

# ಗೀತಾ ಮಕರಂದ




ರಚನೆ.....................

**ಶ್ರೀ ಶ್ರೀ ಶ್ರೀ ವಿದ್ಯಾಪ್ರಕಾಶಾನಂದಗಿರಿ ಸ್ವಾಮಿಗಳು**

ಶ್ರೀ ಶುಕಬ್ರಹ್ಮಾಶ್ರಮ, ಶ್ರೀಕಾಳಹಸ್ತಿ

ಅನುವಾದ

**ಡಾ|| ರಾಯಪಾಟಿ ಶ್ರೀನಾಥ್**

ಪ್ರಕಾಶಕರು

**ಶ್ರೀಮತಿ ಆರ್. ಎಸ್. ರುಕ್ಮಿಣಿ**

**ಅನಿಶಾ ಪಬ್ಲಿಕೇಷನ್ಸ್**

(ಗೀತಾ ಮಕರಂದ ಪ್ರಕಾಶನ ಯೋಜನೆಯ ಪರವಾಗಿ)

ಬಸವಾಪಟ್ಟಣ, ಗಂಗಾವತಿ (ತಾ), ಕೊಪ್ಪಳ (ಜಿ)

ಕರ್ನಾಟಕ



# GEETA MAKARANDA

by **Sri Sri Sri Vidyaprakashanandagiri Swamiji**
(Translation - Dr. R. N. Sreenath)


Published by
**Smt. R. S. Rukmini**
**Anisha Publications**
(Geeta Makaranda publication project)
Basavapatna, Gangavathi (T)
Koppal (Dist) - 583 235
Karnataka

Pages : xxiv + 524

First Edition : 1999

**Price : Rs. 400/-**



© Anisha publications Basavapatna for Geeta Makaranda Project
All rights reserved

ಸರ್ವ ಹಕ್ಕುಗಳು ಪ್ರಕಾಶಕರಿಗೆ ಸೇರಿವೆ



*ಪ್ರಕಾಶಕರು*
**ಶ್ರೀಮತಿ ಆರ್. ಎಸ್. ರುಕ್ಮಿಣಿ**
ಅನಿಶಾ ಪಬ್ಲಿಕೇಷನ್ಸ್
(ಗೀತಾ ಮಕರಂದ ಪ್ರಕಾಶನ ಯೋಜನೆಯ ಪರವಾಗಿ)
ಬಸವಾಪಟ್ಟಣ, ಗಂಗಾವತಿ (ತಾಲ್ಲೂಕು)
ಕೊಪ್ಪಳ (ಜಿಲ್ಲೆ), ಕರ್ನಾಟಕ

ಬೆಲೆ : ರೂ. ೪೦೦/-

ರಕ್ಷಾಪುಟ : ಕೆ. ಕೆ. ಮಕಾಳಿ

ಮುದ್ರಣ
ಲಕ್ಷ್ಮೀ ಮುದ್ರಣಾಲಯ
LAKSHMI MUDRANALAYA
ISO ೯೦೦೧-೨೦೦೦ ಮಾನ್ಯತೆ ಪಡೆದಿದೆ
೧೧೭/೨, ೫ನೇ ಮುಖ್ಯರಸ್ತೆ, ಚಾಮರಾಜಪೇಟೆ
ಬೆಂಗಳೂರು - ೧೮
ದೂರವಾಣಿ : ೨೬೭೧ ೩೧೨೩, ೨೬೭೧ ೮೭೫೨



ಚೇತೋ ಭೃಙ್ಗ ಭ್ರಮಸಿ ವೃಥಾ
ಭವ ಮರು ಭೂಮೌ ವಿರಸಾಯಾಮ್
ಪಿಬ ಪಿಬ ಗೀತಾಮಕರಂದಂ
ಯದುಪತಿ ಮುಖ ಕಮಲಭವಾಢ್ಯಮ್

ಮನಸ್ಸೆನ್ನುವ ಓ ಭ್ರಮರವೇ! ರಸಹೀನವಾದ ಈ ಸಂಸಾರ
ಮರುಭೂಮಿಯಲ್ಲೇಕೆ ವ್ಯರ್ಥವಾಗಿ ಸಂಚರಿಸುತ್ತಿದ್ದೀಯೆ?
(ಇನ್ನು ಆ ಸಂಚಾರವನ್ನು ಕಟ್ಟಿಹಾಕಿ) ಶ್ರೀ ಕೃಷ್ಣ ಪರಮಾತ್ಮನ
ಮುಖಪದ್ಮದಿಂದ ಹೊರಬಿದ್ದ ಶ್ರೇಷ್ಠವಾದ
ಗೀತಾ ಮಕರಂದವನ್ನು ಪಾನಮಾಡು!



ಚಿಕ್ಕ ವಯಸ್ಸಿನಿಂದಲೇ ಧಾರ್ಮಿಕ ಗೀಳು
ಹಿಡಿಸಿ ನಂತರ ಜೀವನದ ಮೇಲೆ ವಿರಕ್ತಿ
ಹುಟ್ಟುವಷ್ಟು ಕಾಡಿಸಿ ನನ್ನ ಇಂದಿನ ಈ ಸ್ಥಿತಿಗೆ
ಕಾರಣಕರ್ತರಾದ ನನ್ನ ಪೂಜ್ಯ ಪಿತ
ದಿ|| ಶ್ರೀ ಆರ್. ಎಸ್. ನಾರಾಯಣ ರೆಡ್ಡಿ
ಯವರಿಗೆ ಹಾಗು ನನ್ನ ಪೂಜ್ಯ ತಾಯಿ
ಶ್ರೀ ತಿಪ್ಪಮ್ಮನವರಿಗೆ
ಈ ಅನುವಾದದ ಪುಣ್ಯವನ್ನು
ಭಕ್ತಿಪೂರ್ವಕವಾಗಿ ಅರ್ಪಿಸುತ್ತಿದ್ದೇನೆ

**ಡಾ|| ಆರ್. ಎಸ್. ಶ್ರೀನಾಥ್**

# ಕೃಷ್ಣಂ ವಂದೇ ಜಗದ್ಗುರುಮ್



ಶ್ರೀ ಶ್ರೀ ಶ್ರೀ ವಿದ್ಯಾಪ್ರಕಾಶಾನಂದಗಿರಿ ಸ್ವಾಮಿಗಳವರು

ಜನನ ೧೩.೦೪.೧೯೧೪ - ಮಹಾ ಸಮಾಧಿ ೧೦.೪.೧೯೯೮

ಶ್ರೀ ಶುಕಬ್ರಹ್ಮಾಶ್ರಮ, ಶ್ರೀಕಾಳಹಸ್ತಿ

ಚಿತ್ತೂರು ಜಿಲ್ಲೆ - ೫೧೭ ೬೪೦

ಆಂಧ್ರಪ್ರದೇಶ

## ಗೀತಾಚಾರ್ಯರು

# ಶ್ರೀ ಶ್ರೀ ಶ್ರೀ ವಿದ್ಯಾಪ್ರಕಾಶಾನಂದಗಿರಿ ಸ್ವಾಮಿಗಳ
# ಜೀವನ ಪರಿಚಯ

| | | |
|---|---|---|
| ಜನನ | - | ಏಪ್ರಿಲ್ ೧೩, ೧೯೧೪ (ಆನಂದ ನಾಮ ಸಂವತ್ಸರ) |
| ಪೂರ್ವಾಶ್ರಮದ ಹೆಸರು | - | ಆನಂದ ಮೋಹನ |
| ವಿದ್ಯಾ ಪದವಿಗಳು | - | ೧೯೩೩ರಲ್ಲಿ ಆಂಧ್ರ ವಿಶ್ವವಿದ್ಯಾಲಯದಿಂದ ಬಿ.ಎ., |
| | - | ಹಿಂದಿ ವಿದ್ಯಾಪೀಠ ವಾರಣಾಸಿಯಿಂದ 'ಕೋವಿದ' ಪದವಿ. |
| ಗಂಗೆಯಲ್ಲಿ ಗೀತಾ ದರ್ಶನ | - | ಋಷಿಕೇಶದಲ್ಲಿ ಗಂಗಾನದಿಯಲ್ಲಿ ಸ್ನಾನ ಮಾಡುತ್ತಿರುವಾಗ ಗಂಧ ಪುಷ್ಪಗಳಿಂದಲಂಕೃತವಾದ ಗೀತಾ ಪುಸ್ತಕ ಸ್ವಾಮಿಯವರ ಕೈಗೆ ಬಂತು. ಆ ಮಹಾನ್‌ಕ್ಷಣ ಸ್ವಾಮಿಯವರ ಜೀವನ್ನೊದ್ದೇಶವನ್ನು ಧೃತಿಗೊಳಿಸಿತು. |
| ಗುರುಕುಲ ಜೀವನ | - | ತಮ್ಮ ೨೩ನೆಯ ವಯಸ್ಸಿನಲ್ಲಿ ಮೇ ೧೭, ೧೯೩೬ರಲ್ಲಿ ಯೇರುಪಾಡಿನ ವ್ಯಾಸಾಶ್ರಮದ ಶ್ರೀ ಸದ್ಗುರು ಮಹರ್ಷಿ ಮಲಯಾಳ ಸ್ವಾಮಿಗಳಿಂದ ಗುರುಕುಲದಲ್ಲಿ ಪಾದಾರ್ಪಣೆ. |
| ತಪಸ್ಸು | - | ಹನ್ನೆರಡು ವರ್ಷಗಳ ಕಾಲ ಬೇಯಿಸದ ಆಹಾರ ಸ್ವೀಕರಿಸಿ ಧ್ಯಾನ ಮಾಡಿದರು. ಒಂದು ವರ್ಷ ಸಂಪೂರ್ಣ ಮೌನವನ್ನು ಆಚರಿಸಿರುವರು. |
| ಸಂನ್ಯಾಸ ದೀಕ್ಷೆ | - | ತಮ್ಮ ೩೪ನೆಯ ವಯಸ್ಸಿನಲ್ಲಿ ಜುಲೈ ೩, ೧೯೪೭ ರಲ್ಲಿ ಶ್ರೀ ಸದ್ಗುರು ಮಹರ್ಷಿ ಮಲಯಾಳ ಸ್ವಾಮಿಗಳಿಂದ ದೀಕ್ಷೆ ಪಡೆದರು. |
| ಸಂನ್ಯಾಸ ನಾಮ | - | ಶ್ರೀ ವಿದ್ಯಾಪ್ರಕಾಶಾನಂದಗಿರಿ ಸ್ವಾಮಿ |
| | - | ತಮ್ಮ ೩೭ನೆಯ ವಯಸ್ಸಿನಲ್ಲಿ ಶ್ರೀ ಕಾಳಹಸ್ತಿಯಲ್ಲಿ ಶ್ರೀ ಶುಕಬ್ರಹ್ಮಾಶ್ರಮವನ್ನು ಸ್ಥಾಪಿಸಿದರು. |
| | - | ಮೊಟ್ಟಮೊದಲ ಗೀತಾಯಜ್ಞವನ್ನು ೨.೧೨.೧೯೫೬ರಲ್ಲಿ ಗುಂಟೂರು ಜಿಲ್ಲೆ ನರಸರಾವ್‌ಪೇಟೆಯಲ್ಲಿ ಪ್ರಾರಂಭಿಸಿದರು. |
| | - | ಗೀತಾಯಜ್ಞ ಶತಕವನ್ನು ೨೫.೪.೧೯೮೧ರಲ್ಲಿ ಹೈದರಾಬಾದ್‌ನಲ್ಲಿ ತಿರುಮಲ ತಿರುಪತಿ ದೇವಸ್ಥಾನದವರಿಂದ ಆಚರಿಸಲಾಯಿತು. |
| | - | 'ವೇದಾಂತಭೇರಿ' ಎನ್ನುವ ಮಾಸಪತ್ರಿಕೆಯನ್ನು ೧೯೬೩ ಜನವರಿಯಲ್ಲಿ ಪ್ರಾರಂಭಿಸಿದರು. |
| | - | 'ಗೀತಾಮಕರಂದ' ಮಾರ್ಚ್ ೭, ೧೯೬೩ರಲ್ಲಿ ಬಿಡುಗಡೆಯಾಯಿತು. |
| | - | ಸ್ವಾಮಿಯವರ ಹೆಸರಿನಲ್ಲಿ ೧೯೬೬ರಲ್ಲಿ ಡಿಗ್ರೀ ಕಾಲೇಜು ಹಾಗು ೧೯೮೨ರಲ್ಲಿ ಬಾಲಿಕೆಯರ ಜೂನಿಯರ್ ಕಾಲೇಜು ಸ್ಥಾಪಿಸಲಾಗಿದೆ. |
| | - | ಸ್ವಾಮಿಯವರ ಅದ್ಭುತ ಉಪನ್ಯಾಸಗಳನ್ನು ತಿರುಮಲ ತಿರುಪತಿ ದೇವಸ್ಥಾನದವರು ಆಡಿಯೋ ಹಾಗು ವೀಡಿಯೋ ಕ್ಯಾಸೆಟ್‌ಗಳಲ್ಲಿ ಬಿಡುಗಡೆ ಮಾಡಿದ್ದಾರೆ. |
| | - | ೨೮.೪.೧೯೯೩ರಲ್ಲಿ 'ಭಕ್ತ ಕಣ್ಣಪ್ಪ ಉಚಿತ ನೇತ್ರ ವೈದ್ಯಾಲಯ'ವನ್ನು ಪ್ರಾರಂಭಿಸಿದ್ದಾರೆ. |
| | - | ೧೨.೪.೧೯೯೬ರಲ್ಲಿ ಶ್ರೀ ಸ್ವಾಮಿಯವರು ತಮ್ಮ ಆಶ್ರಮದ ಪೀಠಾಧಿಪತಿಗಳನ್ನಾಗಿ ಶ್ರೀ ವಿದ್ಯಾಸ್ವರೂಪಾನಂದಗಿರಿ ಸ್ವಾಮಿಯವರನ್ನು ನಿಯುಕ್ತಗೊಳಿಸಿದರು. |
| ಮಹಾಸಮಾಧಿ | - | ೧೦.೪.೧೯೯೮ |

"........ ಗೀತೆಗೆ ಸರಿಹೊಂದುವ ವಿಶಾಲಾರ್ಥವುಳ್ಳ, ಅಗಾಧ ಭಾವವುಳ್ಳ, ಸಮತ್ವವುಳ್ಳ ಗ್ರಂಥವು ಬೇರೊಂದು ಇಲ್ಲವೇ ಇಲ್ಲ".

- ಶ್ರೀ ಮಹರ್ಷಿ ಮಲಯಾಳ ಸ್ವಾಮಿಗಳು



"Those of you who know Sanskrit, should tomorrow, if possible today buy the Gita and begin to study the book. Those of you who do not know Sanskrit, should study sanskrit, if only for the sake of the Gita. I tell you that it contains treasures of knowledge of which you have no conception whatsoever.

**- Mahatma Gandhi**



"ನಿಮ್ಮಲ್ಲಿ ಸಂಸ್ಕೃತ ತಿಳಿದವರು ನಾಳೆ, ಇಲ್ಲವೆ ಸಾಧ್ಯವಾದರೆ, ಇಂದೇ ಒಂದು ಗೀತಾ ಪುಸ್ತಕವನ್ನು ಕೊಂಡು ಓದಲು ಪ್ರಾರಂಭಿಸಿ. ನಿಮಗೆ ಸಂಸ್ಕೃತ ಗೊತ್ತಿಲ್ಲದಿದ್ದರೆ ಕನಿಷ್ಠ ಗೀತೆಗಾದರೂ ಸಂಸ್ಕೃತವನ್ನು ಕಲಿಯಿರಿ. ನಾನು ಯಥಾರ್ಥವಾಗಿ ಹೇಳುತ್ತಿದ್ದೇನೆ - ನೀವು ಊಹಿಸಲಾರದಂಥಹ ಅಮೂಲ್ಯ ಜ್ಞಾನ ಭಂಡಾರ ಗೀತೆಯಲ್ಲಿದೆ."

- ಶ್ರೀ ಮಹಾತ್ಮಾ ಗಾಂಧಿ



Gita= "Truths beautifully arranged together in their proper places like a fine garland or a bouquet of choicest flowers".

**- Swami Vivekananda**



"ಸುಂದರವಾದ ಕುಸುಮ ಮಾಲೆಯಂತೆ ಅಥವ ಒಂದು ಮನೋಹರ ಪುಷ್ಪ ಗುಚ್ಛದಂತೆ ಕ್ರಮಬದ್ಧದಿಂದ ಸುಂದರವಾಗಿ ಹೆಣೆದ ಸತ್ಯಗಳ ಸಮುದಾಯವೇ ಗೀತೆ"

- ಶ್ರೀ ಸ್ವಾಮಿ ವಿವೇಕಾನಂದ

# Message of the Gita "Be Fearless!!"

ಕ್ಲೈಬ್ಯಂ ಮಾಸ್ಮಗಮಃ ಪಾರ್ಥ ನೈತತ್ತ್ವಯ್ಯುಪಪದ್ಯತೇ
ಕ್ಷುದ್ರಃ ಹೃದಯ ದೌರ್ಬಲ್ಯಂ ತ್ಯಕ್ತ್ವೋತ್ತಿಷ್ಠ ಪರನ್ತಪ (೨-೩)
"ಓ ಅರ್ಜುನಾ! ಅಧೈರ್ಯವನ್ನು (ಭಯವನ್ನು) ಹೊಂದಬೇಡ. ಇಂಥಹ ಭಯ ನಿನಗೆ ಸಾಧುವಲ್ಲ. ನೀಚವಾದ ಈ ದೌರ್ಬಲ್ಯವನ್ನು ಬಿಟ್ಟು ಏಳು!! ಕರ್ತವ್ಯಕ್ಕೆ ಅಣಿಯಾಗು!!!

If one reads this one sloka he gets all the merits of reading the entire Gita; for in this one sloka lies imbedded the whole message of the Gita.

**- Swami Vivekananda**



"ಈ ಒಂದು ಶ್ಲೋಕವನ್ನು ಓದಿದರೆ ಗೀತೆಯನ್ನು ಪೂರ್ತಿಯಾಗಿ ಓದಿದ ಫಲಿತವನ್ನು ಮನುಜನು ಹೊಂದಬಲ್ಲನು; ಏಕೆಂದರೆ, ಗೀತೆಯ ಸಂದೇಶವೆಲ್ಲವೂ ಈ ಒಂದು ಶ್ಲೋಕದಲ್ಲಿಯೇ ಅಡಗಿದೆ".

**- ಶ್ರೀ ಸ್ವಾಮಿ ವಿವೇಕಾನಂದ**

# Gita - A miraculous remedy for life's tragedies

"When doubts haunt me when disappointments stare me in the face and when I see not one ray of light on the horizon I turn to Bhagavadgita and find a verse to comfort me and I immediately begin to smile in the midst of overwhelming sorrow. My life has been full of external tragedies and if they had not let any visible and indelible effect on me I owe it to the teachings of Bhagavadgita".

**- Mahatma Gandhi**






"ಸಂಶಯಗಳು ನನ್ನಾವರಿಸಿದಾಗ, ಸಂಕಟಗಳು ಸಂಪ್ರಾಪ್ತವಾದಾಗ, ನಿರಾಶೆ ನಿರುತ್ಸಾಹಗಳು ಉಂಟಾದಾಗ ನಾನು ಭಗವದ್ಗೀತೆಯನ್ನು ತೆರೆದು ನೋಡುತ್ತೇನೆ. ಅದರಲ್ಲಿ ಯಾವುದೋ ಒಂದು ಶ್ಲೋಕ ನನ್ನನ್ನು ಸಾಂತ್ವನಗೊಳಿಸುತ್ತದೆ. ತತ್ಫಲಿತವಾಗಿ ದುಃಖದಾಯಕ ಪರಿಸ್ಥಿತಿಗಳಲ್ಲೂ ಕೂಡ ನನ್ನ ಮುಖದ ಮೇಲೆ ಪ್ರಸನ್ನತೆ ಮೂಡುತ್ತದೆ. ನನ್ನ ಜೀವಿತವು ಅನೇಕ ಒಡಕುತೊಡಕುಗಳಿಂದ ಕೂಡಿದ್ದರೂ, ಘೋರ ಸಂಕಟಗಳನ್ನು ನಾನು ಅನುಭವಿಸಬೇಕಾಗಿ ಬಂದರೂ, ಅವು ಯಾವುವೂ ನನ್ನ ಮನಸ್ಸಿನ ಮೇಲೆ ಲವಲೇಶವಾದರೂ ಅಶಾಂತಿಯನ್ನು ಮಾಡಲಸಾಧ್ಯವಾದವೆಂದರೆ ಅದಕ್ಕೆ ಗೀತಾ ಪ್ರಬೋಧೆಯೇ ಕಾರಣ".

**- ಮಹಾತ್ಮಾ ಗಾಂಧಿ**

# ವಿಷಯ ಸೂಚಿಕೆ

## ಗೀತಾ ಮಕರಂದ



ಓಮ್

# ದಾನಿಗಳು

ಈ ಬೃಹತ್ ಸದ್ಗ್ರಂಥ ಹೊರಬರಲು ಅನೇಕ ಸುಹೃದಯಿಗಳು ಕಾಯಾ ವಾಚಾ ಮನಸಾ ನೇರವಾಗಿ ಹಾಗು ಪರೋಕ್ಷವಾಗಿ ನೆರವಾಗಿದ್ದಾರೆ. ಅವರಲ್ಲಿ ಕೆಲವರನ್ನು ಅನುವಾದಕರ ಮಾತಿನಲ್ಲಿ ಸ್ಮರಿಸಿದ್ದೇನೆ. ಧನ ದಾನದ ಮೂಲಕ ಪ್ರೋತ್ಸಾಹಿಸಿದ ಈ ಕೆಳಕಂಡವರನ್ನು ಪ್ರತ್ಯೇಕವಾಗಿ ಸ್ಮರಿಸುವುದು ನನ್ನ ಆದ್ಯ ಕರ್ತವ್ಯವಾಗಿದೆ.

ನನ್ನ ಪರಮ ಮಿತ್ರರಾದ **ಡಾ|| ಡಿ. ನಾರಾಯಣರಾವ್** ಅವರು ಲಿಬಿಯಾದಲ್ಲಿ ನನ್ನೊಡನೆ ಕೆಲಸ ಮಾಡುತ್ತಿದ್ದಾರೆ. ಅವರು ಒಬ್ಬ ಉದಾತ್ತ ಜೀವಿ. ಬೇರೆ ಎಲ್ಲಾ ಸಾಧ್ಯವಾದ ಪ್ರೋತ್ಸಾಹವನ್ನಷ್ಟೇ ಅಲ್ಲದೆ, ೨೦,೦೦೭ ರೂಪಾಯಿಗಳನ್ನು ದಾನ ಮಾಡಿ ಈ ದೈವಕಾರ್ಯದಲ್ಲಿ ಪಾಲುಗೊಂಡಿದ್ದಾರೆ. ಲಿಬಿಯಾದಲ್ಲಿ ನನ್ನ ಸಹೋದ್ಯೋಗಿಗಳಾದ **ಶ್ರೀ ವಿ. ಭಾನುಪ್ರಕಾಶ್** ಅವರು ಎಲ್ಲಾ ರೀತಿಯ ಸಹಾಯ, ಉತ್ತೇಜನ ಹಾಗು ಸ್ಫೂರ್ತಿಯನ್ನು ನೀಡಿರುವುದಷ್ಟೇ ಅಲ್ಲದೆ, ೨೦೦೭ ರೂಪಾಯಿಗಳನ್ನು ಈ ಸತ್ಕಾರ್ಯಕ್ಕೆ ದಾನವಾಗಿ ನೀಡಿರುತ್ತಾರೆ.

ನನ್ನ ಆಪ್ತ ಬಂಧುಗಳು ಮೂಲತಃ ತೆಲುಗಿನವರಾದರು, ಅಸಾಧಾರಣ ಪ್ರೇಮದಿಂದ ನನ್ನನ್ನು ಈ ಕಾರ್ಯವನ್ನು ಸಾಧಿಸಲೇಬೇಕೆಂದು ಒತ್ತಾಯಿಸಿ, ಎಲ್ಲಾ ರೀತಿಯ ಪ್ರೋತ್ಸಾಹವನ್ನಿತ್ತು ಇದರಲ್ಲಿ ಭಾಗಿಗಳಾಗಿದ್ದಾರೆ. ಬಿಚ್ಚು ಮನಸ್ಸಿನಿಂದ ದ್ರವ್ಯದಾನ ಮಾಡುವುದರ ಮೂಲಕ ನನ್ನನ್ನು ಹುರಿದುಂಬಿಸಿದ್ದಾರೆ. ಅವರಲ್ಲಿ ಎಳೆಯ ವಯಸ್ಸಿನಲ್ಲಿ ಕಣ್ಮರೆಯಾಗಿ, ತಂದೆತಾಯಿಗಳಿಗೆ ಭರಿಸಲಾರದಷ್ಟು ದುಃಖ, ಒರೆಸಲಾರದಷ್ಟು ಕಣ್ಣೀರು ನೀಡಿ ವಿಧಿಯ ಕರೆಗೆ ಓಗೊಟ್ಟ **ದಿ|| ಡಾ|| ಟಿ. ಅಶೋಕ್ ಕುಮಾರ್**ನ ನೆನಪಿಗಾಗಿ ಆತನ ಮಾತಾಪಿತೃಗಳು **ಟಿ. ರಾಮ್‌ಮೋಹನ ರಾವ್** ಮತ್ತು **ಅವರ ಧರ್ಮಪತ್ನಿ** ೧೦,೦೦೮ ರೂ.ಗಳನ್ನು ಕೊಟ್ಟಿರುತ್ತಾರೆ.

ಬಸವಾಪಟ್ಟಣದ **ದಿ|| ಶ್ರೀ ಜೆಟ್ಟಿ ಹನುಮಪ್ಪ**ನವರ ಜ್ಞಾಪಕಾರ್ಥವಾಗಿ ಅವರ ಧರ್ಮಪತ್ನಿ **ಶ್ರೀಮತಿ ಪರಿಮಳ** ಅವರು ರೂ. ೧೦,೦೦೮ ರೂ.ಗಳನ್ನು ನೀಡಿದ್ದಾರೆ.

**ದಿ|| ಗೊಟ್ಟಿಪಾಟಿ ಸೀತಮ್ಮ**ನವರ ಚಿರನೆನಪಿಗಾಗಿ ರೂ. ೧೦,೦೦೮ ರೂ.ಗಳನ್ನು ನೀಡಿದ್ದಾರೆ.

ಬಸವಾಪಟ್ಟಣದ ಶ್ರೀ **ಗೊಟ್ಟಿಪಾಟಿ ಧನಂಜಯ** ಹಾಗು ಅವರ ಧರ್ಮಪತ್ನಿ ಶ್ರೀಮತಿ **ಸೀತಾಮಹಾಲಕ್ಷ್ಮಿ**ಯವರು ರೂ. ೧೦,೧೧೬ ರೂ.ಗಳನ್ನು ನೀಡಿದ್ದಾರೆ.

ಗಂಗಾವತಿಯ **ದಿ|| ಶ್ರೀಕೊಲ್ಲಿ ಗಂಗಾಧರರಾವ್** ಹಾಗು ಅವರ ಧರ್ಮಪತ್ನಿ **ದಿ|| ಶ್ರೀಮತಿ ರುಷಿಮಣಿಯಮ್ಮ**ನವರ ಹೆಸರಿನಲ್ಲಿ ಅವರ ಪುತ್ರರು ರೂ. ೧೧,೧೦೬ ರೂ.ಗಳನ್ನು ಕೊಟ್ಟಿರುತ್ತಾರೆ.

ದಾವಣಗೆರೆಯ ಬಳಿ ವಾಸಸ್ಥರಾಗಿರುವ ಶ್ರೀ ಬಾಬೂ ರಾವ್ ಅವರು, ಅವರ ಮಾತಾಪಿತೃಗಳಾದ ಶ್ರೀ **ಚೆಲಕೂರಿ ನರಸಯ್ಯ** ಹಾಗು **ಸೀತಮ್ಮ**ನವರ ಹೆಸರಿನಲ್ಲಿ ೧೦,೦೦೮ ರೂ.ಗಳ ದಾನ ನೀಡಿದ್ದಾರೆ.

**ದಿ|| ಗೊಟ್ಟಿಪಾಟಿ ವೆಂಕಟರತ್ನಂ**, ಬಸವಾಪಟ್ಟಣ ಅವರ ಸವಿನೆನಪಿಗಾಗಿ ೧೦,೦೦೮ ರೂ.ಗಳನ್ನು ಕೊಡಲಾಗಿದೆ.

**ಡಾ|| ಆನಂದರಾವ್**, ಫಿಜಿಯಾಲಜಿ ಪ್ರೊಫೆಸರ್, ಲಿಬಿಯಾ ಅವರು ೨,೦೦೭ ರೂ.ಗಳನ್ನು ನೀಡಿದ್ದಾರೆ.

**ದ್ರವ್ಯ ಪ್ರೋತ್ಸಾಹವನ್ನಿತ್ತ :**

**ಶ್ರೀ ಜೆಟ್ಟಿ ವೀರಪ್ರಸಾದ್**

**ಶ್ರೀ ಜೆಟ್ಟಿ ವೆಂಕಟರಮಣ**

**ಶ್ರೀ ಸೂರುಪುನೇನಿ ರಾಮಾರಾವ್**

**ಚಿನ್ಮಯಾ ಮಿಷನ್ ಸದಸ್ಯರು**, ಬಸವಾಪಟ್ಟಣ ಇವರಿಗೆ ಋಣಿಯಾಗಿದ್ದೇನೆ

# ಮುನ್ನುಡಿ

(ತೆಲುಗಿನ ಈ ಲೇಖನವನ್ನು ಕನ್ನಡಕ್ಕೆ ಅನುವಾದ ಮಾಡಲಾಗಿದೆ)

ಮಾನವರಿಗೆ ಮಹಾಪ್ರಯೋಜನವನ್ನುಂಟುಮಾಡಿ ಅವರನ್ನು ಚೈತನ್ಯವಂತರನ್ನಾಗಿ ಮಾಡುವವನು ಮಹಾತ್ಮನು. ಆತನು ತನಗಾಗಿ ಜನ್ಮಿಸುವುದಿಲ್ಲ, ತನಗಾಗಿ ಜೀವಿಸುವುದಿಲ್ಲ. ಇತರರಿಗಾಗಿ ಜನ್ಮಿಸಿ ಇತರರಿಗಾಗಿ ಜೀವಿಸುವನು. ಆದ್ದರಿಂದ ಆತನು ಕಾರಣ ಜನ್ಮಿ. ನಮ್ಮ ಗುರುದೇವರಾದ ಶ್ರೀ ಶ್ರೀ ಶ್ರೀ ವಿದ್ಯಾಪ್ರಕಾಶಾನಂದಗಿರಿ ಸ್ವಾಮಿಗಳವರು ಆ ಗುಂಪಿಗೆ ಸೇರಿದವರು. ಅವರು ತಮಗಾಗಿ ಜೀವಿಸಲಿಲ್ಲ. ತಮಗಾಗಿ ಶ್ರಮಿಸಲಿಲ್ಲ. ನಮಗೋಸ್ಕರ ಜೀವಿಸಿದರು, ನಮಗಾಗಿ ಶ್ರಮಿಸಿದರು, ನಮಗೋಸ್ಕರ ತಪವನ್ನಾಚರಿಸಿದರು. ಅಜ್ಞಾನಾಂಧಕಾರದಲ್ಲಿ ಬಿದ್ದು ಹೊರಳಾಡುತ್ತಿರುವ ಮಾನವರನ್ನು ನಲವತ್ತು ವರ್ಷಗಳ ಕಾಲ ಅಹೋರಾತ್ರಿ ಗೀತಾ ಪ್ರವಚನಗಳ ಮೂಲಕ ಅವರ ಅಜ್ಞಾನವನ್ನು ಹೊರದೂಡಿ ಚೈತನ್ಯವಂತರಾಗುವಂತೆ ಮಾಡಿದರು. ಸನ್ಮಾರ್ಗ ವನ್ನವಲಂಬಿಸುವಂತೆ ಪ್ರೇರೇಪಿಸಿದರು. ಅಖಂಡ ಜನಸ್ತೋಮವನ್ನು ಆಧ್ಯಾತ್ಮ ಚಿಂತನೆಯ ಕಡೆಗೆ ಆಸಕ್ತಿಯನ್ನು ಹೊಂದುವಂತೆ ಮಾಡಿದರು. ಆದ್ದರಿಂದ ಶ್ರೀ ಸ್ವಾಮಿಯವರು ಮಹಾತ್ಮರೆನಿಸಿಕೊಂಡರು.

ಪೂಜ್ಯ ಶ್ರೀ ಸ್ವಾಮಿಗಳವರ ಪ್ರಸಂಗಗಳು ಪಂಡಿತ ಪಾಮರರಿಗೆ ರಂಜನೀಯವಾದವುಗಳಷ್ಟದ್ದೇ ಅಲ್ಲದೆ, ಜೇನುತುಪ್ಪಕ್ಕಿಂತ, ಸಕ್ಕರೆಗಿಂತ, ಹಲಸಿನ ತೊಳೆಗಿಂತ ಸಿಹಿಯಾದವುಗಳು ಆಗಿವೆ. ಶ್ರೀ ಸ್ವಾಮಿಗಳು ಒಬ್ಬ ಮಹಾ ಮನುಷ್ಯ, ಮಹಾತಪಸ್ವಿ ಹಾಗು ಮಹಾಪ್ರವಕ್ತ. ಅವರ ಕಂಠ ಕಂಚಿನಂತೆ ಮೊಳಗಿತು. ಅವರ ಮಾತುಗಳಲ್ಲಿ ಒಂದು ಜನಾಕರ್ಷಣೆ, ಒಂದು ರಸಝರಿ, ಒಂದು ರಸಸ್ವಾದವಿರುತ್ತಿತ್ತು. ಆದ್ದರಿಂದಲೇ ಅವರ ಗೀತಾ ಪ್ರವಚನಗಳು ದಾರಿಯಲ್ಲಿ ಹೋಗುತ್ತಿರುವವರನ್ನು ಕೂಡ ಆಕರ್ಷಿಸುತ್ತಿದ್ದವು, ಅವರನ್ನು ಸನ್ಮಾರ್ಗದ ಕಡೆ ಒಯ್ಯುತ್ತಿದ್ದವು. ಶ್ರೀ ಸ್ವಾಮಿಗಳವರು ಒಬ್ಬ ಲೋಕೋತ್ತರ ಪುರುಷ. ಭಕ್ತರಿಗೆ ಗೀತಾ ಮಕರಂದವನ್ನು ತೃಪ್ತಿಯಾಗುವಷ್ಟು ಕುಡಿಸಿದ ಧೀಮಂತ ಗೀತಾಚಾರ್ಯರು ಶ್ರೀ ಸ್ವಾಮೀಜಿ.

## ಗೀತಾ ಮಕರಂದ

ಪೂಜ್ಯ ಶ್ರೀ ಸ್ವಾಮಿಗಳು, ಭಗವದ್ಗೀತೆಗೆ 'ಗೀತಾ ಮಕರಂದ' ಎನ್ನುವ ವಿಪುಲ ವ್ಯಾಖ್ಯೆಯನ್ನು ಬರೆದಿರುವರು. ಇದು ವಿಶೇಷ ಪ್ರಸಾರವನ್ನು ಹೊಂದಿದೆ. ಹಸ್ತಪ್ರತಿ ಸುಮಾರು ೧೧೦೦ ಪುಟಗಳಿಗಿಂತ ಹೆಚ್ಚು ವಿಸ್ತಾರವಿರುವ ಈ ಗ್ರಂಥ ಅತ್ಯದ್ಭುತ ಪ್ರಚಾರಕ್ಕೆ ಒಳಗಾಗಿದೆ. ಮೂಲ ಶ್ಲೋಕಗಳು ಅವುಗಳಿಗೆ ಪ್ರತಿಪದಾರ್ಥ, ತಾತ್ಪರ್ಯದೊಂದಿಗೆ ವಿಪುಲ ವ್ಯಾಖ್ಯಾನವನ್ನು ಇದು ಹೊಂದಿದೆ. ಆಯಾ ಶ್ಲೋಕಗಳ ಕೊನೆಯಲ್ಲಿ ಪ್ರಶ್ನೋತ್ತರ ರೂಪದಲ್ಲಿ ಶ್ಲೋಕಸಾರಾಂಶವನ್ನು ಅಳವಡಿಸಲಾಗಿದೆ. ಎಷ್ಟೋ ಜ್ಞಾನದಾಯಕವಾದ ಉಪೋದ್ಘಾತದಲ್ಲಿ ಗೀತಾ ಸ್ವರೂಪವನ್ನು, ಗೀತಾ ತತ್ತ್ವವನ್ನು ಶ್ರೀ ಸ್ವಾಮಿಗಳವರು ವಿವಿಧ ದೃಷ್ಟಿಕೋನಗಳಲ್ಲಿ ಸಂದರ್ಭೋಚಿತವಾಗಿ ವಿವರಿಸಿರುವರು. ಸ್ಕಾಂದ ಪುರಾಣ, ವೈಷ್ಣವ ತಂತ್ರಸಾರ, ಮಹಾಭಾರತ, ವರಾಹ ಪುರಾಣ ಮೊದಲಾದ ಗ್ರಂಥಗಳಲ್ಲಿರುವ ಗೀತಾ ವೈಶಿಷ್ಟ್ಯವನ್ನು ಪ್ರತಿಪಾದಿಸುವ ವಿಷಯಗಳು ಉಪೋದ್ಘಾತದಲ್ಲಿ ಇವೆ. ಅಷ್ಟೇ ಅಲ್ಲದೆ ಮಂತ್ರ ರೂಪವಾದ ಈ ಗೀತೆಯನ್ನು ಹೇಗೆ ಜಪಿಸಬೇಕು? ಅದರಿಂದ ಉಂಟಾಗುವ ಲೌಕಿಕ ಹಾಗು ಪಾರಮಾರ್ಥಿಕ ಫಲಿತಗಳು ಏನು ಎನ್ನುವ ವಿಷಯಗಳನ್ನು ಕೂಲಂಕಷವಾಗಿ ವಿವರಿಸಿರುವರು.

ಭಗವದ್ಗೀತೆಗೆ ತೆಲುಗಿನಲ್ಲಿ ಅನೇಕ ವ್ಯಾಖ್ಯೆಗಳು ಹೊರಬಂದಿದ್ದರೂ ಗೀತಾಮಕರಂದ ಅವೆಲ್ಲವುಗಳಲ್ಲಿ ಉಚ್ಚ ಸ್ಥಾನವನ್ನು ಹೊಂದಿದೆ. 'ಸರ್ವಪುಷ್ಪಗಳ ಸಾರ ಮಕರಂದ, ಜೇನುತುಪ್ಪ ಎಲ್ಲಾ ಔಷಧಿಗಳಿಗೆ ಆಧಾರ.' ಹಾಗೆಯೇ ಈ ಗೀತಾ ಮಕರಂದ ಎಲ್ಲಾ ವ್ಯಾಖ್ಯಾನಗಳ ಸಾರ. ಇದೊಂದಿದ್ದರೆ ಎಲ್ಲಾ ವಿಧದ ಬೇರೆ ಗೀತೆಗಳು ನಮ್ಮಲ್ಲಿ ಇದ್ದಂತೆಯೇ! ಎಂದು ಪೂಜ್ಯ ಶ್ರೀ ರಾಮಕೃಷ್ಣಾನಂದ ಸ್ವಾಮಿಗಳು ಈ ಗೀತಾ ಮಕರಂದವನ್ನು ಕುರಿತು ಹೇಳಿದ್ದಾರೆ. ವಿವೇಕಾನಂದ ಜೀವಿತ ಚರಿತ್ರೆ ಮುಂತಾದ ಗ್ರಂಥಗಳನ್ನು ರಚಿಸಿರುವ ಪೂಜ್ಯ ಶ್ರೀ ಚಿರಂತನಾನಂದ ಸ್ವಾಮಿಗಳವರು, "ಶ್ರೀ ವಿದ್ಯಾಪ್ರಕಾಶಾನಂದಗಿರಿ ಸ್ವಾಮೀಜಿಯವರು ರಚಿಸಿರುವ ಗೀತಾ ಮಕರಂದವೆನ್ನುವ ಈ ವ್ಯಾಖ್ಯಾನ ಗೀತೆಯ ಒಂದು ಮಹಾ ಭಾಷ್ಯ. ಇದು ಬಹಳ ವಿಶೇಷವಾದ ಗ್ರಂಥ. ಈ

ಗ್ರಂಥವನ್ನು ನಾನು ಚೆನ್ನಾಗಿ ಪರಿಶೀಲಿಸಿರುವೆನು. ಇಂಥಹ ಸಮಗ್ರವಾದ ಗೀತಾಗ್ರಂಥ ಮತ್ತೊಂದಿಲ್ಲ. ಇದನ್ನು ರಚಿಸಿದ ಶ್ರೀ ಸ್ವಾಮೀಜಿಗೆ ಆಂಧ್ರ ಲೋಕ ಎಷ್ಟೋ ಋಣಿಯಾಗಿದೆ" ಎಂದು ತಮ್ಮ ಆದರ ಹಾಗು ಅಭಿಪ್ರಾಯವನ್ನು ಪ್ರಕಟಿಸಿರುತ್ತಾರೆ.

ಈ ಗೀತಾ ಮಕರಂದವನ್ನು ಕುರಿತು ಆಂಧ್ರ ಜ್ಯೋತಿ ದಿನಪತ್ರಿಕೆ (೧೪-೪-೧೯೬೩ ರಲ್ಲಿ) ಸಮೀಕ್ಷಿಸುತ್ತಾ, ಆಕರ್ಷಣೀಯವಾದ ವ್ಯಾಖ್ಯೆ, ವಿಪುಲವಾದ ತಾತ್ಪರ್ಯ, ಎಷ್ಟೋ ಜ್ಞಾನದಾಯಕವಾದ ಉಪೋದ್ಘಾತ ಈ ಪುಸ್ತಕಕ್ಕೆ ಅಮೂಲ್ಯತೆಯನ್ನು ಒದಗಿಸುತ್ತವೆ. ಗೀತಾ ಮಕರಂದವನ್ನು ಓದುತ್ತಾ ಇದ್ದರೆ ಮತ್ತೂ ಮತ್ತೂ ಓದಬೇಕೆನ್ನಿಸುತ್ತದೆಯೇ ಹೊರತು ಕೆಳಗಿಡಬೇಕೆನ್ನುವ ಮನಸ್ಸೇ ಉಂಟಾಗುವುದಿಲ್ಲ. ವಿವರಣೆ ಚೆನ್ನಾಗಿದೆ, ಭಾಷೆ ಪಟುವಾಗಿದೆ - 'ಓದುಗರೊಂದಿಗೆ ಎಷ್ಟೋ ಸನ್ನಿಹಿತವಾದ ಸಾಮರಸ್ಯವನ್ನು ಶ್ರೀ ಸ್ವಾಮಿಗಳು ಹಂಚಿಕೊಳ್ಳುತ್ತಿದ್ದಾರೆ' ಎಂದು ನುಡಿದಿರುವರು.

ಆಂಧ್ರ ಪ್ರಭ (೧೧-೮-೧೯೬೩) ತನ್ನ ಸಮೀಕ್ಷೆಯಲ್ಲಿ "ವ್ಯಾಖ್ಯಾನ ನೈಪುಣ್ಯತೆ ಶ್ರೀ ಸ್ವಾಮಿಗಳವರ ಆಸ್ತಿ. ಗೀತಾ ಸಾರಾಂಶ ಓದುಗನ ಹೃದಯ ಮಂದಿರದಲ್ಲಿ ಶಾಶ್ವತವಾಗಿ ನಿಲ್ಲುವಂತೆ ಮಾಡುವ ಚತುರ ಧೋರಣೆಯಲ್ಲಿ ಇದರ (ಗೀತಾ ಮಕರಂದದ) ರಚನೆ ಸಾಗಿದೆ. ಶ್ರೀ ಸ್ವಾಮಿಗಳವರ ಅಪೂರ್ವ ಗೀತಾ ಭಕ್ತಿಗೆ, ವೇದಾಂತ ವಿಜ್ಞಾನಕ್ಕೆ, ತತ್ತ್ವ ಸುಧಾಮಥನಕ್ಕೆ ಗೀತಾ ಮಕರಂದವೇ ಸಾಕ್ಷಿ" ಎಂದು ಹೇಳಿದೆ.

ಭವನ್ಸ್ ಜರ್ನಲ್ (೨೪-೧೧-೬೩) ತನ್ನ ಸಮೀಕ್ಷೆಯಲ್ಲಿ 'ತೆಲುಗಿನಲ್ಲಿ ಗೀತೆಗೆ ಈ ಹಿಂದೆ ಎಷ್ಟೋ ವ್ಯಾಖ್ಯೆಗಳು ಹೊರಬಿದ್ದಿವೆ. ಆದರೆ ಅನೇಕ ವಿಧಗಳಿಂದ ಕೂಡಿದ ಈ ವ್ಯಾಖ್ಯೆ ವಿಶಿಷ್ಟವಾದುದು. ಈ ಗ್ರಂಥ ಪರಿಚಯದಿಂದ ಶ್ರೀ ಸ್ವಾಮಿಗಳವರು ಕೇವಲ ಪಂಡಿತರು ಮಾತ್ರವೇ ಅಲ್ಲ, ಅನುಭವಪೂರ್ವಕವಾದ ಆಚರಣಾ ವೇದಾಂತದ ಮಹಾ ಬೋಧಕರೆಂದು ತಿಳಿಯುತ್ತದೆ.

"ಪೂಜ್ಯ ಶ್ರೀ ವಿದ್ಯಾ ಪ್ರಕಾಶಾನಂದಗಿರಿ ಸ್ವಾಮಿಗಳ 'ಗೀತಾಮಕರಂದ' ಆಂಧ್ರದಲ್ಲಿ ಎಷ್ಟು ಗೃಹಗಳನ್ನು ಅಲಂಕರಿಸಿದೆಯೋ! ಎಷ್ಟು ಜನಕ್ಕೆ ಗೀತಾಮಕರಂದದ ಸಿಹಿಯನ್ನು ತೋರಿಸಿದೆಯೋ! ವಿದೇಶಗಳಲ್ಲಿರುವವರಿಗೆ ಗೀತಾ ಮಕರಂದದ ಆಂಗ್ಲಾನುವಾದ ಅಮೃತತ್ವವನ್ನು ಒದಗಿಸುತ್ತಿದೆ" ಎಂದು ಚಿನ್ಮಯಾ ಮಿಷನ್‌ನವರಾದ ಶ್ರೀ ಸ್ವಾಮಿನಿ ಶಾರದಾಪ್ರಿಯಾನಂದ ಸ್ವಾಮಿನಿಯವರು ತಮ್ಮ ಹರ್ಷವನ್ನು ವ್ಯಕ್ತಪಡಿಸಿದ್ದಾರೆ.

ಇಂತಹ ಅಮೂಲ್ಯವಾದ, ಶ್ರೀ ಸ್ವಾಮಿಗಳ ರಚನೆಯಾದ 'ಗೀತಾ ಮಕರಂದ'ದ ಆಂಗ್ಲಾನುವಾದ ಅಮೇರಿಕಾ ಮುಂತಾದ ದೇಶಗಳಲ್ಲಿ ಖ್ಯಾತಿ ಗಳಿಸಿದೆ. ಇದರ ಮಹತ್ವವನ್ನು ಗುರುತಿಸಿ ತಿರುಮಲ ತಿರುಪತಿ ದೇವಸ್ಥಾನದವರು ಈ ಮಕರಂದವನ್ನು ತಮಿಳು ಹಾಗು ಹಿಂದಿ ಭಾಷೆಗಳಲ್ಲಿ ಅನುವಾದ ಮಾಡಲಾರಂಭಿಸಿದ್ದಾರೆ. ಸದ್ಯದಲ್ಲೇ ಅವು ಮುದ್ರಿತವಾಗಿ ಹೊರಬರುವ ನಿರೀಕ್ಷೆಯಿದೆ. ಪ್ರಸ್ತುತವಾಗಿ ನಿಮ್ಮ ಕೈಯಲ್ಲಿ ಗೀತಾಮಕರಂದದ ಕನ್ನಡ ಅನುವಾದವಿದೆ. ಈ ಗೀತಾಮಕರಂದವನ್ನು ಓದಿ, ಬಹಳ ಆನಂದಿಸಿ, ಈ ಆನಂದವನ್ನು ಕನ್ನಡಿಗರೊಂದಿಗೆ ಹಂಚಿಕೊಳ್ಳಬೇಕೆನ್ನುವ ಹಂಬಲದಿಂದ, ಉದ್ಯೋಗ ನಿಮಿತ್ತವಾಗಿ ಲಿಬಿಯಾ ದೇಶದಲ್ಲಿರುವ ಡಾ॥ ಆರ್. ಎನ್. ಶ್ರೀನಾಥ್ ಅವರು ನಮ್ಮ ಅನುಮತಿಯನ್ನು ಯಾಚಿಸಿ, ಅದನ್ನು ಪಡೆದು, ಈ ಕನ್ನಡ ಅನುವಾದವನ್ನು ಪೂರ್ತಿ ಮಾಡಿ, ಅವರೇ ಮುದ್ರಣದ ಭಾರವನ್ನು ಹೊತ್ತು ಕನ್ನಡ ಲೋಕಕ್ಕೆ ಕಾಣಿಕೆಯಾಗಿತ್ತಿದ್ದಾರೆ. ನಿಜವಾಗಿ ಅವರು ಒಬ್ಬ ಧನ್ಯಜೀವಿ. ಅವರಿಗೆ ಭಗವಂತನಾದ ಶ್ರೀ ಕೃಷ್ಣನು ಶಾಂತ್ಯಾನಂದಗಳನ್ನು ಪ್ರಸಾದಿಸಲಿ!

ಈ ಅಪೂರ್ವ ಗ್ರಂಥವನ್ನು ಕನ್ನಡಿಗರು ಓದಿ, ಆನಂದಿಸಿ, ನೆರೆ ಹೊರೆಯವರೊಂದಿಗೆ ಈ ಆನಂದವನ್ನು ಹಂಚಿಕೊಂಡು ಧನ್ಯರಾಗಲಿ!

ಓಂ

ಶ್ರೀ ಕಾಳಹಸ್ತಿ
೯-೭-೧೯೯೮
ಶಯ್ಯನೈಕಾದಶಿ

ಶ್ರೀ ವಿದ್ಯಾಸ್ವರೂಪಾನಂದಗಿರಿ ಸ್ವಾಮಿಗಳವರು
ಶ್ರೀ ಶುಕಬ್ರಹ್ಮಾಶ್ರಮ ಪೀಠಾದಿಪತಿಗಳು

# ಅನುವಾದಕರ ಮಾತು

೧೯೯೫ರ ಜೂನ್ ತಿಂಗಳಲ್ಲಿ ನಾನು ಲಿಬಿಯಾದಿಂದ ರಜಾಕ್ಕೆಂದು ಇಂಡಿಯಾ ಬಂದಿದ್ದೆ. ನನ್ನ ಪತ್ನಿ, ಮಗ ಹಾಗು ಮಗಳು ಆಗ ಬಳ್ಳಾರಿಯಲ್ಲಿದ್ದರು. ಬಳ್ಳಾರಿ ಬಿಸಿಲಿಗೆ ತತ್ತರಿಸಿ ಸಾಯಂಕಾಲ ಹೊರಗಡೆ ದಿನವೂ ವಾಕಿಂಗ್ ಹೋಗುತ್ತಿದ್ದೆ. ಹೀಗೆ ಒಂದು ದಿನ ವಾಕಿಂಗ್‌ನಿಂದ ಮನೆಗೆ ಹಿಂದಿರುಗುತ್ತಿರುವಾಗ ದೂರದಿಂದ ಮೈಕ್ ಮೂಲಕ ಬರುತ್ತಿದ್ದ ಸೌಮ್ಯವಾದ ಉಪನ್ಯಾಸವನ್ನು ಕೇಳಿ ಆ ಕಡೆ ಹೋದೆ. ಅದು ಶ್ರೀ ರಾಮಾಕೃಷ್ಣಾಶ್ರಮದ ಬಳ್ಳಾರಿ ಶಾಖೆ, ಅಂದು ಅಲ್ಲಿ ಗೀತಾಪ್ರವಚನ ನಡೆಯುತ್ತಿತ್ತು. ಅಲ್ಲೇ ಪಕ್ಕದಲ್ಲಿ ಕುಳಿತು ಪ್ರವಚನವನ್ನು ಕೇಳಿದೆ. ಯಾವುದೋ ಅವ್ಯಕ್ತ ಶಕ್ತಿ ಮರುದಿನ ಬೆಳಿಗ್ಗೆ ಉಪನಿಷತ್ ಪ್ರವಚನೆಗೂ ಹಾಗೂ ಸಾಯಂಕಾಲ ಭಗವದ್ಗೀತೆಯ ಪ್ರವಚನೆಗೂ ಕರೆದೊಯ್ಯಿತು. ಐದಾರು ದಿನಗಳು ತಪ್ಪದೆ ಹೋದೆ, ಆದರೆ ಮತ್ತೆ ನಾನು ಲಿಬಿಯಾಕ್ಕೆ ಹೋಗುವ ದಿನ ಬಂತು. ಆ ದಿನ ಸಾಯಂಕಾಲ ಪ್ರವಚನ ನೀಡುತ್ತಿದ್ದ ಶ್ರೀ ಸ್ವಾಮಿ ಶಿವದೇವಾನಂದ ಗಿರಿಯವರ ದರ್ಶನ ಮಾಡಿ ಭಗವದ್ಗೀತೆಯನ್ನು ತಿಳಿದುಕೊಳ್ಳಬೇಕೆಂದಿದ್ದ ನನ್ನ ಉತ್ಸುಕತೆಯನ್ನು ಹಾಗೂ ನಾನು ಲಿಬಿಯಾದಲ್ಲಿರುವ ವಿಷಯವನ್ನು ತಿಳಿಸಿದೆ. ಸ್ವಾಮಿಯವರು ಅಜ್ಜಂಪುರ ಮಠದವರು ಪ್ರಕಟಿಸಿರುವ ಭಗವದ್ಗೀತೆಯ ಪ್ರತಿಗಳನ್ನು ಕೊಟ್ಟು ಆಶೀರ್ವದಿಸಿ ಕಳುಹಿಸಿದರು. ಅಂದಿನಿಂದ ನನ್ನ ಭಗವದ್ಗೀತೆ ವ್ಯಾಸಂಗ ಶ್ರದ್ಧೆಯಿಂದ ಸಾಗಿತು. ಶ್ರೀ ರಾಮಕೃಷ್ಣ ಮಠದವರ ಹಾಗು ಗೋರಖ್‌ಪುರ್ ಪ್ರೆಸ್ ಅವರ ಇಂಗ್ಲೀಷ್‌ನಲ್ಲಿ ಪ್ರಕಟವಾಗಿರುವ ಭಗವದ್ಗೀತೆಗಳನ್ನು ಉಪಯೋಗಿಸಿಕೊಂಡು ಸುಮಾರು ೨½ ವರ್ಷಗಳಲ್ಲಿ ಎಲ್ಲಾ ೭೦೧ ಶ್ಲೋಕಗಳನ್ನು ಬಾಯಿಪಾಠ ಮಾಡಿದೆ.

ಕ್ಲೇಶಾತ್ಮಕವಾದ ಸಾಂಸಾರಿಕ ಮೋಹಪಾಶಕ್ಕೆ ಬಲಿಯಾಗಿ, ಎಲ್ಲಾ ರೀತಿಯ ಯಾತನೆಗಳನ್ನು ಅನುಭವಿಸುತ್ತಿದ್ದ ನನಗೆ ಈ ಭಗವದ್ಗೀತಾ ಪಠನ ಸಾಂತ್ವನ ನೀಡಿತು. ಅಂದಿನಿಂದ ನನ್ನ ತಾಪತ್ರಯಗಳು ತಾವೇ ತಾವಾಗಿ ಇಲ್ಲವಾದವು. ಅಷ್ಟೇ ಅಲ್ಲದೆ ನನ್ನ ಧ್ಯೇಯಗಳು, ಆಶಯಗಳು ಹಾಗೂ ಬಾಧ್ಯತೆಗಳು ನೆರವೇರಲು ಪ್ರಾರಂಭಿಸಿದವು. ಗೀತಾ ಮಾತೆಯ ಪ್ರಸಾದ ಅಪಾರ.

ಈ ಅಖಂಡ ಬ್ರಹ್ಮಾಂಡ ಲೋಕದಲ್ಲಿ ಮಾನವರಾಗಿ ಹುಟ್ಟಿ, ಅದ್ವಿತೀಯವಾದ ವಿಚಕ್ಷಣಾ ಹಾಗು ಜ್ಞಾಪಕ ಶಕ್ತಿಗಳನ್ನು ಪಡೆದ ನಾವು ಏನು ಮಾಡುತ್ತಿದ್ದೇವೆ? ನಾವು ಮಾಡುತ್ತಿರುವುದು ಸರಿಯೇ? ಸರ್ವೇಸಾಮಾನ್ಯವಾಗಿ ಈ ಪ್ರಶ್ನೆ ಪ್ರತಿಯೊಬ್ಬ ಬುದ್ಧಿಜೀವಿಯನ್ನು ಕಾಡಿದೆ. ಅಂತಹ ಆಲೋಚನೆ ನನ್ನಲ್ಲಿ ಪ್ರಬಲವಾದಂತೆ, ಏನಾದರೂ ಒಂದು ಸತ್ಕಾರ್ಯ ಮಾಡಿ ನನ್ನ ಋಣವನ್ನು ಸ್ವಲ್ಪಮಟ್ಟಿಗಾದರೂ ತೀರಿಸಿಕೊಳ್ಳಬೇಕೆಂಬ ಹಂಬಲ ಬಲವಾಯಿತು. ಕನ್ನಡ ನಾಡಿನಲ್ಲಿ ಹುಟ್ಟಿ ಬೆಳೆದು ದೊಡ್ಡವನಾದ ನಾನು ಕಾಣಿಕೆಯಾಗಿ ಭಗವದ್ಗೀತೆಯ ವ್ಯಾಖ್ಯಾನ ಬರೆಯಬೇಕೆಂದುಕೊಂಡೆ! ಆದರೆ ಅನುಭವ ಎಲ್ಲಿದೆ? ಅನುಭವ ಜ್ಞಾನವಿಲ್ಲದ ಬರಹಕ್ಕೆ ಬೆಲೆಯಿರುವುದಿಲ್ಲವಲ್ಲ!

ಅಷ್ಟರಲ್ಲಿ ಲಿಬಿಯಾದಲ್ಲಿ ನನ್ನ ಸಹೋದ್ಯೋಗಿಗಳಾದ ಶ್ರೀ ವಿ. ಭಾನುಪ್ರಕಾಶ್ ಅವರು ನನಗೆ ತೆಲುಗಿನ 'ಗೀತಾಮಕರಂದ'ವನ್ನು ಓದಲು ಕೊಟ್ಟರು. (ನಾನು ತೆಲುಗಿನ ವ್ಯಾಸಂಗ ಮಾಡಿಲ್ಲವಾದರೂ ಓದಬಲ್ಲೆ, ಅರ್ಥಮಾಡಿಕೊಳ್ಳಬಲ್ಲೆ ಆದರೆ ಬರೆಯಲು ಬರುವುದಿಲ್ಲ). ಆ ಪುಸ್ತಕವನ್ನು ಓದುತ್ತಿದ್ದಂತೆ ರೋಮಾಂಚನವಾಯಿತು. ನಾನು ಈ ಪುಸ್ತಕವನ್ನು ಕನ್ನಡಕ್ಕೆ ಏಕೆ ಭಾಷಾಂತರ ಮಾಡಬಾರದು? ಎಂದು ಯೋಚಿಸಿ ಶ್ರೀ ಭಾನುಪ್ರಕಾಶ್ ಅವರ ಸಲಹೆ ಕೇಳಿದೆ. ತಕ್ಷಣ ಆತ ಎಷ್ಟು ನನಗೆ ಪ್ರೋತ್ಸಾಹವಿತ್ತು, ಹುರಿದುಂಬಿಸಿದನೆಂದರೆ, ಹೇಳಲು ಅಸಾಧ್ಯ. ತಕ್ಷಣವೇ ಶ್ರೀ ಕಾಳಹಸ್ತಿಯ ಶ್ರೀ ಶುಕಬ್ರಹ್ಮಾಶ್ರಮಕ್ಕೆ ಅನುಮತಿ ಕೋರಿ ಪತ್ರ ಬರೆದೆವು. ಸ್ವಲ್ಪದಿನಗಳ ನಂತರ ಉತ್ತರವೇನೋ ಬಂತು ಆದರೆ ಅದು ನಿರಾಶಾದಾಯಕವಾಗಿತ್ತು. "ಈಗಾಗಲೇ ತಿರುಪತಿ ದೇವಸ್ಥಾನದವರು ತಮಿಳು, ಹಿಂದಿ, ಕನ್ನಡಗಳಲ್ಲಿ 'ಗೀತಾಮಕರಂದ'ವನ್ನು ಭಾಷಾಂತರ ಮಾಡುವ ಯೋಜನೆಯನ್ನು ಹಾಕಿಕೊಂಡಿದ್ದಾರೆ. ಒಂದು ಪಕ್ಷ ಅವರ ಯೋಜನೆ ನಿಂತು ಹೋದರೆ ನಿಮಗೆ ಅನುಮತಿ ಕೊಡುತ್ತೇವೆ" ಎಂದು ತಿಳಿಸಿದ್ದರು. ಸ್ವಲ್ಪ ದಿನಗಳಲ್ಲಿ ಅದನ್ನು ಪೂರ್ತಿಯಾಗಿ ಮರೆತುಬಿಟ್ಟೆವು. ನಂತರ ಬೇರೆ ಯಾವುದಾದರೂ ಗೀತೆಗೆ ಸಂಬಂಧಿಸಿದ ಗ್ರಂಥವನ್ನು ಭಾಷಾಂತರ ಮಾಡಬಹುದೇ ಎನ್ನುವ ಪ್ರಯತ್ನವನ್ನೇನೋ ನಡೆಸಿದ್ದೆ, ಆದರೆ ನನ್ನ ಮನಸ್ಸಿಗೆ ಒಪ್ಪುವಂತಹ ಗ್ರಂಥ ಯಾವುದೂ ಸಿಕ್ಕಿರಲಿಲ್ಲ. ಅಷ್ಟರಲ್ಲಿ ನನ್ನ ೫೦ನೆಯ ಹುಟ್ಟು ಹಬ್ಬದ ನಂತರವೇ, ಶ್ರೀ ಶುಕ್ರಬ್ರಹ್ಮಾಶ್ರಮದಿಂದ ಮತ್ತೊಂದು ಪತ್ರ ಬಂತು. ಅದರಲ್ಲಿ ಅವರು ನನಗೆ ಪೂರ್ಣ ಅನುಮತಿ ನೀಡಿ ಬರೆದಿದ್ದರು. ಮುದ್ರಣದ ಭಾರವನ್ನೆಲ್ಲಾ ನೀವೇ ಹೊತ್ತು ಪ್ರಿಂಟ್ ಮಾಡಿಸಿ, ಆದರೆ ನಮಗೆ ಎರಡು ಪ್ರತಿಗಳನ್ನು ಮಾತ್ರ ಕಳುಹಿಸಿ ಎಂದು ತಿಳಿಸಿದ್ದರು. ತತ್‌ಕ್ಷಣವೇ ನಾನು ಹಾಗು ಶ್ರೀ ಭಾನುಪ್ರಕಾಶ್ ಕಾರ್ಯೋನ್ಮುಖರಾದೆವು. ಪ್ರತಿನಿತ್ಯ ೫ ರಿಂದ ೬ ಘಂಟೆಗಳು ಬರೆಯುತ್ತಿದ್ದೆ. ಕನ್ನಡವನ್ನು ಓದಿ, ಬರೆದು ಸುಮಾರು ಹದಿನೈದು ವರ್ಷಗಳಾಗಿದ್ದುವು. ಆದರೂ ಧೈರ್ಯದಿಂದ ಆ ಭಗವಂತನ ಮೇಲೆ ಭಾರ ಹಾಕಿ ಪ್ರಾರಂಭಿಸಿದೆ. ೬.೧೧.೧೯೯೭ ಸೋಮವಾರ ಪ್ರಾರಂಭ ಮಾಡಿ, ಮೂರು ತಿಂಗಳಲ್ಲಿ ಸುಮಾರು ೧೦೦೦ ಪುಟಗಳಿರುವ ಆ ಬೃಹದ್ಗ್ರಂಥದ ಭಾಷಾಂತರ ಮುಗಿಸಿದೆ.

ಶ್ರೀ ಭಾನುಪ್ರಕಾಶ್ ಅವರು ತೆಲುಗಿನಲ್ಲಿ ಓದುತ್ತಾ ಹೋದರೆ, ನಾನು ಕನ್ನಡದಲ್ಲಿ ಬರೆಯುತ್ತಾ ಹೋದೆ. ಬರೆಯುವ ವೇಳೆಯಲ್ಲಿ ಮನೆಗೆ ಬಂದವರಿಗೆ ಆಶ್ಚರ್ಯ. ಒಂದು ಭಾಷೆಯಲ್ಲಿ ಓದುತ್ತಿದ್ದರೆ, ಇನ್ನೊಂದು ಭಾಷೆಯಲ್ಲಿ ಇಷ್ಟು ವೇಗವಾಗಿ ನೀವು ಹೇಗೆ ಬರೆಯಲು ಸಾಧ್ಯ? ಎಂದು ಕೇಳುತ್ತಿದ್ದರು. ಅವರಿಗೆ ಅನುಮಾನ ಬಂದು ಪಕ್ಕದಲ್ಲಿ ನಿಂತು ನೋಡುತ್ತಿದ್ದರು. ದೈವ ಕೃಪೆಯೊಂದಿದ್ದರೆ ಏನನ್ನಾದರೂ ಸಾಧಿಸಬಹುದು. 'ಮೂಕಂ ಕರೋತಿ ವಾಚಾಲಂ ಪಂಗುಂ ಲಂಘಯತೇ ಗಿರಿಂ' (ದೈವ ಕೃಪೆಯೊಂದಿದ್ದರೆ ಮೂಕನು ಮಾತನಾಡುವನು, ಕುಂಟನು ಪರ್ವತವನ್ನು ಹತ್ತುವನು) ಎಂದು ಆರ್ಯೋಕ್ತಿಯೇ ಇದೆಯಲ್ಲ!

೧೯೯೮ ಜೂನ್ ತಿಂಗಳಲ್ಲಿ ರಜಕ್ಕೆ ಬಂದಾಗ ಎಲ್ಲಾ ಪ್ರೆಸ್‌ಗಳಿಗೆ ಭೇಟಿಕೊಟ್ಟೆ. ಕೊನೆಗೆ ನನ್ನ ಸ್ನೇಹಿತರಾದ ಶ್ರೀ ವಿಶ್ವನಾಥ್ ರೆಡ್ಡಿ (ರಿಟೈರ್ಡ್ ಕನ್ನಡ ಪ್ರೊಫೆಸರ್) ಯವರ ಸಹಾಯದಿಂದ ಲಕ್ಷ್ಮಿ ಮುದ್ರಣಾಲಯದ ಪರಿಚಯವಾಯಿತು. ಮೊದಲ ನೋಟಕ್ಕೆ ಪ್ರೆಸ್ಸಿನ ಮೇಲೆ, ಮಾಲೀಕರಾದ ಶ್ರೀ ಅಶೋಕ್ ಕುಮಾರ್ ಅವರ ಮೇಲೆ ವಿಶ್ವಾಸ ಉಂಟಾಯಿತು. ೨೦೦೦ ಪ್ರತಿಗಳಿಗೆ ೩ ಲಕ್ಷ ೪೦ ಸಾವಿರ ರೂಪಾಯಿಗಳ ವೆಚ್ಚ ತಗಲುವುದೆಂದು ಅವರು ತಿಳಿಸಿದರು. ಇಷ್ಟು ಹಣ ಒಬ್ಬನೇ ಭರಿಸುವುದು ಕಷ್ಟವಾಗುವುದೆಂದು ತಿಳಿದು 'ಗೀತಾ ಮಕರಂದ ಪ್ರಕಾಶನ ಯೋಜನೆ' ಎಂದು ಪ್ರಾರಂಭ ಮಾಡಿದೆ. ಆ ಯೋಜನೆಯ ಪ್ರಕಾರ ಪುಸ್ತಕವನ್ನು ೧೫೦ ರೂ.ಗಳು ಮುಂಗಡವಾಗಿ ಕೊಟ್ಟು ಕೊಂಡರೆ ಸಹಾಯವಾಗುವುದೆಂದು ತಿಳಿಸಿದೆ. ಕೊನೆಗೆ ಸಾವಿರಾರು ರೂಪಾಯಿಗಳನ್ನು ರೆಸೀಟ್ ಬುಕ್ಸ್ ಹಾಗು ಸೀಲುಗಳನ್ನು ಮಾಡುವುದರಲ್ಲಿ ವೆಚ್ಚಮಾಡಿದೆವೇ ಹೊರತು ಅದರಿಂದ ಏನೂ ಪ್ರಯೋಜನವಾಗಲಿಲ್ಲ. ಪತ್ರಿಕೆಗಳಲ್ಲಿ "ಸಂಪಾದಕರಿಗೆ ಪತ್ರ" ಬರೆದು ಈ ಯೋಜನೆಗೆ ಸಹಾಯ ಮಾಡಬೇಕೆಂದು ಯಾಚಿಸಿದೆ. ಯಾವ ಕಡೆಯಿಂದಲೂ ಪ್ರೋತ್ಸಾಹ ಸಿಗಲಿಲ್ಲ.

ನನ್ನ ಬಂಧುಗಳೆಲ್ಲಾ ತೆಲುಗಿನವರು. ಕನ್ನಡದ ಪುಸ್ತಕಕ್ಕೆ ಅವರಿಂದ ಹಣ ಕೇಳಲು ನನಗೆ ಸಂಕೋಚ. ಆದರೂ ನನ್ನ ಕಷ್ಟವನ್ನು ತಿಳಿಸಿದೆ. ಕೂಡಲೇ ಅವರು ಮುಂದೆ ಬಂದು ಶಕ್ತಿ ಮೀರಿ ದ್ರವ್ಯದಾನ ಮಾಡಿ ನನ್ನ ಈ ಯೋಜನೆಯನ್ನು ಕಾರ್ಯಗತಗೊಳಿಸಲು ಸಹಾಯಕವಾದರು. ಅವರಿಗೆ ಕನ್ನಡದ ಮೇಲಿರುವ ಅಭಿಮಾನ ಹೀಗೇ ಮುಂದುವರಿಯಲಿ ಎಂದು ಇಚ್ಛಿಸುತ್ತೇನೆ.

ಒಂದು ಪುಸ್ತಕವನ್ನು ಹೊರತರುವುದು ಎಷ್ಟು ಕಷ್ಟವೆಂದು ನನಗೆ ನಂತರ ತಿಳಿಯಿತು. ಇಲ್ಲಿ ಕೆಲವರಿಗೆ ಪ್ರೂಫ್ ರೀಡಿಂಗ್ ಮಾಡಲು ಹೇಳಿದ್ದೆ ಆದರೆ ಅದು ಯಾವುದೂ ಸಾಧ್ಯವಾಗಲಿಲ್ಲ. ಇಲ್ಲಿಂದ ಲಿಬಿಯಾಕ್ಕೆ ತೆಗೆದುಕೊಂಡು ಹೋಗಿ ನಾನೇ ಪ್ರತಿಯೊಂದನ್ನೂ ನೋಡಬೇಕಾಯಿತು. ನಾನು ಇಲ್ಲಿಗೆ ಬರುವುದು ವರ್ಷಕ್ಕೊಮ್ಮೆ. ಹೀಗಾಗಿ ಪ್ರಕಾಶನ ತಡವಾಯಿತು. ಆದ್ದರಿಂದ ಈಗ ಹೇಗಾದರೂ ಮಾಡಿ ಪ್ರಕಟನೆಯ ಕಾರ್ಯ ಮುಗಿಸಬೇಕೆಂದು ವರ್ಷದ ಮಧ್ಯೆ ರಜಾದಲ್ಲಿ ಸ್ವಂತ ಖರ್ಚಿನಲ್ಲಿ ಬಂದಿದ್ದೇನೆ.

ನಾನು ಈ ಪುಸ್ತಕ ಅನುವಾದ ಮಾಡುವಾಗ ಅನೇಕ ಸ್ನೇಹಿತರು ನೆರವಾಗಿದ್ದಾರೆ. ನನ್ನ ಪತ್ನಿ ಆ ಸಮಯದಲ್ಲಿ ಇಂಡಿಯಾದಲ್ಲಿದ್ದಳಾದ್ದರಿಂದ, ಲಿಬಿಯಾದ ನನ್ನ ಮನೆಯಲ್ಲಿ ಪ್ರತಿನಿತ್ಯ ಜಾಗರಣೆ ಹಾಗು ಜಾತ್ರೆ ಇರುತ್ತಿತ್ತು. ತೆಲುಗಿನವರು ಬಂದು ಒಬ್ಬರಾದ ನಂತರ ಒಬ್ಬರು ಓದುತ್ತಿದ್ದರು. ನಾನು ಮಾತ್ರ ತಲೆ ಎತ್ತದೇ ಬರೆಯುತ್ತಿದ್ದೆ. ಕೆಲವರು ಅಡಿಗೆ ಮಾಡುತ್ತಿದ್ದರು. ಎಲ್ಲರೂ ಕಲೆತು ಊಟ ಮಾಡುತ್ತಿದ್ದೆವು. ನಿತ್ಯವೂ ಹಬ್ಬದ ವಾತಾವರಣ. ನನಗೆ ಬೇಕಾದ ಪೆನ್, ಪೆನ್ಸಿಲ್, ಪೇಪರ್ ಮುಂತಾದ ಸಲಕರಣೆಗಳನ್ನು ಡಾ|| ಡಿ. ನಾರಾಯಣ ರಾವ್ ಅವರು ತಂದೊಗಿಸುತ್ತಿದ್ದರು. ಎಲ್ಲಾ ರೀತಿಯ ಪ್ರೋತ್ಸಾಹವನ್ನು ಅವರು ಕೊಟ್ಟಿದ್ದಾರೆ. ಇವರಲ್ಲದೆ ಆ ಸಮಯದಲ್ಲಿ ನನಗೆ ಸಹಾಯಕವಾಗಿದ್ದ ಈ ಕೆಳಕಂಡವರನ್ನು ಜ್ಞಾಪಿಸಿಕೊಂಡು ವಂದನೆಗಳನ್ನು ಅರ್ಪಿಸುವುದು ನನ್ನ ಕರ್ತವ್ಯ. ಡಾಕ್ಟರ್ಸ್ : ಎಂ. ವೈ. ಕೊಂಡಲು, ರಾಮಭಾವ್, ಮಲ್ಲಾರೆಡ್ಡಿ, ರಾಧಾಕೃಷ್ಣ, ರಾಜೇಂದ್ರ ಪ್ರಸಾದ್ ಬಾಪೂಜಿ, ಆನಂದರಾವ್, ಮೋಹನರಾವ್, ಎನ್. ಹೆಚ್. ಶರ್ಮ, ಬಿ. ಎನ್. ರಾವ್, ವಿಶ್ವನಾಥಮ್, ಪ್ರಸನ್ನ ಕುಮಾರ್, ಶಿವನಂಜೇಗೌಡ ಮುಂತಾದವರು. (ಯಾರನ್ನಾದರೂ ಒಂದು ಪಕ್ಷ ಮರೆತಿದ್ದರೆ ದಯವಿಟ್ಟು ಕ್ಷಮಿಸುವುದು).

ಈ ನನ್ನ 'ಗೀತಾ ಮಕರಂದ'ದ ಕಥೆಯ ಹಿಂದೆ ಸೂತ್ರಧಾರಿಯಾಗಿ ನನ್ನ ಪತ್ನಿಯಿದ್ದಳು. ಅವಳೇ ಈ ಪುಸ್ತಕದ ಪ್ರಕಾಶನದ ಭಾರವನ್ನು ಹೊತ್ತಿದ್ದಾಳೆ. ಹೆಜ್ಜೆ ಹೆಜ್ಜೆಗೆ ನನಗೆ ಪ್ರೋತ್ಸಾಹ ಕೊಟ್ಟು ತುಂಬು ಮನಸ್ಸಿನಿಂದ ಈ ಪುಸ್ತಕ ಹೊರಬರಲು ಸರ್ವಪ್ರಯತ್ನಗಳನ್ನು ಮಾಡಿದ್ದಾಳೆ. ಇದಕ್ಕಿಂತ ಹೆಚ್ಚು ಬರೆದರೆ ಅತಿಶಯೋಕ್ತಿ ಎನಿಸಬಹುದು.

ನನ್ನ ಮಗ ಡಾ|| ಜ್ಞಾನೇಶ್ ಈ ಗ್ರಂಥ ಪ್ರಕಾಶನದ ವಿಷಯದಲ್ಲಿ ನನಗೆ ಬಹಳ ಸಹಾಯಕವಾಗಿದ್ದಾನೆ. ಅವನೊಬ್ಬನೇ ಅಲ್ಲದೆ ನನ್ನ ಮಗಳು ಚಿ|| ಶಾಂತಲಾ ಹಾಗು ಅವಳ ಪತಿ ಚಿ|| ಅನಿಲ್ ಪ್ರೋತ್ಸಾಹ ನೀಡಿ ಉತ್ತೇಜನ ಕೊಟ್ಟಿರುತ್ತಾರೆ. ನನ್ನ ಮುದ್ದಿನ ಮೊಮ್ಮಗಳು ಚಿ|| ಅನಿಶಾ ಬಿಡುಗಡೆಯ ವೇಳೆಯಲ್ಲಿ ಒಂದು ಪ್ರೇರಣೆ.

ನಾನೊಬ್ಬನೇ ಕೊನೆಯವರೆಗೂ ಪ್ರೂಫ್ ರೀಡಿಂಗ್ ಮಾಡಬೇಕಲ್ಲ ಎಂದುಕೊಂಡು ಅಧೀರನಾಗಿದ್ದಾಗ, ಆ ಕರುಣಾಮಯಿ

ಗೀತಾಚಾರ್ಯ ಲಿಬಿಯಾದಲ್ಲಿಯೂ ಒಬ್ಬ ಪಾಂಡಿತ್ಯವುಳ್ಳ ಕನ್ನಡಿಗನನ್ನು ಒದಗಿಸಿ ನನ್ನ ಮನಸ್ಸಿಗೆ ನೆಮ್ಮದಿ ನೀಡಿರುವನು. ಅವರು ಡಾ|| ನಾಗೇಂದ್ರನ್. ಸೈಕಿಯಾಟ್ರಿಸ್ಟ್ ಆಗಿ ಕೆಲಸಮಾಡುತ್ತಿರುವ ಡಾ|| ನಾಗೇಂದ್ರನ್ ನನಗೆ ಬಹಳ ನೆರವಾಗಿ, ಅನೇಕ ಒಳ್ಳೆಯ ಹಾಗು ಸೂಕ್ತ ಸಲಹೆಗಳನ್ನಿತ್ತು ಸಹಾಯ ಮಾಡಿದ್ದಾರೆ. ಅವರಿಗೆ ನಾನು ಋಣಿಯಾಗಿದ್ದೇನೆ.

**ಈ ಭಾಷಾಂತರಕ್ಕೆ ಅನುಮತಿ ಕೊಟ್ಟು ಆಶೀರ್ವದಿಸಿದ ಶ್ರೀ ಶ್ರೀ ಶ್ರೀ ವಿದ್ಯಾಪ್ರಕಾಶಾನಂದಗಿರಿ ಸ್ವಾಮಿಗಳವರಿಗೆ ನನ್ನ ಶ್ರದ್ಧಾಪೂರ್ವಕ ಸಾಷ್ಟಾಂಗ ನಮಸ್ಕಾರಗಳು.**

ನಮ್ಮ ಪ್ರಾರ್ಥನೆಯ ಮೇರೆಗೆ ಮುನ್ನುಡಿ ಬರೆದು ಆಶೀರ್ವಚನ ನೀಡಿರುವ ಶ್ರೀ ಶುಕಬ್ರಹ್ಮಾಶ್ರಮದ ಪೀಠಾಧಿಪತಿಗಳಾದ ಶ್ರೀ ಶ್ರೀ ಶ್ರೀ ವಿದ್ಯಾಸ್ವರೂಪಾನಂದಗಿರಿ ಸ್ವಾಮಿಗಳವರಿಗೆ ಭಕ್ತಿ ಪೂರ್ವಕವಾಗಿ ಸಾಷ್ಟಾಂಗ ನಮಸ್ಕಾರಗಳನ್ನು ಅರ್ಪಿಸುತ್ತಿದ್ದೇನೆ. ಶ್ರೀ ಶುಕಬ್ರಹ್ಮಾಶ್ರಮದ ಮ್ಯಾನೇಜರ್‌ರವರಾದ ಶ್ರೀ ಕೆ. ಈಶ್ವರ್ ಅವರಿಗೆ ನನ್ನ ಹಾರ್ದಿಕ ವಂದನೆಗಳು.

ಇದನ್ನು ಮುದ್ರಣಕ್ಕೆ ಕೊಡುವ ಮುನ್ನ ಶ್ರೀ ಕೆ. ಗುಂಡಯ್ಯ ಶೆಟ್ಟಿಯವರು ಸಹಾಯಮಾಡಿದ್ದಾರೆ. ಅವರಿಗೆ ನನ್ನ ವಂದನೆಗಳು.

ಸುಂದರವಾಗಿ ಮುದ್ರಿಸಿ, ತಮ್ಮ ಎಲ್ಲಾ ತಾಂತ್ರಿಕ ನೈಪುಣ್ಯತೆಯನ್ನು ತೋರಿಸಿರುವ ಲಕ್ಷ್ಮಿ ಮುದ್ರಣಾಲಯದ ಸಿಬ್ಬಂದಿಗೆ ಹಾಗು ಮಾಲೀಕರಾದ ಶ್ರೀ ಅಶೋಕ್ ಕುಮಾರ್ ಅವರಿಗೆ ನಾನು ಚಿರಋಣಿಯಾಗಿದ್ದೇನೆ.

ಲಕ್ಷ್ಮಿ ಮುದ್ರಣಾಲಯದ ಮ್ಯಾನೇಜರ್ ವೆಂಕಟೇಶ್ ಅವರಿಗೆ ಹಾಗು ತಾಳ್ಮೆಯಿಂದ ತಪ್ಪಿಲ್ಲದೆ ಸುಂದರವಾಗಿ ಟೈಪು ಮಾಡಿದ ಶ್ರೀಮತಿ ಟಿ. ಎ. ರಾಜೇಶ್ವರಿ ಹಾಗು ಶ್ರೀಮತಿ ಜಿ. ಸತ್ಯಕುಮಾರಿಯವರಿಗೆ ಅನೇಕಾನೇಕ ವಂದನೆಗಳು. ಸುಂದರವಾಗಿ ಮುಖಪುಟ ವಿನ್ಯಾಸಮಾಡಿದ, ಅಲ್ಲದೆ ನಾನು ಪ್ರೂಫ್ ರೀಡ್ ಮಾಡುವಾಗ ನೈತಿಕ ಬೆಂಬಲ ನೀಡಿದ ಶ್ರೀ ಕೆ. ಕೆ. ಮಕಾಳಿ (ಆರ್ಟಿಸ್ಟ್) ಅವರಿಗೆ ನನ್ನ ಆತ್ಮೀಯ ವಂದನೆಗಳು.

ಇನ್ನು ನನ್ನ ಆಪ್ತ ಕನ್ನಡ ಬಂಧುಗಳೊಂದಿಗೆ ಒಂದು ಮಾತು. ಇದು ಸಾಮಾನ್ಯವಾದ ಕಾದಂಬರಿಯಂತಹ ಪುಸ್ತಕವಲ್ಲ. ಇದರಲ್ಲಿಯ ೭೦೦ ಶ್ಲೋಕಗಳು, ೭೦೦ ಮಂತ್ರಗಳು, ಈ ಪುಸ್ತಕ ನಿಮ್ಮಲ್ಲಿದ್ದರೆ ಒಂದಲ್ಲ ಒಂದು ದಿನ ಅದು ನಿಮ್ಮನ್ನು ಆಕರ್ಷಿಸುತ್ತದೆ. ನಿಮ್ಮ ತಾಪತ್ರಯಗಳಿಗೆ, ಕಷ್ಟ ದುಃಖಗಳಿಗೆ ರಾಮಬಾಣವಾಗುತ್ತದೆ. ನೀವು ಒಂದು ಪ್ರತಿ ಕೊಂಡು ಮನೆಯಲ್ಲಿಡುವುದರಿಂದ ನಮ್ಮ ಯೋಜನೆಯ ಪ್ರಕಾರ ಅದೇ ಹಣಕ್ಕೆ ಮತ್ತೊಂದು ಪ್ರತಿ ಇನ್ನೊಬ್ಬ ಕನ್ನಡಿಗನ ಕೈ ಸೇರುವುದು. ನಮ್ಮ ಉದ್ದೇಶ ಹಳ್ಳಿ ಹಳ್ಳಿಗೂ ಇದರ ಪ್ರತಿಗಳನ್ನು ತಲುಪಿಸುವುದೇ ಆಗಿದೆ. ಇದಕ್ಕೆ ಸುಹೃದಯಿಗಳಾದ ತಾವು, ಪ್ರೆಸ್‌ನವರು ಸಹಾಯ ಮಾಡುತ್ತೀರೆಂದು ಆಶಿಸುತ್ತಾ ಆ ಜಗದ್ಗುರು ಸರ್ವರಿಗೂ ಮಂಗಳವನ್ನುಂಟುಮಾಡಲಿ ಎಂದು ಪ್ರಾರ್ಥಿಸುತ್ತೇನೆ.

ಇದು ನನ್ನ ಚೊಚ್ಚಲು ಪ್ರಯತ್ನವೇ ಅಲ್ಲದೆ ಕನ್ನಡ ಸಂಪರ್ಕವಿಲ್ಲದ ವಿದೇಶದಲ್ಲಿದ್ದು ಬರೆದದ್ದಾದರಿಂದ ಸಹಜವಾಗಿ ಇದರಲ್ಲಿ ಕೆಲವು ದೋಷಗಳಿರಬಹುದು. ಸುಹೃದಯಿಗಳಾದ ಕನ್ನಡಿಗರು ಇಂತಹ ತಪ್ಪುಗಳನ್ನು ನನ್ನ ಗಮನಕ್ಕೆ ತರುವುದರಲ್ಲಿ ಸಹಾಯಕವಾಗಬೇಕೆಂದು ಪ್ರಾಥಿಸುತ್ತೇನೆ. ನಿಮ್ಮ ಸಲಹೆಗಳನ್ನು ಎರಡನೆಯ ಮುದ್ರಣದಲ್ಲಿ ಖಂಡಿತವಾಗಿ ಅಳವಡಿಸಿಕೊಳ್ಳುತ್ತೇನೆ.

**ಡಾ|| ಆರ್. ಎನ್. ಶ್ರೀನಾಥ್**
ಚೇರ್‌ಮನ್
ಡಿಪಾರ್ಟ್‌ಮೆಂಟ್ ಆಫ್ ಅನಾಟಮಿ
ಪಿ.ಓ. ಬಾಕ್ಸ್ ೧೭೪೪೧೨
ಬೆಂಗಾಜಿ, ಲಿಬಿಯಾ

ಬೆಂಗಳೂರು
೨೮.೧೨.೧೯೯೯
E. Mail - Sreenathan @ usa.net

# ತೆಲುಗು ಪ್ರಕಾಶಕರ ಪರಿಚಯ

ಮಕರಂದವೆಂದರೆ ಜೇನುತುಪ್ಪ. ಭಗವದ್ಗೀತೆ ಜೇನುತುಪ್ಪದಂತೆ ಸುಮಧುರವಾಗಿ, ಆಹ್ಲಾದಕರವಾಗಿ, ತಾಪಹಾರಕವಾಗಿ ಇರುವುದರಿಂದ ಮಕರಂದವೆನ್ನುವ ಹೆಸರನ್ನೂ ಅದಕ್ಕೆ ಸೇರಿಸಲಾಗಿದೆ. ಜೇನುತುಪ್ಪ ರೋಗ ವಿನಾಶಕ ಶಕ್ತಿಯನ್ನು ಹೊಂದಿದೆ, ಆದ್ದರಿಂದಲೇ ಔಷಧಗಳಲ್ಲಿ ಅದನ್ನು ಹೆಚ್ಚಿಗೆ ಉಪಯೋಗಿಸುವರು. ಹಾಗೆಯೇ ಗೀತೆಯೆನ್ನುವ ಜೇನುತುಪ್ಪವನ್ನು ಸೇವಿಸಿದವರಿಗೆ ಭವರೋಗವು ಸಂಪೂರ್ಣವಾಗಿ ತೊಲಗಿ ಹೋಗಬಲ್ಲದು. ಜೇನುನೊಣ ಅನೇಕ ಪುಷ್ಪಗಳಿಂದ ಮಧುವನ್ನು ಶೇಖರಿಸಿ ಜೇನುತುಪ್ಪವನ್ನು ತಯಾರು ಮಾಡಿದ ಹಾಗೆ ಶ್ರೀ ಕೃಷ್ಣಪರಮಾತ್ಮನು ಉಪನಿಷತ್ತುಗಳೆಂಬ ಕುಸುಮರಾಶಿಯಿಂದ ಗೀತಮಕರಂದವನ್ನು ಹೀರಿ ಲೋಕಕ್ಕೆ ಪ್ರಸಾದಿಸಿದನು. ಇದು '**ಧರ್ಮ್ಯಾ ಮೃತ**'ವೆಂದು ಭಗವಂತನೇ ಗೀತೆಯಲ್ಲಿ ತಿಳಿಸಿದ್ದಾನೆ. ಆದ್ದರಿಂದ ಅಮೃತ ತುಲ್ಯರೂಪದ್ದಾಗಿದ್ದು ಜನನ ಮರಣ ರೂಪವಾದ ಭವತಾಪಗಳನ್ನು ನಿರ್ಮೂಲಿಸಿ ಹಾಕುವಂತಹ ಹಾಗೂ ಭಗವಂತನ ಮುಖದಿಂದ ಹೊರಬಂದಿರುವ ಈ ಗೀತಾ ಮಕರಂದವನ್ನು ಮುಮುಕ್ಷುಗಳು ಮನಸ್ಸು ತೃಪ್ತಿಯಾಗುವವರೆಗೆ ಪಾನಮಾಡಿ ಕೃತಾರ್ಥರಾಗುವಂತಾಗಲಿ!

ದಕ್ಷಿಣ ಕಾಶಿಯೆಂದು ಪ್ರಸಿದ್ಧವಾದ ಶ್ರೀ ಕಾಳಹಸ್ತಿ ಪುಣ್ಯಕ್ಷೇತ್ರದಲ್ಲಿ ಸುವರ್ಣಮುಖೀ ನದೀ ತೀರದಲ್ಲಿ 'ಶ್ರೀ ಶುಕ ಬ್ರಹ್ಮಾಶ್ರಮ' ಎನ್ನುವ ಒಂದು ಆಶ್ರಮವನ್ನು ಸ್ಥಾಪಿಸಿ ಆಧ್ಯಾತ್ಮಿಕ ಸೇವೆಯನ್ನು ಮಾಡಿರುವ ಶ್ರೀಶ್ರೀಶ್ರೀ ವಿದ್ಯಾಪ್ರಕಾಶಾನಂದಗಿರಿ ಸ್ವಾಮಿಗಳವರು ಗೀತಾಮಕರಂದವೆನ್ನುವ ಹೆಸರಿನಿಂದ ಗೀತೆಗೆ ವಿಪುಲವಾದ ವ್ಯಾಖ್ಯೆಯನ್ನು ಬರೆದಿದ್ದಾರೆ. ಅದನ್ನೇ ಈ ಗ್ರಂಥರೂಪದಲ್ಲಿ ಪ್ರಕಟಿಸುತ್ತಿದ್ದೇವೆ. ಈ ಗ್ರಂಥದಲ್ಲಿ ಮೂಲಶ್ಲೋಕ, ಪ್ರತಿಪದಾರ್ಥ, ತಾತ್ಪರ್ಯ, ವ್ಯಾಖ್ಯಾನಗಳೇ ಅಲ್ಲದೆ ಗೀತಾಪಾಠಕರಿಗೆ ಅತ್ಯವಶ್ಯಕವಾದ ಅನೇಕ ಬೇರೆ ವಿಚಾರಗಳನ್ನು ಪ್ರಾರಂಭದಲ್ಲಿ ತಿಳಿಸಲಾಗಿದೆ. ಸಾಮಾನ್ಯವಾಗಿ ರೂಢಿಯಲ್ಲಿರುವ (ವರಾಹ ಪುರಾಣದಲ್ಲಿ ಕೊಟ್ಟಂತೆ) ಗೀತಾ ಮಹಾತ್ಮ್ಯೆಯನ್ನು ತಾತ್ಪರ್ಯಸಹಿತವಾಗಿ ಇದರಲ್ಲಿ ಪ್ರಕಟಿಸಲಾಗಿದೆ. ಇನ್ನು ಗೀತೆಯನ್ನು ಜಪಿಸುವ ಪದ್ಧತಿ, ಪಾರಾಯಣ ಮಾಡುವ ವಿಧಾನ ಮುಂತಾದುವೆಲ್ಲವನ್ನೂ ವಿಪುಲವಾಗಿ ಇದರಲ್ಲಿ ಕೊಡಲಾಗಿದೆ.

ಗೀತೆ ಮಂತ್ರಮಯವಾದದ್ದು; ಗೀತೆಯಲ್ಲಿಯ ಪ್ರತಿ ಶ್ಲೋಕವೂ ಒಂದು ಮಹಾಮಂತ್ರವೇ. ಯಾವ ಯಾವ ಶ್ಲೋಕವನ್ನು ಎಷ್ಟು ಸಾರಿ ಎಷ್ಟು ದಿನ ಜಪಮಾಡಿದರೆ ಯಾವ ಫಲಿತವೊದಗುವುದು ಎನ್ನುವುದನ್ನು ಈ ಗ್ರಂಥದಲ್ಲಿ ವಿವರವಾಗಿ ವಿಶದೀಕರಿಸಲಾಗಿದೆ.

ಲೌಕಿಕ, ಪಾರಮಾರ್ಥಿಕ ಫಲಗಳಿಗೆ ಅವಶ್ಯಕವಾದ ಜಪಸಾಧನೆಗಳನ್ನು ಬೇರೆ ಬೇರೆಯಾಗಿ ಇದರಲ್ಲಿ ತಿಳಿಸಿದ್ದರೂ ಸಹ ಆಧ್ಯಾತ್ಮಿಕ ಗಮ್ಯವನ್ನು ಶೀಘ್ರವಾಗಿ ಸೇರಬೇಕೆಂದು ಬಯಸುವ ಮುಮುಕ್ಷುಗಳು ವೈರಾಗ್ಯೋಪೇತರಾಗಿ ಲೌಕಿಕ ಫಲಗಳನ್ನು ಕಾಂಕ್ಷಿಸದೆ ಪರಮಾರ್ಥ ಫಲಗಳಿಗೆ ಮಾತ್ರ ತೀವ್ರತರವಾದ ಯತ್ನಗಳನ್ನು ಮಾಡಬೇಕು. ನಿರಂತರ ಸ್ಮೃತಿ ಪಥದಲ್ಲಿರುವುದಕ್ಕಾಗಿ ಕೆಲವು ಗೀತಾವಾಕ್ಯಗಳನ್ನು ಪ್ರತ್ಯೇಕವಾಗಿ ಈ ಗ್ರಂಥದಲ್ಲಿ ಕೊಡಲಾಗಿದೆ. ಅಧ್ಯಾಯ ಕ್ರಮದಲ್ಲಿ ಮತ್ತು ಕಥಾರೂಪದಲ್ಲಿ ಚಿತ್ರಿಸಲ್ಪಟ್ಟಿರುವ ಗೀತಾಪಾರಾಯಣ ಫಲ (ಪದ್ಮ ಪುರಾಣದಿಂದ)ವನ್ನು ಇಲ್ಲಿ ಸಂಕ್ಷೇಪವಾಗಿ ಕೊಡಲ್ಪಟ್ಟಿದೆ. ಈ ಗೀತಾಗ್ರಂಥವು ಪ್ರಾರಂಭದಲ್ಲಿ ಶ್ರೀ ಸ್ವಾಮಿಗಳವರು ಬರೆದ ವಿಪುಲವಾದ ಉಪೋದ್ಘಾತವನ್ನು ಹೊಂದಿದೆ. ಅದರಲ್ಲಿ ಗೀತೆಯ ಮುಖ್ಯ ಆಶಯವನ್ನು, ಗೀತಾತತ್ವವನ್ನು ನಿತ್ಯೋಕ್ತ ಸಾಧನೆಗಳು ಮುಂತಾದುವನ್ನು ವಿಶದವಾಗಿ ಸ್ಪಷ್ಟೀಕರಿಸಲಾಗಿದೆ. ಪಾಠಕರ ಅನುಕೂಲಕ್ಕಾಗಿ ಗ್ರಂಥದ ಕೊನೆಯಲ್ಲಿ ಶ್ಲೋಕಾನುಕ್ರಮಣಿಕೆಯನ್ನು ಸೇರಿಸಲಾಗಿದೆ.

ಈ ಬೃಹದ್ಗ ್ರಂಥವನ್ನು ಪ್ರಕಾಶಿಸಲು ಸಹಕರಿಸಿದ ಎಲ್ಲಾ ಪುಣ್ಯಾತ್ಮರಿಗೆ ನಮ್ಮ ಹೃದಯಪೂರ್ವಕ ಅಭಿನಂದನೆ ಹಾಗೂ ಕೃತಜ್ಞತೆಗಳನ್ನು ಅರ್ಪಿಸುತ್ತಿದ್ದೇವೆ. ಸರ್ವೇಶ್ವರನ ಕೃಪೆಯಿಂದ ಪರಮಕಾರುಣ್ಯರಾದ ಮಹರ್ಷಿಗಳ ದಯೆಯಿಂದ ಗೀತಾಜ್ಞಾನವು ಲೋಕದಲ್ಲಿ ನಾಲ್ಕು ದಿಕ್ಕುಗಳಿಗೂ ವ್ಯಾಪಿಸಿ, ತತ್ಫಲಿತವಾಗಿ ಜನರ ತಮಃ ಪಟಲಗಳು ಆಧ್ಯಾತ್ಮಿಕ ದಿವ್ಯತೇಜವನ್ನು ಹೊಂದಿ ಎಲ್ಲರೂ ಪರಮಶಾಂತಿಯನ್ನು ಹೊಂದುವರೆನ್ನುವ ವಿಶ್ವಾಸವಿಟ್ಟಿದ್ದೇವೆ.

# ದೈವ ಪ್ರಾರ್ಥನೆ*

***ಕರುಣಾಮೂರ್ತಿಯಾದ ದೇವಾ!*** ನಮ್ಮ ಚಿತ್ತವು ಸರ್ವಕಾಲ ಸರ್ವಾವಸ್ಥೆಗಳಲ್ಲಿ ನಿನ್ನ ಪಾದಾರವಿಂದಗಳಲ್ಲಿ ಮಗ್ನವಾಗಿ ಅಚಂಚಲವಾದ ಭಕ್ತಿಯಿಂದ ಕೂಡಿರುವ ಹಾಗೆ ಅನುಗ್ರಹಿಸು.

***ಪರಮದಯಾನಿಧಿ!*** ಪ್ರಾತಃಕಾಲದಲ್ಲಿ ಎದ್ದ ನಂತರ ಮಲಗುವವರೆಗೆ ಮನೋವಾಕ್ಕಾಯಗಳಿಂದ ನಮ್ಮಿಂದ ಯಾರಿಗೂ ಅಪಕಾರವಾಗದಂತೆ, ಇತರ ಪ್ರಾಣಿಕೋಟಿಗಳಿಗೆ ಉಪಕಾರ ಮಾಡುವಂತಹ ಸದ್ಬುದ್ಧಿಯನ್ನು ದಯಮಾಡು.

***ಸಚ್ಚಿದಾನಂದ ಮೂರ್ತಿ! ನಿರ್ಮಲಾತ್ಮಾ!*** ನಮ್ಮ ಅಂತಃಕರಣದಲ್ಲಿ ಯಾವ ವಿಧವಾದ ದುಷ್ಟಸಂಕಲ್ಪಗಳಾಗಲಿ, ವಿಷಯ ವಾಸನೆಗಳಾಗಲಿ, ಅಜ್ಞಾನ ವೃತ್ತಿಯಾಗಲಿ ಯಾವಾಗಲೂ ಉಂಟಾಗದಂತೆ ಅನುಗ್ರಹಿಸು.

***ವೇದಾಂತ ವೇದ್ಯ! ಅಭಯ ಸ್ವರೂಪ!*** ನಮ್ಮಲ್ಲಿ, ಭಕ್ತಿ, ಜ್ಞಾನ, ವೈರಾಗ್ಯ ಬೀಜಗಳು ಅಂಕುರಿಸಿ ಶೀಘ್ರವಾಗಿ ಪ್ರವೃದ್ಧಿಯಾಗುವಂತೆ ಆಶೀರ್ವದಿಸು! ಮತ್ತೆ ಈ ಜನ್ಮದಲ್ಲಿಯೇ ನಿನ್ನ ಸಾನ್ನಿಧ್ಯವನ್ನು ಸೇರಲು ಬೇಕಾದ ಶಕ್ತಿ ಸಾಮರ್ಥ್ಯಗಳನ್ನು ಕರುಣೆಯಿಂದ ನೀಡು.

*ದೇವಾ! ನೀನು ಭಕ್ತವತ್ಸಲ! ದೀನರಿಗೆ ಕಲ್ಪವೃಕ್ಷ ಸ್ವರೂಪಿ!* ನೀನಲ್ಲದೆ ನಮಗಿನ್ನಾರು ದಿಕ್ಕು? ನಿನ್ನನ್ನು ಆಶ್ರಯಿಸುತ್ತಿದ್ದೇವೆ. ಅಸತ್ತಿನಿಂದ ಸತ್ತಿಗೆ ತೆಗೆದುಕೊಂಡು ಹೋಗು! ತಮಸ್ಸಿನಿಂದ ಜ್ಯೋತಿಗೆ ಒಯ್ಯಿ! ಮೃತ್ಯುವಿನಿಂದ ಅಮೃತತ್ವಕ್ಕೆ ಕರೆದುಕೊಂಡು ಹೋಗು. ಇದೇ ನಮ್ಮ ವಿನಂತಿ. ಅನುಗ್ರಹಿಸು. ನಿನ್ನಲ್ಲಿ ಸೇರಿಸಿಕೊ.

**ಪಾಹಿಮಾಮ್, ಪಾಹಿಮಾಮ್, ಪಾಹಿಮಾಮ್, ಪಾಹಿ**
**ಓಂ ತತ್ ಸತ್**

# ಗೀತಾಂಜಲಿ

**ಗೀತಾ ಕಲ್ಪತರುಂ ಭಜೇ ಭಗವತಾ ಕೃಷ್ಣೇನ ಸಂರೋಪಿತಂ**
**ವೇದವ್ಯಾಸ ವಿವರ್ಧಿತಂ ಶ್ರುತಿಶಿರೋಬೀಜಂ ಪ್ರಬೋಧಾಂಕುರುಮ್**
**ನಾನಾಶಾಸ್ತ್ರ ರಹಸ್ಯ ಶಾಖ ಮರತಿ ಕ್ಷಾಂತಿ ಪ್ರವಾಲಾಂಕಿತಂ**
**ಕೃಷ್ಣಾಂಘ್ರಿದ್ವಯ ಭಕ್ತಿ ಪುಷ್ಪಸುರಭಿಂ ಮೋಕ್ಷಪ್ರದಂ ಜ್ಞಾನಿನಾಮ್**

"ಗೀತೆಯೆಂಬ ಕಲ್ಪವೃಕ್ಷವನ್ನು ನಾನು ಸೇವಿಸುತ್ತಿದ್ದೇನೆ. ಅದು ಭಗವಂತನಾದ ಶ್ರೀಕೃಷ್ಣಪರಮಾತ್ಮನಿಂದ ನೆಡಲ್ಪಟ್ಟಿದ್ದು, ವೇದವ್ಯಾಸ ಮಹರ್ಷಿಗಳಿಂದ ಪೋಷಿಸಲ್ಪಟ್ಟಿದೆ. ಉಪನಿಷತ್ತುಗಳೇ ಅದರ ಬೀಜ. ಆತ್ಮ ಪ್ರಬೋಧ ಅದರ ಅಂಕುರ. ವಿವಿಧ ಶಾಸ್ತ್ರಗಳ ರಹಸ್ಯಗಳು ಅದರ ಕೊಂಬೆಗಳು. ವೈರಾಗ್ಯ, ಸಹನೆ ಮುಂತಾದ ಸದ್ಗುಣಗಳು ಅದರ ಚಿಗುರೆಲೆಗಳು. ಶ್ರೀಕೃಷ್ಣಪರಮಾತ್ಮನ ಪಾದಪದ್ಮಗಳಲ್ಲಿರುವ ಅನನ್ಯ ಭಕ್ತಿ ಅದರ ಪುಷ್ಪ ಸುಗಂಧ. ಅದು ಜ್ಞಾನಿಗಳಿಗೆ ಮೋಕ್ಷದಾಯಕವಾಗಿದೆ."

# ಗೀತೆ-ಪ್ರಾಣಿಕೋಟಿಯ ಜೀವಾಳ!!

೧. **ಶ್ರೀ ವಿವೇಕಾನಂದ ಸ್ವಾಮಿ :** ಗೀತೆಯಲ್ಲಿ ಶ್ರೀ ಕೃಷ್ಣಪರಮಾತ್ಮ ಅರ್ಜುನನಿಗೆ ಹೇಳಿರುವವು ಸಾಧಾರಣ ಮಾತುಗಳಲ್ಲ; ಜ್ಞಾನಗಣಿಗಳು. ಜೀವಿತಾದರ್ಶವೆಲ್ಲವನ್ನೂ ಒಂದು ಕ್ಷಣದಲ್ಲಿ ಅಲ್ಲಿ ತಿಳಿಸಲಾಗಿದೆ. ಉಪನಿಷತ್ತು ಎನ್ನುವ ತೋಟಗಳಿಂದ ಆಧ್ಯಾತ್ಮಿಕ ಸತ್ಯಗಳನ್ನು, ಪುಷ್ಪಗಳನ್ನು ಆರಿಸಿ ಕಟ್ಟಿದ ಮಾಲೆಯೇ ಭಗವದ್ಗೀತೆ.

೨. **ಶ್ರೀ ಗಾಂಧಿ ಮಹಾತ್ಮ :** ದುಃಖಪೂರಿತವಾದ ವಾತಾವರಣದಲ್ಲಿದ್ದರೂ, ಆ ದುಃಖವು ನನ್ನನ್ನು ತಾಕದೇ ಇರಲು ಕಾರಣ ಭಗವದ್ಗೀತಾಬೋಧೆಯೇ.

೩. **ಶ್ರೀ ತಿಲಕ್ :** ಪ್ರಪಂಚದಲ್ಲಿಯ ಸಾಹಿತ್ಯಗಳೆಲ್ಲವುಗಳಲ್ಲಿ ಗೀತೆಗೆ ಸಮನಾದ ಪುಸ್ತಕ ಬೇರೊಂದಿಲ್ಲ. ಮಹಾಪ್ರಕಾಶಮಾನವಾದ ಅಮೂಲ್ಯ ರತ್ನವದು. ಅದು ನಮ್ಮೆಲ್ಲರನ್ನು ಪರಮಾನಂದ ಪದವಿಗೆ ಕೊಂಡೊಯ್ಯುವ ಅಪೂರ್ವ ಸಾಧನೆ.

೪. **ಶ್ರೀ ಮಲಯಾಳ ಸ್ವಾಮಿಗಳವರು :** ಸಂಸಾರ ಸಾಗರವನ್ನು ಸುಲಭವಾಗಿ ದಾಟಬೇಕೆಂದರೆ ಭಗವದ್ಗೀತೆಯನ್ನು ಪಠಿಸಿ, ಅದರಲ್ಲಿ ಹೇಳಿದ ಹಾಗೆ ಆಚರಿಸಿದರೆ ಸಾಕು.

೫. **ಶ್ರೀ ಅರವಿಂದ ಯೋಗಿ :** ಮಾನವನು ತನ್ನ ಮೇಧಾಶಕ್ತಿಯೆಲ್ಲವನ್ನೂ ಧಾರೆಯೆರೆದರೂ ಗೀತಾಜ್ಞಾನದ ಒಂದು ಅಂಶವನ್ನು ಮಾತ್ರವೇ ತಿಳಿದುಕೊಂಡು ಇನ್ನೊಬ್ಬನಿಗೆ ತಿಳಿಸಬಲ್ಲನು.

೬. **ಶ್ರೀ ಶಿವಾನಂದ ಸರಸ್ವತಿ ಸ್ವಾಮಿಗಳವರು :** ವಿಶ್ವವಾಙ್ಮಯದಲ್ಲೆಲ್ಲಾ ಗೀತೆಯಂತಹ ಮಹೋನ್ನತ ಗ್ರಂಥರಾಜವು ಮತ್ತೊಂದು ಇಲ್ಲವೇ ಇಲ್ಲ. ಇದು ಜ್ಞಾನಭಂಡಾರ, ವ್ಯಯಗೊಳ್ಳದ ನಿಧಿ, ಆನಂದ ಸಾಗರ.

೭. **ಶ್ರೀ ವಿನೋಬಾ ಭಾವೆ :** ನನ್ನ ಶರೀರ ವೃದ್ಧಿಗೆ ತಾಯಿಯ ಹಾಲು

---

* (ಈ ಪ್ರಾರ್ಥನೆಯನ್ನು ಯಾರು ಪ್ರತಿದಿನವೂ ನಿಯಮ ತಪ್ಪದೆ ಬೆಳಿಗ್ಗೆ ಎದ್ದ ತಕ್ಷಣ ಹಾಗೂ ರಾತ್ರಿ ಮಲಗುವ ಮುಂಚೆ ಮನಃಸ್ಫೂರ್ತಿಯಿಂದ ಪಠಿಸುವರೋ ಅಂತಹವರಿಗೆ ಜೀವನದಲ್ಲಿ ಯಾವ ದೋಷಗಳೂ ಉಂಟಾಗುವುದಿಲ್ಲ, ಇಷ್ಟೇ ಅಲ್ಲದೆ ಭಗವಂತನ ಅನುಗ್ರಹಕ್ಕೆ ಅವರು ಪಾತ್ರರಾಗುವರು.)

ಎಷ್ಟು ಉಪಯೋಗವಾಗಿದೆಯೋ ಹಾಗೆ ನನ್ನ ಬುದ್ಧಿ ವಿಕಾಸದಲ್ಲಿ ಭಗವದ್ಗೀತೆ ಅದಕ್ಕಿಂತ ಹೆಚ್ಚು ಉಪಯೋಗವಾಗಿದೆ.

೮. **ಶ್ರೀ ಮಾಳವೀಯ** : ನನಗೆ ತಿಳಿದಮಟ್ಟಿಗೆ ವಿಶ್ವ ವಾಙ್ಮಯದಲ್ಲಿ ಭಗವದ್ಗೀತೆಯನ್ನು ಮೀರಿದ ಗ್ರಂಥವು ಇನ್ನೊಂದು ಇಲ್ಲವೇ ಇಲ್ಲ. ಅದು ಹಿಂದುಗಳಿಗೇ ಅಲ್ಲದೆ ಸಮಸ್ತ ಮಾನವಕೋಟಿಗೆ ಧರ್ಮ ಭಂಡಾರವಾಗಿದೆ.

೯. **ಶ್ರೀ ಎಡ್ವಿನ್ ಆರ್ನಾಲ್ಡ್** : ಭಾರತದ ಈ ಸರ್ವಪ್ರಿಯ ಕಾವ್ಯಮಯ ದಾರ್ಶನಿಕ ಗ್ರಂಥವಿಲ್ಲದಿದ್ದರೆ, ಆಂಗ್ಲ ಸಾಹಿತ್ಯವು ನಿಸ್ಸಂಶಯವಾಗಿ ಅಪೂರ್ಣವಾಗಿಯೇ ಉಳಿಯುತ್ತಿತ್ತು.

೧೦. **ಶ್ರೀ ವಾರನ್ ಹೇಸ್ಟಿಂಗ್ಸ್**: ಉನ್ನತ ಆಧ್ಯಾತ್ಮ ಶಿಖರಗಳನ್ನು ಆರೋಹಿಸುವ ಇಚ್ಛೆಯುಳ್ಳ ಮಾನವರಿಗೆ ಗೀತೋಪದೇಶವು ಅದ್ವಿತೀಯವಾದ ನೆರವನ್ನು ನೀಡುವುದು.

೧೧. **ಶ್ರೀ ಬಂಕಿಂ ಚಂದ್** : ಭಗವದ್ಗೀತೆಯಂತಹ ಅಪೂರ್ವ ಧರ್ಮ ಸಮನ್ವಯ, ಅದ್ಭುತ ವ್ಯಾಖ್ಯೆ, ಯಾವ ದೇಶದಲ್ಲೂ, ಯಾವ ಕಾಲದಲ್ಲೂ, ಯಾರೂ ಕಂಡಿರಲು ಸಾಧ್ಯವಿಲ್ಲ, ಕೇಳಿರಲೂ ಸಾಧ್ಯವಿಲ್ಲ.

# ಗೀತಾದೇವಿ ಪ್ರಾರ್ಥನೆ

***ತಾಯೀ! ಗೀತಾದೇವಿ! ಜಗನ್ಮಾತೇ! ಚಿನ್ಮಯ ಸ್ವರೂಪಿಣೀ!!*** ಸಂಸಾರ ಘೋರಾರಣ್ಯದಲ್ಲಿ ದಾರಿಕಾಣದೆ ತಲ್ಲಣಿಸುತ್ತಿರುವ ನಮಗೆ ನೀನು ದಿಕ್ಕು ತೋರಿಸಿ ಮಾರ್ಗವನ್ನು ಪ್ರಸಾದಿಸಿರುವೆ. ನಮ್ಮ ಭೀಕರ ಸಾಂಸಾರಿಕ ಸಂಕಟಗಳನ್ನು, ತಾಪತ್ರಯಗಳನ್ನು ಅಂತ್ಯಗೊಳಿಸಲು ನೀನು ಕೃತನಿಶ್ಚಯದಿಂದಿರುವೆ. ಕೋಟ್ಯಾಂತರ ಜನರು ಅಜ್ಞಾನ ನಿಬಿಡಾಂಧಕಾರದಲ್ಲಿ ಸಿಕ್ಕಿಕೊಂಡಿದ್ದರೂ ಸುಕೃತ ವಶದಿಂದ ಈ ಜನ್ಮದಲ್ಲಿ ನಿನ್ನ ಸೇವಾ ಭಾಗ್ಯ ಒದಗಿರುವುದರಿಂದ ನಮ್ಮ ಹೃದಯವು ಆನಂದದಿಂದ ತುಂಬಿ ಹೋಗಿದೆ. ನಿನ್ನ ಕೃಪಾಕಟಾಕ್ಷದಿಂದ ಜನರಲ್ಲಿ ಜ್ಞಾನ ತೇಜವು ಆವಿರ್ಭವಿಸಿ ಅವಿದ್ಯೆ ದಿಕ್ಕು ಪಾಲಾಗಿ ಪಲಾಯನ ಮಾಡುತ್ತಿದೆ. ಸಂಸಾರ ತಾಪತ್ರಯ ಅಂತ್ಯಗೊಳ್ಳುತ್ತಿದೆ. ಅಂಧಕಾರ ಮಯವಾದ ಈ ಪ್ರಾಪಂಚಿಕ ಕ್ಷೇತ್ರದಲ್ಲಿ ನೀನು ನಮಗೆ ದಾರಿ ದೀಪವಾಗಿರುವೆ. ತಾಯೀ! ನಿನ್ನ ಋಣವನ್ನು ನಾವು ಹೇಗೆ ತೀರಿಸಿಕೊಳ್ಳಬೇಕು? ನಿನಗೆ ನಮ್ಮ ಅನಂತಕೋಟಿ ಪ್ರಣಾಮಗಳು.

***ಗೀತಾಂಬಿಕೆ !*** ಶ್ರೀ ಕೃಷ್ಣ ಪರಮಾತ್ಮ ತನ್ನ ಅವತಾರವನ್ನು ಮುಗಿಸಿ ವೈಕುಂಠಕ್ಕೆ ತೆರಳುವ ಸಮಯದಲ್ಲಿ ನಿನ್ನನ್ನು ನಮಗೆ ಪ್ರಸಾದಿಸಿ ಹೋದನು. ಆದ್ದರಿಂದ ನೀನು ಕೃಷ್ಣ ಪ್ರತಿನಿಧಿ. ಸಾಕ್ಷಾತ್ ಕೃಷ್ಣರೂಪಿ. ಓ ಗೀತಾದೇವಿ! ನೀನೇ ನಮಗೆ ಶರಣು! ನಮ್ಮ ಹಾರ್ದಿಕ ನಮೋವಾಕ್ಯಗಳನ್ನು ಸ್ವೀಕರಿಸುವುದು.

***ಜ್ಞಾನದಾತ್ರಿ!*** ತನ್ನನ್ನು ಸೃಷ್ಟಿಸಿದ ಈಶ್ವರನನ್ನು, ತನಗೆ ಬೋಧಿಸಲ್ಪಟ್ಟ ಶಾಸ್ತ್ರವನ್ನು, ತನ್ನನ್ನು ಉದ್ಧರಿಸಿದ ಅನುಷ್ಠಾನವನ್ನು ಯಾವ ಕಾಲದಲ್ಲಿಯೂ ಮರೆಯಬಾರದೆನ್ನುವುದು ಶಿಷ್ಟರ ವಾಕ್ಯ. ಆದ್ದರಿಂದ ಅಮೋಘ ಬೋಧೆಗಳಿಂದ ನಮ್ಮನ್ನು ಉದ್ಧರಿಸಲು ಅನುವಾಗಿರುವ ನಿನ್ನನ್ನು ಸದಾ ನಮ್ಮ ಸ್ಮೃತಿ ಪಟಲದಲ್ಲಿ ಇರಿಸಿಕೊಳ್ಳುವುದು ನಮ್ಮ ಆದ್ಯ ಕರ್ತವ್ಯ. ವಿಧ್ಯುಕ್ತ ಧರ್ಮ!

***ಸ್ವಾರಾಜ್ಯ ಪ್ರದಾಯಿನಿ :*** ಯಾವುದೇ ಒಂದು ಜಾತಿಯನ್ನಾಗಲಿ, ಮತವನ್ನಾಗಲಿ, ಸಂಪ್ರದಾಯವನ್ನಾಗಲಿ ದೂಷಿಸದೆ ಸರ್ವಸಮನ್ವಯ ಪದ್ಧತಿಯಲ್ಲಿ ನಿನ್ನ ಬೋಧೆಯಿದೆ. ಪಾಪಿಗಳು, ದುರಾಚಾರಪರರು ಕೂಡ ಒಮ್ಮೆ ಪುಣ್ಯಾತ್ಮರಾಗುವವರೆನ್ನುವ ಆಶಯವನ್ನು ಘಂಟಾ ಘೋಷವಾಗಿ ಸಾರಿದ್ದೀಯೆ. ನಿರಾಶಾ ಹೃದಯಗಳಿಗೆ ಧೈರ್ಯವನ್ನು ತುಂಬಿದ್ದೀಯೆ. ಜೀವಿಯು ತನ್ನ ಅಂತಃಕರಣ ಶುದ್ಧಿಮಾಡಿಕೊಳ್ಳಲು ಲೆಕ್ಕವಿಲ್ಲದಷ್ಟು ಮಾರ್ಗಗಳನ್ನು ಸೂಚಿಸಿದ್ದೀಯೆ. ಜಗಜ್ಜನನೀ! ನೀನು ಮಾಡಿದ ಉಪಕಾರವನ್ನು ನಾವು ಹೇಗೆ ಮರೆಯಲು ಸಾಧ್ಯ? ನಿನ್ನ ದಿವ್ಯ ಬೋಧೆಗಳನ್ನು ಮರೆಯದಿರುವಂತೆ ಅನುಗ್ರಹಿಸು. ನಿನ್ನ ಪ್ರಿಯವಾದ ಮಕ್ಕಳಿಗೆ ಗಮ್ಯ ತೋರಿಸಿ ಆಶ್ರಯಿಸು!!

***ದೀನಜನೋದ್ಧಾರಿಣೀ!*** ನಿನ್ನ ಭವ್ಯ ಸದುಪದೇಶಗಳು ನಮ್ಮ ಹೃದಯಾಂತರಾಳದಲ್ಲಿ ಪ್ರವೇಶಿಸಿ ಜನ್ಮಾಂತರ ದುಃಸಂಸ್ಕಾರಗಳು ತೊಲಗಿ ಜ್ಞಾನೋದಯವಾಗುವಂತೆ ಆಶೀರ್ವದಿಸು. ಪತಿತರನ್ನು, ದೀನರನ್ನು, ಆರ್ತರನ್ನು, ಸಂಸಾರದಲ್ಲಿ ಮಗ್ನರಾಗಿರುವವರನ್ನು ಉದ್ಧರಿಸಲು ಕಂಕಣ ಕಟ್ಟಿಕೊಂಡ ಓ ದೇವೀ! ಜಗದ್ಧಾತ್ರೀ! ಅಷ್ಟಾದಶಾಧ್ಯಾಯಿನೀ! ಅಂಬಿಕೇ! ನಿನಗೆ ಇದೋ ನಮ್ಮ ನಮನಗಳು! ರಕ್ಷಿಸು!

***ಭಗವನ್ಮುಖಾರವಿಂದಸಂಜನಿತಜ್ಞಾನಗಂಗಾಸ್ವರೂಪಿಯಾದ ತಾಯೀ!*** ಸರ್ವೋಪನಿಷತ್ಸಾರ ರೂಪಿಣೀ! ಭವಸಾಗರದಲ್ಲಿ ಮುಳುಗುತ್ತಿರುವ ನಮಗೆ ನೀನು ನಾವೆಯಾಗಿದ್ದೀಯೆ. ನಿನ್ನನ್ನು ಆಶ್ರಯಿಸಿದ್ದೇವೆ. ದಡ ಸೇರಿಸು. ಭಕ್ತಿ, ಜ್ಞಾನ ವೈರಾಗ್ಯಾದಿ ಮೋಕ್ಷ ಸಾಧನೆಗಳು ನಮಗೆ ಉಂಟಾಗುವಂತೆ ಆಶೀರ್ವದಿಸು. ಅಹರ್ನಿಶ ನಿನ್ನ ಸೇವೆಮಾಡಲು ಬೇಕಾದ ಶಕ್ತಿ ಸಾಮರ್ಥ್ಯಗಳನ್ನು ಕರುಣೆಯಿಂದ ನೀಡು. ನಿನ್ನ ಜನ್ಮಸ್ಥಾನವಾದ ಶ್ರೀ ಕೃಷ್ಣ ಪರಮಾತ್ಮನ ಬಳಿಗೆ ನಮ್ಮನ್ನು ಸೇರಿಸು. ಇದೇ ನಮ್ಮ ವಿನಂತಿ. ಅನುಗ್ರಹಿಸು. ನಿನ್ನ ಕೃಪಾದೃಷ್ಟಿಯನ್ನು ನಮ್ಮ ಮೇಲೆ ಸುರಿಸು.

**ಪಾಹಿಮಾಮ್, ಪಾಹಿಮಾಮ್, ಪಾಹಿಮಾಮ್, ಪಾಹಿ!!**

## ಕೃತಜ್ಞತೆ

# ಗೀತೆ

ಯನ್ನು ಬೋಧಿಸಿದ ಶ್ರೀಕೃಷ್ಣ ಪರಮಾತ್ಮನಿಗೆ

ಗೆ ನಿಮಿತ್ತಮಾತ್ರನಾದ ಅರ್ಜುನನಿಗೆ

ಯನ್ನು ಛಂದೋಬದ್ಧವಾಗಿ ರಚಿಸಿದ ಶ್ರೀ ವೇದವ್ಯಾಸ ಮಹರ್ಷಿಗಳಿಗೆ

ಯನ್ನು ಬರೆದ ಶ್ರೀ ವಿಘ್ನೇಶ್ವರನಿಗೆ

ಯನ್ನು ಪ್ರಪ್ರಥಮವಾಗಿ ಪ್ರಚಾರ ಮಾಡಿದ ಸಂಜಯನಿಗೆ

ಯ ತಾಳ ಪತ್ರಗಳನ್ನು, ಕಾಲಗರ್ಭದಲ್ಲಿ ವಿಲೀನವಾಗದಂತೆ ಕಾಪಾಡಿ
ಲೋಕಕ್ಕೆ ನೀಡಿದ ಪುಣ್ಯಾತ್ಮರಿಗೆ

ಯ ಸೂಕ್ಷ್ಮಭಾವಗಳನ್ನು ಸ್ಫುಟವಾಗಿ ತೋರಿಸಿದ, ತೋರಿಸುತ್ತಿರುವ ಭಾಷ್ಯಕಾರರಿಗೆ

ಯನ್ನು ಮನೆಮನೆಗೆ ವ್ಯಾಪಿಸುವಂತೆ ಮಾಡಿದ ಮಾಡುತ್ತಿರುವ ಗೀತಾ ಪ್ರಚಾರಕರಿಗೆ

**ಲೋಕವು ಎಷ್ಟೋ ಋಣಿಯಾಗಿದೆ.**

ಗೀತೆಯನ್ನು ಶ್ರದ್ಧಾಭಕ್ತಿಗಳಿಂದ ಪಠಿಸಿ ಅದರ ಭಾವಗಳನ್ನು ಸರಿಯಾಗಿ ಅನುಷ್ಠಾನ ಮಾಡುವುದರಿಂದ ಮಾತ್ರ ಅವರ ಋಣವನ್ನು ಜನರು ತೀರಿಸಬಲ್ಲರು.

# ಗೀತಾ ಪ್ರಾಶಸ್ತ್ಯ

(ಮಹಾಭಾರತದಿಂದ)

೧. ಗೀತಾಶಾಸ್ತ್ರ ಮಿದಂ ಪುಣ್ಯಂ ಯಃ ಪಠೇತ್ ಪ್ರಯತಃ ಪುಮಾನ್।
ವಿಷ್ಣೋಃ ಪದಮವಾಪ್ನೋತಿ ಭಯಶೋಕಾದಿ ವರ್ಜಿತಃ॥

ಪರಮ ಪಾವನವಾದ ಈ ಗೀತಾಶಾಸ್ತ್ರವನ್ನು ಯಾರು ಪ್ರಯತ್ನ ಪೂರ್ವಕವಾಗಿ ಪಠಿಸುವರೋ, ಅಂತಹವರು ಭಯ ಶೋಕಾದಿ ರಹಿತವಾದ ವಿಷ್ಣುಪದವನ್ನು ಹೊಂದುವರು.

೨. ಗೀತಾಧ್ಯಯನಶೀಲಸ್ಯ ಪ್ರಾಣಾಯಾಮಪರಸ್ಯ ಚ।
ನೈವಸಂತಿಹಿ ಪಾಪಾನಿ ಪೂರ್ವಜನ್ಮ ಕೃತಾನಿ ಚ॥

ಗೀತಾಧ್ಯಯನ ಮಾಡುವವನಿಗೆ, ಪ್ರಾಣಾಯಾಮ ಅನುಸರಿಸುವವನಿಗೆ ಪೂರ್ವಜನ್ಮದ ಪಾಪಗಳೂ ಕೂಡ ನಶಿಸುವುವು.

೩. ಮಲನಿರ್ಮೋಚನಂ ಪುಂಸಾಂ ಜಲಸ್ನಾನಂ ದಿನೇ ದಿನೇ!
ಸಕೃದ್ಗೀತಾಂಭಸಿ ಸ್ನಾನಂ ಸಂಸಾರ ಮಲನಾಶನಮ್॥

ಜಲದಲ್ಲಿ ಪ್ರತಿದಿನವೂ ಸ್ನಾನ ಮಾಡುವುದರಿಂದ ಮನುಜರಿಗೆ ಶರೀರ ಮಾಲಿನ್ಯ ತೊಲಗುತ್ತದೆ. ಆದರೆ ಗೀತಾಜ್ಞಾನವೆಂಬ ಜಲದಲ್ಲಿ ಒಂದು ಸಾರಿ ಸ್ನಾನ ಮಾಡುವುದರಿಂದ ಸಂಸಾರ ಮಾಲಿನ್ಯವೆಲ್ಲವೂ ನಶಿಸಿಹೋಗುವುದು.

೪. ಭಾರತಾಮೃತ ಸರ್ವಸ್ವಮ್ ವಿಷ್ಣೋರ್ವಕ್ತ್ರಾದ್ವಿನಿಸ್ಸೃತಮ್।
ಗೀತಾಗಂಗೋದಕಂ ಪೀತ್ವಾ ಪುನರ್ಜನ್ಮ ನ ವಿದ್ಯತೇ॥

ಮಹಾಭಾರತದ ಅಮೃತಮಯವೇ ಅಲ್ಲದೆ ಸರ್ವಸ್ವವೂ ಆದ ವಿಷ್ಣುವಿನ ಮುಖದಿಂದ ಹೊರಬಿದ್ದ ಗೀತಾಗಂಗೋದಕವೆನ್ನುವ ಉದಕವನ್ನು ಪಾನಮಾಡುವುದರಿಂದ ಪುನರ್ಜನ್ಮವಿರಲಾರದು.

೫. ಸರ್ವೋಪನಿಷದೋ ಗಾವೋ ದೋಗ್ಧಾ ಗೋಪಾಲನಂದನಃ।
ಪಾರ್ಥೋ ವತ್ಸಃ ಸುಧೀರ್ಭೋಕ್ತಾ ದುಗ್ಧಂ ಗೀತಾಮೃತಂ ಮಹತ್॥

ಉಪನಿಷತ್ತುಗಳೆಲ್ಲವೂ ಗೋವುಗಳು, ಗೋಪಾಲನಂದನನಾದ ಶ್ರೀ ಕೃಷ್ಣಮೂರ್ತಿ ಹಾಲು ಹಿಂಡುವವನು, ಅರ್ಜುನನು ಕರು, ಮಹತ್ತರವಾದ ಗೀತಾಮೃತವೇ ಹಾಲು, ಸದ್ಬುದ್ಧಿಯುಳ್ಳ ಜಿಜ್ಞಾಸುಗಳೇ ಆ ಹಾಲನ್ನು ಕುಡಿಯುವವರು.

೬. ಗೀತಾ ಸುಗೀತಾ ಕರ್ತವ್ಯ ಕಿಮನ್ಯೈಃ ಶಾಸ್ತ್ರ ಸಂಗ್ರಹೈಃ।
ಯಾ ಸ್ವಯಂ ಪದ್ಮನಾಭಸ್ಯ ಮುಖಪದ್ಮಾದ್ವಿನಿಸ್ಸೃತಾ॥

ಗೀತೆಯನ್ನು ಮನಸಾ ಹಾಡಬೇಕು. ಇತರ ಶಾಸ್ತ್ರ ಸಂಗ್ರಹಗಳಿಂದ ಏನು ಪ್ರಯೋಜನ, ಏಕೆಂದರೆ, ಗೀತೆ ಸ್ವಯಂ ವಿಷ್ಣು ಭಗವಂತನ ಮುಖ ಪದ್ಮದಿಂದ ಹೊರಬಿದ್ದಿದೆ.

೭. ಸರ್ವ ಶಾಸ್ತ್ರಮಯೀ ಗೀತಾ ಸರ್ವದೇವಮಯೋ ಹರಿಃ।
ಸರ್ವತೀರ್ಥಮಯೀ ಗಂಗಾ ಸರ್ವವೇದಮಯೋ ಮನುಃ॥

ಗೀತೆ ಸರ್ವಶಾಸ್ತ್ರ ಸ್ವರೂಪಿಣಿ. ವಿಷ್ಣು ಸರ್ವದೇವಮಯನು. ಗಂಗೆ ಸರ್ವತೀರ್ಥಮಯಿ. ಮನುವು ಸರ್ವವೇದ ಸ್ವರೂಪಿ.

೮. ಗೀತಾ ಗಂಗಾಚ ಗಾಯತ್ರೀ ಗೋವಿಂದೇತಿ ಹೃದಿಸ್ಥಿತೇ।
ಚತುರ್ಗಕಾರ ಸಂಯುಕ್ತೇ ಪುನರ್ಜನ್ಮ ನ ವಿದ್ಯತೇ॥

ಗೀತೆ, ಗಂಗೆ, ಗಾಯತ್ರಿ, ಗೋವಿಂದ ಎನ್ನುವ ಈ ನಾಲ್ಕು 'ಗ'ಕಾರಯುಕ್ತ ಪದಾರ್ಥಗಳನ್ನು ಯಾರು ಹೃದಯದಲ್ಲಿ ಧರಿಸುವರೋ ಅವರಿಗೆ ಇನ್ನು ಪುನರ್ಜನ್ಮವಿಲ್ಲ.

೯. ಭಾರತಾಮೃತ ಸರ್ವಸ್ವ ಗೀತಾಯಾ ಮಥಿತಸ್ಯ ಚ।
ಸಾರಮುದ್ಧೃತ್ಯ ಕೃಷ್ಣೇನ ಅರ್ಜುನಸ್ಯ ಮುಖೇ ಹುತಮ್॥

ಮಹಾಭಾರತದ ಅಮೃತ ಸರ್ವಸ್ವವೇ ಗೀತೆ. ಭಾರತವನ್ನು ಮಥಿಸಿ ಸಾರವಾದ ಗೀತೆಯನ್ನು ಹೊರತೆಗೆದು ಶ್ರೀ ಕೃಷ್ಣಮೂರ್ತಿ ಅದನ್ನು ಅರ್ಜುನನ ಮುಖದ ಮೇಲೆ ಹೋಮ ಮಾಡಿದನು (ಅರ್ಥ ಮಾಡಿಸಿದನು).

# ಗೀತಾ ಪ್ರಭಾವ

(ಸ್ಕಂದ ಪುರಾಣದಿಂದ)

ಶ್ರೀ ಭಗವಾನುವಾಚ

೧. ಗೀತಾಸಾರಮಿದಂ ಶಾಸ್ತ್ರಂ ಸರ್ವಶಾಸ್ತ್ರ ಸುನಿಶ್ಚಿತಮ್।
ಯತ್ರಸ್ಥಿತಂ ಬ್ರಹ್ಮಜ್ಞಾನಂ ವೇದಶಾಸ್ತ್ರ ಸುನಿಶ್ಚಿತಮ್॥

ಶ್ರೀ ಭಗವಂತ: ಗೀತಾಸಾರವಾದ ಈ ಶಾಸ್ತ್ರವು ಸಮಸ್ತ ಶಾಸ್ತ್ರಗಳ ಮೂಲಕ ನಿಶ್ಚಯಿಸಲ್ಪಟ್ಟ ಸಿದ್ಧಾಂತಗಳನ್ನು ಹೊಂದಿದೆ. ಅದರಲ್ಲಿ ವೇದಶಾಸ್ತ್ರ ನಿಶ್ಚಯಿಸಲ್ಪಟ್ಟ ಬ್ರಹ್ಮಜ್ಞಾನ ವಿರಾಜಮಾನವಾಗಿದೆ.

೨. ಇದಂ ಶಾಸ್ತ್ರಂ ಮಯಾ ಪ್ರೋಕ್ತಂ ಗುಹ್ಯವೇದಾರ್ಥ ದರ್ಪಣಮ್।
ಯಃ ಪಠೇತ್ಪ್ರಯತೋ ಭೂತ್ವಾ ಸಗಚ್ಛೇದ್ವಿಷ್ಣು ಶಾಶ್ವತಮ್॥

ನನ್ನಿಂದ ಹೇಳಲ್ಪಟ್ಟ ಈ ಗೀತಾಶಾಸ್ತ್ರವು ರಹಸ್ಯವಾದ ವೇದಾಂತಗಳನ್ನು ಕನ್ನಡಿಯಂತೆ ಪ್ರತಿಬಿಂಬಿಸುತ್ತಿದೆ. ಯಾವನು ನಿಷ್ಠೆಯಿಂದ ಇದನ್ನು ಪಠಿಸುವನೋ, ಆತನು ಶಾಶ್ವತವಾದ ವಿಷ್ಣು ಪದವಿಯನ್ನು ಹೊಂದುವನು.

೩. ಏತತ್ಪುಣ್ಯಂ ಪಾಪಹರಂ ಧನ್ಯಂ ದುಃಖಪ್ರಣಾಶನಮ್।
ಪಠತಾಂ ಶೃಣ್ವತಾಂ ವಾಪಿ ವಿಷ್ಣೋರ್ಮಾಹಾತ್ಮ್ಯ ಮುತ್ತಮಮ್॥

ವಿಷ್ಣುವಿನ ಈ ಉತ್ತಮ ಮಹಾತ್ಮ್ಯೆ (ಗೀತಾಶಾಸ್ತ್ರ) ಓದುವವರ, ಕೇಳುವವರ ಪುಣ್ಯವನ್ನು ವೃದ್ಧಿ ಮಾಡುವುದು ಹಾಗು ಪಾಪವನ್ನು ನಿವಾರಿಸುವುದು. ಇದು ಧನ್ಯವಾದದ್ದು, ಹಾಗು ದುಃಖವನ್ನು ನಶಿಸುವ ಸಾಧಕವೂ ಆಗಿದೆ.

೪. ಅಷ್ಟಾದಶಪುರಾಣಾನಿ ನವವ್ಯಾಕರಣಾನಿ ಚ ।
ನಿರ್ಮಥ್ಯ ಚತುರೋ ವೇದಾನ್ ಮುನಿನಾ ಭಾರತಂ ಕೃತಮ್ ॥

೫. ಭಾರತೋದಧಿ ನಿರ್ಮಥ್ಯ ಗೀತಾನಿರ್ಮಥಿತಸ್ಯ ಚ ।
ಸಾರಮುದ್ಧೃತ್ಯ ಕೃಷ್ಣೇನ ಅರ್ಜುನಸ್ಯ ಮುಖೇ ಧೃತಮ್ ॥

ಹದಿನೆಂಟು ಪುರಾಣಗಳನ್ನು, ಒಂಭತ್ತು ವ್ಯಾಕರಣಗಳನ್ನು, ನಾಲ್ಕು ವೇದಗಳನ್ನು ಚೆನ್ನಾಗಿ ಮಥಿಸಿ ವ್ಯಾಸ ಮುನೀಂದ್ರರು ಭಾರತವನ್ನು ರಚಿಸಿದರು. ಆ ಮಹಾಭಾರತವನ್ನು ಮಥಿಸಿ ಸಾರವಾದ ಗೀತೆಯನ್ನು ಹೊರತೆಗೆದು ಶ್ರೀ ಕೃಷ್ಣಪರಮಾತ್ಮ ಅದನ್ನು ಅರ್ಜುನನಿಗೆ ಉಪದೇಶಿಸಿದನು.

೬. ಮಲನಿರ್ಮೋಚನಂ ಪುಂಸಾಂ ಗಂಗಾಸ್ನಾನಂ ದಿನೇದಿನೇ।
ಸಕೃದ್ಗೀತಾಂಭಸಿ ಸ್ನಾನಂ ಸಂಸಾರ ಮಲವಿಮೋಚನಮ್॥

ಪ್ರತಿನಿತ್ಯ ಮಾಡುವ ಗಂಗಾಸ್ನಾನ (ಜಲಸ್ನಾನ) ಮನುಜರ ಶರೀರ ಮಾಲಿನ್ಯವನ್ನು ಹೋಗಲಾಡಿಸುತ್ತದೆ. ಆದರೆ ಗೀತಾಜಲದಲ್ಲಿ ಒಂದು ಸಲ ಸ್ನಾನ ಮಾಡಿದರೆ ಸಂಸಾರ ಮಾಲಿನ್ಯವೆಲ್ಲವೂ ನಿರ್ನಾಮವಾಗುತ್ತದೆ.

೭. ಗೀತಾನಾಮ ಸಹಸ್ರೇಣ ಸ್ತವರಾಜೋ ವಿನಿರ್ಮಿತಃ।
ಯಸ್ಯ ಕುಕ್ಷೌಚ ವರ್ತೇತ ಸೋಽಪಿ ನಾರಾಯಣಃ ಸ್ಮೃತಃ॥

ಗೀತೆಯ ಸಹಸ್ರನಾಮದಿಂದ ನಿರ್ಮಿತವಾದ ಸ್ತವರಾಜವನ್ನು ಯಾರು ಮನಸಾ ಸ್ಮರಿಸುವರೋ ಅವರು ಸಾಕ್ಷಾತ್ ನಾರಾಯಣ ಸ್ವರೂಪಿಗಳೇ ಎಂದು ಹೇಳಲ್ಪಟ್ಟಿದೆ.

೮. ಸರ್ವವೇದಮಯೀ ಗೀತಾ ಸರ್ವಧರ್ಮಮಯೋ ಮನುಃ।
ಸರ್ವತೀರ್ಥಮಯೀ ಗಂಗಾ ಸರ್ವದೇವ ಮಯೋ ಹರಿಃ॥

ಗೀತೆ ಸರ್ವವೇದ ಪರಿಪೂರ್ಣರೂಪಿಣಿ. ಮನು ಸರ್ವಧರ್ಮ ಮಯನು. ಗಂಗೆ ಸರ್ವತೀರ್ಥಪರಿಪೂರ್ಣೆ, ವಿಷ್ಣು ಸರ್ವದೇವಮಯನು.

೯. ಪಾದಸ್ಯಾಪ್ಯರ್ಧಪಾದಂವಾ ಶ್ಲೋಕಂ ಶ್ಲೋಕಾರ್ಧಮೇವವಾ।
ನಿತ್ಯಂ ಧಾರಯತೇ ಯಸ್ತು ಸಮೋಕ್ಷ ಮಧಿಗಚ್ಛತಿ॥

ಗೀತೆಯ ಒಂದು ಶ್ಲೋಕವನ್ನಾಗಲಿ, ಅರ್ಧಶ್ಲೋಕವನ್ನಾಗಲಿ, ಒಂದು ಪಾದವನ್ನಾಗಲಿ, ಪಾದಾರ್ಧವನ್ನಾಗಲಿ ನಿರಂತರವು ಯಾವನು ಮನಸ್ಸಿನಲ್ಲಿ ಧಾರಣೆ ಮಾಡುವನೋ ಆತನು ಮೋಕ್ಷ ಹೊಂದುವನು.

೧೦. ಕೃಷ್ಣವೃಕ್ಷ ಸಮುದ್ಭೂತಾ ಗೀತಾಮೃತ ಹರೀತಕೀ।
ಮಾನುಷೈಃ ಕಿಂ ನ ಖಾದ್ಯೇತ ಕಲೌಮಲವಿರೇಚನೀ॥

ಶ್ರೀ ಕೃಷ್ಣಮೂರ್ತಿಯೆಂಬ ವೃಕ್ಷದಿಂದ ಹೊರಬಿದ್ದ ಗೀತೆಯನ್ನು ಅಮೃತಮಯವಾದ ಹರೀತಕಿ ಫಲಕ್ಕೆ ಹೋಲಿಸಲಾಗಿದೆ. ಇದು ತಿನ್ನಲು ಬಹು ಕಹಿ. ಆದ್ದರಿಂದ ಜನರು ತಿನ್ನಲು ಇಷ್ಟಪಡುವುದಿಲ್ಲ. ಆದರೆ ಇದು ಔಷಧಯುಕ್ತವಾದದ್ದು. ತಿಂದದ್ದೇ ಆದರೆ ಅದು ಮಲವೆಲ್ಲವನ್ನೂ ಶರೀರದಿಂದ ಹೊರಗೆಡಹಿ ಆರೋಗ್ಯವನ್ನು ವರ್ಧಿಸುತ್ತದೆ.

೧೧. ಗಂಗಾ ಗೀತಾ ತಥಾ ಭಿಕ್ಷುಃ ಕಪಿಲಾಶ್ವತ್ಥಸೇವನಂ।
ವಾಸರಂ ಪದ್ಮನಾಭಸ್ಯ ಪಾವನಂ ಕಿಂ ಕಲೌಯಗೇ॥

ಕಲಿಯುಗದಲ್ಲಿ ಗಂಗಾನದಿ, ಗೀತೆ, ಸಾಧುಪುಂಗವ(ಭಿಕ್ಷು), ಕಪಿಲಗೋವು, ಅರಳಿಮರ-ಇವುಗಳ ಸೇವನೆ ಹಾಗು ವಿಷ್ಣು ಭಗವಾನನ ಪರ್ವ ದಿನಗಳು (ಏಕಾದಶಿ ಮೊದಲಾದುವು)- ಇವುಗಳನ್ನು ಮೀರಿದ ಪಾವನವಾದ ವಸ್ತುಗಳು ಬೇರೆ ಯಾವುವೂ ಇಲ್ಲ.

೧೨. ಗೀತಾ ಸುಗೀತಾ ಕರ್ತವ್ಯಾ ಕಿಮನ್ಯೈಃ ಶಾಸ್ತ್ರವಿಸ್ತರೈಃ।
ಯಾ ಸ್ವಯಂ ಪದ್ಮನಾಭಸ್ಯ ಮುಖಪದ್ಮಾದ್ವಿನಿಸ್ಸೃತಾ॥

ಗೀತೆಯನ್ನು ಚೆನ್ನಾಗಿ ಪಠಿಸಿದರೆ (ಶ್ರವಣ, ಮನನ, ನಿದಿ ಧ್ಯಾಸಗಳನ್ನು ಅನುಸರಿಸಿ) ಇತರ ಶಾಸ್ತ್ರಗಳಿಂದ ಏನು ಪ್ರಯೋಜನ? ಏಕೆಂದರೆ, ಗೀತೆ ಸ್ವಯಂ ವಿಷ್ಣು ಭಗವಾನನ ಮುಖಪದ್ಮದಿಂದ ಹೊರಬಂದಿದೆ.

೧೩. ಆಪದಂ ನರಕಂ ಘೋರಂ ಗೀತಾಧ್ಯಾಯೀ ನ ಪಶ್ಯತಿ

ಗೀತಾಧ್ಯಾಯನ ಮಾಡುವವನು ಆಪತ್ತುಗಳನ್ನಾಗಲಿ, ಘೋರವಾದ ನರಕಗಳನ್ನಾಗಲಿ ಎಂದೆಂದಿಗೂ ಅನುಭವಿಸುವುದಿಲ್ಲ.

## ಏಕ ಶ್ಲೋಕೀ ಗೀತ

ಯತ್ರ ಯೋಗೇಶ್ವರಃ ಕೃಷ್ಣೋ ಯತ್ರ ಪಾರ್ಥೋ ಧನುರ್ಧರಃ।
ತತ್ರ ಶ್ರೀರ್ವಿಜಯೋ ಭೂತಿರ್ಧ್ರುವಾ ನೀತಿರ್ಮತಿರ್ಮಮಾ॥

ಎಲ್ಲಿ ಯೋಗೇಶ್ವರನಾದ ಶ್ರೀ ಕೃಷ್ಣಮೂರ್ತಿ, ಎಲ್ಲಿ ಧನುರ್ಧಾರಿಯಾದ ಅರ್ಜುನನು ಇರುವರೋ ಅಲ್ಲಿ ಲಕ್ಷ್ಮಿ, ವಿಜಯ, ಐಶ್ವರ್ಯ, ನೀತಿ ತಪ್ಪದೆ ಇರುವುವೆನ್ನುವುದು ನನ್ನ ನಿಶ್ಚಿತವಾದ ಅಭಿಪ್ರಾಯ. (ಸಂಜಯ)

## ಗೀತೆಗಿರುವ ೧೮ ಹೆಸರುಗಳು

೧. ಗೀತಾ ಗಂಗಾಚ ಗಾಯತ್ರೀ ಸೀತಾ ಸತ್ಯಾ ಸರಸ್ವತೀ।
ಬ್ರಹ್ಮವಿದ್ಯಾ ಬ್ರಹ್ಮವಲ್ಲೀ ತ್ರಿಸಂಧ್ಯಾ ಮುಕ್ತಿಗೇಹಿನೀ॥
೨. ಅರ್ಧಮಾತ್ರಾ ಚಿದಾನಂದಾ ಭವಘ್ನೀ ಭ್ರಾಂತಿ ನಾಶಿನಿ।
ವೇದತ್ರಯೀ ಪರಾಽನನ್ತಾ ತತ್ವಾರ್ಥ ಜ್ಞಾನಮಂಜರಿ॥
೩. ಇತ್ಯೇತಾನಿ ಜಪೇನ್ನಿತ್ಯಂ ನರೋ ನಿಶ್ಚಲಮಾನಸಃ।
ಜ್ಞಾನಸಿದ್ಧಿಂ ಲಭೇಚ್ಛೀಘ್ರಂ ತಥಾನ್ತೇ ಪರಮಂ ಪದಂ॥

**ಗೀತೆಗೆ ಈ ಕೆಳಗಿನ ವಿವಿಧ ಹೆಸರುಗಳಿವೆ:**

೧. ಗೀತೆ　೨. ಗಂಗಾ
೩. ಗಾಯತ್ರೀ　೪. ಸೀತೆ
೫. ಸತ್ಯ　೬. ಸರಸ್ವತಿ
೭. ಬ್ರಹ್ಮವಿದ್ಯೆ　೮. ಬ್ರಹ್ಮವಲ್ಲಿ
೯. ತ್ರಿಸಂಧ್ಯ　೧೦. ಮುಕ್ತಿಗೇಹಿನಿ
೧೧. ಅರ್ಧಮಾತ್ರೆ　೧೨. ಚಿದಾನಂದ
೧೩. ಭವಘ್ನಿ　೧೪. ಭ್ರಾಂತಿನಾಶಿನಿ
೧೫. ವೇದತ್ರಯೀ　೧೬. ಪರ
೧೭. ಅನಂತ　೧೮. ತತ್ವಾರ್ಥಜ್ಞಾನಮಂಜರಿ

ಈ ಹದಿನೆಂಟು ಗೀತಾನಾಮಗಳನ್ನು ಯಾವನು ನಿಶ್ಚಲಚಿತ್ತನಾಗಿ ಸದಾ ಜಪಿಸುವನೋ ಆತನಿಗೆ ಶೀಘ್ರವಾಗಿ ಜ್ಞಾನಸಿದ್ಧಿ, ಕೊನೆಯಲ್ಲಿ ಪರಮಾತ್ಮಪದಪ್ರಾಪ್ತಿ ಲಭಿಸುವುದು.

# ಗೀತಾ ಶ್ಲೋಕ ಸಂಖ್ಯೆ

ಮಹಾಭಾರತದ ಭೀಷ್ಮಪರ್ವದಲ್ಲಿ ಗೀತೆಯನ್ನು ರಚಿಸಿದ ನಂತರ ಗೀತೆಯ ಶ್ಲೋಕ ಸಂಖ್ಯೆಯನ್ನು ಕುರಿತು ಶ್ರೀ ವೇದವ್ಯಾಸರು ಈ ರೀತಿ ಹೇಳಿದರು.

**ಶ್ಲೋ॥ ಷಟ್ಶತಾನಿ ಸವಿಂಶಾನಿ ಶ್ಲೋಕಾನಾಂ ಪ್ರಾಹ ಕೇಶವಃ।**
**ಅರ್ಜುನಃ ಸಪ್ತಪಂಚಾಶತ್ ಸಪ್ತಷಷ್ಟಿಂ ಚ ಸಂಜಯಃ।**
**ಧೃತರಾಷ್ಟ್ರಃ ಶ್ಲೋಕ ಮೇಕಂ ಗೀತಾಯಾ ಮಾನಮುಚ್ಯತೇ॥**

(ಭಾರತದ- ಭೀಷ್ಮಪರ್ವದ ೪೩ನೆಯ ಅಧ್ಯಾಯದ ೪ನೆಯ ಶ್ಲೋಕ)

**ತಾ॥** ಗೀತೆಯಲ್ಲಿ ಶ್ರೀ ಕೃಷ್ಣಮೂರ್ತಿ ೬೨೦ ಶ್ಲೋಕಗಳನ್ನು, ಅರ್ಜುನನು ೫೭ ಶ್ಲೋಕಗಳನ್ನು, ಸಂಜಯನು ೬೭ ಶ್ಲೋಕಗಳನ್ನು, ಧೃತರಾಷ್ಟ್ರನು ೧ ಶ್ಲೋಕವನ್ನು ಹೇಳಿದ್ದಾರೆ. (ಒಟ್ಟು ೭೪೫ ಶ್ಲೋಕಗಳು). ಆದರೆ ಈಗ ಲೋಕದಲ್ಲಿ ವಾಡಿಕೆಯಲ್ಲಿರುವ ಗೀತೆಯಲ್ಲಿ ಶ್ರೀಕೃಷ್ಣನು ಹೇಳಿದ ೫೭೪ ಶ್ಲೋಕಗಳು, ಅರ್ಜುನನು ಹೇಳಿದ ೮೪ ಶ್ಲೋಕಗಳು, ಸಂಜಯನು ಹೇಳಿದ ೪೧ ಶ್ಲೋಕಗಳು, ಧೃತರಾಷ್ಟ್ರನು ಹೇಳಿದ ೧ ಶ್ಲೋಕವೂ ಇದೆ. (ಒಟ್ಟು ೭೦೦ ಶ್ಲೋಕಗಳು). ಅಂದರೆ ಭಾರತದಲ್ಲಿ ಶ್ಲೋಕ ಸಂಖ್ಯೆ ಒಟ್ಟು ೭೪೫ ಎಂದು ಉಲ್ಲೇಖವಿದ್ದರೂ, ಈಗ ಗೀತೆಯಲ್ಲಿ ೭೦೦ ಶ್ಲೋಕಗಳು ಮಾತ್ರವೇ ಇವೆ. ಕೆಲವು ಪ್ರತಿಗಳಲ್ಲಿ ೧೩ನೆಯ ಅಧ್ಯಾಯ ಪ್ರಾರಂಭದಲ್ಲಿ 'ಪ್ರಕೃತಿಂ ಪುರುಷಂ ಚೈವ' ಎನ್ನುವ ಅರ್ಜುನನ ಪ್ರಶ್ನೆ ರೂಪದ ಶ್ಲೋಕವೊಂದಿದೆ. ಅದನ್ನು ಸೇರಿಸಿದರೂ ಒಟ್ಟು ೭೦೧ ಶ್ಲೋಕಗಳಾಗುವುವು. ಉಳಿದ ೪೪ ಶ್ಲೋಕಗಳು ಏನಾಗಿವೆಯೋ ಎಂದು ಪರಿಶೋಧಿಸಿದವರು ಬಹಳ ವಿರಳ. ರಾಜಸ್ಥಾನದ ಕಥಿಯವಾಡ್ ಪ್ರಾಂತದ ಕೆಲವು ವಿದ್ವಾಂಸರು ಗೀತೆಯ ತಾಳಪತ್ರಗಳನ್ನು ಚೆನ್ನಾಗಿ ಪರಿಶೋಧಿಸಿ, ಕೊನೆಗೆ ಬೋಜ (ಭೂರ್ಜರ) ಪತ್ರದ ಮೇಲೆ ಲಿಖಿತವಾಗಿರುವ ೭೪೫ ಶ್ಲೋಕಗಳುಳ್ಳ ಒಂದು ಗೀತಾಪ್ರತಿಯನ್ನು ಹುಡುಕಿದರಂತೆ! ಆದರೆ ಅದೂ ಭಾರತೋಕ್ತ ಸಂಖ್ಯೆಗೆ ಸರಿ ಹೊಂದುತ್ತಿಲ್ಲ. ಯಾವುದು ಹೇಗಿದ್ದರೂ ಭಾರತೋಕ್ತ ಪ್ರಮಾಣವನ್ನು ಹಿಡಿದು ೪೪ ಅದ್ಭುತ ಗೀತಾಶ್ಲೋಕಗಳು ಕಾಲಗರ್ಭದಲ್ಲಿ ಎಲ್ಲಿಯೋ ವಿಲೀನವಾಗಿ ಹೋಗಿವೆ ಎಂದು ಸ್ಪಷ್ಟವಾಗುತ್ತಿದೆ. ಇದರ ವಿಷಯವಾಗಿ ತೀವ್ರ ಪರಿಶೋಧನೆ ನಡೆಸುವುದು ಅವಶ್ಯಕ.

# ಗೀತೆ- ಉಪನಿಷತ್ಸಾರ

ಉಪನಿಷತ್ತುಗಳೆಂಬ ಗೋವುಗಳ ಕ್ಷೀರವೇ ಭಗವದ್ಗೀತೆ. ನಿಗೂಢವಾದ ಉಪನಿಷತ್ಸಿದ್ಧಾಂತಗಳನ್ನು ಸರ್ವಜನರಿಗೆ ಸುಲಭವಾಗಿ ತಿಳಿಯುವಂತೆ ಗೀತೆ ಪ್ರವಚನ ಮಾಡಿದೆ. ಆದ್ದರಿಂದ ಉಪನಿಷತ್ತುಗಳಿಗೆ, ಗೀತೆಗೆ ಹೆಚ್ಚಿನ ಸಾಮ್ಯವಿದೆ, ಅಂತಹ ಕೆಲವು ಸಂದರ್ಭಗಳನ್ನು ಈ ಕೆಳಗೆ ನಿರೂಪಿಸಲಾಗಿದೆ.

***I) ಶಿಷ್ಯನು ಗುರುವಿನ ಬಳಿಗೆ ಹೋಗಿ ಸಂದೇಹ ನಿವೃತ್ತಿಗೋಸ್ಕರ, ಭಕ್ತಿಪೂರ್ವಕವಾಗಿ ಹೀಗೆ ಪ್ರಶ್ನಿಸುವನು.***

**ಉಪನಿಷತ್ತು**

೧) **ತದ್ವಿಜ್ಞಾನಾರ್ಥಂ ಸ ಗುರು ಮೇವಾಭಿಗಚ್ಛೇತ್ ಸಮಿತ್ಪಾಣಿಃ ಶ್ರೋತ್ರಿಯಂ ಬ್ರಹ್ಮನಿಷ್ಠಂ ತನ್ಮೈ ಸ ವಿದ್ವಾನುಪಸನ್ನಾಯ ಸಂಯಕ್ ಪ್ರಶಾಂತ ಚಿತ್ತಾಯ ಶಮಾನ್ವಿತಾಯ ಏನಾಕ್ಷರಂ ಪುರುಷಂ ವೇದಸತ್ಯಂ ಪ್ರೋವಾಚ ತಾಂ ತತ್ತ್ವತೋ ಬ್ರಹ್ಮವಿದ್ಯಾಂ**
(ಮುಂಡಕ ೧, ೨-೧೨, ೧೩)

೨) **ಶೌನಕೋs ಙ್ಗೀರಸಂ ವಿಧಿವದುಪಸನ್ನಃ ಪಪ್ರಚ್ಛ** (ಮುಂ. ೧-೩)

೩) **ಭೃಗುರ್ವೈವಾರುಣಿಃ ವರುಣಂ ಪಿತರ ಮುಪಸಸಾರ** (ತೈತ್ತಿ ೧)

೪) **ಅಧೀಹಿ ಭಗವನ್ ಇತಿಹೋಪಸಸಾದ ಸನತ್ಕುಮಾರಂ ನಾರದಃ** (ಛಾಂ. ೭-೧)

**ಗೀತೆ**

**ಕಾರ್ಪಣ್ಯ ದೋಷಪಹತಃ** (ಭ.ಗೀ. ೨-೭)

***II) ಬ್ರಹ್ಮವಿದ್ಯೆ ಶೋಕ ಮೋಹಗಳನ್ನು ತೊಲಗಿಸುವುದು***

೧) **ತತ್ರ ಕೋ ಮೋಹಃ ಕಃಶೋಕ ಏಕತ್ವ ಮನುಪಶ್ಯತಃ** (ಈಶ. ೭)

೨) **ತರತಿ ಶೋಕ ಮಾತ್ಮವಿತ್** (ಛಾಂ. ೭-೩)

೩) **ಅಭಯಂ ವೈ ಜನಕ ಪ್ರಾಪ್ತೋಸಿ** (ಬೃ. ೪-೨-೪)

**ಗೀತೆ**

೧) **ಮೋಹೋಽಯಂ ವಿಗತೋಮಮ** (ಭ.ಗೀ. ೧೧-೧)

೨) **ನಷ್ಟೋಮೋಹಃ** (ಭ.ಗೀ. ೧೮-೭೩)

***III) ಯಜ್ಞದಾನ ತಪೋರೂಪ ಕರ್ಮಗಳು ಚಿತ್ತವನ್ನು ಶುದ್ಧಮಾಡಿ ಜ್ಞಾನೋತ್ಪತ್ತಿಗೆ ಸಹಾಯಕವಾಗುವುವು. ಆದ್ದರಿಂದ ಅವುಗಳನ್ನು ಪ್ರಾರಂಭದಲ್ಲಿ ಮುಮುಕ್ಷುವು ತಪ್ಪದೆ ಆಚರಿಸಬೇಕು.***

**ಉಪನಿಷತ್ತು**

೧) **ತದೇತಂ ವೇದಾನುವಚನೇನ ಬ್ರಾಹ್ಮಣಾ ವಿವಿದಿಷಂತಿ ಯಜ್ಞೇನ ದಾನೇನ ತಪಸಾನಾಶಕೇನ ಏತಮೇವ ವಿದಿತ್ವಾ ಮುನಿ ರ್ಭವತಿ** (ಬೃ. ೪-೪-೨೨)

**ಗೀತೆ**

೧) **ನಕರ್ಮಣಾ ಮನಾರಂಭಾಮ್ ನೈಷ್ಕರ್ಮ್ಯಂ..........**

೨) **ಯಜ್ಞೋದಾನಂ ತಪಶ್ಚೈವ.......**

೩) **ಸಂನ್ಯಾಸಸ್ತು ಮಹಾಬಾಹೋ ದುಃಖಮಾಪ್ತು ಮಯೋಗತಃ.......**

೪) **ಸ್ವಕರ್ಮಣಾ ತಮಭ್ಯರ್ಚ್ಯ..........**

***IV) ಜ್ಞಾನದಿಂದ ಅಜ್ಞಾನ ನಶಿಸಿ ಮೋಕ್ಷವುಂಟಾಗುವುದು.***

**ಉಪನಿಷತ್ತು**

೧) **ತಮೇವಂ ವಿದ್ವಾನಮೃತ ಇಹಭವತಿ ನಾನ್ಯಃ ಪಂಥಾ ವಿದ್ಯತೇಽಯನಾಯ** (ವಾ.ಉ.)

೨) **ತಮೇವ ವಿದಿತ್ವಾತಿಮೃತ್ಯು ಮೇತಿ ನಾನ್ಯಃ ಪಂಥಾ ವಿದ್ಯತೇಽಯನಾಯ** (ಶ್ವೇ. ೩-೮)

೩) **ಸ ಯೋ ಹ ವೈ ತತ್ಪರಮಂ ಬ್ರಹ್ಮ ವೇದ ಬ್ರಹ್ಮೈವಭವತಿ** (ಮುಂ. ೩-೨-೬)

೪) ಯದಾ ಚರ್ಮವದಾಕಾಶಂ ವೇಷ್ಟಯಿಷ್ಯಂತಿ ಮಾನವಾಃ ತದಾ ದೇವ ಮವಿಜ್ಞಾಯ ದುಃಖಶಾಂತೋ ಭವಿಷ್ಯತಿ (ಶ್ವೇ. ೬-೨೦)
೫) ಜ್ಞಾತ್ವಾ ದೇವಂ ಮುಚ್ಯತೇ ಸರ್ವಪಾಶೈಃ (ಶ್ವೇ. ೨-೧೫)
೬) ಜ್ಞಾತ್ವಾ ಶಿವಂ ಶಾಂತಿ ಮತ್ಯಂತಮೇತಿ (ಶ್ವೇ. ೪-೧೪)
೭. ನಿಚಾಯ್ಯ ತಂ ಮೃತ್ಯುಮುಖಾ ತ್ಪ್ರಮುಚ್ಯತೇ (ಕಾ.)

ಗೀತೆ

೧) ಜ್ಞಾನೇನ ತು ತದಜ್ಞಾನಂ
೨) ಯಜ್ಞಾತ್ವಾ ನ ಪುನರ್ಮೋಹಂ
೩) ಜ್ಞಾತ್ವಾ ಮಾಂ ಶಾಂತಿಮೃಚ್ಛತಿ
೪) ಜ್ಞಾನಂ ಲಬ್ಧ್ವಾ ಪರಾಂ ಶಾಂತಿಂ

### *V) ಮೋಕ್ಷ ನಿತ್ಯವಾದುದು*

ಉಪನಿಷತ್ತು

೧) ನ ಚ ಪುನರಾವರ್ತತೇ (ಛಾಂ)

ಗೀತೆ

೧) ಮಾ ಮುಪೇತ್ಯ ಪುನರ್ಜನ್ಮ ನ ವಿದ್ಯತೇ
೨) ಯದ್ಗತ್ವಾ ನ ನಿವರ್ತಂತೇ

### *VI) ಸಕಾಮಕರ್ಮ ನಿಂದಾರ್ಹವಾದದ್ದು*

ಉಪನಿಷತ್ತು

೧) ಪ್ಲವಾಹ್ಯೇತೆ ಅದೃಢಾ ಯಜ್ಞರೂಪಾ (ಮುಂ. ೧-೨-೭)
೨) ಜಂಘನ್ಯಮಾನಾಃ ಪರ್ಯಂತಿ ಮೂಢಾ (ಮುಂ. ೧-೨-೮)

ಗೀತೆ

ಯಾ ಮಿಮಾಂ ಪುಷ್ಪಿತಾಂ ವಾಚಂ

### *VII) ಸ್ವರ್ಗದಿಂದ ಪುನಾರವೃತ್ತಿ ಸಂಭವಿಸುವುದು*

ಉಪನಿಷತ್ತು

ನಾಕಸ್ಯಪೃಷ್ಠೇ ತೇ ಸುಕೃತೇನುಭೂತ್ವಾ ಇಮಂ ಲೋಕಂ ಹೀನತರಂ ವಾವಿಶಂತಿ (ಮುಂ. ೧-೨-೧೦)

ಗೀತೆ

೧) ತ್ರೈವಿದ್ಯಾ ಮಾಂ ಸೋಮಪಾಃ
೨) ತೇ ತಂ ಭುಕ್ತ್ವಾ ಸ್ವರ್ಗಲೋಕಂ ವಿಶಾಲಂ

### *VIII) ಜ್ಞಾನದಿಂದ ಹೃದಯಗ್ರಂಥಿ ಭೇದನ, ಸಂಶಯನಿವೃತ್ತಿ, ಕರ್ಮಕ್ಷಯ ಉಂಟಾಗುತ್ತದೆ.*

ಉಪನಿಷತ್ತು

೧) ಭಿದ್ಯತೇ ಹೃದಯಗ್ರಂಥಿಃ

ಗೀತೆ

ಯಥೈದಾಂಸಿ ಸಮಿದ್ಧೋಗ್ನಿಃ

### *IX) ಜ್ಞಾನದಿಂದ ಸರ್ವಪಾಪನಿವೃತ್ತಿ ಸಂಭವಿಸುವುದು*

ಉಪನಿಷತ್ತು

೧) ಸರ್ವೇ ಪಾಪ್ಮಾನೋತೋ ನಿವರ್ತಂತೇ (ಛಾಂ. ೮-೪-೨)
೨) ತಂ ವಿದಿತ್ವಾ ನ ಲಿಪ್ಯತೇ ಕರ್ಮಣಾ ಪಾಪಕೇನ (ಬೃ. ೪-೪-೨೨)

ಗೀತೆ

೧) ಅಪಿ ಚೇದಸಿ ಪಾಪೇಭ್ಯಃ ಸರ್ವೇಭ್ಯಃ

### *X) ಪ್ರಣವೋಪಾಸನೆ*

ಉಪನಿಷತ್ತು

ಮುಂಡಕ, ಪ್ರಶ್ನೆ, ಕಠ, ತೈತ್ತರೀಯ, ಛಾಂದೋಗ್ಯಾದಿ ಉಪನಿಷತ್ತುಗಳಲ್ಲಿ ಪ್ರಣವೋಪಾಸನದ ಉಲ್ಲೇಖವಿದೆ. ಹಾಗೆಯೇ ಗೀತೆಯಲ್ಲಿಯೂ ಸಹ ಹೇಳಲ್ಪಟ್ಟಿದೆ.

ಗೀತೆ

ಓಮಿತ್ಯೇಕಾಕ್ಷರಂ ಬ್ರಹ್ಮ

### *XI) ಜ್ಞಾನಫಲದಲ್ಲಿ ಸಮಸ್ತ ಸತ್ಕರ್ಮಗಳ ಫಲವು ಅಂತರ್ಭೂತವಾಗಿರುವುದು*

ಉಪನಿಷತ್ತು

ಸರ್ವಂ ತದಭಿಸಮೇತಿ ಯತ್ಕಿಂಚ ಪ್ರಜಾಃ ಸಾಧುಃ ಕುರ್ವಂತಿ ಯಸ್ತದ್ವೇದ ಯತ್ಸವೇದ (ಛಾಂ. ೪-೨-೪)

ಗೀತೆ

೧) ಯಾವನರ್ಥ ಉದಪಾನೇ
೨) ಸರ್ವಂ ಕರ್ಮಾಖಿಲಂ ಪಾರ್ಥ
೩) ವೇದೇಷು ಯಜ್ಞೇಷು ತಪಃಸು ಚೈವ

### *XII) ಜ್ಞಾನ ಸಿದ್ಧಿಗೆ, ಮೋಕ್ಷಪ್ರಾಪ್ತಿಗೆ ಕಾಮಾದಿಗಳ ತ್ಯಾಗ ಆವಶ್ಯಕ.*

ಉಪನಿಷತ್ತು

೧) ಯದಾಸರ್ವೇ ಪ್ರಮುಚ್ಯಂತೇ। ಕಾಮಾಯೇಸ್ಯ ಹೃದಿ ಸ್ಥಿತಾಃ

ಗೀತೆ

೧) ಪ್ರಜಹಾತಿ ಯದಾ ಕಾಮಾನ್

## ಗೀತೆಯಲ್ಲಿ ಬರುವ ಸಾಕ್ಷಾತ್ ಉಪನಿಷತ್ ವಾಕ್ಯಗಳು

ಗೀತೆಯಲ್ಲಿ ಕೆಲವು ಕಡೆ ಉಪನಿಷತ್ತು ವಾಕ್ಯಗಳನ್ನು ಅವುಗಳಲ್ಲಿ ಇದ್ದಹಾಗೆಯೇ ಹೇಳಲ್ಪಟ್ಟಿವೆ. ಅವು ಯಾವುವೆಂದರೆ

೧) ನಜಾಯತೇ ಮ್ರಿಯತೇ ವಾ ಕದಾಚಿತ್ (೨-೨೦)
೨) ಉಭೌತೌ ನ ವಿಜಾನೀತೋ ನಾಯಂ ಹಂತಿ ನ ಹನ್ಯತೇ (೨-೧೯)
೩) ಆಶ್ಚರ್ಯವತ್ ಪಶ್ಯತಿ (೨-೨೯)
೪) ಯದಕ್ಷರಂ ವೇದವಿದೋ ವದಂತಿ (೮-೧೧)
೫) ಸರ್ವತಃ ಪಾಣಿಪಾದಂ ತತ್ (೧೩-೧೪)
೬) ಸರ್ವೇಂದ್ರಿಯ ಗುಣಾಭಾಸಂ (೧೩-೧೫)
೭) ದೂರಸ್ಥಂ ಚಾಂತಿಕೇ ಚ ತತ್ (೧೩-೧೬)
೮) ಊರ್ಧ್ವಮೂಲಮಧಃಶಾಖಮ್ (೧೫-೧)

# ಗೀತಾ ಮಹಿಮೆ

(ವೈಷ್ಣವೀಯ ತಂತ್ರಸಾರದಿಂದ)

೧. ಶೌನಕ ಉವಾಚ:

ಗೀತಾಯಾಶ್ಚೈವ ಮಾಹಾತ್ಮ್ಯಮ್ ಯಥಾವತ್ಸೂತ ಮೇ ವದ।
ಪುರಾ ನಾರಾಯಣಕ್ಷೇತ್ರೇ ವ್ಯಾಸೇನ ಮುನಿನೋದಿತಂ॥

ಶೌನಕ : ಓ ಸೂತಮುನೀಂದ್ರ! ಪೂರ್ವದಲ್ಲಿ ಒಮ್ಮೆ ನಾರಾಯಣ ಕ್ಷೇತ್ರದಲ್ಲಿ ಶ್ರೀ ವ್ಯಾಸಮುನೀಂದ್ರರು ಹೇಳಿದ ಗೀತಾಮಹಿಮೆಯನ್ನು ಯಥಾರ್ಥವಾಗಿ ನನಗೆ ಹೇಳುವುದು.

೨. ಸೂತ ಉವಾಚ:

ಭದ್ರಂ ಭಗವತಾ ಪೃಷ್ಟಂ ಯದ್ಧಿ ಗುಪ್ತತಮಂ ಪರಮ್
ಶಕ್ಯತೇ ಕೇನ ತದ್ವಕ್ತುಂ ಗೀತಾಮಹಾತ್ಮ್ಯ ಮುತ್ತಮಮ್.

ಸೂತ: ಶೌನಕಾ! ನೀನು ಮಂಗಳಕಾರವಾದ ಪ್ರಶ್ನೆಯನ್ನು ಕೇಳಿರುವೆ. ಆದರೆ, ಅತಿ ಗುಪ್ತವಾದ, ಸರ್ವೋತ್ತಮವಾಗಿರುವ ಗೀತಾಮಹಿಮೆಯನ್ನು ಸಂಪೂರ್ಣವಾಗಿ ಯಾರು ವರ್ಣಿಸಿ ಹೇಳಬಲ್ಲರು?

೩. ಕೃಷ್ಣೋ ಜಾನಾತಿ ವೈ ಸಂಯಕ್ ಕಿಂಚಿತ್ಕುಂತೀಸುತಃ ಫಲಂ
ವ್ಯಾಸೋವಾ ವ್ಯಾಸಪುತ್ರೋವಾ ಯಾಜ್ಞವಲ್ಕ್ಯೋಽಥ ಮೈಥಿಲಃ

ಗೀತೆಯ ಮಹಿಮೆಯನ್ನು ಪೂರ್ತಿಯಾಗಿ ತಿಳಿದವನು ಶ್ರೀಕೃಷ್ಣನು ಒಬ್ಬನೇ. ಅರ್ಜುನನಿಗೆ ಅದನ್ನು ಕುರಿತು ಸ್ವಲ್ಪ ಮಾತ್ರ ತಿಳಿದಿದೆ. ಹಾಗೆಯೇ ವ್ಯಾಸ, ಶುಕ, ಯಾಜ್ಞವಲ್ಕ್ಯ, ಜನಕ ಸ್ವಲ್ಪ ಸ್ವಲ್ಪ ತಿಳಿದವರಾಗಿರುತ್ತಾರೆ.

೪. ಅನ್ಯೇ ಶ್ರವಣತಃ ಶ್ರುತ್ವಾ ಲೇಶಂ ಸಂಕೀರ್ತಯಂತಿ ಚ
ತಸ್ಮಾತ್ಕಿಂಚಿದ್ವದಾಮ್ಯತ್ರ ವ್ಯಾಸಸ್ಯಾಸ್ಯಾನ್ಮಯಾ ಶ್ರುತಮ್

ಇನ್ನು ಬೇರೆಯವರು, ಕಿವಿಗಳಿಂದಷ್ಟೇ ಕೇಳಿರುವ ಆ ಗೀತೆಯ ಮಹಿಮೆಯನ್ನು ಲವಲೇಶವಷ್ಟು ಮಾತ್ರ ವರ್ಣಿಸಲು ಸಾಧ್ಯ. ಈ ಪ್ರಕಾರವಾಗಿ ವ್ಯಾಸರ ಮುಖತಃ ಕೇಳಿದ್ದನ್ನು ನಾನು ಇಲ್ಲಿ ಸ್ವಲ್ಪ ಹೇಳುತ್ತಿದ್ದೇನೆ ಕೇಳು.

೫. ಸರ್ವೋಪನಿಷದೋ ಗಾವೋ ದೋಗ್ಧಾ ಗೋಪಾಲನಂದನಃ
ಪಾರ್ಥೋ ವತ್ಸಃ ಸುಧೀರ್ಭೋಕ್ತಾ ದುಗ್ಧಂ ಗೀತಾಮೃತಂ ಮಹತ್

ಉಪನಿಷತ್ತುಗಳು ಹಸುಗಳು; ಶ್ರೀಕೃಷ್ಣಮೂರ್ತಿ ಹಾಲು ಕರೆಯುವವನು; ಅರ್ಜುನನು ಕರು; ಮಹತ್ತರವಾದ ಗೀತಾಮೃತವೇ ಹಾಲು; ಸದ್ಬುದ್ಧಿಯುಳ್ಳವರು ಆ ಹಾಲನ್ನು ಕುಡಿಯುವರು.

೬. ಸಾರಥ್ಯ ಮರ್ಜುನಸ್ಯಾದೌ ಕುರ್ವನ್ ಗೀತಾಮೃತಂ ದದೌ
ಲೋಕತ್ರಯೋಪಕಾರಾಯ ತಸ್ಮೈ ಕೃಷ್ಣಾತ್ಮನೇ ನಮಃ

ಯಾವ ಮಹನೀಯನು ಪೂರ್ವದಲ್ಲಿ ಅರ್ಜುನನಿಗೆ ರಥ ಸಾರಥ್ಯವನ್ನು ಮಾಡುತ್ತಾ ಮೂರು ಲೋಕಗಳಿಗೆ ಮಹೋಪಕಾರ ಮಾಡಲೋಸುಗ ಆತನಿಗೆ ಗೀತಾಮೃತವನ್ನು ಬೋಧಿಸಿದನೋ, ಆ ಶ್ರೀಕೃಷ್ಣ ಪರಮಾತ್ಮನಿಗೆ ನಮಸ್ಕಾರಗಳು.

೭. ಸಂಸಾರ ಸಾಗರಂ ಘೋರಂ ತರ್ತುಮಿಚ್ಛತಿ ಯೋ ನರಃ
ಗೀತಾನಾವಂ ಸಮಾಸಾದ್ಯ ಪಾರಂ ಯಾತಿ ಸುಖೇನ ಸಃ

ಘೋರವಾದ ಸಂಸಾರ ಸಮುದ್ರವನ್ನು ದಾಟಲಿಚ್ಛಿಸುವ ಮಾನವನು ಭಗವದ್ಗೀತೆಯೆಂಬ ನೌಕೆಯನ್ನು ಬಳಸಿದಲ್ಲಿ ಸುಲಭವಾಗಿ ದಡವನ್ನು ಸೇರಬಲ್ಲನು.

೮. ಗೀತಾಜ್ಞಾನಂ ಶ್ರುತಂ ನೈವ ಸದೈವಾಭ್ಯಾಸಯೋಗತಃ
ಮೋಕ್ಷಮಿಚ್ಛತಿ ಮೂಢಾತ್ಮಾ ಯಾತಿ ಬಾಲಕ ಹಾಸ್ಯತಾಂ

ಯಾವನು ನಿರಂತರಾಭ್ಯಾಸದಿಂದ ಗೀತಾಜ್ಞಾನವನ್ನು ಅನುಭೂತಿಗೊಳಿಸಿಕೊಳ್ಳದೆ ಮೋಕ್ಷವನ್ನು ಮಾತ್ರ ಬಯಸುವನೋ ಅಂತಹ ಮೂಢನನ್ನು ಬಾಲಕರೂ ಸಹ ಪರಿಹಾಸ್ಯ ಮಾಡುವರು.

೯. ಯೇ ಶೃಣ್ವಂತಿ ಪಠಂತ್ಯೇವ ಗೀತಾಶಾಸ್ತ್ರ ಮಹರ್ನಿಶಂ
ನತೇವೈ ಮಾನುಷಾ ಜ್ಞೇಯಾ ದೇವರೂಪಾ ನ ಸಂಶಯಃ

ಯಾರು ಗೀತಾಶಾಸ್ತ್ರವನ್ನು ಅಹರ್ನಿಶ ಶ್ರವಣ ಮಾಡುತ್ತಾ, ಪಠಿಸುತ್ತಿರುವರೋ ಅವರನ್ನು ಸಾಧಾರಣ ಮಾನವರು ಎಂದು ಭಾವಿಸಬಾರದು, ಅವರು ನಿಸ್ಸಂಶಯವಾಗಿ ದೇವರೂಪಿಗಳೇ ಆಗಿದ್ದಾರೆ.

೧೦. ಗೀತಾಜ್ಞಾನೇನ ಸಂಬೋಧಂ ಕೃಷ್ಣಃ ಪ್ರಾಹಾರ್ಜುನಾಯವೈ
ಭಕ್ತಿತತ್ವಂ ಪರಂ ತತ್ರ ಸಗುಣಂ ಚಾಥ ನಿರ್ಗುಣಂ

ಶ್ರೀ ಕೃಷ್ಣಮೂರ್ತಿ ಅರ್ಜುನನಿಗೆ ಗೀತಾಪ್ರಬೋಧದ ಮೂಲಕ ಸಂಯಕ್ ಜ್ಞಾನವನ್ನು, ಉತ್ಕೃಷ್ಟವಾದ ಭಕ್ತಿ ತತ್ವವನ್ನು, ಸಗುಣ ನಿರ್ಗುಣ ಸ್ವರೂಪಗಳನ್ನು ಚೆನ್ನಾಗಿ ಉಪದೇಶಿಸಿದನು.

೧೧. ಸೋಪಾನಾಷ್ಟಾದಶೈರೇವ ಭುಕ್ತಿ ಮುಕ್ತಿ ಸಮುಚ್ಛ್ರಿತೈಃ
ಕ್ರಮಶಃ ಚಿತ್ತಶುದ್ಧಿಃ ಸ್ಯಾತ್ಪ್ರೇಮ ಭಕ್ತ್ಯಾದಿ ಕರ್ಮಸು

ಮುಕ್ತಿದಾಯಕಗಳಾದ, ಉಪದೇಶಗಳಿಂದ ಕೂಡಿದ ಅತ್ಯುನ್ನತವಾದ ಹದಿನೆಂಟು ಅಧ್ಯಾಯಗಳೆಂಬ ಮೆಟ್ಟಿಲುಗಳನ್ನು ಏರಿ ಪ್ರೇಮ, ಭಕ್ತ್ಯಾದಿಗಳ ಸಹಿತ ಕರ್ಮಗಳನ್ನು ಮಾಡುವುದರಿಂದ ಕ್ರಮವಾಗಿ ಜೀವಿಗೆ ಚಿತ್ತಶುದ್ಧಿ ಉಂಟಾಗುವುದು.

೧೨. ಸಾಧು ಗೀತಾಂಭಸಿ ಸ್ನಾನಂ ಸಂಸಾರ ಮಲನಾಶನಂ
ಶ್ರದ್ಧಾಹೀನಸ್ಯ ತತ್ಕಾರ್ಯಂ ಹಸ್ತಿಸ್ನಾನಂ ವೃಥೈವ ತತ್

ಗೀತೆಯೆಂಬ ಜಲದಲ್ಲಿ ಸ್ನಾನ ಮಾಡುವುದು ಬಹಳ ಉತ್ತಮ ವಾದುದು. ಏಕೆಂದರೆ, ಅದು ಸಂಸಾರ ಮಾಲಿನ್ಯವನ್ನು ನಾಶಗೊಳಿಸುವುದು. ಆದರೆ ಶ್ರದ್ಧೆಯಿಲ್ಲದವನ ಆ ಕಾರ್ಯವು ಗಜಸ್ನಾನ* ದಂತೆ ವ್ಯರ್ಥವೇ ಆಗುವುದು.

೧೩. ಗೀತಾಯಾಶ್ಚ ನ ಜಾನಾತಿ ಪಠನಂ ನೈವ ಪಾಠನಂ
ಸ ಏವ ಮಾನುಷೇ ಲೋಕೇ ಮೋಘಕರ್ಮಕರೋ ಭವೇತ್

ಗೀತೆಯನ್ನು ಪಠಿಸುವುದನ್ನು ಅಥವ ಇತರರನ್ನು ಪಠಿಸುವಂತೆ ಮಾಡುವುದನ್ನು ತಿಳಿಯದೇ ಇರುವವನು ಈ ಮಾನವ ಲೋಕದಲ್ಲಿ ವ್ಯರ್ಥ ಕಾರ್ಯವನ್ನು ಆಚರಿಸುವವನೇ ಆಗುವನು.

೧೪. ಯಸ್ಮಾದ್ಗೀತಾಂ ನ ಜಾನಾತಿ ನಾಧಮಸ್ತತ್ಪರೋ ಜನಃ
ಧಿಕ್ತಸ್ಯ ಮಾನುಷಂ ದೇಹಂ ವಿಜ್ಞಾನಂ ಕುಲಶೀಲತಾಂ

ಗೀತೆಯನ್ನು ತಿಳಿಯದೆ ಇರುವವನಿಗಿಂತ ಅಧಮನು ಇನ್ನೊಬ್ಬನು ಇರಲಾರನು. ಅಂತಹವನ ಮಾನವ ಶರೀರ, ವಿಜ್ಞಾನ, ಕುಲಶೀಲಗಳಿಗೆ ಧಿಕ್ಕಾರವಿರಲಿ!

೧೫. ಗೀತಾರ್ಥಂ ನ ವಿಜಾನಾತೀ ನಾಧಮಸ್ತತ್ಪರೋ ಜನಃ
ದಿಗ್ಛರೀರಂ ಶುಭಂ ಶೀಲಂ ವಿಭವಂ ತದ್ಗೃಹಾಶ್ರಮಂ

ಗೀತಾರ್ಥವನ್ನು ತಿಳಿಯದೆ ಇರುವವನಿಗಿಂತ ಅಲ್ಪನು ಮತ್ತೊಬ್ಬನು ಇರಲಾರನು. ಅಂತಹವನ ಸುಂದರ ಶರೀರ, ಶೀಲ, ವೈಭವ, ಗೃಹಸ್ಥಾಶ್ರಮಗಳಿಗೆ ಧಿಕ್ಕಾರವಿರಲಿ!

೧೬. ಗೀತಾಶಾಸ್ತ್ರಂ ನ ಜಾನಾತಿ ನಾಧಮಸ್ತತ್ಪರೋ ಜನಃ
ಧಿಕ್ಪ್ರಾರಬ್ಧಂ ಪ್ರತಿಷ್ಠಾಂ ಚ ಪೂಜಾಂ ಮಾನಂ ಮಹತ್ತಮಮ್

ಗೀತಾಶಾಸ್ತ್ರವನ್ನು ತಿಳಿಯದಂಥವನಿಗಿಂತ ನೀಚನಾದ ಮನುಜನು ಇನ್ನೊಬ್ಬನಿಲ್ಲ. ಅವನ ಪ್ರಾರಬ್ಧ, ಪ್ರತಿಷ್ಠೆ, ಪೂಜೆ, ಸನ್ಮಾನಗಳಿಗೆ ಧಿಕ್ಕಾರವಿರಲಿ!

೧೭. ಗೀತಾಶಾಸ್ತ್ರೇ ಮತಿರ್ನಾಸ್ತಿ ಸರ್ವಂ ತನ್ನಿಷ್ಫಲಂ ಜಗುಃ
ಧಿಕ್ ತಸ್ಯ ಜ್ಞಾನದಾತಾರಂ ವ್ರತಂ ನಿಷ್ಠಾಂ, ತಪೋ ಯಶಃ

ಗೀತಾಶಾಸ್ತ್ರದಲ್ಲಿ ಬುದ್ಧಿ ಹಾಗೂ ಪ್ರೀತಿಯಿಲ್ಲದವನಿಗೆ ಸಮಸ್ತವೂ ನಿಷ್ಫಲವೇ ಎಂದು ಹೇಳಲ್ಪಟ್ಟಿದೆ. ಗೀತಾಧರ್ಮಕ್ಕೆ ವಿರುದ್ಧವಾಗಿ ಬೋಧಿಸುವವನ ವ್ರತ, ನಿಷ್ಠೆ, ತಪಸ್ಸು, ಕೀರ್ತಿಗಳಿಗೆ ಧಿಕ್ಕಾರವಿರಲಿ!

೧೮. ಗೀತಾರ್ಥ ಪಠನಂ ನಾಸ್ತಿ ನಾಧಮಸ್ತತ್ಪರೋ ಜನಃ
ಗೀತಾಗೀತಂ ನ ಯಜ್ಞಾನಾಂ ತದ್ವಿದ್ಧ್ಯಾಸುರಸಂಭವಂ

ಗೀತಾರ್ಥವನ್ನು ಪಠಿಸದವನಿಗಿಂತ ಅಧಮನಾದ ಮನುಷ್ಯನು ಬೇರೊಬ್ಬನಿರಲಸಾಧ್ಯ. ಗೀತೆಗೆ ಸಮ್ಮತವಾಗದ ಜ್ಞಾನ ಆಸುರೀ ಪ್ರಕೃತಿಯವರ ಬುದ್ಧಿಯಿಂದ ಜನಿಸಿರುವುದೇ ಆಗಿದೆ.

೧೯. ತನ್ಮೋಘಂ ಧರ್ಮರಹಿತಂ ವೇದವೇದಾಂತಗರ್ಹಿತಂ
ತಸ್ಮಾದ್ಧರ್ಮಮಯೀ ಗೀತಾ ಸರ್ವಜ್ಞಾನ ಪ್ರಯೋಜಿಕಾ
ಸರ್ವಶಾಸ್ತ್ರಸಾರಭೂತಾ ವಿಶುದ್ಧಾ ಸಾ ವಿಶಿಷ್ಯತೇ

ಗೀತಾ ವಿರುದ್ಧವಾದ ಜ್ಞಾನ, ವೇದ ವೇದಾಂತಗಳಿಂದ ಖಂಡಿಸಿದಂತಹದೂ, ಧರ್ಮರಹಿತವೂ, ವ್ಯರ್ಥವೂ ಆದದ್ದಾಗಿದೆ. ಆದ್ದರಿಂದ ಧರ್ಮಮಯವಾಗಿದ್ದು, ಸಮಸ್ತ ಜ್ಞಾನವನ್ನು ಬೋಧಿಸುವುದಾಗಿದ್ದು, ಸರ್ವಶಾಸ್ತ್ರಗಳ ಸಾರವಾಗಿದ್ದು, ವಿಶುದ್ಧವಾಗಿರುವುದರಿಂದ ಗೀತೆ ಸರ್ವೋತ್ತಮವಾಗಿ ಬೆಳಗುತ್ತಿದೆ.

೨೦. ಯೋಽಧೀತೇ ವಿಷ್ಣುಪರ್ವಾಹೇ ಗೀತಾಂ ಶ್ರೀಹರಿವಾಸರೇ
ಸ್ವಪನ್ಜಾಗ್ರಚ್ಚಲಂ ಸ್ತಿಷ್ಠಞ್ಛತ್ರುಭಿರ್ನಸ ಹೀಯತೇ

ವಿಷ್ಣುಪರ್ವ ದಿನಗಳಲ್ಲಿ (ಏಕಾದಶಿ ಮುಂತಾದ ದಿನಗಳಲ್ಲಿ) ಗೀತೆಯನ್ನು ಯಾರು ಅಧ್ಯಯನ ಮಾಡುವರೋ, ಅವರು ನಿದ್ರಿಸುತ್ತಿದ್ದರೂ, ಎಚ್ಚೆತ್ತಿದ್ದರೂ, ನಡೆಯುತ್ತಿದ್ದರೂ, ಕುಳಿತಿದ್ದರೂ, ಶತ್ರುಗಳಿಂದ (ಕಾಮ ಕ್ರೋದಾಧಿಗಳಿಂದ) ಯಾವಾಗಲೂ ಪರಾಭವವನ್ನು ಹೊಂದುವುದಿಲ್ಲ.

೨೧. ಸಾಲಗ್ರಾಮಶಿಲಾಯಾಂ ವಾ ದೇವಾಗಾರೇ ಶಿವಾಲಯೇ
ತೀರ್ಥೇ ನದ್ಯಾಂ ಪಠನ್ ಗೀತಾಂ ಸೌಭಾಗ್ಯಂ ಲಭತೇ ಧ್ರುವಂ

ಸಾಲಿಗ್ರಾಮಶಿಲೆಯ ಮುಂದಾಗಲಿ, ದೇವಾಲಯ, ಶಿವಾಲಯ, ತೀರ್ಥಸ್ಥಾನ, ನದೀತೀರ ಇವುಗಳಲ್ಲಿ ಎಲ್ಲಿ ಗೀತೆಯನ್ನು ಪಠಿಸಿದರೂ ಅವರಿಗೆ ಸೌಭಾಗ್ಯ ತಪ್ಪದೆ ಲಭಿಸುವುದು.

೨೨. ದೇವಕೀನಂದನಃ ಕೃಷ್ಣೋ ಗೀತಾಪಾಠೇನ ತುಷ್ಯತಿ
ಯಥಾ ನ ವೇದೈ ರ್ದಾನೇನ ಯಜ್ಞತೀರ್ಥವ್ರತಾಧಿಭಿಃ

ದೇವಕೀಸುತನಾದ ಶ್ರೀ ಕೃಷ್ಣ ಪರಮಾತ್ಮನು ಗೀತಾ ಪಠನದಿಂದ ಎಷ್ಟು ಸಂತುಷ್ಟಿ ಹೊಂದುವನೋ, ಅಷ್ಟೇ ಸಂತುಷ್ಟಿಯನ್ನು ವೇದಗಳಿಂದ ದಾನದಿಂದ ಯಜ್ಞತೀರ್ಥವ್ರತಗಳಿಂದ ಹೊಂದುವುದಿಲ್ಲ.

೨೩. ಗೀತಾಧೀತ ಚ ಯೇನಾಪಿ ಭಕ್ತಿಭಾವೇನ ಚೋತ್ತಮಾ
ವೇದ ಶಾಸ್ತ್ರಪುರಾಣಾನಿ ತೇನಾಧೀತಾನಿ ಸರ್ವಶಃ

ಉತ್ತಮವಾದ ಈ ಗೀತಾಶಾಸ್ತ್ರವನ್ನು ಭಕ್ತಿಭಾವದಿಂದ ಅಧ್ಯಯನ ಮಾಡುವವನು ಸಮಸ್ತ ವೇದಗಳನ್ನು, ಶಾಸ್ತ್ರಗಳನ್ನು, ಪುರಾಣಗಳನ್ನು ಅಧ್ಯಯನ ಮಾಡಿದಂತೆಯೇ ಆಗುವುದು..........

೨೪. ಯೋಗಿಸ್ಥಾನೇ ಸಿದ್ಧಪೀಠೇ ಶಿಲಾಗ್ರೇ ಸತ್ಸಭಾಸು ಚ
ಯಜ್ಞೇ ಚ ವಿಷ್ಣುಭಕ್ತಾಗ್ರೇ ಪಠನ್ ಸಿದ್ಧಿಂ ಪರಾಂ ಲಭೇತ್

ಯೋಗಿಗಳ ನಿವಾಸಸ್ಥಾನದಲ್ಲಿ, ಸಿದ್ಧ ಪೀಠದಲ್ಲಿ, ಸಾಲಿಗ್ರಾಮ ಶಿಲೆಯ ಮುಂದೆ, ಸತ್ಪುರುಷರ ಗೋಷ್ಠಿಯಲ್ಲಿ, ಯಜ್ಞಗಳಲ್ಲಿ, ವಿಷ್ಣುಭಕ್ತರೆದುರು ಗೀತೆಯನ್ನು ಓದುವವನು ಉತ್ತಮ ಸಿದ್ಧಿಯನ್ನು ಪಡೆಯುವನು.

೨೫. ಗೀತಾಪಾಠಂ ಚ ಶ್ರವಣಂ ಯಃ ಕರೋತಿ ದಿನೇದಿನೇ
ಕ್ರತವೋ ವಾಜಿಮೇಧಾದ್ಯಾಃ ಕೃತಾಸ್ತೇನ ಸದಕ್ಷಿಣಾಃ

ಯಾವನು ಪ್ರತಿದಿನವೂ ಗೀತಾಪಠನ ಹಾಗೂ ಶ್ರವಣವನ್ನು ಮಾಡುತ್ತಾನೋ, ಅಂತಹವನು ದಕ್ಷಿಣೆಗಳೊಂದಿಗೆ ಮಾಡಿದಂತ ಅಶ್ವಮೇಧ ಯಾಗ ಫಲವನ್ನು ಪಡೆಯುತ್ತಾನೆ.

೨೬. ಯಃ ಶೃಣೋತಿ ಚ ಗೀತಾರ್ಥಂ ಕೀರ್ತಯತ್ಯೇವ ಯಃ ಪರಮ್
ಶ್ರಾವಯೇಚ್ಚ ಪರಾರ್ಥಂ ವೈ ಸಪ್ರಯಾತಿ ಪರಂಪದಮ್

ಯಾರು ಗೀತಾರ್ಥವನ್ನು ಶ್ರವಣ ಮಾಡುವರೋ ಮತ್ತೆ ಅದನ್ನು ಇತರರಿಗೆ ವರ್ಣಿಸಿ ಹೇಳುವರೋ, ಅದರಲ್ಲಿಯ ಉತ್ತಮ ಭಾವಗಳನ್ನು ಬೇರೆಯವರಿಗೆ ತಿಳಿಸುವರೋ, ಅವರು ಪರಮಾತ್ಮ ಪದವನ್ನು ಹೊಂದುವರು.

೨೭. ಗೀತಾಯಾಃ ಪುಸ್ತಕಂ ಶುದ್ಧಂ ಯೋಽರ್ಪಯತ್ಯೇವ ಸಾದರಾತ್
ವಿಧಿನಾ ಭಕ್ತಿಭಾವೇನ ತಸ್ಯ ಭಾರ್ಯಾ, ಪ್ರಿಯಾ ಭವೇತ್

೨೮. ಯಶಃ ಸೌಭಾಗ್ಯ ಮಾರೋಗ್ಯಂ ಲಭತೇ ನಾತ್ರ ಸಂಶಯಃ
ದಯಿತಾನಾಂ ಪ್ರಿಯೋ ಭೂತ್ವಾ ಪರಮಮ್ ಸುಖ ಮಶ್ನುತೇ

* ಗಜಸ್ನಾನ-ಆನೆಗೆ ಸ್ನಾನಮಾಡಿಸಿ ಬಿಟ್ಟರೆ ಕೂಡಲೇ ಅದು ಧೂಳನ್ನು ತಲೆಯ ಮೇಲೆ ಚೆಲ್ಲಿಕೊಳ್ಳುವುದು. ಆದ್ದರಿಂದ ಸ್ನಾನಫಲವು ಅದಕ್ಕೆ ಲಭಿಸುವುದಿಲ್ಲ.

ಪರಿಶುದ್ಧವಾದ ಗೀತಾಗ್ರಂಥವನ್ನು ಯಾವನು ಆದರದಿಂದ ಭಕ್ತಿಭಾವದಿಂದ, ವಿಧಿಪೂರ್ವಕವಾಗಿ ಇತರರಿಗೆ ಸಮರ್ಪಿಸುವನೋ, ಅಂತಹವನ ಪತ್ನಿ ಆತನಿಗೆ ಸದಾ ಅನುಕೂಲವಾಗಿರುವಳು. ಮತ್ತೆ ಆ ಗೀತಾಪುಸ್ತಕದಾತ ಕೀರ್ತಿ, ಸೌಭಾಗ್ಯ, ಆರೋಗ್ಯ ತಪ್ಪದೆ ಪಡೆಯುವನು. ತನ್ನ ಧರ್ಮಪತ್ನಿ ಮುಂತಾದವರಿಗೆ ಪ್ರಿಯನಾಗಿ ಪರಮ ಸುಖವನ್ನು ಹೊಂದುತ್ತಾನೆ.

೨೯. ಅಭಿಚಾರೋದ್ಭವಂ ದುಃಖಂ ವರಶಾಪಾಗತಂ ಚ ಯತ್
ನೋಪಸರ್ಪಂತಿ ತತ್ರೈವ ಯತ್ರ ಗೀತಾರ್ಚನಂ ಗೃಹೇ

ಯಾವ ಗೃಹದಲ್ಲಿ ಗೀತಾಗ್ರಂಥವು ಪೂಜಿಸಲ್ಪಡುತ್ತದೆಯೋ, ಅಲ್ಲಿ ಅಭಿಚಾರ* ಜನಿತ ದುಃಖಗಳಾಗಲಿ, ಹಿರಿಯರ ಶಾಪಗಳಿಂದ ಕಷ್ಟಗಳಾಗಲಿ ಸಮೀಪಿಸುವುದಿಲ್ಲ.

೩೦. ತಾಪತ್ರಯೋದ್ಭವಂ ಪೀಡಾ ನೈವ ವ್ಯಾಧಿ ರ್ಭವೇ ಕ್ವಚಿತ್
ನ ಶಾಪೋ ನೈವ ಪಾಪಂ ಚ ದುರ್ಗತಿ ರ್ನರಕಂ ನ ಚ

ಗೀತಾಗ್ರಂಥವು ಪೂಜಿಸಲ್ಪಡುವ ಗೃಹದಲ್ಲಿ ತಾಪತ್ರಯಗಳಿಂದ ಬರುವ ಬಾಧೆಗಳಾಗಲೀ, ರೋಗಗಳಾಗಲಿ ಸಂಭವಿಸುವುದಿಲ್ಲ. ಮತ್ತೆ ಶಾಪವಾಗಲಿ, ದುರ್ಗತಿಯಾಗಲೀ, ನರಕವಾಗಲೀ ಆ ಗೃಹವಾಸಿಗಳಿಗೆ ಅನುಭವವಾಗುವುದೇ ಇಲ್ಲ.

೩೧. ವಿಸ್ಫೋಟಕಾದಯೊ ದೇಹೇ ನ ಬಾಧನ್ತೇ ಕದಾಚನ
ಲಭೇತ್ ಕೃಷ್ಣಪದೇ ದಾಸ್ಯಂ ಭಕ್ತಿಂ ಚಾವ್ಯಭಿಚಾರಿಣೀಮ್

ಗೀತಾಭ್ಯಾಸದಲ್ಲಿ ನಿರತನಾದವನಿಗೆ ಶರೀರದ ಮೇಲೆ ಬೊಬ್ಬೆಗಳು, ವ್ರಣಗಳು ಮುಂತಾದುವು ಎಂದಿಗೂ ಬಾಧಿಸುವುದಿಲ್ಲ. ಆತನು ಶ್ರೀಕೃಷ್ಣಮೂರ್ತಿಯ ಪಾದಕಮಲಗಳಲ್ಲಿ ಅಚಂಚಲ ಭಕ್ತಿಯನ್ನು, ಶರಣ್ಯವನ್ನು ಹೊಂದುವನು.

೩೨. ಜಾಯತೇ ಸತತಂ ಸಖ್ಯಂ ಸರ್ವಜೀವಗಣೈಃ ಸಹ
ಪ್ರಾರಬ್ಧಂ ಭುಂಜತೋ ವಾಪಿ ಗೀತಾಭ್ಯಾಸರತಸ್ಯಚ
೩೩. ಸಮುಕ್ತಃ ಸಸುಖೀ ಲೋಕೇ ಕರ್ಮಣಾ ನೋಪಲಿಪ್ಯತೇ
ಮಹಾಪಾಪಾದಿ ಪಾಪಾನಿ ಗೀತಾಧ್ಯಾಯೀ ಕರೋತಿಚೇತ್
ನ ಕಿಂಚಿತ್ ಸ್ಪೃಶ್ಯತೇ ತಸ್ಯ ನಲಿನೀದಲಮಂಭಸಾ

ಗೀತಾಭ್ಯಾಸ ತತ್ಪರನು ಪ್ರಾರಬ್ಧವನ್ನು ಅನುಭವಿಸುತ್ತಿದ್ದರೂ, ಸಮಸ್ತ ಭೂತಕೋಟಿಗಳಲ್ಲಿ ನಿರಂತರವಾಗಿ ಸಖ್ಯವನ್ನು ಹೊಂದಿರುತ್ತಾನೆ. ಆತನು ಮುಕ್ತನು, ಸುಖಿಯೂ ಆಗುವನು. ಕರ್ಮಗಳಿಗೆ ಅಂಟಿಕೊಳ್ಳುವುದಿಲ್ಲ. ತಾವರೆ ಎಲೆಗೆ ನೀರು ಅಂಟದಂತೆ ಮಹಾಪಾಪಗಳು ಆತನನ್ನು ಸೋಂಕುವುದಿಲ್ಲ.

೩೪. ಅನಾಚಾರೋದ್ಭವಂ ಪಾಪ ಮವಾಚ್ಯಾದಿಕೃತಂ ಚ ಯತ್
ಅಭಕ್ಷ್ಯ ಭಕ್ಷಜಂ ದೋಷ ಮಸ್ಪರ್ಶಸ್ಪರ್ಶಜಂ ತಥಾ
೩೫. ಜ್ಞಾನಾಜ್ಞಾನಕೃತಂ ನಿತ್ಯ ಮಿಂದ್ರಿಯೈರ್ಜನಿತಂ ಚ ಯತ್
ತತ್ಸರ್ವಂ ನಾಶಮಾಯಾತಿ ಗೀತಾಪಾಠೇನ ತತ್ಕ್ಷಣಾತ್

ಅನಾಚಾರ, ದುರ್ಭಾಷೆ, ಅಭಕ್ಷ್ಯ ಸೇವನೆ (ಭಕ್ಷಿಸಲು ವರ್ಜಿತವಾದವುಗಳನ್ನು ಭುಜಿಸುವುದು), ಮುಟ್ಟಬಾರದವುಗಳನ್ನು ಮುಟ್ಟುವುದು; ತಿಳಿದಾಗಲಿ, ತಿಳಿಯದಾಗಲಿ ಮಾಡಬಾರದಂತಹ ಕಾರ್ಯಗಳನ್ನು ಮಾಡುವುದು ಮತ್ತು ಇಂದ್ರಿಯಗಳ ದ್ವಾರ ಪ್ರತಿನಿತ್ಯವೂ ಸಂಭವಿಸಬಹುದಾದ ಅನೇಕ ಪಾಪಗಳು ಯಾವುವು ಇದ್ದಾವೋ ಅವೆಲ್ಲವುಗಳು ಗೀತಾಪಠನದಿಂದ ತಕ್ಷಣವೇ ನಶಿಸಿ ಹೋಗುವುವು.

---

ಅಭಿಚಾರ : ಶತ್ರುವಿನಿಂದ ಮಾಡಲ್ಪಡುವ ಮಾರಣ ಸಂಬಂಧವಾದ ದುರ್ಮಾರ್ಗಗಳು

೩೬. ಸರ್ವತ್ರ ಪ್ರತಿಭೋಕ್ತಾ ಚ ಪ್ರತಿಗೃಹ್ಯಾ ಚ ಸರ್ವಶಃ
ಗೀತಾಪಾಠಂ ಪ್ರಕುರ್ವಾಣೋ ನ ಲಿಪ್ಯೇತ ಕದಾಚನ

ಎಲ್ಲಾ ಕಡೆ ಊಟಮಾಡುವವನು, ದಾನಗಳನ್ನು ಪಡೆಯುವವನು, ಗೀತಾಪಠನ ಮಾಡುವುದರಿಂದ ಆಯಾ ಪಾಪಗಳಿಂದ ವಿಮುಕ್ತನಾಗುವನು (ಆ ಕಾರ್ಯಗಳಿಂದ ಉಂಟಾಗುವ ಪಾಪಗಳು ಆತನನ್ನು ತಾಕುವುದಿಲ್ಲ).

೩೭. ರತ್ನ ಪೂರ್ಣಾಂ ಮಹೀಂ ಸರ್ವಾಂ ಪ್ರತಿಗೃಹ್ಯಾವಿಧಾನತಃ
ಗೀತಾಪಾಠೇನ ಚೈಕೇನ ಶುದ್ಧ ಸ್ಫಟಿಕವತ್ಸದಾ

ರತ್ನಗಳಿಂದ ತುಂಬಿದ ಭೂಮಿಯನ್ನು ಅವಿಧಿಪೂರ್ವಕವಾಗಿ ದಾನವಾಗಿ ಸ್ವೀಕರಿಸಿದ್ದರೂ, ಗೀತೆಯನ್ನು ಒಂದು ಸಾರಿ ಪಠಿಸುವುದರಿಂದ ಮನುಜನು ಶುದ್ಧ ಸ್ಫಟಿಕದಂತೆ ನಿರ್ಮಲವಾಗುವನು.

೩೮. ಯ ಸ್ಯಾನ್ತಃಕರಣಂ ನಿತ್ಯಂ ಗೀತಾಯಾಂ ರಮತೇ ಸದಾ
ಸ ಸಾಗ್ನಿಕಃ ಸದಾ ಜಾಪೀ ಕ್ರಿಯಾವಾನ್ ಸ ಚ ಪಂಡಿತಃ
೩೯. ದರ್ಶನೀಯಸ್ಸ ಧನವಾನ್ ಸ ಯೋಗೀ ಜ್ಞಾನವಾನಪಿ
ಸ ಏವ ಯಾಜ್ಞಿಕೋ ಯಾಜೀ ಸರ್ವವೇದಾರ್ಥದರ್ಶಕಃ

ಯಾರ ಅಂತಃಕರಣವು ನಿತ್ಯವು ಗೀತೆಯಲ್ಲಿ ನಿರತವಾಗಿದೆಯೋ ಆತನೇ ಅಗ್ನಿಹೋತ್ರ, ಆತನೇ ನಿರಂತರ ಜನೋದ್ಧಾರಕ, ಆತನೇ ಕರ್ಮನಿಷ್ಠ, ಆತನೇ ಪಂಡಿತ. ಅಂತಹ ಗೀತಾತತ್ಪರನಾದರೋ ದರ್ಶನ ಯೋಗ್ಯನು, ಧನವಂತನು, ಯೋಗಿ, ಜ್ಞಾನಿ, ಯಜ್ಞೋದ್ಧಾರಕನು, ಯಜಮಾನನು, ಸಂಪೂರ್ಣ ವೇದಾರ್ಥವನ್ನರಿತವನು ಆಗುವನು.

೪೦. ಗೀತಾಯಾಃ ಪುಸ್ತಕಂ ಯತ್ರ ನಿತ್ಯಪಾಠಶ್ಚ ವರ್ತತೇ
ತತ್ರ ಸರ್ವಾಣಿ ತೀರ್ಥಾನಿ ಪ್ರಯಾಗಾದೀನ ಭೂತಲೇ.........

ಎಲ್ಲಿ ಗೀತಾಗ್ರಂಥವು ನಿತ್ಯವೂ ಪಠಿಸಲ್ಪಡುತ್ತದೋ, ಅಲ್ಲಿ ಪ್ರಯಾಗಾದಿ ಸಮಸ್ತ ತೀರ್ಥಗಳ ಸಂಗಮವಿರುವುದು.

೪೧. ನಿವಸನ್ತಿ ಸದಾ ದೇಹೇ ದೇಹಶೇಷೇಪಿ ಸರ್ವದಾ
ಸರ್ವೇ ದೇವಾಶ್ಚ ಋಷಯೊ ಯೋಗಿನೋ ದೇಹರಕ್ಷಕಾಃ

ಗೀತಾಪಾಠಕನ ಶರೀರದಲ್ಲಿ ತೀರ್ಥಗಳೆಲ್ಲವೂ ಸದಾ ಪ್ರವಹಿಸುತ್ತವೆ. ದೇಹವಿಯೋಗವಾದಾಗ ಆತನ ಮೃತ ದೇಹದಲ್ಲಿ ಆ ತೀರ್ಥಗಳು ವರ್ತಿಸುತ್ತಿರುತ್ತವೆ. ಸಮಸ್ತ ದೇವತೆಗಳು, ಋಷಿಗಳು, ಯೋಗಿಗಳು ಆ ಗೀತಾಧ್ಯಾಯಿಯ ಶರೀರವನ್ನು ಸಂರಕ್ಷಿಸುವರು.

೪೨. ಗೋಪಾಲೋ ಬಾಲಕೃಷ್ಣೋಪಿ ನಾರದ ಧ್ರುವ ಪಾರ್ಷದೈಃ
ಸಹಾಯೋ ಜಾಯತೇಶೀಘ್ರಂ ಯತ್ರ ಗೀತಾ ಪ್ರವರ್ತತೇ

ಎಲ್ಲಿ ಗೀತಾಪಾಠ ನಡೆಯುತ್ತಿದೆಯೋ ಅಲ್ಲಿ ಗೋಪಾಲನಾದ ಬಾಲಕೃಷ್ಣನು, ನಾರದ ಧ್ರುವ ಮುಂತಾದವರೊಡನೆ ಹರ್ಷದಿಂದ ಸಹಾಯ ನಿಮಿತ್ತವಾಗಿ ಶೀಘ್ರವಾಗಿ ಬಂದು ಸೇರುವನು.

೪೩. ಯತ್ರ ಗೀತಾ ವಿಚಾರಶ್ಚ ಪಠನಂ ಪಾಠನಂ ತಥಾ
ಮೋದತೇ ತತ್ರ ಭಗವಾನ್ ಕೃಷ್ಣೋ ರಾಧಿಕಯಾ ಸಹ

ಎಲ್ಲಿ ಗೀತೆಯ ವಿಚಾರ, ಪಠನ, ಬೋಧೆ ನಡೆಯುತ್ತಿದೆಯೋ, ಅಲ್ಲಿ ಭಗವಂತನಾದ ಶ್ರೀಕೃಷ್ಣನು ರಾಧೆಯೊಡನೆ ಆಗಮಿಸಿ ಆನಂದ ಪಡುವನು.

ಶ್ರೀ ಭಗವಾನುವಾಚ :

೪೪. ಗೀತಾ ಮೇ ಹೃದಯಂ ಪಾರ್ಥ ಗೀತಾ ಮೇ ಸಾರ ಮುತ್ತಮಮ್
ಗೀತಾ ಮೇ ಜ್ಞಾನ ಮತ್ಯುಗ್ರಂ ಗೀತಾ ಮೇ ಜ್ಞಾನ ಮವ್ಯಯಮ್

ಶ್ರೀ ಭಗವಂತನು ಹೇಳಿದನು- ಓ ಅರ್ಜುನಾ! ಗೀತೆ ನನ್ನ ಹೃದಯ. ಗೀತೆ ನನ್ನ ಉತ್ತಮ ತತ್ವ. ಗೀತೆ ನನ್ನ ತೇಜೋವಂತ, ನಾಶ ರಹಿತವಾದ ಜ್ಞಾನ.

**೪೫. ಗೀತಾ ಮೇ ಚೋತ್ತಮಂ ಸ್ಥಾನಂ ಗೀತಾ ಮೇ ಪರಮಂ ಪದಮ್**
**ಗೀತಾ ಮೇ ಪರಮಂ ಗುಹ್ಯಂ ಗೀತಾ ಮೇ ಪರಮೋ ಗುರುಃ**

ಗೀತೆ ನನ್ನ ಉತ್ತಮ ಸ್ಥಾನ. ಗೀತೆ ನನ್ನ ಶ್ರೇಷ್ಠಪದ. ಗೀತೆ ನನ್ನ ಪರಮ ರಹಸ್ಯ. ಗೀತೆ ನನ್ನ ಪರಮ ಗುರು.

**೪೬. ಗೀತಾಶ್ರಯೋऽಹಂ ತಿಷ್ಠಾಮಿ ಗೀತಾ ಮೇ ಪರಮಂ ಗೃಹಮ್**
**ಗೀತಾಜ್ಞಾನಂ ಸಮಾಶ್ರಿತ್ಯ ತ್ರಿಲೋಕೀಂ ಪಾಲಯಾಮ್ಯಹಮ್**

ನಾನು ಗೀತೆಯನ್ನಾಶ್ರಯಿಸಿಕೊಂಡೇ ಇದ್ದೇನೆ. ಗೀತೆ ನನ್ನ ಉತ್ತಮ ಗೃಹ. ಗೀತಾಜ್ಞಾನವನ್ನು ಆಶ್ರಯಿಸಿಯೇ ನಾನು ಮೂರುಲೋಕಗಳನ್ನು ಪಾಲಿಸುತ್ತಿದ್ದೇನೆ.

**೪೭. ಗೀತಾ ಮೇ ಪರಮಾ ವಿದ್ಯಾ ಬ್ರಹ್ಮರೂಪಾ ನ ಸಂಶಯಃ**
**ಅರ್ಧಮಾತ್ರಾ ಪರಾ ನಿತ್ಯಾಸ್ವನಿರ್ವಾಚ್ಯಪದಾತ್ಮಿಕಾ**

ಗೀತೆ ನನ್ನ ಶ್ರೇಷ್ಠವಾದ ವಿದ್ಯೆ. ಆದಿ ಬ್ರಹ್ಮಸ್ವರೂಪ (ಪ್ರಣವದ ನಾಲ್ಕನೆಯ ಪಾದ) ಮತ್ತು ಅರ್ಧಮಾತ್ರ ರೂಪ. ಉತ್ಕೃಷ್ಟವಾದುದು. ನಿತ್ಯವಾದುದು. ಅನಿರ್ವಚನೀಯವಾದ ಸ್ವರೂಪವುಳ್ಳದ್ದು. ಇದರಲ್ಲಿ ಯಾವ ಸಂಶಯವೂ ಇಲ್ಲ.

**೪೮. ಗೀತಾನಾಮಾನಿ ವಕ್ಷ್ಯಾಮಿ ಗುಹ್ಯಾನಿ ಶೃಣು ಪಾಂಡವ**
**ಕೀರ್ತನಾ ತ್ಸರ್ವಪಾಪಾನಿ ವಿಲಯಂ ಯಾಂತಿ ತತ್ಕ್ಷಣಾತ್**

ಪಾಂಡುತನಯನಾದ ಅರ್ಜುನಾ! ನಿನಗೀಗ ರಹಸ್ಯವಾದ ಗೀತಾನಾಮಗಳನ್ನು ಹೇಳುತ್ತಿದ್ದೇನೆ ಕೇಳು. ಅವುಗಳನ್ನುಚ್ಚರಿಸುವುದರಿಂದ ಸಮಸ್ತ ಪಾಪಗಳು ತಕ್ಷಣ ನಶಿಸಿ ಹೋಗುವುವು.

**೪೯. ಗಂಗಾ ಗೀತಾ ಚ ಗಾಯತ್ರೀ ಸೀತಾ ಸತ್ಯಾ ಸರಸ್ವತೀ**
**ಬ್ರಹ್ಮವಲ್ಲಿ ಬ್ರಹ್ಮವಿದ್ಯಾ ತ್ರಿಸಂಧ್ಯಾ ಮುಕ್ತಿಗೇಹಿನೀ**
**೫೦. ಅರ್ಧಮಾತ್ರಾ ಚಿದಾನಂದಾ ಭವಘ್ನೀ ಭ್ರಾಂತಿನಾಶಿನೀ**
**ವೇದತ್ರಯೀ ಪರಾऽನಂತಾ ತತ್ವಾರ್ಥಜ್ಞಾನಮಂಜರೀ**
**೫೧. ಇತ್ಯೇತಾನಿ ಜಪೇನ್ನಿತ್ಯಂ ನರೋ ನಿಶ್ಚಲಮಾನಸಃ**
**ಜ್ಞಾನಸಿದ್ಧಿಂ ಲಭೇನ್ನಿತ್ಯಂ ತಥಾಂತೇ ಪರಮಂಪದಂ**

"ಗಂಗೆ, ಗೀತೆ, ಗಾಯತ್ರಿ, ಸೀತೆ, ಸತ್ಯ, ಸರಸ್ವತಿ, ಬ್ರಹ್ಮವಲ್ಲಿ, ಬ್ರಹ್ಮವಿದ್ಯ, ತ್ರಿಸಂಧ್ಯ, ಮುಕ್ತಿಗೇಹಿನಿ, ಅರ್ಧಮಾತ್ರಾ, ಚಿದಾನಂದ, ಭವಘ್ನಿ, ಭ್ರಾಂತಿನಾಶಿನಿ, ವೇದತ್ರಯೀ, ಪರ, ಅನಂತ, ತತ್ವಾರ್ಥಜ್ಞಾನಮಂಜರಿ"-

ಗೀತೆಯ ಈ ನಾಮಗಳನ್ನು ಮಾನವನು ನಿಶ್ಚಲಚಿತ್ತನಾಗಿ ನಿರಂತರ ಜಪಿಸಬೇಕು. ಆದರಿಂದ ಆತನು ಜ್ಞಾನಸಿದ್ಧಿ ಪಡೆದು ಕೊನೆಗೆ ಪರಮಾತ್ಮ ಪದವಿಯನ್ನು ಹೊಂದುವನು.

**೫೨. ಪಾಠೇಽಸಮರ್ಥಃ ಸಂಪೂರ್ಣೇ ತದರ್ಧಂ ಪಾಠ ಮಾಚರೇತ್**
**ತದಾ ಗೋದಾನಜಂ ಪುಣ್ಯಂ ಲಭತೇ ನಾತ್ರ ಸಂಶಯಃ**

ಗೀತೆಯನ್ನು ಸಂಪೂರ್ಣವಾಗಿ ಓದಲು ಸಾಧ್ಯವಿಲ್ಲದವನು, ಅದರಲ್ಲಿಯ ಅರ್ಧಭಾಗವನ್ನಾದರೂ ಓದಬೇಕು. ಆಗ ಗೋದಾನದಿಂದ ಉಂಟಾಗುವ ಫಲವು ಆತನಿಗೆ ತಪ್ಪದೆ ಲಭಿಸುವುದು.

**೫೩. ತ್ರಿಭಾಗಂ ಪಠಮಾನಸ್ತು ಸೋಮಯಾಗಫಲಂ ಲಭೇತ್**
**ಷಡಂಶಂ ಜಪಮಾನಸ್ತು ಗಂಗಾಸ್ನಾನಫಲಂ ಲಭೇತ್**

ಗೀತೆಯ ಮೂರನೆಯ ಒಂದು ಭಾಗ ಪಠಿಸುವವನಿಗೆ ಸೋಮಯಾಗದ ಫಲ ಲಭ್ಯವಾಗುವುದು. ಗೀತೆಯ ಆರನೆಯ ಒಂದು ಭಾಗ (ಮೂರು ಅಧ್ಯಾಯಗಳನ್ನು) ಜಪಿಸುವವನಿಗೆ ಗಂಗಾಸ್ನಾನಫಲ ದೊರಕುವುದು.

**೫೪. ತಥಾಧ್ಯಾಯದ್ವಯಂ ನಿತ್ಯಂ ಪಠಮಾನೋ ನಿರಂತರಂ**
**ಇಂದ್ರಲೋಕ ಮವಾಪ್ನೋತಿ ಕಲ್ಪಮೇಕಂ ವಸೇದ್ಧ್ರುವಂ**

ಗೀತೆಯ ಎರಡು ಅಧ್ಯಾಯಗಳನ್ನು ನಿತ್ಯವೂ ಪಠಿಸುವವನು ಇಂದ್ರ ಲೋಕವನ್ನು ಸೇರಿ ಒಂದು ಕಲ್ಪ ಕಾಲದವರೆಗೆ ಅಲ್ಲಿ ತಪ್ಪದೆ ನಿವಸಿಸುವನು.

**೫೫. ಏಕಮಧ್ಯಾಯಕಂ ನಿತ್ಯಂ ಪಠತೇ ಭಕ್ತಿಸಂಯುತಃ**
**ರುದ್ರಲೋಕ ಮವಾಪ್ನೋತಿ ಗಣೋಭೂತ್ವಾ ವಸೇಚ್ಚಿರಮ್**

ನಿತ್ಯವೂ ಒಂದು ಅಧ್ಯಾಯವನ್ನು ಭಕ್ತಿಯಿಂದ ಪಠಿಸುವವನು ರುದ್ರಲೋಕವನ್ನು ಹೊಂದಿ, ಅಲ್ಲಿ ರುದ್ರಗಣಗಳೊಡನೆ ಚಿರಕಾಲವಿರುವನು.

**೫೬. ಅಧ್ಯಾಯಾರ್ಧಂ ಚ ಪಾದಂ ವಾ ನಿತ್ಯಂ ಯಃ ಪಠತೇ ಜನಃ**
**ಪ್ರಾಪ್ನೋತಿ ರವಿಲೋಕಂ ಸ ಮನ್ವಂತರಸಮಾಃ ಶತಂ**

ಹಾಗೆಯೇ ಪ್ರತಿದಿನವೂ ಗೀತೆಯ ಅರ್ಧ ಅಧ್ಯಾಯವನ್ನಾಗಲಿ, ಇಲ್ಲ ಕಾಲು ಅಧ್ಯಾಯವನ್ನಾಗಲಿ ಯಾರು ಓದುವರೋ ಅವರು ನೂರು ಮನ್ವಂತರಗಳ ಕಾಲ ಸೂರ್ಯಲೋಕದಲ್ಲಿ ನಿವಸಿಸುವರು.

**೫೭. ಗೀತಾಯಾಃ ಶ್ಲೋಕದಶಕಂ ಸಪ್ತ ಪಂಚ ಚತುಷ್ಟಯಂ**
**ತ್ರಿ ದ್ವೈಕಾ ಮೇಕ ಮರ್ಧಂ ವಾ ಶ್ಲೋಕಾನಾಂ ಯಃ ಪಠೇನ್ನರಃ**
**ಚಂದ್ರಲೋಕಾ ಮವಾಪ್ನೋತಿ ವರ್ಷಾಣಾ ಮಯುತಂ ತಥಾ**

ಯಾರು ಗೀತೆಯಲ್ಲಿಯ ಹತ್ತು ಶ್ಲೋಕಗಳನ್ನಾಗಲಿ, ಇಲ್ಲವೇ ಏಳು ಶ್ಲೋಕಗಳನ್ನಾಗಲಿ, ಇಲ್ಲವೇ ಐದು, ಇಲ್ಲವೇ ನಾಲ್ಕು, ಇಲ್ಲವೇ ಮೂರು, ಇಲ್ಲವೇ ಒಂದು ಶ್ಲೋಕವನ್ನಾಗಲಿ, ಇಲ್ಲ ಅರ್ಧಶ್ಲೋಕವನ್ನಾಗಲಿ ನಿತ್ಯ ಪಠಿಸಿವರೋ ಅವರು ಹತ್ತುಸಾವಿರ ವರ್ಷಗಳ ಕಾಲ ಚಂದ್ರಲೋಕದಲ್ಲಿ ನಿವಸಿಸುವರು.

**೫೮. ಗೀತಾರ್ಥ ಮೇಕ ಪಾದಂ ಚ ಶ್ಲೋಕ ಮಧ್ಯಾಯ ಮೇವಚ**
**ಸ್ಮರಂ ಸ್ತ್ಯಕ್ತ್ವಾ ಜನೋ ದೇಹಂ ಪ್ರಯಾತಿ ಪರಮಮ್ ಪದಂ**

ಗೀತೆಯ ಒಂದು ಅಧ್ಯಾಯದ ಅಥವ ಒಂದು ಶ್ಲೋಕದ, ಅಥವ ಒಂದು ಪಾದದ ಅರ್ಥವನ್ನು ಸ್ಮರಿಸುತ್ತಾ ದೇಹವನ್ನು ತ್ಯಜಿಸುವವನು ಪರಮಾತ್ಮಪದವಿಯನ್ನು ಹೊಂದುವನು.

**೫೯. ಗೀತಾರ್ಥ ಮಪಿ ಪಾಠಂ ವಾ ಶೃಣುಯಾ ದಂತಕಾಲತಃ**
**ಮಹಾಪಾತಕಯುಕ್ತೋಽಪಿ ಮುಕ್ತಿ ಭಾಗೀ ಭವೇಜ್ಜನಃ**

ಯಾವನು ಅಂತ್ಯಕಾಲದಲ್ಲಿ ಗೀತೆಯ ಮೂಲಶ್ಲೋಕಗಳನ್ನಾಗಲಿ, ಇಲ್ಲ ಅರ್ಥವನ್ನಾಗಲಿ, ಶ್ರವಣ ಮಾಡುವನೋ ಆತನು ಮಹಾಪಾಪಿಯಾಗಿದ್ದರೂ ಮೋಕ್ಷಕ್ಕೆ ಪಾತ್ರನಾಗುವನು.

**೬೦. ಗೀತಾಪುಸ್ತಕ ಸಂಯುಕ್ತಃ ಪ್ರಾಣಾಂ ಸ್ತ್ಯಕ್ತ್ವಾ ಪ್ರಯಾತಿ ಯಃ**
**ಸ ವೈಕುಂಠ ಮವಾಪ್ನೋತಿ ವಿಷ್ಣುನಾ ಸಹ ಮೋದತೇ**

ಗೀತಾ ಗ್ರಂಥವನ್ನು ಕೈಯಲ್ಲಿ ಹಿಡಿದು ಪ್ರಾಣವನ್ನು ಬಿಡುವವನು ವೈಕುಂಠವನ್ನು ಹೊಂದಿ ವಿಷ್ಣುವಿನ ಜೊತೆ ಆನಂದವನ್ನು ಅನುಭವಿಸುವನು.

**೬೧. ಗೀತಾಧ್ಯಾಯ ಸಮಾಯುಕ್ತೋ ಮೃತೋಮಾನುಷತಾಂ ವ್ರಜೇತ್**
**ಗೀತಾಭ್ಯಾಸಂ ಪುನಃ ಕೃತ್ವಾ ಲಭತೇ ಮುಕ್ತಿ ಮುತ್ತಮಾಮ್**

ಗೀತಾಧ್ಯಯನ ಮಾಡುತ್ತಾ ಮರಣಿಸುವವನು ಮತ್ತೆ ಶುದ್ಧವಾದ ಮಾನವಜನ್ಮವನ್ನು ಪಡೆಯುವನು. ಗೀತಾಭ್ಯಾಸವನ್ನು ಮತ್ತೆ ಮತ್ತೆ ಮಾಡುವವನು ಉತ್ತಮವಾದ ಮೋಕ್ಷಗತಿಯನ್ನು ಹೊಂದುವನು.

೧೨. ಗೀತೇತ್ಯುಚ್ಚಾರ ಸಂಯುಕ್ತೋ ಮ್ರಿಯಮಾಣೋ ಗತಿಂ ಲಭೇತ್
ಯದ್ಯತ್ಕರ್ಮ ಚ ಸರ್ವತ್ರ ಗೀತಾಪಾಠ ಪ್ರಕೀರ್ತಿತಂ
ತತ್ತತ್ಕರ್ಮ ಚ ನಿರ್ದೋಷಂ ಭೂತ್ವಾ ಪೂರ್ಣತ್ವ ಮಾಪ್ನುಯಾತ್

'ಗೀತೆ'ಯೆನ್ನುವ ಶಬ್ದವನ್ನು ಉಚ್ಚರಿಸುತ್ತ ಮರಣಿಸುವವನು ಸದ್ಗತಿಯನ್ನು ಹೊಂದುವನು. ಗೀತೆಯ ಪಠನ, ಸಂಕೀರ್ತನ ಮಾಡುತ್ತಾ ಯಾವ ಯಾವ ಕರ್ಮಗಳು ಮಾಡಲ್ಪಡುತ್ತಿವೆಯೋ ಅವೆಲ್ಲವೂ ದೋಷರಹಿತವಾಗಿ ಪೂರ್ಣಗೊಳ್ಳುತ್ತವೆ.

೧೩. ಪಿತೃನುದ್ದಿಶ್ಯ ಯಃ ಶ್ರಾದ್ಧೇ ಗೀತಾಪಾಠಂ ಕರೋತಿ ಹಿ
ಸಂತುಷ್ಟಾಃ ಪಿತರ ಸ್ತಸ್ಯ ನಿರಯಾ ದ್ಯಾಂತಿ ಸ್ವರ್ಗತಿಂ

ಶ್ರಾದ್ಧಕಾಲದಲ್ಲಿ ಪಿತೃಗಳನ್ನುದ್ದೇಶಿಸಿ ಯಾರು ಗೀತೆಯನ್ನು ಪಠಿಸುವರೋ, ಅಂತಹವನ ಪಿತೃಗಳು ಸಂತುಷ್ಟರಾಗಿ ನರಕದಿಂದ ಸ್ವರ್ಗಕ್ಕೆ ಹೋಗುವರು.

೧೪. ಗೀತಾಪಾಠೇನ ಸಂತುಷ್ಟಾಃ ಪಿತರಃ ಶ್ರಾದ್ಧತರ್ಪಿತಾಃ
ಪಿತೃಲೋಕಂ ಪ್ರಯಾಂತೇವ ಪುತ್ರಾಶೀರ್ವಾದತತ್ಪರಾಃ

ಶ್ರಾದ್ಧದಲ್ಲಿ ತೃಪ್ತಿಗೊಳಿಸಲ್ಪಟ್ಟ ಪಿತೃಗಳು ಗೀತಾಪಠನದಿಂದ ಸಂತುಷ್ಟರಾಗಿ ತಮ್ಮ ಕುಮಾರರನ್ನು ಆಶೀರ್ವದಿಸಿ ಪಿತೃಲೋಕವನ್ನು ಸೇರಿಕೊಳ್ಳುವರು.

೧೫. ಗೀತಾಪುಸ್ತಕ ದಾನಂ ಚ ಧೇನುಪುಚ್ಛಸಮನ್ವಿತಂ
ಕೃತ್ವಾ ಚ ತದ್ದಿನೇ ಸಂಯಕ್ ಕೃತಾರ್ಥೋ ಜಾಯತೇ ಜನಃ

ಹಸುವಿನ ಬಾಲವನ್ನು ಹಾಗು ಗೀತಾಪುಸ್ತಕವನ್ನು ಕೈಯಲ್ಲಿ ಹಿಡಿದು ಗೋದಾನಮಾಡುವವನು ಆ ದಿನವೇ ಕೃತಾರ್ಥನಾಗುವನು.

೧೬. ಪುಸ್ತಕಂ ಹೇಮಸಂಯುಕ್ತಂ ಗೀತಾಯಾಃ ಪ್ರಕರೋತಿ ಯಃ
ದತ್ವಾ ವಿಪ್ರಾಯ ವಿದುಷೇ ಜಾಯತೇ ನ ಪುನರ್ಭವಂ

ಗೀತಾಪುಸ್ತಕವನ್ನು ಚಿನ್ನದೊಡನೆ, ವಿದ್ವಾಂಸನಾದ ಬ್ರಾಹ್ಮಣನಿಗೆ (ಬ್ರಹ್ಮನಿಷ್ಠನಿಗೆ) ದಾನ ಮಾಡುವವನು ತಿರುಗಿ ಸಂಸಾರದಲ್ಲಿ ಜನಿಸುವುದಿಲ್ಲ.

೧೭. ಶತಪುಸ್ತಕದಾನಂ ಚ ಗೀತಾಯಾಃ ಪ್ರಕರೋತಿ ಯಃ
ಸ ಯಾತಿ ಬ್ರಹ್ಮಸದನಂ ಪುನರಾವೃತ್ತಿ ದುರ್ಲಭಂ

ನೂರು ಗೀತಾಪುಸ್ತಕಗಳನ್ನು ದಾನ ಮಾಡುವವನು ಪುನರಾವೃತ್ತಿ ರಹಿತವಾದ ಬ್ರಹ್ಮಧಾಮವನ್ನು ಹೊಂದುವನು.

೧೮. ಗೀತಾದಾನ- ಪ್ರಭಾವೇಣ ಸಪ್ತಕಲ್ಪಮಿತಾಃ ಸಮಾಃ
ವಿಷ್ಣುಲೋಕ ಮವಾಪ್ಯಂತೇ ವಿಷ್ಣುನಾ ಸಹ ಮೋದತೇ

ಗೀತಾದಾನ ಪ್ರಭಾವದಿಂದ ಮನುಜನು ಅಂತ್ಯದಲ್ಲಿ ವಿಷ್ಣುಲೋಕವನ್ನು ಹೊಂದಿ ಅಲ್ಲಿ ಏಳು ಕಲ್ಪಗಳವರೆಗೆ ವಿಷ್ಣುವಿನೊಂದಿಗೆ ಆನಂದದಿಂದ ನಿವಸಿಸುವನು.

೧೯. ಸಮ್ಯಕ್ಶ್ರುತ್ವಾ ಚ ಗೀತಾರ್ಥಂ ಪುಸ್ತಕಂ ಯಃ ಪ್ರದಾಪಯೇತ್
ತಸ್ಮೈ ಪ್ರೀತಃ ಶ್ರೀಭಗವಾನ್ ದದಾತಿ ಮನಸೇಪ್ಸಿತಮ್

ಗೀತಾರ್ಥವನ್ನು ಚೆನ್ನಾಗಿ ಕೇಳಿ ಯಾವನು ಗೀತಾಗ್ರಂಥವನ್ನು ದಾನಮಾಡುವನೋ ಅಂತಹವನ ಬಗ್ಗೆ ಭಗವಂತನಿಗೆ ಪ್ರೀತಿಯುಂಟಾಗಿ ಆತನ ಅಭೀಷ್ಟವನ್ನು ನೆರವೇರಿಸುವನು.

೨೦. ದೇಹಂ ಮಾನುಷಮಾಶ್ರಿತ್ಯ ಚಾತುರ್ವರ್ಣ್ಯೇಷು ಭಾರತ
ನ ಶೃಣೋತಿ ನ ಪಠತಿ ಗೀತಾ ಮಮೃತರೂಪಿಣೀಂ
ಹಸ್ತಾತ್ತ್ಯಕ್ತ್ವಾಮೃತಂ ಪ್ರಾಪ್ತಂ ಸ ನರೋ ವಿಷ ಮಶ್ನುತೇ

ಮನುಷ್ಯನಾಗಿ ಹುಟ್ಟಿಯೂ ಚಾತುರ್ವರ್ಣ್ಯಗಳಲ್ಲಿ ಜನಿಸಿಯೂ ಅಮೃತರೂಪವಾದ ಗೀತೆಯನ್ನು ಯಾರು ಕೇಳುವುದಿಲ್ಲವೋ, ಓದುವುದಿಲ್ಲವೋ, ಅಂತಹವನು ಕೈಯಲ್ಲಿರುವ ಪಾಯಸವನ್ನು ಬಿಸಾಕಿ ವಿಷವನ್ನು ಭುಜಿಸಿದಂತವನೇ ಆಗುತ್ತಾನೆ.

೨೧. ಜನಃ ಸಂಸಾರದುಃಖಾರ್ತೋ ಗೀತಾಜ್ಞಾನಂ ಸಮಾಲಭೇತ್
ಪೀತ್ವಾ ಗೀತಾಮೃತಂ ಲೋಕೇ ಲಬ್ಧ್ವಾ ಭಕ್ತಿಂ ಸುಖೀ ಭವೇತ್

ಸಂಸಾರದುಃಖ ಸಂತಪ್ತನಾದ ಮನುಷ್ಯನು ಗೀತಾಜ್ಞಾನವನ್ನು ಹೊಂದಬೇಕು. ಗೀತಾಮೃತವನ್ನು ಪಾನಮಾಡಿ ಭಗವದ್ಭಕ್ತಿಯನ್ನು ಹೊಂದಿ ಈ ಪ್ರಪಂಚದಲ್ಲಿ ಸುಖಿಯಾಗಿ ಜೀವಿಸಬೇಕು.

೨೨. ಗೀತಾ ಮಾಶ್ರಿತ್ಯ ಬಹವೋ ಭೂಭುಜೋ ಜನಕಾದಯಃ
ನಿರ್ಧೂತ ಕಲ್ಮಷಾ ಲೋಕೇ ಗತಾಸ್ತೇ ಪರಮಂ ಪದಂ

ಗೀತೆಯನ್ನಾಶ್ರಯಿಸಿ ಈ ಪ್ರಪಂಚದಲ್ಲಿ ಜನಕಾದಿ ರಾಜಶ್ರೇಷ್ಠರೆಷ್ಟೋ ಜನ ಪಾಪರಹಿತರಾಗಿ ಉತ್ತಮವಾದ ಕೈವಲ್ಯ ಪದವನ್ನು ಹೊಂದಿರುವರು.

೨೩. ಗೀತಾಸು ನ ವಿಶೇಷೋಸ್ತಿ ಜನೇಷೂಚ್ಚಾವಚೇಷು ಚ
ಜ್ಞಾನೇ ಷ್ವೇವ ಸಮಗ್ರೇಷು ಸಮಾ ಬ್ರಹ್ಮಸ್ವರೂಪಿಣಿ

ಗೀತಾಧ್ಯಯನದ ವಿಷಯದಲ್ಲಿ ಚಿಕ್ಕ, ದೊಡ್ಡ ಎನ್ನುವ ಯಾವ ಭೇದವೂ ಇಲ್ಲ (ಅದಕ್ಕೆ ಎಲ್ಲರೂ ಅಧಿಕಾರಿಗಳೇ ಆಗಿದ್ದಾರೆ). ಗೀತೆ, ಜ್ಞಾನಗಳಲ್ಲೆಲ್ಲಾ ಸಮರೂಪಿ ಹಾಗೂ ಬ್ರಹ್ಮರೂಪಿಣಿಯಾಗಿದೆ.

೨೪. ಯೋಽಭಿಮಾನೇನ ಗರ್ವೇಣ ಗೀತಾನಿಂದಾಂ ಕರೋತಿ ಚ
ಸ ಯಾತಿ ನರಕಂ ಘೋರಂ ಯಾವ ದಾಭೂತಸಂಪ್ಲವಂ

ಯಾರು ಅಭಿಮಾನದಿಂದ, ಗರ್ವದಿಂದ ಗೀತೆಯನ್ನು ನಿಂದಿಸುವರೋ ಅಂತಹವರು ಪ್ರಳಯಕಾಲದವರೆಗೂ ಘೋರವಾದ ನರಕವನ್ನನುಭವಿಸುವರು.

೨೫. ಅಹಂಕಾರೇಣ ಮೂಢಾತ್ಮಾ ಗೀತಾರ್ಥಂ ನೈವ ಮನ್ಯತೇ
ಕುಂಭೀಪಾಕೇಷು ಪಚ್ಯೇತ ಯಾವತ್ಕಲ್ಪಕ್ಷಯೋ ಭವೇತ್

ಯಾವ ಮೂಢನು ಅಹಂಕಾರವಶನಾಗಿ ಗೀತಾರ್ಥವನ್ನು ಆದರಿಸುವುದಿಲ್ಲವೋ ಆತನು ಕಲ್ಪಕ್ಷಯವಾಗುವವರೆಗೆ ಕುಂಭೀಪಾಕ ನರಕದಲ್ಲಿ ಬಿದ್ದಿದ್ದು ಬಾಧೆಪಡುವನು.

೨೬. ಗೀತಾರ್ಥಂ ವಾಚ್ಯಮಾನೋ ಯೋ ನ ಶೃಣೋತಿ ಸಮೀಪತಃ
ಸ ಸೂಕರಭವಾಂ ಯೋನಿ ಮನೇಕಾ ಮಧಿಗಚ್ಛತಿ

ಗೀತಾರ್ಥವನ್ನು ಹೇಳುತ್ತಿರುವಾಗ ಸಮೀಪದಲ್ಲಿಯೇ ಇದ್ದು ಯಾರು ಕೇಳುವುದಿಲ್ಲವೋ ಅಂತಹವರು ಅನೇಕ ಪರ್ಯಾಯಗಳ ಕಾಲ ಹಂದಿ ಜನ್ಮವೆತ್ತುತ್ತಾರೆ.

೨೭. ಚೌರ್ಯಂ ಕೃತ್ವಾಚ ಗೀತಾಯಾಃ ಪುಸ್ತಕಂ ಯಃ ಸಮಾನಯೇತ್
ನ ತಸ್ಯ ಸಫಲಂ ಕಿಂಚಿತ್ ಪಠನಂ ಚ ವೃಥಾ ಭವೇತ್

ಯಾವನು ಗೀತಾಪುಸ್ತಕವನ್ನು ಕದ್ದು ತರುವನೋ ಆತನಿಗೆ ಸಾಫಲ್ಯವುಂಟಾಗುವುದಿಲ್ಲ. ಅಂತಹವನ ಗೀತಾಪಠನ ವ್ಯರ್ಥವಾಗುವುದು.

೨೮. ಯಃ ಶ್ರುತ್ವಾ ನೈವ ಗೀತಾರ್ಥಂ ಮೋದತೇ ಪರಮಾರ್ಥತಃ
ನೈವ ತಸ್ಯ ಫಲಂ ಲೋಕೇ ಪ್ರಮತ್ತಸ್ಯ ಯಥಾಶ್ರಮಃ

ಯಾವನು ಗೀತಾರ್ಥವನ್ನು ಕೇಳಿಯೂ ಪರಮಾರ್ಥದಲ್ಲಿ ಪ್ರಸನ್ನನಾಗುವುದಿಲ್ಲವೋ ಆತನ ಶ್ರವಣಕ್ಕೆ ಯಾವ ಫಲವೂ ಈ ಪ್ರಪಂಚದಲ್ಲಿರುವುದಿಲ್ಲ. ಹುಚ್ಚನ ಚೇಷ್ಟೆಯಂತೆ ಆತನದು ವ್ಯರ್ಥಪರಿಶ್ರಮ.

೨೯. ಗೀತಾಂ ಶ್ರುತ್ವಾ ಹಿರಣ್ಯಂ ಚ ಭೋಜ್ಯಂ ಪಟ್ಟಾಂಬರಂ ತಥಾ
ನಿವೇದಯೇತ್ ಪ್ರಧಾನಾರ್ಥಂ ಪ್ರೀತಯೇ ಪರಮಾತ್ಮನಃ

ಗೀತೆಯನ್ನು ಶ್ರವಣಮಾಡಿ ಪರಮಾತ್ಮನ ಪ್ರೀತಿಗಾಗಿ ಪಾಠಕನಿಗೆ ಚಿನ್ನ, ಉತ್ತಮ ಭೋಜನ, ಶುಭ್ರ ವಸ್ತ್ರ ದಾನಮಾಡಬೇಕು.

೮೦. ವಾಚಕಂ ಪೂಜಯೇ ಭಕ್ತ್ಯಾ ದ್ರವ್ಯಾ ವಸ್ತ್ರಾ ದ್ಯುಪಸ್ಕರೈಃ
ಅನೇಕೈ ರ್ಬಹುಧಾ ಪ್ರೀತ್ಯಾ ತುಷ್ಯತಾಂ ಭಗವಾನ್ ಹರಿಃ

'ಭಗವಂತನಾದ ಶ್ರೀಹರಿ ಸಂತೋಷಗೊಳ್ಳಲಿ!' ಎನ್ನುವ ಉದ್ದೇಶದಿಂದ ಗೀತಾಪಾಠಕನನ್ನು ದ್ರವ್ಯ ವಸ್ತ್ರಾದಿ ವಿವಿಧ ಉಪಕರಣಗಳಿಂದ ಭಕ್ತಿಯಿಂದ, ಪ್ರೀತಿಪೂರ್ವಕವಾಗಿ ಪೂಜಿಸಬೇಕು.

**ಸೂತ ಉವಾಚ**

೮೧. ಮಹಾತ್ಮ್ಯ ಮೇತದ್‌ಗೀತಾಯಾಃ ಕೃಷ್ಣಪ್ರೋಕ್ತಂ ಪುರಾತನಂ
ಗೀತಾಂತೇ ಪಠತೇ ಯಸ್ತು ಯಥೋಕ್ತ ಫಲಭಾಗ್ಭವೇತ್

ಸೂತನು ಹೇಳಿದನು : ಶ್ರೀ ಕೃಷ್ಣಭಗವಂತನಿಂದ ಹೇಳಲ್ಪಟ್ಟ ಪುರಾತನವಾದ ಈ ಗೀತಾಮಹಿಮೆ (ಮಹಾತ್ಮೆ)ಯನ್ನು ಯಾರು ಗೀತಾ ಪಾರಾಯಣದ ನಂತರ ಓದುವರೋ ಅವರು ಮೇಲೆ ತಿಳಿಸಿದ ಫಲಿತಗಳನ್ನು ಹೊಂದುವರು.

೮೨. ಗೀತಾಯಾಃ ಪಠನಂ ಕೃತ್ವಾ ಮಹಾತ್ಮ್ಯಂ ನೈವ ಯಃ ಪಠೇತ್
ವೃಥಾ ಪಾಠಫಲಂ ತಸ್ಯ ಶ್ರಮ ಏವ ಹ್ಯುದಾಹೃತಃ

ಗೀತೆಯನ್ನು ಓದಿಯೂ, ಮಹಾತ್ಮೆಯನ್ನು ಯಾರು ಓದುವುದಿಲ್ಲವೋ ಅಂತಹವನಿಗೆ ಗೀತಾಪಠನದ ಫಲ ಅಲಭ್ಯವೆಂದು ಅದು ಶ್ರಮ ಮಾತ್ರವೆಂದು ಹೇಳಲ್ಪಟ್ಟಿದೆ.

೮೩. ಏತನ್ಮಾಹಾತ್ಮ್ಯಸಂಯುಕ್ತಂ ಗೀತಾಪಾಠಂ ಕರೋತಿ ಯಃ
ಶ್ರದ್ಧಯಾ ಯಃ ಶೃಣೋ ತ್ಯೇವ ಪರಮಾಂ ಗತಿ ಮಾಪ್ನುಯಾತ್

ಯಾವನು ಈ ಮಹಾತ್ಮೆಯೊಡನೆ ಗೀತಾಪಠನಮಾಡುವನೋ, ಇಲ್ಲವೆ ಶ್ರದ್ಧೆಯಿಂದ ಅದನ್ನು ಕೇಳುವನೋ ಆತನು ಉತ್ತಮಗತಿಯನ್ನು ಹೊಂದುವನು.

೮೪. ಶ್ರುತ್ವಾ ಗೀತಾ ಮರ್ಥಯುಕ್ತಾಂ ಮಹಾತ್ಮ್ಯಂ ಯಃ ಶೃಣೋತಿ ಚ
ತಸ್ಯ ಪುಣ್ಯಫಲಂ ಲೋಕೇ ಭವೇ ತ್ಸರ್ವಸುಖಾವಹಂ

ಗೀತೆಯನ್ನು ಅರ್ಥದೊಡನೆ ಯಾರು ಕೇಳುವರೋ ಮತ್ತೆ ಅದರ ಮಹಿಮೆ (ಮಹಾತ್ಮೆ)ಯನ್ನು ಚೆನ್ನಾಗಿ ಶ್ರವಣ ಮಾಡುವರೋ ಅವರ ಪುಣ್ಯಫಲ ಈ ಲೋಕದಲ್ಲಿ ಸರ್ವರಿಗೂ ಸುಖವನ್ನು ಉಂಟುಮಾಡುವುದು.

# ಗೀತಾ ಮಾತೆ

ವಕ್ತ್ರಾಣಿ ಪಂಚ ಜಾನೀಹಿ ಪಂಚಾಧ್ಯಾಯಾ ನನುಕ್ರಮಾತ್।
ದಶಾಧ್ಯಾಯಾಃ ಭುಜಾ ಶ್ಚೈಕ ಮುದರಂ ದ್ವೇ ಪದಾಂಬುಜೇ।
ಏವ ಮಷ್ಟಾದಶಾಧ್ಯಾಯೀ ವಾಙ್ಮಯೀ ಮೂರ್ತಿ ರೀಶ್ವರೀ।
ಜಾನೀ ಹಿ ಜ್ಞಾನಮಾತ್ರೇಣ ಮಹಾಪಾತಕನಾಶಿನೀ॥

ಗೀತಾದೇವಿಗೆ ಮೊದಲ ಐದು ಅಧ್ಯಾಯಗಳು ಐದು ತಲೆಗಳು. ಉಳಿದ ಹತ್ತು ಅಧ್ಯಾಯಗಳು ಹತ್ತು ಹಸ್ತಗಳು, ಹದಿನಾರನೆಯ ಅಧ್ಯಾಯ ಉದರ, ಕೊನೆಯ ಎರಡಧ್ಯಾಯಗಳು ಪಾದಗಳು. ಈ ವಿಧವಾಗಿ ಹದಿನೆಂಟು ಅಧ್ಯಾಯಗಳಿಂದ ಶೋಭಿಸುತ್ತ ಮಹಾಪಾತಕಗಳನ್ನು ನಶಿಸುವಂತಹ ವಾಙ್ಮಯ ಸ್ವರೂಪಿಯಾದ, ಈಶ್ವರೀಮೂರ್ತಿಯಾದ ಗೀತಾದೇವಿಯನ್ನು ವಿವೇಕದಿಂದ ತಿಳಿದುಕೊಳ್ಳುವುದು!

ಶುದ್ಧಾಂ ಸನಾತನಿ ಮಮ್ಲಾಂ ಶೋಕಮೋಹ ವಿನಾಶನೀಮ್
ಕೃಷ್ಣಸ್ವರೂಪಿಣೀಂ ಗೀತಾ ಮಿಷ್ಟದೇವೀಂ ಭಜಾಮ್ಯಹಮ್॥

ನಿರ್ಮಲ ಹಾಗು ಸನಾತನ ಸ್ವರೂಪವುಳ್ಳದ್ದು, ಶೋಕಮೋಹಗಳನ್ನು ನಾಶಮಾಡುವಂತಹದು, ಸಾಕ್ಷಾತ್ ಶ್ರೀ ಕೃಷ್ಣಸ್ವರೂಪಿಯಾದ ಗೀತೆ ಎನ್ನುವ ಇಷ್ಟ ದೇವಿಯನ್ನು ನಾನು ಭಜಿಸುತ್ತಿದ್ದೇನೆ.

# ಗೀತಾ ಪೂಜಾ ವಿಧಾನ

ಗೀತೆ ಒಂದು ಸಾಮಾನ್ಯ ಗ್ರಂಥವಲ್ಲ. ಅದು ಚೈತನ್ಯ ಮೂರ್ತಿ. ಸಾಕ್ಷಾತ್ ದೇವಿ. ಆದ್ದರಿಂದ ವ್ಯಕ್ತಿಯಂತೆ ಗೀತೆಗೂ ಅರ್ಚನೆ ಸಲ್ಲುತ್ತದೆ. ಆ ಪೂಜಾ ವಿಧಾನವನ್ನು ಕೆಳಗೆ ತಿಳಿಸಲಾಗಿದೆ. ಪವಿತ್ರವಾದ ಏಕಾದಶಿ ದಿನವಾಗಲೀ, ಕೃಷ್ಣಾಷ್ಟಮಿ ಮೊದಲಾದ ಪರ್ವದಿನಗಳಲ್ಲಾಗಲಿ, ಗೀತಾಜಯಂತಿ (ಮಾರ್ಗಶಿರ ಶುದ್ಧ ಏಕಾದಶಿ) ಸಂದರ್ಭದಲ್ಲಾಗಲಿ, ಇಲ್ಲ ಬೇರೆ ಯಾವುದೇ ಪವಿತ್ರ ದಿನದಲ್ಲಾಗಲಿ, ಇಲ್ಲವೇ ಪ್ರತಿನಿತ್ಯ ಈ ಗೀತಾ ಪೂಜೆಯನ್ನು ಮಾಡಬಹುದು. ಭಗವಂತನಿಗೆ, ಭಗವದ್ವಾಣಿಗೆ ಅವಿನಾಭಾವ ಸಂಬಂಧವಿದೆ. ಆದ್ದರಿಂದ ಗೀತೆಯನ್ನು ಪೂಜಿಸಿದರೆ ಸಾಕ್ಷಾತ್ ಪರಮಾತ್ಮನನ್ನು ಪೂಜಿಸಿದಂತೆಯೇ ಆಗುತ್ತದೆ. ಮತ್ತೆ ಭಗವಾರಾಧನೆಯಿಂದ ಲಭಿಸುವ ಫಲವು ಲಭ್ಯವಾಗುವುದು. ವಾಸ್ತವವಾಗಿ ಗೀತಾವಾಕ್ಯಗಳನ್ನು ಅನುಷ್ಠಾನ ಮಾಡುವುದೇ ಗೀತೆಯ ನಿಜವಾದ ಪೂಜೆ. ಆದಾಗ್ಯೂ ಈ ಬಾಹ್ಯ ಪೂಜೆಯೂ ಸಹ ಜನರಿಗೆ ಆವಶ್ಯಕವಾಗಿದೆ. ಇನ್ನು ಪೂಜಾ ವಿಧಾನವನ್ನು ನೋಡೋಣ.

ಓಂ ಗುರುಬ್ರಹ್ಮ ಗುರುರ್ವಿಷ್ಣು ರ್ಗುರುರ್ದೇವೋ ಮಹೇಶ್ವರಃ
ಗುರುಸಾಕ್ಷಾತ್‌ಪರಬ್ರಹ್ಮಾ ತಸ್ಮೈ ಶ್ರೀ ಗುರವೇ ನಮಃ

ಓಂ ಕೃಷ್ಣಂ ಕಮಲಪತ್ರಾಕ್ಷಂ ಪುಣ್ಯಶ್ರವಣ ಕೀರ್ತನಂ
ವಾಸುದೇವಂ ಜಗದ್ಯೋನಿಂ ನೌಮಿ ನಾರಾಯಣಮ್ ಹರಿಮ್।

(ಮೇಲಿನ ಪ್ರಾರ್ಥನಾ ಶ್ಲೋಕಗಳನ್ನು ಪಠಿಸಿ ನಂತರ ಮೂರು ಸಾರಿ ಆಚಮನವನ್ನು ಮಾಡಬೇಕು)

**ಓಂ ಕೇಶವಾಯ ಸ್ವಾಹಾ, ಓಂ ನಾರಾಯಣಾಯ ಸ್ವಾಹಾ, ಓಂ ಮಾಧವಾಯಾ ಸ್ವಾಹಾ, ಗೋವಿಂದಾಯ ನಮಃ, ವಿಷ್ಣವೇ ನಮಃ,**

ಮಧುಸೂದನಾಯ ನಮಃ, ತ್ರಿವಿಕ್ರಮಾಯ ನಮಃ, ವಾಮನಾಯ ನಮಃ, ಶ್ರೀಧರಾಯ ನಮಃ, ಹೃಷೀಕೇಶಾಯ ನಮಃ, ಪದ್ಮನಾಭಾಯ ನಮಃ, ದಾಮೋದರಾಯ ನಮಃ, ಸಂಕರ್ಷಣಾಯ ನಮಃ, ವಾಸುದೇವಾಯ ನಮಃ, ಪ್ರದ್ಯುಮ್ನಾಯ ನಮಃ, ಅನಿರುದ್ಧಾಯ ನಮಃ, ಪುರುಷೋತ್ತಮಾಯ ನಮಃ, ಅಧೋಕ್ಷಜಾಯ ನಮಃ, ನಾರಸಿಂಹಾಯ ನಮಃ, ಅಚ್ಯುತಾಯ ನಮಃ, ಜನಾರ್ದನಾಯ ನಮಃ, ಉಪೇಂದ್ರಾಯ ನಮಃ, ಹರಯೇ ನಮಃ, ಶ್ರೀಕೃಷ್ಣಾಯ ನಮಃ.

(ನಂತರ ಈ ಕೆಳಗಿನ ಮಂತ್ರವನ್ನು ಹೇಳುತ್ತಾ ಪ್ರಾಣಾಯಾಮವನ್ನು ಮಾಡಬೇಕು)

ಓಂ ಭೂಃ ಓಂ ಭುವಃ ಓಗ್ಂ ಸುವಃ ಓಂ ಮಹಃ ಓಂ ಜನಃ ಓಂ ತಪಃ ಓಗ್ಂ ಸತ್ಯಂ ಓಂ ತತ್ಸವಿತುರ್ವರೇಣ್ಯಂ ಭರ್ಗೋ ದೇವಸ್ಯ ಧೀಮಹಿ, ಧಿಯೋ ಯೋ ನಃ ಪ್ರಚೋದಯಾತ್, ಓಂ ಆಪೋ ಜ್ಯೋತಿ ರಸೋಽಮೃತಂ ಬ್ರಹ್ಮ ಭೂರ್ಭುವ ಸ್ಸುವರೋಮ್

(ನಂತರ ಗಂಟೆ ಬಾರಿಸುತ್ತಾ ಈ ಕೆಳಗಿನ ಶ್ಲೋಕವನ್ನು ಹೇಳಬೇಕು)

ಆಗಮಾರ್ಥಂ ತು ದೇವಾನಾಂ ಗಮನಾರ್ಥಂ ತು ರಕ್ಷಸಾಮ್
ಕುರು ಘಂಟಾರವಂ ತತ್ರ ದೇವತಾಹ್ವಾನ ಲಾಂಛನಮ್

(ಆ ಮೇಲೆ ದೀಪವನ್ನು ಬೆಳಗಿಸಿ ಈ ಕೆಳಗಿನಸಂಕಲ್ಪವನ್ನು ಮಾಡಿಕೊಳ್ಳಬೇಕು)

ಶುಭೇ ಶೋಭನೇ ಮುಹೂರ್ತೇ ಶ್ರೀಮಹಾವಿಷ್ಣೋರಾಜ್ಞಯಾ ಪ್ರವರ್ತಮಾನಸ್ಯ ಅದ್ಯಬ್ರಹ್ಮಣಃ ದ್ವಿತೀಯಪರಾರ್ಧೇ ಶ್ವೇತವರಾಹಕಲ್ಪೇ ವೈವಸ್ವತಮನ್ವಂತರೇ ಕಲಿಯುಗೇ ಪ್ರಥಮ ಪಾದೇ ಜಂಬೂದ್ವೀಪೇ ಭರತವರ್ಷೇ ಭರತ ಖಂಡೇ ಮೇರೋ ದಕ್ಷಿಣದಿಗ್ಭಾಗೇ ಶ್ರೀಶೈಲಸ್ಯ ಆಗ್ನೇಯ[1] ಪ್ರದೇಶೇ ಕೃಷ್ಣಕಾವೇರ್ಯೋ[2] ರ್ಮಧ್ಯಪ್ರದೇಶೇ ಅಸ್ಮಿನ್ ಶೋಭನಗೃಹೇ[3] ಸಮಸ್ತದೇವತಾ ಬ್ರಾಹ್ಮಣ ಸಮಸ್ತದೇವತಾ ಬ್ರಾಹ್ಮಣ ಹರಿಹರ ಗುರುಚರಣ ಸನ್ನಿಧೌ ಅಸ್ಮಿನ್‌ವರ್ತಮಾನ ವ್ಯಾವಹಾರಿಕ ಚಾಂದ್ರಮಾನೇನ.... ಸಂವತ್ಸರೇ.... ಆಯನೇ.... ಋತೌ.... ಮಾಸೇ.... ಪಕ್ಷೇ.... ತಿಥೌ.... ವಾಸರೇ ಶುಭನಕ್ಷತ್ರೇ ಶುಭಯೋಗೇ ಶುಭಕರಣ ಏವಂಗುಣ ವಿಶೇಷಣ ವಿಶಿಷ್ಟಾಯಾಂ ಶುಭತಿಥೌ ಶ್ರೀಮಾನ್ ಶ್ರೀಮತಃ ಗೋತ್ರಸ್ಯ ನಾಮಧೇಯಸ್ಯ ಮಮ ಉಪಾತ್ತದುರಿತಕ್ಷಯದ್ವಾರಾ ಶ್ರೀ ಪರಮೇಶ್ವರ ಪ್ರೀತ್ಯರ್ಥಂ ಸಮಸ್ತ ಪಾಪನಿವೃತ್ತ್ಯರ್ಥಂ ಸರ್ವದುರಿತ ಕ್ಷಯದ್ವಾರಾ ಪುಣ್ಯಫಲಪ್ರಾಪ್ತ್ಯರ್ಥಂ ಆತ್ಮಶುದ್ಧ್ಯರ್ಥಂ ಭೂಮಂಡಲೇ ಚರಾಚರ ಪ್ರಾಣಿ ಕೋಟೀನಾಂ ಕ್ಷೇಮಸಿದ್ಧ್ಯರ್ಥಂ ಭಕ್ತಿ ಜ್ಞಾನ ವೈರಾಗ್ಯ ಫಲಸಿದ್ಧ್ಯರ್ಥಂ ಮಮ ಅಭೀಷ್ಟಫಲಸಿದ್ಧ್ಯರ್ಥಂ ಪ್ರತಿಬಂಧರಹಿತ ಬ್ರಹ್ಮಸಾಕ್ಷಾತ್ಕಾರ ಜ್ಞಾನಸಿದ್ಧ್ಯರ್ಥಂ ಶ್ರೀ ಪರಮೇಶ್ವರ ಪ್ರೀತ್ಯರ್ಥಂ ಚ ಸಂಭವತಾ ನಿಯಮೇನ ಸಂಭವದ್ಭಿರ್ದ್ರವ್ಯೈಃ ಸಂಭವದ್ಭಿರುಪಚಾರೈಶ್ಚ ಯಾವಚ್ಛಕ್ತಿ ಶ್ರೀಗೀತಾದೇವತಾ ಮುದ್ದಿಶ್ಯ ಶ್ರೀಗೀತಾದೇವತಾ ಪ್ರೀತ್ಯರ್ಥಂ ಧ್ಯಾನಾವಾಹನಾದಿ ಷೋಡಶೋಪಚಾರ ಪೂಜಾಮಹಂ ಕರಿಷ್ಯೇ-

ಆದೌ ನಿರ್ವಿಘ್ನೇನ ಪರಿಸಮಾಪ್ತ್ಯರ್ಥಂ ಶ್ರೀ ಮಹಾಗಣಾಧಿಪತಿ ಪೂಜಾಂ ಕರಿಷ್ಯೇ- ತದಂಗಕಲಶಾರಾಧನಂ ಕರಿಷ್ಯೇ- ಕಲಶಂ ಗಂಧಪುಷ್ಪಾ ಕ್ಷತೈರಭ್ಯರ್ಚ್ಯ

(ನಂತರ ಕಲಶವನ್ನು ಗಂಧ ಪುಷ್ಪಾಕ್ಷತೆಗಳಿಂದ ಅಲಂಕರಿಸಿ ಈ ಕೆಳಗಿನ ಮಂತ್ರವನ್ನು ಉಚ್ಚರಿಸುತ್ತಾ ಅದರಲ್ಲಿಯ ನೀರನ್ನು ಎಲೆಯಿಂದ ಸ್ಪರ್ಶಿಸಬೇಕು)

ಗಂಗೇಚ ಯಮುನೇ ಕೃಷ್ಣೇ ಗೋದಾವರಿ ಸರಸ್ವತಿ
ನರ್ಮದೇ ಸಿಂಧುಕಾವೇರಿ ಜಲೇಽಸ್ಮಿನ್ಸನ್ನಿಧಿಂ ಕುರು

ಆಯಾಂತು ಶ್ರೀ ಮಹಾಗಣಾಧಿಪತಿ ಪೂಜಾರ್ಥಂ ಮಮ ದುರಿತಕ್ಷಯ ಕಾರಕಾಃ, ಕಲಶೋದಕೇನ ಪೂಜಾದ್ರವ್ಯಾಣಿ ಸಂಪ್ರೋಕ್ಷ್ಯ ದೇವ ಮಾತ್ಮಾನಂ ಚ ಸಂಪ್ರೋಕ್ಷ್ಯ।

(ನಂತರ ಆ ಕಲಶೋದಕವನ್ನು ಪೂಜಾ ದ್ರವ್ಯಗಳ ಮೇಲೂ, ತನ್ನ ಶಿರಸ್ಸಿನ ಮೇಲೂ ಸಿಂಪರಿಸಿಕೊಂಡು ಶ್ರೀಮಹಾಗಣಾಧಿಪತಿಗೆ ಧ್ಯಾನವಾಹನ ಉಪಚಾರಗಳನ್ನು ಮಾಡಿ ಈ ಕೆಳಗಿನ ಮಂತ್ರಗಳಿಂದ ಪೂಜಿಸಬೇಕು)

ಓಂ ಸುಮುಖಾಯ ನಮಃ, ಓಂ ಏಕದಂತಾಯ ನಮಃ, ಓಂ ಕಪಿಲಾಯ ನಮಃ, ಓಂ ಗಜಕರ್ಣಿಕಾಯ ನಮಃ, ಓಂ ಲಂಬೋದರಾಯ ನಮಃ, ಓಂ ವಿಕಟಾಯ ನಮಃ, ಓಂ ವಿಘ್ನರಾಜಾಯ ನಮಃ, ಓಂ ಗಣಾಧಿಪಾಯ ನಮಃ। ಓಂ ಧೂಮಕೇತವೇ ನಮಃ, ಓಂ ಗಣಾಧ್ಯಕ್ಷಾಯ ನಮಃ, ಓಂ ಫಾಲಚಂದ್ರಾಯ ನಮಃ, ಓಂ ಗಜಾನನಾಯ ನಮಃ, ಓಂ ವಕ್ರತುಂಡಾಯ ನಮಃ, ಓಂ ಶೂರ್ಪಕರ್ಣಾಯ ನಮಃ, ಓಂ ಹೇರಂಬಾಯ ನಮಃ, ಓಂ ಸ್ಕಂದಪೂರ್ವಜಾಯ ನಮಃ, ಓಂ ಶ್ರೀ ಮಹಾಗಣಾಧಿಪತಯೇ ನಮಃ, ಷೋಡಶನಾಮಪೂಜಾಂ ಸಮರ್ಪಯಾಮಿ

ಶ್ರೀ ಮಹಾಗಣಾಧಿಪತಿ ದೇವತಾಭ್ಯೋ ನಮಃ- ಸರ್ವೋಪಚಾರ ಪೂಜಾಂ ಸಮರ್ಪಯಾಮಿ- ಅನಯಾ ಪೂಜಯಾ ಭಗವಾನ್ ಶ್ರೀ ಮಹಾಗಣಪತಿ ದೇವತಾಸ್ಸುಪ್ರೀತಾ ಸ್ಸುಪ್ರಸನ್ನಾ ವರದಾ ಭವನ್ತು

(ನಂತರ ಅಕ್ಷತೆಗಳನ್ನು, ಪುಷ್ಪಗಳನ್ನು ಹಿಡಿದುಕೊಂಡು ಸಂಕಲ್ಪಮಾಡಿ ಕೊಂಡು ಈ ಕೆಳಗಿನ ವಿಧದಲ್ಲಿ ಹೇಳಿ ಅವುಗಳನ್ನು ನೀರಿನಲ್ಲಿ ಬಿಡಬೇಕು)

ಶುಭತಿಥೌ ಶ್ರೀಮದ್ಗೀತಾದೇವತಾ ಮುದ್ದಿಶ್ಯ ಶ್ರೀಮದ್ಗೀತಾದೇವತಾ ಪ್ರೀತ್ಯರ್ಥಂ ಯಾವಚ್ಛಕ್ತಿ ಧ್ಯಾನಾವಾಹನಾದಿ ಷೋಡಶೋಪಚಾರ ವಿಧಾನೇನ ಶ್ರೀ ಗೀತಾದೇವತಾ ಪೂಜಾಂ ಕರಿಷ್ಯೇ.

(ನಂತರ ಗೀತಾ ಗ್ರಂಥವನ್ನು ಹರಿಶಿನ, ಕುಂಕುಮ ಪುಷ್ಪಗಳಿಂದ ಅಲಂಕರಿಸಿ ಒಂದು ಪೀಠದ ಮೇಲಿರಿಸಿ ಈ ಕೆಳಗಿನ ವಿಧದಲ್ಲಿ ಪೂಜೆ ಮಾಡಬೇಕು-)

ಅಥ ಪ್ರಾಣಪ್ರತಿಷ್ಠಾಪನಂ-

ವಕ್ತ್ರಾಣಿ ಪಂಚ ಜಾನೀಹಿ ಪಂಚಧ್ಯಾಯಾ ನನುಕ್ರಮಾತ್
ದಶಾಧ್ಯಾಯಾಃ ಭುಜಾಶ್ಚೈಕ ಮುದರಂ ದ್ವೇ ಪದಾಂಬುಜೇ
ಏವ ಮಷ್ಟಾದಶಾಧ್ಯಾಯೀ ವಾಙ್ಮಯೀ ಮೂರ್ತಿ ರೀಶ್ವರೀ
ಜಾನೀಹಿ ಜ್ಞಾನಮಾತ್ರೇಣ ಮಹಾಪಾತಕನಾಶಿನೀ

---

1. ಕೆಲವು ಕಡೆ 'ಈಶಾನ್ಯಪ್ರದೇಶೇ' ಇತ್ಯಾದಿ ವಿಧಗಳಾಗಿ ಹೇಳಬೇಕಾಗುವುದು
2. ಕೆಲವು ಕಡೆ 'ಕೃಷ್ಣಾಗೋದಾವರ್ಯೋ- ಇತ್ಯಾದಿ ವಿಧಗಳಾಗಿ ಹೇಳಬೇಕಾಗುವುದು
3. ಇಲ್ಲವೇ, 'ಪುಣ್ಯಾಶ್ರಮೇ'

ಓಂ ಶ್ರೀಗೀತಾಯೈ ನಮಃ- ಧ್ಯಾನಂ ಸಮರ್ಪಯಾಮಿ, ಸರ್ವತೀರ್ಥ ಮಯ್ಯೈನಮಃ- ಆವಾಹನಂ ಸಮರ್ಪಯಾಮಿ; ಅಕ್ಷರಾಯೈನಮಃ- ಆಸನಂ ಸಮರ್ಪಯಾಮಿ; ಮಲನಿರ್ಮೋಚಿನ್ಯೈನಮಃ- ಪಾದ್ಯಂ ಸಮರ್ಪಯಾಮಿ; ಸತ್ಯಾಯೈನಮಃ ಅರ್ಘ್ಯಂ ಸಮರ್ಪಯಾಮಿ; ವಿಷ್ಣೋರ್ವಕ್ತ್ರಾದ್ವಿನಿಃಸೃತಾಯೈ ನಮಃ- ಆಚಮನಂ ಸಮರ್ಪಯಾಮಿ; ವಂದ್ಯಾಯೈನಮಃ- ಪಂಚಾಮೃತ ಸ್ನಾನಂ ಸಮರ್ಪಯಾಮಿ, ಅನಂತರಂ ಶುದ್ಧೋದಕಸ್ನಾನಂ ಸಮರ್ಪಯಾಮಿ; ವಿಶ್ವಮಂಗಳಕಾರಿಣ್ಯೈ ನಮಃ ವಸ್ತ್ರಯುಗ್ಮಂ ಸಮರ್ಪಯಾಮಿ; ಸರ್ವಶಾಸ್ತ್ರ ಮಯ್ಯೈ ನಮಃ ಯಜ್ಞೋಪವೀತಂ ಸಮರ್ಪಯಾಮಿ; ಆಭರಣಾನಿ ಧಾರಯಾಮಿ; ಸರ್ವೈಶ್ವರ್ಯ ಪ್ರದಾಯಿನ್ಯೈನಮಃ ಶ್ರೀಗಂಧಸಮರ್ಪಯಾಮಿ; ಭಾರತಾಮೃತಸರ್ವಸ್ವಾಯೈ ನಮಃ- ಅಕ್ಷತಾನ್ ಸಮರ್ಪಯಾಮಿ; ಪುಷ್ಪೈಃಪೂಜಯಾಮಿ;

(ಕೊನೆಯಲ್ಲಿ ಅಕ್ಷತೆಗಳನ್ನಾಗಲಿ, ಪುಷ್ಪಗಳನ್ನಾಗಲಿ ಕೈಯಲ್ಲಿ ತೆಗೆದುಕೊಂಡು ಈ ಕೆಳಗೆ ತಿಳಿಸಿದ ಮಂತ್ರಗಳನ್ನುಚ್ಚರಿಸುತ್ತಾ ಗೀತಾ ದೇವಿಯನ್ನು ಪೂಜಿಸಬೇಕು)

# ಶ್ರೀ ಗೀತಾಷ್ಟೋತ್ತರ ಶತ ನಾಮಾವಳಿ

೧. ಓಂ ಶ್ರೀಗೀತಾದೇವ್ಯೈನಮಃ
೨. ಓಂ ವಿಮಲಾಯೈ ನಮಃ
೩. ಓಂ ಸುಖದಾಯೈ ನಮಃ
೪. ಓಂ ಮುನಿಸಂಸ್ತುತಾಯೈ ನಮಃ
೫. ಓಂ ತತ್ತ್ವಾರ್ಥಬೋಧಿನ್ಯೈನಮಃ
೬. ಓಂ ಸರ್ವಲೋಕ ಸಂಪೂಜ್ಯಾಯೈನಮಃ
೭. ಓಂ ಶ್ರೀಕೃಷ್ಣಮುಖನಿಸ್ಸೃತಾಯೈ ನಮಃ
೮. ಓಂ ಪಾಪಘ್ನ್ಯೈ ನಮಃ
೯. ಓಂ ಪುಣ್ಯದಾಯೈ ನಮಃ
೧೦. ಓಂ ಮಹಾದೇವ್ಯೈನಮಃ
೧೧. ಓಂ ನಿಷ್ಪ್ರತ್ಯೂಹಚಿದಾತ್ಮಕಾಯೈ ನಮಃ
೧೨. ಓಂ ಶೋಕಮೋಹಾಪಹನ್ತ್ರ್ಯೈನಮಃ
೧೩. ಓಂ ಮೋಕ್ಷದಾಯೈ ನಮಃ
೧೪. ಓಂ ಬ್ರಹ್ಮಬೋಧಿನ್ಯೈ ನಮಃ
೧೫. ಓಂ ಬ್ರಹ್ಮವಿದ್ಯಾಯೈ ನಮಃ
೧೬. ಓಂ ಚಿದಾನಂದಾಯೈ ನಮಃ
೧೭. ಓಂ ಭಗವತ್ಯೈ ನಮಃ
೧೮. ಓಂ ಭಯನಾಶಿನ್ಯೈ ನಮಃ
೧೯. ಓಂ ವೇದತ್ರಯಾತ್ಮಿಕಾಯೈ ನಮಃ
೨೦. ಓಂ ಅನಂತಾಯೈ ನಮಃ
೨೧. ಓಂ ತತ್ತ್ವಾರ್ಥಜ್ಞಾನಮಂಜರಿಯೈ ನಮಃ
೨೨. ಓಂ ವ್ಯಾಸಸಂಗ್ರ ಥಿತಾಯೈ ನಮಃ
೨೩. ಓಂ ಪೂತಾಯೈ ನಮಃ
೨೪. ಓಂ ಸಂಸಾರಮಲಮೋಚನ್ಯೈ ನಮಃ
೨೫. ಓಂ ಸರ್ವಶಾಸ್ತ್ರ ಮಯ್ಯೈ ನಮಃ
೨೬. ಓಂ ಮಾತ್ರೇ ನಮಃ
೨೭. ಓಂ ಸರ್ವತೀರ್ಥಮಯ್ಯೈ ನಮಃ
೨೮. ಓಂ ತತ್ತ್ವಮಸ್ಯಾದಿ ವಾಕ್ಯೋತ್ಥಬ್ರಹ್ಮತತ್ತ್ವಾವಗಾಹಿನ್ಯೈ ನಮಃ
೨೯. ಓಂ ಶಾಂತಿಪ್ರದಾಯೈ ನಮಃ
೩೦. ಓಂ ಪರಾನಂದಾಯೈ ನಮಃ
೩೧. ಓಂ ಬೋಧಾಮೃತ ತರಂಗಿಣ್ಯೈ ನಮಃ
೩೨. ಓಂ ವಿಶ್ವಸಂಸ್ಕೃತಿ ಸಮುದ್ಭೂತಾಯೈ ನಮಃ
೩೩. ಓಂ ವಿಶ್ವಧರ್ಮ ಪ್ರಚಾರಿಣ್ಯೈ ನಮಃ
೩೪. ಓಂ ವಿಶ್ವೈಕ ರಚನಾಯೈ ನಮಃ
೩೫. ಓಂ ರಮಣೀಯಾರ್ಥ ಭಾಸಿತಾಯೈ ನಮಃ
೩೬. ಓಂ ರಮ್ಯಾಯೈ ನಮಃ
೩೭. ಓಂ ವಿಶ್ವಮಾನವ ಸಂಪೂಜ್ಯಾಯೈ ನಮಃ
೩೮. ಓಂ ವಿಶ್ವಮಂಗಳ ಕಾರಿಣ್ಯೈ ನಮಃ
೩೯. ಓಂ ವಿಶ್ವಸಿದ್ಧಾಂತಸಮ್ಮಾನ್ಯೈ ನಮಃ
೪೦. ಓಂ ವಿಶ್ವಸಂಮೋಹನಾಶಿನ್ಯೈ ನಮಃ
೪೧. ಓಂ ವಿಶ್ವಸ್ವರೂಪಿಣ್ಯೈ ನಮಃ
೪೨. ಓಂ ವಿಶ್ವವಂದ್ಯಾಯೈ ನಮಃ
೪೩. ಓಂ ವಿಶ್ವತತ್ತ್ವಪ್ರಕಾಶಿನ್ಯೈ ನಮಃ
೪೪. ಓಂ ತ್ರಿಗುಣಾತೀತ ತತ್ತ್ವಾರ್ಥಬಾಸಿನ್ಯೈ ನಮಃ
೪೫. ಓಂ ಗ್ರಂಥಿಭೇದಿನ್ಯೈ ನಮಃ
೪೬. ಓಂ ಲೋಕೋತ್ತರಗುಣೋಪೇತಾಯೈ ನಮಃ
೪೭. ಓಂ ಲೋಕೋಚಿತಮತಾನ್ವಿತಾಯೈ ನಮಃ
೪೮. ಓಂ ಲೋಕೋದ್ಧರಣ ಸಂಶೀಲಾಯೈ ನಮಃ
೪೯. ಓಂ ಲೋಕಾಮೋದ ಪ್ರವರ್ಧಿತಾಯೈ ನಮಃ
೫೦. ಓಂ ನಿಹಿತಾಖಿಲ ಶಾಸ್ತ್ರಾರ್ಥಾಯೈ ನಮಃ
೫೧. ಓಂ ಶುಭೌಜಃ ಪದಗುಂಭಿತಾಯೈ ನಮಃ
೫೨. ಓಂ ಅನಿವಾರ್ಯಖ್ಯಾಯೈ ನಮಃ
೫೩. ಓಂ ಗಂಭೀರಾಯೈ ನಮಃ
೫೪. ಓಂ ನಿತ್ಯಾಯೈ ನಮಃ
೫೫. ಓಂ ನಿತ್ಯಸುಖ ಪ್ರದಾಯೈ ನಮಃ
೫೬. ಓಂ ನೈಕವ್ಯಾಖ್ಯಾನ ಸಂಭಿನ್ನಾಯೈ ನಮಃ
೫೭. ಓಂ ನಾನಾಚಾರ್ಯ ಸಮಾದೃತಾಯೈ ನಮಃ
೫೮. ಓಂ ಸ್ವಸ್ವಾನುಕೂಲ ಭಾವಾರ್ಥಶೋಭಿತಾಯೈ ನಮಃ
೫೯. ಓಂ ಶಾಂತಿದಾಂತಿದಾಯೈ ನಮಃ
೬೦. ಓಂ ನಿತ್ಯನೂತನ ಭಾವಾರ್ಥದಾಯಿನ್ಯೈ ನಮಃ
೬೧. ಓಂ ಲೋಕಕಾಮದಾಯೈನಮಃ
೬೨. ಓಂ ಪ್ರಾಚ್ಯಪಾಶ್ಚಾತ್ಯ ಖಂಡಾಂತರ್ನಿವಾಸಿ ಜನಮೋದಿನ್ಯೈ ನಮಃ
೬೩. ಓಂ ಅಕ್ಷರಾಯೈ ನಮಃ
೬೪. ಓಂ ಅದ್ವೇಷಿಣ್ಯೈ ನಮಃ
೬೫. ಓಂ ಸರ್ವಕಾಲ ಧರ್ಮಪ್ರಬೋಧಿನ್ಯೈ ನಮಃ
೬೬. ಓಂ ದೈವಸಂಪತ್ಸುಸಂಪನ್ನಾಯೈ ನಮಃ
೬೭. ಓಂ ಅಸುರಭಾವಾದಿ ವರ್ಜಿತಾಯೈ ನಮಃ
೬೮. ಓಂ ಅಷ್ಟಾದಶ ಮಹಾಯೋಗ ಭೂಷಿತಾಯೈ ನಮಃ
೬೯. ಓಂ ಭ್ರಷ್ಟತಾರಿಣ್ಯೈ ನಮಃ
೭೦. ಓಂ ಸ್ತ್ರೀಶೂದ್ರ ಸಮುದ್ಧರ್ತ್ರ್ಯೈ ನಮಃ
೭೧. ಓಂ ಸಮಭಾವ ವಿಶೋಭಿನ್ಯೈನಮಃ
೭೨. ಓಂ ಈರ್ಷ್ಯಾಪ್ರಸೂತ ಜಾತ್ಯಾದಿ ದುರಹಂಕಾರಘಾತಿನ್ಯೈ ನಮಃ
೭೩. ಓಂ ಚಂಡಾಲ ದ್ವಿಜ ಶೂದ್ರಾದಿ ಸರ್ವೋದ್ಧರಣ ತತ್ಪರಾಯೈ ನಮಃ
೭೪. ಓಂ ಮಾಯಾಪನೋದಿನ್ಯೈ ನಮಃ

೭೫. ಓಂ ಸತ್ಯಾಯೈ ನಮಃ
೭೬. ಓಂ ದ್ವಂದ್ವ ಭೇದ ವಿನಾಶಿನ್ಯೈ ನಮಃ
೭೭. ಓಂ ಅಭೇದಭಾವ ಪೀಯೂಷವರ್ಷಿಣ್ಯೈ ನಮಃ
೭೮. ಓಂ ಜ್ಞಾನಭಾಸಿನ್ಯೈ ನಮಃ
೭೯. ಓಂ ತ್ಯಾಗರೂಪಾಯೈ ನಮಃ
೮೦. ಓಂ ಅನವದ್ಯಾಯೈನಮಃ
೮೧. ಓಂ ವಿಮುಕ್ತ ಫಲಶಾಲಿನ್ಯೈ ನಮಃ
೮೨. ಓಂ ಯಥಾಧಿಕಾರಿ ನಿಷ್ಕಾಮಕರ್ಮದ್ಯಾನಾದಿಬೋಧಿನ್ಯೈ ನಮಃ
೮೩. ಓಂ ಭವಮಗ್ನ ಪ್ರಜಾನೌಕಾಯೈ ನಮಃ
೮೪. ಓಂ ಬಂಧಚ್ಛೇದ ವಿಚಕ್ಷಣಾಯೈ ನಮಃ
೮೫. ಓಂ ಭಗವದ್ಭಾವಸಂಪೂರ್ಣಾಯೈ ನಮಃ
೮೬. ಓಂ ಭವವಾರಿಧಿ ಕಾರಿಣ್ಯೈ ನಮಃ
೮೭. ಓಂ ಆಧ್ಯಾತ್ಮಿಕ ಮಹಾಕಾಶ ಲಸತ್ಸೌದಾಮಿನೀ ಸಮಾಯೈ ನಮಃ
೮೮. ಓಂ ನಿಷ್ಕಲಾಯೈ ನಮಃ
೮೯. ಓಂ ನಿರ್ಮಲಾಯೈ ನಮಃ
೯೦. ಓಂ ಶಾಂತಾಯೈ ನಮಃ
೯೧. ಓಂ ಸರ್ವತೇಜೋಮಯ್ಯೈ ನಮಃ
೯೨. ಓಂ ಶುಭಾಯೈ ನಮಃ
೯೩. ಓಂ ತಮೋವಿಮೂಢ ಲೋಕಾಂಧಕಾರ ನೋದನಚಂದ್ರಿಕಾಯೈ ನಮಃ
೯೪. ಓಂ ಶ್ರುತ್ಯಂತಗತ ತತ್ವಾರ್ಥ ಬೋಧಿನ್ಯೈ ನಮಃ
೯೫. ಓಂ ಬೋಧಭಾಸುರಾಯೈನಮಃ
೯೬. ಓಂ ಬೋಧಾಮೃತ ಪಯಶ್ಶುಕ್ಲಾಯೈ ನಮಃ
೯೭. ಓಂ ಪಾರ್ಥವತ್ಸ ತರಾನ್ವಿತಾಯೈ ನಮಃ
೯೮. ಓಂ ದೋಗ್ಧೃಕೃಷ್ಣಾಯೈ ನಮಃ
೯೯. ಓಂ ಗೋರೂಪಾಯೈ ನಮಃ
೧೦೦. ಓಂ ಕಾಮಧೇನವೇ ನಮಃ
೧೦೧. ಓಂ ಶುಗಂತಿಕಾಯೈ ನಮಃ
೧೦೨. ಓಂ ಕ್ಲಿನ್ನಪಾರ್ಥ ತಮೋಹಂತ್ರ್ಯೈ ನಮಃ
೧೦೩. ಓಂ ಕ್ಷಾತ್ರಧರ್ಮಪ್ರವರ್ತಿಕಾಯೈ ನಮಃ
೧೦೪. ಓಂ ಕರ್ತವ್ಯಚ್ಯುತ ಧೀಮೂಢಜನ ಸತ್ಪಥದರ್ಶಿಕಾಯೈ ನಮಃ
೧೦೫. ಓಂ ಸರ್ವಸನ್ಯಾಸ ಸಂ ಲಕ್ಷ್ಯಾಯೈ ನಮಃ
೧೦೬. ಓಂ ಪೂರ್ಣಬ್ರಹ್ಮಪ್ರಬೋಧಿನ್ಯೈ ನಮಃ
೧೦೭. ಓಂ ಕಲಿ ಸಂತ್ರಸ್ತಸಂಮೂಢ ಲೋಕತ್ರಾಣ ಚಣಾಯೈ ನಮಃ
೧೦೮. ಓಂ ಪರಾಯೈ ನಮಃ

ಹರಿಃ ಓಂ ತತ್ ಸತ್

ಓಂ ಇತಿ ಶ್ರೀ ಭಗವದ್ಗೀತಾಷ್ಟೋತ್ತರ ಶತನಾಮಾವಳಿಸ್ತೋತ್ರ ಪುಷ್ಪಾಂಜಲಿ ಪೂಜಾಂ ಸಮರ್ಪಯಾಮಿ, ಓಂ ಅಷ್ಟಾದಶಾಧ್ಯಾಯಿನ್ಯೈ ನಮಃ- ನಾನಾ ವಿಧ ಪರಿಮಳಪತ್ರ ಪುಷ್ಪಾಣಿ ಸಮರ್ಪಯಾಮಿ; ಓಂ ಭವದ್ವೇಷಿಣ್ಯೈನಮಃ- ಧೂಪ ಮಾಘ್ರಾಪಯಾಮಿ; ಓಂ ಸರ್ವೋಪನಿಷತ್ಸಾರ ರೂಪಿಣ್ಯೈನಮಃ- ದೀಪಂ ದರ್ಶಯಾಮಿ; ಓಂ ಅದ್ವೈತಾಮೃತವರ್ಷಿಣ್ಯೈ ನಮಃ- ನೈವೇದ್ಯಂ ಸಮರ್ಪಯಾಮಿ; ಮಧ್ಯೇ ಮಧ್ಯೇ ಪಾನೀಯಂ ಸಮರ್ಪಯಾಮಿ; ಉತ್ತರಾಪೋಶನಂ ಸಮರ್ಪಯಾಮಿ; ಓಂ ವ್ಯಾಸೇನ ಗ್ರಥಿತಾಯೈ ನಮಃ- ತಾಂಬೂಲಂ ಸಮರ್ಪಯಾಮಿ, ಓಂ ಭಾರತ ಪಂಕಜ ಸ್ವರೂಪಾಯೈ ನಮಃ- ಕರ್ಪೂರನೀರಾಜನಂ ದರ್ಶಯಾಮಿ; ಓಂ ಭಯಶೋಕಾದಿ ವರ್ಜಿತಾಯೈ ನಮಃ - ಮಂತ್ರಪುಷ್ಪಂ ಸಮರ್ಪಯಾಮಿ; ಓಂ ಲೋಕತ್ರಯೋಪಕಾರಿಣ್ಯೈ ನಮಃ, ಪ್ರದಕ್ಷಿಣಂ ಸಮರ್ಪಯಾಮಿ; ಓಂ ಸರ್ವಜ್ಞಾನಮಯ್ಯೈ ನಮಃ ಸರ್ವೋಪಚಾರ ಪೂಜಾಂ ಸಮರ್ಪಯಾಮಿ.

ಅನಯಾ ಧ್ಯಾನಾವಾಹನಾದಿ ಷೋಡಶೋಪಚಾರ ಪೂಜಯಾ ಭಗವತೀ ಶ್ರೀಗೀತಾ ದೇವತಾ ಸುಪ್ರೀತಾ ಸುಪ್ರಸನ್ನಾ ವರದಾ ಭವತು.

............ಇತಿ ಶ್ರೀ ಗೀತಾದೇವಿ ಪೂಜಾ ಸಮಾಪ್ತಂ

(ಗೀತಾದೇವಿ ಪೂಜಾ ಸಂದರ್ಭದಲ್ಲಿ ಶ್ರೀಕೃಷ್ಣ ಭಗವಂತನನ್ನು ಸ್ಮರಿಸುವುದು, ಸೇವಿಸುವುದು ಹಾಗು ಸಮಯೋಚಿತವಾಗಿರುವುದು ಮುಮುಕ್ಷುಗಳ ಕರ್ತವ್ಯವಾಗಿದೆ. ಆದ್ದರಿಂದ ಭಕ್ತ ಜನರ ಉಪಯೋಗ ನಿಮಿತ್ತ ಶ್ರೀಕೃಷ್ಣಾಷ್ಟೋತ್ತರ ಶತನಾಮಾವಳಿಯನ್ನು ಕೂಡ ಕೆಳಗೆ ಕೊಡಲಾಗಿದೆ.

# ಶ್ರೀಕೃಷ್ಣಾಷ್ಟೋತ್ತರ ಶತನಾಮಾವಳಿ

೧. ಓಂ ಶ್ರೀಕೃಷ್ಣಾಯ ನಮಃ
೨. ಓಂ ಕಮಲಾನಾಥಾಯ ನಮಃ
೩. ಓಂ ವಾಸುದೇವಾಯ ನಮಃ
೪. ಓಂ ಸನಾತನಾಯ ನಮಃ
೫. ಓಂ ವಾಸುದೇವಾತ್ಮಜಾಯ ನಮಃ
೬. ಓಂ ಪುಣ್ಯಾಯ ನಮಃ
೭. ಓಂ ಲೀಲಾಮಾನುಷ ವಿಗ್ರಹಾಯ ನಮಃ
೮. ಓಂ ಶ್ರೀವತ್ಸ ಕೌಸ್ತುಭಧರಾಯ ನಮಃ
೯. ಓಂ ಯಶದಾವತ್ಸಲಾಯ ನಮಃ
೧೦. ಓಂ ಹರಯೇ ನಮಃ
೧೧. ಓಂ ಚತುರ್ಭುಜಾತ್ತ ಚಕ್ರಾಸಿ ಗದಾ ಶಂಖಾದ್ಯುದಾಯುಧಾಯ ನಮಃ
೧೨. ಓಂ ದೇವಕೀನಂದನಾಯ ನಮಃ
೧೩. ಓಂ ಶ್ರೀಶಾಯ ನಮಃ
೧೪. ಓಂ ನಂದಗೋಪ ಪ್ರಿಯಾತ್ಮಜಾಯ ನಮಃ
೧೫. ಓಂ ಯಮುನಾವೇಗ ಸಂಹಾರಿಣೇ ನಮಃ
೧೬. ಓಂ ಬಲಭದ್ರಪ್ರಿಯಾನುಜಾಯ ನಮಃ
೧೭. ಓಂ ಪೂತನಾಜೀವಿತಹರಾಯ ನಮಃ
೧೮. ಓಂ ಶಕಟಾಸುರ ಭಂಜನಾಯ ನಮಃ

೧೯. ಓಂ ನಂದವ್ರಜ ಜನಾನಂದಿನೇ ನಮಃ

೨೦. ಓಂ ಸಚ್ಚಿದಾನಂದ ವಿಗ್ರಹಾಯ ನಮಃ

೨೧. ಓಂ ನವನೀತ ವಿಲಿಪ್ತಾಂಗಾಯ ನಮಃ

೨೨. ಓಂ ನವನೀತ ನಟಾಯ ನಮಃ

೨೩. ಓಂ ಅನಘಾಯ ನಮಃ

೨೪. ಓಂ ನವನೀತ ನವಾಹಾರಾಯ ನಮಃ

೨೫. ಓಂ ಮುಚುಕುಂದಪ್ರಸಾದಕಾಯ ನಮಃ

೨೬. ಓಂ ಷೋಡಶ ಸ್ತ್ರೀಸಹಸ್ರೇಶಾಯ ನಮಃ

೨೭. ಓಂ ತ್ರಿಭಂಗಿನೇ ನಮಃ

೨೮. ಓಂ ಮಧುರಾಕೃತಯೇ ನಮಃ

೨೯. ಓಂ ಶುಕವಾಗಮೃತಾಬ್ಧೀಂದವೇ ನಮಃ

೩೦. ಓಂ ಗೋವಿಂದಾಯ ನಮಃ

೩೧. ಓಂ ಯೋಗಿನಾಂಪತಯೇ ನಮಃ

೩೨. ಓಂ ವತ್ಸವಾಟಚರಾಯ ನಮಃ

೩೩. ಓಂ ಅನಂತಾಯ ನಮಃ

೩೪. ಓಂ ಧೇನುಕಾಸರ ಭಂಜನಾಯ ನಮಃ

೩೫. ಓಂ ತೃಣೀಕೃತತೃಣಾವರ್ತಾಯ ನಮಃ

೩೬. ಓಂ ಯಮಳಾರ್ಜುನ ಭಂಜನಾಯ ನಮಃ

೩೭. ಓಂ ಉತ್ತಾಲತಾಲಭೇತ್ರೇ ನಮಃ

೩೮. ಓಂ ತಮಾಲಶ್ಯಾಮಲಾಕೃತಯೇ ನಮಃ

೩೯. ಓಂ ಗೋಪಗೋಪೀಶ್ವರಾಯ ನಮಃ

೪೦. ಓಂ ಯೋಗಿನೇ ನಮಃ

೪೧. ಓಂ ಕೋಟಿಸೂರ್ಯಸಮಪ್ರಭಾಯ ನಮಃ

೪೨. ಓಂ ಇಲಾಪತಯೇ ನಮಃ

೪೩. ಓಂ ಪರಂಜ್ಯೋತಿಷೇ ನಮಃ

೪೪. ಓಂ ಯಾದವೇಂದ್ರಾಯ ನಮಃ

೪೫. ಓಂ ಯದೂದ್ವಹಾಯ ನಮಃ

೪೬. ಓಂ ವನಮಾಲಿನೇ ನಮಃ

೪೭. ಓಂ ಪೀತವಾಸನೇ ನಮಃ

೪೮. ಓಂ ಪಾರಿಜಾತಾಪಹಾರಕಾಯ ನಮಃ

೪೯. ಓಂ ಗೋವರ್ಧನಾಚಲೋದ್ಧರ್ತ್ರೇ ನಮಃ

೫೦. ಓಂ ಗೋಪಾಲಾಯ ನಮಃ

೫೧. ಓಂ ಸರ್ವಪಾಲಕಾಯ ನಮಃ

೫೨. ಓಂ ಅಜಾಯ ನಮಃ

೫೩. ಓಂ ನಿರಂಜನಾಯ ನಮಃ

೫೪. ಓಂ ಕಾಮಜನಕಾಯ ನಮಃ

೫೫. ಓಂ ಕಂಜಲೋಚನಾಯ ನಮಃ

೫೬. ಓಂ ಮಧುಘ್ನೇ ನಮಃ

೫೭. ಓಂ ಮಧುರಾನಾಥಾಯ ನಮಃ

೫೮. ಓಂ ದ್ವಾರಕಾನಾಥಾಯ ನಮಃ

೫೯. ಓಂ ಬಲಿನೇ ನಮಃ

೬೦. ಓಂ ಬೃಂದಾವನಾಂತಸಂಚಾರಿಣೇ ನಮಃ

೬೧. ಓಂ ತುಲಸೀದಾಮಭೂಷಣಾಯ ನಮಃ

೬೨. ಓಂ ಶಮಂತಕಮಣೇರ್ಹರ್ತ್ರೇ ನಮಃ

೬೩. ಓಂ ನರನಾರಾಯಣಾತ್ಮಕಾಯ ನಮಃ

೬೪. ಓಂ ಕುಬ್ಜಾಕೃಷ್ಣಾಂಬರಧರಾಯ ನಮಃ

೬೫. ಓಂ ಮಾಯಿನೇ ನಮಃ

೬೬. ಓಂ ಪರಮಪುರುಷಾಯ ನಮಃ

೬೭. ಓಂ ಮುಷ್ಟಿಕಾಸುರ ಚಾಣೂರ ಮಲ್ಲಯುದ್ಧವಿಶಾರದಾಯ ನಮಃ

೬೮. ಓಂ ಸಂಸಾರವೈರಿಣೇ ನಮಃ

೬೯. ಓಂ ಕಂಸಾರಯೇ ನಮಃ

೭೦. ಓಂ ಮುರಾರಯೇ ನಮಃ

೭೧. ಓಂ ನರಕಾಂತಕಾಯ ನಮಃ

೭೨. ಓಂ ಅನಾದಿ ಬ್ರಹ್ಮಚಾರಿಣೇ ನಮಃ

೭೩. ಓಂ ಕೃಷ್ಣಾವ್ಯಸನ ಕರ್ಶಕಾಯ ನಮಃ

೭೪. ಓಂ ಶಿಶುಪಾಲ ಶಿರಚ್ಛೇತ್ರೇ ನಮಃ

೭೫. ಓಂ ದುರ್ಯೋಧನಕುಲಾಂತಕಾಯ ನಮಃ

೭೬. ಓಂ ವಿದುರಾಕ್ರೂರವರದಾಯ ನಮಃ

೭೭. ಓಂ ವಿಶ್ವರೂಪ ಪ್ರದರ್ಶಕಾಯ ನಮಃ

೭೮. ಓಂ ಸತ್ಯವಾಚೇ ನಮಃ

೭೯. ಓಂ ಸತ್ಯಸಂಕಲ್ಪಾಯ ನಮಃ

೮೦. ಓಂ ಸತ್ಯಭಾಮಾರತಾಯ ನಮಃ

೮೧. ಓಂ ಜಯಿನೇ ನಮಃ

೮೨. ಓಂ ಸುಭದ್ರಾಪೂರ್ವಜಾಯ ನಮಃ

೮೩. ಓಂ ವಿಷ್ಣವೇ ನಮಃ

೮೪. ಓಂ ಭೀಷ್ಮಮುಕ್ತಿಪ್ರದಾಯಕಾಯ ನಮಃ

೮೫. ಓಂ ಜಗದ್ಗುರವೇ ನಮಃ

೮೬. ಓಂ ಜಗನ್ನಾಥಾಯ ನಮಃ

೮೭. ಓಂ ವೇಣುನಾದವಿಶಾರದಾಯ ನಮಃ

೮೮. ಓಂ ವೃಷಭಾಸುರ ವಿಧ್ವಂಸಿನೇ ನಮಃ

೮೯. ಓಂ ಬಾಣಾಸುರ ಕರಾಂತಕಾಯ ನಮಃ

೯೦. ಓಂ ಯುಧಿಷ್ಠಿರ ಪ್ರತಿಷ್ಠಾತ್ರೇ ನಮಃ

೯೧. ಓಂ ಬರ್ಹಿಬರ್ಹಾವಸಂತಕಾಯ ನಮಃ

೯೨. ಓಂ ಪಾರ್ಥಸಾರಥಯೇ ನಮಃ

೯೩. ಓಂ ಗೀತಾಮೃತಮಹೋದಧಯೇ ನಮಃ

೯೪. ಓಂ ಅವ್ಯಕ್ತಾಯ ನಮಃ

೯೫. ಓಂ ಕಾಳೀಯಫಣಿಮಾಣಿಕ್ಯಮಂಡಿತ ಶ್ರೀಪದಾಂಭುಜಾಯ ನಮಃ

೯೬. ಓಂ ದಾಮೋದರಾಯ ನಮಃ

೯೭. ಓಂ ಯಜ್ಞಭೋಕ್ತ್ರೇ ನಮಃ

೯೮. ಓಂ ದಾನವೇಂದ್ರವಿನಾಶಕಾಯ ನಮಃ

೯೯. ಓಂ ನಾರಾಯಣಾಯ ನಮಃ

೧೦೦. ಓಂ ಪರಬ್ರಹ್ಮಣೇ ನಮಃ

೧೦೧. ಓಂ ಪನ್ನಗಾಶನ ವಾಹನಾಯ ನಮಃ

೧೦೨. ಓಂ ಜಲಕ್ರೀಡಾಸಮಾಸಕ್ತ ಗೋಪೀವಸ್ತ್ರಾಪಹಾರಕಾಯ ನಮಃ

೧೦೩. ಓಂ ಪುಣ್ಯಶ್ಲೋಕಾಯ ನಮಃ

೧೦೪. ಓಂ ತೀರ್ಥಪಾದಾಯ ನಮಃ

೧೦೫. ಓಂ ವೇದವೇದ್ಯಾಯ ನಮಃ

೧೦೬. ಓಂ ದಯಾ ನಿಧಯೇ ನಮಃ

೧೦೭. ಓಂ ಸರ್ವತೀರ್ಥಾತ್ಮಕಾಯ ನಮಃ

೧೦೮. ಓಂ ಸರ್ವಗ್ರಹರೂಪಿಣೇ ನಮಃ

ಓಂ ಪರಾತ್ಪರಾಯ ನಮಃ

ಇತಿ ಶ್ರೀ ಕೃಷ್ಣಾಷ್ಟೋತ್ತರ ಶತನಾಮಾವಳಿ ಸಮಾಪ್ತಾ

ಓಂ ತತ್ ಸತ್

# ಗೀತಾ ಗಂಗೆ

ಶ್ಲೋ ॥ ಜಾತಾಸಿ ತ್ವಂ ಮುರಹರಿಮುಖಾಜ್ಜಾಹ್ನವೀ ತಸ್ಯ ಪಾದಾತ್
ಸರ್ವಾನಭ್ಯುದ್ಧರತಿ ಭವತೀ ಸಾತು ಮಗ್ನಾನ್ ವಿಧತ್ತೇ
ಪ್ರತ್ಯಗ್ಬ್ರಹ್ಮಾಮೃತರಸನಿಧಿಂ ಪ್ರಾಪ್ಯ ವಿಶ್ರಾಮ್ಯಸಿ ತ್ವಂ
ಮಾತರ್ಗೀತೇ ಜಡನಿಧಿಮಿಯಂ ಮಾತಿ ನ ತ್ವತ್ಪ್ರಭಾವಃ

ತಾತ್ಪರ್ಯ– ಓ ಗೀತಾದೇವಿ! ವಿಷ್ಣುಭಗವಂತನ ಪಾದಗಳಿಂದ ಗಂಗೆ ಉದ್ಭವಿಸಿದೆ. ನೀನಾದರೋ, ಆ ಭಗವಂತನ ಮುಖದಿಂದ ಆವಿರ್ಭವಿಸಿದ್ದೀಯೆ! (ಓಹೋ! ಎಂತಹ ಔತ್ಕೃಷ್ಟ್ಯ ನಿನ್ನದು!) ಗಂಗೆಯಲ್ಲಿ ಬಿದ್ದ ಭೌತಿಕ ದೇಹಗಳು ನೀರಿನಲ್ಲಿ ಮುಳುಗಿ ಹೋಗುತ್ತಿವೆ. ಆದರೆ ಜ್ಞಾನಗಂಗೆಯಾದ ನಿನ್ನಲ್ಲಿ ಮೊರೆ ಹೊಕ್ಕವರನ್ನೆಲ್ಲಾ ನೀನು ಉದ್ಧರಿಸುತ್ತಿದ್ದೀಯೆ! ಇಷ್ಟೇ ಅಲ್ಲ. ಗಂಗಾನದಿ ಹೋಗಿ ಜಡವಾದ ಉಪ್ಪು ಸಮುದ್ರದಲ್ಲಿ (ಬಂಗಾಳ ಕೊಲ್ಲಿಯಲ್ಲಿ) ಕಲೆತು ಹೋಗುತ್ತಿದೆ. ಗೀತಗಂಗೆಯಾದ ನೀನು ಚೈತನ್ಯವಾದ ಪ್ರತ್ಯಗಾತ್ಮನಲ್ಲಿ (ಬ್ರಹ್ಮಾನಂದ ಸಾಗರದಲ್ಲಿ) ಸೇರಿ ವಿಶ್ರಮಿಸುತ್ತಿದ್ದೀಯೆ! ಇಂತಹ ಅನುಪಮ ಪ್ರಭಾವವುಳ್ಳ ಗೀತಾ ಗಂಗಮ್ಮ ತಾಯಿ! ನಿನ್ನನ್ನು ಇನ್ನು ಯಾವುದರೊಂದಿಗೆ ಹೋಲಿಸಬೇಕು? (ಗಂಗಾನದಿ ಪವಿತ್ರವಾದುದೇ; ಆದರೆ ಗೀತಾಗಂಗೆ ಅದಕ್ಕಿಂತಲೂ ಪವಿತ್ರವಾದದ್ದೆಂದು ಕವಿ ಚಮತ್ಕಾರವಾಗಿ ತಿಳಿಸಿದ್ದಾನೆ).

# ಗೀತೆಯನ್ನು ಜಪಿಸುವ ವಿಧಾನ*

ಗೀತೆಯಲ್ಲಿಯ ಭಾವ ಎಷ್ಟು ಗಂಭೀರವಾಗಿದೆಯೋ ಭಾಷೆಯೂ ಅಷ್ಟೇ ಪಟುತ್ವವುಳ್ಳದ್ದಾಗಿದೆ. ಪ್ರತಿಪದವೂ ಮಹಾಶಕ್ತಿವಂತವಾಗಿ ಬೆಳಗುತ್ತಿದೆ. ಭಾವ ದೃಷ್ಟಿಯಲ್ಲೂ, ಅಕ್ಷರದೃಷ್ಟಿಯಲ್ಲೂ ಗೀತೆ ಅತ್ಯಂತ ಮಹತ್ತರವಾದುದು. ಅಷ್ಟೇ ಅಲ್ಲ, ಗೀತೆಯಲ್ಲಿಯ ಪ್ರತಿಶ್ಲೋಕವೂ ಒಂದು ಮಹಾಮಂತ್ರವೇ ಆಗಿದೆ. ೭೦೧ ಶ್ಲೋಕಗಳು ೭೦೧ ಮಂತ್ರಗಳು. ಆದ್ದರಿಂದಲೇ ಗೀತೆಯಲ್ಲಿ ಋಷ್ಯಾದಿ ನ್ಯಾಸಗಳಲ್ಲಿ 'ಓಂ ಅಸ್ಯ ಶ್ರೀ ಭಗವದ್ಗೀತಾಶಾಸ್ತ್ರ ಮಹಾಮಂತ್ರಸ್ಯ' ಎನ್ನುವ ವಾಕ್ಯವು ಕಾಣುತ್ತದೆ. ಹರಿರೂಪನಾದ ಶ್ರೀಕೃಷ್ಣಪರಮಾತ್ಮನೊಬ್ಬನ ಅಪರಹರಿ ಸ್ವರೂಪ@ನಾದ ಶ್ರೀ ವೇದವ್ಯಾಸಮಹರ್ಷಿಯ ದಿವ್ಯಶಕ್ತಿ ಪ್ರಭಾವವೇ ಅದು ಎಂದು ಹೇಳಬಹುದು. ಲೌಕಿಕ, ಪಾರಮಾರ್ಥಿಕ ಫಲಗಳೆರಡಕ್ಕೂ ಗೀತಾ ಮಂತ್ರವನ್ನು ಜಪಿಸಬಹುದು. ಅಂದರೆ ಲೌಕಿಕ ಮನೋರಥಗಳು ಸಿದ್ಧಿಸುವುದಕ್ಕಾಗಲಿ, ಪಾರಮಾರ್ಥಿಕ ವಾಂಛೆಗಳು ನೆರವೇರುವುದಕ್ಕಾಗಲಿ ಆಯಾ ಗೀತಾಮಂತ್ರಗಳನ್ನು ಶ್ರದ್ಧಾಪೂರ್ವಕವಾಗಿ ಅನುಷ್ಠಾನ ಮಾಡಬಹುದು. ಗೀತೆಯಲ್ಲಿಯ ಶ್ಲೋಕಗಳೆಲ್ಲವೂ ಮಂತ್ರಗಳಾಗಿದ್ದಾಗ್ಯೂ ಪ್ರತ್ಯೇಕವಾಗಿ ೪, ೯, ೧೧, ೧೨, ೧೩, ೧೫ನೆಯ ಅಧ್ಯಾಯಗಳು ಮಂತ್ರದೃಷ್ಟಿಯಲ್ಲಿ ವಿಶೇಷ ಮಹತ್ವವನ್ನು ಹೊಂದಿವೆ.

ಸೂರ್ಯೋದಯಕ್ಕಿಂತ ಮುಂಚೆ ಉಷಃಕಾಲದಲ್ಲಿ ನಿದ್ರೆಯಿಂದೇಳುವುದು, ಸಾತ್ವಿಕ ಮಿತ ಭೋಜನವನ್ನು ಸ್ವೀಕರಿಸುವುದು, ಬ್ರಹ್ಮಚರ್ಯವನ್ನು ಅನುಸರಿಸುವುದು, ಸತ್ಯವಾದ ಮಿತಭಾಷೆಯನ್ನು ಉಪಯೋಗಿಸುವುದು, ನೆಲದ ಮೇಲೆ ಮಲಗುವುದು, ಸಾಧ್ಯವಾದಷ್ಟು ನಿರಂತರವಾಗಿ 'ಹರಿಃ ಶರಣಂ' ಎನ್ನುವ ಮಂತ್ರವನ್ನು ನಿರಂತರವಾಗಿ ಮನಸ್ಸಿನಲ್ಲಿ ಜಪಿಸುವುದು, ಮುಂತಾದ ಪವಿತ್ರ ನಿಯಮಗಳನ್ನು ಗೀತಾನುಷ್ಠಾನಪರರು ಪಾಲಿಸುವುದು ಅತ್ಯಾವಶ್ಯಕ.

ಮತ್ತೆ ಜಪವನ್ನು ಮಾಡುವವರು ಶೌಚಸ್ನಾನಾದಿಗಳನ್ನು ಮಾಡಿ ಶುದ್ಧವಾದ ಹತ್ತಿ ಬಟ್ಟೆಗಳನ್ನು, ಹಿಂಸೆಯಿಂದ ಕೂಡದ ರೇಷ್ಮೆ ವಸ್ತ್ರಗಳನ್ನು ಧರಿಸಿ, ದರ್ಭೆ ಇಲ್ಲವೇ ಉಣ್ಣೆಯ ಆಸನದ ಮೇಲೆ ಕುಳಿತು, ನಿಯಮಾನುಸಾರವಾಗಿ ಸಂಧ್ಯಾ ಗಾಯತ್ರಿ ಜಪ ಮೊದಲಾದವುಗಳನ್ನು ಮಾಡಿದ ನಂತರ '**ಓಂ ಕೇಶವಾಯ ನಮಃ, ಓಂ ನಾರಾಯಣಾಯ ನಮಃ, ಓಂ ಮಾಧವಾಯ ನಮಃ, ಓಂ ಗೋವಿಂದಾಯ ನಮಃ, ಓಂ ವಿಷ್ಣವೇ ನಮಃ, ಓಂ ಮಧುಸೂದನಾಯ ನಮಃ**, ಎಂದು ಉಚ್ಚರಿಸಿ ಶ್ರೀ ಕೃಷ್ಣ ಭಗವಂತನನ್ನು ಧ್ಯಾನಿಸಬೇಕು. ನಂತರ 'ಈ ಕಾರ್ಯಸಿದ್ಧಿಗೋಸ್ಕರ ಈ ಮಂತ್ರವನ್ನು ಜಪಿಸುವೆನು' ಎಂದು ಸಂಕಲ್ಪ ಮಾಡಿಕೊಳ್ಳಬೇಕು. ನಂತರ '**ಓಂ ಕ್ಲೀಂ ಕೃಷ್ಣಾಯನಮಃ**' ಎನ್ನುವ ಮಂತ್ರದಿಂದಲೇ ಆಗಲಿ, ಇಲ್ಲ ಯಾವುದನ್ನು ಜಪಿಸಬೇಕೆಂದಿರುವಿರೋ ಆ ಮಂತ್ರದಿಂದ ಅಂಗನ್ಯಾಸ**ವನ್ನು ಮಾಡಬೇಕು. ನಂತರ ಕೈಯಲ್ಲಿ ತುಳಸಿ, ಪುಷ್ಪಗಳನ್ನು ತೆಗೆದುಕೊಂಡು ಶ್ರೀಕೃಷ್ಣಮೂರ್ತಿಯನ್ನು ಈ ಕೆಳಗಿನ ಮಂತ್ರದಿಂದ ಆಹ್ವಾನಿಸಬೇಕು.

ವಂಶೀವಿಭೂಷಿತಕರಾ ನ್ನವನೀರದಾಭಾತ್
ಪೀತಾಂಬರಾ ದರುಣಬಿಂಬಫಲಾಧರೋಷ್ಠಾತ್
ಪೂರ್ಣೇಂದು ಸುಂದರಮುಖಾ ದರವಿಂದನೇತ್ರಾತ್
ಕೃಷ್ಣಾತ್ಪರಂ ಕಿಮಪಿ ತತ್ತ್ವಮಹಮ್ ನಜಾನೇ

(ತಾ॥ ಕೈಯಲ್ಲಿ ಮುರಳಿಯನ್ನು ಧರಿಸಿದವನು, ಮೇಘಚ್ಛಾಯದಿಂದ ಕೂಡಿದವನು, ಪೀತಾಂಬರಧಾರಿಯು, ತೊಂಡೆಹಣ್ಣಿನಂತ ಕೆಂಪು ತುಟಿಗಳಿಂದ ಶೋಭಿಸುವವನು, ಪೂರ್ಣಚಂದ್ರನಂತೆ ಸುಂದರ ಮುಖವುಳ್ಳವನು, ಕಮಲನೇತ್ರನಾದ ಶ್ರೀ ಕೃಷ್ಣಪರಮಾತ್ಮನಿಗಿಂತ ಭಿನ್ನವಾದ ಮತ್ತೊಂದು ತತ್ವವನ್ನು ನಾನು ಅರಿಯೆನು).

---

* ಈ ಭಾಗ ಮತ್ತು ಇದರ ನಂತರ ಬರುವ "ಗೀತೆಯ ಲೌಕಿಕ ಫಲಗಳು", "ಗೀತೆಯ ಪಾರಮಾರ್ಥಿಕ ಫಲಗಳು"- ಎನ್ನುವ ಭಾಗಗಳನ್ನು ಗೋರಖ್‌ಪುರದ ಗೀತಾಪ್ರೆಸ್‌ನ ಕಲ್ಯಾಣ್ ಪತ್ರಿಕೆಯಲ್ಲಿಯ ಒಂದು ಲೇಖನದ ಆಧಾರದ ಮೇಲೆ ಬರೆಯಲಾಗಿದೆ. ಮತ್ತೆ ಆ ಪತ್ರಿಕೆಯವರ ಸೌಜನ್ಯದಿಂದ ಇಲ್ಲಿ ಪ್ರಕಟಗೊಂಡಿವೆ. ಈ ಭಾಗಗಳನ್ನು ಪ್ರಕಟಿಸಲು ತಮ್ಮ ಸಮ್ಮತಿಯನ್ನು (ಅನುಮತಿ) ಕೊಟ್ಟಿದ್ದಕ್ಕೆ ಅವರಿಗೆ ನಮ್ಮ ಕೃತಜ್ಞತೆಗಳನ್ನು ತಿಳಿಸುತ್ತಿದ್ದೇವೆ- (ಪ್ರಕಾಶಕರು)

@ ದ್ವಿಬಾಹುರಪರೋಹರಿಃ = ಎರಡು ಬಾಹುಗಳುಳ್ಳ ವಿಷ್ಣುವೇ ವ್ಯಾಸಮುನೀಂದ್ರರು

** ಅಂಗನ್ಯಾಸ ಕರನ್ಯಾಸಗಳ ವಿವರಣೆ ಈ ಗ್ರಂಥದ 'ಗೀತಾಪಾರಾಯಣ ಮಾಡುವ ಪದ್ಧತಿ', ಎನ್ನುವ ಶೀರ್ಷಿಕೆಯ ಕೆಳಗೆ ನೋಡುವುದು.

ಅನಂತರ ಶ್ರೀಕೃಷ್ಣಭಗವಂತನನ್ನು ಷೋಡಶೋಪಚಾರಗಳಿಂದ ಇಲ್ಲವೆ ಪಂಚೋಪಚಾರಗಳಿಂದ ಪೂಜಿಸಬೇಕು. ನಂತರ ನಿಶ್ಚಿಂತೆಯಿಂದ ಕೂಡಿದ ಏಕಾಗ್ರ ಮನಸ್ಸಿನಿಂದ ಮಂತ್ರಗಳನ್ನು ಜಪಿಸಬೇಕು. ಜಪಿಸುವಾಗ ಮಧ್ಯದಲ್ಲಿ ಮಾತಾಡಬಾರದು. ಭಗವಂತನ ವಿಗ್ರಹದೆಡೆಗೇ ದೃಷ್ಟಿಯನ್ನು ಕೇಂದ್ರೀಕರಿಸಬೇಕು. ಇಲ್ಲ ಮನಸ್ಸಿನಲ್ಲಿ ಭಗವಂತನನ್ನೇ ಧ್ಯಾನಿಸುತ್ತಿರಬೇಕು. ಈ ಕಡೆ ಆ ಕಡೆ ನೋಡಬಾರದು. ಶಾಂತಿ ಹಾಗು ಪ್ರಸನ್ನಚಿತ್ತತೆಯಿಂದ ಮಂತ್ರವನ್ನು ಜಪಿಸಬೇಕು.

ಎಲ್ಲದಕ್ಕಿಂತ ಮುಖ್ಯವಾದದ್ದು ಶ್ರದ್ಧೆ. 'ಈ ಜಪದಿಂದ ತಮ್ಮ ಅಭೀಷ್ಟವು ತಪ್ಪದೆ ಸಿದ್ಧಿಸುತ್ತದೆ ಎನ್ನುವ ದೃಢವಾದ ವಿಶ್ವಾಸವನ್ನು ಹೃದಯದಲ್ಲಿ ಹೊಂದಿದ್ದು ಈ ಅನುಷ್ಠಾನವನ್ನು ಆಚರಿಸಬೇಕು. ಮತ್ತೆ, ಜಪ ಮಾಡುವಾಗ ಇಂತಹ ಶ್ರದ್ಧೆಯನ್ನೇ ಹೃದಯದಲ್ಲಿಟ್ಟುಕೊಂಡು, ಅದನ್ನು ವೃದ್ಧಿಗೊಳಿಸಿಕೊಳ್ಳಬೇಕು. ಒಂದು ಸಾರಿ ಆಚರಿಸಿ ಕಾರ್ಯಸಿದ್ಧಿ ಆಗದಿದ್ದರೆ ಶ್ರದ್ಧಾಪೂರ್ವಕವಾಗಿ ಮೂರು, ಇಲ್ಲವೇ ಏಳು ಸಾರಿ ಆಚರಿಸಬೇಕು. ಜಪ ಮುಗಿದ ಕೂಡಲೇ ಆ ಮಂತ್ರದಿಂದಲೇ ದಶಾಂಶ ಹೋಮವನ್ನು ಮಾಡಬೇಕು. ಹೋಮದ್ರವ್ಯದಲ್ಲಿ ಎಳ್ಳು, ಹಿಟ್ಟು, ಸಕ್ಕರೆ, ತುಪ್ಪಗಳನ್ನು ಕಲಸಬೇಕು. ಗೋಧಿ ಪಾಯಸದ ಬಲಿ ಸಮರ್ಪಿಸಬೇಕು. ಒಬ್ಬ ಮನುಷ್ಯನಿಗೆ ಬೇಕಾದಷ್ಟು, ಇಲ್ಲ ಶಕ್ತ್ಯಾನುಸಾರ ಅದಕ್ಕಿಂತ ಕಡಿಮೆಯಾಗಲಿ ಪಾಯಸವನ್ನು ಶ್ರದ್ಧೆಯಿಂದ ಮಾಡಿ ಎಡಗೈ ಹೆಬ್ಬೆರಳು, ಹಾಗು ತೋರುಬೆರಳುಗಳಲ್ಲಿ ಹಿಡಿದು **"ಏಷ ಬಲಿಃ ಶ್ರೀಕೃಷ್ಣಾಯ ನಮಃ"** ಎಂದು ಹೇಳಿ ಮಹಾವಿನಯ ಶ್ರದ್ಧೆಗಳಿಂದ ಅದನ್ನು ಭಗವಂತನಿಗೆ ಅರ್ಪಿಸಬೇಕು. ಆ ಬಲಿಗೆ ಬೇಕಾದ ಪದಾರ್ಥಗಳೆಲ್ಲವನ್ನು ಪವಿತ್ರವಾದ ಪಾತ್ರೆಯಲ್ಲಿರಿಸಿ, ಮುಚ್ಚಿಟ್ಟು ರಾತ್ರಿ ತನ್ನ ತಲೆಯ ಬಳಿ ಇರಿಸಿಕೊಂಡು ತನ್ನ ಅಭೀಷ್ಟ ನೆರವೇರಲು ಭಗವಂತನನ್ನು ಪ್ರಾರ್ಥಿಸುತ್ತ ಮಂತ್ರಗಳನ್ನು ಉಚ್ಚರಿಸುತ್ತಾ ಮಲಗಬೇಕು. ಬೆಳಿಗ್ಗೆ ಎದ್ದು ಆ ನೈವೇದ್ಯವನ್ನು ಹಸುವಿಗೆ ತಿನ್ನಿಸಬೇಕು.

ಜಪ ಪೂರ್ತಿಯಾದ ನಂತರ ಪೂರ್ಣ ನಮ್ರತೆಯಿಂದ, ಅತ್ಯಂತ ಭಕ್ತಿಯಿಂದ ಈ ಕೆಳಗಿನ ಶ್ಲೋಕಗಳನ್ನು ಉಚ್ಚರಿಸುತ್ತಾ ಭಗವಂತನಿಗೆ ಕ್ಷಮಾಪ್ರಾರ್ಥನೆಯನ್ನು ಮಾಡಬೇಕು.

**೧. ಆವಾಹನಂ ನ ಜಾನಾಮಿ ನೈವ ಜಾನಾಮಿ ಪೂಜನಂ**
**ವಿಸರ್ಜನಂ ನ ಜಾನಾಮಿ ಕ್ಷಮಸ್ವ ಪರಮೇಶ್ವರ**

**೨. ಅನ್ಯಥಾ ಶರಣಂ ನಾಸ್ತಿ ತ್ವಮೇವ ಶರಣಂ ಮಮ**
**ತಸ್ಮಾತ್ಕಾರುಣ್ಯಭಾವೇನ ಕ್ಷಮಸ್ವ ಪರಮೇಶ್ವರ**

**೩. ಗತಂ ಪಾಪಂ ಗತಂ ದುಃಖಂ ಗತಂ ದಾರಿದ್ರ್ಯಮೇವ ಚ**
**ಆಗತಾ ಸುಖಸಂಪತ್ತಿಃ ಪುಣ್ಯಾಚ್ಚ ತವ ದರ್ಶನಾತ್**

**೪. ಮಂತ್ರಹೀನಂ ಕ್ರಿಯಾಹೀನಂ ಭಕ್ತಿಹೀನಂ ಸುರೇಶ್ವರಾ**
**ಯತ್ಪೂಜಿತಂ ಮಯಾದೇವ ಪರಿಪೂರ್ಣ ತದಸ್ತು ಮೇ**

**೫. ಯದಕ್ಷರ ಪದಭ್ರಷ್ಟಂ ಮಾತ್ರಾಹೀನಂ ಚ ಯದ್ಭವೇತ್**
**ತತ್ಸರ್ವಂ ಕ್ಷಮ್ಯತಾಂ ದೇವ ಪ್ರಸೀದ ಪರಮೇಶ್ವರ**

**೬. ಯಸ್ಯ ಸ್ಮೃತ್ಯಾಚ ನಾಮೋಕ್ತ್ಯ ತಪೋಯಜ್ಞ ಕ್ರಿಯಾದಿಷು**
**ನ್ಯೂನಂ ಸಂಪೂರ್ಣತಾಮೇತಿ ಸದ್ಯೋ ವಂದೇ ತಮಚ್ಯುತಂ**

**೭. ಪ್ರಮಾದಾತ್ಕುರ್ವತಾಂ ಕರ್ಮ ಪ್ರಚ್ಯವೇತಾಧ್ವರೇಷು ಯತ್**
**ಸ್ಮರಣಾದೇವ ತದ್ವಿಷ್ಣೋಃ ಸಂಪೂರ್ಣಂ ಸ್ಯಾದಿತಿ ಶ್ರುತಿಃ**

ನಂತರ **"ಅನಯಾ ಯಥೋಪಚಾರ ಪೂಜಯಾ ಶ್ರೀ ಭಗವಾನ್ ಕೃಷ್ಣಃ ಪ್ರಿಯತಾಂ ನ ಮಮ"** ಎಂದು ಹೇಳಿ ಸಾಷ್ಟಾಂಗ ನಮಸ್ಕಾರ ಮಾಡಬೇಕು. ನಂತರ ಭಗವಂತನ ಚರಣೋದಕವನ್ನು ಈ ಕೆಳಗಿನ ಶ್ಲೋಕಗಳನ್ನು ಉಚ್ಚರಿಸುತ್ತಾ ಶಿರಸ್ಸಿನ ಮೇಲಿಟ್ಟುಕೊಂಡು ಆಮೇಲೆ ಕುಡಿಯಬೇಕು.

**೧. ಅಕಾಲಮೃತ್ಯುಹರಣಂ ಸರ್ವವ್ಯಾಧಿವಿನಾಶನಂ**
**ವಿಷ್ಣೋಃ ಪಾದೋದಕಂ ಪೀತ್ವಾ ಪುನರ್ಜನ್ಮ ನ ವಿದ್ಯತೇ**

**೨. ವಿಷ್ಣುಪಾದಾಭಿಷಿಕ್ತಂ ಯಃ ಪಾತ್ರೇಣೈವ ಪಿಬೇಜ್ಜಲಂ**
**ಸರ್ವಪಾಪವಿನಿರ್ಮುಕ್ತಃ ಸ ಯಾತಿ ಪರಮಾಂ ಗತಿಂ**

ಇನ್ನು ಜಪಮಾಡುವವರು ಈ ಕೆಳಗಿನ ವಿಷಯಗಳನ್ನು ಗಮನಿಸಬೇಕು.

೧. ಯಾವ ಮಂತ್ರದ ಸಿದ್ಧಿಯನ್ನು ಹೊಂದಬೇಕೆಂದು ಇಚ್ಛಿಸುವರೋ ಅದನ್ನು ಕೃಷ್ಣಾಷ್ಟಮಿಯ, ಶರತ್ ಪೂರ್ಣಿಮೆಯ, ದೀಪಾವಳಿಯ, ಅಥವ ವೈಶಾಖ ಪೌರ್ಣಿಮಿಯ ರಾತ್ರಿಗಳಲ್ಲಿ ಆಸನಾರೂಢರಾಗಿ ಭಕ್ತಿಯಿಂದ ಮೂರು ಸಾವಿರ ಜಪಿಸಬೇಕು. ಈ ರೀತಿ ಮಂತ್ರವನ್ನು ಅನುಷ್ಠಿಸಿದ ನಂತರ ಬಹಳ ಲಾಭವುಂಟಾಗುವುದು.

೨. ಜಪಕ್ಕೆ ಮುನ್ನ ಭಗವದ್ಗೀತೆಯನ್ನು ಪೂರ್ತಿಯಾಗಲಿ, ಇಲ್ಲವೆ ಆರು ಅಧ್ಯಾಯಗಳನ್ನಾಗಲಿ, ಇಲ್ಲ ಮೂರು ಅಧ್ಯಾಯಗಳನ್ನಾಗಲಿ, ಇಲ್ಲ ಹದಿನೈದನೆಯ ಅಧ್ಯಾಯವನ್ನಾಗಲಿ ತಪ್ಪದೆ ಪಠಿಸಬೇಕು.

೩. ಪ್ರತ್ಯೇಕವಾಗಿ ಜಪ ಮಾಡಬೇಕೆನ್ನುವರು ೧೧ನೆಯ ಅಧ್ಯಾಯವನ್ನು ೧೧ ಸಾರಿ (ಮೊದಲು, ಮಧ್ಯೆ ಮತ್ತು ಕೊನೆಯಲ್ಲಿ) ಒಂಭತ್ತು ದಿನಗಳವರೆಗೆ ತಪ್ಪದೆ ಪಠನ ಮಾಡಬೇಕು. ಜಪ ಪೂರ್ತಿಯಾದ ನಂತರ ಸಾಧ್ಯವಾದರೆ ವಿಧಿ ಪ್ರಕಾರವಾಗಿ ಆ ಮಂತ್ರದೊಡನೆ ದಶಾಂಶ ತರ್ಪಣ, ಹೋಮ ಮಾಡಿ ಬ್ರಹ್ಮನಿಷ್ಠರಿಗೆ ಭೋಜನವಿಡುವುದು ಒಳ್ಳೆಯದು.

ಮಂತ್ರಜಪ ಮಾಡುವವರು ಭಗವಂತನ ಪೂಜೆಯ ಜೊತೆ ಈ ಕೆಳಗಿನ ಯಂತ್ರವನ್ನು (ನಂ.೧) ಕೂಡ ಪೂಜಿಸಬೇಕು.

ಈ ಯಂತ್ರವನ್ನು ತಾಮ್ರಫಲಕದ ಮೇಲೆ ಬರೆಯಿಸಬೇಕು. ಇಲ್ಲದಿದ್ದರೆ ಶ್ರೀಗಂಧದ ಫಲಕದ ಮೇಲೆ ದಾಳಿಂಬೆ ಕಡ್ಡಿಯಿಂದ ಕೆಂಪು ಚಂದನದಲ್ಲಿ ಬರೆಯಿಸಿ ಪೂಜಾ ಸ್ಥಳದಲ್ಲಿಡಬೇಕು. ಈ ಯಂತ್ರದಲ್ಲಿರುವ ಒಂದರಿಂದ

ನಂ. ೧ ಯಂತ್ರ



ಒಂಭತ್ತರವರೆಗಿನ ಅಂಕೆಗಳನ್ನು 'ಕೃ' ನಿಂದ 'ರುಂ' ವರೆಗಿನ ಅಕ್ಷರಗಳನ್ನು ೧೦೮ ಸಾರಿ ತಿದ್ದಬೇಕು. ತಿದ್ದುವಾಗ ಪ್ರತಿಸಾರಿ **'ಕೃಷ್ಣಂ ವಂದೇ ಜಗದ್ಗುರುಂ'** ಎಂದು ಉಚ್ಚರಿಸಬೇಕು. ಧ್ಯಾನ ಮಾಡುವಾಗ ಗೋಪಾಲಕೃಷ್ಣನ ರೂಪವನ್ನಾಗಲೀ, ಪಾರ್ಥಸಾರಥಿಯ ರೂಪವನ್ನಾಗಲಿ ಊಹಿಸಿಕೊಳ್ಳಬಹುದು.

ಗೀತೆಯ ೨ನೆಯ ಅಧ್ಯಾಯದ ೭ನೆಯ ಶ್ಲೋಕವನ್ನು ಶಯನೈಕಾದಶಿಯಿಂದು (ಆಷಾಢ ಶುದ್ಧ ಏಕಾದಶಿ) ಮೊದಲು ಮಾಡಿ ಉತ್ಥಾನೈಕಾದಶಿ (ಕಾರ್ತೀಕ ಶುದ್ಧ ಏಕಾದಶಿ)ಯವರೆಗೆ ಪ್ರತಿ ಏಕಾದಶಿ ರಾತ್ರಿ ಪವಿತ್ರ ವಸ್ತ್ರಗಳನ್ನು ಧರಿಸಿ ಶುಭ್ರವಾದ ಹಾಸಿಗೆಯ ಮೇಲೆ ಕುಳಿತು ಗೀತೋಕ್ತ ರಥದ ಮೇಲೆ ಆಸೀನವಾಗಿರುವ ಭಗವಂತನನ್ನು ಪ್ರಾರ್ಥಿಸುತ್ತ ೧೦೮ ಸಾರಿ ಪಠಿಸಬೇಕು. ಇದರಿಂದ ಯಾವುದೋ ಒಂದು ಏಕಾದಶಿಯಂದು ಸ್ವಪ್ನದಲ್ಲಿ ಭಗವಂತನು ಯಥಾಯೋಗ್ಯವಾಗಿ ಆದೇಶಿಸುತ್ತಾನೆ. ಇದರಲ್ಲಿ ಸಾಧಕನಿಗೆ ಶ್ರದ್ಧೆ, ಧಾರಣೆ, ಪವಿತ್ರತೆ, ಬಹಳ ಅವಶ್ಯಕ. ಸಾಧಕನು ಎಷ್ಟು ಉತ್ತಮನಾಗಿರುತ್ತಾನೋ ಅಷ್ಟು ಶೀಘ್ರವಾಗಿ ಆತನಿಗೆ ಅನುಭವವು ಆಗುವುದು.

೧೧ನೆಯ ಅಧ್ಯಾಯದ ೩೬ನೆಯ ಶ್ಲೋಕದಿಂದ ಜಲವನ್ನಾಗಲಿ ವಿಭೂತಿಯನ್ನಾಗಲಿ ಮಂತ್ರಿಸಿ ಪ್ರೇತಬಾಧಕವುಳ್ಳವನಿಗೆ (ದೆವ್ವ ಹಿಡಿದವನಿಗೆ) ಕೊಡುವುದರಿಂದ ಆ ಬಾಧೆ ನಿವಾರಣೆಯಾಗುವುದು. ರೋಗಿಗೆ ನೀಡಿದರೆ ಅದರ ಫಲವು ಕಾಣುವುದು. ಮಹಾರೋಗ ಪೀಡಿತನಾದ ಮನುಷ್ಯನಿಗೆ ಅಥವ ತೀವ್ರವಾಗಿ ವ್ಯಾಧಿಗ್ರಸ್ತವಾದ ಪಶುವಿಗೆ ಈ ಮಂತ್ರವನ್ನು ಮೂರು ಸಾವಿರ ಸಾರಿ ಜಪಿಸಿ ಒಂದು ಲೋಟ ನೀರನ್ನು ಭಾವಿಯಿಂದ ಸೇದಿ ತೆಗೆದು ಮಂತ್ರಿಸಿ ಮೆಲ್ಲಗೆ ಗಂಟೆಗಟ್ಟಲೇ ಅಥವ ದಿನಗಳಗಟ್ಟಲೇ ಕುಡಿಸುವುದರಿಂದ ರೋಗವು ಉಪಶಮನ ಹೊಂದುವುದು. ಪಶ್ವಾದಿಗಳಿಗೆ ಮೇವಿನೊಡನೆ ಇಲ್ಲವೆ ಬೇರೆ ಯಾವ ವಿಧದಲ್ಲಿಯೇ ಆಗಲಿ ಕುಡಿಸಿದಲ್ಲಿ ವ್ಯಾಧಿ ನಿವಾರಣೆಯಾಗುವುದು.

೧೧ನೆಯ ಅಧ್ಯಾಯದ ೩೯ನೆಯ ಶ್ಲೋಕದಿಂದ ಮಂತ್ರಿಸುತ್ತಾ ದರ್ಭೆ, ಇಲ್ಲ ಬೇವಿನ ಕಡ್ಡಿಯಿಂದ ರೋಗಿಯನ್ನು ಬಹಳ ಸಾರಿ ಸ್ಪರ್ಶಿಸುವುದರಿಂದ ಪ್ರೇತಬಾಧೆ (ದೆವ್ವದ ಬಾಧೆ) ನಿವಾರಣೆಯಾಗುವುದು.

ಶ್ರೀ ಮದ್ಭಗವದ್ಗೀತೆಯನ್ನು ನಿಷ್ಕಾಮ ಭಾವದಿಂದ ಪ್ರತಿದಿನವೂ ಪಠಿಸುವುದರಿಂದ ಭಗವಂತನ ಅನುಗ್ರಹದಿಂದ ಭಕ್ತಿ, ಜ್ಞಾನಗಳು ಉಂಟಾಗಿ ಭಗವತ್ಸಾಕ್ಷಾತ್ಕಾರವಾಗಿ ಮಾನವ ಜೀವಿತೋದ್ದೇಶವು ಸಫಲವಾಗುವುದು. ಇದಕ್ಕೆ ಶ್ರದ್ಧೆ ಬಹಳ ಅವಶ್ಯಕ. ಮತ್ತೆ ಪವಿತ್ರತೆ, ದೈವೀಸಂಪತ್ತು, ಸದ್ಗುಣಗಳನ್ನು ಸಂಪಾದಿಸುತ್ತಾ ಪಠಿಸಬೇಕು. ಗೀತೋಪದೇಶವನ್ನನುಸರಿಸಿ ತಮ್ಮ ಜೀವನವನ್ನು ನಡೆಸುವ, ಪ್ರತಿದಿನವೂ ಗೀತೆಯನ್ನು ಪೂರ್ಣವಾಗಿ ಪಠಿಸುವ ಮಹನೀಯರನ್ನು ಕುರಿತು ಇನ್ನು ಬೇರೆ ಹೇಳಬೇಕಾಗಿಲ್ಲ.

ಜನರು ಅವರವರ ಕೋರಿಕೆಗಳಿಗನುಸಾರವಾಗಿ ಆಯಾ ಗೀತಾಶ್ಲೋಕ* ಗಳನ್ನು ಸಾಮಾನ್ಯ ರೀತಿಯಲ್ಲಾಗಲಿ ಇಲ್ಲ ಸಂಪುಟ ರೀತಿಯಲ್ಲಾಗಲಿ ಜಪಿಸಬಹುದು. ಈ ಸಂಪುಟ ಪದ್ಧತಿ ಎರಡು ವಿಧಗಳಾಗಿದೆ. ಗೀತೆಯಲ್ಲಿ ಪ್ರತಿಯೊಂದು ಶ್ಲೋಕದ ನಂತರ ತಾನು ಆರಿಸಿಕೊಂಡ ಸಂಪುಟ ಶ್ಲೋಕವನ್ನು ಪಠಿಸಿ ನಂತರ ಮುಂದಿನ ಶ್ಲೋಕಗಳನ್ನು ಪಠಿಸುವುದು ಮೊದಲನೆಯ ಸಂಪುಟ ಪದ್ಧತಿ. ಪ್ರತಿ ಶ್ಲೋಕ ಪಠಣಕ್ಕಿಂತ ಮುಂಚೆ ಹಾಗು ನಂತರ ಅಂದರೆ ಒಂದು ಶ್ಲೋಕವನ್ನು ಪಠಿಸಿ ಎರಡನೆಯ ಶ್ಲೋಕವನ್ನು ಪಠಿಸುವುದಕ್ಕೆ ಮುಂಚೆ ಮಧ್ಯದಲ್ಲಿ ಸಂಪುಟ ಶ್ಲೋಕವನ್ನು ಎರಡು ಸಾರಿ ಉಚ್ಚರಿಸುವುದು ಎರಡನೆಯ ಸಂಪುಟ ಪದ್ಧತಿ. ಇದನ್ನೇ ಸಂಪುಟವಲ್ಲಿಯೆನ್ನುವರು. ಇದು ಮೊದಲನೆಯ ಪದ್ಧತಿಗಿಂತ ವಿಶೇಷ ಮಹತ್ವವುಳ್ಳದ್ದಾಗಿದೆ. ಗೀತೆಯಲ್ಲಿಯ ಪ್ರತಿ ಶ್ಲೋಕವೂ ಮಂತ್ರವೇ. ಅವೆಲ್ಲವೂ ಮನೋರಥಗಳನ್ನು ಈಡೇರಿಸಬಲ್ಲವು. ಆದ್ದರಿಂದ ಪ್ರತಿ ಶ್ಲೋಕವನ್ನು ಸಂಪುಟವಾಗಿ ಹಾಡಿಕೊಳ್ಳಬಹುದು. (ಒಬ್ಬ ಮಹನೀಯನು ಗೀತೆಯಲ್ಲಿಯ ಪ್ರತಿ ಶ್ಲೋಕವನ್ನು ಸಂಪುಟ ಮಾಡಿ ೭೦೦ ಸಾರಿ ಜಪಿಸಿ ಸಿದ್ಧಿ ಪಡೆದನಂತೆ!). ಕೆಲವು ಮುಖ್ಯ ಸಂಪುಟ ಶ್ಲೋಕಗಳನ್ನು ಅವುಗಳ ಫಲಗಳೊಂದಿಗೆ ಈ ಭಾಗದ ಅಂತ್ಯದಲ್ಲಿ ಕೊಡಲಾಗಿದೆ.

ಗೀತಾಪಾರಾಯಣವನ್ನು ಅದರ ವಿಧಿಯನ್ನನುಸರಿಸಿ ಮಂಗಳಾಚರಣೆ, ಅಂಗನ್ಯಾಸ ಕರನ್ಯಾಸ, ಧ್ಯಾನ, ವಿನಿಯೋಗ ಸಂಕಲ್ಪಾದಿಗಳನ್ನು ಮಾಡಿ ಜರುಗಿಸಬೇಕು. ಗೀತಾ ಪಾರಾಯಣ ಪದ್ಧತಿಯನ್ನು ಮುಂದೆ ತಿಳಿಸಲಾಗುವುದು. ಪ್ರತಿದಿನವೂ ಪೂರ್ತಿ ಪಾರಾಯಣ ಮಾಡಿದರೆ ಸರ್ವೋತ್ತಮ. ಇಲ್ಲದಿದ್ದರೆ ದಿನಕ್ಕೆ ಒಂಭತ್ತು ಅಧ್ಯಾಯಗಳಂತೆ ಎರಡು ದಿನಗಳಲ್ಲಾಗಲಿ, ಆರು ಅಧ್ಯಾಯಗಳಂತೆ ಮೂರು ದಿನಗಳಲ್ಲಾಗಲಿ, ಇಲ್ಲ (ಮೊದಲನೆಯ ದಿನ ಒಂದು, ಎರಡನೆಯ ಅಧ್ಯಾಯಗಳು; ಎರಡನೆಯ ದಿನ ಮೂರು, ನಾಲ್ಕು, ಐದನೆಯ ಅಧ್ಯಾಯಗಳು; ಮೂರನೆಯ ದಿನ ಆರರಿಂದ ಎಂಟನೆಯ ಅಧ್ಯಾಯದವರೆಗೆ; ನಾಲ್ಕನೆಯ ದಿನ ಒಂಭತ್ತು, ಹತ್ತನೆಯ ಅಧ್ಯಾಯಗಳು; ಐದನೆಯ ದಿನ ಹನ್ನೊಂದರಿಂದ ಹದಿಮೂರನೆಯ ಅಧ್ಯಾಯದವರೆಗೆ; ಆರನೆಯ ದಿನ ಹದಿನಾಲ್ಕರಿಂದ ಹದಿನಾರು ಹಾಗು ಏಳನೆಯ ದಿನ ಕೊನೆಯ ಎರಡು ಅಧ್ಯಾಯಗಳು) ಈ ಪ್ರಕಾರವಾಗಿ ಏಳು ದಿನಗಳಲ್ಲಾಗಲಿ, ಇಲ್ಲ ದಿನಕ್ಕೆ ಎರಡು ಅಧ್ಯಾಯಗಳಂತೆ ಒಂಭತ್ತು ದಿನಗಳಲ್ಲಿ ಪೂರ್ತಿ ಪಾರಾಯಣ ಮಾಡಬೇಕು. ಹಾಗಾಗದಿದ್ದರೆ ದಿನಕ್ಕೆ ಒಂದು ಅಧ್ಯಾಯದಂತೆ ಹದಿನೆಂಟು ದಿನಗಳಲ್ಲಿ ಪೂರ್ತಿ ಪಾರಾಯಣ ಮಾಡಬೇಕು.

ನಂ. ೨ ಯಂತ್ರ




* ಯಾವ ಯಾವ ಕೋರಿಕೆ ಸಫಲವಾಗಲು ಯಾವ ಗೀತಾಶ್ಲೋಕವನ್ನು ಎಷ್ಟು ಸಾವಿರ ಜಪಿಸಬೇಕೆನ್ನುವುದು ಈ ಭಾಗದ ಕೊನೆಯಲ್ಲಿ ಕೊಡಲಾಗಿದೆ.

ಪಾರಾಯಣದ ಪ್ರಾರಂಭದಲ್ಲಿ ಭಗವಂತನಾದ ಶ್ರೀಕೃಷ್ಣನನ್ನು ಮತ್ತು ಕೆಳಕಂಡ ಷಟ್ಕೋಣ ಯಂತ್ರವನ್ನು (ನಂ.೨) ವಿಧಿಪೂರ್ವಕವಾಗಿ ಪೂಜಿಸಬೇಕು. ಯಂತ್ರವನ್ನು ತಾಮ್ರ ಫಲಕದ ಮೇಲೆ ಬರೆಯಿಸಿ ಪವಿತ್ರವಾಗಿರಿಸಬೇಕು. ಇಲ್ಲವೆ ಚದರವಾದ ಗಂಧದ ಫಲಕದ ಮೇಲೆ ಕೆಂಪು ಚಂದನದಿಂದ ದಾಳಿಂಬೆ ಕಡ್ಡಿಯಿಂದ ಬರೆಯಬೇಕು.

ನಂ. ೩ ಯಂತ್ರ

| | | |
|---|---|---|
| ಕೃಷ್ಣ | ಕೃಷ್ಣ | ಕೃಷ್ಣ |
| ಕೃಷ್ಣ | ಕ್ಲೀಂ ಕೃಷ್ಣಾಯ ನಮಃ | ಕೃಷ್ಣ |
| ಕೃಷ್ಣ | ಕೃಷ್ಣ | ಕೃಷ್ಣ |

ನಂ. ೪ ಯಂತ್ರ




ಶ್ರೀ ಮದ್ಭಗವದ್ಗೀತೆಯ ಪೂರ್ತಿ ಪಾರಾಯಣವನ್ನು ಪ್ರತಿದಿನ ತಪ್ಪದೆ, ಒಂದು ವರ್ಷದವರೆಗೆ ಮಾಡಿದಲ್ಲಿ ಪ್ರತಿಯೊಂದು ಕಾರ್ಯವೂ ಸಿದ್ಧಿಸುವುದು. ಮತ್ತೆ ಮೇಲೆ ಕೊಟ್ಟಿರುವ ನವಕೋಷ್ಠಕ ಯಂತ್ರವನ್ನು (ನಂ.೩) ತಾಮ್ರಫಲಕದ ಮೇಲೆ ಅಥವಾ ಗಂಧದ ಫಲಕದ ಮೇಲೆ ಬರೆದು ಪೂಜಿಸಬೇಕು. ಪಾರಾಯಣವು ಪೂರ್ತಿಯಾದ ನಂತರ ಪ್ರತಿನಿತ್ಯವೂ **'ಕ್ಲೀಂ ಕೃಷ್ಣಾಯ ನಮಃ'** ಎಂದು ಮೂರುಸಾವಿರ ಜಪ ಮಾಡಬೇಕು.

ಭಗವಂತ ಶ್ರೀಕೃಷ್ಣನ ಪ್ರತ್ಯಕ್ಷ ಕೃಪೆಯನ್ನು ಹೊಂದಲು ಮೇಲೆ ಕೊಟ್ಟಿರುವ ಯಂತ್ರ (ನಂ.೪)ವನ್ನು ಪೂಜಿಸಬೇಕು.

ಈ ಯಂತ್ರವನ್ನು ತಾಮ್ರ ಫಲಕದ ಮೇಲಾಗಲಿ, ಶ್ರೀಗಂಧದ ಫಲಕದ ಮೇಲಾಗಲಿ ಶುದ್ಧವಾಗಿ ಬರೆದು ಪ್ರತಿದಿನವೂ ಅದನ್ನು ಪೂಜಿಸುತ್ತಾ ಪಾರಾಯಣ ವಿಧಿಯನ್ನು ಅನುಸರಿಸಿ ಗೀತೆಯ ಪೂರ್ತಿ ಪಾರಾಯಣವನ್ನು ಪ್ರತಿದಿನವೂ ಮಾಡಬೇಕು. ಮತ್ತೆ **'ಓಂ ಐಂ ಕ್ಲೀಂ ಹ್ರೀಂ ಶ್ರೀಂ ಕೃಷ್ಣಾಯ ಗೋಪೀಜನವಲ್ಲಭಾಯ ಸ್ವಾಹಾ'** ಎನ್ನುವ ಈ ಅಷ್ಟಾದಶ ಅಕ್ಷರ ಮಂತ್ರವನ್ನು ಪ್ರತಿದಿನವೂ (೧೧೦೦) ಒಂದು ಸಾವಿರದ ಒಂದು ನೂರುಸಾರಿ ಜಪಿಸಬೇಕು. ಈ ಪ್ರಕಾರವಾಗಿ ಪ್ರತಿದಿನವೂ ತಪ್ಪದೆ ಮೂರು ವರ್ಷಗಳ ಕಾಲ ಪಾರಾಯಣ ಮತ್ತು ಜಪ ಮಾಡಿದಲ್ಲಿ ಪ್ರತ್ಯಕ್ಷವಾಗಿ ಭಗವತ್ಕೃಪೆ ಲಭಿಸುವುದು. ಮತ್ತೆ ಭಗವತ್ಸಾಕ್ಷಾತ್ಕಾರ ಸುಲಭವಾಗಿ ಲಭ್ಯವಾಗುವುದು.

ನಲವತ್ತು ದಿನಗಳವರೆಗೆ ಪ್ರತಿದಿನವೂ 'ಸಂಹಾರಕ್ರಮ'ದಲ್ಲಿ ಅಂದರೆ ೧೮ನೆಯ ಅಧ್ಯಾಯದಿಂದ ಪ್ರಾರಂಭಿಸಿ ಒಂದನೆಯ ಅಧ್ಯಾಯದವರೆಗೆ ಹಿಂದಿನಿಂದ ಮುಂದಕ್ಕೆ ತಲೆಕೆಳಗಾಗಿ ಮೂರುಸಾರಿ ಪಠಿಸುವುದರಿಂದ ಬಂಧವಿಮುಕ್ತಿಯಾಗುವುದು.

ಅದೇ ವಿಧವಾಗಿ 'ಸ್ಥಿತಿಕ್ರಮ'ದಲ್ಲಿ ೪೦ ದಿನಗಳು ಪ್ರತಿದಿನವೂ ಮೂರು ಸಾರಿ ಪಠಿಸುವುದರಿಂದ ಲಕ್ಷ್ಮಿ ಸಂಪ್ರಾಪ್ತವಾಗುವುದು. ೭ನೆಯ ಅಧ್ಯಾಯದಿಂದ ೧೮ನೆಯ ಅಧ್ಯಾಯದವರೆಗೆ, ತಿರುಗಿ ೬ನೆಯ ಅಧ್ಯಾಯದಿಂದ ೧ನೆಯ ಅಧ್ಯಾಯದವರೆಗೆ ಪಠಿಸುವುದನ್ನು ಸ್ಥಿತಿಕ್ರಮವೆಂದು ಕರೆಯಲ್ಪಡುವುದು.

೧ನೆಯ ಅಧ್ಯಾಯದಿಂದ ೧೮ನೆಯ ಅಧ್ಯಾಯದವರೆಗೆ ಪಠಿಸುವುದನ್ನು 'ಸೃಷ್ಟಿಕ್ರಮ'ವೆಂದು ಕರೆಯುವರು. ಇದೂ ಸಹ ಶ್ರೇಷ್ಠವಾದುದು. ಮನೋರಥಗಳನ್ನು ಈಡೇರಿಸುವುದು.

ಸಮಸ್ತ ಅಭೀಷ್ಟಗಳ ಸಿದ್ಧಿಗಾಗಿ **'ಯತ್ರಯೋಗೇಶ್ವರಃ ಕೃಷ್ಣೋ'** (೧೮-೭೮) ಎನ್ನುವ ಮಂತ್ರವನ್ನು ಸಂಪುಟ ಮಾಡಿಕೊಂಡು ಜಪಿಸಬೇಕು. ಮತ್ತೆ ಸರ್ವರೋಗಶಮನಕ್ಕೋಸ್ಕರ ಈ ಮಂತ್ರವನ್ನು ಸಂಪುಟಮಾಡಿ ೧೦ನೆಯ ಅಧ್ಯಾಯವನ್ನು ಪಾರಾಯಣ ಮಾಡಬೇಕು. ಊಟದ ಸಮಯದಲ್ಲಿ ಪ್ರತಿದಿನ ೧೫ನೆಯ ಅಧ್ಯಾಯವನ್ನು ಪಠಿಸುವುದು ಬಹಳ ಉತ್ತಮ.

ಜಪವಾದನಂತರ ಮಾಡಬೇಕಾದ ಕ್ಷಮಾಪ್ರಾರ್ಥನಾ ಶ್ಲೋಕಗಳು ಯಾವುವು ಹೇಳಲ್ಪಟ್ಟಿವೆಯೋ ಅವುಗಳನ್ನು ಪಾರಾಯಣದ ನಂತರವೂ ಪಠಿಸಿ ಕ್ಷಮಾಯಾಚನೆ ಮಾಡಿ ಚರಣೋದಕವನ್ನು ಸ್ವೀಕರಿಸಬೇಕು. ಪೂರ್ಣಶ್ರದ್ಧೆ, ಅಚಂಚಲ ವಿಶ್ವಾಸವಿಟ್ಟು ವಿಧಿ ಪ್ರಕಾರ ಚೆನ್ನಾಗಿ ಅನುಷ್ಠಿಸಿದಲ್ಲಿ ಅವಶ್ಯವಾಗಿ ಸಿದ್ಧಿ ಉಂಟಾಗುವುದು. ಯಾವ ಕಾರ್ಯವೂ ಪರಿಣಾಮವಿಲ್ಲದೆ ಇರುವುದಿಲ್ಲ; ನಿಷ್ಫಲವಾಗುವುದಿಲ್ಲ. ಹಾಗಿರಬೇಕಾದರೆ ಸಂಯಮ ಹಾಗೂ ನಿಯಮಗಳಿಂದ ಮಾಡಲ್ಪಟ್ಟ ಭಗವದ್ಗೀತಾ ಪಾರಾಯಣದ ವಿಷಯವನ್ನು ಬೇರೆ ಹೇಳಬೇಕೆ? ಆದ್ದರಿಂದ ಎಷ್ಟು ಪ್ರತಿಬಂಧಗಳುಂಟಾದರೂ ಗೀತಾಮಂತ್ರ ಜಪವನ್ನು ಬಿಡಬಾರದು. ಅದರ ಮೇಲಿನ ಶ್ರದ್ಧಾವಿಶ್ವಾಸಗಳನ್ನು ಸಡಲಿಸಬಾರದು. ಗೀತೆಯ ಅಧ್ಯಯನ, ಮನನ ಹಾಗೂ ಜಪಗಳಿಂದ ಲೌಕಿಕ ಮತ್ತು ಪಾರಮಾರ್ಥಿಕ ಫಲಗಳೆರಡೂ ಸಿದ್ಧಿಸುವುವು. ಯಾವ ಯಾವ ಶ್ಲೋಕವು ಎಷ್ಟು ಸಾವಿರ ಜಪಿಸಿದರೆ ಯಾವ ಯಾವ ಫಲಿತವು ಲಭಿಸುವುದೆನ್ನುವ ವಿಷಯವನ್ನು ಈ ಕೆಳಗೆ ಕೊಡಲಾಗಿದೆ. ಪ್ರಥಮವಾಗಿ ಲೌಕಿಕ ಫಲಿತಗಳ ವಿಷಯವನ್ನು, ನಂತರ ಪಾರಮಾರ್ಥ ಫಲಗಳ ವಿಷಯವನ್ನು ವಿವರಿಸಲಾಗಿದೆ.

# ಗೀತೆಯ ಲೌಕಿಕ ಫಲಗಳು

ಲೌಕಿಕ ಫಲಗಳು ಕೈಗೂಡಲು ಈ ಕೆಳಗೆ ಕೆಲವು ಗೀತೆಯ ಶ್ಲೋಕಗಳನ್ನು (ಮಂತ್ರಗಳನ್ನು) ಕೊಡಲಾಗಿದೆ. ಇಲ್ಲಿ ಕೆಲವು ಕಡೆ ಒಂದೊಂದು ಫಲದ ಕೆಳಗೆ ಅನೇಕ ಶ್ಲೋಕಗಳು ಸೂಚಿಸಲ್ಪಟ್ಟಿದ್ದರೂ, ಅವುಗಳಲ್ಲಿ ಯಾವ ಒಂದು ಮಂತ್ರವನ್ನಾದರೂ ವಿಧಿ ಪ್ರಕಾರವಾಗಿ ಶ್ರದ್ಧೆ, ಭಕ್ತಿಗಳೊಂದಿಗೆ ಜಪಿಸಿದಲ್ಲಿ ಫಲವು ತಪ್ಪದೆ ಉಂಟಾಗುವುದು. ಯಾವ ಯಾವ ಮಂತ್ರವನ್ನು ಎಷ್ಟು ಸಂಖ್ಯೆಯಲ್ಲಿ ಯಾವ ಮೂರ್ತಿಯನ್ನು ಧ್ಯಾನಿಸಿ ಎಷ್ಟು ದಿನಗಳಲ್ಲಿ ಪೂರ್ತಿಮಾಡಬೇಕೆನ್ನುವುದನ್ನು ಇಲ್ಲಿ ವಿವರವಾಗಿ ತಿಳಿಸಲಾಗಿದೆ. ಆ ಪ್ರಕಾರವಾಗಿ ಮಾಡಿಕೊಳ್ಳಬಹುದು. ಆದರೆ ಸಕಾಮಕರ್ಮ, ಫಲಾಸಕ್ತಿಯಿಂದ ಕೂಡಿದ ಗೀತಾಪಠನ ಅಷ್ಟು ಶ್ರೇಷ್ಠವಾದುದಲ್ಲ. **'ಕೃಪಣಾಃ ಫಲ ಹೇತವಃ'**- 'ಫಲವನ್ನು ಕೋರುವವರು ಅಲ್ಪರು' ಎಂದು ಭಗವಂತನು ಗೀತೆಯಲ್ಲಿ ತಿಳಿಸಿಯೇ ಇದ್ದಾನೆ. ಆದ್ದರಿಂದ ಕ್ರಮಕ್ರಮವಾಗಿ ಮನುಜನು ನಿಷ್ಕಾಮ ಕರ್ಮದಲ್ಲಿ, ಭಗವತ್ಪ್ರೀತ್ಯರ್ಥ ಕರ್ಮಗಳಲ್ಲಿ ಫಲಾಭಿಸಂಧಿರಹಿತವಾದ ಅನುಷ್ಠಾನದೊಳಗೆ ಪ್ರವೇಶಿಸುವುದು ಶ್ರೇಯಸ್ಕರ. ಗೀತಾಶ್ಲೋಕಗಳ ಮಹತ್ತರ ಮಂತ್ರ ಶಕ್ತಿಯನ್ನು ನಿರೂಪಿಸುವುದಕ್ಕೆ, ಸಾಮಾನ್ಯ ಜನರಿಗೆ ಗೀತೆಯಲ್ಲಿ ಆಸಕ್ತಿ ಹುಟ್ಟಿಸುವಂತೆ ಮಾಡಲು (ಪ್ರವೇಶಕ್ಕೆ ದಾರಿ ಮಾಡಿಕೊಡಲು) ಮಾತ್ರವೇ ಈ ಲೌಕಿಕ ಫಲಗಳನ್ನು ಇಲ್ಲಿ ಕೊಡಲಾಗಿದೆ. ಆದ್ದರಿಂದ ಅವುಗಳನ್ನೇ ಜೀವಿತ ಚರಮ ಲಕ್ಷ್ಯಗಳೆಂದು ಯಾರೂ ಭಾವಿಸಬಾರದು. ನಿಷ್ಕಾಮ ಭಾವನೆಯಿಂದ ಗೀತೆಯನ್ನು ಪಠಿಸುತ್ತಾ ಅನುಷ್ಠಾನ ಮಾಡುವುದೇ ಸರ್ವಶ್ರೇಷ್ಠ. ಹಾಗೆ ಮಾಡುವವನಿಗೆ ಅಂತಃಕರಣ ಶುದ್ಧಿಯಾಗಿ, ಭಗವತ್ಪ್ರಾಪ್ತಿಯು ಲಭಿಸುವುದು.

೧. ಕಾರ್ಯಸಿದ್ಧಿ

(೧) ಮಂತ್ರ

**ಧರ್ಮಕ್ಷೇತ್ರೇ ಕುರುಕ್ಷೇತ್ರೇ ಸಮವೇತಾ ಯುಯುತ್ಸವಃ**
**ಮಾಮಕಾಃ ಪಾಂಡವಾಶ್ಚೈವ ಕಿಮಕುರ್ವತ ಸಂಜಯ** (೧-೧)

ಜಪಿಸಬೇಕಾದ ಸಂಖ್ಯೆ - ೨೫ ಸಾವಿರ. ಈ ಸಂಖ್ಯೆ ಎಷ್ಟು ದಿನಗಳಲ್ಲಿ ಪೂರ್ತಿ ಮಾಡಬೇಕು ? ೨೧ ದಿನಗಳು; ಯಾವ ರೂಪದಲ್ಲಿ ಧ್ಯಾನಿಸಬೇಕು? - ಪಾರ್ಥಸಾರಥಿ; ಫಲ - ಕಾರ್ಯಸಿದ್ಧಿ

(೨) ಮಂತ್ರ

**ಏವಂ ಬುದ್ಧೇಃ ಪರಂ ಬುದ್ಧ್ವಾ ಸಂಸ್ತಭ್ಯಾತ್ಮಾನ ಮಾತ್ಮನಾ**
**ಜಹಿಶತ್ರುಂ ಮಹಾಬಾಹೋ ಕಾಮರೂಪಂ ದುರಾಸದಮ್** (೩-೪೩)

ಜಪಿಸಬೇಕಾದ ಸಂಖ್ಯೆ - ೪೧ ಸಾವಿರ; ಜಪಕಾಲ-೨೧ ದಿನಗಳು ಧ್ಯಾನಮೂರ್ತಿ-ಗೋಪಾಲಕೃಷ್ಣ; ಫಲ-ಕಾರ್ಯಸಿದ್ಧಿ.

(೩) ಮಂತ್ರ

**ಯತ್ಕರೋಷಿ ಯದಶ್ನಾಸಿ ಯಜ್ಜುಹೋಷಿ ದದಾಸಿ ಯತ್**
**ಯತ್ತಪಸ್ಯಸಿ ಕೌಂತೇಯ ತತ್ಕುರುಷ್ವ ಮದರ್ಪಣಮ್** (೯.೨೭)

ಜಪಿಸಬೇಕಾದ ಸಂಖ್ಯೆ- ೧½ ಲಕ್ಷ; ಜಪಕಾಲ-೫೦ ದಿನಗಳು; ಧ್ಯಾನಮೂರ್ತಿ-ಪಾರ್ಥಸಾರಥಿ; ಫಲ-ಕಾರ್ಯಸಿದ್ಧಿ.

(೪) ಮಂತ್ರ

**ಜ್ಞೇಯಂ ಯತ್ತತ್ಪ್ರವಕ್ಷ್ಯಾಮಿ ಯಜ್ಞಾತ್ವಾಮೃತಮಶ್ನುತೇ**
**ಅನಾದಿಮತ್ಪರಂ ಬ್ರಹ್ಮ ನ ಸತ್ತನ್ನಾಸದುಚ್ಯತೇ** (೧೩-೧೩)

ಜಪಸಂಖ್ಯೆ-೫ಲಕ್ಷ; ಜಪಕಾಲ- ೧೫೦ ದಿನಗಳು; ಧ್ಯಾನಮೂರ್ತಿ-ಪಾರ್ಥಸಾರಥಿ; ಫಲ- ಕಾರ್ಯಸಿದ್ಧಿ.

ಈ ಮಂತ್ರವನ್ನೇ ಸಂಪುಟ ಪದ್ಧತಿ*ಯಲ್ಲಿ ೫೧ ಸಾರಿ ಜಪಿಸಿದರೂ ಕಾರ್ಯಸಿದ್ಧಿಯಾಗುವುದು.

(೫) ಮಂತ್ರ

**ಸರ್ವತಃ ಪಾಣಿಪಾದಂ ತತ್ಸರ್ವತೋಽಕ್ಷಿ ಶಿರೋಮುಖಮ್**
**ಸರ್ವತಃ ಶ್ರುತಿಮಲ್ಲೋಕೇ ಸರ್ವಮಾವೃತ್ಯ ತಿಷ್ಠತಿ** (೧೩-೧೪)

ಜಪಸಂಖ್ಯೆ-೨೫ ಸಾವಿರ; ಜಪಕಾಲ-೨೫ ದಿನ; ಧ್ಯಾನಮೂರ್ತಿ, ಪಾರ್ಥಸಾರಥಿ; ಫಲ-ಕಾರ್ಯಸಿದ್ಧಿ.

(೬) ಮಂತ್ರ

**ಸರ್ವಧರ್ಮಾನ್ ಪರಿತ್ಯಜ್ಯ ಮಾಮೇಕಂ ಶರಣಂ ವ್ರಜ**
**ಅಹಂ ತ್ವಾ ಸರ್ವಪಾಪೇಭ್ಯೋ ಮೋಕ್ಷಯಿಷ್ಯಾಮಿ ಮಾ ಶುಚಃ** (೧೮-೬೬)

ಈ ಮಂತ್ರವನ್ನು ಸಂಪುಟ ರೀತಿಯಲ್ಲಿ (೧೫೧) ಸಾರಿ ಜಪಿಸಿದಲ್ಲಿ ಸರ್ವಕಾರ್ಯಗಳು ಸಿದ್ಧಿಸುವುವು.

**II ರೋಗನಾಶ**

(೧) ಮಂತ್ರ

**ಕುತಸ್ತ್ವಾ ಕಶ್ಮಲಮಿದಂ ವಿಷಮೇ ಸಮುಪಸ್ಥಿತಂ**
**ಅನಾರ್ಯಜುಷ್ಟಮಸ್ವರ್ಗ್ಯ ಮಕೀರ್ತಿಕರಮರ್ಜುನ** (೭-೨)

ಜಪಸಂಖ್ಯೆ- ೨೫ ಸಾವಿರ; ಜಪಕಾಲ=೧೧ದಿನ, ಧ್ಯಾನಮೂರ್ತಿ-ಪಾರ್ಥಸಾರಥಿ; ಫಲ=ರೋಗ ನಾಶ

ಈ ಮಂತ್ರವನ್ನು ಸಂಪುಟ ಪದ್ಧತಿಯಲ್ಲಿ ೧೦೦ ಸಾರಿ ಜಪಿಸಿದರೂ. ರೋಗಗಳು ಶಮನ ಹೊಂದುವುವು.

(೨) ಮಂತ್ರ

**ಮತ್ತಃ ಪರತರಂ ನಾನ್ಯತ್ಕಿಂಚಿ ದಸ್ತಿ ಧನಂಜಯ**
**ಮಯಿ ಸರ್ವಮಿದಂ ಪ್ರೋತಂ ಸೂತ್ರೇ ಮಣಿಗಣಾ ಇವ** (೭-೭)

ಜಪಸಂಖ್ಯೆ: ೧½ ಲಕ್ಷ; ಜಪಕಾಲ-೭೫ ದಿನ; ಧ್ಯಾನಮೂರ್ತಿ-ಪಾರ್ಥಸಾರಥಿ; ಫಲ-ರೋಗ ನಾಶ

ಈ ಮಂತ್ರವನ್ನು ಸಂಪುಟ ಪದ್ಧತಿಯಲ್ಲಿ ೧೦೦ ಸಾರಿ ಜಪಿಸಿದರೆ ರೋಗ ವಿನಾಶವಾಗುವುದು.

---

* ಈ ಪದ್ಧತಿಯನ್ನು ೨೨ ನೆಯ ಪುಟದಲ್ಲಿ ಕೊಡಲಾಗಿದೆ.

**III ಸ್ವಪ್ನಸಿದ್ಧಿ**

(೧) ಮಂತ್ರ

**ಕಾರ್ಪಣ್ಯ ದೋಷಪಹತ ಸ್ವಭಾವಃ ಪೃಚ್ಛಾಮಿ ತ್ವಾಂ ಧರ್ಮಸಂಮೂಢ ಚೇತಾಃ**
**ಯಚ್ಛ್ರೇಯಸ್ಯಾ ನ್ನಿಶ್ಚಿತಂ ಬ್ರೂಹಿ ತನ್ಮೇ ಶಿಷ್ಯಸ್ತೇಽಹಂ ಶಾಧಿ ಮಾಂ ತ್ವಾಂ ಪಪನ್ನಮ್** (೨-೭)

ಜಪಸಂಖ್ಯೆ-೫೧ ಸಾವಿರ; ಜಪಕಾಲ-೨೧ ದಿನಗಳು ಧ್ಯಾನ ಮೂರ್ತಿ-ಪಾರ್ಥಸಾರಥಿ; ಫಲಿತ-ಸ್ವಪ್ನಸಿದ್ಧಿ.

ಈ ಮಂತ್ರವನ್ನು ಸಂಪುಟ ಪದ್ಧತಿಯಲ್ಲಿ ೫೧ ಸಾರಿ ಜಪಿಸಿದರೆ ಸ್ವಪ್ನಸಿದ್ಧಿ ಕೈಗೂಡುತ್ತದೆ.

(೨) ಮಂತ್ರ

**ವ್ಯಾಮಿಶ್ರೇಣೇವ ವಾಕ್ಯೇನ ಬುದ್ಧಿಂ ಮೋಹಯಸೀವ ಮೇ**
**ತದೇಕಂ ವದ ನಿಶ್ಚಿತ್ಯ ಏನ ಶ್ರೇಯೋಽಹಮಾಽಪ್ನುಯಾಮ್।** (೩-೨)

ಜಪಸಂಖ್ಯೆ ೧೧ ಸಾವಿರ; ಜಪಕಾಲ-೧೧ ದಿನಗಳು, ಧ್ಯಾನ ಮೂರ್ತಿ=ಪಾರ್ಥಸಾರಥಿ, ಫಲ=ಸ್ವಪ್ನಾದೇಶ

**IV ವಿಪತ್ತು ಹರಣ**

(೧) ಮಂತ್ರ

**ಲೋಕೇಽಸ್ಮಿನ್ ದ್ವಿವಿಧಾ ನಿಷ್ಠಾ ಪುರಾಪ್ರೋಕ್ತಾ ಮಯಾಽನಘ**
**ಜ್ಞಾನಯೋಗೇನ ಸಾಂಖ್ಯಾನಾಂ ಕರ್ಮಯೋಗೇನ ಯೋಗಿನಾಮ್** (೩-೩)

ಜಪಸಂಖ್ಯೆ=೧,೨೫ ಸಾವಿರ; ಜಪಕಾಲ=೪೧ ದಿನಗಳು; ಧ್ಯಾನಮೂರ್ತಿ ಪಾರ್ಥಸಾರಥಿ; ಫಲ=ವಿಪತ್ತುಗಳು ತೊಲಗುವುವು.

ಈ ಮಂತ್ರವನ್ನು ಸಂಪುಟ ಪದ್ಧತಿಯಲ್ಲಿ ೧೦೦ ಸಾರಿ ಜಪಿಸಿದರೂ ವಿಪತ್ತುಗಳು ತೊಲಗುವುವು.

(೨) ಮಂತ್ರ

**ಭೋಕ್ತಾರಂ ಯಜ್ಞತಪಸಾಂ ಸರ್ವಲೋಕಮಹೇಶ್ವರಮ್**
**ಸುಹೃದಂ ಸರ್ವಭೂತಾನಾಂ ಜ್ಞಾತ್ವಾ ಮಾಂ ಶಾಂತಿಮೃಚ್ಛತಿ** (೫-೨೯)

ಜಪಸಂಖ್ಯೆ=೪೩ ಸಾವಿರ; ಜಪಕಾಲ=೨೧ ದಿನಗಳು;
ಧ್ಯಾನಮೂರ್ತಿ= ಪಾರ್ಥಸಾರಥಿ; ಫಲ=ವಿಪತ್ತು ಹರಣ

**V. ಪೂರ್ವಜನ್ಮ ಜ್ಞಾನ**

(೧) ಮಂತ್ರ

**ಅಪರಂ ಭವತೋ ಜನ್ಮ ಪರಂ ಜನ್ಮ ವಿವಸ್ವತಃ**
**ಕಥಮೇತಾ ದ್ವಿಜಾನೀಯಾಂ ತ್ವಮಾದೌ ಪ್ರೋಕ್ತವಾನಿತಿ** (೪-೪)

ಜಪಸಂಖ್ಯೆ=೫ ಲಕ್ಷ; ಜಪಕಾಲ=೧೫೦ ದಿನಗಳು
ಧ್ಯಾನಮೂರ್ತಿ=ಪಾರ್ಥಸಾರಥಿ; ಫಲ=ಪೂರ್ವಜನ್ಮಜ್ಞಾನ ಸಿದ್ಧಿ

ಈ ಮಂತ್ರವನ್ನು ಸಂಪುಟ ಪದ್ಧತಿಯಲ್ಲಿ ೧೫೦ ಸಾರಿ ಜಪಿಸಿದ್ದರೂ ಮೇಲೆ ತಿಳಿಸಿದ ಫಲಗಳು ಕೈಗೂಡುವುವು.

(೨) ಮಂತ್ರ

**ಬಹೂನಿ ಮೇ ವ್ಯತೀತಾನಿ ಜನ್ಮಾನಿ ತವ ಚಾರ್ಜುನ**
**ತಾನ್ಯಹಂ ವೇದಸರ್ವಾಣಿ ನ ತ್ವಂ ವೇತ್ಥ ಪರಂತಪ** (೪-೫)

ಜಪಸಂಖ್ಯೆ=೬ ಲಕ್ಷ; ಜಪಕಾಲ=೫೧ ದಿನಗಳು
ಧ್ಯಾನಮೂರ್ತಿ=ಪಾರ್ಥಸಾರಥಿ; ಫಲ=ಪೂರ್ವಜನ್ಮಜ್ಞಾನ ಸಿದ್ಧಿಸುವುದು

**VI. ಧನಪ್ರಾಪ್ತಿ**

(೧) ಮಂತ್ರ

**ಯತ್ಸಾಂಖ್ಯೈಃ ಪ್ರಾಪ್ಯತೇ ಸ್ಥಾನಂ ತದ್ಯೋಗೈರಪಿ ಗಮ್ಯತೇ**
**ಏಕಂ ಸಾಂಖ್ಯಂ ಚ ಯೋಗಂ ಚ ಯಃ ಪಶ್ಯತಿ ಸ ಪಶ್ಯತಿ** (೫-೫)

ಜಪಸಂಖ್ಯೆ=೪೦ ಸಾವಿರ; ಜಪಕಾಲ=೩೧ ದಿನಗಳು
ಧ್ಯಾನಮೂರ್ತಿ= ಪಾರ್ಥಸಾರಥಿ; ಫಲ ಆಕಸ್ಮಿಕ ದ್ರವ್ಯಪ್ರಾಪ್ತಿ.

ಈ ಮಂತ್ರವನ್ನು ಸಂಪುಟವನ್ನಾಗಿ ಮಾಡಿಕೊಂಡು ೫೧ ಸಾರಿ ಮಾಡಿದರೂ ಮೇಲಿನ ಫಲವು ಲಭಿಸಬಲ್ಲದು.

(೨) ಮಂತ್ರ

**ವಕ್ತುಮರ್ಹಸ್ಯಶೇಷೇಣ ದಿವ್ಯಾ ಹ್ಯಾತ್ಮವಿಭೂತಯಃ**
**ಯಾಭಿರ್ವಿಭೂತಿಭಿರ್ಲೋಕಾನಿಮಾಂಸ್ತ್ವಂ ವ್ಯಾಪ್ಯ ತಿಷ್ಠಸಿ**(೧೦-೧೬)

ಜಪಸಂಖ್ಯೆ- ೩೬ ಸಾವಿರ; ಜಪಕಾಲ=೩೧ ದಿನಗಳು
ಧ್ಯಾನಮೂರ್ತಿ=ಪಾರ್ಥಸಾರಥಿ; ಫಲ=ಲಕ್ಷ್ಮೀಪ್ರಾಪ್ತಿ

(೩) ಮಂತ್ರ

**ಅನೇಕ ಬಾಹೂದರ ವಕ್ತ್ರನೇತ್ರಂ**
**ಪಶ್ಯಾಮಿ ತ್ವಾಂ ಸರ್ವತೋಽನಂತರೂಪಂ**
**ನಾಂತಂ ನ ಮಧ್ಯಂ ನಪುನಸ್ತವಾದಿಂ**
**ಪಶ್ಯಾಮಿ ವಿಶ್ವೇಶ್ವರ ವಿಶ್ವರೂಪ!!** (೧೧-೧೬)

ಜಪಸಂಖ್ಯೆ=೧೩ ಸಾವಿರ; ಜಪಕಾಲ=೧೫ ದಿನಗಳು
ಧ್ಯಾನಮೂರ್ತಿ=ಪಾರ್ಥಸಾರಥಿ; ಫಲ=ಧನಪ್ರಾಪ್ತಿ

(೪) ಮಂತ್ರ

**ಯ ಚ್ಚಾವಹಾಸಾರ್ಥ ಮಸತ್ಕೃತೋಽಸಿ**
**ವಿಹಾರ ಶಯ್ಯಾಸನ ಭೋಜನೇಷು**
**ಏಕೋಽಥವಾ ಪ್ಯಚ್ಯುತ ತತ್ಸಮಕ್ಷಂ**
**ತತ್ಕ್ಷಾಮಯೇ ತ್ವಾಮಹ ಮಪ್ರಮೇಯಂ** (೧೧-೪೨)

ಜಪಸಂಖ್ಯೆ=೧½ ಲಕ್ಷ; ಜಪಕಾಲ=೫೦ ದಿನಗಳು
ಧ್ಯಾನಮೂರ್ತಿ=ಪಾರ್ಥಸಾರಥಿ; ಫಲ=ಲಕ್ಷ್ಮೀಪ್ರಾಪ್ತಿ

ಈ ಮಂತ್ರವನ್ನು ಸಂಪುಟ ಪದ್ಧತಿಯಲ್ಲಿ ೧೦೦ ಸಾರಿ ಜಪಿಸಿದರೂ ಮೇಲಿನ ಫಲವು ಕೈಗೂಡುವುದು.

(೫) ಮಂತ್ರ

**ಅದೃಷ್ಟಪೂರ್ವಂ ಹೃಷಿತೋಽಸ್ಮಿ ದೃಷ್ಟ್ವಾ**
**ಭಯೇನ ಚ ಪ್ರವ್ಯಥಿತಂ ಮನೋ ಮೇ**
**ತದೇವ ಮೇ ದರ್ಶಯ ದೇವರೂಪಂ**
**ಪ್ರಸೀದ ದೇವೇಶ ಜಗನ್ನಿವಾಸ** (೧೧-೪೫)

ಜಪಸಂಖ್ಯೆ=೧½ ಲಕ್ಷ; ಜಪಕಾಲ=೫೦ ದಿನಗಳು;
ಧ್ಯಾನಮೂರ್ತಿ=ಪಾರ್ಥಸಾರಥಿ; ಫಲ= ಐಶ್ವರ್ಯಪ್ರಾಪ್ತಿ

ಈ ಮಂತ್ರವನ್ನು ಸಂಪುಟ ರೀತಿಯಲ್ಲಿ ೧೦೦ ಸಾರಿ ಜಪಿಸಿದರೆ ಉಪರ್ಯುಕ್ತ ಫಲವು ಸಿದ್ಧಿಸುವುದು.

೧೧ನೆಯ ಅಧ್ಯಾಯದ ಈ ಕೆಳಗಿನ ಮಂತ್ರಗಳನ್ನು ಇದೇ ಸಂಖ್ಯೆ ಹಾಗು ಇದೇ ಪದ್ಧತಿಯಲ್ಲಿ ಜಪಿಸಿದರೂ ಒಂದೊಂದಕ್ಕೂ ಇಂಥಹ ಫಲವೇ ಕೈಗೂಡುವುದು.

a. **ಮಾತೇ ವ್ಯಥಾ ಮಾ ಚ ವಿಮೂಢಭಾವೋ**
**ದೃಷ್ಟ್ವಾ ರೂಪಂ ಘೋರ ಮೀದೃಙ್ಮಮೇದಂ**
**ವ್ಯಪೇತಭೀಃ ಪ್ರೀತಮನಾಃ ಪುನಸ್ತ್ವಂ**
**ತದೇವ ಮೇ ರೂಪ ಮಿದಂ ಪ್ರಪಶ್ಯ** (೧೧-೪೯)

b. **ಇತ್ಯರ್ಜುನಂ ವಾಸುದೇವಸ್ತಥೋಕ್ತ್ವಾ**
**ಸ್ವಕಂ ರೂಪಂ ದರ್ಶಯಾಮಾಸ ಭೂಯಃ**
**ಆಶ್ವಾಸಯಾಮಾಸ ಚ ಭೀತಮೇನಂ**
**ಭೂತ್ವಾ ಪುನ ಸೌಮ್ಯವಪು ರ್ಮಹಾತ್ಮಾ** (೧೧-೫೦)

c. **ದೃಷ್ಟ್ವೇದಂ ಮಾನುಷಂ ರೂಪಂ**
**ತವ ಸೌಮ್ಯಂ ಜನಾರ್ಧನ**
**ಇದಾನೀಮಸ್ಮಿ ಸಂವೃತ್ತಸ್ಸಚೇತಾಃ ಪ್ರಕೃತಿಂ ಗತಃ** (೧೧-೫೧)

d. **ಸುದುರ್ದಶಮಿದಂ ರೂಪಂ ದೃಷ್ಟವಾನಸಿ ಯನ್ಮಮ**
**ದೇವಾ ಅಪ್ಯಸ್ಯ ರೂಪಸ್ಯ ನಿತ್ಯಂ ದರ್ಶನಕಾಂಕ್ಷಿಣಃ** (೧೧-೫೨)

e. **ನಾಹಂ ವೇದೈರ್ನ ತಪಸಾ ನ ದಾನೇನ ನ ಚೇಜ್ಯಯಾ**
**ಶಕ್ಯ ಏವಂವಿಧೋ ದ್ರಷ್ಟುಂ ದೃಷ್ಟವಾನಸಿ ಮಾಂ ಯಥಾ** (೧೧-೫೩)

(೬) ಮಂತ್ರ

**ನಮಃ ಪುರಸ್ತಾದಥ ಪೃಷ್ಠತಸ್ತೇ**
**ನಮೋಽಸ್ತುತೇ ಸರ್ವತ ಏವ ಸರ್ವ........................**
**ಅನಂತವೀರ್ಯಾಮಿತ ವಿಕ್ರಮಸ್ತ್ವಂ**
**ಸರ್ವಂ ಸಮಾಪ್ನೋಷಿ ತತೋಽಸಿ ಸರ್ವಃ** (೧೧-೪೦)

ಜಪಸಂಖ್ಯೆ=೧$^{1}/_{3}$ ಲಕ್ಷ; ಜಪಕಾಲ= ೫೦ ದಿನಗಳು;
ಧ್ಯಾನಮೂರ್ತಿ=ಪಾರ್ಥಸಾರಥಿ; ಫಲ=ದಾರಿದ್ರ್ಯನಾಶ

**VII ಶತ್ರುಗಳ ಮೇಲೆ ವಿಜಯ:**

(೧) ಮಂತ್ರ

**ಬಂಧುರಾತ್ಮಾತ್ಮನಸ್ತಸ್ಯ ಏನಾತ್ಮೈವಾತ್ಮನಾ ಜಿತಃ**
**ಅನಾತ್ಮನಸ್ತು ಶತ್ರುತ್ವೇ ವರ್ತೇತಾತ್ಮೈವ ಶತ್ರುವತ್** (೬-೬)

ಜಪಸಂಖ್ಯೆ=೨೧ ಸಾವಿರ; ಜಪಕಾಲ=೨೧ ದಿನಗಳು
ಧ್ಯಾನಮೂರ್ತಿ=ಪಾರ್ಥಸಾರಥಿ; ಫಲ=ಶತ್ರುಗಳ ಮೇಲೆ ವಿಜಯ

೨) ಮಂತ್ರ

I **ಶನೈಶ್ಶನೈರುಪರಮೇ ದ್ಬುದ್ಧ್ಯಾ ಧೃತಿಗೃಹೀತಯಾ**
**ಆತ್ಮಸಂಸ್ಥಂ ಮನಃ ಕೃತ್ವಾ ನಕಿಂಚಿದಪಿ ಚಿಂತಯೇತ್** (೬-೨೫)

II **ಯತೋ ಯತೋ ನಿಶ್ಚರತಿ ಮನಶ್ಚಂಚಲ ಮಸ್ಥಿರಮ್**
**ತತಸ್ತತೋ ನಿಯಮ್ಯೈತದಾತ್ಮನ್ಯೇವ ವಶಂ ನಯೇತ್** (೬-೨೬)

ಜಪಸಂಖ್ಯೆ=೧೩ ಸಾವಿರ; ಜಪಕಾಲ=೨೬ ದಿನಗಳು
ಧ್ಯಾನಮೂರ್ತಿ=ಪಾರ್ಥಸಾರಥಿ; ಫಲ=ಶತ್ರುಗಳ ಮೇಲೆ ವಿಜಯ

**VIII ಸರ್ವಪ್ರಿಯತೆ:**

(೧) ಮಂತ್ರ

**ಯೋಮಾಂ ಪಶ್ಯತಿ ಸರ್ವತ್ರ ಸರ್ವಂಚ ಮಯಿ ಪಶ್ಯತಿ**
**ತಸ್ಯಾಹಂ ನ ಪ್ರಣಶ್ಯಾಮಿ ಸ ಚ ಮೇ ನ ಪ್ರಣಶ್ಯತಿ** (೬-೩೦)

ಜಪಸಂಖ್ಯೆ: ೫ ಲಕ್ಷ ೧೦ ಸಾವಿರ; ಜಪಕಾಲ=೧೫೦ ದಿನಗಳು;
ಧ್ಯಾನಮೂರ್ತಿ=ಗೋಪಾಲಕೃಷ್ಣ; ಫಲ=ಸರ್ವಪ್ರಿಯತೆ:

**IX ಋಣವಿಮುಕ್ತಿ**

(೧) ಮಂತ್ರ

**ಸರ್ವಭೂತಸ್ಥಿತಂ ಯೋ ಮಾಂ ಭಜತ್ಯೇಕತ್ವಮಾಸ್ಥಿತಃ**
**ಸರ್ವಥಾವರ್ತಮಾನೋಽಪಿ ಸ ಯೋಗೀ ಮಯಿ ವರ್ತತೇ** (೬-೩೧)

ಜಪಸಂಖ್ಯೆ=೫ ಲಕ್ಷ, ೧೦ ಸಾವಿರ, ಜಪಕಾಲ=೧೫೭ ದಿನಗಳು;
ಧ್ಯಾನಮೂರ್ತಿ=ಪಾರ್ಥಸಾರಥಿ; ಫಲ=ಋಣ ವಿಮುಕ್ತಿ.

(೨) ಮಂತ್ರ

**ತೇಷಾಮಹಂ ಸಮುದ್ಧರ್ತಾ ಮೃತ್ಯುಸಂಸಾರಸಾಗರಾತ್**
**ಭವಾಮಿ ನ ಚಿರಾತ್ಪಾರ್ಥ ಮಯ್ಯಾವೇಶಿತ ಚೇತಸಾಃ** (೧೨-೭)

ಜಪಸಂಖ್ಯೆ=೧$^{1}/_{3}$ ಲಕ್ಷ; ಜಪಕಾಲ=೫೦ ದಿನಗಳು;
ಧ್ಯಾನಮೂರ್ತಿ=ಪಾರ್ಥಸಾರಥಿ; ಫಲ= ಋಣವಿಮುಕ್ತಿ

ಈ ಮಂತ್ರವನ್ನು ಸಂಪುಟ ರೀತಿಯಲ್ಲಿ ೧೦೦ ಸಾರಿ ಜಪಿಸಿದರೂ ಋಣ ವಿಮುಕ್ತಿಯಾಗುವುದು.

**X ಶತ್ರುಬಾಧಾ ವಿಮುಕ್ತಿ:**

ಮಂತ್ರ

**ಅಭ್ಯಾಸಯೋಗಯುಕ್ತೇನ ಚೇತಸಾ ನಾನ್ಯಗಾಮಿನಾ**
**ಪರಮಂ ಪುರುಷಂ ದಿವ್ಯಂ ಯಾತಿ ಪಾರ್ಥಾನುಚಿಂತಯನ್** (೮-೮)

ಜಪಸಂಖ್ಯೆ=೧$^{1}/_{3}$ ಲಕ್ಷ; ಜಪಕಾಲ=೫೦ ದಿನಗಳು;
ಧ್ಯಾನಮೂರ್ತಿ=ಪಾರ್ಥಸಾರಥಿ; ಫಲ=ಶತ್ರುಬಾಧಾವಿಮುಕ್ತಿ

**XI ಸಂತಾನ ಪ್ರಾಪ್ತಿ**

ಮಂತ್ರ

**ನ ಚ ಮಾಂ ತಾನಿ ಕರ್ಮಾಣಿ ನಿಬಧ್ನಂತಿ ಧನಂಜಯ**
**ಉದಾಸೀನವದಾಸೀನ ಮಸಕ್ತಂ ತೇಷು ಕರ್ಮಸು** (೯-೯)

ಜಪಸಂಖ್ಯೆ=೧ ಲಕ್ಷ ೯೦ ಸಾವಿರ; ಜಪಕಾಲ=೨೧೦ ದಿನಗಳು;
ಧ್ಯಾನಮೂರ್ತಿ=ಪಾರ್ಥಸಾರಥಿ; ಫಲ=ಸಂತಾನಪ್ರಾಪ್ತಿ

**XII ಯೋಗಕ್ಷೇಮ ಪ್ರಾಪ್ತಿ**

(೧) ಮಂತ್ರ

**ಅನನ್ಯಾಶ್ಚಿಂತಯಂತೋ ಮಾಂ ಯೇ ಜನಾಃ ಪರ್ಯುಪಾಸತೇ**
**ತೇಷಾಂ ನಿತ್ಯಾಭಿಯುಕ್ತಾನಾಂ ಯೋಗಕ್ಷೇಮಂ ವಹಾಮ್ಯಹಮ್** (೯-೨೨)

ಜಪಸಂಖ್ಯೆ=೧$^{1}/_{3}$ ಲಕ್ಷ; ಜಪಕಾಲ=೭೫ ದಿನಗಳು
ಧ್ಯಾನಮೂರ್ತಿ=ಪಾರ್ಥಸಾರಥಿ; ಫಲ=ಯೋಗಕ್ಷೇಮ ಪ್ರಾಪ್ತಿ

**XIII ಸುಖ ಪ್ರಾಪ್ತಿ:**

(೧) ಮಂತ್ರ

**ಪತ್ರಂ ಪುಷ್ಪಂ ಫಲಂ ತೋಯಂ ಯೋಮೇ ಭಕ್ತ್ಯಾ ಪ್ರಯಚ್ಛತಿ**
**ತದಹಂ ಭಕ್ತ್ಯುಪಹೃತ ಮಶ್ನಾಮಿ ಪ್ರಯತಾತ್ಮನಃ** (೯-೨೬)

ಜಪಸಂಖ್ಯೆ=೧$^{1}/_{3}$ ಲಕ್ಷ; ಜಪಕಾಲ=೫೦ ದಿನಗಳು;
ಧ್ಯಾನಮೂರ್ತಿ=ಗೋಪಾಲಕೃಷ್ಣ; ಫಲ=ಸುಖಪ್ರಾಪ್ತಿ

ಈ ಮಂತ್ರವನ್ನು ಸಂಪುಟ ಪದ್ಧತಿಯಲ್ಲಿ ೧೫೧ ಸಾರಿ ಜಪಿಸಿದರೂ ಮೇಲ್ಕಂಡ ಫಲವು ಸಹ ಕೈಗೂಡುವುದು.

**XIV ಭಯನಾಶ**

೧) ಮಂತ್ರ

**ಮಾಂ ಹಿ ಪಾರ್ಥ ವ್ಯಪಾಶ್ರಿತ್ಯ ಯೇಽಪಿ ಸ್ಯುಃ ಪಾಪಯೋಽನಯಃ**
**ಸ್ತ್ರಿಯೋವೈಶ್ಯಾಸ್ತಥಾಶೂದ್ರಾಸ್ತೇಽಪಿಯಾಂತಿ ಪರಾಂ ಗತಿಂ** (೯-೩೨)

ಜಪಸಂಖ್ಯೆ=೧½ ಲಕ್ಷ; ಜಪಕಾಲ=೫೦ ದಿನಗಳು;
ಧ್ಯಾನಮೂರ್ತಿ=ಪಾರ್ಥಸಾರಥಿ; ಫಲ=ಭಯನಾಶ

(೨) ಮಂತ್ರ

**ಶ್ರದ್ಧಯಾ ಪರಯಾ ತಪ್ತಂ ತಪಸ್ತ ತ್ರಿವಿಧಂ ನರೈಃ**
**ಅಫಲಾಕಾಂಕ್ಷಿಭಿರುಕ್ತೈಸ್ಸಾತ್ವಿಕಂ ಪರಿಚಕ್ಷತೇ** (೧೭-೧೭)

ಜಪಸಂಖ್ಯೆ=೭೫ ಸಾವಿರ; ಜಪಕಾಲ= ೧೫ ದಿನಗಳು;
ಧ್ಯಾನಮೂರ್ತಿ=ಪಾರ್ಥಸಾರಥಿ; ಫಲ=ಶತ್ರುಭಯನಾಶ

**XV ಸಿದ್ಧಿಗಳಿಸುವುದು**

ಮಂತ್ರ

**ಮನ್ಮನಾ ಭವ ಮದ್ಭಕ್ತೋ ಮದ್ಯಾಜೀ ಮಾಂ ನಮಸ್ಕುರು**
**ಮಾಮೇವೈಷ್ಯಸಿ ಯುಕ್ತ್ವೈವ ಮಾತ್ಮಾನಂ ಮತ್ಪರಾಯಣಃ** (೯-೩೪)

ಜಪಸಂಖ್ಯೆ=೨೦ ಲಕ್ಷದ ೧೦ ಸಾವಿರ; ಜಪಕಾಲ=೭೫ ದಿನಗಳು
ಧ್ಯಾನಮೂರ್ತಿ=ಪಾರ್ಥಸಾರಥಿ; ಫಲ=ಸಿದ್ಧಿಯುಂಟಾಗುವುದು.

**XVI ದುಃಖನಾಶ:**

೧) ಮಂತ್ರ

**ಯೋ ಮಾ ಮಜ ಮನಾದಿಂಚ ವೇತ್ತಿ ಲೋಕಮಹೇಶ್ವರಮ್**
**ಅಸಂಮೂಢಸ್ಸ ಮರ್ತ್ಯೇಷು ಸರ್ವಪಾಪೈಃ ಪ್ರಮುಚ್ಯತೇ** (೧೦-೩)

ಜಪಸಂಖ್ಯೆ=೧½ ಲಕ್ಷ; ಜಪಕಾಲ=೫೦ ದಿನಗಳು;
ಧ್ಯಾನಮೂರ್ತಿ=ಪಾರ್ಥಸಾರಥಿ; ಫಲ=ದುಃಖನಾಶ

೨) ಮಂತ್ರ

**ತೇಷಾಂ ಸತತಯುಕ್ತಾನಾಂ ಭಜತಾಂ ಪ್ರೀತಿಪೂರ್ವಕಮ್**
**ದದಾಮಿ ಬುದ್ಧಿಯೋಗಂ ತಂ ಯೇನ ಮಾ ಮುಪಯಾಂತಿತೇ (೧೦-೧೦)**

ಜಪಸಂಖ್ಯೆ=೩೬ ಸಾವಿರ; ಜಪಕಾಲ=೩೧ ದಿನಗಳು
ಧ್ಯಾನಮೂರ್ತಿ=ಪಾರ್ಥಸಾರಥಿ; ಫಲ=ವಿಪತ್ತುನಾಶ

೩) ಮಂತ್ರ

**ಶ್ರೇಯೋ ಹಿ ಜ್ಞಾನ ಮಭ್ಯಾಸಾತ್ ಜ್ಞಾನಾ ದ್ಧ್ಯಾನಂ ವಿಶಿಷ್ಯತೇ**
**ಧ್ಯಾನಾತ್ಕರ್ಮಫಲತ್ಯಾಗ ಸ್ತ್ಯಾಗಾಚ್ಛಾಂತಿ ರನಂತರಮ್** (೧೨-೧೨)

ಜಪಸಂಖ್ಯೆ=೧೫ ಸಾವಿರ; ಜಪಕಾಲ=೨೧ ದಿನಗಳು;
ಧ್ಯಾನಮೂರ್ತಿ=ಪಾರ್ಥಸಾರಥಿ; ಫಲ=ದುಃಖವಿಯೋಗ

**XVII ವಿಘ್ನನಾಶ**

ಮಂತ್ರ

**ದಿವ್ಯಮಾಲ್ಯಾಂಬರಧರಂ ದಿವ್ಯಗಂಧಾನುಲೇಪನಮ್**
**ಸರ್ವಾಶ್ಚರ್ಯಮಯಂ ದೇವಮನಂತಂ ವಿಶ್ವತೋಮುಖಂ** (೧೧-೧೧)

ಜಪಸಂಖ್ಯೆ=೧೩ ಸಾವಿರ; ಜಪಕಾಲ=೧೫ ದಿನಗಳು;
ಧ್ಯಾನಮೂರ್ತಿ=ಪಾರ್ಥಸಾರಥಿ; ಫಲ=ವಿಘ್ನನಾಶ

ಈ ಮಂತ್ರವನ್ನು ಸಂಪುಟ ಪದ್ಧತಿಯಲ್ಲಿ ೫೧ ಸಾರಿ ಜಪಿಸಿದರೆ ಮೇಲಿನ ಫಲವು ಲಭಿಸುವುದು.

**XVIII ಪ್ರೇಮವೃದ್ಧಿ**

(೧) ಮಂತ್ರ

**ತ್ವಮಾದಿದೇವಃ ಪುರುಷಃ ಪುರಾಣ**
**ಸ್ತ್ವಮಸ್ಯ ವಿಶ್ವಶ್ಯ ಪರಂ ನಿಧಾನಮ್**
**ವೇತ್ತಾಸಿ ವೇದ್ಯಂಚ ಪರಂ ಚ ಧಾಮ**
**ತ್ವಯಾ ತತಂ ವಿಶ್ವಮನಂತರೂಪ** (೧೧-೩೮)

ಜಪಸಂಖ್ಯೆ=೧೫ ಸಾವಿರ; ಜಪಕಾಲ=೨೧ ದಿನಗಳು;
ಧ್ಯಾನಮೂರ್ತಿ=ಪಾರ್ಥಸಾರಥಿ; ಫಲ=ಪ್ರೇಮವೃದ್ಧಿ

(೨) ಮಂತ್ರ

**ಜ್ಞಾನ ಜ್ಞೇಯಂ ಪರಿಜ್ಞಾತಾ ತ್ರಿವಿಧಾ ಕರ್ಮಚೋದನಾ**
**ಕರಣಂ ಕರ್ಮ ಕರ್ತೇತಿ ತ್ರಿವಿಧಃ ಕ್ರಮಸಂಗ್ರಹಃ** (೧೮-೧೮)

ಜಪಸಂಖ್ಯೆ=೧೫ ಸಾವಿರ; ಜಪಕಾಲ=೨೧ ದಿನಗಳು
ಧ್ಯಾನಮೂರ್ತಿ=ಪಾರ್ಥಸಾರಥಿ; ಫಲ-ಪ್ರೇಮವೃದ್ಧಿ

**XIX ಭೂತಪ್ರೇತ ಬಾಧೆಯ ನಿವಾರಣೆ:**

(೧) ಮಂತ್ರ

**ವಾಯುರ್ಯಮೋಽಗ್ನಿರ್ವರುಣಶಶಾಂಕಃ**
**ಪ್ರಜಾಪತಿಸ್ತ್ವಂ ಪ್ರಪಿತಾಮಹಶ್ಚ**
**ನಮೋ ನಮಸ್ತೇಽಸ್ತು ಸಹಸ್ರಕೃತ್ವಃ**
**ಪುನಶ್ಚ ಭೂಯೋಽಪಿ ನಮೋ ನಮಸ್ತೇ** (೧೧-೩೯)

ಜಪಸಂಖ್ಯೆ=೧೫ ಸಾವಿರ; ಜಪಕಾಲ=೧೫ ದಿನಗಳು;
ಧ್ಯಾನಮೂರ್ತಿ=ಪಾರ್ಥಸಾರಥಿ; ಫಲ=ಭೂತಪ್ರೇತ ಬಾಧೆಗಳ ನಿವಾರಣೆ

೨) ಭೂತಪ್ರೇತ ಬಾಧೆಗಳು ಶಮನ ಹೊಂದಲು ಈ ಕೆಳಗಿನ ಮಂತ್ರವನ್ನೂ ಕೂಡ ಸಂಪುಟವಾಗಿ ೫೧ ಸಾರಿ ಜಪಿಸಬಹುದು.

ಮಂತ್ರ

**ಸ್ಥಾನೇ ಹೃಷೀಕೇಶ ತವ ಪ್ರಕೀರ್ತ್ಯಾ**
**ಜಗತ್ಪ್ರಹೃಷ್ಯತ್ಯನುರಜ್ಯತೇ ಚ**
**ರಕ್ಷಾಂಸಿ ಭೀತಾನಿ ದಿಶೋದ್ರವಂತಿ**
**ಸರ್ವೇ ನಮಸ್ಯಂತಿ ಚ ಸಿದ್ಧಸಂಘಾಃ** (೧೧-೩೬)

**XX ಪ್ರಸನ್ನತೆ:**

(೧) ಮಂತ್ರ

**ಪಿತಾಸಿ ಲೋಕಸ್ಯ ಚರಾಚರಸ್ಯ**
**ತ್ವಮಸ್ಯ ಪೂಜ್ಯಶ್ಚ ಗುರುರ್ಗರೀಯಾನ್**
**ನ ತ್ವತ್ಸಮೋಽಸ್ತ್ಯಭ್ಯಧಿಕಃ ಕುತೋಽನ್ಯೋ**
**ಲೋಕತ್ರಯೇಽಪ್ಯಪ್ರತಿಮಪ್ರಭಾವ (೧೧-೪೩)**

ಜಪಸಂಖ್ಯೆ=೧೫ ಸಾವಿರ; ಜಪಕಾಲ=೧೫ ದಿನಗಳು
ಧ್ಯಾನಮೂರ್ತಿ=ಪಾರ್ಥಸಾರಥಿ; ಫಲ=ಪ್ರಸನ್ನತೆ

**XXI ಗುರುದೇವರ ಕ್ಷಮೆ:**

ಮಂತ್ರ

**ತಸ್ಮಾತ್ಪ್ರಣಮ್ಯ ಪ್ರಣಿಧಾಯ ಕಾಯಂ**
**ಪ್ರಸಾದಯೇ ತ್ವಾ ಮಹ ಮೀಶ ಮೀಡ್ಯಮ್**
**ಪಿತೇವ ಪುತ್ರಸ್ಯ ಸಖೇವ ಸಖ್ಯುಃ**
**ಪ್ರಿಯಃ ಪ್ರಿಯಾಯಾರ್ಹಸಿ ದೇವಸೋಢುಮ್** (೧೧-೪೪)

ಜಪಸಂಖ್ಯೆ=೧½ ಲಕ್ಷ; ಜಪಕಾಲ=೫೦ ದಿನಗಳು;
ಧ್ಯಾನಮೂರ್ತಿ=ಪಾರ್ಥಸಾರಥಿ; ಫಲ=ಗುರುದೇವರಿಂದ ಕ್ಷಮೆ

**XXII ಮೃತ್ಯುಕಾಲ ಜ್ಞಾನ:**

ಮಂತ್ರ

**ಯದಾ ಸತ್ತ್ವೇ ಪ್ರವೃದ್ಧೇತು ಪ್ರಲಯಂ ಯಾತಿ ದೇಹಭೃತ್**
**ತದೋತ್ತಮವಿದಾಂ ಲೋಕಾ ನಮಲಾನ್ ಪ್ರತಿಪದ್ಯತೇ** (೧೪-೧೪)

ಜಪಸಂಖ್ಯೆ=೧ ಲಕ್ಷ; ಜಪಕಾಲ=೫೧ ದಿನಗಳು

ಧ್ಯಾನಮೂರ್ತಿ=ಪಾರ್ಥಸಾರಥಿ; ಫಲ=ಮೃತ್ಯುಕಾಲ ಜ್ಞಾನ

**XXIII ಉದರ ರೋಗ ನಾಶ:**

ಮಂತ್ರ

**ಅಹಂ ವೈಶ್ವಾನರೋ ಭೂತ್ವಾ ಪ್ರಾಣಿನಾಂ ದೇಹ ಮಾಶ್ರಿತಃ**
**ಪ್ರಾಣಾಪಾನಸಮಾಯುಕ್ತಃ ಪಚಾಮ್ಯನ್ನಂ ಚತುರ್ವಿಧಮ್** (೧೫-೧೪)

ಜಪಸಂಖ್ಯೆ=೧½ ಲಕ್ಷ; ಜಪಕಾಲ= ೧೫ ದಿನಗಳು;

ಧ್ಯಾನಮೂರ್ತಿ=ಪಾರ್ಥಸಾರಥಿ; ಫಲ=ಉದರರೋಗ ನಾಶ

ಈ ಮಂತ್ರವನ್ನು ಸಂಪುಟ ರೀತಿಯಲ್ಲಿ ೫೧ ಸಾರಿ ಜಪಿಸಿದರೆ ಉದರ ರೋಗ ಶಮಿಸುವುದು.

**XXIV ದೋಷನಾಶ, ಕ್ರೋಧಶಮನ:**

(೧) ಮಂತ್ರ

**ಸರ್ವಸ್ಯಚಾಹಂ ಹೃದಿ ಸನ್ನಿವಿಷ್ಟೋ**
**ಮತ್ತಃ ಸ್ಮೃತಿರ್ಜ್ಞಾನ ಮಪೋಹನಂ ಚ**
**ವೇದೈಶ್ಚ ಸರ್ವೈರಹಮೇವ ವೇದ್ಯೋ**
**ವೇದಾಂತಕೃದ್ವೇದವಿದೇವ ಚಾಹಂ** (೧೫-೧೫)

ಜಪಸಂಖ್ಯೆ=೧ಲಕ್ಷ ೧೦ ಸಾವಿರ; ಜಪಕಾಲ=೧೧೦ ದಿನಗಳು

ಧ್ಯಾನಮೂರ್ತಿ=ಪಾರ್ಥಸಾರಥಿ; ಫಲ=ಕ್ರೋಧಶಮನ.

(೨) ಮಂತ್ರ

**ಅನೇಕಚಿತ್ತ ವಿಭ್ರಾಂತಾ ಮೋಹಜಾಲ ಸಮಾವೃತಾಃ**
**ಪ್ರಸಕ್ತಾಃ ಕಾಮಭೋಗೇಷು ಪತಂತಿ ನರಕೇಽಶುಚೌ** (೧೬-೧೬)

ಜಪಸಂಖ್ಯೆ=೧೦ ಸಾವಿರ, ಜಪಕಾಲ=೧೧ ದಿನಗಳು

ಧ್ಯಾನಮೂರ್ತಿ=ಪಾರ್ಥಸಾರಥಿ; ಫಲ=ದೋಷನಾಶ

(೩) ಮಂತ್ರ

**ತ್ರಿವಿಧಂ ನರಕಸ್ಯೇದಂ ದ್ವಾರಂ ನಾಶನಮಾತ್ಮನಃ**
**ಕಾಮಃ ಕ್ರೋಧಸ್ತಥಾ ಲೋಭಃ ಸ್ತಸ್ಮಾದೇತತ್ತ್ರಯಂ ತ್ಯಜೇತ್** (೧೬-೨೧)

ಜಪಸಂಖ್ಯೆ=೧½ ಲಕ್ಷ; ಜಪಕಾಲ= ೧೫೦ ದಿನಗಳು;

ಧ್ಯಾನಮೂರ್ತಿ=ಪಾರ್ಥಸಾರಥಿ; ಫಲ=ಕಾಮಕ್ರೋಧಲೋಭಗಳ ಮೇಲೆ ವಿಜಯ

**XXV ವೈಭವ ಪ್ರಾಪ್ತಿ**

(೧) ಮಂತ್ರ

**ಯೋಮಾಮೇವ ಮಸಂಮೂಢೋ ಜಾನಾತಿ ಪುರುಷೋತ್ತಮಮ್**
**ಸ ಸರ್ವವಿದ್ಭಜತಿ ಮಾಂ ಸರ್ವಭಾವೇನ ಭಾರತ** (೧೫-೧೯)

ಜಪಸಂಖ್ಯೆ=೧½ ಲಕ್ಷ; ಜಪಕಾಲ=೫೦ ದಿನಗಳು;

ಧ್ಯಾನಮೂರ್ತಿ=ಪಾರ್ಥಸಾರಥಿ; ಫಲ=ವೈಭವಪ್ರಾಪ್ತಿ

# ಗೀತೆಯ ಪಾರಮಾರ್ಥಿಕ ಫಲಗಳು

ಈ ಕೆಳಗೆ ತಿಳಿಸಲ್ಪಟ್ಟ ಪಾರಮಾರ್ಥಿಕ ಫಲಗಳು ಲಭಿಸಬೇಕೆಂದು ಇಚ್ಛಿಸುವವರು, ಅವುಗಳಿಗನುಗುಣವಾಗಿ ಇಲ್ಲಿ ವಿವರಿಸಿದ ರೀತಿಯಲ್ಲಿ ಭಕ್ತಿ ಪೂರ್ವಕವಾಗಿ ಜಪಿಸಿದಲ್ಲಿ ಫಲವನ್ನು ಹೊಂದಬಲ್ಲರು. ಈ ಮಂತ್ರಗಳು ಹಿಂದಿನ ಭಾಗದಲ್ಲಿ ಪೂರ್ತಿಯಾಗಿ ಕೊಡಲ್ಪಟ್ಟಿವೆಯಾದ್ದರಿಂದ ಇಲ್ಲಿ ಸಂಕ್ಷೇಪವಾಗಿ ಕೊಡಲಾಗಿದೆ. ಅನೇಕ ಮಂತ್ರಗಳನ್ನು ಒಂದೇ ಫಲಕ್ಕೆ ತಿಳಿಸಲ್ಪಟ್ಟಿದ್ದರೂ, ವಿಧಿಪ್ರಕಾರವಾಗಿ ಯಾವುದೇ ಒಂದು ಮಂತ್ರವನ್ನು ಆಯಾ ಸಂಖ್ಯೆಯಲ್ಲಿ ಶ್ರದ್ಧೆಯಿಂದ ಜಪಿಸಿದರೂ ಸಾಕು ಫಲವು ಅವಶ್ಯವಾಗಿ ಲಭಿಸುವುದು.

| ಫಲ | ಮಂತ್ರ | ಅಧ್ಯಾಯ ಶ್ಲೋಕ | ಜಪ ಸಂಖ್ಯೆ | ಎಷ್ಟು ದಿನಗಳು | ಧ್ಯಾನಮೂರ್ತಿ | ಸಂಪುಟ ಎಷ್ಟುಸಾರಿ |
|---|---|---|---|---|---|---|
| ಅಂತಃಕರಣ ಶುದ್ಧಿ | ಧರ್ಮಕ್ಷೇತ್ರೇ ಕುರುಕ್ಷೇತ್ರೇ | ೧-೧ | ೨೫ ಸಾವಿರ | ೨೧ | ಪಾರ್ಥಸಾರಥಿ | - |
| | ವ್ಯಾಮಿಶ್ರೇಣೇವ ವಾಕ್ಯೇನ | ೩-೨ | ೧೧ ಸಾವಿರ | ೧೧ | ಪಾರ್ಥಸಾರಥಿ | - |
| | ಸರ್ವತಃ ಪಾಣಿ ಪಾದಂ ತತ್ | ೧೩-೧೩ | ೨೫ ಸಾವಿರ | ೨೫ | ಪಾರ್ಥಸಾರಥಿ | - |
| ಮಾನಸ ತಾಪನಾಶನ | ಕುತಸ್ತ್ವಾ ಕಶ್ಮಲಮಿದಂ... | ೨-೨ | ೨೫ ಸಾವಿರ | ೨೫ | ಪಾರ್ಥಸಾರಥಿ | ೧೦೦ |
| ಕಾಮಾದಿಶತ್ರು ವಿಜಯ | ಏವಂ ಬುದ್ಧೇಃ ಪರಂ ಬುದ್ಧ್ವಾ | ೩-೪೩ | ೪೧ ಸಾವಿರ | ೨೧ | ಗೋಪಾಲಕೃಷ್ಣ | - |
| | ಅಭ್ಯಾಸಯೋಗ ಯುಕ್ತೇನ | ೮-೮ | ೧½ ಲಕ್ಷ | ೫೦ | ಪಾರ್ಥಸಾರಥಿ | - |
| | ತ್ರಿವಿಧಂ ನರಕಸ್ಯೇದಂ | ೬-೨೧ | ೧½ ಲಕ್ಷ | ೧೫೦ | ಪಾರ್ಥಸಾರಥಿ | - |
| | ಶ್ರದ್ಧಯಾ ಪರಯಾತಪ್ತಂ... | ೧೭-೧೭ | ೭೫ ಸಾವಿರ | ೧೫ | ಪಾರ್ಥಸಾರಥಿ | - |
| ಭಕ್ತಿಯಲ್ಲಿ ದೃಢತೆ | ಬಹೂನಿಮೇ ವ್ಯತೀತಾನಿ | ೪-೫ | ೬ ಲಕ್ಷ | ೫೧ | ಪಾರ್ಥಸಾರಥಿ | - |
| | ಯೋ ಮಾಂ ಪಶ್ಯತಿ ಸರ್ವತ್ರ | ೬-೩೦ | ೫ಲಕ್ಷ ೧೦ ಸಾವಿರ | ೧೫೦ | ಗೋಪಾಲಕೃಷ್ಣ | - |
| | ಜ್ಞೇಯಂ ಯತ್ತತ್ಪ್ರವಕ್ಷ್ಯಾಮಿ | ೩-೧೨ | ೫ ಲಕ್ಷ | ೧೫೦ | ಪಾರ್ಥಸಾರಥಿ | ೫೧ |
| | ಯೋ ಮಾಮೇವ ಮಸಂಮೂಢೋ | ೧೫-೧೯ | ೧½ ಲಕ್ಷ | ೫೦ | ಪಾರ್ಥಸಾರಥಿ | - |

| | | | | | | |
|---|---|---|---|---|---|---|
| ಚಿತ್ತಚಾಂಚಲ್ಯನಾಶ | ಲೋಕೇಽಸ್ಮಿನ್‌ದ್ವಿವಿಧಾ ನಿಷ್ಠಾ | ೩-೩ | ೧¼ ಲಕ್ಷ | ೪೧ | ಪಾರ್ಥಸಾರಥಿ | ೧೦೦ |
| ಸಾಧನೆಯಲ್ಲಿ ಬರುವ | ಭೋಕ್ತಾರಂ ಯಜ್ಞತಪಸಾಂ | ೫-೨೯ | ೪೩ ಸಾವಿರ | ೨೧ | ಪಾರ್ಥಸಾರಥಿ | - |
| ವಿಘ್ನನಾಶನ | ದಿವ್ಯಮಾಲ್ಯಾಮ್ಬರಧರಂ | ೧೧-೧೧ | ೧೩ ಸಾವಿರ | ೧೫ | ಪಾರ್ಥಸಾರಥಿ | - |
| ಮನೋಜಯ, | ಶನೈಶ್ಶನೈರುಪರಮೇತ್... | ೬-೨೫ | ೧೩ ಸಾವಿರ | ೨೬ | | - |
| ಧ್ಯಾನ | ಯತೋ ಯತೋನಿಶ್ಚರತಿ | ೬-೨೬ | ೧೩ ಸಾವಿರ | | ಪಾರ್ಥಸಾರಥಿ | |
| ಯೋಗ್ಯತೆ | ವಾಯುರ್ಯಮೋಽಗ್ನಿರ್ವರುಣಃ ಶಶಾಂಕಃ | ೧೧-೩೯ | ೧೫ ಸಾವಿರ | ೧೫ | ಪಾರ್ಥಸಾರಥಿ | ೫೧ |
| | ಸ್ಥಾನೇಹೃಷೀಕೇಶ ತವಪ್ರಕೀರ್ತ್ಯಾ | ೧೧-೩೬ | | | | |
| ಶರಣಾಗತಿ ಯೋಗ್ಯತೆ | ಕಾರ್ಪಣ್ಯದೋಷೋಪಹತ ಸ್ವಭಾವಃ | ೨-೭ | ೫೧ ಸಾವಿರ | ೨೧ | ಪಾರ್ಥಸಾರಥಿ | ೫೧ |
| | ಮಾಂ ಹಿ ಪಾರ್ಥ ವ್ಯಪಾಶ್ರಿತ್ಯ | ೯-೩೨ | ೫೦ ಸಾವಿರ | ೫೦ | ಪಾರ್ಥಸಾರಥಿ | - |
| | ಮನ್ಮನಾಭವ ಮದ್ಭಕ್ತೋ | ೯-೩೪ | ೨ ಲಕ್ಷ ೧೦ ಸಾವಿರ | ೭೫ | ಪಾರ್ಥಸಾರಥಿ | - |
| ವಿಶ್ವಾಸದಲ್ಲಿ ದೃಢತೆ | ಅಪರಂ ಭವತೋ ಜನ್ಮ | ೪-೪ | ೫ ಲಕ್ಷ | ೧೫೦ | ಪಾರ್ಥಸಾರಥಿ | ೧೫೦ |
| ಸಾಂಖ್ಯ ನಿಷ್ಠೆ | ಯತ್ಸಾಂಖ್ಯೈಃ ಪ್ರಾಪ್ಯತೇಸ್ಥಾನಂ | ೫-೫ | ೪೦ ಸಾವಿರ | ೩೧ | ಪಾರ್ಥಸಾರಥಿ | ೫೧ |
| ಜ್ಞಾನ ಪರಿಪಕ್ವತೆ | ಸರ್ವಭೂತಸ್ಥಿತಂ ಯೋ ಮಾಂ | ೬-೩೧ | ೫ ಲಕ್ಷ ೧೦ ಸಾವಿರ | ೧೫೭ | ಪಾರ್ಥಸಾರಥಿ | - |
| ದ್ವೇಷಭಾವ ನಾಶ | ಬಂಧುರಾತ್ಮಾತ್ಮನಸ್ತಸ್ಯ | ೬-೬ | ೨೧ ಸಾವಿರ | ೨೧ | ಪಾರ್ಥಸಾರಥಿ | - |
| ಸರ್ವತ್ರಭಗವತ್ ದರ್ಶನ | ಮತ್ತಃ ಪರತರಂ ನಾನ್ಯತ್ | ೭-೭ | ೧¼ ಲಕ್ಷ | ೭೫ | ಪಾರ್ಥಸಾರಥಿ | ೧೦೦ |
| ಯೋಗ್ಯತೆ | ಪತ್ರಂಪುಷ್ಪಂ ಫಲಂ ತೋಯಂ | ೯-೨೬ | ೧½ ಲಕ್ಷ | ೫೦ | ಗೋಪಾಲಕೃಷ್ಣ | ೧೫೧ |
| ಕರ್ಮಯೋಗ ಪರಿಪಕ್ವತೆ | ನಚಮಾಂ ತಾನಿ ಕರ್ಮಾಣಿ | ೯-೯ | ೧ ಲಕ್ಷ ೯೦ ಸಾವಿರ | ೨೧೦ | ಪಾರ್ಥಸಾರಥಿ | - |
| ಯೋಗಕ್ಷೇಮ ಪ್ರಾಪ್ತಿ | ಅನನ್ಯಾಶ್ಚಿಂತಯಂತೋ ಮಾಂ | ೯-೨೨ | ೧¼ ಲಕ್ಷ | ೭೫ | ಪಾರ್ಥಸಾರಥಿ | - |
| ಭಗವತ್ಕೃಪೆ | ಯತ್ಕರೋಷಿ ಯದಶ್ನಾಸಿ | ೯-೨೭ | ೧½ ಲಕ್ಷ | ೫೦ | ಪಾರ್ಥಸಾರಥಿ | - |
| | ವಕ್ತುಮರ್ಹಸ್ಯಶೇಷೇಣ | ೧೦-೧೬ | ೩೬ ಸಾವಿರ | ೩೧ | ಪಾರ್ಥಸಾರಥಿ | - |
| ಭಗವತ್ಪ್ರಸನ್ನತೆ | ಪಿತಾಸಿ ಲೋಕಸ್ಯ ಚರಾಚರಸ್ಯ | ೧೧-೪೩ | ೧೫ ಸಾವಿರ | ೧೫ | ಪಾರ್ಥಸಾರಥಿ | - |
| ಭಗವಂತನ ಕ್ಷಮೆ | ತಸ್ಮಾತ್ಪ್ರಣಮ್ಯ ಪ್ರಣಿಧಾಯಕಾಯಂ | ೧೧-೪೪ | ೧½ ಲಕ್ಷ | ೫೦ | ಪಾರ್ಥಸಾರಥಿ | ೧೦೦ |
| | ಅದೃಷ್ಟಪೂರ್ವಂ ಹೃಷಿತೋಸ್ಮಿ ದೃಷ್ಟ್ವಾ | ೧೧-೪೫ | ೧½ ಲಕ್ಷ | ೫೦ | ಪಾರ್ಥಸಾರಥಿ | - |
| | ಮಾತೇ ವ್ಯಥಾ ಮಾಚ ವಿಮೂಢಭಾವೋ | ೧೧-೪೯ | ೧½ ಲಕ್ಷ | ೫೦ | ಪಾರ್ಥಸಾರಥಿ | - |
| | ಇತ್ಯರ್ಜುನಂ ವಾಸುದೇವಸ್ತಥೋಕ್ತ್ವಾ | ೧೧-೫೦ | ೧ ಲಕ್ಷ | ೫೦ | ಪಾರ್ಥಸಾರಥಿ | - |
| ಭಗವದ್ದರ್ಶನ | ದೃಷ್ಟ್ವೇದಂ ಮಾನುಷಂ ರೂಪಂ | ೧೧-೫೧ | ೧½ ಲಕ್ಷ | ೫೦ | ಪಾರ್ಥಸಾರಥಿ | - |
| | ಸುದುರ್ದರ್ಶಮಿದಂ ರೂಪಂ | ೧೧-೫೨ | ೧½ ಲಕ್ಷ | ೫೦ | ಪಾರ್ಥಸಾರಥಿ | ೫೦ |
| | ನಾಹಂ ವೇದೈರ್ನತಪಸಾ | ೧೧-೫೩ | ೧½ ಲಕ್ಷ | ೫೦ | ಪಾರ್ಥಸಾರಥಿ | - |
| ಪಾಪನಾಶ | ಯೋಮಾಮಜಮನಾದಿಂಚ | ೧೦-೩ | ೧½ ಲಕ್ಷ | ೫೦ | ಪಾರ್ಥಸಾರಥಿ | - |
| ದೋಷನಾಶ | ಶ್ರೇಯೋಹಿಜ್ಞಾನಮಭ್ಯಾಸಾತ್ | ೧೨-೧೨ | ೧೫ ಸಾವಿರ | ೨೧ | ಪಾರ್ಥಸಾರಥಿ | - |
| | ಅನೇಕಚಿತ್ತ ವಿಭ್ರಾಂತಾ | ೧೬-೧೬ | ೧೦ ಸಾವಿರ | ೧೧ | ಪಾರ್ಥಸಾರಥಿ | - |
| ವಿವೇಕಪ್ರಾಪ್ತಿ | ಅನೇಕ ಬಾಹೂದರ ವಕ್ತ್ರ ನೇತ್ರಂ | ೧೧-೧೬ | ೧೩ ಸಾವಿರ | ೧೫ | ಪಾರ್ಥಸಾರಥಿ | ೧೦೦ |
| | ಯಚ್ಚಾಪಹಾಸಾರ್ಥಮಸತ್ಕೃತೋಽಸಿ | ೧೧-೪೨ | ೧½ ಲಕ್ಷ | ೫೦ | ಪಾರ್ಥಸಾರಥಿ | - |
| | ಅಹಂ ವೈಶ್ವಾನರೋ ಭೂತ್ವಾ | ೧೫-೧೪ | ೧½ ಲಕ್ಷ | ೧೫ | ಪಾರ್ಥಸಾರಥಿ | ೫೧ |
| ಪ್ರೇಮವೃದ್ಧಿ | ತ್ವಮಾದಿದೇವಃ ಪುರುಷಃ ಪುರಾಣಃ | ೧೧-೩೮ | ೧೫ ಸಾವಿರ | ೧೫ | ಪಾರ್ಥಸಾರಥಿ | - |
| | ಜ್ಞಾನಂ ಜ್ಞೇಯಂ ಪರಿಜ್ಞಾತಾ | ೧೮-೧೮ | ೧೫ ಸಾವಿರ | ೨೧ | ಪಾರ್ಥಸಾರಥಿ | - |
| ಯೋಗಯುಕ್ತನಾಗುವುದು | ತೇಷಾಂ ಸತತಯುಕ್ತಾನಾಂ | ೧೦-೧೦ | ೩೬ ಸಾವಿರ | ೩೧ | ಪಾರ್ಥಸಾರಥಿ | - |
| ಮೋಹನಾಶ | ನಮಃ ಪುರಸ್ತಾದಥ ಪೃಷ್ಠತಸ್ತೇ | ೧೧-೪೦ | ೧½ ಲಕ್ಷ | ೫೦ | ಪಾರ್ಥಸಾರಥಿ | - |
| ಭಗವತ್ಪ್ರಾಪ್ತಿಗೆ ಯೋಗ್ಯತೆ | ತೇಷಾಮಹಂ ಸಮುದ್ಧರ್ತಾ | ೧೨-೭ | ೧½ ಲಕ್ಷ | ೫೦ | ಪಾರ್ಥಸಾರಥಿ | ೧೦೦ |
| | ಸರ್ವಧರ್ಮಾನ್ ಪರಿತ್ಯಜ್ಯ | ೧೮-೬೬ | | | | |
| ಮೃತ್ಯುಕಾಲದಲ್ಲಿ ಭಗವತ್ಸ್ಮರಣೆ | ಯಾದಾ ಸತ್ತ್ವೇ ಪ್ರವೃದ್ಧೇತು | ೧೪-೧೪ | ೧ ಲಕ್ಷ | ೫೧ | ಪಾರ್ಥಸಾರಥಿ | ೧೫೧ |
| ಕ್ರೋಧಶಮನ | ಸರ್ವಸ್ಯಚಾಹಂ ಹೃದಿಸನ್ನಿವಿಷ್ಟೋ | ೧೫-೧೫ | ೧ ಲಕ್ಷ ೧೦ ಸಾವಿರ | ೧೧೦ | ಪಾರ್ಥಸಾರಥಿ | - |
| ವಿಘ್ನನಾಶ | ದಿವ್ಯಮಾಲ್ಯಾಂಬರಧರಂ | ೧೧-೧೧ | | | | ೫೧ |

# ಗೀತೆಯ ಅಮೋಘ ಶಕ್ತಿಗೆ ಕಾರಣ




ಹೇಗೆಂದರೆ, ಗೀತೆಯನ್ನು ಹೇಳಿದವನು ಕೃಷ್ಣನೆನ್ನುವುದು ಸರ್ವರಿಗೂ ತಿಳಿದ ವಿಷಯವೇ. ಕೇಳಿದವನು ಅರ್ಜುನ. ಅರ್ಜುನನು ಕೃಷ್ಣ ಹೇಗಾದನೆನ್ನುವ ಸಂಶಯ ಉಂಟಾಗಬಹುದು. ಆ ಸಂಶಯವನ್ನು ಭಗವಂತನೇ ಗೀತೆಯ ೧೦ನೆಯ (ವಿಭೂತಿಯೋಗ) ಅಧ್ಯಾಯದಲ್ಲಿ ತೀರಿಸಿದ್ದಾನೆ. **"ಪಾಂಡವಾನಾಮ್ ಧನಂಜಯಃ"**– ಪಂಚ ಪಾಂಡವರಲ್ಲಿ ಅರ್ಜುನನು ನಾನೇ' ಎಂದು ಕೃಷ್ಣನು ಅಲ್ಲಿ ಹೇಳಿದ್ದಾನೆ. ಆದ್ದರಿಂದ ಅರ್ಜುನನು ಸಾಕ್ಷಾತ್ ಶ್ರೀ ಕೃಷ್ಣ ರೂಪವೇ ಆಗಿದ್ದಾನೆ. ಇನ್ನು ಬರೆದವರು ವ್ಯಾಸಮಹರ್ಷಿಗಳು. ವ್ಯಾಸರು ಕೃಷ್ಣ ಹೇಗಾಗುವರು? ಈ ಸಂಶಯವನ್ನು ಅದೇ ಅಧ್ಯಾಯದಲ್ಲಿ ನಿವಾರಿಸಲಾಗಿದೆ. **"ಮುನೀನಾಪ್ಯಹಂ ವ್ಯಾಸಃ"** ಮುನಿಗಳಲ್ಲಿ ಶ್ರೀ ವೇದವ್ಯಾಸರು ನಾನು ಎಂದು ಭಗವಂತನು ಹೇಳಿರುವನು. ಆದ್ದರಿಂದ ವ್ಯಾಸರು ಸಾಕ್ಷಾತ್ ಶ್ರೀಕೃಷ್ಣ ಸ್ವರೂಪವೇ ಎಂದು ಅರ್ಥವಾಗುತ್ತದೆ. ಈ ಪ್ರಕಾರವಾಗಿ ಮೂವರು ಕೃಷ್ಣರ ದಿವ್ಯ ತಪಃಶಕ್ತಿ ಏಕೀಭವಿಸಿದ ಮಹತ್ತರ ಗ್ರಂಥವಾದುದರಿಂದ ಗೀತೆಗೆ ಈ ಘನತೆ ಬಂದಿದೆ.

## ಅದೃಷ್ಟ ಸಂಖ್ಯೆ ೧೮

| | |
|---|---|
| ಗೀತೆಯಲ್ಲಿಯ ಅಧ್ಯಾಯಗಳು | ೧೮ |
| ಮಹಾಭಾರತ ಯುದ್ಧ ನಡೆದ ಒಟ್ಟು ದಿನಗಳು | ೧೮ |
| ಯುದ್ಧದಲ್ಲಿಯ ಸೈನಿಕರ ಸಂಖ್ಯೆ (ಅಕ್ಷೋಹಿಣಿಗಳಲ್ಲಿ) | ೧೮ |
| ಮಹಾಭಾರತ ಗ್ರಂಥದಲ್ಲಿಯ ಪರ್ವಗಳು | ೧೮ |

ಅಕ್ಷೋಹಿಣಿ
- ೨೧೮೭೦ ಆನೆಗಳು — ೨+೧+೮+೭+೦=೧೮
- ೨೧೮೭೦ ರಥಗಳು — ೨+೧+೮+೭+೦=೧೮
- ೬೫೬೧೦ ಕುದುರೆಗಳು — ೬+೫+೬+೧+೦=೧೮
- ೧,೦೯೩೫೦ ಕಾಲಾಳುಗಳು — ೧+೦+೯+೩+೫+೦=೧೮

ಮೋಕ್ಷಸೌಧ ಸೋಪಾನಗಳು*
- ಅಂತಃಕರಣ ಚತುಷ್ಟಯ -೧
- ಪಂಚಪ್ರಾಣಗಳು -೫
- ಪಂಚ ಜ್ಞಾನೇಂದ್ರಿಯಗಳು -೫
- ಪಂಚ ಕರ್ಮೇಂದ್ರಿಯಗಳು-೫
- ದೇಹ -೧
- ದೃಶ್ಯ -೧

೧+೫+೫+೫+೧+೧=೧೮

| | |
|---|---|
| ಮನುಜನಿಗೆ 'ಮೈನರ್' ತೀರುವ ಕಾಲ (ವರ್ಷಗಳಲ್ಲಿ) | ೧೮ |
| ದೇವಾಲಯಕ್ಕೆ ಮೆಟ್ಟಿಲುಗಳು | ೧೮ |
| ಯಜ್ಞಗಳಲ್ಲಿ ಋತ್ವಿಕ್ಕುಗಳು | ೧೮ |
| ಪ್ರಪ್ರಥಮ ಉಪನಿಷತ್ತು 'ಈಶಾವಾಸ್ಯ'ದಲ್ಲಿಯ ಮಂತ್ರಗಳು | ೧೮ |
| ಗೀತೆಯ ೨ನೆಯ ಅಧ್ಯಾಯದಲ್ಲಿ 'ಆತ್ಮವರ್ಣನೆ' ಶ್ಲೋಕಗಳು | ೧೮ |
| ಗೀತೆಯ ೨ನೆಯ ಅಧ್ಯಾಯದಲ್ಲಿ ಸ್ಥಿತಪ್ರಜ್ಞನ ಲಕ್ಷಣ ಶ್ಲೋಕಗಳು | ೧೮ |
| ದುರ್ಗಾದೇವಿಯ ಭುಜಗಳು | ೧೮ |

ಸಾಂಖ್ಯ ಮತಾನುಸಾರದಲ್ಲಿ ೧೮ನೆಯ ಸಂಖ್ಯೆ "ಸೋಽಹಂ" ಭಾವವನ್ನು ಸೂಚಿಸುತ್ತದೆಂದು, ಇಲ್ಲವೆ **'ಅಹಂ ಬ್ರಹ್ಮಾಸ್ಮಿ'** ಎನ್ನುವ ಮಹಾವಾಕ್ಯದ ಅರ್ಥವನ್ನು ಸ್ಫುರಿಸುವಂತೆ ಮಾಡುತ್ತದೆಂದು ಹಿರಿಯರು ಹೇಳುವರು.

---

* **ದೃಶ್ಯಂ ದೇಹಂಚ ವಾಗಾದಿ ಶ್ರೋತ್ರಾದೀಂದ್ರಿಯ ಪಂಚಕಮ್ ಪ್ರಾಣಾದಿ ಪಂಚಕಮ್ ಚೈವ ತಥಾಂತಃಕರಣಮೇವ ಚ**
**ಮುಕ್ತಿ ಸೌಧಸ್ಯ ಸೋಪಾನಾ ಅಷ್ಟಾದಶ ಇತೀರಿತಾಃ ಏತಾನ್ಕ್ರಮೇಣ ಚಾರುಹ್ಯ ಬ್ರಹ್ಮಭೂಯಾಯ ಕಲ್ಪತೇ**

ತಾ।। ದೃಶ್ಯವು, ದೇಹವು, ಪಂಚಕರ್ಮೇಂದ್ರಿಯಗಳು, ಪಂಚಜ್ಞಾನೇಂದ್ರಿಯಗಳು, ಪಂಚ ಪ್ರಾಣಗಳು, ಅಂತಃಕರಣ ಚತುಷ್ಟಯ- ಎನ್ನುವ ಈ ಹದಿನೆಂಟು, ಮೋಕ್ಷ ಸೌಧಕ್ಕೆ ಮೆಟ್ಟಿಲುಗಳೆಂದು ಹೇಳಲಾಗಿದೆ. ಇವುಗಳನ್ನು ಕ್ರಮವಾಗಿ ದಾಟಿದ ಮುಮುಕ್ಷು ಪರಬ್ರಹ್ಮ ಸ್ವರೂಪನಾಗುತ್ತಾನೆ.

## ಅಧ್ಯಾಯಾನುಕ್ರಮವಾಗಿ ಗೀತೆಯಲ್ಲಿ ವ್ಯಕ್ತಿಗಳು ಹೇಳಿರುವ ಶ್ಲೋಕಗಳ ಸಂಖ್ಯೆ

| ಅಧ್ಯಾಯ | ಧೃತರಾಷ್ಟ್ರ | ಸಂಜಯ | ಅರ್ಜುನ | ಶ್ರೀಕೃಷ್ಣ | ಅಧ್ಯಾಯದಲ್ಲಿಯ ಒಟ್ಟು ಶ್ಲೋ.ಸಂಖ್ಯೆ | ಆಯಾ ವ್ಯಕ್ತಿಗಳು ಹೇಳಿದ ಒಟ್ಟು ಶ್ಲೋಕಗಳ ಸಂಖ್ಯೆ |
|---|---|---|---|---|---|---|
| ೧ | ೧ | ೨೫ | ೨೧ | - | ೪೭ | |
| ೨ | - | ೩ | ೬ | ೬೩ | ೭೨ | |
| ೩ | - | - | ೩ | ೪೦ | ೪೩ | |
| ೪ | - | - | ೧ | ೪೧ | ೪೨ | ಶ್ರೀಕೃಷ್ಣ.... ೫೭೪ |
| ೫ | - | - | ೧ | ೨೮ | ೨೯ | ಅರ್ಜುನ .... ೮೫ |
| ೬ | - | - | ೫ | ೪೨ | ೪೭ | ಸಂಜಯ .... ೪೧ |
| ೭ | - | - | - | ೩೦ | ೩೦ | ಧೃತರಾಷ್ಟ್ರ .... ೧ |
| ೮ | - | - | ೨ | ೨೬ | ೨೮ | ಒಟ್ಟು - ೭೦೧ |
| ೯ | - | - | - | ೩೪ | ೩೪ | ಗೀತಾ ಶ್ಲೋಕಗಳು |
| ೧೦ | - | - | ೭ | ೩೫ | ೪೨ | |
| ೧೧ | - | ೮ | ೩೩ | ೧೪ | ೫೫ | |
| ೧೨ | - | - | ೧ | ೧೯ | ೨೦ | |
| ೧೩ | - | - | ೧ | ೩೪ | ೩೫ | |
| ೧೪ | - | - | ೧ | ೨೬ | ೨೭ | |
| ೧೫ | - | - | - | ೨೦ | ೨೦ | |
| ೧೬ | - | - | - | ೨೪ | ೨೪ | |
| ೧೭ | - | - | ೧ | ೨೭ | ೨೮ | |
| ೧೮ | - | ೫ | ೨ | ೭೧ | ೭೮ | |
| | ೧ | ೪೧ | ೮೫ | ೫೭೪ | ೭೦೧ | |

## ಗೀತಾ ಶ್ಲೋಕಗಳ ಛಂದೋವಿವರಣೆ

ಗೀತೆಯಲ್ಲಿ ಐದು ಛಂದಸ್ಸುಗಳನ್ನು ಉಪಯೋಗಿಸಲ್ಪಡಲಾಗಿದೆ. ಅವು 'ಅನುಷ್ಟುಪ್, ಇಂದ್ರವಜ್ರ, ಉಪೇಂದ್ರವಜ್ರ, ಉಪಜಾತಿ, ವಿಪರೀತ ಪೂರ್ವ' ಎನ್ನುವವು. ಯಾವ ಯಾವ ಅಧ್ಯಾಯಗಳಲ್ಲಿ ಯಾವ ಯಾವ ಶ್ಲೋಕಗಳು ಯಾವ ಯಾವ ಛಂದಸ್ಸಿನಲ್ಲಿ ರಚಿಸಲ್ಪಟ್ಟಿವೆಯೋ ಆ ವಿವರಗಳನ್ನು ಈ ಕೆಳಗೆ ಕೊಡಲಾಗಿದೆ. ಅನುಷ್ಟಪ್ ಛಂದಸ್ಸಿನ ಶ್ಲೋಕಗಳನ್ನು ಬಿಟ್ಟು ಮಿಕ್ಕ ಶ್ಲೋಕಗಳೆಲ್ಲವನ್ನೂ ಕೊಡಲಾಗಿದೆ.

| ಛಂದಸ್ಸು | ಅಧ್ಯಾಯ | ಶ್ಲೋಕಗಳ ನಂಬರ್ | ಒಟ್ಟು | |
|---|---|---|---|---|
| ಇಂದ್ರವಜ್ರ | ೨ | ೭, ೨೯ | ೨ | |
| ಇಂದ್ರವಜ್ರ | ೮ | ೨೮ | ೧ | |
| ಇಂದ್ರವಜ್ರ | ೯ | ೨೦ | ೧ | |
| ಇಂದ್ರವಜ್ರ | ೧೧ | ೨೦, ೨೨, ೨೭, ೩೦ | ೪ | ಅನುಷ್ಟುಪ್ - ೬೪೬ ಶ್ಲೋ. |
| ಇಂದ್ರವಜ್ರ | ೧೫ | ೫, ೧೫ | ೨ | ಇಂದ್ರವಜ್ರ - ೧೦ ಶ್ಲೋ. |
| ಉಪೇಂದ್ರವಜ್ರ | ೧೧ | ೧೮, ೨೮, ೨೯, ೪೫ | ೪ | ಉಪೇಂದ್ರವಜ್ರ - ೪ ಶ್ಲೋ. |
| ಉಪಜಾತಿ | ೨ | ೫, ೬, ೮, ೨೦, ೨೨, ೭೦ | ೬ | ಉಪಜಾತಿ - ೩೭ ಶ್ಲೋ. |
| ಉಪಜಾತಿ | ೮ | ೯, ೧೦, ೧೧ | ೩ | ವಿಪರೀತಪೂರ್ವ - ೪ ಶ್ಲೋ |
| ಉಪಜಾತಿ | ೯ | ೨೧ | ೧ | ಗೀತೆಯಲ್ಲಿ ಒಟ್ಟು - ೭೦೧ ಶ್ಲೋ |
| ಉಪಜಾತಿ | ೧೧ | ೧೫, ೧೬, ೧೭, ೧೯, ೨೧, ೨೩, ೨೪, ೨೫, ೨೬, ೩೧, ೩೨, ೩೩ | ೨೪ | |

| | | | | |
|---|---|---|---|---|
| | | ೩೪, ೩೬, ೩೮, ೪೦, ೪೧, ೪೨<br>೪೩, ೪೬, ೪೭, ೪೮, ೪೯, ೫೦ | | |
| ಉಪಜಾತಿ | ೧೫ | ೨, ೩, ೪ | ೩ | |
| ವಿಪರೀತಪೂರ್ವ | ೧೧ | ೩೫, ೩೭, ೩೯, ೪೪ | ೪ | |

# ಗೀತಾ ಸ್ತೋತ್ರ ಕದಂಬ

೧. ಇದಂ ಗೀತಾಶಾಸ್ತ್ರಂ ಪರಮಪುರುಷಾರ್ಥೈಕ್ಯ ನಿಲಯಂ
ತ್ರಿಕಾಂಡಂ ವೇದಾರ್ಥಂ ಸಕಲ ಮಿಹ ಸಂಗೃಹ್ಯ ಕಥಿತಂ
ಸ್ವಯಂ ಶ್ರೀಕೃಷ್ಣೇನ ಶ್ರುತಿವಿಶದತತ್ವೇನ ವಿಭುನಾ
ಜಪಾದ್ಧ್ಯಾನಾಜ್ಞಾ ನಾಚ್ಛ್ರುತಮಪಿ ಫಲತ್ಯೇವ ಸುಧಿಯಾಂ

ಈ ಗೀತಾ ಶಾಸ್ತ್ರವು ಪರಮ ಪುರುಷಾರ್ಥವಾದ ಮೋಕ್ಷಕ್ಕೆ ನಿಲಯ. ಕಾಂಡತ್ರಯಾತ್ಮಕವಾದ ವೇದದ ಅರ್ಥವೆಲ್ಲವನ್ನೂ ಸಂಗ್ರಹಿಸಲ್ಪಟ್ಟಿದ್ದಾಗಿ ಸರ್ವವ್ಯಾಪಕನಾದ ಶ್ರೀಕೃಷ್ಣಪರಮಾತ್ಮನಿಂದ ಇಲ್ಲಿ ವಿಶದವಾಗಿ ಹೇಳಲ್ಪಟ್ಟಿದೆ. ಆದ್ದರಿಂದ ಇದನ್ನು ಜಪಿಸಿ, ಧ್ಯಾನಿಸಿ, ಶ್ರವಣಮಾಡಿ ಅದರ ಜ್ಞಾನ ಸಂಪಾದಿಸುವ ಬುದ್ಧಿವಂತರಿಗೆ ಅದು ತಪ್ಪದೆ ಫಲವನ್ನು ಕೊಡುತ್ತದೆ.

೨. ರಥಾ ಕೇಚಿದ್ಯೋಗೇ ವಿಜಿತಕರಣಾಃ ಸಂಯತಧಿಯಃ
ಕ್ರಿಯಾಜಾಲೇ ಕೇಚಿತ್ಸುಖಲವರಸಾಸ್ವಾದನಪರಾಃ
ರಥಾಃ ಶಾಸ್ತ್ರಾಭ್ಯಾಸೇ ವಿಶದಮತಯಃ ಕೇಚಿ ದಜಡಾ
ವಯಂತು ಶ್ರೀಕಾಂತಾನನವಚನ ಮಾಸ್ವಾದ್ಯ ಕೃತಿನಃ

ಕೆಲವರು ತಮ್ಮ ಬುದ್ಧಿಯನ್ನು ಸಂಯಮಗೊಳಿಸಿ, ಇಂದ್ರಿಯಗಳನ್ನು ಜಯಿಸಿ ಯೋಗದಲ್ಲಿ ಆಸಕ್ತಿಯುಳ್ಳವರಾಗಿದ್ದಾರೆ. ಮತ್ತೆ ಕೆಲವರು ಸ್ವಲ್ಪ ಸುಖಕ್ಕೋಸ್ಕರ ಅನೇಕ ಕ್ರಿಯಾಕಾಂಡಗಳಲ್ಲಿ ನಿಮಗ್ನರಾಗಿದ್ದಾರೆ. ಕೆಲವರು ವಿವೇಕವಂತರು ತಮ್ಮ ಬುದ್ಧಿಯನ್ನು ನಿರ್ಮಲಗೊಳಿಸಿಕೊಂಡು ಶಾಸ್ತ್ರಾಭ್ಯಾಸದಲ್ಲಿ ನಿರತರಾಗಿದ್ದಾರೆ. ಆದರೆ, ನಾವು, ಲಕ್ಷ್ಮೀಪತಿಯಾದ ಶ್ರೀಕೃಷ್ಣ ಪರಮಾತ್ಮನ ಮುಖಾರವಿಂದದಿಂದ ಹೊರಬಿದ್ದ ವಾಕ್ಯಗಳನ್ನು (ಗೀತಾಶಾಸ್ತ್ರವನ್ನು) ಸೇವಿಸಿ ಕೃತಾರ್ಥರಾದೆವು.

೩. ವಾರ್ಷ್ಣೇಯ ಬ್ರಹ್ಮಶೈಲಾ ದೃಜುಶತಪಥಗಾ ಜ್ಞಾನವಿಜ್ಞಾನಕೂಲಾ
ಪಾರ್ಥಸ್ಯ ಪ್ರಾರ್ಥನಾಥ ಶ್ಚಿರ ಮಮೃತವಹಾ ಪ್ರತ್ಯಗಾನಂದಸಿಂಧುಮ್
ಸಂಪ್ರಾಪ್ತಾರ್ಥಪ್ರವಾಹಪ್ರಪತಿತ ವಿತತಾಶ್ವತ್ಥ ಮುನ್ಮೂಲಯಂತೀ
ಗೀತಾ ಸ್ರೋತಾ ನಿಮಜ್ಜ್ಯ ಸಕಲ ಕಲಿಮಲಂ ಸ್ವರ್ಧುನೀಯಂ ಧುನೀತೇ.

ಪರಬ್ರಹ್ಮಸ್ವರೂಪನಾದ ಶ್ರೀಕೃಷ್ಣಮೂರ್ತಿಯೆನ್ನುವ ಪರ್ವತ ಶಿಖರದಿಂದ ಅರ್ಜುನನ ಪ್ರಾರ್ಥನೆಯಿಂದ ಉದ್ಭವಿಸಿದ್ದು, ವಕ್ರಗಳಿಲ್ಲದೆ ಹೆಚ್ಚು ಮಾರ್ಗಗಳಿಂದ ಕೂಡಿದ್ದು, ಜ್ಞಾನ ವಿಜ್ಞಾನಗಳೆಂಬ ತೀರ್ಥಗಳನ್ನು ಹೊಂದಿದ್ದು, ಶಾಶ್ವತವಾದ ಅಮೃತ ಪ್ರವಾಹವಾಗಿದ್ದು, ಪ್ರತ್ಯಗಾತ್ಮವೆನ್ನುವ ಆನಂದ ಸಮುದ್ರವನ್ನು ಸೇರುತ್ತಿರುವ, ಪರಮಾರ್ಥವೆಂಬ ಪ್ರವಾಹಕ್ಕೆ ಅಡ್ಡಲಾಗಿ ಬಿದ್ದಿರುವ (ಸಂಸಾರ ರೂಪ) ಅಶ್ವತ್ಥ ವೃಕ್ಷವನ್ನು ಸಮೂಲವಾಗಿ ಛೇದಿಸಿ ಹಾಕುವ, ತನ್ನಲ್ಲಿ ಮುಳುಗುವವರ ಕಲಿಕಲ್ಮಷವನ್ನು ತೊಲಗಿಸಿ ಹಾಕುವಂತಹ **ಗೀತೆ**, ನಿರ್ಮಲ ಗಂಗಾ ಪ್ರವಾಹದಂತೆ ಶೋಭಿಸುತ್ತಿದೆ.

೪. ಆಚಾರ್ಯಾಃ ಸಂತಿ ಕುತ್ರಾ ಪ್ಯಥಿವಿಮಲಧಿಯೋ ವೇದಶಾಸ್ತ್ರಾಗಮಾನಾಂ
ದುಷ್ಪ್ರಾಪಸ್ತಾವದಾಸ್ತೇ ತ್ರಿಜಗತಿ ನಿತರಾ ಮಾತ್ಮ ತತ್ತ್ವೋಪದೇಷ್ಟಾ
ಏವಂ ಸತ್ಯರ್ಜುನಸ್ಯಾದ್ಭುತ ವಿಕಲವತೋ ವರ್ಣ್ಯತೇ ಕಿನ್ನು ಭಾಗ್ಯಂ
ಯಸ್ಯಾಚಾರ್ಯಸ್ಯ ಹೇತೋಃ ಸ್ವಯ ಮುಪನಿಷದಾ ಮರ್ಥ ಆವಿರ್ಬಭೂವ

ವೇದಶಾಸ್ತ್ರಗಳನ್ನು ತಿಳಿದವರು, ಅತಿ ನಿರ್ಮಲಚಿತ್ತರಾದ ಗುರುಗಳು ಅಲ್ಲಲ್ಲಿ ಸಿಗಬಹುದು. ಆದರೆ ಕೇವಲ ಆತ್ಮತತ್ತ್ವವನ್ನು, ಅನುಭವ ಪೂರ್ವಕವಾಗಿ ಬೋಧಿಸುವ ಮಹನೀಯರು ಮೂರು ಲೋಕಗಳಲ್ಲಿಯೂ ಬಹಳ ವಿರಳ. ಹೀಗಿರಬೇಕಾದರೆ, ರಣರಂಗದಲ್ಲಿ ಬಂಧುಗಳು ಮುಂತಾದವರೊಂದಿಗೆ ವಿಕಲಚಿತ್ತನಾಗಿದ್ದ ಅರ್ಜುನನ ಭಾಗ್ಯವೇನೆಂದು ಹೇಳಬೇಕು ಆತನಿಗೆ ಗುರು ರೂಪದಲ್ಲಿ ಸಾಕ್ಷಾತ್ ಉಪನಿಷತ್ತುಗಳ ಸಾರವೇ ಮೂರ್ತೀಭವಿಸಿದೆ.

೫. ಕ್ವ ಶಾಸ್ತ್ರಂ ಗೀತಾಖ್ಯಂ ಹರಿಮುಖ ಸರೋಜಾ ದ್ವಿಗಲಿತಂ
ಕ್ವ ಚಾಸ್ಮಾಕಂ ಬುದ್ಧಿ ದ್ವಿಷಯವಿಷಪಙ್ಕೇ ನಿಪತಿತಾ
ತಥಾಪಿ ಶ್ರೀಕಾಂತಪ್ರಚುರಗುಣಾಲಕ್ಷ್ಮೀ ವಿರಚಿತಂ
ಕಟಾಕ್ಷಂ ಸ್ವಚ್ಛಾಚ್ಛಂ ಹ್ಯನುಸೃತವತಾಂ ಕಿಂ ನ ಸುಲಭಮ್

ಭಗವಂತನ ಮುಖಪದ್ಮದಿಂದ ಹೊರಬಿದ್ದ ಈ ಗೀತೆಯೆನ್ನುವ ಮಹಾಶಾಸ್ತ್ರವೆಲ್ಲಿ! ವಿಷಯಗಳೆನ್ನುವ ವಿಷಜಾಲದಲ್ಲಿ ನಿಮಗ್ನವಾದ ನಮ್ಮ ಬುದ್ಧಿಯೆಲ್ಲಿ! ಆದಾಗ್ಯೂ, ಅನಂತ ಸದ್ಗುಣ ಹಾಗೂ ನಿರ್ಮಲವಾದ ಆ ಲಕ್ಷ್ಮೀಪತಿಯ ಕಟಾಕ್ಷವನ್ನು ಗಳಿಸುವುದರಿಂದ ಅದು ಸುಲಭವಾಗಿಯೇ ಗ್ರಹಿಸಲ್ಪಡುವುದು.

೬. ವೇದೋದಧಿಪ್ರಮಥಿತಂ ವಾಸುದೇವ ಸಮುದ್ಧೃತಮ್
ಸಂತಃ ಪಿಬಂತಿ ಸತತಂ ಗೀತಾಮೃತ ರಸಾಯನಮ್

ವೇದಗಳೆನ್ನುವ ಕ್ಷೀರಸಮುದ್ರವನ್ನು ಮಥಿಸಿ ಶ್ರೀಕೃಷ್ಣಪರಮಾತ್ಮ ಕಡೆದು ತೆಗೆದ ಗೀತಾಮೃತವನ್ನು ಸತ್ಪುರುಷರು ನಿರಂತರ ಪಾನಮಾಡುತ್ತಿದ್ದಾರೆ.

೭. ಏಕಂ ಶಾಸ್ತ್ರಂ ದೇವಕೀಪುತ್ರ ಗೀತಂ
ಏಕೋ ದೇವೋ ದೇವಕೀಪುತ್ರಏವ
ಏಕ ಮಂತ್ರಸ್ತಸ್ಯ ನಾಮಾನಿಯಾನಿ
ಕರ್ಮಾಪ್ಯೇಕಂ ತಸ್ಯ ದೇವಸ್ಯ ಸೇವಾ

ಎಲ್ಲಾ ಶಾಸ್ತ್ರಗಳಿಗಿಂತ ದೇವಕೀ ಪುತ್ರನಾದ ಶ್ರೀಕೃಷ್ಣಮೂರ್ತಿ ಹಾಡಿರುವ ಗೀತಾಶಾಸ್ತ್ರವೇ ಉನ್ನತವಾದುದು. ದೇವತೆಗಳಲ್ಲೆಲ್ಲಾ ದೇವಕೀ ಸುತನಾದ ಶ್ರೀಕೃಷ್ಣನೇ ಉತ್ತಮನು. ಮಂತ್ರಗಳೆಲ್ಲವುಗಳಲ್ಲಿ ಶ್ರೀಕೃಷ್ಣನ ನಾಮಾವಳಿಯೇ ಸರ್ವಶ್ರೇಷ್ಠ. ಕರ್ಮಗಳಲ್ಲಿ ಶ್ರೀಕೃಷ್ಣನ ಸೇವೆಯೇ ಬಹಳ ವಿಶೇಷವಾದುದು.

**ಭಾರತೇ ಸರ್ವವೇದಾರ್ಥೋ ಭಾರತಾರ್ಥಶ್ಚ ಕೃತ್ಸ್ನಶಃ**
**ಗೀತಾಯಾಮಸ್ತಿ ತೇನೇಯಂ ಸರ್ವಶಾಸ್ತ್ರಮಯೀ ಮತಾ**

ಸಮಸ್ತ ವೇದಗಳ ಸಾರವು ಭಾರತದಲ್ಲಿದೆ. ಭಾರತದ ಸಾರವೆಲ್ಲವೂ ಗೀತೆಯಲ್ಲಿದೆ. ಆದ್ದರಿಂದ ಭಗವದ್ಗೀತೆ ಸರ್ವಶಾಸ್ತ್ರಮಯವೆಂದು ಹೇಳಲ್ಪಡುತ್ತಿದೆ.

**ಶ್ರೀ ಗೋವಿಂದಮುಖಾರವಿಂದ ಮಧುನಾಮಿಷ್ಟಂ ಮಹಾಭಾರತೇ**
**ಗೀತಾಖ್ಯಂ ಪರಮಂ ರಹಸ್ಯಮೃಷಿಣಾ ವ್ಯಾಸೇನ ವಿಖ್ಯಾಪಿತಮ್**
**ವ್ಯಾಖ್ಯಾತಂ ಭಗವತ್ಪದೈಃ ಪ್ರತಿಪದಂ ಶ್ರೀಶಂಕರಾಖ್ಯೈಃ ಪುನ**
**ರ್ವಿಸ್ಪಷ್ಟಂ ಮಧುಸೂದನೇನ ಮುನಿನಾ ಸ್ವಜ್ಞಾನಶುದ್ಧ್ಯೈ ಕೃತಂ**

ಗೋವಿಂದನಾದ ಶ್ರೀಕೃಷ್ಣಪರಮಾತ್ಮನ ಮುಖಪದ್ಮದಿಂದ ಹೊರ ಬಂದುದು, ಅತ್ಯಂತ ಮಧುರವಾದುದು ಆದ ಗೀತೆ ಪರಮರಹಸ್ಯ ವಾದುದು. ಮಹಾಭಾರತದಲ್ಲಿ ವ್ಯಾಸಮಹರ್ಷಿಯಿಂದ ಪ್ರಕಟಿಸಲ್ಪಟ್ಟಿದೆ. ಶ್ರೀಶಂಕರ ಭಗವತ್ಪಾದರು ಅದಕ್ಕೆ ವಿಪುಲವಾಗಿ ವ್ಯಾಖ್ಯೆ ಬರೆದಿರುವರು. ಮತ್ತೆ ಶ್ರೀ ಮಧುಸೂದನಸರಸ್ವತಿಗಳು ಸ್ವಕೀಯ ಜ್ಞಾನಶುದ್ಧಿಗಾಗಿ ಅದರ ಭಾವವನ್ನು ಲೋಕಕ್ಕೆ ಸ್ಪಷ್ಟವಾಗಿ ತಿಳಿಸಿದರು.

**ಭಗವದ್ಗೀತಾ ಕಿಂಚಿ ದಧೀತಾ**
**ಗಂಗಾಜಲಲವಕಣಿಕಾ ಪೀತಾ**
**ಸಕೃದಪಿ ಯೇನ ಮುರಾರಿಸಮರ್ಚಾ**
**ತಸ್ಯ ಕರೋತಿ ಯಮೋಽಪಿ ನ ಚರ್ಚಾಮ್**

ಯಾವನು ಭಗವದ್ಗೀತೆಯನ್ನು ಸ್ವಲ್ಪವಾದರೂ ಅಧ್ಯಯನ ಮಾಡುವನೋ, ಗಂಗಾಜಲವನ್ನು ಸ್ವಲ್ಪವಾದರೂ ಕುಡಿಯುವನೋ, ವಿಷ್ಣುಮೂರ್ತಿಯನ್ನು ಒಂದು ಪರ್ಯಾಯವಾದರೂ ಪೂಜಿಸುವನೋ ಅಂತಹವನ ಬಗ್ಗೆ ಯಮನು ಚರ್ಚಿಸುವುದಿಲ್ಲ. (ಮರಣರಾಹಿತ್ಯ ಪದವಿಯನ್ನು ಆತ ಹೊಂದುವನೆಂದು ಇದರ ಅರ್ಥ).

**ಗೇಯಂ ಗೀತಾನಾಮಸಹಸ್ರಂ**
**ಧ್ಯೇಯಂ ಶ್ರೀಪತಿರೂಪ ಮಜಸ್ರಮ್**
**ನೇಯಂ ಸಜ್ಜನಸಂಗ್ಗೇ ಚಿತ್ತಂ**
**ದೇಯಂ ದೀನಜನಾಯ ಚ ವಿತ್ತಮ್**

ಭಗವದ್ಗೀತೆಯನ್ನು, ವಿಷ್ಣುಸಹಸ್ರ ನಾಮವನ್ನು ಪಠಿಸಬೇಕು. ವಿಷ್ಣುಮೂರ್ತಿಯ ರೂಪವನ್ನು ಯಾವಾಗಲೂ ಧ್ಯಾನಿಸಬೇಕು. ಸತ್ಪುರುಷರ ಸಾಂಗತ್ಯದಲ್ಲಿ ಚಿತ್ತವನ್ನು ಲೀನಗೊಳಿಸಬೇಕು. ದೀನಜನರಿಗೆ ಧನವನ್ನು ದಾನಮಾಡಬೇಕು.

**ಗೀಕಾರಂ ತ್ಯಾಗರೂಪಂ ಸ್ಯಾತ್ತತ್ತ್ವಬೋಧಂ ತಕಾರಕಮ್**
**ಗೀತಾವಾಕ್ಯ ಮಿದಂ ತತ್ತ್ವಂ ಜ್ಞೇಯಂ ಸರ್ವಮುಮುಕ್ಷುಭಿಃ**

'ಗೀ' ಎಂದರೆ ತ್ಯಾಗ; 'ತ' ಎಂದರೆ ತತ್ತ್ವಜ್ಞಾನ. ಈ ವಿಧವಾಗಿ ತ್ಯಾಗವನ್ನು, ತತ್ತ್ವಜ್ಞಾನವನ್ನು ಬೋಧಿಸುವುದೇ 'ಗೀತೆ', ಎಂದು ಮುಮುಕ್ಷುಗಳು ತಿಳಿಯಬೇಕು.

# ೪ ಗಕಾರಗಳು

**ಗೀತಾ ಗಂಗಾ ಚ ಗಾಯತ್ರೀ ಗೋವಿಂದೇತಿ ಹೃದಿಸ್ಥಿತೇ**
**ಚತುರ್ಗಕಾರಸಂಯುಕ್ತೇ ಪುನರ್ಜನ್ಮ ನ ವಿದ್ಯತೇ॥**

(ಮಹಾಭಾರತ)

ಗೀತೆ, ಗಂಗೆ, ಗಾಯತ್ರಿ, ಗೋವಿಂದ — ಎನ್ನುವ ಗಕಾರಗಳಿಂದ ಪ್ರಾರಂಭವಾಗುವ ನಾಲ್ಕನ್ನೂ ಯಾವನು ಹೊಂದಿರುವನೋ, ಅಂತಹವನಿಗೆ ಪುನರ್ಜನ್ಮವಿಲ್ಲ. (ಅಂದರೆ ಜನನ ಮರಣ ರೂಪವಾದ ಸಂಸಾರ ದುಃಖಗಳಿಂದ ಆತನು ವಿಮುಕ್ತಿಹೊಂದಿ ಕೈವಲ್ಯ ಪದವಿಯನ್ನಲಂಕರಿಸುವನು ಎಂದು ಅರ್ಥ.) ಗೀತಾಧ್ಯಯನ, ಗಂಗಾಸ್ನಾನ ಗಾಯತ್ರೀಜಪ, ಗೋವಿಂದನ ಧ್ಯಾನ ಜೀವನದಲ್ಲಿ ಬಹಳ ಮುಖ್ಯವೆಂದು ತಿಳಿಯಬೇಕು.

# ಗೀತಾಚಾರ್ಯ ಸ್ತೋತ್ರ

**ಯಸ್ಯಕೃಪಾಕಟಾಕ್ಷೇಣ ಸಂಸಾರೋಽಯಂ ಪ್ರಣಶ್ಯತಿ**
**ಸರ್ವಗಂ ಸಚ್ಚಿದಾತ್ಮಾನಂ ತಂ ವಂದೇ ಪಾರ್ಥಸಾರಥಿಮ್**

ಯಾರ ಕೃಪಾಕಟಾಕ್ಷದಿಂದ ಈ ಸಂಸಾರದುಃಖ ನಶಿಸಿ ಹೋಗುವುದೋ ಅಂತಹ ಸರ್ವವ್ಯಾಪಕನೂ ಸಚ್ಚಿದಾನಂದ ಸ್ವರೂಪಿಯೂ, ಅರ್ಜುನನ ಸಾರಥಿಯೂ ಆದ ಶ್ರೀಕೃಷ್ಣಪರಮಾತ್ಮನಿಗೆ ನಮಸ್ಕಾರಗಳು.

**ವ್ಯವಹಿತಪೃತನಾಮುಖಂ ನಿರೀಕ್ಷ್ಯ**
**ಸ್ವಜನವಧಾ ದ್ವಿಮುಖಸ್ಯ ದೋಷಬುದ್ಧ್ಯಾ**
**ಕುಮತಿ ಮಹರ ದಾತ್ಮವಿದ್ಯಯಾ ಯಃ**
**ಸ ಭವತು ಮೇ ಭಗವಾನ್ ಗತಿರ್ಮುಕುಂದಃ**

(ಭಾಗವತ-ಭೀಷ್ಮಸ್ತುತಿ)

ಎರಡು ಪಕ್ಷಗಳ ಸೇನೆಗಳು ಯುದ್ಧಕ್ಕೆ ಸಿದ್ಧರಾಗಿರುವುದನ್ನು ನೋಡಿ, ಸ್ವಜನರನ್ನು ವಧಿಸುವುದು ದೋಷವೆಂದು ತಿಳಿದು ಯುದ್ಧ ಮಾಡುವುದಿಲ್ಲವೆಂದು ನಿಂತಿದ್ದ ಅರ್ಜುನನ ವಿಪರೀತ ಬುದ್ಧಿಯನ್ನು ತನ್ನ ಆತ್ಮವಿದ್ಯೋಪದೇಶದಿಂದ ತೊಲಗಿಸಿದ ಶ್ರೀಕೃಷ್ಣ ಭಗವಂತನು ನನ್ನನ್ನು ಕಾಪಾಡಲಿ!

**ಯದಿಬ್ಧಾತರಿಂ ಪ್ರಾಪ್ಯ ಗೀತಾಪಯೋಧೌ**
**ನ್ಯಮಜ್ಜಂ ಗೃಹೀತಾತಿಚಿತ್ರಾರ್ಥ ರತ್ನಮ್**
**ನ ಚೋತ್ಥಾತು ಮಸ್ಮಿ ಪ್ರಭುರ್ಹರ್ಷ ಯೋಗಾತ್**
**ಸ ಮೇ ಕೌತುಕೀ ನಂದಸೂನುಃ ಪ್ರಿಯಃ ಸ್ಯಾತ್**

ಯಾರನ್ನು ಕುರಿತ ಭಗವದ್ಭಕ್ತಿಯೆನ್ನುವ ನೌಕೆಯಿಂದ ಗೀತಾ ಸಮುದ್ರದಲ್ಲಿ ವಿಹರಿಸಿ, ಮುಳುಗಿ ಅದರಲ್ಲಿ ಚಿತ್ರವಿಚಿತ್ರವಾದ (ಜ್ಞಾನ) ರತ್ನಗಳನ್ನು ತೆಗೆದು ಆನಂದಪರವಶನಾಗಿ ಮೇಲಕ್ಕೆ ಬರಲು ಸಾಧ್ಯವಾಗುತ್ತಿಲ್ಲವೋ ಆ ಪರಮಾನಂದರೂಪಿಯಾದ ಪ್ರಭು ಶ್ರೀಕೃಷ್ಣಪರಮಾತ್ಮನನಗೆ ಪ್ರಿಯವನ್ನು ಉಂಟುಮಾಡಲಿ!

**ಶೋಕಪಙ್ಕನಿಮಗ್ನಂ ಯಃ ಸಾಂಖ್ಯಯೋಗೋಪದೇಶತಃ**
**ಉಜ್ಜಹಾರಾರ್ಜುನಂ ಭಕ್ತಂ ಸ ಕೃಷ್ಣಃ ಶರಣಂ ಮಮ**

ಯಾರು ದುಃಖವೆಂಬ ಕೆಸರಿನಲ್ಲಿ ಹೂತುಹೋಗಿದ್ದ ಅರ್ಜುನನನ್ನು ತನ್ನ ಜ್ಞಾನೋಪದೇಶದಿಂದ ಉದ್ಧರಿಸಿದನೋ ಆ ಶ್ರೀ ಕೃಷ್ಣಮೂರ್ತಿಯೇ ನನಗೆ ಶರಣು.

**ಪೀತಂ ವಾಸೋ ದಧಾನಂ ವಿಜಯರಥಗತಂ ಬ್ರಹ್ಮರುದ್ರಾದಿವಂದ್ಯಂ**
**ಭೂಮೇರ್ಭಾರಂ ಜಿಹೀರ್ಷುಂ ನವಜಲದರುಚಂ ಶಂಖಚಕ್ರಾಬ್ಜಹಸ್ತಮ್**
**ಪಾರ್ಥವ್ಯಾಜೇನ ಲೋಕಂ ನಿಗಮಮನಸೃತೌ ಯೋಜಯಂತಂ ಮಹೇಶಂ**
**ಧ್ಯಾಯೇನ್ನಿತ್ಯಂ ಸುಸೇವ್ಯಂ ಸುಜನಮತಿಗೃಹಂ ಕೃಷ್ಣಮಾನಂದಕಂದಂ**

ಜರಿ ವಸ್ತ್ರ ಧರಿಸಿದವನು, ಅರ್ಜುನನ ರಥಸಾರಥಿ, ಬ್ರಹ್ಮರುದ್ರಾದಿ ದೇವತೆಗಳಿಗೆ ವಂದ್ಯನು, ಭೂಭಾರವನ್ನು ತೀರಿಸಲು ಅವತರಿಸಿದವನು, ನೀಲಮೇಘಕಾಂತಿಯುಳ್ಳವನು, ಕೈಯಲ್ಲಿ ಶಂಖ ಚಕ್ರ ಗದೆ ಪದ್ಮಗಳನ್ನು ಹೊಂದಿದವನು, ಅರ್ಜುನನ ನೆಪದಲ್ಲಿ ಲೋಕವೆಲ್ಲವನ್ನೂ ವೇದಮಾರ್ಗದಲ್ಲಿ ಪ್ರವರ್ತಿಸುವಂತೆ ಮಾಡಿದವನು, ಮಹೇಶ್ವರನು, ಸತ್ಪುರುಷರ ಪವಿತ್ರ ಬುದ್ಧಿಗಳಲ್ಲಿ ನಿವಸಿಸುವವನು, ಪರಮ ಸೇವೆಯನ್ನು ಪಡೆಯಲರ್ಹನಾದವನು, ಆನಂದನಿಲಯನೂ ಆದ ಶ್ರೀಕೃಷ್ಣ ಮೂರ್ತಿಯನ್ನು ನಿರಂತರವೂ ಧ್ಯಾನಿಸುವೆನು.

**ಕಾಂಡತ್ರಯಾತ್ಮಕಂ ಶಾಸ್ತ್ರಂ ಗೀತಾಖ್ಯಂ ಯೇನ ನಿರ್ಮಿತಮ್**
**ಆದಿಮಧ್ಯಾಂತಷಟ್ಕೇಷು ತಸ್ಮೈ ಭಗವತೇ ನಮಃ**

ಆದಿ ಮಧ್ಯಾಂತಗಳಲ್ಲಿ ಆರಾರು ಅಧ್ಯಾಯಗಳ ಒಂದು ಷಟ್ಕದಂತೆ ೧೮ ಅಧ್ಯಾಯಗಳ ಗೀತೆಯೆನ್ನುವ ಆಧ್ಯಾತ್ಮಿಕ ಶಾಸ್ತ್ರವನ್ನು ಯಾರು ಬೋಧಿಸಿದರೋ ಆ ಶ್ರೀಕೃಷ್ಣ ಭಗವಾನನಿಗೆ ನಮಸ್ಕಾರಗಳು.

**ಅಗ್ರೇ ಕೃತ್ವಾ ಕಮಪಿ ಚರಣಂ ಜಾನುನೈಕೇನ ತಿಷ್ಠನ್**
**ಪಶ್ಚಾತ್ಪಾರ್ಥಂ ಪ್ರಣಯರಸಜುಷಾ ಚಕ್ಷುಷಾವೇಕ್ಷಮಾಣಃ**
**ಸವ್ಯೇ ತೋತ್ರಂ ಕರಸರಸಿಜೇ ದಕ್ಷಿಣೇ ಜ್ಞಾನಮುದ್ರಾಂ**
**ಆಬಿಭ್ರಾಣೋರಥಮಧಿವಸನ್ ಪಾತು ನಃ ಸೂತವೇಷಃ**

ಒಂದು ಕಾಲು ಮುಂದಕ್ಕೆ ಚಾಚಿ, ಮತ್ತೊಂದು ಕಾಲಿನ ಮೊಣಕಾಲಿನ ಮೇಲೆ ರಥದಲ್ಲಿ ಕುಳಿತು, ಹಿಂದಿರುವ ಅರ್ಜುನನನ್ನು ಪ್ರೇಮಪೂರಿತ ನೇತ್ರಗಳಿಂದ ವೀಕ್ಷಿಸುತ್ತಿರುವ; ಎಡಗೈಯಲ್ಲಿ ಕುದುರೆ ಲಗಾಮನ್ನು ಹಿಡಿದು, ಬಲಗೈಯಲ್ಲಿ ಜ್ಞಾನಮುದ್ರೆಯನ್ನು ಧರಿಸಿರುವ ಸೂತವೇಷಧಾರಿಯಾದ ಶ್ರೀಕೃಷ್ಣನೇ ನಮ್ಮನ್ನು ರಕ್ಷಿಸು!

# ಗೀತೆಯ ಕೆಲವು ವಿಶೇಷಗಳು

೧) ಗೀತೆಯನ್ನು ಸಾಕ್ಷಾತ್ ಆಗಿ ಕೇಳಿದವನು ಅರ್ಜುನನೊಬ್ಬನೇ ಅಲ್ಲ. ಇನ್ನೂ ಮೂವರು ಇದ್ದಾರೆ. ಅರ್ಜುನನ ರಥದ ಮೇಲೆ ಕುಳಿತಿರುವ ಹನುಮಂತನೂ ಹಾಗು ವ್ಯಾಸಮಹರ್ಷಿಗಳೂ ಕೇಳಿದರು. ವ್ಯಾಸರ ಅನುಗ್ರಹದಿಂದ ಸಂಜಯನೂ ಕೇಳಿದನು. ಆದ್ದರಿಂದ ಗೀತೆಯನ್ನು ನೇರವಾಗಿ ಕೇಳಿದವರು ಒಟ್ಟು ನಾಲ್ಕು ಜನ.

೨) ಯುದ್ಧಾರಂಭದಲ್ಲಿ ಅರ್ಜುನನಿಗೆ ಉಂಟಾದ 'ಅಜ್ಞಾನಸಂಮೋಹ' ಶ್ರೀಕೃಷ್ಣನ ಮುಖದಿಂದ ಗೀತೆಯನ್ನು ಕೇಳಿದ ನಂತರ ತೊಲಗಿ ಹೋಯಿತೆಂದು ಸಾಮಾನ್ಯವಾಗಿ ಜನರು ಭಾವಿಸುತ್ತಾರೆ. ಅವರು **"ನಷ್ಟೋ ಮೋಹಃ ಸ್ಮೃತಿರ್ಲಬ್ಧಾ"** ಎನ್ನುವ (೧೮ನೆಯ ಅಧ್ಯಾಯದ ೭೩ನೇ) ಗೀತಾಶ್ಲೋಕವನ್ನು ಉದಾಹರಿಸುತ್ತಾರೆ. ನಿಜವೇ, ಆದರೆ ಗೀತೆಯ ೧೧ನೆಯ ಅಧ್ಯಾಯದ ಪ್ರಾರಂಭದಲ್ಲಿಯೇ ಅರ್ಜುನನು ಈ ಕೆಳಗಿನ ವಾಕ್ಯಗಳನ್ನು ಹೇಳಿರುವನು.

**ಮದನುಗ್ರಹಾಯ ಪರಮಂ ಗುಹ್ಯ ಮಧ್ಯಾತ್ಮ ಸಂಜ್ಞಿತಮ್**
**ಯತ್ತ್ವಯೋಕ್ತಂ ವಚಸ್ತೇನ ಮೋಹೋಽಯಂ ವಿಗತೋಮಮ (೧೧-೧)**

"ಮಹಾತ್ಮಾ! ನನ್ನ ಮೇಲೆ ಅನುಗ್ರಹಿಸಿ ನೀವು ಬೋಧಿಸಿದಂಥಹ ಅತಿರಹಸ್ಯವಾದ ಈ ಅಧ್ಯಾತ್ಮ ಜ್ಞಾನದಿಂದ ನನ್ನ ಅಜ್ಞಾನವು ತೊಲಗಿದೆ.

ಅರ್ಜುನನ ಮುಖದಿಂದ ಹೊರಬಿದ್ದ ಈ ವಾಕ್ಯದಿಂದ ಅರ್ಜುನನ ಮೋಹಭ್ರಾಂತಿಗಳು ಗೀತೆಯನ್ನು ಅರ್ಧ (ಹತ್ತು ಅಧ್ಯಾಯಗಳು) ಕೇಳುವಷ್ಟರಲ್ಲಿಯೇ ತೊಲಗಿ ಹೋಗಿದ್ದುವೆನ್ನುವುದು ಸ್ಪಷ್ಟವಾಗುತ್ತಿದೆ.

೩) 'ಗೀತಾ' ಗ್ರಂಥದ ಮಹೋದ್ದೇಶ 'ಗೀತಾ' ಪದವನ್ನು ತಲೆಕೆಳಗಾಗಿ ಓದಿದರೆ ತಿಳಿಯುವುದು. 'ಗೀತಾ' ಎನ್ನುವ ಪದವನ್ನು ತಿರುಗಿಸಿ ಓದಿದರೆ 'ತ್ಯಾಗಿ' ಆಗುವುದು ಅಂದರೆ ***'ತ್ಯಾಗಿಯಾಗು'*** ಎಂದು ಗೀತೆ ಬೋಧಿಸುತ್ತದೆ.

೪) 'ಅಶೋಚ್ಯಾನ್'- (೨-೧೧) ಎನ್ನುವ ಪದದಿಂದ ಶ್ರೀಕೃಷ್ಣನ ಬೋಧೆ ಪ್ರಾರಂಭವಾಗಿ ಮಧ್ಯದಲ್ಲಿ 'ನತ್ವಂ ಶೋಚಿತು ಮರ್ಹಸಿ' (೨-೨೭) ಮುಂತಾದ ಎಚ್ಚರಿಕೆಗಳಿಂದ ಕೂಡಿ ಕೊನೆಗೆ 'ಮಾ ಶುಚಃ' (೧೮-೬೬) ಎನ್ನುವ ವಾಕ್ಯದಿಂದ ಸಮಾಪ್ತಿಗೊಂಡಿದೆ. ಆದ್ದರಿಂದ ***'ಶೋಕರಾಹಿತ್ಯ'*** ವೇ ಗೀತೆಯ ಮುಖ್ಯ ಸಿದ್ಧಾಂತ ಎಂದು ಅರ್ಥವಾಗುತ್ತಿದೆ.

೫) ಗೀತೆಯಲ್ಲಿ ಒಟ್ಟು ೭೦೦ ಶ್ಲೋಕಗಳು ಇವೆ. ೧೩ನೆಯ ಅಧ್ಯಾಯದ ಪ್ರಾರಂಭದಲ್ಲಿ ಅರ್ಜುನನ ಪ್ರಶ್ನೆಯಾದ **'ಪ್ರಕೃತಿಂ ಪುರುಷಂ ಚೈವ'** ಎನ್ನುವ ಶ್ಲೋಕವನ್ನು ಕೂಡ ಸೇರಿಸಿದರೆ ಆ ಸಂಖ್ಯೆ ೭೦೧ ಆಗುತ್ತದೆ.

೬) ಗೀತೆಯನ್ನು ರಣರಂಗದಲ್ಲಿ ಶ್ರೀಕೃಷ್ಣಪರಮಾತ್ಮ ಅರ್ಜುನನಿಗೆ ಬೋಧಿಸಿದ ದಿನ ಮಾರ್ಗಶಿರ ಶುದ್ಧ ಏಕಾದಶಿ. ಅದು ಗೀತೆಯ ಜನ್ಮದಿನ. ಆದ್ದರಿಂದ ಆ ದಿನದಂದು ಜನರು ಗೀತಾಜಯಂತಿಯನ್ನು ಆಚರಿಸುವರು.

೭) ಮೊಟ್ಟಮೊದಲು ಗೀತೆಯನ್ನು ಹೊರಗೆ ಪ್ರಚಾರ ಮಾಡಿದವನು ಸಂಜಯ.

೮) 'ಧ' ಕಾರದಿಂದ ಗೀತೆ ಪ್ರಾರಂಭವಾಗಿ 'ಮ'ಕಾರದಿಂದ ಅಂತ್ಯಗೊಂಡಿದೆ. 'ಧ, ಮ' ಎನ್ನುವ ಈ ಎರಡು ಅಕ್ಷರಗಳ ಮಧ್ಯೆ ಗೀತೆಯೆಲ್ಲಾ ಬೆಳಗುತ್ತಿದೆ.* ಮೂರ್ತಿಭವಿಸಿದ ಧರ್ಮವೇ ಗೀತೆಯೆಂದು ತಿಳಿಸಲು ಬಹುಶಃ ಆ ಪದಸಮೂಹ ಏರ್ಪಟ್ಟಿರುವುದೇನೋ!

೯) ಒಬ್ಬರು ಹೊಸದಾಗಿ ಗೀತಾಪುಸ್ತಕವನ್ನು ಓದಲು ಪ್ರಾರಂಭಿಸಿ 'ಧರ್ಮಕ್ಷೇತ್ರೇ ಕುರುಕ್ಷೇತ್ರೇ' ಎನ್ನುವ ಮೊದಲ ಶ್ಲೋಕವನ್ನು ತಪ್ಪಾಗಿ 'ಧರ್ಮಂ ಕ್ಷೇತ್ರೇ ಕುರುಕ್ಷೇತ್ರೇ' ಎಂದು ಓದಿ ನಂತರ 'ಕ್ಷೇತ್ರೇ ಕ್ಷೇತ್ರೇ ಧರ್ಮಂ ಕುರು'(ಈ

* ಪ್ರಾಕೃತ ಭಾಷೆಯಲ್ಲಿ 'ಧರ್ಮ'ವನ್ನು 'ಧಮ್ಮ' ಎನ್ನುವರು. ದೃಷ್ಟಾಂತಕ್ಕೆ- ಧರ್ಮ ಪದ ಎನ್ನುವ ಬೌದ್ಧ ಗ್ರಂಥ 'ಧಮ್ಮಪದ' ಎಂದು ಕರೆಯಲ್ಪಟ್ಟಿದೆ. (ಧಮ್ಮ=ಧರ್ಮ)

ಕ್ಷೇತ್ರವೆನ್ನುವ ದೇಹದಿಂದ ಧರ್ಮ ಮಾಡು) ಎಂದು ಅದನ್ನು ಸಮಜಾಯಿಸಿಕೊಂಡರಂತೆ! ಈ ಒಂದು ಚಿಕ್ಕ ವಾಕ್ಯವನ್ನು ಆಚರಣೆಯಲ್ಲಿಟ್ಟುಕೊಂಡರೂ ಸಾಕು ಎಂದು ಭಾವಿಸಿ ಧರ್ಮಾಚರಣೆ ಪರಾಯಣರಾದರಂತೆ!

೧೦) ಗೀತೆಯನ್ನು ಹೇಳಿದವನು, ಕೇಳಿದವನು, ಬರೆದವನು ಕೃಷ್ಣನೇ.@

೧೧) ಗೀತೆ ಹಣೆ ಬರಹವನ್ನು ಅಳಿಸುವುದು. ತೆಲುಗಿನಲ್ಲಿ ಗೀತ ಎಂದರೆ ರೇಖೆ (ಗೀತೆಗೆ ಜೀವಿಯ ಬ್ರಹ್ಮ ಲಿಖಿತವನ್ನು ಅಳಿಸಿ ಹಾಕಿ ಅವನನ್ನು ಕರ್ಮಾತೀತ, ಜನ್ಮಾತೀತ ಕೈವಲ್ಯ ಪದವಿಗೆ ಏರಿಸುವ ಅಖಂಡ ಶಕ್ತಿಯಿದೆ.

೧೨) ಶ್ರೀ ವೇದವ್ಯಾಸರಿಗೆ '೧೮' ಸಂಖ್ಯೆಯ ಮೇಲೆ ಮಮಕಾರ ಹೆಚ್ಚು.

೧೩) ಗೀತೆಯ ಕೆಲವು ಅಧ್ಯಾಯಗಳಲ್ಲಿ ಶ್ಲೋಕಗಳು ಸಮಾನ ಸಂಖ್ಯೆಯಲ್ಲಿವೆ. ಅವು ಯಾವುವೆಂದರೆ:

೧ನೆಯ ಮತ್ತು ೬ನೆಯ ಅಧ್ಯಾಯಗಳಲ್ಲಿ ೪೭ ಶ್ಲೋಕಗಳಿವೆ.

೪ನೆಯ ಮತ್ತು ೧೦ನೆಯ ಅಧ್ಯಾಯಗಳಲ್ಲಿ ೪೨ ಶ್ಲೋಕಗಳಿವೆ.

೮ನೆಯ ಮತ್ತು ೧೭ನೆಯ ಅಧ್ಯಾಯಗಳಲ್ಲಿ ೨೮ ಶ್ಲೋಕಗಳಿವೆ.

೯ನೆಯ ಮತ್ತು ೧೩ನೆಯ ಅಧ್ಯಾಯಗಳಲ್ಲಿ ೩೪ ಶ್ಲೋಕಗಳಿವೆ.

೧೨ನೆಯ ಮತ್ತು ೧೫ನೆಯ ಅಧ್ಯಾಯಗಳಲ್ಲಿ ೨೦ ಶ್ಲೋಕಗಳಿವೆ.

೧೪) ಮಹಾಭಾರತದಲ್ಲಿ ಗೀತೆಯು ಭೀಷ್ಮಪರ್ವದ ೨೫ನೆಯ ಅಧ್ಯಾಯದಿಂದ ೪೨ನೆಯ ಅಧ್ಯಾಯದವರೆಗಿದೆ.

೧೫) ಪವಿತ್ರ ಸಂಸ್ಕೃತ ಗ್ರಂಥಗಳು 'ಅಥ' ಎನ್ನುವ ಮಂಗಳ ವಾಚಕದೊಡನೆ ಪ್ರಾರಂಭಗೊಂಡು 'ಇತಿ' ಎನ್ನುವ ಮಂಗಳವಾಚಕದೊಡನೆ ಅಂತ್ಯವಾಗುವುವು. ಗೀತೆಯ ಪ್ರಾರಂಭದ 'ಅಥ ವ್ಯವಸ್ಥಿತಾನ್ ದೃಷ್ಟ್ವಾ' ಎನ್ನುವ ವಾಕ್ಯದಲ್ಲಿ 'ಅಥ' ಎನ್ನುವ ಪದವೂ, ಅಂತಿಮ ಘಟ್ಟದಲ್ಲಿ 'ಇತಿ ಗುಹ್ಯತಮಂ ಶಾಸ್ತ್ರಂ' ಎನ್ನುವ ವಾಕ್ಯದಲ್ಲಿ 'ಇತಿ' ಎನ್ನುವ ಪದವೂ ಇವೆ. ಆದ್ದರಿಂದ ಆರ್ಷ ಸಂಪ್ರದಾಯವನ್ನು ಗೀತೆ ಕಾಪಾಡಿದಂತಾಗಿದೆ.

೧೬) ಕಲಿಯುಗಕ್ಕಿಂತ ೩೮ ವರ್ಷಗಳ ಮೊದಲು ಅಂದರೆ ದ್ವಾಪರ ಯುಗಾಂತರದಲ್ಲಿ ಗೀತೆ ಬೋಧಿಸಲ್ಪಟ್ಟಿತು. ಕಲಿಯುಗ ಪ್ರಾರಂಭವಾಗಿ ೨೦೦೦ಕ್ಕೆ ೫೧೦೧ ವರ್ಷಗಳಾಗಿವೆ. ಆದ್ದರಿಂದ ಗೀತೆ ಆವಿರ್ಭವಿಸಿ ೫೧೩೯ ವರ್ಷಗಳಾಗಿವೆ. (ಮಾರ್ಗಶಿರ ಶುದ್ಧ ಏಕಾದಶಿ ೧೦-೧೨-೨೦೦೦ಕ್ಕೆ).*

೧೭) ಶ್ರೀಕೃಷ್ಣನ ಅವತಾರ ಕಾಲವು (ಉಪಾಧಿ ವಯಸ್ಸು) ೧೨೫ ವರ್ಷಗಳು, ೭ ತಿಂಗಳು, ೮ ದಿನ, ೩೦ ಘಳಿಗೆ. ಗೀತೆಯನ್ನು ಬೋಧಿಸುವ ಸಮಯದಲ್ಲಿ ಶ್ರೀಕೃಷ್ಣನ ವಯಸ್ಸು ಸುಮಾರು ೮೭ ವರ್ಷಗಳು.

೧೮)(i) 'ಯೇನ ಸರ್ವಮಿದಂ ತತಮ್' ಎನ್ನುವ ವಾಕ್ಯ ಗೀತೆಯಲ್ಲಿ ಮೂರು ಸಾರಿ ಪ್ರಯೋಗವಾಗಿದೆ.** (ಯಾರಿಂದ ಈ ಸಮಸ್ತ ಜಗತ್ತು ವ್ಯಾಪಿಸಲ್ಪಟ್ಟಿದೆಯೋ ಅಂಥ ಪರಮಾತ್ಮ ಎಂದರ್ಥ)

(ii) 'ಮನ್ಮನಾಭವ ಮದ್ಭಕ್ತೋ ಮದ್ಯಾಜೀ ಮಾಂ ನಮಸ್ಕುರು' ಎನ್ನುವ ವಾಕ್ಯವು ಗೀತೆಯಲ್ಲಿ ಎರಡು ಸಾರಿ ಪ್ರಯೋಗಿಸಲ್ಪಟ್ಟಿದೆ. (೯ನೆಯ ಅಧ್ಯಾಯದ ೩೪ನೆಯ ಶ್ಲೋಕ ಮತ್ತೆ ೧೮ನೆಯ ಅಧ್ಯಾಯದ ೬೫ನೇ ಶ್ಲೋಕ) 'ನನ್ನಲ್ಲೇ ಚಿತ್ತವನ್ನಿರಿಸು, ನನ್ನ ಭಕ್ತನಾಗು, ನನ್ನನ್ನೇ ಅರ್ಚಿಸು, ನನ್ನನ್ನು ನಮಸ್ಕರಿಸು' ಎಂದರ್ಥ.

........................

# ಗೀತೆಯಲ್ಲಿ ಕೃಷ್ಣಾರ್ಜುನರ ಹೆಸರುಗಳು

ಗೀತೆಯಲ್ಲಿ ಶ್ರೀಕೃಷ್ಣಪರಮಾತ್ಮನನ್ನು ಈ ಕೆಳಗಿನ ನಾಮಧೇಯಗಳಿಂದ ಕರೆಯಲಾಗಿದೆ.

| | | |
|---|---|---|
| ಅಚ್ಯುತ | ಆದ್ಯ | ಕೇಶಿನಿಷೂದನ |
| ಅನಂತ | ಕಮಲಪತ್ರಾಕ್ಷ | ಗೋವಿಂದ |
| ಅಪ್ರತಿಮ ಪ್ರಭಾವ | ಕೃಷ್ಣ | ಜಗತ್ಪತಿ |
| ಅರಿಸೂದನ | ಕೇಶವ | ಜಗನ್ನಿವಾಸ |
| ಜನಾರ್ದನ | ಭೂತಭಾವನ | ವಾರ್ಷ್ಣೇಯ |
| ದೇವ | ಭೂತೇಶ | ವಾಸುದೇವ |
| ದೇವದೇವ | ಮಧುಸೂದನ | ವಿಶ್ವಮೂರ್ತಿ |
| ದೇವವರ | ಮಹಾತ್ಮ | ವಿಶ್ವೇಶ್ವರ |
| ದೇವೇಶ | ಮಹಾಬಾಹು | ವಿಷ್ಣು |
| ಪರಮೇಶ್ವರ | ಮಾಧವ | ಸರ್ವ |
| ಪುರುಷೋತ್ತಮ | ಯಾದವ | ಸಹಸ್ರಬಾಹು |
| ಪ್ರಭು | ಯೋಗಿ | ಹೃಷೀಕೇಶ |
| ಭಗವಂತ | ಯೋಗೇಶ್ವರ | |

ಗೀತೆಯಲ್ಲಿ ಅರ್ಜುನನಿಗೆ ಈ ಹೆಸರುಗಳನ್ನು ಕೊಡಲಾಗಿದೆ.

| | | | |
|---|---|---|---|
| ಅನಘ | ಕುರುಪ್ರವೀರ | ತಾತ | |
| ಅನಸೂಯ | ಕುರುನಂದನ | ದೇಹಭೃತಾಂವರ | ಭರತರ್ಷಭ |
| ಅರ್ಜುನ | ಕುರುಶ್ರೇಷ್ಠ | ಧನಂಜಯ | ಭರತಶ್ರೇಷ್ಠ |
| ಕಪಿಧ್ವಜ | ಕುರುಸತ್ತಮ | ಪರಂತಪ | ಭರತಸತ್ತಮ |
| ಕಿರೀಟಿ | ಕೌಂತೇಯ | ಪಾಂಡವ | ಭಾರತ |
| | ಗುಡಾಕೇಶ | ಪಾರ್ಥ | ಮಹಾಬಾಹು |
| | | ಪುರುಷರ್ಷಭ | ಸವ್ಯಸಾಚಿ |

---

@ ಇದರ ವಿವರ 'ಗೀತೆಯ ಅಮೋಘ ಶಕ್ತಿಗೆ ಕಾರಣ' ಎನ್ನುವ ಶೀರ್ಷಿಕೆಯ ಕೆಳಗೆ ತಿಳಿಸಲ್ಪಟ್ಟಿದೆ.

* ೨೦೦೦ ವರ್ಷದ ನಂತರ ಆಯಾ ವರ್ಷಗಳನ್ನು ಈ ಸಂಖ್ಯೆಗೆ ಕಲಸಿಕೊಂಡು ಓದಬೇಕು.

** 1) ಅವಿನಾಶಿ ತು ತದ್ವಿದ್ಧಿ ಏನ ಸರ್ವಮಿದಂ ತತಂ (೨-೧೭)

೨) ಯಸ್ಯಾಂತಃ ಸ್ಥಾನಿ ಭೂತಾನಿ ಏನ ಸರ್ವಮಿದಂ ತತಂ (೮-೨೨)

೩) ಯತಃ ಪ್ರವೃತ್ತಿರ್ಭೂತಾನಾಂ ಏನ ಸರ್ವಮಿದಂ ತತಂ (೧೮-೪೬)

# ಕೆಲವು ನಿತ್ಯ ಸ್ಮರಣೀಯ ಗೀತಾವಾಕ್ಯಗಳು

(ಔಷಧವನ್ನು ಸೇವಿಸಿದ ನಂತರ ರೋಗ ಶಮನಗೊಳ್ಳುವಂತೆ, ಭವರೋಗ ಶಮನ ಹೊಂದಲು ಔಷಧ ರೂಪದ ಭಗವದ್ಗೀತೆಯನ್ನು ಸೇವಿಸಬೇಕು. ನಿತ್ಯ ಜೀವನದಲ್ಲಿ ಗೀತೆಯನ್ನು ಅಳವಡಿಸಿಕೊಂಡಾಗ ಮಾತ್ರ ಸಂಸಾರ ದುಃಖವು ಶಮನ ಹೊಂದುವುದು. ಆದ್ದರಿಂದ ಸಮಯ ದೊರೆತಾಗಲೆಲ್ಲಾ ಸ್ಮರಿಸಲು ಹಾಗು ಮನನಮಾಡಲು ಕೆಲವು ಗೀತಾವಾಕ್ಯಗಳು ಯಾವಾಗಲೂ ಕೈಯಲ್ಲಿರಬೇಕು. ಕತ್ತಲಲ್ಲಿ ಪ್ರಯಾಣ ಮಾಡುತ್ತಿರುವವನಿಗೆ ದೀಪವೆಷ್ಟು ಉಪಯೋಗವಾಗಬಲ್ಲದೋ ಅಷ್ಟು ಪ್ರಯೋಜನವನ್ನು ಸಂಸಾರ ಗಾಢಾಂಧಕಾರದಲ್ಲಿ ದಿಕ್ಕು ತೋಚದೆ ತಲ್ಲಣಿಸುತ್ತಿರುವ ಜೀವಿಗೆ ಈ ಗೀತಾವಾಕ್ಯಗಳು ನೀಡುವುವು. ಆದ್ದರಿಂದ ಇಂತಹ ಮಹದ್ವಾಕ್ಯಗಳನ್ನು ನಿತ್ಯಜೀವನದಲ್ಲಿ ನಿರಂತರ ಸ್ಮೃತಿಸುತ್ತಾ ಇರುವುದಕ್ಕಾಗಿ ಅವುಗಳನ್ನು ಬಾಯಿಪಾಠ ಮಾಡುವುದಾಗಲಿ ಅಥವ ಮನೆಯ ಗೋಡೆಯ ಮೇಲೆ ಚೆನ್ನಾಗಿ ಕಾಣಿಸುವ ಹಾಗೆ ಬರೆದಿಟ್ಟುಕೊಳ್ಳುವುದು ಒಳ್ಳೆಯದು. ಫಲಕಗಳ ಮೇಲೆ ಬರೆಸಿ ಮನೆಯಲ್ಲಾಗಲಿ, ಆಶ್ರಮದಲ್ಲಾಗಲಿ, ಕೀಲಕ ಸ್ಥಾನದಲ್ಲಾಗಲಿ ಅವುಗಳನ್ನು ಇಟ್ಟು ಕಾರ್ಯ ನಿಮಗ್ನನಾಗಿರುವ ತನ್ನ ದೃಷ್ಟಿಯ ಮೇಲೆ ಅವು ಆಗಿಂದಾಗ ಬೀಳುವ ಹಾಗೆ ನೋಡಿಕೊಳ್ಳಬೇಕು. ಗೀತೆಯಲ್ಲಿಯ ವಾಕ್ಯಗಳೆಲ್ಲವೂ ಪ್ರಾಮುಖ್ಯವಾದವುಗಳಾಗಿದ್ದರೂ ಪಾಠಕರ ಸೌಕರ್ಯಕ್ಕೋಸ್ಕರ ಕೆಲವು ಮಹದ್ವಾಕ್ಯಗಳನ್ನು ಕೆಳಗೆ ಕೊಡಲಾಗಿದೆ.

| ಗೀತಾವಾಕ್ಯ | ತಾತ್ಪರ್ಯ |
|---|---|
| ೧) ಕ್ಷುದ್ರಂ ಹೃದಯದೌರ್ಬಲ್ಯಂ ತ್ಯಕ್ತ್ವೋತ್ತಿಷ್ಠ ಪರಂತಪ (೨-೩) | ಓ ಅರ್ಜುನಾ! ನೀಚವಾದ ಹೃದಯ ದುರ್ಬಲತೆಯನ್ನು ಬಿಟ್ಟು ಕರ್ತವ್ಯ ಮುಖಿನಾಗು. |
| ೨) ನಾಸತೋ ವಿದ್ಯತೇ ಭಾವೋ ನಾಭಾವೋ ವಿದ್ಯತೇ ಸತಃ (೨-೧೬) | ಇಲ್ಲದಿರುವುದಕ್ಕೆ ಇರುವಿಕೆಯಿಲ್ಲ ಇರುವುದಕ್ಕೆ ಇಲ್ಲದಿರುವಿಕೆಯಿಲ್ಲ (ಜಗತ್ತು ಇಲ್ಲದಿರುವುದು; ಆತ್ಮ ಇರುವುದು.) |
| ೨)(a) ನತ್ವೇವಾಹಂ ಜಾತುನಾಸಂ ನತ್ವಂ ನೇಮೇ ಜನಾಧಿಪಾಃ (೨-೧೨) | ನೀನು, ನಾನು, ಈ ರಾಜರು- ಹಾಗೂ ಬೇರೆ ಎಲ್ಲರೂ ಮೊದಲು, ಈಗ ಹಾಗು ಮುಂದೂ ಯಾವಾಗಲೂ ಇರುವವರೇ (ಆತ್ಮಕ್ಕೆ ವಿನಾಶವಿಲ್ಲ) |
| ೩) ನ ಹನ್ಯತೇ ಹನ್ಯಮಾನೇ ಶರೀರೇ (೨-೨೦) | ಶರೀರ ನಾಶವಾದರೂ ಆತ್ಮ ನಾಶವಾಗುವುದಿಲ್ಲ |
| ೪) ಸ್ವಲ್ಪಮಪ್ಯಸ್ಯ ಧರ್ಮಸ್ಯ ತ್ರಾಯತೇ ಮಹತೋ ಭಯಾತ್ (೨-೪೦) | ಧರ್ಮವು ಸ್ವಲ್ಪವೇ ಆದರೂ ಮಹಾ ಭಯದಿಂದ ಕಾಪಾಡುವುದು. |
| ೫) ಕರ್ಮಣ್ಯೇವಾಧಿಕಾರಸ್ತೇ ಮಾ ಫಲೇಷು ಕದಾಚನ (೨-೪೭) | ಕರ್ಮ ಮಾಡುವುದರಲ್ಲಿಯೇ ನಿನಗೆ ಅಧಿಕಾರವಿದೆಯಾಗಲಿ ಅದರ ಫಲಗಳಲ್ಲಿ ಇಲ್ಲ. |
| ೬) ಸಮತ್ವಂ ಯೋಗ ಉಚ್ಯತೇ (೨-೪೮) | (ಕಾರ್ಯಸಿದ್ಧಿಸಿದರೂ, ಸಿದ್ಧಿಸದೇ ಇದ್ದರೂ) ಸಮಬುದ್ಧಿ ಹೊಂದಿರುವುದೇ ಯೋಗವೆನಿಸಿಕೊಳ್ಳುವುದು |
| ೬)(a) ಯೋಗಸ್ಥಃ ಕುರು ಕರ್ಮಾಣಿ (೨-೪೮) | ದೈವ(ಆತ್ಮ)ದಲ್ಲಿ ಸ್ಥಿರವುಳ್ಳವನಾಗಿ ಕರ್ಮಗಳನ್ನು ಮಾಡು. |
| ೭) ಯೋಗಃ ಕರ್ಮಸು ಕೌಶಲಂ(೨-೫೦) | ಕರ್ಮಗಳಲ್ಲಿಯ ಕುಶಲತೆ (ನಿಷ್ಕಾಮಾಚರಣೆ)ಯನ್ನು ಯೋಗವೆನ್ನುವರು. (ಅಂತಹ ಯೋಗವನ್ನು ಅವಲಂಬಿಸು) |
| ೮) ಅಶಾಂತಸ್ಯ ಕುತಃ ಸುಖಮ್(೨-೬೬) | ಶಾಂತಿ (ಚಿತ್ತೋಪರತಿ)ಯಿಲ್ಲದವನಿಗೆ ಸುಖವೆಲ್ಲಿಯದು? |
| ೯) ಕರ್ಮಜ್ಯಾಯೋ ಹ್ಯಕರ್ಮಣಃ (೩-೮) | ಕರ್ಮವನ್ನು ಮಾಡದೆ ಇರುವುದಕ್ಕಿಂತ ಮಾಡುವುದೇ ಮೇಲು (ತಮೋಗುಣಿಗಿಂತ ಕಾರ್ಯಾಚರಣಾಶೀಲನೇ ಶ್ರೇಷ್ಠನು.) |
| ೧೦) ಯುಧ್ಯಸ್ವ ವಿಗತಜ್ವರಃ (೩-೩೦) | ಸಂತಾಪವಿಲ್ಲದವನಾಗಿ ಯುದ್ಧ ಮಾಡು (ಕಾರ್ಯಶೀಲನಾಗು) |
| ೧೧) ಜಹಿ ಶತ್ರುಂ ಮಹಾಬಾಹೋ! ಕಾಮರೂಪಂ ದುರಾಸದಮ್ (೩-೪೩) | ಓ ಅರ್ಜುನಾ! ಜಯಿಸಲು ಕಷ್ಟವಾದ ಕಾಮವೆನ್ನುವ ಶತ್ರುವನ್ನು ನಾಶ ಮಾಡು. |
| ೧೨) ಸರ್ವಂ ಕರ್ಮಾಖಿಲಂ ಪಾರ್ಥ ಜ್ಞಾನೇ ಪರಿಸಮಾಪ್ಯತೇ (೪-೩೩) | ಸಮಸ್ತ ಕರ್ಮಗಳು ಜ್ಞಾನದಲ್ಲಿ ಪರಿಸಮಾಪ್ತಿಗೊಳ್ಳುತ್ತವೆ. |
| ೧೩) ನ ಹಿ ಜ್ಞಾನೇನ ಸದೃಶಂ ಪವಿತ್ರಮಹ ವಿದ್ಯತೇ (೪-೩೮) | ಈ ಪ್ರಪಂಚದಲ್ಲಿ ಜ್ಞಾನಕ್ಕೆ ಸಮಾನವಾದ ವಸ್ತು ಮತ್ತೊಂದಿಲ್ಲ. |
| ೧೪) ಶ್ರದ್ಧಾವಾನ್ ಲಭತೇ ಜ್ಞಾನಂ (೪-೩೯) | ಶ್ರದ್ಧೆಯಿರುವವನೇ ಜ್ಞಾನವನ್ನು ಹೊಂದುವನು. |
| ೧೫) ನ ಸುಖಂ ಸಂಶಯಾತ್ಮನಃ (೪-೪೦) | ಮನಸ್ಸಿನಲ್ಲಿ ಸಂಶಯವಿಟ್ಟುಕೊಂಡಿರುವವನಿಗೆ ಸುಖವು ಎಂದೆಂದಿಗೂ ಲಭಿಸುವುದಿಲ್ಲ. |
| ೧೬) ವಿಗತೇಚ್ಛಾಭಯಕ್ರೋಧೋ ಯಸ್ಸದಾ ಮುಕ್ತ ಏವ ಸಃ (೫-೨೮) | ಕಾಮಕ್ರೋಧಭಯಾದಿಗಳು ಇಲ್ಲದೇ ಇರುವವನು ಯಾವಾಗಲೂ ಮುಕ್ತನೇ |
| ೧೭) ಜ್ಞಾತ್ವಾ ಮಾಂ ಶಾಂತಿಮೃಚ್ಛತಿ (೫-೨೯) | ನನ್ನನ್ನು (ಆತ್ಮವನ್ನು) ತಿಳಿದುಕೊಂಡು ಜೀವಿಯು ಪರಮಶಾಂತಿಯನ್ನು ಹೊಂದುತ್ತಿದ್ದಾನೆ. |
| ೧೮) ಉದ್ಧರೇದಾತ್ಮನಾತ್ಮಾನಂ (೬-೫) | ತನ್ನನ್ನು ತಾನೇ ಉದ್ಧರಿಸಿಕೊಳ್ಳಬೇಕು. |
| ೧೯) ಆತ್ಮಸಂಸ್ಥಂ ಮನಃ ಕೃತ್ವಾ ನ ಕಿಂಚಿದಪಿ ಚಿಂತಯೇತ್(೬-೨೫) | ಮನಸ್ಸನ್ನು ಆತ್ಮದಲ್ಲಿರಿಸಿ ಇತರೆ ಯಾವುದನ್ನೂ ಚಿಂತಿಸಬಾರದು. |

೨೦) ಅಭ್ಯಾಸೇನ ತು ಕೌಂತೇಯ ವೈರಾಗ್ಯೇಣ ಚ ಗೃಹ್ಯತೇ(೬-೩೫) — ಮನಸ್ಸನ್ನು ಅಭ್ಯಾಸದಿಂದಲೂ ವೈರಾಗ್ಯದಿಂದಲೂ ನಿಗ್ರಹಿಸಬೇಕು.

೨೧) ನ ಹಿ ಕಲ್ಯಾಣ ಕೃತ್ಕಶ್ಚಿತ್ ದುರ್ಗತಿಂ ತಾತ ಗಚ್ಛತಿ (೬-೪೦) — ಒಳ್ಳೆಯ ಕಾರ್ಯವನ್ನು ಮಾಡುವವನಿಗೆ ಎಂದೂ ದುರ್ಗತಿ ಉಂಟಾಗುವುದಿಲ್ಲ.

೨೨) ಮಯಿ ಸರ್ವಮಿದಂ ಪ್ರೋತಂ ಸೂತ್ರೇ ಮಣಿಗಣಾ ಇವ (೭-೭) — ದಾರದಲ್ಲಿ ಮಣಿಗಳು ಪೋಣಿಸಲ್ಪಟ್ಟಂತೆ ಸಮಸ್ತ ಜಗತ್ತು ನನ್ನನ್ನೇ ಆಶ್ರಯಿಸಿರುವುದು.

೨೩) ಮಾಮೇವ ಯೇ ಪ್ರಪದ್ಯಂತೇ ಮಾಯಾಮೇತಾಂ ತರಂತಿ ತೇ (೭-೧೪) — ನನ್ನನ್ನು ಯಾರು ಶರಣು ಹೊಂದುವರೋ ಅವರು ಮಾಯೆಯನ್ನು ದಾಟುವರು.

೨೪) ಜ್ಞಾನೀತ್ವಾತ್ಮೈವ ಮೇ ಮತಮ್ (೭-೧೮) — ಜ್ಞಾನಿ ನಾನೇ ಎಂದು ನ್ನ ನಿಶ್ಚಯವಾದ ಅಭಿಪ್ರಾಯ (ಜ್ಞಾನಿಗೂ ನನಗೂ ಭೇದವಿಲ್ಲ.)

೨೫) ವಾಸುದೇವಸ್ಸರ್ವಮಿತಿ (೭-೧೯) — ಸಮಸ್ತವೂ ವಾಸುದೇವನೇ! (ಪ್ರಪಂಚವೆಲ್ಲವೂ ಭಗವನ್ಮಯ)

೨೬) ತಸ್ಮಾತ್ಸರ್ವೇಷು ಕಾಲೇಷು ಮಾಮನುಸ್ಮರ ಯುಧ್ಯ ಚ (೮-೭) — ಆದ್ದರಿಂದ ಎಲ್ಲಾ ಕಾಲಗಳಲ್ಲಿಯೂ ನನ್ನನ್ನು ಸ್ಮರಿಸುತ್ತಾ ಯುದ್ಧಮಾಡು (ಸ್ವಧರ್ಮವನ್ನು ಆಚರಿಸು)

೨೭) ತೇಷಾಂ ನಿತ್ಯಾಭಿಯುಕ್ತಾನಾಂ ಯೋಗಕ್ಷೇಮಂ ವಹಾಮ್ಯಹಮ್ (೯-೨೨) — ಅನನ್ಯಚಿತ್ತದಿಂದ ನಿರಂತರವಾಗಿ ನನ್ನನ್ನು ಧ್ಯಾನಿಸುವ ಪುಣ್ಯಶೀಲರ ಯೋಗಕ್ಷೇಮವನ್ನು ನಾನೇ ವಹಿಸುವೆನು.

೨೮) ತತ್ಕುರುಷ್ವ ಮದರ್ಪಣಮ್ (೯-೨೭) — ನೀನು ಏನು ಮಾಡಿದರೂ ಅದನ್ನು ನನಗೆ ಅರ್ಪಿಸು.

೨೯) ನ ಮೇ ಭಕ್ತಃ ಪ್ರಣಶ್ಯತಿ (೯-೩೧) — ನನ್ನ ಭಕ್ತರು ಎಂದೆಂದಿಗೂ ಕೆಡುವುದಿಲ್ಲ (ನಾಶವಾಗುವುದಿಲ್ಲ).

೩೦) ಅನಿತ್ಯಮಸುಖಂ ಲೋಕಮಿಮಂ ಪ್ರಾಪ್ಯ ಭಜಸ್ವ ಮಾಮ್ (೯-೩೩) — ಅನಿತ್ಯ, ಸುಖರಹಿತವಾದ ಈ ಲೋಕವನ್ನು ಹೊಂದಿದ ನೀನು (ಶಾಶ್ವತ ಸುಖಕ್ಕೋಸ್ಕರ) ನನ್ನನ್ನೇ ಸೇವಿಸು.

೩೧a) ಸರ್ವಭೂತಹಿತೇರತಾಃ (೧೨-೪) — ಸಮಸ್ತ ಪ್ರಾಣಿಗಳಿಗೆ ಮೇಲುಂಟು ಮಾಡುವ ಆಸಕ್ತಿಯುಳ್ಳವರು ನನ್ನನ್ನೇ ಹೊಂದುವರು

೩೧b) ತೇಷಾಮಹಂ ಸಮುದ್ಧರ್ತಾ ಮೃತ್ಯುಸಂಸಾರ ಸಾಗರಾತ್(೧೨-೭) — ನನ್ನನ್ನು ಧ್ಯಾನಿಸುವವರನ್ನು ಈ ಜನನ ಮರಣ ರೂಪ ಸಂಸಾರ ಸಾಗರದಿಂದ ಶೀಘ್ರವಾಗಿ ಉದ್ಧರಿಸುವೆನು.

೩೨) ತ್ಯಾಗಾ ಚ್ಛಾಂತಿರನಂತರಮ್ (೧೨-೧೨) — ತ್ಯಾಗದಿಂದ ಶಾಂತಿಯುಂಟಾಗುವುದು.

೩೩) ಯೋ ಮದ್ಭಕ್ತಃ ಸ ಮೇ ಪ್ರಿಯಃ (೧೨-೧೪) — ಯಾವನು ನನ್ನ ಮೇಲೆ ಭಕ್ತಿಯನ್ನು ಇಟ್ಟಿರುವನೋ ಆತನೇ ನನಗೆ ಪ್ರಿಯನು.

೩೪) ಕ್ಷೇತ್ರಜ್ಞಂ ಚಾಪಿ ಮಾಂ ವಿದ್ಧಿ ಸರ್ವಕ್ಷೇತ್ರೇಷು ಭಾರತ (೧೩-೩) — ಓ ಅರ್ಜುನಾ! ಸಮಸ್ತ ಉಪಾಧಿಗಳಲ್ಲಿ, ಆ ಉಪಾಧಿಗಳನ್ನು ತಿಳಿಯುವ ಪ್ರಜ್ಞೆ ನಾನೇ ಎಂದು ತಿಳಿ.

೩೫) ಜನ್ಮಮೃತ್ಯುಜರಾವ್ಯಾಧಿ ದುಃಖ ದೋಷಾನುದರ್ಶನಂ (೧೩-೯) — ಜನನ, ಮರಣ, ವೃದ್ಧಾಪ್ಯ, ರೋಗಗಳಲ್ಲಿಯ ದುಃಖ ಹಾಗೂ ದೋಷಗಳನ್ನು ಮತ್ತೆ ಮತ್ತೆ ಜ್ಞಾಪಿಸಿಕೊಳ್ಳಬೇಕು.

೩೬) ಅವಿಭಕ್ತಂ ವಿಭಕ್ತೇಷು ತಜ್ಜ್ಞಾನಂ ವಿದ್ಧಿ ಸಾತ್ವಿಕಮ್ (೧೮-೨೦) — ಬೇರೆ ಬೇರೆಯಾಗಿ ಕಾಣುವ ಸಮಸ್ತ ವಸ್ತುಗಳಲ್ಲಿ ಏಕವಾಗಿರುವ ಪರಮಾತ್ಮನನ್ನು ಅರ್ಥಮಾಡಿ ಕೊಳ್ಳುವುದೇ ಸಾತ್ವಿಕ ಜ್ಞಾನ.

೩೭) ಭಕ್ತ್ಯಾ ಮಾಮಭಿಜಾನಾತಿ (೧೮-೫೫) — ಭಕ್ತಿಯಿಂದ ನನ್ನನ್ನು ಸಾಕ್ಷಾತ್ಕಾರ ಮಾಡಿಕೊಳ್ಳುವನು.

೩೮) ಮಚ್ಚಿತ್ತಃ ಸತತಂ ಭವ (೧೮-೫೭) — ಯಾವಾಗಲೂ ನನ್ನಲ್ಲೇ ಚಿತ್ತವನ್ನು ಇರಿಸು.

೩೯) ಮನ್ಮನಾ ಭವ (೧೮-೬೫) — ನನ್ನಲ್ಲೇ ಮನಸ್ಸನ್ನು ಇಡುವುದು.

೪೦) ಮಾಮೇಕಂ ಶರಣಂ ವ್ರಜ (೧೮-೬೬) — ನನ್ನೊಬ್ಬನನ್ನೇ ಶರಣು ಹೊಂದುವುದು.

# ಸಪ್ತಶ್ಲೋಕೀ ಗೀತೆ

೧. ಓಮಿತ್ಯೇಕಾಕ್ಷರಂ ಬ್ರಹ್ಮ ವ್ಯಾಹರ ನ್ಮಾಮನುಸ್ಮರನ್
ಯಃ ಪ್ರಯಾತಿ ತ್ಯಜಂದೇಹಂ ಸ ಯಾತಿ ಪರಮಾಂ ಗತಿಂ (೮-೧೩)

೨. ಸ್ಥಾನೇ ಹೃಷಿಕೇಶ ತವ ಪ್ರಕೀರ್ತ್ಯಾ
ಜಗತ್ಪ್ರಹೃಷ್ಯತ್ಯನುರಜ್ಯತೇ ಚ ರಕ್ಷಾಂಸಿ ಭೀತಾನಿ ದಿಶೋ ದ್ರವಂತಿ
ಸರ್ವೇ ನಮಸ್ಯಂತಿ ಚ ಸಿದ್ಧಸಂಘಾಃ (೧೧-೩೬)

೩. ಸರ್ವತಃ ಪಾಣಿಪಾದಂ ತತ್ಸರ್ವತೋಽಕ್ಷಿಶಿರೋಮುಖಮ್
ಸರ್ವತಃ ಶ್ರುತಿಮಲ್ಲೋಕೇ ಸರ್ವಮಾವೃತ್ಯ ತಿಷ್ಠತಿ (೧೩-೧೪)

೪. ಕವಿಂ ಪುರಾಣ ಮನುಶಾಸಿತಾರಂ ಅಣೋರಣೀಯಾಂಸಮನುಸ್ಮರೇದ್ಯಃ
ಸರ್ವಸ್ಯ ಧಾತಾರ ಮಚಿಂತ್ಯರೂಪ ಮಾದಿತ್ಯವರ್ಣಂ ತಮಸಃ ಪರಸ್ತಾತ್ (೮-೯)

೫. ಊರ್ಧ್ವಮೂಲ ಮಧಃಶಾಖ ಮಶ್ವತ್ಥಂ ಪ್ರಾಹು ರವ್ಯಯಮ್
ಛಂದಾಂಸಿ ಯಸ್ಯ ಪರ್ಣಾನಿ ಯಸ್ತಂವೇದ ಸ ವೇದವಿತ್ (೧೫-೧)

೬. ಸರ್ವಸ್ಯ ಚಾಹಂ ಹೃದಿ ಸನ್ನಿವಿಷ್ಟೋ ಮತ್ತಃ ಸ್ಮೃತಿಜ್ಞಾನ ಮಪೋಹನಂ ಚ
ವೇದೈಶ್ಚ ಸರ್ವೈ ರಹಮೇವ ವೇದ್ಯೋ ವೇದಾಂತ ಕೃದ್ವೇದವಿದೇವ ಚಾಹಮ್(೧೫-೧೫)

೭. ಮನ್ಮನಾ ಭವ ಮದ್ಭಕ್ತೋ ಮದ್ಯಾಜೀ ಮಾಂ ನಮಸ್ಕುರು
ಮಾಮೇವೈಷ್ಯಸಿ ಯುಕ್ತ್ವೈವ ಮಾತ್ಮಾನಂ ಮತ್ಪರಾಯಣಃ(೯-೩೪)

# ಗೀತಾ ಸಾರ

ಭಗವದ್ಗೀತೆಯ ಕೊನೆಯ ಅಧ್ಯಾಯದಲ್ಲಿ ಶ್ರೀಕೃಷ್ಣಪರಮಾತ್ಮನು ಗೀತಾ ಪ್ರಬೋಧೆಯೆಲ್ಲವನ್ನು ಕ್ರೋಢೀಕರಿಸಿ ಸಂಕ್ಷೇಪವಾಗಿ ಮೂರು ಶ್ಲೋಕಗಳಲ್ಲಿ ಹೇಳಿದ್ದಾನೆ. ಪರಬ್ರಹ್ಮಸಾಕ್ಷಾತ್ಕಾರವನ್ನು ಜೀವಿಯು ಹೇಗೆ ಹೊಂದಬಲ್ಲನು ಎನ್ನುವುದನ್ನು ಅವುಗಳಲ್ಲಿ ಚೆನ್ನಾಗಿ ವಿವರಿಸಲ್ಪಟ್ಟಿದೆ. ಆದ್ದರಿಂದ ಮುಮುಕ್ಷುಗಳು ಆ ಶ್ಲೋಕಗಳನ್ನು ಬಾಯಿಪಾಠ ಮಾಡಿ ಭಾವವನ್ನು ನಿರಂತರವಾಗಿ ಮನನ ಮಾಡುವುದು ಶ್ರೇಯಸ್ಕರ. ಅವು ಯಾವುವೆಂದರೆ

**೧. ಬುದ್ಧ್ಯಾ ವಿಶುದ್ಧಯಾ ಯುಕ್ತೋ ಧೃತ್ಯಾತ್ಮಾನಂ ನಿಯಮ್ಯ ಚ**
**ಶಬ್ದಾದೀನ್ವಿಷಯಾನ್ ತ್ಯಕ್ತ್ವಾ ರಾಗದ್ವೇಷೌ ವ್ಯುದಸ್ಯ ಚ (೧೮-೫೧)**

**೨. ವಿವಿಕ್ತಸೇವೀ ಲಘ್ವಾಶೀ ಯತವಾಕ್ಕಾಯಮಾನಸಃ**
**ಧ್ಯಾನಯೋಗಪರೋ ನಿತ್ಯಂ ವೈರಾಗ್ಯಂ ಸಮುಪಾಶ್ರಿತಃ(೧೮-೫೨)**

**೩. ಅಹಂಕಾರಂ ಬಲಂ ದರ್ಪಂ ಕಾಮಂ ಕ್ರೋಧಂ ಪರಿಗ್ರಹಮ್**
**ವಿಮುಚ್ಯ ನಿರ್ಮಮಃ ಶಾಂತೋ ಬ್ರಹ್ಮಭೂಯಾಯ ಕಲ್ಪತೇ(೧೮-೫೩)**

ನಿರ್ಮಲ ಬುದ್ಧಿಯಿಂದ, ಧೈರ್ಯದಿಂದ ಮನಸ್ಸನ್ನು ಸ್ವಾಧೀನಗೊಳಿಸಿಕೊಂಡು ಶಬ್ದಾದಿ ವಿಷಯಗಳನ್ನು, ರಾಗದ್ವೇಷಗಳನ್ನು ಬಿಟ್ಟು ಏಕಾಂತ ಸ್ಥಳವಾಸಿಯಾಗಿ, ಮಿತಾಹಾರವನ್ನು ಸ್ವೀಕರಿಸುತ್ತಾ, ಶರೀರಾಪೇಕ್ಷೆಗಳನ್ನು ನಿಯಮಿಸಿಕೊಂಡು, ನಿರಂತರ ಧ್ಯಾನಯೋಗಾಭ್ಯಾಸವನ್ನು ಮಾಡುತ್ತಾ, ವೈರಾಗ್ಯವನ್ನು ಆಶ್ರಯಿಸಿ, ಅಹಂಕಾರ ಬಲದರ್ಪ ಕಾಮ ಕ್ರೋಧ ಹಾಗೂ ಭೋಗ್ಯವಸ್ತುಗಳನ್ನು ತ್ಯಜಿಸಿ ಮಮಕಾರ ರಹಿತನಾಗಿ, ಶಾಂತಸ್ವಭಾವವನ್ನು ಹೊಂದಿರುವ ಮಹನೀಯನು ಪರಬ್ರಹ್ಮ ಸಾಕ್ಷಾತ್ಕಾರ ಹೊಂದಲು ಸಮರ್ಥನೆನಿಸಿಕೊಳ್ಳುವನು.

# ಗೀತೆಯಲ್ಲಿ - ಉಪಮಾನಗಳು

ಮಹಾತ್ಮರು ತಾವು ಬೋಧಿಸುವ ಗಂಭೀರ ತತ್ವಗಳನ್ನು ಜನಸಾಮಾನ್ಯರ ಹೃದಯದಲ್ಲಿ ನಾಟುವುದಕ್ಕೋಸ್ಕರ ದೃಷ್ಟಾಂತಗಳನ್ನು ಉಪಯೋಗಿಸುತ್ತಾರೆ. ತದ್ವಾರ ಕ್ಲಿಷ್ಟ ಭಾವಗಳು ಜನರಿಗೆ ಸುಲಭವಾಗಿ ಬೋಧಪ್ರದವಾಗುವುವು. ರಾಮಾಯಣ, ಯೋಗವಾಸಿಷ್ಠ, ಭಾರತ, ಭಾಗವತಾದಿಗಳಲ್ಲಿ ಅನೇಕ ದೃಷ್ಟಾಂತಗಳನ್ನು ಕೊಡಲಾಗಿದೆ. ಗೀತೆಯಲ್ಲಿ ಶ್ರೀಕೃಷ್ಣಮೂರ್ತಿಯು ಇಂತಹ ಪದ್ಧತಿಯನ್ನೇ ಅನುಸರಿಸಿ ಆಧ್ಯಾತ್ಮಿಕ ತತ್ವಗಳನ್ನು ಸರಿಯಾದ ಸಾದೃಶಗಳ ಮೂಲಕ ಬೋಧಿಸಿದನು. ಆ ಉಪಮಾನಗಳನ್ನು ಇಲ್ಲಿ ಕೊಡಲಾಗಿದೆ.

೧) ಮನುಜನು ಹಳೆಯ ಬಟ್ಟೆಗಳನ್ನು ಬಿಟ್ಟು ಹೊಸ ಬಟ್ಟೆಗಳನ್ನು ಹೇಗೆ ಧರಿಸುತ್ತಿದ್ದಾನೋ ಹಾಗೆಯೇ ಆತ್ಮ ಹಳೆಯ ಶರೀರವನ್ನು ಬಿಟ್ಟು ಹೊಸ ಶರೀರವನ್ನು ಧರಿಸುತ್ತಿದೆ.(೨-೨೨)

೨) ಸರ್ವತ್ರ ಜಲದಿಂದ ತುಂಬಿದ ದೊಡ್ಡ ಜಲಾಶಯಗಳು ಇರಲು, ಸ್ವಲ್ಪ ಜಲವಿರುವ ಭಾವಿ ಮುಂತಾದುವುಗಳಿಂದ ಮನುಜನಿಗೆ ಹೇಗೆ ಪ್ರಯೋಜನವಿಲ್ಲವೋ ಹಾಗೆಯೇ ಬ್ರಹ್ಮಜ್ಞಾನಿಗೆ ಸಮಸ್ತ ವೇದಗಳಿಂದ ಹೆಚ್ಚಿನ ಉಪಕಾರವಿರುವುದಿಲ್ಲ. (೨-೪೬)

೩) ಆಮೆ ತನ್ನ ಅವಯವಗಳನ್ನು ಒಳಗೆಳೆದುಕೊಂಡಂತೆ, ಯೋಗಿಯಾದವನು ಇಂದ್ರಿಯಗಳನ್ನು ವಿಷಯಗಳಿಂದ ಎಳೆದುಕೊಳ್ಳಬಲ್ಲನಾದರೆ ಆತನ ಜ್ಞಾನ ಸ್ಥಿರವಾಗುವುದು. (೨-೫೮)

೪. ಜಲದಿಂದ ಸಂಪೂರ್ಣವಾಗಿ ತುಂಬಿ ಸ್ಥಿರವಾಗಿರುವ ಸಮುದ್ರದಲ್ಲಿ ನದಿ ಮುಂತಾದ ಸಿಹಿಜಲಗಳು ಯಾವ ಪ್ರಕಾರವಾಗಿ ಪ್ರವೇಶಿಸಿ ಅದರಲ್ಲಿ ಒಂದಾಗುತ್ತವೆಯೋ, ಆ ಪ್ರಕಾರವಾಗಿ ಸಮಸ್ತ ಕೋರಿಕೆಗಳು ಬ್ರಹ್ಮನಿಷ್ಠನಲ್ಲಿ ಪ್ರವೇಶಿಸಿ ಅವನಲ್ಲಿ ಅಡಗಿ ಹೋಗುತ್ತವೆ (ಒಂದಾಗುತ್ತವೆ). ಅಂತಹ ಬ್ರಹ್ಮನಿಷ್ಠನು ಶಾಂತಿಯನ್ನು ಹೊಂದುವನಾಗಲೀ ವಿಷಯಾಸಕ್ತಿ ಉಳ್ಳವನಲ್ಲ (೨-೭೦)

೫. ಹೊಗೆಯಿಂದ ಕೆಂಡ, ಧೂಳಿನಿಂದ ಕನ್ನಡಿ, ಜರಾಯುವಿನಿಂದ ಗರ್ಭದಲ್ಲಿಯ ಶಿಶು ಹೇಗೆ ಮುಚ್ಚಲ್ಪಟ್ಟಿವೆಯೋ ಅದೇ ರೀತಿಯಾಗಿ ಕಾಮದಿಂದ ಆತ್ಮಜ್ಞಾನ ಮುಚ್ಚಲ್ಪಟ್ಟಿದೆ. (೩-೩೮)

೬. ಓ ಅರ್ಜುನಾ! ಧಗಧಗನೆ ಉರಿಯುತ್ತಿರುವ ಅಗ್ನಿ ಯಾವ ಪ್ರಕಾರವಾಗಿ ಕಟ್ಟಿಗೆಗಳನ್ನು ಭಸ್ಮಮಾಡುವುದೋ ಅದೇ ರೀತಿಯಾಗಿ ಜ್ಞಾನವೆಂಬ ಅಗ್ನಿಯು ಸಮಸ್ತ ಕರ್ಮಗಳನ್ನು ಭಸ್ಮಗೊಳಿಸುವುದು. (೪-೩೭)

೭. ಯಾವನು ತಾನು ಮಾಡುವ ಕಾರ್ಯಗಳನ್ನು ಪರಮಾತ್ಮನಿಗೆ ಸಮರ್ಪಿಸಿ, ಫಲಾಸಕ್ತಿಯನ್ನು (ಸಂಗವನ್ನು) ಬಿಡುವನೋ ಅವನಿಗೆ ತಾವರೆ ಎಲೆ ಹೇಗೆ ನೀರಿನಲ್ಲಿದ್ದರೂ ನೀರು ಅಂಟುವುದಿಲ್ಲವೋ ಹಾಗೆ ಪಾಪಗಳು ಅಂಟುವುದಿಲ್ಲ.(೫-೧೦)

೮. ಯಾವ ಪ್ರಕಾರವಾಗಿ ದೀಪವು ಗಾಳಿ ಬೀಸದೇ ಇರುವ ಸ್ಥಳದಲ್ಲಿ ನಿಶ್ಚಲವಾಗಿರುವುದೋ ಆ ಪ್ರಕಾರವಾಗಿ ಆತ್ಮಧ್ಯಾನದಲ್ಲಿ ಮಗ್ನವಾಗಿರುವ ಯೋಗಿಯ ಚಿತ್ತವೂ ಕೂಡ ನಿಶ್ಚಲ ಸ್ಥಿತಿಯನ್ನು ಹೊಂದಿರುವುದು. ಯೋಗಿ ಪುಂಗವರ ನಿಶ್ಚಲಮನಸ್ಸನ್ನು ದೀಪದ ನಿಶ್ಚಲ ಸ್ಥಿತಿಗೆ ಹೋಲಿಸಲಾಗಿದೆ. (೬-೧೯)

೯. ಅರ್ಜುನಾ! ನನಗಿಂತ ಭಿನ್ನವಾದದ್ದು ಈ ಪ್ರಪಂಚದಲ್ಲಿ ಬೇರೆ ಯಾವುದೂ ಇಲ್ಲ. ದಾರದಲ್ಲಿ ಮಣಿಗಳು ಇದ್ದ ಹಾಗೆ ನನ್ನಲ್ಲಿ ಈ ಸಮಸ್ತ ಪ್ರಪಂಚವೆಲ್ಲವೂ ಇದೆ. (೭-೭)

೧೦. ಎಲ್ಲೆಲ್ಲಿಯೂ ಸಂಚರಿಸುವ ಮಹಾ ವಾಯುವು ಯಾವಾಗಲೂ ಆಕಾಶದಲ್ಲಿ ಹೇಗೆ ನಿಂತಿರುವುದೋ ಹಾಗೆಯೇ ಸಮಸ್ತ ಭೂತಗಳು ನನ್ನಲ್ಲಿ ಇವೆ ಎಂದು ತಿಳಿಯಬೇಕು. (೯-೬)

೧೧. ಓ ಅರ್ಜುನಾ! ಈ ಶರೀರ ಕ್ಷೇತ್ರವೆಂದು ಹೇಳಲ್ಪಡುತ್ತದೆ. ಮತ್ತೆ ಇದನ್ನು ತಿಳಿಯುವವನು ಕ್ಷೇತ್ರಜ್ಞನೆಂದು ವಿವೇಕ ಉಳ್ಳವರು ಹೇಳುತ್ತಾರೆ. (೧೩-೨)

೧೨. ಅತಿ ಸೂಕ್ಷ್ಮವಾಗಿರುವುದರಿಂದ ಸರ್ವವ್ಯಾಪಕವಾದ ಆಕಾಶವು ಯಾವುದರಿಂದಲೂ ಸೋಂಕದೆ ಹೇಗೆ ನಿರ್ಲಿಪ್ತವಾಗಿರುವುದೋ ಹಾಗೆಯೇ ಸರ್ವತ್ರ ವ್ಯಾಪಿಸಿರುವ ಆತ್ಮವೂ ಸಹ ದೇಹಾದಿಗಳೊಡನೆ ಅಂಟದೆ ನಿರ್ಲಿಪ್ತವಾಗಿರುವುದು. (೧೩-೩೨)

೧೩. ಅರ್ಜುನಾ! ಸೂರ್ಯನು ಸಮಸ್ತ ಲೋಕವನ್ನು ಹೇಗೆ ಪ್ರಕಾಶಗೊಳಿಸುತ್ತಿದ್ದಾನೆಯೋ ಹಾಗೆ ಕ್ಷೇತ್ರಜ್ಞನಾದ ಆತ್ಮನು ದೇಹವೆನ್ನುವ ಕ್ಷೇತ್ರವನ್ನು ಪ್ರಕಾಶಿಸುತ್ತಿದ್ದಾನೆ. (೧೩-೩೪)

೧೪. ಯಾವುದಕ್ಕೆ ವೇದಗಳು ಎಲೆಗಳಾಗಿವೆಯೋ ಅಂತಹ ಸಂಸಾರ ರೂಪ ಅಶ್ವತ್ಥವೃಕ್ಷದ ಬೇರುಗಳು ಮೇಲ್ಮುಖವಾಗಿದ್ದು ಕೊಂಬೆಗಳು ಕೆಳಮುಖವಾಗಿವೆ. ಇದು ಬಹುಕಾಲವಿರುವುದಾಗಿದೆ ಎಂದು ಹಿರಿಯರು ಹೇಳುತ್ತಾರೆ. ಅದನ್ನು ಯಾವನು ಅರ್ಥಮಾಡಿಕೊಳ್ಳುವನೋ ಆತನು ವೇದವನ್ನು ತಿಳಿದಂತಹವನಾಗುತ್ತಾನೆ. (೧೫-೧)

೧೫. ಸಂಸಾರವೆಂಬ ಆ ಅಶ್ವತ್ಥವೃಕ್ಷದ ಕೊಂಬೆಗಳು ಗುಣಗಳಿಂದ ವೃದ್ಧಿ ಹೊಂದಿ, ವಿಷಯಗಳೇ ಚಿಗುರಾಗಿ ಮೇಲೆ ಹಾಗೂ ಕೆಳಗೆ ವ್ಯಾಪಿಸಿವೆ. ಅದರ ಬೇರುಗಳು ಮನುಷ್ಯ ಲೋಕದಲ್ಲಿ ಕರ್ಮಸಂಬಂಧ ವುಳ್ಳವಾಗಿ ಕೆಳಗೆ ಪ್ರಸರಿಸಲ್ಪಟ್ಟಿವೆ. (೧೫-೨)

೧೬. ವಾಯು, ಪುಷ್ಪಗಳು ಮುಂತಾದ ಸುವಾಸನೆಯುಳ್ಳ ಪದಾರ್ಥಗಳ ಮೇಲೆ ಬೀಸಿದಾಗ ಆಯಾ ಪದಾರ್ಥಗಳನ್ನು ಅಲ್ಲಿಯೇ ಬಿಟ್ಟು ಅವುಗಳ ಗಂಧಾಣುಗಳನ್ನು ಹೇಗೆ ತೆಗೆದುಕೊಂಡು ಹೋಗುವುದೋ ಹಾಗೆ ಜೀವಿಯು ಒಂದು ದೇಹವನ್ನು ಬಿಟ್ಟು ಮತ್ತೊಂದು ದೇಹವನ್ನು ಹೊಂದುವಾಗ ಶರೀರವನ್ನು ಅಲ್ಲಿಯೇ ಬಿಟ್ಟರೂ ಅದರಲ್ಲಿರುವ ಮನಸ್ಸು ಮೊದಲಾದ ಆರು ಇಂದ್ರಿಯಗಳನ್ನು, ವಾಸನೆಗಳನ್ನು ತೆಗೆದುಕೊಂಡು ಹೋಗುತ್ತಿದ್ದಾನೆ. (೧೫-೮)

೧೭. ಹೊಗೆ ಕೆಂಡವನ್ನಾವರಿಸಿರುವಂತೆ, ಸಮಸ್ತ ಕರ್ಮಗಳು ದೋಷದಿಂದ ಆವೃತವಾಗಿವೆ.(೧೮-೪೮)

೧೮. ಓ ಅರ್ಜುನಾ! ಈಶ್ವರನು ಸಮಸ್ತ ಪ್ರಾಣಿಗಳ ಹೃದಯ ಸ್ಥಾನದಲ್ಲಿ ನಿವಸಿಸಿ, ಅವರೆಲ್ಲರನ್ನೂ ತನ್ನ ಮಾಯೆಯಿಂದ, ಯಂತ್ರಕ್ಕೆ ಸಿಕ್ಕಿಕೊಂಡವರು ಹೇಗೆ ತಿರುಗುತ್ತಾರೋ ಹಾಗೆ ತಿರುಗಿಸುತ್ತಿದ್ದಾನೆ. (೧೮-೬೧)

# ಗೀತಾ ಭವನ

'ಗೀತಾ ಮೇ ಚೋತ್ತಮಮ್ ಗೃಹಂ'- ಎನ್ನುವುದು ಭಗವದ್ವಾಕ್ಯ. ಅಂದರೆ 'ನಾನು ಗೀತೆಯನ್ನಾಶ್ರಯಿಸಿದ್ದೇನೆ. ಗೀತೆ ನನ್ನ ನಿವಾಸಗೃಹ' ಎಂದು ಭಾವನೆ. ಈ ಪ್ರಕಾರವಾಗಿ ಗೀತಾಮಹಾತ್ಮ್ಯೆಯ ಗೃಹದ ಬಗ್ಗೆ ಭಗವಂತನು ತಿಳಿಸಿದ್ದಾನೆ. ಆ ಗೃಹದ ಸ್ವರೂಪ, ಸ್ವಭಾವಗಳ ವಿವರಣೆ ಈ ಕೆಳಗೆ ವಿವರಿಸಲ್ಪಟ್ಟಿದೆ.

**- ಗೀತಾಸೌಧದ ವಿವರಗಳು-**

**ನಿರ್ಮಾತೃ** : ಶ್ರೀಕೃಷ್ಣ ಪರಮಾತ್ಮ

**ಅಲಂಕರಣಕರ್ತ** : ಶ್ರೀವೇದವ್ಯಾಸ ಮುನೀಂದ್ರರು

**ಆಕಾರ** : ಮೂರು ಅಂತಸ್ತುಗಳುಳ್ಳದ್ದು

**ಬುನಾದಿ (ಪಾಯ)** : ಅರ್ಜುನ ವಿಷಾದ ಯೋಗ (ಪ್ರಥಮೋಧ್ಯಾಯ)

**ಮೊದಲನೆಯ ಅಂತಸ್ತು** : ಐದು ಕೋಣೆಗಳು (ಎರಡನೆಯ ಅಧ್ಯಾಯದಿಂದ ಆರನೆಯ ಅಧ್ಯಾಯದವರೆಗೆ)-(ಸಾಂಖ್ಯಯೋಗ, ಕರ್ಮಯೋಗ, ಜ್ಞಾನ ಯೋಗ, ಕರ್ಮಸಂನ್ಯಾಸಯೋಗ ಮತ್ತು ಆತ್ಮಸಂಯಮ ಯೋಗಗಳು)

**ಎರಡನೆಯ ಅಂತಸ್ತು** : ಆರು ಕೋಣೆಗಳು, ಭಕ್ತಿ ಷಟ್ಕ-(ಏಳನೆಯ ಅಧ್ಯಾಯದಿಂದ ಹನ್ನೆರಡರವರೆಗೆ) ವಿಜ್ಞಾನ, ಅಕ್ಷರಪರಬ್ರಹ್ಮ, ರಾಜವಿದ್ಯಾ ರಾಜಗುಹ್ಯ, ವಿಭೂತಿ, ವಿಶ್ವರೂಪಸಂದರ್ಶನ ಹಾಗೂ ಭಕ್ತಿಯೋಗಗಳು)

**ಮೂರನೆಯ ಅಂತಸ್ತು** : ಆರು ಕೋಣೆಗಳು, ಜ್ಞಾನಷಟ್ಕ- (೧೩ನೆಯ ಅಧ್ಯಾಯದಿಂದ ೧೮ರ ವರೆಗೆ) ಕ್ಷೇತ್ರಕ್ಷೇತ್ರಜ್ಞ ವಿಭಾಗ, ಗುಣತ್ರಯವಿಭಾಗ, ಪುರುಷೋತ್ತಮಪ್ರಾಪ್ತಿ, ದೈವಾಸುರ ಸಂಪದ್ವಿಭಾಗ, ಶ್ರದ್ಧಾತ್ರಯವಿಭಾಗ ಹಾಗು ಮೋಕ್ಷಸಂನ್ಯಾಸಯೋಗಗಳು)

ನಿರ್ಮಾಣಕ್ಕೆ ಬೇಕಾದ ಸುಣ್ಣ (ಸಿಮೆಂಟ್) - ಕರ್ಮ

ನಿರ್ಮಾಣಕ್ಕೆ ಬೇಕಾದ ನೀರು - ಭಕ್ತಿ

ನಿರ್ಮಾಣಕ್ಕೆ ಬೇಕಾದ ಇಟ್ಟಿಗೆ - ಜ್ಞಾನ

ಗೀತಾಭವನ ಅತಿ ವಿಶಾಲವಾದುದು. ಅತಿ ಸುಂದರವಾದುದು. ಅದರ ಒಂದೊಂದು ಕೋಣೆಯಲ್ಲಿ ಚಿತ್ರವಿಚಿತ್ರಗಳಾದ ಅಮೂಲ್ಯ ಪದಾರ್ಥಗಳಿವೆ. ಆ ಭವನದಲ್ಲಿ ಎಲ್ಲರಿಗೂ ಪ್ರವೇಶವಿದೆ. ಜಾತಿಮತ ಕುಲ ಲಿಂಗಗಳ ಭೇದವಿಲ್ಲ, ಪ್ರವೇಶ ಶುಲ್ಕವಿಲ್ಲ. ಹಾಗೆ ಪ್ರವೇಶಿಸಿ, ನಿರಾತಂಕವಾಗಿ ದರ್ಶಿಸಬಹುದು, ಸ್ಪರ್ಶಿಸಬಹುದು, ಬೇಕಾದ್ದನ್ನು ತೆಗೆದುಕೊಂಡು ಹೋಗಬಹುದು. ಅಡ್ಡ ಬರುವವರಿಲ್ಲ. ಆತಂಕವಿರುವುದಿಲ್ಲ. ಒಮ್ಮೆ ಶಂಕರಾಚಾರ್ಯರು ಈ ಗೀತಾಭವನದೊಳಗೆ ಪ್ರವೇಶಿಸಿ ಅದರ ಸೌಂದರ್ಯವನ್ನು ನೋಡಿ ಮುಗ್ಧರಾಗಿ, ಅದರಲ್ಲಿರುವ ಅನೇಕ ಪದಾರ್ಥಗಳನ್ನು ಕೊಂಡೊಯ್ದರು. ನಂತರ ರಾಮಾನುಜಾಚಾರ್ಯರು, ಮಧ್ವಾಚಾರ್ಯರು, ಹಾಗೆಯೇ ಅನೇಕರು ಬಂದು ಗೀತಾಭವನವನ್ನು ಸಂದರ್ಶಿಸಿ ಅದರಲ್ಲಿಯ ವಸ್ತುಗಳನ್ನು ತೆಗೆದುಕೊಂಡು ಹೋಗಿ ಪರಮ ಶಾಂತಿಯನ್ನು ಪಡೆದರು. ಆದರೆ ವಿಚಿತ್ರವೇನೆಂದರೆ ಯಾರು ಎಷ್ಟು ವಸ್ತುಗಳನ್ನು ತೆಗೆದುಕೊಂಡು ಹೋದರೂ ಆ ಭವನವು ಸಮಸ್ತ ಪದಾರ್ಥಗಳಿಂದ ಪರಿಪೂರ್ಣವಾಗಿ ಅಕ್ಷಯವಾಗಿಯೇ ಇದೆ. ಇದೇ ಗೀತಾಭವನದ ವಿಶಿಷ್ಟತೆ. ಆದ್ದರಿಂದ ಮುಮುಕ್ಷುಗಳೆಲ್ಲರು ಈ ಗೀತಾನಾಮದ ಮಹತ್ತರವಾದ ಸುವಿಶಾಲ ಭವ್ಯಭವನವನ್ನು ಕಣ್ಣು ತುಂಬ ವೀಕ್ಷಿಸಿ, ಅದರಲ್ಲಿ ವಿಶ್ರಮಿಸಿ, ಸಾಂಸಾರಿಕ ದುಃಖಜಾಲದಿಂದ ವಿಮುಕ್ತರಾಗಿ ಪರಮಾನಂದವನ್ನು ಅನುಭವಿಸಿ ಧನ್ಯರಾಗಬೇಕು!

# ಅಧ್ಯಾಯ ಕ್ರಮದಲ್ಲಿ ಗೀತಾ ಪಾರಾಯಣ ಫಲ

ಗೀತೆಯ ಮಹಿಮೆ ಅಪಾರ. ಗೀತಾಶ್ಲೋಕಗಳ ಪಾರಾಯಣ, ಜಪ, ಧ್ಯಾನಾದಿಗಳಿಂದ ಎಷ್ಟೋ ಸತ್ಫಲಿತಗಳು ಮನುಜನಿಗೆ ಕೈಗೂಡುತ್ತವೆ. ಗೀತೆಯ ಈ ಅಖಂಡ ಶಕ್ತಿಯ ಬಗ್ಗೆ ಪೂರ್ವದಲ್ಲಿ ಲಕ್ಷ್ಮೀದೇವಿಗೆ ಶ್ರೀಮನ್ನಾರಾಯಣನು ಬೋಧಿಸಲು ಅದನ್ನೇ ಮತ್ತೆ ಮಹೇಶ್ವರನು ಪಾರ್ವತಿಗೆ ವಿವರಿಸಿ ಹೇಳಿದನು. ಈ ವಿಷಯವೆಲ್ಲವೂ ಪದ್ಮಪುರಾಣದಲ್ಲಿದೆ. ಗೀತೆಯಲ್ಲಿಯ ಒಂದೊಂದು ಅಧ್ಯಾಯವನ್ನು ಪಾರಾಯಣ ಮಾಡುವುದರಿಂದ ಉಂಟಾಗುವ ಅಮೋಘ ಫಲಗಳನ್ನು ಕಥಾರೂಪದಲ್ಲಿ ಅದರಲ್ಲಿ ಸುಂದರವಾಗಿ ಕೊಡಲಾಗಿದೆ. ಪದ್ಮಪುರಾಣದಲ್ಲಿಯ ಈ ಗೀತಾ ಮಹಾತ್ಮ್ಯೆಯನ್ನು ಪಾಠಕರ ಸಲುವಾಗಿ ಇಲ್ಲಿ ಸಂಕ್ಷೇಪವಾಗಿ ತಿಳಿಯಪಡಿಸಲಾಗಿದೆ.

**೧) ಪ್ರಥಮೋಧ್ಯಾಯದ ಫಲ** : ಇದರ ಪಾರಾಯಣವನ್ನು ಪೂರ್ತಿಯಾಗಲಿ, ಒಂದು ಅಧ್ಯಾಯವನ್ನಾಗಲಿ, ಅರ್ಧ ಅಧ್ಯಾಯವನ್ನಾಗಲಿ, ಒಂದು ಶ್ಲೋಕವನ್ನಾಗಲಿ, ಶ್ಲೋಕಾರ್ಥವನ್ನಾಗಲಿ, ಕೊನೆಗೆ ಒಂದು ಪಾದವನ್ನಾಗಲಿ, ಕನಿಷ್ಟ ಒಂದು ಪದವನ್ನಾಗಲಿ ಭಕ್ತಿಯಿಂದ ಯಾವೊಬ್ಬನು ಪಠಿಸುವನೋ ಆತನು ಸುಶರ್ಮನ ಹಾಗೆ ಮುಕ್ತಿ ಹೊಂದುವನು. ಹೇಗೆಂದರೆ-

ಪೂರ್ವದಲ್ಲಿ ಸುಶರ್ಮನೆನ್ನುವ ಬ್ರಾಹ್ಮಣನಿದ್ದನು. ಆತನು ವಿಷಯಲೋಲನಾಗಿ, ದುರಾಚಾರಪರನಾಗಿ ಭ್ರಷ್ಟಜೀವನ ನಡೆಸಿ, ಮರಣಿಸಿದನು. ಹೆಚ್ಚು ಯಮಯಾತನೆಗಳನ್ನನುಭವಿಸಿದ ನಂತರ, ಎತ್ತಾಗಿ ಹುಟ್ಟಿದನು. ಅದು ಭಾರಗಳನ್ನು ಹೊರುತ್ತಾ ಹೊರುತ್ತಾ ಒಂದು ದಿನ ಒಂದು ಪರ್ವತ ಪ್ರದೇಶದಲ್ಲಿ ಹೆಚ್ಚಿನ ಭಾರದಿಂದ ಕೆಳಗೆ ಬಿದ್ದು ಮರಣಿಸಿತು. ಅದರ ದೀನದೆಶೆಯನ್ನು ನೋಡಿ ಆ ಮಾರ್ಗದಲ್ಲಿ ಹೋಗುತ್ತಿದ್ದ ಕೆಲವರು ಅದಕ್ಕೆ ಸದ್ಗತಿ ಉಂಟಾಗಲೆಂದು ತಮ್ಮ ಪುಣ್ಯದ ಸ್ವಲ್ಪ ಭಾಗವನ್ನು ಧಾರೆಯೆರೆದರು. ಅದರಲ್ಲಿ ಒಬ್ಬ ವೇಶ್ಯೆಯು ತಾನು ಏನೂ ಪುಣ್ಯ ಮಾಡಲಿಲ್ಲವೆಂದು ತಿಳಿದು, ಏನಾದರೂ ಮಾಡಿದ್ದರೆ ಆ ವೃಷಭನಿಗೆ ಅರ್ಪಿಸಿರುವೆನೆಂದು ಸಂಕಲ್ಪಿಸಿಕೊಂಡಳು. ವೇಶ್ಯೆಯ ಪುಣ್ಯದಿಂದ ಆ ವೃಷಭವು ಪುಣ್ಯಲೋಕಕ್ಕೆ ಹೋಯಿತು. ಅಲ್ಲಿಂದ ಪೂರ್ವಜನ್ಮ ಜ್ಞಾನವನ್ನು ಹೊಂದಿದ ಉತ್ತಮ ಬ್ರಾಹ್ಮಣನಾಗಿ ಹುಟ್ಟಿತು. ಆ ಬ್ರಾಹ್ಮಣನು ತನಗೆ ಪೂರ್ವಜನ್ಮದಲ್ಲಿ ಸುಕೃತವನ್ನು ಧಾರೆಯೆರೆದ ವೇಶ್ಯೆಯ ಮನೆಗೆ ಹೋಗಿ ಆ ಸುಕೃತವೆಂತಹುದೆಂದು ಪ್ರಶ್ನಿಸಲು ಆಕೆ ಒಂದು ಗಿಳಿಯನ್ನು ತೋರಿಸಿ, ಅದರ ವಾಕ್ಯಗಳನ್ನು ಕೇಳುವುದರಿಂದ ತನ್ನ ಚಿತ್ತವು ಪುನೀತವಾಯಿತೆಂದು ಹೇಳಿದಳು. ಅವರಿಬ್ಬರೂ ವಿಷಯವೇನೆಂದು ಆ ಗಿಳಿಯನ್ನು ಕೇಳಲು, ಅದು "ಪೂರ್ವಜನ್ಮದಲ್ಲಿ ತಾನೊಬ್ಬ ವಿದ್ವಾಂಸನೆಂದೂ ಗುರುದೂಷಣಾದಿ ಪಾಪಗಳನ್ನು ಮಾಡಿ ಮರಣಿಸಿ, ನಂತರ ಗಿಳಿಯಾಗಿ ಹುಟ್ಟಿ ಅರಣ್ಯದಲ್ಲಿ ದೀನಾವಸ್ಥೆಯಲ್ಲಿದ್ದಾಗ, ಒಬ್ಬ ಮುನಿಪುಂಗವನು ತನ್ನನ್ನು ಆತನ ಆಶ್ರಮಕ್ಕೆ ತೆಗೆದುಕೊಂಡು ಹೋಗಿ ಪೋಷಿಸುತ್ತಿದ್ದನು ಎಂದು ತಿಳಿಸಿತು. ಅಲ್ಲಿ ಗೀತೆಯ ಪ್ರಥಮಾಧ್ಯಾಯವನ್ನು ಆತ ತನ್ನ ಶಿಷ್ಯರಿಗೆ ನಿರಂತರವಾಗಿ ಬೋಧಿಸುತ್ತಿದ್ದನು. ಕೇಳಿ ಕೇಳಿ, ಕ್ರಮವಾಗಿ ಅದನ್ನುಚ್ಚರಿಸಲು ಸಾಧ್ಯವಾಯಿತು. ಹೀಗಿರಲು ಒಂದು ದಿನ ಒಬ್ಬ ಕಳ್ಳನು ನನ್ನನ್ನು ಅಪಹರಿಸಿ ಈ ವೇಶ್ಯೆಗೆ ಮಾರಿದನು. ಇದರಿಂದ ವೇಶ್ಯೆಯ ಪಾಪವಿಮುಕ್ತಿಯಾಯಿತಲ್ಲದೆ ಸುಶರ್ಮನಿಗೆ ಸದ್ಗತಿ ಲಭಿಸಿತು," ಎಂದು ಹೇಳಿತು.

**ತಸ್ಮಾ ದಧ್ಯಾಯ ಮಾದ್ಯಂ ಯಃ ಪಠತೇ ಶೃಣುತೇ ಸ್ಮರೇತ್**
**ಅಭ್ಯಸೇತ್ತಸ್ಯ ನ ಭವೇತ್ ಭವಾಂಭೋಧಿರ್ದುರುತ್ತರಃ**

ಆದ್ದರಿಂದ ಗೀತೆಯ ಪ್ರಥಮೋಧ್ಯಾಯವನ್ನು ಯಾರು ಪಠಿಸುವರೋ, ಶ್ರವಣ ಮಾಡುವರೋ, ಸ್ಮರಿಸುವರೋ, ಅವರು ಸಂಸಾರ ಸಾಗರವನ್ನು ಸುಲಭವಾಗಿ ದಾಟುವರು.

**ಗೀತೆಯ ಪ್ರಥಮೋಧ್ಯಾಯದ ಪಾರಾಯಣ ಫಲ - ಪಾಪವಿಮುಕ್ತಿ, ಪೂರ್ವಜನ್ಮ ಸ್ಮೃತಿ.**

**೨) ದ್ವಿತಿಯೋಧ್ಯಾಯದ ಫಲ:** ಪೂರ್ವಕಾಲದಲ್ಲಿ ದಕ್ಷಿಣದೇಶದ ಪುರಂದರ ವೆನ್ನುವ ಪಟ್ಟಣದಲ್ಲಿ ದೇವಶರ್ಮನೆಂಬ ಒಬ್ಬ ಬ್ರಾಹ್ಮಣನು ಇದ್ದನು. ಆತನು ಅನೇಕ ಯೋಗಗಳನ್ನು, ಅತಿಥಿ ಪೂಜೆ ಮುಂತಾದ ಸತ್ಕ್ರಿಯಗಳನ್ನು ಆಚರಿಸುತ್ತಿದ್ದನು. ಆದರೂ ಮನಶ್ಶಾಂತಿ, ಆತ್ಮಜ್ಞಾನವನ್ನು ಹೊಂದಲಾರದೆ ಚಿಂತಾಕ್ರಾಂತನಾಗಿದ್ದನು. ಒಂದು ದಿನ ಆತನ ಮನೆಗೆ ಸಾಧು ಪುಂಗವ ನೊಬ್ಬನು ಬರಲು, ಆತನಿಗೆ ತನ್ನ ವೃತ್ತಾಂತವನ್ನು ತಿಳಿಸಿ ಜ್ಞಾನೋಪಾಯವನ್ನು ಕೋರಿದನು. ಸಾಧು ಆತನನ್ನು ಆ ಕಾರ್ಯಸಿದ್ಧಿಗಾಗಿ ಸೌಪುರ ನಗರದ ಮಿತ್ರವಂತನೆಂಬ ಗೊಲ್ಲನ ಬಳಿಗೆ ಕಳುಹಿಸಿದನು. ಮಿತ್ರವಂತನು ದೇವಶರ್ಮನಿಗೆ ಹೀಗೆ ಹೇಳಿದನು. ನಾನು ಒಮ್ಮೆ ಅರಣ್ಯದಲ್ಲಿ ಮೇಕೆಗಳನ್ನು ಮೇಯಿಸುತ್ತಿದ್ದಾಗ ದೊಡ್ಡ ಹುಲಿಯೊಂದು ಬರಲು ನಾನು ಹಾಗು ನನ್ನ ಮೇಕೆಗಳು ಚೆಲ್ಲಾಪಿಲ್ಲಿಯಾಗಿ ಓಡಿಹೋದೆವು. ಆದರೆ ಆ ಸ್ಥಳ ಮಹಾತ್ಮ್ಯೆಯಿಂದ, ಒಂದು ಕಡೆ ನನ್ನ ಮಂದೆಯ ಒಂದು ಮೇಕೆ ಮತ್ತು ಆ ಹುಲಿ ಸ್ನೇಹದಿಂದಿರುವುದನ್ನು ಕಂಡೆ. ಕೂಡಲೇ ಸಮೀಪದಲ್ಲಿದ್ದ ಒಂದು ವಾನರನ ಮೂಲಕ ಆ ವಿಸ್ಮಯ ದೃಶ್ಯಕ್ಕೆ ಕಾರಣವನ್ನು ತಿಳಿದುಕೊಂಡೆನು. ಅದು ಏನೆಂದರೆ ಆ ಪ್ರಾಂತದ ಒಂದು ದೇವಾಲಯದಲ್ಲಿ ಸುಕರ್ಮ ನೆನ್ನುವವನು ಜ್ಞಾನಪ್ರಾಪ್ತಿಗಾಗಿ ಈಶ್ವರೋಪಾಸನೆಯನ್ನು ಮಾಡುತ್ತಿದ್ದನು. ಒಂದು ದಿನ ಅಲ್ಲಿಗೆ ಒಬ್ಬ ಅತಿಥಿ ಬಂದು ಆತನ ಹಿತಕೋರಿ ಗೀತೆಯ ಎರಡನೆಯ ಅಧ್ಯಾಯವನ್ನು ಒಂದು ಶಿಲಾಫಲಕದ ಮೇಲೆ ಕೆತ್ತಿ ಅದನ್ನು ಅಭ್ಯಸಿಸು ಎಂದು ಹೇಳಿ ಅಂತರ್ಧಾನನಾದನು. ಸುಕರ್ಮನು ಹಾಗೆಯೇ ನಿತ್ಯವೂ ಗೀತೆಯ ದ್ವಿತೀಯೋಧ್ಯಾಯವನ್ನು ಪಾರಾಯಣಮಾಡುತ್ತಾ, ಅಭ್ಯಾಸ ಮಾಡುತ್ತಿರಲು, ಸ್ವಲ್ಪಕಾಲದಲ್ಲಿ ಆತನಿಗೆ ಚಿತ್ತನಿರ್ಮಲವಾಗಿ ಆತ್ಮಜ್ಞಾನ ಉದಯಿಸಿತು. ಆಗಿನಿಂದ ಆ ಪವಿತ್ರಾತ್ಮನು ಕಾಲಿಟ್ಟ ಸ್ಥಳವೆಲ್ಲಾ ಪುನೀತವಾಗಿ ರಾಗದ್ವೇಷರಹಿತವಾಗಿ ಬಿಡುತ್ತಿತ್ತು. ಈ ವಿಷಯ ತಿಳಿದ ಕೂಡಲೇ ನಾನು ಆ ಶಿಲಾಫಲಕದ ಬಳಿ ಹೋಗಿ ಗೀತೆಯ ದ್ವಿತೀಯೋಧ್ಯಾಯವನ್ನು ಅಭ್ಯಸಿಸಿ ಆತ್ಮಜ್ಞಾನಾನುಭವವನ್ನು ಹೊಂದಿದೆ. ನೀನೂ ಹಾಗೆ ಮಾಡುವುದು. ಮಿತ್ರವಂತನ ಆ ವಾಕ್ಯಗಳನ್ನು ಕೇಳಿ ದೇವಶರ್ಮನು ಗೀತೆಯ ಎರಡನೆಯ ಅಧ್ಯಾಯವನ್ನು ಪಾರಾಯಣ ಮಾಡುತ್ತ, ಮನನ ಮಾಡುತ್ತ, ಕ್ರಮವಾಗಿ ಆತ್ಮಜ್ಞಾನವನ್ನು ಹಾಗು ಬ್ರಹ್ಮಪದವನ್ನು ಹೊಂದಿ ಕೃತಾರ್ಥನಾದನು.

**ಶಿಕ್ಷಿತಸ್ತೇನ ಪೂತಾತ್ಮಾ ಪಠ ನ್ನಧ್ಯಾಯ ಮಾದರಾತ್**
**ದ್ವಿತೀಯ ಮಾಸಸಾದೋಚ್ಚೈಃ ನಿರವದ್ಯಂ ಪರಂ ಪದಮ್**

**ಗೀತೆಯ ದ್ವಿತೀಯೋಧ್ಯಾಯದ ಫಲ- ಆತ್ಮಜ್ಞಾನ ಪ್ರಾಪ್ತಿ**

೩) **ತೃತೀಯೋಧ್ಯಾಯದ ಫಲ :** ಪೂರ್ವದಲ್ಲಿ ಜನಸ್ಥಾನವೆಂಬ ನಗರದಲ್ಲಿ ಜಡನೆಂಬ ಬ್ರಾಹ್ಮಣನಿದ್ದನು. ಆತನು ತನ್ನ ಜಾತಿಗೆ ಅನುಗುಣವಾದ ಆಚಾರವನ್ನು ತ್ಯಜಿಸಿ ವಿಷಯಲೋಲುಪನಾಗಿ ಧನಾಶಾಪರನಾಗಿದ್ದನು. ಆತನು ವ್ಯಾಪಾರನಿಮಿತ್ತ ಉತ್ತರ ದೇಶಕ್ಕೆ ಹೋಗಿ ಅಲ್ಲಿಂದ ತಿರುಗಿ ಬರುತ್ತಿರುವಾಗ ಮಾರ್ಗಮಧ್ಯದಲ್ಲಿ ಆತನನ್ನು ಚೋರರು ಒಂದು ವೃಕ್ಷದ ಕೆಳಗೆ ಸಾಯಿಸಿದರು. ಪಾಪಾತ್ಮನಾದುದರಿಂದ ಮರಣಾನಂತರ ಆತನು ಪಿಶಾಚಿ ರೂಪವನ್ನು ಹೊಂದಿದನು. ಧರ್ಮಾತ್ಮನಾದ ಆತನ ಕುಮಾರನು ತಂದೆಗೆ ಉತ್ತರ ಕ್ರಿಯೆಗಳನ್ನು ನಡೆಸಲು ಕಾಶೀನಗರಕ್ಕೆ ಹೋಗುತ್ತಾ ಮಾರ್ಗದಲ್ಲಿ ತನ್ನ ತಂದೆ ವಧಿಸಲ್ಪಟ್ಟ ವೃಕ್ಷದ ಕೆಳಗೆ ಕುಳಿತು ಗೀತೆಯ ೩ನೆಯ ಅಧ್ಯಾಯವನ್ನು ಪಾರಾಯಣ ಮಾಡಿದನು.

ತತ್ರಾಧ್ಯಾಯಂ ಸ ಗೀತಾಯ ಸ್ತೃತೀಯಂ ಸಂಜಜಾಪ ಹ

ಕೂಡಲೇ ಆಕಾಶದಲ್ಲಿ ತನ್ನ ತಂದೆ ಭಯಂಕರ ಪ್ರೇತ ದೇಹವನ್ನು ಬಿಟ್ಟು ದಿವ್ಯ ವಿಮಾನಾರೂಢನಾಗಿರುವುದನ್ನು ನೋಡಿ, 'ತಂದೆಯೇ! ಪ್ರೇತತ್ವ ಹೋಗಿ ನೀನು ದೇವತ್ವವನ್ನು ಹೊಂದಲು ಕಾರಣವೇನು' ಎಂದು ಆತನನ್ನು ಕೇಳಲು, 'ಪುತ್ರಾ, ನಿನ್ನಿಂದ ಪಠಿಸಲ್ಪಟ್ಟ ಗೀತೆಯ ತೃತೀಯೋಧ್ಯಾಯವನ್ನು ಕೇಳುವುದರಿಂದ, ನನಗೆ ಈ ದಿವ್ಯಸ್ಥಿತಿ ಉಂಟಾಗಿದೆ. ಇನ್ನು ನೀನು ಕಾಶಿಗೆ ಹೋಗುವ ಅವಶ್ಯಕತೆಯಿಲ್ಲ ಮನೆಗೆ ಹೋಗಿ ಇದೇ ಉಪಾಯದಿಂದ ಗೀತೆಯ ೩ನೇ ಅಧ್ಯಾಯವನ್ನು ಪಾರಾಯಣ ಮಾಡುತ್ತಾ ತದ್ವಾರಾ ಲಭಿಸಿದ ಪುಣ್ಯವನ್ನು ಧಾರೆಯೆರೆದು ನಮ್ಮ ವಂಶಜರೆಲ್ಲರನ್ನು ನರಕಲೋಕದಿಂದ ಉದ್ಧರಿಸು' ಎಂದು ಹೇಳಿದನು. ಕುಮಾರನು ಹಾಗೆಯೇ ಮಾಡಿದನು. ಆಗ ವಿಷ್ಣು ಭಗವಾನನು ಯಮನ ಬಳಿಗೆ ದೇವದೂತರನ್ನು ಕಳುಹಿಸಿ ನರಕಲೋಕವಾಸಿಗಳಾದ ಅವನ ವಂಶಜರನ್ನೂ ಯಮನನ್ನು ವೈಕುಂಠಕ್ಕೆ ಕರೆಸಿಕೊಂಡನು. ಅಲ್ಲಿ ಯಮಧರ್ಮ ರಾಯನು, ವಿಷ್ಣುಸ್ತೋತ್ರವನ್ನು ಮಾಡಿ ಆತನ ಆಜ್ಞೆಯಂತೆ ಜಡನ ವಂಶಜರನ್ನು ಉದ್ಧರಿಸಿ, ನಿಜ ಲೋಕಕ್ಕೆ ಕಳುಹಿಸಿದನು. ಈ ಪ್ರಕಾರವಾಗಿ ಗೀತೆಯ ತೃತೀಯ ಅಧ್ಯಾಯದ ಪಾರಾಯಣದಿಂದ ಮಾನವನು ಪಾಪರಹಿತನಾಗಿ ದಿವ್ಯತ್ವವನ್ನು ಹೊಂದುವನು.

**ಗೀತೆಯ ತೃತೀಯೋಧ್ಯಾಯದ ಫಲ-ಪಾಪರಾಹಿತ್ಯ, ಪ್ರೇತತ್ವ ವಿಮುಕ್ತಿ.**

೪) **ಗೀತೆಯ ಚತುರ್ಥೋಧ್ಯಾಯದ ಫಲ :** ಗಂಗಾನದಿ ತೀರದಲ್ಲಿ ವಾರಣಾಸಿ ಎಂಬ ಪಟ್ಟಣವಿದೆ. ಅಲ್ಲಿ ವಿಶ್ವನಾಥ ದೇವಾಲಯವಿದೆ. ಅಲ್ಲಿ ಭರತನೆಂಬ ಮಹನೀಯನು ಭಕ್ತಿಶ್ರದ್ಧೆಗಳಿಂದ ನಿತ್ಯವೂ ಗೀತೆಯ ನಾಲ್ಕನೆಯ ಅಧ್ಯಾಯವನ್ನು ಪಾರಾಯಣ ಮಾಡುತ್ತಿದ್ದನು.

ನಿತ್ಯ ಮಾತ್ಮರತ ಸ್ತುರ್‍ಯಂ ಜಪ ತ್ಯಧ್ಯಾಯ ಮಾದರಾತ್
ತದಭ್ಯಾಸಾ ದದುಷ್ಟಾತ್ಮಾ ನ ದ್ವಂದ್ವೈರಭಿಭೂಯತೇ

ಅದರಿಂದ ಆತನು ಪವಿತ್ರನಾಗಿ, ಸುಖದುಃಖ, ಶೀತೋಷ್ಣಾದಿ ದ್ವಂದ್ವಗಳಲ್ಲಿ ಸಮಬುದ್ಧಿಯನ್ನು ಹೊಂದಿದ್ದನು. ಒಮ್ಮೆ ತನಗೆ ಮಹಾತ್ಮರನ್ನು ಸಂದರ್ಶಿಸುವ ಕುತೂಹಲ ಉಂಟಾಗಲು ಪರ್ಯಟನೆಗೆ ಹೊರಟನು. ದಾರಿಯಲ್ಲಿ ಒಂದು ಕಡೆ ಎರಡು ಬಾರೆಹಣ್ಣಿನ ಮರಗಳ ಕೆಳಗೆ ವಿಶ್ರಮಿಸಿ ಗೀತೆಯ ನಾಲ್ಕನೆಯ ಅಧ್ಯಾಯವನ್ನು ಪಾರಾಯಣ ಮಾಡಿದನು. ಮತ್ತೆ ಅಲ್ಲಿಂದ ಹೊರಡುವಾಗ ಅಲ್ಲಿ ಬಿದ್ದಿದ್ದ ಎರಡು ಹಣ್ಣುಗಳನ್ನು ತೆಗೆದುಕೊಂಡು ಹೋದನು. ನಂತರ ಐದು ದಿನಗಳಲ್ಲಿ ಆ ಎರಡು ಗಿಡಗಳು ಒಣಗಿ ಹೋಗಿ, ಅದರಲ್ಲಿಯ ಜೀವಿಗಳು ಪೂರ್ವಜನ್ಮ ಜ್ಞಾನಸಹಿತ ಬ್ರಾಹ್ಮಣ ಬಾಲಿಕೆಯರಾಗಿ ಒಂದೇಕಡೆ ಜನ್ಮಿಸಿದರು. ಹೀಗಿರುವಾಗ ಒಂದು ದಿನ ಆ ಭರತ ಮುನೀಂದ್ರನು ಆ ಬಾಲಿಕೆಯರ ಗೃಹಕ್ಕೆ ಹೋಗಲು ಅವರು ಆತನಿಗೆ ಪೂಜಾದಿಗಳನ್ನರ್ಪಿಸಿ ಆತನ ಆದೇಶದ ಮೇರೆಗೆ ತಮ್ಮ ವೃತ್ತಾಂತವೆಲ್ಲವನ್ನು ಹೀಗೆ ವಿವರಿಸಿದರು. 'ಮಹಾತ್ಮಾ! ಪೂರ್ವದಲ್ಲಿ ಗೋದಾವರಿ ತೀರದಲ್ಲಿ ಚಿನ್ನಪಾಪವೆಂಬ ತೀರ್ಥಸ್ಥಳದಲ್ಲಿ ಸತ್ಯತಪನೆಂಬ ಯೋಗಿಪುಂಗವನು ಘೋರ ತಪಸ್ಸು ನಡೆಸುತ್ತಿದ್ದನು. ಆತನ ತಪಸ್ಸಿನಿಂದ ತನ್ನ ಪದವಿಗೆ ಏನಾದರೂ ಭಂಗ ಉಂಟಾಗುವುದೇನೋ ಎಂದು ಭಾವಿಸಿ ಇಂದ್ರನು ಅದಕ್ಕೆ ಭಗ್ನವನ್ನುಂಟು ಮಾಡಲಿಚ್ಛಿಸಿ ಅಪ್ಸರೆಯರಾದ ನಮ್ಮಿಬ್ಬರನ್ನು ಅಲ್ಲಿಗೆ ಕಳುಹಿಸಿದನು. ಇಂದ್ರನ ಆಜ್ಞಾನುಸಾರ ನಾವು ಆ ಮುನೀಂದ್ರನ ಬಳಿಗೆ ಹೋಗಿ ಸುಮಧುರವಾಗಿ ನೃತ್ಯಜ್ಞಾನಾದಿಗಳನ್ನು ಮಾಡಿದೆವು. ಅದರಿಂದ ಆತನು ಕೋಪೋದ್ರೇಕಗೊಂಡು ಗಂಗಾತೀರದಲ್ಲಿ ಎರಡು ಬಾರೆಗಿಡಗಳಾಗಿ ಜನ್ಮಿಸಿರೆಂದು ಶಪಿಸಿದನು. ಆಗ ಕರುಣೆಸಿರೆಂದು ದೀನಚಿತ್ತರಾಗಿ ಬೇಡಿಕೊಳ್ಳಲು, 'ಭರತನೆನ್ನುವ ಮಹಾತ್ಮನು ನಿಮ್ಮ ಬಳಿಗೆ ಬರುವವರೆಗೆ ನಿಮಗೆ ಆ ವೃಕ್ಷರೂಪವಿರುವುದು. ಅನಂತರ ಪೂರ್ವಜನ್ಮ ಸ್ಮೃತಿಯುಳ್ಳ ಮಾನವ ಜನ್ಮ ಪಡೆದು ಕ್ರಮವಾಗಿ ದೇವತಾರೂಪವನ್ನು ಪಡೆಯಬಲ್ಲರೆಂದು ಹೇಳಿದನು, ಮಹಾತ್ಮಾ! ಈ ವಿಧವಾಗಿ ಶಾಪಗ್ರಸ್ತವಾಗಿ ಬಾರೆಗಿಡಗಳಾಗಿದ್ದ ನಮ್ಮ ಬಳಿಗೆ ಈ ಹಿಂದೆ ತಾವು ಬಂದು ಗೀತೆಯ ಚತುರ್ಥೋಧ್ಯಾಯವನ್ನು ಪಾರಾಯಣ ಮಾಡಿದಿರಿ, ಫಲಸ್ವರೂಪವಾಗಿ ನಮಗೆ ಶಾಪವಿಮೋಚನೆಯುಂಟಾಗಿದೆ. ಘೋರ ಸಂಸಾರದಿಂದ ನಮ್ಮನ್ನು ಮುಕ್ತಿಗೊಳಿಸಿದ ಮಹನೀಯರಾದ ನಿಮಗೆ ನಮ್ಮ ನಮನಗಳೆಂದು ಆ ಇಬ್ಬರು ಬಾಲಕಿಯರು ತಮ್ಮ ಭಕ್ತ್ಯಾಂಜಲಿಗಳನ್ನು ಆ ಮುನೀಂದ್ರನಿಗೆ ಅರ್ಪಿಸಿದರು.

ಕನ್ಯೇ ಚತುರ್ಥ ಮಧ್ಯಾಯಂ ಜಪೇತಾಂ ನಿತ್ಯಮಾದರಾತ್

**ಗೀತೆಯ ಚತುರ್ಥೋಧ್ಯಾಯದ ಫಲ-ಮಾನವರೇ ಅಲ್ಲದೆ ವೃಕ್ಷಾದಿಗಳೂ ಕೂಡ ದೋಷವಿಮುಕ್ತರಾಗಿ ಮೋಕ್ಷ ಹೊಂದುವರು.**

೫. **ಪಂಚಮೋಧ್ಯಾಯದ ಫಲ :** ಮದ್ರ ದೇಶದಲ್ಲಿ ಪುರುಕುತ್ಸವೆಂಬ ನಗರವಿದೆ. ಅಲ್ಲಿ ಪಿಂಗಳನೆಂಬ ಬ್ರಾಹ್ಮಣನಿದ್ದನು. ಆತನು ತನ್ನ ಕುಲಧರ್ಮವಾದ ವೇದಾಧ್ಯಯನಾದಿ ಕಾರ್ಯಗಳನ್ನು ಬಿಟ್ಟು ಸಂಗೀತವನ್ನು, ನಾಟ್ಯವನ್ನು ಅಭ್ಯಸಿಸಿ ರಾಜನ ಆಸ್ಥಾನವನ್ನು ಸೇರಿದನು. ಆತನಿಗೆ ನೀಚಕುಲದಲ್ಲಿ ಜನ್ಮಿಸಿದ ಅರುಣೆ ಎನ್ನುವ ಪತ್ನಿಯಿದ್ದಳು. ಆಕೆ ಮತ್ತೊಬ್ಬನನ್ನು ಪ್ರೇಮಿಸಿ ಕಾಲಕಳೆಯುತ್ತಿದ್ದು ತನ್ನ ಸ್ವೇಚ್ಛಾಚಾರಗಳಿಗೆ ಪಿಂಗಳನು ಅಡ್ಡವಾಗಿರುವನೆಂದು ಭಾವಿಸಿ ಒಂದು ರಾತ್ರಿ ಆತನ ತಲೆ ಒಡೆದು ಸಾಯಿಸಿ ಮೃತ ಶರೀರವನ್ನು ಭೂಮಿಯಲ್ಲಿ ಹೂತಿಟ್ಟಳು. ಆಕೆಯು ತನ್ನ ದುಷ್ಪ್ರವೃತ್ತಿಯಿಂದ ಭಗಂದರವೆನ್ನುವ ರೋಗದಿಂದ ಪೀಡಿತಳಾಗಿ ಸತ್ತಳು. ಸತ್ತ ಪಿಂಗಳನು ಒಂದು ಅರಣ್ಯದಲ್ಲಿ ಹದ್ದಾಗಿಯೂ ಆತನ ಹೆಂಡತಿ ಅಲ್ಲಿಯೇ ಗಿಳಿಯಾಗಿಯೂ ಜನ್ಮಿಸಿದರು. ಪೂರ್ವಜನ್ಮ ವೈರದಿಂದ ಪರಸ್ಪರ ಕಲಹ ಮಾಡುತ್ತಾ, ಒಂದು ದಿನ ಆಕಸ್ಮಾತ್ತಾಗಿ ಜಲದಿಂದ ತುಂಬಿದ ಒಂದು ಋಷಿ ಪುಂಗವನ ತಲೆ ಚಿಪ್ಪಿನ ಮೇಲೆ ಬಿದ್ದು ಮೃತಪಟ್ಟವು. ದೂತರು ಅವುಗಳೆನ್ನು ಯಮನ ಬಳಿಗೆ ತೆಗೆದುಕೊಂಡು ಹೋಗಲು ಯಮನು ಅವರನ್ನು ಬಿಡುಗಡೆಮಾಡಿ ಉತ್ತಮಲೋಕಕ್ಕೆ ಹೋಗುವಂತೆ ಆದೇಶಿಸಿದನು. ಅದನ್ನು ಕೇಳಿ ಆ ದಂಪತಿಗಳಿಬ್ಬರೂ ಅನೇಕ ಪಾಪಕಾರ್ಯಗಳನ್ನು ಮಾಡಿದ ನಮಗೆ ಇಂತಹ

ಸದ್ಗತಿ ಹೇಗೆ ಲಭಿಸಿತೆಂದು ಪ್ರಶ್ನಿಸಲು, ಯಮನು ಈ ರೀತಿ ಹೇಳಿದನು- 'ಓ ದಂಪತಿಗಳೇ! ಗಂಗಾ ತೀರದಲ್ಲಿ ವಟು ಎನ್ನುವ ಹೆಸರುಳ್ಳ ಬ್ರಹ್ಮವೇತ್ತನೊಬ್ಬನಿದ್ದನು. ಆತನು ನಿತ್ಯವೂ ಗೀತೆಯ ೫ನೆಯ ಅಧ್ಯಾಯವನ್ನು ಪಾರಾಯಣ ಮಾಡುತ್ತಿದ್ದನು. ಆದರಿಂದ ಆತನು ಪುನೀತನಾಗಿ ಸನಾತನವಾದ ಪರಬ್ರಹ್ಮವನ್ನು ಸೇರಿದನು.

ಗೀತಾನಾಂ ಪಂಚಮಾಧ್ಯಾಯ ಮಾವರ್ತಯತಿ ಸರ್ವದಾ
ತೇನ ಪುಣ್ಯೇನ ಪೂತಾತ್ಮಾ ಯಯೌ ಬ್ರಹ್ಮ ಸನಾತನಮ್

ಆತನ ತಲೆ ಚಿಪ್ಪಿನ ಮೇಲೆ ಬಿದ್ದು ಮೃತಪಟ್ಟಿದ್ದರಿಂದ ನೀವೂ ಕೂಡ ಪವಿತ್ರರಾದಿರಿ. ಆದ್ದರಿಂದ ನಿಮಗೆ ಇಷ್ಟವಾದ ಉತ್ತಮ ಲೋಕವನ್ನು ಪ್ರಸಾದಿಸುವಂತೆ ಆಜ್ಞಾಪಿಸಿರುತ್ತೇನೆ. ಅನಂತರ ಅವರಿಬ್ಬರೂ ವಿಮಾನ ರೂಢರಾಗಿ ವೈಕುಂಠಕ್ಕೆ ಹೋದರು. ಈ ಪ್ರಕಾರವಾಗಿ ಗೀತೆಯ ೫ನೆಯ ಅಧ್ಯಾಯದ ಸಂಬಂಧದಿಂದ ಪಶುಪಕ್ಷ್ಯಾದಿಗಳು ಸಹ ಮುಕ್ತಿ ಹೊಂದಬಲ್ಲವು.

**ಗೀತೆಯ ಪಂಚಮೋಧ್ಯಾಯದ ಫಲ- ದೋಷವಿಮುಕ್ತಿ, ಪಶು ಪಕ್ಷ್ಯಾದಿಗಳೂ ಕೂಡ ಮುಕ್ತಿ ಹೊಂದುವುವು.**

**೬. ಷಷ್ಠೋಧ್ಯಾಯದ ಫಲ :** ಪೂರ್ವದಲ್ಲಿ ಗೋದಾವರಿ ನದೀ ತೀರದಲ್ಲಿ ಪ್ರತಿಷ್ಠಾನವೆಂಬ ನಗರವಿತ್ತು. ಆ ನಗರವನ್ನು ಧರ್ಮಾತ್ಮನಾದ ಜಾನಶ್ರುತಿ ಎಂಬ ರಾಜನು ಪಾಲಿಸುತ್ತಿದ್ದನು. ಆ ರಾಜನ ಧರ್ಮನಿರತೆಗೆ ಪ್ರಜಾಹಿತ ಕಾರ್ಯಗಳಿಗೆ ಮೆಚ್ಚಿ ದೇವತೆಗಳು ಆತನನ್ನು ಅನುಗ್ರಹಿಸಲು ಇಚ್ಛಿಸಿ ಹಂಸಗಳ ರೂಪದಲ್ಲಿ ಆತನ ಅರಮನೆಗೆ ಆಕಾಶಮಾರ್ಗದಲ್ಲಿ ಬರುತ್ತಿದ್ದರು. ಪಟ್ಟಣವನ್ನು ಸಮೀಪಿಸುತ್ತಿರುವಾಗ ಭದ್ರಾಶ್ವ ಮುಂತಾದ ಹಂಸಗಳು ಬೇರೆಯವುಗಳಿಗಿಂತ ವೇಗವಾಗಿ ಮುಂದೆ ಹಾರಿದವು. ಅದನ್ನು ಕಂಡ ಮಿಕ್ಕ ಹಂಸಗಳು ಅವುಗಳೊಂದಿಗೆ, ಓ, ವೇಗವಾಗಿ ಹೋಗಿ ಮಹಾತೇಜಸ್ವಿಯಾದ ಜಾನಶ್ರುತಿ ಮಹಾರಾಜನಿಗೆ ಅವಿನಯ ತೋರಿಸಬಹುದೇ? ಮೆಲ್ಲಗೆ ಹೋಗಿ! ಎಂದು ಹೇಳಲು, ಆ ಹಂಸಗಳು 'ಬ್ರಹ್ಮವೇತ್ತನಾದ ರೈಕ್ವನ ಮುಂದೆ ಈ ರಾಜನ ತೇಜಸ್ಸು ಯಾವ ಮೂಲೆಗೆ?' ಎಂದು ಸಮಾಧಾನವಿತ್ತವು. ಆ ವಾಕ್ಯಗಳನ್ನು ತನ್ನ ಉಪ್ಪರಿಗೆ ಮೇಲೆ ನಿಂತಿದ್ದ ಜಾನಶ್ರುತಿಯು ಕೇಳಿ ಕೂಡಲೇ ತನ್ನ ಸಾರಥಿಯನ್ನು ಕರೆದು ರೈಕ್ವನನ್ನು ಹುಡುಕಿ ತರುವುದು ಎಂದು ಆಜ್ಞಾಪಿಸಿದನು. ಅವನು ಪುಣ್ಯ ಕ್ಷೇತ್ರಗಳನ್ನೆಲ್ಲಾ ಹುಡುಕಿ ಕೊನೆಗೆ ಕಾಶ್ಮೀರ ದೇಶದಲ್ಲಿ ಮಾಣಿಕ್ಯೇಶ್ವರ ದೇವಾಲಯದ ದ್ವಾರದ ಬಳಿ ಒಂದು ಬಂಡಿಯಲ್ಲಿ ಕೂತಿದ್ದ ರೈಕ್ವನನ್ನು ಸಂದರ್ಶಿಸಿ, ಪ್ರಣಾಮಮಾಡಿ 'ಮಹಾತ್ಮಾ! ತಾವು ಇಲ್ಲಿ ಈ ಪ್ರಕಾರವಾಗಿರಲು ಕಾರಣವೇನು? ಎಂದು ಕೇಳಲು, ನನ್ನ ಸ್ವರೂಪವನ್ನು ತಿಳಿಯಬೇಕೆಂದರೆ ಸ್ವಲ್ಪ ಕಾಲವಿಲ್ಲಿರ ಬೇಕಾಗುತ್ತದೆಂದು ಹೇಳಿದನು. ಆ ವಾಕ್ಯವನ್ನು ಕೇಳಿ, ಸಾರಥಿ ರಾಜನ ಬಳಿಗೆ ಹೋಗಿ ನಡೆದ ವೃತ್ತಾಂತವನ್ನು ತಿಳಿಸಿದನು. ರಾಜನು ಕೂಡಲೇ ಆ ವೈರಾಗ್ಯಶೀಲನನ್ನು ಸಂದರ್ಶಿಸಿ ಸೇವಿಸಬೇಕೆಂದು ೧೦೦೦೦ ಗೋವುಗಳನ್ನು, ಪೀತಾಂಬರಗಳನ್ನು, ಮುತ್ತಿನ ಹಾರಗಳನ್ನು ತೆಗೆದುಕೊಂಡು ರೈಕ್ವನ ಬಳಿಗೆ ಹೋದನು. ಆತನಿಗೆ ನಮಸ್ಕರಿಸಿ ತಾನು ತಂದ ವಸ್ತುಗಳನ್ನು ಕಾಣಿಕೆಯಾಗಿ ಸ್ವೀಕರಿಸಬೇಕೆಂದು ಪ್ರಾರ್ಥಿಸಿದನು. ಮುನೀಂದ್ರನು ಅದಕ್ಕೆ ಕೋಪಿಸಿಕೊಂಡು 'ಓ! ನನ್ನ ವಿಷಯ ನಿನಗೆ ತಿಳಿಯದೇ? ಈ ವಸ್ತುಗಳನ್ನು ನೀನು ಹಿಂದಕ್ಕೆ ತೆಗೆದುಕೊಂಡು ಹೋಗು, ನನಗೆ ಬೇಕಾಗಿಲ್ಲ' ಎಂದನು. ರಾಜನು ಆತನ ಪಾದಗಳನ್ನು ಹಿಡಿದು ಕ್ಷಮಿಸಬೇಕೆಂದು ಬೇಡಿ, ಆತನ ಆ ಮಹಾತ್ಮ್ಯೆಗೆ ಕಾರಣವೇನೆಂದು ಪ್ರಶ್ನಿಸಿದನು. ಆ ರೈಕ್ವ ಮುನಿ ತಾನು ಗೀತೆಯ ೬ನೆಯ ಅಧ್ಯಾಯವನ್ನು ಪ್ರತಿದಿನವೂ ಪಾರಾಯಣ ಮಾಡುವುದರ ಪ್ರಭಾವದಿಂದ ತನಗೆ ಅಂತಹ ವೈರಾಗ್ಯ ಉಂಟಾಗಿದೆಯೆಂದು ತಿಳಿಸಿದನು.

ಗೀತಾನಾಂ ಷಷ್ಠ ಮಧ್ಯಾಯಾಂ ಜಪಾಮಿಪ್ರತ್ಯಹಂ ನೃಪ
ತೇನೈವ ತೇಜೋರಾಶಿರ್ಮೇ ಸುರಾಣಾ ಮಪಿ ದುಸ್ಸಹಃ

ಜಾನಶ್ರುತನು ಬಹುಕಾಲ ಆತನ ಸೇವಾಶುಶ್ರೂಷೆಗಳನ್ನು ಮಾಡಿ ಗೀತೆಯ ೬ನೆಯ ಅಧ್ಯಾಯವನ್ನು ಆತನಿಂದ ಕಲಿತು ಆ ಅಭ್ಯಾಸವಶದಿಂದ ಕ್ರಮವಾಗಿ ಮುಕ್ತಿ ಧಾಮವನ್ನಲಂಕರಿಸಿದನು. ಆದ್ದರಿಂದ ಗೀತೆಯ ೬ನೆಯ ಅಧ್ಯಾಯದ ಪಾರಾಯಣ, ಅನುಷ್ಠಾನಗಳಿಂದ ಜನಗಳಿಗೆ ಮೋಕ್ಷಪ್ರಾಪ್ತಿ ಅವಶ್ಯವಾಗಿ ಉಂಟಾಗುವುದು.

**ಗೀತೆಯ ಆರನೆಯ ಅಧ್ಯಾಯ ಫಲ- ಮೋಕ್ಷ ಪ್ರಾಪ್ತಿ**

**೭. ಸಪ್ತಮೋಧ್ಯಾಯದ ಫಲ :** ಪೂರ್ವಕಾಲದಲ್ಲಿ ಪಾಟಲೀಪುತ್ರವೆಂಬ ನಗರದಲ್ಲಿ ಶಂಕುಕರ್ಣನೆಂಬ ಬ್ರಾಹ್ಮಣನಿದ್ದನು. ಆತನು ತನ್ನ ಬ್ರಾಹ್ಮಣ ವೃತ್ತಿಯನ್ನು ಬಿಟ್ಟು ನಿರಂತರವೂ ಧನಾರ್ಜನಾ ತತ್ಪರನಾಗಿ ಕಾಲ ಕಳೆಯುತ್ತಿದ್ದನು. ಒಂದು ದಿನ ಆತನು ತನ್ನ ಬಂಧು ಮಿತ್ರಾದಿಗಳೊಂದಿಗೆ ಮತ್ತೊಂದು ಗ್ರಾಮಕ್ಕೆ ಹೋಗುತ್ತಿರಲು ಮಾರ್ಗಮಧ್ಯದಲ್ಲಿ ಒಂದು ಸರ್ಪಕಚ್ಚಿ ಮರಣಿಸಿದನು. ನಂತರ ಆತನು ಸರ್ಪವಾಗಿ ಹುಟ್ಟಿ ಪೂರ್ವಜನ್ಮದ ಧನಾಶೆಯ ಸಂಸ್ಕಾರವು ಗಾಢವಾಗಿದ್ದುದರಿಂದ ತಾನು ಇದುವರೆವಿಗೆ ಭೂಮಿಯಲ್ಲಿ ಬಚ್ಚಿಟ್ಟಿದ್ದ ನಿಧಿಯನ್ನು ರಕ್ಷಿಸುತ್ತಿರಲು, ಒಂದು ರಾತ್ರಿ ತನ್ನ ಪುತ್ರರ ಸ್ವಪ್ನದಲ್ಲಿ ಕಾಣಿಸಿಕೊಂಡು ತಾನು ಅವರ ತಂದೆಯೆಂದೂ ಸರ್ಪರೂಪದಲ್ಲಿ ನಿಧಿಯನ್ನು ಕಾಪಾಡುತ್ತಿದ್ದೇನೆಂದೂ ತಿಳಿಸಿದನು. ಮರುದಿನ ಬೆಳಿಗ್ಗೆ ಅವರು ನಿಧಿಯಿರುವ ಸ್ಥಳವನ್ನು ಅಗೆಯುತ್ತಿರುವಾಗ ಆ ಸರ್ಪವು ಎದ್ದು 'ಶಿವ' ಎನ್ನುವ ಕುಮಾರನೊಡನೆ ತನ್ನನ್ನು ಆ ದೀನದಶೆಯಿಂದ ಉದ್ಧರಿಸಬೇಕೆಂದು, ಭಗವದ್ಗೀತೆಯ ಸಪ್ತಮೋಧ್ಯಾಯ ಪಾರಾಯಣವೇ ತನ್ನನ್ನು ಸದ್ಗತಿಗೆ ಒಯ್ಯುವುದೆಂದು ತಿಳಿಸಿದನು. ಆತನ ಮಕ್ಕಳು ಆ ವಿಧದಲ್ಲಿಯೇ ಪಾರಾಯಣ ಮಾಡಿ ತಂದೆಯನ್ನು ಮುಕ್ತಿಗೊಳಿಸಿದರು.

ಗೀತಾನಾಂ ಸಪ್ತಮಾಧ್ಯಾಯ ಮಂತರೇಣ ಸುಧಾಮಯಂ
ಜಂತೋರ್ಜರಾಮೃತ್ಯುದುಃಖ ನಿರಾಕರಣ ಕಾರಣಮ್

ಅಮೃತ ಪರಿಪೂರ್ಣವಾದ ಗೀತೆಯ ಏಳನೆಯ ಅಧ್ಯಾಯವನ್ನು ಪಾರಾಯಣ ಮಾಡುವುದರಿಂದ ಜೀವಿಗಳು ಜನ್ಮ ಜರಾಮೃತ್ಯು ದುಃಖಗಳಿಂದ ವಿಮುಕ್ತರಾಗುವರು. ಶಂಕುಕರ್ಣನ ಮಕ್ಕಳು ಗೀತಾ ಸಪ್ತಮೋಧ್ಯಾಯವನ್ನು ಪಠಿಸುವುದರಿಂದ ತಂದೆಯನ್ನು ಸರ್ಪಜನ್ಮದಿಂದ ವಿಮುಕ್ತಿಗೊಳಿಸಿದರು. ಪುತ್ರರು ತಂದೆಯ ದ್ರವ್ಯವನ್ನು ದಾನಧರ್ಮಗಳಿಗೆ ವಿನಿಯೋಗಿಸಿ ಸುಚರಿತರಾಗಿ ಗೀತೆಯ ಸಪ್ತಮೋಧ್ಯಾಯವನ್ನು ನಿರಂತರ ಜಪಿಸುತ್ತಾ ಭಗವದ್ ಜ್ಞಾನವನ್ನು ಹೊಂದಿ ಮುಕ್ತರಾದರು.

**ಸಪ್ತಮಾಧ್ಯಾಯ ಜಪತೋ ಮುಕ್ತಿಭಾಜೋಽಭವಂ ಸ್ತತಃ**
**ದೇವ ಮಿಷ್ಟತಮಮ್ ಜ್ಞಾತ್ವಾ ನಿರ್ವಾಣಾರ್ಪಿತ ಬುದ್ಧಯಃ**

ಆದ್ದರಿಂದ ಗೀತೆಯ ಸಪ್ತಮೋಧ್ಯಾಯದ ಪಾರಾಯಣದಿಂದ ಮಾನವರೇ ಅಲ್ಲದೆ, ಪಿತೃ ದೇವತೆಗಳು, ಸರ್ಪಾದಿ ನೀಚಯೋನಿಗಳಲ್ಲಿ ಜನ್ಮಿಸಿದವರೂ ಕೂಡ ಮೋಕ್ಷಕ್ಕೆ ಭಾಗಿಗಳಾಗುತ್ತಾರೆ.

**ಗೀತೆಯ ಸಪ್ತಮೋಧ್ಯಾಯದ ಫಲ- ಮಾನವರು, ಪಿತೃದೇವತೆಗಳು, ಸರೀಸೃಪಾದಿಗಳೂ ಕೂಡ ಮುಕ್ತಿ ಹೊಂದುವುವು.**

**೮. ಅಷ್ಟಮೋಧ್ಯಾಯದ ಫಲ :** ದಕ್ಷಿಣ ದೇಶದಲ್ಲಿ ಆಮರ್ದಕವೆಂಬ ಪ್ರಸಿದ್ಧ ನಗರದಲ್ಲಿ ಭಾವಶರ್ಮನೆಂಬ ಬ್ರಾಹ್ಮಣನು ವಾಸಿಸುತ್ತಿದ್ದನು. ಆತನು ಅನೇಕ ಅನುಚಿತ ಕಾರ್ಯಗಳನ್ನು ಮಾಡುತ್ತಾ ಜೀವನವನ್ನು ವ್ಯರ್ಥಗೊಳಿಸಿ ಕೊಂಡಿದ್ದನು. ವೇಶ್ಯಾಲೋಲನಾಗಿ, ಮಧು, ಮಾಂಸಗಳನ್ನು ಭಕ್ಷಿಸುತ್ತಿದ್ದನು. ಕಾಲಕ್ರಮದಲ್ಲಿ ಆತನು ಅಜೀರ್ಣವ್ಯಾಧಿ ಪೀಡಿತನಾಗಿ ಮರಣಿಸಿ (ಹೆಂಡದ ಸಂಸ್ಕಾರದಿಂದ) ಒಂದು ಸ್ಥಳದಲ್ಲಿ ಈಚಲು ಗಿಡವಾಗಿ ಜನ್ಮಿಸಿದನು. ಹೀಗಿರುವಾಗ ಕುಶೀವಲನೆಂಬ ಇನ್ನೊಬ್ಬ ಬ್ರಾಹ್ಮಣನು ದಾನಗಳನ್ನು ಅಧಿಕ ವಾಗಿ ತೆಗೆದುಕೊಳ್ಳುತ್ತಾ ಧರ್ಮಕಾರ್ಯಗಳನ್ನು ಮಾಡದೆ ಜೀವನವನ್ನು ನಡೆಸುತ್ತಾ ಕಾಲವಶದಲ್ಲಿ ಮೃತ್ಯು ಹೊಂದಿ ಬ್ರಹ್ಮರಾಕ್ಷಸನಾಗಿ ಜನ್ಮಿಸಿದನು. ಆತನ ಪತ್ನಿಯಾದ ಕುಮತಿಯು ಬ್ರಹ್ಮರಕ್ಕಸಿಯಾಗಿ ಹುಟ್ಟಿದಳು. ಅವರಿಬ್ಬರೂ ಈಚಲು ಮರದ ಕೆಳಗೆ ಕುಳಿತಿದ್ದು ಹೆಂಡತಿ ಗಂಡನೊಂದಿಗೆ 'ನಾಥಾ! ನಮಗೆ ಈ ಬ್ರಹ್ಮರಾಕ್ಷಸ ರೂಪ ಹೇಗೆ ತೊಲಗುವುದೆಂದು ಪ್ರಶ್ನಿಸಲು, ಪತಿಯು 'ಬ್ರಹ್ಮ ವಿದ್ಯೋಪದೇಶದಿಂದ, ಆಧ್ಯಾತ್ಮ ವಿಚಾರಣೆಯಿಂದ, ಕರ್ಮಗಳ ರಹಸ್ಯವನ್ನು ತಿಳಿಯುವುದರಿಂದ ಹೋಗುವುದೆಂದು' ಹೇಳಿದನು. ಆ ವಾಕ್ಯಗಳನ್ನು ಕೇಳಿ ಪತ್ನಿಯಾದ ಕುಮತಿ 'ಕಿಂ ತದ್ಬ್ರಹ್ಮ ಕಿಮಧ್ಯಾತ್ಮಂ ಕಿಂ ಕರ್ಮ ಪುರುಷೋತ್ತಮ' ಬ್ರಹ್ಮವೆಂದರೆ ಏನು? ಆಧ್ಯಾತ್ಮವೆಂದರೇನು? ಕರ್ಮದ ತತ್ವವೇನು?' ಎಂದು ಪ್ರಶ್ನಿಸಿ, ಅಪ್ರಯತ್ನವಾಗಿ ಗೀತೆಯ ಅಷ್ಟಮೋಧ್ಯಾಯದ ಪ್ರಥಮ ಶ್ಲೋಕದ ಪೂರ್ವಾರ್ಧವನ್ನು ಸ್ಮರಿಸಿದಳು. ಆ ಗೀತಾವಾಕ್ಯದ ಶ್ರವಣ ಮಾತ್ರದಿಂದಲೇ ಈಚಲು ಮರವಾಗಿದ್ದ ಭಾವಶರ್ಮ, ಬ್ರಹ್ಮರಾಕ್ಷಸನಾಗಿದ್ದ ಕುಶೀವರ ಹಾಗೂ ಅವನ ಪತ್ನಿ ವಿಮುಕ್ತರಾಗಿ ನಿಜರೂಪವನ್ನು ಹೊಂದಿದರು. ಆಗ ಕುಶೀವರ ದಂಪತಿಗಳು ಆ ಸಮಯದಲ್ಲಿ ಅಲ್ಲಿಗೆ ಬಂದ ವಿಮಾನವನ್ನು ಹತ್ತಿ ದಿವ್ಯಲೋಕವನ್ನು ಸೇರಿದರು. ಭಾವಶರ್ಮನಾದರೋ ಆ ಅರ್ಧಶ್ಲೋಕ ವನ್ನು ಬರೆದಿಟ್ಟುಕೊಂಡು ಕಾಶಿ ಪಟ್ಟಣಕ್ಕೆ ಹೋಗಿ ಅದನ್ನು ಜಪಿಸುತ್ತ ಅರ್ಥವನ್ನು ಮನನ ಮಾಡುತ್ತ ಶ್ರೀ ಹರಿಯನ್ನು ಕುರಿತು ಧ್ಯಾನಿಸುತ್ತಿದ್ದನು. ವಿಷ್ಣುಮೂರ್ತಿ ಆತನ ಜಪ ತಪಗಳಿಗೆ ಮೆಚ್ಚಿ ಮೋಕ್ಷವನ್ನು ಪ್ರಸಾದಿಸಿದನು. ಆತನ ತಪಸ್ಸಿನಿಂದ ನರಕವಾಸಿಗಳಾಗಿದ್ದ ಆತನ ವಂಶಜರೂ ಸಹ ವಿಮುಕ್ತಿ ಹೊಂದಿದರು.

> **ಜಪನ್ ಗೀತಾಷ್ಟಮಾಧ್ಯಾಯ ಶ್ಲೋಕಾರ್ಧಂ ನಿಯತೇಂದ್ರಿಯಃ**
> **ಸಂತುಷ್ಟವಾ ನಹಂ ದೇವಿ ತದೀಯ ತಪಸಾ ಭೃಶಮ್.**

ಈ ವಿಧವಾಗಿ ಗೀತೆಯ ಅಷ್ಟಮೋಧ್ಯಾಯದ ಪಾರಾಯಣದಿಂದ ಬ್ರಹ್ಮರಾಕ್ಷಸತ್ವ, ವೃಕ್ಷ್ಯಾದಿ ಸಮಸ್ತ ದೋಷಗಳು ತೊಲಗಿ ಜೀವಿಗೆ ಮುಕ್ತಿ ಲಭಿಸುವುದು.

**ಗೀತೆಯ ಅಷ್ಟಮೋಧ್ಯಾಯದ ಫಲ- ಸಮಸ್ತ ದುರ್ಗತಿ ನಿವಾರಣೆ, ಮೋಕ್ಷಪ್ರಾಪ್ತಿ**

**೯. ನವಮೋಧ್ಯಾಯದ ಫಲ :** ಪೂರ್ವದಲ್ಲಿ ನರ್ಮದಾ ನದಿ ತೀರದಲ್ಲಿ ಮಹಿಷ್ಮತಿ ಎನ್ನುವ ಪಟ್ಟಣದಲ್ಲಿ ಮಾಧವನೆಂಬ ಬ್ರಾಹ್ಮಣನಿದ್ದನು. ಆತನು ದೊಡ್ಡ ವಿದ್ವಾಂಸ. ಧರ್ಮ ಪ್ರವೃತ್ತಿಯುಳ್ಳವನು. ಒಂದು ಸಾರಿ ಆತನು ಯಾಗಮಾಡಬೇಕೆಂದುಕೊಂಡು ಅದಕ್ಕೆ ಬಲಿ ಕೊಡಲೆಂದು ಒಂದು ಮೇಕೆಯನ್ನು ತಂದನು. ಸರಿಯಾಗಿ ಬಲಿ ಕೊಡುವ ಸಮಯದಲ್ಲಿ ಆ ಮೇಕೆ 'ಓ ದ್ವಿಜೋತ್ತಮ! ಈ ಯಾಗದಿಂದ ನಿನಗೆ ಶಾಶ್ವತ ಫಲಿತವೇನೂ ಕೈಗೂಡುವುದಿಲ್ಲ, ಮತ್ತೆ ಒಂದು ಪಶುವನ್ನು ಹಿಂಸಿಸುವುದರಿಂದ ನನಗೆ ಹಿಡಿದ ದುರ್ಗತಿಯೇ ನಿನಗುಂಟಾಗುವುದು' ಎಂದು ವಿಪ್ರನಿಗೆ ಹೇಳಿತು. ನಂತರ ಬ್ರಾಹ್ಮಣನ ಕೋರಿಕೆಯ ಮೇಲೆ ಮೇಕೆ ತನ್ನ ಪೂರ್ವ ವೃತ್ತಾಂತವನ್ನು ಹೇಳಿತು- 'ಓ ವಿಪ್ರ! ಪೂರ್ವದಲ್ಲಿ ನಿನ್ನ ಹಾಗೆ ನಾನೂ ಬ್ರಾಹ್ಮಣ ವಂಶದಲ್ಲಿ ಜನಿಸಿದ್ದೆ. ಒಂದು ದಿನ ನನ್ನ ಪುತ್ರನು ರೋಗಗ್ರಸ್ತನಾಗಲು ನನ್ನ ಪತ್ನಿಯ ಪ್ರೇರಣೆಯಿಂದ ರೋಗ ಶಾಂತಿಗೆ ಒಂದು ಮೇಕೆಯನ್ನು ಚಂಡಿಕಾದೇವಿಗೆ ಬಲಿಕೊಟ್ಟೆ. ಆ ಮೇಕೆಯ ಹೃದಯ ವಿದ್ರಾವಕ ದೃಶ್ಯವನ್ನು ನೋಡುತ್ತಿದ್ದ ಅದರ ತಾಯಿ ನನ್ನನ್ನು ಮೇಕೆಯಾಗಿ ಹುಟ್ಟು ಎಂದು ಶಪಿಸಿದಳು. ಆದ್ದರಿಂದಲೇ ಅನೇಕ ಜನ್ಮಗಳನ್ನು ಹೊತ್ತು ಈಗ ಈ ಪ್ರಕಾರವಾಗಿ ಮೇಕೆಯಾಗಿ ಹುಟ್ಟಿ ಬಾಧೆಗಳನ್ನು ಪಡುತ್ತಿದ್ದೇನೆ.!' ಆ ವಾಕ್ಯಗಳನ್ನು ಕೇಳಿ ಬ್ರಾಹ್ಮಣನು ತತ್ತರಿಸಿ, ಆತ್ಯಂತಿಕ ಸುಖಪ್ರಾಪ್ತಿಗೆ ಮಾರ್ಗ ತಿಳಿಸೆಂದು ಕೋರಲು, ಆ ಮೇಕೆ ಹೀಗೆ ಸಮಾಧಾನ ಕೊಟ್ಟಿತು.

ಪೂರ್ವದಲ್ಲಿ ಕುರುಕ್ಷೇತ್ರ ಎನ್ನುವ ನಗರದಲ್ಲಿ ಚಂದ್ರಶರ್ಮನೆನ್ನುವ ರಾಜನಿದ್ದನು. ಆತನು ಒಂದು ದಿನ ಸೂರ್ಯಗ್ರಹಣ ಕಾಲದಲ್ಲಿ ಒಬ್ಬ ಬ್ರಾಹ್ಮಣನಿಗೆ ಕಾಲಪುರುಷ ದಾನ ಮಾಡಬೇಕೆಂದು ನಿಶ್ಚಯಿಸಿದನು. ಉತ್ತಮನಾದ ವಿಪ್ರನನ್ನು ಕರೆಯಿಸಿ ಯಥಾವಿಧಿಯಾಗಿ ದಾನ ನೀಡಿದನು. ಕೂಡಲೇ ಕಾಲಪುರುಷನ ವಿಗ್ರಹದಿಂದ ಚಂಡಾಲ ದಂಪತಿಗಳು ಉದ್ಭವಿಸಿ ದಾನವನ್ನು ಸ್ವೀಕರಿಸಿದ ಆ ಬ್ರಾಹ್ಮಣನನ್ನು ಬಾಧಿಸತೊಡಗಿದರು. ತಕ್ಷಣವೇ ಆತನು ಗೀತೆಯ ನವಮೋಧ್ಯಾಯವನ್ನು ಪಾರಾಯಣ ಮಾಡತೊಡಗಿದನು. ಆಗ ಆ ಅಧ್ಯಾಯದಲ್ಲಿಯ ಒಂದೊಂದು ಅಕ್ಷರದಿಂದ ಒಬ್ಬೊಬ್ಬ ವಿಷ್ಣುದೂತ ಆವಿರ್ಭವಿಸಿ ಆ ಚಂಡಾಲ ದಂಪತಿಗಳನ್ನು ಹೊರದೋಡಿಸಿದರು. ರಾಜನು ಆಶ್ಚರ್ಯಗೊಂಡು ಯಾವ ಮಂತ್ರವನ್ನು ಜಪಿಸುವುದರಿಂದ ಬ್ರಾಹ್ಮಣನು ಆ ಭಯಂಕರವಾದ ಆಪತ್ತನ್ನು ದಾಟಿದನೆಂದು ಕೇಳಿದನು. ಆ ವಿಪ್ರನು ತಾನು ಗೀತೆಯ ೯ನೆಯ ಅಧ್ಯಾಯವನ್ನು ಯಾವಾಗಲೂ ಪಾರಾಯಣ ಮಾಡುತ್ತಿರುತ್ತೇನೆಂದೂ, ಅದರಿಂದ ಸಮಸ್ತ ಕಷ್ಟಗಳು, ಪ್ರತಿಗ್ರಹಣ ದೋಷಗಳು ತೊಲಗುವುವೆಂದು ಹೇಳಿದನು. ಆ ರಾಜನು ಆತನಿಂದ ಆ ಜಪ ಕಲಿತು ನಿಷ್ಠೆಯಿಂದ ಅಭ್ಯಾಸ ಮಾಡಿದನು. ಅದರಿಂದ ಇಬ್ಬರೂ ಮುಕ್ತರಾದರು.

> ೧. ಗೀತಾಯಾ ನವಮಾಧ್ಯಾಯಮಂತ್ರಮಾಲಾ ಮಯಾಸ್ಮೃತಾ
> ತನ್ಮಾಹಾತ್ಮ್ಯಮಿದಂ ಸರ್ವಂ ತ್ವ ಮವೇಹಿ ಮಹೀಪತೇ
>
> ೨. ಗೀತಾಯಾ ನವಮಾಧ್ಯಾಯಂ ಜಪಾಮಿ ಪ್ರತ್ಯಹಂ ನೃಪ
> ನಿಸ್ತೀರ್ಣಾಶ್ಚಾಪದ ಸ್ತೇನ ಕುಪ್ರತಿಗ್ರಹ ಸಂಭವಾಃ

ಮೇಕೆ ಈ ರೀತಿ ಹೇಳಲು, ಆ ಬ್ರಾಹ್ಮಣನು ಮೇಕೆಯನ್ನು ಬಲಿ ಕೊಡದೆ ಬಿಟ್ಟು ಸದಾ ಗೀತಾ ನವಮೋಧ್ಯಾಯವನ್ನು ಶ್ರದ್ಧೆಯಿಂದ ಪಾರಾಯಣ ಮಾಡಿ ಅಂತ್ಯದಲ್ಲಿ ಪರಮಾತ್ಮ ಪದವಿಯನ್ನು ಪಡೆದನು. ಆದ್ದರಿಂದ ಗೀತೆಯ ನವಮೋಧ್ಯಾಯದ ಪಾರಾಯಣದಿಂದ ಪ್ರತಿಗ್ರಹಣಾದಿ ಜನಿತ ದೋಷಗಳು ನಾಶವಾಗುವುವಲ್ಲದೇ ಮೋಕ್ಷ ಲಭಿಸುವುದು.

**ಗೀತೆಯ ನವಮೋಧ್ಯಾಯದ ಫಲ- ಪ್ರತಿಗ್ರಹಣ ದೋಷ ವಿನಾಶ, ಮುಕ್ತಿ**

**೧೦) ದಶಮೋಧ್ಯಾಯದ ಫಲ :** ಕಾಶೀ ಪಟ್ಟಣದಲ್ಲಿ ಧೀರಬುದ್ಧನೆಂಬ ಬ್ರಾಹ್ಮಣನಿದ್ದನು. ಆತನು ಜಿತೇಂದ್ರಿಯನಾಗಿದ್ದು ಪರಮೇಶ್ವರನಲ್ಲಿ ಉತ್ಕಟ ಭಕ್ತಿಯನ್ನು ಇಟ್ಟಿದ್ದನು. ಪರಮ ಪುನೀತಚಿತ್ತನಾದ್ದರಿಂದ ಆ ಬ್ರಾಹ್ಮಣನು

ಎಲ್ಲಿಗೆ ಹೋದರೂ ಅಲ್ಲಿಗೆ ಈಶ್ವರನೂ ಆತನ ಜೊತೆ ಹೋಗುತ್ತಿದ್ದನು. ಅದನ್ನು ನೋಡಿದ ಭೃಂಗಿರಿಟು ಎನ್ನುವವನು ಅದಕ್ಕೆ ಕಾರಣವೇನೆಂದು ಶಿವನನ್ನು ಪ್ರಶ್ನಿಸಲು, ಆತನು ಹೀಗೆ ಹೇಳಿದನು- ಪೂರ್ವದಲ್ಲಿ ಕೈಲಾಸದ ಪುನ್ನಾಗ ವನದಲ್ಲಿ ಒಂದು ಬೆಳದಿಂಗಳ ರಾತ್ರಿ ಒಂದು ಕಟ್ಟೆಯ ಮೇಲೆ ಕುಳಿತಿದ್ದೆನು. ಆಗ ಆಕಾಶದಿಂದ ಒಂದು ಕಪ್ಪು ಪಕ್ಷಿ ನನ್ನ ಬಳಿಗೆ ಬಂದು ಒಂದು ಪದ್ಮವನ್ನು ಸಮರ್ಪಿಸಿ ನಮಸ್ಕರಿಸಿತು. 'ನೀನು ಯಾರು, ನಿನ್ನ ವೃತ್ತಾಂತವೇನು?' ಎಂದು ನಾನು ಪ್ರಶ್ನಿಸಲು, ಆ ಪಕ್ಷಿ ಹೀಗೆ ಹೇಳಿತು- ನಾನು ಬ್ರಹ್ಮದೇವನ ಹಂಸ. ಸೌರಾಷ್ಟ್ರದೇಶದಲ್ಲಿ ಒಂದು ತಾವರೆ ಕೆರೆಯಿದೆ, ಅದರಲ್ಲಿಯ ತಾವರೆ ಕಡ್ಡಿಗಳನ್ನು ತಿಂದು ಒಂದು ದಿನ ನಾನು ಆಕಾಶಕ್ಕೆ ಹಾರುತ್ತಿರಲು ಕೂಡಲೇ ಕೆಳಗೆ ಬಿದ್ದೆ. ನನ್ನ ಶರೀರ ಕಪ್ಪಾಯಿತು. ಹೀಗೇಕಾಯಿತೆಂದು ನಾನು ಆಶ್ಚರ್ಯವಾಗಿ ನೋಡುತ್ತಿರಲು, ಅಷ್ಟರಲ್ಲಿ ಆ ಪದ್ಮ ಸರೋವರದಿಂದ "ಏಳು!" ಎನ್ನುವ ಶಬ್ದ ಕೇಳಿಬರಲು ನಾನು ಅಲ್ಲಿಗೆ ಹೋಗಿ ನೋಡಿದೆ. ಒಂದು ಪದ್ಮಲತೆ ಕಾಣಿಸಿತು. ಆ ಲತೆ ನನಗೆ ಹೀಗೆ ಹೇಳಿತು, 'ನೀನು ಆಕಾಶಕ್ಕೆ ಹಾರುತ್ತ ನನ್ನನ್ನು ದಾಟಿ ಹೋದೆ, ತತ್ಫಲಿತವಾಗಿ ನಿನ್ನ ಶರೀರವು ಕಪ್ಪಾಗಿದೆ. ನೀನು ಕೆಳಗೆ ಬಿದ್ದ ರಭಸಕ್ಕೆ, ನನ್ನ ಮುಖಗಂಧವು ಪ್ರಸರಿಸಿ ೩೦ ಸಾವಿರ ಭ್ರಮರಗಳು ಈಗಾಗಲೇ ದಿವ್ಯರೂಪ ಹೊಂದಿ ಸ್ವರ್ಗಕ್ಕೆ ಹೋಗಿರುವುವು. ಈ ನನ್ನ ಪ್ರಭಾವಕ್ಕೆ ಕಾರಣವೇನೆಂದರೆ, ಪೂರ್ವದಲ್ಲಿ ನಾನು ಒಬ್ಬ ಬ್ರಾಹ್ಮಣ ಬಾಲಿಕೆ. ನನ್ನ ಹೆಸರು ಸರೋಜವದನೆ. ವಿವಾಹನಂತರ ಪತಿಶುಶ್ರೂಷೆ ಮಾಡುತ್ತಾ ಕಾಲಕಳೆಯುತ್ತಿದ್ದೆ. ಒಂದು ದಿನ ಒಂದು ಗೊರವಂಕ ಪಕ್ಷಿಗೆ ಪಾಠ ಹೇಳುತ್ತಿರುವಾಗ ಪತಿ ಸೇವೆಯಲ್ಲಿ ವಿಳಂಬವಾಗಲು, ಪತಿ ಕೋಪಿಸಿಕೊಂಡು ಗೊರವಂಕ ಪಕ್ಷಿಯಾಗು ಎಂದು ಶಪಿಸಿದನು. ಕೂಡಲೇ ನಾನು ಒಬ್ಬ ಮುನಿಪುಂಗವನ ಗೃಹದಲ್ಲಿ ಆ ಪಕ್ಷಿಯಾಗಿ ಜನ್ಮಿಸಿದೆ. ಆ ಮನೆಯ ಯಜಮಾನಿ ನಿತ್ಯವೂ ಗೀತೆಯ ೧೦ನೆಯ ಅಧ್ಯಾಯವನ್ನು ಪಾರಾಯಣ ಮಾಡುತ್ತಿದ್ದುದರಿಂದ ನಾನು ಅದನ್ನು ಚೆನ್ನಾಗಿ ಶ್ರವಣ ಮಾಡಿದೆ. ಆ ಮಹಾತ್ಮ್ಯೆಯಿಂದ ಸ್ವಲ್ಪ ಕಾಲದಲ್ಲೇ ನಾನು ಆ ಪಕ್ಷಿಯ ದೇಹವನ್ನು ಬಿಟ್ಟು ಸ್ವರ್ಗದಲ್ಲಿ ಅಪ್ಸರೆಯಾಗಿ ಜನ್ಮಿಸಿ ಪದ್ಮಾವತಿ ಎನ್ನುವ ಹೆಸರಿನಿಂದ ಲಕ್ಷ್ಮಿಗೆ ದಾಸಿಯಾಗಿದ್ದೆ. ಒಂದು ದಿನ ಈ ಸರೋವರದಲ್ಲಿ ವಿಹರಿಸುತ್ತಿರಲು, ಇಲ್ಲಿಗೆ ಬಂದ ದುರ್ವಾಸಮುನೀಂದ್ರರನ್ನು ನೋಡಿ ಭಯಬಿದ್ದು ಕೂಡಲೇ ಪದ್ಮಲತಾ ರೂಪವನ್ನು ಧರಿಸಿದೆ. ಅದನ್ನು ನೋಡಿ ಆತನು ಲತಾರೂಪದಲ್ಲಿಯೇ ೧೦೦ ವರ್ಷಗಳು ಇರು ಎಂದು ಶಪಿಸಿದನು. ಈಗ ನಿನಗೂ ನನಗೂ ಶಾಪಾವಧಿ ಮುಗಿಯುತ್ತಾ ಬಂದಿದೆ. ನಾನು ಈಗ ಗೀತೆಯ ದಶಮಾಧ್ಯಾಯವನ್ನು ಪಾರಾಯಣ ಮಾಡುವೆನು. ನೀನು ಕೇಳು,' ಎಂದು ಹೇಳಿ ಆ ಪದ್ಮಲತೆ ಗೀತೆಯ ೧೦ನೆಯ ಅಧ್ಯಾಯವನ್ನು ಸ್ಮರಿಸಿ ಮುಕ್ತಿ ಪಡೆದಳು. ಆ ಲತೆ ಕೊಟ್ಟ ಪದ್ಮವನ್ನು ಸ್ವೀಕರಿಸಿ ನಿನ್ನ ಪಾದಗಳ ಬಳಿಗೆ ಬಂದಿರುವೆ ಎಂದು ಶಿವನಿಗೆ ತಿಳಿಸಿತು. ಅನಂತರ ಬ್ರಹ್ಮದೇವನ ಹಂಸವಾದ ಆ ಪಕ್ಷಿ ಪೂರ್ವದಲ್ಲಿ ಪದ್ಮಲತೆಯಿಂದ ಹೇಳಲ್ಪಟ್ಟ ಗೀತೆಯ ದಶಮೋಧ್ಯಾಯದ ಪ್ರಭಾವದಿಂದ ಒಬ್ಬ ಬ್ರಾಹ್ಮಣನಾಗಿ ಜನ್ಮಿಸಿ ಪೂರ್ವ ಸಂಸ್ಕಾರದ ಬಲದಿಂದ ನಿರಂತರವೂ ದಶಮೋಧ್ಯಾಯವನ್ನು ಪಠಿಸುತ್ತಿದ್ದನು. ತತ್ಫಲಿತವಾಗಿ ಆತನು ಸರ್ವಭೂತಸ್ಥನಾದ ವಿಷ್ಣುವನ್ನು ದರ್ಶಿಸುತ್ತಾ ಮಹಾ ಪವಿತ್ರನಾಗಿ ತತ್ವಜ್ಞಾನವನ್ನು ಪಡೆದು ಜೀವನ್ಮುಕ್ತನಾದನು.

ದಶಮಾಧ್ಯಾಯ ಮಹಾತ್ಮ್ಯಾ, ತತ್ತ್ವಜ್ಞಾನಂ ಸುದುರ್ಲಭಂ
ಲಬ್ಧ ಮೇತೇನಾ ಮುನಿನಾ ಜೀವನ್ಮುಕ್ತಿ ರಿಯಂ ತಥಾ

ಆದ್ದರಿಂದಲೇ ನಾನು ಆತನನ್ನು ಪ್ರೀತಿಯಿಂದ ಸದಾ ಹಿಂಬಾಲಿಸುತ್ತಿರುತ್ತೇನೆ. ಗೀತೆಯ ದಶಮೋಧ್ಯಾಯಕ್ಕೆ ಇಂತಹ ಮಹಿಮೆಯಿದೆ.

**ಗೀತೆಯ ದಶಮೋಧ್ಯಾಯದ ಫಲ- ಬ್ರಹ್ಮಜ್ಞಾನ ಪ್ರಾಪ್ತಿ.**

**೧೧) ಏಕಾದಶೋಧ್ಯಾಯದ ಫಲ:** ಪೂರ್ವಕಾಲದಲ್ಲಿ ಪ್ರಣೀತವೆಂಬ ನದೀತೀರದಲ್ಲಿ ಮೇಘಂಕರವೆಂಬ ಪಟ್ಟಣವಿತ್ತು. ಸಕಲ ಲೋಕಪತಿಯಾದ ವಿಷ್ಣು ಅಲ್ಲಿ ವಾಸಿಸುತ್ತಾ ಪುರಜನರಿಗೆ ಸೌಖ್ಯಗಳನ್ನು ಪ್ರಸಾದಿಸುತ್ತಿದ್ದನು. ಆ ಪಟ್ಟಣದಲ್ಲಿ ಮೇಖಲವೆಂಬ ತೀರ್ಥಸ್ಥಳವೊಂದಿತ್ತು. ಆ ಪುರದಲ್ಲಿ ಸುನಂದನೆಂಬ ಬ್ರಾಹ್ಮಣೋತ್ತಮನು ಸದಾಚಾರ ಪರಾಯಣನಾಗಿ ವೇದಶಾಸ್ತ್ರ ಪ್ರವೀಣನಾಗಿದ್ದನು. ಆತನು ನಿತ್ಯವೂ ವಿಷ್ಣುಸನ್ನಿಧಿಯಲ್ಲಿ ಗೀತೆಯ ಏಕಾದಶೋಧ್ಯಾಯವನ್ನು ಪಠಿಸುತ್ತಿದ್ದನು. ಅದರಿಂದ ಆತನಿಗೆ ಬ್ರಹ್ಮಜ್ಞಾನ ಉದಯಿಸಲು ಜೀವನ್ಮುಕ್ತನಾಗಿ ಬೆಳಗುತ್ತಿದ್ದನು. ಒಮ್ಮೆ ಆತನು ತೀರ್ಥಯಾತ್ರೆ ಮಾಡಬೇಕೆಂದು ಹೊರಟು ಅನೇಕ ತೀರ್ಥಸ್ಥಳಗಳನ್ನು ದರ್ಶಿಸಿ ಕೊನೆಗೆ ವಿವಾಹ ಮಂಟಪವೆನ್ನುವ ಪಟ್ಟಣದಲ್ಲಿ ಅಲ್ಲಿಯ ಗ್ರಾಮಾಧಿಕಾರಿ ತೋರಿಸಿದ ಒಂದು ಮಂದಿರದಲ್ಲಿ, ಆ ರಾತ್ರಿ ತನ್ನ ಸ್ನೇಹಿತರೊಂದಿಗೆ ವಿಶ್ರಮಿಸಿದನು. ಮರುದಿನ ಬೆಳಿಗ್ಗೆ ಎದ್ದು ನೋಡಲು ಆತನನ್ನು ಬಿಟ್ಟು ಬೇರೆಯವರೆಲ್ಲರೂ ಅದೃಶ್ಯರಾಗಿದ್ದರು. ಅಷ್ಟರಲ್ಲಿ ಗ್ರಾಮಾಧಿಕಾರಿಯು ಬಂದು ವಿಷಯವೆಲ್ಲವನ್ನೂ ಆತನಿಗೆ ತಿಳಿಸಿದನು. ಮಹಾತ್ಮಾ! ಈ ಪುರದಲ್ಲಿ ನರಭಕ್ಷಕನಾದ ಘೋರರಾಕ್ಷಸನೊಬ್ಬನು ಇರುವನು. ಆತನು ಜನರನ್ನು ಬಾಧಿಸುತ್ತಿರಲು, ನಾವೆಲ್ಲರೂ ಆತನನ್ನು ಪ್ರಾರ್ಥಿಸಿ, ಇತರ ಗ್ರಾಮಗಳಿಂದ ಬಂದ ಜನರನ್ನು ಮಾತ್ರ ಭಕ್ಷಿಸು ಎಂದು ಬೇಡಿಕೊಂಡೆವು. ಅದಕ್ಕೋಸ್ಕರವೇ ನಾವು ಈ ಧರ್ಮಶಾಲೆಯನ್ನು ನಿರ್ಮಿಸಿದೆವು. ನಿಮ್ಮ ಹೊರತು ನಿಮ್ಮ ಜೊತೆ ಬಂದವರನ್ನೆಲ್ಲಾ ಆತ ಕಬಳಿಸಿ ಹಾಕಿದ್ದಾನೆ. ನನ್ನ ಕುಮಾರನು ಸಹ ಈ ರೀತಿ ಭಕ್ಷಿಸಲ್ಪಟ್ಟಿದ್ದಾನೆ. ನಿಮ್ಮಲ್ಲಿ ಯಾವುದೋ ಅಲೌಕಿಕ ಶಕ್ತಿಯಿದೆಯಾದ್ದರಿಂದ ನೀವು ತಪ್ಪಿಸಿಕೊಳ್ಳಲು ಸಾಧ್ಯವಾಗಿದೆ. ನನ್ನ ಕುಮಾರನು ಹೇಗೆ ಬದುಕಬಲ್ಲನು ಎಂದು ರಾಕ್ಷಸನನ್ನು ಕೇಳಿದಾಗ ಗೀತೆಯ ಏಕಾದಶೋಧ್ಯಾಯವನ್ನು ಪಾರಾಯಣ ಮಾಡುತ್ತಾ ನೀವು ಜಲವನ್ನು ಮಂತ್ರಿಸಿದರೆ ರಾಕ್ಷಸತ್ವವು ಹೋಗುವುದೇ ಅಲ್ಲದೆ ನನ್ನಿಂದ ಇಲ್ಲಿಯವರೆಗೆ ಭಕ್ಷಿಸಲ್ಪಟ್ಟವರೆಲ್ಲರೂ ಮುಕ್ತಿ ಹೊಂದುವರು ಎಂದು ಹೇಳಿದನು. ಇಂತಹ ಅದ್ಭುತ ಶಕ್ತಿ ಆ ಅಧ್ಯಾಯಕ್ಕೆ ಹೇಗೆ ಬಂದಿತೆಂದು ನಾನು ಆ ರಾಕ್ಷಸನನ್ನು ಕೇಳಲು ಅವನು ಹೀಗೆ ಉತ್ತರವಿತ್ತನು.

'ವಿತ್ತವಾನನೆಂಬ ಬ್ರಾಹ್ಮಣನೊಬ್ಬನು ಗೀತೆಯ ಏಕಾದಶೋಧ್ಯಾಯವನ್ನು ಪಠಿಸುತ್ತಿದ್ದ. ಆತನು ಮರಣಿಸಿದ ನಂತರ ಆತನ ಅಸ್ಥಿ ಖಂಡವನ್ನು ಒಂದು ಹದ್ದು ಬಾಯಲ್ಲಿ ಕಚ್ಚಿಕೊಂಡು ಹೋಗುತ್ತಿರುವಾಗ ಅದು ದಾರಿಯಲ್ಲಿ ಜಾರಿ ಒಂದು ಜಲಾಶಯದಲ್ಲಿ ಬಿತ್ತು. ಅದರಿಂದ ಆ ಸ್ಥಳ ಮಹಾತೀರ್ಥವಾಯಿತು. ಗೀತೆಯ ೧೧ನೆಯ ಅಧ್ಯಾಯಕ್ಕೆ ಇಂತಹ ಮಹಿಮೆಯಿದೆ!'- ರಾಕ್ಷಸನು ಈ ರೀತಿ ಹೇಳಿ ನನ್ನ ಕುಮಾರನ ಪುನರ್ಜೀವನಕ್ಕಾಗಿ ನಿನ್ನ ಬಳಿಗೆ ಹೋಗೆಂದು ಆದೇಶಿಸಿದನು. ನಂತರ ಸುನಂದನ ಪ್ರಶ್ನೆಗಳನ್ನು ಪುರಸ್ಕರಿಸಿ ಗ್ರಾಮಾಧಿಕಾರಿ ಆ ರಾಕ್ಷಸನ ವೃತ್ತಾಂತವನ್ನು ಹೀಗೆ ಹೇಳಲಾರಂಭಿಸಿದನು. ದ್ವಿಜೋತ್ತಮಾ! ಪೂರ್ವದಲ್ಲಿ ಈ ಗ್ರಾಮದಲ್ಲಿ ವ್ಯವಸಾಯವನ್ನು ಮಾಡುತ್ತಿದ್ದ ಬ್ರಾಹ್ಮಣನೊಬ್ಬನಿದ್ದನು. ಒಂದು ದಿನ ಆತನು ಹೊಲದಲ್ಲಿ ಕುಳಿತಿದ್ದಾಗ ಸಮೀಪದಲ್ಲಿ ಒಂದು ಹದ್ದು ದಾರಿಯಲ್ಲಿ ಹೋಗುತ್ತಿರುವವನನ್ನು ಕುಕ್ಕಿ ಸಾಯಿಸುತ್ತಿತ್ತು. ಒಬ್ಬ ಮುನೀಶ್ವರನು ಅದನ್ನು

ನೋಡಿ ಓಡಿ ಬರುವಷ್ಟರಲ್ಲಿಯೇ ಆ ಹದ್ದು ಆತನನ್ನು ಸಾಯಿಸಿ ಹಾರಿಹೋಯಿತು. ಅಷ್ಟರಲ್ಲಿ ಆ ಮುನಿಪುಂಗವನು ಪಕ್ಕದಲ್ಲೇ ಇದ್ದು ದಾರಿಹೋಕನನ್ನು ಕಾಪಾಡದೆ ಇದ್ದ ದೋಷಕ್ಕಾಗಿ ಆ ಬ್ರಾಹ್ಮಣನನ್ನು 'ರಾಕ್ಷಸ'ನಾಗಿ ಜನ್ಮಿಸುವಂತೆ ಶಪಿಸಿದನು. ಅನುಗ್ರಹಿಸಬೇಕೆಂದು ಬ್ರಾಹ್ಮಣನು ಬೇಡಿಕೊಳ್ಳಲು 'ಗೀತೆಯ ಏಕಾದಶೋಧ್ಯಾಯವನ್ನು ಏಳು ಸಾರಿ ಪಠನ ಮಾಡಿ ಅಭಿಮಂತ್ರಿಸಲ್ಪಟ್ಟ ಜಲದಿಂದ ನಿನ್ನ ಶಾಪವಿಮುಕ್ತಿಯಾಗುವುದು, ಎಂದು ಮುನೀಶ್ವರನು ಹೇಳಿದನು. ಆದ್ದರಿಂದ 'ಮಹಾತ್ಮಾ! ಆ ರಾಕ್ಷಸನನ್ನು ಹಾಗೂ ನನ್ನ ಕುಮಾರನನ್ನು ಉದ್ಧರಿಸಬೇಕೆಂದು ಗ್ರಾಮಪಾಲನು, ಸುನಂದನನ್ನು ಪ್ರಾರ್ಥಿಸಿದನು. ಆತನು ಗೀತೆಯ ೧೧ನೆಯ ಅಧ್ಯಾಯವನ್ನು ಏಳುಸಾರಿ ಪಾರಾಯಣ ಮಾಡಿ ರಾಕ್ಷಸನ ಶಿರದ ಮೇಲೆ ಜಲವನ್ನು ಚೆಲ್ಲಿದನು. ಅಷ್ಟರಲ್ಲಿ ಆ ಜಲದಿಂದ ರಾಕ್ಷಸನು ಹಾಗೂ ಆತನಿಂದ ಭಕ್ಷಿಸಲ್ಪಟ್ಟ ಅಭಾಗ್ಯ ಜೀವಿಗಳೆಲ್ಲರೂ ದಿವ್ಯದೇಹಧಾರಿಗಳಾಗಿ ವಿಷ್ಣುಪದವನ್ನು ಹೊಂದಿದರು. ಗ್ರಾಮ ಪಾಲನ ಮಗನು ತಂದೆಗೆ 'ಸಾಧು ಜನ ಸಾಂಗತ್ಯ ಮಾಡಿ ಗೀತೆಯ ಏಕಾದಶೋಧ್ಯಾಯವನ್ನು ಪಾರಾಯಣ ಮಾಡುತ್ತಿರಬೇಕೆಂದು, ಪರಮಾತ್ಮನಾದ ಶ್ರೀಕೃಷ್ಣನನ್ನು ಸದಾ ಧ್ಯಾನಿಸುತ್ತಿರಬೇಕೆಂದು, ಅದರಿಂದ ಸಕಲ ಕಲ್ಯಾಣಗಳು ಲಭಿಸುವುವೆಂದು ಮೋಕ್ಷಸಿದ್ಧಿಸುವುದೆಂದು ವಾಚಿಸಿ ದಿವ್ಯಲೋಕಕ್ಕೆ ನಿರ್ಗಮಿಸಿದನು. ಗ್ರಾಮಾಧಿಕಾರಿಯು ಹಾಗೆಯೇ ಮಾಡಿ ಮುಕ್ತಿ ಹೊಂದಿದನು. ಆದ್ದರಿಂದ ಗೀತೆಯ ಏಕಾದಶೋಧ್ಯಾಯದ ಪಾರಾಯಣದಿಂದ ಸರ್ವಪಾಪವಿಮುಕ್ತಿ, ಪರಮಾತ್ಮ ಪದಪ್ರಾಪ್ತಿ ಸಿದ್ಧಿಸುವುವು.

ನಿಷ್ಕಲ್ಮಷತಯಾ ಚೈನಂ ಪ್ರಾಪುಸ್ತೇ ಪರಮಂ ಪದಮ್
ಏಕಾದಶಸ್ಯ ಸಾಮರ್ಥ್ಯಾ ದಧ್ಯಾಯಸ್ಯ ಭವಿಷ್ಯತಿ

**ಗೀತೆಯ ಏಕಾದಶೋಧ್ಯಾಯದ ಫಲ-ಸರ್ವಪಾಪವಿಮುಕ್ತಿ, ಪರಮಾತ್ಮ ಪದಪ್ರಾಪ್ತಿ.**

**೧೨) ದ್ವಾದಶೋಧ್ಯಾಯದ ಫಲ:** ದಕ್ಷಿಣ ದೇಶದಲ್ಲಿ ಕೊಲ್ಲಾಪುರವೆಂಬ ದೊಡ್ಡ ಪಟ್ಟಣವಿದೆ. ಅದು ಸಕಲ ಸೌಭಾಗ್ಯಗಳಿಗೆ ನಿಲಯವಾಗಿತ್ತು. ಪರಾಶಕ್ತಿಯಾದ ಲಕ್ಷ್ಮೀದೇವಿ ಅಲ್ಲಿ ಸದಾ ವಿರಾಜಿಸುತ್ತಿದ್ದಳು. ಒಂದು ದಿನ ಒಬ್ಬ ರಾಜಕುಮಾರನು ಆ ಪಟ್ಟಣಕ್ಕೆ ಬಂದು ಲಕ್ಷ್ಮೀದೇವಿಯನ್ನು ಸಂದರ್ಶಿಸಿ ಭಕ್ತಿಪೂರ್ವಕವಾಗಿ ಆಕೆಯನ್ನು ಪ್ರಾರ್ಥಿಸಿದನು. ಆಗ ಮಹಾಲಕ್ಷ್ಮೀ ಆತನ ಭಕ್ತಿಗೆ ಮೆಚ್ಚಿ, ಪ್ರತ್ಯಕ್ಷವಾಗಿ ವರವನ್ನು ಕೋರು ಎಂದು ಕೇಳಲು, ಆತನು ಹೀಗೆ ಪ್ರಾರ್ಥಿಸಿದನು- 'ದೇವೀ! ನನ್ನ ತಂದೆಯಾದ ಬೃಹದ್ರಥನು ಅಶ್ವಮೇಧ ಯಾಗವನ್ನು ಮಾಡುತ್ತಾ ರೋಗಗ್ರಸ್ತನಾಗಿ ಮರಣಿಸಿದನು. ಆತನ ಶರೀರವು ಕೆಡದಂತಿರಲು ತೈಲದ್ರಾವಕದಲ್ಲಿ ಭದ್ರಪಡಿಸಿದ್ದೇನೆ. ಯಾಗದ ಕುದುರೆಯು ಎಲ್ಲಿಯೋ ಓಡಿ ಹೋಗಿ ಎಷ್ಟು ಹುಡುಕಿದರೂ ಕಾಣಿಸುತ್ತಿಲ್ಲ. ಆದ್ದರಿಂದ 'ತಾಯೀ! ಆ ಅಶ್ವವನ್ನು ಪುನಃ ಲಭಿಸುವಂತೆ ಮಾಡಿದಲ್ಲಿ ಯಾಗವನ್ನು ಪೂರ್ತಿಮಾಡಿ ಪಿತೃಋಣವನ್ನು ತೀರಿಸಿಕೊಳ್ಳುವೆನು. ಅನುಗ್ರಹಿಸು', ಎನ್ನುವ ರಾಜಕುಮಾರನ ಆ ವಾಕ್ಯವನ್ನು ಕೇಳಿ ದೇವಿ ಹೀಗೆ ಹೇಳಿದಳು- 'ನನ್ನ ಆಲಯದ ದ್ವಾರದಲ್ಲಿ ಸಿದ್ಧಸಮಾಧಿ ಎನ್ನುವ ಹೆಸರುಳ್ಳ ಒಬ್ಬ ಬ್ರಾಹ್ಮಣನಿದ್ದಾನೆ. ಆತನು ನಿನ್ನ ಅಭೀಷ್ಟವನ್ನು ನೆರವೇರಿಸುವನು. ರಾಜಪುತ್ರನು ಹಾಗೆಯೇ ಆ ವಿಪ್ರನನ್ನು ಭೇಟಿಮಾಡಲು ಆತನು ತನ್ನ ಮಂತ್ರ ಪ್ರಭಾವದಿಂದ ದೇವತೆಗಳನ್ನು ಅಲ್ಲಿಗೆ ಕರೆಯಿಸಿ, ದೇವೇಂದ್ರನು ಅಪಹರಿಸಿದ ಯಾಗಾಶ್ವವನ್ನು ಶೀಘ್ರವೇ ತೆಗೆದುಕೊಂಡು ಬನ್ನಿರೆಂದು ಆಜ್ಞಾಪಿಸಿದನು. ಅವರು ಹಾಗೆಯೇ ಮಾಡಿದರು. ಕಳೆದು ಹೋದ ಕುದುರೆಯು ಮತ್ತೆ ಲಭಿಸಿದ್ದೇ ಅಲ್ಲದೆ ದೇವತೆಗಳೆಲ್ಲರೂ ಆಜ್ಞಾಬದ್ಧರಾಗಿರುವುದನ್ನು ವೀಕ್ಷಿಸಿ ರಾಜಕುಮಾರನು ಆ ಬ್ರಾಹ್ಮಣನ ಅದ್ಭುತ ಶಕ್ತಿ ಸಾಮರ್ಥ್ಯಗಳನ್ನು ಕಂಡು ಆಶ್ಚರ್ಯವನ್ನು ಹೊಂದಿ, ಮೃತಗೊಂಡಿದ್ದ ತನ್ನ ತಂದೆಯನ್ನು ಬದುಕಿಸಬೇಕೆಂದು ಬೇಡಿಕೊಂಡನು. ಆತನು ಹಾಗೆಯೇ ಆತನ ತಂದೆಯ ಮೃತಕಳೇಬರದ ಬಳಿಗೆ ಹೋಗಿ ಜಲವನ್ನು ಅಭಿಮಂತ್ರಿಸಿ ಅದರ ಮೇಲೆ ಚೆಲ್ಲಿದನು. ಕೂಡಲೇ ಬೃಹದ್ರಥನು ಸಜೀವನಾದನು. ರಾಜಕಮಾರನು ತಂದೆಗೆ, ನಡೆದ ವೃತ್ತಾಂತವೆಲ್ಲವನ್ನು ತಿಳಿಸಲು ಆತನು ಆ ಬ್ರಾಹ್ಮಣನಿಗೆ ಪ್ರಣಾಮಮಾಡಿ ಯಾವ ಪುಣ್ಯ ಪ್ರಭಾವದಿಂದ ತಮಗೆ ಇಂತಹ ಅಲೌಕಿಕ ಶಕ್ತಿಯುಂಟಾಗಿದೆಯೆಂದು ಪ್ರಶ್ನಿಸಲು ವಿಪ್ರನು ಹೀಗೆ ಹೇಳಿದನು.

ಗೀತಾನಾಂ ದ್ವಾದಶಾಧ್ಯಾಯಂ ಜಪಾಮ್ಯಹ ಮತಂದ್ರಿತಃ
ತೇನ ಶಕ್ತಿರಿಯಂ ರಾಜನ್ ಯಯಾ ಪ್ರಾಪ್ತೋಸಿ ಜೀವಿತಮ್

'ರಾಜಾ ನಾನು ಪ್ರತಿನಿತ್ಯ ಭಕ್ತಿ ಪೂರ್ವಕವಾಗಿ ಗೀತೆಯ ೧೨ನೆಯ ಅಧ್ಯಾಯವನ್ನು ಪಾರಾಯಣ ಮಾಡುತ್ತೇನೆ. ಆದರಿಂದ ಈ ಶಕ್ತಿ ಉಂಟಾಗಿದೆ. ನಂತರ ರಾಜನು, ಆತನ ಕುಮಾರನೂ ಆ ಬ್ರಾಹ್ಮಣನಿಂದ ಗೀತೆಯ ದ್ವಾದಶೋಧ್ಯಾಯವನ್ನು ಕಲಿತು ಜಪಿಸತೊಡಗಿದರು. ಬೇರೆಯವರೂ ಹಾಗೆಯೇ ಮಾಡಿದರು. ಈ ಪ್ರಕಾರವಾಗಿ ಅವರೆಲ್ಲರೂ ಮುಕ್ತಿ ಧಾಮವನ್ನಲಂಕರಿಸಿದರು. ಆದ್ದರಿಂದ ಗೀತೆಯ ದ್ವಾದಶೋಧ್ಯಾಯದ ಪಾರಾಯಣದಿಂದ ದಿವ್ಯಶಕ್ತಿ ಉದಯಿಸುವುದೇ ಅಲ್ಲದೆ ಮೋಕ್ಷ ಪ್ರಾಪ್ತಿಯಾಗುವುದು.

**ಗೀತೆಯ ದ್ವಾದಶೋದ್ಯಾಯದ ಫಲ- ದಿವ್ಯಶಕ್ತಿಗಳ ಉದಯ, ಮೋಕ್ಷರೂಪಸದ್ಗತಿ ಲಭ್ಯ.**

**೧೩) ತ್ರಯೋದಶೋಧ್ಯಾಯದ ಫಲ :** ದಕ್ಷಿಣ ದೇಶದ ತುಂಗಭದ್ರಾ ತೀರದಲ್ಲಿ ಹರಿಹರವೆಂಬ ನಗರವಿದೆ. ಅಲ್ಲಿ ಹರಿದೀಕ್ಷಿತನೆಂಬ ಧರ್ಮಾನುರಕ್ತಿಯುತ ಬ್ರಾಹ್ಮಣನು ಇದ್ದನು. ಆತನಿಗೆ ದುರಾಚಾರಿಯೆಂಬ ಪತ್ನಿಯಿದ್ದಳು. ಆಕೆ ನಿತ್ಯ ಪತಿಯನ್ನು ದೂಷಿಸುತ್ತ ದುಷ್ಟಪ್ರವೃತ್ತಿಯುಳ್ಳವಳಾಗಿ ಸ್ವೇಚ್ಛಾವಿಹಾರಿಯಾಗಿದ್ದಳು. ಒಂದು ದಿನ ರಾತ್ರಿ ಆ ವ್ಯಭಿಚಾರಿಣಿ ನಗರದ ಹೊರಗಿರುವ ಅರಣ್ಯದಲ್ಲಿ ಒಂದು ಸಂಕೇತ ಸ್ಥಳವನ್ನು ನಿರ್ಣಯಿಸಿಕೊಂಡು ಅಲ್ಲಿರಲು, ವಿಟರ‍್ಯಾರೂ ಬರದೇ ಇದ್ದದ್ದರಿಂದ, ಕಾಮಾಂಧಳಾಗಿ ಅಲ್ಲಿ ಇಲ್ಲಿ ತಿರುಗುತ್ತ ಒಂದು ಕಡೆ ಕುಳಿತಿರಬೇಕಾದರೆ ಒಂದು ಹುಲಿ ಅವಳ ಮೇಲೆ ಬಿದ್ದು ದೇಹವನ್ನು ಕಿತ್ತು ತಿಂದುಹಾಕಿತು. ಮರಣಿಸಿದ ನಂತರ ಆಕೆ ತನ್ನ ಪಾಪ ಕೃತ್ಯಗಳ ಫಲವಾಗಿ ಹೆಚ್ಚು ಕಾಲ ಘೋರ ನರಕಯಾತನೆಯನ್ನು ಅನುಭವಿಸಿ, ನಂತರ ಭೂಲೋಕದಲ್ಲಿ ಚಂಡಾಲ ಸ್ತ್ರೀಯಾಗಿ ಜನ್ಮಿಸಿದಳು. ಒಂದು ದಿನ ಆಕೆ ತನ್ನ ಪುರದ ಈಶ್ವರನ ಸತಿಯಾದ ಜೃಂಭಕಾದೇವಿಯ ಆಲಯಕ್ಕೆ ಬರಲು ಅಲ್ಲಿ ವಾಸುದೇವನೆಂಬ ಬ್ರಾಹ್ಮಣನು ಗೀತೆಯ ೧೩ನೆಯ ಅಧ್ಯಾಯವನ್ನು ಪಾರಾಯಣ ಮಾಡುತ್ತಿರಲು ಅದನ್ನು ಶ್ರವಣ ಮಾಡಿದಳು. ಕೂಡಲೇ ಆಕೆ ತನ್ನ ಚಂಡಾಲ ದೇಹವನ್ನು ಬಿಟ್ಟು ದಿವ್ಯರೂಪವನ್ನು ಧರಿಸಿ ಉತ್ತಮಲೋಕ ಸೇರಿದಳು. ಆದ್ದರಿಂದ ಗೀತೆಯ ತ್ರಯೋದಶೋಧ್ಯಾಯದ ಪಾರಾಯಣ ಮಾಡುವವರು, ಶ್ರವಣ ಮಾಡುವವರು ಚಂಡಾಲತ್ವಾದಿ ದೋಷಗಳಿಂದ ವಿಮುಕ್ತರಾಗಿ ಪಾಪ ರಹಿತರಾಗಿ ಸದ್ಗತಿಯನ್ನು ಹೊಂದಬಲ್ಲರು.

ಗೀತಾತ್ರಯೋದಶೋಧ್ಯಾಯ ಮುದ್ಗಿರಂತಮನಾರತಮ್
ತತಸ್ತ ಚ್ಛ್ರವಣಾದೇವ ಮುಕ್ತ ಸ್ವಪಚ ವಿಗ್ರಹಾತ್

**ಗೀತೆಯ ತ್ರಯೋದಶೋಧ್ಯಾಯದ ಫಲ - ಪಾಪವಿಮುಕ್ತಿ, ಸದ್ಗತಿ ಪ್ರಾಪ್ತಿ.**

**೧೪) ಚತುರ್ದಶೋಧ್ಯಾಯದ ಫಲ :** ಪೂರ್ವದಲ್ಲಿ ಕಾಶ್ಮೀರ ದೇಶದಲ್ಲಿ ಶೌರ್ಯವರ್ಮನೆಂಬ ರಾಜನು ವಾಸಿಸುತ್ತಿದ್ದನು. ಆತನು ತನ್ನ ಮಿತ್ರನಾದ ಸಿಂಹಳದ್ವೀಪ ಪ್ರಭುವಾದ ವಿಕ್ರಮ ಬೇತಾಳನಿಗೆ ಕಾಣಿಕೆಯಾಗಿ ಎರಡು ಬೇಟೆ ನಾಯಿಗಳನ್ನು ಕಳುಹಿಸಿದನು. ಆ ನಾಯಿಗಳೊಂದಿಗೆ ಒಂದು ದಿನ ವಿಕ್ರಮ ಬೇತಾಳ ಭೂಪತಿ ಅನೇಕ ಮಂದಿ ರಾಜಕುಮಾರರ ಜೊತೆ ಬೇಟೆಗೆ ಹೋದನು. ಅಲ್ಲಿ ಒಂದು ಕಡೆ ವೇಗವಾಗಿ ಓಡುತ್ತಿದ್ದ ಮೊಲವನ್ನು ಹಿಡಿದುಕೊಳ್ಳಲು ಆ ರಾಜ ತನ್ನ ನಾಯಿಗಳನ್ನು ಬೆನ್ನಟ್ಟಿಸಲು ಆ ಮೊಲ ಹಾಗು ಒಂದು ನಾಯಿ ವೇಗವಾಗಿ ಓಡಿ ಕೊನೆಗೆ ಒಂದು ಆಶ್ರಮ ಸ್ಥಳವನ್ನು ಸೇರಿದವು. ಆ ಆಶ್ರಮದಲ್ಲಿ ಜಿತೇಂದ್ರಿಯನಾದ ವತ್ಸನೆಂಬ ಮುನಿಪುಂಗವನು ಇದ್ದನು. ಆತನು ನಿರಂತರ ಗೀತೆಯ ಹದಿನಾಲ್ಕನೆಯ ಅಧ್ಯಾಯವನ್ನು ಪಾರಾಯಣ ಮಾಡುತ್ತ ಶಿಷ್ಯರಿಗೆ ಬೋಧಿಸುತ್ತಿದ್ದನು. ಆ ಆಶ್ರಮದಲ್ಲಿ ಸಿಂಹಶಾರ್ದೂಲಾದಿ ಹಿಂಸಾಮೃಗಗಳು ತಮ್ಮ ಕ್ರೂರತ್ವವನ್ನು ಬಿಟ್ಟು ಬೇರೆ ಮೃಗಗಳೊಂದಿಗೆ ಆನಂದವಾಗಿದ್ದವು. ಆ ವತ್ಸ ಮುನೀಂದ್ರನ ಶಿಷ್ಯನು ತನ್ನ ಪಾದಗಳನ್ನು ತೊಳೆದ ಸ್ಥಳದಲ್ಲಿ ಭೂಮಿ ಒದ್ದೆಯಾಗಿತ್ತು. ಓಡಿ ಬಂದ ಆ ಮೊಲ ಹಾಗು ನಾಯಿ ಸುಸ್ತಾಗಿ ಅಲ್ಲಿ ಬೀಳಲು ತತ್ಪವಿತ್ರ ಜಲಸ್ಪರ್ಶದಿಂದ ಆ ಎರಡೂ ದಿವ್ಯರೂಪಗಳನ್ನು ಧರಿಸಿ ವಿಮಾನವನ್ನು ಆರೋಹಿಸಿ ಸ್ವರ್ಗಲೋಕಕ್ಕೆ ನಿರ್ಗಮಿಸಿದವು.

ಅದೆಲ್ಲವನ್ನು ನೋಡಿ, ಆಶ್ಚರ್ಯಚಕಿತನಾದ ವಿಕ್ರಮ ಬೇತಾಳ ರಾಜನು ಕಾರಣವೇನೆಂದು ಮುನೀಂದ್ರನ ಶಿಷ್ಯನನ್ನು ಪ್ರಶ್ನಿಸಲು ಆತನು ಹೀಗೆ ಹೇಳಿದನು. ಪೂರ್ವದಲ್ಲಿ ಮಹಾರಾಷ್ಟ್ರ ದೇಶದಲ್ಲಿ ಪ್ರತ್ಯುದಕವೆಂಬ ಪಟ್ಟಣವಿತ್ತು. ಅಲ್ಲಿ ಧೂರ್ತನಾದ ಕೇಶವನೆಂಬ ಬ್ರಾಹ್ಮಣನಿದ್ದನು. ಆತನಿಗೆ ವಿಲೋಭನೆಯೆಂಬ ದುಶ್ಶೀಲ ಪತ್ನಿಯಿದ್ದಳು. ವ್ಯಭಿಚಾರಿಣಿಯಾದ ಆ ಸ್ತ್ರೀ ಮೇಲೆ ಒಂದು ದಿನ ಆ ಬ್ರಾಹ್ಮಣನು ಕೋಪಿಸಿಕೊಂಡು, ಹೊಡೆದು ಸಾಯಿಸಿದನು. ಸ್ತ್ರೀಹತ್ಯ ಪಾಪದಿಂದ ಆತನು ಮೊಲವಾಗಿ ಜನ್ಮಿಸಿದನು. ಪಾಪಿಷ್ಠೆಯಾದ ಆತನ ಪತ್ನಿಯು ಹೆಣ್ಣು ನಾಯಿಯಾಗಿ ಹುಟ್ಟಿದಳು. ಈಗ ಇಲ್ಲಿಗೆ ಬಂದ ಮೊಲ, ನಾಯಿ ಅವುಗಳೇ. ಆಶ್ರಮದಲ್ಲಿ ವತ್ಸನೆಂಬ ಜಿತೇಂದ್ರಿಯನಾದ ಯೋಗಿಯಿದ್ದಾನೆ. ಆತನು ಸದಾ ಗೀತೆಯ ೧೪ನೆಯ ಅಧ್ಯಾಯವನ್ನು ಪಾರಾಯಣ ಮಾಡುತ್ತಿರುತ್ತಾನೆ. ನಾನು ಆತನ ಶಿಷ್ಯ, ನಾನೂ ಸಹ ೧೪ನೆಯ ಅಧ್ಯಾಯವನ್ನು ಸದಾ ಜಪಿಸುತ್ತಿರುವೆನು. ನಾನು ಕಾಲು ತೊಳೆದುಕೊಂಡ ಜಲದ ಸ್ಪರ್ಶದಿಂದ ಆ ಮೃಗಗಳು ಪುನೀತಗೊಂಡು ಸ್ವರ್ಗಕ್ಕೇರಿವೆ.

> **ಚತುರ್ದಶಂ ತು ಅಧ್ಯಾಯಂ ಜಪಾಮಿ ಪ್ರತ್ಯಹಂ ನೃಪ**
> **ಮದೀಯ ಚರಣಾಂ ಭೋಜಪ್ರಕ್ಷಾಲನಜಲೇ ಲುಠನ್**
> **ಶಶ ಸ್ತ್ರಿದಿವಮಾಪನ್ನ ಶ್ಶುನಕ್ಯಾ ಸಹ ಭೂಪತೇ.**

ಶಿಷ್ಯನ ಆ ವಾಕ್ಯಗಳನ್ನು ಕೇಳಿ ರಾಜನು ಆಗಿನಿಂದ ಗೀತೆಯ ೧೪ನೆಯ ಅಧ್ಯಾಯವನ್ನು ಪಾರಾಯಣ ಮಾಡುತ್ತಾ ಕ್ರಮವಾಗಿ ಪರಮಾತ್ಮ ಪದವಿಯನ್ನಲಂಕರಿಸಿದನು.

**ಗೀತೆಯ ೧೪ನೆಯ ಅಧ್ಯಾಯದ ಫಲ-ದೋಷನಿವಾರಣೆ, ಉತ್ತಮ ಗತಿ ಪ್ರಾಪ್ತಿ.**

**೧೫) ಪಂಚದಶೋಧ್ಯಾಯದ ಫಲ :** ಪೂರ್ವದಲ್ಲಿ ಗೌಡ ದೇಶದಲ್ಲಿ ನರಸಿಂಹನೆಂಬ ಮಹಾರಾಜನು ರಾಜ್ಯವಾಳುತ್ತಿದ್ದನು. ಆತನಿಗೆ ಸರಸ ಭೇರನೆಂಬ ಸೇನಾಧಿಪತಿಯಿದ್ದನು. ಹೀಗಿರಲು ಒಮ್ಮೆ ಆ ಸೇನಾಧಿಪತಿಗೆ ರಾಜನನ್ನು ವಧಿಸಿ ತಾನೇ ರಾಜ್ಯವನ್ನು ಪಾಲಿಸಬೇಕೆಂಬ ದುರ್ಬುದ್ಧಿ ಉಂಟಾಯಿತು. ಆದರೆ ತನ್ನ ಅಭೀಷ್ಟವು ನೆರವೇರುವುದಕ್ಕಿಂತ ಮುಂಚೆಯೇ ವಿಷೂಚಿಕಾ ಎಂಬ ವ್ಯಾಧಿಯಿಂದ ಮರಣಿಸಿದನು. ನಂತರ ಸಿಂಧುದೇಶದಲ್ಲಿ ಒಂದು ಕುದುರೆಯಾಗಿ ಹುಟ್ಟಲು, ಒಬ್ಬಾನೊಬ್ಬ ವಣಿಕ ಶ್ರೇಷ್ಠನು ಅದನ್ನು ತಿರುಗಿ ಅದೇ ರಾಜನಿಗೆ ಮಾರಿದನು. ರಾಜನು ಒಂದು ದಿನ ಅದರ ಮೇಲೆ ಅರಣ್ಯಕ್ಕೆ ಬೇಟೆಗೆಂದು ಹೋಗಲು, ದಾರಿಯಲ್ಲಿ ಬಾಯಾರಿಕೆಗೊಂಡು ಕುದುರೆಯನ್ನು ಒಂದು ಗಿಡಕ್ಕೆ ಕಟ್ಟಿ ಜಲವನ್ನು ಅನ್ವೇಷಿಸುತ್ತಾ ಒಂದು ಬಂಡೆಯ ಮೇಲೆ ಕುಳಿತನು. ಇಷ್ಟರಲ್ಲಿ ಒಂದು ತಾಳೆಎಲೆ ಗಾಳಿಗೆ ಹೊಡೆದುಕೊಂಡು ಬರಲು, ಅದರಲ್ಲಿ ಏನೋ ಬರೆದಿರುವುದನ್ನು ನೋಡಿ, ರಾಜನು ಅದನ್ನು ಓದಿದನು. ಅದು ಗೀತೆಯ ೧೫ನೆಯ ಅಧ್ಯಾಯದ ಅರ್ಧಶ್ಲೋಕ. ಆ ಅರ್ಧಶ್ಲೋಕವನ್ನು ಕೇಳುತ್ತಲೇ ಪಕ್ಕದಲ್ಲಿದ್ದ ಕುದುರೆ ದಿವ್ಯರೂಪ ಧರಿಸಿ ಸ್ವರ್ಗಕ್ಕೆ ನಿರ್ಗಮಿಸಿತು. ನಂತರ ಹತ್ತಿರವಿದ್ದ ಋಷ್ಯಾಶ್ರಮಕ್ಕೆ ಹೋಗಿ, ಆ ಋಷಿಯನ್ನು ಕುದುರೆ ಅಂತರ್ಯಾಮವಾದ ಕಾರಣವನ್ನು ಕೇಳಲು ಆತನು ಗೀತೆಯ ೧೫ನೆಯ ಅಧ್ಯಾಯದ ಅರ್ಧಶ್ಲೋಕದ ಶ್ರವಣ ಫಲಿತವೇ ಅದು ಎಂದು ತಿಳಿಸಿದನು.

> **ಅಥ ಪಂಚದಶೋದ್ಯಾಯಶ್ಲೋಕಾರ್ಧಂ ಲಿಖಿತಂ ಕ್ವಚಿತ್**
> **ತತೋವಾಚಯತ ಶ್ರುತ್ವಾ ನಿರಗಾತ್ತುರಗೋ ದಿವಮ್**

ನಂತರ ರಾಜನು ಗೀತೆಯ ಪಂಚದಶೋಧ್ಯಾಯವನ್ನು ಭಕ್ತಿಯಿಂದ ಸದಾ ಪಠಿಸುತ್ತಾ ವಿಶುದ್ಧಚಿತ್ತನಾಗಿ ಮುಕ್ತಿ ಹೊಂದಿದನು. ಆದ್ದರಿಂದ ಗೀತೆಯ ೧೫ನೆಯ ಅಧ್ಯಾಯದ ಪಾರಾಯಣದಿಂದ ಜೀವಿಗಳು ಸರ್ವಪಾಪವಿಮುಕ್ತರಾಗಿ ಮೋಕ್ಷವನ್ನು ಹೊಂದುವರು.

**ಗೀತೆಯ ೧೫ನೆಯ ಅಧ್ಯಾಯದ ಫಲ- ಸರ್ವಪಾಪನಿವೃತ್ತಿ, ಉತ್ತಮ ಮೋಕ್ಷಗತಿ ಸಂಪ್ರಾಪ್ತಿ.**

**೧೬) ಷೋಡಶೋಧ್ಯಾಯದ ಫಲ :** ಪೂರ್ವದಲ್ಲಿ ಘೂರ್ಜರ ದೇಶದಲ್ಲಿ ಸೌರಾಷ್ಟ್ರಿಕವೆನ್ನುವ ಪುರದಲ್ಲಿ ಖಡ್ಗಬಾಹು ಎನ್ನುವ ರಾಜನು ಆಳುತ್ತಿದ್ದನು. ಆತನ ಬಳಿ ಅರಿವರ್ದನವೆಂಬ ಮಹಾಬಲಶಾಲಿಯಾದ ಆನೆಯೊಂದಿತ್ತು. ಒಂದು ದಿನ ಅದು ತನ್ನನ್ನು ಕಟ್ಟಿದ್ದ ಹಗ್ಗಗಳನ್ನು ಕಿತ್ತುಕೊಂಡು ಊರಿನ ಮೇಲೆ ಬಿತ್ತು. ಅದರಿಂದ ಪುರಜನರೆಲ್ಲರೂ ಭಯಭೀತಿಗೊಂಡರು. ಮಾವಟಿಯಾಗಲಿ, ರಾಜನಾಗಲಿ ಎಷ್ಟು ಪ್ರಯತ್ನಿಸಿದರೂ ಅದು ಜಗ್ಗಲಿಲ್ಲ. ಇಷ್ಟರಲ್ಲಿ ಸರಸನೆಂಬ ಬ್ರಾಹ್ಮಣನು ಸ್ನಾನ ಮಾಡಿ ಕೆಲವು ಗೀತಾ ಶ್ಲೋಕಗಳನ್ನು ಪಠಿಸುತ್ತಾ ಆ ದಾರಿಯಲ್ಲಿ ಜನರು ನಿಷೇಧಿಸುತ್ತಿದ್ದರೂ ಕೇಳದೆ ಧೈರ್ಯವಾಗಿ ಆ ಮದಗಜವನ್ನು ಸಮೀಪಿಸಿ ಅದರ ಶರೀರವನ್ನು ನೀವಿದನು. ಅದರಿಂದ ರಾಜನು ಆಶ್ಚರ್ಯಚಕಿತನಾಗಿ ಆ ವಿಪ್ರನನ್ನು ಸಮೀಪಿಸಿ ಅಂತಹ ಅಲೌಕಿಕ ಶಕ್ತಿಗೆ ಕಾರಣವೇನೆಂದು ಕೇಳಲು ಆತನು ಹೀಗೆ ತಿಳಿಸಿದನು. 'ಓ ರಾಜನೇ! ನಾನು ಪ್ರತಿನಿತ್ಯ ಗೀತೆಯ ೧೬ನೆಯ ಅಧ್ಯಾಯದ ಕೆಲವು ಶ್ಲೋಕಗಳನ್ನು ಪಠಿಸುವೆನು. ಅದರಿಂದ ನನಗೆ ಈ ಸಿದ್ಧಿಯುಂಟಾಗಿದೆ'.

> **ಗೀತಾಯಾ ಷೋಡಶೋಧ್ಯಾಯ ಶ್ಲೋಕಾನ್ಕತಿಪಯಾನಹಮ್**
> **ಜಪಾಮಿ ಪ್ರತ್ಯಹಂ ಭೂಪ ತೇನೈತಾ ಸ್ಸರ್ವ ಸಿದ್ಧಯಃ**

ಅದನ್ನು ಕೇಳಿ ರಾಜನು ಬ್ರಾಹ್ಮಣನನ್ನು ತನ್ನ ಅರಮನೆಗೆ ಕೊಂಡೊಯ್ದು, ಗೌರವಿಸಿ, ಆತನಿಂದ ಗೀತೆಯ ೧೬ನೆಯ ಅಧ್ಯಾಯದ ಉಪದೇಶವನ್ನು ಹೊಂದಿ, ತತ್ಪ್ರಭಾವದಿಂದ ಆ ಬ್ರಾಹ್ಮಣನ ಸಿದ್ಧಿಗಳನ್ನು ತಾನೂ ಪಡೆದನು. ಅದರಿಂದ ಆತನಿಗೆ ಆ ಗೀತಾ ಶ್ಲೋಕಗಳ ಬಗ್ಗೆ ಪರಮ ವಿಶ್ವಾಸವುಂಟಾಗಿ ಅತ್ಯಂತ ಭಕ್ತಿಯಿಂದ ಅವುಗಳನ್ನು ನಿರಂತರ ಪಠಿಸುತ್ತಾ ಕೊನೆಗೆ ಪರಮಾತ್ಮ ಪದವಿಯನ್ನು ಪಡೆದನು. ಆದ್ದರಿಂದ ಗೀತೆಯ ೧೬ನೆಯ ಅಧ್ಯಾಯದ

ಪಾರಾಯಣದಿಂದ ಜೀವಿಯು ಅಪರಿಮಿತ ಶೌರ್ಯ ಸಾಹಸಗಳನ್ನು ಹೊಂದಿ ಕೊನೆಗೆ ಮೋಕ್ಷವನ್ನು ಪಡೆಯುವನು.

**ಗೀತೆಯ ೧೬ನೆಯ ಅಧ್ಯಾಯದ ಫಲ- ಬಲವಿಕ್ರಮಾದಿಗಳುಂಟಾಗು ವುವು. ಮೋಕ್ಷ ಸಂಪ್ರಾಪ್ತಿಯಾಗುವುದು.**

**೧೭) ಸಪ್ತದಶೋಧ್ಯಾಯದ ಫಲ:** ಪೂರ್ವಕಾಲದಲ್ಲಿ, ಘೂರ್ಜರ ದೇಶವನ್ನು ಪಾಲಿಸುತ್ತಿದ್ದ ಖಡ್ಗಬಾಹುವೆಂಬ ರಾಜನ ಪುತ್ರನ ಬಳಿ ದುಶ್ಯಾಸನನೆಂಬ ಸೇವಕನಿದ್ದನು. ಒಂದು ದಿನ ಆತನು ಮದಗಜವನ್ನು ಹತ್ತಿ ಹೋಗುತ್ತಿರಬೇಕಾದರೆ, ಮಾರ್ಗಮಧ್ಯದಲ್ಲಿ ಆ ಆನೆ ಆತನನ್ನು ಕೆಳಗೆ ಬೀಳಿಸಿ ಸಾಯಿಸಿತು. ನಂತರ ಆತನು ಸಿಂಹಲಾಧೀಶ್ವರನಾದ ಜಯದೇವನ ಆಸ್ಥಾನದಲ್ಲಿ ಆನೆಯಾಗಿ ಹುಟ್ಟಿದನು. ಜಯದೇವನು ಅದನ್ನು ತನ್ನ ಮಿತ್ರನಾದ ಖಡ್ಗಬಾಹು ರಾಜನಿಗೆ ಕೊಟ್ಟನು. ಖಡ್ಗಬಾಹು ಅದನ್ನು ಒಬ್ಬ ಕವೀಶ್ವರನಿಗೆ ದಾನಕೊಟ್ಟನು. ಆ ಕವೀಶ್ವರನು ಅದನ್ನು ಮಾಲವ ದೇಶಾಧಿಪತಿಗೆ ಮಾರಿದನು. ಹೀಗಿರುವಾಗ ಕೆಲವು ದಿನಗಳ ನಂತರ ಆ ಆನೆ ವ್ಯಾಧಿಗ್ರಸ್ತವಾಗಿ ಅತಿ ದುಃಖದಿಂದಿತ್ತು. ರೋಗೋಪಶಮನಕ್ಕಾಗಿ ರಾಜನು ಅನೇಕ ವೈದ್ಯಗಳನ್ನು ಮಾಡಿಸಿದನು. ಆದರೆ ವ್ಯಾಧಿ ಕಡಿಮೆಯಾಗಲಿಲ್ಲ. ಒಂದು ದಿನ ರಾಜನು ಅದರ ಬಳಿಗೆ ಬರಲು, ಆ ಆನೆ ರಾಜನಿಗೆ ಹೀಗೆ ಹೇಳಿತು- 'ರಾಜಾ! ಈ ಔಷಧಿಗಳಿಂದ ನನ್ನ ವ್ಯಾಧಿ ಉಪಶಮನಹೊಂದುವುದಿಲ್ಲ. ಗೀತೆಯ ೧೭ನೆಯ ಅಧ್ಯಾಯವನ್ನು ಪಾರಾಯಣ ಮಾಡುವವರನ್ನು ಕರೆದುಕೊಂಡು ಬನ್ನಿ ಅದರಿಂದ ನನ್ನ ರೋಗವು ಶಮನ ಹೊಂದುವುದು.

> ಗೀತಾ ಸಪ್ತದಶಾಧ್ಯಾಯಜಾಪಕಂ ದ್ವಿಜಮಾನಯ
> ತೇನಾಯಂ ಮಾಮಕೋ ರೋಗಃ ಶಾಮ್ಯತ್ಯತ್ರ ನ ಸಂಶಯಃ

ಈ ವಾಕ್ಯವನ್ನು ಕೇಳಿ ರಾಜನು ಕೂಡಲೇ ಗೀತೆಯ ೧೭ನೆಯ ಅಧ್ಯಾಯವನ್ನು ಪಾರಾಯಣ ಮಾಡುವ ವಿಪ್ರನನ್ನು ಕರೆಯಿಸಿ ತದಧ್ಯಾಯವನ್ನು ಅಲ್ಲಿ ಪಠಣ ಮಾಡಿಸಿ, ಜಲವನ್ನು ಅಭಿಮಂತ್ರಿಸಲು ತತ್ಫಲಿತವಾಗಿ ಆ ಗಜವು ರೋಗವಿಮುಕ್ತವಾಗಿ ದಿವ್ಯರೂಪವನ್ನು ಹೊಂದಿ ಮೋಕ್ಷವನ್ನು ಹೊಂದಿತು. ಅದನ್ನು ನೋಡಿ ಮಾಳವಾಧಿಪತಿಯಾದ ನರವರ್ಮನು ಗೀತೆಯ ೧೭ನೆಯ ಅಧ್ಯಾಯವನ್ನು ಪಾರಾಯಣ ಮಾಡುತ್ತಾ ಅಚಿರ ಕಾಲದಲ್ಲಿಯೇ ಮುಕ್ತನಾದನು. ಆದ್ದರಿಂದ ಗೀತೆಯ ೧೭ನೆಯ ಅಧ್ಯಾಯದ ಪಠಣದಿಂದ ಮಹಾವ್ಯಾಧಿಗಳು ಉಪಶಮಿಸಿ ಜೀವಿಗೆ ಮುಕ್ತಿ ಲಭಿಸುವುದು.

**ಗೀತೆಯ ಹದಿನೇಳನೆಯ ಅಧ್ಯಾಯದ ಫಲ- ಸರ್ವರೋಗ ವಿಮುಕ್ತಿ, ಮೋಕ್ಷಪ್ರಾಪ್ತಿ.**

**೧೮) ಅಷ್ಟಾದಶೋಧ್ಯಾಯದ ಫಲ :** ಮೇರು ಪರ್ವತ ಶಿಖರದ ಅಮರಾವತಿ ಪಟ್ಟಣದಲ್ಲಿ ದೇವೇಂದ್ರನು ಒಮ್ಮೆ ಶಚೀದೇವಿಯೊಡನೆ ಸುಖಾಸೀನನಾಗಿರಲು ತೇಜೋವಂತನಾದ ಒಬ್ಬ ಪರಮಪುರುಷನನ್ನು ಅಲ್ಲಿಗೆ ವಿಷ್ಣುದೇವನು ಕರೆದುಕೊಂಡು ಬಂದನು. ಆತನ ದಿವ್ಯ ಕಾಂತಿ ಪುಂಜವನ್ನು ನೋಡಲಶಕ್ಯನಾಗಿ ದೇವೇಂದ್ರನು ಸಿಂಹಾಸನದಿಂದ ಕೆಳಗೆ ಬೀಳಲು, ದೇವದೂತರು ಆ ನೂತನ ಪುರುಷನನ್ನು ಸಿಂಹಾಸನದ ಮೇಲೆ ಕೂರಿಸಿ ಪಟ್ಟ ಕಟ್ಟಿದ್ದರು. ಮಂಗಳ ವಾದ್ಯಗಳನ್ನು, ಗೀತೆಗಳನ್ನು ಹಾಡತೊಡಗಿದರು. ಆ ಸನ್ನಿವೇಶವನ್ನು ನೋಡಿ ದೇವೇಂದ್ರನು ವಿಸ್ಮಯನಾಗಿ, ಯಜ್ಞಯಾಗಾದಿಗಳನ್ನಾಗಲಿ, ದಾನಧರ್ಮ ಗಳನ್ನಾಗಲಿ, ಪುಣ್ಯಕ್ಷೇತ್ರ ಸಂದರ್ಶನಗಳನ್ನಾಗಲಿ ಮಾಡದ ಈತನಿಗೆ ಈ ಮಹೋನ್ನತ ದೆಶೆ ಹೇಗೆ ಸಂಭವಿಸಿತೆನ್ನುವ ಸಂದೇಹವು ಬಂದು ಕೂಡಲೇ ವಿಷ್ಣುಲೋಕಕ್ಕೆ ಹೋಗಿ, ಇಂದ್ರಾಧಿಪತ್ಯ ಆತನಿಗೆ ಹೇಗೆ ಲಭಿಸಿತೆಂದು ವಿಷ್ಣುಭಗವಾನನನ್ನು ಕೇಳಿದನು. ಅದಕ್ಕೆ ಶ್ರೀಹರಿ, 'ಆತನು ನಿತ್ಯ ಗೀತೆಯ ೧೮ನೆಯ ಅಧ್ಯಾಯದ ಐದು ಶ್ಲೋಕಗಳನ್ನು ಭಕ್ತಿಯಿಂದ ಪಠಿಸುತ್ತಿದ್ದನು. ಅದರಿಂದ ಆತನಿಗೆ ಈ ಮಹಾತ್ಮ್ಯೆ ಒದಗಿದೆಯೆಂದು ಹೇಳಿದನು.

> ಜಪತ್ಯಷ್ಟಾದಶೋಧ್ಯಾಯೇ ಗೀತಾನಾಂ ಶ್ಲೋಕ ಪಂಚಕಮ್
> ಯತ್ಪುಣ್ಯೇನ ಚ ಸಂಪ್ರಾಪ್ತಂ ತವ ಸಾಮ್ರಾಜ್ಯಮುತ್ತಮಮ್

ಆ ವಾಕ್ಯವನ್ನು ಕೇಳಿ ದೇವೇಂದ್ರನು ಕೂಡಲೇ ಬ್ರಾಹ್ಮಣ ವೇಷ ಧರಿಸಿ ಗೋದಾವರಿ ನದೀ ತೀರಕ್ಕೆ ಹೋಗಿ ಅಲ್ಲಿ ಒಬ್ಬ ಬ್ರಾಹ್ಮಣೋತ್ತಮನ ಸೇವೆಯನ್ನು ಮಾಡಿ, ಆತನಿಂದ ಗೀತೆಯ ೧೮ನೆಯ ಅಧ್ಯಾಯವನ್ನು ಕಲಿತು ಪಾರಾಯಣ ಮಾಡಿ, ಇಂದ್ರಾದಿಪದವಿಗಳನ್ನು ನಿಕೃಷ್ಟವಾಗಿ ಭಾವಿಸಿ, ಕೊನೆಗೆ ವಿಷ್ಣು ಸಾನ್ನಿಧ್ಯವನ್ನು ಹೊಂದಿದನು.

ಆದ್ದರಿಂದ ಗೀತೆಯ ೧೮ನೆಯ ಅಧ್ಯಾಯದ ಪಾರಾಯಣದಿಂದ ಮನುಜನಿಗೆ ಸರ್ವಯಜ್ಞಫಲ, ಸರ್ವಪುಣ್ಯ ಕಾರ್ಯಫಲ ಹಾಗೂ ಮೋಕ್ಷವು ಲಭಿಸುತ್ತವೆ. ಈ ಪ್ರಕಾರವಾಗಿ ಗೀತಾಧ್ಯಯನ ಮಹಾತ್ಮ್ಯೆಯನ್ನು ಪೂರ್ವದಲ್ಲಿ ವಿಷ್ಣು ಭಗವಾನನು ಲಕ್ಷ್ಮೀದೇವಿಗೆ ಹೇಳಲು, ಅದನ್ನೇ ಈಶ್ವರನು ಪಾರ್ವತೀದೇವಿಗೆ ಉಪದೇಶಿಸಿದನು.

**ಗೀತೆಯ ೧೮ನೆಯ ಅಧ್ಯಾಯದ ಫಲ- ಸರ್ವಪುಣ್ಯ ಫಲ, ಮೋಕ್ಷರೂಪ ಸದ್ಗತಿ.**

# ಗೀತೆಯ ಅನೇಕ ರೂಪಗಳು
# (Polymorphism)

ಗೀತೆ

| | |
|---|---|
| ಶ್ರೀ ಕೃಷ್ಣಭಗವಾನನ | ದೂತ |
| ವ್ಯಾಸಮುನೀಂದ್ರನ | ರಚನೆ |
| ವೇದಮಂತ್ರಗಳ | ಘೋಷ |
| ಅಹಂಕಾರಾದಿಗಳಿಗೆ | ಪೆಟ್ಟು |
| ದಿವ್ಯಜ್ಞಾನಗಳ | ದಾತ |
| ಅಸುರ ಸ್ವಭಾವಗಳಿಗೆ | ಮಾರಕ |
| ದೈವೀಸಂಪದದ | ನಾಯಕ |
| ಪರಮಾತ್ಮದೃಷ್ಟಿಗೆ | ಮಾತೃ |
| ರಾಗದ್ವೇಷಗಳಿಗೆ | ಮೂಗುದಾರ |
| ಕೈವಲ್ಯಪಥಕ್ಕೆ | ದಾರಿದೀಪ |
| ಪ್ರಣವನಾದಕ್ಕೆ | ಸ್ವರ |
| ಭವಸಾಗರದ | ದೋಣಿ |
| ಮುಮುಕ್ಷುಗಳಿಗೆ | ಅಭಯಹಸ್ತ |
| ಪ್ರಕೃತಿ ಸಾಮ್ರಾಜ್ಯದ | ವಿಜೇತ |
| ಧರ್ಮಾಮೃತಕ್ಕೆ | ಕಲಶ |

# ಗೀತಾ ಸಂಗ್ರಹ

ಭಗವದ್ಗೀತೆಯ ಒಂದೊಂದು ಅಧ್ಯಾಯದಿಂದ ಅದರ ಸಾರವನ್ನು ತಿಳಿಸುವ ಅತಿ ಪ್ರಧಾನವಾದ ಒಂದೊಂದು ಶ್ಲೋಕವನ್ನು ಆರಿಸಿ ತೆಗೆದು ತಾತ್ಪರ್ಯಸಹಿತವಾಗಿ ಇಲ್ಲಿ ವಿವರಿಸಲಾಗಿದೆ. ಗೀತಾಸಾರವನ್ನು ಮನನ ಮಾಡುವವರಿಗೆ ಇವು ಸಹಾಯವಾಗಬಲ್ಲವು.

೧. ನ ಕಾಂಕ್ಷೇ ವಿಜಯಾ ಕೃಷ್ಣ ನ ಚ ರಾಜ್ಯಂ ಸುಖಾನಿ ಚ
ಕಿಂ ನೋ ರಾಜ್ಯೇನ ಗೋವಿಂದ ಕಿಂ ಭೋಗೈರ್ಜೀವಿತೇನ ವಾ (೧-೩೩)

ಓ ಕೃಷ್ಣಾ! ನಾನು ವಿಜಯವನ್ನಾಗಲಿ, ರಾಜ್ಯವನ್ನಾಗಲಿ, (ಪ್ರಾಪಂಚಿಕ) ಸುಖವನ್ನಾಗಲಿ ಕೋರುವುದಿಲ್ಲ. ನನಗೆ ರಾಜ್ಯದಿಂದಾಗಲಿ, ಭೋಗದಿಂದಾಗಲಿ, ಜೀವನದಿಂದಾಗಲಿ ಏನು ಪ್ರಯೋಜನ?

೨. ನ ಜಾಯತೇ ಮ್ರಿಯತೇ ವಾ ಕದಚ
ನ್ನಾಯಂ ಭೂತ್ವಾ ಭವಿತಾ ವಾ ನ ಭೂಯಃ
ಅಜೋ ನಿತ್ಯ ಶ್ಶಾಶ್ವತೋಽಯಂ ಪುರಾಣೋ
ನ ಹನ್ಯತೇ ಹನ್ಯಮಾನೇ ಶರೀರೇ (೨-೨೦)

ಈ ಆತ್ಮ ಯಾವಾಗಲಾಗಲಿ ಹುಟ್ಟುವುದಲ್ಲ ಅಥವ ಸಾಯುವುದಲ್ಲ. ಅದು ಒಮ್ಮೆ ಇಲ್ಲವಾಗಿದ್ದು ಮತ್ತೆ ಹೊಸದಾಗಿ ಬರುವುದಲ್ಲ; ಇದ್ದು ಮತ್ತೆ ಇಲ್ಲದಂತೆ ಆಗುವುದಲ್ಲ. ಅದಕ್ಕೆ ಹುಟ್ಟು ಇಲ್ಲ. ನಾಶರಹಿತ, ಶಾಶ್ವತ ಮತ್ತು ಅನಾದಿಯಾದುದು. ಶರೀರ ಮೃತ ಹೊಂದಿದಾಗ ಅದು ಸಾಯುವುದಿಲ್ಲ.

೩. ಯಸ್ತ್ವಿಂದ್ರಿಯಾಣಿ ಮನಸಾ ನಿಯಮ್ಯಾರಭತೇಽರ್ಜುನ
ಕರ್ಮೇಂದ್ರಿಯೈಃ ಕರ್ಮಯೋಗ ಮಸಕ್ತಸ್ಸ ವಿಶಿಷ್ಯತೇ (೩-೭)

ಓ ಅರ್ಜುನಾ! ಯಾವನು ಇಂದ್ರಿಯಗಳನ್ನು ಮನಸ್ಸಿನಿಂದ ನಿಗ್ರಹಿಸಿ ಕರ್ಮೇಂದ್ರಿಯಗಳಿಂದ ಕರ್ಮಯೋಗವನ್ನು ಅಸಕ್ತನಾಗಿ ಆಚರಿಸುವನೋ ಆತನೇ ಉತ್ತಮನು.

೪. ಬ್ರಹ್ಮಾರ್ಪಣಂ ಬ್ರಹ್ಮಹವಿರ್ಬ್ರಹ್ಮಾಗ್ನೌ ಬ್ರಹ್ಮಣಾಹುತಮ್
ಬ್ರಹ್ಮೈವ ತೇನ ಗಂತವ್ಯಂ ಬ್ರಹ್ಮಕರ್ಮ ಸಮಾಧಿನಾ (೪-೨೪)

ಹೋಮ ಸಾಧನೆಗಳು, ಹವಿಸ್ಸು, ಹೋಮಾಗ್ನಿ, ಹೋಮ ಮಾಡುವವನು ಹಾಗು ಸಮಸ್ತವೂ ಬ್ರಹ್ಮವೆಂದು ತಿಳಿಯುವವನು ಅಂತಹ ಚಿತ್ತೈಕಾಗ್ರತೆಯಿಂದ ಬ್ರಹ್ಮವನ್ನೇ ಹೊಂದುವನು.

೫. ಬ್ರಹ್ಮಣ್ಯಾಧಾಯ ಕರ್ಮಾಣಿ ಸಂಗಂ ತ್ಯಕ್ತ್ವಾ ಕರೋತಿ ಯಃ
ಲಿಪ್ಯತೇ ನ ಸ ಪಾಪೇನ ಪದ್ಮಪತ್ರಮಿವಾಂಭಸಾ (೫-೧೦)

ಯಾರು ಸಮಸ್ತ ಕರ್ಮಗಳನ್ನು ಪರಮಾತ್ಮನಿಗೆ ಸಮರ್ಪಿಸಿ, ಸಂಗವನ್ನು (ಫಲಾಪೇಕ್ಷೆ) ಬಿಟ್ಟು ಕಾರ್ಯ ಮಾಡುತ್ತಾನೋ ಅವನು 'ತಾವರೆ ಎಲೆಗೆ ನೀರು ಅಂಟದಂತೆ' ಪಾಪದಿಂದ ಅಂಟಲ್ಪಡುವುದಿಲ್ಲ.

೬. ಶನೈಶ್ಶನೈರುಪರಮೇದ್ಬುದ್ಧ್ಯಾ ಧೃತಿಗೃಹೀತಯಾ
ಆತ್ಮಸಂಸ್ಥಂ ಮನಃ ಕೃತ್ವಾ ನ ಕಿಂಚಿದಪಿ ಚಿಂತಯೇತ್ (೬-೨೫)

ಧೈರ್ಯದಿಂದ ಕೂಡಿದ ಬುದ್ಧಿಯಿಂದ ಮನಸ್ಸನ್ನು ಮೆಲ್ಲಮೆಲ್ಲಗೆ ವಿಷಯಗಳಿಂದ ಮರಳಿಸಬೇಕು. ನಂತರ ಮನಸ್ಸನ್ನು ಆತ್ಮದಲ್ಲಿ ಸ್ಥಿರೀಕರಿಸಿ ಬೇರೆ ಯಾವುದೇ (ದೃಶ್ಯ) ವಸ್ತುವನ್ನು ಆಶಿಸಬಾರದು.

೭. ಮತ್ತಃ ಪರತರಂ ನಾನ್ಯತ್ಕಿಂಚಿದಸ್ತಿ ಧನಂಜಯ
ಮಯಿ ಸರ್ವಮಿದಂ ಪ್ರೋತಂ ಸೂತ್ರೇ ಮಣಿಗಣಾ ಇವ (೭-೭)

ಓ ಅರ್ಜುನಾ! ನನಗಿಂತ ಭಿನ್ನವಾದುದು ಈ ಪ್ರಪಂಚದಲ್ಲಿ ಯಾವುದೂ ಇಲ್ಲ. ಈ ಸಮಸ್ತ ಜಗತ್ತು ದಾರದಲ್ಲಿ ಮಣಿಗಳಿರುವಂತೆ ನನ್ನಲ್ಲಿ ಸ್ಥಿತಗೊಂಡಿದೆ.

೮. ಓಮಿತ್ಯೇಕಾಕ್ಷರಂ ಬ್ರಹ್ಮ ವ್ಯಾಹರನ್ಮಾಮನುಸ್ಮರನ್
ಯಃ ಪ್ರಯಾತಿ ತ್ಯಜಂದೇಹಂ ಸಯಾತಿ ಪರಮಾಂ ಗತಿಮ್ (೮-೧೩)

ಯಾವನು ಪರಬ್ರಹ್ಮವಾಚಕವಾದ "ಓಂ" ಎನ್ನುವ ಏಕಾಕ್ಷರವನ್ನು (ಪ್ರಣವವನ್ನು) ಉಚ್ಚರಿಸುತ್ತಾ (ಲಕ್ಷ್ಯಾರ್ಥವಾದ) ನನ್ನನ್ನು ಧ್ಯಾನಿಸುತ್ತಾ ಈ ಶರೀರವನ್ನು ಬಿಡುವನೋ, ಅವನು ಸರ್ವೋತ್ತಮಗತಿಯಾದ ಮೋಕ್ಷವನ್ನು ಹೊಂದುತ್ತಾನೆ.

೯. ಅನನ್ಯಾಶ್ಚಿಂತಯಂತೋ ಮಾಂ ಯೇ ಜನಾಃ ಪರ್ಯುಪಾಸತೇ
ತೇಷಾಂ ನಿತ್ಯಾಭಿಯುಕ್ತಾನಾಂ ಯೋಗಕ್ಷೇಮಂ ವಹಾಮ್ಯಹಮ್ (೯-೨೨)

ಯಾರು ಅನನ್ಯಚಿತ್ತದಿಂದ ನನ್ನನ್ನು ಧ್ಯಾನಿಸುತ್ತ ಸೇವಿಸುತ್ತಾರೋ, ಯಾವಾಗಲೂ ನನ್ನಲ್ಲೇ ನಿಷ್ಠೆಯಿಟ್ಟಿರುತ್ತಾರೋ, ಅವರ ಯೋಗಕ್ಷೇಮವನ್ನು ನಾನೇ ವಹಿಸುವೆನು.

೧೦. ಯ ದ್ಯದ್ವಿಭೂತಿಮತ್ಸತ್ತ್ವಂ ಶ್ರೀಮದೂರ್ಜಿತಮೇವ ವಾ
ತತ್ತದೇವಾಗಚ್ಛತ್ವಂ ಮಮ ತೇಜೋಽಶಂ ಸಂಭವಮ್ (೧೦-೪೧)

ಯಾವ ಯಾವ ವಸ್ತು ಐಶ್ವರ್ಯಯುಕ್ತವಾಗಿ ಕಾಂತಿಯುಕ್ತವಾಗಿ, ಶಕ್ತಿವಂತವಾಗಿರುವುದೋ, ಅವೆಲ್ಲವೂ ನನ್ನ ತೇಜೋಂಶದಿಂದ ಸಂಭವಿಸಿರುವುದೆಂದು ನೀನು ತಿಳಿಯುವುದು.

೧೧. ಮತ್ಕರ್ಮಕೃನ್ಮತ್ಪರಮೋ ಮದ್ಭಕ್ತಃ ಸಂಗವರ್ಜಿತಃ
ನಿರ್ವೈರಸ್ಸರ್ವಭೂತೇಷು ಯಸ್ಸಮಾಮೇತಿ ಪಾಂಡವ (೧೧-೫೫)

ಓ ಅರ್ಜುನಾ! ಯಾವನು ನನಗೆ ಪ್ರಿಯವಾದ ಕರ್ಮಗಳನ್ನೇ ಮಾಡುವನೋ, ನನ್ನನ್ನೇ ಪರಮ ಪ್ರಾಪ್ಯವಾಗಿ ಭಾವಿಸಿರುವನೋ, ನನ್ನಲ್ಲಿ ಭಕ್ತಿಯುಳ್ಳವನಾಗಿರುವನೋ, ದೃಶ್ಯಪದಾರ್ಥಗಳಲ್ಲಿ ಆಸಕ್ತಿಯಿಲ್ಲದೇ ಇರುವನೋ, ಮತ್ತೆ ಸಮಸ್ತ ಪ್ರಾಣಿಗಳೆಡೆ ವೈರರಹಿತನಾಗಿ, ದಯೆಯಿಂದ ವರ್ತಿಸುವನೋ, ಅವನು ನನ್ನನ್ನೇ ಹೊಂದುವನು.

೧೨. ಸಂತುಷ್ಟಸ್ಸತತಂ ಯೋಗೀ ಯತಾತ್ಮಾ ದೃಢನಿಶ್ಚಯಃ
ಮಯ್ಯರ್ಪಿತ ಮನೋಬುದ್ಧಿರ್ಯೋಮದ್ಭಕ್ತಸ್ಸಮೇ ಪ್ರಿಯಃ (೧೨-೧೪)

ಯಾವಾಗಲೂ ಸಂತುಷ್ಟನಾಗಿರುವವನು, ಯೋಗಿಯು, ಮನೋ ನಿಗ್ರಹವನ್ನು ಹೊಂದಿದವನು, ಸ್ಥಿರವಾದ ನಿಶ್ಚಯವುಳ್ಳವನು ಹಾಗು ತನ್ನ ಮನೋಬುದ್ಧಿಗಳನ್ನು ನನಗೆ ಅರ್ಪಿಸಿರುವ ಭಕ್ತನೇ ನನಗೆ ಅತ್ಯಂತ ಪ್ರಿಯವಾದವನು.

೧೩. ಕ್ಷೇತ್ರಜ್ಞಂ ಚಾಪಿ ಮಾಂ ವಿದ್ಧಿ ಸರ್ವಕ್ಷೇತ್ರೇಷು ಭಾರತ
ಕ್ಷೇತ್ರಕ್ಷೇತ್ರಜ್ಞಯೋರ್ಜ್ಞಾನಂ ಯತ್ತಜ್ಞಾನಂ ಮತಂ ಮಮ(೧೩-೧೩)

ಓ ಅರ್ಜುನಾ! ಸಮಸ್ತ ಕ್ಷೇತ್ರದಲ್ಲಿ (ದೇಹದಲ್ಲಿ)ರುವ ಕ್ಷೇತ್ರಜ್ಞನು ನಾನೇ ಎಂದು ತಿಳಿ. ಈ ಕ್ಷೇತ್ರಕ್ಷೇತ್ರಜ್ಞರ ಜ್ಞಾನ ಯಾವುದು ಇದೆಯೋ ಅದನ್ನೇ ವಾಸ್ತವ ಜ್ಞಾನವೆಂದು ತಿಳಿ.

೧೪. ನಾನ್ಯಂ ಗುಣೇಭ್ಯಃ ಕರ್ತಾರಂ ಯದಾ ದ್ರಷ್ಟಾನುಪಶ್ಯತಿ
ಗುಣೇಭ್ಯಶ್ಚ ಪರಂವೇತ್ತಿ ಮದ್ಭಾವಂ ಸೋಽಧಿಗಚ್ಛತಿ (೧೪-೧೯)

ಯಾವನು ವಿವೇಕವಂತನಾಗಿ ತ್ರಿಗುಣಗಳಿಗಿಂತ ಬೇರೆಯಾದ ಕರ್ತನನ್ನು ದರ್ಶಿಸುವನೋ ಮತ್ತೆ ತನ್ನನ್ನು ತ್ರಿಗುಣಗಳಿಗಿಂತ ಅನ್ಯನೆಂದು ಯಾವಾಗ ತಿಳಿಯುವನೋ, ಆಗ ಆತನು ನನ್ನ ಸ್ವರೂಪವನ್ನೇ (ಬ್ರಹ್ಮೈಕ್ಯ) ಹೊಂದುತ್ತಾನೆ.

೧೫. ನಿರ್ಮಾನಮೋಹಾ ಜಿತಸಂಗದೋಷಾ ಅಧ್ಯಾತ್ಮನಿತ್ಯಾ ವಿನಿವೃತ್ತಕಾಮಾಃ
ದ್ವಂದ್ವೈರ್ವಿಮುಕ್ತಾಸ್ಸುಖದುಃಖಸಂಜ್ಞೈ
ರ್ಗಚ್ಛಂತ್ಯಮೂಢಾಃ ಪದಮವ್ಯಯಂ ತತ್ (೧೫-೫)

ಅಭಿಮಾನ, ಮೋಹವಿಲ್ಲದವನು, ಸಂಗ (ಪ್ರಾಪಂಚಿಕ ಸಂಸರ್ಗ) ದೋಷವನ್ನು ಜಯಿಸಿದವನು, ಸದಾ ಆತ್ಮ ಚಿಂತನೆಯಲ್ಲಿ ತೊಡಗಿರುವವನು, ಕೋರಿಕೆಗಳೆಲ್ಲವನ್ನೂ ತ್ಯಜಿಸಿದವನು, ಸುಖದುಃಖಾದಿ ದ್ವಂದ್ವಗಳು ಇಲ್ಲದೆ ಇರುವ ವಿವೇಕವಂತನು, ನಾಶವಿಲ್ಲದ ಆ ಬ್ರಹ್ಮಪದವಿಯನ್ನೇ ಹೊಂದುತ್ತಾನೆ.

೧೬. ಯಶ್ಶಾಸ್ತ್ರವಿಧಿ ಮುತ್ಸೃಜ್ಯ ವರ್ತತೇ ಕಾಮಕಾರತಃ
ನ ಸ ಸಿದ್ಧಿಮವಾಪ್ನೋತಿ ನ ಸುಖಂ ನ ಪರಾಂ ಗತಿಮ್ (೧೬-೨೩)

ಯಾವನು ಶಾಸ್ತ್ರಗಳಲ್ಲಿ ಹೇಳಿದ ಪ್ರಕಾರ ಆಚರಿಸದೆ ತನ್ನ ಇಷ್ಟ ಪ್ರಕಾರ ಪ್ರವರ್ತಿಸುವನೋ ಅವನು ಜ್ಞಾನಸಿದ್ಧಿಯನ್ನಾಗಲಿ, ಸುಖವನ್ನಾಗಲಿ, ಮೋಕ್ಷವನ್ನಾಗಲಿ ಹೊಂದುವುದಿಲ್ಲ (ಶಾಸ್ತ್ರಗಳಲ್ಲಿ ಹೇಳಿದ ಹಾಗೆ ದೈವಸಂಪದವನ್ನು ಸಂಪಾದಿಸಿ ಅಸುರ ಸಂಪದವನ್ನು ಬಿಡಬೇಕು ಎನ್ನುವುದು ಭಾವ).

೧೭. ಸತ್ತ್ವಾನುರೂಪಾ ಸರ್ವಸ್ಯ ಶ್ರದ್ಧಾ ಭವತಿ ಭಾರತ
ಶ್ರದ್ಧಾಮಯೋಽಯಂ ಪುರುಷೋ ಯೋಯಚ್ಛ್ರದ್ಧಸ್ಸ ಏವ ಸಃ(೧೭-೩)

ಓ ಅರ್ಜುನಾ! ಸಮಸ್ತ ಜೀವಿಗಳಿಗೆ ಅವರವರ (ಪೂರ್ವಜನ್ಮ ಸಂಸ್ಕಾರದಿಂದ ಲಭ್ಯವಾದ) ಅಂತಃಕರಣವನ್ನನುಸರಿಸಿ ಗುಣಗಳು ಉಂಟಾಗುತ್ತವೆ. ಜೀವಿಯು ಗುಣಮಯಿ. ಯಾವನು ಯಾವ ಗುಣವನ್ನು ಹೊಂದಿದ್ದಾನೋ ಅವನು ಅಂತಹ ರೂಪವನ್ನೇ ಹೊಂದುತ್ತಾನೆ. (ಆದ್ದರಿಂದ ಪ್ರತಿಯೊಬ್ಬರೂ ಶ್ರದ್ಧೆಯಿಂದ ಪ್ರಯತ್ನಪೂರ್ವಕವಾಗಿ ಸತ್ವಗುಣವನ್ನವಲಂಬಿಸಿ, ಕ್ರಮವಾಗಿ ಗುಣಾತೀತ ಸ್ಥಿತಿಯನ್ನು ಸೇರಬೇಕೆಂದು ಅರ್ಥ).

೧೮. ಸರ್ವಧರ್ಮಾನ್ಪರಿತ್ಯಜ್ಯ ಮಾಮೇಕಂ ಶರಣಂ ವ್ರಜ
ಅಹಂ ತ್ವಾ ಸರ್ವಪಾಪೇಭ್ಯೋ ಮೋಕ್ಷಯಿಷ್ಯಾಮಿ ಮಾ ಶುಚಃ (೧೮-೬೬)

ಸಮಸ್ತ ಧರ್ಮಗಳನ್ನು (ಕಾಮ್ಯಕರ್ಮಗಳನ್ನು ಇಲ್ಲವೆ ದೃಶ್ಯ ಪದಾರ್ಥಗಳನ್ನು) ಬಿಟ್ಟು ನನ್ನೊಬ್ಬನನ್ನೇ (ದೃಕ್ಕುರೂಪವಾದ ಆತ್ಮನ್ನೇ) ಶರಣು ಹೊಂದು. ಆಗ ನಿನ್ನನ್ನು ಸಮಸ್ತ ಪಾಪಗಳಿಂದ ನಾನು ವಿಮುಕ್ತಿಗೊಳಿಸುವೆ. ದುಃಖಿಸಬೇಡ.

# ಗೀತೆಯ ಅಂತರಾರ್ಥ

ಪಾಂಡವ ಕೌರವ ಯುದ್ಧವು ವಾಸ್ತವವಾಗಿ ಪ್ರತಿಜೀವಿಯ ಹೃದಯಾಂತರಾಳದಲ್ಲಿ ಪ್ರತಿದಿನವೂ ಸಂಭವಿಸುವ ಧರ್ಮಾಧರ್ಮ ಯುದ್ಧದ ಸಾಕ್ಷಾತ್ ಪ್ರತಿಬಿಂಬ. ಜೀವನ ಸಂಗ್ರಾಮದಲ್ಲಿ ಒಳ್ಳೆಯದಕ್ಕೆ ಕೆಟ್ಟದ್ದಕ್ಕೆ, ಧರ್ಮಾಧರ್ಮಗಳಿಗೆ, ನ್ಯಾಯಾನ್ಯಾಯಗಳಿಗೆ, ಸತ್ಯಾಸತ್ಯಗಳಿಗೆ ಪ್ರತಿನಿಮಿಷವೂ ದೊಡ್ಡ ಯುದ್ಧ ನಡೆಯುತ್ತಿರುತ್ತದೆ. ಆ ಯುದ್ಧದಲ್ಲಿ ಜೀವಿಯ ನಿಶ್ಚಯಾತ್ಮಕವಾದ ಬುದ್ಧಿ ಎಷ್ಟು ಶುದ್ಧ ಹಾಗೂ ವಿವೇಕವಾಗಿದೆಯೋ ಅಷ್ಟು ವಿಜಯ ಲಭಿಸುವುದು. ಆದ್ದರಿಂದಲೇ ಉಪನಿಷತ್ತುಗಳಲ್ಲಿ ಬುದ್ಧಿಯನ್ನು ಸಾರಥಿಗೆ ಹೋಲಿಸಲಾಗಿದೆ. ರಥವು ಗಮ್ಯ ಸ್ಥಾನವನ್ನು ನಿರಾತಂಕವಾಗಿ ಸೇರಬೇಕೆಂದರೆ, ಕುಮಾರ್ಗವನ್ನು ಹಿಡಿಯದೆ ಸವ್ಯವಾದ ಪಥದಲ್ಲಿಯೇ ಮುಂದುವರಿಯಬೇಕೆಂದರೆ, ಸಾರಥಿ ಮಹಾಪ್ರಜ್ಞಾವಂತನು ಹಾಗು ಕುಶಲನಾಗಿರಬೇಕು. ಶ್ರೀಕೃಷ್ಣಪರಮಾತ್ಮನಂತಹ ಸಾರಥಿ ಲಭಿಸಿದರೆ ಇನ್ನು ಜೀವನ ರಥವು ಮೋಕ್ಷವೆನ್ನುವ ಗಮ್ಯಸ್ಥಾನವನ್ನು ಸೇರದೇ ಇರುವುದೇ? ಅರ್ಜುನನ ಸೌಭಾಗ್ಯದಿಂದ ಆತನಿಗೆ ಪ್ರಜ್ಞಾದುರಂಧರನಾದ ಲೋಕೇಶನೇ ಸಾರಥಿಯಾಗಿ ದೊರಕಿದನು. ಕರ್ತವ್ಯಚ್ಯುತನಾಗಿ ಧರ್ಮಕ್ಷೇತ್ರದಲ್ಲಿ ವಕ್ರಮಾರ್ಗವನ್ನು ಅನುಸರಿಸಲು ಪ್ರಯತ್ನಿಸಿದ ಅರ್ಜುನನನ್ನು ತನ್ನ ಬೋಧೆಯಿಂದ ಸವ್ಯಮಾರ್ಗದಲ್ಲಿಯೇ ಶ್ರೀಕೃಷ್ಣನು ನಡೆಸಿದನು. ಆತನ ಆ ಬೋಧೆಯೇ ಭಗವದ್ಗೀತೆ. ಹಾಗೆಯೇ ಹೃದಯ ಕ್ಷೇತ್ರದಲ್ಲಿ ಅಧ್ಯಾತ್ಮನಿಶ್ಚಯದಿಂದ ಪರಿಪೂರ್ಣವಾದ ಪವಿತ್ರಬುದ್ಧಿಯು ಕರ್ತವ್ಯಚ್ಯುತವಾದ ಮನಸ್ಸಿಗೆ ಬೋಧಿಸುವಂತಹ ದಿವ್ಯಬೋಧೆಯೂ ಸಹ ಒಂದು ಭಗವದ್ಗೀತೆಯೇ ಹೌದು. ಗೀತೆಯ ಅಂತರಾರ್ಥವಿದು. ಅರ್ಜುನನಂತೆ ಪ್ರತಿಜೀವಿಯು ತನ್ನ ಜೀವನ ರಥದ ಕುದುರೆಗಳ ಲಗಾಮನ್ನು ಪರಮಾತ್ಮನಿಗೆ ಸಮರ್ಪಿಸಿದಲ್ಲಿ ಆತನ ಅನುಗ್ರಹದಿಂದ ಮೋಕ್ಷರೂಪದ ಗಮ್ಯಸ್ಥಾನವನ್ನು ಸುಲಭವಾಗಿ ಸೇರಿಕೊಳ್ಳುವನು.

**ಗೀತೆಯ ರಹಸ್ಯಾರ್ಥ (ಅಂತರಾರ್ಥ)ವನ್ನು ಈ ಕೆಳಗೆ ಕೊಡಲಾಗಿದೆ.**

| | |
|---|---|
| ಕುರುಕ್ಷೇತ್ರ | - ಹೃದಯಕ್ಷೇತ್ರ |
| ಅರ್ಜುನನ ರಥ | - ಶರೀರ |
| ಸಾರಥಿಯಾದ ಶ್ರೀಕೃಷ್ಣ | - ಪ್ರಜ್ಞಾರೂಪದ ಬುದ್ಧಿ (ಪರಮಾತ್ಮ) |
| ರಥಿಕನಾದ ಅರ್ಜುನ | - ಚಂಚಲ ಮನಸ್ಸು (ಜೀವಿ) |
| ಕುದುರೆಗಳು | - ಇಂದ್ರಿಯಗಳು |
| ಕೌರವ+ಪ್ರತಿಪಕ್ಷ ಸೇನೆಗಳು | - ಕಾಮ ಕ್ರೋಧ ರಾಗ ದ್ವೇಷ, ಅಹಂಕಾರ, ಮಮಕಾರಾದಿ ದುರ್ಗುಣಗಳು |
| ಪಾಂಡವ+ಸ್ವಪಕ್ಷಸೇನೆ | - ನಿರ್ಭಯತೆ, ಭಕ್ತಿ, ಶ್ರದ್ಧಾದಿ ಸದ್ಗುಣಗಳು |
| ಅರ್ಜುನನ ಧನುಸ್ಸು | - ಸಾಧನ ಚತುಷ್ಟಯ |
| ಸಂಜಯ | - ವಿವೇಕ |
| ಧೃತರಾಷ್ಟ್ರ | - ಅವಿವೇಕ, ಅವಿದ್ಯೆ |
| ದುರ್ಯೋಧನ | - ಕಾಮ |
| ಭಗವದ್ಗೀತೆ | - ಜೀವಿಯ (ಮನಸ್ಸಿನ) ಬಗ್ಗೆ ಪ್ರಜ್ಞಾನ ರೂಪವಾದ ಬುದ್ಧಿಯನ್ನು ಹೇಳುವ ಹಿತವಾಕ್ಯಗಳು |

ಮೊದಲ ಆರು ಅಧ್ಯಾಯಗಳು - (ಕರ್ಮಷಟ್ಕ)- ಶ್ರವಣ
ಎರಡನೆಯ ಆರು ಅಧ್ಯಾಯಗಳು-(ಭಕ್ತಿಷಟ್ಕ)- ಮನನ
ಮೂರನೆಯ ಆರು ಅಧ್ಯಾಯಗಳು-(ಜ್ಞಾನಷಟ್ಕ)- ನಿದಿಧ್ಯಾಸ

**ಜೀವನ ರಥವನ್ನು ವಿಷಯ ಮಾರ್ಗದಲ್ಲಿ ನಡೆಸುವುದೇ ಬಂಧನ. ದೈವ ಮಾರ್ಗದಲ್ಲಿ ನಡೆಸುವುದೇ ಮೋಕ್ಷ. ಇದು ಗೀತೆಯ ರಹಸ್ಯ.**

# ಗೀತೋದ್ಯಾನ ವಿಹಾರ

೧) ಭಗವದ್ಗೀತ್ಯೋದ್ಯಾನವಿಹಾರವಿದು ಭಕ್ತಿ ನರ್ಪಿಸಲು ಓಡುತ ಬನ್ನಿ ಸೊಗಸಾದದನು ವೀಕ್ಷಿಸಲಿನ್ನು ಸುಲಭದಾರಿಯ ತೋರಿಸುವನ್ಬನ್ನಿ

೨) ಭಾರತಯುದ್ಧ ಮಾನವಕೋಟಿಯ ಚಿಮ್ಮಿದ ಚಿಲುಮೆ ತಣಿಯಲು ಬನ್ನಿ ಧೀರನು ವ್ಯಾಸನು ಬಿತ್ತಿ ಬೆಳೆಸಿದ ದಿವ್ಯೋದ್ಯಾನವ ನೋಡಲು ಬನ್ನಿ

೩) ನೀಲಮೇಘಕೃಷ್ಣ ನಡೆಸಿದ ರಥವಿದು ಪ್ರೇಮದ ಕೆಸರಲಿ ಹೂತಿದೆ ಬನ್ನಿ ಇಹಪರ ಸುಖಕರ ಹೇತುಭೂತಗಳ ಪೂರ್ಣದಾತನ ದರ್ಶಿಸಬನ್ನಿ

೪) ಉದ್ಯಾನವಿಹಾರ ಅಷ್ಟಾದಶೈಕರೆ ಸೀಮಿತದಲ್ಲಿದೆ ನೋಡಲು ಬನ್ನಿ ಸುಲಲಿತವಾದ ಏಳು ಶತಕ ಸದ್ವೃಕ್ಷಗಳು ಬೆಳೆದಿವೆ ತಂಗಲು ಬನ್ನಿ

೫) ಬಾಡದ ಕೊಳೆಯದ ಹೂಗಳವು ರಸಭರಿತ ಸತ್ಫಲಗಳು ಸ್ವಾದಿಸ ಬನ್ನಿ ತಪ್ಪದೆ ನಾವು ಧನ್ಯರು ಹೊತ್ತು ತರುವ ತಲೆಗೊಂದು ಬನ್ನಿ

# ಗೀತಾ ಜಯಂತಿ

ವ್ಯಕ್ತಿಗಳಂತೆ ಜಯಂತಿ ಮಾಡಿಸಿಕೊಳ್ಳುವ ಭಾಗ್ಯವು ಗೀತಾಗ್ರಂಥಕ್ಕೂ ಸಂದಿದೆ. ಅದರ ವೈಶಿಷ್ಟ್ಯದಿಂದಲೇ ಅದಕ್ಕೆ ಅಂತಹ ಅಪೂರ್ವ ಗೌರವ ಸಿದ್ಧಿಸಿದೆ. ಶ್ರೀಕೃಷ್ಣ ಭಗವಂತನು ರಣರಂಗದಲ್ಲಿ ಅರ್ಜುನನಿಗೆ ಗೀತೋಪದೇಶ ಮಾಡಿದ ಸುದಿನವು ಮಾರ್ಗಶಿರ ಶುದ್ಧ ಏಕಾದಶಿ. ಆದ್ದರಿಂದ ಆ ದಿನವನ್ನು ಮಹಾಪರ್ವದಿನವಾಗಿ ಭಾವಿಸಲಾಗುತ್ತದೆ. ಶ್ರೀರಾಮಜಯಂತಿ, ಶ್ರೀಕೃಷ್ಣ ಜಯಂತಿ, ಶ್ರೀ ಬುದ್ಧ ಜಯಂತಿ, ಶ್ರೀ ದತ್ತಾತ್ರೇಯ ಜಯಂತಿ, ಶ್ರೀಶಂಕರ ಜಯಂತಿ ಮುಂತಾದ ಉತ್ಸವಗಳು ನಡೆಯುವ ಪವಿತ್ರ ದಿನಗಳಲ್ಲಿ ಆಯಾ ಅವತಾರ ಪುರುಷರನ್ನು ಜನರು ಹೇಗೆ ಅರ್ಚಿಸುವರೋ, ಹಾಗೆಯೇ 'ಶ್ರೀಗೀತಾ ಜಯಂತಿ' ಸಂದರ್ಭದಲ್ಲಿ ಶ್ರೀ ಗೀತಾದೇವಿಯನ್ನು ಅರ್ಚಿಸುವ ಆಚಾರವಿದೆ. ಗೀತಾಮಾತೆಯನ್ನು ಹೇಗೆ ಪೂಜಿಸಬೇಕು ಎನ್ನುವ ವಿಧಾನವೆಲ್ಲವನ್ನೂ ಈ ಗ್ರಂಥದಲ್ಲಿ ಈಗಾಗಲೇ ಕೊಡಲಾಗಿದೆ. ಆ ದಿನದಂದು ಗೀತಾಗ್ರಂಥ, ಶ್ರೀಕೃಷ್ಣ, ಶ್ರೀವ್ಯಾಸ, ಶ್ರೀ ಅರ್ಜುನರ ಅರ್ಚನೆಯೊಡನೆ ಈ ಕೆಳಗಿನ ಕಾರ್ಯಕ್ರಮಗಳನ್ನು ನಡೆಸುವುದು ಉತ್ತಮ.

೧. ಭಗವದ್ಗೀತೆಯ ಒಟ್ಟು ೧೮ ಅಧ್ಯಾಯಗಳ ಪಾರಾಯಣ ವ್ಯಕ್ತಿಗತ ವಾಗಿಯಾಗಲಿ, ಸಾಮೂಹಿಕವಾಗಿಯಾಗಲಿ ನಡೆಸಬೇಕು. ಭಕ್ತರು ಕೆಲವರು ಸೇರಿದಲ್ಲಿ ಸಮಷ್ಟಿ ಪಾರಾಯಣ ಜರುಗಿಸುವುದು ಶ್ರೇಷ್ಠ. ಏಕೆಂದರೆ ಸಮಷ್ಟಿ ಪಾರಾಯಣದಿಂದ ಜನಿಸುವ ಗೀತಾಘೋಷ ಜನರ ಉತ್ಸಾಹವನ್ನು ಉತ್ತೇಜಿಸುವುದೇ ಅಲ್ಲದೆ, ದೂರವಿರುವವರ ಶ್ರುತಿ ಪುಟಗಳನ್ನು ಕೂಡ ಪುನೀತಗೊಳಿಸಬಲ್ಲದು. ಗೀತಾ ಪಠನ ಪೂರ್ತಿಯಾದ ನಂತರ ಮಹಾತ್ಮ್ಯೆಯನ್ನು ಪೂರ್ತಿಯಾಗಿ ಓದಬೇಕು.

೨. ಗೀತಾ ತತ್ವವನ್ನು ತಿಳಿದ ಮಹನೀಯರಿಂದ ಆ ದಿನದಂದು ಗೀತೆಯ ಬಗ್ಗೆ ಉಪನ್ಯಾಸವನ್ನು ಏರ್ಪಾಟು ಮಾಡಬೇಕು. ಗೀತೋಪನ್ಯಾಸದ ಮೂಲಕ ಜನಗಳಲ್ಲಿ ಗೀತೆಯ ಬಗ್ಗೆ ಮಹೋನ್ನತ ಭಾವನೆ ಉಂಟಾಗುವುದಲ್ಲದೆ ಗೀತೆಯ ಮೇಲೆ ಅವರಿಗೆ ಪ್ರೀತಿ ಅಧಿಕವಾಗುವುದು. ತತ್ಫಲಿತವಾಗಿ ಅವರ ಸಂಸಾರ ದುಃಖಗಳು ಅಂತ್ಯಗೊಂಡು ಪರಮಾನಂದ ಪ್ರಾಪ್ತಿ ಲಭ್ಯವಾಗುವುದು. ಇದಕ್ಕೆ ಮೀರಿದ ಪರೋಪಕಾರ ಕಾರ್ಯವು ಬೇರೊಂದಿಲ್ಲ. ಆದ್ದರಿಂದ ಇಂತಹ ಬ್ರಹ್ಮವಿದ್ಯಾದಾನಕ್ಕೆ, ಗೀತಾಜ್ಞಾನ ವಿತರಣೆಗೆ, ಜನರು ಅವಕಾಶವನ್ನು ಕಲ್ಪಿಸಿ ತದ್ವಾರ ಜನಸಾಮಾನ್ಯರ ನೈತಿಕ, ಆಧ್ಯಾತ್ಮಿಕ ಬೆಳೆಗಳನ್ನು ಅಭಿವೃದ್ಧಿಪಡಿಸಬೇಕು. ಹಾಗೆ ಮಾಡುವವರು ಜ್ಞಾನಯಜ್ಞವನ್ನು ಆಚರಿಸಿದಂತಾಗಿ ಮಹಾಪುಣ್ಯವನ್ನು ಪಡೆಯುವರೇ ಅಲ್ಲದೆ ಶ್ರೀಕೃಷ್ಣ ಪರಮಾತ್ಮನ ಅನುಗ್ರಹಕ್ಕೆ ಪಾತ್ರರಾಗುವರು.*

೩. ಮಕ್ಕಳಿಗೆ ಹಾಗು ದೊಡ್ಡವರಿಗೆ ಗೀತಾ ಪಠಣದ ಸ್ಪರ್ಧೆ ಏರ್ಪಡಿಸಿ ಗೆದ್ದವರಿಗೆ ಆ ದಿನ ಸಾಯಂಕಾಲ ಬಹಿರಂಗ ಸಭೆಯಲ್ಲಿ ಬಹುಮಾನಗಳನ್ನು ವಿತರಿಸಬೇಕು. ಆ ಬಹುಮಾನಗಳೂ ಕೂಡ ಗೀತಾ ಸಂಬಂಧವಾದ ಪುಸ್ತಕಗಳಾಗಿದ್ದರೆ ಒಳ್ಳೆಯದು. ಈ ಸ್ಪರ್ಧೆಗಳಿಂದ ಯಾವುದೋ ಅವ್ಯಕ್ತ ರೀತಿಯಲ್ಲಿ ತೀವ್ರವಾದ ಅಧ್ಯಯನಾಸಕ್ತಿಯುಂಟಾಗಿ. ಉತ್ಸಾಹ ವೃದ್ಧಿಯಾಗುತ್ತದೆ.

೪. ಸಾಮಾನ್ಯ ಜನರಿಗೆ ಗೀತೆಯಲ್ಲಿ ಆಸಕ್ತಿ ಉಂಟಾಗಲು, ಗೀತೆಯ ಉಪನ್ಯಾಸ, ಹರಿಕಥೆ ಹಾಗು ಇತರೆ ವಿಧಗಳಾದ ಗೀತಾ ಕಾಲಕ್ಷೇಪಗಳನ್ನು ನಡೆಸುವುದು ಶ್ರೇಯಸ್ಕರ. ಗೀತೆಗೆ ಸಂಗೀತವನ್ನು ಜೋಡಿಸುವುದರಿಂದ, ವಿನೋದಗಳ ಅಳವಡಿಕೆಯಿಂದ ಜನಸಾಮಾನ್ಯರನ್ನು ಗೀತೆಯ ಕಡೆಗೆ ಆಕರ್ಷಿಸಬಹುದು. ಜನರಿಗೆ ಗೀತಾ ಪರಿಚಯ ಮಾಡಿಸಲು ಇದು ಒಳ್ಳೆಯ ಮಾರ್ಗ.

೫. ಗೀತಾಸಾರವನ್ನು, ಗೀತಾವಿಶೇಷಗಳನ್ನು ಸಂಕ್ಷೇಪವಾಗಿ ಪ್ರಿಂಟು ಮಾಡಿಸಿ ಕರಪತ್ರಗಳ ಮೂಲಕ ಜನರಿಗೆ ತಿಳಿಯುವಂತೆ ಮಾಡಬಹುದು. ಗೀತಾಸಾಹಿತ್ಯವನ್ನು ಹೆಚ್ಚು ಹೆಚ್ಚಿಗೆ ಪ್ರಸಾರ ಮಾಡುವುದು ಈ ಕಾಲದಲ್ಲಿ ಅತ್ಯವಸರ. ಶಕ್ತಿಯಿರುವವರು ಆ ಪವಿತ್ರ ದಿನದಂದು ಗೀತಾಗ್ರಂಥಗಳನ್ನು ಮುಮುಕ್ಷುಗಳಿಗೆ, ಸಾಧುಪುಂಗವರಿಗೆ, ಭಕ್ತರಿಗೆ ಉಚಿತವಾಗಿ ಹಂಚಬಹುದು.

೬. ಅನೇಕರು ಒಂದು ಕಡೆ ಸೇರಲು ಅವಕಾಶವಿದ್ದಲ್ಲಿ, ಅಲ್ಲಿ ಗೀತಾ ಸಂಬಂಧವಾದ ವಿವಿಧ ವ್ಯಾಖ್ಯೆಗಳಿಂದ ಕೂಡಿದ ಗ್ರಂಥಗಳನ್ನು ಪದ್ಯ ಗದ್ಯಗಳ ಸಂಪುಟವನ್ನು, ಗೀತೋಪನ್ಯಾಸರೂಪವಾದ ಪುಸ್ತಕಗಳನ್ನು ಗೀತಾ ಸಂಬಂಧ ಚಿತ್ರಗಳನ್ನು, ಇನ್ನೂ ಮೊದಲಾದ ಗೀತಾಸಾಹಿತ್ಯವನ್ನು ಜನರ ಸೌಕರ್ಯಾರ್ಥವಾಗಿ ಪ್ರದರ್ಶಿಸಬಹುದು. (Gita Exhibition)

---

* ನ ಚ ತಸ್ಮಾನ್ಮನುಷ್ಯೇಷು ಕಶ್ಚಿನ್ಮೇ ಪ್ರಿಯಕೃತ್ತಮಃ
ಭವಿತಾ ನ ಚ ಮೇ ತಸ್ಮಾದನ್ಯಃ ಪ್ರಿಯತರೋ ಭುವಿ (೧೮-೬೯)

೭. ಗೀತಾ ಜಯಂತಿ ಮಹಾ ಪುಣ್ಯದಿನವಾದದ್ದರಿಂದ ಆದಿನ ಗೀತಾ ಗ್ರಂಥವನ್ನು, ಹಾಗು ಶ್ರೀಕೃಷ್ಣ ಪರಮಾತ್ಮ ಶ್ರೀ ವೇದವ್ಯಾಸ ಮಹರ್ಷಿ, ಅರ್ಜುನ ಇವರ ಚಿತ್ರಗಳನ್ನು ಪುಷ್ಪಗಳಿಂದ ಅಲಂಕರಿಸಿ ರಥದ ಮೇಲಾಗಲಿ, ಚಿಕ್ಕ ವಾಹನದಲ್ಲಾಗಲಿ ಇರಿಸಿ ಮೇಳವಾದ್ಯಗಳಿಂದ, ಭಜನೆಗಳಿಂದ ಊರಿನ ಪ್ರಧಾನ ಬೀದಿಗಳಲ್ಲಿ ಉತ್ಸವದಲ್ಲಿ ತೆಗೆದುಕೊಂಡು ಹೋಗಬಹುದು.

೮. ಮುಖ್ಯವಾಗಿ ಗೀತಾಜಯಂತಿ ಸಂದರ್ಭದಲ್ಲಿ ಜನರು ಕೆಲವು ಪಾರ ಮಾರ್ಥಿಕ ಪ್ರತಿಜ್ಞೆಗಳನ್ನು ಮಾಡಬೇಕು. ಪ್ರತಿನಿತ್ಯವು ಒಂದು ಅಧ್ಯಾಯವನ್ನಾಗಲಿ ಇಲ್ಲ ಕೆಲವು ಶ್ಲೋಕಗಳನ್ನಾಗಲಿ ತಪ್ಪದೆ ಪಾರಾಯಣ ಮಾಡುವೆನೆಂದು ಆ ದಿನ ಪ್ರತಿಜ್ಞೆ ಮಾಡಬೇಕು. ಆ ವಿಧವಾಗಿ ಪ್ರತಿನಿತ್ಯವೂ ಗೀತೆಯ ಅನುಷ್ಠಾನವನ್ನು ತಪ್ಪದೆ ಆಚರಿಸುತ್ತಾ ಮತ್ತೆ ಒಂದು ವರ್ಷದ ನಂತರ ಅಂದರೆ ಮರು ಗೀತಾಜಯಂತಿಯಂದು ಆಧ್ಯಾತ್ಮ ಪಥದಲ್ಲಿ ತಾನು ಎಷ್ಟರವರೆಗೆ ಅಭಿವೃದ್ಧಿ ಹೊಂದಿದ್ದೇನೆಂದು, ಗೀತೆ ಬಾಯಿಪಾಠವಾಗಿದೆಯೇ? ಶೀಲ ಶುದ್ಧವಾಗಿದೆಯೇ? ಅವಲೋಕಿಸಿಕೊಳ್ಳಬೇಕು, ಪರೀಕ್ಷಿಸಿಕೊಳ್ಳಬೇಕು.

ಗೀತಾ ಸಂಬಂಧದ ಅಳಿಲು ಸೇವೆ ಸಾಕ್ಷಾತ್ ಭಗವತ್ಸೇವೆಯೇ ಎಂದು ಭಾವಿಸಬೇಕು. ಮುಮುಕ್ಷುಗಳು ಗೀತಾಜ್ಞಾನ ವ್ಯಾಪ್ತಿಗೆ, ಗೀತಾಪ್ರಚಾರಕ್ಕೆ ಸಹಕರಿಸುತ್ತಾ ತಾವೂ ಮುಕ್ತಿ ಹೊಂದಿ ಇತರರನ್ನು ಕೂಡ ಮುಕ್ತಿ ಪಥಕ್ಕೆ ಒಯ್ಯಲು ಪ್ರಯತ್ನಿಸಿ ಶ್ರೀಕೃಷ್ಣಪರಮಾತ್ಮನ ಅಪಾರಕೃಪೆಗೆ ಪಾತ್ರರಾಗಬೇಕು!!

# ಗೀತಾ ಮಂಗಳಾರತಿ

೧. ಪಾವನ ಗೀತಾಮಾತಾ
ಜಯ ಮಂಗಳ ಆರತಿ ನಿನಗೆ

೨. ಭಕ್ತರನಾವೆಯ ಬಂಧ ವಿಮೋಚನಿ
ಭವಭಯಹಾರಿಣಿ ಭವ್ಯದಾಯಿನಿ ।।ಪಾವನ।।

೩. ಸರ್ವಲೋಕಸಂರಕ್ಷಣ ಗೀತೆ
ಸರ್ವವೇದಸಂಸೇವಿತ ಜನನಿ
ಶಾಂತಿವಿಧಾಯಿನಿ ಸತ್ಯಪ್ರದಾಯಿನಿ
ಸತ್ವಗುಣಾಲಯ ಸಚ್ಚರಿತ ।।ಪಾವನ।।

II

೧. ಮಂಗಳವಿದೋ ಸ್ವೀಕರಿಸು ಓ ಭಗವದ್ಗೀತೆ
ಮಾತಾ, ಶ್ರೀಭಗವದ್ಗೀತಾ ಮಾತಾ ।।ಮಂ।।

೨. ಸಂಗವರ್ಜಿತ ಜ್ಞಾನಿಗಳ ಬೆಳಗುವ ಹೃದಯ ಜ್ಯೋತಿಯು ನೀನೇ
ಪರಮ ಪಾವನನ ಧ್ಯಾನದಿಂದ ವಿಕ್ಷೇಪ ತೊಲಗಿಸು ನೀನೇ ।।ಮಂ।।

೩. ಪಾರ್ಥನ ನೆಪದಿ ಮುರುಳೀಕೃಷ್ಣನು ಮಾನವರ ಪಾಲಿಸಲೆಂದೇ
ಮಾಯಾನಾಶಕರ ಗೀತಾ ಜ್ಞಾನಜ್ಯೋತಿಯ ತೋರಿದ ಜನಕೆ ।।ಮಂ।।

೪. ಮೂಢಾವಸ್ಥೆಗಳ ಸಾಕ್ಷಿಯು ನೀನು ಮೂರು ಗುಣಗಳಿಲ್ಲದೆ
ಆತನೇ ನೀನೆಂದು ಅನುಭವವಾಗುವ ಪರಮಾನಂದವ ನೀಡು ।।ಮಂ।।

ಸಂಸ್ಕೃತ

೧. ಜಯತು ಜಯತು ಗೀತಾ ಕೃಷ್ಣವಕ್ತ್ರಪ್ರಭೂತ
ಜಯತು ಜಯತು ಗೀತಾ ಸರ್ವಲೋಕೈಕ ಮಾತಾ
ಜಯತು ಜಯತು ಗೀತಾ ದೈವ ಸಂಪತ್ಪ್ರಪೂತಾ
ಜಯತು ಜಯತು ಗೀತಾ ವಿಶ್ವಶಾಂತಿಪ್ರಸೂತಾ

**ತಾ।।** ಶ್ರೀಕೃಷ್ಣನ ಮುಖಾರವಿಂದದಿಂದ ಆವಿರ್ಭವಿಸಿರುವ, ಸರ್ವ ಜಗಜ್ಜನನಿಯಾದ, ಭಕ್ತಿಯನ್ನು ಮುಕ್ತಿಯನ್ನು ಕೊಡುವ, ಪ್ರಪಂಚದಲ್ಲಿ ಶಾಂತಿ ಉಂಟುಮಾಡುವಂತಹ ಗೀತೆಗೆ ಜಯವಾಗಲಿ.

೨. ಮಂಗಳಂ ಶ್ರೀಕುರುಕ್ಷೇತ್ರರಣಕ್ಷೋಣೀ ವಿಹಾರಿಣೇ
ಪಾರ್ಥಸಾರಥಿ ರೂಪಾಯ ಗೀತಾಚಾರ್ಯಾಯ ಮಂಗಳಂ

**ತಾ।।** ಕುರುಕ್ಷೇತ್ರದ ರಣರಂಗದಲ್ಲಿ ವಿಹರಿಸುವವನೂ, ಅರ್ಜುನನ ರಥ ಸಾರಥಿಯೂ, ಗೀತಾಚಾರ್ಯನೂ ಆದ ಶ್ರೀಕೃಷ್ಣಮೂರ್ತಿಗೆ ಮಂಗಳ ವುಂಟಾಗಲಿ!

ಹಿಂದಿ

೧. ಜಯ ಭಗವದ್ಗೀತೇ ಜಯ ಭಗವದ್ಗೀತೇ
ಹರಿ ಹಿಯ ಕಮಲ ವಿಹಾರಿಣಿ ಸುಂದರ ಸುಪುನೀತೇ ।।ಜಯ।।

೨. ಕರ್ಮ ಸುಮರ್ಮ ಪ್ರಕಾಶಿನಿ ಕಾಮಾಸಕ್ತಿಹರಾ
ತತ್ವಜ್ಞಾನ ವಿಕಾಶಿನಿ ವಿದ್ಯಾ ಬ್ರಹ್ಮಪರಾ ।।ಜಯ।।

೩. ನಿಶ್ಚಲ ಭಕ್ತಿವಿಧಾಯಿನಿ ನಿರ್ಮಲ ಮಲಹಾರೀ
ಶರಣರಹಸ್ಯಪ್ರದಾಯಿನಿ ಸಬವಿಧಿ ಸುಖಕಾರೀ ।।ಜಯ।।

೪. ರಾಗದ್ವೇಷವಿದಾರಿಣಿ, ಕಾರಿಣಿ ಮೋದಸದಾ
ಭವಭಯಹಾರಿಣಿ ತಾರಿಣಿ ಪರಮಾನಂದಪ್ರದಾ ।।ಜಯ।।

೫. ಆಸುರ ಭಾವ ವಿನಾಶಿನಿ ನಾಶಿನಿ ತಮರಜನೀ
ದೈವೀ ಸದ್ಗುಣದಾಯಿನಿ ಹರಿರಸಿಕಾಸಜನೀ ।।ಜಯ।।

೬. ಸಮತಾ ತ್ಯಾಗ ಸಿಖಾವನಿ ಹರಿ ಮುಖಕೀ ವಾಣೀ
ಸಕಲ ಶಾಸ್ತ್ರಕೀ ಸ್ವಾಮಿನಿ ಶೃತಿಯೋಂಕೀ ರಾಣೀ ।।ಜಯ।।

೭. ದಯಾಸುಧಾ ಬರಸಾವನಿ ಮಾತು! ಕೃಪಾಕೀ ಜೈ
ಹರಿಪದಪ್ರೇಮ ದಾನಕರ ಆಪನೋಕರಲೀ ಜೈ ।।ಜಯ।।

**ತಾ।।** ವಿಷ್ಣು ಭಗವಾನನ ಹೃದಯ ಕಮಲದಲ್ಲಿ ವಿಹರಿಸುತ್ತಿರುವುದು, ಸುಂದರವಾದ ಪರಮ ಪವಿತ್ರವಾದ ಕರ್ಮರಹಸ್ಯವನ್ನು ಬೋಧಿಸುವುದು, ಕಾಮಾಸಕ್ತಿಯ ರೂಪವನ್ನು ನಿವಾರಣೆ ಮಾಡುವುದು, ತತ್ವಜ್ಞಾನವನ್ನು ಪ್ರಕಾಶಿಸುವುದು, ಉತ್ಕೃಷ್ಟಬ್ರಹ್ಮವಿದ್ಯಾಸ್ವರೂಪಿಣಿಯು, ನಿಶ್ಚಲ ಭಕ್ತಿ ಯನ್ನುಂಟು ಮಾಡುವುದು, ಸಂಸಾರ ಮಾಲಿನ್ಯವನ್ನು ತೊಲಗಿಸುವುದು, ಶರಣಾಗತಿ ರಹಸ್ಯವನ್ನು ಬೋಧಿಸುವುದು, ಸರ್ವವಿಧಗಳ ಸುಖವನ್ನುಂಟು ಮಾಡುವುದು, ರಾಗ ದ್ವೇಷಗಳನ್ನು ನಿವಾರಿಸುವುದು, ನಿರಂತರವೂ ಪರಮಾ ನಂದ ವನ್ನು ಪ್ರಸಾದಿಸುವುದು, ಸಂಸಾರ ಭಯವನ್ನು ಹೊರದೂಡಿಸುವುದು, ಜೀವಿಗಳನ್ನು ಉದ್ಧಾರ ಮಾಡುವುದು, ಅಸುರ ಸ್ವಭಾವವನ್ನು ನಶಿಸುವಂತೆ ಮಾಡುವುದು, ರಜಸ್ತಮಗಳನ್ನು ಛೇದಿಸಿ ಹಾಕುವುದು, ದೈವೀಸಂಪದ ವನ್ನುಂಟು ಮಾಡುವುದು, ಭಗವದ್ಭಕ್ತರಿಗೆ ಅಲಂಕರಣ ಭೂತವಾಗಿರುವುದು, ಸಮತ್ವ ಹಾಗು ತ್ಯಾಗವನ್ನು ಕಲಿಸುವುದು, ವಿಷ್ಣುಭಗವಾನನ ಮುಖದಿಂದ ಉದ್ಭವಿಸಿರುವುದು, ಸಮಸ್ತ ಶಾಸ್ತ್ರಗಳಿಗಿಂತ ಶ್ರೇಷ್ಠವಾದುದು. ಶೃತಿಗಳಿಗೆ ರಾಣಿಯಾಗಿ ಶೋಭಿಸುವಂತಹದು ಹಾಗೂ ದಯಾ ರಸಾಮೃತವನ್ನು ಧಾರೆಯೆರೆಯುತ್ತಿರುವ ಭಗವದ್ಗೀತೆಗೆ ಜಯವಾಗಲಿ! ಓ ಗೀತಾದೇವಿ! ನಮ್ಮ ಮೇಲೆ ಕೃಪೆ ತೋರಿಸು. ಹರಿಪಾದಪದ್ಮಗಳಲ್ಲಿ ನಮಗೆ ಪ್ರೀತಿಯುಂಟಾಗು ವಂತೆ ಮಾಡು ತಾಯಿ! ನಮ್ಮನ್ನು ನಿನ್ನ ದಡಕ್ಕೆ ಸೇರಿಸಿಕೋ!!

# ಗೀತಾ ಪಾರಾಯಣ ಪದ್ಧತಿ

ಗೀತೆಯನ್ನು ಪ್ರಾರಂಭ ಮಾಡುವುದಕ್ಕಿಂತ ಮುಂಚೆ ಈ ಕೆಳಗಿನ ಶ್ಲೋಕವನ್ನು ಉಚ್ಚರಿಸುತ್ತ ವಂದನೆಯನ್ನು ಸಮರ್ಪಿಸಬೇಕು.

**ಓಂ ಶ್ರೀ ಕೃಷ್ಣ ಪರಬ್ರಹ್ಮಣೇ ನಮಃ**

೧. **ಓಂ ಶುಕ್ಲಾಂಬರಧರಂ ವಿಷ್ಣುಂ ಶಶಿವರ್ಣಂ ಚತುರ್ಭುಜಮ್**
**ಪ್ರಸನ್ನವದನಂ ಧ್ಯಾಯೇ ತ್ಸರ್ವವಿಘ್ನೋಪಶಾಂತಯೇ**

೨. **ಓಂ ಅಖಂಡಮಂಡಲಾಕಾರಂ ವ್ಯಾಪ್ತಂ ಯೇನ ಚರಾಚರಮ್**
**ತತ್ಪದಂ ದರ್ಶಿತಂ ಯೇನ ತಸ್ಮೈ ಶ್ರೀಗುರವೇನಮಃ**

೩. **ಓಂ ಕೃಷ್ಣಂ ಕಮಲಪತ್ರಾಕ್ಷಂ ಪುಣ್ಯಶ್ರವಣ ಕೀರ್ತನಮ್**
**ವಾಸುದೇವಂ ಜಗದ್ಯೋನಿಂ ನೌಮಿ ನಾರಾಯಣಂ ಹರಿಮ್**

೪. **ಓಂ ವ್ಯಾಸಾಯ ವಿಷ್ಣುರೂಪಾಯ ವ್ಯಾಸರೂಪಾಯ ವಿಷ್ಣವೇ**
**ನಮೋವೈಬ್ರಹ್ಮನಿಧಯೇ ವಾಸಿಷ್ಠಾಯ ನಮೋನಮಃ**

೫. **ಓಂ ನಾರಾಯಣಂ ನಮಸ್ಕೃತ್ಯ ನರಂ ಚೈವ ನರೋತ್ತಮಮ್**
**ದೇವೀಂ ಸರಸ್ವತೀಂ ವ್ಯಾಸಂ ತತೋಜಯ ಮುದೀರಯೇತ್**

ಈ ಪ್ರಕಾರವಾಗಿ ವಂದನೆಯನ್ನಾಚರಿಸಿದ ನಂತರ ಭಗವಂತನಾದ ಶ್ರೀಕೃಷ್ಣಮೂರ್ತಿಯನ್ನು, ಶ್ರೀವೇದವ್ಯಾಸ ಮಹರ್ಷಿಯನ್ನು, ಗೀತಾಗ್ರಂಥವನ್ನು ಭಕ್ತಿಪೂರ್ವಕವಾಗಿ ಪೂಜಿಸಬೇಕು. ಆ ಮೇಲೆ ಈ ಕೆಳಕಂಡಂತೆ ಪಾರಾಯಣವನ್ನು ಉಪಕ್ರಮಿಸಬೇಕು. (ಪಾರಾಯಣ ಮಾಡುವಾಗ ಶ್ಲೋಕ ಸಂಖ್ಯೆಗಳಿಗಾಗಲಿ, ಅಧ್ಯಾಯಗಳ ಸಂಖ್ಯೆಗಳಿಗಾಗಲಿ ಪ್ರಮುಖ್ಯತೆ ಕೊಡದೆ, ಮನಸ್ಸನ್ನು ಶ್ರೀಕೃಷ್ಣಪರಮಾತ್ಮನಲ್ಲಿ, ಗೀತಾಭಾವಾರ್ಥದಲ್ಲಿ ಸಂಲಗ್ನಿಸಬೇಕು. ಕುರುಕ್ಷೇತ್ರದ ರಣರಂಗದಲ್ಲಿ ಎರಡು ಸೇನೆಗಳ ಮಧ್ಯೆ ರಥದ ಮೇಲೆ ಕುಳಿತು ಶ್ರೀಕೃಷ್ಣ ಪರಮಾತ್ಮ ದೀನವದನನಾಗಿರುವ ಅರ್ಜುನನಿಗೆ ಹಿತಬೋಧೆ ಮಾಡುತ್ತಿರುವ ದೃಶ್ಯವನ್ನು ಹೃದಯದಲ್ಲಿ ಚಿತ್ರಿಸಿಕೊಳ್ಳಬೇಕು. ಮತ್ತೆ ತಾನೇ ಅರ್ಜುನನೆಂದು ಭಾವಿಸಿಕೊಂಡು ಸಾಕ್ಷಾತ್ ಶ್ರೀಕೃಷ್ಣಮೂರ್ತಿ ಎದುರಿಗೆ ನಿಂತು ತನಗೆ ಬೋಧಿಸುತ್ತಿರುವನೆಂದು ಊಹಿಸಿಕೊಳ್ಳಬೇಕು. ಈ ವಿಧವಾಗಿ ಪಾರಾಯಣ ಸಮಯದಲ್ಲಿ ಚಿತ್ತವನ್ನು ಎಷ್ಟು ಏಕಾಗ್ರದಿಂದಿರಿಸುವರೋ ಫಲ ಅಷ್ಟೇ ಅಧಿಕವಾಗಿರುತ್ತದೆ.) ಪಾರಾಯಣದ ವಿನಿಯೋಗವನ್ನು ಈ ಕೆಳಗೆ ತಿಳಿಸಿದ ರೀತಿಯಲ್ಲಿ ಜರುಗಿಸಬೇಕು.

ವಿನಿಯೋಗ : ಬಲಗೈ ಉಂಗುರದ ಬೆರಳಿಗೆ ದರ್ಭೆಯ ಪವಿತ್ರ ಧರಿಸಿ ಕೈಯಲ್ಲಿ ನೀರು ತೆಗೆದುಕೊಂಡು ಈ ಕೆಳಗಿನ ವಾಕ್ಯವನ್ನು ಉಚ್ಚರಿಸಿ ತಟ್ಟೆಯಲ್ಲಿ ಬಿಡಬೇಕು-

**ಓಂ ಅಸ್ಯ ಶ್ರೀಭಗವದ್ಗೀತಾಶಾಸ್ತ್ರ ಮಹಾಮಂತ್ರಸ್ಯ ಶ್ರೀವೇದವ್ಯಾಸೋ ಭಗವಾನ್ ಋಷಿಃ, ಅನುಷ್ಟುಪ್ ಛಂದಃ, ಶ್ರೀಕೃಷ್ಣಪರಮಾತ್ಮಾ ದೇವತಾ, ಅಶೋಚ್ಯಾನನ್ವಶೋಚಸ್ತ್ವಮಿತಿ ಬೀಜಂ, ಸರ್ವಧರ್ಮಾನ್ ಪರಿತ್ಯಜ್ಯ ಮಾಮೇಕಂ ಶರಣಂ ವ್ರಜೇತಿಶಕ್ತಿಃ, ಅಹಂತ್ವಾ ಸರ್ವಪಾಪೇಭ್ಯೋ ಮೋಕ್ಷಯಿಷ್ಯಾಮಿ ಮಾಶುಚ ಇತಿ ಕೀಲಕಮ್, ಮಚ್ಚಿತ್ತಸ್ಸರ್ವದುರ್ಗಾಣಿ ಮತ್ಪ್ರಸಾದಾತ್ತರಿಷ್ಯಸೀತಿ ಕವಚಮ್, ಕಿರೀಟಿನಂ ಗದಿನಂ ಚಕ್ರಹಸ್ತ ಮಿತ್ಯಸ್ತ್ರಂ, ಅನಾದಿ ಮಧ್ಯಾಂತ ಮನಂತವೀರ್ಯ ಮಿತಿ ಧ್ಯಾನಂ, ಜ್ಞಾನಯಜ್ಞೇನ ಭಗವತಾರಾಧಾನಾರ್ಥೇ ಶ್ರೀ ಕೃಷ್ಣ ಪರಮಾತ್ಮ ಪ್ರೀತ್ಯರ್ಥೇ ಗೀತಾಪಾರಾಯಣೇ ಜಪೇ ವಿನಿಯೋಗಃ**

(ನಂತರ ಕರನ್ಯಾಸ, ಅಂಗನ್ಯಾಸಗಳನ್ನು ಮಾಡಬೇಕು. ಆ ಪದ್ಧತಿಯನ್ನು ಈ ಕೆಳಗೆ ತಿಳಿಸಲಾಗಿದೆ. ತನ್ನ ಅವಯವಗಳೆಲ್ಲವೂ ಪರಮಾತ್ಮನ ಚೈತನ್ಯದಿಂದ, ಸತ್ತಿನಿಂದ ಪರಿಪೂರ್ಣವಾಗಿವೆಯೆಂದು ಭಾವಿಸುವುದೇ 'ನ್ಯಾಸ'ದ ಉದ್ದೇಶ. ಇದರಿಂದ, ಜಪಿಸುವವನು, ಪಾರಾಯಣ ಮಾಡುವವನು ಮಂತ್ರಮಯನಾಗಿ ಆಯಾ ಮಂತ್ರದೇವತೆಗಳಿಂದ ರಕ್ಷಿಸಲ್ಪಡುತ್ತಾನೆ. ಆತನ ಬಾಹ್ಯಾಂತರಗಳು ಶುದ್ಧವಾಗುವವು. ದಿವ್ಯಫಲ ಕೈಗೂಡುವುದು. ಸಾಧನೆ ನಿರ್ವಿಘ್ನವಾಗಿ ನಡೆದು ಪರಮ ಲಾಭದಾಯಕವಾಗುವುದು.)

**ಕರನ್ಯಾಸ**

**ನೈನಂ ಛಿಂದಂತಿ ಶಸ್ತ್ರಾಣಿ ನೈನಂ ದಹತಿ ಪಾವಕಃ**
**ಇತ್ಯಂಗುಷ್ಠಾಭ್ಯಾಂ ನಮಃ**

(ಈ ಮಂತ್ರವನ್ನು ಪಠಿಸಿ ಎರಡು ಕೈಗಳ ಹೆಬ್ಬೆರಳುಗಳನ್ನು ಎರಡು ತೋರು ಬೆರಳುಗಳಿಂದ ಸ್ಪರ್ಶಿಸಬೇಕು.)

**ನಚೈನಂ ಕ್ಲೇದಯಂತ್ಯಾಪೋ ನಶೋಷಯತಿ ಮಾರುತಃ**
**ಇತಿ ತರ್ಜನೀಭ್ಯಾಂ ನಮಃ**

(ಎನ್ನುತ್ತಾ ಎರಡು ತೋರು ಬೆರಳುಗಳನ್ನು ಎರಡು ಹೆಬ್ಬೆರಳುಗಳಿಂದ ಸ್ಪರ್ಶಿಸಬೇಕು)

**ಅಚ್ಛೇದ್ಯೋಽಯಮದಾಹ್ಯೋಽಯಮಕ್ಲೇದ್ಯೋಽಶೋಷ್ಯ ಏವಚ**
**ಇತಿ ಮಧ್ಯಮಾಭ್ಯಾಂ ನಮಃ**

(ಎನ್ನುತ್ತಾ ಎರಡು ಹೆಬ್ಬೆರಳುಗಳಿಂದ ಎರಡು ಮಧ್ಯ ಬೆರಳುಗಳನ್ನು ಸ್ಪರ್ಶಿಸಬೇಕು)

**ನಿತ್ಯಃ ಸರ್ವಗತಃ ಸ್ಥಾಣುರಚಲೋಽಯಂ ಸನಾತನಃ**
**ಇತ್ಯನಾಮಿಕಾಭ್ಯಾಂ ನಮಃ**

(ಎನ್ನುತ್ತಾ ಎರಡು ಹೆಬ್ಬೆರಳುಗಳಿಂದ ಎರಡು ಉಂಗುರದ ಬೆರಳುಗಳನ್ನು ಸ್ಪರ್ಶಿಸಬೇಕು)

**ಪಶ್ಯ ಮೇ ಪಾರ್ಥ ರೂಪಾಣಿ ಶತಶೋಽಥ ಸಹಸ್ರಶಃ**
**ಇತಿ ಕನಿಷ್ಠಿಕಾಭ್ಯಾಂ ನಮಃ**

(ಎನ್ನುತ್ತಾ ಎರಡು ಹೆಬ್ಬೆರಳುಗಳಿಂದ ಎರಡು ಕನಿಷ್ಠ ಬೆರಳುಗಳನ್ನು ಸ್ಪರ್ಶಿಸಬೇಕು.)

**ನಾನಾವಿಧಾನಿ ದಿವ್ಯಾನಿ ನಾನಾ ವರ್ಣಾಕೃತೀನಿಚ**
**ಇತಿ ಕರತಲಕರಪೃಷ್ಠಾಭ್ಯಾಂ ನಮಃ**

(ಎನ್ನುತ್ತಾ ಬಲಗೈ ಕೆಳಗೆ ಎಡಗೈಯನ್ನು, ಎಡಗೈ ಕೆಳಗೆ ಬಲಗೈಯನ್ನು ಕ್ರಮವಾಗಿ ಇಡಬೇಕು. ಅಂದರೆ ಅಂಗೈಗಳು ಅವುಗಳ ಹಿಂಭಾಗಗಳು ಕ್ರಮವಾಗಿ ತಾಕಬೇಕು). (ಈ ಪ್ರಕಾರವಾಗಿ ಕರನ್ಯಾಸವನ್ನು ಮಾಡಿ ನಂತರ ಅಂಗನ್ಯಾಸವನ್ನು ಮಾಡಬೇಕು.)

**ಅಂಗನ್ಯಾಸ**

**ನೈನಂ ಛಿಂದಂತಿ ಶಸ್ತ್ರಾಣಿ ನೈನಂ ದಹತಿ ಪಾವಕಃ**
**ಇತಿ ಹೃದಯಾಯ ನಮಃ**

(ಎಂದು ಉಚ್ಚರಿಸಿ ಬಲಗೈಯಿಂದ ಹೃದಯಸ್ಥಾನವನ್ನು ಸ್ಪರ್ಶಿಸಬೇಕು)

**ನಚೈನಂ ಕ್ಲೇದಯಂತ್ಯಾಪೋ ನಶೋಷಯತಿ ಮಾರುತಃ**
**ಇತಿ ಶಿರಸೇ ಸ್ವಾಹಾ**

(ಎಂದು ಉಚ್ಚರಿಸಿ ಶಿರಸ್ಸನ್ನು ಸ್ಪರ್ಶಿಸಬೇಕು)

**ಅಚ್ಛೇದ್ಯೋಽಯಮದಾಹ್ಯೋಽಯಮಕ್ಲೇದ್ಯೋಽಶೋಷ್ಯ ಏವಚ-**
**ಇತಿ ಶಿಖಾಯೈವಷಟ್**

(ಎಂದು ಪಠಿಸಿ ಶಿಖೆಯನ್ನು ಮುಟ್ಟಬೇಕು)

**ನಿತ್ಯಸ್ಸರ್ವಗತಃ ಸ್ಥಾಣು ರಚಲೋಽಯಂ ಸನಾತನಃ**
**ಇತಿ ಕವಚಾಯಹುಮ್**

(ಎಂದು ಉಚ್ಚರಿಸಿ ಬಲಗೈಯಿಂದ ಎಡಭುಜವನ್ನು, ಎಡಗೈಯಿಂದ ಬಲಭುಜವನ್ನು ಸ್ಪರ್ಶಿಸಬೇಕು.)

**ಪಶ್ಯಮೇ ಪಾರ್ಥ ರೂಪಾಣಿ ಶಥಶೋಽಥ ಸಹಸ್ರಶಃ**
**ಇತಿ ನೇತ್ರಾತ್ರಯಾಯವೌಷಟ್**

(ಎಂದು ಪಠಿಸಿ ಬಲಗೈಯಿಂದ ನೇತ್ರಗಳನ್ನು ಮುಟ್ಟಬೇಕು)

**ನಾನಾವಿಧಾನಿ ದಿವ್ಯಾನಿ ನಾನಾ ವರ್ಣಾಕೃತೀನಿಚ**
**ಇತ್ಯಸ್ತ್ರಾಯಫಟ್**

(ಎಂದು ಪಠಿಸಿ ಬಲಗೈಯನ್ನು ಶಿರಸ್ಸು ಸುತ್ತ ತಿರುಗಿಸಿ ತೋರು ಹಾಗೂ ಮಧ್ಯ ಬೆರಳುಗಳಿಂದ ಎಡಗೈಯ ಮೇಲೆ ಚಪ್ಪಾಳೆ ಹೊಡೆಯತಕ್ಕದ್ದು)

(ಈ ಪ್ರಕಾರವಾಗಿ ನ್ಯಾಸವನ್ನು ಮಾಡಿ ಅನಂತರ ಮನಸ್ಸನ್ನು ಏಕಾಗ್ರಗೊಳಿಸಿಕೊಂಡು ಭಕ್ತಿಪೂರ್ವಕವಾಗಿ ಧ್ಯಾನಿಸಬೇಕು.)

## ಧ್ಯಾನ

**(ಮಹಾಭಾರತದ ಧ್ಯಾನ)**

**ಪರಾಶರ್ಯವಚಸ್ಸರೋಜ ಮಮಲಂ ಗೀತಾರ್ಥ ಗಂಧೋತ್ಕಟಂ**
**ನಾನಾಖ್ಯಾನಕ ಕೇಸರಂ ಹರಿಕಥಾ ಸಂಬೋಧನಾ ಬೋಧಿತಮ್**
**ಲೋಕೇ ಸಜ್ಜನ ಷಟ್ಪದೈರಹರಹಃ ಪೇಪೀಯಮಾನಂ ಮುದಾ**
**ಭೂಯಾ ದ್ಭಾರತಪಂಕಜಂ ಕಲಿಮಲ ಪ್ರಧ್ವಂಸಿ ನಃ ಶ್ರೇಯಸೇ**

ಶ್ರೀ ವೇದವ್ಯಾಸರ ವಾಚವೆಂಬ ಸರೋವರದಲ್ಲಿ ಹುಟ್ಟಿರುವುದು, ಅತಿ ನಿರ್ಮಲವಾದುದು, ಗೀತಾರ್ಥವೆಂಬ ಮಹಾ ಸುಗಂಧದಿಂದ ಕೂಡಿರುವುದು. ನಾನಾ ವಿಧವಾದ ಇತಿಹಾಸಗಳನ್ನು ಕೇಸರಗಳನ್ನಾಗಿ ಹೊಂದಿರುವುದು, ಭಗವತ್ ಕಥೋಪದೇಶಗಳಿಂದ ತುಂಬಿರುವುದು, ಲೋಕದಲ್ಲಿ ಸಜ್ಜನರೆಂಬ ಭ್ರಮರಗಳಿಂದ ನಿರಂತರ ಸಂತೋಷದಿಂದ ಆಸ್ವಾದಿಸಲ್ಪಡುತ್ತಿರುವುದು ಹಾಗು ಕಲಿದೋಷಗಳನ್ನು ಪೂರ್ತಿಯಾಗಿ ನಾಶಮಾಡುವಂತಹದೂ ಆದ ಮಹಾಭಾರತವೆನ್ನುವ ಪದ್ಮ ನಮಗೆ ಮಂಗಳವನ್ನುಂಟುಮಾಡಲಿ!

## ಶ್ರೀಕೃಷ್ಣನ ಧ್ಯಾನ

**ಓಂ ಪ್ರಪನ್ನ ಪಾರಿಜಾತಾಯ ತೋತ್ರವೇತ್ರೈಕ ಪಾಣಯೇ**
**ಜ್ಞಾನಮುದ್ರಾಯ ಕೃಷ್ಣಾಯ ಗೀತಾಮೃತದುಹೇ ನಮಃ**

ಶರಣಾಗತರಾದ ಭಕ್ತರಿಗೆ ಕಲ್ಪವೃಕ್ಷದಂತೆ ಅಪೇಕ್ಷಿತ ವಸ್ತುಗಳನ್ನು ಒದಗಿಸುವ, ಒಂದು ಕೈಯಲ್ಲಿ ಚಾಟಿ, ಮತ್ತೊಂದು ಕೈಯಲ್ಲಿ ಜ್ಞಾನಮುದ್ರೆಯನ್ನು ಧರಿಸಿರುವ, ಗೀತೆಯೆಂಬ ಅಮೃತವನ್ನು ಹಿಂಡುತ್ತಿರುವಂತಹ ಶ್ರೀಕೃಷ್ಣಮೂರ್ತಿಗೆ ನಮಸ್ಕಾರಗಳು.

**ವಸುದೇವಸುತಂ ದೇವಂ ಕಂಸಚಾಣೂರಮರ್ದನಮ್**
**ದೇವಕೀಪರಮಾನಂದಂ ಕೃಷ್ಣಂ ವಂದೇ ಜಗದ್ಗುರುಮ್**

ವಸುದೇವ ಪುತ್ರನು, ದಿವ್ಯಸ್ವರೂಪಧಾರಿಯು, ಕಂಸಚಾಣೂರರನ್ನು ಸಂಹರಿಸಿದವನು, ದೇವಕಿಗೆ ಪರಮಾನಂದವನ್ನುಂಟು ಮಾಡುವವನು ಹಾಗು ಜಗದ್ಗುರುವಾದ ಶ್ರೀಕೃಷ್ಣನಿಗೆ ನಮಸ್ಕರಿಸುತ್ತಿದ್ದೇನೆ.

**ಭೀಷ್ಮದ್ರೋಣ ತಟಾ ಜಯದ್ರಥಜಲಾ ಗಾಂಧಾರ ನಿಲೋತ್ಪಲಾ**
**ಶಲ್ಯಗ್ರಾಹವತೀ ಕೃಪೇಣ ವಹನೀ ಕರ್ಣೇನ ವೇಲಾಕುಲಾ**
**ಅಶ್ವತ್ಥಾಮ ವಿಕರ್ಣ ಘೋರಮಕರಾ ದುರ್ಯೋಧನಾವರ್ತಿನೀ**
**ಸೋತ್ತೀರ್ಣಾ ಖಲು ಪಾಂಡವೈ ರಣನದೀ ಕೈವರ್ತಕಃ ಕೇಶವಃ**

ಭೀಷ್ಮದ್ರೋಣರೆಂಬ ದಡಗಳನ್ನುಳ್ಳದ್ದು, ಜಯದ್ರಥನೆಂಬ ಜಲದಿಂದ ತುಂಬಿರುವುದು; ಕೌರವರೆನ್ನುವ ನೀರಿನಲ್ಲಿ ತೇಲುವ ಪುಷ್ಪಗಳನ್ನು, ಶಲ್ಯನೆನ್ನುವ ಭಯಂಕರವಾದ ಮತ್ಸ್ಯವನ್ನು, ಕೃಪಾಚಾರ್ಯನೆನ್ನುವ ಪ್ರವಾಹವನ್ನು, ಕರ್ಣನೆನ್ನುವ ತರಂಗಗಳನ್ನು, ಅಶ್ವತ್ಥಾಮ ವಿಕರ್ಣರೆನ್ನುವ ಭಯಂಕರವಾದ ಮೊಸಳೆಗಳನ್ನು, ದುರ್ಯೋಧನನೆನ್ನುವ ಸುಳಿಯನ್ನು ಹೊಂದಿರುವ ಈ ಯುದ್ಧವೆನ್ನುವ ಮಹಾನದಿಯನ್ನು ಪಾಂಡವರು ಶ್ರೀಕೃಷ್ಣನೆನ್ನುವ ನಾವಿಕನ ಸಹಾಯದಿಂದ ದಾಟಿದರು.

**ಮೂಕಂ ಕರೋತಿ ವಾಚಾಲಂ ಪಙ್ಗುಂ ಲಂಘಯತೇ ಗಿರಿಮ್**
**ಯತ್ಕೃಪಾ ತಮಹಂ ವಂದೇ ಪರಮಾನಂದ ಮಾಧವಮ್**

ಯಾರ ಕೃಪಾಕಟಾಕ್ಷದಿಂದ ಮೂಕನು ಒಳ್ಳೆಯ ವಾಚಾಳಿಯಾಗಬಲ್ಲನೋ, ಕುಂಟನು ಪರ್ವತವನ್ನು ದಾಟಬಲ್ಲನೋ ಅಂತಹ ಪರಮಾನಂದ ಸ್ವರೂಪಿಯಾದ ಶ್ರೀಕೃಷ್ಣಮೂರ್ತಿಗೆ ನಮಸ್ಕಾರ.

**ಯಂ ಬ್ರಹ್ಮಾ ವರುಣೇಂದ್ರ ರುದ್ರಮರುತಃ ಸ್ತುನ್ವಂತಿ ದಿವ್ಯೈಃಸ್ತವೈಃ**
**ವೇದೈಸ್ಸಾಂಗ ಪದ ಕ್ರಮೋಪನಿಷದೈ ರ್ಗಾಯಂತಿ ಯಂ ಸಾಮಗಾಃ**
**ಧ್ಯಾನಾವಸ್ಥಿತ ತದ್ಗತೇನ ಮನಸಾ ಪಶ್ಯಂತಿ ಯಂ ಯೋಗಿನೋ**
**ಯಸ್ಯಾಂತಂ ನ ವಿದುಃ ಸುರಾಸುರಗಣಾ ದೇವಾಯ ತಸ್ಮೈ ನಮಃ**

ಬ್ರಹ್ಮದೇವನು, ವರುಣನು, ಇಂದ್ರನು, ರುದ್ರನು, ವಾಯುವು ಮುಂತಾದ ದೇವತೆಗಳು ದಿವ್ಯಸ್ತೋತ್ರಗಳಿಂದ ಯಾರನ್ನು ಸ್ತುತಿಸುತ್ತಿದ್ದಾರೋ; ಸಾಮಗಾನ ಪಂಡಿತರು, ಅಂಗ, ಪದ, ಕ್ರಮ, ಉಪನಿಷತ್ತುಗಳಿಂದ ಕೂಡಿದ ವೇದಗಳಿಂದ ಯಾರನ್ನು ಕುರಿತು ಹಾಡುತ್ತಿದ್ದಾರೋ; ಯೋಗಿಗಳು ಧ್ಯಾನನಿಷ್ಠರಾಗಿ ಏಕಾಗ್ರಚಿತ್ತದಿಂದ ಯಾರನ್ನು ದರ್ಶಿಸುತ್ತಿದ್ದಾರೋ; ಯಾರ ಆದ್ಯಂತಗಳನ್ನು ದೇವತೆಗಳಾಗಲಿ, ಅಸುರರಾಗಲಿ, ತಿಳಿದುಕೊಳ್ಳಲಾರರೋ ಅಂತಹ ಪರಮಾತ್ಮನಿಗೆ ನಮಸ್ಕಾರಗಳು.

## ಶ್ರೀವ್ಯಾಸರ ಧ್ಯಾನ

**ಓಂ ನಮೋಽಸ್ತುತೇ ವ್ಯಾಸ ವಿಶಾಲಬುದ್ಧೇ ಫುಲ್ಲಾರವಿಂದಾಯತ ಪತ್ರನೇತ್ರ**
**ಯೇನ ತ್ವಯಾ ಭಾರತ ತೈಲಪೂರ್ಣಃ ಪ್ರಜ್ವಾಲಿತೋ ಜ್ಞಾನಮಯಃ ಪ್ರದೀಪಃ**

ವಿಶಾಲಬುದ್ಧಿಯುಳ್ಳವನು, ಅರಳಿದ ಕಮಲದ ಪುಷ್ಪದ ಹಾಗೆ ಇರುವ ನೇತ್ರಗಳನ್ನು ಹೊಂದಿದವನಾಗಿದ್ದು ಮಹಾಭಾರತವೆನ್ನುವ ತೈಲದಿಂದ ಪರಿಪೂರ್ಣವಾಗಿರುವ ಗೀತಾಜ್ಞಾನವೆನ್ನುವ, ಜ್ಯೋತಿಯನ್ನು ಬೆಳಗಿಸಿದ (ತದ್ವಾರ ಜನರ ಹೃದಯಗಳಿಂದ ಅಜ್ಞಾನಾಂಧಕಾರಗಳನ್ನು ಹೊರದೋಡಿಸಿದ) ವ್ಯಾಸ ಭಗವಾನನಿಗೆ ನಮಸ್ಕಾರಗಳು.

ಶ್ರೀ ಗೀತಾಧ್ಯಾನ

**ಪಾರ್ಥಾಯ ಪ್ರತಿಬೋಧಿತಾಂ ಭಗವತಾ ನಾರಾಯಣೇನ ಸ್ವಯಂ**
**ವ್ಯಾಸೇನ ಗ್ರಥಿತಾಂ ಪುರಾಣಮುನಿನಾ ಮಧ್ಯೇ ಮಹಾಭಾರತಮ್**
**ಅದ್ವೈತಾಮೃತವರ್ಷಿಣೀಂ ಭಗವತೀ ಮಷ್ಟಾದಶಾಧ್ಯಾಯಿನೀಮ್**
**ಅಂಬತ್ವಾಮನುಸಂದಧಾಮಿ ಭಗವದ್ಗೀತೇ ಭವದ್ವೇಷಿಣೀಮ್**

ಸ್ವಯಂ ಭಗವಂತನಾದ ನಾರಾಯಣನಿಂದ ಅರ್ಜುನನಿಗೆ ಬೋಧಿಸಲ್ಪಟ್ಟ, ಪ್ರಾಚೀನ ಮಹರ್ಷಿಯಾದ ವೇದವ್ಯಾಸ ಮುನೀಂದ್ರನಿಂದ ಮಹಾಭಾರತದ ಮಧ್ಯದಲ್ಲಿ ರಚಿಸಲ್ಪಟ್ಟ, ಅದ್ವೈತ ಜ್ಞಾನವೆನ್ನುವ ಅಮೃತವನ್ನು ಮಳೆಗೆರೆಯುವ, ಹದಿನೆಂಟು ಅಧ್ಯಾಯಗಳಿಂದ ಕೂಡಿದ್ದು ಸಂಸಾರ ಬಂಧಗಳಿಂದ ವಿಮುಕ್ತಿಯನ್ನುಂಟುಮಾಡುವಂತಹ ಓ ತಾಯೀ! ಭಗವದ್ಗೀತೆ! ನಿನ್ನನ್ನು ನಾನು ಧ್ಯಾನಿಸುತ್ತಿದ್ದೇನೆ.

**ಗೀತಾಕಲ್ಪತರುಂ ಭಜೇ ಭಗವತಾ ಕೃಷ್ಣೇನ ಸಂರೋಪಿತಮ್**
**ವೇದವ್ಯಾಸ ವಿವರ್ಧಿತಂ ಶೃತಿಶಿರೋಬೀಜಂ ಪ್ರಬೋಧಾಂಕುರಮ್**
**ನಾನಾಶಾಸ್ತ್ರರಹಸ್ಯಶಾಖ ಮರತಿಕ್ಷಾಂತಿಪ್ರವಾಲಾಂಕಿತಮ್**
**ಕೃಷ್ಣಾಂಘ್ರಿದ್ವಯ ಭಕ್ತಿಪುಷ್ಪ ಸುರಭಿಂ ಮೋಕ್ಷಪ್ರದಂ ಜ್ಞಾನಿನಾಮ್**

ಭಗವಂತನಾದ ಶ್ರೀಕೃಷ್ಣನಿಂದ ನೆಡಲ್ಪಟ್ಟಿದ್ದು, ಶ್ರೀವೇದವ್ಯಾಸ ಮುನೀಂದ್ರರಿಂದ ಪೋಷಿಸಲ್ಪಟ್ಟ, ಉಪನಿಷತ್ತುಗಳನ್ನೇ ಬೀಜಗಳಾಗಿ ಹೊಂದಿದ್ದು, ಸಕಲಶಾಸ್ತ್ರ ರಹಸ್ಯಗಳೆಂಬ ಕೊಂಬೆಗಳನ್ನು ಹೊಂದಿರುವ, ಅನಾಸಕ್ತಿ, ಕ್ಷಮೆ ಎನ್ನುವ ಚಿಗುರಿನಿಂದ ಕೂಡಿದ, ಶ್ರೀ ಕೃಷ್ಣಭಗವಂತನ ಪಾದಪದ್ಮಗಳಲ್ಲಿ ಭಕ್ತಿ ಎನ್ನುವ ಸುಗಂಧದಿಂದ ಶೋಭಿಸುತ್ತಿರುವ, ಜ್ಞಾನಿಗಳಿಗೆ ಮೋಕ್ಷದಾಯಕವಾಗಿರುವ ಗೀತಾಕಲ್ಪವೃಕ್ಷವನ್ನು ನಾನು ಸೇವಿಸುತ್ತಿದ್ದೇನೆ.

**ಸಂಸಾರ ಸಾಗರಂ ಘೋರಂ ತರ್ತುಮಿಚ್ಛತಿ ಯೋ ನರಃ**
**ಗೀತಾನಾವಂ ಸಮಾಸಾದ್ಯ ಪಾರಂ ಯಾತಿ ಸುಖೇನ ಸಃ**

ಭಯಂಕರವಾದ ಸಂಸಾರ ಸಮುದ್ರವನ್ನು ದಾಟಲಿಚ್ಛಿಸುವವನು, ಭಗವದ್ಗೀತೆಯೆಂಬ ನಾವೆಯ ಶರಣು ಹೊಂದುವುದರಿಂದ ಸುಲಭವಾಗಿ ಅದನ್ನು ದಾಟಬಲ್ಲನು.

**ಸರ್ವೋಪನಿಷದೋ ಗಾವೋ ದೋಗ್ಧಾ ಗೋಪಾಲ ನಂದನಃ**
**ಪಾರ್ಥೋ ವತ್ಸಃ ಸುಧೀ ರ್ಭೋಕ್ತಾ ದುಗ್ಧಂ ಗೀತಾಮೃತಂ ಮಹತ್**

ಉಪನಿಷತ್ತುಗಳು ಗೋವುಗಳು, ಗೋಪಾಲನಂದನಾದ ಶ್ರೀಕೃಷ್ಣ ಪರಮಾತ್ಮ ಹಾಲು ಹಿಂಡುವವನು, ಅರ್ಜುನನು ಕರು, ಗೀತಾಮೃತವೇ ಹಾಲು. ಸದ್ಬುದ್ಧಿಯುಳ್ಳವರು ಅದನ್ನು ಪಾನ ಮಾಡುವವರು. (ಈ ಪ್ರಕಾರವಾಗಿ ಶ್ರೀಕೃಷ್ಣ ಪರಮಾತ್ಮನನ್ನು, ಶ್ರೀ ವೇದವ್ಯಾಸರನ್ನು, ಶ್ರೀ ಗೀತಾಮಾತೆಯನ್ನು ಶ್ರೀ ಮಹಾಭಾರತವನ್ನು ಧ್ಯಾನಿಸಿ ಕೊನೆಯಲ್ಲಿ ಗೀತಾಪಾರಾಯಣವನ್ನು ಮಾಡಬೇಕು. ಪ್ರತಿದಿನವೂ ಒಂದು ಅಧ್ಯಾಯವನ್ನು ಪೂರ್ತಿಯಾಗಿ ಪಾರಾಯಣ ಮಾಡುವುದು ಒಳ್ಳೆಯದು. ಪಾರಾಯಣ ಪೂರ್ತಿಯಾದ ನಂತರ ಗೀತಾಮಹಾತ್ಮ್ಯೆಯನ್ನು ಓದಬೇಕು. ಇದು ಶಿಷ್ಟಾಚಾರ. ೨೩ ಶ್ಲೋಕಗಳಿಂದ ಕೂಡಿದ (ವರಾಹ ಪುರಾಣದಲ್ಲಿ ಉಲ್ಲೇಖವಾದ) ಗೀತಾಮಹಾತ್ಮ್ಯೆ ಹೆಚ್ಚು ರೂಢಿಯಲ್ಲಿದೆ. ಅದನ್ನು ಈ ಕೆಳಗೆ ಕೊಡಲಾಗಿದೆ. ಪಾರಾಯಣಾನಂತರ ಅದರಲ್ಲಿಯ ಎರಡು ಶ್ಲೋಕಗಳನ್ನಾದರೂ ಓದಬೇಕು.

# ಗೀತಾ ಮಹಾತ್ಮ್ಯೆ
## (ವರಾಹ ಪುರಾಣದಿಂದ)

೧. ಧರೋವಾಚ

**ಭಗವನ್ ಪರಮೇಶಾನ ಭಕ್ತಿ ರವ್ಯಭಿಚಾರಿಣೀ**
**ಪ್ರಾರಬ್ಧಂ ಭುಜ್ಯಮಾನಸ್ಯ ಕಥಂ ಭವತಿ ಹೇ ಪ್ರಭೋ**

ಭೂದೇವಿ ವಿಷ್ಣುಭಗವಾನನ್ನು ಈ ರೀತಿ ಪ್ರಶ್ನಿಸಿದಳು-ಓ ಭಗವಂತನೇ! ಪರಮೇಶ್ವರ! ಪ್ರಭು! ಪ್ರಾರಬ್ಧವನ್ನು ಅನುಭವಿಸುತ್ತಿರುವವನಿಗೆ ಅಚುಂಚಲವಾದ ಭಕ್ತಿ ಹೇಗೆ ಉಂಟಾಗುತ್ತದೆ?

೨. ವಿಷ್ಣುರುವಾಚ

**ಪ್ರಾರಬ್ಧಂ ಭುಜ್ಯಮಾನೋಽಪಿ ಗೀತಾಭ್ಯಾಸರತಸ್ಸದಾ**
**ಸ ಮುಕ್ತ ಸ್ಸ ಸುಖೀ ಲೋಕೇ ಕರ್ಮಣಾ ನೋಪಲಿಪ್ಯತೇ**

ವಿಷ್ಣುವು- ಓ ಭೂ ದೇವಿ! ಪ್ರಾರಬ್ಧವನ್ನನುಭವಿಸುತ್ತಿದ್ದರೂ ಯಾರು ನಿರಂತರವಾಗಿ ಗೀತಾಭ್ಯಾಸದಲ್ಲಿ ನಿರತರಾಗಿರುವರೋ ಅವರು ಮುಕ್ತರಾಗಿ ಕರ್ಮಗಳಿಂದ ಸೋಂಕಲ್ಪಡದೆ ಈ ಪ್ರಪಂಚದಲ್ಲಿ ಸುಖವಾಗಿರುವರು.

**ಮಹಾಪಾಪಾದಿಪಾಪಾನಿ ಗೀತಾಧ್ಯಾನಂ ಕರೋತಿ ಚೇತ್**
**ಕ್ವಚಿತ್ಸ್ಪರ್ಶಂ ನ ಕುರ್ವಂತಿ ನಲಿನೀದಲ ಮಂಭಸಾ**

ತಾವರೆ ಎಲೆಗೆ ನೀರು ಅಂಟದಂತೆ ಗೀತಾಧ್ಯಾನವನ್ನು ಮಾಡುವವನನ್ನು ಮಹಾಪಾಪವಾದರೂ ಸ್ವಲ್ಪವೂ ಸ್ಪರ್ಶಿಸುವುದಿಲ್ಲ.

**ಗೀತಾಯಾಃ ಪುಸ್ತಕಂ ಯತ್ರ ಯತ್ರ ಪಾಠಃ ಪ್ರವರ್ತತೇ**
**ತತ್ರ ಸರ್ವಾಣಿ ತೀರ್ಥಾನಿ ಪ್ರಯಾಗಾದೀನಿ ತತ್ರವೈ**

ಎಲ್ಲಿ ಗೀತಾಗ್ರಂಥವಿರುವುದೋ ಮತ್ತೆ ಎಲ್ಲಿ ಗೀತಾಪಾರಾಯಣ ನಡೆಯುತ್ತಿರುವುದೋ, ಅಲ್ಲಿ ಪ್ರಯಾಗಾದಿ ಸಮಸ್ತ ತೀರ್ಥಗಳು ಇರುವುವು.

**ಸರ್ವೇ ದೇವಾಶ್ಚ ಋಷಯೋ ಯೋಗಿನಃ ಪನ್ನಗಾಶ್ಚ ಯೇ**
**ಗೋಪಾಲಾ ಗೋಪಿಕಾ ವಾಽಪಿ ನಾರದೋದ್ಧವ ಪಾರ್ಷದೈಃ**
**ಸಹಾಯೋ ಜಾಯತೇ ಶೀಘ್ರಂ ಯತ್ರ ಗೀತಾಪ್ರವರ್ತತೇ**

ಎಲ್ಲಿ ಗೀತಾಪಾರಾಯಣ ನಡೆಯುತ್ತಿದೆಯೋ ಅಲ್ಲಿಗೆ ಸಮಸ್ತ ದೇವತೆಗಳು, ಋಷಿಗಳು, ಯೋಗಿಗಳು, ನಾಗಗಳು, ಗೋಪಾಲರು, ಗೋಪಿಕರು, ಭಗವತ್ಪ್ರವರ್ತಕರಾದ ನಾರದ, ಉದ್ಧವರು ಬಂದು ತಕ್ಷಣ ಸಹಾಯ ಪ್ರವೃತ್ತರಾಗುವರು.

**ಯತ್ರ ಗೀತಾವಿಚಾರಶ್ಚ ಪಠನಂ ಪಾಠನಂ ಶ್ರುತಮ್**
**ತತ್ರಾಹಂ ನಿಶ್ಚಿತಂ ಪೃಥ್ವಿ ನಿವಸಾಮಿ ಸದೈವ ಹಿ**

ಓ ಭೂದೇವಿ! ಎಲ್ಲಿ ಗೀತೆಯ ಚರ್ಚೆ, ಪಠನ, ಬೋಧೆ, ಶ್ರವಣ ನಡೆಯುತ್ತಿದೆಯೋ ಅಲ್ಲಿ ನಾನು ತಪ್ಪದೆ ಇರುವೆನು.

**ಗೀತಾಶ್ರಯೋಽಹಂ ತಿಷ್ಠಾಮಿ ಗೀತಾ ಮೇ ಚೋತ್ತಮಂ ಗೃಹಮ್**
**ಗೀತಾಜ್ಞಾನ ಮುಪಾಶ್ರಿತ್ಯ ತ್ರೀ ನ್ಲೋಕಾನ್ಪಾಲಯಮ್ಯಹಮ್**

ನಾನೂ ಗೀತೆಯನ್ನೇ ಆಶ್ರಯಿಸಿದ್ದೇನೆ. ಗೀತೆಯೇ ನನ್ನ ಉತ್ತಮ ನಿವಾಸ, ಮತ್ತೆ ಗೀತಾಜ್ಞಾನವನ್ನಾಶ್ರಯಿಸಿಯೇ ಮೂರು ಲೋಕಗಳನ್ನು ನಾನು ಪಾಲಿಸುತ್ತಿದ್ದೇನೆ.

**ಗೀತಾಮೇ ಪರಮಾ ವಿದ್ಯಾ ಬ್ರಹ್ಮರೂಪಾ ನ ಸಂಶಯಃ**
**ಅರ್ಧಮಾತ್ರಾಕ್ಷರಾ ನಿತ್ಯಾ ಸ್ವನಿರ್ವಾಚ್ಯಪದಾತ್ಮಿಕಾ**

ಗೀತೆ ನನ್ನ ಪರಮವಿದ್ಯೆ. ಅದು ಬ್ರಹ್ಮಸ್ವರೂಪ, ಇದರಲ್ಲಿ ಎಳ್ಳಷ್ಟೂ ಸಂಶಯವಿಲ್ಲ. ಅದು (ಪ್ರಣವದ ನಾಲ್ಕನೆಯ ಪಾದ) ಅರ್ಧಮಾತ್ರಾ ಸ್ವರೂಪ. ಅದು ನಾಶರಹಿತವಾದುದು. ನಿತ್ಯವಾದುದು ಮತ್ತು ಅನಿರ್ವಚನೀಯವಾದುದು.

**ಚಿದಾನಂದೇನ ಕೃಷ್ಣೇನ ಪ್ರೋಕ್ತಾ ಸ್ವಮುಖತೋಽರ್ಜುನಮ್**
**ವೇದತ್ರಯೀ ಪರಾನಂದಾ ತತ್ತ್ವಾರ್ಥಜ್ಞಾನಮಂಜಸಾ***

ಸಚ್ಚಿದಾನಂದ ಸ್ವರೂಪನಾದ ಶ್ರೀಕೃಷ್ಣಪರಮಾತ್ಮನಿಂದ ಈ ಗೀತೆ ಸ್ವಯಂ ಆಗಿ ಅರ್ಜುನನಿಗೆ ಹೇಳಲ್ಪಟ್ಟಿದೆ. ಇದು ಮೂರು ವೇದಗಳ ಸಾರ. ಪರಮಾನಂದ ಸ್ವರೂಪ. ತನ್ನನ್ನು ಆಶ್ರಯಿಸಿದವನಿಗೆ ಇದು ತತ್ವಜ್ಞಾನವನ್ನು ನೀಡುತ್ತದೆ.

**ಯೋಽಷ್ಟಾದಶ ಜಪೇನ್ನಿತ್ಯಂ ನರೋ ನಿಶ್ಚಲ ಮಾನಸಃ**
**ಜ್ಞಾನಸಿದ್ಧಿಂ ಸ ಲಭತೇ ತತೋ ಯಾತಿ ಪರಂ ಪದಮ್**

ಯಾವ ನರನು ನಿಶ್ಚಲಚಿತ್ತನಾಗಿ ಗೀತೆಯ ೧೮ ಅಧ್ಯಾಯಗಳನ್ನು ನಿತ್ಯವೂ ಪಾರಾಯಣ ಮಾಡುವನೋ, ಆತನು ಜ್ಞಾನಸಿದ್ಧಿಯನ್ನು ಹೊಂದಿ, ಪರಮಾತ್ಮ ಪದವಿ(ಮೋಕ್ಷ)ಯನ್ನು ಪಡೆಯಬಲ್ಲನು.

**ಪಾಠೇಽಸಮರ್ಥ ಸ್ಸಂಪೂರ್ಣೇ ತದರ್ಧಂ ಪಾಠಮಾಚರೇತ್**
**ತದಾ ಗೋದಾನಜಂ ಪುಣ್ಯಂ ಲಭತೇ ನಾತ್ರ ಸಂಶಯಃ**

ಗೀತೆಯನ್ನು ಪೂರ್ತಿ ಓದಲು ಸಾಧ್ಯವಾಗದಿದ್ದವರು ಅದರಲ್ಲಿಯ ಅರ್ಧಭಾಗವನ್ನಾದರೂ ಪಠಿಸಬೇಕು. ಆದರಿಂದ ಅವರಿಗೆ ಗೋದಾನದಿಂದ ಉಂಟಾಗುವ ಪುಣ್ಯವು ಲಭಿಸುವುದು. ಈ ವಿಷಯದಲ್ಲಿ ಸಂದೇಹವಿಲ್ಲ.

**ತ್ರಿಭಾಗಂ ಪಠಮಾನಸ್ತು ಗಂಗಾಸ್ನಾನಫಲಂ ಲಭೇತ್**
**ಷಡಂಶಂ ಜಪಮಾನಸ್ತು ಸೋಮಯಾಗಫಲಂ ಲಭೇತ್**

ಗೀತೆಯ ⅓ ಭಾಗವನ್ನು (ಆರು ಅಧ್ಯಾಯಗಳನ್ನು) ಪಾರಾಯಣ ಮಾಡುವವರಿಗೆ ಗಂಗಾ ಸ್ನಾನದಿಂದ ಒದಗುವ ಫಲವು ಕೈಗೂಡುವುದು. ⅙ ಭಾಗವನ್ನು (ಅಂದರೆ ಮೂರು ಅಧ್ಯಾಯಗಳನ್ನು) ಪಠಿಸುವವರಿಗೆ ಸೋಮಯಾಗದ ಫಲವು ಲಭಿಸುವುದು.

**ಏಕಾಧ್ಯಾಯಂ ತು ಯೋ ನಿತ್ಯಂ ಪಠತೇ ಭಕ್ತಿಸಂಯುತಃ**
**ರುದ್ರಲೋಕ ಮವಾಪ್ನೋತಿ ಗಣೋ ಭೂತ್ವಾ ವಸೇ ಚ್ಚಿರಮ್**

ಯಾವನು ಗೀತೆಯಲ್ಲಿಯ ಒಂದು ಅಧ್ಯಾಯವನ್ನು ಭಕ್ತಿಯಿಂದ ನಿತ್ಯವೂ ಪಠಿಸುತ್ತಾನೋ ಆತನು ರುದ್ರಲೋಕವನ್ನು ಹೊಂದಿ ರುದ್ರಗಣದಲ್ಲಿ ಒಬ್ಬನಾಗಿ ಚಿರಕಾಲವಿರುವನು.

**ಅಧ್ಯಾಯಶ್ಲೋಕಪಾದಂ ವಾ ನಿತ್ಯಂ ಯಃ ಪಠತೇ ನರಃ**
**ಸ ಯಾತಿ ನರತಾಂ ಯಾವ ನ್ಮನುಕಾಲಂ ವಸುಂಧರೇ**

ಓ ಭೂದೇವೀ! ಯಾವನು ಒಂದು ಅಧ್ಯಾಯದ ¼ ಭಾಗವನ್ನು ನಿತ್ಯವೂ ಪಾರಾಯಣ ಮಾಡುವನೋ ಆತನು ಒಂದು ಮನ್ವಂತರ ಕಾಲ, ಉತ್ಕೃಷ್ಟವಾದ ಮಾನವ ಜನ್ಮವನ್ನು ಹೊಂದುವನು.

**ಗೀತಾಯಾಃ ಶ್ಲೋಕ ದಶಕಂ ಸಪ್ತಪಂಚ ಚತುಷ್ಟಯಮ್**
**ದ್ವೌ ತ್ರೀ ನೇಕಂ ತದರ್ಧಂ ವಾ ಶ್ಲೋಕಾನಾಂ ಯಃ ಪಠೇನ್ನರಃ**
**ಚಂದ್ರಲೋಕ ಮವಾಪ್ನೋತಿ ವರ್ಷಾಣಾ ಮಯುತಂ ಧ್ರುವಮ್**
**ಗೀತಾಪಾಠ ಸಮಾಯುಕ್ತೋ ಮೃತೋಮಾನುಷತಾಂ ವ್ರಜೇತ್**

ಗೀತೆಯಲ್ಲಿಯ ಹತ್ತು ಶ್ಲೋಕಗಳನ್ನಾಗಲಿ, ಸಾಧ್ಯವಾಗದಿದ್ದಲ್ಲಿ ಏಳು, ಐದು, ನಾಲ್ಕು, ಮೂರು, ಎರಡು, ಒಂದು ಅಥವಾ ಅರ್ಧ ಶ್ಲೋಕವನ್ನಾಗಲಿ ಯಾರು ಪಠಿಸುವರೋ ಅವರು ಚಂದ್ರಲೋಕವನ್ನು ಹೊಂದಿ ಅಲ್ಲಿ ಹತ್ತುಸಾವಿರ ವರ್ಷಗಳು ಇರುವರು. ಇದರಲ್ಲಿ ಸಂಶಯವಿಲ್ಲ. ಮತ್ತೆ ಗೀತೆಯನ್ನು ಪಠಿಸುತ್ತ ಯಾರು ಮರಣಿಸುವರೋ ಅವರು ಉತ್ತಮವಾದ ಮಾನವ ಜನ್ಮವನ್ನು ಪಡೆಯುವರು.

**ಗೀತಾಭ್ಯಾಸಂ ಪುನಃ ಕೃತ್ವಾ ಲಭತೇ ಮುಕ್ತಿಮುತ್ತಮಾಮ್**
**ಗೀತೇತ್ಯುಚ್ಚಾರ ಸಂಯುಕ್ತೋ ಮ್ರಿಯಮಾಣೋ ಗತಿಂ ಲಭೇತ್**

ಹಾಗೆ ಆತನು ಮಾನವನಾಗಿ ಪುನಃ ಜನ್ಮಿಸಿ ಗೀತಾಭ್ಯಾಸವನ್ನು ಮತ್ತೆ ಮತ್ತೆ ಮಾಡುತ್ತ ಉತ್ತಮವಾದ ಮೋಕ್ಷವನ್ನು ಹೊಂದುವನು. 'ಗೀತೇ, ಗೀತೇ' ಎಂದು ಉಚ್ಚರಿಸುತ್ತಾ ಪ್ರಾಣ ಬಿಡುವವನು ಸದ್ಗತಿಯನ್ನು ಹೊಂದುವನು.

**ಗೀತಾರ್ಥಶ್ರವಣಾಸಕ್ತೋ ಮಹಾಪಾಪಯುತೋಽಪಿ ವಾ**
**ವೈಕುಂಠಂ ಸಮವಾಪ್ನೋತಿ ವಿಷ್ಣುನಾ ಸಹಮೋದತೇ**

ಮಹಾ ಪಾಪಾತ್ಮನಾಗಿದ್ದರೂ ಗೀತಾರ್ಥವನ್ನು ಕೇಳಲು ಆಸಕ್ತಿಯುಳ್ಳವನಾಗಿದ್ದರೆ ಸಾಕು ವೈಕುಂಠವನ್ನು ಹೊಂದಿ ವಿಷ್ಣುವಿನೊಂದಿಗೆ ಆನಂದವನ್ನು ಅನುಭವಿಸುವನು.

**ಗೀತಾರ್ಥಂ ಧ್ಯಾಯತೇ ನಿತ್ಯಂ ಕೃತ್ವಾ ಕರ್ಮಾಣಿ ಭೂರಿಶಃ**
**ಜೀವನ್ಮುಕ್ತ ಸ್ಸವಿಜ್ಞೇಯೋ ದೇಹಾಂತೇ ಪರಮಂ ಪದಮ್**

ಯಾವನು ಗೀತಾರ್ಥವನ್ನು ನಿತ್ಯವೂ ಚಿಂತನೆ ಮಾಡುತ್ತಿರುತ್ತಾನೋ, ಆತನು ಎಷ್ಟೇ ಕರ್ಮಗಳನ್ನಾಚರಿಸಿದರೂ ಜೀವನ್ಮುಕ್ತನೇ ಎಂದು ಹೇಳಲ್ಪಡುವನು. ಮತ್ತೆ ದೇಹದ ಪತನವಾದ ನಂತರ ಆತನು ಪರಮಾತ್ಮ ಪದವಿಯನ್ನು (ವಿದೇಹಕೈವಲ್ಯ) ಹೊಂದುವನು.

**ಗೀತಾಮಾಶ್ರಿತ್ಯ ಬಹವೋ ಭೂಭುಜೋ ಜನಕಾದಯಃ**
**ನಿರ್ಧೂತ ಕಲ್ಮಷಾ ಲೋಕೇ ಗೀತಾ ಯಾತಾಃ ಪರಂ ಪದಮ್**

ಈ ಪ್ರಪಂಚದಲ್ಲಿ ಗೀತೆಯನ್ನಾಶ್ರಯಿಸಿದ ಜನಕಾದಿ ರಾಜರುಗಳು ಪಾಪರಹಿತರಾಗಿ ಪರಮಾತ್ಮ ಪದವಿಯನ್ನು ಹೊಂದಿದರು.

**ಗೀತಾಯಾಃ ಪಠನಂ ಕೃತ್ವಾ ಮಹಾತ್ಮ್ಯಂ ನೈವ ಯಃ ಪಠೇತ್**
**ವೃಥಾ ಪಾಠೋ ಭವೇತ್ತಸ್ಯ ಶ್ರಮ ಏವ ಹ್ಯುದಾಹೃತಃ**

ಗೀತೆಯನ್ನು ಪಠಿಸಿ ಆ ತರುವಾಯ ಮಹಾತ್ಮ್ಯವನ್ನು ಯಾರು ಪಠಿಸುವುದಿಲ್ಲವೋ ಆತನ ಪಾರಾಯಣ (ನಿರ್ದಿಷ್ಟ ಫಲ ಕೊಡದೆ)

---

* ತತ್ತ್ವಾರ್ಥ ಜ್ಞಾನಸಂಯುತಾ- ಎಂದು ಪಾಠಾಂತರ.

ವ್ಯರ್ಥವೇ ಆಗುವುದು. ಆದ್ದರಿಂದ ಅಂತಹವನ ಗೀತಾಪಠಣ ವ್ಯರ್ಥ ಎಂದು ಹೇಳಲಾಗಿದೆ.*

> ಏತನ್ಮಾಹಾತ್ಮ್ಯಸಂಯುಕ್ತಂ ಗೀತಾಭ್ಯಾಸಂ ಕರೋತಿ ಯಃ
> ಸ ತತ್ಫಲ ಮವಾಪ್ನೋತಿ ದುರ್ಲಭಾಂ ಗತಿ ಮಾಪ್ನುಯಾತ್

ಈ ಮಹಾತ್ಮ್ಯೆಯೊಂದಿಗೆ ಗೀತಾಪಾರಾಯಣವನ್ನು ಮಾಡುವವನು ಮೇಲೆ ತಿಳಿಸಿದ ಫಲವನ್ನು ಹೊಂದಿ ದುರ್ಲಭವಾದ ಸದ್ಗತಿಯನ್ನು (ಮೋಕ್ಷ) ಪಡೆಯಬಲ್ಲನು.

**ಸೂತ ಉವಾಚ:**

> ಮಹಾತ್ಮ್ಯ ಮೇತದ್ಗೀತಾಯಾ ಮಯಾ ಪ್ರೋಕ್ತಂ ಸನಾತನಮ್
> ಗೀತಾಂತೇ ಚ ಪಠೇ ದ್ಯಸ್ತು ಯದುಕ್ತಂ ತತ್ಫಲಂ ಲಭೇತ್

ಸೂತನು ಹೇಳಿದನು- ಓ ಶೌನಕಾದಿ ಮಹರ್ಷಿಗಳೇ! ಈ ಪ್ರಕಾರವಾಗಿ ಸನಾತನವಾದ ಗೀತಾಮಹಾತ್ಮ್ಯೆಯನ್ನು ನಾನು ನಿಮಗೆ ತಿಳಿಸಿದೆ. ಇದನ್ನು ಗೀತಾಪಾರಾಯಣದ ನಂತರ ಯಾರು ಪಠಿಸುವರೋ ಅವರು ಮೇಲೆ ತಿಳಿಸಿದ ಫಲಗಳನ್ನು ಹೊಂದುವರು.

**ಇತಿ ಶ್ರೀ ವರಾಹಪುರಾಣೇ ಶ್ರೀಗೀತಾಮಹಾತ್ಮ್ಯಂ ಸಂಪೂರ್ಣಮ್**

ಹೀಗೆ ಶ್ರೀ ವರಾಹಪುರಾಣದಲ್ಲಿಯ ಶ್ರೀ ಗೀತಾಮಹಾತ್ಮ್ಯೆಯು ಸಮಾಪ್ತವಾಯಿತು.

---

* ಗ್ರಂಥದ ಮಹಿಮೆಯನ್ನು ತಿಳಿದುಕೊಳ್ಳದಿದ್ದಲ್ಲಿ, ಗ್ರಂಥದ ಮೇಲೆ ಶ್ರದ್ಧೆಯುಂಟಾಗುವುದಿಲ್ಲ ಎಂದರ್ಥ.

'ಓಂ'

ಶುಕ್ಲಾಂ ಬರಧರಂ ವಿಷ್ಣುಂ ಶಶಿವರ್ಣಂ ಚತುರ್ಭುಜಂ। ಪ್ರಸನ್ನವದನಂ ಧ್ಯಾಯೇತ್ ಸರ್ವವಿಘ್ನೋಪಶಾಂತಯೇ॥

# ಉಪೋದ್ಘಾತ

ಗೀತೆಯಂತಹ ವಿಶ್ವವಾಙ್ಮಯವಾದ ಮಹತ್ತರ ಗ್ರಂಥವು ಮತ್ತೊಂದು ಇಲ್ಲ. ಬೇರೆ ಎಲ್ಲಾ ಸಾಹಿತ್ಯ ಮಾನವನಿರ್ಮಿತ. ಆದರೆ ಗೀತೆ ಭಗವನ್ನಿರ್ಮಿತ. ಮಾಯಾವರ್ತಿಯಾದ ಮಾನವನಿಂದ ನಿರ್ಮಿತವಾದ ವಸ್ತುವೆಲ್ಲಿ! ಮಾಯಾತೀತನಾದ ಭಗವಂತನಿಂದ ಸೃಷ್ಟಿಸಲ್ಪಟ್ಟ ಶೃತಿಯೆಲ್ಲಿ! ಬೋಧಿಸುವವನು ಅವತಾರ ಮೂರ್ತಿ, ಕೇಳುವವನು ಅಧಿಕಾರ ಮೂರ್ತಿ; ಬೋಧಿಸುವವನು ಪರಮಾತ್ಮ ಕೇಳುವವನು ಮಹಾತ್ಮ* ಬೋಧಿಸಿದವನು ಪುರುಷೋತ್ತಮ. ಕೇಳಿದವನು ನರೋತ್ತಮ.@ ಈ ಪ್ರಕಾರವಾಗಿ ಅದ್ಭುತ ಪಟುತ್ವವುಳ್ಳ ಗುರುಶಿಷ್ಯರ ಸಮ್ಮೇಳನದಿಂದ ಆವಿರ್ಭವಿಸಿರುವ ಅಮರ ವಾಣಿಯೇ ಗೀತೆ. ಅವರಿಬ್ಬರ ಅಲೌಕಿಕ ಸಂವಾದವನ್ನು ಜಗದ್ವಿಖ್ಯಾತ ರಚಯಿತನಾದ ಶ್ರೀ ವೇದವ್ಯಾಸ ಮುನೀಂದ್ರನು ಛಂದೋಬದ್ಧವಾಗಿ ಅಪಾರ ಕರುಣೆಯಿಂದ ಲೋಕಕ್ಕೆ ಪ್ರಸಾದಿಸಿದ್ದಾನೆ. ಈ ವಿಧವಾಗಿ ಮಹನೀಯರಾದ ಈ ಮೂವರು ತಪಸ್ಸಂಪನ್ನರ ಕೃಪಾವಿಶೇಷದಿಂದಲೇ ಗೀತೆ ಪ್ರಪಂಚದಲ್ಲಿ ಆವಿರ್ಭವಿಸಿ ಸರ್ವಜನರಿಗೆ ಶ್ರೇಯಸ್ಕರವಾಗಿದೆ. ಯಾರು ಗೀತೆಯನ್ನು ಆಶ್ರಯಿಸುವರೋ ಅವರು ನಿಸ್ಸಂಶಯವಾಗಿ ಉದ್ಧಾರವಾಗುವರು. ವಾಸ್ತವವಾಗಿ ಜೀವಿಗಳ ಪುಣ್ಯ ಫಲಿತವಾದಾಗ ಮಾತ್ರ ಗೀತೆಯಂತಹ ಅತ್ಯದ್ಭುತ ಪಾರಮಾರ್ಥಿಕ ಗ್ರಂಥದ ಸಂದರ್ಶನ ಜನರಿಗೆ ಉಂಟಾಗುತ್ತದೆ. ಗೀತೆಯ ಅನನ್ಯ ಪ್ರತಿಭೆಯನ್ನು, ಅಖಂಡ ಶಕ್ತಿ ಸಾಮರ್ಥ್ಯವನ್ನು, ಅಪಾರ ಮಹಿಮೆಯನ್ನು ವೀಕ್ಷಿಸಿದ ಮೇಲೆ ಯಾರಿಗಾದರೂ ಅದರ ಮೇಲೆ ಪರಮ ಪೂಜ್ಯಭಾವವು, ಭಕ್ತಿಶ್ರದ್ಧೆಗಳು ಉದಯಿಸದೆ ಇರವು. ಆದ್ದರಿಂದ ಅಂತಹ ಲೋಕೋತ್ತರ ದಿವ್ಯವಾಙ್ಮಯದ, ಹುಟ್ಟು ಪೂರ್ವೋತ್ತರಗಳನ್ನು, ಸ್ವರೂಪ ಸ್ವಭಾವಗಳನ್ನು, ಮಹಿಮೆ ಹಾಗೂ ವಿಶೇಷಗಳನ್ನು ವಿಚಾರಿಸುವುದು ನಮ್ಮ ಕರ್ತವ್ಯ.

### ಎರಡು ಗೀತೆಗಳು

ಶ್ರೀಕೃಷ್ಣ ಪರಮಾತ್ಮನ ಜೀವನ ಕಾಲದಲ್ಲಿ ಎರಡು ಗಾನಗಳು ಹೊರಹೊಮ್ಮಿದವು. ಒಂದು ಮುರಳೀಗಾನ; ಎರಡನೆಯದು ಗೀತಾಗಾನ. ಮುರಳೀಗಾನದ ಮಾಧುರ್ಯವನ್ನು ಗೋಪಿಕೆಯರು ಪೂರ್ತಿಯಾಗಿ ಆಸ್ವಾದಿಸಿದರು. ಬೇರೆಯವರು ಆ ಕಾಲದಲ್ಲಿ ಆ ಜ್ಞಾನರಸವನ್ನು ಸ್ವಲ್ಪ ಮಟ್ಟಿಗೆ ಆನಂದಿಸಿ ಧನ್ಯರಾದರು. ಆ ಮುರಳೀಜ್ಞಾನವೆಂತಹುದೋ ನಮಗೆ ತಿಳಿಯದು. ಅದನ್ನು ಕೇಳುವ ಭಾಗ್ಯ ನಮಗೆ ಇಲ್ಲ, ಆದರೇನು? ಅದನ್ನು ಮೀರಿದ ಎರಡನೆಯ ಗಾನವು ನಮ್ಮ ಪಾಲಿಗೆ ಸಂದಿದೆ. ಅದೇ ಗೀತಾಗಾನ. ಹಾಡು ಹಾಡುವವರಿಗೆ ಹಾಗು ಹಾಡಿಗೆ ಭೇದವೇನಿದೆ? ಅಂತೆಯೇ ಶ್ರೀಕೃಷ್ಣನಿಗೂ ಗೀತೆಗೂ ಭೇದವಿಲ್ಲ. ಅವೆರಡಕ್ಕೂ ಅವಿನಾಭಾವ ಸಂಬಂಧವಿದೆ. ಶ್ರೀಕೃಷ್ಣನ ನಿಃಶ್ವಾಸವೇ ಗೀತೆ. ಅಷ್ಟೇ ಏಕೆ, ಭಗವಂತನ ಹೃದಯವೇ ಗೀತೆಯೆಂದು ನಿಸ್ಸಂಶಯವಾಗಿ ಹೇಳಬಹುದು. ಭಗವನ್ಮುಖಾರವಿಂದದಿಂದ ಸಂಜನಿತವಾದ ಅಂತಹ ಗೀತಾಜ್ಞಾನ ಪ್ರವಾಹದಲ್ಲಿ ಸ್ನಾನ ಮಾಡುವವರ ಪಾಪಕರ್ಮಗಳು ನಿರ್ನಾಮಗೊಂಡು ಮುಕ್ತಿ ಕರತಲಾ ಮಲಕವಾಗುತ್ತದೆ. ಆದ್ದರಿಂದ ಭಗವಂತನ ಆ ಎರಡನೆಯ ಗಾನವಾದ ಗೀತೆಯನ್ನು ಶ್ರವಣ ಮಾಡುವ ಭಾಗ್ಯವನ್ನು ಪಡೆದಂತಹ ಭೂತ, ಭವಿಷ್ಯತ್ ಮತ್ತು ವರ್ತಮಾನ ಕಾಲಗಳ ಜೀವರಾಶಿಗಳ ಭಾಗ್ಯವೆಷ್ಟೆಂದು ಹೇಳಲು ಸಾಧ್ಯವಿಲ್ಲ.

### ಸರ್ವಜನೋಪಯೋಗಕ್ಕಾಗಿ ಅದ್ಭುತ ಲೀಲೆ

ಶ್ರೀಕೃಷ್ಣಮೂರ್ತಿ ತನ್ನ ಜೀವನ ಕಾಲದಲ್ಲಿ ಲೆಕ್ಕವಿಲ್ಲದಷ್ಟು ಅದ್ಭುತ ಪವಾಡಗಳನ್ನು, ಆಶ್ಚರ್ಯಕರವಾದ ಲೀಲೆಗಳನ್ನು ಪ್ರದರ್ಶಿಸಿದನು. ಅವೆಲ್ಲವುಗಳನ್ನು ನಾವು ನೋಡಲಿಲ್ಲ, ಅನುಭವಿಸಲಿಲ್ಲ. ಆ ಕಾಲದವರಿಗೆ ಅವೆಲ್ಲವೂ ಉಪಯೋಗವಾಗಿವೆ. ಆದರೆ ಯಶೋದಾ ತನಯನಿಂದ ಉದ್ಭವಿಸಿದ ಗೀತಾರೂಪ ಶಾಸ್ತ್ರವೊಂದು ಮಾತ್ರ ಅಂದಿನವರಿಗೇ ಅಲ್ಲದೆ ಇಂದಿನವರಿಗೆ ಕೂಡ ಲಾಭ ತಂದುಕೊಟ್ಟಿದೆ. ಭಗವಂತನ ಈ ಗೀತೋಪದೇಶ ಒಂದು ಮಹಾಲೀಲೆ. ಯಾವುದೇ ಕಾಲಕ್ಕಾಗಲೀ, ಮತಕ್ಕಾಗಲೀ, ಜಾತಿಗಾಗಲೀ ಮೀಸಲಾಗಿರದೆ ಅದು ಸಾರ್ವಭೌಮ ಸಾರ್ವಜನೀನ, ಸಾರ್ವಕಾಲೀನ, ಸತ್ಯ, ಶಿವ, ಹಾಗೂ ಸುಂದರವಾದ ಭಗವದ್ವಾಣಿಯಾಗಿದೆ. ಆದ್ದರಿಂದಲೇ ಶ್ರೀಕೃಷ್ಣನ ಪ್ರಾರ್ಥನೆಯಲ್ಲಿ ಹೀಗೆ ಹೇಳಲ್ಪಟ್ಟಿದೆ-

**ಸಾರಥ್ಯಮರ್ಜುನಸ್ಯಾದೌ ಕುರ್ವನ್ ಗೀತಾಮೃತಂ ದದೌ।**
**ಲೋಕತ್ರಯೋಪಕಾರಾಯ ತಸ್ಮೈ ಕೃಷ್ಣಾತ್ಮನೇ ನಮಃ॥**

ಯಾವ ಮಹನೀಯನು ಪೂರ್ವದಲ್ಲಿ ಅರ್ಜುನನಿಗೆ ಸಾರಥಿಯಾಗಿದ್ದು ಮುಲ್ಲೋಕಗಳ ಉಪಕಾರಾರ್ಥವಾಗಿ ಗೀತಾಮೃತವನ್ನು ಧಾರೆಯೆರೆದನೋ ಅಂತಹ ಶ್ರೀಕೃಷ್ಣಪರಮಾತ್ಮನಿಗೆ ನಮಸ್ಕಾರ.

---

* ಪಾರ್ಥಸ್ಯ ಚ ಮಹಾತ್ಮನಃ (ಗೀತ ೧೮-೧೪)

@ ನರಂ ಚೈವ ನರೋತ್ತಮಮ್ (ಭಾರತ)

## ಸರ್ವಶಾಸ್ತ್ರ ಸಾರ

ಗೀತೆಯ ಮಹಿಮೆಯನ್ನು ಕುರಿತು ಇನ್ನೂ ಸ್ವಲ್ಪ ಆಳವಾಗಿ ವಿಚಾರಿಸೋಣ- ಹಿಂದೂಧರ್ಮ ಸಾಹಿತ್ಯವು ಅತಿವ್ಯಾಪಕವಾದುದು. ಎಷ್ಟೋ ಶಾಸ್ತ್ರಗಳು, ಎಷ್ಟೋ ಗ್ರಂಥಗಳು, ಎಷ್ಟೋ ಸಿದ್ಧಾಂತಗಳು! ಇವೆಲ್ಲವನ್ನೂ ನೋಡಿ ಮನುಜನು ವಿಚಲಿತನಾಗಿ ಯಾವುದನ್ನು ಆಚರಿಸಬೇಕೋ, ಯಾವುದನ್ನು ತ್ಯಜಿಸಬೇಕೋ ತೋರದೆ ಈ ಕೆಳಗಿನ ಪ್ರಶ್ನೆಗಳನ್ನು ಹಾಕುತ್ತಿದ್ದಾನೆ.

ಈ ಅಪಾರ ಶಾಸ್ತ್ರಗಳನ್ನು ಮಥಿಸಿ ಹೊರತೆಗೆದ ಸಾರಭೂತವಾದ ಗ್ರಂಥವ್ಯಾವುದಾದರೂ ಇದೆಯೇ? ಸರ್ವಶಾಸ್ತ್ರ ಸಿದ್ಧಾಂತ ಸಮನ್ವಯ ರೂಪವಾದ ಗ್ರಂಥವೇನಾದರೂ ಹೈಂದವ ಸಾಹಿತ್ಯದಲ್ಲಿ ಲಭಿಸುತ್ತದೆಯೇ? ಹಿಂದೂಧರ್ಮವನ್ನೇ ಅಲ್ಲದೆ ಸರ್ವಧರ್ಮಗಳ ಸಂಪ್ರದಾಯ ತತ್ವಗಳನ್ನು ಘೋಷಿಸುವ ಹಾಗೂ ಅವುಗಳಿಗೆ ಮೆರುಗು ನೀಡುವ ಏಕೈಕ ಪ್ರಾಮಾಣಿಕ ಗ್ರಂಥವೇನಾದರೂ ಇದೆಯೇ? ಈ ಪ್ರಶ್ನೆಗಳೆಲ್ಲವುಗಳಿಗೆ ಸರಿಯಾದ ಪ್ರತ್ಯುತ್ತರವಿದೆ. ಅಂತಹ ಪ್ರಾಮಾಣಿಕ ಗ್ರಂಥ ಭಗವದ್ಗೀತೆ, ಅಧ್ಯಾತ್ಮಜ್ಞಾನದ ಹಾಗೂ ಸಮಸ್ತ ಧರ್ಮಗಳ ನಿಘಂಟು ಭಗವದ್ಗೀತೆ. ಏಕೆಂದರೆ ಹಿಂದೂ ಮತದ ಸಿದ್ಧಾಂತವನ್ನೇ ಅಲ್ಲದೆ ಸಮಸ್ತ ಮತಗಳ ಪ್ರಧಾನ ಸೂತ್ರಗಳೆಲ್ಲವನ್ನು, ಧರ್ಮಗಳೆಲ್ಲವನ್ನು ಇದರಲ್ಲಿ ಕ್ರೋಢೀಕರಿಸಲಾಗಿದೆ. ವಿವಿಧ ಮತ ಸಿದ್ಧಾಂತ ರೂಪಗಳನ್ನು ಶಾಖೋಪಶಾಖೆಗಳಲ್ಲಿ ವಿರಾಜಿಸುವ ಧರ್ಮ ವೃಕ್ಷವೇ ಗೀತೆ. ಸರ್ವಧರ್ಮ ಸಮನ್ವಯ ಕ್ಷೇತ್ರವೇ ಗೀತೆ. ಸಾಂಖ್ಯ, ಯೋಗ, ನ್ಯಾಯ, ವೈಶೇಷಿಕ, ಮೀಮಾಂಸೆ, ವೇದಾಂತಗಳ ಹಾಗೂ ಶೈವ, ಗಾಣಪತ್ಯ, ವೈಷ್ಣವಾದಿ ಮತಗಳ; ಅಷ್ಟೇ ಅಲ್ಲ ಪ್ರಪಂಚದ ಸಮಸ್ತ ಸಂಪ್ರದಾಯಗಳ ಸಮನ್ವಯ ಗೀತೆಯಲ್ಲಿ ಕಂಡುಬರುತ್ತದೆ. ಆದ್ದರಿಂದಲೇ ಇದನ್ನು ವಿಶ್ವಮತ ಗ್ರಂಥ (Universal scripture, Universal Gospel, Bible of Humanity)ವೆಂದು ಏಕಕಂಠದಲ್ಲಿ ಸರ್ವರೂ ಹೇಳುತ್ತಾರೆ. ಬಹುಹಿಂದೆ ವಲ್ಲಭಾಚಾರ್ಯರನ್ನು ಒಬ್ಬ ಭಕ್ತನು ಹೀಗೆ ಪ್ರಶ್ನಿಸಿದನು.

'ಅಯ್ಯಾ! ಶಾಸ್ತ್ರಗಳಲ್ಲೆಲ್ಲ ಯಾವ ಶಾಸ್ತ್ರ ಪ್ರಧಾನವಾದುದು? ಅವರು ತಕ್ಷಣ **"ಏಕಂ ಶಾಸ್ತ್ರಂ ದೇವಕೀ ಪುತ್ರ ಗೀತಂ"**- ಎಂದರು. ಅಂದರೆ ದೇವಕೀಸುತನಾದ ಶ್ರೀಕೃಷ್ಣಮೂರ್ತಿ ಹಾಡಿದ ಗೀತಾಶಾಸ್ತ್ರವೊಂದೇ ಎಲ್ಲವುಗಳಿಗಿಂತ ಮೇಲಾದುದು. ಹಾಗೆಯೇ ಯಾವ ಹಾಡನ್ನು ಹಾಡಿಕೊಳ್ಳಬೇಕು? ಎಂದು ಒಬ್ಬರು ಶ್ರೀ ಶಂಕರಾಚಾರ್ಯರನ್ನು ಪ್ರಶ್ನಿಸಲಾಗಿ,

**'ಗೇಯಂ ಗೀತಾನಾಮ ಸಹಸ್ರಂ'**

ಎಂದು ಅವರು ಅಪ್ಪಣೆ ಕೊಟ್ಟರು. ಅಂದರೆ ಗೀತೆಯನ್ನು ಮತ್ತು ವಿಷ್ಣು ಸಹಸ್ರನಾಮಗಳನ್ನು ಹಾಡಿಕೊಳ್ಳುತ್ತಿರಬೇಕೆಂಬುದೇ ಅದರ ಅರ್ಥ. ಅತ್ಯಂತ ಮೇಧಾಸಂಪನ್ನರು, ಸರ್ವಶಾಸ್ತ್ರ ವಿಶಾರದರು, ಅಧ್ಯಾತ್ಮ ವಿದ್ಯಾ ಕೋವಿದರಾದ ಈ ಇಬ್ಬರೂ ಗೀತೆಯಲ್ಲಿ ಅಂತಹ ಅಮೋಘ ಶಕ್ತಿಯಿದೆಯಾದ್ದರಿಂದ ಹಾಗೆ ಹೇಳಬೇಕಾಗಿ ಬಂತು. ಹಾಗೆಯೇ-

**'ಸರ್ವಶಾಸ್ತ್ರ ಮಯೀ ಗೀತಾ'**

ಸರ್ವಶಾಸ್ತ್ರಗಳಿಂದ ಪರಿಪೂರ್ಣವಾದದ್ದು ಗೀತೆ, ಎಂದು ಸ್ಕಂದ ಪುರಾಣದಲ್ಲಿದೆ.

**"ಗೀತಾ ಸುಗೀತಾ ಕರ್ತವ್ಯಾ ಕಿಮನ್ಯೈಃ ಶಾಸ್ತ್ರವಿಸ್ತರೈಃ"**

ಗೀತೆಯ ಮಾಧುರ್ಯವನ್ನು ಅಳವಡಿಸಿಕೊಳ್ಳಬೇಕೇ ಹೊರತು ಬೇರೆಯ ಅನೇಕ ಶಾಸ್ತ್ರಗಳಿಂದ ಏನು ಪ್ರಯೋಜನವೆಂದು ಮಹಾಭಾರತದಲ್ಲಿ ಗೀತೆಯನ್ನು ಶ್ಲಾಘಿಸಲಾಗಿದೆ. ಆ ಕಾಲದಲ್ಲಿ ಅಂದರೆ ದ್ವಾಪರಯುಗಾಂತದಲ್ಲಿ, ರಣರಂಗದಲ್ಲಿ ಭಗವಂತನಿಂದ ಉಪದೇಶಿಸಲ್ಪಟ್ಟಿದ್ದು ಈವರೆಗೆ ಐದು ಸಾವಿರ ವರ್ಷಗಳು ದಾಟಿದರೂ ಗೀತೆ ಸ್ವಲ್ಪವೂ ಚದರದೆ, ನದೀಪ್ರವಾಹದಂತೆ ನಿತ್ಯನೂತನವಾಗಿ ಹರಿಯುತ್ತಿರುವಂತೆ ಭಾಸವಾಗುತ್ತಿದೆ. ಗೀತೆಯಲ್ಲಿಯ ಗಂಭೀರ ಭಾವಗಳನ್ನು, ಸರ್ವಮತ ಸಮನ್ವಯ ಧೋರಣೆಯನ್ನು, ಅಗಾಧ ಜ್ಞಾನವನ್ನು, ಅಂತ್ಯವಿಲ್ಲದ ಅರ್ಥ ಪರಂಪರೆಯನ್ನು ಪರಿಶೀಲಿಸಿದಾಗ ಇದು ಮಾನವ ನಿರ್ಮಿತವಲ್ಲವೆಂದು ಸ್ಪಷ್ಟವಾಗಿ ಅರ್ಥವಾಗುವುದು. ಸೃಷ್ಟಿಯ ಆರಂಭದಿಂದ ಈವರೆವಿಗೆ ಇಂತಹ ಲೋಕೋತ್ತರ ಸರ್ವೋಪಯೋಗ ಗ್ರಂಥ ಮತ್ತೊಂದು ಹೊರಹೊಮ್ಮಲಿಲ್ಲವೆಂದು ಹೇಳಿದರೆ ಅತಿಶಯೋಕ್ತಿಯೇನಲ್ಲ. ಆದುದರಿಂದಲೇ ಈ ಹಿಂದೆ ಎಷ್ಟೋ ಮಹನೀಯರು ಗೀತೆಗೆ ತಮ್ಮನ್ನು ತಾವೇ ಸಮರ್ಪಿಸಿಕೊಂಡು ತಮಗೆ ಸಾಧ್ಯವಾದ ವ್ಯಾಖ್ಯೆಯೊಂದನ್ನು ಬರೆದು ಗೀತಾ ಸೇವೆಯಲ್ಲಿ ಪಾಲುಗೊಂಡು 'ಧನ್ಯೋಸ್ಮಿ' ಎನಿಸಿಕೊಂಡರು. ಭಾರತ ದೇಶದ ಧಾರ್ಮಿಕ ಜೀವನದ ಮೇಲೆ ಗೀತೆ ಎಸಗಿರುವ ಪ್ರಭಾವ ಅದ್ವಿತೀಯ.

## ವಿವಿಧ ಗೀತೆಗಳು

ಪ್ರಪಂಚದಲ್ಲಿ ಎಷ್ಟೋ ಗೀತೆಗಳಿವೆ. ಅಷ್ಟಾವಕ್ರ ಗೀತೆ, ಅವಧೂತ ಗೀತೆ, ಋಭು ಗೀತೆ, ಬ್ರಹ್ಮ ಗೀತೆ, ವಶಿಷ್ಠ ಗೀತೆ, ಗಣೇಶ ಗೀತೆ, ಹನುಮದ್ಗೀತೆ, ಪರಾಶರ ಗೀತೆ, ಹರೀತ ಗೀತೆ, ಶಿವ ಗೀತೆ, ಹಂಸ ಗೀತೆ, ಭಿಕ್ಷು ಗೀತೆ, ಕಪಿಲ ಗೀತೆ, ದೇವೀ ಗೀತೆ ಮುಂತಾದ ಅಗಣಿತವಾದ ಗೀತೆಗಳು ವಿಶ್ವ ಸಾಹಿತ್ಯದಲ್ಲಿ ಬೆಳಗುತ್ತಿದ್ದರೂ ಭಗವದ್ಗೀತೆಯೊಂದಕ್ಕೇ ಗೀತೆಯೆಂಬ ಹೆಸರು ರೂಢಿಯಲ್ಲಿ ಬಂದಿದೆ. ಗೀತೆಯ ಸುಲಭ ಶೈಲಿ, ವಿಷಯ ಗಾಂಭೀರ್ಯ, ಸಮನ್ವಯ ದೃಷ್ಟಿ, ಸರ್ವರಿಗೂ ಆಚರಣೆ ಯೋಗ್ಯವಾದ ಅನುಷ್ಠಾನ ಪದ್ಧತಿಗಳು ಮೊದಲಾದವು ಅದರ ವ್ಯಾಪಕತೆಗೆ, ಸರ್ವಜನ ಸಮಾದರಣೆಗೆ ಹೇತುಗಳಾಗಿವೆ. 'ಭಗವದ್ಗೀತೆ' ಅನ್ನುವ ನಾಮಧೇಯದಲ್ಲಿಯೇ ಒಂದು ವಿಧವಾದ ವಿಶಾಲಭಾವವು ಕಂಡುಬರುತ್ತದೆ. ಏಕೆಂದರೆ ಕೃಷ್ಣನು ಬೋಧಿಸಿದ್ದು ಕೃಷ್ಣ ಗೀತವೆಂದು ಕರೆಯಲ್ಪಡಬಹುದಾಗಿತ್ತು ಆದರೆ ಅದು ಭಗವದ್ಗೀತೆಯೆಂದು ಚಲಾವಣೆಯಲ್ಲಿರುವುದೇ ಅದರ ಜಾತಿ ಮತ ವ್ಯಕ್ತ್ಯಾತೀತ ಸ್ಥಾಯಿಯನ್ನು ಸೂಚಿಸುತ್ತದೆ. ಆದ್ದರಿಂದಲೇ ಮ್ಯಾಕ್ಸಮುಲ್ಲರ್, ಕಾರ್ಲೈಲ್, ಎಮರ್‌ಸನ್, ಎಡ್ವಿನ್ ಆರ್ನಾಲ್ಡ್, ಅನಿಬೆಸೆಂಟ್ ಮೊದಲಾದ ಪಾಶ್ಚಾತ್ಯರನೇಕರು ಗೀತಾಪ್ರಭಾವಕ್ಕೊಳಗಾಗಿ, ಅದರ ವಿಷಯ ಗಾಂಭೀರ್ಯದಿಂದ ಆಕರ್ಷಿತರಾಗಿ, ಗೀತೋಪದೇಶ ಬೋಧನೆಗಳಿಂದ ತಮ್ಮ ತಮ್ಮ ಜೀವನಗಳನ್ನು ಸುಸಂಸ್ಕರಿಸಿಕೊಂಡು ಗೀತೆಯನ್ನು ಪ್ರಚಾರಿಸಿದರು. ಅದರಲ್ಲಿ ಎಡ್ವಿನ್ ಆರ್ನಾಲ್ಡ್ ಎನ್ನುವ ಮಹನೀಯನು 'ದಿವ್ಯಗೀತೆ' (The song celestial) ಎನ್ನುವ ಹೆಸರಿನಲ್ಲಿ ಗೀತೆಯ ಹದಿನೆಂಟು ಅಧ್ಯಾಯಗಳನ್ನು ಆಂಗ್ಲ ಭಾಷೆಯಲ್ಲಿ ಪದ್ಯರೂಪದಲ್ಲಿ ರಚಿಸಿದನು. ಹೂಣ ಭಾಷೆಯಲ್ಲಿ ಅದು ಬಹಳ ವಿಖ್ಯಾತವಾದ ಗ್ರಂಥ. ಇಷ್ಟೇ ಅಲ್ಲ, ಗೀತೆಯ ಔನ್ನತ್ಯವನ್ನು ಕುರಿತು ಆತನು ಈ ಕೆಳಗೆ ಹೇಳಿದ ಮಾತುಗಳು ಗೀತೆಯ ಬಗ್ಗೆ ಇರುವ ಜನಗಳ ಶ್ರದ್ಧಾ ಭಕ್ತಿಗಳನ್ನು ತಿಳಿಯಪಡಿಸುತ್ತವೆ. "ಭಾರತ ದೇಶದ ಈ ಸರ್ವಪ್ರಿಯ, ಕಾವ್ಯ ಮಯ ದಾರ್ಶನಿಕ ಗ್ರಂಥವು ಆಂಗ್ಲ ಭಾಷೆಗೆ ಭಾಷಾಂತರವಾಗದೆ ಇದ್ದಿದ್ದರೆ ಆಂಗ್ಲ ಸಾಹಿತ್ಯವು ಅಪೂರ್ಣವಾಗಿಯೇ ಉಳಿಯುತ್ತಿತ್ತು. ಆಂಗ್ಲದಲ್ಲಿಯೇ ಅಲ್ಲದೆ ಪ್ರಪಂಚ ದಲ್ಲಿಯ ಪ್ರಮುಖ ಭಾಷೆಗಳೆಲ್ಲವುಗಳಲ್ಲಿಯೂ ಗೀತೆ ಅನುವಾದಿಸಲ್ಪಟ್ಟಿದೆ ಯಾದ್ದರಿಂದ, ಕೋಟ್ಯಾಂತರ ಜನರು ಗೀತಾ ಜ್ಞಾನ ರಸಾಮೃತವನ್ನು ಪಾನಮಾಡಿ ತಮ್ಮ ತಮ್ಮ ಜೀವನಗಳನ್ನು ಶಾಂತಿಮಯವಾಗಿಸಿಕೊಂಡಿದ್ದಾರೆ.

## ಗೀತೆಯದು ಮಾತೃ ಹೃದಯ

ವಾಸ್ತವವಾಗಿ ಗೀತೆ ಒಂದು ಗ್ರಂಥವಲ್ಲ. ಸಜೀವ ಚೈತನ್ಯ ಮೂರ್ತಿ ಶ್ರೀಕೃಷ್ಣನು ಈ ಲೋಕವನ್ನು ತ್ಯಜಿಸುವಾಗ ಆ ನವಚೇತನ ವಿಕಸಿತ ದಿವ್ಯ ಗ್ರಂಥವನ್ನು ನಮಗೆ ಅನುಗ್ರಹಿಸಿ ಹೋಗಿದ್ದಾನೆ.* ಗೀತಾರೂಪದಲ್ಲಿ ಆ ವಾಙ್ಮಯಮೂರ್ತಿ ನಮ್ಮೆಲ್ಲರಿಗೂ ಜ್ಞಾನದಾನವನ್ನು ಮಾಡುತ್ತಾ ಭವದುಃಖಗಳಿಂದ ಬಿಡುಗಡೆ ಮಾಡುತ್ತಾ ತಾಯಿಯಂತೆ ರಕ್ಷಿಸುತ್ತಿದ್ದಾನೆ. ಗಾಂಧಿಮಹಾತ್ಮ ಹೇಳಿದ ಈ ಕೆಳಗಿನ ವಾಕ್ಯಗಳು ಸ್ಮರಣೀಯವಾಗಿವೆ.

I lost my earthly mother who gave me birth long ago but this eternal mother (Gita) has completely filled her place by my side ever since. When I am in difficulty or distress, I seek refuge in her bosom.

"ನನಗೆ ಜನ್ಮವಿತ್ತ ತಾಯಿ ಬಹಳ ವರ್ಷಗಳ ಹಿಂದೆಯೇ ತೀರಿಕೊಂಡರು. ಆದರೆ ಈ ಶಾಶ್ವತ ಗೀತಾ ತಾಯಿ ಆ ಸ್ಥಾನವನ್ನು ಗ್ರಹಿಸಿ ಆಗಿನಿಂದ ಈವರೆಗೆ ನನ್ನನ್ನು ಎಡೆಬಿಡದೆ ಕಾಪಾಡುತ್ತಿದ್ದಾಳೆ. ಕಷ್ಟಗಳು ಪ್ರಾಪ್ತಿಯಾದಾಗ ನಾನು ಅವಳ ಒಡಲಿನಲ್ಲಿ ತಲೆಮರೆಸಿಕೊಳ್ಳುತ್ತೇನೆ. ಗಾಂಧಿ ಮಹಾತ್ಮನಂತೆ ಎಷ್ಟೋ ಜನ ಗೀತಾಮಾತೆಯನ್ನು ಆಶ್ರಯಿಸಿ ತಮ್ಮ ತಮ್ಮ ಕಷ್ಟಗಳನ್ನು ನಿವಾರಿಸಿಕೊಂಡರು. ಗೀತೆಯದು ಮಾತೃ ಹೃದಯ. ಪುತ್ರ ವಾತ್ಸಲ್ಯದಿಂದ ಮಾನವರನ್ನೇ ಅಲ್ಲದೆ ಪಶು ಪಕ್ಷ್ಯಾದಿಗಳನ್ನು, ಸಮಸ್ತ ಚರಾಚರಗಳನ್ನು ಕೂಡ ಆಹ್ವಾನಿಸಿ ಅವರಿಗೆ ಬೇಕಾದ ರಕ್ಷಣೆಯನ್ನು ಕೊಟ್ಟು ಮುಕ್ತಿ ಮಾರ್ಗವನ್ನು ಸೂಚಿಸುತ್ತದೆ. ಜಾತಿ ಮತ ಕುಲ ಲಿಂಗ ವಯೋ ವಿಚಕ್ಷಣವಿಲ್ಲದೆ ಸರ್ವರಿಗೂ ಮೋಕ್ಷಾಧಿಕಾರವಿದೆಯೆಂದು ಅದು ಉಚ್ಚ ಕಂಠದಲ್ಲಿ ಹಾಡುತ್ತಿದೆ.

## ಗೀತೆಯ ಅನುಪಮ ಸಾಮರ್ಥ್ಯ

ಗೀತೆ ಕಲ್ಪವೃಕ್ಷದಂತಹದು. ಆದರೆ ಸ್ವರ್ಗಲೋಕದ ಕಲ್ಪವೃಕ್ಷದಂತೆ ಕ್ಷಣಿಕ ಪ್ರಾಪಂಚಿಕ ವಸ್ತುಜಾಲವನ್ನು ನೀಡುವುದಲ್ಲ, ಸಂಕಲ್ಪ ರಹಿತವಾದ ಮೋಕ್ಷ ಸ್ಥಿತಿಯನ್ನು ಪ್ರಸಾದಿಸುವುದು. ಗೀತೆ ಕಾಮಧೇನುವಿನಂತಹದು. ಆದರೆ ಸುರಲೋಕದ ಕಾಮಧೇನುವಿನಂತೆ ನಶ್ವರ ಭೋಗ ಪದಾರ್ಥಗಳನ್ನು ಒದಗಿಸುವುದಲ್ಲ. ಕಾಮವರ್ಜಿತವಾದ ನಿಷ್ಕಲಂಕ ನಿರ್ವಾಣ ಪದವಿಯನ್ನು ನೀಡುವುದು. ಗೀತೆ ಚಿಂತಾಮಣಿಯಂತಹದು. ಆದರೆ ಚಿಂತಾಮಣಿಯಂತೆ ಪಾಂಚಭೌತಿಕ ಸಂಪತ್ತನ್ನು ವೃದ್ಧಿಪಡಿಸುವುದಲ್ಲ, ಚಿಂತೆಗಳೆಲ್ಲವನ್ನು ಹೋಗಲಾಡಿಸಿ ನಿಶ್ಚಿಂತ ನಿರಪೇಕ್ಷ ನಿರಾಮಯ ಪರಂಧಾಮಕ್ಕೆ ಜೀವಿಯನ್ನು ಒಯ್ಯುವುದು. ಗೀತೆ ಅಮೃತದಂಥದು. ಆದರೆ ದೇವತೆಗಳು ಕುಡಿಯುವ ಜಡ ದ್ರವವಲ್ಲ. ಜನನ ಮರಣ ರಹಿತವಾದ ಶಾಶ್ವತ ಬ್ರಹ್ಮಸಾಕ್ಷಾತ್ಕಾರವನ್ನು ನೀಡುವ ಜ್ಞಾನಾಮೃತ. ಇಷ್ಟೇ ಅಲ್ಲ, 'ನೀನು ನಾಶರಹಿತವಾದ ಆತ್ಮವೇ ಹೊರತು ದೇಹವಲ್ಲವೆಂದು ವಿಶ್ವಾಸ ಉಂಟುಮಾಡುವ ಅಭಯ ಶಾಸ್ತ್ರ. ಫಲರಹಿತ ಕರ್ತವ್ಯ ನಿಷ್ಠೆಯನ್ನು ಕಲಿಸಿ ಸರ್ವರೂ ಮೋಕ್ಷಾಧಿಕಾರರೇ ಎಂದು ಘೋಷಿಸಿದ ಈಶ್ವರೀಯ ವಾಣಿ ಅದು. ಮತ್ತೆ ಭವಸಾಗರವನ್ನು ಸುಲಭವಾಗಿ ದಾಟಿಸುವ ಶಕ್ತ ದೋಣಿ. ಜೀವನ ರಥವನ್ನು ಏರುಪೇರುಗಳಿಲ್ಲದೆ ಸವ್ಯವಾಗಿ ನಡೆಸುವ ಪಥನಿರ್ದೇಶಕ. ತನ್ನ ಜ್ಞಾನದ ದಿವ್ಯ ಘರ್ಜನೆಯಿಂದ ಜನಗಳನ್ನು ಮೋಹ ನಿದ್ರೆಯಿಂದ ಎಚ್ಚರಗೊಳಿಸುವ ಮೇಘ ಸಮುದಾಯ. ಉಪನಿಷತ್ತುಗಳೆಂಬ ಗೋವುಗಳಿಂದ ಶ್ರೀಕೃಷ್ಣನೆಂಬ ಗೋಪಾಲನು ಹಾಲನ್ನು ಹಿಂಡಿ ವ್ಯಾಸ ಮಹರ್ಷಿಯ ಮೂಲಕ ಭಾರತವೆಂಬ ಪಾತ್ರೆಯಲ್ಲಿ ಶೇಖರಿಸಲ್ಪಟ್ಟ ಅಮೃತಧಾರೆ. ತಾಪತ್ರಯಗಳನ್ನು ತಣ್ಣಾರಿಸಿ ವ್ಯವಹಾರ ಪರಮಾರ್ಥಮಾರ್ಗಗಳೆರಡನ್ನು ಸವ್ಯವಾಗಿಸುವ ದಿವ್ಯದೃಷ್ಟಿ. ನಾಸ್ತಿಕ ಹಾಗು ಪಾಷಂಡರಿಂದ ಪ್ರಸರಿಸಲ್ಪಡುವ ಭ್ರಮಜಾಲವನ್ನು ತೊಲಗಿಸಿ ಜನರನ್ನು ಸತ್ಯಾಕಾಶದಲ್ಲಿ ವಿಹಾರಕ್ಕೆ ಒಯ್ಯುವ ವಿಮಾನ. ಬಾಹ್ಯವೇಷಗಳನ್ನು ತೊಲಗಿಸಿ ಸರಿಯಾದ ಮಾರ್ಗವನ್ನು ತೋರಿಸುವ ಮಾರ್ಗದರ್ಶಿ. ದೂರದಿಂದ ಸುಂದರವಾಗಿ ಕಾಣಿಸುವ ಮಿಥ್ಯಾವಸ್ತುಗಳ ಬಗ್ಗೆ ಇರುವ ಭ್ರಮೆಯನ್ನು, ಅವಿದ್ಯೆಯನ್ನು ಹೋಗಲಾಡಿಸಿ, ಮೋಕ್ಷದ್ವಾರಗಳ ಬೀಗದಕೈಯನ್ನು ಜಿಜ್ಞಾಸುಗಳ ಕೈಯಲ್ಲಿ ಕೊಡುವ ಅನುಪಮ ಬ್ರಹ್ಮವಿದ್ಯೆಯೇ ಗೀತೆ.

## ಗೀತೆಯ ಅಪಾರಶಕ್ತಿಗೆ ಕಾರಣ

ಗೀತೆಗೆ ಇಂಥಹ ಮಹತ್ತರ ಶಕ್ತಿ ಹೇಗೆ ಬಂದಿದೆಯೆಂಬುದನ್ನು ಸ್ವಲ್ಪ ವಿಚಾರಿಸೋಣ. ಶ್ರೀಶುಕಮುನಿಗಳು ಪರೀಕ್ಷಿತ್ ಮಹಾರಾಜನಿಗೆ ಮೋಕ್ಷಮಾರ್ಗ ಉಪದೇಶಿಸುವ ಸಮಯದಲ್ಲಿ ಆ ಕಾರ್ಯಕ್ಕೆ ಅವರಿಗೆ ಏಳು ದಿನಗಳ ಬಿಡುವು ದೊರೆಯಿತು. ಆದ್ದರಿಂದ ಸಾವಕಾಶವಾಗಿ ಅನೇಕ ಕಥೆಗಳೊಂದಿಗೆ, ಇತಿಹಾಸಗಳೊಂದಿಗೆ, ವರ್ಣನೆಗಳೊಂದಿಗೆ ಬೋಧಿಸಲನುವಾದರು. ಆದರೆ ಗೀತೋಪದೇಶ ಸಮಯದಲ್ಲಿ ಶ್ರೀಕೃಷ್ಣನ ಪರಿಸ್ಥಿತಿ ಬೇರೆ. ಅರ್ಜುನನಿಗೆ ಜ್ಞಾನೋಪದೇಶ ಮಾಡಲು ಶ್ರೀಕೃಷ್ಣನಿಗೆ ಕೆಲವು ನಿಮಿಷಗಳ ವ್ಯವಧಿ ಮಾತ್ರ ದೊರಕಿತು. ಅದರಲ್ಲಿಯೂ ಯುದ್ಧ ಸಮಯ. ಎರಡು ಪಕ್ಷದವರೂ ರಣಕ್ರಿಯೆಗೆ ಸರ್ವಸನ್ನದ್ಧರಾಗಿ ಬಂದಿದ್ದಾರೆ. ಶಂಖಗಳನ್ನು ಊದಿದ್ದಾರೆ. ಭೇರಿಗಳನ್ನು ಬಾರಿಸಿದ್ದಾರೆ. ಇನ್ನೇನು ಬಿಲ್ಲಿನಿಂದ ಬಾಣಗಳು ಬರುವುದೇ ಬಾಕಿ, ಅಂತಹ ವಿಷಮ ಪರಿಸ್ಥಿತಿಯಲ್ಲಿ ಶ್ರೀಕೃಷ್ಣನಿಗೆ ಅರ್ಜುನನ ಮೋಹ ವಿನಾಶಮಾಡುವ ಬ್ರಹ್ಮಾಂಡವಾದ ಬಾಧ್ಯತೆ ಎದುರಾಗಿದೆ. ಕೂತಿರುವ ಅರ್ಜುನನು ಏಳುವುದರಲ್ಲಿಯೇ ಸಮಸ್ತ ವಿಜ್ಞಾನವನ್ನು ಆತನಿಗೆ ಬೋಧಿಸಬೇಕಾಗಿ ಬಂದಿದೆ. ಆದ್ದರಿಂದ ಅಂತಹ ಭಾರಿ ನೈತಿಕ ಬಾಧ್ಯತೆಯನ್ನು ಎದುರಿಸುವುದಕ್ಕೋಸ್ಕರ ಶ್ರೀಕೃಷ್ಣಮೂರ್ತಿ ಆ ಸಮಯದಲ್ಲಿ ತನ್ನ ಶಕ್ತಿಯುಕ್ತಿಗಳೆಲ್ಲವುಗಳನ್ನು ಅಮೋಘವಾಗಿ ಕ್ರೋಢೀಕರಿಸಿ ಕಾರ್ಯವನ್ನು ಉಪಕ್ರಮಿಸಿದನು. ವೇದವೇದಾಂತಗಳ ಸಾರವೆಲ್ಲವನ್ನೂ ಹಿಂಡಿ ಕ್ಷಣಕಾಲದಲ್ಲಿ ಅರ್ಜುನನಿಗೆ ಬೋಧಿಸಿದನು. ಸಮಸ್ತ ಶಾಸ್ತ್ರಗಳ ಸಿದ್ಧಾಂತಗಳನ್ನು, ಅನುಷ್ಠಾನ ಪದ್ಧತಿಗಳನ್ನು ಸಾಂಗವಾಗಿ ನೀಡಿದನು. ತತ್ಫಲಿತವಾಗಿ ಆತನ ಆಶಯವು ನೆರವೇರಿತು. '**ನಯೋತ್ಸ್ಯ ಇತಿ ಗೋವಿಂದ**' "ಓ ಕೃಷ್ಣ! ನಾನು ಯುದ್ಧವನ್ನು ಮಾಡುವುದಿಲ್ಲ" ಎಂದು ಹೇಳಿದವನಿಂದಲೇ ಸ್ವಲ್ಪ ಹೊತ್ತಿನಲ್ಲೇ ಮತ್ತೆ '**ಕರಿಷ್ಯೇ ವಚನಂ ತವ**' ಓ ಕೃಷ್ಣ! ನೀನು ಹೇಳಿದಹಾಗೆ (ಯುದ್ಧ) ಮಾಡುವೆನು" ಎಂದು ಹೇಳುವಂತೆ ಮಾಡಿದನು. ನನ್ನ ಅಜ್ಞಾನವು ಕ್ಷೀಣಿಸಿದೆ (ನಷ್ಟೋ ಮೋಹಃ)' ಎನ್ನುವ ವಾಕ್ಯವನ್ನು ಅರ್ಜುನನು ಹೇಳುವಂತೆ ಮಾಡಿದನು. ಇದೆಲ್ಲದಕ್ಕೂ ಕಾರಣ ಶ್ರೀಕೃಷ್ಣ ಪರಮಾತ್ಮನ ಲೋಕೋತ್ತರ ಪ್ರತಿಭೆಯೇ ಹೌದು. ಆತನ ತೀವ್ರ ಚಿತ್ತೈಕಾಗ್ರತಾರೂಪ ಸಮಾಧಿ, ನಿಷ್ಠಾಜನಿತ ಅಖಂಡ ಜ್ಞಾನೋಪದೇಶವೇ ಹೌದು. ಸಾಮಾನ್ಯ ಮಾನವರೇ ಏಕಾಗ್ರ ಚಿತ್ತರಾದಾಗ

---

* ಭುವಂ ವಿಹಾಯ ಕೃಷ್ಣಸ್ತ್ವಾಂ ದರ್ಶಯಿತ್ವಾ ದಿವಂ ಗತಃ। ತ್ವಮೇವ ಸಾಕ್ಷಾತ್ ಶ್ರೀಕೃಷ್ಣಃ ಹೇಗೀತೇ ಶರಣಂ ಮಮ॥

ಪ್ರಾಪಂಚಿಕ ರಂಗದಲ್ಲೇ ಆಗಲಿ; ಸಾಹಿತ್ಯ ಕ್ಷೇತ್ರದಲ್ಲೇ ಆಗಲಿ; ಸಾಂಘಿಕ, ರಾಜಕೀಯ, ಆಧ್ಯಾತ್ಮಿಕಾದಿ ರಂಗಗಳಲ್ಲಿ ಸಾಹಸ ಯುಕ್ತವಾದ ಕ್ರಿಯೆಗಳನ್ನು ಮಾಡಲು ಶಕ್ಯರಾಗುತ್ತಾರೆ. ಅಂಥದರಲ್ಲಿ ಸರ್ವಜ್ಞನಾದ ಸಾಕ್ಷಾತ್ ಭಗವಂತನ ವಿಚಾರ ಬೇರೆ ಹೇಳಬೇಕೆ? ಆದುದರಿಂದಲೇ ಶ್ರೀಕೃಷ್ಣ ಪರಮಾತ್ಮನ ಭಾವ ಸಮಾಧಿಯಿಂದ ಜನಿಸಿರುವ ಭಗವದ್ಗೀತೆ ಅಪಾರ ಮಹಿಮೆಯುಳ್ಳದ್ದಾಗಿದೆ.

ಈ ಸತ್ಯವನ್ನೇ ಭಾರತ ತನ್ನ ಅಶ್ವಮೇಧ ಪರ್ವದಲ್ಲಿ ಕೆಳಗಿನ ಉದಾಹರಣೆಯಿಂದ ಮತ್ತೆ ಒತ್ತಿ ಹೇಳುತ್ತಿದೆ. ಭಾರತದ ಯುದ್ಧವಾದ ನಂತರ ಯುಧಿಷ್ಠಿರನು ರಾಜ್ಯಪಾಲನೆ ಮಾಡುತ್ತಿದ್ದು ಸರ್ವಜನರು ಶಾಂತಿಸೌಭಾಗ್ಯಗಳನ್ನು ಅನುಭವಿಸುತ್ತಿರುವಾಗ ಸ್ವಲ್ಪ ಕಾಲದಲ್ಲಿ ಶ್ರೀಕೃಷ್ಣಮೂರ್ತಿ ದ್ವಾರಕೆಗೆ ಪ್ರಯಾಣಮಾಡಬೇಕೆಂದು ಉದ್ದೇಶಿಸಿದನು. ಹೀಗಿರಲು ಒಂದು ದಿನ ಅರ್ಜುನನು ಶ್ರೀ ಕೃಷ್ಣನನ್ನು ಈ ರೀತಿ ಪ್ರಶ್ನಿಸಿದನು. 'ಮಹಾತ್ಮಾ! ಅಂದು ರಣರಂಗದಲ್ಲಿ ತಾವು ನನ್ನ ಮೇಲೆ ಕರುಣೆಯಿಟ್ಟು ಉಪದೇಶಿಸಿದ ದಿವ್ಯಜ್ಞಾನವನ್ನು (ಭಗವದ್ಗೀತೆಯನ್ನು) ಈಗ ಕಾರಣಾಂತರದಿಂದ ಮರೆತಿದ್ದೇನೆ. ಅದನ್ನು ಮತ್ತೆ ಕೇಳಬೇಕೆಂಬ ತೀವ್ರವಾದ ಕುತೂಹಲ ಉಂಟಾಗಿದೆ. ಆದ್ದರಿಂದ ದಯೆಮಾಡಿ ಅದನ್ನು ಮತ್ತೆ ಬೋಧಿಸಿ', ಎಂದು ಕೇಳಲು ಅದಕ್ಕೆ ಕೇಳಿ ಶ್ರೀಕೃಷ್ಣ ಹೀಗೆ ಪ್ರತ್ಯುತ್ತರವಿತ್ತನು- "ಓ ಅರ್ಜುನಾ! ಅತಿ ರಹಸ್ಯವಾದ ಜ್ಞಾನವನ್ನು ಆ ಸಮಯದಲ್ಲಿ (ಯುದ್ಧರಂಗದಲ್ಲಿ) ನಿನಗೆ ಉಪದೇಶಿಸಿದೆನು. ಆದರೆ ಅಶ್ರದ್ಧೆಯಿಂದ ಅದನ್ನು ಈಗ ನೀನು ಮರೆತು ಹೋಗಿರುವುದು ನನಗೆ ಬಹಳ ಅಪ್ರಿಯವಾಗಿ ಕಂಡುಬರುತ್ತಿದೆ. ಅದೆಲ್ಲವನ್ನೂ ತಿರುಗಿ ಇದ್ದದ್ದು ಇದ್ದ ಹಾಗೆ ಈಗ ಹೇಳುವುದಕ್ಕೆ ನನಗೆ ಸಾಧ್ಯವಾಗದು. ಆಗ ಯೋಗಯುಕ್ತನಾಗಿ (ತೀವ್ರ ಏಕಾಗ್ರಚಿತ್ತವುಳ್ಳವನಾಗಿ) ನಾನು ನಿನಗೆ ಬೋಧಿಸಿದ್ದ (ಅಂತಹ ಸ್ಥಿತಿ, ಮತ್ತೆ ಬರುವುದು ದುರ್ಲಭ). ಬ್ರಹ್ಮಸಾಕ್ಷಾತ್ಕಾರಕ್ಕೆ ಆ ಬೋಧೆ ಸಾಕು.* ಭಗವಂತನ ಈ ವಾಕ್ಯಗಳಿಂದ ಗೀತೋಪದೇಶದ ಸಮಯದಲ್ಲಿ ಆತನಿಗಿದ್ದ ಚಿತ್ತೈಕಾಗ್ರತೆ ಹಾಗು ಯೋಗನಿಷ್ಠೆ (Concentration) ಸ್ಪಷ್ಟವಾಗಿ ತಿಳಿಯುತ್ತದೆ. ಮನಸ್ಸು ಮಹಾಪ್ರಬುದ್ಧವಾಗಿದ್ದಾಗ ಶ್ರೀಕೃಷ್ಣನು ಗೀತೆಯನ್ನು ಬೋಧಿಸಿದನು. ಈ ವಿಧವಾಗಿ ಯೋಗೇಶ್ವರನ ಯೋಗನಿಷ್ಠೆ ಗೀತೆಗೆ ಇಂತಹ ಅಖಂಡಶಕ್ತಿಯನ್ನು ಕೊಟ್ಟಿದೆ.

## ಗೀತಾಯಜ್ಞ

ಕುರುಕ್ಷೇತ್ರ ಸಂಗ್ರಾಮದಲ್ಲಿ ವಿಚಿತ್ರವಾದ ಯಜ್ಞವೊಂದು ಜರುಗಿತು. ಆ ಯಜ್ಞದ ಹೋಮಕುಂಡ ಅರ್ಜುನನ ಮುಖ. ಹೋಮದ್ರವ್ಯ ಗೀತೋಪದೇಶ. ಯಜ್ಞಹೋತ ಶ್ರೀಕೃಷ್ಣ .ಫಲ ಕೈವಲ್ಯ.

ಭಾರತಾಮೃತ ಸರ್ವಸ್ವ ಗೀತಾಯಾ ಮಥಿತಸ್ಯ ಚ
ಸಾರಮುದ್ಧೃತ್ಯ ಕೃಷ್ಣೇನ ಅರ್ಜುನಸ್ಯ ಮುಖೇ ಹುತಂ

(ಭಾರತ-ಭೀಷ್ಮಪರ್ವ ೪೩-೫)

ಭಾರತವೆನ್ನುವ ಅಮೃತ ರಾಶಿಯಲ್ಲಿ ಸರ್ವಸ್ವವಾದ ಗೀತೆಯನ್ನು ಶ್ರೀಕೃಷ್ಣಮೂರ್ತಿ ಚೆನ್ನಾಗಿ ಮಥಿಸಿ ಅದರ ಸಾರವನ್ನು ತೆಗೆದು ಅರ್ಜುನನ ಮುಖದೆಡೆಗೆ ನೀಡಿದನು. ಈ ವಿಧವಾಗಿ ಬ್ರಹ್ಮಜ್ಞಾನಾಮೃತವೆಂಬ ಹೋಮ ದ್ರವ್ಯವನ್ನು ಸವಿದು ಪಾರ್ಥನು ಕೃತಾರ್ಥನಾದನು. ಹಾಗೆಯೇ ಸರ್ವಜೀವಿಗಳು ಆ ಭಗವಂತನ ಆ ದಿವ್ಯ ಪ್ರಸಾದವನ್ನು ಸ್ವೀಕರಿಸಿ ಧನ್ಯರಾಗಬಹುದು!

## ಉಪನಿಷತ್‌ಸಾರ - ಗೀತೆ

ಉಪನಿಷತ್ತುಗಳು ವೇದಗಳ ಸಾರ. ಉಪನಿಷತ್ತುಗಳ ಸಾರ ಭಗವದ್ಗೀತೆ. ಉಪನಿಷತ್ತುಗಳಿಗೆ ವೇದಾಂತ ಶಾಸ್ತ್ರ ಹಾಗು ಶ್ರುತಿಶಿರಸ್ಸುಗಳೆನ್ನುವ ಹೆಸರುಗಳಿವೆ. ವೇದಗಳ ಅಂತ್ಯದಲ್ಲಿ ತಿಳಿಸಲ್ಪಟ್ಟ ಸಾರಭೂತವಾದ ಸಾಹಿತ್ಯವಾದ್ದರಿಂದ ವೇದಾಂತವೆಂದು, ಶರೀರಕ್ಕೆ ಶಿರಸ್ಸು ಪ್ರಧಾನವಾಗಿರುವಂತೆ ಶ್ರುತಿಗಳಿಗೆ ಪ್ರಧಾನವಾಗಿರುವುದರಿಂದ ಶ್ರುತಿಶಿರಸ್ಸೆಂದು ಕರೆಯಲಾಗಿದೆ. ಈ ಪ್ರಕಾರವಾಗಿ ಉಪನಿಷತ್ತುಗಳು ಆಧ್ಯಾತ್ಮವಾಙ್ಮಯದಲ್ಲಿ ಬಹು ಪ್ರಾಮುಖ್ಯವಾದ ಸ್ಥಾನವನ್ನು ಅಲಂಕರಿಸಿವೆ. ಮಹೋನ್ನತವಾದ ವೇದವೃಕ್ಷದ ಫಲಸ್ವರೂಪಗಳಾದ ಆ ಉಪನಿಷತ್ತುಗಳನ್ನು ಅರ್ಥೈಸಿ ಆಸ್ವಾದಿಸಿ ಸಾರ್ಥಕರಾಗಬೇಕೆಂದು ಪ್ರತಿ ಮುಮುಕ್ಷುವಿನ ಚಿತ್ತವು ಸಾಧಾರಣವಾಗಿ ಕುತೂಹಲವಾಗಿರುತ್ತದೆ. ಆದರೆ ಉಪನಿಷತ್ತಿನ ಭಾಷೆ, ಭಾವ, ಸಾಮಾನ್ಯರಿಗೆ ಅರ್ಥವಾಗುವುದು ಬಹಳ ಕಷ್ಟವಾದ್ದರಿಂದ ಅವುಗಳ ಮಾಧುರ್ಯವನ್ನು ಸ್ವಾದಿಸುವ ಅವಕಾಶದಿಂದ ಬಹುವಾಗಿ ವಂಚಿತರಾಗುತ್ತಾರೆ. ಆ ವಿಜ್ಞಾನವನ್ನು ಎಲ್ಲರೂ ಅನುಭೂತಿ ಮಾಡಿಕೊಳ್ಳಲು ಆಸ್ಕಾರವಿಲ್ಲದಂತಾಗಿದೆ. ಇದು ಒಂದು ಕ್ಲಿಷ್ಟವಾದ ಸಮಸ್ಯೆಯಾಗಿ ಕೂತಿದೆ. ಈ ಸಮಸ್ಯೆಯನ್ನು ಪರಿಷ್ಕರಿಸಿ ಜನಸಾಮಾನ್ಯರಿಗೆ ಮಹೋಪಕಾರ ಮಾಡಬೇಕೆಂದು ಭಗವಂತನು ಸಂಕಲ್ಪಿಸಿದನು. ಆತನು ಉಪನಿಷತ್ತುಗಳೆಂಬ ಗೋವುಗಳನ್ನು ಮುಂದಿಟ್ಟುಕೊಂಡು, ಅರ್ಜುನನೆಂಬ ಕರುವನ್ನು ನಿಮಿತ್ತವಾಗಿಟ್ಟುಕೊಂಡು, ಗೋಪಾಲನಂದನು ತಾನೇ ಆಗಿ ಬ್ರಹ್ಮ ಜ್ಞಾನಾಮೃತವೆಂಬ ಆ ಕ್ಷೀರವನ್ನು ಹಸುಗಳಿಂದ ತೆಗೆದು ಮುಮುಕ್ಷುಗಳೆಲ್ಲರಿಗೂ ಹಂಚಿದನು. ಆ ಕ್ಷೀರವೇ ಭಗವದ್ಗೀತೆ.** ಈ ಪ್ರಕಾರವಾಗಿ ಜಟಿಲವಾದ ವೇದ ವಿಜ್ಞಾನವನ್ನು ಭಗವದ್ಗೀತೆಯ ಸುಲಭ ಸಾಹಿತ್ಯದ ಮೂಲಕ ಶ್ರೀ ಕೃಷ್ಣಮೂರ್ತಿ ಸಾಮಾನ್ಯ ಜನರಿಗೆ ಪ್ರಸಾದಿಸಿ ಲೋಕಕ್ಕೆ ಮಹೋಪಕಾರವನ್ನು ಮಾಡಿದನು. ಗೀತೆ ಅರ್ಜುನನಿಗೆ ಬೋಧಿಸಲ್ಪಟ್ಟಿದೆಯೆಂದು ಜನರು ಸ್ಥೂಲವಾಗಿ ಅಂದುಕೊಳ್ಳುತ್ತಾರೆ. ಆದರೆ, ವಾಸ್ತವವಾಗಿ ಅದು ವಿಶ್ವ ಕೋಟಿಗೆ ಉಪದೇಶಿಸಲಾಗಿದೆ. ಕರುವಿನ ಭಾಗಕ್ಕೆ ಸಿಗುವ ಹಾಲು ಸ್ವಲ್ಪವೇ ಅಲ್ಲವೇ? ಮಿಕ್ಕ ಹಾಲೆಲ್ಲವೂ ಬೇರೆಯವರ ಪಾಲಾಗಲೇಬೇಕಲ್ಲವೇ?. ಸುಧೀರ್ಭೋಕ್ತಾ- ಎಂದು ಹೇಳಲ್ಪಟ್ಟಿರುವುದರಿಂದ ಬುದ್ಧಿಮಂತರೆಲ್ಲರೂ (ಮೋಕ್ಷಾಪೇಕ್ಷಿಗಳೆಲ್ಲರೂ) ಅದನ್ನು ಕುಡಿದು ಆಸ್ವಾದಿಸಬಹುದೆಂದು ಸ್ಪಷ್ಟವಾಗುತ್ತಿದೆ. ಮತ್ತೆ **'ಗೀತಾಮೃತಂಮಹತ್'** ಎಂದು ಹೇಳಿರುವುದರಿಂದ, ಇದು ಸ್ವರ್ಗದಲ್ಲಿ

---

* ೧. ಅಬುದ್ಧ್ಯಾ ನಾಗ್ರಹೀರ್ಯಸ್ತ್ವಂ ತನ್ಮೇಸುಮಹದಪ್ರಿಯಮ್। ನ ಚ ಸಾದ್ಯ ಪುನರ್ಭೂಯಃ ಸ್ಮೃತಿರ್ಮೇ ಸಂಭವಿಷ್ಯತಿ [(ಭಾರತ-ಅಶ್ವಮೇಧ ಪರ್ವ(೧೬-೧೦)]
೨. ನೂನಮಶ್ರದ್ದಧಾನೋಽಸಿ ದುರ್ಮೇಧಾ ಹ್ಯಾಸಿ ಪಾಂಡವ। ನ ಚ ಶಕ್ಯಂ ಪುನರ್ವಕ್ತು ಮಶೇಷೇಣ ಧನಂಜಯ (೧೬-೧೧)
೩. ಸಹಿಧರ್ಮಃ ಸುಪರ್ಯಾಪ್ತೋ ಬ್ರಹ್ಮಣಃ ಪದವೇದನೇ ನಶಕ್ಯಂ ತನ್ಮಯಾ ಭೂಯಂತಥಾವಕ್ತು ಮಶೇಷತಃ (೧೬-೧೨)
೪. ಪರಂ ಹಿ ಬ್ರಹ್ಮ ಕಥಿತಂ ಯೋಗಯುಕ್ತೇನ ತನ್ಮಯಾ (೧೬-೧೩)

** ಸರ್ವೋಪನಿಷದೋ ಗಾವೋ ದೋಗ್ಧಾ ಗೋಪಾಲನಂದನಃ। ಪಾರ್ಥೋವತ್ಸಃ ಸುಧೀರ್ಭೋಕ್ತಾ ದುಗ್ಧಂ ಗೀತಾಮೃತಂ ಮಹತ್॥

ಯಂತಹ ಅಮೃತವಲ್ಲವೆಂದೂ, ಪಾರಲೌಕಿಕವಾದ ಸಚ್ಚಿದಾನಂದ ರಸಾಮೃತವೆಂದು ಅರ್ಥವಾಗುತ್ತದೆ. ಆದ್ದರಿಂದ ಸುಲಭ ಶೈಲಿಯಲ್ಲಿ, ಗಂಭೀರ ಭಾವದಲ್ಲಿ ಸಾಕ್ಷಾತ್ ಭಗವಂತನಿಂದಲೇ ಲೋಕಕ್ಕೆ ಪ್ರಸಾದಿಸಲ್ಪಟ್ಟ "ಉಪನಿಷತ್ತುಗಳ ಸಾರ" (Essence)ವಾದ ಈ ಗೀತೆಯನ್ನು ಪಠಿಸಿ, ಅನುಷ್ಠಿಸಿ, ಭವದುಃಖಗಳನ್ನು ದಾಟುವುದು ಪ್ರತಿಯೊಂದು ಜೀವಿಯ ಕರ್ತವ್ಯವಾಗಿದೆ.

## ಗೀತಾಜ್ಞಾನವು ಅನಂತ

ಗೀತೆಯ ಮಹಿಮೆ ವರ್ಣಿಸಲಸದಳ. ಇದಕ್ಕೆ ಅಂತ್ಯವಿಲ್ಲ. ಭಗವಂತನು ಹೇಗೆ ಅನಂತನೋ ಹಾಗೆ ಭಗವದ್ವಾಣಿಯೂ ಅನಂತ. "ಕೃಷ್ಣಸ್ತು ಭಗವಾನ್ ಸ್ವಯಂ"- ಎಂದು ಹೇಳಲ್ಪಟ್ಟಿದೆಯಾದ್ದರಿಂದ ಗೀತಾಚಾರ್ಯನು ಹಾಗು ಜಗದ್ಗುರುವಾದ ಶ್ರೀಕೃಷ್ಣಮೂರ್ತಿ ಸಾಕ್ಷಾತ್ ಭಗವಂತನೇ ಆದುದರಿಂದ ಕೃಷ್ಣವಾಣಿ ಭಗವದ್ವಾಣಿಯೇ ಹೌದು. ಕೃಷ್ಣಗೀತೆ ಭಗವದ್ಗೀತೆಯೇ ಸರಿ. ಗೀತೆಯನ್ನು ಓದಿದ ಪ್ರತಿಯೊಬ್ಬರಿಗೆ ಅದು ದೈವನಿರ್ಮಿತವೆಂದು ಸ್ಪಷ್ಟವಾಗಿ ತಿಳಿಯುತ್ತದೆ. ಪ್ರತಿ ಅಕ್ಷರದಲ್ಲಿಯೂ, ಪ್ರತಿ ಶ್ಲೋಕದಲ್ಲಿಯೂ ದೈವತ್ವವು ತುಳುಕಾಡುತ್ತಿದೆ. ಪ್ರತಿ ಶ್ಲೋಕದಲ್ಲಿ ಎಷ್ಟೆಷ್ಟೋ ನೂತನ ಅರ್ಥಗಳು ಕಂಡು ಬರುತ್ತವೆ. ಅಷ್ಟೇ ಅಲ್ಲ, ಶ್ಲೋಕ ಬಿಂದುವಿನಲ್ಲಿ ಜ್ಞಾನ ಸಿಂಧು ಅಡಗಿದೆ ಎಂದರೆ ಅತಿಶಯೋಕ್ತಿಯೇನೂ ಅಲ್ಲ. ಅವರವರ ಸಂಸ್ಕಾರಕ್ಕನುಗುಣವಾಗಿ ಅವರವರಿಗೆ ಸಾಧುವಾದ ಅರ್ಥವು ಅದರಲ್ಲಿ ಸ್ಫುರಿಸುತ್ತದೆ. ಮುಂದೆ ಚಿತ್ತವು ಶುದ್ಧವಾದಂತೆಲ್ಲಾ ಅದೇ ಶ್ಲೋಕದಲ್ಲಿ ವಿನೂತನವಾದ ವಿಶಾಲ ಭಾವಗಳು ಕಾಣಿಸುತ್ತವೆ. "The suggestiveness of this wonderful book is really infinite."

'ಈ ಗ್ರಂಥದ ವಿನೂತನಭಾವ ಪೂರ್ಣಶೀಲತೆ ವಾಸ್ತವವಾಗಿ ಅನಂತವಾದುದು, ಎಂದು ಒಬ್ಬ ಮಹನೀಯರು ನುಡಿದಿದ್ದಾರೆ. ಆದರೆ ಯಾರು ಯಾರು ಎಷ್ಟೆಷ್ಟು ಅರ್ಥಗಳನ್ನು ಕೊಟ್ಟರೂ, ಎಷ್ಟೆಷ್ಟು ಭಾಷ್ಯಗಳನ್ನು ಬರೆದರೂ, ಇನ್ನೂ ಅನಂತವಾದ ವಿಜ್ಞಾನ ಅದರಲ್ಲಿ ಉಳಿದೇ ಇದೆ. ಒಂದು ನದೀ ಪ್ರವಾಹದಲ್ಲಿ ಒಬ್ಬನು ಚಿಕ್ಕ ತಂಬಿಗೆಯಲ್ಲಿ ನೀರನ್ನು ತುಂಬಿಕೊಂಡು ಹೋಗುವನು, ಮತ್ತೊಬ್ಬನು ಬಿಂದಿಗೆಯಲ್ಲಿ ನೀರು ತೆಗೆದುಕೊಂಡು ಹೋಗುವನು, ಇನ್ನೊಬ್ಬನು ಪೀಪಾಯಿ ತುಂಬ ತುಂಬಿಕೊಂಡು ಹೋಗುವನು, ಮತ್ತೊಬ್ಬನು 'ಟ್ಯಾಂಕ್'ನ್ನು ತುಂಬಿಕೊಂಡು ಹೋಗುವನು. ಈ ಪ್ರಕಾರವಾಗಿ ಅವರವರ ಶಕ್ತ್ಯಾನುಸಾರವಾಗಿ ಎಷ್ಟೆಷ್ಟು ತೀರ್ಥವನ್ನು ಬಳಸಿದರೂ ನದಿಯಲ್ಲಿ ಇನ್ನೂ ಅನಂತ ಜಲ ಶೇಷವಾಗಿ ಉಳಿದೇ ಇರುತ್ತದೆ. ಹಾಗೆಯೇ ಗೀತಾಗಂಗೆಯ ಪ್ರವಾಹದಲ್ಲಿ ಶಂಕರಾ ಚಾರ್ಯರು ಒಂದು ದೊಡ್ಡ ಪಾತ್ರೆಯ ತುಂಬ ಜ್ಞಾನವನ್ನು ತುಂಬಿಕೊಂಡು ಹೋದರು. ಹಾಗೆಯೇ ರಾಮಾನುಜರು, ಮಧ್ವಾಚಾರ್ಯರು, ಶ್ರೀಕಂಠಶಿವಾಚಾರ್ಯರು ಮೊದಲಾದ ಅನೇಕ ಮಹನೀಯರು ಅವರವರ ಶಕ್ತ್ಯಾನುಸಾರವಾಗಿ ಬುದ್ಧಿರೂಪವಾದ ಪಾತ್ರೆಗಳ ತುಂಬ ಗೀತಾರ್ಥವನ್ನು ಗ್ರಹಿಸಿ ನಿರ್ಗಮಿಸಿದರು. ಹಾಗೆಯೇ ಆಧುನಿಕ ಕಾಲದಲ್ಲಿ ತಿಲಕ ಮಹಾಶಯ, ಗಾಂಧಿಮಹಾತ್ಮ ಅನಿಬಿಸೆಂಟ್ ಮೊದಲಾದವರೆಲ್ಲಾ ಗೀತಾಮೃತವನ್ನು ಸೇವಿಸಿ ಹೋದರು. ಇನ್ನೂ ಅನೇಕರು ಸೇದಿಕೊಳ್ಳುತ್ತಿದ್ದಾರೆ. ಮುಂದೆ ಮುಂದೆ ಇನ್ನೂ ಅನೇಕರು ಪಡೆಯುವರೂ ಕೂಡ. ಆದರೆ ಇಷ್ಟು ಜನ ಮಹಾತ್ಮರು ಗೀತೆಯನ್ನು ಮಥಿಸಿ, ಕೆಲವರು ದ್ವೈತ ಪರವಾಗಿ, ಕೆಲವರು ವಿಶಿಷ್ಟಾದ್ವೈತಪರವಾಗಿ, ಕೆಲವರು ಅದ್ವೈತಪರವಾಗಿ, ಹಾಗೆಯೇ ಕೆಲವರು ಕರ್ಮಪರವಾಗಿ, ಕೆಲವರು ಭಕ್ತಿಪರವಾಗಿ, ಕೆಲವರು ಯೋಗಪರವಾಗಿ, ಕೆಲವರು ಜ್ಞಾನಪರವಾಗಿ ಅರ್ಥಗಳನ್ನು ಹೇಳುತ್ತಿದ್ದರೂ, ಭಾವಗಳನ್ನು ಪ್ರದರ್ಶಿಸುತ್ತಿದ್ದರೂ ಗೀತೆಯಲ್ಲಿ ಇನ್ನೂ ಎಷ್ಟೋ ವಿಜ್ಞಾನ ಭಂಡಾರವು ಉಳಿದೇ ಇದೆ. ಇದೇ ಗೀತೆಯ ಮಹಾ ವಿಶಿಷ್ಟತೆ. ಇಂಥಹ ಶಕ್ತಿ ಮತ್ತೆ ಬೇರೆಯ ಗ್ರಂಥಗಳಿಗಿಲ್ಲ. ಆದ್ದರಿಂದಲೇ ಗೀತೆಯನ್ನು ಸಂಪೂರ್ಣವಾಗಿ ತಿಳಿದುಕೊಂಡವನು ಪ್ರಪಂಚದಲ್ಲಿ ಒಬ್ಬನೇ ಒಬ್ಬನೆಂದರೆ ಸ್ವಯಂ ಶ್ರೀಕೃಷ್ಣನೇ ಹೌದು. ಬೇರೆಯವರೆಲ್ಲಾ ಗೀತೆಯ ಸ್ವಲ್ಪ ಅಂಶಗಳನ್ನು ಮಾತ್ರ ಅರ್ಥಮಾಡಿಕೊಂಡವರು.

**ಕೃಷ್ಣೋ ಜಾನಾತಿ ವೈ ಸಂಯಕ್ ಕಿಂಚಿತ್‌ಕುಂತೀಸುತಃ ಫಲಮ್।**
**ವ್ಯಾಸೋವಾ ವ್ಯಾಸಪುತ್ರೋವಾ ಯಾಜ್ಞವಲ್ಕ್ಯೋಽಥ ಮೈಥಿಲಃ॥**

"ಗೀತಾರ್ಥವನ್ನು, ಗೀತಾಮಹಿಮೆಯನ್ನು, ಕೃಷ್ಣನೊಬ್ಬ ಮಾತ್ರ ಸಂಪೂರ್ಣವಾಗಿ ತಿಳಿದಿದ್ದಾನೆ. ಅರ್ಜುನ, ವ್ಯಾಸ, ಶುಕ, ಯಾಜ್ಞವಲ್ಕ್ಯ, ಜನಕ ಮುಂತಾದವರೆಲ್ಲಾ ಅಲ್ಪ ಸ್ವಲ್ಪ ಮಾತ್ರವೇ ತಿಳಿದುಕೊಂಡವರಾಗಿದ್ದಾರೆ." ಓಹೋ! ಗೀತಾಮಹಿಮೆ, ಗೀತಾರ್ಥವು ಎಷ್ಟು ಅಪಾರವಾದುದು!

ಆದರೆ ಇಲ್ಲಿ ಒಂದು ಧರ್ಮಸೂಕ್ಷ್ಮವನ್ನು ಗ್ರಹಿಸಬೇಕಾಗಿದೆ. ಅದೇನೆಂದರೆ ಅಮೃತವನ್ನು ಒಂದು ಬಿಂದು ಸೇವಿಸಿದರೂ ತಂಬಿಗೆ ಕುಡಿದರೂ, ಇನ್ನೂ ಅಧಿಕವಾಗಿ ಕುಡಿದರೂ ಫಲ ಮಾತ್ರ ಒಂದೇ. ಮರಣರಾಹಿತ್ಯವು ಎಲ್ಲರಿಗೂ ಸಮಾನವಾಗಿ ಸಿದ್ಧಿಸುವುದು. ಹಾಗೆಯೇ ಗೀತಾಮೃತವನ್ನು ಸ್ವಲ್ಪ ತೆಗೆದುಕೊಂಡರೂ, ಅಧಿಕವಾಗಿ ಭುಜಿಸಿದರೂ; ಭವದುಃಖಹರಣ, ಮೋಕ್ಷಪ್ರಾಪ್ತಿ, ಸಮಾನವಾಗಿಯೇ ಸಂಭವಿಸುತ್ತವೆ. ಆದ್ದರಿಂದ ಈ ವಿಷಯವಾಗಿ ಯಾರೂ ಅಂಜಬೇಕಾಗಿಲ್ಲ. ಶಂಕರಾದಿಯರಷ್ಟು ಮೇಧಾಶಕ್ತಿಯಿಲ್ಲದೇ ಹೋದರೂ, ನಿರುತ್ಸಾಹ ಬೀಳದೆ ಅನೇಕ ಗೀತೋಕ್ತ ಧರ್ಮಗಳಲ್ಲಿ ಕನಿಷ್ಟ ಒಂದನ್ನಾದರೂ ನಿಷ್ಠೆಯಿಂದ ಅನುಷ್ಠಾನ ಮಾಡುವ ಪ್ರಯತ್ನ ಮಾಡಬೇಕು. ಅದರಿಂದ ಪರಮಶಾಂತಿ ತಪ್ಪದೆ ಸಿಗುವುದು.

## ಭಾರತದ ಸರ್ವಸ್ವವು ಗೀತೆ

ಶ್ರೀ ಭಗವದ್ಗೀತೆ ಮಹಾಭಾರತದ ಭೀಷ್ಮಪರ್ವದಲ್ಲಿ ೨೫ನೆಯ ಅಧ್ಯಾಯದಿಂದ ಮೊದಲುಗೊಂಡು ೪೨ನೆಯ ಅಧ್ಯಾಯದ ವರೆಗೆ ಇದೆ. ಭಾರತ ಮಹಾ ಸಮುದ್ರದ ದೀಪಸ್ತಂಭ (Light house)ದಂತೆ ಗೀತೆ ಮೆರೆಯುತ್ತಿದೆ. ಭಾರತ ಕ್ಷೀರವಾದ ಗೀತೆ ನವನೀತವಾಗಿ ಬೆಳಗುತ್ತಿದೆ. ಅಷ್ಟಾದಶ ಪುರಾಣಗಳನ್ನು, ನವವ್ಯಾಕರಣಗಳನ್ನು, ನಾಲ್ಕು ವೇದಗಳನ್ನು ಚೆನ್ನಾಗಿ ಮಥಿಸಿ ವ್ಯಾಸ ಮುನೀಂದ್ರರು ಭಾರತವನ್ನು ರಚಿಸಿದರು.* ಆದ್ದರಿಂದಲೇ ಭಾರತವು ಪಂಚಮ ವೇದವೆಂದು ಪ್ರಖ್ಯಾತಿಗೊಂಡಿದೆ. ಅಂತಹ ಮಹೋತ್ಕೃಷ್ಟ ಕಾವ್ಯದ ಸಾರವೇ ಭಗವದ್ಗೀತೆ. ಶ್ರೀಕೃಷ್ಣಪರಮಾತ್ಮ ಜ್ಞಾನಾಮೃತವನ್ನು

---

* ೧. ಅಷ್ಟಾದಶ ಪುರಾಣಾನಿ ನವವ್ಯಾಕರಣಾನಿ ಚ ನಿರ್ಮಥ್ಯ ಚತುರ್ವೇದಾನ್ ಮುನಿನಾ ಭಾರತಂ ಕೃತಮ್।

೨. ಭಾರತೋದಧಿ ನಿರ್ಮಥ್ಯ ಗೀತಾಯಾ ನಿರ್ಮಥಿತಸ್ಯ ಚ। ಸಾರಮುದ್ಧೃತ್ಯ ಕೃಷ್ಣೇನ ಅರ್ಜುನಸ್ಯ ಮುಖೇ ಹುತಮ್॥

ಮಳೆಗೆರೆಯುತ್ತಿರಲು ವ್ಯಾಸಮುನೀಂದ್ರರು ಮಹಾಭಾರತವೆಂಬ ಕಲಶದಲ್ಲಿ ಅದನ್ನು ಹಿಡಿದಿಟ್ಟಿದ್ದಾರೆಂದು ಅಲಂಕಾರಿಕ ಭಾಷೆಯಲ್ಲಿ ಹೇಳಬಹುದು. ಮುಂದೆ-

**ಧರ್ಮೇ ಚಾರ್ಥೇ ಚ ಕಾಮೇಚ ಮೋಕ್ಷೇ ಚ ಭರತರ್ಷಭ**
**ಯದಿಹಾಸ್ತಿ ತದನ್ಯತ್ರ ಯನ್ನೇಹಾಸ್ತಿ ನತತ್ಕ್ವಚಿತ್** (ಭಾರತ)

"ಧರ್ಮಾರ್ಥಕಾಮಮೋಕ್ಷಗಳನ್ನು ಚತುರ್ವಿಧ ಪುರುಷಾರ್ಥಗಳನ್ನು ಕುರಿತು ಮಹಾಭಾರತದಲ್ಲಿ ಏನೇನು ಉಲ್ಲೇಖವಾಗಿದೆಯೋ ಅದು ಬೇರೆ ಕಡೆಯೂ ಲಭ್ಯವಿರಬಹುದು. ಆದರೆ ಇದರಲ್ಲಿ ಇಲ್ಲದ್ದು ಬೇರೆ ಎಲ್ಲಿಯೂ ಇಲ್ಲ." ಇಷ್ಟೇ ಅಲ್ಲ. "ಯನ್ನಭಾರತೇ ತನ್ನ ಭಾರತೇ" ಮಹಾಭಾರತದಲ್ಲಿ ಇಲ್ಲದೇ ಇರುವುದು ಭಾರತ ದೇಶದಲ್ಲಿಯೇ ಇಲ್ಲ- ಈ ಪ್ರಕಾರವಾಗಿ ಮಹಾಭಾರತ ಅನುಪಮಖ್ಯಾತಿಯನ್ನು ಹೊಂದಿದೆ. ಇನ್ನು ಅದರ ಸಾರವಾದ ಭಗವದ್ಗೀತೆ ಹೇಗಿರಬಹುದೋ ಪಾಠಕರೇ ಊಹಿಸಿಕೊಳ್ಳಬಹುದು. ಆದ್ದರಿಂದಲೇ ಶ್ರೀ ಆದಿಶಂಕರರು ತಮ್ಮ ಗೀತಾಭಾಷ್ಯದ ಪ್ರಾರಂಭದಲ್ಲಿಯೇ-

**"ತದಿತಂ ಗೀತಾಶಾಸ್ತ್ರಂ ಸಮಸ್ತ ವೇದಾರ್ಥಸಾರಸಂಗ್ರಹಭೂತಮ್"**

'ಈ ಗೀತಾಶಾಸ್ತ್ರವು ಸಮಸ್ತವೇದ ವೇದಾಂತಗಳ ಸಾರಸಂಗ್ರಹ'ವೆಂದು ಬಣ್ಣಿಸಿದ್ದಾರೆ. ಹಾಗಿಲ್ಲದಿದ್ದರೆ, ಖಂಡ ಖಂಡಾಂತರಗಳ ಪ್ರಾಜ್ಞರೆಲ್ಲರೂ ಇದರಿಂದ ಹೇಗೆ ಆಕರ್ಷಿಸಲ್ಪಡುವರು? ಮಧುವಿಲ್ಲದಿರುವ ಸ್ಥಳಕ್ಕೆ ದುಂಬಿಗಳು ಹೋಗುವುದಿಲ್ಲವಲ್ಲ! ಗೀತೆಯದು ಅವ್ಯಯವಾದ ಬೋಧೆ. ಅದು ನಾಶರಹಿತವಾದುದು. ದೇಶಕಾಲಗಳು ಬದಲಾದರೂ ಅದು ಬದಲಾಗದು. ಕಿಂಚಿತ್ತೂ ಚದುರುವುದಿಲ್ಲ. ಅದು ಯುಗಯುಗಗಳ ಧರ್ಮ. ಆದ್ದರಿಂದಲೇ ಗೀತಾಚಾರ್ಯರು ಅದನ್ನು ಕುರಿತು ಮೂರನೆಯ ಅಧ್ಯಾಯದಲ್ಲಿ "ಪ್ರೋಕ್ತವಾನಹಮವ್ಯಯಮ್"- ಅವ್ಯಯವಾದ ಈ ಬ್ರಹ್ಮವಿದ್ಯೆಯನ್ನು, ಪೂರ್ವದಲ್ಲಿ ನಾನು ಸೂರ್ಯನಿಗೆ ಉಪದೇಶಿಸಿದ್ದೆ ಎಂದು ತಿಳಿಸಿದ್ದಾರೆ. ಇದು ಅತಿರಹಸ್ಯವಾದ ವಿದ್ಯೆ. ಆದ್ದರಿಂದಲೇ **'ಇದಂತುತೇ ಗುಹ್ಯತಮಂ'**- ಈ ಮಹಾಗೋಪ್ಯವಾದ ಶಾಸ್ತ್ರವನ್ನು ನಾನು ನಿನಗೆ ಹೇಳುತ್ತಿದ್ದೇನೆಂದು ಗೀತಾಚಾರ್ಯರು ಪದೇ ಪದೇ ಗೀತೆಯಲ್ಲಿ ಉದ್ಬೋಧಿಸುತ್ತಿದ್ದಾರೆ.

ಈ ಪ್ರಕಾರವಾಗಿ ಅತಿರಹಸ್ಯವಾದ, ಅಖಂಡವಾದ ಈ ತತ್ವಬೋಧೆ ಒಂದು ದೇಶಕ್ಕಾಗಲಿ, ಒಂದು ಸಂಪ್ರದಾಯಕ್ಕಾಗಲಿ, ಒಂದು ಕಾಲಕ್ಕಾಗಲಿ, ಒಂದು ಮತಕ್ಕಾಗಲಿ, ಒಂದು ಜಾತಿಗಾಗಲಿ ಮೀಸಲಾಗಿರದೆ ಸರ್ವದೇಶಗಳಿಗೆ, ಸರ್ವಕಾಲಗಳಿಗೆ, ಸರ್ವಮತಗಳಿಗೆ, ಸಮಸ್ತ ಸಂಪ್ರದಾಯಗಳಿಗೆ ಸೇರಿದ್ದಾಗಿದೆ. ಸರ್ವಮತಗಳ ಸಾರ ಇದರಲ್ಲಿ ಇದೆ. ಆದುದರಿಂದ ಭಗವದ್ಗೀತೆ ಕೇವಲ ಹಿಂದುಗಳ ಮತಗ್ರಂಥ ಎಂದು ಹೇಳುವುದು ಅಸಮಂಜಸ. ಇದು ಒಂದು ಸಾರ್ವಭೌಮಗ್ರಂಥ. ಇದನ್ನು ಆಶ್ರಯಿಸಿದವರು ಧರ್ಮರಹಸ್ಯವನ್ನೆಲ್ಲಾ ಗ್ರಹಿಸಿ ಪರಮಶಾಂತಿಯನ್ನು ತಪ್ಪದೆ ಪಡೆಯುವರು.

ಜ್ಞಾನೇಶ್ವರರು ಗೀತೆಯ ಬಗ್ಗೆ ಈ ಕೆಳಕಂಡಂತೆ ಪ್ರಸ್ತಾಪಿಸಿದ್ದಾರೆ: "ಗೀತೆ ವಿವೇಕ ವೃಕ್ಷಗಳ ತೋಟ; ಸರ್ವಸುಖಗಳ (ಪಾಯ) ಬುನಾದಿ; ಪರಮಾರ್ಥ ಸಿದ್ಧಾಂತ ರತ್ನಗಣಿ; ನವರಸಾಮೃತಗಳಿಂದ ತುಂಬಿದ ಸಮುದ್ರ; ತೆರೆದಿಟ್ಟ ಪರಂಧಾಮ. ಸರ್ವವಿದ್ಯೆಗಳ ಮೂಲಭೂಮಿ; ಸರ್ವಶಾಸ್ತ್ರಗಳಿಂದ ತುಂಬಿದ ಆಶ್ರಯಸ್ಥಾನ, ಸರ್ವಧರ್ಮಗಳ ಮಾತೃಭೂಮಿ; ಸಜ್ಜನರ ಪ್ರೇಮಪೂರಿತ ಮಿತ್ರ; ಸರಸ್ವತಿಯ ಲಾವಣ್ಯ ರತ್ನಗಳ ಭಂಡಾರ; ಜ್ಞಾನಾಮೃತಪೂರ್ಣ ಗಂಗೆ; ವಿವೇಕ ಕ್ಷೀರಸಮುದ್ರದ ನವಲಕ್ಷ್ಮಿ"- ಗೀತೆ ಮಹಾನುಭಾವರ ದೃಷ್ಟಿಯಲ್ಲಿ ಎಂತಹ ಪೂಜ್ಯ ಸ್ಥಾನವನ್ನು ಅಲಂಕರಿಸಿದೆ ಎನ್ನುವುದನ್ನು ಈ ಮೇಲಿನ ವಾಕ್ಯಗಳು ನಿದರ್ಶಿಸುತ್ತವೆ.

## ಗೀತೋಪನಿಷತ್ತು

ಗೀತೆಯ ಬಗ್ಗೆ ಲಭ್ಯವಿರುವ ಇನ್ನೂ ಕೆಲವು ವೈಚಿತ್ರ್ಯಗಳನ್ನು ಪರಿಶೀಲಿಸೋಣ- ವಿಷ್ಣುವಿನ ನಾಭಿ ಕಮಲದಿಂದ ಬ್ರಹ್ಮದೇವನು ಆವಿರ್ಭವಿಸಿದನೆಂದು ಶಾಸ್ತ್ರಗಳ ಪ್ರತೀತಿ. ಬ್ರಹ್ಮದೇವನಿಂದ ವೇದಗಳು ಉತ್ಪತ್ತಿಯಾಗಿವೆ ಎನ್ನುವುದು ಲೋಕದಲ್ಲಿ ವಿಖ್ಯಾತವಾದ ವಿಷಯ. ಭಗವದ್ಗೀತೆಯಾದರೋ ನೇರವಾಗಿ ವಿಷ್ಣುಮೂರ್ತಿಯ ಮುಖ ಕಮಲದಿಂದ ಜನ್ಮಿಸಿದೆ. ಮುಖಕಮಲವೆಲ್ಲಿ? ನಾಭಿಕಮಲವೆಲ್ಲಿ? ಆದುದರಿಂದಲೇ ವೇದಗಳಿಗಿಂತ ಗೀತೆ ಭಗವಂತನಿಗೆ ಬಹು ಆಪ್ತವಾದುದೆಂದು ಸ್ಪಷ್ಟವಾಗುತ್ತದೆ. ಈ ಕೆಳಗಿನ ಮಹಾಭಾರತದ ವಾಕ್ಯಗಳು ಈ ಅರ್ಥವನ್ನೇ ಹೇಳುತ್ತಿವೆ.

**ಗೀತಾ ಸುಗೀತಾ ಕರ್ತವ್ಯಾ ಕಿಮನ್ಯೈಃ ಶಾಸ್ತ್ರ ವಿಸ್ತರೈಃ**
**ಯಾ ಸ್ವಯಂ ಪದ್ಮನಾಭಸ್ಯ ಮುಖಪದ್ಮಾದ್ವಿನಿಸ್ಸೃತಾ** (ಭಾರತ-ಭೀಷ್ಮಪರ್ವ ೪-೩೧)

"ಗೀತೆ ಸ್ವಯಂ ವಿಷ್ಣುಭಗವಾನನ ಮುಖಕಮಲದಿಂದ ಹೊರ ಬಂದಿದೆಯಾದ್ದರಿಂದ ಇದನ್ನು ಚೆನ್ನಾಗಿ ಕರತಲಾಮಲಕ ಮಾಡಿಕೊಂಡರೆ ಸಾಕು. ಇತರ ಶಾಸ್ತ್ರಗಳಿಂದೇನು ಪ್ರಯೋಜನ? "ಗೀತೆಯ ಮಹಿಮೆಯನ್ನು ವರ್ಣಿಸಲು ಇದಕ್ಕಿಂತ ಅಧಿಕವಾದ ಪ್ರಮಾಣವೇನು ಬೇಕು? ಕೆಲವರು ಗೀತೆಯನ್ನು ಸ್ಮೃತಿಗೆ ಹೋಲಿಸುವರು. ಈಶ್ವರ ನಿಶ್ವಾಸ ಶ್ರುತಿ ಆಗಿರುವಾಗ ಈಶ್ವರವಾಣಿ ಸ್ಮೃತಿ ಹೇಗಾಗುವುದೆಂದು ವಲ್ಲಭಾಚಾರ್ಯರು ಪ್ರಶ್ನಿಸಿದ್ದಾರೆ. ಮತ್ತೆ ಭಗವದ್ಗೀತೆಯ ಪ್ರತಿ ಅಧ್ಯಾಯದ ಕೊನೆಯಲ್ಲಿ- 'ಇತಿ ಶ್ರೀಮದ್ಭಗವದ್ಗೀತಾಸೂಪನಿಷತ್ಸು ಬ್ರಹ್ಮ ವಿದ್ಯಾಯಾಂ ಯೋಗಶಾಸ್ತ್ರೇ ಶ್ರೀಕೃಷ್ಣಾರ್ಜುನ ಸಂವಾದೇ' ಎನ್ನುವ ಸಂಕಲ್ಪವಿದೆ. ಅದರಲ್ಲಿ ಉಪನಿಷತ್ಸು= 'ಉಪನಿಷತ್ತುಗಳಲ್ಲಿ' ಎಂದು ಹೇಳಲ್ಪಟ್ಟಿದೆಯಾದ್ದರಿಂದ, ಗೀತೆ ವೇದಾಂತದ ಉಪನಿಷತ್ತುಗಳಿಗೆ ಸೇರಿರುವುದೇ ಎಂದು ಸ್ಪಷ್ಟವಾಗುತ್ತಿದೆ. ಆದ್ದರಿಂದ ಇದನ್ನು 'ಗೀತೋಪನಿಷತ್ತು' ಎಂದರೆ ತಪ್ಪೇ ಇಲ್ಲ. ವೇದಗಳಂತೆಯೇ ಇದು ಅಮರವಾಣಿಯೆನ್ನುವುದರಲ್ಲಿ ಯಾವ ಸಂದೇಹವೂ ಇಲ್ಲ.

## ಪ್ರಸ್ಥಾನತ್ರಯದಲ್ಲಿ ಗೀತೆ

ಆಧ್ಯಾತ್ಮ ವಾಙ್ಮಯದಲ್ಲಿ ಮುಮುಕ್ಷುಗಳಿಗೆ ಪ್ರಸ್ಥಾನತ್ರಯವು ಅತಿಮುಖ್ಯವಾದುದು. ಪ್ರಸ್ಥಾನತ್ರಯದ ಪರಿಚಯವಿಲ್ಲದೇ ಇದ್ದಲ್ಲಿ ಪರಮಾರ್ಥ ತತ್ವವು ಬೋಧ್ಯವಲ್ಲ. ದಶೋಪನಿಷತ್ತುಗಳು, ಭಗವದ್ಗೀತೆ, ಬ್ರಹ್ಮಸೂತ್ರಗಳು- ಈ ಮೂರನ್ನೂ ಸೇರಿಸಿ ಪ್ರಸ್ಥಾನತ್ರಯವೆನ್ನುವರು. ಧರ್ಮಸೂಕ್ಷ್ಮಗಳಿಂದ ತುಂಬಿ ತುಳುಕುತ್ತಿರುವುದರಿಂದ ಗೀತೆ ಪ್ರಸ್ಥಾನತ್ರಯದಲ್ಲಿ ತನ್ನ ಸ್ಥಾನವನ್ನು ಸಂಪಾದಿಸಿಕೊಳ್ಳಲು ಸಾಧ್ಯವಾಗಿದೆ. ಉಪನಿಷತ್ತು ಹಾಗೂ ಬ್ರಹ್ಮಸೂತ್ರಗಳ ಭಾವಗಳು ಗೀತೆಯಲ್ಲಿಯೂ ಇರುವುದರಿಂದ, ಅಲ್ಲದೆ ಭಾಷೆ ಹಾಗೂ ಶೈಲಿ ಸುಲಭವಾಗಿರುವುದರಿಂದ ಗೀತೆ ಜನಗಳ ಮೇಲೆ ವಿಶೇಷ ಪ್ರಭಾವವನ್ನು ಬೀರಿದೆ.

"ನಾನು ಗೀತೆಯನ್ನು ಆಶ್ರಯಿಸಿಕೊಂಡಿದ್ದೇನೆ. ಗೀತೆಯೇ ನನ್ನ ಸುಂದರ ಮಂದಿರ. ಗೀತಾಜ್ಞಾನವನ್ನವಲಂಬಿಸಿಯೇ ಮೂರು ಲೋಕಗಳನ್ನು ನಾನು

ಪಾಲಿಸುತ್ತಿದ್ದೇನೆ"* ಎಂದು ಗೀತಾಮಹಾತ್ಮೆಯಲ್ಲಿ ವಿಷ್ಣುವು ಹೇಳಿದ ಮಾತುಗಳು ಗೀತೆಯ ಮಹೋನ್ನತ ಸ್ಥಿತಿಯನ್ನು, ಪ್ರಾಧಾನ್ಯತೆಯನ್ನು ಸಾರುತ್ತಿವೆ. ಮತ್ತೆ ಗೀತಾಶ್ರಯದಿಂದಲೇ ಭಗವಂತನು ತ್ರಿಲೋಕಗಳನ್ನು, ಬ್ರಹ್ಮಾಂಡವೆಲ್ಲವನ್ನೂ ಪಾಲಿಸುತ್ತಿರಬೇಕಾದರೆ ಮಾನವನು ಒಂದು ಚಿಕ್ಕ ಗೃಹವನ್ನು ಪಾಲಿಸಲಾರನೇ? ಕುಟುಂಬವನ್ನು ಪಾಲಿಸಲಾರನೇ? ತಪ್ಪದೆ ಪಾಲಿಸಬಲ್ಲನು. "ಭೂ ಭುಜೋ ಜನಕಾದಯಃ" ಅಂದಹಾಗೆ ಜನಕಾದಿ ಮಹಾರಾಜರು ಹಾಗೆ ಪಾಲಿಸಲು ಶಕ್ಯರಾದರು. ಗೀತೆಯನ್ನು ಅವಲಂಬಿಸಿ ಅವರೆಲ್ಲರೂ ತಮ್ಮ ತಮ್ಮ ಸಂಸಾರಗಳನ್ನು, ತಮ್ಮ ತಮ್ಮ ಜೀವನ ನೌಕೆಗಳನ್ನು ಅಡೆತಡೆಗಳಿಲ್ಲದೆ ಸಾಗಿಸಿದರು. ಆದ್ದರಿಂದ ತಾಪತ್ರಯಗಳಿಂದ ಕೂಡಿದ ಈ ಘೋರ ಸಂಸಾರಾರಣ್ಯದಲ್ಲಿ ದುಃಖರಹಿತವಾಗಿ ಪ್ರಶಾಂತ ಜೀವನವನ್ನು ಬಯಸುವ ಪ್ರತಿಯೊಬ್ಬರೂ ಗೀತೆಯ ಸಹಾಯವನ್ನು ಪಡೆಯಲೇಬೇಕು.

**ಗೀತಾ ರಕ್ಷತಿ ರಕ್ಷಿತಾ**

ಯಾರು ಗೀತೆಯನ್ನು ರಕ್ಷಿಸುತ್ತಾರೋ ಅವರನ್ನು ಗೀತೆ ರಕ್ಷಿಸುತ್ತದೆ. ಅಂದರೆ ಗೀತೆಯನ್ನು ಯಾರು ಆದರಿಸುವರೋ, ಆಶ್ರಯಿಸುವರೋ, ಅನುಷ್ಠಾನಿಸುವರೋ ಅವರನ್ನು ಗೀತೆ ಭವಸಾಗರದಿಂದ ಕಾಪಾಡುತ್ತದೆಂದರ್ಥ. ಆದ್ದರಿಂದಲೇ ದುಃಖಮಯವಾದ ಈ ಸಂಸಾರ ಸಮುದ್ರವನ್ನು ಯಾರು ದಾಟಲಿಚ್ಛಿಸುವರೋ ಅವರು ಗೀತೆ ಎಂಬ ನೌಕೆಯನ್ನು ತಪ್ಪದೆ ಆಶ್ರಯಿಸಬೇಕೆಂದು ಶಾಸ್ತ್ರಗಳು ಉದ್ಘೋಷಿಸುತ್ತವೆ.@

## ಕಲಿಕಾಲಕ್ಕೆ ತಿರುಮಂತ್ರ

ಕಲಿಕಾಲದಲ್ಲಿ ಧರ್ಮವು ಬಹುಶಃ ದುರ್ಭರವಾಗಿದೆ. ಇಲ್ಲ ಕಲಿ ತನ್ನ ಸರ್ವಶಕ್ತಿಯಿಂದ ವಿಜೃಂಭಿಸಿ ಜನರನ್ನು ಕುಮಾರ್ಗದಲ್ಲಿ ನಡೆಸಿ ಭ್ರಷ್ಟರನ್ನಾಗಿ ಮಾಡಬೇಕೆಂದಿದ್ದರೂ ಇರಬಹುದು ಆದರೆ ದಯಾರ್ದ್ರ ಹೃದಯದ ಪರಮಾತ್ಮ ಕೃಷ್ಣಾವತಾರವನ್ನೆತ್ತಿ ಸರಿಯಾಗಿ ಕಲಿಕಾಲಕ್ಕೆ ಸ್ವಲ್ಪಮುಂದೆ ಗೀತಾಮೃತವನ್ನು ಜನಗಳಿಗೆ ಧಾರೆಯೆರೆದರು. ಹಾಗಿಲ್ಲದಿದ್ದಲ್ಲಿ ಕೃತಯುಗದಲ್ಲಿ ಇದರ ಜೋಲಿಗೆ ಏಕೆ ಹೋಗಲಿಲ್ಲ? ತ್ರೇತಾಯುಗದಲ್ಲಿ ಇದರ ಮಾತೇಕೆ ಊಹಿಸಲಿಲ್ಲ? ದ್ವಾಪರಯುಗದ ಕೊನೆಯವರೆಗೂ ಏಕೆ ಕಾದಿರಬೇಕಿತ್ತು? ರೋಗ ಬಲವಾದನಂತರ ಸರಿಯಾದ ಔಷಧವನ್ನೀಯಬೇಕೆಂದು ಬಹುಶಃ ಭಾವಿಸಿದಂತಿದೆ. ಯಾವುದು ಏನೇ ಆಗಲಿ, ಕಲಿದೋಷದ ಭಯ ಜನಗಳಿಗಿನ್ನಿಲ್ಲ. ಮಾಂತ್ರಿಕನಿಗೆ ಗ್ರಹಬಾಧೆಯಿಲ್ಲದಿರುವಂತೆ ಗೀತಾಮಂತ್ರ ಜಪಿಸುವ ಮಾನವನಿಗೆ ಸಂಸಾರ ದೋಷಗಳು ಅಂಟುವುದಿಲ್ಲ. ಒಂದುವೇಳೆ ಬಂದರೂ ಅಶೇಷವಾಗಿ ನಿರ್ಮೂಲವಾಗುವುವು.

**ಪಾಠಮಾತ್ರಪರಾಭೂತ ಕಾಲಕಿಂಕರಗರ್ಜಿತಮ್**

"ಗೀತಾಪಠಣದ ಮಾತ್ರದಿಂದಲೇ ಯಮಕಿಂಕರರ ಘರ್ಜನೆಗಳು ವ್ಯರ್ಥವಾಗಿ ಹೋಗುವುವು"- ಎಂದು ಪದ್ಮ ಪುರಾಣದ ಗೀತಾಮಹಾತ್ಮೆಯಲ್ಲಿ ತಿಳಿಯಪಡಿಸಲಾಗಿದೆ. ಗೀತೆಯಲ್ಲಿಯ ಪ್ರತಿಶಬ್ದವೂ ಪಾಪವನ್ನು ಭಸ್ಮೀಭೂತಮಾಡಬಲ್ಲ ಅಗ್ನಿಕಣದಂಥಹುದೆಂದು ಹೇಳುವುದರಲ್ಲಿ ಅತಿಶಯೋಕ್ತಿ ಏನೂ ಇಲ್ಲ. ಆದ್ದರಿಂದಲೇ ಪಂಡಿತರಿಂದ ಹಿಡಿದು ಪಾಮರರವರೆಗೆ, ರಾಜನಿಂದ ಹಿಡಿದು ದರಿದ್ರನವರೆಗೆ, ಭೂಪಾಲನಿಂದ ಹಿಡಿದು ಗೋಪಾಲನವರೆಗೆ ಎಲ್ಲಾ ಮಾನವಕೋಟಿ ಗೀತೆಯನ್ನು ಆಶ್ರಯಿಸಿ ಅದರಿಂದ ಶಾಂತಿ ಸೌಭಾಗ್ಯಗಳನ್ನು ಅನುಭವಿಸುತ್ತಿದ್ದಾರೆ. ಗೀತಾ ಗಂಗಾಪಾನದಿಂದ ಇಲ್ಲಿಯವರೆಗೆ ಅದೆಷ್ಟೋ ಜನ ಮುಕ್ತಿ ಹೊಂದಿದ್ದಾರೆ. ಈಗ ಹೊಂದುತ್ತಿದ್ದಾರೆ ಹಾಗು ಮುಂದೆ ಹೊಂದಬಲ್ಲರು.

**ಭಗವದ್ಗೀತಾ ಕಿಂಚದಧೀತಾ**
**ಗಂಗಾಜಲಲವಕಣಿಕಾ ಪೀತಾ**
**ಸಕೃದಪಿಯೇನ ಮುರಾರಿ ಸಮರ್ಚಾ**
**ತಸ್ಯಕರೋತಿ ಯಮೋಽಪಿ ನ ಚರ್ಚಾಮ್**

ಭಗವದ್ಗೀತೆಯ ಸ್ವಲ್ಪ ಅಧ್ಯಯನ ಮಾಡಿದರೂ, ಗಂಗಾಜಲವನ್ನು ಸ್ವಲ್ಪ ಪಾನಮಾಡಿದರೂ, ವಿಷ್ಣು ಭಗವಂತನನ್ನು ಒಂದು ಪರ್ಯಾಯ ಪೂಜಿಸಿದರೂ, ಇನ್ನು ಯಮನು ಅವರ ಬಳಿ ಸುಳಿಯಲಾರನು. ಆದ್ದರಿಂದ ಗೀತೆಯ ಮೇಲೆ ಪೂರ್ಣವಿಶ್ವಾಸವನ್ನಿಟ್ಟು ಅದರಲ್ಲಿಯ ಸತ್ಯಗಳನ್ನು ಅನುಷ್ಠಾನ ಮಾಡಿಕೊಂಡು, ನಿರತಿಶಯಾನಂದವನ್ನು ಈ ಜನ್ಮದಲ್ಲೇ ಪಡೆಯಲು ಬದ್ಧಕಂಕಣರಾಗಬೇಕು.

## ನಿತ್ಯಜೀವನ ಸಂಗಾತಿ

ಗೀತೆಯು ಕೇವಲ ಕೃಷ್ಣಾರ್ಜುನರ ಸಂಭಾಷಣೆಯಲ್ಲ. ಅದು ಪ್ರತಿಯೊಬ್ಬರ ಹೃದಯದಲ್ಲಿ ನಿರಂತರ ನಡೆಯುತ್ತಿರುವ ಸಂಭಾಷಣೆ. ಅರ್ಜುನನ ಹಾಗೆ ನಮ್ಮ ಕರ್ಣಗಳನ್ನು ಶ್ರೀಕೃಷ್ಣಪರಮಾತ್ಮನೆಡೆಗೆ ತಿರುಗಿಸಿದಲ್ಲಿ, ಆ ದೈವವಾಣಿ ಸರ್ವರಿಗೂ ಕೇಳಿಸಬಲ್ಲದು. ಸಾಮಾನ್ಯ ಗ್ರಂಥದಂತೆ ಇದನ್ನು ಒಂದು ಸಾರಿ ಪಠಿಸಿ ಪಕ್ಕಕ್ಕೆ ಇಡಬಾರದು. ಓದಿ ಆಕಡೆ ಬಿಸಾಕಲು ಇದೇನು ಕಾದಂಬರಿಯಲ್ಲ. ಇದು ನಿತ್ಯಜೀವನ ಸಂಗಾತಿ. ನಿರಂತರವಾಗಿ ಇದನ್ನು ಅಧ್ಯಯನ ಮಾಡುತ್ತ ದೈನಂದಿನ ಜೀವನದಲ್ಲಿ ಅದರ ಧರ್ಮಗಳನ್ನು ಅಳವಡಿಸಿಕೊಳ್ಳುವಂತಾಗಬೇಕು. ಆಪತ್ತುಗಳಲ್ಲಿ, ಸಂಸಾರಿಕ ಕ್ಲೇಶಗಳಲ್ಲಿ ಅದು ಜೀವಿಗೆ ನೀಡುವ ಉಪಕಾರವು ಅಮೋಘವಾದುದು. ರೋಗಿಯ ಪಕ್ಕದಲ್ಲೇ ವೈದ್ಯನಿದ್ದರೆ ರೋಗಿಗೆ ಎಷ್ಟು ಧೈರ್ಯವು ಇರುತ್ತದೆಯೋ, ಸಂಶಯಗಳು ನಿವಾರಣೆಯಾಗದೆ ಕಕ್ಕಾಬಿಕ್ಕಿಯಾಗಿರುವ ಶಿಷ್ಯನ ಬಳಿ ಅನುಭವಜ್ಞನಾದ ಸದ್ಗುರುವಿದ್ದರೆ ಶಿಷ್ಯನಿಗೆ ಎಷ್ಟು ಆನಂದವಾಗುವುದೋ, ಭವದುಃಖ ಪೀಡಿತನಾದ ಮನುಜನ ಬಳಿ ಗೀತೆಯಿದ್ದರೆ ಅಂತಹ ಉತ್ಸಾಹ ಆತನಿಗೆ ಲಭಿಸುತ್ತದೆ. ಗಾಂಧೀಮಹಾತ್ಮನ ಅನುಭವ ಪೂರ್ವಕವಾದ ಈ ಕೆಳಗಿನ ಮಾತುಗಳು ಸಾಧಕರಿಗೆ ಪ್ರೋತ್ಸಾಹದಾಯಕವಾಗಿವೆ.

"ಸಂಶಯಗಳು ನನ್ನನ್ನಾವರಿಸಿದಾಗ, ಸಂಕಟಗಳು ಸಂಪ್ರಾಪ್ತವಾದಾಗ, ನಿರಾಶೆ ನಿರುತ್ಸಾಹಗಳು ಉಂಟಾದಾಗ ನಾನು ಭಗವದ್ಗೀತೆಯನ್ನು ತೆರೆದು ನೋಡುವೆನು. ಅದರಲ್ಲಿಯ ಯಾವುದೋ ಒಂದು ಶ್ಲೋಕ ನನ್ನನ್ನು ಸಾಂತ್ವನಗೊಳಿಸುವುದು. ತತ್ಫಲಿತವಾಗಿ ಮಹಾವಿಪತ್ಕರ ಪರಿಸ್ಥಿತಿಯಲ್ಲಿಯೂ ಕೂಡ ನನ್ನ ಮುಖದ ಮೇಲೆ ಮುಗುಳ್ನಗೆ ತಾಂಡವವಾಡುತ್ತದೆ. ನನ್ನ ಜೀವನವು ಅನೇಕ ಅಡೆತಡೆಗಳಿಂದ ಕೂಡಿದ್ದರೂ, ಘೋರ ಸಂಘಟನೆಗಳನ್ನು ನಾನು ಎದುರಿಸಬೇಕಾಗಿಬಂದಿದ್ದರೂ, ಅವು ಯಾವುವೂ ನನ್ನ ಮನಸ್ಸಿನ ಮೇಲೆ

---

* ಗೀತಾಶ್ರಯೋಹಂ ತಿಷ್ಠಾಮಿ ಗೀತಾಮೇಚೋತ್ತಮಮ್ ಗೃಹಮ್। ಗೀತಾಜ್ಞಾನ ಮುಪಾಶ್ರಿತ್ಯ ತ್ರೀನ್ಲೋಕಾನ್ ಪಾಲಯಾಮ್ಯಹಮ್ (ಗೀತಾ. ಮ. ೭)

@ ಸಂಸಾರಸಾಗರಂ ಘೋರಂ ತರ್ತು ಮಿಚ್ಛತಿ ಯೋ ನರಃ ಗೀತಾ ನಾವಂ ಸಮಾಸಾದ್ಯ ಪಾರಂ ಯಾತಿ ಸುಖೇನ ಸಃ (ವೈಷ್ಣವೀಯ ತಂತ್ರಸಾರ)

ಲವಲೇಶ ಅಶಾಂತತೆಯನ್ನು ಉಂಟುಮಾಡಲಿಲ್ಲ ಎನ್ನುವುದಕ್ಕೆ ಕಾರಣ ಗೀತಾ ಪ್ರಬೋಧೆಯ ಸತ್ಫಲಿತವೇ ಆಗಿದೆ." ಆದ್ದರಿಂದಲೇ ಇರಬಹುದು, ನಮ್ಮ ಹಿರಿಯರು ಪಾರಾಯಣವೆಂದು ಗೀತೆಯ ಪಠಣದ ಏರ್ಪಾಟು ಮಾಡಿ ಪ್ರತಿನಿತ್ಯವೂ ಅದನ್ನು ಮರೆಯದ ಹಾಗೆ ಇರಲು ನಿಯಮವನ್ನು ವಿಧಿಸಿದ್ದಾರೆ. ಆ ಪ್ರಕಾರವಾಗಿ ಮಾಡಿದ್ದಾದರೆ ಗೀತಾರ್ಥವು ಹೃದಯವನ್ನು ಪ್ರವೇಶಿಸಿ ಸಾಮಾನ್ಯ ಜೀವನವು ದಿವ್ಯ ಜೀವನವಾಗುತ್ತದೆ. ಮತ್ತೆ ದಾನವನು ಮಾನವನಾಗಿ ಪರಿವರ್ತನೆಗೊಂಡು, ಕ್ರಮವಾಗಿ ಮಾಧವನ ಪರಿಣಿತಿ ಹೊಂದಬಲ್ಲನು. ಇದೇ ಗೀತೆಯ ಅನನ್ಯ ಪ್ರತಿಭೆ. ಇಂಥಹ ಮಹತ್ತರ ಗ್ರಂಥವನ್ನು ನಮಗೆ ಧಾರೆಯೆರೆದ ಶ್ರೀಕೃಷ್ಣಪರಮಾತ್ಮನಿಗೆ ಹಾಗೂ ಶ್ರೀವೇದವ್ಯಾಸರಿಗೆ ನಾವು ಎಷ್ಟೋ ಋಣಿಗಳಾಗಿದ್ದೇವೆ.

**ಶೋಕ ರಾಹಿತ್ಯ ಆನಂದ ಪ್ರಾಪ್ತಿಯೇ ಗೀತಾಲಕ್ಷ್ಯ**

ಗೀತೆ ಅಂದರೆ ಗಾನ ಸೃಷ್ಟಿಯಾಗಿದೆ ಎಂದು ಅರ್ಥ. ಗಾನವು ಆನಂದ ಸಮಯದಲ್ಲಿ ಆವಿರ್ಭವಿಸುವುದೇ ಹೊರತು ದುಃಖಸಮಯದಲ್ಲಲ್ಲ. ಆದ್ದರಿಂದ ಆನಂದವೇ ಗೀತೆಯ ಪ್ರಧಾನಲಕ್ಷ್ಯವೆಂದು, ಮುಮುಕ್ಷುಗಳು ಸದಾ ಜ್ಞಾಪಕದಲ್ಲಿಟ್ಟುಕೊಂಡಿರಬೇಕು. ಅಂತಹ ಆನಂದಾನುಭವದ ಮಾರ್ಗದರ್ಶನವೇ ಗೀತೆಯ ಉದ್ದೇಶ. ಹದಿನೆಂಟು ಅಧ್ಯಾಯಗಳ ಅಖಂಡವಾದ ಬೋಧೆಯಿಂದ ನಿರತಿಶಯಾನಂದವನ್ನು ಹೊಂದುವ ವಿವಿಧ ಉಪಾಯಗಳನ್ನು ಗೀತೆ ಮನುಜನ ಮುಂದೆ ಇಟ್ಟಿದೆ. ಆದ್ದರಿಂದಲೇ ಗೀತಾಪ್ರಬೋಧ 'ಅಶೋಚ್ಯಾನ್' (ಯಾರ ಬಗ್ಗೆ ಶೋಚಿಸುವುದು ಸಾಧುವಲ್ಲವೋ) ಎನ್ನುವ ಪದದಿಂದ ಪ್ರಾರಂಭವಾಗಿ 'ಮಾಶುಚಃ' (ಶೋಚಿಸ ಬಾರದು) ಅನ್ನುವ ಪದದಲ್ಲಿ ಸಮಾಪ್ತಿಯಾಗುತ್ತದೆ. ಶೋಕರಾಹಿತ್ಯ, ಆನಂದಪ್ರಾಪ್ತಿಗಳು ಗೀತೆಯಿಂದ ದೊರಕುವ ಮಹಾಫಲಗಳು. ಸಂಸಾರ ದಾವಾಗ್ನಿಯಿಂದ ಬಳಲುತ್ತ ತ್ರಿವಿಧ ತಾಪಗಳಿಂದ ದಗ್ಧರಾಗಿರುವ ಜನಸಮುದಾಯಕ್ಕೆ ಈ ಪ್ರಕಾರವಾಗಿ ಗೀತೆ ಮಹೋಪಕಾರ ಮಾಡುತ್ತದೆ. ಕಣ್ಣೀರು ಸುರಿಸುತ್ತಿರುವವರನ್ನು ಸಾಂತ್ವನಗೊಳಿಸುತ್ತದೆ. ಭಯಗ್ರಸ್ತನ ಬೆನ್ನು ತಟ್ಟಿ ಅವನ ಹೃದಯದಲ್ಲಿ ಧೈರ್ಯ ಸಂಚಾರವನ್ನುಂಟುಮಾಡುತ್ತದೆ. ನಿರಾಶೆಯಿಂದ ಜರ್ಝರಿತನಾದವನಿಗೆ ಉತ್ಸಾಹವನ್ನೀಯುತ್ತಿದೆ. ಆದ್ದರಿಂದ ಎಷ್ಟೋ ಜನ ಗೀತಾಮಾತೆಯ ಸನ್ನಿಧಿಯನ್ನು ಸೇರಿ ಹೃದಯ ಪರಿವರ್ತನೆ ಹೊಂದಿ ಧನ್ಯರಾಗುತ್ತಿದ್ದಾರೆ.

ಇಲ್ಲಿಯವರೆಗೆ ಗೀತೆಯ ಕೆಲವು ಮಹಿಮಾವಿಶೇಷಗಳನ್ನು ವಿಚಾರಿಸಿದೆವು. ಇನ್ನು ಗೀತಾಗ್ರಂಥದ ಆಂತರ್ಯವನ್ನು ಪ್ರವೇಶಿಸಿ ಅದರ ಅಂದ ಚೆಂದಗಳನ್ನು, ಹುಟ್ಟು ಪೂರ್ವೋತ್ತರಗಳನ್ನು ವೀಕ್ಷಿಸೋಣ. ಗೀತೆ ಕಾಲ್ಪನಿಕವಲ್ಲ, ಒಂದಾನೊಂದು ಚಾರಿತ್ರಿಕ ಘಟನೆ (Historical fact) ಯೆಂದು ಮೊಟ್ಟಮೊದಲು ತಿಳಿಯತಕ್ಕದ್ದು. ಶ್ರೀಕೃಷ್ಣ, ಅರ್ಜುನ ಮುಂತಾದವರೆಲ್ಲರೂ ಸ್ವಲ್ಪ ಕಾಲದ ಹಿಂದೆ ಭಾರತ ದೇಶದಲ್ಲಿ ಬೆಳಗಿದ ಚಾರಿತ್ರಕ ಪುರುಷರೇ ಹೊರತು ಕಾಲ್ಪನಿಕ ವ್ಯಕ್ತಿಗಳಲ್ಲ. ಈ ಸತ್ಯವನ್ನು ತಿಳಿದುಕೊಂಡಲ್ಲಿ ಗೀತೆಯ ಮೇಲಿನ ವಿಶ್ವಾಸ ಇನ್ನೂ ಅಧಿಕವಾಗುತ್ತದೆ.

....................

# ಗೀತಾವತರಣ

ಪಾಂಡವರು, ಕೌರವರು ಕಲೆತು ಬೆರೆತು ಅನ್ಯೋನ್ಯ ಮೈತ್ರಿಯಿಂದ ಕಾಲವನ್ನು ಕಳೆಯುತ್ತಿರುವ ದಿನಗಳಂದು ಅಸೂಯೆ ಎನ್ನುವ ಬೇರುಹುಳು ದುರ್ಯೋಧನನ ಚಿತ್ತದಲ್ಲಿ ಪ್ರವೇಶಿಸಿತು. ಕ್ರಮವಾಗಿ ಇದು ಆತನ ವಿವೇಕವನ್ನು ನಾಶಮಾಡತೊಡಗಿತು. ತತ್ಫಲಿತವಾಗಿ ಆತನು, ಶಕುನಿ ಮುಂತಾದವರ ಸಹಾಯದಿಂದ ವಕ್ರ ಮಾರ್ಗಗಳನ್ನನುಸರಿಸಿ ಪಾಂಡವರನ್ನು ಜೂಜಿನಲ್ಲಿ ಸೋಲಿಸಿ ಅವರ ರಾಜ್ಯವನ್ನು ಅಪಹರಿಸಿ ಹನ್ನೆರಡು ವರ್ಷಗಳ ವನವಾಸ, ಒಂದು ವರ್ಷ ಅಜ್ಞಾತವಾಸ ಅವರಿಂದ ಮಾಡಿಸಿದನು. ನಂತರವೂ ಸಹ ಅವರ ರಾಜ್ಯವನ್ನು ಅವರಿಗೆ ಕೊಡದೆ ನಾನಾ ಬಾಧೆಗಳನ್ನು ಕೊಟ್ಟನು. ಅರ್ಧರಾಜ್ಯವಲ್ಲ, ಕಾಲು ರಾಜ್ಯವೂ ಅಲ್ಲ, ಕೊನೆಗೆ ಐದು ಗ್ರಾಮಗಳೂ ಅಲ್ಲ, ಸೂಜಿ ಮೊನೆಯಷ್ಟು ಸ್ಥಳವಾದರೂ ಪಾಂಡವರಿಗೆ ಕೊಡುವುದಿಲ್ಲವೆಂದು ದುರ್ಯೋಧನನು ಹಠವಿಡಿದನು. ನಂತರ ಶ್ರೀಕೃಷ್ಣ ರಾಯಭಾರ ನಡೆಯಿತು. ಆದರೂ ಪ್ರಯೋಜನವಾಗಲಿಲ್ಲ. ಪಾಂಡವರ ಕನಿಷ್ಠ ಕೋರಿಕೆಗಳನ್ನು ಕೂಡ ದುರ್ಯೋಧನನು ಅಹಂಕಾರ ಗರ್ವಿಷ್ಟನಾಗಿ ತಿರಸ್ಕರಿಸಿದ್ದರಿಂದ ಇನ್ನು ಬೇರೆ ಗತ್ಯಂತರವಿಲ್ಲದೆ ಪಾಂಡವರು ಧರ್ಮಯುದ್ಧಕ್ಕೆ ಸಿದ್ಧರಾಗಬೇಕಾಯಿತು. ಎರಡು ಪಕ್ಷಗಳ ಸೈನಿಕರು ಯುದ್ಧಕ್ಕೆ ಸನ್ನದ್ಧರಾದರು. ಧರ್ಮಕ್ಷೇತ್ರವಾದ ಕುರುಕ್ಷೇತ್ರದಲ್ಲಿ ಪಾಂಡವ ಕೌರವ ಸೇನೆಗಳು ಯುದ್ಧಸನ್ನದ್ಧರಾಗಿ ನಿಂತರು. ಶಂಖಗಳನ್ನು ಊದಿದರು. ಬಾಣಗಳನ್ನು ಬಿಲ್ಲಿಗೇರಿಸುತ್ತಿರುವ ಸಮಯದಲ್ಲಿ ಪಾರ್ಥನ ಕೋರಿಕೆಯ ಮೇರೆಗೆ ಪಾರ್ಥಸಾರಥಿ ರಥವನ್ನು ಎರಡು ಸೇನೆಗಳ ಮಧ್ಯೆ ನಿಲ್ಲಿಸಿದನು. ಶತ್ರು ಸೈನ್ಯದಲ್ಲಿಯ ಅಣ್ಣ ತಮ್ಮಂದಿರು, ಭಾವಂದಿರು, ಭಾವ ಮೈದುನರು, ಪಿತರು, ತಾತಂದಿರು, ಗುರುಗಳು ಮುಂತಾದವರನ್ನೆಲ್ಲಾ ನೋಡಿ, ಅರ್ಜುನನು ಈ 'ಸ್ವಜನರನ್ನು ನಾನು ಹೇಗೆ ವಧಿಸಲಿ? ಇದು ಪಾಪಕ್ಕೆ ಕಾರಣವಲ್ಲವೇ! 'ಈ ಬಂಧುಗಳನ್ನು ಸಾಯಿಸಿ ರಾಜ್ಯವಾಳುವುದಕ್ಕಿಂತ ಭಿಕ್ಷಾಟನೆ ಮಾಡಿ ಜೀವಿಸುವುದೇ ಮೇಲು', ಎಂದು ಪರಿಪರಿ ವಿಧಗಳಲ್ಲಿ ನೊಂದು ಶೋಕತಪ್ತನಾಗಿ ಗಾಂಡೀವವನ್ನು ಕೆಳಗೆ ಜಾರಿಬಿಟ್ಟು ರಥದಲ್ಲಿ ಕುಸಿದು ಬಿದ್ದನು. ಧರ್ಮಾಧರ್ಮ ನಿರ್ಣಯವನ್ನು ಖುದ್ದು ಮಾಡಲಾರದೆ ಗತ್ಯಂತರವಿಲ್ಲದೆ ಶ್ರೀಕೃಷ್ಣನ ಪಾದಗಳ ಮೇಲೆ ಬಿದ್ದು-

**'ಶಿಷ್ಯಸ್ತೇಽಹಂ ಶಾಧಿ ಮಾಂ ತ್ವಾಂ ಪ್ರಪನ್ನಮ್'**

'ನಾನು ನಿನ್ನ ಶಿಷ್ಯ, ನಿನ್ನ ಶರಣು ಹೊಂದಿರುವೆನು, (ಕರ್ತವ್ಯವನ್ನು ಬೋಧಿಸಿ) ನನ್ನನ್ನು ಅನುಗ್ರಹಿಸು'- ಎಂದು ಶರಣಾಗತನಾಗಿ, ದೀನನಾಗಿ ಬೇಡಿಕೊಂಡನು. ಆಗ ಭಗವಂತನು ಅರ್ಜುನನಿಗೆ ಗೀತೋಪದೇಶವನ್ನು ಮಾಡಿದನು. ಗೀತೆಯ ಪೂರ್ವೋತ್ತರ ಇದು. ಯುದ್ಧದಲ್ಲಿ ಅರ್ಜುನನ ಅಹಂ, ಮಮಕಾರ (ನಾನು ನನ್ನವರು) ಅನ್ನುವ ರೂಪಗಳಲ್ಲಿ ಮೋಹವು (ಅಜ್ಞಾನ) ಪ್ರಬಲವಾಗಿ ಆತನನ್ನು ಕರ್ತವ್ಯ ಚ್ಯುತನನ್ನಾಗಿಸಿಬಿಟ್ಟಿತ್ತು. ಶ್ರೀಕೃಷ್ಣನ ಬೋಧೆ ಅರ್ಜುನನ ಮೋಹಜಾಲಕ್ಕೆ ಗದಾ ಪ್ರಹರಣವಾಗಿ ಬಂತು. ದೇಹಾಭಿಮಾನದಿಂದ ತುಂಬಿಹೋದ ಅರ್ಜುನನ ಈ ಬಲಹೀನತೆಯನ್ನು ಭಗವಂತನು ತನ್ನ ಆತ್ಮಜ್ಞಾನೋಪದೇಶದಿಂದ ಬೇರುಸಹಿತ ನಿರ್ಮೂಲ

ಮಾಡಿದನು. ಮತ್ತೆ "ನನ್ನ ಅಜ್ಞಾನವು ತೊಲಗಿದೆ, ನೀವು ಹೇಳಿದ ಹಾಗೆ ಆಚರಿಸುವೆನು" ಎಂದು ಕೊನೆಯಲ್ಲಿ ಅರ್ಜುನನ ಬಾಯಿಂದ ಬರುವ ಹಾಗೆ ಮಾಡಿದನು.

ಈ ಪ್ರಕಾರವಾಗಿ ಅರ್ಜುನನ ಅಜ್ಞಾನವನ್ನು ಹೋಗಲಾಡಿಸಿದ ಗೀತೆ ಬೇರೆ ಯಾರ ಅಜ್ಞಾನವನ್ನಾದರೂ ಹೋಗಲಾಡಿಸಬಲ್ಲದು. ಅರ್ಜುನನ ವಿಷಾದವನ್ನು ಅಂತ್ಯಗೊಳಿಸಿದ ಗೀತೆ ಬೇರೆ ಯಾರ ವಿಷಾದವನ್ನಾದರೂ ಅಂತ್ಯಗೊಳಿಸಬಲ್ಲದು. ಒಬ್ಬರ ರೋಗವನ್ನು ಗುಣಪಡಿಸಿದ ಔಷಧಿ ಬೇರೆಯವರ ಅದೇ ರೋಗವನ್ನು ಗುಣಪಡಿಸಬಲ್ಲದಲ್ಲವೇ? ಇದರಲ್ಲಿ ಯಾವ ರೀತಿಯ ಸಂಶಯವೂ ಇಲ್ಲ. ಪಾರ್ಥನ ಮೂಲಕ ಶ್ರೀಕೃಷ್ಣಮೂರ್ತಿ ಜನಸಾಮಾನ್ಯರಿಗೆಲ್ಲಾ ಉಪದೇಶವನ್ನು ಮಾಡಿದ್ದಾನೆಂದು ತಿಳಿಯುವುದೇ ಉಚಿತ. ಆದ್ದರಿಂದ ಪ್ರತಿಯೊಬ್ಬರೂ ಅವರವರ ಹೃದಯಗಳನ್ನು ನಿಗ್ರಹಿಸಿ ಕೊಂಡು ಅವರವರ ಚಿತ್ತಗಳನ್ನು ಚೆನ್ನಾಗಿ ಪರಿಶೋಧಿಸಿಕೊಂಡು, ಜನ್ಮಜನ್ಮಾಂತರಗಳಿಂದ ಮನೆ ಮಾಡಿಕೊಂಡಿರುವ ಕಾಮಕ್ರೋಧಾದಿಗಳನ್ನು ಅಜ್ಞಾನ ಅಂಧಕಾರಗಳನ್ನು ಗೀತಾಜ್ಞಾನ ಜ್ಯೋತಿಯಿಂದ ನಿರ್ಮೂಲನ ಮಾಡಿಕೊಂಡು ಬಂಧ ವಿಮುಕ್ತರಾಗಿ ಆನಂದವನ್ನು ಈ ಜೀವನದಲ್ಲಿಯೇ ಅನುಭವಿಸುವಂತಾಗಬೇಕು!

## ಗೀತೆಗೆ ಅಧಿಕಾರಿ

ಆದರೆ ಗೀತಾಗ್ರಂಥವನ್ನು ಪಠಿಸಲು ಯಾರು ಅರ್ಹರು ಎನ್ನುವ ಪ್ರಶ್ನೆ ಈವರೆಗೆ ಸಾಮಾನ್ಯವಾಗಿ ನಿಮಗೆ ಉದಯಿಸಿರಬಹುದು. ನೀರನ್ನು ಕುಡಿಯಲು ಯಾರಿಗೆ ಅಧಿಕಾರವಿದೆ? ಬಾಯಾರಿಕೆಗೊಂಡವನಿಗೆ. ಅನ್ನವನ್ನು ತಿನ್ನಲು ಯಾರಿಗೆ ಅಧಿಕಾರವಿದೆ? ಹಸಿದವನಿಗೆ. ಔಷಧವನ್ನು ಸೇವಿಸಲು ಯಾರಿಗೆ ಅಧಿಕಾರವಿದೆ? ರೋಗಿಗೆ. ಆದ್ದರಿಂದ ಭವರೋಗದಿಂದ ಬಳಲುತ್ತಿರುವವರೆಲ್ಲರೂ ಗೀತಾಜ್ಞಾನೌಷಧ ಸೇವನೆಗೆ ಅಧಿಕಾರಿಗಳೇ ಆಗಿದ್ದಾರೆ. ಆದರೆ ಭವರೋಗ ಪೀಡಿತರು ಯಾರು ಎನ್ನುವ ಸಂದೇಹ ಬರುತ್ತದೆ. ಹುಟ್ಟಿದವರೆಲ್ಲರೂ ಭವರೋಗ ಪೀಡಿತರೇ. ಹುಟ್ಟು ಸಾವುಗಳೆಂಬ ಈ ಚಕ್ರಕ್ಕೆ ಸಿಲುಕಿದ ವರೆಲ್ಲ ಯಾವುದೋ ವಿಧವಾಗಿ ಈ ರೋಗದಿಂದ ಬಳಲುತ್ತಿರುವವರೇ ಆಗಿದ್ದಾರೆ. ಆದ್ದರಿಂದ ಜಾತಿ, ಮತ, ಕುಲ ಹಾಗೂ ವಯಸ್ಸು ಎನ್ನುವ ಭೇದಗಳಿಲ್ಲದೆ ಸರ್ವರೂ ಗೀತಾಪಠಣಕ್ಕೆ ಗೀತಾ ಜ್ಞಾನೋಪಾರ್ಜನೆಗೆ ಅರ್ಹರೇ ಆಗಿದ್ದಾರೆ. ಆದರೆ ತನಗೆ ರೋಗವಿದೆಯೆಂದು ತಿಳಿದವನು ಮಾತ್ರವೇ ಔಷಧ ತೆಗೆದುಕೊಳ್ಳಲು ಪ್ರಯತ್ನಿಸುವನು. ಔಷಧದ ಮೇಲೆ, ವೈದ್ಯನ ಮೇಲೆ ವಿಶ್ವಾಸವಿರುವವನು ಮಾತ್ರವೇ ಔಷಧಕ್ಕೆ ಪ್ರಯತ್ನ ಪಟ್ಟಹಾಗೆ, ಜನನ ಮರಣ ರೂಪದ ಸಂಸಾರ ವ್ಯಾಧಿಯಿಂದ ತಾನು ಬಳಲುತ್ತಿದ್ದೇನೆಂದು ತಿಳಿದ ಮನುಜನು ಮಾತ್ರವೇ ಗೀತಾದಿ ಸದ್ಗ್ರಂಥ ಪಠಣದ ಮೊರೆ ಹೋಗುವನ್ನು. ಶಾಸ್ತ್ರಗಳ ಮೇಲೆಯೂ, ಅವುಗಳನ್ನು ಬೋಧಿಸಿದ ಪುಣ್ಯಪುರುಷರ ಮೇಲೆಯೂ ಅಚಲ ವಿಶ್ವಾಸ ಇರುವವನಿಗೆ ಮಾತ್ರ ಅವು ಉತ್ತಮವಾದ ಫಲಗಳನ್ನೀಯುವುವು. ಆದ್ದರಿಂದಲೇ ಶ್ರೀಕೃಷ್ಣಪರಮಾತ್ಮನು ಗೀತೆಯನ್ನು ಪಠಿಸುವುದಕ್ಕೆ ಯಾರು ಅಧಿಕಾರಿ ಎನ್ನುವ ಪ್ರಶ್ನೆಗೆ ಈ ರೀತಿ ಅಪ್ಪಣೆ ಕೊಟ್ಟಿದ್ದಾನೆ.

**ಇದಂ ತೇ ನಾತಪಸ್ಕಾಯ ನಾಭಕ್ತಾಯ ಕದಾಚನ।**
**ನಚಾಶುಶ್ರೂಷವೇ ವಾಚ್ಯಂ ನಚ ಮಾಂ ಯೋಽಭ್ಯಸೂಯತಿ॥** (೧೮-೬೭)

ಓ ಅರ್ಜುನಾ! ಈ ಗೀತಾಶಾಸ್ತ್ರವನ್ನು ಜನನ ಮರಣ ರೂಪದ ಸಂಸಾರದಿಂದ ತಪ್ಪಿಸಿಕೊಳ್ಳಬೇಕೆಂಬ ಮನೋವ್ಯಾಕುಲತೆಯಿಲ್ಲದವನಿಗಾಗಲಿ, ಗುರುವಿನ ಮೇಲೆ ಹಾಗು ಈಶ್ವರನ ಮೇಲೆ ಭಕ್ತಿಯಿಲ್ಲದವನಿಗಾಗಲಿ, ಹಿರಿಯರ ಶುಶ್ರೂಷೆಮಾಡದವನಿಗಾಗಲಿ, ನನ್ನನ್ನು (ಭಗವಂತನನ್ನು) ನಿಂದಿಸುವವನಿಗಾಗಲಿ ಬೋಧಿಸಬಾರದು. ಅಂತಹವನು ಇದನ್ನು ಓದಬಾರದು" ಎಂದು ಗೀತಾಂತ್ಯದಲ್ಲಿ ಪರಮಾತ್ಮನು ಅಪ್ಪಣೆಕೊಟ್ಟಿದ್ದಾನೆ. ಮತ್ತೆ "ಯಾರು ನನ್ನ ಈ ಗೀತಾತತ್ವವನ್ನು ಶ್ರದ್ಧೆಯುಳ್ಳವರಾಗಿ, ಅಸೂಯೆಯಿಲ್ಲದವರಾಗಿ ನಿತ್ಯವೂ ಆಚರಣೆಯಲ್ಲಿಟ್ಟಿರುವರೋ ಅವರು ಕರ್ಮ ಬಂಧನದಿಂದ ವಿಮುಕ್ತಿಗೊಳ್ಳುವರು. ಹಾಗಲ್ಲದೆ, ಯಾರು ಇದನ್ನು ದ್ವೇಷಿಸುವರೋ, ಹೇಳಿದ ಹಾಗೆ ಆಚರಿಸುವುದಿಲ್ಲವೋ ಅಂತಹವರನ್ನು ಸರ್ವಜ್ಞಾನ ರಹಿತರೆಂದು, ಬುದ್ಧಿಹೀನರೆಂದು ತಿಳಿಯುವುದು."*- ಎಂದು ಬೇರೊಂದು ಕಡೆ ಪ್ರಸ್ತಾಪಿಸಲಾಗಿದೆ. ಆದ್ದರಿಂದ ಶ್ರದ್ಧೆ, ವಿಶ್ವಾಸವುಳ್ಳವರೆಲ್ಲರೂ, ಅದರ ಮೇಲೆ ಕುತೂಹಲವುಳ್ಳವರೆಲ್ಲರೂ ಗೀತೆಗೆ ಅಧಿಕಾರಿಗಳೇ ಆಗಿದ್ದಾರೆ. 'ಮಾನವಾಃ' ಎಂಬ ಸರ್ವಸಾಮಾನ್ಯವಾದ (General term) ಪದವನ್ನು ಭಗವಂತನು ಪ್ರಯೋಗಿಸಿರುವನಾದ್ದರಿಂದ ಜಾತಿಮತ ಕುಲ ಭೇದಗಳಿಲ್ಲದೆ ಸಮಸ್ತ ಮಾನವ ಕೋಟಿ ಗೀತಾ ಸಂಸೇವನೆ ಮಾಡಬಹುದೆಂದು ಸ್ಪಷ್ಟೀಕರಿಸಿದಂತಾಗಿದೆ.

ಇನ್ನು ಗೀತೆಯ ಅಂತರ್ಯವನ್ನು ಪ್ರವೇಶಿಸಿ ಅದರಲ್ಲಿರುವ ವಿಶೇಷಗಳನ್ನು ಒಂದೊಂದಾಗಿ ಪರೀಕ್ಷಿಸೋಣ.

## ಗೀತೆಯಲ್ಲಿ ಅನುಷ್ಠಾನಕ್ಕಿರುವ ಪ್ರಾಧಾನ್ಯತೆ

ಸಿದ್ಧಾಂತಗಳನ್ನು ಒಂದೇ ಸಮನೆ ಹೇಳುವುದಕ್ಕಿಂತ ಅನುಷ್ಠಾನ ವಿಧಿಗಳನ್ನು ಒತ್ತಿ ಹೇಳುವುದು ಗೀತಾಚಾರ್ಯನಿಗೆ ಪರಮಪ್ರೀತಿ. ಆದ್ದರಿಂದಲೇ ಸಾಧ್ಯವಸ್ತುವಾದ ಪರಮಾತ್ಮನ ಬಗ್ಗೆ ಸ್ವಲ್ಪ ಮಾತ್ರವೇ ಹೇಳಿ, ಆ ಪರಮಾತ್ಮನನ್ನು ಸೇರಲು ಬೇಕಾದ ಸಾಧನೆಗಳನ್ನು ವಿಸ್ತಾರವಾಗಿ ಗೀತೆಯಲ್ಲಿ ಹೇಳಲಾಗಿದೆ. ಎರಡನೆಯ ಅಧ್ಯಾಯದ ಸ್ಥಿತಪ್ರಜ್ಞನ ಲಕ್ಷಣಗಳು, ಆರನೆಯ ಅಧ್ಯಾಯದ ಯೋಗಾಭ್ಯಾಸ ಪದ್ಧತಿ, ಹನ್ನೆರಡನೆಯ ಅಧ್ಯಾಯದ ಭಕ್ತನ ಲಕ್ಷಣಗಳು, ಹದಿಮೂರನೆಯ ಅಧ್ಯಾಯದ ಜ್ಞಾನಗುಣಗಳು, ಹದಿನಾರನೆಯ ಅಧ್ಯಾಯದ ದೈವೀಸಂಪದ್ವಿವರಣೆಗಳು, ಮುಂತಾದುವು ಇವುಗಳಿಗೆ ಉದಾಹರಣೆಗಳು. ಸಿದ್ಧಾಂತ ಪ್ರತಿಪಾದನೆಗಿಂತ ಅನುಷ್ಠಾನ ನಿರ್ವಹಣೆಯೇ ಬಹಳ ಶ್ರೇಷ್ಠವೆಂದು ಈ ಬೋಧನೆಗಳ ದ್ವಾರ ಭಗವಂತನು ತಿಳಿಯ ಹೇಳುತ್ತಿದ್ದಾನೆ. ಗೀತಾಗ್ರಂಥವನ್ನು ತೆರೆಯುತ್ತಲೇ ಮೊಟ್ಟಮೊದಲು ಈ ಸತ್ಯ ಕಣ್ಣಿಗೆ ಕಟ್ಟಿದ ಹಾಗೆ ಓದುಗನಿಗೆ ಭಾಸವಾಗುವುದು. ನೈತಿಕವಾಗಿ ಪತನ ಹೊಂದಿದವನಿಗೆ ಆಧ್ಯಾತ್ಮಿಕ ಸೂತ್ರಗಳು ಏನುಮಾಡಿದರೂ ಹೃದಯವನ್ನು

---

* ೧. ಯೇ ಮೇ ಮತಮಿದಂ ನಿತ್ಯಮನುತಿಷ್ಠಂತಿ ಮಾನವಾಃ। ಶ್ರದ್ಧಾವನ್ತೋಽನಸೂಯಂತೋ ಮುಚ್ಯನ್ತೇ ತೇಽಪಿ ಕರ್ಮಭಿಃ॥ (೩-೩೧)

೨. ಯೇ ತ್ವೇತದಭ್ಯಸೂಯಂತೋ ನಾನುತಿಷ್ಠಂತಿ ಮೇ ಮತಮ್। ಸರ್ವಜ್ಞಾನವಿಮೂಢಾಂಸ್ತಾನ್ ವಿದ್ಧಿ ನಷ್ಟಾನ ಚೇತಸಃ॥ (೩-೩೨)

ಪ್ರವೇಶಿಸಲಾರವು. ಚಿತ್ತಶುದ್ಧಿ ಯಿಲ್ಲದವನಿಗೆ ಜ್ಞಾನವು ಹಿಡಿಸದು. ಬಂಜರು ಪ್ರದೇಶದಲ್ಲಿ ಸಸ್ಯವು ವೃದ್ಧಿಯಾಗಲಾರದು. ಆದ್ದರಿಂದ ಹೃದಯ ನಿರ್ಮಲತೆಗೆ ಬೇಕಾದ ಸಾಧನೆಗಳು (Ethical training) ಜೀವಿಗೆ ಪ್ರಪ್ರಥಮವಾಗಿ ಅವಶ್ಯಕ. ಈ ಸತ್ಯವನ್ನು ಗುರ್ತಿಸಿಯೇ ಗೀತಾಚಾರ್ಯರು ಶೀಲನಿರ್ಮಾಣಕ್ಕೆ (Character-building) ವಿಶೇಷ ಪ್ರಾಧಾನ್ಯವನ್ನು ಕೊಟ್ಟಿದ್ದಾರೆ.

ಸಾಧ್ಯವಸ್ತುವಾದ ಪರಮಾತ್ಮನ ಮೇಲೆ ಇರುವ ಪ್ರೀತಿಯ ಒಂದಿಷ್ಟು ಭಾಗವನ್ನು ಸಾಧನೆಯಲ್ಲಿ ವಿನಿಯೋಗಿಸಿದ್ದೇ ಆದರೆ ಲಕ್ಷ್ಯವು ಕರತಲಾಮಲಕ ವಾಗುತ್ತದೆ. ಆದರೆ ಜನರು ಹಾಗೆ ಮಾಡುತ್ತಿಲ್ಲ. ದೇವರ ಪವಿತ್ರತೆ ಜೀವಿಗೆ ಬಂದಾಗ ಮಾತ್ರ ಮೋಕ್ಷವು ಸಿದ್ಧಿಸುತ್ತದೆ. ಇಲ್ಲದೆಹೋದಲ್ಲಿ ದೇವರಿಗೂ, ಜೀವಿಗೂ ಮಧ್ಯೆ ಇರುವ ದೂರ ಹಾಗೆಯೇ ಉಳಿದುಹೋಗುತ್ತದೆ.

**ಸತ್ವಪುರುಷಯೋಃ ಶುದ್ಧಿಸಾಮ್ಯೇ ಕೈವಲ್ಯಮ್**

ಚಿತ್ತವನ್ನು ಪರಮಾತ್ಮನಿಗೆ ಸಮಾನವಾದ ನಿರ್ಮಲತೆಗೆ ಒಯ್ಯುವುದೇ ಮೋಕ್ಷ, ಎಂದು ಪತಂಜಲಿ ಮಹರ್ಷಿ ನುಡಿದಿದ್ದಾರೆ. ಆದ್ದರಿಂದ ಚಿತ್ತ ನೈರ್ಮಲ್ಯಕ್ಕೆ ಬೇಕಾದ ಪರಿಕಾರಗಳ ಬಗ್ಗೆ ಮುಮುಕ್ಷುವು ತಿಳಿಯುವುದು ಅವಶ್ಯ. ಭಾರತವು ಪೂರ್ವದಲ್ಲಿ ತನಗೆ ಇದ್ದ ಔನ್ನತ್ಯವನ್ನೀಗ ಕಳೆದುಕೊಂಡಿರುವುದಕ್ಕೆ ಕಾರಣ ಲಕ್ಷ್ಯದ ಮೇಲಿರುವ ಆಸಕ್ತಿ, ಅದರ ಸಾಧನೆಗಳ ಮೇಲಿನ ನಿರಾಸಕ್ತಿಯೇ ಆಗಿದೆ. ಸಿದ್ಧಾಂತಗಳ ಮೇಲಿರುವ ಪ್ರೀತಿ ಆಚರಣೆಯಲ್ಲಿ ಕಂಡು ಬರದೇ ಇರುವುದರಿಂದ, ಸಾಧ್ಯವಸ್ತುವಿನ ಮೇಲಿರುವ ಪ್ರೇಮ ಸಾಧನೆಯಲ್ಲಿ ಉಪಲಬ್ಧವಿಲ್ಲದೇ ಇರುವುದರಿಂದ ಅನುಷ್ಠಾನ ವೇದಾಂತ ಕುಗ್ಗಿ 'ವಾಚಾ' ವೇದಾಂತ ಪ್ರಬಲವಾಗಿದೆ. ಇವು ಪೂರ್ವದ ಔನ್ನತ್ಯದ ಅಧೋಗತಿಗೆ ಕಾರಣಗಳು ಎಂದು ಜನರು ಜ್ಞಾಪಕದಲ್ಲಿಟ್ಟುಕೊಳ್ಳಬೇಕು. ಈ ಪದ್ಧತಿ ಗೀತಾಚಾರ್ಯರಿಗೆ ಸರಿಹೋಗದು. ಆದ್ದರಿಂದಲೇ ಜ್ಞೇಯವನ್ನು ಕಡಿಮೆ ಹೇಳಿ ಜ್ಞಾನವನ್ನು ವಿಸ್ತಾರವಾಗಿ ಗೀತೆಯಲ್ಲಿ ಪ್ರತಿಪಾದಿಸಿದ್ದಾರೆ. ಧ್ಯೇಯವನ್ನು ಸ್ವಲ್ಪ ಹೇಳಿ ಧ್ಯಾನವನ್ನು ಹೆಚ್ಚಾಗಿ ಬೋಧಿಸಿದ್ದಾರೆ. 'ಸಾಧ್ಯವನ್ನು' ಸ್ವಲ್ಪ ಪ್ರತಿಪಾದಿಸಿ 'ಸಾಧನೆಯನ್ನು' ಹೆಚ್ಚಾಗಿ ಪ್ರಚಾರ ಮಾಡಿದ್ದಾರೆ. ಗೀತಾಬೋಧೆಯಲ್ಲಿ ಸಾಧಕನು ಮೊಟ್ಟ ಮೊದಲಿಗೆ ಗ್ರಹಿಸಬೇಕಾದ ಪರಮರಹಸ್ಯವಿದೆಯೇ ಆಗಿದೆ. ಗೀತೆ ಆಚರಣಾತ್ಮಕ ವಿಜ್ಞಾನ (Practical Science) ಎಂದು ಎಲ್ಲರೂ ಗುರ್ತಿಸುವಂತಾಗಲಿ! ಸದಾಚರಣೆಯಿಂದ ಮಾನವಕೋಟಿ ಮೋಕ್ಷ ಹೊಂದುವಂತಾಗಲಿ!

## ಗೀತೆ ವ್ಯವಹಾರವನ್ನು ವೇದಾಂತಸ್ಥಾಯಿಗೆ ಒಯ್ಯುವುದು

"ಕರ್ಮ ಕೆಟ್ಟದ್ದಲ್ಲ ವ್ಯವಹಾರ ದೂಷ್ಯವಲ್ಲ- ನಿನ್ನ ದೃಷ್ಟಿಯನ್ನು ಪವಿತ್ರಗೊಳಿಸಿಕೋ. ನೀನು ಮಾಡುವ ಕರ್ಮವನ್ನು ಮಹಾಯಜ್ಞವೆಂದು ಭಾವಿಸು. ನಿನ್ನ ಭಾವವನ್ನು ಶುದ್ಧಿಗೊಳಿಸಿಕೋ. ಆಗ ನೀನು ಮಾಡುವ ವ್ಯವಹಾರವು ಶ್ರೇಯಸ್ಕರವಾಗಿ ಪರಿವರ್ತನೆಗೊಳ್ಳುತ್ತದೆ." ಎಂದು ಗೀತೆ ಘೋಷಿಸುತ್ತಿದೆ. ಕರ್ಮಮಾಡದೆ ಮನುಷ್ಯನು ಒಂದು ಕ್ಷಣವೂ ಇರಲಾರನು. ಆದ್ದರಿಂದ ಕರ್ಮವನ್ನು ದೂಷಿಸುತ್ತ, ನಿಷೇಧಿಸುತ್ತ ಮಾಡುವ ಬೋಧನೆಗಳು ಸಾಮಾನ್ಯನಿಗೆ ಪ್ರಯೋಜನಕರವಾಗಲಾರವು. ಮೇಲಾಗಿ ಅಂತಹ ಬೋಧೆಗಳಿಂದ ಆತನು ಅಕರ್ಮಣಿಯಾಗಿ, ಜಡಪ್ರಾಯನಾಗಿ ತಯಾರಾಗುತ್ತಾನೆ. ಜೀವನವು ನಿರರ್ಥಕವಾಗಿ ಹೋಗುವುದು. ಲೋಕದಲ್ಲಿ ನೂರಕ್ಕೆ ತೊಂಭತ್ತೊಂಬತ್ತು ಜನ ಗೃಹಸ್ಥರಾಗಿಯೂ, ಬ್ರಹ್ಮಚಾರಿ ಗಳಾಗಿಯೂ ಇದ್ದಾರೆ. ಅವರು ಕರ್ಮವನ್ನು ತ್ಯಜಿಸಲು ಸಾಧ್ಯವಿಲ್ಲ. ಸರ್ವಸಂಗ ಪರಿತ್ಯಾಗ ಮಾಡಿ ಏಕಾಂತವಾಗಿ ಕಾಲಕಳೆಯುವ ಸನ್ಯಾಸಿಗಳು, ಸಾಧುಗಳು ಬಹಳ ವಿರಳ. ಆದ್ದರಿಂದ ಬಹಳಷ್ಟು ಜನರಿಗೆ ಉಪಕಾರವಾಗುವ ಬೋಧನೆ ಈಗ ಬೇಕಾಗಿದೆ. ಈ ವಿಷಯಗಳನ್ನೆಲ್ಲಾ ಗೀತಾಚಾರ್ಯರು ಆಳವಾಗಿ ಆಲೋಚಿಸಿ, ವ್ಯವಹಾರವನ್ನು ದೂಷಿಸದೆ, ಅದನ್ನು ಪವಿತ್ರಗೊಳಿಸುವ ಉಪಾಯಗಳನ್ನು ಅನ್ವೇಷಿಸತೊಡಗಿದರು. ಮತ್ತೆ ಅಂತಹ ವ್ಯವಹಾರದ ಮೂಲಕ, ಕರ್ಮಾಚರಣೆಯ ಮೂಲಕ ಚಿತ್ತಶುದ್ಧಿಯನ್ನು ಸಂಪಾದಿಸಿ ಕ್ರಮವಾಗಿ ಜ್ಞಾನಾನುಭವವನ್ನು ಪಡೆದು ಮೋಕ್ಷವನ್ನು ಹೊಂದಬಹುದೆಂದು ಅವರು ಬಹಿರಂಗವಾಗಿ ಪ್ರಕಟಿಸಿದರು.

**ಸ್ವಕರ್ಮಣಾ ತಮಭ್ಯರ್ಚ್ಯ ಸಿದ್ಧಿಂ ವಿಂದತಿ ಮಾನವಃ (೧೮-೪೬)**

'ತಮ್ಮ ತಮ್ಮ ಕರ್ಮಗಳ ಮೂಲಕ ಪರಮಾತ್ಮನನ್ನು ಅರ್ಚಿಸಿ ಮಾನವನು ಮುಕ್ತಿಯನ್ನು ಹೊಂದಬಲ್ಲನು' ಎಂದು ಭಗವಂತನು ಹೇಳಿದ್ದಾನೆ. ಇದಕ್ಕೆ ಪ್ರಬಲವಾದ ದೃಷ್ಟಾಂತ ಅರ್ಜುನನೇ ಆಗಿದ್ದಾನೆ. ಹೇಗೆಂದರೆ, 'ನಾನು ಯುದ್ಧವನ್ನು ಮಾಡುವುದಿಲ್ಲ; ನನಗೆ ರಾಜ್ಯ ಬೇಡ; ಜೋಳಿಗೆ ತೆಗೆದುಕೊಂಡು ಭಿಕ್ಷಾನ್ನವನ್ನು ತಿನ್ನುತ್ತಾ ಕಾಲಕ್ಷೇಪ ಮಾಡುವೆ'* ನೆಂದು ಹೇಳಿದ ಅರ್ಜುನನು, ಶ್ರೀಕೃಷ್ಣಮೂರ್ತಿಯ ದಿವ್ಯ ಬೋಧೆಗಳಿಂದ ಕರ್ಮರಂಗಕ್ಕೆ ಧುಮುಕಿ, ಯುದ್ಧವನ್ನು ಮಾಡಿ, 'ನಾನೇನೂ ಮಾಡಲಿಲ್ಲ' ಎನ್ನುವಂತಹ ನಿರ್ಲಿಪ್ತಭಾವವುಳ್ಳವನಾಗಿ, ಭಯಂಕರವಾದ ಸಂಗ್ರಾಮವನ್ನು ಯಜ್ಞವಾಗಿ ಪರಿವರ್ತಿಸಿದನು. ಶ್ರೀಕೃಷ್ಣನನ್ನು ಮುಂದಿಟ್ಟುಕೊಂಡು ಅರ್ಜುನನು ವ್ಯವಹಾರವನ್ನು ನಡೆಸಿದನು. ವ್ಯವಹಾರವನ್ನು ಮೋಕ್ಷಸೋಪಾನವಾಗಿ ಪರಿಣಮಿಸುವ ಉಪಾಯ ಇದೇ ಆಗಿದೆ. ಭಗವಂತನನ್ನು ಸ್ಮರಿಸುತ್ತಾ ಆ ಕಾರ್ಯವನ್ನು ಮಾಡುವುದೇ ಮುಕ್ತಿಗೆ ಮಾರ್ಗ.

**ಮಾಮನುಸ್ಮರ ಯುಧ್ಯ ಚ**

'ನನ್ನನ್ನು ಸ್ಮರಿಸುತ್ತಾ ಯುದ್ಧವನ್ನು ಮಾಡು'- ಇದೇ ಕರ್ಮರಹಸ್ಯ. ಯುದ್ಧ ಮಾಡುವುದು ವಿಶೇಷವಲ್ಲ. ದೇವರನ್ನು ಸ್ಮರಿಸುತ್ತಾ ಯುದ್ಧ ಮಾಡುವುದು ವಿಶೇಷ. ಫಲವನ್ನು ಈಶ್ವರಾರ್ಪಣೆ ಮಾಡಿ ಕಾರ್ಯ ಮಾಡುವುದು ವಿಶೇಷ. ಆಗ ಕರ್ಮವು 'ಕರ್ಮಯೋಗ'ವಾಗಿ ರೂಪುಗೊಳ್ಳುತ್ತದೆ. (Work will be transformed into worship). ಹಾಗೆ ಮಾಡಿದಲ್ಲಿ ಏಕಾಂತದಲ್ಲಿ ಸಮಾಧಿನಿಷ್ಠೆಯಲ್ಲಿರುವ ಯೋಗಿಗೂ ಪ್ರಪಂಚದ ವಿವಿಧ ಕಾರ್ಯಕಲಾಪಗಳಲ್ಲಿ ನಿಮಗ್ನರಾಗಿರುವ ಕರ್ಮನಿಷ್ಠನಿಗೂ ಒಂದೇ ಫಲವು ಲಭಿಸುವುದು. ಆತ್ಮಶಾಂತಿ ಇವರೀರ್ವರಿಗೂ ಸಂಪ್ರಾಪ್ತಿಯಾಗುತ್ತದೆ. ಇದೇ ಭಗವದ್ಗೀತೆ ಬೋಧಿಸಿದ ತತ್ವ. ಲೋಕದಲ್ಲಿ ಕೆಲವು ಶಾಸ್ತ್ರಗಳು ಕರ್ಮವನ್ನು ಪೂರ್ತಿಯಾಗಿ ನಿಷೇಧಿಸುತ್ತವೆ. ಅವು ನಿವೃತ್ತಿ ಮಾರ್ಗವನ್ನೇ ಹೆಚ್ಚಾಗಿ ಪೋಷಿಸುತ್ತವೆ. ಮತ್ತೆ ಕೆಲವು ಶಾಸ್ತ್ರಗಳು ಕರ್ಮವನ್ನು ವಿಶೇಷವಾಗಿ ಪ್ರೋತ್ಸಾಹಿಸುತ್ತವೆ. ಅವು ಪ್ರವೃತ್ತಿಯನ್ನೇ ಹೆಚ್ಚಾಗಿ ಬಲಪಡಿಸುತ್ತವೆ. ಆದರೆ ಗೀತೆ ಅತ್ತ ಪ್ರವೃತ್ತಿಯೂ ಅಲ್ಲದೆ, ಇತ್ತ ನಿವೃತ್ತಿಯೂ ಅಲ್ಲದೆ ಮಧ್ಯಮಾರ್ಗವನ್ನು ಅವಲಂಬಿಸಿದೆ. ಅದು ಎಲ್ಲರಿಗೂ ಆಚರಣಯೋಗ್ಯವಾಗಿದೆ. ಶರೀರ

---

* ಶ್ರೇಯೋ ಭೋಕ್ತುಂ ಭೈಕ್ಷ್ಯಮಪೀಹ ಲೋಕೇ (೨-೫)

ಪ್ರವೃತ್ತಿಯಲ್ಲಿದ್ದರೂ ಮನಸ್ಸನ್ನು ನಿವೃತ್ತಿಯಲ್ಲಿಟ್ಟುಕೊಳ್ಳಬೇಕು (Hands in the society and head in the forest) ಎಂದು ಗೀತೆ ಬೋಧಿಸುತ್ತದೆ. ಈ ಗೀತಾಭಾವವನ್ನು ಅನುಸರಿಸಿ ಜನಕನು ರಾಜ್ಯವನ್ನಾಳಿದನು. ವಿಷ್ಣುಮೂರ್ತಿಯು ತ್ರಿಲೋಕಗಳನ್ನು ಪಾಲಿಸಿದನು.* ಈ ವಿಧವಾಗಿ ಗೀತಾಚಾರ್ಯರು, ವೇದಾಂತಿಗಳಿಗೆ ಸಾಮಾನ್ಯವಾಗಿ ಅಸಹನೀಯವಾದ ಲೋಕವ್ಯವಹಾರಕ್ಕೆ ಹೊಸರೂಪವಿತ್ತು ಅದಕ್ಕೆ ಪರಮಾರ್ಥ ಸ್ಥಾಯಿಯನ್ನು ಕಲ್ಪಿಸಿದರು. ಇಂಥಹ ಅಪೂರ್ವಸಿದ್ಧಾಂತವನ್ನು ಮೊದಲು ಯಾರೂ ಯಾವ ಶಾಸ್ತ್ರವೂ ಪ್ರತಿಪಾದಿಸಲಿಲ್ಲ. ಆದ್ದರಿಂದಲೇ ಗೀತೆಗೂ, ಗೀತಾಚಾರ್ಯನಿಗೂ ಇಂತಹ ಘನತೆ ಬಂದೊದಗಿದೆ.

## ಗೀತೆಯಲ್ಲಿ ಸರ್ವಯೋಗ ಸಮನ್ವಯ

ಲೋಕದಲ್ಲಿ ಕರ್ಮಮಾರ್ಗಾವಲಂಬಿಗಳು, ಭಕ್ತಿಮಾರ್ಗಾವಲಂಬಿಗಳು, ಯೋಗಮಾರ್ಗಾವಲಂಬಿಗಳು, ಜ್ಞಾನಮಾರ್ಗಾವಲಂಬಿಗಳೆಂದು ಅನೇಕ ಪ್ರಕಾರದವರು ಆಧ್ಯಾತ್ಮಕ್ಷೇತ್ರದಲ್ಲಿದ್ದಾರೆ. ಅದರಲ್ಲಿ ಕೆಲವರು ತಮ್ಮಮಾರ್ಗವೇ ಉತ್ತಮವೆಂದೂ, ಬೇರೆಯವರ ಮಾರ್ಗ ನಿಕೃಷ್ಟವೆಂದೂ ವಾದಿಸುವರು. ತಮ್ಮತಮ್ಮವಾದಗಳನ್ನು ಬಲಪಡಿಸುವುದಕ್ಕೆ ಅವರು ಕೆಲವು ಪ್ರಮಾಣಗಳನ್ನು ಕೂಡ ತೋರಿಸುತ್ತಾರೆ. ಈ ಪ್ರಕಾರವಾಗಿ ಸ್ವಮತಸ್ತುತಿ, ಪರಮತ ದ್ವೇಷ, ಸ್ವಮಾರ್ಗ ಪರಿಪೋಷಣೆ, ಅನ್ಯಮಾರ್ಗ ವಿಮರ್ಶನೆಗಳು ಪ್ರಪಂಚದಲ್ಲಿ ರೂಢಿಯಲ್ಲಿರುವುದನ್ನು ನೋಡಿ, ಅಂಥಹದನ್ನು ದೂರಮಾಡುವುದಕ್ಕಾಗಿ ಶ್ರೀಕೃಷ್ಣಭಗವಂತನು ಗೀತಾವತರಣ ಮಾಡಿ ಸರ್ವಮತ ಸಮನ್ವಯ ತತ್ವವನ್ನು ಜನರಲ್ಲಿ ವ್ಯಾಪಿಸುವಂತೆ ಮಾಡಿದನು. ಮೋಕ್ಷ ಸಾಧನೆಗೆ ಕರ್ಮ, ಭಕ್ತಿ, ಧ್ಯಾನ, ಜ್ಞಾನ ಎನ್ನುವ ನಾಲ್ಕನ್ನು ನಾಲ್ಕು ದ್ವಾರಗಳೆಂದೂ, ಯಾವ ದ್ವಾರದ ಮೂಲಕ ಹೋದರೂ ಮುಕ್ತಿ ಧಾಮ ಸೇರಬಹುದೆಂದು ನುಡಿದರು. ಮತ್ತೆ ನದಿಗಳೆಲ್ಲವೂ ಗಮ್ಯ ಸ್ಥಾನವಾದ ಸಮುದ್ರವನ್ನು ತಪ್ಪದೆ ಸೇರುವಂತೆ, ಎಲ್ಲಾ ಮಾರ್ಗಗಳು ಜೀವಿಯನ್ನು ಕೈವಲ್ಯಧಾಮಕ್ಕೆ ಸೇರಿಸುತ್ತವೆ ಎಂದು ಬೋಧಿಸಿದ್ದಾರೆ. ಯಾವ ಮಾರ್ಗವನ್ನನುಸರಿಸಿದರೂ ತಪ್ಪಿಲ್ಲ. ಅವರವರ ಸಂಸ್ಕಾರವನ್ನನುಸರಿಸಿ ಜನರು ಯಾವುದೇ ಮಾರ್ಗವನ್ನು, ಯಾವುದೇ ಸಿದ್ಧಾಂತವನ್ನು ಅನುಸರಿಸಲು ಸರ್ವಸ್ವತಂತ್ರರು ಎಂದು ಗೀತೆ ನುಡಿಯುತ್ತದೆ.

ಕೆಲವರ ಚಿತ್ತವು ಸಹಜವಾಗಿಯೇ ಕ್ರಿಯಾಶೀಲ (Active) ವಾಗಿರುತ್ತದೆ. ಅವರು ತಪ್ಪದೆ ಕರ್ಮಮಾರ್ಗವನ್ನು ಅನುಸರಿಸುತ್ತಾರೆ. ಕರ್ಮಮಾಡುವುದರಲ್ಲೇ, ಲೋಕಸೇವೆಯಲ್ಲೇ ಅವರು ಆನಂದವನ್ನು ಹೊಂದುತ್ತಾರೆ. ಕರ್ಮತತ್ವವನ್ನು, ಕರ್ಮರಹಸ್ಯವನ್ನು ಆಳವಾಗಿ ತಿಳಿದುಕೊಂಡು ನಿಷ್ಕಾಮ ಪೂರ್ವಕವಾಗಿ ಕರ್ಮವನ್ನೇ ಆಚರಿಸುತ್ತಿರಿ ಎಂದು ಅಂಥಹವರಿಗೆ ಗೀತೆ ಬೋಧಿಸುತ್ತದೆ. ಅವರಿಗಾಗಿಯೇ ಇರಬಹುದು, 'ಕರ್ಮಯೋಗ' ಎನ್ನುವ ಅಧ್ಯಾಯವನ್ನು ಗೀತೆ ಕಾದಿರಿಸಿದೆ. ಮತ್ತೆ ಕೆಲವರ ಚಿತ್ತವು ಸಹಜವಾಗಿಯೇ ಆವೇಶಪೂರಿತವಾಗಿ, ಭಕ್ತಿಪರವಶ (Emotional) ವಾಗಿರುವುದು. ಅಂತಹವರು ಭಕ್ತಿ ಮಾರ್ಗವನ್ನನುಸರಿಸುವರು. ಜಪ, ಪೂಜೆ, ಪ್ರಾರ್ಥನೆ, ಸಂಕೀರ್ತನೆ, ನಾಮಸ್ಮರಣೆ ಮೊದಲಾದುವುಗಳಲ್ಲಿ ಅವರು ವಿಶೇಷವಾಗಿ ಆಸ್ಥೆ ವಹಿಸುವರು. ಅಂತಹವರಿಗೆ ಭಕ್ತಿ ಮಾರ್ಗವನ್ನು ಗೀತೆ ಉಪದೇಶಿಸಿ, ಅದನ್ನೇ ಅನುಸರಿಸುತ್ತಾ ಮುಕ್ತಿಹೊಂದಿರಿ ಎಂದು ಪ್ರೋತ್ಸಾಹಿಸುತ್ತದೆ. ಭಕ್ತಿಯೋಗ ಎನ್ನುವ ಅಧ್ಯಾಯವನ್ನು ಅಂಥಹ ಸಂಸ್ಕಾರವಿರುವವರಿಗೆ ಪ್ರತ್ಯೇಕವಾಗಿ ಗೀತೆ ಏರ್ಪಾಟು ಮಾಡಿದೆ. ಅದೇ ರೀತಿ ಕೆಲವರು ಉಪಾಸನಾಶೀಲರಾಗಿ (Meditative)ರುತ್ತಾರೆ. ಅಂಥಹವರು ನಿರಂತರವಾಗಿ ಧ್ಯಾನದಲ್ಲಿ ಆಸಕ್ತಿ ಹೊಂದಿರುತ್ತಾರೆ. ಬಹಿರ್ಮುಖ ವ್ಯವಹಾರಗಳಲ್ಲಿ ಆಸಕ್ತಿ ಇಲ್ಲದೆ, ಚಿತ್ತವನ್ನು ಸರ್ವದಾ ಅಂತರ್ಮುಖಗೊಳಿಸಿ ಧ್ಯಾನನಿಷ್ಠೆಯನ್ನು ಬಲಪಡಿಸುವುದರಲ್ಲೇ ಪ್ರಯತ್ನವಂತರಾಗಿರುತ್ತಾರೆ. ಅಂಥಹವರಿಗಾಗಿ ಗೀತೆ ಧ್ಯಾನಯೋಗ ಅಥವ ಆತ್ಮಸಂಯೋಗ ಯೋಗ ಎನ್ನುವ ಅಧ್ಯಾಯವನ್ನು ಪ್ರತ್ಯೇಕವಾಗಿ ಕಾದಿರಿಸಿದೆ. ಈ ಮೂರು ಪಂಗಡಗಳೇ ಅಲ್ಲದೆ ಬೇರೆಯವರೂ ಇದ್ದಾರೆ. ಅವರು ಜ್ಞಾನಿಗಳು. ಅವರ ಚಿತ್ತವು ಸದಾ ವಿಚಾರಣಾಯುಕ್ತವಾಗಿ (rational)ರುತ್ತದೆ. ಅವರು ಸತ್ಯಾಸತ್ಯಗಳನ್ನು, ಆತ್ಮಾನಾತ್ಮಗಳನ್ನು, ಕ್ಷೇತ್ರ ಕ್ಷೇತ್ರಜ್ಞರನ್ನು ವಿವೇಚಿಸಿ ನೋಡುವರು. ಅವರಿಗೆ ಧೀಶಕ್ತಿ (will power) ಹೆಚ್ಚಿಗೆ ಇರುವುದು. ಅಂಥಹ ಸ್ವಭಾವವುಳ್ಳವರಿಗೆ ಗೀತೆ ಜ್ಞಾನಯೋಗ, ಕ್ಷೇತ್ರಕ್ಷೇತ್ರಜ್ಞ ವಿಭಾಗ ಯೋಗ ಎನ್ನುವ ಅಧ್ಯಾಯಗಳನ್ನು ಪ್ರತ್ಯೇಕವಾಗಿ ಹೊಂದಿದೆ.

ಈ ಪ್ರಕಾರವಾಗಿ ಪ್ರಪಂಚದಲ್ಲಿಯ ಭಿನ್ನಭಿನ್ನ ಮನಸ್ತತ್ವವುಳ್ಳವರನ್ನು ಗೀತೆ ಸಂತೃಪ್ತಿಸಿ, ಎಲ್ಲರಿಗೂ ಮೋಕ್ಷಮಾರ್ಗವನ್ನುಪದೇಶಿಸಿ ಸರ್ವಪಥಗಳೂ ಸತ್ಯವೇ ಎಂದು ನಿರೂಪಿಸಿ, ಪರಸ್ಪರ ದ್ವೇಷವನ್ನು, ವೈಮನಸ್ಸುಗಳನ್ನು ತೊಡೆದುಹಾಕಿದೆ. ಈ ವಿಷಯದಲ್ಲಿ ಶ್ರೀವಿವೇಕಾನಂದಸ್ವಾಮಿ ವಚಿಸಿದ ವಾಕ್ಯವನ್ನು ಉಲ್ಲೇಖಿಸಬಹುದು- 'The reconciliation of the different paths of Dharma and work without desire or attachment are the two special characteristics of the Gita'- ಅಂದರೆ ಸರ್ವಯೋಗ ಸಮನ್ವಯ ಹಾಗು ನಿಷ್ಕಾಮಕರ್ಮ ಗೀತೆಯ ಎರಡು ಪ್ರಮುಖ ಲಕ್ಷಣಗಳು. ಇಂಥಹ ಸಮನ್ವಯಭಾವವನ್ನು ಹೊಂದಿರುವದರಿಂದಲೇ ಎಲ್ಲ ಸಂಪ್ರದಾಯದವರು ಗೀತೆಯ ಬಗ್ಗೆ ವಿಶೇಷವಾದ ಆದರವನ್ನು ಪ್ರದರ್ಶಿಸುತ್ತಾರೆ. ಅದ್ವೈತ ಮತ ಪ್ರತಿಷ್ಠಾಪಕರಾದ ಶಂಕರಾಚಾರ್ಯರು ಗೀತೆಯನ್ನು ಶ್ಲಾಘಿಸಿದರು. ವಿಶಿಷ್ಟಾದ್ವೈತ ಪ್ರವರ್ತಕರಾದ ರಾಮಾನುಜರು ಇದನ್ನು ಕೊಂಡಾಡಿದರು. ದ್ವೈತ ಮತ ಸ್ಥಾಪಕರಾದ ಮಧ್ವಾಚಾರ್ಯರು ಇದಕ್ಕೆ ವಂದನೆಗಳನ್ನರ್ಪಿಸಿದರು. ಶೈವ ಮತ ಪ್ರತಿಷ್ಠಾಪಕರಾದ ಶ್ರೀಕಂಠ ಶಿವಾಚಾರ್ಯರು ಇದನ್ನು ಪ್ರಶಂಸಿಸಿದರು. ಈ ಪ್ರಕಾರವಾಗಿ ವಿವಿಧಯೋಗಗಳಿಂದೊಡಗೂಡಿ ವಿವಿಧ ಮಾರ್ಗಗಳನ್ನು ಉಪದೇಶಿಸುತ್ತಾ, ಭಿನ್ನಭಿನ್ನ ತತ್ವಗಳನ್ನು ಪ್ರತಿಪಾದಿಸುವರೆಲ್ಲರನ್ನೂ ಸಮನ್ವಯಗೊಳಿಸಿ, ಒಂದೇ ಲಕ್ಷ್ಯವಾದ ಪರಂಧಾಮಕ್ಕೆ ಸೇರಿಸುವಂಥಹ ಅದ್ಭುತ ಕೌಶಲದಿಂದ ಕೂಡಿದಂಥ ಗ್ರಂಥರಾಜವೇ ಗೀತೆ. ವಿವಿಧ ಯೋಗಗಳ ಮಧ್ಯೆ ಸರಿಯಾದ ಹೊಂದಿಕೆಯನ್ನು, ಸಮತ್ವ (Balance)ವನ್ನು ಕಾಪಾಡಿಕೊಂಡು ಬಂದಿದೆ. ತಮ್ಮ ತಮ್ಮ ಮಾರ್ಗಗಳೇ ಉತ್ತಮವೆಂದು ವಾದಿಸುವವರಿಗೆಲ್ಲ ಗೀತೆ ಸರಿಯಾದ ಗುಣಪಾಠ ಬೋಧಿಸಿದೆ. ಅವರಲ್ಲಿ ಅವರು ಜಗಳವಾಡಿಕೊಳ್ಳುವುದು ಕೇವಲ ಮೂರ್ಖತನವೆಂದು, ಅಹಂಕಾರವನ್ನು ವರ್ಜಿಸಿ ಆತ್ಮಾನುಭವವನ್ನು ಉಂಟುಮಾಡುವುದೇ ಎಲ್ಲ ಮಾರ್ಗಗಳ ಏಕೈಕ ಲಕ್ಷ್ಯವೆಂದು ಮುಕ್ತ ಕಂಠದಿಂದ ಸಾರಿದೆ. ಈ ಪ್ರಕಾರವಾಗಿ ಜನರ ಮಧ್ಯೆ, ಮತಗಳ ಮಧ್ಯೆ ಪರಿಪೂರ್ಣವಾದ ಸಮನ್ವತೆಯನ್ನು ಗೀತೆ ಸ್ಥಾಪಿಸಿದೆ. ಗೀತೆ ಸಾಧಿಸಿದ ಅನೇಕ ಘನವಿಜಯಗಳಲ್ಲಿ ಇದು ಒಂದು.

---

* ಗೀತಾಜ್ಞಾನಮುಪಾಶ್ರಿತ್ಯ ತ್ರೀನ್ಲೋಕಾನ್ಪಾಲಯಾಮ್ಯಹಮ್

## ಗೀತೆಯಲ್ಲಿ ಸರ್ವಭೂತದಯೆ

ಗೀತೆಯಲ್ಲಿರುವುದು ವಾಚಾ ವೇದಾಂತವಲ್ಲ, ಅನುಷ್ಠಾನವೇದಾಂತ. ಪ್ರತಿ ಚಿಕ್ಕ ವಿಷಯದಲ್ಲಿಯೂ ಅದು ಆಚರಣೆಯ ಮೇಲೆಯೇ (Practical side) ವಿಶೇಷಾಸಕ್ತಿ ತೋರಿಸುತ್ತದೆ. ಹೃದಯದ ಪರಿಪಕ್ವತೆಯಾಗದೆ ಮೋಕ್ಷವು ಯಾರಿಗೂ ಪ್ರಾಪ್ತಿಯಾಗುವುದಿಲ್ಲವೆನ್ನುವುದು ಗೀತಾಚಾರ್ಯರ ಮತ. ಚಿತ್ತವು ರಜೋಗುಣ, ತಮೋಗುಣಾತ್ಮಕವಾಗಿ, ಕಠಿಣವಾಗಿರುವವರೆಗೂ, ಮೇಲ್ಮೇಲೆ ಎಷ್ಟು ಪೂಜೆಗಳನ್ನು ಮಾಡಿದರೂ, ಎಷ್ಟು ಸ್ತೋತ್ರಗಳನ್ನು ಸ್ತುತಿಸಿದರೂ, ಎಷ್ಟು ಧ್ಯಾನಗಳನ್ನಾಚರಿಸಿದರೂ ಮೋಕ್ಷವೂ ಲಭಿಸುವುದು ಅಸಾಧ್ಯ. ಪರ ಪ್ರಾಣಿಯ ಮೇಲೆ ದಯೆ, ಕರುಣೆ ಮಳೆಗರೆದಾಗಲೇ ಯೋಗ, ಭಕ್ತಿ, ಧ್ಯಾನ, ಜ್ಞಾನ ಮುಂತಾದುವು ಅಭಿವೃದ್ಧಿ ಹೊಂದಬಲ್ಲವು ಎಂದು ತಿಳಿಯತಕ್ಕದ್ದು. ಭಗವಂತನ ಮೇಲೆ ಭಕ್ತಿ ಇದ್ದು ಜೀವರಾಶಿಗಳ ಮೇಲೆ ದ್ವೇಷವಿದ್ದಲ್ಲಿ ಆ ಭಕ್ತಿಗೆ ಅರ್ಥವೇ ಇಲ್ಲ. ಅದು ಭಗವಂತನಿಗೆ ಅರ್ಪಿಸುವ ಉಪಚಾರವಲ್ಲ. ಅಪಚಾರವೇ ಆಗುವುದು.

**ಸರ್ವಜೀವ ತಿರಸ್ಕಾರಃ ಕೇಶವಂ ಪ್ರತಿ ಗಚ್ಛತಿ**

ಅಂದಹಾಗೆ ಯಾವ ಜೀವಿಯನ್ನು ತಿರಸ್ಕರಿಸಿದರೂ, ಬಾಧಿಸಿದರೂ ಭಗವಂತನನ್ನೇ ಬಾಧಿಸಿದ ಹಾಗೆ. ಏಕೆಂದರೆ ಸಮಸ್ತಜೀವ ಕೋಟಿಗಳು ವಿರಾಟರೂಪನಾದ ಪರಮಾತ್ಮನ ಅವಯವಗಳು. ಯಾವುದೇ ಒಂದು ಅವಯವ ಬಾಧೆಗೊಳಗಾದರೂ, ಮೂಲಕ್ಕೆ ನೋವಾಗುವುದು. ಆದ್ದರಿಂದ ಸರ್ವಭೂತದಯೆ ಎನ್ನುವುದು ಯೋಗಗಳೆಲ್ಲವುಗಳಿಗೆ ಪರಮಾವಶ್ಯಕವಾದ ಅಂಗ. ಈ ಸತ್ಯವನ್ನೇ ಭಗವದ್ಗೀತೆ ಪ್ರಾರಂಭದಿಂದ ಅಂತ್ಯದವರೆಗೆ ಪದೇ ಪದೇ ಹೇಳುತ್ತಾ ಬಂದಿದೆ. ಸಂದರ್ಭ ದೊರಕಿದಾಗಲೆಲ್ಲ ಜೀವ ಕಾರುಣ್ಯವನ್ನು.............. ಭಗವಂತನು ಒತ್ತಿ ಹೇಳಿರುತ್ತಾನೆ.

**೧) ಅದ್ವೇಷ್ಟಾ ಸರ್ವ ಭೂತಾನಾಂ**
**೨) ಸರ್ವಭೂತ ಹಿತೇ ರತಾಃ**
**೩) ನಿರ್ವೈರ್ಯಃಸರ್ವಭೂತೇಷು**

ಮುಂತಾದ ವಿಶ್ವಪ್ರೇಮ ಸೂಚಕ ವಾಕ್ಯಗಳು ಗೀತೆಯಲ್ಲಿ ಎಷ್ಟೋ ಕಾಣಸಿಕೊಳ್ಳುತ್ತವೆ. 'ಸರ್ವಭೂತ' ಎನ್ನುವ ಪದಪ್ರಯೋಗದಿಂದ, ಮಾನವ ಕೋಟಿಯನ್ನೇ ಅಲ್ಲದೆ ಸಮಸ್ತ ಜೀವ ಕೋಟಿಯನ್ನು ಪ್ರೇಮಿಸಬೇಕೆಂದು, ಅದರ ಬಗ್ಗೆ ದಯಾಪೂರ್ಣವಾಗಿ ವರ್ತಿಸಬೇಕೆಂದು ಬೋಧಿಸಲ್ಪಟ್ಟಂತಾಗಿದೆ. ಶ್ರೀ ಕೃಷ್ಣಮೂರ್ತಿ ಭೂತಕೋಟಿ ಹಿತದ ಬಗ್ಗೆ ಏಕಿಷ್ಟು ಅಧಿಕವಾಗಿ ಪ್ರಸ್ತಾಪಿಸಿದ್ದಾರೆ? ಕೇವಲ ಧ್ಯಾನ, ಪೂಜೆ, ಜಪ, ಯೋಗಗಳ ವಿಚಾರಣೆ ಬೋಧಿಸಿದ್ದರೆ ಸಾಲದಾಗಿತ್ತೇ? ಔಷಧವನ್ನು ಸೇವಿಸಿ ಪಥ್ಯವನ್ನಾಚರಿಸದಿದ್ದರೆ ಹೇಗೆ ವ್ಯಾಧಿ ನಿವಾರಣೆಯಾಗಲಾರದೋ, ಹಾಗೆಯೇ ಭಗಮಂತನನ್ನು ಪೂಜಿಸಿ, ಭಗವತ್ಸ್ವರೂಪಿಗಳಾದ ಜೀವ ಕೋಟಿಯನ್ನು ದ್ವೇಷಿಸಿದರೆ ಭವರೋಗವು ಯಾವಕಾಲಕ್ಕೂ ಶಮನ ಹೊಂದುವುದಿಲ್ಲ. ಆದ್ದರಿಂದ ಔಷಧಿ, ಪಥ್ಯ ಎರಡೂ ಅವಶ್ಯಕ. ಹಾಗೆಯೇ ಯೋಗಗಳ ಜೊತೆ ಭೂತದಯೆ ಅತ್ಯವಶ್ಯಕವಾಗಿದೆ. ಈ ಸತ್ಯವನ್ನೇ ಭಗವಂತನು ಈ ಕೆಳಕಂಡ ಶ್ಲೋಕದಲ್ಲಿ ನಿರೂಪಿಸಿದ್ದಾನೆ-

**ಮತ್ಕರ್ಮಕೃನ್ಮತ್ಪರಮೋ ಮದ್ಭಕ್ತಸ್ಸಂಗವರ್ಜಿತಃ।**
**ನಿರ್ವೈರಸ್ಸರ್ವಭೂತೇಷು ಯಸ್ಸ ಮಾಮೇತಿ ಪಾಂಡವ॥ (೧೧-೫೫)**

"ಯಾರು ದೈವಕಾರ್ಯ, ದೈವಧ್ಯಾನ, ದೈವಭಕ್ತಿ, ದೈವ ಜ್ಞಾನಗಳ ಜೊತೆ ಸಮಸ್ತ ಪ್ರಾಣಿಗಳ ಮೇಲೆ ದಯೆಯುಳ್ಳವರಾಗಿರುವರೋ ಅವರು ನನ್ನನ್ನೇ ಹೊಂದುವರು." ಇಷ್ಟೇ ಅಲ್ಲ, 'ಹನ್ನೆರಡನೆಯ ಅಧ್ಯಾಯದಲ್ಲಿ ಭಕ್ತನ ಗುಣಗಳನ್ನು ಪ್ರಸ್ತಾಪಿಸುತ್ತ ಮೊಟ್ಟಮೊದಲನೆಯದಾಗಿ 'ಅದ್ವೇಷ್ಟಾಸರ್ವ ಭೂತಾನಾಂ' (ಸಮಸ್ತ ಪ್ರಾಣಿ ಕೋಟಿಯ ಬಗ್ಗೆ ದ್ವೇಷವಿಲ್ಲದೆ ಇರುವುದು) ಎನ್ನುವ ಸುಗುಣ ಶ್ರೇಷ್ಠವನ್ನು ತಿಳಿ ಹೇಳಿದ್ದಾನೆ. ಈ ಪ್ರಕಾರವಾಗಿ ಬೋಧಿಸುವುದರ ಅಂತರ್ಯವೇನು? ಭಕ್ತಿಯ, ಯೋಗದ, ಜ್ಞಾನದ ವಾಸ್ತವ ಸ್ವರೂಪವನ್ನು ಬೋಧಿಸುವುದು; ಸರ್ವವೂ ಭಗವತ್ಸ್ವರೂಪವೆಂದು ವೀಕ್ಷಿಸುವ ಅಭ್ಯಾಸ ಮಾಡಿಸುವುದು; ಭಕ್ತಿ, ಜ್ಞಾನಾದಿಗಳ ಯಥಾರ್ಥ ಸ್ವರೂಪವನ್ನು ತಿಳಿಸುವುದು ಮತ್ತು ಅನುಷ್ಠಾನವೇದಾಂತವನ್ನು ಪ್ರೋತ್ಸಾಹಿಸುವುದೇ ಆಗಿದೆ. ಭಾಗವತದಲ್ಲಿ ಸುದಾಮನು ಶ್ರೀಕೃಷ್ಣಮೂರ್ತಿ ಯಿಂದ ಮೂರು ವರಗಳನ್ನು ಬೇಡಿದನು- "(೧) ನಿನ್ನ ಪಾದಕಮಲ ಸೇವೆ (೨) ನಿನ್ನ ಪಾದಾರ್ಚಕರೊಡನೆ ಸಾಂಗತ್ಯ (೩) ಅಂತ್ಯವಿಲ್ಲದ ಅಪಾರ ಭೂತದಯೆ"- ಇವುಗಳಲ್ಲಿ ಮೂರನೆಯದಾದ ಭೂತದಯೆ ಮೊದಲನೆಯ ಎರಡು ವಿಷಯಗಳಿಗೆ ಬಲವನ್ನೀಯುತ್ತ, ಅವುಗಳ ಪ್ರಕಾಶವನ್ನು ದ್ವಿಗುಣೀಕೃತಗೊಳಿಸುತ್ತದೆ. ಆದ್ದರಿಂದ ಇದು ಮುಮುಕ್ಷುಗಳ ಅತ್ಯಾವಶ್ಯಕವಾದ ಅಂಗವಾಗಿ ಪರಿಗಣಿಸಲ್ಪಟ್ಟಿದೆ. ಅದು ಇಲ್ಲದ ಭಕ್ತಿ, ಜ್ಞಾನಗಳು ನಿಸ್ತೇಜಗೊಂಡು, ನಿರ್ವೀರ್ಯಗಳಾಗುತ್ತವೆ. ಇದೆಲ್ಲವನ್ನೂ ಗುರ್ತಿಸಿ ಶ್ರೀಕೃಷ್ಣ ಭಗವಂತನು ಭೂತದಯೆ ಮಹೋತ್ಕೃಷ್ಟವಾದ ಗುಣವೆಂದು ಹೇಳಿ ಗೀತೆಯಲ್ಲಿ ಸಮುಚಿತಸ್ಥಾನವನ್ನಿತ್ತು ಗೌರವಿಸಿದನು.

## ಗೀತೆಯಲ್ಲಿ ಸಮತ್ವ

ಗೀತೆಯಲ್ಲಿಯ ಮತ್ತೊಂದು ಪ್ರಧಾನ ವಿಷಯವೆಂದರೆ ಸಮತ್ವ ಬೋಧನೆ. ಮನಸ್ಸು ನಿಶ್ಚಲವಾಗಿ, ಸಮರೂಪವಾಗಿದ್ದಾಗಲೇ ಅಧಿಷ್ಠಾನಾತ್ಮ ಸ್ವರೂಪವು ಸಾಕ್ಷಾತ್ಕಾರವಾಗುವುದು. ನಿಶ್ಚಲವಾದ ನಿರ್ಮಲಜಲದಲ್ಲಿ ಸೂರ್ಯಪ್ರತಿಬಿಂಬವು ಸ್ಫುಟವಾಗಿ ಕಾಣುವ ಹಾಗೆ, ಮನಸ್ಸು ಅಚಂಚಲವಾಗಿದ್ದಾಗ ಮಾತ್ರ ಬ್ರಹ್ಮಾನುಭೂತಿ, ಆತ್ಮಾನಂದವು ಲಭಿಸುವುದು. ಆದ್ದರಿಂದಲೇ ಗೀತೆಯಲ್ಲಿ ಭಗವಾನನು ಮನಸ್ಸಿನ ಸಮಸ್ಥಿತಿಯ ಬಗ್ಗೆ ವಿಶೇಷವಾಗಿ ಬೋಧಿಸುತ್ತಾ ಬಂದು ಮುಮುಕ್ಷುವು ಅಂಥಹ ಚಿತ್ತಸಾಮ್ಯವನ್ನು ತಪ್ಪದೆ ಅವಲಂಬಿಸಬೇಕೆಂದು ಎಚ್ಚರಿಸಿದ್ದಾನೆ. ಯೋಗವೆಂದರೆ ಬೇರೆ ಏನೂ ಅಲ್ಲ, 'ಚಿತ್ತವು ನಿಶ್ಚಲವಾಗಿರುವುದೇ' ಎಂದು ಉದ್ಘೋಷಿಸಿದನು (ಸಮತ್ವಂ ಯೋಗ ಉಚ್ಯತೇ). "ಓ ಅರ್ಜುನಾ! ಸುಖ ದುಃಖಗಳಲ್ಲಿ, ಮಾನಾಪಮಾನಗಳಲಿ, ಶೀತೋಷ್ಣಗಳಲ್ಲಿ, ನಿಂದಾಸ್ತುತಿಗಳಲ್ಲಿ, ಲಾಭಾಲಾಭಾಗಳಲ್ಲಿ, ಜಯಾಪಜಯಗಳಲ್ಲಿ ಸಮಬುದ್ಧಿಯಿಂದಿರುವುದು; ಅಂತಹ ಸಮಬುದ್ಧಿಯುಳ್ಳ ಧೀರನೇ ಮೋಕ್ಷ ಹೊಂದಬಲ್ಲನು. ಯಾರ ಮನಸ್ಸು ಸಮತ್ವದಲ್ಲಿ ಸ್ಥಿತವಾಗಿರುವುದೋ ಅವರು ಈ ಜೀವನ ಕಾಲದಲ್ಲಿಯೇ ಪ್ರಕೃತಿಯನ್ನು ಜಯಿಸಿ ಪರಮಾನಂದವನ್ನು ಅನುಭವಿಸುವರು"* ಎಂದು

---

* ೧) ಸಮ ದುಃಖಸುಖಂ ಧೀರಂ ಸೋಽಮೃತತ್ವಾಯ ಕಲ್ಪತೇ (೨-೫)
೨) ಸುಖದುಃಖೇ ಸಮೇಕೃತ್ವಾ . . . . . ನೈವಂ ಪಾಪ ಮವಾಪ್ಸ್ಯಸಿ (೨-೩೮)
೩) ಸಿದ್ಧ್ಯಸಿದ್ಧ್ಯೋಸ್ಸಮೋ ಭೂತ್ವಾ ಸಮತ್ವಂ ಯೋಗ ಉಚ್ಯತೇ (೨-೪೮)
೪) ಇಹೈವ ತೈರ್ಜಿತಃ ಸರ್ಗೋ ಯೇಷಾಂ ಸಾಮ್ಯೇ ಸ್ಥಿತಂ ಮನಃ (೫-೧೯)

ಗೀತಾಚಾರ್ಯನು ಸಾಧಕರಿಗೆ ಅತ್ಯಂತೋಪಯುಕ್ತವಾದ ಸಮತ್ವ ಧರ್ಮವನ್ನು ಪ್ರತಿಪಾದಿಸಿದನು. ಜನರಲ್ಲಿ ಹೆಚ್ಚಿಗೆ ಮೋಕ್ಷಾಭಿಲಾಷಿಗಳೇನೋ ಇದ್ದಾರಾಗಲಿ, ಆ ಮೋಕ್ಷಕ್ಕೆ ಪ್ರತಿಬಂಧಕವಾಗಿರುವ ಚಿತ್ತವನ್ನು ಸರಿಮಾಡಿಕೊಳ್ಳುವ ಪ್ರಯತ್ನ ಮಾಡುತ್ತಿಲ್ಲ. ಕೋತಿಯಂತೆ ಚಪಲಚಿತ್ತವುಳ್ಳವರಾಗಿ, ಸಂಸಾರಕ್ಷೇತ್ರದಲ್ಲಿ ಉಂಟಾಗುವ ಏಳು ಬೀಳುಗಳಿಗೆ ತಲ್ಲಣಿಸಿ ಯಾರಾದರೂ ಸ್ತುತಿಸಿದಾಗ ಉಬ್ಬಿಹೋಗುತ್ತಾ, ನಿಂದಿಸಿದಾಗ ಕುಗ್ಗಿ ಹೋಗುತ್ತಾ ಏತದ ಬಾನಿನ ಹಾಗೆ ಪ್ರವರ್ತಿಸುತ್ತಿರುವ ಮನಸ್ಸಿನಿಂದ ಪರಮಾರ್ಥ ಲಕ್ಷ್ಯವನ್ನು ಹೇಗೆ ಹೊಂದಬಲ್ಲರು? ಇದು ಅಸಾಧ್ಯ. ಆದ್ದರಿಂದಲೇ ಶ್ರೀಕೃಷ್ಣಪರಮಾತ್ಮ ಗೀತೆಯಲ್ಲಿ ಸಮತ್ವವನ್ನು ವಿಶೇಷವಾಗಿ ಬೋಧಿಸಿ, ಎಂಥಹ ಸಾಂಸಾರಿಕ ವಿಕಟ ಪರಿಸ್ಥಿತಿಯಲ್ಲಾದರೂ ಸಮಭಾವವನ್ನು ಚಿತ್ತವು ಬಿಡಬಾರದೆಂದು ಉಪದೇಶಿಸಿರುವನು.

ವಿಶ್ವವೆಲ್ಲವೂ ಒಂದೇ ಭಗವಸ್ವರೂಪ. ಇದರಲ್ಲಿ ಭಿನ್ನತ್ವವಿಲ್ಲ. ಅಜ್ಞಾನದಿಂದಲೇ ಅನೇಕತ್ವವು ಗೋಚರಿಸುತ್ತದೆ. ಆದರೆ ವಾಸ್ತವವಾಗಿ ಅದು ಸತ್ಯವಲ್ಲ. ವಿಶ್ವರೂಪ ಸಂದರ್ಶನಯೋಗದಲ್ಲಿ ಈ ರಹಸ್ಯವನ್ನು ಬಯಲು ಮಾಡಲಾಗಿದೆ. ಎಲ್ಲವೂ ಒಂದೇ ವಿರಾಟರೂಪ. ವಿಭಜನೆ ಮಾಡಲಸಾಧ್ಯವಾದ ಒಂದೇ ದೈವತತ್ವ ಈ ಪ್ರಪಂಚವನ್ನಾವರಿಸಿದೆ. ಛಿದ್ರಮಾಡಲಸಾಧ್ಯವಾದ ವಸ್ತುವಿದು. ಆದ್ದರಿಂದ ಯಾವ ಚರಾಚರ ಪ್ರಾಣಿಕೋಟಿಯಲ್ಲಿಯೂ ದ್ವೇಷವಿರಬಾರದು. ಎಲ್ಲರ ಮೇಲೆಯೂ ಸಮದೃಷ್ಟಿಯಿಡಬೇಕು. ಶತ್ರು ಮಿತ್ರಾದಿಗಳಲ್ಲಿ ಸಮಭಾವವನ್ನು ಪ್ರದರ್ಶಿಸಬೇಕು ಎಂದು ಗೀತೆ ಪ್ರಕಟಿಸುತ್ತಿದೆ. ಇಷ್ಟೇ ಅಲ್ಲ, ಬ್ರಾಹ್ಮಣನಲ್ಲಿಯೂ, ಹಸುವಿನಲ್ಲಿಯೂ, ಆನೆಯಲ್ಲಿಯೂ, ನಾಯಿಯಲ್ಲಿಯೂ, ಚಂಡಾಲನಲ್ಲಿಯೂ ಸಹ ಸಮದೃಷ್ಟಿಯಿಂದಿರಬೇಕೆಂದು ಗೀತೆ ಆದೇಶಿಸುತ್ತಿದೆ.[@] ಗೀತೆಯ ಮಹಿಮೆ ಇದರಲ್ಲೇ ಇದೆ. ಮಾನವನನ್ನೇ ಅಲ್ಲದೆ, ಸಮಸ್ತ ಪ್ರಾಣಿಜಾಲವನ್ನು ಪ್ರೇಮದಿಂದ ಗೀತೆ ತಬ್ಬಿ ಅಪ್ಪಿಕೊಳ್ಳುತ್ತದೆ. "ಓ ಜೀವಿ! ನಿನ್ನ ಪ್ರೇಮವನ್ನು ಪುಣ್ಯಾತ್ಮರ ಮೇಲೆಯೇ ಅಲ್ಲದೆ ಪಾಪಾತ್ಮರ ಮೇಲೆ ಕೂಡ ಹರಸು. ಮಾನವರ ಮೇಲೆಯೇ ಅಲ್ಲದೆ ದಾನವರ ಮೇಲೆ ಕೂಡ ಕರುಣೆ ತೋರಿಸು. ದ್ವಿಪಾದಿಗಳ (ಅಂದರೆ ಮಾನವರ) ಮೇಲೆಯೇ ಅಲ್ಲದೆ ಚತುಷ್ಪಾದಿಗಳ ಮೇಲೂ ಪ್ರೇಮಧಾರೆಯನ್ನು ವಿಸ್ತರಿಸಬೇಕು. ನಿನ್ನನ್ನು ನೀನು ಹೇಗೆ ಪ್ರೇಮಿಸಿಕೊಳ್ಳುತ್ತೀಯೋ ಹಾಗೆಯೇ ಇತರರನ್ನು ಕೂಡ ಪ್ರೇಮಿಸು. ಸುಖ ಹಾಗೂ ದುಃಖ ಸ್ಥಿತಿಗಳಲ್ಲಿ ಇತರರನ್ನು ನಿನ್ನ ಹಾಗೆ ಪರಿಗಣಿಸಿಕೊ** ಎಂದು ಗೀತಾಚಾರ್ಯನು ಜನರಿಗೆ ಆದೇಶ ವನ್ನೀಯುತ್ತಿದ್ದಾನೆ.

ಸಾಮಾನ್ಯವಾಗಿ ಲೋಕದಲ್ಲಿ 'ಭ್ರಾತೃತ್ವ'ವನ್ನು ಒಂದು ಮಹಾ ಸುಗುಣವೆಂದು ಪ್ರಶಂಸಿಸಲ್ಪಡಲಾಗುತ್ತದೆ. ನೀನು ನಿನ್ನ ಸೋದರನಂತೆ ಇತರರನ್ನು ಪ್ರೇಮಿಸು' ಎಂದು ಹಿರಿಯರು ಹೇಳುತ್ತಾರೆ. ಆದರೆ ಗೀತೆ ಅದಕ್ಕಿಂತ ಇನ್ನೊಂದು ಮೆಟ್ಟಿಲು ಮೇಲೆ ಹೋಗಿದೆ. ವಿಶ್ವಭ್ರಾತೃತ್ವವನ್ನು ದಾಟಿ ಆತ್ಮೌಪಮ್ಯಸ್ಥಿತಿಯನ್ನು ಅದು ಸೇರಿಕೊಂಡಿದೆ. ಅದನ್ನೇ ಅದು ವರ್ಣಿಸಿದೆ. ವಾಸ್ತವವಾಗಿ ಅದೇ ಆದರ್ಶವಾದುದು. ಏಕೆಂದರೆ ಸೋದರರು ತಮ್ಮ ತಮ್ಮಲ್ಲಿ ಜಗಳವಾಡಿಕೊಳ್ಳಬಹುದು. ಆದರೆ ತನ್ನನ್ನು ತಾನು ಯಾವಾಗಲೂ ಯಾರೂ ದ್ವೇಷಿಸಿಕೊಳ್ಳುವುದಿಲ್ಲ. ಆದ್ದರಿಂದ ತನ್ನ ಮೇಲಿನಂತೆಯೇ ಇತರರ ಮೇಲೆ ದಯೆಹೊಂದಿರಬೇಕೆಂದು ಬೋಧಿಸುವುದು ಸರ್ವೋತ್ತಮಧರ್ಮ. ಇಂಥಹ ಆತ್ಮೌಪಮ್ಯ ದೃಷ್ಟಿಯನ್ನು ದಿಗ್ದರ್ಶಿಸಿದ ಮತಗಳು ಲೋಕದಲ್ಲಿ ಬಹಳ ವಿರಳ. ವಿಶ್ವಭ್ರಾತೃತ್ವದವರೆಗೆ ಅವು ಹೋಗಿ ತಲುಪಲು ಸಾಧ್ಯವಾಗಿವೆ. ಹಿಂದೂಮತವು ಉಪನಿಷತ್ತುಗಳಲ್ಲಿ ಹಾಗು ಗೀತಾದಿ ಸದ್ಗ್ರಂಥಗಳಲ್ಲಿ

**ಸರ್ವಭೂತಸ್ಥ ಮಾತ್ಮಾನಂ ಸರ್ವಭೂತಾನಿ ಚಾತ್ಮನಿ।**
**ಈಕ್ಷತೇ ಯೋಗಯುಕ್ತಾತ್ಮಾ ಸರ್ವತ್ರ ಸಮದರ್ಶನಃ॥** (೬-೨೯)

ಅನ್ನುವ ಇಂಥಹ ಸರ್ವಾತ್ಮತ್ವ ಪ್ರಬೋಧೆಗಳ ಮೂಲಕ ಪ್ರೇಮದ ಪರಿಧಿಯನ್ನು ವಿಸ್ತರಿಸಿದೆ. ಪ್ರಪಂಚದಲ್ಲಿಯ ಇತರ ಮತಗಳು "ನಿನ್ನ ನೆರೆಯವನನ್ನು ಪ್ರೇಮಿಸು" ಎಂದು ಬೋಧಿಸಿವಿಯೇ ಆಗಲಿ, ಏಕೆ ಪ್ರೇಮಿಸಬೇಕು? ಎನ್ನುವ ಪ್ರಶ್ನೆಗೆ ಸರಿಯಾದ ಸಮಾಧಾನವನ್ನು ಕೊಟ್ಟಿಲ್ಲ. ಆದ್ದರಿಂದ ವಿಜ್ಞಾನವೇತ್ತರಿಗೆ (Scientists), ಭೌತಿಕ ಶಾಸ್ತ್ರಜ್ಞರಿಗೆ ಮತಗಳಲ್ಲಿ ವಿಶ್ವಾಸ ಹುಟ್ಟುತ್ತಿಲ್ಲ. ಹೇತುವಾದವನ್ನು (Logic) ಎದುರಿಸಲಾರದ ಮತವು ದೋಷವುಳ್ಳದ್ದೆನ್ನುವುದು ಅವರ ಅಭಿಪ್ರಾಯ. ನಿರ್ದಿಷ್ಟವಾದ ಯಾವುದೇ ಕಾರ್ಯವನ್ನು ಏಕೆ ಮಾಡಬೇಕು? ಯಾವುದೇ ಒಂದು ಧರ್ಮವನ್ನು ಏಕೆ ಆಚರಿಸಬೇಕು? ಒಬ್ಬ ವ್ಯಕ್ತಿಯನ್ನು ಏಕೆ ಪ್ರೇಮಿಸಬೇಕು? ಎನ್ನುವ ಪ್ರಶ್ನೆಗಳಿಗೆ ಸಮಾಧಾನ ಕೊಡಲಾರದ ಮತವಾಗಲಿ, ಸಂಪ್ರದಾಯವಾಗಲಿ ಅಪೂರ್ಣವೇ ಎನ್ನುವುದು ಅವರ ಅಭಿಪ್ರಾಯ. ಪದಾರ್ಥವೇತ್ತರು ಹಾಕುವ ಈ ಸವಾಲನ್ನು ಪರಮಾರ್ಥವೇತ್ತನಾದ ಶ್ರೀಕೃಷ್ಣನು ಎದುರಿಸಿದನು. ಗೀತೆಯಲ್ಲಿ ಎಲ್ಲರ ಪ್ರಶ್ನೆಗಳಿಗೆ ಸರಿಯಾದ ಉತ್ತರವಿದೆ (ಆತ್ಮೌಪಮ್ಯೇನ.... ಮುಂತಾದ ಶ್ಲೋಕಗಳ ಮೂಲಕ). ಎಲ್ಲೆಲ್ಲಿಯೂ ಒಂದೇ ಆತ್ಮ(ತಾನೇ) ವ್ಯಾಪಿಸಿದ್ದು, ಸರ್ವಜೀವಿಗಳಲ್ಲಿ ತನ್ನನ್ನೇ ನೋಡಿಕೊಂಡಾಗ ಇನ್ನೊಬ್ಬರ ಮೇಲೆ ದ್ವೇಷ ಹೇಗೆ ಉಂಟಾಗುವುದು? ಎಂದು ಅಲ್ಲಿ ಖಡಾಖಂಡಿತವಾಗಿ ಹೇಳಲಾಗಿದೆ. ಈ ಪ್ರಕಾರವಾಗಿ ಶ್ರೀಕೃಷ್ಣಪರಮಾತ್ಮನು ಗೀತೆಯಲ್ಲಿ ಮುಮುಕ್ಷುಗಳಿಗೆ ಅತ್ಯಾವಶ್ಯಕವಾದ 'ಸಮತ್ವ' ಧರ್ಮವನ್ನು ಸಕಾರಣಗಳಿಂದ ಪ್ರತಿಪಾದಿಸಿ ಸಾಧಕಲೋಕಕ್ಕೆ ಮಹೋಪಕಾರವನ್ನು ಮಾಡಿದ್ದಾನೆ.

## ಗೀತೆಯಲ್ಲಿ ನೂತನ ವಿವರಣೆಗಳು

### ಯಜ್ಞಾದಿಪದಗಳಿಗೆ ನೂತನ ಅರ್ಥ

ಗೀತೆಯಲ್ಲಿ ಕೆಲಕೆಲವು ಹೊಸ ವಿವರಣೆಗಳಿವೆ. ಇಲ್ಲಿಯ ತನಕ ಪ್ರವಚಿಸಿದ ಭಾವಗಳಿಗೆ, ಪದಗಳಿಗೆ, ಗೀತೆಯಲ್ಲಿ ನೂತನ ರೂಪವನ್ನು ಕೊಡಲಾಗಿದೆ. ಅದರಿಂದ ಸಮಾಜದಲ್ಲಿ ಹೊಸ ಉತ್ತೇಜ, ಕ್ರಾಂತಿ ಉಂಟಾಗಿದೆ. ಯಜ್ಞ, ತ್ಯಾಗ, ಯೋಗ, ಸಂನ್ಯಾಸ, ತಪಸ್ಸು ಮುಂತಾದವುಗಳು

---

@ ವಿದ್ಯಾವಿನಯಸಂಪನ್ನೇ ಬ್ರಾಹ್ಮಣೇ ಗವಿಹಸ್ತಿನಿ। ಶುನಿಚೈವ ಶ್ವಪಾಕೇ ಚ ಪಂಡಿತಾಃ ಸಮದರ್ಶಿನಃ (೫-೧೮)

** ೧) ಆತ್ಮೌಪಮ್ಯೇನ ಸರ್ವತ್ರ ಸಮಂ ಪಶ್ಯತಿ ಯೋಽರ್ಜುನ। ಸುಖಂ ವಾ ಯದಿ ವಾ ದುಃಖಂ ಸಯೋಗೀ ಪರಮೋ ಮತಃ॥ (೬-೩೨)

೨) ಸುಹೃನ್ಮಿತ್ರಾರ್ಯುದಾಸೀನ ಮಧ್ಯಸ್ಥ ದ್ವೇಷ್ಯಬಂಧುಷು। ಸಾಧುಷ್ವಪಿ ಚ ಪಾಪೇಷು ಸಮಬುದ್ಧಿರ್ವಿಶಿಷ್ಯತೇ॥ (೬-೯)

೩) ಸಮಲೋಷ್ಟಾಶ್ಮ ಕಾಂಚನಃ........................... (೧೪-೨೪)

೪) ಸಮಶ್ಶತ್ರೌ ಚ ಮಿತ್ರೇಚ............................ (೧೨-೧೮)

ಗೀತೆಯಲ್ಲಿ ನೂತನ ಅರ್ಥವನ್ನು ಹೊಂದಿವೆ. ಈ ಪದಗಳಿಗೆ ಮೊದಲು ಯಾವ ಅರ್ಥವಿತ್ತು? ಗೀತಾಚಾರ್ಯನು ಅವುಗಳಿಗೆ ಹೊಸ ಆಯಾಮ ಹೇಗೆ ಕೊಟ್ಟನು? ಅನ್ನುವುದನ್ನು ಸಂಕ್ಷೇಪವಾಗಿ ಕೆಳಗೆ ವಿಚಾರಿಸೋಣ. ಏಕೆಂದರೆ, ಆ ಯಜ್ಞ, ಸನ್ಯಾಸ ಮುಂತಾದವುಗಳು ಸಾಮಾನ್ಯ ಜನರ ಕೈಗೆ ಎಟುಕದಷ್ಟು ದೂರವಿದ್ದವಾದ್ದರಿಂದ ಅವರು ಅವುಗಳನ್ನು ಗ್ರಹಿಸಲು ಅಸಾಧ್ಯವಾಗಿತ್ತು. ಆದರೆ ಶ್ರೀಕೃಷ್ಣಪರಮಾತ್ಮನು ಅವುಗಳ ಯಥಾರ್ಥ ಸ್ವರೂಪವನ್ನು ಬಯಲುಮಾಡಿ, ಅವುಗಳ ನಿಜಾರ್ಥವನ್ನು ವಿವರಿಸಿ ಜನರ ಹೃದಯಭಾರವನ್ನಿಳಿಸಿದನು. ಮತ್ತೆ ಅವೇ ಯಜ್ಞ ಸಂನ್ಯಾಸಾದಿಗಳು ಸರ್ವಸಾಮಾನ್ಯರ ಸೊತ್ತೆಂದು ಘೋಷಿಸಿದನು. ಆದ್ದರಿಂದ ಅವುಗಳ ಬಗ್ಗೆ ವಿಚಾರಿಸುವುದು ಅವಶ್ಯಕ.

**ಯಜ್ಞ**

ಸಾಮಾನ್ಯವಾಗಿ ಯಜ್ಞವೆನ್ನುವ ಹೆಸರು ಕಿವಿಯಲ್ಲಿ ಬೀಳುತ್ತಲೇ 'ಇದು ಎಲ್ಲರಿಗೂ ಸಾಧ್ಯವಾಗುವ ಕೆಲಸವಲ್ಲ' ಎನ್ನುವ ಭಾವನೆ ತಟ್ಟುವುದು. ಧನ ಬಾಹುಳ್ಯ, ಜನ ಬಾಹುಳ್ಯವಿದ್ದ ಯಾರೋ ಕೆಲವರು ಮಹಾರಾಜರು ಪೂರ್ವದಲ್ಲಿ ಆಚರಿಸುತ್ತಿದ್ದರು. ಅಂಗಬಲ ಹಾಗು ಅರ್ಥಬಲವಿದ್ದಾಗ ಮಾತ್ರ ಯೋಗಕ್ರಿಯೆ ಸಾಧ್ಯವಾಗುತ್ತಿತ್ತು. ಹೋತ, ಉದ್ಗಾತ ಮುಂತಾದವರು, ಋತ್ವಿಕ್ಕುಗಳು, ಪಂಡಿತರು, ಶಾಸ್ತ್ರ ಪರಿಚಯವಿದ್ದವರು, ಧನಧಾನ್ಯಗಳು, ಎಷ್ಟೋ ಕ್ರಿಯಾಕಲಾಪಗಳು ಯಜ್ಞಕ್ಕೆ ಅವಶ್ಯಕಗಳಾಗಿದ್ದುವು. ಇನ್ನು ಫಲವೋ ಅತಿ ಸ್ವಲ್ಪ. ಕಾಮ್ಯಕರ್ಮವಾದ್ದರಿಂದ ಅದರ ಫಲವು ನ್ಯೂನತೆಗಳನ್ನು ಹೊಂದೇ ಇರುತ್ತದೆ. ಶಾಶ್ವತವಾದ ಮೋಕ್ಷವು ಅದರಿಂದ ಯಾವಾಗಲೂ ಸಿಗಲಾರದು. ಇದೆಲ್ಲವನ್ನು ಆಲೋಚಿಸಿ, ಶ್ರೀ ಕೃಷ್ಣಭಗವಂತನು ಸರ್ವರಿಗೂ ಸಾಧ್ಯವಾದ, ಹೆಚ್ಚಿಗೆ ಶ್ರಮವಿಲ್ಲದ; ಪಂಡಿತರಿಗೆ, ಪಾಮರರಿಗೆ, ಧನಿಕರಿಗೆ, ದರಿದ್ರರಿಗೆ, ಪುರುಷರಿಗೆ, ಸ್ತ್ರೀಯರಿಗೆ, ಬ್ರಾಹ್ಮಣರಿಗೆ, ಚಂಡಾಲರಿಗೆ ಹಾಗು ಸರ್ವರಿಗೂ ಆಚರಣಯೋಗ್ಯವಾದ; ಧನವ್ಯಯವಿಲ್ಲದ ಯಜ್ಞವನ್ನು ಉಪದೇಶಿಸಿದನು. ಅದೇ ನಿಷ್ಕಾಮ ಕರ್ಮ. ಕರ್ತೃತ್ವವಿಲ್ಲದೆ ಮಾಡಲ್ಪಡುವ ಪ್ರತಿಕಾರ್ಯವೂ ಮಹಾಯಜ್ಞವೇ ಆಗುವುದು. ದೈವಸ್ಮೃತಿಯಿಂದ ಆಚರಿಸಲ್ಪಡುವ ಕಾರ್ಯವೆಲ್ಲವೂ ಯಜ್ಞಕ್ರಿಯೆಯಾಗಿ ಪರಿಣಮಿಸುವುದು! - ಎಂದು ಭಗವಂತನು ಗೀತೆಯಲ್ಲಿ ತಿಳಿಸಿದ್ದಾನೆ. ಈ ಸೂತ್ರವನ್ನನುಸರಿಸಿ ಮನುಜನು ತನ್ನ ದೈನಂದಿನ ವ್ಯವಹಾರವೆಲ್ಲವನ್ನು ಪವಿತ್ರವಾದ ಯಜ್ಞವಾಗಿ ಪರಿಣಮಿಸಿಕೊಳ್ಳುವ ಸಾಧ್ಯತೆಗಳಿವೆ. ಅರ್ಜುನನು ಶ್ರೀ ಕೃಷ್ಣ ಪರಮಾತ್ಮನನ್ನು ಮುಂದೆ ಇಟ್ಟುಕೊಂಡು ಆತನನ್ನೇ ಸ್ಮರಿಸುತ್ತಾ ಘೋರ ಸಂಗ್ರಾಮವನ್ನು ಕೂಡ ಸಾತ್ವಿಕ ಯಜ್ಞವನ್ನಾಗಿ ಪರಿಣಮಿಸಿದನು.

> ೧. **ಯಜ್ಞಾನಾಂ ಜಪಯಜ್ಞೋಽಸ್ಮಿ** (೧೦-೨೫)
> ೨. **ಸ್ವಾಧ್ಯಾಯ ಜ್ಞಾನಯಜ್ಞಾಶ್ಚ ಯತಯಃ ಸಂಶಿತವ್ರತಾಃ** (೪-೨೮)

ಈ ಪ್ರಕಾರವಾಗಿ ಗೀತಾಚಾರ್ಯನು ಜಪ, ಸ್ವಾಧ್ಯಯ, ಆಹಾರ ಸಂಯಮ ಮುಂತಾದ ಸಾಮಾನ್ಯಕ್ರಿಯೆಗಳನ್ನು ಕೂಡ ಯಜ್ಞಗಳೆಂದು ವಿವರಿಸಿದನು.

ಭಗವಂತನು ತಿಳಿಸಿದ ಈ ಯಜ್ಞಗಳನ್ನು ಯಾರು ಬೇಕಾದರೂ ಆಚರಿಸಬಹುದು. ಖರ್ಚಿನ ಬಾಬತ್ತಿಲ್ಲ, ಹೆಚ್ಚಿನ ಪರಿಶ್ರಮವಿಲ್ಲ. ಅಪಾರವಾದ ಫಲವೋ ಕಟ್ಟಿಟ್ಟದ್ದು. ಕರ್ಮಬಂಧವನ್ನು ಕತ್ತರಿಸಿ ಆ ಕಡೆ ತೆಗೆದು ಬಿಸಾಡುವಷ್ಟು ಅಮೋಘ ಶಕ್ತಿ ಈ ಯಜ್ಞಗಳಿಗೆ ಇದೆ. ಅಂತಹ ಯಜ್ಞರೂಪವಲ್ಲದ ಬೇರೆ ಯಾವ ಕರ್ಮಗಳೇ ಆಗಲಿ ಜೀವಿಗೆ ಬಂಧವನ್ನೇ ಉಂಟುಮಾಡುವುವು.* ಆದ್ದರಿಂದ ಭಗವಂತನು ತೋರಿಸಿದ ಈ ಸುಲಭೋಪಾಯದ ಮೂಲಕ ಪ್ರತಿಯೊಬ್ಬರು ಅವರವರ ನಿತ್ಯಕರ್ಮಗಳನ್ನು. ವ್ಯವಹಾರಗಳನ್ನು ಕರ್ತೃತ್ವ ರಹಿತರಾಗಿ, ಈಶ್ವರಾರ್ಪಣ ಬುದ್ಧಿಯಿಂದ ಆಚರಿಸುವುದರ ಮೂಲಕ ಅವು ಯಜ್ಞಕ್ರಿಯೆಗಳಾಗಿ ಪರಿವರ್ತನೆಗೊಂಡು ಕರ್ಮಬಂಧನದಿಂದ ಬಿಡುಗಡೆ ಮಾಡುತ್ತವೆ. ಇಲ್ಲದೆ ಹೋದಲ್ಲಿ ಜೀವನವು ದುರ್ಭರವಾಗುತ್ತದೆ. ಮತ್ತೆ ಕರ್ಮರಾಶಿ ವೃದ್ಧಿಯಾಗಿ ಜನನ ಮರಣರೂಪದ ಸಂಸಾರವನ್ನು ಸ್ಥಿರಗೊಳಿಸುತ್ತದೆ. ಈ ವಿಧವಾಗಿ ಶ್ರೀಕೃಷ್ಣಪರಮಾತ್ಮನು ಸರ್ವಜೀವಿಗಳ ಉದ್ಧಾರಕ್ಕಾಗಿ ಯಜ್ಞವೆಂಬ ಪದಕ್ಕೆ ನೂತನ ರೂಪವನ್ನು ಕೊಟ್ಟು ಕಠಿಣವಾದ ಆ ಕ್ರಿಯೆಯನ್ನು ಸುಲಭಗೊಳಿಸಿ ದ್ವಿಗುಣ ಫಲದ ಅಭಿಧಾನವನ್ನಿತ್ತು ಜನಸಾಮಾನ್ಯರಿಗೆ ಮಹೋಪಕಾರವನ್ನು ಮಾಡಿದ್ದಾನೆ.

**ತ್ಯಾಗ ಹಾಗೂ ಸಂನ್ಯಾಸ**

ತ್ಯಾಗವೆಂದರೆ ಸಮಸ್ತವನ್ನು ಬಿಟ್ಟುಬಿಡುವುದೆಂದೂ; ಸಂನ್ಯಾಸವೆಂದರೆ ಮನೆಬಾಗಿಲು, ಪತ್ನೀಪುತ್ರರು, ಬಂಧುಗಳು, ಆಸ್ತಿಪಾಸ್ತಿಗಳು, ಮುಂತಾದುವುಗಳೆಲ್ಲವನ್ನೂ ತ್ಯಾಜ್ಯಮಾಡಿ ಕಾವಿ ವಸ್ತ್ರವನ್ನು ಧರಿಸಿ ಅರಣ್ಯಕ್ಕೆ ಹೋಗುವುದೆಂದೂ ಅಲ್ಲಿಯವರೆಗೂ ಭಾವಿಸುತ್ತಿದ್ದರು. ಆದ್ದರಿಂದಲೇ ಅಂತಹ ತ್ಯಾಗ, ಸಂನ್ಯಾಸ ಜನರ ದೃಷ್ಟಿಯಲ್ಲಿ ಹೆಚ್ಚಿನ ಅಭಿಪ್ರಾಯ ಮಾಡಿರಲಿಲ್ಲ. ಆದರೆ ಶ್ರೀ ಕೃಷ್ಣಮೂರ್ತಿ ಈ ಎರಡು ಶಬ್ದಗಳಿಗೆ ವಿಶಾಲವಾದ ಅರ್ಥವನ್ನಿತ್ತು ಇವು ಎಲ್ಲರಿಗೂ ಸಾಧ್ಯವಾಗುವಂತೆ ಮಾಡಿದನು.

> ೧. **ಸರ್ವಕರ್ಮಫಲತ್ಯಾಗಂ ಪ್ರಾಹುಸ್ತ್ಯಾಗಂ ವಿಚಕ್ಷಣಾಃ** (೧೮-೨)
> ೨. **ಯಸ್ತು ಕರ್ಮಫಲತ್ಯಾಗೀ ಸ ತ್ಯಾಗೀತ್ಯಭಿಧೀಯತೇ** (೧೮-೧೧)

ಮುಂತಾದ ಪ್ರಮಾಣಗಳ ಮೂಲಕ ಕರ್ಮಫಲವನ್ನು ಈಶ್ವರಾರ್ಪಣೆ ಮಾಡುವುದೇ ತ್ಯಾಗವೆಂದು ಗೀತಾಚಾರ್ಯನು ನುಡಿದನು. ಆದ್ದರಿಂದ ಈ ತ್ಯಾಗವು ಸರ್ವರಿಗೂ ಆಚರಣಯೋಗ್ಯವಾಗಿದೆ. ಹಾಗೆಯೇ ಸಂನ್ಯಾಸಕ್ಕೆ ಕೂಡ ಗೀತಾಚಾರ್ಯರು ಸೂಕ್ತವಾದ ಅರ್ಥವನ್ನು ಬೋಧಿಸಿದರು. ಅದೇನೆಂದರೆ,

> ೧. **ಅನಾಶ್ರಿತಃ ಕರ್ಮಫಲಂ ಕಾರ್ಯಂ ಕರ್ಮ ಕರೋತಿ ಯಃ।**
> **ಸ ಸಂನ್ಯಾಸೀ ಚ ಯೋಗೀಚ ನ ನಿರಗ್ನಿರ್ನಚಾಕ್ರಿಯಃ॥** (೬-೧)
> ೨. **ಕಾಮ್ಯಾನಾಂ ಕರ್ಮಣಾಂ ನ್ಯಾಸಂ ಸಂನ್ಯಾಸಂ ಕವಯೋ ವಿದುಃ।**(೧೮-೨)

"ಅಗ್ನಿ ಹೋತ್ರವನ್ನು ಬಿಡುವುದಾಗಲಿ, ಯಾವ ಕೆಲಸವನ್ನು ಮಾಡದೆ ಸುಮ್ಮನಿರುವುದಾಗಲಿ ಸಂನ್ಯಾಸವಾಗಲಾರದು. ಫಲವನ್ನು ಅಪೇಕ್ಷಿಸದೆ ಕರ್ಮವನ್ನು ಮಾಡುವುದೇ ಸಂನ್ಯಾಸ. ಕಾಮ್ಯಕರ್ಮಗಳನ್ನು ಬಿಡುವುದೇ ಸಂನ್ಯಾಸ" - (The Sannyasa of Gita is all work yet no work) - ಎಂದು ಭಗವಂತನು ಗೀತೆಯಲ್ಲಿ ಸ್ಪಷ್ಟವಾಗಿ ಹೇಳಿದ್ದಾನೆ. ಓಹೋ! ಎಷ್ಟು ಸುಲಭವಾಗಿದೆ ಸಂನ್ಯಾಸ! ಗೃಹ, ಪರಿವಾರವನ್ನು ತ್ಯಜಿಸಬೇಕಾಗಿಲ್ಲ. ಪತ್ನಿ ಪುತ್ರರನ್ನು ಬಿಡಬೇಕಾಗಿಲ್ಲ. ಉದ್ಯೋಗಕ್ಕೆ ತಿಲಾಂಜಲಿಯನ್ನರ್ಪಿಸಬೇಕಾಗಿಲ್ಲ.

---

* ಯಜ್ಞಾರ್ಥಾತ್ ಕರ್ಮಣೋಽನ್ಯತ್ರ ಲೋಕೋಽಯಂ ಕರ್ಮಬಂಧನಃ । (೩-೯)

ಕಾವಿ ವಸ್ತ್ರಗಳನ್ನು ಧರಿಸಬೇಕಾಗಿಲ್ಲ. ದಂಡ ಕಮಂಡಲಗಳ ಗೋಜಿಗೆ ಹೋಗಬೇಕಾಗಿಲ್ಲ. ನಿರ್ಜನ ಪ್ರದೇಶಕ್ಕೆ ನಿಷ್ಕ್ರಮಿಸುವ ಅಗತ್ಯವಿಲ್ಲ. ಎಲ್ಲಿರುವವರು ಅಲ್ಲೇ ಇರಬಹುದು. ಯಾವ ಕೆಲಸವನ್ನು ಮಾಡುವವರು ಆ ಕೆಲಸವನ್ನೇ ಮುಂದುವರಿಸಬಹುದು. ಕ್ರಿಯೆಗಳಲ್ಲಿ ಕರ್ತೃತ್ವ ಬುದ್ಧಿಮಾತ್ರ ಬಿಟ್ಟರೆ ಸಾಕು. ಕಾಮ್ಯಬುದ್ಧಿಯನ್ನು ಅಂತ್ಯಗೊಳಿಸಿದರೆ ಸಾಕು. ಅದೇ ಸಂನ್ಯಾಸ - ಎಂದು ಶ್ರೀ ಕೃಷ್ಣಪರಮಾತ್ಮನು ಘಂಟಾಘೋಷವಾಗಿ ಘೋಷಿಸಿದನು. ಗೀತೆಯಲ್ಲಿಯ ಈ ಸಂನ್ಯಾಸವನ್ನು ಗೃಹಸ್ಥರು ಕೂಡ ಆಚರಿಸಬಹುದು. ಸ್ತ್ರೀಯರು ಕೂಡ ಆಚರಿಸಬಹುದು. ಈ ವಿಧವಾಗಿ ಸರ್ವ ಆಚರಣೆಗಳನ್ನು ಆಚರಿಸುವ ಮೂಲಕ ತ್ಯಾಗಿಗಳಾಗಬಹುದು.

**ಯೋಗ**

ಇನ್ನು ಯೋಗವೆನ್ನುವ ಪದಕ್ಕೆ ಗೀತೆ ಎಂತಹ ವ್ಯಾಖ್ಯೆ ಕೊಡುತ್ತಿದೆಯೋ ನೋಡೋಣ. ಇಲ್ಲಿಯವರೆಗೆ ಯೋಗವೆನ್ನುವ ಶಬ್ದ ಕೇಳುತ್ತಲೇ, ಅದು ಯಾವುದೋ ಕಷ್ಟಕರವಾದ ಅಷ್ಟಾಂಗ ಯೋಗವೋ, ಹಠ ಯೋಗವೋ ಎಂದು ಭಾವಿಸುತ್ತಿದ್ದರು. ಆದರೆ ಗೀತಾಚಾರ್ಯರು ಯೋಗಕ್ಕೆ ಸುಲಭವಾದ ಅರ್ಥವನ್ನು ಕೊಟ್ಟರು.

೧. **ಸಮತ್ವಂ ಯೋಗ ಉಚ್ಯತೇ** (೨-೪೮)
೨. **ಯೋಗಃ ಕರ್ಮಸು ಕೌಶಲಮ್** (೨-೫೦)

"ಕಾರ್ಯವು ಫಲಿಸಲಿ ಇಲ್ಲವೆ ಫಲಿಸದೆ ಇರಲಿ ಚಿತ್ತದಲ್ಲಿ ಸಮಸ್ಥಿತಿಯನ್ನು ಹೊಂದಿರುವುದೇ ಯೋಗ. ಕರ್ಮದಲ್ಲಿ ಫಲಾಪೇಕ್ಷೆ ಇಲ್ಲದೆ ಇರುವುದೇ ಯೋಗ"ವೆಂದು ಶ್ರೀ ಕೃಷ್ಣನು ಅಪ್ಪಣೆಯಿತ್ತನು. ಜೀವಿಯು ಶಿವನಲ್ಲಿ ಐಕ್ಯವಾಗಲು ಸಹಾಯವಾಗುವ ಯಾವ ಕ್ರಿಯೆಯೇ ಆಗಲಿ ಯೋಗವೆನಿಸಿಕೊಳ್ಳುವುದು (ಯುಜ್ಯತ ಇತಿ ಯೋಗಃ). ಈ ಪ್ರಕಾರವಾಗಿ ಕರ್ಮ, ಭಕ್ತಿ, ಧ್ಯಾನ,ಜ್ಞಾನ ಮುಂತಾದುವು ಯೋಗಗಳೇ ಆಗಿವೆ. ಆದ್ದರಿಂದಲೇ ಕರ್ಮಯೋಗ, ಭಕ್ತಿಯೋಗ, ಧ್ಯಾನಯೋಗ, ಜ್ಞಾನಯೋಗ ಎಂದು ಭಿನ್ನವಾಗಿ ಕರೆಯಲ್ಪಟ್ಟಿವೆ. ಯೋಗಾಭ್ಯಾಸಕ್ಕೆ ಯಾರೂ ಭಯಪಡುವ ಅಗತ್ಯವಿಲ್ಲ. ಫಲಾಪೇಕ್ಷೆಯಿಲ್ಲದೆ ಕರ್ಮಮಾಡುವವರು; ಚಿತ್ತದ ಸಮತ್ವವನ್ನು ಕಾಪಾಡಿಕೊಳ್ಳುವವರೆಲ್ಲರೂ ಯೋಗಿಗಳೇ. ಒಂದೇ ಮಾತಿನಲ್ಲಿ ಹೇಳಬೇಕೆಂದರೆ, ದೈವಪ್ರಾಪ್ತಿಗೆ ಸಹಾಯವಾಗುವ ಯಾವ ಕಾರ್ಯವನ್ನು ಮಾಡಿದರೂ ಆತನು ಯೋಗಿಯೇ ಎಂದು ಗೀತೆ ಉಪದೇಶಿಸುತ್ತದೆ.

**ತಪಸ್ಸು**

ಹಾಗೆಯೇ ಪೂರ್ವದಲ್ಲಿ ತಪಸ್ಸು ಎನ್ನುವ ಶಬ್ದವನ್ನು ಕೇಳುತ್ತಲೇ ಜನರು ತತ್ತರಿಸಿ ಹೋಗುತ್ತಿದ್ದರು. ತಲೆ ಕೆಳಗೆ ಕಾಲು ಮೇಲೆ ಮಾಡಿ ಉರಿಯುವ ಬಿಸಿಲಿನಲ್ಲಿ ಬೆಂದು ಹೋಗಿ; ಇಲ್ಲ ಮಳೆಯಲ್ಲಿ ನೆನೆಯುತ್ತ ಅನ್ನಾಹಾರಗಳನ್ನು ವರ್ಜಿಸಿ; ದಿನಗಳು, ತಿಂಗಳುಗಟ್ಟಲೇ ಕಾಲಕ್ಷೇಪ ಮಾಡುವುದೇ ತಪಸ್ಸು ಎಂದು ಜನರು ತಿಳಿದಿದ್ದರು. ಇಂತಹ ಭೀತಿ ಪ್ರಜೆಗಳಲ್ಲಿ ವ್ಯಾಪಿಸಿದ್ದ ಕಾರಣದಿಂದಲೇ ಆ ತಪಸ್ಸಿನ ಗೋಜಿಗೆ ಬಹಳ ಜನ ಹೋಗುತ್ತಿರಲಿಲ್ಲ. ಆದರೂ ತಪಸ್ಸಿನ ಮೂಲಕ ಮಾತ್ರವೇ ಪಾಪ ಸಮುದಾಯವು ಭಗ್ನವಾಗುವುದು (ತಪಸಾ ಕಿಲ್ಬಿಷಂಹಂತಿ) ಎನ್ನುವ ಶಾಸ್ತ್ರದ ಉದ್ಘೋಷದಿಂದ ಏನು ಮಾಡುವುದೆಂದು ತೋಚದೆ ವಿಚಲಿತರಾಗಿದ್ದ ಜನಸಮುದಾಯಕ್ಕೆ ಅಭಯವನ್ನೀಯುತ್ತ ಶ್ರೀ ಕೃಷ್ಣ ಭಗವಂತನು ತಪಸ್ಸು ಎನ್ನುವ ಪದಕ್ಕೆ ಬೇರೆಯ ಅರ್ಥವನ್ನೇ ಕೊಟ್ಟನು. ಗೀತೆಯ ೧೭ನೆಯ ಅಧ್ಯಾಯದಲ್ಲಿ "ಓ ಸಾಧಕರೇ! ಮುಮುಕ್ಷುಗಳೇ! ಮೋಕ್ಷಕ್ಕೆ ತಪಸ್ಸು ಅತ್ಯಾವಶ್ಯಕವಾದದ್ದು. ಆದರೆ ಅದು ನೀವು ಸಾಮಾನ್ಯವಾಗಿ ಭಾವಿಸುವ ಕ್ಲೇಶಾತ್ಮಕವಾದ ಭಯಂಕರವಾದ ತಪಸ್ಸಲ್ಲ. ಅದು ಸರ್ವರಿಗೂ ಆಚರಣಯೋಗ್ಯವಾದ ಸುಲಭ ಸಾಧನೆ. ಅದು ಶಾರೀರಕ, ವಾಚಕ, ಮಾನಸಿಕಗಳೆಂದು ಮೂರು ವಿಧಗಳಾಗಿದೆ. ದೇವತೆಗಳು, ಬ್ರಹ್ಮನಿಷ್ಠರು, ಗುರುಗಳು ಹಾಗು ಪ್ರಜ್ಞಾಶೀಲರಾದ ಮಹನೀಯರು ಮೊದಲಾದವರನ್ನು ಪೂಜಿಸುವುದು; ಶೌಚ, ಋಜುತ್ವ, ಬ್ರಹ್ಮಚರ್ಯ, ಅಹಿಂಸೆ ಮೊದಲಾದ ಸುಗುಣಗಳನ್ನು ಹೊಂದಿರುವುದು ಶಾರೀರಕ ತಪಸ್ಸು ಎಂದು ಕರೆಯಲ್ಪಡುತ್ತದೆ. ಪ್ರಿಯವಾಗಿ ಹಾಗೂ ಸತ್ಯವಾಗಿ ಮಾತನಾಡುವುದು, ಸ್ವಾಧ್ಯಯನ ಮಾಡುವುದು ವಾಚಕ ತಪಸ್ಸು ಎಂದೆನಿಸಿಕೊಳ್ಳುತ್ತದೆ. ಮನೋನೈರ್ಮಲ್ಯ, ಮೌನ, ಆತ್ಮಸಂಯಮ, ಭಾವಶುದ್ಧಿಗಳು ಮಾನಸಿಕ ತಪಸ್ಸು ಎಂದು ಹೇಳಲ್ಪಡುತ್ತವೆ*- ಎಂದು ಶ್ರೀ ಕೃಷ್ಣಮೂರ್ತಿ ಅಪ್ಪಣೆ ಕೊಟ್ಟನು. ಭಗವಂತನು ತಿಳಿಸಿದ ಈ ತಪಸ್ಸು ಎಲ್ಲರಿಗೂ ಸಾಧ್ಯ ಹಾಗೂ ಸ್ವಲ್ಪ ಪರಿಶ್ರಮ ಮಾಡುವುದರಿಂದ ಸರ್ವರಿಗೂ ಲಭ್ಯ. ಇಂದ್ರಿಯಗಳಿಗೆ, ಮನಸ್ಸಿಗೆ ಜನ್ಮಜನ್ಮಾಂತರಗಳಿಂದ ಅಂಟಿಕೊಂಡು ಬಂದಿರುವ ದುಸ್ಸಂಸ್ಕಾರ, ದುರ್ವಾಸನಗಳೆನ್ನುವ ಮಾಲಿನ್ಯವನ್ನು ಹೊರದೂಡುವುದೇ ತಪಸ್ಸು. ಸೂಕ್ಷ್ಮದೇಹಕ್ಕೆ ಹಿಡಿದಿರುವ ಬೂಜನ್ನು ತೆಗೆಯುವುದೇ ತಪಸ್ಸು. ಇನ್ನೂ ಸ್ವಲ್ಪ ವಿಶದೀಕರಿಸಬೇಕೆಂದರೆ, ಇದು ಚಿನ್ನದ ಅದಿರನ್ನು ಪುಟಕ್ಕೆ ಹಾಕಿ ಹೊಳೆಯುವ ಬಂಗಾರವನ್ನಾಗಿ ಮಾಡಿದ ಹಾಗೆ. ಇಂದ್ರಿಯ, ಮನಸ್ಸುಗಳನ್ನು ಜ್ಞಾನಾಗ್ನಿಯಿಂದ ದಹಿಸಿ ಅವುಗಳಲ್ಲಿಯ ಮಾಲಿನ್ಯವನ್ನು ಭಸ್ಮೀಕರಿಸುವುದೇ ತಪಸ್ಸು. ಈ ಪ್ರಕಾರವಾಗಿ ಭಗವದ್ಗೀತೆಯು ಯಜ್ಞಾದಿ ಪದಗಳಿಗೆ ನೂತನಾರ್ಥಗಳನ್ನು ಕೊಟ್ಟು, ಜನರಿಗೆ ಸುಲಭವಾದ ಸಾಧನೆಗಳನ್ನು ತೋರಿಸಿ, ಭಯಬಿದ್ದು ದೂರ ಓಡುತ್ತಿದ್ದ ಜನರನ್ನು ಆಕರ್ಷಿಸಿ, ಆಧ್ಯಾತ್ಮಿಕ ಕ್ಷೇತ್ರವನ್ನು ಭಕ್ತವೃಂದದೊಡನೆ ಸಡಗರದಿಂದ ನಲಿಯುವಂತೆ ಮಾಡಿತು. ಗೀತೆ ಮಾಡಿದ ಈ ಉಪಕಾರವನ್ನು ಮಾನವ ಕೋಟಿಯು ಎಂದೆಂದಿಗೂ ಮರೆಯಲಾರದಂತಹದು.

---

*೧. ದೇವ ದ್ವಿಜಗುರು ಪ್ರಾಜ್ಞ ಪೂಜನಂ ಶೌಚ ಮಾರ್ಜವಮ್ ।
ಬ್ರಹ್ಮಚರ್ಯಮಹಿಂಸಾ ಚ ಶಾರೀರಂ ತಪ ಉಚ್ಯತೇ ॥ (೧೭-೧೪)
೨. ಅನುದ್ವೇಗಕರಂ ವಾಕ್ಯಂ ಸತ್ಯಂ ಪ್ರಿಯಹಿತಂ ಚಯತ್ ।
ಸ್ವಾಧ್ಯಾಯಾಭ್ಯಸನಂ ಚೈವ ವಾಙ್ಮಯಂ ತಪ ಉಚ್ಯತೇ ॥(೧೭-೧೫)
೩. ಮನಃ ಪ್ರಸಾದಸ್ಸೌಮ್ಯತ್ವಂ ಮೌನಮಾತ್ಮ ವಿನಿಗ್ರಹಃ ।
ಭಾವಸಂಶುದ್ಧಿರಿತ್ಯೇತತ್ತಪೋ ಮಾನಸ ಮುಚ್ಯತೇ ॥ (೧೭-೧೬)

## ಗೀತಾಸ್ವರೂಪ

ಗೀತೆಯು ಹದಿನೆಂಟು ಅಧ್ಯಾಯಗಳಿಂದ ಕೂಡಿದೆ. ವೇದಗಳ ಹಾಗೆ ಇದೂ ಕಾಂಡತ್ರಯಾತ್ಮಕವಾಗಿ ವಿಭಜಿಸಲ್ಪಟ್ಟಿದೆ. ವೇದಗಳಲ್ಲಿಯ ಮೊದಲನೆಯ ಭಾಗವು ಕರ್ಮಪ್ರತಿಪಾದಕವಾದ ಸಂಹಿತೆ. ಎರಡನೆಯ ಭಾಗವು ಉಪಾಸನಾಪ್ರತಿಪಾದಕವಾದ ಬ್ರಾಹ್ಮಣ. ಮೂರನೆಯ ಭಾಗವು ವಿಜ್ಞಾನಪ್ರತಿಪಾದಕವೆನ್ನುವ ಉಪನಿಷತ್ತುಗಳು. ವೇದಗಳ ಸಾರವೇ ಗೀತೆಯಾದ್ದರಿಂದ ಅದು ಕೂಡ ತ್ರಿಭಾಗ ರೂಪವಾಗಿ ವಿಭಾಗಗೊಂಡಿದೆ. ತ್ರಿಷಟ್ಕಗಳಿಂದ ರಾರಾಜಿಸುತ್ತಿದೆ. ಅದರಲ್ಲಿ ಪ್ರಥಮ ಷಟ್ಕ ಕರ್ಮಯೋಗವನ್ನು, ದ್ವಿತೀಯ ಷಟ್ಕ ಭಕ್ತಿಯೋಗವನ್ನು, ತೃತೀಯಷಟ್ಕ ಜ್ಞಾನಯೋಗವನ್ನು ಬೋಧಿಸುತ್ತವೆ. ಆದರೆ ಕರ್ಮಷಟ್ಕದಲ್ಲಿ ಭಕ್ತಿ ಜ್ಞಾನಗಳು, ಭಕ್ತಿಷಟ್ಕದಲ್ಲಿ ಜ್ಞಾನಕರ್ಮಗಳು, ಜ್ಞಾನಷಟ್ಕದಲ್ಲಿ ಭಕ್ತಿಕರ್ಮಗಳು ಇಲ್ಲದೆ ಇಲ್ಲ. ಇದು ಕೇವಲ ಸ್ಥೂಲ ವಿಭಜನೆ ಮಾತ್ರ. ವಾಸ್ತವವಾಗಿ ವಿಚಾರಿಸಿದಲ್ಲಿ ಯಾವುದೇ ಒಂದು ಯೋಗದಲ್ಲಿ ಬೇರೆಯೋಗಗಳು ಅಂತರ್ಭೂತಗಳಾಗಿದ್ದು ಗೌಣವಾಗಿರುವವು. ಅವುಗಳನ್ನು ಪ್ರತ್ಯೇಕವಾಗಿ ವಿಭಜಿಸುವುದು ಅಸಮಂಜಸ. ಮಾನವ ಜೀವನದಲ್ಲಿ ಈ ಮೂರು ಯೋಗಗಳು (ಕರ್ಮ, ಭಕ್ತಿ, ಜ್ಞಾನ) ಅತ್ಯವಶ್ಯಕಗಳು. ಜನಕನ ಕ್ರಿಯಾಶೀಲತೆ, ಬುದ್ಧನ ತುಂಬು ಹೃದಯ, ಶಂಕರನ ಮೇಧಾಶಕ್ತಿ, ಈ ಮೂರು ಮಾನವನ ವ್ಯಕ್ತಿತ್ವವನ್ನು ತಪ್ಪದೆ ಅಲಂಕರಿಸಬೇಕು. (one should possess the head of Shankara, the heart of Buddha and the hand of Janaka). ಗೀತೆಯಲ್ಲಿಯು ಈ ಯೋಗಗಳೆಲ್ಲವೂ ಒಂದರೊಂದೊಡಗೂಡಿ ಕೊನೆಯಲ್ಲಿ ಜೀವಿಯನ್ನು ಪರಂಧಾಮಕ್ಕೆ ಸೇರಿಸಲು ಅನುವಾಗುತ್ತವೆ.

ಗೀತೆಯ ಮೊದಲನೇ ಅಧ್ಯಾಯ ಹಾಗು ಎರಡನೆಯ ಅಧ್ಯಾಯದ ೧೧೦ನೆಯ ಶ್ಲೋಕದವರೆಗೆ ಇರುವ ವಿಷಯವನ್ನು ಪೂರ್ವ ಪೀಠಿಕೆ ಎಂದು ಕರೆಯುವರು. ಗೀತೆಯ ಬೋಧೆ ವಾಸ್ತವವಾಗಿ ಎರಡನೆಯ ಅಧ್ಯಾಯದ ಹನ್ನೊಂದನೆಯ ಶ್ಲೋಕವಾದ "ಅಶೋಚ್ಯಾನನ್ವಶೋಚಸ್ತ್ವಂ"- ಎನ್ನುವಲ್ಲಿಯಿಂದ ಪ್ರಾರಂಭವಾಗುತ್ತದೆ. ಆದ್ದರಿಂದಲೇ ಆ ಶ್ಲೋಕವನ್ನು ಗೀತೆಯ ಅಂಗನ್ಯಾಸ ಕ್ರಮದಲ್ಲಿ ಬೀಜವೆಂದು ಹೇಳಲ್ಪಟ್ಟಿದೆ. ಹಾಗೆಯೇ ಅಂತ್ಯದಲ್ಲಿ ೧೮ನೆಯ ಅಧ್ಯಾಯದ ೭೩ನೆಯ ಶ್ಲೋಕದಿಂದ ಕೊನೆಯವರೆಗೆ ಉತ್ತರ ಪೀಠಿಕೆ ಎಂದೆನ್ನುವರು. ಅದು ಅರ್ಜುನ ಹಾಗೂ ಸಂಜಯನ ವಾಕ್ಯಗಳಿಂದ ಕೂಡಿದೆ. ಈ ಎರಡನ್ನು ಬಿಟ್ಟರೆ, ಬೇರೆಯದೆಲ್ಲವೂ ಶ್ರೀಕೃಷ್ಣ ಪರಮಾತ್ಮನ ಬೋಧಾಮೃತ ಧಾರೆ. ಮಧ್ಯೆ ಮಧ್ಯೆ ಅರ್ಜುನನು ಹಾಕುವ ಪ್ರಶ್ನೆಗಳು ಸಾಧಕಲೋಕದಲ್ಲಿ ಸಾಮಾನ್ಯವಾಗಿ ಹೊರಹೊಮ್ಮುವ ಸಂಶಯಗಳೇ ಆಗಿವೆ. ಗೀತಾಬೋಧೆ ಸಂವಾದ ರೂಪದಲ್ಲಿರುವುದರಿಂದ ಸಾಧಕರ ಸಂಶಯಗಳೆಲ್ಲವನ್ನು ಅಲ್ಲಿ ಹಂತ ಹಂತವಾಗಿ ಪರಿಷ್ಕರಿಸಲಾಗಿದೆ.

ಭಗವತ್ತತ್ವವು ಗೀತೆಯಲ್ಲಿಯ ಎಲ್ಲಾ ಅಧ್ಯಾಯಗಳಲ್ಲಿ ಬೋಧಿಸಲ್ಪಟ್ಟಿದೆಯಾದರೂ, ೧೧ನೆಯ ಅಧ್ಯಾಯ (ವಿಶ್ವರೂಪ ಸಂದರ್ಶನ ಯೋಗ)ದಲ್ಲಿ ಪ್ರತ್ಯಕ್ಷವಾಗಿ ತೋರಿಸಲ್ಪಟ್ಟಿದೆ. ಇದು ಗೀತೆಯ ಮಹಾ ವಿಶೇಷ. ತತ್ತ್ವವು ಶ್ರವಣ ಮಾತ್ರದಿಂದ ಪೂರ್ತಿಯಾಗಲಾರದು. ಪ್ರತ್ಯಕ್ಷ ದರ್ಶನ, ಪ್ರತ್ಯಕ್ಷಾನುಭವವನ್ನು ಕೂಡ ಹೊಂದಿರಬೇಕೆನ್ನುವುದನ್ನು ಈ ಸಂಘಟನೆಯ ಮೂಲಕ ಗೀತೆ ಲೋಕಕ್ಕೆ ಸಾರುತ್ತಿದೆ. ಉನ್ನತ ಪಾಠಶಾಲೆಗಳಲ್ಲಿ ರಸಾಯನಿಕ ವಿದ್ಯೆಯನ್ನು ಬೋಧಿಸುವಾಗ ವಾಚಾಜ್ಞಾನದ (theory) ಜೊತೆ ಅನುಭವ ಜ್ಞಾನವೂ (practical) ಹೇಗೆ ಮೇಳವಿಸಲ್ಪಡುತ್ತದೋ, ಹಾಗೆಯೇ ಗೀತೆಯಲ್ಲಿ ಭಗವಂತನು ತನ್ನ ಸ್ವರೂಪವನ್ನು ಅರ್ಜುನನಿಗೆ ಪ್ರತ್ಯಕ್ಷವಾಗಿ ತೋರಿಸಿ, ಅನುಭವ ಜ್ಞಾನದ ಪ್ರಾಧಾನ್ಯತೆಯನ್ನು ಹಾಗು ಅವಶ್ಯಕತೆಯನ್ನು ಒತ್ತಿ ಹೇಳಿರುತ್ತಾನೆ.

ಗೀತೆಯಲ್ಲಿ ಅನೇಕ ಯೋಗಗಳ ಟಿಪ್ಪಣಿಗಳು ಇದ್ದಾಗ್ಯೂ, ಸ್ಥೂಲವಾಗಿ ಕರ್ಮ, ಭಕ್ತಿ, ಧ್ಯಾನ, ಜ್ಞಾನಯೋಗಗಳೆಂದು ಪ್ರಧಾನವಾಗಿ ನಾಲ್ಕು ಯೋಗಗಳಿವೆ ಎಂದು ಹೇಳಬಹುದು. ಆಯಾ ಯೋಗಗಳನ್ನು ಅಭ್ಯಸಿಸುವಾಗ "ಗೀತೆಯಲ್ಲಿ ಇದು ಮಾತ್ರವೇ ಪ್ರಾಮುಖ್ಯ. ಭಗವಂತನು ಇದೊಂದನ್ನೇ ಸಮರ್ಥಿಸುತ್ತಿದ್ದಾನೆ", ಎಂದೆನಿಸುವುದು ಸಹಜ. ಕರ್ಮಯೋಗ ಪ್ರಿಯರಿಗೆ, ಕರ್ಮಯೋಗ ಮಾತ್ರ ಗೀತೆಯಲ್ಲಿ ಒತ್ತಿ ಹೇಳಲ್ಪಟ್ಟಿದೆಯೆಂದು ಸ್ಫುರಿಸುತ್ತದೆ. ಅವರಿಗೆ ಅದರಲ್ಲಿ ಅನೇಕ ಪ್ರಮಾಣಗಳು ಗೋಚರಿಸುವುವು. ಹಾಗೆಯೇ ಭಕ್ತಿಯೋಗಿಗಳಿಗೆ ಭಕ್ತಿಯು, ಜ್ಞಾನಯೋಗಿಗಳಿಗೆ ಜ್ಞಾನವು ಕಾಣುತ್ತವೆ. ವಾಸ್ತವವಾಗಿ ಗೀತಾಚಾರ್ಯನು ಎಲ್ಲವನ್ನು ಸಮಾನವಾಗಿ ಬೋಧಿಸಿ, ಎಲ್ಲವನ್ನು ಸರಿಯಾಗಿ ಸಮನ್ವಯಿಸಿ, ಮೋಕ್ಷಕ್ಕೆ ಎಲ್ಲವೂ ಅವಶ್ಯಕಗಳೆಂದು ಎತ್ತಿ ತೋರಿಸಿದ್ದಾನೆ. ಯಾರ ಯಾರ ಸಂಸ್ಕಾರ ಹೇಗಿದೆಯೋ ಅದರಂತೆ ಅವರವರಿಗೆ ಪ್ರಿಯವಾದುದನ್ನು ಆಶ್ರಯಿಸಿಕೊಂಡು ಉದ್ಧಾರವಾಗಬಹುದೆಂದು ಕರುಣೆಯಿಂದ ಉಪದೇಶಿಸಿದ್ದಾನೆ. ಆದರೆ ಎಲ್ಲಾ ಯೋಗಗಳು ಒಂದನ್ನೊಂದು ಅವಲಂಬಿಸಿರುವುದರಿಂದ, ಯಾವುದೇ ಒಂದು ಯೋಗವನ್ನಾಚರಿಸಿದರೂ ಪರೋಕ್ಷವಾಗಿ ಬೇರೆಯವುಗಳನ್ನು ಕೂಡ ಆಚರಿಸಿದಂತಹವರಾಗುತ್ತಾರೆ. ಈ ಸರ್ವಯೋಗ ಸಮ್ಮಿಶ್ರಣ (Yoga of synthesis), ಸರ್ವಯೋಗ ಸಮನ್ವಯ, ಗೀತೆಯ ಅದ್ಭುತ ಚಮತ್ಕಾರಗಳಲ್ಲಿ ಒಂದಾಗಿದೆ.

## ಗೀತಾತಾತ್ಪರ್ಯ

ಈ ಪ್ರಕಾರವಾಗಿ ಗೀತೆಯಲ್ಲಿ ಎಲ್ಲಾ ಯೋಗಗಳು ಸಮರ್ಥಿಸಲ್ಪಟ್ಟಿವೆಯೆಂದರೆ, ಅದರ ಮುಖ್ಯ ತಾತ್ಪರ್ಯವೇನು? ಬೋಧಕನ ದೃಷ್ಟಿ ಪ್ರಧಾನವಾಗಿ ಯಾವುದರ ಮೇಲೆ ಕೇಂದ್ರೀಕರಿಸಲ್ಪಟ್ಟಿದೆ? ಎನ್ನುವ ವಿಷಯವನ್ನು ಅರ್ಥಮಾಡಿಕೊಳ್ಳಲು ವಿಮರ್ಶಕರು ಬಹು ವಿಧವಾಗಿ ಪ್ರಯತ್ನಗಳನ್ನು ಮಾಡಿದ್ದಾರೆ. ಅವುಗಳಲ್ಲಿ ಒಂದೆರಡನ್ನು ಮಾತ್ರ ಇಲ್ಲಿ ವಿಚಾರಿಸೋಣ - ಸಾಮಾನ್ಯವಾಗಿ ಗ್ರಂಥದ ತಾತ್ಪರ್ಯವನ್ನು ನಿರ್ಣಯಿಸಲು ಆರು ಪ್ರಮಾಣಗಳನ್ನು ಪರೀಕ್ಷಿಸಿ ನೋಡುವರು. ಅದನ್ನೇ ಷಡ್ವಿಧಲಿಂಗ ವೆನ್ನುವರು. ಅವು ಕ್ರಮವಾಗಿ ೧) ಉಪಕ್ರಮೋಪಸಂಹಾರಗಳು ೨) ಅಭ್ಯಾಸ ೩) ಅಪೂರ್ವತ್ವ ೪) ಫಲ ೫) ಅರ್ಥವಾದ ೬) ಉಪಪತ್ತಿ. ಈ ಆರು ಪ್ರಮಾಣಗಳ ಮೇರೆಗೆ ಗೀತೆಯ ಪ್ರಧಾನಾಶಯವನ್ನು ತಿಳಿಯಲು ಯತ್ನಗಳನ್ನು ಮಾಡಲಾಗಿದೆ. ಕೆಲವರು ಶರಣಾಗತಿ (ಭಕ್ತಿ)ಯೇ ಗೀತೆಯ ಮುಖ್ಯತಾತ್ಪರ್ಯವೆಂದು ಮೇಲೆ ಹೇಳಿದ ಷಡ್ವಿಧ ಲಿಂಗದ ಮೂಲಕ ಪರೀಕ್ಷಿಸಿ ಹೇಳುವರು. ಹೇಗೆಂದರೆ-

೧) **a) ಉಪಕ್ರಮ**

ಶಿಷ್ಯಸ್ತೇಽಹಂ ಶಾಧಿ ಮಾಂ ತ್ವಾಂ ಪ್ರಪನ್ನಮ್ (೨-೭)

"ಕೃಷ್ಣಾ! ನಾನು ನಿನ್ನ ಶಿಷ್ಯ. ನಿನ್ನಲ್ಲೇ ಶರಣು ಹೊಂದಿದ್ದೇನೆ, ಆಜ್ಞಾಪಿಸು"- ಈ ಪ್ರಕಾರವಾಗಿ ಗೀತೆ ಶರಣಾಗತಿಯಿಂದ ಪ್ರಾರಂಭವಾಗುತ್ತದೆ.

**b) ಉಪಸಂಹಾರ**

ಸರ್ವಧರ್ಮಾನ್ ಪರಿತ್ಯಜ್ಯ ಮಾಮೇಕಂ ಶರಣಂ ವ್ರಜ (೧೮-೬೬)

"ಸಮಸ್ತ ವಿಷಯಗಳನ್ನು ತ್ಯಜಿಸಿ ನನ್ನೊಬ್ಬನನ್ನೇ ಶರಣು ಹೊಂದು"- ಈ ವಿಧವಾಗಿ ಗೀತೆ ಶರಣಾಗತಿಯೊಂದಿಗೆ ಅಂತ್ಯವಾಗುತ್ತದೆ.

ಗೀತೆಯ ಮಧ್ಯಭಾಗದಲ್ಲಿ "ಅನನ್ಯಾಶ್ಚಿಂತಯಂತೋ ಮಾಂ.......... ಯೋಗಕ್ಷೇಮಂ ವಹಾಮ್ಯಹಮ್" ಎನ್ನುವ ಶ್ಲೋಕದ ಮೂಲಕ ಕೂಡ ಶರಣಾಗತಿಯನ್ನೇ ಬೋಧಿಸಲಾಗಿದೆ. ಈ ರೀತಿಯಾಗಿ ಗೀತೆಯ ಆದಿ ಮಧ್ಯಾಂತರಗಳಲ್ಲಿ ಶರಣಾಗತಿ ರೂಪವಾದ ಭಕ್ತಿಯೇ ಪ್ರೋತ್ಸಾಹಿಸಲ್ಪಟ್ಟಿದೆ.

**೨) ಅಭ್ಯಾಸ**

೧೨ನೆಯ ಅಧ್ಯಾಯದಲ್ಲಿ "ಮಯ್ಯೇವ ಮನ ಆಧತ್ಸ್ವ ..... ನ ಸಂಶಯಃ" (೧೨-೮)

"ಅದ್ವೇಷ್ಟಾ ಸರ್ವಭೂತಾನಾಂ........ ಕ್ಷಮೀ" (೧೨-೧೩) ಮೊದಲಾದ ಶ್ಲೋಕಗಳು

೧) ಯೇ ಯಥಾ ಮಾಂ ಪ್ರಪದ್ಯಂತೇ........ (೪-೧೧)
೨) ಮಾಮೇವ ಯೇ ಪ್ರಪದ್ಯಂತೇ........ (೭-೧೪)

ಮೊದಲಾದ ಶ್ಲೋಕಗಳು; ೭, ೧೦, ೧೧, ೧೫ನೆಯ ಅಧ್ಯಾಯಗಳ ಮತ್ತೆ ಕೆಲವು ಶ್ಲೋಕಗಳು, ಭಕ್ತಿ, ಶರಣಾಗತಿಯನ್ನು ಬೋಧಿಸುತ್ತವೆ.

**೩) ಅಪೂರ್ವತ್ವ:**

ಕರ್ಮ, ಭಕ್ತಿ, ಜ್ಞಾನ- ಎನ್ನುವ ಮೂರನ್ನು ಅನೇಕ ಕಡೆ ಹೇಳಲಾಗಿದೆಯಾದರೂ, ಗೀತೆಯಲ್ಲಿ ಜ್ಞಾನ ಮತ್ತು ಕರ್ಮ ಸಹಿತವಾಗಿರುವ ಭಕ್ತಿಗೆ ಹೆಚ್ಚಿನ ಪ್ರಾಧಾನ್ಯತೆ ಕೊಡಲಾಗಿದೆ. ಇದೇ ಅದರ ಅಪೂರ್ವತೆ.

**೪) ಫಲ:**

ಭಗವದಾಜ್ಞಾಪಾಲನೆಯೇ ಫಲ. 'ಕರಿಷ್ಯೇ ವಚನಂ ತವ'- ದೇವರ ಆಜ್ಞಾನುಸಾರವಾಗಿ ಭಕ್ತನು ಕಾರ್ಯವನ್ನು ಕೈಗೊಳ್ಳುವನು. ಇಲ್ಲಿಯೂ ಸಹ ಭಕ್ತಿಯೇ ಪ್ರಧಾನವಾಗಿ ಕಾಣಿಸುತ್ತದೆ.

**೫) ಅರ್ಥವಾದ:**

೧) 'ಸ್ವಲ್ಪಮಪ್ಯಸ್ಯ'........ ಈಶ್ವರಾರ್ಪಣವಾಗಿ, ಭಕ್ತಿಪೂರ್ವಕವಾಗಿ ಮಾಡಲ್ಪಡುವ ಕರ್ಮ, ಇಲ್ಲವೇ ಶರಣಾಗತಿ ಅಲ್ಪವಾದರೂ ಭಯಂಕರವಾದ ಸಂಸಾರದ ಭಯದಿಂದ ವಿಮುಕ್ತಿಗೊಳಿಸುವುದು.

೨) ಜನಕಾದಿಗಳ ದೃಷ್ಟಾಂತ- ಭಗವಂತನಿಗೆ ಸರ್ವಸಮರ್ಪಣೆ ಮಾಡಿ ಅವರು ಕರ್ಮಗಳನ್ನು ಆಚರಿಸಿದರು.

**೬) ಉಪಪತ್ತಿ (ಯುಕ್ತಿ):**

'ಮಯ್ಯಾವೇಶ್ಯ ಮನೋ ಯೇ ಮಾಂ.....' ಮುಂತಾದ ಶ್ಲೋಕಗಳ ಮೂಲಕ ಭಕ್ತಿಯನ್ನು ಕುರಿತ ಉಪಪತ್ತಿ (ಯುಕ್ತಿ)ಯನ್ನು ಬೋಧಿಸಲಾಗಿದೆ. ಈ ಪ್ರಕಾರವಾಗಿ ಷಡ್ವಿಧಲಿಂಗದ ಮೂಲಕ ಮತ್ತು ಗೀತೆಯಲ್ಲಿಯ ಅನೇಕ ಬೇರೆ ಪ್ರಮಾಣಗಳ ಮೂಲಕ *ಶರಣಾಗತಿಯೇ ಗೀತೆಯ ಮುಖ್ಯ ತಾತ್ಪರ್ಯವೆಂದು ಕೆಲವರ ಅಭಿಪ್ರಾಯವಾಗಿದೆ.

ಮತ್ತೆ ಕೆಲವರು ನಿಷ್ಕಾಮ ಕರ್ಮವೇ ಗೀತೆಯ ಪ್ರಧಾನಾಶಯವೆಂದು ನಂಬುತ್ತಾರೆ. ಗೀತೆಯ ಬೋಧನೆಯ ನಂತರ ಅರ್ಜುನನು ಏನನ್ನು ಮಾಡಿದನೋ ಅದೇ ಗೀತೆಯ ತಾತ್ಪರ್ಯವೆಂದು ಅವರ ನಿಶ್ಚಯ. ಅಕರ್ಮಿಯಾಗಿ ರಥದ ಮೇಲೆ ನಿಶ್ಶಸ್ತ್ರನಾಗಿ, ನಿರುತ್ಸಾಹಿಯಾಗಿದ್ದ ಅರ್ಜುನನು ಗೀತಾಬೋಧೆಯಿಂದ ಧೈರ್ಯೋತ್ಸಾಹಗಳನ್ನು ಹೊಂದಿ 'ಕರಿಷ್ಯೇ ವಚನಂ ತವ' (ನೀವು ಹೇಳಿದ ಹಾಗೆ ನಡೆಯುವೆನು) ಎಂದು ಹೇಳಿ ರಣರಂಗದಲ್ಲಿ ಧುಮುಕಿದನೇ ಹೊರತು ಸರ್ವಸಂಗ ಪರಿತ್ಯಾಗ ಮಾಡಿ ಸಂನ್ಯಾಸವನ್ನು ಸ್ವೀಕರಿಸಿ ಅರಣ್ಯಕ್ಕೆ ಓಡಿ ಹೋಗಲಿಲ್ಲ. ಫಲಾಪೇಕ್ಷೆ ರಹಿತನಾಗಿ ಕರ್ತವ್ಯ-ಕರ್ಮವನ್ನಾ ಚರಿಸಿದನು. ಆದ್ದರಿಂದ ನಿಷ್ಕಾಮ ಕರ್ಮಾಚರಣೆಯೇ ಗೀತಾಶಯವೆಂದು ಅವರು ಒತ್ತಿ ಹೇಳುತ್ತಾರೆ. ಮತ್ತೆ ಅದನ್ನು ಪುಷ್ಟಿಗೊಳಿಸುವ ಅನೇಕ ಪ್ರಮಾಣಗಳನ್ನು ಕೂಡ ಅವರು ಗೀತೆಯಿಂದ ಉದಾಹರಿಸುವರು.@

ಇನ್ನು ಮೂರನೆಯ ಪಕ್ಷದವರು ಜ್ಞಾನವೇ ಗೀತೆಯಲ್ಲಿಯ ಪ್ರಧಾನ ವಿಷಯವೆಂದು ನುಡಿಯುತ್ತಾರೆ. ಅರ್ಜುನನ ಶೋಕಕ್ಕೆ ಕಾರಣವೇನು? ಅಜ್ಞಾನ, ಮೋಹ. ಆ ಅಜ್ಞಾನ ಹೇಗೆ ಹೋಯಿತು? ಆ ಮೋಹ ಹೇಗೆ ಅಂತ್ಯಗೊಂಡಿತು? "ನಷ್ಟೋ ಮೋಹಃ......... ಮೋಹೋಽಯಂ ವಿಗತೋಮಮ"- "ನನ್ನ ಅಜ್ಞಾನವು ತೊಲಗಿ ಹೋಗಿದೆ" ಎಂದು ಅರ್ಜುನನು ಹೇಳಲು ಹೇಗೆ ಸಾಧ್ಯವಾಯಿತು? ಜ್ಞಾನದಿಂದಲೇ. ಅಜ್ಞಾನವು ಜ್ಞಾನವೊಂದರಿಂದ ತೊಲಗುವುದೇ ಹೊರತು ಮತ್ತೆ ಯಾವುದರಿಂದಲೂ ಸಾಧ್ಯವಿಲ್ಲ. ಕತ್ತಲು ಬೆಳಕಿನಿಂದ ಮಾತ್ರ ದೂರವಾಗುವುದೇ ಹೊರತು ಬೇರೆ ಯಾವುದರಿಂದಲೂ ಅಲ್ಲ. ಅರ್ಜುನನ ಶೋಕವು ಆತ್ಮಜ್ಞಾನವೊಂದರಿಂದ ಮಾತ್ರವೇ ದೂರವಾಯಿತಲ್ಲವೇ!

ತರತಿಶೋಕ ಮಾತ್ಮವಿತ್

'ಆತ್ಮವೇತ್ತನೇ ದುಃಖವನ್ನು ದಾಟಬಲ್ಲನು' ಎಂದು ಉಪನಿಷತ್ತು

---

* ೧. ಭಕ್ತ್ಯಾ ಮಾ ಮಭಿಜಾನಾತಿ......... (೧೮-೫೫) ೨. ನಾಹಂ ವೇದೈರ್ನ ತಪಸಾ......... (೧೧-೫೩)
೩. ಭಕ್ತ್ಯಾತ್ವನನ್ಯಯಾ ಶಕ್ಯ......... (೧೧-೫೪) ೪. ತೇಷಾಮಹಂ ಸಮುದ್ಧರ್ತಾ..........(೧೨-೭)
೫. ಅಹಂ ಸರ್ವಸ್ಯ ಪ್ರಭವೋ........(೧೦-೮) ೬. ಮತ್ತಃ ಪರತರಂ ನಾನ್ಯತ್.........(೭-೭)
೭. ..................ಭಜಸ್ವಮಾಮ್ (೯-೩೩)

@ ೧. ತಸ್ಮಾದಸಕ್ತಂ ಸತತಂ ಕಾರ್ಯಂ, ಕರ್ಮ ಸಮಾಚರ। (೩-೧೯) ೨. ನಿಯತಂ ಕುರು ಕರ್ಮ ತ್ವಂಕರ್ಮ ಜ್ಯಾಯೋ ಹ್ಯಕರ್ಮಣಃ। (೩-೮)
೩. ಕರ್ಮಣ್ಯೇವಾಧಿಕಾರಸ್ತೇ ಮಾ ಫಲೇಷು ಕದಾಚನ। (೨-೪೭) ೪. ತಯೋಸ್ತು ಕರ್ಮಸಂನ್ಯಾಸಾತ್ ಕರ್ಮಯೋಗೋ ವಿಶಿಷ್ಯತೇ। (೫-೨)
೫. ಕರ್ಮಣೈವಹಿ ಸಂಸದ್ಧಿಮಾಸ್ಥಿತಾ ಜನಕಾದಯಃ। (೩-೨೦) ೬. ಅಸಕ್ತೋಹ್ಯಾಚರನ್ ಕರ್ಮ ಪರಮಾಪ್ನೋತಿ ಪೂರುಷಃ। (೩-೧೯)

ಉದ್ಘೋಷಿಸುತ್ತದೆ. ಆದ್ದರಿಂದಲೇ ಶ್ರೀಕೃಷ್ಣಭಗವಂತನು ಆರಂಭದ ಎರಡನೆಯ ಅಧ್ಯಾಯದಲ್ಲಿ ಅಖಂಡವಾದ ಆತ್ಮಜ್ಞಾನೋಪದೇಶವನ್ನು ಮಾಡಿದನು. ಗೀತಾಚಾರ್ಯರು ಪ್ರಪ್ರಥಮವಾಗಿ ಕರ್ಮವನ್ನು ಬೋಧಿಸಲಿಲ್ಲ. ಧ್ಯಾನವನ್ನು ವರ್ಣಿಸಲಿಲ್ಲ. ಸ್ವಸ್ವರೂಪ ಸ್ಥಿತಿಯನ್ನು ಮಾತ್ರ ವರ್ಣಿಸಿ ಹೇಳಿದರು. ಹುಟ್ಟು ಸಾವುಗಳಿಲ್ಲದ ಆತ್ಮವನ್ನು ಕುರಿತು ವಿವರಿಸಿದರು. 'ಓ ಅರ್ಜುನಾ! ನೀನು ನಶ್ವರವಾದ ಪಾಂಚಭೌತಿಕ ದೇಹಪಂಜರವಲ್ಲ. ವಿಶ್ವವ್ಯಾಪಕವಾದ ಅಖಂಡಾತ್ಮಚೈತನ್ಯ' ಎಂದು ಪದೇ ಪದೇ ಘೋಷಿಸಿದರು. ಆತ್ಮಜ್ಞಾನವೊಂದು ಮಾತ್ರ ಭವದುಃಖವನ್ನು, ಸಂಸಾರ ಬಂಧವನ್ನು ಸಮೂಲವಾಗಿ ತೊಲಗಿಸಬಲ್ಲದು, ಆದ್ದರಿಂದಲೇ ಶ್ರೀಕೃಷ್ಣಮೂರ್ತಿ ಮೊಟ್ಟಮೊದಲನೆಯದಾಗಿ ಅದನ್ನು ಬೋಧಿಸಿದನು. ಮುಂದುವರಿಯುತ್ತ ಜ್ಞಾನ ಹಾಗೂ ಜ್ಞಾನದ ಮಹಿಮೆಯ ಬಗ್ಗೆ ಕೆಳಕಂಡಂತೆ ಹೇಳಿದರು.

**೧) ಸರ್ವಂ ಕರ್ಮಾಖಿಲಂ ಪಾರ್ಥ ಜ್ಞಾನೇ ಪರಿಸಮಾಪ್ಯತೇ।** (೪-೩೩)
**೨) ನಹಿ ಜ್ಞಾನೇನ ಸದೃಶಂ ಪವಿತ್ರಮಿಹ ವಿದ್ಯತೇ।** (೪-೩೮)
**೩) ಜ್ಞಾನೀ ತ್ವಾತ್ಮೈವ ಮೇ ಮತಮ್।** (೭-೧೮)
**೪) ಜ್ಞಾನಂ ಲಬ್ಧ್ವಾ ಪರಂ ಶಾಂತಿಮಚಿರೇಣಾಧಿಗಚ್ಛತಿ** (೪-೩೯)

ಈ ಪ್ರಕಾರವಾಗಿ ಲೆಕ್ಕವಿಲ್ಲದಷ್ಟು ಪ್ರಮಾಣಗಳನ್ನು ಮಧ್ಯೆ ಮಧ್ಯೆ ಹೇಳುತ್ತಾ ಕಟ್ಟಕಡೆಯಲ್ಲಿ ಅಂದರೆ ಗೀತಾಂತ್ಯದಲ್ಲಿ-

**ಅಧ್ಯೇಷ್ಯತೇ ಚ ಯ ಇಮಂ ಧರ್ಮ್ಯಂ ಸಂವಾದ ಮಾವಯೋಃ**
**ಜ್ಞಾನಯಜ್ಞೇನ ತೇನಾಹ ಮಿಷ್ಟಸ್ಯಾಮಿತಿ ಮೇಮತಿಃ** (೧೮-೭೦)

ಎನ್ನುವ ಗಂಭೀರವಾಧ ಉಪಸಂಹಾರ ವಾಕ್ಯವನ್ನು ಉಚ್ಚರಿಸಿದರು. ಇದರ ಅರ್ಥ- "ಧರ್ಮಯುಕ್ತವಾದದ್ದು ಮತ್ತು ನಮ್ಮ ಇಬ್ಬರ ಸಂಭಾಷಣಾ ರೂಪವಾದದ್ದು ಆದ ಈ ಗೀತಾಶಾಸ್ತ್ರವನ್ನು ಯಾವ ಒಬ್ಬನು ಅಧ್ಯಯನ ಮಾಡುವನೋ ಆತನು ಜ್ಞಾನಯಜ್ಞದಿಂದ ನನ್ನನ್ನು ಪೂಜಿಸಿದಂಥವನಾಗುತ್ತಾನೆ. ಗ್ರಂಥದ ಕಟ್ಟಕಡೆಯ ಬೋಧೆಯನ್ನು ಜ್ಞಾನಯಜ್ಞವೆಂದು ಭಗವಂತನು ವರ್ಣಿಸಿ ಹೇಳಿರುವುದರಿಂದ ಗೀತೆಯ ನಿಷ್ಕರ್ಷೆ ಜ್ಞಾನವೆಂದೇ ತಿಳಿದು ಬರುತ್ತದೆ. ಮತ್ತೆ **'ಜ್ಞಾನಿತ್ವಾತ್ಮೈವ ಮೇ ಮತಮ್'** (೭-೧೮)- ಜ್ಞಾನಿಗೂ ನನಗೂ ಭೇದವಿಲ್ಲ. ಜ್ಞಾನಿಯು ನಾನೇ ಎಂದು ಏಳನೆಯ ಅಧ್ಯಾಯದಲ್ಲಿ ಭಗವಂತನು ಹೇಳಿರುವುದರಿಂದ ಜ್ಞಾನಿಗೆ ಹಾಗು ಜ್ಞಾನಕ್ಕೆ ಗೀತಾಚಾರ್ಯನು ಎಷ್ಟು ಪ್ರಾಮುಖ್ಯತೆಯನ್ನಿತ್ತಿದ್ದಾನೆ ಎನ್ನುವುದು ಸ್ಪಷ್ಟವಾಗುತ್ತದೆ. ಅರ್ಜುನನ ಮೇಲೆ ಗೀತಾಬೋಧೆ ಯಾವ ಪ್ರಕಾರವಾದ ಪ್ರಭಾವವನ್ನು ಉಂಟು ಮಾಡಿತು ಎನ್ನುವುದನ್ನು ತಕ್ಷಣ ಸಂಭವಿಸಿದ ಸಂಘಟನೆಗಳನ್ನು ಮಾತ್ರವೇ ನೋಡಿ ನಿರ್ಣಯಿಸದೆ, ಆ ವ್ಯಕ್ತಿಯ ಜೀವಿತಾಂತ್ಯದವರೆಗಿನ ಸ್ವರೂಪವನ್ನು ಪರೀಕ್ಷಿಸಿ ನಿಶ್ಚಯಿಸುವುದು ಸಮಂಜಸ. ಅರ್ಜುನನು ಗೀತಾ ಶ್ರವಣದ ನಂತರ ಸ್ವಲ್ಪಕಾಲ ಗೃಹಸ್ಥಾಶ್ರಮದಲ್ಲಿದ್ದು ವ್ಯವಹಾರ ಆಚರಿಸಿದರೂ ಸಹ, ಕೊನೆಯಲ್ಲಿ ಸರ್ವಸಂಗಪರಿತ್ಯಾಗಮಾಡಿ, ಸಂನ್ಯಾಸವನ್ನು ಸ್ವೀಕರಿಸಿ, ನಿರ್ವಿಕಲ್ಪ ಧ್ಯಾನ ನಿಷ್ಠೆಗಾಗಿ ಏಕಾಂತಕ್ಕೆ ತೆರಳಿದಂತೆ ಸ್ವರ್ಗಾರೋಹಣ ಪರ್ವದಲ್ಲಿ ಉಲ್ಲೇಖವಿದೆ. ಆದ್ದರಿಂದ ಯಾವೊತ್ತಿಗಾದರೂ ಮನಸ್ಸು ತನ್ನ ಬಹಿರ್ಮುಖತೆಯನ್ನು ಬಿಟ್ಟು, ಅಂತರ್ಮುಖವಾಗಿ, ಸ್ವಸ್ವರೂಪವಾದ ಆತ್ಮದಲ್ಲಿ ಸ್ನಾನ ಮಾಡಿಕೊಂಡಾಗ ಮಾತ್ರ ಜೀವಿಯು ಪೂರ್ಣವಾಗಿ ತನ್ನ ಲಕ್ಷ್ಯವನ್ನು ಹೊಂದಿದಂಥವನಾಗುತ್ತಾನೆ.

"ಆತ್ಮಸಂಸ್ಥಂ ಮನಃ ಕೃತ್ವಾ ನ ಕಿಂಚಿದಪಿ ಚಿಂತಯೇತ್" (೬-೨೫)

ಇತ್ಯಾದಿ ಪ್ರಮಾಣಗಳು ಈ ಅರ್ಥವನ್ನೇ ವಿಶದೀಕರಿಸುತ್ತವೆ. ಆದ್ದರಿಂದ ಯಾವಾಗ್ಗೇ ಆಗಲಿ ಮುಮುಕ್ಷುಗಳಿಗೆ ಜ್ಞಾನವೇ ಶರಣು. ಜ್ಞಾನ ಮಾತ್ರ ಆತ್ಯಂತಿಕ ದುಃಖರಾಹಿತ್ಯವನ್ನು, ಪರಮಾನಂದ ಪ್ರಾಪ್ತಿಯನ್ನು ಉಂಟು ಮಾಡಬಲ್ಲದು. **"ಸರ್ವಂ ಕರ್ಮಾಖಿಲಂ ಪಾರ್ಥ ಜ್ಞಾನೇ ಪರಿಸಮಾಪ್ಯತೇ"** ಎಂದು ಹೇಳಿದ ಹಾಗೆ ಇನ್ನುಳಿದ ಕರ್ಮ, ಭಕ್ತಿ, ಧ್ಯಾನಗಳೆಲ್ಲವೂ ಕಟ್ಟಕಡೆಗೆ ಜ್ಞಾನದಲ್ಲಿ ಪರ್ಯವಸನಗೊಳ್ಳುತ್ತವೆ. ಆ ಕರ್ಮಾದಿಗಳೆಲ್ಲವೂ ಚಿತ್ತವನ್ನು ಶುದ್ಧಗೊಳಿಸಿ, ಆತ್ಮ ವಿಚಾರಣೆಗೆ ಅನುವಾದ ವಾತಾವರಣವನ್ನು ಜೀವಿಗೆ ಒದಗಿಸುತ್ತವೆ. ನಂತರ ಆತ್ಮವಿಚಾರಣೆ ಸುಗಮವಾಗಿ ನಡೆದು ಜೀವಿಯು ಮೋಕ್ಷವನ್ನು ಹೊಂದುತ್ತಾನೆ. ಈ ಸತ್ಯವನ್ನೇ ಈ ಕೆಳಗಿನ ಶ್ಲೋಕದ ಮೂಲಕ ಭಗವಂತನು ನಿರೂಪಿಸಿದ್ದಾನೆ.

**ತೇಷಾಂ ಸತತಯುಕ್ತಾನಾಂ ಭಜತಾಂ ಪ್ರೀತಿಪೂರ್ವಕಮ್**
**ದದಾಮಿ ಬುದ್ಧಿಯೋಗಂ ತಂ ಯೇನ ಮಾಮುಪಯಾಂತಿತೇ** (೧೦-೧೦)

"ನಿರಂತರವೂ ಪ್ರೀತಿ ಪೂರ್ವಕವಾಗಿ ಯಾರು ನನ್ನನ್ನು ಭಜಿಸುವರೋ ಅಂಥಹವರಿಗೆ ನಾನು (ಆತ್ಮಾನಾತ್ಮವಿಚಾರಣಾ ಸಮರ್ಥವಾದ) ಬುದ್ಧಿಯೋಗವನ್ನು (ಜ್ಞಾನವನ್ನು) ಪ್ರಸಾದಿಸುವೆನು. ಆದರಿಂದ ಅವರು ನನ್ನನ್ನು ಸೇರುವರು." ಭಕ್ತಿ, ನಿಷ್ಕಾಮ ಕರ್ಮ, ಧ್ಯಾನ ಮೊದಲಾದುವು ಯಾವ ಪ್ರಕಾರವಾಗಿ ಜ್ಞಾನೋದ್ಭವಕ್ಕೆ ಸಹಾಯಕವಾಗುತ್ತವೆ ಹಾಗು ಜ್ಞಾನದಿಂದ ನೇರವಾಗಿ ಮೋಕ್ಷವು ಹೇಗೆ ಲಭಿಸುವುದೆನ್ನುವುದನ್ನು ಮೇಲಿನ ಶ್ಲೋಕವು ವಿವರಿಸುತ್ತದೆ. ತನ್ನ ಸ್ವರೂಪವನ್ನು ತಾನು ತಿಳಿಯುವುದೇ ಮೋಕ್ಷ. ಆ ತಿಳಿದುಕೊಳ್ಳುವ ಶಕ್ತಿಯೇ ಜ್ಞಾನ. ಅಂತಹ ಶಕ್ತಿ ಎಲ್ಲರಿಗೂ ಲಭ್ಯವಾಗುವುದಿಲ್ಲ. ಭಗವದನುಗ್ರಹವಿರುವವನಿಗೆ ಮಾತ್ರ ಲಭಿಸುವುದು. ಆ ಭಗವದನುಗ್ರಹ ಎಲ್ಲರಿಗೂ ಬಾರದು. ಯಾರು ನಿಷ್ಕಾಮ ಕರ್ಮದಿಂದ ಭಜನೆ, ಸಂಕೀರ್ತನೆ, ಜಪ, ತಪ, ಪರೋಪಕಾರ ಮುಂತಾದುವುಗಳ ಮೂಲಕ ಪರಮಾತ್ಮನನ್ನು ಬಹಳ ಕಾಲದವರೆಗೆ ಅರ್ಚಿಸುವರೋ ಅವರಿಗೆ ಲಭಿಸುವುದು.

**ಭಗವದ್ಭಕ್ತಿಯುಕ್ತಸ್ಯ ತತ್ಪ್ರಸಾದಾತ್ಮಬೋಧತಃ।**
**ಸುಖಂ ಬಂಧವಿಮುಕ್ತಿಃ ಸ್ಯಾದಿತಿ ಗೀತಾರ್ಥ ಸಂಗ್ರಹಃ॥**

'ಭಗವದ್ಭಕ್ತಿ ಇರುವವನಿಗೆ ನಿಷ್ಕಾಮಕರ್ಮಾಚರಣೆಯಿಂದ ಭಗವದನುಗ್ರಹವು ಲಭಿಸುತ್ತದೆ. ಭಗವದನುಗ್ರಹವಾದವನಿಗೆ ಆತ್ಮಜ್ಞಾನ ಉಂಟಾಗುವುದು. ಆತ್ಮಜ್ಞಾನವುಂಟಾದವನಿಗೆ ಸುಲಭವಾಗಿ ಬಂಧ ವಿಮುಕ್ತಿಯಾಗುವುದು.' ಇದೇ ಗೀತಾಸಾರ ಸಂಗ್ರಹ- ಎಂದು ಹಿರಿಯರು ನುಡಿದಿದ್ದಾರೆ.

ಗೀತಾಸಾರವೇನೆಂದು ಒಬ್ಬ ಮಹನೀಯನನ್ನು ಪ್ರಶ್ನಿಸಲು ಆತನು **'w³'** ಎಂದು ಉತ್ತರವಿತ್ತನು. ಏನೆಂದರೆ **W'x'W'x'W-Work, worship, wisdom**- ಕರ್ಮ, ಭಕ್ತಿ, ಜ್ಞಾನ- ಕರ್ಮದಿಂದ ಭಕ್ತಿ, ಭಕ್ತಿಯಿಂದ ಜ್ಞಾನ, ಜ್ಞಾನದಿಂದ ಮೋಕ್ಷ ಎಂದರ್ಥ.

**ಕರ್ಮಣಾ ಜಾಯತೇ ಭಕ್ತಿಃ ಭಕ್ತ್ಯಾ ಜ್ಞಾನಂ ಪ್ರಜಾಯತೇ।**
**ಜ್ಞಾನಾತ್ಪ್ರಜಾಯತೇ ಮುಕ್ತಿಃ ಇತಿ ಶಾಸ್ತ್ರಾರ್ಥಸಂಗ್ರಹಃ॥**

'ನಿಷ್ಕಾಮಕರ್ಮಾಚರಣೆಯ ದ್ವಾರ ಭಕ್ತಿ ಜನಿಸುತ್ತದೆ. ಭಕ್ತಿಯಿಂದ ಜ್ಞಾನವು ಪ್ರಾದುರ್ಭವಿಸುತ್ತದೆ. ಜ್ಞಾನದಿಂದ ಮೋಕ್ಷವು ಲಭಿಸುತ್ತದೆ- ಇದೇ

ಸರ್ವಶಾಸ್ತ್ರ ಸಿದ್ಧಾಂತ ಸಾರ ಸಂಗ್ರಹ' ಎಂದು ಮಹಾತ್ಮರು ವಚಿಸಿದ್ದಾರೆ. ಆದ್ದರಿಂದ ಅರ್ಜುನನ ಶೋಕವನ್ನು ರೂಪಾಂತರಗೊಳಿಸಿದಂಥಹ, ಮೋಹವನ್ನು ನಾಶಗೊಳಿಸಿದಂಥಹ ಜ್ಞಾನವೇ ಗೀತೆಯ ಪರಮ ಲಕ್ಷ್ಯ, ಅದೇ ಗೀತಾಗ್ರಂಥದ ತಾತ್ಪರ್ಯ. ಕರ್ಮ, ಭಕ್ತಿ, ಧ್ಯಾನಾದಿ ಸಾಧನೆಗಳೆಲ್ಲವೂ ಕ್ರಮವಾಗಿ ಚಿತ್ತಶುದ್ಧಿ ಪ್ರಸಾದಿಸಿ ಜ್ಞಾನವನ್ನೇ ಉತ್ಪನ್ನ ಮಾಡುತ್ತವೆ. ಮೋಕ್ಷಕ್ಕೆ ಜ್ಞಾನವೊಂದೇ ಸಾಕ್ಷಾತ್ಸಾಧನೆ, ಬೇರೆಯವು ಪರಂಪರಾ ಸಾಧನೆಗಳೆಂದು ನಿರ್ಣಯಿಸುವುದೇ ಸಮುಚಿತವೆಂದು ತೋರುತ್ತದೆ.

## ಗೀತಾಬೋಧೆ

ಮಾನವನನ್ನು ದೇವನನ್ನಾಗಿ ಮಾಡುವ ಶಕ್ತಿಸಾಮರ್ಥ್ಯಗಳು ಗೀತಾ ಬೋಧೆಯಲ್ಲಿವೆ. ಇಲ್ಲದೇ ಹೋದಲ್ಲಿ ಸಾಮಾನ್ಯನಾದ ಅರ್ಜುನನನ್ನು 'ಮಹಾತ್ಮ'ನನ್ನಾಗಿ ಹೇಗೆ ತಾನೆ ಪರಿವರ್ತಿಸಬಲ್ಲದು?* ಒಂದು ಕ್ಷಣದಲ್ಲಿ ಜೀವನಾದರ್ಶವನ್ನು ಅರ್ಜುನನಿಗೆ ತೋರಿಸಿತು. ಶ್ರೀಕೃಷ್ಣಮೂರ್ತಿ ಧರ್ಮಾಮೃತದ ಮಳೆಗೆರೆದರೆ ಅರ್ಜುನನು ಕಂಠಪೂರ್ತಿ ಅದನ್ನು ಸಂತೃಪ್ತಿಯಿಂದ ಕುಡಿದು ಕೃತಕೃತ್ಯನಾದನು. ಈ ವಿಧವಾಗಿ ಕ್ಷಣಕಾಲದಲ್ಲೇ ಒಬ್ಬ ವ್ಯಕ್ತಿಯನ್ನು ಮೋಕ್ಷಶಿಖರಕ್ಕೆ ಕರೆದೊಯ್ದ ಆ ಗೀತಾಬೋಧೆ ಎಂಥಹುದೋ ವಿಚಾರಿಸುವುದು ಅತ್ಯಾವಶ್ಯಕವಾಗಿದೆ. ಪಾಠಶಾಲೆಯಲ್ಲಿ ಉಪಾಧ್ಯಾಯನು ವಿದ್ಯಾರ್ಥಿಗೆ ಒಂದೊಂದು ಪಾಠವನ್ನು ತಾಳ್ಮೆಯಿಂದ ಬೋಧಿಸುವ ಹಾಗೆ ಕರುಣಾಮಯನಾದ ಶ್ರೀಕೃಷ್ಣಪರಮಾತ್ಮನು ಅರ್ಜುನನ ಕೈ ಹಿಡಿದುಕೊಂಡು ಒಂದೊಂದು ಮೆಟ್ಟಿಲು ಹತ್ತಿಸಿ ಕಟ್ಟಕಡೆಗೆ ಮೋಕ್ಷಧಾಮವನ್ನು ಸೇರಿಸಿದನು. 'ನನ್ನನ್ನು ನಮಸ್ಕರಿಸು' (ಮಾಂ ನಮಸ್ಕುರು) ಎನ್ನುವ ಚಿಕ್ಕ ಸಾಧನೆಯಿಂದ ಮೊದಲಾಗಿ 'ತತ್ತ್ವಮಸಿ' ಎನ್ನುವ ಮಹಾವಾಕ್ಯದ ವಿಚಾರಣೆಯವರೆಗೆ ಇರುವ ಸಾಧನ ಕ್ರಮಗಳೆಲ್ಲವನ್ನು ಭಗವಂತನು ಪ್ರೇಮಪೂರ್ವಕವಾಗಿ ಅರ್ಜುನನಿಗೆ ಬೋಧಿಸಿದನು. ಗೀತೆಯದು ಮಾತೃಹೃದಯ. ಸಂಸಾರ ಕೂಪದಲ್ಲಿ ಬಿದ್ದು ನಾನಾ ಯಾತನೆಗಳನ್ನು ಅನುಭವಿಸುತ್ತಿರುವ ಜೀವಕೋಟಿಯ ಮೇಲೆ ಅನುಕಂಪ ತೋರಿಸಿ, ಗೀತಾಮಾತೆ ಅವರಿಗೆ ಸರಿಯಾದ ದಾರಿಯನ್ನು ತೋರಿಸಿದೆ. ಮೊಟ್ಟಮೊದಲನೆಯದಾಗಿ ಕರ್ಮವನ್ನು ಬೋಧಿಸಿತು. ತೃಪ್ತಿಯಾಗಲಿಲ್ಲ. ಮತ್ತೆ ಭಕ್ತಿಯನ್ನು ಪ್ರತಿಪಾದಿಸಿತು. ಅದರಿಂದಲೂ ತೃಪ್ತಿಯಾಗಲಿಲ್ಲ. ನಂತರ ಧ್ಯಾನ ಪದ್ಧತಿಯನ್ನು ವಿವರಿಸಿತು. ಅದರಿಂದಲೂ ಸಂತುಷ್ಟಿಯಾಗಲಿಲ್ಲ. ಆ ಮೇಲೆ ಜ್ಞಾನವನ್ನು ಬೋಧಿಸಿತು. ಈ ವಿಧವಾಗಿ ಸರ್ವಯೋಗಗಳನ್ನು ಪ್ರತಿಪಾದಿಸಿ, ಬದ್ಧನನ್ನು ಮುಕ್ತನನ್ನಾಗಿಸಿ, ಸಕ್ತನನ್ನು ಯುಕ್ತನನ್ನಾಗಿಸಿ ಗೀತಾಮಾತೆ ಸಂತೃಪ್ತಿಯನ್ನು ಹೊಂದಿದೆ. ಗೀತೆಯಲ್ಲಿ ಬೋಧಿಸಲ್ಪಟ್ಟ ಪ್ರಧಾನವಾದ ಈ ನಾಲ್ಕು ಯೋಗಗಳ ಬಗ್ಗೆ ಸಂಕ್ಷೇಪವಾಗಿ ಈ ಕೆಳಗೆ ವಿಚಾರಿಸೋಣ. ಅದರಿಂದ ಗೀತಾತತ್ತ್ವವು ಸ್ವಲ್ಪವಾದರೂ ಗ್ರಾಹ್ಯವಾಗಬಲ್ಲದು.

## ಗೀತೆಯಲ್ಲಿ ಕರ್ಮಯೋಗ

ಗೀತೆ ಸನ್ಯಾಸಿಗಳಿಗೆ ಉಪಯೋಗವಾಗುವ ಗ್ರಂಥವೆಂದು ಯಾರೂ ತಿಳಿಯಬಾರದು. ಅದು ಗೃಹಸ್ಥರಿಗೆ ಅತಿ ಹೆಚ್ಚು ಉಪಯೋಗವಾಗಬಲ್ಲದು. ಏಕಾಂತವಾಗಿ ಗುಹೆಗಹ್ವರಗಳಲ್ಲಿ ತಪಸ್ಸು ಮಾಡುವ ಸಾಧು ಪುಂಗವರಿಗೆ ಮಾತ್ರ ಕೆಲಸಕ್ಕೆ ಬರುವ ವಾಙ್ಮಯವೆಂದು ಯಾರೂ ಭಾವಿಸಬಾರದು. ಜನಾವೃತ ಪಟ್ಟಣಗಳಲ್ಲಿ ಉದ್ಯೋಗಗಳನ್ನು ಮಾಡುತ್ತಿರುವ ಗೃಹಸ್ಥರಿಗೂ ವ್ಯಾಪಾರಸ್ಥರಿಗೂ, ವ್ಯವಸಾಯದಾರರಿಗೂ ಕೂಡ ಬೇಕಾದ ಶಾಸ್ತ್ರವಿದು. ಏಕೆಂದರೆ, ಇದರಲ್ಲಿ ಬೇರೆಯೋಗಗಳ ಜೊತೆ ಕರ್ಮಯೋಗವು ವಿಪುಲವಾಗಿ ಹೇಳಲ್ಪಟ್ಟಿದೆ. ವ್ಯವಹಾರ ಮಾಡುವುದು ಕೂಡ ಮೋಕ್ಷ ಪ್ರಾಪ್ತಿಯ ವಿಧಾನವೆಂದು ಇದರಲ್ಲಿ ತೋರಿಸಲಾಗಿದೆ. ಮೊದಲು ವೇದಾಂತ ನಿತ್ಯಜೀವನಕ್ಕಿಂತ ಭಿನ್ನವೆಂಬ ಪ್ರತೀತಿಯಿತ್ತು. ವೇದಾಂತ ಹಾಗೂ ವ್ಯವಹಾರಗಳಿಗೆ ಸಂಬಂಧವಿಲ್ಲವೆಂಬ ವಾಡಿಕೆಯಿತ್ತು. ಆದರೆ ಗೀತಾಚಾರ್ಯನು ಆ ನಂಬಿಕೆಗೆ ಇತಿ ಹೇಳಿ-

'Religion must rule even worldly pursuits'

ದೈನಂದಿನ ಪ್ರಾಪಂಚಿಕ ಕಾರ್ಯಗಳನ್ನು ದೈವಭಾವನೆಯಿಂದ ಮಾಡಬಹುದೆಂದು, ಆ ಪ್ರಕಾರವಾಗಿಯೇ ಮಾಡಬೇಕೆಂದು ಬೋಧಿಸಿ, ಅಲ್ಲಿಯವರೆಗೆ ಭೌತಿಕ ಹಾಗೂ ಆಧ್ಯಾತ್ಮಿಕ ರಂಗಗಳ ಮಧ್ಯೆ ಇದ್ದ ಆಳವಾದ ಪ್ರಪಾತಕ್ಕೆ ಅಡ್ಡಲಾಗಿ ಸೇತುವೆಯನ್ನು ಕಟ್ಟಿದರು. ಪ್ರವೃತ್ತಿಯಲ್ಲಿ ನಿವೃತ್ತಿಯನ್ನು ಬೋಧಿಸಿದರು. ಸಂಸಾರದಲ್ಲಿ ಸಂನ್ಯಾಸವನ್ನು ಬೋಧಿಸಿದರು. ರಥದ ಚಕ್ರಗಳು ತಿರುಗುತ್ತಿದ್ದರೂ, ಕುಳಿತುಕೊಳ್ಳುವ ಪೀಠ ಹೇಗೆ ನಿಶ್ಚಲವಾಗಿರುವುದೋ ಹಾಗೆ ಶರೀರವು, ಇಂದ್ರಿಯಗಳು ಲೋಕದಲ್ಲಿ ವಿವಿಧ ಕಾರ್ಯಗಳಲ್ಲಿ ಪ್ರವರ್ತಿಸುತ್ತಿದ್ದರೂ ಮನಸ್ಸು ನಿಶ್ಚಲವಾಗಿ ದೈವದಲ್ಲಿ ಆಸೀನವಾಗಿರುವ ವಿಧಾನವನ್ನು ಶ್ರೀಕೃಷ್ಣಪರಮಾತ್ಮನು ಗೀತೆಯಲ್ಲಿ ತೋರಿಸಿದ್ದಾನೆ. ಇದೇ ಕರ್ಮಯೋಗ.

**ಯೋಗಸ್ಥಃ ಕುರು ಕರ್ಮಾಣಿ**

'ಚಿತ್ತವನ್ನು ದೈವದಲ್ಲಿ (ಆತ್ಮದಲ್ಲಿ) ನಿಲ್ಲಿಸಿ ನಿಮ್ಮನಿಮ್ಮ ಕಾರ್ಯಗಳನ್ನು ಮಾಡಿಕೊಳ್ಳಿ' ಫಲವನ್ನು ಈಶ್ವರಾರ್ಪಣೆ ಮಾಡಿ, ಕರ್ತೃತ್ವವನ್ನು ಬಿಟ್ಟು ಎಷ್ಟು ಕಾರ್ಯಗಳನ್ನಾದರು ಮಾಡು, ಅಂಥಹ ಕಾರ್ಯಾಚರಣೆಯಿಂದ ನಿನಗೆ ಬಂಧವುಂಟಾಗುವುದಿಲ್ಲ ಎಂದು ಭಗವಂತನು ಉಪದೇಶಿಸಿದನು. ಗಣಿತ ಶಾಸ್ತ್ರದಲ್ಲಿ ಒಂದು ಸಿದ್ಧಾಂತವಿದೆ. ಅದೇನೆಂದರೆ-

---

* ಪಾರ್ಥಸ್ಯ ಚ ಮಹಾತ್ಮನಃ (೧೮-೭೪)

Infinity + Anything = Infinity

'ಅನಂತಕ್ಕೆ ಏನನ್ನು ಸೇರಿಸಿದರು ಕೊನೆಗೆ ಅನಂತವೇ ಉಳಿಯುವುದು. ದೈವವು ಅನಂತ. ಜ್ಞಾನವು ಅನಂತ. ಆದ್ದರಿಂದ ದೈವಸ್ಮರಣೆಯಿಂದ ಅಥವ ದೈವಾರ್ಪಣ ಬುದ್ಧಿಯಿಂದ ಯಾವ ಕಾರ್ಯವನ್ನಾಚರಿಸಿದ್ದಾಗ್ಯೂ (ಅದು ಲೌಕಿಕ ಕಾರ್ಯವಾಗಲಿ ಅಥವ ಪಾರಮಾರ್ಥಿಕ ಕಾರ್ಯವಾಗಲಿ) ಕೊನೆಗೆ ದೈವವೇ ಶೇಷವಾಗಿ ಉಳಿಯುತ್ತದೆಯೇ ಹೊರತು ಕರ್ಮ ಬಂಧನವಲ್ಲ. ಇದೇ ಗೀತಾಚಾರ್ಯನು ತಿಳಿಸಿದ ಕರ್ಮಯೋಗದ ರಹಸ್ಯ. ಹಾಗಲ್ಲದೆ ದೈವಸ್ಮರಣವಿಲ್ಲದೇ ಇಲ್ಲವೇ ಫಲಾಪೇಕ್ಷೆಯಿಂದ ಯಾವ ಕ್ರಿಯೆಯನ್ನು ಆಚರಿಸಿದರೂ ಅದು ಜೀವಿಯನ್ನು ಬದ್ಧನನ್ನಾಗಿ ಮಾಡಬಲ್ಲದು. ಅಂಥಹವನು ಕರ್ಮಬಂಧನದಲ್ಲಿ ಸಿಕ್ಕಿಹಾಕಿಕೊಳ್ಳುವನು. **Work divorced of spirituality is an artificial flower which has neither life nor fragrance.**

"ದೈವ ದೃಷ್ಟಿಯಿಲ್ಲದ ಕಾರ್ಯ; ಪರಮಾರ್ಥತೆ ಪವಿತ್ರತೆ ಇಲ್ಲದ ಕ್ರಿಯೆಯು ಜೀವವಿಲ್ಲದ ಕೃತ್ರಿಮಪುಷ್ಪದಂತೆ" ಎಂದು ಒಬ್ಬ ಮಹನೀಯನು ಹೇಳಿರುವನು. ಆದ್ದರಿಂದ ಕರ್ಮ ವಿಶೇಷವಲ್ಲ. ಕರ್ಮಮಾಡುವ ವಿಧಾನ ವಿಶೇಷ. ಏನು ಮಾಡಬೇಕೆನ್ನುವುದು ಗೀತೆ ಹೇಳುವುದಿಲ್ಲ. ಹೇಗೆ ಮಾಡಬೇಕೆನ್ನುವುದನ್ನು ಅದು ಬೋಧಿಸುತ್ತದೆ. ಇದೇ ಗೀತೆಯಲ್ಲಿಯ ವಿಶೇಷ. ಈ ಸೂತ್ರವನ್ನನುಸರಿಸಿ ಆಯಾ ಆಶ್ರಮದವರು, ಆಯಾ ಸಂಪ್ರದಾಯದವರು, ಅವರವರ ವಿಧ್ಯುಕ್ತಧರ್ಮಗಳನ್ನು, ಕರ್ಮಗಳನ್ನು ಆಚರಿಸಿಕೊಳ್ಳಬಹುದು. ಬಿಡಬೇಕಾದ ಕೆಲಸವಿಲ್ಲ. ಗೃಹಸ್ಥನು ತನ್ನ ನಿತ್ಯಕಾರ್ಯಗಳನ್ನು, ದೈನಂದಿನ ವ್ಯವಹಾರಗಳನ್ನು ನೋಡಿಕೊಳ್ಳಬಹುದು. ವ್ಯಾಪಾರಿ ತನ್ನ ವ್ಯಾಪಾರವನ್ನು ನಡೆಸಬಹುದು. ಉದ್ಯೋಗಿ ತನ್ನ ಉದ್ಯೋಗವನ್ನು ಮಾಡಬಹುದು. ರೈತನು ತನ್ನ ಹೊಲವನ್ನು ಉಳಬಹುದು. ಪರಿಚರ್ಯಾತ್ಮಕ ಕಾರ್ಯ ಮಾಡುವವರು ತಮ್ಮ ಕಾರ್ಯವನ್ನು ಮುಂದುವರಿಸಬಹುದು. ಪುರೋಹಿತನು ತನ್ನ ಪೌರೋಹಿತ್ಯವನ್ನು ಮುಂದುವರೆಸಬಹುದು. ಕ್ಷತ್ರಿಯನು ಯುದ್ಧವನ್ನು ಮಾಡಬಹುದು, ಆದರೆ (ಮಾಮನುಸ್ಮರ) ದೈವದೃಷ್ಟಿಹೊಂದಿ, ದೈವವನ್ನು ಸ್ಮರಿಸುತ್ತ, ಫಲಾಪೇಕ್ಷೆಯಿಲ್ಲದೆ ಈಶ್ವರಾರ್ಪಣಬುದ್ಧಿಯಿಂದ ಮಾಡಬೇಕು. ಇದೇ ಗೀತೆಯ ಶಾಸನ. ಆಗ ಕರ್ಮದಲ್ಲಿಯ ವಿಷ (ಬಂಧಜನಕತ್ವ) ತೊಲಗಿ ಸಾಮಾನ್ಯಕ್ರಿಯೆಯೂ ಮಹಾಪವಿತ್ರ ಕ್ರಿಯೆಯಾಗಿ ಪರಿವರ್ತನೆಗೊಳ್ಳುವುದು.

ವ್ಯವಹಾರದಲ್ಲಿ ಪರಮಾರ್ಥಪ್ರಯೋಗ (Vedanta in daily life) ಎನ್ನುವ ಈ ಕಲೆ ಗೀತೆಯಲ್ಲಿ ವಿಶೇಷವಾಗಿ ಕಂಡುಬರುತ್ತಿದೆ. ಗೀತೆಗೆ ವಿಶ್ವ ವ್ಯಾಪಕತ್ವವನ್ನು ತನ್ನ ದೊರಕಿಸಿಕೊಟ್ಟ ಧರ್ಮವು ಇದೇ ಆಗಿದೆ. ಜ್ಞಾನಾನಂತರ ನಿವೃತ್ತಿ ಅನಿವಾರ್ಯವಲ್ಲವೆಂದು ಗೀತೆ ಬೋಧಿಸುತ್ತದೆ. ಅರ್ಜುನನ ಜೀವನವೇ ಇದಕ್ಕೆ ಉದಾಹರಣೆ. ಮೋಹವು (ಅಜ್ಞಾನವು) ಮಾಯವಾದ ನಂತರವೂ ಅರ್ಜುನನು ಪ್ರವೃತ್ತಿಯನ್ನು ಬಿಡಲಿಲ್ಲ. ಸಂಸಾರವನ್ನು ಬಿಡಲಿಲ್ಲ. ಗೀತೆ ಅಭ್ಯಾಸಿಸಿದರೆ ವೈರಾಗ್ಯ ಉಂಟಾಗಿ ಎಲ್ಲಿ ತಮ್ಮ ಮಕ್ಕಳು ಅರಣ್ಯಕ್ಕೆ ಓಡಿ ಹೋಗುವರೋ ಎಂದು ಕೆಲವರು ಭಯದಿಂದ ಮಕ್ಕಳಿಗೆ ಗೀತೆಯನ್ನು ಹೇಳಿಕೊಡುವುದಿಲ್ಲ. ಆದರೆ ಅಂತಹ ಭೀತಿಗೆ ಯಾವ ಆಧಾರವೂ ಇಲ್ಲ. ಗೀತೆಯನ್ನು ನೇರವಾಗಿ ಸ್ವಾಮಿ ಮುಖದಿಂದ ಕೇಳಿದ ಅರ್ಜುನನೇ ಹಾಗೆ ಮಾಡಲಿಲ್ಲ. ಇನ್ನು ಬೇರೆಯವರ ವಿಷಯ ಮತ್ತೆ ಪ್ರತ್ಯೇಕವಾಗಿ ಹೇಳಬೇಕೆ? ಆದ್ದರಿಂದ ಸರ್ವರೂ ಗೀತೆಯನ್ನಾಶ್ರಯಿಸಿ ಅದರ ಪೂರ್ಣ ಪ್ರಯೋಜನವನ್ನು ಹೊಂದಬೇಕು. ಜ್ಞಾನವಿಲ್ಲದೆ ಮೋಕ್ಷವು ಸಿದ್ಧಿಸಲಾರದು. ಜ್ಞಾನವು ಚಿತ್ತಶುದ್ಧಿಯಿಲ್ಲದೆ ಲಭ್ಯವಾಗದು. ಚಿತ್ತಶುದ್ಧಿ ನಿಷ್ಕಾಮ ಕರ್ಮ ಇಲ್ಲದೆ ಇದ್ದಲ್ಲಿ ಉದಯಿಸದು. ಆದ್ದರಿಂದ ಸಾಧಕರಿಗೆಲ್ಲಾ ಪ್ರಪ್ರಥಮವಾಗಿ ಕರ್ಮಯೋಗ ಅತ್ಯಾವಶ್ಯಕವಾದುದಾಗಿದೆ.

**ಆರುರುಕ್ಷೋರ್ಮುನೇರ್ಯೋಗಂ ಕರ್ಮಕಾರಣಮುಚ್ಯತೇ (೬-೩)**

ಎನ್ನುವ ವಾಕ್ಯದಲ್ಲಿ ಈ ಅರ್ಥವನ್ನೇ ಭಗವಂತನು ಸ್ಪಷ್ಟೀಕರಿಸಿರುತ್ತಾನೆ. ಜ್ಞಾನ ಸಾಧನೆಯಲ್ಲಿ ಮೇಲೇರುವ ಆಕಾಂಕ್ಷೆಯುಳ್ಳವರಿಗೆ ಪ್ರಾರಂಭದಲ್ಲಿ ಕರ್ಮ ಕಾರಣಭೂತವಾಗಿರಬೇಕೆನ್ನುವುದೇ ಅದರ ಭಾವ.

ಕರ್ಮವನ್ನು ಪೂರ್ತಿಯಾಗಿ ಬಿಟ್ಟು ಯಾರೂ ಇರಲಾರರು. ಕರ್ಮವನ್ನು ಪವಿತ್ರಗೊಳಿಸುವ ಪದ್ಧತಿಯನ್ನು ಕಲಿತಲ್ಲಿ, ಅದರಿಂದ ಯಾವ ತೊಂದರೆಯೂ ಇಲ್ಲ. ಶ್ರೀಕೃಷ್ಣನು ತಿಳಿಸಿದ ಉಪಾಯ ಇದೇ ಆಗಿದೆ. ಫಲಾಪೇಕ್ಷೆಯನ್ನು ಬಿಟ್ಟು ಕರ್ಮವನ್ನು ಮಾಡುವುದೇ ಅದನ್ನು ಪವಿತ್ರಗೊಳಿಸುವ ಪದ್ಧತಿ. ಅದನ್ನೇ ಕರ್ಮಯೋಗವೆಂದು ಕರೆಯುವರು. ಯಾವ ಕರ್ಮವನ್ನು ಕೆಲವು ವೇದಾಂತಿಗಳು ಅಸಂಗತವೆಂದು ಉಪೇಕ್ಷಿಸಿದರೋ ಅದನ್ನೇ ಗೀತೆ ಸ್ವೀಕರಿಸಿ ಅದನ್ನು ನಿಷ್ಕಾಮ ಕರ್ಮವಾಗಿ ಬದಲಿಸಿ ಮೋಕ್ಷಪ್ರಾಪ್ತಿಗೆ ಉಪಯೋಗಿಸಿಕೊಳ್ಳಲಾಗಿದೆ. ಗೀತೆ ಉದ್ಭವಿಸುವುದಕ್ಕಿಂತ ಮೊದಲು ಲೋಕದಲ್ಲಿ ಎರಡು ತರಗತಿಯವರು ಮಾತ್ರ ಇದ್ದರು. ಕರ್ಮಗಳನ್ನು ಮಾಡುತ್ತ ಫಲವನ್ನು ಅಪೇಕ್ಷಿಸುವವರು (ಪ್ರಾಪಂಚಿಕ ಸಂಸ್ಕಾರ ಉಳ್ಳವರು) ಒಂದು ತರಗತಿ, ಕರ್ಮಗಳನ್ನು ಪೂರ್ತಿಯಾಗಿ ವಿಸರ್ಜಿಸಿದವರು (ಸಂನ್ಯಾಸಿಗಳು, ತಪಸ್ವಿಗಳು) ಎರಡನೆಯ ತರಗತಿ. ಆದರೆ ಗೀತೆ ಮೂರನೆಯ ತರಗತಿಯವರನ್ನು ಬಡಿದೆಬ್ಬಿಸಿದೆ. ಕರ್ಮಗಳನ್ನು ಮಾಡುತ್ತಾ ಫಲವನ್ನು ಅಪೇಕ್ಷಿಸದವರು ಈ ಗುಂಪಿಗೆ ಸೇರುತ್ತಾರೆ- ಕರ್ಮಗಳನ್ನು ಆಚರಿಸಿದರೂ ಅವರು ಕರ್ಮಬಂಧನಕ್ಕೆ ಒಳಗಾಗುವುದಿಲ್ಲ. ಆದ್ದರಿಂದ ಗೀತಾಮಾತೆ ಸೂಚಿಸಿದ ಈ ಮೂರನೆಯ ಪದ್ಧತಿಯ ಮೂಲಕ ಜನರು ತಮ್ಮ ಕರ್ಮರಂಗವನ್ನು ಶುದ್ಧಮಾಡಿಕೊಂಡು, ತದ್ವಾರಾ ತಮ್ಮ ಹೃದಯ ಕ್ಷೇತ್ರವನ್ನು ಪುನೀತಗೊಳಿಸಿಕೊಂಡು ಜ್ಞಾನಾವಿರ್ಭಾವದಿಂದ ಪರಮಾನಂದವನ್ನು ಅನುಭವಿಸುವಂತಾಗಬೇಕು!

# ಗೀತೆಯಲ್ಲಿ ಭಕ್ತಿಯೋಗ

ಭಗವದ್ಗೀತೆಯಲ್ಲಿ ಭಿನ್ನ ಭಿನ್ನ ಸಿದ್ಧಾಂತಗಳನ್ನು ಪ್ರತಿಪಾದಿಸಿದ್ದಾಗ್ಯೂ ಒಂದೇ ವಿಚಾರಧಾರೆ ಸರ್ವತ್ರ ಪ್ರವಹಿಸುತ್ತಿದೆ. ಅದೇ ಯೋಗ. ಸಿದ್ಧಾಂತಗಳನ್ನು ಆಚರಣೆಯಲ್ಲಿ ತರುವ ಕಲೆಯನ್ನೇ ಯೋಗವೆಂದು ಕರೆಯುವರು. ಜೀವಿಯನ್ನು ಶಿವನಲ್ಲಿ ಐಕ್ಯ ಮಾಡುವ ಸಾಧನೆಯನ್ನೇ ಯೋಗವೆಂದು ಹೇಳಲಾಗುತ್ತದೆ. ಜನರ ಸಂಸ್ಕಾರಗಳು, ಮನಸ್ತತ್ವಗಳು ಭಿನ್ನ ಭಿನ್ನವಾಗಿರುವುದರಿಂದ ಭಗವತ್ಪ್ರಾಪ್ತಿಗೆ ಅವರು ಅವಲಂಬಿಸುವ ಸಾಧನಗಳು ಬೇರೆ ಬೇರೆಯಾಗಿರುವುದರಿಂದ, ಯೋಗಗಳನ್ನು ಅನೇಕ ವಿಧಗಳಲ್ಲಿ ರೂಪಿಸಲಾಗಿದೆ. ಹೇಗೆ ಅನೇಕ ರೋಗಗಳಿದ್ದಾಗ ಔಷಧಿಗಳು ಅಧಿಕವಾಗಿ ಬೇಕಾಗುವುದೋ ಹಾಗೆ. ಈ ಕಾರಣದಿಂದ ಗೀತೆಯಲ್ಲಿ ಹೆಚ್ಚು ಯೋಗಗಳ ಬಳಕೆ ಅವಶ್ಯಕವಾಗಿದೆ. ಜೈಮಿನಿಯ ಕರ್ಮಸಿದ್ಧಾಂತ, ನಾರದನ ಭಕ್ತಿ ಸಿದ್ಧಾಂತ, ಪತಂಜಲಿಯ ಯೋಗಸಿದ್ಧಾಂತ, ವೇದವ್ಯಾಸರ ಜ್ಞಾನಸಿದ್ಧಾಂತಗಳೆಲ್ಲವೂ ಗೀತೆಯಲ್ಲಿ ಸುಂದರವಾಗಿ ಪ್ರತಿಪಾದಿಸಲ್ಪಟ್ಟಿವೆ. ಎಲ್ಲಾ ವಸ್ತುಗಳು ಲಭ್ಯವಿರುವ ದೊಡ್ಡ ಅಂಗಡಿಯೇ ಭಗವದ್ಗೀತೆ. ಯಾರಿಗೆ ಏನು ಬೇಕೋ ಅವರಿಗೆ ಅದು ಗೀತೆಯಿಂದ ಲಭಿಸುವುದು. ಇಷ್ಟು ಯೋಗಗಳು, ಇಷ್ಟು ಮಾರ್ಗಗಳು ಪ್ರಸ್ತಾಪಿಸಲ್ಪಟ್ಟರೂ ಅವೆಲ್ಲವುಗಳ ಮಧ್ಯೆ ಸಮನ್ವಯವನ್ನು ಸಾಧಿಸಿರುವುದು ಗೀತೆಯ ಮಹಾವಿಶೇಷ. ಮೋಕ್ಷ ಪ್ರಾಪ್ತಿಗೆ ಕರ್ಮ, ಭಕ್ತಿ, ಧ್ಯಾನ, ಜ್ಞಾನ ಎಲ್ಲವೂ ಸ್ವಲ್ಪ ಸ್ವಲ್ಪ ಪ್ರಮಾಣದಲ್ಲಿ ಅವಶ್ಯಕವೇ ಆಗಿವೆ. ಯಾವುದನ್ನೂ ಬಿಡಲಾಗುವುದಿಲ್ಲ. ಕರ್ಮದಿಂದ ಪವಿತ್ರತೆ (Purification), ಭಕ್ತಿ ಧ್ಯಾನಗಳಿಂದ ಪ್ರಕಾಶ (Illumination), ಜ್ಞಾನದಿಂದ ಐಕ್ಯತೆ (Union) ಸಿದ್ಧಿಸುತ್ತವೆ. ಮನೆ ಕಟ್ಟಲು ಹೇಗೆ ಇಟ್ಟಿಗೆ, ಸುಣ್ಣ, ಕಟ್ಟಿಗೆ ಅವಶ್ಯಕತೆಗಳೋ, ರೊಟ್ಟಿ ಮಾಡಲು ಹಿಟ್ಟು, ತುಪ್ಪ, ಒಲೆ ಹೇಗೆ ಅವಶ್ಯಕವೋ ಹಾಗೆಯೇ ಕೈವಲ್ಯಪ್ರಾಪ್ತಿಗೆ ಕರ್ಮ, ಭಕ್ತ್ಯಾದಿ ಸಾಧನೆಗಳೆಲ್ಲವೂ ಅವಶ್ಯಕವೇ ಆಗಿವೆ. ನಾಲ್ಕು ಚಕ್ರಗಳ ಮೇಲೆ ಚಲಿಸುವ ಯಂತ್ರದ ಯಾವ ಒಂದು ಚಕ್ರ ಇಲ್ಲದೇ ಇದ್ದರೂ ಅದು ನಡೆಯದು. ಹಾಗೆಯೇ ಮೇಲಿನ ಸಾಧನೆಗಳಲ್ಲಿ ಯಾವ ಒಂದರ ಕೊರತೆಯಿದ್ದರೂ ಸಾಧನೆ ಪರಿಪೂರ್ಣವಾಗಲಾರದು. ಆದರೆ ಒಬ್ಬೊಬ್ಬರ ಮನಸ್ತತ್ವವನ್ನು ಹಿಡಿದು ಒಂದೊಂದು ಅಧಿಕವಾಗಿರಬಹುದು. ಬೇರೆಯವು ಗೌಣವಾಗಿರಬಹುದು. ಎಲ್ಲಾ ಮಾರ್ಗಗಳ ಪ್ರಧಾನ ಲಕ್ಷ್ಯ ಅಹಂಕಾರವನ್ನು (ego) ತೊಲಗಿಸುವುದೇ ಆಗಿದೆ.

ಈಗ ಭಕ್ತಿಮಾರ್ಗದ ಬಗ್ಗೆ ಸ್ವಲ್ಪ ವಿಚಾರಿಸೋಣ. ಭಗವಂತನ ಮೇಲಿನ ಪ್ರೀತಿಯೇ ಭಕ್ತಿ. ಭಕ್ತಿಯಲ್ಲಿ ತನ್ಮಯತೆಯನ್ನು ಹೊಂದಿದವನು "ನಿನ್ನನ್ನು ಬಿಟ್ಟು ಬೇರೆ ಏನನ್ನೂ ನಾನರಿಯೆ" ಎಂದು ವಚಿಸುವನು. "ನನ್ನದೇನೂ ಇಲ್ಲ, ಎಲ್ಲವೂ ನಿನ್ನದೇ, ನೀನೇ ತಾಯಿ, ನೀನೇ ತಂದೆ; ನಾನು ನಿನ್ನ ದಾಸಾನುದಾಸನು" ಎಂದು ಭಗವಂತನನ್ನು ಉದ್ದೇಶಿಸಿ ಹೇಳುವನು. ಅರ್ಜುನನು ಶ್ರೀಕೃಷ್ಣ ಪರಮಾತ್ಮನಿಗೆ ಸರ್ವಸಮರ್ಪಣೆ ಮಾಡಿಕೊಂಡು (ಶಾಧಿಮಾಂ ತ್ವಾಂ ಪ್ರಪನ್ನಮ್)- ಆಜ್ಞಾಪಿಸು ಎಂದು ಬಿನ್ನವಿಸಿಕೊಳ್ಳುತ್ತಾನೆ. ಆದರೆ ಸಾಮಾನ್ಯ ಭಕ್ತಿಯಿಂದ ಗೀತೆ ತೃಪ್ತಿ ಹೊಂದದು. 'ಅನನ್ಯ ಭಕ್ತಿ' ಬೇಕೆಂದು ಅಪೇಕ್ಷಿಸುತ್ತದೆ. 'ಅನನ್ಯ' ಎನ್ನುವ ಶಬ್ದ ಗೀತೆಯಲ್ಲಿ ಪದೇಪದೇ ಪ್ರಯೋಗಿಸಲ್ಪಟ್ಟಿರುವುದನ್ನು ಗಮನಿಸಬೇಕು.* ಅನ್ಯಭಾವವು ಇಲ್ಲದೇ ಇರುವುದನ್ನು 'ಅನನ್ಯ'ವೆಂದು ಕರೆಯುವರು. ಅಂದರೆ ಭಗವಂತನನ್ನು ಬಿಟ್ಟು ಅನ್ಯತ್ರ ಚಿತ್ತ ಮಗ್ನವಾಗದೇ ಇರುವುದೇ ಅನನ್ಯಭಕ್ತಿ.

"ಇಂತಹ ಅನನ್ಯಭಕ್ತಿ, ಇಂತಹ ಅವ್ಯಭಿಚಾರಿಣಿ ಭಕ್ತಿಯುಳ್ಳವನು ನನಗೆ ಅತ್ಯಂತ ಪ್ರಿಯನು. ಅಂಥಹವನನ್ನು ನಾನು ಮೃತ್ಯುರೂಪದ ಸಂಸಾರ ಸಾಗರದಿಂದ ಪಾರು ಮಾಡುವೆನು" ಎಂದು ಶ್ರೀಕೃಷ್ಣಮೂರ್ತಿ ಕರುಣೆಯಿಂದ ಉಪದೇಶಿಸಿದನು. ಒಂದು ವೇಳೆ ಮನಸ್ಸು ದೈವದ ಮೇಲೆ ಲಗ್ನವಾಗದಿದ್ದರೆ ಅಭ್ಯಾಸದಿಂದ ಹೇಗಾದರೂ ಅದನ್ನು ಸಾಧಿಸಬೇಕೇ ಹೊರತು, ಎಂದೆಂದಿಗೂ ಬಿಡಬಾರದೆಂದು ಸೂಚಿಸಿದನು. ಕಾರಣವೇನೆಂದರೆ, ಪ್ರಪಂಚದಲ್ಲಿ ಸ್ಥಿರವಾದದ್ದು, ನಾಶರಹಿತವಾದದ್ದು ಅಥವ ಇರುವುದು ಒಂದೇ. ಅದೇ ಪರಮಾತ್ಮ. ಬೇರೆಯ ವಸ್ತುಗಳೆಲ್ಲವೂ ಕ್ಷಣಿಕ, ನಾಶವಾಗುವಂಥಹವು, ಅಸ್ಥಿರವಾದವುಗಳು. ಅವುಗಳನ್ನು ನಂಬಿಕೊಂಡರೆ ಶಾಂತಿಸುಖಗಳು ಯಾವ ಕಾಲಕ್ಕೂ ಲಭಿಸಲಾರವು. ಆದ್ದರಿಂದಲೇ ಮಾಯಾತೀತನಾದ ಪರಮೇಶ್ವರನನ್ನು (ಮಾಯಿನಂ ತು ಮಹೇಶ್ವರಮ್) ಮಾಯಾಂತರ್ಗತಿಯಾದ ಜೀವಿಯು ತಪ್ಪದೆ ಆಶ್ರಯಿಸಬೇಕಾಗುತ್ತದೆ. ಮುಕ್ತಿಗೆ ಬೇರೆ ಮಾರ್ಗವಿಲ್ಲ. ಹಾಗೆ ಆಶ್ರಯಿಸುವುದನ್ನೇ ಭಕ್ತಿಯೆನ್ನುವರು.

ಮತ್ತೆ ಸರ್ವೇಶ್ವರನ, ಸದ್ಗುರುವಿನ ಅನುಗ್ರಹವಿಲ್ಲದೆ ಜೀವಿಯು ಭಯಂಕರವಾದ ಸಂಸಾರ ಸಾಗರವನ್ನು ದಾಟಲು ಸಾಧ್ಯವಿಲ್ಲ. ಇದು ಒಂದು ಪರಮರಹಸ್ಯ. ಈ ರಹಸ್ಯ ತಿಳಿಯದೆ ಅನೇಕರು ತಮ್ಮ ತಮ್ಮ ಲೌಕಿಕ ಪ್ರಜ್ಞೆಯಿಂದ ಪ್ರಕೃತಿಯನ್ನು ಜಯಿಸಲು ನೋಡಿ ಕೊನೆಗೆ ವಿಫಲರಾಗುವರು. ಏಕೆಂದರೆ ಪ್ರಕೃತಿ ಪರಮಾತ್ಮನಿಗೆ ಅಧೀನವಾದದ್ದು. ಪರಮಾತ್ಮನಾದರೋ ಭಕ್ತಿಗೆ ಅಧೀನ.

---

* ೧. ಅನನ್ಯಾಶ್ಚಿಂತಯಂತೋ ಮಾಂ....... (೯-೨೨) ೨. ಅನನ್ಯೇ ನೈವ ಯೋಗಿನಃ........ (೧೨-೬)
೩. ಅನನ್ಯ ಚೇತಾ ಸ್ತತಂ.......... (೮-೧೪)

ಭಕ್ತಿಯಿಂದ ತನ್ನನ್ನಾರಾಧಿಸುವವರಿಗೆ, ತನ್ನಲ್ಲೇ ಚಿತ್ತವನ್ನು ಲಗ್ನ ಮಾಡಿರುವವರಿಗೆ ಆತನು ಅನುಗ್ರಹವನ್ನು ಪ್ರಸಾದಿಸಿ ಅವರ ಯಾವತ್ತು ದುಃಖಗಳನ್ನು ತೊಲಗಿಸಿ ತನ್ನಲ್ಲೇ ವಿಲೀನಗೊಳಿಸಿ ಕೊಳ್ಳುತ್ತಾನೆ. ಅವರ ಯೋಗಕ್ಷೇಮದ ಭಾರವನ್ನು ತಾನೇ ಹೊರುವನು.

**೧) ಮಚ್ಚಿತ್ತಾಸ್ಸರ್ವದುರ್ಗಾಣಿ ಮತ್ಪ್ರಸಾದಾತ್ತರಿಷ್ಯಸಿ** (೧೮-೫೮)
**೨) ತೇಷಾಂ ನಿತ್ಯಾಭಿಯುಕ್ತಾನಾಂ ಯೋಗಕ್ಷೇಮಂ ವಹಾಮ್ಯಹಮ್** (೯-೨೨)

ಇತ್ಯಾದಿ ಗೀತೆಯ ವಾಕ್ಯಗಳ ಮೂಲಕ ಶ್ರೀಕೃಷ್ಣಪರಮಾತ್ಮನು ಮೇಲಿನ ಅರ್ಥವನ್ನು ಚೆನ್ನಾಗಿ ವಿಶದೀಕರಿಸಿದ್ದಾನೆ.

ಮೋಕ್ಷಕ್ಕೆ ಪ್ರತ್ಯಕ್ಷ ಕಾರಣವಾದ ಆತ್ಮಾನಾತ್ಮ ವಿಚಾರಣಾರೂಪವಾದ ಜ್ಞಾನವು ಉಂಟಾಗುವ ಮೊದಲು ಭಕ್ತಿಯು ಪರಿಪೂರ್ಣವಾಗಿ ಹೃದಯವನ್ನು ಆವರಿಸಬೇಕು. "**ಭಕ್ತ್ಯಾ ಜ್ಞಾನಂ ಪ್ರಜಾಯತೇ**"- ಭಕ್ತಿಯಿಂದಲೇ ಜ್ಞಾನವು ಪ್ರಾದುರ್ಭವಿಸುವುದೆಂದು ಶಾಸ್ತ್ರಗಳು ಹೇಳುತ್ತವೆ. ಮಹಾತ್ಮರ ಅನುಭವಗಳು ಕೂಡ ಇದನ್ನೇ ಸ್ಥಿರೀಕರಿಸುತ್ತವೆ. ಭಕ್ತಿಯೆಂಬ ಪುಷ್ಪವು ವಿಕಸಿತವಾದನಂತರ ಮಾತ್ರ ಜ್ಞಾನವೆಂಬ ಫಲವು ಆವಿರ್ಭವಿಸುವುದು. ಜೀವಿಯ ಭಕ್ತಿಗೆ ಮೆಚ್ಚಿ ಭಗವಂತನೇ ಆ ಜ್ಞಾನ ಫಲವನ್ನು, ಆ ಬುದ್ಧಿಯೋಗವನ್ನು ಆತನಿಗೆ ಪ್ರಸಾದಿಸುವನೆಂದು ವಿಭೂತಿಯೋಗದಲ್ಲಿ ತಿಳಿಸಲಾಗಿದೆ.@ ಇದರಿಂದ ಭಕ್ತಿಯ ಪ್ರಾಶಸ್ತ್ಯ ವೆಂಥಹುದು ಎನ್ನುವುದು ಸ್ಪಷ್ಟವಾಗುತ್ತದೆ.

ಆದರೆ ಗೀತಾಚಾರ್ಯನು ಪ್ರಾಥಮಿಕ ಭಕ್ತಿಯಿಂದ ತೃಪ್ತಿಹೊಂದದೆ ಪರಾಭಕ್ತಿಯನ್ನು ಕೂಡ ತಿಳಿಹೇಳಿದನು. ಫಲಪುಷ್ಪಾದಿಗಳಿಂದ ದೇವರನ್ನು ಅರ್ಚಿಸುವುದು ಸಾಮಾನ್ಯ ಪೂಜೆ. ಏಕೆಂದರೆ ಆ ಪುಷ್ಪಾದಿಗಳು ಭಗವನ್ನಿರ್ಮಿತಗಳು. ಮಾನವ ನಿರ್ಮಿತ ವಸ್ತುಗಳಲ್ಲ. ದೇವರು ನಿರ್ಮಿಸಿದ್ದನ್ನು ದೇವರಿಗೇ ಅರ್ಪಿಸುವುದು ಸಾಮಾನ್ಯವಾದ ಕೆಲಸ. ಮಾನವನು ತನ್ನ ಹೃದಯಕ್ಷೇತ್ರದಲ್ಲಿ, ಹೃದಯೋದ್ಯಾನದಲ್ಲಿ ಸ್ವಂತವಾಗಿ ಬೆಳೆಸಿ ಪೋಷಿಸಿದ ಸುಗುಣಗಳೆಂಬ ಪುಷ್ಪಗಳನ್ನು, ದೈವೀಸಂಪದವೆಂಬ ಪುಷ್ಪರಾಶಿಯನ್ನು ಭಗವಂತನಿಗೆ ಅರ್ಪಿಸಿದಾಗ ಮಾತ್ರ ಆ ಪರಾತ್ಪರನು ಅಪರಿಮಿತವಾಗಿ ಸಂತೋಷಿಸುವನು. ಇದೇ ಪರಾಪೂಜೆಯೆಂದು ಕರೆಯಲ್ಪಟ್ಟಿದೆ. ಇದನ್ನೇ ಪರಾಭಕ್ತಿಯೆಂದೂ ಹೇಳುವರು. ಆದ್ದರಿಂದಲೇ ಶ್ರೀಕೃಷ್ಣ ಪರಮಾತ್ಮನು ಭಕ್ತಿಯೋಗವೆನ್ನುವ (೧೨ನೆಯ) ಅಧ್ಯಾಯದಲ್ಲಿ ಚಿಕ್ಕ ಚಿಕ್ಕ ಪೂಜಾ ವಿವರಣೆಗಳನ್ನು ಕೊಡದೆ, ದ್ವೇಷ ರಾಹಿತ್ಯ, ಮೈತ್ರಿ, ಕರುಣೆ ಮೊದಲಾದ ಮೂವತ್ತೈದು ಸುಗುಣಗಳನ್ನು (ಅದ್ವೇಷ್ಟಾಸರ್ವ ಭೂತಾನಾಂ... ಇತ್ಯಾದಿ) ವರ್ಣಿಸಿ ಹೇಳಿದ್ದಾನೆ. ಇಂತಹ ಸದ್ಗುಣಕುಸುಮ ಮಾಲೆಗಳಿಂದ ಹೃದಯ ಕ್ಷೇತ್ರವನ್ನು ಅಲಂಕರಿಸಿಕೊಳ್ಳುವನೇ ನಿಜವಾದ ಭಕ್ತ. ಅಂತಹ ಗುಣ ಗ್ರಹಣವೇ ನಿಜವಾದ ಭಕ್ತಿ. '**ಭಕ್ತಿ ಮಾನ್ಯಸ್ಸಮೇ ಪ್ರಿಯಃ**' ಎಂದು ಪದೇ ಪದೇ ಹೇಳುತ್ತಾ ಅಂಥಹ ಅದ್ವೇಷ್ಟೃತ್ವಾದಿ ಗುಣಗಳನ್ನು ಹೊಂದಿರುವವನೇ ನನಗೆ ಅತ್ಯಂತ ಪ್ರಿಯನೆಂದು ಭಗವಂತನು ಗೀತೆಯಲ್ಲಿ ಘೋಷಿಸಿದ್ದಾನೆ. ಆದ್ದರಿಂದ ಭಕ್ತಿಯೋಗಿಗಳು ಸ್ವಲ್ಪ ಜಾಗರೂಕರಾಗಿ ಸಾಮಾನ್ಯಪೂಜೆ ಆರಾಧನೆಗಳ ಜೊತೆ ಮೈತ್ರ್ಯಾದಿ ಸುಗುಣಗಳನ್ನು ಕೂಡ ಹೊಂದಿ ಭಗವಂತನ ಕೃಪೆಗೆ ಪಾತ್ರರಾಗಬೇಕು. ಆಗ ಮಾತ್ರ ಭಕ್ತಿಯೋಗ ಪರಿಪೂರ್ಣವಾಗಿ ಶೋಭಿಸುವುದು.

ಎಲ್ಲಾ ಯೋಗಗಳಿಗಿಂತ ಭಕ್ತಿಯೋಗ ಬಹಳ ಸುಲಭವಾದದ್ದು. ಎಲ್ಲರಿಗೂ ಸಾಧ್ಯವಾಗುವ ಸ್ಥಿತಿಯಲ್ಲಿದೆ. ಕಠಿಣವಾದ ಯಾವ ಸಾಧನೆಗಳು ಇದರಲ್ಲಿ ಇಲ್ಲ. ಭಗವಂತನ ಮೇಲೆ ನಿಷ್ಕಳಂಕವಾದ ಪ್ರೇಮವೊಂದು ಇದ್ದರೆ ಸಾಕು. ಈ ವಿಧವಾಗಿ ಸರ್ವರಿಗೂ ಸುಲಭಸಾಧ್ಯವಾದ ಮಾರ್ಗವಾದ್ದರಿಂದಲೇ ಗೀತೆಯಲ್ಲಿ ಇದನ್ನು ವಿಶೇಷವಾಗಿ ವರ್ಣಿಸಿ ಹೇಳಲಾಗಿದೆ. ಪ್ರತಿ ಅಧ್ಯಾಯದಲ್ಲೂ ಇದರ ಪ್ರಸ್ತಾಪ ಸ್ವಲ್ಪವಲ್ಲ ಸ್ವಲ್ಪ ಇದ್ದೇ ಇರುತ್ತದೆ. ಅಖಂಡ ಜ್ಞಾನೋಪದೇಶವನ್ನು ಮಾಡಿದ ೧೪ನೆಯ ಅಧ್ಯಾಯದ ಕೊನೆಯಲ್ಲಿ-

**ಮಾಂಚಯೋಽವ್ಯಭಿಚಾರೇಣ ಭಕ್ತಿಯೋಗೇನ ಸೇವತೇ।**
**ಸಗುಣಾನ್‌ಸಮತೀತ್ಯೈತಾನ್ ಬ್ರಹ್ಮಭೂಯಾಯ ಕಲ್ಪತೇ॥** (೧೪-೨೬)

"ಯಾವೊಬ್ಬನು ಅಚಂಚಲವಾದ ಭಕ್ತಿಯೋಗದಿಂದ ನನ್ನನ್ನು ಸೇವಿಸುತ್ತಾನೋ ಆತನು ತ್ರಿಗುಣಗಳನ್ನು ಅತಿಕ್ರಮಿಸಿದಂತವನಾಗಿ ಬ್ರಹ್ಮ ಸಾಕ್ಷಾತ್ಕಾರಕ್ಕೆ ಅರ್ಹತೆಯನ್ನು ಹೊಂದುವನು"- ಎಂದು ಭಕ್ತಿಯ ಮಹಿಮೆಯನ್ನು ಕೊಂಡಾಡಲಾಗಿದೆ. ಮತ್ತೆ ವಿಶ್ವರೂಪ ಸಂದರ್ಶನದ ಕೊನೆಯ ಭಾಗದಲ್ಲಿ ಒಂದು ಅದ್ಭುತ ರಹಸ್ಯವನ್ನು ಶ್ರೀಕೃಷ್ಣಪರಮಾತ್ಮ ಬಹಿರ್ಗತಗೊಳಿಸಿದ್ದಾನೆ.

**ಭಕ್ತ್ಯಾ ತ್ವನನ್ಯಯಾ ಶಕ್ಯ ಅಹಮೇವಂವಿಧೋಽರ್ಜುನ।**
**ಜ್ಞಾತುಂ ದ್ರಷ್ಟುಂ ಚ ತತ್ತ್ವೇನ ಪ್ರವೇಷ್ಟುಂಚ ಪರಂತಪ॥** (೧೧-೫೪)

"ಈ ಪ್ರಕಾರವಾಗಿ ವಿಶ್ವರೂಪವನ್ನು ತಿಳಿದುಕೊಳ್ಳುವುದಾಗಲಿ, ನೋಡುವುದಾಗಲಿ, ಅದರಲ್ಲಿ ಪ್ರವೇಶಿಸುವುದಾಗಲಿ ಅನನ್ಯಭಕ್ತಿಯಿಂದ ಮಾತ್ರ ಸಾಧ್ಯವಾಗುವುದು. ಇತರೆ ಯಾವುದರಿಂದಲೂ ಸಾಧ್ಯವಿಲ್ಲ." ಇದರ ಪ್ರಕಾರ ಭಗವದೈಕ್ಯಕ್ಕೆ, ಭಗವದ್ದರ್ಶನಕ್ಕೆ ಭಕ್ತಿಯೇ ಪ್ರಧಾನವೆಂದು ತಿಳಿದು ಬರುತ್ತದೆ. ಅಕ್ಷರ ಪರಬ್ರಹ್ಮಯೋಗದಲ್ಲಿ "ಪರಮ ಪುರುಷನಾದ ಆ ಮಹಾತ್ಮ ಅನನ್ಯ ಭಕ್ತಿಯಿಂದಲೇ ಲಭ್ಯವಾಗುವನೆಂದು"* ಪ್ರಕಟಿಸಲ್ಪಡಲಾಗಿದೆ. ಗೀತೆಯಲ್ಲಿ ಒಂದು ಕಡೆ "ನನ್ನನ್ನು ಯಾರೂ ತಿಳಿದುಕೊಳ್ಳಲಾರರು" (ಮಾಂತು ವೇದ ನ ಕಶ್ಚನ) ಎನ್ನುವ ಭಗವದ್ವಾಕ್ಯವನ್ನು ಕೇಳುತ್ತಲೇ ನಿರ್ವಿಣ್ಣ ಹೃದಯರಾಗುವ ಮುಮುಕ್ಷುಗಳನ್ನು ತಕ್ಷಣವೇ "ಭಕ್ತಿಯಿಂದ ನನ್ನನ್ನು ತಿಳಿದುಕೊಳ್ಳಬಲ್ಲರು" (ಭಕ್ತ್ಯಾಮಾಮಭಿಜಾನಾತಿ) ಎನ್ನುವ ವಾಕ್ಯವನ್ನು ಹೇಳಿ ಶ್ರೀಕೃಷ್ಣಪರಮಾತ್ಮ ಸಮಾಧಾನಪಡಿಸಿದನು. ಇದರಿಂದ ಭಕ್ತಿಗೆ ಎಂತಹ ಅಲೌಕಿಕ ಪ್ರತಿಭೆಯಿದೆ ಎನ್ನುವುದು ತಿಳಿಯುತ್ತದೆ. ಆದ್ದರಿಂದ ಭಗವದ್ವಾಕ್ಯದಲ್ಲಿ ವಿಶ್ವಾಸವಿಟ್ಟು ಸುಲಭವಾದ ಈ ಭಕ್ತಿಯೋಗವನ್ನು ಸರ್ವರೂ ಆಶ್ರಯಿಸಿ ಬ್ರಹ್ಮಾನಂದ ಸಾಗರದಲ್ಲಿ ಮೀಯುವಂತಾಗಬೇಕು.

---

@ ತೇಷಾಂ ಸತತಯುಕ್ತಾನಾಂ ಭಜತಾಂ ಪ್ರೀತಿಪೂರ್ವಕಮ್। ದದಾಮಿ ಬುದ್ಧಿಯೋಗಂ ತಂ ಯೇನ ಮಾ ಮುಪಯಾನ್ತಿತೇ॥ (೧೦-೧೦)

* ಪುರುಷಃ ಸಪರಃ ಪಾರ್ಥ ಭಕ್ತ್ಯಾ ಲಭ್ಯಸ್ತನನ್ಯಯಾ (೮-೨೨)

# ಗೀತೆಯಲ್ಲಿ ರಾಜಯೋಗ

ಸೂರ್ಯಕಿರಣಗಳಲ್ಲಿ ಏಳು ಬಣ್ಣಗಳಿವೆ. ಏಳು ಬಣ್ಣಗಳು ಕಲೆತು ಬಿಳಿಯ ಬಣ್ಣವಾಗಿದೆ. ಕಾಮನಬಿಲ್ಲಿನಿಂದ ಈ ಸತ್ಯವು ಗೋಚರವಾಗುವುದು. ಪುಷ್ಪಗಳು, ಔಷಧಿಗಳು ಅವುಗಳಿಗೆ ಬೇಕಾದ ಬಣ್ಣವನ್ನು ಆ ಕಿರಣಗಳಿಂದ ಸ್ವೀಕರಿಸಿ, ತದ್ರೂಪವಾಗಿ ಪರಿಣಾಮ ಹೊಂದಿ ವೃದ್ಧಿಯಾಗುತ್ತವೆ. ಸೂರ್ಯಕಿರಣಕ್ಕೆ ಒಂದೇ ಒಂದು ಬಣ್ಣವಿದ್ದಿದ್ದರೆ ಪುಷ್ಪಗಳು, ಔಷಧಿಗಳು ಇಷ್ಟು ವರ್ಣಗಳೊಡನೆ ಈ ಪ್ರಕಾರವಾಗಿ ಅಭಿವೃದ್ಧಿ ಹೊಂದಲು ಅವಕಾಶವೇ ಇರುತ್ತಿರಲಿಲ್ಲ. ಹಾಗೆ ಗೀತೆಯಲ್ಲಿ ಹದಿನೆಂಟು ಭಿನ್ನ ಭಿನ್ನ ಯೋಗಗಳನ್ನು ಪ್ರತಿಪಾದಿಸಿರುವುದರಿಂದ ಯಾರಿಗೆ ಯಾವ ಯೋಗ ಬೇಕೋ ಅದನ್ನು ಸ್ವೀಕರಿಸಿ ವಿಮುಕ್ತಿ ಹೊಂದಬಹುದು. ವೃತ್ತದ ಪರಿಧಿಯಿಂದ ಕೇಂದ್ರಸ್ಥಾನಕ್ಕೆ ಬರಲು ಅನೇಕ ದಾರಿಗಳಿವೆ. ಯಾವುದರಿಂದ ಬಂದರೂ ಕೇಂದ್ರವನ್ನು ಸೇರಬಹುದು. ಹಾಗೆಯೇ ಬ್ರಹ್ಮಸಾಕ್ಷಾತ್ಕಾರದ ಲಕ್ಷ್ಯವುಳ್ಳವನಿಗೆ ಶ್ರೀಕೃಷ್ಣಪರಮಾತ್ಮ ಕರುಣೆಯಿಂದ ಗೀತೆಯಲ್ಲಿ ಅನೇಕ ಯೋಗಗಳನ್ನು ಉಪದೇಶಿಸಿದನು. ಅದರಲ್ಲಿ ರಾಜಯೋಗವೊಂದು. ಇದನ್ನೇ ಧ್ಯಾನಯೋಗವೆಂದು, ಆತ್ಮಸಂಯಮಯೋಗವೆಂದು ಕರೆಯುವರು. ಪತಂಜಲಿ ಮಹರ್ಷಿಯು ಇದನ್ನು ವಿಸ್ತಾರವಾಗಿ ವರ್ಣಿಸಿದ್ದಾನೆ. ರಾಜಯೋಗವು ಎಂಟು ಅಂಗಗಳಿಂದ ಕೂಡಿದೆ. ಇದನ್ನೇ ಅಷ್ಟಾಂಗ ಯೋಗವೆಂದು ಕರೆಯುವರು.

ಅವು ಕ್ರಮವಾಗಿ ೧. ಯಮ ೨. ನಿಯಮ ೩. ಆಸನ ೪. ಪ್ರಾಣಾಯಾಮ ೫. ಪ್ರತ್ಯಾಹಾರ ೬. ಧಾರಣ ೭. ಧ್ಯಾನ ೮. ಸಮಾಧಿ- ಎಂದು ಕರೆಯಲ್ಪಟ್ಟಿವೆ. ಈ ಎಂಟು ಅಂಗಗಳು ಗೀತೆಯಲ್ಲಿ ಚೆನ್ನಾಗಿ ವಿವರಿಸಲ್ಪಟ್ಟಿವೆ. ಗೀತೆಯಲ್ಲಿ ಯಾವ ಯಾವ ಕಡೆ ಯಾವ ಯಾವ ವಿಧವಾಗಿ ಈ ಅಂಗಗಳು ಪ್ರಸ್ತಾಪಿಸಲ್ಪಟ್ಟಿವೆ ಎನ್ನುವುದನ್ನು ನೋಡೋಣ. ಇವುಗಳನ್ನು ಗಮನಿಸಿದಲ್ಲಿ ಶ್ರೀಕೃಷ್ಣಮೂರ್ತಿ ಗೀತೆಯಲ್ಲಿ ರಾಜಯೋಗವನ್ನು ಎಷ್ಟು ಚೆನ್ನಾಗಿ ಪೋಷಿಸಿದ್ದಾನೆನ್ನುವ ವಿಷಯ ತಿಳಿದು ಬರುತ್ತದೆ.

**೧) ಯಮ=** ಅಹಿಂಸೆ, ಸತ್ಯ, ಅಸ್ತೇಯ, ಬ್ರಹ್ಮಚರ್ಯ, ಅಪರಿಗ್ರಹ ಈ ಐದು ಗುಣಗಳು ಸೇರಿ 'ಯಮ'ವೆನಿಸಿಕೊಳ್ಳುವವು.

೧. ಅಹಿಂಸೆ:
- ಅಹಿಂಸಾ ಕ್ಷಾಂತಿ ರಾರ್ಜವಮ್............ (೧೩-೮)
- ಅಹಿಂಸಾ ಸಮತಾತುಷ್ಟಿಃ.............. (೧೦-೫)
- ಬ್ರಹ್ಮಚರ್ಯ ಮಹಿಂಸಾ ಚ............. (೧೭-೧೪)

೨. ಸತ್ಯ:
- ಸತ್ಯಂ ಪ್ರಿಯ ಹಿತಂ ಚ ಯತ್........(೧೭-೧೫)
- ಅಹಿಂಸಾ ಸತ್ಯ ಮಕ್ರೋಧಃ............ (೧೬-೨)

೩. ಅಸ್ತೇಯ: ಅನಪೇಕ್ಷಃ ಶುಚಿರ್ದಕ್ಷಃ.......... (೧೨-೧೬)

೪. ಬ್ರಹ್ಮಚರ್ಯ:
- ಯದಿಚ್ಛಂತೋ ಬ್ರಹ್ಮಚರ್ಯಂ ಚರಂತಿ....... (೮-೧೧)
- ಬ್ರಹ್ಮಚಾರಿವ್ರತೇಸ್ಥಿತಃ........... (೬-೧೪)
- ಬ್ರಹ್ಮಚರ್ಯ ಮಹಿಂಸಾ ಚ.......... (೧೭-೧೪)

೫. ಅಪರಿಗ್ರಹ: ಕಾಮಂ ಕ್ರೋಧಂ ಪರಿಗ್ರಹಂ ವಿಮುಚ್ಯ... (೧೮-೫೩)

**೨) ನಿಯಮ=** ಶೌಚ, ಸಂತೋಷ, ತಪಸ್ಸು, ಸ್ವಾಧ್ಯಾಯ, ಈಶ್ವರ ಪ್ರಣಿಧಾನ-ಎನ್ನುವ ಈ ಐದುಗುಣಗಳು ಸೇರಿ 'ನಿಯಮ'ವಾಗುತ್ತದೆ.

೧. ಶೌಚ:
- ತೇಜಃ ಕ್ಷಮಾಧೃತಿ ಶೌಚಂ........... (೧೬-೩)
- ಆಚಾರ್ಯೋಪಾಸನಂ ಶೌಚಂ...... (೧೩-೮)
- ದೇವದ್ವಿಜಗುರು ಪ್ರಾಜ್ಞಪೂಜನಂ ಶೌಚಮಾರ್ಜವಮ್.......... (೧೭-೧೪)

೨. ಸಂತೋಷ:
- ಸಂತುಷ್ಟಸ್ಸತತಂ ಯೋಗೀ............. (೧೨-೧೪)
- ಸಂತುಷ್ಟೋಯೇನ ಕೇನಚಿತ್......... (೧೨-೧೯)
- ಶಾರೀರಂ ತಪ ಉಚ್ಯತೇ........... (೧೭-೧೪)

೩. ತಪಸ್ಸು:
- ವಾಙ್ಮಯಂ ತಪ ಉಚ್ಯತೇ........... (೧೭-೧೫)
- ತಪೋ ಮಾನಸ ಮುಚ್ಯತೇ.......... (೧೭-೧೬)
- ತಪೋ ದಾನಂ ಯಶೋಽಯಶಃ........ (೧೦-೫)

೪. ಸ್ವಾಧ್ಯಾಯ:
- ಸ್ವಾಧ್ಯಾಯಸ್ತಪ ಆರ್ಜವಮ್.......... (೧೬-೧)
- ಸ್ವಾಧ್ಯಾಯಾಭ್ಯಸನಂ ಚೈವ.............. (೧೭-೧೫)

೫. ಈಶ್ವರ ಪ್ರಣಿಧಾನ:
- ಮಾಮೇಕಂ ಶರಣಂ ವ್ರಜ....... (೧೮-೬೬)
- ತಮೇವ ಶರಣಂ ಗಚ್ಛ......... (೧೮-೬೨)

**೩) ಆಸನ:** ..............ಸ್ಥಿರ ಮಾಸನ ಮಾತ್ಮನಃ (೬-೧೧)

**೪) ಪ್ರಾಣಾಯಾಮ:**
- ಪ್ರಾಣಾಪಾನಗತಿ ರುದ್ಧ್ವಾ ಪ್ರಾಣಾಯಾಮ ಪರಾಯಣಃ (೪-೨೯)
- ಪ್ರಾಣಾಪಾನೌಸಮೌಕೃತ್ವಾ ನಾಸಾಭ್ಯಂತರಚಾರಿಣೌ (೫-೨೭)

**೫) ಪ್ರತ್ಯಾಹಾರ :**
- ಶಬ್ದಾದೀನ್ವಿಷಯಾಂ ಸ್ತ್ಯಕ್ತ್ವಾ..... (೧೮-೫೧)
- ಬಾಹ್ಯ ಸ್ಪರ್ಶೇಷ್ವಸಕ್ತಾತ್ಮಾ......... (೫-೨೧)
- ಯತೋ ಯತೋ ನಿಶ್ಚರತಿ......... (೬-೨೬)

**೬) ಧಾರಣ:**
- ಯದಾ ಸಂಹರತೇ ಚಾಯಂ......... (೨-೫೮)
- ಆತ್ಮಸಂಸ್ಥಂ ಮನಃ ಕೃತ್ವಾ ನ ಕಿಂಚಿದಪಿ ಚಿಂತಯೇತ್ (೬-೨೫)
- ಮಯ್ಯೇವ ಮನಆಧತ್ಸ್ವ ಮಯಿ ಬುದ್ಧಿಂ ನಿವೇಶಯ(೧೨-೮)

೭) ಧ್ಯಾನ:
ಧ್ಯಾನೇನಾತ್ಮನಿ ಪಶ್ಯನ್ತಿ.......... (೧೩-೨೫)
ಧ್ಯಾನಯೋಗಪರೋ ನಿತ್ಯಂ......... (೧೮-೫೨)
ಉಪವಿಶ್ಯಾಸನೇ ಯುಂಜಾದ್ಯೋಗ
ಮಾತ್ಮವಿಶುದ್ಧಯೇ..... (೬-೧೨)

೮) ಸಮಾಧಿ:
ಪ್ರಶಾಂತಮನಸಂ ಹ್ಯೇನಂ..........
ಬ್ರಹ್ಮಭೂತಮಕಲ್ಮಷಮ್ (೬-೨೭)
ಸುಖಮಾತ್ಯಂತಿಕಂ ಯತ್ತತ್.....ನ ಚೈ ವಾಯಂ
ಸ್ಥಿತಶ್ಚಲತಿ ತತ್ತ್ವತಃ (೬-೨೧)
ಸಮಾಧಾವಚಲಾಬುದ್ಧಿಃ............... (೨-೫೩)
ಭೋಗೈಶ್ವರ್ಯಪ್ರಸಕ್ತಾನಾಂ..... ಸಮಾಧೌ
ನ ವಿಧೀಯತೇ (೨-೪೪)

ಈ ಪ್ರಕಾರವಾಗಿ ಭಗವದ್ಗೀತೆಯಲ್ಲಿ ರಾಜಯೋಗದ ಅಷ್ಟಾಂಗಗಳು ಪೋಷಿಸಲ್ಪಟ್ಟಿವೆ. ಧ್ಯಾನಯೋಗಿ ಯಾವ ಸ್ಥಳದಲ್ಲಿ ಯಾವ ಪ್ರಕಾರವಾಗಿ, ಯಾವ ನಿಯಮಗಳೊಡನೆ, ಯಾವ ಪದ್ಧತಿಯನ್ನವಲಂಬಿಸಿ ಧ್ಯಾನಾದಿಗಳನ್ನು ಉಪಕ್ರಮಿಸಬೇಕೆನ್ನುವುದನ್ನು ಗೀತೆಯ ಆರನೆಯ ಅಧ್ಯಾಯದಲ್ಲಿ ವಿವರವಾಗಿ ತಿಳಿಸಲ್ಪಟ್ಟಿದೆ. ಆಹಾರ ನಿಯಮ, ನಿವಾಸ ನಿಯಮ, ಅನುಷ್ಠಾನ ನಿಯಮ ಈ ಮೂರರಲ್ಲಿಯೂ ಸಾಧಕನು ಬಹಳ ಜಾಗರೂಕನಾಗಿರಬೇಕೆಂದು ಗೀತಾಚಾರ್ಯನು ಎಚ್ಚರಿಸಿದ್ದಾನೆ. ಸಾಧನೆಯಲ್ಲಿ ಚಿಕ್ಕ ವಿಷಯವನ್ನು ಕೂಡ ಉಪೇಕ್ಷಿಸದೆ ಮುಮುಕ್ಷುಗಳಿಗೆ ತಿಳಿಸುವುದು ಗೀತೆಯ ಒಂದು ಪ್ರತ್ಯೇಕತೆ. ಹೇಗೆಂದರೆ ಚಿಕ್ಕ ವಿಷಯಗಳಲ್ಲಿ ಅಜಾಗರೂಕತೆ ತೋರಿಸಿದರೆ ದೊಡ್ಡ ದೊಡ್ಡ ಫಲಗಳು ಕೈಜಾರಿ ಹೋಗುವುವು. ಆದ್ದರಿಂದ ಏನನ್ನು ತಿನ್ನಬೇಕು, ಹೇಗೆ ಕುಳಿತುಕೊಳ್ಳಬೇಕು, ದೃಷ್ಟಿಯನ್ನು ಎಲ್ಲಿ ಕೇಂದ್ರೀಕರಿಸಬೇಕು ಮೊದಲಾದ ಸಾಮಾನ್ಯ ವಿಷಯಗಳ ಬಗ್ಗೆ ಕೂಡ ಗೀತೆ ಜಾಗರೂಕತೆ ವಹಿಸಿದೆ. ಆದ್ದರಿಂದ ಗೀತೆಯಲ್ಲಿ ಹೇಳಿದಂತೆ ಪ್ರಾಥಮಿಕ ಅಭ್ಯಾಸಗಳನ್ನು ಕೂಡ ಶ್ರದ್ಧಾಪೂರ್ವಕವಾಗಿ ಆಚರಿಸುತ್ತಾ ಕ್ರಮಕ್ರಮವಾಗಿ ಯೋಗದಲ್ಲಿ ಮುಂದುವರಿಯಬೇಕು.

ಯೋಗವೆಂದರೆ ಏನು? ಚಿತ್ತವೃತ್ತಿಗಳನ್ನು ನಿರೋಧಿಸುವುದೇ ಯೋಗವೆಂದು ಪತಂಜಲಿ ನುಡಿದರು.* ಅನೇಕ ಜನ್ಮಾಂತರಗಳಿಂದ ವೃದ್ಧಿ ಹೊಂದಿರುವ ಇಂದ್ರಿಯಗಳು ಹಾಗು ಮನಸ್ಸು, ಬಹಿರ್ ಪ್ರಪಂಚದಲ್ಲಿ ಅನುದಾಸಕ್ತಿಯನ್ನು ಹೊಂದಿ ವಿಷಯ ಭೋಗಗಳ ಮೇಲೆ ಹಾರಿ ಕೂರುತ್ತವೆ. ಅವುಗಳನ್ನು ಹಿಡಿತದಲ್ಲಿಡಬೇಕು. ಆಮೆ ತನ್ನ ಅವಯವಗಳನ್ನು ಒಳಗೆ ತೆಗೆದುಕೊಂಡ ಹಾಗೆ ಇಂದ್ರಿಯಾರ್ಥಗಳಾದ ಶಬ್ದಾಸ್ಪರ್ಶಾದಿಗಳಿಂದ ಮನಸ್ಸನ್ನು ಪ್ರತ್ಯೇಕಿಸಿ, ಅಂತರ್ಮುಖಿ ಮಾಡಿ ಆತ್ಮದಲ್ಲಿ ಸ್ಥಾಪಿಸಬೇಕು.

**ತದಾ ದ್ರಷ್ಟುಃ ಸ್ವರೂಪೇಽವಸ್ಥಾನಮ್**

ಬಾಹ್ಯ ಪ್ರಪಂಚಕ್ಕೆ ಸಂಬಂಧಿಸಿದ ವಿಷಯವೃತ್ತಗಳು ಯಾವಾಗ ವಿಚಾರಣಾ ಬಲದಿಂದ, ಅಭ್ಯಾಸ, ವೈರಾಗ್ಯಗಳಿಂದ ನಿರುದ್ಧವಾಗುವುವೋ ಆಗ ಮನಸ್ಸು ಇನ್ನು ಹೊರಗಡೆ ಓಡಲು ಅವಕಾಶವಿಲ್ಲದೆ, ತನ್ನಷ್ಟಕ್ಕೆ ತಾನೆ ಅಧಿಷ್ಠಾನವಾದ ಆತ್ಮನಲ್ಲಿ (ಸ್ವಸ್ವರೂಪದಲ್ಲಿ) ಸ್ಥಿರಗೊಳ್ಳುವುದು. ಈ ಪ್ರಕಾರವಾಗಿ ಮನಸ್ಸನ್ನು ವಿಷಯಗಳಿಂದ ದೂರಮಾಡಿ ಹೃದಯಸ್ಥಾನವಾದ ಆತ್ಮದಲ್ಲಿ ಸ್ಥಾಪಿಸುವುದೇ ರಾಜಯೋಗದ ಸಾರಾಂಶ. ರಾಜಯೋಗದ ಸಾರವೆಲ್ಲವನ್ನು ಗೀತಾಚಾರ್ಯನು ಈ ಕೆಳಗಿನ ಅರ್ಧಶ್ಲೋಕದಲ್ಲಿ ಹೇಳಿ ಮುಗಿಸಿದ್ದಾನೆ-

**ಆತ್ಮಸಂಸ್ಥಂ ಮನಃಕೃತ್ವಾ ನ ಕಿಂಚಿದಪಿ ಚಿಂತಯೇತ್** (೬-೨೫)

"ಮನಸ್ಸನ್ನು ಆತ್ಮದಲ್ಲಿ ಬೇರೂರಿಸಿ ಬಾಹ್ಯವಿಷಯಗಳಾವುವನ್ನು ಚಿಂತಿಸಬಾರದು"- ಎಂದು ಇದರ ಅರ್ಥ. ಇದರಲ್ಲಿ ಎರಡು ಸಾಧನೆಗಳಿವೆ. ಒಂದು- ವಿಷಯ ವಿಸ್ಮರಣೆ; ಎರಡು- ಆತ್ಮಸ್ಮರಣೆ. ವಿಷಯ ವಿಸ್ಮರಣೆಯೊಂದೇ ಸಾಲದು. ಏಕೆಂದರೆ, ಗಾಢ ನಿದ್ರೆಯಲ್ಲಿ ವಿಷಯ ವಿಸ್ಮರಣೆ ನಡೆಯುತ್ತಲೇ ಇರುತ್ತದೆ. ಅದರಿಂದ ಜೀವಿಗೆ ಯಾವ ಮಹಾಪ್ರಯೋಜನೆಯೂ ಕಾಣುವುದಿಲ್ಲ. ಆದ್ದರಿಂದಲೇ ಅದರ ಜೊತೆಗೆ ಆತ್ಮಚಿಂತನೆಯೂ ಅವಶ್ಯಕ. ಪ್ರಾರಂಭ ಸ್ಥಿತಿಯಲ್ಲಿ ಮನಸ್ಸು ಯಾವ ಆಲೋಚನೆಯೂ ಇಲ್ಲದೆ ಇರಲಾರದು. ಆದ್ದರಿಂದ ದೈವ ಚಿಂತನೆಯನ್ನಾಗಲಿ, ಇಲ್ಲವೆ ಆತ್ಮವಿಚಾರಣೆಯನ್ನಾಗಲಿ ಮೊಟ್ಟಮೊದಲಿಗೆ ಆಶ್ರಯಿಸಬೇಕು. ಸಾಧನೆ ತೀವ್ರವಾದಂತೆ ಕ್ರಮವಾಗಿ ಮನಸ್ಸು ಅತಿಸೂಕ್ಷ್ಮವಾಗಿ ಕೇವಲ ನಿರ್ವಿಕಲ್ಪ ಸ್ಥಿತಿಯನ್ನು ಹೊಂದಿ ಸ್ವಸ್ವರೂಪ ಸ್ಥಿತಿಬಿಟ್ಟು ಅನ್ಯವಾದ ಬೇರೆ ಯಾವ ಸಂಕಲ್ಪವನ್ನೂ ಹೊಂದುವುದಿಲ್ಲ. ಆದ್ದರಿಂದ ಮೊದಲು ದುಃಸಂಕಲ್ಪದಿಂದ ಸತ್ಸಂಕಲ್ಪಕ್ಕೆ ತೇರ್ಗಡೆ ಹೊಂದಿ, ಅಲ್ಲಿಂದ ನಿಸ್ಸಂಕಲ್ಪಕ್ಕೆ ಮುಂದುವರಿಯಬೇಕು. ಆ ನಿಸ್ಸಂಕಲ್ಪ ಸ್ಥಿತಿಯೇ ಸಮಾಧಿ.

ಆದರೆ ಅಂಥಹ ಸ್ಥಿತಿ ಅಂದುಕೊಂಡಷ್ಟು ಸುಲಭವಲ್ಲ. ಏಕೆಂದರೆ ಮನಸ್ಸು ಬಹಳ ಚಂಚಲವಾದದ್ದು. **"ವಾಯೋರಿವ ಸುದುಷ್ಕರಮ್"**- ಗಾಳಿಯನ್ನು ಮೂಟೆ ಕಟ್ಟಿದ ಹಾಗೆ ಅದನ್ನು ನಿಗ್ರಹಿಸುವುದು ಬಹಳ ಕಷ್ಟವೆಂದು ಅರ್ಜುನನು ಹೇಳೇ ಹೇಳಿದ್ದಾನೆ. ಅಂತಹ ಚಪಲತೆ, ವಾಸನಾಬಲದಿಂದ ಏರ್ಪಡುವುದು. ಆದ್ದರಿಂದ ವಿಷಯಗಳ ವಾಸ್ತವ ಕ್ಷಣಿಕ ರೂಪವನ್ನು ವಿಚಾರಿಸುವುದರ ಮೂಲಕ ಅವುಗಳ ಮೇಲೆ ವಿರಕ್ತಿಯನ್ನುಂಟುಮಾಡಿ, ಮನಸ್ಸನ್ನು ಅವುಗಳ ಕಡೆ ಹೋಗಬಿಡದೆ ಅಂತರ್ಮುಖವಾಗಿಸಬೇಕು. ಪ್ರತಿನಿತ್ಯವು ಈ ಪ್ರಕಾರವಾಗಿ ಸ್ವಲ್ಪ ಸ್ವಲ್ಪ ಅಭ್ಯಾಸಮಾಡುವುದರಿಂದ ಅದಷ್ಟು ಬೇಗನೆ ಮನಸ್ಸು ದಾರಿಗೆ ಬರುವುದು. ಆದ್ದರಿಂದಲೇ ಶ್ರೀಕೃಷ್ಣ ಪರಮಾತ್ಮನು ಗೀತೆಯಲ್ಲಿ-

**ಅಭ್ಯಾಸೇನತು ಕೌಂತೇಯ ವೈರಾಗ್ಯೇಣ ಚ ಗೃಹ್ಯತೇ** (೬-೩೫)

ಎಂದು ಹೇಳುತ್ತಾ, ವೈರಾಗ್ಯಪೂರ್ವಕವಾದ ಅಭ್ಯಾಸದ ಹೊರತು ಬೇರೆ ಯಾವುದರಿಂದಲೂ ಮನಸ್ಸು ಬಗ್ಗದು, ಎಂದು ಸ್ಪಷ್ಟವಾಗಿ ಹೇಳಿದ್ದಾನೆ. ಈ ಸಿದ್ಧಾಂತವನ್ನೇ ವೇದಾಂತ ಶಾಸ್ತ್ರವು ಇನ್ನೊಂದು ವಿಧವಾಗಿ ಬೋಧಿಸುತ್ತದೆ. ವಾಸನಾಕ್ಷಯ, ಮನೋನಾಶ, ತತ್ವಜ್ಞಾನ ಈ ಮೂರರಿಂದ ಜೀವಿಗೆ ಬ್ರಹ್ಮ ಸಾಕ್ಷಾತ್ಕಾರವಾಗಬಲ್ಲದು. ಅಂಥಹ ತತ್ವಜ್ಞಾನದ ಸಹಾಯದಿಂದ ವಾಸನಾಕ್ಷಯ ಉಂಟಾಗಿ, ವಾಸನಾಕ್ಷಯದಿಂದ ಮನೋನಾಶವು ಸಂಭವಿಸುವುದು. ಮೋಕ್ಷವು ಪ್ರಾಪ್ತಿಯಾಗಬೇಕೆಂದರೆ ಮನಸ್ಸು ನಶಿಸಬೇಕು. ಮನಸ್ಸು ನಶಿಸಬೇಕಾದರೆ ವಾಸನೆಗಳು ಕ್ಷಯವಾಗಬೇಕು ವಾಸನೆಗಳು ಕ್ಷಯವಾಗಬೇಕೆಂದರೆ ತತ್ತ್ವವಿಚಾರಣೆ ಮಾಡಬೇಕು. ಆದ್ದರಿಂದ ಅಭ್ಯಾಸ ವೈರಾಗ್ಯಗಳ ಮೂಲಕ, ತತ್ವಚಿಂತನಾದಿಗಳ ಸಹಾಯದಿಂದ, ಧ್ಯಾನನಿಷ್ಠೆಯಿಂದ ಮನಸ್ಸಿಗೆ ಕಡಿವಾಣ ಹಾಕಿ ಭವಸಾಗರವನ್ನು ದಾಟಲೇಬೇಕು. ಇದೇ ರಾಜಯೋಗದ ನಿಷ್ಕರ್ಷೆ.

---

* **ಯೋಗಶ್ಚಿತ್ತವೃತ್ತಿ ನಿರೋಧಃ**

# ಗೀತೆಯಲ್ಲಿ ಜ್ಞಾನಯೋಗ

ಜೀವಿಗೆ ದುಃಖವು ಯಾವುದರಿಂದ ಉಂಟಾಗಿದೆ? ಶರೀರ ಪರಿಗ್ರಹಣದಿಂದ, ಶರೀರವು ಯಾವುದರಿಂದ ಉಂಟಾಗಿದೆ? ಕರ್ಮಗಳಿಂದ. ಕರ್ಮ ಯಾವುದರಿಂದ ಉಂಟಾಗಿದೆ? ರಾಗಾದಿಗಳಿಂದ. ರಾಗಾದಿಗಳು ಯಾವುದರಿಂದ ಉಂಟಾಗಿವೆ? ಅಜ್ಞಾನದಿಂದ. ಈ ಅಜ್ಞಾನವು ಹೇಗೆ ಹೋಗುವುದು? ಜ್ಞಾನದಿಂದ. ಆದ್ದರಿಂದ ಜೀವಿಗೆ ಆತ್ಯಂತಿಕ ದುಃಖರಾಹಿತ್ಯವು ಜ್ಞಾನದಿಂದಲೇ ಸಿದ್ಧಿಸುತ್ತದೆ. ತನ್ನ ಸ್ವರೂಪವನ್ನು ಮರೆತದ್ದರಿಂದ ಬಂಧ ಉಂಟಾಗಿದೆ. ಮತ್ತೆ ತನ್ನ ಸ್ವರೂಪವನ್ನು ಜ್ಞಾಪಕಕ್ಕೆ ತಂದುಕೊಳ್ಳುವುದರಿಂದ ಮೋಕ್ಷ ಪ್ರಾಪ್ತಿಯಾಗುವುದು. ಅಂಥಹ ಸ್ವಸ್ವರೂಪ ಸಂಧಾನವನ್ನು ಜ್ಞಾನವೆಂದು ಹಿರಿಯರು ಹೇಳುತ್ತಾರೆ. ಮೋಕ್ಷರೂಪವಾದ ಪರಮಶಾಂತಿಯನ್ನು ಅಭಿಲಾಷಿಸುವವನು ಈ ಪ್ರಕಾರವಾದ ಜ್ಞಾನಾನು ಭವವನ್ನು ತಪ್ಪದೆ ಹೊಂದಬೇಕಾಗುತ್ತದೆ.

ಜ್ಞಾನಂ ಲಬ್ಧ್ವಾ ಪರಾಂ ಶಾಂತಿಮಚಿರೇಣಾಧಿಗಚ್ಛತಿ (೪-೩೯)

ಎಂದು ಗೀತಾಚಾರ್ಯನು ಈ ಸತ್ಯವನ್ನೇ ತಿಳಿಸಿದ್ದಾನೆ. ಗೀತೆಯ ನಾಲ್ಕನೆಯ ಅಧ್ಯಾಯವಾದ ಜ್ಞಾನಯೋಗದಲ್ಲಿ ಜ್ಞಾನವು ವಿಶೇಷವಾಗಿ ವರ್ಣಿಸಲ್ಪಟ್ಟಿದೆ.* ಹೇಗೆಂದರೆ-

೧. ಜ್ಞಾನತಪಸ್ಸು- ಜ್ಞಾನದ ತಪಸ್ಸಿನಿಂದ ಎಷ್ಟೋ ಜನರು ಪುನೀತರಾಗಿದ್ದಾರೆ.

೨. ಜ್ಞಾನಯಜ್ಞ- ಧನಾದಿಗಳಿಂದ ಮಾಡಿದ ಯಜ್ಞಕ್ಕಿಂತ ಜ್ಞಾನಯಜ್ಞವು ಶ್ರೇಷ್ಠವಾದದ್ದು.

೩. ಜ್ಞಾನನೌಕೆ- ಪಾಪ ಸಮುದ್ರವನ್ನು ಜ್ಞಾನವೆಂಬ ನೌಕೆಯಿಂದ ಹಾಯಾಗಿ ದಾಟಬಹುದು.

೪. ಜ್ಞಾನಾಗ್ನಿ- ಜ್ಞಾನವೆಂಬ ಅಗ್ನಿ ಸಮಸ್ತ ಕರ್ಮಗಳೆಂಬ ಕಟ್ಟಿಗೆಗಳನ್ನು ಭಸ್ಮೀಭೂತ ಮಾಡಬಲ್ಲದು.

೫. ಜ್ಞಾನಖಡ್ಗ- ಅಜ್ಞಾನ ಜನಿತವಾದ ಸಂಶಯವನ್ನು ಜ್ಞಾನವೆನ್ನುವ ಖಡ್ಗ ಛೇದಿಸಿ ಹಾಕಬಲ್ಲದು.

ಓಹೋ! ಜ್ಞಾನವನ್ನು ಕುರಿತು ಭಗವಂತನು ಎಷ್ಟು ಉಪಮಾನಗಳನ್ನಿತ್ತಿದ್ದಾನೆ! ಇಷ್ಟರಿಂದ ತೃಪ್ತಿಯಾಗದೆ ಮತ್ತೆ ಐದನೆಯ ಅಧ್ಯಾಯದಲ್ಲಿ ಜ್ಞಾನವನ್ನು ಸೂರ್ಯನಿಗೆ ಹೋಲಿಸಿ ವರ್ಣಿಸಿರುವನು.+

ಅಲ್ಲಿಗೇ, ನಿಲ್ಲದೆ, ಮತ್ತೆ ಹತ್ತನೆಯ ಅಧ್ಯಾಯದಲ್ಲಿ ಜ್ಞಾನವನ್ನು ಒಂದು ಪ್ರಕಾಶವಾದ ದೀಪಕ್ಕೆ ಹೋಲಿಸಲಾಗಿದೆ.@ ಜ್ಞಾನದ ಅಪಾರ ಮಹಿಮೆಯನ್ನು, ಅದ್ಭುತ ಶಕ್ತಿಯನ್ನು ಜನರಿಗೆ ತಿಳಿಹೇಳಲು ಭಗವಂತನು ಇಷ್ಟು ಸಾದೃಶ್ಯಗಳನ್ನು ಕೊಟ್ಟಿರುತ್ತಾನೆ. "ಓ ಜೀವಿಗಳೇ! ಜ್ಞಾನತಪಸ್ಸನ್ನು ಆಚರಿಸಿ ಪವಿತ್ರರಾಗಿ! ಜ್ಞಾನಯಜ್ಞವನ್ನು ನಿರ್ವಹಿಸಿ ಮುಕ್ತಿಶ್ರೀಯನ್ನು ವರಿಸಿ! ಜ್ಞಾನವು ತಪ್ಪದೆ ಪಾಪಸಮುದ್ರವನ್ನು ದಾಟಿಸುವುದು! ಜ್ಞಾನಾಗ್ನಿಯು 'ಕರ್ಮ'ವೆಂಬ ಕಟ್ಟಿಗೆಗಳನ್ನು ಸುಟ್ಟುಹಾಕುವುದು! ಜ್ಞಾನಖಡ್ಗವು ಸರ್ವಸಂಶಯಗಳನ್ನು ಛೇದಿಸಿ ಹಾಕುವುದು! ಜ್ಞಾನಭಾಸ್ಕರನ ದಿವ್ಯತೇಜದಿಂದ ಅಜ್ಞಾನಾಂಧಕಾರವು ಮಾಯವಾಗುವುದು! ಜ್ಞಾನದೀಪವನ್ನು ಬೆಳಗಿಸಿ ಅಮೃತಮಯಕಾಂತಿ ಪುಂಜವನ್ನು ಚತುರ್ದಿಕ್ಕುಗಳಿಗೆ ಪ್ರಸರಿಸಿರಿ! ಎಂದು ಗೀತೆಯಲ್ಲಿ ಭಗವಂತನು ಎಲ್ಲಾ ಜನರಿಗೆ ಹಿತಬೋಧೆ ಮಾಡಿದ್ದಾನೆ. ಆದ್ದರಿಂದ ಪ್ರತಿಯೊಬ್ಬರು ತಮ್ಮ ಈ ಜೀವಾವಧಿಯಲ್ಲಿಯೇ ಜ್ಞಾನವನ್ನು ಅವಶ್ಯವಾಗಿ ಸಂಪಾದಿಸಿಕೊಳ್ಳಬೇಕೆನ್ನುವುದು ಸ್ಪಷ್ಟವಾಗುತ್ತಿದೆ.

ಜ್ಞಾನವೆಂದರೆ ಏನು? ಈ ವಿಷಯವನ್ನು ಸ್ವಲ್ಪ ವಿಚಾರಿಸೋಣ. ಪ್ರಕೃತಿ, ಪುರುಷರ ಸಂಯೋಗವೇ ಪ್ರಪಂಚ. ಈ ಪ್ರಪಂಚದಲ್ಲಿ ಆತ್ಮ ಅನಾತ್ಮ; ಕ್ಷೇತ್ರ, ಕ್ಷೇತ್ರಜ್ಞ; ದೃಕ್ಕು, ದೃಶ್ಯ; ಎಲ್ಲವೂ ಒಂದೇ ಆಗಿರುವಂತೆ ಅಜ್ಞಾನಿಗೆ ಗೋಚರವಾಗುತ್ತವೆ. ಅವುಗಳನ್ನು ಬೇರ್ಪಡಿಸುವುದೇ ಜ್ಞಾನ. ಅವುಗಳನ್ನು ವಿಭಜಿಸಿ, ಜಡವನ್ನು ಜಡವಾಗಿಯೂ, ಚೈತನ್ಯವನ್ನು ಚೈತನ್ಯವಾಗಿಯೂ ನೋಡುವುದೇ ಜ್ಞಾನ. ಆದ್ದರಿಂದಲೇ ಕೆಲವು ಯೋಗಗಳನ್ನು 'ವಿಭಾಗ' ಯೋಗಗಳೆಂದು ಪ್ರತ್ಯೇಕವಾಗಿ ಕರೆಯಲಾಗಿದೆ. (ಕ್ಷೇತ್ರ ಕ್ಷೇತ್ರಜ್ಞ ವಿಭಾಗ ಯೋಗ, ಗುಣತ್ರಯ ವಿಭಾಗಯೋಗ, ದೈವಾಸುರ ಸಂಪದ್ವಿಭಾಗಯೋಗ, ಶ್ರದ್ಧಾತ್ರಯ ವಿಭಾಗಯೋಗ). 'ವಿಭಾಗ'ವೆಂದರೆ ಕಲೆತವುಗಳನ್ನು ಬೇರ್ಪಡಿಸುವುದು ಎಂದರ್ಥ. ಒಳ್ಳೆಯದು ಹಾಗು ಕೆಟ್ಟದ್ದು ಕಲೆತಿದ್ದಲ್ಲಿ ಅವುಗಳನ್ನು

---

* ೧) ಬಹವೋ ಜ್ಞಾನತಪಸಾ ಪೂತಾ ಮದ್ಭಾವ ಮಾಗತಾಃ (೪-೧೦) ೨) ಶ್ರೇಯಾನ್ದ್ರವ್ಯಮಯಾದ್ಯಜ್ಞಾ ಜ್ಞಾನಯಜ್ಞಃ ಪರಂತಪ (೪-೩೩)
೩) ಸರ್ವಂ ಜ್ಞಾನ ಪ್ಲವೇನೈವ ವೃಜಿನಂ ಸಂತರಿಷ್ಯಸಿ- (೪-೩೬) ೪) ಜ್ಞಾನಾಗ್ನಿಃ ಸರ್ವಕರ್ಮಾಣಿ ಭಸ್ಮಸಾತ್ಕುರುತೇ ತಥಾ (೪-೩೭)
೫) ತಸ್ಮಾದಜ್ಞಾನಸಂಭೂತಂ ಹೃತ್ಸ್ಥಂ ಜ್ಞಾನಾಸಿ ನಾತ್ಮನಃ। ಛಿತ್ತ್ವೈನಂ ಸಂಶಯಂ ಯೋಗಮಾತಿಷ್ಠೋತ್ತಿಷ್ಠ ಭಾರತ॥ (೪-೪೨)

\+ ತೇಷಾಮಾದಿತ್ಯವಜ್ಜ್ಞಾನಂ ಪ್ರಕಾಶಯತಿ ತತ್ಪರಮ್ (೫-೧೬)

@ ನಾಶಯಾಮ್ಯಾತ್ಮಭಾವಸ್ಥೋ ಜ್ಞಾನದೀಪೇನ ಭಾಸ್ವತಾ (೧೦-೧೧)

ಬೇರ್ಪಡಿಸಿ, ಒಳ್ಳೆಯದನ್ನು ಗ್ರಹಿಸಿ, ಕೆಟ್ಟದ್ದನ್ನು ವಿಸರ್ಜಿಸುವುದು ಲೋಕದ ವಾಡಿಕೆ. ಸಿಪ್ಪೆ ಹಾಗು ಸಿಹಿಯಾದ ಕಾಂಡವನ್ನು ಹೊಂದಿರುವ ಬಾಳೆಯ ಹಣ್ಣನ್ನು ಚಿಕ್ಕ ಮಗುವಿನ ಕೈಗಿತ್ತರೂ ಅದು ಸಿಪ್ಪೆಯನ್ನು ಸುಲಿದು ಬಿಸಾಡಿ ಮೃದುವಾದ ಗೊಜ್ಜನ್ನು ತಿನ್ನುತ್ತದೆ. ಪ್ರತಿನಿತ್ಯವು ಬೆಳಿಗ್ಗೆ ಮನೆಗಳಲ್ಲಿ ಗೃಹಿಣಿಯರು ಅಕ್ಕಿಯಲ್ಲಿ ಕಲ್ಲಾರಿಸುವ ದೃಶ್ಯ ಸರ್ವೇ ಸಾಮಾನ್ಯ. ಅದೇರೀತಿ ಆತ್ಮ ಅನಾತ್ಮ ಕಲೆತಿರುವ ಉಪಾಧಿಯಲ್ಲಾಗಲಿ, ದೃಶ್ಯಪ್ರಪಂಚದಲ್ಲಾಗಲಿ ಅವೆರಡನ್ನೂ ಬೇರ್ಪಡಿಸಿ ಚಿತ್ತವನ್ನು ಆತ್ಮದಲ್ಲಿ ಮಾತ್ರ ಸ್ಥಿರಗೊಳಿಸಿ ಅನಾತ್ಮದೊಡನೆ ವಿರಕ್ತಿಯಿಂದಿರಬೇಕು. ಇದೇ ಜ್ಞಾನ. ಕ್ಷೇತ್ರದಿಂದ ಕ್ಷೇತ್ರಜ್ಞನನ್ನು ಬೇರೆ ಮಾಡಿ ತಾನೇ ಕ್ಷೇತ್ರಜ್ಞನೆಂದು ತಿಳಿದು ಕ್ಷೇತ್ರದ ಬಗ್ಗೆ ಅನಾಸಕ್ತಿ ವಹಿಸಬೇಕು. ಅಸ್ತಿ, ಭಾತಿ, ಪ್ರಿಯ, ನಾಮ ಹಾಗೂ ರೂಪಗಳೆಂಬ ಐದನ್ನು ಹೊಂದಿದ ಯಾವ ವಸ್ತುವಿನಲ್ಲೇ ಆಗಲಿ ಮೊದಲ ಮೂರನ್ನು ಸತ್ಯವೆಂತಲು, ಕೊನೆಯ ಎರಡನ್ನು ಅಸತ್ಯವೆಂದು ಭಾವಿಸಬೇಕು.

ಇನ್ನು ಕ್ಷೇತ್ರವೆಂದರೇನು? ಕ್ಷೇತ್ರಜ್ಞನೆಂದರೆ ಯಾರು? ಎನ್ನುವುದನ್ನು ನೋಡಬೇಕು. ಪಂಚಮಹಾಭೂತಗಳು, ಅಹಂಕಾರ, ಬುದ್ಧಿ, ಅವ್ಯಕ್ತ, ಕರ್ಮೇಂದ್ರಿಯಗಳು, ಜ್ಞಾನೇಂದ್ರಿಯಗಳು, ಶಬ್ದಸ್ಪರ್ಶಾದಿ ವಿಷಯಗಳು, ಇಚ್ಛೆ, ದ್ವೇಷ, ಸುಖ, ದುಃಖ, ದೇಹೇಂದ್ರಿಯಾದಿ ಸಮೂಹ, ಅಂತಃಕರಣ ವೃತ್ತಿಗಳು ಮುಂತಾದುವುಗಳನ್ನು ಕ್ಷೇತ್ರವೆಂದು ಕರೆಯುವರು. ಇವುಗಳನ್ನು ತಿಳಿದುಕೊಳ್ಳುವ ಪ್ರಜ್ಞಾರೂಪವಾದ ಚೈತನ್ಯವೇ ಕ್ಷೇತ್ರಜ್ಞ.

**ಕ್ಷೇತ್ರಜ್ಞ ಚಾಪಿ ಮಾಂ ವಿದ್ಧಿ ಸರ್ವಕ್ಷೇತ್ರೇಷು ಭಾರತ** (೧೩-೩)

'ಓ ಅರ್ಜುನಾ! ಸಮಸ್ತ ಕ್ಷೇತ್ರಗಳಲ್ಲಿರುವ ಕ್ಷೇತ್ರಜ್ಞನು ನಾನೇ ಎಂದು ತಿಳಿ" ಎಂದು ಶ್ರೀಕೃಷ್ಣಪರಮಾತ್ಮನು ಘೋಷಿಸಿರುವ ಅಮೋಘವಾದ ಸತ್ಯ ಜನರ ಪಾಲಿಗೆ ವರಪ್ರಸಾದವಾಗಿದೆ. ಏಕೆಂದರೆ, ಸಾಕ್ಷಾತ್ ಪರಂಧಾಮನು, ವೈಕುಂಠನಾಥನು ಆದ ವಿಶ್ವವ್ಯಾಪಕ ಚಿನ್ಮೂರ್ತಿ ಪ್ರತಿಯೊಬ್ಬರ ಹೃದಯಾಂತ ರಾಳದಲ್ಲಿ ಬೆಳಗುತ್ತಿದ್ದಾನೆಯೇ ಆಗಲಿ ದೂರದಲ್ಲೆಲ್ಲೋ ಇಲ್ಲ ಎನ್ನುವುದು ಇದರಿಂದ ಸ್ಪಷ್ಟವಾಗುತ್ತದೆ. ಆತನು ಅತಿ ಸಾಮೀಪ್ಯದಲ್ಲೇ ಇದ್ದಾನೆ. ಸರ್ವಸಾಕ್ಷಿಯಾಗಿ ಮನಸ್ಸಿನಲ್ಲೇ ಪ್ರಕಾಶಿಸುತ್ತಿದ್ದಾನೆ. ಆದ್ದರಿಂದ ಪ್ರಯತ್ನಿಸಿದರೆ ಆತನು ಸರ್ವರಿಗೂ ಲಭ್ಯ- ಎನ್ನುವ ಧೈರ್ಯವು ಇದರಿಂದ ಉಂಟಾಗುತ್ತದೆ. 'ಸರ್ವಕ್ಷೇತ್ರೇಷು'- ಎಂದು ಹೇಳಲ್ಪಟ್ಟಿದೆಯಾದ್ದರಿಂದ ಜಾತಿ, ಮತ, ಕುಲಗಳ ಭೇದವಿಲ್ಲದೆ ಸಮಸ್ತ ಚರಾಚರಗಳಲ್ಲಿ ಕ್ಷೇತ್ರಜ್ಞನಾದ ಪರಮಾತ್ಮನು ಅಧಿಷ್ಠಾನವಾಗಿದ್ದಾನೆಂದು ಇದರಿಂದ ಸ್ಪಷ್ಟವಾಗುತ್ತದೆ. ವಿಚಾರಣೆಯಿಂದ, ಅನ್ನಮಯ, ಪ್ರಾಣಮಯ, ಮನೋಮಯ, ವಿಜ್ಞಾನಮಯ, ಆನಂದಮಯ ಎನ್ನುವ ಪಂಚಕೋಶಗಳನ್ನು ಬೇರೆಮಾಡಿ ನೋಡಿದಾಗ ಎಲ್ಲರ ಅಂತರಾಳದಲ್ಲಿ ಸರ್ವಸಾಕ್ಷಿಯಾಗಿ ಬೆಳಗುತ್ತಿರುವ ಆತ್ಮ ತಪ್ಪದೆ ಅನುಭೂತಿಯಾಗುವುದು. ಇಂಥಹ ಆತ್ಮಾನುಭೂತಿಯೇ ಜ್ಞಾನದ ಫಲ. ಅದೇ ಮೋಕ್ಷ. ಆದ್ದರಿಂದ ಜ್ಞಾನವಿಚಾರಣೆ, ಜೀವಿಯನ್ನು ಮಹೋನ್ನತ ಆಧ್ಯಾತ್ಮಿಕ ಶಿಖರಕ್ಕೆ ಕರೆದೊಯ್ದು, ಸ್ವಸ್ವರೂಪದ ಮೂಲಕ ಜೀವನನ್ನು ಶಿವನನ್ನಾಗಿ ಮಾಡಿ ಪರಮಾನಂದವನ್ನು, ಜೀವನ್ಮುಕ್ತಿಯನ್ನು ಇಲ್ಲಿಯೇ ಪ್ರಸಾದಿಸುತ್ತದೆ **(ಜ್ಞಾನವಾನ್ ಮಾಂ ಪ್ರಪದ್ಯತೇ).**

ಜ್ಞಾನೋದಯದ ನಂತರ ಮನುಷ್ಯನಿಂದ ಆಚರಿಸಲ್ಪಡುವ ಕರ್ಮಗಳು, ಮಹಾಪವಿತ್ರವಾಗಿ ನಿರ್ಲೇಪವಾಗಿರುವುವು. ಬುದ್ಧಿಗೆ ಅತೀತನಾದ (ಬುದ್ಧೇಃಪರಂ) ಪರಮಾತ್ಮನನ್ನು ತಿಳಿದವನು, ಅಂಥಹ ಸ್ಥಿತಿಯನ್ನು ಹೊಂದಿದವನು, ದೇಹೇಂದ್ರಿಯಾದಿ ಸಂಘಾತಗಳೆಲ್ಲವನ್ನು, ಅಂತಃಕರಣವನ್ನು ಸಾಕ್ಷಿಯಾಗಿ ವೀಕ್ಷಿಸುವನು. ಅಲ್ಲಿ ತಾನು ಕರ್ತನಲ್ಲ. ದೇಹೇಂದ್ರಿಯಗಳು ತಮ್ಮ ತಮ್ಮ ಕೆಲಸಗಳನ್ನು ತಾವು ಮಾಡಿಕೊಳ್ಳುತ್ತಿರುತ್ತವೆ ಎನ್ನುವ ಭಾವವನ್ನು ಹೊಂದಿರುವನು. ಆತನು ಅವುಗಳೊಂದಿಗೆ ಯಾವ ರೀತಿಯ ಸಂಪರ್ಕವನ್ನು ಹೊಂದಿರದೆ ನಾಶರಹಿತವಾದ ಪರಬ್ರಹ್ಮನಲ್ಲೇ ಸ್ಥಿತನಾಗಿ, ಸ್ವಸ್ವರೂಪಾನು ಭವವನ್ನು ಹೊಂದಿ, ಅಸಕ್ತ ಬುದ್ಧಿಯುಳ್ಳವನಾಗಿರುವನು. ಜ್ಞಾನಿಯಾದವನು ಒಂದು ವೇಳೆ ಲೋಕಹಿತಾರ್ಥವಾಗಿ ಕರ್ಮಮಾಡಿದರೂ ಅಸಕ್ತ ಬುದ್ಧಿ ಯಿಂದಲೇ, ನಿರ್ಲಿಪ್ತಮನಸ್ಕನಾಗಿಯೇ ಮಾಡುವನು. ಅಂಥಹ ಯಾವುದೇ ಕರ್ಮವು ಪರಮ ಪುನೀತವಾಗಿ ಅತ್ಯದ್ಭುತ ಮಹಿಮೆಯುಳ್ಳದ್ದಾಗಿರುತ್ತದೆ. ಜ್ಞಾನಿಯ ಕರ್ಮಕ್ಕೂ, ಅಜ್ಞಾನಿಯ ಕರ್ಮಕ್ಕೂ ಇರುವ ವ್ಯತ್ಯಾಸ ಇದೇ. ಅಜ್ಞಾನಿ ದೇಹೇಂದ್ರಿಯಾದಿ ಸಂಘಾತದಲ್ಲಿ ಐಕ್ಯವಾಗಿ 'ನಾನೇ ದೇಹವೆಂದು' ಭಾವಿಸಿ ಸಕ್ತಚಿತ್ತನಾಗಿ ಕರ್ಮಗಳನ್ನಾಚರಿಸುತ್ತಾ ಬದ್ಧನಾಗಿರುವನು. ಜ್ಞಾನಿಯು "ನಾನು ಈ ದೇಹವಲ್ಲ, ನಾನು ಸಚ್ಚಿದಾನಂದರೂಪವಾದ, ಜನನ ಮರಣ ರಹಿತವಾದ, ಸನಾತನವಾದ, ಅವ್ಯಯವಾದ ಆತ್ಮನೇ ಹೊರತು, ನಶ್ವರವಾದ ಈ ದೇಹವಲ್ಲ"

**ತದ್ಬ್ರಹ್ಮನಿಷ್ಕಲಮಹಂ ನ ಚ ಭೂತಸಂಘಃ**

ಎಂದು ದೃಢಚಿತ್ತನಾಗಿ, ಅಹಂಭಾವದಿಂದ ಮುಕ್ತನಾಗಿ, ಮಮಕಾರ ರಹಿತನಾಗಿ, ಕರ್ತೃತ್ವವನ್ನು ಬಿಟ್ಟು ಅಸಕ್ತ ಬುದ್ಧಿಯಿಂದ ಕರ್ಮಗಳನ್ನು ಆಚರಿಸಿ ಮುಕ್ತನಾಗುವನು. ಆದ್ದರಿಂದ ಕರ್ಮಗಳನ್ನಾಚರಿಸುವ ಮೊದಲು, ಅವುಗಳನ್ನು ಕುಶಲತೆಯಿಂದ ಹೇಗೆ ಆಚರಿಸಬೇಕೆನ್ನುವ ರಹಸ್ಯವನ್ನು ಕಲಿಯಬೇಕು. ಅಂಥಹ ಕರ್ಮಕುಶಲತೆ ಜ್ಞಾನದಿಂದ ಮಾತ್ರ ಲಭ್ಯವಾಗುವುದು.

ಆದ್ದರಿಂದಲೇ ಶ್ರೀಕೃಷ್ಣಪರಮಾತ್ಮನು ಎರಡನೆಯ ಅಧ್ಯಾಯದ ಆರಂಭದಲ್ಲೇ ಜ್ಞಾನವನ್ನುಪದೇಶಿಸಿ, ಕರ್ಮದಲ್ಲಿ ಕುಶಲತೆಯನ್ನು ಸಂಪಾದಿಸುವ ಚತುರತೆಯನ್ನು ಬೋಧಿಸಿ, ನಂತರ ಕರ್ಮಯೋಗವನ್ನು ಉಪಕ್ರಮಿಸಿದನು. **"ಯೋಗಸ್ಥಃ ಕುರು ಕರ್ಮಾಣಿ"**- (ಆತ್ಮದಲ್ಲಿ ಸ್ಥಿರವಾಗಿದ್ದುಕೊಂಡು ಅಸಕ್ತಬುದ್ಧಿಯಿಂದ ಕರ್ಮಗಳನ್ನಾಚರಿಸು) ಎನ್ನುವ ಮಹಾ ಮಂತ್ರವನ್ನು ಬೋಧಿಸಲು ಪ್ರಾರಂಭಿಸಿದನು. ಆದ್ದರಿಂದಲೇ ಮಹಾತ್ಮರು ಜ್ಞಾನಪ್ರಾಪ್ತಿಯ ನಂತರ ಮಾಡುವ ಲೋಕಸೇವೆ ಸಾಮಾನ್ಯರು ಮಾಡುವ ಸೇವೆಗಿಂತ ಎಷ್ಟೋ ಪಾಲು ಉತ್ತಮವಾಗಿದ್ದು, ನಿಷ್ಕಳಂಕವಾಗಿರುವುದು. ಜ್ಞಾನೋದಯದ ನಂತರ ಅವರವರ ಸಂಸ್ಕಾರವನ್ನನುಸರಿಸಿ ಕೆಲವರು ನಿವೃತ್ತಿಯನ್ನವಲಂಬಿಸುವರು. ಮತ್ತೆ ಕೆಲವರು ಪ್ರವೃತ್ತಿಯನ್ನು ಸ್ವೀಕರಿಸುವರು. ಅಂತಹ ಪ್ರವೃತ್ತಿಯನ್ನು ಸ್ವೀಕರಿಸಿದವರಿಗೆ ಕೂಡ ನಿವೃತ್ತಿ ಫಲವೇ ಸಿಗುವುದು.* ಶ್ರೀಕೃಷ್ಣ, ಜನಕ, ಇಕ್ಷ್ವಾಕು ಮೊದಲಾದ ಚಕ್ರವರ್ತಿಗಳು; ಶಂಕರಾಚಾರ್ಯ, ವಿವೇಕಾನಂದ ಮೊದಲಾದ ಸಂನ್ಯಾಸಿಗಳು ಜ್ಞಾನಾನಂತರ ಲೋಕಹಿತಾರ್ಥವಾಗಿ ಬಹಳಷ್ಟು ಕರ್ಮಕಾಂಡವನ್ನಾಚರಿಸಿದರು. ಆದರೂ ಜ್ಞಾನಪ್ರಭಾವದಿಂದ ಕರ್ಮಗಳು ಅವರನ್ನು ಯಾವ ರೀತಿಯಲ್ಲೂ ಬಂಧಿಸಲಿಲ್ಲ. ಆದ್ದರಿಂದ ಪ್ರವೃತ್ತಿಗಾಗಲಿ, ನಿವೃತ್ತಿಗಾಗಲಿ ಜ್ಞಾನವನ್ನು ಸರ್ವಜೀವಿಗಳು ಅತ್ಯಾವಶ್ಯಕವಾಗಿ ಸಂಪಾದಿಸಿಕೊಳ್ಳಬೇಕು. ಆದ್ದರಿಂದಲೇ ಶ್ರೀಕೃಷ್ಣಪರಮಾತ್ಮನು-

**ನಹಿ ಜ್ಞಾನೇನ ಸದೃಶಂ ಪವಿತ್ರ ಮಿಹ ವಿದ್ಯತೇ** (೪-೩೮)

"ಜ್ಞಾನಕ್ಕೆ ಸಮಾನವಾದ ಪವಿತ್ರವಾದ ವಸ್ತು ಈ ಪ್ರಪಂಚದಲ್ಲಿ ಬೇರೆ ಇನ್ನೊಂದಿಲ್ಲ" ಎಂದು ಗೀತೆಯಲ್ಲಿ ಜ್ಞಾನದ ಪ್ರಭಾವವನ್ನು ವರ್ಣಿಸಿರುವನು.

---

* ಪ್ರವೃತ್ತಿರಪಿ ಧೀರಸ್ಯ ನಿವೃತ್ತಿಫಲಭಾಗಿನೀ

ಅಪರೋಕ್ಷ ಜ್ಞಾನ ಹೃದಯದಲ್ಲಿ ಉಂಟಾಗಲು, ಗೀತೆಯ ೧೩ನೆಯ ಅಧ್ಯಾಯದಲ್ಲಿ ಹೇಳಿದ ಹಾಗೆ ಅಮಾನಿತ್ವಾದಿ ಜ್ಞಾನ ಗುಣಗಳನ್ನು ಸಾಧಕನು ಚೆನ್ನಾಗಿ ಅಭ್ಯಸಿಸಬೇಕು. ಅಂಥಹ ಜ್ಞಾನಗುಣಗಳ ಅಭ್ಯಾಸವಾಗದೆ ಜ್ಞೇಯವಸ್ತುವಾದ ಪರಬ್ರಹ್ಮವು ಅನುಭೂತಿಯಾಗಲಾರದು.

ಭಗವದ್ಗೀತೆಯ ಏಳನೆಯ ಅಧ್ಯಾಯದಲ್ಲಿ ನಾಲ್ಕು ವಿಧವಾಗಿ ಭಕ್ತರನ್ನು ವಿಂಗಡಿಸಲಾಗಿದೆ. ಕ್ರಮವಾಗಿ- ಆರ್ತ, ಜಿಜ್ಞಾಸು, ಅರ್ಥಾರ್ಥಿ, ಜ್ಞಾನಿ ಎಂದು.

**ಉದಾರಾಸ್ಸರ್ವ ಏವೈತೇ ಜ್ಞಾನೀತ್ವಾತ್ಮೈವ ಮೇ ಮತಮ್** (೭-೧೮)

"ಅವರೆಲ್ಲರೂ ಉತ್ತಮರೇ. ಆದರೆ ಅವರಲ್ಲಿ ಜ್ಞಾನಿಯಾದವನು ಮಾತ್ರ ಸಾಕ್ಷಾತ್ ನಾನೇ ಎಂದು ನನ್ನ ಅಭಿಪ್ರಾಯ." ಶ್ರೀಕೃಷ್ಣಮೂರ್ತಿ ಜ್ಞಾನದ ಸರ್ವೋನ್ನತ ಸ್ಥಿತಿಯನ್ನು ಹೊಗಳಿರುವನು. ಜ್ಞಾನಿಯು ಸಾಕ್ಷಾತ್ ಭಗವಂತನೇ. ಭಗವಂತನಿಗೂ ಜ್ಞಾನಿಗೂ ಯಾವ ರೀತಿಯ ಭೇದವೂ ಇಲ್ಲ ಎನ್ನುವುದು ಇದರ ಅರ್ಥ. ದ್ವೈತ ಸಾಧನೆಗಳೆಲ್ಲವೂ ಕ್ರಮವಾಗಿ ವಿಕಾಸ ಹೊಂದಿ ಅದ್ವೈತದೊಳಕ್ಕೆ ಜೀವಿಯನ್ನು ಕರೆದೊಯ್ಯುತ್ತವೆ. ಇನ್ನು ಭಗವಂತ, ಭಕ್ತ ಎನ್ನುವ ಭೇದ ಅಲ್ಲಿಲ್ಲ. ಇಬ್ಬರೂ ಒಂದೇ ಸಚ್ಚಿದಾನಂದ ಘನಸ್ವರೂಪವಾಗಿ ರಾರಾಜಿಸುವರು. ಅದೇ ಜೀವನದ ಚರಮಸ್ಥಿತಿ. ಅದೇ ಸಾಧನೆಗಳ ಅಂತಿಮ ದೆಶೆ. ಅದೇ ಜೀವನ್ಮುಕ್ತಿ. ಜ್ಞಾನದ ಫಲ ಇಂಥಹ ಅಪಾರ ಮಹಿಮೆಯಿಂದ ಕೂಡಿದೆ. ಆದ್ದರಿಂದ ಪ್ರತಿಯೊಬ್ಬರು ತಮ್ಮ ಜೀವನಾವಧಿಯಲ್ಲಿಯೇ ಅಮೋಘವಾದ ಜ್ಞಾನಸ್ಥಿತಿಯನ್ನು ಸಂಪಾದಿಸಿಕೊಂಡು ಜನ್ಮಸಾರ್ಥಕ ಗೊಳಿಸಿಕೊಳ್ಳಬೇಕು.

# ಗೀತೆಯಲ್ಲಿ ಸಾಧನೆ

ಇಲ್ಲಿಯವರೆಗೆ ಗೀತೆಯಲ್ಲಿ ಹೇಳಲ್ಪಟ್ಟ ವಿವಿಧ ಮಾರ್ಗಗಳನ್ನು ವಿಚಾರಿಸಿದೆವು. ಇನ್ನು ಅವುಗಳ ಸಾಧನೆ ಹೇಗೆ ಎನ್ನುವುದನ್ನು ತಿಳಿದುಕೊಳ್ಳ ಬೇಕಾಗಿದೆ. ಆದ್ದರಿಂದ ಸಾಧನೆಗಳ ಲೋಪದೋಷಗಳನ್ನು ತಿಳಿದಿರುವುದು ಒಳ್ಳೆಯದು. ಗೀತಾಚಾರ್ಯನಿಗೆ ಅನುಷ್ಠಾನದಲ್ಲೇ ಯಾವಾಗಲೂ ಹೆಚ್ಚು ಪ್ರೀತಿಯಿರುವುದರಿಂದ ಸಾಧನಾ ರಹಸ್ಯಗಳಿಗೆ ಗೀತೆಯಲ್ಲಿ ಹೆಚ್ಚಿನ ಪ್ರಾಧಾನ್ಯತೆ ಕೊಡಲಾಗಿದೆ. ಸಾಮಾನ್ಯವಾಗಿ ಯೋಗವನ್ನಾರಂಭ ಮಾಡಿದಾಗ ಸಾಧಕನಿಗೆ ಉಂಟಾಗುವ ವಿಘ್ನಗಳಾವುವು? ಅವುಗಳನ್ನು ಯಾವ ರೀತಿ ಆತನು ನಿವಾರಿಸಿಕೊಳ್ಳಬಹುದು? ಸಾಧನೆಯ ವೇಳೆಯಲ್ಲಿ ಆತನು ಎದುರಿಸ ಬಹುದಾದ ಸಮಸ್ಯೆಗಳೇನು? ಅವುಗಳನ್ನು ಹೇಗೆ ಪರಿಷ್ಕರಿಸಿಕೊಳ್ಳಬಹುದು? ಈ ಮುಂತಾದ ವಿಷಯಗಳು ಅಭ್ಯಾಸಿಗೆ ಬಹಳ ಮುಖ್ಯವಾದುವು. ಭಗವಂತನು ಗೀತೆಯಲ್ಲಿ ಅವುಗಳೆಲ್ಲವನ್ನು ಸ್ಪಷ್ಟವಾಗಿ ತಿಳಿಸಿ ಸಾಧಕಲೋಕಕ್ಕೆ ಮಹೋಪಕಾರವನ್ನು ಮಾಡಿದ್ದಾನೆ. ಅವು ಯಾವುವೆಂದರೆ-

**೧. ದುರ್ಬಲತ್ವವನ್ನು ಹೊರದೂಡಬೇಕು:**

ಸಾಧನೆಯ ಆರಂಭದಲ್ಲಿ ಅಧೈರ್ಯ, ಅಂಜುಬುರುಕುತನ, ದುರ್ಬಲತೆ, ನಿರುತ್ಸಾಹಗಳನ್ನು ಹತ್ತಿರಕ್ಕೆ ಬರದ ಹಾಗೆ ನೋಡಿಕೊಳ್ಳಬೇಕು. "ಯಾರೋ ಮಹರ್ಷಿಗಳು ಮೋಕ್ಷವನ್ನು ಹೊಂದಿದರೆಂದರೆ, ನಾನು ಹೇಗೆ ಪಡೆಯಬಲ್ಲೆನು? ನನಗೆ ಅಂತಹ ಚಿತ್ತಶುದ್ಧಿ ಸಾಧ್ಯವೇ? ನಾನು ಗೃಹಸ್ಥ, ಮಕ್ಕಳು ಮರಿಗಳುಳ್ಳವನು. ಈ ಎಲ್ಲರನ್ನೂ ಬಿಟ್ಟು ಅರಣ್ಯಕ್ಕೆ ಹೋಗಲಾರೆನಲ್ಲ! ನನ್ನಿಂದ ಸಂನ್ಯಾಸ ತೆಗೆದುಕೊಳ್ಳಲು ಅಸಾಧ್ಯ. ಸಂಸಾರದ ಜಂಜಾಟವನ್ನು ಹೇಗೆ ಬಿಡಲು ಸಾಧ್ಯ? ನನ್ನಂಥವನಿಗೆ ಮೋಕ್ಷ ಹೇಗೆ ಲಭಿಸುವುದು?" ಈ ಪ್ರಕಾರವಾದ ದುರ್ಬಲ ವಚನಗಳನ್ನು ಯಾರೂ ಎತ್ತರಬಾರದೆಂದು-ಗೀತೆ ಖಡಾಖಂಡಿತವಾಗಿ ಹೇಳಿದೆ.

**ಕ್ಷುದ್ರಂ ಹೃದಯದೌರ್ಬಲ್ಯಂ ತ್ಯಕ್ತ್ವೋತ್ತಿಷ್ಠ ಪರಂತಪ** (೨-೩)

"ಅತಿ ನೀಚವಾದ ಹೃದಯ ದೌಬಲ್ಯವನ್ನು ಹೊಡೆದೋಡಿಸು! ಕರ್ತವ್ಯವನ್ನು ಮಾಡು! ಓ ಅರ್ಜುನಾ"- ಎಂದು ಅರ್ಜುನನ ಮೂಲಕ ಸರ್ವಜೀವಿಗಳನ್ನು ಗೀತಾಮಾತೆ ಎಚ್ಚರಿಸುತ್ತದೆ. ನಿರ್ಭಯವಾಗಿರಿ (Be fearless)- (ವಿಗತ ಭೀಃ) ಎಂದು ಪದೇ ಪದೇ ಹೇಳುತ್ತದೆ. 'ಧೃತ್ಯುತ್ಸಾಹಸ ಮನ್ವಿತಃ'- "ಧೈರ್ಯ ಹಾಗು ಉತ್ಸಾಹವುಳ್ಳವನಾಗಿ ಕಾರ್ಯವು ಸಿದ್ಧಿಸಲಿ ಸಿದ್ಧಿಸದೆ ಹೋಗಲಿ ಮನಸ್ಸಿಗೆ ಹಚ್ಚಿಕೊಳ್ಳದೆ ಸಮಬುದ್ಧಿಯಿಂದ ಕರ್ತವ್ಯವನ್ನು ನಿರ್ವಹಿಸು" ಎಂದು ಆದೇಶಿಸಿದೆ. ಸಂನ್ಯಾಸಿಗಳಿಗೇ ಮೋಕ್ಷವು ಮೀಸಲೆಂದು ಗೃಹಸ್ಥರ್ಯಾರೂ ಅಂಜಬೇಕಾಗಿಲ್ಲ. ಅರ್ಜುನನು ಗೃಹಸ್ಥ, ಜನಕನು ಗೃಹಸ್ಥ. ಅವರು ಮೋಕ್ಷ ಹೊಂದಿರುವುರೆಂದಾಗ ಬೇರೆಯವರು ಹೇಗೆ ಹೊಂದದೆ ಇರಲು ಸಾಧ್ಯ? ಕೆಲವು ಮತ, ಜಾತಿ, ಕುಲ ಮತ್ತು ಆಶ್ರಮದವರಿಗೆ ಮಾತ್ರ ಮುಕ್ತಿ ಮೀಸಲೆನ್ನುವ ವಿಷಯವನ್ನು ಯಾವ ಶಾಸ್ತ್ರವೂ ಅಂಗೀಕರಿಸಿಲ್ಲ. ಗೀತೆ ಅಂಥಹ ಸಿದ್ಧಾಂತವನ್ನು ಮೊದಲೇ ಅಂಗೀಕರಿಸಿಲ್ಲ. ಆದರೆ ವಿಘ್ನಗಳಿಗೆ ಅಂಜದೆ, ಪ್ರತಿಬಂಧಕಗಳನ್ನು ಲೆಕ್ಕ ಹಿಡಿಯದೆ ಭಗವಂತನ ಮೇಲೆ ಪರಿಪೂರ್ಣವಾದ ವಿಶ್ವಾಸವಿಟ್ಟು ಕರ್ತವ್ಯವನ್ನು ಪಾಲಿಸಿದಾಗ ಮಾತ್ರ ಮೋಕ್ಷವು ಲಭಿಸಬಲ್ಲದು. ಆದ್ದರಿಂದ ಧೈರ್ಯವನ್ನು ಎಂಥಹ ಪರಿಸ್ಥಿತಿಯಲ್ಲೂ ಬಿಡಬಾರದೆನ್ನುವುದು ಗೀತೆಯ ಪ್ರಪ್ರಥಮ ಆದೇಶ. ಸಾಧಕನು ಈ ವಿಷಯದಲ್ಲಿ ಅತಿ ಜಾಗರೂಕನಾಗಿದ್ದು, ಅಂಜಬುರುಕತನವನ್ನು ಹಿಮ್ಮೆಟ್ಟಿಸಿ, ವಿಘ್ನಗಳಿಗೆ ಅಂಜದೆ, ಅಧೈರ್ಯಕ್ಕೆ ಎಡೆಗೊಡದೆ, ಸರ್ವೇಶ್ವರನ ಮೇಲೆ, ಸದ್ಗುರುವಿನ ಮೇಲೆ ಹಾಗೂ ತನ್ನ ಮೇಲೆ ಪರಿಪೂರ್ಣ ವಿಶ್ವಾಸವನ್ನಿಟ್ಟುಕೊಂಡು ಪರಮಾರ್ಥಪಥದಲ್ಲಿ ಮುಂದಕ್ಕೆ ಸಾಗಿಹೋಗಬೇಕು.

**೨. ಮಧ್ಯಮಾರ್ಗವನ್ನವಲಂಬಿಸಬೇಕು:**

ಗುರಿಯನ್ನು ಆದಷ್ಟು ಬೇಗ ಮುಟ್ಟಬೇಕೆನ್ನುವುದು ಒಳ್ಳೆಯದೇ ಆಗಲಿ, ಆ ಗಡಿ ಬಿಡಿಯಲ್ಲಿ ತನ್ನ ಕಾಲುಗಳನ್ನು ಮುರಿದುಕೊಳ್ಳಬಾರದು. ಮನಸ್ಸು ಅಚಂಚಲವಾಗಿರಬಾರದು. ಸಾಧನೆಯಲ್ಲಿ ಗಂಭೀರತೆ ಗೋಚರಿಸುತ್ತಿರಬೇಕು "Slow and steady wins the race"- ಶಾಂತವಾಗಿ ಸ್ಥಿರಬುದ್ಧಿಯಿಂದ ಪ್ರವರ್ತಿಸುವವನು ಮಾತ್ರ ಗೆಲ್ಲಬಲ್ಲನು ಎಂಬ ನಾಣ್ನುಡಿ ಪ್ರಚಲಿತವಾಗಿಯೇ ಇದೆಯಲ್ಲ! **'ಅತಿ ಸರ್ವತ್ರ ವರ್ಜಯೇತ್'**- ಎನ್ನುವ ಹಿರಿಯರ ಆದೇಶವಿದೆ. ಆದ್ದರಿಂದಲೇ ಶ್ರೀಕೃಷ್ಣಪರಮಾತ್ಮನು ಗೀತೆಯಲ್ಲಿ ಸಾಧಕರನ್ನುದ್ದೇಶಿಸಿ 'ಅಧಿಕವಾಗಿ ಭುಜಿಸಲೂಬಾರದು, ತಿನ್ನದೆಯೂ ಇರಬಾರದು; ಅಧಿಕವಾಗಿ ನಿದ್ರಿಸಬಾರದು, ನಿದ್ರೆಯಿಲ್ಲದೆಯೂ ಇರಬಾರದು;

ಮಿತಾಹಾರ, ಮಿತನಿದ್ರೆ, ಮಿತಾಚರಣೆಯುಳ್ಳವನಾಗಿರಬೇಕು. ಆಗ ಮಾತ್ರ ಯೋಗವು ನಿರ್ವಿಘ್ನವಾಗಿ ನಡೆಯುವುದು* ಎಂದು ಕರುಣೆಯಿಂದ ಆದೇಶಿಸಿದ್ದಾನೆ. ಯಾವ ವಸ್ತುವನ್ನೇ ಆಗಲಿ ಜಾಗ್ರತೆಯಿಂದ ಉಪಯೋಗಿಸಿದರೆ ಬಹಳ ದಿನಗಳವರೆಗೆ ಕೆಲಸ ಮಾಡಬಲ್ಲದು. ಮಿತಿಮೀರಿ ಉಪಯೋಗಿಸಿದರೆ ಬೇಗನೇ ಕೆಟ್ಟು ಹೋಗುವುದು. ಹಾಗೆಯೇ ದೇಹ, ಇಂದ್ರಿಯಗಳು, ಮನಸ್ಸು ಎನ್ನುವುಗಳನ್ನು ಭಗವಂತನು ನಮಗೆ ಪ್ರಸಾದಿಸಿದ್ದಾನೆ. ಅವುಗಳನ್ನು ಸದುಪಯೋಗ ಪಡಿಸಿಕೊಂಡು ಅವುಗಳ ಮೂಲಕ ಭವಸಾಗರವನ್ನು ದಾಟಬೇಕಾಗಿದೆ. ಭಗವನ್ಮುಖವಾಗಿರುವವರು ಆ ಭವಸಾಗರದ ನೌಕೆಗಳನ್ನು ಬಹು ಜಾಗರೂಕತೆಯಿಂದ ಕಾಪಾಡಿಕೊಳ್ಳುವ ಬದಲು ಅವುಗಳಿಗೆ ಶಕ್ತಿಮೀರಿದ ಕೆಲಸಕೊಟ್ಟರೆ ಆ ನೌಕೆಗಳು ಸಮುದ್ರದ ಮಧ್ಯದಲ್ಲಿಯೇ ನಮ್ಮನ್ನು ಮುಳುಗಿಸುವುವು. ಯೋಗದ ಬದಲು ರೋಗ ಬಂದು ಅಂಟಿಕೊಳ್ಳುವುದು. ಎಷ್ಟೋ ಸಾಧಕರು ಪ್ರಾಣಾಯಾಮಾದಿಗಳನ್ನು ಅವಶ್ಯಕತೆಗಿಂತ ಹೆಚ್ಚಿಗೆ ಮಾಡಿ ಶುಷ್ಕೋಪವಾಸಗಳಿಂದ ದೇಹವನ್ನು ಕ್ಷೀಣಗೊಳಿಸಿ; ಆಕಡೆ ಪರಮಾರ್ಥ ಕ್ಕಾಗಲಿ, ಈ ಕಡೆ ಪ್ರಾಪಂಚಿಕ ವ್ಯವಹಾರಕ್ಕಾಗಲಿ ಕೆಲಸಕ್ಕೆ ಬಾರದೆ, "ಎರಡೂ ಕಡೆ ಕೆಟ್ಟ ಮೂರ್ಖ"ರಂತೆ ತಯಾರಾಗುವರು. ಅಂಥಹವರ ಜೀವನವು ಭ್ರಷ್ಟವಾಗಿ ಹೋಗುತ್ತದೆ. ಇದೆಲ್ಲವನ್ನು ಗಮನಿಸಿಯೇ ಗೀತಾಚಾರ್ಯನು ಸಾಧನೆಯಲ್ಲಿ 'ಮಧ್ಯಮಾರ್ಗ' ವನ್ನು ಸೂಚಿಸಿರುವನು. ಆದ್ದರಿಂದ ಮುಮುಕ್ಷುಗಳು ತಮ್ಮ ತಮ್ಮ ಸಾಧನೆಗಳಲ್ಲಿ ಅತಿ ಜಾಗರೂಕರಾಗಿದ್ದು 'ಶನೈಃ ಶನೈಃ' ಎಂದು ಭಗವಂತನು ಆದೇಶಿಸಿದ ಹಾಗೆ ಶಾಂತವಾಗಿ, ಗಂಭೀರವಾಗಿ ಪ್ರವರ್ತಿಸುತ್ತ, ಮಧ್ಯಮಾರ್ಗವನ್ನು ಅವಲಂಬಿಸಿ ವಿಜಯವನ್ನು ಸಾಧಿಸಬೇಕು.

### ೩. ಅಭ್ಯಾಸವನ್ನು ಬಿಡಬಾರದು- ವೈರಾಗ್ಯವನ್ನವಲಂಬಿಸಬೇಕು

ಅನೇಕ ಜನ್ಮಗಳಿಂದ ಮನಸ್ಸು ಪ್ರಕೃತಿ ದಾಸ್ಯವನ್ನು ಅವಲಂಬಿಸುತ್ತಾ ಬಂದಿದೆ. ಈಗ ಅದನ್ನು ಅಲ್ಲಿಂದ ಮರಳಿಸಿ ದೈವತ್ವದ ದಾರಿಯಲ್ಲಿ ನಡೆಸ ಬೇಕಾಗಿದೆ. ಭೋಗದಿಂದ ಯೋಗದ ಕಡೆ ತಿರುಗಬೇಕಾಗಿದೆ. ಆದ್ದರಿಂದ ಸಹಜವಾಗಿಯೇ ಅದು ತಿರುಗಿ ಬೀಳುತ್ತದೆ. ಪ್ರತಿಕ್ರಿಯೆ (Reaction) ಸಂಭವಿಸುತ್ತದೆ. ಜನ್ಮಜನ್ಮಾಂತರಗಳಿಂದ ವಿಷಯಸುಖಗಳಲ್ಲಿ ಒದ್ದಾಡಿದ ಮನಸ್ಸು ಅಲ್ಲಿಂದ ಹಿಂದಿರುಗಬೇಕೆಂದರೆ ಸಾಮಾನ್ಯವಾಗಿ ಒಪ್ಪಿಕೊಳ್ಳುವುದಿಲ್ಲ. ಹಟವಿಡಿದೇ ತೀರುತ್ತದೆ. ಆದರೆ ಸಾಧಕನು ಪಟ್ಟನ್ನು ಬಿಡದೆ ಪ್ರತಿದಿನವೂ ಸ್ವಲ್ಪ ಸ್ವಲ್ಪ ಅಭ್ಯಾಸ ಮಾಡುವುದರಿಂದ ಕೊನೆಗೆ, ಯಾವಾಗಲೋ ಒಮ್ಮೆ ಅದು ಬಗ್ಗುತ್ತದೆ. ಗೀತೆಯ ಆರನೆಯ ಅಧ್ಯಾಯದಲ್ಲಿ ಅರ್ಜುನನು, ಮನಸ್ಸು ಮಹಾಚಪಲವಾದುದೆಂದು, ಅದನ್ನು ನಿಗ್ರಹಿಸುವುದು ಅತಿದುಷ್ಕರವೆಂದು ಶ್ರೀಕೃಷ್ಣನಿಗೆ ತನ್ನ ಬಲಹೀನತೆಯನ್ನು ತಿಳಿಸಿದನು. ಅದಕ್ಕೆ ಆ ಮಹನೀಯನು, 'ಅದಕ್ಕೆ ನಾನೇನು ಮಾಡಲಿ? ಅಭ್ಯಾಸದಿಂದ ನೀನೇ ಅದನ್ನು ನಿಗ್ರಹಿಸಿಕೊಳ್ಳಬೇಕು. ಬೇರೆ ದಾರಿಯಿಲ್ಲ. ವೈರಾಗ್ಯದ ಸಹಾಯವನ್ನು ಪಡೆ' ಎಂದು ಉತ್ತರವಿತ್ತನು. ಭಗವಂತನ ಅತಿಸಮೀಪದ ನೆಂಟ, ಪ್ರಿಯ, ಸಖ, ಭಕ್ತ ಹಾಗು ಆಪ್ತಮಿತ್ರನಾದ ಅರ್ಜುನನ ಮನೋನಿಗ್ರಹಕ್ಕೆ ಕೂಡ ಸ್ವಪ್ರಯತ್ನ ರೂಪವಾದ ಅಭ್ಯಾಸವೇ ಶರಣ್ಯವಾದಾಗ ಇನ್ನು ಬೇರೆಯವರ ಬಗ್ಗೆ ಹೇಳುವ ಅವಶ್ಯಕತೆಯಿಲ್ಲ. ಆದ್ದರಿಂದ ಮನೋನಿಗ್ರಹಕ್ಕೆ ಅಭ್ಯಾಸವೊಂದೇ ದಾರಿ.

ಮತ್ತೆ ಹನ್ನೆರಡನೆಯ ಅಧ್ಯಾಯದಲ್ಲಿ ಶ್ರೀಕೃಷ್ಣಪರಮಾತ್ಮ ಅರ್ಜುನನಿಗೆ ಕೆಲವು ಸಾಧನೆಗಳನ್ನು ಉಪದೇಶಿಸುತ್ತಾ ಮೊಟ್ಟ ಮೊದಲಿಗೆ 'ನನ್ನ ಮೇಲೆ ನಿನ್ನ ಮನಸ್ಸಿರಿಸು, ಹಾಗೆ ಮಾಡಿದ್ದಾದರೆ ನೀನು ನನ್ನಲ್ಲೇ ನಿವಸಿಸುತ್ತೀಯೆ' ಎಂದು ಬೋಧಿಸಿದನು. 'ಒಂದು ವೇಳೆ ನಿನ್ನಲ್ಲಿ ಮನಸ್ಸನ್ನು ಸ್ಥಿರವಾಗಿ ಇಡಲು ಸಾಧ್ಯವಾಗದೆ ಹೋದರೆ ಏನು ಮಾಡಬೇಕು ಮಹಾನುಭಾವ? ಎಂದು ತಕ್ಷಣ ಅರ್ಜುನನು ಕೇಳಬಹುದೆಂದು ಭಾವಿಸಿ, ಆ ಪ್ರಶ್ನೆಗೆ ಹೀಗೆ ಸಮಾಧಾನವಿತ್ತನು.

**ಅಭ್ಯಾಸಯೋಗೇನ ತತೋ ಮಾಮಿಚ್ಛಾಪ್ತುಂ ಧನಂಜಯ (೧೨-೯)**

'ಒಂದು ವೇಳೆ ನನ್ನಲ್ಲಿ ನಿನ್ನ ಮನಸ್ಸನ್ನು ನಿಲ್ಲಿಸಲು ಸಾಧ್ಯವಾಗದಿದ್ದರೆ, ಅಭ್ಯಾಸದಿಂದ ನಿಲ್ಲುವಂತೆ ಮಾಡಿಕೊಂಡು ನನ್ನನ್ನು ಹೊಂದಲು ಪ್ರಯತ್ನಿಸು-' ಆದ್ದರಿಂದ ಮನೋನಿಗ್ರಹಕ್ಕೆ, ಭಗವತ್ಪ್ರಾಪ್ತಿಗೆ ಅಭ್ಯಾಸವನ್ನು ಬಿಟ್ಟರೆ ಬೇರೆ ದಾರಿಯೇ ಇಲ್ಲ. ಆದ್ದರಿಂದಲೇ ಅಭ್ಯಾಸವನ್ನು ಅಭ್ಯಾಸಯೋಗವೆಂದು ಕರೆದು ಕರ್ಮ, ಭಕ್ತಿ ಮತ್ತು ಜ್ಞಾನಯೋಗಗಳಿಗೆ ಸಮಾನವಾದ ಸ್ಥಾನವನ್ನು ಅಭ್ಯಾಸಕ್ಕೂ ಕೂಡ ಕೊಟ್ಟಿದ್ದಾರೆನಿಸುತ್ತದೆ. ಇಂಥಹ ಅಭ್ಯಾಸಯೋಗವೆನ್ನುವ ಪದ ಗೀತೆಯ ೮ನೆಯ ಅಧ್ಯಾಯದಲ್ಲಿ ಕಂಡುಬರುತ್ತದೆ.** ಅಕ್ಷರ ಪರಬ್ರಹ್ಮವನ್ನು ಹೊಂದಲು ತದೇಕ ಧ್ಯಾನರೂಪವಾದ ನಿರಂತರಭ್ಯಾಸವೇ ಶರಣ್ಯವೆಂದು ಅಲ್ಲಿ ಭಗವಂತನು ಬೋಧಿಸಿದ್ದಾನೆ. ಆದ್ದರಿಂದ ಕರ್ಮಯೋಗ, ಭಕ್ತಿಯೋಗ, ಜ್ಞಾನಯೋಗ, ಧ್ಯಾನಯೋಗಗಳು ಈ ಅಭ್ಯಾಸಯೋಗದೊಡನೆ ಸೇರುವುದರೊಂದಿಗೆ ಪರಿಪಕ್ವತೆ ಹಾಗು ದೃಢತೆಯನ್ನು ಹೊಂದುತ್ತವೆ. ಯಾವ ಯೋಗವಾದರೂ ಕೊನೆಗೆ ಅಭ್ಯಾಸಯೋಗವನ್ನವಲಂಬಿಸಬೇಕಾದದ್ದೇ.

ಆದರೆ ಈ ಅಭ್ಯಾಸವನ್ನು ಯಾವಾಗ ಮಾಡಬೇಕು? ಇದಕ್ಕೆ ಗೀತೆಯಲ್ಲಿ ಉತ್ತರ 'ನಿರಂತರ'ವೆಂದಿದೆ. ಮಾಯೆ ಮಹಾಪ್ರಮಾದಕರವಾದದ್ದು. ಅದು ಹೊಂಚು ಹಾಕಿದ್ದು, ಸಾಧಕನು ಯಾವಾಗಲಾದರೂ ಸ್ವಲ್ಪ ಅಜಾಗರೂಕತೆ ಯಿಂದ ಮೈಮರೆತರೆ, ತಕ್ಷಣ ಬಂದು ಕಚ್ಚುವುದು. ಆದ್ದರಿಂದ ಮುಮುಕ್ಷು ಯಾವಾಗಲೂ ಜಾಗರೂಕನಾಗಿರಬೇಕು. ಇಲ್ಲವೆಂದರೆ **'ತಸ್ಮಾತ್ಸರ್ವೇಷು ಕಾಲೇಷು ಮಾಮನುಸ್ಮರ'**- ಸರ್ವಕಾಲದಲ್ಲಿಯೂ ನನ್ನ ಸ್ಮರಣೆಮಾಡುತ್ತಿರು- ಎಂದು ಹೇಗೆ ಹೇಳಲು ಸಾಧ್ಯ? ಬೆಳಿಗ್ಗೆ, ಮಧ್ಯಾಹ್ನ, ಸಾಯಂಕಾಲ ಮಾತ್ರ ಸ್ಮರಿಸಬೇಕೆಂದು ಏಕೆ ಹೇಳಲಿಲ್ಲ? ಇದಕ್ಕೆ ಕಾರಣ, ಕಾಮಾದಿಗಳು ಜೀವಿಯ ನಿರಂತರ ಶತ್ರುಗಳು, ನಿತ್ಯವೈರಿಗಳು (ಜ್ಞಾನಿನೋ ನಿತ್ಯ ವೈರಿಣಾ). ಅವು ಸಾಧಕನನ್ನು ಕಬಳಿಸಲು ಸರ್ವಸನ್ನದ್ಧವಾಗಿ ಸದಾ ಕಾದುಕುಳಿತಿವೆ. ಆದ್ದರಿಂದ ಸಾಧಕನು ಅವುಗಳ ಮೇಲೆ ವಿಜಯ ಸಾಧಿಸಬೇಕೆಂದರೆ ವಿವೇಕವೆಂಬ ಖಡ್ಗದೊಡನೆ ಸದಾ ಸನ್ನದ್ಧನಾಗಿರ ಬೇಕಾಗುತ್ತದೆ. 'ತಸ್ಮಾಜ್ಜಾಗ್ರತ, ಜಾಗ್ರತ' ಎಂದು ಶಾಸ್ತ್ರಗಳು ಎಚ್ಚರಿಸಲು ಇದೇ ಕಾರಣ. ಗೀತೆಯಲ್ಲಿ ಸತತಂ (ಯಾವಾಗಲೂ) ಎನ್ನುವ ಪದವು ವಿಶೇಷವಾಗಿ ಕಂಡುಬರುತ್ತಿದೆ.@ ನಿರಂತರ

---

* ೧) ನಾತ್ಯಶ್ನತಸ್ತು ಯೋಗೋಽಸ್ತಿ ನ ಚೈಕಾನ್ತ ಮನಶ್ನತಃ। ನ ಚಾತಿಸ್ವಪ್ನಶೀಲಸ್ಯ ಜಾಗ್ರತೋನ್ನೈವ ಚಾರ್ಜುನ॥ (೬-೧೬)
ಯುಕ್ತಾಹಾರವಿಹಾರಸ್ಯ ಯುಕ್ತಚೇಷ್ಟಸ್ಯ ಕರ್ಮಸು। ಯುಕ್ತಸ್ವಪ್ನಾವಬೋಧಸ್ಯ ಯೋಗೋ ಭವತಿ ದುಃಖಹಾ॥ (೬-೧೭)

** ಅಭ್ಯಾಸ ಯೋಗಯುಕ್ತೇನ ಚೇತಸಾ ನಾನ್ಯಗಾಮಿನಾ (೮-೮)

@ (೧) ತೇಷಾಂ ಸತತಯುಕ್ತಾನಾಂ.............(೧೦-೧೦) (೨) ಸತತಂ ಕೀರ್ತಯಂತೋಮಾಂ............(೯-೧೪)

ಸಾಧನೆಯನ್ನಾಶ್ರಯಿಸ ಬೇಕೆನ್ನುವುದು ಭಗವಂತನ ಆದೇಶ. ಪ್ರಾರಂಭದೆಶೆಯಲ್ಲಿ ಮುಮುಕ್ಷುವು ಧ್ಯಾನಾದಿಗಳಿಗೆ ಸ್ವಲ್ಪ ವೇಳೆಯನ್ನು ನಿಯಮಿಸಿಕೊಂಡರೂ, ಕ್ರಮಕ್ರಮವಾಗಿ ಅದನ್ನು ಹೆಚ್ಚಿಸಿ ನಿರಂತರ ದೈವಭಾವನೆಗೆ ಪ್ರಯತ್ನಿಸಬೇಕು. "ಸ್ಥಿತಾಸ್ಯಾಮಂ ತಕಾಲೇಽಪಿ" ಅಂತ್ಯಕಾಲದವರೆಗೆ ಭಗವತ್ಸ್ಮೃತಿಯನ್ನು ಬಿಡಬಾರದೆಂದೂ, ಬ್ರಾಹ್ಮೀ ಸ್ಥಿತಿಯನ್ನು ಕಾಪಾಡಿಕೊಂಡಿರಬೇಕೆಂದು ಗೀತಾಮಾತೆ ಆದೇಶಿಸಿದೆ. ಏಕೆಂದರೆ ಅಂತಿಮ ಶ್ವಾಸದಲ್ಲಿ ಕೂಡ ಮಾಯೆ ಮನುಜನನ್ನು ಮೋಸಗೊಳಿಸ ಬಹುದು. ಆದ್ದರಿಂದಲೇ ಮಹನೀಯರು ತಮ್ಮ ಆಧ್ಯಾತ್ಮಿಕ ಸಾಧನೆಯಲ್ಲಿ ಕಡುಜಾಗರೂಕರಾಗಿ ಸತತಾಭ್ಯಾಸ ಪರರಾಗಿರುತ್ತಾರೆ.

ಇನ್ನು ಮನೋನಿಗ್ರಹವನ್ನು ಹೇಗೆ ಅಭ್ಯಸಿಸಬೇಕೆನ್ನುವುದನ್ನು ಒಂದೆರಡು ವಾಕ್ಯಗಳಲ್ಲಿ ಹೇಳಬೇಕಾಗಿದೆ. ಗೀತೆಯ ಪದ್ಧತಿ ಪ್ರಕಾರ ಯಾವಾಗ ಮನಸ್ಸು ಚಪಲಗೊಂಡು ಹೊರಗಡೆ ಓಡುತ್ತದೆಯೋ, ಆಗ ಅದಕ್ಕೆ ತಿಳಿಹೇಳಿ ನೆಮ್ಮದಿಯಿಂದ ಒಳಗೆ ಕರೆತಂದು ಆತ್ಮದಲ್ಲಿ ಸ್ಥಾಪಿಸಬೇಕು.* ದೃಶ್ಯಪದಾರ್ಥಗಳಲ್ಲಿ 'ದುಃಖದೋಷಾನುದರ್ಶನ'ವನ್ನು ಕಾಣಬೇಕೆಂದು ಗೀತೆ ಆದೇಶವಿತ್ತಿದೆ. ಬಾಹ್ಯಪದಾರ್ಥಗಳು ಪಾಂಚ ಭೌತಿಕಗಳೆಂದು, ಜಡಗಳೆಂದು, ಕ್ಷಣಿಕಗಳೆಂದು, ಶಾಶ್ವತ ಸುಖ ಪ್ರದಗಳಲ್ಲವೆಂದು ಮನಸ್ಸಿಗೆ, ಇಂದ್ರಿಯಗಳಿಗೆ ಚೆನ್ನಾಗಿ ಬೋಧ್ಯವಾದಲ್ಲಿ, ಇನ್ನು ಅವುಗಳಲ್ಲಿ ಕ್ರಮೇಣ ಆಸಕ್ತಿಯನ್ನು ಬಿಟ್ಟು ಆಧಿಷ್ಠಾನಾತ್ಮದಲ್ಲೇ ಸ್ಥಿರವಾಗಬಲ್ಲವು. ಆದ್ದರಿಂದಲೇ ವಿಷಯ ವಿರಕ್ತಿ, ಸಾಧಕನಿಗೆ ಅತ್ಯವಶ್ಯಕ. ಹಾಗಿಲ್ಲದೆ ಭೋಗೈಶ್ವರ್ಯಗಳ ಮೇಲೆ ಮನಸ್ಸನ್ನು ಹರಿಯಬಿಟ್ಟಾಗ-

**ಭೋಗೈಶ್ವರ್ಯ ಪ್ರಸಕ್ತಾನಾಂ ತಯಾಽಪಹೃತಚೇತಸಾಂ**
**ವ್ಯವಸಾಯಾತ್ಮಿಕಾ ಬುದ್ಧಿಸ್ಸಮಾಧೌ ನ ವಿಧೀಯತೇ (೨-೪೪)**

ವಿಷಯ ಸುಖಗಳಲ್ಲಿ ಮನಸ್ಸು ಆಕರ್ಷಿತಗೊಂಡು ಧ್ಯಾನನಿಷ್ಠೆಯಲ್ಲಿ ಚಿತ್ತಕ್ಕೆ ಏಕಾಗ್ರತೆಯಿಲ್ಲದಂತಾಗುವುದು. ಆದ್ದರಿಂದ ಸಾಧಕನು ಮೊಟ್ಟಮೊದಲು ಪ್ರಯತ್ನಪೂರ್ವಕವಾಗಿ ವಿಷಯಗಳಲ್ಲಿ ವಿರಕ್ತಿಯನ್ನುಂಟು ಮಾಡಿಕೊಂಡು ಮನಸ್ಸನ್ನು ನಿಧಾನವಾಗಿ ಅಲ್ಲಿಂದ ಮರಳಿಸಿ ಆತ್ಮದಲ್ಲಿ ಸ್ಥಾಪಿಸಬೇಕು.@@ ಈ ಕಾರ್ಯವನ್ನು ಆದಷ್ಟು ಬೇಗ ಸಾಧಿಸಿ ಪರಮಾನಂದ ಪದವಿಯಾದ ಕೈವಲ್ಯವನ್ನು ಈ ಜನ್ಮದಲ್ಲೇ ಪಡೆಯಬೇಕೆಂದು ಗೀತಾಮಾತೆ ಕರುಣೆಯಿಂದ ಉಪದೇಶಿಸುತ್ತಿದೆ. ಆದ್ದರಿಂದ ಅಭ್ಯಾಸ ವೈರಾಗ್ಯಗಳನ್ನು ಯಾರೂ ಬಿಡಬಾರದು.

**೪. ಶ್ರದ್ಧಾವಿಶ್ವಾಸಗಳಿರಬೇಕು, ಸಂಶಯವನ್ನು ಹೊರಗಟ್ಟಬೇಕು**

ಪರಮಾತ್ಮನ ಅಸ್ತಿತ್ವದ ವಿಷಯದಲ್ಲಾಗಲಿ, ಜಗತ್ತಿನ ಮಿಥ್ಯತ್ವದ ವಿಷಯದಲ್ಲಾಗಲಿ ಯಾವ ಸಂದೇಹಕ್ಕೂ ಎಡೆಯಿರಬಾರದು. ಏಕೆಂದರೆ ಅವುಗಳ ಬಗ್ಗೆ ಶಾಸ್ತ್ರಗಳು ಖಚಿತವಾಗಿ ಕೆಲವು ನಿರ್ಣಯಗಳನ್ನು ಮಾಡಿವೆ. ಮಹಾತ್ಮರುಗಳೆಲ್ಲ ಅವರವರ ಅನುಭವಗಳಿಂದ ಇದೇ ಸರಿಯೆಂದು ಒಪ್ಪಿದ್ದಾರೆ. **'ತಸ್ಮಾಚ್ಛಾಸ್ತ್ರಂ ಪ್ರಮಾಣಂ ತೇ'** ಎಂದು ಗೀತೆ ಶಾಸ್ತ್ರಪ್ರಮಾಣವನ್ನು ಆದರಿಸ ಬೇಕೆಂದು ಎಚ್ಚರಿಸಿದೆ. ಕೆಲವು ವೇಳೆ ಶಾಸ್ತ್ರ ಪ್ರಮಾಣಗಳ ಸತ್ಯತ್ವಗಳು ಪ್ರಶ್ನಾರ್ಹ ವಾಗಿ ಕಂಡುಬಂದರೂ ಸಂದೇಹಿಸಬಾರದು. ಅವುಗಳ ಮೇಲೆ ಅನನ್ಯ ಶ್ರದ್ಧಾ ವಿಶ್ವಾಸಗಳನ್ನಿಟ್ಟು ಪರಮಾರ್ಥ ರಂಗದಲ್ಲಿ ಮುಂದಕ್ಕೆ ಸಾಗಿ ಹೋಗಬೇಕು.

**ಸಂಶಯಾತ್ಮಾ ವಿನಶ್ಯತಿ**

(ತ್ರಿಕಾಲಗಳಲ್ಲಿಯೂ ಸತ್ಯವಾದದ್ದನ್ನು) ಸಂಶಯಿಸುವವನು ವಿನಾಶವನ್ನೇ ಹೊಂದುವನು ಎಂದು ಗೀತೆ ತಿಳಿಸುತ್ತಿದೆ. ಮತ್ತೆ-

**ಶ್ರದ್ಧಾವಾನ್ ಲಭತೇ ಜ್ಞಾನಂ**

ಶ್ರದ್ಧಾಭಕ್ತಿಗಳು ಉದಯಿಸಿ ವಿಶ್ವಾಸದಿಂದ ಸಾಧನೆ ಮಾಡುವವನು ತಪ್ಪದೆ ಜ್ಞಾನವನ್ನು ಹೊಂದುವನೆಂದು ಗೀತೆ ಸಾರುತ್ತಿದೆ. ಈ ಎರಡು ವಾಕ್ಯಗಳನ್ನು ಗೀತೆಯಲ್ಲಿಯ ಎರಡು ಅಷ್ಟಾಕ್ಷರಿ ಮಹಾಮಂತ್ರಗಳೆಂದು ಭಾವಿಸಿ ದೈವ ಕಾರ್ಯಗಳಲ್ಲಿಯೂ, ಆಧ್ಯಾತ್ಮಿಕ ಸಿದ್ಧಾಂತಗಳಲ್ಲಿಯೂ ಶ್ರದ್ಧೆಯನ್ನು ಬೆಳೆಸಿಕೊಂಡು ಸಂಶಯವನ್ನು ಹೃದಯಾಂತರಾಳದಿಂದ ಹೊರಗಟ್ಟಿ ಪರಮಾತ್ಮ ಪದವಿಯನ್ನು ಸಾಧ್ಯಗೊಳಿಸಿಕೊಳ್ಳಬೇಕು.

ಶ್ರದ್ಧೆ ಎನ್ನುವ ಪದ ಗೀತೆಯಲ್ಲಿ ಲೆಕ್ಕವಿಲ್ಲದಷ್ಟು ಸಾರಿ ಪ್ರಯೋಗಿಸ ಲ್ಪಟ್ಟಿರುವುದು ಕಂಡು ಬರುತ್ತದೆ.+ ದೇವತೆಗಳಲ್ಲಾಗಲಿ, ತೀರ್ಥದಲ್ಲಾಗಲಿ, ಬ್ರಹ್ಮನಿಷ್ಠನಲ್ಲಾಗಲಿ, ಮಂತ್ರದಲ್ಲಾಗಲಿ, ಜ್ಯೋತಿಷ್ಯದಲ್ಲಾಗಲಿ, ಔಷಧ ದಲ್ಲಾಗಲಿ, ಗುರುವಿನಲ್ಲಾಗಲಿ ಮನುಷ್ಯನಿಗೆ ಎಂತಹ ಶ್ರದ್ಧೆ, ಭಾವನೆ, ವಿಶ್ವಾಸವಿರುವುದೋ ಅಂತಹ ಫಲವೇ ಕೈಗೂಡುವುದು.** ಆದ್ದರಿಂದ ಭಗವಂತನ ಅಸ್ತಿತ್ವದ ಮೇಲೆ ಯಾವ ತರಹದ ಸಂಶಯವನ್ನೂ ಇಟ್ಟುಕೊಳ್ಳದೆ, ಅವನ ಮೇಲೆ ಪರಿಪೂರ್ಣವಾದ ವಿಶ್ವಾಸವನ್ನಿಟ್ಟು, ಶ್ರದ್ಧೆಯಿಂದ, ದೈವ ಭಕ್ತ್ಯಾದಿಗಳಿಂದ ಶತವಿಘ್ನಗಳನ್ನು ಹೊರಗಡೆ ಅಟ್ಟಿ ಸಾಧಕನು ಆಧ್ಯಾತ್ಮಿಕ ಪಥದಲ್ಲಿ ತ್ವರಿತವಾಗಿ ಪುರೋಗಮಿಸುವಂತಾಗಬೇಕು.

---

* ಯತೋ ಯತೋ ನಿಶ್ಚರತಿ ಮನಶ್ಚಂಚಲ ಮಸ್ಥಿರಮ್। ತತಸ್ತತೋ ನಿಯಮ್ಯೈತದಾತ್ಮನ್ಯೇವ ವಶಂ ನಯೇತ್॥ (೬-೨೬)

@@ ಗೀತೋಕ್ತ ಸಾಧನೆಗಳಲ್ಲಿ ವೈರಾಗ್ಯಕ್ಕೆ ಪ್ರಮುಖವಾದ ಸ್ಥಾನವನ್ನು ಕೊಟ್ಟಂತೆ ಈ ಕೆಳಗಿನ ಪ್ರಮಾಣಗಳ ಮೂಲಕ ತಿಳಿದು ಬರುತ್ತದೆ.
೧. ಅಭ್ಯಾಸೇನ ತು ಕೌಂತೇಯ ವೈರಾಗ್ಯೇಣ ಚ ಗೃಹ್ಯತೇ (೬-೩೫) ೨. ವೈರಾಗ್ಯಂ ಸಮುಪಾಶ್ರಿತಃ (೧೮-೫೨) ೩) ಇಂದ್ರಿಯಾರ್ಥೇಷು ವೈರಾಗ್ಯಂ (೧೩-೮)

\+ ೧. ಶ್ರದ್ಧಧಾನಾ ಮತ್ಪರಮಾ (೧೨-೨೦) ೨. ಶ್ರದ್ಧಯಾ ಪರಯಾ ತಪ್ತಂ (೧೭-೧೭) ೩. ಶ್ರದ್ಧಯಾ ಪರಯೋಪೇತಾಃ (೧೨-೨) ೪. ಶ್ರದ್ಧಯಾರ್ಚಿತು ಮಿಚ್ಛತಿ (೭-೨೧)
೫. ಶ್ರದ್ಧಾವಂತೋಽನಸೂಯಂತೋ (೩-೩೧) ೬. ಶ್ರದ್ಧಾವಾನನಸೂಯಶ್ಚ (೧೮-೭೧) ೭. ಶ್ರದ್ಧಾವಾನ್ ಭಜತೇ ಯೋಮಾಂ (೬-೪೭)
೮. ಶ್ರದ್ಧಾವಿರಹಿತಂ ಯಜ್ಞಂ (೧೭-೧೩)

** ದೇವೇ ತೀರ್ಥೇ ದ್ವಿಜೇ ಮಂತ್ರೇ ದೈವಜ್ಞೇ ಭೇಷಜೇ ಗುರೌ। ಯಾದೃಶೀ ಭಾವನಾ ಯಸ್ಯ ಸಿದ್ಧಿರ್ಭವತಿ ತಾದೃಶೀ

# ಗೀತೆಯಲ್ಲಿ ನಿಷೇಧಿಸಲ್ಪಟ್ಟ ಆಚಾರ ವಿಚಾರಗಳು

ಭಗವತ್ಸಾಕ್ಷಾತ್ಕಾರವನ್ನು ಅಪೇಕ್ಷಿಸುವವನು ಸತ್ಯವಾದ ಮಾರ್ಗವನ್ನೇ ಅವಲಂಬಿಸಬೇಕು. ಅಸತ್ಯ ಮಾರ್ಗದಿಂದ ಲಕ್ಷ್ಯವನ್ನು ಸೇರದೆ ಇರುವುದೇ ಅಲ್ಲದೆ, ಚಿತ್ತಶಾಂತಿಯಿಲ್ಲದೆ, ನಾನಾ ಅವಸ್ಥೆಗಳನ್ನು ಅನುಭವಿಸ ಬೇಕಾಗುವುದು. ಸಾಂಸಾರಿಕ ಕ್ಲೇಶಗಳಿಗೆ, ಜನನ ಮರಣಗಳಿಗೆ ಗುರಿಯಾಗ ಬೇಕಾಗುತ್ತದೆ. ಆದ್ದರಿಂದ ಗೀತಾಚಾರ್ಯನು ಕೆಲವು ನಿಷಿದ್ಧಾಚಾರಗಳನ್ನು ಟಿಪ್ಪಣಿಸಿ ಮುಮುಕ್ಷುವು ಅವುಗಳನ್ನು ಅನುಸರಿಸಬಾರದೆಂದು ತೀವ್ರವಾಗಿ ಎಚ್ಚರಿಕೆಯಿತ್ತಿದ್ದಾನೆ. ಅವುಗಳ ತಿಳುವಳಿಕೆ ಸಾಧಕನಿಗೆ ಅತ್ಯವಶ್ಯಕವಾದುದ ರಿಂದ ಇಲ್ಲಿ ನೋಡೋಣ.

೧. ಕಾಮ್ಯ ಬುದ್ಧಿಯಿಂದ ಯಜ್ಞಗಳನ್ನಾಚರಿಸುವುದು
೨. ಅಕರ್ಮಣತ್ವ (ಯಾವ ಕರ್ಮವನ್ನೂ ಮಾಡದೆ ಸುಮ್ಮನಿರುವುದು)
೩. ನಾಸ್ತಿಕತೆ
೪. ಭೌತಿಕವಾದ
೫. ಶರೀರ ಕ್ಲೇಶಗೊಳ್ಳುವಂಥಹ ದಾಂಭಿಕ ತಪಸ್ಸು
೬. ಮಿಥ್ಯಾಚಾರ

ಈ ಆರು ವಿಷಯಗಳ ಬಗ್ಗೆ ಮುಮುಕ್ಷುಗಳು ಕಡು ಜಾಗರೂಕ ರಾಗಿದ್ದು ಅವುಗಳನ್ನು ಹತ್ತಿರಕ್ಕೆ ಸೇರಿಸಬಾರದೆಂದು ಗೀತೆಯಲ್ಲಿ ಬೋಧಿಸಲ್ಪಟ್ಟಿದೆ. ಅವುಗಳ ಬಗ್ಗೆ ಸಂಕ್ಷೇಪವಾಗಿ ವಿಚಾರಿಸೋಣ.

**೧. ಸಕಾಮ ಯಜ್ಞಾದಿ ಕರ್ಮಗಳು**

ವಿಷಯ ಭೋಗಗಳಿಗೆ ಹಾಗೂ ಪಾರಮಾರ್ಥ ಜೀವನಕ್ಕೆ ಆರು ಮತ್ತು ಒಂಬತ್ತರ ಸಂಬಂಧ. ಒಂದಕ್ಕೊಂದು ಬದ್ಧ ವಿರೋಧಿಗಳು. ಭೋಗಾಸಕ್ತಿ ಯುಳ್ಳವನು ಮೋಕ್ಷವನ್ನೆಂದಿಗೂ ಪಡೆಯಲಾರನು. ಇಹಲೋಕದ ಭೋಗವಾಗಲೀ, ಪರಲೋಕದ ಭೋಗವಾಗಲೀ ಎರಡೂ ಒಂದೇ. ಜೀವಿಯ ಆಧ್ಯಾತ್ಮಿಕ ಪತನಕ್ಕೆ ಕಾರಣವಾಗುವಲ್ಲಿ ಎರಡೂ ಸಮಾನವೇ. ಆದರೆ ಸ್ವರ್ಗಭೋಗಗಳು ಸ್ವಲ್ಪ ಉತ್ತಮವೇನೋ! (ಕುರುಡನಿಗೆ ಕೋಲು ಸಿಕ್ಕ ಹಾಗೆ). ಆದರೆ ಏನು ಪ್ರಯೋಜನ?

**ಕ್ಷೀಣೇ ಪುಣ್ಯೇ ಮರ್ತ್ಯಲೋಕಂ ವಿಶಂತಿ**

ಎಂದ ಹಾಗೆ ಭೋಗಾನುಭವದಿಂದ ಆ ಪುಣ್ಯವು ಕ್ಷೀಣಿಸುತ್ತಲೇ ಸ್ವರ್ಗದಿಂದ ಮರಳಿ ಬಂದು ಮತ್ತೆ ಭೂಲೋಕದಲ್ಲಿ ಆಧ್ಯಾತ್ಮರಂಗದ 'ಅ, ಆ' ಗಳನ್ನು ಪ್ರಾರಂಭಿಸಬೇಕಾದ್ದೇ. ಆದ್ದರಿಂದ ಜನನ ಮರಣಗಳಿಗೆ, ಜೀವನ ಆಗಮನಾದಿಗಳಿಗೆ, ಗತಾಗತಗಳಿಗೆ* ಹೇತುವಾಗುವ ಕಾಮ್ಯ ಕರ್ಮಗಳನ್ನು, ಸ್ವರ್ಗಭೋಗ ಜನಕಗಳಾದ, ಸಕಾಮ ಯಜ್ಞಯಾಗಾದಿಗಳನ್ನು ಶ್ರೀಕೃಷ್ಣಪರಮಾತ್ಮನು ಗೀತೆಯಲ್ಲಿ ಪೂರ್ತಿಯಾಗಿ ನಿಷೇಧಿಸಿದ್ದಾನೆ. ಜೀವಿಯ ಮೋಕ್ಷಪ್ರಾಪ್ತಿಗೆ, ಆತ್ಯಂತಿಕ ದುಃಖರಾಹಿತ್ಯಕ್ಕೆ, ಅಡ್ಡಬರುವ ಯಾವ ಕ್ರಿಯೆಯಾದರೂ ಸರಿಯೇ ಅದು ಸ್ವರ್ಗಭೋಗವೇ ಆಗಲಿ, ಭೂಲೋಕ ಭೋಗವೇ ಆಗಲಿ ಇಲ್ಲವೆ ಪಾತಾಳ ಲೋಕ ಭೋಗವೇ ಆಗಲಿ- ನಿಷಿದ್ಧವೇ ಸರಿ. ಏಕೆಂದರೆ ಮನಸ್ಸು ಕೋರಿಕೆಗಳಿಂದ ತುಂಬಿ ಬಹಿರ್ಮುಖವಾಗಿ ಓಡುತ್ತಿದ್ದರೆ, ಧ್ಯಾನಕಾಲದಲ್ಲಿ ಏಕಾಗ್ರತೆ ಬರಲಾರದು. ಮನಸ್ಸು ಆತ್ಮದಲ್ಲಿ ಸ್ಥಿರವಾಗದಿದ್ದಲ್ಲಿ ಮೋಕ್ಷವು ಯಾವ ಕಾಲಕ್ಕೂ ಲಭ್ಯವಾಗುವುದಿಲ್ಲ. ಆದ್ದರಿಂದ ಗೀತಾಚಾರ್ಯನು ಸ್ವರ್ಗಸುಖಕ್ಕೆ ಪರಿತಪಿಸುತ್ತಿರುವ ಜನರನ್ನು 'ಅವಿಪಶ್ಚಿತರು' (ಅವಿವೇಕಿಗಳು, ಅಲ್ಪ ಬುದ್ಧಿಯುಳ್ಳವರು) ಎಂದು ಸಂಬೋಧಿಸಿ ಅವರ ಚರ್ಯೆಗಳನ್ನು ಪೂರ್ತಿಯಾಗಿ ಖಂಡಿಸಿದನು. ಗೀತೆಯ ಎರಡನೆಯ ಅಧ್ಯಾಯದಲ್ಲಿಯ ಈ ಕೆಳಗಿನ ಶ್ಲೋಕದಲ್ಲಿ ಇಂಥಹ ಭಾವನೆ ವ್ಯಕ್ತವಾಗುತ್ತದೆ.

> **೧. ಕಾಮಾತ್ಮಾನಃ ಸ್ವರ್ಗಪರಾ ಜನ್ಮ ಕರ್ಮ ಫಲಪ್ರದಾಮ್।**
> **ಕ್ರಿಯಾವಿಶೇಷಬಹುಲಾಂ ಭೋಗೈಶ್ವರ್ಯಗತಿಂ ಪ್ರತಿ॥** (೨-೪೩)
> **೨. ಭೋಗೈಶ್ವರ್ಯ ಪ್ರಸಕ್ತಾನಾಂ................ ಸಮಾಧೌ ನ ವಿಧೀಯತೇ** (೨-೪೪)

ಆದ್ದರಿಂದ ಕ್ರಿಯಾಬಾಹುಳ್ಯದಿಂದೊಡಗೂಡಿ, ವಿಕ್ಷೇಪಜನಕವಾಗಿ, ಚಿತ್ತ ಚಾಂಚಲ್ಯಕ್ಕೆ ಕಾರಣಭೂತವಾದ ಈ ಸಕಾಮಯಜ್ಞಗಳನ್ನು ಆಚರಿಸುವುದಕ್ಕಿಂತ ಮೋಕ್ಷದಾಯಕಗಳಾದ ಜಪಯಜ್ಞ, ಸ್ವಾಧ್ಯಾಯಯಜ್ಞ, ಜ್ಞಾನಯಜ್ಞ ಮುಂತಾದುವುಗಳನ್ನು ಏಕೆ ಆಚರಿಸಬಾರದೆಂದು ಗೀತೆಯಲ್ಲಿ ಭಗವಂತನೇ ಪ್ರಶ್ನಿಸುತ್ತಿದ್ದಾನೆ. ಆದ್ದರಿಂದ ಮುಮುಕ್ಷುವು ಅಂಥಹ ಸಕಾಮಕರ್ಮಗಳ ಜೋಲಿಗೆ ಹೋಗದೆ ಗೀತೆಯಲ್ಲಿ ಹೇಳಲ್ಪಟ್ಟಿರುವ ನಿಷ್ಕಾಮಯಜ್ಞಗಳನ್ನು ಆಶ್ರಯಿಸಿ ಮೋಕ್ಷವನ್ನು ಪಡೆಯುವುದು ಶ್ರೇಯಸ್ಕರ.

**೨. ಅಕರ್ಮಣತ್ವ**

ಯಾವ ಕರ್ಮವನ್ನೂ ಮಾಡದೆ ಸುಮ್ಮನೆ ಇದ್ದರೆ ಅದೊಂದು ಬಹಳ ದೊಡ್ಡ ಸ್ಥಿತಿಯೆಂದು ಕೆಲವರು ತಿಳಿಯಬಹುದು. ಹಾಗಿರುವುದು ಪರಮವೈರಾಗ್ಯದ ಚಿಹ್ನೆಯೆಂದು ಕೆಲವರು ಊಹಿಸಬಹುದು. ಆದರೆ ಹಾಗೆ ತಿಳಿಯುವುದು ಒಂದು ದೊಡ್ಡ ತಪ್ಪು. ಮನಸ್ಸಿನಲ್ಲಿ ವಾಸನೆ, ಸಂಸ್ಕಾರಗಳು ಇರುವವರೆಗೆ ಸ್ಥೂಲದೇಹದಿಂದ ಕರ್ಮಗಳನ್ನು ಮಾಡದೇ ಇದ್ದರೂ ಜೀವಿಯ ಬಂಧವು ವಿಮುಕ್ತವಾಗಲಾರದು. ಮನಸ್ಸಿನಲ್ಲಿ ಆಯಾ ಸಂಕಲ್ಪಗಳು ವಿಜೃಂಭಿಸುತ್ತಲೇ ಇರುತ್ತವೆ. ಯಾವ ಕರ್ಮವನ್ನೂ ಮಾಡದೆ ಸುಮ್ಮನೆ ಇರುವವರು ತಮೋಗುಣಿಗಳಾದರೂ ಆಗಿರಬೇಕು ಇಲ್ಲ ಕೇವಲ ವಿಶುದ್ಧಸತ್ವಿಗಳಾಗಿ

---

* ಗತಾಗತಂ ಕಾಮ ಕಾಮಾ ಲಭಂತೇ (೯-೨೧)

ನಿರ್ವಿಕಲ್ಪಸಮಾಧಿಯನ್ನು ಹೊಂದಿದವರಾದರೂ ಆಗಿರಬೇಕು. ಎರಡನೆಯ ಗುಂಪಿಗೆ ಸೇರಿದವರು ಈ ಲೋಕದಲ್ಲಿ ಬಹಳ ವಿರಳ. ಅಂಥಹವರು ಪರಮಪೂಜ್ಯರು. ಅವರ ಹೃದಯ ವಾಸನಾರಹಿತವಾಗಿ, ನಿಷ್ಕಲ್ಮಷವಾಗಿರುತ್ತದೆ. ಅವರು ಕರ್ಮಗಳನ್ನು ಮಾಡಿದರೂ ಮಾಡದೇ ಇದ್ದರೂ ಅವರಿಗೆ ಬಂಧನವಿಲ್ಲ **(ನೈವ ತಸ್ಯ ಕೃತೇನಾರ್ಥೋ ನಾ ಕೃತೇನೇಹ ಕಶ್ಚನ)**. ಆದರೆ ಬೇರೆಯವರು ಹಾಗಿರಲು ಸಾಧ್ಯವಿಲ್ಲ. ಅವರು ಕರ್ಮಗಳನ್ನು ಆಚರಿಸಿಯೇ ತೀರಬೇಕು. ಏಕೆಂದರೆ ತಮೋಗುಣದಿಂದ ರಜೋಗುಣಕ್ಕೆ, ರಜೋಗುಣದಿಂದ ವಿಶುದ್ಧ ಸತ್ವಕ್ಕೆ, ಇಲ್ಲ ಗುಣಾತೀತ ಸ್ಥಿತಿಗೆ ಪ್ರಯಾಣ ಮಾಡಬೇಕಾಗಿದೆ. ಇಂಥಹ ಸ್ಥಿತಿಯಲ್ಲಿ ಯಾವ ಕರ್ಮವನ್ನೂ ಮಾಡದೆ ಸುಮ್ಮನೆ ಇರುವುದು ಕೇವಲ ಮೂರ್ಖತನವೆನಿಸಿಕೊಳ್ಳುವುದು. ಅದರಿಂದ ಜೀವನ ಭ್ರಷ್ಟವಾಗಿ ಹೋಗುವುದು. ಬಂಧ ಇನ್ನೂ ಹೆಚ್ಚಾಗಿ ಬೆಳೆಯುತ್ತಾ ಹೋಗುತ್ತದೆ. ಆದ್ದರಿಂದಲೇ ಶ್ರೀಕೃಷ್ಣಪರಮಾತ್ಮ-

**ಕರ್ಮಜ್ಯಾಯೋ ಹ್ಯಕರ್ಮಣಃ** (೩-೮)

"ಕರ್ಮಗಳನ್ನು ಮಾಡದೆಯಿರುವುದಕ್ಕಿಂತ ಮಾಡುವುದೇ ಮೇಲು"

**ತಯೋಽಸ್ತು ಕರ್ಮಸಂನ್ಯಾಸಾತ್ ಕರ್ಮಯೋಗೋ ವಿಶಿಷ್ಯತೇ** (೫-೨)

"ಈ ಎರಡರಲ್ಲಿ ಕರ್ಮತ್ಯಾಗಕ್ಕಿಂತ ಕರ್ಮಯೋಗವೇ ಶ್ರೇಷ್ಠವಾದುದು"- ಎಂದು ಗೀತೆಯಲ್ಲಿ ಅಕರ್ಮಣತ್ವವನ್ನು ಖಂಡಿಸಿರುವನು. ಕುಂಭಕರ್ಣನಿಗಿಂತ ರಾವಣಾಸುರನು ಮೇಲು. ತಮೋಗುಣಕ್ಕಿಂತ ರಜೋಗುಣ ಮೇಲು. ರಜೋಗುಣಕ್ಕಿಂತ ಸತ್ವಗುಣವು ಮೇಲು; ಆದ್ದರಿಂದ ಯಾವ ಕರ್ಮವನ್ನು ಮಾಡದೆ ವೃಥಾ ಕಾಲಹರಣ ಮಾಡುವುದಕ್ಕಿಂತ ಯಾವುದೋ ಒಂದು ಕರ್ಮಮಾಡುವುದು ಉತ್ತಮ. ಕ್ರಮವಾಗಿ ಆ ಕರ್ಮ ಶುದ್ಧವಾಗಿ, ನಿಷ್ಕಾಮವಾಗಬಲ್ಲದು. ಅದರಿಂದ ಚಿತ್ತಶುದ್ಧಿಯೂ ತದ್ವಾರ ಜ್ಞಾನಪ್ರಾಪ್ತಿಯು ಕೈಗೂಡುವುದು. ಈ ಪ್ರಕಾರವಾಗಿ ಕರ್ಮಾಚರಣೆ ಕೊನೆಯಲ್ಲಿ ನೈಷ್ಕರ್ಮಸಿದ್ಧಿ ರೂಪವಾದ ಮೋಕ್ಷಕ್ಕೆ ಎಡೆಮಾಡಿಕೊಡುತ್ತದೆ. ಆದ್ದರಿಂದ ಸಾಧಕರು ತಮೋಗುಣ, ಸತ್ವಗುಣಗಳೆಂದು ಭ್ರಮೆ ಹೊಂದದೆ ಬಹುಜಾಗರೂಕರಾಗಿ ಅಕರ್ಮಣತ್ವದಿಂದ ದೂರವಿದ್ದು, ಆಧ್ಯಾತ್ಮೋನ್ನತಿಗೆ ದಾರಿಮಾಡಿ ಕೊಡುವ ಸತ್ಕ್ರಿಯುಗಳನ್ನಾಚರಿಸುತ್ತ ಜನ್ಮಸಾಫಲ್ಯ ಮಾಡಿಕೊಳ್ಳಬೇಕೆಂದು ಶ್ರೀಕೃಷ್ಣಪರಮಾತ್ಮ ಗೀತೆಯಲ್ಲಿ ಆದೇಶವಿತ್ತಿದ್ದಾನೆ.

**೩. ನಾಸ್ತಿಕತೆ**

"ದೃಶ್ಯವಸ್ತುಗಳೆಲ್ಲ ಸತ್ಯ. ಪುನರ್ಜನ್ಮವಿಲ್ಲ. ಆದ್ದರಿಂದ ಬದುಕಿದ ನಾಲ್ಕುದಿನ ಪುಷ್ಕಲವಾಗಿ ತಿಂದು, ಕುಡಿದು ವಿಲಾಸವಾಗಿ ಕಳೆಯಬೇಕು. ಸ್ಥೂಲದೇಹ ಪೋಷಣೆಯೇ ಪರಮ ಪುರುಷಾರ್ಥ" ಇದು ನಾಸ್ತಿಕರ ವಿಚಾರಧಾರೆ. ಗೀತಾಚಾರ್ಯನಿಗೆ ಇಂಥಹ ಮಾತುಗಳು ಸ್ವಲ್ಪವೂ ರುಚಿಸುವುದಿಲ್ಲ. ಆದ್ದರಿಂದಲೇ ಗೀತೆಯ ೧೬ನೆಯ ಅಧ್ಯಾಯದಲ್ಲಿ ಅಂಥಹ ನಾಸ್ತಿಕಭಾವವನ್ನು ಸಂಪೂರ್ಣವಾಗಿ ಖಂಡಿಸಿದ್ದಾನೆ. "ಜಗತ್ತನ್ನು ಈಶ್ವರನು ಸೃಷ್ಟಿಸಲಿಲ್ಲ, ಸ್ತ್ರೀಪುರುಷರ ಸಂಯೋಗದಿಂದ ಅದು ಏರ್ಪಟ್ಟಿದೆ- ಎಂದು ವಾದಿಸಿ ದುಷ್ಪೂರವಾದ ಕಾಮವನ್ನಾಶ್ರಯಿಸಿ ದಂಭಮಾನಮದಾನ್ವಿತರಾಗಿ ಭೋಗಗಳನ್ನೇ ಪರಮಗಮ್ಯಗಳೆಂದು ಭಾವಿಸಿ ಅವುಗಳಿಗೋಸ್ಕರ ಅನ್ಯಾಯವಾಗಿ ದ್ರವ್ಯಾರ್ಜನೆ ಮಾಡಿ, ಧನಮದಾಂಧರಾಗಿ ಗರ್ವದಿಂದ ಕೊಬ್ಬಿದ ನರಾಧಮರಿಗೆ ನರಕ ಹಾಗು ನೀಚಯೋನಿಗಳೇ ಗತಿ" ಎಂದು ಶ್ರೀಕೃಷ್ಣಮೂರ್ತಿ ಹೇಳಿದ ವಾಕ್ಯಗಳು ಸಾಧಕರನ್ನು ಎಚ್ಚರಿಸಬೇಕು. ಆದ್ದರಿಂದ ಮುಮುಕ್ಷುವು ಅಂಥಹ ನಾಸ್ತಿಕಭಾವಗಳನ್ನು ನಂಬದೆ, ದೇಹಾದಿ ಭೌತಿಕವಸ್ತು ಜಾಲವು ಅಸತ್ಯವೆಂದು ನಂಬಿ, ಭೋಗಾಸಕ್ತಿಯನ್ನು ತ್ಯಜಿಸಿ, ಯೋಗಾಸಕ್ತಿಯನ್ನು ಸಂಪಾದಿಸಿಕೊಂಡು ಜೀವನವನ್ನು ಪರಮಾರ್ಥಸಂಪಾದನೆಗೆ ಮುಡುಪಾಗಿಟ್ಟು ಬ್ರಹ್ಮಾನಂದಾನು ಭೂತಿಯನ್ನು ಆದಷ್ಟುಬೇಗ ಪಡೆಯಬೇಕು.

**೪. ಭೌತಿಕವಾದ**

"ಪ್ರಕೃತಿ (Nature)ಯಿಂದಲೇ ಸಮಸ್ತವು ನಡೆಯುತ್ತಿದೆ. ಇನ್ನು ಪುರುಷನ ಅವಶ್ಯಕತೆ ಏನಿದೆ? ಕಾರ್ಯಕಾರಣರೂಪವಾದ ಈ ಚರಾಚರ ಜಗತ್ತೆಲ್ಲವೂ ಪ್ರಕೃತಿಯ ಅಧೀನ. ಪ್ರಕೃತಿ ಸ್ವತಃ ಚೇತನವಾದದ್ದು. ಸರ್ವಶಕ್ತಿ ಸಮನ್ವಿತವಾದದ್ದು."- ಎನ್ನುವ ಈ ಭೌತಿಕ ವಾದವನ್ನು ಗೀತೆ ಸಮ್ಮತಿಸದು. ಆ ಪ್ರಕೃತಿ, ಪುರುಷನಿಗೆ ಅಧೀನವಾಗಿರುವುದೆಂದು, ಸ್ವತಃ ಅದು ಜಡವಾಗಿದ್ದು ಪುರುಷನಿಂದ ಚೈತನ್ಯವನ್ನು ಪಡೆದು ಕಾರ್ಯದಲ್ಲಿ ಪ್ರವೃತ್ತಿಗೊಳ್ಳು ತ್ತದೆನ್ನುವುದು ಗೀತೆಯ ಅಭಿಪ್ರಾಯ.

**ಮಾಯಾಧ್ಯಕ್ಷೇಣ ಪ್ರಕೃತಿಃ ಸೂಯತೇ ಸಚರಾಚರಮ್** (೯-೧೦)

ಚೈತನ್ಯವಂತನಾದ ಪರಮಾತ್ಮನ ಸಾನ್ನಿಧ್ಯದಿಂದ, ಪ್ರಕೃತಿ ಮತ್ತು ಈ ಸ್ಥಾವರ ಜಂಗಮಾತ್ಮಕವಾದ ಸಮಸ್ತ ಪ್ರಪಂಚ ಉತ್ಪನ್ನವಾಗುತ್ತದೆ. ಈ ಜಗತ್ತೆಂಬ ಸಭೆಗೆ ಭಗವಂತನು ಅಧ್ಯಕ್ಷ (Chairman), ಪ್ರಕೃತಿ ಸಂಚಾಲಕ (Convenor). ಅಧ್ಯಕ್ಷನಿಲ್ಲದಿದ್ದರೆ ಬೇರೆಯವರೆಲ್ಲರಿದ್ದರು ಸಭೆಯು ಹೇಗೆ ನಿಸ್ತೇಜನವಾಗಿರುತ್ತದೋ, ಸಭೆಗೆ ರೂಪವೇ ಹೇಗಿರುವುದಿಲ್ಲವೋ, ಜಗದ್ವಿಷಯವೂ ಹಾಗೆ ಎಂದು ತಿಳಿಯಬೇಕು. ಪರಮಾತ್ಮನು ಪ್ರಕೃತಿಗೆ ಆಧಾರಭೂತನು. ಆಧಾರವಿಲ್ಲದೆ ಆಧೇಯವು ನಿಲ್ಲದು. **'ಸೂತ್ರೇ ಮಣಿಗಣಾ ಇವ'** ಎಂದಹಾಗೆ ಈ ಬ್ರಹ್ಮಾಂಡವೆನ್ನುವ ಮಣಿಹಾರದಲ್ಲಿ ದಾರದಂತೆ ಆಧಾರಭೂತವಾಗಿ ಪರಮಾತ್ಮ ವ್ಯಾಪಿಸಿದ್ದಾನೆ. ದಾರವೇ ಇಲ್ಲದಿದ್ದರೆ ಮಣಿಗಳು ಹೇಗೆ ಚೆಲ್ಲಾಪಿಲ್ಲಿಯಾಗಿ ಬಿದ್ದುಹೋಗುವವೋ, ಹಾಗೆ ಪುರುಷನು ಇಲ್ಲದೇ ಇದ್ದಲ್ಲಿ ಪ್ರಕೃತಿಗೆ ಅಸ್ತಿತ್ವವೇ ಇರುವುದಿಲ್ಲ. ಮತ್ತೆ-

**ಕ್ಷೇತ್ರಂ ಕ್ಷೇತ್ರೀ ತಥಾ ಕೃತ್ಸ್ನಂ ಪ್ರಕಾಶಯತಿ ಭಾರತ** (೧೩-೩೪)

'ಓ ಅರ್ಜುನಾ! ಕ್ಷೇತ್ರಜ್ಞನಾದ ಪರಮಾತ್ಮ ಸಮಸ್ತ ಕ್ಷೇತ್ರವನ್ನು (ಪ್ರಕೃತಿಯನ್ನು) ಪ್ರಕಾಶಿಸುತ್ತಿದ್ದಾನೆ.! ಇದರಿಂದ ಪ್ರಕೃತಿ ಇಲ್ಲದೆ ಕ್ಷೇತ್ರವು ಜಡವಾದದ್ದೆಂದು, ಅದಕ್ಕೆ ಸ್ವತಃ ಪ್ರಕಾಶವಿಲ್ಲವೆಂದು, ಕ್ಷೇತ್ರಜ್ಞನಾದ ಪುರುಷನೇ ಕ್ಷೇತ್ರವಾದ ಆ ಪ್ರಕೃತಿಯನ್ನು ಪ್ರಕಾಶಿಸುತ್ತಿದ್ದಾನೆ ಎಂದು ತಿಳಿದು ಬರುತ್ತದೆ. ಈ ವಿಧವಾಗಿ ಪ್ರಕೃತಿ ಸ್ವತಃ ತನ್ನ ಶಕ್ತಿಯಿಂದ ಕಾರ್ಯಗಳನ್ನು ನಡೆಸುತ್ತದೆ ಎನ್ನುವ ಭೌತಿಕವಾದವನ್ನು ಗೀತೆ ವಿರೋಧಿಸುತ್ತದೆ.

ಮತ್ತೆ ಪಂಚಭೂತಗಳು ಅಸ್ಥಿರ, ಚಪಲ, ನಶ್ವರ ಮತ್ತು ವಿಕಾರವಾದವು ಗಳಾಗಿವೆ. ಇವುಗಳನ್ನು ನಂಬಿಕೊಂಡರೆ ಜೀವಿಗೆ ಪತನವು ಶತಸ್ಸಿದ್ಧ. ಅಸ್ಥಿರವಾಗಿರುವ ಕಂಭವನ್ನು ಹಿಡಿದುಕೊಂಡು ಅದರ ಸುತ್ತ ತಿರುಗುತ್ತಿರುವವನು ಕಂಭದ ಜೊತೆ ತಾನೂ ಸಹ ಬಿದ್ದು ಹೋಗುತ್ತಾನಲ್ಲವೇ! ಪ್ರಪಂಚದಲ್ಲಿ ಸ್ಥಿರವಾಗಿ ಇರುವ ವಸ್ತುವು ಒಂದೇ. ಅದೇ ಪರಮಾತ್ಮ **'ಅಚಲೋಽಯಂ ಸನಾತನಃ'** ಎಂದು ಗೀತೆ ಪರಮಾತ್ಮನನ್ನು ಕುರಿತು ಹೇಳುತ್ತದೆ. ಅದು ಸರ್ವಸಾಕ್ಷಿ. ಆ ವಸ್ತುವನ್ನು ನಂಬಿದವನಿಗೆ ಇನ್ನು ಪತನದ ಭಯವಿಲ್ಲ. ಭೌತಿಕ ವಸ್ತು ಜಾಲವನ್ನು ನಂಬಿದವರು ತಪ್ಪದೆ ಏಟು ತಿನ್ನುವರು, ಇಲ್ಲಿಯವರೆಗೆ ಎಷ್ಟೋ ಜನರು ಹಾಗೆ ಪತನಗೊಂಡಿದ್ದಾರೆ. ಬಿಸಿಲ್ಗುದುರೆಗಳ ಹಿಂದೆ ಓಡುವವರು, ಪ್ರತಿಬಿಂಬಿತವಾದ ಪದಾರ್ಥವನ್ನು ತಿನ್ನಬೇಕೆನ್ನುವವರು ತಪ್ಪದೆ

ಆಶಾಭಂಗದ ಪಾಲಾಗುತ್ತಾರೆ. ಆದ್ದರಿಂದ ಪ್ರಕೃತಿಯನ್ನು ನಂಬದೆ ಪುರುಷನನ್ನೇ ನಂಬಿ ಆಧ್ಯಾತ್ಮದೃಷ್ಟಿಹೊಂದಿ ಜನ್ಮಸಾರ್ಥಕತೆ ಹೊಂದಬೇಕೆನ್ನುವುದು ಗೀತೆಯ ಆಶೆ. "ನನ್ನಿಂದಲ್ಲೇ ಎಲ್ಲವೂ ನಡೆಯುತ್ತಿದೆ (ಮತ್ತಃ ಸರ್ವಂ ಪ್ರವರ್ತತೆ), ನಾನು ಜಗತ್ತಿಗೆ ತಂದೆ, ತಾಯಿ, ತಾತ, ವಿಧಾತ (ಪಿತಾಹಮಸ್ಯ ಜಗತೋ ಮಾತಾ ಧಾತಾಪಿತಾಮಹಃ). ಆದ್ದರಿಂದ ಇತರರನ್ನು ಆಶ್ರಯಿಸದೆ, ಭೌತಿಕವನ್ನು ಹಿಡಿದುಕೊಂಡು ಓಲಾಡದೆ ಅಧ್ಯಾತ್ಮರೂಪನಾದ ನನ್ನನ್ನೇ ಆಶ್ರಯಿಸು (ಮಾಮೇಕಂ ಶರಣಂ ವ್ರಜ)" ಎಂದು ಭಗವಂತನು ಗೀತೆಯಲ್ಲಿ ಕರುಣೆಯಿಂದ ಅನೇಕ ಕಡೆ ಬೋಧಿಸಿದ್ದಾನೆ. ಸಂಸಾರ ದುಃಖದಿಂದ ವಿಮುಕ್ತನಾಗಬೇಕೆಂದು ಅಪೇಕ್ಷಿಸುವ ಮುಮುಕ್ಷುವು ಭೌತಿಕವಾದಕ್ಕೆ ತಿಲಾಂಜಲಿ ಅರ್ಪಿಸಿ ಅಧ್ಯಾತ್ಮವಾದವನ್ನು ಪ್ರೋತ್ಸಾಹಿಸಿ ಹೃದಯಸ್ಥ ಪರಮಾತ್ಮನನ್ನು ಸಾಕ್ಷಾತ್ಕರಿಸಿಕೊಂಡು ಪರಮಾನಂದವನ್ನು ಅನುಭವಿಸುವಂತಾಗಬೇಕು!

### ೫. ದೇಹವನ್ನು ಶೋಷಿಸುವ ತಪಸ್ಸು

ಮೋಕ್ಷಕ್ಕೆ ಪ್ರತಿಬಂಧಕಗಳು ಚಿತ್ತದಲ್ಲಿಯ ದುಷ್ಟವಾಸನೆ, ದುಷ್ಟಸಂಕಲ್ಪಗಳು, ದುಸ್ಸಂಸ್ಕಾರಗಳೇ ಹೊರತು ದೇಹವಲ್ಲ. ದೇಹವು ಏನೂ ತಿಳಿಯದ ಜಡ. ಅದನ್ನು ಬಾಧಿಸುವುದರಿಂದ ಮೋಕ್ಷವೊದಗುತ್ತದೆಂದು ತಿಳಿಯುವುದು ಒಂದು ಭ್ರಮೆ. ಹುತ್ತವನ್ನು ಬಡಿಯುವುದರಿಂದ ಹಾವು ಸಾಯುವುದಿಲ್ಲ. ಜನ್ಮಜನ್ಮಾಂತರಗಳಿಂದ ಹೃದಯದಲ್ಲಿ ಚೆನ್ನಾಗಿ ಮನೆಮಾಡಿಕೊಂಡಿರುವ ಕಾಮಕ್ರೋಧಾದಿಗಳು ದೇಹಶೋಷಣೆ ಮಾತ್ರದಿಂದ ಎಂದೆಂದಿಗೂ ಮಾಯವಾಗವು. ಆದ್ದರಿಂದ ಮಹನೀಯರು ತಮ್ಮ ಚಿತ್ತವನ್ನು, ಇಂದ್ರಿಯಗಳನ್ನು ಪುಟಕ್ಕೆ ಹಾಕಿ, ತಪಸ್ಸನ್ನಾಚರಿಸಿ, ಸಂಯಮವನ್ನು ಅಭ್ಯಸಿಸಿ, ಅವುಗಳಲ್ಲಿಯ ರಾಗದ್ವೇಷ ಕಷಾಯವನ್ನು, ಮಾಲಿನ್ಯವನ್ನು ದೂರೀಕೃತಗೊಳಿಸುವರು. ಇದನ್ನೇ ವಾಸ್ತವವಾಗಿ ತಪಸ್ಸು ಎಂದು ಕರೆಯುತ್ತೇವೆ. ದೇಹವನ್ನು ಶೋಷಿಸುವುದು ತಪಸ್ಸಲ್ಲ. ಇದರ ಬಗ್ಗೆ ಶ್ರೀಕೃಷ್ಣ ಪರಮಾತ್ಮನು ಗೀತೆಯ ೧೭ನೆಯ ಅಧ್ಯಾಯದಲ್ಲಿ ಚೆನ್ನಾಗಿ ಎಚ್ಚರಿಕೆ ಕೊಟ್ಟಿದ್ದಾನೆ.* ಹಾಗೆ ಅಶಾಸ್ತ್ರೀಯವಾಗಿ ಘೋರ ತಪಸ್ಸುಗಳನ್ನು ಮಾಡಿ ಶರೀರಕ್ಕೆ ಬಾಧೆ ಕೊಡುವವರು ಅಸುರರು ಎಂದು ಮೂದಲಿಸಲ್ಪಟ್ಟಿದ್ದಾರೆ. ಅವುಗಳ ಬದಲು ಆ ಅಧ್ಯಾಯದಲ್ಲೇ ಗೀತಾಚಾರ್ಯನು ತ್ರಿವಿಧತಪಸ್ಸುಗಳನ್ನು ಸುಂದರವಾಗಿ ವರ್ಣಿಸಿದ್ದಾನೆ. ಅವು ಪ್ರತಿಯೊಬ್ಬರಿಗೂ ಆಚರಣೆಯೋಗ್ಯವಾದುವು. ಆದರೆ ದೇಹಾ ರೋಗ್ಯದ ದೃಷ್ಟಿಯಿಂದ ಆಗಾಗ್ಗೆ ಏಕಾದಶಿ ಮೊದಲಾದ ಪರ್ವದಿನಗಳಂದು ಉಪವಾಸ ಮುಂತಾದುವುಗಳನ್ನು ಆಚರಿಸಬಹುದು. ಅಷ್ಟೇ ಅಲ್ಲದೆ ಕಠೋರ ತಪಸ್ಸುಗಳಿಂದ ಶರೀರವನ್ನು ಬಾಧಿಸುವುದರಿಂದ ಉಂಟಾಗುವ ಪ್ರಯೋಜನವು ಏನೂ ಇಲ್ಲ. ಆದ್ದರಿಂದ ಅಂಥಹವುಗಳನ್ನು ಆಶ್ರಯಿಸದೆ, ಶ್ರೀಕೃಷ್ಣಪರಮಾತ್ಮನು ಗೀತೆಯಲ್ಲಿ ಸೂಚಿಸಿದ ಸಾತ್ವಿಕತಪಸ್ಸನ್ನು ಮಾತ್ರ ಮಾಡಿ ಮುಮುಕ್ಷುಗಳು ಪರಮಾರ್ಥ ಸಿದ್ಧಿಗಾಗಿ ಪ್ರಯತ್ನಿಸಬೇಕು.

### ೬. ಮಿಥ್ಯಾಚಾರ

ಕೆಲವರು ಕರ್ಮೇಂದ್ರಿಯಗಳಿಂದ ಯಾವ ಕರ್ಮಗಳನ್ನು ಮಾಡದೆ ಸುಮ್ಮನೆ ಕುಳಿತಿದ್ದು ಮನಸ್ಸಿನಲ್ಲಿ ಮಾತ್ರ ಮೂರು ಲೋಕಗಳ ಸಮಾಚಾರವನ್ನು ಮೆಲುಕು ಹಾಕುವರು. ಅಂಥಹವರು ಶರೀರೇಂದ್ರಿಯಗಳಿಂದ ಕರ್ಮ ಮಾಡದೇ ಹೋದರೂ ಮನಸ್ಸಿನಲ್ಲಿ ವಿಪುಲವಾಗಿ ಕರ್ಮವನ್ನಾಚರಿಸುತ್ತಾರಾದ್ದರಿಂದ ಕರ್ಮಬದ್ಧರೇ ಆಗುವರು.

**ಕರ್ಮೇಂದ್ರಿಯಾಣಿ ಸಂಯಮ್ಯ ಯ ಆಸ್ತೇ ಮನಸಾ ಸ್ಮರನ್**
**ಇಂದ್ರಿಯಾರ್ಥಾನ್ ವಿಮೂಢಾತ್ಮಾ ಮಿಥ್ಯಾಚಾರಸ್ಸ ಉಚ್ಯತೇ (೩-೬)**

"ಕರ್ಮೇಂದ್ರಿಯಗಳನ್ನು ಹೇಗೋ ಅಣಗಿ ಹಾಕಿ ಯಾರು ಮನಸ್ಸಿನಿಂದ ಶಬ್ದಾದಿ ವಿಷಯಗಳನ್ನು ಚಿಂತಿಸುತ್ತಾರೋ, ಅಂಥಹವರು ವಿವೇಕಶೂನ್ಯರೇ ಆಗುವರು. ಅವರನ್ನು ಮಿಥ್ಯಾಚಾರಿ, ಕಪಟಾಚಾರಿಗಳೆಂದು ಭಗವಂತನು ತರಾಟೆಗೆ ತೆಗೆದುಕೊಂಡಿದ್ದಾನೆ. ಆದ್ದರಿಂದ ಮೊದಲು ಮನಸ್ಸನ್ನು ದಾರಿಗೆ ತರುವುದು ಅತಿ ಮುಖ್ಯವಾದುದು. ವಿಷಯವಾಸನೆಗಳಿಲ್ಲದೆ ಅದನ್ನು ಶುದ್ಧಪಡಿಸಿಕೊಳ್ಳಬೇಕು. ಪ್ರಾಪಂಚಿಕ ಸಂಕಲ್ಪಗಳನ್ನು ಹತ್ತಿರಕ್ಕೆ ಸೇರಿಸಬಾರದು. ಯಾವಾಗ ಮನಸ್ಸು ವಿಷಯಸಂಕಲ್ಪರಹಿತವಾಗಿ, ವಾಸನಾವರ್ಜಿತವಾಗಿರುವುದೋ ಆಗ ಕರ್ಮೇಂದ್ರಿಯಗಳಿಂದ ಕರ್ಮಗಳನ್ನು ಮಾಡಿದರೂ ಮಾನವನು ಬಂಧನಕ್ಕೊಳಗಾಗುವುದಿಲ್ಲ.@ ಆದ್ದರಿಂದ ಸಾಧಕರು ಗೀತಾಚಾರ್ಯನ ಈ ಎಚ್ಚರಿಕೆಯನ್ನು ಕಡುಜಾಗರೂಕತೆಯಿಂದ ಗಮನಿಸಿ ಮಿಥ್ಯಾಚಾರವನ್ನು ಬಿಟ್ಟು ಧ್ಯಾನಕಾಲದಲ್ಲಿ ಮನಸ್ಸಿನಲ್ಲಿ ಯಾವ ವಿಧವಾದ ವಿಷಯಸಂಕಲ್ಪಗಳನ್ನೂ ಹೊಂದಿರದೆ ದೈವಭಾವನೆ ಮಾತ್ರ ಇರುವಂತೆ ಪ್ರವರ್ತಿಸಬೇಕು. ಆದರೆ ಪ್ರಾರಂಭದಲ್ಲಿ ಅಂಥಹ ಸ್ಥಿತಿ ಸುಲಭವಾಗಿ ಲಭ್ಯವಾಗದಿದ್ದರೂ ಬಹುಕಾಲಾಭ್ಯಾಸದಿಂದ ಅದನ್ನು ಸಾಧಿಸಬಹುದು. ಕೇವಲ ಕರ್ಮೇಂದ್ರಿಯಗಳನ್ನು ಮಾತ್ರ ಹತೋಟಿಯಲ್ಲಿಟ್ಟುಕೊಳ್ಳುವುದರಿಂದ ವಿಶೇಷ ಪ್ರಯೋಜನವೇನೂ ಇಲ್ಲ. ಮನಸ್ಸನ್ನು ಹತೋಟಿಯಲ್ಲಿಡಬೇಕು.

---

* ೧. ಅಶಾಸ್ತ್ರವಿಹಿತಂ ಘೋರಂ ತಪ್ಯಸ್ತೇ ಯೇ ತಪೋ ಜನಾಃ। ದಂಭಾಹಂಕಾರ ಸಂಯುಕ್ತಾಃ ಕಾಮರಾಗಬಲಾನ್ವಿತಾಃ।। (೧೭-೫)

೨. ಕರ್ಶಯನ್ತಃ ಶರೀರಸ್ಥಂ ಭೂತಗ್ರಾಮಮಚೇತಸಃ। ಮಾಂ ಚೈವಾಂತಃ ಶರೀರಸ್ಥಂ ತಾನ್ವಿದ್ಧ್ಯಾಸುರ ನಿಶ್ಚಯಾನ್ (೧೭-೬)

@ ಯಸ್ತ್ವಿಂದ್ರಿಯಾಣಿ ಮನಸಾ ನಿಯಮ್ಯಾರಭತೇಽರ್ಜುನ। ಕರ್ಮೇಂದ್ರಿಯೈಃ ಕರ್ಮಯೋಗಮಸಕ್ತಸ್ಸ ವಿಶಿಷ್ಯತೇ (೩-೭)

# ಗೀತಾಭ್ಯಾಸಿಗೆ ಉದಯಿಸುವ ಕೆಲ ಪ್ರಶ್ನೆಗಳು

೧. ಪ್ರಶ್ನೆ :

ಅಷ್ಟು ಸ್ವಲ್ಪಕಾಲದಲ್ಲಿ ಇಂಥಹ ಬೃಹತ್ ಗೀತೆಯನ್ನು ಶ್ರೀಕೃಷ್ಣನು ಹೇಗೆ ಹೇಳಲು ಸಾಧ್ಯವಾಯಿತು?

ಉತ್ತರ : ೧) ವಾಸ್ತವವಾಗಿ ವಿಚಾರಿಸಿದರೆ ಶ್ರೀಕೃಷ್ಣನು ಮಾಡಲಾಗದ ಕೆಲಸ ಏನೂ ಇಲ್ಲ. ಆತ ಅಘಟಿತ ಘಟನಾ ಪ್ರವೀಣ. ಮಾಯಾಧೀಶನು. ತನ್ನ ಯೋಗಮಾಯೆಯಿಂದ ದೊಡ್ಡ ದೊಡ್ಡ ಲೀಲೆಗಳನ್ನು ಪ್ರದರ್ಶಿಸಿ ಲೋಕವನ್ನು ಆಶ್ಚರ್ಯಚಕಿತವನ್ನಾಗಿ ಮಾಡಿದ ಮಹಾನುಭಾವ. ಅಂಥಹವನಿಗೆ ಸ್ವಲ್ಪ ಸಮಯದಲ್ಲಿ ಬೃಹದ್ಬೋಧೆಯನ್ನು ಮಾಡುವುದು ಕಷ್ಟತರವೇನಲ್ಲ.

೨) ಯುದ್ಧ ಸಮಯದಲ್ಲಿ ಭಗವಂತನು ಸೂತ್ರಪ್ರಾಯವಾಗಿ ಕೆಲ ಧರ್ಮಗಳನ್ನು ಬೋಧಿಸಿರಲೂಬಹುದು ನಂತರ, ಅವುಗಳನ್ನು ವೇದವ್ಯಾಸರು ಛಂದೋ ಬದ್ಧವಾಗಿ ವಿಸ್ತಾರ ಗ್ರಂಥರೂಪವಾಗಿ ರೂಪಿಸಿದ್ದಿರಬಹುದು.

೩) ಯುದ್ಧದ ಪ್ರಾರಂಭದ ದಿನ ಉಭಯಪಕ್ಷದ ಸೈನಿಕರು ರಣರಂಗದಲ್ಲಿ ನಿಂತ ತಕ್ಷಣವೇ ಯುದ್ಧವು ಪ್ರಾರಂಭವಾಗಲಿಲ್ಲ. ಕೆಲವು ಸಣ್ಣ ಪುಟ್ಟ ಘಟನೆಗಳು ನಡೆದವು. ಧರ್ಮರಾಜನು ನಡೆಯುತ್ತಾ ಶತ್ರುಸೈನ್ಯದ ಕಡೆ ಸಾಗಿದನು. ಸೋದರರೆಲ್ಲರೂ ಆತನನ್ನು ಅನುಸರಿಸಿದರು. ಆತನು ಭೀಷ್ಮ, ದ್ರೋಣ, ಕೃಪಾಶಲ್ಯರ ಕಡೆಗೆ ಹೋಗಿ ಅವರ ಆಶೀರ್ವಾದವನ್ನು ಪಡೆದು ಬಂದನು. ನಂತರ ಶತ್ರುಪಕ್ಷದವರ್‍ಯಾರಾದರು ಶರಣಾಗತರಾಗಬಯಸಿದರೆ ಅವರಿಗೆ ರಕ್ಷಣೆವೀಯುವೆನೆಂದು ಧರ್ಮರಾಜ ಅಭಯ ಕೊಡಲು ಯುಯುತ್ಸನು ಪಾಂಡವ ಪಕ್ಷದ ಕಡೆ ಬಂದು ಸೇರಿದನು. ಈ ಪ್ರಕಾರವಾಗಿ ಕೆಲವು ಘಟನೆಗಳು ಮಧ್ಯೆ ಸಂಭವಿಸಿವೆಯಾದ್ದರಿಂದ ಯುದ್ಧ ಪ್ರಾರಂಭಕ್ಕೆ ಸ್ವಲ್ಪ ಕಾಲಹಿಡಿದಿದೆ ಎನ್ನುವುದನ್ನು ಊಹಿಸಿಕೊಳ್ಳಬಹುದು. ಅಲ್ಲದೆ ಅದು ಪ್ರಾರಂಭದ ದಿನವಾದ್ದರಿಂದ ಯುದ್ಧ ಸಂಬಂಧದ ಕೆಲವು ವ್ಯವಸ್ಥೆಗಳನ್ನು ನೋಡಿಕೊಳ್ಳಲು ಸ್ವಲ್ಪ ವೇಳೆ ತೆಗೆದುಕೊಂಡಿರಬಹುದು. ಅಂಥಹ ಸಂದರ್ಭದಲ್ಲಿ ಗೀತೋಪದೇಶವಾಗಿದೆಯಾದ್ದರಿಂದ ಅದರಲ್ಲಿ ವೈಪರೀತ್ಯವೇನಿಲ್ಲ.

೪) ಯುದ್ಧನೀತಿಯನ್ನನುಸರಿಸಿ ಪ್ರತಿಯೊಬ್ಬರು ಸಂಗ್ರಾಮದಲ್ಲಿ ಅನುಸರಿಸಬೇಕಾದ ಕೆಲವು ಧರ್ಮಸೂತ್ರಗಳು ಇರುತ್ತವೆ. ಅದರಲ್ಲಿ ಒಂದು- "ಶತ್ರು ಪಕ್ಷದಲ್ಲಿ ಯಾರಾದರೂ ನಿರಾಯುಧರಾಗಿ, ಶೋಕ ಸಂತಪ್ತರಾಗಿದ್ದರೆ ಅವರ ಮೇಲೆ ಶಸ್ತ್ರ ಪ್ರಯೋಗ ಸಲ್ಲ." ಉಭಯಪಕ್ಷಗಳಲ್ಲಿ ಯುದ್ಧ ನೀತಿಯನ್ನು ಗೌರವಿಸುವ ಅನೇಕ ಮಹಾನುಭಾವರಿದ್ದರು. ಅರ್ಜುನನು ಯುದ್ಧಾರಂಭ ಸಮಯದಲ್ಲಿ ಬಿಲ್ಲುಬಾಣಗಳನ್ನು ತ್ಯಜಿಸಿ, ಶೋಕಸಂವಿಗ್ನ ಮಾನಸನಾದನು. ಪಾಂಡವಪಕ್ಷದಲ್ಲಿ ಅರ್ಜುನನಿಗೆ ವಿಶೇಷ ಸ್ಥಾನವಿದ್ದು, ಅಂಥಹವನು ನಿರಸ್ತ್ರನಾಗಿದ್ದಾಗ ಎದುರಿನವರು ಯುದ್ಧವನ್ನು ಹೇಗೆ ಪ್ರಾರಂಭಿಸುವರು? ಆದ್ದರಿಂದ ಅವರು ಸ್ವಲ್ಪ ಕಾದು, ಶ್ರೀಕೃಷ್ಣನ ದಿವ್ಯಬೋಧೆಯಿಂದ ಅರ್ಜುನನು ಮರುಕಳಿಸಿಕೊಂಡು ಧನುರ್ಧರನಾಗಿ ರಂಗದಲ್ಲಿ ನಿಂತನಂತರ ಯುದ್ಧವನ್ನು ಉಪಕ್ರಮಿಸಿರಬಹುದು.

ಈ ಮೇಲೆ ಹೇಳಿದ ಕಾರಣಗಳಿಂದ ರಣಕ್ಷೇತ್ರದಲ್ಲಿ ಗೀತಾಬೋಧೆ ಸಂಭವಿಸಿರುವುದು ಅಸಮಂಜಸವೇನಲ್ಲ ಎಂದು ಸ್ಪಷ್ಟವಾಗುತ್ತದೆ.

೨. ಪ್ರಶ್ನೆ :

ಕೃಷ್ಣನು ಹಾಗೂ ಅರ್ಜುನನು ಚಿಕ್ಕ ವಯಸ್ಸಿನಿಂದ ಜೊತೆಯಲ್ಲಿ ಇದ್ದವರು. ಬೇರೆ ಯಾವುದೇ ಪ್ರಶಾಂತವಾದ ಸಂದರ್ಭದಲ್ಲಿ ಗೀತೆಯನ್ನು ಬೋಧಿಸದೆ, ಗಡಿಬಿಡಿಯಾಗಿದ್ದ ಯುದ್ಧರಂಗದಲ್ಲೇ ಶ್ರೀಕೃಷ್ಣನು ಅದನ್ನು ಏಕೆ ಬೋಧಿಸಿದನು?

ಉತ್ತರ :

೧) ನಿರ್ದಿಷ್ಟ ವೇಳೆಯಲ್ಲಿ ನಿರ್ವಹಿಸಿದ ಕಾರ್ಯ ಮಾತ್ರ ಸತ್ಫಲಿತವನ್ನು ಕೊಡುವುದು. ಈ ಸೂತ್ರ ಪರಮಾರ್ಥರಂಗಕ್ಕೆ ಇನ್ನೂ ಚೆನ್ನಾಗಿ ಅನ್ವಯಿಸುತ್ತದೆ. ಕಬ್ಬಿಣ ಚೆನ್ನಾಗಿ ಕಾದಿದ್ದಾಗ ಮಾತ್ರ ಕಮ್ಮಾರನು ಅದನ್ನು ಬಗ್ಗಿಸಲು ಪ್ರಯತ್ನ ಮಾಡುವನು. ಬುನಾದಿ ಚೆನ್ನಾಗಿ ಗಟ್ಟಿಯಾದ ನಂತರವೇ ಯಜಮಾನ ಅದರ ಮೇಲೆ ಗೃಹವನ್ನು ನಿರ್ಮಿಸುವನು. ರೋಗವುಂಟಾದಾಗಲೇ ವೈದ್ಯನು ಔಷಧವನ್ನು ಪ್ರಯೋಗಿಸುತ್ತಾನೆ. ಹೊಲವನ್ನು ಉತ್ತನಂತರ ಮಾತ್ರ ರೈತನು ಬಿತ್ತುವನು. ಹಾಗೆ ಅರ್ಜುನನ ಹೃದಯ ರಣರಂಗದಲ್ಲಿ ವೈರಾಗ್ಯ ಪ್ರಪೂರಿತವನ್ನು ಗ್ರಹಿಸಿ ಶ್ರೀಕೃಷ್ಣನು "ಇದೇ ಜ್ಞಾನ ಬೋಧೆಗೆ ಸರಿಯಾದ ವೇಳೆ" ಎಂದು ನಿಶ್ಚಯಿಸಿ ತಕ್ಷಣ ತತ್ವೋಪದೇಶವನ್ನು ಉಪಕ್ರಮಿಸಿದನು. ಅಂಥಹ ಸ್ಥಿತಿ ಅರ್ಜುನನಿಗೆ ಈವರೆವಿಗೆ ಯಾವಾಗಲೂ ಏರ್ಪಟ್ಟಿರಲಿಲ್ಲ. ಯುದ್ಧಕ್ಷೇತ್ರದಲ್ಲಿ ಅರ್ಜುನನು 'ಧರ್ಮಸಮ್ಮೂಢಚೇತಸ್ಸನಾಗಿ' ಕರ್ತವ್ಯಾಕರ್ತವ್ಯಗಳು ತಿಳಿಯದೆ ಜ್ಞಾನಬೋಧೆಗಾಗಿ ಪರಿತಪಿಸಿದನು. ಅಂಥಹ ತೀವ್ರ ಪರಿತಾಪ, ತೀವ್ರ ಧರ್ಮ ಜಿಜ್ಞಾಸೆ, ಜ್ಞಾನಾಕಾಂಕ್ಷೆ ಇದುವರೆವಿಗೆ ಆತನಿಗೆ ಯಾವಾಗಲೂ ಉಂಟಾಗಿರಲಿಲ್ಲ. ಆದ್ದರಿಂದಲೇ ಶ್ರೀಕೃಷ್ಣನು ಆತನ ಜೋಲಿಗೆ ಹೋಗಿರಲಿಲ್ಲ. ಈಗಲಾದರೋ ರಣರಂಗದಲ್ಲಿ ಪ್ರವೇಶಿಸುತ್ತಲೇ ಅಂತಹ ಜ್ಞಾನದಾಹ ಉಂಟಾಗಿದೆ. ಆದ್ದರಿಂದ ಕೂಡಲೇ ಶ್ರೀಕೃಷ್ಣಪರಮಾತ್ಮ ಜ್ಞಾನಾಮೃತವರ್ಷದ ಮಳೆಗರೆದನು.

೨) ಮತ್ತೆ, ಜೀವನ ಒಂದು ಯುದ್ಧರಂಗ. ಪ್ರತಿದಿನವೂ ಧರ್ಮಾಧರ್ಮ ಗಳಿಗೆ, ಸತ್ಯಾಸತ್ಯತೆಗಳಿಗೆ, ನ್ಯಾಯಾನ್ಯಾಯಗಳಿಗೆ ಭೀಕರವಾದ ಕಲಹ ಮಾನವನ ಚಿತ್ತಾಂತರಾಳದಲ್ಲಿ ನಡೆಯುತ್ತಲೇ ಇರುತ್ತದೆ. ಅಂಥಹ ಒಂದು ಯುದ್ಧದ ಪ್ರತಿರೂಪವೇ ಪಾಂಡವ ಕೌರವರ ಯುದ್ಧ. ಪಾಂಡವರು ಸದ್ಗುಣವಂತರು. ಕೌರವರು ದುರ್ಗುಣವಂತರು. ಶ್ರೀಕೃಷ್ಣಮೂರ್ತಿ ಸದ್ಗುಣಗಳೊಡನೆ ಸೇರಿ ಅವುಗಳನ್ನು ಪ್ರೋತ್ಸಾಹಿಸಿ, ದುರ್ಗುಣಗಳ ಮೇಲೆ, ರಾಕ್ಷಸ ಸ್ವಭಾವಗಳ

ಮೇಲೆ ವಿಜಯವನ್ನು ಹೊಂದುವಂತೆ ಮಾಡಿದನು. ಹಾಗೆಯೇ ಪ್ರತಿಜೀವಿಯು ಪರಮಾತ್ಮನನ್ನಾಶ್ರಯಿಸಿ, ದುಃಸಂಸ್ಕಾರಗಳನ್ನು ಹೊಡೆದೋಡಿಸಿ, ಹೃದಯವನ್ನು ಧರ್ಮಮಯವಾಗಿಸಿಕೊಂಡು ಪರಮಾನಂದವನ್ನು ಅನುಭವಿಸಬೇಕೆಂದು ಜನರಿಗೆ ಬೋಧಿಸುವ ಸಲುವಾಗಿ ಆ ಸ್ಥೂಲಸಂಗ್ರಾಮವನ್ನು ಗೀತಾ ಬೋಧೆಗೆ ಕ್ಷೇತ್ರವಾಗಿ ಆರಿಸಿಕೊಂಡಿರಬಹುದು.

**೩. ಪ್ರಶ್ನೆ:**

ಭೀಷ್ಮ, ದ್ರೋಣ, ಕೃಪ, ಶಲ್ಯ, ಧರ್ಮರಾಜ, ಭೀಮ, ಕರ್ಣ ಮೊದಲಾದ ಉದ್ದಂಡ ವೀರರಿದ್ದರೂ ಅರ್ಜುನನಿಗೆ ಮಾತ್ರ ಶ್ರೀಕೃಷ್ಣ ಗೀತೆಯನ್ನೇಕೆ ಬೋಧಿಸಿದನು?

**ಉತ್ತರ :**

ಅರ್ಜುನನು ಸಾಮಾನ್ಯನಲ್ಲ, ನರನಾರಾಯಣರಲ್ಲಿ ಒಬ್ಬನು. ನಾರಾಯಣನು ಶ್ರೀಕೃಷ್ಣನ ರೂಪವನ್ನು ಧರಿಸಿ, ನರನು ಪಾರ್ಥನ ರೂಪವನ್ನು ಧರಿಸಿ ಜನ್ಮಿಸಿದರು. **'ಪಾಂಡವಾನಾಂ ಧನಂಜಯಃ'**- 'ಪಾಂಡವರಲ್ಲಿ ಅರ್ಜುನನು ನಾನು' ಎಂದು ಭಗವಂತನು ಗೀತೆಯಲ್ಲಿ ಹೇಳಿಯೇ ಇದ್ದಾನಲ್ಲವೇ! ಇದರಿಂದ ಅರ್ಜುನನು ಎಂಥಹ ಶಕ್ತಿಸಂಪನ್ನನೆನ್ನುವುದು ತಿಳಿದುಬರುತ್ತದೆ. ಒಂದಾನೊಂದು ಕಾಲದಲ್ಲಿ ಆತನು ಘೋರವಾದ ತಪಸ್ಸು ಮಾಡಿ, ಶಿವನನ್ನು ಮೆಚ್ಚಿಸಿ ಪಾಶುಪತಾಸ್ತ್ರವನ್ನು ಸಂಪಾದಿಸಿದನು. ಹಾಗೆಯೇ ಅನೇಕ ದೇವತೆಗಳ ಮೆಚ್ಚುಗೆ ಗಳಿಸಿ ಅನೇಕ ವಿಧವಾದ ಅಸ್ತ್ರಶಸ್ತ್ರಾದಿಗಳನ್ನು ಪಡೆದನು. ಉತ್ತರ ಗೋಗ್ರಹಣದ ಸಮಯದಲ್ಲಿ ಒಬ್ಬನೇ ಭೀಷ್ಮಾದಿ ಸಹಿತವಾದ ಯಾವತ್ತೂ ಕೌರವ ಸೈನ್ಯವನ್ನು ಎದುರಿಸಿ ಹಿಮ್ಮೆಟ್ಟಿಸಿ ಪಲಾಯನ ಮಾಡಿಸಿದ್ದು ಅರ್ಜುನನ ಅಪರಿಮಿತವಾದ ಬಲಪರಾಕ್ರಮಗಳಿಗೆ ಒಂದು ನಿದರ್ಶನ. ಇನ್ನು ಶೀಲವನ್ನು ಪರಿಶೀಲಿಸಿದರೆ ಸ್ವರ್ಗದಲ್ಲಿ ಊರ್ವಶಿಯ ಥಳುಕು ಬೆಳಕುಗಳಿಗೆ, ಮಾಯಾಜಾಲಗಳಿಗೆ ಬಗ್ಗದೆ, ಅವಳು ಹಾಕಿದ ಜಾಲಕ್ಕೆ ಸಿಗದೆ ಹೊರಬಿದ್ದ ಚರಿತ್ರಶುದ್ಧಿಯುಳ್ಳ ಮಹನೀಯನು ಆತ. ಮತ್ತೆ ಶ್ರೀಕೃಷ್ಣನಿಗೆ ಬಾಲ್ಯದಿಂದಲೇ ಪ್ರಾಣಸ್ನೇಹಿತ, ಸಖ, ಆದರೆ ಯುದ್ಧಾರಂಭದ ವೇಳೆಯಲ್ಲಿ- **'ಶಿಷ್ಯಸ್ತೇಽಹಂ ಶಾಧಿ ಮಾಂ ತ್ವಾ ಪ್ರಪನ್ನಮ್'**- 'ನಾನು ನಿನ್ನ ಶಿಷ್ಯ, ನಿನ್ನನ್ನೇ ಶರಣು ಹೊಂದಿದ್ದೇನೆ, ಆಜ್ಞಾಪಿಸು' ಎಂದು ಶ್ರೀಕೃಷ್ಣನನ್ನು ಬೇಡಿಕೊಂಡು ಸಖಿತ್ವದೊಡನೆ ಭಕ್ತಿಯನ್ನೂ ಪ್ರದರ್ಶಿಸಿದನು. ಆದ್ದರಿಂದಲೇ ಶ್ರೀಕೃಷ್ಣನು ಆತನನ್ನು **'ಭಕ್ತೋಽಸಿ ಮೇ ಸಖಾಚೇತಿ'** (ನೀನು ನನ್ನ ಸಖನೇ ಅಲ್ಲದೆ ಭಕ್ತನೂ ಹೌದು) ಎಂದು ಹೇಳುವುದು ನಡೆದಿದೆ. 'ನೀನು ಸಖ ಹಾಗೂ ಭಕ್ತನಾಗಿದ್ದರಿಂದಲೇ ನಿನಗೆ ಅತಿ ರಹಸ್ಯವಾದ ಬ್ರಹ್ಮವಿದ್ಯೆಯನ್ನು (ರಹಸ್ಯಂ ಹ್ಯೇತದುತ್ತಮಮ್) ಉಪದೇಶಿಸಿದ್ದೇನೆ' ಎಂದು ಭಗವಂತನು ಹೆಮ್ಮೆಯಿಂದ ಹೇಳಿದ್ದಾನೆ. 'ನೀನು ನನಗೆ ಅತ್ಯಂತ ಪ್ರಿಯನು' (ಪ್ರತಿಜಾನೇ ಪ್ರಿಯೋಽಸಿ ಮೇ; ಇಷ್ಟೋಽಸಿ ಮೇ ದೃಢಮಿತಿ) ಎಂದು ಅನೇಕ ಸ್ಥಳಗಳಲ್ಲಿ ಹೇಳಿದ್ದಾನೆ. ಅರ್ಜುನನ ಭಕ್ತಿಯೇ ಭಗವಂತನ ಪ್ರೇಮಕ್ಕೆ ಕಾರಣ. ಈ ಪ್ರಕಾರವಾಗಿ ಭೌತಿಕ, ಆಧ್ಯಾತ್ಮಿಕ ಬಲಸಂಪನ್ನನಾಗಿ, ಶ್ರೀಕೃಷ್ಣಪರಮಾತ್ಮನ ಆಪ್ತನಾಗಿ, ಅಪರಿಮಿತವಾದ ಯೋಗ್ಯತೆಗಳಿರುವನಾದ್ದರಿಂದ ಭಗವಂತನು ಗೀತೋಪದೇಶವನ್ನು ಆತನಿಗೇ ಪ್ರಸಾದಿಸಿರುವುದು ಸಮಂಜಸವೆಂದು ಹೇಳಬಹುದು.

**೪. ಪ್ರಶ್ನೆ :**

'ಯುದ್ಧಮಾಡು' ಎಂದು ಅರ್ಜುನನಿಗೆ ಬೋಧಿಸಿರುವುದರಿಂದ ಗೀತೆ ಹಿಂಸೆಯನ್ನು ಪ್ರೇರೇಪಿಸಿದಂತಾಗುವುದಿಲ್ಲವೇ?

**ಉತ್ತರ :**

ಇಲ್ಲ, ಗೀತೆ ಯಾವಾಗಲೂ ಹಿಂಸೆಯನ್ನು ಪ್ರೇರೇಪಿಸಿಲ್ಲ. ಮೇಲಾಗಿ ಅಹಿಂಸೆಯನ್ನೇ ಪ್ರೋತ್ಸಾಹಿಸುತ್ತಾ ಬಂದಿದೆ.* ಗೀತೆಯ ಅರ್ಥವನ್ನು ಸರಿಯಾಗಿ ತಿಳಿಯದವನೇ ಇಂಥಹ ವಾಕ್ಯಗಳನ್ನು ಹೇಳುವನು. 'ಯುದ್ಧಮಾಡೆಂದು' ಏಕೆ ಹೇಳಬೇಕಾಗಿ ಬಂದಿದೆ, ಯಾರಿಗೆ ಹೇಳಬೇಕಾಗಿ ಬಂದಿದೆ, ಯಾವ ಪರಿಸ್ಥಿತಿಯಲ್ಲಿ ಹೇಳಬೇಕಾಗಿ ಬಂದಿದೆ, ಎಲ್ಲವನ್ನೂ ಸರಿಯಾಗಿ ವಿಚಾರಿಸಿ ನೋಡಿದರೆ ಅಲ್ಲಿ ವಿಮರ್ಶೆಗೆ ಎಡೆ ಇಲ್ಲ. ಅಹಿಂಸಾತತ್ವವನ್ನು ಅತಿಸೂಕ್ಷ್ಮವಾಗಿ ತಿಳಿದುಕೊಳ್ಳಬೇಕಾಗಿದೆ. ಅರ್ಜುನನು ಕ್ಷತ್ರಿಯ, ರಾಜ. ರಾಜ್ಯಪಾಲನೆಯು ಆತನ ವಿಧ್ಯುಕ್ತ ಧರ್ಮ. ದುಷ್ಟಶಿಕ್ಷಣ, ಶಿಷ್ಟರಕ್ಷಣ ಆತನ ಕರ್ತವ್ಯ. ಅದರ ಮೂಲಕ ಧರ್ಮವನ್ನು, ಶಾಂತಿಭದ್ರತೆಗಳನ್ನು ಲೋಕದಲ್ಲಿ ಸ್ಥಾಪಿಸಬೇಕಾಗುತ್ತದೆ. ಶ್ರೀಕೃಷ್ಣನ ಅವತಾರವು ಅದಕ್ಕೋಸ್ಕರವಾಗಿಯೇ ಏರ್ಪಟ್ಟಿದೆಯೆಂದು ಗೀತೆಯಲ್ಲಿ ಸ್ಪಷ್ಟವಾಗಿ ಹೇಳಲ್ಪಟ್ಟಿದೆ.@ ದುಷ್ಕರ್ಮಗಳನ್ನು ಮಾಡುವವರನ್ನು, ಸಂಘವಿದ್ರೋಹಿಗಳನ್ನು, ದೇಶದ್ರೋಹಿಗಳನ್ನು ಮಟ್ಟ ಹಾಕದಿದ್ದರೆ, ಅವರನ್ನು ಶಿಕ್ಷಿಸದಿದ್ದರೆ ದೇಶವು ಸಂಘವು ಅಲ್ಲೋಲಕಲ್ಲೋಲವಾಗಿ, ಅರಾಜಕತೆಯು ಹೆಚ್ಚಾಗಿ, ದುಷ್ಟಶಕ್ತಿಗಳು ವಿಜೃಂಭಿಸಿ, ಜನರೆಲ್ಲರಿಗೂ ಅಶಾಂತಿ, ಹಿಂಸೆಗಳುಂಟಾಗುತ್ತವೆ. ಬೇರು ಹುಳವನ್ನು ಸಕಾಲದಲ್ಲಿ ನಿರ್ಮೂಲನ ಮಾಡದಿದ್ದರೆ ಅನತಿ ಕಾಲದಲ್ಲಿಯೇ ಅದು ಗಿಡವೆಲ್ಲವನ್ನು ಒಣಗಿಸಿ ಬಿಡುವುದು. ಹುಣ್ಣನ್ನು ಶಸ್ತ್ರ ಚಿಕಿತ್ಸೆಯಿಂದ ಸಕಾಲದಲ್ಲಿ ತೆಗೆದುಹಾಕದಿದ್ದರೆ ಅದು ದೊಡ್ಡದಾಗಿ ದೇಹವೆಲ್ಲಾ ವ್ಯಾಪಿಸಿ ಘೋರವಿಪತ್ತನ್ನುಂಟುಮಾಡುತ್ತದೆ. ಅಲ್ಲಿ ಹುಣ್ಣನ್ನು ಕೊಯ್ದು ತೆಗೆದುಹಾಕುವುದು ಹಿಂಸೆಯಲ್ಲ, ಅಹಿಂಸೆಯೇ. ಹಾಗೆಯೇ ಸಂಘವಿದ್ರೋಹಕ ಶಕ್ತಿಗಳು ಸಮಾಜದಲ್ಲಿ ಪ್ರಬಲವಾದಾಗ, ಪರಿಪಾಲಕರು ಅವುಗಳನ್ನು ಗಮನಿಸಿ ತಕ್ಷಣವೇ ಸರಿಯಾದ ಮಾರ್ಗಗಳನ್ನು ಅನುಸರಿಸಿ ಅವುಗಳನ್ನು ನಿಯಂತ್ರಿಸಬೇಕು. ಇಲ್ಲದೇ ಹೋದಲ್ಲಿ ಸಂಘವೆಲ್ಲವೂ ಕೆಟ್ಟು ಹೋಗುತ್ತದೆ. ಕಳ್ಳತನ ಮಾಡಿದವನನ್ನು, ಖೂನಿ ಮಾಡಿದವನನ್ನು ಪೊಲೀಸರು ಹಿಡಿದು ನ್ಯಾಯಾಧೀಶರಿಗೆ ಒಪ್ಪಿಸಿ ಜೈಲುಶಿಕ್ಷೆಯಾಗಲಿ, ಗಲ್ಲಾಗಲಿ ಕೊಡಿಸುವರು. ಇದರಿಂದ ಅವರು ಕಳ್ಳನನ್ನು ಹಿಂಸಿಸಿದಂತೆ ಆಗುತ್ತದೆಯೇ? ಅಂಥಹ ಕಾರ್ಯದಿಂದ ಅವರು ಅಹಿಂಸೆ, ಶಾಂತಿ, ಭದ್ರತೆಗಳನ್ನು ಲೋಕದಲ್ಲಿ ವ್ಯಾಪಿಸುವಂತೆ ಮಾಡುವಲ್ಲಿ ಸಹಾಯಕವಾಗುತ್ತಿದ್ದಾರೆ.

ಹಾಗೆಯೇ ದುರ್ಯೋಧನಾದಿಗಳು ಆತತಾಯಿಗಳಾಗಿ** ಪ್ರವರ್ತಿಸುತ್ತ ಲೋಕಕಂಟಕರಾಗಿ ತಯಾರಾದರು. ಸೋದರರಾದ ಪಾಂಡವರಿಗೆ

---

* ೧. ಅಹಿಂಸಾ ಕ್ಷಾಂತಿರಾರ್ಜವಮ್ (೧೩-೮) ೨) ಅಹಿಂಸಾ ಸತ್ಯಮಕ್ರೋಧಃ (೧೬-೨) ೩. ಅಹಿಂಸಾ ಸಮತಾ ತುಷ್ಟಿಃ (೧೦-೫) ೪. ಬ್ರಹ್ಮಚರ್ಯ ಮಹಿಂಸಾ ಚ (೧೭-೧೪) ೫) ಅದ್ವೇಷ್ಟಾ ಸರ್ವಭೂತಾನಾಂ ಮೈತ್ರಃ ಕರುಣ ಏವಚ.........(೧೨-೧೩)

@ ಪರಿತ್ರಾಣಾಯ ಸಾಧೂನಾಂ ವಿನಾಶಾಯ ಚ ದುಷ್ಕೃತಾಂ। ಧರ್ಮಸಂಸ್ಥಾಪನಾರ್ಥಾಯ ಸಂಭವಾಮಿ ಯುಗೇ ಯುಗೇ।। (೪-೮)

** **ಆತತಾಯಿಃ** ವಿಷವನ್ನು ಇಡುವವನು, ಮನೆ ಸುಡುವವನು, ಸ್ತ್ರೀಯರನ್ನು ಅವಮಾನಿಸುವವನು, ಆಯುಧಗಳಿಂದ ಸಾಯಿಸುವವನು, ಭೂಮಿಯನ್ನು ಕಬಳಿಸುವವನು, ಧನವನ್ನು ಕಳ್ಳತನ ಮಾಡುವವನು.

ನ್ಯಾಯವಾಗಿ ಸಲ್ಲಬೇಕಾಗಿದ್ದ ರಾಜ್ಯದಲ್ಲಿ ಸೂಜಿ ಮೊನೆಯಷ್ಟು ಸ್ಥಳವನ್ನು ಕೂಡ ಕೊಡುವುದಿಲ್ಲವೆಂದರು. ಶ್ರೀಕೃಷ್ಣನು ರಾಯಭಾರಿಯಾಗಿ ಹೋಗಿ ಎಷ್ಟು ಹೇಳಬೇಕೋ ಅಷ್ಟು ಹೇಳಿ ನೋಡಿದನು. ಆದರೆ ಅವರ ಕಠಿಣ ಹೃದಯ ಸ್ವಲ್ಪವೂ ಕರಗಲಿಲ್ಲ. ಇನ್ನು ವಿಧಿಯಿಲ್ಲದೆ ಪಾಂಡವರು ಯುದ್ಧಕ್ಕೆ ಇಳಿಯಬೇಕಾಗಿ ಬಂತು.

ಈ ಪ್ರಕಾರವಾಗಿ ಯುದ್ಧವು ಅನಿವಾರ್ಯವಾಯಿತು. ಲೋಕ ಸಂಗ್ರಹಾರ್ಥವಾಗಿ ರಾಜರು ದುಷ್ಟರನ್ನು ಶಿಕ್ಷಿಸುವುದು ಹಿಂಸೆ ಎಂದೆನ್ನಿಸಿಕೊಳ್ಳುವುದಿಲ್ಲ. ಅದು ಕ್ಷತ್ರಿಯ ಧರ್ಮ. ಅರ್ಜುನ ಕ್ಷತ್ರಿಯ, ಆದ್ದರಿಂದ ಕ್ಷಾತ್ರಧರ್ಮವನ್ನು ಅವನಿಗೆ ಬೋಧಿಸಬೇಕಾಗಿ ಬಂತು. ಹಿಂಸಾಹಿಂಸೆಗಳ ತತ್ವವನ್ನು ವಿಶಾಲವಾದ ದೃಷ್ಟಿಕೋನದಿಂದ ವೀಕ್ಷಿಸಬೇಕೇ ಹೊರತು ಸಂಕುಚಿತ ದೃಷ್ಟಿಯಿಂದಲ್ಲ. ಆಳವಾಗಿ ವಿಚಾರಿಸಬೇಕೇ ಹೊರತು ಮೇಲ್ಮೇಲಲ್ಲ. ಗೀತೆಯಲ್ಲಿ ಹೆಚ್ಚಿಗೆ ಅಹಿಂಸೆಯ ಪ್ರಸ್ತಾಪವಿದೆಯೇ ಆಗಲಿ ಹಿಂಸೆಯದ್ದಲ್ಲ. ಸಮಸ್ತ ಪ್ರಾಣಿಕೋಟಿಯ ಮೇಲೆ ದಯೆಯುಂಟಾಗಿರಬೇಕೆಂದು ಹೇಳಲ್ಪಟ್ಟಿದೆಯೇ ಹೊರತು ದ್ವೇಷವನ್ನು ತೋರಿಸಬೇಕೆಂದಲ್ಲ. ಇಂಥಹ ಅಹಿಂಸಾದೃಷ್ಟಿಯನ್ನು ಹೊಂದಿರುವ ಗೀತಾಚಾರ್ಯನು ಹಿಂಸೆಯನ್ನು ಪ್ರೇರೇಪಿಸಿದನೆನ್ನುವುದು ಕೇವಲ ಹಾಸ್ಯಾಸ್ಪದ, ಕಾರಣವಿಲ್ಲದ್ದು. ಪ್ರತ್ಯೇಕ ಸಮಯದಲ್ಲಿ ಪ್ರತ್ಯೇಕ ಪರಿಸ್ಥಿತಿಯಲ್ಲಿ ಪ್ರತ್ಯೇಕ ವ್ಯಕ್ತಿಗೆ, (ಇಲ್ಲಿ ಕ್ಷತ್ರಿಯನಿಗೆ ಯುದ್ಧದ ಬಗ್ಗೆ) ನಿರ್ದಿಷ್ಟವಾದ ಆದೇಶವನ್ನಿತ್ತ ಘಟನೆ ಇದು. ಅದು ಕರ್ತೃತ್ವರಹಿತವಾಗಿ, ಅಹಂಭಾವ ವರ್ಜಿತವಾಗಿ, ಈಶ್ವರಾರ್ಪಣಬುದ್ಧಿಯಿಂದ, ಫಲಾಫಲಗಳಲ್ಲಿ ಸಮಬುದ್ಧಿ ಹೊಂದಿ ನಿಷ್ಕಾಮವಾಗಿ ಕರ್ಮವನ್ನು ಆಚರಿಸಬೇಕೆಂದು ಪ್ರಬೋಧಿಸಲ್ಪಟ್ಟ ಘಟ್ಟ. ನ್ಯಾಯಾಧಿಕಾರಿ ಚೋರನಿಗೆ ಶಿಕ್ಷೆ ವಿಧಿಸಿದರೆ ಎಷ್ಟು ಹಿಂಸೆ ಮಾಡಿದಂತಾಗುತ್ತದೋ, ಅರ್ಜುನನು ದುಷ್ಟಶಿಕ್ಷಣಕ್ಕಾಗಿ ಯುದ್ಧ ಮಾಡುವುದು ಕೂಡ ಅಷ್ಟೇ ಹಿಂಸೆಯುಳ್ಳದ್ದಾಗಿದೆ! ಅದು ಹಿಂಸೆಯಲ್ಲ. ವಿಶಾಲಭಾವದಿಂದ ಪರಿಶೀಲಿಸಿದರೆ ಅಹಿಂಸೆಯೇ ಆಗಿದೆ. ಆದ್ದರಿಂದ ಗೀತೆ ಅಹಿಂಸೆಯನ್ನು ಪ್ರೋತ್ಸಾಹಿಸುತ್ತದೆಯೇ ಹೊರತು ಹಿಂಸೆಯನ್ನಲ್ಲವೆಂದು ಘಂಟಾಘೋಷವಾಗಿ ಹೇಳಬಹುದು.

# ಗೀತೆ - ಯೋಗವಾಸಿಷ್ಠ

ಇಲ್ಲಿಯವರೆಗೆ ಗೀತಾಭ್ಯಾಸಿಗೆ ಸಹಜವಾಗಿ ಉಂಟಾಗುವ ಸಂಶಯಗಳ ನಿವಾರಣೆಯ ಬಗ್ಗೆ ವಿಚಾರಿಸಲಾಯಿತು. ಇನ್ನು ಆಧ್ಯಾತ್ಮಿಕ ವಾಙ್ಮಯದಲ್ಲಿ ಅತಿವ್ಯಾಪಕವಾಗಿ ಪ್ರಚಾರದಲ್ಲಿರುವ, ಸುಪ್ರಸಿದ್ಧ ಪ್ರಾಮಾಣಿಕ ಗ್ರಂಥಗಳಲ್ಲಿ ಒಂದಾದ, ಅತಿಪುರಾತನವಾದ ಯೋಗವಾಸಿಷ್ಠಕ್ಕೂ ಗೀತೆಗೂ ಇರುವ ಹೋಲಿಕೆಗಳು, ಅವುಗಳ ಸಂಬಂಧವನ್ನು ತಿಳಿದುಕೊಳ್ಳುವುದು ಪಾಠಕರಿಗೆ ಬಹಳ ಅವಶ್ಯಕ ವಾಗಿರುವುದರಿಂದ ಕ್ಲುಪ್ತವಾಗಿ ವಿಚಾರಿಸಲಾಗಿದೆ. ತ್ರೇತಾ ಯುಗದಲ್ಲಿ ಮಹರ್ಷಿ ವಾಲ್ಮೀಕಿ ಮೂವತ್ತೆರಡು ಸಾವಿರ ಶ್ಲೋಕಗಳಿಂದ ಕೂಡಿದ ಯೋಗವಾಸಿಷ್ಠವೆಂಬ ಬೃಹದ್ಗ್ರಂಥವನ್ನು ರಚಿಸಿದನು. ಅದಕ್ಕೂ ಹಾಗೂ ಗೀತೆಗೂ ಈ ಕೆಳಗಿನ ಹೋಲಿಕೆಗಳಿವೆ.

೧. ಗೀತೆಯಲ್ಲಿ ಶ್ರೀಕೃಷ್ಣಮೂರ್ತಿ ಅರ್ಜುನನಿಗೆ ಉಪದೇಶಿಸಿದ ರೀತಿಯಲ್ಲಿ ಯೋಗ ವಾಸಿಷ್ಠದಲ್ಲಿ ಶ್ರೀವಶಿಷ್ಠರು ಶ್ರೀರಾಮಚಂದ್ರನಿಗೆ ತತ್ವೋಪದೇಶವನ್ನು ಮಾಡಿದರು. ಆದ್ದರಿಂದ ಈ ಎರಡೂ ಸಂವಾದ ರೂಪದಲ್ಲಿವೆ.

೨. ಅರ್ಜುನನು ಪ್ರಾಪಂಚಿಕ ಐಶ್ವರ್ಯಗಳ ಮೇಲೆ ವಿರಕ್ತಿ ಹೊಂದಿ ತ್ರೈಲೋಕ್ಯ ಸಾಮ್ರಾಜ್ಯವನ್ನು ಕೂಡ ತೃಣಪ್ರಾಯವೆಣಿಸಿ ಕರ್ತವ್ಯ ವಿಮೂಢನಾಗಿ ರಣರಂಗದಲ್ಲಿದ್ದಾಗ ಶ್ರೀಕೃಷ್ಣಮೂರ್ತಿ ಆತನಿಗೆ ಗೀತಾಧರ್ಮವನ್ನು ಹೇಗೆ ಬೋಧಿಸಿದನೋ ಅದೇರೀತಿ ಹದಿನಾರುವರ್ಷದ ಹರೆಯುವಕ ಶ್ರೀರಾಮ ಚಂದ್ರನು ದೃಶ್ಯ ಪ್ರಪಂಚದ ಅನಿತ್ಯತೆಯನ್ನು ಗ್ರಹಿಸಿ, ಭೋಗವಿಲಾಸಗಳ ಮೇಲೆ ಪೂರ್ಣವಿರಕ್ತಿ ಹೊಂದಿ ಕರ್ತವ್ಯವು ತಿಳಿಯದೆ ಸ್ತಬ್ದಸ್ಥಿತಿಯಲ್ಲಿದ್ದಾಗ ಕುಲಗುರುಗಳಾದ ಶ್ರೀ ವಸಿಷ್ಠರು ಆತನಿಗೆ ಧೈರ್ಯೋತ್ಸಾಹಗಳನ್ನು ಉಂಟುಮಾಡುತ್ತಾ ಯೋಗವಾಸಿಷ್ಠವೆಂಬ ಅಖಂಡ ಪಾರಮಾರ್ಥಿಕ ಬೋಧೆಯನ್ನು ಮಾಡಿದರು.

೩. ಶ್ರೀಕೃಷ್ಣನ ದಿವ್ಯಬೋಧೆಯಿಂದ ಹೇಗೆ ಅರ್ಜುನನು ತನ್ನ ಮೋಹ ನಿದ್ರೆಯಿಂದ ಎಚ್ಚೆತ್ತು ಕಾರ್ಯರಂಗಕ್ಕೆ ಧುಮುಕಿದನೋ ಹಾಗೆಯೇ ಶ್ರೀ ವಸಿಷ್ಠರ ಅಖಂಡಾತ್ಮೋಪದೇಶದಿಂದ ಶ್ರೀರಾಮಚಂದ್ರನು ಶೋಕವಿಮುಕ್ತನಾಗಿ ಅಕರ್ಮಣತ್ವವನ್ನು ಹೊರದೂಡಿ ಕರ್ತವ್ಯ ಪಾಲನೆಯಲ್ಲಿ ತೊಡಗಿದನು.

೪. ಶ್ರೀಯೋಗಾವಾಸಿಷ್ಠವು ತ್ರೇತಾಯುಗಕ್ಕೆ ಸೇರಿದುದು. ಭಗವದ್ಗೀತೆ ದ್ವಾಪರಯುಗದ ಅಂತ್ಯದ್ದು. ಸುಮಾರು ಎರಡು ಯುಗಗಳ ಅಂತರ ಈ ಎರಡಕ್ಕೆ ಇದೆ. ಆದರೂ ಯೋಗ ವಾಸಿಷ್ಠದಲ್ಲಿ ಗೀತೆಯನ್ನು ಕುರಿತ ಪ್ರಸ್ತಾವನೆ ಇದೆ. ಯೋಗವಾಸಿಷ್ಠದ ನಿರ್ವಾಣ ಪ್ರಕರಣದ ಅರ್ಜುನೋ ಪಾಖ್ಯಾನದಲ್ಲಿ ಶ್ರೀಕೃಷ್ಣಾರ್ಜುನರ ಮಧ್ಯೆ ಮುಂದೆ ನಡೆಯಲಿರುವ ಶ್ರೀಭಗವದ್ಗೀತಾ ರೂಪ ಸಂವಾದವೆಲ್ಲವೂ ವಿವರವಾಗಿ ಸೂಚಿಸಲ್ಪಟ್ಟಿದೆ. ಆ ಸಂದರ್ಭದಲ್ಲಿ ಕೆಲಕೆಲವು ಗೀತಾಶ್ಲೋಕಗಳು ಆ ಗ್ರಂಥದಲ್ಲಿ ಉಲ್ಲೇಖಿಸ ಲ್ಪಟ್ಟಿವೆ. ಓಹೋ! ವಸಿಷ್ಠ ಮಹರ್ಷಿಯ ತ್ರಿಕಾಲಜ್ಞಾನವೆಷ್ಟೆಂದು ವರ್ಣಿಸೋಣ! ಮತ್ತೆ ಯೋಗ ವಾಸಿಷ್ಠದಂತಹ ಮಹೋನ್ನತ ಗ್ರಂಥದಲ್ಲಿ ಒಂದು ಉಪಾಖ್ಯಾನವೆಲ್ಲವನ್ನೂ ಗೀತೆಗೆ ಮೀಸಲಾಗಿಟ್ಟಿರುವುದನ್ನು ನೋಡಿದರೆ ಗೀತೆಯ ಮಹಿಮೆಯೆಷ್ಟು ಎನ್ನುವುದು ಸ್ಪಷ್ಟವಾಗುತ್ತದೆ. ಯುಗ ಯುಗಗಳ ಮೊದಲೇ ಅದರ ಖ್ಯಾತಿ ವಿಶ್ವವಿಖ್ಯಾತವಾಗಿದ್ದಂತೆ ಕಾಣುತ್ತದೆ. ಆದ್ದರಿಂದ ಪ್ರಾಚೀನ ಕಾಲದಲ್ಲಿಯೇ ವಶಿಷ್ಠಾದಿ ಮಹರ್ಷಿಗಳ ಹೃದಯ ಪೀಠದಲ್ಲಿ ಸಮಾದರಣೆ ಹೊಂದಿ ರಾಮಚಂದ್ರಾದಿ ಮಹನೀಯರಿಗೆ ಕರ್ತವ್ಯವನ್ನು ಬೋಧಿಸಿದಂತಹ ಗೀತೆಯಂತಹ ಪ್ರಮುಖ ದಿವ್ಯಗ್ರಂಥವನ್ನು ಮುಮುಕ್ಷುಗಳೆಲ್ಲರೂ ಸಮಾಶ್ರಯಿಸಿ ಬಂಧ ವಿಮುಕ್ತರಾಗಿ ಪರಮಾನಂದವನ್ನನುಭವಿಸುವಂತಾಗಲಿ!

# ದೈನಂದಿನ ಜೀವನದಲ್ಲಿ ಗೀತೆ

ಪ್ರಪಂಚದಲ್ಲಿ ಲೆಕ್ಕವಿಲ್ಲದಷ್ಟು ಗ್ರಂಥಗಳು ದಿನದಿನವು ಪ್ರಕಟಿತ ಗೊಳ್ಳುತ್ತವೆ. ಕಾದಂಬರಿಗಳು, ನಾಟಕಗಳು, ಕಥೆಗಳು, ಸಾಹಿತ್ಯ ಗ್ರಂಥಗಳು ಚಾರಿತ್ರಿಕ ವೈಜ್ಞಾನಿಕ ಪರಿಶೋಧನೆಗಳಿಗೆ ಸಂಬಂಧಿಸಿದ ಪುಸ್ತಕಗಳು, ಮುಂತಾದುವು ಎಷ್ಟೋ ಹೊರಬರುತ್ತಿವೆ. ಒಂದು ಸಾರಿ ಓದಿದ ತರುವಾಯ ಅವುಗಳನ್ನು ತೆಗೆದು ಆಕಡೆ ಇಡುತ್ತಾರೆ. ಆದರೆ ಈ ಗ್ರಂಥ ಸರಳಿಯಲ್ಲಿ ಒಂದು ಪುಸ್ತಕವನ್ನು ಮಾತ್ರ ಪ್ರತಿನಿತ್ಯ ಬಿಡದೆ ಉಪಯೋಗಿಸುತ್ತಾರೆ. ಅದೇ ನಿಘಂಟು (Dictionary), ಅದನ್ನು ಯಾರೂ ಬಿಸಾಡಲು ಸಾಧ್ಯವಿಲ್ಲ. ಶ್ರೀ ಭಗವದ್ಗೀತೆ ಜೀವನದ ನಿಘಂಟು. ಪ್ರತಿ ನಿಮಿಷವೂ ಅದರ ಉಪಯೋಗ ಮಾನವನಿಗೆ ಏರ್ಪಡುತ್ತಿದೆ. ವೈದ್ಯರು ಔಷಧದ ಪುಸ್ತಕಗಳನ್ನು ನಿತ್ಯವೂ ತಿರುಗಿಸಿಹಾಕಿದ ಹಾಗೆ, ಭವರೋಗ ಬಂಧಿತನು ಗೀತೆಯನ್ನು ಪ್ರತಿದಿನವೂ ಅಭ್ಯಸಿಸತಕ್ಕದ್ದು. ಏಕೆಂದರೆ ನಿತ್ಯಜೀವನಕ್ಕೆ ಅವಶ್ಯಕವಾದ ಸಾಮಗ್ರಿಗಳು ಅದರಲ್ಲಿವೆ. ದೈನಂದಿನ ಜೀವನದಲ್ಲಿ ಉಪಯೋಗವಿಲ್ಲದಿರುವ ಮತ ಗ್ರಂಥಗಳಿಗೆ ಲೋಕದಲ್ಲಿ ಹೆಚ್ಚಿಗೆ ಬೆಲೆಯಿಲ್ಲ. ಆದರೆ ಭಗವದ್ಗೀತೆ ಅಂಥಹದಲ್ಲ. ಮಾನವನು ತನ್ನ ನಿತ್ಯಜೀವನದಲ್ಲಿ ಅಡಿಗಡಿಗೆ ಎದುರಿಸುತ್ತಿರುವ ಭೌತಿಕ, ನೈತಿಕ, ಆಧ್ಯಾತ್ಮಿಕ ಸಮಸ್ಯೆಗಳೆಲ್ಲವುಗಳಿಗೂ ತಕ್ಕ ಪರಿಷ್ಕಾರ ಮಾರ್ಗವನ್ನು ಗೀತೆ ಸೂಚಿಸುತ್ತದೆ. ಆದ್ದರಿಂದ ಅದು ಮನುಜನ ಜೀವನಯಾತ್ರೆಯಲ್ಲಿ ಅತಿ ಪ್ರಯೋಜನಕರವಾದ ಗ್ರಂಥಗಳಲ್ಲೊಂದು ಎನ್ನುವುದರಲ್ಲಿ ಎಳ್ಳಷ್ಟೂ ಸಂಶಯವಿಲ್ಲ. ಗೀತೆ ಜನಗಳಿಗೆ ಹೇಗೆ ಸಹಾಯವಾಗಬಲ್ಲದು ಎನ್ನುವುದನ್ನು ಸ್ವಲ್ಪ ವಿಚಾರಿಸೋಣ.

## ೧. ಕೋಪ ಬಂದಾಗ:-

ಕೋಪ ಒಂದು ಮಾನಸಿಕ ತರಂಗ. ಅದು ಮೊದಲು ಒಂದು ಚಿಕ್ಕ ಗಾಳಿಯಂತೆ ಆವಿರ್ಭವಿಸಿ ಸುಂಟರಗಾಳಿಯಾಗಿ ನಂತರ ಭೀಕರ ಚಂಡಮಾರುತವಾಗಿ ಜೀವಿಯನ್ನು ಅಧೋಗತಿಗೆ ತಳ್ಳುತ್ತದೆ.

**ಕ್ರೋಧಾದ್ಭವತಿ ಸಂಮೋಹಃ ಸಂಮೋಹಾತ್ಸ್ಮೃತಿವಿಭ್ರಮಃ**
**ಸ್ಮೃತಿಭ್ರಂಶಾದ್ಬುದ್ಧಿನಾಶೋ ಬುದ್ಧಿನಾಶಾತ್ಪ್ರಣಶ್ಯತಿ** (೨-೬೩)

"ಕ್ರೋಧದಿಂದ ಮಾನವನು ತನ್ನನ್ನು ತಾನೇ ಮರೆತು ಹೋಗುವನು. ಅದರಿಂದ ಜ್ಞಾಪಕಶಕ್ತಿ ನಶಿಸುತ್ತದೆ. ತತ್ಫಲಿತವಾಗಿ ಆತನು ಬುದ್ಧಿಯನ್ನು ಕಳೆದುಕೊಳ್ಳುವನು. ಕೊನೆಗೆ ಅಧೋಗತಿಯ ಪಾಲಾಗುವನು ಎಂದು ಗೀತೆ ಕೋಪದ ದುಷ್ಪರಿಣಾಮಗಳನ್ನು ಹೇಳುತ್ತಾ ತಿಳಿಹೇಳಿದೆ. ಈ ಪ್ರಕಾರವಾಗಿ ಮಾನವನನ್ನು ದಾನವನನ್ನಾಗಿ ಮಾಡುವಲ್ಲಿ ಕೋಪವು ಪ್ರಾಮುಖ್ಯವಾದ ಪಾತ್ರವನ್ನು ವಹಿಸುವುದೆಂದೂ ಅದರ ವಿಷಯವಾಗಿ ಕಡುಜಾಗರೂಕರಾಗಿರಬೇಕೆಂದು ಗೀತೆ ಎಚ್ಚರಿಕೆ ಕೊಟ್ಟಿದೆ. ಕೋಪವು ಹೆಂಡದಂಥಹದು(ಸಾರಾಯಿ). ಕೋಪ ಬಂದವನು ಹೆಂಡ ಕುಡಿದವನಂತೆ ಮೈಮರೆತು ಪ್ರವರ್ತಿಸುವನು. ಅವನಿಗೆ ಯುಕ್ತಾಯುಕ್ತ ಜ್ಞಾನವಿರುವುದಿಲ್ಲ. ಆದ್ದರಿಂದಲೇ ಅವರಿಂದ ಲೋಕಕ್ಕೆ ಬಹಳ ಅಪಚಾರಗಳಾಗುತ್ತವೆ. ಕ್ರೋಧವು ರಜೋಗುಣ. ರಜೋಗುಣವುಳ್ಳವನಿಗೆ ಯಾವುದರಲ್ಲಿಯೂ ಶಾಂತಿಸುಖಗಳು ಲಭಿಸುವುದಿಲ್ಲ. 'ರಜಸಸ್ತು ಫಲಂ ದುಃಖಂ' ಎಂದು ಭಗವಂತನು ಹೇಳೇ ಹೇಳಿದ್ದಾನೆ. ಮತ್ತೆ 'ಕ್ರೋಧಃ ಪಾರುಷ್ಯಮೇವ ಚ....... ಪಾರ್ಥ ಸಂಪದ ಮಾಸುರೀಮ್' (೧೬-೪) ಎಂದು ಕ್ರೋಧವನ್ನು ಅಸುರೀಗುಣಗಳ ಪಟ್ಟಿಯಲ್ಲಿ ಸೇರಿಸಿದ್ದಾನೆ. ಇದನ್ನು ಮನಸ್ಸಿನಲ್ಲಿಟ್ಟುಕೊಂಡು ಕೋಪ ಬಂದ ತಕ್ಷಣ ಮೇಲೆ ಹೇಳಿದ ಗೀತಾಶ್ಲೋಕಗಳನ್ನು ಜ್ಞಾಪಕಕ್ಕೆ ತಂದುಕೊಂಡು ಭಗವಂತನ ಎಚ್ಚರಿಕೆಯನ್ನು ಗಮನಿಸಿ ಆ ದುಷ್ಟ ಅತಿಥಿಯು ಒಳ ಸೇರುವುದಕ್ಕಿಂತ ಮೊದಲೇ ಹೃದಯ ಗೃಹದಿಂದ ಪಲಾಯನಗೊಳಿಸಬೇಕು.

## ೨. ಭೋಗ ಸಮುದಾಯದ ಮೇಲೆ ಆಸಕ್ತಿ ಉಂಟಾದಾಗ:

**'ಭೋಗಾ ಭವಮಹಾರೋಗಾಃ'** ಎಂದು ವಶಿಷ್ಠರು ನುಡಿದರು. ಅಂದರೆ ಭೋಗಗಳು ಸಂಸಾರದ ಮಹಾರೋಗಗಳೆಂದರ್ಥ. ಈ ವಾಕ್ಯವನ್ನು ತ್ರೇತಾಯುಗದ ಯೋಗವಾಸಿಷ್ಠದಲ್ಲಿ ಹೇಳಲ್ಪಟ್ಟಿದೆ. ದ್ವಾಪರ ಯುಗದಲ್ಲಿ ಗೀತಾಚಾರ್ಯನಾದ ಶ್ರೀಕೃಷ್ಣನು ಅದನ್ನು ಅನುಮೋದಿಸಿ **'ಭೋಗಾ ದುಃಖ ಯೋನಯ ಏವತೇ'** (೫-೨೨)- ಭೋಗಗಳೇ ದುಃಖಗಳಿಗೆ ಕಾರಣ! ಎಂದು ಆದೇಶಿಸಿದನು. ಅನುಭವಜ್ಞರಾದ ಹಿರಿಯರೆಲ್ಲರೂ ಹೀಗೆಯೇ ಹೇಳುತ್ತಾರೆ. ಶಾಸ್ತ್ರಗಳು, ಉಪನಿಷತ್ತುಗಳು ಈ ವಿಧವಾಗಿಯೇ ಉದ್ಘೋಷಿಸುತ್ತಿವೆ. ಆದರೆ ಯಾರು ಎಷ್ಟೇ ಹೇಳಿದರು ಅನೇಕ ಜನ್ಮಾರ್ಜಿತ ಸಂಸ್ಕಾರ ಪ್ರಾಬಲ್ಯದಿಂದ ಅಧಿಕ ಸಂಖ್ಯೆಯಲ್ಲಿ ಜನರು ಬಿಸಿಲ್ಗುದುರೆಯಂತಹ ಈ ವಿಷಯ ಭೋಗಗಳ ಕಡೆಗೆ ಓಡುತ್ತಲೇ ಇದ್ದಾರೆ. ವಿಚಾರಿಸುವ ಶಕ್ತಿ ಇಲ್ಲದೇ ಇರುವುದೇ ಭೋಗವು ರುಚಿಕರವಾಗಿ ತೋರುವುದಕ್ಕೆ ಕಾರಣ. ಅವುಗಳಲ್ಲಿ ಅಸತ್ಯ ರಮಣೀಯತೆ ಇದೆಯೇ ಹೊರತು ಯಥಾರ್ಥರಮಣೀಯತೆಯಿಲ್ಲ. ಒಂದು ವೇಳೆ ಇದ್ದಿದ್ದರೆ ಅವುಗಳಿಂದ ಜನರಿಗೆ ಪರಿಪೂರ್ಣಶಾಂತಿ, ತೃಪ್ತಿ, ಆನಂದ ಉಂಟಾಗಬೇಕಾಗಿತ್ತು. ಆದರೆ ಹಾಗಾಗುತ್ತಿಲ್ಲ. **'ಸೌಖ್ಯ ಬಿಂದುಮಾತ್ರೇಣ ದುಃಖಂ ಪರ್ವತಮೇವ ಚ'**- ಎಂದಹಾಗೆ ಲವಲೇಶ ಸುಖವು ಅವುಗಳಿಂದ ಉಂಟಾದರೂ ಹಿಮಾಲಯದಂಥಹ ದುಃಖ ಅದರ ಹಿಂದೆ ಕಾದುಕೊಂಡೇ ಇದೆ.

ಆದ್ದರಿಂದ ಪರಮಶಾಂತಿರೂಪ ಮೋಕ್ಷವನ್ನು ಆಶಿಸುವವರೆಲ್ಲರೂ

ಅಂಥಹ ಪ್ರಾಪಂಚಿಕ ಭೋಗಜಾಲವನ್ನು ತ್ಯಜಿಸಲೇಬೇಕೆಂದು ಗೀತೆ ಅನೇಕ ಬಾರಿ ಒತ್ತಿ ಹೇಳಿದೆ. ಹೇಗೆಂದರೆ- "ಭೋಗೈಶ್ವರ್ಯಗಳ ಮೇಲೆ ಆಸಕ್ತಿಯುಳ್ಳವರು, ಅವುಗಳಿಂದ ಅಪಹರಿಸಲ್ಪಟ್ಟ ಚಿತ್ತವುಳ್ಳವರಾದ್ದರಿಂದ ಧ್ಯಾನಾದಿಗಳಲ್ಲಿ ಅವರಿಗೆ ಏಕಾಗ್ರತೆ ಉಂಟಾಗುವುದಿಲ್ಲ."* ಮತ್ತೆ-

ಯೇಹಿ ಸಂಸ್ಪರ್ಶಜಾ ಭೋಗಾ ದುಃಖಯೋನಯ ಏವತೇ
ಆದ್ಯಂತವಂತಃ ಕೌಂತೇಯ ನ ತೇಷು ರಮತೇ ಬುಧಃ (೫-೨೨)

'ಶಬ್ದಾದಿ ವಿಷಯಭೋಗಗಳು ದುಃಖವನ್ನೇ ಬೀಜವನ್ನಾಗಿ ಹೊಂದಿವೆ. ಅಷ್ಟೇ ಅಲ್ಲದೆ ಅವು ಕ್ಷಣಿಕವಾದವು. ಆದುದರಿಂದ ತಿಳುವಳಿಕೆಯುಳ್ಳವರು ಅವುಗಳಲ್ಲಿ ಯಾವಾಗಲೂ ರಮಿಸುವುದಿಲ್ಲ' ಎಂದು ಭಗವಂತನು ವಿಷಯಾದಿಗಳ ತುಚ್ಛತ್ವವನ್ನು ಸ್ಪಷ್ಟವಾಗಿ ಪ್ರಕಟಿಸಿದನು. ವಾಸ್ತವವಾಗಿ ಸುಖವು ಒಳಗಿರುವುದೇ ಹೊರತು ಹೊರಗಲ್ಲ. ಆ ಅಂತಃಸುಖವು ಅಕ್ಷಯವಾದುದೆಂದು** ಬಹುವಿಧವಾಗಿ ಬೋಧಿಸಿರುವನು. ಭೋಗತ್ಯಾಗದ ಬಗ್ಗೆ ಗೀತೆಯಲ್ಲಿ ಭಗವಂತನು ತಿಳಿಸಿದ ಒಂದೆರಡು ಪ್ರಮಾಣಗಳನ್ನು ಇಲ್ಲಿ ಹೇಳುವುದು ಸಮುಚಿತವಾಗಿ ಕಾಣುತ್ತಿದೆ.

೧. ಇಂದ್ರಿಯಾರ್ಥೇಷು ವೈರಾಗ್ಯಂ (೧೩-೯)= ಶಬ್ದಸ್ಪರ್ಶಾದಿ ವಿಷಯ ಭೋಗಗಳಲ್ಲಿ ವೈರಾಗ್ಯವನ್ನು ಹೊಂದಬೇಕು.

೨. ಶಬ್ದಾದೀನ್ ವಿಷಯಾನ್‌ಸ್ತ್ಯಕ್ತ್ವಾ (೧೮-೫೧) ಶಬ್ದಾದಿ ವಿಷಯ ಭೋಗಗಳನ್ನು ತ್ಯಜಿಸಬೇಕು.

೩. ಕಾಮೋಪಭೋಗಪರಮಾ ಏತಾವದಿತಿ ನಿಶ್ಚಿತಾಃ (೧೬-೧೧)= "ಶಬ್ದಾದಿ ವಿಷಯ ಭೋಗಾನುಭವವೇ ಪರಮಪುರುಷಾರ್ಥವೆಂದು ಆಸುರೀಪ್ರಕೃತಿ ಹೊಂದಿದವರು ಭಾವಿಸುತ್ತಾರೆ. ಅದು ಬಹಳ ದೊಡ್ಡ ತಪ್ಪು....... ಅಂಥಹವರು ಹೀನವಾದ ನರಕದ ಪಾಲಾಗುವರು."

೪) ನಿಃಸ್ಪೃಹಃ ಸರ್ವಕಾಮೇಭ್ಯೋ........(೬-೧೮)= ಸಮಸ್ತ ವಿಷಯಾಸಕ್ತಿಗಳಿಂದ ಬಿಡುಗಡೆಯಾದಾಗ ಸಾಧಕನು ಮುಕ್ತಿಯನ್ನು ಹೊಂದುತ್ತಾನೆ.

ಈ ಪ್ರಕಾರವಾಗಿ ಗೀತೆಯಲ್ಲಿ ಎಷ್ಟೋ ಪ್ರಮಾಣಗಳು ಭೋಗತ್ಯಾಗವನ್ನು ಬೋಧಿಸುತ್ತಿವೆ. ಯಾವ ಯಾವ ಸಾಧಕನಿಗೆ ದೃಶ್ಯ ವಿಷಯಗಳ ಮೇಲೆ ಆಸೆ ಅಂಕುರಿಸುತ್ತದೋ, ಆಗ ಗೀತೆಯಲ್ಲಿಯ ಭಗವದ್ವಾಕ್ಯಗಳನ್ನು ಮತ್ತೆ ಮತ್ತೆ ಜ್ಞಾಪಕಕ್ಕೆ ತಂದುಕೊಳ್ಳುತ್ತಾ ಧೈರ್ಯದಿಂದ ಚಿತ್ತವನ್ನು ಅವುಗಳಿಂದ ತಿರುಗಿಸಬೇಕು. ಸಾಕ್ಷಾತ್ ಶ್ರೀಕೃಷ್ಣಪರಮಾತ್ಮನೇ ಎದುರಿಗೆ ಬಂದು ಮೇಲಿನ ವಾಕ್ಯಗಳನ್ನು ಹೇಳಿದ ಹಾಗೆ ಭಾವಿಸಬೇಕು.

### ೩) ಮರಣ ಭಯವುಂಟಾದಾಗ

ಎಲ್ಲಾ ಭಯಗಳಲ್ಲಿ ಮರಣಭಯ ಬಹಳ ಭಯಂಕರವಾದದ್ದು. ಪಂಡಿತ, ಪಾಮರ, ಧನವಂತ, ದರಿದ್ರ, ಬಲವಂತ, ದುರ್ಬಲ, ಬ್ರಾಹ್ಮಣ, ಚಂಡಾಲ- ಇವರೇ ಏಕೆ, ಪ್ರತಿಯೊಬ್ಬನೂ ಮರಣವೆಂಬ ಮಾತು ಕೇಳುತ್ತಲೇ ಭಯದಿಂದ ಕಂಪಿಸುತ್ತಾನೆ. ಆದರೆ ಹಾಗೆ ಭಯಬೀಳುವುದು ಬಹಳ ಹಾಸ್ಯಾಸ್ಪದ ವಿಷಯವೆಂದು ಗೀತೆಯಲ್ಲಿ ನಿರೂಪಿಸಲಾಗಿದೆ. ಮರಣವೆಂದರೆ ದೇಹವಿಯೋಗ. ತಾನು ಒಂದು ವೇಳೆ ದೇಹವಾಗಿದ್ದರೆ ದೇಹವಿಯೋಗಕ್ಕೆ ಅಳುವುದು ಸಮಂಜಸವೇ ಆಗುತ್ತಿತ್ತು. ಆದರೆ ತಾನು ವಾಸ್ತವವಾಗಿ ದೇಹವಲ್ಲ, ದೇಹಿ. ತಾನು ಪಾಂಚಭೌತಿಕ ವಸ್ತುಸಮುದಾಯವಲ್ಲ, ಶಾಶ್ವತ ಸಚ್ಚಿದಾನಂದ ಘನಸ್ವರೂಪ. ಹಳೆಯ ವಸ್ತ್ರಗಳನ್ನು ತೆಗೆದು ಹಾಕುವಾಗ ಯಾರೂ ದುಃಖಿಸುವುದಿಲ್ಲ. ಹಾಗೆಯೇ ದೇಹಗಳು ಜರ್ಜರವಾಗಿ ಕ್ಷೀಣಿಸಿ ವಿಯೋಗ ಹೊಂದುವಾಗ ವಿವೇಕಿಗಳಾದವರು ಯಾರೂ ದುಃಖಿಸುವುದಿಲ್ಲ. ಏಕೆಂದರೆ ಆ ದೇಹಾದಿಗಳಿಗೆ ಸಾಕ್ಷೀರೂಪನಾದ ಅಂತರಾತ್ಮ ತಾನೇ ಎಂದು ಅವರಿಗೆ ಚೆನ್ನಾಗಿ ತಿಳಿದಿರುತ್ತದೆ.

ನ ತ್ವೇವಾಹಂ ಜಾತು ನಾಸಂ ನ ತ್ವಂ ನೇಮೇ ಜನಾಧಿಪಾಃ
ನ ಚೈವ ನ ಭವಿಷ್ಯಾಮಸ್ಸರ್ವೇ ವಯಮತಃ ಪರಮ್ (೨-೧೨)

"ಓ ಅರ್ಜುನಾ! ನಾನು, ನೀನು ಹಾಗು ಈ ರಾಜರೆಲ್ಲರೂ ಶಾಶ್ವತ ಸ್ವರೂಪರು. ನಾವೆಲ್ಲರೂ ಮೊದಲಿನಿಂದ ಇದ್ದವರು, ಮುಂದೆಯೂ ಇರುವವರು. (ನಮಗೆ ಎಂದೆಂದಿಗೂ ನಾಶವಿಲ್ಲ)." ಎಂದು ಶ್ರೀಕೃಷ್ಣನು ಗೀತೆಯಲ್ಲಿ ಅರ್ಜುನನಿಗೆ 'ತತ್ತ್ವಮಸಿ' ಮಹಾವಾಕ್ಯೋಪದೇಶವನ್ನು ಮಾಡಿ ಅಖಂಡ ಧೈರ್ಯವನ್ನು ತುಂಬಿದನು. ಮರಣದ ಬಗ್ಗೆ ಭಯವುಂಟಾದಾಗ ಅಥವಾ ಬಂಧು ಮಿತ್ರಾದಿಗಳು ಮರಣಿಸಿದಾಗ ಈ ಕೆಳಗಿನ ವಾಕ್ಯಗಳನ್ನು ಶಾಂತವಾಗಿ ಸಂಸ್ಮರಿಸುವುದರಿಂದ ಭಯವು ಪಲಾಯನವಾಗಬಲ್ಲದು.

೧) ಅಚ್ಛೇದ್ಯೋಽಯಮದಾಹ್ಯೋಽಯಮಕ್ಲೇದ್ಯೋಽಶೋಷ್ಯ ಏವಚ
ನಿತ್ಯಸ್ಸರ್ವಗತಃ ಸ್ಥಾಣುರಚಲೋಽಯಂ ಸನಾತನಃ (೨-೧೪)

'ಆತ್ಮ' ಛೇದಿಸಲು, ದಹಿಸಲು, ನೆನೆಯಿಸಲು, ಅಸಾಧ್ಯವಾದುದು. ಅದು ನಿತ್ಯ, ಸರ್ವವ್ಯಾಪಕ, ನಿಶ್ಚಲ ಮತ್ತು ಸನಾತನವಾದದ್ದು.

೨) ದೇಹೀ ನಿತ್ಯಮವಧ್ಯೋಽಯಂ ದೇಹೇ ಸರ್ವಸ್ಯಭಾರತ
ತಸ್ಮಾತ್ಸರ್ವಾಣಿ ಭೂತಾನಿ ನತ್ವಂ ಶೋಚಿತು ಮರ್ಹಸಿ (೨-೩೦)

'ಓ ಅರ್ಜುನಾ! ದೇಹವು ಮರಣಿಸಿದರೂ ಆತ್ಮ ಮರಣಿಸುವುದಿಲ್ಲ. ಈ ಸತ್ಯ ಪ್ರತಿಯೊಬ್ಬರಿಗೂ ಅನ್ವಯಿಸುವುದು. ಆದ್ದರಿಂದ ನೀನು ಯಾರ ಬಗ್ಗೆಯೂ ಯೋಚಿಸುವುದು ಸರಿಯಲ್ಲ.'

೩) ನ ಜಾಯತೇ ಮ್ರಿಯತೇ ವಾ ಕದಾಚ
ನ್ನಾಯಂ ಭೂತ್ವಾ ಭವಿತಾ ವಾ ನ ಭೂಯಃ
ಅಜೋ ನಿತ್ಯಃ ಶಾಶ್ವತೋಽಯಂ ಪುರಾಣೋ
ನ ಹನ್ಯತೇ ಹನ್ಯಮಾನೇ ಶರೀರೇ (೨-೨೦)

'ಆತ್ಮ ಯಾವಾಗಲೂ ಹುಟ್ಟುವುದಿಲ್ಲ. ಸಾಯುವುದಿಲ್ಲ. ಮೊದಲು ಇಲ್ಲದೆ ಈಗ ಹೊಸದಾಗಿ ಬಂದಿರುವುದಲ್ಲ. ಈಗಿದ್ದು ಆಮೇಲೆ ಇಲ್ಲದಾಗುವುದಲ್ಲ. ಅದಕ್ಕೆ ಹುಟ್ಟುವಿಕೆಯೇ ಇಲ್ಲ. ಅದು ನಿತ್ಯ, ಸ್ಥಿರಸ್ವರೂಪ, ಪುರಾಣಪುರುಷ. ಶರೀರ ಸತ್ತರೂ ಆತ್ಮ ಸಾಯುವುದಿಲ್ಲ.'

ಈ ಪ್ರಕಾರವಾದ ಪ್ರಮಾಣಗಳು ಗೀತೆಯಲ್ಲಿ ಎಷ್ಟೋ ಇವೆ. ಅವುಗಳನ್ನು ಪ್ರತಿನಿತ್ಯವೂ ಚೆನ್ನಾಗಿ ಮನನ ಮಾಡಿದರೆ, ಇನ್ನು ಮೃತ್ಯುಭಯ ಹೃದಯದಿಂದ ತಾನೇ ತಾನಾಗಿ ಪಲಾಯನಗೊಳ್ಳುತ್ತದೆ. "**ನಾನು ದೇಹಿ, ದೇಹವಲ್ಲ, ನಾನು ಕ್ಷೇತ್ರಜ್ಞ, ಕ್ಷೇತ್ರವಲ್ಲ, ನಾನು ತ್ರಿಗುಣಾತೀತನು ತ್ರಿಗುಣಗಳಲ್ಲ**," ಎಂದು ಪದೇ ಪದೇ ಮನನ ಮಾಡುತ್ತಿರಬೇಕು.

---

* ಭೋಗೈಶ್ವರ್ಯಪ್ರಸಕ್ತಾನಾಂ..................... ಸಮಾಧೌ ನ ವಿಧೀಯತೇ (೨-೪೪)

** ವಿಂದತ್ಯಾತ್ಮನಿ ಯತ್ಸುಖಮ್ ಸುಖಮಕ್ಷಯ ಮಶ್ನುತೇ (೫-೨೧)

## ೪. ಕಾಮಾದಿ ವಿಕಾರಗಳು ಪ್ರಕೋಪಿಸಿದಾಗ

ಸಾಧಕನ ಶತ್ರುಗಳಲ್ಲಿ ಅಗ್ರಗಣ್ಯವಾದದ್ದು ಕಾಮ. ಅದು ಪ್ರತಿಪಕ್ಷ ನಾಯಕನಿದ್ದಂತೆ. ಜ್ಞಾನರತ್ನವನ್ನಪಹರಿಸಲೋಸುಗ ಸಾಧಕನ ಹೃದಯಗೃಹದಲ್ಲಿ ಮೊದಲು ಪ್ರವೇಶಿಸುವ ಕಳ್ಳ ಕಾಮ. ಅದು ಪ್ರವೇಶಿದ ನಂತರ ಅದರ ಹಿಂದೆಯೇ ಕ್ರೋಧ, ಲೋಭಾದಿಗಳೆಂಬ ದುಷ್ಟಸಮೂಹ ಪ್ರವೇಶಿಸುತ್ತವೆ. 'ಜ್ಞಾನಿನೋ ನಿತ್ಯವೈರಿಣಾ' (ಜ್ಞಾನಿಗೆ ಇವು ನಿರಂತರ ಶತ್ರುಗಳು) 'ದುಷ್ಪೂರೇಣಾನಲೇನ ಚ'- (ಅಗ್ನಿಯಂತೆ ಆಹುತಿಗಳಿಂದ ತೃಪ್ತಿ ಹೊಂದದು) ಎಂದು ಶ್ರೀಕೃಷ್ಣಭಗವಂತನು ಗೀತೆಯಲ್ಲಿ ಕಾಮವನ್ನು ಕುರಿತು ಅನೇಕ ಕಡೆ ಎಚ್ಚರಿಕೆ ಕೊಟ್ಟಿದ್ದಾನೆ. ಅದರ ವಿಷಯವಾಗಿ ಜಾಗ್ರತೆ ವಹಿಸದಿದ್ದಲ್ಲಿ ಆಧ್ಯಾತ್ಮಪಥದಲ್ಲಿ ಮನುಜನು ಎಂದೂ ಉನ್ನತಿ ಹೊಂದಲು ಸಾಧ್ಯವಿಲ್ಲ. ಆದ್ದರಿಂದ ಅಂತಹ ದುಷ್ಟವಿಕಾರಗಳು ಪ್ರಕೋಪಿಸಿದಾಗ ಗೀತೆಯಲ್ಲಿಯ ಈ ಕೆಳಗಿನ ಪ್ರಮಾಣಗಳನ್ನು ಮತ್ತೆ ಮತ್ತೆ ಚಿಂತನೆಮಾಡಿ ಅವುಗಳನ್ನು ತೊಲಗಿಸಿಕೊಳ್ಳಬೇಕು.

**೧) ಸಂಗಾತ್ಸಂಜಾಯತೇ ಕಾಮಃ......... ಪ್ರಣಶ್ಯತಿ** (೨-೬೨, ೬೩)

ದೃಶ್ಯ ವಿಷಯಗಳು ಮನಃಪಟಲವನ್ನು ತಾಕಿದ ತಕ್ಷಣ ಅವುಗಳ ಮೇಲೆ ಕೋರಿಕೆ ಹುಟ್ಟುತ್ತದೆ. ಕ್ರಮಕ್ರಮವಾಗಿ ಆ ಕೋರಿಕೆ ಜೀವಿಯನ್ನು ವಿನಾಶದೆಡೆಗೆ ಒಯ್ಯುತ್ತದೆ- ಎಂದು ಹೇಳಲ್ಪಟ್ಟಿರುವುದರಿಂದ, ಪಾಂಚ ಭೌತಿಕ ಪದಾರ್ಥಗಳ ನಶ್ವರತ್ವವನ್ನು, ಅಲ್ಪತ್ವವನ್ನು ಕುರಿತು ಚೆನ್ನಾಗಿ ವಿಚಾರಣೆ ಮಾಡಿ ತತ್ಸಂಬಂಧದ ಸಂಕಲ್ಪಗಳು ಹೃದಯದಲ್ಲಿ ಆವಿರ್ಭವಿಸದಂತೆ ನೋಡಿಕೊಳ್ಳಬೇಕು. ಒಂದು ವೇಳೆ ಆವಿರ್ಭವಿಸಿದರೆ ತಕ್ಷಣವೇ ಕಿತ್ತುಹಾಕಬೇಕು.

**೨) ಶಕ್ನೋತೀಹೈವ ಯಸ್ಸೋಡುಂ ಪ್ರಾಕ್ಶರೀರ ವಿಮೋಕ್ಷಣಾತ್**
**ಕಾಮ ಕ್ರೋಧೋದ್ಭವಂ ವೇಗಂ ಸಯುಕ್ತಃ ಸ ಸುಖೀ ನರಃ** (೫-೨೩)

'ಈ ಶರೀರದ ವಿಯೋಗಕ್ಕಿಂತ ಮೊದಲೇ ಕಾಮ, ಕ್ರೋಧಾದಿ ದುರ್ಗುಣಗಳ್ನು ಯಾವನು ನಿಗ್ರಹಿಸಬಲ್ಲನೋ ಆತನೇ ಸುಖವಂತ, ಆತನೇ ಮುಕ್ತ'- ಎಂದು ಗೀತಾಚಾರ್ಯನು ಐನೆಯ ಅಧ್ಯಾಯದಲ್ಲಿ ಹೇಳಿದ್ದಾನೆ. ಆದುದರಿಂದ ಕಾಮವು ಉದಯಿಸುತ್ತಲೇ ಇದು ಜೀವಿತಕ್ಕೆ ಬಹಳ ಅನರ್ಥವನ್ನು ತಂದೊಡ್ಡುವ ವಸ್ತುವೆಂದು ನಿಶ್ಚಯಿಸಿ ಅದನ್ನು ಹೇಗಾದರೂ ಮಾಡಿ ಹೃದಯಕ್ಷೇತ್ರದಿಂದ ಹೊರದೂಡಬೇಕು. ಶತ್ರು ಪಕ್ಕದಲ್ಲಿದ್ದರೆ ಎಷ್ಟು ಹಾನಿಯುಂಟಾಗುತ್ತದೆಯೋ ಅಷ್ಟು ಹಾನಿ ಕಾಮವೆನ್ನುವ ಶತ್ರುವಿನಿಂದ ಉಂಟಾಗುವುದು. ಆದ್ದರಿಂದ ಅದಕ್ಕೆ ಆಶ್ರಯಕೊಡಬಾರದೆಂದು ಭಗವಂತನು ಪದೇ ಪದೇ ತಿಳಿಸುತ್ತಿದ್ದಾನೆ.

**೩) ತ್ರಿವಿಧಂ ನರಕಸ್ಯೇದಂ ದ್ವಾರಂ ನಾಶನ ಮಾತ್ಮನಂ**
**ಕಾಮ ಕ್ರೋಧ ಸ್ಥಥಾಲೋಭಸ್ತಸ್ಮಾ ದೇತತ್ರಯಂ ತ್ಯಜೇತ್** (೧೬-೨೧)

'ಕಾಮ, ಕ್ರೋಧ, ಲೋಭ ಈ ಮೂರೂ ನರಕದ್ವಾರಗಳು. ಅವು ಜೀವಿಗೆ ವಿನಾಶವನ್ನುಂಟುಮಾಡುತ್ತವೆ. ಆದ್ದರಿಂದ ಅವುಗಳನ್ನು ತ್ಯಜಿಸಲೇಬೇಕೆಂದು' ಭಗವಂತನು ಹಿತೋಪದೇಶ ಮಾಡುತ್ತಿದ್ದಾನೆ. ಎಂತಹ ಸಮಂಜಸವಾದ ಎಚ್ಚರ! ಕಾಮವು ಪ್ರವೇಶಿಸಿದಾಗೆಲ್ಲಾ ಇಂಥಹ ಭಗವದ್ವಾಕ್ಯಗಳನ್ನು ಮನನ ಮಾಡಿಕೊಳ್ಳುತ್ತಿರಬೇಕು. ಕಾಮದ ವಿವಿಧ ದುಷ್ಟರೂಪಗಳ ಬಗ್ಗೆ ಗೀತೆಯು ಇನ್ನೂ ಅನೇಕ ಪ್ರಮಾಣಗಳನ್ನು ಒದಗಿಸುತ್ತದೆ. ಅವುಗಳನ್ನು ಈ ಕೆಳಗೆ ಕೊಡಲಾಗಿದೆ.

**೧) ಕಾಮಏಷ ಕ್ರೋಧ ಏಷ.........** (೩-೩೭)
**೨) ಕಾಮ ಕ್ರೋಧ ವಿಯುಕ್ತಾನಾಂ.........** (೫-೨೬)
**೩) ಕಾಮಂ ಕ್ರೋಧಂ ಪರಿಗ್ರಹಮ್ ವಿಮುಚ್ಯ........** (೧೮-೫೩)
**೪) ಜಹಿ ಶತ್ರುಂ ಮಹಾಬಾಹೋ ಕಾಮರೂಪಂ ದುರಾಸದಮ್...** (೩-೪೩)

(ಓ ಮಹಾಬಾಹೋ! ಭಯಂಕರವಾದ ಈ ಕಾಮವೆನ್ನುವ ಶತ್ರುವನ್ನು ಜಯಿಸು, ವಿನಾಶದಿಂದ ಪಾರಾಗುವೆ)

**೫) ಕಾಮ ಸಂಕಲ್ಪ ವರ್ಜಿತಾಃ............** (೪-೧೯)
**೬) ಕಾಮಾತ್ಮಾನಃ ಸ್ವರ್ಗಪರಾ........** (೨-೪೩)
**೭) ಕಾಮೈಸ್ತೈಸ್ತೈರ್ಹೃತಜ್ಞಾನಾಂ............** (೭-೨೦)

ಕಾಮವೆನ್ನುವ ಶತ್ರು ನಮ್ಮ ಮೇಲೆ ದಾಳಿಮಾಡಿದಾಗ, ಈ ಮೇಲೆ ಉದಹರಿಸಿದ ಗೀತಾವಾಕ್ಯಗಳೆಂಬ ಅಸ್ತ್ರಗಳನ್ನು ಪ್ರಯೋಗಿಸಿ ಅದನ್ನು ಎದುರಿಸಿ ಹತಗೊಳಿಸಬೇಕು. ನಿರಾಯುಧನು ಯಾವಾಗಲೂ ಶತ್ರುವಿನ ಹತ್ತಿರಕ್ಕೆ ಹೋಗಲಾರನು. ಒಂದು ವೇಳೆ ಸಮೀಪಿಸಿದರೂ ಎದುರಿಸಲಾರನು. ಎದುರಿಸಿದರೂ ಜಯಿಸಲಾರನು. ಆದ್ದರಿಂದ ಅನೇಕ ಜನ್ಮಗಳಿಂದ ಬಲಗೊಂಡಿದ್ದು ಬಲಿಷ್ಠವಾಗಿ ಕೊಬ್ಬಿರುವ ಕಾಮವನ್ನು ಜಯಿಸಲು ಸಾಧಕನು ಗೀತಾವಾಕ್ಯಗಳನ್ನು, ಉಪನಿಷತ್ವಾಕ್ಯಗಳನ್ನು ಮತ್ತು ಇತರೆ ಸಚ್ಛಾಸ್ತ್ರಗಳ ಪ್ರಮಾಣಗಳನ್ನು ಆಯುಧಗಳನ್ನಾಗಿ ಹೊಂದಿ ಸರ್ವಸನ್ನದ್ಧನಾಗಿ ಇರಬೇಕು. ಆಗ ಕಾಮವು ಏನೂ ಮಾಡಲಾರದೆ ತನ್ನ ಸೋಲನ್ನು ಒಪ್ಪಿಕೊಳ್ಳುವುದು. ಈ ಪ್ರಕಾರವಾಗಿ ಕಾಮಾದಿಗಳು ಅಧಿಕವಾದಾಗ ಅವುಗಳ ಮೇಲೆ ವಿಜಯ ಸಾಧಿಸಲು ಗೀತೆ ಮಾನವನಿಗೆ ಎಷ್ಟೋ ಸಹಕಾರಿಯಾಗಿದೆ.

## ೫. ಪರರ ಮೇಲೆ ಅಸೂಯೆ, ದ್ವೇಷವುಂಟಾದಾಗ:-

ಈ ಪ್ರಪಂಚವು ವಿಭಕ್ತವಾಗಿ ಕಂಡರೂ ವಾಸ್ತವವಾಗಿ ಅವಿಭಕ್ತವಾದುದು. ತರಂಗದಲ್ಲಿ, ನೀರ್ಗುಳ್ಳೆಯಲ್ಲಿ, ನೊರೆಯಲ್ಲಿ ಹೇಗೆ ಒಂದೇ ಜಲವು ವ್ಯಾಪಿಸಿರುವುದೋ ಹಾಗೆ ಜೀವಕೋಟಿಗಳಲ್ಲೆಲ್ಲಾ ಒಂದೇ ಚೈತನ್ಯ ವ್ಯಾಪಿಸಿದೆ. ಇನ್ನು ಒಬ್ಬರ ಮೇಲೆ ದ್ವೇಷ ಹಾಗು ಅಸೂಯೆಗಳಿಗೆ ತಾವೆಲ್ಲಿದೆ? ಎಂದು ಗೀತೆ ಪ್ರಶ್ನಿಸುತ್ತದೆ. **"ತತ್ರ ಕೋ ಮೋಹಃ ಕಃ ಶೋಕ ಏಕತ್ವ ಮನುಪಶ್ಯತಃ"** ಎಂದು ಉಪನಿಷತ್ತು ಸಹ ಇದೇ ಪ್ರಶ್ನೆಯನ್ನು ನೇರವಾಗಿ ಕೇಳುತ್ತಿದೆ. ಅಂದರೆ ಸರ್ವತ್ರ ಏಕತ್ವವನ್ನು ನೋಡುವವನಿಗೆ ಇನ್ನು ಮೋಹವೆಲ್ಲಿದೆ? ದುಃಖವೆಲ್ಲಿದೆ? ಎಂದರ್ಥ. ಈ ಏಕತ್ವಾನುಭೂತಿಯನ್ನು ಗೀತೆ ಅನೇಕ ಕಡೆ ಒತ್ತಿ ಹೇಳಿದೆ. ಶತ್ರುಮಿತ್ರಾದಿಗಳಲ್ಲಿ, ಉದಾಸೀನನಲ್ಲಿ, ದ್ವೇಷಿಸುವನಲ್ಲಿ, ಬಂಧುಗಳಲ್ಲಿ, ಪುಣ್ಯಾತ್ಮರಲ್ಲಿ, ಪಾಪಾತ್ಮರಲ್ಲಿ ಸಮಬುದ್ಧಿಯಿಟ್ಟಿರುವವನು ಉತ್ತಮನು,[1] ಎಂದು ಗೀತೆ ಘೋಷಿಸುತ್ತಿದೆ. ಮತ್ತೆ-

**ಅದ್ವೇಷ್ಟಾ ಸರ್ವಭೂತಾನಾಂ............** (೧೨-೧೩)

'ಯಾವ ಪ್ರಾಣಿಯನ್ನೂ ದ್ವೇಷಿಸಬಾರದು, ಅವುಗಳ ಮೇಲೆ ಮೈತ್ರಿ ಹಾಗು ಕರುಣೆಯಿಂದಿರಬೇಕು. ಅಂಥಹವನೇ ನನ್ನ ಭಕ್ತ' ಎಂದು ಶ್ರೀಕೃಷ್ಣಮೂರ್ತಿಯು ಪ್ರಕಟಿಸಿದನು. ಇಷ್ಟೇ ಅಲ್ಲ, ಇತರರೂ ಕೂಡ ನಿನ್ನ

---

1. ಸುಹೃನ್ಮಿತ್ರಾರ್ಯುದಾಸೀನ.......... ಸಮಬುದ್ಧಿರ್ವಿಶಿಷ್ಯತೇ (೬-೯)

ಹಾಗೆಯೇ ಎಂದು ಭಾವಿಸು;@ ಎನ್ನುವ ವಿಶಾಲವಾದ ಸಿದ್ಧಾಂತವನ್ನು ಪ್ರತಿಪಾದಿಸಿದನು. ಸರ್ವರಲ್ಲಿ ಇರುವ ಆತ್ಮ ಒಂದೇ. ಆದ್ದರಿಂದ ಒಬ್ಬರನ್ನು ದ್ವೇಷಿಸಿದರೆ ತನ್ನನ್ನು ತಾನೇ ದ್ವೇಷಿಸಿಕೊಂಡಂತೆ; ಒಬ್ಬರನ್ನು ನಿಂದಿಸಿದರೆ ತನ್ನನ್ನು ತಾನೇ ನಿಂದಿಸಿಕೊಂಡಂತೆ. ಭಗವಂತನು ಬಹಿರಂಗಗೊಳಿಸಿರುವ ಈ ವಿಶಾಲ ಪ್ರತಿಪಾದನೆಯನ್ನು ದೃಷ್ಟಿಯಲ್ಲಿಟ್ಟುಕೊಂಡರೆ ಅಸೂಯಾದ್ವೇಷಗಳೇ ಅಲ್ಲ, ಯಾವ ದುರ್ಗುಣಗಳೂ ಹತ್ತಿರ ಬರುವ ಸಾಹಸ ಮಾಡುವುದಿಲ್ಲ.

**೬. ಪ್ರಾಪಂಚಿಕ ವೈಭವಗಳಿಂದ ಗರ್ವಿತನಾದಾಗ:-**

ಅನಂತಕೋಟಿ ಬ್ರಹ್ಮಾಂಡದಲ್ಲಿ ನಾವು ನಿವಸಿಸುತ್ತಿರುವ ಈ ಚಿಕ್ಕ ಪೃಥ್ವಿ ಯಾವ ಮೂಲೆಗೆ? ಈ ಭೂಗೋಳದಲ್ಲಿ ಯಾವ ಮೂಲೆಯಲ್ಲೋ ಅಣಗಿರುವ ನಮ್ಮ ದೇಶವೆಲ್ಲಿ? ಈ ದೇಶದ ಯಾವುದೋ ಮೂಲೆಯಲ್ಲಿರುವ ನಮ್ಮ ಭೂಮಿಗಳು, ರಾಜ್ಯಗಳು, ವೈಭವಗಳಿಗೆ ಯಾವ ಸ್ಥಾನವಿದೆ? ಪರಮಾತ್ಮನ ಅನಂತ ಮಹಾವಿಭೂತಿಯೆನ್ನುವ ಒಂದು ಪರ್ಯಾಯವನ್ನು ಮನಸಾರೆ ಸ್ಮರಿಸಿದಲ್ಲಿ ಗರ್ವ, ಅಹಂಕಾರಗಳು ಏಕಕ್ಷಣದಲ್ಲಿ ಮಾಯವಾಗುವುವು.

ವಿಷ್ಟಭ್ಯಾಹ ಮಿದಂ ಕೃತ್ಸ್ನಮೇಕಾಂಶೇನ ಸ್ಥಿತೋಜಗತ್ (೧೦-೪೨)

'ನಾನು ಈ ಜಗತ್ತೆಲ್ಲವನ್ನು ನನ್ನ ಒಂದೇ ಒಂದು ಅಂಶದಿಂದ ವ್ಯಾಪಿಸಿದ್ದೇನೆ' ಎಂದು ವಿಭೂತಿಯೋಗದಲ್ಲಿ ಭಗವಂತನು ಘೋಷಿಸಿರುವ ವಾಕ್ಯ ಎಷ್ಟು ಗಂಭೀರವಾಗಿದೆ! ಈ ಬ್ರಹ್ಮಾಂಡಗಳೆಲ್ಲವನ್ನು ಒಂದು ಪಾದದಿಂದ ವ್ಯಾಪಿಸಿ ತನ್ನ ಇನ್ನೂ ಮೂರು ಪಾದಗಳನ್ನು ಅದಕ್ಕೆ ಅತೀತವಾಗಿ ಭಗವಂತನು ಹೊಂದಿದ್ದಾನೆಂದು ಪುರುಷಸೂಕ್ತಿಯಲ್ಲಿ ಹೇಳಲಾಗಿದೆ.

ಪಾದೋಽಸ್ಯ ವಿಶ್ವಾಭೂತಾನಿ ತ್ರಿಪಾದಸ್ಯಾಮೃತಂ ದಿವಿ

ಭಗವಂತನ ಈ ವಿಶ್ವವ್ಯಾಪಕ ಅನಂತಶಕ್ತಿಯೆದುರು ಮಾನವನ ಆಸ್ತಿಪಾಸ್ತಿಗಳು ವೈಭವಗಳು ಭೋಗಭಾಗ್ಯಗಳು ಯಾವ ಮೂಲೆಗೆ. ಇದೆಲ್ಲವನ್ನೂ ಯೋಚಿಸಿದರೆ ಮಾನವನ ಅಲ್ಪತ್ವವು ಎದ್ದು ಕಾಣುತ್ತದೆ. ಅರ್ಜುನನಂಥಹ ಮಹಾ ಬಲಶಾಲಿ, ರಾಜಾಧಿರಾಜನು ಭಗವಂತನ ವಿಶ್ವರೂಪವನ್ನು ಸಂದರ್ಶಿಸಿದ ತಕ್ಷಣ ಎಂತಹ ವಿನಯ, ವಿಧೇಯತೆ, ಭಕ್ತಿಭಾವವನ್ನು ಪ್ರದರ್ಶಿಸಿದನೋ ಗೀತೆಯ ೧೧ನೆಯ ಅಧ್ಯಾಯವನ್ನು ಓದಿದವರಿಗೆ ತಿಳಿಯುವುದು.* ಅರ್ಜುನನಂಥವನೇ ಅಷ್ಟು ಶ್ರದ್ಧೆ ತೋರಿದಾಗ ಇನ್ನು ಸಾಮಾನ್ಯರ ವಿಷಯ ಬೇರೆ ಹೇಳಬೇಕೇ! ಆದ್ದರಿಂದ ಗರ್ವಾದಿಗಳುಂಟಾದಾಗ ಗೀತೆಯಲ್ಲಿಯ ವಿಭೂತಿಯೋಗ, ವಿಶ್ವರೂಪ ಸಂದರ್ಶನ ಯೋಗಗಳನ್ನು ಸಂಸ್ಮರಿಸುವುದರಿಂದ ಅವು ತಕ್ಷಣ ಪಲಾಯನವಾಗುವವು.

'ನಾನು ದೊಡ್ಡವನು, ನಾನು ಧನವಂತನು, ನನಗೆ ಅನೇಕ ಪರಿಚಾರಕರಿದ್ದಾರೆ. ನನಗೆ ಸಮಾನವಾದವರಾರಿದ್ದಾರೆ?' ಈ ಪ್ರಕಾರವಾದ ಬಿಂಕಗಳನ್ನು ಹೊಂದಿರುವವರು ಅಸುರ ಸ್ವಭಾವ ಸಂಯುಕ್ತರು. ಅಂಥಹವರು ತಮ್ಮ ರಜೋಗುಣ, ತಮೋಗುಣಗಳ ಪ್ರಭಾವದಿಂದ ಕೊನೆಗೆ ನರಕವನ್ನೇ ಆಶ್ರಯಿಸಬೇಕಾಗಿ ಬರುವುದೆಂದು ಗೀತೆಯ ೧೬ನೆಯ ಅಧ್ಯಾಯದಲ್ಲಿ ಎಚ್ಚರಿಸಲಾಗಿದೆ.+ ಆದ್ದರಿಂದ ತಮ್ಮ ಪ್ರಾಪಂಚಿಕ ವೈಭವ ಘನತೆಗಳ ಬಗ್ಗೆ ಗರ್ವಿಸುವವರು ಗೀತೆಯ ೧೬ನೆಯ ಅಧ್ಯಾಯವನ್ನು ಅಭ್ಯಾಸ ಮಾಡಿ ತಿದ್ದಿಕೊಳ್ಳಬೇಕು. ಅದರಲ್ಲಿ ಭಗವಂತನು ಅತಿ ತೀವ್ರವಾದ ಎಚ್ಚರಿಕೆಯನ್ನು ಕೊಟ್ಟಿರುವುದರಿಂದ ಎಂಥಹವನಿಗಾದರೂ ಪಾಪಭೀತಿ ಉಂಟಾಗಿ ಗರ್ವಾಹಂಕಾರಾದಿಗಳು ದೂರವಾಗಬಲ್ಲವು.

ಮತ್ತೆ ಸರಿಯಾಗಿ ವಿಚಾರಿಸಿದಲ್ಲಿ ದೃಶ್ಯವಸ್ತುಗಳೆಲ್ಲವೂ ಕ್ಷರವಾದವುಗಳೆಂದು ಅರ್ಥವಾಗುತ್ತದೆ. 'ಯದ್ದೃಶ್ಯಂ ತನ್ನಶ್ಯಂ' (ಕಾಣುವುದೆಲ್ಲಾ ನಶಿಸಲೇಬೇಕು) ಎನ್ನುವ ಶಾಸ್ತ್ರವಾಕ್ಯವು ಲೋಕವಿದಿತ. 'ಜಾತಸ್ಯಹಿ ಧ್ರುವೋ ಮೃತ್ಯುಃ'- ಹುಟ್ಟಿದವನಿಗೆ ಸಾವು ನಿಶ್ಚಿತ (ವಿನಾಶತಪ್ಪದು) ಎನ್ನುವುದು ಗೀತಾವಾಕ್ಯ.

'ಆಬ್ರಹ್ಮಭುವನಾಲ್ಲೋಕಾಃ ಪುನರಾವರ್ತಿನೋಽರ್ಜುನ (೮-೧೬)

'ಬ್ರಹ್ಮಲೋಕದಿಂದ ಸಮಸ್ತ ಲೋಕಗಳೆಲ್ಲವುಗಳಲ್ಲಿ ಪುನರಾವೃತ್ತಿ ಸಹಜ. ಹುಟ್ಟುವುದು, ಗತಿಸುವುದು ಸ್ವಾಭಾವಿಕ ಚಕ್ರ. ಪರಮಾತ್ಮನೊಬ್ಬನೇ ಅಕ್ಷರ. ಜನನ-ಮರಣವಿಲ್ಲದ್ದು ಆ ಪರಮಾತ್ಮಸ್ಥಿತಿಯೊಂದೇ [ಮಾಮುಪೇತ್ಯ ತು ಕೌಂತೇಯ ಪುನರ್ಜನ್ಮನವಿದ್ಯತೇ (೮-೧೬)]. ಆದ್ದರಿಂದ ಆಗಮನಾದಿಗಳಿಂದ ಕೂಡಿ, ನಶ್ವರಗಳಾಗಿದ್ದು, ಕಾರಣ ಭೂತಗಳಾಗಿದ್ದು, ಕ್ಷರಗಳಾದಂತಹ ಈ ಪ್ರಾಪಂಚಿಕ ವಿಷಯಜಾಲದ ಬಗ್ಗೆ, ಐಶ್ವರ್ಯದ ಬಗ್ಗೆ ಏಕೆ ಗರ್ವವುಂಟಾಗಬೇಕು? ಅವುಗಳಿಂದ ಅಹಂಭಾವವುಂಟಾಗುವುದಾದರೂ ಏಕೆ? ಆದ್ದರಿಂದ ಈ ಮೇಲಿನ ಗೀತಾವಾಕ್ಯಗಳನ್ನು ಸಂಸ್ಮರಿಸಿ ಕ್ಷರಪದಾರ್ಥಗಳನ್ನು ಪ್ರಾಮುಖ್ಯವೆಂದು ಎಣಿಸದೆ, ಅವುಗಳಿಂದ ಗರ್ವ ಪೀಡಿತರಾಗದೆ, ಅಕ್ಷರನಾದ ಪರಮಾತ್ಮನನ್ನೇ ಆಶ್ರಯಿಸಿ ಧನ್ಯರಾಗಬೇಕು.

ಈ ಪ್ರಕಾರವಾಗಿ ದುರ್ಗುಣಗಳು ಹೃದಯದಲ್ಲಿ ಪ್ರವೇಶಿಸಿದಾಗ ತಕ್ಷಣವೇ ಅವುಗಳಿಗೆ ತಿರುಮಂತ್ರಗಳಾಗಿರುವ ಗೀತಾಶ್ಲೋಕಗಳನ್ನು ಸ್ಮರಿಸಿಕೊಂಡು ಹೃದಯ ಕ್ಷೇತ್ರವನ್ನು ನಿರ್ಮಲಗೊಳಿಸಿಕೊಳ್ಳಬೇಕು. ರೋಗಗಳು ಬರುವುದಕ್ಕೆ ಮುಂಚೆ ಆರೋಗ್ಯ ಪದ್ಧತಿಗಳನ್ನು ಅನುಸರಿಸುವುದು ಸರ್ವೋತ್ತಮ. ರೋಗಗಳು ಬಂದ ತಕ್ಷಣ ಆರೋಗ್ಯ ವಿಧಾನಗಳನ್ನು, ವೈದ್ಯ ಪದ್ಧತಿಗಳನ್ನು ಅನುಸರಿಸುವುದು ಬಹಳ ಒಳ್ಳೆಯದು. ಆದರೆ ಏನೂ ಮಾಡದೆ ಸುಮ್ಮನೆಯಿದ್ದಲ್ಲಿ ಭವರೋಗವು ಉಲ್ಬಣವಾಗಿ ಜೀವಿಯ ಅಧಃಪತನಕ್ಕೆ ಕಾರಣವಾಗುತ್ತದೆ. ಗೀತೆಯಲ್ಲಿ ಎಷ್ಟೋ ಔಷಧಗಳನ್ನು ಹೇಳಲಾಗಿದೆ. ದುರ್ಗುಣ ನಿವಾರಕ ಉಪಶಮನಗಳನ್ನು ಕೊಡಲಾಗಿದೆ. ಭವರೋಗಿ ಅವುಗಳನ್ನು ಸದ್ವಿನಿಯೋಗಪಡಿಸಿಕೊಂಡು ಭವಬಂಧರಹಿತನಾಗಿ, ನಿರ್ಮಲಾತ್ಮನಾಗಿ, ನಿರಾಮಯ ಸ್ವರೂಪಿಯಾಗಿ ಉದ್ಧಾರವಾಗಬೇಕು.

---

@. ಆತ್ಮೌಪಮ್ಯೇನ ಸರ್ವತ್ರ....................... ಸ ಯೋಗೀ ಪರಮೋ ಮತಃ (೬-೩೨)

*. ನಮಃ ಪುರಸ್ತಾದಥ ಪೃಷ್ಠತಸ್ತೇ ನಮೋಽಸ್ತುತೇ ಸರ್ವತ ಏವ ಸರ್ವ (೧೧-೪೦)

\+ ಆಢ್ಯೋಽಭಿಜನವಾನಸ್ಮಿ ಕೋಽನ್ಯೋಽಸ್ತಿ ಸದೃಶೋಮಯಾ (೧೬-೧೫)

............................ ಪತಂತಿ ನರಕೇಽಶುಚೌ (೧೬-೧೬)

# ನಮ್ಮ ಕರ್ತವ್ಯ

ಇಲ್ಲಿಯವರೆಗೆ ಗೀತೆಯ ಮಹಾವಿಶೇಷಗಳೆಷ್ಟನ್ನೋ ನೋಡಿದೆವು. ಹೀಗೆ ತಿಳಿದುಕೊಳ್ಳುತ್ತಾ ಹೋಗುತ್ತಿದ್ದರೆ ಇನ್ನು ಅದಕ್ಕೆ ಅಂತ್ಯವಿಲ್ಲ. ಏಕೆಂದರೆ ಗೀತಾಪ್ರತಿಭೆಯನ್ನು ವರ್ಣಿಸಲು ಸಾವಿರ ತಲೆಗಳುಳ್ಳ ಆದಿಶೇಷನಿಗೂ ಅಸಾಧ್ಯ. ಅದು ಅನಂತ. ಆದುದರಿಂದ ಗೀತೆಯ ಬಗ್ಗೆ ಸ್ವಲ್ಪ ತಿಳಿದುಕೊಂಡಿದ್ದರೂ ಅಷ್ಟೇ ಸಾಕು. ಅದರಿಂದ ಪರಿತೃಪ್ತಿ ಹೊಂದಿ ಅದರ ಮನನನಿದಿಧ್ಯಾಸಗಳನ್ನು ಮಾಡಲು ತೊಡಗಬೇಕು. ಗೀತೆಯ ಅಧ್ಯಯನ (ಪಾರಾಯಣ) ಪುಣ್ಯವಾದದ್ದು. ಅನುಷ್ಠಾನವು ಮನುಷ್ಯನಿಗೆ ಮೋಕ್ಷವನ್ನು ಪ್ರಸಾದಿಸುವುದು. ಆದ್ದರಿಂದ ಅಧ್ಯಯನ ಮಾತ್ರದಿಂದ ಸಂತುಷ್ಟಿ ಹೊಂದದೆ ಆಚರಣೆ ಕೂಡ ಮಾಡುವ ಪ್ರಯತ್ನ ಮಾಡಬೇಕು.

ಗೀತಾಗಂಗೋದಕಂ ಪೀತ್ವಾ ಪುನರ್ಜನ್ಮ ನ ವಿದ್ಯತೇ

ಅಂದಹಾಗೆ ಗೀತಾಜ್ಞಾನಗಂಗಾತೀರ್ಥವನ್ನು ಸೇವಿಸಿ ಜನನ ಮರಣ ರೂಪವಾದ ಈ ಭವಬಂಧವನ್ನು ಛೇದಿಸಬೇಕು. ಇದೇ ನಮ್ಮ ಕರ್ತವ್ಯ. ಗೀತಾದಿ ಸದ್ಗ್ರಂಥಗಳು ಲಭಿಸುವುದಕ್ಕು ಕೂಡ ಪುಣ್ಯ ವಿಶೇಷವಿರಬೇಕೆಂದು ಮುಮುಕ್ಷುಗಳು ಗ್ರಹಿಸಬೇಕು. ಏಕೆಂದರೆ ಮನುಷ್ಯನಾಗಿ ಜನಿಸುವುದು, ಮೋಕ್ಷ ಪಡೆಯಬೇಕೆಂಬ ಜಿಜ್ಞಾಸೆಯುಂಟಾಗುವುದು, ಆ ಮೋಕ್ಷಕ್ಕೆ ದಾರಿ ತೋರಿಸುವ ಮಹಾತ್ಮರ, ಅವರ ಬೋಧನರೂಪವಾದ ಸಚ್ಛಾಸ್ತ್ರಗಳ ಪರಿಚಯ ಸಿಗುವುದು ಮಹಾದುರ್ಲಭ ಎಂದು ಜಗದ್ಗುರು ಶ್ರೀ ಶಂಕರಾಚಾರ್ಯರು ನುಡಿದಿದ್ದಾರೆ.* ಆದ್ದರಿಂದ ಶ್ರೀಕೃಷ್ಣಪರಮಾತ್ಮನ ಹಾಗೂ ಅವನ ವಾಣಿಯಾದ ಗೀತೆಯ ಸೌಭಾಗ್ಯವನ್ನು ಹೊಂದಿದವರು ಧನ್ಯರು. ಹಾಗೆ ಹೊಂದಿದವರು ಶರೀರ ಪತನವಾಗುವುದಕ್ಕೆ ಮುಂಚೆ (ಪ್ರಾಕ್ಶರೀರ ವಿಮೋಕ್ಷಣಾತ್) ಅದರ ಲಕ್ಷ್ಯವಾದ ಮೋಕ್ಷಕ್ಕೆ ಪ್ರಯತ್ನಿಸಬೇಕು. ದೀಪವಿರುವಾಗಲೇ ಮನೆಯನ್ನು ಸರಿಪಡಿಸಿಕೊಳ್ಳಬೇಕು. ಮಾನವ ಶರೀರ ಮತ್ತೆ ಮತ್ತೆ ಲಭಿಸದು, **'ಶತಕೋಟಜನ್ಮ ಸುಕೃತೈರ್ಪುಣ್ಯೈರ್ವಿನಾ ಲಭ್ಯತೇ'**- ಎಂದು ಭಗವತ್ಪಾದರು ತಿಳಿಸಿದ ಹಾಗೆ ಎಷ್ಟೋ ಪೂರ್ವ ಜನ್ಮಗಳ ಸುಕೃತದಿಂದ ವಿಜ್ಞಾನವಂತವಾದ ಈ ಜನ್ಮ ಲಭಿಸಿದೆ. ಆದ್ದರಿಂದ ಆರೋಗ್ಯ ಚೆನ್ನಾಗಿರುವಾಗಲೇ, ಅನುಕೂಲವಾದ ಅವಕಾಶಗಳಿದ್ದಾಗಲೇ, ಜೀವನದ ವಸಂತಕಾಲದಲ್ಲಿಯೇ (ಬಾಲ್ಯ, ಯೌವನಗಳಲ್ಲಿಯೇ) ಗೀತಾದಿ ಸದ್ಗ್ರಂಥಗಳನ್ನಾಶ್ರಯಿಸಿ ಭಕ್ತಿಜ್ಞಾನ ವೈರಾಗ್ಯಗಳನ್ನು ಚೆನ್ನಾಗಿ ಅಳವಡಿಸಿಕೊಂಡು, ಸಂಸಾರ ದುಃಖಶೃಂಖಲೆಯನ್ನು ಛಿದ್ರಗೊಳಿಸಬೇಕು. ಆದುದರಿಂದಲೇ ಗೀತೆಯಲ್ಲಿ 'ಇಹೈವ'** (ಇಲ್ಲಿಯೇ, ಈ ಜನ್ಮದಲ್ಲಿಯೇ) ಎಂದು ಭಗವಂತನು ಅನೇಕ ಕಡೆ ಒತ್ತಿ ಹೇಳಿರುವುದಕ್ಕೆ ಕಾರಣ. ಈ ಜನ್ಮದಲ್ಲೇ ನಾವು ಬಂದ ಕೆಲಸ ಪೂರ್ತಿಮಾಡಬೇಕೆನ್ನುವುದು ಅದರ ಭಾವ.

ಆದುದರಿಂದ ಪ್ರತಿದಿನವೂ ನಿಯಮ ತಪ್ಪದೆ, (ಊಟದ) ಭೋಜನ ಕಾರ್ಯವನ್ನು ನಿರ್ವಹಿಸಿದಂತೆ, ಸರ್ವೋಪನಿಷತ್ಸಾರವಾದ, ಸರ್ವಶಾಸ್ತ್ರ ಸಿದ್ಧಾಂತ ಸಂಗ್ರಹವಾದ ಭಗವದ್ಗೀತೆಯ ಒಂದು ಅಧ್ಯಾಯವನ್ನಾದರೂ ಸ್ವಲ್ಪ ಅಭ್ಯಾಸಮಾಡುವುದು, ಅದರ ಭಾವವನ್ನು ಏಕಾಗ್ರಚಿತ್ತದಿಂದ ಮನನ ಮಾಡುವುದು ಉತ್ತಮ. ತಾನೇ ಅರ್ಜುನನೆಂದು, ಶ್ರೀಕೃಷ್ಣಮೂರ್ತಿ ತನಗೆ ಬೋಧಿಸುತ್ತಿದ್ದಾನೆಂದು ಮನಃಪೂರ್ತಿಯಾಗಿ ಭಾವಿಸಬೇಕು. ಅರ್ಜುನನು ರಥದ ಕುದುರೆಗಳ ಕಡಿವಾಣವನ್ನು ಕೃಷ್ಣನಿಗೆ ಒಪ್ಪಿಸಿದ ಹಾಗೆ, ನಮ್ಮ ಜೀವನ ರಥದ ಬಾಧ್ಯತೆಯನ್ನು ಭಗವಂತನಿಗೆ ಒಪ್ಪಿಸಿ, ಕರ್ತೃತ್ವಭಾವವನ್ನು ತ್ಯಜಿಸಿ, ಅಹಂಭಾವವನ್ನು ಹೊರದೋಡಿ, **"ನಿಮಿತ್ತಮಾತ್ರಂ ಭವ ಸವ್ಯಸಾಚಿನ್"** ಅಂದಹಾಗೆ ಈ ಸಂಸಾರಯಾತ್ರೆಯಲ್ಲಿ ಕೇವಲ ನಿಮಿತ್ತ ಮಾತ್ರರಾಗಿ ವ್ಯವಹರಿಸಿದಲ್ಲಿ, ಇನ್ನು ದುಃಖಕ್ಕೆ ಅವಕಾಶವೆಲ್ಲಿ? ಬಂಧವೆಲ್ಲಿದೆ? ನಿರಾತಂಕವಾಗಿ ಆ ಕೃಷ್ಣನೇ ನಮ್ಮ ಜೀವನರಥವನ್ನು ಗಮ್ಯಸ್ಥಾನಕ್ಕೆ ತೆಗೆದುಕೊಂಡು ಹೋಗುವನು. ಈ ಪ್ರಕಾರವಾಗಿ ಗೀತಾಶ್ರವಣದ ಮೂಲಕ, ಗೀತೋಕ್ತಭಾವಾನುಷ್ಠಾನದೊಡನೆ ಮಾನವನು ತನ್ನ ಜೀವನವನ್ನು ಸಂಸ್ಕರಿಸಿಕೊಂಡು ಈ ಜನ್ಮದಲ್ಲೇ ಬ್ರಹ್ಮಾನುಭೂತಿಯನ್ನು ಪಡೆಯುವಂತಾಗಬೇಕು.

# ಗೀತಾ ಪ್ರಚಾರ

ಆದರೆ ಅಷ್ಟರಿಂದಲೇ ನಮ್ಮ ಕಾರ್ಯ ಪೂರ್ತಿಯಾಗಲಿಲ್ಲ. ತಾನು ಉದ್ಧಾರವಾಗಿ ಇತರರನ್ನು ಕೂಡ ಉದ್ಧರಿಸುವುದು ಸನಾತನಧರ್ಮ. 'ಸ್ವಯಂ ತೀರ್ಣಃ ಪರಾಂಸ್ತಾರಯತಿ' ಅಂದಹಾಗೆ ತಾನು ಹೊಂದಿದ ಪರಮಾನಂದವನ್ನು ಇತರರಿಗೂ ಹಂಚಬೇಕು. ಮತ್ತೆ ಯಾವ ಗೀತಾನುಸಂಧಾನದಿಂದ ತನ್ನ ಅಂತಃಕರಣ ಪರಿಶುದ್ಧವಾಗಿ ಆತ್ಮಾನುಭವವನ್ನು ಹೊಂದಲು ಸಾಧ್ಯವಾಗಿದೆಯೋ, ಅಂಥಹ ಗೀತೆಯ ಪರಿಚಯವನ್ನು

* ದುರ್ಲಭಂ ತ್ರಯಮೇವೈತದ್ದೈವಾನುಗ್ರಹ ಹೇತುಕಮ್। ಮನುಷ್ಯತ್ವಂ ಮುಮುಕ್ಷುತ್ವಂ ಮಹಾಪುರುಷಸಂಶ್ರಯಃ (ವಿವೇಕ ಚೂಡಾಮಣಿ)

** ಇಹೈವ ತೈರ್ಜಿತಸ್ಸರ್ಗೋ.................(೫-೧೯) ಶಕ್ನೋತೀಹೈವ ಯಸ್ಸೋಢುಂ............(೫-೨೩)

ಇತರರಿಗೂ ಕೂಡ ಮಾಡಿಸಬೇಕು. ಎಷ್ಟೋ ಜನ ಈ ಸಂಸಾರಕೂಪದಲ್ಲಿ ಬಿದ್ದು ದಿಕ್ಕು ತಿಳಿಯದೆ ನಾನಾ ಯಾತನೆಗಳನ್ನು ಅನುಭವಿಸುತ್ತಿದ್ದಾರೆ. ಅಜ್ಞಾನಾಂಧಕಾರದಲ್ಲಿ ಸಿಕ್ಕಿಕೊಂಡು ದಿಕ್ಕು ತಿಳಿಯದೆ ಸಂಕಟಕ್ಕೆ ಒಳಗಾಗುತ್ತಿದ್ದಾರೆ. ಅವರನ್ನು ಕಾಪಾಡುವರರಾರು? ದ್ರವ್ಯವೃದ್ಧರೇ? ಅಲ್ಲ. ವಯೋವೃದ್ಧರೇ? ಅಲ್ಲ. ವಿದ್ಯಾವೃದ್ಧರೇ? ಅಲ್ಲ. ಜ್ಞಾನವೃದ್ಧರೇ ಅವರನ್ನು ಕಾಪಾಡಬಲ್ಲರು. ಆಧ್ಯಾತ್ಮಿಕ ತತ್ವನಿಷ್ಠೆ ಹೊಂದಿದವರೇ ಅವರನ್ನು ದಡಕ್ಕೆ ಸೇರಿಸಬಲ್ಲರು. ಪ್ರಯತ್ನಪೂರ್ವಕವಾಗಿ ಗೀತಾಜ್ಞಾನಮಯ ಪ್ರದೀಪವನ್ನು ತಮ್ಮ ಹೃದಯದಂಗಳದಲ್ಲಿ ಬೆಳಗಿಸಿಕೊಂಡವರೇ ಅವರನ್ನು ಉದ್ಧರಿಸಬಲ್ಲರು. ಆದ್ದರಿಂದ ಸರ್ವಶಾಸ್ತ್ರಸಾರವಾದ ಗೀತೆಯನ್ನು ತಾನು ಅನುಷ್ಠಾನಮಾಡಿ ಇತರರನ್ನು ಕೂಡ ಅನುಷ್ಠಾನಿಸುವಂತೆ ಮಾಡಬೇಕು. ತಾನು ಅಭ್ಯಸಿಸಿ ಇತರರನ್ನು ಕೂಡ ಅಭ್ಯಸಿಸುವಂತೆ ಪ್ರಚೋದಿಸಬೇಕು. ಇದೇ ಜ್ಞಾನದಾನ. ಇದೇ ಜ್ಞಾನಯಜ್ಞ. ಎಲ್ಲಾ ಯಜ್ಞಗಳಿಗಿಂತ ಜ್ಞಾನಯಜ್ಞ ಶ್ರೇಷ್ಠವಾದುದೆಂದು ಗೀತೆಯಲ್ಲಿ ಭಗವಂತನು ಹೇಳೀ ಇದ್ದಾನೆ.* ಎಲ್ಲಾ ಯಜ್ಞಗಳಿಗಿಂತ ಜ್ಞಾನಯಜ್ಞ ಉತ್ಕೃಷ್ಟವಾದುದೆಂದು ಶಾಸ್ತ್ರಗಳೆಲ್ಲವೂ ಒಕ್ಕೊರಳಿನಲ್ಲಿ ಘೋಷಿಸುತ್ತಿವೆ.

**ವಾರ್ಯನ್ನ ಗೋಮಹೀವಾಸಸ್ತಿ ಲಕಾಞ್ಚನ ಸರ್ಪಿಷಾಮ್**
**ಸರ್ವೇಷಾಮೇವ ದಾನಾನಾಂ ಜ್ಞಾನದಾನಂ ವಿಶಿಷ್ಯತೇ**

'ಜಲದಾನ, ಅನ್ನದಾನ, ಗೋದಾನ, ಭೂದಾನ, ನಿವಾಸದಾನ, ಸುವರ್ಣದಾನ ಮೊದಲಾದ ದಾನಗಳಿಗಿಂತ ಜ್ಞಾನದಾನವು ಉತ್ತಮ ವಾದದ್ದು! ಆದ್ದರಿಂದ ಗೀತೆಯನ್ನು ತಾನು ಪಠಿಸುವುದೇ ಅಲ್ಲದೆ ಕೈಲಾದಷ್ಟು ಗೀತಾಪ್ರಚಾರವನ್ನು ಕೂಡ ಮಾಡಬೇಕು. ಈ ಪ್ರಕಾರವಾಗಿ ಗೀತಾ ಪ್ರಚಾರಮಾಡುವವನು ನನಗೆ ಎಲ್ಲರಿಗಿಂತ ಹೆಚ್ಚಿಗೆ ಪ್ರಿಯನು (ಪ್ರಿಯ ಕೃತ್ತಮಃ) ಎಂದು ಶ್ರೀಕೃಷ್ಣಪರಮಾತ್ಮನು ಗೀತಾಂತ್ಯದಲ್ಲಿ ಸ್ವಯಂ ಆಗಿ ತಿಳಿಸಿದ್ದಾನೆ. ಇದರಿಂದ ಗೀತಾ ಪ್ರಚಾರಕಾರ್ಯವು ಶ್ರೀಕೃಷ್ಣನಿಗೆ ಅತ್ಯಂತ ಪ್ರಿಯವಾದದ್ದೆಂದು ತಿಳಿದುಬರುತ್ತದೆ. ಭಗವಂತನಿಗೆ ಪ್ರಿಯವಾದ ಕಾರ್ಯವನ್ನು ಏಕೆ ಮಾಡಬಾರದು? ತಾನು ಉದ್ಧಾರವಾಗಿ ಸಂಘವು ಕೂಡ ಉದ್ಧಾರವಾಗುವಂತಹ ಕಾರ್ಯಮಾಡಿದರೆ ಲೋಕಕ್ಕೆ ಎಷ್ಟು ಶ್ರೇಯಸ್ಕರ! ಆದ್ದರಿಂದ ಪ್ರತಿ ಗ್ರಾಮದಲ್ಲಿ, ಪಟ್ಟಣದಲ್ಲಿ ಗೀತಾಸಂಘಗಳೇರ್ಪಾಡಾಗಿ, ಗೀತಾಭವನಗಳು ನಿರ್ಮಿಸಲ್ಪಟ್ಟು, ಗೀತಾಪ್ರಚಾರವು ಸಮೃದ್ಧವಾಗಿ ಸಾಗಲಿ! ಪಾಠಶಾಲೆಗಳಲ್ಲಿ ನಿರ್ಬಂಧವಾಗಿ ಗೀತೆ ಬೋಧಿಸಲ್ಪಡಲಿ! ಪ್ರತಿಯೊಂದು ಮನೆಯಲ್ಲಿ ಗೀತೆಯ ಮಂತ್ರಗಳು ಪ್ರತಿಧ್ವನಿಸುವಂತಾಗಲಿ! ಗೀತಾಮುರಳೀಗಾನ ಎಲ್ಲೆಲ್ಲೂ ವ್ಯಾಪಿಸಿ ಜನರನ್ನು ಪುನೀತಗೊಳಿಸಿ ಅವರನ್ನು ಆನಂದಮಯರನ್ನಾಗಿ ಮಾಡಲಿ!

ಗೀತೆಯೆಲ್ಲಿದೆಯೋ ಅಲ್ಲಿ ಶ್ರೀಕೃಷ್ಣನಿರುವನು.[1] ಎಲ್ಲಿ ಕೃಷ್ಣನಿರುವನೋ ಅಲ್ಲಿ ವಿಜಯ, ಐಶ್ವರ್ಯಗಳಿರುವುವು ಹಾಗು ನೀತಿ ತಾಂಡವವಾಡುತ್ತಿರುತ್ತದೆ.[2] ಆದ್ದರಿಂದ ಪ್ರತಿಯೊಬ್ಬರೂ ಗೀತೆಯನ್ನು ಶ್ರದ್ಧೆಯಿಂದ ಅಭ್ಯಸಿಸಬೇಕು. ಮತ್ತೆ ಬೇರೆಯವರಿಗೂ ಬೋಧಿಸಬೇಕು. ಗೀತಾಗಂಗೆಯ ಪ್ರವಾಹದಲ್ಲಿ ತಮ್ಮ ತಮ್ಮ ಹೃದಯಕ್ಷೇತ್ರಗಳನ್ನು ಪರಿಪಕ್ವಗೊಳಿಸಿಕೊಂಡು ಧನ್ಯರಾಗಲು ಯತ್ನಿಸಬೇಕು.

# ಉಪಸಂಹಾರ

ಇಲ್ಲಿಯವರೆಗೆ ಗೀತೆಯ ಬಗ್ಗೆ ಅನೇಕ ವಿವರಗಳನ್ನು ಓದುಗರಿಗೆ ಒದಗಿಸಲಾಯಿತು. ಇನ್ನು ಕೊನೆಯ ಭಾಗದಲ್ಲಿ ಸಿಂಹಾವಲೋಕನ ಮಾಡಿ ಈ ಭಾಗವನ್ನು ಉಪಸಂಹರಿಸೋಣ. ಗೀತೆ ಪ್ರತ್ಯಕ್ಷ ಭಗವತ್ಸ್ವರೂಪ. ಗೀತಾಸೇವೆ ಸಾಕ್ಷಾತ್ ಶ್ರೀಹರಿಯ ಸೇವೆ. ಗೀತಾಪಾಠ ಭಗವಂತನ ಜಪವೇ ಆಗಿದೆ. ಗೀತಾಪಾಠ ನಾರಾಯಣನ ದಿವ್ಯಮಂತ್ರ. ಸಕ್ಕರೆಯ ಬೊಂಬೆಯನ್ನು ಎಲ್ಲಿ ಕಡಿದರು ಸಿಹಿಯಾಗಿಯೇ ಇರುತ್ತದೆ. ಹಾಗೆಯೇ ಗೀತೆಯ ಎಲ್ಲಾ ಭಾಗಗಳು ಬ್ರಹ್ಮಾನಂದ ಮಾಧುರ್ಯದಿಂದ ತುಂಬಿ ತುಳುಕುತ್ತಿವೆ. ಗೀತೆ ಧರ್ಮವೃಕ್ಷ. ಅದನ್ನು ಅವಲಂಬಿಸಿದವರಿಗೆ ಗೀತಾಫಲವು ತಪ್ಪದೆ ದೊರೆಯುತ್ತದೆಂದು ಹೇಳುವುದರಲ್ಲಿ ಯಾವ ಅತಿಶಯೋಕ್ತಿಯಿಲ್ಲ. ಗೀತೆಯಲ್ಲಿ ಇಂಥಹ ಅದ್ಭುತಶಕ್ತಿ ಅಡಗಿರುವುದಕ್ಕೆ ಕಾರಣವೇನು? ಅದನ್ನು ಬೋಧಿಸಿದವನು ಷೋಡಶಕಲಾಪರಿಪೂರ್ಣನಾದ ಅವತಾರಪುರುಷ. ಪ್ರಪಂಚದಲ್ಲಿ ದೊಡ್ಡದೊಡ್ಡ ಮತಗಳಿಗೆ ಸಂಬಂಧಿಸಿದ ಪ್ರವಕ್ತರಲ್ಲಿ ಕೆಲವರು 'ನಾನು ಆ ದೇವರ ಕುಮಾರನು' ಎಂದು ಹೇಳಿದ್ದಾರೆ. ಮತ್ತೆ ಕೆಲವರು 'ನಾನು ದೇವನ ದೂತ' ಎಂದು ಹೇಳಿದ್ದಾರೆ. ಮತ್ತೆ ಕೆಲವರು 'ನಾನು ದೇವರ ಸೇವಕ' ಎಂದು ಹೇಳಿದ್ದಾರೆ. ಆದರೆ ಗೀತಾಪ್ರವಕ್ತ 'ನಾನೇ ದೇವರು' ಎಂದು ಹೇಳಿಬಿಟ್ಟರು. ಆದ್ದರಿಂದ ಗೀತೆ 'ಸಾಕ್ಷಾತ್ ದೈವವಾಣಿ' ಪರಂಪರದೈವವಾಣಿಯಲ್ಲ. ಆದ್ದರಿಂದಲೇ ಇಂಥಹ ಪ್ರಚಂಡ ಆಧ್ಯಾತ್ಮಿಕ ಶಕ್ತಿ ಇದಕ್ಕೆ ಬಂದಿದೆ. ಅರ್ಜುನನ ಹಿಮಗಿರಿ ಸದೃಶವಾದ (ಅಜ್ಞಾನವು) ಮೋಹವು ಗೀತೆಯ ಅರ್ಧಬೋಧೆಯಿಂದಲೇ ಪೂರ್ತಿಯಾಗಿ ಮಾಯವಾಗಿ ಹೋದದ್ದು[3] ಅತಿ ವಿಚಿತ್ರವಾದ ವಿಷಯ. ಗೀತೆಯ ಅಲೌಕಿಕ ಸಾಮರ್ಥ್ಯವನ್ನು ಸಮರ್ಥಿಸಲು ಇದಕ್ಕಿಂತ ಮಿಗಿಲಾದ ಸನ್ನಿವೇಶ ಬೇರೇನು ಬೇಕು? ಗೀ-ಗಾನ ಮಾಡುವವರನ್ನು, ತ-ತಟಕ್ಕೆ (ಮೋಕ್ಷಕ್ಕೆ) ಒಯ್ಯುವುದು ಗೀತೆ. ಕಲ್ಪವೃಕ್ಷದಂತೆ ತನ್ನನ್ನಾಶ್ರಯಿಸಿದವರಿಗೆ ಅದು ಸಂಪೂರ್ಣ ರಕ್ಷಣೆಯನ್ನು ನೀಡುತ್ತದೆ. ಅಸಹಾಯಕರಿಗೆ ಅದು ಸಹಾಯವಾಗಿ ನಿಲ್ಲುತ್ತದೆ. ಕುರುಡರಿಗೆ ಕಣ್ಣಾಗಿ, ಕುಂಟರಿಗೆ ಕಾಲಾಗಿ, ದುರ್ಬಲರಿಗೆ ಬಲವಾಗಿ, ವಿಷಯದಾವಾಗ್ನಿಗೆ ಮಳೆಯಾಗಿ, ಅಜ್ಞಾನಿಗೆ ಜ್ಞಾನವಾಗಿ, ಅದು ಅಭಯವನ್ನೀಯುತ್ತದೆ. ಭಯ ಪೀಡಿತನನ್ನು ಸಿಂಹವನ್ನಾಗಿ, ಮರಣಿಸುವವನನ್ನು ಅಮರರನ್ನಾಗಿ ಕ್ಷಣದಲ್ಲೇ ಪರಿವರ್ತನೆ ಗೊಳಿಸುವುದು. ಭವರೋಗಕ್ಕೆ ಅದು ರಾಮಬಾಣ. ಮಾನವ

---

* ಶ್ರೇಯಾನ್ದ್ರವ್ಯಮಯಾತ್ ಯಜ್ಞಾತ್ ಜ್ಞಾನಯಜ್ಞಃ ಪರಂತಪ (೪-೩೩)

1. ಯತ್ರ ಗೀತಾವಿಚಾರಶ್ಚ ಪಠನಂ ಪಾಠನಂ ಶ್ರುತಮ್। ತತ್ರಾಹಂ ನಿಶ್ಚಿತಂ ಪೃಥ್ವಿ ನಿವಸಾಮಿ ಸದೈವ ಹಿ. (ಗೀ.ಮ)
2. ಯತ್ರ ಯೋಗೇಶ್ವರಃ ಕೃಷ್ಣೋ ಯತ್ರ ಪಾರ್ಥೋ ಧನುರ್ಧರಃ। ತತ್ರ ಶ್ರೀರ್ವಿಜಯೋ ಭೂತಿರ್ಧ್ರುವಾ ನೀತಿರ್ಮತಿರ್ಮಮ (೧೮-೭೮)
3. ಅರ್ಜುನ "............ಮೋಹೋಽಯಂ ವಿಗತೋಮಮ" (ನನ್ನ ಅಜ್ಞಾನವು ತೊಲಗಿ ಹೋಗಿದೆ) (೧೧-೧)

ಸಮಾಜಕ್ಕೆ ಸರ್ವೋತ್ತಮ ಕೊಡುಗೆ. ಪ್ರತಿಯೊಬ್ಬರನ್ನು ಕೈಹಿಡಿದುಕೊಂಡು ಮೆಲ್ಲಮೆಲ್ಲಗೆ ಮೇಲಕ್ಕೆತ್ತಿ ಒಂದೊಂದು ಮೆಟ್ಟಿಲು ಊರ್ಧ್ವವಾಗಿ ಕರೆದುಕೊಂಡು ಹೋದಂತೆ ಅವರವರ ಲೋಪಗಳು ಮಾಯವಾಗಿ, ಅಂತಃಕರಣದಲ್ಲಿ ಅಡಗಿರುವ ನಿಗೂಢವಾದ ಆತ್ಮತೇಜವನ್ನು ಪ್ರಚೋದಿಸಿ, ನಿದ್ರಿಸುತ್ತಿರುವ ಶಕ್ತಿಯನ್ನು ಜಾಗೃತಗೊಳಿಸಿ ಕ್ರಮಕ್ರಮವಾಗಿ ಕೈವಲ್ಯರೂಪವಾದ ಪರಂಧಾಮಕ್ಕೆ ಅವರನ್ನು ಸೇರಿಸುತ್ತದೆ.

ಕರ್ಮ, ಭಕ್ತಿ, ಜ್ಞಾನಗಳೆಂಬ ಮೂರು ಪ್ರವಾಹಗಳು ಸೇರಿ ಆದ ತ್ರಿವೇಣಿ ಪುಣ್ಯತೀರ್ಥ ಗೀತೆ. ಅಂತಹ ತ್ರಿವೇಣಿಯಲ್ಲಿ ಸ್ನಾನ ಮಾಡುವವರು ಧನ್ಯರು. ಕರ್ಮ, ಭಕ್ತಿ, ಧ್ಯಾನ, ಜ್ಞಾನವೆಂಬ ಈ ನಾಲ್ಕು, ಬೇರೆ ಬೇರೆಯಾಗಿ ವಿಭಜಿಸಲಾರದಂತಹ ವಸ್ತುಗಳು. ಒಂದರಲ್ಲಿ ಮತ್ತೊಂದು ಬೆರೆತು ತಾಳಮೇಳಗಳೊಂದಿಗೆ ನಿಕಟವಾದ ಸಂಬಂಧವನ್ನೇರ್ಪಡಿಸಿಕೊಂಡಿವೆ. ಒಬ್ಬನಲ್ಲಿ ಸಂಸ್ಕಾರವಶದಿಂದ ಒಂದು ಪ್ರಧಾನವಾಗಿರಬಹುದು ಮತ್ತು ಬೇರೆಯವು ಗೌಣವಾಗಿ ಇದ್ದೇ ಇರುವುವು. ಈ ರಹಸ್ಯವನ್ನು ತಿಳಿಯದವರು ಅವರವರ ಮಾರ್ಗವೇ ಸರಿಯೆಂದು ಕಲಹಕ್ಕೆ ಇಳಿಯುತ್ತಾರೆ. ಗೀತೆ ಎಲ್ಲವನ್ನೂ ಸಮನ್ವಯಗೊಳಿಸಿದೆ. ಯಾರಿಂದಲೂ, ಯಾರೊಡನೆಯೂ ವಿವಾದ ಭೇದವಿಲ್ಲದೆ ನೋಡಿಕೊಂಡಿದೆ. ಅಹಂಕಾರರಾಹಿತ್ಯ, ಸ್ವಾರ್ಥತ್ಯಾಗ ಎಲ್ಲ ಮಾರ್ಗಗಳ ಪ್ರಧಾನ ಲಕ್ಷ್ಯವೆಂದು ಬೋಧಿಸಿದೆ.

ಗೀತೆಗೆ ಅನೇಕ ವ್ಯಾಖ್ಯೆಗಳಿದ್ದಾಗ್ಗ್ಯೂ, ಎಲ್ಲದಕ್ಕಿಂತ ಉತ್ತಮ ವ್ಯಾಖ್ಯೆ ಶ್ರೀಕೃಷ್ಣನ ಜೀವನವೇ ಆಗಿದೆ. ಕರ್ಮ, ಭಕ್ತಿ, ಧ್ಯಾನ, ಜ್ಞಾನಗಳು ಶ್ರೀಕೃಷ್ಣನ ಜೀವನದಲ್ಲಿ ಸಮುಚಿತ ಸ್ಥಾನ ಹೊಂದಿವೆ. ಆತನದು ಆದರ್ಶ ಜೀವನ. ಅನುಷ್ಠಾನ ವೇದಾಂತ ಆತನ ದಾರಿ. ಆತನ ಜೀವನ ಮೂರ್ತೀಭವಿಸಿದ ಗೀತಾಪ್ರಬೋಧೆ. ಹೇಗೆಂದರೆ ಶ್ರೀ ಕೃಷ್ಣನು ನಿಷ್ಕಾಮಕರ್ಮವನ್ನು ಆಚರಿಸಿ ತೋರಿಸಿದನು. ಗೀತಾಜ್ಞಾನವನ್ನಾಶ್ರಯಿಸಿಯೇ ಮೂರು ಲೋಕಗಳನ್ನು ಆಳಿ ತೋರಿಸಿದನು. ಅನವರತಕರ್ಮದ ಮಧ್ಯೆ ನಿರತಿಶಯ ಶಾಂತಿಯನ್ನು (Intense rest in ceaseless activity) ಹೊಂದಿರುವುದು ಆತನ ಜೀವಿತದ ಒಂದು ಮಹಾವಿಶೇಷ. ಗೀತೆಯಲ್ಲಿಯ ಪ್ರಧಾನ ಬೋಧೆಯಲ್ಲಿ ಇದು ಒಂದು. ಇನ್ನು ಎರಡನೆಯದು ಭಕ್ತಿ. ತನ್ನ ಗುರುವಾದ ಸಾಂದೀಪ ಮಹರ್ಷಿ ಹಾಗು ಬೇರೆ ಪ್ರಾಜ್ಞರಿಗೆ ಶ್ರೀಕೃಷ್ಣನು ಎಷ್ಟೋ ಭಕ್ತಿಯನ್ನು ಸಲ್ಲಿಸಿದನು. ಧರ್ಮರಾಜನು ಆಚರಿಸಿದ ರಾಜಸೂಯಯಾಗದಲ್ಲಿ ಭಕ್ತರ ಪಾದಗಳನ್ನು ತೊಳೆದು ತನ್ನ ವಿನಯವನ್ನು, ನಿಗರ್ವವನ್ನು ತೋರಿಸಿದನು. ಇನ್ನು ಯೋಗದ ವಿಷಯಕ್ಕೆ ಬಂದರೆ ಆತನು ಸ್ವಯಂ ಯೋಗೇಶ್ವರನೇ ಹೌದು. ಜ್ಞಾನದ ವಿಷಯಕ್ಕೆ ಬಂದರೆ ಅವಿರತ ಜ್ಞಾನಧಾರೆಯ ಮೂರ್ತಿ ಆತನು. ಬಹು ಹಿಂದೆ ಸೂರ್ಯನಿಗೆ ಯೋಗವನ್ನು, ಜ್ಞಾನವನ್ನು ಬೋಧಿಸಿದ ಪುರಾಣಪುರುಷ. ಈ ಪ್ರಕಾರವಾಗಿ ಕರ್ಮ, ಭಕ್ತಿ, ಧ್ಯಾನ, ಜ್ಞಾನಗಳೆನ್ನುವ ಗೀತಾಧರ್ಮದ ಸಂಪುಟರೂಪವೇ ಶ್ರೀಕೃಷ್ಣಪರಮಾತ್ಮ. ಶ್ರೀಕೃಷ್ಣನು ಯಾವ ರೀತಿ ತನ್ನ ಜೀವನವನ್ನು ಗೀತಾಮಯವನ್ನಾಗಿಸಿಕೊಂಡನೋ ಹಾಗೆಯೇ ಪ್ರತಿವ್ಯಕ್ತಿಯು ತನ್ನ ನಿತ್ಯಜೀವನವನ್ನು ಗೀತೆಗೆ ಅನುರೂಪವಾಗಿ ಬದಲಾಯಿಸಿಕೊಂಡು ತನ್ನ ಮಾಂಸಮಯ ವಿಗ್ರಹವನ್ನು ಮಂತ್ರಮಯವಾಗಿ ಹಾಗೂ ಸಚ್ಚಿದಾನಂದ ದಿವ್ಯತೇಜೋಮಯವಾಗಿ ಪರಿಪೂರ್ಣಗೊಳಿಸಿಕೊಳ್ಳಬೇಕು. ಇದೇ ಜೀವನ ಲಕ್ಷ್ಯ. ಗೀತಾ ಪ್ರಬೋಧೆಯ ಸಾರ.

ಗೀತೆಯಲ್ಲಿಯ ಮತ್ತೊಂದು ವಿಶೇಷವೇನೆಂದರೆ ಅದರಲ್ಲಿ ಎಲ್ಲೂ ಬಲಾತ್ಕಾರವಿಲ್ಲ. ಗೀತೆಯ ಧರ್ಮಬೋಧೆಯೆಲ್ಲವೂ ಸಮಾಪ್ತಿಯಾದನಂತರ ಶ್ರೀಕೃಷ್ಣನು ಅರ್ಜುನನೊಡನೆ

**ವಿಮೃಶ್ಯೈತದಶೇಷೇಣ ಯಥೇಚ್ಛಸಿ ತಥಾ ಕುರು** (೧೮-೬೩)

'ನಾನು ಹೇಳಿದ ಈ ಗೀತಾಶಾಸ್ತ್ರವೆಲ್ಲವನ್ನು ನೀನು ಚೆನ್ನಾಗಿ ಪರ್ಯಾಲೋಚಿಸಿಕೊಂಡು ನಂತರ ನಿನಗೆ ಹೇಗೆ ಇಷ್ಟವೋ ಹಾಗೆ ಮಾಡು' ಎಂದು ಹೇಳಿರುವುದೇ ಇದಕ್ಕೆ ಪ್ರಮಾಣ. 'ಹೇಳಬೇಕಾದ ಧರ್ಮವನ್ನು ನಾನು ಹೇಳಿದೆ. ಇದು ತಗ್ಗು, ಇದು ದಿನ್ನೆ; ಇದು ಅಮೃತ, ಇದು ವಿಷ ಇದು ಶ್ರೇಯಸ್ಸು, ಇದು ಪ್ರೇಯಸ್ಸು; ಇದು ಬಂಧ, ಇದು ಮೋಕ್ಷ; ಇದು ಪುಣ್ಯ, ಇದು ಪಾಪ- ಈ ಪ್ರಕಾರವಾಗಿ ಸ್ಪಷ್ಟವಾಗಿ ನಿರೂಪಿಸಿ ತೋರಿಸಿದ್ದೇನೆ. ನಿನಗೆ ಏನು ಇಷ್ಟವೋ ಅದನ್ನೇ ತೆಗೆದುಕೊಳ್ಳಬಹುದು' ಎಂದು ಭಗವಂತನು ಕರುಣೆಯಿಂದ ಹೇಳಿದನು. ಮಹಾನುಭಾವರು ಇತರರಿಗೆ ಧರ್ಮವನ್ನು ಬೋಧಿಸುವವರೇ ಹೊರತು ಕರ್ತೃತ್ವವನ್ನು ಎಂದೂ ವಹಿಸರು. ಬುದ್ಧಿಯಿರುವ ಶಿಷ್ಯರು ಗುರುವಿನ ಇಂಗಿತವನ್ನು ಗ್ರಹಿಸಿ ಅವರು ಬೋಧಿಸಿದ ಧರ್ಮವನ್ನು ಮನಸಾರೆ ಸ್ವೀಕರಿಸುತ್ತಾರೆ ವಿನಃ ತಾತ್ಸಾರಿಸುವುದಿಲ್ಲ. ಅರ್ಜುನನೂ ಹಾಗೆ ಮಾಡಿದನು. ಅದರ ಫಲಸ್ವರೂಪ ಆತನ ಅಜ್ಞಾನ ಕ್ಷಣದಲ್ಲಿ ಮಾಯವಾಯಿತು.

ಇನ್ನು ಗೀತೆಯಲ್ಲಿಯ ಭಾವಗಳನ್ನೆಲ್ಲಾ ಕ್ರೋಢೀಕರಿಸಿ ಸಂಕ್ಷೇಪವಾಗಿ ಕೆಳಗೆ ಕೊಡಲಾಗಿದೆ. ಪ್ರತಿಜೀವಿ ಘನೀಭವಿಸಿದ ಆತ್ಮಸ್ವರೂಪವೇ ಆಗಲಿ ದೇಹವಲ್ಲ (Each soul is potentially divine). ಆದರೆ ಚಿತ್ತಶುದ್ಧಿಯಿಲ್ಲದ ಕಾರಣ ಮನುಜನಿಗೆ ಅಂಥಹ ಅಪರೋಕ್ಷಜ್ಞಾನ ಉಂಟಾಗುತ್ತಿಲ್ಲ. ಆದ್ದರಿಂದ ಚಿತ್ತಶುದ್ಧಿಗೋಸ್ಕರ ನಿಷ್ಕಾಮಕರ್ಮವನ್ನು ತಪ್ಪದೆ ಆಚರಿಸಬೇಕು. ಈಶ್ವರಾರ್ಪಣ ಬುದ್ಧಿಯಿಂದ, ಕರ್ತೃತ್ವ ರಹಿತವಾಗಿ, ನಿಷ್ಕಾಮವಾಗಿ ಕರ್ಮಗಳನ್ನು ಆಚರಿಸುತ್ತಾ ಬಂದರೆ ಸ್ವಲ್ಪ ಕಾಲದಲ್ಲೇ ಚಿತ್ತವು ನಿರ್ಮಲತ್ವವನ್ನು ಹೊಂದಬಲ್ಲದು. ಮಲಿನ ರಹಿತವಾದ ಕನ್ನಡಿಯಲ್ಲಿ ಸೂರ್ಯನ ಪ್ರತಿಬಿಂಬ ಸ್ಪಷ್ಟವಾಗಿ ಗೋಚರವಾದಂತೆ, ಶುದ್ಧವಾದ ಬಟ್ಟೆಗೆ ಬಣ್ಣ ಚೆನ್ನಾಗಿ ಹತ್ತಿದಂತೆ, ನಿರ್ಮಲ ಚಿತ್ತದಲ್ಲಿ ಆತ್ಮಜ್ಞಾನವು ಸೊಗಸಾಗಿ ಅನುಭೂತಿಯಾಗುವುದು. ಆದ್ದರಿಂದಲೇ ಗೀತೆಯಲ್ಲಿ ಹೃದಯ ನಿರ್ಮಲತೆಗೆ, ಚಿತ್ತಶುದ್ಧಿಗೆ ಬೇಕಾದ ಸಾಧನೋಪಾಯಗಳನ್ನು ಕೊಡಲಾಗಿದೆ ಮತ್ತೆ ಮಾಯಾಂತರ್ಗತವಾದ ಜೀವಿಯು ಸ್ವಯಂಶಕ್ತಿಯಿಂದ ಮಾಯೆಯನ್ನು ದಾಟುವುದು ಬಹಳ ದುಸ್ತರವಾದ ಕೆಲಸವಾದ್ದರಿಂದ, ಮಾಯಾತೀತನಾದ ಪರಮೇಶ್ವರನ ಕಟ್ಟುನಿಟ್ಟಳೆಗಳನ್ನು ಪಾಲಿಸಲೇಬೇಕಾಗಿದೆ. ಆದ್ದರಿಂದ ಭಕ್ತಿಯು ಬಹಳ ಅವಶ್ಯಕವಾದದ್ದು. ನಿರ್ಮಲಭಕ್ತಿಯಿಂದ ಭಗವಂತನ ನಾಮಸಂಕೀರ್ತನೆ, ಜಪ, ಪೂಜೆ, ಪ್ರಾರ್ಥನಾದಿಗಳನ್ನು ಆಚರಿಸಬೇಕು.

**ಯೇ ಭಜಂತಿ ತು ಮಾಂ ಭಕ್ತ್ಯಾ ಮಯಿತೇ ತೇಷು ಚಾಪ್ಯಹಮ್** (೯-೨೯)

ಎಂದು ಭಗವಂತನು ತಿಳಿಸಿದ ಹಾಗೆ ಯಾರ್ಯಾರು ಭಕ್ತಿಯಿಂದ ಸರ್ವೇಶ್ವರನನ್ನು ಆರಾಧಿಸುವರೋ ಅವರನ್ನು ಭಗವಂತನು ಅನುಗ್ರಹಿಸುವನು. ಅಂಥಹ ಅನುಗ್ರಹದಿಂದ ಸಾಧಕನಲ್ಲಿ 'ಬುದ್ಧಿಯೋಗ'ವೆನ್ನುವ ಅಪೂರ್ವ ವಸ್ತು ಬಂದು ಸೇರಿಕೊಳ್ಳುವುದು (ದದಾಮಿ ಬುದ್ಧಿಯೋಗಂ). ಅದನ್ನೇ ಆತ್ಮಜ್ಞಾನವೆನ್ನುವರು. ಅದು ಲಭಿಸಿದರೆ ಇನ್ನು ಮೋಕ್ಷ ಬಹು ಸಮೀಪ. ಈ ವಿಧವಾಗಿ ಪುಣ್ಯಕಾರ್ಯಾಚರಣೆ, ನಿಷ್ಕಾಮಕರ್ಮ, ಅಚಂಚಲಭಕ್ತಿ

ಮುಂತಾದುವು ಜೀವಿಯ ಜ್ಞಾನೋತ್ಪಾದನೆಯಲ್ಲಿ ಅಮಿತವಾದ ಸ್ಥಾನವನ್ನು ಹೊಂದಿವೆ. ಆದರೆ ಮನೆಯೊಳಗಡೆ ದೀಪ ಬೆಳಗುತ್ತಿದ್ದರೂ ಕಿಟಕಿಯ ಮೂಲಕ ಗಾಳಿ ಬಂದು ದೀಪವನ್ನು ಆರಿಸುವ ಹಾಗೆ, ಇಂದ್ರಿಯ ದ್ವಾರಗಳ ಮೂಲಕ ವಿಷಯಸಂಕಲ್ಪಗಳನ್ನು ಒಳಗೆ ಪ್ರವೇಶಿಸಲು ಬಿಟ್ಟರೆ ಕಷ್ಟಬಿದ್ದು ಹೊತ್ತಿಸಿದ್ದ ಆ ಜ್ಞಾನದೀಪವು ಆರಿಹೋಗುವುದು. ಆದ್ದರಿಂದ ಇಂದ್ರಿಯ ನಿಗ್ರಹಣೆ, ವಿಷಯವಿರಕ್ತಿಗಳನ್ನು ಮೊದಲಿನಿಂದಲೂ ಅಭ್ಯಸಿಸಿಕೊಂಡು ಬರಬೇಕು.

ತಸ್ಮಾತ್ತ್ವಮಿಂದ್ರಿಯಾಣ್ಯಾದೌ ನಿಯಮ್ಯ ಭರತರ್ಷಭ (೩-೪೧)

ಎಂದು ಭಗವಂತನು ಇಂದ್ರಿಯ ನಿಗ್ರಹದ ಬಗ್ಗೆ ಅಲ್ಲಲ್ಲಿ ಒತ್ತಿ ಹೇಳುತ್ತಾ ಬಂದಿದ್ದಾನೆ. ಇಲ್ಲಿ ಆದೌ (ಮೊಟ್ಟಮೊದಲು) ಎನ್ನುವ ಪದ ಪ್ರಯೋಗವಾಗಿರುವುದರಿಂದ ಈ ಕಾರ್ಯವು ಯಾವಾಗಲೋ ಮುಂದೆ ಮಾಡಬೇಕಾದುದು ಅಲ್ಲ, ಸಾಧನದ ಪ್ರಾರಂಭದಲ್ಲೇ ಇದರ ಬಗ್ಗೆ ಯೋಚಿಸಬೇಕೆಂದು ಗೀತಾಚಾರ್ಯನು ಎಚ್ಚರಿಕೆ ಕೊಟ್ಟಿರುತ್ತಾನೆ. ಈ ಪ್ರಕಾರವಾಗಿ ಇಂದ್ರಿಯಗಳನ್ನು, ಚಿತ್ತವೃತ್ತಿಗಳನ್ನು ನಿರೋಧಿಸುವುದೇ ರಾಜಯೋಗ. ಈ ವಿಧವಾಗಿ ನಿಷ್ಕಾಮಕರ್ಮ, ಭಕ್ತಿ, ರಾಜಯೋಗಗಳಿಂದ ಚಿತ್ತದಲ್ಲಿಯ ಭಯಂಕರವಾದ ದೋಷಗಳಾದ ಮಲ, ವಿಕ್ಷೇಪಗಳನ್ನು ಶೌಚ ಗೊಳಿಸಿಕೊಂಡು ಆತ್ಮವಿಚಾರಣೆಯಲ್ಲಿ ಪಾದಾರ್ಪಣೆ ಮಾಡಬೇಕು. 'ನಾನು ಯಾರು?' ಎನ್ನುವ ಪ್ರಶ್ನೆಯನ್ನು ಹಾಕಿಕೊಂಡು ಪಂಚಕೋಶಗಳನ್ನು 'ಧೀಶಕ್ತಿ'ಯಿಂದ ಬೇರ್ಪಡಿಸಿ, ಆ ಸರ್ವಸಾಕ್ಷಿಯಾದ, ಸ್ವಯಂಜ್ಯೋತಿ ಸ್ವರೂಪವನ್ನು (ಕ್ಷೇತ್ರಜ್ಞನನ್ನು) ಚೆನ್ನಾಗಿ ಅನುಭೂತಿಗೊಳಿಸಿಕೊಳ್ಳಬೇಕು. ಆಗ ಚಿತ್ತದಲ್ಲಿಯ ಮೂರನೆಯ ದೋಷವಾದ 'ಆವರಣ' ಕಾಲುಕೀಳುವುದು. ಆಗ ಜೀವಿಯು 'ತೇಷಾಮಾದಿತ್ಯವಜ್ಞಾನಂ' ಎಂದಹಾಗೆ, ಮೋಡಗಳಿಂದ ಹೊರಬಿದ್ದ ಸೂರ್ಯನ ಹಾಗೆ ಸ್ವಚ್ಛವಾಗಿ ಆತ್ಮತೇಜೋವಿರಾಜಿತನಾಗುವನು. ಅದನ್ನೇ ಮೋಕ್ಷವೆನ್ನುವರು. ಅಂಥಹ ಸ್ಥಿತಿಯನ್ನು ಪಡೆಯುವುದೇ ಜೀವಿಯ ಲಕ್ಷ್ಯ. ಅದನ್ನು ಈ ದೇಹವಿರುವಾಗಲೇ ಸಾಧಿಸಿ ಕೃತಾರ್ಥನಾಗಬೇಕಾಗಿದೆ. ಇದೇ ಗೀತಾಸಾರ.

ಗೀತೆಯನ್ನು ಪಠಿಸಲು ಕಾಲನಿಯಮವೇನೂ ಇಲ್ಲ. ಆದರೆ ಸಾಮಾನ್ಯವಾಗಿ ಬೆಳಿಗ್ಗೆ ಸ್ನಾನಮಾಡಿ ಶುಚಿರ್ಭೂತರಾಗಿ, ಮನೆಯಲ್ಲಾಗಲಿ, ತೀರ್ಥಸ್ಥಾನದಲ್ಲಾಗಲಿ ಪವಿತ್ರಸ್ಥಾನದಲ್ಲಿ ಕುಳಿತುಕೊಂಡು ಗೀತಾಪಾರಾಯಣ ಮಾಡುವುದು ಆಚಾರ. ಹಾಗೆಯೇ ಬೇರೆ ವೇಳೆಗಳಲ್ಲಿ ಕೂಡ ಪಾರಾಯಣವನ್ನು ಮಾಡಬಹುದು. ಆದ್ದರಿಂದ ಆಂತರಿಕ ಶುದ್ಧಿಯ ಜೊತೆ ಬಾಹ್ಯಶುದ್ಧಿಯನ್ನೂ ಸಹ ಗಮನಿಸಬೇಕು. 'ಶುಚೌದೇಶೇ' ಎಂದು ಗೀತೆಯಲ್ಲಿ ಹೇಳಿರುವುದರಿಂದ ಸಾಧನೆ ಮಾಡುವ ಸ್ಥಳ, ಜಪಿಸುವ ಸ್ಥಳ ಪರಿಶುದ್ಧವಾಗಿರಬೇಕೆಂದು ಸ್ಪಷ್ಟವಾಗುತ್ತದೆ. ಪ್ರತಿದಿನವೂ ಒಂದು ಅಧ್ಯಾಯವನ್ನು ಪಾರಾಯಣ ಮಾಡಬಹುದು. ಸಮಯವಿದ್ದಲ್ಲಿ ಇನ್ನೂ ಹೆಚ್ಚಿಗೆ ಮಾಡುತ್ತಾ ಹೋಗಬೇಕು. ಪಾರಾಯಣ ಪದ್ಧತಿಯನ್ನು ಗ್ರಂಥದ ಆದಿಯಲ್ಲಿ ಕೊಡಲಾಗಿದೆ. ಪಾರಾಯಣವು ಪೂರ್ತಿಯಾದ ನಂತರ ಗೀತಾಮಹಾತ್ಮ್ಯೆಯ ಒಂದೆರಡು ಶ್ಲೋಕಗಳನ್ನಾದರೂ ತಪ್ಪದೆ ಪಠಿಸಬೇಕು.

ಮತ್ತೆ ಪಾರಾಯಣದ ನಂತರ ಗೀತೆಯನ್ನು ಅರ್ಥದೊಡನೆ ಸ್ವಲ್ಪ ಪಠಿಸುವುದನ್ನು ಅಭ್ಯಸಿಸುತ್ತಾ ಬರಬೇಕು. ಏಕೆಂದರೆ ಪಾರಾಯಣದಿಂದ ಪುಣ್ಯವು ಲಭಿಸುವುದು. ಶ್ಲೋಕಾರ್ಥವನ್ನು ಚೆನ್ನಾಗಿ ಮನನ ಮಾಡಿದಾಗ ಮಾತ್ರವೇ ಚಿತ್ತದಲ್ಲಿಯ ಮಲಿನ ವಾಸನೆಗಳು ನಶಿಸಿ ಮೋಕ್ಷಕ್ಕೆ ದಾರಿಯೇರ್ಪಡುವುದು. ಅರ್ಥವು ಸಂಧಿಗ್ಧವಾಗಿದ್ದಾಗ ಶ್ಲೋಕದಲ್ಲಿಯ ಪೂರ್ವಾಪರಗಳನ್ನು ಸಮನ್ವಯಪರಿಸಿಕೊಂಡು ನೋಡಬೇಕು. ದೃಷ್ಟಾಂತಕ್ಕೆ,

ಪ್ರಕೃತಿಂ ಯಾಂತಿ ಭೂತಾನಿ ನಿಗ್ರಹಃ ಕಿಂ ಕರಿಷ್ಯತಿ (೩-೩೩)

ಎನ್ನುವ ಶ್ಲೋಕದಲ್ಲಿ 'ಜನರು ಅವರವರ ಸಂಸ್ಕಾರವನ್ನನುಸರಿಸಿ ವರ್ತಿಸುತ್ತಿದ್ದಾರೆ; ಇನ್ನು ನಿಗ್ರಹ ಏನು ಮಾಡಬಲ್ಲದು?' ಎಂದು ಹೇಳಲ್ಪಟ್ಟಿದೆ. ಇಲ್ಲಿ ಸಂಸ್ಕಾರಗಳ ಪ್ರಾಬಲ್ಯವನ್ನು ನಿರೂಪಿಸಲು ಹೀಗೆ ಹೇಳಲ್ಪಟ್ಟಿದೆಯೇ ಹೊರತು ನಿಗ್ರಹವಿರಬಾರದೆನ್ನುವ ಭಾವವಲ್ಲ ಆದ್ದರಿಂದ ನಂತರವೇ,

ಇಂದ್ರಿಯಸ್ಯೇಂದ್ರಿಯಸ್ಯಾರ್ಥೇ ರಾಗದ್ವೇಷೌ ವ್ಯವಸ್ಥಿತೌ
ತಯೋರ್ನವಶಮಾಗಚ್ಛೇ ತ್ತೌಹ್ಯಸ್ಯ ಪರಿಪಂಥಿನೌ (೩-೩೪)

'ಇಂದ್ರಿಯಗಳಿಗೆ ಶಬ್ದಾದಿ ವಿಷಯಗಳಲ್ಲಿ ರಾಗದ್ವೇಷಗಳು ಏರ್ಪಡುತ್ತವೆ. ಆ ರಾಗ ದ್ವೇಷಗಳು ಜ್ಞಾನಿಗೆ ಶತ್ರುಗಳು. ಆದ್ದರಿಂದ ಅವುಗಳಿಗೆ ವಶವಾಗಬಾರದು' ಎಂದು ಹೇಳಲಾಗಿದೆ. ಇಲ್ಲಿ ಇಂದ್ರಿಯನಿಗ್ರಹವನ್ನು ತಪ್ಪದೆ ಅಭ್ಯಾಸ ಮಾಡಿಕೊಳ್ಳಬೇಕೆಂದು ಶ್ರೀಕೃಷ್ಣಮೂರ್ತಿ ಆದೇಶವಿತ್ತಿದ್ದಾನೆ. ಆದ್ದರಿಂದ ಸಂದಿಗ್ಧಾರ್ಥದಿಂದ ಕೂಡಿದ ಯಾವುದೇ ಶ್ಲೋಕದ ಅರ್ಥವನ್ನು, ನಿರ್ಣಯಿಸಬೇಕಾದಾಗ ಪೂರ್ವಾಪರ ಶ್ಲೋಕಗಳನ್ನು ಕೂಡ ವಿಚಾರಿಸಬೇಕಾಗಿ ಬರುವುದು. ಸಮನ್ವಯ ದೃಷ್ಟಿಯಿಂದ ಗೀತೆಯನ್ನು ಪಠಿಸಬೇಕು.

ಈ ಪ್ರಕಾರವಾಗಿ ಪ್ರತಿದಿನವೂ ಸ್ವಲ್ಪ ಗೀತಾಭ್ಯಾಸಮಾಡುತ್ತಾ ಚಿತ್ತವನ್ನು ನಿರ್ಮಲಮಾಡಿಕೊಂಡು ಭಗವದನುಗ್ರಹಕ್ಕೆ ಪಾತ್ರರಾಗಿ ಜನ್ಮಪಾವನ ಮಾಡಿಕೊಳ್ಳಬೇಕು. ಮುಖ್ಯವಾಗಿ ಪಾಶ್ಚಾತ್ಯನಾಗರೀಕತೆಯ ವ್ಯಾಮೋಹವು ಜನರನ್ನು ಬೇಟೆಯಾಡುತ್ತಿರುವ ಈ ಕಾಲದಲ್ಲಿ ಗೀತಾಪ್ರಬೋಧೆಯ ಅವಶ್ಯಕತೆ ಎಷ್ಟೋ ಇದೆ. ಪ್ರಾಪಂಚಿಕ ಭೋಗಗಳೇ ಶರಣ್ಯವೆಂದು ತಿಳಿಯುವ ಅವಿವೇಕಿಗಳಿಗೆ ಗೀತೆ ಒಳ್ಳೆಯ ಗುಣಪಾಠವನ್ನು ಹೇಳಿ ವಾಸ್ತವಸುಖ ಎಲ್ಲಿದೆ ಎನ್ನುವುದನ್ನು ತೋರಿಸುತ್ತಿದೆ. ಅಲ್ಪಸುಖಗಳಿಗೆ ಕೈಚಾಚದೆ ನಿರತಿಶಯಾನಂದ ವನ್ನು ಹುಡುಕಿಕೊಳ್ಳಿ ಎಂದು ಪ್ರೇಮದಿಂದ ಬುದ್ಧಿ ಹೇಳುತ್ತದೆ. ಗೀತಾಮಾತೆಯು ವಾತ್ಸಲ್ಯಾನಂದವನ್ನು ಹುಡುಕಿಕೊಳ್ಳಿ ಎಂದು ಪ್ರೇಮದಿಂದ ಬುದ್ಧಿ ಹೇಳುತ್ತದೆ. ಆದ್ದರಿಂದ ಗೀತಾಮಾತೆಯ ವಾತ್ಸಲ್ಯಪೂರಿತ ದಿವ್ಯವಚನಗಳನ್ನು ಶ್ರದ್ಧೆಯಿಂದ ಕೇಳಿ, ಅನುಷ್ಠಾನ ಮಾಡಿ ಆತ್ಮಸಾಮ್ರಾಜ್ಯಾಭಿಷಕ್ತರಾಗಿರಿ!

ಆದರೆ ಗೀತೆಯನ್ನು ಪಠಿಸಲು ಬೇಕಾದ ವಿದ್ವತ್ತಿಲ್ಲದವರು, ಹೆಚ್ಚಿಗೆ ಓದಿಕೊಳ್ಳದೇ ಇರುವವರು ಹೇಗೆ ಮುಕ್ತ ರಾಗಬಲ್ಲರೆಂಬ ಸಂಶಯ ಕೆಲವರನ್ನು ಕಾಡುತ್ತಿರಬಹುದು. ಅಂಥಹವರ ಬಗ್ಗೆ ಶ್ರೀಕೃಷ್ಣಪರಮಾತ್ಮ ಗೀತೆಯಲ್ಲಿ ಒಂದೆರಡು ಕಡೆ ಪ್ರಸ್ತಾಪಿಸಿ ಅವರೂ ಸಹ ಉದ್ಧಾರವಾಗಲು ಅವಕಾಶವಿದೆಯೆಂದು ಕರುಣೆಯಿಂದ ಹೇಳಿದ್ದಾನೆ.

ಅನ್ಯೇತ್ವೇವಮಜಾನಂತಃ ಶ್ರುತ್ವಾನ್ಯೇಭ್ಯ ಉಪಾಸತೇ
ತೇಽಪಿ ಚಾತಿತರನ್ತ್ಯೇವ ಮೃತ್ಯುಂ ಶ್ರುತಿಪರಾಯಣಾಃ (೧೩-೨೬)

ದೊಡ್ಡ ದೊಡ್ಡ ಯೋಗಗಳ ಪರಿಚಯವಿಲ್ಲದೇ ಇದ್ದರೂ, ಇತರರಿಂದ ಬೋಧೆಗಳನ್ನು ಕೇಳಿ, ಶ್ರದ್ಧೆಯಿಂದ ಯಾರು ಅವುಗಳನ್ನು ಆಚರಿಸುವವರೋ ಅವರೂ ಸಹ ಜನನ ಮರಣ ರೂಪವಾದ ಈ ಸಂಸಾರ ಬಂಧವನ್ನು ದಾಟುವರೆಂದು ಭಗವಂತನು ಹೇಳಿದ್ದಾನೆ. ವಿದ್ಯೆ ಶ್ರೇಷ್ಠವಾದುದು. ಒಂದು

ವೇಳೆ ಅದು ಇಲ್ಲದೆ ಹೋದಲ್ಲಿ ಆಧ್ಯಾತ್ಮಿಕ ವಿಜ್ಞಾನವನ್ನು ಶ್ರವಣದ ಮೂಲಕ ಕ್ರಮಕ್ರಮವಾಗಿ ಪಡೆಯಬಹುದು. ಏಕೆಂದರೆ ಶ್ರವಣದ ನಂತರ ಮನನ, ಮನನದ ನಂತರ ನಿದಿಧ್ಯಾಸವುಂಟಾಗಿ ಮನುಷ್ಯನು ಮೆಲ್ಲಮೆಲ್ಲಗೆ ಲಕ್ಷ್ಯವನ್ನು ಸಾಧಿಸಬಲ್ಲನು. ಆದರೆ ಗಮ್ಯ ಸೇರಲೇಬೇಕೆನ್ನುವ ಛಲ, ಶ್ರದ್ಧೆ ಮಾತ್ರ ತಪ್ಪದೆ ಇರಬೇಕು. ಈ ವಿಷಯವನ್ನೇ ಗೀತಾಂತ್ಯದಲ್ಲಿ ಶ್ರೀಕೃಷ್ಣಮೂರ್ತಿ ಪ್ರಸ್ತಾಪಿಸುತ್ತಾ ಶ್ರದ್ಧೆಯಿಂದ, ಅನಸೂಯಪರರಾಗಿ ಯಾರು ಗೀತೆಯನ್ನು ಶ್ರವಣ ಮಾಡುವರೋ ಅಂಥಹವರು ಪಾಪವಿಮುಕ್ತರಾಗಿ ಪುಣ್ಯವಂತರ ಉತ್ತಮಲೋಕವನ್ನು ಹೊಂದುವರೆಂದು ಸ್ಪಷ್ಟವಾಗಿ ಹೇಳಿದ್ದಾನೆ.* ಆದ್ದರಿಂದ ಗೀತೆಯನ್ನು ಓದಲಸಾಧ್ಯವಾದವರು ದಿಗಿಲುಬೀಳದೆ ಗೀತಾಬೋಧೆ ನಡೆಯುತ್ತಿರುವ ಸ್ಥಾನಕ್ಕೆ ಹೋಗಿ ಶ್ರವಣ ಮಾಡಿ ಅದನ್ನು ಆಚರಿಸಿ ಉದ್ಧಾರವಾಗಬಹುದು. ಆದರೆ ಸಾಧ್ಯವಾದಷ್ಟು ಸ್ವತಃ ಓದಿಕೊಳ್ಳುವ ಶಕ್ತಿಯನ್ನು ಸಂಪಾದಿಸುವುದು ಸರ್ವೋತ್ತಮ. ಗೀತೆಯನ್ನು ಪಠಿಸುವುದಕ್ಕಾದರೂ ಸಂಸ್ಕೃತವನ್ನು ಕಲಿಯಿರಿ ಎಂದು ಗಾಂಧೀ ಮಹಾತ್ಮನು ಹೇಳಿರುವುದನ್ನು ಇಲ್ಲಿ ಸ್ಮರಿಸುವುದು ಉತ್ತಮ.

ಗೀತೆ ಸಮಾಪ್ತಿಯಾಗಿದೆ. ಶ್ರೀಕೃಷ್ಣನು ತನ್ನ ದಿವ್ಯೌಷಧ ಪ್ರಯೋಗವನ್ನು ಪೂರ್ತಿಮಾಡಿದ ತಕ್ಷಣವೇ ಅರ್ಜುನನ ವ್ಯಾಧಿ ಉಪಶಮನಗೊಂಡಿತು. ಆದರೂ ವೈದ್ಯನ ಇನ್ನೊಂದು ಕರ್ತವ್ಯ ಬಾಕಿ ಇದೆ. 'ನಿನ್ನ ಪರಿಸ್ಥಿತಿ ಹೇಗಿದೆ?' ಎಂದು ರೋಗಿಯನ್ನು ವಿಚಾರಿಸುವುದೇ ಆ ಕರ್ತವ್ಯ. ಶ್ರೀಕೃಷ್ಣನು ಈ ಪ್ರಶ್ನೆ ಕೇಳಲಾಗಿ, 'ನಷ್ಟೋಮೋಹಃ' ಎಂದು ತಕ್ಷಣ ರೋಗಿಯಿಂದ ಪ್ರತ್ಯುತ್ತರ ಬಂತು. "ಮಹಾತ್ಮಾ! ನನ್ನ ಅಜ್ಞಾನವು ದೂರವಾಗಿದೆ. ದೀರ್ಘಸಂಸಾರ ವ್ಯಾಧಿ ಗುಣವಾಗಿದೆ, 'ಧನ್ಯೋಽಸ್ಮಿ', ಇದೆಲ್ಲವೂ ನಿನ್ನ ಅನುಗ್ರಹದ ಫಲವೇ" ಎಂದು ಅರ್ಜುನನು ಉತ್ಸಾಹ ಪೂರ್ವಕವಾಗಿ ಹೇಳಿದನು. ವೈದ್ಯನ ಗೀತಾರೂಪ ಔಷಧಿಯ ಪ್ರಥಮ ಪ್ರಯೋಗ (ಅರ್ಜುನನ ಮೇಲೆ) ಸಫಲವಾಗಿದೆ. ತಕ್ಷಣವೇ ಸಂಜಯನು, ಆ ದಿವ್ಯೌಷಧವನ್ನು ಕುಡಿದು 'ಹೃಷ್ಯಾಮಿಚ ಪುನಃ ಪುನಃ', "ಹೃಷ್ಯಾಮಿಚ ಮುಹುರ್ಮುಹುಃ" ಎಂದು ಆನಂದದಿಂದ ಕುಣಿದನು. ಬ್ರಹ್ಮವಿಜ್ಞಾನದ ಫಲಗಳಾದ ಶೋಕರಾಹಿತ್ಯ ಹಾಗೂ ಅತ್ಯಾಹರ್ಷ ಅರ್ಜುನನಿಗೇ ಅಲ್ಲದೆ ಸಂಜಯನಿಗೂ ಕೂಡ ಲಭಿಸಿದವು. ಆದ್ದರಿಂದ ವೈದ್ಯನ ಎರಡನೆಯ ಪ್ರಯೋಗ ಸಂಜಯನ ಮೇಲೆ ನಡೆದು ಅದೂ ಕೂಡ ಸಫಲವಾಗಿರುವುದು ವೇದ್ಯವಾಗುತ್ತಿದೆ. ಹೀಗೆ ಗೀತಾಶ್ರವಣ ದಿಂದ ಒಬ್ಬರ ನಂತರ ಒಬ್ಬರು ಮುಕ್ತಿ ಪಡೆದರೆಂದರೆ ಬೇರೆಯವರ ಬಗ್ಗೆ ಸಂದೇಹವೇಕೆ? ಆದ್ದರಿಂದ ಸರ್ವರೂ ಗೀತಾಧ್ಯಾಯನಕ್ಕೆ ಕಂಕಣಬದ್ಧರಾಗ ಬೇಕು. ಆದರೆ ಶ್ರದ್ಧೆ ಬಹಳ ಅವಶ್ಯ.

ಈ ಪ್ರಕಾರವಾಗಿ ಗೀತೆ, ಅರ್ಜುನ ಸಂಜಯರಿಗೇ ಅಲ್ಲದೆ ಪ್ರಾಣಿಕೋಟಿಗೆಲ್ಲಾ ಶಾಂತಿ ಭಿಕ್ಷೆ ನೀಡುತ್ತಿದೆ. ಗೀತಾಕಲ್ಪವೃಕ್ಷ ಶಾಖೋಪಶಾಖೆಗಳಾಗಿ ವಿಸ್ತರಿಸಿ ತಣ್ಣನೆಯ ನೆರಳನ್ನಿತ್ತು ಫಲವನ್ನು ಕೊಡುವಾಗ, ಸಂಸಾರಮಾರ್ಗದಲ್ಲಿ ಅನಾದಿಕಾಲದಿಂದ ಪರಿಭ್ರಮಿಸುತ್ತ ಭೀಷಣತಾಪತ್ರಯಗಳಿಂದ ವ್ಯಥೆಹೊಂದಿದ ಜೀವಿಯು ಅದರ ಕೆಳಗೆ ಹೋಗಿ ಮೋಕ್ಷ ಫಲವನ್ನು ಭುಜಿಸಿ ಸುಖವಾಗಿ ಏಕೆ ಇರಬಾರದು? ಪವಿತ್ರ ಗೀತಾಮಕರಂದವನ್ನು ಹೀರಿ ಪರಮಾನಂದವನ್ನೇಕೆ ಅನುಭವಿಸಬಾರದು? ಗೀತಾಧ್ಯಾಯನದಿಂದ ಉತ್ತಮ ಜ್ಞಾನಯಜ್ಞವನ್ನು ಆಚರಿಸಿ ನಿರ್ವಾಣಸುಖವನ್ನೇಕೆ ಪಡೆಯಬಾರದು? ಸರ್ವೇಶ್ವರನ ಕೃಪೆಯಿಂದ, ಮಹರ್ಷಿಗಳ ಕೃಪೆಯಿಂದ ಜನರಲ್ಲಿ ಗೀತಾಸಕ್ತಿ ವೃದ್ಧಿಹೊಂದಿ ಆಧ್ಯಾತ್ಮ ವಿದ್ಯಾಪರಿಚಯ ನಿರ್ವಿಘ್ನವಾಗಿ ಸಾಗುವಂತಾಗಲಿ! ಗೀತಾತತ್ತ್ವ ಸಮಾಶ್ರಯದಿಂದ ಜನರ ಭವಬಂಧಗಳು ವಿಚ್ಛಿನ್ನವಾಗಿ ಹೋಗಲಿ! ಗೀತಾರೂಪಪರಮಾರ್ಥ ಮಳೆಯ ಧಾರೆಯಿಂದ ಜನರ ಹೃದಯಕ್ಷೇತ್ರಗಳು ಸಸ್ಯಶ್ಯಾಮಲವಾಗಿ, ನಿರ್ವಾಣವೆನ್ನುವ ಉತ್ತಮ ಬೆಳೆ ಬೆಳೆಯುವಂತಾಗಲಿ! ಗೀತಾಕಹಳೆ ಹತ್ತು ದಿಕ್ಕುಗಳಿಗೆ ಪಸರಿಸಿ ಜನರನ್ನು ಅಜ್ಞಾನನಿದ್ರೆಯಿಂದ ಏಳುವಂತೆ ಮಾಡಲಿ! ಗೀತಾಗಂಗೆಯಲ್ಲಿ ಸ್ನಾನಮಾಡಿ ಸಂಸಾರಮಾಲಿನ್ಯವನ್ನು ತೊಳೆದುಕೊಂಡು ಪ್ರಾಣಿಕೋಟಿ ನಿರತಿಶಯ ಸುಖವನ್ನು ಅನುಭವಿಸು ವಂತಾಗಲಿ! ಭಗವತ್ಕೃಪೆಯಿಂದ ಗೀತಾತತ್ತ್ವಾನುಭೂತಿಯಿಂದ ಜನರು ತಮ್ಮ ತಮಃಪಟಲಗಳನ್ನು ವಿಚ್ಛೇದಿಸಿ ಬ್ರಹ್ಮಾನಂದಾಭೂತಿಯಲ್ಲಿ ನಿಮಗ್ನರಾಗಿ ತಮ್ಮ ಜೀವನಗಳನ್ನು ಧನ್ಯಮಾಡಿಕೊಳ್ಳುವಂತಾಗಲಿ!

ಓಂ ತತ್‌ಸತ್

ಓಂ ಶ್ರೀಕೃಷ್ಣಾರ್ಪಣಮಸ್ತು

---

* ಶ್ರದ್ಧಾವಾನನಸೂಯಶ್ಚ ಶೃಣುಯಾದಪಿ ಯೋನರಃ
ಸೋಽಪಿ ಮುಕ್ತಃ ಶುಭಾನ್ ಲೋಕಾನ್ ಪ್ರಾಪ್ನುಯಾತ್ಪುಣ್ಯಕರ್ಮಣಾಮ್ (೧೮-೭೧)

ಶ್ರೀ ಕೃಷ್ಣಪರಬ್ರಹ್ಮಣೇ ನಮಃ
ಶ್ರೀ ಸದ್ಗುರು ಪರಮಾತ್ಮನೇ ನಮಃ - ಸರ್ವಮಹರ್ಷಿಭ್ಯೋ ನಮಃ

# ಶ್ರೀ ಭಗವದ್ಗೀತೆ

## ಅಥ ಪ್ರಥಮೋಧ್ಯಾಯಃ
## ಮೊದಲನೆಯ ಅಧ್ಯಾಯ
## ಅರ್ಜುನ ವಿಷಾದಯೋಗಃ - ಅರ್ಜುನ ವಿಷಾದಯೋಗವು

**ಅಧ್ಯಾಯದ ಹೆಸರು :**

'ಅರ್ಜುನ ವಿಷಾದ ಯೋಗ' - ಯೋಗವೆಂದರೆ ಕೂಡುವಿಕೆ. ಜೀವಾತ್ಮ ಪರಮಾತ್ಮರ ಐಕ್ಯವನ್ನೇ ಯೋಗವೆನ್ನುವರು. ಅಂಥಹ ಐಕ್ಯತೆಯನ್ನು ಸಿದ್ಧಿಸುವಂತೆ ಮಾಡುವ ಮಾರ್ಗವನ್ನು ಯೋಗವೆಂದೇ ಕರೆಯುವರು. ಜೀವಬ್ರಹ್ಮರ ಸಂಯೋಗ, ನಿಷ್ಕಾಮ ಕರ್ಮದಿಂದ, ಭಕ್ತಿಯಿಂದ, ಧ್ಯಾನ(ಆತ್ಮಸಂಯಮ)ದಿಂದ ಇಲ್ಲವೆ ಜ್ಞಾನದಿಂದ ಸಿದ್ಧಿಸಬಲ್ಲದು. ಆದ್ದರಿಂದಲೇ ಆಯಾ ಮಾರ್ಗಗಳನ್ನು ಸಾಧನೆಗಳನ್ನು ಅವಲಂಬಿಸಿದಾಗ ಅವುಗಳನ್ನು ಕರ್ಮಯೋಗ, ಭಕ್ತಿಯೋಗ, ಧ್ಯಾನಯೋಗ, ಜ್ಞಾನಯೋಗಗಳೆಂದು ಬೇರೆಬೇರೆಯಾಗಿ ಹೆಸರಿಸಿದ್ದಾರೆ. ಆದರೆ ವಿಷಾದವು ಹೇಗೆ ಯೋಗವಾಗುವುದು? ವಿಷಾದವೆಂದರೆ ದುಃಖ. ದುಃಖ, ಯೋಗವು ಹೇಗೆ ಆಗಬಲ್ಲದು? ಪ್ರಾಪಂಚಿಕ ವಸ್ತುಗಳಿಗೆ, ಭೋಗಭಾಗ್ಯಗಳಿಗೆ ದುಃಖಿಸುವುದು ಯೋಗವಲ್ಲವಾಗಲಿ, ದೈವಕ್ಕೆ, ಧರ್ಮಕ್ಕೆ ದುಃಖಿಸುವುದು ಯೋಗವೇ ಆಗುತ್ತದೆ. ವಿಷಾದ, ಯೋಗವಲ್ಲ, ಆದರೆ 'ಅರ್ಜುನ ವಿಷಾದವು' ಯೋಗವಾಗುವುದು. ಏಕೆಂದರೆ ಅರ್ಜುನನು ಮೂರುಲೋಕಗಳ ರಾಜ್ಯವನ್ನು ತೃಣೀಕರಿಸಿ, ಪ್ರಾಪಂಚಿಕ ಸುಖಗಳನ್ನು ತ್ಯಜಿಸಿ, ಧರ್ಮಕ್ಕಾಗಿ ತೀವ್ರವಾಗಿ ಪರಿತಪಿಸಿದನು. ಮುಮುಕ್ಷುಗಳಿಗೆ ಇಂಥಹ ಸ್ಥಿತಿ ಅತ್ಯಾವಶ್ಯಕ. ಅರ್ಜುನನಿಗೆ ಉಂಟಾದ ವೈರಾಗ್ಯಭಾವನೆ. ಧರ್ಮ ಜಿಜ್ಞಾಸೆ, ತೀವ್ರ ಪರಿತಾಪ, ಜ್ಞಾನಪ್ರಾಪ್ತಿಗೆ ಹಾಗು ಭಗವದೈಕ್ಯಕ್ಕೆ ದಾರಿಮಾಡಿಕೊಡುತ್ತವಾದ್ದರಿಂದ ಆತನ ವಿಷಾದವನ್ನು ಯೋಗವೆಂದು ವರ್ಣಿಸಲಾಗಿದೆ. ಅದರ ಬಗ್ಗೆಯ ವಿವರಣೆ ಈ ಅಧ್ಯಾಯದಲ್ಲಿ ಬರುವುದಾದ್ದರಿಂದ ಇದನ್ನು 'ಅರ್ಜುನ ವಿಷಾದಯೋಗ'ವೆಂದು ಕರೆಯುವರು

**ಈ ಅಧ್ಯಾಯದಲ್ಲಿಯ ಪ್ರಧಾನ ವಿಷಯಗಳು.**

೧) ಎರಡು ಸೇನೆಗಳ ಮುಖ್ಯ ವೀರರ ವರ್ಣನೆ (೧ ರಿಂದ ೧೧ರವರೆಗೆ)
೨) ಆಯಾ ಸೇನೆಗಳು ಶಂಖನಿನಾದಗಳು (೧೨ ರಿಂದ ೧೯ರವರೆಗೆ)
೩) ಅರ್ಜುನನ ಸೇನಾನಿರೀಕ್ಷಣೆಯ ಪ್ರಸಂಗ (೨೦ರಿಂದ ೨೭ರವರೆಗೆ)
೪) ಮೋಹಗ್ರಸ್ತನಾದ ಅರ್ಜುನನ ವಿಷಾದಪೂರಿತ ವಚನಗಳು (೨೮ ರಿಂದ ೪೭ರವರೆಗೆ)

**ಪೂರ್ವಚರಿತ್ರೆಯೊಡನೆ ಈ ಅಧ್ಯಾಯಕ್ಕೆ ಇರುವ ಸಂಬಂಧ.**

ಮಹಾಭಾರತ ಯುದ್ಧ ಪ್ರಾರಂಭವಾಗಿ ಹತ್ತು ದಿನಗಳಾಗಿವೆ. ಭೀಷ್ಮನು ರಣರಂಗದಲ್ಲಿ ಬಿದ್ದುಹೋದನು. ಆ ವೃತ್ತಾಂತವನ್ನು ತಕ್ಷಣ ಸಂಜಯನು ಧೃತರಾಷ್ಟ್ರನಿಗೆ ತಿಳಿಸಲು, ಆತನು ಬಹಳ ಶೋಕಿಸಿ ಯುದ್ಧವು ಪ್ರಾರಂಭವಾದಾಗಿನಿಂದ ಅಲ್ಲಿಯವರೆಗೆ ನಡೆದ ವೃತ್ತಾಂತವೆಲ್ಲವನ್ನು ತಿಳಿಸಬೇಕೆಂದು ಸಂಜಯನನ್ನು ಕೋರಿದನು. ಆಗ ಸಂಜಯನು, ಉಭಯಪಕ್ಷದ ಸೈನಿಕರು ಯುದ್ಧಸನ್ನದ್ಧರಾಗುವುದು, ರಣಕ್ಷೇತ್ರದಲ್ಲಿ ಶ್ರೀಕೃಷ್ಣಪರಮಾತ್ಮ ಅರ್ಜುನನಿಗೆ ಜ್ಞಾನೋಪದೇಶ ಮಾಡುವುದು ಮೊದಲಾದ ವಿಷಯಗಳೆಲ್ಲವನ್ನು ವಿವರವಾಗಿ ಧೃತರಾಷ್ಟ್ರನಿಗೆ ಹೇಳಿದನು. ಅದೇ ಗೀತಾಶಾಸ್ತ್ರ.
**ಅವತಾರಿಕೆ:-** ಯುದ್ಧದ ಬಗ್ಗೆ ಧೃತರಾಷ್ಟ್ರನು ಸಂಜಯನನ್ನು ಪ್ರಶ್ನಿಸುತ್ತಿದ್ದಾನೆ.

**ಧೃತರಾಷ್ಟ್ರ ಉವಾಚ**

**೧. ಧರ್ಮಕ್ಷೇತ್ರೇ ಕುರುಕ್ಷೇತ್ರೇ ಸಮವೇತಾ ಯುಯುತ್ಸವಃ**
**ಮಾಮಕಾಃ ಪಾಂಡವಾಶ್ಚೈವ ಕಿಮಕುರ್ವತ ಸಂಜಯ**

**ಅರ್ಥ:-** ಧೃತರಾಷ್ಟ್ರ ಉವಾಚ=ಧೃತರಾಷ್ಟ್ರನು ಹೇಳಿದನು; ಸಂಜಯ=ಓ ಸಂಜಯನೇ: ಧರ್ಮಕ್ಷೇತ್ರೇ=ಧರ್ಮಭೂಮಿಯಾದ; ಕುರುಕ್ಷೇತ್ರೇ= ಕುರುಕ್ಷೇತ್ರದಲ್ಲಿ; ಯುಯುತ್ಸವಃ=ಯುದ್ಧ ಮಾಡಬೇಕೆಂಬ ಇಚ್ಛೆಯುಳ್ಳವರಾಗಿ; ಸಮಾವೇತಾಃ=ಸೇರಿ; ಮಾಮಕಾಃ=ನನ್ನವರು; ಪಾಂಡವಶ್ಚೈವ=ಪಾಂಡವರು; ಕಿಮ್=ಏನು; ಅಕುರ್ವತ=ಮಾಡಿದರು.

**ತಾ||** ಧೃತರಾಷ್ಟ್ರನು ಹೀಗೆ ಹೇಳಿದನು: ಓ ಸಂಜಯಾ! ನನ್ನವರಾದ ದುರ್ಯೋಧನಾದಿಗಳು, ಪಾಂಡವಪುತ್ರರಾದ ಧರ್ಮರಾಜಾದಿಗಳು ಯುದ್ಧಮಾಡುವ ಇಚ್ಛೆಯುಳ್ಳವರಾಗಿ ಪುಣ್ಯಭೂಮಿಯಾದ ಕುರುಕ್ಷೇತ್ರದಲ್ಲಿ ಸೇರಿ ಏನು ಮಾಡಿದರು?

**ವ್ಯಾಖ್ಯೆ:-** **'ಧರ್ಮ'** ಶಬ್ದದಿಂದ ಗೀತೆ ಪ್ರಾರಂಭವಾಗಿದೆ. ಅದು ಮಂಗಳವಾಚಕ. ಧರ್ಮವೆನ್ನುವ ಪದವನ್ನು ಮೊಟ್ಟಮೊದಲೇ ಪ್ರಯೋಗಿಸುವುದರ ಮೂಲಕ ಶ್ರೀವ್ಯಾಸಮಹರ್ಷಿ ಗೀತೆಗೆ ಮಂಗಳಕರವಾದ ಶುಭ ಪ್ರಾರಂಭವನ್ನು ಮಾಡಿದ ಹಾಗಾಗಿದೆ. ಏಕೆಂದರೆ ಭಗವಂತನು ಧರ್ಮಸ್ವರೂಪ. ಧರ್ಮ ಶಬ್ದೋಚ್ಚಾರಣೆಯಿಂದ ಭಗವನ್ನಾಮವನ್ನೇ ವ್ಯಾಸಮಹರ್ಷಿಗಳು ಕೀರ್ತಿಸಿ ದಂತಾಗಿದೆ. ಗೀತಾಗ್ರಂಥದ ಲಕ್ಷ್ಯ, ಸಾರಾಂಶ ಈ ಮೊದಲ ಪದದಲ್ಲಿಯೇ ತೋರಿಸಿದಂತಾಗಿದೆ. ಅದೇ ಧರ್ಮ. ಅಂತಹ ಧರ್ಮೋದ್ಧಾರಕ್ಕಾಗಿಯೇ ಲೋಕದಲ್ಲಿ ಭಗವಂತನು ಅವತರಿಸುತ್ತಿರುತ್ತಾನೆ*. ಧೃತರಾಷ್ಟ್ರನೆಂದರೆ ರಾಷ್ಟ್ರವನ್ನು ಧರಿಸಿದವನೆಂದರ್ಥ. ತನ್ನದಲ್ಲದ ರಾಷ್ಟ್ರವನ್ನು ತನ್ನದೆಂದು ಭಾವಿಸುವವನೇ ಧೃತರಾಷ್ಟ್ರ. ಈ ಪ್ರಪಂಚ, ದೇಹ, ಇಂದ್ರಿಯಗಳು, ಮನಸ್ಸು, ಬುದ್ಧಿ ಮೊದಲಾದುವುಗಳೆಲ್ಲಾ ದೃಶ್ಯಗಳು. ಅವು ತಾನಲ್ಲ, ಇಂದ್ರಿಯಾ ತೀತವಾದ (ದೃಕ್ ಆದ) ಆತ್ಮವೊಂದೇ ತಾನೇ ಆಗಲಿ, ದೇಹಾದಿ ದೃಶ್ಯ ಪದಾರ್ಥಗಳಲ್ಲ. ಆದರೆ ಅಜ್ಞಾನಿ ತನ್ನದಲ್ಲದ ಅಂದರೆ (ಅನಾತ್ಮಗಳಾದ) ಆತ್ಮೇತರವಾದ ದೃಶ್ಯರೂಪ ದೇಹಾದಿ ರಾಷ್ಟ್ರಗಳನ್ನು ತನ್ನವೆಂದು ಭಾವಿಸಿ ಅವುಗಳ ಮೇಲೆ ಮಮತೆ, ಅಹಂಭಾವವನ್ನು ಹೊಂದುತ್ತಾನೆ. ಆದ್ದರಿಂದಲೇ ಆತನು ಧೃತರಾಷ್ಟ್ರನು. ಅಜ್ಞಾನಭಾವದಿಂದ ಕೂಡಿದವರೆಲ್ಲಾ ಧೃತರಾಷ್ಟ್ರರೇ ಆಗುತ್ತಾರೆ. ಗೀತಾಜ್ಞಾನ ಶ್ರವಣದಿಂದ ಅಂಥಹ ಅಜ್ಞಾನರೂಪದ ಅಂಧತ್ವವನ್ನು ನಿವಾರಿಸಿಕೊಳ್ಳುವುದು ಪ್ರತಿಯೊಬ್ಬನ ಕರ್ತವ್ಯವೇ ಆಗಿದೆ.

**'ಕುರುಕ್ಷೇತ್ರ'**: ಇದು ಬಹಳ ವಿಶೇಷವಾದ ಪುಣ್ಯಕ್ಷೇತ್ರ. ಪಂಜಾಬ್ ರಾಜ್ಯದಲ್ಲಿ ಅಂಬಾಲಾ ಎನ್ನುವ ಪಟ್ಟಣಕ್ಕೆ ದಕ್ಷಿಣದಲ್ಲಿ, ದೆಹಲಿಗೆ ಉತ್ತರದಲ್ಲಿ ಈ ಸ್ಥಳವಿದೆ. ಮಹಾಭಾರತದ ಅರಣ್ಯ ಪರ್ವದ ೮೩ನೆಯ ಅಧ್ಯಾಯದಲ್ಲಿ, ಶಲ್ಯಪರ್ವದ ೫೩ನೆಯ ಅಧ್ಯಾಯದಲ್ಲಿ ಈ ಕುರುಕ್ಷೇತ್ರದ ಮಹಿಮೆಯ ಬಗ್ಗೆ ಸುಂದರವಾದ ವರ್ಣನೆಯಿದೆ. ಪೂರ್ವದಲ್ಲಿ ಬ್ರಹ್ಮದೇವನು, ಇಂದ್ರ, ಅಗ್ನಿ ಮೊದಲಾದವರು ಅಲ್ಲಿ ತಪಸ್ಸುಗಳನ್ನು ಮಾಡಿದ್ದಾರೆ. ಕೌರವರಿಗೆ, ಪಾಂಡವರಿಗೆ ಮೂಲಪುರುಷನಾದ ಕುರುಮಹಾರಾಜ ಈ ಸ್ಥಳದಲ್ಲಿ ಬಹಳ ಧರ್ಮಗಳನ್ನಾಚರಿಸಿದನು. ಒಂದಾನೊಂದು ಸಮಯದಲ್ಲಿ ಕುರು ಭೂಪಾಲ ಆ ದೇಶವನ್ನು ಉತ್ತಿದ್ದರಿಂದ ಅದಕ್ಕೆ ಕುರುಕ್ಷೇತ್ರವೆಂದು ಹೆಸರು ಬಂದಿದೆ. ಆ ಕ್ಷೇತ್ರದಲ್ಲಿ ಯಾರು ತಪಸ್ಸು ಮಾಡುವರೋ, ಇಲ್ಲಿ ಯಾರು ಮೃತಿ ಹೊಂದುವರೋ ಅವರು ಉತ್ತಮ ಲೋಕವನ್ನು ಸೇರುವರೆಂದು ಇಂದ್ರನು ಕುರುವಿಗೆ ವರವಿತ್ತನು. ಪೂರ್ವದಲ್ಲಿ ಪರಶುರಾಮನು ಆ ಸ್ಥಳದಲ್ಲಿ ಪಿತೃತರ್ಪಣವನ್ನು ಮಾಡಿದನು. ಎಷ್ಟೋ ಮಹನೀಯರು ಆ ಸ್ಥಳದಲ್ಲಿ ವಿಶೇಷ ಧರ್ಮಕಾರ್ಯಗಳನ್ನಾಚರಿಸಿದ್ದಾರೆ. ಆದ್ದರಿಂದ ಅದನ್ನು ಧರ್ಮಕ್ಷೇತ್ರವೆಂದು ಕರೆಯುವರು.

ಅಂಥಹ ಧರ್ಮಕ್ಷೇತ್ರವನ್ನು ಪ್ರವೇಶಿಸುವುದರಿಂದ ಅದರ ಪ್ರಭಾವದಿಂದ ತನ್ನ ಪುತ್ರರಾದ ದುರ್ಯೋಧನಾದಿಯರ ಚಿತ್ತದಲ್ಲಿ ದಯಾದಿ ಸದ್ಗುಣಗಳು ಉದಯಿಸಿ, ಧರ್ಮರಾಜಾದಿಗಳ ಸಹಜ ಅಹಿಂಸಾದಿ ಸದ್ಗುಣಗಳು ಪುಟವೆದ್ದು ಯುದ್ಧ ವಿರಮಣದ ಸಂಕಲ್ಪಗಳೇನಾದರೂ ಅವರಲ್ಲಿ ಉದಯಿಸಿರ ಬಹುದೇನೋ ಎಂದು ಶಂಕಿಸಿ ಧೃತರಾಷ್ಟ್ರನು ಯುದ್ಧದಲ್ಲಿ 'ಅವರೇನು ಮಾಡಿದರು?' ಎಂದು ಪ್ರಶ್ನಿಸಿದ್ದಿರಬಹುದು.

'ಮಾಮಕಾಃ'-'ನನ್ನವರು' ಎಂದು ಕೌರವರನ್ನು ಪ್ರತ್ಯೇಕಿಸಿ ಹೇಳಿರುವುದರಿಂದ ಪಾಂಡವರ ಬಗ್ಗೆ ಧೃತರಾಷ್ಟ್ರನಿಗೆ ಇರುವ ಪಕ್ಷಪಾತ ಬುದ್ಧಿ ವ್ಯಕ್ತವಾಗುತ್ತದೆ.

**"ಸಂಜಯ"**-'ಸಮ್ಯಕ್‌ಜಯ' ವಾದವನೇ ಸಂಜಯ. ಇಂದ್ರಿಯಾದಿಗಳನ್ನು ಪೂರ್ತಿಯಾಗಿ ನಿಗ್ರಹಿಸಿದವನೆಂದರ್ಥ. ಹಾಗೆ ಇಂದ್ರಿಯಗಳನ್ನು ಜಯಿಸಿದವನಿಗೆ ಮತ್ತು ಪವಿತ್ರ ಹೃದಯವನ್ನು ಹೊಂದಿರುವವನಿಗೆ ಗೀತಾಜ್ಞಾನವನ್ನು ಕೇಳುವ, ಆಚರಿಸುವ, ಬೋಧಿಸುವ ಸದವಕಾಶ ಒದಗಿ ಬರುತ್ತದೆಂದು ಸಂಜಯನ ವೃತ್ತಾಂತ ಸಾರಿ ಹೇಳುತ್ತದೆ. ಮತ್ತೆ ಅಲ್ಪಜಾತಿಯಲ್ಲಿ ಜನಿಸಿದ್ದರೂ (ಸೂತಕುಲದವನು) ತನ್ನ ಯೋಗ್ಯತೆಯಿಂದ, ಹೃದಯ ಪರಿಶುದ್ಧತೆಯಿಂದ ವ್ಯಾಸಾದಿ ಮಹರ್ಷಿಗಳ ಅನುಗ್ರಹಕ್ಕೆ ಪಾತ್ರನಾಗಿ, ಪ್ರತ್ಯಕ್ಷ ಗೀತಾಶ್ರವಣ, ವಿಶ್ವರೂಪ ಸಂದರ್ಶನಾದಿ ಮಹಾಭಾಗ್ಯಗಳನ್ನು ಪಡೆದದ್ದನ್ನು ನೋಡಿದರೆ, ಆತ್ಮೋನ್ನತಿಗೆ ಜಾತಿ, ಮತ ಕುಲಗಳಾವುವು ಅಡಚಣೆಗಳಲ್ಲ ವೆಂಬುದು ಸ್ಪಷ್ಟವಾಗುತ್ತದೆ.

ದುರ್ಯೋಧನನ ಜಯದ ಬಗ್ಗೆ ತಿಳಿಯಲು ಕುತೂಹಲ ಹೊಂದಿ ಧೃತರಾಷ್ಟ್ರನು ಕೇಳಿದ "ಧರ್ಮಕ್ಷೇತ್ರೇ ಕುರುಕ್ಷೇತ್ರೇ........ ಕಿಮಕುರ್ವತ ಸಂಜಯ" ಎನ್ನುವ ಗೀತೆಯ ಪ್ರಥಮ ಶ್ಲೋಕರೂಪವಾದ ಪ್ರಶ್ನೆಗೆ ಸಂಜಯನು "ಯತ್ರ ಯೋಗೇಶ್ವರಃ ಕೃಷ್ಣೋ........... ಧ್ರುವಾ ನೀತಿರ್ಮತಿರ್ಮಮ (೧೮-೭೮), [ಎಲ್ಲಿ ಶ್ರೀಕೃಷ್ಣನು, ಅರ್ಜುನನು ಇರುವರೋ, ಅಲ್ಲಿ ವಿಜಯವು ಮನೆಮಾಡಿಕೊಂಡಿರುತ್ತದೆ] ಎನ್ನುವ ಗೀತೆಯ ಕೊನೆಯ ಶ್ಲೋಕವನ್ನು ಪ್ರತ್ಯುತ್ತರವಾಗಿ ಹೇಳಬಹುದಾಗಿದ್ದರು ಆ ಭಾವಕ್ಕೆ ಪುಷ್ಟಿಕೊಡುವುದಕ್ಕೋಸ್ಕರ ದೀರ್ಘ ವೃತ್ತಾಂತವನ್ನು ("ದೃಷ್ಟ್ವಾ ತು ಪಾಂಡವಾನೀಕಂ....." ಮೊದಲಾದ ಶ್ಲೋಕಗಳ ಮೂಲಕ) ಪ್ರಾರಂಭಿಸಿದನು.

ಅ : ಧೃತರಾಷ್ಟ್ರನ ಪ್ರಶ್ನೆಗೆ ಉತ್ತರವಾಗಿ ಸಂಜಯನು ಹೀಗೆ ಉತ್ತರವಿತ್ತನು-
ಸಂಜಯ ಉವಾಚ:

೨. **ದೃಷ್ಟ್ವಾ ತು ಪಾಂಡವಾನೀಕಂ ವ್ಯೂಢಂ ದುರ್ಯೋಧನಸ್ತದಾ**
**ಆಚಾರ್ಯಮುಪಸಂಗಮ್ಯ ರಾಜಾ ವಚನಮಬ್ರವೀತ್**

**ಅರ್ಥ:-** ಸಂಜಯ ಉವಾಚ=ಸಂಜಯನು ಹೇಳಿದನು; ತದಾ=ಆಗ, ರಾಜಾ=ರಾಜನಾದ; ದುರ್ಯೋಧನಃ=ದುರ್ಯೋಧನನು; ವ್ಯೂಢಂ=ವ್ಯೂಹ ರಚಿಸಿ; ಪಾಂಡವಾನೀಕಂ=ಪಾಂಡವಸೇನೆ; ದೃಷ್ಟ್ವಾತು=ನೋಡಿ ಆಚಾರ್ಯಂ= ದ್ರೋಣಾಚಾರ್ಯನು; ಉಪಸಂಗಮ್ಯ=ಸಮೀಪಿಸಿ; ವಚನಂ=(ಮುಂದೆ ಹೇಳುವ) ವಾಕ್ಯವನ್ನು; ಅಬ್ರವೀತ್=ನುಡಿದನು.

**ತಾ:-** ಧೃತರಾಷ್ಟ್ರನೊಡನೆ ಸಂಜಯನು ಹೀಗೆ ಸಂಭಾಷಿಸಿದನು- ಆಗ ರಾಜನಾದ ದುರ್ಯೋಧನನು ವ್ಯೂಹಾಕಾರವಾಗಿ ರಚಿಸಲ್ಪಟ್ಟ ಪಾಂಡವಸೇನೆಯನ್ನು ನೋಡಿ, ನಂತರ ಗುರುಗಳಾದ ದ್ರೋಣಾಚಾರ್ಯರನ್ನು ಸಮೀಪಿಸಿ ಹೀಗೆ ಹೇಳಿದನು.

**ವ್ಯಾಖ್ಯೆ :** ಪಾಂಡವಸೇನಾಧಿಪತಿಯಾದ ದೃಷ್ಟದ್ಯುಮ್ನನು ಯುದ್ಧಶಾಸ್ತ್ರಾನು ಸಾರವಾಗಿ ತನ್ನ ಸೇನೆಯನ್ನು ವ್ಯೂಹಾಕಾರವಾಗಿ ರಚಿಸಿದನು. ಪಾಂಡವಸೇನೆಯ ಅದ್ಭುತ ವ್ಯೂಹರಚನೆ ದುರ್ಯೋಧನನಿಗೆ ಆಶ್ಚರ್ಯವನ್ನುಂಟುಮಾಡಿತು. ಅದಕ್ಕಿಂತ ಹೆಚ್ಚಾಗಿ ಬಹುಶಃ ತನ್ನ ಸೈನ್ಯವನ್ನು ಇನ್ನೂ ಉತ್ತಮವಾಗಿ ರಚಿಸುವ ಉದ್ದೇಶದಿಂದ ತಕ್ಷಣ ಆ ವಾರ್ತೆಯನ್ನು ಗುರುವಾದ ದ್ರೋಣಾಚಾರ್ಯರಿಗೆ ತಿಳಿಯ ಬಯಸಿದನು.

---

* ಧರ್ಮಸಂಸ್ಥಾಪನಾಯ ಸಂಭವಾಮಿ ಯುಗೇ ಯುಗೇ (೪-೮)

ದುರ್ಯೋಧನನು ರಾಜ, ಆಡಳಿತದ ಸರ್ವೋನ್ನತ ಸ್ಥಾನವನ್ನಲಂಕರಿಸಿದವನು. ಹಾಗಿರುವಾಗ ತನಗಿಂತ ಕೆಳಗಿನ ಸ್ಥಾನದಲ್ಲಿರುವ ಸೇನಾನಾಯಕನ ಬಳಿಗೆ ತಾನೇ ಖುದ್ದಾಗಿ ಹೋಗಬೇಕಾದ ಕೆಲಸವೇನಿತ್ತು ಎಂಬ ಶಂಕೆ ಉಂಟಾಗುತ್ತದೆ. ಇದಕ್ಕೆ ಕಾರಣ ಬಹುಶಃ ೧) ಪಾಂಡವರ ಸೈನ್ಯವನ್ನು, ಅದರಲ್ಲಿ ಮುಖ್ಯವಾಗಿ ಭೀಮಾರ್ಜುನರನ್ನು ನೋಡಿ ಭಯದಿಂದ ಅಧೈರ್ಯವನ್ನು ಹೊಂದಿದ್ದಿರಬಹುದು (ಪ್ರಾರಂಭದಲ್ಲಿಯೇ ರಾಜನು ಧೈರ್ಯವನ್ನು ಕಳೆದುಕೊಳ್ಳುವುದು ಅಶುಭ ಸೂಚಕ). ೨) ದ್ರೋಣಾಚಾರ್ಯನು ಸೇನಾನಾಯಕನಾದ್ದರಿಂದ ಆತನು ಧೈರ್ಯದಿಂದಿರುವುದು ಅತ್ಯವಶ್ಯಕ ಇಲ್ಲದಿದ್ದರೆ ಸೈನ್ಯವೆಲ್ಲವು ಬೆದರುವ ಅವಕಾಶವಿರುವುದು. ೩) ದ್ರೋಣಾಚಾರ್ಯರು ವಯೋವೃದ್ಧರು, ಜ್ಞಾನವೃದ್ಧರು ಮೇಲಾಗಿ ಗುರುಸ್ಥಾನವನ್ನಲಂಕರಿಸಿದವರು ಅವರಿಗೆ ವಿಧೇಯತೆ ತೋರಿಸುವುದು ಧರ್ಮ. ೪) ಹೇಗೋ ದ್ರೋಣಾಚಾರ್ಯರನ್ನು ಒಲಿಸಿಕೊಂಡು ಆತನನ್ನು ತನ್ನ ಸ್ವಾರ್ಥಕ್ಕೆ ಉಪಯೋಗಿಸಿಕೊಳ್ಳಬೇಕೆಂದಿರಬಹುದು- ಈ ಎಲ್ಲಾ ಕಾರಣಗಳಿಂದ ದುರ್ಯೋಧನನು ಆಚಾರ್ಯರನ್ನು ತನ್ನ ಬಳಿಗೆ ಕರೆಯಿಸಿಕೊಳ್ಳದೆ ತಾನೇ ಅವರ ಕಡೆಗೆ ಸಾಗಿ ಬಿನ್ನವಿಸಿಕೊಂಡನು.

ಅ : ದುರ್ಯೋಧನನು ದ್ರೋಣಾಚಾರ್ಯರನ್ನು ಸಮೀಪಿಸಿ ಈ ರೀತಿಯಾಗಿ ನುಡಿದನು.

೩. **ಪಶ್ಯೈತಾಂ ಪಾಂಡುಪುತ್ರಾಣಾಂ ಆಚಾರ್ಯ ಮಹತೀಂ ಚಮೂಮ್**
**ವ್ಯೂಢಾಂ ದ್ರುಪದಪುತ್ರೇಣ ತವ ಶಿಷ್ಯೇಣ ಧೀಮತಾ**

**ಅರ್ಥ** : ಆಚಾರ್ಯ=ಓ ಗುರುವರ್ಯಾ!; ತವ=ನಿನ್ನ; ಶಿಷ್ಯೇಣ=ಶಿಷ್ಯನಾದ; ಧೀಮತಾ=ಬುದ್ಧಿವಂತನಾದ; ದ್ರುಪದ ಪುತ್ರೇಣ=ದ್ರುಪದರಾಜಪುತ್ರನಾದ ದೃಷ್ಟದ್ಯುಮ್ನನಿಂದ; ವ್ಯೂಢಾಂ=ವ್ಯೂಹಾಕಾರವಾಗಿ ರಚಿಸಲ್ಪಟ್ಟ; ಪಾಂಡು ಪುತ್ರಾಣಾಮ್=ಪಾಂಡವರ; ಏತಾಮ್=ಈ; ಮಹತೀಮ್=ವಿಶೇಷವಾದ; ಚಮೂಮ್=ಸೇನೆಯನ್ನು; ಪಶ್ಯ=ನೋಡುವಂಥವನಾಗು.

**ತಾ:-** ಓ ಗುರುವರ್ಯಾ! ಬುದ್ಧಿಶಾಲಿಯು; ನಿಮ್ಮ ಶಿಷ್ಯನೂ ಆದ ದೃಷ್ಟದ್ಯುಮ್ನನಿಂದ ವ್ಯೂಹಾಕಾರವಾಗಿ ರಚಿಸಲ್ಪಟ್ಟಿರುವ ಪಾಂಡವರ ಈ ವಿಶೇಷ ಸೈನ್ಯವನ್ನು ನೋಡುವಂಥವನಾಗು!

**ವ್ಯಾಖ್ಯೆ:-** ಈ ಶ್ಲೋಕದ ಹಿಂದೆ 'ದುರ್ಯೋಧನ ಉವಾಚ' ಎಂದಿರಬೇಕಾಗಿತ್ತು. ಆದರೆ ಹಾಗಿಲ್ಲ. ಪಾಪಿಯಾದ್ದರಿಂದಲೇ ಆತನ ಹೆಸರನ್ನು ಪುಣ್ಯಶೀಲರಾದ ಗೀತಾಪಾಠಕರಿಂದ ಉಚ್ಛರಿಸಲ್ಪಡದೇ ಇರಲಿ ಎಂದು ಬಹುಶಃ ಉಪಯೋಗಿಸಿಲ್ಲ!

ದುರ್ಯೋಧನನು ರಾಜಕೀಯ ಚತುರತೆಯನ್ನು ಹೊಂದಿದವನು. ಕಾರ್ಯಸಾಧನೆ ನಿಮಿತ್ತವಾಗಿ ತಾನೇ ಇಳಿದು ಬಂದು ಒಬ್ಬ ಸೇನಾನಾಯಕನೊಡನೆ (ದ್ರೋಣಾಚಾರ್ಯರೊಡನೆ) ಮಾತಾಡುವುದೇ ಅಲ್ಲದೆ ಪ್ರತಿಪಕ್ಷದ ಮೇಲೆ ರೋಷ ಬರುವಂತೆ ಮಾಡುವ ಪ್ರಯತ್ನದಲ್ಲಿದ್ದಾನೆ. 'ದ್ರುಪದನ ಪುತ್ರನು, ನಿಮ್ಮ ಶಿಷ್ಯನಾದ ದೃಷ್ಟದ್ಯುಮ್ನನು ಪಾಂಡವ ಸೇನೆಯನ್ನು ಚೆನ್ನಾಗಿ ರಚಿಸಿದ್ದಾನೆ'- ಎಂದು ಹೇಳುವುದರ ಮೂಲಕ ದ್ರೋಣಾಚಾರ್ಯರಿಗೆ ದ್ರುಪದನ ಮೇಲಿರುವ ಪೂರ್ವ ವೈರವನ್ನು ಜ್ಞಾಪಕಕ್ಕೆ ಬರುವಂತೆ ಮಾಡಿದ್ದಾನೆ. 'ನಿಮ್ಮ ಶಿಷ್ಯನಾಗಿದ್ದವನೇ ಈಗ ಪ್ರತಿಪಕ್ಷದ ನಾಯಕನಾಗಿ ಗುರುವಿನ ಮೇಲೆ ತಿರುಮಂತ್ರ ಹಾಕುತ್ತಿದ್ದಾನೆಂದು' ತಿಳಿಸಿ ದ್ರೋಣಾಚಾರ್ಯರಿಗೆ ತೀವ್ರವಾಗಿ ರೋಷ ಕೆರಳುವಂತೆ ಮಾಡಿದನು. ಶತ್ರುಪಕ್ಷವನ್ನು ಹಾಗು ಅದರ ನಾಯಕನನ್ನು ಹೆಚ್ಚಾಗಿ ವರ್ಣಿಸುವುದರ ಮೂಲಕ ಸ್ವಪಕ್ಷನಾಯಕನಿಗೆ ಅವರ ಮೇಲೆ ಪ್ರತೀಕಾರಭಾವ ವೃದ್ಧಿಯಾಗುತ್ತದೆನ್ನುವುದು ದುರ್ಯೋಧನನ ನಂಬಿಕೆ.

'**ಧೀಮಂತ**' ಎಂದು ಹೇಳುವುದರಿಂದ ದೃಷ್ಟದ್ಯುಮ್ನನು ವ್ಯೂಹರಚನೆಯಲ್ಲಿ ಅತಿ ಚಮತ್ಕಾರಿಯಾದವನೆಂದರ್ಥವಾಗುವುದು. ಆದ್ದರಿಂದಲೇ ಆತನನ್ನು ಪಾಂಡವರು ತಮ್ಮ ಸೇನಾಧಿಪತಿಯೆಂದು ಆರಿಸಿಕೊಂಡರು.

ಅ।। ದುರ್ಯೋಧನನು ಪಾಂಡವಪಕ್ಷದ ಮುಖ್ಯಯೋಧರ ಪಟ್ಟಿಯನ್ನು ದ್ರೋಣಾಚಾರ್ಯರಿಗೆ ಕೊಡುವನು.

೪. **ಅತ್ರ ಶೂರಾ ಮಹೇಷ್ವಾಸಾ ಭೀಮಾರ್ಜುನ ಸಮಾ ಯುಧಿ**
**ಯುಯುಧಾನೋ ವಿರಾಟಶ್ಚ ದ್ರುಪದಶ್ಚ ಮಹಾರಥಃ**
೫. **ದೃಷ್ಟಕೇತುಶ್ಚೇಕಿತಾನಃ ಕಾಶೀರಾಜಶ್ಚ ವೀರ್ಯವಾನ್**
**ಪುರುಜಿತ್ ಕುಂತಿಭೋಜಶ್ಚ ಶೈಬ್ಯಶ್ಚ ನರಪುಂಗವಃ**
೬. **ಯುಧಾಮನ್ಯುಶ್ಚ ವಿಕ್ರಾಂತ ಉತ್ತಮೌಜಾಶ್ಚ ವೀರ್ಯವಾನ್**
**ಸೌಭದ್ರೋ ದ್ರೌಪದೇಯಾಶ್ಚ ಸರ್ವ ಏವ ಮಹಾರಥಾಃ**

**ಅರ್ಥ:-** ಅತ್ರ=ಈ ಪಾಂಡವಸೇನೆಯಲ್ಲಿ; ಮಹೇಷ್ವಾಸಾಃ=ಮಹಾಧನುರ್ವಿದ್ಯಾ ಪಾರಂಗತರು; ಯುಧಿ=ಯುದ್ಧದಲ್ಲಿ; ಭೀಮಾರ್ಜುನ ಸಮಾಃ=ಭೀಮಾರ್ಜುನರಿಗೆ ಸಮವಾದ; ಶೂರಾಃ=ಶೂರರು; (ಅವರಾರೆಂದರೆ); ಯುಯುಧಾನಃ=ಯುಯುಧಾನನು; ವಿರಾಟಶ್ಚ=ವಿರಾಟನು; ಮಹಾರಥಃ= ಮಹಾರಥನಾದ; ದ್ರುಪದಶ್ಚ=ದ್ರುಪದನು; ದೃಷ್ಟಕೇತುಃ=ದೃಷ್ಟಕೇತು; ಚೇಕಿತಾನಃ=ಚೇಕಿತಾನನು; ವೀರ್ಯವಾನ್=ಪರಾಕ್ರಮಿಯಾದ; ಕಾಶೀರಾಜಶ್ಚ=ಕಾಶೀರಾಜ; ಪುರುಜಿತ್=ಪುರುಜಿತ್ತನು; ಕುಂತೀಭೋಜಶ್ಚ= ಕುಂತೀಭೋಜನು; ನರಪುಂಗವಃ=ಮನುಜಶ್ರೇಷ್ಠನಾದ; ಶೈಬ್ಯಶ್ಚ=ಶೈಬ್ಯನು; ವಿಕ್ರಾನ್ತಃ=ಪರಾಕ್ರಮಶಾಲಿಯಾದ; ಯುಧಾಮನ್ಯುಶ್ಚ=ಯಧಾಮನ್ಯನು; ವೀರ್ಯನಾನ್=ವೀರ್ಯವಂತನಾದ; ಉತ್ತಮೌಜಾಶ್ಚ=ಉತ್ತಮೌಜನು; ಸೌಭದ್ರಃ=ಅಭಿಮನ್ಯು; ದ್ರೌಪದೇಯಾಶ್ಚ=ದ್ರೌಪದೀ ಪುತ್ರರಾದ ಉಪ ಪಾಂಡವರು; ಸರ್ವೇ=ಇವರೆಲ್ಲರೂ; ಮಹಾರಥಾಃ ಏವ=ಮಹಾರಾಥರೇ ಆಗಿದ್ದಾರೆ.

**ತಾತ್ಪರ್ಯ:-** ಈ ಪಾಂಡವಸೇನೆಯಲ್ಲಿ ಧನುರ್ವಿದ್ಯಪಾರಂಗತರು, ಯುದ್ಧದಲ್ಲಿ ಭೀಮಾರ್ಜುನರಿಗೆ ಸಮಾನವಾದ ಶೂರರು ಬಹಳಷ್ಟು ಇದ್ದಾರೆ. ಅವರಾರೆಂದರೆ-ಯುಯುಧಾನ, ವಿರಾಟ, ಮಹಾರಥನಾದ ದ್ರುಪದ, ದೃಷ್ಟಕೇತು, ಚೇಕಿತಾನ, ಪರಾಕ್ರಮವಂತನಾದ ಕಾಶೀರಾಜ, ಪುರುಜಿತ್, ಕುಂತೀಭೋಜ, ಸರ್ವೋತ್ತಮನಾದ ಶೈಬ್ಯ, ಶೌರ್ಯವಂತನಾದ ಯುಧಾಮನ್ಯು, ಪರಾಕ್ರಮಶಾಲಿಯಾದ ಉತ್ತಮೌಜ, ಅಭಿಮನ್ಯು, ಉಪಪಾಂಡವರು. ಇವರೆಲ್ಲರೂ ಮಹಾರಥರೇ ಆಗಿದ್ದಾರೆ.

**ವ್ಯಾಖ್ಯೆ:-** ಮೇಲೆ ಹೇಳಿದ ವೀರರೆಲ್ಲರೂ ಭೀಮಾರ್ಜುನರಿಗೆ ಸಮಾನರೆಂದು ಹೇಳಿರುವುದರಿಂದ ಅವರೆಲ್ಲರೂ ಶೂರಾಗ್ರೇಸರರೆಂದು, ದುರ್ಯೋಧನನಿಗೆ ಭಯೋತ್ಪಾದನೆ ಉಂಟುಮಾಡುವವರೆಂದು ಸ್ಪಷ್ಟವಾಗುತ್ತಿದೆ.

ದುರ್ಯೋಧನನು ಸ್ವಪಕ್ಷ ವೀರರ ಬಗ್ಗೆ ಮೊದಲು ಹೇಳದೆ ಪ್ರತಿಪಕ್ಷವೀರರನ್ನು ಹೊಗಳಲು ಎರಡು ಕಾರಣಗಳಿವೆ. ೧) ಆಚಾರ್ಯನಿಗೆ ಶತ್ರುಸೈನ್ಯದ ಮೇಲೆ ರೋಷವುಂಟಾಗುವಂತೆ ಮಾಡುವುದು ೨) ತನ್ನ ಸೈನ್ಯದ

ಬಗ್ಗೆ ತನಗೆ ಧೈರ್ಯವಿಲ್ಲದೇ ಇರುವುದು. ತನ್ನ ಸೈನ್ಯಕ್ಕಿಂತ ಪ್ರತಿಪಕ್ಷ ಸೈನ್ಯವೇ ಬಲವಾಗಿದೆಯೆಂದು ಇರುವ ಭಾವನೆ.

"ಮಹಾರಥ"- ಹತ್ತುಸಾವಿರ ಧನುರ್ಧರ ಯೋಧರೊಡನೆ ಏಕಾಕಿಯಾಗಿ ಯುದ್ಧ ಮಾಡುವ ಸಾಮರ್ಥ್ಯವುಳ್ಳವನು, ಆಯುಧಶಾಸ್ತ್ರದಲ್ಲಿ ಪ್ರವೀಣನಾದ ಶೂರನನ್ನು ಮಹಾರಥನೆನ್ನುವರು.*

ಯುಯುಧಾನ-ಈತನಿಗೆ ಸಾತ್ಯಕಿ ಎಂಬ ಹೆಸರೂ ಇದೆ.

ಧೃಷ್ಟಕೇತು - ಚೇದಿ ದೇಶದ ರಾಜ, ಶಿಶುಪಾಲನ ಪುತ್ರ

ಪುರುಜಿತ್, ಕುಂತೀಭೋಜರು - ಕುಂತೀದೇವಿಯ ಸೋದರರು.

ದ್ರೌಪದೇಯರು-ದ್ರೌಪದಿಯ ಪುತ್ರರಾದ ಉಪಪಾಂಡವರು. ಪ್ರತಿವಿಂಧ್ಯ, ಶ್ರುತಸೋಮ, ಶ್ರುತಕೀರ್ತಿ, ಶತಾನೀಕ, ಶ್ರುತಸೇನ- ಈ ಐವರು ಕ್ರಮವಾಗಿ ಧರ್ಮರಾಜ, ಭೀಮಾದಿಯರಿಗೆ ದ್ರೌಪದಿಯಿಂದ ಪಡೆದ ಸಂತಾನ.

**ಅ॥** ಈ ಪ್ರಕಾರವಾಗಿ ಪಾಂಡವಪಕ್ಷದ ವೀರರ ಬಗ್ಗೆ ಹೇಳಿ, ಇನ್ನು ತನ್ನ ಪಕ್ಷದ ಪ್ರಧಾನ ಯೋಧರ ಬಗ್ಗೆ ದುರ್ಯೋಧನನು ವರ್ಣಿಸಿ ಹೇಳುತ್ತಾನೆ-

**೭. ಅಸ್ಮಾಕಂ ತು ವಿಶಿಷ್ಟಾ ಯೇ ತಾನ್ನಿಬೋಧ ದ್ವಿಜೋತ್ತಮ**
**ನಾಯಕಾ ಮಮ ಸೈನ್ಯಸ್ಯ ಸಂಜ್ಞಾರ್ಥಂ ತಾನ್ ಬ್ರವೀಮಿತೇ**

**ಅರ್ಥ:-** ದ್ವಿಜೋತ್ತಮ=ಓ ಬ್ರಾಹ್ಮಣ ಶ್ರೇಷ್ಠಾ!, ಅಸ್ಮಾಕಂ ತು=ಇನ್ನು ನಮ್ಮ ಪಕ್ಷದಲ್ಲಿ; ಯೇ=ಯಾರು; ವಿಶಿಷ್ಟಾಃ=ಪ್ರಮುಖರೋ; ಮಮ=ನನ್ನ; ಸೈನ್ಯಸ್ಯ= ಸೈನ್ಯಕ್ಕೆ; ನಾಯಕಾಃ=ನಾಯಕರು; ತಾನ್=ಅವರನ್ನು; ತೇ=ನಿನಗೆ; ಸಂಜ್ಞಾರ್ಥಂ=ಜ್ಞಾಪಕಕ್ಕೋಸ್ಕರ; ಬ್ರವೀಮಿ=ಹೇಳುತ್ತಿದ್ದೇನೆ.

**ತಾ:-** ಓ ಬ್ರಾಹ್ಮಣೋತ್ತಮಾ! ಇನ್ನು ನಮ್ಮ ಸೈನ್ಯದ ಪ್ರಮುಖರು, ಸೇನಾನಾಯಕರು ಯಾರಿರುವರೋ ಅವರನ್ನು ಜ್ಞಾಪಕಕ್ಕೋಸ್ಕರ ನಿಮಗೆ ಹೇಳುತ್ತಿದ್ದೇನೆ. (ಕೇಳಿ).

**ವ್ಯಾಖ್ಯೆ:-** ಪ್ರತಿಪಕ್ಷವೀರರನ್ನು ಮಾತ್ರ ತಿಳಿಸಿದಲ್ಲಿ ದ್ರೋಣನಿಗೆ ಒಂದು ವೇಳೆ ಅಧೈರ್ಯವುಂಟಾಗುವದೇನೋ ಎಂದು ಭಾವಿಸಿ, ಧೈರ್ಯೋತ್ಸಾಹವನ್ನು ನೀಡುವದಕ್ಕೋಸ್ಕರ ತಮ್ಮ ಪಕ್ಷದ ಶೂರವೀರರನ್ನು ಕೂಡ ದುರ್ಯೋಧನನು ವರ್ಣಿಸಲಾರಂಭಿಸಿದ್ದಾನೆ.

**೮. ಭವಾನ್ ಭೀಷ್ಮಶ್ಚ ಕರ್ಣಶ್ಚ ಕೃಪಶ್ಚ ಸಮಿತಿಂಜಯಃ**
**ಅಶ್ವತ್ಥಾಮಾ ವಿಕರ್ಣಶ್ಚ ಸೋಮದತ್ತಿ ಸ್ತಥೈವ ಚ.@**

**೯. ಅನ್ಯೇ ಚ ಬಹವಶ್ಶೂರಾ ಮದರ್ಥೇ ತ್ಯಕ್ತಜೀವಿತಾಃ**
**ನಾನಾಶಸ್ತ್ರಪ್ರಹರಣಾಸ್ಸರ್ವೇ ಯುದ್ಧವಿಶಾರದಾಃ**

**ಅರ್ಥ:-** ಭವಾನ್=ನೀನು; ಭೀಷ್ಮಶ್ಚ=ಭೀಷ್ಮನು; ಕರ್ಣಶ್ಚ=ಕರ್ಣನು; ಸಮಿತಿಂಜಯಃ=ಯುದ್ಧದಲ್ಲಿ ಜಯಶೀಲನಾದ; ಕೃಪಶ್ಚ=ಕೃಪಾಚಾರ್ಯನು; ಅಶ್ವತ್ಥಾಮಾ=ಅಶ್ವತ್ಥಾಮನು; ವಿಕರ್ಣಶ್ಚ=ವಿಕರ್ಣನು; ತಥೈವ ಚ=ಹಾಗೆಯೇ; ಸೋಮದತ್ತಿಃ=ಸೋಮದತ್ತನ ಕುಮಾರನಾದ ಭೂರೀಶ್ರವ; (ಇನ್ನೂ) ಮದರ್ಥೇ=ನನಗಾಗಿ; ತ್ಯಕ್ತಜೀವಿತಾಃ=ಪ್ರಾಣವನ್ನು ಧಾರೆಯೆರೆಯಲು ಸಿದ್ಧರಾದ; ಬಹವಃ=ಅನೇಕ; ಅನ್ಯೇಚ=ಇತರರಾದ; ಶೂರಾಃ=ಶೂರರು; ನಾನಾ ಶಸ್ತ್ರಪ್ರಹರಣಾಃ=ವಿವಿಧ ಶಸ್ತ್ರಾಸ್ತ್ರ ಆಯುಧಗಳನ್ನು ಹೊಂದಿದವರು; (ಇಲ್ಲಿ ಇದ್ದಾರೆ); ಸರ್ವೇ=ಇವರೆಲ್ಲರೂ; ಯುದ್ಧವಿಶಾರದಾಃ=ಯುದ್ಧದಲ್ಲಿ ಪ್ರವೀಣರು (ಆಗಿದ್ದಾರೆ).

**ತಾ:-** ತಾವು, ಭೀಷ್ಮ, ಕರ್ಣ, ಯುದ್ಧದಲ್ಲಿ ಯಾವಾಗಲೂ ಜಯಶೀಲನಾದ ಕೃಪಾಚಾರ್ಯ, ಅಶ್ವತ್ಥಾಮ, ವಿಕರ್ಣ, ಭೂರೀಶ್ರವ ಮತ್ತು ಇನ್ನೂ ಅನೇಕರು ತಮ್ಮ ತಮ್ಮ ಜೀವಗಳನ್ನೇ ಮುಡುಪಾಗಿಟ್ಟು ಯುದ್ಧಸನ್ನದ್ಧರಾಗಿ ವಿವಿಧ ಶಸ್ತ್ರಾಸ್ತ್ರಸಂಪನ್ನರಾಗಿ ಇಲ್ಲಿ ನೆರೆದಿದ್ದಾರೆ.

**ವ್ಯಾಖ್ಯೆ:-** ದುರ್ಯೋಧನನು ವೀರರ ಪಟ್ಟಿಯನ್ನು ಕೊಡುವಾಗ ತನ್ನ ಪಕ್ಷದ ಸೇನಾಧಿಪತಿಯಾದ ಭೀಷ್ಮನ ಹೆಸರು ಮೊದಲು ಹೇಳದೆ ದ್ರೋಣನ ಹೆಸರನ್ನು ಏಕೆ ಹೇಳಬೇಕಾಗಿ ಬಂತು? ಎದುರಿಗೆ ನಿಂತಿರುವ ದ್ರೋಣರು ತಪ್ಪು ತಿಳಿದುಕೊಳ್ಳುತ್ತಾರೆಂದಾಗಲಿ, ಗುರುವನ್ನು ಪ್ರಪ್ರಥಮವಾಗಿ ನೆನೆಸುವುದು ಆದ್ಯ ಕರ್ತವ್ಯವೆಂತಾಗಲಿ ಇಲ್ಲವೆ ದ್ರೋಣಾಚಾರ್ಯರನ್ನು ಉತ್ತೇಜಗೊಳಿಸುವ ಉದ್ದೇಶದಿಂದ ಹಾಗೆ ಮಾಡಿರಬಹುದು.

ಎರಡೂ ಸೇನೆಗಳ ಶೂರ ವೀರರನ್ನು ದ್ರೋಣಾಚಾರ್ಯರು ಚೆನ್ನಾಗಿ ತಿಳಿದೇ ಇದ್ದಾರೆ. ಆತನಿಗೆ ಹೇಳುವ ನೆಪದಲ್ಲಿ ದುರ್ಯೋಧನನು ಅವರನ್ನು ಮತ್ತೆ ಜ್ಞಾಪಿಸಿಕೊಂಡು ಬಲಾಬಲಗಳನ್ನು ಲೆಕ್ಕಹಾಕಿಕೊಳ್ಳುತ್ತಿದ್ದಾನೆ. 'ತ್ಯಕ್ತಜೀವಿತಾಃ'='ಪ್ರಾಣಗಳನ್ನು ಬಿಟ್ಟವರು'- ಎನ್ನುವ ಪದವು ದುರ್ಯೋಧನನ ಮುಖದಿಂದ ಹೊರಹೊಮ್ಮಿ ತನ್ನವರೆಲ್ಲಾ ನಶಿಸಿ ಹೋಗುವವರೆಂದು ಮುಂದೆಯೇ ಆತನ ಅಂತರಾತ್ಮಕ್ಕೆ ತಿಳಿದಿತ್ತೆನ್ನುವುದು ಕಂಡು ಬರುತ್ತದೆ. ಈ ಪ್ರಕಾರವಾಗಿ ಹೇಳುವುದು ದುರ್ಯೋಧನನಿಗೆ ಅಪಶಕುನ ಸೂಚಕವೆಂದು ಕೆಲವರ ಅಭಿಪ್ರಾಯ.

**ಅ॥** ಈ ವಿಧವಾಗಿ ತನ್ನ ಪಕ್ಷದ ಶೂರರನ್ನು ಹೊಗಳಿ ನಂತರ ದುರ್ಯೋಧನನು ಎರಡೂ ಕಡೆಯ ಸೈನ್ಯಗಳ ಬಲಾಬಲಗಳನ್ನು ಲೆಕ್ಕಹಾಕಿ ತನ್ನ ಸೈನ್ಯವೇ ಬಹಳ ಉತ್ತಮವಾದದ್ದೆಂದು ನುಡಿಯುತ್ತಿದ್ದಾನೆ-

**೧೦. ಅಪರ್ಯಾಪ್ತಂ ತದಸ್ಮಾಕಂ ಬಲಂ ಭೀಷ್ಮಾಭಿರಕ್ಷಿತಮ್**
**ಪರ್ಯಾಪ್ತಂ ತ್ವಿದಮೇತೇಷಾಂ ಬಲಂ ಭೀಮಾಭಿರಕ್ಷಿತಮ್**

**ಅರ್ಥ:-** ತತ್=ಅಂತಹ; ಅಸ್ಮಾಕಮ್=ನಮ್ಮ; ಬಲಮ್=ಸೈನ್ಯವು, ಭೀಷ್ಮಾಭಿ ರಕ್ಷಿತಮ್=ಭೀಷ್ಮನಿಂದ ಚೆನ್ನಾಗಿ ರಕ್ಷಿಸಲ್ಪಟ್ಟಿದೆ; ಅಪರ್ಯಾಪ್ತಂ= ಅಪರಿಮಿತ ವಾಗಿದೆ. ಏತೇಷಾಮ್=ಈ ಪಾಂಡವರ; ಇದಂ=ಈ; ಬಲಂತು=ಸೈನ್ಯ ವಾದರೋ; ಭೀಮಾಭಿರಕ್ಷಿತಮ್=ಭೀಮನಿಂದ ಕಾಪಾಡಲ್ಪಡಲಾಗಿದ್ದು; ಪರ್ಯಾಪ್ತಂ=ಪರಿಮಿತವಾದದ್ದು.

**ತಾ:-** ಅಂಥಹ ಶೂರರನ್ನು ಹೊಂದಿರುವ ನಮ್ಮ ಸೈನ್ಯವು ಭೀಷ್ಮನಿಂದ ಕಾಪಾಡಲ್ಪಟ್ಟು ಅಪರಿಮಿತವಾಗಿದೆ. (ಅಜೇಯವಾಗಿರುತ್ತದೆ). ಪಾಂಡವರ ಈ ಸೈನ್ಯವಾದರೋ ಭೀಮನಿಂದ ರಕ್ಷಿಸಲ್ಪಟ್ಟು ಪರಿಮಿತವಾಗಿದೆ.

**ವ್ಯಾಖ್ಯೆ:-** ಈ ಶ್ಲೋಕದಲ್ಲಿಯ 'ಅಪರ್ಯಾಪ್ತಂ', 'ಪರ್ಯಾಪ್ತಂ' ಎನ್ನುವ ಪದಗಳ ಮೇಲೆ ಭಾಷ್ಯಾಕಾರರು ಮತಭೇದವನ್ನು ಹೊಂದಿದ್ದಾರೆ. ಆನಂದಗಿರಿ, ಶಂಕರಾನಂದ ಮುಂತಾದವರು 'ಅಪರ್ಯಾಪ್ತಂ' ಪದಕ್ಕೆ ಅಪರಿಮಿತವಾದದ್ದು ಎನ್ನುವ ಅರ್ಥವನ್ನು ಸೂಚಿಸಿದ್ದಾರೆ. ಶ್ರೀಧರರು ಮುಂತಾದವರು

---

* ಏಕೋದಶಸಹಸ್ರಾಣಿ ಯೋಧಯೇದ್ಯಸ್ತು ಧನ್ವಿನಾಮ್ ಶಸ್ತ್ರಶಾಸ್ತ್ರಪ್ರವೀಣಶ್ಚ ಮಹಾರಥ ಇತಿ ಸ್ಮೃತಃ

@ ಸೋಮದತ್ತಿರ್ಜಯದ್ರಥಃ - (ಪಾಠಾಂತರ)

ಅಸಂಪೂರ್ಣ, ಅಸಮರ್ಥ ಎನ್ನುವ ಭಾವವನ್ನು ಪ್ರಕಟಿಸಿದ್ದಾರೆ. ಇದರಲ್ಲಿ ಮೊದಲಿನ ಅರ್ಥವೇ ಸಮುಚಿತವಾಗಿದೆಯೆಂದು ತೋರುತ್ತದೆ. ಏಕೆಂದರೆ ದುರ್ಯೋಧನನು ಈಗಾಗಲೇ ಉದ್ಯೋಗ ಪರ್ವದಲ್ಲಿ ಧೃತರಾಷ್ಟ್ರನೊಡನೆ (ಉ. ೫೪-೬೦-೭೦), ಭೀಷ್ಮಪರ್ವದಲ್ಲಿ ದ್ರೋಣಾಚಾರ್ಯರೊಡನೆ (ಭೀಷ್ಮ ೫೧-೪-೬) ತನ್ನ ಸೈನ್ಯದ ಹಿರಿಮೆಯನ್ನು ಕುರಿತು ಶ್ಲಾಘಿಸಿಕೊಂಡಿರುತ್ತಾನೆ. ಅವರನ್ನು ಉತ್ಸಾಹಗೊಳಿಸಲು ಈ ವಿಧವಾಗಿ ಆತನು ಹೇಳಿದ್ದನು. ಈಗಲೂ ಅಂಥಹ ಸಂದರ್ಭವೇ ಇರುವುದರಿಂದ, ಇನ್ನೊಂದು ವಿಧವಾಗಿ ಆತನು ಹೇಳಿರುವ ಸಾಧ್ಯತೆಯಿಲ್ಲ. ತನ್ನ ಸೈನ್ಯವನ್ನು ಅವಹೇಳನ ಮಾಡಿಕೊಳ್ಳುವ ಅವಕಾಶ ಕಂಡು ಬರುತ್ತಿಲ್ಲ. ಶ್ಲೋಕದ ಧೋರಣೆ ಸ್ವಪಕ್ಷವನ್ನು ಹೊಗಳಿಕೊಳ್ಳುವುದೇ ಆಗಿದೆ. ಆದ್ದರಿಂದ ನಮ್ಮ ಸೈನ್ಯವು ಸಾಲದು. ಪಾಂಡವ ಸೈನ್ಯವು ಪರಿಪೂರ್ಣವಾಗಿದೆ ಎಂದು ಹೇಳುವ ಅರ್ಥ ಸಂದರ್ಭೋಚಿತ ವಾಗಿಲ್ಲ. ತನ್ನ ಸೈನ್ಯವನ್ನು ಶ್ಲಾಘಿಸುತ್ತ ಭೀಷ್ಮಪರ್ವದಲ್ಲಿ (೫೧-೬) ಇದೇ ಶ್ಲೋಕವನ್ನು ದುರ್ಯೋಧನನು ದ್ರೋಣಾಚಾರ್ಯನಿಗೆ ಹೇಳಿದ ವಿಷಯವನ್ನು ಇಲ್ಲಿ ಗಮನಕ್ಕೆ ತಂದುಕೊಳ್ಳುವುದು ಸಮುಚಿತವೆಂದು ಕಾಣುತ್ತದೆ.

**'ಭೀಮಾಭಿರಕ್ಷಿತಮ್'**- ಕೌರವಸೇನೆಗೆ ಭೀಷ್ಮ ಅಧಿಪತಿಯಾಗಿದ್ದಹಾಗೆ ಪಾಂಡವ ಸೇನೆಗೆ ದೃಷ್ಟದ್ಯುಮ್ನನು ಸೇನಾಧಿಪತಿಯಾಗಿರುವಾಗ ಇಲ್ಲಿ 'ಭೀಮನಿಂದ ರಕ್ಷಿಸಲ್ಪಟ್ಟ ಪಾಂಡವ ಸೇನೆ' ಎಂದು ಏಕೆ ಹೇಳಲ್ಪಟ್ಟಿದೆ? ಇದಕ್ಕೆ ಕಾರಣಗಳು ಬಹುಶಃ (೧) ಭೀಮನು ಧಾರ್ತರಾಷ್ಟ್ರರೆಲ್ಲರನ್ನು ವಧಿಸಲು ಕೃತನಿಶ್ಚಯನಾಗಿರುವುದರಿಂದ ದುರ್ಯೋಧನನ ಚಿತ್ತದಲ್ಲಿ ಆತನೇ ಬಹುಶಃ ಸ್ಫುರಿಸುತ್ತಿರಬಹುದು. ೨) ದೃಷ್ಟದ್ಯುಮ್ನನನ್ನು ಪಾಂಡವ ಸೇನೆಯ ಸೇನಾಧಿಪತಿಯೆಂದು ನಿಯಮಿಸಲ್ಪಟ್ಟಿದ್ದರೂ, ಸೇನೆಯೆಲ್ಲವನ್ನು ಕಾಪಾಡುವ ಹೊರೆ ಭೀಮನ ಪಾಲಿಗೂ ನಿಯೋಜಿಸಲಾಗಿತ್ತು. (೩) ಮೊದಲನೆಯ ದಿನ ಪಾಂಡವರಿಂದ ರಚಿಸಲ್ಪಟ್ಟ ವಜ್ರವ್ಯೂಹದ ರಕ್ಷಣೆಯ ಅಗ್ರಭಾಗದಲ್ಲಿ ಭೀಮನಿದ್ದನು. ಆದ್ದರಿಂದ ಆತನೇ ದುರ್ಯೋಧನನಿಗೆ ಸೇನಾರಕ್ಷಕನಾಗಿ ಕಂಡುಬಂದಿರಬಹುದು.

**ಅ||** ಈ ಪ್ರಕಾರವಾಗಿ ತನ್ನ ಸೈನ್ಯವನ್ನು ಅಜೇಯವೆಂದು ವರ್ಣಿಸಿ ನಂತರ ವೀರರೆಲ್ಲರನ್ನು ದುರ್ಯೋಧನನು ಸಂಬೋಧಿಸಿ ಭೀಷ್ಮನನ್ನು ರಕ್ಷಿಸಬೇಕೆನ್ನುವ ಎಚ್ಚರಿಕೆಯನ್ನು ನೀಡುತ್ತಾನೆ.

> ೧೧. ಅಯನೇಷು ಚ ಸರ್ವೇಷು ಯಥಾಭಾಗಮವಸ್ಥಿತಾಃ
> ಭೀಷ್ಮ ಮೇವಾಭಿರಕ್ಷಂತು ಭವನ್ತಸ್ಸರ್ವ ಏವ ಹಿ.

**ಅರ್ಥ:**- ಭವನ್ತಃ=ನೀವು; ಸರ್ವಏವ=ಎಲ್ಲರೂ; ಸರ್ವೇಷು=ಸಮಸ್ತವು; ಅಯನೇಷು ಚ=ಎಲ್ಲಾ ವ್ಯೂಹ ಮಾರ್ಗಗಳಲ್ಲಿ; ಯಥಾಭಾಗಮ್=ಅವರವರ ನಿಯಮಿತ ಸ್ಥಾನಗಳಲ್ಲಿ; ಅವಸ್ಥಿತಾಃ=ಇದ್ದವರಾಗಿ; ಭೀಷ್ಮಮೇವ=ಭೀಷ್ಮನನ್ನೇ; ಅಭಿರಕ್ಷಂತು ಹಿ=ಎಲ್ಲ ರೀತಿಯಿಂದಲೂ ಕಾಪಾಡುವುದು!

**ತಾ||** ನೀವೆಲ್ಲರೂ ವ್ಯೂಹಮಾರ್ಗದಲ್ಲಿ ತಮ್ಮ ತಮ್ಮ ನಿಯಮಿತ ಸ್ಥಾನಗಳಲ್ಲಿದ್ದು ಭೀಷ್ಮನನ್ನೇ ಸರ್ವವಿಧಗಳಿಂದ ಕಾಪಾಡುವುದು.

**ವ್ಯಾಖ್ಯೆ:**- ಭೀಷ್ಮನು ಮಹಾಪರಾಕ್ರಮಶಾಲಿ. ತನ್ನನ್ನು ತಾನು ರಕ್ಷಿಸಿಕೊಳ್ಳಬಲ್ಲನು. ಹಾಗಿದ್ದರೂ ಭೀಷ್ಮನನ್ನೇ ಸರ್ವವಿಧಗಳಿಂದ ಕಾಪಾಡಬೇಕೆಂದು ದುರ್ಯೋಧನನು ಏಕೆ ಹೇಳಿದನು? ಇದಕ್ಕೆ ಕಾರಣವಿದೆ. ದ್ರುಪದನ ಪುತ್ರನಾದ ಶಿಖಂಡಿ ಮೊಟ್ಟಮೊದಲು ಸ್ತ್ರೀರೂಪವನ್ನು ಹೊಂದಿದ್ದನಾದ್ದರಿಂದ ಆತನೊಡನೆ ಯುದ್ಧವನ್ನು ಮಾಡುವುದಿಲ್ಲವೆಂದು ಭೀಷ್ಮನು ಪ್ರತಿಜ್ಞೆಮಾಡಿದ್ದನು. ಆದ್ದರಿಂದ ಪಾಂಡವಪಕ್ಷದ ಕಡೆ ಇರುವ ಶಿಖಂಡಿ ಎದುರು ಬಂದರೆ ಭೀಷ್ಮನು ಆತನೊಡನೆ ಯುದ್ಧಮಾಡುವುದಿಲ್ಲ. ಅದನ್ನು ನೋಡಿಕೊಂಡು ಶತ್ರುವು ಆತನನ್ನು ವಧಿಸಬಹುದು. ಈ ರಹಸ್ಯ ತಿಳಿದು ದುರ್ಯೋಧನನು ವೀರರೆಲ್ಲರಿಗೆ ಭೀಷ್ಮನ ಎದುರು ಶಿಖಂಡಿ ಬರದೆ ಇರದಂತೆ ಸರ್ವವಿಧವಾಗಿ ಎಚ್ಚರಿಕೆ ವಹಿಸಬೇಕು ಎಂದು ಆದೇಶಿಸಿದನು. ಭೀಷ್ಮನೊಬ್ಬನು ಕ್ಷೇಮವಾಗಿದ್ದರೆ - ಶತ್ರುಗಳೆಲ್ಲರನ್ನು ಹತಗೊಳಿಸುವ ಸಾಮರ್ಥ್ಯ ಆತನಿಗೆ ಇದೆಯಾದ್ದರಿಂದ ಆತನಿದ್ದರೆ ತನ್ನ ಸೈನ್ಯವೆಲ್ಲಾ ಕ್ಷೇಮವಾಗಿದ್ದಂತೆ ಎಂದು ಭಾವಿಸಿದ ದುರ್ಯೋಧನನು ತನ್ನ ವೀರರಿಗೆ ಮೇಲೆ ಹೇಳಿದ ಹಾಗೆ ಆಜ್ಞಾಪಿಸಿದನು.

**ಅ||** ಈ ಪ್ರಕಾರವಾಗಿ ದುರ್ಯೋಧನನ ವೃತ್ತಾಂತವನ್ನು ವಿವರಿಸಿ ನಂತರ ಸಂಜಯನು ರಣರಂಗದಲ್ಲಿ ನಡೆದ ಸಂಘಟನೆಗಳನ್ನು ವಿವರಿಸುತ್ತಿದ್ದಾನೆ-

> ೧೨. ತಸ್ಯ ಸಂಜನಯನ್ ಹರ್ಷಂ ಕುರುವೃದ್ಧಃ ಪಿತಾಮಹಃ
> ಸಿಂಹನಾದಂ ವಿನದ್ಯೋಚ್ಚೈಃ ಶಂಖಂ ದಧ್ಮೌಪ್ರತಾಪವಾನ್

**ಅರ್ಥ:**- ಪ್ರತಾಪವಾನ್=ಪರಾಕ್ರಮವಂತನು; ಕುರುವೃದ್ಧಃ=ಕೌರವರಲ್ಲಿ ಹಿರಿಯನು; ಪಿತಾಮಹಃ=ತಾತನಾದ ಭೀಷ್ಮ; ತಸ್ಯ=ಆ ದುರ್ಯೋಧನನಿಗೆ; ಹರ್ಷಮ್=ಸಂತೋಷವನ್ನು; ಸಂಜನಯನ್=ಉಂಟುಮಾಡಲು; ಉಚ್ಚೈಃ=ಗಟ್ಟಿಯಾಗಿ; ಸಿಂಹನಾದಮ್=ಸಿಂಹಘರ್ಜನೆಯಂತಹ ಧ್ವನಿ; ವಿನದ್ಯ=ಮಾಡಿ; ಶಂಖಮ್=ಶಂಖವನ್ನು; ದಧ್ಮೌ=ಊದಿದನು.

**ತಾ:**- ಪರಾಕ್ರಮಶಾಲಿಯಾದ ಕುರುವೃದ್ಧ ಭೀಷ್ಮಪಿತಾಮಹನು ಆಗ ದುರ್ಯೋಧನನನ್ನು ಉತ್ಸಾಹಗೊಳಿಸಲು ಸಿಂಹಧ್ವನಿಯಿಂದ ಶಂಖವನ್ನು ಊದಿದನು.

**ವ್ಯಾಖ್ಯೆ:**- ಪ್ರತಾಪವಾನ್-ಪರಶುರಾಮ ಮುಂತಾದ ಮಹಾಶಕ್ತಿಸಂಪನ್ನರನ್ನು ಕೂಡ ಜಯಿಸಿದ ಅಮಿತ ಪರಾಕ್ರಮಿಯಾದ್ದರಿಂದ ಭೀಷ್ಮನನ್ನು ಇಲ್ಲಿ ಪ್ರತಾಪವಾನ್ ಎಂದು ಕರೆಯಲಾಗಿದೆ.

ಪ್ರಭುವಾದ ದುರ್ಯೋಧನನು ಶತ್ರುಸೈನ್ಯವನ್ನು ನೋಡಿ ಸ್ವಲ್ಪ ತಳಮಳ ಗೊಂಡಂತೆ ಕಂಡಾಗ ಅದನ್ನು ಗಮನಿಸಿದ ಭೀಷ್ಮನು ಆತನ ಹೃದಯವನ್ನು ಪುಲಕಿತಗೊಳ್ಳುವಂತೆ ಮಾಡಲೋಸುಗ ಶಂಖವನ್ನು ಮಹಾಧ್ವನಿಯಿಂದ ಊದಿದನು. ಸೇನಾನಾಯಕನು ಶಂಖನಿನಾದ ಮಾಡಿ ಯುದ್ಧಾರಂಭವನ್ನು ಕೂಡ ಸೂಚಿಸಿದನು. ಕುರುವೃದ್ಧಃ=ಕುರುವಂಶದಲ್ಲಿ ಬಾಹ್ಲಿಕನ ನಂತರ ವಯಸ್ಸಿನಲ್ಲಿ ದೊಡ್ಡವನು ಭೀಷ್ಮನೇ. ಆದ್ದರಿಂದಲೇ ಆತನನ್ನು ಪಿತಾಮಹನೆಂದು ಕರೆಯುವರು.

**ಅ||** ಭೀಷ್ಮನ ಯುದ್ಧೋತ್ಸಾಹವನ್ನು ನೋಡಿ ಬೇರೆಯ ಯೋಧರೂ ಸಹ ಶಂಖಾದಿಗಳನ್ನು ಊದಿದರೆಂದು ಸಂಜಯನು ಹೇಳುತ್ತಾನೆ-

> ೧೩. ತತಶ್ಶಂಖಾಶ್ಚ ಭೇರ್ಯಶ್ಚ ಪಣವಾನಕಗೋಮುಖಾಃ
> ಸಹಸೈವಾಭ್ಯಹನ್ಯನ್ತ ಸ ಶಬ್ದಸ್ತುಮುಲೋಽಭವತ್

**ಅರ್ಥ:**- ತತಃ=ನಂತರ; ಶಂಖಾಶ್ಚ=ಶಂಖಗಳನ್ನು; ಭೇರ್ಯಶ್ಚ=ಭೇರಿಗಳನ್ನು ಪಣವಾನಕ ಗೋಮುಖಾಃ=ತಪ್ಪಟೆಗಳು, ಕರಡಿಮಜಲುಗಳು, ಕಹಳೆಗಳು; ಸಹಸೈವ=ತಕ್ಷಣ; ಅಭ್ಯಹನ್ಯನ್ತ=ಮೊಳಗಿದವು; ಸಶಬ್ದಃ=ಆ ಧ್ವನಿ; ತುಮುಲಃ=ಎಲ್ಲ ದಿಕ್ಕುಗಳಿಗೂ ವ್ಯಾಪಿಸಿ; ಅಭವತ್=ಹಬ್ಬಿತ್ತು.

**ತಾ:** ಭೀಷ್ಮನು ಶಂಖನಿನಾದ ಮಾಡಿದ ನಂತರ ಕೌರವಸೇನೆಯ ಬೇರೆಯ ಯೋಧರು ಶಂಖಗಳನ್ನು, ಭೇರಿಗಳನ್ನು, ತಪ್ಪಟೆಗಳನ್ನು, ಮೊದಲಾದವುಗಳನ್ನು ಮೊಳಗಿಸಿದರು. ಆ ಶಬ್ದದಿಂದ ದಿಕ್ಕುಗಳೆಲ್ಲ ಜರ್ಝರಿತವಾದವು.

**ವ್ಯಾಖ್ಯೆ:-** ಸೇನಾಪತಿಯ ಶಂಖನಾದ ಬೇರೆಯ ಸೈನಿಕರಲ್ಲಿ ಉತ್ಸಾಹವನ್ನುಂಟು ಮಾಡಿ, ಅವರೆಲ್ಲಾ ಉತ್ತೇಜನ ಹೊಂದಿ ಒಂದೇ ಸಾರಿ ವಿವಿಧ ರಣಧ್ವನಿಗಳನ್ನು ಮಾಡಿದರು.

'ನನ್ನವರು, ಪಾಂಡವರು ಯುದ್ಧದಲ್ಲಿ ಏನು ಮಾಡಿದರು ? ಎನ್ನುವ ಧೃತರಾಷ್ಟ್ರನ ಪ್ರಶ್ನೆಗೆ ಇಲ್ಲಿಯವರೆಗೆ ಸಂಜಯನು ಕೌರವಪಕ್ಷದ ವಾರ್ತೆಯನ್ನು ತಿಳಿಸಿದನು. ಇಲ್ಲಿಂದ ಮುಂದೆ ಐದು ಶ್ಲೋಕಗಳಲ್ಲಿ ಪಾಂಡವಪಕ್ಷದ ವೃತ್ತಾಂತವನ್ನು ವಿವರಿಸಿ ಹೇಳುತ್ತಾನೆ.

**ಅ||** ಕೃಷ್ಣಾರ್ಜುನರು ತಮ್ಮ ತಮ್ಮ ಶಂಖಗಳನ್ನು ನಾದಮಾಡಿದ ವಿಷಯವನ್ನು ತಿಳಿಸುತ್ತಾನೆ-

**೧೪. ತತಶ್ಶ್ವೇತೈರ್ಹಯೈರ್ಯುಕ್ತೇ ಮಹತಿ ಸ್ಯನ್ದನೇ ಸ್ಥಿತೌ**
**ಮಾಧವಃ ಪಾಂಡವಶ್ಚೈವ ದಿವ್ಯೌ ಶಂಖೌ ಪ್ರದಧ್ಮತುಃ**

**ಅರ್ಥ:-** ತತಃ=ನಂತರ; ಶ್ವೇತೈಃ=ಶ್ವೇತವರ್ಣದ; ಹಯೈಃ=ಕುದುರೆಗಳಿಂದ; ಯುಕ್ತೇ=ಕೂಡಿದ; ಮಹತಿ=ದೊಡ್ಡದಾದ; ಸ್ಯಂದನೇ=ರಥದಲ್ಲಿ; ಸ್ಥಿತೌ=ಕುಳಿತು; ಮಾಧವಃ=ಶ್ರೀಕೃಷ್ಣನು; ಪಾಂಡವಶ್ಚೈವ=ಅರ್ಜುನನು; ದಿವ್ಯೌ=ದಿವ್ಯವಾದ; ಶಂಖೌ=ತಮ್ಮ ತಮ್ಮ ಶಂಖಗಳನ್ನು; ಪ್ರದಧ್ಮತುಃ=ಗಟ್ಟಿಯಾಗಿ ಊದಿದರು.

**ತಾ:-** ನಂತರ ಬೆಳ್ಳನೆಯ ಕುದುರೆಗಳನ್ನು ಹೂಡಿದ ಮಹಾರಥದಲ್ಲಿ ಕುಳಿತ ಕೃಷ್ಣಾರ್ಜುನರು ತಮ್ಮ ತಮ್ಮ ದಿವ್ಯವಾದ ಶಂಖಗಳನ್ನು ಗಟ್ಟಿಯಾಗಿ ಊದಿದರು.

**ವ್ಯಾಖ್ಯೆ:-** ಗೀತೆಯಲ್ಲಿ ಶ್ರೀಕೃಷ್ಣಮೂರ್ತಿ ರಂಗದಲ್ಲಿ ಪ್ರವೇಶಿಸುವುದು ಇಲ್ಲಿಯೇ. ಶ್ವೇತವರ್ಣದ ಕುದುರೆಗಳನ್ನು ಹೂಡಿದ ಅತ್ಯದ್ಭುತವಾದ ದಿವ್ಯರಥವನ್ನಾರೋಹಿಸಿ ನರನಾರಾಯಣರು ಕೃಷ್ಣಾರ್ಜುನರ ರೂಪದಲ್ಲಿ ಪ್ರತ್ಯಕ್ಷವಾದರು. ಶ್ವೇತವರ್ಣವು ಸತ್ವಗುಣವನ್ನು ಸೂಚಿಸುತ್ತದೆ. ಧರ್ಮವನ್ನು ಪ್ರತಿಬಿಂಬಿಸುತ್ತದೆ. ಇದನ್ನು ಹಿಡಿದು ಧರ್ಮವು (ತತ್ಫಲಿತವಾಗಿ) ವಿಜಯವು ಪಾಂಡವರ ಪಕ್ಷದಲ್ಲೇ ಇದೆಯೆಂದು ತಿಳಿದು ಬರುತ್ತದೆ.

ಅರ್ಜುನನಿಗೆ ಈ ದಿವ್ಯರಥವನ್ನು, ಗಾಂಡೀವವೆಂಬ ಧನುಸ್ಸನ್ನು ಪೂರ್ವದಲ್ಲಿ ಖಾಂಡವ ದಹನಕ್ಕೆ ಮೆಚ್ಚಿ ಅಗ್ನಿದೇವನು ಪ್ರಸಾದಿಸಿದ್ದನು. ಅವೆಲ್ಲ ಮಹಾಶಕ್ತಿವಂತವಾದುವು. ಬೆಳ್ಳಗಿನ ನಾಲ್ಕು ಕುದುರೆಗಳು ಗಂಧರ್ವರಾಜನಾದ ಚಿತ್ರರಥನು ಬಹುಮಾನರೂಪವಾಗಿ ಕೊಟ್ಟ ನೂರು ಕುದುರೆಗಳಿಗೆ ಸೇರಿದವುವಾಗಿವೆ. ಅವು ಭೂಮ್ಯಾಕಾಶಗಳೆಲ್ಲಾದರೂ ಸಂಚರಿಸಬಲ್ಲವು. ಈ ನಾಲ್ಕು ಕುದುರೆಗಳು ನಾಲ್ಕು ವೇದಗಳೆಂದು, ಕೃಷ್ಣಾರ್ಜುನರು ಪರಮಾತ್ಮ ಜೀವಾತ್ಮರೆಂದು ಪ್ರತೀತಿ.

**"ಮಾಧವಃ"-** 'ಮಾ ಅಂದರೆ ಲಕ್ಷ್ಮಿ, 'ಧವು' ಅಂದರೆ ಪತಿ, ಲಕ್ಷ್ಮೀಪತಿಯಾದ ಶ್ರೀಕೃಷ್ಣಪರಮಾತ್ಮ ಶಂಖವನ್ನು ಊದಿ ಕೌರವಪಕ್ಷದಿಂದ ರಾಜ್ಯಲಕ್ಷ್ಮಿಯನ್ನು ಸ್ವೀಕರಿಸಿದನೆಂದು ಸಂಜಯನು ಹೇಳುತ್ತಿದ್ದಾನೆ.

ಕೌರವ ಪಕ್ಷದಲ್ಲಿ ಭೀಷ್ಮನು ಪ್ರಧಾನ. ಆದ್ದರಿಂದ ಎಲ್ಲರಿಗಿಂತ ಪ್ರಥಮವಾಗಿ ಆತನೇ ಶಂಖವನ್ನು ಮೊಳಗಿಸಿದನು. ಹಾಗೆಯೇ ಪಾಂಡವ ಪಕ್ಷದಲ್ಲಿ ಮೊದಲು ಶ್ರೀಕೃಷ್ಣಮೂರ್ತಿಯೇ ಶಂಖವನ್ನು ಮೊಳಗಿಸಿದನಾದ್ದರಿಂದ ಆತನೇ ಈ ಪಕ್ಷಕ್ಕೆ ಪ್ರಧಾನನೆಂದು, ಬೇರೆಯವರೆಲಾ ನಿಮಿತ್ತಮಾತ್ರವೆಂದು ಸ್ಪಷ್ಟವಾಗುತ್ತದೆ.

**"ಪಾಂಡವಃ"-** ಅರ್ಜುನ. 'ಪಾಂಡವಾನಾಂ ಧನಂಜಯಃ' ಎಂದು ಹೇಳಲ್ಪಟ್ಟಿರುವುದರಿಂದ ಪಾಂಡವ ಎನ್ನುವ ಶಬ್ದಕ್ಕೆ ಅರ್ಜುನ ಎನ್ನುವ ಅರ್ಥ ಸಮಂಜಸವಾಗಿದೆ.

**ಅ||** ಇನ್ನು ಮುಂದಿನ ನಾಲ್ಕು ಶ್ಲೋಕಗಳಲ್ಲಿ ಪಾಂಡವ ವೀರರನ್ನು ಅವರು ಊದಿದ ಶಂಖಗಳನ್ನು ವರ್ಣಿಸಲಾಗಿದೆ-

**೧೫. ಪಾಂಚಜನ್ಯಂ ಹೃಷೀಕೇಶೋ ದೇವದತ್ತಂ ಧನಂಜಯಃ**
**ಪೌಂಡ್ರಂ ದಧ್ಮೌ ಮಹಾಶಂಖಂ ಭೀಮಕರ್ಮಾ ವೃಕೋದರಃ**

**೧೬. ಅನಂತವಿಜಯಂ ರಾಜಾ ಕುಂತೀಪುತ್ರೋ ಯುಧಿಷ್ಠಿರಃ**
**ನಕುಲಃ ಸಹದೇವಶ್ಚ ಸುಘೋಷಮಣಿಪುಷ್ಪಕೌ**

**೧೭. ಕಾಶ್ಯಶ್ಚ ಪರಮೇಷ್ವಾಸಃ ಶಿಖಂಡೀ ಚ ಮಹಾರಥಃ**
**ದೃಷ್ಟದ್ಯುಮ್ನೋ ವಿರಾಟಶ್ಚ ಸಾತ್ಯಕಿಶ್ಚಾಪರಾಜಿತಃ**

**೧೮. ದ್ರುಪದೋ ದ್ರೌಪದೇಯಾಶ್ಚ ಸರ್ವಶಃ ಪೃಥಿವೀಪತೆ**
**ಸೌಭದ್ರಶ್ಚ ಮಹಾಬಾಹುಃ ಶಂಖಾನ್ ದಧ್ಮುಃ ಪೃಥಕ್ ಪೃಥಕ್**

**ಅರ್ಥ:-** ಪೃಥಿವೀಪತೆ=ಓ ಧೃತರಾಷ್ಟ್ರ ಮಹಾರಾಜಾ !; ಹೃಷೀಕೇಶಃ=ಶ್ರೀಕೃಷ್ಣ; ಪಾಂಚಜನ್ಯಂ=ಪಾಂಚಜನ್ಯವೆನ್ನುವ ಶಂಖ; ಧನಂಜಯಃ=ಅರ್ಜುನ; ದೇವದತ್ತಃ=ದೇವದತ್ತವೆನ್ನುವ ಶಂಖ; ಭೀಮಕರ್ಮಾ=ಭಯಂಕರವಾದ ಕರ್ಮಗಳನ್ನು ನಿರ್ವಹಿಸುವ; ವೃಕೋದರಃ=ಭೀಮ; ಪೌಂಡ್ರಮ್= ಪೌಂಡ್ರವೆಂಬ; ಮಹಾಶಂಖಮ್=ಮಹಾಶಂಖವನ್ನು; ದಧ್ಮೌ=ಊದಿದನು; ಕುಂತೀಪುತ್ರಃ=ಕುಂತೀದೇವಿ ಕುಮಾರ; ರಾಜಾ=ರಾಜನಾದ; ಯುಧಿಷ್ಠಿರಃ= ಧರ್ಮರಾಜ; ಅನಂತವಿಜಯಂ=ಅನಂತವಿಜಯವೆಂಬ ಶಂಖ; ನಕುಲಃ= ನಕುಲ; ಸಹದೇವಶ್ಚ=ಸಹದೇವ; ಸುಘೋಷಮಣಿಪುಷ್ಪಕೌ=ಸುಘೋಷ ಮತ್ತು ಮಣಿಪುಷ್ಪಕವೆಂಬ ಶಂಖಗಳು; ದಧ್ಮುಃ=ಕ್ರಮವಾಗಿ ಊದಿದರು; (ಅದೇ ವಿಧವಾಗಿ) ಪರಮೇಷ್ವಾಸಃ=ದೊಡ್ಡ ಧನುಸ್ಸುಗಳುಳ್ಳ; ಕಾಶ್ಯಶ್ಚ= ಕಾಶೀರಾಜ; ಮಹಾರಥಃ=ಮಹಾರಥಿ; ಶಿಖಂಡಿ ಚ=ಶಿಖಂಡಿಯು; ದೃಷ್ಟದ್ಯುಮ್ನಃ= ದೃಷ್ಟದ್ಯುಮ್ನನು; ವಿರಾಟಶ್ಚ=ವಿರಾಟನು; ಅಪರಾಜಿತಃ=ಅಪಜಯವನ್ನು ಹೊಂದದವನು; ಸಾತ್ಯಕಿಶ್ಚ=ಸಾತ್ಯಕಿಯು; ದ್ರುಪದಃ=ದ್ರುಪದನು; ದ್ರೌಪದಶ್ಚ=ದ್ರೌಪದೀಕುಮಾರರಾದ ಉಪಪಾಂಡವರು; ಮಹಾಬಾಹುಃ= ದೊಡ್ಡ ಬಾಹುಗಳುಳ್ಳ; ಸೌಭದ್ರಶ್ಚ=ಅಭಿಮನ್ಯು; ಸರ್ವಶಃ= ಸೇನೆಯೆಲ್ಲವೂ; ಪೃಥಕ್‌ಪೃಥಕ್=ಬೇರೆಬೇರೆಯಾಗಿ; ಶಂಖಾನ್=(ತಮ್ಮ ತಮ್ಮ) ಶಂಖಗಳನ್ನು; ದಧ್ಮುಃ=ಊದಿದರು.

**ತಾ:-** ಶ್ರೀಕೃಷ್ಣನು ಪಾಂಚಜನ್ಯವೆಂಬ ಶಂಖವನ್ನು ಊದಿದನು. ಅರ್ಜುನನು ದೇವದತ್ತವನ್ನು ಊದಿದನು. ಭಯಂಕರವಾದ ಕಾರ್ಯಗಳನ್ನು ನಿರ್ವಹಿಸಬಲ್ಲ ಭೀಮನು ಪೌಂಡ್ರವೆನ್ನುವ ಶಂಖವನ್ನು ಊದಿದನು. ಕುಂತೀಸುತನಾದ ಧರ್ಮರಾಜನು ಅನಂತವಿಜಯವನ್ನು, ನಕುಲನು ಸುಘೋಷವನ್ನು, ಸಹದೇವನು ಮಣಿಪುಷ್ಪಕವನ್ನು ಊದಿದರು. ಹಾಗೆಯೇ ಮಹಾಧನುಸ್ಸನ್ನು ಹೊಂದಿದ ಕಾಶೀರಾಜನು, ಮಹಾರಥನಾದ ಶಿಖಂಡಿಯು, ದೃಷ್ಟದ್ಯುಮ್ನನು, ವಿರಾಟನು, ಅಪಜಯವನ್ನೇ ಅರಿಯದ ಸಾತ್ಯಕಿಯು, ದ್ರುಪದನು, ದ್ರೌಪದೀಪುತ್ರರಾದ ಉಪಪಾಂಡವರು, ಮಹಾಭುಜಬಲವುಳ್ಳ ಅಭಿಮನ್ಯು, ಸೇನೆಯಲ್ಲಿ ಬೇರೆ ಬೇರೆಯಾಗಿ ತಮ್ಮ ತಮ್ಮ ಶಂಖಗಳನ್ನು ಊದಿದರು.

**ವ್ಯಾಖ್ಯೆ:-** ಕೃಷ್ಣಾದಿಗಳು ಉಪಯೋಗಿಸಿದ ಈ ಪಾಂಚಜನ್ಯಾದಿ ಶಂಖಗಳು ಸಾಮಾನ್ಯವಾದವುಗಳಲ್ಲ, ದಿವ್ಯವಾದವುಗಳೆಂದು ಈಗಾಗಲೇ ಹೇಳಲ್ಪಟ್ಟಿದೆ.

'ಪಾಂಚಜನ್ಯಃ'- ಪಂಚಜನ ಎನ್ನುವ ರಾಕ್ಷಸನ ಎಲುಬುಗಳಿಂದ ಮಾಡಲ್ಪಟ್ಟಿದೆಯಾದ್ದರಿಂದ ಶ್ರೀಕೃಷ್ಣನ ಶಂಖವನ್ನು ಪಾಂಚಜನ್ಯವೆಂದು ಕರೆಯುವರು. ಹೃಷೀಕೇಶ-ಹೃಷೀಕಗಳೆಂದರೆ ಇಂದ್ರಿಯಗಳು. ಈಶನೆಂದರೆ ಅಧಿಪತಿ. ಇಂದ್ರಿಯಗಳಿಗೆ ಅಧಿಪತಿಯಾದ ಸರ್ವಸಾಕ್ಷಿಯಾದ ಪರಮಾತ್ಮ ನೆಂದರ್ಥ.

**'ಧನಂಜಯಃ'**-ರಾಜಸೂಯಯಾಗಕ್ಕೆ ಅನೇಕ ರಾಜರಿಂದ ಧನವನ್ನು ಸಂಪಾದಿಸಿ ತಂದಿದ್ದರಿಂದ, ಅಲ್ಲದೆ ಧನದ ಆಶೆಯನ್ನು ತ್ಯಜಿಸಿದವನಾದ್ದರಿಂದ ಅರ್ಜುನನಿಗೆ ಧನಂಜಯನೆನ್ನುವ ಹೆಸರು ಬಂದಿದೆ.

**'ವೃಕೋದರಃ'**:- ವೃಕವೆಂದರೆ ತೋಳ. ಅದರ ಹೊಟ್ಟೆಯಂತಹ ಹೊಟ್ಟೆ ಯುಳ್ಳವನೆಂದು, ಇಲ್ಲ ಎಲ್ಲವನ್ನೂ ಭಸ್ಮಮಾಡುವ 'ವೃಕ' ಎನ್ನುವ ಅಗ್ನಿಯನ್ನು ಉದರದಲ್ಲಿ ಹೊಂದಿದವನೆಂದು ಭೀಮನಿಗೆ ವೃಕೋದರ ಎನ್ನುವ ಹೆಸರು ಬಂದಿದೆ.

**ಅ||** ಪಾಂಡವಪಕ್ಷದ ವೀರರ ಶಂಖಧ್ವನಿಗಳ ಫಲಿತವನ್ನು ಮುಂದಿನ ಶ್ಲೋಕದಲ್ಲಿ ವಿವರಿಸುತ್ತಾನೆ-

**೧೯. ಸಘೋಷೋ ಧಾರ್ತರಾಷ್ಟ್ರಾಣಾಂ ಹೃದಯಾನಿ ವ್ಯದಾರಯತ್**
**ನಭಶ್ಚ ಪೃಥಿವೀಂ ಚೈವ ತುಮುಲೋ ವ್ಯನುನಾದಯನ್**

**ಅರ್ಥ:-** ತುಮುಲಃ=ಸರ್ವವನ್ನು ವ್ಯಾಪಿಸಿದ; ಸ ಘೋಷಃ=ಆ ಧ್ವನಿ; ನಭಶ್ಚ= ಆಕಾಶವನ್ನು; ಪೃಥಿವೀಂಚೈವ=ಭೂಮಿಯನ್ನು; ವ್ಯನುನಾದಯನ್=ಶಬ್ದ ವೊಳಗಿತು; ಧಾರ್ತರಾಷ್ಟ್ರಾಣಾಮ್=ದುರ್ಯೋಧನಾದಿಗಳ; ಹೃದಯಾನಿ=ಹೃದಯಗಳನ್ನು; ವ್ಯದಾರಯತ್=ಭೇದಿಸಿತು.

**ತಾ:-** ಪಾಂಡವವೀರರ ಶಂಖಗಳ ಆ ಮಹಾಧ್ವನಿ ಭೂಮ್ಯಾಕಾಶಗಳನ್ನು ತತ್ತರಿಸುವಂತೆ ಮಾಡಿ ಅದು ದುರ್ಯೋಧನಾದಿಗಳ ಹೃದಯವನ್ನು ಭೇದಿಸಿತು.

**ವ್ಯಾಖ್ಯೆ:-** ಶ್ರೀಕೃಷ್ಣಾದಿಯರ ಶಂಖಧ್ವನಿಗಳು ದುರ್ಯೋಧನಾದಿಗಳ ಹೃದಯಗಳನ್ನು ಭೇದಿಸಿದವು ಎಂದು ಹೇಳುವುದರಿಂದ ಅವರ ಅರ್ಧ ಪ್ರಾಣ ಈಗಾಗಲೇ ಹೋಗಿ, ಅವರ ಉತ್ಸಾಹವು ಬಹಳ ಕುಗ್ಗಿದೆಯೆಂದು ಇದರಿಂದ ಸ್ಪಷ್ಟವಾಗುತ್ತಿದೆ.

**ಅ||** ನಂತರ ಅರ್ಜುನನು ಉತ್ಸಾಹಪೂರಿತನಾಗಿ ಶ್ರೀಕೃಷ್ಣನೊಡನೆ ಸಂಭಾಷಿಸಿದ ಕೆಲವು ಮಾತುಗಳನ್ನು ಸಂಜಯನು ನಾಲ್ಕು ಶ್ಲೋಕಗಳ ಮೂಲಕ ತಿಳಿಸುತ್ತಿದ್ದಾನೆ.

**೨೦. ಅಥ ವ್ಯವಸ್ಥಿತಾನ್ ದೃಷ್ಟ್ವಾ ಧಾರ್ತರಾಷ್ಟ್ರಾನ್ ಕಪಿಧ್ವಜಃ**
**ಪ್ರವೃತ್ತೇ ಶಸ್ತ್ರಸಂಪಾತೇ ಧನುರುದ್ಯಮ್ಯ ಪಾಂಡವಃ**

**೨೧. ಹೃಷೀಕೇಶಂ ತದಾ ವಾಕ್ಯಮಿದಮಾಹ ಮಹೀಪತೇ**

**ಅರ್ಥ:-** ಮಹೀಪತೇ=ಓ ಧೃತರಾಷ್ಟ್ರ ಮಹಾರಾಜಾ! ಅಥ=ಅಲ್ಲಿ; ಶಸ್ತ್ರ ಸಂಪಾತೇ=ಆಯುಧ ಪ್ರಯೋಗ; ಪ್ರವೃತ್ತೇ=ಪ್ರಾರಂಭವಾಗುತ್ತಿರುವಾಗ; ಕಪಿಧ್ವಜಃ=ಹನುಮಂತನನ್ನು ಧ್ವಜದ ಮೇಲೆ ಹೊಂದಿದ; ಪಾಂಡವಃ= ಅರ್ಜುನನು; ವ್ಯವಸ್ಥಿತಾನ್=ಯುದ್ಧ ಸನ್ನದ್ಧನಾಗಿ; ಧಾರ್ತರಾಷ್ಟ್ರಾನ್= ಕೌರವರನ್ನು; ದೃಷ್ಟ್ವಾ=ನೋಡಿ; ಧನುಃ=ಬಿಲ್ಲನ್ನು; ಉದ್ಯಮ್ಯ=ಹಿಡಿದು; ತದಾ=ಆ ಸಮಯದಲ್ಲಿ; ಹೃಷೀಕೇಶಂ=ಶ್ರೀಕೃಷ್ಣನ ಬಗ್ಗೆ; ಇದಂ ವಾಕ್ಯಮ್ ಈ ವಾಕ್ಯವನ್ನು; ಆಹಾ=ಹೇಳಿದನು.

**ತಾ:-** ಓ ಧೃತರಾಷ್ಟ್ರಮಹಾರಾಜಾ! ಅಲ್ಲಿ ಇನ್ನೇನು ಆಯುಧ ಪ್ರಯೋಗ ಪ್ರಾರಂಭವಾಗಬೇಕನ್ನುವಾಗ ಕಪಿಧ್ವಜನಾದ ಅರ್ಜುನನು ಯುದ್ಧಸನ್ನದ್ಧರಾದ ಕೌರವರನ್ನು ನೋಡಿ ಧನುಸ್ಸನ್ನು ಹಿಡಿದು ಶ್ರೀಕೃಷ್ಣನಿಗೆ ಈ ರೀತಿ ಹೇಳಿದನು.

**ವ್ಯಾಖ್ಯೆ:-** 'ಕಪಿಧ್ವಜ'- ಅರ್ಜುನನ ರಥದ ಪತಾಕೆಯ ಮೇಲೆ ಹನುಮಂತ ನಿರುವುದರಿಂದ ಅರ್ಜುನನಿಗೆ ಕಪಿಧ್ವಜನೆನ್ನುವ ಹೆಸರು ಬಂದಿದೆ. ಭೀಮನ ಪ್ರಾರ್ಥನೆಯನ್ನನುಸರಿಸಿ ಆಂಜನೇಯನು ಪಾಂಡವರಿಗೆ ಯುದ್ಧದಲ್ಲಿ ಜಯವುಂಟಾಗುವುದಕ್ಕೋಸ್ಕರ ಅರ್ಜುನನ ರಥದ ಪತಾಕೆಯ ಮೇಲೆ ತಾನು ಕೂತಿರುವೆನೆಂದು ವರವಿತ್ತಿದ್ದನು (ಭಾರತ-ಅರಣ್ಯ ೧೫೧ ಅ).

**ಅರ್ಜುನ ಉವಾಚ:-**

**ಸೇನಯೋರುಭಯೋರ್ಮಧ್ಯೇ ರಥಂ ಸ್ಥಾಪಯ ಮೇಽಚ್ಯುತ**

**೨೨. ಯಾವದೇತಾನ್ನಿರೀಕ್ಷೇಽಹಂ ಯೋದ್ಧುಕಾಮಾನವಸ್ಥಿತಾನ್**
**ಕೈರ್ಮಯಾ ಸಹ ಯೋದ್ಧವ್ಯಮಸ್ಮಿನ್ ರಣಸಮುದ್ಯಮೇ**

ಅರ್ಜುನನು ಹೇಳಿದನು:-

**ಅರ್ಥ:-** ಅಚ್ಯುತ=ಓ ಕೃಷ್ಣಾ! ಅಸ್ಮಿನ್=ಈ; ರಣಸಮುದ್ಯಮೇ=ಯುದ್ಧಾ ರಂಭದಲ್ಲಿ; ಮಯಾ=ನನ್ನಿಂದ; ಕೈಸಹಾ=ಯಾರೊಡನೆ; ಯೋದ್ಧವ್ಯಮ್= ಯುದ್ಧ ಮಾಡಬೇಕಾಗಿದೆಯೊ; ಯೋದ್ಧುಕಾಮಾನ್=ಯುದ್ಧಾಪೇಕ್ಷಿತರಾಗಿ; ಅವಸ್ಥಿತಾನ್=(ಇಲ್ಲಿ) ನಿಂತಿರುವ; ಏತಾನ್=(ಅಂಥಹ) ವೀರರನ್ನು; ಯಾವತ್=ಎಲ್ಲಿಂದ; ಅಹಂ=ನಾನು; ನಿರೀಕ್ಷೆ=ನೋಡಬಲ್ಲೆನೋ; (ತಾವತ್= ಅಲ್ಲಿ) ಉಭಯೋಃ ಸೇನಯೋಃ=ಎರಡು ಸೇನೆಗಳ ಮಧ್ಯೆ; ಮೇ=ನನ್ನ; ರಥಂ ಸ್ಥಾಪಯ=ರಥವನ್ನು ನಿಲ್ಲಿಸು.

**ತಾ:-** ಓ ಕೃಷ್ಣಾ! ನಾನು ಯಾರೊಡನೆ ಸಮರ ಮಾಡಬೇಕಾಗಿದೆಯೋ, ಅಂಥಹ ಯುದ್ಧಾಭಿಲಾಷಿಗಳನ್ನು ನಾನು ಯಾವ ಸ್ಥಳದಿಂದ ಚೆನ್ನಾಗಿ ನೋಡಬಲ್ಲೆನೋ ಅಂಥಹ ಸ್ಥಳದಲ್ಲಿ ರಥವನ್ನು ನಿಲ್ಲಿಸು. ಯುದ್ಧಾರಂಭಕ್ಕೆ ಮುಂಚೆ ಅವರನ್ನು ನೋಡಬಯಸುತ್ತೇನೆ.

**ವ್ಯಾಖ್ಯೆ:-** ಶತ್ರುಗಳೊಡನೆ ಹೋರಾಟ ಪ್ರಾರಂಭಿಸುವುದಕ್ಕೆ ಮುಂಚೆ, ಶತ್ರುಪಕ್ಷದಲ್ಲಿ ಎಷ್ಟುಜನರಿರುವರು, ಯಾರ‍್ಯಾರು ಇದ್ದಾರೆ, ಅವರೆಲ್ಲರೂ ಎಂಥಹ ಶಕ್ತಿ ಹೊಂದಿದ್ದಾರೆ ಎನ್ನುವುದೆಲ್ಲವನ್ನು ಗಮನಿಸುವುದು ಉತ್ತಮ ಯೋಧನ ಲಕ್ಷಣ. ಆದ್ದರಿಂದಲೇ ಅರ್ಜುನನು ಅದನ್ನು ವೀಕ್ಷಿಸಲು ರಥವನ್ನು ಉಭಯ ಸೇನೆಗಳ ಮಧ್ಯೆ ತೆಗೆದುಕೊಂಡು ಹೋಗೆಂದು ಶ್ರೀಕೃಷ್ಣನಿಗೆ ಹೇಳಿದನು.

**'ಅಚ್ಯುತ'**-ಚ್ಯುತಿಯಿಲ್ಲದವನು ಅಚ್ಯುತ. ಅಂದರೆ ನಾಶವಿಲ್ಲದವನು ಇಲ್ಲವೇ ಸ್ವಸ್ವರೂಪದಿಂದ ಚಲಿಸದೆ ಇರುವವನೆಂದರ್ಥ. ಇಲ್ಲಿ ತನ್ನನ್ನಾಶ್ರಯಿಸಿದವರನ್ನು ಸಂಸಾರ ಸಮುದ್ರದಿಂದ ಚ್ಯುತಿ ಹೊಂದದಂತೆ ನೋಡಿಕೊಳ್ಳುವವನು ಎನ್ನುವ ಅರ್ಥವನ್ನು ಕೊಡಬಹುದು. ತಮ್ಮ ತಮ್ಮ ಆಧ್ಯಾತ್ಮಿಕ ಸಾಧನೆಗಳಲ್ಲಿ ಚ್ಯುತಿ ಹೊಂದದೆ ಇರುವವರು ಮಾತ್ರವೇ ಅಚ್ಯುತನನ್ನು ಸೇರಬಲ್ಲರು. ಆದ್ದರಿಂದ ಅಚ್ಯುತನನ್ನು ಸೇರಬೇಕೆಂದುಕೊಂಡವರು ತಮ್ಮ ಸಾಧನೆಗಳಲ್ಲಿ ಯಾವುದೇ ಚ್ಯುತಿ, ಲೋಪಗಳಿಲ್ಲದಂತೆ ನೋಡಿಕೊಳ್ಳಬೇಕು.

**೨೩. ಯೋತ್ಸ್ಯಮಾನಾನವೇಕ್ಷೇಽಹಂ ಯ ಏತೇಽತ್ರ ಸಮಾಗತಾಃ**
**ಧಾರ್ತರಾಷ್ಟ್ರಸ್ಯ ದುರ್ಬುದ್ಧೇರ್ಯುದ್ಧೇ ಪ್ರಿಯಚಿಕೀರ್ಷವಃ**

**ಅರ್ಥ:-** ದುರ್ಬುದ್ಧೇಃ=ದುಷ್ಟಬುದ್ಧಿಯುಳ್ಳ; ಧಾರ್ತರಾಷ್ಟ್ರಸ್ಯ=ದುರ್ಯೋಧನನಿಗೆ; ಯುದ್ಧೇ=ಯುದ್ಧದಲ್ಲಿ; ಪ್ರಿಯ ಚಿಕೀರ್ಷವಃ=ಪ್ರಿಯವನ್ನುಂಟು ಮಾಡಿದಂತರವರಾಗಿ; ಯೇ ಏತೇ=ಯಾವ ವೀರರು; ಅತ್ರ=ಇಲ್ಲಿ; ಸಮಾಗತಾಃ=ಸೇರಿದುಂಥವರಾಗಿದ್ದಾರೋ; (ತಾನ್=ಆ) ಯೋತ್ಸ್ಯಮಾನಾನ್=ಯುದ್ಧಮಾಡ ಹೋಗುತ್ತಿರುವವರನ್ನು; ಅಹಂ=ನಾನು; ಅಪೇಕ್ಷೇ=ನೋಡಲು ಅಪೇಕ್ಷಿಸುವೆನು.

**ತಾ:-** ದುಷ್ಟಬುದ್ಧಿಯುಳ್ಳ ದುರ್ಯೋಧನನಿಗೆ ಯುದ್ಧದಲ್ಲಿ ಪ್ರಿಯವನ್ನುಂಟಾಗುವಂತೆ ಮಾಡಲು ಇಲ್ಲಿ ಸೇರಿರುವ ಆ ಯೋಧರನ್ನು ನಾನು ನೋಡ ಬಯಸುವೆನು.

**ವ್ಯಾಖ್ಯೆ:-** 'ದುರ್ಬುದ್ಧೇಃ'-ದುರ್ಯೋಧನನು ಪಾಂಡವರಿಗೆ ಈವರೆವಿಗೆ ಎಷ್ಟೋ ಅಪಚಾರಗಳನ್ನು ಮಾಡಿದ್ದಾನೆ. ಕೊನೆಗೆ ಅವರಿಗೆ ನ್ಯಾಯಬದ್ಧವಾಗಿ ಸಿಗಬೇಕಾಗಿದ್ದ ರಾಜ್ಯವನ್ನು ಕೂಡ ಅವರಿಂದ ಕಬಳಿಸಿ ಅವರಿಗೆ ನಾನಾ ಹಿಂಸೆಗಳನ್ನು ಕೊಟ್ಟನು. ಇದೆಲ್ಲವನ್ನು ಮನಸ್ಸಿನಲ್ಲಿಟ್ಟುಕೊಂಡೇ ಅರ್ಜುನನು ದುರ್ಯೋಧನನನ್ನು ದುರ್ಬುದ್ಧಿಯುಳ್ಳವನೆಂದು ಹೇಳಿದ್ದಾನೆ. **'ಬುದ್ಧಿನಾಶಾತ್ ಪ್ರಣಶ್ಯತಿ'-** ಬುದ್ಧಿ ಕೆಟ್ಟಲ್ಲಿ ಮನುಷ್ಯನು ನಶಿಸಿ ಹೋಗುವನು ಎಂದು ಗೀತೆಯಲ್ಲಿ ಭಗವಾನನು ತಿಳಿಸಿದ್ದಾನೆ. ಇದರ ಪ್ರಕಾರ ದುರ್ಯೋಧನನಿಗೆ ಮುನ್ಮುಂದೆ ಉಂಟಾಗುವ ನಾಶ ಪ್ರಾರಂಭದಲ್ಲಿಯೇ 'ದುರ್ಬುದ್ಧಿ'ಯೆನ್ನುವ ಪದದಿಂದ ಸೂಚಿಸಲ್ಪಟ್ಟಿದೆಯೆಂದು ಊಹಿಸಬಹುದು. ಮತ್ತೆ ಯಾರ ಬುದ್ಧಿ ಶುದ್ಧವಿಲ್ಲದೆ ಕೆಟ್ಟ ಗುಣಗಳಿಂದ ಕೂಡಿದೆಯೋ, ಅಂಥಹವರು ಜೀವನ ರಂಗದಲ್ಲಿ ದುರ್ಯೋಧನನಂತೆ ಅಪಯಶಸ್ಸು, ಅಪಜಯ, ವಿನಾಶವನ್ನು ತಪ್ಪದೆ ಹೊಂದುವರು. ಆದ್ದರಿಂದ ಸದ್ಬುದ್ಧಿಯನ್ನು ಆಶ್ರಯಿಸಬೇಕೇ ಹೊರತು 'ದುರ್ಬುದ್ಧಿ'ಯನ್ನಲ್ಲ.

**'ಪ್ರಿಯಚಿಕೀರ್ಷವಃ'**-ದುಷ್ಟಶೀಲನಾದ ದುರ್ಯೋಧನನ್ನು ಸಂತೋಷಗೊಳಿಸಬೇಕೆಂದುಕೊಂಡವರೆಲ್ಲ ಯುದ್ಧದಲ್ಲಿ ಪಾಲ್ಗೊಂಡರು. ಪಾಪವನ್ನು ಪ್ರೋತ್ಸಾಹಿಸುವುದು ಕೂಡ ಮಹಾಪಾಪ. ಆದ್ದರಿಂದ ದುರ್ಯೋಧನನ ಹಾಗೆ ದುರ್ಬುದ್ಧಿಯನ್ನಾಶ್ರಯಿಸುವುದಾಗಲಿ, ಆತನ ಪಕ್ಷದವರ ಹಾಗೆ ಅಂಥಹುದನ್ನು ಪ್ರೋತ್ಸಾಹಿಸುವುದಾಗಲಿ ಯಾವಾಗಲೂ ಒಳ್ಳೆಯದಲ್ಲ.

**ಅ॥** ಅರ್ಜುನನ ಈ ವಾಕ್ಯಗಳ ನಂತರ ಶ್ರೀಕೃಷ್ಣನು ಏನು ಮಾಡಿದನೆಂದು ಮುಂದೆ ಹೇಳಲ್ಪಟ್ಟಿದೆ-

**ಸಂಜಯ ಉವಾಚ:-**

> **೨೪. ಏವಮುಕ್ತೋ ಹೃಷೀಕೇಶೋ ಗುಡಾಕೇಶೇನ ಭಾರತ**
> **ಸೇನಯೋರುಭಯೋರ್ಮಧ್ಯೇ ಸ್ಥಾಪಯಿತ್ವಾ ರಥೋತ್ತಮಮ್**
>
> **೨೫. ಭೀಷ್ಮದ್ರೋಣಪ್ರಮುಖತಸ್ಸರ್ವೇಷಾಂ ಚ ಮಹೀಕ್ಷಿತಾಂ**
> **ಉವಾಚ ಪಾರ್ಥ ಪಶ್ಯೈತಾನ್ ಸಮವೇತಾನ್ ಕುರೂನಿತಿ**

ಸಂಜಯ ಉವಾಚ:- ಸಂಜಯನು ಹೇಳಿದನು.

**ಅರ್ಥ:-** ಭಾರತ=ಭರತ ವಂಶದಲ್ಲಿ ಜನಿಸಿದ ಓ ಧೃತರಾಷ್ಟ್ರಮಹಾರಾಜಾ! ಏವಮ್=ಈ ಪ್ರಕಾರವಾಗಿ; ಗುಡಾಕೇಶೇನ; ಅರ್ಜುನನ ಕೈಯಲ್ಲಿ; ಉಕ್ತಃ=ಹೇಳಲ್ಪಟ್ಟ; ಹೃಷೀಕೇಶಃ=ಶ್ರೀಕೃಷ್ಣನು; ಉಭಯೋಃ ಸೇನಯೋಃ=ಎರಡೂ ಸೇನೆಗಳ; ಮಧ್ಯೇ=ಮಧ್ಯದಲ್ಲಿ; ಭೀಷ್ಮದ್ರೋಣ ಪ್ರಮುಖತಃ=ಭೀಷ್ಮ ದ್ರೋಣರೆದುರಿಗೆ; ಸರ್ವೇಷಾಂ ಮಹೀಕ್ಷಿತಾಂ=ಎಲ್ಲ ರಾಜರೆದುರಿಗೆ; ರಥೋತ್ತಮಮ್=ಶ್ರೇಷ್ಠವಾದ ರಥವನ್ನು; ಸ್ಥಾಪಯಿತ್ವಾ= ನಿಲ್ಲಿಸಿ; ಪಾರ್ಥ=ಓ ಅರ್ಜುನಾ! ಸಮವೇತನ್=ಸೇರಿರುವ; ಏತಾನ್=ಈ; ಕುರೂನ್=ಕೌರವರನ್ನು; ಪಶ್ಯ=ನೋಡು; ಇತಿ=ಎಂದು; ಉವಾಚ= ಹೇಳಿದನು.

**ತಾ:-** ಓ ಧೃತರಾಷ್ಟ್ರಮಹಾರಾಜಾ! ಅರ್ಜುನನ ಮಾತಿಗೆ ಓಗೊಟ್ಟು ಶ್ರೀಕೃಷ್ಣನು ಶ್ರೇಷ್ಠವಾದ ಆ ರಥವನ್ನು ಎರಡು ಸೇನೆಗಳ ಮಧ್ಯೆ, ಭೀಷ್ಮದ್ರೋಣರ ಮತ್ತು ಎಲ್ಲಾ ರಾಜರ ಎದುರಿಗೆ ನಿಲ್ಲಿಸಿ 'ಅರ್ಜುನಾ! ಇಲ್ಲಿ ನೆರೆದಿರುವ ಕೌರವರನ್ನು ನೋಡು!' ಎಂದು ಹೇಳಿದನು.

**ವ್ಯಾಖ್ಯೆ:-** 'ಗುಡಾಕೇಶಃ-ನಿದ್ರೆಯನ್ನು ಜಯಿಸಿದವನು. ತಮೋಗುಣವನ್ನು ತ್ಯಜಿಸಿದವನು. ಅತಿಜಾಗರೂಕನಾದವನು ಎಂದರ್ಥ. ಅಧ್ಯಾತ್ಮ ಬೋಧೆಯ ಶ್ರವಣಕ್ಕೆ ಏಕಾಗ್ರತೆ, ಪ್ರಮಾದರಾಹಿತ್ಯ ಅವಶ್ಯಕ. ಅಂಥಹ ಸುಲಕ್ಷಣಗಳು ಗೀತಾಬೋಧರೂಪ ಪರಮಾರ್ಥವಿದ್ಯೆಯನ್ನು ಶ್ರವಣ ಮಾಡುತ್ತಿರುವ ಅರ್ಜುನನಲ್ಲಿವೆಯೆಂದು 'ಗುಡಾಕೇಶ' ಪದವು ನಿರೂಪಿಸುತ್ತಿದೆ. 'ಕುರೂನ್'-ಕೌರವರನ್ನು ನೋಡು ಎಂದು ಶ್ರೀಕೃಷ್ಣನು ಅರ್ಜುನನಿಗೆ ಹೇಳಿದನು. ಕೌರವರೆಲ್ಲರೂ ಅರ್ಜುನನಿಗೆ ಅತಿ ಸಮೀಪದ ಬಂಧುಗಳೇ. ಆದ್ದರಿಂದ ಯಾವ ಸ್ವಜನರನ್ನು ನೋಡಿ ಅರ್ಜುನನ ಮನಸ್ಸು ಅಲ್ಲೋಲ ಕಲ್ಲೋಲವಾಗಬಹುದೋ, ಶೋಕ ಸಂವಿಗ್ನಗೊಳ್ಳಬಹುದೋ ಅವರ ಮುಂದೆ ರಥವನ್ನು ನಿಲ್ಲಿಸಿದನು. ಗೀತೋಪದೇಶಕ್ಕೆ ಕ್ಷೇತ್ರ ಇಲ್ಲಿ ತಯಾರಾಗುತ್ತಿದೆ. ರಥವನ್ನು ಅಲ್ಲಿ ನಿಲ್ಲಿಸುವುದರ ಮೂಲಕ ಗೀತಾಶಾಸ್ತ್ರ ಆವಿರ್ಭವಿಸಲು ಸೂಕ್ತವಾದ ಪರಿಸ್ಥಿತಿಯನ್ನು ಶ್ರೀಕೃಷ್ಣನು ಅರ್ಜುನನಿಗೆ ಒದಗಿಸುತ್ತಿದ್ದಾನೆ. ಗೀತಾವಿರ್ಭಾವ ಸರ್ವಜೀವಿಗಳ ಮಹದ್ಭಾಗ್ಯವೇ ಅಲ್ಲವೇ!

**ಅ॥** ಶ್ರೀ ಕೃಷ್ಣನ ಈ ವಾಕ್ಯಗಳನ್ನು ಕೇಳಿ ಅರ್ಜುನನು ಏನು ಮಾಡಿದನೆಂದು ಸಂಜಯನು ಹೇಳುತ್ತಾನೆ-

> **೨೬. ತತ್ರಾಪಶ್ಯತ್ ಸ್ಥಿತಾನ್ ಪಾರ್ಥಃ ಪಿತೄನಥ ಪಿತಾಮಹಾನ್,**
> **ಆಚಾರ್ಯಾನ್ ಮಾತುಲಾನ್ ಭ್ರಾತೄನ್ ಪುತ್ರಾನ್ ಪೌತ್ರಾನ್ ಸಖೀಂಸ್ತಥಾ**
>
> **೨೭(ಅ) ಶ್ವಶುರಾನ್ ಸುಹೃದಶ್ಚೈವ ಸೇನಯೋರುಭಯೋರಪಿ**

**ಅರ್ಥ:-** ಅಥ=ನಂತರ ಅಲ್ಲಿ; ಪಾರ್ಥಃ=ಅರ್ಜುನನು; ತತ್ರ=ಅಲ್ಲಿ; ಉಭಯೋಃ ಸೇನಯೋಃ ಅಪಿ=ಎರಡು ಸೇನೆಗಳ ಮಧ್ಯೆ; ಸ್ಥಿತಾನ್=ಇದ್ದು; ಪಿತೄನ್=ಪಿತೃಗಳು; ಪಿತಾಮಹಾನ್=ತಾತಂದಿರು; ಆಚಾರ್ಯಾನ್=ಗುರುಗಳು; ಮಾತುಲಾನ್=ಸೋದರ ಮಾವಂದಿರು; ಭ್ರಾತೄನ್=ಸಹೋದರರು; ಪುತ್ರಾನ್=ಪುತ್ರರು; ಪೌತ್ರಾನ್=ಮೊಮ್ಮಕ್ಕಳು; ಸಖೀನ್=ಸ್ನೇಹಿತರು; ತಥಾ=ಹಾಗೆಯೇ; ಶ್ವಶುರಾನ್=ಮಾವಂದಿರು; ಸುಹೃದಶ್ಚೈವ=ಹಿತಕೋರುವವರನ್ನೆಲ್ಲಾ; ಅಪಶ್ಯತ್=ನೋಡಿದನು.

**ತಾ:-** ನಂತರ ಅರ್ಜುನನು ಅಲ್ಲಿ ಎರಡು ಸೇನೆಗಳ ಮಧ್ಯೆ ಉಪಸ್ಥಿತರಾಗಿದ್ದ ಪಿತರನ್ನು ತಾತಂದಿರನ್ನು, ಗುರುಗಳನ್ನು, ಸೋದರ ಮಾವಂದಿರನ್ನು, ಸಹೋದರರರನ್ನು, ಮಕ್ಕಳನ್ನು, ಮೊಮ್ಮಕ್ಕಳನ್ನು, ಸ್ನೇಹಿತರನ್ನು, ಮಾವಂದಿರನ್ನು ಹಿತೈಷಿಗಳನ್ನು-(ಎಲ್ಲರನ್ನು) ನೋಡಿದನು.

**ವ್ಯಾಖ್ಯೆ:-** ಪಿತೃಗಳು - ಭೂರಿಶ್ರವಸ್ಸು ಮುಂತಾದವರು
ತಾತರು - ಭೀಷ್ಮ ಮುಂತಾದವರು
ಗುರುಗಳು - ದ್ರೋಣಾಚಾರ್ಯ ಮುಂತಾದವರು
ಸೋದರಮಾವಂದಿರು - ಶಲ್ಯ ಮುಂತಾದವರು

ಸಹೋದರರು - ದುರ್ಯೋಧನ ಮುಂತಾದವರು

ಪುತ್ರರು - ದುರ್ಯೋಧನನ ಪುತ್ರನಾದ ಲಕ್ಷ್ಮಣ ಮುಂತಾದವರು.

ಮೊಮ್ಮಕ್ಕಳು - ಲಕ್ಷ್ಮಣ ಪುತ್ರ ಮುಂತಾದವರು

ಸ್ನೇಹಿತರು - ಅಶ್ವತ್ಥಾಮ ಮುಂತಾದವರು

ಮಾವಂದಿರು - ದ್ರುಪದ ಮುಂತಾದವರು

ಹಿತೈಷಿಗಳು - ಕೃತವರ್ಮ ಮುಂತಾದವರು

'ಎರಡು ಸೇನೆಗಳ ಮಧ್ಯೆ' ಎಂದು ಹೇಳಿರುವುದರಿಂದ ತನ್ನ ಸೈನ್ಯದಲ್ಲಿಯ ಜನರನ್ನು ಕೂಡ ಅರ್ಜುನನು ನೋಡಿದನೆಂದರ್ಥ.

**ಅ||** ಈ ಪ್ರಕಾರವಾಗಿ ಎರಡು ಪಕ್ಷಗಳ ಸೈನಿಕರನ್ನು ನೋಡಿ ನಂತರ ಅಲ್ಲಿ ಅರ್ಜುನನು ಏನು ಮಾಡಿದನೆಂದು ಸಂಜಯನು ಹೇಳುತ್ತಿದ್ದಾನೆ-

**೨೭(b) ತಾನ್ಸಮೀಕ್ಷ್ಯ ಸ ಕೌಂತೇಯಸ್ಸರ್ವಾನ್ ಬಂಧೂನವಸ್ಥಿತಾನ್**
**೨೮(a) ಕೃಪಯಾ ಪರಯಾಽವಿಷ್ಟೋ ವಿಷಿದನ್ನಿದಮಬ್ರವೀತ್**

**ಅರ್ಥ:-** ಸಃ ಕೌಂತೇಯಃ=ಆ ಅರ್ಜುನನು; ಅವಸ್ಥಿತಾನ್=(ಯುದ್ಧಸನ್ನದ್ಧಾಗಿ) ನಿಂತಿರುವ; ತಾನ್=ಆ; ಸರ್ವಾನ್ ಬಂಧೂನ್=ಬಂಧುಗಳೆಲ್ಲರನ್ನು; ಸಮೀಕ್ಷ್ಯ= ಚೆನ್ನಾಗಿ ನೋಡಿ; ಪರಯಾ=ಅಧಿಕವಾದ; ಕೃಪಯಾ=ಕನಿಕರದಿಂದ; ಆವಿಷ್ಟಃ=ಕೂಡಿದಂಥವನಾಗಿ; ವಿಷೀದನ್=ದುಃಖಿಸುತ್ತಾ; ಇದಂ=ಈ ಮುಂದೆ ಹೇಳುವ ವಾಕ್ಯವನ್ನು; ಅಬ್ರವೀತ್=ಹೇಳಿದನು.

**ತಾ:-** ಅರ್ಜುನನು ಯುದ್ಧಭೂಮಿಯಲ್ಲಿ ನಿಂತಿರುವ ಆ ಬಂಧು ವರ್ಗವನ್ನೆಲ್ಲಾ ವೀಕ್ಷಿಸಿ ದಯಾರ್ದ್ರ ಹೃದಯಿಯಾಗಿ ದುಃಖಿಸುತ್ತಾ ಹೀಗೆ ಹೇಳಿದನು.

**ವ್ಯಾಖ್ಯೆ:-** 'ಕೃಪ' ಎಂದರೆ ದಯೆ, ಕರುಣೆ, ಕನಿಕರ, ಅಯ್ಯೋ ಪಾಪ- ಎನ್ನುವ ಅರ್ಥ. ಅದು ಒಳ್ಳೆಯ ಗುಣವೇ. ಆದರೆ ತೋರಿಸುವ ಕಡೆ ತೋರಿಸಿದಲ್ಲಿ ಮಾತ್ರ ಅದು ಶೋಭಿಸುತ್ತದೆ. ಅಧರ್ಮದಲ್ಲಿ ಮುಳುಗಿಹೋದ ಕೌರವರ ಮೇಲೆ ಅರ್ಜುನನು ಕನಿಕರತೋರಿಸಿದನು. ಇವರೆಲ್ಲರು 'ನನ್ನವರು, ನನ್ನ ಬಂಧುಗಳು' ಎನ್ನುವ ಮಮತ್ವಬುದ್ಧಿ ಆತನಲ್ಲಿ ಉದಯಿಸಿತು. 'ಇವರನ್ನು ಹೇಗೆ ಸಾಯಿಸಲಿ?' ಎಂದು ಭಯಗೊಂಡನು. ಕ್ಷತ್ರಿಯನಾದ ಅರ್ಜುನನಿಗೆ ಯುದ್ಧ ಸಮಯದಲ್ಲಿ ಆ ಗುಣವು ಶೋಭಿಸದು. ಏಕೆಂದರೆ, ಅದನ್ನು ಯಾರ ಮೇಲೆ ತೋರಿಸಬಾರದೋ ಅಲ್ಲದೆ ಯಾವಾಗ ತೋರಿಸಬಾರದೋ ಆ ಸಮಯದಲ್ಲಿ ಆತನು ತೋರಿಸಲು ಪ್ರಾರಂಭಿಸಿದನು. ಈ ದೋಷವನ್ನೇ ಗೀತಾತತ್ವಪ್ರಬೋಧೆಯಿಂದ ಶ್ರೀಕೃಷ್ಣನು ಅರ್ಜುನನ ಹೃದಯದಿಂದ ತೊಲಗಿಸುತ್ತಾನೆ.

'ವಿಷೀದನ್'-'ದುಃಖಿಸುವುದು' ಎಂದು ಹೇಳುವುದರಿಂದ ಎಂಥಹ ಶಾರೀರಿಕ ಬಲ, ಭೌತಿಕ ಶಕ್ತಿಸಾಮರ್ಥ್ಯಗಳಿದ್ದಾಗ್ಯೂ ಅವಿದ್ಯೆ ತೊಲಗದೆ ಇದ್ದರೆ ಕ್ಷಣದಲ್ಲಿ ಅಧೀರನಾಗುವನೆಂದು ರುಜುವಾಗುತ್ತದೆ. ಅರ್ಜುನನು ಮಹಾಶಕ್ತಿವಂತ. ಅನೇಕ ದಿವ್ಯವಾದ ಅಸ್ತ್ರಶಸ್ತ್ರಗಳನ್ನು ಹೊಂದಿದವನು. ಆದರೂ ಅಜ್ಞಾನ ಆವರಿಸಿದಾಗ ಬಾಲಚಂದ್ರನಂತೆ ಶಕ್ತಿವಿಹೀನನಾಗಿ ದುಃಖಿಸಲು ಪ್ರಾರಂಭಿಸುತ್ತಾನೆ. ಮನೋವ್ಯಾಧಿಗೆ ಚಿಕಿತ್ಸೆ ಮಾಡದಿದ್ದಲ್ಲಿ ಶರೀರ ಎಷ್ಟು ಸೌಷ್ಠವವಾಗಿದ್ದರೂ ಚಿಂತೆ ಬಿಡದು. ಆದ್ದರಿಂದ ಆತ್ಮಜ್ಞಾನದಿಂದ ಅವಿದ್ಯೆ ಪೂರ್ತಿಯಾಗಿ ತೊಲಗಿದಾಗ ಮಾತ್ರ ಜೀವಿಗೆ ನಿರತಿಶಯಾನಂದ, ದುಃಖರಾಹಿತ್ಯ ಸಿದ್ಧಿಸುವುವು. ಅರ್ಜುನನಂಥವನೇ ಅವಿದ್ಯೆಯಿಂದ ದುರ್ಬಲತ್ವವನ್ನು ಹೊಂದಿದನೆಂದರೆ, ಇನ್ನು ಸಾಮಾನ್ಯರ ವಿಷಯವನ್ನು ಬೇರೆ ಹೇಳಬೇಕೇ? ಆದ್ದರಿಂದ ಅಧ್ಯಾತ್ಮ ವಿದ್ಯೆಯ ಮೂಲಕ ಮನೋಜಯ, ನಂತರ ಮನಶ್ಶಾಂತಿ ಹೊಂದುವುದು ಪ್ರತಿಜೀವಿಯ ಪ್ರಧಾನ ಕರ್ತವ್ಯವಾಗಿದೆ. ಅರ್ಜುನನ ದೀನಸ್ಥಿತಿಯನ್ನು ನೋಡಿ ಇಂಥಹ ಆತ್ಮವಿದ್ಯೆಯನ್ನೇ ಶ್ರೀಕೃಷ್ಣಮೂರ್ತಿ ಆತನಿಗೆ ಬೋಧಿಸಿದನು.

**ಅ||** ಅರ್ಜುನನು ಶ್ರೀಕೃಷ್ಣಪರಮಾತ್ಮನಲ್ಲಿ ತನ್ನ ದೀನಸ್ಥಿತಿಯನ್ನು ಬಿನ್ನವಿಸಿಕೊಳ್ಳುತ್ತಿದ್ದಾನೆ-

**ಅರ್ಜುನ ಉವಾಚ:-**

**೨೮(b) ದೃಷ್ಟ್ವೇಮಂ ಸ್ವಜನಂ ಕೃಷ್ಣ ಯುಯುತ್ಸುಂ ಸಮುಪಸ್ಥಿತಮ್**

**೨೯. ಸೀದಂತಿ ಮಮ ಗಾತ್ರಾಣಿ ಮುಖಂ ಚ ಪರಿಶುಷ್ಯತಿ**
**ವೇಪಥುಶ್ಚ ಶರೀರೇ ಮೇ ರೋಮಹರ್ಷಶ್ಚ ಜಾಯತೇ**

**೩೦. ಗಾಂಡೀವಂ ಸ್ರಂಸತೇ ಹಸ್ತಾತ್ತ್ವಕ್ಚೈವ ಪರಿದಹ್ಯತೇ**
**ನ ಚ ಶಕ್ನೋಮ್ಯವಸ್ಥಾತುಂ ಭ್ರಮತೀವ ಚ ಮೇ ಮನಃ**

ಅರ್ಜುನ ಉವಾಚ:- ಅರ್ಜುನನು ಹೇಳಿದನು.

**ಅರ್ಥ:-** ಕೃಷ್ಣ=ಓ ಕೃಷ್ಣಮೂರ್ತಿ! ಯುಯುತ್ಸುಮ್=ಯುದ್ಧ ಮಾಡುವದ ಕ್ಕೋಸ್ಕರ; ಸಮುಪಸ್ಥಿತಂ=ಸೇರಿರುವ; ಇಮಮ್=ಈ; ಸ್ವಜನಂ=ಬಂಧು ಜನರನ್ನು; ದೃಷ್ಟ್ವಾ=ನೋಡಿ; ಮಮ=ನನ್ನ; ಗಾತ್ರಾಣಿ=ಅವಯವಗಳು; ಸೀದಂತಿ=ಶಿಥಿಲವಾಗುತ್ತಿವೆ; ಮುಖಂ ಚ=ಬಾಯಿ; ಪರಿಶುಷ್ಯತಿ=ಒಣಗಿ ಹೋಗುತ್ತಿದೆ; ಮೇ=ನನ್ನ; ಶರೀರೇ=ಶರೀರದಲ್ಲಿ; ವೇಪಥುಶ್ಚ=ನಡುಗುತ್ತ; ರೋಮಹರ್ಷಶ್ಚ=ರೋಮ ಪುಲಿಕಿತವಾಗಿ; ಜಾಯತೇ=ಕಾಣುತ್ತದೆ; ಗಾಂಡೀವಂ=ಗಾಂಡೀವವೆನ್ನುವ ನನ್ನ ಧನುಸ್ಸು; ಹಸ್ತಾತ್=ಕೈಯಿಂದ; ಸ್ರಂಸತೇ=ಜಾರಿಹೋಗುತ್ತಿದೆ; ತ್ವಕ್ಚೈವ=ಚರ್ಮವು; ಪರಿದಹ್ಯತೆ= ಉರಿಯುತ್ತಿದೆ; ಅವಸ್ಥಾತುಂ=ನಿಲ್ಲುವುದಕ್ಕೆ; ನ ಚ ಶಕ್ನೋಮಿ=ಶಕ್ತಿಯಿಲ್ಲದವ ನಾಗಿದ್ದೇನೆ; ಮೇ=ನನ್ನ; ಮನಃ=ಮನಸ್ಸು; ಭ್ರಮತೀವ ಚ=ಗಿರ್‍ರನೆ ತಿರುಗುತ್ತಿದೆ.

**ತಾ:-** ಓ ಕೃಷ್ಣಮೂರ್ತಿ! ಯುದ್ಧಮಾಡಲು ನೆರೆದಿರುವ ಈ ಬಂಧುಜನರನ್ನು ನೋಡಿ ನನ್ನ ಅವಯವಗಳು ಸೋಲುತ್ತಿವೆ. ಬಾಯಿ ಒಣಗುತ್ತಿದೆ. ಶರೀರವೆಲ್ಲ ನಡುಗುತ್ತಿದೆ. ರೋಮಗಗ್ಗರವಾಗುತ್ತಿದೆ. ಗಾಂಡೀವವು ಕೈಯಿಂದ ಜಾರಿಹೋಗುತ್ತಿದೆ. ಚರ್ಮವು ಉರಿಯುತ್ತಿದೆ. ನಿಂತುಕೊಳ್ಳಲು ಸಹ ನನಗೆ ಶಕ್ತಿಯಿಲ್ಲದಾಗಿದೆ. ತಲೆ ಗಿರ್‍ರನೆ ತಿರುಗುತ್ತಿದೆ.

**ವ್ಯಾಖ್ಯೆ:-** ಈ ಶ್ಲೋಕಗಳಲ್ಲಿ ಅರ್ಜುನನಿಗೆ ಆ ಸಮಯದಲ್ಲುಂಟಾದ ಶಾರೀರಕ ಹಾಗು ಮಾನಸಿಕ ವಿಕಾರಗಳ ವರ್ಣನೆಯಿದೆ. ಇವೆಲ್ಲವೂ ಭಯ, ಅಧೈರ್ಯ, ನಿರುತ್ಸಾಹಗಳ ಚಿಹ್ನೆಗಳು. ಯುದ್ಧವನ್ನಾಗಲಿ, ಶತ್ರು ಸಂಹಾರವನ್ನಾಗಲಿ ಲೆಕ್ಕಹಾಕದ ಅರ್ಜುನನು, ಎಷ್ಟೋ ಸಮರಗಳಲ್ಲಿ ವಿಜಯೀವಂತನಾದ ಅರ್ಜುನನು, ಈ ಸಮಯದಲ್ಲಿ ಹೇಗೆ ನಿರುತ್ಸಾಹವನ್ನು ಹೊಂದಿದನು? ಆತನ ಶರೀರಬಲಕ್ಕೆ, ಭೌತಿಕ ಶಕ್ತಿಗಳಲ್ಲಿ ಯಾವ ಕೊರತೆಯೂ ಇಲ್ಲ. ಆದರೆ ಮಾನಸಿಕವಾಗಿ ಆತನು ಬಹಳ ದೊಡ್ಡ ಆಘಾತವನ್ನನುಭವಿಸಿದ್ದಾನೆ. ಯಾವುದರಿಂದ? ಇವರು 'ನನ್ನವರು' (ಸ್ವಜನಂ), ಇವರನ್ನು ಹೇಗೆ ಸಂಹರಿಸುವುದು?...... ಎನ್ನುವ ಮನೋದುರ್ಬಲತೆಯನ್ನು ಹೊಂದಿದ್ದ ನಾದ್ದರಿಂದ. ಇದನ್ನೇ ಮಮಕಾರವೆನ್ನುವರು. ಈ ಮಮಕಾರವು ಅರ್ಜುನನನ್ನು

ಬಾಧಿಸಿದ್ದರಿಂದಲೇ 'ಸ್ವಜನಂ ಸ್ವಜನಂ' ಎಂದು ಆತನು ಪದೇ ಪದೇ ಕಲವರಿಸುತ್ತಿದ್ದಾನೆ. "ದೃಷ್ಟ್ವೇಮಂ ಸ್ವಜನಂ ಕೃಷ್ಣ; ಹತ್ವಾ ಸ್ವಜನಮಾಹವೇ; ಸ್ವಜನಂ ಹಿ ಕಥಂ ಹತ್ವಾ......" ಈ ಮಮಕಾರವೇ ಅರ್ಜುನನಿಗೆ ಹಿಡಿದ ರೋಗ, ಅದಕ್ಕೆ ಆತ್ಮಜ್ಞಾನವೇ ಸರಿಯಾದ ರಾಮಬಾಣ. ಅದನ್ನೇ ಶ್ರೀಕೃಷ್ಣಮೂರ್ತಿ ಅರ್ಜುನನಿಗೆ ಈಗ ಪ್ರಸಾದಿಸಲು, ಅನುವಾಗುತ್ತಿದ್ದಾನೆ.

**ಅ॥** ಯುದ್ಧವಿಮುಖತೆಗೆ ಅರ್ಜುನನು ತನ್ನ ಕಾರಣಗಳನ್ನು ಶ್ರೀಕೃಷ್ಣನಿಗೆ ತಿಳಿಸುತ್ತಿದ್ದಾನೆ-

**೩೧. ನಿಮಿತ್ತಾನಿ ಚ ಪಶ್ಯಾಮಿ ವಿಪರೀತಾನಿ ಕೇಶವ**
**ನ ಚ ಶ್ರೇಯೋಽನುಪಶ್ಯಾಮಿ ಹತ್ವಾ ಸ್ವಜನಮಾಹವೇ**

ಅರ್ಥ:- ಕೇಶವ=ಓ ಕೃಷ್ಣಮೂರ್ತಿ! ವಿಪರೀತಾನಿ=ಅನರ್ಥಸೂಚಕವಾಗಿ; ನಿಮಿತ್ತಾನಿ ಚ=ಶಕುನಗಳನ್ನು; ಪಶ್ಯಾಮಿ=ನೋಡುತ್ತಿದ್ದೇನೆ; ಆಹವೇ= ಯುದ್ಧದಲ್ಲಿ; ಸ್ವಜನಂ=ಬಂಧುಗಳನ್ನು; ಹತ್ವಾ=ವಧಿಸಿ; ಅನು=ನಂತರ; ಶ್ರೇಯಃ=ಶ್ರೇಯಸ್ಸು; ನ ಪಶ್ಯಾಮಿ=ಕಾಣದಂತಾಗಿದೆ.

**ತಾ:-** ಓ ಕೃಷ್ಣಮೂರ್ತಿ! ಅನೇಕ ಅಪಶಕುನಗಳನ್ನು ನೋಡುತ್ತಿದ್ದೇನೆ. ಯುದ್ಧದಲ್ಲಿ ಬಂಧುಗಳನ್ನು ಸಂಹರಿಸಿದ ನಂತರ ಯಾವ ಲಾಭವಿದೆಯೋ ನನಗೆ ಅರ್ಥವಾಗುತ್ತಿಲ್ಲ (ತಿಳಿಯುತ್ತಿಲ್ಲ).

**೩೨. ನ ಕಾಂಕ್ಷೇ ವಿಜಯಂ ಕೃಷ್ಣ ನ ಚ ರಾಜ್ಯಂ ಸುಖಾನಿ ಚ**
**ಕಿಂ ನೋ ರಾಜ್ಯೇನ ಗೋವಿಂದ ಕಿಂ ಭೋಗೈರ್ಜೀವಿತೇನ ವಾ.**

**ಅರ್ಥ:-** ಕೃಷ್ಣ=ಓ ಕೃಷ್ಣಾ! ವಿಜಯಂ=ವಿಜಯವನ್ನು; ನ ಕಾಂಕ್ಷೇ= ಕೋರುವುದಿಲ್ಲ; ರಾಜ್ಯಂಚ=ರಾಜ್ಯವನ್ನು; ಸುಖಾನಿ ಚ=ಸುಖಗಳನ್ನು; ನ(ಕಾಂಕ್ಷೆ)= ಕೋರುವುದಿಲ್ಲ; ಗೋವಿಂದ=ಓ ಕೃಷ್ಣಾ; ನೋಃ=ನಮಗೆ; ರಾಜ್ಯೇನ=ರಾಜ್ಯದಿಂದ; ಕಿಮ್=ಏನು; (ಪ್ರಯೋಜನ)? ಭೋಗೈಃ= ಭೋಗಗಳೊಡನೆ; ಜೀವಿತೇನ ವಾ=ಇಲ್ಲ ಜೀವನದಲ್ಲೇ ಆಗಲಿ; ಕಿಮ್=ಏನು (ಪ್ರಯೋಜನ)?

**ತಾ:-** ಕೃಷ್ಣಾ! ನಾನು ವಿಜಯವನ್ನಾಗಲಿ, ರಾಜ್ಯವನ್ನಾಗಲಿ, ಸುಖವನ್ನಾಗಲಿ ಕೋರುವುದಿಲ್ಲ. ರಾಜ್ಯದಿಂದಾಗಲಿ, ಭೋಗದಿಂದಾಗಲಿ, ಜೀವನದಿಂದಾಗಲಿ ನಮಗೇನು ಪ್ರಯೋಜನ?

**ವ್ಯಾಖ್ಯೆ:-** ವೈರಾಗ್ಯ ಉಂಟಾದವನಿಗೆ ಮಾತ್ರ ಆತ್ಮಜ್ಞಾನ (ಬ್ರಹ್ಮಜ್ಞಾನ)ವನ್ನು ಉಪದೇಶಿಸಬೇಕೆಂದು ಶಾಸ್ತ್ರನಿಯಮವಿದೆ. ಆದರೆ ಅಧ್ಯಾತ್ಮ ಜ್ಞಾನಮಯವಾದ ಗೀತಾಶಾಸ್ತ್ರ ಶ್ರವಣವನ್ನು ಮಾಡಲಿರುವ ಅರ್ಜುನನಿಗೆ ವೈರಾಗ್ಯವು ಹೇಗೆ ಪ್ರಾಪ್ತಿಯಾಗಿದೆ? ಆತನು ಜ್ಞಾನಕ್ಕೆ ಅಧಿಕಾರಿಯೇ? ಎನ್ನುವ ಸಂಶಯ ಈ ಶ್ಲೋಕದಿಂದ ನಿವಾರಿಸಲ್ಪಟ್ಟಿದೆ. ಯಾವುದೇ ಒಂದು ವಿಧದಿಂದ ಅರ್ಜುನನಿಗೆ ತೀವ್ರವಾದ ವಿರಕ್ತಿ ಉಂಟಾಗಿದೆ. ಪ್ರಾಪಂಚಿಕ ಸುಖಗಳ ಬಗ್ಗೆ ಜಿಗುಪ್ಸೆ ಹುಟ್ಟಿದೆ. ರಾಜ್ಯವನ್ನು, ಭೋಗವನ್ನು ಆತ ತೃಣಪ್ರಾಯವಾಗಿ ನೋಡಿದನು. ನಂತರ ಮೂರು ಲೋಕಗಳು ತನಗೆ ಸಮರ್ಪಿಸಲ್ಪಟ್ಟರೂ ಇಷ್ಟವಿಲ್ಲ*ವೆನ್ನುವ ನಿರ್ಣಯಕ್ಕೆ ಬಂದನು. ಇಂಥಹ ತೀವ್ರವೈರಾಗ್ಯೋತ್ಪತ್ತಿ ಸಮಯವೇ ಬ್ರಹ್ಮವಿದ್ಯಾಬೋಧನೆಗೆ ಸರಿಯಾದ ಸುಮುಹೂರ್ತ. ಆದ್ದರಿಂದಲೇ ಶ್ರೀ ಕೃಷ್ಣಮೂರ್ತಿ ಅರ್ಜುನನಿಗೆ ಈಗಾಗಲೇ ಏಂದೋ ಬೋಧಿಸಿರದೆ, ವೈರಾಗ್ಯವು, ಭೋಗ ತ್ಯಾಜ್ಯವು ಹೃದಯದಲ್ಲಿ ಚೆನ್ನಾಗಿ ನಾಟಿದ ನಂತರವೇ ಪರಮಾರ್ಥ ತತ್ವವನ್ನು ಬೋಧಿಸಿದನು.

**೩೩. ಏಷಾಮರ್ಥೇ ಕಾಂಕ್ಷಿತಂ ನೋ ರಾಜ್ಯಂ ಭೋಗಾಃ ಸುಖಾನಿ ಚ**
**ತ ಇಮೇಽವಸ್ಥಿತಾ ಯುದ್ಧೇ ಪ್ರಾಣಾಂಸ್ತ್ಯಕ್ತ್ವಾ ಧನಾನಿಚ**

**೩೪. ಆಚಾರ್ಯಾಃ ಪಿತರಃ ಪುತ್ರಾಸ್ತಥೈವ ಚ ಪಿತಾಮಹಾಃ**
**ಮಾತುಲಾಶ್ಶ್ವಶುರಾಃ ಪೌತ್ರಾಸ್ಸ್ಯಾಲಾಸ್ಸಂಬಂಧಿನಸ್ತಥಾ**

**ಅರ್ಥ:-** ನಃ=ನಮಗೆ; ರಾಜ್ಯಂ=ರಾಜ್ಯವನ್ನು; ಭೋಗಾಃ=ಭೋಗಗಳನ್ನು; ಸುಖಾನಿಚ=ಸುಖಗಳನ್ನು; ಏಷಾಮರ್ಥೇ=ಯಾರಿಗೋಸ್ಕರ; ಕಾಂಕ್ಷಿತಮ್= ಇಷ್ಟಪಡುವೆವೋ; ತೇ=ಅಂಥಹ; ಆಚಾರ್ಯಾಃ=ಗುರುಗಳು; ಪಿತರಃ=ಪಿತರು; ಪುತ್ರಾಃ=ಪುತ್ರರು; ತಥೈವ ಚ=ಹಾಗೆಯೇ; ಪಿತಾಮಹಾಃ=ತಾತಂದಿರು; ಮಾತುಲಾಃ=ಸೋದರ ಮಾವಂದಿರು; ಶ್ವಶುರಾಃ=ಮಾವಂದಿರು; ಪೌತ್ರಾಃ= ಮೊಮ್ಮಕ್ಕಳು; ಸ್ಯಾಲಾಃ=ಭಾವಮೈದುನರು; ತಥಾ=ಆ ಪ್ರಕಾರ; ಸಂಬಂಧಿನಃ= ಸಂಬಂಧಿಗಳು; ಇಮೇ=ಇವರೆಲ್ಲರನ್ನು; ಪ್ರಾಣಾನ್=ಪ್ರಾಣಗಳನ್ನು; ಧನಾನಿ ಚ= ಧನವನ್ನು; ತ್ಯಕ್ತ್ವಾ=ಬಿಟ್ಟು; ಯುದ್ಧೇ=ಯುದ್ಧದಲ್ಲಿ; ಅವಸ್ಥಿತಾಃ=ನಿಂತಿದ್ದಾರೆ.

**ತಾ:-** ಯಾರಿಗೋಸ್ಕರ ಈ ರಾಜ್ಯ, ಭೋಗ, ಸುಖಗಳನ್ನು ಅಪೇಕ್ಷಿಸು ತ್ತೇವೆಯೋ, ಅಂಥಹ ಗುರುಗಳು, ಪಿತರು, ತಾತಂದಿರು, ಸೋದರ ಮಾವಂದಿರು, ಮಾವಂದಿರು, ಮೊಮ್ಮಕ್ಕಳು, ಭಾವಮೈದುನರು, ಸಂಬಂಧಿಗಳು ತಮ್ಮ ಪ್ರಾಣಗಳ ಮೇಲೆ, ಧನದ ಮೇಲೆ ಆಸೆಯನ್ನು ಬಿಟ್ಟು ಈ ರಣರಂಗದಲ್ಲಿ ಬಂದು ನಿಂತಿದ್ದಾರೆ.

**೩೫. ಏತಾನ್ನ ಹಂತುಮಿಚ್ಛಾಮಿ ಘ್ನತೋಽಪಿ ಮಧುಸೂದನ**
**ಅಪಿ ತ್ರೈಲೋಕ್ಯರಾಜ್ಯಸ್ಯ ಹೇತೋಃ ಕಿಂ ನು ಮಹೀಕೃತೇ**

**ಅರ್ಥ:-** ಮಧುಸೂದನ=ಓ ಕೃಷ್ಣಾ!, ಘ್ನತೋಽಪಿ=(ನನ್ನನ್ನು) ವಧಿಸುವವ ರಾದರು; ಏತಾನ್=ಅವರನ್ನು; ತ್ರೈಲೋಕ್ಯ ರಾಜ್ಯಸ್ಯ ಹೇತೋಃ=ಮೂರು ಲೋಕಗಳ ರಾಜ್ಯಾಧಿಪತ್ಯಕ್ಕಾದರು; ಹಂತುಂ=ವಧಿಸಲು; ನೇಚ್ಛಾಮಿ=ಇಷ್ಟ ಪಡುವುದಿಲ್ಲ; ಮಹೀಕೃತೇ=ಭೂಲೋಕ ರಾಜ್ಯಕ್ಕೋಸ್ಕರ; ಕಿಂ ನು=(ಇನ್ನು) ಹೇಳುವುದೇನಿದೆ?

**ತಾ:-** ಓ ಕೃಷ್ಣಾ! ಇವರೆಲ್ಲ ನನ್ನನ್ನು ವಧಿಸುವವವರಾಗಿದ್ದರೂ, ಮೂರು ಲೋಕ ರಾಜ್ಯಾಧಿಪತ್ಯಕ್ಕಾದರೂ ನಾನು ಅವರನ್ನು ಸಾಯಿಸುವುದಿಲ್ಲ. ಇನ್ನು ಈ ಭೂಲೋಕ ರಾಜ್ಯಕ್ಕೆ ಬೇರೆ ಹೇಳಬೇಕೇ?

**ವ್ಯಾಖ್ಯೆ:** 'ಮಧುಸೂದನಃ'- ಮಧುವೆಂಬ ರಾಕ್ಷಸನನ್ನು ಸಂಹರಿಸಿದ್ದರಿಂದ ಶ್ರೀಕೃಷ್ಣನಿಗೆ ಮಧುಸೂದನನೆಂಬ ಹೆಸರು ಬಂದಿದೆ.

**೩೬. ನಿಹತ್ಯ ಧಾರ್ತರಾಷ್ಟ್ರಾನ್ನಃ ಕಾ ಪ್ರೀತಿಸ್ಸ್ಯಾಜ್ಜನಾರ್ದನ**
**ಪಾಪಮೇವಾಶ್ರಯೇದಸ್ಮಾನ್ ಹತ್ವೈತಾನಾತತಾಯಿನಃ**

ಅರ್ಥ:- ಜನಾರ್ದನ=ಓ ಕೃಷ್ಣಾ! ಧಾರ್ತರಾಷ್ಟ್ರಾನ್=ದುರ್ಯೋಧನಾದಿಗಳನ್ನು; ನಿಹತ್ಯ=ವಧಿಸಿ; ನಃ=ನಮಗೆ; ಕಾ ಪ್ರೀತಿಃ=ಏನು ಸಂತೋಷ; ಸ್ಯಾತ್=ಒದಗುತ್ತದೆ; ಆತತಾಯಿನಃ=ದುರ್ಮಾರ್ಗಿಗಳು; ಏತಾನ್=ಇವರನ್ನು; ಹತ್ವಾ=ವಧಿಸಿದರೂ; ಅಸ್ಮಾನ್=ನಮ್ಮನ್ನು; ಪಾಪಮೇವ=ಪಾಪವೇ; ಆಶ್ರಯೇತ್=ಹೊಂದುವೆವು.

---

* ಅಪಿ ತ್ರೈಲೋಕ್ಯ ರಾಜ್ಯಸ್ಯ ಹೇತೋಃ ಕಿಂ ನು ಮಹೀಕೃತೇ (೧-೩೫)

**ತಾ:-** ಓ ಕೃಷ್ಣಾ! ದುರ್ಯೋಧನಾದಿಗಳನ್ನು ವಧಿಸುವುದರಿಂದ ನಮಗೆ ಯಾವ ಸಂತೋಷ ಬರುತ್ತದೆ? ದುರ್ಮಾರ್ಗಿಗಳಾದ ಇವರನ್ನು ವಧಿಸುವುದರಿಂದ ನಾವೇ ಪಾಪಗ್ರಸ್ತರಾಗುತ್ತೇವೆ.

**ವ್ಯಾಖ್ಯೆ:-** 'ಆತತಾಯಿನಃ'=ಮಹಾ ಪಾಪವನ್ನನುಂಟು ಮಾಡುವವರು; ೧) ಮನೆಗೆ ಬೆಂಕಿಯಿಡುವವನು ೨) ವಿಷವನ್ನಿಡುವವನು ೩) ಆಯುಧವನ್ನು ಧರಿಸಿ ಹಿಂಸಿಸುವನು ೪) ಧನವನ್ನು ಅಪಹರಿಸುವವನು ೫) ಭೂಮಿಯನ್ನು ಆಕ್ರಮಿಸುವವನು ೬) ಇತರರ ಪತ್ನಿಯರನ್ನು ಹರಿಸುವವನು. ಎನ್ನುವ ಈ ಆರರನ್ನು ಆತ ತಾಯಿಗಳೆನ್ನುವರು.* (ದುರ್ಯೋಧನಾದಿಗಳು ಈ ಆರು ವಿಧಗಳ ಪಾಪಗಳನ್ನು ಮಾಡಿದವರಾಗಿದ್ದಾರೆ)

**೩೭. ತಸ್ಮಾನ್ನಾರ್ಹಾ ವಯಂ ಹಂತುಂ ಧಾರ್ತರಾಷ್ಟ್ರಾನ್ ಸ್ವಬಾಂಧವಾನ್**
**ಸ್ವಜನಂ ಹಿ ಕಥಂ ಹತ್ವಾ ಸುಖಿನಸ್ಸ್ಯಾಮ ಮಾಧವ**

**ಅರ್ಥ:-** ಮಾಧವ=ಓ ಕೃಷ್ಣಾ! ತಸ್ಮಾತ್=ಆದ್ದರಿಂದ; ಸ್ವಬಾಂಧವಾನ್= ನಮ್ಮ ಬಂಧುಗಳು; ಧಾರ್ತರಾಷ್ಟ್ರಾನ್=ದುರ್ಯೋಧನಾದಿಯರು; ಹನ್ತುಂ= ವಧಿಸುವುದಕ್ಕೆ; ವಯಂ=ನಾವು; ನಾರ್ಹಾಃ=ಅರ್ಹರಲ್ಲ; ಸ್ವಜನಂ=ನಮ್ಮವರನ್ನು; ಹತ್ವಾ=ಸಾಯಿಸಿ; ಸುಖಿನಃ=ಸುಖವಾಗಿ; ಕಥಂ=ಹೇಗೆ; ಸ್ಯಾಮಹಿ= ಇರಬಲ್ಲೆವು?

**ತಾ:-** ಓ ಕೃಷ್ಣಾ! ಆದ್ದರಿಂದ ನಮ್ಮ ಬಂಧುಗಳಾದ ದುರ್ಯೋಧನಾದಿಯರನ್ನು ಸಾಯಿಸಲು ನಾವು ಸರಿಯಾದವರಲ್ಲ. ನಮ್ಮವರನ್ನು ಸಾಯಿಸಿ ನಾವು ಹೇಗೆ ಸುಖವಾಗಿ ಇರಬಲ್ಲೆವು?

**ವ್ಯಾಖ್ಯೆ:-** 'ಸ್ವ, ಸ್ವ' ಎಂದು ಅರ್ಜುನನು ಕನವರಿಸುತ್ತಿದ್ದಾನೆ (ಸ್ವಬಾಂಧವಾನ್, ಸ್ವಜನಂ.......) 'ನನ್ನದು' ಎನ್ನುವ ಮಮಕಾರಭಾವ ಆತನಲ್ಲಿ ಗಟ್ಟಿಯಾಗಿ ಬೇರೂರಿದೆ. 'ನಾನು, ನನ್ನದು' (ಅಹಂಕಾರ, ಮಮಕಾರಗಳು) ಎನ್ನುವ ಈ ಎರಡೂ ಜೀವಿಯ ಮೋಕ್ಷಮಾರ್ಗಕ್ಕೆ ಮಹಾ ಪ್ರತಿಬಂಧಕಗಳಾಗಿವೆ. 'ಈ ದೇಹವೇ ನಾನು' ಎಂದು ತಿಳಿದುಕೊಂಡಿರುವವರೆಗೆ ಇಂಥಹ ಭಾವಗಳು ಜನರನ್ನು ಬಿಡುವುದಿಲ್ಲ. ಆದ್ದರಿಂದಲೇ ಶ್ರೀಕೃಷ್ಣಪರಮಾತ್ಮನು ಅರ್ಜುನನ ಈ ದೇಹಾಭಿಮಾನವನ್ನು ನೀನು ಆತ್ಮವೇ ಹೊರತು ದೇಹವಲ್ಲ ಎನ್ನುವ ಅಖಂಡ ಜ್ಞಾನೋಪದೇಶದ ಮೂಲಕ ತೊಲಗಿಸಲು ಹೊರಟಿದ್ದಾನೆ.

**೩೮. ಯದ್ಯಪ್ಯೇತೇ ನ ಪಶ್ಯಂತಿ ಲೋಭೋಪಹತಚೇತಸಃ**
**ಕುಲಕ್ಷಯಕೃತಂ ದೋಷಂ ಮಿತ್ರದ್ರೋಹೇ ಚ ಪಾತಕಮ್**

**೩೯. ಕಥಂ ನ ಜ್ಞೇಯಮಸ್ಮಾಭಿಃ ಪಾಪಾದಸ್ಮಾನ್ನಿವರ್ತಿತುಮ್**
**ಕುಲಕ್ಷಯಕೃತಂ ದೋಷಂ ಪ್ರಪಶ್ಯದ್ಭಿರ್ಜನಾರ್ದನ**

**ಅರ್ಥ:-** ಜನಾರ್ದನ=ಓ ಕೃಷ್ಣಾ! ಲೋಭೋಪಹತ ಚೇತಸಃ=ರಾಜ್ಯ ಲೋಭದಿಂದ ಸೂರೆಗೊಂಡ ಮನಸ್ಸುಗಳು; ಏತೇ=ಈ ದುರ್ಯೋಧನಾದಿಯರು; ಕುಲಕ್ಷಯಕೃತಂ=ವಂಶನಾಶದಿಂದ ಉಂಟಾಗುವ; ದೋಷಂ= ದೋಷ; ಮಿತ್ರದ್ರೋಹೇ=ಮಿತ್ರದ್ರೋಹದಲ್ಲಿ; ಪಾತಕಂ ಚ=ಪಾಪವನ್ನು; ಯದ್ಯಪಿ ನ ಪಶ್ಯಂತಿ=ತಿಳಿದುಕೊಳ್ಳದಿದ್ದರೂ; ಕುಲಕ್ಷಯಕೃತಂ=ಕುಲನಾಶನದಿಂದ ಉಂಟಾಗುವ; ದೋಷಂ=ದೋಷವನ್ನು; ಪ್ರಪಶ್ಯದ್ಭಿಃ=ಚೆನ್ನಾಗಿ ತಿಳಿದುಕೊಳ್ಳುತ್ತಿರುವ; ಅಸ್ಮಾಭಿ=ನಮ್ಮಿಂದ; ಅಸ್ಮಾತ್ ಪಾಪಾತ್=ಈ ಪಾಪದಿಂದ; ನಿವರ್ತಿತುಮ್=ವಿರಮಿಸಲು; ಕಥಂ=ಹೇಗೆ; ನಜ್ಞೇಯಂ= ತಿಳಿಯದಾಗಿದೆ.

**ತಾ:-** ಓ ಕೃಷ್ಣಾ! ರಾಜ್ಯಲೋಭದಿಂದ ಭ್ರಷ್ಟಚಿತ್ತರಾದ ದುರ್ಯೋಧನಾದಿಯರು ವಂಶನಾಶವಾಗುವಂಥಹ ದೋಷವನ್ನು, ಮಿತ್ರ ದ್ರೋಹದಿಂದ ಒದಗುವ ಪಾಪವನ್ನು, ಒಂದುವೇಳೆ ತಿಳಿಯದೇ ಇದ್ದರೂ, ಆ ಎರಡನ್ನು ಚೆನ್ನಾಗಿ ತಿಳಿದ ನಾವೇಕೆ ಈ ಪಾಪಕೃತ್ಯದಿಂದ ವಿರಮಿಸಿಕೊಳ್ಳಬಾರದೋ ಅರ್ಥವಾಗುತ್ತಿಲ್ಲ.

**ವ್ಯಾಖ್ಯೆ:-** **'ಲೋಭೋಪಹತ ಚೇತಸಃ'** ಲೋಭದಿಂದ ವಿಕಾರಗೊಂಡ ಚಿತ್ತವುಳ್ಳವರು (ದುರ್ಯೋಧನಾದಿಯರು) ಕಾಮಕ್ರೋಧ ಲೋಭಗಳೆನ್ನುವ ದುಷ್ಟತ್ರಯಗಳಲ್ಲಿ ಲೋಭ ಸ್ಥಾನ ಮಾಡಿಕೊಂಡಿದೆ. ಈ ಮೂರನ್ನು ನರಕದ್ವಾರಗಳೆಂದು ಮುಂದೆ ಭಗವಂತನು ವರ್ಣಿಸಿ ಹೇಳುವನು.** ಈ ದುರ್ಗುಣಗಳು ಚಿತ್ತವನ್ನು ಕಲುಷಿತಗೊಳಿಸುತ್ತವೆ. ಈ ಲೋಭಾದಿಗಳನ್ನಾಶ್ರಯಿಸಿದ್ದರಿಂದ ದುರ್ಯೋಧನಾದಿಯರು ಬಹಳ ದೊಡ್ಡ ಮಾನಸಿಕ ಆಘಾತವನ್ನು ಹೊಂದಬೇಕಾಗಿ ಬಂತು. ಆದ್ದರಿಂದಲೇ ಅವರು ಲೋಭೋಪಹತಚೇತಸ್ಕರೆಂದು ಕರೆಯಲ್ಪಟ್ಟರು. ಶ್ರೇಯೋಭಿಲಾಷಿಗಳು ಆ ದುರ್ಗುಣಗಳನ್ನು ಹತ್ತಿರಕ್ಕೆ ಸೇರಿಸಬಾರದು.

**ಅ॥** ಅರ್ಜುನನು ತನ್ನ ವಾದವನ್ನು ಮುಂದುವರೆಸುತ್ತಿದ್ದಾನೆ.

**೪೦. ಕುಲಕ್ಷಯೇ ಪ್ರಣಶ್ಯಂತಿ ಕುಲಧರ್ಮಾಸ್ಸನಾತನಾಃ**
**ಧರ್ಮೇ ನಷ್ಟೇ ಕುಲಂ ಕೃತ್ಸ್ನಮಧರ್ಮೋಽಭಿಭವತ್ಯುತ**

**೪೧. ಅಧರ್ಮಾಭಿಭವಾತಷ್ಣ ಪ್ರದುಷ್ಯಂತಿ ಕುಲಸ್ತ್ರಿಯಃ**
**ಸ್ತ್ರೀಷು ದುಷ್ಟಾಸು ವಾರ್ಷ್ಣೇಯ ಜಾಯತೇ ವರ್ಣಸಂಕರಃ**

**೪೨. ಸಂಕರೋ ನರಕಾಯೈವ ಕುಲಘ್ನಾನಾಂ ಕುಲಸ್ಯ ಚ**
**ಪತಂತಿ ಪಿತರೋ ಹ್ಯೇಷಾಂ ಲುಪ್ತಪಿಂಡೋದಕ ಕ್ರಿಯಾಃ**

**ಅರ್ಥ:-** ಕುಲಕ್ಷಯೇ=ವಂಶವನ್ನು ನಶಿಸುವ; ಸನಾತನಃ=ಅನಾದಿಯಾಗಿ (ವಂಶಪರಂಪರೆಯಾಗಿ) ಬರುತ್ತಿರುವ; ಕುಲಧರ್ಮಾಃ=ಕುಲಧರ್ಮಗಳು; ಪ್ರಣಶ್ಯನ್ತಿ=ನಶಿಸುತ್ತಿವೆ; ಧರ್ಮೇನಷ್ಟೇ=ಧರ್ಮವನ್ನು ನಶಿಸುವ; ಕೃತ್ಸ್ನಮ್= ಸಮಸ್ತವಾದ; ಕುಲಂ=ಕುಲವನ್ನು; ಅಧರ್ಮಃ=ಅಧರ್ಮವು; ಅಭಿಭವತಿ ಉತ=ವ್ಯಾಪಿಸುವುದಲ್ಲಾ!, ಕೃಷ್ಣಾ=ಓ ಕೃಷ್ಣಾ! ಅಧರ್ಮಾಭಿಭವಾತ್= ಅಧರ್ಮವು ವೃದ್ಧಿಹೊಂದುವುದರಿಂದ; ಕುಲಸ್ತ್ರಿಯಃ=ಕುಲಸ್ತ್ರೀಯರು; ಪ್ರದುಷ್ಯಂತಿ=ಪತಿತರಾಗುವರು; ವಾರ್ಷ್ಣೇಯ=ವೃಷ್ಣಿವಂಶೀಯನಾದ ಓ ಕೃಷ್ಣಾ! ಸ್ತ್ರೀಷು ದುಷ್ಟಾಸು=ಸ್ತ್ರೀಯರು ಪತಿತರಾದರೆ; ವರ್ಣಸಂಕರಃ=ವರ್ಣ ಸಂಕರವು; ಜಾಯತೆ=ಉಂಟಾಗುತ್ತದೆ; ಸಂಕರಃ=(ವರ್ಣ) ಸಂಕರವು; ಕುಲಘ್ನಾನಾಂ= ಕುಲವನ್ನು ಕೆಡಿಸಿದವರಿಗೆ; ಕುಲಸ್ಯ ಚ=ಕುಲಕ್ಕೆ; ನರಾಕಾಯೈವ=ನರಕಕ್ಕೆ; ಏಷಾಂ=ಇದರ; ಪಿತರಃ=ಪಿತೃದೇವತೆಗಳು; ಲುಪ್ತಪಿಂಡೋದಕ ಕ್ರಿಯಾಃ=

---

* ಅಗ್ನಿದೋ ಗರದಶ್ಚೈವ ಶಸ್ತ್ರಪಾಣಿರ್ಧನಾಪಹಾ। ಕ್ಷೇತ್ರದಾರಾಪಹರ್ತಾ ಚ ಷಡೇತೇ ಹ್ಯಾತತಾಯಿನಃ (ವಸಿಷ್ಠಸ್ಮೃತಿ ೩-೧೬)

** ತ್ರಿವಿಧಂ ನರಕಸ್ಯೇದಂ ದ್ವಾರಂ ನಾಶನಮಾತ್ಮನಃ
ಕಾಮಕ್ರೋಧಸ್ತಥಾ ಲೋಭಸ್ತಸ್ಮಾದೇತತ್ತ್ರಯಂ ತ್ಯಜೇತ್ (೧೬-೨೧)

ಶ್ರಾದ್ಧ, ತರ್ಪಣ ಮುಂತಾದ ಪಿಂಡೋದಕ ಕ್ರಿಯೆಗಳು ಇಲ್ಲವಾದವರಾಗಿ; ಪತಂತಿ=ಅಧೋಗತಿಯನ್ನು ಹೊಂದುತ್ತಾರೆ.

**ತಾ:-** ಓ ಕೃಷ್ಣಾ! ಕುಲವು ನಶಿಸುವುದರಿಂದ ಅನಾದಿಯಿಂದ ಬಂದ ಕುಲಧರ್ಮಗಳು ಮಾಯವಾಗಿ ಹೋಗುತ್ತವೆ. ಧರ್ಮವು ನಶಿಸುವುದರಿಂದ ಕುಲದಲ್ಲೆಲ್ಲಾ ಅಧರ್ಮವು ವ್ಯಾಪಿಸುತ್ತದೆ. ಅಧರ್ಮವು ವೃದ್ಧಿಯಾಗುವುದರಿಂದ ಕುಲಸ್ತ್ರೀಯರು ಪತಿತರಾಗುವರು. ಸ್ತ್ರೀಯರು ಪತಿತರಾಗುವುದರಿಂದ ವರ್ಣಸಂಕರವೇರ್ಪಡುವುದು. ಅಂಥಹ ವರ್ಣಸಂಕರದಲ್ಲಿ, ಸಂಕರ ಉಂಟುಮಾಡಿದವರಿಗೆ ಹಾಗೂ ಸಂಕರ ಹೊಂದಿದ ಕುಲಕ್ಕೆ ನರಕ ಪ್ರಾಪ್ತಿಯಾಗುವುದು. ಅವರ ಪಿತೃದೇವತೆಗಳು ಶ್ರಾದ್ಧ, ತರ್ಪಣಗಳು ಇಲ್ಲದವರಾಗಿ ಅಧೋಗತಿಯನ್ನು ಹೊಂದುವರು.

**೪೩. ದೋಷೈರೇತೈಃ ಕುಲಘ್ನಾನಾಂ ವರ್ಣಸಂಕರಕಾರಕೈಃ**
**ಉತ್ಸಾದ್ಯಂತೇ ಜಾತಿಧರ್ಮಾಃ ಕುಲಧರ್ಮಾಶ್ಚ ಶಾಶ್ವತಾಃ**

**೪೪. ಉತ್ಸನ್ನಕುಲಧರ್ಮಾಣಾಂ ಮನುಷ್ಯಾಣಾಂ ಜನಾರ್ದನ**
**ನರಕೇ ನಿಯತಂವಾಸೋ ಭವತೀತ್ಯನುಶುಶ್ರುಮ**

**ಅರ್ಥ:-** ಕುಲಘ್ನಾನಾಂ=ಕುಲವನ್ನು ನಾಶ ಮಾಡುವವರ; ವರ್ಣಸಂಕಾರ ಕಾರಕೈಃ=ಜಾತಿಯನ್ನು ಸಂಕರ ಮಾಡುವವರು; ಏತೈಃ=ಈ; ದೋಷೈಃ=ದೋಷಗಳಿಂದ; ಶಾಶ್ವತಾಃ=ಶಾಶ್ವತವಾದ; ಜಾತಿಧರ್ಮಾಃ=ಜಾತಿಧರ್ಮಗಳು; ಕುಲಧರ್ಮಾಶ್ಚ= ಕುಲಧರ್ಮಗಳೂ; ಉತ್ಸಾದ್ಯಂತೆ=ನಶಿಸಿ ಹಾಕುತ್ತವೆ; ಜನಾರ್ದನ=ಓ ಕೃಷ್ಣಾ! ಉತ್ಸನ್ನಕುಲಧರ್ಮಾಣಾಂ=ನಶಿಸಿದ ಕುಲಧರ್ಮಗಳ; ಮನುಷ್ಯಾಣಾಂ= ಮಾನವರಿಗೆ; ನರಕೇ=ನರಕದಲ್ಲಿ; ನಿಯತಂ=ಯಾವಾಗಲೂ; ವಾಸಂ= ನಿವಾಸವು; ಭವತಿ=ಉಂಟಾಗುತ್ತದೆ; ಇತಿ=ಎಂದು; ಅನುಶುಶ್ರುಮ= (ಹಿರಿಯರಿಂದ) ಕೇಳಿದ್ದೇವೆ.

**ತಾ:-** ಓ ಕೃಷ್ಣಾ! ಕುಲನಾಶಕರ ಜಾತಿಸಾಂಕರ್ಯಹೇತುಗಳಾದ ಈ ದೋಷಗಳಿಂದ ಶಾಶ್ವತವಾದ ಜಾತಿಧರ್ಮಗಳು, ಕುಲಧರ್ಮಗಳು ನಶಿಸಿಹೋಗುತ್ತವೆ. ಕುಲಧರ್ಮಗಳು ನಶಿಸಿದ ಮಾನವರಿಗೆ ಶಾಶ್ವತ ನರಕನಿವಾಸ ಉಂಟಾಗುವುದೆಂದು ನಾವು ಕೇಳಿದ್ದೇವೆ.

**೪೫. ಅಹೋ ಬತ ಮಹಾತ್ಪಾಪಂ ಕರ್ತುಂ ವ್ಯವಸಿತಾ ವಯಮ್**
**ಯದ್ರಾಜ್ಯ ಸುಖಲೋಭೇನ ಹಂತುಂ ಸ್ವಜನಮುದ್ಯತಾಃ**

**ಅರ್ಥ:-** ಅಹೋ=ಆಶ್ಚರ್ಯಸೂಚಕ! ಬತ=ಅಯ್ಯೋ! ಯತ್=ಯಾವ ಕಾರಣದಿಂದ; ವಯಂ=ನಾವು; ರಾಜ್ಯಸುಖಲೋಭೇನ=ರಾಜ್ಯ ಸುಖಗಳ ಆಸೆಯಿಂದ; ಸ್ವಜನಂ=ಬಂಧುಗಳನ್ನು; ಹಂತುಂ=ವಧಿಸಲು; ಉದ್ಯತಾಃ= ಪ್ರಯತ್ನಿಸುತ್ತಿದ್ದೇವೋ; (ತತ್=ಆ ಕಾರಣದಿಂದ); ಮಹಾತ್ಪಾಪಮ್= ಮಹಾಪಾತಕವನ್ನು; ಕರ್ತುಂ=ಮಾಡಲು; ವ್ಯವಸಿತಾಃ=ಯೋಜಿಸಿದಂತಾಗುವುದು.

**ತಾ:-** ಅಯ್ಯೋ! ರಾಜ್ಯಸುಖದ ಆಸೆಯಿಂದ ನಾವು ಬಂಧುಗಳನ್ನು ವಧಿಸಲು ಪ್ರಯತ್ನಿಸಿ ಮಹಾಪಾಪಕ್ಕೆ ಎಡೆಕೊಟ್ಟಂತಾಗುವುದಲ್ಲಾ!

**೪೬. ಯದಿ ಮಾಮಪ್ರತೀಕಾರ ಮಶಸ್ತ್ರಂ ಶಸ್ತ್ರಪಾಣಯಃ**
**ಧಾರ್ತರಾಷ್ಟ್ರಾ ರಣೇ ಹನ್ಯುಸ್ತನ್ಮೇ ಕ್ಷೇಮತರಂ ಭವೇತ್**

**ಅರ್ಥ:-** ಅಶಸ್ತ್ರಂ=ಆಯುಧವನ್ನು ಧರಿಸದೆ; ಅಪ್ರತೀಕಾರಂ=ಎದುರಿಸದೆ; ಮಾಂ=ನನ್ನನ್ನು; ರಣೇ=ಯುದ್ಧದಲ್ಲಿ; ಶಸ್ತ್ರಪಾಣಯಃ=ಕೈಯಲ್ಲಿ ಆಯುಧಗಳನ್ನು ಧರಿಸಿರುವ; ಧಾರ್ತರಾಷ್ಟ್ರಾಃ=ದುರ್ಯೋಧನಾದಿಗಳು; ಹನ್ಯುಃಯದಿ= ವಧಿಸಿದರೆ; ತತ್=ಅದು; ಮೇ=ನನಗೆ; ಕ್ಷೇಮತರಂ=ಮತ್ತೂ ಕ್ಷೇಮ; ಭವೇತ್=ಆಗುವುದು.

**ತಾ:-** ಆಯುಧಗಳನ್ನು ಧರಿಸದೆ, ಯುದ್ಧನಿರತನಾಗದೆ ಇರುವ ನನ್ನನ್ನು ಒಂದುವೇಳೆ ಕೈಯಲ್ಲಿ ಆಯುಧಗಳನ್ನು ಹಿಡಿದಿರುವ ದುರ್ಯೋಧನಾದಿಗಳು ವಧಿಸಿದರೆ ಅದು ನನಗೆ ಬಹು ಕ್ಷೇಮಕರ.

**ವ್ಯಾಖ್ಯೆ:-** 'ಕ್ಷೇಮತರಂ'- ಅಶಸ್ತ್ರನಾದ ತಾನು ಶತ್ರುವಿನಿಂದ ವಧಿಸಲ್ಪಟ್ಟರೆ ಅದು ತನಗೆ ಬಹಳ ಮೇಲೆಂದು ಈ ಕೆಳಗಿನ ಕಾರಣಗಳಿಂದ ಹೇಳಿರಬಹುದು.

೧) ಕುಲನಾಶಮಾಡಿ ಹೊಸದಾಗಿ ಪಾಪವನ್ನು ಸಂಪಾದಿಸುವುದು ತಪ್ಪಿ, ಪೂರ್ವಪುಣ್ಯವನ್ನು ಕಾಪಾಡಿಕೊಳ್ಳಬಹುದು

೨) ಬಂಧುವಧೆಯಿಂದ ಆಗುವ ಪಾಪವು ತಪ್ಪಿ ಹೋಗುವುದು.

೩) ಬಂಧು ಮಿತ್ರಾದಿಗಳ ಪ್ರಾಣಗಳು ಉಳಿಯುತ್ತವೆ.

೪) ಬಂಧು ಮಿತ್ರಾದಿಗಳ ಪ್ರಾಣರಕ್ಷಣೆಯಿಂದ ಒದಗುವ ಪುಣ್ಯ, ಮೋಕ್ಷ ಸಾಧನೆಗೆ ಹೇತುವಾಗುವುವು.

**ಅ॥** ಅರ್ಜುನನು ಈ ಪ್ರಕಾರವಾಗಿ ತನ್ನ ಮಾನಸಿಕ ಆಂದೋಳನವನ್ನು ಶ್ರೀ ಕೃಷ್ಣಪರಮಾತ್ಮನಿಗೆ ವ್ಯಕ್ತಮಾಡಿ ನಂತರ ಏನು ಮಾಡಿದನೆನ್ನುವುದನ್ನು ಸಂಜಯನು ಹೇಳುತ್ತಿದ್ದಾನೆ-

**ಸಂಜಯ ಉವಾಚ:-**

**೪೭. ಏವ ಮುಕ್ತ್ವಾರ್ಜುನಸ್ಸಂಖ್ಯೇ ರಥೋಪಸ್ಥ ಉಪಾವಿಶತ್**
**ವಿಸೃಜ್ಯ ಸಶರಂ ಚಾಪಂ ಶೋಕಸಂವಿಗ್ನಮಾನಸಃ**

ಸಂಜಯ ಉವಾಚ=ಸಂಜಯನು ಹೇಳಿದನು.

**ಅರ್ಥ:-** ಸಂಖ್ಯೇ=ಯುದ್ಧಭೂಮಿಯಲ್ಲಿ; ಅರ್ಜುನಃ=ಅರ್ಜುನನು; ಏವಂ= ಈ ಪ್ರಕಾರವಾಗಿ; ಉಕ್ತ್ವಾ=ಹೇಳಿ; ಶೋಕ ಸಂವಿಗ್ನಮಾನಸಃ=ದುಃಖದಿಂದಾವೃತ ಮನಸ್ಸುಳ್ಳವನಾಗಿ; ಸಶರಂ=ಬಾಣದಿಂದ ಕೂಡಿದ; ಚಾಪಂ=ಧನುಸ್ಸನ್ನು; ವಿಸೃಜ್ಯ=ತ್ಯಜಿಸಿ; ರಥೋಪಸ್ಥ=ರಥದ ಮೇಲೆ; ಉಪಾವಿಶತ್=ಕುಳಿತುಬಿಟ್ಟನು.

**ತಾ:-** (ಓ ಧೃತರಾಷ್ಟ್ರಮಹಾರಾಜಾ!) ಯುದ್ಧ ಭೂಮಿಯಲ್ಲಿ ಅರ್ಜುನನು ಈ ಪ್ರಕಾರವಾಗಿ ಹೇಳಿ ಶೋಕ ಚಿತ್ತವುಳ್ಳವನಾಗಿ, ಬಾಣದಿಂದ ಸಜ್ಜಿತನಾಗಿದ್ದ ಅರ್ಜುನನು ಅವುಗಳನ್ನು ತ್ಯಜಿಸಿ ರಥದಲ್ಲಿ ಕುಸಿದುಬಿದ್ದನು.

**ವ್ಯಾಖ್ಯೆ:-** **'ಶೋಕ ಸಂವಿಗ್ನ ಮಾನಸಃ'-** ಅರ್ಜುನನು ಶೋಕಚಿತ್ತನಾಗಿ ಧನುರ್ಬಾಣಗಳನ್ನು ಕೈಯಿಂದ ಜಾರಿಬಿಟ್ಟನು. ಅವನು ತನ್ನ ಜೀವನದಲ್ಲಿ ನಿರುತ್ಸಾಹದಿಂದ ಧನುಸ್ಸನ್ನು ಕೈ ಬಿಟ್ಟ ಘಟ್ಟ ಇಲ್ಲಿಯವರೆಗೆ ಒಂದೂ ಇಲ್ಲ. ಆದ್ದರಿಂದ ಇದಕ್ಕೆ ಯಾವುದೋ ಪ್ರಬಲವಾದ ಕಾರಣವಿರಬೇಕು. ಸ್ವಜನ ಕ್ಷಯದ ಬಗ್ಗೆ ಅವನಿಗೆ ಈಗಿರುವ ಕಳಕಳಿಯೇ ಇದಕ್ಕೆ ಕಾರಣ. ಆ ಕಳಕಳಿ ಆವೇದನೆಯಾಗಿ ಪರಿಣಮಿಸಿದೆ. ತತ್ಫಲಿತವಾಗಿ ಆತನು ರಾಜ್ಯವನ್ನು, ಭೋಗವನ್ನು ತೃಣೀಕರಿಸಿದನು. ಯುದ್ಧವನ್ನು ನಿರಾಕರಿಸಿದನು. ಅರ್ಜುನನ ಈ ಪರಮ ವಿರಕ್ತಿಯನ್ನು ಕಾರಣವಾಗಿಟ್ಟುಕೊಂಡು ಶ್ರೀ ಕೃಷ್ಣಪರಮಾತ್ಮ ಆತನಿಗೆ ಅಮೂಲ್ಯವಾದ ಆತ್ಮಜ್ಞಾನೋಪದೇಶವನ್ನು ಮಾಡಿದನು. ಅರ್ಜುನನ ವಿಷಾದವು ವಿಷಾದವಾಗಿ ಉಳಿಯದೆ ವಿಷಾದಯೋಗವಾಗಿ ಬದಲಾಯಿತು. ಏಕೆಂದರೆ ಅರ್ಜುನನು ಪ್ರಾಪಂಚಿಕ ಸುಖ, ರಾಜ್ಯ ಭೋಗಗಳ ಬಗ್ಗೆ

ವಿರಕ್ತಿಯನ್ನು ಹೊಂದಿ, ಧರ್ಮವನ್ನು ತಿಳಿದುಕೊಳ್ಳಲು ಪರಿತಪಿಸಿದನು (ಧರ್ಮ ಸಂಮೂಢ ಚೇತಾಃ). ಅಂಥಹ ಪರಿತಾಪ ಮುಮುಕ್ಷುಗಳಿಗೆ ಅತ್ಯಾವಶ್ಯಕ. ದೈವಕ್ಕೋಸ್ಕರ, ಧರ್ಮಕ್ಕೋಸ್ಕರ ಉಂಟಾಗುವ ಪರಿತಾಪ, (ವಿಷಾದ) ಯೋಗಕ್ಕೆ ದಾರಿ ಮಾಡಿಕೊಡುತ್ತದೆ. ಒಂದು (ವಿಷಯ ಭೋಗಗಳಲ್ಲಿ) ವಿರಕ್ತಿ, ಮತ್ತೊಂದು (ಧರ್ಮದಲ್ಲಿ) ಆಸಕ್ತಿ, ಈ ಎರಡೂ ಮೋಕ್ಷ ಪ್ರಾಪ್ತಿಗೆ ಅತ್ಯಾವಶ್ಯಕ. ಅಂದರೆ ಪ್ರಾಪಂಚಿಕ ವೈಭವಗಳ ಮೇಲೆ ವಿರಕ್ತಿ, ಧರ್ಮ ಹಾಗೂ ದೈವದಲ್ಲಿ ಆಸಕ್ತಿಯಿದ್ದರೆ ಮಾತ್ರ ಪರಮಾರ್ಥ ಪಥದಲ್ಲಿ ಜೀವಿಯು ತ್ವರಿತವಾಗಿ, ನಿರಾತಂಕವಾಗಿ ಸಾಗಬಲ್ಲನು. ಅರ್ಜುನನಿಗೆ ಇವೆರಡೂ ಒದಗಿ ಬಂದಿವೆ. ಆದ್ದರಿಂದಲೇ ಆತನ ಅರ್ಹತೆಯನ್ನು ಗುರುತಿಸಿ ಶ್ರೀಕೃಷ್ಣಪರಮಾತ್ಮನು ತಕ್ಷಣವೇ ಶ್ರೇಯಸ್ಕರವಾದ ಜ್ಞಾನೋಪದೇಶವನ್ನು ಮಾಡಿದನು. ಅರ್ಜುನನ ಹಾಗೆ ಯಾರಾದರೂ ಆಗಲಿ ದೃಶ್ಯವಿಷಯಗಳ ಮೇಲೆ ವಿರಕ್ತಿ ಹೊಂದಿ, ಧರ್ಮಕ್ಕೋಸ್ಕರ ಹಂಬಲಿಸಿದರೆ, ಭಗವಾನುಗ್ರಹದಿಂದ ಆತನಿಗೆ ಜ್ಞಾನೋದಯ, ಪರಮಶಾಂತಿ ತಪ್ಪದೆ ಲಭಿಸುವುವು.

ಓಂ

ಇತಿ ಶ್ರೀ ಮದ್ಭಗವದ್ಗೀತಾಸೂಪನಿಷತ್ಸು ಬ್ರಹ್ಮವಿದ್ಯಾಯಾಂ ಯೋಗಶಾಸ್ತ್ರೇ
ಶ್ರೀ ಕೃಷ್ಣಾರ್ಜುನಸಂವಾದೇ ಅರ್ಜುನ ವಿಷಾದ ಯೋಗೋ ನಾಮ

ಪ್ರಥಮೋಽಧ್ಯಾಯಃ

ಇದು ಉಪನಿಷತ್ಪ್ರತಿಪಾದಕವು, ಬ್ರಹ್ಮವಿದ್ಯೆಯು, ಯೋಗ ಶಾಸ್ತ್ರವು, ಶ್ರೀಕೃಷ್ಣಾರ್ಜುನಸಂವಾದವೂ ಆದ
ಶ್ರೀ ಭಗವದ್ಗೀತೆಯಲ್ಲಿಯ ಅರ್ಜುನ ವಿಷಾದಯೋಗವೆನ್ನುವ
ಮೊದಲನೆಯ ಅಧ್ಯಾಯ

**ಓಂ ತತ್ ಸತ್**

# ಶ್ರೀ ಭಗವದ್ಗೀತೆ

## ಅಥ ದ್ವಿತೀಯೋऽಧ್ಯಾಯಃ
## ಎರಡನೆಯ ಅಧ್ಯಾಯ
## ಸಾಂಖ್ಯಯೋಗಃ
## ಸಾಂಖ್ಯಯೋಗ

**ಈ ಅಧ್ಯಾಯದ ಹೆಸರು :**

"ಸಾಂಖ್ಯಯೋಗ"- ಸಂಖ್ಯೆಯಿಂದ ಕೂಡಿರುವುದು ಸಾಂಖ್ಯ. ಸಾಂಖ್ಯವೆಂದರೆ ಜ್ಞಾನ. ಜ್ಞಾನವಿಚಾರಣೆಯಲ್ಲಿ ಅನಾತ್ಮವಸ್ತುಗಳನ್ನು ಲೆಕ್ಕಹಾಕುವಾಗ ಸಂಖ್ಯೆಗಳನ್ನು ಆಶ್ರಯಿಸಬೇಕಾಗಿರುವುದರಿಂದ ಅದನ್ನು ಸಾಂಖ್ಯವೆಂದು ಕರೆಯುವರು. ಪ್ರಕೃತಿಯ ೨೪ ತತ್ವಗಳನ್ನು ಇಲ್ಲವೆ ೯೬ ತತ್ವಗಳನ್ನು ತೀವ್ರವಾಗಿ ಶೋಧಿಸಿ, ಅವು ಅನಾತ್ಮರೂಪಗಳೆಂದು ತ್ಯಜಿಸಿ, ಅವುಗಳಿಗೆ ಸಾಕ್ಷಿಯಾಗಿರುವಂತಹ ಪರಮಾತ್ಮನನ್ನು ಗ್ರಹಿಸುವುದೇ ಸಾಂಖ್ಯ ವಿದ್ಯೆ. ಆತ್ಮಾನಾತ್ಮ ವಿವೇಕರೂಪದ ವಿಜ್ಞಾನವೇ ಸಾಂಖ್ಯ. ಈ ಅಧ್ಯಾಯದಲ್ಲಿ ಆತ್ಮಸ್ವರೂಪವು ಚೆನ್ನಾಗಿ ವರ್ಣಿಸಲ್ಪಟ್ಟಿರುವುದರಿಂದ, ಪಂಚ ಭೂತಾತ್ಮಕವಾದ ದೇಹಾದಿಗಳ ನಶ್ವರತೆ ಪ್ರತಿಪಾದಿಸಲ್ಪಟ್ಟಿರುವುದರಿಂದ, ಜ್ಞಾನಸಂಬಂಧವಾದ ಅಂಶಗಳು ಹೆಚ್ಚಾಗಿ ಬಂದಿರುವುದರಿಂದಲೂ ಇದಕ್ಕೆ ಸಾಂಖ್ಯಯೋಗವೆನ್ನುವ ಹೆಸರು ಬಂದಿದೆ.

**ಈ ಅಧ್ಯಾಯದಲ್ಲಿನ ಪ್ರಧಾನ ವಿಷಯಗಳು:**

೧. ಅರ್ಜುನನು ತನ್ನ ಮಾನಸಿಕ ವ್ಯಥೆಯನ್ನು ಶ್ರೀಕೃಷ್ಣಪರಮಾತ್ಮನಿಗೆ ತಿಳಿಸಿ ನಿವಾರಣೋಪಾಯವನ್ನು ಯಾಚಿಸುವುದು (೧ ರಿಂದ ೧೦ರವರೆಗೆ)

೨. ಆತ್ಮಸ್ವರೂಪ ವರ್ಣನೆ............... (೧೧ ರಿಂದ ೩೦ರವರೆಗೆ)

೩. ಕ್ಷಾತ್ರಧರ್ಮವನ್ನನುಸರಿಸಿ ಯುದ್ಧಮಾಡಬೇಕಾದ ಅವಶ್ಯಕತೆಯನ್ನು ನಿರೂಪಿಸಿರುವುದು (೩೧ ರಿಂದ ೩೮ರವರೆಗೆ)

೪. ನಿಷ್ಕಾಮಕರ್ಮಯೋಗದ ಪ್ರತಿಪಾದ.......... (೩೯ ರಿಂದ ೫೩ರವರೆಗೆ)

೫. ಸ್ಥಿತಪ್ರಜ್ಞನ ಲಕ್ಷಣಗಳು, ಆತನ ಮಹಿಮೆ......... (೫೪ ರಿಂದ ೭೨ರವರೆಗೆ)

**ಪೂರ್ವಾಧ್ಯಾಯದೊಡನೆ ಈ ಅಧ್ಯಾಯಕ್ಕೆ ಇರುವ ಸಂಬಂಧ:**

ಶ್ರೀಕೃಷ್ಣನು ಅರ್ಜುನನ ರಥವನ್ನು ಎರಡು ಸೇನೆಗಳ ಮಧ್ಯೆ ನಿಲ್ಲಿಸಲು, ಮುಂದೆ ನಿಂತಿರುವ ಬಂಧುಮಿತ್ರರನ್ನು ನೋಡಿ ಅರ್ಜುನನು ಶೋಕತಪ್ತನಾಗಿ ಅವರನ್ನು ಹೇಗೆ ವಧಿಸಬೇಕೆಂದು ವ್ಯಥೆಪಟ್ಟು ಗಾಂಡೀವವನ್ನು ಕೈಯಿಂದ ಜಾರಿ ಬಿಟ್ಟು ರಥದಲ್ಲಿ ಕುಸಿದು ಬಿದ್ದನೆಂದು ಕಳೆದ ಅಧ್ಯಾಯದಲ್ಲಿ ಹೇಳಲ್ಪಟ್ಟಿದೆ. ಅರ್ಜುನನ ಈ ದೈನ್ಯ ಸ್ಥಿತಿಯನ್ನು ನೋಡಿ ಶ್ರೀಕೃಷ್ಣ ಪರಮಾತ್ಮನು ಈ ಅಧ್ಯಾಯದಲ್ಲಿ ಆತನಿಗೆ ಧೈರ್ಯವನ್ನು ಉಂಟುಮಾಡಲು ಆತ್ಮದ ನಿಜತತ್ವವನ್ನು, ಕರ್ಮರಹಸ್ಯವನ್ನು ಬೋಧಿಸುತ್ತಿದ್ದಾನೆ.

ಅ|| ಅರ್ಜುನನ ಮಾನಸಿಕ ಪರಿಸ್ಥಿತಿಯನ್ನು ವರ್ಣಿಸುತ್ತ ಸಂಜಯನು ಈ ಅಧ್ಯಾಯವನ್ನು ಪ್ರಾರಂಭಿಸುತ್ತಿದ್ದಾನೆ-

**ಸಂಜಯ ಉವಾಚ:**

**೧. ತಂ ತಥಾ ಕೃಪಯಾऽऽವಿಷ್ಟಮಶ್ರುಪೂರ್ಣಾಕುಲೇಕ್ಷಣಮ್**
**ವಿಷೀದಂತಮಿದಂ ವಾಕ್ಯಮುವಾಚ ಮಧುಸೂದನಃ**

ಸಂಜಯ ಉವಾಚ - ಸಂಜಯನು ಹೇಳಿದನು.

**ಅರ್ಥ:** ತಥಾ=ಈ ರೀತಿ; ಕೃಪಯಾ=ಕನಿಕರದಿಂದ; ಆವಿಷ್ಟಂ=ತುಂಬಿ ಹೋದಂತವನಾಗಿ; ಅಶ್ರುಪೂರ್ಣಾಕುಲೇಕ್ಷಣಮ್= ಕಣ್ಣೀರಿನಿಂದ ತುಂಬಿ ವ್ಯಾಕುಲವಾದ ನೇತ್ರಗಳುಳ್ಳ; ವಿಷೀದಂತಂ= ದುಃಖಿಸುತ್ತಿದ್ದಂತಹ; ತಮ್= ಆ ಅರ್ಜುನನ ಬಗ್ಗೆ; ಮಧುಸೂದನಃ= ಶ್ರೀಕೃಷ್ಣಮೂರ್ತಿ; ಇದಂ ವಾಕ್ಯಂ= ಈ (ಮುಂದೆ ಹೇಳುವ) ವಾಕ್ಯವನ್ನು; ಉವಾಚ= ಹೇಳಿದನು.

**ತಾ:-** ಸಂಜಯನು ಹೇಳಿದನು- ಆ ಪ್ರಕಾರವಾಗಿ ದೈನ್ಯದಿಂದ ಕಣ್ಣೀರಿಡುತ್ತ ದುಃಖಿಸುತ್ತಿದ್ದ ಅರ್ಜುನನ್ನು ನೋಡಿ ಶ್ರೀಕೃಷ್ಣನು ಹೀಗೆ ಹೇಳಿದನು.

**ವ್ಯಾಖ್ಯೆ: 'ಅಶ್ರುಪೂರ್ಣಾಕುಲೇಕ್ಷಣಂ'-** ತೀವ್ರ ವೈರಾಗ್ಯವನ್ನು ಹೊಂದಿದವನ ಲಕ್ಷಣ ಈ ರೀತಿಯಾಗಿಯೇ ಇರುವುದು. ಪ್ರಪಂಚ ಭೋಗ ಹಾಗು ದೃಶ್ಯವಿಷಯಗಳ ಬಗ್ಗೆ ವಿರಕ್ತಿ ಹೊಂದಿ, ಸಂಸಾರದ ಮೇಲೆ ಜಿಗುಪ್ಸೆ ಹುಟ್ಟಿದವನ ಕಣ್ಣಿನಿಂದ ಧಾರಾಕಾರವಾಗಿ ಕಣ್ಣೀರು ಸುರಿಯುತ್ತಿರುತ್ತದೆ. ಜಗದ್ವೈಭವಗಳು ಭಾರಭೂತಗಳಾಗಿ ಕಾಣಿಸುತ್ತವೆ. ಇಂತಹ ಸ್ಥಿತಿಯೇ ಈಗ ಅರ್ಜುನನಿಗೆ ಉಂಟಾಗಿದೆ. ಬ್ರಹ್ಮೋಪದೇಶಕ್ಕೆ ಇಂತಹ ವೈರಾಗ್ಯ ಒಂದು ಅರ್ಹತೆಯಾಗಿದೆ. ಇದಿಲ್ಲದವನಿಗೆ ಅಧ್ಯಾತ್ಮವಿದ್ಯೆ ಬೋಧಿಸಲ್ಪಟ್ಟರೂ, ಕೊಳೆ ಬಟ್ಟೆಗೆ ಹಾಕಿದ ಬಣ್ಣದಂತೆ ನಿಷ್ಪ್ರಯೋಜಕವಾಗುವುದು. ಶ್ರೀಕೃಷ್ಣಮೂರ್ತಿ ಮಾಡಲಿರುವ ಅಧ್ಯಾತ್ಮ ಧರ್ಮೋಪದೇಶಕ್ಕೆ ಅರ್ಜುನನು (ಇಂತಹ ವೈರಾಗ್ಯಾವಲಂಬನೆಯ ದ್ವಾರ) ಅರ್ಹತೆಯನ್ನು ಹೊಂದಿರುವನೆಂದು ಸ್ಪಷ್ಟವಾಗುತ್ತದೆ.

'ಕೃಪಯಾऽऽವಿಷ್ಟಂ'=ಕೃಪೆ, ದಯೆ, ಕನಿಕರಗಳು ಒಳ್ಳೆಯ ಗುಣಗಳೇ. ಆದರೆ ಇವುಗಳನ್ನು ತೋರಿಸಬಾರದವರ ಮೇಲೆ ಹಾಗೂ ತೋರಿಸಬಾರದ ಸಮಯದಲ್ಲಿ ತೋರಿಸುವುದರಿಂದ ಅವು ನಿರ್ದೇಶಿತ ಸತ್ಫಲಗಳನ್ನು ಕೊಡುವುದಿಲ್ಲ. ಅಪಾತ್ರ ಸ್ನೇಹ ಕಾರುಣ್ಯ ಉತ್ತಮವಾದುದಲ್ಲ. ಅಧರ್ಮಕ್ಕೆ ಹೇತುವಾಗಿರುವವರಿಗೆ ಅರ್ಜುನನು ಕನಿಕರವನ್ನು ತೋರಿಸಿದನು. ಇದು ಕ್ಷಾತ್ರಧರ್ಮಕ್ಕೆ ವಿರೋಧವಾದುದು. ಆದ್ದರಿಂದ 'ಈ ರೀತಿಯ ಅಧರ್ಮಿಗಳ

ಮೇಲೆ ತೋರಿಸುವ ಕೃಪೆ ಕೆಲಸಕ್ಕೆ ಬಾರದು.' ಅದರ ಬದಲು ತನ್ನ ಕ್ಷತ್ರಿಯಧರ್ಮವನ್ನು ಕಾರ್ಯಾನ್ವಿತಗೊಳಿಸಬೇಕೆಂದು ಅರ್ಜುನನಿಗೆ ಬೋಧಿಸಲಾಯಿತು.

**'ಮಧುಸೂದನ'**- ಮಧುವೆಂಬ ರಾಕ್ಷಸನನ್ನು ಸಂಹರಿಸಿದ್ದರಿಂದ ಶ್ರೀಕೃಷ್ಣನಿಗೆ ಈ ಹೆಸರು ಬಂದಿದೆ. (ಮಧುವೆಂದರೆ- ಜೇನುತುಪ್ಪವೆನ್ನುವ ಅರ್ಥವಿದೆ. ಅಹಂಕಾರ, ಶಬ್ದಾದಿ ವಿಷಯಗಳು, ದೃಶ್ಯಭೋಗಗಳು ಜೇನುತುಪ್ಪದಂತೆ ಮೊದಲು ಬಹು ಸಿಹಿಯಾಗಿ ಕಾಣುತ್ತವೆ. ನಂತರ ವಿಷವಾಗಿ ಬಾಧಿಸುವುವು. ಆದ್ದರಿಂದ ಅವುಗಳನ್ನು ತ್ಯಜಿಸಬೇಕು. ಅದೇ ಮಧುಸೂದನತ್ವ ಅಂತಹ ಮಧುಸೂದನತ್ವವೆನ್ನುವ ಲಕ್ಷಣವನ್ನು ಹೊಂದಿರುವವನೇ ಮಧುಸೂದನನಾದ ಪರಮಾತ್ಮನನ್ನು ಸೇರುವನು.)

**ಅ||** ಅರ್ಜುನನ ಈ ದೀನಸ್ಥಿತಿಯನ್ನು ನೋಡಿ ಶ್ರೀಕೃಷ್ಣಮೂರ್ತಿ ಆತನಿಗೆ ಧೈರ್ಯವನ್ನು ತುಂಬುತ್ತಿದ್ದಾನೆ-

**ಶ್ರೀ ಭಗವಾನುವಾಚ:**

**೨. ಕುತಸ್ತ್ವಾ ಕಶ್ಮಲಮಿದಂ ವಿಷಮೇ ಸಮುಪಸ್ಥಿತಮ್**
**ಅನಾರ್ಯಜುಷ್ಟ ಮಸ್ವರ್ಗ್ಯ ಮಕೀರ್ತಿಕರ ಮರ್ಜುನ**

ಶ್ರೀ ಭಗವಾನುವಾಚ=ಭಗವಂತನಾದ ಶ್ರೀಕೃಷ್ಣನು ಹೇಳಿದನು-

**ಅರ್ಥ:** ಅರ್ಜುನ- ಓ ಅರ್ಜುನಾ! ಅನಾರ್ಯಜುಷ್ಟಮ್= ಅನಾರ್ಯರು ಅವಲಂಬಿಸಲು ಯೋಗ್ಯವಾದದ್ದು; ಅಸ್ವರ್ಗ್ಯಂ=ಸ್ವರ್ಗಪ್ರಾಪ್ತಿಗೆ ಭಂಗವನ್ನುಂಟು ಮಾಡುವುದು; ಅಕೀರ್ತಿಕರಂ=ಅಪಕೀರ್ತಿಯನ್ನು ಉಂಟುಮಾಡು ವಂಥಹದು; ಇದಂ=ಈ; ಕಶ್ಮಲಂ=ಮನೋವ್ಯಾಕುಲತೆಯು (ಮೋಹವು); ವಿಷಮೇ=(ಈ) ವಿಷಮಸಮಯದಲ್ಲಿ; ತ್ವಾ=ನಿನಗೆ; ಕುತಃ=ಎಲ್ಲಿಂದ (ಯಾವ ಕಾರಣದಿಂದ); ಸಮುಪಸ್ಥಿತಂ=ಬಂದೊದಗಿದೆ?

**ತಾ:** ಓ ಅರ್ಜುನಾ! ಅನಾರ್ಯರು ಅವಲಂಬಿಸಲು ಯೋಗ್ಯವಾದ, ಸ್ವರ್ಗಪ್ರತಿಬಂಧಕವಾದ, ಅಪಯಶಸ್ಸು ಉಂಟುಮಾಡುವ ಈ ಮೋಹವು ಈ ವಿಷಮ ಸಮಯದಲ್ಲಿ ನಿನಗೆಲ್ಲಿಂದ ಬಂದಾವರಿಸಿದೆ?

**ವ್ಯಾಖ್ಯೆ:** 'ಕಶ್ಮಲಮಿದಂ'-ಅಂಜುಬುರುಕುತನ, ಶೋಕ, ಮನೋವ್ಯಾಕುಲತೆ ಮೊದಲಾದವುಗಳನ್ನು ಭಗವಂತನು ಕಶ್ಮಲ (ಮಾಲಿನ್ಯ)ವೆಂದು ಕರೆದಿದ್ದಾನೆ. ಶರೀರಕ್ಕೆ ಯಾವುದೇ ಮಾಲಿನ್ಯವುಂಟಾದಂತೆ ಮನಸ್ಸಿಗೆ ಶೋಕ, ಮೋಹ, ರಾಗದ್ವೇಷಾದಿರೂಪ ಮಾಲಿನ್ಯ ಅಂಟಿಕೊಳ್ಳುತ್ತಿರುತ್ತದೆ. ದೇಹದ ಮಾಲಿನ್ಯ ವನ್ನು ಸಾಬೂನು ಮುಂತಾದುವುಗಳಿಂದ ಶುಭ್ರಪಡಿಸಿದಂತೆ ಮನೋಮಾಲಿನ್ಯ ವನ್ನು ಪರಮಾರ್ಥ ಬೋಧೆಯಿಂದ ನಿವಾರಿಸಿಕೊಳ್ಳಬೇಕು. ಅರ್ಜುನನ ಈ ಕಶ್ಮಲ ಶ್ರೀಕೃಷ್ಣಮೂರ್ತಿಯ ದಿವ್ಯಜ್ಞಾನೋಪದೇಶದಿಂದ ಶುಭ್ರವಾದಂತೆ, ಪ್ರತಿಯೊಬ್ಬರು ಅವರವರ ಚಿತ್ತಗಳನ್ನು ಪರಿಶೋಧಿಸಿಕೊಂಡು ಅಜ್ಞಾನ ಮಾಲಿನ್ಯವನ್ನು ಗೀತಾ ಪ್ರಬೋಧೆಯನ್ನನುಸರಿಸುವುದರಿಂದ ನಿವಾರಿಸಿ ಕೊಳ್ಳಬೇಕು.

**'ಅನಾರ್ಯಜುಷ್ಟಮ್'**- ಪ್ರಪಂಚದಲ್ಲಿ ಎರಡು ಗುಂಪುಗಳಿವೆ. ಆರ್ಯರು, ಅನಾರ್ಯರು ಎಂದು. ಸನ್ಮಾರ್ಗವನ್ನವಲಂಬಿಸುವವರು, ಪವಿತ್ರತೆಯ ಕೈಹಿಡಿಯುವವರು, ಪ್ರಕಾಶವನ್ನಪೇಕ್ಷಿಸುವವರು, ಧೈರ್ಯೋತ್ಸಾಹವುಳ್ಳವರು ಆರ್ಯರು. ದುರ್ಮಾರ್ಗವನ್ನವಲಂಬಿಸುವವರು, ಅಪವಿತ್ರತೆ ಹಾಗು ಕಶ್ಮಲದ ಕೈಹಿಡಿಯುವವರು, ಅಂಧಕಾರವನ್ನಪೇಕ್ಷಿಸುವವರು, ಅಧೈರ್ಯ, ನಿರುತ್ಸಾಹ ಹಾಗೂ ನಿರಂತರ ಭೀತಿಯನ್ನು ಹೊಂದಿದವರು ಅನಾರ್ಯರು. ತಾವು ಆರ್ಯರೋ ಅಥವ ಅನಾರ್ಯರೋ ಎಂದು ಪ್ರತಿಯೊಬ್ಬರೂ ತಮ್ಮನ್ನು ಪ್ರಶ್ನಿಸಿಕೊಂಡು ಆರ್ಯರಾಗಿರುವುದಕ್ಕೇ ಪ್ರಯತ್ನಿಸಬೇಕು.

ಪ್ರಶ್ನೆ: ಅಧೈರ್ಯ, ಶೋಕ, ಭೀತಿ ಮುಂತಾದ ಅವಗುಣಗಳು ಎಂತಹವು?

ಉತ್ತರ : ೧) ಅವು ಮನಸ್ಸಿನ ಕಲ್ಮಷಗಳು ೨) ಅನಾರ್ಯರು ಆಚರಿಸುವಂತಹವು ೩) ಸ್ವರ್ಗಾದಿ ಉತ್ತಮ ಲೋಕಗಳಿಂದ ವಂಚಿಸಲ್ಪಡುವುವು ೪) ಅಪಕೀರ್ತಿಯನ್ನುಂಟುಮಾಡುವುವು.

**೩. ಕ್ಲೈಬ್ಯಂ ಮಾಸ್ಮಗಮಃ ಪಾರ್ಥ ನೈತತ್ತ್ವಯ್ಯುಪಪದ್ಯತೇ**
**ಕ್ಷುದ್ರಂ ಹೃದಯದೌರ್ಬಲ್ಯಂ ತ್ಯಕ್ತ್ವೋತ್ತಿಷ್ಠ ಪರಂತಪ**

**ಅರ್ಥ:** ಪಾರ್ಥ= ಓ ಅರ್ಜುನಾ! ಕ್ಲೈಬ್ಯಮ್=ಅಧೈರ್ಯವನ್ನು; ಮಾಸ್ಮಗಮಃ= ಹೊಂದಬೇಡ; ಏತತ್=ಇದು; ತ್ವಯಿ=ನಿನಗೆ; ನ ಉಪಪದ್ಯತೇ= ಸರಿಯಾದುದಲ್ಲ; ಪರಂತಪ=ಶತ್ರುಗಳನ್ನು ಪರಿತಪಿಸುವಂತೆ ಮಾಡುವವನು; ಕ್ಷುದ್ರಂ=ನೀಚವಾದ; ಹೃದಯ ದೌರ್ಬಲ್ಯಂ=ಮನೋ ದುರ್ಬಲತೆಯನ್ನು; ತ್ಯಕ್ತ್ವಾ=ಬಿಟ್ಟು; ಉತ್ತಿಷ್ಠ= (ಯುದ್ಧಕ್ಕೆ) ಸನ್ನದ್ಧನಾಗು(ಏಳು).

**ತಾ:** ಓ ಅರ್ಜುನಾ! ಅಧೈರ್ಯವನ್ನು ಹೊಂದಬೇಡ. ಇದು ನಿನಗೆ ತಕ್ಕದ್ದಲ್ಲ. ನೀಚವಾದ ಈ ಮನೋದುರ್ಬಲತೆಯನ್ನು ಬಿಟ್ಟು ಯುದ್ಧ ಮಾಡಲನುವಾಗು.

**ವ್ಯಾಖ್ಯೆ:** 'ಕ್ಲೈಬ್ಯಂ'= ಅಂದರೆ ಕ್ಲೈಬ್ಯತೆ, ನಪುಂಸಕತೆ, ಪೌರುಷವು ಇಲ್ಲದೇ ಇರುವುದು. ಅಂಜುಬುರುಕುತನ, ಅಧೈರ್ಯಗಳನ್ನು ಹೊಂದಬೇಡ ಎಂದು ಭಗವಂತನು ಅರ್ಜುನನನ್ನು ಎಚ್ಚರಿಸುತ್ತಿದ್ದಾನೆ. ಅಧೈರ್ಯವು ಬಹಳ ನೀಚವಾದ ಸ್ವಭಾವವಾಗಿರುವುದರಿಂದ 'ಕ್ಲೈಬ್ಯಂ' (ನಪುಂಸಕತ್ವ) ಎಂದು ಅದನ್ನು ವರ್ಣಿಸಿ, ಅಂತಹದನ್ನು ಆಶ್ರಯಿಸಿರುವ ಅರ್ಜುನನ್ನು ಭಗವಂತನು ಪರಿಹಾಸ್ಯ ಮಾಡಿದ್ದಾನೆ.

ಸುಗುಣಗಳಲ್ಲಿ ಧೈರ್ಯ, ನಿರ್ಭಯತೆ ಬಹಳ ಪ್ರಧಾನಗಳಾದವು. ಆ ಎರಡು ಇದ್ದಲ್ಲಿ ಬೇರೆ ಎಲ್ಲಾ ಸುಗುಣಗಳು ತಾವೇ ಬಂದು ಸೇರುತ್ತವೆ. ಆದ್ದರಿಂದಲೇ ಭಗವಂತನು ಗೀತೆಯ ೧೬ನೆಯ ಅಧ್ಯಾಯದ ಪ್ರಾರಂಭದಲ್ಲಿ ೨೬ ಗುಣಗಳನ್ನು ಹೇಳುತ್ತಾ ಮೊಟ್ಟಮೊದಲಿಗೆ 'ಅಭಯಂ' ಎನ್ನುವ ಸುಗುಣವನ್ನು ವರ್ಣಿಸಿ ಹೇಳಿದನು.

**ಉತ್ಸಾಹಂ ಸಾಹಸಂ ಧೈರ್ಯಂ ಬುದ್ಧಿಶಕ್ತಿಃ ಪರಾಕ್ರಮಃ**
**ಷಡೇತೇ ಯತ್ರ ತಿಷ್ಠಂತಿ ತತ್ರ ದೇವೋಽಪಿ ತಿಷ್ಠತಿ**

"ಉತ್ಸಾಹ, ಸಾಹಸ, ಧೈರ್ಯ, ಸದ್ಬುದ್ಧಿ, ಶಕ್ತಿ, ಪರಾಕ್ರಮ ಎನ್ನುವ ಈ ಆರು ಸುಗುಣಗಳು ಎಲ್ಲಿರುವುವೋ, ಅಲ್ಲಿ ಸಾಕ್ಷಾತ್ ಭಗವಂತನು ನಿವಸಿಸುತ್ತಾನೆ" ಎಂದು ಪ್ರಾಜ್ಞರು ಹೇಳಿದ್ದಾರೆ. ಹಾಗಿಲ್ಲದಿದ್ದಲ್ಲಿ ಗೀತೆಯಲ್ಲಿ ಪ್ರಪ್ರಥಮವಾಗಿ ಈ "ಧೈರ್ಯ"ವನ್ನು ಸುಗುಣವೆಂದು ಹೇಗೆ ತಾನೇ ಶ್ರೀಕೃಷ್ಣಮೂರ್ತಿ ಪ್ರತಿಪಾದಿಸುವನು? ಭಗವಂತನು ಬಾಯಿತೆರೆಯುತ್ತಲೇ ಆತನ ಮುಖಾರವಿಂದದಿಂದ ಈ ನಿರ್ಭಯತ್ವವೆಂಬ ಮಂತ್ರಪುಂಜವು ಹೊರಹೊಮ್ಮಿತು. ಗೀತಾಚಾರ್ಯನು ಅನೇಕ ತತ್ವಗಳನ್ನು ಹೇಳಬೇಕೆಂದು ಕೊಂಡು ಮೊಟ್ಟಮೊದಲಿಗೆ 'ನಿರ್ಭಯತ್ವ'ವನ್ನು ಬೋಧಿಸಿರುವುದರಿಂದ, ಇದರಲ್ಲಿ ಏನೋ ವಿಶೇಷವಾದ ಮಹತ್ವವಿರಲೇಬೇಕು. ಅರ್ಜುನನ ರೋಗ ಬಹಳ ತೀವ್ರವಾದುದು. ಅದನ್ನು ನೋಡಿ ಶ್ರೀಕೃಷ್ಣಮೂರ್ತಿಯೆನ್ನುವ ವೈದ್ಯನು

ತನ್ನ ಔಷಧಿ ಪೆಟ್ಟಿಗೆಯಲ್ಲಿರುವ ಅನೇಕ ಔಷಧಿಗಳಲ್ಲಿ ಈ ನಿರ್ಭಯತ್ವವೆಂಬ ರಾಮಬಾಣ ದಿವ್ಯೌಷಧವನ್ನು ಆರಿಸಿ ತೆಗೆದು ಪ್ರಪ್ರಥಮವಾಗಿ ಅದನ್ನೇ ಪ್ರಯೋಗಿಸಿದನು. ಅಜ್ಞಾನಜನಿತ ಮನೋದೌರ್ಬಲ್ಯವೇ ಅರ್ಜುನನ ವ್ಯಾಧಿ. ಆತ್ಮಜ್ಞಾನ ಜನಿತ ಪ್ರಚಂಡಧೀರತ್ವವೇ ಶ್ರೀಕೃಷ್ಣನ ಔಷಧ. "ಉತ್ತಿಷ್ಠ"- **'ಉತ್ತಿಷ್ಠತ! ಜಾಗ್ರತ! ಪ್ರಾಪ್ಯವರಾನ್ನಿಬೋಧತ'- "ಏಳು, ಜಾಗೃತನಾಗು, ಮಹನೀಯರನ್ನು ಸಮೀಪಿಸಿ ವಿಜ್ಞಾನವನ್ನು ಹೊಂದು"** ಎಂದು ಉಪನಿಷತ್ತುಗಳು ಘೋಷಿಸುತ್ತಿವೆ. ಹಾಗೆಯೇ ಭಗವಂತನು "ಏಳು ಕಾರ್ಯನಿರತನಾಗು! ಕರ್ತವ್ಯವನ್ನು ಪಾಲಿಸು" ಎಂದು ಅರ್ಜುನನನ್ನು ಇಲ್ಲಿ ಎಚ್ಚರಿಸುತ್ತಿದ್ದಾನೆ.

**'ಪರಂತಪ-** ಓ ಅರ್ಜುನಾ! ಇಲ್ಲಿಯವರೆಗೆ ನೀನು ಎಷ್ಟೋ ಶತ್ರುಗಳನ್ನು ಧ್ವಂಸ ಮಾಡಿದ್ದೀಯೆ. ಆದರೆ ಅವರೆಲ್ಲರೂ ಹೊರಗಿನ (ಬಾಹ್ಯ) ಶತ್ರುಗಳು. ಈಗ ನಿನ್ನ ಅಂತಃಶತ್ರುಗಳಾದ ಶೋಕ, ಮೋಹ, ಅಧೈರ್ಯ, ಮನೋದೌರ್ಬಲ್ಯಗಳನ್ನು ಜಯಿಸುವಂಥವನಾಗು' ಎನ್ನುವುದನ್ನು 'ಪರಂತಪ' ಎನ್ನುವ ಶಬ್ದದ ಮೂಲಕ ಸೂಚಿಸಲ್ಪಟ್ಟಿದೆ.

**ಅ॥** ಶ್ರೀಕೃಷ್ಣನ ಈ ಬೋಧಾವಾಕ್ಯಗಳನ್ನು ಕೇಳಿಯೂ ಕೂಡ ತನ್ನ ಹಳೆಯಧೋರಣೆಯನ್ನೇ ಪ್ರದರ್ಶಿಸುತ್ತ ಪೂಜ್ಯನೀಯರಾದ ಭೀಷ್ಮದ್ರೋಣಾದಿ ಗಳೊಡನೆ ಸೆಣಸಾಟ ಪಾಪಕ್ಕೆ ಕಾರಣವಾಗುವುದಲ್ಲವೆ ಎಂದು ಅರ್ಜುನನು ನುಡಿಯುತ್ತಿದ್ದಾನೆ.

**ಅರ್ಜುನ ಉವಾಚ :**

**೪. ಕಥಂ ಭೀಷ್ಮಮಹಂ ಸಂಖ್ಯೇ ದ್ರೋಣಂ ಚ ಮಧುಸೂದನ**
**ಇಷುಭಿಃ ಪ್ರತಿಯೋತ್ಸ್ಯಾಮಿ ಪೂಜಾರ್ಹಾವರಿಸೂದನ**

ಅರ್ಜುನ ಉವಾಚ=ಅರ್ಜುನನು ಹೇಳಿದನು,

**ಅರ್ಥ:** ಅರಿಸೂದನ- ಶತ್ರುಗಳನ್ನು ನಾಶಮಾಡುವ ಶಕ್ತಿಯನ್ನುಳ್ಳ; ಮಧುಸೂದನ=ಓ ಕೃಷ್ಣಾ!; ಪೂಜಾರ್ಹಾ=ಪೂಜಿಸಲರ್ಹರಾದ; ಭೀಷ್ಮಂ=ಭೀಷ್ಮನನ್ನು; ದ್ರೋಣಂಚ= ದ್ರೋಣನನ್ನು; ಸಂಖ್ಯೇ=ಯುದ್ಧದಲ್ಲಿ; ಅಹಂ=ನಾನು; ಇಷುಭಿಃ=ಬಾಣ ಗಳಿಂದ; ಕಥಂ=ಹೇಗೆ; ಪ್ರತಿಯೋತ್ಸ್ಯಮಿ=ಎದುರಿಸಿ ಯುದ್ಧ ಮಾಡ ಬಲ್ಲೆನು?

**ತಾ:** ಅರ್ಜುನನು ಕೇಳಿದನು- ಓ ಕೃಷ್ಣಾ!; ಭೀಷ್ಮ ದ್ರೋಣರಿಬ್ಬರು ಪೂಜಾರ್ಹರು. ಅಂತವರ ಮೇಲೆ ಬಾಣಗಳನ್ನು ಬಿಟ್ಟು ನಾನು ಹೇಗೆ ತಾನೇ ಯುದ್ಧ ಮಾಡಬಲ್ಲೆನು?

**ವ್ಯಾಖ್ಯೆ:** ಶತ್ರುಪಕ್ಷದಲ್ಲಿದ್ದಾಗ್ಯೂ ಭೀಷ್ಮದ್ರೋಣರ ಮೇಲೆ ಅರ್ಜುನನಿಗೆ ಎಷ್ಟೋ ಗೌರವ, ಭಕ್ತಿಭಾವವಿದೆಯೆಂದು ಈ ಶ್ಲೋಕದಿಂದ ತಿಳಿದು ಬರುತ್ತದೆ.

**೫. ಗುರೂನಹತ್ವಾ ಹಿ ಮಹಾನುಭಾವಾನ್ ಶ್ರೇಯೋ**
**ಭೋಕ್ತುಂ ಭೈಕ್ಷ್ಯಮಪೀಹ ಲೋಕೇ**
**ಹತ್ವಾರ್ಥಕಾಮಾಂಸ್ತು ಗುರೂನಿಹೈವ ಭುಂಜೀಯ ಭೋಗಾನ್ ರುಧಿರಪ್ರದಿಗ್ಧಾನ್**

**ಅರ್ಥ:** ಮಹಾನುಭಾವಾನ್=ಮಹಾನುಭಾವರಾದ; ಗುರೂನ್=ಗುರುಗಳನ್ನು; ಅಹತ್ವಾ=ಕೊಲ್ಲದೆ; ಇಹಲೋಕೇ=ಈ ಲೋಕದಲ್ಲಿ; ಭೈಕ್ಷ್ಯಮಪಿ=ಭಿಕ್ಷಾನ್ನ ವನ್ನಾದರು; ಭೋಕ್ತುಂ=ಭುಜಿಸುವುದು; ಶ್ರೇಯೋಹಿ=ಒಳ್ಳೆಯದಲ್ಲವೇ!; ಗುರೂನ್=ಗುರುಗಳನ್ನು; ಹತ್ವಾತು=ಕೊಂದು; ಇಹೈವ=ಈ ಲೋಕದಲ್ಲಿ; ರುಧಿರಪ್ರದಿಗ್ಧಾನ್=ರಕ್ತಲಿಪ್ತವಾದ; ಅರ್ಥಕಾಮಾನ್=ಅರ್ಥಕಾಮಾದಿಗಳು (ಧನಸಂಪದಗಳು, ಕಾಮ್ಯವಸ್ತುಗಳು); ಭೋಗಾನ್=ಭೋಗಗಳನ್ನು; ಭುಂಜೀಯ=ಭುಜಿಸಿದಂಥವನಾಗುತ್ತೇನೆ.

**ತಾ:** ಮಹಾನುಭಾವರಾದ ಗುರುಗಳನ್ನು ಕೊಲ್ಲುವುದಕ್ಕಿಂತ ಈ ಲೋಕದಲ್ಲಿ ಭಿಕ್ಷಾನ್ನವನ್ನು ಭುಜಿಸುವುದು ಉತ್ತಮ. ಅವರನ್ನು ವಧಿಸಿದರೆ ಅವರ ರಕ್ತದಿಂದ ಒದ್ದೆಯಾದ ಧನಸಂಪದಗಳನ್ನೇ (ಕಾಮ್ಯಭೋಗಗಳನ್ನೇ) ಅನುಭವಿಸಬೇಕಾಗುತ್ತದೆ.

**ವ್ಯಾಖ್ಯೆ:** 'ಗುರೂನ್ ಮಹಾನುಭಾವಾನ್'- ದ್ರೋಣಾಚಾರ್ಯ, ಕೃಪಾಚಾರ್ಯರಂತಹ ಗುರುಗಳು, ಭೀಷ್ಮ, ಬಾಹ್ಲಿಕ, ಸೋಮದತ್ತ, ಭೂರಿಶ್ರವ, ಶಲ್ಯಾದಿ ಮಹನೀಯರು ಎಂದರ್ಥ.

**೬. ನ ಚೈತದ್ವಿದ್ಮಃ ಕತರನ್ನೋ ಗರೀಯೋ ಯದ್ವಾ ಜಯೇಮ ಯದಿ ವಾ ನೋ ಜಯೇಯುಃ**
**ಯಾನೇವ ಹತ್ವಾ ನ ಜಿಜೀವಿಷಾಮಸ್ತೇಽವಸ್ಥಿತಾಃ ಪ್ರಮುಖೇ ಧಾರ್ತರಾಷ್ಟ್ರಾಃ**

**ಅರ್ಥ:** ನಃ=ನಮಗೆ; ಕತರತ್=ಯಾವುದು; ಗರೀಯಃ=ಶ್ರೇಷ್ಠವೋ; ಏತತ್ ಚ=ಇದನ್ನೂ ಸಹ; ನವಿದ್ಮಃ=ತಿಳಿಯದಂಥವರಾಗಿದ್ದೇವೆ; ಜಯೇಮ ಯದ್ವಾ=(ನಾವು) ಜಯಿಸುವುವೋ; (ಇಲ್ಲ) ನಃ=ನಮ್ಮನ್ನು; ಜಯೇಯುಃ ಯದಿವಾ=(ಅವರೇ) ಜಯಿಸುವರೋ?ಯಾನ್=ಯಾರನ್ನು; ಹತ್ವಾ=ವಧಿಸಿ; ನ ಜಿಜೀವಿಷಾಮಃ=ಜೀವಿಸಲಿಚ್ಛಿಸುವುದಿಲ್ಲವೋ; ತೇ ಧಾರ್ತರಾಷ್ಟ್ರಾಃ ಏವ= ಅಂಥಹ ಧೃತರಾಷ್ಟ್ರನ ಸಂಬಂಧಿಗಳಾದ ಭೀಷ್ಮಾದಿಗಳು; ಪ್ರಮುಖೇ=ಮುಂದೆ; ಅವಸ್ಥಿತಾಃ=ನಿಂತಿದ್ದಾರೆ.

**ತಾ:** ಈ ಯುದ್ಧವನ್ನು ನಾವು ಗೆಲ್ಲುವೆವೋ ಅಥವ ಅವರು ಗೆಲ್ಲುವರೋ ಹೇಳಲಾರೆವು. ಈ ಎರಡರಲ್ಲಿ ನಮಗೆ ಯಾವುದು ಉತ್ತಮವೋ ತಿಳಿಯದು. ಯಾರನ್ನು ಕೊಂದು ನಾವು ಜೀವಿಸಲಿಚ್ಛಿಸುವುದಿಲ್ಲವೋ ಅಂಥಹ ಭೀಷ್ಮಾದಿಗಳು ಯುದ್ಧದಲ್ಲಿ ನಮ್ಮೆದುರು ನಿಂತಿದ್ದಾರೆ.

**ಅ॥** ತನ್ನ ಆದ್ಯ ಕರ್ತವ್ಯವೇನು ಎಂದು ನಿಷ್ಕರ್ಷೆಯಾಗಿ ತಿಳಿಯದ ಅರ್ಜುನನು ಶ್ರೀಕೃಷ್ಣಮೂರ್ತಿಗೆ ಶರಣಾಗತನಾಗುತ್ತಿದ್ದಾನೆ.

**೭. ಕಾರ್ಪಣ್ಯದೋಷೋಪಹತಸ್ವಭಾವಃ ಪೃಚ್ಛಾಮಿ ತ್ವಾಂ ಧರ್ಮಸಮ್ಮೂಢಚೇತಾಃ**
**ಯಚ್ಛ್ರೇಯಃ ಸ್ಯಾನ್ನಿಶ್ಚಿತಂ ಬ್ರೂಹಿ ತನ್ಮೇ ಶಿಷ್ಯಸ್ತೇಽಹಂ ಶಾಧಿ ಮಾಂ ತ್ವಾಂ ಪ್ರಪನ್ನಮ್**

**ಅರ್ಥ:** ಕಾರ್ಪಣ್ಯದೋಷೋಪಹತಸ್ವಭಾವಃ=ಕೃಪಣತ್ವವೆಂಬ ದೋಷದಿಂದ ಕುಂದಿದ ಸ್ವಭಾವವುಳ್ಳ (ನಾನು); ಧರ್ಮಸಮ್ಮೂಢಚೇತಾಃ=ಧರ್ಮವಿಷಯ ದಲ್ಲಿ ಸಂದೇಹದ ಮನಸ್ಸುಳ್ಳವನಾಗಿ; ತ್ವಾಮ್=ನಿನ್ನನ್ನು; ಪೃಚ್ಛಾಮಿ=ಬೇಡು ತ್ತಿದ್ದೇನೆ; ಯತ್=ಯಾವುದು; ನಿಶ್ಚಿತಂ=ನಿಶ್ಚಯವಾಗಿ; ಶ್ರೇಯಃ=ಶ್ರೇಯವು; ಸ್ಯಾತ್=ಆಗುವುದೊ; ತತ್=ಅದನ್ನು; ಮೇ=ನನಗೆ; ಬ್ರೂಹಿ=ಉಪದೇಶಿಸು ವಂಥವನಾಗು; ಅಹಂ=ನಾನು; ತೇ=ನಿನಗೆ; ಶಿಷ್ಯಃ=ಶಿಷ್ಯನು; ತ್ವಾಮ್=ನಿನ್ನನ್ನು; ಪ್ರಪನ್ನಂ=ಶರಣುಹೊಂದಿದ; ಮಾಂ=ನನ್ನನ್ನು; ಶಾಧಿ= ಆಜ್ಞಾಪಿಸು.

**ತಾ:** (ಓ ಕೃಷ್ಣಾ!) ಕೃಪಣತ್ವ (ಆತ್ಮಜ್ಞಾನಶೂನ್ಯತೆ) ಎನ್ನುವ ದೋಷದಿಂದ ಮಲಿನವಾದಂಥವನಾಗಿ ಧರ್ಮವಿಷಯದಲ್ಲಿ ಸಂದೇಹವುಂಟಾಗಿ ನಿನ್ನ ಮೊರೆ ಹೊಕ್ಕಿದ್ದೇನೆ. ಯಾವುದು ನಿಶ್ಚಯವಾಗಿ ಶ್ರೇಯಸ್ಕರವೋ ಅದನ್ನು ಹೇಳು- ನಾನು ನಿನ್ನ ಶಿಷ್ಯ. ಶರಣುಹೊಂದಿದ ನನ್ನನ್ನು (ಈ ಪ್ರಕಾರವಾಗಿ ನಡೆಯೆಂದು) ಆಜ್ಞಾಪಿಸು.

**ವ್ಯಾಖ್ಯೆ: 'ಕಾರ್ಪಣ್ಯದೋಷ'**- ಕೃಪಣವೆನ್ನುವ ಭಾವ ಕಾರ್ಪಣ್ಯತೆ. ಕೃಪಣನೆಂದರೆ ಲೋಭಿ ದರಿದ್ರನೆಂದು ಸಾಮಾನ್ಯವಾಗಿ ಅರ್ಥ. ಆತ್ಮಜ್ಞಾನ ಶೂನ್ಯ*ವೆಂದು ಇನ್ನೊಂದು ಅರ್ಥ. ಏಕೆಂದರೆ ಅರ್ಜುನನಿಗೆ ಲೋಭ ಯಾವ ಕೋಶದಲ್ಲಿಯೂ ಇರಲಿಲ್ಲ. ಆದ್ದರಿಂದ ಕಾರ್ಪಣ್ಯವೆಂದರೆ ಉಪನಿಷತ್ತುಗಳಲ್ಲಿ ಹೇಳಿದ ಪ್ರಕಾರ ಆತ್ಮಜ್ಞಾನರಾಹಿತ್ಯ ಅಥವ ಅಜ್ಞಾನವೆನ್ನುವ ಅರ್ಥ ಇಲ್ಲಿ ಅನ್ವಯಿಸುತ್ತದೆ.

ಪ್ರಥಮ ಅಧ್ಯಾಯದಲ್ಲಿ ಬಹಳಷ್ಟವರೆಗೆ ಅರ್ಜುನನ ಉಪನ್ಯಾಸವೇ ನಡೆಯಿತು. ಆ ಸಮಯದಲ್ಲಿ ಕೃಷ್ಣಮೂರ್ತಿ ಬಾಯೆತ್ತಲಿಲ್ಲ. ಅರ್ಜುನನು ಎಷ್ಟೋ ತಿಳಿದವನಂತೆ ಧರ್ಮವನ್ನೇ ಭಗವಂತನ ಮುಂದೆ ಓದಿದನು. 'ನಾಪೃಷ್ಟಃ ಕಸ್ಯ ಚಿದ್ಬ್ರೂಯಾತ್' ಎಂದ ಹಾಗೆ, ಪ್ರಶ್ನೆ ಇಲ್ಲದೆ ಉತ್ತರ ಹೇಗೆ ಕೊಡಬೇಕೆಂಬ ಮುಜುಗರದಿಂದ ಬಹುಶಃ ಶ್ರೀಕೃಷ್ಣನು ಮೌನವನ್ನಾಚರಿಸಿದ್ದಿರಬಹುದು. ಆದರೆ ಅರ್ಜುನನು ಮಹಾನುಭಾವನಾದ್ದರಿಂದ ತನ್ನ ಪರಿಸ್ಥಿತಿಯನ್ನು ತಾನೇ ಗ್ರಹಿಸಿಕೊಂಡು ಇನ್ನು ತನ್ನ ಉಪನ್ಯಾಸದಿಂದ ಲಾಭವಿಲ್ಲವೆಂದು ತಿಳಿದು ಭಗವಂತನಲ್ಲಿ ಶರಣು ಹೊಂದಿದನು. ಶರಣಾಗತಿಯೊಂದೇ ತನ್ನ ವಿಪತ್ಕರ ಪರಿಸ್ಥಿತಿಯಿಂದ ಪಾರುಮಾಡುವ ಸಾಧನೆಯೆಂದು ಅರಿತು, ಶಿಷ್ಯಭಾವವನ್ನು ತಕ್ಷಣ ಸ್ವೀಕರಿಸಿದನು. ಶಿಷ್ಯನು ಎಷ್ಟು ವಿನಯಶೀಲನಾಗಿರುವನೋ, ಅಷ್ಟು ಪ್ರೀತಿ ಗುರುವಿನಿಂದ ಪಡೆಯಬಲ್ಲನು. ಆದ್ದರಿಂದ ಯಾವಾಗ ಅರ್ಜುನನು ಪ್ರವೃತ್ತಿಯ ಮೂಲಕ ಶರಣಾಗತಿಯನ್ನು ಮತ್ತು ಆತ್ಮಾರ್ಪಣದ ಮೂಲಕ ತನ್ನ ಶಿಷ್ಯಧರ್ಮವನ್ನು ಪಾಲಿಸಿದನೋ, ಆ ತಕ್ಷಣವೇ ಶ್ರೀಕೃಷ್ಣಮೂರ್ತಿ ತನ್ನ ಗುರುಧರ್ಮವನ್ನು ಪಾಲಿಸಿದನು. ಶ್ರೇಷ್ಠವಾದ ಆಧ್ಯಾತ್ಮಿಕ ಬೋಧೆಯಿದ ಆತನನ್ನು ಧನ್ಯಗೊಳಿಸಿದನು. ಒಂದು ಪಕ್ಷ ಅರ್ಜುನನು ಇಂಥ ಶಿಷ್ಯ ಸ್ಥಾನವನ್ನು ಗ್ರಹಿಸದೆ ಇದ್ದಿದ್ದರೆ ಬಹುಶಃ ಶ್ರೀಕೃಷ್ಣಪರಮಾತ್ಮನು ಅಂಥಹ ಗುರುಸ್ಥಾನವನ್ನು ಅಲಂಕರಿಸುತ್ತಿರಲಿಲ್ಲವೇನೋ! ನಮಗೆ ಗೀತೆ ಲಭ್ಯವೇ ಆಗುತ್ತಿರಲಿಲ್ಲ. ಆದ್ದರಿಂದ ಅರ್ಜುನನು ತನ್ನ ಆತ್ಮಾರ್ಪಣೆಯಿಂದ ಲೋಕಕ್ಕೆ ಮಹೋಪಕಾರ ಮಾಡಿದ್ದಾನೆ. ಮುಮುಕ್ಷುಗಳೆಲ್ಲರು ಗೀತೆಯಲ್ಲಿ ಹೇಳಲ್ಪಟ್ಟ ಈ ಗುರುಶಿಷ್ಯ ನ್ಯಾಯವನ್ನು ಸರಿಯಾಗಿ ಅರ್ಥಮಾಡಿಕೊಂಡು ಮೋಕ್ಷಪಥದಲ್ಲಿ ಮುಂದುವರಿಯಬೇಕು.

**"ಉಪಹತ ಸ್ವಭಾವಃ"**- ಪ್ರತಿಯೊಬ್ಬರ 'ಸ್ವಭಾವವು' ವಾಸ್ತವವಾಗಿ ನಿರ್ಮಲವಾದುದು. ಆದರೆ ಪ್ರಕೃತಿ ದೋಷದಿಂದ ಅದು ಮಲಿನಗೊಳ್ಳುತ್ತದೆ. ಕೆಲವರಿಗೆ ಕಾಮದೋಷದಿಂದ ಮಲಿನವುಂಟಾದರೆ ಮತ್ತೆ ಕೆಲವರು ಕ್ರೋಧದೋಷಕ್ಕೆ ಬಲಿಯಾಗುತ್ತಾರೆ. ಆದರೆ ಅರ್ಜುನನು ಕೃಪಣತ್ವ (ಅಜ್ಞಾನ)ವೆನ್ನುವ ದೋಷಕ್ಕೆ ಬಲಿಯಾಗಿ ಅವನ ಚಿತ್ತವನ್ನು ಧರ್ಮಾಧರ್ಮಪರಿಜ್ಞಾನದಿಂದ ವಂಚಿತಗೊಳಿಸಿಕೊಂಡನು. ತಮ್ಮ ನಿರ್ಮಲ ಸ್ವಭಾವ, ದೋಷದಿಂದ ಕುಂಠಿತವಾಗಿದ್ದರೂ ಅವಿವೇಕಿಗಳು ಆ ದೋಷ ನಿವಾರಣೆಗೆ ಪ್ರಯತ್ನವನ್ನೇ ಮಾಡುವುದಿಲ್ಲ. ಅರ್ಜುನನಾದರೋ, ಹಾಗಲ್ಲದೆ ತನ್ನ ಚಿತ್ತದಲ್ಲಿಯ ದೋಷವನ್ನು ತಕ್ಷಣ ಗ್ರಹಿಸಿ ಅದನ್ನು ಸರಿಪಡಿಸಿಕೊಳ್ಳಲು ಮಾರ್ಗವನ್ನು ಹುಡುಕುತ್ತಿದ್ದಾನೆ. ಆ ಮಾರ್ಗವೇನು? ಸದ್ಗುರುವನ್ನು ಆಶ್ರಯಿಸುವುದೇ. ಯಾರು ಆ ಗುರು? ಶ್ರೀಕೃಷ್ಣಪರಮಾತ್ಮನೇ. ಅರ್ಜುನನು ತಕ್ಷಣ ಭಗವಂತನಿಗೆ ಶರಣಾಗತನಾಗಿ 'ನಾನು ನಿನ್ನ ಶಿಷ್ಯ, ನನ್ನನ್ನು ಆಜ್ಞಾಪಿಸು!' ಎಂದು ಬೇಡಿಕೊಂಡನು. ಶ್ರೀಕೃಷ್ಣನ ಪಾದವಶನಾಗಿ, ಅಹಂಕಾರವನ್ನು ಹೊಡೆದೋಡಿಸಿದನು. ಶಿರಬಾಗಿಸಿದನು. ಪಾರಮಾರ್ಥ ಕ್ಷೇತ್ರದಲ್ಲಿ ಪುರೋಭಿವೃದ್ಧಿ ಹೊಂದಲು ಇರುವುದು ಇದೊಂದೇ ಮಾರ್ಗ. 'ಅಹಂ' ಭಾವವನ್ನು ದೂರಮಾಡಿ ಸದ್ಗುರುವನ್ನು ಆಶ್ರಯಿಸುವುದೇ ಸಂಸಾರಸಾಗರವನ್ನು ದಾಟಲು ಇರುವ ಏಕೈಕ ಉಪಾಯ. ಸದ್ಗುರುವೆನ್ನುವ ನಾವಿಕನನ್ನು ಆಶ್ರಯಿಸಿದಲ್ಲಿ ಆತನು ಭವಸಾಗರವನ್ನು ಅನಾಯಾಸವಾಗಿ ದಾಟಿಸಬಲ್ಲನು. ಆದ್ದರಿಂದ ಮುಮುಕ್ಷುಗಳೆಲ್ಲರು ಅರ್ಜುನನ ಹಾಗೆ ಸದ್ಗುರುವಿನ ಮೊರೆ ಹೊಕ್ಕು ವಿನಯದಿಂದ ಆತ್ಮಜ್ಞಾನ ಪ್ರಾಪ್ತಿಮಾಡಿಕೊಂಡು ಜನ್ಮ ಸಾರ್ಥಕಗೊಳಿಸಿಕೊಳ್ಳಬೇಕು.

**ಅ||** ಶರಣಾಗತಿಯನ್ನು ಬಿಟ್ಟರೆ ತನ್ನ ಮನೋವ್ಯಾಕುಲತೆಯನ್ನು ದೂರಮಾಡುವ ಬೇರೆ ಯಾವ ಉಪಾಯವು ತನಗೆ ಗೋಚರವಾಗುತ್ತಿಲ್ಲವೆಂದು ಅರ್ಜುನನು ಹೇಳುತ್ತಿದ್ದಾನೆ.

**೮. ನ ಹಿ ಪ್ರಪಶ್ಯಾಮಿ ಮಮಾಪನುದ್ಯಾದ್ಯಚ್ಛೋಕ ಮುಚ್ಛೋಷಣ ಮಿಂದ್ರಿಯಾಣಾಮ್**
**ಅವಾಪ್ಯ ಭೂಮಾವಸಪತ್ನ ಮೃದ್ಧಂ ರಾಜ್ಯಂ ಸುರಾಣಾಮಪಿ ಚಾಧಿಪತ್ಯಮ್**

**ಅರ್ಥ:** ಭೂಮೌ-ಭೂಮಂಡಲದಲ್ಲಿ; ಅಸಪತ್ನಂ=ಶತ್ರುಗಳು ಇಲ್ಲದಂಥ; ವೃದ್ಧಂ=ಸಮೃದ್ಧವಾದ; ರಾಜ್ಯಂ=ರಾಜ್ಯವನ್ನು; (ಮತ್ತೆ) ಸುರಾಣಾಂ= ದೇವತೆಗಳ; ಆಧಿಪತ್ಯಂಚ=ಆಧಿಪತ್ಯವನ್ನು; ಅವಾಪ್ಯ ಅಪಿ=ಹೊಂದಿಯೂ ಕೂಡ; ಇಂದ್ರಿಯಾಣಾಂ=ಇಂದ್ರಿಯಗಳಿಗೆ; ಉಚ್ಛೋಷಣಂ=ಹೆಚ್ಚು ತಾಪವನ್ನುಂಟು ಮಾಡುವಂತಹ; ಮಮ=ನನ್ನ; ಶೋಕಂ=ದುಃಖವನ್ನು; ಯತ್=ಯಾವುದು; ಅಪನುದ್ಯಾತ್=ಹೋಗಲಾಡಿಸುವುದೋ; (ತತ್=ಅದನ್ನು)ನ ಪ್ರಪಶ್ಯಾಮಿಹಿ= ಕಾಣಲಾರದೆ ಹೋಗುತ್ತಿದ್ದೇನೆ!

**ತಾ:** ಈ ಭೂಮಂಡಲದಲ್ಲಿ ಶತ್ರುಶೂನ್ಯವಾದ ಸಮೃದ್ಧವಾದ ರಾಜ್ಯವನ್ನು ಹೊಂದಿದರೂ (ಸ್ವರ್ಗದಲ್ಲಿ) ದೇವತೆಗಳ ಮೇಲೆ ಆಧಿಪತ್ಯವನ್ನು ಪಡೆದರೂ ಸಹ ನನ್ನ ಇಂದ್ರಿಯಗಳನ್ನು ಶೋಷಿಸುವ ಈ ದುಃಖವನ್ನು ಯಾವುದು ಹೋಗಲಾಡಿಸಬಲ್ಲದೋ ಅಂತಹ ಉಪಾಯವನ್ನು ಕಾಣದಂಥವನಾಗಿದ್ದೇನೆ.

**ವ್ಯಾಖ್ಯೆ:** ಬಾಹ್ಯಪ್ರಪಂಚದಲ್ಲಿ ಎಷ್ಟು ಸಂಪದಗಳನ್ನು, ಅಧಿಕಾರಗಳನ್ನು, ಪದವಿಗಳನ್ನು ಹೊಂದಿದ್ದಾಗ್ಯೂ ಅವು ಮಾನವನ ಅಶಾಂತಿಯನ್ನು ಹೋಗಲಾಡಿಸಲು ಸಾಧ್ಯವಿಲ್ಲ. ಮನೋವ್ಯಾಧಿಯನ್ನು ಅವು ದೂರಗೊಳಿಸಲಾರವು. ಆದ್ದರಿಂದಲೇ ಭೂಲೋಕ, ಸ್ವರ್ಗಲೋಕಾಧಿಪತ್ಯಗಳೆರಡೂ ಸೇರಿ ತನ್ನ ಮನೋದುಃಖವನ್ನು ಹೋಗಲಾಡಿಸಲು ಅಸಾಧ್ಯವಾಗಿವೆ ಎಂದು ಅರ್ಜುನನು ಹೇಳುತ್ತಿದ್ದಾನೆ. ಮನೋವ್ಯಾಧಿಗೆ ಆತ್ಮಜ್ಞಾನವೊಂದೇ ದಿವ್ಯೌಷಧ. ಅದನ್ನೇ ಭಗವಂತನು ಅರ್ಜುನನಿಗೆ ಪ್ರಸಾದಿಸಲಿದ್ದಾನೆ. ಆದ್ದರಿಂದ ಪ್ರಪಂಚದಲ್ಲಿ ಸಂಪಾದಿಸಬೇಕಾದದ್ದು ಬಾಹ್ಯಪ್ರಪಂಚದ ಸೌಖ್ಯಗಳು, ಪದವಿಗಳು, ಭೋಗಗಳು ಅಲ್ಲ, ಆತ್ಮಜ್ಞಾನವೊಂದೇ ಎನ್ನುವುದು ಸ್ಪಷ್ಟವಾಗುತ್ತಿದೆ.

**ಅ||** ಈ ಪ್ರಕಾರವಾಗಿ ಹೇಳಿ ನಂತರ ಅರ್ಜುನನು ಏನು ಮಾಡಿದನೆನ್ನುವುದು ಸಂಜಯನು ಹೇಳುತ್ತಿದ್ದಾನೆ.

---

* ಯೋ ವಾ ಏತದಕ್ಷರಂ ಗಾರ್ಗ್ಯವಿದಿತ್ವಾಸ್ಮಾಲ್ಲೋಕಾತ್ಪ್ರೈತಿ ನ ಕೃಪಣಃ (ಬೃಹ.ಉಪ. ೩-೮-೧೦)

ಸಂಜಯ ಉವಾಚ:

**೯. ಏವಮುಕ್ತ್ವಾ ಹೃಷೀಕೇಶಂ ಗುಡಾಕೇಶಃ ಪರಂತಪಃ**
**ನ ಯೋತ್ಸ್ಯ ಇತಿ ಗೋವಿಂದ ಮುಕ್ತ್ವಾ ತೂಷ್ಣೀಂ ಬಭೂವ ಹ**

ಸಂಜಯ ಉವಾಚ=ಸಂಜಯನು ಹೇಳಿದನು.

**ಅರ್ಥ:** ಪರಂತಪಃ=ಶತ್ರುಗಳನ್ನು ತಪಿಸಬಲ್ಲ; ಗುಡಾಕೇಶಃ=ಅರ್ಜುನನು; ಹೃಷೀಕೇಶಂ=ಶ್ರೀಕೃಷ್ಣನೊಡನೆ; ಏವಂ=ಈ ಪ್ರಕಾರವಾಗಿ; ಉಕ್ತ್ವಾ=ಹೇಳಿ, ನಯೋತ್ಸ್ಯೇ=ಯುದ್ಧ ಮಾಡುವುದಿಲ್ಲ; ಇತಿ=ಎಂದು; ಗೋವಿಂದಂ=(ಆ) ಕೃಷ್ಣಪರಮಾತ್ಮನಿಗೆ, ಉಕ್ತ್ವಾ=ಹೇಳಿ; ತೂಷ್ಣೀಂಬಭೂವಹ=ಸುಮ್ಮನಾದನು (ತಟಸ್ಥನಾದನು).

**ತಾ:** ಈ ವಿಧವಾಗಿ ಅರ್ಜುನನು ಶ್ರೀಕೃಷ್ಣನೊಡನೆ ಸಂವಾದಿಸಿ, 'ನಾನು ಯುದ್ಧ ಮಾಡುವುದಿಲ್ಲ' ಎಂದು ಹೇಳಿ ತಟಸ್ಥನಾದನು.

**ಅ||** ಆ ಸಂದರ್ಭದಲ್ಲಿ ಶ್ರೀಕೃಷ್ಣನು ಏನು ಮಾಡಿದನೆನ್ನುವುದನ್ನು ಸಂಜಯನು ಹೇಳುತ್ತಿದ್ದಾನೆ.

**೧೦. ತಮುವಾಚ ಹೃಷೀಕೇಶಃ ಪ್ರಹಸನ್ನಿವ ಭಾರತ**
**ಸೇನಯೋರುಭಯೋರ್ಮಧ್ಯೇ ವಿಷೀದಂತಮಿದಂ ವಚಃ**

**ಅರ್ಥ:** ಭಾರತ=ಓ ಧೃತರಾಷ್ಟ್ರಮಹಾರಾಜಾ! ಉಭಯೋಃ ಸೇನಯೋಃ= ಎರಡು ಸೇನೆಗಳ ಮಧ್ಯೆ (ನಡುವೆ) ವಿಷೀದಂತಂ=ದುಃಖಿಸುತ್ತಿರುವ; ತಂ=ಆ (ಅರ್ಜುನನ್ನುದ್ದೇಶಿಸಿ); ಹೃಷೀಕೇಶಂ=ಶ್ರೀಕೃಷ್ಣನು; ಪ್ರಹಸನ್ನಿವ=ಹುಸಿ ನಗುವಿನಿಂದ; ಇದಂ ವಚಃ=ಈ (ಮುಂದೆ ಹೇಳಲ್ಪಟ್ಟ) ವಾಕ್ಯವನ್ನು; ಉವಾಚ=ಹೇಳಿದನು.

**ತಾ||** ಓ ಧೃತರಾಷ್ಟ್ರ ಮಹಾರಾಜಾ! ಎರಡು ಸೇನೆಗಳ ಮಧ್ಯೆ ನಿಂತು ದುಃಖಿಸುತ್ತಿರುವ ಆ ಅರ್ಜುನನನ್ನು ನೋಡಿ ಶ್ರೀಕೃಷ್ಣನು ಹುಸಿನಗುವಿ ನೊಂದಿಗೆ ಈ (ಕೆಳಗಿನ) ವಾಕ್ಯಗಳನ್ನು ಉಚ್ಚರಿಸಿದನು.

**ವ್ಯಾಖ್ಯೆ:** "ಪ್ರಹಸನ್ನಿವ"- ಹಸನ್=ನಗುತ್ತಾ; ಪ್ರಹಸನ್=ಚೆನ್ನಾಗಿ ನಗುತ್ತಾ; ಅಜ್ಞಾನಸ್ಥಿತಿಯಲ್ಲಿರುವವರನ್ನು ನೋಡಿ, ಅವರ ಚೇಷ್ಟೆಗಳನ್ನು ಪರಿವೀಕ್ಷಿಸಿದಾಗ ಜ್ಞಾನಿಗಳಿಗೆ ಸಹಜವಾಗಿ ನಗು ಬರುತ್ತದೆ. ಅರ್ಜುನನಿಗೆ ಧರ್ಮಸೂಕ್ಷ್ಮದ ಅರಿವಿಲ್ಲವಾದ್ದರಿಂದ ಪರಿಸ್ಥಿತಿ ತಲೆಕೆಳಗಾಗಿದೆಯೆಂಬ ಭ್ರಮೆಯಿಂದ ಶೋಕತಪ್ತನಾದನು. ಧರ್ಮರಹಸ್ಯದ ಕರ್ತನಾದ ಶ್ರೀಕೃಷ್ಣನಿಗೆ ಅದು ಹುಡುಗಾಟದಂತೆ ಕಂಡಿತು. ಮಾಯೆಯನ್ನು ದಾಟಲಾಗದವರು ಮಾಯಾಜನ್ಯಗಳಾದ ದೇಹೇಂದ್ರಿಯ ಮನಗಳಿಂದ, ನಂತರ ಪ್ರಾಪಂಚಿಕ ಪದಾರ್ಥಗಳೊಡನೆ ತಾದಾತ್ಮ್ಯ ಹೊಂದಿ, ಆ ಗುಣಗಳನ್ನು ತಮ್ಮಮೇಲೆ ಆರೋಪಿಸಿಕೊಂಡು ದುಃಖಿಸುತ್ತಾರೆ. ವಿವೇಕವಂತರಾದ ಜ್ಞಾನಿಗಳು ಆ ಮಾಯೆಯನ್ನು ಜಯಿಸಿ ಅದಕ್ಕೆ ಅಧೀನವಾಗಿರುವ ಇಂದ್ರಿಯಗಳಿಗೆ ಒಳಗಾಗದೆ, ಅವುಗಳ ಗುಣಗಳನ್ನು ತಮ್ಮಮೇಲೆ ಆರೋಪಿಸಿಕೊಳ್ಳದೆ ಸಾಕ್ಷಿಯಾಗಿ ನೋಡುತ್ತಿರುತ್ತಾರೆ. ಅಂತಹವರಿಗೆ ಮಾಯೆಯ ಚೇಷ್ಟೆಗಳು ನಗು ಬರಿಸುತ್ತವೆ. ರಜ್ಜು (ಹಗ್ಗ) ಎಂದು ತಿಳಿದವನು ಅದನ್ನು ಹಾವೆಂದು ಭ್ರಮಿಸಿ ಅಳುವವನನ್ನು ಕುರಿತು ನಗುವುದಿಲ್ಲವೇ? ಪರಿಹಾಸ್ಯಮಾಡುವುದಿಲ್ಲವೇ? ಚಿಕ್ಕ ಕೂಸಿನ ವಿಕೃತ ಚೇಷ್ಟೆಗಳನ್ನು ತಂದೆ ನೋಡಿ ನಕ್ಕಂತೆ, ಅಜ್ಞಾನಿಗಳ ಚರ್ಯೆಗಳು ಜ್ಞಾನಿಗಳಿಗೆ ಹಾಸ್ಯಾಸ್ಪದವಾಗಿರುವುವು. ಅಜ್ಞಾನಿಗೆ 'ಗೋಷ್ಪದಂ ಸಾಗರಾಯತೇ' ಅಂದಹಾಗೆ, ಚಿಕ್ಕ ಮಡುವಿನಂತಹ ಸಂಸಾರವು ಮಹಾ ಸಾಗರವಾಗಿ ಕಾಣುವುದು; ಆದ್ದರಿಂದಲೇ ಇಲ್ಲಿ ಮೋಹಗ್ರಸ್ತನಾದ ಅರ್ಜುನನ ಈ ಚರ್ಯೆಗಳು ಪರಮ ಜ್ಞಾನಿಯಾದ ಶ್ರೀಕೃಷ್ಣನಿಗೆ ಹಾಸ್ಯಜನಕವಾಗಿ ಕಂಡುಬಂದುವು. ಒಂದು ಮುಖದಲ್ಲಿ ವಿಷಾದಛಾಯೆ (ವಿಷೀದಂತಂ), ಮತ್ತೆ ಇನ್ನೊಂದು ಮುಖದ ಮೇಲೆ ಆನಂದಛಾಯೆ (ಪ್ರಹಸನ್), ಇದೇ ಅಜ್ಞಾನಿಗೆ ಹಾಗೂ ಜ್ಞಾನಿಗೆ ಇರುವ ಭೇದ.

**ಅ:** ಶ್ರೀಕೃಷ್ಣಪರಮಾತ್ಮನು ಅರ್ಜುನನಿಗೆ ಮಾಡಿದ ದಿವ್ಯ ಪ್ರಬೋಧೆಯನ್ನು ಸಂಜಯನು ವಿವರಿಸುತ್ತಿದ್ದಾನೆ- ಪ್ರಪ್ರಥಮವಾಗಿ ಯಾರನ್ನು ಕುರಿತೂ ಶೋಕಿಸಬಾರದೆಂದು ಭಗವಂತನು ನುಡಿಯುತ್ತಿದ್ದಾನೆ.

ಶ್ರೀಭಗವಾನುವಾಚ:

**೧೧. ಅಶೋಚ್ಯಾನನ್ವ ಶೋಚಸ್ತ್ವಂ ಪ್ರಜ್ಞಾವಾದಾಂಶ್ಚ ಭಾಷಸೇ**
**ಗತಾಸೂನಗತಾಸೂಂಶ್ಚ ನಾನುಶೋಚಂತಿ ಪಂಡಿತಾಃ**

ಶ್ರೀಭಗವಾನುವಾಚ- ಶ್ರೀಭಗವಂತನು (ಶ್ರೀಕೃಷ್ಣಪರಮಾತ್ಮ) ಹೇಳಿದನು.

**ಅರ್ಥ:** ತ್ವಂ=ನೀನು, ಅಶೋಚ್ಯಾನ್=ಶೋಕಿಸಬಾರದವರ ಬಗ್ಗೆ, ಅನ್ವಶೋಚಃ=ಶೋಕಿಸುತ್ತಿದ್ದೀಯೆ; ಪ್ರಜ್ಞಾವಾದಾಂಶ್ಚ=ತಿಳುವಳಿಕೆಯಿಂದ ಕೂಡಿದ ಮಾತುಗಳನ್ನು ಸಹ; ಭಾಷಸೇ=ಹೇಳುತ್ತಿದ್ದೀಯೆ; ಪಂಡಿತಾಃ= ಆತ್ಮಜ್ಞಾನಿಗಳು; ಗತಾಸೂನ್=ಮರಣಿಸಿದವರ ಬಗ್ಗೆ ಕುರಿತು; ಅಗತಾಸೂನ್= ಬದುಕಿದವರ ಬಗ್ಗೆ ಕುರಿತು; ನ ಅನುಶೋಚಂತಿ= ದುಃಖಿಸುವುದಿಲ್ಲ.

**ತಾ|** ಶ್ರೀಕೃಷ್ಣಭಗವಂತನು ಹೇಳಿದನು- (ಓ ಅರ್ಜುನಾ!) ನೀನು ಶೋಕಿಸಬಾರದವರನ್ನು ಕುರಿತು ಶೋಕಿಸುತ್ತಿದ್ದೀಯೆ. ಅಷ್ಟೇ ಅಲ್ಲದೆ ತಿಳುವಳಿಕೆಯಿಂದ ಕೂಡಿದ ವಾಕ್ಯಗಳನ್ನು ಕೂಡ ಉಪಯೋಗಿಸುತ್ತಿದ್ದೀಯೆ. ಜ್ಞಾನಿಗಳು ಮರಣಿಸಿದವರ ಬಗ್ಗೆಯಾಗಲಿ, ಜೀವಿಸುತ್ತಿರುವವರನ್ನು ಕುರಿತಾಗಲಿ ಯಾವಾಗಲೂ ದುಃಖಿಸುವುದಿಲ್ಲ.

**ವ್ಯಾಖ್ಯೆ:** ಗೀತಾಬೋಧೆ ಈ ಶ್ಲೋಕದಿಂದ ಪ್ರಾರಂಭವಾಗುತ್ತಿದೆ. ಆದ್ದರಿಂದಲೇ ಗೀತಾಶಾಸ್ತ್ರಕ್ಕೆ ಈ ಶ್ಲೋಕ ಬೀಜಪ್ರದವಾಗಿದೆ.* ವೃಕ್ಷವೆಲ್ಲವೂ ಬೀಜದಲ್ಲಿ ಅಡಕವಾಗಿರುವಂತೆ, ಗೀತಾತತ್ವವೆಲ್ಲವು ಈ ಶ್ಲೋಕದಲ್ಲಿ ಅಡಕವಾಗಿದೆ.

ಗೀತಾಪ್ರಬೋಧೆಯು 'ಅಶೋಚ್ಯಾನ್'- ಎನ್ನುವ ಶಬ್ದದಿಂದ ಪ್ರಾರಂಭವಾಗಿ ಕೊನೆಯ ಅಧ್ಯಾಯದ 'ಮಾ ಶುಚಃ'- ಎನ್ನುವ ಪದದೊಡನೆ ಅಂತ್ಯಗೊಂಡಿದೆ. ಆದ್ದರಿಂದ ಶೋಕರಾಹಿತ್ಯವೇ ಗೀತೆಯ ಪರಮ ಲಕ್ಷ್ಯವೆಂದು ಅರ್ಥವಾಗುತ್ತದೆ.

"ಅಶೋಚ್ಯಾನ್,- ಪ್ರಪಂಚದಲ್ಲಿ ಪ್ರತಿ ಪದಾರ್ಥವು ಅಸ್ತಿ, ಭಾತಿ, ಪ್ರಿಯ, ನಾಮ, ರೂಪಗಳೆನ್ನುವ ಐದರಿಂದ ಏರ್ಪಟ್ಟಿರುತ್ತದೆ. ಅದರಲ್ಲಿ ಮೊದಲ ಮೂರು (ಸತ್, ಚಿತ್, ಆನಂದ) ಸತ್ಯಗಳು. ಉಳಿದ ಎರಡು ನಾಮರೂಪಗಳೆನ್ನುವ ಕಲ್ಪಿತಗಳು. ಮೊದಲ ಮೂರು ಮಾತ್ರವೇ ಜೀವಿಯ ವಾಸ್ತವ ಸ್ವರೂಪಗಳು. ನಾಮರೂಪಗಳಲ್ಲ. ಸತ್ಯವಾದ ತನ್ನ ಸ್ವರೂಪ ಯಾವ ಕಾಲದಲ್ಲಿಯೂ ನಶಿಸುವುದಿಲ್ಲ. ಆದ್ದರಿಂದ ಅದಕ್ಕೋಸ್ಕರ ಶೋಕಿಸುವ

---

* "ಅಸ್ಯ ಶ್ರೀ ಭಗವದ್ಗೀತಾಶಾಸ್ತ್ರ ಮಹಾಮಂತ್ರಸ್ಯ............... ಅಶೋಚ್ಯಾನನ್ವ ಶೋಚಸ್ತ್ವಂ ಇತಿ ಬೀಜಂ................

ಅಗತ್ಯವಿಲ್ಲ. ಅಸತ್ಯವಾದ ನಾಮ, ರೂಪಗಳು ಬದಲಾದರೂ, ನಶಿಸಿದರೂ, ಅವು ತನ್ನ ಸ್ವರೂಪಗಳಲ್ಲವಾದ್ದರಿಂದ ಅವುಗಳಿಗೋಸ್ಕರ ಶೋಕಿಸುವುದು ನಿಷ್ಪ್ರಯೋಜನ. ಆದ್ದರಿಂದ ಇನ್ನು ಯಾವುದಕ್ಕೆ ಶೋಕಿಸಬೇಕು ? ಎಂದು ಶ್ರೀ ಭಗವಂತನು ಪ್ರಶ್ನಿಸುತ್ತಿದ್ದಾನೆ.

**"ಪ್ರಜ್ಞಾವಾದಾಂಶ್ಚ"**- ತಿಳುವಳಿಕೆಯ ಮಾತುಗಳು- ಬುದ್ಧಿ ಸ್ವಲ್ಪದೂರ ಮಾತ್ರ ಹೋಗಬಲ್ಲದು. ನಂತರ ಸ್ಥಬ್ದವಾಗುವುದು. ಬುದ್ಧಿಗೆ ಅತೀತವಾದ ವಸ್ತು ಆತ್ಮ (ಏವಂ ಬುದ್ಧೇಃ ಪರಂಬುದ್ಧ್ವಾ...). ಬುದ್ಧಿ (Conscious state) ಪ್ರಕೃತಿಯಲ್ಲಿ ಅಂತರ್ಗತವಾಗಿರುವುದರಿಂದ ಬುದ್ಧಿವಾದದಲ್ಲಿ ಕೆಲವು ಲೋಪಗಳಿರಲು ಸಾಧ್ಯ. ಬುದ್ಧಿಯನ್ನು ದಾಟಿ ಆತ್ಮವನ್ನು (Super Conscious state) ಮುಟ್ಟಿದವನ ಸ್ಥಿತಿ ಬೇರೆ. ಆತನು ಪರಮಾರ್ಥ ತತ್ವವನ್ನು, ಯಥಾರ್ಥವನ್ನು ವಚಿಸಬಲ್ಲನು. ಅರ್ಜುನನು ಇನ್ನೂ ಅಂಥಹ ಸ್ಥಿತಿ ಮುಟ್ಟಲಿಲ್ಲವಾದ್ದರಿಂದ ಬುದ್ಧಿಯನ್ನು ತನ್ನ ಮಾನದಿಂದ ಅಳೆದು ತನಗೆ ತೋಚಿದ ವಿಧದಲ್ಲಿ ಮಾತನಾಡಿದನು. "ಇವೆಲ್ಲವೂ ವ್ಯರ್ಥ ಪ್ರಜ್ಞಾವಾದಗಳು!" ಎಂದು ಒಂದೇ ಮಾತಿನಲ್ಲಿ ಭಗವಂತನು ಎಲ್ಲವನ್ನೂ ಅಲ್ಲಗಳೆದನು.

*"ನಾನು ಶೋಚಂತಿ ಪಂಡಿತಾಃ"*- ಸಾಮಾನ್ಯವಾಗಿ ಪಂಡಿತರೆಂದರೆ ಕಾವ್ಯ, ನಾಟಕ, ಅಲಂಕಾರ ಹಾಗು ಕವಿತೆಗಳಲ್ಲಿ ಪ್ರಕ್ಷರತೆ ಹೊಂದಿರುವವರೆಂದರ್ಥ. ಆದರೆ ಯಥಾರ್ಥವಾಗಿ ಪಂಡಿತನೆಂದರೆ ಒಬ್ಬರನ್ನು ಕುರಿತಾಗಲಿ ಅಥವ ಯಾವುದಕ್ಕೂ ದುಃಖಿಸದವನೆಂದು ಭಗವಂತನು ಹೇಳಿದ್ದಾನೆ.[1] ಇಷ್ಟೇ ಅಲ್ಲ, ಜ್ಞಾನಾಗ್ನಿಯಿಂದ ಸಮಸ್ತ ಕರ್ಮಗಳನ್ನು ಭಸ್ಮೀಭೂತಗೊಳಿಸಿದವನೇ ಪಂಡಿತನೆಂದು[2] ನಾಲ್ಕನೆಯ ಅಧ್ಯಾಯದಲ್ಲಿ ಹಾಗು ಸರ್ವಜೀವಿಗಳನ್ನು ಸಮವಾಗಿ ನೋಡುವವನೇ ಪಂಡಿತನೆಂದು[3] ಐದನೆಯ ಅಧ್ಯಾಯದಲ್ಲಿ ಹೇಳಲ್ಪಟ್ಟಿದೆ. ಇಂಥಹ ಸುಗುಣಗಳನ್ನು ಹೊಂದಿದವನಿಗೆ ಮಾತ್ರ ಭಗವಂತನು ಪಂಡಿತನೆನ್ನುವ ಬಿರುದನ್ನು ದಯಪಾಲಿಸಿರುವನು. ಆದ್ದರಿಂದ ಜನರು ವಿದ್ಯಾಪಾಂಡಿತ್ಯಗಳೊಡನೆ ಆತ್ಮಜ್ಞಾನವನ್ನೂ ಸಹ ಹೊಂದಿ ಭಗವದುಕ್ತ ಪಾಂಡಿತ್ಯವನ್ನು ಸಂಪಾದಿಸಿಕೊಂಡು ಸರ್ವೇಶನಿಗೆ ಪ್ರೀತಿಪಾತ್ರರಾಗಬೇಕಾಗಿದೆ.

ಪ್ರಶ್ನೆ: ಪಂಡಿತರೆಂದರೆ ಯಾರು ?

ಉತ್ತರ: ಬದುಕಿರುವವರ ಬಗ್ಗೆಯಾಗಲಿ, ಮರಣಿಸಿದವರ ಬಗ್ಗೆಯಾಗಲಿ, ಇಲ್ಲವೇ ಮತ್ತೆ ಯಾವ ವಸ್ತುವಿನ ಬಗ್ಗೆಯೂ ದುಃಖಿಸದವನೇ ಪಂಡಿತನು.

**ಅ:** ಬಂಧುಗಳನ್ನು ಕುರಿತು ಏಕೆ ಶೋಕಿಸಬಾರದೆನ್ನುವುದಕ್ಕೆ ಕಾರಣಗಳನ್ನು ಕೊಡುತ್ತಾ ಆತ್ಮವೆನ್ನುವ ಶಾಶ್ವತ ತತ್ವವನ್ನು ಪ್ರತಿಪಾದಿಸುತ್ತಿದ್ದಾನೆ-

**೧೨. ನ ತ್ವೇವಾಹಂ ಜಾತು ನಾಸಂ ನ ತ್ವಂ ನೇಮೇ ಜನಾಧಿಪಾಃ**
**ನ ಚೈವ ನ ಭವಿಷ್ಯಾಮಸ್ಸರ್ವೇ ವಯಮತಃ ಪರಂ**

**ಅರ್ಥ:** ಅಹಂ=ನಾನು, ಜಾತು=ಯಾವ ಕಾಲದಲ್ಲಿ, ನಾಸಂ=ಇಲ್ಲವೆನ್ನುವುದು; ನತುಏವ=ಇಲ್ಲವೇ ಇಲ್ಲ; ತ್ವಂ= ನೀನು; ನ=ಇಲ್ಲವೆನ್ನುವುದೇ ಇಲ್ಲ, ಇಮೇ=ಈ; ಜನಾಧಿಪಃ=ರಾಜರು; (ನ ಆಸನ್ ಇತಿ) ನ=ಇಲ್ಲವೆನ್ನುವುದೇ ಇಲ್ಲ; ಅತಃ ಪರಂ= ಇನ್ನು ಮೇಲೆ; ವಯಂ ಸರ್ವೇ=ನಾವೆಲ್ಲರೂ; ನ ಭವಿಷ್ಯಾಮಃ (ಇತಿ) ಚ=ಇಲ್ಲವೆನ್ನುವುದು; ನ ಏವ=ಇಲ್ಲ

**ತಾ:** ಅರ್ಜುನಾ! ನಾನಾಗಲಿ, ನೀನಾಗಲಿ, (ಯುದ್ಧ ಭೂಮಿಯಲ್ಲಿರುವ) ರಾಜರಾಗಲಿ, ಹಿಂದೆ ಒಮ್ಮೆ ಇರಲಿಲ್ಲವೆಂಬುದೇ ಇಲ್ಲ. ಮುಂದೆಯೂ ಇರುವುದಿಲ್ಲವೆಂಬುದೇ ಇಲ್ಲ.

**ವ್ಯಾಖ್ಯೆ:** ಈ ಶ್ಲೋಕದ ಮೂಲಕ ಭಗವಂತನು 'ತತ್ವಮಸಿ' ಮಹಾವಾಕ್ಯೋಪದೇಶವನ್ನು ಮಾಡುತ್ತಿದ್ದಾನೆ. 'ನಾನು, ನೀನು, ಸಮಸ್ತಜೀವಿಗಳು' ಎಲ್ಲರೂ ಶಾಶ್ವತ ಆತ್ಮಸ್ವರೂಪಿಗಳೇ ಎಂದು ಘೋಷಿಸುತ್ತಿದ್ದಾನೆ. ಜೀವಿಯನ್ನು ಶಿವನನ್ನು ಒಂದೇ ವೇದಿಕೆಯ ಮೇಲೆ ಸಮಾನ ಸ್ಥಾನದಲ್ಲಿ ಇಲ್ಲಿ ಭಗವಂತನು ನಿಲ್ಲಿಸಿದ್ದಾನೆ. ಇದು ಪರಮರಹಸ್ಯವಾದ ಆಧ್ಯಾತ್ಮ ತತ್ವ. ಬ್ರಹ್ಮಜ್ಞಾನ ಸಾರಾಂಶ. ಅರ್ಜುನನು ತ್ರೈಲೋಕ್ಯವನ್ನು ಕೂಡ ತೃಣೀಕರಿಸುವಂಥಹ ತೀವ್ರವೈರಾಗ್ಯವನ್ನು ಹೊಂದಿರುವುದರಿಂದ ಬ್ರಹ್ಮಜ್ಞಾನಕ್ಕೆ ಅಧಿಕಾರಿಯೆಂದು ನಿರ್ಣಯಿಸಿ ಭಗವಂತನು ಮಹೋನ್ನತವಾದ ಪರಮಾರ್ಥ ಸತ್ಯಗಳನ್ನು ಈ ವಿಧವಾಗಿ ಆತನಿಗೆ ಬೋಧಿಸಲು ಉಪಕ್ರಮಿಸುತ್ತಿದ್ದಾನೆ.

'ನೀನು, ನಾನು, ಈ ರಾಜರೆಲ್ಲರೂ ನಿತ್ಯರು.' ಎಂದು ಹೇಳುವುದರಿಂದ ಈ ಕೆಳಗಿನ ಸತ್ಯಗಳು ಬೋಧಿಸಲ್ಪಡುತ್ತಿವೆ.

೧. ಆತ್ಮವು ನಿತ್ಯ
೨. ತಾನು ಆತ್ಮವೇ ಹೊರತು ದೇಹವಲ್ಲ
೩. ಎಲ್ಲ ಜೀವಿಗಳಲ್ಲಿಯೂ ಒಂದೇ ಆತ್ಮ ವ್ಯಾಪಿಸಿದೆ.

ಇಂಥಹ ಬೋಧೆಯಿಂದ ಜೀವಿಗೆ ಅಪರಿಮಿತವಾದ ಧೈರ್ಯವು ಆನಂದವು ಬರಬಲ್ಲದು. ಏಕೆಂದರೆ, ತಾನು ಯಾವಾಗಲೂ ನಶಿಸುವುದಿಲ್ಲ ಎಂದು ತಿಳಿದಾಗ ಇನ್ನು ತಾನಾಗಲಿ ಅಥವ ಇನ್ನೊಬ್ಬರಾಗಲಿ ಮರಣ ಹೊಂದಬಹುದೆನ್ನುವ ದುಃಖಕ್ಕೆ ಅವಕಾಶವೇ ಇಲ್ಲ. ಶ್ರೀಕೃಷ್ಣಪರಮಾತ್ಮನು ಅರ್ಜುನನಿಗೆ ಧೈರ್ಯವನ್ನು ಹುರಿದುಂಬಿಸಲು ಉಪಾಯವನ್ನಾಲೋಚಿಸಿ, ಇಂಥಹ ನಿಜಾತ್ಮಬೋಧೆಯಲ್ಲದೆ ಬೇರೆ ಯಾವುದರಿಂದಲೇ ಆಗಲಿ ಅದು ಸಿದ್ಧಿಸುವುದಿಲ್ಲವೆಂದು ನಿಶ್ಚಯಿಸಿ ಮೊಟ್ಟ ಮೊದಲಲ್ಲೇ ಗಂಭೀರವಾದ ಆತ್ಮ ವಿದ್ಯೆಯನ್ನು ಉಪದೇಶಿಸುತ್ತಿದ್ದಾನೆ.

*"ಸರ್ವೇ ವಯಮತಃಪರಮ್"*- (ನಾವೆಲ್ಲರೂ) ಎಂದು ಹೇಳಿರುವುದರಿಂದ ಆತ್ಮದೃಷ್ಟಿಯಲ್ಲಿ ಭಗವಂತ, ಭಕ್ತ, ಗುರು ಹಾಗು ಶಿಷ್ಯರಿಗೆ ಭೇದವೇ ಇಲ್ಲವೆಂದು ಎಲ್ಲರೂ ಒಂದೇ ಸದ್ವಸ್ತುವೆಂದು ಸ್ಪಷ್ಟವಾಗುತ್ತಿದೆ. ಆದ್ದರಿಂದಲೇ ಹನುಮಂತನು ಶ್ರೀರಾಮಚಂದ್ರನೊಡನೆ 'ಆತ್ಮಬುದ್ಧ್ಯಾ ತ್ವಮೇವಾಹಂ' (ಆತ್ಮ ದೃಷ್ಟಿಯಲ್ಲಿ ನೀನು ಹಾಗೂ ನಾನು ಒಂದೇ) ಎಂದು ಹೇಳಿದನು. ಉಪಾಧಿಯಿಂದಲೇ ಜೀವತ್ವವೇರ್ಪಟ್ಟಿದೆ. ಉಪಾಧಿಭಾವ ಬಿಟ್ಟಾಗ ಜೀವನು ಶಿವನಾಗುವನು (ಶಿವೋಽಹಂ). ಆದ್ದರಿಂದ ದೇಹಾದಿಗಳು ನಶಿಸಿದರೂ ದುಃಖಿಸುವ ಅವಸರವಿಲ್ಲ (ತಾನು ಶಾಶ್ವತವಾದ ಆತ್ಮನಾದ್ದರಿಂದ). ಮತ್ತೆ

1. ಗತಾಸೂನ ಗತಾಸೂಂಶ್ಚ ನಾನುಶೋಚಂತಿ ಪಂಡಿತಾಃ.........(೨-೧೧)
2. ಜ್ಞಾನಾಗ್ನಿದಗ್ಧ ಕರ್ಮಾಣಂ ತಮಾಹುಃ ಪಂಡಿತಂ ಬುಧಾಃ.......(೪-೧೯)
3. ಶುನಿ ಚೈವ ಶ್ವಪಾಕೇ ಚ ಪಂಡಿತಾಃ ಸಮದರ್ಶನಃ........(೫-೧೮)

ಯಾವೊಬ್ಬನೂ ತಾನು ಅಲ್ಪನೆಂದು ಭಯಪಡಬೇಕಾಗಿಲ್ಲ (ತಾನು ವಾಸ್ತವವಾಗಿ ಸಾಕ್ಷಾತ್ ಪರಮಾತ್ಮ ಸ್ವರೂಪನೇ ಆದ್ದರಿಂದ). ಈ ಪ್ರಕಾರವಾಗಿ ಶ್ರೀಕೃಷ್ಣಪರಮಾತ್ಮ ಒಂದು ಚಿಕ್ಕ ಧರ್ಮಸೂಕ್ಷ್ಮದಿಂದ ವಿಷಣ್ಣಚಿತ್ತನಾದ ಅರ್ಜುನನಲ್ಲಿ ಧೈರ್ಯಸಂಚಾರವನ್ನುಂಟುಮಾಡಿದನು.

ಪ್ರ: ಜೀವಿಯು ಯಾರು?

ಉ: ಆತ್ಮವೇ ಹೊರತು ದೇಹವಲ್ಲ.

ಪ್ರ : ಆತ್ಮ ಎಂಥಹದು?

ಉ : ಪೂರ್ವದಲ್ಲಿದ್ದದ್ದು, ಈಗಿರುವುದು, ಮುಂದೆಯೂ ಇರುವುದು. ಅದಕ್ಕೆ ವಿನಾಶವೇ ಇಲ್ಲ. ಅದು ಶಾಶ್ವತವಾದದ್ದು.

ಪ್ರ : ಈ ಸತ್ಯ ಕೆಲವರಿಗೆ ಮಾತ್ರ ಅನ್ವಯಿಸುವುದೇ?

ಉ : ಇಲ್ಲ, ಪಿಪೀಲಿಕಾದಿ ಬ್ರಹ್ಮಪರ್ಯಂತ ಸರ್ವರಿಗೂ ಅನ್ವಯಿಸುವುದು. ಎಲ್ಲರೂ ಜನನ ಮರಣ ರಹಿತ ಶಾಶ್ವತವಾದ ಆತ್ಮಸ್ವರೂಪಿಗಳೇ ಆಗಿದ್ದಾರೆ.

**ಅ** : ದೇಹವಿಯೋಗಾನಂತರ ಆತ್ಮವಿದ್ದೇ ಇರುವುದೆಂದು ತಿಳಿಸುತ್ತಿದ್ದಾನೆ-

**೧೩. ದೇಹಿನೋಽಸ್ಮಿನ್ ಯಥಾ ದೇಹೇ ಕೌಮಾರಂ ಯೌವನಂ ಜರಾ**
**ತಥಾ ದೇಹಾಂತರಪ್ರಾಪ್ತಿರ್ಧೀರ ಸ್ತತ್ರ ನ ಮುಹ್ಯತಿ**

**ಅರ್ಥ** : ದೇಹಿನಃ=ಜೀವಿಗೆ; ಅಸ್ಮಿನ್ ದೇಹೇ=ಈ ಶರೀರದಲ್ಲಿ; ಕೌಮಾರಂ= ಬಾಲ್ಯ; ಯೌವನಂ= ಯೌವನವು; ಜರಾ= ಜರಾವಸ್ಥೆ (ವೃದ್ಧಾಪ್ಯ), ಯಥಾ= ಹೇಗೆ ಉಂಟಾಗುವುವೋ; ತಥಾ=ಹಾಗೆಯೇ; ದೇಹಾಂತರ ಪ್ರಾಪ್ತಿಃ= ಮತ್ತೊಂದು ಶರೀರ ಹೊಂದುವುದು (ಉಂಟಾಗುತ್ತದೆ); ತತ್ರ=ಆ ವಿಷಯದಲ್ಲಿ; ಧೀರಃ= ಜ್ಞಾನಿಯು; ನಮುಹ್ಯತಿ=ಮರುಳಾಗುವುದಿಲ್ಲ (ಶೋಕಿಸುವುದಿಲ್ಲ).

**ತಾ**: ಜೀವಿಗೆ ಶರೀರದಲ್ಲಿ ಬಾಲ್ಯ, ಯೌವನ, ವೃದ್ಧಾಪ್ಯಗಳೆನ್ನುವ ಅವಸ್ಥೆಗಳು ಹೇಗೆ ಉಂಟಾಗುವುವೋ ಹಾಗೆ ಮರಣಾನಂತರ ಮತ್ತೆ ಶರೀರವನ್ನು ಹೊಂದುವುದು ನಡೆಯುತ್ತದೆ. ಆದ್ದರಿಂದ ಈ ವಿಷಯದಲ್ಲಿ ಜ್ಞಾನಿಯಾದವನು ಮೋಹವನ್ನು (ಶೋಕವನ್ನು) ಹೊಂದುವುದಿಲ್ಲ.

**ವ್ಯಾಖ್ಯೆ**: ೧)ಬಾಲ್ಯ ೨) ಯೌವನ ೩) ವೃದ್ಧಾಪ್ಯ ೪) ದೇಹಾಂತರ ಪ್ರಾಪ್ತಿ; ಎನ್ನುವ ನಾಲ್ಕು ಅವಸ್ಥೆಗಳು ಜೀವಿಗೆ ಉಂಟಾಗುತ್ತವೆಯೆಂದು ಭಗವಂತನು ತಿಳಿಯಪಡಿಸುತ್ತಿದ್ದಾನೆ.

'ದೇಹೇ' ಎಂದು ಹೇಳಲ್ಪಟ್ಟಿರುವುದರಿಂದ ಈ ಬದಲಾವಣೆಗಳು ದೇಹಕ್ಕೇ ಹೊರತು ಆತ್ಮಕ್ಕಲ್ಲವೆಂದು ಸ್ಪಷ್ಟವಾಗುತ್ತಿದೆ. ಬಾಲ್ಯವು ಹೋಗಿ ಯೌವನವು ಬಂದಾಗ ಯಾರೂ ದುಃಖಿಸುವುದಿಲ್ಲ. ಯೌವನವು ಹೋಗಿ ವೃದ್ಧಾಪ್ಯವು ಬಂದಾಗ ದುಃಖಿಸುವುದಿಲ್ಲ. ಹಾಗಿರಬೇಕಾದರೆ ವೃದ್ಧಾಪ್ಯವು ಹೋಗಿ ಮರಣ, ದೇಹಾಂತರಪ್ರಾಪ್ತಿ ಉಂಟಾದಾಗ ಏಕೆ ದುಃಖಿಸ ಬೇಕೆನ್ನುವುದು ಭಗವಂತನ ಪ್ರಶ್ನೆ. ಈ ರಹಸ್ಯವನ್ನರಿತ ಮಹನೀಯರು ಅವುಗಳನ್ನು ಕುರಿತು ಯೋಚನೆಮಾಡದ್ದೆ ಅವು ಸಂಭವಿಸಿದಾಗ ಮೇರು ಪರ್ವತದಂತೆ ಧೀರರಾಗಿದ್ದು ಗಂಭೀರವಾಗಿ ವರ್ತಿಸುತ್ತಾರೆ. ಮೇಲೆ ತಿಳಿಸಿದ ನಾಲ್ಕು ಅವಸ್ಥೆಗಳಲ್ಲಿ ಮೊದಲ ಮೂರು ಸಹಜವೆಂದು ಜನರಿಗೆ ಗೊತ್ತು. ಆದರೆ ನಾಲ್ಕನೆಯದು (ದೇಹಾಂತರ ಪ್ರಾಪ್ತಿ) ಇರುವುದೆಂದು ತಿಳಿಯದು. ಆದ್ದರಿಂದ ಭಗವಂತನು ಇಲ್ಲಿ ನಾಲ್ಕನೆಯ ದೇಹಾಂತರ ಪ್ರಾಪ್ತಿಯೆನ್ನುವ ಅವಸ್ಥೆಯಿದೆಯೆಂದು, ಮೊದಲ ಮೂರು ಹೇಗೆ ಸತ್ಯಗಳೋ ಅದೂ ಸಹ ಅಷ್ಟೇ ಸತ್ಯವೆಂದು ಆದ್ದರಿಂದ ಅದನ್ನು ಕುರಿತು ವಿಚಲಿತರಾಗದೆ ಧೀರರಂತೆ ಪ್ರವರ್ತಿಸಬೇಕೆಂದು ಬೋಧಿಸುತ್ತಿದ್ದಾನೆ. (ಕರ್ಮರಾಹಿತ್ಯವನ್ನು ಹೊಂದುವುದರಿಂದ) ಜ್ಞಾನಿಗೆ ಮಾತ್ರ ಈ ದೇಹಾಂತರ ಪ್ರಾಪ್ತಿಯಿರದು. ಸಾಮಾನ್ಯರಿಗೆ ಮಾತ್ರ ಅದು ಅನಿವಾರ್ಯವೆಂದು ಗ್ರಹಿಸಬೇಕು-

**ದೇಹಚಕ್ರ (Cycle of the body)**




ಕರ್ಮದೋಷವಿರುವವರೆಗೆ ಉಪಾಧಿಗೆ ಈ ನಾಲ್ಕು ಅವಸ್ಥೆಗಳು ಚಕ್ರ ಭ್ರಮಣದಂತೆ ಸಂಭವಿಸುತ್ತಿರುತ್ತವೆ. ಜ್ಞಾನದಿಂದ ಕರ್ಮಸಂಚಿತ ಭಸ್ಮವಾದ ಮೇಲೆ ಮಾತ್ರ ದೇಹವು, ತತ್ಸಂಬಂಧವಾದ ಅವಸ್ಥೆಗಳು ಇಲ್ಲವಾಗುವುವು. ಅದೇ ಮೋಕ್ಷ ಸ್ಥಿತಿ.

ಪ್ರ : ಜೀವಿಗೆ ಎಷ್ಟು ಅವಸ್ಥೆಗಳಿವೆ? ಅವು ಯಾವುವು?

ಉ : ಜೀವಿಗೆ ನಾಲ್ಕು ಅವಸ್ಥೆಗಳಿವೆ. ಅವು ಕ್ರಮವಾಗಿ ಬಾಲ್ಯ, ಯೌವನ, ವೃದ್ಧಾಪ್ಯ, ದೇಹಾಂತರ ಪ್ರಾಪ್ತಿ.

ಪ್ರ : ಧೀರನು ಯಾರು ?

ಉ : ಬಾಲ್ಯ, ಯೌವನಾದಿಗಳಂತೆ ಮರಣ, ದೇಹಾಂತರ ಪ್ರಾಪ್ತಿಗಳು ಸಂಭವಿಸಿದಾಗ ಕಿಂಚಿತ್ತೂ ದುಃಖಿಸದವನು.

**ಅ**॥ ಬಂಧು ಮಿತ್ರಾದಿಗಳಿಂದ ಸಿಗುವ ಸುಖದುಃಖಾದಿ ದ್ವಂದ್ವಗಳು ಅನಿತ್ಯಗಳೆಂದು, ಅವುಗಳಿಗೆ ಲಕ್ಷ್ಯಕೊಡಬಾರದೆಂದು ಹೇಳಲಾಗುತ್ತಿದೆ.

**೧೪. ಮಾತ್ರಾಸ್ಪರ್ಶಾಸ್ತು ಕೌಂತೇಯ ಶೀತೋಷ್ಣಸುಖದುಃಖದಾಃ**
**ಆಗಮಾಪಾಯಿನೋಽನಿತ್ಯಾಸ್ತಾಂ ಸ್ತಿತಿಕ್ಷಸ್ವ ಭಾರತ**

**ಅರ್ಥ** : ಕೌಂತೇಯ=ಓ ಅರ್ಜುನಾ! ಮಾತ್ರಾಸ್ಪರ್ಶಾಸ್ತು=ಇಂದ್ರಿಯ ಶಬ್ದಾದಿ ವಿಷಯ ಸಂಯೋಗಗಳೆಲ್ಲವೂ; ಶೀತೋಷ್ಣಸುಖದುಃಖದಾಃ=ಶೀತ, ಉಷ್ಣ ಸುಖ, ದುಃಖ ಇವುಗಳನ್ನು ಉಂಟುಮಾಡುವಂಥಹವು; ಆಗಮಾಪಾಯಿನಃ= ಬಂದು ಹೋಗುವಂಥಹವು; ಅನಿತ್ಯಾಃ=ಅಸ್ಥಿರವಾದುವು (ಆಗಿವೆ), ತಾನ್=ಅವುಗಳನ್ನು; ಭಾರತ=ಭರತ ಕುಲದಲ್ಲಿ ಜನ್ಮಿಸಿದ ಓ ಅರ್ಜುನಾ!; ಸ್ತಿತಿಕ್ಷಸ್ವ=ಸಹಿಸಿಕೊಳ್ಳುವುದು.

**ತಾ**: ಓ ಅರ್ಜುನಾ! ಇಂದ್ರಿಯಗಳ ಶಬ್ದಸ್ಪರ್ಶಾದಿ ವಿಷಯ ಸಂಯೋಗಗಳು ಒಮ್ಮೆ ಶೀತವೂ ಒಮ್ಮೆ ಉಷ್ಣವೂ, ಒಮ್ಮೆ ಸುಖವೂ, ಮತ್ತೊಮ್ಮೆ ದುಃಖವನ್ನೂ ಉಂಟುಮಾಡುತ್ತಿರುತ್ತವೆ. ಅವು ಬಂದು ಹೋಗುವ ಸ್ವಭಾವ

ಉಳ್ಳವುಗಳಾಗಿದ್ದು ಅಸ್ಥಿರವಾದವುಗಳಾಗಿವೆ. ಆದ್ದರಿಂದ ಅವುಗಳನ್ನು ಸಹಿಸಿಕೊಳ್ಳಬೇಕು.

**ವ್ಯಾಖ್ಯೆ:** ಜಗತ್ತು ಮಿಥ್ಯೆಯೆಂಬ ಜ್ಞಾನವಿಲ್ಲದವರು ಬಾಹ್ಯ ಪದಾರ್ಥಗಳ ಸಂಯೋಗದಿಂದ ಇಂದ್ರಿಯಗಳಿಗೆ ಉಂಟಾಗುವ ಶೀತೋಷ್ಣ, ಸುಖದುಃಖಾದಿ ವಿಕಾರಗಳನ್ನು ಸತ್ಯಗಳೆಂದು ತಮ್ಮಲ್ಲಿ ಅವುಗಳನ್ನು ಅಧ್ಯಾರೋಪಿಸಿಕೊಂಡು ವಿಷಾದಕ್ಕೊಳಗಾಗಿದ್ದಾರೆ. ಆದರೆ ಈ ವಿಕಾರಗಳೆಲ್ಲವೂ ಪ್ರಕೃತಿಗೆ ಸಂಬಂಧಿಸುದುವೇ ಆಗಲಿ ಆತ್ಮಕ್ಕಲ್ಲ. ಆತ್ಮವಾದರೋ ಅಕರ್ತ, ನಿರ್ಲಿಪ್ತವೆಂದು ತಿಳಿದವನಿಗೆ ಅಂಥಹ ಬಾಧೆ ಇರದು. ಆದ್ದರಿಂದ ಸಮ ಬುದ್ಧಿಯಿಂದ ಇವುಗಳನ್ನು ಸಹಿಸಿಕೊಳ್ಳಬೇಕೆಂದು ಭಗವಂತನು ಅರ್ಜುನನಿಗೆ ಬೋಧಿಸುತ್ತಿದ್ದಾನೆ.

*'ಸುಖದುಃಖದಾಃ'*- ಶಬ್ದಾದಿ ವಿಷಯಗಳಿಂದ ಒದಗುವ ಸುಖ ಕೇವಲ ಸುಖವಲ್ಲ. ದುಃಖಮಿಶ್ರಿತ ಸುಖ. ಏಕೆಂದರೆ ಕೇವಲ ಸುಖವಾಗಿದ್ದಲ್ಲಿ ಇನ್ನೊಮ್ಮೆ ದುಃಖವುಂಟಾಗಬಾರದು. ಆದರೆ ಹಾಗಾಗುವುದಿಲ್ಲ. ಸ್ವಲ್ಪ ಸುಖವನ್ನು ಅವು ಉಂಟುಮಾಡಿದರೂ ತಕ್ಷಣವೇ ಅಪರಿಮಿತವಾದ ದುಃಖವು ಕಾದುಕೊಂಡೇ ಇರುವುದು. ಆದ್ದರಿಂದಲೇ ಅವುಗಳನ್ನು 'ಸುಖದಾಃ' ಎಂದು ಹೇಳದೆ 'ಸುಖ ದುಃಖದಾಃ' ಎಂದು ಭಗವಂತನು ವರ್ಣಿಸಿದ್ದಾನೆ.

*"ಆಗಮಾಪಾಯಿನಃ"*- ಬಂದು ಹೋಗುವಂಥಹವು. ಪ್ರಾಪಂಚಿಕ ಸುಖಗಳು ಬಂದೊದಗಿದಾಗ ಯಾರೂ ಹೆಮ್ಮೆ ಪಡಬಾರದು. ಏಕೆಂದರೆ ಅವು ಬಂದು ನಿಲ್ಲುವುವಲ್ಲ. ಹೋಗುವ ಚೇಷ್ಟೆಗಳನ್ನು ಹೊಂದೇ ಇರುವುವು. ಬಂಧುಗಳಂತೆ ಬಂದು ಹೋಗುವುವು. ಅವು ಅನಿತ್ಯಗಳು. ಆದ್ದರಿಂದ ಅವುಗಳ ಬಗ್ಗೆ ಪ್ರೀತಿ, ಮಮಕಾರ, ಆಸಕ್ತಿ ಸಾಧುವಲ್ಲ. ಆ ಥಳಕು ಬೆಳಕು ಸುಖಗಳಲ್ಲಿ ಮಮಕಾರವನ್ನು ಹೊಂದಿ ಅವುಗಳ ಹಿಂದೆ ಓಡುವವನು ದುಃಖವನ್ನೇ ಆಹ್ವಾನಿಸುವವನಾಗಿದ್ದು ಸಂಸಾರಕೂಪದಲ್ಲಿ ಬೀಳುವುದು ಖಚಿತ. ಆದ್ದರಿಂದ ಅಂತಹ ಕ್ಷಣಿಕ ಸುಖಗಳಿಗಾಗಿ ತಾಪತ್ರಯಪಡದೆ ಶಾಶ್ವತ ಆತ್ಮ ಸುಖಕ್ಕಾಗಿ ಯತ್ನಿಸಬೇಕು.

*"ತಾಂ ಸ್ತಿತಿಕ್ಷಸ್ವ"*- ತಿತಿಕ್ಷ ಅಂದರೆ ಸಹನೆ. ಶೀತೋಷ್ಣಾದಿಗಳು ಸಂಭವಿಸಿದಾಗ ಸಮಭಾವದಿಂದ ಅವುಗಳನ್ನು ಸಹಿಸಿಕೊಳ್ಳಬೇಕು. 'ತಿತಿಕ್ಷ' ಎನ್ನುವುದು ಶಮದಮಾದಿ ಸದ್ಗುಣಗಳಲ್ಲಿ ಒಂದು.

ಪ್ರ : ಶಬ್ದಸ್ಪರ್ಶಾದಿ ವಿಷಯಗಳ ಸ್ವಭಾವವೆಂಥಹದು?

ಉ : ಅವು (೧) ಶೀತೋಷ್ಣ ಸುಖದುಃಖದಾಯಕಗಳು (೨) ಬಂದು ಹೋಗತಕ್ಕಂಥವು (೩) ಅನಿತ್ಯವಾದವುಗಳು.

ಪ್ರ : ಆ ಶೀತೋಷ್ಣಾದಿಗಳು ಬಂದೊದಗಿದಾಗ ಏನು ಮಾಡಬೇಕು?

ಉ : ಸಮದೃಷ್ಟಿಯಿಂದ ಅವುಗಳನ್ನು ಸಹಿಸಿಕೊಂಡು ಧೈರ್ಯವಾಗಿರಬೇಕು.

**ಅ॥** ವಿಷಯ ಜನಿತ ಸುಖದುಃಖಗಳಲ್ಲಿ ಸಮದೃಷ್ಟಿಯುಳ್ಳವನಿಗೆ ಉಂಟಾಗುವ ಒಳಿತನ್ನು ಕುರಿತು ಹೇಳುತ್ತಿದ್ದಾನೆ.

**೧೫. ಯಂ ಹಿ ನ ವ್ಯಥಯಂತ್ಯೇತೇ ಪುರುಷಂ ಪುರುಷರ್ಷಭ**
**ಸಮದುಃಖಸುಖಂ ಧೀರಂ ಸೋಽಮೃತತ್ವಾಯ ಕಲ್ಪತೇ**

**ಅರ್ಥ:** ಪುರುಷರ್ಷಭ=ಪುರುಷಶ್ರೇಷ್ಠನಾದ ಓ ಅರ್ಜುನಾ! ಏತೇ=ಶಬ್ದ ಸ್ಪರ್ಶಾದಿ ವಿಷಯಗಳು; ಸಮದುಃಖಸುಖಂ= ಸುಖದುಃಖಗಳನ್ನು ಸಮವಾಗಿ ನೋಡುವಂಥಹ; ಧೀರಂ=ಧೈರ್ಯಶಾಲಿಯಾದವನು; ಯಂ ಪುರುಷಂ=ಯಾವ ಮನುಜನು; ನ ವ್ಯಥಯಂತಿ=ಬಾಧಿಸುವುದಿಲ್ಲವೋ (ವ್ಯಥೆಯುಂಟು ಮಾಡುವುದಿಲ್ಲವೋ); ಸಃಹಿ=ಆತನೇ; ಅಮೃತತ್ವಾಯ=ಮೋಕ್ಷಕ್ಕೆ; ಕಲ್ಪತೆ=ಯೋಗ್ಯನು.

**ತಾ:** ಪುರುಷಶ್ರೇಷ್ಠನಾದ ಓ ಅರ್ಜುನಾ! ಯಾರನ್ನು ಈ ಶಬ್ದ ಸ್ಪರ್ಶಾದಿಗಳು ಬಾಧಿಸುವುದಿಲ್ಲವೋ (ವ್ಯಥೆಯನ್ನುಂಟುಮಾಡುವುದಿಲ್ಲವೋ), ಯಾರು ಸುಖ ದುಃಖಗಳಲ್ಲಿ ಸಮಭಾವವುಳ್ಳವರಾಗಿರುವರೋ ಅಂಥಹ ಧೀರರೇ ಮೋಕ್ಷಕ್ಕೆ ಯೋಗ್ಯರು.

**ವ್ಯಾಖ್ಯೆ:** *"ಪುರುಷರ್ಷಭ"*- (ಪುರುಷಶ್ರೇಷ್ಠ). ಇಂದ್ರಿಯಗಳನ್ನು ಜಯಿಸಿ ವಿಷಯಾದಿಗಳಿಂದ ವ್ಯಥೆ ಹೊಂದದೆ, ಸುಖದುಃಖಾದಿಗಳಲ್ಲಿ ಸಮಭಾವವನ್ನು ಹೊಂದಿ (ಲೌಕಿಕ ಶ್ರೇಷ್ಠತೆಯೊಂದಿಗೆ) ಪಾರಮಾರ್ಥಿಕ ಶ್ರೇಷ್ಠತೆಯನ್ನು ಕೂಡ ಸಂಪಾದಿಸು ಎಂದು ಬಹುಶಃ ಅರ್ಜುನನ್ನು ಎಚ್ಚರಿಸಲು ಪುರುಷರ್ಷಭ ಎನ್ನುವ ಪದವನ್ನು ಉಪಯೋಗಿಸಲಾಗಿದೆ.

*"ಸಮದುಃಖಸುಖಂ ಧೀರಂ"*- ಸುಖದುಃಖಗಳಲ್ಲಿ ಸಮಾನತೆಯನ್ನು ಹೊಂದಿರುವುದೇ ಧೀರತೆ. ಆತ್ಮದಲ್ಲಿ ಸ್ಥಿತನಾಗಿ ಸುಖದುಃಖಗಳೆರಡನ್ನೂ ಮನೋವಿಕಾರಗಳೆಂದು ವೀಕ್ಷಿಸುವನೇ ಧೀರನು. ದುಃಖವು ಹೇಗೆ ಒಂದು ರೀತಿಯ ಮನೋವಿಕಾರವೋ ಸುಖವೂ ಸಹ ಅಂಥಹುದೇ. ಆದ್ದರಿಂದ ಮನಸ್ಸಿಗೆ ಸಾಕ್ಷಿಯಾದ ಆತ್ಮದಲ್ಲಿ ಸ್ಥಿರತೆಯನ್ನು ಹೊಂದಿದ ಧೀರನಾದ ಮಹನೀಯನು, ಆ ಎರಡನ್ನೂ ಸಮವಾಗಿ ವೀಕ್ಷಿಸುವನು (ಜನಕನ ಆಸ್ಥಾನದಲ್ಲಿಯ ಶುಕನಂತೆ).

*"ಸೋಽಮೃತತ್ವಾಯ ಕಲ್ಪತೆ"*- ಮೋಕ್ಷಕ್ಕೆ ಅಮೃತತ್ವವೆನ್ನುವ ಹೆಸರಿದೆ. ಈ ನಾಮರೂಪದೃಶ್ಯ ಪ್ರಪಂಚವೆಲ್ಲವೂ ಮೃತಸ್ವರೂಪವಾಗಿದ್ದು; ಜನನ ಮರಣಗಳಿಂದ, ವಿನಾಶಗಳಿಂದ ಕೂಡಿದುದು ಆಗಿದೆ. ಆತ್ಮಸ್ಥಿತಿರೂಪ ಮೋಕ್ಷವು ಮರಣರಹಿತವಾದುದು. ಆದ್ದರಿಂದ ಮೋಕ್ಷವೆಂದರೆ, ಆಕಾಶದಲ್ಲಿಯೋ, ಸ್ವರ್ಗದಲ್ಲಿಯೋ ಇರುವ ವಸ್ತುವಲ್ಲ. ಅಮೃತತ್ವಪದವಿಯೇ ಮೋಕ್ಷ. ಮೃತ್ಯು ರಹಿತವಾದ ಆತ್ಮಸ್ಥಿತಿಯೇ ಮೋಕ್ಷ. ಅಂತಹದನ್ನು ಹೊಂದಿದವನು ಮತ್ತೆ ಮೃತ್ಯುವಿನ ಬಾಯಿಗೆ ಸಿಗುವುದಿಲ್ಲ. ಮತ್ತೆ ಜನಿಸುವುದಿಲ್ಲ. (ಯದ್ಗತ್ವಾ ನನಿವರ್ತಂತೆ ತದ್ಧಾಮ ಪರಮಂ ಮಮ).

ಮೋಕ್ಷಾರ್ಹತೆಗಾಗಿ ಭಗವಂತನು ಇಲ್ಲಿ ಯಾವುದೇ ಒಂದು ಜಾತಿಯನ್ನಾಗಲಿ, ಮತವನ್ನಾಗಲಿ, ಕುಲವನ್ನಾಗಲಿ ಹೆಸರಿಸಲಿಲ್ಲ. ಯಾರು ಇಂದ್ರಿಯನಿಗ್ರಹ, ವಿಷಯರಾಹಿತ್ಯ, ಸುಖದುಃಖ ಸಮಭಾವಗಳನ್ನು ಹೊಂದಿರುವವರೋ, ಅಂತಹ ಧೀರರೇ ಮೋಕ್ಷಕ್ಕೆ ಅರ್ಹರೆಂದು ತಿಳಿಸಿದನು. ಆಹಾ! ಗೀತೆಯಲ್ಲಿ ಎಂತಹ ಉದಾತ್ತ ಭಾವಗಳು ಪ್ರಕಟಿಸಲ್ಪಟ್ಟಿವೆಯೋ ನೋಡಿರಿ!

ಪ್ರ : ಮೋಕ್ಷವೆಂದರೇನು ?

ಉ : ಮರಣರಾಹಿತ್ಯವಾದ ಶಾಶ್ವತ ಆನಂದ ಪದವಿಯೇ ಮೋಕ್ಷ.

ಪ್ರ : ಅದನ್ನು ಯಾರು ಹೊಂದಬಲ್ಲರು ?

ಉ : ಶಬ್ದ ಸ್ಪರ್ಶಾದಿ ವಿಷಯಗಳಿಂದ ವಿಚಲಿತರಾಗದವರು, ಸುಖದುಃಖಗಳಲ್ಲಿ ಸಮಭಾವವನ್ನು ಹೊಂದಿರುವ ಧೀರರೇ ಮೋಕ್ಷವನ್ನು ಪಡೆಯಬಲ್ಲರು.

ಪ್ರ : ಧೀರರೆಂದರೆ ಯಾರು ?

ಉ : ಶಬ್ದಾದಿವಿಷಯಗಳನ್ನು ಜಯಿಸಿ ಸುಖದುಃಖಗಳಲ್ಲಿ ಸಮಭಾವವನ್ನು ಹೊಂದಿರುವವರನ್ನು ಧೀರರೆಂದು ಕರೆಯುವರು.

**ಅ॥** ಯಾವುದು ಸದ್ವಸ್ತುವೋ, ಯಾವುದು ಅಸದ್ವಸ್ತುವೋ ವಿಶದೀಕರಿಸಲಾಗಿದೆ.

**೧೬. ನಾಸತೋ ವಿದ್ಯತೇ ಭಾವೋ ನಾಭಾವೋ ವಿದ್ಯತೇ ಸತಃ**
**ಉಭಯೋರಪಿ ದೃಷ್ಟೋಽನ್ತಸ್ತ್ವನಯೋಃ ಸ್ತತ್ವದರ್ಶಿಭಿಃ**

**ಅರ್ಥ:** ಅಸತಃ=ಇಲ್ಲದೆ ಇರವುದಕ್ಕೆ; ಭಾವಃ=ಸಂಭವ; ನವಿದ್ಯತೇ=ಇಲ್ಲ; ಸತಃ=ಇರುವುದಕ್ಕೆ; ಅಭಾವಃ=ಇಲ್ಲದೇ ಇರುವಿಕೆ (ಅಸಂಭವ); ನವಿದ್ಯತೇ= ಇಲ್ಲ; ಅನಯೋಃ=ಈ; ಉಭಯೋರಪಿ=ಎರಡರ ಬಗ್ಗೆ; ಅಂತಃ ತು= ನಿಶ್ಚಯವಾಗಿ; ತತ್ವದರ್ಶಿಭಿಃ=ಜ್ಞಾನಿಗಳಿಂದ; ದೃಷ್ಟಃ=ದರ್ಶಿಸಲ್ಪಟ್ಟಿದೆ.

**ತಾ:** ಅಸತ್ಯಗಳಾದ (ನಾಮರೂಪಗಳಾಗಿ, ನಶಿಸುವ ಸ್ವಭಾವಗಳುಳ್ಳವಾಗಿರುವ) ದೇಹಾದಿಗಳಿಗೆ ಇರುವಿಕೆಯಿಲ್ಲ. ಸತ್ಯವಾದಂತಹ ಆತ್ಮಕ್ಕೆ ಇಲ್ಲದಿರುವಿಕೆ ಸಂಭವಿಸುವುದಿಲ್ಲ. ತತ್ವಜ್ಞಾನಿಗಳಾದವರು ಈ ಎರಡರ ಸ್ವರೂಪವನ್ನು ಚೆನ್ನಾಗಿ ತಿಳಿದಿರುವರು.

**ವ್ಯಾಖ್ಯೆ:** "ತತ್ವದರ್ಶಿಭಿಃ"- 'ದರ್ಶಿಭಿಃ' ಎಂದು ಹೇಳುವುದರಿಂದ ತತ್ವವನ್ನು ಪ್ರತ್ಯಕ್ಷವಾಗಿ ನೋಡಿದವರೆನ್ನುವ ಅರ್ಥ ಬರುತ್ತದೆ. ಕೇವಲ ಬಾಯಿಂದ ಚಪಲಕ್ಕೆ ಮಾತನಾಡುವವರಲ್ಲ ("ತತ್ವವಾದಿಭಿಃ" ಅಲ್ಲ). ಸತ್ಯವನ್ನು ಕರತಲಾಮಲಕ ಮಾಡಿಕೊಂಡವರೆಂದು ಅರ್ಥ. ಅಂತಹ ಜ್ಞಾನಿಗಳಿಗೆ ನಿತ್ಯಾನಿತ್ಯ ವಸ್ತು ಪರಿಜ್ಞಾನ ಚೆನ್ನಾಗಿ ಅನುಭವವಾಗಿರುವುದು. ಆದ್ದರಿಂದ ಯಾವುದು ಇರುವಂಥಹುದೋ ಯಾವುದು ಇಲ್ಲದೆ ಇರುವಂಥಹದೋ ಅವರಿಗೆ ಚೆನ್ನಾಗಿ ತಿಳಿದಿರುತ್ತದೆ. ಈ ದೇಹಾದಿ ದೃಶ್ಯ ವಸ್ತುಗಳೆಲ್ಲವೂ ನಶಿಸುವ ಗುಣಗಳನ್ನು ಹೊಂದಿವೆಯಾದ್ದರಿಂದ ಪರಮಾರ್ಥ ದೃಷ್ಟಿಯಲ್ಲಿ ಇಲ್ಲದೇ ಇರುವುವು. ಅಂಥಹ ಇಲ್ಲದೆ ಇರುವ ಸ್ವಭಾವ ಹೊಂದಿರುವ ವಸ್ತುಗಳಿಗೆ ಅಸ್ತಿತ್ವ ಎಂದೂ ಇರುವುದಿಲ್ಲ.

ಒಂದು ವೇಳೆ ಕಾಣಿಸಿದರೂ ಅದು ಬಿಸಿಲು ಕುದುರೆ (Mirage)ಯಂತೆ ಭ್ರಾಂತಿಯಾಗಿಯೇ ಇರುತ್ತದೆ. ಆತ್ಮವು ಸತ್ಯವಾದ ವಸ್ತು. ಅದಕ್ಕೆ ಇಲ್ಲದಿರುವಿಕೆ ಎನ್ನುವುದು ಯಾವಾಗಲೂ ಇಲ್ಲ. ಈ ಯಥಾರ್ಥ ಸ್ಥಿತಿಯನ್ನು ಜ್ಞಾನಿಗಳು ಮಾತ್ರ ತಿಳಿಯಬಲ್ಲರು. ಬೇರೆಯವರು ಈ ಸತ್ಯವನ್ನು ತಿಳಿದು ಕೊಳ್ಳದೆ, ಇಲ್ಲದೆ ಇರುವುದಕ್ಕೆ ಅಸ್ತಿತ್ವ ಕಲ್ಪಿಸಿ, ಇರುವುದಕ್ಕೆ ಇಲ್ಲದೆ ಇರುವಿಕೆಯನ್ನು ಕಲ್ಪಿಸಿ ನಾನಾ ಬಾಧೆಗಳನ್ನು ಅನುಭವಿಸುತ್ತಿದ್ದಾರೆ.

೧) ಇರುವ ಭಗವಂತನನ್ನು (ಆತ್ಮ) ಇಲ್ಲವೆನ್ನುವುದು ಒಂದು ದೋಷ.

೨) ಅಸತ್ತಾದ (ಇಲ್ಲದೇ ಇರುವ) ಜಗತ್ತನ್ನು ಇರುವುದೆಂದು ಹೇಳುವುದು ಮತ್ತೊಂದು ದೋಷ.

ಮೊದಲನೆಯದನ್ನು ಅಸಂಭಾವನೆಯೆಂದು ಎರಡನೆಯದನ್ನು ವಿಪರೀತ ಭಾವನೆಯೆಂದು ಹೇಳುವರು. ಅಸಂಭಾವದಿಂದ ಸತ್ಯ ವಸ್ತುವು ದೂರವಾಗಿ ಹೋಗುವುದರಿಂದ ನಿತ್ಯಾನಂದವು ಅವರಿಗೆ ಪ್ರಾಪ್ತವಾಗುವುದಿಲ್ಲ. ವಿಪರೀತ ಭಾವದಿಂದ ಅಸತ್ಯ ವಸ್ತುವು ಸನ್ನಿಹಿತವಾಗುವುದರಿಂದ ದುಃಖವು ಸಮೀಪಿಸುತ್ತದೆ.

ಅಂತಹ ದುಃಖವು ಅಂತ್ಯವಾಗಬೇಕೆಂದರೆ ಇದ್ದದ್ದನ್ನು ಇದ್ದ ಹಾಗೆ, ಇಲ್ಲದೆ ಇರುವುದನ್ನು ಇಲ್ಲದ್ದ ಹಾಗೆ ನೋಡಿದರೂ ಸಾಕು. ಇದು ಶಾಂತಿಗೆ ಮಾರ್ಗ. ದುಃಖರಾಹಿತ್ಯಕ್ಕೆ ದಾರಿ. ತತ್ವಜ್ಞಾನಿಗಳು ಇದನ್ನು ಗ್ರಹಿಸಿ ತಮ್ಮ ಜೀವನಗಳನ್ನು ಕೃತಾರ್ಥಗೊಳಿಸಿಕೊಳ್ಳುವರು. ಅಜ್ಞಾನಿಗಳು ಅದನ್ನು ತಿಳಿಯದೆ ಸಂಸಾರ ಚಕ್ರದಲ್ಲಿ ಸಿಕ್ಕಿಬಿದ್ದು ದುಃಖಗಳನ್ನು ಅನುಭವಿಸುತ್ತಿದ್ದಾರೆ.

ಈ ಶ್ಲೋಕದಲ್ಲಿ "ಬ್ರಹ್ಮ ಸತ್ಯಂ ಜಗನ್ಮಿಥ್ಯ" ಎನ್ನುವ ಪರಮ ಸತ್ಯದ ಪರಿಚಯ ಮಾಡಲಾಗಿದೆ.

ಪ್ರ : ತತ್ವಜ್ಞಾನಿಗಳು ಎಂತಹ ಅನುಭವವನ್ನು ಹೊಂದಿರುವರು?

ಉ : ನಾಮರೂಪಾತ್ಮಕಗಳಾದ ದೃಶ್ಯ ಪ್ರಪಂಚವನ್ನು ಅಸತ್ತೆಂದು, ಸಚ್ಚಿದಾನಂದ ಪರಮಾತ್ಮನು ಸತ್ತೆಂದು (ನಿಜವೆಂದು) ಅವರು ನೋಡುತ್ತಿರುತ್ತಾರೆ.

**ಅ॥** ಮೇಲೆ ತಿಳಿಸಿದ ಸತ್, ಅಸತ್‌ಗಳೆನ್ನುವ ಸದ್ವಸ್ತುಗಳ ವಿವರ ಹೇಳಲ್ಪಡುತ್ತಿದೆ.

**೧೭. ಅವಿನಾಶಿ ತು ತದ್ವಿದ್ಧಿ ಯೇನ ಸರ್ವಮಿದಂ ತತಮ್**
**ವಿನಾಶಮವ್ಯಯಸ್ಯಾಸ್ಯ ನ ಕಶ್ಚಿತ್ ಕರ್ತುಮರ್ಹತಿ**

**ಅರ್ಥ :** ಇದಂ ಸರ್ವಂ=ಈ ಸಮಸ್ತ ಪ್ರಪಂಚವೂ; ಏನ=ಯಾವುದರಿಂದ (ಯಾವ ಪರಮಾತ್ಮನಿಂದ); ತತಂ=ವ್ಯಾಪಿಸಲ್ಪಟ್ಟಿದ್ದಿಯೋ; ತತೌ ತು=ಅದನ್ನು; ಅವಿನಾಶಿ=ನಾಶವು ಇಲ್ಲದೆ ಇರುವುದೆಂದು; ವಿದ್ಧಿ=ತಿಳಿಯುವುದು; ಅಸ್ಯ=ಈ; ಅವ್ಯಯಸ್ಯ=ನಾಶವಿಲ್ಲದೆ ಇರುವ ಸತ್ ಪದಾರ್ಥಗಳಿಗೆ; ವಿನಾಶಂ=ನಾಶವನ್ನು; ಕರ್ತುಮ್=ಮಾಡುವುದಕ್ಕೆ; ಕಶ್ಚಿತ್=ಯಾರಿಗೂ; ನ ಅರ್ಹತಿ=ಸಾಧ್ಯವಿಲ್ಲ.

**ತಾ:** ಓ ಅರ್ಜುನಾ! ಈ ಸಮಸ್ತ ಪ್ರಪಂಚವು ಯಾವ ಪರಮಾತ್ಮನಿಂದ ವ್ಯಾಪಿಸಲ್ಪಟ್ಟಿದೆಯೋ, ಅದು ನಾಶರಹಿತವಾಗಿದೆಯೆಂದು ತಿಳಿಯುವುದು. ಅವ್ಯಯವಾದ ಅಂತಹ ಆತ್ಮಕ್ಕೆ ವಿನಾಶವನ್ನು ಯಾರೂ ತಂದೊಡ್ಡಲಾರರು.

**ವ್ಯಾಖ್ಯೆ:** ಸಮಸ್ತ ಚರಾಚರ ವಸ್ತುಗಳು, ಹೃದಯಸ್ಥನಾದ ಆತ್ಮನಿಂದಲೇ ವ್ಯಾಪಿಸಲ್ಪಟ್ಟಿವೆ- ೧) ಸರ್ವಜೀವಿಗಳನ್ನು ಆತ್ಮರೂಪಿಗಳಾಗಿ ನೋಡಿ ಅವುಗಳ ಬಗ್ಗೆ ಪ್ರೇಮ, ದಯೆ, ಕರುಣೆ ಹೊಂದಿರಬೇಕು.

೨) ಭಗವಂತನಿಗೆ ಆತ್ಮ ಅತಿ ಸಮೀಪವಾಗಿರುವುದರಿಂದ ಯಾವ ಕಾಲದಲ್ಲಿಯೂ ಪಾಪ ಮಾಡಬಾರದು.

೩) ತನ್ನ ವಾಸ್ತವ ಸ್ವರೂಪವಾದ ಆತ್ಮನನ್ನು ಯಾರೂ ನಾಶಗೊಳಿಸಲು ಸಾಧ್ಯವಿಲ್ಲವಾದ್ದರಿಂದ ಸಾಧಕನು ಧೈರ್ಯವಾಗಿ ಆನಂದದಿಂದ ನಿರಂತರವೂ ಅಂತಹ ಆತ್ಮನ ಬಗ್ಗೆ ಮನನ ಮಾಡುತ್ತಾ ಸ್ವಾತ್ಮಸ್ಥಿತಿಯಲ್ಲಿ ನಿಮಗ್ನನಾಗಬೇಕು.

ಪ್ರ : ಆತ್ಮ ಎಂತಹದು?

ಉ : ೧) ಸಮಸ್ತ ಪ್ರಪಂಚವನ್ನು ವ್ಯಾಪಿಸಿದೆ ೨) ನಾಶರಹಿತವಾದದ್ದು ೩) ಅದನ್ನು ಯಾರೂ ವಿನಾಶಗೊಳಿಸಲು ಸಾಧ್ಯವಿಲ್ಲ.

**ಅ॥** ಹೀಗೆ ಸದ್ವಸ್ತುವಿನ ಬಗ್ಗೆ ವಿವರಿಸಿ ಮುಂದೆ ಅಸದ್ವಸ್ತುವಿನ ವಿವರ ಕೊಡಲಾಗಿದೆ.

೧೮. ಅಂತವಂತ ಇಮೇ ದೇಹಾ ನಿತ್ಯಸ್ಯೋಕ್ತಾ ಶರೀರಿಣಃ
ಅನಾಶಿನೋಽಪ್ರಮೇಯಸ್ಯ ತಸ್ಮಾದ್ಯುಧ್ಯಸ್ವ ಭಾರತ

**ಅರ್ಥ:** ನಿತ್ಯಸ್ಯ=ನಿತ್ಯನು; ಅನಾಶಿನಃ=ನಾಶವಿಲ್ಲದವನು; ಅಪ್ರಮೇಯಸ್ಯ= ಪ್ರತ್ಯಕ್ಷಾದಿ ಪ್ರಮಾಣಗಳಿಂದ ತಿಳಿಯಲಸಾಧ್ಯವಾದವನು; ಶರೀರಿಣಃ= ದೇಹಿಯಾದ ಆತ್ಮ; ಇಮೇದೇಹಾಃ=ಈ ಶರೀರಗಳು; ಅಂತವಂತಃ=ವಿನಾಶ ವಾಗುವಂತಹವು; ಉಕ್ತಾಃ=ಹೇಳಲ್ಪಟ್ಟಿದೆ; ತಸ್ಮಾತ್=ಆ ಕಾರಣದಿಂದ; ಭಾರತ=ಓ ಅರ್ಜುನಾ!; ಯುಧ್ಯಸ್ವ=ಯುದ್ಧವನ್ನು ಮಾಡುವುದು.

**ತಾ:** ಓ ಅರ್ಜುನಾ! ನಿತ್ಯನು, ನಾಶರಹಿತನು, ಅಪ್ರಮೇಯನಾದ ದೇಹಿಯ (ಆತ್ಮದ) ಈ ದೇಹಗಳು ನಾಶವಾಗುವಂತಹವು (ಆತ್ಮವಾದರೋ ಶಾಶ್ವತ). ಆದ್ದರಿಂದ (ಆತ್ಮದ ಬಗ್ಗೆಯಾಗಲಿ, ದೇಹದ ಬಗ್ಗೆಯಾಗಲಿ ಶೋಕವನ್ನು ಬಿಟ್ಟು) ನೀನು ಯುದ್ಧ ಮಾಡುವುದು.

**ವ್ಯಾಖ್ಯೆ:** *"ಅಂತವಂತ ಇಮೇ ದೇಹಾಃ"*=ದೇಹಗಳು ಅಂತ (ಮರಣ) ವುಳ್ಳವುವು. ತಾನು ದೇಹವಲ್ಲ ಆದರೆ ದೇಹಿ; ಶರೀರವಲ್ಲ ಆದರೆ ಶರೀರಿ. ದೇಹಗಳು ನಶಿಸಿಹೋಗುವಂತಹವು ಆದರೆ ದೇಹಿಯಾದ ಆತ್ಮ ನಾಶವಾಗುವುದಲ್ಲ. ನಾಶವಾಗುವಂತಹ ಇಂತಹ ದೇಹಗಳನ್ನು ಎಂದೂ ನಂಬಬಾರದು. ಅದರೊಡನೆ ತಾದಾತ್ಮ್ಯ ಭಾವವನ್ನು ಹೊಂದಿರಬಾರದು. ನಿತ್ಯನಾದ ಆತ್ಮನನ್ನೇ ನಂಬಿ, ಆತನೇ ತಾನೆಂದು ಭಾವಿಸಬೇಕು. "ಶರೀರಿಣಃ"- ಎಂದು ಹೇಳಲ್ಪಟ್ಟಿರುವುದರಿಂದ ಆತ್ಮದೂರ ಎಲ್ಲೋ ಇಲ್ಲ, ಶರೀರದಲ್ಲೇ ವ್ಯಾಪಿಸಿದ್ದಾನೆಂದು ಸ್ಪಷ್ಟವಾಗುತ್ತಿದೆ. ಆದ್ದರಿಂದ ಶರೀರ ಭಾವವನ್ನು ತ್ಯಜಿಸಿ 'ಶರೀರಿ' ಭಾವವನ್ನು ಬೆಳೆಸಿಕೊಳ್ಳಬೇಕು.

**"ತಸ್ಮಾದ್ಯುಧ್ಯಸ್ವ"** 'ಆತ್ಮ ನಾಶವಿಲ್ಲದ್ದು ಮತ್ತೆ ನೀನಾದರೋ ದೇಹವಲ್ಲ ಆದ್ದರಿಂದ ಇನ್ನು ಯಾವುದಕ್ಕೂ ದುಃಖಿಸಬೇಕಿಲ್ಲ. ದುಃಖವನ್ನು ಪೂರ್ಣವಾಗಿ ತ್ಯಜಿಸಿ ಜ್ಞಾನದಿಂದ ಕೂಡಿ ನಿನ್ನ ವಿಧ್ಯುಕ್ತ ಕರ್ಮವನ್ನು ಆಚರಿಸು' ಎಂದು ಭಗವಂತನು ಇಲ್ಲಿ ಅರ್ಜುನನಿಗೆ ಹಿತಬೋಧೆ ಮಾಡುತ್ತಿದ್ದಾನೆ.

ಪ್ರಶ್ನೆ : ದೇಹದ ಸ್ವಭಾವ ಎಂತಹದು?

ಉತ್ತರ : ಅದು ನಾಶವಾಗುವಂತಹದು.

ಪ್ರಶ್ನೆ : ದೇಹಿಯಾದ ಆತ್ಮ ಎಂಥವನು?

ಉತ್ತರ : ೧) ನಿತ್ಯನು ೨) ನಾಶರಹಿತನು ೩) ಅಪ್ರಮೇಯನು.

**ಅ॥** ಆತ್ಮದ ಸ್ವರೂಪ, ಸ್ವಭಾವಗಳನ್ನು ಇನ್ನೂ ವಿವರಿಸಿ ಹೇಳುತ್ತಾ ಅದು ಎಂದೂ ನಾಶವಾಗುವುದಿಲ್ಲ (ಮರಣಿಸುವುದಿಲ್ಲ) ಎಂದು ಹೇಳುತ್ತಿದ್ದಾನೆ.

೧೯. ಯ ಏನಂ ವೇತ್ತಿ ಹಂತಾರಂ ಯಶ್ಚೈನಂ ಮನ್ಯತೇ ಹತಮ್
ಉಭೌ ತೌ ನ ವಿಜಾನೀತೋ ನಾಯಂ ಹಂತಿ ನ ಹನ್ಯತೇ

**ಅರ್ಥ:** ಯಃ=ಯಾರು; ಏನಂ=ಈ (ಶರೀರದಲ್ಲಿರುವ) ಆತ್ಮನು; ಹಂತಾರಂ= ವಧಿಸುವಂಥವನು; ವೇತ್ತಿ=ತಿಳಿದುಕೊಳ್ಳುತ್ತಿದ್ದಾನೋ; ಯಶ್ಚ=ಯಾರು; ಏನಂ=ಇವುಗಳನ್ನು; ಹತಂ=ವಧಿಸಲ್ಪಟ್ಟವನು; ಮನ್ಯತೇ=ತಿಳಿಯುವನೋ; ತೌ ಉಭೌ=ಆ ಇಬ್ಬರೂ; ನ ವಿಜಾನೀತಃ=ತಿಳಿದುಕೊಂಡವರಲ್ಲ; ಅಯಂ=ಈ ಆತ್ಮ ನ ಹಂತಿ=ವಧಿಸುವುದಿಲ್ಲ, ನ ಹನ್ಯತೆ ಚ=ವಧಿಸಲ್ಪಡುವುದಿಲ್ಲ.

**ತಾ:** ಯಾರು ಈ ಆತ್ಮವನ್ನು ವಧಿಸುವಂತಹದು ಎಂದು ತಿಳಿದಿರುವರೋ ಅಥವ ಯಾರು ಈ ಆತ್ಮವನ್ನು ವಧಿಸಲ್ಪಡುವಂತಹದು ಎಂದು ತಿಳಿದಿರುವರೋ ಆ ಇಬ್ಬರೂ ಸಹ ವಾಸ್ತವವನ್ನು (ಯಥಾರ್ಥ ಸ್ವರೂಪ) ತಿಳಿದವರಲ್ಲ. ಯಥಾರ್ಥವಾಗಿ ಈ ಆತ್ಮ ಯಾರನ್ನೂ ವಧಿಸುವುದಿಲ್ಲ (ಕೊಲ್ಲುವುದಿಲ್ಲ) ಅಥವ ಕೊಲ್ಲಲ್ಪಡುವುದೂ ಇಲ್ಲ.

**ವ್ಯಾಖ್ಯೆ:** ಕಠೋಪನಿಷತ್ತಿನಲ್ಲಿ ಈ ಶ್ಲೋಕವನ್ನು ಹೋಲುವ ಒಂದು ಶ್ಲೋಕವಿದೆ.* ೧) ಆತ್ಮ ಕೊಲ್ಲುವವನಲ್ಲ ಎಂದು ಹೇಳುವುದರಿಂದ ಕರ್ತೃತ್ವಾದಿಗಳು ಆತ್ಮಕ್ಕೆ ಇಲ್ಲವೆಂದು ತಿಳಿದು ಬರುತ್ತದೆ. ಆತ್ಮ ಮಾಡುವವನಲ್ಲ, ಮಾಡಿಸುವವನೂ ಅಲ್ಲ. ಕರ್ತೃತ್ವಾದಿಗಳು ಬುದ್ಧಿಗೆ ಸೀಮಿತವೇ ಆಗಲಿ ಬುದ್ಧಿಗೆ ಸಾಕ್ಷಿಯಾದ ಆತ್ಮಕ್ಕಲ್ಲ. ಆತ್ಮಕ್ಕೆ ಕರ್ತೃತ್ವವನ್ನು ಆರೋಪಿಸುವವನು ಹುಚ್ಚನೇ ಸರಿ ಎಂದು ಗೀತೆ ಹೇಳುತ್ತದೆ.

೨) ಆತ್ಮ ಕೊಲ್ಲಲ್ಪಡುವುದಲ್ಲ- ಎಂದು ಹೇಳುವುದರಿಂದ ಅದು ಶಾಶ್ವತವೂ ಹಾಗು ನಿರ್ವಿಕಾರವಾದುದೆಂದು ಸ್ಪಷ್ಟವಾಗುತ್ತದೆ. ಆದ್ದರಿಂದ ಸಾಧಕನು 'ತಾನು ಆತ್ಮ ಸ್ವರೂಪನೆಂದು, ಮರಣರಹಿತನೆಂದು, ಮರಣವು ದೇಹಕ್ಕೆ ಮಾತ್ರ ಇದೆ ಎಂದು, ತಾನಾದರೋ ದೇಹಕ್ಕೆ ಸಾಕ್ಷಿಯಾಗಿ, ನಿತ್ಯ ನಿರಂಜನನಾಗಿ ಪ್ರಕಾಶಗೊಳ್ಳುತ್ತಿರುವವನು' ಎಂದು ಭಾವಿಸಿಕೊಳ್ಳಬೇಕು.

ಪ್ರಶ್ನೆ : ಆತ್ಮ ಎಂತಹವನು ?

ಉತ್ತರ: ಆತ್ಮ ಕೊಲ್ಲುವವನಲ್ಲ, ಕೊಲ್ಲಲ್ಪಡುವವನೂ ಅಲ್ಲ (ಅಕರ್ತ, ಅವಿನಾಶಿ).

**ಅ॥** ಆತ್ಮ ಯಾವ ರೀತಿ ಕೊಲ್ಲಲ್ಪಡುವುದಿಲ್ಲ ಎನ್ನುವುದನ್ನು ಸ್ಪಷ್ಟೀಕರಿಸುತ್ತಾ ಅದು ನಿರ್ವಿಕಾರಿಯೆಂದು ಹೇಳಲಾಗುತ್ತಿದೆ.

೨೦. ನ ಜಾಯತೇ ಮ್ರಿಯತೇ ವಾ ಕದಾಚಿತ್
ನಾಯಂ ಭೂತ್ವಾ ಭವಿತಾ ವಾ ನ ಭೂಯಃ
ಅಜೋ ನಿತ್ಯಃ ಶಾಶ್ವತೋಽಯಂ ಪುರಾಣೋ
ನ ಹನ್ಯತೇ ಹನ್ಯಮಾನೇ ಶರೀರೇ

**ಅರ್ಥ:** ಅಯಂ=ಈ ಆತ್ಮ ಕದಾಚಿತ್=ಯಾವಾಗಲೂ; ನ ಜಾಯತೇ= ಹುಟ್ಟುವುದಿಲ್ಲ; ನಮ್ರಿಯತೇವಾ=ಸಾಯುವುದೂ ಇಲ್ಲ; ನ ಭೂತ್ವಾ=(ಇಲ್ಲಿಯ ವರೆಗೆ) ಇಲ್ಲದೆ; ಭೂಯಃ=ಮತ್ತೆ; ಭವಿತಾವಾನ=(ಹೊಸದಾಗಿ) ಸಂಭವಿಸುವುದಲ್ಲ ಅಥವ (ಭೂತ್ವಾ=ಇದ್ದು; ಭೂಯಃ=ಮತ್ತೆ; ನ ಭವಿತಾನ=ಇಲ್ಲದೆ ಇರುವುವುದಲ್ಲ). ಅಯಂ=ಈತನು; ಅಜಃ=ಹುಟ್ಟು ಇಲ್ಲದೆ ಇರುವವನು; ನಿತ್ಯಂ=ಮರಣವಿಲ್ಲದವನು; ಶಾಶ್ವತಃ=ಯಾವಾಗಲೂ ಇರುವವನು; ಪುರಾಣಃ=ಅನಾದಿಯಾದವನು; ಶರೀರೇ ಹನ್ಯಮಾನೇ(ಸತಿ)= ಶರೀರ ಹತವಾದರೂ; ನಹನ್ಯತೇ=ಕೊಲ್ಲಲ್ಪಡುವುದಿಲ್ಲ.

**ತಾ:** ಈ ಆತ್ಮ ಹುಟ್ಟು ಅಥವ ಸಾವು ಇಲ್ಲದೇ ಇರುವುದು. ಇಲ್ಲಿಯವರೆಗೆ ಇಲ್ಲದೆ ಈಗ ಹೊಸದಾಗಿ ಸಂಭವಿಸುವುದಲ್ಲ. (ಇದ್ದು ಮತ್ತೆ ಇಲ್ಲದಂತಾಗುವುದಲ್ಲ.) ಇದು ಜನನ ಮರಣಗಳಿಲ್ಲದ್ದು; ಶಾಶ್ವತವಾದದ್ದು ಹಾಗು ಪುರಾತನವಾದದ್ದು. ಶರೀರ ಕೊಲ್ಲಲ್ಪಟ್ಟರೂ ಇದು ಕೊಲ್ಲಲ್ಪಡುವುದಿಲ್ಲ.

---

* ಹಂತಾ ಚೇನ್ಮನ್ಯತೇ ಹನ್ತುಮ್ ಹತಶ್ಚೇನ್ಮನ್ಯತೆ ಹತಮ್।
ಉಭೌ ತೌ ನ ವಿಜಾನೀತೋ ನಾಯಂ ಹಂತಿ ನ ಹನ್ಯತೆ॥ (ಕಠ.ಉ. ೧೧-೧೯)

**ವ್ಯಾಖ್ಯೆ:** ಈ ಶ್ಲೋಕವನ್ನು ಹೋಲುವ ಶ್ಲೋಕವು ಕಠೋಪನಿಷತ್ತಿನಲ್ಲಿ ಇದೆ.* ಗೀತೆ ಉಪನಿಷತ್ತಿನ ಸಾರವೆನ್ನಲು ಇದೇ ನಿದರ್ಶನ.

ಶರೀರ ನಶಿಸಿದರೂ ಆತ್ಮ ನಶಿಸುವುದಿಲ್ಲವೆಂದು ಹೇಳಲ್ಪಟ್ಟಿರುವುದರಿಂದ ಶರೀರಕ್ಕಿಂತ ಭಿನ್ನವಾಗಿದ್ದು ಆತ್ಮ ಸಾಕ್ಷಿಯಾಗಿದೆಯೆಂದು ಸ್ಪಷ್ಟವಾಗುತ್ತದೆ. ಆದ್ದರಿಂದ ಮಾನವನು ನಶಿಸುವ ಶರೀರದೊಡನೆ ತಾದಾತ್ಮ್ಯ ಭಾವವನ್ನು ಹೊಂದದೆ ನಾಶವಿಲ್ಲದ ಆತ್ಮನೇ ತಾನೆಂದು ನಿರಂತರವಾಗಿ ಭಾವಿಸಿ ಕೊಳ್ಳುತ್ತಿರಬೇಕು. ಅದರಿಂದ ಅಪರಿಮಿತ ಧೈರ್ಯ, ಆನಂದಗಳು ಉಂಟಾಗುತ್ತವೆ. ನಿರ್ಭಯವು ಉದಯಿಸುತ್ತದೆ. ಮರಣ ಭಯವು ಚೂರುಚಾರಾಗಿ ನಿರ್ನಾಮವಾಗುವುದು.

ಪ್ರ : ಆತ್ಮದ ಸ್ವರೂಪವೆಂತಹದು ?

ಉ : ೧) ಅದು ಹುಟ್ಟು, ಸಾವಿಲ್ಲದ್ದು ೨) ಯಾವಾಗಲೂ ಇರುವಂತಹದು ೩) ಸ್ಥಿರವಾಗಿರುವುದು ೪) ಶಾಶ್ವತ ೫) ಪುರಾಣ ಪುರುಷ ೬) ಶರೀರ ನಶಿಸಿದರೂ ನಶಿಸದೇ ಇರುವುದು.

**ಅ||** ಆತ್ಮ ಕೊಲ್ಲುವ ಸ್ವಭಾವವುಳ್ಳದ್ದು ಏಕೆ ಅಲ್ಲ ಎನ್ನುವುದನ್ನು ಮುಂದೆ ವಿವರಿಸಲಾಗಿದೆ.

> **೨೧. ವೇದಾವಿನಾಶಿನಂ ನಿತ್ಯಂ ಯ ಏನಮಜಮವ್ಯಯಮ್**
> **ಕಥಂ ಸ ಪುರುಷಃ ಪಾರ್ಥ ಕಂ ಘಾತಯತಿ ಹಂತಿ ಕಮ್**

**ಅರ್ಥ:** ಓ ಅರ್ಜುನಾ! ಯಂ=ಯಾರು; ಏನಂ=ಈ ಆತ್ಮವನ್ನು; ಅಜಂ= ಹುಟ್ಟಿಲ್ಲದ್ದು; ಅವ್ಯಯಮ್=ಕ್ಷಯವಿಲ್ಲದ್ದು; ಅವಿನಾಶಿನಂ=ನಾಶ ರಹಿತವಾದದ್ದು; ನಿತ್ಯಂ=ನಿತ್ಯ; ವೇದ=ತಿಳಿಯುತ್ತಾನೋ; ಸಃಪುರುಷಃ=ಆ ಮನುಜನು; ಕಥಂ=ಹೇಗೆ; ಕಂ=ಯಾರನ್ನು; ಘಾತಯತಿ=ಕೊಲ್ಲಿಸುವನು? ಕಂ=ಯಾರನ್ನು; ಹಂತಿ=ಕೊಲ್ಲುವನು?

**ತಾ:** ಓ ಅರ್ಜುನಾ! ಈ ಆತ್ಮವನ್ನು ಯಾವನು ಜನನ ಮರಣವಿಲ್ಲದ್ದು, ನಾಶರಹಿತವಾದದ್ದು ಹಾಗು ನಿತ್ಯವಾದದ್ದೆಂದು ತಿಳಿಯುವನೋ, ಅಂತಹವನು ಇನ್ನೊಬ್ಬನನ್ನು ಕೊಲ್ಲಿಸಲು ಅಥವಾ ಕೊಲ್ಲಲು ಹೇಗೆ ಸಾಧ್ಯ?

**ವ್ಯಾಖ್ಯೆ:** ಆತ್ಮವು ನಿತ್ಯವಾದುದರಿಂದ ಅದನ್ನು ಯಾರೂ ಕೊಲ್ಲಲು ಹಾಗು ಕೊಲ್ಲಿಸಲು ಸಾಧ್ಯವಿಲ್ಲವೆಂದು ಅರ್ಥ.

**ಅ||** ದೇಹಗಳು ಅನಿತ್ಯವಾದವುಗಳು, ದೇಹಿಯಾದ ಆತ್ಮವೋ ನಿತ್ಯ ಎನ್ನುವ ವಿಷಯವನ್ನು ಉಪಮಾನದ ಮೂಲಕ ತಿಳಿಸಲಾಗುತ್ತಿದೆ-

> **೨೨. ವಾಸಾಂಸಿ ಜೀರ್ಣಾನಿ ಯಥಾ ವಿಹಾಯ ನವಾನಿ ಗೃಹ್ಣಾತಿ ನರೋಽಪರಾಣಿ**
> **ತಥಾ ಶರೀರಾಣಿ ವಿಹಾಯ ಜೀರ್ಣಾ ನ್ಯನ್ಯಾನಿ ಸಂಯಾತಿ ನವಾನಿ ದೇಹೀ**

**ಅರ್ಥ:** ನರಃ=ಮನುಜನು; ಜೀರ್ಣಾನಿ- ಶಿಥಿಲವಾದ (ಜೀರ್ಣವಾದ), ವಾಸಾಂಸಿ=ವಸ್ತ್ರಗಳನ್ನು; ವಿಹಾಯ=ಬಿಟ್ಟು; ಅಪರಾಣಿ=ಬೇರೆಯ; ನವಾನಿ (ವಾಸಾಂಸಿ) ಹೊಸ ವಸ್ತ್ರಗಳನ್ನು; ಯಥಾ=ಯಾವ ಪ್ರಕಾರವಾಗಿ; ಗೃಹ್ಣಾತಿ= ಧರಿಸುತ್ತಾನೋ; ತಥಾ=ಆ ಪ್ರಕಾರವಾಗಿಯೇ; ದೇಹೀ=ಆತ್ಮ ಜೀರ್ಣಾನಿ= ಶಿಥಿಲವಾದ; ಶರೀರಾಣಿ=ದೇಹಗಳನ್ನು; ವಿಹಾಯ=ಬಿಟ್ಟು; ಅನ್ಯಾನಿ=ಬೇರೆ; ನವಾನಿ (ಶರೀರಾಣಿ)=ಹೊಸ ಶರೀರಗಳನ್ನು; ಸಂಯಾತಿ= ಹೊಂದುತ್ತಿದ್ದಾನೆ (ಪಡೆಯುತ್ತಿದ್ದಾನೆ).

**ತಾ:** ಜೀರ್ಣವಾದ ಹಳೆಯ ಬಟ್ಟೆಗಳನ್ನು ತೆಗೆದುಹಾಕಿ ಬೇರೆಯ ಹೊಸ ಬಟ್ಟೆಗಳನ್ನು ಹೇಗೆ ಮನುಜನು ಧರಿಸುತ್ತಾನೋ ಹಾಗೆ ದೇಹಿ ಎನ್ನುವ ಆತ್ಮವು ಶಿಥಿಲವಾದ ಹಳೆಯ ಶರೀರಗಳನ್ನು ಬಿಟ್ಟು ಹೊಸ ಶರೀರಗಳನ್ನು ಧರಿಸುತ್ತದೆ.

**ವ್ಯಾಖ್ಯೆ:** ಗೀತೆಯಲ್ಲಿ ಭಗವಂತನು ಅನೇಕ ಕಡೆ ಉಪಮಾನಗಳ ಮೂಲಕವೂ ಬೋಧೆ ಮಾಡುತ್ತಾನೆ. ದೃಷ್ಟಾಂತಗಳಿಂದ ಸಾಮಾನ್ಯರು ಕೂಡ ವಿಷಯವನ್ನು ಸರಿಯಾಗಿ ಅರಿಯಲು ಸಾಧ್ಯವಾಗುತ್ತದೆ. ಇದು ಅಂತಹ ಒಂದು ಉಪಮಾನವಾಗಿದೆ.

ಅಗಸನಿಗೆ ಮೈಲು(ಕೊಳೆಯ) ಬಟ್ಟೆಗಳನ್ನು ಒಗೆಯುವುದಕ್ಕೆ ಹಾಕುವಾಗ ಯಾರೂ ದುಃಖಿಸುವುದಿಲ್ಲ. ವೃಕ್ಷಗಳ ಎಲೆಗಳು ಶಿಶಿರ ಋತುವಿನಲ್ಲಿ ಉದುರಿ ಹೋಗುವಾಗ ಯಾರೂ ಆವೇದನೆಗೊಳಗಾಗುವುದಿಲ್ಲ. ಏಕೆಂದರೆ, ಹೊಸ ಹೊಸವು ಮತ್ತೆ ಬರುತ್ತವೆಯೆನ್ನುವ ಧೈರ್ಯವಿರುವುದರಿಂದ. ಮರಣವೂ ಅಷ್ಟೇ ಎಂದು ಭಗವಂತನು ಇಲ್ಲಿ ತಿಳಿಸುತ್ತಿದ್ದಾನೆ. ಶಿಥಿಲವಾದ ದೇಹದ ತ್ಯಾಗವೇ ಮರಣ. ಜೀವಿಯು ತನ್ನ ಜೀರ್ಣದೇಹವನ್ನು ಬಿಟ್ಟು ನೂತನ ದೇಹವನ್ನು ಧರಿಸುವನು. ಆದ್ದರಿಂದ ಮರಣವೆನ್ನುವುದು ದುಃಖಿಸಬೇಕಾದ ವಿಷಯವಲ್ಲವೆಂದು ಶ್ರೀಕೃಷ್ಣಮೂರ್ತಿ ಒತ್ತಿ ಹೇಳಿದ್ದಾನೆ. ಆದರೆ ಜ್ಞಾನದಿಂದ ಕರ್ಮಸಂಕ್ಷಯಗೊಳಿಸಿಕೊಂಡು, ಮತ್ತೆ ಜನ್ಮ ಮರಣಾದಿಗಳಿಲ್ಲದೆ ಮಾಡಿ ಕೊಳ್ಳುವುದೇ ಸರ್ವೋತ್ತಮವೆಂದು ಭಗವಂತನು ಮುಂದೆ ಅನುಗ್ರಹಿಸುವನು.

*'ಶರೀರಾಣಿ'*- ಎಂದು ಬಹುವಚನವನ್ನು ಉಪಯೋಗಿಸಿರುವುದರಿಂದ (ಜ್ಞಾನಾಗ್ನಿಯಿಂದ ಕರ್ಮಸಂಚಯವು ದಗ್ಧವಾಗದೇ ಇಲ್ಲದ ಪಕ್ಷದಲ್ಲಿ) ಜೀವಿಯು ಅನೇಕ ಜನ್ಮಗಳನ್ನು ಪಡೆಯಬೇಕಾಗಿ ಬರುವುದೆಂದು ಸ್ಪಷ್ಟವಾಗುತ್ತದೆ.

"ಜೀರ್ಣಾನಿ"- ಎನ್ನುವ ಪದಕ್ಕೆ 'ಶಿಥಿಲವಾದ ಪ್ರಾರಬ್ಧಪೂರಿತ ದೇಹ' ಎನ್ನುವ ಅರ್ಥವನ್ನು ಕೊಡಬೇಕಾಗುತ್ತದೆ. ಏಕೆಂದರೆ, ವೃದ್ಧಾಪ್ಯದಲ್ಲಿಯೇ ಎಲ್ಲರೂ ಮರಣಿಸುವುದಿಲ್ಲ. ಯೌವನ, ಬಾಲ್ಯಗಳಲ್ಲಿಯೂ ಸಹ ಮರಣಿಸುತ್ತಾರೆ. ಆಗ ಅವರ ದೇಹಗಳು ನವೀನವಾಗಿ ಕಂಡುಬರುತ್ತವೆಯೇ ಹೊರತು ಶಿಥಿಲವಾದವುಗಳಂತೆ ತೋರುವುದಿಲ್ಲ. 'ದೇಹೀ'- ಎನ್ನುವ ಶಬ್ದದಿಂದ ಮರಣವು ದೇಹಕ್ಕೆ ಹೊರತು, ದೇಹಿಯಾದ ಆತ್ಮಕ್ಕಲ್ಲ ಎನ್ನುವುದು ಸ್ಪಷ್ಟವಾಗುತ್ತದೆ. ಉಪಾಧಿಗಳು ಬದಲಾಗುತ್ತಿದ್ದರೂ, ಅವುಗಳಿಗೆ ಸಾಕ್ಷಿಯಾದ ಆತ್ಮವು ಸ್ವಲ್ಪವೂ ಬದಲಾಗದೆ (ಅಚಲೋಽಯಂ ಸನಾತನಃ ಎಂದಹಾಗೆ), ನಿಶ್ಚಲವಾಗಿರುವುದು. ಜೀವಿಯ ವಾಸ್ತವ ಸ್ವರೂಪ ಆತ್ಮವೇ ಹೊರತು, ದೇಹವಲ್ಲ.

**ಅ||** ಆತ್ಮವನ್ನು ಪಂಚಭೂತಗಳು ಬಾಧಿಸುವುದಿಲ್ಲವೆಂದು ನುಡಿಯುತ್ತಿದ್ದಾನೆ-

---

* ನ ಜಾಯತೇ ಮ್ರಿಯತೇ ವಾ ವಿಪಶ್ಚಿನ್ನಾಯಂ ಕುತಶ್ಚಿನ್ನ ಬಭೂವ ಕಶ್ಚಿತ್
ಅಜೋ ನಿತ್ಯಶ್ಶಾಶ್ವತೋಽಯಂ ಪುರಾಣೋ ನ ಹನ್ಯತೇ ಹನ್ಯಮಾನೇ ಶರೀರೇ (ಕಠ. ಉ ೧೧-೧೮)

೨೩. ನೈನಂ ಛಿಂದಂತಿ ಶಸ್ತ್ರಾಣಿ ನೈನಂ ದಹತಿ ಪಾವಕಃ
ನ ಚೈನಂ ಕ್ಲೇದಯಂತ್ಯಾಪೋ ನ ಶೋಷಯತಿ ಮಾರುತಃ

**ಅರ್ಥ:** ಏನಂ=ಈ ಆತ್ಮವನ್ನು; ಶಸ್ತ್ರಾಣಿ=ಆಯುಧಗಳು; ನ ಛಿಂದಂತಿ= ಛೇದಿಸಲಾರವು; ಪಾವಕಃ=ಅಗ್ನಿ; ಏನಂ=ಈ ಆತ್ಮವನ್ನು; ನದಹತಿ= ಸುಡಲಾಗುವುದಿಲ್ಲ; ಆಪಃ ಚ= ನೀರು ಸಹ; ಏನಂ=ಈ ಆತ್ಮವನ್ನು; ನ ಕ್ಲೇದಯಂತಿ=ನೆನೆಸಲಾರದು; ಮಾರುತಃ=ಗಾಳಿ; ನ ಶೋಷಯತಿ= ಒಣಗಿಸಲಾರದು.

**ತಾ:** ಈ ಆತ್ಮವನ್ನು ಆಯುಧಗಳಾವುವು ಛೇದಿಸಲಾರವು. ಅಗ್ನಿ ಸುಡಲಾರದು, ನೀರು ಒದ್ದೆ ಮಾಡಲಾರದು, ಗಾಳಿ ಒಣಗಿಸಲಾರದು.

**ವ್ಯಾಖ್ಯೆ:** ಜೀವಿಗೆ ೧) ಶರೀರ ೨) ಮನಸ್ಸು ೩) ಆತ್ಮ- ಎನ್ನುವ ಮೂರು ಇವೆ. ಇವುಗಳಲ್ಲಿ ಒಂದಕ್ಕಿಂತ ಮತ್ತೊಂದು ಸೂಕ್ಷ್ಮವಾಗಿರುವಂತಹವು. ಸ್ಥೂಲಪಂಚಭೂತಗಳು (ಶಸ್ತ್ರ ಜಲಾದಿಗಳು) ಸ್ಥೂಲವಾದ ಶರೀರವನ್ನು ಬಾಧಿಸುತ್ತವೆಯೇ ಹೊರತು ಸೂಕ್ಷ್ಮವಾದ ಮನಸ್ಸನ್ನಲ್ಲ. ಹಾಗಿರಬೇಕಾದರೆ ಅತಿ ಸೂಕ್ಷ್ಮವಾದ ಆತ್ಮವನ್ನು ಅವು ಹೇಗೆ ಬಾಧಿಸಬಲ್ಲವು?

ಪರಮಾರ್ಥ ದೃಷ್ಟಿಯಿಂದ ನೋಡಿದಾಗ ಸ್ಥೂಲ, ಸೂಕ್ಷ್ಮದೇಹಗಳೆರಡೂ ರಜ್ಜುಸರ್ಪಗಳಂತೆ ಕಲ್ಪನೆಗಳೇ ಹೌದು. ಕಲ್ಪಿತ ವಸ್ತುವು, ಇಲ್ಲವೆ ಆರೋಪಿತ ವಸ್ತುವು ಅಧಿಷ್ಠಾನವನ್ನು ಸ್ವಲ್ಪವೂ ಬಾಧಿಸಲಾರದು. (ಮೃಗತೃಷ್ಣಾಜಲವು ಮರು ಭೂಮಿಯನ್ನು ಒದ್ದೆ ಮಾಡಲು ಅಸಾಧ್ಯವಲ್ಲವೇ!)? ಆತ್ಮದ ಇಂತಹ ಸ್ವಭಾವವನ್ನು ಮನನ ಮಾಡುವುದರಿಂದ ಜೀವಿಗೆ ಅಪರಿಮಿತವಾದ ಧೈರ್ಯವು ಬರುವುದು.

**ಅ||** ಆತ್ಮದ ಅವಿನಾಶತ್ವವನ್ನು ಮತ್ತೆ ಪ್ರತಿಪಾದಿಸಲಾಗಿದೆ.

೨೪. ಅಚ್ಛೇದ್ಯೋಽಯಮದಾಹ್ಯೋಽಯಮಕ್ಲೇದ್ಯೋಽಶೋಷ್ಯ ಏವಚ
ನಿತ್ಯಸ್ಸರ್ವಗತಸ್ಥಾಣುರಚಲೋಽಯಂ ಸನಾತನಃ

**ಅರ್ಥ:** ಅಯಂ=ಈ ಆತ್ಮ ಅಚ್ಛೇದ್ಯಃ=ಛೇದಿಸಲ್ಪಡದು; ಅಯಂ=ಈ ಆತ್ಮ ಅದಾಹ್ಯಃ=ಸುಡಲ್ಪಡದು, (ಮತ್ತೆ) ಅಕ್ಲೇದ್ಯಃ=ಒದ್ದೆಯಾಗಲಾರದು, ಅಶೋಷ್ಯಃ ಏವಚ=ಒಣಗಿಸಲ್ಪಡಲಾಗದು; ಅಯಂ=ಈ ಆತ್ಮ ನಿತ್ಯಃ= ನಿತ್ಯವು, ಸರ್ವಗತಃ=ಸರ್ವವ್ಯಾಪಿಯು, ಸ್ಥಾಣುಃ=ಸ್ಥಿರಸ್ವರೂಪಿ; ಅಚಲಃ= ನಿಶ್ಚಲವೂ (ಚಲನೆಯಿಲ್ಲದ್ದು); ಸನಾತನಃ=ಅನಾದಿಯಾದದ್ದು.

**ತಾ:** ಈ ಆತ್ಮ ಛೇದಿಸಲ್ಪಡದು, ಸುಡಲ್ಪಡದು, ಒದ್ದೆಯಾಗಲಾರದು, ಒಣಗಿಸಲಸಾಧ್ಯವಾದುದು. ಇದು ನಿತ್ಯವೂ, ಸರ್ವವ್ಯಾಪಿಯೂ, ಸ್ಥಿರಸ್ವ ರೂಪಿಯೂ, ನಿಶ್ಚಲವೂ ಹಾಗೂ ಪುರಾತನವಾದದ್ದು.

**ವ್ಯಾಖ್ಯೆ :** ಪಂಚಭೂತಗಳು ಪಾಂಚಭೌತಿಕ ವಸ್ತುವನ್ನು ಮಾತ್ರ ಬಾಧಿಸಬಲ್ಲವು. ಆತ್ಮವು ಪಂಚಭೂತಾತ್ಮವಲ್ಲ. ಆದ್ದರಿಂದ ಅವುಗಳ ಪ್ರಭಾವವೇನೂ ಅದರ ಮೇಲೆ ಬೀಳಲಾರದು.

"ನಿತ್ಯಃ ಸರ್ವಗತಃ"- ಎನ್ನುವ ಎರಡು ಪದಗಳಿಂದ ಆತ್ಮವನ್ನು ಕಾಲಕ್ಕೂ, ದೇಶಕ್ಕೂ ಅತೀತವಾದುದೆಂದು ವಿವರಿಸಲಾಗಿದೆ. ಎಲ್ಲ ಕಾಲದಲ್ಲಿಯೂ ಇರುವವನು ನಿತ್ಯನು; ಎಲ್ಲಾ ದೇಶಗಳಲ್ಲೂ ಇರುವವನು ಸರ್ವಗತನು. ಆತ್ಮ ದೇಶಕಾಲಗಳೆರಡರಲ್ಲೂ ವ್ಯಾಪಿಸಿದ್ದು ಅವುಗಳಿಗೆ ಅತೀತವಾಗಿದೆ. ಪ್ರಪಂಚದಲ್ಲಿಯ ಪ್ರತಿ ವಸ್ತುವು ಕಾಲಕ್ಕೆ ಒಳಗಾಗಿದೆ. ಕಾಲಕ್ಕೆ ಅತೀತವಾದ ಪದಾರ್ಥವೇನೂ ಜಗತ್ತಿನಲ್ಲಿಲ್ಲ. ಬ್ರಹ್ಮಾಂಡಗಳೆಲ್ಲವೂ ಕಾಲಗರ್ಭದಲ್ಲಿ ವಿಲೀನವಾಗಿ ಹೋಗುತ್ತವೆ. ಈ ಪ್ರಕಾರವಾಗಿ ಕಾಲವು ಸರ್ವವನ್ನು ನುಂಗಿ ಹಾಕುತ್ತಿರಲು ಆತ್ಮ ಅಂತಹ ಕಾಲವನ್ನು ನುಂಗಿ ಹಾಕುತ್ತದೆ. ಆದ್ದರಿಂದಲೇ ಆತನಿಗೆ 'ಅಂತಕಾಂತಕನು' ಎನ್ನುವ ಹೆಸರಿದೆ. ಆತನು ನಿತ್ಯನು. ಹಾಗೆಯೇ ಸರ್ವವ್ಯಾಪಕನೂ ಹೌದು. ಸಮಸ್ತ ಚರಾಚರ ಪ್ರಾಣಿಕೋಟಿಗಳಲ್ಲಿ ಆತನು 'ಸತ್ತಾ ಸಾಮಾನ್ಯರೂಪ'ದಲ್ಲಿ ಬೆಳಗುತ್ತಿದ್ದಾನೆ. ಈ ಸತ್ಯವನ್ನು ತಿಳಿದಾಗ ಇನ್ನು ಪಾಪ ಮಾಡಲು ಜೀವಿಯು ಹೇಗೆ ಸಾಹಸ ಮಾಡಬಲ್ಲನು? ಸರ್ವ ಸಾಕ್ಷಿಯಾದ ಪರಮಾತ್ಮನು ಸರ್ವತ್ರ ವ್ಯಾಪಿಸಿ ಸಮಸ್ತವನ್ನು ವೀಕ್ಷಿಸುತ್ತಿರುವಾಗ ಆತನ ಸನ್ನಿಧಿಯಲ್ಲಿ ಯಾರಾದರೂ ಪಾಪವನ್ನು ಮಾಡಲು ಸಾಧ್ಯವೇ? ಆದ್ದರಿಂದ ಈ ಸತ್ಯಗಳನ್ನು ಚೆನ್ನಾಗಿ ಮನನ ಮಾಡುತ್ತಾ ಚಿತ್ತದಲ್ಲಿ ಕಳಂಕ ಉದಯಿಸದಂತೆ ನೋಡಿಕೊಳ್ಳಬೇಕು.

ಆತ್ಮ ಸರ್ವವ್ಯಾಪಿಯಾಗಿರುವುದರಿಂದ ಅದು ಬೇರೆಯ ಸ್ಥಳಕ್ಕೆ ಹೋಗುವ ಪ್ರಶ್ನೆ ಹುಟ್ಟುವುದೇ ಇಲ್ಲ. ಅದು ಇಲ್ಲದೇ ಇರುವ ಸ್ಥಳವೇ ಇಲ್ಲವೆಂದಾಗ ಹೋಗುವುದೆಲ್ಲಿಗೆ? ಆದ್ದರಿಂದ ಅದನ್ನು 'ಸ್ಥಾಣು' ಎಂದು ಕರೆಯಲಾಗಿದೆ. ಮತ್ತೆ ಸನಾತನನೆಂದು ವರ್ಣಿಸಲಾಗಿದೆ. ಆತ್ಮ ಸನಾತನವಾದುದರಿಂದ ಆತ್ಮತತ್ವ ವಿಚಾರಣೆಯೇ ವಾಸ್ತವವಾಗಿ ಸನಾತನ ಧರ್ಮವೆನಿಸುವುದು. ಸನಾತನವಲ್ಲದ ಕ್ಷಣಿಕ ಪ್ರಾಪಂಚಿಕ ವಸ್ತು ಜಾಲವನ್ನು ಕುರಿತ ವಿಚಾರಗಳಿಂದ ಮುಕ್ತಿ ಎಂದೆಂದಿಗೂ ಸಿಗುವುದಿಲ್ಲ. ಆದ್ದರಿಂದ ಆತ್ಮ ವಿಚಾರಣಾ ರೂಪವಾದ ಸನಾತನ ಧರ್ಮವನ್ನೇ ಜೀವಿಯು ಆಶ್ರಯಿಸಬೇಕು.

ಪ್ರಶ್ನೆ : ಆತ್ಮ ಎಂತಹದು ?

ಉತ್ತರ : ಛೇದಿಸಲ್ಪಡದು, ಸುಡಲ್ಪಡದು, ಒದ್ದೆಯಾಗದು, ಒಣಗಿಸಲ್ಪಡ ಲಸಾಧ್ಯವಾದುದು. ಅದು ನಿತ್ಯ, ಸರ್ವವ್ಯಾಪಿ, ನಿಶ್ಚಲ ಹಾಗೂ ಸನಾತನ ವಾದುದು.

**ಅ||** ಈ ಪ್ರಕಾರವಾಗಿ ಆತ್ಮ ಶಾಶ್ವತವೆಂದು ತಿಳಿದು ದುಃಖವನ್ನು ದೂರಮಾಡಿ ಕೊಳ್ಳಬೇಕೆಂದು ವಚಿಸುತ್ತಿದ್ದಾನೆ.

೨೫. ಅವ್ಯಕ್ತೋಽಯಮಚಿಂತ್ಯೋಽಯಮವಿಕಾರ್ಯೋಽಯಮುಚ್ಯತೇ
ತಸ್ಮಾದೇವಂ ವಿದಿತ್ವೈನಂ ನಾನುಶೋಚಿತುಮರ್ಹಸಿ

**ಅರ್ಥ:** ಅಯಂ=ಈ ಆತ್ಮ ಅವ್ಯಕ್ತಃ=ಇಂದ್ರಿಯಗಳಿಗೆ ಅಗೋಚರವಾದವನು, ಅಯಂ=ಈ ಆತ್ಮ ಅಚಿಂತ್ಯಃ=ಮನಸ್ಸಿನಿಂದ ಯೋಚಿಸಲಸಾಧ್ಯವಾದವನು; ಅಯಂ=ಈ ಆತ್ಮ ಅವಿಕಾರ್ಯಃ=ವಿಕಾರವನ್ನು ಹೊಂದದವನು (ಇತಿ= ಎಂದು); ಉಚ್ಯತೇ=ಹೇಳಲ್ಪಡುತ್ತಿದೆ. ತಸ್ಮಾತ್=ಆದ್ದರಿಂದ; ಏನಂ=ಈ ಆತ್ಮವನ್ನು; ಏವಂ=ಈ ಪ್ರಕಾರವಾಗಿ; ವಿದಿತ್ವಾ=ತಿಳಿದುಕೊಂಡು; ಅನುಶೋಚಿತುಂ=ದುಃಖಿಸಲು; ನ ಅರ್ಹಸಿ=ಯೋಗ್ಯವಲ್ಲ.

**ತಾ:** ಈ ಆತ್ಮ ಇಂದ್ರಿಯಗಳಿಗೆ ಗೋಚರವಾಗದವನು, ಮನಸ್ಸಿನಿಂದ ಚಿಂತಿಸಲಸಾಧ್ಯವಾದವನು, ವಿಕಾರಗಳನ್ನು ಹೊಂದದವನೆಂದು ಹೇಳಲ್ಪಡು ತ್ತಿದೆ. ಆದ್ದರಿಂದ ನೀನು ಈ ಪ್ರಕಾರವಾಗಿ ತಿಳಿದುಕೊಂಡು ದುಃಖಿಸಬಾರದು.

**ವ್ಯಾಖ್ಯೆ:** ಸ್ಥೂಲ ಪಂಚ ಭೂತಾತ್ಮಕ ಪದಾರ್ಥವು ನೇತ್ರಗಳಿಗೆ ಕಾಣಿಸುವುದು. ಆದರೆ ಆತ್ಮ ಅಂತಹವನಲ್ಲ. ಆದ್ದರಿಂದ ನೇತ್ರಗಳಿಗೆ ಅಗೋಚರನು. ಹಾಗೆಯೇ ಸೂಕ್ಷ್ಮ ಪಂಚಭೂತಾತ್ಮಕ ಪದಾರ್ಥವಾಗಿದ್ದಿದ್ದರೆ ಮನಸ್ಸಿಗೆ ಗೋಚರವಾಗುತ್ತಿತ್ತು ಆದರೆ ಆತ್ಮ ಅಂತಹವನಲ್ಲ. ಆದ್ದರಿಂದ ಮನಸ್ಸಿಗೆ ಅಗೋಚರನು. ಮನಸ್ಸು

ಲಯವಾದಾಗ ಉಳಿಯುವ ವಸ್ತುವೇ ಆತ್ಮ. ಮನಸ್ಸನ್ನು ಶುದ್ಧಮಾಡಿಕೊಳ್ಳುವ ಮೂಲಕ ಅದನ್ನು ಅಧಿಷ್ಠಾನದಲ್ಲಿ ವಿಲೀನಗೊಳಿಸಿದರೆ ನಂತರ ಏನು ಉಳಿಯುವುದೋ ಅದೇ ಆತ್ಮ. ಈ ಪ್ರಕಾರವಾಗಿ ಮನೋವಿಲಯದಿಂದ ಲಭಿಸುವ ವಸ್ತುವು ಮನಸ್ಸಿಗೆ ಹೇಗೆ ಗೋಚರವಾಗಬಲ್ಲದು? ಆದ್ದರಿಂದಲೇ ಆತ್ಮನನ್ನು ಅಚಿಂತ್ಯನೆಂದು ಇಲ್ಲಿ ವರ್ಣಿಸಲಾಗಿದೆ. ಮತ್ತೆ ಪ್ರಪಂಚದಲ್ಲಿರುವ ಸಮಸ್ತ ದೃಶ್ಯ ಪದಾರ್ಥಗಳು ಹುಟ್ಟುವ, ಬೆಳೆಯುವ ಮುಂತಾದ ಆರು ವಿಧಗಳಾದ ವಿಕಾರಗಳಿಗೆ ಒಳಗಾಗಿರುತ್ತವೆ. ಆತ್ಮ ಅಂತಹ ದೃಶ್ಯ ವಸ್ತುವಲ್ಲ. ದೃಗ್ರೂಪನು, ದೇಶಕಾಲಾತೀತನಾದ ಸಚ್ಚಿದಾನಂದರೂಪಿ, ಸರ್ವಸಾಕ್ಷಿ. ಕಾರ್ಯವು ವಿಕಾರಹೊಂದುತ್ತಾ ಎಂದಿಗಾದರೂ ತನ್ನ ಕಾರಣದಲ್ಲಿ ಲಯವಾಗಲೇಬೇಕು. ಆತ್ಮನು ಕಾರ್ಯವಲ್ಲ. ಸರ್ವಕಾರಣಗಳಿಗೂ ಕಾರಣನು. ಆದ್ದರಿಂದ ಅಲ್ಲಿ ವಿಕಾರವೇ ಇರುವುದಿಲ್ಲ.

**"ತಸ್ಮಾದೇವಂ ವಿದಿತ್ವೈನಂ ನಾನು ಶೋಚಿತು ಮರ್ಹಸಿ"** ಸ್ವಸ್ವರೂಪದ ಬಗ್ಗೆ ಇರುವ ಅಜ್ಞಾನವೇ ಶೋಕಕ್ಕೆ ಮೂಲಕಾರಣ. ತಾನು ದೇಹವೆಂದು, ಮನಸ್ಸೆಂದು ತಿಳಿದು ಅವುಗಳೊಡನೆ ಜೀವಿಯು ಯಾವಾಗ ತಾದಾತ್ಮ್ಯವನ್ನು ಹೊಂದುವನೋ ಆ ಕ್ಷಣವೇ ದುಃಖವು ಆತನನ್ನು ಆಶ್ರಯಿಸುವುದು. ಆದರೆ ತಾನು ವಾಸ್ತವವಾಗಿ ದೇಹವಾಗಲೀ, ಮನಸ್ಸಾಗಲೀ ಅಲ್ಲವೆಂದು, ನಿರ್ವಿಕಾರನಾದ ಆತ್ಮನೇ ಎಂದು ಸದ್ಗುರುಗಳ ಮೂಲಕ, ಶಾಸ್ತ್ರಗಳ ಮೂಲಕ ತಿಳಿದರೆ ಇನ್ನು ದುಃಖಕ್ಕೆ ಅವಕಾಶವೆಲ್ಲಿದೆ? ಆದ್ದರಿಂದಲೇ ಶ್ರೀಕೃಷ್ಣಮೂರ್ತಿ ಅರ್ಜುನನಿಗೆ ಆತ್ಮಜ್ಞಾನವನ್ನು ಹೊಂದಿ ದುಃಖರಹಿತನಾಗಬೇಕೆಂದು ಇಲ್ಲಿ ಬೋಧಿಸುತ್ತಿದ್ದಾನೆ.

ಈ ತಾಪತ್ರಯಾತ್ಮಕವಾದ, ಮಹಾಭಯಂಕರವಾದಂತಹ ಸಂಸಾರ ದುಃಖಕ್ಕೆ ಸಿಕ್ಕಿ ತಲ್ಲಣಿಸುತ್ತಿರುವ ಜನಗಳ ದುಃಖನಿವಾರಣೋಪಾಯಕ್ಕೆ ಆತ್ಮ ಜ್ಞಾನವೊಂದೇ (ಸ್ವಸ್ವರೂಪಾನುಭವವೇ) ದಾರಿ ಎಂದು ಭಗವದ್ವಾಕ್ಯದ ಮೂಲಕ ಸ್ಪಷ್ಟವಾಗುತ್ತಿದೆ. ಆದ್ದರಿಂದ ಆತ್ಮನನ್ನು ಸರ್ವರೂ ಅನ್ವೇಷಿಸಬೇಕು.* ಆತ್ಮಜ್ಞಾನವೊಂದೇ ಈ ಸಂಸಾರ ಗಾಢಾಂಧಕಾರಕ್ಕೆ ಬೆಳಕು ನೀಡುವ ದೀಪ.

ಪ್ರಶ್ನೆ : ಆತ್ಮದ ಲಕ್ಷಣಗಳನ್ನು ವಿವರಿಸಿ ?

ಉತ್ತರ : ಆತನು ೧) ಇಂದ್ರಿಯಗಳಿಗೆ ಅಗೋಚರನು ೨) ಮನಸ್ಸಿನಿಂದ ಚಿಂತಿಸಲಶಕ್ಯವಾದವನು ೩) ನಿರ್ವಿಕಾರನು.

ಪ್ರಶ್ನೆ : ಶೋಕ ನಿವಾರಣೆಗೆ ಉಪಾಯವೇನು ?

ಉತ್ತರ : ಈ ಪ್ರಕಾರವಾಗಿ ಆತ್ಮನನ್ನು ತಿಳಿದು, ಆತ್ಮಾನುಭೂತಿಯನ್ನು ಹೊಂದುವುದೇ ಶೋಕರಾಹಿತ್ಯಕ್ಕೆ ಹೇತು.

**ಅ॥** ಇನ್ನು ಜೀವಿಯ ದೃಷ್ಟಿಯಿಂದ ನೋಡಿದರೂ ಆತ್ಮನನ್ನು ಕುರಿತು ಶೋಚಿಸುವುದು ಸಾಧುವಲ್ಲವೆಂದು ಹೇಳಲಾಗುತ್ತಿದೆ.

**೨೬. ಅಥ ಚೈನಂ ನಿತ್ಯಜಾತಂ ನಿತ್ಯಂ ವಾ ಮನ್ಯಸೇ ಮೃತಮ್**
**ತಥಾಪಿ ತ್ವಂ ಮಹಾಬಾಹೋ ನೈವಂ ಶೋಚಿತು ಮರ್ಹಸಿ**

**ಅರ್ಥ:** ಮಹಾಬಾಹೋ=ಮಹಾಬಾಹುಗಳುಳ್ಳ (ಉದ್ದ ತೋಳುಗಳುಳ್ಳ) ಅರ್ಜುನಾ! ಅಥ ಚ=ಒಂದು ವೇಳೆ; ಏನಂ=ಈ ಆತ್ಮವು; ನಿತ್ಯಜಾತಂ ವಾ=ಯಾವಾಗಲೂ ಹುಟ್ಟುವಂಥದೆಂದಾಗಲಿ; ನಿತ್ಯಂ=ಯಾವಾಗಲೂ; ಮೃತಂ=ಮರಣಕ್ಕೊಳಗಾಗುವುದೆಂದಾಗಲಿ; ಮನ್ಯಸೇ=ಅಂದುಕೊಂಡರೂ (ಭಾವಿಸಿದರು); ತಥಾಪಿ=ಹಾಗಿದ್ದರೂ; ಏವಂ=ಈ ರೀತಿಯಾಗಿ; ಶೋಚಿತಂ= ದುಃಖಿಸುವುದು; ತ್ವಂ=ನೀನು; ನ ಅರ್ಹಸಿ=ಸರಿಯಲ್ಲ.

**ತಾ:** ಓ ಅರ್ಜುನಾ! ಒಂದು ವೇಳೆ ಈ ಆತ್ಮ(ದೇಹದೊಡನೆ) ನಿರಂತರವಾಗಿ ಹುಟ್ಟುತ್ತಾ, ಸಾಯುತ್ತಾ ಇರುವುದೆಂದು ನೀನು ಭಾವಿಸಿದರೆ, ಆ ಸಂದರ್ಭದಲ್ಲೂ ಕೂಡ ಈ ಪ್ರಕಾರವಾಗಿ ಶೋಚಿಸುವುದು ಸರಿಯಲ್ಲ.

**ವ್ಯಾಖ್ಯೆ:** "ಮಹಾಬಾಹೋ"- "ಓ ಅರ್ಜುನಾ! ನೀನು ಮಹಾ ಬಾಹುಬಲ (ಭೌತಿಕ ಬಲ)ವುಳ್ಳವನು. ಆದರೆ ಅದು ಸಾಕಾಗದು. ಆಧ್ಯಾತ್ಮಿಕ ಬಲವೂ ಇರಬೇಕು. ಅದು ಇಲ್ಲವಾದ್ದರಿಂದಲೇ ನೀನು ಶೋಕಿಸುತ್ತಿದ್ದೀಯೆ. ನಿನ್ನ ಬಾಹುಬಲವು ನಿನ್ನ ಮಾನಸಿಕ ವ್ಯಥೆಯನ್ನು ಹೋಗಲಾಡಿಸಲಶಕ್ಯವಾಗಿದೆ. ಆದ್ದರಿಂದ ಭೌತಿಕ ಬಲದೊಡನೆ ಆತ್ಮಶಕ್ತಿ (Spiritual Energy)ಯನ್ನೂ ಕೂಡ ಸಂಪಾದಿಸು" ಎಂದು ತಿಳಿಯಪಡಿಸಲೆಂದು ಮಹಾಬಾಹೋ ಎನ್ನುವ ಪದವನ್ನು ಬಹುಶಃ ಉಪಯೋಗಿಸಲಾಗಿದೆ.

ಶ್ರೀಕೃಷ್ಣ ಪರಮಾತ್ಮನು ಅರ್ಜುನನನ್ನು ಸಮಾಧಾನಪಡಿಸಲೆಂದು ಉನ್ನತ ಸ್ಥಾಯಿಯ ಮಾತುಗಳಿಂದ ಕೆಳಗಿಳಿದು ಬಂದು ಸಾಮಾನ್ಯ ಜನರ 'ಜೀವದೃಷ್ಟಿ'ಯಿಂದ ಅವಲೋಕಿಸುತ್ತ ಆ ಸ್ಥಿತಿಯಲ್ಲೂ ದುಃಖಕ್ಕೆ ಅವಕಾಶವಿಲ್ಲವೆಂದು ನುಡಿಯುತ್ತಿದ್ದಾನೆ.

'*ಅಥಚ*'- 'ಒಂದು ವೇಳೆ' ಎಂದು ಹೇಳಿರುವುದರಿಂದ ಇದು ಸಿದ್ಧಾಂತದ ಮಾತಲ್ಲವೆಂದು ಸಾಮಾನ್ಯ ಜನರ ದೃಷ್ಟಿಯಿಂದ ಮಾತ್ರ ಹೇಳಲ್ಪಟ್ಟ ಮಾತು ಎಂದು ಸ್ಪಷ್ಟವಾಗುತ್ತಿದೆ. ಆತ್ಮ ಒಂದುವೇಳೆ ದೇಹದೊಡನೆ ಹುಟ್ಟು ಸಾವುಗಳನ್ನು ಹೊಂದಿದ್ದರೂ ಕೂಡ ಶೋಕಕ್ಕೆ ಅವಕಾಶವಿಲ್ಲವೆಂದಾಗ ವಾಸ್ತವವಾಗಿ ಹುಟ್ಟು ಸಾವುಗಳಿಲ್ಲದ ಆತ್ಮದ ವಿಚಾರವಾಗಿ ಬೇರೆ ಹೇಳಬೇಕೇ ಎನ್ನುವ ಅರ್ಥದಲ್ಲಿ ಉಪಯೋಗಿಸಲ್ಪಟ್ಟಿದೆ.

**೨೭. ಜಾತಸ್ಯ ಹಿ ಧ್ರುವೋ ಮೃತ್ಯುರ್ಧ್ರುವಂ ಜನ್ಮ ಮೃತಸ್ಯ ಚ**
**ತಸ್ಮಾದಪರಿಹಾರ್ಯೇಽರ್ಥೇ ನ ತ್ವಂ ಶೋಚಿತು ಮರ್ಹಸಿ**

**ಅರ್ಥ:** ಜಾತಸ್ಯ=ಜನ್ಮಿಸಿದವನಿಗೆ; ಮೃತ್ಯುಃ=ಸಾವು; ಧ್ರುವೋಹಿ= ನಿಶ್ಚಯವು; ಮೃತಸ್ಯ=ಮರಣಿಸಿದವನಿಗೆ; ಜನ್ಮ ಚ=ಹುಟ್ಟುವುದು, ಧ್ರುವಂ=ನಿಶ್ಚಯ; ತಸ್ಮಾತ್=ಆಕಾರಣದಿಂದ; ಅಪರಿಹಾರ್ಯೇ=ತಪ್ಪಿಸಲಸಾಧ್ಯವಾದ; ಅರ್ಥೇ=(ಈ) ವಿಷಯದಲ್ಲಿ; ತ್ವಮ್=ನೀನು; ಶೋಚಿತುಮ್=ದುಃಖಿಸುವುದು, ನ ಅರ್ಹಸಿ=ಅಸಮಂಜಸ.

**ತಾ:** (ಒಂದು ವೇಳೆ ನೀನು ಈ ಆತ್ಮನು ಹುಟ್ಟುಸಾವುಗಳುಳ್ಳದ್ದು ಎಂದು ಭಾವಿಸಿದಲ್ಲಿ) ಹುಟ್ಟಿದವನಿಗೆ ಮರಣ ತಪ್ಪದು. ಮರಣಿಸಿದವನಿಗೆ ಜನ್ಮ ತಪ್ಪಿದ್ದಲ್ಲ. ತಪ್ಪಿಸಲಸಾಧ್ಯವಾದ ಈ ವಿಷಯದ ಬಗ್ಗೆ ಇನ್ನು ನೀನು ಶೋಚಿಸುವುದು ಯುಕ್ತವಲ್ಲವೇ ಅಲ್ಲ.

**ವ್ಯಾಖ್ಯೆ :** ಇದೂ ಸಹ ಈಗಾಗಲೇ ತಿಳಿಸಿದ ಸಾಮಾನ್ಯರ ದೃಷ್ಟಿಯನ್ನನುಸರಿಸಿ ಹೇಳಿದ್ದೇ ಆಗಿದೆ. ಯತಾರ್ಥವಾಗಿ ಆತ್ಮಕ್ಕೆ ಹುಟ್ಟು ಸಾವುಗಳಿಲ್ಲ.

---

* ಆತ್ಮಾ ವಾ ಅರೇ ದ್ರಷ್ಟವ್ಯ ಶ್ರೋತವ್ಯೋ ಮನ್ತವ್ಯೋ ನಿದಿಧ್ಯಾಸಿತವ್ಯ (ಬೃ-ಉ)

"ಅಪರಿಹಾರ್ಯೇರ್ಥೇ"- ಆತ್ಮಜ್ಞಾನವು ಲಭಿಸದ ಹೊರತು ಈ ಜನನ ಮರಣಗಳು ಅಪರಿಹಾರ್ಯಗಳಾಗಿಯೇ (ತಪ್ಪಿಸಲಸಾಧ್ಯವಾದವುಗಳಾಗಿ) ಉಳಿಯುತ್ತವೆ. ಆತ್ಮಜ್ಞಾನವಾದ ನಂತರ ಆ ಸಂಸಾರ ಚಕ್ರ ಪರಿಭ್ರಮಣ (ಜನನ ಮರಣ)ವು ನಿಂತು ಹೋಗುತ್ತದೆ. ಅಲ್ಲಿಗೆ ಅವು 'ಪರಿಹಾರ್ಯ' ಸ್ಥಿತಿ ತಲುಪುತ್ತವೆ. ಆದ್ದರಿಂದ ಶ್ರೀ ಕೃಷ್ಣಪರಮಾತ್ಮನು, ಕರ್ಮಸಂಚಯವು ಇನ್ನೂ ಕ್ಷಯವಾಗದೇ ಇರುವ ಸಾಮಾನ್ಯರನ್ನು ದೃಷ್ಟಿಯಲ್ಲಿಟ್ಟುಕೊಂಡು ಈ ಶ್ಲೋಕವನ್ನು ಹೇಳಿರುವನೆಂದು ಗ್ರಹಿಸಬೇಕು. ಹಾಗಿಲ್ಲದಿದ್ದರೆ 'ನ ಜಾಯತೇ ಮ್ರಿಯತೇ ವಾ ಕದಾಚಿತ್......" ಮುಂತಾದ ಶ್ಲೋಕಗಳಿಗೆ ಹಾಗೂ ಅವುಗಳ ಪರಮ ಸತ್ಯಗಳಿಗೆ ಲೋಪವುಂಟಾಗುತ್ತದೆ. ಭಗವಂತನು ಸಾಮಾನ್ಯ ಜನರ ದೃಷ್ಟಿಯಲ್ಲಿಯೇ ಆತ್ಮದ ಬಗ್ಗೆ ಶೋಕಿಸಬಾರದೆಂದು ಹೇಳಿರುವಾಗ, ಜ್ಞಾನಿಗಳ ದೃಷ್ಟಿಯಲ್ಲಿ ಬೇರೆ ಹೇಳುವ ಪ್ರಮೇಯವೇ ಇಲ್ಲ ಎನ್ನುವುದನ್ನು ಊಹಿಸಿಕೊಳ್ಳಬೇಕು.

**೨೮. ಅವ್ಯಕ್ತಾದೀನಿ ಭೂತಾನಿ ವ್ಯಕ್ತಮಧ್ಯಾನಿ ಭಾರತ**
**ಅವ್ಯಕ್ತನಿಧನಾನ್ಯೇವ ತತ್ರ ಕಾ ಪರಿದೇವನಾ**

**ಅರ್ಥ:** ಭಾರತ- ಓ ಅರ್ಜುನಾ! ಭೂತಾನಿ=ಪ್ರಾಣಿಗಳು (ಪ್ರಾಣಿಗಳ ದೇಹಗಳು); ಅವ್ಯಕ್ತಾದೀನಿ=ಆದಿಯಲ್ಲಿ (ಹುಟ್ಟುವುದಕ್ಕೆ ಪೂರ್ವದಲ್ಲಿ) ಕಣ್ಣಿಗೆ ಕಾಣಿಸದಂತಹ ಸ್ವರೂಪವುಳ್ಳವು; ವ್ಯಕ್ತಮಧ್ಯಾನಿ=ಮಧ್ಯದಲ್ಲಿ (ಹುಟ್ಟಿದ ನಂತರ) ಕಾಣಿಸುವ ರೂಪಗಳನ್ನು ಹೊಂದಿರುವವು; ಅವ್ಯಕ್ತ ನಿಧನಾನ್ಯೇವ= ಮರಣಿಸಿದ ನಂತರ (ಅಂತ್ಯದಲ್ಲಿ) ಕಾಣಿಸದಂತಹ ಸ್ವರೂಪವುಳ್ಳವು (ಭವಂತಿ= ಆಗುತ್ತಿವೆ); ತತ್ರ=ಆ ವಿಷಯದಲ್ಲಿ; (ಇನ್ನು) ಪರಿದೇವನಾ=ದುಃಖವು; ಕಾ=ಏಕೆ?

**ತಾ:** ಓ ಅರ್ಜುನಾ! ಪ್ರಾಣಿಕೋಟಿಗಳೆಲ್ಲವೂ ಹುಟ್ಟುವುದಕ್ಕಿಂತ ಮೊದಲು ಅದೃಶ್ಯವಾಗಿಯೂ, ಹುಟ್ಟಿದ ನಂತರ (ದೇಹದಿಂದ ಕೂಡಿ) ದೃಶ್ಯವಾಗಿಯೂ ಮರಣಿಸಿದ ನಂತರ ಮತ್ತೆ ಅದೃಶ್ಯವಾಗುತ್ತಿವೆ. ಹಾಗಿರುವಾಗ ಈ ವಿಷಯದಲ್ಲಿ ಶೋಕವೇಕೆ ? (ಮೊದಲು ಅದೃಶ್ಯವಾಗಿದ್ದು ಮತ್ತೆ ದೃಶ್ಯವಾಗಿ ಕೊನೆಗೆ ಅದೃಶ್ಯವಾಗುವ ಭ್ರಾಂತಿರೂಪಗಳಾದ ಈ ದೇಹಗಳ ಗೋಸ್ಕರ ದುಃಖಿಸುವುದು ಏಕೆ ಎನ್ನುವುದು ಇದರ ಅರ್ಥ. ಆದಿಯಲ್ಲಿ ಯಾವ ಅವ್ಯಕ್ತ ರೂಪವನ್ನು ಹೊಂದಿರುವುವೋ, ಅದೇ ಅವ್ಯಕ್ತ ರೂಪವನ್ನು ಮತ್ತೆ ಅಂತ್ಯದಲ್ಲಿ ಧರಿಸುತ್ತಿರುವ ದೇಹಗಳಿಗಾಗಿ ಶೋಕಿಸುವುದೇಕೆ?).

**ವ್ಯಾಖ್ಯೆ:** ಪ್ರಾಣಿಗಳಿಗೆ ಜನನಕ್ಕಿಂತ ಮೊದಲು ಈ ದೇಹದೊಡನೆ ಸಂಬಂಧ ವಿರುವುದಿಲ್ಲ. ಮರಣಿಸಿದ ನಂತರವೂ ಇರುವುದಿಲ್ಲ. ಮಧ್ಯಕಾಲದಲ್ಲಿ ಮಾತ್ರ ಇದೆ. ಆದಿ ಅಂತ್ಯಗಳಲ್ಲಿ ಇಲ್ಲವಾಗಿ ಮಧ್ಯದಲ್ಲಿ ಮಾತ್ರ ಕಂಡುಬರುವುದು ಮಿಥ್ಯಾ ವಸ್ತುವೇ ಹೌದು.* ಅದು ಭ್ರಾಂತಿ. ಸ್ವಪ್ನ ಜಗತ್ತು ನಿದ್ರೆಗೆ ಮೊದಲು ಇರುವುದಿಲ್ಲ; ನಿದ್ರೆಯಿಂದ ಎಚ್ಚೆತ್ತ ನಂತರವೂ ಇರುವುದಿಲ್ಲ. ಮಧ್ಯೆ ಮಾತ್ರ ಇರುತ್ತದೆ. ಸ್ವಪ್ನವನ್ನು ಹೇಗೆ ಮಿಥ್ಯೆಯೆಂದು ಕರೆಯುತ್ತೇವೆಯೋ ಹಾಗೆ ಮಧ್ಯ ಕಾಲದಲ್ಲಿ ಮಾತ್ರ ಕಂಡುಬರುವ ಈ ದೇಹಾದಿ ದೃಶ್ಯ ಪದಾರ್ಥಗಳು ಬಿಸಿಲು ಕುದುರೆಗಳಂತೆ ಅಸತ್ಯ ಹಾಗೂ ಭ್ರಾಂತಿರೂಪಗಳು. ಹಾಗಿರುವಾಗ ಇನ್ನು ಭಯವೇಕೆ? ಎಂದು ಭಗವಂತನು ಪ್ರಶ್ನಿಸುತ್ತಿದ್ದಾನೆ.

ಈ ಪ್ರಕಾರವಾಗಿ ಅನೇಕ ಯುಕ್ತಿಗಳ ಮೂಲಕ ಶ್ರೀಕೃಷ್ಣಮೂರ್ತಿ ಅರ್ಜುನನ ಶೋಕಗಳನ್ನು ಪರಿಹರಿಸಲು ಯತ್ನಿಸುತ್ತಿದ್ದಾನೆ- ಇಲ್ಲಿಯವರಿಗೆ ಆತನು ಬೋಧಿಸಿದ ಯುಕ್ತಿಗಳನ್ನು ಸಂಕ್ಷೇಪವಾಗಿ ಕೆಳಗೆ ವಿವರಿಸಲಾಗಿದೆ.

೧) ಆತ್ಮ ಶಾಶ್ವತ. ಬಂಧು ಮಿತ್ರರೆಲ್ಲಾ ಆತ್ಮಸ್ವರೂಪರು. ಆದ್ದರಿಂದ ಅವರಿಗಾಗಿ ದುಃಖಿಸುವುದು ಸರಿಯಲ್ಲ.

೨) ಆತ್ಮ ನಿರ್ವಿಕಾರಿ. ಜೀರ್ಣಿಸಿದ ವಸ್ತ್ರಗಳನ್ನು ತ್ಯಜಿಸಿ ಹೊಸ ವಸ್ತ್ರಗಳನ್ನು ಧರಿಸಿದಂತೆ ಅದು ಜೀರ್ಣಿಸಿದ ಶರೀರವನ್ನು ಬಿಟ್ಟು ನೂತನ ಶರೀರವನ್ನು ಧರಿಸುತ್ತದೆ. ಆದ್ದರಿಂದ ನಿರಾಕರಿಸಲ್ಪಟ್ಟ ಶರೀರಗಳಿಗಾಗಿ ಶೋಕಿಸುವ ಅಗತ್ಯವಿಲ್ಲ.

೩) ಒಂದು ವೇಳೆ ಆತ್ಮ ಜನನ ಮರಣಗಳಿಗೆ ಒಳಗಾಗಿದೆ ಎಂದುಕೊಂಡರೂ, ಒಂದು ಸಾರಿ ಮರಣಿಸಿದ್ದು ಮತ್ತೆ ಹುಟ್ಟುವುದಾದ್ದರಿಂದ ಆಗಲೂ ದುಃಖಿಸುವ ಅಗತ್ಯವಿಲ್ಲ.

೪) ಈ ಶರೀರಗಳು ಜನನಕ್ಕಿಂತ ಮುಂಚೆ ಇರಲಿಲ್ಲ. ಮರಣಾನಂತರವೂ ಇರುವುದಿಲ್ಲ. ಮಧ್ಯೆ ಮಾತ್ರ ಸ್ವಲ್ಪ ಕಾಲ ಕಂಡುಬರುತ್ತವೆ. ಆದ್ದರಿಂದ ಅವು ಭ್ರಾಂತಿಗಳು ಮಾತ್ರ. ಭ್ರಾಂತಿಯ ವಸ್ತುಗಳಿಗೆ ಶೋಕಿಸುವುದು ಅನಗತ್ಯ.

**ಅ||** ಈ ಪ್ರಕಾರವಾಗಿ ಆತ್ಮ ಅಥವ ದೇಹವನ್ನು ಕುರಿತು ಶೋಕಿಸುವ ಅಗತ್ಯವಿಲ್ಲವೆಂದು ಅನೇಕ ವಿಧಗಳಲ್ಲಿ ಪ್ರತಿಪಾದಿಸಿ, ಅದ್ಭುತವಾದ ಆತ್ಮ ಸ್ವರೂಪವನ್ನು ಸಾಕ್ಷಾತ್ಕರಿಸಿಕೊಳ್ಳುವವರು ದುರ್ಲಭವೆಂದು ತಿಳಿಸಲಾಗುತ್ತಿದೆ.

**೨೯. ಆಶ್ಚರ್ಯವತ್ ಪಶ್ಯತಿ ಕಶ್ಚಿದೇನಮ್ ಆಶ್ಚರ್ಯವದ್ವದತಿ ತಥೈವ ಚಾನ್ಯಃ**
**ಆಶ್ಚರ್ಯವಚ್ಚೈನ ಮನ್ಯಃ ಶೃಣೋತಿ ಶ್ರುತ್ವಾಪ್ಯೇನಂ ವೇದ ನ ಚೈವ ಕಶ್ಚಿತ್**

**ಅರ್ಥ:** ಕಶ್ಚಿತ್-ಯಾವನೋ ಒಬ್ಬ; ಏನಂ=ಈ ಆತ್ಮವನ್ನು; ಆಶ್ಚರ್ಯವತ್= ಆಶ್ಚರ್ಯವಾಗಿರುವಂತೆ; ಪಶ್ಯತಿ=ನೋಡುತ್ತಿದ್ದಾನೆ; ತಥೈವ=ಹಾಗೆಯೇ; ಅನ್ಯಃ ಚ=ಮತ್ತೊಬ್ಬನು, ಆಶ್ಚರ್ಯವತ್=ಆಶ್ಚರ್ಯವಾದದ್ದಾಗಿರುವಂತೆ; ಏನಂ=ಈ ಆತ್ಮವನ್ನು; ವದತಿ=ಹೇಳುತ್ತಿದ್ದಾನೆ; ಅನ್ಯಃ ಚ=ಮತ್ತೊಬ್ಬನು; ಏನಂ=ಈ ಆತ್ಮವನ್ನು ಆಶ್ಚರ್ಯವತ್=ಆಶ್ಚರ್ಯವಾದದ್ದಾಗಿರುವಂತೆ; ಶೃಣೋತಿ= ಕೇಳುತ್ತಿದ್ದಾನೆ; ಶೃತ್ವಾಪಿ=ಕೇಳಿಯೂ ಸಹ, ಏನಂ=ಈ ಆತ್ಮವನ್ನು; ಕಶ್ಚಿತ್ ಚ=(ಅವರಲ್ಲಿ) ಯಾರೂ; ವೇದ ನ ಏವ=ತಿಳಿಯದೇ ಉಳಿಯುವರು (ಸಾಕ್ಷಾತ್ ಅನುಭವ ಹೊಂದದೆ ಉಳಿಯುತ್ತಾರೆ.)

**ತಾ:** ಈ ಆತ್ಮವನ್ನು ಒಬ್ಬನು ಆಶ್ಚರ್ಯವಾದದ್ದಾಗಿರುವಂತೆ ನೋಡುತ್ತಿದ್ದರೆ ಮತ್ತೆ ಇನ್ನೊಬ್ಬನು ಆಶ್ಚರ್ಯವಾದದ್ದಾಗಿರುವಂತೆ ಇದನ್ನು ಕುರಿತು ಹೇಳುತ್ತಿದ್ದಾನೆ. ಹಾಗೆಯೇ ಬೇರೊಬ್ಬನು ಇದನ್ನು ಆಶ್ಚರ್ಯವಾದದ್ದಂತೆ ಕೇಳುತ್ತಿದ್ದಾನೆ. ಹೀಗೆ ಕೇಳಿ, ನೋಡಿ, ಹೇಳಿಯೂ ಕೂಡ ಒಬ್ಬನೂ ಅದನ್ನು ಸರಿಯಾಗಿ ತಿಳಿಯಲು ಸಾಧ್ಯವಾಗುತ್ತಿಲ್ಲ. (ಸಾಕ್ಷಾತ್ ಅನುಭವಕ್ಕೆ ಬರುತ್ತಿಲ್ಲ).

**ವ್ಯಾಖ್ಯೆ:** ಆಧ್ಯಾತ್ಮ ವಿದ್ಯೆ, ಮೌಖಿಕ ವರ್ಣನೆ (Theory)ಗಳಿಂದ ಪೂರ್ತಿಯಾಗದು. ಅದು ಆಚರಣಾಪೂರ್ವಕವಾದ ವಿಜ್ಞಾನ (Practical

---

* **ಯನ್ನಾದೌ ಯಚ್ಚ ನಾಸ್ತ್ಯನ್ತೇ ತನ್ಮಧ್ಯೇ ಭಾತಮಪ್ಯಸತ್। ಅತೋ ಮಿಥ್ಯಾ ಜಗತ್ಸರ್ವಮಿತಿ ವೇದಾಂತಡಿಂಡಿಮಃ (ಶ್ರೀ ಶಂಕರಾಚಾರ್ಯರು)**
ಯಾವುದು ಪೂರ್ವದಲ್ಲಿ ಇಲ್ಲವೋ, ಅಂತ್ಯದಲ್ಲಿ ಇಲ್ಲವೋ ಅದು ಮಧ್ಯದಲ್ಲಿ ಕಾಣಿಸಿಕೊಂಡರೂ ಇಲ್ಲದ್ದೇ ಆಗುತ್ತದೆ. ಆದ್ದರಿಂದ ಸೃಷ್ಟಿಗೆ ಪೂರ್ವದಲ್ಲಿ ಇಲ್ಲದೆ ಇರುವುದು, ಪ್ರಳಯಾನಂತರ ಇಲ್ಲವಾಗುವ ಈ ಜಗತ್ತೆಲ್ಲವೂ ಮಧ್ಯದಲ್ಲಿ ಈಗ ಕಾಣಿಸಿಕೊಂಡರೂ ಮಿಥ್ಯೆಯೇ ಎಂದು ವೇದಾಂತಭೇರಿ ಸಾರುತ್ತಿದೆ.

Science). ಅದನ್ನು ಕುರಿತ ಪ್ರತಿ ವಿಷಯವನ್ನು ಕೂಡ ಪ್ರತ್ಯಕ್ಷವಾಗಿ ಅನುಭೂತಿ ಮಾಡಿಕೊಂಡಾಗ ಮಾತ್ರ ಪೂರ್ಣವಾಗಿ ಅದು ತಿಳಿಯಲ್ಪಡುವುದು. ಅನುಭೂತಿಯಾಗಲು ಬಹು ಜನ್ಮಾರ್ಜಿತ ಪುಣ್ಯ, ಚಿತ್ತನೈರ್ಮಲ್ಯ, ವಾಸನಾರಾಹಿತ್ಯಗಳು ಅಗತ್ಯ. ಆದ್ದರಿಂದ ಸಾಧನ ಚತುಷ್ಟಯ ಸಂಪತ್ತು ಹೊಂದಿದವನಿಗೆ ಮಾತ್ರ ಬ್ರಹ್ಮಜ್ಞಾನದಲ್ಲಿ ಪ್ರವೇಶ ಉಂಟಾಗುತ್ತದೆ. ಬೇರೆಯವರು ಒಂದುವೇಳೆ ಬ್ರಹ್ಮಜ್ಞಾನವನ್ನು, ಆತ್ಮವಿಚಾರಣೆಯನ್ನು ಕೈಕೊಂಡರೂ ಪೂರ್ಣ ಫಲದಿಂದ ವಂಚಿತರಾಗಿಯೇ ಉಳಿಯುವರು. ಹೃದಯ ಕ್ಷೇತ್ರವು ಸತ್ವಗುಣ ಪ್ರಧಾನವಾಗಿದ್ದಲ್ಲಿ, ರಜಸ್ತಮಸ್ಸುಗಳು ದೂರವಾಗಿ ಪರಿಶುದ್ಧವಾಗಿದ್ದಲ್ಲಿ; ಸ್ವಚ್ಛ ದರ್ಪಣದಲ್ಲಿ ವಸ್ತುವು ಚೆನ್ನಾಗಿ ಪ್ರತಿಫಲಿಸುವಂತೆ, ಒಗೆದ ಬಟ್ಟೆಗೆ ಬಣ್ಣ ಚೆನ್ನಾಗಿ ಅಂಟುವಂತೆ, ಹಸನಾದ ಭೂಮಿಯಲ್ಲಿ ಬೀಜವು ಶೀಘ್ರವಾಗಿ ಮೊಳೆಯುವಂತೆ, ಬ್ರಹ್ಮಸಾಕ್ಷಾತ್ಕಾರವು ಶೀಘ್ರವಾಗಿ ಉಂಟಾಗುವುದು. ಚಿತ್ತಶುದ್ಧಿಯುಳ್ಳವರು ಲೋಕದಲ್ಲಿ ವಿರಳವಾದುದರಿಂದ ಆತ್ಮಾನುಭೂತಿ ಹೊಂದಿರುವವರು ಬಹು ಕಡಿಮೆಯೆಂದು ಭಗವಂತನು ಹೇಳುತ್ತಿದ್ದಾನೆ.*

'ಕಶ್ಚಿದ್ಧೀರಃ ಪ್ರತ್ಯಗಾತ್ಮಾನ ಮೈಕ್ಷತ್ ಆವೃತ್ತ ಚಕ್ಷುರಮೃತತ್ವಮಿಚ್ಛನ್'

ಇಂದ್ರಿಯ ನಿಗ್ರಹವುಂಟಾಗಿ ಬಾಹ್ಯ ವಿಷಯಗಳಿಂದ ಚಿತ್ತವನ್ನು ಮರಳಿಸಿ, ಅಂತರ್ಮುಖನಾಗಿ ಮೋಕ್ಷದ ಬಗ್ಗೆ ತೀವ್ರ ಅಭಿಲಾಷೆಯಿರುವ ಯಾವನೋ ಒಬ್ಬ ಧೀರನು ಮಾತ್ರವೇ ಪ್ರತ್ಯಗಾತ್ಮನನ್ನು ಸಾಕ್ಷಾತ್ಕರಿಸಿಕೊಳ್ಳಬಲ್ಲನೆಂದು ಕಠೋಪನಿಷತ್ತು ಹೇಳುತ್ತದೆ.

ಆತ್ಮವನ್ನು ಯಾವುದೋ ದೃಶ್ಯ ವಸ್ತುವನ್ನು ನೋಡಿದಂತೆ ನೋಡಲು ಸಾಧ್ಯವಿಲ್ಲ. ಅದನ್ನು ಕೇಳಲೂ ಸಾಧ್ಯವಿಲ್ಲ, ವಿವರಿಸಲೂ ಸಾಧ್ಯವಿಲ್ಲ. ಇಂದ್ರಿಯಾತೀತವಾದುದು. ಅತಿ ಸೂಕ್ಷ್ಮವಾಗಿದ್ದು ಹೃದಯ ಗುಹೆಯಲ್ಲಿ ಬಚ್ಚಿಟ್ಟುಕೊಂಡಿದೆ. ನಿಷ್ಕಾಮ ಕರ್ಮ, ಭಕ್ತಿ, ವೈರಾಗ್ಯ, ಧ್ಯಾನ ಅಮಾನಿತ್ವಾದಿ ಮುಂತಾದ ಸದ್ಗುಣಗಳಿಂದ ಹೃದಯವನ್ನು ನಿರ್ಮಲ ಮಾಡಿಕೊಂಡು, ಆತ್ಮ ವಿಚಾರಣೆಯ ಮೂಲಕ ಅದನ್ನು ಅನುಭೂತಿಗೊಳಿಸಿಕೊಳ್ಳಬೇಕು. ಇಲ್ಲಿ 'ವೇದನಚೈವಕಶ್ಚಿತ್' ಎನ್ನುವುದಕ್ಕೆ 'ಯಾರೂ ತಿಳಿದುಕೊಳ್ಳುತ್ತಿಲ್ಲ' ಎನ್ನುವ ಅರ್ಥವಲ್ಲ. ತಿಳಿದುಕೊಂಡವರು ಬಹಳ ವಿರಳವೆಂದು ಮಾತ್ರವೇ ಇದರ ಅರ್ಥ. ಆತ್ಮ ದೃಶ್ಯವಸ್ತುಗಳಿಗಿಂತ ಸರ್ವವಿಧಗಳಲ್ಲಿ ವಿಲಕ್ಷಣವಾದುದಾಗಿರುವುದರಿಂದ ಅದನ್ನು ಎಲ್ಲರೂ ಆಶ್ಚರ್ಯವಾಗಿ ನೋಡುತ್ತಿದ್ದಾರೆ.

ಈ ಶ್ಲೋಕಕ್ಕೆ ಮತ್ತೊಂದು ಅರ್ಥವನ್ನು ಕೂಡ ಹೇಳಬಹುದು. ಆತ್ಮವನ್ನು ಕುರಿತು ನೋಡುವವನು, ಕೇಳುವವನು, ಹೇಳುವವನು (ಆತ್ಮಾನುಭವವನ್ನು ಹೊಂದಿದವನು) ಪ್ರಪಂಚದಲ್ಲಿ ಅತ್ಯಾಶ್ಚರ್ಯಕರವಾದವನು ಹಾಗೂ ಮಹಾದುರ್ಲಭನು.

**೮॥** ಇಲ್ಲಿಯವರೆಗೆ ಆತ್ಮವನ್ನು ಕುರಿತು ವಿಚಾರಿಸಿ ಇನ್ನು ಆ ವಿಚಾರವನ್ನು ಉಪಸಂಹರಿಸುತ್ತಾ, ಆತ್ಮ ನಿತ್ಯವಾದುದಾದ್ದರಿಂದ ಯಾರೂ ಯಾರಿಗೂ ಶೋಕಿಸುವ ಅಗತ್ಯವಿಲ್ಲ ಎಂದು ಮತ್ತೆ ನಿಶ್ಚಯವಾಗಿ ಹೇಳಲಾಗುತ್ತಿದೆ.

**೩೦. ದೇಹೀ ನಿತ್ಯಮವಧ್ಯೋಽಯಂ ದೇಹೇ ಸರ್ವಸ್ಯ ಭಾರತ**
**ತಸ್ಮಾತ್ಸರ್ವಾಣಿ ಭೂತಾನಿ ನ ತ್ವಂ ಶೋಚಿತುಮರ್ಹಸಿ**

**ಅರ್ಥ:** ಭಾರತ- ಓ ಅರ್ಜುನಾ!, ಸರ್ವಸ್ಯ=ಸಮಸ್ತ ಪ್ರಾಣಿಗಳ; ದೇಹೇ= ದೇಹಗಳಲ್ಲಿ (ಇರುವ); ಅಯಂ ದೇಹಿ=ಈ ಆತ್ಮ ನಿತ್ಯಂ=ಯಾವಾಗಲೂ; ಅವಧ್ಯಃ=ಕೊಲ್ಲಲ್ಪಡದು; ತಸ್ಮಾತ್=ಆದ್ದರಿಂದ; ಸರ್ವಾಣಿ=ಸಮಸ್ತ; ಭೂತಾನಿ=ಪ್ರಾಣಿಗಳ ಬಗ್ಗೆ; ತ್ವಂ=ನೀನು; ಶೋಚಿತುಂ=ದುಃಖಿಸಲು; ನ ಅರ್ಹಸಿ=ತಕ್ಕವನಲ್ಲ.

**ತಾ:** ಅರ್ಜುನಾ! ಸಮಸ್ತ ಪ್ರಾಣಿಕೋಟಿಯ ದೇಹಗಳಲ್ಲಿ ನಿವಸಿಸಿರುವ ಈ ಆತ್ಮವು ಎಂದಿಗೂ ವಧಿಸಲ್ಪಡದು. ಆದ್ದರಿಂದ ನೀನು ಯಾವ ಪ್ರಾಣಿಯನ್ನು ಕುರಿತಾಗಲಿ ಶೋಕಿಸುವುದು ಸರಿಯಲ್ಲ.

**ವ್ಯಾಖ್ಯೆ:** ದೇಹವು ವಧಿಸಲ್ಪಟ್ಟರೂ, ದೇಹದ ಒಳಗಿರುವ ಆತ್ಮ ಮರಣಿಸುವುದಿಲ್ಲ. 'ದೇಹೀ'- ಎಂದು ಹೇಳಲ್ಪಟ್ಟಿರುವುದರಿಂದ ಆತ್ಮ ದೇಹದಲ್ಲೇ ಇದ್ದು ದೇಹಕ್ಕೆ ಸಾಕ್ಷಿಯಾಗಿರುವುದೆಂದು ಅರ್ಥ. 'ನಿತ್ಯಂ'- ಎಂದು ಹೇಳಿರುವುದರಿಂದ ಈ ಸತ್ಯವು ಯಾವುದೋ ಒಂದು ನಿರ್ದಿಷ್ಟ ಕಾಲಕ್ಕೆ ಅನ್ವಯಿಸುವುದಲ್ಲವೆಂದು, ಆತ್ಮ ಯಾವಾಗಲೂ 'ಅವಧ್ಯ' ಎನ್ನುವುದು ಸ್ಪಷ್ಟವಾಗುತ್ತಿದೆ.

ಈ ಶ್ಲೋಕದಲ್ಲಿ 'ಸರ್ವ' ಶಬ್ದ ಪ್ರಯೋಗವು ಎರಡು ಸಾರಿ ಮಾಡಲ್ಪಟ್ಟಿದೆ- 'ಸರ್ವಸ್ಯ' 'ಸರ್ವಾಣಿ ಭೂತಾನಿ' ಎಂದು. ಇದರಿಂದ ಸಮಸ್ತ ಪ್ರಾಣಿಗಳ ದೇಹದಲ್ಲಿ (ಆ ದೇಹವು ಯಾವ ಜಾತಿಗೆ ಸೇರಿದ್ದರೂ, ಮತಕ್ಕೆ ಸೇರಿದ್ದರೂ, ಸ್ತ್ರೀ, ಪುರುಷನಾದರೂ, ಪ್ರಾಣಿಯಾದರೂ, ಸ್ಥಾವರವಾದರೂ ಸರಿಯೇ) ಆತ್ಮ ನಿವಸಿಸುತ್ತಿದ್ದಾನೆಂದು, ಸರ್ವರಲ್ಲಿಯೂ ಸಮಾನವಾಗಿದ್ದಾನೆಂದು ಸ್ಪಷ್ಟವಾಗುತ್ತಿದೆ. ಸಾಮಾನ್ಯವಾಗಿ ಜನರು ಮರಣಿಸುವಾಗ, ರೋಗಗ್ರಸ್ತರಾದಾಗ, ಬಾಧೆಗೆ ಒಳಗಾದಾಗ ತಾವೇ ಮರಣಿಸುತ್ತೇವೆಂದು, ನೋವು ಅನುಭವಿಸುತ್ತಿದ್ದೇವೆಂದು ಭಾವಿಸಿ ದುಃಖಿಸುತ್ತಿದ್ದಾರೆ. ಹಾಗೆ ತಿಳಿಯುವುದು ಬಹಳ ಅವಿವೇಕವೆಂದು ಭಗವಂತನು ಈ ಶ್ಲೋಕದ ಮೂಲಕ ತಿಳಿಸುತ್ತಿದ್ದಾನೆ. ದೇಹ ಬಾಧೆಗೊಳಗಾದರೂ, ಮರಣಿಸಿದರೂ, ದೇಹದಲ್ಲಿಯ ಆತ್ಮ ವಾಸ್ತವವಾಗಿ ಯಾವ ಬಾಧೆಗೂ ಒಳಗಾಗುವುದಿಲ್ಲ, ಮರಣಿಸುವುದಿಲ್ಲ. ಈ ಸತ್ಯವು ಎಲ್ಲಾ ಚರಾಚರ ಪ್ರಾಣಿಕೋಟಿಗಳ ದೇಹಗಳಿಗೆ ಅನ್ವಯಿಸುತ್ತದೆ. ಇದನ್ನು ಅರಿತವನಿಗೆ ಇನ್ನು ಶೋಕಕ್ಕೆ ಅವಕಾಶವೇ ಇಲ್ಲವೆಂದು ಭಗವಂತನು ಸ್ಪಷ್ಟೀಕರಿಸುತ್ತಿದ್ದಾನೆ. ಶೋಕರಾಹಿತ್ಯಕ್ಕೆ ಉಪಾಯವೆಂದರೆ ತಾನು ದೇಹವಲ್ಲವೆಂದು, ದೇಹಿಯಾದ ಆತ್ಮನೇ ಎಂದು ತಿಳಿಯುವುದೇ ಆಗಿದೆ. ದೇಹ ಭಾವದಿಂದ ದುಃಖವು, ಆತ್ಮ ಭಾವದಿಂದ ದುಃಖರಾಹಿತ್ಯವು ಜೀವಿಗಳಿಗೆ ಒದಗುತ್ತದೆ. ಆದ್ದರಿಂದ ಮುಮುಕ್ಷುವು ತಾನು ಆತ್ಮನೆಂದು ನಿರಂತರವೂ ಭಾವಿಸಿಕೊಳ್ಳುತ್ತಿರಬೇಕು.

"ಭಾರತ"- 'ಭಾ' ಎಂದರೆ ಪ್ರಕಾಶ, 'ರತಃ'=ಆಸಕ್ತಿಯಿರುವವನು- ಓ ಅರ್ಜುನಾ! ನೀನು ಆತ್ಮಜ್ಞಾನ ಪ್ರಕಾಶದಲ್ಲೇ ಸದಾ ತನ್ಮಯನಾಗಿರು, ದೇಹಾಭಿಮಾನ, ರೂಪ, ತಮಸ್ಸುಗಳಲ್ಲಿ ಮುಳುಗಿ ಹೋಗಬೇಡ ಎಂದು

---

* ಇಂತಹ ಭಾವವನ್ನೇ ಕಠೋಪನಿಷತ್ತು ಹೇಳುತ್ತದೆ.
ಶ್ರವಣಾಯಾಪಿ ಬಹುಭಿರ್ಯೋ ನ ಲಭ್ಯಃ
ಶೃಣ್ವಂತೋಽಪಿ ಬಹವೋಽಯಂ ನ ವಿದ್ಯುಃ। ಆಶ್ಚರ್ಯೋ ವಕ್ತಾ ಕುಶಲೋಽಸ್ಯ ಲಬ್ಧಾ। ಆಶ್ಚರ್ಯೋ ಜ್ಞಾತ ಕುಶಲಾನುಶಿಷ್ಟಃ॥ (ಕ.ಉ. ೧-೨-೭)

'ಭಾರತ' ಎಂದು ಸಂಬೋಧನೆ ಮಾಡುವುದರಿಂದ ಅರ್ಜುನನನ್ನು ಎಚ್ಚರಿಸುತ್ತಿದ್ದಾನೆ.

ಪ್ರ : ದೇಹದ ಹಾಗೂ ದೇಹಿಯ (ಆತ್ಮದ) ಸ್ವಭಾವವನ್ನು ವಿವರಿಸು?

ಉ : ದೇಹವು ವಧಿಸಲ್ಪಡುವುದು, ನಾಶ ಹೊಂದುವಂತಹದು, ದೇಹಿಯಾದ ಆತ್ಮ ವಧಿಸಲ್ಪಡುವುದಲ್ಲ, ನಾಶವಾಗುವುದಲ್ಲ.

ಪ್ರ : ಶೋಕರಾಹಿತ್ಯಕ್ಕೆ ಉಪಾಯವೇನು ?

ಉ : ದೇಹದೊಡನೆ ತಾದಾತ್ಮ್ಯ ಹೊಂದದೆ ತಾನು ಆತ್ಮನೇ ಎಂದು ಭಾವಿಸಿಕೊಳ್ಳುವುದರಿಂದ ಶೋಕ ತೊಲಗಿ ಹೋಗುವುದು.

**ಅ।।** ಇಲ್ಲಿಯವರೆಗೆ ಸಾಂಖ್ಯಯೋಗಾನುಸಾರವಾಗಿ ಆತ್ಮದ ನಿತ್ಯತ್ವವನ್ನು ಬೋಧಿಸಿ, ಇನ್ನು ಮುಂದಿನ ಏಳು ಶ್ಲೋಕಗಳ ಮೂಲಕ ಕ್ಷತ್ರಿಯ ಧರ್ಮದ ದೃಷ್ಟಿಯಿಂದ ನೋಡಿದರೂ 'ನೀನು ದುಃಖಿಸುವುದು ವಿವೇಕವಲ್ಲವೆಂದು', ಭಗವಂತನು ಅರ್ಜುನನಿಗೆ ಬೋಧಿಸುತ್ತಿದ್ದಾನೆ.

**೩೧. ಸ್ವಧರ್ಮಮಪಿ ಚಾವೇಕ್ಷ್ಯ ನ ವಿಕಂಪಿತು ಮರ್ಹಸಿ**
**ಧರ್ಮ್ಯಾದ್ಧಿ ಯುದ್ಧಾ ಚ್ಛ್ರೇಯೋऽನ್ಯತ್ ಕ್ಷತ್ರಿಯಸ್ಯ ನ ವಿದ್ಯತೇ**

**ಅರ್ಥ:** ಚ=ಮತ್ತೆ; ಸ್ವಧರ್ಮಂ=ಸ್ವಧರ್ಮವು; ಸ್ವಕೀಯ=(ಕ್ಷತ್ರಿಯ) ಧರ್ಮ; ಅವೇಕ್ಷ್ಯ ಅಪಿ=ನೋಡಿಯಾದರೂ; ವಿಕಂಪಿತುಮ್=ಕದಲಲು; ನ ಅರ್ಹಸಿ=ತಕ್ಕವನಲ್ಲ. ಕ್ಷತ್ರಿಯಸ್ಯ=ಕ್ಷತ್ರಿಯನಿಗೆ; ಧರ್ಮ್ಯಾತ್=ಧರ್ಮಯುತ ವಾದ; ಯುದ್ಧಾತ್=ಯುದ್ಧಕ್ಕಿಂತ; ಅನ್ಯತ್=ಬೇರೆಯಾದ; ಶ್ರೇಯಃ= ಶ್ರೇಯಸ್ಸು; ನ ವಿದ್ಯತೇಹಿ=ಇಲ್ಲವಲ್ಲಾ!

**ತಾ:** ಮತ್ತೆ ಓ ಅರ್ಜುನಾ! ಸ್ವಕೀಯವಾದ ಕ್ಷತ್ರಿಯ ಧರ್ಮದ ದೃಷ್ಟಿಯಿಂದ ನೋಡಿದರೂ ಸಹ ಯುದ್ಧದಿಂದ ಪಲಾಯನಗೊಳ್ಳುವುದು ನಿನಗೆ ಉಚಿತವಲ್ಲ. ಏಕೆಂದರೆ, ಕ್ಷತ್ರಿಯನಿಗೆ ಧರ್ಮ ಯುದ್ಧಕ್ಕಿಂತ ಶ್ರೇಯಸ್ಕರವಾದುದು ಮತ್ತೊಂದಿಲ್ಲ.

**ವ್ಯಾಖ್ಯೆ:** ಕರ್ತವ್ಯ ನಿರ್ವಹಣೆ, ಸ್ವಧರ್ಮಾಚರಣೆ ಧರ್ಮಕ್ಕೆ ವಿರುದ್ಧವಲ್ಲದ ಕಾರ್ಯಗಳಲ್ಲಿ ಶ್ರೀಕೃಷ್ಣನಿಗೆ ಎಷ್ಟು ಪ್ರೀತಿಯಿದೆ ಎನ್ನುವುದು ಈ ಶ್ಲೋಕದಿಂದ ಅರ್ಥವಾಗುತ್ತಿದೆ. ಶರೀರವಿರುವವರೆಗೆ ಪ್ರತಿಯೊಬ್ಬನೂ ಯಾವುದೋ ಒಂದು ಕಾರ್ಯವನ್ನು ಮಾಡುತ್ತಿರಲೇಬೇಕು. ಅಂತಹ ಸಂದರ್ಭಗಳಲ್ಲಿ ಸ್ವಧರ್ಮಾನುಕೂಲವಾದ ಕಾರ್ಯಗಳನ್ನು ನಿಷ್ಕಾಮವಾಗಿ ಆಚರಿಸುವುದರಿಂದ ಮನುಷ್ಯನಿಗೆ ಉತ್ತಮ ಶ್ರೇಯಸ್ಸು ಲಭಿಸುವುದೇ ಅಲ್ಲದೆ ಚಿತ್ತಶುದ್ಧಿಯಾಗಿ ಮೋಕ್ಷವು ಸಂಪ್ರಾಪ್ತವಾಗುತ್ತದೆ. ಇಲ್ಲಿ 'ಧರ್ಮ್ಯಾತ್'- ಎಂದು ಹೇಳಿರುವುದರಿಂದ ಕ್ಷತ್ರಿಯರು ಧರ್ಮಯುದ್ಧವನ್ನು ಆಶ್ರಯಿಸಬೇಕೇ ಹೊರತು ಅಧರ್ಮಯುದ್ಧವನ್ನಲ್ಲ ಎಂದು ಸ್ಪಷ್ಟೀಕರಿಸಲಾಗಿದೆ.

**೩೨. ಯದೃಚ್ಛಯಾ ಚೋಪಪನ್ನಂ ಸ್ವರ್ಗದ್ವಾರ ಮಪಾವೃತಮ್**
**ಸುಖಿನಃ ಕ್ಷತ್ರಿಯಾಃ ಪಾರ್ಥ ಲಭಂತೇ ಯುದ್ಧಮೀದೃಶಮ್**

**ಅರ್ಥ:** ಪಾರ್ಥ=ಓ ಅರ್ಜುನಾ! ಯದೃಚ್ಛಯಾ=ತನ್ನಷ್ಟಕ್ಕೆ ತಾನೇ (ಕೋರದೆ); ಉಪಪನ್ನಂ=ಬಂದೊದಗಿರುವುದು; ಅಪಾವೃತಂ=ತೆರೆಯಲ್ಪಟ್ಟ; ಸ್ವರ್ಗದ್ವಾರಂ ಚ=ಸ್ವರ್ಗದ್ವಾರದಂತಹದು; ಈ ದೃಶಮ್=ಇಂತಹ; ಯುದ್ಧಂ=ಯುದ್ಧವು; ಕ್ಷತ್ರಿಯಾಃ=ಯಾವ ಕ್ಷತ್ರಿಯನು; ಲಭಂತೇ= ಹೊಂದುತ್ತಾನೋ; (ತೇ=ಅವನು); ಸುಖಿನಃ=ಸುಖವಂತನು (ಧನ್ಯನು),

**ತಾ:** ಓ ಅರ್ಜುನಾ! ಅಪ್ರಯತ್ನವಾಗಿಯೇ ತೆರೆಯಲ್ಪಟ್ಟ ಸ್ವರ್ಗದ್ವಾರದಂತಹ (ಸ್ವರ್ಗಪ್ರಾಪ್ತಿಯನ್ನುಂಟು ಮಾಡುವಂತಹ) ಯುದ್ಧವು ಯಾವ ಕ್ಷತ್ರಿಯನ ಪಾಲಿಗೆ ಬರುವುದೋ ಆತನು ನಿಸ್ಸಂಶಯವಾಗಿ ಧನ್ಯನೇ ಹೌದು.

**ವ್ಯಾಖ್ಯೆ:** 'ಪಾರ್ಥ'- ಅರ್ಜುನನನ್ನು 'ಪಾರ್ಥಾ' ಎಂದು ಸಂಬೋಧಿಸು ವುದರಿಂದ ಶ್ರೀಕೃಷ್ಣಮೂರ್ತಿ ಅರ್ಜುನನ ತಾಯಿಯಾದ ಪೃಥೆ (ಕುಂತೀದೇವಿ)ಯ ಕ್ಷಾತ್ರಧರ್ಮ ನಿರ್ವಹಣೆಯ ಆದೇಶವನ್ನು ಆತನಿಗೆ ಜ್ಞಾಪಕಕ್ಕೆ ತಂದುಕೊಡುವಂತಿದೆ. ಯುದ್ಧಕ್ಕೆ ಮೊದಲು ಕುಂತೀದೇವಿ ಹಸ್ತಿನಾಪುರದಿಂದ ಶ್ರೀಕೃಷ್ಣನ ಮೂಲಕ ಅರ್ಜುನನಿಗೆ ಈ ಕೆಳಗಿನ ಸಂದೇಶವನ್ನು ಕಳುಹಿಸಿದ್ದಳು- "ಯಾವುದರ ನಿಮಿತ್ತವಾಗಿ ಕ್ಷತ್ರಿಯ ಮಾತೆ ಕುಮಾರನಿಗೆ ಜನ್ಮವೀಯುವಳೋ ಅಂತಹ ಸಂದರ್ಭವೀಗ ಬಂದು ಒದಗಿದೆ."* ಎಂದು ತಿಳಿಸುವುದು. ಬಾಹ್ಯಯುದ್ಧವು ಕ್ಷತ್ರಿಯರಿಗೆ ಮಾತ್ರ ಮೀಸಲು. ಆದರೆ ಕಾಮಕ್ರೋಧ, ರಾಗದ್ವೇಷ ಹಾಗು ದುಷ್ಟವಾಸನೆಗಳೊಡನೆ ನಡೆಯುವ ಅಂತರ್ಯುದ್ಧ ಪ್ರತಿಯೊಬ್ಬರಲ್ಲೂ ಕಾಣಬಹುದು. ಬಾಹ್ಯಯುದ್ಧವನ್ನು ಧರ್ಮಪೂರ್ವಕವಾಗಿ ಆಚರಿಸುವುದರಿಂದ ಸ್ವರ್ಗಪ್ರಾಪ್ತಿಯಾಗುವುದು (ಮೋಕ್ಷದ್ವಾರಮಪಾವೃತಮ್). ನಿಜವಾದ ಕ್ಷತ್ರಿಯರು ಯುದ್ಧವ್ಯಾವಾಗ ಸಂಪ್ರಾಪ್ತವಾಗುವುದೋ ಎಂದು ಚಾತಕ ಪಕ್ಷಿಯಂತೆ ಎದುರು ನೋಡುತ್ತಿರುತ್ತಾರೆ. ಹಾಗೆಯೇ ಮುಮುಕ್ಷುಗಳು ಮಾಯೆ ಹಾಗು ಅಜ್ಞಾನದೊಡನೆ ಯಾವಾಗ ಯುದ್ಧಮಾಡುವ ಅವಕಾಶ ಸಿಗುತ್ತದೆಯೋ ಎಂದು ಕಾದು ಕುಳಿತಿರುತ್ತಾರೆ. ಕ್ಷತ್ರಿಯರಿಗೆ ಯುದ್ಧವಿದ್ದ ಹಾಗೆ ಇವರಿಗೆ ಅವಿದ್ಯೆಯೊಡನೆ ಹೋರಾಟಮಾಡುವುದೆಂದರೆ ಪರಮಪ್ರೀತಿ.

**೩೩. ಅಥ ಚೇತ್ತ್ವಮಿಮಂ ಧರ್ಮ್ಯಂ ಸಂಗ್ರಾಮಂ ನ ಕರಿಷ್ಯಸಿ**
**ತತಸ್ಸ್ವಧರ್ಮ್ಯಂ ಕೀರ್ತಿಂ ಚ ಹಿತ್ವಾ ಪಾಪಮವಾಪ್ಸ್ಯಸಿ**

**ಅರ್ಥ:-** ಅಥ=ಇನ್ನು; ತ್ವಂ=ನೀನು; ಇಮಂ=ಈ; ಧರ್ಮ್ಯಂ=ಧರ್ಮಯುಕ್ತ ವಾದ; ಸಂಗ್ರಾಮಂ=ಯುದ್ಧವನ್ನು; ನ ಕರಿಷ್ಯಸಿಚೇತ್=ಮಾಡದೇ ಹೋದರೆ; ತತಃ=ಅದರಿಂದ; ಸ್ವಧರ್ಮ್ಯಂ=ಸ್ವಧರ್ಮವನ್ನು; ಕೀರ್ತಿಂಚ=ಕೀರ್ತಿಯನ್ನು; ಹಿತ್ವಾ=ಬಿಟ್ಟು; ಪಾಪಂ=ಪಾಪವನ್ನು; ಅವಾಪ್ಸ್ಯಸಿ=ಹೊಂದುತ್ತೀಯೆ.

**ತಾ:** ಇನ್ನು ನೀನು ಧರ್ಮಯುಕ್ತವಾದ ಈ ಯುದ್ಧವನ್ನು ಮಾಡದೆ ಹೋದರೆ, ಅದರಿಂದ ನೀನು ಸ್ವಧರ್ಮವನ್ನು ತ್ಯಜಿಸಿದಂತಹವನಾಗಿ, ಕೀರ್ತಿಯನ್ನು ಕಳೆದುಕೊಂಡು ಪಾಪವನ್ನು ಹೊಂದುತ್ತೀಯೆ.

**೩೪. ಅಕೀರ್ತಿಂ ಚಾಪಿ ಭೂತಾನಿ ಕಥಯಿಷ್ಯಂತಿ ತೇऽವ್ಯಯಾಮ್**
**ಸಂಭಾವಿತಸ್ಯ ಚಾಕೀರ್ತಿ ರ್ಮರಣಾ ದತಿರಿಚ್ಯತೇ**

**ಅರ್ಥ:** ಅಪಿಚ=ಮತ್ತೆ; ಭೂತಾನಿ=ಪ್ರಾಣಿಗಳು(ಜನರು); ತೇ=ನಿನ್ನ; ಅವ್ಯಯಾಂ=ಚಿರಕಾಲದವರೆಗೆ ಮರೆತು ಹೋಗದಂತ; ಅಕೀರ್ತಿಂ= ಅಪಕೀರ್ತಿಯನ್ನು; ಕಥಯಿಷ್ಯಂತಿ=ಹೇಳಿಕೊಳ್ಳುವರು; ಸಂಭಾವಿತಸ್ಯ=

---

* ಏತದ್ಧನಂಜಯೋ ವಾಚ್ಯೋ ನಿತ್ಯೋದ್ಯುಕ್ತೋ ವೃಕೋದರಃ। ಯದರ್ಥಂ ಕ್ಷತ್ರಿಯಂ ಸೂತೇ ತಸ್ಯ ಕಾಲೋಽಯಮಾಗತಃ (ಮಹಾಭಾರತ ಉ-೧೩೭-೯೧೦)
ಕುಂತಿದೇವಿ: ಓ ಕೃಷ್ಣಾ! ಯಾವ ನಿಮಿತ್ತವಾಗಿ ಕ್ಷತ್ರಿಯ ಮಾತೆ ಕುಮಾರನಿಗೆ ಜನ್ಮವೀಯುವಳೋ; ಅಂಥಹ ಸಂದರ್ಭವೀಗ ಬಂದೊದಗಿದೆಯೆಂದು ಅರ್ಜುನ ಹಾಗು ನಿರಂತರ ಯುದ್ಧಸನ್ನದ್ಧನಾಗಿರುವ ಭೀಮನಿಗೆ ತಿಳಿಸುವುದು.

ಗೌರವಿಸಲ್ಪಟ್ಟವನಿಗೆ; ಅಕೀರ್ತಿಃ=ಅಪಕೀರ್ತಿ;ಮರಣಾತ್ ಚ=ಸಾವಿಗಿಂತಲೂ; ಅತಿರಿಚ್ಯತೇ=ಅಧಿಕವಾದುದಾಗಿದೆ.

**ತಾ:** ಮತ್ತೆ ಈ ಲೋಕದಲ್ಲಿ ನಿನ್ನ ಅಪಕೀರ್ತಿ ಚಿರಕಾಲದವರೆಗೆ ಉಳಿದ್ದು ಹೋಗುವುದು. ಗೌರವವಾಗಿ ಬದುಕಿದವನಿಗೆ ಅಪಕೀರ್ತಿ ಮರಣಕ್ಕಿಂತ ಘೋರವಾದುದು.

**ವ್ಯಾಖ್ಯೆ:** ಮಾಡಬಾರದ ಕೆಲಸ ಮಾಡಿದಾಗ, ಮಾಡಬೇಕಾದ ಕೆಲಸ ಮಾಡದೆ ಇರುವಾಗ ಲೋಕದಲ್ಲಿ ಅಪಕೀರ್ತಿ ವ್ಯಾಪಿಸುವುದು. ಮಾಡಬೇಕಾದ ಧರ್ಮಯುದ್ಧವನ್ನು ಮಾಡದೆ ಹೋದರೆ ಅರ್ಜುನನು ಅಪಕೀರ್ತಿಯ ಪಾಲಾಗುವನೆಂದು ಶ್ರೀಕೃಷ್ಣಮೂರ್ತಿ ಎಚ್ಚರಿಸುತ್ತಿದ್ದಾನೆ. ಗೌರವಸ್ಥನಿಗೆ ಅಪಕೀರ್ತಿ ಮರಣಕ್ಕಿಂತ ಹೆಚ್ಚು ಬಾಧೆಯನ್ನುಂಟು ಮಾಡುವುದು. ಏಕೆಂದರೆ, ಮರಣವು ಶರೀರವೊಂದನ್ನೇ ಬಾಧಿಸುವುದು. ಅಪಕೀರ್ತಿಯಾದರೋ ಜನ್ಮಜನ್ಮಾಂತರಗಳವರೆಗೆ ಉಳಿದು ಹೋಗುವುದು.

**ಅಂತರಾರ್ಥ:** ಜೀವಿಯು ಆತ್ಮಸ್ವರೂಪಿ. ಮಹಾಗೌರವನೀಯವಾದ ವ್ಯಕ್ತಿ. ಆತನು ಇಂದ್ರಿಯ, ಮನಸ್ಸುಗಳಿಗೆ ಒಳಗಾದಲ್ಲಿ ಅಪಕೀರ್ತಿಯ ಪಾಲಾಗುವನು. ಆದ್ದರಿಂದ ಆತ್ಮ ಸ್ಮೃತಿಯಿಂದ ಮಾಯೆ, ಇಂದ್ರಿಯಾದಿಗಳನ್ನು ಜಯಿಸಿ ಅಪಕೀರ್ತಿ ಬರದಂತೆ ನೋಡಿಕೊಳ್ಳುವುದು ಆತನ ಕರ್ತವ್ಯ.

**೩೫. ಭಯಾದ್ರಣಾದುಪರತಂ ಮಂಸ್ಯಂತೇ ತ್ವಾಂ ಮಹಾರಥಾಃ**
**ಯೇಷಾಂ ಚ ತ್ವಂ ಬಹುಮತೋ ಭೂತ್ವಾ ಯಾಸ್ಯಸಿ ಲಾಘವಮ್**

**ಅರ್ಥ:** ಚ-ಮತ್ತೆ; ಏಷಾಂ=ಯಾರಲ್ಲಿ; ತ್ವಂ=ನೀನು; ಬಹುಮತಃ ಭೂತ್ವಾ= ಗೌರವ ಉಳ್ಳವನಾಗಿ; ಲಾಘವಂ=ಕೀಳಾಗಿ (ಅಗೌರವ); ಯಾಸ್ಯಸಿ= ಹೊಂದಬಲ್ಲೆಯೋ (ತೇ=ಅಂತಹ); ಮಹಾರಥಾಃ=ಮಹಾರಥಿಗಳು; ತ್ವಾಂ=ನಿನ್ನನ್ನು; ರಣಾತ್=ಯುದ್ಧದಿಂದ; ಭಯಾತ್=ಭಯದಿಂದ; ಉಪರತಂ=ಹಿಮ್ಮೆಟ್ಟಿದವನೆಂದು; ಮಂಸ್ಯಂತೇ=ತಿಳಿಯುವರು.

**ತಾ:-** ಮತ್ತೆ ಇಲ್ಲಿಯವರೆಗೆ ಯಾವ ಮಹಾರಥಿಗಳು ನಿನ್ನನ್ನು ಘನವಾಗಿ ಗೌರವಿಸುತ್ತಿದ್ದಾರೋ ಅವರೇ ಈಗ ನಿನ್ನನ್ನು ಹೀಯಾಳಿಸಿ, ಭಯದಿಂದ ಯುದ್ಧಮಾಡುವುದನ್ನು ಬಿಟ್ಟು ಓಡಿ ಹೋದವನೆಂದು ಮೂದಲಿಸುತ್ತಾರೆ.

**೩೬. ಅವಾಚ್ಯವಾದಾಂಶ್ಚ ಬಹೂನ್ ವದಿಷ್ಯಂತಿ ತವಾಹಿತಾಃ**
**ನಿಂದಂತಸ್ತವ ಸಾಮರ್ಥ್ಯಂ ತತೋ ದುಃಖತರಂ ನು ಕಿಮ್**

**ಅರ್ಥ:** ತವ=ನಿನ್ನ; ಅಹಿತಾಃ=ಶತ್ರುಗಳು; ತವ=ನಿನ್ನ; ಸಾಮರ್ಥ್ಯಮ್= ಸಾಮರ್ಥ್ಯವನ್ನು; ನಿಂದಂತಃ=ದೂಷಿಸಿ; ಬಹೂನ್=ಅನೇಕ; ಅವಾಚ್ಯ ವಾದಾಂಶ್ಚ=ಆಡಬಾರದ ಮಾತುಗಳನ್ನು; ವದಿಷ್ಯಂತಿ=ಹೇಳಬಲ್ಲರು; ತತಃ=ಅದಕ್ಕಿಂತ, ದುಃಖತರಮ್=ದುಃಖಕರವಾದದ್ದು; ಕಿಮ್‌ನು=ಇನ್ನೇನು ಇರಬಲ್ಲದು?

**ತಾ:** (ಇಷ್ಟೇ ಅಲ್ಲದೆ, ಅಲ್ಲಿ ನೆರೆದಿರುವ) ಶತ್ರುಗಳು ನಿನ್ನ ಸಾಮರ್ಥ್ಯವನ್ನು ದೂಷಿಸುತ್ತಾ ದುರ್ಭಾಷೆಯನ್ನು ಕೂಡ ಉಪಯೋಗಿಸ ಬಲ್ಲರು. ಅದನ್ನು ಮೀರಿದ ದುಃಖ ಬೇರೆ ಇರಲು ಸಾಧ್ಯವೇ?

**ಅ॥** ಧರ್ಮಯುದ್ಧದಿಂದ ಇಹಪರಗಳಲ್ಲಿ ಉಂಟಾಗುವ ಶ್ರೇಯಗಳನ್ನು ಹೇಳಲಾಗಿದೆ-

**೩೭. ಹತೋ ವಾ ಪ್ರಾಪ್ಸ್ಯಸೇ ಸ್ವರ್ಗಂ ಜಿತ್ವಾ ವಾ ಭೋಕ್ಷ್ಯಸೇ ಮಹೀಮ್।**
**ತಸ್ಮಾದುತ್ತಿಷ್ಠ ಕೌಂತೇಯ ಯುದ್ಧಾಯ ಕೃತನಿಶ್ಚಯಃ॥**

**ಅರ್ಥ:** ಕೌಂತೇಯ=ಓ ಅರ್ಜುನಾ!, ಹತೋ ವಾ=(ನೀನು) ವಧಿಸಲ್ಪಟ್ಟರೆ ಸ್ವರ್ಗಂ=ಸ್ವರ್ಗವನ್ನು; ಪ್ರಾಪ್ಸ್ಯಸೇ=ಹೊಂದುತ್ತೀಯೆ; ಜಿತ್ವಾವಾ=ಜಯಿಸಿದರೆ; ಮಹೀಮ್=ರಾಜ್ಯವನ್ನು; ಭೋಕ್ಷ್ಯಸೇ=ಅನುಭವಿಸುತ್ತೀಯೆ; ತಸ್ಮಾತ್= ಆದ್ದರಿಂದ; ಯುದ್ಧಾಯ=ಯುದ್ಧಕ್ಕೋಸ್ಕರ; ಕೃತನಿಶ್ಚಯಃ=ನಿಶ್ಚಯಿಸಿದಂತವನಾಗಿ; ಉತ್ತಿಷ್ಠ=ಏಳು.

**ತಾ:** ಅರ್ಜುನಾ! ಒಂದು ವೇಳೆ ನೀನು ಈ ಧರ್ಮಯುದ್ಧದಲ್ಲಿ ಶತ್ರುಗಳಿಂದ ವಧಿಸಲ್ಪಟ್ಟರೆ ಸ್ವರ್ಗವನ್ನು ಪಡೆಯುತ್ತೀಯೆ. ಹಾಗಲ್ಲದೆ, ನೀನೇ ಜಯಿಸಿದಲ್ಲಿ ಭೂಲೋಕ ರಾಜ್ಯವನ್ನು ಅನುಭವಿಸುತ್ತೀಯೆ. ಈ ಪ್ರಕಾರವಾಗಿ ಎರಡು ವಿಧಗಳೂ ಲಾಭದಾಯಕಗಳೇ. ಆದ್ದರಿಂದ ಏಳು, ಯುದ್ಧಸನ್ನದ್ಧನಾಗು.

**ವ್ಯಾಖ್ಯೆ:** ಈ ಶ್ಲೋಕವು ಮುಮುಕ್ಷುಗಳಿಗೆ ಪ್ರಾಣವಿದ್ದ ಹಾಗೆ ಇದು ಒಂದು ಮಹಾಮಂತ್ರ. ಸಾಧನೆಯಲ್ಲಿ ನಿರಾಶೆ, ಅಧೈರ್ಯ, ನಿರುತ್ಸಾಹಗಳು ಉಂಟಾದಾಗ, ಇದನ್ನು ಪಠಿಸಿದರೆ ಮಹಾ ಧೈರ್ಯವು ನಿಶ್ಚಿತವಾಗಿ ಉಂಟಾಗುವುದು. ಏಕೆಂದರೆ ಧರ್ಮಪೂರ್ವಕವಾದ ಬಾಹ್ಯ ಯುದ್ಧದಲ್ಲಿ ಶೂರನು ವಿಜಯ ಹೊಂದಿದರೆ ರಾಜ್ಯವೂ, ಮರಣಿಸಿದರೆ ಸ್ವರ್ಗವೂ ಹೇಗೆ ಸಿಗುವುವೋ, ಹಾಗೆಯೇ ಅವಿದ್ಯೆ (ಮಾಯೆ)ಯ ಸಂಗ್ರಾಮದಲ್ಲಿ ಆತ್ಮಾನಾತ್ಮ ಯುದ್ಧದಲ್ಲಿ ಸಾಧಕನು ವಿಜಯಗಳಿಸಿದರೆ ಮೋಕ್ಷವನ್ನು, ಮರಣಿಸಿದರೆ ಉತ್ತಮ ಲೋಕಪ್ರಾಪ್ತಿಯನ್ನು ಹೊಂದುತ್ತಾನೆ. ಆದ್ದರಿಂದ ಎರಡು ವಿಧದಲ್ಲಿಯೂ ಆತನಿಗೆ ಶ್ರೇಯವೇ ಉಂಟಾಗುವುದು. ಆಧ್ಯಾತ್ಮಿಕ ಸಾಧನೆ ಪೂರ್ತಿಯಾಗುವ ಮೊದಲೇ ಒಂದು ವೇಳೆ ಮುಮುಕ್ಷುವಿಗೆ ಮರಣವು ಸಂಭವಿಸಿದಲ್ಲಿ ಆತನಿಗೆ ಯಾವ ರೀತಿಯ ದುರ್ಗತಿಯೂ ಉಂಟಾಗುವು ದಿಲ್ಲವೆಂದು, ಉತ್ತಮ ಲೋಕದಲ್ಲಿ ಸುಖಗಳನ್ನನುಭವಿಸಿ, ಮತ್ತೆ ಭೂಲೋಕದಲ್ಲಿ ಉತ್ತಮ ವಂಶದಲ್ಲಿಯೋ ಇಲ್ಲ ಯೋಗಿಗಳ ಕುಲದಲ್ಲಿಯೋ ಜನ್ಮಿಸಿ ತಾನೀಮಧ್ಯೆ ಬಿಟ್ಟ ಸಾಧನೆಗಳನ್ನು ಮತ್ತೆ ಮುಂದುವರಿಸುತ್ತಾನೆ ಎಂದು ಮುಂದೆ (ಆರನೆಯ ಅಧ್ಯಾಯದಲ್ಲಿ) ಬರುವುದು. ಆದ್ದರಿಂದ ಮುಮುಕ್ಷುವು ತನ್ನ ಆಧ್ಯಾತ್ಮಿಕ ಸಾಧನೆಯನ್ನು ಹಾಗೂ ಪ್ರಕೃತಿಯೊಡನೆ ತಾನು ಮಾಡುವ ಸಂಗ್ರಾಮವನ್ನು ಎಳ್ಳಷ್ಟೂ ಬಿಡದೆ ಕೃತನಿಶ್ಚಯನಾಗಿ ಮುಂದುವರಿಯಬೇಕೆಂದು ಅರ್ಜುನನನ್ನು ನೆಪವಾಗಿಟ್ಟುಕೊಂಡು ಲೋಕಕ್ಕೆಲ್ಲಾ ಶ್ರೀಕೃಷ್ಣ ಮೂರ್ತಿ ಸಾರುತ್ತಿದ್ದಾನೆ.

"ಕೃತನಿಶ್ಚಯಃ"- ಎಂದು ಹೇಳಲ್ಪಟ್ಟಿರುವುದರಿಂದ ಲಕ್ಷ್ಯವು ಅನುಭೂತಿಯಾಗುವವರೆಗೆ ಸಾಧನೆಯನ್ನು ಕಿಂಚಿತ್ತೂ ಸಡಿಲಿಸಬಾರದೆಂಬ ದೃಢ ನಿಶ್ಚಯವನ್ನು ಹೊಂದಿರಬೇಕೆಂದು ಸ್ಪಷ್ಟವಾಗುತ್ತಿದೆ. ಹಿಡಿದ ಕೆಲಸ ಮಾಡಲೇಬೇಕೆಂಬ ಛಲವಿಲ್ಲದವರನ್ನು ಮಾಯೆ ಕೆಳಗೆ ತಳ್ಳಿ ಬೀಳಿಸುತ್ತದೆ. ಆದ್ದರಿಂದ ಜಾಗರೂಕರಾಗಿರಬೇಕು.

'ತಸ್ಮಾದ್ಯುತ್ತಿಷ್ಠ'* 'ಏಳು' ಎಂದು ಭಗವಂತನು ಅರ್ಜುನನಿಗೆ

---

* ಉತ್ತಿಷ್ಠತ, ಜಾಗ್ರತ, ಪ್ರಾಪ್ಯವರಾನ್ನಿ ಬೋಧತ.
ಏಳಿರಿ, ಮೇಲೇಳಿರಿ, ಮಹನೀಯರನ್ನು ಆಶ್ರಯಿಸಿ ಜ್ಞಾನವನ್ನು ಹೊಂದಿರಿ (ಕ.ಉ.)

ಧೈರ್ಯವನ್ನು ಬೋಧಿಸುತ್ತಿದ್ದಾನೆ. ಸಂಸಾರ ಕ್ಷೇತ್ರದಲ್ಲಿ ಅನೇಕ ದುಃಖ ಹಾಗು ತಾಪತ್ರಯಗಳಲ್ಲಿ ಬಿದ್ದು ಕ್ಷಣಿಕ ಸುಖಗಳಿಗಾಗಿ ಹಾತೊರೆಯುತ್ತಾ, ನಾನಾ ಯಾತನೆಗಳನ್ನು ಅನುಭವಿಸುತ್ತಿರುವ ಮಾನವರಿಗೆ ಈ ಧೈರ್ಯೋದ್ಬೋಧಕ ಮತ್ತು ಉತ್ಸಾಹವನ್ನುಂಟುಮಾಡುವ ಬೋಧೆಗಳು ಎಷ್ಟೋ ಅವಶ್ಯಕ.

**ಅ॥** ಕಾರ್ಯಗಳನ್ನು ಹೇಗೆ ಆಚರಿಸಿದರೆ ಮನುಷ್ಯನು ಪಾಪಕ್ಕೆ ಸಿಲುಕುವುದಿಲ್ಲವೆನ್ನುವುದನ್ನು ವಚಿಸುತ್ತಿದ್ದಾನೆ.

**೩೮. ಸುಖದುಃಖೇ ಸಮೇ ಕೃತ್ವಾ ಲಾಭಾಲಾಭೌ ಜಯಾಜಯೌ**
**ತತೋ ಯುದ್ಧಾಯ ಯುಜ್ಯಸ್ವ ನೈವಂ ಪಾಪಮವಾಪ್ಸ್ಯಸಿ**

**ಅರ್ಥ:** ಸುಖದುಃಖೇ=ಸುಖದುಃಖಗಳನ್ನು; ಲಾಭಾಲಾಭೌ=ಲಾಭನಷ್ಟಗಳನ್ನು; ಜಯಾಜಯೌ=ಜಯಾಪಜಯಗಳನ್ನು; ಸಮೇಕೃತ್ವಾ=ಸಮವಾಗಿ ಭಾವಿಸಿ; ತತಃ=ನಂತರ; ಯುದ್ಧಾಯ=ಯುದ್ಧಮಾಡಲೋಸುಗ; ಯಜ್ಯಸ್ವ=ಸಿದ್ಧವಾಗು; ಏವಂ(ಚೇತ್)=ಹೀಗೆ ಮಾಡಿದ್ದಾದರೆ; ಪಾಪಂ=ಪಾಪವನ್ನು; ನ ಅವಾಪ್ಸ್ಯಸಿ=ಹೊಂದುವುದಿಲ್ಲ.

**ತಾ॥** ಸುಖದುಃಖಗಳಲ್ಲಿ, ಲಾಭನಷ್ಟಗಳಲ್ಲಿ, ಜಯಾಪಜಯಗಳಲ್ಲಿ ಸಮಬುದ್ಧಿ ಹೊಂದಿ ಯುದ್ಧಕ್ಕೆ ಸಿದ್ಧನಾಗು. ಹೀಗೆ ಮಾಡಿದ್ದಾದರೆ ನೀನು ಪಾಪಕ್ಕೆ ಸಿಲುಕುವುದಿಲ್ಲ.

**ವ್ಯಾಖ್ಯೆ:** ಈ ಶ್ಲೋಕದಲ್ಲಿ ಭಗವಂತನು ಕರ್ಮರಹಸ್ಯವನ್ನು ಬೋಧಿಸುತ್ತಿದ್ದಾನೆ. ಕರ್ಮವನ್ನು ಮಾಡಿಯೂ ಯಾವ ವಿಧವಾದ ಪಾಪದಿಂದ ಸೋಂಕದೆ ಇರುವಂತಹ ಉಪಾಯವನ್ನು ತಿಳಿಸುತ್ತಿದ್ದಾನೆ. ಅದೇ ಸಮಭಾವ (Balance of mind). ಸುಖದುಃಖಾದಿಗಳಲ್ಲಿ ಸಮಬುದ್ಧಿ ಹೊಂದಿ ಕರ್ಮವನ್ನಾಚರಿಸಬೇಕು. ಅದರಿಂದ ಮಾನವನು ಪಾಪಕ್ಕೆ ಒಳಗಾಗುವುದಿಲ್ಲ. ಸುಖವು ಬಂದಾಗ ಉಬ್ಬಿಹೋಗಿ ಗರ್ವಿಸದೆ, ದುಃಖವು ಉಂಟಾದಾಗ ಕುಗ್ಗಿ ವ್ಯಾಕುಲಗೊಳ್ಳದೆ ಎರಡರಲ್ಲಿಯೂ ಸಮಬುದ್ಧಿಯನ್ನು ಹೊಂದಿರಬೇಕು. ಸಮಚಿತ್ತದಲ್ಲಿ ಆತ್ಮ ಸ್ಪಷ್ಟವಾಗಿ ಪ್ರತಿಬಿಂಬಿಸುವುದು. ಅಂತಹವನು ಪಾಪಕ್ಕೆ ಹೇಗೆ ಒಳಗಾಗುವನು? ಕರ್ಮಮಾರ್ಗ ಕೀಳೆಂದೂ, ಕರ್ಮ ಬಂಧಕ್ಕೆ ಹಾಗೂ ಜನ್ಮಕ್ಕೆ ಕಾರಣವೆಂದ್ಹೂ ಕೆಲವರು ಭಾವಿಸುವರು. ಆದರೆ ಭಗವಂತನ ಅಪ್ಪಣೆ ಬೇರೆ ಇದೆ. ಸಮಬುದ್ಧಿಯಿಂದ ಕರ್ಮವನ್ನಾಚರಿಸಿದರೆ ಆ ಕರ್ಮದಿಂದ ಪಾಪವು ಎಂದೆಂದಿಗೂ ಸ್ಪರ್ಶಿಸುವುದಿಲ್ಲವೆಂದು ಗೀತಾಚಾರ್ಯನು ಘೋಷಿಸುತ್ತಿದ್ದಾನೆ. 'ಕರ್ಮದಲ್ಲಿ ದೋಷವಿಲ್ಲ. ಕರ್ಮಮಾಡುವ ವಿಧಾನದಲ್ಲಿ ದೋಷವಿದೆ' ಎನ್ನುವುದನ್ನು ಸಾಧಕರು ತಿಳಿದುಕೊಂಡು ಕರ್ಮವನ್ನು ಸಮಬುದ್ಧಿಯಿಂದ ಆಚರಿಸಬೇಕು.

"ತತೋ ಯುದ್ಧಾಯ ಯುಜ್ಯಸ್ವ"- ಎಂದು ಹೇಳಲ್ಪಟ್ಟಿರುವುದರಿಂದ, ಕರ್ಮರಂಗದಲ್ಲಿ ಪ್ರವೇಶಿಸುವುದಕ್ಕೆ ಮುನ್ನ ಕರ್ಮವನ್ನು ಹೇಗೆ ಮಾಡಬೇಕೆನ್ನುವ ಪದ್ಧತಿಯನ್ನು ತಿಳಿದುಕೊಳ್ಳುವುದು ಅವಶ್ಯಕವೆಂದು ಸ್ಪಷ್ಟವಾಗುತ್ತಿದೆ. (ತತಃ=ಅಲ್ಲಿ ನಂತರ) ಯುದ್ಧವನ್ನು ಮಾಡು ಎಂದು ಭಗವಂತನು ಆದೇಶಿಸಿದನು. ಯಾವುದರ ನಂತರ? ಸುಖ ದುಃಖಾದಿಗಳೆರಡೂ ಸಮವೆಂಬ ಅಭ್ಯಾಸ ಮಾಡಿಕೊಂಡ ನಂತರ. ಅಂತಹ ಸಮತ್ವವನ್ನು ಮೊದಲೇ ಅಭ್ಯಸಿಸದೆ ಕರ್ಮಕ್ಷೇತ್ರದಲ್ಲಿ ಒಂದು ಪಕ್ಷ ಇಳಿದಿದ್ದೇ ಆದರೆ ಪತನ ಕಟ್ಟಿಟ್ಟದ್ದು. ಕರ್ಮದ ಹಾಹಾಕಾರದಲ್ಲಿ ಚಂಚಲತೆ ಸಹಜವಾಗಿ ಉಂಟಾಗುವುದೇ ಅಲ್ಲದೆ ಪಾಪದ ಸಂಪಾದನೆಯೂ ಆಗುವುದು. ಕರ್ಮಕ್ಕೆ ಜ್ಞಾನವು ಜೋಡಾಗಬೇಕು. ಆಗ ಮಾತ್ರ ಅದು ಶೋಭಿಸುವುದು. ಆದ್ದರಿಂದಲೇ ಶ್ರೀಕೃಷ್ಣಪರಮಾತ್ಮ ಅರ್ಜುನನಿಗೆ ಮೊದಲು ಜ್ಞಾನವನ್ನುಪದೇಶಿಸಿ, ನಂತರ ಕರ್ಮವನ್ನು ಬೋಧಿಸಿದನು.

ಪ್ರ : ಕರ್ಮವನ್ನು ಯಾವಾಗ ಆಚರಿಸಬೇಕು?

ಉ : ಸುಖದುಃಖಾದಿಗಳಲ್ಲಿ ಸಮಬುದ್ಧಿಯನ್ನು ಪಡೆದ ನಂತರ

ಪ್ರ : ಕರ್ಮವನ್ನು ಮಾಡುತ್ತಿದ್ದರೂ ಪಾಪವುಂಟಾಗದೆ ಇರಲು ಯಾವ ಉಪಾಯವಿದೆ ?

ಉ : ಚಿತ್ತದಲ್ಲಿ ಸುಖದುಃಖಾದಿಗಳ ಬಗ್ಗೆ ಸಮಭಾವವನ್ನು ಸ್ಥಿರ ಮಾಡಿಕೊಂಡು ಕರ್ಮಮಾಡಿದಲ್ಲಿ ಪಾಪವು ಉಂಟಾಗುವುದಿಲ್ಲ.

**ಅ॥** ಇಲ್ಲಿಯವರೆಗೆ ಸಾಂಖ್ಯಯೋಗವನ್ನು ಕುರಿತು ಬೋಧಿಸಿ ಇನ್ನು ಕರ್ಮಯೋಗವನ್ನಿಷ್ಟು ಹೇಳಲು ಪ್ರಾರಂಭಿಸಿದ್ದಾನೆ-

**೩೯. ಏಷಾ ತೇಽಭಿಹಿತಾ ಸಾಂಖ್ಯೇ ಬುದ್ಧಿರ್ಯೋಗೇ ತ್ವಿಮಾಂ ಶೃಣು**
**ಬುದ್ಧ್ಯಾ ಯುಕ್ತೋ ಯಯಾ ಪಾರ್ಥ ಕರ್ಮಬಂಧಂ ಪ್ರಹಾಸ್ಯಸಿ**

**ಅರ್ಥ:** ಪಾರ್ಥ=ಓ ಅರ್ಜುನಾ! ಸಾಂಖ್ಯೇ=ಆತ್ಮತತ್ವ ವಿಷಯದಲ್ಲಿ; ಏಷಾ=ಹೀಗೆ ಪ್ರತಿಪಾದಿಸಲ್ಪಟ್ಟ; ಬುದ್ಧಿ=ಜ್ಞಾನವನ್ನು; ತೇ=ನಿನಗೆ; ಅಭಿಹಿತಾ=ಹೇಳಲ್ಪಟ್ಟಿದೆ; ಯಯಾ ಬುದ್ಧ್ಯಾ=ಅಂತಹ ವಿವೇಕದಿಂದ; ಯುಕ್ತಃ=ಕೂಡಿದವನಾಗಿ; ಕರ್ಮಬಂಧಂ=ಕರ್ಮಬಂಧವನ್ನು; ಪ್ರಹಾಸ್ಯಸಿ=ಬಿಡಬಲ್ಲೆಯೋ; (ತಾಂ=ಅಂತಹ) ಯೋಗೇತು=ಕರ್ಮಯೋಗದ ವಿಷಯದಲ್ಲಿ; ಇಮಾಂ= ಈ ಹೇಳಲ್ಪಡುವ ಬುದ್ಧಿಯನ್ನು (ನಿಶ್ಚಯವನ್ನು); ಶೃಣು=ಕೇಳು.

**ತಾ॥** ಓ ಅರ್ಜುನಾ! ಇಲ್ಲಿಯವರೆಗೆ ಸಾಂಖ್ಯಶಾಸ್ತ್ರದಲ್ಲಿ ಹೇಳಲ್ಪಟ್ಟ ಆತ್ಮತತ್ವ ನಿಶ್ಚಯವನ್ನು ತಿಳಿಸಿದೆ. ಇನ್ನು ಯೋಗ ಶಾಸ್ತ್ರದಲ್ಲಿ ಕರ್ಮಯೋಗ ಸಂಬಂಧವಾದ ವಿವೇಕವನ್ನು ನಿನಗೆ ತಿಳಿಸಬಯಸುತ್ತೇನೆ. ಅದನ್ನು ತಿಳಿದಂಥವನಾದರೆ ನೀನು ಕರ್ಮಬಂಧನದಿಂದ ವಿಮುಕ್ತನಾಗುವೆ. ಆದ್ದರಿಂದ ಶ್ರದ್ಧೆಯಿಂದ ಕೇಳುವಂಥವನಾಗು.

**ವ್ಯಾಖ್ಯೆ:** ಕರ್ಮಮಾಡಿಯೂ ಬಂಧನಕ್ಕೊಳಗಾಗದೆ ಇರಬೇಕೆಂದರೆ, ಆ ಕರ್ಮವನ್ನು ಹೇಗೆ ಮಾಡಬೇಕೆಂಬ ವಿವೇಕ ಅತ್ಯವಶ್ಯಕ. ಆ ವಿವೇಕವನ್ನೇ 'ಬುದ್ಧಿ' ಎಂದು ಇಲ್ಲಿ ಹೇಳಲಾಗಿದೆ. ಅಂತಹ ಬುದ್ಧಿಯಿಂದ ಕರ್ಮವನ್ನಾಚರಿಸಿದರೆ ಜೀವಿಯು ಕರ್ಮ ಬಂಧನಕ್ಕೆ ಒಳಗಾಗುವುದಿಲ್ಲ. ಬಂಧವನ್ನುಂಟುಮಾಡದ ಕರ್ಮವು ಮೋಕ್ಷಕ್ಕೆ ಹೇತುವಾಗುವುದು. ಆದ್ದರಿಂದ ಭಗವಂತನು ತಿಳಿಸಲ್ಪಡುವ 'ಬುದ್ಧಿ'ಯನ್ನು ಕರ್ಮಯೋಗ ರಹಸ್ಯವನ್ನು ಪ್ರತಿಯೊಬ್ಬರೂ ಕರತಲಾಮಲಕ ಮಾಡಿಕೊಂಡು ಬಂಧವಿಮುಕ್ತರಾಗಬೇಕು.

**ಅ॥** ಕರ್ಮಯೋಗದ ಮಹಿಮೆಯನ್ನು ವರ್ಣಿಸುತ್ತಿದ್ದಾನೆ.

**೪೦. ನೇಹಾಭಿಕ್ರಮನಾಶೋಽಸ್ತಿ ಪ್ರತ್ಯವಾಯೋ ನ ವಿದ್ಯತೇ**
**ಸ್ವಲ್ಪಮಪ್ಯಸ್ಯ ಧರ್ಮಸ್ಯ ತ್ರಾಯತೇ ಮಹತೋ ಭಯಾತ್**

**ಅರ್ಥ:** ಇಹ=(ಮೋಕ್ಷಮಾರ್ಗದ) ಈ ಕರ್ಮಯೋಗದಲ್ಲಿ; ಅಭಿಕ್ರಮ ನಾಶಃ=ಪ್ರಾರಂಭವಾಗಿರುವುದು ನಿಷ್ಫಲವಾಗುವುದು; ನ ಅಸ್ತಿ=ಇಲ್ಲ; ಪ್ರತ್ಯವಾಯಃ= ದೋಷವು (ಇಲ್ಲವೇ ವಿರುದ್ಧ ಫಲ); ನ ವಿದ್ಯತೇ=ಇಲ್ಲ; ಅಸ್ಯ ಧರ್ಮಸ್ಯ=ಕರ್ಮಯೋಗವೆಂಬ ಧರ್ಮದಲ್ಲಿ; ಸ್ವಲ್ಪಮಪಿ=

ಲೇಶವಾದರೂ (ಸ್ವಲ್ಪವಾದರೂ); ಮಹತಃ=ವಿಶೇಷವಾದ; ಭಯಾತ್= ಭಯದಿಂದ; ತ್ರಾಯತೇ=ರಕ್ಷಿಸುತ್ತದೆ.

**ತಾ:** ನಿಷ್ಕಾಮ ಕರ್ಮಯೋಗವು ಆರಂಭವಾದದ್ದೇ ಆದರೆ ನಿಷ್ಫಲವೆಂದೂ ಆಗದು. ಪೂರ್ತಿಯಾಗುವ ಮುನ್ನ ಯಾವುದೇ ಕಾರಣದಿಂದ ಮಧ್ಯದಲ್ಲೇ ನಿಂತು ಹೋದರೂ ದೋಷವಿಲ್ಲ. ಈ ಕರ್ಮಯೋಗಾನುಷ್ಠಾನ ವೆಂಬ ಧರ್ಮವನ್ನು ಸ್ವಲ್ಪ ಆಚರಿಸಿದರೂ ಮಹತ್ತರವಾದ, (ಜನನ ಮರಣ ಪ್ರವಾಹ ರೂಪದ) ಸಂಸಾರ ಭಯದಿಂದ ರಕ್ಷಿಸುತ್ತದೆ.

**ವ್ಯಾಖ್ಯೆ:** ಬುದ್ಧಿಯಿಂದ (ವಿವೇಕದಿಂದ) ಕೂಡಿದ ಈ ಕರ್ಮಯೋಗವನ್ನು ಅಂದರೆ ನಿಷ್ಕಾಮ ಕರ್ಮಯೋಗವನ್ನು (ಆಧ್ಯಾತ್ಮಿಕ ಸಾಧನೆಯನ್ನು) ಪ್ರಾರಂಭಿಸಿದ್ದೇ ಆದರೆ ವ್ಯರ್ಥವೆಂದೂ ಆಗುವುದಿಲ್ಲ. ಅದು ತಪ್ಪದೆ ಸತ್ಫಲವನ್ನು ಕೊಡುತ್ತದೆ. ಒಂದು ವೇಳೆ ಯಾವುದೇ ಕಾರಣಗಳಿಂದ ಮಧ್ಯೆ ನಿಂತು ಹೋದರೂ ದೋಷವಿರುವುದಿಲ್ಲ. ಬೀಜವನ್ನು ಭೂಮಿಯಲ್ಲಿ ಬಿತ್ತಿದ ನಂತರ ಕೊನೆಯವರೆಗೂ ಅದನ್ನು ಜಲಾದಿಗಳಿಂದ ಪೋಷಿಸಿದರೆ ಮಾತ್ರ ಫಲವು ಕೈಗೂಡುವುದು. ಮಧ್ಯದಲ್ಲಿ ಯಾವುದೇ ಕಾರಣದಿಂದ ಜಲಸೇಚನೆಗಳನ್ನು ನಿಲ್ಲಿಸಿದರೆ ಆ ಮೊಳಕೆ ಒಣಗಿ ಹೋಗುವುದು. ನಿಷ್ಕಾಮ ಕರ್ಮಯೋಗದ ವಿಷಯವೇ ಬೇರೆ. ಎಷ್ಟು ಮಾಡಿದರೆ ಅಷ್ಟು ಫಲ ದೊರೆಯುತ್ತದೆಯೇ ವಿನಃ ಅದರಿಂದ ದೋಷವು ಯಾವಾಗಲೂ ಉಂಟಾಗುವುದಿಲ್ಲ.

"ತ್ರಾಯತೇ ಮಹತೋ ಭಯಾತ್"- ವಿವೇಕದಿಂದ ಕೂಡಿದ ಈ ಕರ್ಮಾಚರಣೆ, ಇಲ್ಲವೇ ನಿಷ್ಕಾಮ ಕರ್ಮಯೋಗವನ್ನು ಸ್ವಲ್ಪ ಆಚರಿಸಿದರೂ ಮಹಾಭಯದಿಂದ ಜೀವಿಯನ್ನು ಕಾಪಾಡುತ್ತದೆಂದು ಹೇಳಲಾಗಿದೆ. ಪ್ರಪಂಚದಲ್ಲಿ ಎಲ್ಲಾ ಭಯಗಳಿಗಿಂತ ದೊಡ್ಡ ಭಯವಾವುದು? ಮರಣ ಭಯ. ಜನನ ಮರಣ ರೂಪದ ಸಂಸಾರ ಭಯ. ಅದನ್ನು ನಿಷ್ಕಾಮ ಕರ್ಮಾನುಷ್ಠಾನ ದೂರಮಾಡುತ್ತದೆ.

ಸಣ್ಣ ಕಿಡಿಯು ಘೋರಾರಣ್ಯವನ್ನು ಹೇಗೆ ಭಸ್ಮೀಭೂತಗೊಳಿಸುವುದೋ, ಚಿಕ್ಕ ದೋಣಿಯಾದರೂ ವಿಶಾಲ ಮಹಾ ಸಮುದ್ರವನ್ನು ಹೇಗೆ ದಾಟಿಸುವುದೋ ಹಾಗೆ ಈ ಪರಮಾರ್ಥ ಸಾಧನೆಯು ಸ್ವಲ್ಪವಾದರೂ ಘೋರ ಸಂಸಾರ ವಿಪತ್ತಿನಿಂದ ಜೀವಿಯನ್ನು ಕಾಪಾಡುತ್ತದೆ. ಆದ್ದರಿಂದ ಇನ್ನು ಸಾಧಕರು ಭಯಪಡಬೇಕಾಗಿಲ್ಲ. ಪೂರ್ಣಸ್ಥಿತಿಯನ್ನು ಮೊಟ್ಟ ಮೊದಲೇ ಹೊಂದಲಶಕ್ಯರಾದರೂ, ತಮ್ಮ ಸಾಧನೆಯನ್ನು ಬಿಡದೆ ಆಚರಿಸುತ್ತಿರಬೇಕು. ಚಿಕ್ಕ ಪೂಜೆ, ಚಿಕ್ಕಮಂತ್ರ, ಅಥವ ಯಾವುದೇ ಒಂದು ಪುಣ್ಯ ಕಾರ್ಯವನ್ನಾಗಲಿ ಬಿಡದೆ ಪರಿಪೂರ್ಣ ವಿಶ್ವಾಸವಿಟ್ಟು ಆಚರಿಸುತ್ತಿದ್ದಲ್ಲಿ ಕ್ರಮವಾಗಿ ಅದೇ ಸಂಸಾರ ಸಮುದ್ರವನ್ನು ದಾಟಿಸಲು ಸಹಾಯಕವಾಗುತ್ತದೆ. ಔಷಧವು ಗುಂಜಿನಷ್ಟಿದ್ದರೂ ಪಥ್ಯಾನುಸಾರವಾಗಿ ತಪ್ಪದೆ ಸೇವಿಸಿದರೆ ಭಯಂಕರವಾದ ರೋಗವನ್ನು ಕೂಡ ವಾಸಿಮಾಡುವುದಲ್ಲವೇ!

ಕರ್ಮಯೋಗವೆನ್ನುವ ಧರ್ಮವು ಅಲ್ಪವಾಗಿ ಕಂಡರೂ ಮಹಾಸಂಸಾರ ಭಯದಿಂದ ಜೀವಿಯನ್ನು ಪರಿರಕ್ಷಿಸುವುದೆಂದು ಭಗವಂತನು ಈ ಶ್ಲೋಕದಲ್ಲಿ ಹೇಳಿದ ವಿಷಯವು ಸಾಧಕ ಲೋಕಕ್ಕೆ ಎಷ್ಟೋ ಆಶ್ವಾಸನೆಯನ್ನು ನೀಡುತ್ತಿದೆ. ಏಕೆಂದರೆ "ಈ ಅನಂತ ಸಂಸಾರಸಾಗರವನ್ನು ಹೇಗೆ ಈಜಬಲ್ಲೆವು? ಈ ಘೋರ ತಮಸ್ಸನ್ನು ಹೇಗೆ ದಾಟಬಲ್ಲೆವು? ಅಯ್ಯೋ! ನಾವು ಇಷ್ಟೆಲ್ಲಾ ಧರ್ಮಗಳನ್ನು ಆಚರಿಸಲಾರೆವಲ್ಲಾ! ನಿರಂತರವಾಗಿ ಸಾಧನೆ ಮಾಡಲಾರೆವಲ್ಲಾ! ಅದು ಆ ಋಷಿಗಳಿಗೆ, ಮುನೀಶ್ವರರಿಗೇ ಸಾಧ್ಯ. ನಮ್ಮಂತಹ ಸಾಮಾನ್ಯರು ಅಂತಹ ತಪಸ್ಸನ್ನು ಹೇಗೆ ಮಾಡಬಲ್ಲೆವು?" ಎಂದು ನಾನಾ ವಿಧವಾಗಿ ಚಿಂತಿಸುತ್ತಿರುವ ಜನಗಳಿಗೆ ಧೈರ್ಯವನ್ನಿತ್ತು, ಮೋಕ್ಷಪ್ರಾಪ್ತಿಗೆ ಸಂಸಾರ ಭಯ ನಾಶಕ್ಕೆ ಬೇಕಾದ ವರಪ್ರಸಾದವನ್ನು ಭಗವಂತನು ಇಲ್ಲಿ ಉಪದೇಶಿಸಿದ್ದಾನೆ. ಆದ್ದರಿಂದ ಭಗವದ್ವಾಕ್ಯಗಳ ಮೇಲೆ ವಿಶ್ವಾಸವಿಟ್ಟು ನಿಷ್ಕಾಮ ಕರ್ಮಯೋಗ ವೆಂಬ ಆಧ್ಯಾತ್ಮಿಕ ಧರ್ಮವನ್ನು ಕಿಂಚಿತ್ತಾದರೂ ಆಚರಿಸಿ ಜನರು ಬಂಧ ವಿಮುಕ್ತರಾಗುವಂತಾಗಬೇಕು!

ಪ್ರ : ನಿಷ್ಕಾಮ ಕರ್ಮವೆಂಬ ಧರ್ಮದ ಪ್ರಾಶಸ್ತ್ಯವನ್ನು ವಿವರಿಸುವುದು?

ಉ : ೧) ಅದನ್ನು ಪ್ರಾರಂಭಿಸಿದ್ದೇ ಆದರೆ ನಿಷ್ಫಲವೆಂದೂ ಉಂಟಾಗದು. ೨) ಸ್ವಲ್ಪ ಆಚರಿಸಿ, ಮಧ್ಯೆ ನಿಲ್ಲಿಸಿದರೂ ದೋಷವಿಲ್ಲ. ೩) ಸ್ವಲ್ಪ ಆಚರಿಸಿದರೂ ದೊಡ್ಡ ಸಂಸಾರ ಭಯವನ್ನು ದೂರ ಮಾಡುವುದು.

ಪ್ರ : ಸಂಸಾರ ಭಯದಿಂದ ತಪ್ಪಿಸಿಕೊಳ್ಳುವ ಉಪಾಯವೇನು ?

ಉ : ವಿವೇಕಯುಕ್ತವಾದ ಕರ್ಮಾಚರಣೆಯನ್ನು (ನಿಷ್ಕಾಮ ಕರ್ಮಾನುಷ್ಠಾನ) ಮಾಡುವುದು.

ಅ|| ಉತ್ತಮ ಕರ್ಮಯೋಗಿಯ ಸ್ಥಿರಚಿತ್ತಕ್ಕೂ, ಭೋಗಾಸಕ್ತರ ಚಂಚಲ ಮನಸ್ಸುಗಳಿಗೂ ಇರುವ ಭೇದವನ್ನು ತೋರಿಸುತ್ತಿದ್ದಾನೆ.

೪೧. ವ್ಯವಸಾಯಾತ್ಮಿಕಾ ಬುದ್ಧಿರೇಕೇಹ ಕುರುನಂದನ
ಬಹುಶಾಖಾ ಹ್ಯನಂತಾಶ್ಚ ಬುದ್ಧಯೋಽವ್ಯವಸಾಯಿನಾಮ್

**ಅರ್ಥ:** ಕುರುನಂದನಾ=ಓ ಅರ್ಜುನಾ!, ಇಹ=ಈ ಕರ್ಮಯೋಗದ ಅನುಷ್ಠಾನದಲ್ಲಿ; ವ್ಯವಸಾಯಾತ್ಮಿಕಾ=ನಿಶ್ಚಯದಿಂದ ಕೂಡಿದ; ಬುದ್ಧಿಃ=ಬುದ್ಧಿ; ಏಕಾ=ಒಂದೇ; ಅವ್ಯವಸಾಯಿನಾಂ=ನಿಶ್ಚಯವಿಲ್ಲದವರ; ಬುದ್ಧಯಃ= ಬುದ್ಧಿಗಳು; ಬಹುಶಾಖಾಃ=ಅನೇಕ ವಿಧಗಳಲ್ಲಿ ವ್ಯಾಪಿಸಿರುವುವು; ಅನಂತಾಶ್ಚಹಿ=ಅನಂತವಾಗಿರುವುವು.

**ತಾ||** ಅರ್ಜುನಾ! ಈ ಕರ್ಮಯೋಗಾನುಷ್ಠಾನದಲ್ಲಿ ನಿಶ್ಚಯದಿಂದ ಕೂಡಿದ ಬುದ್ಧಿ ಒಂದೇ ಆಗಿದೆ. ನಿಶ್ಚಯವಿಲ್ಲದವರ ಬುದ್ಧಿಗಳು ಅನೇಕ ವಿಧಗಳಾಗಿದ್ದು ಅನಂತವಾಗಿವೆ.

**ವ್ಯಾಖ್ಯೆ:** ದೈವದಲ್ಲಿ (ಆತ್ಮದಲ್ಲಿ) ನಿಶ್ಚಯವುಂಟಾಗಿರುವ ಬುದ್ಧಿ ಏಕಾಗ್ರವಾಗಿರುತ್ತದೆ. ಏಕೆಂದರೆ ಅದು ಆ ದೈವವನ್ನು ಬಿಟ್ಟು ಬೇರೆ ಯಾವುದನ್ನೂ ಇಚ್ಛಿಸದು. ಅದು ಶಾಖೋಪಶಾಖೆಗಳಾಗಿ ವಿಸ್ತರಿಸದು. ದೈವವೆನ್ನುವ ಲಕ್ಷ್ಯದಲ್ಲಿಯೇ ಏಕಾಗ್ರವಾಗಿರುವುದು. ಅಂತಹ ನಿಶ್ಚಯಾತ್ಮಕವಾದ ಬುದ್ಧಿಯುಳ್ಳವರು ಮಾಡುವ ಪ್ರತಿಕಾರ್ಯವೂ, ಪ್ರತಿಭಾವನೆಯೂ ದೈವೋನ್ಮುಖವಾಗಿರುವುವು. ಫಲಾಪೇಕ್ಷೆಯಿಲ್ಲದೆ ಈಶ್ವರಾರ್ಪಣೆ ಮಾಡಿ ಅವರು ಕಾರ್ಯಗಳನ್ನು ಮಾಡುತ್ತಿರುತ್ತಾರೆ. ದೈವಲಕ್ಷ್ಯವಿಲ್ಲದೇ ಇರುವವರು ಅನೇಕ ಪ್ರಾಪಂಚಿಕ ವಸ್ತುಗಳನ್ನು ಆಶ್ರಯಿಸಿ ದೃಶ್ಯ ಪದಾರ್ಥಗಳ ಕಡೆಗೆ ಓಡುತ್ತಾ, ಅವುಗಳ ಪ್ರಾಪ್ತಿಯೇ ತಮ್ಮ ಗಮ್ಯವೆಂದು ಭಾವಿಸಿ ಚಂಚಲ ಬುದ್ಧಿಯುಳ್ಳವರಾಗಿರುವರು. ಬುದ್ಧಿ ಏಕೋನ್ಮುಖವಾಗಿರದು. ಡೊಂಕಾಗಿ ಬಹುದಿಕ್ಕುಗಳಲ್ಲಿ ವಿಸ್ತರಿಸಿ ಪ್ರಪಂಚದ ವಸ್ತುಗಳ ಮೇಲೆ ಮೋಹಗೊಂಡು ಫಲಗಳನ್ನು ಕೋರುತ್ತಾ, ಭೋಗಗಳನ್ನು ಅಪೇಕ್ಷಿಸುತ್ತಾ, ಅನೇಕ ಕರ್ಮಕಾಂಡಗಳಲ್ಲಿ ಸಿಕ್ಕಿಕೊಂಡು ತತ್ಫಲಿತವಾಗಿ ಏಕಾಗ್ರತೆ ಇರುವುದಿಲ್ಲ.

ಸಮಾನಾಂತರವಾಗಿ ಬೇರೆಬೇರೆ ದಿಕ್ಕುಗಳಲ್ಲಿ ಪ್ರಸರಿಸುವ ಸೂರ್ಯ ಕಿರಣಗಳು ಉನ್ನತ ದರ್ಪಣದ (Convex) ಮೂಲಕ ಹಾದಾಗ ಕೆಳಗಿರುವ ಕಾಗದವನ್ನು ಭಸ್ಮಮಾಡಬಲ್ಲವು. ಆ ವಿಧವಾಗಿಯೇ ನಿಶ್ಚಯಾತ್ಮಕವಾದ ಏಕಾಗ್ರ ಬುದ್ಧಿಯಲ್ಲಿ ಅಖಂಡ ಶಕ್ತಿ ಅಡಗಿದೆ. ಪ್ರಾಪಂಚಿಕ ಮಾನವನು ಅನೇಕ ದೃಶ್ಯ ವಿಷಯಗಳಲ್ಲಿ ಆಸಕ್ತಿಯುಳ್ಳ ಮನಸ್ಸುಳ್ಳವನಾಗಿ ಕೋರಿಕೆಗಳನ್ನು ತೀರಿಸಲೋಸುಗ ತನ್ನ ಎಲ್ಲಾ ಶಕ್ತಿಯನ್ನು ಧಾರೆಯೆರೆಯುತ್ತಿದ್ದಾನೆ. ಅಂತಹವನ ಚಿತ್ತವು ಚಂಚಲವಾಗಿ, ಬಹು ಶಾಖಾಯುತವಾಗಿರುವುದರಿಂದ ಅವನು ಶಾಂತಿಯಿಲ್ಲದೆ ತಲ್ಲಣಿಸಿ ಹೋಗುತ್ತಾನೆ. ಆದ್ದರಿಂದ ವಿವೇಕವಂತನಾಗಿ ದೈವದಲ್ಲಿ (ಮೋಕ್ಷದಲ್ಲಿ) ನಿಶ್ಚಯವಾದ ಬುದ್ಧಿಯನ್ನು ಇಟ್ಟುಕೊಂಡು ಬಹು ಶಾಖಾತ್ಮಕವಾದ ಅನಿಶ್ಚಯವಾದ ಬುದ್ಧಿಗೆ ತಿಲಾಂಜಲಿ ಅರ್ಪಿಸಬೇಕು.

**ಅ॥** ನಿಶ್ಚಯಾತ್ಮಕ ಬುದ್ಧಿಯಿಲ್ಲದವರ ಸ್ವಭಾವವನ್ನು ವರ್ಣಿಸಲಾಗಿದೆ.

**೪೨. ಯಾಮಿಮಾಂ ಪುಷ್ಪಿತಾಂ ವಾಚಂ ಪ್ರವದಂತ್ಯವಿಪಶ್ಚಿತಃ**
**ವೇದವಾದರತಾಃ ಪಾರ್ಥ ನಾನ್ಯದಸ್ತೀತಿ ವಾದಿನಃ**

**೪೩. ಕಾಮಾತ್ಮಾನಃ ಸ್ವರ್ಗಪರಾ ಜನ್ಮಕರ್ಮಫಲಪ್ರದಾಮ್**
**ಕ್ರಿಯಾವಿಶೇಷಬಹುಲಾಂ ಭೋಗೈಶ್ವರ್ಯಗತಿಂ ಪ್ರತಿ**

**೪೪. ಭೋಗೈಶ್ವರ್ಯಪ್ರಸಕ್ತಾನಾಂ ತಯಾಽಪಹೃತಚೇತಸಾಮ್**
**ವ್ಯವಸಾಯಾತ್ಮಿಕಾ ಬುದ್ಧಿಃ ಸಮಾಧೌ ನ ವಿಧೀಯತೇ**

**ಅರ್ಥ:** ಪಾರ್ಥ=ಓ ಅರ್ಜುನಾ! ವೇದವಾದರತಾಃ=ವೇದಗಳ ಫಲವನ್ನು ತಿಳಿಸುವ ಭಾಗಗಳಲ್ಲಿ(ಅರ್ಥವಾದಗಳಲ್ಲಿ) ಪ್ರೀತಿಯುಳ್ಳವರು; ನಾನ್ಯದಸ್ತೀತಿ ವಾದಿನಃ=ಅದರಲ್ಲಿ ಹೇಳಲ್ಪಟ್ಟ ಸ್ವರ್ಗಾದಿಗಳಿಗಿಂತ ಅಧಿಕವಾದ ಫಲವು ಬೇರೊಂದು ಇಲ್ಲವೆಂದು ವಾದಿಸುವವರು, ಕಾಮಾತ್ಮಾನಃ=ಕೋರಿಕೆಗಳಿಂದ ತುಂಬಿದ ಮನಸ್ಸುಳ್ಳವರು; ಸ್ವರ್ಗಪರಾಃ=ಸ್ವರ್ಗದಲ್ಲಿ ಆಸಕ್ತಿಯುಳ್ಳವರು (ಆಗಿ); ಅವಿಪಶ್ಚಿತಃ= ಅವಿವೇಕಿಗಳು (ತತ್ವವನ್ನು ತಿಳಿಯದ ಅಲ್ಪಜ್ಞಾನಿಗಳು); ಜನ್ಮಕರ್ಮ ಫಲಪ್ರದಾಂ=ಜನ್ಮವನ್ನು, ಕರ್ಮವನ್ನು ಅದರ ಫಲವನ್ನೀಯುವಂತಹದು; ಭೋಗೈಶ್ವರ್ಯಗತಿಂ ಪ್ರತಿ=ಭೋಗಗಳನ್ನು, ಐಶ್ವರ್ಯಗಳನ್ನು ಸಂಪಾದಿಸಲು; ಕ್ರಿಯಾ ವಿಶೇಷ ಬಹುಲಾಂ=ವಿವಿಧ ಕಾರ್ಯ ಕಲಾಪಗಳೊಡನೆ ಕೂಡಿದುದು; ಪುಷ್ಪಿತಾಂ=ಫಲಪ್ರದವಲ್ಲದ ಕೇವಲ ಪುಷ್ಪದಂತೆ ದೃಶ್ಯಕ್ಕೆ ಮಾತ್ರ ರಮ್ಯವಾಗಿರುವುದು (ಆಗಿದೆ); ಯಾಂ ಇಮಾಂ=ಯಾವ ಈ; ವಾಚಂ= ವಾಕ್ಯವನ್ನು; ಪ್ರವದಂತಿ=ವಿಶೇಷವಾಗಿ ಹೇಳುತ್ತಿರುವರೋ; ತಯಾ=ಅದರಿಂದ; ಅಪಹೃತ=ಅಪಹರಿಸಲ್ಪಟ್ಟ; ಚೇತಸಾಂ=ಮನಸ್ಸುಳ್ಳವರು; ಭೋಗೈಶ್ವರ್ಯ ಪ್ರಸಕ್ತಾನಾಂ=ಭೋಗಗಳಲ್ಲಿ, ಐಶ್ವರ್ಯಗಳಲ್ಲಿ ಆಶೆಯುಳ್ಳವರಿಗೆ; ವ್ಯವಸಾಯಾತ್ಮಿಕಾ ಬುದ್ಧಿಃ= ನಿಶ್ಚಯವಾದ ಬುದ್ಧಿ (ಏಕಾಗ್ರ ಬುದ್ಧಿ); ಸಮಾಧೌ= ದೈವ ಧ್ಯಾನದಲ್ಲಿ (ಸಮಾಧಿ ನಿಷ್ಠೆಯಲ್ಲಿ);ನ ವಿಧೀಯತೆ= ಆಗಲಾರದು.

**ತಾ:** ಓ ಅರ್ಜುನಾ! ವೇದಗಳಲ್ಲಿ ಬರುವ ಫಲವನ್ನೀಯುವ ಭಾಗಗಳಲ್ಲಿ ಇಷ್ಟವುಳ್ಳವರು, ಅದರಲ್ಲಿ ಹೇಳಲ್ಪಟ್ಟ ಸ್ವರ್ಗಾದಿ ಫಲಗಳಿಗಿಂತ ಅಧಿಕವಾದದ್ದು ಬೇರೊಂದು ಇಲ್ಲ ಎಂದು ವಾದಿಸುವವರು, ವಿಷಯಾ ಸಕ್ತಿಗಳಿಂದ ತುಂಬಿದ ಚಿತ್ತವುಳ್ಳವರು, ಸ್ವರ್ಗಾಭಿಲಾಷಿಗಳಾದ ಅಲ್ಪಜ್ಞರು, ಜನ್ಮ, ಕರ್ಮ ಫಲವನ್ನು ನೀಡುವ ಭೋಗೈಶ್ವರ್ಯ ಸಂಪಾದನೆಗಾಗಿ ವಿವಿಧ ಕಾರ್ಯಕಲಾಪಗಳಿಂದ ಕೂಡಿದವರು ಫಲಶೂನ್ಯವಾದ ಯಾವ ವಾಕ್ಯಗಳಿಂದ ಆಕರ್ಷಿತರಾಗಿರುವರೋ (ಆ ವಾಕ್ಯಗಳನ್ನು ನಂಬಿ ದೃಶ್ಯ ವ್ಯಾಮೋಹದಲ್ಲಿ ಬೀಳುವರೋ), ಅವರು ಅಪಹರಿಸಲ್ಪಟ್ಟ ಚಿತ್ತವುಳ್ಳವರಾಗಿದ್ದಾರೆ; ಭೋಗೈಶ್ವರ್ಯಪ್ರಿಯರಾದ ಜನಗಳಿಗೆ ದೈವಧ್ಯಾನದಲ್ಲಿ (ಸಮಾಧಿನಿಷ್ಠೆಯಲ್ಲಿ) ನಿಶ್ಚಯವಾದ (ಏಕಾಗ್ರವಾದ) ಬುದ್ಧಿ ಎಂದಿಗೂ ಉಂಟಾಗದು.

**ವ್ಯಾಖ್ಯೆ:** *ಪುಷ್ಪಿತಾಂ ವಾಚಂ* - ಫಲಪ್ರದವಲ್ಲದ ವಾಕ್ಯಗಳನ್ನು ಫಲವೀಯದ ಸುವಾಸನೆಯ ಹೂಗಳಿಗೆ ಹೋಲಿಸಲಾಗಿದೆ. ಹೊರಗೆ ಸೊಗಸಾಗಿ ಕಂಡರೂ ಒಳಗೆ ಸತ್ವವಿಲ್ಲದವು. ಮೋಕ್ಷವೆಂಬ ಫಲವನ್ನು ಕೊಡದ ಕಾಮ್ಯಕರ್ಮಾದಿ ಗಳನ್ನೊಳಗೊಂಡ ವಾಕ್ಯಗಳೆಂದರ್ಥ.

*"ಪ್ರವದಂತಿ"* - 'ವದಂತಿ' ಎಂದು ಹೇಳದೆ 'ಪ್ರವದಂತಿ' ಎಂದು ಹೇಳಿರುವುದರಿಂದ ಸಾರಹೀನವಾದ ತಮ್ಮ ವಾಕ್ಯಗಳನ್ನು ಅವರು ಅಧಿಕವಾಗಿ ಬಳಸುತ್ತಾರೆ ಎಂದರ್ಥ. (Empty vessels make much noise). 'ಅವಿಪಶ್ಚಿತಃ' - ಅಂದರೆ ಅವಿವೇಕಿಗಳು, ಅಲ್ಪಜ್ಞರು. ಕಾಮ್ಯಕರ್ಮಾದಿಗಳನ್ನು ಮಾಡುವವರು, ಸ್ವರ್ಗಾದಿ ಭೋಗಗಳನ್ನು ಅಭಿಲಾಷಿಸುವವರು, ಬುದ್ಧಿ ಕಡಿಮೆಯುಳ್ಳವರು ಎಂದರ್ಥ ಅಂತಹವರನ್ನು ಬುದ್ಧಿವಂತರ ಗುಂಪಿನಲ್ಲಿ ಭಗವಂತನು ಸೇರಿಸಲಿಲ್ಲ. ಆದ್ದರಿಂದ ಮಹಾಪಂಡಿತನಾದರೂ, ವೇದವೇತ್ತನಾದರೂ, ಕಾಮ್ಯಬುದ್ಧಿಯಿಂದ ಸ್ವರ್ಗಾದಿ ಭೋಗಗಳನ್ನು ಅಪೇಕ್ಷಿಸಿದರೆ ಪರಮಾರ್ಥ ದೃಷ್ಟಿಯಲ್ಲಿ ಆತನು ಅವಿವೇಕಿಯೇ ಹೌದು. ಅವಿವೇಕಿಗಳ ಕಣ್ಣು ತೆರೆಯಲು ಭಗವಂತನು ಈ ವಾಕ್ಯವನ್ನು ಹೇಳುತ್ತಿದ್ದಾನೆ. ಸ್ವರ್ಗಾದಿಗಳ ಬಗ್ಗೆ, ಅವುಗಳ ಭೋಗಗಳ ಬಗ್ಗೆ ಭಗವಂತನ ಅಭಿಪ್ರಾಯ ವೇನೆಂದು ಈ ಶ್ಲೋಕದಿಂದ ತಿಳಿದುಬರುತ್ತದೆ.

*"ವೇದವಾದರತಾಃ"* - ವೇದಗಳಲ್ಲಿ ಫಲವನ್ನು ತೋರಿಸುವ ಅರ್ಥ ವಾದಗಳು ಕೆಲವು ಇವೆ - 'ಯಾವ ಯಾವ ಕರ್ಮ ಹೇಗೆ ಮಾಡಿದರೆ ಯಾವ ಸ್ವರ್ಗ ಭೋಗಗಳುಂಟಾಗುವುವು' ಎನ್ನುವ ವಾಕ್ಯಗಳನ್ನು ಹಿಡಿದುಕೊಂಡು ಒದ್ದಾಡುತ್ತಿರುವವರು.

ವೇದವೇದಾಂತಗಳಲ್ಲಿ ಮೋಕ್ಷಪ್ರಾಪ್ತಿಗಾಗಿ ಉಪದೇಶಿಸಲ್ಪಟ್ಟ ಬೋಧೆಗಳು ಎಷ್ಟೋ ಇವೆ. ಅವುಗಳನೆಲ್ಲಾ ಬಿಟ್ಟು ಕಾಮ್ಯಕರ್ಮ ವಿಭಾಗಗಳನ್ನೇ ಹಿಡಿದುಕೊಂಡು 'ಪ್ರಪಂಚದಲ್ಲಿ ಇದನ್ನು ಬಿಟ್ಟರೆ ಬೇರೆ ಏನೂ ಇಲ್ಲವೇ ಇಲ್ಲ'ವೆಂದು ಅವರು ವಾದಿಸುವರು. ವೇದಗಳಲ್ಲಿ ಮೂರು ಭಾಗಗಳಿವೆ - ೧) ಕರ್ಮಕಾಂಡ ೨) ಉಪಾಸನಾಕಾಂಡ ೩) ಜ್ಞಾನಕಾಂಡ. ಈ ಶ್ಲೋಕಗಳಲ್ಲಿ ಹೆಸರಿಸಲ್ಪಟ್ಟ ಅವಿವೇಕಿಗಳು ಮೊದಲ ಕರ್ಮಕಾಂಡವನ್ನೇ ಹಿಡಿದುಕೊಂಡು ಅದರಲ್ಲಿ ಸ್ವರ್ಗಾದಿಫಲಗಳ ಬಗ್ಗೆ ಹೇಳುವ ಭಾಗಗಳನ್ನೇ ಸ್ವೀಕರಿಸಿ ಮಿಕ್ಕ ಎರಡನ್ನೂ ಬಿಟ್ಟು ಬಿಡುವರು. ಅವರ ಪದ್ಧತಿ ಸರಿಯಲ್ಲವೆಂದು ಗೀತಾಚಾರ್ಯನು ಬೋಧಿಸುತ್ತಿದ್ದಾನೆ.

*"ಕಾಮಾತ್ಮನಃ"*- ಕೋರಿಕೆಗಳ ಸ್ವರೂಪವುಳ್ಳವರು ಅಂದರೆ ತುಂಬಾ ಕೋರಿಕೆಗಳುಳ್ಳವರೆಂದರ್ಥ. ಧನ, ಪುತ್ರ, ಪತ್ನಿ ಮುಂತಾದ ಮೋಹಗಳಿಗೆ ತಮ್ಮ ಹೃದಯದಲ್ಲಿ ಸ್ಥಾನವನ್ನಿತ್ತವರು. ಇದು ಕೂಡದು. ಹೃದಯದಲ್ಲಿ ಭಗವಂತನಿಗೆ ಸ್ಥಳವನ್ನೀಯಬೇಕೇ ಹೊರತು ಕಾಮಾದಿ ದುಷ್ಟ ಪ್ರವೃತ್ತಿಗಳಿಗಲ್ಲ. ದೈವಾತ್ಮರಾಗಬೇಕೇ ಹೊರತು ಕಾಮಾತ್ಮರು, ಕ್ರೋಧಾತ್ಮರಾಗಬಾರದು.

*"ಸ್ವರ್ಗಪರಾಃ"*- ಸ್ವರ್ಗಪರರು ಮೋಕ್ಷಕ್ಕೆ ಯೋಗ್ಯರಲ್ಲ. ಆಧ್ಯಾತ್ಮ ಕ್ಷೇತ್ರದಲ್ಲಿ ಸ್ವರ್ಗಕ್ಕೆ ಮಹತ್ವವಿಲ್ಲ. ಸ್ವರ್ಗಾದಿಸುಖಗಳನ್ನು ತೃಣೀಕರಿಸಿದವನಿಗೆ

ಸ್ವರ್ಗವು ದೊಡ್ಡದಾಗಿ ಕಾಣಬಹುದೇ ಹೊರತು ಜ್ಞಾನಿಗಳಿಗಲ್ಲ. ಏಕೆಂದರೆ ಸ್ವರ್ಗವೂ ಒಂದು ಲೋಕವೇ. ಸೃಷ್ಟಿ, ಸ್ಥಿತಿ ಲಯಗಳು ಅದಕ್ಕೂ ಇವೆ. ಆದರೆ ಅಲ್ಲಿಯ ಭೌತಿಕವಸ್ತುಗಳು ಸ್ವಲ್ಪ ಅಪ್ಪಟವಾಗಿರಬಹುದು. ಅದರಿಂದ ಏನು ಪ್ರಯೋಜನ? ಅವೂ ಅಶಾಶ್ವತವೇ. ಮೇಲಾಗಿ ಪುಣ್ಯ ಕ್ಷೀಣಿಸಿದ ನಂತರ ಮತ್ತೆ ತಿರುಗಿಬರಬೇಕಾದುದೇ!* ಆದ್ದರಿಂದ ವಿಷಯ ಭೋಗಗಳ ಅಪೇಕ್ಷೆಯಲ್ಲಿ ಮುಳುಗಿಸಿ ಜೀವಿಯಲ್ಲಿ ಮೃಗ ಪ್ರವೃತ್ತಿಯನ್ನು ಹುರಿದೆಬ್ಬಿಸಿ ಮೋಕ್ಷದಿಂದ ಆತನನ್ನು ದೂರಮಾಡುವ ಆ ಸ್ವರ್ಗ ಸೀಮೆಯಿಂದ ಮಾನವನಿಗೆ ಸಿಗುವುದೇನೂ ಇಲ್ಲ. ಮುಮುಕ್ಷುಗಳು ಅದನ್ನಿಚ್ಛಿಸುವುದಿಲ್ಲ; ಮೇಲಾಗಿ ಅದನ್ನು ಬಂಧಕರವೆಂದು ಭಾವಿಸುತ್ತಾರೆ. ಭಗವಂತನೂ ಸಹ ಇಲ್ಲಿ ಸ್ವರ್ಗಾಸಕ್ತಿಗಳನ್ನು ತೀವ್ರವಾಗಿ ವಿಮರ್ಶಿಸಿ ಅಲ್ಲಗಳೆದಿದ್ದಾನೆ. ಆದ್ದರಿಂದ ವೈರಾಗ್ಯಶೀಲನು, ಮೋಕ್ಷಾಕಾಂಕ್ಷಿಯಾದವನು ಅವುಗಳ ಜೋಲಿಗೆ ಹೋಗಬಾರದು.

"ಜನ್ಮ ಕರ್ಮಫಲಪ್ರದಾಮ್"- ಕಾಮ್ಯಕರ್ಮಗಳು ಜನ್ಮರಾಹಿತ್ಯವನ್ನು ಎಂದೆಂದಿಗೂ ಉಂಟು ಮಾಡುವುದಿಲ್ಲ. ಕರ್ಮ, ಜನ್ಮ-ಜನ್ಮ, ಕರ್ಮ ಎನ್ನುವ ಸಂಸಾರ ಚಕ್ರದಲ್ಲಿ ಜೀವಿಯನ್ನು ಅವು ಬೀಳಿಸುತ್ತವೆ. ಆದ್ದರಿಂದಲೇ ಭಗವಂತನು ಗೀತೆಯಲ್ಲಿ ನಿಷ್ಕಾಮ ಕರ್ಮವನ್ನು ಪ್ರೋತ್ಸಾಹಿಸಿದ್ದಾನೇ ಹೊರತು ಕಾಮ್ಯಕರ್ಮವನ್ನಲ್ಲ. ಜನ್ಮಕರ್ಮರೂಪಗಳಾದ ದಾರುಣ ಫಲವನ್ನೊದಗಿಸುವ ಈ ಕಾಮ್ಯಕರ್ಮಗಳನ್ನು ಮುಮುಕ್ಷುವು ಎಂದಿಗೂ ಆಶ್ರಯಿಸಬಾರದು.

"*ಕ್ರಿಯಾ ವಿಶೇಷ ಬಹುಲಾಂ ಭೋಗೈಶ್ವರ್ಯಗತಿಂ ಪ್ರತಿ*"- ಸ್ವರ್ಗಾದಿ ಭೋಗಗಳನ್ನು, ಐಶ್ವರ್ಯಗಳನ್ನು ಅಪೇಕ್ಷಿಸಿ ಅವುಗಳಿಗೋಸ್ಕರ ಅನೇಕ ಯಜ್ಞಯಾಗಾದಿಗಳನ್ನು ಆಚರಿಸುತ್ತಾ, ಕರ್ಮಕಾಂಡದಲ್ಲೇ ಅನೇಕರು ಮುಳುಗಿ ಹೋಗಿರುವರು. ಅವರು ಅಪೇಕ್ಷಿಸುತ್ತಿರುವುದು ಶಾಶ್ವತವಾದ ದೈವಸುಖವನ್ನಲ್ಲ, ಕ್ಷಣಿಕವಾದ ಪ್ರಾಪಂಚಿಕ ಸುಖವನ್ನೇ.

"ತಯಾಪಹೃತಚೇತಸಾಮ್"- ಕಾಮ್ಯಕರ್ಮದಲ್ಲಿ ನಿರತರಾಗಿರುವವರು ತಮ್ಮ ಮಧುರವಾದ ಮಾತುಗಳಿಂದ ಜನರ ಚಿತ್ತವನ್ನು ಆಕರ್ಷಿಸುತ್ತಾರೆ. ಜನರು ಇವರಿಂದ ಮೋಸ ಹೋಗುತ್ತಿದ್ದಾರೆ. ಆದ್ದರಿಂದ ಅಂತಹವರ ಸಹವಾಸವನ್ನು ಮಾಡಬಾರದು. ಸತ್ಪುರುಷರ, ಸಾಧುಪುಂಗವರ, ವಿರಾಗಿಗಳ ಸಾಂಗತ್ಯವನ್ನು ಮಾಡಿದಲ್ಲಿ ಚಿತ್ತವು ದೈವಮುಖವಾಗುತ್ತದೆ.

"ವ್ಯವಸಾಯಾತ್ಮಿಕಾಬುದ್ಧಿಃ ಸಮಾಧೌ ನ ವಿಧೀಯತೇ"- ಭೋಗೈಶ್ವರ್ಯ ಪ್ರಸಕ್ತಿಯಿಂದ ಉಂಟಾಗುವ ನಷ್ಟವೆಂದರೆ, ಅದು ಧ್ಯಾನದಲ್ಲಿ, ದೈವಚಿಂತನೆಯಲ್ಲಿ ಮನಸ್ಸನ್ನು ನಿಲ್ಲಲು ಬಿಡುವುದಿಲ್ಲ. ಚಿತ್ತವು ಬಹಿರ್ಮುಖವಾಗುತ್ತದೆ. ಸಮಾಧಿ ಸ್ಥಿತಿಯು ಅವರಿಗೆ ಎಂದೆಂದಿಗೂ ಲಭಿಸದು. ಗಾಳಿಬೀಸುತ್ತಿರುವಾಗ ದೀಪ ಹೇಗೆ ಚಂಚಲವಾಗಿರುವುದೋ ಹಾಗೆ ಅವರ ಚಿತ್ತವು ಮಹಾಚಂಚಲವಾಗಿರುವುದು. ಅದರಿಂದ ಅಶಾಂತಿಯೊದಗಿ, ಅಶಾಂತಿಯಿಂದ ಸುಖವಿಯೋಗವಾಗುವುದು. ಆದ್ದರಿಂದ ಮೋಕ್ಷಕ್ಕೆ ಅತ್ಯಾವಶ್ಯಕವಾದ ಧ್ಯಾನ ನಿಷ್ಠೆ ಅಡಚಣೆ ಇಲ್ಲದೆ ನಡೆಯಲು ಮನಸ್ಸು ವಿಷಯ ಭೋಗಗಳ ಕಡೆಗೆ ಓಡದಂತೆ ಎಚ್ಚರಿಕೆ ವಹಿಸಬೇಕು.

ಪ್ರ: ಭೋಗೈಶ್ವರ್ಯ ಪ್ರಸಕ್ತಿಯಿಂದ ಉಂಟಾಗುವ ನಷ್ಟವೇನು?

ಉ: ಅದರಿಂದ ದೈವಧ್ಯಾನದಲ್ಲಿ ಮನಸ್ಸು ನಿಮಗ್ನವಾಗದು.

**ಅ||** ವಿಷಯಗಳ ಮೇಲಿನ ಆಸಕ್ತಿಯನ್ನು ತ್ಯಜಿಸಿ ಆತ್ಮಾನುಭವವನ್ನು ಹೊಂದುವಂತೆ ಪ್ರೇರೇಪಿಸುತ್ತಿದ್ದಾನೆ.

**೪೫. ತ್ರೈಗುಣ್ಯವಿಷಯಾ ವೇದಾ ನಿಸ್ತ್ರೈಗುಣ್ಯೋ ಭವಾರ್ಜುನ**
**ನಿರ್ದ್ವಂದ್ವೋ ನಿತ್ಯಸತ್ತ್ವಸ್ಥೋ ನಿರ್ಯೋಗಕ್ಷೇಮ ಆತ್ಮವಾನ್**

**ಅರ್ಥ:** ಓ ಅರ್ಜುನಾ!; ವೇದಾಃ= ವೇದಗಳು (ಅವುಗಳ ಪೂರ್ವಭಾಗವಾದ ಕರ್ಮ ಕಾಂಡ); ತ್ರೈಗುಣ್ಯವಿಷಯಾಃ=ತ್ರಿಗುಣಾತ್ಮಕವಾದ ವಿಷಯಗಳನ್ನು ತಿಳಿಸುವ; (ತ್ವಮ್=ನೀನು); ನಿಸ್ತ್ರೈಗುಣ್ಯಃ= ತ್ರಿಗುಣಗಳನ್ನು ತ್ಯಜಿಸಿದವನಾಗು (ಇಲ್ಲ ತ್ರಿಗುಣಗಳಿಂದ ಉಂಟಾಗುವ ವಿಷಯಾಸೆಗಳನ್ನು ತ್ಯಜಿಸಿದವನೆಂದರ್ಥ); ನಿರ್ದ್ವಂದ್ವಃ=ಸುಖದುಃಖಾದಿ ದ್ವಂದ್ವಾದಿಗಳಿಗೆ ಅತೀತನಾದವನು; ನಿತ್ಯಸತ್ತ್ವಸ್ಥಃ= ಯಾವಾಗಲೂ ಶುದ್ಧ ಸತ್ವವನ್ನು ಆಶ್ರಯಿಸಿದವನು; ನಿರ್ಯೋಗಕ್ಷೇಮಃ= ಯೋಗಕ್ಷೇಮಗಳ ಬಗ್ಗೆ ಯೋಚಿಸದವನು; ಆತ್ಮವಾನ್=ಆತ್ಮಜ್ಞಾನಿ; ಭವ=ಆಗು.

**ತಾ||** ಓ ಅರ್ಜುನಾ! ವೇದಗಳು (ಅವುಗಳ ಪೂರ್ವಭಾಗವಾದ ಕರ್ಮಕಾಂಡ) ತ್ರಿಗುಣಾತ್ಮಕಗಳಾದ (ಸಂಸಾರ) ವಿಷಯಗಳನ್ನು ತಿಳಿಸುವುವು. ನೀನು ತ್ರಿಗುಣಾತೀತನು, ದ್ವಂದ್ವಾತೀತನು, ನಿರಂತರ ಶುದ್ಧಸತ್ವವನ್ನಾಚರಿಸುವವನು ಹಾಗು ಯೋಗಕ್ಷೇಮವನ್ನು ದೃಷ್ಟಿಯಲ್ಲಿಡದವನೂ ಆದ ಆತ್ಮಜ್ಞಾನಿಯಾಗು.

**ವಾಖ್ಯೆ:** "*ತ್ರೈಗುಣ್ಯವಿಷಯಾ ವೇದಾಃ*"- ಮೇಲಿನ ಶ್ಲೋಕದಿಂದ ಕರ್ಮ ಕಾಂಡಕ್ಕೆ, ಯಜ್ಞಯಾಗಾದಿಗಳಿಗೆ ಸಂಬಂಧಿಸಿದ ವೇದಭಾಗ (ಪೂರ್ವ ಭಾಗ)ವನ್ನು ಕುರಿತು ಇಲ್ಲಿ ಪ್ರಸ್ತಾಪಿಸಲಾಗಿದೆಯೆಂದು ಸ್ಪಷ್ಟವಾಗುತ್ತಿದೆ. ವೇದದ ಉತ್ತರ ಭಾಗವು ತ್ರಿಗುಣಾತೀತನಾದ ಪರಬ್ರಹ್ಮನನ್ನು ವಿಮರ್ಶಿಸುತ್ತದೆ. ದೃಶ್ಯ ಪ್ರಪಂಚವೆಲ್ಲವೂ ತ್ರಿಗುಣಗಳಿಂದ ಕೂಡಿದೆ. ಅದು ಅಲ್ಪವಾದದ್ದು. ಅದೃಶ್ಯ ರೂಪನಾದ ಆತ್ಮವೊಂದೇ ತ್ರಿಗುಣಾತೀತವಾದುದು. ಅದು ಸರ್ವೋತ್ತಮ ವಾದದ್ದು. ಗುಣಗಳ ಅಧೀನನಾದವನಿಗೆ ಈ ಬಂಧ, ಬಾಧೆಗಳು, ಜನ್ಮಗಳು, ಕರ್ಮಗಳು ಇರುವವು. ಗುಣಾತೀತನಾಗಿ ಆತ್ಮದಲ್ಲಿ ಸ್ಥಿತನಾಗಿರುವ ಜ್ಞಾನಿಗೆ ಇವು ಯಾವುವೂ ಇರುವುದಿಲ್ಲ. ಆದ್ದರಿಂದಲೇ ಭಗವಂತನು, ಅರ್ಜುನನನ್ನು ಗುಣಾತೀತನಾಗಿ ಆತ್ಮವಂತನಾಗಬೇಕೆಂದು ಅಪ್ಪಣೆ ಕೊಟ್ಟಿರುತ್ತಾನೆ.

"ನಿತ್ಯಸತ್ತ್ವಸ್ಥಃ"- ಇಲ್ಲಿ ಹೇಳಲ್ಪಟ್ಟ ಸತ್ವವು ತ್ರಿಗುಣಗಳ ಸತ್ವವಲ್ಲ. ತ್ರಿಗುಣಗಳನ್ನು ದಾಟಬೇಕೆಂದು ತಿಳಿಸಿ ಮತ್ತೆ ಒಂದು ನಿರ್ದಿಷ್ಟ ಗುಣವನ್ನು ಆಶ್ರಯಿಸೆಂದು ಬೋಧಿಸಲು ಸಾಧ್ಯವಿಲ್ಲ. ಆದ್ದರಿಂದ ಇಲ್ಲಿ 'ಸತ್ವ'ವೆನ್ನುವ ಶಬ್ದದ ಅರ್ಥ ವಿಶುದ್ಧ ಸತ್ವ ಸ್ಥಿತಿ ಇಲ್ಲವೇ ಆತ್ಮಸ್ಥಿತಿ ಎಂದು ತಿಳಿಯಬೇಕು. 'ಜ್ಞಚಿತ್ತಂ ಸತ್ವ ಮುಚ್ಯತೇ'- (ಆತ್ಮ ಜ್ಞಾನಿಯ ಬ್ರಹ್ಮಾಕಾರವಾದ ಚಿತ್ತವು ಸತ್ವವೆನಿಸಿಕೊಳ್ಳುವುದು) ಎಂದು ಶ್ರೀ ವಸಿಷ್ಠಮುನೀಂದ್ರರು ತಿಳಿಸಿದ್ದಾರೆ. 'ನಿತ್ಯಸತ್ವಸ್ಥಃ'- ಎಂದು ಹೇಳಲ್ಪಟ್ಟಿರುವುದರಿಂದ ಒಂದು ನಿರ್ದಿಷ್ಟ ಕಾಲದಲ್ಲಿ ಮಾತ್ರವಲ್ಲದೆ, ನಿರಂತರವಾಗಿ ಸತ್ವವನ್ನಾಶ್ರಯಿಸಿ, ಆತ್ಮಸ್ಥಿತನಾಗಿರಬೇಕೆಂಬುದೇ ಇದರ ಭಾವ.

---

* ಕ್ಷೀಣೇ ಪುಣ್ಯೇ ಮರ್ತ್ಯಲೋಕಂ ವಿಶಂತಿ(೯-೨೧)

"ನಿರ್ಯೋಗಕ್ಷೇಮ ಆತ್ಮವಾನ್"- ಯೋಗವೆಂದರೆ ಇಲ್ಲದೆ ಇರುವ ವಸ್ತುವನ್ನು ಹೊಂದುವುದು, ಕ್ಷೇಮವೆಂದರೆ ಈ ರೀತಿ ಪಡೆದದ್ದನ್ನು ಕಾಪಾಡಿಕೊಳ್ಳುವುದು - ಈ ಎರಡೂ ಅವಶ್ಯಕವಲ್ಲವೆಂದು ಭಗವಂತನು ತಿಳಿಸಿದ್ದಾನೆ. ಏಕೆಂದರೆ ಆತ್ಮದಲ್ಲಿ ಸ್ಥಿತನಾಗಿರುವವನು ಸಮಸ್ತ ಪದಾರ್ಥಗಳನ್ನು ಹೊಂದಿದಂತೆಯೇ. ಇನ್ನು ಆತನು ಯಾವುದನ್ನು ಅಪೇಕ್ಷಿಸಬೇಕು? ಆತ್ಮವಂತನಾಗಿ (ಆತ್ಮವಾನ್)ರಬೇಕೆಂಬುದು, ಭಗವದಾಜ್ಞೆ, 'ಧನವಾನ್, ಸೌಂದರ್ಯವಾನ್, ಅಧಿಕಾರವಾನ್.....'ಎಂದು ಹೇಳದೆ 'ಆತ್ಮವಾನ್' ಎಂದು ಹೇಳಲ್ಪಟ್ಟಿರುವುದರಿಂದ ಪ್ರಪಂಚದಲ್ಲಿಯ ಸಮಸ್ತ ಪದಾರ್ಥಗಳಿಗಿಂತ ಪದವಿಗಳಿಗಿಂತ ಆತ್ಮಸ್ಥಿತಿಯೇ ಸರ್ವೋತ್ತಮವಾದದ್ದೆಂದು ಸೂಚಿತವಾಗುತ್ತಿದೆ.

ಪ್ರಶ್ನೆ: ಯಾವ ಪ್ರಕಾರವಾಗಿ ನಡೆಯಬೇಕೆಂದು ಶ್ರೀಕೃಷ್ಣನು ಅರ್ಜುನನಿಗೆ ಬೋಧಿಸಿದನು?

ಉತ್ತರ: ೧) ತ್ರಿಗುಣಗಳನ್ನು ದಾಟಿ ಹೋಗಬೇಕು ೨) ದ್ವಂದ್ವಗಳನ್ನು ಹೊಂದಿರಬಾರದು ೩) ನಿರಂತರವು ವಿಶುದ್ಧ ಸತ್ವ (ಆತ್ಮ) ಸ್ಥಿತಿಯನ್ನು ಹೊಂದಿರಬೇಕು ೪) ಯೋಗಕ್ಷೇಮ ದೃಷ್ಟಿಯಿರಬಾರದು ೫) ಆತ್ಮ ಜ್ಞಾನಿಯಾಗಿ ವರ್ತಿಸಬೇಕು.

**ಅ||** ಆತ್ಮಜ್ಞಾನಿಯ ಮಹಿಮೆಯನ್ನು ಹೇಳುತ್ತಿದ್ದಾನೆ-

**೪೬. ಯಾವಾನರ್ಥ ಉದಪಾನೇ ಸರ್ವತಃ ಸಂಪ್ಲುತೋದಕೇ**
**ತಾವಾನ್ ಸರ್ವೇಷು ವೇದೇಷು ಬ್ರಾಹ್ಮಣಸ್ಯ ವಿಜಾನತಃ**

**ಅರ್ಥ:** ಉದಪಾನೇ= ಭಾವಿ ಮೊದಲಾದವುಗಳು; ಯಾವಾನರ್ಥಃ=ಯಾವ ಪ್ರಯೋಜನವಿರುವುದೋ; ಸರ್ವತಃ ಸಂಪ್ಲುತೋದಕೇ=ಎಲ್ಲವೂ ಜಲಾವೃತ ವಾದಾಗ; ತಾವಾನ್ (+ಅರ್ಥಃ)=ಎಷ್ಟು ಪ್ರಯೋಜನ; (ಯಥಾ+ಭವತಿ) ಹೇಗೆ ಆಗುತ್ತಿದೆಯೋ - ಅದರಲ್ಲೇ ಹೇಗೆ ಸೇರಿರುವುದೋ; ಸರ್ವೇಷು ವೇದೇಷು=ಸಮಸ್ತವೇದಗಳಲ್ಲಿ (ವೇದೋಕ್ತಗಳಾದ ಸಮಸ್ತ ಕರ್ಮಗಳಲ್ಲಿ) (ಯಾವಾನರ್ಥಃ=ಎಷ್ಟು ಪ್ರಯೋಜನವಿರುವುದೋ); ತಾವಾನರ್ಥಃ=ಅಷ್ಟು ಪ್ರಯೋಜನ); ವಿಜಾನತಃ=ಆತ್ಮಸ್ವರೂಪದ ನಿಶ್ಚಯಾನಭವವನ್ನು ಹೊಂದಿರುವ; ಬ್ರಾಹ್ಮಣಸ್ಯ=ಬ್ರಹ್ಮನಿಷ್ಠನಿಗೆ; (ತಥಾ+ಭವತಿ=ಆ ಪ್ರಕಾರವೇ ಆಗುತ್ತಿದೆ- ಬ್ರಹ್ಮಾನಂದದಲ್ಲಿ ಅಡಕವಾಗಿರುವುದು).

**ತಾ:** ಸ್ನಾನ ಪಾನಾದಿಗಳಿಗೆ ಉಪಯುಕ್ತವಾದ ಸ್ವಲ್ಪ ನೀರುಳ್ಳ ಭಾವಿ ಮುಂತಾದವುಗಳಿಂದ ಉಂಟಾಗುವ ಪ್ರಯೋಜನ ಸಮಸ್ತವನ್ನೂ ಆವರಿಸಿರುವ ಮಹತ್ತರ ಜಲ ಪ್ರವಾಹದ ನೀರಿನಲ್ಲಿ ಹೇಗೆ ಅಡಗಿರುವುದೋ ಹಾಗೆ ವೇದಗಳಲ್ಲಿ ಹೇಳಲ್ಪಟ್ಟ ಸಮಸ್ತ ಕರ್ಮಗಳಿಂದ ಉಂಟಾಗುವ ಪ್ರಯೋಜನ ಪರಮಾತ್ಮ ತತ್ವವನ್ನರಿತ ಬ್ರಹ್ಮನಿಷ್ಠನ ಬ್ರಹ್ಮಾನಂದದಲ್ಲಿ ಅಡಕವಾಗಿರುವುದು.

**ಮತ್ತೊಂದರ್ಥ:** ಸ್ನಾನಪಾನಾದಿ ವಿಷಯಗಳಲ್ಲಿ ಎಲ್ಲವೂ ನೀರಿನಿಂದ ತುಂಬಿದ ಸ್ಥಳದಲ್ಲಿ, ಕೆರೆ, ಭಾವಿ ಮುಂತಾದುವುಗಳಿಂದ ಮನುಷ್ಯನಿಗೆ ಎಷ್ಟು ಪ್ರಯೋಜನವಾಗುವುದೋ ಅಷ್ಟೇ ಪ್ರಯೋಜನ ಸಮಸ್ತ ವೇದಗಳಿಂದ ಅನುಭವಜ್ಞನಾದ ಬ್ರಹ್ಮನಿಷ್ಠನಿಗೆ ಉಂಟಾಗುತ್ತದೆ.

**ವ್ಯಾಖ್ಯೆ:** ಚಿಕ್ಕ ಚಿಕ್ಕ ಭಾವಿಗಳಿಂದ ಸ್ನಾನ ಪಾನಾದಿಗಳಿಗೆ ಎಷ್ಟು ಪ್ರಯೋಜನ ವಾಗುವುದೋ ಅಷ್ಟು ಪ್ರಯೋಜನ ಸರ್ವತ್ರ ಜಲದಿಂದ ತುಂಬಿದ ವಿಶಾಲವಾದ ನೀರಿನಲ್ಲಿ (ಪ್ರವಾಹದಲ್ಲಿ)ಯೂ ಅಂತರ್ಭೂತವಾಗಿದೆ. ಹಾಗೆಯೇ ವೇದಗಳಲ್ಲಿ ಹೇಳಲ್ಪಟ್ಟ ಸಮಸ್ತ ಕರ್ಮಕಾಂಡದ ಫಲ, ಆತ್ಮಾನುಭವವನ್ನು ಹೊಂದಿರುವ ಬ್ರಹ್ಮಜ್ಞಾನಿಯಲ್ಲಿ ಅಂತರ್ಭೂತವಾಗಿದೆ. ಆದ್ದರಿಂದ ಬ್ರಹ್ಮನಿಷ್ಠನು ವೇದಗಳಲ್ಲಿಯ ಆ ಕಾಮ್ಯ ಕರ್ಮಾದಿ ಫಲಗಳನ್ನು ಎಂದಿಗೂ ಅಪೇಕ್ಷಿಸುವುದಿಲ್ಲ. 'ಶತೇ ಪಂಚಾಶತ್'- ನ್ಯಾಯವನ್ನನುಸರಿಸಿ (ನೂರರಲ್ಲಿ ಐವತ್ತು ಅಡಗಿರುವಂತೆ), ಆನೆಯ ಪಾದದ ಹೆಜ್ಜೆಯಲ್ಲಿ ಬೇರೆ ಸಣ್ಣ ಪ್ರಾಣಿಗಳ ಪಾದಗಳ ಹೆಜ್ಜೆಗಳು ಅಡಕವಾಗಿರುವಂತೆ, ಆತ್ಮಸುಖದಲ್ಲಿ ಇತರ ಸಮಸ್ತ ಸುಖಗಳೂ ಇವೆ. ಆದ್ದರಿಂದ ಆತ್ಮಾನುಭವವಾಗಿರುವ ಜ್ಞಾನಿ, ವೇದಗಳಲ್ಲಿ ಉಲ್ಲೇಖವಾಗಿರುವ ಸ್ವರ್ಗಾದಿ ಕಾಮ್ಯ ಕರ್ಮಫಲಗಳನ್ನು ಯಾಚಿಸುವುದಿಲ್ಲ. ಇಲ್ಲಿ 'ಜಾನತಃ' ಎಂದು ಹೇಳದೆ 'ವಿಜಾನತಃ' ಎಂದು ಹೇಳಿರುವುದರಿಂದ ಮೇಲ್ಮೈಲಿನ ಜ್ಞಾನ (superficial knowledge) ಸಾಕಾಗದೆಂದು, ಅನುಭವ ಜ್ಞಾನವಾಗಬೇಕೆಂದು ಸ್ಪಷ್ಟವಾಗುತ್ತಿದೆ.

ಈ ಶ್ಲೋಕವನ್ನು ರಾಮಾನುಜರು ಮತ್ತೊಂದು ರೀತಿ ವ್ಯಾಖ್ಯಾನಿಸಿದ್ದಾರೆ - ಬಾಯಾರಿದವನಿಗೆ ಮಹಾಸಾಗರದ ಜಲದಿಂದ ಪ್ರಯೋಜನವಿಲ್ಲ. ನಾಲ್ಕು ಬೊಗಸೆ ಸಿಹಿ ನೀರು ಮಾತ್ರ ಸಾಕು. ರೋಗಿ ಎಲ್ಲಾ ಔಷಧಗಳನ್ನು ತೆಗೆದುಕೊಳ್ಳಬೇಕಾದ ಅಗತ್ಯವಿಲ್ಲ. ಬೇಕಾದ ಒಂದು ಔಷಧವನ್ನು ಸರಿಯಾಗಿ ಸೇವಿಸಿದರೆ ಸಾಕು. ಹಸಿದವನು ಎಲ್ಲಾ ರೀತಿಯ ಭಕ್ಷ್ಯಗಳನ್ನು ಭುಜಿಸಬೇಕಾಗಿಲ್ಲ, ತುತ್ತು ಅನ್ನ ತಿಂದರೆ ಸಾಕು. ಹಾಗೆಯೇ ವಿವೇಕವಂತನು ಸಮಸ್ತ ವೇದಗಳಲ್ಲಿರುವ ಬ್ರಹ್ಮಪ್ರಾಪ್ತಿಯ ಸಾಧನೆಗಳಲ್ಲಿ ಕೆಲವು ಸಾಧನೆಗಳನ್ನು ಸರಿಯಾಗಿ ಅನುಷ್ಠಿಸಿ, ಅನುಭೂತಿಸಿಕೊಂಡರೆ ಸಾಕು. ಉಳಿದ ಕಾಮ್ಯಕರ್ಮಾದಿಗಳಿಂದ, ಆತನಿಗೆ ಯಾವ ಪ್ರಯೋಜನವೂ ಇಲ್ಲ. ವೇದಗಳಲ್ಲಿ ಅನೇಕ ಮಂತ್ರಗಳು, ಉಪಾಸನೆಗಳು, ಕರ್ಮಗಳು ಹೇಳಲ್ಪಟ್ಟಿದ್ದರೂ, ಭವರೋಗ ನಶಿಸಿ ಮೋಕ್ಷಧಾಮ ಸೇರಲು ಸಾಧಕನಿಗೆ ಒಂದೇ ಒಂದು ಮಂತ್ರ, ಉಪಾಸನೆ ಅಥವ ಧ್ಯಾನವನ್ನು ಪದ್ಧತಿಯಾಗಿ ಅನುಷ್ಠಾನ ಮಾಡಿದರೆ ಸಾಕು. 'ಎಲ್ಲವನ್ನೂ ನಾವು ಮಾಡಲಿಲ್ಲವಲ್ಲ'- ಎಂದು ಯಾರೂ ಅಧೀರರಾಗಬೇಕಾಗಿಲ್ಲವೆಂದು ಭಗವಂತನು ಇಲ್ಲಿ ಭಕ್ತರಿಗೆ ಆಶ್ವಾಸನೆಯನ್ನಿತ್ತಿದ್ದಾನೆ.

**ಅ||** ಕರ್ಮಯೋಗದ ಪದ್ಧತಿಯನ್ನು ಭಗವಂತನು ತಿಳಿಸುತ್ತಿದ್ದಾನೆ.

**೪೭. ಕರ್ಮಣ್ಯೇವಾಧಿಕಾರಸ್ತೇ ಮಾ ಫಲೇಷು ಕದಾಚನ**
**ಮಾ ಕರ್ಮಫಲ ಹೇತುರ್ಭೂರ್ಮಾತೇ ಸಂಗೋಽಸ್ತ್ವಕರ್ಮಣಿ**

**ಅರ್ಥ:** ತೇ= ನಿನಗೆ; ಕರ್ಮಣ್ಯೇವ-ಕರ್ಮದಲ್ಲಿಯೇ; ಅಧಿಕಾರಃ=ಅಧಿಕಾರ (ಅಸ್ತಿ=ಇದೆ); ಕದಾಚನ=ಒಮ್ಮೆ; ಫಲೇಷು=(ಅವುಗಳ) ಫಲಗಳಲ್ಲಿ; (ಅಧಿಕಾರಃ=ಅಧಿಕಾರ) ಮಾ=ಬೇಡ; ಕರ್ಮಫಲಹೇತುಃ=ಕರ್ಮಫಲಕ್ಕೆ ಕಾರಣವಾದವನು; ಮಾಭೂಃ=ಆಗಬೇಡ; ಅಕರ್ಮಣಿ=ಕರ್ಮಮಾಡದೆ ಇರುವುದರಲ್ಲಿ; ತೇ=ನಿನಗೆ; ಸಂಜ್ಞಃ= ಆಸಕ್ತಿ; ಮಾ ಅಸ್ತು= ಉಂಟಾಗದಿರಲಿ.

**ತಾ||** (ಅರ್ಜುನಾ!) ನಿನಗೆ ಕರ್ಮಮಾಡುವುದರಲ್ಲಿ ಅಧಿಕಾರವಿದೆ. ಕರ್ಮಫಲಗಳನ್ನು ಅಪೇಕ್ಷಿಸುವ ಅಧಿಕಾರ ನಿನಗೆ ಎಂದಿಗೂ ಇಲ್ಲ. ಕರ್ಮಫಲಗಳಿಗೆ ನೀನು ಕಾರಣ ಭೂತನಾಗಬೇಡ. ಮತ್ತೆ ಕರ್ಮಗಳನ್ನು ಮಾಡದಿರುವುದರಲ್ಲಿ ನಿನಗೆ ಆಸಕ್ತಿ ಉಂಟಾಗದಿರಲಿ!

**ವ್ಯಾಖ್ಯೆ:** ಅರ್ಜುನಾ! ನಿನಗೆ ಕರ್ಮ ಮಾಡುವುದರಲ್ಲಿ ಅಧಿಕಾರವಿದೆಯೇ ಹೊರತು ಫಲಾಪೇಕ್ಷೆಯಲ್ಲಲ್ಲ ಎಂದು ಭಗವಂತನು ಇಲ್ಲಿ ತಿಳಿಸಿದ್ದಾನೆ. ಅಂದರೆ ಫಲಾಪೇಕ್ಷೆಯಿಲ್ಲದೆ, ಈಶ್ವರಾರ್ಪಣ ಬುದ್ಧಿಯಿಂದ ಕರ್ತೃತ್ವರಹಿತನಾಗಿ

ಕರ್ಮಗಳನ್ನು ಆಚರಿಸಬೇಕೆನ್ನುವುದೇ ಇದರ ಅರ್ಥ. 'ಕದಾಚನ'- ಎಂದು ಹೇಳಲ್ಪಟ್ಟಿರುವುದರಿಂದ ಯಾವ ಸಂದರ್ಭದಲ್ಲಿಯೂ ಫಲವನ್ನು ಅಪೇಕ್ಷಿಸಬೇಡ ಎಂದು ಭಗವಂತನು ನಿಶ್ಚಯವಾಗಿ ತಿಳಿಸಿರುವನು. ಫಲವನ್ನು ಅಪೇಕ್ಷಿಸಿ ಮಾಡುವ ಕರ್ಮಗಳಿಂದ ಚಿತ್ತ ಶುದ್ಧಿಯುಂಟಾಗುವುದಿಲ್ಲ. ಚಿತ್ತಶುದ್ಧಿಯುಂಟಾಗ ದಿದ್ದರೆ ಆತ್ಮಜ್ಞಾನ ಉದಯಿಸುವುದಿಲ್ಲ. ಆತ್ಮಜ್ಞಾನವಿಲ್ಲದೆಡೆ ಮೋಕ್ಷವು ಸಂಭವಿಸುವುದಿಲ್ಲ. ಆದ್ದರಿಂದ ಮೋಕ್ಷ ಪ್ರಾಪ್ತಿಗೆ ನಿಷ್ಕಾಮಕರ್ಮ ಅತ್ಯಂತ ಅವಶ್ಯಕವಾಗಿದೆ.

"*ಮಾತೇ ಸಂಗೋಸ್ತ್ವ ಕರ್ಮಣಿ*"- ಕರ್ಮ ಫಲವನ್ನು ಅಪೇಕ್ಷಿಸಬಾರ ದೆಂದು ಹೇಳಲ್ಪಟ್ಟಿದೆಯಲ್ಲ, ಇನ್ನು ಆ ಫಲವಿಲ್ಲದ ಕರ್ಮಗಳೇಕೆ? ಎಂದು ಕರ್ಮಗಳನ್ನೇ ಎಲ್ಲಿ ಬಿಟ್ಟು ಬಿಡುವರೋ ಎಂದು ಶಂಕಿಸಿ ಹಾಗೆ ಎಂದೆಂದಿಗೂ ಮಾಡಬಾರದೆಂದು ಭಗವಂತನು ಎಚ್ಚರಿಸಿದ್ದಾನೆ. ಏಕೆಂದರೆ ಅದು ಸೋಮಾರಿತನದ ಲಕ್ಷಣ. ಅದು ತಮೋಗುಣ. ಯಾವ ಕರ್ಮವನ್ನೂ ಮಾಡದೆ ಇರುವುದು ಅಭಿನಂದನೀಯ ವಿಶೇಷವೇನಲ್ಲ. ನಿದ್ರೆಯಲ್ಲಿ ಯಾರೂ ಯಾವ ಕರ್ಮವನ್ನೂ ಮಾಡುವುದಿಲ್ಲ. ಗೋಡೆಗೆ ಯಾವ ಕರ್ಮವಿದೆ? ಕರ್ಮವಿಲ್ಲದ ಗೋಡೆಗಳಿಗೆ ಏನಾದರೂ ದೊಡ್ಡ ಕಿರೀಟ ಬಂದಿದೆಯೇ? ಆದ್ದರಿಂದ ತಮೋಗುಣ ಜನ್ಯವಾದ ಅಕರ್ಮಣತ್ವವನ್ನು ಹೊರದೂಡಬೇಕೆನ್ನುವುದು ಭಗವಂತನ ಆಜ್ಞೆ. ಸೋಮಾರಿಗಳಿಗೆ ಈ ವಾಕ್ಯ ಒಂದು ಕೊಡಲಿ ಪೆಟ್ಟು. ಕೆಲವರು ಸಮಾಧಿ ನಿಷ್ಠೆಯ ಹೆಸರಿನಲ್ಲಿ ಕೇವಲ ತಮಸ್ಸಿನಲ್ಲೇ ಕಾಲಹರಣ ಮಾಡುತ್ತಾರೆ. ಅಂತಹವರು ಇಹಪರಗಳಿಗೆ ಕೂಡ ಕೆಟ್ಟವರಾಗುತ್ತಾರೆ. ಅವರು ಎಚ್ಚೆತ್ತು ಯಾವುದೋ ಒಂದು ಸತ್ಕಾರ್ಯದಲ್ಲಿ ನಿರತರಾಗುವುದು ಒಳಿತು. ಕರ್ಮ ಮಾಡದೆ ಇರಲು ಸಾಧ್ಯವೇ ಇಲ್ಲ. ಆದ್ದರಿಂದ ಯಾವುದೋ ಒಂದು ಕರ್ಮವನ್ನು ಮಾಡಲೇಬೇಕು. ಅದನ್ನೇ ನಿಷ್ಕಾಮವಾಗಿ ಆಚರಿಸು ಎಂದು ಭಗವಂತನು ಅಪ್ಪಣೆ ಕೊಟ್ಟಿದ್ದಾನೆ. ಹಾಗೆ ಮಾಡಿದಲ್ಲಿ ಮೋಕ್ಷಪಥಕ್ಕೆ ಅಪಾರವಾದ ಸಹಾಯವಾಗುತ್ತದೆ. ಗೀತೆಯ ಪ್ರಧಾನ ಆಶಯಗಳಲ್ಲಿ ಈ ಅನಾಸಕ್ತಿ ಯೋಗ ಒಂದು. ಅಕರ್ಮಣ್ಯನಾಗಿ ರಥದಲ್ಲಿ ಕುಸಿದುಬಿದ್ದಿದ್ದ ಅರ್ಜುನನನ್ನು ಕರ್ಮವೀರನನ್ನಾಗಿ ಹುರಿದೆಬ್ಬಿಸಿದ ಬೋಧೆಗಳಲ್ಲಿ ಇದು ಒಂದು. ನಿಷ್ಕಾಮ ಕರ್ಮತತ್ವವನ್ನು ಚೆನ್ನಾಗಿ ಅರಿತು ಜನರು ತಮ್ಮ ಜೀವನವನ್ನು ಸಂಸ್ಕರಿಸಿಕೊಳ್ಳಬೇಕಾಗಿದೆ.

ಪ್ರಶ್ನೆ: ಮನುಜನಿಗೆ ಯಾವುದರಲ್ಲಿ ಅಧಿಕಾರವಿದೆ?

ಉ: ಕರ್ಮಗಳನ್ನು ಮಾಡುವುದರಲ್ಲಿ ಅಧಿಕಾರವಿದೆಯೇ ಹೊರತು, ಫಲಗಳನ್ನು ಅಪೇಕ್ಷಿಸುವುದರಲ್ಲಲ್ಲ.

ಪ್ರಶ್ನೆ: ಯಾವುದನ್ನು ತ್ಯಜಿಸಬೇಕು ?

ಉ : ಕರ್ಮಫಲವನ್ನು, ಅಕರ್ಮಣತ್ವವನ್ನು (ಯಾವ ಕೆಲಸವನ್ನೂ ಮಾಡದೆ ಇರುವುದನ್ನು) ಬಿಡಬೇಕು.

ಪ್ರಶ್ನೆ: ಆದ್ದರಿಂದ, ಫಲಿತಾಂಶವೇನು ?

ಉ: ಕರ್ಮಗಳನ್ನು ಮಾಡುತ್ತಾ ಫಲಗಳನ್ನು ಬಿಡಬೇಕು.

**೪೮. ಯೋಗಸ್ಥಃ ಕುರು ಕರ್ಮಾಣಿ ಸಂಗಂ ತ್ಯಕ್ತ್ವಾ ಧನಂಜಯ**
**ಸಿದ್ಧ್ಯಸಿದ್ಧ್ಯೋಃ ಸಮೋ ಭೂತ್ವಾ ಸಮತ್ವಂ ಯೋಗ ಉಚ್ಯತೇ**

**ಅರ್ಥ:** ಧನಂಜಯ=ಓ ಅರ್ಜುನಾ! (ತ್ವಂ=ನೀನು); ಯೋಗಸ್ಥಃ= ಯೋಗನಿಷ್ಠೆ ಯಲ್ಲಿದ್ದು; ಸಂಗಂ=(ನಾನು, ನನ್ನದು ಎನ್ನುವ) ಅಭಿಮಾನವನ್ನು, ಆಸಕ್ತಿಯನ್ನು ತ್ಯಕ್ತ್ವಾ=ಬಿಟ್ಟು; ಸಿದ್ಧ್ಯಸಿದ್ಧ್ಯೋಃ=ಫಲವೊದಗಿದರೂ, ಇಲ್ಲದೇ ಇದ್ದರೂ; ಸಮೋಭೂತ್ವಾ=ಸಮವಾಗಿರುವವನಾಗಿ; ಕರ್ಮಾಣಿ=ಕರ್ಮಗಳನ್ನು; ಕುರು= ಮಾಡು; ಸಮತ್ವಂ=(ಅಂತಹ) ಸಮಬುದ್ಧಿಯೇ; ಯೋಗಃ (ಇತಿ)=ಯೋಗ ವೆಂದು; ಉಚ್ಯತೇ=ಹೇಳಲ್ಪಡುತ್ತದೆ.

**ತಾ||** ಓ ಅರ್ಜುನಾ! ನೀನು ಯೋಗ ನಿಷ್ಠೆಯಲ್ಲಿದ್ದು, ಸಂಗವನ್ನು ತ್ಯಜಿಸಿ, ಕಾರ್ಯ ಸಫಲವಾಗಲಿ ಅಥವ ಅಸಫಲವಾಗಲಿ (ಲೆಕ್ಕಿಸದೆ) ಸಮಾನ ಬುದ್ಧಿಯಿಂದ ಕರ್ಮಗಳನ್ನು ಮಾಡು. ಅಂತಹ ಸಮಬುದ್ಧಿಯನ್ನೇ ಯೋಗ ವೆನ್ನುವರು.

**ವ್ಯಾಖ್ಯೆ:** ಯೋಗ ನಿಷ್ಠೆಯಲ್ಲಿದ್ದು ಕರ್ಮಗಳನ್ನು ಮಾಡಬೇಕೆಂದು ಭಗವಂತನು ಆಜ್ಞಾಪಿಸಿದನು. ಯೋಗವೆಂದರೇನು? ಕಾರ್ಯದ ಸಿದ್ಧಾಸಿದ್ಧ್ಯತೆಗಳಲ್ಲಿ ಸಮಭಾವ ಹೊಂದಿರುವುದೇ ಯೋಗವೆಂದು ಇಲ್ಲಿ ಹೇಳಲ್ಪಟ್ಟಿದೆ. ಆದರೆ ಅಂತಹ ನಿರ್ವಿಕಾರಸ್ಥಿತಿ ಹೇಗೆ ಉಂಟಾಗಬಲ್ಲದು? ಸಮತ್ವಬುದ್ಧಿ(equilibrium of mind)ಯನ್ನು ಹೇಗೆ ಪಡೆಯುವುದು? ಮನಸ್ಸನ್ನು ದಾಟಿ ಆತ್ಮದಲ್ಲಿ ಸ್ಥಿರವಾದಾಗ ಮಾತ್ರವೇ ಅಂತಹ ಸ್ಥಿತಿ ಒದಗಲು ಸಾಧ್ಯ. ಅದನ್ನೇ ಯೋಗಸ್ಥಿತಿಯೆನ್ನುವರು. ಮನಸ್ಸು ಆತ್ಮಗಳ ಮಿಲನವೇ ಯೋಗ. ಜೀವ ಪರಮಾತ್ಮರ ಸಂಯೋಗವೇ ಯೋಗ. ಆ ಯೋಗ ಸ್ಥಿತಿಯಲ್ಲಿ ಈ ನಿರ್ವಿಕಾರ ಸಮಸ್ಥಿತಿ ಉದಯಿಸುತ್ತದೆಯಾದ್ದರಿಂದ ಅದನ್ನು ಇಲ್ಲಿ ಯೋಗವೆಂದಿರುವರು. ಆದ್ದರಿಂದ ಯೋಗದಲ್ಲಿರುವುದೆಂದರೆ ಆತ್ಮದಲ್ಲಿ ಸ್ಥಿತನಾಗಿ, ದೃಶ್ಯದೊಡನೆ ಸಂಗ (attachment) ತ್ಯಜಿಸಿ ಫಲದ ಪ್ರಾಪ್ತಾಪ್ರಾಪ್ತಗಳಲ್ಲಿ ಸಮಭಾವ ಹೊಂದಿ ಕಾರ್ಯಗಳನ್ನು ಮಾಡುವುದೇ ಎಂದು ಭಗವಂತನು ಅಪ್ಪಣೆ ಕೊಟ್ಟಿರುತ್ತಾನೆ.

ಕಾರ್ಯಗಳನ್ನು ಪ್ರಾರಂಭಿಸುವ ಮುನ್ನ 'ಯೋಗಸ್ಥ'ನಾಗಬೇಕು, ಅಂದರೆ ಯೋಗದಲ್ಲಿರುವುದನ್ನು ಕಲಿಯಬೇಕು. ದೈವಬುದ್ಧಿಯನ್ನು, ಆತ್ಮಬುದ್ಧಿಯನ್ನು ಚೆನ್ನಾಗಿ ಅಳವಡಿಸಿಕೊಳ್ಳಬೇಕು. ಇಲ್ಲದೇ ಹೋದಲ್ಲಿ ಆ ಕಾರ್ಯಗಳು ಬಂಧಕರವಾಗುತ್ತವೆ. ಹಾಗೆ ಯೋಗದಲ್ಲಿರುವುದನ್ನು ಅಭ್ಯಸಿಸದೆ ಕರ್ಮಗಳನ್ನು ಮಾಡುವುದರಿಂದ ಅನೇಕರಿಗೆ ಲಾಭಾಲಾಭಗಳಲ್ಲಿ, ಜಯಾಪಜಯಗಳಲ್ಲಿ, ಸಿದ್ಧ್ಯಸಿದ್ಧ್ಯಗಳಲ್ಲಿ ಚಿತ್ತವಿಕಾರ (ಚಿತ್ತಚಾಂಚಲ್ಯ)ವು ಆಗುವುದರಿಂದ ಅವರು ಅಶಾಂತಿಗೊಳಗಾಗುತ್ತಾರೆ. ಇದರಿಂದ ಕರ್ಮಾಚರಣೆಗೆ ಮೊದಲು ಜ್ಞಾನ ವಿಚಾರಣೆ, ಆತ್ಮಚಿಂತನೆ ತಪ್ಪದೆ ಇರಬೇಕೆಂದು, ಆಗಲೇ ಕರ್ಮ ನಿಷ್ಕಾಮ ಹಾಗು ನಿರ್ಲೇಪವಾಗುವುದೆಂದು ಸ್ಪಷ್ಟವಾಗುತ್ತದೆ. ಈ ಕಾರಣಗಳಿಂದಲೇ ಗೀತೆಯಲ್ಲಿ ಕರ್ಮಯೋಗಕ್ಕಿಂತ ಮೊದಲು ಸಾಂಖ್ಯಯೋಗ, ಜ್ಞಾನಗಳನ್ನು ಉಪದೇಶಿಸಲಾಗಿದೆ.

ಪ್ರ: ಯೋಗವೆಂದರೇನು ?

ಸಮತ್ವಬುದ್ಧಿಯನ್ನು ಯೋಗವೆನ್ನುವರು.

ಪ್ರ: ಕರ್ಮಗಳನ್ನು ಯಾವ ಪ್ರಕಾರವಾಗಿ ಆಚರಿಸಬೇಕು?

ಉ: ೧) ಯೋಗನಿಷ್ಠೆಯಲ್ಲಿದ್ದುಕೊಂಡು ೨) ಸಂಗವನ್ನು (ಆಸಕ್ತಿ ಹಾಗೂ ಅಭಿಮಾನಗಳನ್ನು) ಬಿಟ್ಟು ೩) ಕಾರ್ಯವು ಸಿದ್ಧಿಸದೇ ಇದ್ದರೂ ಸಮಭಾವ ಹೊಂದಿ ಕರ್ಮವನ್ನಾಚರಿಸಬೇಕು.

ಅ।। ಕಾಮ್ಯಕರ್ಮಗಳನ್ನು ಬಿಟ್ಟು ಸಮತ್ವ ಬುದ್ಧಿಯಿಂದ ಕೂಡಿದ ಕರ್ಮವನ್ನು ಅವಲಂಬಿಸಬೇಕೆಂದು ಬೋಧಿಸುತ್ತಿದ್ದಾನೆ.

೪೯. ದೂರೇಣ ಹ್ಯವರಂ ಕರ್ಮ ಬುದ್ಧಿ ಯೋಗಾದ್ಧನಂಜಯ
ಬುದ್ಧೌ ಶರಣಮನ್ವಿಚ್ಛ ಕೃಪಣಾಃ ಫಲಹೇತವಃ

**ಅರ್ಥ:** ಧನಂಜಯ=ಓ ಅರ್ಜುನಾ! ಬುದ್ಧಿಯೋಗಾತ್=ಸಮತ್ವ ಬುದ್ಧಿಯಿಂದ ಕೂಡಿದ ನಿಷ್ಕಾಮ ಕರ್ಮಕ್ಕಿಂತ; ಕರ್ಮ=ಫಲಾಪೇಕ್ಷೆಯಿಂದ ಕೂಡಿದ ಕಾಮ್ಯ ಕರ್ಮವು; ದೂರೇಣ=ಬಹಳ; ಅವರಂಹಿ=ನಿಕೃಷ್ಟ ವಾದುದಲ್ಲವೇ! (ಆದ್ದರಿಂದ) ಬುದ್ಧೌ=(ಅ)ಸಮತ್ವಬುದ್ಧಿಯಲ್ಲಿ; ಶರಣಂ= ಆಶ್ರಯವನ್ನು; ಅನ್ವಿಚ್ಛ=ಅಭಿಲಾಷಿಸುವುದು; ಫಲಹೇತವಃ=ಫಲಾಪೇಕ್ಷಿಗಳು; ಕೃಪಣಾಃ=ಅಲ್ಪರು (ಕೃಪಣರು).

**ತಾ:** ಓ ಅರ್ಜುನಾ! (ಮೇಲೆ ತಿಳಿಸಿದ) ಸಮತ್ವ ಬುದ್ಧಿಯಿಂದ ಕೂಡಿದ ನಿಷ್ಕಾಮ ಕರ್ಮಕ್ಕಿಂತ, ಫಲಾಪೇಕ್ಷೆಯಿಂದ ಕೂಡಿದ ಕಾಮ್ಯಕರ್ಮವು ಬಹಳ ಕೆಳ ದರ್ಜೆಯದು! ಆದ್ದರಿಂದ ಸಮತ್ವ ರೂಪದ ನಿಷ್ಕಾಮ ಕರ್ಮಾನುಷ್ಠಾನ ಬುದ್ಧಿಯನ್ನೇ ನೀನು ಆಶ್ರಯಿಸು. ಫಲವನ್ನು ಅಪೇಕ್ಷಿಸುವವರು ಅಲ್ಪರು (ಕೃಪಣರು).

**ವ್ಯಾಖ್ಯೆ:** ಅರ್ಜುನನನ್ನು ಸಂಬೋಧಿಸುವಾಗ 'ಧನಂಜಯ' ಎನ್ನುವ ಪದವನ್ನು ಹಿಂದಿನ ಹಾಗು ಈ ಶ್ಲೋಕಗಳಲ್ಲಿ ಪ್ರಯೋಗಿಸಲ್ಪಟ್ಟಿರುವುದನ್ನು ಗಮನಿಸುವುದು. ಭೌತಿಕ ಧನವನ್ನೇ ಅಲ್ಲದೆ ಜ್ಞಾನಧನವನ್ನು, ಯೋಗಧನವನ್ನು ಕೂಡ ಜಯಿಸುವಂಥವನಾಗು, ಓ ಅರ್ಜುನಾ! ಎಂದು ಸೂಚಿಸುವುದೇ ಈ ಪ್ರಯೋಗಕ್ಕೆ ಕಾರಣ.

ಗೀತೆಯಲ್ಲಿ ಮುಂದೆ ಕೆಲವು ಕಡೆಗಳಲ್ಲಿ ಬುದ್ಧಿಯೋಗವೆನ್ನುವ ಪದವು ಜ್ಞಾನಯೋಗವೆನ್ನುವ ಅರ್ಥದಲ್ಲಿ ಉಪಯೋಗಿಸಲ್ಪಡಲಾಗುವುದು. ಆದರೆ ಇಲ್ಲಿ ಸಮತ್ವ ಬುದ್ಧಿಯಿಂದ ಕೂಡಿದ ನಿಷ್ಕಾಮ ಕರ್ಮಯೋಗವೆನ್ನುವ ಅರ್ಥದಲ್ಲಿ ಪ್ರಯೋಗಿಸಲ್ಪಟ್ಟಿದೆ. ಕಾಮ್ಯಕರ್ಮ, ಜನನ ಮರಣಗಳಿಗೆ ಕಾರಣವಾಗುತ್ತದೆ. ನಿಷ್ಕಾಮ ಕರ್ಮ ಚಿತ್ತಶುದ್ಧಿಯನ್ನು ಮಾಡುವುದರಿಂದ ಮೋಕ್ಷಕ್ಕೆ ಹೇತುವಾಗುತ್ತದೆ. ಆದ್ದರಿಂದ ಈ ಎರಡಕ್ಕೂ ಸಂಬಂಧವೇ ಇಲ್ಲ. ಕಾಮ್ಯ ಕರ್ಮ ಬಹಳ ನಿಮ್ನ ಶ್ರೇಣಿಯದು. ಅದನ್ನು ಕೋರುವವರು ಕೃಪಣರು, ಅಲ್ಪರು (ಕೃಪಣಾಃ ಫಲ ಹೇತವಃ). ಅವರು ಜನನ ಮರಣ ರೂಪ ಸಂಸಾರ ಪ್ರವಾಹದಲ್ಲಿ ಕೊಚ್ಚಿಕೊಂಡು ಹೋಗುವರು. ಈ ರೀತಿಯ ಕೃಪಣತೆಯನ್ನು ಯಾರೂ ಆಶ್ರಯಿಸಬಾರದೆಂದು ಭಗವಂತನು ಇಲ್ಲಿ ಎಚ್ಚರಿಸುತ್ತಿದ್ದಾನೆ. ಮಾನವರಾಗಿ ಹುಟ್ಟಿ ಈಶ್ವರನು ಕೊಟ್ಟ ಬುದ್ಧಿಶಕ್ತಿಗಳನ್ನು ದುರ್ವಿನಿಯೋಗಿಸಿಕೊಂಡು ವಿಷಯಾದಿಗಳಲ್ಲಿ ಆಸಕ್ತಿ ಹೊಂದಿ, ಫಲಾಭಿಲಾಷೆಯಿಂದ ಕರ್ಮಗಳನ್ನು ಮಾಡಿ, ದೀನರಾಗಿ ವರ್ತಿಸುವುದು ಅತ್ಯಂತ ಶೋಚನೀಯ. ಆದ್ದರಿಂದ ದೀನತೆಯನ್ನು ಹೊಡೆದೋಡಿಸಿ 'ಬುದ್ಧೌ *ಶರಣಮನ್ವಿಚ್ಛ*' ಎಂದು ಭಗವಂತನು ಅಪ್ಪಣೆ ಕೊಟ್ಟಂತೆ ಮುಮುಕ್ಷುವು ಸಮತ್ವ ಬುದ್ಧಿಯಿಂದ ನಿಷ್ಕಾಮ ಕರ್ಮವನ್ನೇ ಆಚರಿಸಬೇಕು. ಕಾಮ್ಯ ಕರ್ಮಗಳನ್ನು ತ್ಯಜಿಸಬೇಕು. ತನ್ನ ಬುದ್ಧಿಯನ್ನೇ ತಾನು ಶರಣು ಹೊಂದಿ ಉದ್ಧಾರವಾಗಬೇಕು. ಬುದ್ಧಿಯನ್ನು ಸಮತ್ವದಿಂದ, ನಿಷ್ಕಾಮ ಭಾವದಿಂದ ಕೂಡಿರುವಂತೆ ಮಾಡಿ ಅದನ್ನು ಆಶ್ರಯಿಸಿದಲ್ಲಿ ಜನ್ಮ ವಿಮುಕ್ತವಾಗುವುದೆಂದು ಭಗವಂತನು ಇಲ್ಲಿ ತಿಳಿಸುತ್ತಿದ್ದಾನೆ.

ಪ್ರ : ಫಲಾಪೇಕ್ಷೆಯಿಂದ ಮಾಡಿದ ಕರ್ಮವೆಂತಹದು ?

ಉ : ಮಹಾನಿಕೃಷ್ಟವಾದುದು (ನಿಷ್ಕಾಮಕರ್ಮವೇ ಸರ್ವೋತ್ತಮ)

ಪ್ರ : ಮನುಜನು ಏನನ್ನು ಶರಣು ಹೊಂದಬೇಕು ?

ಉ : ತನ್ನ ಬುದ್ಧಿಯನ್ನು ಸಮತ್ವದೊಡನೆ ನಿಷ್ಕಾಮ ಭಾವದಿಂದ ಕೂಡಿರುವಂತೆ ಮಾಡಿ, ಅದನ್ನೇ ಶರಣು ಹೊಂದಬೇಕು.

ಪ್ರ : ಫಲಾಭಿಲಾಷೆಯಿಂದ ಕರ್ಮಗಳನ್ನು ಮಾಡುವವರು ಎಂತಹವರು ?

ಉ : ಅತಿ ದೀನರು (ಕೃಪಣರು). ಅವರು ಸಂಸಾರ ಸಾಗರದಲ್ಲಿ ಕೊಚ್ಚಿಕೊಂಡು ಹೋಗುವರು.

ಅ।। ಸಮತ್ವ ಬುದ್ಧಿಯಿಂದ ಆಚರಿಸುವ ನಿಷ್ಕಾಮ ಕರ್ಮದ ಫಲವನ್ನು ತಿಳಿಸುತ್ತಾ ಅದನ್ನೇ ಆಶ್ರಯಿಸಬೇಕೆಂದು ಮತ್ತೆ ಬೋಧಿಸಲಾಗಿದೆ.

೫೦. ಬುದ್ಧಿಯುಕ್ತೋ ಜಹಾತೀಹ ಉಭೇ ಸುಕೃತದುಷ್ಕೃತೇ
ತಸ್ಮಾದ್ಯೋಗಾಯ ಯುಜ್ಯಸ್ವ ಯೋಗಃ ಕರ್ಮಸು ಕೌಶಲಮ್

**ಅರ್ಥ:** ಬುದ್ಧಿಯುಕ್ತ=ಸಮತ್ವಬುದ್ಧಿಯಿಂದ ಕೂಡಿದವನು; ಉಭೇ ಸುಕೃತ ದುಷ್ಕೃತೇ=ಪುಣ್ಯಪಾಪಗಳೆರಡನ್ನು; ಇಹ=ಈ ಲೋಕದಲ್ಲೇ (ಈ ಜನ್ಮದಲ್ಲೇ); ಜಹಾತಿ=ಬಿಡುತ್ತಿದ್ದಾನೆ; ತಸ್ಮಾತ್=ಆ ಕಾರಣದಿಂದ; ಯೋಗಾಯ=ನಿಷ್ಕಾಮ ಕರ್ಮಯೋಗಕ್ಕೋಸ್ಕರ; ಯುಜ್ಯಸ್ವ=ಸಿದ್ಧಪಡು; ಕರ್ಮಸು=ಕರ್ಮಗಳಲ್ಲಿ; ಕೌಶಲಂ=ಕುಶಲತೆ; ಯೋಗಃ=ಯೋಗವು; ಉಚ್ಯತೇ=ಹೇಳಲ್ಪಡುತ್ತಿದೆ.

**ತಾ।।** ಸಮತ್ವಬುದ್ಧಿಯನ್ನು ಹೊಂದಿದವನು ಪಾಪ ಪುಣ್ಯಗಳೆರಡನ್ನೂ ಈ ಜನ್ಮದಲ್ಲೇ ಬಿಟ್ಟು ಬಿಡುತ್ತಿದ್ದಾನೆ. ಆದ್ದರಿಂದ ಅಂತಹ ಸಮತ್ವಬುದ್ಧಿಯ ನಿಷ್ಕಾಮ ಕರ್ಮಯೋಗಕ್ಕೆ ಯತ್ನಿಸಬೇಕು. ಕರ್ಮಗಳಲ್ಲಿಯ ಚಾತುರ್ಯವೇ ಯೋಗ.

**ವ್ಯಾಖ್ಯೆ:** ಬುದ್ಧಿಯುಕ್ತನೆಂದರೆ ಸಮತ್ವ ಬುದ್ಧಿಯಿಂದ ಅನಾಸಕ್ತಿಯಿಂದ ನಿಷ್ಕಾಮವಾಗಿ ಕರ್ಮಗಳನ್ನಾಚರಿಸುವವನು. ಅಂತಹವನಿಗೆ ಪುಣ್ಯವಾಗಲಿ, ಪಾಪವಾಗಲಿ ಸೋಂಕುವುದಿಲ್ಲ. ಆಸಕ್ತಿಯಿಂದ, ಫಲಾಭಿಲಾಷೆಯಿಂದ ಕರ್ಮಗಳನ್ನು ಮಾಡುವವರಿಗೆ ಮಾತ್ರ ಪುಣ್ಯಪಾಪಗಳ ಸಂಬಂಧವಿರುವುದು. ಅನಾಸಕ್ತಿಯಿಂದ, ಫಲಾಪೇಕ್ಷೆಯಿಲ್ಲದೆ ಕರ್ಮ ಮಾಡುವವರಿಗೆ ಆ ಪಾಪ ಪುಣ್ಯಗಳ ಸಂಬಂಧವೇನೂ ಇರುವುದಿಲ್ಲ.* ಅವರು ಬಂಧವಿಮುಕ್ತರಾಗುವರು. ಆದರೂ ಮಹನೀಯರಾದವರು ನಿಷ್ಕಾಮ ಬುದ್ಧಿಯಿಂದ ಪುಣ್ಯಕಾರ್ಯ ಗಳನ್ನು ಲೋಕ ಹಿತಾರ್ಥವಾಗಿ ಆಚರಿಸುತ್ತಲೇ ಇರುವರು. ಗೀತೆಯಲ್ಲಿ ಭಗವಂತನು ಪುಣ್ಯಕಾರ್ಯಗಳನ್ನು ಪ್ರೋತ್ಸಾಹಿಸುತ್ತಲೇ ಬಂದನು.@

ಸಾಧಕನು ಪಾಪಕಾರ್ಯಗಳನ್ನು ತ್ಯಜಿಸಿ ಪುಣ್ಯಕಾರ್ಯಗಳನ್ನು

---

* ಯಜ್ಞಾಯಾಚರತಃ ಕರ್ಮ ಸಮಗ್ರಂ ಪ್ರವಿಲೀಯತೇ (೪-೨೩)

@ ೧) ಏಷಾಂ ತ್ವಂತಗತಂ ಪಾಪಂ ಜನಾನಾಂ ಪುಣ್ಯಕರ್ಮಣಾಮ್ (೭-೨೮)

೨) ಯಜ್ಞದಾನಃ ತಪಃ ಕರ್ಮ ನ ತ್ಯಾಜ್ಯಂ ಕಾರ್ಯಮೇವ ತತ್ (೧೮-೫)

ಮಾಡಬೇಕು. ಆ ಪುಣ್ಯಕಾರ್ಯಗಳನ್ನು ಅನಾಸಕ್ತನಾಗಿ ನಿಷ್ಕಾಮ ಬುದ್ಧಿಯಿಂದ ಆಚರಿಸುತ್ತಾ ಕರ್ಮಬಂಧನದಿಂದ ವಿಮುಕ್ತನಾಗಬೇಕು. ಇಲ್ಲಿ ಈ ದೃಷ್ಟಿಯಿಂದಲೇ ಸಮಬುದ್ಧಿಯುಳ್ಳ ನಿಷ್ಕಾಮಯೋಗಿ ಪುಣ್ಯ ಪಾಪಗಳೆರಡ ರಿಂದಲೂ ಬಿಡುಗಡೆ ಹೊಂದುತ್ತಿದ್ದಾನೆಂದು ಹೇಳಲ್ಪಟ್ಟಿದೆ. ಕೇವಲ ನಿರ್ವಿಕಲ್ಪ ಸಮಾಧಿಯಲ್ಲಿ ಮಾತ್ರವೇ ಮನುಜನು ಆತ್ಮಸ್ಥಿತನಾಗಿ ಇಂದ್ರಿಯಗಳಿಂದ ಯಾವ ಕರ್ಮವನ್ನೂ ಮಾಡದೇ ಇರುವನು. ಬೇರೆ ಸಮಯಗಳಲ್ಲಿ ಪುಣ್ಯಕಾರ್ಯಗಳನ್ನು ಅನಾಸಕ್ತಿಯಿಂದ ಮಹನೀಯರು ಆಚರಿಸುತ್ತಲೇ ಇರುವರು. ಆದ್ದರಿಂದ ಬೇರೆಯವರು ಕೂಡ ತಮ್ಮ ಚಿತ್ತ ಶುದ್ಧಿಗೋಸ್ಕರ, ಆತ್ಮಜ್ಞಾನಕ್ಕೋಸ್ಕರ, ಪುಣ್ಯಕಾರ್ಯಗಳನ್ನು, ದೈವ ಕಾರ್ಯಗಳನ್ನು ಬಿಡದೆ ನಿಷ್ಕಾಮ ಬುದ್ಧಿಯಿಂದ ಆಚರಿಸುತ್ತಿರಬೇಕು. ಆತ್ಮೋನ್ನತಿಗೆ ಇದು ಒಂದೇ ಮಾರ್ಗ.

*"ಕೌಶಲಂ"*- ಸಮತ್ವ ಬುದ್ಧಿಯ ಸಹಾಯದಿಂದ ಕಾಮ್ಯ ಕರ್ಮಗಳಿಂದ ಮನಸ್ಸನ್ನು ಬಿಡಿಸಿಕೊಳ್ಳುವ ಸಾಮರ್ಥ್ಯವೇ ಯೋಗ. ಕರ್ಮಗಳನ್ನು ಮಾಡುತ್ತಿದ್ದರೂ ಅವುಗಳ ಬಂಧನಕ್ಕೊಳಗಾಗದೆ ಇರಬಲ್ಲ ಶಕ್ತಿ ಹಾಗೂ ಯುಕ್ತಿಯೇ ಯೋಗ. ಅಂದರೆ ಸಮತ್ವ ಬುದ್ಧಿಯಿಂದ, ನಿಷ್ಕಾಮವಾಗಿ, ಅನಾಸಕ್ತವಾಗಿ ಕರ್ಮಗಳನ್ನು ಆಚರಿಸಬಲ್ಲ ದಕ್ಷತೆಯನ್ನು ಯೋಗವೆಂದು ಇಲ್ಲಿ ಕರೆಯಲಾಗಿದೆ.

ಪ್ರ : ಯೋಗವೆಂದರೇನು ?

ಉ : ಕೌಶಲ (ಕುಶಲ)ದಿಂದ, ಅನಾಸಕ್ತನಾಗಿ ಕರ್ಮಗಳನ್ನು ಆಚರಿಸಬಲ್ಲ ಸಾಮರ್ಥ್ಯವೇ ಯೋಗ

**೫೧. ಕರ್ಮಜಂ ಬುದ್ಧಿಯುಕ್ತಾ ಹಿ ಫಲಂ ತ್ಯಕ್ತ್ವಾ ಮನೀಷಿಣಃ**
**ಜನ್ಮಬಂಧವಿನಿರ್ಮುಕ್ತಾಃ ಪದಂ ಗಚ್ಛಂತ್ಯನಾಮಯಮ್**

**ಅರ್ಥ:** ಬುದ್ಧಿಯುಕ್ತಾಃ=ಸಮತ್ವಬುದ್ಧಿಯಿಂದಿರುವ; ಮನೀಷಿಣಃ= ವಿವೇಕವಂತರು; ಕರ್ಮಜಂ=ಕರ್ಮದಿಂದ ಉಂಟಾದ; ಫಲಂ=ಫಲವನ್ನು; ತ್ಯಕ್ತ್ವಾ=ಬಿಟ್ಟು; ಜನ್ಮಬಂಧವಿನಿರ್ಮುಕ್ತಾಃ=ಜನ್ಮವೆಂಬ ಬಂಧನದಿಂದ ವಿಮುಕ್ತರಾಗಿ; ಅನಾಮಯಂ=ದುಃಖರಹಿತವಾದ; ಪದಂ=ಸ್ಥಾನವನ್ನು; ಗಚ್ಛಂತಿಹಿ=ಹೊಂದುತ್ತಿದ್ದಾರಲ್ಲ!

**ತಾ||** ಸಮತ್ವ ಬುದ್ಧಿಯಿಂದ ಕೂಡಿದ ವಿವೇಕವಂತರು, ಕರ್ಮಗಳನ್ನಾಚರಿಸು ತ್ತಿದ್ದರೂ ಅವುಗಳ ಫಲಗಳನ್ನು ತ್ಯಜಿಸಿ ಜನನ ಮರಣ ರೂಪವಾದ ಬಂಧನದಿಂದ ವಿಮುಕ್ತರಾಗಿ ದುಃಖ ರಹಿತವಾದ ಮೋಕ್ಷ ಪದವಿಯನ್ನು ಪಡೆಯುತ್ತಿದ್ದಾರೆ.

**ವ್ಯಾಖ್ಯೆ:** ಮನೀಷ ಎಂದರೆ ಪ್ರಜ್ಞಾವಂತ. ಬುದ್ಧಿ ಹಾಗೂ ಪ್ರಜ್ಞೆಯನ್ನು ಹೊಂದಿ ಕರ್ಮಫಲವನ್ನು ತ್ಯಜಿಸಿದವನೆಂದು ಇಲ್ಲಿ ಅರ್ಥ. ಇದರಿಂದ ಕರ್ಮಗಳನ್ನು ಆಚರಿಸುವುದಕ್ಕೆ ಮೊದಲು ವಿವೇಕ ಅತ್ಯಾವಶ್ಯಕ ಎಂದು ತಿಳಿದುಬರುತ್ತಿದೆ. ಕರ್ಮಗಳನ್ನು ಸಕಾಮವಾಗಿ, ಸಂಗದೊಡನೆ ಆಚರಿಸು ವುದರಿಂದ ಆಗುವ ನಷ್ಟವನ್ನು; ನಿಷ್ಕಾಮವಾಗಿ, ನಿಸ್ಸಂಗವಾಗಿ ಆಚರಿಸು ವುದರಿಂದ ಲಭಿಸುವ ಶ್ರೇಯವನ್ನು ಚೆನ್ನಾಗಿ ಅರಿತವನೇ (ಕರ್ಮರಹಸ್ಯವನ್ನು ತಿಳಿದುಕೊಂಡವನೇ) ಕರ್ಮಫಲವನ್ನು ತ್ಯಜಿಸಿ ಉತ್ತಮ ಪದವನ್ನು ಹೊಂದಬಲ್ಲನು. ವಿವೇಕದಿಂದ ಮಾತ್ರ ಮಾನವನು ಕರ್ಮಗಳನ್ನು ನಿಷ್ಕಾಮವಾಗಿ, ಅನಾಸಕ್ತಿಯಿಂದ ಆಚರಿಸಬಲ್ಲನು. ಆದ್ದರಿಂದಲೇ ಇಲ್ಲಿ ಬುದ್ಧಿಯುಕ್ತರು, ಮನೀಷಿಗಳು ಮಾತ್ರವೇ ಕರ್ಮಫಲತ್ಯಾಗ ಮಾಡುವುದರಲ್ಲಿ ಸಮರ್ಥರಾಗುವರೆಂದು ಹೇಳಲಾಗಿದೆ.

ನಿಷ್ಕಾಮ ಕರ್ಮದಿಂದ ಚಿತ್ತವು ಶುದ್ಧವಾದ ನಂತರ, ಅಂತಹ ನಿರ್ಮಲ ಚಿತ್ತದಲ್ಲಿ ಆತ್ಮಜ್ಞಾನ ಉದಯಿಸುವುದರಿಂದ ಅವರು ಜನ್ಮಬಂಧ ರಹಿತರಾಗುವರು. ಇದರಿಂದ ಕರ್ಮಮಾರ್ಗವು ಮೋಕ್ಷಕ್ಕೆ ಹೇಗೆ ಉಪಕಾರವಾಗುತ್ತದೆನ್ನುವುದನ್ನು ಇಲ್ಲಿ ಸ್ಪಷ್ಟೀಕರಿಸಿದಂತಾಗಿದೆ. ಕರ್ಮದಿಂದ ಮೋಕ್ಷವು ಉಂಟಾಗುತ್ತದೆಯೇ ಎಂದು ಕೆಲವರು ಸಂದೇಹಿಸಬಹುದು. ಆದರೆ ಅದಕ್ಕೆ ಉತ್ತರ ಇಲ್ಲಿ ಭಗವಂತನಿಂದಲೇ ಬಂದಿದೆ. ಕರ್ಮಗಳನ್ನು ಫಲಾಭಿಲಾಷಾರಹಿತವಾಗಿ ಅನಾಸಕ್ತಿಯಿಂದ ಆಚರಿಸುವವರು ನಿರ್ಮಲ, ನಿರುಪದ್ರವ ಹಾಗೂ ಭವಬಂಧರಹಿತವಾದ ಮೋಕ್ಷ ಪದವಿಯನ್ನು ತಪ್ಪದೆ ಪಡೆಯುವರೆಂದು ಗೀತಾಚಾರ್ಯನು ಹೇಳಿದ್ದಾನೆ.

*"ಜನ್ಮಬಂಧವಿನಿರ್ಮುಕ್ತಾಃ*- ಈ ಪ್ರಪಂಚದಲ್ಲಿ ಪ್ರತಿಯೊಬ್ಬರೂ ಸಂಸಾರ ಬಂಧನದಿಂದ ಹೇಗೆ ವಿಮುಕ್ತರಾಗಬೇಕು ಎಂದು ವಿಚಾರಿಸುತ್ತಿದ್ದಾರೆ. ಬಂಧವಿಮುಕ್ತಿಗೆ ಭಗವಂತನು ಇಲ್ಲಿ ಸುಲಭೋಪಾಯ ವನ್ನು ಹೇಳಿದ್ದಾನೆ. "ಓ ಜೀವಿಗಳಿರಾ! ನೀವು ಬಂಧವಿಮುಕ್ತರಾಗಿ, ನಿರಾಮಯವಾದ ಮೋಕ್ಷ ಪದವಿಯನ್ನು ಹೊಂದಬೇಕೆಂದುಕೊಂಡರೆ ಕರ್ಮಗಳನ್ನು ನಿಷ್ಕಾಮವಾಗಿ ಈಶ್ವರಾರ್ಪಣ ಬುದ್ಧಿಯಿಂದ ಆಚರಿಸಿ. ಅದರಿಂದ ಚಿತ್ತಶುದ್ಧಿಯುಂಟಾಗಿ ಆತ್ಮಜ್ಞಾನ ಉದಯಿಸಿ ನೀವು ತಪ್ಪದೆ ಮೋಕ್ಷಧಾಮವನ್ನು ಹೊಂದುವಿರಿ ಎಂದು ಶ್ರೀಕೃಷ್ಣಮೂರ್ತಿ ಭಕ್ತರಿಗೆ ಅಭಯವಿತ್ತಿದ್ದಾನೆ.

*"ಮನೀಷಿಣಃ"*- ಒಬ್ಬನಿಗೆ ಪ್ರಜ್ಞೆಯಿದೆಯೋ ಇಲ್ಲವೇ ಎಂದು ತಿಳಿದುಕೊಳ್ಳಲು ಅವನ ಪಾಂಡಿತ್ಯವನ್ನು ಪರೀಕ್ಷಿಸಬೇಕಿಲ್ಲ. ಆತನ ಆಚರಣೆಯಲ್ಲಿ ನಿಷ್ಕಾಮಭಾವ, ಅನಾಸಕ್ತಿಗಳು ಇವೆಯೇ ಅಥವಾ ಇಲ್ಲವೇ ಎನ್ನುವುದನ್ನು ನೋಡಿದರೆ ಸಾಕು. ಕರ್ಮರಹಸ್ಯವನ್ನರಿತು ಲೋಕದಲ್ಲಿ ಅನಾಸಕ್ತಿಯಿಂದ ವ್ಯವಹರಿಸವವನೇ ವಾಸ್ತವವಾಗಿ ಪ್ರಜ್ಞಾವಂತನಾಗಲಿ ಲೌಕಿಕ ಪಂಡಿತನಲ್ಲ.

*"ಪದಂ ಗಚ್ಛಂತ್ಯನಾಮಯಮ್"*- ಪ್ರಪಂಚದಲ್ಲಿ ಅನೇಕ ಪದವಿಗಳಿವೆ. ಚಕ್ರವರ್ತಿ ಪದವಿ, ದೇವೇಂದ್ರ ಪದವಿ ಮುಂತಾದುವುಗಳು. ಆದರೆ ಅವು ಎಷ್ಟು ಮಹತ್ವವಾದುವಾದರೂ ಸಂಸಾರ ಚಕ್ರಕ್ಕೆ ಸಿಕ್ಕಿಕೊಂಡೇ ಇವೆ. ಜನನ, ಮರಣ, ದುಃಖಗಳಿಂದ ಅವು ಮನುಷ್ಯನನ್ನು ತಪ್ಪಿಸಲಾರವು. ಪ್ರಪಂಚದಲ್ಲಿ ಎಲ್ಲಾ ಪದವಿಗಳಿಗಿಂತ ಉತ್ತಮವಾಗಿದ್ದು ದುಃಖವೆನ್ನುವುದು ಲವಲೇಶವೂ ಇಲ್ಲದ, ಬಂಧರಹಿತವಾದ ಪದವಿಯೆಂದರೆ ಆತ್ಮಪದ ಒಂದೇ. ಅದು ಬ್ರಹ್ಮಪದ. ಅದನ್ನು ಹೊಂದುವುದೇ ಪ್ರತಿ ಜೀವಿಯ ಲಕ್ಷ್ಯ. ಅದನ್ನು ಹೊಂದುವ ಮಾರ್ಗವೇನು? ಭಗವಂತನೇ ಆ ಮಾರ್ಗವನ್ನು ಇಲ್ಲಿ ಸೂಚಿಸಿದ್ದಾನೆ. ಫಲಾಭಿಲಾಷಾರಹಿತವಾಗಿ ಕರ್ಮಗಳನ್ನಾಚರಿಸುತ್ತಾ, ಚಿತ್ತ ಶುದ್ಧಿಯನ್ನು ಪಡೆದು, ತದ್ವಾರ ಆತ್ಮಜ್ಞಾನವನ್ನು ಪಡೆಯುವುದೇ ಆ ಮಾರ್ಗ. ಆದ್ದರಿಂದ ಮುಮುಕ್ಷುಗಳು ಅದನ್ನು ಅನುಸರಿಸಿ ಉದ್ಧಾರವಾಗಬೇಕು.

ಪ್ರ : ಪ್ರಜ್ಞಾಶೀಲ (ಬುದ್ಧಿವಂತ)ನ ಲಕ್ಷಣವೇನು ?

ಉ : ನಿಷ್ಕಾಮ ಕರ್ಮಾಚರಣೆ

ಪ್ರ : ನಿಷ್ಕಾಮ ಕರ್ಮಾಚರಣೆಯಿಂದ ಅವರು ಏನನ್ನು ಹೊಂದುವರು?

ಉ: ಜನ್ಮಬಂಧ ರಹಿತರಾಗಿ, ಅವರು ನಿರಾಮಯವಾದ ಮೋಕ್ಷವನ್ನು ಹೊಂದುವರು.

ಪ್ರ : ಪರಮಾತ್ಮಪದವಿ ಎಂಥಹದು ?

ಉ : ೧. ಜನ್ಮಬಂಧನವಿಲ್ಲದ್ದು ೨. ನಿರಾಮಯ (ದುಃಖವರ್ಜಿತ) ವಾದದ್ದು.

**ಅ॥** ಅಂತಹ ಮೋಕ್ಷ ಸ್ಥಿತಿಯನ್ನು ಜನರು ಯಾವಾಗ ಹೊಂದುವರು ಎನ್ನುವುದನ್ನು ನಿರೂಪಿಸಲಾಗಿದೆ.

**೫೨. ಯದಾ ತೇ ಮೋಹಕಲಿಲಂ ಬುದ್ಧಿರ್ವ್ಯತಿತರಿಷ್ಯತಿ**
**ತದಾ ಗಂತಾಸಿ ನಿರ್ವೇದಂ ಶ್ರೋತವ್ಯಸ್ಯ ಶ್ರುತಸ್ಯ ಚ**

**ಅರ್ಥ:** ಯದಾ=ಸದಾ; ತೇ=ನಿನ್ನ; ಬುದ್ಧಿಃ=ಬುದ್ಧಿ; ಮೋಹಕಲಿಲಂ=ಅಜ್ಞಾನವೆನ್ನುವ ಮಾಲಿನ್ಯವನ್ನು; ವ್ಯತಿತರಿಷ್ಯತಿ=ದಾಟಬಲ್ಲದೋ; ತದಾ=ಆಗ; ಶ್ರೋತವ್ಯಸ್ಯ=ಕೇಳಬಹುದಾದ ಬೋಧೆಯಲ್ಲಿ; ಶ್ರುತಸ್ಯಚ=ಕೇಳಿದ ಬೋಧೆಯಲ್ಲಿ; ನಿರ್ವೇದಂ=ವಿರಕ್ತಿಯನ್ನು; ಗಂತಾಸಿ=ಹೊಂದಬಲ್ಲೆ.

**ತಾ॥** ಅರ್ಜುನಾ! ನಿನ್ನ ಬುದ್ಧಿ ಯಾವಾಗ ಅಜ್ಞಾನವೆನ್ನುವ ಮಾಲಿನ್ಯವನ್ನು ದಾಟಿ ಹೋಗಬಲ್ಲದೋ (ಅದರಿಂದ ಬಿಡಿಸಿಕೊಂಡು ಪರಿಶುದ್ಧವಾಗುವುದೋ) ಆಗ ಮುಂದೆ ಕೇಳಬೇಕಾದುದರ ಬಗ್ಗೆಯೂ, ಹಿಂದೆ ಕೇಳಿರುವುದರ ಬಗ್ಗೆಯೂ ನೀನು ವಿರಕ್ತಿಯನ್ನು ಹೊಂದುವೆ.

**ವ್ಯಾಖ್ಯೆ:** ಜೀವಿಯ ಲಕ್ಷ್ಯವು ಮೋಹವನ್ನು ದಾಟಿ ಹೋಗುವುದೇ ಆಗಿದೆ. ಆ ಮೋಹಕ್ಕೆ ಅಜ್ಞಾನ, ಮಾಯೆ, ಪ್ರಕೃತಿ ಮುಂತಾದ ಹೆಸರುಗಳಿವೆ. ತಮಸ್ಸಿಗೂ ಪರಮಾತ್ಮನಿಗೂ ಅಜಗಜಾಂತರ. *'ತಮಸಸ್ತು ಪಾರೆ'* ಎನ್ನುವ ವೇದವಾಕ್ಯ ಈ ಸತ್ಯವನ್ನು ಬೋಧಿಸುತ್ತದೆ. ಪ್ರಕಾಶರೂಪವಾದ ಆ ಪರಮಾತ್ಮನನ್ನು ಸೇರಬೇಕಾದರೆ, ಅಡ್ಡವಾಗಿರುವ ಮೋಹವನ್ನು (ತಮಸ್ಸನ್ನು) ದಾಟಬೇಕಾಗಿದೆ. ನಿಷ್ಕಾಮಕರ್ಮಾಚರಣೆಯಿಂದ, ಶ್ರವಣ ಮನನ ನಿದಿಧ್ಯಾಸರೂಪ ಆತ್ಮ ವಿಚಾರಣೆಯ ಮೂಲಕ, ಆ ಕಾರ್ಯವನ್ನು ಸಾಧಿಸಬೇಕು. ಈ ಪ್ರಕಾರವಾಗಿ ಬುದ್ಧಿ ಯಾವಾಗ ಈ ಅಜ್ಞಾನ ಮಾಲಿನ್ಯವನ್ನು ದಾಟಿ ಹೋಗುವುದೋ, ಆ ಕಡೆಯಿರುವ ಪರಮಾತ್ಮನ ಸಾನ್ನಿಧ್ಯವನ್ನು ಸೇರುವನೋ, ಆಗ ಧ್ಯೇಯ ವಸ್ತುವಿನಲ್ಲೇ ಆತ ರಮಿಸುತ್ತಿರುತ್ತಾನಾದ್ದರಿಂದ ಇನ್ನು ಶ್ರವಣಾದಿಗಳಲ್ಲಿ ಆತನಿಗೆ ಆಸಕ್ತಿಯಿರುವುದಿಲ್ಲ. ಆದರೆ ಇದು ಸಾಧ್ಯವಸ್ತುವನ್ನು (ಆತ್ಮವನ್ನು) ಹೊಂದಿದವರನ್ನು ಕುರಿತ ಮಾತೇ ಹೊರತು ಸಾಧಕರನ್ನು ಉದ್ದೇಶಿಸಿ ಹೇಳಿರುವ ಮಾತಲ್ಲ ಎನ್ನುವುದನ್ನು ತಿಳಿಯಬೇಕು. ಸಾಧಕರು ಶಾಸ್ತ್ರಶ್ರವಣಾದಿಗಳನ್ನು ತಪ್ಪದೆ ಅನುಸರಿಸಬೇಕು.

"ಮೋಹಕಲಿಲಂ"- ಎಂದು ಹೇಳಲ್ಪಟ್ಟಿರುವುದರಿಂದ ಜನರ ಹೃದಯಗಳಲ್ಲಿ ಅಜ್ಞಾನವೆನ್ನುವ ಮಲಿನ ಸೇರಿದೆಯೆಂದು ಅದನ್ನು ಪ್ರಯತ್ನ ಪೂರ್ವಕವಾಗಿ ನಿಷ್ಕಾಮ ಕರ್ಮಾಚರಣೆಗಳ ಮೂಲಕ, ಆತ್ಮವಿಚಾರಣೆಯ ದ್ವಾರ ನಿರ್ಮೂಲಿಸಿಕೊಂಡು ಆತ್ಮಸಾಕ್ಷಾತ್ಕಾರವನ್ನು ಹೊಂದಬೇಕೆನ್ನುವುದು ಸ್ಪಷ್ಟವಾಗುತ್ತಿದೆ.

**೫೩. ಶ್ರುತಿವಿಪ್ರತಿಪನ್ನಾ ತೇ ಯದಾ ಸ್ಥಾಸ್ಯತಿ ನಿಶ್ಚಲಾ**
**ಸಮಾಧಾ ವಚಲಾ ಬುದ್ಧಿಸ್ತದಾ ಯೋಗ ಮವಾಪ್ಸ್ಯಸಿ**

**ಅರ್ಥ:** ಶ್ರುತಿವಿಪ್ರತಿಪನ್ನಾ=ನಾನಾವಿಧವಾದ ಶ್ರವಣಾದಿಗಳಿಂದ ವಿಕ್ಷಿಪ್ತವಾಗಿರುವ; ತೇ=ನಿನ್ನ; ಬುದ್ಧಿಃ=ಬುದ್ಧಿ; ಯದಾ=ಯಾವಾಗಲೂ; ನಿಶ್ಚಲಾ=ಅಚಲವಾಗಿದ್ದು; ಸಮಾಧೌ=ಪರಮಾತ್ಮನ ಧ್ಯಾನದಲ್ಲಿ; ಅಚಲ=ಅಚಲವಾಗಿ; ಸ್ಥಾಸ್ಯತಿ=ಸ್ಥಿರವಾಗಿರುವುದೋ; ತದಾ=ಆಗ; ಯೋಗಂ=ಯೋಗವನ್ನು (ಭಗವದೈಕ್ಯವನ್ನು ಆತ್ಮಸಾಕ್ಷಾತ್ಕಾರವನ್ನು); ಅವಾಪ್ಸ್ಯಸಿ=ಹೊಂದಬಲ್ಲೆ

**ತಾ॥** ನಾನಾ ವಿಧದ ಶ್ರವಣಾದಿಗಳಿಂದ ವಿಕ್ಷಿಪ್ತವಾಗಿರುವ ನಿನ್ನ ಬುದ್ಧಿ ಯಾವಾಗ ಅಚಲವಾಗಿ ಪರಮಾತ್ಮನ ಧ್ಯಾನದಲ್ಲಿ ಸ್ಥಿರವಾಗಿ ನಿಲ್ಲುವುದೋ, ಆಗ ನೀನು ಆತ್ಮಸಾಕ್ಷಾತ್ಕಾರವನ್ನು ಹೊಂದಬಲ್ಲೆ.

**ವ್ಯಾಖ್ಯೆ:** ವೇದಗಳಲ್ಲಿ 'ನಿರ್ದಿಷ್ಟ ಫಲಕ್ಕೆ ನಿರ್ದಿಷ್ಟ ಕರ್ಮವನ್ನು ಮಾಡುವುದು'- ಎಂದು ಹೇಳಿರುವ ಅನೇಕ ವಾಕ್ಯಗಳನ್ನು ಕೇಳುವುದರಿಂದ ಬುದ್ಧಿ ಸ್ಥಿರವಾಗಿ ನಿಲ್ಲದೆ ಚಂಚಲವಾಗುವುದು. ಆ ಚಂಚಲ ಬುದ್ಧಿ, ಯಾವಾಗ ಫಲವನ್ನು ತ್ಯಜಿಸಿ, ತತ್ವವಿಚಾರದಿಂದ ಅಜ್ಞಾನ ಮಾಲಿನ್ಯವನ್ನು ದಾಟಿ ಇಹಲೋಕ ಪರಲೋಕ ಭೋಗಾದಿಗಳ ಮೇಲಿನ ಆಸಕ್ತಿ ತ್ಯಜಿಸಿ, ವಿಕ್ಷೇಪವನ್ನು ಹೊಡೆದೋಡಿಸಿ, ಪರಮಾತ್ಮಧ್ಯಾನದಲ್ಲಿಯೇ ಸ್ಥಿರವಾಗಿ ನಿಲ್ಲುವುದೋ ಆಗಲೇ ಮಾನವನು ಆತ್ಮಸಾಕ್ಷಾತ್ಕಾರವನ್ನು (ಜೀವನ್ಮುಕ್ತಿಯನ್ನು) ಹೊಂದಬಲ್ಲನೆಂದು ಇಲ್ಲಿ ಹೇಳಲಾಗಿದೆ. ಅಂತಹ ಸ್ಥಿತಿಯನ್ನೇ 'ಯೋಗ'ವೆಂದು ಕರೆಯುವರು. ಇಲ್ಲಿ ತಿಳಿಸಲ್ಪಟ್ಟ 'ಯೋಗ' ಎನ್ನುವ ಶಬ್ದಕ್ಕೆ ಐಕ್ಯ, ಜೀವಾತ್ಮಪರಮಾತ್ಮರ ಸಂಯೋಗವೆಂದು ಅರ್ಥ. ಬುದ್ಧಿಯು ಆತ್ಮದಲ್ಲಿ ವಿಲೀನವಾಗುವುದೇ ಯೋಗ. ಅನೇಕ ಬೋಧೆಗಳನ್ನು ಕೇಳಿ ಕಂಗಾಲಾದ ಬುದ್ಧಿ ಕೊನೆಯಲ್ಲಿ ವಿಚಾರಣೆಯಿಂದ ದೃಶ್ಯ ವಿಷಯಗಳಿಂದ ದೂರವಾಗಿ ಬುದ್ಧಿಗೆ ಸಾಕ್ಷಿಯಾಗಿರುವ ಆತ್ಮದಲ್ಲಿ ಯಾವಾಗ ನಿಶ್ಚಲವಾಗಿ ಧ್ಯಾನ ಮಗ್ನನಾಗುವುದೋ, ಆಗ ಉಪ್ಪು ಬೊಂಬೆ ಸಮುದ್ರದಲ್ಲಿ ವಿಲೀನವಾದಂತೆ, ಆತ್ಮದಲ್ಲಿ ವಿಲೀನವಾಗಿ ಪರಮ ಶಾಂತಿಯನ್ನು, ಆನಂದವನ್ನು ಹೊಂದಬಲ್ಲನು. ಆಗಲೇ ಯೋಗವು(ಐಕ್ಯವು) ಸಿದ್ಧಿಸಿದಂತಾಗುತ್ತದೆ ಎಂದು ಭಗವಂತನು ಇಲ್ಲಿ ಹೇಳಿರುತ್ತಾನೆ.

ಚಿತ್ತವು ಚಪಲವಾಗಿದ್ದಲ್ಲಿ ಧ್ಯಾನವಾಗಲೀ, ಯೋಗವಾಗಲೀ ಸಂಭವಿಸಲು ಸಾಧ್ಯವಿಲ್ಲವೆಂದು ಇಲ್ಲಿ ಸ್ಪಷ್ಟವಾಗಿ ನಿರೂಪಿಸಲಾಗಿದೆ. ಆದ್ದರಿಂದಲೇ 'ನಿಶ್ಚಲ' 'ಅಚಲ' ಎನ್ನುವ ಎರಡು ವಿಶೇಷಣಗಳನ್ನು ಇಲ್ಲಿ ಸೇರಿಸಲಾಗಿದೆ. ಕೈ ನಡುಗುತ್ತಿರುವಾಗ, ಇಲ್ಲ ದಾರದ ತುದಿ ಚೂಪಾಗಿರ ದಿದ್ದರೆ ಸೂಜಿಯ ರಂಧ್ರದಲ್ಲಿ ಆ ದಾರವು ಹೇಗೆ ಪ್ರವೇಶಿಸುವುದಿಲ್ಲವೋ ಹಾಗೆಯೇ ಏಕಾಗ್ರತೆ, ನಿರ್ವಿಷಯತೆ ಇಲ್ಲದ ಕಡೆ ಬುದ್ಧಿ(ಮನಸ್ಸು) ಆತ್ಮದಲ್ಲಿ ಪ್ರವೇಶಿಸದು.

ಆದ್ದರಿಂದ ಸಾಧಕನು ೧) ಶ್ರವಣದಲ್ಲಿ ಹೆಚ್ಚಿಗೆ ಕಾಲವ್ಯಯ ಮಾಡದೆ ಮನನ ನಿದಿಧ್ಯಾಸಗಳನ್ನು ಹೆಚ್ಚಾಗಿ ಅನುಸರಿಸಬೇಕು, ೨) ದೃಶ್ಯ ವಿಷಯಗಳಿಂದ, ಭೋಗಗಳಿಂದ ಚಿತ್ತವನ್ನು ದೂರಮಾಡಿ, ಅಂತರ್ಮುಖನಾಗಿ ಆತ್ಮದಲ್ಲಿ ಸ್ಥಿರಗೊಳಿಸಿಕೊಳ್ಳಬೇಕು. ಚಿತ್ತೈಕಾಗ್ರತೆ ಹೊಂದಿರಬೇಕು;

ಮಾನವನು ಆತ್ಮಸಾಕ್ಷಾತ್ಕಾರವನ್ನು ಯಾವಾಗ ಪಡೆಯಬಲ್ಲನು ಎಂದು ಕೇಳುವ ಪ್ರಶ್ನೆಗೆ ಈ ಶ್ಲೋಕವು ಉತ್ತರ ಕೊಡುವುದು. ಆತ್ಮಾನುಭೂತಿಗೆ ಕಾಲನಿಯಮವಿಲ್ಲ. ಯಾವಾಗ ಚಿತ್ತವು ವಿಷಯವಿಮುಖತೆ, ಏಕಾಗ್ರತೆ ಯನ್ನು ಗಳಿಸಬಲ್ಲದೋ, ಆಗ ಮೋಕ್ಷಸ್ಥಿತಿಯನ್ನು ಅದು ಪಡೆಯಬಲ್ಲದು. ಆದ್ದರಿಂದ ಯದಾ(ಯಾವಾಗ), ತದಾ (ಆಗ) ಎನ್ನುವ ಎರಡು ಪದಗಳ ಪ್ರಯೋಗವಿಲ್ಲಿದೆ.

ಪ್ರ : ಜೀವಬ್ರಹ್ಮೈಕ್ಯರೂಪಯೋಗವು ಮನುಷ್ಯನಿಗೆ ಯಾವಾಗ ಸಿದ್ಧಿಸುವುದು?

ಉ : ಬುದ್ಧಿ ಯಾವಾಗ ನಿಶ್ಚಲವಾಗಿ, ನಿರ್ವಿಷಯವಾಗಿ, ಆತ್ಮಧ್ಯಾನದಲ್ಲಿ ಸ್ಥಿರವಾಗುವುದೋ ಆಗಲೇ ಜೀವ ಬ್ರಹ್ಮೈಕ್ಯರೂಪಯೋಗವು ಸಿದ್ಧಿಸುವುದು.

**ಅ||** ಸ್ಥಿರಬುದ್ಧಿಯುಳ್ಳ ಜೀವನ್ಮುಕ್ತನ ಬಗ್ಗೆ ಭಗವಂತನು ಹೇಳಿದ ಆ ವಾಕ್ಯಗಳನ್ನು ಕೇಳಿ ಅಂತಹ ಸ್ಥಿತಪ್ರಜ್ಞನ ಲಕ್ಷಣಗಳಾವುವೋ ತಿಳಿಯಬೇಕೆನ್ನುವ ಅಭಿಲಾಷೆಯುಂಟಾಗಿ ಅರ್ಜುನನು ಈ ಕೆಳಗಿನ ವಿಧದಲ್ಲಿ ಪ್ರಶ್ನಿಸುತ್ತಿದ್ದಾನೆ.

**ಅರ್ಜುನ ಉವಾಚ**

**೫೪. ಸ್ಥಿತಪ್ರಜ್ಞಸ್ಯ ಕಾ ಭಾಷಾ ಸಮಾಧಿಸ್ಥಸ್ಯ ಕೇಶವ**
**ಸ್ಥಿತಧೀಃ ಕಿಂ ಪ್ರಭಾಷೇತ ಕಿಮಾಸೀತ ವ್ರಜೇತ ಕಿಮ್**

ಅರ್ಜುನ ಉವಾಚ : ಅರ್ಜುನನು ಹೇಳಿದನು-

**ಅರ್ಥ:** ಕೇಶವ=ಓ ಕೃಷ್ಣಾ! ಸಮಾಧಿಸ್ಥಸ್ಯ=ಸಮಾಧಿಯಲ್ಲಿರುವ; ಸ್ಥಿತ ಪ್ರಜ್ಞಸ್ಯ=ಸ್ಥಿರಬುದ್ಧಿಯುಳ್ಳವನ; ಭಾಷಾ=ಲಕ್ಷಣವು; ಕಾ=ಯಾವುದು?; ಸ್ಥಿತಧೀಃ= ಸ್ಥಿರಬುದ್ಧಿಯುಳ್ಳವನು, ಕಿಂ=ಹೇಗೆ; ಪ್ರಭಾಷೇತ=ಮಾತನಾಡು ವನು; ಕಿಂ=ಯಾವರೀತಿ; ಆಸೀತ=ಕುಳಿತುಕೊಳ್ಳುವನು (ಇರುವನು); ಕಿಂ=ಹೇಗೆ; ವ್ರಜೇತ=ನಡೆಯುವನು.

**ತಾ||** ಅರ್ಜುನನು ಹೀಗೆ ಕೇಳಿದನು- ಓ ಕೃಷ್ಣಾ! ಸಮಾಧಿಯಲ್ಲಿರುವ ಸ್ಥಿತಪ್ರಜ್ಞನಾದ ಜೀವನ್ಮುಕ್ತನ ಲಕ್ಷಣವೇನು? ಆತನು ಹೇಗೆ ಮಾತನಾಡುವನು? ಯಾವ ರೀತಿಯಲ್ಲಿರುವನು? ಹೇಗೆ ನಡೆಯುವನು?

**ವ್ಯಾಖ್ಯೆ:** ಸಮಾಧಿ ನಿಷ್ಠೆಯಲ್ಲಿರುವ ಯೋಗಿಯ (ಅಂದರೆ ಆತ್ಮಜ್ಞಾನಿಯಾದ ಜೀವನ್ಮುಕ್ತನ) ಲಕ್ಷಣಗಳಾವುವೋ ಈ ಸಂದರ್ಭದಲ್ಲಿ ಅರ್ಜುನನು ತಿಳಿಯ ಬಯಸಿದನು. ಕೆಲವರು ವೇಷಧಾರಿಗಳು ಹೊರಗೆ ಡಾಂಬಿಕವಾಗಿ ಸಮಾಧಿ ನಿಷ್ಠೆಯಲ್ಲಿರುವಂತೆ ನಟಿಸುವರು. ಆದ್ದರಿಂದ ನಿಜವಾದ ಸಮಾಧಿನಿಷ್ಠರನ್ನು ಕಂಡು ಹಿಡಿಯುವ ಮಾರ್ಗ ಲೋಕಕ್ಕೆ ಬೇಕಾಗಿದೆ. ದೈವವಶಾತ್ ಅರ್ಜುನನೇ ತತ್ಸಂಬಂಧವಾದ ಪ್ರಶ್ನೆಯನ್ನು ಕೇಳಿರುತ್ತಾನೆ. ಒಬ್ಬ ವ್ಯಕ್ತಿ ಸರಿಯಾದ ಆಧ್ಯಾತ್ಮಿಕ ಪಥದಲ್ಲಿರುವನೋ ಇಲ್ಲವೋ, ಆತನು ನಿಜವಾದ ಯೋಗಿಯೋ ಅಥವ ಮೋಸಗಾರನೋ ಎಂದು ಕಂಡು ಹಿಡಿಯಲು ಈ ಮೂರು ಚಿಹ್ನೆಗಳು ಸಾಕು. ೧) ಆತನ ಮಾತು ೨) ಆತನ ನಿವಾಸ ೩) ಆತನ ನಡತೆ. ಪ್ರತಿಯೊಬ್ಬನಲ್ಲಿಯೂ ಅವನ ಗುಣ ಅವನ ಕ್ರಿಯೆಗಳಲ್ಲಿ ಕಂಡುಬರುತ್ತದೆ. ಅಜ್ಞಾನಿಯ ಪ್ರತಿ ಕಾರ್ಯದಲ್ಲೂ ತಮೋಗುಣ, ರಜೋಗುಣ ಹಾಗೂ ಅಪವಿತ್ರತೆ ಎದ್ದು ಕಾಣುತ್ತಿರುತ್ತದೆ. ಬ್ರಹ್ಮಜ್ಞಾನಿಯ ನಿತ್ಯ ವ್ಯವಹಾರಗಳಲ್ಲಿ ದೈವತ್ವ, ಶಾಂತಿ, ಪವಿತ್ರತೆ ತುಂಬಿ ತುಳುಕುತ್ತಿರುತ್ತವೆ. ಆದ್ದರಿಂದ ಸ್ಥಿತ ಪ್ರಜ್ಞನಾದ ಮಹನೀಯನ ಲಕ್ಷಣಗಳು, ಸ್ವರೂಪ ಸ್ವಭಾವಗಳು, ದೈನಂದಿನ ಜೀವನ ರಹಸ್ಯಗಳನ್ನು ತಿಳಿದುಕೊಂಡಲ್ಲಿ, ಅವುಗಳನ್ನು ನೋಡಿ ಬೇರೆಯವರು ಆ ಮಾರ್ಗದಲ್ಲಿ ನಡೆದು ಮುಕ್ತಿ ಹೊಂದಬಲ್ಲರೆಂಬ ಉದ್ದೇಶದಿಂದ ಅರ್ಜುನನು ಈ ಪ್ರಶ್ನೆಯನ್ನು ಹಾಕಿರುತ್ತಾನೆ.

ಸ್ಥಿತ + {ಪ್ರಜ್ಞ / ಧೀಃ} ಎಂದರೆ ಪ್ರಜ್ಞೆ, ಬುದ್ಧಿಯನ್ನು ಆತ್ಮದಲ್ಲಿ ಸ್ಥಿರವಾಗಿರಿಸು, ವವನೆಂದು ಅರ್ಥ. ಬೇರೆಯವರು ಅಸ್ಥಿತಪ್ರಜ್ಞರು. ಅವರ ಬುದ್ಧಿ, ಆತ್ಮದಲ್ಲಿ (ದೈವದಲ್ಲಿ) ಇರದೆ ದೃಶ್ಯ (ವಿಷಯ)ಗಳಲ್ಲಿ ಇರುವುದು ಎಂದರ್ಥ. ಆದ್ದರಿಂದ ಮುಮುಕ್ಷುವು ಸ್ಥಿತಪ್ರಜ್ಞನ ಲಕ್ಷಣಗಳನ್ನು ಅರಿತು ಅವುಗಳನ್ನು ಆಚರಣೆಯಲ್ಲಿಟ್ಟು ಕೊಂಡು ಭವಬಂಧನದಿಂದ ವಿಮುಕ್ತಿಯನ್ನು ಹೊಂದಬೇಕು. ಸ್ಥಿತಪ್ರಜ್ಞನ ಲಕ್ಷಣಗಳ ಈ ಗೀತೆಯ ಭಾಗ (೫೪ನೆಯ ಶ್ಲೋಕದಿಂದ ೭೨ರ ವರೆಗೆ) ಗೀತೆಯಲ್ಲಿ ಮಹಾ ಪ್ರಾಮುಖ್ಯತೆಯನ್ನು ಹೊಂದಿದೆ. ಗಾಂಧಿ ಮಹಾತ್ಮನು ಪ್ರತಿದಿನವೂ ಈ ಭಾಗವೆಲ್ಲವನ್ನೂ ಪಾರಾಯಣ ಮಾಡುತ್ತಿದ್ದನು.

ಪ್ರ : ಸ್ಥಿತಪ್ರಜ್ಞನ ಯಾವ ಲಕ್ಷಣಗಳನ್ನು ಅರ್ಜುನನು ತಿಳಿಯಬಯಸಿದನು?

ಉ : ೧) ಆತನ ಭಾಷೆ ೨) ಆತನ ನಿವಾಸ ೩) ಆತನ ನಡವಳಿಕೆ

**ಅ||** ಅರ್ಜುನನ ಪ್ರಶ್ನೆಗೆ ಸಮಾಧಾನವೀಯುತ್ತಾ ಶ್ರೀಕೃಷ್ಣ ಭಗವಂತನು ಹದಿನೆಂಟು ಶ್ಲೋಕಗಳ ಮೂಲಕ ಸ್ಥಿತಪ್ರಜ್ಞನಾದ ಜ್ಞಾನಿಯ ಲಕ್ಷಣಗಳನ್ನು ವಿವರಿಸುತ್ತಿದ್ದಾನೆ.

**ಶ್ರೀಭಗವಾನುವಾಚ**

**೫೫. ಪ್ರಜಹಾತಿ ಯದಾ ಕಾಮಾನ್ ಸರ್ವಾನ್ ಪಾರ್ಥ ಮನೋಗತಾನ್**
**ಆತ್ಮನ್ಯೇವಾತ್ಮನಾ ತುಷ್ಟಃ ಸ್ಥಿತಪ್ರಜ್ಞಸ್ತದೋಚ್ಯತೇ**

ಶ್ರೀಭಗವಾನುವಾಚ-ಶ್ರೀ ಕೃಷ್ಣ ಭಗವಂತನು ಈ ರೀತಿ ಹೇಳಿದನು.

**ಅರ್ಥ:** ಪಾರ್ಥ=ಓ ಅರ್ಜುನಾ! ಯಥಾ=ಯಾವಾಗ; ಮನೋಗತಾನ್= ಮನಸ್ಸಿನಲ್ಲಿರುವಂತಹ; ಸರ್ವಾನ್-ಸಮಸ್ತವಾದ; ಕಾಮಾನ್=ಕೋರಿಕೆಗಳನ್ನು; ಪ್ರಜಹಾತಿ=ಪೂರ್ತಿಯಾಗಿ ಬಿಟ್ಟು ಬಿಡುವನೋ; ಆತ್ಮನ್ಯೇವ=ಆತ್ಮದಲ್ಲಿಯೇ; ಆತ್ಮನಾ=ಆತ್ಮದಿಂದ (ಆತ್ಮವನ್ನು ಅವಲಂಬಿಸಿದ ಮನಸ್ಸಿನಿಂದ); ತುಷ್ಟಃ=ಸಂತುಷ್ಟಿಯನ್ನು ಹೊಂದಿದಂಥವನಾಗಿ(ಭವತಿ-ಇರುವನೋ); ತದಾ=ಆಗ; ಸ್ಥಿತಪ್ರಜ್ಞಃ(ಇತಿ)=ಸ್ಥಿತಪ್ರಜ್ಞನೆಂದು (ನಿಶ್ಚಲ ಬುದ್ಧಿಯುಳ್ಳವ ನೆಂದು); ಉಚ್ಯತೆ=ಹೇಳಲ್ಪಡುತ್ತಾನೆ.

**ತಾ||** ಶ್ರೀ ಭಗವಂತನು ಈ ರೀತಿ ಹೇಳಿದನು- ಓ ಅರ್ಜುನಾ! ಯಾವಾಗ ಮನುಷ್ಯನು ತನ್ನ ಮನಸ್ಸಿನಿಂದ ಕೋರಿಕೆ (ಕಾಮನೆ)ಗಳನ್ನು ಸಂಪೂರ್ಣವಾಗಿ ತ್ಯಜಿಸುವನೋ, ಮತ್ತೆ ಆತ್ಮದಲ್ಲಿಯೇ, ಆತ್ಮದಿಂದ (ನಿರ್ಮಲಚಿತ್ತದಿಂದ) ನಿರಂತರ ಸಂತೃಪ್ತಿಯನ್ನು ಹೊಂದುತ್ತಿರುವನೋ ಆತನನ್ನು ಸ್ಥಿತಪ್ರಜ್ಞನೆಂದು ಕರೆಯುವುದು.

**ವ್ಯಾಖ್ಯೆ:** ಅನೇಕರು ತಮ್ಮ ಗುರುಗಳ ಬಳಿಗೆ ಹೋಗಿ, 'ಅಯ್ಯೋ! ನಮಗೆ ಮೋಕ್ಷವು ಯಾವಾಗ ಲಭಿಸುವುದು? ಈ ಸಂಸಾರ ಬಾಧೆ ಯಾವಾಗ ನಿವೃತ್ತಿಯಾಗುವುದು?' ಎಂದು ಪ್ರಶ್ನಿಸುವರು. ಆಗ ಗುರುಗಳು ಈ ಶ್ಲೋಕದಲ್ಲಿ ಭಗವಂತನು ಕೊಟ್ಟ ಸಮಾಧಾನವನ್ನೇ ಕೊಡುವರು. ಜನರ ಮೋಕ್ಷಪ್ರಾಪ್ತಿಗೆ ಬೇಕಾದ ಮುಹೂರ್ತವು ಅವರವರ ಕೈಯಲ್ಲಿಯೇ ಇದೆ. 'ಯದಾ=ಯಾವಾಗ ನೀನು ಸಾಧನೆ ಮಾಡುವೆಯೋ, ತದಾ=ಆಗ ನೀನು ಮೋಕ್ಷವನ್ನು ಹೊಂದುವೆ' ಎಂದು ಮುಕ್ತಕಂಠದಿಂದ ಇಲ್ಲಿ ಹೇಳಲಾಗಿದೆ. ಈ ಶ್ಲೋಕದಲ್ಲಿ ತಿಳಿಸಲ್ಪಟ್ಟ 'ಯೋಗ್ಯತೆ' ಯಾವ ಕ್ಷಣದಲ್ಲಿ ಜೀವಿಗೆ ಲಭಿಸುವುದೋ ಆ ಕ್ಷಣದಲ್ಲಿಯೇ ಆತನಿಗೆ ಮುಕ್ತಿ ಕರತಲಾಮಲಕವಾಗುವುದು. ಆದ್ದರಿಂದ ತನಗಿನ್ನೂ ಶಾಂತಿ ಉಂಟಾಗಲಿಲ್ಲವೆಂದು ದುಃಖಶಮನವಾಗಲಿಲ್ಲವೆಂದು ಹಿರಿಯರನ್ನು, ಶಾಸ್ತ್ರಗಳನ್ನು ಮೊರೆಹೊಕ್ಕರೆ ಲಾಭವಿಲ್ಲ. ಅದಕ್ಕೆ ಬದಲಾಗಿ ತಾನು ಮಾಡಬೇಕಾದ ಸಾಧನೆಯನ್ನು ಸಕ್ರಮವಾಗಿ ಮಾಡಬೇಕು.

ಆ ಸಾಧನೆಯೆಂತಹುದೆಂದರೆ- ಪ್ರಜಾಹಾತಿ ಯದಾ ಕಾಮಾನ್ ಸರ್ವಾನ್- ೧) ಮೊಟ್ಟ ಮೊದಲು ತನ್ನಲ್ಲಿರುವ ಕೋರಿಕೆಗಳೆಲ್ಲವನ್ನೂ ಸಂಪೂರ್ಣವಾಗಿ ಬಿಟ್ಟುಬಿಡಬೇಕು. ಇಲ್ಲಿ 'ಜಹಾತಿ' (ಬಿಡುತ್ತಿದ್ದಾನೆ) ಎಂದು ಹೇಳದೆ 'ಪ್ರಜಹಾತಿ'- ಎಂದು ಹೇಳಿರುವುದರಿಂದ ಕೋರಿಕೆಗಳನ್ನು

ನಿಶ್ಶೇಷವಾಗಿ ಬಿಡಬೇಕೆಂದೂ, 'ಸರ್ವಾನ್'- ಎಂದು ಹೇಳಿರುವುದರಿಂದ ಸಮಸ್ತ ಕೋರಿಕೆಗಳನ್ನು ತ್ಯಜಿಸಬೇಕೆನ್ನುವುದು ಸ್ಪಷ್ಟವಾಗುತ್ತಿದೆ. ವಾಸನೆ, ಅಗ್ನಿ, ಸಾಲ, ರೋಗ, ಶತ್ರು, ರಾಗ, ವೈರ, ವಿಷ ಮುಂತಾದುವುಗಳಲ್ಲಿ ಒಂದು ಸ್ವಲ್ಪ ಶೇಷ ಉಳಿದಿದ್ದರೂ ಮಹಾ ಉಪದ್ರವಗಳು ಉಂಟಾಗುತ್ತವಾದ್ದರಿಂದ ಅವುಗಳನ್ನು ಸಂಪೂರ್ಣವಾಗಿ ಇಲ್ಲದಂತೆ ಮಾಡಿಕೊಳ್ಳಬೇಕೆಂದು ಶಾಸ್ತ್ರಗಳು ಒತ್ತಿ ಹೇಳುತ್ತಿವೆ.* ಅಸಂಪೂರ್ಣವಾಗಿ ಎಲ್ಲಾ ಬಯಕೆಗಳನ್ನು ತ್ಯಜಿಸಿದರೂ ಅಥವಾ ಸಂಪೂರ್ಣವಾಗಿ ಕೆಲವು ಬಯಕೆಗಳನ್ನು ಇರಲು ಬಿಟ್ಟರೂ ಫಲವು ಉಂಟಾಗುವುದಿಲ್ಲವೆಂದೂ, ಸಂಪೂರ್ಣವಾಗಿ ಎಲ್ಲವನ್ನೂ ತ್ಯಜಿಸಿದಾಗ ಮಾತ್ರ ಮೋಕ್ಷಫಲವು ಸಿದ್ಧಿಸುವುದೆಂದು ತಿಳಿಸಲು ಭಗವಂತನು ಈ ಶ್ಲೋಕದಲ್ಲಿ 'ಪ್ರಜಹಾತಿ' 'ಸರ್ವಾನ್' ಎನ್ನುವ ಎರಡು ಪದಗಳನ್ನು ಪ್ರಯೋಗಿಸಿದ್ದಾನೆ.

ಬಯಕೆಗಳು ಮನಸ್ಸಿನ ಮೂಲೆ ಮೂಲೆಗಳಲ್ಲಿ ಅಡಗಿರುವುವು. ವಾಸನಾರೂಪದಲ್ಲಿ ಅವು ಒಳಗೆ ಬೇರೂರಿರುತ್ತವೆ. ಆದ್ದರಿಂದಲೇ 'ಮನೋಗತಾನ್' ಅಂದರೆ ದೋಷವಾಗಲಿ, ಬಂಧನವಾಗಲಿ ಹೊರಗೆ ಎಲ್ಲೋ ಇಲ್ಲದೆ ಮನಸ್ಸಿನಲ್ಲಿಯೇ ಇವೆ. ಆದ್ದರಿಂದ ಮನಸ್ಸೆನ್ನುವ ಅಗಾಧವಾದ ಅಂಧಕಾರ ಗುಹೆಯಲ್ಲಿರುವ ಕೋರಿಕೆಗಳನ್ನು ವಿವೇಕವೆನ್ನುವ ದೀಪದ ಸಹಾಯದಿಂದ, ಚೆನ್ನಾಗಿ ಹುಡುಕಬೇಕು. ಅಕ್ಕಿಯಲ್ಲಿ ಕಲ್ಲಾರಿಸಿದಂತೆ, ಪೈರಿನಲ್ಲಿ ಕಳೆ ತೆಗೆದಂತೆ, ಉದ್ಯಾನವನದಲ್ಲಿ ಮುಳ್ಳುಗಿಡಗಳನ್ನು ಕತ್ತರಿಸಿದಂತೆ, ತರಕಾರಿ ಸಸಿಯ ಹೂಗಳನ್ನು ಚಿವುಟಿದಂತೆ ಮನಸಿನಲ್ಲಿಯ ಕಾಮನೆಗಳನ್ನು ಸಂಪೂರ್ಣವಾಗಿ ಆರಿಸಿ ತೆಗೆದು ಬಿಸಾಡಬೇಕೆಂದು ಭಗವಂತನು ಇಲ್ಲಿ ತಿಳಿಸುತ್ತಿದ್ದಾನೆ. ಈ ಕೋರಿಕೆಗಳು ಅನೇಕ ಜನ್ಮಗಳಿಂದ ಜೀವಿಯ ಬೆನ್ನುಹತ್ತಿ, ವಾಸನಾರೂಪ ಹೊಂದಿ, ದೇಹದಲ್ಲಿ ಚೆನ್ನಾಗಿ ಮನೆಮಾಡಿಕೊಂಡು ಬೇರೂರಿ, ಜನನ ಮರಣಗಳನ್ನುಂಟುಮಾಡುತ್ತಿವೆ. ಆದ್ದರಿಂದ ಮೂಲ ಸಹಿತ ಅವುಗಳೆಲ್ಲವನ್ನು ತ್ಯಜಿಸಬೇಕು. ಏನು ಸ್ವಲ್ಪ ಶೇಷವಾಗಿ ಉಳಿದರೂ ಪ್ರಮಾದವೇ. ಹೇಗೆಂದರೆ ಕೆಲವರು ಎಲ್ಲಾ ಕೋರಿಕೆಗಳನ್ನು ಬಿಟ್ಟು ಕೊನೆಗೆ ಯಾವುದೋ ಒಂದರಲ್ಲಿ ಚಿಕ್ಕ ಮೋಹವಿಟ್ಟುಕೊಂಡು ಬಂಧನದ ಚಕ್ರದಲ್ಲಿ ಬಿದ್ದು ಅಧೋಗತಿ ಹೊಂದುತ್ತಿದ್ದಾರೆ. ಅಗ್ನಿಯೆಲ್ಲವೂ ತಣ್ಣಗಾಗಿ ಒಂದು ಕಿಡಿ ಶೇಷವಾಗಿ ಉಳಿದಿದ್ದರೂ ಕಾಲಕ್ರಮದಲ್ಲಿ ಅದು ಮಹಾದಾರುಣವಾಗಿ ಪರಿಣಮಿಸಬಹುದಲ್ಲಾ! ಆದ್ದರಿಂದಲೇ ಭಗವಂತನು 'ಸಮಸ್ತ ಕಾಮನೆಗಳ ಸಂಪೂರ್ಣತ್ಯಾಗವನ್ನೇ ಇಲ್ಲಿ ಉದ್ಘೋಷಿಸಿರುವನು. ಈ ತ್ಯಾಗದಲ್ಲಿ ಆತ್ಮವಿಚಾರಣೆ, ವಿವೇಕ ವೈರಾಗ್ಯಾದಿಗಳು ಸಹಾಯಗೊಳ್ಳುತ್ತವೆ.

೨) ಇನ್ನು ಎರಡನೆಯ ಸಾಧನೆ- 'ಆತ್ಮನ್ಯೇವಾತ್ಮನಾ ತುಷ್ಟಃ'- ತನ್ನ ಆತ್ಮದಲ್ಲಿಯೇ ತಾನು ಸಂತುಷ್ಟನಾಗಿರುವುದು. ತೃಪ್ತಿ, ಆನಂದಗಳು ಎಲ್ಲಿ ಲಭಿಸುವುವು? ಎನ್ನುವ ಪ್ರಶ್ನೆಗೆ ಇಲ್ಲಿ ಸಮಾಧಾನವನ್ನೀಯಲಾಗಿದೆ. ಆನಂದ ಹೊರಗಿಲ್ಲ, ದೃಶ್ಯದಲ್ಲಿಲ್ಲ, ಶಬ್ದ ಸ್ಪರ್ಶಾದಿ ವಿಷಯಗಳಲ್ಲಿಲ್ಲ, ಭೂಮಿಯ ಅಂತರಾಳಗಳನ್ನೆಲ್ಲಾ ಶೋಧಿಸಿದರೂ, ಚತುರ್ದಶ ದಿಕ್ಕುಗಳ ಅಂಗುಲ ಅಂಗುಲವನ್ನು ದೀಪದಿಂದ ಹುಡುಕಿದರೂ, ತೃಪ್ತಿ, ಆನಂದಗಳು ಸಿಗುವುದಿಲ್ಲ. ಆನಂದವು ಹೊರಗೆ ಸಿಗುವ ವಿಷಯವಲ್ಲ. ಅದು ತನ್ನ ಆತ್ಮದಲ್ಲಿಯೇ (ತನ್ನಲ್ಲಿಯೇ) ಇರುವುದು. ಮನಸ್ಸಿನಲ್ಲಿಯ ಇಚ್ಛಾದಿ ಮಾಲಿನ್ಯಗಳು ಯಾವಾಗ ತನ್ನನ್ನು ಬಿಡುವುವೋ, ಆಗ ಸ್ವತಃಸಿದ್ಧವಾಗಿ ಬೆಳಗುತ್ತಿರುವ ಆತ್ಮಾನಂದವು ಜೀವಿಗೆ ದ್ಯೋತಕವಾಗುವುದು. ಇದು ವೇದಾಂತದ ರಹಸ್ಯ. ಬ್ರಹ್ಮಾನಂದವು ಹೊಸದಾಗಿ ಎಲ್ಲಿಯೋ, ಯಾರೋ ಮಾಡಿಕೊಂಡು ತರುವ ಪದಾರ್ಥವಲ್ಲ. ಆ ಆನಂದವು ಸ್ವತಃ ತನ್ನಲ್ಲಿಯೇ ಇದೆ. ಆದರೆ ಅಜ್ಞಾನದಿಂದ ಮರೆಯಾಗಿದೆ. ವಿವೇಕ, ವೈರಾಗ್ಯಾದಿಗಳಿಂದ ಮನಸ್ಸಿಗೆ ಹಿಡಿದಿರುವ ಆ ಕಾಮಾದಿಗಳೆಂಬ ಬೂಜನ್ನು ಸ್ವಚ್ಛಮಾಡಿದರೆ ಒಳಗಿರುವ ಸಹಜ ಆತ್ಮಾನಂದವು ಹೊರ ಹೊಮ್ಮುತ್ತದೆ. ಪಾಚಿಯನ್ನು ತೆಗೆದು ಹಾಕಿದ ಕೂಡಲೇ ಶುದ್ಧವಾದ ಜಲವು ಕಂಡುಬಂದಂತೆ, ದೃಶ್ಯ ದೋಷಗಳು, ವಾಸನೆಗಳು, ಕೋರಿಕೆಗಳು ಸಂಪೂರ್ಣವಾಗಿ ಕಳಚಿ ಹೋದ ನಂತರ ದೃಕ್ಸ್ವರೂಪವಾದ ಸ್ವಯಂ ಪ್ರಕಾಶ ಪರಮಾತ್ಮ ಹೊರಬೀಳುವನು. ಆದ್ದರಿಂದಲೇ ಈ ಶ್ಲೋಕದ ಪ್ರಥಮಪಾದದಲ್ಲಿ ಸರ್ವಕಾಮನಾರಾಹಿತ್ಯವೆಂಬ ಸಾಧನೆಯನ್ನು ತಿಳಿಸಿ, ಎರಡನೆಯ ಪಾದದಲ್ಲಿ 'ಆತ್ಮಸಂತುಷ್ಟಿ, ಆತ್ಮಾನಂದಗಳು' ಎನ್ನುವ ಸಾಧ್ಯಗಳನ್ನು ಭಗವಂತನು ವಚಿಸಿರುವನು. ಸಾಧನೆ ಮಾಡಿದಲ್ಲಿ ಸಾಧ್ಯವು ಲಭಿಸುವುದೆನ್ನುವುದೇ ಇದರ ಭಾವ.

ಈ ಪ್ರಕಾರವಾಗಿ ಕೋರಿಕೆಗಳೆಲ್ಲವನ್ನೂ ಪೂರ್ಣವಾಗಿ ತ್ಯಜಿಸಿ, ನಿರಂತರವೂ ಆತ್ಮದಲ್ಲಿಯೇ ಸಂತುಷ್ಟಿಯನ್ನು ಹೊಂದಿರುವವನು ಸ್ಥಿತ ಪ್ರಜ್ಞನು, ಜೀವನ್ಮುಕ್ತನು ಅಥವ ಜ್ಞಾನಿ. ಈ ಚಿಹ್ನೆಗಳಿಂದ ಮುಮುಕ್ಷುಗಳು ಪೂರ್ಣ ಸ್ಥಿತಿಯನ್ನು ಹೊಂದಿರುವರೊ ಇಲ್ಲವೋ ತಿಳಿದುಕೊಳ್ಳಬಹುದು. ಜೀವನ್ಮುಕ್ತನ ಮುಖದಲ್ಲಿ ಸದಾ ತುಷ್ಟಿ, ಆನಂದಗಳು ತಾಂಡವವಾಡುತ್ತಿರುತ್ತವೆ. ಕೋರಿಕೆಗಳನ್ನು ಹೊಂದಿರುವನ ಮುಖದಲ್ಲಿ ಭಯ ಹಾಗು ದುಃಖಗಳು ಎದ್ದು ಕಾಣುತ್ತಿರುತ್ತವೆ. ಸ್ಥಿತಪ್ರಜ್ಞನಿಗೆ ಇನ್ನು ಪಡೆಯಬೇಕಾದ ಪದಾರ್ಥವೇನೂ ಇರುವುದಿಲ್ಲ ವಾದ್ದರಿಂದ ತನ್ನ ಹೃದಯದಲ್ಲಿರುವ ಬ್ರಹ್ಮಾನಂದಾಮೃತ ಸಾಗರದಲ್ಲಿ ತೇಲುತ್ತಿರುತ್ತಾನೆ. ಇದೇ ಆತನ ಚಿಹ್ನೆ.

ಪ್ರ : ಸ್ಥಿತಪ್ರಜ್ಞನ ಲಕ್ಷಣಗಳೇನು?

ಉ : ೧) ಮನಸ್ಸಿನಲ್ಲಿಯ ಕೋರಿಕೆಗಳೆಲ್ಲವನ್ನೂ ಸಂಪೂರ್ಣವಾಗಿ ತ್ಯಜಿಸುವುದು. ೨) ನಿರಂತರವೂ ಆತ್ಮದಲ್ಲಿಯೇ ಸಂತುಷ್ಟಿ ಹೊಂದಿರುವುದು.

ಪ್ರ : ಪ್ರಪಂಚದಲ್ಲಿ ಪೂರ್ಣಾನಂದ ಎಲ್ಲಿ ಲಭಿಸುವುದು?

ಉ : ತನ್ನ ಆತ್ಮದಲ್ಲಿಯೇ.

**೫೬. ದುಃಖೇಷ್ವನುದ್ವಿಗ್ನಮನಾಃ ಸುಖೇಷು ವಿಗತಸ್ಪೃಹಃ**
**ವೀತರಾಗಭಯಕ್ರೋಧಃ ಸ್ಥಿತಧೀರ್ಮುನಿರುಚ್ಯತೇ**

**ಅರ್ಥ:** ದುಃಖೇಷು=ದುಃಖಗಳಲ್ಲಿ; ಅನುದ್ವಿಗ್ನಮನಾಃ=ಕ್ಷೋಭೆಯಿಲ್ಲದ ಮನಸ್ಸುಳ್ಳವನಾಗಿ; ಸುಖೇಷು=ಸುಖಗಳಲ್ಲಿ; ವಿಗತಸ್ಪೃಹಃ=ಆಸಕ್ತಿಯಿಲ್ಲದವನಾಗಿ, ವೀತರಾಗಭಯಕ್ರೋಧಃ=ಅನುರಾಗ, ಭಯ, ಕೋಪಗಳನ್ನು ತ್ಯಜಿಸಿದ; ಮುನಿಃ=(ಆತ್ಮ) ಮನನ ಶೀಲನು; ಸ್ಥಿತಧೀಃ= (ಇತಿ) ಸ್ಥಿತ ಪ್ರಜ್ಞನೆಂದು; ಉಚ್ಯತೇ=ಹೇಳಲ್ಪಡುತ್ತಿದ್ದಾನೆ.

**ತಾ||** ದುಃಖಗಳಲ್ಲಿ ಕ್ಷೋಭೆಯಿಲ್ಲದ ಮನಸ್ಸುಳ್ಳವನಾಗಿ, ಸುಖಗಳಲ್ಲಿ ಆಸಕ್ತಿಯಿಲ್ಲದವನಾಗಿ, ಅನುರಾಗ, ಭಯ, ಕೋಪಗಳನ್ನು ತ್ಯಜಿಸಿದ (ಆತ್ಮ) ಮನನ ಶೀಲನನ್ನು ಸ್ಥಿತಪ್ರಜ್ಞನೆಂದು ಕರೆಯುವರು.

---

* ವಾಸನಾಯಾಸ್ತಥಾ ವಹ್ನೇಃ ಋಣವ್ಯಾಧಿದ್ವಿಷಾಮಪಿ ಸ್ನೇಹವೈರ ವಿಷಾಣಾಂ ಚ ಶೇಷಃ ಸ್ವಲ್ಪೋಽಪಿ ಬಾಧತೇ

**ವ್ಯಾಖ್ಯೆ:** ಸ್ಥಿತಪ್ರಜ್ಞನ ಇನ್ನೂ ಕೆಲವು ಲಕ್ಷಣಗಳನ್ನು ಇಲ್ಲಿ ವಿಮರ್ಶಿಸಲಾಗಿದೆ. ಪ್ರಜ್ಞೆ ಇಲ್ಲವೆ ಬುದ್ಧಿಯನ್ನು ಆತ್ಮದಲ್ಲಿ ಸ್ಥಿರಪಡಿಸಿಕೊಂಡಿರುವವನು ಸ್ಥಿತಪ್ರಜ್ಞನೆಂದು ಕರೆಯಲ್ಪಡುವನು. ಸಾಮಾನ್ಯರ ಬುದ್ಧಿ ಅಥವ ಪ್ರಜ್ಞೆ ಪ್ರಪಂಚದ ದೇಹಾದಿ ದೃಶ್ಯಗಳಿಗೆ ಅಂಟಿಕೊಂಡು ದೈವದಲ್ಲಿ ನಿಂತಿರುವುದಿಲ್ಲ ವಾದ್ದರಿಂದ ಅವರು ಸ್ಥಿತಪ್ರಜ್ಞರಲ್ಲ. ಇಲ್ಲಿ ಸ್ಥಿತಪ್ರಜ್ಞನ ಮೂರು ಲಕ್ಷಣಗಳನ್ನು ಕೊಡಲಾಗಿದೆ.

ಅವು ಯಾವುವೆಂದರೆ-

೧) ದುಃಖಗಳಲ್ಲಿ ಆತನ ಮನಸ್ಸು ಯಾವ ವಿಧವಾದ ಉದ್ವೇಗಕ್ಕೂ ಒಳಗಾಗುವುದಿಲ್ಲ. ಮೇಘದ ಮೇಲಿರುವ ಸೂರ್ಯನು, ಮಳೆ, ಮಿಂಚು, ಸಿಡಿಲುಗಳ ಉಪದ್ರವಗಳಿಗೆ ಅತೀತನಾಗಿ ಇರುವಂತೆ, ಪ್ರಾಪಂಚಿಕ ದೃಷ್ಟಿಯಿರುವವನಿಗೆ ಉಂಟಾಗುವ ಸುಖದುಃಖಗಳು ಆತ್ಮಜ್ಞನಿಗೆ ಇರುವುದಿಲ್ಲ. ಆತನು ತನ್ನ ಮನಸ್ಸಿಗೆ ಸಾಕ್ಷಿಯಾಗಿರುವನು. ಸಾಕ್ಷಿಯನ್ನು ಸಾಕ್ಷ್ಯಧರ್ಮಗಳು ಯಾವಾಗಲೂ ಬಾಧಿಸುವುದಿಲ್ಲ. ಆದ್ದರಿಂದ ದುಃಖಾದಿಗಳಲ್ಲಿ ಆತನು ಯಾವ ಕ್ಷೋಭೆಗೂ ಒಳಗಾಗದೆ ಇರುವನು. ಪರ್ವತವನ್ನು ಬಾಣಗಳು ಭೇದಿಸಲಾರದಂತೆ, ಸಮುದ್ರದ ತರಂಗಗಳು ತೀರದಲ್ಲಿರುವ ಪರ್ವತವನ್ನು ಕದಲಿಸಲು ಅಸಾಧ್ಯವಾದಂತೆ, ಕಮಲದ ಬಳ್ಳಿಯು ಮದಗಜವನ್ನು ಬಂಧಿಸಲಸಾಧ್ಯವಾದಂತೆ, ದುಃಖಾದಿಗಳು ಜ್ಞಾನಿಗೆ ವೇದನೆ ಉಂಟು ಮಾಡಲಾರವೆಂದು ಶ್ರೀವಸಿಷ್ಠ ಮುನಿಗಳು ಪೂರ್ವದಲ್ಲಿ ಶ್ರೀರಾಮಚಂದ್ರನಿಗೆ ಬೋಧಿಸಿದರು.

೨) ಹಾಗೆಯೇ ಸುಖಗಳು ಪ್ರಾಪ್ತವಾದಾಗ ಉಬ್ಬಿಹೋಗುವವನು ಜ್ಞಾನಿಯಲ್ಲ. ದುಃಖಗಳಂತೆ ಸುಖವೂ ಸಹ ಒಂದು ಮನೋವಿಕಾರವೇ ಆಗಿದೆ. ಆದ್ದರಿಂದ ಮನಸ್ಸನ್ನು ಅತಿಕ್ರಮಿಸಿ ಆತ್ಮವನ್ನು ಸೇರಿದ ಸ್ಥಿತಪ್ರಜ್ಞನನ್ನು ಆ ಮನೋವಿಕಾರವೇನೂ ಮಾಡಲಾರದು. ಮತ್ತೆ ಅನಂತ ಬ್ರಹ್ಮಾನಂದ ಸಾಗರವೇ ತನ್ನ ರೂಪವೆಂದು ತಿಳಿದ ಜ್ಞಾನಿ, ಅದರಲ್ಲಿಯ ಒಂದು ಭಾಗವಾಗಿ, ಪ್ರತಿಬಿಂಬಿತರೂಪವಾದ ಪ್ರಾಪಂಚಿಕ ಸುಖವನ್ನು ಎಂದಾದರೂ ಇಚ್ಛಿಸುವನೇ? ಎಚ್ಚೆತ್ತವನು ಸ್ವಪ್ನರಾಜ್ಯಸುಖವನ್ನು ಕೋರುವನೇ? ಒಂದು ವೇಳೆ ಹಾಗೆ ಕೋರಿದರೆ ಆತ ಇನ್ನೂ ಎಚ್ಚರವಾಗಿಲ್ಲವೆಂದೇ ಅರ್ಥ. ಜನಕನ ಆಸ್ಥಾನದಲ್ಲಿದ್ದ ಶುಕ ಮುನೀಂದ್ರನು ಮಹಾ ವೈಭವಗಳನ್ನು ಆಶಿಸದೆ, ಮಹಾಬಾಧೆಗಳಲ್ಲಿಯೂ ವಿಚಲಿತನಾಗದೆ ಇದ್ದದ್ದರಿಂದ ಆತನನ್ನು ಸ್ಥಿತಪ್ರಜ್ಞವೆಂದು ಕರೆದರು. ಆ ರೀತಿ ಯಾರಾದರೂ ಸರಿಯೇ, ಈ ಲಕ್ಷಣಗಳಿದ್ದಲ್ಲಿ ಅವರು ಸ್ಥಿತಪ್ರಜ್ಞರೆಂದೇ ಕರೆಯಿಸಿ ಕೊಳ್ಳುವರು.

೩) ಸ್ಥಿತ ಪ್ರಜ್ಞನಾದವನಿಗೆ ರಾಗ, ಭಯ, ಕ್ರೋಧಗಳಿರುವುದಿಲ್ಲ. ಜ್ಞಾನಿಯ ದೃಷ್ಟಿಯಲ್ಲಿ ಸಮಸ್ತವು ಆತ್ಮಸ್ವರೂಪವಾಗಿಯೇ ಗೋಚರಿಸುವುದು. ಆದ್ದರಿಂದ **'ತತ್ರಕೋಮೋಹಃ ಕಃ ಶೋಕ ಏಕತ್ವಮನುಪಶ್ಯತಃ'**- ಎನ್ನುವ ಈಶಾವಾಸ್ಯೋಪನಿಷತ್ ವಾಕ್ಯದ ಪ್ರಕಾರ ಆತನಿಗೆ ಶೋಕಮೋಹಾದಿ ಗಳಾಗಲಿ, ರಾಗಭಯಕ್ರೋಧಾದಿಗಳಾಗಲಿ ಉಂಟಾಗಲು ಹೇಗೆ ಸಾಧ್ಯ? ಎಲ್ಲವೂ ತಾನೇ ಆಗಿರುವಾಗ ಇನ್ನು ತನ್ನಮೇಲೆ ತನಗೆ ರಾಗ ಭಯ, ಕ್ರೋಧವೆಲ್ಲಿಂದ ಬರುವುದು? ಆದ್ದರಿಂದ ಆತ್ಮಾನುಭವ ಹೊಂದಿರುವ ಸ್ಥಿತಪ್ರಜ್ಞನಿಗೆ ಯಾವ ವಿಕಾರಗಳೂ ಇರುವುದಿಲ್ಲ.

'ಮುನಿ'- ಎಂದರೆ ಮನನಶೀಲನು. ಮುನಿಗಳು ಆಧ್ಯಾತ್ಮಿಕ ಸತ್ಯಗಳನ್ನು ಚೆನ್ನಾಗಿ ಮನನ ಮಾಡಿದ ಮಹನೀಯರು. ಆದ್ದರಿಂದ ಅವರಿಗೆ ಮುನಿಗಳು ಎನ್ನುವ ಹೆಸರು ಬಂದಿದೆ. ಅವರ ಹಾಗೆ ಮನನನಿದಿಧ್ಯಾಸಗಳನ್ನು ಅವಲಂಬಿಸದಿದ್ದರೆ ಸತ್ಯಗಳು ಯಾರಿಗೂ ಅನುಭೂತಿಯಾಗುವುದಿಲ್ಲ. ಮನನಶೀಲರೇ ಸ್ಥಿತಪ್ರಜ್ಞತೆಯನ್ನು, ಜೀವನ್ಮುಕ್ತಿಯನ್ನು ಹೊಂದಬಲ್ಲರು. ಈ ವಿಷಯವನ್ನು ತಿಳಿಸಲು 'ಮುನಿ' ಎನ್ನುವ ಪದ ಬಹುಶಃ ಇಲ್ಲಿ ಉಪಯೋಗಿಸಲ್ಪಟ್ಟಿದೆ. ಆಧ್ಯಾತ್ಮಿಕ ಕ್ಷೇತ್ರದಲ್ಲಿ ಸೋಮಾರಿಗಳಿಗೆ ಸ್ಥಾನವಿಲ್ಲ. ಸೋಮಾರಿಗಳು 'ಸೋಽಹಂ' ಪರ್ವತವನ್ನು ಯಾವ ಕಾಲದಲ್ಲಿಯೂ ಅಧಿರೋಹಿಸಲಾರರು. ಮನನಶೀಲರು, ಸಾಧನಪರರು ಮಾತ್ರವೇ ಜೀವನ್ಮುಕ್ತಿ ಪದವಿಯನ್ನು ಹೊಂದಬಲ್ಲರು.

ಪ್ರ : ಸ್ಥಿತಪ್ರಜ್ಞನ ಇನ್ನೂ ಕೆಲವು ಲಕ್ಷಣಗಳನ್ನು ತಿಳಿಸುವುದು?

ಉ : ೧) ದುಃಖಗಳಲ್ಲಿ ಕ್ಷೋಭೆಹೊಂದದಿರುವುದು. ೨) ಸುಖಗಳಲ್ಲಿ ಆಸಕ್ತಿಯಿಲ್ಲದೇ ಇರುವುದು ೩) ರಾಗ, ಭಯ, ಕ್ರೋಧಗಳಿಲ್ಲದೆ ಇರುವುದು.

**೫೭. ಯಃ ಸರ್ವತ್ರಾನಭಿಸ್ನೇಹ ಸ್ತತ್ತತ್ಪ್ರಾಪ್ಯ ಶುಭಾಶುಭಮ್**
**ನಾಭಿನಂದತಿ ನ ದ್ವೇಷ್ಟಿ ತಸ್ಯ ಪ್ರಜ್ಞಾ ಪ್ರತಿಷ್ಠಿತಾ**

**ಅರ್ಥ:** ಯಂ=ಯಾವನು; ಸರ್ವತ್ರ=ಸಮಸ್ತ ವಿಷಯಗಳಲ್ಲಿ; ಅನಭಿಸ್ನೇಹಃ= ಅಭಿಮಾನವಿಲ್ಲದವನಾಗಿ; ತತ್ತತ್=ಆಯಾ; ಶುಭಾಶುಭಮ್=ಪ್ರಿಯಾ ಪ್ರಿಯ ವಿಷಯಗಳನ್ನು; ಪ್ರಾಪ್ಯ=(ಒಂದು ವೇಳೆ) ಹೊಂದಿದ್ದರೂ; ನಾಭಿನಂದತಿ=ಸಂತೋಷಿಸುವುದಿಲ್ಲವೋ; ನ ದ್ವೇಷ್ಟಿ=ದ್ವೇಷಿಸುವುದಿಲ್ಲವೋ; ತಸ್ಯ=ಅಂತಹವನ, ಪ್ರಜ್ಞಾ=ಜ್ಞಾನವು; ಪ್ರತಿಷ್ಠಿತಾ=ಸ್ಥಿರವಾಗಿರುವುದು. (ಅವನು ಸ್ಥಿತಪ್ರಜ್ಞನೆಂದು ಭಾವ).

**ತಾ॥** ಯಾವನು ಸರ್ವವಿಷಯಗಳಲ್ಲಿಯೂ (ದೇಹ, ಬಂಧು ಭೋಗಾದಿ ಗಳಲ್ಲಿ) ಅಭಿಮಾನವಿಲ್ಲದೇ ಇರುವನೋ, ಪ್ರಿಯಾಪ್ರಿಯಗಳು ಸಂಭವಿಸಿದರೂ ಸಂತೋಷವಾಗಲಿ, ದ್ವೇಷವಾಗಲಿ ಹೊಂದದೆ ಇರುವನೋ ಅಂತಹವನ ಜ್ಞಾನ ಸ್ಥಿರವಾದದ್ದೆಂದು ಹೇಳಲ್ಪಡುತ್ತದೆ (ಅವನೇ ಸ್ಥಿತಪ್ರಜ್ಞನು).

**ವ್ಯಾಖ್ಯೆ:** 'ಯಃ' (ಯಾರು)- ಗೀತೆಯಲ್ಲಿ ಅನೇಕ ಕಡೆ ಈ ಶಬ್ದ ಪ್ರಯೋಗ ಮಾಡಲ್ಪಟ್ಟಿದೆ. 'ಯಾರು ಇಂತಹ ಯೋಗ್ಯನೋ ಆತನು ಮುಕ್ತಿಯನ್ನು' ಹೊಂದುವನು ಎಂದು ಹೇಳಲ್ಪಟ್ಟಿದೆಯೇ ಹೊರತು, ಜಾತಿ, ಮತ, ವರ್ಣ, ಲಿಂಗ, ವಯೋವಿಚಕ್ಷಣವನ್ನೇನೂ ಇಲ್ಲಿ ಎತ್ತಿ ತೋರಿಸಿಲ್ಲ. ಇದು ಗೀತೆಯ ವಿಶಾಲ ದೃಷ್ಟಿಗೆ ಒಂದು ಉದಾಹರಣೆ.

*"ಸರ್ವತ್ರಾನಭಿಸ್ನೇಹಃ"*- ಯಾವ ವಿಷಯದಲ್ಲೂ ಅಭಿಮಾನವು ಇರಬಾರದೆಂದು ಹೇಳಲ್ಪಟ್ಟಿದೆ. ಸಾಮಾನ್ಯವಾಗಿ ಅಪ್ರಿಯ ವಿಷಯಗಳಲ್ಲಿ ಯಾರಿಗೂ ಅಭಿಮಾನ ಇರುವುದಿಲ್ಲ. ಹಾಗೆಯೇ ಪ್ರಿಯ ವಿಷಯಗಳಲ್ಲಿಯೂ ಯಾರಿಗೆ ಅಭಿಮಾನವಿರುವುದಿಲ್ಲವೋ ಆತನೇ ಸ್ಥಿತಪ್ರಜ್ಞ. ಪ್ರಿಯವಾಗಲಿ, ಅಪ್ರಿಯವಾಗಲಿ ಎಲ್ಲವೂ ಮಾಯೆಯಲ್ಲಿ (ದೃಶ್ಯದಲ್ಲಿ, ಪ್ರಕೃತಿಯಲ್ಲಿ) ಅಂತರ್ಭೂತವಾಗಿವೆಯಾದ್ದರಿಂದ, ಮಾಯಾತೀತ ಪರಮಾತ್ಮನಲ್ಲಿ ಸ್ಥಿತನಾಗಿರುವವನಿಗೆ ಅವು ಎಳ್ಳಷ್ಟು ರುಚಿಸುವುದಿಲ್ಲ. ಆದ್ದರಿಂದ ಅವುಗಳ ಮೇಲೆ ಅಭಿಮಾನವಿರುವುದಿಲ್ಲ.

ತಾನು ಇಚ್ಛಿಸದಿದ್ದರೂ ಒಮ್ಮೊಮ್ಮೆ ಜ್ಞಾನಿಗೆ ದೈವಿಕವಾಗಿ ಪ್ರಿಯಗಳಾಗಲಿ, ಅಪ್ರಿಯಗಳಾಗಲಿ ಬಂದೊದಗಬಹುದು. ಅಂತಹ ಸ್ಥಿತಿಯಲ್ಲಿ

ಪ್ರಿಯಗಳೆಂದರೆ ಸಂತೋಷವನ್ನಾಗಲಿ, ಅಪ್ರಿಯಗಳೆಂದರೆ ದ್ವೇಷವನ್ನಾಗಲಿ ಆತ ಹೊಂದುವುದಿಲ್ಲ. ಪರ್ವತದಂತೆ ಅಚಂಚಲನಾಗಿರುವನು. ಇದೇ ಸ್ಥಿತಪ್ರಜ್ಞನ ಚಿಹ್ನೆ.

ಪ್ರ : ಸ್ಥಿತಪ್ರಜ್ಞನ ಬೇರೆ ಯಾವ ಲಕ್ಷಣಗಳನ್ನು ಇಲ್ಲಿ ಹೇಳಲಾಗಿದೆ?

ಉ : ೧) ಸಮಸ್ತ ವಿಷಯಗಳಲ್ಲಿ ಅಭಿಮಾನ ಇಲ್ಲದೆ ಇರುವುದು. ೨) ಪ್ರಿಯ, ಅಪ್ರಿಯಗಳು ಸಂಭವಿಸಿದಾಗ ಸಂತೋಷವಾಗಲಿ, ದ್ವೇಷವಾಗಲಿ ಇಲ್ಲದೆ ಇರುವುದು.

**೫೮. ಯದಾ ಸಂಹರತೇ ಚಾಯಂ ಕೂರ್ಮೋಽಂಗಾನೀವ ಸರ್ವಶಃ**
**ಇಂದ್ರಿಯಾಣೀಂದ್ರಿಯಾರ್ಥೇಭ್ಯಃ ಸ್ತಸ್ಯ ಪ್ರಜ್ಞಾ ಪ್ರತಿಷ್ಠಿತಾ**

**ಅರ್ಥ:** ಯದಾ=ಯಾವಾಗ; ಅಯಂ=ಈತನು(ಯೋಗಿ); ಕೂರ್ಮಃ= ಆಮೆಯ; ಅಂಗಾನೀವ=ಅವಯವಗಳಂತೆ; ಇಂದ್ರಿಯಾರ್ಥೇಭ್ಯಃ=ಇಂದ್ರಿಯ ವಿಷಯಗಳಿಂದ (ಶಬ್ದಸ್ಪರ್ಶಾದಿಗಳಿಂದ); ಇಂದ್ರಿಯಾಣಿ=ಇಂದ್ರಿಯಗಳನ್ನು; ಸರ್ವಶಃ ಚ=ಎಲ್ಲಾ ಕಡೆಗಳಿಂದಲೂ; ಸಂಹರತೇ=ಒಳಕ್ಕೆ ಎಳೆದುಕೊಳ್ಳುತ್ತಾನೆಯೋ (ತದಾ=ಆಗ); ತಸ್ಯ=ಆತನ; ಪ್ರಜ್ಞಾ=ಜ್ಞಾನವು; ಪ್ರತಿಷ್ಠಿತಾ= ಸ್ಥಿರವಾಗಿರುವುದು.

**ತಾ:** ಆಮೆಯು ತನ್ನ ಅವಯವಗಳನ್ನು ಒಳಕ್ಕೆ ಎಳೆದುಕೊಂಡಂತೆ, ಯೋಗಿ ಯಾವಾಗ ತನ್ನ ಇಂದ್ರಿಯಗಳನ್ನು ಇಂದ್ರಿಯಾರ್ಥ ವಿಷಯಗಳಿಂದ ಪೂರ್ಣವಾಗಿ ಹಿಂದಕ್ಕೆ ಸೆಳೆದುಕೊಳ್ಳುತ್ತಾನೆಯೋ ಆಗ ಆತನ ಜ್ಞಾನ ಸ್ಥಿರವಾಗಿದೆ ಎಂದು ಹೇಳಬಹುದು (ಆಗ ಆತನು ಸ್ಥಿತಪ್ರಜ್ಞನೆನಿಸಿಕೊಳ್ಳುವನು).

**ವ್ಯಾಖ್ಯೆ:** ಮೋಕ್ಷಪ್ರಾಪ್ತಿಗೆ (ಆತ್ಮಸಾಕ್ಷಾತ್ಕಾರಕ್ಕೆ) ಇಂದ್ರಿಯ ನಿಗ್ರಹ ಅತ್ಯಂತ ಅವಶ್ಯಕವೆಂದು ಇಲ್ಲಿ ತಿಳಿಸಲಾಗಿದೆ. 'ಯದಾ' ಎನ್ನುವ ಪದ ಉಪಯೋಗಿಸಲ್ಪಟ್ಟಿರುವುದರಿಂದ ಮನುಷ್ಯನಿಗೆ ಯಾವಾಗ ಇಂದ್ರಿಯ ನಿರೋಧ ಸಿದ್ಧಿಸುವುದೋ, ಆಗ ಬುದ್ಧಿ ಆತ್ಮನಲ್ಲಿ ಸ್ಥಿರವಾಗುವುದೆಂದು ಹೇಳಲಾಗಿದೆ. ಈ ಸತ್ಯವನ್ನೇ ಪತಂಜಲಿ ಮಹರ್ಷಿ *"ಯೋಗಶ್ಚಿತ್ತ ವೃತ್ತಿ ನಿರೋಧಃ; ತದಾ ದ್ರಷ್ಟುಃ ಸ್ವರೂಪೇಽವಸ್ಥಾನಮ್"* ಎನ್ನುವ ಎರಡು ಸೂತ್ರಗಳ ಮೂಲಕ ವ್ಯಕ್ತಪಡಿಸಿದ್ದಾನೆ. ಅಂದರೆ ಯಾವಾಗ ಚಿತ್ತವು ತನ್ನ ಬಹಿರ್ಮುಖ ವಿಷಯ ಪ್ರವೃತ್ತಿಗಳನ್ನು ತ್ಯಜಿಸಿ, ಅಂತರ್ಮುಖವಾಗುವುದೋ ಆಗ ಅದು ಆತ್ಮದಲ್ಲಿ ಗಟ್ಟಿಯಾಗಿ ಬೇರೂರಿರುವುದೆಂದರ್ಥ.

ಈ ತತ್ವವನ್ನಿಲ್ಲಿ ಭಗವಂತನು ಒಳ್ಳೆಯ ದೃಷ್ಟಾಂತದ ಮೂಲಕ ಬೋಧಿಸಿದ್ದಾನೆ. ಆಮೆಗೆ ಸ್ವಲ್ಪ ಶಬ್ದವಾಗಲಿ, ಅಡೆತಡೆಯಾಗಲಿ ಬಂದರೆ ಕೂಡಲೇ ತನ್ನ ಎಲ್ಲಾ ಅವಯವಗಳನ್ನು ಒಳಕ್ಕೆ (ಚಿಪ್ಪಿನೊಳಗೆ) ಎಳೆದುಕೊಳ್ಳುವುದು. ಹಾಗೆಯೇ ಯೋಗಿಯಾದವನು ಶಬ್ದ ಸ್ಪರ್ಶಾದಿ ಬಾಹ್ಯ ವಿಷಯಗಳಿಂದ ಮನಸ್ಸನ್ನು ಸೆಳೆದು ಅಂತರಾತ್ಮದಲ್ಲಿ ಅದನ್ನು ಸ್ಥಿರಗೊಳಿಸುವನು. 'ಸರ್ವಶಃ' ಎಂದು ಹೇಳಲ್ಪಟ್ಟಿರುವುದರಿಂದ ಯಾವುದೋ ಒಂದು ಇಂದ್ರಿಯ ನಿಗ್ರಹ ಸಾಕಾಗುವುದಿಲ್ಲವೆಂದೂ, ಸಮಸ್ತವನ್ನೂ ನಿರೋಧಿಸಬೇಕೆಂದು ಸ್ಪಷ್ಟೀಕರಿಸಲಾಗಿದೆ. ರಾತ್ರಿಯಲ್ಲಿ ಎಲ್ಲಾ ಬಾಗಿಲುಗಳನ್ನು ಮುಚ್ಚಿ ಯಾವುದೇ ಒಂದನ್ನು ತೆರೆದಿಟ್ಟಿದ್ದರೂ ಕಳ್ಳನು ಅದರೊಳಗಿನಿಂದ ಪ್ರವೇಶಿಸಬಹುದು. ಎಲ್ಲಾ ಕಿಟಕಿಗಳನ್ನು ಮುಚ್ಚಿ ಒಂದೇ ಒಂದನ್ನು ತೆರೆದಿಟ್ಟಿದ್ದರೂ ಬೀಸುವ ಗಾಳಿಯಿಂದ ಬೆಳಗುತ್ತಿರುವ ದೀಪ ಆರಿಹೋಗುವುದು. ಆದ್ದರಿಂದ ಮುಮುಕ್ಷುವು ಬಹು ಜಾಗರೂಕತೆಯಿಂದ ಎಲ್ಲಾ ಇಂದ್ರಿಯಗಳನ್ನು ವಿಷಯಗಳಿಂದ ಹಿಮ್ಮೆಟ್ಟಿಸಿಕೊಳ್ಳಬೇಕು. ಆತ್ಮಾನುಭೂತಿಗೆ, ಸ್ಥಿತಪ್ರಜ್ಞತೆಗೆ ವಿಷಯರಾಹಿತ್ಯದ ಅವಶ್ಯಕತೆಯಿದೆಯೆಂದು ಗೀತಾಚಾರ್ಯನು ಈ ಶ್ಲೋಕದಲ್ಲಿ ಬೋಧಿಸುತ್ತಿದ್ದಾನೆ.

ಪ್ರ : ಮನುಷ್ಯನು ಯಾವಾಗ ಸ್ಥಿತಪ್ರಜ್ಞನಾಗಬಲ್ಲನು?

ಉ : ಯಾವಾಗ ಮನುಷ್ಯನು ತನ್ನ ಎಲ್ಲಾ ಇಂದ್ರಿಯಗಳನ್ನು ಶಬ್ದಾದಿ ವಿಷಯಗಳಿಂದ ಮರಳಿಸುವನೋ, ಮತ್ತೆ ಚಿತ್ತವನ್ನು ಅಂತರ್ಮುಖ ಮಾಡಿಕೊಂಡು ಆತ್ಮದಲ್ಲಿ ಸ್ಥಾಪಿಸುವನೋ ಆಗ ಸ್ಥಿತ ಪ್ರಜ್ಞನಾಗುವನು.

**ಅ||** ಈ ಪ್ರಕಾರವಾಗಿ ಸ್ಥಿತಪ್ರಜ್ಞನ ಲಕ್ಷಣಗಳನ್ನು ತಿಳಿಸಿ ಇನ್ನು ಆತ್ಮಜ್ಞಾನದಿಂದ ವಿಷಯವಾಸನೆ ಸಮೂಲವಾಗಿ ದೂರವಾಗುವುದೆಂದು ವಚಿಸುತ್ತಿದ್ದಾನೆ-

**೫೯. ವಿಷಯಾ ವಿನವರ್ತಂತೇ ನಿರಾಹಾರಸ್ಯ ದೇಹಿನಃ**
**ರಸವರ್ಜಂ ರಸೋಽಪ್ಯಸ್ಯ ಪರಂ ದೃಷ್ಟ್ವಾ ನಿವರ್ತತೇ**

**ಅರ್ಥ:** ನಿರಾಹಾರಸ್ಯ=ಶಬ್ದಾದಿ ವಿಷಯಗಳನ್ನು ಸ್ವೀಕರಿಸದ; ದೇಹಿನಃ= ಜೀವಿಗೆ; ರಸವರ್ಜಂ=ವಿಷಯವಾಸನೆ ಬಿಟ್ಟು; ವಿಷಯಾಃ=ವಿಷಯಗಳೆಲ್ಲವೂ; ವಿನಿವರ್ತಂತೇ=ನಿರ್ಗಮಿಸುತ್ತಿವೆ (ದೂರವಾಗುತ್ತಿವೆ); ಪರಂ=ಪರಮಾತ್ಮನನ್ನು; ದೃಷ್ಟ್ವಾ=ನೋಡಿದ ನಂತರ; ರಸೋಽಪಿ=ಆ ವಿಷಯ ವಾಸನೆ ಕೂಡ; ಅಸ್ಯ=ಈತನಿಗೆ; ನಿವರ್ತತೇ=ನಿರ್ಗಮಿಸುತ್ತಿದೆ.

**ತಾ||** ಶಬ್ದಾದಿ ವಿಷಯಗಳನ್ನು ಸ್ವೀಕರಿಸದ ಜೀವಿಗೆ, ಆ ವಿಷಯಗಳು ದೂರವಾಗುತ್ತವೆಯೇ ಹೊರತು ಅವುಗಳನ್ನು ಕುರಿತ ತೃಷ್ಣೆಯು ಹೋಗುವುದಿಲ್ಲ. ಪರಮಾತ್ಮನನ್ನು ದರ್ಶಿಸಿದಲ್ಲಿ ಆ ತೃಷ್ಣೆಗಳೂ ವಿಷಯಗಳೊಡನೆ ನಿರ್ಗಮಿಸುತ್ತವೆ.

**ವ್ಯಾಖ್ಯೆ:** ಈ ಶ್ಲೋಕವು ಸಾಧಕರಿಗೆ ಬಹಳ ಮುಖ್ಯವಾದದು. ಏಕೆಂದರೆ ಸಾಧನೆಗೆ ಸಂಬಂಧಿಸಿದ ಪರಮ ರಹಸ್ಯವನ್ನು ಇಲ್ಲಿ ತಿಳಿಯಪಡಿಸಲಾಗಿದೆ. ಅದು ಏನು ಎನ್ನುವುದನ್ನು ವಿಚಾರಿಸಬೇಕು.

ವಾಸನಾಕ್ಷಯ, ಮನೋನಾಶ, ತತ್ವಜ್ಞಾನವೆಂಬ ಮೂರು ಸಾಧನೆಗಳು ಶಾಸ್ತ್ರಗಳಲ್ಲಿ ತಿಳಿಸಲ್ಪಟ್ಟಿವೆ. ಈ ಮೂರನ್ನು ಏಕಕಾಲದಲ್ಲಿಯೇ ಸಾಧಿಸಿದರೆ ಮಾತ್ರ ಆತ್ಮ ಸಾಕ್ಷಾತ್ಕಾರ ಉಂಟಾಗುವುದೆಂದು ಹೇಳಲಾಗಿದೆ. ವಾಸನಾಕ್ಷಯದಿಂದ ತತ್ವಜ್ಞಾನವು; ತತ್ವಜ್ಞಾನದಿಂದ ವಾಸನಾಕ್ಷಯವು ಸಿದ್ಧಿಸುತ್ತವೆ. ಹಿಂದಿನ ಶ್ಲೋಕದಲ್ಲಿ ವಾಸನಾಕ್ಷಯದಿಂದ ತತ್ವದರ್ಶನ ಲಭಿಸುವುದೆಂದು ಹೇಳಲ್ಪಟ್ಟಿರುವುದರಿಂದ ಈ ಶ್ಲೋಕದಲ್ಲಿ ತತ್ವದರ್ಶನದಿಂದ (ಆತ್ಮಾವಲೋಕನದಿಂದ) ವಾಸನಾಕ್ಷಯವು ಸಿದ್ಧಿಸುವುದೆಂದು ಹೇಳಲ್ಪಟ್ಟಿದೆ. ತೃಷ್ಣೆ ನಾಶವಾಗದೆ ಆತ್ಮದರ್ಶನವುಂಟಾಗುವುದಿಲ್ಲ. ಆತ್ಮದರ್ಶನವಾಗದೆ ವಿಷಯ ವಾಸನೆಗಳು ನಶಿಸುವುದಿಲ್ಲ. ಆದ್ದರಿಂದಲೇ ಇಲ್ಲಿ **'ಪರಂ ದೃಷ್ಟ್ವಾ ರಸೋಽಪಿ ನಿವರ್ತತೇ'**, ಪರಮಾತ್ಮನ ದರ್ಶನವಾದ ನಂತರವೇ ವಾಸನೆ ಇಲ್ಲವಾಗುವುದು ಎಂದು ಹೇಳಲ್ಪಟ್ಟಿದೆ. ವಾಸನಾಕ್ಷಯ, ತತ್ವಜ್ಞಾನ (ಆತ್ಮದರ್ಶನ) ಎರಡನ್ನೂ ಒಂದೇ ಕಾಲದಲ್ಲಿ ಅಭ್ಯಾಸಮಾಡಬೇಕೆಂದು ಶಾಸ್ತ್ರಗಳು ಉದ್ಘೋಷಿಸುತ್ತಿವೆ.

ವಾಸನಾಕ್ಷಯವು ಸಾಮಾನ್ಯವಾದ ಕಾರ್ಯವಲ್ಲ, ಮೋಕ್ಷದ ಗುಟ್ಟೆಲ್ಲವೂ ಅದರಲ್ಲಿಯೇ ಅಡಗಿದೆ. ಅದು ಸಿದ್ಧಿಸಿದಲ್ಲಿ ಸಮಸ್ತವೂ ಸಿದ್ಧಿಸಿದ ಹಾಗೆಯೇ. ಅನೇಕ ಜನ್ಮಾರ್ಜಿತಗಳಾದ ಸಂಸ್ಕಾರಗಳು ಘನೀಭವಿಸಿ ವಾಸನಾರೂಪವಾಗಿ ಚಿತ್ತದಲ್ಲಿ ದೃಢವಾಗಿರುತ್ತವೆ. ಇಂದ್ರಿಯಗಳಿಗೆ ಶಬ್ದಾದಿ ವಿಷಯಗಳು ಆಹಾರ

ಆ ಆಹಾರವನ್ನು ಅಂದರೆ ವಿಷಯಗಳನ್ನು ಸ್ವೀಕರಿಸದಿದ್ದ ಮಾತ್ರಕ್ಕೆ ಒಳಗಡೆ ಅಡಗಿರುವ ವಿಷಯ ವಾಸನೆ ನಾಶವಾಗಿದೆಯೆಂದು ಯಾರೂ ಭ್ರಮಿಸಬಾರದು. ಹುತ್ತವನ್ನು ಹೊಡೆದು ಹಾಕಿದ ಮಾತ್ರಕ್ಕೆ ಹಾವು ಸಾಯುವುದಿಲ್ಲ. ಆ ವಿಷಯ ವಾಸನೆ ಸಮೂಲವಾಗಿ ತೊಲಗಲು ಆತ್ಮವನ್ನು ಸಂದರ್ಶಿಸಬೇಕು(ಪರಂದೃಷ್ಟ್ವಾ). ಆತ್ಮದ ಸತ್ಯತೆಯನ್ನು, ಜಗತ್ತಿನ ಮಿಥ್ಯತೆಯನ್ನು ಅನುಭೂತಿಗೊಳಿಸಿಕೊಳ್ಳಬೇಕು. ಆತ್ಮತತ್ವದ ಶ್ರವಣ ಮನನಾದಿಗಳನ್ನು ಶ್ರದ್ಧೆಯಿಂದ ಅವಲಂಬಿಸಬೇಕು. ವಿಷಯಗಳ ಅನಿತ್ಯತೆಯನ್ನು, ಆತ್ಮದ ಶಾಶ್ವತ ಆನಂದತ್ವಗಳನ್ನು ಚೆನ್ನಾಗಿ ಮನದಟ್ಟು ಮಾಡಿಕೊಳ್ಳಬೇಕು. ನಂತರವೇ ವಿಷಯಗಳ ಮೇಲಿನ ಪ್ರೀತಿ, ಅನುರಾಗಗಳು ಕ್ರಮವಾಗಿ ಕಡಿಮೆಯಾಗುತ್ತಾ ಬಂದು ವಾಸನೆ ಕ್ಷೀಣಿಸಿ, ಕೊನೆಗೆ ನಶಿಸಿಹೋಗುವುದು. ಆದ್ದರಿಂದ ಸಾಧಕರು ತಾವು ಕೇವಲ ಇಂದ್ರಿಯಗಳನ್ನು ಮೇಲೆ ಮೇಲೆ ನಿರೋಧಿಸುತ್ತಿದ್ದಾರೋ ಇಲ್ಲ ರಸವರ್ಜಿತ (ವಾಸನಾರಹಿತ) ವನ್ನಾಗಿ ಮಾಡಿಕೊಂಡಿದ್ದಾರೋ ತಮ್ಮನ್ನು ತಾವೇ ಚೆನ್ನಾಗಿ ಪರೀಕ್ಷಿಸಿಕೊಂಡು, ಭಗವಂತನು ದಯೆಯಿಂದ ತಿಳಿಸಿರುವ ಈ (ಆತ್ಮ) ತತ್ವದರ್ಶನ ರೂಪವೆನ್ನುವ ಉಪಾಯದಿಂದ ನಿಶ್ಶೇಷ ವಾಸನಾರಾಹಿತ್ಯ ಸ್ಥಿತಿ ಹೊಂದಿ ಜನ್ಮಸಾರ್ಥಕತೆಯನ್ನು ಹೊಂದಬೇಕು.

'ನಿರಾಹಾರಸ್ಯ'- ಎನ್ನುವ ಪದಕ್ಕೆ 'ಉಪವಾಸಮಾಡಿದವನಿಗೆ' ಎಂದು ಕೆಲವರು ಅರ್ಥ ಹೇಳುತ್ತಾರೆ. ಆದರೆ ಅದಕ್ಕಿಂತ ಮೇಲೆ ಕೊಟ್ಟ ಅರ್ಥವೇ ಹೆಚ್ಚು ಸಮಂಜಸವಾಗಿದೆ.

ಪ್ರ : ಮೋಕ್ಷಪ್ರಾಪ್ತಿಗೆ ಇಂದ್ರಿಯಗಳನ್ನು ವಿಷಯಗಳಿಂದ ದೂರಮಾಡಿದರೆ ಸಾಕೇ?

ಉ : ಸಾಲದು. ಚಿತ್ತದಲ್ಲಿರುವ ವಿಷಯವಾಸನೆ ಕೂಡ ನಿರ್ಗಮಿಸಬೇಕು.

ಪ್ರ : ಆ ವಾಸನೆ ದೂರವಾಗಲು ಏನು ಉಪಾಯವಿದೆ ?

ಉ : ಪರಮಾತ್ಮದರ್ಶನವೇ. ಅಂದರೆ ಆತ್ಮತತ್ವ ಚಿಂತನಾದಿಗಳ ಮೂಲಕ ದೃಶ್ಯದ ಮಿಥ್ಯತೆಯನ್ನು, ಆತ್ಮದ ಸತ್ಯತ್ವವನ್ನು ಪ್ರತ್ಯಕ್ಷವಾಗಿ ಅನುಭೂತಿಸಿಕೊಳ್ಳುವುದೇ ಆಗಿದೆ.

**ಅ||** ಆತ್ಮದರ್ಶನಕ್ಕಾಗಿ ಪ್ರಯತ್ನವನ್ನು ಮಾಡುತ್ತಿದ್ದರೂ ಕೆಲವರಿಗೆ ಅದು ಏಕೆ ಸಿದ್ಧಿಸುವುದಿಲ್ಲ ಎನ್ನುವುದಕ್ಕೆ ಕಾರಣವನ್ನು ಕೊಡಲಾಗಿದೆ.

**೬೦. ಯತತೋ ಹ್ಯಪಿ ಕೌಂತೇಯ ಪುರುಷಸ್ಯ ವಿಪಶ್ಚಿತಃ**
**ಇಂದ್ರಿಯಾಣಿ ಪ್ರಮಾಥೀನಿ ಹರಂತಿ ಪ್ರಸಭಂ ಮನಃ**

**ಅರ್ಥ:** ಕೌಂತೇಯ=ಓ ಅರ್ಜುನಾ! ಯತತಃ ಅಪಿ=(ಆತ್ಮಾವಲೋಕಕ್ಕೆ) ಪ್ರಯತ್ನ ಮಾಡುತ್ತಿರುವವನಾದರು; ವಿಪಶ್ಚಿತಃ=ವಿದ್ವಾಂಸನಾದರೂ (ಶಾಸ್ತ್ರಜ್ಞಾನವುಳ್ಳ); ಪುರುಷಸ್ಯ=ಪುರುಷನ, ಮನಃ=ಮನಸ್ಸನ್ನು; ಪ್ರಮಾಥೀನಿ=ಕ್ಷೋಭೆಯುಂಟುಮಾಡುವ, ಇಂದ್ರಿಯಾಣಿ=ಇಂದ್ರಿಯಗಳು; ಪ್ರಸಭಂ=ಬಲಾತ್ಕಾರವಾಗಿ; ಹರಂತಿಹಿ=ಎಳೆಯುತ್ತಿರುವುವಲ್ಲಾ!

**ತಾ||** ಓ ಅರ್ಜುನಾ! ಇಂದ್ರಿಯಗಳು ಮಹಾಶಕ್ತಿಯುತವಾದುವು. ಏಕೆಂದರೆ ಆತ್ಮಾವಲೋಕಕ್ಕೆ ಯತ್ನಿಸುತ್ತಿರುವ ಮನುಜನ ಮನಸ್ಸನ್ನು ಕೂಡ ಅವು ಬಲಾತ್ಕಾರವಾಗಿ (ವಿಷಯಗಳ ಮೇಲೆ) ಎಳೆದುಕೊಂಡು ಹೋಗುತ್ತವೆ.

**ವ್ಯಾಖ್ಯೆ:** ಇಂದ್ರಿಯಗಳು ಎಷ್ಟು ಬಲವತ್ತರವಾದವುಗಳೆನ್ನುವುದನ್ನು ಇಲ್ಲಿ ನಿರೂಪಿಸಲಾಗಿದೆ. 'ವಿಪಶ್ಚಿತಃ' ಎಂದು ಹೇಳಲ್ಪಟ್ಟಿರುವುದರಿಂದ ವಿದ್ವಾಂಸನ ಮನಸ್ಸನ್ನು ಕೂಡ ಇಂದ್ರಿಯಗಳು ಎಳೆಯಬಲ್ಲವಾದರೆ ಇನ್ನು ಸಾಮಾನ್ಯ ಮನುಷ್ಯನ ಬಗ್ಗೆ ಬೇರೆ ಹೇಳಬೇಕೆ? ಎಂದು ತಿಳಿಸಿದಂತಾಗಿದೆ. ಹಾಗೆಯೇ ಇಂದ್ರಿಯ ನಿಗ್ರಹಕ್ಕೆ ಪ್ರಯತ್ನ ಮಾಡುತ್ತಿರುವವನನ್ನೂ ಸಹ ಅವು ಹರಣ ಮಾಡಲು ಪ್ರಯತ್ನಿಸುತ್ತಿದ್ದಾವೆಂದಾಗ ಯತ್ನವನ್ನೇ ಮಾಡದೆ ಇರುವ ಅಜ್ಞಾನಿಯನ್ನು ಅವು ಎಷ್ಟು ತೊಂದರೆಗೀಡು ಮಾಡುತ್ತವೆ ಎನ್ನುವುದನ್ನು ಊಹಿಸಬಹುದು.

'ಬಲವಾನಿನಿಂದ್ರಿಯಗ್ರಾಮೋ ವಿದ್ವಾಂಸಮಪಿ ಕರ್ಷತಿ'- ಇಂದ್ರಿಯ ಸಮೂಹ ಬಲವತ್ತರವಾದುದು. ಅದು ವಿದ್ವಾಂಸನನ್ನು ಕೂಡ ಬಲಹೀನನನ್ನಾಗಿ ಮಾಡುವುದು ಎಂದು ವ್ಯಾಸಮಹರ್ಷಿಯು ತಿಳಿಸಿದ್ದಾನೆ. 'ಪ್ರಸಭಂ'- ಬಲಾತ್ಕಾರವಾಗಿ ಸೆಳೆಯುವುದು ಎಂದು ಹೇಳಿರುವುದರಿಂದ ಆ ಇಂದ್ರಿಯಗಳು ಎಷ್ಟು ಶಕ್ತಿಯುಳ್ಳವೋ ಊಹಿಸಿಕೊಳ್ಳಬಹುದು.

ಪ್ರತಿಜೀವಿಯಲ್ಲಿಯೂ ಆತ್ಮಾನಾತ್ಮಯುದ್ಧ, ಧರ್ಮಾಧರ್ಮಯುದ್ಧ ಸ್ವಲ್ಪ ಪರಿಮಿತಿಯಲ್ಲಿ ಆಗುತ್ತಲೇ ಇರುತ್ತದೆ. ಸಾಧಕನು ದೈವ ಸಂಬಂಧ ಬಲವನ್ನು ಒಂದಿಷ್ಟು ಶೇಖರಿಸುತ್ತಿದ್ದರೂ, ಆಕಡೆ ಮಾಯೆ, ಅವಿದ್ಯೆ ತಮ್ಮ ಸೈನ್ಯವಾದ ಇಂದ್ರಿಯ ವಿಷಯಾದಿ ವಾಸನೆಗಳನ್ನು ಹುರಿದುಂಬಿಸುತ್ತಿರುತ್ತವೆ. ಮುಮುಕ್ಷುವಿಗೆ ದೈವೀಸಂಪತ್ತಿನ ಬಲವು ಅಧಿಕವಾದಾಗ ಮಾತ್ರ ಈ ಸಂಗ್ರಾಮದಲ್ಲಿ ವಿಜಯಗೊಳ್ಳಲು ಸಾಧ್ಯವಾಗುವುದು. ಈ ಶ್ಲೋಕದಲ್ಲಿ ವಿದ್ವಾಂಸನ ಮನಸ್ಸನ್ನು ಇಂದ್ರಿಯಗಳು ಬಲಾತ್ಕಾರವಾಗಿ ಸೆಳೆಯುವುವು ಎಂದು ಹೇಳಿದ ಮಾತ್ರಕ್ಕೆ ಯಾರೂ ಅಧೈರ್ಯಗೊಳ್ಳಬಾರದು. ತನ್ನ ಸಾಧನೆಯನ್ನು (ಶಮದಮಾದಿಗಳನ್ನು) ಇನ್ನೂ ಹೆಚ್ಚು ನಿಗ್ರಹದಿಂದ ಮಾಡಿ ಶತ್ರುವನ್ನು ಎದುರಿಸಬೇಕು. ಅಜಾಗರೂಕತೆ ಕೆಲಸಕ್ಕೆ ಬರುವುದಿಲ್ಲ. ಈ ಭಾವವನ್ನೇ ಮುಂದಿನ ಶ್ಲೋಕದಲ್ಲಿ ಭಗವಂತನು ವಿವರಿಸುತ್ತಾನೆ.

"ವಿಪಶ್ಚಿತಃ"- ಪಾಂಡಿತ್ಯವನ್ನು ಹೊಂದಿದವನನ್ನು ಸಹ ಇಂದ್ರಿಯಗಳು ಪೀಡಿಸುತ್ತವೆ ಎಂದು ಹೇಳಿರುವುದರಿಂದ ಕೇವಲ ಶಾಸ್ತ್ರ ಪರಿಜ್ಞಾನ ಸಾಲದೆಂದೂ, ಅನುಭವಜ್ಞಾನದ ಅವಶ್ಯಕತೆ ಇದೆ ಎಂದು ತಿಳಿಯುತ್ತಿದೆ.

ಇಲ್ಲಿಯವರೆಗೆ ಶತ್ರುವಿನ ಬಲವೆಂತಹದೋ ಸಾಧಕನಿಗೆ ಸರಿಯಾದ ತಿಳುವಳಿಕೆಯಿಲ್ಲವಾದ್ದರಿಂದ ಸ್ವಲ್ಪ ಮಂದಪ್ರಯತ್ನ ಮಾಡುತ್ತಾ ಬಂದಿರಬಹುದು. ಆದರೆ ಭಗವಂತನು ಈ ಶ್ಲೋಕದಲ್ಲಿ ಶತ್ರುವಿನ ಬಲವೆಂತಹುದೋ ಸ್ಪಷ್ಟವಾಗಿ ಪ್ರಕಟಿಸಿರುವುದರಿಂದ ಇನ್ನು ಮುಂದೆ ಮುಮುಕ್ಷುವು ಶತ್ರುವಿನ ಎರಡರಷ್ಟು ಬಲವನ್ನು (ದೈವೀ ಸಂಪದವನ್ನು) ಸಂಪಾದಿಸಿ ಆತ್ಮಾನಾತ್ಮಸಂಗ್ರಾಮದಲ್ಲಿ ವಿಜಯವನ್ನು ಗಳಿಸಬೇಕು.

ಪ್ರ : ಇಂದ್ರಿಯಗಳ ಶಕ್ತಿ ಎಂತಹುದೋ ತಿಳಿಸುವುದು?

ಉ : ಅವು ಮೋಕ್ಷಮಾರ್ಗದಲ್ಲಿ ಯತ್ನಿಸುತ್ತಿರುವ ವಿದ್ವಾಂಸನ ಮನಸ್ಸನ್ನೂ ಕೂಡ ಬಲಾತ್ಕಾರವಾಗಿ ಸೆಳೆದು ವಿಷಯಗಳ ಕಡೆಗೆ ತೆಗೆದುಕೊಂಡು ಹೋಗುತ್ತವೆ.

**ಅ||** ಆದ್ದರಿಂದ ಮುಮುಕ್ಷುವು ಮುಂದೆ ಏನು ಮಾಡಬೇಕೆನ್ನುವುದನ್ನು ತಿಳಿಸುತ್ತಿದ್ದಾನೆ.

**೬೧. ತಾನಿ ಸರ್ವಾಣಿ ಸಂಯಮ್ಯ ಯುಕ್ತ ಆಸೀತ ಮತ್ಪರಃ**
**ವಶೇ ಹಿ ಯಸ್ಯೇಂದ್ರಿಯಾಣಿ ತಸ್ಯ ಪ್ರಜ್ಞಾ ಪ್ರತಿಷ್ಠಿತಾ**

**ಅರ್ಥ:** ತಾನಿ=ಆ ಇಂದ್ರಿಯಗಳನ್ನು; ಸರ್ವಾಣಿ=ಎಲ್ಲವನ್ನೂ; ಸಂಯಮ್ಯ=

ವಶಮಾಡಿಕೊಂಡು; ಯುಕ್ತಃ=ಸಮಾಧಿಸ್ಥಿತಿ (ಮನಃಸ್ಥಿರತೆ)ಯನ್ನು ಹೊಂದಿದವನು; ಮತ್ಪರಃ=ನನ್ನಲ್ಲೇ ಆಸಕ್ತಿ ಹೊಂದಿದ ಚಿತ್ತವುಳ್ಳವನು; ಆಸೀತ=ಇರಬೇಕು; ಹಿ=ಏಕೆಂದರೆ, ಯಸ್ಯ=ಯಾರ; ಇಂದ್ರಿಯಾಣಿ= ಇಂದ್ರಿಯಗಳು; ವಶೇ=ವಶದಲ್ಲಿ; (ವರ್ತಂತೇ=ಇರುವವೋ); ತಸ್ಯ=ಆತನ; ಪ್ರಜ್ಞಾ=ಜ್ಞಾನವು; ಪ್ರತಿಷ್ಠಿತಾ=ಸ್ಥಿರವಾಗಿರುವುದು; (ಭವತಿ-ಆಗಿದೆ).

**ತಾ||** (ಬಲವತ್ತರವಾದ) ಅಂತಹ ಇಂದ್ರಿಯಗಳೆಲ್ಲವನ್ನು ಪೂರ್ಣವಾಗಿ ವಶಪಡಿಸಿಕೊಂಡು ಸಾಧಕನು ಮನಃಸ್ಥಿರತೆ (ಸಮಾಧಿ)ಯನ್ನು ಹೊಂದಿ ನನ್ನಲ್ಲೇ (ಆತ್ಮದಲ್ಲಿಯೇ) ಆಸಕ್ತಿಯುಳ್ಳ ಮನಸ್ಸನ್ನು ಹೊಂದಿರಬೇಕು. ಏಕೆಂದರೆ, ಯಾವನ ಇಂದ್ರಿಯಗಳು ಅವನ ಸ್ವಾಧೀನದಲ್ಲಿರುವುವೋ ಆತನ ಜ್ಞಾನವೇ ಸ್ಥಿರವಾಗಿ ಪ್ರಕಾಶಿಸಬಲ್ಲದು.

**ವ್ಯಾಖ್ಯೆ:** "ಸರ್ವಾಣಿ"- ಎಂದು ಹೇಳಲ್ಪಟ್ಟಿರುವುದರಿಂದ, ಯಾವ ಒಂದು ಇಂದ್ರಿಯ ವಶವಾಗದೇ ಉಳಿದರೂ, ಅದು ಪ್ರಮಾದಕ್ಕೆ ಕಾರಣವಾಗುವುದ ರಿಂದ, ಎಲ್ಲಾ ಇಂದ್ರಿಯಗಳನ್ನು ಸಂಪೂರ್ಣವಾಗಿ ವಶಪಡಿಸಿಕೊಳ್ಳಬೇಕೆಂದು ಆದೇಶ ಕೊಟ್ಟಂತಾಗಿದೆ. ಮಡಕೆಗೆ ಒಂದು ಚಿಕ್ಕ ರಂಧ್ರವಿದ್ದರೂ ಹೇಗೆ ನೀರೆಲ್ಲವೂ ಸೋರಿ ಹೋಗುವುದೋ, ಒಂದು ಕಿಟಕಿ ತೆರೆದಿದ್ದರೂ ದೀಪವು ಹೇಗೆ ಆರಿ ಹೋಗುವುದೋ ಹಾಗೆ, *'ತದಸ್ಯಹರತಿ ಪ್ರಜ್ಞಾಂ ವಾಯುರ್ನಾವ ಮಿವಾಂಭಸಿ (೨-೬೭)'*ಎಂದು ಮುಂದೆ ಭಗವಂತನು ಇದೇ ವಿಷಯವನ್ನು ಸ್ಪಷ್ಟಪಡಿಸುತ್ತಾನೆ.

ಈ ಶ್ಲೋಕದಲ್ಲಿ ಎರಡು ಸಾಧನೆಗಳು ಹೇಳಲ್ಪಟ್ಟಿವೆ. ೧) ಇಂದ್ರಿಯ ಗಳನ್ನು ವಿಷಯಗಳ ಕಡೆ ಹರಿಯಬಿಡದೆ ನಿಗ್ರಹಿಸುವುದು ೨) ಮನಸ್ಸನ್ನು ಭಗವಂತನಲ್ಲಿ (ಆತ್ಮನಲ್ಲಿ) ಸಂಲಗ್ನಿಸುವುದು. ಅಂದರೆ ದೃಶ್ಯ ನಿರೋಧ, ದೃಕ್ಸ್ವರೂಪಾಚರಣೆ ಎರಡೂ ಅವಶ್ಯಕವೇ. ಇದರಲ್ಲಿ ಮೊದಲನೆಯದಾದ ದೃಶ್ಯವನ್ನು ಮಾತ್ರ ನಿರೋಧಿಸಿ ಸುಮ್ಮನಾದಲ್ಲಿ ಪ್ರತಿಫಲವಿರುವುದಿಲ್ಲ. ಏಕೆಂದರೆ ಅಂತಹ ದೃಶ್ಯರಹಿತಸ್ಥಿತಿ ಗಾಢನಿದ್ರೆಯಲ್ಲಿ (ಸುಷುಪ್ತಿಯಲ್ಲಿ) ಮನುಜನಿಗೆ ಲಭ್ಯವಾಗುತ್ತಲೇ ಇದೆಯಲ್ಲಾ! ಆದ್ದರಿಂದ ಅದರ ಜೊತೆ ಆತ್ಮಸ್ಥಿರತೆ ಹಾಗೂ ಆತ್ಮಧ್ಯಾನ ಕೂಡ ಇರಬೇಕು. ಸಾಲ ತೀರಬೇಕು, ಸ್ವಲ್ಪ ಹಣ ಬ್ಯಾಂಕಿನಲ್ಲಿ ಉಳಿಯಬೇಕು. ಆಗಲೇ ಜೀವಿಗೆ ಶಾಂತಿಯುಂಟಾಗುವುದು, ಹಾಗೆಯೇ ವಿಷಯ ವಿರಕ್ತಿಯೊಡನೆ ಆತ್ಮಚಿಂತನೆ ಕೂಡ ತಪ್ಪದೆ ಇರಬೇಕೆಂದು ಈ ಶ್ಲೋಕವು ಬೋಧಿಸುತ್ತಿದೆ. ವಾಸನಾಕ್ಷಯ ಹಾಗೂ ತತ್ವಜ್ಞಾನ ಎರಡೂ ಅವಶ್ಯಕಗಳೆಂದು ಸಾಧಕನು ತಿಳಿಯಬೇಕು. ಒಂದುವೇಳೆ ಎರಡನೆಯದಾದ ಆತ್ಮಜ್ಞಾನವೊಂದನ್ನೇ ಸ್ವೀಕರಿಸಿದಲ್ಲಿ, ವಶವಾಗದ ಇಂದ್ರಿಯಗಳು ಚಿತ್ತವನ್ನು ಬಹಿರ್ಮುಖವಾಗಿ ಸೆಳೆದು ಹಾಕುವ ಪ್ರಮಾದವಿದೆ. ಆದ್ದರಿಂದ ಇಂದ್ರಿಯ ನಿರೋಧ, ಆತ್ಮಚಿಂತನೆ ಎರಡೂ ಅವಶ್ಯಕವೆಂದು ಶ್ರೀಕೃಷ್ಣಮೂರ್ತಿ ತಿಳಿಸುತ್ತಿದ್ದಾನೆ.

*"ಯುಕ್ತ"*- ಎಂದರೆ ಕೂಡಿಕೊಂಡವನು; ದೃಕ್ಸ್ವರೂಪನಾದ ಆತ್ಮದೊಡನೆ ಕೂಡಿದವನು- ಅಂದರೆ ಸಮಾಧಿನಿಷ್ಠೆಯಲ್ಲಿರುವವನು ಎಂದರ್ಥ.

*"ಮತ್ಪರಃ"*- (ನನ್ನಲ್ಲೇ ಚಿತ್ತವುಳ್ಳವನು)- ಶ್ರೀಕೃಷ್ಣಪರಮಾತ್ಮ ಸಾಕ್ಷಾತ್ ಪರಮಾತ್ಮನೇ ಆದುದರಿಂದ, 'ನನ್ನಲ್ಲಿ' ಎಂದು ತಿಳಿಸಿದಾಗ 'ಆತ್ಮದಲ್ಲಿ' ಎಂದು ನಾವು ಗ್ರಹಿಸಿಕೊಳ್ಳಬೇಕು. ದ್ವೈತಭಾವವುಳ್ಳವರು, ಸಗುಣಾರಾಧಕರು ಶ್ರೀಕೃಷ್ಣ ದಿವ್ಯ ಮಂಗಳಮೂರ್ತಿಯಲ್ಲೇ ಮನಸ್ಸನ್ನು ಸಂಲಗ್ನಿಸುವರು. ಕ್ರಮೇಣವಾಗಿ ಅವರು ಶ್ರೀಕೃಷ್ಣನು ಆತ್ಮರೂಪವಾದ ತಮ್ಮ ಹೃದಯದಲ್ಲೇ ಇದ್ದಾನೆ ಎಂದು ತಿಳಿದು ದ್ವೈತದಿಂದ ಅದ್ವೈತಕ್ಕೆ, ಸಗುಣದಿಂದ ನಿರ್ಗುಣಕ್ಕೆ ಬದಲಾಗುವರು. ಗೀತೆ ಭಕ್ತಿ ಮಾರ್ಗಾವಲಂಬಿಗಳಿಗೆ, ಜ್ಞಾನಮಾರ್ಗಾವಲಂಬಿಗಳಿಗೆ ಸರ್ವರಿಗೂ ಉಪಯೋಗಕರವಾಗಿರಲೆಂದು ಇಂತಹ ಪದಗಳನ್ನು ಉದಾಹರಣೆಯಾಗಿ ಕೊಟ್ಟಿದೆ. ('ಆತ್ಮಪರಃ' ಎಂದು ಹೇಳದೆ 'ಮತ್ಪರಃ' ಎಂದು ಇಲ್ಲಿ ಹೇಳಲಾಗಿದೆ.)

ಈ ಶ್ಲೋಕದ ಮೊದಲನೆಯ ಪಾದ ಸಾಧನೆ ಕುರಿತದ್ದು. ಎರಡನೆಯ ಪಾದದಲ್ಲಿ ಆ ಸಾಧನೆಯಿಂದ ಒದಗುವ ಫಲವನ್ನು ಕೊಡಲಾಗಿದೆ. ಮೊದಲನೆಯ ಪಾದವು, ಇಂದ್ರಿಯಗಳನ್ನು ನಿಗ್ರಹಿಸಿ ಮನಸ್ಸನ್ನು ಆತ್ಮದಲ್ಲಿ ಸ್ಥಾಪಿಸಬೇಕೆಂದು, ಎರಡನೆಯ ಪಾದವು ಈ ಆತ್ಮಸ್ಥಿತಿಯುಳ್ಳವರಿಗೆ ಆತ್ಮಜ್ಞಾನ, ಆತ್ಮಾನುಭೂತಿಯಾಗುತ್ತದೆಂದು ಬೋಧಿಸುತ್ತಿವೆ. ಇಂದ್ರಿಯ ನಿಗ್ರಹವಿಲ್ಲ ದಿದ್ದರೆ ಆತ್ಮದಲ್ಲಿ ಸ್ಥಿರತೆ ಬರಲಾರದು. ಒಂದುವೇಳೆ ಹಾಗೆ ಬಂದರೂ ಬಹಳ ಕಾಲದವರೆಗೆ ಇರಲಾರದು. ಎಷ್ಟೋ ಕಷ್ಟಬಿದ್ದು ಆತ್ಮಜ್ಞಾನ, ಆತ್ಮಸ್ಥಿತಿಗಳನ್ನು ಸಂಪಾದಿಸಿಕೊಳ್ಳುತ್ತಿರುವಾಗ, ಇಂದ್ರಿಯಗಳನ್ನು ಬೇಕಾಬಿಟ್ಟಿಯಾಗಿ ವಿಷಯಗಳ ಮೇಲೆ ಹೋಗಬಿಟ್ಟರೆ ಆ ರೀತಿ ಸಂಪಾದನೆ ಮಾಡಿದ ಶಕ್ತಿ ವ್ಯರ್ಥವಾಗಿ ಹೋಗುವುದು. ಪೈರಿಗೆ ಎಷ್ಟು ಕಷ್ಟಬಿದ್ದು ನೀರು ಕಟ್ಟುತ್ತಿದ್ದರೂ ಹೊಲದಲ್ಲಿ ಅಲ್ಲಲ್ಲಿ ಇಲಿಯ ಬಿಲಗಳಿದ್ದಲ್ಲಿ ಆ ನೀರು ನಿಲ್ಲುವುದೇ? ಹಾಗೆಯೇ ಆತ್ಮಜ್ಯೋತಿ (ಜ್ಞಾನ) ಆರದೆ ಬೆಳಗುತ್ತಿರಬೇಕೆಂದರೆ ಇಂದ್ರಿಯಗಳೆನ್ನುವ ಕಿಟಕಿಗಳನ್ನು, ರಂಧ್ರಗಳನ್ನು ಮುಚ್ಚಬೇಕು (ನಿಗ್ರಹಿಸಬೇಕು) ಎಂದು ಭಗವಂತನು ಆದೇಶಿಸುತ್ತಿದ್ದಾನೆ. ಹಾಗೆ ಮುಚ್ಚಿದವನ ಪ್ರಜ್ಞೆ, ಆತ್ಮದಲ್ಲಿ ಸ್ಥಿರವಾಗಿರುತ್ತದೆಯೇ ಹೊರತು ಬೇರೆಯವುಗಳಲ್ಲಲ್ಲ ಎಂದು ಸ್ಪಷ್ಟವಾಗಿ ತಿಳಿಸಿದ್ದಾನೆ. ಆದ್ದರಿಂದ ಮೋಕ್ಷಪ್ರಾಪ್ತಿಯಲ್ಲಿ, ಆತ್ಮ ಸಾಕ್ಷಾತ್ಕಾರದಲ್ಲಿ ಇಂದ್ರಿಯ ನಿಗ್ರಹ ಎಂತಹ ಪ್ರಾಮುಖ್ಯ ಸ್ಥಾನ ವಹಿಸಿದೆ ಎನ್ನುವುದನ್ನು ಮುಮುಕ್ಷುಗಳು ವಿಚಾರಿಸಬೇಕು.

ಪ್ರ : ಮೋಕ್ಷ ಪ್ರಾಪ್ತಿಗೆ ಬೇಕಾದ ಸಾಧನೆಗಳಾವುವು?

ಉ : ೧) ಇಂದ್ರಿಯಗಳನ್ನು ವಿಷಯಗಳ ಕಡೆ ಹೋಗದಂತೆ ನಿಗ್ರಹಿಸುವುದು ೨) ಮನಸ್ಸನ್ನು ಆತ್ಮದಲ್ಲಿ ಸ್ಥಾಪಿಸುವುದು.

ಪ್ರ : ಯಾರ ಜ್ಞಾನವು ಸ್ಥಿರವಾಗಿರಬಲ್ಲದು?

ಉ : ಸರ್ವೇಂದ್ರಿಯ ನಿಗ್ರಹವನ್ನು ಹೊಂದಿದ ಜ್ಞಾನಿಯ ಜ್ಞಾನವು ಸ್ಥಿರವಾಗಿರಬಲ್ಲದು.

**ಅ||** ವಿಷಯ ಚಿಂತನೆಗಳಿಂದ ಒದಗುವ ಘೋರ ಪ್ರಮಾದವನ್ನು ಎರಡು ಶ್ಲೋಕಗಳ ಮೂಲಕ ಹೇಳಲಾಗಿದೆ-

**೬೨. ಧ್ಯಾಯತೋ ವಿಷಯಾನ್ ಪುಂಸಃ ಸಂಗಸ್ತೇಷೂಪಜಾಯತೇ**
**ಸಂಗಾತ್‌ಸಂಜಾಯತೇ ಕಾಮಃ ಕಾಮಾತ್‌ಕ್ರೋಧೋಭಿಜಾಯತೇ**

**೬೩. ಕ್ರೋಧಾದ್ಭವತಿ ಸಂಮೋಹಃ ಸಂಮೋಹಾತ್‌ಸ್ಮೃತಿವಿಭ್ರಮಃ**
**ಸ್ಮೃತಿಭ್ರಂಶಾ ದ್ಬುದ್ಧಿನಾಶೋ ಬುದ್ಧಿನಾಶಾತ್ ಪ್ರಣಶ್ಯತಿ**

**ಅರ್ಥ:** ವಿಷಯಾನ್=(ಶಬ್ದಸ್ಪರ್ಶಾದಿ) ವಿಷಯಗಳನ್ನು; ಧ್ಯಾಯತಃ= ಚಿಂತಿಸುತ್ತಿರುವ ಮನುಷ್ಯನಿಗೆ; ತೇಷು=ಆ ವಿಷಯಗಳಲ್ಲಿ; ಸಂಗಃ=ಆಸಕ್ತಿ; ಉಪಜಾಯತೇ=ಉಂಟಾಗುತ್ತದೆ. ಸಂಗಾತ್=ಆಸಕ್ತಿಯಿಂದ; ಕಾಮಃ=

ಕೋರಿಕೆ; ಸಂಜಾಯತೇ=ಹುಟ್ಟುತ್ತದೆ; ಕಾಮಾತ್=(ಅಂತಹ) ಕೋರಿಕೆಯಿಂದ; ಕ್ರೋಧಃ= ಕೋಪ; ಅಭಿಜಾಯತೇ=ಹುಟ್ಟುತ್ತದೆ; ಕ್ರೋಧಾತ್=ಕೋಪದಿಂದ; ಸಂಮೋಹಃ=ಅವಿವೇಕವು (ತನ್ನನ್ನು ತಾನೇ ತಿಳಿಯದ ಸ್ಥಿತಿ); ಭವತಿ= ಉಂಟಾಗುತ್ತದೆ. ಸಂಮೋಹಾತ್= ಅವಿವೇಕದಿಂದ; ಸ್ಮೃತಿವಿಭ್ರಮಃ= ಜ್ಞಾಪಕಶಕ್ತಿ ಹೋಗುವುದು(ಮರೆವು) (ಭವತಿ=ಉಂಟಾಗುತ್ತದೆ); ಸ್ಮೃತಿ ಭ್ರಂಶಾತ್=ಮರೆವಿನಿಂದ; ಬುದ್ಧಿನಾಶಃ=ಬುದ್ಧಿನಾಶ; (ಭವತಿ=ಉಂಟಾಗು ತ್ತದೆ) ಬುದ್ಧಿ ನಾಶಾತ್=ಬುದ್ಧಿ ನಾಶದಿಂದ; ಪ್ರಣಶ್ಯತಿ=ನಾಶವಾಗುತ್ತಾನೆ ಅಧೋಗತಿ ಹೊಂದುತ್ತಾನೆ.

**ತಾ||** ಮಾನವನು ಶಬ್ದಾದಿ ವಿಷಯಗಳ ಬಗ್ಗೆ ಚಿಂತಿಸುವುದರಿಂದ ಆ ವಿಷಯಗಳಲ್ಲಿ ಆಸಕ್ತಿ ಹುಟ್ಟುತ್ತದೆ. ಅಂತಹ ಆಸಕ್ತಿಯಿಂದ ಅದರ ಮೇಲೆ ಆತನಿಗೆ ಕೋರಿಕೆ ಉಂಟಾಗುತ್ತದೆ. ಆ ಕೋರಿಕೆಯಿಂದ ಕೋಪವು ಉಂಟಾಗುತ್ತದೆ. ಕೋಪದಿಂದ ಅವಿವೇಕವು, ಅವಿವೇಕದಿಂದ ಮರೆವು, ಮರೆವಿನಿಂದ ಬುದ್ಧಿನಾಶವು ಕ್ರಮವಾಗಿ ಸಂಭವಿಸುವುವು. ಬುದ್ಧಿನಾಶದಿಂದ ಅಧೋಗತಿ ಹೊಂದುತ್ತಾನೆ.

**ವ್ಯಾಖ್ಯೆ:** (ದೃಶ್ಯ) ವಿಷಯ ಚಿಂತನೆ ಎಷ್ಟು ಅನರ್ಥಕ್ಕೆ ದಾರಿಮಾಡುವುದೋ ಈ ಎರಡು ಶ್ಲೋಕಗಳಲ್ಲಿ ವಿಶದೀಕರಿಸಲಾಗಿದೆ. ಶತ್ರುವು ಮಿತ್ರನಂತೆ ನಟಿಸಿ ಮೆಲ್ಲಗೆ ಒಳಗೆ ಪ್ರವೇಶಿಸುವುದು. ಮೊದಲು ಸ್ವಲ್ಪ ಸ್ಥಳವನ್ನು ಮಾತ್ರ ಯಾಚಿಸಿ ಕ್ರಮವಾಗಿ ವಾಮನ ಮೂರ್ತಿಯಂತೆ ವಿಸ್ತರಿಸುತ್ತಾ ಕೊನೆಗೆ ತನಗೆ ಸ್ಥಳವನ್ನು ಕೊಟ್ಟವನನ್ನೇ ವಧಿಸುವುದು.

"Give me room to sit down, I can make room to lie down."

'ನನಗೆ ಕುಳಿತುಕೊಳ್ಳಲು ಸ್ಥಳವಿತ್ತರೆ ಸಾಕು, ಮಲಗುವುದಕ್ಕೆ ಸ್ಥಳವನ್ನು ನಾನೇ ಮಾಡಿಕೊಳ್ಳುವೆನು'- ಎನ್ನುವುದು ಮನಸ್ಸಿನ ಭಾವ (ಆಂಗ್ಲಗಾದೆ). ವಿಷಯ ಚಿಂತೆ ಮನಸ್ಸಿನಲ್ಲಿ ಸ್ವಲ್ಪ ಪ್ರವೇಶಿಸಿದರೂ ಅದೇ ಬೃಹತ್ತಾಗಿ ಮನುಜನನ್ನು ಅಧೋಗತಿಗೆ ಒಯ್ಯುತ್ತದೆ. 'ಈಸ್ಟ್ ಇಂಡಿಯಾ ಕಂಪೆನಿ' (ಆಂಗ್ಲರು) ಮೊದಲು ಭಾರತಕ್ಕೆ ವ್ಯಾಪಾರ ಮಾಡಲು ಬಂದು ಸ್ವಲ್ಪ ಸ್ಥಳವನ್ನು ಯಾಚಿಸಿ ತೆಗೆದುಕೊಂಡರು. ಆದರೆ ಸ್ವಲ್ಪ ಕಾಲದಲ್ಲಿ ಅವರು ವೃದ್ಧಿ ಹೊಂದಿ ತಮಗೆ ಸ್ಥಾನ ಕೊಟ್ಟ ಭಾರತೀಯರನ್ನೇ ಆಳಿದರು. ಹಾಗೆಯೇ ಈ ವಿಷಯ ಸಂಕಲ್ಪವೂ ಹೌದು.

ಮೊದಲು ಮನುಷ್ಯನಿಗೆ ಯಾವ ಸಂಕಲ್ಪವೂ ಇರುವುದಿಲ್ಲ, ನಿಧಾನವಾಗಿ ಯಾವುದೋ ಒಂದು ದೃಶ್ಯವಸ್ತುವಿನ ಬಗ್ಗೆ ಆತನು ಚಿಂತಿಸಲು ಪ್ರಾರಂಭಿಸುವನು. ಆಗ ಅದರಿಂದ ಮನಸ್ಸಿಗೆ ಒಂದು ವಿಧವಾದ ಸಂಬಂಧವು (attachment) ಏರ್ಪಡುತ್ತದೆ. ಆ ಸಂಬಂಧವೇ ಬಲಿತು ಆ ವಸ್ತುವನ್ನು ಅನುಭವಿಸಬೇಕೆಂಬ ಬಯಕೆ ಹುಟ್ಟುತ್ತದೆ. ಅದನ್ನೇ ಕಾಮವೆನ್ನುವರು. ಅದು ಬಹಳ ಕೆಟ್ಟದ್ದು. 'ಮಹಾಪಾಪಾ'- ಪಾಪಿಷ್ಠವಾದುದು ಎಂದು ಭಗವಂತನು ಅದನ್ನು ಮುಂದೆ ವರ್ಣಿಸಿ ಹೇಳುತ್ತಾನೆ. ಮನೆಯಲ್ಲಿ ಹಾವಾಗಲಿ, ಕಳ್ಳನಾಗಲಿ ಸೇರಿಕೊಂಡರೆ ಎಷ್ಟು ಅಪಕಾರವಾಗುವುದೋ, ಹೃದಯದಲ್ಲಿ ಕಾಮವು ಸೇರಿಕೊಂಡರೆ ಅಷ್ಟೇ ಕೀಳು ಉಂಟಾಗುವುದು. ಆದ್ದರಿಂದ ಮನೆಯಲ್ಲಿ ಸೇರಿರುವ ಸರ್ಪವನ್ನು, ಕಳ್ಳನನ್ನು ಮನೆಯಿಂದ ಹೊರಗಟ್ಟಿದಂತೆ ಈ ಕಾಮ ಪಿಶಾಚಿಯನ್ನು ತಕ್ಷಣವೇ ಹೊರಕ್ಕೆ ಸಾಗಹಾಕಬೇಕು. (ಒಳಗೆ ಪ್ರವೇಶವನ್ನೇ ಕೊಡದಿದ್ದರೆ ಮತ್ತೂ ಒಳ್ಳೆಯದು). ಮೊಳಕೆಯಾಗಿರುವಾಗಲೇ ಅದನ್ನು ಚಿವುಟಿ ಹಾಕಬೇಕು. ಹಾಗೆ ಮಾಡದಿದ್ದರೆ, ಅದು ತನ್ನ ಸ್ನೇಹಿತರನ್ನು, ಬಂಧುಗಳನ್ನು (ಕ್ರೋಧಾದಿಗಳನ್ನು) ಜೊತೆಯಲ್ಲಿ ತಕ್ಷಣವೇ ಕರೆದುಕೊಂಡು ಬಂದು ತನ್ನ ಪಕ್ಷವನ್ನು ಬಲಪಡಿಸಿಕೊಂಡು ಜೀವಿಯನ್ನು ಅಧೋಗತಿಗೆ ತಳ್ಳಿ ಹಾಕುತ್ತದೆ. ಆ ಹಂತಗಳೆಲ್ಲವನ್ನೂ ಗೀತಾಚಾರ್ಯನು ಅತಿ ಸುಂದರವಾಗಿ ಇಲ್ಲಿ ಚಿತ್ರಿಸಿದ್ದಾನೆ. ಇದು ಸಾಧಕರಿಗೆ ಅತಿಮುಖ್ಯವಾದುದು. ಏಕೆಂದರೆ ಮಾನವನಿಗೆ ಯಾರು ಶತ್ರುಗಳು, ಅವರು ಒಳಗೆ ಹೇಗೆ ಪ್ರವೇಶಿಸುವರು? ಹೇಗೆ ವೃದ್ಧಿಗೊಳ್ಳುವರು? ಜೀವಿಯನ್ನು ಹೇಗೆ ಕೆಳಗೆ ಬೀಳಿಸುವರು? ಅವುಗಳನ್ನು ಜಯಿಸುವುದು ಹೇಗೆ? ಈ ವಿಷಯಗಳೆಲ್ಲವನ್ನೂ ಕೂಲಂಕುಷವಾಗಿ ಇಲ್ಲಿ ಚರ್ಚಿಸಿದ್ದಾನೆ.

ಕಾಮವೆನ್ನುವುದು ಹೃದಯದಲ್ಲಿ ಪ್ರವೇಶಿಸಿದೊಡನೆ ಕ್ರೋಧವನ್ನೂ ಸಹ ರಂಗಸ್ಥಳಕ್ಕೆ ತರುವುದು. ಈ ಕಾಮಕ್ರೋಧಗಳೆರಡೂ ಪರಮಮಿತ್ರರು. ಒಬ್ಬರನ್ನು ಬಿಟ್ಟು ಮತ್ತೊಬ್ಬರು ಇರಲಾರದಷ್ಟು ಸನ್ನಿಹಿತ ಇವರಲ್ಲಿ ಇದೆ. ಕೋರಿಕೆಗಳುಂಟಾದಾಗ ಅವುಗಳನ್ನು ಅನುಭವಿಸುವುದಕ್ಕೆ ಅಡ್ಡ ಬರುವವರ ಮೇಲೆ ಕ್ರೋಧ ಉಂಟಾಗುತ್ತದೆ. ಕ್ರೋಧ ಹೆಂಡದಂತಹದು. ಅದು ನೆತ್ತಿಗೇರಿದಾಗ ತನ್ನನ್ನು ತಾನೇ ಮರೆಯುವನು. ಕಣ್ಣು ಕೆಂಪಗಾಗುವುವು. ಚಿತ್ತವು ವಿಕಲತೆ ಹೊಂದುವುದು. ಯುಕ್ತಾಯುಕ್ತಗಳನ್ನು ಮರೆಯುವನು. ಆವೇಶ ಪೂರಿತನಾಗಿ ದೆವ್ವ ಹಿಡಿದವನಂತೆ ಪ್ರವರ್ತಿಸುವನು. ಆದ್ದರಿಂದ ಕ್ರೋಧದಿಂದ ಸಂಮೋಹವು(ಮೈಮರೆವು) ಉಂಟಾಗುತ್ತದೆಯೆಂದು ಇಲ್ಲಿ ಹೇಳಲ್ಪಟ್ಟಿದೆ. ಆ ಸಂಮೋಹದಿಂದ ಜ್ಞಾಪಕಶಕ್ತಿ (ಸ್ಮೃತಿ) ಕುಂದುತ್ತದೆ. ಅದರಿಂದ ಬುದ್ಧಿ ಭ್ರಮಣೆಯಾಗುವುದು. ಬುದ್ಧಿನಾಶದಿಂದ ಮನುಜನು ಮಹಾ ಪತನವನ್ನು ಹೊಂದುತ್ತಾನೆ. ಆದ್ದರಿಂದ ಮುಮುಕ್ಷುವು ಇಂದ್ರಿಯಗಳನ್ನು ವಿಷಯಗಳ ಕಡೆ ಹರಿಯಬಿಡದೆ, ಮನಸ್ಸು ಅವುಗಳ ಬಗ್ಗೆ ಚಿಂತಿಸದಂತೆ ಕಡು ಜಾಗರೂಕನಾಗಿರಬೇಕೆಂದು ಭಗವಂತನು ಇಲ್ಲಿ ಎಚ್ಚರಿಸುತ್ತಿದ್ದಾನೆ.

"ಧ್ಯಾಯತೋ ವಿಷಯಾನ್"- ಅನ್ನುವಲ್ಲಿ ಒಂದು ವಿಶೇಷವಿದೆ. ಅದು ಏನೆಂದರೆ ಧ್ಯಾನವೆನ್ನುವುದು ಒಂದು ಹೊಸ ವಿಷಯವಲ್ಲ. ಅದು ಪ್ರಾಪಂಚಿಕ ಜನರೆಲ್ಲರಿಗೂ ತಿಳಿದ ವಿಷಯವೇ. ಆದರೆ ಅವರು ದೃಶ್ಯ ವಸ್ತುಗಳನ್ನು ಧ್ಯಾನಿಸುತ್ತಾರೆ, ಭಗವಂತನನ್ನು ಧ್ಯಾನಿಸುವುದಿಲ್ಲ. ಇಷ್ಟೇ ವ್ಯತ್ಯಾಸ. ಆದ್ದರಿಂದ ದೈವ ಧ್ಯಾನವನ್ನು ಅಭ್ಯಾಸ ಮಾಡಿಕೊಳ್ಳಬೇಕೆಂದರೆ ಯಾವ ಏಕಾಗ್ರತೆ, ಆಸಕ್ತಿ ಮುಂಚೆ ವಿಷಯ ಭೋಗಗಳ ಮೇಲಿತ್ತೋ ಅದನ್ನೇ ದೈವದ ಕಡೆಗೆ ತಿರುಗಿಸಿದರೆ ಸಾಕು, ಹೊಸದಾಗಿ ಮಾಡಬೇಕಾದದ್ದೇನಿಲ್ಲ. ತಕ್ಷಣ ಮೋಕ್ಷವು ಕರತಲಾಮಲಕವಾಗುವುದು. ಪ್ರಹ್ಲಾದನು ಇಂತಹ ವರವನ್ನೇ ಕೋರಿದನು.* ಆದ್ದರಿಂದ ವಿಷಯಧ್ಯಾನಗಳನ್ನು ಬಿಟ್ಟು ದೈವ ಧ್ಯಾನವನ್ನು ಮಾಡಬೇಕು. ಮೋಹವೆಂದು ಹೇಳದೆ ಸಂಮೋಹವೆಂದು ಹೇಳಿರುವುದರಿಂದ; ಭ್ರಮೆ ಎಂದು ಹೇಳದೆ 'ವಿಭ್ರಮೆ' ಎಂದು ಹೇಳಿರುವುದರಿಂದ; ನಶ್ಯತಿ

* ಯಾ ಪ್ರೀತಿರವಿವೇಕಾನಾಂ ವಿಷಯೇಶ್ವಾನಪಾಯಿನೀ। ತ್ವಾಮನುಸ್ಮರತಸ್ಸಾ ಮೇ ಹೃದಯಾನ್ಮಾ ಪಸರ್ಪತು। (ಭಾಗವತ)
"ಅವಿವೇಕಿಗಳಿಗೆ ವಿಷಯಗಳ ಮೇಲೆ ಎಷ್ಟು ತೀವ್ರವಾದ ಆಸಕ್ತಿಯಿದೆಯೋ ಅಂತಹ ಗಾಢ ಆಸಕ್ತಿ ನಿನ್ನನ್ನು ಸ್ಮರಿಸುವ ನನ್ನ ಹೃದಯದಿಂದ ದೂರವಾಗದ ಹಾಗೆ ನೋಡಿಕೊ."

ಎಂದು ಹೇಳದೆ 'ಪಣಶ್ಯತಿ' ಎಂದು ಹೇಳಿರುವುದರಿಂದ ವಿಷಯವಸ್ತುಗಳ ವಿಶೇಷ ದುಷ್ಪರಿಣಾಮಗಳನ್ನು ಒತ್ತಿ ಹೇಳಿದಂತಾಗಿದೆ.

ಪ್ರ : ಜೀವಿಯ ವಿನಾಶಕ್ಕೆ ಕಾರಣವೇನು?

ಉ : (ದೃಶ್ಯ) ವಿಷಯ ಚಿಂತನೆ.

ಪ್ರ : ಅದು ಜೀವಿಯನ್ನು ಯಾವ ಪ್ರಕಾರವಾಗಿ ಪತನಗೊಳಿಸುವುದು?

ಉ : ವಿಷಯ ಚಿಂತನೆಯಿಂದ ವಿಷಯಸಂಗವೇರ್ಪಟ್ಟು ಅದರಿಂದ ಕಾಮವು, ಕಾಮದಿಂದ ಕ್ರೋಧವು, ಕ್ರೋಧದಿಂದ ಸಂಮೋಹ, ಸಂಮೋಹದಿಂದ ವಿಸ್ಮೃತಿ, ವಿಸ್ಮೃತಿಯಿಂದ ಬುದ್ಧಿನಾಶ, ಬುದ್ಧಿ ನಾಶದಿಂದ ಅಧೋಗತಿ ಪ್ರಾಪ್ತಿ ಕ್ರಮವಾಗಿ ಸಂಭವಿಸುತ್ತವೆ.

**ಅ॥** ಇಂದ್ರಿಯ ಹಾಗು ಮನಸ್ಸುಗಳನ್ನು ಸ್ವಾಧೀನ ಮಾಡಿಕೊಂಡ ಸ್ಥಿತಪ್ರಜ್ಞನು ಪ್ರಪಂಚದಲ್ಲಿ ಹೇಗಿರುವನು ಹಾಗು ಯಾವ ಫಲವನ್ನು ಹೊಂದು ವನೆನ್ನುವುದನ್ನು ತಿಳಿಸಲ್ಪಾಗಿದೆ.

**೬೪. ರಾಗದ್ವೇಷವಿಯುಕ್ತೈಸ್ತು ವಿಷಯಾನಿಂದ್ರಿಯೈಶ್ಚರನ್**
**ಆತ್ಮವಶ್ಯೈರ್ವಿಧೇಯಾತ್ಮಾ ಪ್ರಸಾದಮಧಿಗಚ್ಛತಿ**

**ಅರ್ಥ:** ತು=ಆದರೆ; ವಿಧೇಯಾತ್ಮಾ=ಸ್ವಾಧೀನವಾದ ಮನಸ್ಸುಳ್ಳವನು; ರಾಗದ್ವೇಷ ವಿಯುಕ್ತೈಃ=ರಾಗದ್ವೇಷ ಇಲ್ಲದೆಯೂ; ಆತ್ಮವಶ್ಯೈಃ=ತನ್ನ ಸ್ವಾಧೀನ ದಲ್ಲಿರುವುವು (ಆದ); ಇಂದ್ರಿಯೈಃ=ಇಂದ್ರಿಯಗಳಿಂದ; ವಿಷಯಾನ್=ಶರೀರ ಧಾರಣೋಪಾಯಗಳಾದ ಅನ್ನಪಾನಾದಿ (ವಿಷಯಗಳು); ಚರನ್=ಅನುಭವಿಸು ತ್ತಿದ್ದರೂ; ಪ್ರಸಾದಮ್=ಮನೋ ನಿರ್ಮಲತೆಯನ್ನು (ಮನಃಶಾಂತಿಯನ್ನು); ಅಧಿಗಚ್ಛತಿ=ಹೊಂದುತ್ತಿದ್ದಾನೆ.

**ತಾ॥** ಆದರೆ ಮನಸ್ಸನ್ನು ಸ್ವಾಧೀನಮಾಡಿಕೊಂಡವನು, ರಾಗ ದ್ವೇಷರಹಿತವಾಗಿದ್ದು ತನಗೆ ಅಧೀನವಾಗಿರುವ ಇಂದ್ರಿಯಗಳಿಂದ (ದೇಹ ಯಾತ್ರೆಗಾಗಿ) ಅನ್ನ ಪಾನಾದಿ ವಿಷಯಗಳನ್ನು ಅನುಭವಿಸುತ್ತಿದ್ದರೂ, ಮನೋನಿರ್ಮಲತೆ (ಮನಶ್ಶಾಂತಿ)ಯನ್ನು ಹೊಂದುತ್ತಿದ್ದಾನೆ.

**ವ್ಯಾಖ್ಯೆ:** ಮನೋನಿರ್ಮಲತೆಯನ್ನು, ತತ್ಫಲಿತವಾಗಿ ಮನಶ್ಶಾಂತಿಯನ್ನು ಯಾರು ಹೊಂದುವರು ಎನ್ನುವುದನ್ನು ಈ ಶ್ಲೋಕದಲ್ಲಿ ನಿರೂಪಿಸಲಾಗಿದೆ. ರಾಗದ್ವೇಷಗಳಿಲ್ಲದೆ, ಇಂದ್ರಿಯ ಮನಸ್ಸುಗಳನ್ನು ಸ್ವಾಧೀನ ಪಡಿಸಿಕೊಂಡವನು, ಮನೋನಿರ್ಮಲತೆಯನ್ನು, ಮನಶ್ಶಾಂತಿಯನ್ನು ತಪ್ಪದೆ ಹೊಂದುವನು. ಅಂತಹವನು ದೇಹ ಸಂರಕ್ಷಣಾರ್ಥವಾಗಿ ಅನ್ನ ಪಾನಾದಿಗಳನ್ನು ಸ್ವೀಕರಿಸಿದರೂ ಆತನ ಮನೋನಿರ್ಮಲತೆಗೆ, ಶಾಂತಿಗೆ ಯಾವರೀತಿಯ ಭಂಗವೂ ಉಂಟಾಗಲಾರದು. ವಿಷದ ಹಲ್ಲನ್ನು ಕಿತ್ತ ಹಾವು ಹೇಗೆ ಹಾನಿಯಲ್ಲವೋ ಹಾಗೆ ರಾಗದ್ವೇಷಗಳು ನಶಿಸಿದ ಇಂದ್ರಿಯ, ಮನಸ್ಸುಗಳಿಂದ ಪ್ರಪಂಚದಲ್ಲಿ ವ್ಯವಹರಿಸಿದರೂ ಅವುಗಳಿಂದ ಯಾವ ಹಾನಿಯೂ ಉಂಟಾಗುವುದಿಲ್ಲ. ಹೇಳಿದ ಹಾಗೆ ಕೇಳುವ ಕುದುರೆಗಳಿದ್ದಲ್ಲಿ ರಥವು ಗಮ್ಯಸ್ಥಾನವನ್ನು ಸೇರುವಹಾಗೆ, ರಥಿಕನಿಗೆ ಪರಮಶಾಂತಿ ಲಭಿಸುವಂತೆ, ಸ್ವಾಧೀನವಾದ ಇಂದ್ರಿಯಮನಗಳು ಶರೀರ ಯಾತ್ರೆಯ ವ್ಯವಹಾರದಲ್ಲಿ ಮನುಜನ ಚಿತ್ತ ಶಾಂತಿಗೆ ಭಂಗವನ್ನುಂಟು ಮಾಡುವುದಿಲ್ಲ.

"ಆತ್ಮವಶ್ಯೈಃ ವಿಧೇಯಾತ್ಮಾ"- ಎನ್ನುವ ಎರಡು ಪದಗಳ ಪ್ರಯೋಗ ದಿಂದ ಇಂದ್ರಿಯಗಳು, ಮನಸ್ಸು ಮನುಜನಿಗೆ ವಿಧೇಯವಾಗಿ ಇರಬೇಕೇ ಹೊರತು ಮನುಜನು ಅವುಗಳ ದಾಸನಾಗಬಾರದೆಂದು ಸ್ಪಷ್ಟವಾಗುತ್ತಿದೆ. ಪ್ರಪಂಚದಲ್ಲಿ ಅನೇಕರು ತಮ್ಮ ಇಂದ್ರಿಯ ಮನಗಳಿಗೆ ದಾಸರಾಗಿ ಪರತಂತ್ರರಾಗಿ ವರ್ತಿಸುತ್ತಾರೆ. ಅಂತಹವರಿಗೆ ಚಿತ್ತಶಾಂತಿ ಎಂದೆಂದಿಗೂ ಲಭಿಸದು. ಎಂತಹ ಧನವಂತನಾದರೂ, ಬಲವಂತನಾದರೂ, ವಿದ್ಯಾವಂತನಾದರೂ ತನ್ನ ಇಂದ್ರಿಯ, ಮನಸ್ಸುಗಳು ತನಗೆ ವಿಧೇಯವಾಗಿರದಿದ್ದಲ್ಲಿ ಶಾಂತಿಯನ್ನು ಹೊಂದಲಾರನು. ಆದ್ದರಿಂದಲೇ ಭಗವಂತನು ಇಲ್ಲಿ ಶಾಂತಿ, ನಿರ್ಮಲತೆಗಳಿಗೆ ಒಳ್ಳೆಯ ಮಾರ್ಗವನ್ನು ಬೋಧಿಸುತ್ತಾ, ಇಂದ್ರಿಯಾದಿಗಳನ್ನು ವಶದಲ್ಲಿಟ್ಟು ಕೊಂಡವನೇ ಅವುಗಳನ್ನು ಅನುಭವಿಸಬಲ್ಲನೆಂದು ಘಂಟಾಘೋಷವಾಗಿ ಹೇಳಿರುವನು. ಆದ್ದರಿಂದ ತನ್ನ ಇಂದ್ರಿಯ ಮನಸ್ಸುಗಳಿಗೆ ತಾನು ದಾಸನಾಗದೆ, ಅವು ಆಡಿಸಿದ ಹಾಗೆ ಆಡದೆ, ಪಾರತಂತ್ರ್ಯವನ್ನು ದೂರಮಾಡಿ ವಿವೇಕ ವೈರಾಗ್ಯಗಳಿಂದ, ಭಗವತ್ ಭಕ್ತಿಯಿಂದ ಇಂದ್ರಿಯಗಳನ್ನು ವಶೀಕರಿಸಿಕೊಂಡು ಪರಮ ಶಾಂತಿಯನ್ನು, ಆನಂದವನ್ನು ಹೊಂದಬೇಕು.

ಪ್ರ : ಶಾಂತಿಯನ್ನು, ನಿರ್ಮಲತೆಯನ್ನು ಯಾವನು ಹೊಂದಬಲ್ಲನು?

ಉ : ೧) ರಾಗ ದ್ವೇಷಗಳಿಲ್ಲದವನು ೨) ಇಂದ್ರಿಯ ಮನಗಳನ್ನು ಸ್ವಾಧೀನ ಪಡಿಸಿಕೊಂಡವನು ಹೊಂದಬಲ್ಲನು.

**೬೫. ಪ್ರಸಾದೇ ಸರ್ವದುಃಖಾನಾಂ ಹಾನಿರಸ್ಯೋಪಜಾಯತೇ**
**ಪ್ರಸನ್ನ ಚೇತಸೋ ಹ್ಯಾಶು ಬುದ್ಧಿಃ ಪರ್ಯವತಿಷ್ಠತಿ**

**ಅರ್ಥ:** ಪ್ರಸಾದೇ=ಮನೋ ನೈರ್ಮಲ್ಯ (ಚಿತ್ತಶಾಂತಿ)ವುಂಟಾದಾಗ; ಅಸ್ಯ= ಈತನಿಗೆ, ಸರ್ವದುಃಖಾನಾಂ=ಸಮಸ್ತ ದುಃಖಗಳ; ಹಾನಿಃ=ವಿನಾಶವು; ಉಪಜಾಯತೇ=ಉಂಟಾಗುತ್ತಿದೆ; ಪ್ರಸನ್ನ ಚೇತಸಃ=ನಿರ್ಮಲ ಮನಸ್ಸುಳ್ಳವನಿಗೆ; ಬುದ್ಧಿಃ=ಬುದ್ಧಿ; ಆಶು=ಶೀಘ್ರವಾಗಿ; ಪರ್ಯವತಿಷ್ಠತಿಹಿ= (ಪರಮಾತ್ಮನಲ್ಲಿ) ಸ್ಥಿರವಾಗುವುದು.

**ತಾ॥** ಮನೋನಿರ್ಮಲತೆಯುಂಟಾಗುವುದರಿಂದ ಮನುಜನ ಸಮಸ್ತ ದುಃಖಗಳು ಉಪಶಮನ ಹೊಂದುತ್ತವೆ. ನಿರ್ಮಲ ಮನಸ್ಕನ ಬುದ್ಧಿ ಶೀಘ್ರವಾಗಿ (ಪರಮಾತ್ಮನಲ್ಲಿ) ಸ್ಥಿರತೆಯನ್ನು ಹೊಂದುತ್ತದೆ.

**ವ್ಯಾಖ್ಯೆ:** ಪ್ರತಿ ಜೀವಿಯು ದುಃಖರಾಹಿತ್ಯ, ಆನಂದ ಪ್ರಾಪ್ತಿಯನ್ನು ಕೋರುತ್ತಿದ್ದಾನೆ. ಅವು ಹೇಗೆ ಲಭಿಸುವುವು? ಅದಕ್ಕೆ ಉತ್ತರ ಈ ಶ್ಲೋಕದಲ್ಲಿ ಭಗವಂತನು ತಿಳಿಸುತ್ತಿದ್ದಾನೆ. ಮನಸ್ಸು ನಿರ್ಮಲವಾಗುವುದರಿಂದ ಜೀವಿಗೆ ಅವೆರಡೂ ಸಿದ್ಧಿಸುತ್ತವೆ. ಚಿತ್ತವು ಯಾವಾಗ ಭೋಗ ವಾಸನೆಗಳ ಸೋಂಕಿಲ್ಲದೆ ನಿರ್ಮಲವಾಗಿರುವುದೋ ಆಗ ಜೀವನದ ಲಕ್ಷ್ಯ ಸಿದ್ಧಿಸಿದಂತೆಯೇ. ಹೇಗೆಂದರೆ ನಿರ್ಮಲವಾದ ಕನ್ನಡಿಯಲ್ಲಿ ವಸ್ತುವು ಚೆನ್ನಾಗಿ ಪ್ರತಿಬಿಂಬಿಸಿದಂತೆ ಶುದ್ಧಾಂತಃಕರಣದಲ್ಲಿ, ಶಾಂತ ಚಿತ್ತದಲ್ಲಿ ಅಧಿಷ್ಠಾನವಾದ ಆತ್ಮ ದೇದೀಪ್ಯ ಪ್ರಮಾನ ವಾಗಿ ಪ್ರಕಾಶಿಸುವನು.

"ಮೋಕ್ಷೋ ಹಿ ಚೇತೋ ವಿಮಲಂ ಸಂಯಜ್ಞಾನ ವಿಬೋಧಿತಂ"
(ವಶಿಷ್ಠ ಗೀತೆ).

ಉತ್ತಮ ಜ್ಞಾನ ವಿಚಾರಣೆಯಿಂದ ಏರ್ಪಟ್ಟ ನಿರ್ಮಲಚಿತ್ತವೇ ಮೋಕ್ಷವೆಂದು ಶ್ರೀ ವಶಿಷ್ಠ ಮುನೀಂದ್ರರು ಹೇಳಿದ್ದಾರೆ. ಪತಂಜಲಿ

ಮಹರ್ಷಿಯು ಆ ಭಾವವನ್ನೇ ವ್ಯಕ್ತಗೊಳಿಸಿದ್ದಾರೆ.* ಆದ್ದರಿಂದ ಮೋಕ್ಷಾಭಿಲಾಷೆ ಹೊಂದಿದವರು ತಮ್ಮ ಚಿತ್ತದಲ್ಲಿರುವ ವಿಷಯ ವಾಸನಾದಿ ಮಾಲಿನ್ಯವನ್ನು ತೊಳೆದು, ಅದನ್ನು ನಿರ್ಮಲವಾಗಿಟ್ಟುಕೊಳ್ಳಬೇಕು. ಹಾಗೆ ಮಾಡುವುದರಿಂದ ಎರಡು ಮಹತ್ತರ ಫಲಗಳು ಕೈಗೂಡುವುವು ಎಂದು ಭಗವಂತನು ನುಡಿಯುತ್ತಿದ್ದಾನೆ. ಅವು ಯಾವುವೆಂದರೆ-

೧) ಸಮಸ್ತ ದುಃಖಗಳ ನಾಶ

೨) ಬುದ್ಧಿಯು ಶೀಘ್ರವಾಗಿ ಆತ್ಮದಲ್ಲಿ ಸ್ಥಿರತೆಯನ್ನು ಹೊಂದುವುದು.

ಮೊದಲನೆಯದು ದುಃಖರಾಹಿತ್ಯ, ಎರಡನೆಯದು ಆನಂದ ಪ್ರಾಪ್ತಿ. ಈ ಎರಡೂ ಮನೋನಿರ್ಮಲತೆಯಿಂದ ಸಿದ್ಧಿಸುತ್ತವೆ. "ಸರ್ವ ದುಃಖಾನಾಂ" ಎಂದು ಹೇಳಲ್ಪಟ್ಟಿರುವುದರಿಂದ ಯಾವುದೋ ಒಂದೆರಡು ದುಃಖಗಳಲ್ಲದೆ ಆಧ್ಯಾತ್ಮಿಕ, ಆಧಿಭೌತಿಕ, ಆಧಿದೈವಿಕಾದಿ ಸಮಸ್ತ ದುಃಖಗಳೂ ಉಪಶಮನಗೊಳ್ಳುತ್ತವೆ ಎಂದು ಸ್ಪಷ್ಟೀಕರಿಸದಂತಾಗಿದೆ. ಆಹಾ! ಎಂತಹ ಅಮೋಘವಾದ ಫಲ! ದುಃಖಗಳಲ್ಲಿ ಬಿದ್ದು ವಿಲವಿಲ ಒದ್ದಾಡುತ್ತ, ತಾಪತ್ರಯಗಳಲ್ಲಿ ಬೆಂದು ಬೇಸತ್ತು ಒಂದುಕ್ಷಣವಾದರೂ ಸುಖ, ಶಾಂತಿ ಇಲ್ಲದಿರುವ ಮಾನವನಿಗೆ ಇದಕ್ಕಿಂತ ಮಿಗಿಲಾದ ಫಲವಿನ್ನೇನುಬೇಕು? ಆದ್ದರಿಂದ ಆ ಸದ್ಫಲಿತಗಳಿಗಾಗಿ ಚಿತ್ತಶುದ್ಧಿಯನ್ನು ಸಂಪಾದಿಸಿಕೊಳ್ಳಬೇಕೆಂದು ಭಗವಂತನು ಕರುಣೆಯಿಂದ ಬೋಧಿಸುತ್ತಿದ್ದಾನೆ. ಅದು ಇಲ್ಲದೇ ಇದ್ದರೆ ಎಷ್ಟು ಜನ್ಮಗಳನ್ನು ಹೊತ್ತರೂ ಈ ಸಂಸಾರಯಾತನೆ ತೀರುವುದಿಲ್ಲ.

ಇನ್ನು ಚಿತ್ತ ನೈರ್ಮಲ್ಯದಿಂದ ಉಂಟಾಗುವ ಎರಡನೆಯ ಲಾಭ, ಆನಂದ ಪ್ರಾಪ್ತಿ. 'ಬುದ್ಧಿಃ ಪರ್ಯವತಿಷ್ಠತಿ'- ಚಿತ್ತವು ಯಾವಾಗ ನಿರ್ಮಲವಾಗುವುದೋ ಆಗ ಆತ್ಮದಲ್ಲಿ ಸ್ಥಿರತೆಯನ್ನು ಹೊಂದುವುದು. ಆತ್ಮ ಎಂದರೆ ಸಚ್ಚಿದಾನಂದ ಸಾಗರ; ಬ್ರಹ್ಮಾನಂದ ರಾಶಿ. ಅದರಲ್ಲಿ ಚಿತ್ತವನ್ನು ಸ್ಥಿರವಾಗಿಸಿಕೊಂಡರೆ ಇನ್ನು ಜೀವಿಯ ಆನಂದಕ್ಕೆ ಪಾರವೇ ಇಲ್ಲ. ಚತುರ್ಮುಖಾನಂದವೂ ಕೂಡ ಆತ್ಮಾನಂದ ಸಾಗರದ ಒಂದು ಬಿಂದುವೇ ಆಗಿದೆ. ಆ ಸಾಗರದಲ್ಲಿ ಬುದ್ಧಿ ಐಕ್ಯವಾದರೆ, ಸ್ಥಿರತೆ ಹೊಂದಿದರೆ ಇನ್ನು ಜೀವಿತಾಶಯವು ಸಿದ್ಧಿಸಿದಂತೇ ಸರಿ. ದುಃಖರಾಹಿತ್ಯ, ಆನಂದಪ್ರಾಪ್ತಿಯೆಂಬ ಮಹೋನ್ನತ ಫಲದ್ವಯವನ್ನು ಕೊಡುವ ಮನೋನೈರ್ಮಲ್ಯವನ್ನು ಪ್ರಯತ್ನ ಪೂರ್ವಕವಾಗಿ ಜೀವಿಯು ಸಾಧಿಸಬೇಕೆಂಬುದು ಈ ಶ್ಲೋಕದ ತಾತ್ಪರ್ಯವಾಗಿದೆ.

ಪ್ರ : ಸಮಸ್ತ ದುಃಖಗಳನ್ನು ಶಮನಗೊಳಿಸುವ ಉಪಾಯವೇನು?

ಉ : ಮನಸ್ಸನ್ನು ನಿರ್ಮಲಮಾಡಿಕೊಳ್ಳುವುದು

ಪ್ರ : ಯಾರ ಬುದ್ಧಿ ಆತ್ಮದಲ್ಲಿ ಸ್ಥಿರವಾಗಿರುವುದು?

ಉ : ನಿರ್ಮಲ ಚಿತ್ತವುಳ್ಳವನ ಬುದ್ಧಿ.

ಪ್ರ : ಮನೋನಿರ್ಮಲತೆಯಿಂದ ಉಂಟಾಗುವ ಫಲಗಳೇನು?

ಉ : ೧) ಸಮಸ್ತ ದುಃಖನಾಶ ೨) ಬುದ್ಧಿ ಶೀಘ್ರವಾಗಿ ಆತ್ಮದಲ್ಲಿ ನೆಲೆಸುವುದು (ಅದರ ಮೂಲಕ ಆನಂದ ಪ್ರಾಪ್ತಿ ಸಂಭವಿಸುವುದು).

ಅ॥ ಇನ್ನು ಇಂದ್ರಿಯ ಮನಗಳನ್ನು ಸ್ವಾಧೀನ ಪಡಿಸಿಕೊಳ್ಳದೆ ಇರುವವರ ದುಃಸ್ಥಿತಿಯನ್ನು ಎರಡು ಶ್ಲೋಕಗಳ ಮೂಲಕ ತಿಳಿಸಲಾಗುತ್ತಿದೆ.

**೬೬. ನಾಸ್ತಿ ಬುದ್ಧಿರಯುಕ್ತಸ್ಯ ನ ಚಾಯುಕ್ತಸ್ಯ ಭಾವನಾ**
**ನ ಚಾಭಾವಯತಃ ಶಾಂತಿರಶಾಂತಸ್ಯ ಕುತಃ ಸುಖಮ್**

**ಅರ್ಥ:** ಅಯುಕ್ತಸ್ಯ=ಇಂದ್ರಿಯ ನಿಗ್ರಹಣವಿಲ್ಲದವನಿಗೆ (ಇಂದ್ರಿಯ ಮನಸ್ಸುಗಳನ್ನು ಹತೋಟಿಯಲ್ಲಿಡದವನಿಗೆ); ಬುದ್ಧಿಃ=ವಿವೇಕ ಬುದ್ಧಿ; ನಾಸ್ತಿ= ಉಂಟಾಗದು; ಅಯುಕ್ತಸ್ಯ=ಇಂದ್ರಿಯ ನಿಗ್ರಹವಿಲ್ಲದವನಿಗೆ; ಭಾವನಾಚ= ಆತ್ಮಚಿಂತನೆಯು; ನ=ಉಂಟಾಗುವುದಿಲ್ಲ. ಅಭಾವಯತಃ=ಆತ್ಮ ಚಿಂತನೆಯಿಲ್ಲದವನಿಗೆ; ಶಾಂತಿಃ ಚ=ಶಾಂತಿಯು; ನ=ಉಂಟಾಗದು. ಅಶಾಂತಸ್ಯ=ಶಾಂತಿಯಿಲ್ಲದವನಿಗೆ; ಸುಖಂ=ಸುಖವು; ಕುತಃ=ಎಲ್ಲಿಯದು.

**ತಾ॥** ಇಂದ್ರಿಯ ನಿಗ್ರಹ ಹಾಗೂ ಮನಸ್ಸಂಯಮವಿಲ್ಲದವನಿಗೆ ವಿವೇಕ ಬುದ್ಧಿ ಉಂಟಾಗುವುದಿಲ್ಲ. ಆತ್ಮ ಚಿಂತನೆಯು ಸಂಭವಿಸಲು ಸಾಧ್ಯವಿಲ್ಲ. ಆತ್ಮಚಿಂತನೆ ಇಲ್ಲದವನಿಗೆ ಶಾಂತಿ ಲಭಿಸುವುದಿಲ್ಲ. ಶಾಂತಿಯಿಲ್ಲದವನಿಗೆ ಇನ್ನು ಸುಖವೆಲ್ಲಿ?

**ವ್ಯಾಖ್ಯೆ:** ಪ್ರತಿ ಜೀವಿಯು ಸಂಪೂರ್ಣ ಸುಖವನ್ನು ಅಪೇಕ್ಷಿಸುತ್ತಾನೆ. ಆ ಸುಖವು ಎಲ್ಲಿಂದ ಬರುವುದು? ಹೇಗೆ ಲಭಿಸುವುದು? ದೃಶ್ಯ ಪದಾರ್ಥಗಳಲ್ಲಿ, ವಿಷಯ ಭೋಗಗಳಲ್ಲಿ ಲಭಿಸುವ ಸುಖವು ವಾಸ್ತವ ಸುಖವಲ್ಲ. ಅದು ಪ್ರತಿಬಿಂಬ ಸುಖ, ಕ್ಷಣಿಕ ಸುಖ, ದುಃಖಮಿಶ್ರಿತ ಸುಖ. ಅವಿಚ್ಛಿನ್ನ ಪರಿಪೂರ್ಣ ನಿರತಿಶಯ ಸುಖ ಉಂಟಾಗಬೇಕಾದರೆ ಚಿತ್ತದಲ್ಲಿ ಶಾಂತಿಯಿರಬೇಕು. ಅಶಾಂತ ಮನಸ್ಸು ಸುಖವನ್ನು ಹೊಂದಲಾರದು. ಆದರೆ ಆ ಶಾಂತಿ ಹೇಗೆ ಲಭ್ಯವಾಗುವುದು? ನಶ್ವರ, ಪ್ರಾಪಂಚಿಕ ಪದಾರ್ಥ ಗಳನ್ನು ಚಿಂತಿಸುವುದರಿಂದ ಲಭಿಸದು. ಒಂದು ವೇಳೆ ಸ್ವಲ್ಪ ಅನುಭವವಾದರೂ ಅದು ನಿಲ್ಲದು. ಶಾಶ್ವತವಾದ ಆತ್ಮದ (ದೈವದ) ಬಗ್ಗೆ ಚಿಂತಿಸುವುದರಿಂದ, ಧ್ಯಾನಿಸುವುದರಿಂದ ಚಿತ್ತದಲ್ಲಿ ಶಾಂತಿಯುಂಟಾಗುತ್ತದೆ. ಆದರೆ ಆ ಆತ್ಮಚಿಂತನೆ ಅಶುದ್ಧ ಮನಸ್ಸುಳ್ಳವರಲ್ಲಿ ಹುಟ್ಟುವುದಿಲ್ಲ. ಬುದ್ಧಿ ಶುದ್ಧವಾಗಿದ್ದಾಗ (ಮನೋ ನೈರ್ಮಲ್ಯ ಸ್ಥಿತಿಯಲ್ಲಿಯೇ) ಆತ್ಮ ಚಿಂತನೆ, ವಿವೇಕಗಳು ಉದಯಿಸುತ್ತವೆ. ಆದರೆ ಆ ಬುದ್ಧಿಯು ಹೇಗೆ ಶುದ್ಧವಾಗುವುದು? ಚಿತ್ತವು ವಿಷಯಗಳಲ್ಲಿ ಪ್ರವರ್ತಿಸದೆ ದೃಶ್ಯವಾಸನೆಗಳಿಂದ ವಿಮುಕ್ತವಾದಾಗ ಮಾತ್ರ ಬುದ್ಧಿ ನಿರ್ಮಲವಾಗುವುದು. ಇಂದ್ರಿಯನಿಗ್ರಹ ಹಾಗೂ ಮನಸ್ಸಂಯಮದಿಂದ ಬುದ್ಧಿ ಪರಿಶುದ್ಧವಾಗುತ್ತದೆ. ಈ ಪ್ರಕಾರವಾಗಿ ಬ್ರಹ್ಮಾನಂದಕ್ಕೆ, ನಿತ್ಯ ನಿರತಿಶಯ ಸುಖಕ್ಕೆ ಹೇತುವು ಇಂದ್ರಿಯನಿಗ್ರಹವೇ ಎಂದು ಅರ್ಥವಾಗುತ್ತದೆ.

| | | |
|---|---|---|
| ಸುಖವು ಬೇಕೇ | - | ಶಾಂತಿಯನ್ನು ಪಡೆ |
| ಶಾಂತಿ ಬೇಕೇ | - | ಆತ್ಮ ಚಿಂತನೆ ಮಾಡು |
| ಆತ್ಮಚಿಂತನೆ ಬೇಕೇ | - | ನಿರ್ಮಲ ಬುದ್ಧಿಯನ್ನು ಹೊಂದು |
| ನಿರ್ಮಲಬುದ್ಧಿ ಬೇಕೇ | - | ಇಂದ್ರಿಯಗಳನ್ನು ನಿಗ್ರಹಿಸು. |

- ಎಂದು ಈ ಶ್ಲೋಕದಲ್ಲಿ ಭಗವಂತನು ವಿಶದೀಕರಿಸುತ್ತಾ ಸುಖದ ಮೂಲ ಇಂದ್ರಿಯನಿಗ್ರಹದಲ್ಲಿಯೇ ಇದೆಯೆಂದು ನುಡಿದಿರುವನು. ಆದ್ದರಿಂದ ಜೀವನ ಲಕ್ಷ್ಯವಾದ ಪರಮಸುಖವನ್ನು ಸಾಧಿಸುವುದರಲ್ಲಿ ಮಹತ್ವ ಸ್ಥಾನವನ್ನು

* ಸತ್ವ ಪುರುಷಯೋಃ ಶುದ್ಧಿಸಾಮ್ಯೇ ಕೈವಲ್ಯಂ (ಪ. ಯೋಗ ಸೂತ್ರಗಳು ೧೧೧-೫೫) ಆತ್ಮಕ್ಕೆ ಸಮಾನವಾದ ಚಿತ್ತ ನಿರ್ಮಲತೆಯೇ ಕೈವಲ್ಯ (ಮೋಕ್ಷ)

ಆಕ್ರಮಿಸಿಕೊಂಡಿರುವ ಈ ಇಂದ್ರಿಯ ನಿಗ್ರಹವನ್ನು ಪ್ರತಿಯೊಬ್ಬರೂ ತಪ್ಪದೆ ಅಭ್ಯಸಿಸಬೇಕು.

೧. ಪ್ರಶ್ನೆ : ಸುಖವು ಯಾವುದರಿಂದ ಉಂಟಾಗುತ್ತದೆ?

ಉತ್ತರ : ಶಾಂತಿಯಿಂದ

೨. ಪ್ರಶ್ನೆ : ಶಾಂತಿ ಯಾವುದರಿಂದ ಲಭಿಸುವುದು?

ಉತ್ತರ : ಆತ್ಮಚಿಂತನೆಯಿಂದ

೩. ಪ್ರಶ್ನೆ : ಆತ್ಮಚಿಂತನೆ ಯಾವುದರಿಂದ ಲಭಿಸುವುದು?

ಉತ್ತರ : ನಿರ್ಮಲ ಬುದ್ಧಿಯಿಂದ

೪. ಪ್ರಶ್ನೆ : ನಿರ್ಮಲಬುದ್ಧಿ ಯಾವುದರಿಂದ ಉಂಟಾಗುವುದು?

ಉತ್ತರ : ಇಂದ್ರಿಯ ನಿಗ್ರಹಣ, ಮನಸ್ಸಂಯಮ ಹಾಗು ವಿಷಯ ವಿರಕ್ತಿಗಳಿಂದ.

**೬೭. ಇಂದ್ರಿಯಾಣಾಂ ಹಿ ಚರತಾಂ ಯನ್ಮನೋಽನುವಿಧೀಯತೇ**
**ತದಸ್ಯ ಹರತಿ ಪ್ರಜ್ಞಾಂ ವಾಯುರ್ನಾವಮಿವಾಂಭಸಿ**

**ಅರ್ಥ:** ಚರತಾಂ ಇಂದ್ರಿಯಾಣಾಂ= ವಿಷಯಗಳಲ್ಲಿ ಪ್ರವರ್ತಿಸುತ್ತಿರುವ ಇಂದ್ರಿಯಗಳಲ್ಲಿ; ಯತ್=ಯಾವ ಇಂದ್ರಿಯವನ್ನು; ಮನಃ=ಮನಸ್ಸು; ಅನುವಿಧೀಯತೆ=ಅನುಸರಿಸಿ ಹೋಗುತ್ತಿದೆಯೋ; ತತ್=ಆ ಇಂದ್ರಿಯವು; ಅಸ್ಯ=ಇದರ; ಪ್ರಜ್ಞಾಂ=ವಿವೇಕ; ಅಂಭಸಿ=ನೀರಿನಲ್ಲಿ; ನಾವಂ= ದೋಣಿಯನ್ನು; ವಾಯುರಿವ=(ಪ್ರತಿಕೂಲ) ವಾಯುವುನಿಂದ; ಹರತಿಹಿ= ಎಳೆದುಕೊಂಡು ಹೋಗುತ್ತಿರುವುದಲ್ಲಾ!

**ತಾ||** ವಿಷಯಗಳಲ್ಲಿ ಪ್ರವರ್ತಿಸುತ್ತಿರುವ ಇಂದ್ರಿಯಗಳಲ್ಲಿ ಯಾವ ಒಂದು ಇಂದ್ರಿಯವನ್ನು ಮನಸ್ಸು ಅನುಸರಿಸಿ ಹೋದರೂ, ಅದು ಮನುಜನ ವಿವೇಕವನ್ನು ಜಲದಲ್ಲಿರುವ ದೋಣಿಯನ್ನು ಪ್ರತಿಕೂಲ ಗಾಳಿಯು ಬೇರೆದಾರಿಗೆ ಎಳೆದೊಯ್ಯುವಂತೆ ಅಪಹರಿಸಿ ಎಳೆದೊಯ್ಯುತ್ತದೆ.

(ಯತ್‌ಮನಃ ಅನುವಿಧೀಯತೇ ತತ್=ಯಾವ ಮನಸ್ಸು ಅನುಸರಿಸಿ ಹೋಗುತ್ತಿದೆಯೋ ಆ ಮನಸ್ಸು- ಎಂದು ಅರ್ಥವನ್ನು ಹೇಳಬಹುದು).

**ವ್ಯಾಖ್ಯೆ:** ಸಾಧಕನು ಇಂದ್ರಿಯಾರ್ಥಗಳಾದ ಶಬ್ದ ಸ್ಪರ್ಶಾದಿಗಳಲ್ಲಿ ವಿರಕ್ತಿ ಹೊಂದಿರಬೇಕು. ಹಾಗಿಲ್ಲದೆ ಇಂದ್ರಿಯಗಳು ಸ್ವೇಚ್ಛೆಯಾಗಿ ವಿಷಯಾರಣ್ಯದಲ್ಲಿ ಸಂಚರಿಸುತ್ತಿದ್ದರೆ, ಅದರಿಂದ ಉಂಟಾಗುವ ಪ್ರಮಾದವನ್ನು ಇಲ್ಲಿ ವರ್ಣಿಸಲಾಗಿದೆ. ವಿಷಯಗಳಲ್ಲಿ ಸಂಚರಿಸುವ ಇಂದ್ರಿಯಗಳಲ್ಲಿ ಮನಸ್ಸು ಯಾವುದೇ ಒಂದರಿಂದ ಪ್ರೇರೇಪಿತಗೊಂಡರೂ, ಆ ಇಂದ್ರಿಯವು ಆತನನ್ನು ಸಂಸಾರ ಕೂಪದಲ್ಲಿ ಬೀಳಿಸಿ ಅವನನ್ನು ಹಾಳು ಮಾಡುವುದು. ಈ ವಿಷಯವನ್ನು ದೃಷ್ಟಾಂತದ ಮೂಲಕ ವಿವರಿಸಲಾಗಿದೆ. ಯಾವ ಪ್ರಕಾರವಾಗಿ ಸಮುದ್ರದಲ್ಲಿ ಪ್ರತಿಕೂಲ ಗಾಳಿಯು ದೋಣಿಯನ್ನು ಅಪಮಾರ್ಗಕ್ಕೆ ಬೀಸಿ ತೆಗೆದುಕೊಂಡು ಹೋಗುವುದೋ ಇಲ್ಲ ಸಮುದ್ರದಲ್ಲಿ ಮುಳುಗಿಸುವುದೋ ಹಾಗೆ ಮನಸ್ಸಿನ ಹಿಂದೆ ಬಿದ್ದಿರುವ ಇಂದ್ರಿಯವು ಮನುಜನನ್ನು ದೈವಮಾರ್ಗದಿಂದ ದೂರಮಾಡಿ ಸಂಸಾರ ಮಾರ್ಗದಲ್ಲಿ ಬೀಳಿಸುತ್ತಿದೆ. ಒಂದು ಇಂದ್ರಿಯವೇ ಇಷ್ಟು ಅನರ್ಥವನ್ನು ತರಬಹುದಾದರೆ ಇನ್ನು ಸರ್ವೇಂದ್ರಿಯಗಳನ್ನೂ ಮನಸ್ಸು ಅನುಸರಿಸಿದರೆ ಎಷ್ಟು ವಿನಾಶವುಂಟಾಗುತ್ತದೆ ಎನ್ನುವುದನ್ನು ಬೇರೆ ಹೇಳಬೇಕಾಗಿಲ್ಲ.

ಆದ್ದರಿಂದ ಮನಸ್ಸನ್ನು ಸರಿಯಾಗಿ ವಿವೇಕವಂತಗೊಳಿಸಿ, ಅದು ಇಂದ್ರಿಯಗಳ ಹಿಂದೆ ಓಡದಂತೆ ನೋಡಬೇಕು. ಮನಸ್ಸು, ಇಂದ್ರಿಯಗಳನ್ನು ಹತೋಟಿಯಲ್ಲಿಟ್ಟುಕೊಂಡು ಅವು ವಿಷಯಗಳಲ್ಲಿ ಪ್ರವೇಶಿಸದಂತೆ ನಿರೋಧಿಸುತ್ತಾ ತನ್ನ ಸ್ವಾಧೀನದಲ್ಲಿಟ್ಟುಕೊಳ್ಳಬೇಕು. ಹಾಗಿಲ್ಲದೆ ಅವುಗಳೊಡನೆ ಮನಸ್ಸು ಕೂಡ ಸೇರಿದರೆ, ಆ ಇಂದ್ರಿಯಗಳು ಮನುಜನ ಪ್ರಜ್ಞೆಯನ್ನು, ವಿವೇಕವನ್ನು ಬೂದಿ ಮಾಡಿ ಹಾಕುವವೆಂದು ಇಲ್ಲಿ ಹೇಳಲಾಗಿದೆ. ಆದ್ದರಿಂದ ಸಾಧಕನು ತಾನು ಕಷ್ಟಪಟ್ಟು ಸಂಪಾದಿಸಿದ ವಿವೇಕ, ಆತ್ಮಜ್ಞಾನಗಳನ್ನು ಸುರಕ್ಷಿತ ವಾಗಿಡಬೇಕೆಂದರೆ ಇಂದ್ರಿಯ ದ್ವಾರಗಳನ್ನು ಮುಚ್ಚಿ (ನಿಗ್ರಹಿಸಿ), ವಿಷಯ ವಾಯುವು ಅವುಗಳ ಕಡೆ ಬೀಸದಂತೆ ಎಚ್ಚರಿಕೆ ವಹಿಸಬೇಕು. ಈ ರಹಸ್ಯವನ್ನೇ ಈ ಶ್ಲೋಕದಲ್ಲಿ ಹೇಳಲಾಗಿದೆ. ಅನೇಕ ಜನ ಸಾಧಕರು ಎಷ್ಟೋ ಪ್ರಯತ್ನದಿಂದ ಸ್ವಲ್ಪ ಆತ್ಮಜ್ಞಾನ, ಪ್ರಜ್ಞೆ, ವಿವೇಕ ಸಂಪಾದಿಸಿ ಅಜಾಗರೂಕತೆಯಿಂದ ಇಂದ್ರಿಯಗಳನ್ನು ವಿಷಯಗಳ ಕಡೆಗೆ ಬಿಡುವುದರಿಂದ, ಇಲ್ಲವೇ ವೈರಾಗ್ಯ ಕ್ಷೀಣಿಸುವುದರಿಂದ ತಮ್ಮ ಆ ಪ್ರಜ್ಞೆಯೆಲ್ಲವನ್ನು ಹಾಳುಮಾಡಿ ಕೊಳ್ಳುವುದು ಕಂಡು ಬರುತ್ತದೆ. ಅಂತಹವರಿಗೆ ಎಚ್ಚರಿಕೆ ಕೊಡುವುದಕ್ಕಾಗಿ ಈ ಪ್ರಕಾರವಾದ ಬೋಧೆಗಳನ್ನು ಭಗವಂತನು ಇಲ್ಲಿ ಹೇಳುತ್ತಿದ್ದಾನೆ. ಈ ಬೋಧೆಗಳನ್ನು ಕೇಳಿ ಸಾಧಕರು ತಮ್ಮ ಅನುಷ್ಠಾನದ ವಿಷಯದಲ್ಲಿ ಜಾಗರೂಕರಾಗಿ ವರ್ತಿಸಬೇಕು.

ಪ್ರ : ಇಂದ್ರಿಯಗಳು, ಮನಸ್ಸು ವಿಷಯಗಳಲ್ಲಿ ಸಂಚರಿಸುವುದರಿಂದ ಉಂಟಾಗುವ ಹಾನಿಯೇನು?

ಉ : ವಿಷಯಗಳಲ್ಲಿ ಪ್ರೀತಿಯುಳ್ಳ ಇಂದ್ರಿಯಗಳು ಹಾಗು ಮನಸ್ಸು ಮನುಜನ (ಪ್ರಜ್ಞೆ) ವಿವೇಕವನ್ನು ನಾಶಮಾಡುವುವು.

**ಅ||** ಆದ್ದರಿಂದ ಇಂದ್ರಿಯ ನಿಗ್ರಹವುಳ್ಳವನ ಪ್ರಜ್ಞೆ ಮಾತ್ರ ಸ್ಥಿರವಾಗಿರುವುದೆಂದು ವಚಿಸಲಾಗುತ್ತಿದೆ.

**೬೮. ತಸ್ಮಾದ್ಯಸ್ಯ ಮಹಾಬಾಹೋ ನಿಗೃಹೀತಾನಿ ಸರ್ವಶಃ**
**ಇಂದ್ರಿಯಾಣೀಂದ್ರಿಯಾರ್ಥೇಭ್ಯಸ್ತಸ್ಯ ಪ್ರಜ್ಞಾ ಪ್ರತಿಷ್ಠಿತಾ**

**ಅರ್ಥ:** ಮಹಾಬಾಹೋ=ಉದ್ದವಾದ ಬಾಹುಗಳಿರುವ ಓ ಅರ್ಜುನಾ! ತಸ್ಮಾತ್=ಆದ್ದರಿಂದ; ಯಸ್ಯ=ಯಾವೊಬ್ಬನ; ಇಂದ್ರಿಯಾಣಿ=ಇಂದ್ರಿಯ ಗಳು; ಇಂದ್ರಿಯಾರ್ಥೇಭ್ಯಃ=ವಿಷಯಗಳಿಂದ; ಸರ್ವಶಃ=ಸರ್ವವಿಧಗಳಿಂದ (ಸಂಪೂರ್ಣವಾಗಿ); ನಿಗೃಹೀತಾನಿ=ನಿಗ್ರಹಿಸಲ್ಪಟ್ಟಿವೆಯೋ; ತಸ್ಯ=ಆತನ; ಪ್ರಜ್ಞಾ=ಜ್ಞಾನ(ವಿವೇಕ); ಪ್ರತಿಷ್ಠಿತಾ=ಇನ್ನೂ ಹೆಚ್ಚು ಸ್ಥಿರಗೊಳ್ಳುತ್ತದೆ.

**ತಾ||** ಆದ್ದರಿಂದ ಓ ಅರ್ಜುನಾ! ಯಾವನು ತನ್ನ ಇಂದ್ರಿಯಗಳನ್ನು ವಿಷಯಗಳ ಕಡೆಗೆ ಹೋಗಬಿಡದೆ ಸರ್ವವಿಧಗಳಿಂದ ನಿಗ್ರಹಿಸುತ್ತಾನೋ, ಆತನ ಜ್ಞಾನ ಇನ್ನೂ ಸ್ಥಿರವಾಗುವುದು.

**ವ್ಯಾಖ್ಯೆ:** "ಸರ್ವಶಃ"- ಎಂದು ಹೇಳಿರುವುದರಿಂದ ಇಂದ್ರಿಯಗಳನ್ನು ಏನೋ ಸ್ವಲ್ಪ ನಿಗ್ರಹಿಸಿದರೆ ಸಾಲದು, ಸಂಪೂರ್ಣವಾಗಿ ನಿಗ್ರಹಿಸಬೇಕೆಂದು, ಸರ್ವವಿಧ ಗಳಿಂದ ಪ್ರಯತ್ನಮಾಡಿ ಹೇಗಾದರೂ ಅವುಗಳನ್ನು ಹತೋಟಿಯಲ್ಲಿಟ್ಟು ಕೊಳ್ಳಬೇಕೆಂದು ಸ್ಪಷ್ಟವಾಗುತ್ತದೆ.

ಇಂದ್ರಿಯಗಳನ್ನು ಶಬ್ದ ಸ್ಪರ್ಶಾದಿ ವಿಷಯಗಳ ಕಡೆ ಹೋಗಬಿಡದೆ ಯಾವನು ಸಂಪೂರ್ಣವಾಗಿ ನಿಗ್ರಹಿಸುವನೋ, ಅಂತಹವನ ವಿವೇಕ ಹಾಗು ಬುದ್ಧಿ ಆತ್ಮದಲ್ಲಿ ಸ್ಥಿರತೆಯನ್ನು ಹೊಂದುತ್ತವೆಯೆಂದು ಭಗವಂತನು ಇಲ್ಲಿ ತಿಳಿಸುತ್ತಿದ್ದಾನೆ. ಈ ಪ್ರಕಾರವಾಗಿ ಮತ್ತೆ ಮತ್ತೆ ಒತ್ತಿ ಹೇಳಿರುವುದರಿಂದ, ಮೋಕ್ಷಮಾರ್ಗದಲ್ಲಿ ಇಂದ್ರಿಯ ನಿಗ್ರಹಣಕ್ಕೆ ಎಂತಹ ಪ್ರಮುಖ ಸ್ಥಾನವಿದೆಯೋ ಅರ್ಥಮಾಡಿಕೊಳ್ಳಬೇಕು. 'ನಮ್ಮ ದುಃಖ ದೂರವಾಗಬೇಕು. ಸಂಸಾರ

ಯಾತನೆಗಳು ಶಮನಗೊಳ್ಳಬೇಕು, ಮೋಕ್ಷವುಂಟಾಗಬೇಕು' ಎಂದು ಜನರು ಬಯಸುತ್ತಿದ್ದಾರೆಯೇ ಹೊರತು, ಅದಕ್ಕೆ ಬೇಕಾದ ಸಾಧನೆಗಳನ್ನು ಮಾತ್ರ ಮಾಡುತ್ತಿಲ್ಲ. ಆದ್ದರಿಂದ ದುಃಖರಾಹಿತ್ಯವನ್ನು ಬಯಸುವವರು ಭಗವಂತನು ತಿಳಿಸಿದ ಈ ಇಂದ್ರಿಯ ನಿಗ್ರಹಾದಿ ಸಾಧನೆಗಳನ್ನು ತಪ್ಪದೆ ಮಾಡಬೇಕು.

ಪ್ರ : ಯಾರ ಪ್ರಜ್ಞೆ (ವಿವೇಕ) ಸುಸ್ಥಿರವಾಗಿರಬಲ್ಲದು?

ಉ: ಇಂದ್ರಿಯಗಳನ್ನು ಸಂಪೂರ್ಣವಾಗಿ ನಿಗ್ರಹಿಸಿದವನ ಪ್ರಜ್ಞೆ ಸುಸ್ಥಿರವಾಗಿರುವುದು.

**ಅ||** ಸಾಮಾನ್ಯ ಜನರ ಪ್ರವೃತ್ತಿಗೂ, ಸಂಯಮಶೀಲರಾದ ಯೋಗಿಗಳ ಪ್ರವೃತ್ತಿಗೂ ಇರುವ ಭೇದಗಳನ್ನು ಕೊಡಲಾಗಿದೆ.

**೬೯. ಯಾ ನಿಶಾ ಸರ್ವಭೂತಾನಾಂ ತಸ್ಯಾಂ ಜಾಗರ್ತಿ ಸಂಯಮಿ**
**ಯಸ್ಯಾಂ ಜಾಗ್ರತಿ ಭೂತಾನಿ ಸಾ ನಿಶಾ ಪಶ್ಯತೋ ಮುನೇಃ**

**ಅರ್ಥ:** ಸರ್ವಭೂತಾನಾಂ=ಸಮಸ್ತಪ್ರಾಣಿಗಳಿಗೆ; ಯಾ=ಯಾವುದು; ನಿಶಾ=ರಾತ್ರಿಯೋ; ತಸ್ಯಾಮ್=ಅದರಲ್ಲಿ; ಸಂಯಮಿ=ಇಂದ್ರಿಯ ನಿಗ್ರಹವುಳ್ಳ ಯೋಗಿ; ಜಾಗರ್ತಿ=ಎಚ್ಚರವಾಗಿರುವನು; ಯಸ್ಯಾಮ್= ಯಾವುದರಲ್ಲಿ; ಭೂತಾನಿ=ಪ್ರಾಣಿಗಳು; ಜಾಗ್ರತಿ=ಎಚ್ಚರವಾಗಿರುವುವೋ; ಸಾ=ಅದು; ಪಶ್ಯತಃ=ಪರಮಾತ್ಮ ತತ್ವವನ್ನು ದರ್ಶಿಸುತ್ತಿರುವ; ಮುನೇಃ=(ಆತ್ಮ) ಮನನ ಶೀಲನಿಗೆ; ನಿಶಾ=ರಾತ್ರಿ (ಭವತಿ=ಆಗುತ್ತಿದೆ).

**ತಾ||** ಸಮಸ್ತ ಪ್ರಾಣಿಗಳಿಗೆ(ಸಾಮಾನ್ಯ ಜನರಿಗೆ) ಯಾವುದು (ಪರಮಾರ್ಥ ತತ್ವ) ರಾತ್ರಿಯಾಗಿ (ದೃಷ್ಟಿಗೆ ಅಗೋಚರವಾಗಿ) ಇರುವುದೋ, ಅದರಲ್ಲಿ ಇಂದ್ರಿಯ ನಿಗ್ರಹಪರನಾದ ಯೋಗಿ ಎಚ್ಚೆತ್ತಿರುವನು (ಆತ್ಮಾವಲೋಕನವನ್ನು ಮಾಡುತ್ತಿರುತ್ತಾನೆ). ಯಾವುದರಲ್ಲಿ (ಯಾವ ಶಬ್ದಾದಿ ವಿಷಯಗಳಲ್ಲಿ) ಪ್ರಾಣಿಗಳು ಎಚ್ಚೆತ್ತಿರುವರೋ (ಆಸಕ್ತಿಯಿಂದ ಪ್ರವರ್ತಿಸಿರುವರೋ) ಅದು (ವಿಷಯಜಾಲ) ಪರಮಾತ್ಮ ತತ್ವವನ್ನು ದರ್ಶಿಸುವ ಮುನೀಂದ್ರನಿಗೆ ರಾತ್ರಿಯಾಗಿರುವುದು (ದೃಷ್ಟಿಗೆ ಗೋಚರವಾಗದೆ ಇರುವುದು).

**ವ್ಯಾಖ್ಯೆ:** ಈ ಶ್ಲೋಕವನ್ನು ಆಲಂಕಾರಿಕ ಭಾಷೆಯಲ್ಲಿ ಹೇಳಲ್ಪಟ್ಟಿದೆ. "ಅಜ್ಞಾನಿಗಳಿಗೆ ಯಾವುದು ರಾತ್ರಿಯೋ ಅದು ಜ್ಞಾನಿಗಳಿಗೆ ಹಗಲು, ಜ್ಞಾನಿಗಳಿಗೆ ಯಾವುದು ರಾತ್ರಿಯೋ ಅದು ಅಜ್ಞಾನಿಗಳಿಗೆ ಹಗಲು" ಎಂದು ಇಲ್ಲಿ ಹೇಳಲಾಗಿದೆ. ಇದರ ವಿವರಣೆ: ಆತ್ಮ, ದೈವ, ಇಂದ್ರಿಯ ನಿಗ್ರಹಣೆ ಮೊದಲಾದ ಪರಮಾರ್ಥ ವಿಷಯಗಳು ಅಜ್ಞಾನಿಗಳಿಗೆ ಏನೂ ತಿಳಿದಿರುವುದಿಲ್ಲ. ತಿಳಿಯಬೇಕೆಂಬ ಕುತೂಹಲವೂ ಕೂಡ ಅವರಿಗೆ ಇರುವುದಿಲ್ಲ. ಅವು ಯಾವುವೂ ಅವರ ದೃಷ್ಟಿಗೆ ಗೋಚರಿಸುವುದಿಲ್ಲ. ಅವು ಅವರಿಗೆ ಇಲ್ಲದ ಹಾಗೆಯೇ. ಆದ್ದರಿಂದ ಅವು ಅವರಿಗೆ ರಾತ್ರಿಯಂತಹ ವೆಂದು ಹೇಳಲಾಗಿದೆ. ಆ ಪರಮಾರ್ಥ ವಿಷಯಗಳಲ್ಲಿ ಅವರು ಅಜಾಗರೂಕ ರಾಗಿರುವರು. ನಿದ್ರೆ ಹೋಗುತ್ತಿರುವರು. ನಿರ್ಲಕ್ಷ್ಯವಾಗಿ ಪ್ರವರ್ತಿಸುವರು. ಆದರೆ ಸಂಯಮಶೀಲನಾದ ಜ್ಞಾನಿಯ ವರ್ತನೆ ಇದಕ್ಕೆ ವಿರುದ್ಧವಾಗಿರುವುದು. ಅವನು ನಿರಂತರ ದೈವಚಿಂತನೆ, ಆತ್ಮಾನುಭೂತಿಯಲ್ಲಿ ಮುಳುಗಿರುವನು. ಆತ್ಮದ ವಿಷಯದಲ್ಲಿ ಸದಾ ಜಾಗರೂಕನಾಗಿರುವನು. ದೈವ ಸ್ಮರಣೆಯನ್ನು ಒಂದು ಕ್ಷಣವೂ ಬಿಡುವುದಿಲ್ಲ. ಬ್ರಹ್ಮಾನುಭೂತಿಯಲ್ಲಿ ಎಚ್ಚೆತ್ತಿರುವನು. ಆದ್ದರಿಂದ ಅಜ್ಞಾನಿಗಳು ನಿದ್ರೆ ಹೋಗುತ್ತಿರುವ ದೈವ ವಿಷಯದಲ್ಲಿ ಜ್ಞಾನಿಗಳು ಎಚ್ಚೆತ್ತಿರುವರು.

ಜ್ಞಾನಿಗಳಾದ ಮಹನೀಯರು ಇಂದ್ರಿಯನಿಗ್ರಹಪರರಾಗಿ ವಿಷಯ ಭೋಗಗಳಲ್ಲಿ ವಿರಕ್ತಿ ಹೊಂದಿ ನಾಮರೂಪಾತ್ಮಕವಾದ ಈ ದೃಶ್ಯ ಪ್ರಪಂಚವನ್ನು ಮಿಥ್ಯೆಯೆಂದು ಭಾವಿಸಿ, ಪ್ರಾಪಂಚಿಕ ವಿಷಯಗಳಲ್ಲಿ ಆಸಕ್ತಿ ಹೊಂದದೇ ಇರುವರು. ಇಂದ್ರಿಯಾರ್ಥಗಳಾದ, ಶಬ್ದ ಸ್ಪರ್ಶಾದಿಗಳಲ್ಲಿ ವಿಮುಖತೆ ಹೊಂದಿರುವರು. ಅವು ಅವರ ದೃಷ್ಟಿಗೆ ಬೀಳುವುದೇ ಇಲ್ಲ. ಆದ್ದರಿಂದ ಈ ವಿಷಯಾದಿಗಳೆಲ್ಲವೂ, ಭೋಗ ವಿಲಾಸಗಳೆಲ್ಲವೂ ಅವರಿಗೆ ರಾತ್ರಿಯಂತಹವೇ ಆಗಿವೆ. ಅವುಗಳಲ್ಲಿ ಸಂಯಮಶೀಲರು ನಿದ್ರೆ ಹೋಗುತ್ತಿರುವರು. ಆದರೆ ಅವು ಅಜ್ಞಾನಿಗಳಿಗೆ ಮಹಾ ಪ್ರೀತಿಯಾಗಿ ಕಾಣುವುವು. ಅಹರ್ನಿಶೆ ಅವುಗಳಲ್ಲಿ ಪ್ರೀತಿಯಿಟ್ಟು ಅವುಗಳನ್ನು ಅನುಭವಿಸುತ್ತಾ ಕಾಲಕ್ಷೇಪ ಮಾಡುವರು. ಆ ವಿಷಯ ಭೋಗಗಳಲ್ಲಿ, ನಾಮರೂಪ ವ್ಯವಹಾರಗಳಲ್ಲಿ ಅವರು ಸದಾ ಆಸಕ್ತಿಯಿಂದಿರುವರು. ಆದ್ದರಿಂದ ಅವು ಅವರಿಗೆ ಹಗಲಿನಂತಹವು. ಯಾವ ಇಂದ್ರಿಯ ವಿಷಯಗಳಲ್ಲಿ ಜ್ಞಾನಿಗಳು ನಿದ್ರಿಸುತ್ತಿದ್ದಾರೋ, ಅವುಗಳಲ್ಲಿ ಅಜ್ಞಾನಿಗಳು ಎಚ್ಚೆತ್ತಿರುವರು. ಅವರಿಗೆ ಯಾವುದು ರಾತ್ರಿಯೋ ಇವರಿಗೆ ಅದು ಹಗಲು.

ರಾತ್ರಿ ಕಾಲದಲ್ಲಿ ಸಂಚರಿಸುವ ಪ್ರಾಣಿಗಳು ಎಷ್ಟೋ ಇವೆ. ಬೆಕ್ಕು, ಬಾವಲಿ, ಗೂಬೆ, ರಾಕ್ಷಸರು, ಕ್ರೂರ ಮೃಗಗಳು ಮುಂತಾದುವುಗಳಿಗೆ ಹಗಲು ರಾತ್ರಿಯಾಗಿರುತ್ತದೆ. ಅವುಗಳ ರಾತ್ರಿ ನಮಗೆ ಹಗಲು. ಅಜ್ಞಾನಿಗಳು ನಿಶಾಚರರ ಗುಂಪಿಗೆ ಸೇರಿದವರು. ಜ್ಞಾನಿಗಳು ದಿನಚರರ ಗುಂಪಿಗೆ ಸೇರಿದವರು.

"ಸಂಯಮಿ"- ಎನ್ನುವ ಪದವನ್ನು ಪ್ರಯೋಗಿಸಿರುವುದರಿಂದ ಪರಿಪೂರ್ಣ ಇಂದ್ರಿಯ ನಿಗ್ರಹಣೆಯುಳ್ಳವನೇ ಆತ್ಮದ ವಿಷಯದಲ್ಲಿ ಎಚ್ಚೆತ್ತಿರುವವನೆಂದೂ (ಜಾಗರ್ತಿ), ಆ ರೀತಿಯ ಎಚ್ಚರವಿಲ್ಲದವನಿಗೆ ದೈವವು (ಆತ್ಮ) ಕಂಡುಬರುವುದಿಲ್ಲ ಎಂದು ಸ್ಪಷ್ಟವಾಗಿ ಬೋಧಿಸಲ್ಪಟ್ಟಿದೆ. ಈ ವಿಧವಾಗಿ ಆಧ್ಯಾತ್ಮ ಕ್ಷೇತ್ರದಲ್ಲಿ ಸಂಯಮ (ಇಂದ್ರಿಯ ನಿಗ್ರಹ)ಕ್ಕೆ ಮಹೋನ್ನತ ಸ್ಥಾನವಿದೆ.

"ಪಶ್ಯತೋ ಮುನೇಃ"- ಮುನಿಗಳೆಂದರೆ ಮನನ ಶೀಲರು. ಆದರೆ ಆತ್ಮ ದರ್ಶನವನ್ನು ಹೊಂದಿದ ಮುನಿಗಳು ವಿರಳ. 'ಪಶ್ಯತಃ'- ಎಂದು ಹೇಳಲ್ಪಟ್ಟಿರುವುದರಿಂದ ಭಗವಂತ (ಆತ್ಮ)ನನ್ನು ಪ್ರತ್ಯಕ್ಷವಾಗಿ ನೋಡಿ ಅನುಭೂತಿಗೊಳಿಸಿಕೊಳ್ಳಬಹುದೆಂದು ಇಲ್ಲಿ ಹೇಳಲಾಗಿದೆ. ಆ ಸ್ಥಿತಿಯನ್ನು ಪ್ರತಿಯೊಬ್ಬರೂ ಹೊಂದುವಂತಾಗಬೇಕು.

ವಿಷಯ ಭೋಗಗಳನ್ನು ತ್ಯಜಿಸಿ, ಇಂದ್ರಿಯ ನಿಗ್ರಹಣೆ ಮಾಡಿ ಆತ್ಮದಲ್ಲಿ ಸದಾ ಎಚ್ಚೆತ್ತಿರಬೇಕೆಂದು ಈ ಶ್ಲೋಕವು ಬೋಧಿಸುತ್ತಿದೆ.

ಪ್ರ : ಅಜ್ಞಾನಿಗೆ, ಜ್ಞಾನಿಗೆ ಇರುವ ಭೇದವೇನು?

ಉ : ಅಜ್ಞಾನಿ- ದೈವ ವಿಷಯದಲ್ಲಿ ಪ್ರವರ್ತಿಸುವುದಿಲ್ಲ, ವಿಷಯ ಭೋಗದಲ್ಲಿ ಸದಾ ನಿರತನಾಗಿರುವನು.

ಜ್ಞಾನಿ- ದೈವ ವಿಷಯದಲ್ಲಿ ಸದಾ ಪ್ರವರ್ತಿಸುತ್ತಿರುವನು. ವಿಷಯ ಭೋಗಗಳಲ್ಲಿ ವಿರಕ್ತಿ ಹೊಂದಿರುವನು.

**ಅ||** ಶಾಂತಿಯನ್ನು ಯಾರು ಹೊಂದಬಲ್ಲರು ಎನ್ನುವುದನ್ನು ಎರಡು ಶ್ಲೋಕಗಳ ದ್ವಾರ ಹೇಳುತ್ತಿದ್ದಾನೆ.

**೭೦. ಆಪೂರ್ಯಮಾಣಮಚಲ ಪ್ರತಿಷ್ಠಮ್**
**ಸಮುದ್ರಮಾಪಃ ಪ್ರವಿಶಂತಿ ಯದ್ವತ್**
**ತದ್ವತ್ಕಾಮಾ ಯಂ ಪ್ರವಿಶಂತಿ ಸರ್ವೇ**
**ಸ ಶಾಂತಿಮಾಪ್ನೋತಿ ನ ಕಾಮಕಾಮೀ**

**ಅರ್ಥ:** ಆಪೂರ್ಯಮಾಣಂ=ನದೀಜಲಮುಂತಾದವುಗಳಿಂದ ಸಂಪೂರ್ಣವಾಗಿ ತುಂಬಿದಂತಹದು; ಅಚಲಪ್ರತಿಷ್ಠಂ=ಸ್ಥಿರವಾದ ಪರಿಧಿಯಿರುವುದು (ಹದ್ದು ಮೀರದೇ ಇರುವುದು), ಸಮುದ್ರಃ=ಸಮುದ್ರ; ಆಪಃ=(ನದೀ ಮೊದಲಾದ) ಜಲಗಳು; ಯದ್ವತ್=ಯಾವ ರೀತಿಯಾಗಿ; ಪ್ರವಿಶಂತಿ= ಪ್ರವೇಶಿಸುತ್ತವೆಯೋ, ತದ್ವತ್=ಆ ರೀತಿಯಾಗಿ; ಸರ್ವೇಕಾಮಾಃ= ಭೋಗ್ಯ ವಿಷಯಗಳೆಲ್ಲವೂ; ಯಂ=ಯಾವ ಮನುಜನ (ಬ್ರಹ್ಮನಿಷ್ಠನ); ಪ್ರವಿಶಂತಿ= (ಪ್ರವೇಶಿಸಿ ಅಣಗಿ ಹೋಗುತ್ತಿವೆಯೋ); ಸಃ=ಅಂತಹವನು; ಶಾಂತಿಂ= ಶಾಂತಿಯನ್ನು; ಆಪ್ನೋತಿ=ಹೊಂದುತ್ತಿರುವನು; ಕಾಮ ಕಾಮೀ; ವಿಷಯಾಸಕ್ತನು; ನ (ಆಪ್ನೋತಿ)=ಹೊಂದುವುದಿಲ್ಲ.

**ತಾ||** ಜಲದಿಂದ ಸಂಪೂರ್ಣವಾಗಿ ತುಂಬಿರುವ ನಿಶ್ಚಲವಾದ ಸಮುದ್ರವನ್ನು ನದೀ ಜಲಗಳು ಮುಂತಾದುವು ಯಾವ ಪ್ರಕಾರವಾಗಿ ಸೇರುವುವೋ (ಯಾವ ರೀತಿ ಇವುಗಳ ಪ್ರವೇಶದಿಂದ ಸಮುದ್ರಕ್ಕೆ ಸ್ವಲ್ಪವೂ ಕ್ಷೋಭೆಯುಂಟಾಗುವುದಿಲ್ಲವೋ) ಆ ಪ್ರಕಾರವಾಗಿ ಭೋಗ್ಯ ವಿಷಯಗಳೆಲ್ಲವೂ ಬ್ರಹ್ಮನಿಷ್ಠನನ್ನು ಸೇರಿ (ಆತನನ್ನು ವಿಕೃತಿಗೊಳಿಸಲು ಸಾಧ್ಯವಾಗದೆ) ವಿಲೀನವಾಗುತ್ತವೆ. ಆತನೇ ಶಾಂತಿಯನ್ನು ಹೊಂದುವನಲ್ಲದೆ ವಿಷಯಾಸಕ್ತಿಯುಳ್ಳವನಲ್ಲ.

**ವ್ಯಾಖ್ಯೆ:** "ಕಾಮಾಃ"- ಎನ್ನುವ ಪದಕ್ಕೆ 'ಕೋರಿಕೆಗಳು' ಎನ್ನುವ ಅರ್ಥವನ್ನು ಇಲ್ಲಿ ಹೇಳುವುದು ಅಷ್ಟು ಸಮಂಜಸವಲ್ಲ. ಏಕೆಂದರೆ ಬ್ರಹ್ಮಜ್ಞಾನಿಗೆ, ಸ್ಥಿತಪ್ರಜ್ಞನಿಗೆ ಕೋರಿಕೆಗಳು ಯಾವುವೂ ಇರುವುದಿಲ್ಲ. ಆದ್ದರಿಂದ **"ಕಾಮ್ಯಂತೇ, ಇತಿ ಕಾಮಾಃ"**- ಎನ್ನುವ ವಾಕ್ಯದ ಹಾಗೆ ಇಲ್ಲಿ ಭೋಗ್ಯ ವಿಷಯಗಳು ಎಂದು ಅರ್ಥ ಹೇಳುವುದು ಸರಿಯೆಂದು ಕಾಣುತ್ತದೆ.

ಶಾಂತಿಯನ್ನು ಯಾರು ಹೊಂದುವರು ಎನ್ನುವುದನ್ನು ಈ ಶ್ಲೋಕದಲ್ಲಿ ನಿರೂಪಿಸಲಾಗಿದೆ. ಕಾಮನಿಗೆ ದಾಸನಾದವನು, ವಿಷಯಾಸಕ್ತನು, ಕೋರಿಕೆಗಳನ್ನು ಹೊಂದಿರುವವನು, ಶಾಂತಿಯನ್ನು ಎಂದೆಂದಿಗೂ ಹೊಂದುವುದಿಲ್ಲವೆಂದು ಇಲ್ಲಿ ಸ್ಪಷ್ಟವಾಗಿ ಹೇಳಲ್ಪಟ್ಟಿದೆ. "ನ ಕಾಮ ಕಾಮೀ"- ಕೋರಿಕೆಗಳು ಇಲ್ಲದೇ ಇರುವವನು. ವಿಷಯಾಸಕ್ತಿಯಿಲ್ಲದವನು, ಕಾಮವನ್ನು ಜಯಿಸಿದವನು ಮಾತ್ರ ಶಾಂತಿಯನ್ನು ಹೊಂದಬಲ್ಲನು. ಸಂದರ್ಭಾನುಸಾರವಾಗಿ ಇಲ್ಲಿ ಒಂದು ದೃಷ್ಟಾಂತವನ್ನು ಕೊಡಲಾಗಿದೆ.

ಜ್ಞಾನಿಯನ್ನು ಸಮುದ್ರಕ್ಕೆ ಹೋಲಿಸಲಾಗಿದೆ. ಸಮುದ್ರದ ಜಲ ಸೂರ್ಯನ ತಾಪಕ್ಕೆ ಆವಿಯಾಗಿ ಮೇಘ ರೂಪವಾಗಿ ಪರಿಣಾಮಗೊಳ್ಳುತ್ತಿದ್ದರೂ ಒಂದು ಅಂಗುಲವೂ ಕಡಿಮೆಯಾಗುವುದಿಲ್ಲ. ಹಾಗೆಯೇ ಅನೇಕ ನದಿಗಳ ಮೂಲಕ, ಮಳೆಯ ಮೂಲಕ ಎಷ್ಟೋ ಜಲ ಅದರಲ್ಲಿ ಬಂದು ಸೇರುತ್ತಿದ್ದರೂ ಒಂದು ಅಂಗುಲವೂ ಬೆಳೆಯುವುದಿಲ್ಲ (ಹೆಚ್ಚಾಗುವುದಿಲ್ಲ). ಹಾಗೆಯೇ ಜ್ಞಾನಿಯಾದವನು, ಸ್ಥಿತಪ್ರಜ್ಞನು ತನ್ನ ಇಂದ್ರಿಯಗಳಿಗೆ ಶಬ್ದಾದಿ ವಿಷಯಗಳು ಗೋಚರಿಸಿದರೂ, ಗೋಚರಿಸದೆ ಇದ್ದರೂ ನಿರ್ವಿಕಾರಿಯಾಗಿಯೇ ಇರುವನು. ಸ್ವಲ್ಪವೂ ಚಲಿಸುವುದಿಲ್ಲ. ಆತನಿಗೆ ವಿಷಯಾಸಕ್ತಿ ಸ್ವಲ್ಪವೂ ಇರುವುದಿಲ್ಲ. 'ಸರ್ವೇಕಾಮಾಃ' ಎಂದು ಹೇಳಲ್ಪಟ್ಟಿರುವುದರಿಂದ ಯಾವುದೋ ಒಂದು ಭೋಗ್ಯ ವಿಷಯವಲ್ಲ, ಅನೇಕ ಭೋಗ್ಯ ವಿಷಯಗಳು ಬಂದು ಮೇಲೆ ಬಿದ್ದರೂ ಅವು ಅಲ್ಲಿಯೇ ಕರಗಿ ಹೋಗುವುವು. ವಿಕಾರಗಳನ್ನುಂಟು ಮಾಡುವುದಿಲ್ಲ. ಅಂದರೆ ಜ್ಞಾನಿಯಾದವನು ಒಂದು ವೇಳೆ ದೈವಿಕವಾಗಿ ನಿತ್ಯವ್ಯವಹಾರದಲ್ಲಿ ಅನೇಕ ದೃಶ್ಯ ವಿಷಯಗಳ ಮಧ್ಯೆ ಇರುವ ಪ್ರಾರಬ್ಧವಿದ್ದರೂ, ಇಂದ್ರಿಯಗಳ ದ್ವಾರ ಆತನಿಗೆ ಶಬ್ದಾದಿ ವಿಷಯಗಳು ಗೋಚರಿಸಿದರೂ, ಅವನಲ್ಲಿ ಯಾವ ವಿಕಾರವೂ ಉಂಟಾಗುವುದಿಲ್ಲವೆನ್ನುವುದೇ ಇದರ ಅರ್ಥ.

**ಜ್ಞಾತಜ್ಞೇಯಸ್ಯ ಮನಸೋ ಮಾನಮೇತದ್ಧಿ ಲಕ್ಷಣಮ್**
**ನ ಸ್ವದಂತೇ ಸಮಗ್ರಾಣಿ ಭೋಗವೃಂದಾನಿ ಯತ್ಪುನಃ**
**ವಶಿಷ್ಠಗೀತೆ-**

ಎಂದು ಶ್ರೀ ವಶಿಷ್ಠ ಮುನೀಂದ್ರರು ಹೇಳಿದ ಹಾಗೆ ಆತ್ಮಜ್ಞಾನಿಯ ಚಿಹ್ನೆ ಭೋಗಗಳಲ್ಲಿ ಆಸಕ್ತಿಯಿಲ್ಲದೆ ಇರುವುದೇ ಆಗಿದೆ. ಒಂದು ವೇಳೆ ಆಸಕ್ತಿಯಿದ್ದಲ್ಲಿ ಆತನಿನ್ನೂ ಜ್ಞಾನಸ್ಥಿತಿಯನ್ನು ಪಡೆದಿಲ್ಲವೆಂದು ತಿಳಿಯಬೇಕು. ಸಮುದ್ರವು ಜಲದಿಂದ ಪರಿಪೂರ್ಣವಾಗಿದ್ದಂತೆ ಜ್ಞಾನಿ ಬ್ರಹ್ಮಾನಂದದಲ್ಲಿ ಸಂಪೂರ್ಣವಾಗಿ ಪರಿಪೂರ್ಣನಾಗಿರುವನು. ಸಮುದ್ರ ಅಚಲವಾಗಿ ಸುಪ್ರತಿಷ್ಠವಾಗಿರುವಂತೆ ಜೀವನ್ಮುಕ್ತನು ನಿರ್ವಿಕಾರನಾಗಿ ನಿಶ್ಚಲನಾಗಿ ಮೇರುಪರ್ವತದಂತೆ ಗಾಂಭೀರ್ಯವನ್ನು ಹೊಂದಿರುವನು.

ಚಿಕ್ಕ ಚಿಕ್ಕ ಕೆರೆ, ಭಾವಿ, ಕುಂಟೆ, ಸರೋವರ ಹಾಗು ನದಿಗಳಿಗೆ ಹೆಚ್ಚು ನೀರು ಬಂದರೆ ಅವುಗಳ ಕಟ್ಟೆಗಳು ಒಡೆದು ಹೋಗುವುವು. ಜಲವು ಬರದೇ ಇದ್ದಲ್ಲಿ ಒಣಗಿ ಹೋಗುವುವು. ಹಾಗೆಯೇ ಅಜ್ಞಾನಿಗಳ ಹೃದಯದಲ್ಲಿ ಭೋಗ್ಯ ಪದಾರ್ಥಗಳು, ಶಬ್ದಾದಿ ವಿಷಯಗಳು ಬಂದು ಬಿದ್ದಾಗ ವಿಕಾರಗಳುಂಟಾಗಿ ಚಪಲ ಚಿತ್ತರಾಗುವರು. ವಿಷಯಗಳ ಅಭಾವವುಂಟಾದಾಗ ಶೋಕಾನ್ವಿತರಾಗಿ ದೀನರಾಗಿ ವರ್ತಿಸುವರು. ಇದೇ ಜ್ಞಾನಿ ಹಾಗೂ ಅಜ್ಞಾನಿಗಳಿಗೆ ಇರುವ ಭೇದ. ಈ ಭೇದವನ್ನೇ ಈ ಶ್ಲೋಕದಲ್ಲಿ ನಿರೂಪಿಸಲಾಗಿದೆ. ಬಯಕೆಗಳಿರುವವನು ಶಾಂತಿಯನ್ನು ಎಂದೆಂದಿಗೂ ಪಡೆಯಲು ಸಾಧ್ಯವಿಲ್ಲ ಎಂದು ಹೇಳಿರುವುದರಿಂದ ಮನುಜನು ಕಾಮವನ್ನು ತ್ಯಜಿಸಿ (ಜಯಿಸಿ) ವಿಷಯಾಸಕ್ತಿಯನ್ನು ಬಿಟ್ಟು ಅಪೇಕ್ಷಾರಹಿತನು '(ಅಕಾಮಕಾಮೀ)' ಆಗಬೇಕೇ ಹೊರತು ಅಪೇಕ್ಷಾಯುತನು (ಕಾಮಕಾಮೀ) ಎಂದೆಂದಿಗೂ ಆಗಬಾರದು.

ಇಲ್ಲಿ ಇನ್ನೊಂದು ರಹಸ್ಯವಿದೆ. ಸಮುದ್ರ, ನದಿಗಳು ನೀರಿಗಾಗಿ ಎಂದೂ ಪರಿತಪಿಸುವುದಿಲ್ಲ. ಅವು ದೈವಿಕವಾಗಿ ಬಂದು ಸೇರುವುವು. ಹಾಗೆಯೇ ಜ್ಞಾನಿಯು ಯಾವ ವಿಷಯವನ್ನೂ ಕೋರುವುದಿಲ್ಲ. ಆದರೆ ನಿತ್ಯವ್ಯವಹಾರದಲ್ಲಿ ಒಂದು ವೇಳೆ ದೈವಿಕವಾಗಿ ಶಬ್ದಾದಿ ವಿಷಯಗಳು ಬಂದರೆ ಅವುಗಳಿಂದ ಆತನು ಯಾವ ಮಾತ್ರವೂ ಉದ್ರೇಕಗೊಳ್ಳದೆ ನಿರ್ವಿಕಾರಿಯಾಗಿರುವನೆಂದರ್ಥ.

ಶಾಂತಿಯನ್ನು ಬಯಸುವವರೆಲ್ಲರೂ, ಈ ಶ್ಲೋಕವನ್ನು, ಅದರಲ್ಲಿ ಮುಖ್ಯವಾಗಿ **'ಸಶಾಂತಿ ಮಾಪ್ನೋತಿ ನ ಕಾಮಕಾಮೀ'** ಎನ್ನುವ ಕೊನೆಯ ಪದವನ್ನು ಚೆನ್ನಾಗಿ ಮನನ ಮಾಡುತ್ತಾ ತಮ್ಮಲ್ಲಿರುವ ಕೋರಿಕೆಗಳನ್ನು ಹೊರಗೆಳೆದು ತೆಗೆದು ಬಿಸಾಡಿ ಕಾಮರೂಪ ಪಿಶಾಚಿಗೆ ತಮ್ಮ ಹೃದಯಗಳಲ್ಲಿ ಹರಳಿನಷ್ಟೂ ಸ್ಥಳವೀಯದೆ ಇದ್ದು, ತತ್ಫಲಿತವಾಗಿ ಪರಮಶಾಂತಿ ಹಾಗೂ ಆತ್ಮಾನಂದವನ್ನು ಅನುಭವಿಸುವಂತಾಗಬೇಕು.

ಪ್ರ : ಶಾಂತಿಯನ್ನು ಯಾರು ಹೊಂದುವರು?

ಉ : ಯಾವ ಕೋರಿಕೆಯೂ ಇಲ್ಲದವನು, ವಿಷಯ ಜಾಲದಿಂದ ವಿಕೃತವಾಗದ ಹೃದಯವನ್ನು ಹೊಂದಿರುವವನು, ಸಮುದ್ರದಂತೆ ನಿರ್ವಿಕಾರಿಯಾಗಿರುವನು.

**೭೧. ವಿಹಾಯ ಕಾಮಾನ್ ಯಃ ಸರ್ವಾನ್ ಪುಮಾಂಶ್ಚರತಿ ನಿಃಸ್ಪೃಹಃ**
**ನಿರ್ಮಮೋ ನಿರಹಂಕಾರಃ ಸ ಶಾಂತಿಮಧಿಗಚ್ಛತಿ**

**ಅರ್ಥ:** ಯಃ ಪುಮಾನ್=ಯಾವ ಮನುಜನು; ಸರ್ವಾನ್=ಸಮಸ್ತಗಳಾದ; ಕಾಮಾನ್=ಕೋರಿಕೆ (ಶಬ್ದಾದಿ ವಿಷಯ)ಗಳನ್ನು; ವಿಹಾಯ=ಬಿಟ್ಟು; ನಿಸ್ಪೃಹಃ=ಅವುಗಳ ಮೇಲೆ ಆಸೆಯಿಲ್ಲದವನಾಗಿ; ನಿರ್ಮಮಃ=ಮಮಕಾರ ವಿಲ್ಲದವನಾಗಿ; ನಿರಹಂಕಾರಃ=ಅಹಂಕಾರ ವರ್ಜಿತನಾಗಿ; ಚರತಿ=ಸಂಚರಿಸು ತ್ತಿರುವನೋ; ಸಃ=ಅವನು; ಶಾಂತಿಂ=ಶಾಂತಿಯನ್ನು; ಅಧಿಗಚ್ಛತಿ= ಹೊಂದುತ್ತಾನೆ.

**ತಾ||** ಯಾವನು ಸಮಸ್ತ ಕೋರಿಕೆಗಳನ್ನು ಶಬ್ದಾದಿ ವಿಷಯಗಳನ್ನು ತ್ಯಜಿಸಿ, ಅವುಗಳ ಮೇಲೆ ಯಾವ ರೀತಿಯ ಆಶೆಯೂ ಇಲ್ಲದೆ, ಅಹಂಕಾರ ಮಮಕಾರ ರಹಿತನಾಗಿ ಪ್ರವರ್ತಿಸುವನೋ ಅಂತಹವನೇ ಶಾಂತಿಯನ್ನು ಹೊಂದುತ್ತಾನೆ.

**ವ್ಯಾಖ್ಯೆ:** (ಸ್ಥಿತಪ್ರಜ್ಞನ ಲಕ್ಷಣಗಳ ಬಗ್ಗೆ ಈಗಾಗಲೇ ಅರ್ಜುನನು ನಾಲ್ಕು ಪ್ರಶ್ನೆಗಳನ್ನು ಹಾಕಿದ್ದಾನೆ. ಅವು ಯಾವುವೆಂದರೆ-

೧) ಕಾ ಭಾಷಾ (ಆತನ ಲಕ್ಷಣಗಳೇನು?) (೨) ಕಿಂ ಪ್ರಭಾಷೇತ=ಏನು ಮಾತನಾಡುವನು? (೩) ಕಿಮಾಸೀತ=ಹೇಗೆ ಇರುವನು? (೪) ವ್ರಜೇತಂ ಕಿಂ= ಹೇಗೆ ಸಂಚರಿಸುವನು?

(೧) ೫೫ನೆಯ ಶ್ಲೋಕದಿಂದ ಅಧ್ಯಾಯದ ಕೊನೆಯವರೆಗೂ ಹೇಳಿದವೆಲ್ಲವೂ ಸ್ಥಿತಪ್ರಜ್ಞನ ಸರ್ವೇಸಾಮಾನ್ಯ ಲಕ್ಷಣಗಳೇ ಆಗಿರುವುದರಿಂದ ಅವು ಮೊದಲನೆಯ ಪ್ರಶ್ನೆಗೆ ಉತ್ತರವೂ ಹೌದು. (೨) ೫೫ನೆಯ ಶ್ಲೋಕದಿಂದ ೫೭ನೆಯ ಶ್ಲೋಕದವರೆಗೆ ಎರಡನೆಯ ಪ್ರಶ್ನೆಗೆ ಉತ್ತರವಿದೆ. (೩) ೫೮ನೆಯ ಶ್ಲೋಕದಿಂದ ೬೧ನೆಯ ಶ್ಲೋಕದವರೆಗೆ ಮೂರನೆಯ ಪ್ರಶ್ನೆಗೆ ಸಮಾಧಾನ. (ಕಿಮಾಸೀತ ಎನ್ನುವುದಕ್ಕೆ ೬೧ನೆಯ ಶ್ಲೋಕದಲ್ಲಿ 'ಯುಕ್ತ ಆಸೀತ'- ಎನ್ನುವ ಉತ್ತರವಿದೆ. (೪) ೭೧ನೆಯ ಶ್ಲೋಕವು ನಾಲ್ಕನೆಯ ಪ್ರಶ್ನೆಗೆ ಉತ್ತರವಾಗಿದೆ- 'ವ್ರಜೇತ ಕಿಂ'- ಎನ್ನುವುದಕ್ಕೆ ೭೧ನೆಯ ಶ್ಲೋಕದಲ್ಲಿ 'ಚರತಿ ನಿಸ್ಪೃಹಃ= ಎನ್ನುವುದು ಪ್ರತ್ಯುತ್ತರ). ಶಾಂತಿ ಯಾರಿಗೆ ಲಭಿಸುವುದು ಎನ್ನುವುದನ್ನು ಈ ಶ್ಲೋಕದಲ್ಲಿ ಸ್ಪಷ್ಟೀಕರಿಸಲಾಗಿದೆ. ಶಾಂತಿಯನ್ನು, ಸುಖವನ್ನು ಹೊಂದಬಯಸು ವವರೆಲ್ಲರೂ ನಾಲ್ಕು ಅತಿಮುಖ್ಯವಾದ ಸಾಧನೆಗಳನ್ನು ಆಚರಿಸಬೇಕು. ಅವು ಯಾವುವೆಂದರೆ- ೧) ಸಮಸ್ತ ಕೋರಿಕೆಗಳನ್ನು, ಶಬ್ದಾದಿ ವಿಷಯಗಳನ್ನು ತ್ಯಜಿಸುವುದು ೨) ಆತನಲ್ಲಿ ಯಾವ ರೀತಿಯ ಅಭಿಲಾಷೆಯೂ ಇರಬಾರದು ೩) ಅಹಂಕಾರವನ್ನು ಹೊರದೂಡಬೇಕು. ೪) ಮಮಕಾರವನ್ನು ತ್ಯಜಿಸಬೇಕು. ಈ ಒಂದೊಂದನ್ನು ಕುರಿತು ಸಂಕ್ಷೇಪವಾಗಿ ವಿಚಾರಿಸೋಣ. ೧) ಸ್ಥಿತಪ್ರಜ್ಞ ಘಟ್ಟದ ಪ್ರಾರಂಭದಲ್ಲಿ ಹೇಳಿದ 'ಪ್ರಜಹಾತಿ ಯದಾಕಾಮಾನ್ ಸರ್ವಾನ್'- ಅಂದರೆ, ಸಮಸ್ತ ಕೋರಿಕೆಗಳನ್ನು ಬಿಟ್ಟು ಬಿಡಬೇಕೆಂದು ಭಗವಂತನು ಮತ್ತೆ ಇಲ್ಲಿ ಹೇಳುತ್ತಿದ್ದಾನೆ. 'ಸರ್ವಾನ್'- (ಸಮಸ್ತಗಳಾದ) ಎನ್ನುವ ಪದವನ್ನು ಚೆನ್ನಾಗಿ ಗಮನಿಸಬೇಕು, ಯಾವ ಒಂದು ಕೋರಿಕೆಯೂ ವಿಷಯವೂ ಹೃದಯದಲ್ಲಿರಬಾರದೆಂದು ಭಾವ. ಏಕೆಂದರೆ ಅದೇ ದೊಡ್ಡದಾಗಿ, ವಿಸ್ತರಿಸಿ ಸಾಧಕನಿಗೆ ಉಪದ್ರವ ತಂದಿಡುತ್ತದೆ. ಆದ್ದರಿಂದ ಎಲ್ಲವನ್ನೂ ತ್ಯಜಿಸಿ ಹೃದಯವನ್ನು ನಿಶ್ಶೇಷವಾಗಿ ವಾಸನಾರಹಿತಗೊಳಿಸಬೇಕು. ೨) ವಿಷಯಗಳನ್ನು, ಅಪೇಕ್ಷೆಗಳನ್ನು ತ್ಯಜಿಸಿ ಮತ್ತೆ ಅವುಗಳ ಬಗ್ಗೆಯ ಅಭಿಲಾಷೆ, ಸಂಸ್ಮರಣೆ ಎಂದೆಂದಿಗೂ ಬರದಂತೆ ನೋಡಿಕೊಂಡು ನಿಃಸ್ಪೃಹನಾಗಬೇಕು. ೩) ಅಹಂಕಾರವು ಹತ್ತಿರ ಸುಳಿಯದಂತೆ ನೋಡಿಕೊಳ್ಳಬೇಕು. (ವಾಸ್ತವವಾಗಿ) ತಾನು ಆತ್ಮನೇ ಹೊರತು ದೇಹಾದಿ ಉಪಾಧಿರೂಪವಲ್ಲವೆನ್ನುವ ಆತ್ಮಭಾವ ಉಂಟಾಗಿ ದೇಹಾದಿಗಳಲ್ಲಿಯ ಅಹಂಭಾವವನ್ನು ಪರಿವರ್ಜಿತಗೊಳಿಸಿ ಕೊಳ್ಳಬೇಕು. ೪) ದೇಹವೇ ತಾನಲ್ಲದಾಗ ದೇಹದ ಹೊರಗಿರುವ ಕ್ಷೇತ್ರ, ಮನೆ, ಬಂಧ್ವಾದಿ ಪದಾರ್ಥಗಳು ತನ್ನವು ಹೇಗೆ ಆಗುತ್ತವೆ? ಆದ್ದರಿಂದ ಅವುಗಳಲ್ಲಿರುವ ಮಮತ್ವವನ್ನು ತ್ಯಜಿಸಬೇಕು- ಈ ಪ್ರಕಾರವಾಗಿ ಈ ನಾಲ್ಕು ಸಾಧನೆಗಳನ್ನು ಯಾವನು ಅನುಷ್ಠಾನದಲ್ಲಿ ಇಡುವನೋ ಆತನು ಪರಮ ಶಾಂತಿಯನ್ನು ಪಡೆಯುವನೆಂದು ಭಗವಂತನು ತಿಳಿಸುತ್ತಿದ್ದಾನೆ. ಅವು ಇಲ್ಲದೆ ಇರುವವನು, ಈ ಸಂಸಾರ ಚಕ್ರಕ್ಕೆ ಸಿಲುಕಿ ಅಶಾಂತಿಯನ್ನು, ದುಃಖವನ್ನು ಹೊಂದುತ್ತಿದ್ದಾನೆ.

ಈ ಶ್ಲೋಕದಲ್ಲಿ 'ಯಃ'-(ಯಾರು) ಎಂದು 'ಯ'ಶಬ್ದ ಪ್ರಯೋಗ ಮಾಡಲ್ಪಟ್ಟಿರುವುದರಿಂದ ಮೇಲಿನ ಅರ್ಹತೆಗಳನ್ನು ಹೊಂದಿದವನು ಯಾರೇ ಆಗಲಿ, ಯಾವ ಜಾತಿ ಮತ ಕುಲ ವರ್ಣಗಳಿಗೆ ಸೇರಿದವನಾದರೂ, ಸ್ತ್ರೀಯಾದರೂ, ಪುರುಷನಾದರೂ, ಶಾಂತಿಯನ್ನು, ಮೋಕ್ಷವನ್ನು ತಪ್ಪದೆ ಪಡೆಯುವನು ಎನ್ನುವುದು ಸ್ಪಷ್ಟವಾಗುತ್ತದೆ.

ಪ್ರ : ಶಾಂತಿಯನ್ನು ಯಾವನು ಹೊಂದಬಲ್ಲನು?

ಉ : ೧) ಕೋರಿಕೆಗಳನ್ನು, ವಿಷಯಾಸಕ್ತಿಗಳನ್ನೆಲ್ಲಾ ಬಿಟ್ಟವನು ೨) ದೃಶ್ಯ ಪದಾರ್ಥಗಳ ಮೇಲೆ ಅಭಿಲಾಷೆಯಿಲ್ಲದವನು ೩) ಅಹಂಕಾರವನ್ನು ಹೊರದೂಡಿದವನು. ೪) ಮಮಕಾರವನ್ನು ಬಿಟ್ಟವನು- ಅಂತಹ ಮನುಜನಿಗೆ ಶಾಂತಿಯು ಲಭ್ಯವಾಗುವುದು.

**ಅ||** ಇಂತಹ ನಿರ್ವಿಷಯ ಸ್ಥಿತಿ ಅಂತ್ಯಕಾಲದಲ್ಲಿ ಇರಬೇಕೆಂದು, ಅದರಿಂದ ಮೋಕ್ಷ ಪ್ರಾಪ್ತಿಯಾಗುವುದೆಂದು ಬೋಧಿಸಲಾಗಿದೆ.

೭೨. ಏಷಾ ಬ್ರಾಹ್ಮೀಸ್ಥಿತಿಃ ಪಾರ್ಥ ನೈನಾಂ ಪ್ರಾಪ್ಯ ವಿಮುಹ್ಯತಿ
ಸ್ಥಿತ್ವಾಸ್ಯಾಮಂತಕಾಲೇಽಪಿ ಬ್ರಹ್ಮನಿರ್ವಾಣ ಮೃಚ್ಛತಿ

**ಅರ್ಥ:** ಪಾರ್ಥ=ಓ ಅರ್ಜುನಾ! ಏಷಾ=ಇದು; ಬ್ರಾಹ್ಮೀಸ್ಥಿತಿಃ=ಬ್ರಹ್ಮ ಸಂಬಂಧವಾದ ಸ್ಥಿತಿ; ಯೇನಾಂ=ಇದನ್ನು; ಪ್ರಾಪ್ಯ=ಹೊಂದಿ; ನ ವಿಮುಹ್ಯತಿ= ವಿಯೋಗಕ್ಕೆ ಒಳಗಾಗುವುದಿಲ್ಲ; ಅಂತಕಾಲೇಽಪಿ=ಅಂತ್ಯ ಕಾಲದಲ್ಲಿಯೂ ಸಹ; ಅಸ್ಯಾಂ=ಈ ಸ್ಥಿತಿಯಲ್ಲಿ; ಸ್ಥಿತ್ವಾ=ನಿಂತು; ಬ್ರಹ್ಮನಿರ್ವಾಣಂ=ಬ್ರಹ್ಮಾನಂದ (ಮೋಕ್ಷ)ವನ್ನು; ಋಚ್ಛತಿ=ಹೊಂದುತ್ತಿದ್ದಾನೆ.

**ತಾ||** ಅರ್ಜುನಾ! ಇದೆಲ್ಲವೂ ಬ್ರಹ್ಮ ಸಂಬಂಧವಾದ ಸ್ಥಿತಿ; ಇಂತಹ ಬ್ರಾಹ್ಮೀಸ್ಥಿತಿಯನ್ನು ಹೊಂದಿದವನು ಮತ್ತೆ ಎಂದೆಂದೂ ವಿಮೋಹಕ್ಕೆ ಒಳಗಾಗುವುದಿಲ್ಲ. ಅಂತ್ಯಕಾಲದಲ್ಲಿಯೂ ಕೂಡ, ಈ ಸ್ಥಿತಿಯಲ್ಲಿ ಸ್ಥಿರವಾಗಿದ್ದು ಬ್ರಹ್ಮಾನಂದರೂಪ ಮೋಕ್ಷವನ್ನು ಪಡೆಯುತ್ತಾನೆ.

**ವ್ಯಾಖ್ಯೆ:** ಇಲ್ಲಿಯವರೆಗೆ ತಿಳಿಸುತ್ತಾ ಬಂದಿರುವ ಸ್ಥಿತಪ್ರಜ್ಞನ ಸಾಧನೆಗಳನ್ನು ಅಂದರೆ ಇಂದ್ರಿಯ ನಿಗ್ರಹಣ, ವಿಷಯ ತ್ಯಾಗ, ಅಹಂಕಾರ ಮಮಕಾರ ರಾಹಿತ್ಯ ಮೊದಲಾದುವುಗಳನ್ನು ಅನುಸರಿಸುತ್ತಾ ನಡೆದರೆ ಜೀವ ಬ್ರಹ್ಮೈಕ್ಯ ಸಿದ್ಧಿಸುವುದು. ಕೀಟಕವು ಭ್ರಮರವಾದಂತೆ ಜೀವಿಗಳು ಬ್ರಹ್ಮಸ್ವರೂಪವನ್ನು ಹೊಂದುವರು. ಅದೇ ಬ್ರಾಹ್ಮೀ ಸ್ಥಿತಿ. ಆ ಸ್ಥಿತಿಯಲ್ಲಿ ಮನುಜನು ಬ್ರಹ್ಮಾನಂದ ಭರಿತನಾಗಿದ್ದು ಸಾಂಸಾರಿಕ ಭ್ರಮೆಗಳನ್ನು, ವಿಮೋಹಗಳನ್ನು ಮತ್ತೆ ಎಂದೆಂದಿಗೂ ಹೊಂದುವುದಿಲ್ಲ.

*"ಅಂತಕಾಲೇಽಪಿ"*- ಸಂಸ್ಕೃತದಲ್ಲಿ 'ಅಪಿ'- ಎನ್ನುವ ಶಬ್ದಕ್ಕೆ 'ಕೂಡ'

ಎಂದರ್ಥ. 'ಅಂತಕಾಲೇsಪಿ'- ಅಂದರೆ ಅಂತ್ಯಕಾಲದಲ್ಲಿಯೂ ಕೂಡ- ಇಂತಹ ಬ್ರಾಹ್ಮೀ ಸ್ಥಿತಿಯಲ್ಲಿರುವವನು ನಿರ್ವಾಣ ರೂಪವಾದ ಮೋಕ್ಷವನ್ನು ಪಡೆಯುವನು ಎನ್ನುವುದೇ ಅದರ ಭಾವ. ಅಷ್ಟೇ ಅಲ್ಲದೆ ಅಂತ್ಯಕಾಲದಲ್ಲಿ 'ಮಾತ್ರವೇ' ಎಂದು ಇಲ್ಲಿ ಹೇಳಲ್ಪಡಲಿಲ್ಲ. ಹಾಗೆ ಹೇಳಲ್ಪಟ್ಟಿದ್ದರೆ ಜನಗಳು ಜೀವನದುದ್ದಕ್ಕೂ ಸೋಮಾರಿಗಳಾಗಿ ವ್ಯವಹರಿಸಿ ಭಗವದ್ಧ್ಯಾನವನ್ನು ಅಂತ್ಯಕಾಲಕ್ಕೆ ವಾಯಿದೆ ಹಾಕುತ್ತಿದ್ದರು. ಆದರೆ ತಪ್ಪುಗ್ರಹಣದಿಂದ, ಬೋಧಿಸುವವರ ಅಭಾವದಿಂದ, ಇಲ್ಲವೆ ಇನ್ನು ಬೇರೆ ಯಾವುದೇ ಕಾರಣದಿಂದ ಜೀವನವೆಲ್ಲವೂ ಭಗವಂತನನ್ನು ಕುರಿತು ಧ್ಯಾನಮಾಡದೆ, ವೃದ್ಧಾಪ್ಯದಲ್ಲಿ ಇಲ್ಲವೆ ಅಂತ್ಯಕಾಲದಲ್ಲಿ ದೈವಚಿಂತನೆ ಪ್ರಾರಂಭ ಮಾಡಿದರೂ ಒಳ್ಳೆಯದೇ, ಆದರೆ ಶರೀರ ದೌರ್ಬಲ್ಯಾದಿಗಳಿಂದ ಸಾಧನೆ ಸರಿಯಾಗಿ ನಡೆಯಲಾರದು. ಮತ್ತೆ ಈ ಪರಮಾರ್ಥಸಾಧನೆ ಇಂದ್ರಿಯನಿಗ್ರಹಾದಿಗಳು, ಕಾಮದ ಮೇಲಣ ಜಯ ಒಂದು ದಿನದಲ್ಲಿ ಸಿದ್ಧಿಸುವುವಲ್ಲ. ಅನೇಕ ಜನ್ಮಾರ್ಜಿತ ಮಲಿನವಾಸನೆಗಳು ಒಂದು ಕ್ಷಣದಲ್ಲಿ ಮಾಯವಾಗಿ ಹೋಗುವುವೇ? ಬುದ್ಧಿಬಲದಿಂದ ಶರೀರ ಸೌಷ್ಠವವಿದ್ದಾಗ ತೀವ್ರಸಾಧನೆಯನ್ನು ದೀರ್ಘಕಾಲ ಮಾಡಿದರೆ ಮಾತ್ರ ಸಿದ್ಧಿಸುವುದು. ಆರೋಗ್ಯ, ಬಲ, ಪ್ರಜ್ಞೆ, ಸ್ಮೃತಿ ಚೆನ್ನಾಗಿರುವ ಬಾಲ್ಯ, ಯೌವ್ವನ ಕಾಲವೇ ಆಧ್ಯಾತ್ಮಸಾಧನೆಗೆ ಸರಿಯಾದ ಸಮಯ. ಆದ್ದರಿಂದಲೇ ಭಗವಂತನು ಗೀತೆಯ ೮ನೆಯ ಅಧ್ಯಾಯದಲ್ಲಿ

**'ತಸ್ಮಾತ್ಸರ್ವೇಷು ಕಾಲೇಷು ಮಾಮನುಸ್ಮರ ಯುಧ್ಯಚ'** ಎಲ್ಲಾ ಕಾಲಗಳಲ್ಲಿಯೂ ಭಗವತ್ ಚಿಂತನೆ ಮಾಡಿರೆಂದು ಹೇಳಿದನೇ ಹೊರತು ಅಂತ್ಯಕಾಲದಲ್ಲೇ ಎಂದು ಹೇಳಲಿಲ್ಲ. ಮತ್ತೆ ಜೀವನವೆಲ್ಲವೂ ಯಾವ ಸಾಧನೆಯನ್ನು ಮಾಡುವರೋ, ಯಾವ ನಾಮವನ್ನು ಉಚ್ಚರಿಸುವರೋ ಅಂತ್ಯಕಾಲದಲ್ಲಿ ಅದೇ ಬಾಯಿಗೆ ಬರುತ್ತದೆ. ಅಂತ್ಯಕಾಲದಲ್ಲಿಯಾದರೂ ಸ್ಮರಣೆ ಪ್ರಾರಂಭಿಸಿದರೆ ಒಳ್ಳೆಯದೇ ಆಗಲಿ ಅಂತಹ ಭಗವತ್ಸ್ಮೃತಿ ಹಾಯಾಗಿ ನಡೆಯುವುದು ದುರ್ಲಭ. ಆದ್ದರಿಂದ ಅಂತ್ಯ ಕಾಲದಲ್ಲಿ ದೈವಚಿಂತನೆಯಲ್ಲಿ ನಿಮಗ್ನವಾಗಿರಬೇಕೆಂದರೆ ಜೀವನವೆಲ್ಲವೂ ಪ್ರಯತ್ನ ಮಾಡುವುದು ಅವಶ್ಯಕವಾಗಿದೆ.

ಮತ್ತೆ 'ಅಂತ್ಯಕಾಲ'- ನಿರ್ದಿಷ್ಟ ಸಮಯದಲ್ಲಿ ಬರುವುದೆಂದು ಸರಿಯಾಗಿ (ಖಚಿತವಾಗಿ) ಹೇಳಲು ಯಾರಿಗೂ ಸಾಧ್ಯವಿಲ್ಲ. ಆದ್ದರಿಂದ ಪ್ರತಿ ನಿಮಿಷವೂ, ಬಾಲ್ಯಯೌವನಗಳಲ್ಲಿಯೂ ಕೂಡ ದೈವ ಚಿಂತನಾಮಗ್ನರಾಗಿದ್ದಲ್ಲಿ ಬ್ರಾಹ್ಮೀ ಸಾಧನೆಯಲ್ಲಿ ಕಳೆದಲ್ಲಿ ಇನ್ನು ಅಂತ್ಯಕಾಲ ಯಾವಾಗ ಬಂದರೇನು? ಮರಣ ಯಾವಾಗ ಬಂದರೇನು? ಆದ್ದರಿಂದ ಸಾಧಕರು ಈ ವಿಷಯದಲ್ಲಿ ಜಾಗರೂಕರಾಗಿ ವೃದ್ಧಾಪ್ಯದವರೆಗೆ ಕಾಯದೆ, ಅಂತ್ಯಕಾಲದವರೆಗೆ ನಿರೀಕ್ಷಿಸದೆ, ಬಾಲ್ಯ ಯೌವನಗಳಲ್ಲಿಯೇ ಬ್ರಾಹ್ಮೀ ಸ್ಥಿತಿಯ ಅನುಭವದಲ್ಲಿ ಸ್ಥಿರತೆ ಹೊಂದುವಂತೆ ನೋಡಿಕೊಳ್ಳಬೇಕು.

ಪ್ರ : ಬ್ರಾಹ್ಮೀ ಸ್ಥಿತಿ ಎಂದರೇನು ?

ಉ : ಇಂದ್ರಿಯ ನಿಗ್ರಹ, ಕಾಮ ಜಯಾದಿಗಳಿಂದ, ಆತ್ಮಚಿಂತನೆಯಿಂದ ಉಂಟಾಗುವ ಬ್ರಹ್ಮಾನುಭವ ಸ್ಥಿತಿ.

ಪ್ರ : ಆ ಸ್ಥಿತಿಯನ್ನು ಯಾವಾಗ ಹೊಂದಬಹುದು?

ಉ : ಬಾಲ್ಯ ಯೌವನಗಳಲ್ಲಿ, ಅಂತ್ಯಕಾಲದಲ್ಲಿಯೂ ಕೂಡ.

ಪ್ರ : ಅದರಿಂದ ಉಂಟಾಗುವ ಪ್ರಯೋಜನಗಳೇನು?

ಉ : ಜೀವಿಯು ಬ್ರಹ್ಮಾನಂದ ರೂಪವಾದ ಮೋಕ್ಷವನ್ನು ಪಡೆಯುವನು.

## ಓಮ್

ಇತಿ ಶ್ರೀಮದ್ಭಗವದ್ಗೀತಾಸೂಪನಿಷತ್ಸು ಬ್ರಹ್ಮವಿದ್ಯಾಯಾಂ ಯೋಗಶಾಸ್ತ್ರೇ
ಶ್ರೀಕೃಷ್ಣಾರ್ಜುನಸಂವಾದೇ ಸಾಂಖ್ಯಯೋಗೋ ನಾಮ
ದ್ವಿತೀಯೋsಧ್ಯಾಯಃ
ಇದು ಉಪನಿಷತ್ಪ್ರತಿಪಾದಕವು, ಬ್ರಹ್ಮವಿದ್ಯೆಯು, ಯೋಗಶಾಸ್ತ್ರವು
ಶ್ರೀಕೃಷ್ಣಾರ್ಜುನ ಸಂವಾದವೂ ಆದ ಶ್ರೀ ಮದ್ ಭಗವದ್ಗೀತೆಯಲ್ಲಿ ಸಾಂಖ್ಯಯೋಗವೆನ್ನುವ
ಎರಡನೆಯ ಅಧ್ಯಾಯ

**ಓಮ್ ತತ್ ಸತ್**

# ಶ್ರೀ ಭಗವದ್ಗೀತೆ

## ಅಥ ತೃತೀಯೋಽಧ್ಯಾಯಃ

## ಮೂರನೆಯ ಅಧ್ಯಾಯ

## ಕರ್ಮಯೋಗಃ - ಕರ್ಮಯೋಗ

**ಈ ಅಧ್ಯಾಯದ ಹೆಸರು :**

**"ಕರ್ಮಯೋಗ"**- ಲೋಕದಲ್ಲಿ ಕರ್ಮಮಾಡದೆ ಯಾವ ಜೀವಿಯೂ ಇರಲಾರನು. ಅವರವರಿಗೆ ನಿಯಮಿತವಾದ ಕರ್ಮಗಳನ್ನು ಅವರು ತಪ್ಪದೆ ನಿಷ್ಕಾಮ ಬುದ್ಧಿಯಿಂದ ಆಚರಿಸಬೇಕು. ತಮ್ಮ ವಿಧ್ಯುಕ್ತ ಕರ್ಮಗಳನ್ನು ಫಲಾಪೇಕ್ಷೆಯಿಲ್ಲದೆ, ಈಶ್ವರಾರ್ಪಣ ಬುದ್ಧಿಯಿಂದ ನಡೆಸಬೇಕು (ಆಚರಿಸಬೇಕು). ಕಾರ್ಯಗಳನ್ನು ಮನುಜನು ಏಕೆ ಆಚರಿಸಬೇಕು? ಅವುಗಳನ್ನು ಆಚರಿಸದೆ ಇದ್ದಲ್ಲಿ ಉಂಟಾಗುವ ಅಪಕಾರಗಳೇನು? ಆಚರಿಸುವುದರಿಂದ ಉಂಟಾಗುವ ಒಳಿತೇನು? ಯಾವ ಕರ್ಮ ಬಂಧನ ವನ್ನುಂಟುಮಾಡುವುದು? ಯಾವ ಕರ್ಮ, ಮುಕ್ತಿಗೆ ದಾರಿ ತೋರಿಸುವುದು? ಈ ಪ್ರಕಾರವಾಗಿ ಕರ್ಮಕ್ಕೆ ಸಂಬಂಧಿಸಿದ ವಿವಿಧ ವಿಷಯಗಳು ಈ ಅಧ್ಯಾಯದಲ್ಲಿ ಚರ್ಚಿಸಲ್ಪಟ್ಟಿವೆಯಾದ್ದರಿಂದ ಇದಕ್ಕೆ ಕರ್ಮಯೋಗವೆನ್ನುವ ಹೆಸರನ್ನು ಕೊಡಲಾಗಿದೆ.

**ಈ ಅಧ್ಯಾಯದಲ್ಲಿಯ ಪ್ರಧಾನ ವಿಷಯಗಳು**

೧. ಅನಾಸಕ್ತಿ ಭಾವದಿಂದ ನಿಯತ ಕರ್ಮಗಳನ್ನಾಚರಿಸುವುದು ಉತ್ತಮವೆಂದು ನಿರೂಪಿಸಿರುವುದು. (೧ರಿಂದ ೮ನೆಯ ಶ್ಲೋಕದವರೆಗೆ)

೨. ಫಲಾಪೇಕ್ಷೆಯಿಲ್ಲದೆ ಮಾಡಲ್ಪಟ್ಟ ಕರ್ಮ ಯಜ್ಞವೇ ಎಂದು ತಿಳಿಸುತ್ತಾ ಅಂತಹ ಯಜ್ಞವನ್ನು ಆಚರಿಸುವ ಆವಶ್ಯಕತೆಯನ್ನು ತಿಳಿಸುವುದು. (೯ರಿಂದ ೧೬ನೆಯ ಶ್ಲೋಕದವರೆಗೆ)

೩. ಜ್ಞಾನಿಯು, ಸಾಕ್ಷಾತ್ ಭಗವಂತನು ಲೋಕ ಸಂಗ್ರಹಾರ್ಥವಾಗಿ ಕರ್ಮಗಳನ್ನು ಮಾಡುತ್ತಲೇ ಇರುವನೆಂದು ತಿಳಿಸುವುದು. (೧೭ರಿಂದ ೨೪ನೆಯ ಶ್ಲೋಕದವರೆಗೆ)

೪. ಅಜ್ಞಾನಿಯ, ಜ್ಞಾನಿಯ ಲಕ್ಷಣಗಳನ್ನು ತಿಳಿಸುತ್ತಾ, ರಾಗ ದ್ವೇಷ ರಹಿತವಾಗಿ ಕರ್ಮವನ್ನು ಆಚರಿಸಬೇಕೆಂದು ಬೋಧಿಸಿರುವುದು (೨೫ರಿಂದ ೩೫ರ ವರೆಗೆ)

೫. ಕಾಮ ಕ್ರೋಧಾದಿಗಳನ್ನು ಜಯಿಸುವ ಪದ್ಧತಿಯನ್ನು ತಿಳಿಸಿರುವುದು (೩೬ರಿಂದ ೪೩ರ ವರೆಗೆ)

**ಪೂರ್ವಾಧ್ಯಾಯದೊಡನೆ ಈ ಅಧ್ಯಾಯಕ್ಕೆ ಇರುವ ಸಂಬಂಧ:**

ಹಿಂದಿನ ಅಧ್ಯಾಯವಾದ ಸಾಂಖ್ಯಯೋಗದ ಪ್ರಾರಂಭದಲ್ಲಿ ಭಗವಂತನು ಅಖಂಡವಾದ ಜ್ಞಾನೋಪದೇಶವನ್ನು ಅರ್ಜುನನಿಗೆ ಬೋಧಿಸಿದನು. ಮತ್ತೆ ಮಧ್ಯದಲ್ಲಿ ನಿಷ್ಕಾಮ ಕರ್ಮಯೋಗದ ಪ್ರಶಂಸೆ ಸ್ವಲ್ಪ ಮಾಡಿದನು. ಕಟ್ಟ ಕಡೆಗೆ ಸ್ಥಿತಪ್ರಜ್ಞನ ಲಕ್ಷಣಗಳನ್ನು, ಇಂದ್ರಿಯ ನಿಗ್ರಹಾದಿ ಸಾಧನೆಗಳನ್ನು ಹೇಳಿ ಮಹೋನ್ನತವಾದ ಬ್ರಾಹ್ಮೀಸ್ಥಿತಿಯನ್ನು, ಜ್ಞಾನಾನುಭವವನ್ನು ವರ್ಣಿಸಿ ಹೇಳಿದನು. ಅದೆಲ್ಲವನ್ನೂ ಕೇಳಿ ಅರ್ಜುನನು ಜ್ಞಾನವೇ ಕರ್ಮಕ್ಕಿಂತ ಅಧಿಕವೆನ್ನುವುದು ಭಗವಂತನ ನಿರ್ಣಯವೆಂದು ತಿಳಿದು, ಜ್ಞಾನವೇ ಉತ್ತಮವಾದುದೆನ್ನುವುದು ಭಗವಂತನ ಉದ್ದೇಶವಾದರೆ ನನ್ನನ್ನು ಏತಕ್ಕೆ ಈ ಯುದ್ಧವೆನ್ನುವ ಪ್ರಚಂಡ ಕರ್ಮಕ್ಷೇತ್ರದಲ್ಲಿ ಇಳಿಯುವಂತೆ ಪ್ರೋತ್ಸಾಹಿಸುತ್ತಿದ್ದಾನೆ? ಎನ್ನುವ ಸಂಶಯವನ್ನು ಹೊಂದಿ, ಭಗವಂತನನ್ನು ಪ್ರಶ್ನಿಸುತ್ತಿದ್ದಾನೆ-

**ಅರ್ಜುನ ಉವಾಚ**

**೧. ಜ್ಯಾಯಸೀ ಚೇತ್ ಕರ್ಮಣಸ್ತೇ ಮತಾ ಬುದ್ಧಿರ್ಜನಾರ್ದನ**
**ತತ್ಕಿಂ ಕರ್ಮಣಿ ಘೋರೇ ಮಾಂ ನಿಯೋಜಯಸಿ ಕೇಶವ**

ಅರ್ಜುನ ಉವಾಚ - ಅರ್ಜುನನು ಹೇಳಿದನು

**ಅರ್ಥ:** ಜನಾರ್ದನ=ಓ ಕೃಷ್ಣಾ! ಬುದ್ಧಿಃ=ಜ್ಞಾನವು; ಕರ್ಮಣಃ=ಕರ್ಮಕ್ಕಿಂತ; ಜ್ಯಾಯಸೀ=ಶ್ರೇಷ್ಠವಾದುದು(ಎಂದು); ತೇ=ನಿನ್ನ; ಮತಾಚೇತ್=ಅಭಿಪ್ರಾಯವಾದರೆ; ತತ್=ಆಗ; ಕೇಶವ=ಓ ಕೃಷ್ಣಾ!; ಘೋರೇ=ಭಯಂಕರವಾದ; ಕರ್ಮಣಿ=(ಯುದ್ಧವೆನ್ನುವ) ಕರ್ಮದಲ್ಲಿ; ಮಾಂ=ನನ್ನನ್ನು; ನಿಯೋಜಯಸಿ=ಪ್ರವರ್ತಿಸುವಂತೆ ಮಾಡುತ್ತಿದ್ದೀಯೆ; ಕಿಂ=ಏಕೆ?

**ತಾ॥** ಅರ್ಜುನನು ಹೇಳಿದನು- ಓಕೃಷ್ಣಾ! ಜ್ಞಾನವು ಕರ್ಮಕ್ಕಿಂತ ಶ್ರೇಷ್ಠವಾದುದೆನ್ನುವುದು ನಿನ್ನ ಅಭಿಪ್ರಾಯವಾದರೆ, ಮತ್ತೆ ಈ ಭಯಂಕರವಾದ (ಯುದ್ಧ) ಕರ್ಮದಲ್ಲಿ ನನ್ನನ್ನು ಏಕೆ ತೊಡಗಿಸುತ್ತಿದ್ದೀಯೆ?

**ವ್ಯಾಖ್ಯೆ:** ಇಲ್ಲಿ ಬುದ್ಧಿ ಎಂದರೆ ಜ್ಞಾನ. ಹಿಂದಿನ ಅಧ್ಯಾಯದ ೪೯, ೫೦, ೫೧ನೆಯ ಶ್ಲೋಕಗಳಲ್ಲಿ ಭಗವಂತನು ಕರ್ಮಕ್ಕಿಂತ ಬುದ್ಧಿಯೋಗವು ಶ್ರೇಷ್ಠ ಎಂದು ಹೇಳಿದಾಗಲೇ ಅರ್ಜುನನ ಮನಸ್ಸಿನಲ್ಲಿ ಸಂದೇಹವು ಉಂಟಾಗಿರಬಹುದು. "ಏನು, ಭಗವಂತನು ಕರ್ಮದಲ್ಲಿ ಮಾತ್ರ ನಿನಗೆ ಅಧಿಕಾರವಿದೆ

(ಕರ್ಮಣ್ಯೇವಾಧಿಕಾರಸ್ತೇ... ೨-೪೭), ಕರ್ಮಗಳನ್ನು ಮಾಡು (ಕುರು ಕರ್ಮಾಣಿ ೨-೪೮) ಆದ್ದರಿಂದ ಏಳು, ಯುದ್ಧವನ್ನು ಮಾಡು (ತಸ್ಮಾದ್ಯುಧ್ಯಸ್ವ ೨-೧೮) ಎಂದು ಒಂದು ಕಡೆ ಹೇಳುತ್ತಾ, ಮತ್ತೆ ಬುದ್ಧಿಯೋಗಕ್ಕಿಂತ ಕರ್ಮ ಬಹಳ ಕೀಳಾದದ್ದೆಂದು (ದೂರೇಣ ಹ್ಯವರಂ ಕರ್ಮ ಬುದ್ಧಿಯೋಗಾದ್ಧನಂ ಜಯ ೨-೪೯) ಇನ್ನೊಂದು ಕಡೆ ಹೇಳಿರುವನಲ್ಲ! ಈ ವಾಕ್ಯಗಳು ಪರಸ್ಪರ ವಿರುದ್ಧಾರ್ಥವಾಗಿರುವವಲ್ಲವೇ?" ಎರಡನೆಯ ಅಧ್ಯಾಯದಲ್ಲಿ ೪೯, ೫೦, ೫೧ ಶ್ಲೋಕಗಳನ್ನು ಭಗವಂತನು ಹೇಳಿದ ಕೂಡಲೇ ತನ್ನ ಈ ಸಂಶಯವನ್ನು ಆತನ ಮುಂದೆ ಇಡಬೇಕೆಂದಿದ್ದಿರಬಹುದು. ಆದರೆ ತಕ್ಷಣವೇ ಶ್ರೀಕೃಷ್ಣಮೂರ್ತಿ 'ನಿನ್ನ ಬುದ್ಧಿ ಯಾವಾಗ ಸಮಾಧಿಯಲ್ಲಿ ಸ್ಥಿರವಾಗುವುದೋ ಆಗ (ಜೀವಬ್ರಹ್ಮೈಕ್ಯರೂಪ) ಯೋಗವನ್ನು ಪಡೆಯಬಲ್ಲೆ' ಎಂದು ಬೋಧಿಸಲು ತಕ್ಷಣವೇ ಅರ್ಜುನನಿಗೆ ಸಮಾಧಿಯಲ್ಲಿ ಸ್ಥಿತ ಹೊಂದಿದವನ (ಸ್ಥಿತಪ್ರಜ್ಞನ) ಲಕ್ಷಣಗಳನ್ನು ತಿಳಿದುಕೊಳ್ಳಬೇಕೆಂಬ ಉತ್ಸುಕತೆ ಉಂಟಾಗಿ, ಅದನ್ನೇ ಮೊದಲು ಪ್ರಶ್ನಿಸಿದನು. ಅಲ್ಲಿ ಅದಕ್ಕೆ ಉತ್ತರವಾಗಿ ಸ್ಥಿತಪ್ರಜ್ಞನ ಲಕ್ಷಣಗಳನ್ನು ಭಗವಂತನು ಹೇಳಿ ಪೂರ್ತಿಮಾಡಿದ ತಕ್ಷಣವೇ ಅರ್ಜುನನು ತನ್ನ ಹಳೆಯ ಸಂದೇಹಗಳನ್ನು ಆತನ ಮುಂದಿಟ್ಟನು. ಈ ಮೂರನೆಯ ಅಧ್ಯಾಯದ ಪ್ರಾರಂಭದ ಎರಡು ಶ್ಲೋಕಗಳು ಆ ಸಂದೇಹವನ್ನು ಕುರಿತವು ಆಗಿವೆ.

> **೨. ವ್ಯಾಮಿಶ್ರೇಣೇವ[1] ವಾಕ್ಯೇನ ಬುದ್ಧಿಂ ಮೋಹಯಸೀವ ಮೇ**
> **ತದೇಕಂ ವದ ನಿಶ್ಚಿತ್ಯ ಯೇನ ಶ್ರೇಯೋಽಹಮಾಪ್ನುಯಾಮ್**

**ಅರ್ಥ:** ವ್ಯಾಮಿಶ್ರೇಣೇವ=ಸಮ್ಮಿಶ್ರಣವಾಗಿರುವ; ವಾಕ್ಯೇನ=ವಾಕ್ಯಗಳಿಂದ; ಮೇ=ನನ್ನ; ಬುದ್ಧಿಂ=ಬುದ್ಧಿಯು; ಮೋಹಯಸೀವ=ಮೋಹಗೊಂಡಿರುವುದು; ಅಹಂ=ನಾನು; ಯೇನ=ಯಾವುದರಿಂದ; ಶ್ರೇಯಃ=ಶ್ರೇಯಸ್ಸನ್ನು; ಆಪ್ನುಯಾಮ್=ಹೊಂದಬಲ್ಲೆ; ತದೇಕಂ=ಅಂಥಹದನ್ನು (ಕರ್ಮ ಅಥವ ಜ್ಞಾನ), ನಿಶ್ಚಿತ್ಯ=ನಿಶ್ಚಯಿಸಿ; ವದ=ಹೇಳುವುದು.

**ತಾ||** (ಓ ಕೃಷ್ಣಾ!) ಸಮ್ಮಿಶ್ರಣವಾಗಿರುವ ವಾಕ್ಯಗಳ ದ್ವಾರಾ ನನ್ನ ಬುದ್ಧಿ ಸಂಶಯಕ್ಕೆ ಒಳಗಾಗಿದೆ. ಆದ್ದರಿಂದ ನಾನು ಯಾವುದರಿಂದ ಶ್ರೇಯವನ್ನು ಹೊಂದಬಲ್ಲೆನೋ ಅದನ್ನು (ಕರ್ಮ, ಜ್ಞಾನಗಳಲ್ಲಿ ಯಾವುದು ಎನ್ನುವುದನ್ನು) ನಿಶ್ಚಯಿಸಿ ನನಗೆ ತಿಳಿಸುವುದು.

**ವ್ಯಾಖ್ಯೆ:** 'ಇವ' (ಹಾಗೆ) ಎನ್ನುವ ಪದವನ್ನು ಅರ್ಜುನನು ಎರಡು ಸಾರಿ ಈ ಶ್ಲೋಕದಲ್ಲಿ ಪ್ರಯೋಗಿಸಿರುವುದರಿಂದ ಶ್ರೀಕೃಷ್ಣಮೂರ್ತಿ ವಾಸ್ತವವಾಗಿ ಮೋಹಗೊಳಿಸುವಂತಹ ಸಂದಿಗ್ಧ ವಾಕ್ಯಗಳನ್ನೇನೂ ಉಪಯೋಗಿಸದಿದ್ದರೂ ಅರ್ಜುನನಿಗೆ ತನ್ನ ಅಜ್ಞಾನದಿಂದ ಆ ವಿಧವಾಗಿ ಕಂಡುಬಂದಿದೆಯೆಂಬ ಭಾವವು ಕಾಣುತ್ತಿದೆ.

**ಅ||** ಅರ್ಜುನನ ಈ ಪ್ರಶ್ನೆಗೆ ಭಗವಂತನು ಸಮಾಧಾನವೀಯುತ್ತಾ ಮೋಕ್ಷ ಪ್ರಾಪ್ತಿಗೆ ಎರಡು ಮಾರ್ಗಗಳನ್ನು ತಿಳಿಸುತ್ತಿದ್ದಾನೆ-

ಶ್ರೀಭಗವಾನುವಾಚ

> **೩. ಲೋಕೇಽಸ್ಮಿನ್ ದ್ವಿವಿಧಾ ನಿಷ್ಠಾ ಪುರಾ ಪ್ರೋಕ್ತಾ ಮಯಾಽನಘ**
> **ಜ್ಞಾನಯೋಗೇನ ಸಾಂಖ್ಯಾನಾಂ ಕರ್ಮಯೋಗೇನ ಯೋಗಿನಾಮ್**

**ಶ್ರೀಭಗವಾನುವಾಚ- ಶ್ರೀಭಗವಂತನು ಹೇಳಿದನು.**

**ಅರ್ಥ:** ಅನಘ=ಪಾಪರಹಿತನಾದ ಓ ಅರ್ಜುನಾ! ಪುರಾ=ಬಹುಹಿಂದೆ; ಲೋಕೇಽಸ್ಮಿನ್=ಈ ಲೋಕದಲ್ಲಿ; ಮಯಾ=ನನ್ನಿಂದ; ಸಾಂಖ್ಯಾನಾಂ= ಸಾಂಖ್ಯರಿಗೆ (ಜ್ಞಾನ ಮಾರ್ಗಾವಲಂಬಿಗಳಿಗೆ); ಜ್ಞಾನಯೋಗೇನ=ಜ್ಞಾನ ಯೋಗದಿಂದ; ಯೋಗಿನಾಂ=ಯೋಗಿಗಳಿಗೆ (ಕರ್ಮ ಮಾರ್ಗಾವಲಂಬಿಗಳಿಗೆ); ಕರ್ಮಯೋಗೇನ=ಕರ್ಮಯೋಗದಿಂದ; ದ್ವಿವಿಧಾ=ಎರಡು ವಿಧಗಳಿಂದ; ನಿಷ್ಠಾ=ಅನುಷ್ಠಾನ ಕ್ರಮ; ಪ್ರೋಕ್ತಾ=ಹೇಳಲ್ಪಟ್ಟಿದೆ.

**ಶ್ರೀಭಗವಂತನು ಹೇಳಿದನು**

**ತಾ||** ಪಾಪರಹಿತನಾದ ಓ ಅರ್ಜುನಾ! ಬಹಳ ಹಿಂದೆ ಈ ಲೋಕದಲ್ಲಿ ಸಾಂಖ್ಯರಿಗೆ (ತತ್ವವಿಚಾರಣಾಪರರಿಗೆ) ಜ್ಞಾನಯೋಗ ಮತ್ತು ಯೋಗಿಗಳಿಗೆ ಕರ್ಮಯೋಗವೆನ್ನುವ ಎರಡು ವಿಧಗಳಾದ ಅನುಷ್ಠಾನ ಕ್ರಮಗಳು ನನ್ನಿಂದ ಹೇಳಲ್ಪಟ್ಟವು.

**ವ್ಯಾಖ್ಯೆ:** "ಅನಘ"- 'ಪಾಪರಹಿತನೇ' ಎಂದು ಅರ್ಜುನನ್ನು ಶ್ರೀಕೃಷ್ಣ ಮೂರ್ತಿ ಇಲ್ಲಿ ಸಂಬೋಧಿಸಿದನು. ಚಿತ್ತವು ಪಾಪರಹಿತವಾದಾಗಲೇ ಬ್ರಹ್ಮವಿದ್ಯೆ ಸಲೀಸಾಗಿ ಅದರಲ್ಲಿ ಪ್ರವೇಶಿಸುವುದು. ಬಟ್ಟೆಗೆ ಹತ್ತಿದ ಕೊಳೆಯು ಹೋದನಂತರವೇ ಬಣ್ಣ ಹಿಡಿಯುವುದು. ವೇದಾಂತ ಬೋಧೆಗೆ, ಆತ್ಮವಿಚಾರಣೆಗೆ ಅರ್ಜುನನು ತನ್ನ ಅನಘತ್ವ (ಪಾಪರಾಹಿತ್ಯ)ದ ಮೂಲಕ ಅರ್ಹತೆಯನ್ನು ಸಂಪಾದಿಸಿದನು. ಅರ್ಜುನನು ಪಾಪರಹಿತನಾಗಿರುವುದ ರಿಂದಲೇ ಶ್ರೀಕೃಷ್ಣಮೂರ್ತಿ ಆತನ ಯೋಗ್ಯತೆಯನ್ನು ಗುರುತಿಸಿ ಗೀತಾಜ್ಞಾನವೆಂಬ ಆಧ್ಯಾತ್ಮಿಕ ಉಪದೇಶವನ್ನು ಆತನಿಗೆ ಮಾಡಿದನು.

ಜೀವಿಗಳಲ್ಲಿ ಅವರವರ ಮನಸ್ತತ್ವಗಳನ್ನನುಸರಿಸಿ ಒಬ್ಬೊಬ್ಬರಿಗೆ ಒಂದೊಂದು ಮಾರ್ಗದಲ್ಲಿ ಪ್ರೀತಿಯಿರುವುದು. ಕೆಲವರಿಗೆ ತತ್ವ ವಿಚಾರಣೆ ಯಲ್ಲಿ ಆಸಕ್ತಿಯಿರುವುದು. ಇವರು ಸಾಂಖ್ಯರು, ಜ್ಞಾನಯೋಗಿಗಳು. ಇಂತಹವರಿಗೆ ಅನುಗುಣವಾದ ಬೋಧೆ ಜ್ಞಾನಯೋಗವೇ ಆಗಿದೆ. ಇವರಿಗೆ ಸೃಷ್ಟಿಯ ಆರಂಭದಲ್ಲಿ (ಪೂರ್ವಕಾಲದಲ್ಲಿ) ಭಗವಂತನು ಜ್ಞಾನಯೋಗವೆಂಬ ಸಾಧನ ಕ್ರಮವನ್ನು ಉಪದೇಶಿಸಿದನು. ಮತ್ತೆ ಕೆಲವರಿಗೆ ಕರ್ಮಮಾರ್ಗದಲ್ಲಿ ಪ್ರೀತಿಯಿರುತ್ತದೆ. ಅವರು ಯೋಗಿಗಳು. ಅವರಿಗೆ ಅವರ ಸಂಸ್ಕಾರ ವನ್ನನುಸರಿಸಿ ಕರ್ಮಯೋಗವನ್ನೇ ಪೂರ್ವದಲ್ಲಿ ಸರ್ವೇಶ್ವರನು ಬೋಧಿಸಿದನು. ಅವರವರ ಸಾಧನೆಯನ್ನು ಅನುಷ್ಠಾನ ಮಾಡಲು ಸರ್ವರೂ ಸ್ವತಂತ್ರರು. ಇಲ್ಲಿ ಬಲಾತ್ಕಾರವೇನೂ ಇಲ್ಲ. ಏಕೆಂದರೆ, ಬಲಾತ್ಕಾರ ಕೃತ್ರಿಮ ವಾಗಿದ್ದು ಆಧ್ಯಾತ್ಮ ಪಥದಲ್ಲಿ ಉನ್ನತಿಯನ್ನುಂಟುಮಾಡುವುದಿಲ್ಲ. ಒಂದೇ ಗಮ್ಯಸ್ಥಾನವನ್ನು ಸೇರಲು ಅನೇಕ ಮಾರ್ಗಗಳಿರಬಹುದು. ಒಂದು ಶಿಖರವನ್ನೇರಲು ಎಷ್ಟೋ ದಾರಿಗಳಿರಬಹುದು. ಯಾವ ದಾರಿಯಿಂದ ಪ್ರಯಾಣ ಬೆಳೆಸಿದರೂ ಕೊನೆಗೆ ಎಲ್ಲರೂ ಆ ಗಮ್ಯಸ್ಥಾನವನ್ನೇ ಸೇರುವರು. ಆದ್ದರಿಂದ ಯಾರ ಮನಸ್ಸು ಯಾವ ಮಾರ್ಗದಲ್ಲಿ ಆಸಕ್ತಿಯುಳ್ಳದ್ದಾಗಿರು ವುದೊ ಅವರು ಆ ಮಾರ್ಗವನ್ನು ಶ್ರದ್ಧೆ, ಭಕ್ತಿಗಳಿಂದ ಅನುಸರಿಸಿ, ಲಕ್ಷ್ಯವಾದ ಪರಮಾತ್ಮನನ್ನು ಸೇರಬಹುದೆಂದು ಭಗವಂತನು ಇಲ್ಲಿ ತಿಳಿಸುತ್ತಿದ್ದಾನೆ. ಗೀತೆಯಲ್ಲಿ ಅನೇಕ ಯೋಗಗಳು ಹೇಳಲ್ಪಟ್ಟಿದ್ದರೂ ಅವುಗಳೆಲ್ಲವನ್ನು ಪ್ರಧಾನವಾಗಿ ಜ್ಞಾನ, ಕರ್ಮಯೋಗಗಳ ಕೆಳಗೇ ವಿಭಜಿಸಬಹುದು.

ಪೂರ್ವದಲ್ಲಿ (ಸೃಷ್ಟಿಯ ಆರಂಭದಲ್ಲಿ) ಶ್ರೀಕೃಷ್ಣನು ಈ ಎರಡು ಯೋಗಗಳನ್ನು ಬೋಧಿಸಿದನೆಂದು ಹೇಳಿರುವುದರಿಂದ ಆತನು ತ್ರಿಕಾಲಾಧೀಶನೆಂದು, ಆತನು ಸಾಕ್ಷಾತ್ ಪರಮಾತ್ಮನೇ ಎಂದು ಸ್ಪಷ್ಟವಾಗುತ್ತಿದೆ.

---

1. ವ್ಯಾಮಿಶ್ರೇಣೈವ - ಪಾಠಾಂತರ

ಪ್ರ : ಪೂರ್ವದಲ್ಲಿ ಭಗವಂತನು ಜನರ ಉದ್ಧಾರಕ್ಕಾಗಿ ಎಷ್ಟು ಮಾರ್ಗಗಳನ್ನು ಬೋಧಿಸಿದನು ? ಅವು ಯಾವುವು ?

ಉ : ಎರಡು ಮಾರ್ಗಗಳನ್ನು ಬೋಧಿಸಿದನು ೧) ಜ್ಞಾನಯೋಗ (ಸಾಂಖ್ಯರ ಉಪಯೋಗಾರ್ಥವಾಗಿ) ೨) ಕರ್ಮಯೋಗ (ಕರ್ಮಯೋಗಿಗಳ ಉಪಯೋಗಾರ್ಥವಾಗಿ)

**ಅ||** ಈ ಎರಡು ಮಾರ್ಗಗಳಲ್ಲಿಯೂ ಕೇವಲ ಕರ್ಮಗಳನ್ನು ತ್ಯಜಿಸುವುದರಿಂದ ಮೋಕ್ಷವು ಲಭಿಸುವುದಿಲ್ಲವೆನ್ನುವುದನ್ನು ಹೇಳಲಾಗುತ್ತಿದೆ-

**೪. ನ ಕರ್ಮಣಾಮನಾರಂಭಾನ್ನೈಷ್ಕರ್ಮ್ಯಂ ಪುರುಷೋಽಶ್ನುತೇ**
**ನ ಚ ಸಂನ್ಯಸನಾದೇವ ಸಿದ್ಧಿಂ ಸಮಧಿಗಚ್ಛತಿ**

**ಅರ್ಥ:** ಪುರುಷಃ=ಮನುಜನು; ಕರ್ಮಣಾಂ=ಕರ್ಮಗಳನ್ನು; ಅನಾರಂಭಾತ್= ಆಚರಿಸದೇ ಇರುವುದರಿಂದ; ನೈಷ್ಕರ್ಮ್ಯಂ=ನಿಷ್ಕ್ರಿಯವಾದ ಆತ್ಮಸ್ವರೂಪ ಸ್ಥಿತಿಯನ್ನು; ನ ಅಶ್ನುತೇ=ಹೊಂದುವುದಿಲ್ಲ; ಸಂನ್ಯಸನಾದೇವ=ಕರ್ಮತ್ಯಾಗ ಮಾಡುವುದರಿಂದಲೇ; ಸಿದ್ಧಿಂ=ಮೋಕ್ಷವನ್ನು; ನ ಚ ಸಮಧಿ ಗಚ್ಛತಿ= ಹೊಂದುವುದು ಸಾಧ್ಯವಿಲ್ಲವಲ್ಲ!

**ತಾ||** ಮನುಜನು ಕರ್ಮಗಳನ್ನು ಆಚರಿಸದೇ ಸುಮ್ಮನಿದ್ದ ಮಾತ್ರಕ್ಕೆ ನಿಷ್ಕ್ರಿಯವಾದ ಆತ್ಮಸ್ವರೂಪ ಸ್ಥಿತಿಯನ್ನು ಹೊಂದುವುದಿಲ್ಲ. ಕರ್ಮತ್ಯಾಗ ಮಾತ್ರದಿಂದ ಮೋಕ್ಷಸಿದ್ಧಿಯನ್ನು ಯಾರೂ ಹೊಂದಲು ಸಾಧ್ಯವಿಲ್ಲ.

**ವ್ಯಾಖ್ಯೆ:** ಈ ಶ್ಲೋಕದಲ್ಲಿಯ ಮೊದಲನೆಯ ಪಾದ ಕರ್ಮಯೋಗವನ್ನು ಕುರಿತು, ಎರಡನೆಯ ಪಾದ ಜ್ಞಾನಮಾರ್ಗವನ್ನು ಕುರಿತು ವಿವರಿಸುತ್ತಿವೆ. ಕರ್ಮಮಾರ್ಗವನ್ನನುಸರಿಸುವವನು ತನ್ನ ವಿಧ್ಯುಕ್ತಧರ್ಮವನ್ನು, ಕರ್ತವ್ಯವನ್ನು, ತನ್ನ ನಿಯತ ಕರ್ಮವನ್ನು (ನಿಷ್ಕಾಮವಾಗಿ) ಆಚರಿಸದೇ ಇದ್ದಲ್ಲಿ ಆತನಿಗೆ ಚಿತ್ತಶುದ್ಧಿ ಉಂಟಾಗುವುದಿಲ್ಲ. ಆಗ ಆತನು ನೈಷ್ಕರ್ಮ್ಯ ಆತ್ಮಸ್ಥಿತಿಯನ್ನು ಸೇರಲಾರನು. ಹಾಗೆಯೇ ಜ್ಞಾನಮಾರ್ಗದಲ್ಲಿರುವವನು ಬಾಹ್ಯ ಸಂನ್ಯಾಸದಿಂದ, ಕರ್ಮತ್ಯಾಗದಿಂದ ಮೋಕ್ಷ ಸಿದ್ಧಿಯನ್ನು ಎಂದಿಗೂ ಪಡೆಯುವುದಿಲ್ಲ. ಏಕೆಂದರೆ ಮೋಕ್ಷಕ್ಕೆ ಮನೋ ನೈರ್ಮಲ್ಯ, ವಾಸನಾಕ್ಷಯಗಳು ಮುಖ್ಯವಾಗಿ ಬೇಕಾಗಿವೆ. ಈ ಪ್ರಕಾರವಾಗಿ, ಯಾವ ದೃಷ್ಟಿಯಿಂದ ನೋಡಿದರೂ ಕೇವಲ ಕರ್ಮತ್ಯಾಗವು ಮೋಕ್ಷಕ್ಕೆ ಕಾರಣವಾಗಲಾರದೆಂದು ಭಗವಂತನು ಹೇಳುತ್ತಿದ್ದಾನೆ.

ಕರ್ಮಗಳನ್ನು ನಿಷ್ಕಾಮವಾಗಿ ಆಚರಿಸದೇ ಇದ್ದಲ್ಲಿ ಚಿತ್ತಶುದ್ಧಿ ಉಂಟಾಗುವುದಿಲ್ಲ. ಚಿತ್ತಶುದ್ಧಿಯಾಗದಿದ್ದರೆ ಜ್ಞಾನವು ಉದಯಿಸದು. ಜ್ಞಾನವು ಉದಯಿಸದಿದ್ದರೆ ಮೋಕ್ಷವು (ನಿಷ್ಕ್ರಿಯಾತ್ಮಸ್ಥಿತಿ, ನೈಷ್ಕರ್ಮ್ಯಸಿದ್ಧಿ) ಲಭಿಸದು. ಆದ್ದರಿಂದಲೇ ಭಗವಂತನು ಇಲ್ಲಿ ಕರ್ಮಗಳನ್ನು ಆಚರಿಸದಿದ್ದರೆ ಮೋಕ್ಷಪದವಿ ಕೈಗೂಡದೆಂದು ಹೇಳಿರುವನು. ಪ್ರಾರಂಭದಲ್ಲಿ ಕರ್ಮಾಚರಣೆಯನ್ನು ಆಚರಿಸುವುದರಿಂದಲೇ ಕೊನೆಗೆ ಜ್ಞಾನ ನಿಷ್ಠಾತ್ಮಕವಾದ ಆತ್ಮಾನುಭವವನ್ನು ಹೊಂದಲು ಸಾಧ್ಯ. ಕರ್ಮಗಳನ್ನು ಬಿಡುವುದರಿಂದ ಮೋಕ್ಷಸಿದ್ಧಿಯನ್ನು ಯಾರೂ ಹೊಂದಲಾರರು. ಮೇಲಾಗಿ ಅಂತಹವರು ಸೋಮಾರಿಗಳಾಗಿ ಜೀವನವನ್ನು ವ್ಯರ್ಥವಾಗಿ ತಮಸ್ಸಿನಲ್ಲಿ ಕಳೆಯುವರು. ಆದ್ದರಿಂದ ನೈಷ್ಕರ್ಮ್ಯಪರಬ್ರಹ್ಮದ ಹೆಸರಿನಲ್ಲಿ ಕೆಲವರು ಕರ್ಮರಹಿತರಾಗಿ ಆ ಕಡೆ ದೈವಕ್ಕಾಗಲಿ, ಈ ಕಡೆ ಪ್ರಪಂಚಕ್ಕಾಗಲಿ ಉಪಕಾರವಾಗದೆ ಉಭಯ ಭ್ರಷ್ಟರಾಗುವ ಅವಕಾಶ ಗಳಿರುವುದರಿಂದ ಜಾಗರೂಕರಾಗಿರಬೇಕು.

ತಮಸ್ಸಿನಿಂದ ರಜಸ್ಸಿಗೆ, ರಜಸ್ಸಿನಿಂದ ಸತ್ವಕ್ಕೆ, ಸತ್ವದಿಂದ ವಿಶುದ್ಧ ಸತ್ವಕ್ಕೆ ಇಲ್ಲವೇ ಗುಣಾತೀತಕ್ಕೆ ಜೀವಿಯು ಕ್ರಮವಾಗಿ ಮುಂದುವರಿಯಬೇಕು. ಆ ಸ್ಥಿತಿ, ಪ್ರಾರಂಭದಲ್ಲಿ ಕರ್ಮಾಚರಣೆಯಿಂದ ಸಾಧ್ಯವೇ ಹೊರತು ಅಕರ್ಮಣ್ಯತ್ವದಿಂದ ಸಾಧ್ಯವಿಲ್ಲ. ಆದ್ದರಿಂದಲೇ ಭಗವಂತನು ಇಲ್ಲಿ ನೈಷ್ಕರ್ಮ್ಯ ಸಿದ್ಧಿರೂಪವಾದ ಮೋಕ್ಷವು ಸಾಮಾನ್ಯವಾದದ್ದಲ್ಲವೆಂತಲೂ, ಅದು ಅಕಸ್ಮಾತ್ತಾಗಿ ಎಲ್ಲಿಂದಲೋ ಜಾರಿಬಂದು ಬೀಳುವುದಲ್ಲವೆಂತಲೂ; ಚಿತ್ತಶುದ್ಧಿಗೋಸ್ಕರ ನಿಷ್ಕಾಮ ಕರ್ಮವನ್ನು ಆಚರಿಸದಿದ್ದರೆ ಆ ಸ್ಥಿತಿ ಎಂದೆಂದಿಗೂ ಸಂಭವಿಸುವು ದಿಲ್ಲವೆಂದು ಘಂಟಾಘೋಷವಾಗಿ ಹೇಳಿರುತ್ತಾನೆ. ಬಾಹ್ಯ ಸಂನ್ಯಾಸ ಮಾತ್ರದಿಂದ ಲಕ್ಷ್ಯವು ಸಿದ್ಧಿಸುವುದಿಲ್ಲವೆಂದು ಗೀತಾಚಾರ್ಯನು ಇಲ್ಲಿ ಸ್ಪಷ್ಟವಾಗಿ ತಿಳಿಸಿದ್ದಾನೆ. ಕರ್ಮಗಳನ್ನು ಬಿಡುವುದು, ಅಥವ ಬಿಡದೇ ಇರುವುದು ಮುಖ್ಯವಲ್ಲ. ಒಳಗಿನ ವಾಸನೆಗಳು ನಿರ್ಮೂಲವಾಗಬೇಕು. ಚಿತ್ತವು ನಿರ್ಮಲವಾಗಬೇಕು. ಅದು ಬಹಳ ಪ್ರಧಾನವಾದುದು. ಅದು ಕರ್ಮಾಚರಣೆಯಿಂದಲೇ ಸಾಧ್ಯ. ಆದ್ದರಿಂದ ಭಗವಂತನು ಕರ್ಮಾಚರಣೆಗಳನ್ನು (ನಿಷ್ಕಾಮ ಕರ್ಮಯೋಗವನ್ನು) ಇಲ್ಲಿ ಪ್ರೋತ್ಸಾಹಿಸುತ್ತಿದ್ದಾನೆ. ಈ ವಿಧವಾಗಿ ಸೋಮಾರಿಗಳಿಗೆ, ಅಕರ್ಮಣಿಗಳಿಗೆ ಸರ್ವೇಶ್ವರನು ಒಳ್ಳೆಯ ಗುಣಪಾಠವನ್ನು ಹೇಳಿರುವನು. ಇದರಿಂದ ಪ್ರಾರಂಭದಲ್ಲಿ ಪ್ರತಿಯೊಬ್ಬರೂ ಚಿತ್ತಶುದ್ಧಿಗೋಸ್ಕರ ಯಾವುದೋ ಒಂದು ಪವಿತ್ರ ಕರ್ಮವನ್ನು ದೈವ ಪ್ರೀತ್ಯರ್ಥವಾಗಿ (ಫಲಾಭಿಸಂಧಿರಹಿತವಾಗಿ) ತಪ್ಪದೆ ಆಚರಿಸಿಯೇ ತೀರಬೇಕೆಂದು ಸ್ಪಷ್ಟವಾಗುತ್ತಿದೆ.

ಪ್ರ : ಯಾವುದರಿಂದ ಮೋಕ್ಷವು ಲಭಿಸಲು ಸಾಧ್ಯವಿಲ್ಲ ?

ಉ : (ಚಿತ್ತಶುದ್ಧಿಗಾಗಿ) ಕರ್ಮಾಚರಣೆ ಮಾಡದೆ ಇದ್ದರೆ, ಬಾಹ್ಯಸಂನ್ಯಾಸ ಮಾತ್ರದಿಂದ ಮೋಕ್ಷವು ಎಂದೆಂದಿಗೂ ಲಭಿಸುವುದಿಲ್ಲ.

ಪ್ರ : ಮತ್ತೆ ಮೋಕ್ಷವು ಯಾವುದರಿಂದ ಲಭಿಸುವುದು ಎಂದು ಇದರಿಂದ ಸ್ಪಷ್ಟವಾಗುತ್ತದೆ?

ಉ : ನಿಷ್ಕಾಮ ಕರ್ಮಾಚರಣೆಯಿಂದ ಕ್ರಮವಾಗಿ ಮೋಕ್ಷವು ಪ್ರಾಪ್ತಿಯಾಗುವುದು. ಮತ್ತೆ ವಾಸನಾ ತ್ಯಾಗದಿಂದ ಮೋಕ್ಷವು ಲಭಿಸುವುದು.

**ಅ||** ಇನ್ನು ಕರ್ಮಯೋಗದ ಆವಶ್ಯಕತೆಯನ್ನು ಭಗವಂತನು ಅನೇಕ ರೀತಿಗಳಲ್ಲಿ ತಿಳಿಸುತ್ತಾ ಪ್ರಪ್ರಥಮವಾಗಿ ಕರ್ಮತ್ಯಾಗವು ಭೌತಿಕವಾಗಿ ಅಸಾಧ್ಯವೆಂದು ತಿಳಿಸುತ್ತಿದ್ದಾನೆ-

**೫. ನ ಹಿ ಕಶ್ಚಿತ್ ಕ್ಷಣಮಪಿ ಜಾತು ತಿಷ್ಠತ್ಯಕರ್ಮಕೃತ್**
**ಕಾರ್ಯತೇ ಹ್ಯವಶಃ ಕರ್ಮ ಸರ್ವಃ ಪ್ರಕೃತಿಜೈರ್ಗುಣೈಃ**

**ಅರ್ಥ:** ಕಶ್ಚಿತ್=ಯಾರು; ಜಾತು=ಒಮ್ಮೆ; ಕ್ಷಣಮಪಿ=ಕ್ಷಣವಾದರೂ; ಅಕರ್ಮಕೃತ್=ಕರ್ಮವನ್ನು ಮಾಡದೆ; ನ ಹಿ ತಿಷ್ಠತಿ=ಇರಲಾರರಲ್ಲ!; ಹಿ= ಏಕೆಂದರೆ; ಪ್ರಕೃತಿಜೈಃ=ಪ್ರಕೃತಿ(ಮಾಯೆ)ಯಿಂದ ಹುಟ್ಟಿದ; ಗುಣೈಃ= ಗುಣಗಳಿಂದ; ಸರ್ವಃ=ಪ್ರತಿಯೊಬ್ಬನು; ಅವಶಃ=ಅಸ್ವತಂತ್ರನಾಗಿ (ತನ್ನ ವಶವಿಲ್ಲದೆ) ಕರ್ಮ=ಕರ್ಮವನ್ನು; ಕಾರ್ಯತೇ=ಮಾಡುತ್ತಿದ್ದಾನೆ.

**ತಾ||** (ಪ್ರಪಂಚದಲ್ಲಿ) ಯಾವನೂ ಒಂದು ಕ್ಷಣವಾದರೂ ಕರ್ಮಮಾಡದೆ ಇರಲಾರನು. ಪ್ರಕೃತಿಯಿಂದ ಹುಟ್ಟಿದ ಗುಣಗಳಿಂದ ಪ್ರತಿಯೊಬ್ಬನೂ ಬಲಾತ್ಕಾರವಾಗಿ ಕರ್ಮಗಳನ್ನು ಮಾಡುತ್ತಲೇ ಇದ್ದಾನೆ.

**ವ್ಯಾಖ್ಯೆ:** ಕರ್ಮಗಳನ್ನು ಮಾಡದೆ ಯಾರೂ ಒಂದು ಕ್ಷಣವಾದರೂ ಇರಲಾರರು. ಗಾಳಿ ಸೇವಿಸುವುದು ಒಂದು ಕರ್ಮ, ತಿನ್ನುವುದು ಒಂದು ಕರ್ಮ, ನಡೆಯುವುದು, ಮತ್ತು ಮಾತನಾಡುವುದು ಕರ್ಮಗಳೇ. ಇವು ಇಲ್ಲದೆ ಯಾರಾದರೂ ಪ್ರಪಂಚದಲ್ಲಿ ಇರಬಲ್ಲರೇ? ಆದ್ದರಿಂದ ಸರ್ವರಿಗೂ ಕರ್ಮ ಅನಿವಾರ್ಯವಾದದ್ದೆಂದು ಭಗವಂತನು ಹೇಳುತ್ತಿದ್ದಾನೆ.

ಮತ್ತೆ, ಜ್ಞಾನಿಯನ್ನು ಬಿಟ್ಟು ಬೇರೆ ಎಲ್ಲಾ ಜೀವಿಗಳು ಮಾಯೆಗೆ ಹಾಗು ಪ್ರಕೃತಿಗೆ ಅಧೀನವಾಗಿಯೇ ಇರುವರು. ಪ್ರಕೃತಿಯಿಂದ ಜನ್ಯವಾದ ತ್ರಿಗುಣಗಳಿಗೆ ಆತ ಅಧೀನನಾಗಿ ಪ್ರವರ್ತಿಸುತ್ತಿದ್ದಾನೆ. ಆದ್ದರಿಂದ ಆಯಾ ಗುಣಗಳನ್ನು ಅನುಸರಿಸಿ ಕರ್ಮಗಳನ್ನು ಆತನು ಪರವಶನಾಗಿ ಆಚರಿಸುತ್ತಲೇ ಇರುವನು. ಆದರೆ ಇಲ್ಲಿ 'ಸರ್ವಃ' ಎನ್ನುವ ಪದಕ್ಕೆ 'ಜೀವನ್ಮುಕ್ತರಾದ ಮಹನೀಯರ ಹೊರತು ಬೇರೆಯವರೆಲ್ಲಾ' ಎಂದರ್ಥ. ಏಕೆಂದರೆ ಜೀವನ್ಮುಕ್ತರು ಗುಣಾತೀತವಾದ ಆತ್ಮಸ್ಥಿತಿಯನ್ನು ಹೊಂದಿರುತ್ತಾರೆ. ಗುಣಗಳಿಗೆ ಅಧೀನರಾಗಿರುವುದಿಲ್ಲ, ಅವರನ್ನು ಮಾಯೆಯು ಏನೂ ಮಾಡಲಾರದು. ಆದರೂ ಅವರ ದೇಹೇಂದ್ರಿಯಾದಿಗಳು ಪ್ರಕೃತಿಯಲ್ಲಿ ಅಂತರ್ಗತವಾಗಿರುವುದರಿಂದ ಅವು ಅವುಗಳ ನಿರ್ದಿಷ್ಟ ಕಾರ್ಯವನ್ನಾಚರಿಸಿದರೂ ಅವರು ಅಕರ್ತರಾಗಿ, ನಿಸ್ಸಂಗವಾಗಿಯೇ ಉಳಿಯುವರು.

ಇನ್ನು ಅಜ್ಞಾನಿಗಳಾದವರು ಪ್ರಕೃತಿಗೆ, ಅವುಗಳ ಗುಣಗಳಿಗೆ ಬದ್ಧರಾಗಿದ್ದರೂ, ಅಷ್ಟು ಮಾತ್ರಕ್ಕೆ, ನಿರುತ್ಸಾಹ ಪಡಬೇಕಾಗಿಲ್ಲ. ಪುರುಷ ಪ್ರಯತ್ನವನ್ನಾಶ್ರಯಿಸಿ, ಶುದ್ಧ ಕರ್ಮದಿಂದ ಅಶುದ್ಧ ಕರ್ಮವನ್ನು, ಪುಣ್ಯದಿಂದ ಪಾಪ್ಪವನ್ನು ದೂರಮಾಡಿ, ಈಶ್ವರಾರ್ಪಣ ಬುದ್ಧಿಯಿಂದ ಸತ್ಕರ್ಮಗಳನ್ನು ಆಚರಿಸುತ್ತಾ, ನಿಷ್ಕಾಮವಾಗಿ ಪ್ರವರ್ತಿಸುವುದರಿಂದ, ಕ್ರಮೇಣ ಚಿತ್ತ ನೈರ್ಮಲ್ಯ ಉಂಟಾಗಿ ಮೋಕ್ಷ ಸ್ಥಿತಿಯನ್ನು ಹೊಂದಬಲ್ಲರು.

**ಅ||** ಇಂದ್ರಿಯಗಳನ್ನು ಬರೀ ಕುತೂಹಲದಿಂದ ಮಾತ್ರ ಬಿಗಿಯಾಗಿ ಹಿಡಿದು **ಕುಳಿತುಕೊಳ್ಳುವುದರಿಂದ**, ಕರ್ಮತ್ಯಾಗ (ನೈಷ್ಕರ್ಮ) ಎಂದೆಂದಿಗೂ ಸಾಧ್ಯವಿಲ್ಲವೆಂದು ಹೇಳಲಾಗುತ್ತಿದೆ.

**೬. ಕರ್ಮೇಂದ್ರಿಯಾಣಿ ಸಂಯಮ್ಯ ಯ ಆಸ್ತೇ ಮನಸಾ ಸ್ಮರನ್**
**ಇಂದ್ರಿಯಾರ್ಥಾನ್ವಿಮೂಢಾತ್ಮಾ ಮಿಥ್ಯಾಚಾರಃ ಸ ಉಚ್ಯತೇ**

**ಅರ್ಥ:** ಯಃ=ಯಾವನು; ಕರ್ಮೇಂದ್ರಿಯಾಣಿ=ಕರ್ಮೇಂದ್ರಿಯ, ಜ್ಞಾನೇಂದ್ರಿಯಗಳನ್ನು; ಸಂಯಮ್ಯ=ನಿಗ್ರಹಿಸಿ; ಮನಸಾ=ಮನಸ್ಸಿನಿಂದ; ಇಂದ್ರಿಯಾರ್ಥಾನ್=ಇಂದ್ರಿಯಗಳ (ಶಬ್ದಾದಿ) ವಿಷಯಗಳನ್ನು; ಸ್ಮರನ್= ಚಿಂತಿಸುತ್ತಾ; ಆಸ್ತೇ=ಇರುವನೋ; ವಿಮೂಢಾತ್ಮಾ=ವಿವೇಕ ಶೂನ್ಯವಾದ ಮನಸ್ಸುಳ್ಳ; ಸಃ=ಆತನು; ಮಿಥ್ಯಾಚಾರಃ=ಕಪಟ ಆಚಾರವುಳ್ಳವನೆಂದು; ಉಚ್ಯತೇ=ಹೇಳಲ್ಪಡುತ್ತದೆ.

**ತಾ||** ಯಾವನು ಕರ್ಮೇಂದ್ರಿಯ ಜ್ಞಾನೇಂದ್ರಿಯಗಳನ್ನು ನಿಗ್ರಹಿಸಿ, ಮನಸ್ಸಿನಿಂದ ಇಂದ್ರಿಯಗಳ ಶಬ್ದಾದಿ ವಿಷಯಗಳನ್ನು ಚಿಂತಿಸುತ್ತಿರುವನೊ, ಅಂತಹ ಮೂಢಚಿತ್ತನಾದ ಮನುಜನು ಮಿಥ್ಯಾಚಾರಿ ಎಂದು ಕರೆಯಲ್ಪಡುತ್ತಾನೆ.

**ವ್ಯಾಖ್ಯೆ:** ಇಲ್ಲಿ ಕರ್ಮೇಂದ್ರಿಯಾಣಿ ಎನ್ನುವ ಪದಕ್ಕೆ ಕರ್ಮೇಂದ್ರಿಯ, ಜ್ಞಾನೇಂದ್ರಿಯಗಳು ಎರಡೂ ಎಂದರ್ಥ. ಏಕೆಂದರೆ ಕೆಲವು ಇಂದ್ರಿಯಗಳ ಬಗ್ಗೆ ಮಾತ್ರ ಹೇಳಿದಲ್ಲಿ ಡಂಭಾಚಾರಿಯ ಚಿತ್ರಣ ಅಪೂರ್ಣವಾಗುವುದು.

*"ಸಂಯಮ್ಯ"*-ಇದು ಸಾಧಕನು ಮಾಡುವ ಸಂಯಮವಲ್ಲ. ಏಕೆಂದರೆ, ಉತ್ತಮ ಸಂಯಮವಿರುವವನು ಮಿಥ್ಯಾಚಾರಿಯಾಗಿ ಎಂದೆಂದೂ ಇರುವುದಿಲ್ಲ, ಡಂಭಕ್ಕಾಗಿ ಇಂದ್ರಿಯಗಳನ್ನು ಪೂರ್ತಿಯಾಗಿ ಬಿಗಿ ಹಿಡಿದು ಕೂತು, ಮನಸ್ಸಿನಿಂದ ಮೂರು ಲೋಕಗಳಲ್ಲಿ ವಿಹರಿಸುವವನನ್ನು ಕುರಿತು ಇಲ್ಲಿ ಹೇಳಲಾಗಿದೆ. ಆದರೆ ಪ್ರಾರಂಭದಲ್ಲಿ ಕೆಲವು ಸಾಧಕರಿಗೆ ಧ್ಯಾನ ಮಾಡುವಾಗ ಮನಸ್ಸು ದೈವದ ಮೇಲೆ (ಲಕ್ಷ್ಯದ ಮೇಲೆ) ನಿಲ್ಲದೆ ದಶದಿಕ್ಕುಗಳಲ್ಲಿ ಓಡುತ್ತಿರುತ್ತದೆ. ಅದಕ್ಕೂ, ಡಂಭಾಚಾರಿಯ ಪ್ರದರ್ಶನಕ್ಕೂ ಬಹಳ ವ್ಯತ್ಯಾಸವಿದೆ. ಏಕೆಂದರೆ ಮುಮುಕ್ಷುವಾದವನು ಒಂದು ವೇಳೆ ತನ್ನ ಮನಸ್ಸು ವಿಷಯದ ಮೇಲೆ ಎರಗಿದರೂ ಅದನ್ನು ಅಲ್ಲಿಂದ ಮರಳಿಸಿ ಆತ್ಮದಲ್ಲಿ (ದೈವದಲ್ಲಿ) ಸ್ಥಾಪಿಸಲು ಯತ್ನಿಸುತ್ತಿರುತ್ತಾನೆ. ಡಂಭಾಚಾರಿಯು ಹಾಗೆ ಮಾಡುವುದಿಲ್ಲ. ಸಾಧಕನದು ಸದುದ್ದೇಶ. ಈತನದು ದುರುದ್ದೇಶ. ಈತನು ಮಾಡುವುದು ಕೃತ್ರಿಮ ಧ್ಯಾನ, ಬಕಧ್ಯಾನ.

ಆಧ್ಯಾತ್ಮ ಸಾಧನೆಯನ್ನು ಪ್ರಾರಂಭಿಸಿದಾಗ ಮುಮುಕ್ಷು ಅದರ ಪದ್ಧತಿಯನ್ನು, ಕ್ರಮವನ್ನು ಸರಿಯಾಗಿ ತಿಳಿದುಕೊಂಡಿರಬೇಕೆನ್ನುವುದು ಈ ಶ್ಲೋಕದಿಂದ ಸ್ಪಷ್ಟವಾಗುತ್ತಿದೆ. ಇಲ್ಲದೆ ಇದ್ದರೆ ಕುಮಾರ್ಗದಲ್ಲಿ ಬೀಳುವ ಸಂಭವವಿದೆ. ಹಿರಿಯರಾದ ಮಹಾತ್ಮರಿಂದ, ಅನುಭವಜ್ಞರಾದ ಗುರುಗಳಿಂದ, ಸಾಧನ ಪದ್ಧತಿಯನ್ನು ಅವಶ್ಯವಾಗಿ ತಿಳಿದುಕೊಳ್ಳಬೇಕು. ಇಲ್ಲದೆ ಇದ್ದಲ್ಲಿ 'ಇಂದ್ರಿಯ ನಿಗ್ರಹ ಅವಶ್ಯಕವಾದುದು' ಎನ್ನುವ ಸೂತ್ರವನ್ನು ಗ್ರಹಿಸಿ ಅದರ ಒಳಿತು ಕೆಡಕುಗಳನ್ನು ತಿಳಿಯದೆ, ಇಂದ್ರಿಯಗಳನ್ನು ಬಲಾತ್ಕಾರವಾಗಿ ಅದುಮಿಟ್ಟು, ಒಳಗೆ ಮನಸ್ಸಿನಲ್ಲಿ ಲೋಕವ್ಯವಹಾರಗಳೆಲ್ಲವನ್ನು, ವಿಷಯ ಭೋಗಗಳೆಲ್ಲವನ್ನು ನಡೆಸುವ ಅವಕಾಶವಿರುತ್ತದೆ. ಆದ್ದರಿಂದ ಇಂತಹ ಪ್ರಮಾದವನ್ನು ಊಹಿಸಿ, ಗುರೋರ್ಗುರುವಾದ ಶ್ರೀ ಕೃಷ್ಣಪರಮಾತ್ಮನು ಅಂತಹವರನ್ನು ತಿದ್ದಲು ಗೀತಾಶಾಸ್ತ್ರದಲ್ಲಿ ಈ ವಿಧವಾದ ಎಚ್ಚರಿಕೆಗಳನ್ನು ಆಗಾಗ ನೀಡುತ್ತಿರುತ್ತಾನೆ.

ಲೋಕದಲ್ಲಿ ಯೋಗಿಗಳ ಹಾಗೆ ನಟಿಸುವ ಅಜ್ಞಾನಿಗಳು ಕೆಲವರು ಇರಬಹುದು. ಪ್ರಪಂಚವನ್ನು ಮೋಸಗೊಳಿಸಲು, ಇಂದ್ರಿಯಗಳನ್ನು ನಿಗ್ರಹಿಸಿ ಅವರು ಒಂದು ಕಡೆ ಕುಳಿತಿದ್ದರೂ, ಮನಸ್ಸು ವಾಸನಾಮಯ ವಾಗಿರುವುದರಿಂದ ಅದು ತ್ರಿಲೋಕದಲ್ಲಿ ಸಂಚರಿಸುತ್ತಿರುತ್ತದೆ. ಇಲ್ಲಿ ಪ್ರಪಂಚ ಸುಖಕ್ಕೂ ದೂರವಾಗಿ, ಅಲ್ಲಿ ದೈವ ಸುಖಕ್ಕೂ ದೂರವಾಗಿ, ಎರಡಕ್ಕೂ ಸೇರದೆ ಇರುವವರನ್ನು ಮೂಢರು ಎಂದು ಕರೆದರೆ ಸಾಲದೆಂದು ಕೊಂಡು 'ವಿಮೂಢರೆಂದು' ಕರೆದನು.

ಇಂದ್ರಿಯಗಳಿಗೆ ಸ್ವತಃ ವಿಷಯಗಳನ್ನು ಅನುಭವಿಸುವ ಶಕ್ತಿಯಾಗಲಿ ತಿಳಿದುಕೊಳ್ಳುವ ಶಕ್ತಿಯಾಗಲೀ ಇಲ್ಲ. ಮನಸ್ಸು ಅವುಗಳೊಡನೆ ಸೇರಿದಾಗ ಮಾತ್ರ ಆಯಾ ಶಕ್ತಿಗಳು ಏರ್ಪಡುತ್ತವೆ. ಆದ್ದರಿಂದ ಇಂದ್ರಿಯ ನಿಗ್ರಹದೊಡನೆ ಮನಸ್ಸಿನ ನಿಗ್ರಹವನ್ನೂ ಮಾಡಿದರೆ ಮಾತ್ರ ಪ್ರಯೋಜನವುಂಟಾಗುತ್ತದೆ. ಆದರೆ ಕೇವಲ ಇಂದ್ರಿಯಗಳನ್ನು ಬಿಗಿ ಹಿಡಿಯುವುದರಿಂದ ಪ್ರಯೋಜನ ವಿರುವುದಿಲ್ಲ. ಹಾಗೆ ಬಿಗಿ ಹಿಡಿದಲ್ಲಿ ಅದು ಮಿಥ್ಯಾಚಾರವೆನಿಸಿಕೊಳ್ಳುವುದು. ಮುಮುಕ್ಷುಗಳು ಆ ರೀತಿಯ ಪ್ರವರ್ತನೆಯನ್ನು ಬಿಟ್ಟುಬಿಡಬೇಕು. ಇಂದ್ರಿಯಗಳ ಜೊತೆಗೆ ಮನಸ್ಸನ್ನೂ ಕೂಡ ಹತೋಟಿಯಲ್ಲಿಟ್ಟಿರಬೇಕು. ಹಾಗೆ ಮನಸ್ಸನ್ನು ಹತೋಟಿಯಲ್ಲಿಟ್ಟುಕೊಂಡಿದ್ದರೆ, ಒಂದು ವೇಳೆ ಇಂದ್ರಿಯಗಳು ದೇಹಯಾತ್ರಾ ವಶ್ಯಕಗಳಾದ ಅನ್ನ ಪಾನಾದಿ ವಿಷಯಗಳಲ್ಲಿ ಪ್ರವರ್ತಿಸಿದರೂ ಪ್ರಮಾದವಿಲ್ಲ. ಈ ವಿಷಯವನ್ನು ಗೀತಾಚಾರ್ಯನೇ ಮುಂದೆ ತಿಳಿಸುವನು.

ಪ್ರ : ಮಿಥ್ಯಾಚಾರವೆಂದರೇನು ?

ಉ : ಇಂದ್ರಿಯಗಳನ್ನು ಮಾತ್ರ ಅದುಮಿಟ್ಟು, ಮನಸ್ಸಿನಿಂದ ಮೂರುಲೋಕಗಳ ಸಂಚಾರ ಮಾಡುವುದನ್ನು, ವಿಷಯಗಳನ್ನು ಸ್ಮರಿಸುವುದನ್ನು ಮಿಥ್ಯಾಚಾರ (ಡಂಭಾಚಾರ)ವೆನ್ನುವರು.

**ಅ॥** ಮನಸ್ಸಿನಲ್ಲಿರುವ ಆಸಕ್ತಿ ತ್ಯಜಿಸಿ ಇಂದ್ರಿಯಗಳಿಂದ ನಿಷ್ಕಾಮವಾಗಿ ಕರ್ಮಗಳನ್ನು ಆಚರಿಸುವನು ಉತ್ತಮನೆಂದು ಹೇಳಲಾಗುತ್ತಿದೆ-

**೭. ಯಸ್ತ್ವಿಂದ್ರಿಯಾಣಿ ಮನಸಾ ನಿಯಮ್ಯಾರಭತೇಽರ್ಜುನ**
**ಕರ್ಮೇಂದ್ರಿಯೈಃ ಕರ್ಮಯೋಗಮಸಕ್ತಃ ಸ ವಿಶಿಷ್ಯತೇ**

**ಅರ್ಥ:** ಅರ್ಜುನ=ಓ ಅರ್ಜುನಾ! ಯಸ್ತು=ಯಾರಾದರೇ; ಇಂದ್ರಿಯಾಣಿ= ಇಂದ್ರಿಯಗಳನ್ನು; ಮನಸಾ=ಮನಸ್ಸಿನಿಂದ; ನಿಯಮ್ಯ=ಗ್ರಹಿಸಿ; ಕರ್ಮೇಂದ್ರಿಯೈಃ=ಆ ಕರ್ಮೇಂದ್ರಿಯ, ಜ್ಞಾನೇಂದ್ರಿಯಗಳಿಂದ; ಕರ್ಮಯೋಗಂ=ಕರ್ಮಯೋಗವನ್ನು; ಅಸಕ್ತಃ=ಅಸಕ್ತನಾಗಿ; ಆರಭತೇ= ಮಾಡುತ್ತಿದ್ದಾನೋ; ಸಃ=ಆತನು; ವಿಶಿಷ್ಯತೇ=ಶ್ರೇಷ್ಠನೆನಿಸಿಕೊಳ್ಳುವನು.

**ತಾ॥** ಓ ಅರ್ಜುನಾ! ಯಾವನು ಇಂದ್ರಿಯಗಳೆಲ್ಲವನ್ನು ಮನಸ್ಸಿನಿಂದ ನಿಗ್ರಹಿಸಿ, ಅವುಗಳಿಂದ ಕರ್ಮಯೋಗವನ್ನು ಸಂಗರಹಿತನಾಗಿ ಆಚರಿಸುವನೋ ಆತನು ಉತ್ತಮನು.

**ವ್ಯಾಖ್ಯೆ:** ಮೇಲಿನ ಶ್ಲೋಕದಂತೆ ಇಲ್ಲಿಯೂ ಕೂಡ 'ಇಂದ್ರಿಯಾಣಿ' 'ಕರ್ಮೇಂದ್ರಿಯೈಃ' ಎನ್ನುವ ಪದಗಳಿಂದ ಇಂದ್ರಿಯಗಳೆಲ್ಲವೂ ಮನಸ್ಸಿಗಿಂತ ಭಿನ್ನವಾದವುಗಳು ಎಂದು ತಿಳಿಯಬೇಕು. ಏಕೆಂದರೆ ಮನಸ್ಸು ನಿಗ್ರಹಗೊಳ್ಳದೆ ಕರ್ಮೇಂದ್ರಿಯಗಳಿಂದ ಆಚರಿಸಲ್ಪಡುವ ಕರ್ಮಯೋಗ ಅಪೂರ್ಣವಾಗಿಯೇ ಉಳಿಯುವುದು.

ಮನಸ್ಸನ್ನು ಚೆನ್ನಾಗಿ ನಿಗ್ರಹಿಸಿ (ಅದರಿಂದ ವಾಸನೆಯನ್ನು ದೂರೀಕರಿಸಿ) ಇಂದ್ರಿಯಗಳನ್ನು ಸಂಯಮಿಸಿ, ವಿಷಯಗಳಲ್ಲಿ ಬೀಳದೆ, ಅಸಕ್ತನಾಗಿ (ಫಲಾಪೇಕ್ಷೆರಹಿತವಾದ) ಕರ್ಮಗಳನ್ನಾಚರಿಸಿದರೆ ಮನುಜನು ಬದ್ಧನಾಗುವುದಿಲ್ಲ. ಇಂದ್ರಿಯಗಳು ಮನಸ್ಸಿನ ಅಧೀನವಾಗಿರಬೇಕು. ಮನಸ್ಸು ತನ್ನ ಅಧೀನವಾಗಿರಬೇಕು. ಇಂದ್ರಿಯಗಳು ಅವುಗಳ ಕಾರ್ಯಗಳನ್ನು ಮಾಡಿದರೂ, ಮಾಡದೇ ಇದ್ದರೂ ಮನಸ್ಸಿನ ಸಕ್ತತೆಯೇ ಬಂಧನಕ್ಕೆ ಕಾರಣ. ಅಸಕ್ತತೆಯೇ ಮೋಕ್ಷಕ್ಕೆ ಕಾರಣ. ಆದ್ದರಿಂದ ಸಕ್ತತೆ, ವಿಷಯವಾಸನೆ ಮನಸ್ಸಿನಲ್ಲಿ ಇಲ್ಲದ ಹಾಗೆ ಮಾಡಿ, ನಂತರ ಇಂದ್ರಿಯಗಳಿಂದ ಕಾರ್ಯಗಳನ್ನು ಮಾಡಿದರೂ ದೋಷ ಸಂಭವಿಸುವುದಿಲ್ಲವೆಂದು ಭಗವಂತನು ಹೇಳುತ್ತಿದ್ದಾನೆ. ಆದ್ದರಿಂದಲೇ ಮಹನೀಯರು ಮೊಟ್ಟಮೊದಲು ಮನಸ್ಸಿನ ಸಂಯಮವನ್ನು ಅಭ್ಯಸಿಸಿ, ಹತೋಟಿಗೆ ಬಂದ ವಿಶುದ್ಧೇಂದ್ರಿಯಗಳಿಂದ ಲೋಕಹಿತಾರ್ಥವಾದ ಕರ್ಮಗಳನ್ನು ಮಾಡುವರು.

ಪ್ರ : ಕರ್ಮಯೋಗವನ್ನು ಹೇಗೆ ಅಭ್ಯಸಿಸಬೇಕು ?

ಉ : ಇಂದ್ರಿಯಗಳನ್ನು ನಿಗ್ರಹಿಸಿ ಅಂತಹ ನಿಯಮಿತೇಂದ್ರಿಯಗಳಿಂದ ಅಸಕ್ತ ಬುದ್ಧಿಯನ್ನು ಹೊಂದಿ ಕರ್ಮಯೋಗವನ್ನು ಅಭ್ಯಸಿಸಬೇಕು.

**ಅ॥** ಆದ್ದರಿಂದ ಶಾಸ್ತ್ರ ನಿಯಮಿತ ಕರ್ಮವನ್ನು ತಪ್ಪದೆ (ನಿಷ್ಕಾಮ ಬುದ್ಧಿಯಿಂದ) ಆಚರಿಸಬೇಕೆಂದು ಭಗವಂತನು ಅರ್ಜುನನಿಗೆ ಆದೇಶವನ್ನೀಯುತ್ತಿದ್ದಾನೆ-

**೮. ನಿಯತಂ ಕುರು ಕರ್ಮ ತ್ವಂ ಕರ್ಮ ಜ್ಯಾಯೋ ಹ್ಯಕರ್ಮಣಃ**
**ಶರೀರಯಾತ್ರಾಪಿ ಚ ತೇ ನ ಪ್ರಸಿದ್ಧ್ಯೇದಕರ್ಮಣಃ**

**ಅರ್ಥ:** ತ್ವಂ=ನೀನು; ನಿಯತಂ=(ಶಾಸ್ತ್ರಗಳಿಂದ) ನಿಯಮಿತಗೊಂಡ; ಕರ್ಮ ಕರ್ಮವನ್ನು; ಕುರು=ಮಾಡು; ಅಕರ್ಮಣಃ=ಕರ್ಮ ಮಾಡದೆ ಇರುವುದಕ್ಕಿಂತ; ಕರ್ಮ=ಕರ್ಮವನ್ನು (ಮಾಡುವುದು); ಜ್ಯಾಯೋ ಹಿ= ಶ್ರೇಷ್ಠವಾದುದಲ್ಲವೇ! ಅಕರ್ಮಣಃ- ಕರ್ಮಮಾಡದೆ ಇರುವುದರಿಂದ; ತೇ=ನಿನಗೆ; ಶರೀರಯಾತ್ರಾಪಿ ಚ=ದೇಹ ಯಾತ್ರೆ ಕೂಡ; ನ ಪ್ರಸಿದ್ಧ್ಯೇತ್= ಸಿದ್ಧಿಸುವುದಿಲ್ಲ.

**ತಾ॥** (ಓ ಅರ್ಜುನಾ!) ನೀನು (ಶಾಸ್ತ್ರಗಳಿಂದ) ನಿಯಮಿತವಾದ ಕರ್ಮಗಳನ್ನು ಮಾಡು. ಕರ್ಮಮಾಡದೇ ಇರುವುದಕ್ಕಿಂತ ಮಾಡುವುದೇ ಶ್ರೇಷ್ಠ. ಮತ್ತೆ ಕರ್ಮಮಾಡದೆ ಇರುವುದರಿಂದ ದೇಹ ಯಾತ್ರೆಯನ್ನು ನಡೆಸುವುದು ಸಾಧ್ಯವಾಗುವುದಿಲ್ಲ.

**ವ್ಯಾಖ್ಯೆ:** 'ನಾನು ಏನು ಮಾಡಬೇಕು ಎನ್ನುವುದನ್ನು ಅಸಂದಿಗ್ಧವಾಗಿ ಹೇಳು ಕೃಷ್ಣಾ!' ಎಂದು ಈ ಅಧ್ಯಾಯದ ಪ್ರಾರಂಭದಲ್ಲಿ ಕೇಳಿದ ಅರ್ಜುನನ ಪ್ರಶ್ನೆಗೆ ಶ್ರೀಕೃಷ್ಣಮೂರ್ತಿ **'ನಿಯತಂ ಕುರು ಕರ್ಮ'** (ನೀನು ಕರ್ಮವನ್ನು ತ್ಯಜಿಸದೆ, ಶಾಸ್ತ್ರ ನಿಯಮಿತವಾದ ಕರ್ಮವನ್ನು ಮಾಡು)- ಎಂದು ಇಲ್ಲಿ ಸ್ಪಷ್ಟವಾಗಿ ಆದೇಶಿಸಿದ್ದಾನೆ. ನಿಯತ ಕರ್ಮದಿಂದ ಚಿತ್ತವು ಶುದ್ಧವಾಗಿ ಆತ್ಮ ಜ್ಞಾನೋದಯವಾಗಬಲ್ಲದು. ಕರ್ಮವನ್ನು ತ್ಯಜಿಸಿ ಕುಳಿತುಕೊಳ್ಳುವುದರಿಂದ ಏನೂ ಸಿದ್ಧಿಸುವುದಿಲ್ಲ. ಅದಕ್ಕಿಂತ ಕರ್ಮಮಾಡುವುದೇ ಒಳಿತು. ಸತ್ಕರ್ಮ, ದೈವಾರ್ಪಿತ ಕರ್ಮವಾದಲ್ಲಿ ಇನ್ನೂ ಶ್ರೇಷ್ಠ- ಎಂದು ಭಗವಂತನು ನುಡಿಯುತ್ತಿದ್ದಾನೆ. ಇನ್ನೊಂದು ದೃಷ್ಟಿಯಿಂದ ನೋಡಿದರೂ ಕರ್ಮಮಾಡದೆ ಇದ್ದರೆ, ಶರೀರ ನಡೆಯುವುದೇ ಕಷ್ಟವೆಂದು, ದೇಹ ಯಾತ್ರೆ ಮುಂದೆ ಸಾಗುವುದಿಲ್ಲವೆಂದು ಹೇಳಿ ಕರ್ಮಾಚರಣೆಯನ್ನು ಪ್ರೋತ್ಸಾಹಿಸುತ್ತಿದ್ದಾನೆ.

ಪ್ರ : ಕರ್ಮ ಮಾಡುವುದು ಒಳ್ಳೆಯದೇ? ಮಾಡದೇ ಇರುವುದು ಒಳ್ಳೆಯದೇ?

ಉ : ಮಾಡುವುದೇ ಒಳಿತು.

ಪ್ರ : ಎಂತಹ ಕರ್ಮವನ್ನು ಮಾಡಬೇಕು ?

ಉ : ಶಾಸ್ತ್ರ ನಿಯಮಿತವಾದ ಕರ್ಮಗಳನ್ನು ಮಾಡಬೇಕು.

ಪ್ರ : ಕರ್ಮ ಮಾಡದಿದ್ದರೆ ಉಂಟಾಗುವ ಹಾನಿಯೇನು ?

ಉ : ಆಗ ೧) ಚಿತ್ತಶುದ್ಧಿಯಾಗುವುದಿಲ್ಲ, ಚಿತ್ತಶುದ್ಧಿಯಿಲ್ಲದೆಡೆ ಜ್ಞಾನ ಉದಯಿಸುವುದಿಲ್ಲ, ಜ್ಞಾನವು ಇಲ್ಲದ ಕಡೆ ಮೋಕ್ಷ ಸಿದ್ಧಿಸದು. ೨) ಕರ್ಮ ಮಾಡದೆ ಇದ್ದರೆ ದೇಹ ಯಾತ್ರೆಯೂ ಕೂಡ ನಡೆಯುವುದಿಲ್ಲ.

**ಅ॥** ಕರ್ಮಬಂಧನದಿಂದ ಬಿಡಿಸಿಕೊಳ್ಳುವ ಉಪಾಯವನ್ನು ಹೇಳಲಾಗುತ್ತಿದೆ.

**೯. ಯಜ್ಞಾರ್ಥಾತ್ಕರ್ಮಣೋಽನ್ಯತ್ರ ಲೋಕೋಽಯಂ ಕರ್ಮಬಂಧನಃ**
**ತದರ್ಥಂ ಕರ್ಮ ಕೌಂತೇಯ ಮುಕ್ತಸಂಗಃ ಸಮಾಚರ**

**ಅರ್ಥ:** ಓ ಅರ್ಜುನಾ! ಯಜ್ಞಾರ್ಥಾತ್=ಯಜ್ಞಕ್ಕಾಗಿ (ಭಗವದ್ವಿಷಯವಾದ); ಕರ್ಮಣಃ=ಕರ್ಮಗಳಿಗಿಂತ; ಅನ್ಯತ್ರ=ಇತರ ಕರ್ಮಗಳಿಂದ; ಅಯಂ ಲೋಕಃ=ಈ ಲೋಕವು (ಜನರು); ಕರ್ಮಬಂಧನಃ=ಕರ್ಮದಿಂದ ಬಂಧಿಸಲ್ಪಡುತ್ತಿದೆ (ಆದ್ದರಿಂದ); ತದರ್ಥಂ=ಆ ಯಜ್ಞಕ್ಕಾಗಿ; ಕರ್ಮ= ಕರ್ಮವನ್ನು; ಮುಕ್ತಸಂಗಃ=ಸಂಗರಹಿತನಾಗಿ; ಸಮಾಚರ=ಸರಿಯಾಗಿ ಆಚರಿಸುವುದು.

**ತಾ॥** ಓ ಅರ್ಜುನಾ! (ಭಗವತ್ಪ್ರೀತಿಕರವಾದ, ಇಲ್ಲವೇ ಲೋಕ ಹಿತಾರ್ಥವಾದ) ಕರ್ಮಗಳನ್ನು ಬಿಟ್ಟು ಬೇರೆ ಎಲ್ಲಾ ಕರ್ಮಗಳು ಜನರನ್ನು ಬಂಧಿಸುತ್ತವೆ. ಆದ್ದರಿಂದ ಯಜ್ಞಕ್ಕೆ ಸಂಬಂಧಿಸಿದ ಕರ್ಮಗಳನ್ನೇ ಸಂಗರಹಿತನಾಗಿ (ಫಲಾಸಕ್ತಿಯಿಲ್ಲದೆ) ಆಚರಿಸುವುದು.

**ವ್ಯಾಖ್ಯೆ:** ಗೀತೆಯಲ್ಲಿ ಶ್ರೀಕೃಷ್ಣಮೂರ್ತಿ, ಯಜ್ಞ, ಸಂನ್ಯಾಸ, ತ್ಯಾಗ ಮುಂತಾದ ಪದಗಳಿಗೆ ನೂತನವಾದ ಅರ್ಥವನ್ನು ಕೊಟ್ಟಿರುವನು. ಯಜ್ಞವನ್ನು ಸಾಮಾನ್ಯವಾಗಿ ರೂಢಿಯಲ್ಲಿರುವ ಅಗ್ನಿಹೋತ್ರ, ಮಂತ್ರ, ತಂತ್ರಗಳಿಂದ ಕೂಡಿದ ಒಂದು ಕ್ರಿಯೆಯಾಗಿ ವರ್ಣಿಸದೆ, ಭಗವದ್ವಿಷಯವಾದ, ಇಲ್ಲವೇ ಪರ ಹಿತಾರ್ಥವಾದ ಕ್ರಿಯೆಯಾಗಿ ವರ್ಣಿಸಿ ಹೇಳಿರುವನು. ಇಂತಹ ಯಜ್ಞವು ಪ್ರತಿಯೊಬ್ಬನಿಗೆ ಸಾಧ್ಯವಾದುದಾದ್ದರಿಂದ, ಇದನ್ನು ಆಶ್ರಯಿಸಿ ಧನ್ಯರಾಗುವ ಅವಕಾಶವಿದೆ. ಸಾಮಾನ್ಯವಾಗಿ ಕರ್ಮ, ಸಂಸಾರ ಬಂಧನವನ್ನುಂಟು ಮಾಡುವುದೆಂದು ಲೋಕದಲ್ಲಿ ಒಂದು ಪ್ರತೀತಿ. ಪುಣ್ಯಕಾರ್ಯಮಾಡಿದರೂ ಆ ಪುಣ್ಯಫಲವನ್ನು ಅನುಭವಿಸಲು ಮತ್ತೆ ಜನ್ಮವೆತ್ತಬೇಕಾಗಿರುತ್ತದೆಂದು, ಆದ್ದರಿಂದ ಅಂತಹ ಕರ್ಮಗಳನ್ನು ಮಾಡಬಾರದೆಂದು ಕೆಲವರು ಹೆದರಿಸುವರು. ಆದರೆ ಗೀತಾಚಾರ್ಯನು ಅಂತಹ ಭಯವನ್ನು ಹೋಗಲಾಡಿಸಿದನು. ಸಕಾಮವಾಗಿ ಫಲಾಸಕ್ತಿಯಿಂದ ಮಾಡಿದ ಕರ್ಮಮಾತ್ರ ಜನ್ಮಾದಿ ರೂಪ ಸಂಸಾರಗಳಿಗೆ ಹೇತುವಾಗಿ ಬಂಧನ ಉಂಟುಮಾಡುವುದು. ಅದಕ್ಕೆ ವಿರುದ್ಧವಾದ, ಅಂದರೆ ನಿಷ್ಕಾಮಬುದ್ಧಿಯಿಂದ ಮಾಡಲ್ಪಟ್ಟ ಕರ್ಮ ಎಂದಿಗೂ ಬಂಧನವನ್ನುಂಟು ಮಾಡುವುದಿಲ್ಲವೆಂದು ಹೇಳಿದನು. ಭಗವದ್ವಿಷಯವಾದ ಕರ್ಮವಾಗಲಿ, ಲೋಕ ಹಿತವಾದ ಕರ್ಮವಾಗಲಿ, ಫಲಾಪೇಕ್ಷರಹಿತವಾಗಿ ಮಾಡಲ್ಪಟ್ಟದ್ದು ಎಂದಿಗೂ ಬಂಧನವನ್ನುಂಟು ಮಾಡುವುದಿಲ್ಲ. ಮೇಲಾಗಿ ಅಂತಹ ನಿಷ್ಕಾಮ ಕರ್ಮ, ಚಿತ್ತಶುದ್ಧಿಯ ದ್ವಾರ ಮೋಕ್ಷಕ್ಕೆ ಹೇತುವಾಗುವುದು.

ಒಂದೇ ಕರ್ಮವನ್ನು, ಸಂಗದಿಂದ (ಫಲಾಪೇಕ್ಷೆಯಿಂದ) ಮಾಡಿದರೆ ಬಂಧನವನ್ನು; ಸಂಗರಹಿತವಾಗಿ (ಚಿತ್ತಶುದ್ಧಿದ್ವಾರ) ಮಾಡಿದರೆ ಮೋಕ್ಷವನ್ನುಂಟು ಮಾಡುವುದು. ಸ್ವಾರ್ಥಕ್ಕಾಗಿ ಮಾಡಿದ ಕರ್ಮ ಬಂಧನವನ್ನು, ಭಗವದರ್ಥಕ್ಕಾಗಿ, ಲೋಕಹಿತಾರ್ಥಕ್ಕಾಗಿ ಮಾಡಿದ ಕರ್ಮ ಮೋಕ್ಷವನ್ನು ತಂದು ಕೊಡುತ್ತದೆ. ಆದ್ದರಿಂದ ಕರ್ಮದಲ್ಲಿ ದೋಷವಿಲ್ಲ. ಅದನ್ನು ಮಾಡುವ ಪದ್ಧತಿಯಲ್ಲಿ ದೋಷವಿದೆ. ಸಕ್ತವಾಗಿ ಆಚರಿಸುವುದೇ ದೋಷ, ಸಕಾಮವಾಗಿ ಮಾಡುವುದೇ ಲೋಪ.

ಶ್ರೀಕೃಷ್ಣಮೂರ್ತಿ ಅರ್ಜುನನೊಡನೆ 'ಕರ್ಮಗಳನ್ನು ಬಿಡದೆ ಆಚರಿಸು', (ಸಮಾಚರ) ಎಂದು ಹೇಳಿ ಕರ್ಮಯೋಗವನ್ನು ಪ್ರೋತ್ಸಾಹಿಸಿದನು. ಆದರೆ ಆ ಕರ್ಮಗಳನ್ನು ಹೇಗೆ ಮಾಡಬೇಕು ಎನ್ನುವ ಪದ್ಧತಿಯನ್ನು ಮೊದಲೇ ತಿಳಿದಿರಬೇಕೆಂದು ಎಚ್ಚರಿಸಿರುವನು. ಕರ್ಮರಹಸ್ಯವನ್ನು ತಿಳಿದು ಕರ್ಮವನ್ನು ಮಾಡಬೇಕು. ಇಲ್ಲದಿದ್ದರೆ, ಅದರಲ್ಲಿ ಸಿಕ್ಕಿ ಬೀಳುವ ಸಂಭವವಿದೆ. ಆ ಕರ್ಮರಹಸ್ಯವೇನು ಎನ್ನುವುದನ್ನು ಭಗವಂತನು ಎರಡು ಸೂತ್ರಗಳ ದ್ವಾರ ಇಲ್ಲಿ ಬೋಧಿಸಿದ್ದಾನೆ. ಅವು ಯಾವುವೆಂದರೆ- ೧) ಯಜ್ಞಕ್ಕೋಸ್ಕರ (ಭಗವತ್ಪ್ರೀತಿಕರವಾದ, ಪರ ಹಿತಾರ್ಥವಾದ) ಕರ್ಮಗಳನ್ನೇ ಮಾಡಬೇಕು. ೨) ಕರ್ಮಗಳನ್ನು ಸಂಗರಹಿತವಾಗಿ (ಫಲಾಪೇಕ್ಷರಹಿತವಾಗಿ) ಆಚರಿಸಬೇಕು. ಈ ಪ್ರಕಾರವಾಗಿ ಆಚರಿಸಲ್ಪಟ್ಟ ಕರ್ಮ ಸಾಮಾನ್ಯವಾದದ್ದಾದರೂ, ಮಹಾ ಯಜ್ಞವಾಗಿ ಪರಿಣಮಿಸಿ ಜೀವಿಗೆ ಪರಮ ಶ್ರೇಯವನ್ನುಂಟುಮಾಡುವುದು. ಆಗ ಕರ್ಮ, ಕರ್ಮವಾಗಿ ಉಳಿಯದೆ ಧ್ಯಾನವಾಗಿ ರೂಪುಗೊಳ್ಳುವುದು. (Work will be transformed into worship). ಬಂಧಕರವಾಗದೆ, ಮೋಕ್ಷಕರವಾಗಿ ಪರಿಣಾಮಗೊಳ್ಳುವುದು.

ಪ್ರ : ಯಾವ ಕರ್ಮ, ಬಂಧನವನ್ನುಂಟುಮಾಡುವುದಿಲ್ಲ?

ಉ : ಯಜ್ಞಕ್ಕೋಸ್ಕರ (ಭಗವತ್ಪ್ರೀತಿಕರವಾದ, ಪರೋಪಕಾರಾರ್ಥವಾದ ಕರ್ಮ, ಬಂಧನವನ್ನುಂಟು ಮಾಡುವುದಿಲ್ಲ. ಅದನ್ನು ಸಂಗರಹಿತವಾಗಿ, ಫಲಾಪೇಕ್ಷೆಯಿಲ್ಲದೆ (ನಿಷ್ಕಾಮವಾಗಿ) ಆಚರಿಸಬೇಕು.

**ಅ॥** ಯಜ್ಞಗಳ ಮಹಿಮೆಯನ್ನು ತಿಳಿಸಲಾಗುತ್ತಿದೆ-

**೧೦. ಸಹಯಜ್ಞಾಃ ಪ್ರಜಾಃ ಸೃಷ್ಟ್ವಾ ಪುರೋವಾಚ ಪ್ರಜಾಪತಿಃ**
**ಅನೇನ ಪ್ರಸವಿಷ್ಯಧ್ವಮೇಷವೋಽಸ್ತ್ವಿಷ್ಟಕಾಮಧುಕ್**

**ಅರ್ಥ:** ಪ್ರಜಾಪತಿಃ=ಬ್ರಹ್ಮದೇವನು; ಪುರಾ=ಪೂರ್ವದಲ್ಲಿ (ಸೃಷ್ಟಿಯಾದಿಯಲ್ಲಿ); ಸಹಯಜ್ಞಾಃ=ಯಜ್ಞಗಳಿಂದ ಕೂಡಿ; ಪ್ರಜಃ=ಪ್ರಜೆಗಳನ್ನು; ಸೃಷ್ಟ್ವಾ=ಸೃಷ್ಟಿಸಿ; ಅನೇನ=ಇದರಿಂದ(ಈ ಯಜ್ಞಗಳಿಂದ); ಪ್ರಸವಿಷ್ಯಧ್ವಂ= ವೃದ್ಧಿ ಹೊಂದುವವನು; ಏಷಃ=ಇದು; ವಃ=ನಿಮಗೆ; ಇಷ್ಟಕಾಮಧುಕ್= ಇಷ್ಟಗಳಾದ ಕೋರಿಕೆಗಳನ್ನು ಕೊಡುವ ಹಾಗೆ; ಅಸ್ತು=ಆಗಲಿ(ಎಂದು); ಉವಾಚ=ಹೇಳಿದನು.

**ತಾ॥** ಪೂರ್ವದಲ್ಲಿ ಬ್ರಹ್ಮದೇವನು ಯಜ್ಞದಿಂದ ಪ್ರಜೆಗಳನ್ನು ಸೃಷ್ಟಿಸಿ 'ಈ ಯಜ್ಞಗಳಿಂದ ನೀವು ಅಭಿವೃದ್ಧಿಯನ್ನು ಹೊಂದಿರಿ, ಇವು ನಿಮ್ಮ ಅಭೀಷ್ಟಗಳನ್ನು ನೆರವೇರಿಸುವಂತಾಗಲಿ'! ಎಂದು ಅವರಿಗೆ ಹೇಳಿದನು.

**ವ್ಯಾಖ್ಯೆ:** ಮನುಜನು ಸೃಷ್ಟಿಸಲ್ಪಟ್ಟಾಗ, ಆತನೊಂದಿಗೆ, ಆತನು ಬಂಧನಗಳಿಂದ ಮುಕ್ತಿಹೊಂದಲು ಬೇಕಾದ ಸಾಧನೋಪಾಯಗಳು ಕೂಡ ಸೃಷ್ಟಿಸಲ್ಪಟ್ಟವು, ಎಂದು ಈ ಶ್ಲೋಕವು ತಿಳಿಸುತ್ತಿದೆ. ಆಹಾ! ಭಗವಂತನು ಎಂತಹ ಕರುಣಾಮಯಿ, ಪ್ರಾಣಿಕೋಟಿಗಳನ್ನು ಉದ್ಧಾರಮಾಡಬೇಕೆಂದು, ಎಷ್ಟು ಕುತೂಹಲವಿದೆಯೋ ನೋಡಿ! 'ಅಯ್ಯೋ! ಹೀಗೆ ಸೃಷ್ಟಿಸಲ್ಪಟ್ಟ ಪ್ರಜೆಗಳು, ಸಂಸಾರ ಬಂಧನದಲ್ಲಿ ಸಿಲುಕಿ ಜನನಮರಣ ಪ್ರವಾಹದಲ್ಲಿ ಬಿದ್ದು ಸ್ವಲ್ಪವಾದರೂ ಶಾಂತಿಯಿಲ್ಲದೆ ತಲ್ಲಣಿಸಿ ಹೋಗಿದ್ದಾರೆ. ಈ ಸಂಸಾರ ನರಕ ಬಾಧೆಯಿಂದ ತಪ್ಪಿಸಿಕೊಳ್ಳುವುದು ಹೇಗೆ? ಎಂದು ಸರ್ವೇಶ್ವರನು ಆಲೋಚಿಸಿ, ಪ್ರಾರಂಭದಲ್ಲಿಯೇ ಮೋಕ್ಷ ಸಾಧನೋಪಾಯಗಳಾದ ಅನೇಕ ಯಜ್ಞಗಳನ್ನು ಕೂಡ ಸೃಷ್ಟಿಸಿದನೆಂದು ಇಲ್ಲಿ ತಿಳಿಸಲಾಗಿದೆ.

ಯಜ್ಞವೆಂದರೆ ಭಗವದ್ವಿಷಯವಾದ, ಪರೋಪಕಾರ ಸಂಬಂಧವಾದ, ಆತ್ಮಜ್ಞಾನ ಸಂಬಂಧವಾದ ಕ್ರಿಯೆಯೆಂದು ಭಾವ. ಈ ಯಜ್ಞದ ಬಗ್ಗೆ ವಿಸ್ತಾರವಾಗಿ ಮುಂದೆ ಬರುವ ಅಧ್ಯಾಯದಲ್ಲಿ ತಿಳಿಸಲಾಗುವುದು.

"ಇಷ್ಟಕಾಮಧುಕ್"- ಈ ಯಜ್ಞಗಳು ಕಾಮಧೇನುವಿನಂತೆ ಜೀವಿಗಳ ಅಭೀಷ್ಟಗಳನ್ನು ನೆರವೇರಿಸಿ, ಅವರನ್ನು ಉನ್ನತ ಪಥಗಾಮಿಗಳನ್ನಾಗಿ ಮಾಡುವುವೆಂದು ಇಲ್ಲಿ ಹೇಳಲಾಗಿದೆ. ಜೀವಿಯು ಸಾಮಾನ್ಯವಾಗಿ ಅಪೇಕ್ಷಿಸುವ ದುಃಖರಾಹಿತ್ಯ, ಪರಮಾನಂದ ಪ್ರಾಪ್ತಿಯೆನ್ನುವ ಎರಡನ್ನೂ ಈ ಯಜ್ಞಗಳನ್ನು ಆಚರಿಸುವುದರಿಂದ ತಪ್ಪದೆ ಹೊಂದುವನು. ಆದ್ದರಿಂದ ಅವು 'ಇಷ್ಟಕಾಮಧುಕ್' ಎಂದು ಹೇಳಲ್ಪಟ್ಟಿವೆ. 'ಪ್ರಸವಿಷ್ಯಧ್ವಮ್'- ಎಂದು ಹೇಳಿರುವುದರಿಂದ ಜೀವಿಯ ನೈತಿಕ ಹಾಗು ಆಧ್ಯಾತ್ಮಿಕಾಭಿವೃದ್ಧಿಯನ್ನು ಆ ಯಜ್ಞಗಳುಂಟುಮಾಡುವುವು ಎಂದು ಇಲ್ಲಿ ಸ್ಪಷ್ಟವಾಗಿ ಹೇಳಲಾಗಿದೆ.

ಪ್ರ : ಬ್ರಹ್ಮದೇವನು ಪ್ರಜೆಗಳನ್ನು ಸೃಷ್ಟಿಸಿದಾಗ ಅವರ ಜೊತೆ ಮತ್ತೇನನ್ನು ಸೃಷ್ಟಿಸಿದನು?

ಉ : ಯಜ್ಞಗಳನ್ನು (ಸತ್ಕಾರ್ಯಗಳನ್ನು, ದೈವ ಕಾರ್ಯಗಳನ್ನು)

ಪ್ರ : ಅವುಗಳಿಂದ ಪ್ರಯೋಜನವೇನು?

ಉ : ಅವು ಜೀವಿಯ ಆಧ್ಯಾತ್ಮಿಕಾಭಿವೃದ್ಧಿಯನ್ನು ಮಾಡುವುವು. (ಕಾಮಧೇನು ವಿನಂತೆ ಆತನ ಕೋರಿಕೆಗಳನ್ನು (ಶಾಂತಿ, ಸುಖ, ಮೋಕ್ಷವನ್ನು) ನೆರವೇರಿಸುವುವು.

೧೧. **ದೇವಾನ್ಭಾವಯತಾನೇನ ತೇ ದೇವಾ ಭಾವಯಂತು ವಃ**
**ಪರಸ್ಪರಂ ಭಾವಯಂತಃ ಶ್ರೇಯಃ ಪರಮವಾಪ್ಸ್ಯಥ**

**ಅರ್ಥ:** ಅನೇನ=ಈ ಯಜ್ಞದಿಂದ; ದೇವಾನ್=ದೇವತೆಗಳನ್ನು, ಭಾವಯತ=ಸಂತೋಷಪಡಿಸು; ತೇ ದೇವಾಃ=ಆ ದೇವತೆಗಳು; ವಃ= ನಿಮ್ಮನ್ನು; ಭಾವಯಂತಃ=(ಮಳೆ ಮುಂತಾದುವುಗಳಿಂದ) ಸಂತುಷ್ಟಿ ಪಡಿಸುವರು; (ಈ ಪ್ರಕಾರವಾಗಿ) ಪರಸ್ಪರಂ=ಒಬ್ಬರಿಗೊಬ್ಬರು; ಭಾವಯಂತಃ=ಸಂತೋಷಪಡಿಸಿಕೊಂಡಂಥವರಾಗಿ; ಪರಂ=ಉತ್ಕೃಷ್ಟವಾದ; ಶ್ರೇಯಃ=ಶ್ರೇಯಸ್ಸನ್ನು; ಅವಾಪ್ಸ್ಯಥ=ಹೊಂದುವರು.

**ತಾ||** ಈ ಯಜ್ಞಗಳಿಂದ ದೇವತೆಗಳನ್ನು ತೃಪ್ತಿಪಡಿಸಿರಿ. ಆ ದೇವತೆಗಳು ನಿಮ್ಮನ್ನು ಮಳೆ ಮುಂತಾದುವುಗಳಿಂದ ತೃಪ್ತಿಯಾಗಿಡುವರು! ಈ ಪ್ರಕಾರವಾಗಿ ಪರಸ್ಪರ ತೃಪ್ತಿ ಹೊಂದುವುದರಿಂದ ಉತ್ತಮ ಶ್ರೇಯವನ್ನು ಹೊಂದುವಂಥವರಾಗಿರಿ!

**ವ್ಯಾಖ್ಯೆ:** ಅನೇಕ ದೇವತೆಗಳ ರೂಪದಲ್ಲಿ ಸಾಕ್ಷಾತ್ ಪರಮಾತ್ಮನೇ ಇರುವನಾದ್ದರಿಂದ ಯಾವ ದೇವತೆಯನ್ನು ಪೂಜಿಸಿದರೂ, ಅರ್ಚಿಸಿದರೂ, ಧ್ಯಾನಿಸಿದರೂ, ಭಗವಂತನನ್ನು ಆರಾಧಿಸಿದಂತೆಯೇ ಆಗುವುದು. ಆದ್ದರಿಂದ ಈ ಯಜ್ಞಗಳ ದ್ವಾರ, ಜೀವಿಗಳು ಭಗವಂತನನ್ನು ಆರಾಧಿಸಿದಲ್ಲಿ, ಭಗವಂತನು ಅವರನ್ನು ಅನುಗ್ರಹಿಸುವನು. ಆ ದೇವತೆಗಳ ಮೂಲಕವಾಗಿ ತತ್ಫಲಗಳನ್ನು ಕೊಡುತ್ತಿರುತ್ತಾನೆ. ಈ ಪ್ರಕಾರವಾಗಿ ಜೀವಿಯು ಯಜ್ಞಗಳ ದ್ವಾರ (ಫಲಾಪೇಕ್ಷೆ ರಹಿತ ಸತ್ಕರ್ಮಗಳಿಂದ) ಭಗವಂತನನ್ನು ಯಾವಾಗ ಆರಾಧಿಸುವನೋ ಆಗ ಅವನು ಅನುಗ್ರಹಿಸಿ, ಜ್ಞಾನದ ದ್ವಾರ ಪರಮ ಶ್ರೇಯವಾದ ಮೋಕ್ಷವನ್ನು ಆತನಿಗೆ ಉಂಟುಮಾಡುವನು.

"*ಶ್ರೇಯಃ ಪರಂ*"- ಪ್ರಪಂಚದಲ್ಲಿ ಅನೇಕ ಶ್ರೇಯಗಳಿದ್ದರೂ ಅವು ಗಳನ್ನೆಲ್ಲಾ ಮೀರಿದ ಶ್ರೇಯವು ಮೋಕ್ಷ. ಭಗವಂತನ ಆರಾಧನೆ ಮಾಡುವವನು ಅದನ್ನು ಪಡೆಯುತ್ತಿದ್ದಾನೆ. ಆದ್ದರಿಂದಲೇ ಅದನ್ನು ಇಲ್ಲಿ ಪರಮಶ್ರೇಯವೆಂದು ಹೇಳಲಾಗಿದೆ. ಆತ್ಮಸ್ಥಿತಿ (ಮೋಕ್ಷಸ್ಥಿತಿ)ಯೊಂದೇ ಲೋಕದಲ್ಲಿ ಪರಮಶ್ರೇಯ ವಾದುದು. ಅದನ್ನು ಭಗವತ್ಕರುಣೆಯಿಂದ ಜೀವಿಯು ಹೊಂದಬಲ್ಲನು. ಏಕೆಂದರೆ ಸರ್ವೇಶ್ವರನ ಅನುಗ್ರಹವಿಲ್ಲದೆ ಈ ಮಾಯೆಯನ್ನು ಯಾರೂ ದಾಟಲಾರರು. ಆ ಭಗವತ್ಕರುಣೆ, ಜೀವಿಯ ಸ್ವಕೀಯ ಪುರುಷ ಪ್ರಯತ್ನದಿಂದಲೇ ಲಭಿಸುವುದು.

ಜೀವಿಗೆ ದೇವನಿಗೆ ಸಂಬಂಧವಿಲ್ಲ ಎಂದುಕೊಂಡಲ್ಲಿ ಯಾರೂ ಪ್ರಪಂಚದಲ್ಲಿ ವೃದ್ಧಿಯಾಗಲಾರರು, ಆದ್ದರಿಂದ ಪ್ರಾಪಂಚಿಕ ವ್ಯಕ್ತಿಗಳಿಗಿಂತ ದೈವದೊಡನೆ ಹೆಚ್ಚಿನ ಸಂಬಂಧವನ್ನು ಏರ್ಪಡಿಸಿಕೊಳ್ಳಬೇಕು. ಪ್ರಪಂಚದ ಮಾನವರು ಒಮ್ಮೆ ನಮಗೆ ಸಹಾಯ ಮಾಡಬಹುದು. ಮತ್ತೊಮ್ಮೆ ಮಾಡಲಾರದೆ ಹೋಗಬಹುದು. ಹೇಗಿದ್ದರೂ ಅವರೊಡನೆ ಸಂಬಂಧ ಈ ಜನ್ಮದಲ್ಲಿಯೇ ತೀರುವುದು. ಆದರೆ ದೈವ ಸಂಬಂಧವು ಅಂತಹುದಲ್ಲ. ದೈವವು ಜನ್ಮಜನ್ಮಾಂತರಗಳವರೆಗೆ ಜೀವಿಗಳ ಹಿಂದಿದ್ದು ಅವರಿಗೆ ಶ್ರೇಯವನ್ನುಂಟು ಮಾಡುವುದು. ಅವರವರ ಸಾಧನೆಗಳ ತೀವ್ರತೆಯನ್ನು ಹಿಡಿದು ಈ ಜನ್ಮದಲ್ಲಿಯೇ ಮೋಕ್ಷವನ್ನು ಸಿದ್ಧಿಸುವಂತೆ ಮಾಡಬಹುದು. ಆದ್ದರಿಂದ ಆ ಸರ್ವೋತ್ತಮವಾದ ದೈವ ಸಂಬಂಧವನ್ನು ಯಾರೂ ಮರೆಯಬಾರದೆಂದು ಈ ಶ್ಲೋಕದಲ್ಲಿ ಒತ್ತಿ ಹೇಳಲಾಗಿದೆ.

ಪ್ರ : ಪರಮ ಶ್ರೇಯವಾದ ಮೋಕ್ಷವು ಹೇಗೆ ಲಭಿಸುವುದು?

ಉ : ಯಜ್ಞಗಳ (ಫಲಾಭಿಸಂಧಿರಹಿತ ಸತ್ಕರ್ಮಗಳ) ದ್ವಾರ ಭಗವಂತನನ್ನು ಆರಾಧಿಸುವುದರಿಂದ (ಕ್ರಮವಾಗಿ ಚಿತ್ತಶುದ್ಧಿ ಉಂಟಾಗಲು ಅದರಿಂದ ಜ್ಞಾನವು ಆವಿರ್ಭವಿಸಿ, ಆ ಜ್ಞಾನದಿಂದ) ಮೋಕ್ಷವು ಲಭಿಸುವುದು.

**ಅ||** ಭಗವತ್ ಪದಾರ್ಥಗಳನ್ನು ಭಗವಂತನಿಗೆ ಅರ್ಪಿಸದೆ ಅನುಭವಿಸುವವರು ಕಳ್ಳರು ಎಂದು ಹೇಳಲಾಗುತ್ತಿದೆ-

೧೨. **ಇಷ್ಟಾನ್ಭೋಗಾನ್ಹಿವೋ ದೇವಾಃ ದಾಸ್ಯಂತೇ ಯಜ್ಞಭಾವಿತಾಃ**
**ತೈರ್ದತ್ತಾನಪ್ರದಾಯೈಭ್ಯೋ ಯೋ ಭುಂಕ್ತೇ ಸ್ತೇನ ಏವ ಸಃ**

**ಅರ್ಥ:** ಯಜ್ಞಭಾವಿತಾಃ=ಯಜ್ಞದಿಂದ ಸಂತೋಷಪಡಿಸಲ್ಪಟ್ಟ; ದೇವಾಃ= ದೇವತೆಗಳು; ವಃ=ನಿಮಗೆ; ಇಷ್ಟಾನ್=ಇಷ್ಟವಾದ; ಬೋಗಾನ್=ಭೋಗ ಗಳನ್ನು; ದಾಸ್ಯಂತೇಹಿ=ಕೊಡುವವರಲ್ಲ; ತೈಃ=ಅವರಿಂದ; ದತ್ತಾನ್= ಕೊಡಲ್ಪಟ್ಟ (ಮೃಷ್ಟಾನ್ನಾದಿ ಭೋಗಗಳನ್ನು); ಏಭ್ಯಃ=ಅವರಿಗೆ (ಆ ದೇವತೆಗಳಿಗೆ); ಅಪ್ರದಾಯ=ಸಮರ್ಪಿಸದೇ; ಯಃ=ಯಾವನು; ಭುಂಕ್ತೇ= ಭುಜಿಸುತ್ತಾನೋ; ಸಃ=ಆತನು; ಸ್ತೇನ ಏವ=ಕಳ್ಳನೇ ಆಗುತ್ತಾನೆ.

**ತಾ||** ಮನುಜನು ಮಾಡುವ ಯಜ್ಞಗಳಿಂದ ಸಂತೋಷಿಸಿ, ದೇವತೆಗಳು ಅವರಿಗೆ ಇಷ್ಟವಾದ ಭೋಗಗಳನ್ನು ಕೊಡುವರು. ಹಾಗೆ ಅವರಿಂದ ಕೊಡಲ್ಪಟ್ಟ ಆ ಭೋಗ್ಯವಸ್ತುಗಳನ್ನು ಮತ್ತೆ ಅವರಿಗೇ ಸಮರ್ಪಿಸದೆ ಯಾರು ಅನುಭವಿಸುವರೋ ಅವರು ಕಳ್ಳರೇ ಆಗುತ್ತಾರೆ.

**ವ್ಯಾಖ್ಯೆ:** ಯಜ್ಞಗಳಿಂದ ಆರಾಧಿಸಲ್ಪಟ್ಟಾಗ ಭಗವಂತನು, ಅಥವ ಆಯಾ ದೇವತೆಗಳು ಅನ್ನಾದಿ ಭೋಗ್ಯ ಪದಾರ್ಥಗಳನ್ನು ಪ್ರಸಾದಿಸುವರು. ಭಗವದತ್ತವಾದವನ್ನು ಮತ್ತೆ ಅವನಿಗೆ ಸಮರ್ಪಿಸದೆ, ಅಥವ ಭಗವತ್ಸ್ವರೂಪಗಳೇ ಆದ ಪ್ರಾಣಿ ಕೋಟಿಗಳಿಗೆ ಇಡದೆ ತಾನು ಭುಜಿಸಿದರೆ ಇಲ್ಲವೆ ಅನುಭವಿಸಿದರೆ ಆತನು ಕಳ್ಳನೇ ಆಗುವನು ಎಂದು ಇಲ್ಲಿ ಹೇಳಲಾಗಿದೆ. 'ಕಳ್ಳ'- ಎನ್ನುವ ಪದದ ಅರ್ಥವೇನು? ತನ್ನದಲ್ಲದ ವಸ್ತುವನ್ನು ಅದರ ಬೆಲೆ ಕೊಡದೆ ತೆಗೆದುಕೊಳ್ಳುವವನೇ ಕಳ್ಳ. ಅನ್ನ ಮುಂತಾದ ಭೋಗ್ಯ ವಸ್ತುಗಳು ಭಗವಂತನ ಸ್ವತ್ತು. ನಮ್ಮದಲ್ಲ ಏಕೆಂದರೆ ಅವುಗಳನ್ನು ನಾವು ತಯಾರು ಮಾಡಲು ಸಾಧ್ಯವಿಲ್ಲ. ಪರಮಾತ್ಮನೇ ಮಳೆಗರೆದು ಸಸ್ಯದ ಜೀವ ಶಕ್ತಿಯನ್ನು ಪ್ರೋದ್ದೀಪಿಸಿ ಧಾನ್ಯವನ್ನು ಸೃಷ್ಟಿಸುವನು. ಆದ್ದರಿಂದ ಅದರ ಬೆಲೆಯನ್ನು ನಾವು ಭಗವಂತನಿಗೆ ಸಲ್ಲಿಸಲೇಬೇಕು. ಭಕ್ತಿಯೇ ಅದರ ಮೌಲ್ಯ, ಕೃತಜ್ಞತೆಯೇ ಅದರ ಬೆಲೆ. ಆದ್ದರಿಂದ ಆ ಅನ್ನವನ್ನು ಭಗವಂತನಿಗೆ (ಕೃತಜ್ಞತಾಪೂರ್ವಕವಾಗಿ) ನಿವೇದಿಸಬೇಕು. ಅದರಲ್ಲಿ ಸ್ವಲ್ಪ ಭಾಗವನ್ನು ಪ್ರಾಣಿ ಕೋಟಿಗೆ ಸಮರ್ಪಿಸಬೇಕು. ಹಾಗೆ ಮಾಡದೆ ಅದನ್ನು ಜೀವಿಯು ಉಪಯೋಗಿಸಿದರೆ ಕಳ್ಳತನ ಮಾಡಿದಂತೆಯೇ ಆಗುವುದು. ಈ ಪ್ರಕಾರವಾಗಿ ಈಶ್ವರನಿತ್ತ ಅನ್ನಾದಿ ಭೋಗ್ಯ ಪದಾರ್ಥಗಳನ್ನು ಪುನಃ ಈಶ್ವರನಿಗೆ ಸಮರ್ಪಿಸದೆ ಅನುಭವಿಸುವವನು ಕಳ್ಳನೇ ಎಂದು ಶ್ರೀ ಕೃಷ್ಣಮೂರ್ತಿ ಸ್ಪಷ್ಟವಾಗಿ ಹೇಳಿದನು.

ಆದರೆ ಈಗ ಪ್ರಪಂಚದಲ್ಲಿ ಎಷ್ಟು ಜನ ಆ ಪ್ರಕಾರವಾಗಿ ದೈವಕ್ಕೆ ನಿವೇದಿಸುತ್ತಿದ್ದಾರೆ? ಪ್ರಪಂಚವಾಸಿಗಳ ದೃಷ್ಟಿಯಲ್ಲಿ ಮನುಷ್ಯನು ಬಹಳ

ದೊಡ್ಡವನಾಗಿದ್ದು, ವಿದ್ಯಾವಂತನಾಗಿದ್ದು, ಧನವಂತನಾಗಿದ್ದು, ರಾಜನಾಗಿದ್ದು ಭಗವಂತನ ದೃಷ್ಟಿಯಲ್ಲಿ ಕಳ್ಳನಾಗಿದ್ದರೆ ಏನು ಪ್ರಯೋಜನ? ಆದ್ದರಿಂದ ಆ ಸ್ಥಿತಿ ಬರದಂತೆ ನೋಡಿಕೊಳ್ಳಬೇಕು. ಮತ್ತೆ ಪ್ರಪಂಚದಲ್ಲಿ ಕಳ್ಳನಿಗೆ ಶಿಕ್ಷೆ ವಿಧಿಸಲಾಗುತ್ತಿದೆ. ಹಾಗಿರುವಾಗ ದೈವ ವಸ್ತುಗಳನ್ನು ಸ್ವಾರ್ಥಕ್ಕಾಗಿ ಉಪಯೋಗಿಸಿಕೊಳ್ಳುವ ಈ ಕಳ್ಳರಿಗೆ ಶಿಕ್ಷೆ ಇರುವುದಿಲ್ಲವೇ? ಅವರಿಗೆ ಈಶ್ವರನು ಸರಿಯಾದ ಶಿಕ್ಷೆಯನ್ನು ವಿಧಿಸಿಯೇ ತೀರುತ್ತಾನೆ. ಆದ್ದರಿಂದ ಮುಮುಕ್ಷುಗಳು ತಮಗಿದ್ದದ್ದರಲ್ಲಿಯೇ ಏನೋ ಸ್ವಲ್ಪ, ಕನಿಷ್ಠ ಒಂದು ಅಗುಳನ್ನಾದರು, ಭೂತ ಕೋಟಿಗೆ ಪ್ರಸಾದಿಸುತ್ತಾ, 'ಬ್ರಹ್ಮಾರ್ಪಣಂ' 'ಕೃಷ್ಣಾರ್ಪಣಂ' ಅಥವ 'ರಾಮಾರ್ಪಣಂ' ಎಂದು ಭಕ್ತಿಯಿಂದ ಅರ್ಪಿಸಿ ನಂತರ ಭುಜಿಸಬೇಕು. ಈ ಪ್ರಕಾರವಾದ ಈಶ್ವರಾರ್ಪಣ ಬುದ್ಧಿ, ಭಕ್ತಿಭಾವನೆ, ಪರೋಪಕಾರ ದೃಷ್ಟಿಯನ್ನು ಅಳವಡಿಸಿಕೊಂಡು ಧನ್ಯರಾಗಬೇಕು.

ಪ್ರ : ಯಜ್ಞಗಳಿಂದ (ಫಲಾಪೇಕ್ಷರಹಿತ ಸತ್ಕರ್ಮಗಳಿಂದ) ಆರಾಧಿಸಲ್ಪಟ್ಟ ಭಗವಂತನು ಜನಗಳಿಗೆ ಏನು ಕೊಡುವನು?

ಉ : ಅವರವರಿಗೆ ಇಷ್ಟವಾದ ಅನ್ನಾದಿ ಭೋಗ್ಯ ಪದಾರ್ಥಗಳನ್ನೀಯುವನು.

ಪ್ರ : ಅವು ಲಭಿಸಿದಾಗ ಜೀವಿಯು ಏನು ಮಾಡಬೇಕು?

ಉ : ಕೂಡಲೇ ಅವುಗಳನ್ನು ಆಯಾ ದೇವತೆಗಳಿಗೆ ಇಲ್ಲವೇ ಭಗವಂತನಿಗೆ ಅರ್ಪಿಸಬೇಕು.

ಪ್ರ : ಹಾಗೆ ಮಾಡದೆ ಅನುಭವಿಸಿದರೆ ಉಂಟಾಗುವ ನಷ್ಟವೇನು?

ಉ : ಅವನನ್ನು ಕಳ್ಳನೆಂದು ಪರಿಗಣಿಸಲ್ಪಡುವುದರಿಂದ, ಶಿಕ್ಷೆ ಅನುಭವಿಸಬೇಕಾಗುವುದು.

**ಅ॥** ಪದಾರ್ಥಗಳನ್ನು ಭಗವದರ್ಪಿತ ಮಾಡಿ ಅನುಭವಿಸುವವರಿಗೆ ಸಿಗುವ ಸತ್ಫಲಗಳು, ಸ್ವಾರ್ಥಕ್ಕಾಗಿ ವಿನಿಯೋಗಿಸುವವರಿಗೆ ಉಂಟಾಗುವ ದುಷ್ಫಲಿತ ಗಳನ್ನು ಹೇಳಲಾಗುತ್ತಿದೆ-

**೧೩. ಯಜ್ಞಶಿಷ್ಟಾಶಿನಃ ಸಂತೋ ಮುಚ್ಯಂತೇ ಸರ್ವಕಿಲ್ಬಿಷೈಃ**
**ಭುಂಜತೇ ತೇ ತ್ವಘಂ ಪಾಪಾ[1] ಯೇ ಪಚಂತ್ಯಾತ್ಮಕಾರಣಾತ್**

**ಅರ್ಥ:** ಯಜ್ಞ ಶಿಷ್ಟಾಶಿನಃ=ಯಜ್ಞದಲ್ಲಿ ಭಗವದರ್ಪಣಮಾಡಿ ಶೇಷವನ್ನು ಭುಜಿಸುವುದು; ಸಂತಃ=ಸಜ್ಜನರು; ಸರ್ವಕಿಲ್ಬಿಷೈಃ=ಸಮಸ್ತ ಪಾಪಗಳಿಂದ; ಮುಚ್ಯಂತೇ=ಮುಕ್ತಿಹೊಂದುತ್ತಾರೆ; ಏತು=ಯಾರಾದರೆ; ಆತ್ಮಕಾರಣಾತ್= ತಮ್ಮ (ಉದರ ಪೋಷಣೆ) ನಿಮಿತ್ತವೇ; ಪಚಂತಿ=ಬೇಯಿಸುತ್ತಿದ್ದಾರೊ (ಭುಜಿಸುತ್ತಾರೊ); ಪಾಪಾಃ=ಪಾಪಿಗಳಾದ; ತೇ=ಅವರು; ಅಘಂ= ಪಾಪವನ್ನು; ಭುಂಜತೇ=ತಿನ್ನುವರೇ ಆಗುತ್ತಾರೆ.

**ತಾ॥** ಯಜ್ಞದಲ್ಲಿ (ಭಗವದರ್ಪಣ ಮಾಡಿ) ಶೇಷವಾಗಿ ಉಳಿದ ಪದಾರ್ಥವನ್ನು ತಿನ್ನುವ ಸಜ್ಜನರು ಸಮಸ್ತ ಪಾಪಗಳಿಂದ ವಿಮುಕ್ತಿಗೊಳ್ಳುತ್ತಾರೆ. ಹಾಗಲ್ಲದೆ ಯಾರು ತಮಗೋಸ್ಕರ ಬೇಯಿಸಿಕೊಂಡು ಭುಜಿಸುತ್ತಾರೋ ಅಂತಹವರು ಪಾಪವನ್ನೇ ತಿನ್ನುವರು ಆಗುತ್ತಾರೆ.

**ವ್ಯಾಖ್ಯೆ:** ಭಗವಾರಾಧನಾರೂಪಗಳಾದ ಯಜ್ಞಗಳನ್ನು ಮಾಡಿ, ಅನ್ನಾದಿಗಳನ್ನು ಭಗವಂತನಿಗೆ ಅರ್ಪಿಸಿ (ಇಲ್ಲವೆ ಭಗವತ್ಸ್ವರೂಪಿಗಳೇ ಆದ ಪ್ರಾಣಿಕೋಟಿ ಗಳಿಗೆ ಸ್ವಲ್ಪಭಾಗವನ್ನು ಸಮರ್ಪಿಸಿ) ಉಳಿದ ಪದಾರ್ಥವನ್ನು ಭುಜಿಸುವವನು ಸಮಸ್ತ ಪಾಪಗಳಿಂದ ವಿಮುಕ್ತನಾಗುವನೆಂದು ಇಲ್ಲಿ ಹೇಳಲಾಗಿದೆ. **'ಸರ್ವಕಿಲ್ಬಿಷೈಃ'**- ಎಂದು ಹೇಳಲ್ಪಟ್ಟಿರುವುದರಿಂದ ಒಂದೆರಡು ಪಾಪ ಗಳಿಂದಲ್ಲದೇ ಸಮಸ್ತ ಪಾಪಗಳಿಂದ ಮುಕ್ತರಾಗುವರು ಎಂದು ಹೇಳಿದಂತಾಗಿದೆ. ಇದರಿಂದ ಯಜ್ಞಗಳಿಗೆ, ಭಗವನ್ನಿವೇದನೆಗಳಿಗೆ, ತ್ಯಾಗಗಳಿಗೆ, ಪರೋಪ ಕಾರಗಳಿಗೆ ಎಷ್ಟು ಸಾಮರ್ಥ್ಯವಿದೆಯೋ ಸ್ಪಷ್ಟವಾಗುತ್ತಿದೆ. ಆದ್ದರಿಂದಲೇ ಈಶಾವಾಸ್ಯೋಪನಿಷತ್ತಿನ ಪ್ರಾರಂಭದಲ್ಲಿ 'ತ್ಯೇನ ತ್ಯಕ್ತೇನ ಭುಂಜೀಥಾಃ' "ನಿನಗಿರುವುದರಲ್ಲಿ ಸ್ವಲ್ಪ ತ್ಯಾಗಮಾಡಿ ಭುಜಿಸು. ನಿನ್ನಲ್ಲಿರುವುದನ್ನು ಭಗವಂತನಿಗೆ ಅರ್ಪಿಸಿ ಭುಜಿಸು"- ಎಂದು ಹೇಳಲಾಗಿದೆ. ಹಾಗಲ್ಲದೆ ಸ್ವಾರ್ಥಕ್ಕೋಸ್ಕರವೇ ತಿನ್ನುವವರು, ದೈವಕ್ಕೆ ಅರ್ಪಿಸದೆ ಭುಜಿಸುವವರು, ಪರಪ್ರಾಣಿಗೆ ಸ್ವಲ್ಪವೂ ತ್ಯಾಗ ಮಾಡದೆ ಭುಜಿಸುವವರು, ಪಾಪಗಳನ್ನು ಭುಜಿಸಿದಂತೆಯೇ ಎಂದು ಭಗವಂತನು ಛೇಡಿಸಿದನು. ಅವರು ಪಾಪದ ಮೂಟೆ ಕಟ್ಟಿಕೊಳ್ಳುತ್ತಿದ್ದಾರೆ. ಅವರು ಪಾಪವನ್ನೇ ಭುಜಿಸಿದಂತವರಾಗಿ ಅದು ಅವರ ರಕ್ತನಾಳಗಳಲ್ಲಿ ಪ್ರವೇಶಿಸಿ, ಅವರು ಕೇವಲ ಪಾಪರೂಪಿಗಳಾಗಿದ್ದಾ ರೆಂದರ್ಥ. ಆದ್ದರಿಂದ ಸ್ವಾರ್ಥವೇ ಪಾಪಕ್ಕೆ ಕಾರಣ. ಸ್ವಾರ್ಥ ತ್ಯಾಗವೇ ಮೋಕ್ಷಕ್ಕೆ ನಾಂದಿ ಎಂದು ಈ ಶ್ಲೋಕದ ದ್ವಾರ ಬಯಲಾಗುತ್ತದೆ. ಭಗವಂತನಿಗೆ ನಿವೇದಿಸದೆ, ಪರಪ್ರಾಣಿಗೆ ಸ್ವಲ್ಪವೂ ಇಡದೆ, ಪಂಚಭಕ್ಷ್ಯ ಪರಮಾನ್ನಗಳನ್ನು ತಿಂದರೂ ವಿಷ ತಿಂದಂತೆ ಎಂದೂ, ಈಶ್ವರಾರ್ಪಣ ಮಾಡಿ ಭೂತಕೋಟಿಗೆ ಸ್ವಲ್ಪ ತ್ಯಾಗ ಮಾಡಿ ಗಂಜಿಯನ್ನು ಕುಡಿದರೂ ಅದು ಅಮೃತವೇ ಆಗುವುದೆಂದು ಇಲ್ಲಿ ಹೇಳಿದಂತಾಗಿದೆ.

ನಿತ್ಯ ಜೀವನದಲ್ಲಿ ಹೆಚ್ಚುವಾಗ, ರುಬ್ಬುವಾಗ, ಬೀಸುವಾಗ, ಬೇಯಿಸು ವಾಗ, ಕಸತೆಗೆಯುವಾಗ, ತಿಳಿಯದೆ ಪ್ರಾಣಿಹಿಂಸೆ ಜರುಗಬಹುದು. ಅದನ್ನೇ ಪಂಚಸೂನವೆನ್ನುವರು. ಆ ಪಾಪವನ್ನು ಪರಿಹರಿಸಲು ಪಂಚ ಮಹಾಯಜ್ಞಗಳನ್ನು ಸೂಚಿಸಲಾಗಿದೆ; ಅವು ಯಾವುವೆಂದರೆ- (೧) ದೈವಯಜ್ಞ (ಹೋಮ) (೨)ಪಿತೃಯಜ್ಞ (ತರ್ಪಣ) (೩) ನೃಯಜ್ಞ (ಅತಿಥಿ ಪೂಜೆ) (೪) ಬ್ರಹ್ಮಯಜ್ಞ (ವೇದಾಧ್ಯಯನ) (೫) ಭೂತಯಜ್ಞ (ಪ್ರಾಣಿಗಳಿಗೆ ಅನ್ನವಿಡುವುದು). ಈ ರೀತಿಯ ಭಗವತ್ ಆರಾಧನೆ, ಪರೋಪಕಾರ ಸಂಬಂಧಗಳಾದ ಯಜ್ಞಗಳ ನ್ನಾಚರಿಸುತ್ತಾ, ಯಜ್ಞಶೇಷವನ್ನು ಮಾತ್ರ ಭುಜಿಸುವವನು ಪಾಪರಹಿತನಾಗಿ, ಕ್ರಮೇಣ ಪರಮ ಶ್ರೇಯವನ್ನು ಹೊಂದಬಲ್ಲನೆಂದು ಭಗವಂತನು ಈ ಶ್ಲೋಕದಲ್ಲಿ ತಿಳಿಸಿದನು.

ಪ್ರ : ಯಜ್ಞಶೇಷವನ್ನು (ದೈವಾರ್ಪಿತ ಮಾಡಿ, ಶೇಷವನ್ನು) ಭುಜಿಸುವವರಿಗೆ ಉಂಟಾಗುವ ಫಲವೇನು?

ಉ : ಅವರು ಸರ್ವ ಪಾಪಗಳಿಂದ ವಿಮುಕ್ತರಾಗುವರು.

ಪ್ರ : ಹಾಗೆ ಮಾಡದೆ, ಸ್ವಾರ್ಥಕ್ಕಾಗಿ ಮಾತ್ರ ಭುಜಿಸುವವರಿಗೆ ಉಂಟಾಗುವ ಫಲವೇನು?

ಉ : ಅವರು ಪಾಪವನ್ನೇ ಹೊಂದಿ, ಪಾಪರೂಪಿಗಳಾಗುವರು.

**ಅ॥** ಯಜ್ಞ ಮಹಾಪವಿತ್ರವಾದುದೆಂದು, ಪರಮಾತ್ಮನು ಅದರಲ್ಲಿ ಸುಪ್ರತಿಷ್ಠನಾಗಿ ಬೆಳಗುತ್ತಿರುತ್ತಾನೆ ಎಂದು ಹೇಳಲಾಗುತ್ತಿದೆ-

1. ತೇತ್ವಘಂ ಬುಞ್ಜತೇ ಪಾಪಾ - ಪಾಠಾಂತರ

೧೪. ಅನ್ನಾದ್ಭವಂತಿ ಭೂತಾನಿ ಪರ್ಜನ್ಯಾದನ್ನಸಂಭವಃ
ಯಜ್ಞಾದ್ಭವತಿ ಪರ್ಜನ್ಯೋ ಯಜ್ಞಃ ಕರ್ಮಸಮುದ್ಭವಃ

೧೫. ಕರ್ಮ ಬ್ರಹ್ಮೋದ್ಭವಂ ವಿದ್ಧಿ ಬ್ರಹ್ಮಾಕ್ಷರ ಸಮುದ್ಭವಮ್
ತಸ್ಮಾತ್ಸರ್ವಗತಂ ಬ್ರಹ್ಮ ನಿತ್ಯಂ ಯಜ್ಞೇ ಪ್ರತಿಷ್ಠಿತಮ್

**ಅರ್ಥ:** ಅನ್ನಾತ್=ಅನ್ನದಿಂದ; ಭೂತಾನಿ=ಪ್ರಾಣಿಗಳು; ಭವಂತಿ= ಉದ್ಭವಿಸುತ್ತಿವೆ ಪರ್ಜನ್ಯಾತ್=ಮೇಘದಿಂದ; ಅನ್ನಸಂಭವಃ=ಅನ್ನ ಉತ್ಪತ್ತಿಯಾಗುತ್ತಿದೆ; ಯಜ್ಞಾತ್=ಯಜ್ಞದಿಂದ; ಪರ್ಜನ್ಯಃ=ಮೇಘವು; ಭವತಿ=ಉಂಟಾಗುತ್ತದೆ; ಯಜ್ಞಃ=ಯಜ್ಞ; ಕರ್ಮಸಮುದ್ಭವಃ=ಸತ್ಕರ್ಮಾ ಚರಣೆಯಿಂದ ನಡೆಯುತ್ತಿದೆ; ಕರ್ಮ=ಸತ್ಕರ್ಮ; ಬ್ರಹ್ಮೋದ್ಭವಂ= ವೇದಗಳಿಂದ ಉಂಟಾಗುತ್ತದೆ; ಬ್ರಹ್ಮ=ವೇದ; ಅಕ್ಷರ ಸಮುದ್ಭವಮ್=ಅಕ್ಷರ ಪರಮಾತ್ಮನಿಂದ ಉಂಟಾಗುತ್ತಿದೆ; ತಸ್ಮಾತ್=ಆದ್ದರಿಂದ ಸರ್ವಗತಂ= ಎಲ್ಲವನ್ನೂ ವ್ಯಾಪಿಸಿದ; ಬ್ರಹ್ಮ=ಬ್ರಹ್ಮವು; ನಿತ್ಯಂ=ಯಾವಾಗಲೂ; ಯಜ್ಞೇ=ಯಜ್ಞಗಳಲ್ಲಿ; ಪ್ರತಿಷ್ಠಿತಮ್=ಸ್ಥಿತಗೊಂಡಿದೆಯೆಂದು ವಿದ್ಧಿ= ತಿಳಿಯುವುದು.

**ತಾ||** ಪ್ರಾಣಿಗಳು ಅನ್ನದಿಂದ ಉತ್ಪನ್ನವಾಗುತ್ತವೆ. ಅನ್ನವು ಮೇಘದಿಂದ ಉತ್ಪತ್ತಿಯಾಗುತ್ತದೆ. ಮೇಘವು (ಮೋಡವು) ಯಜ್ಞಗಳಿಂದುಂಟಾಗುತ್ತದೆ. ಯಜ್ಞವು ಸತ್ಕರ್ಮಗಳಿಂದುಂಟಾಗುತ್ತದೆ. ಸತ್ಕರ್ಮ ವೇದಗಳಿಂದುಂಟಾಗುತ್ತದೆ. ವೇದವು ಅಕ್ಷರ ಪರಬ್ರಹ್ಮನಿಂದ ಉಂಟಾಗಿರುವುದಾದ್ದರಿಂದ ಸರ್ವವ್ಯಾಪಕವಾದ ಬ್ರಹ್ಮವು ನಿರಂತರವಾಗಿ ಯಜ್ಞದಲ್ಲಿ ಪ್ರತಿಷ್ಠಿತವಾಗಿದೆಯಂದು ತಿಳಿಯುವುದು.

**ವ್ಯಾಖ್ಯೆ:**

ಧರ್ಮಚಕ್ರ




ಬ್ರಹ್ಮದಿಂದ ವೇದವು, ವೇದದಿಂದ ಸತ್ಕರ್ಮ, ಸತ್ಕರ್ಮದಿಂದ ಯಜ್ಞ ಉಂಟಾಗುತ್ತದೆ. ಈ ಕಾರಣದಿಂದ ಯಜ್ಞದಲ್ಲಿ ಬ್ರಹ್ಮವೂ ಸದಾ ಪ್ರತಿಷ್ಠಿತ ವಾಗಿರುತ್ತದೆಯೆಂದು ಇಲ್ಲಿ ಹೇಳಲಾಗಿದೆ. ಆದ್ದರಿಂದಲೇ ಯಜ್ಞಾದಿಗಳು ಮಹಾಪವಿತ್ರಗಳಾಗಿದ್ದು, ಚಿತ್ತ ಶುದ್ಧಿಕಾರಕಗಳಾಗಿ, ಮೋಕ್ಷಪ್ರದಗಳಾಗಿವೆ. (ಮೇಲಿನ ಚಕ್ರದಲ್ಲಿ ಮಳೆ, ಅನ್ನ, ಶರೀರಗಳು ಯಜ್ಞದಲ್ಲಿ ಅಂತರ್ಭೂತ ವಾಗಿರುವುದರಿಂದ ಅಲ್ಲಿ ಪ್ರತ್ಯೇಕವಾಗಿ ತೋರಿಸಿಲ್ಲ). ದೈವಕಾರ್ಯಗಳು (ಯಜ್ಞಾದಿಗಳು) ಸಾಮಾನ್ಯವಾದವುಗಳೆಂದು ತಿಳಿಯಬಾರದು. ಏಕೆಂದರೆ ಅವುಗಳಲ್ಲಿ ಸಾಕ್ಷಾತ್ ಸರ್ವವ್ಯಾಪಕ ಪರಬ್ರಹ್ಮನು ಸುಪ್ರತಿಷ್ಠನಾಗಿರುವನೆಂದು ಗೀತೆ ಉದ್ಘೋಷಿಸುತ್ತಿದೆ. ಆದ್ದರಿಂದ ಸರ್ವರೂ ಅವುಗಳನ್ನು ಆಚರಿಸಿ ಚಿತ್ತಶುದ್ಧಿ ಮಾಡಿಕೊಂಡು, ತದನಂತರ ಬ್ರಹ್ಮಸಾಕ್ಷಾತ್ಕಾರವನ್ನು ಹೊಂದಿ ಬಂಧ ವಿಮುಕ್ತರಾಗಬೇಕು.

"ಯಜ್ಞಾದ್ಭವತಿ ಪರ್ಜನ್ಯಃ"- ಯಜ್ಞಗಳಿಂದ ಮಳೆ ಬರುತ್ತದೆ ಎಂದು ಹೇಳಲಾಗಿದೆ. ಇದರಿಂದ ಯಜ್ಞಾದಿಗಳ ಅಭಾವದಿಂದ, ಬರಗಾಲ ಮುಂತಾದ ಕಷ್ಟಗಳೊದಗುತ್ತವೆ ಎಂದು ಸ್ಪಷ್ಟವಾಗುತ್ತಿದೆ. ಆದ್ದರಿಂದ ದೇಶ ಸೌಭಾಗ್ಯ ಮತ್ತು ಆತ್ಮಶುದ್ಧಿಗೆ ಜನರು ಸತ್ಕರ್ಮಗಳನ್ನು ಹೆಚ್ಚಾಗಿ ಆಚರಿಸಬೇಕು.

ಪ್ರ : ಯಜ್ಞಗಳು ಏಕೆ ಪವಿತ್ರವಾಗಿವೆ?

ಉ : ಅವುಗಳಲ್ಲಿ ಸರ್ವವ್ಯಾಪಕ ಬ್ರಹ್ಮನು ಪ್ರತಿಷ್ಠಿತನಾಗಿರುವನು. ಅವುಗಳನ್ನು ಆಚರಿಸುವುದರಿಂದ ಜೀವಿಗೆ ಕ್ರಮೇಣ ಬ್ರಹ್ಮಸಾಕ್ಷಾತ್ಕಾರ ಸಿದ್ಧಿಸುವುದು.

**ಅ||** ಯಜ್ಞರೂಪ ಸತ್ಕಾರ್ಯಗಳನ್ನು ಆಚರಿಸದವನ ಜೀವನವು ನಿಷ್ಫಲವೆಂದು ಹೇಳಲಾಗುತ್ತಿದೆ-

೧೬. ಏವಂ ಪ್ರವರ್ತಿತಂ ಚಕ್ರಂ ನಾನುವರ್ತಯತೀಹ ಯಃ
ಅಘಾಯುರಿಂದ್ರಿಯಾರಾಮೋ ಮೋಘಂ ಪಾರ್ಥ ಸ ಜೀವತಿ

**ಅರ್ಥ:** ಪಾರ್ಥ=ಓ ಅರ್ಜುನಾ!; ಯಃ=ಯಾರು; ಏವಂ=ಈ ಪ್ರಕಾರವಾಗಿ; ಪ್ರವರ್ತಿತಂ=ವರ್ತಿಸಲ್ಪಟ್ಟ; ಚಕ್ರಂ=ಜಗಚ್ಚಕ್ರವನ್ನು; ಇಹ=ಈ ಲೋಕದಲ್ಲಿ; ನ ಅನುವರ್ತಯತಿ=ಅನುಸರಿಸಿ ವರ್ತಿಸುವುದಿಲ್ಲವೋ; ಸಃ=ಆತನು; ಅಘಾಯುಃ=ಪಾಪ ಜೀವಿಯು; ಇಂದ್ರಿಯಾರಾಮಃ=ಇಂದ್ರಿಯ ಭೋಗಾಸಕ್ತನಾಗಿ(ದ್ದು); ಮೋಘಂ= ವ್ಯರ್ಥವಾಗಿ; ಜೀವತಿ=ಬದುಕುತ್ತಿದ್ದಾನೆ.

**ತಾ||** ಓ ಅರ್ಜುನಾ! ಈ ಪ್ರಕಾರವಾಗಿ ಪ್ರವರ್ತಿಸಲ್ಪಟ್ಟ ಧರ್ಮಚಕ್ರವನ್ನು ಈ ಪ್ರಪಂಚದಲ್ಲಿ ಯಾವನು ಅನುಸರಿಸಿ ನಡೆಯುವುದಿಲ್ಲವೋ ಆತನು ಪಾಪ ಜೀವನವನ್ನು ನಡೆಸುವಂಥವನಾಗಿದ್ದು, ಇಂದ್ರಿಯ ಲೋಲನಾಗಿ ವ್ಯರ್ಥವಾಗಿ ಬದುಕುತ್ತಿದ್ದಾನೆ.

**ವ್ಯಾಖ್ಯೆ:** ಯಜ್ಞಗಳು (ನಿಷ್ಕಾಮ ಬುದ್ಧಿಯಿಂದ ಮಾಡುವ ಸತ್ಕರ್ಮಗಳು) ಸಾಮಾನ್ಯವಾದುವಲ್ಲ, ಅವುಗಳಲ್ಲಿ ಸರ್ವವ್ಯಾಪಕ ಪರಬ್ರಹ್ಮಶಕ್ತಿ ಅಡಗಿದೆ. ಆದ್ದರಿಂದ ಅವುಗಳನ್ನು ಅನುಸರಿಸುವವನು ಪರಮ ಶ್ರೇಯವನ್ನು (ಮೋಕ್ಷವನ್ನು) ಹೊಂದುವನು. ಅನುಸರಿಸದೇ ಇರುವವನು ತನ್ನ ಜೀವನವನ್ನು ವ್ಯರ್ಥಮಾಡಿಕೊಳ್ಳುವವನು. ಏಕೆಂದರೆ ಆತನು ದೈವವನ್ನು ಮರೆತು, ದೃಶ್ಯವನ್ನು ನಂಬಿ ವಿಷಯಲೋಲನಾಗಿ ಪಾಪದ ಜೀವನವನ್ನು ಜೀವಿಸುವನು. ಯಜ್ಞರೂಪ ಸತ್ಕರ್ಮಗಳಿಂದ ಭಗವಂತನನ್ನು, ದೇವತೆಗಳನ್ನು ಆರಾಧಿಸದೇ ಇರುವವನು, ತ್ಯಾಗ ಬುದ್ಧಿಯಿಲ್ಲದವನು, ಪರೋಪಕಾರವನ್ನು ಮಾಡದೇ ಇರುವವನು ಸಂಸಾರ ಕೂಪದಲ್ಲಿ ಬಿದ್ದು ಜೀವನವನ್ನು ಭ್ರಷ್ಟಗೊಳಿಸಿ ಕೊಳ್ಳುತ್ತಾನೆಂದು ಇಲ್ಲಿ ಹೇಳಲಾಗಿದೆ. ಹಾಗಲ್ಲದೆ ಮೇಲೆ ತಿಳಿಸಿದ ಈ ಧರ್ಮ ಚಕ್ರವನ್ನನುಸರಿಸಿ ಯಜ್ಞರೂಪ ಸತ್ಕರ್ಮಗಳನ್ನು ಆಚರಿಸುವವನು ಭಗವದನುಗ್ರಹಕ್ಕೆ ಪಾತ್ರನಾಗಿ, ಚಿತ್ತಶುದ್ಧಿ ಪಡೆದು ಕ್ರಮವಾಗಿ ಮೋಕ್ಷಧಾಮವನ್ನು ಅಲಂಕರಿಸುವನು. ಒಬ್ಬನದು ಪಾಪ ಜೀವನ, ಇನ್ನೊಬ್ಬನದು ಪುಣ್ಯಜೀವನ; ಒಬ್ಬನು ಇಂದ್ರಿಯಾರಾಮ, ಇನ್ನೊಬ್ಬನು ಆತ್ಮಾರಾಮ; ಒಬ್ಬನು ವ್ಯರ್ಥಜೀವಿ, ಮತ್ತೊಬ್ಬನು ಸಾರ್ಥಕಜೀವಿ.

ಭಗವಂತನನ್ನು ಮರೆಯುವುದೇ ಪಾಪ (To forget God is sin)ವೆಂದು ರಾಮತೀರ್ಥರು ಹೇಳಿದ್ದಾರೆ. ಮೇಲೆ ತಿಳಿಸಿದ ಧರ್ಮಚಕ್ರವನ್ನು ಅನುಸರಿಸದವರು ದೈವವನ್ನು ಮರೆತು ದೃಶ್ಯದ ಹಿಂದೆಯೇ ಓಡುವರು.

ಆದ್ದರಿಂದ ಅವರು ಪಾಪದ ಮೂಟೆಯನ್ನು ಕಟ್ಟಿಕೊಳ್ಳುತ್ತಿದ್ದಾರೆ. ಆದ್ದರಿಂದಲೇ ಅವರನ್ನು 'ಅಘಾಯುಗಳು' (ಪಾಪದ ಜೀವನ ನಡೆಸುವವರು) ಎಂದು ಗೀತಾಚಾರ್ಯನು ಕರೆದಿದ್ದಾನೆ. ಮತ್ತೆ ದೃಶ್ಯವನ್ನು ಸತ್ಯವೆಂದು ನಂಬಿ ಅದರ ಹಿಂದೆ ಓಡುವವನು ಸಹಜವಾಗಿ ಇಂದ್ರಿಯ ಲೋಲನಾಗಿ, ವಿಷಯಾಸಕ್ತನಾಗಿ ಪ್ರವರ್ತಿಸುವನಾದ್ದರಿಂದ ಅವನನ್ನು ಇಂದ್ರಿಯಾರಾಮ ಎಂದು ವರ್ಣಿಸಲಾಗಿದೆ. ಅವರ ಜೀವನ ತಮಗಾಗಲಿ, ಬೇರೆಯವರಿಗಾಗಲಿ ಉಪಯೋಗಕ್ಕೆ ಬರದು. ಆದ್ದರಿಂದ ಅವರದು 'ಮೋಘ ಜೀವನ' (ವ್ಯರ್ಥಜೀವನ) ಎಂದು ಹೇಳಲ್ಪಟ್ಟಿದೆ. ಮಾನವನಾಗಿ ಹುಟ್ಟಿ ದೈವವನ್ನು ಮರೆತು ಇಂದ್ರಿಯ ಸುಖಗಳಲ್ಲಿ ಮುಳುಗುವುದಕ್ಕಿಂತ ಕ್ರಿಮಿಕೀಟಾದಿಗಳಾಗಿ ಜನ್ಮಿಸುವುದು ಒಳ್ಳೆಯದು. ಆದ್ದರಿಂದ ಭಗವಂತನು ಹೇಳಿದ ಈ ಯಜ್ಞಾಚರಣ ರೂಪ ಧರ್ಮಚಕ್ರವನ್ನನುಸರಿಸಿ ಮಾನವ ಜೀವನವನ್ನು ಸಾರ್ಥಕಗೊಳಿಸಿಕೊಳ್ಳಬೇಕು.

ಪ್ರ : ಯಜ್ಞಾದಿರೂಪಗಳಾದ ಧರ್ಮ ಚಕ್ರವನ್ನು ಅನುಸರಿಸದೇ ಇರುವವನ ಜೀವನವು ಹೇಗಿರುವುದು?

ಉ : ೧) ಅವನದು ಪಾಪ ಜೀವನ ೨) ಇಂದ್ರಿಯ ಲೋಲನಾಗಿ ವರ್ತಿಸುವನು ೩) ಜೀವನವನ್ನು ವ್ಯರ್ಥ ಮಾಡಿಕೊಳ್ಳುವನು.

**ಅ॥** ಆತ್ಮಸಾಕ್ಷಾತ್ಕಾರವನ್ನು ಹೊಂದಿರುವ ಮಹನೀಯರು ಸ್ವತಃ ದೈವದಲ್ಲಿಯೇ ನಿರಂತರವಾಗಿ ವರ್ತಿಸುತ್ತಿರುವರು. ಆದ್ದರಿಂದ ಅವರಿಗೆ ಮಾತ್ರ ಈ ಯಜ್ಞಾದಿ ಕಾರ್ಯನಿರ್ವಹಣೆಯಲ್ಲಿ (ವಿಧಿ) ನಿಯಮಗಳ ಅವಶ್ಯಕತೆಯಿಲ್ಲವೆಂದು ಎರಡು ಶ್ಲೋಕಗಳ ದ್ವಾರ ಹೇಳಲಾಗುತ್ತಿದೆ-

**೧೭. ಯಸ್ತ್ವಾತ್ಮರತಿರೇವ ಸ್ಯಾದಾತ್ಮತೃಪ್ತಶ್ಚ ಮಾನವಃ**
**ಆತ್ಮನ್ಯೇವ ಚ ಸಂತುಷ್ಟಸ್ತಸ್ಯ ಕಾರ್ಯಂ ನವಿದ್ಯತೇ**

**ಅರ್ಥ:** ಯಃ ಮಾನವಃ ತು=ಯಾವ ಮಾನವನು; ಆತ್ಮರತಿಃ ಏವ= ಆತ್ಮದಲ್ಲಿಯೇ ರತಿಸುವವನು; ಆತ್ಮ ತೃಪ್ತಃ ಚ=ಆತ್ಮದಲ್ಲೇ ತೃಪ್ತಿಹೊಂದಿ ಉಳ್ಳವನು; ಆತ್ಮನಿ ಏವ=ಆತ್ಮದಲ್ಲಿಯೇ; ಸಂತುಷ್ಟಃ ಚ=ಸಂತೋಷ ಪಡುವವನು; ಸ್ಯಾತ್=ಆಗುತ್ತಾನೆಯೋ, ತಸ್ಯ=ಅಂತಹವನಿಗೆ; ಕಾರ್ಯಂ= ಮಾಡಬೇಕಾದದ್ದು; ನ ವಿದ್ಯತೇ=ಇಲ್ಲ.

ತಾ: ಯಾವನು ಕೇವಲ ಆತ್ಮದಲ್ಲಿ ಕ್ರೀಡಿಸುತ್ತಾ, ಆತ್ಮದಲ್ಲಿಯೇ ತೃಪ್ತಿಹೊಂದುತ್ತಾ, ಆತ್ಮದಲ್ಲಿಯೇ ಸಂತೋಷಿಸುತ್ತಾನೆಯೋ, ಅಂತಹ ಆತ್ಮಜ್ಞಾನಿಗೆ ಇನ್ನು ಮಾಡಬೇಕಾದ ಕೆಲಸ(ವಿಧಿ) ಯಾವುದೂ ಇಲ್ಲ.

ವ್ಯಾಖ್ಯೆ: ಕರ್ಮಯೋಗದ ಶಾಸ್ತ್ರವಿಧಿಗಳನ್ನು ಲೋಕದಲ್ಲಿ ಕೆಲವರನ್ನು ಬಿಟ್ಟು ಬೇರೆಯವರೆಲ್ಲಾ ಅನುಸರಿಸಲೇಬೇಕು. ಆ ಕೆಲವು ಜನ ಯಾರೋ ಈ ಶ್ಲೋಕದಲ್ಲಿ ಹೇಳಲ್ಪಟ್ಟಿದೆ. ಆತ್ಮಾರಾಮ, ಆತ್ಮತೃಪ್ತ, ಆತ್ಮಸಂತುಷ್ಟರಾದ ಮಹನೀಯರಿಗೆ ಕರ್ಮಸಂಬಂಧವಾದ ವಿಧಿಗಳನ್ನು ಹೇರಿರುವುದಿಲ್ಲ. ಏಕೆಂದರೆ ಸಮಸ್ತ ಕರ್ಮಗಳ, ಸಾಧನೆಗಳ ಲಕ್ಷ್ಯ ಆತ್ಮಸಾಕ್ಷಾತ್ಕಾರ. ಅದು ಅವರಿಗೆ ಆಗಾಗಲೇ ಲಭಿಸಿಯೇ ಇದೆ. ಕರ್ಮಗಳ ದ್ವಾರ ಹೊಂದಬೇಕಾದ ಫಲವನ್ನು ಅವರು ಹೊಂದಿದ್ದಾರೆ. ಆದ್ದರಿಂದ ಶಾಸ್ತ್ರಗಳು ಅವರನ್ನು 'ವಿಧಿ'ಯಿಂದ ಮುಕ್ತಗೊಳಿಸಿವೆ. ಆದರೂ ಲೋಕಸಂಗ್ರಹಾರ್ಥವಾಗಿ ಮಹಾತ್ಮರು ಸತ್ಕರ್ಮಗಳನ್ನು ಆಚರಿಸುತ್ತಲೇ ಇರುವರು. ಅವರು ಕರ್ಮ ಮಾಡಿದರೂ, ಮಾಡದೇ ಇದ್ದರೂ ದೋಷವಿಲ್ಲ.

ಆದರೆ ಇದು ಸಾಮಾನ್ಯರಿಗೆ ಅನ್ವಯಿಸುವುದಿಲ್ಲ. ಪ್ರಪಂಚದಲ್ಲಿ ಆತ್ಮಾನುಭೂತಿಯನ್ನು ಹೊಂದಿದ ಮಹನೀಯರು ವಿರಳ. ಬೇರೆಯವರೆಲ್ಲರೂ ಕರ್ಮ ಮಾಡಬೇಕಾದದ್ದೇ. ಕೃತಾರ್ಥರಾಗಬೇಕಾದರೆ ಕೃತಕೃತ್ಯರಾಗಲೇಬೇಕು. ತಾವು ಪೂರ್ಣ ಸ್ಥಿತಿಯನ್ನು ಹೊಂದದೇ ಇದ್ದರೂ ಹೊಂದಿದಂತೆ ನಟಿಸಿ ಅಕರ್ಮಣೆಗಳಾಗಬಾರದು. ಅದು ಕಪಟ ಹಾಗು ಮಿಥ್ಯಾಚಾರವೇ ಹೌದು.

ಪ್ರಪಂಚದಲ್ಲಿ ಬಹುತೇಕ ಜನರು ವಿಷಯರತಿ, ವಿಷಯತೃಪ್ತಿ, ವಿಷಯ ಸಂತುಷ್ಟಿಯಲ್ಲಿ ಕಾಲಕ್ಷೇಪಮಾಡುತ್ತಿದ್ದಾರೆ. ಅದರಿಂದ ಇಹಕ್ಕಾಗಲಿ, ಪರಕ್ಕಾಗಲಿ ಅವರಿಗಾಗಲೀ ಏನೂ ಲಾಭವಿಲ್ಲ. ಆದ್ದರಿಂದ ಆ ಪದ್ಧತಿಯನ್ನು ಬಿಟ್ಟು 'ಆತ್ಮರತಿ', ಆತ್ಮತೃಪ್ತಿ, ಆತ್ಮಸಂತುಷ್ಟಿ'ಗಳನ್ನು ಹೊಂದಲು ಪ್ರಯತ್ನಿಸಬೇಕು. ಜೀವನದ ಲಕ್ಷ್ಯವೂ ಇದೇ ಆಗಿದೆ. ವಾಸ್ತವವಾಗಿ ಆನಂದವು ಜನರು ನಂಬಿದಂತೆ ಹೊರಗೆ ಇಲ್ಲ. ಅದು ಹೃದಯದಲ್ಲಿಯೇ ಇದೆ. ಹೊರಗಿರುವುದು ಪ್ರತಿಬಿಂಬಾನಂದ, ಕ್ಷಣಿಕ ಸುಖ. ಒಳಗಿರುವುದು ಶಾಶ್ವತ, ನಿರತಿಶಯಾನಂದವಾದ್ದರಿಂದ ಮುಮುಕ್ಷುಗಳು ದೃಶ್ಯ ಪದಾರ್ಥಗಳ ಮೇಲೆ ವಿರಕ್ತಿ ಹೊಂದಿ ಅಂತರ್ಮುಖರಾಗಿ ಆತ್ಮಾನಂದವನ್ನು ಅನುಭವಿಸಬೇಕು.

"ಮಾನವಃ"- ಶಬ್ದವನ್ನು ಪ್ರಯೋಗಿಸಲ್ಪಟ್ಟಿರುವುದರಿಂದ ಪ್ರತಿ ಮಾನವನಿಗೂ ಆತ್ಮಾನುಭವರೂಪವಾದ ಜೀವನ್ಮುಕ್ತ ಸ್ಥಿತಿಯನ್ನು ಪಡೆಯುವ ಅರ್ಹತೆಯಿದೆಯೆಂದೂ, ಸರ್ವಮಾನವರು ಜಾತಿ ಮತ ಕುಲ ಭೇದಗಳಿಲ್ಲದೆ ಅಂತಹ ಮಹೋನ್ನತ ಸ್ಥಿತಿಯನ್ನು ಹೊಂದಬಹುದೆಂದು ಹೇಳಲಾಗಿದೆ.

ಪ್ರ : ಕರ್ಮಯೋಗದ ವಿಧಿಗಳು ಯಾರಿಗೆ ಅನ್ವಯಿಸುವುದಿಲ್ಲ?

ಉ : ಆತ್ಮಾರಾಮ, ಆತ್ಮತೃಪ್ತಿ, ಆತ್ಮಸಂತುಷ್ಟರಾದ ಮಹನೀಯರಿಗೆ ಕರ್ಮಯೋಗದ ವಿಧಿಗಳು ಅನ್ವಯಿಸುವುದಿಲ್ಲ.

**೧೮. ನೈವ ತಸ್ಯ ಕೃತೇನಾರ್ಥೋ ನಾಕೃತೇನೇಹ ಕಶ್ಚನ**
**ನ ಚಾಸ್ಯ ಸರ್ವಭೂತೇಷು ಕಶ್ಚಿದರ್ಥವ್ಯಪಾಶ್ರಯಃ**

**ಅರ್ಥ:** ತಸ್ಯ=ಆತನಿಗೆ (ಅಂತಹ ಆತ್ಮಜ್ಞಾನಿಗೆ); ಇಹ=ಈ ಲೋಕದಲ್ಲಿ; ಕೃತೇನ=ಕರ್ಮಮಾಡುವುದರಿಂದ; ಅರ್ಥಃ=ಪ್ರಯೋಜನ; ನ ಏವ=ಏನೂ ಇಲ್ಲ; ಅಕೃತೇನ=ಕರ್ಮಮಾಡದೆ ಇರುವುದರಿಂದ; ಕಶ್ಚನ=ಯಾವುದೇ ಒಂದು (ದೋಷಃ=ದೋಷ); ನ=ಇಲ್ಲ; ಅಸ್ಯ=ಈತನಿಗೆ; ಸರ್ವಭೂತೇಷು; ಚರಾಚರ ಸಮಸ್ತಪ್ರಾಣಿಗಳೆಲ್ಲವುಗಳಲ್ಲಿ; ಅರ್ಥ ವ್ಯಪಾಶ್ರಯಃ=ಪ್ರಯೋಜನಕ್ಕಾಗಿ ಆಶ್ರಯಿಸಬೇಕಾಗಿರುವುದು; ಕಶ್ಚಿತ್=ಯಾವುದೂ; ನ=ಇಲ್ಲ;

**ತಾ॥** ಆತ್ಮಜ್ಞಾನಿಗೆ ಈ ಪ್ರಪಂಚದಲ್ಲಿ ಕರ್ಮ ಮಾಡುವುದರಿಂದ ಪ್ರಯೋಜನವಾಗಲೀ, ಮಾಡದೇ ಇರುವುದರಿಂದ ದೋಷವಾಗಲೀ ಯಾವುದೂ ಇರುವುದಿಲ್ಲ, ಆತನು ತನ್ನ ಯಾವುದೇ ಪ್ರಯೋಜನಕ್ಕಾಗಿ ಸಮಸ್ತ ಭೂತಗಳಲ್ಲಿ ಯಾವುದನ್ನೂ ಆಶ್ರಯಿಸಬೇಕಾಗಿರುವುದಿಲ್ಲ.

ವ್ಯಾಖ್ಯೆ: ಮೇಲೆ ತಿಳಿಸಿದ ಜೀವನ್ಮುಕ್ತನಾದ ಆತ್ಮಜ್ಞಾನಿಗೆ ಕರ್ಮ ಮಾಡುವುದರಿಂದ ಇಲ್ಲವೆ ಮಾಡದೇ ಇರುವುದರಿಂದ ಪ್ರಯೋಜನವೇನೂ ಇಲ್ಲವೆಂದು ತಿಳಿಸಲಾಗಿದೆ. ಏಕೆಂದರೆ ಆತನು ನಿರಂತರವೂ ಆತ್ಮದಲ್ಲಿಯೇ ತೃಪ್ತಿಹೊಂದಿರುವನಾದ್ದರಿಂದ ಕರ್ಮದಿಂದಾಗಲಿ, ಕರ್ಮತ್ಯಾಗದಿಂದಾಗಲಿ ಪ್ರಪಂಚದಲ್ಲಿ ಹೊಸದಾಗಿ ಸಾಧಿಸಬೇಕಾದ ವಿಷಯ ಆತನಿಗೆ ಏನೂ ಇಲ್ಲ. ಆತನು ಅಂದುಕೊಂಡರೆ ಕರ್ಮಮಾಡಬಹುದು; ಮಾಡದೆಯೂ ಇರಬಹುದು.

ವಿಧಿಯೇನೂ ಇಲ್ಲ ಆದರೂ ಲೋಕಕ್ಷೇಮಕ್ಕಾಗಿ ಮಹನೀಯರಾದ ಅವರು ಸಾಮಾನ್ಯವಾಗಿ ಸತ್ಕರ್ಮಗಳನ್ನಾಚರಿಸುತ್ತಲೇ ಇರುವರು.

ಮತ್ತೆ ಅಂತಹ ಆತ್ಮನಿಷ್ಠರು ಪ್ರಪಂಚದಲ್ಲಿ ಯಾವ ಪ್ರಯೋಜನಕ್ಕಾಗಿಯೂ ಒಬ್ಬರನ್ನು ಆಶ್ರಯಿಸಬೇಕಾದ ಕೆಲಸವಿಲ್ಲವೆಂದು ಹೇಳಲಾಗಿದೆ. ಏಕೆಂದರೆ ಎಲ್ಲ ಪ್ರಯೋಜನಗಳು ಯಾವುದರಿಂದ ಸಿದ್ಧಿಸುತ್ತಿವೆಯೋ, ಆ ಎಲ್ಲಾ ಪ್ರಯೋಜನಗಳಿಗೂ ಕೇಂದ್ರ, ಮೂಲಸ್ಥಾನ (Head quarters)ವಾದ ಆ ಆತ್ಮವನ್ನು ಅವರು ಕೈವಶಮಾಡಿಕೊಂಡೇ ಇದ್ದಾರೆ. 'ಶತೇ ಪಂಚಾಶತ್' ನೂರರಲ್ಲಿ ಐವತ್ತು ಸೇರೇ ಇರುವ ನ್ಯಾಯವನ್ನನುಸರಿಸಿ, ಸಮಸ್ತ ಪ್ರಾಪಂಚಿಕ ಪ್ರಯೋಜನಗಳು ಆತ್ಮಪ್ರಾಪ್ತಿಯಲ್ಲಿ ಅಂತರ್ಭೂತವಾಗಿಯೇ ಇವೆ. ಆದ್ದರಿಂದ ಅವರು ಒಬ್ಬರ ಮುಂದೆ ಕೈಚಾಚುವ, ಒಬ್ಬರಿಗೆ ತಲೆ ಬಗ್ಗಿಸುವ, ಒಬ್ಬರನ್ನು ಆಶ್ರಯಿಸಬೇಕಾದ ಕೆಲಸವೇ ಇರುವುದಿಲ್ಲ.

ಆದರೆ ಈ ರೀತಿ ಕರ್ಮಸಂಬಂಧವಾದ ನಿರ್ದಿಷ್ಟವಾದ ವಿಧಿ ಇಲ್ಲದೆ ಇರುವುದು ಆತ್ಮನಿಷ್ಠನೊಬ್ಬನಿಗೇ ಹೊರತು ಬೇರೆಯವರಿಗಲ್ಲ. ಬೇರೆಯವರೆಲ್ಲರೂ ತಪ್ಪದೆ (ನಿಷ್ಕಾಮ ಬುದ್ಧಿಯಿಂದ) ಕರ್ಮವನ್ನಾಚರಿಸಲೇಬೇಕು. ಉದ್ಯೋಗ ನಿವೃತ್ತಿಯಾದ ನಂತರ ಪಿಂಚಣಿ (pension) ತೆಗೆದುಕೊಳ್ಳುತ್ತಾ ವಿರಾಮವಾಗಿರುವವರನ್ನು ನೋಡಿ ವಿದ್ಯಾರ್ಥಿದೆಸೆಯಲ್ಲಿರುವವನಾಗಲಿ, ಉದ್ಯೋಗಿಯಾಗಲಿ ತನ್ನ ಕರ್ತವ್ಯವನ್ನು ಬಿಟ್ಟರೆ ಹೇಗೆ ಭ್ರಷ್ಟರಾಗುವರೋ ಹಾಗೆ ಜೀವನ್ಮುಕ್ತ ದೆಶೆ ಹೊಂದುವುದಕ್ಕಿಂತ ಮೊದಲೇ ಕರ್ತವ್ಯ ನಿರ್ವಹಣೆಯನ್ನು (ಕರ್ಮವಿಧಿಯನ್ನು) ತ್ಯಜಿಸುವವನು ಪತನವನ್ನು ಹೊಂದುವನು ಆದ್ದರಿಂದ ಸಾಧಕರು ಈ ವಿಷಯದಲ್ಲಿ ಕಡು ಜಾಗರೂಕರಾಗಿದ್ದು ತಮ್ಮ ಸಾಧನೆಗಳಲ್ಲಿ ಕಿಂಚಿನ್ಮಾತ್ರವೂ ಕೊರತೆ ಇಲ್ಲದಂತೆ ನೋಡಿಕೊಳ್ಳಬೇಕು.

**ಅ||** ಫಲಾಪೇಕ್ಷೆಯನ್ನು ಬಿಟ್ಟು ಕಾರ್ಯಗಳನ್ನು ಆಚರಿಸಬೇಕೆಂದು ಈಗ ಭಗವಂತನು ಅರ್ಜುನನಿಗೆ ಆದೇಶಿಸುತ್ತಿದ್ದಾನೆ-

**೧೯. ತಸ್ಮಾದಸಕ್ತಃ ಸತತಂ ಕಾರ್ಯಂ ಕರ್ಮ ಸಮಾಚರ**
**ಅಸಕ್ತೋ ಹ್ಯಾಚರನ್ ಕರ್ಮ ಪರಮಾಪ್ನೋತಿ ಪೂರುಷಃ**

**ಅರ್ಥ:** ತಸ್ಮಾತ್=ಆದ್ದರಿಂದ(ತ್ವಂ ನೀನು); ಅಸಕ್ತಃ=ಸಂಗ(ಫಲಾಪೇಕ್ಷೆ) ಇಲ್ಲದವನು (ಆಗಿ); ಸತತಂ=ಯಾವಾಗಲೂ; ಕಾರ್ಯಂ=ಮಾಡಬೇಕಾದ; ಕರ್ಮ=ಕರ್ಮವನ್ನು; ಸಮಾಚರ=ಚೆನ್ನಾಗಿ ಆಚರಿಸುವುದು; ಅಸಕ್ತಃ=ಸಂಗವಿಲ್ಲದವನು(ಆಗಿ); ಕರ್ಮ=ಕರ್ಮವನ್ನು; ಆಚರನ್=ಆಚರಿಸುತ್ತಿರುವ; ಪೂರುಷಃ=ಪುರುಷನು; ಪರಂ=ಮೋಕ್ಷವನ್ನು; ಆಪ್ನೋತಿಹಿಃ=ಹೊಂದುತ್ತಿದ್ದಾನಲ್ಲವೇ!

**ತಾ||** ಆದ್ದರಿಂದ ನೀನು ಸಂಗ (ಫಲಾಪೇಕ್ಷೆ)ಇಲ್ಲದವನಾಗಿ ಮಾಡಬೇಕಾದ ಕರ್ಮವನ್ನು ಯಾವಾಗಲೂ ಸಮರ್ಪಕವಾಗಿ ಮಾಡುತ್ತಿರು. ಅಸಕ್ತನಾಗಿ ಕರ್ಮವನ್ನಾಚರಿಸುವ ಮಾನವನು (ಕ್ರಮೇಣ) ಮೋಕ್ಷವನ್ನು ಹೊಂದುತ್ತಿದ್ದಾನೆ.

**ವ್ಯಾಖ್ಯೆ:** "ತಸ್ಮಾತ್" ಆತ್ಮಜ್ಞಾನಿಗೆ ಕರ್ಮನಿರ್ವಹಣೆಯಲ್ಲಿ ವಿಧಿ ನಿಯಮಗಳಿರುವುದಿಲ್ಲ. ಬೇರೆಯವರಾದರೋ ಕರ್ಮವನ್ನಾಚರಿಸಲೇಬೇಕು. ಆದ್ದರಿಂದ (ಸಾಧನೆದೆಸೆಯಲ್ಲಿರುವ) ಮುಮುಕ್ಷುಗಳು ಕರ್ಮವನ್ನು ತಪ್ಪದೆ ಮಾಡಲೇಬೇಕು. ಆದರೆ ೧) ಅದರಲ್ಲಿ ಸಂಗವನ್ನು, ಸಕ್ತತೆಯನ್ನು (attachment) ಬಿಟ್ಟು ಮಾಡಬೇಕು. ೨) ಮತ್ತೆ ಶಾಸ್ತ್ರ ನಿಯತಕಾರ್ಯಗಳನ್ನೇ ಮಾಡಬೇಕು. ಈ ಎರಡು ವಿಶೇಷಣಗಳನ್ನು ಎಚ್ಚರಿಕೆಯಿಂದ ಪಾಲಿಸಿದಾಗ ಕರ್ಮವು ದೋಷವರ್ಜಿತವಾಗಿ ಮೋಕ್ಷಕ್ಕೆ ಹೇತುವಾಗುವುದು. ಆದ್ದರಿಂದಲೇ ಅಂತಹ ನಿಷ್ಕಾಮ ಕರ್ಮವನ್ನು ಯಾವಾಗಲೂ (ಸತತಂ) ಆಚರಿಸುತ್ತಿರು ಎಂದು ಭಗವಂತನು ಅರ್ಜುನನಿಗೆ ಬೋಧಿಸಿದನು. ಒಂದು ಪಕ್ಷ ಕರ್ಮವು ಬಂಧಕರವಾದದ್ದಾಗಿದ್ದರೆ ದೇವರೇ ಹೀಗೇಕೆ ಹೇಳುವನು? ಕರ್ಮದಲ್ಲಿಯ ಸಕ್ತತೆಯನ್ನು, ಫಲಾಪೇಕ್ಷೆಯನ್ನು ಬಿಟ್ಟುಬಿಟ್ಟರೆ ಆ ಕರ್ಮವೇ ನೈಷ್ಕರ್ಮ್ಯವಾಗಿ, ಮೋಕ್ಷಕ್ಕೆ ('ಪರಂ') ದಾರಿಮಾಡಿಕೊಡುವುದು. ಒಂದು ವೇಳೆ ಫಲಾಪೇಕ್ಷೆ ಬಿಡದಿದ್ದರೆ ಆ ಕರ್ಮವೇ ಬಂಧಕಾರವಾಗಿ ಸಂಸಾರಕ್ಕೆ ಹೇತುವಾಗುವುದು. ಇದು ಕರ್ಮರಹಸ್ಯ.

ಬೇರೆ ಯೋಗಗಳ ಹಾಗೆ ಕರ್ಮಯೋಗವೂ ಕೂಡ ಹೇಗೆ ಮೋಕ್ಷದಾಯಕವಾಗುವುದು ಎನ್ನುವುದನ್ನು ಈ ಶ್ಲೋಕದಲ್ಲಿ ಸ್ಪಷ್ಟೀಕರಿಸಲಾಗಿದೆ. ಅನಾಸಕ್ತ ಕರ್ಮಯೋಗದಿಂದ ಚಿತ್ತವು ಶುದ್ಧವಾಗಿ ಮೋಕ್ಷಪ್ರಾಪ್ತಿಗೆ ಸರಿಯಾದ ವಾತಾವರಣ ಏರ್ಪಡುತ್ತದೆ. **'ಮೋಕ್ಷೋ ಹಿ ಚೇತೋ ವಿಮಲಂ'** ಎಂದ ಹಾಗೆ ಚಿತ್ತದ ನೈರ್ಮಲ್ಯ ಸ್ಥಿತಿಯೇ ಮೋಕ್ಷ. ಆ ಸ್ಥಿತಿ ನಿಷ್ಕಾಮ ಕರ್ಮಾಚರಣೆಯಿಂದ ತಪ್ಪದೆ ಸಿದ್ಧಿಸುವುದು. ಲೋಕದಲ್ಲಿ ಜನ ಸಾಮಾನ್ಯರಿಗೆ ಜ್ಞಾನ, ಧ್ಯಾನ ಯೋಗಗಳಿಗಿಂತ ಕರ್ಮ ಹಾಗು ಭಕ್ತಿ ಮಾರ್ಗಗಳಲ್ಲಿ ಒಲವು ಹೆಚ್ಚು. ಆದ್ದರಿಂದ ಜನರಿಗೆ ಸುಲಭವಾಗಿ ಹಿಡಿಸುವ ಆ ಎರಡು ಮಾರ್ಗಗಳನ್ನು ಭಗವಂತನು ಗೀತೆಯಲ್ಲಿ ವಿಶೇಷವಾಗಿ ಪ್ರೋತ್ಸಾಹಿಸಿದ್ದಾನೆ.

ಪ್ರ : ಕರ್ಮವನ್ನು ಯಾವ ಪ್ರಕಾರ ಆಚರಿಸಬೇಕು?

ಉ : ೧) ಅನಾಸಕ್ತವಾಗಿ (ಫಲಾಪೇಕ್ಷೆ ರಹಿತವಾಗಿ, ನಿಷ್ಕಾಮವಾಗಿ) ಆಚರಿಸಬೇಕು. ೨) ಮಾಡಬೇಕಾದ ಅಂದರೆ ಶಾಸ್ತ್ರ ನಿಯಮಿತವಾದ ಕರ್ಮಗಳನ್ನೇ ಆಚರಿಸಬೇಕು.

ಪ್ರ : ಆ ಪ್ರಕಾರವಾಗಿ ಆಚರಿಸುವುದರಿಂದ ಉಂಟಾಗುವ ಫಲವೇನು?

ಉ : ಹಾಗೆ ಆಚರಿಸುವುದರಿಂದ ಮೋಕ್ಷವು ಸಿದ್ಧಿಸುವುದು.

**ಅ||** ಜನಕಾದಿಗಳ ದೃಷ್ಟಾಂತವನ್ನು ಹೇಳಿ ನಿಷ್ಕಾಮಕರ್ಮಯೋಗದ ಪ್ರಾಮುಖ್ಯತೆಯನ್ನು ಬಲಪಡಿಸಲಾಗುತ್ತಿದೆ-

**೨೦. ಕರ್ಮಣೈವ ಹಿ ಸಂಸಿದ್ಧಿಮ್ ಆಸ್ಥಿತಾ ಜನಕಾದಯಃ**
**ಲೋಕಸಂಗ್ರಹಮೇವಾಪಿ ಸಂಪಶ್ಯನ್ ಕರ್ತುಮರ್ಹಸಿ**

**ಅರ್ಥ:** ಜನಕಾದಯಃ=ಜನಕ ಮೊದಲಾದವರು; ಕರ್ಮಣೈವ=(ನಿಷ್ಕಾಮ)ಕರ್ಮದಿಂದಲೇ; ಸಂಸಿದ್ಧಿಃ=(ಚಿತ್ತಶುದ್ಧಿಯ ದ್ವಾರ) ಮೋಕ್ಷವನ್ನು; ಆಸ್ಥಿತಾಃ ಹಿ=ಹೊಂದಿದರಲ್ಲಾ!; ತ್ವಂ=ನೀನು; ಲೋಕಸಂಗ್ರಹಂ=ಜನರನ್ನು ಸನ್ಮಾರ್ಗದಲ್ಲಿ ಪ್ರವರ್ತಿಸುವಂತೆ ಮಾಡುವ ಪ್ರಯೋಗ; ಸಂಪಶ್ಯನ್ ಅಪಿ=ಆಲೋಚಿಸಿಯಾದರೂ; ಕರ್ತುಮೇವ=ಕರ್ಮ ಮಾಡುವುದಕ್ಕೆ; ಅರ್ಹಸಿ=ಅರ್ಹನಾಗಿದ್ದೀಯೇ (ಯೋಗ್ಯ)

**ತಾ||** ಜನಕ ಮೊದಲಾದವರು ನಿಷ್ಕಾಮ ಕರ್ಮದಿಂದ ಮೋಕ್ಷವನ್ನು ಹೊಂದಿದರು. ಜನರನ್ನು ಸನ್ಮಾರ್ಗದಲ್ಲಿ ಪ್ರವರ್ತಿಸುವಂತೆ ಮಾಡುವ ಉದ್ದೇಶದಿಂದಲಾದರೂ ನೀನು ಕರ್ಮಗಳನ್ನು ಆಚರಿಸತಕ್ಕದ್ದು.

**ವ್ಯಾಖ್ಯೆ:** ಹಿಂದಿನ ಶ್ಲೋಕದಲ್ಲಿ ನಿಷ್ಕಾಮ ಕರ್ಮಾಚರಣೆಯಿಂದ ಮಾನವನು ಪರಮಾತ್ಮನನ್ನು (ಮೋಕ್ಷವನ್ನು) ಹೊಂದಬಲ್ಲನೆಂದು ಹೇಳಿದ ಸಿದ್ಧಾಂತವನ್ನೇ ಈಗ ಜನಕಾದಿಗಳ ದೃಷ್ಟಾಂತದಿಂದ ಮತ್ತೂ ಬಲಪಡಿಸಲಾಗಿದೆ.

"ಜನಕಾದಯಃ"- ಎಂದರೆ ಜನಕ, ಅಶ್ವಪತಿ, ಇಕ್ಷ್ವಾಕು, ಪ್ರಹ್ಲಾದ, ಅಂಬರೀಶ, ಭಗೀರಥ ಮೊದಲಾದ ಚಕ್ರವರ್ತಿ ಗಳೆಂದರ್ಥ. ಈ ನಿಷ್ಕಾಮ ಕರ್ಮಯೋಗ ಹೊಸದೇನೂ ಅಲ್ಲವೆಂದು ಅನೇಕ ರಾಜರು ಪೂರ್ವದಲ್ಲಿ ಅದನ್ನು ಅವಲಂಬಿಸಿ ಮುಕ್ತಿ ಧಾಮವನ್ನು ಸೇರಿರುವರೆಂದು, ಆದ್ದರಿಂದ ಅರ್ಜುನನು ಕೂಡ ಅದನ್ನು ಈಗ ಅವಲಂಬಿಸಬಹುದೆಂದು ಭಗವಂತನು ಹೇಳುತ್ತಿದ್ದಾನೆ. ರಾಜ್ಯವನ್ನು ಪಾಲಿಸುತ್ತಾ ಮೋಕ್ಷವನ್ನು ಪಡೆಯಲು ಸಾಧ್ಯವೇ? ಕರ್ಮದಿಂದ ಮೋಕ್ಷಸಿದ್ಧಿಯನ್ನು ಯಾರಾದರೂ ಹೊಂದಿದ್ದಾರೆಯೇ ಎಂದು ಅರ್ಜುನನು ಪ್ರಶ್ನಿಸುವ ಮುನ್ನವೇ ಶ್ರೀಕೃಷ್ಣಮೂರ್ತಿ ಅದಕ್ಕೆ ಸಮಾಧಾನವನ್ನು ಇಲ್ಲಿ ಕೊಟ್ಟಿದ್ದಾನೆ. ಕರ್ಮವನ್ನು ನಿಷ್ಕಾಮವಾಗಿ ಆಚರಿಸುವುದರಿಂದ ಚಿತ್ತವು ನಿರ್ಮಲವಾಗುತ್ತದೆ. ನಿರ್ಮಲಚಿತ್ತದಲ್ಲಿ ಜ್ಞಾನವು ಉದಯಿಸುತ್ತದೆ. ಜ್ಞಾನ ವಿಚಾರಣೆಯಿಂದ ಮೋಕ್ಷವು ಸಿದ್ಧಿಸುತ್ತದೆ. ಈ ಪ್ರಕಾರವಾಗಿ ನಿಷ್ಕಾಮ ಕರ್ಮಯೋಗ, ಮೋಕ್ಷಕ್ಕೆ ಹೇತುವೇ ಆಗುತ್ತದೆ. ಜನಕನು ಮೊಟ್ಟಮೊದಲು ಅನೇಕ ಸತ್ಕಾರ್ಯಗಳನ್ನು ಫಲಾಪೇಕ್ಷೆರಹಿತವಾಗಿ ಮಾಡಿ, ಚಿತ್ತವು ಶುದ್ಧವಾದ ನಂತರ ಆತ್ಮವಿಚಾರಣೆ ಮಾಡಿ ಸ್ವಸ್ವರೂಪ ಸಾಕ್ಷಾತ್ಕಾರ ರೂಪ ಮೋಕ್ಷವನ್ನು ಪಡೆದನು ಎಂದು ಯೋಗ ವಾಸಿಷ್ಠದಲ್ಲಿ ಹೇಳಲಾಗಿದೆ. ಆದ್ದರಿಂದ ಅನಾಸಕ್ತ ಕರ್ಮಯೋಗದಿಂದ ಮುಕ್ತಿ ಲಭ್ಯವಾಗುವುದರಲ್ಲಿ ಸಂದೇಹವೇನಿಲ್ಲ.

ಇನ್ನು ಲೋಕಸಂಗ್ರಹದ ದೃಷ್ಟಿಯಿಂದ, ಅಂದರೆ ಲೋಕವನ್ನು ದುಷ್ಟ (ಅಪ) ಮಾರ್ಗದಿಂದ ತಪ್ಪಿಸಿ ಸನ್ಮಾರ್ಗದಲ್ಲಿ ಪ್ರವರ್ತಿಸುವಂತೆ ಮಾಡಲು ಕರ್ಮಯೋಗ ಅತ್ಯಾವಶ್ಯಕ ಎಂದು ಭಗವಂತನು ಹೇಳುತ್ತಿದ್ದಾನೆ. ಪರೋಪಕಾರಕ್ಕೆ ಎಷ್ಟು ಪ್ರಾಧಾನ್ಯತೆಯನ್ನು ಕೊಡಲಾಗಿದೆಯೋ ನೋಡಿ! ಪ್ರಾಣಿಗಳಿಗೆ ಉಪಕಾರಮಾಡುವುದು ಮಹಾ ಪುಣ್ಯಪ್ರದವಾದುದು. ಹಾಗಿರುವಾಗ ಮೋಕ್ಷೋಪಾಯವಾದ ಕರ್ಮಯೋಗವನ್ನು ತಾನು ಆಚರಿಸಿ, ಬೇರೆಯುವರನ್ನು ಆಚರಿಸುವಂತೆ ಮಾಡಿ, ತದ್ವಾರ ಜನಗಳನ್ನು ಭವಬಂಧನದಿಂದ ಬಿಡುಗಡೆ ಹೊಂದುವಂತೆ ಮಾಡುವುದು ಎಲ್ಲವುಗಳಿಗಿಂತ ಶ್ರೇಷ್ಠವಾದ ಉಪಯೋಗ. ಆದ್ದರಿಂದಲೇ 'ನೀನು ನಿಷ್ಕಾಮ ಕರ್ಮಯೋಗ ವನ್ನು ಆಚರಿಸಿ ಜನರನ್ನು ಸನ್ಮಾರ್ಗದ ಕಡೆಗೆ ತಿರುಗಿಸಿ ಉದ್ಧಾರಮಾಡು' ಎಂದು ಭಗವಂತನು ಅರ್ಜುನನಿಗೆ ಹಿತಬೋಧೆ ಮಾಡಿದನು.

ಪ್ರ : ಕರ್ಮಯೋಗದಿಂದ ಇಲ್ಲಿಯವರೆಗೆ ಯಾರಿಗಾದರೂ ಮೋಕ್ಷ ಪ್ರಾಪ್ತವಾಗಿದೆಯೇ? ಹಾಗಿದ್ದಲ್ಲಿ ಅವರು ಯಾರು?

ಉ : ಜನಕಾದಿ ಚಕ್ರವರ್ತಿಗಳು ಕರ್ಮಯೋಗದಿಂದ ಮೋಕ್ಷ ಹೊಂದಿದ್ದಾರೆ.

ಪ್ರ : ಕರ್ಮಯೋಗವನ್ನು ಆಚರಿಸುವುದರಿಂದ ಪ್ರಪಂಚಕ್ಕೆ ಉಂಟಾಗುವ ಪ್ರಯೋಜನವೇನು?

ಉ : ಅದರಿಂದ ಅನೇಕ ಜನರು ತಪ್ಪು ಮಾರ್ಗದಿಂದ ಸನ್ಮಾರ್ಗಕ್ಕೆ ಬರುವ ಅವಕಾಶವಿದೆ.

**ಅ||** ಹಿರಿಯರು ಮಾಡುವುದನ್ನೇ ಕಿರಿಯರು ಅನುಕರಿಸುವರು ಎನ್ನುವ ಲೋಕನ್ಯಾಯವನ್ನು ಹೇಳಲಾಗುತ್ತಿದೆ-

> ೨೧. ಯದ್ಯದಾಚರತಿ ಶ್ರೇಷ್ಠಃ ತತ್ತದೇವೇತರೋ ಜನಃ
> **ಸ ಯತ್ ಪ್ರಮಾಣಂ ಕುರುತೇ ಲೋಕಸ್ತದನುವರ್ತತೇ**

**ಅರ್ಥ:** ಶ್ರೇಷ್ಠಃ=ದೊಡ್ಡವನು; ಯತ್‌ಯತ್=ಯಾವಯಾವ ಕರ್ಮಗಳನ್ನು; ಆಚರತಿ=ಆಚರಿಸುತ್ತಿದ್ದಾರೆ; ಇತರಃ ಜನಃ=ಬೇರೆ ಜನರು; ತತ್ ತತ್ ಏವ=ಆಯಾಕರ್ಮಗಳನ್ನೇ (ಆಚರತಿ-ಆಚರಿಸುತ್ತಿದ್ದಾರೆ); ಸಂ=ಆತನು; ಯತ್= ಯಾವುದನ್ನು; ಪ್ರಮಾಣಂ=ಪ್ರಮಾಣವಾಗಿ; ಕುರುತೇ= ಮಾಡುತ್ತಿದ್ದಾನೊ (ತೆಗೆದುಕೊಳ್ಳುತ್ತಿದ್ದಾನೊ); ಲೋಕಃ=ಲೋಕವು (ಜನರು); ತತ್=ಅದನ್ನು; ಅನುವರ್ತತೇ=ಅನುಸರಿಸುವರು.

**ತಾ||** ಹಿರಿಯರು (ದೊಡ್ಡವರು) ಯಾವ ಕರ್ಮವನ್ನು ಮಾಡುವರೋ ಅದನ್ನೇ ಬೇರೆಯವರೂ ಮಾಡುವರು. ಅವರು ಯಾವುದನ್ನು ಪ್ರಮಾಣವಾಗಿ ಸ್ವೀಕರಿಸುವರೋ ಬೇರೆಯವರೂ ಅದನ್ನೇ ಅನುಸರಿಸುವರು.

**ವ್ಯಾಖ್ಯೆ:** ಲೋಕರೂಢಿಯಲ್ಲಿ ಹಿರಿಯರು ಏನು ಮಾಡುವರೋ ಬೇರೆಯವರು ಅದನ್ನೇ ಅನುಸರಿಸುವರು. ಆದ್ದರಿಂದ ಶ್ರೇಷ್ಠರು ತಮ್ಮ ಆಚರಣೆಯ ವಿಷಯದಲ್ಲಿ ಬಹಳ ಜಾಗರೂಕರಾಗಿರಬೇಕು. ಅವರ ಪದ್ಧತಿಯನ್ನೇ ಬೇರೆಯವರು ಅನುಸರಿಸುವುದರಿಂದ ತಮ್ಮ ಅನುಷ್ಠಾನ ವಿಷಯದಲ್ಲಿ ಅವರು ಬಹಳ ಎಚ್ಚರಿಕೆಯಿಂದ ವ್ಯವಹರಿಸಬೇಕು. ಶಾಸ್ತ್ರವಿರುದ್ಧ ಆಚರಣೆಯನ್ನು ಮಾಡಬಾರದು. ಅರ್ಜುನನು ತನ್ನ ಶೌರ್ಯ, ಧೈರ್ಯ, ಪರಾಕ್ರಮಗಳಿಂದ, ಸಚ್ಚರಿತ್ರೆಯಿಂದ ಲೋಕದಲ್ಲಿ ಖ್ಯಾತಿ ಸಂಪಾದಿಸಿದನು. ಅಂತಹ ಹಿರಿಯರು ಅಕರ್ಮಣಿಗಳಾಗಿರದೆ ತಮ್ಮ ವಿಧ್ಯುಕ್ತ ಧರ್ಮವನ್ನು ಫಲಾಪೇಕ್ಷರಹಿತವಾಗಿ ಅಸಕ್ತವಾಗಿ ಆಚರಿಸಿದ್ದರಿಂದ ಅದನ್ನು ನೋಡಿ ಬೇರೆಯವರು, 'ಆಹಾ, ಅರ್ಜುನನಂಥವನೇ ಈ ಪ್ರಕಾರವಾಗಿ ಆಚರಿಸಿದ ಮೇಲೆ ನಾವೇಕೆ ಮಾಡಬಾರದು' ಎಂದು ಯೋಚಿಸಿ, ನಿಷ್ಕಾಮ ಕರ್ಮಾವಲಂಬಿಗಳಾಗಿ ಚಿತ್ತ ಶುದ್ಧಿಯನ್ನು ಹೊಂದಿ ಪರಮ ಶ್ರೇಯವನ್ನು ಹೊಂದಬಲ್ಲರು.

'ಯಥಾ ರಾಜಾ ತಥಾ ಪ್ರಜಾ'- ಎನ್ನುವ ಆರ್ಯೋಕ್ತಿಯಂತೆ ಶ್ರೇಷ್ಠರು ಅಕರ್ಮಣಿಗಳಾಗಿದ್ದರೆ ಬೇರೆ ಜನರೂ ಸಹ ಯಾವ ಕರ್ಮಗಳನ್ನೂ ಮಾಡದೆ ಸುಮ್ಮನಿದ್ದು ಕ್ರಮೇಣ ಕರ್ಮ ಭ್ರಷ್ಟರಾಗಿ ಹೋಗುವರು. ಆದ್ದರಿಂದ ಲೋಕಕ್ಷೇಮ ದೃಷ್ಟಿಯಿಂದ ಹಿರಿಯರು ಸತ್ಕರ್ಮಗಳನ್ನು ಆಚರಿಸಲೇಬೇಕು.

ಮತ್ತೆ ಹಿರಿಯರು ತಾವು ಯಾವುದನ್ನು ಪ್ರಮಾಣವಾಗಿ ಸ್ವೀಕರಿಸು ತ್ತಾರೋ ಬೇರೆಯವರು ಅದನ್ನೇ ಪ್ರಮಾಣವಾಗಿ ತೆಗೆದುಕೊಳ್ಳುವರು. ಯಾವ ವಾಕ್ಯವನ್ನು, ಯಾವ ಸಿದ್ಧಾಂತವನ್ನು, ಯಾವ ಪದ್ಧತಿಯನ್ನು, ಯಾವ ಶಾಸ್ತ್ರವನ್ನು ಅವರು ಆದರಿಸುವರೋ ಉಳಿದ ಪ್ರಜೆಗಳೂ ಅದನ್ನೇ ಸ್ವೀಕರಿಸಿ ಆಚರಿಸುವರು. ಈ ಪ್ರಕಾರವಾಗಿ ಸತ್ಯಸಿದ್ಧಾಂತವು, ಶಾಸ್ತ್ರನಿಯತ ಕರ್ಮವು ಹೆಚ್ಚಿಗೆ ಪ್ರಚಾರವಾಗುವುದೇ ಅಲ್ಲದೆ ಬಹಳಷ್ಟು ಜನ ಅನುಸರಿಸುವುದರಿಂದ, ಮೋಕ್ಷಕ್ಕೆ ಭಾಗಿಗಳಾಗುವರು. ಆದ್ದರಿಂದ ಹಿರಿಯರು ಮಹೋನ್ನತ ಧರ್ಮಗಳನ್ನು ಮೊದಲು ತಾವು ಆಚರಿಸಿ, ಲೋಕಕ್ಕೆ ತೋರಿಸುವುದು ಅತ್ಯಾವಶ್ಯಕವೆಂದು ಭಗವಂತನು ಇಲ್ಲಿ ಬೋಧಿಸುತ್ತಿದ್ದಾನೆ.

"ಆಚರತಿ"- ಈ ಶ್ಲೋಕದಲ್ಲಿ ಶ್ರೀಕೃಷ್ಣಪರಮಾತ್ಮ ಆಚರಣೆಗೆ ಹೆಚ್ಚಿನ ಪ್ರಾಧಾನ್ಯತೆ ಕೊಟ್ಟಿರುವನೇ ಹೊರತು 'ವಾಚಾ' ಜ್ಞಾನಕ್ಕಲ್ಲ. ಈ ವಿಷಯವನ್ನು ಸಾಧಕರು ಚೆನ್ನಾಗಿ ಗಮನಿಸಬೇಕಾಗಿದೆ. ಆಚರಣೆ ಹಾಗು ಅನುಷ್ಠಾನವಿಲ್ಲದ ವಾಕ್ಯಗಳಿಂದ ಪ್ರಯೋಜನವಿಲ್ಲ. ಆದ್ದರಿಂದ ಮೊದಲು ಹಿರಿಯರು ಆದರ್ಶಪ್ರಾಯರಾಗಿರಬೇಕೆಂಬುದು ಭಗವಂತನ ಆದೇಶ. ಆಗ ಮಾತ್ರ ಜನರಿಗೆ ಅವರ ಮೇಲೆ ಮತ್ತು ಶಾಸ್ತ್ರವಾಕ್ಯಗಳ ಮೇಲೆ ವಿಶ್ವಾಸವೇರ್ಪಡುತ್ತದೆ.

**ಅ||** ಮುಂದಿನ ಮೂರು ಶ್ಲೋಕಗಳಲ್ಲಿ ಕರ್ಮಯೋಗದ ಅವಶ್ಯಕತೆಯನ್ನು ಸ್ವಕೀಯ ದೃಷ್ಟಾಂತದ ದ್ವಾರ ಪರಿಪೋಷಿಸಲಾಗಿದೆ-

**೨೨. ನ ಮೇ ಪಾರ್ಥಾಸ್ತಿ ಕರ್ತವ್ಯಂ ತ್ರಿಷು ಲೋಕೇಷು ಕಿಂಚನ**
**ನಾನಾವಾಪ್ತಮವಾಪ್ತವ್ಯಂ ವರ್ತ ಏವ ಚ ಕರ್ಮಣಿ**

**ಅರ್ಥ:** ಪಾರ್ಥ=ಓ ಅರ್ಜುನಾ; ಮೇ=ನನಗೆ; ತ್ರಿಷು ಲೋಕೇಷು= ಮೂರು ಲೋಕಗಳಲ್ಲಿ; ಕರ್ತವ್ಯಂ=ಮಾಡಬೇಕಾದ ಕಾರ್ಯ; ಕಿಂಚನ= ಸ್ವಲ್ಪವಾದರೂ; ನ ಅಸ್ತಿ=ಇಲ್ಲ; ಅನವಾಪ್ತಂ=ಹೊಂದಲಸಾಧ್ಯವಾದದ್ದು; ಅವಾಪ್ತವ್ಯಂ=ಹೊಂದಬೇಕಾದ (ವಸ್ತುವೇನು); ನ=ಇಲ್ಲ; (ತಥಾಪಿ) ಚ=ಆದರೂ; ಕರ್ಮಣಿ= ಕರ್ಮವನ್ನು; ವರ್ತ ಏವ=ಪ್ರವರ್ತಿಸುತ್ತಲೇ ಇದ್ದೇನೆ.

**ತಾ||** ಅರ್ಜುನಾ! ನನಗೆ ಈ ಮೂರು ಲೋಕಗಳಲ್ಲಿ ಮಾಡಬೇಕಾದ ಕಾರ್ಯ ಏನೂ ಇಲ್ಲ. ಮತ್ತೆ ಹೊಂದಲಸಾಧ್ಯವಾದದ್ದು, ಹೊಂದಬೇಕಾದದ್ದು ಏನೂ ಇಲ್ಲ. ಆದರೂ ನಾನು ಕರ್ಮದಲ್ಲಿ ಪ್ರವರ್ತಿಸುತ್ತಲೇ ಇದ್ದೇನೆ.

**ವ್ಯಾಖ್ಯೆ:** ಶ್ರೀಕೃಷ್ಣಮೂರ್ತಿ ಸಾಕ್ಷಾತ್ ಪರಮೇಶ್ವರನೇ ಆದುದರಿಂದ ಲೋಕವೆಲ್ಲವೂ ಆತನ ಉದರದಲ್ಲಿಯೇ ಇದೆ. ಹೀಗಿರುವಾಗ ಲೋಕಗಳಲ್ಲಿ ಅವನಿಗೆ ಮಾಡಬೇಕಾದ ಕಾರ್ಯವಾಗಲಿ ಹೊಂದಲಸಾಧ್ಯವಾದ ವಸ್ತುವಾಗಲಿ ಇರಲು ಹೇಗೆ ಸಾಧ್ಯ? ಆದರೂ ಕರುಣಾಮಯನಾದ್ದರಿಂದ ಭಕ್ತರ ಉದ್ಧಾರಕ್ಕಾಗಿ ಅವತಾರವೆತ್ತಿ ಪ್ರಜೋಪಕಾರಿ ಕರ್ಮಗಳನ್ನು ಮಾಡುತ್ತಲೇ ಇದ್ದಾನೆ. ವಾಸ್ತವವಾಗಿ ನಿರಾಕಾರನಾದರೂ, ಸಾಕಾರ ರೂಪವನ್ನು ಧರಿಸಿ, ಜನಗಳಲ್ಲಿ ಬೆರೆತು ಅವರಿಗೆ ಧರ್ಮಗಳನ್ನು, ತತ್ವರಹಸ್ಯಗಳನ್ನು ಬೋಧಿಸಿ ಮುಕ್ತಿಮಾರ್ಗವನ್ನು ಅವರಿಗೆ ಕರತಲಾಮಲಕವಾಗುವಂತೆ ಮಾಡುತ್ತಿದ್ದಾನೆ. ಸಾಕ್ಷಾತ್ ಭಗವಂತನೇ ಈ ಪ್ರಕಾರವಾಗಿ ಕರ್ಮಗಳನ್ನು ಆಚರಿಸುತ್ತಾ ಇರಬೇಕಾದರೆ, ಇನ್ನು ಸಾಮಾನ್ಯ ಮಾನವರು ಆಚರಿಸದೆ ಇದ್ದರೆ ಹೇಗೆ? ಜೀವನ್ಮುಕ್ತರಾಗಿದ್ದರೂ ತತ್ವಾನುಭೂತಿಯನ್ನು ಹೊಂದಿದ್ದರೂ, ಅನೇಕ ಮಹನೀಯರು, ಭಗವಂತನ ಈ ಆದರ್ಶವನ್ನೇ ಅನುಸರಿಸಿ ಲೋಕ ಸಂಗ್ರಹಾರ್ಥವಾಗಿ ಅನೇಕ ಕಾರ್ಯಗಳನ್ನು ಆಚರಿಸುತ್ತಲೇ ಇದ್ದಾರೆ. ಆದ್ದರಿಂದ ಸಾಮಾನ್ಯ ಮಾನವರು, ಸಾಧಕರು, ಮುಮುಕ್ಷುಗಳು ಅಕರ್ಮಣತ್ವವನ್ನು ಅವಲಂಬಿಸದೆ, ಆತ್ಮೋದ್ಧಾರಕ್ಕಾಗಿ ನಿಷ್ಕಾಮವಾಗಿ, ಅನಾಸಕ್ತವಾಗಿ ಕರ್ಮಗಳನ್ನು ತಪ್ಪದೆ ಆಚರಿಸಬೇಕು. ಅದರಿಂದ ಅವರಿಗೆ ಪರಮಶ್ರೇಯ ವುಂಟಾಗುವುದು.

**೨೩. ಯದಿ ಹ್ಯಹಂ ನ ವರ್ತೇಯಮ್ ಜಾತು ಕರ್ಮಣ್ಯತಂದ್ರಿತಃ**
**ಮಮ ವರ್ತ್ಮಾನುವರ್ತಂತೇ ಮನುಷ್ಯಾಃ ಪಾರ್ಥ ಸರ್ವಶಃ**

**ಅರ್ಥ:** ಪಾರ್ಥ=ಓ ಅರ್ಜುನಾ! ಹಿ=ಏಕೆಂದರೆ; ಅಹಂ=ನಾನು; ಜಾತು=ಯಾವಾಗಲೂ; ಅತಂದ್ರಿತಃ(ಸನ್)=ಜಾಗರೂಕನಾಗಿ; ಕರ್ಮಣಿ= ಕರ್ಮದಲ್ಲಿ; ನ ವರ್ತೇಯಂ ಯದಿ=ಪ್ರವರ್ತಿಸದಿದ್ದರೆ; ಮನುಷ್ಯಾಃ= ಮನುಷ್ಯರು; ಸರ್ವಶಃ=ಎಲ್ಲಾ ವಿಧಗಳಲ್ಲಿ; ಮಮ=ನನ್ನ; ವರ್ತ್ಮ= ಮಾರ್ಗವನ್ನೇ; ಅನುವರ್ತಂತೇ=ಅನುಸರಿಸಿ, ವರ್ತಿಸುವರು.

**ತಾ||** ಅರ್ಜುನಾ! ನಾನು ಯಾವಾಗಲೂ ಜಾಗರೂಕನಾಗಿದ್ದು ಕರ್ಮದಲ್ಲಿ ಪ್ರವರ್ತಿಸದಿದ್ದರೆ, ಮನುಷ್ಯರೂ ಸರ್ವವಿಧಗಳಲ್ಲಿ ನನ್ನ ಆ ಮಾರ್ಗವನ್ನೇ ಅನುಸರಿಸಿ ಹಿಂಬಾಲಿಸುವರು.

**ವ್ಯಾಖ್ಯೆ:** "ಅತಂದ್ರಿತಃ"- 'ತಂದ್ರಿತಾ' ಎಂದರೆ ಸೋಮಾರಿತನ, ಆಲಸ್ಯತೆ- ಸೋಮಾರಿತನವಿಲ್ಲದ ಸ್ಥಿತಿಯನ್ನು ಅತಂದ್ರಿತಃ ಎನ್ನುವರು. ಅಂದರೆ ಜಾಗರೂಕತೆ. ಶ್ರೀ ಕೃಷ್ಣಪರಮಾತ್ಮನು ತನಗೆ ಕರ್ಮ ಮಾಡುವ ಅವಶ್ಯಕತೆಯಿಲ್ಲದಿದ್ದರೂ ಮಹಾಜಾಗರೂಕನಾಗಿ ಕರ್ಮವನ್ನು ಮಾಡುತ್ತಿದ್ದೇನೆಂದು ಹೇಳಿದನು. ಏಕೆಂದರೆ ತಾನು ಕರ್ಮಗಳನ್ನು ಬಿಟ್ಟರೆ ಬೇರೆಯವರೂ ಸಹ ಬಿಟ್ಟುಬಿಟ್ಟು ಅಧಃಪತನ ಹೊಂದುವರು ಎನ್ನುವುದು ಆತನ ಅಭಿಮತ. ಈ ವಿಷಯವನ್ನೇ ಈ ಶ್ಲೋಕದಲ್ಲಿ ವ್ಯಕ್ತಮಾಡಲಾಗಿದೆ.

ಆದ್ದರಿಂದಲೇ ಮಹನೀಯರು, ಆದರ್ಶಮೂರ್ತಿಗಳು, ಮಹಾ ಪ್ರವರ್ತಕರು ತಮ್ಮ ಕರ್ಮಾಚರಣೆ ವಿಷಯದಲ್ಲಿ, ಧರ್ಮ ಪ್ರವರ್ತನೆಯ ವಿಷಯದಲ್ಲಿ ಅತ್ಯಂತ ಜಾಗರೂಕರಾಗಿ ಹಿಂದೆ ವರ್ತಿಸಿದರಷ್ಟೇ ಅಲ್ಲದೆ ಈಗಲೂ ವರ್ತಿಸುತ್ತಿದ್ದಾರೆ. ಚರಿತ್ರೆಯೇ ಇದಕ್ಕೆ ಪ್ರಬಲ ನಿದರ್ಶನ.

ಮತ್ತೆ, 'ಅತಂದ್ರಿತಃ' ಎನ್ನುವ ಪದ ಪ್ರಯೋಗದಿಂದ ಮುಮುಕ್ಷುಗಳು ತಮ್ಮ ಸಾಧನೆಗಳಲ್ಲಿ ಕಡು ಜಾಗರೂಕರಾಗಿರಬೇಕೆಂದು ಎಚ್ಚರಿಕೆ ಕೊಡಲಾಗುತ್ತಿದೆ. ಮಾಡಲೇಬೇಕೆನ್ನುವ ಕರ್ತವ್ಯಗಳು ಯಾವುವೂ ಇಲ್ಲದ ಭಗವಂತನೇ ತನ್ನ ಆಚರಣೆಯ ವಿಷಯದಲ್ಲಿ ಜಾಗರೂಕನಾಗಿರುವಾಗ, ಸಂಸಾರ ಬಂಧ ವಿಮುಕ್ತಿಗಾಗಿ ಕರ್ಮಸಾಧನೆಗಳನ್ನು ಮಾಡಬೇಕಾಗಿರುವ ಸಾಮಾನ್ಯ ಜನರು ಎಷ್ಟು ಜಾಗರೂಕತೆಯಿಂದ ಕರ್ಮವನ್ನು ಆಚರಿಸಬೇಕೆನ್ನುವುದನ್ನು ಊಹಿಸಬಹುದು. ಸಾಧನೆಯಲ್ಲಿ ಸೋಮಾರಿತನ ಕೆಲಸಕ್ಕೆ ಬಾರದು, ಏಕೆಂದರೆ, ಅಜಾಗರೂಕತೆಯಿಂದಿದ್ದರೆ ಮೇಧಾವಿಯನ್ನು ಕೂಡ ಮಾಯೆ ತನ್ನ ಬಲೆಯಲ್ಲಿ ಬೀಳಿಸುವುದು. ಇಂದ್ರಿಯಗಳು ಮಹಾ ಪ್ರಬಲವಾದುವು. ಆದ್ದರಿಂದ ಅಹರ್ನಿಶ ಅವುಗಳು ಹಾಕುವ ಹೊಂಚುಗಳ ಬಗ್ಗೆ ಮುಮುಕ್ಷುವು ನಿಗಾವಹಿಸಿರಬೇಕು. ಎಷ್ಟೋ ವಿವೇಕ, ಜಾಗರೂಕತೆ, ಭಗವತ್ಕರುಣೆ ಈ ಸಂದರ್ಭದಲ್ಲಿ ಆವಶ್ಯಕಗಳಾಗಿವೆ. ರಾತ್ರಿ ವೇಳೆಯಲ್ಲಿ ರೈಲು ನಡೆಸುವ ಡ್ರೈವರ್ ಎಷ್ಟು ಎಚ್ಚರಿಕೆಯಿಂದಿರಬೇಕಾಗುತ್ತದೆಯಲ್ಲ; ಸ್ವಲ್ಪ ಅಜಾಗರೂಕತೆ ತೋರಿಸಿದರೂ ಜನರಿಗೆ ಘೋರ ವಿಪತ್ತು ಸಂಭವಿಸಬಹುದಲ್ಲವೇ? ಹಾಗೆಯೇ ಮುಮುಕ್ಷುಗಳು ಆಧ್ಯಾತ್ಮಿಕ ಸಾಧನೆಗಳಲ್ಲಿ ಸೋಮಾರಿತನ ವಹಿಸಿದರೆ ಪತನ ಹೊಂದುವರು. 'ಜಾತು'- ಎನ್ನುವ ಪದವನ್ನು ಪ್ರಯೋಗಿಸಲ್ಪಟ್ಟಿರುವುದರಿಂದ ಭಗವಂತನು ತಾನು ಆಚರಿಸುವ ಕರ್ಮಗಳ ವಿಷಯದಲ್ಲಿ ಎಂದೆಂದೂ ಅಜಾಗರೂಕತೆ ವಹಿಸುವುದಿಲ್ಲ ಎನ್ನುವುದು ಸ್ಪಷ್ಟವಾಗುತ್ತಿದೆ. ಸಾಧಿಸಬೇಕಾದದ್ದೇನೂ ಇಲ್ಲದವರೇ ಹೀಗಿದ್ದರೆ, ಏನೂ ಸಾಧಿಸದೇ ಇರುವ ಸಾಮಾನ್ಯ ಜನರು ಹೇಗಿರಬೇಕು? ನಿರಂತರವಾಗಿ ಜಾಗರೂಕರಾಗಿರಬೇಕೆಂಬುದು ಭಾವ. ಆದ್ದರಿಂದಲೇ ಶಾಸ್ತ್ರಗಳು **"ಪ್ರಮಾದೋ ವೈ ಮೃತ್ಯುಃ"** (ಪ್ರಮತ್ತತೆ, ಅಜಾಗ್ರತೆ ಸಾವಿಗೆ ಸಮಾನ) ಎಂದು ಘೋಷಿಸುತ್ತಿವೆ. ಶ್ರೀಶಂಕರ ಭಗವತ್ಪಾದರು ಈ ವಿಷಯವಾಗಿ ಎಚ್ಚರಿಕೆ ನೀಡಿದ್ದಾರೆ* ಆದ್ದರಿಂದ ಸಾಧಕರು ಭಗವಂತನು ತಿಳಿಸಿದ ಈ 'ಅತಂದ್ರಿತಃ' ಎನ್ನುವ ಪದವನ್ನು ಮತ್ತೆ ಮತ್ತೆ ಜ್ಞಾಪಿಸಿಕೊಳ್ಳುತ್ತಾ ಸೋಮಾರಿಗಳಾಗದೆ ತಮ್ಮ ಸಾಧನೆಗಳನ್ನು ಮುಂದುವರಿಸಬೇಕು.

---

* **ಪ್ರಮಾದೋ ಬ್ರಹ್ಮನಿಷ್ಠಾಯಾಂ ನ ಕರ್ತವ್ಯಃ ಕದಾಚನ। ಪ್ರಮಾದೋ ಮೃತ್ಯುರಿತ್ಯಾಹ ಭಗವಾನ್ ಬ್ರಹ್ಮಣಸ್ಸುತಃ (ವಿವೇಕ ಚೂಡಾಮಣಿ ೩.೨೨)**
ಬ್ರಹ್ಮ ನಿಷ್ಠೆಯಲ್ಲಿ ಸೋಮಾರಿತನ, ಅಜಾಗರೂಕತೆ ಯಾವಾಗಲೂ ಕೆಲಸಕ್ಕೆ ಬರುವುದಿಲ್ಲ. ಅಂತಹ ಸೋಮಾರಿತನ ಮೃತ್ಯುವಿಗೆ ಸಮಾನವೆಂದು ಸನತ್ಕುಮಾರರು ಹೇಳಿದರು.

೨೪. ಉತ್ಸೀದೇಯುರಿಮೇ ಲೋಕಾಃ ನ ಕುರ್ಯಾಂ ಕರ್ಮ ಚೇದಹಮ್
ಸಂಕರಸ್ಯ ಚ ಕರ್ತಾ ಸ್ಯಾಮ್ ಉಪಹನ್ಯಾಮಿಮಾಃ ಪ್ರಜಾಃ

**ಅರ್ಥ:** ಅಹಂ=ನಾನು; ಕರ್ಮ=ಕರ್ಮವನ್ನು; ನಕುರ್ಯಾಂ ಚೇತ್=ಮಾಡದೆ ಇದ್ದ ಪಕ್ಷದಲ್ಲಿ; ಇಮೇ ಲೋಕಾಃ=ಈ ಪ್ರಜೆಗಳು; ಉತ್ಸೀದೇಯುಃ= ಭ್ರಷ್ಟರಾಗುವರು; ಸಂಕರಸ್ಯ ಚ=ಸಂಕರಕ್ಕೆ(ಮಿಶ್ರಣ ಜಾತಿಗೆ); ಕರ್ತಾ= ಕರ್ತನು; ಸ್ಯಾಮ್=ಆಗುತ್ತೇನೆ; ಇಮಾಃ ಪ್ರಜಾಃ=ಈ ಪ್ರಜೆಗಳನ್ನು; ಉಪಹನ್ಯಾಮ್= ಕೆಡಿಸಿದಂಥವನಾಗುತ್ತೇನೆ.

**ತಾ||** ಮತ್ತೆ, ನಾನು ಕರ್ಮವನ್ನು ಮಾಡದೆ ಇದ್ದರೆ ಈ ಪ್ರಜೆಗಳು ಕೆಟ್ಟುಹೋಗುವರು. ಜನ ಸಮುದಾಯದಲ್ಲಿ ಏರ್ಪಡುವ ಸಂಕರಕ್ಕೆ (ಜಾತಿ ಮಿಶ್ರಣಕ್ಕೆ) ನಾನೇ ಕರ್ತನಾದಂತೆ ಆಗುವುದು. ಅದರಿಂದ ಜನಗಳನ್ನು ನಾನು ಕೆಡಿಸಿದಂತಾಗುತ್ತದೆ.

**ವ್ಯಾಖ್ಯೆ:** 'ನಾನು ಕರ್ಮವನ್ನು ಮಾಡದೆ ಇದ್ದಲ್ಲಿ, ಬೇರೆಯವರೂ ಮಾಡುವುದಿಲ್ಲ. ಆಗ ಎಲ್ಲಾ ರಂಗಗಳಲ್ಲಿ ಸಂಕರವು (ಮಿಶ್ರಣ), ಅಶಾಂತಿ ಏರ್ಪಡುತ್ತದೆ. ಪ್ರಜೆಗಳು ಅನ್ಯಾಯವನ್ನು ಅಧರ್ಮವನ್ನು ಆಚರಿಸುವರು; ತತ್ಫಲಿತವಾಗಿ ಉತ್ಪಾತಗಳು, ಉಪದ್ರವಗಳು ಸಂಭವಿಸುವುವು. ಈ ವಿಧವಾಗಿ ಪ್ರಜೆಗಳ ವಿನಾಶಕ್ಕೆ ನಾನು ಕಾರಣಭೂತನಾಗುವೆ. ಅವರನ್ನು ಎಲ್ಲಾ ವಿಧಗಳಿಂದ ಕೆಡಿಸಿದಂತೆ ಆಗುತ್ತದೆ. ಆದ್ದರಿಂದ ಪ್ರಜೆಗಳ ಕ್ಷೇಮಕ್ಕಾಗಿ ನಾನು ಕರ್ಮಗಳನ್ನು ಮಾಡುತ್ತಾ ಇದ್ದೇನೆಂದು ಹೇಳಿ ಭಗವಂತನು ಕರ್ಮಯೋಗದ ಅವಶ್ಯಕತೆಯನ್ನು ನಿರೂಪಿಸುತ್ತಿದ್ದಾನೆ. ಭಗವಂತನಿಗೆ ಪ್ರಾಣಿ ಕೋಟಿಯ ಮೇಲೆ ಎಷ್ಟು ಕರುಣೆಯಿದೆಯೋ, ಅವರ ಶ್ರೇಯವನ್ನು ಆತನು ಎಷ್ಟು ಗಾಢವಾಗಿ ಇಚ್ಛಿಸುತ್ತಿದ್ದಾನೋ ಈ ಶ್ಲೋಕದಿಂದ ವ್ಯಕ್ತವಾಗುತ್ತದೆ. ಈ ವಿಧವಾಗಿ ಇತರರು ಸಹ ಭಗವಂತನ ಜಾಡಿನಲ್ಲಿ ನಡೆಯುತ್ತಾ, ಕರ್ಮಗಳನ್ನು ಬಿಡದೆ ಅನುಸರಿಸುತ್ತ ಲೋಕಕ್ಷೇಮಕ್ಕೆ ಕಾರಣಕರ್ತರಾಗಬೇಕು.

**ಅ||** ಲೋಕಹಿತಕ್ಕಾಗಿ ಜ್ಞಾನಿಗಳಾದವರು ಅಸಕ್ತತೆಯಿಂದ ಕರ್ಮಗಳನ್ನು ಆಚರಿಸಬೇಕೆಂದು ಬೋಧಿಸಲಾಗುತ್ತಿದೆ-

೨೫. ಸಕ್ತಾಃ ಕರ್ಮಣ್ಯವಿದ್ವಾಂಸೋ ಯಥಾ ಕುರ್ವಂತಿ ಭಾರತ
ಕುರ್ಯಾದ್ವಿದ್ವಾಂಸ್ತಥಾಸಕ್ತಃ ಚಿಕೀರ್ಷುರ್ಲೋಕಸಂಗ್ರಹಮ್

**ಅರ್ಥ:** ಭಾರತ=ಓ ಅರ್ಜುನಾ! ಅವಿದ್ವಾಂಸಃ=ಅಜ್ಞಾನಿಗಳು; ಕರ್ಮಣಿ= ಕರ್ಮದಲ್ಲಿ; ಸಕ್ತಾಃ=ಸಕ್ತರಾಗಿ(ಫಲಾಪೇಕ್ಷೆಯುಳ್ಳವರಾಗಿ); ಯಥಾ= ಯಾವ ಪ್ರಕಾರವಾಗಿ; ಕುರ್ವಂತಿ=ಮಾಡುತ್ತಿದ್ದಾರೋ; ತಥಾ=ಆ ಪ್ರಕಾರವಾಗಿ; ವಿದ್ವಾನ್=ಜ್ಞಾನಿ; ಅಸಕ್ತಃ=ಅಸಕ್ತರಾಗಿ(ಫಲಾಸಕ್ತಿಯಿಲ್ಲದೆ); ಲೋಕ ಸಂಗ್ರಹಮ್=ಲೋಕಕಲ್ಯಾಣವನ್ನು; ಚಿಕೀರ್ಷುಃ=ನೆರವೇರಿಸಿದಂತವರಾಗಿ; (ಕರ್ಮಾಣಿ=ಕರ್ಮಗಳನ್ನು) ಕುರ್ಯಾತ್=ಮಾಡಬೇಕು.

**ತಾ||** ಓ ಅರ್ಜುನಾ! ಅಜ್ಞಾನಿಗಳು ಕರ್ಮಗಳಿಗೆ ಅಂಟಿಕೊಂಡು ಫಲಾಪೇಕ್ಷೆಯಿಂದ ಯಾವ ಪ್ರಕಾರವಾಗಿ ಅವುಗಳನ್ನು ಮಾಡುತ್ತಿದ್ದಾರೋ, ಆ ಪ್ರಕಾರವೇ ಜ್ಞಾನಿಗಳು ಫಲಾಸಕ್ತರಹಿತರಾಗಿ ಲೋಕಕಲ್ಯಾಣ ನಿಮಿತ್ತವಾಗಿ ಕಾರ್ಯಗಳನ್ನು ಆಚರಿಸಬೇಕು.

**ವ್ಯಾಖ್ಯೆ:** ಅಜ್ಞಾನಿಗಳು ಹಾಗು ಜ್ಞಾನಿಗಳಿಬ್ಬರೂ ಕರ್ಮ ಮಾಡುವರು. ಆದರೆ ಅಜ್ಞಾನಿಗಳು ಫಲಾಸಕ್ತಿಯಿಂದ ಮಾಡುವರು. ಜ್ಞಾನಿಗಳು ಫಲಾಸಕ್ತರಹಿತರಾಗಿ ಮಾಡುವರು. ಒಬ್ಬರು ಕರ್ಮಕ್ಕೆ ಅಂಟಿಕೊಂಡು ಕರ್ತೃತ್ವ ಬುದ್ಧಿಯಿಂದ ಆಚರಿಸುವರು. ಮತ್ತೊಬ್ಬರು ಅಂಟಿಕೊಳ್ಳದೆ ಕರ್ತೃತ್ವರಹಿತರಾಗಿ ಆಚರಿಸುವರು. ಅಜ್ಞಾನಿಗಳು ಸ್ವಾರ್ಥಕ್ಕೋಸ್ಕರ ಕರ್ಮಮಾಡುವರು. ಜ್ಞಾನಿಗಳು ಲೋಕಕಲ್ಯಾಣ ನಿಮಿತ್ತ ಕರ್ಮ ಮಾಡುವರು. ಕರ್ಮಗಳನ್ನು ಇಬ್ಬರೂ ಮಾಡುವರು. ಆದರೆ ಪದ್ಧತಿಯಲ್ಲಿ ಮಾತ್ರ ಭೇದವಿದೆ. ಒಬ್ಬರು ಕರ್ಮಕ್ಕೆ ಅಂಟಿಕೊಂಡು ಹೋಗುವರು (ಸಕ್ತರು), ಮತ್ತೆ ಇನ್ನೊಬ್ಬರು ಅಂಟದೆ ಇರುವರು (ಅಸಕ್ತರು). ಮೊದಲಿನವರಿಗೆ ಕರ್ಮಬಂಧವುಂಟಾಗುವುದು. ಎರಡನೆಯವರಿಗೆ ಅದೇ ಕರ್ಮ ಮುಕ್ತಿಯನ್ನು ಪ್ರಸಾದಿಸುವುದು. ಕತ್ತಿಯನ್ನು ತಿಳಿಯದೆ ಉಪಯೋಗಿಸಿದರೆ ಹಾನಿ ಮಾಡುವುದು, ತಿಳಿದು ಉಪಯೋಗಿಸಿದರೆ ಲಾಭವನ್ನು ಮಾಡುವುದು. ಅಗ್ನಿಯು ಒಂದೇ ಆದರೆ ತಿಳಿಯದೆ ಉಪಯೋಗಿಸಿದರೆ ದೇಹವನ್ನು ಸುಡುವುದು, ತಿಳಿದು ಉಪಯೋಗಿಸಿದರೆ ಅಡಿಗೆ ತಯಾರಾಗುವುದು. ಹಾಗೆಯೇ ಕರ್ಮ ಒಂದು ಆಯುಧವಿದ್ದ ಹಾಗೆ, ಅದನ್ನು ಹಿಡಿಯುವ ಉಪಯೋಗಿಸುವ ವಿಧಾನಗಳನ್ನು ಹಿರಿಯರಿಂದ ಕಲಿಯಬೇಕು. ಆಗ ಮಾತ್ರ ಅದು ಸಂಸಾರ ಬಂಧ ವಿಮುಕ್ತಿಯೆನ್ನುವ ಲಕ್ಷ್ಯವನ್ನು ಸಾಧಿಸಬಲ್ಲದು. ಕರ್ಮವೆನ್ನುವ ಆಯುಧವನ್ನು ಹೇಗೆ ಉಪಯೋಗಿಸ ಬೇಕೆಂದು, ಗೀತೆಯಲ್ಲಿ ಅಲ್ಲಲ್ಲಿ ಭಗವಂತನು ಎಲ್ಲರಿಗೂ ಚೆನ್ನಾಗಿ ಅರ್ಥವಾಗುವಂತೆ ಹೇಳಿರುತ್ತಾನೆ.

'ಕರ್ಮ ಎನ್ನುವ ಆಯುಧವನ್ನು ಮೂಲೆಗಿಡಬಾರದು (ಮಾತೇ ಸಂಗೋಽಸ್ತ್ವ ಕರ್ಮಣಿ); ಉಪಯೋಗಿಸಬೇಕು; ಆದರೆ ಅದನ್ನು ತಿಳಿದು ಉಪಯೋಗಿಸಬೇಕು! ಪ್ರಯೋಗವನ್ನು ಕಲಿತು ಉಪಯೋಗಿಸಬೇಕು!' ಎಂದು ಎಚ್ಚರಿಸಲಾಗಿದೆ. ಈ ಶ್ಲೋಕದಲ್ಲಿ ಆ ಪ್ರಯೋಗ ಚೆನ್ನಾಗಿ ವಿವರಿಸಲ್ಪಟ್ಟಿದೆ. ಅನಾಸಕ್ತದಿಂದ ಕರ್ಮಗಳನ್ನು ಮಾಡುವುದೇ ಆ ಪ್ರಯೋಗ ಪದ್ಧತಿ.

*"ಚಿಕೀರ್ಷುರ್ಲೋಕಸಂಗ್ರಹಮ್"*- ಎನ್ನುವ ಪದದಿಂದ ಲೋಕ ಹಿತದಲ್ಲಿ ಭಗವಂತನಿಗೆ ಅದೆಷ್ಟು ಪ್ರೀತಿಯಿದೆ ಎನ್ನುವುದು ವಿದಿತವಾಗುತ್ತದೆ. ಭಗವತ್ಪ್ರೀತಿಕರವಾದ ಲೋಕಕಲ್ಯಾಣವನ್ನು ಸಾಧಿಸುವುದು ವಿವೇಕವಂತನ ವಿಧ್ಯುಕ್ತ ಧರ್ಮ. ತಾಪತ್ರಯಾಗ್ನಿಯಿಂದ ಸಂತಪ್ತವಾದ ಪ್ರಾಣಿ ಕೋಟಿಯನ್ನು ಉದ್ಧಾರಮಾಡಲು ಯಾವ ಸ್ವಲ್ಪ ಸಹಾಯ ಮಾಡಿದರೂ ಸಹ ಅದು ಬಹಳ ದೊಡ್ಡದು ಎಂದೆನಿಸಿಕೊಳ್ಳುತ್ತದೆ. ಆದ್ದರಿಂದ ವಿದ್ವಾಂಸರಾದವರು (ಜ್ಞಾನಿಗಳು) ಅನಾಸಕ್ತ ಕರ್ಮಾಚರಣೆಯ ಮೂಲಕ ಲೋಕ ಹಿತವನ್ನು ಸಾಧಿಸಬೇಕೆಂದು ಭಗವಂತನು ಈ ಶ್ಲೋಕದಲ್ಲಿ ಆದೇಶಿಸುತ್ತಿದ್ದಾನೆ. ಅವರನ್ನು ನೋಡಿ ಬೇರೆಯವರು ನಿಷ್ಕಾಮ ಮಾರ್ಗವನ್ನವಲಂಬಿಸಿ ಉದ್ಧಾರವಾಗುವ ಅವಕಾಶವಿದೆ.

*"ಭಾರತ"*- ಎನ್ನುವ ಶಬ್ದದಿಂದ ಅರ್ಜುನನನ್ನು ಆಗಾಗ ಸಂಬೋಧಿಸುತ್ತಾ ಭಗವಂತನು ಆತನ ಉತ್ಸಾಹವನ್ನು ಕೆರಳಿಸುತ್ತಿದ್ದಾನೆ. ಆ ಪದಕ್ಕೆ 'ಭರತವಂಶದಲ್ಲಿ ಜನ್ಮಿಸಿದಂತಹ' ಎನ್ನುವ ಅರ್ಥವಲ್ಲದೆ, ಇನ್ನೊಂದು ಅರ್ಥವೂ ಇದೆ. (ಭಾ=ಪ್ರಕಾಶ, ರತಃ=ರಮಿಸುವವನು) ಪ್ರಕಾಶದಲ್ಲಿ ಆಸಕ್ತಿಯಿರುವವನು ಭಾರತ. 'ಓ ಅರ್ಜುನಾ! ಏಳು! ಅಜ್ಞಾನಾಂಧಕಾರವನ್ನು ಹೊರದೋಡಿಸಿ ಜ್ಞಾನದೀಪ್ತಿಯಲ್ಲಿ ಬೆಳಗು! ಎಂದು ಬೋಧಿಸಿದಂತಾಗಿದೆ.

ಪ್ರ : ವಿವೇಕವಂತನು ಕರ್ಮಗಳನ್ನು ಯಾವ ಪ್ರಕಾರವಾಗಿ ಮಾಡಬೇಕು?

ಉ : ಅಸಕ್ತನಾಗಿ (ಫಲಾಸಕ್ತಿರಹಿತನಾಗಿ) ಮಾಡಬೇಕು.

ಪ್ರ : ಏತಕ್ಕೆ?

ಉ : ಲೋಕಕ್ಷೇಮಕ್ಕೆ

**೨೬. ನ ಬುದ್ಧಿಭೇದಂ ಜನಯೇತ್ ಅಜ್ಞಾನಾಂ ಕರ್ಮಸಂಗಿನಾಮ್**
**ಜೋಷಯೇತ್ ಸರ್ವಕರ್ಮಾಣಿ ವಿದ್ವಾನ್ ಯುಕ್ತಃ ಸಮಾಚರನ್**

**ಅರ್ಥ:** ವಿದ್ವಾನ್=ಜ್ಞಾನಿ; ಕರ್ಮಸಂಗಿನಾಂ=ಕರ್ಮದಲ್ಲಿ ಆಸಕ್ತಿಯುಳ್ಳವನು, ಅಜ್ಞಾನಾಂ=ಅಜ್ಞಾನಿಗಳಿಗೆ; ಬುದ್ಧಿ ಭೇದಂ=(ಫಲಾಸಕ್ತಿಯಿಂದ ಕರ್ಮ ವನ್ನು ಆಚರಿಸುವ) ಬುದ್ಧಿಯಲ್ಲಿ ಭ್ರಮೆ; ನ ಜನಯೇತ್= ಹುಟ್ಟಿಸಬಾರದು; ಸರ್ವಕರ್ಮಾಣಿ=ಸಮಸ್ತ ಕರ್ಮಗಳನ್ನು; (ಸ್ವಯಂ) ಯುಕ್ತ ಸಮಾಚರನ್=(ತಾನು) ಯೋಗ ಯುಕ್ತನಾಗಿ (ಆತ್ಮದಲ್ಲಿ ಸ್ಥಿತನಾಗಿ) ಚಾಕಚಕ್ಯತೆಯಿಂದ ಆಚರಿಸುತ್ತ; ಜೋಷಯೇತ್=(ಅವರಿಂದ) ಮಾಡಿಸಬೇಕು.

**ತಾ||** ಜ್ಞಾನಿಯಾದವನು ಕರ್ಮಫಲಾಸಕ್ತರಾದ ಅಜ್ಞಾನಿಗಳ ಬುದ್ಧಿಯನ್ನು ಕದಲಿಸಬಾರದು (ಭ್ರಮೆಗೊಳ್ಳುವಂತೆ ಮಾಡಬಾರದು). ತಾನು ಯೋಗಯುಕ್ತನಾಗಿ ಚಾಕಚಕ್ಯತೆಯಿಂದ ಸಮಸ್ತ ಶಾಸ್ತ್ರವಿಹಿತ ಕರ್ಮಗಳನ್ನು ಆಚರಿಸುತ್ತಾ, ಆ ಆಚರಣೆಗಳನ್ನು ಅವರೂ (ಅಜ್ಞಾನಿಗಳೂ) ಸಹ ಅನುಸರಿಸುವಂತೆ ಮಾಡಬೇಕು.

**ವ್ಯಾಖ್ಯೆ:** ಕರ್ಮಕ್ಕೆ ಅಂಟಿಕೊಂಡು ಫಲಾಪೇಕ್ಷೆಯಿಂದ ಕರ್ಮಗಳನ್ನಾಚರಿಸುವವರ ಬುದ್ಧಿಯನ್ನು ಜ್ಞಾನಿ ತನ್ನ ಮೌಖಿಕ ಬೋಧೆಗಳಿಂದ ಚಪಲಗೊಳ್ಳುವಂತೆ ಮಾಡಬಾರದು. ತನ್ನ ನಿರ್ಮಲಾಚರಣೆಯಿಂದ ಅವರನ್ನು ತನ್ನ ಮಾರ್ಗ ಅನುಸರಿಸುವಂತೆ ಮಾಡಬೇಕೆಂದು ಹೇಳಲಾಗಿದೆ. ಲೋಕದಲ್ಲಿ ಕೆಲವರು ನಿಷ್ಕಾಮ ಕರ್ಮತತ್ವ ತಿಳಿಯದೆ ಯಾವುದೋ ಒಂದು ವಿಶ್ವಾಸದಿಂದ, ಶ್ರದ್ಧೆಯಿಂದ ಫಲಾಸಕ್ತಿಯುತವಾಗಿ ಕರ್ಮಗಳನ್ನು ಮಾಡುತ್ತಿರುತ್ತಾರೆ. ಅಂತಹವರಿಗೆ 'ನೀವು ಮಾಡುತ್ತಿರುವುದು ತಪ್ಪು, ಈ ಪ್ರಕಾರವಾಗಿ ಮಾಡಬೇಡಿ, ಬೇರೆ ದಾರಿಯಿದೆ' ಎಂದು ಬೋಧಿಸುವುದರಿಂದ ಯಥಾರ್ಥವನ್ನು ಗ್ರಹಿಸುವವರು ಬಹಳ ವಿರಳ. ಆದ್ದರಿಂದ ಅಂತಹ ಬೋಧೆಗಳಿಂದ ಅವರಲ್ಲಿ ಕೆಲವರು ಕರ್ಮಗಳನ್ನು ಪೂರ್ತಿಯಾಗಿ ಬಿಟ್ಟುಬಿಡುವ ಪ್ರಮಾದವಿದೆ. ಅದರಿಂದ ಅವರು ಉಭಯಭ್ರಷ್ಟರಾಗಿ ಘೋರ ತಮಸ್ಸಿನಲ್ಲಿ ಬೀಳುವರು. ಆ ಗುಂಪಿಗೆ ಸೇರಿದವರನ್ನು ಭ್ರಮೆಗೊಳಿಸಬಾರದು. ತಾನು ಮಾತ್ರ ಆತ್ಮಸ್ಥಿತನಾಗಿ, ಇಂದ್ರಿಯ ನಿಗ್ರಹಪರನಾಗಿ, ಅನಾಸಕ್ತನಾಗಿ ಕರ್ಮಗಳನ್ನು ಆಚರಿಸುತ್ತಿರಬೇಕು. ಆ ನಿರ್ಮಲ ಅನುಷ್ಠಾನವನ್ನು ಆತ್ಮ ಶಾಂತಿ ರೂಪವನ್ನು ಅದರ ಪ್ರತ್ಯಕ್ಷ ಫಲಿತವನ್ನು ಅವರು ನೋಡಿ ಕ್ರಮೇಣ ಅರ್ಥಮಾಡಿಕೊಳ್ಳುವರು. ನಂತರ ತಮ್ಮ ಚಿತ್ತವನ್ನು ಕೂಡ ಬದಲಾಯಿಸಿಕೊಂಡು ಕಾಲಕ್ರಮೇಣವಾಗಿ ನಿಷ್ಕಾಮ ಕರ್ಮಾಚರಣೆಗಳಾಗಿ ಬದಲಾಗುವರು. ಇದು ಈ ಶ್ಲೋಕದ ಭಾವ.

ಮೌಖಿಕ (ವಾಚಾ) ಬೋಧೆಗಳಿಗಿಂತ ಅನುಷ್ಠಾನದ ದ್ವಾರ ಮಾಡುವ ಬೋಧೆಗೆ ಬಹಳ ಪಟುತ್ವವಿದೆಯೆಂದು ಈ ಶ್ಲೋಕದಿಂದ ತಿಳಿಯುತ್ತದೆ. ಸಭಾವೇದಿಕೆಗಳ ಮೇಲೆ ಮಾಡುವ ಉಪನ್ಯಾಸಗಳಿ (Platform speeches)ಗಿಂತ ನಿರಾಡಂಬರವಾಗಿ ಏಕಾಂತವಾಗಿ ಮಾಡುವ ನಿಷ್ಕಾಮ ಪವಿತ್ರಾನುಷ್ಠಾನವೇ (Silent unselfish work) ಪಟುತ್ವವಾದದ್ದೆಂದು ಇದರಿಂದ ಸ್ಪಷ್ಟವಾಗುತ್ತಿದೆ. ಮತ್ತೆ ಹೇತುವಾದವನ್ನು ಅವಲಂಬಿಸಿರುವ ಈ ವಿಜ್ಞಾನ ಯುಗದಲ್ಲಿ 'ಬಾಯಿ' ಬೋಧೆಗಳಿಂದ ಒಬ್ಬರನ್ನು ಒಪ್ಪಿಸುವುದಾಗಲಿ, ಬದಲು ಮಾಡುವುದಾಗಲಿ ಬಹಳ ಕಷ್ಟ. ತನ್ನ ಶುದ್ಧವಾದ ಅನುಷ್ಠಾನದಿಂದ ಮಾತ್ರ ಜನರ ಹೃದಯಗಳನ್ನು ಸೂರೆಗೊಳ್ಳಬಹುದು. ನಂತರವೇ ಜನರಿಗೆ ಅವರ ಬೋಧೆಗಳ ಮೇಲೆ ನಂಬಿಕೆಯುಂಟಾಗಬಲ್ಲದು.

"*ಯುಕ್ತಃ ಸಮಾಚರನ್*"- ಎಂದು ಹೇಳಿರುವುದನ್ನು ತಾನು ಯೋಗ ಯುಕ್ತನಾಗಿ, ಆತ್ಮದಲ್ಲಿ ಸ್ಥಿರತೆ ಹೊಂದಿ, ನಿಷ್ಕಾಮಬುದ್ಧಿಯಿಂದ ಕರ್ಮಗಳನ್ನು ಆಚರಿಸುತ್ತಿರಬೇಕೆಂದು ಅರ್ಥಮಾಡಿಕೊಳ್ಳಬೇಕು. 'ಆಚರನ್' ಎಂದು ಹೇಳದೆ 'ಸಮಾಚರನ್' ಎಂದು ಹೇಳಲ್ಪಟ್ಟಿರುವುದರಿಂದ ಪವಿತ್ರವಾದ ಅನುಷ್ಠಾನವನ್ನು ಹೊಂದಿರಬೇಕೆಂದು ಬೋಧಿಸಲ್ಪಟ್ಟಂತಾಗಿದೆ.

ಪ್ರ : ಅಜ್ಞಾನಿಗಳಿಗೆ ಯಾವ ಪ್ರಕಾರವಾಗಿ ಬೋಧಿಸಬೇಕು?

ಉ : ತಾನು ನಿರ್ಮಲವಾದ ಆಚರಣೆಯನ್ನು ಹೊಂದಿ, ಅನಾಸಕ್ತನಾಗಿ ಕರ್ಮಗಳನ್ನಾಚರಿಸುತ್ತಿದ್ದು, ಅದನ್ನು ನೋಡಿ ಅವರು ಕಲಿತುಕೊಳ್ಳುವಂತೆ ಮಾಡುವುದೇ ಉತ್ತಮ ಬೋಧೆ.

**ಅ||** ಜ್ಞಾನಿಗೆ, ಕರ್ಮಫಲಾಸಕ್ತನಾದ ಅಜ್ಞಾನಿಗೆ ಇರುವ ಭೇದವನ್ನು ಎರಡು ಶ್ಲೋಕಗಳ ದ್ವಾರ ತಿಳಿಯಪಡಿಸಲಾಗಿದೆ-

**೨೭. ಪ್ರಕೃತೇಃ ಕ್ರಿಯಮಾಣಾನಿ ಗುಣೈಃ ಕರ್ಮಾಣಿ ಸರ್ವಶಃ**
**ಅಹಂಕಾರ ವಿಮೂಢಾತ್ಮಾ ಕರ್ತಾಹಮಿತಿ ಮನ್ಯತೇ**

**ಅರ್ಥ:** ಪ್ರಕೃತೇಃ=ಪ್ರಕೃತಿಯ, ಗುಣೈಃ=ಗುಣಗಳಿಂದ; ಸರ್ವಶಃ=ನಾನಾ ವಿಧಗಳಿಂದ; ಕ್ರಿಯಮಾಣಾನಿ=ಮಾಡಲ್ಪಡುತ್ತಿರುವ; ಕರ್ಮಾಣಿ=ಕರ್ಮಗಳನ್ನು; ಅಹಂಕಾರ ವಿಮೂಢಾತ್ಮಾ=ಅಹಂಕಾರದಿಂದ ವಿವೇಕಶೂನ್ಯವಾದ ಮನಸ್ಸುಳ್ಳವನು; ಅಹಂ=ನಾನು; ಕರ್ತಾ=ಮಾಡುವವನು; ಇತಿ=ಎಂದು; ಮನ್ಯತೇ=ಭಾವಿಸುತ್ತಿದ್ದಾನೆ.

**ತಾ||** ಪ್ರಕೃತಿಯಿಂದ ಹುಟ್ಟಿದ ಸತ್ವರಜೋಸ್ತಮಗುಣಗಳಿಂದ ಸಮಸ್ತ ಕಾರ್ಯಗಳು ನಡೆಯುತ್ತಿರಲು, ಅಹಂಕಾರದಿಂದ ವಿವೇಕ ಶೂನ್ಯವಾದ ಮನಸ್ಸುಳ್ಳವನು ತಾನೇ ಮಾಡುತ್ತಿರುವೆನೆಂದು ಭಾವಿಸುತ್ತಿದ್ದಾನೆ.

**ವ್ಯಾಖ್ಯೆ:** ಪ್ರಕೃತಿಯಿಂದ ಹುಟ್ಟಿದ ಸತ್ವರಜೋಸ್ತಮ ಗುಣಗಳೇ 'ಮನಸ್ಸು ಬುದ್ಧಿ ಚಿತ್ತ ಅಹಂಕಾರಗಳು; ಸೂಕ್ಷ್ಮ ಪಂಚಭೂತಗಳು; ಕರ್ಮೇಂದ್ರಿಯಗಳು; ಜ್ಞಾನೇಂದ್ರಿಯಗಳು; ಶಬ್ದಾದಿ ವಿಷಯಗಳು'- ಎನ್ನುವ ಇಪ್ಪತ್ನಾಲ್ಕು ತತ್ವಗಳಾಗಿ ರೂಪುಗೊಂಡಿವೆ. ಆದ್ದರಿಂದ ಈ ದೃಶ್ಯ ಪ್ರಪಂಚವೆಲ್ಲವೂ, ದೇಹ, ಮನೋಬುದ್ಧಿ ಮುಂತಾದುವುಗಳೆಲ್ಲವೂ ಪ್ರಕೃತಿ ಜನ್ಯಗಳೇ ಆಗಿವೆ. ಪ್ರಕೃತಿಯಿಂದ ಉಂಟಾದ ಈ ದೇಹೇಂದ್ರಿಯಾದಿ ಉಪಾಧಿಗಳಿಂದಲೇ ಸಮಸ್ತ ಕರ್ಮಗಳು ಮಾಡಲ್ಪಡುತ್ತಿವೆ. ಆದರೆ ಅವುಗಳಿಗೆ ಸಾಕ್ಷಿಯಾದ ಆತ್ಮದಿಂದಲ್ಲ. ತಾನು ವಾಸ್ತವವಾಗಿ ಆತ್ಮ ಸ್ವರೂಪನು, ಆ ಉಪಾಧಿಗೆ, ದೇಹೇಂದ್ರಿಯ ಮನೋಬುದ್ಧಿಗಳಿಗೆ ಸಾಕ್ಷಿ. ಆದ್ದರಿಂದ ಯಥಾರ್ಥವಾಗಿ ತಾನು ಯಾವ ಕರ್ಮವನ್ನು ಮಾಡುತ್ತಿಲ್ಲ, ಪ್ರಕೃತಿಯೇ ಎಲ್ಲವನ್ನೂ ನಡೆಸುತ್ತಿದೆ. ದೇಹೇಂದ್ರಿಯ ಮನಸ್ಸಾದಿಗಳಿಂದ ಸಂಯೋಗವಾದ ಉಪಾಧಿಯೇ ಆಯಾ ಕಾರ್ಯಗಳೆಲ್ಲವನ್ನೂ ಮಾಡುತ್ತದೆ. ಆದರೆ ದೇಹಾದಿಗಳ ಅಭಿಮಾನವುಳ್ಳ ಅವಿವೇಕಿ 'ನಾನು ಮಾಡುತ್ತಿದ್ದೇನೆ, ನಾನೇ ಕರ್ತನು' ಎಂದು ಭಾವಿಸುತ್ತಾನೆ. ದೇಹಾಹಂಭಾವದಿಂದ ಆತನ ಮನಸ್ಸು ವಿವೇಕವನ್ನು ಕಳೆದುಕೊಂಡು ಆತ್ಮಾನಾತ್ಮ ತತ್ವ ಶೂನ್ಯವಾಗಿರುವುದರಿಂದ ಕರ್ತೃತ್ವವನ್ನು ತನ್ನ ಮೇಲೆ ಸುಮ್ಮ ಸುಮ್ಮನೆ ಹಾಕಿಕೊಳ್ಳುತ್ತಿದ್ದಾನೆ. ತತ್ಫಲಿತವಾಗಿ ಅನೇಕ ಜನ್ಮಗಳನ್ನು, ದುಃಖಗಳನ್ನು ಅನುಭವಿಸುತ್ತಿದ್ದಾನೆ.

ಜ್ಞಾನಿಗೆ, ಅಜ್ಞಾನಿಗೆ ಭೇದ ಇಲ್ಲಿಯೇ ಇದೆ. ಅಜ್ಞಾನಿ ಉಪಾಧಿಯಲ್ಲಿ ತಾದಾತ್ಮ್ಯ ಭಾವ ಹೊಂದಿ ಕರ್ತೃತ್ವ, ಭೋಕ್ತೃತ್ವಗಳನ್ನು ತನ್ನ ಮೇಲೆ ಆರೋಪಿಸಿಕೊಂಡು ಬಾಧೆ ಬೀಳುತ್ತಿದ್ದಾನೆ. ಜ್ಞಾನಿ ಉಪಾಧಿಯನ್ನು ತನ್ನಿಂದ ಬೇರೆ ಮಾಡಿಕೊಂಡು, ತಾನು ಆತ್ಮನೇ ಹೊರತು ಉಪಾಧಿಯಲ್ಲವೆಂದು ತಿಳಿದು, ಅದನ್ನು ಸಾಕ್ಷಿಭೂತವಾಗಿ ವೀಕ್ಷಿಸುತ್ತಾ ಕರ್ತೃತ್ವಾದಿಗಳು ಇಲ್ಲದವನಾಗಿ ಪರಮಾನಂದವನ್ನು ಅನುಭವಿಸುತ್ತಿದ್ದಾನೆ. ಅಜ್ಞಾನಿಗೆ ಅನಂತ ದುಃಖವು, ಜ್ಞಾನಿಗೆ ಅನಂತಾನಂದವು ಒದಗುವುದಕ್ಕೆ ಇದೇ ಕಾರಣ. ಆದ್ದರಿಂದ ಮುಮುಕ್ಷುವು ಪ್ರಕೃತಿ ಮಾಡುವುದನ್ನು ತನ್ನ ಮೇಲೆ ಆರೋಪಿಸಿಕೊಳ್ಳದೆ, ಕರ್ತೃತ್ವ ರಹಿತನಾಗಿ ತನ್ನ ಸತ್ಯಸ್ವರೂಪವಾದ ಆತ್ಮದಲ್ಲಿಯೇ ಸ್ಥಿತನಾಗಿರಬೇಕು.

*"ಅಹಂಕಾರ ವಿಮೂಢಾತ್ಮಾ"*- ಎನ್ನುವ ಪದದಿಂದ ಅಹಂಕಾರವು ಜೀವಿಗೆ ಎಂತಹ ಘೋರವಾದ ವಿಪತ್ತನ್ನು ತರುವುದೋ ತಿಳಿಯುತ್ತದೆ. ಅಹಂಕಾರವು ವಿವೇಕವನ್ನು ಬದಿಗೆ ಸರಿಸಿ ವಿಮೂಢತ್ವದ ಕಡೆಗೆ ಒಯ್ಯುವುದು. ಆದ್ದರಿಂದ ದೇಹಾದಿಗಳಲ್ಲಿ ಅಹಂಭಾವವು ಯಾವಾಗಲೂ ಇರಬಾರದು. ಆತ್ಮವೇ 'ನಾನು' ಎನ್ನುವ ಭಾವ ಉಂಟಾಗಿರಬೇಕು (ಅಹಂಬ್ರಹ್ಮಾಸ್ಮಿ)

ಪ್ರ : ಪ್ರಪಂಚದಲ್ಲಿ ಸಮಸ್ತ ಕರ್ಮಗಳು ಯಾವುದರಿಂದ ನಡೆಸಲ್ಪಡುತ್ತಿವೆ?

ಉ : ಪ್ರಕೃತಿಯಿಂದ (ಪ್ರಕೃತಿ ಜನ್ಯಗಳಾದ ಗುಣಗಳಿಂದ)

ಪ್ರ : ಆದರೆ ಅಹಂಕಾರವುಳ್ಳ ಮನುಷ್ಯನು ಏನೆಂದುಕೊಳ್ಳುತ್ತಾನೆ?

ಉ : ತಾನೇ ಕರ್ತನೆಂದು ತಿಳಿಯುತ್ತಾನೆ.

ಪ್ರ : ಅದರ ಫಲವೇನು?

ಉ : ತತ್ಫಲಿತವಾಗಿ ಜನ್ಮ ಪರಂಪರೆಗಳನ್ನು, ದುಃಖವನ್ನು ಅನುಭವಿಸುತ್ತಿದ್ದಾನೆ. ಆದ್ದರಿಂದ ತಾನು ಆತ್ಮಸ್ವರೂಪನೆಂದು, ಕರ್ತನಲ್ಲವೆಂದು ತಿಳಿದು ದುಃಖರಹಿತನಾಗಿ ಬ್ರಹ್ಮಾನಂದವನ್ನು ಪಡೆಯಬೇಕು.

**೨೮. ತತ್ತ್ವವಿತ್ತು ಮಹಾಬಾಹೋ! ಗುಣಕರ್ಮವಿಭಾಗಯೋಃ**
**ಗುಣಾ ಗುಣೇಷು ವರ್ತಂತ ಇತಿ ಮತ್ವಾ ನ ಸಜ್ಜತೇ**

**ಅರ್ಥ:** ಮಹಾಬಾಹೋ=ಉದ್ದವಾದ ಬಾಹುಗಳುಳ್ಳ ಓ ಅರ್ಜುನಾ!, ಗುಣಕರ್ಮವಿಭಾಗಯೋಃ=ಗುಣಗಳ, ಕರ್ಮಗಳ ವಿಭಾಗಗಳನ್ನು ಕುರಿತು; ತತ್ವವಿತ್ತು=ಯಥಾರ್ಥವನ್ನು ತಿಳಿದವನು; ಗುಣಾಃ=(ಇಂದ್ರಿಯಾದಿಗಳು) ಗುಣಗಳು; ಗುಣೇಷು=(ಶಬ್ದಾದಿ ವಿಷಯಗಳೆನ್ನುವ) ಗುಣಗಳಲ್ಲಿ; ವರ್ತಂತೇ= ಪ್ರವರ್ತಿಸುತ್ತಿವೆ; ಇತಿ=ಎಂದು; ಮತ್ವಾ=ತಿಳಿದು; ನ ಸಜ್ಜತೇ=ಸಂಗವನ್ನು (ಅಭಿಮಾನವನ್ನು) ಹೊಂದಿರುವುದಿಲ್ಲ.

**ತಾ||** ಉದ್ದವಾದ ಬಾಹುಗಳುಳ್ಳ ಓ ಅರ್ಜುನಾ! ಗುಣಗಳ, ಕರ್ಮಗಳ ವಿಭಜನೆಯನ್ನು ಕುರಿತ ಯಥಾರ್ಥವನ್ನು ತಿಳಿದ ಜ್ಞಾನಿ, ಗುಣಗಳು (ಇಂದ್ರಿಯಾದಿಗಳು) ಗುಣಗಳಲ್ಲಿ (ಶಬ್ದಾದಿ ವಿಷಯಗಳಲ್ಲಿ) ಪ್ರವರ್ತಿಸುತ್ತಿವೆ ಎಂದು (ಆತ್ಮಸ್ವರೂಪನಾದ ತನಗೆ ವಾಸ್ತವವಾಗಿ ಅವುಗಳ ಮೇಲೆ ಯಾವ ಸಂಬಂಧವೂ ಇಲ್ಲವೆಂದು) ತಿಳಿದು ಕರ್ಮಗಳಲ್ಲಿ ಸಂಗವನ್ನು (ಅಭಿಮಾನವನ್ನು) ಹೊಂದಿರುವುದಿಲ್ಲ.

**ವ್ಯಾಖ್ಯೆ:** ಪ್ರಪಂಚದಲ್ಲಿಯೇ ಅಲ್ಲದೆ, ದೇಹದಲ್ಲಿಯೂ ಕೂಡ ಆತ್ಮ ಅನಾತ್ಮ ದೃಕ್ಕು, ದೃಶ್ಯಗಳು ಕಲೆತಿವೆ. ಆ ಎರಡನ್ನೂ ವಿಭಜಿಸಬೇಕು. ತತ್ತ್ವವೇತ್ತನು ಅವುಗಳನ್ನು ವಿಭಜಿಸಬಲ್ಲನು. ಆ ರೀತಿ ವಿಭಜಿಸುವ ಶಕ್ತಿಯುಳ್ಳವನನ್ನು ತತ್ತ್ವವೇತ್ತನೆನ್ನುವರು.

**'ತಂ ಸ್ವಾಚ್ಛರೀರಾತ್ ಪ್ರವೃಹೇನ್ಮುಂಜಾದಿ ವೇಷೀಕಾಂ ಧೈರ್ಯೇಣ'** ಎನ್ನುವ ಕಠೋಪನಿಷತ್ತಿನ ವಾಕ್ಯದಂತೆ ದರ್ಭೆ ಹಾಗೂ ಹುಲ್ಲು ಕಲೆತಿರುವ ಹುಲ್ಲಿನ ಹೊರೆಯಿಂದ ದರ್ಭೆಯನ್ನು ಬೇರ್ಪಡಿಸಿದ ಹಾಗೆ, ಅಕ್ಕಿಯಿಂದ ಮಣ್ಣಿನ ಹೆಂಟೆಗಳನ್ನು ಬೇರ್ಪಡಿಸಿದಂತೆ (ಆರಿಸಿ ಹಾಕಿದಂತೆ) ಆತ್ಮಾನಾತ್ಮಗಳ ಸಂಘಾತದಿಂದ ಅನಾತ್ಮವನ್ನು ಬೇರ್ಪಡಿಸಬೇಕು. ಹಾಗೆ ಬೇರ್ಪಡಿಸಿ, ಜ್ಞಾನಿಯಾದವನು ಪ್ರಾಪಂಚಿಕವಾದ ತನ್ನ ದೇಹದ ಸಮಸ್ತಕಾರ್ಯಗಳನ್ನು ಆ ಅನಾತ್ಮದಿಂದ, ಪ್ರಕೃತಿಯಿಂದ ಮಾಡಲ್ಪಟ್ಟಂತೆ ವೀಕ್ಷಿಸುತ್ತಾನೆ. ಆಯಾ ಗುಣಗಳು, ಆಯಾ ಗುಣಗಳಿಗೆ ಸಂಬಂಧಪಟ್ಟ ಕಾರ್ಯಗಳಲ್ಲಿ ಪ್ರವರ್ತಿಸುತ್ತಿರುತ್ತವೆ. ಆತ್ಮವಾದ ತನಗೆ ಅವುಗಳಲ್ಲಿ ಯಾವ ರೀತಿಯ ಸಂಬಂಧವೂ ಇಲ್ಲವೆಂದು ಗ್ರಹಿಸುತ್ತಾನೆ. ಹಾಗೆ ಗ್ರಹಿಸಿದವನಾಗಿ ಆ ಪ್ರಕೃತಿಯೊಡನೆ (ದೃಶ್ಯದೊಡನೆ) ಸಂಗ ಹಾಗು ಅಭಿಮಾನವಿಲ್ಲದವನಾಗಿರುತ್ತಾನೆ ಅಸಕ್ತನಾಗಿರುತ್ತಾನೆ. ಪ್ರಪಂಚದಲ್ಲಿ ಸಂಚರಿಸುತ್ತಿದ್ದರೂ ಕಮಲದ ಎಲೆಯ ಮೇಲಿರುವ ನೀರಿನ ಹನಿಯಂತೆ ನಿರ್ಲಿಪ್ತನಾಗಿರುವನು, 'ನ ಸಜ್ಜತೇ' ಅಂಟಿಕೊಳ್ಳುವುದಿಲ್ಲ. ಜಡವಾದ ಸ್ವಪ್ನ ತುಲ್ಯವಾದಂತಹ ದೃಶ್ಯದಿಂದ ಚೈತನ್ಯವಾದಂತಹ ಜ್ಞಾನಿ ಹೇಗೆ ಸಕ್ತಗೊಳ್ಳುವನು? ಬೆಣ್ಣೆಯ ಮುದ್ದೆ ಮಜ್ಜಿಗೆಯಲ್ಲಿ ಹೇಗೆ ತೇಲುತ್ತದೋ ಹಾಗೆ ತತ್ತ್ವವೇತ್ತನು ದೃಶ್ಯಕ್ಕೆ ಅಂಟಿಕೊಳ್ಳದೆ ಭಿನ್ನವಾಗಿಯೇ ಇರುವನು. ಆದ್ದರಿಂದ ದೃಶ್ಯ ಸಂಬಂಧಗಳಾದ ಸುಖದುಃಖಗಳು ಅವನ ಮೇಲೆ ಯಾವ ಅಭಿಪ್ರಾಯವನ್ನೂ ಉಂಟು ಮಾಡುವುದಿಲ್ಲ. ದುಃಖಕ್ಕೆ ಕಾರಣ ಪ್ರಕೃತಿಯೊಡನೆ ಉಂಟಾಗುವ ಸಂಗವೇ. ಆ ಸಂಗರಾಹಿತ್ಯವೇ ಮೋಕ್ಷ *'ದೃಗ್ದೃಶ್ಯಸಂಯೋಗೋಹೇಯ ಹೇತುಃ'* (ದೃಕ್ಕು ಹಾಗೂ ದೃಶ್ಯಗಳ ಸಂಯೋಗವನ್ನು ಬೇರ್ಪಡಿಸಬೇಕು)- ಎಂದು ಪತಂಜಲಿ ಮಹರ್ಷಿ ನುಡಿದಿದ್ದಾನೆ. ಈ ಪ್ರಕಾರವಾಗಿ ಆತ್ಮಾನಾತ್ಮ ವಿಚಾರಣೆ ಇಲ್ಲದವನು ಸಂಸಾರದಲ್ಲಿ ಮುಳುಗಿರುವನು. ಹೇಗೆಂದರೆ ಆತನು ದೇಹವೇ ತಾನೆಂದು, ಇಂದ್ರಿಯಗಳೇ ತಾನೆಂದು, ಮನಸ್ಸೇ ತಾನೆಂದು ಭಾವಿಸಿ, ಅವುಗಳ ಮೇಲೆ ಅಭಿಮಾನವನ್ನಿಟ್ಟು, ಆಯಾ ಇಂದ್ರಿಯ ಕೃತ ಕರ್ಮಗಳನ್ನು ತಾನೇ ಮಾಡುತ್ತಿರುವೆನೆಂದು ಭಾವಿಸುತ್ತಾ ಮೋಹಗೊಳ್ಳುತ್ತಿದ್ದಾನೆ. ಆದ್ದರಿಂದ ಅನಾತ್ಮ (ದೃಶ್ಯ)ವಸ್ತುಗಳಾದ ದೇಹೇಂದ್ರಿಯಾದಿಗಳ ಮೇಲಿನ ಅಭಿಮಾನವನ್ನು ಬಿಟ್ಟು ಆತ್ಮದಲ್ಲಿಯೇ ಸ್ಥಿರಗೊಂಡಿರಬೇಕು. ದುಃಖವಿಮುಕ್ತಿಗೆ ಇದೊಂದೇ ಉಪಾಯ. ಸಂಸಾರ ಚಕ್ರದಿಂದ ತಪ್ಪಿಸಿಕೊಳ್ಳಲು ಇದು ರಾಮಬಾಣ.

ಪ್ರ : ತತ್ತ್ವವೇತ್ತನು ಕರ್ಮಗಳಲ್ಲಿ ಹೇಗೆ ಪ್ರವರ್ತಿಸುವನು?

ಉ : ಆತ್ಮಾನಾತ್ಮ ವಿವೇಕವುಳ್ಳ ಆತನು "ಆಯಾ ಗುಣಗಳು ಆಯಾ ಕಾರ್ಯಗಳಲ್ಲಿ ಪ್ರವರ್ತಿಸುತ್ತಿರುವವೇ ಹೊರತು, ಆತ್ಮವಾದ ತಾನು ಮಾತ್ರ ಏನನ್ನೂ ಮಾಡುತ್ತಿಲ್ಲ" ಎಂದು ನಿಶ್ಚಯಿಸಿ, ಕಾರ್ಯಗಳಲ್ಲಿ ಸಂಗ ವರ್ಜಿತನಾಗಿರುವನು.

**ಅ||** ಆಸಕ್ತಿಯಿಂದ ಕರ್ಮಗಳನ್ನು ಮಾಡುತ್ತಿರುವವನ ಚಿತ್ತವನ್ನು ಕದಲಿಸಬಾರದು. ಜ್ಞಾನಿಯು ಆ ಕರ್ಮಗಳನ್ನೇ ಫಲಾಪೇಕ್ಷಾರಹಿತನಾಗಿ ಆಚರಿಸಿ ಅವನನ್ನು ಕ್ರಮೇಣ ತನ್ನ ದಾರಿಗೆ ಆಕರ್ಷಿಸಬೇಕೆಂದು ಈಗಾಗಲೇ ತಿಳಿಸಿದ ಭಾವವನ್ನೇ ಮತ್ತೆ ಒತ್ತಿ ಹೇಳಲಾಗುತ್ತಿದೆ-

೨೯. ಪ್ರಕೃತೇರ್ಗುಣಸಂಮೂಢಾಃ ಸಜ್ಜಂತೇ ಗುಣಕರ್ಮಸು
ತಾನಕೃತ್ಸ್ನವಿದೋ ಮಂದಾನ್ ಕೃತ್ಸ್ನವಿನ್ನ ವಿಚಾಲಯೇತ್

**ಅರ್ಥ:** (ಏ=ಯಾರು); ಪ್ರಕೃತೇ=ಪ್ರಕೃತಿಯ; ಗುಣಸಂಮೂಢಾಃ=ರಾಜಸಾದಿಗುಣಗಳಿಂದ ಮೋಹವುಳ್ಳವರಾಗಿ; ಗುಣ ಕರ್ಮಸು=ಗುಣಗಳ (ದೇಹೇಂದ್ರಿಯ ಮನಸ್ಸುಗಳ) ಕರ್ಮಗಳಲ್ಲಿ; ಸಜ್ಜಂತೇ=ಆಸಕ್ತರಾಗಿರುತ್ತಾರೋ; ಅಕೃತ್ಸ್ನವಿದಃ=ಅಲ್ಪಜ್ಞರು; ಮಂದಾನ್=ಮಂದಚಿತ್ತವುಳ್ಳವರು; ತಾನ್=ಅಂತಹ ಕರ್ಮಸಂಗಿಗಳನ್ನು; ಕೃತ್ಸ್ನವಿತ್=ಆತ್ಮಜ್ಞನಾದ ಜ್ಞಾನಿ; ನ ವಿಚಾಲಯೇತ್=ವಿಚಲಿತಗೊಳ್ಳುವಂತೆ ಮಾಡಬಾರದು.

**ತಾ||** ಪ್ರಕೃತಿಯ ರಾಜಸಾದಿ ಗುಣಗಳಿಂದ ಮೋಹಕ್ಕೆ ಒಳಗಾದವರಾಗಿ ದೇಹೇಂದ್ರಿಯಾದಿಗಳ ಕ್ರಿಯೆಗಳಲ್ಲಿ ಆಸಕ್ತಿಯುಳ್ಳವರಾಗಿ ವರ್ತಿಸುತ್ತಿರುವ ಕರ್ಮಸಂಗಿಗಳಾದ ಅಲ್ಪಜ್ಞರನ್ನು, ಮಂದ ಮತಿಗಳನ್ನು ಆತ್ಮಜ್ಞನಾದ ಜ್ಞಾನಿಯು ವಿಚಲಿತಗೊಳ್ಳಿಸಬಾರದು. (ಕರ್ಮಗಳನ್ನು ಬಿಡುವಂತೆ ಮಾಡಬಾರದು).

**ವ್ಯಾಖ್ಯೆ:** ಇದೇ ಅಧ್ಯಾಯದ ೨೬ನೆಯ ಶ್ಲೋಕದಲ್ಲಿ ಹೇಳಿದ ಭಾವವನ್ನೇ ಮತ್ತೊಮ್ಮೆ ಎಚ್ಚರಿಕೆಯನ್ನು ನೀಡುವ ಉದ್ದೇಶದಿಂದ ಇಲ್ಲಿ ಹೇಳಲಾಗಿದೆ. ಆತ್ಮಜ್ಞರಾದ ಮಹನೀಯರು ಕರ್ತೃತ್ವ ಬುದ್ಧಿ ಹೊಂದಿರುವ ಹಾಗು ಸಕ್ತರಾಗಿರುವಂತಹ ಅಜ್ಞಾನಿಗಳ ಮನಸ್ಸನ್ನು ವಿಚಲಿತಗೊಳಿಸದೆ, ತಮ್ಮ ಉನ್ನತಾಚರಣೆಯ ಮೂಲಕ ಅವರನ್ನೂ ಸಹ ತಮ್ಮ ದಾರಿಗೆ ಮೆಲ್ಲಗೆ ತೆಗೆದುಕೊಂಡು ಬರಬೇಕು. ತಮ್ಮ ನಿಷ್ಕಾಮಾಚರಣೆಯಿಂದ ಕ್ರಮೇಣ ಅವರಿಗೆ ಪ್ರೋತ್ಸಾಹವನ್ನು ಉಂಟು ಮಾಡಬೇಕು. ಹಿರಿಯರ ನಿಷ್ಕಲ್ಮಷ ಪ್ರವರ್ತನೆಗಳನ್ನು, ನಿಸ್ಸಂಗ ವ್ಯವಹಾರವನ್ನು ನೋಡಿ ಅವರೂ ಕ್ರಮವಾಗಿ ಸನ್ಮಾರ್ಗಿಗಳಾಗುವರು.

"ಅಕೃತ್ಸ್ನವಿತ್"- ಗುಣ ಕರ್ಮಗಳಲ್ಲಿ, ದೃಶ್ಯ ಪದಾರ್ಥಗಳಲ್ಲಿ ಅಭಿಮಾನ ಹಾಗು ಸಂಗವುಳ್ಳವರನ್ನು ಅಲ್ಪಜ್ಞರೆಂದು ಭಗವಂತನು ಕರೆದನು. ಅವರು ಎಷ್ಟು ಪ್ರಾಪಂಚಿಕ ವಿದ್ಯಾ ವಿಜ್ಞಾನಗಳನ್ನು ಪಡೆದಿದ್ದರೂ, ಮಹಾ ಪಂಡಿತರಾಗಿದ್ದರೂ, ಪ್ರಕೃತಿಗೆ ಮತ್ತು ಇಂದ್ರಿಯ ವಿಷಯಗಳಿಗೆ ದಾಸರಾಗಿಯೇ ಇರುವರು. ಅವರು ಅಲ್ಪಜ್ಞರೇ ಆಗಿರುವರು. ಮತ್ತೆ 'ಮಂದಾನ್'- ಎಂದು ಹೇಳಲ್ಪಟ್ಟಿರುವುದರಿಂದ ಅವರು ದೊಡ್ಡವರ ಹಾಗು ಭಗವಂತನ ದೃಷ್ಟಿಯಲ್ಲಿ ಮಂದಮತಿಗಳೇ ಆಗಿದ್ದಾರೆ. ಆದ್ದರಿಂದ ಗುಣ ಸಂಗವನ್ನು, ಪ್ರಕೃತಿ ದಾಸ್ಯತೆಯನ್ನು ಬಿಟ್ಟ ಸರ್ವವೇತ್ತ 'ಕೃತ್ಸ್ನವಿತ್' ಆಗಬೇಕೇ ಹೊರತು, ಅವುಗಳಿಗೆ ಅಂಟಿಕೊಂಡ ಮಂದಮತಿ 'ಅಕೃತ್ಸ್ನವಿತ್'ಗಳಾಗಬಾರದು. "ಕೃತ್ಸ್ನವಿತ್"- ಅಂದರೆ ಯಾವುದನ್ನು ತಿಳಿದುಕೊಂಡ ನಂತರ ಸಮಸ್ತವನ್ನೂ ತಿಳಿದಂತಾಗುತ್ತದೋ **(ಯಸ್ಮಿನ್ ವಿಜ್ಞಾತೇ ಸರ್ವಮಿದಂ ವಿಜ್ಞಾತಂ ಭವತಿ)** ಅಂತಹ ಆತ್ಮವನ್ನು ತಿಳಿಯುವುದೇ ಸರ್ವಜ್ಞತ್ವ, ಅದನ್ನು ತಿಳಿದವನೇ ಕೃತ್ಸ್ನವಿದ. ಸಮಸ್ತ ಬ್ರಹ್ಮಾಂಡಕ್ಕೆ ಮೂಲಾಧಾರವಾದ ಬ್ರಹ್ಮ(ಆತ್ಮ) ವಸ್ತುವನ್ನು ತಿಳಿದಲ್ಲಿ ಎಲ್ಲವನ್ನೂ ತಿಳಿದಂತಾಗುತ್ತದೆ. ಆದುದರಿಂದಲೇ ಮಹನೀಯರಾದ ಋಷಿಗಳು (ಮುನಿಗಳು) ಮೊದಲು ತಮ್ಮ ಹೃದಯವನ್ನು ಶೋಧಿಸಿಕೊಂಡು, ಇಂದ್ರಿಯಗಳನ್ನು ಜಯಿಸಿ, ಪ್ರಕೃತಿಯನ್ನು ಸ್ವಾಧೀನಪಡಿಸಿಕೊಂಡು ಆತ್ಮಾನುಭವವನ್ನು ಹೊಂದುವುದರಿಂದ ಸರ್ವಜ್ಞರು (ಕೃತ್ಸ್ನವಿದರು) ಆದರು. ಜನ್ಮ ಸಾರ್ಥಕತೆಗೆ ಅದು ಏಕೈಕ ಮಾರ್ಗ. ಶಾಂತಿಗೆ, ಸುಖಕ್ಕೆ ಉಪಾಯ.

ಪ್ರ : ಪ್ರಕೃತಿ ಗುಣಗಳಿಗೆ ದಾಸರಾಗಿ ವರ್ತಿಸುವ ಕರ್ಮಸಂಗಿಗಳೆಂತಹವರು?

ಉ : ಅಲ್ಪಜ್ಞರು, ಮಂದಮತಿಗಳು

ಪ್ರ : ಅಂತಹವರನ್ನು ಜ್ಞಾನಿಗಳೇನು ಮಾಡಬೇಕು?

ಉ : ಅವರ ಬುದ್ಧಿಯನ್ನು ವಿಚಲಿತಗೊಳಿಸದೆ ಸ್ವಕೀಯ ಉತ್ತಮಾಚರಣೆಯ ದ್ವಾರಾ ಅವರನ್ನು ಕ್ರಮವಾಗಿ ತಮ್ಮ ದಾರಿಗೆ ತಿರುಗಿಸಿಕೊಳ್ಳಬೇಕು.

**ಅ||** ಈ ಅಧ್ಯಾಯದ ಪ್ರಾರಂಭದಲ್ಲಿ ಅರ್ಜುನನು ಹಾಕಿದ ಪ್ರಶ್ನೆಗೆ ಉತ್ತರವಾಗಿ ಪರಮಶ್ರೇಯದ ಮಾರ್ಗವನ್ನು ತಿಳಿಸಲಾಗುತ್ತಿದೆ-

೩೦. ಮಯಿ ಸರ್ವಾಣಿ ಕರ್ಮಾಣಿ ಸಂನ್ಯಸ್ಯಾಧ್ಯಾತ್ಮಚೇತಸಾ
ನಿರಾಶೀರ್ನಿರ್ಮಮೋ ಭೂತ್ವಾ ಯುಧ್ಯಸ್ವ ವಿಗತಜ್ವರಃ

**ಅರ್ಥ:** ಸರ್ವಾಣಿ ಕರ್ಮಾಣಿ=ಸಮಸ್ತ ಕರ್ಮಗಳನ್ನು; ಮಯಿ=ನನ್ನಲ್ಲಿ; ಅಧ್ಯಾತ್ಮ ಚೇತಸಾ=ಅಧ್ಯಾತ್ಮಚಿತ್ತದೊಡನೆ (ಆತ್ಮದಲ್ಲಿ ಸ್ಥಿರವಾಗಿರುವ ಮನಸ್ಸಿನಿಂದ); ಸಂನ್ಯಸ್ಯ=ಸಮರ್ಪಿಸಿ; ನಿರಾಶೀಃ=ಆಶೆಯಿಲ್ಲದವನಾಗಿ; ನಿರ್ಮಮಃ=ಮಮಕಾರವಿಲ್ಲದವನು; ಭೂತ್ವಾ=ಆಗಿ; ವಿಗತಜ್ವರಃ=ಸಂತಾಪರಹಿತನಾಗಿ; ಯುಧ್ಯಸ್ವ=ಯುದ್ಧ ಮಾಡುವುದು.

**ತಾ||** ಸಮಸ್ತ ಕರ್ಮಗಳನ್ನು ನನ್ನಲ್ಲಿ (ಅಧ್ಯಾತ್ಮ ಚಿತ್ತದೊಡನೆ) ಸಮರ್ಪಿಸಿ, ಆಶೆಯಾಗಲಿ, ಮಮಕಾರವಾಗಲಿ ಇಲ್ಲದವನಾಗಿ, ನಿಶ್ಚಿಂತನಾಗಿ ಯುದ್ಧವನ್ನು ಮಾಡು.

**ವ್ಯಾಖ್ಯೆ:** "ಅಧ್ಯಾತ್ಮ ಚೇತಸಾ"- ಪ್ರಪಂಚದಲ್ಲಿ ಸರ್ವೇಸಾಮಾನ್ಯವಾಗಿ ಜನರು ಪ್ರಾಪಂಚಿಕ ಭಾವಗಳೊಡನೆ, ದೃಶ್ಯ ವಿಕಾರಗಳೊಡನೆ ತುಂಬಿರುವರು. ದೈವಕ್ಕೆ, ಪರಮಾತ್ಮನಿಗೆ ಅಲ್ಲಿ ಸ್ಥಳ ಸಿಗುವುದು ದುಸ್ತರ (ದುರ್ಲಭ). ಅದು ಅಧ್ಯಾತ್ಮ ಚಿತ್ತವಲ್ಲ. ಅದು ಪ್ರಾಪಂಚಿಕ ಚಿತ್ತ. ಪ್ರತಿಯೊಬ್ಬನೂ ಅಧ್ಯಾತ್ಮಚಿತ್ತ ಹೊಂದಿರಬೇಕೆನ್ನುವುದು ಭಗವಂತನ ಅಪ್ಪಣೆ. ಆತ್ಮಜ್ಞಾನದಿಂದ, ಪರಮಾರ್ಥ ಚಿಂತನೆಯಿಂದ ಚಿತ್ತವು ತುಂಬಿದ್ದು, ನಿರತಿಶಯ ಭಕ್ತಿಭಾವವನ್ನು ಹೊಂದಿರಬೇಕು. ಅದನ್ನೇ ಅಧ್ಯಾತ್ಮ ಚಿತ್ತವೆನ್ನುವರು. ಪವಿತ್ರ ಮನಸ್ಸುಳ್ಳವನಾಗಿ ಸಮಸ್ತ ಕರ್ಮಗಳನ್ನು ಭಗವದರ್ಪಣ ಮಾಡಬೇಕೆಂದು ಇಲ್ಲಿ ಬೋಧಿಸಲಾಗಿದೆ. "ಸರ್ವಾಣಿ ಕರ್ಮಾಣಿ" ಎಂದು ಹೇಳಲ್ಪಟ್ಟಿರುವುದರಿಂದ, ಒಂದೆರಡು ಕರ್ಮಗಳನ್ನಲ್ಲವೆಂದೂ ತಾನು ಮಾಡುವ ಸಮಸ್ತ ಕಾರ್ಯಗಳನ್ನೂ ಈಶ್ವರಾರ್ಪಣ ಬುದ್ಧಿಯಿಂದ ಆಚರಿಸಬೇಕೆಂದೂ ವಿದಿತವಾಗುತ್ತಿದೆ.

"ನಿರಾಶೀಃ, ನಿರ್ಮಮಃ"- ಆಶೆ, ಮಮಕಾರಗಳನ್ನು ಹೊಡೆದೋಡಿಸಬೇಕೆಂದು ಎಚ್ಚರಿಸಲಾಗಿದೆ. ಈ ಪ್ರಪಂಚದಲ್ಲಿ ಭಗವಂತನನ್ನು (ಆತ್ಮನನ್ನು) ಬಿಟ್ಟರೆ ಸಾಧಕನಿಗೆ ಇಷ್ಟವಾದಂತಹದು ಬೇರೆ ಏನೂ ಇಲ್ಲ. ಆತ್ಮವೊಂದೇ ಸತ್ಯವಾದುದು. ದೃಶ್ಯ ಪ್ರಪಂಚವೆಲ್ಲವೂ ಅದರ ಪ್ರತಿಬಿಂಬ ರೂಪ, ಕಲ್ಪಿತ, ನಶ್ವರ. ಅಂತಹ ಕಲ್ಪಿತ ಮಿಥ್ಯಾಪ್ರಪಂಚದಲ್ಲಿರುವ ವಸ್ತುಗಳ ಮೇಲೆ ವಿವೇಕವಂತನಾದವನು ಆಸೆ, ಮಮಕಾರಗಳನ್ನು ಹೇಗೆ ಇರಿಸುವನು? ಈ ರೀತಿಯ ವಿಚಾರಣೆಯ ಮೂಲಕ ಆಸೆಯನ್ನು, ಮಮಕಾರವನ್ನು ದೂರಮಾಡಿಕೊಂಡು ಮನುಜನು ಪವಿತ್ರವಾದ ಭಗವದರ್ಪಿತ ಚಿತ್ತದೊಡನೆ ತನ್ನ ವಿಧ್ಯುಕ್ತ ಕರ್ಮಗಳನ್ನು ಆಚರಿಸಬೇಕೆಂದು ಅರ್ಜುನನನ್ನು ನೆಪ ಮಾಡಿಕೊಂಡು ಲೋಕಕ್ಕೆಲ್ಲಾ ಬೋಧಿಸಲಾಗಿದೆ. ಅರ್ಜುನನು ಕ್ಷತ್ರಿಯ ನಾದುದರಿಂದ 'ಯುಧ್ಯಸ್ವ' (ಯುದ್ಧ ಮಾಡು) ಎಂದು ಹೇಳಲ್ಪಟ್ಟಿದೆ. ಬೇರೆಯವರು ಅವರವರ ಸಾಂಪ್ರದಾಯದಂತೆ ಈಶ್ವರಾರ್ಪಣ ಬುದ್ಧಿಯೊಡನೆ, ಮೇಲೆ ಹೇಳಿದ ಅಧ್ಯಾತ್ಮ ಗುಣಗಳೊಡನೆ ಕರ್ಮಗಳನ್ನು ಆಚರಿಸಬೇಕು. ಇದರಿಂದ ಗೃಹಸ್ಥಾಶ್ರಮದಲ್ಲಿರುವವರು ಕೂಡ ಉದ್ಧಾರವಾಗಲು ಅವಕಾಶವೇರ್ಪಡುತ್ತದೆ.

"ವಿಗತಜ್ವರಃ"- 'ಸಂತಾಪರಹಿತನಾಗಿ ಯುದ್ಧ ಮಾಡು' ಎಂದು ಭಗವಂತನು ಅಪ್ಪಣೆ ಕೊಟ್ಟನು. ಜ್ವರಗಳು ಎರಡು ವಿಧ. ಒಂದು ಬಾಹ್ಯಜ್ವರ, ಎರಡನೆಯದು ಅಭ್ಯಂತರ ಜ್ವರ. ಎರಡೂ ಜೀವಿಯನ್ನು ಬಾಧಿಸುತ್ತವೆ. ಅದರಲ್ಲಿ ಬಾಹ್ಯಜ್ವರ ಅಂದರೆ ಶಾರೀರಕ ಜ್ವರ ಔಷಧಿಗಳಿಂದ ನಿವಾರಣೆಯಾಗುತ್ತದೆ. ಅಭ್ಯಂತರ ಜ್ವರ, ಅಂದರೆ ಮಾನಸಿಕ ಜ್ವರ (ಭವರೋಗ, ಸಂಸಾರತಾಪ) ತಣ್ಣಗಾಗಲು ಭಗವಂತನು ಈ ಶ್ಲೋಕದಲ್ಲಿ ಸರಿಯಾದ ಔಷಧಿಯನ್ನು ಕೆಳಕಂಡಂತೆ ಸೂಚಿಸಿದ್ದಾನೆ.

೧) ಆಧ್ಯಾತ್ಮಚಿತ್ತ ಹೊಂದಿರಬೇಕು. (ಆತ್ಮ ಮತ್ತು ದೈವದಲ್ಲಿಯೇ ಸಂಲಗ್ನವಾದ ಚಿತ್ತವುಳ್ಳವರಾಗಿರಬೇಕು).

೨) ಅಂತಹ ನಿರ್ಮಲ ಚಿತ್ತವುಳ್ಳವರಾಗಿ ಸಮಸ್ತ ಕರ್ಮಗಳನ್ನು, ಅವುಗಳ ಫಲಗಳನ್ನು ಭಗವಂತನಿಗೆ ಅರ್ಪಿಸಬೇಕು.

೩) ಆಶೆಯನ್ನು ಬಿಡಬೇಕು

೪) ಮಮಕಾರವಿಲ್ಲದವರಾಗಿರಬೇಕು.

ಈ ನಾಲ್ಕು "ರಾಮಬಾಣ" ದಿವ್ಯೌಷಧಗಳನ್ನು ಭವರೋಗ ಪೀಡಿತರು ಅನುಸರಿಸುವುದರಿಂದ 'ವಿಗತಜ್ವರ'ರು ಆಗಬಲ್ಲರು. 'ಗತ' ಎಂದು ಹೇಳದೆ 'ವಿಗತ' ಎಂದು ಹೇಳಿರುವುದರಿಂದ ಜ್ವರ ಸಂಪೂರ್ಣವಾಗಿ ನಿವಾರಣೆ ಯಾಗಬಲ್ಲದು ಎಂದರ್ಥ. ಜನನ ಮರಣ ರೂಪ ಘೋರ ಸಂಸಾರ ಪ್ರವಾಹ ದಲ್ಲಿ ಬಿದ್ದು ಅನೇಕ ನರಕರೂಪ ಗರ್ಭಗಳಲ್ಲಿ ಜೀವಿಯನ್ನು ದೂಡುವ ಈ ಒಳಜ್ವರ ಅಂತ್ಯವಾಗುವುದರಿಂದ ಮಹಾ ಪ್ರಮಾದ ದೂರವಾಗುವುದು. ಆದ್ದರಿಂದ ಭಗವಂತನು ತಿಳಿಸಿದ ಈ ನಾಲ್ಕು ದಿವ್ಯೌಷಧಗಳನ್ನು ಸೇವಿಸಿ ವಿಗತ ಸಂಸಾರ ಜ್ವರನಾಗಿ ದೈವಾರ್ಪಿತಚಿತ್ತದಿಂದ ಆನಂದದಿಂದ ಕಾರ್ಯಗಳನ್ನು ಮಾಡಬೇಕೆಂದು ಶ್ರೀ ಕೃಷ್ಣಮೂರ್ತಿ ಕರುಣೆಯಿಂದ ಇಲ್ಲಿ ಬೋಧಿಸಿದ್ದಾನೆ.

ಪ್ರ : ಪರಮಶ್ರೇಯಕ್ಕೆ ಮಾರ್ಗವೇನು ?

ಉ : ಅಧ್ಯಾತ್ಮ ಚಿತ್ತದೊಡನೆ ಸಮಸ್ತ ಕರ್ಮಗಳನ್ನು ಭಗವದರ್ಪಣೆ ಮಾಡಿ ಆಶೆ ಮಮಕಾರ ವರ್ಜಿತನಾಗಿ, ನಿಸ್ಸಂತಾಪದಿಂದ ಸ್ವಕೀಯ ಕಾರ್ಯವನ್ನು ಆಚರಿಸುವುದೇ ಶ್ರೇಯ ಮಾರ್ಗ.

**ಅ॥** ಇಂತಹ ಮಾರ್ಗವನ್ನು ಅನುಸರಿಸುವವನಿಗೆ ಉಂಟಾಗುವ ಫಲವನ್ನು ವಿವರಿಸಲಾಗುತ್ತಿದೆ-

**೩೧. ಯೇ ಮೇ ಮತಮಿದಂ ನಿತ್ಯಮ್ ಅನುತಿಷ್ಠಂತಿ ಮಾನವಾಃ**
**ಶ್ರದ್ಧಾವಂತೋಽನಸೂಯಂತೋ ಮುಚ್ಯಂತೇ ತೇಽಪಿ ಕರ್ಮಭಿಃ**

**ಅರ್ಥ:** ಯೇ ಮಾನವಾಃ=ಯಾವ ಮನುಷ್ಯರು; ಮೇ=ನನ್ನ; ಇದಂಮತಂ= ಈ ಅಭಿಪ್ರಾಯವನ್ನು; ಶ್ರದ್ಧಾವಂತಃ=ಶ್ರದ್ಧಾವಂತರು; ಅನಸೂಯಂತಃ= ಅಸೂಯೆಯಿಲ್ಲದವರು(ಆಗಿ); ನಿತ್ಯಂ=ಯಾವಾಗಲೂ; ಅನುತಿಷ್ಠಂತಿ= ಅನುಸರಿಸುತ್ತಿದ್ದಾರೋ; ತೇ ಅಪಿ=ಅವರು ಕೂಡ; ಕರ್ಮಭಿಃ=ಕರ್ಮ ಗಳಿಂದ; ಮುಚ್ಯಂತೇ=ಬಿಡುಗಡೆ ಹೊಂದುತ್ತಾರೆ.

**ತಾ॥** ಯಾವ ಮನುಜರು ಶ್ರದ್ಧಾವಂತರಾಗಿ, ಅಸೂಯೆಯಿಲ್ಲದವರಾಗಿ ಈ ನನ್ನ ಅಭಿಪ್ರಾಯವನ್ನು ಯಾವಾಗಲೂ ಆಚರಣೆಯಲ್ಲಿಟ್ಟಿರುವರೋ, ಅವರು ಕರ್ಮಬಂಧನದಿಂದ ವಿಮುಕ್ತಗೊಳ್ಳುತ್ತಾರೆ.

**ವ್ಯಾಖ್ಯೆ:** ಮೇಲೆ ತಿಳಿಸಿದ ನಿಷ್ಕಾಮ ಕರ್ಮಾಚರಣೆ ದ್ವಾರ ಮನುಷ್ಯನು ಕರ್ಮಬಂಧನವನ್ನು ಕಡಿದು ಹಾಕುತ್ತಾನೆಂದು ಹೇಳಲಾಗಿದೆ. ಇದನ್ನು ಸರಿಯಾಗಿ ತಿಳಿದುಕೊಂಡು ಆಚರಿಸಿದಲ್ಲಿ ಕರ್ಮವೇ ಕರ್ಮವನ್ನು ಕಡಿದು ಹಾಕುತ್ತದೆನ್ನುವುದು ಸ್ಪಷ್ಟವಾಗುತ್ತಿದೆ. ಕರ್ಮಯೋಗದ ದ್ವಾರ ಕರ್ಮದಿಂದ ವಿಮುಕ್ತನಾಗುತ್ತಿದ್ದಾನೆ. ಅಂದರೆ ಅನಾಸಕ್ತ ಕರ್ಮಾಚರಣೆಯ ಮೂಲಕ ಕರ್ಮಯೋಗಿಗಳು, ಜ್ಞಾನಿಯೋಗಿಗಳಂತೆ ಕರ್ಮಬಂಧ ವಿಮುಕ್ತಿಯನ್ನು ಪಡೆಯುತ್ತಾರೆನ್ನುವುದು ಭಾವ. (ನಿಷ್ಕಾಮ ಕರ್ಮಾನುಷ್ಠಾನದಿಂದ ಚಿತ್ತಶುದ್ಧಿ ಉಂಟಾಗಿ ಅದರಿಂದ ಜ್ಞಾನವು ಅಂಕುರಿಸಿ ವಿಮುಕ್ತಿ ಹೊಂದುತ್ತಿದ್ದಾರೆ).

"ನಿತ್ಯಂ"- ಎಂದು ಹೇಳಿರುವುದರಿಂದ ಯಾವುದೋ ಒಂದು ನಿರ್ದಿಷ್ಟ ಸಮಯದಲ್ಲಿ ಆ ಪ್ರಕಾರವಾಗಿ ವರ್ತಿಸುವುದು ಸಾಲದೆಂದೂ, ಪ್ರತಿದಿನವೂ ಅವರವರು ಮಾಡುವ ಕರ್ಮಗಳನ್ನು ಅನಾಸಕ್ತಿಯಿಂದ ಆಚರಿಸಬೇಕೆಂದು ಅರ್ಥವಾಗುತ್ತಿದೆ. ಆದರೆ, ಅನುಷ್ಠಾನ ಮಾಡಬೇಕಾದರೆ ಎರಡು ಸದ್ಗುಣಗಳನ್ನು ಮುಖ್ಯವಾಗಿ ಅವಲಂಬಿಸಬೇಕು. ಅವು ಶ್ರದ್ಧೆ ಹಾಗೂ ಅಸೂಯಾರಾಹಿತ್ಯ. ಯಾವ ವಸ್ತುವಿನಲ್ಲಿಯೇ ಆಗಲಿ, ಯಾವ ವಾಕ್ಯದಲ್ಲಿಯೇ ಆಗಲಿ, ಯಾವ ವ್ಯಕ್ತಿಯಲ್ಲಿಯೇ ಆಗಲಿ ಮನುಜನಿಗೆ ಎಷ್ಟು ಶ್ರದ್ಧಾ ವಿಶ್ವಾಸಗಳು ಇರುವುವೋ ಅಷ್ಟಷ್ಟು ಅಧಿಕ ಫಲಗಳನ್ನು ಅವುಗಳ ಮೂಲಕ ಆತನು ಹೊಂದಬಲ್ಲನು. ಅಸೂಯೆಯೆನ್ನುವುದು ಬೇರು ಹುಳುವಿನಂತಹದು. ಅದು ಜೀವಿಯ ಶಕ್ತಿಯನ್ನು ಒಳಗೇ ತಿಂದು ಹಾಕುವುದು. ಆಧ್ಯಾತ್ಮ ರಂಗದಲ್ಲಿ ಅದು ಪ್ರಬಲಶತ್ರು. ಸಾಧಕನು ಕಷ್ಟಬಿದ್ದು ಸಂಪಾದಿಸಿದ ಎಲ್ಲಾ ಸದ್ಗುಣಗಳನ್ನು ಚಿಟಿಕೆಯಲ್ಲಿ ಅದು ಬೂದಿ ಮಾಡಿ ಹಾಕುವುದು (ಕ್ಷೀರದಲ್ಲಿ ಬಿದ್ದ ವಿಷ ಬಿಂದುವಿನಂತೆ). ಈ ಪ್ರಮಾದವನ್ನು ಊಹಿಸಿ ಭಗವಂತನು ಸಾಧಕ ಲೋಕಕ್ಕೆ ಸಕಾಲದಲ್ಲಿ ಎಚ್ಚರಿಕೆ ನೀಡಿದ್ದಾನೆ. ಶ್ರದ್ಧೆ, ಅಸೂಯೆ ಎನ್ನುವ ಎರಡು ಶಸ್ತ್ರಗಳನ್ನು ಧರಿಸಿ- ಅಂದರೆ ಶ್ರದ್ಧೆಯನ್ನು ಆಶ್ರಯಿಸಿ, ಅಸೂಯೆಯನ್ನು ಹೊರದೂಡಿ, ಕರ್ಮಕ್ಷೇತ್ರದಲ್ಲಿ ಧುಮುಕಿ, ಅನಾಸಕ್ತನಾಗಿ ನಿರಂತರವು ಕರ್ಮ ಮಾಡಿದರೆ ಮನುಜನು ಕರ್ಮ ಬಂಧನವನ್ನು ಎಳ್ಳಷ್ಟೂ ಹೊಂದುವುದಿಲ್ಲವೆಂದು ಇಲ್ಲಿ ಹೇಳಲಾಗಿದೆ. ಈ ಪ್ರಕಾರವಾಗಿ ಕರ್ಮವೇ ಕರ್ಮರಾಹಿತ್ಯಕ್ಕೆ ಹೇಗೆ ಉಪಯೋಗವಾಗುವುದು ಎನ್ನುವುದನ್ನು ಇಲ್ಲಿ ಚೆನ್ನಾಗಿ ನಿರೂಪಿಸಲಾಗಿದೆ. ಭಗವದರ್ಪಿತ ಕರ್ಮದಿಂದ, ಇಲ್ಲವೆ ಫಲಾಭಿಲಾಷಾರಹಿತ (ಅನಾಸಕ್ತ) ಕರ್ಮದಿಂದ, ಕರ್ಮದಲ್ಲಿ ಬಂಧರೂಪವಾಗಿರುವ ವಿಷವು ನಾಶವಾಗಿ, ಕರ್ಮವು ನೈಷ್ಕರ್ಮ್ಯವಾಗಿ ಬೆಳಗುವುದು.

"ಮಾನವಾಃ"- ಎಂದು ಹೇಳಲ್ಪಟ್ಟಿರುವುದರಿಂದ, ಈ ಪರಮಾರ್ಥ ಸಾಧನೆಗಳನ್ನು, ಜಾತಿ ಮತ ಕುಲ ಭೇದಗಳಿಲ್ಲದೆ, ಸಮಸ್ತ ಮಾನವರು ಆಚರಿಸಿ ಮುಕ್ತರಾಗಬಹುದೆನ್ನುವುದು ಭಾವ.

"ಅಪಿ"- ಎನ್ನುವ ಪದ ಪ್ರಯೋಗದಿಂದ- ಸಾಮಾನ್ಯರೂ ಕೂಡ ಇಂತಹ ಪದ್ಧತಿಯಿಂದ ಮುಕ್ತರಾಗಬಹುದಾದರೆ ಇನ್ನು ಅರ್ಜುನನಿಗೆ ಅದು ಸುಲಭತರವೆಂದು ಬೋಧಿಸಿದಂತಾಗಿದೆ.

ಪ್ರ : ಕರ್ಮಗಳಿಂದ ಯಾರು ವಿಮುಕ್ತರಾಗುವರು ?

ಉ : ಭಗವಂತನು ಬೋಧಿಸಿದ ಈ ಅನಾಸಕ್ತ ಕರ್ಮಯೋಗ ಪದ್ಧತಿಯನ್ನು ಶ್ರದ್ಧಾವಂತರಾಗಿ, ಅಸೂಯಾರಹಿತರಾಗಿ, ಸತ್ಯವಾಗಿ ಪಾಲಿಸುವವರು ಕರ್ಮ ಬಂಧವಿಮುಕ್ತರಾಗುವರು.

**ಅ||** (ನಿಷ್ಕಾಮಯೋಗ) ಪದ್ಧತಿಯನ್ನು ಅನುಷ್ಠಾನ ಮಾಡದವರಿಗೆ ಆಗುವ ಹಾನಿಯನ್ನು ವಿವರಿಸಲಾಗುತ್ತಿದೆ.

**೩೨. ಯೇ ತ್ವೇತದಭ್ಯಸೂಯಂತೋ ನಾನುತಿಷ್ಠಂತಿ ಮೇ ಮತಮ್**
**ಸರ್ವಜ್ಞಾನವಿಮೂಢಾಂಸ್ತಾನ್ ವಿದ್ಧಿ ನಷ್ಟಾನಚೇತಸಃ**

**ಅರ್ಥ:** ಯೇ ತು=ಯಾರಾದರೆ; ಮೇ=ನನ್ನ; ಯೇತತ್ ಮತಮ್=ಈ ಅಭಿಪ್ರಾಯವನ್ನು; ಅಭ್ಯಸೂಯಂತಃ=ದ್ವೇಷಿಸುವಂತವರಾಗಿ; ನ ಅನುತಿಷ್ಠಂತಿ= ಅನುಸರಿಸುವುದಿಲ್ಲವೋ; ತಾನ್=ಅವರನ್ನು; ಅಚೇತಸಃ=ಬುದ್ಧಿಹೀನರೆಂದು; ಸರ್ವಜ್ಞಾನ ವಿಮೂಢಾನ್=ಯಾವ ವಿಧವಾದ ಜ್ಞಾನವಿಲ್ಲದವರಾಗಿ; ನಷ್ಟಾನ್=ಕೆಟ್ಟವರು; ವಿದ್ಧಿ=ತಿಳಿಯುವುದು.

**ತಾ||** ಯಾರು ನನ್ನ ಈ ಅಭಿಪ್ರಾಯವನ್ನು (ಆಧ್ಯಾತ್ಮ ಮಾರ್ಗ, ನಿಷ್ಕಾಮ ಕರ್ಮಯೋಗ ಪದ್ಧತಿಯನ್ನು) ದ್ವೇಷಿಸಿ, ಅನುಸರಿಸುವುದಿಲ್ಲವೋ ಅಂತಹವರನ್ನು ಬುದ್ಧಿಹೀನರೆಂದು, ಏನೂ ಜ್ಞಾನವಿಲ್ಲದವರೆಂದು, ಭ್ರಷ್ಟರು ಎಂದು ತಿಳಿಯುವುದು.

ವ್ಯಾಖ್ಯೆ: ಭಗವತ್ಪ್ರೋಕ್ತವಾದ ಈ ಅನಾಸಕ್ತ ಕರ್ಮಯೋಗವನ್ನು, ದೈವ ಮಾರ್ಗವನ್ನು ದ್ವೇಷಿಸಿ, ಆಸಕ್ತಿಯಿಂದ ಕರ್ಮಗಳನ್ನು ಮಾಡುತ್ತಾ ದೃಶ್ಯದಲ್ಲೇ ರಮಿಸುತ್ತಿರುವವರು, ಕರ್ಮಬಂಧನದಲ್ಲಿ ತಪ್ಪದೆ ಬಿದ್ದು ಜನನ ಮರಣ ರೂಪವಾದ ಈ ಸಂಸಾರ ಪ್ರವಾಹದಲ್ಲಿ ಮುಳುಗಿ ಹೋಗುವರು. ಅವರು ಆಕಡೆ ಬ್ರಹ್ಮವನ್ನಾಗಲಿ, ಈ ಕಡೆ ಕರ್ಮವನ್ನಾಗಲಿ ತಿಳಿಯದಂತವರಾಗಿದ್ದು ಅವಿವೇಕದಿಂದ ವಿನಾಶಕ್ಕೆ ಗುರಿಯಾಗುತ್ತಾರೆ. ಪ್ರಪಂಚ ಜ್ಞಾನಗಳು ಎಷ್ಟು ಇದ್ದರೂ, ಮಹಾಪಂಡಿತನಾದರೂ, ಭಗವಂತನ ಬಗ್ಗೆ ಭಕ್ತಿ ಶ್ರದ್ಧೆಗಳು, ನಿಷ್ಕಾಮಭಾವ, ಆತ್ಮಜ್ಞಾನ ಮುಂತಾದುವು ಇಲ್ಲದೆ ಇದ್ದರೆ ಆತನು ದೈವ ದೃಷ್ಟಿಯಲ್ಲಿ ಸರ್ವವಿಜ್ಞಾನ ವಿಮೂಢನೇ ಆಗುವನು. ಬುದ್ಧಿಯಿದ್ದರೂ ಇಲ್ಲದಂಥವನಾಗಿರುತ್ತಾನೆ (ಆ ಬುದ್ಧಿ ನಶ್ವರ ದೃಶ್ಯ ವಸ್ತುಗಳಲ್ಲೇ ಮುಳುಗಿ ಹೋಗಿದೆಯಾದ್ದರಿಂದ). ಅವನ ಹಣೆಯ ಮೇಲೆ 'ಪತನ' ಎನ್ನುವುದು ಯಾವಾಗಲೂ ಬರೆದಿರುತ್ತದೆಯೆನ್ನುವುದು ಈ ಶ್ಲೋಕದಲ್ಲಿ ಸ್ಪಷ್ಟವಾಗಿ ಹೇಳಲ್ಪಟ್ಟಿದೆ (ನಷ್ಟಾನ್). ಆದ್ದರಿಂದ ಭಗವದತ್ತ ಮಾರ್ಗವನ್ನೇ ಅನುಸರಿಸಿ, ಭಕ್ತಿ ಶ್ರದ್ಧೆಗಳಿಂದ ನಿಷ್ಕಾಮ ಕರ್ಮಯೋಗಾದಿ ಪರಮಾತ್ಮ ತತ್ತ್ವಗಳನ್ನು ಆಚರಿಸುವುದು, ಅನುಷ್ಠಾನ ಮಾಡುವುದು ಶ್ರೇಯಸ್ಕರ. ಇಲ್ಲದಿದ್ದರೆ ಮೂರು ಅನರ್ಥಗಳು ಬಂದೊದಗುವುವು. ಅವು (೧) ಸರ್ವಜ್ಞಾನ ವಿಮೂಢತೆ (೨) ಬುದ್ಧಿಹೀನತೆ (೩) ವಿನಾಶ

ಪ್ರ : ಭಗವಂತನು ಬೋಧಿಸಿದ ಈ ಪರಮಾತ್ಮ ತತ್ತ್ವವನ್ನು ಅನುಸರಿಸದ ವರಿಗೆ, ದ್ವೇಷಿಸುವವರಿಗೆ ಉಂಟಾಗುವ ದುರ್ಗತಿಗಳನ್ನು ವಿವರಿಸುವುದು?

ಉ : ೧) ಸ್ವಲ್ಪವೂ ಜ್ಞಾನ ಇಲ್ಲದಿರುವುದು ೨) ಬುದ್ಧಿ ಕೆಟ್ಟು ಹೋಗುವುದು ೩) ಸಂಸಾರ ಕೂಪದಲ್ಲಿ ಬಿದ್ದು ನಶಿಸಿ ಹೋಗುವುದು.

**ಅ||** ಈ ಪ್ರಕಾರವಾಗಿ ಮನುಜನು ತನ್ನ ವಿಧ್ಯುಕ್ತ ಕರ್ಮಗಳನ್ನು ನಿಷ್ಕಾಮವಾಗಿ ಆಚರಿಸದೆ, ಕರ್ಮಗಳೆಲ್ಲವನ್ನೂ ತ್ಯಜಿಸಿ ಬಿಟ್ಟರೆ ಉಂಟಾಗುವ ನಷ್ಟವೇನೆಂದು ಹೇಳಲಾಗುತ್ತಿದೆ-

**೩೩. ಸದೃಶಂ ಚೇಷ್ಟತೇ ಸ್ವಸ್ಯಾಃ ಪ್ರಕೃತೇರ್ಜ್ಞಾನವಾನಪಿ**
**ಪ್ರಕೃತಿಂ ಯಾಂತಿ ಭೂತಾನಿ ನಿಗ್ರಹಃ ಕಿಂ ಕರಿಷ್ಯತಿ**

**ಅರ್ಥ:** ಜ್ಞಾನವಾನ್ ಅಪಿ=ಜ್ಞಾನವಂತನಾದರೂ, ಸ್ವಸ್ಯಾಃ=ತನ್ನ; ಪ್ರಕೃತೇಃ=ಪ್ರಕೃತಿಗೆ(ಸ್ವಭಾವಕ್ಕೆ); ಸದೃಶಂ=ಅನುಗುಣವಾಗಿ; ಚೇಷ್ಟತೇ= ಪ್ರವರ್ತಿಸುತ್ತಿದ್ದಾನೆ; ಭೂತಾನಿ=ಪ್ರಾಣಿಗಳು; ಪ್ರಕೃತಿಂ=ತಮ್ಮ ಸ್ವಭಾವವನ್ನು (ಪ್ರಕೃತಿಯನ್ನು); ಯಾಂತಿ=ಅನುಸರಿಸಿ ನಡೆಯುತ್ತಿವೆ;(ಆದ್ದರಿಂದ) ನಿಗ್ರಹಃ= ನಿರೋಧ; ಕಿಂ ಕರಿಷ್ಯತಿ=ಏನು ಮಾಡಬಲ್ಲದು?

**ತಾ||** ಜ್ಞಾನವಂತನಾದರೂ (ಶಾಸ್ತ್ರ ಪಾಂಡಿತ್ಯ ಹಾಗು ಲೌಕಿಕ ಜ್ಞಾನವುಳ್ಳವನು) ತನ್ನ ಪ್ರಕೃತಿಗೆ (ಜನ್ಮಾಂತರ ಸಂಸ್ಕಾರದಿಂದ ಉಂಟಾಗಿರುವ ಸ್ವಭಾವಕ್ಕೆ) ಅನುಗುಣವಾಗಿ ಪ್ರವರ್ತಿಸುತ್ತಿದ್ದಾನೆ. ಪ್ರಾಣಿಗಳು ತಮ್ಮ ಪ್ರಕೃತಿಯನ್ನು ಅನುಸರಿಸಿ ನಡೆಯುತ್ತಿವೆ. ಆದ್ದರಿಂದ ಇನ್ನು ನಿಗ್ರಹ ಏನು ಮಾಡುವುದು?

ವ್ಯಾಖ್ಯೆ: ಇಲ್ಲಿ 'ಜ್ಞಾನವಾನಪಿ' ಎನ್ನುವ ಪಡಕ್ಕೆ ಶಾಸ್ತ್ರ ಪಾಂಡಿತ್ಯ, ಲೌಕಿಕ ವಿದ್ಯೆಗಳನ್ನು ಮಾತ್ರ ತಿಳಿದವನೆಂದರ್ಥ. ಅನುಭವದಿಂದ ಆದ ಪೂರ್ಣಜ್ಞಾನಿಯಲ್ಲ. ಎಂತಹ ಮಹಾಪಂಡಿತನಾದರೂ, ಶಾಸ್ತ್ರ ಜ್ಞಾನವುಳ್ಳವನಾದರೂ ತನ್ನ ಪ್ರಕೃತಿಗೆ ಅಂದರೆ ಪೂರ್ವಜನ್ಮ ಸಂಸ್ಕಾರಕ್ಕೆ ಅನುಗುಣವಾಗಿಯೇ ಪ್ರವರ್ತಿಸುತ್ತಿದ್ದಾನೆ. ಇನ್ನು ಸಾಮಾನ್ಯರ ವಿಷಯವನ್ನು ಬೇರೆ ಹೇಳಬೇಕೆ? ಎನ್ನುವುದು ಇದರ ಅರ್ಥ. ಇಲ್ಲಿ ಪೂರ್ವಸಂಸ್ಕಾರದ ಪ್ರಾಬಲ್ಯವನ್ನು ಹೇಳುವುದೇ ಪ್ರಧಾನೋದ್ದೇಶವಾಗಿದೆ. ಅಷ್ಟೇ ಹೊರತು ನಿಗ್ರಹದ ನಿರುಪಯೋಗತ್ವವನ್ನು ಹೇಳುವುದಲ್ಲ. ಆದರೂ ಮತ್ತೆ ಇನ್ನೊಂದು ಶ್ಲೋಕದಲ್ಲಿ **"ತಯೋರ್ನ ವಶಮಾಗಚ್ಛೇತ್"** ಇಂದ್ರಿಯಗಳಿಗೆ ಒಳಗಾಗದೆ ಅವುಗಳನ್ನು ನಿಗ್ರಹಿಸಬೇಕು ಎಂದು ಏಕೆ ಹೇಳಬೇಕಾಗಿ ಬಂತು? ಗೀತಾಶಾಸ್ತ್ರದಲ್ಲಿ ಪ್ರಾರಂಭದಿಂದ ಕೊನೆಯವರೆಗೂ ಭಗವಂತನು 'ದುಷ್ಟ ಸಂಸ್ಕಾರಗಳನ್ನು ನಿರೋಧಿಸುವುದು, ಕಾಮಗಳನ್ನು ಹೊರದೂಡುವುದು, ಕ್ರೋಧವನ್ನು ನಿಯಂತ್ರಿಸುವುದು, ಇಂದ್ರಿಯಗಳನ್ನು ನಿಗ್ರಹಿಸುವುದು'- ಮುಂತಾದುವುಗಳ ಬಗ್ಗೆ ಹೇಳಿರಬೇಕಾದರೆ, ಈ ಒಂದು ಸಂದರ್ಭದಲ್ಲಿ ಮಾತ್ರ ನಿಗ್ರಹದಿಂದ ಪ್ರಯೋಜನವಿಲ್ಲವೆಂದು ವಚಿಸಲು ಸಾಧ್ಯವೇ? ಇಲ್ಲ. ಜನ್ಮಾಂತರ ವಾಸನೆಗಳ, ಸಂಸ್ಕಾರಗಳ ಗಾಢವಾದ ಶಕ್ತಿಯ ಬಗ್ಗೆ ವರ್ಣಿಸುತ್ತಾ, ಈ ರೀತಿಯಾಗಿ ಹೇಳಬೇಕಾಗಿ ಬಂದಿದೆ ಅಷ್ಟೇ.

**ಅ||** ಪ್ರತಿಯೊಬ್ಬನೂ ತನ್ನ ಪ್ರಕೃತಿಯನ್ನು ಅನುಸರಿಸಿ ವರ್ತಿಸಿದರೆ, ಕರ್ಮಬಂಧನದಿಂದ ಹೇಗೆ ಬಿಡುಗಡೆ ಹೊಂದುವನೆನ್ನುವುದನ್ನು ಹೇಳಲಾಗುತ್ತಿದೆ-

**೩೪. ಇಂದ್ರಿಯಸ್ಯೇಂದ್ರಿಯಸ್ಯಾರ್ಥೇ ರಾಗದ್ವೇಷೌ ವ್ಯವಸ್ಥಿತೌ**
**ತಯೋರ್ನ ವಶಮಾಗಚ್ಛೇತ್ ತೌ ಹ್ಯಸ್ಯ ಪರಿಪಂಥಿನೌ**

**ಅರ್ಥ:** ಇಂದ್ರಿಯಸ್ಯ ಇಂದ್ರಿಯಸ್ಯ=ಪ್ರತಿ ಇಂದ್ರಿಯದ; ಅರ್ಥೇ= ವಿಷಯ ದಲ್ಲಿ; ರಾಗದ್ವೇಷೌ=ರಾಗವು, ದ್ವೇಷವು, ವ್ಯವಸ್ಥಿತೌ=ಏರ್ಪಟ್ಟಿದೆ; ತಯೋಃ=ಆ ರಾಗ ದ್ವೇಷಗಳಿಗೆ; ವಶಂ=ಅಧೀನ; ನ ಆಗಚ್ಛೇತ್=ಆಗಬಾರದು; ತೌ=ಆ ರಾಗ ದ್ವೇಷಗಳು; ಅಸ್ಯ=ಇದಕ್ಕೆ; ಪರಿಪಂಥಿನೌ ಹಿ=ಶತ್ರುಗಳಲ್ಲವೇ?

**ತಾ||** ಪ್ರತಿ ಇಂದ್ರಿಯಕ್ಕೆ ಅದರದರ ವಿಷಯದಲ್ಲಿ (ಶಬ್ದಾದಿಗಳಲ್ಲಿ) ರಾಗದ್ವೇಷಗಳು (ಇಷ್ಟಾನಿಷ್ಟಗಳು) ಏರ್ಪಡುತ್ತವೆ. ಆ ರಾಗ ದ್ವೇಷಗಳಿಗೆ ಯಾರೂ ವಶವಾಗಬಾರದು. ಅವು ಮನುಜನ ಪ್ರಬಲ ಶತ್ರುಗಳಲ್ಲವೇ!

ವ್ಯಾಖ್ಯೆ: ಹಿಂದಿನ ಶ್ಲೋಕದಲ್ಲಿ ಹೇಳಿದಂತೆ ಮನುಜನು ತನ್ನ ಪ್ರಕೃತಿಗೆ ಅನುಗುಣವಾಗಿ ವರ್ತಿಸುವುದು ಸಹಜವಾದರೂ ಪುರುಷ ಪ್ರಯತ್ನ ಬಲದಿಂದ ಪ್ರಕೃತಿಯನ್ನು ಜಯಿಸಲು ಸಾಧ್ಯ ಎಂದು ಇಲ್ಲಿ ಹೇಳಲಾಗಿದೆ. ಇಂದ್ರಿಯಗಳಿಗೆ

ಶಬ್ದಾದಿ ವಿಷಯಗಳಲ್ಲಿ ಇಷ್ಟಾನಿಷ್ಟಗಳು (ರಾಗದ್ವೇಷಗಳು) ಉಂಟಾಗುತ್ತವೆ. ಅವು ಮುಮುಕ್ಷುವಿಗೆ ಪರಮ ಶತ್ರುಗಳು. ಅವು ಅನೇಕ ಜನ್ಮಗಳಿಂದ ಜೀವಿಯ ಹೃದಯ ಕ್ಷೇತ್ರವನ್ನು ಆಕ್ರಮಿಸಿಕೊಂಡು ಅಧಿಕಾರವನ್ನು ಚಲಾಯಿಸುತ್ತಿವೆ. ಈಗ ಸದ್ಗುರುವಿನ ಉಪದೇಶದಿಂದ ಆ ಶತ್ರುವನ್ನು ಹೊರದೂಡಿ ಆತ್ಮ ಸಾಮ್ರಾಜ್ಯಾಧಿಪತ್ಯವನ್ನು ಪುನಃ ಸಂಪಾದಿಸಿಕೊಳ್ಳುತ್ತಿದ್ದಾನೆ. ಆತ್ಮವಿಚಾರಣೆ, ಭಕ್ತಿ, ವೈರಾಗ್ಯ, ನಿಷ್ಕಾಮ ಕರ್ಮಾಚರಣೆ- ಮುಂತಾದುವುಗಳ ಮೂಲಕ ಆ ಕಾರ್ಯವನ್ನು ಸಾಧಿಸಬೇಕು. ಹಾಗೆ ಸಾಧಿಸುವವರೆಗೆ ಜೀವಿಗೆ ಶಾಂತಿ ಯಿರುವುದಿಲ್ಲ. ಏಕೆಂದರೆ ಶತ್ರುವು ಊರಿನಲ್ಲಿ ಇದ್ದರೆ ಪ್ರಮಾದ; ಮನೆ ಯಲ್ಲಿದ್ದರೆ ಇನ್ನೂ ಪ್ರಮಾದ; ಇನ್ನು ಹೃದಯದಲ್ಲಿಯೇ ಇದ್ದರೆ ಎಷ್ಟು ಮಹಾ ಪ್ರಮಾದವೋ, ಎಷ್ಟು ಅಶಾಂತಿಯೋ ಬೇರೆ ಹೇಳಬೇಕಾಗಿಲ್ಲ. ಆದ್ದರಿಂದ ಆ ರಾಗದ್ವೇಷಾದಿ ಅಂತಃಶತ್ರುಗಳಿಗೆ ವಶವಾಗದೆ, ಪುರುಷ ಪ್ರಯತ್ನದಿಂದ ಅವುಗಳನ್ನು ಹೇಗಾದರೂ ಮಾಡಿ ಸೋಲಿಸಬೇಕು.

ಪೂರ್ವಜನ್ಮದ ದುಷ್ಟ ಸಂಸ್ಕಾರ, ಇಹ ಜನ್ಮದ ಪರಮಾತ್ಮ ಯತ್ನ ಎರಡು ಟಗರುಗಳಂತೆ ಹೊಡೆದಾಡುತ್ತವೆ. ಅವೆರಡರಲ್ಲಿ ಯಾವುದು ಬಲವಾಗಿದೆಯೋ ಅದು ಜಯಿಸುತ್ತದೆ. ಆದ್ದರಿಂದ ಆಧ್ಯಾತ್ಮಿಕ ಪುರುಷ ಪ್ರಯತ್ನವನ್ನು ದ್ವಿಗುಣಗೊಳಿಸಿ **'ತಯೋರ್ನವಶಮಾಗಚ್ಛೇತ್'** ಎಂದು ಭಗವಂತನು ಆದೇಶಿಸಿದ ರೀತಿಯಲ್ಲಿ ಆ ರಾಗದ್ವೇಷಗಳಿಗೆ ತಲೆ ಬಾಗಿಸದೆ, ಹೃದಯಾಂತರಾಳದಿಂದ ಅವುಗಳನ್ನು ಹೊರತಳ್ಳಬೇಕು. 'ಪೂರ್ವಜನ್ಮಸಂಸ್ಕಾರ ಚೆನ್ನಾಗಿಲ್ಲ' ಎಂದು ಶೋಕಿಸುವುದರಿಂದ ಉಪಯೋಗವಿಲ್ಲ. ಅದು ಹೇಗಾದರೂ ಇರಲಿ! **'ಪೌರುಷೇಣ ಪ್ರಯತ್ನೇನ ಯೋಜನೀಯಾ ಶುಭೇ ಪಥಿ'-** ಎಂದು ಶ್ರೀ ವಶಿಷ್ಠಮಹರ್ಷಿ ಹೇಳಿದ ಹಾಗೆ ಈಗಿನ ಪುರುಷಪ್ರಯತ್ನದಿಂದ ಆ ಹಳೆಯ ಶಕ್ತಿಗಳನ್ನು ಹತಗೊಳಿಸಿ ಮನಸ್ಸನ್ನು ಶುದ್ಧಮಾರ್ಗದಲ್ಲಿ ಪ್ರವೇಶ ಮಾಡಬಹುದು. ಶ್ರೀಕೃಷ್ಣ ಭಗವಂತನು ಗೀತೆಯಲ್ಲಿ 'ಓ ಜೀವಿಗಳಿರಾ! ನಿಮ್ಮ ನಿಮ್ಮ ದುಷ್ಟ ಸಂಸ್ಕಾರಗಳಿಗೆ ಒಳಗಾಗಬೇಡಿ, ಪ್ರಯತ್ನ ಪೂರ್ವಕವಾಗಿ ಅವುಗಳನ್ನು ತೊಲಗಿಸಿ ಆತ್ಮ ಸಾಮ್ರಾಜ್ಯವನ್ನು ಸಂಪಾದಿಸಿ!' ಎಂದು ಎಚ್ಚರಿಸಿದ್ದಾನೆ. ಭಗವಂತನ ಈ ಆದೇಶವನ್ನನುಸರಿಸಿ ಮುಮುಕ್ಷುಗಳೆಲ್ಲರೂ ತಮ್ಮ ಅಂತಃ ಶತ್ರುಗಳಾದ ರಾಗದ್ವೇಷಾದಿಗಳನ್ನು ಜಯಿಸಿ ಪರಮಶಾಂತಿಯನ್ನು ಪಡೆಯುವಂತಾಗಬೇಕು.

ಪ್ರ : ಇಂದ್ರಿಯಗಳ ಸ್ವಭಾವಗಳೇನು?

ಉ : ವಿಷಯಗಳಲ್ಲಿ ರಾಗ ದ್ವೇಷಗಳನ್ನು ಹೊಂದಿರುವುದು.

ಪ್ರ : ಮೋಕ್ಷಾಪೇಕ್ಷೆ ಉಳ್ಳವನು ಆಚರಿಸಬೇಕಾದ ವಿಧಾನವೇನು?

ಉ : ರಾಗದ್ವೇಷಗಳಿಗೆ ಒಳಗಾಗದೆ ಪುರುಷ ಪ್ರಯತ್ನದಿಂದ ಅವುಗಳನ್ನು ಜಯಿಸಬೇಕು. ಅವು ಮನುಜನಿಗೆ ಪ್ರಬಲ ಶತ್ರುಗಳು.

**ಅ॥** ಸ್ವಧರ್ಮಾಚರಣೆಯ ದ್ವಾರ ಅಂತಹ ರಾಗದ್ವೇಷರಹಿತ ಸ್ಥಿತಿಗೆ ಯತ್ನಿಸಬೇಕೆಂದು ಹೇಳಲಾಗುತ್ತಿದೆ-

**೩೫. ಶ್ರೇಯಾನ್ ಸ್ವಧರ್ಮೋ ವಿಗುಣಃ ಪರಧರ್ಮಾತ್ ಸ್ವನುಷ್ಠಿತಾತ್**
**ಸ್ವಧರ್ಮೇ ನಿಧನಂ ಶ್ರೇಯಃ ಪರಧರ್ಮೋ ಭಯಾವಹಃ**

**ಅರ್ಥ:** ಸ್ವನುಷ್ಠಿತಾತ್=ಚೆನ್ನಾಗಿ ಆಚರಿಸಲ್ಪಟ್ಟ; ಪರಧರ್ಮಾತ್=ಬೇರೆಯವರ ಧರ್ಮಕ್ಕಿಂತ; ವಿಗುಣಃ=ಗುಣವಿಲ್ಲದ್ದಾದರೂ; ಸ್ವಧರ್ಮಃ=ತನ್ನ ಧರ್ಮವೇ; ಶ್ರೇಯಾನ್=ಶ್ರೇಷ್ಠವಾದುದು; ಸ್ವಧರ್ಮೇ=ತನ್ನ ಧರ್ಮದಲ್ಲಿ; ನಿಧನಂ= ಮರಣ ಬಂದರೂ; ಶ್ರೇಯಃ=ಶ್ರೇಯಸ್ಕರ; ಪರಧರ್ಮಃ=ಇತರರ ಧರ್ಮ; ಭಯಾವಹಃ=ಭಯವನ್ನುಂಟುಮಾಡುವುದು (ಆಗಿದೆ).

**ತಾ॥** ಚೆನ್ನಾಗಿ ಆಚರಿಸಲ್ಪಟ್ಟ ಬೇರೆಯವರ ಧರ್ಮಕ್ಕಿಂತ, ಗುಣವಿಲ್ಲದ್ದಾದರೂ ತನ್ನ ಧರ್ಮವೇ ಶ್ರೇಷ್ಠವಾದುದು. ತನ್ನ ಧರ್ಮದಲ್ಲಿ ಮರಣ ಸಂಭವಿಸಿದರೂ ಶ್ರೇಯಸ್ಕರವೇ. ಇತರರ ಧರ್ಮವು ಭಯಂಕರವಾದದ್ದು.

**ವ್ಯಾಖ್ಯೆ:** ಅರ್ಜುನನು ಕ್ಷತ್ರಿಯ. ಯುದ್ಧ ಮಾಡುವುದು ಆತನ ಧರ್ಮ. ಅದನ್ನು ಬಿಟ್ಟು ಬೇರೆಯವರ ಧರ್ಮವನ್ನು ಅನುಸರಿಸುವುದು ಉತ್ತಮವಲ್ಲ. ಸ್ವಧರ್ಮವಾದ ಯುದ್ಧದಲ್ಲಿ ಮರಣ ಸಂಭವಿಸಿದರೂ ಶ್ರೇಯಸ್ಕರವೇ (ಉತ್ತಮಲೋಕಪ್ರಾಪ್ತಿ) ಆಗುವುದು. ಬೇರೆಯವರ ಧರ್ಮವನ್ನಾಚರಿಸುವುದು ಭಯಂಕರವಾದದ್ದು.

ಈ ಶ್ಲೋಕಕ್ಕೆ ಮತ್ತೊಂದು ಅರ್ಥವನ್ನು ಕೊಡಬಹುದು. 'ಸ್ವಧರ್ಮಃ' ಆತ್ಮ ಸಂಬಂಧವಾದ ಧರ್ಮವು- ಆತ್ಮ ಪ್ರಾಪ್ತಿಗೆ ಬೇಕಾದ ಸಾಧನೆಗಳು. 'ಪರಧರ್ಮಃ'=ದೃಶ್ಯ ಸಂಬಂಧವಾದ ಧರ್ಮವು- ಶಬ್ದಾದಿ ವಿಷಯ ಸೌಖ್ಯಗಳು, ಪ್ರಾಪಂಚಿಕ ಭೋಗಗಳು ಮೊದಲಾದುವು. ಆತ್ಮ ಪ್ರಾಪ್ತಿಗಾಗಿ ಮಾಡಬೇಕಾದ ಸಾಧನೆಗಳು, ವ್ರತಾದಿಗಳು ಪ್ರಾರಂಭದಲ್ಲಿ ಸ್ವಲ್ಪ ಪ್ರಯಾಸಕರವಾಗಿ ಕಂಡರೂ ಅವುಗಳನ್ನು ಬಿಡಬಾರದು. ಹಾಗೆಯೇ ವಿಷಯ ಸೌಖ್ಯ ಸಾಧನೆಗಳು ಸುಲಭವಾಗಿ ಕಂಡುಬಂದರೂ ಅವುಗಳನ್ನು ಹಿಡಿಯಬಾರದು. ಏಕೆಂದರೆ ಅವು ಜೀವಿಯನ್ನು ದೈವ ವಿಮುಖನನ್ನಾಗಿ ಮಾಡಿ ನರಕದಲ್ಲಿ ಬೀಳಿಸುವುವು. ಆದ್ದರಿಂದ ಮಹಾಭಯಂಕರವಾದುವು. ಮುಮುಕ್ಷುವು ಅವುಗಳ ಜೋಲಿಗೆ ಹೋಗದೆ, ಆತ್ಮಧರ್ಮಗಳಲ್ಲಿ, ಸದಾಚಾರಗಳಲ್ಲಿ, ವ್ರತನಿಷ್ಠಾದಿಗಳಲ್ಲಿ ಪ್ರೀತಿಯುಳ್ಳವನಾಗಿ ಅವುಗಳನ್ನೇ ಆಶ್ರಯಿಸಬೇಕು. ಮಾಯೆ ಅನೇಕ ವಿಧಗಳಿಂದ ಜೀವಿಯನ್ನು ಮೋಸ ಮಾಡುವುದು. ಪರಮಾತ್ಮ ಸಾಧನೆ ಪ್ರಾರಂಭದಲ್ಲಿ 'ವಿಗುಣ'ವಾಗಿ ಪ್ರಯಾಸಕರವಾಗಿರುವಂತೆ ಭಾಸವಾಗುತ್ತದೆ. ಸಂಸಾರ ಸೌಖ್ಯಗಳು 'ಸುಗುಣ'ವಾಗಿ ಸುಲಭವಾಗಿರುವಂತೆ ತೋರುವುವು. ಸಾಧಕನು ಈ ವಿಷಯದಲ್ಲಿ ಬಹಳ ಜಾಗರೂಕನಾಗಿದ್ದು ಕಷ್ಟವಾಗಿ ತೋರಿದರೂ ತನ್ನ ಪರಮಾತ್ಮ ಸಾಧನೆಯನ್ನು, ವ್ರತನಿಷ್ಠೆಯನ್ನು ಸ್ವಲ್ಪವೂ ಸಡಿಲಿಸಬಾರದು. ಒಂದು ವೇಳೆ ಸ್ವಾತ್ಮಧರ್ಮಾಚರಣೆಯ, ವ್ರತಪಾಲನೆಯ ಮಧ್ಯದಲ್ಲಿ ಮರಣ ಸಂಭವಿಸಿದರೂ ಅದು ಶ್ರೇಯಸ್ಕರವೇ ಆಗುವುದು. ಕಷ್ಟಗಳು ಬಂದರೂ ಒಳ್ಳೆಯದಕ್ಕೇ ಬರುವುವು. ಅಚಂಚಲ ನಿಷ್ಠೆಯಿಂದ, ಧೈರ್ಯದಿಂದ, ಹಿಡಿದ ಪಟ್ಟು ಬಿಡದೆ ಆತ್ಮಸಾಧನೆಯನ್ನು ಮುಂದುವರಿಸಿದರೆ ಸ್ವಲ್ಪಕಾಲದಲ್ಲಿಯೇ ಪರಮಾನಂದ ಲಕ್ಷ್ಯವನ್ನು ಪಡೆಯುವನು. ಆದ್ದರಿಂದ ಎಷ್ಟು ವಿಗುಣವಾಗಿ ಕಂಡರೂ ಸ್ವಾತ್ಮ ಧರ್ಮವನ್ನು ಬಿಡಬಾರದೆಂದೂ, ಎಷ್ಟು ಸುಗುಣವಾಗಿ ತೋರಿದರೂ ದೃಶ್ಯ ಧರ್ಮವನ್ನು ಅವಲಂಬಿಸಬಾರದೆಂದೂ ಭಗವಂತನು ಈ ಶ್ಲೋಕದಲ್ಲಿ ಬೋಧಿಸಿದ್ದಾನೆ. ಸಾಧನೆಯ ಕಾಲದಲ್ಲಿ ಇಂತಹ ಧೈರ್ಯೋತ್ಪಾದಕ ವಚನಗಳನ್ನು ಮುಮುಕ್ಷುವು ಮತ್ತೆ ಮತ್ತೆ ಸ್ಮರಿಸುತ್ತಾ ಮುಂದುವರಿಯಬೇಕು.

ಪ್ರ : ಸ್ವಧರ್ಮ, ಪರಧರ್ಮಗಳಲ್ಲಿ ಯಾವುದು ಶ್ರೇಷ್ಠವಾದುದು? ಹೇಗೆ?

ಉ : ಕಷ್ಟವಾಗಿ ತೋರಿದರೂ ಸ್ವಧರ್ಮವೇ ಮೇಲು. ಸುಖವಾಗಿ ತೋರಿದರೂ ಪರಧರ್ಮವು ಭಯಂಕರವಾದುದು. ಸ್ವಧರ್ಮವು ಉನ್ನತಿಯನ್ನುಂಟು

ಮಾಡುವುದು. ಸ್ವಧರ್ಮಪಾಲನೆಯ ಮಧ್ಯದಲ್ಲಿ ಒಂದು ವೇಳೆ ಮರಣ ಸಂಭವಿಸಿದರೂ ಅದು ಜೀವಿಗೆ ಶ್ರೇಯಸ್ಕರವೇ ಆಗುವುದು.

**ಅ||** ಈ ವಿಧವಾಗಿ ಪರಧರ್ಮವನ್ನು ಆಶ್ರಯಿಸುವುದು, ಪಾಪ ಕಾರ್ಯಗಳನ್ನು ಅವಲಂಬಿಸುವುದು ದುಃಖಪ್ರದಗಳೆಂದು ತಿಳಿದೂ ಮನುಜನು ಏಕೆ ಬಲವಂತವಾಗಿ ಅವುಗಳ ಕಡೆಗೆ ಎಳೆಯಲ್ಪಡುತ್ತಾನೆ ಎನ್ನುವ ಶಂಕೆ ಈ ಸಂದರ್ಭದಲ್ಲಿ ಅರ್ಜುನನಿಗೆ ಉದಯಿಸಿ ಭಗವಂತನನ್ನು ಈ ರೀತಿ ಪ್ರಶ್ನಿಸುತ್ತಿದ್ದಾನೆ-

**ಅರ್ಜುನ ಉವಾಚ :**

**೩೬. ಅಥ ಕೇನ ಪ್ರಯುಕ್ತೋಽಯಮ್ ಪಾಪಂ ಚರತಿ ಪೂರುಷಃ**
**ಅನಿಚ್ಛನ್ನಪಿ ವಾರ್ಷ್ಣೇಯ ಬಲಾದಿವ ನಿಯೋಜಿತಃ**

ಅರ್ಜುನ ಉವಾಚ- ಅರ್ಜುನನು ಹೇಳಿದನು.

**ಅರ್ಥ:** ವಾರ್ಷ್ಣೇಯ=ಓ ಕೃಷ್ಣಾ!, ಅಥ=ಹಾಗಿದ್ದರೆ; ಅಯಂಪೂರುಷಃ= ಈ ಪುರುಷನು; ಕೇನ=ಯಾವುದರಿಂದ; ಪ್ರಯುಕ್ತ=ಪ್ರೇರೇಪಿಸಲ್ಪಟ್ಟವನಾಗಿ; ಅನಿಚ್ಛನ್ನಪಿ=ಕೋರದೆ ಇದ್ದರೂ; ಬಲಾತ್=ಬಲಾತ್ಕಾರವಾಗಿ; ನಿಯೋಜಿತ ಇವ=ನಿಯಂತ್ರಿತಗೊಂಡವವನಂತೆ; ಪಾಪಂ=ಪಾಪವನ್ನು; ಚರತಿ= ಆಚರಿಸುತ್ತಿದ್ದಾನೆ.

**ತಾ||** ಅರ್ಜುನನು ಶ್ರೀ ಕೃಷ್ಣಮೂರ್ತಿಯನ್ನು ಹೀಗೆ ಪ್ರಶ್ನಿಸಿದನು- ಓ ಕೃಷ್ಣಾ! ಮನುಜನು ಪಾಪವನ್ನು ಮಾಡಬಾರದೆಂದುಕೊಂಡರೂ, ಯಾವುದರಿಂದ ಪ್ರೇರೇಪಿಸಲ್ಪಟ್ಟು ಬಲಾತ್ಕಾರವಾಗಿ ಪಾಪವನ್ನು ಆಚರಿಸುತ್ತಲೇ ಇದ್ದಾನೆ.

**ವ್ಯಾಖ್ಯೆ:** ಶ್ರೀಕೃಷ್ಣ ಪರಮಾತ್ಮನು ಇಂದ್ರಿಯ ನಿಗ್ರಹಣ, ರಾಗ ದ್ವೇಷವಿಸರ್ಜನೆ, ಸ್ವಧರ್ಮ ಮುಂತಾದುವುಗಳನ್ನು ಕುರಿತು ಬೋಧಿಸುತ್ತಾ ಇರುವಾಗ ಅರ್ಜುನನಿಗೆ ಒಂದು ಸಂದೇಹ ಬರಲು ಕೂಡಲೇ ಭಗವಂತನನ್ನು ಪ್ರಶ್ನಿಸಿದನು. ಈ ಸಂದೇಹವು ಅರ್ಜುನನೊಬ್ಬನಿಗೇ ಅಲ್ಲ, ಪ್ರತಿಮುಮುಕ್ಷುವಿಗೂ ಬರುತ್ತದೆಯಾದ್ದರಿಂದ ಈ ಪ್ರಶ್ನೆ ಮತ್ತು ಅದಕ್ಕೆ ಭಗವಂತನು ಕೊಟ್ಟ ಸಮಾಧಾನ ಸಾಧಕ ಲೋಕಕ್ಕೆ ಅತ್ಯಾವಶ್ಯಕವಾದುದು.

ವಿಷಯಾನುಭವವು ಪ್ರಮಾದವೆಂದು ತಿಳಿಯದವನಾರು? ಅಸತ್ಯವು ಪಾಪವೆಂದು ತಿಳಿಯದವನಾರು? ಕೋಪವು ಕೆಟ್ಟದ್ದೆಂದು ಪ್ರತಿಯೊಬ್ಬನಿಗೆ ಗೊತ್ತಿಲ್ಲವೇ? ಹಾಗೆ ತಿಳಿದಿದ್ದರೂ ಸಹ ಜನರು ಪಾಪಗಳನ್ನು ಬಲಾತ್ಕಾರವಾಗಿ ಮಾಡುತ್ತಲೇ ಇದ್ದಾರೆ. ಒಂದು ವಸ್ತುವನ್ನು ತಿನ್ನಬಾರದೆಂದು ಮನಸ್ಸು ನಿರ್ಧರಿಸಿದರೂ, ಯಾವುದೋ ಒಂದು ಶಕ್ತಿ ಅವನನ್ನು ತಿನ್ನುವಂತೆ ಮಾಡಿಸುತ್ತದೆ. ಆ ಶಕ್ತಿ ಯಾವುದು ಎನ್ನುವುದು ಅರ್ಜುನನ ಪ್ರಶ್ನೆ. ಮಾಡಬಾರದೆಂದು ನಿಶ್ಚಯಿಸಿಕೊಂಡ ಮಾನವನಿಂದ ಪುನಃ ಕೆಲಸವನ್ನು ಮಾಡಿಸುವುದು ಯಾವುದು ಎನ್ನುವುದು ಅರ್ಜುನನ ಶಂಕೆ. ಪಾಪ ಮಾಡಬೇಕೆನ್ನುವ ಕೋರಿಕೆಯಿಲ್ಲದಿದ್ದರೂ ಪಾಪವನ್ನು ಮಾಡುತ್ತಿದ್ದಾನೆಂದರೆ, ಪ್ರತಿಕೂಲಶಕ್ತಿ ಜೀವಿಯಲ್ಲಿ ಎಷ್ಟು ಶಕ್ತಿಯುತವಾಗಿದೆಯೋ ಯೋಚಿಸ ಬಹುದು. 'ಬಲಾದಿವ ನಿಯೋಜಿತಃ'- ಎಂದು ಹೇಳಿರುವುದರಿಂದ ರಾಜನಿಂದ ಆಜ್ಞಾಪಿತವಾದ ಸೇವಕನಂತೆ ಯಾವುದೋ ಒಂದು ಪ್ರಬಲ ಶಕ್ತಿಯಿಂದ ಪ್ರಚೋದನೆಗೊಳಗಾಗಿ ಮನುಷ್ಯನು ಬಲಾತ್ಕಾರವಾಗಿ ದುಷ್ಕರ್ಮ್ಯದಲ್ಲಿ ತೊಡಗುತ್ತಿದ್ದಾನೆ. ಆ ಪ್ರತಿಕೂಲ ಶಕ್ತಿಯನ್ನು ಹಾಗು ಅದನ್ನು ತೊಲಗಿಸುವ ಉಪಾಯವನ್ನು ಭಗವಂತನು ಕರುಣೆಯಿಂದ ಉಪದೇಶಿಸು ತ್ತಿದ್ದಾನೆ. ಆದ್ದರಿಂದ ಸಾಧಕರು ಅತ್ಯಂತ ಜಾಗರೂಕತೆಯಿಂದ ಇದನ್ನು ಪರಿಶೀಲಿಸಿ ತಮ್ಮ ಆಚರಣೆಯಲ್ಲಿ ಸರಿಯಾದ ಮಾರ್ಗವನ್ನು ಅವಲಂಬಿಸಬೇಕು.

ಪ್ರಪಂಚದಲ್ಲಿ ಮೂರು ರೀತಿಯ ಜೀವಿಗಳಿದ್ದಾರೆ- ೧) ಎಂದೂ ಪಾಪಮಾಡದವರು ೨) ಪಾಪವನ್ನು ಮಾಡುವ ಯೋಜನೆಯಿಲ್ಲದಿದ್ದರೂ ಸಹ ಯಾವುದೋ ಒಂದು ಪ್ರೇರಣೆಯಿಂದ ಬಲವಂತವಾಗಿ ಪಾಪಗಳನ್ನು ಮಾಡುವವರು. ೩) ಬೇಕೆಂದು ಪಾಪಗಳನ್ನು ಮಾಡುವವರು- ಇವರಲ್ಲಿ ಮೊದಲನೆಯ ತರಗತಿಯವರು ಉತ್ತಮೋತ್ತಮರು, ಜೀವನ್ಮುಕ್ತರು, ಮಾಯಾತೀತರು. ಇವರ ಮುಂದೆ ಪ್ರಕೃತಿಯ ಆಟಪಾಟಗಳು ಸಾಗವು. ಎರಡನೆಯ ತರಗತಿಯವರು ಮುಮುಕ್ಷುಗಳು, ಸಾಧಕರು. ಇವರನ್ನು ಕುರಿತು ಅರ್ಜುನನು ಪ್ರಶ್ನಿಸಿದ್ದಾನೆ. ಇನ್ನು ಮೂರನೆಯ ತರಗತಿಯವರು ನಿಕೃಷ್ಟರು, ರಾಕ್ಷಸ ಗುಣವುಳ್ಳವರು. ಅಜ್ಞಾನಿಗಳು. ಮೂರು ಮತ್ತು ಎರಡನೆಯ ತರಗತಿಗಳಲ್ಲಿ ತೇರ್ಗಡೆ ಹೊಂದಿ ಮೊದಲನೆಯ ತರಗತಿಗೆ ಪ್ರವೇಶಿಸಬೇಕು. ಅದಕ್ಕಾಗಿ ಭಗವಂತನು ಈ ಮುಂದೆ ಹೇಳುವ ಬುದ್ಧಿವಾದವನ್ನು ಕೇಳಿ ಜನರು ಅವರವರ ಹೃದಯಗಳನ್ನು ಪರಿಶೋಧಿಸಿಕೊಂಡು ಪಾಪರಹಿತರಾಗಲು ತೀವ್ರವಾದ ಪ್ರಯತ್ನ ಮಾಡಬೇಕು.

**ಅ||** ಅರ್ಜುನನ ಪ್ರಶ್ನೆಗೆ ಭಗವಂತನು ಸಮಾಧಾನ ಹೇಳುತ್ತಿದ್ದಾನೆ.

**ಶ್ರೀ ಭಗವಾನುವಾಚ:**

**೩೭. ಕಾಮ ಏಷ ಕ್ರೋಧ ಏಷಃ ರಜೋಗುಣಸಮುದ್ಭವಃ**
**ಮಹಾಶನೋ ಮಹಾಪಾಪ್ಮಾ ವಿದ್ಧ್ಯೇನಮಿಹ ವೈರಿಣಮ್**

ಶ್ರೀಭಗವಾನುವಾಚ- ಭಗವಂತನು ಹೇಳಿದನು.

**ಅರ್ಥ:** ಏಷಃ=(ನೀನು ಕೇಳಿದ) ಈ ಕಾರಣವು; ರಜೋಗುಣ ಸಮುದ್ಭವಃ= ರಜೋಗುಣದಿಂದ ಹುಟ್ಟಿದ; ಕಾಮಃ=ಕಾಮವು; ಏಷಃ=ಇದೇ ಆಗಿದೆ (ಕಾಮವೇ); ಕ್ರೋಧಃ=ಕ್ರೋಧ(ವಾಗಿ ಪರಿಣಮಿಸುತ್ತದೆ); ಮಹಾಶನಃ= (ಇದು) ತೃಪ್ತಿ ಹೊಂದುವುದಿಲ್ಲವೆಂದೂ; ಮಹಾಪಾಪ್ಮಾ=ಮಹಾ ಪಾಪಗಳಿಗೆ ಕಾರಣಭೂತವಾದದು (ಆಗಿದೆಯಾದ್ದರಿಂದ); ಏನಂ=ಈ ಕಾಮವನ್ನು; ಇಹ=ಈ ಮೋಕ್ಷ ಮಾರ್ಗದಲ್ಲಿ; ವೈರಿಣಂ=ಶತ್ರುವೆಂದು; ವಿದ್ಧಿ= ತಿಳಿಯುವುದು.

**ತಾ||** ಶ್ರೀಭಗವಂತನು ಹೇಳಿದನು- ಓ ಅರ್ಜುನಾ! ನೀನು ಕೇಳಿದ ಈ ಹೇತುವು (ಕಾರಣವು) ರಜೋಗುಣದಿಂದ ಹುಟ್ಟಿದ ಕಾಮ. ಇದು ಕ್ರೋಧವಾಗಿ ಪರಿಣಮಿಸುತ್ತದೆ. ಈ ಕಾಮವನ್ನು ಎಷ್ಟು ಅನುಭವಿಸಿದರೂ ತೃಪ್ತಿ ಹೊಂದದೆ, ಮಹಾಪಾಪಕ್ಕೆ ಕಾರಣಭೂತವಾಗುತ್ತದೆ. ಆದ್ದರಿಂದ ಇದನ್ನು ಮೋಕ್ಷ ಮಾರ್ಗದಲ್ಲಿ ಶತ್ರುವೆಂದು ಪರಿಗಣಿಸುವುದು.

**ವ್ಯಾಖ್ಯೆ:** ಪಾಪ ಮಾಡಬಾರದು ಎಂದು ಅಂದುಕೊಂಡರೂ ಜೀವಿಯಿಂದ ಬಲಾತ್ಕಾರವಾಗಿ ಪಾಪವನ್ನು ಮಾಡಿಸಲ್ಪಡುವ ಶಕ್ತಿ ಯಾವುದೋ ಇಲ್ಲಿ ತಿಳಿಸಲಾಗಿದೆ. ಅದು ಕಾಮ. ಅದು ರಜೋಗುಣದಿಂದ ಹುಟ್ಟಿದೆ. ಅದರ ತಮ್ಮ ಕ್ರೋಧ. ಈ ಕಾಮ ಕ್ರೋಧಗಳು ಯಾವಾಗಲೂ ಕೂಡಿಯೇ ಇರುತ್ತವೆ. ಗೀತೆಯಲ್ಲಿ ಬಹಳ ಕಡೆ ಇವೆರಡನ್ನು ಸೇರಿಸಿಯೇ ಉಲ್ಲೇಖಿಸಲಾಗಿದೆ. ಈಗಾಗಲೇ ತಿಳಿಸಿದ ರಾಗ ದ್ವೇಷಗಳ ಪ್ರತಿರೂಪಗಳೇ ಈ ಕಾಮಕ್ರೋಧ

ಗಳೆಂದು ತಿಳಿಯಬೇಕು. ಕ್ರೋಧವು ಕಾಮದಿಂದ ಉದ್ಭವಿಸುತ್ತಾದ್ದರಿಂದ ಈ ಎರಡರಲ್ಲಿ ಕಾಮವೇ ಪ್ರಧಾನವಾದುದು. ಮನಸ್ಸಿನ ಶತ್ರುಗಳಲ್ಲಿ ಮಹಾ ಬಲವತ್ತರವಾದುದು ಕಾಮವೇ ಆದುದರಿಂದ ಅರಿಷಡ್ವರ್ಗಗಳಲ್ಲಿ ಅದಕ್ಕೆ ಪ್ರಥಮ ಸ್ಥಾನವನ್ನೀಯಲಾಗಿದೆ. ಅಸುರ ಗುಣಗಳಿಗೆ ಕಾಮವು ನಾಯಕ (Captain). ಕ್ರೋಧವು ಉಪನಾಯಕ. ಮೋಕ್ಷ ಮಾರ್ಗದಲ್ಲಿ ಪ್ರಯಾಣಿಸುವವರು ಎದುರಿಸಬೇಕಾಗಿರುವ ವ್ಯತಿರೇಕ ಶಕ್ತಿಗಳಲ್ಲಿ ಕಾಮವು ಮುಖ್ಯವಾದುದಾಗಿರುವುದರಿಂದ, ಜೀವಿಗೆ ದೈವ ಸಾಕ್ಷಾತ್ಕಾರದಲ್ಲಿ ಮಹಾಪ್ರತಿಬಂಧಕವಾದದ್ದಾಗಿರುವುದರಿಂದ, ಈ ಕಾಮದ ಬಗ್ಗೆ ಭಗವಂತನು ಹೆಚ್ಚಿನ ವಿವರಣೆ ನೀಡುತ್ತಿದ್ದಾನೆ.

ಅದರ ಚರಿತ್ರೆಯನ್ನು ವರ್ಣಿಸಿ ಹೇಳುತ್ತಾ, ಮೊಟ್ಟಮೊದಲು ಕಾಮವನ್ನು ೧) 'ಇದು ಮಹಾ ಬಕಾಸುರ' (ಮಹಾಶನಃ) ಎಂದು ಹೇಳಿದನು. ಎಷ್ಟು ಆಹುತಿಗಳನ್ನಿತ್ತರು ಅಗ್ನಿಹೋತ್ರನಿಗೆ ತೃಪ್ತಿಯಾಗದಿರುವಂತೆ ಈ ಕಾಮವನ್ನು ಎಷ್ಟು ಅನುಭವಿಸಿದರೂ ತೃಪ್ತಿಯುಂಟಾಗುವುದಿಲ್ಲ. ಮೇಲಾಗಿ ವೃದ್ಧಿ ಹೊಂದುತ್ತಲೇ ಹೋಗುವುದು. 'ತೃಪ್ತಿಯಾಯಿತು' ಎಂದು ಕಾಮವು ಹೇಳಿದ ಸಂದರ್ಭವು ಒಂದಾದರೂ ಚರಿತ್ರೆಯಲ್ಲಿಲ್ಲ. ಕೋರಿಕೆಗಳನ್ನು ಅನುಭವಿಸುತ್ತಾ ಕಾಮವನ್ನು ಯಾರೂ ನಿಗ್ರಹ ಮಾಡಲಾರರು. ಕಟ್ಟಿಗೆಯ ತುಂಡುಗಳನ್ನು ಹಾಕುವುದನ್ನು ನಿಲ್ಲಿಸಿದಾಗ ಮಾತ್ರ ಅಗ್ನಿ ತಣ್ಣಗಾದಂತೆ, ತತ್ತ್ವ ವಿಚಾರಣೆಯ ದ್ವಾರ ಕೋರಿಕೆಗಳನ್ನು ಕಡಿಮೆ ಮಾಡಿಕೊಳ್ಳುತ್ತಾ ಹೋಗುವುದೇ ಕಾಮನಿರ್ಮೂಲನಕ್ಕೆ ಇರುವ ಏಕೈಕ ದಾರಿ. ಈ ಕಾಮವು ೨) ಮಹಾಪಾಪ ಜನಕವಾದದ್ದು (ಮಹಾಪಾಪ್ಮಾ) ಎಂದು ಇಲ್ಲಿ ಹೇಳಲ್ಪಟ್ಟಿದೆ. 'ಪಾಪ್ಮಾ' ಎಂದು ಹೇಳದೆ 'ಮಹಾಪಾಪ್ಮಾ' ಎಂದು ಹೇಳಿರುವುದರಿಂದ ಘೋರ ಪಾಪಕ್ಕೆ ಇದು ಕಾರಣವಾಗುತ್ತದೆಂದು ಸ್ಪಷ್ಟವಾದಂತಾಗಿದೆ. ಜೀವಿಗೆ ಜನ್ಮ ಜನ್ಮಾಂತರಗಳಲ್ಲಿ ಪುಣ್ಯದ ಖಾತೆ ಕಡಿಮೆಯಾಗಿ ಪಾಪದ ಹೊರೆ ಬೆಳೆಯಲು ಕಾರಣ ಈ ಕಾಮವೇ ಆಗಿದೆ.

ಇದನ್ನು ಶತ್ರು (ವೈರಿ) ಎಂದೂ ಕರೆಯಲಾಗಿದೆ. ಜೀವಿಗೆ ಅತಿ ನಿಕಟವಾಗಿರುವ ಶತ್ರು ಈ ಕಾಮವೇ ಆಗಿದೆ. ಏಕೆಂದರೆ ಅದು ಬಾಹ್ಯದಲ್ಲಿರದೆ ಹೃದಯದಲ್ಲಿಯೇ ಸ್ಥಾನಮಾಡಿಕೊಂಡಿದೆ. ಅದು ಈಗಿನ ಶತ್ರುವಲ್ಲ, ಬಹಳ ಹಳೆಯ ಶತ್ರು. ಎಷ್ಟೋ ಜನ್ಮಗಳಿಂದ ಜೀವಿಯನ್ನು ವೇದಿಸುತ್ತಾ ಆತನ ಆತ್ಮ ಸ್ವಾತಂತ್ರ್ಯವನ್ನು ಕಬಳಿಸಿ ಅವನನ್ನು ಜೀತದಾಳನ್ನಾಗಿ ಮಾಡಿ ತನ್ನ ಹತೋಟಿಯಲ್ಲಿಟ್ಟುಕೊಂಡಿದೆ. ಆತನ ಹೃದಯ ಸಾಮ್ರಾಜ್ಯಾಧಿಪತ್ಯವೆಲ್ಲವನ್ನೂ ತಾನೇ ಸ್ವೀಕರಿಸಿ ಅಧಿಕಾರವನ್ನು ಚಲಾಯಿಸುತ್ತಾ ತಾನೊಬ್ಬನೇ ಅಲ್ಲದೆ ತನ್ನ ಬಂಧುವರ್ಗವನ್ನು (ಕ್ರೋಧಾದಿಗಳನ್ನು) ಸಹ ಜೊತೆಮಾಡಿಕೊಂಡು ಅವನಲ್ಲಿ ನಿವಸಿಸುತ್ತಿದೆ. ಶತ್ರು ಇರುವ ಕಡೆ ಶಾಂತಿಯಿರದು. ಆದ್ದರಿಂದ ವಿವೇಕ ವೈರಾಗ್ಯಾದಿಗಳಿಂದ ಈ ಕಾಮವೆನ್ನುವ ಪ್ರಬಲ ಶತ್ರುವನ್ನು ಹೃದಯ ನಿವಾಸದಿಂದ ಹೊರದೂಡಲು ಜೀವಿಯು ಬದ್ಧ ಕಂಕಣನಾಗಬೇಕು.

ವ್ಯಾಧಿಯನ್ನು ಮೇಲ್ಮೇಲೆ ನಿವಾರಿಸುವುದಕ್ಕಿಂತ ಅದರ ಮೂಲವನ್ನು ಅರಿತು ಸಮೂಲವಾಗಿ ತೊಲಗಿಸಿ ಹಾಕುವುದು ಶ್ರೇಯಸ್ಕರ (Prevention is better than cure); ಭಗವಂತನು ಇಲ್ಲಿ ಅದೇ ಕೆಲಸವನ್ನು ಮಾಡುತ್ತಿದ್ದಾನೆ. ಸಂಸಾರ ದುಃಖಗಳಿಗೆ ಮೇಲ್ಮೇಲೆ ತೇಪೆ ಹಾಕುವುದಕ್ಕಿಂತ ಆ ದುಃಖಗಳಿಗೆಲ್ಲಾ ಮೂಲವೇನೋ ವಿಚಾರಿಸಿ, ಈ ಸಂಸಾರ ವೃಕ್ಷಕ್ಕೆ ಬೀಜ ಪ್ರದವಾದ ಆ ಕಾಮವನ್ನು ತೆಗೆದು ಹಾಕುವ ಪ್ರಯತ್ನ ಮಾಡಬೇಕಾಗಿದೆ.

ಪ್ರ : ಯಾವುದರ ಪ್ರೇರಣೆಯಿಂದ ಜೀವಿಯು ತಾನು ಬೇಡವೆಂದುಕೊಂಡರೂ ಪಾಪವನ್ನು ಮಾಡುತ್ತಿದ್ದಾನೆ?

ಉ : ಕಾಮದ ಪ್ರೇರಣೆಯಿಂದ

ಪ್ರ : ಆ ಕಾಮವು ಎಂತಹದು?

ಉ : ಅದು ೧) ಎಷ್ಟು ಅನುಭವಿಸಿದರೂ ತೃಪ್ತಿಯಾಗದಂತಹದು ೨) ಮಹಾ ಪಾಪಜನಕವಾದುದು ೩) ಜೀವಿಯ ಪ್ರಬಲ ಶತ್ರು.

**ಅ॥** ಕಾಮದ ಸ್ವರೂಪ ಸ್ವಭಾವಗಳನ್ನು, ಪಾಪ ಜನಕಗುಣವನ್ನು ಮೂರು ಶ್ಲೋಕಗಳಲ್ಲಿ ವಿವರಿಸಿ ಹೇಳಲಾಗುತ್ತಿದೆ-

**೩೮. ಧೂಮೇನಾವ್ರಿಯತೇ ವಹ್ನಿಃ ಯಥಾದರ್ಶೋ ಮಲೇನ ಚ**
**ಯಥೋಲ್ಬೇನಾವೃತೋ ಗರ್ಭಃ ತಥಾ ತೇನೇದಮಾವೃತಮ್**

**ಅರ್ಥ:** ಯಥಾ=ಯಾವ ಪ್ರಕಾರವಾಗಿ; ಧೂಮೇನ=ಹೊಗೆಯಿಂದ; ಅಗ್ನಿಃ=ಅಗ್ನಿಯು; ಆವ್ರಿಯತೇ=ಮುಚ್ಚಲ್ಪಡುತ್ತದೆಯೋ; (ಯಥಾ=ಯಾವ ಪ್ರಕಾರವಾಗಿ), ಆದರ್ಶಃ ಚ=ಕನ್ನಡಿಯು; ಮಲೇನ=ಮಾಲಿನ್ಯದಿಂದ (ಧೂಳಿನಿಂದ); (ಆವ್ರಿಯತೇ=ಕವಿಯಲ್ಪಡುತ್ತದೊ); ಯಥಾ=ಯಾವ ಪ್ರಕಾರವಾಗಿ; ಉಲ್ಬೇನ=ಜರಾಯುವಿನಿಂದ; ಗರ್ಭಃ=ಗರ್ಭದಲ್ಲಿಯ ಶಿಶು; ಆವೃತಃ=ಮುಚ್ಚಲ್ಪಟ್ಟಿದೆಯೋ; ತಥಾ=ಹಾಗೆಯೇ, ತೇನ=ಆ ಕಾಮದಿಂದ; ಇದಂ=ಈ ಆತ್ಮಜ್ಞಾನ; ಆವೃತಂ=ಮುಚ್ಚಲ್ಪಟ್ಟಿದೆ.

**ತಾ॥** ಹೊಗೆಯಿಂದ ಅಗ್ನಿ, ಧೂಳಿನಿಂದ ಕನ್ನಡಿ, ಜರಾಯು ಎಂಬ ಪೊರೆಯಿಂದ ಗರ್ಭದಲ್ಲಿರುವ ಶಿಶು ಮುಚ್ಚಲ್ಪಟ್ಟಿರುವಂತೆ ಕಾಮದಿಂದ ಜ್ಞಾನವು ಮುಚ್ಚಲ್ಪಟ್ಟಿದೆ.

**ವ್ಯಾಖ್ಯೆ:** ಪ್ರತಿಜೀವಿಯ ಹೃದಯದಲ್ಲಿ ಆತ್ಮವು ದೇದೀಪ್ಯಮಾನವಾಗಿ ಪ್ರಕಾಶಿಸುತ್ತಿದೆ. ಆದರೆ ಅದು ಕಾಮಾದಿಗಳಿಂದ ಆವೃತವಾಗಿರುವುದರಿಂದ ಅನುಭೂತಿಗೊಳಗಾಗಲಾರದು. ಈ ವಿಷಯವನ್ನು ಸ್ಪಷ್ಟೀಕರಿಸಲೋಸುಗ ಭಗವಂತನು ಇಲ್ಲಿ ಮೂರು ದೃಷ್ಟಾಂತಗಳನ್ನು ಕೊಟ್ಟಿದ್ದಾನೆ. ೧) ಅಗ್ನಿ ಹೊಗೆಯಿಂದ ಮುಚ್ಚಲ್ಪಟ್ಟಂತೆ ೨) ಕನ್ನಡಿಯು ಧೂಳಿನಿಂದ ಕವಿಯಲ್ಪಟ್ಟಂತೆ ೩) ಗರ್ಭಸ್ಥ ಶಿಶು ಜರಾಯುವುನಿಂದ ಆವೃತವಾದಂತೆ ಆತ್ಮವು ಕಾಮದಿಂದ ಮುಚ್ಚಲ್ಪಟ್ಟಿದೆಯೆಂದು ಹೇಳಲಾಗಿದೆ. ಹೊಗೆಯಿಂದ ಮುಚ್ಚಲ್ಪಟ್ಟಾಗ ಅಗ್ನಿ ಅಲ್ಲಿ ಇದೆ ಎಂದು ಗೊತ್ತಾಗುವುದೇ ಇಲ್ಲ. ಹೊಗೆಯ ಕಪ್ಪು ಅಗ್ನಿಯ ಪ್ರಕಾಶವನ್ನು ಮಂದಗೊಳಿಸಿ ಅದೇ ಜಯಿಸಿದಂತೆ ತೋರಿ ಬರುತ್ತದೆ. ಹಾಗೆಯೇ ದರ್ಪಣಾದಿಗಳು. ಆದರೆ ಬೀಸುವ ಗಾಳಿಯಿಂದ ಆ ಹೊಗೆ ದೂರವಾಗಿ ಅಗ್ನಿ ಸ್ವತಃ ಸಿದ್ಧವಾಗಿ ದೇದೀಪ್ಯಮಾನವಾಗಿ ವ್ಯಕ್ತವಾಗುವುದು. ಕನ್ನಡಿಯ ಮೇಲಿನ ಧೂಳನ್ನು ಒರೆಸಿದ ನಂತರ ಅದು ಸ್ವಚ್ಛವಾಗಿ ಪ್ರಕಾಶಿಸುವುದು. ಜರಾಯು ತನ್ನ ಆವರಣವನ್ನು ತೆರೆದ ನಂತರ ಶಿಶು ಗರ್ಭದಿಂದ ಹೊರಬೀಳುವುದು. ಹಾಗೆಯೇ ಭಕ್ತಿ ಜ್ಞಾನ ವೈರಾಗ್ಯಾದಿ ಸಾಧನೆಗಳಿಂದ ಕಾಮಾದಿಗಳನ್ನು ಹೃದಯದಿಂದ ಹೊರದೂಡಿದರೆ ಆತ್ಮವು ಪ್ರತ್ಯಕ್ಷವಾಗಿ ಅನುಭೂತಿಯಾಗುವುದು. ಅದೇ ಮೋಕ್ಷ ಸ್ಥಿತಿ, ಬಂಧರಾಹಿತ್ಯ.

ಮತ್ತೆ ಅಗ್ನಿ ಹೊಗೆಯಿಂದ ಮುಚ್ಚಲ್ಪಟ್ಟಾಗಲಿ, ಕನ್ನಡಿಯ ಮೇಲೆ ಧೂಳು ಕುಳಿತಾಗಾಗಲಿ, ಶಿಶುವು ಜರಾಯುವಿನಿಂದ ಆವೃತವಾದಾಗಲಿ; ಹೊಗೆ ಹಾಗು ಧೂಳು ಆ ಅಗ್ನಿ; ದರ್ಪಣಗಳ ಸ್ವರೂಪಕ್ಕೆ ವಾಸ್ತವವಾಗಿ

ಯಾವ ಹಾನಿಯನ್ನೂ ಉಂಟು ಮಾಡುವುದಿಲ್ಲ. ಅವು ಸ್ವತಃ ನಿರ್ಮಲವಾಗಿಯೇ ಇರುವುವು. ಹಾಗೆಯೇ ಆತ್ಮವು ಕಾಮಾದಿಗಳಿಂದ ಆವೃತವಾಗಿದ್ದರೂ ಅದರ ನಿರ್ಮಲತೆಗೆ ಯಾವ ರೀತಿಯ ಭಂಗವೂ ಉಂಟಾಗುವುದಿಲ್ಲ. ಆವರಣವಿರುವುದರಿಂದ ಅವು ಅನುಭೂತಿಯಾಗಲಾರವು. ಅದು ತೊಲಗುತ್ತಲೇ ಅನುಭೂತಿಯಾಗುತ್ತದೆ. ಇಲ್ಲಿ ವಸ್ತುವಿನಲ್ಲಿ ಯಾವ ಬದಲಾವಣೆಯೂ ಉಂಟಾಗದೆ ಆವರಣವು ಮಾತ್ರ ಸರಿಸಲ್ಪಡುತ್ತದೆ. ಆದ್ದರಿಂದ ಸಾಧಕರು ತಮ್ಮ ಹೃದಯಗಳಲ್ಲಿರುವ ಕಾಮಾದಿರೂಪ ಆವರಣವನ್ನು ಪುರುಷ ಪ್ರಯತ್ನದಿಂದ, ಸಾಧನೆಗಳಿಂದ ಸರಿಸಿ ತಮ್ಮ ಸಹಜ ಆತ್ಮಸ್ವರೂಪವನ್ನು ಅನುಭೂತಿ ಮಾಡಿಕೊಂಡು ಜನ್ಮಸಾರ್ಥಕತೆಯನ್ನು ಪಡೆಯಬೇಕು. ಈ ಸತ್ಯವನ್ನೇ ಭಗವಂತನು ಈ ಶ್ಲೋಕದ ಮೂಲಕ ತಿಳಿಸುತ್ತಿದ್ದಾನೆ.

ಮೇಲೆ ತಿಳಿಸಿದ ದೃಷ್ಟಾಂತಗಳಲ್ಲಿ ಕಷ್ಟಸಾಧ್ಯವಾದದ್ದು ಏನೂ ಇಲ್ಲ. ಹೊಗೆಯನ್ನು ಸುಲಭವಾಗಿ ಊದಿ ಹಾಕಬಹುದು; ಧೂಳನ್ನು ಕಷ್ಟವಿಲ್ಲದೆ ಒರೆಸಿ ಹಾಕಬಹುದು; ಜರಾಯುವು ಕಾಲಕ್ರಮದಲ್ಲಿ ತಾನೇತಾನಾಗಿ ಒಡೆಯುವುದು. ಹಾಗೆಯೇ ಆತ್ಮಪ್ರಾಪ್ತಿ ಹೊಂದುವುದು ಅಸಾಧ್ಯವಾದ ಕೆಲಸವೇನೂ ಅಲ್ಲ. ಸೋಮಾರಿತನವನ್ನು ಬಿಟ್ಟು ಸ್ವಲ್ಪ ಪ್ರಯತ್ನ ಮಾಡಿದಲ್ಲಿ ಕಾಮಾದಿಗಳನ್ನು ತಪ್ಪದೆ ಜಯಿಸಬಹುದು.

ಹಿಂದಿನ ಶ್ಲೋಕದಲ್ಲಿ ಕಾಮದ ಪ್ರಸ್ತಾಪ ಬಂದಿರುವುದರಿಂದ ಈ ಶ್ಲೋಕದಲ್ಲಿ 'ತೇನ' ಎನ್ನುವ ಪದಕ್ಕೆ 'ಆ ಕಾಮದಿಂದ' ಎಂದೂ (ಮುಂದಿನ ಶ್ಲೋಕದಲ್ಲಿ 'ಈ ಕಾಮದಿಂದ ಜ್ಞಾನ ಮುಚ್ಚಲ್ಪಟ್ಟಿದೆ' ಎಂದು ತಿಳಿಸುವುದರಿಂದ) 'ಇದಂ' ಎನ್ನುವ ಪದಕ್ಕೆ ಜ್ಞಾನವೆಂಬ ಅರ್ಥವನ್ನು ಕೊಡಬೇಕು.

ಪ್ರ : ಆತ್ಮಜ್ಞಾನವು ಯಾವುದರಿಂದ ಮುಚ್ಚಲ್ಪಟ್ಟಿದೆ?

ಉ : ಕಾಮಾದಿಗಳಿಂದ

ಪ್ರ : ಯಾವ ಪ್ರಕಾರವಾಗಿ

ಉ : ೧) ಹೊಗೆಯಿಂದ ಅಗ್ನಿ ೨) ಧೂಳಿನಿಂದ ಕನ್ನಡಿ ೩) ಜರಾಯುವಿನಿಂದ ಗರ್ಭದಲ್ಲಿಯ ಶಿಶು ಆವೃತವಾಗಿರುವಂತೆ.

**ಅ॥** ಕಾಮವನ್ನು ಅಗ್ನಿಯೊಂದಿಗೆ ಹೋಲಿಸಲಾಗಿದೆ-

**೩೯. ಆವೃತಂ ಜ್ಞಾನಮೇತೇನ ಜ್ಞಾನಿನೋ ನಿತ್ಯವೈರಿಣಾ**
**ಕಾಮರೂಪೇಣ ಕೌಂತೇಯ ದುಷ್ಪೂರೇಣಾನಲೇನ ಚ**

**ಅರ್ಥ:** ಕೌಂತೇಯ=ಓ ಅರ್ಜುನಾ!, ದುಷ್ಪೂರೇಣ=ತುಂಬಲಾರದಂತಹದು, ಅನಲೇನ ಚ=ಅಗ್ನಿಯ ಹಾಗೆ ತೃಪ್ತಿ ಹೊಂದದಂತಹದು; ಕಾಮರೂಪೇಣ=ಆಶಾರೂಪವಾದುದು; ಜ್ಞಾನಿನಃ=ಜ್ಞಾನಿಗೆ; ನಿತ್ಯ ವೈರಿಣಾ= ನಿರಂತರ ಶತ್ರು(ಆಗಿದೆ); ಏತೇನ=ಈ ಕಾಮದಿಂದ; ಜ್ಞಾನಂ= (ಆತ್ಮ) ಜ್ಞಾನ; ಆವೃತಂ=ಮುಚ್ಚಲ್ಪಟ್ಟಿದೆ.

**ತಾ॥** ಓ ಅರ್ಜುನಾ! ತುಂಬಲಾರದಂತಹದು, ಅಗ್ನಿಯಂತೆ ಎಂದೂ ತೃಪ್ತಿ ಹೊಂದಲಾರದಂತಹದು, ಆಶಾರೂಪವಾದುದು ಮತ್ತು ಜ್ಞಾನಿಗೆ ನಿರಂತರ ಶತ್ರುವಾದ ಈ ಕಾಮದಿಂದ (ಆತ್ಮ) ಜ್ಞಾನವು ಮುಚ್ಚಲ್ಪಟ್ಟಿದೆ.

**ವ್ಯಾಖ್ಯೆ:** ಹಿಂದಿನ ಶ್ಲೋಕದಲ್ಲಿ ಕಾಮದ ಪರಿಚಯವನ್ನು ಮಾಡಲಾಯಿತು. ಇಲ್ಲಿ ಅದರ ಬಗ್ಗೆ ಮತ್ತೆ ಸ್ವಲ್ಪ ವಿವರಣೆಯಿದೆ. ಸಾಧಕರಿಗೆ ಅದರ ಸ್ವರೂಪ ಚೆನ್ನಾಗಿ ಅರ್ಥವಾಗಬೇಕೆಂಬುದು ಭಗವಂತನ ಅಭಿಪ್ರಾಯ. ಏಕೆಂದರೆ ಶತ್ರುವಿನ ಬಲಾಬಲಗಳನ್ನು ಚೆನ್ನಾಗಿ ಅರಿತವನೇ ಆತನನ್ನು ಪರಾಜಿತಗೊಳಿಸಬಹುದು. ಕಾಮವನ್ನು ಇಲ್ಲಿ ಮತ್ತೆ ಎರಡು ವಿಶೇಷಣಗಳಿಂದ ವರ್ಣಿಸಲಾಗಿದೆ. ಅವು ಯಾವುವೆಂದರೆ- ೧) ನಿತ್ಯವೈರಿ ೨) ದುಷ್ಪೂರವಾದ ಅಗ್ನಿ. ಇವುಗಳನ್ನು ಕುರಿತು ಸ್ವಲ್ಪ ವಿಚಾರಿಸೋಣ.

*"ನಿತ್ಯವೈರಿಣಾಂ"*- ಮೋಕ್ಷವನ್ನು ಹೊಂದುವವರೆಗೆ ಈ ಕಾಮವು ಎಷ್ಟು ಜನ್ಮಗಳಾದರೂ ಮನುಷ್ಯನನ್ನು ಬಾಧಿಸುತ್ತಲೇ ಇರುತ್ತದೆಯಾದ್ದರಿಂದ ಇದನ್ನು ನಿತ್ಯಶತ್ರುವೆಂದು ಹೇಳಲಾಗಿದೆ. ಪ್ರಪಂಚದಲ್ಲಿ ಶತ್ರುಗಳೇನಕರು ಇರಬಹುದು ಮತ್ತು ಒಮ್ಮೆ ಶತ್ರುವಾಗಿದ್ದವನು ಕಾಲಕ್ರಮದಲ್ಲಿ ಮಿತ್ರನಾಗಬಹುದು. ಆದ್ದರಿಂದ ಅವರೆಲ್ಲರೂ ಅನಿತ್ಯ ಶತ್ರುಗಳು. ಆದರೆ ಜೀವಿಗೆ ಒಬ್ಬ ನಿತ್ಯ ಶತ್ರು ಇದ್ದಾನೆ. ಆತನೇ ಕಾಮ. ಪ್ರತಿಕ್ಷಣವೂ ಮುಮುಕ್ಷುವನ್ನು ಕೆಳಬೀಳಿಸಲು ಆತನು ಪ್ರಯತ್ನ ಮಾಡುತ್ತಿರುತ್ತಾನೆ. ಮಹಾಮಹಾ ಪಂಡಿತರನ್ನು, ಬಲಶಾಲಿಗಳನ್ನು, ರಾಜಾಧಿರಾಜರನ್ನು, ಇಂದ್ರರನ್ನು, ಚಂದ್ರರನ್ನು ಎಲ್ಲರನ್ನೂ ಕ್ಷಣ ಕಾಲದಲ್ಲಿಯೇ ಆತ ಕೆಡವಿ ಬೀಳಿಸುವನು. ಅನೇಕ ವರ್ಷಗಳ ಆಧ್ಯಾತ್ಮ ಸಾಧನೆಯಿಂದ ಉದ್ಧಾರವಾದ ಉದ್ದಂಡರನ್ನೂ ಸಹ, ಅವರೇನಾದರೂ ಸ್ವಲ್ಪ ಅಜಾಗರೂಕರಾಗಿದ್ದರೆ, ಸಮಯ ನೋಡಿ ಈ ಶತ್ರು ತನ್ನ ಬಲೆಯಲ್ಲಿ ಹಾಕಿಕೊಳ್ಳುತ್ತಿದ್ದಾನೆ. ಪರಮಪದ ಸೋಪಾನ ಪಟದಲ್ಲಿಯ (Snake and ladder game) ದೊಡ್ಡ ಹಾವಿಗೆ ಇದನ್ನು ಹೋಲಿಸಬಹುದು. ಮೇಲೆ ಹೋದ ಸಾಧಕನು ಇವನ ಬಾಯಲ್ಲಿ ಬಿದ್ದು ಮೊದಲಿಗೇ ಬರುವನು. ಈ ನಿತ್ಯ ಶತ್ರುವಿನ ಹಿಡಿತದಿಂದ ತಪ್ಪಿಸಿಕೊಳ್ಳಲು ಸಾಧಕನು ಎಷ್ಟೋ ಯತ್ನಗಳನ್ನು ಮಾಡಬೇಕಾಗಿದೆ. ಒಮ್ಮೊಮ್ಮೆ ಆ ಕಾಮವು ಮೇಲು ಮೇಲೆ ಹೋದಂತೆ ಕಂಡರೂ, ವಾಸನಾರೂಪವಾಗಿ ಹೃದಯದಲ್ಲಿ ಇದ್ದೇ ಇರುವುದು. ಆದ್ದರಿಂದ ವಿವೇಕ ವೈರಾಗ್ಯಾದಿಗಳಿಂದ, ಆತ್ಮವಿಚಾರಣೆಯಿಂದ ಕಾಮವನ್ನು ನಿಶ್ಶೇಷವಾಗಿ ತೊಲಗಿಸುವವನು ಧನ್ಯನು.

*"ದುಷ್ಪೂರೇಣ ಅನಲೇನ"*- ಅಗ್ನಿ ಹಾಗು ಸಮುದ್ರದಂತೆ ಕಾಮವು ತುಂಬಲಾರದಂತಹದು. ಎಷ್ಟು ಕಟ್ಟಿಗೆಗಳನ್ನು ಹಾಕಿದರೂ ಅಗ್ನಿ "ಸಾಕು" ಅನ್ನುವುದಿಲ್ಲ. ಎಷ್ಟು ನದೀ ಜಲ ಬಂದು ಸೇರಿದರೂ ಸಮುದ್ರ "ಸಾಕು" ಎಂದು ಹೇಳುವುದಿಲ್ಲ. ಹಾಗೆಯೇ ಕಾಮವೂ ಸಹ; ಅನುಭವಿಸುತ್ತಾ ಅದನ್ನು ಯಾರೂ ತೃಪ್ತಿಪಡಿಸಲಾರರು. ಅದು "ಮಹಾಶನ"ವೆಂದು ಈಗಾಗಲೇ ಹೇಳಲ್ಪಟ್ಟಿದೆ! ಬುಟ್ಟಿಯಲ್ಲಿ ನೀರು ಸೇದಿದ ಹಾಗೆ ಆ ಕಾಮವನ್ನು ತೃಪ್ತಿಗೊಳಿಸುವ ಯತ್ನ ಎಂದಿಗೂ ಸಾಧ್ಯವಿಲ್ಲ. 'ತೃಪ್ತೋಽಸ್ಮಿ' ಎಂದು ಕಾಮವು ಎಂದಿಗೂ ಹೇಳುವುದಿಲ್ಲ. ಅದನ್ನು ಹಾಗೆ ಹೇಳುವಂತೆ ಯಾರೂ ಮಾಡಲಾರರು ಕೂಡ. ಅಗ್ನಿಯಲ್ಲಿ ತುಪ್ಪ ಹಾಕುತ್ತಿದ್ದರೆ ಅದು ಎಂದಿಗೂ ತಣ್ಣಗಾಗುವುದಿಲ್ಲ, ಇನ್ನೂ ವೃದ್ಧಿಯಾಗುತ್ತದೆ. ಹಾಗೆಯೇ ಕಾಮವನ್ನು ಅನುಭವಿಸುತ್ತಾ ಹೋದಂತೆ ಹೆಚ್ಚಾಗುವುದೇ ಹೊರತು ಕಡಿಮೆಯಾಗುವುದಿಲ್ಲ. ಈ ಸಂದರ್ಭದಲ್ಲಿ ಭಾಗವತದಲ್ಲಿ ಯಯಾತಿ ಅನುಭವ ಪೂರ್ವಕವಾಗಿ ಹೇಳಿದ ಮಾತುಗಳನ್ನು ಮುಮುಕ್ಷುಗಳು ಸ್ಮರಿಸಬೇಕಾಗಿದೆ.* ಕಟ್ಟಿಗೆ ತುಂಡುಗಳನ್ನು ಹಾಕದೆ ಹೋದರೆ

---

* ನ ಜಾತು ಕಾಮಃ ಕಾಮಾನಾಮುಪಭೋಗೇನ ಶಾಮ್ಯತಿ। ಹವಿಷಾ ಕೃಷ್ಣವರ್ತ್ಮೇವ ಭೂಯ ಏ ವಾಭಿವರ್ಧತೇ॥ (ಭಗವತ ೯-೧೪-೧೪)
"ಅನುಭವಿಸುತ್ತಿದ್ದರೆ ಕಾಮವು ಯಾವಾಗಲೂ ಶಮನಗೊಳ್ಳುವುದಿಲ್ಲ, ಅಗ್ನಿಯಲ್ಲಿ ತುಪ್ಪ ಹಾಕಿದ ಹಾಗೆ ಅದು ವೃದ್ಧಿ ಹೊಂದುತ್ತಲೇ ಇರುತ್ತದೆ (ಯಯಾತಿ).

ಹೇಗೆ ಅಗ್ನಿ ತಣ್ಣಾಗುಗುತ್ತದೆಯೋ ಹಾಗೆ ಕೋರಿಕೆಗಳನ್ನು, ಭೋಗ ಸಂಕಲ್ಪಗಳನ್ನು ಹೃದಯದಿಂದ ಆರಿಸಿ ತೆಗೆದು ಬಿಸಾಡಿದರೆ ಮಾತ್ರ ಕಾಮವು ತಣ್ಣಗಾಗುವುದು. ಕಾಮ ನಿವಾರಣೆಗೆ ಇದೇ ಉಪಾಯ; ಅನುಭವಿಸುವುದಲ್ಲ. ಸಂಸ್ಕೃತದಲ್ಲಿ 'ಅಲಂ' ಎಂದರೆ 'ಸಾಕು' ಎನ್ನುವ ಅರ್ಥ ಇದೆ. 'ಅನಲಂ' ಅಂದರೆ 'ಸಾಲದು' ಎಂದರ್ಥ. ಎಷ್ಟು ಆಹುತಿ ಹಾಕಿದರೂ ಅಗ್ನಿ ಸಾಕು ಎಂದು ಹೇಳುವುದಿಲ್ಲ ವಾದ್ದರಿಂದ ಅದನ್ನು ಅನಲ ಎಂದು ಕರೆದರು. ಕಾಮವೂ ಅಂತಹುದೇ ಎಂದು ಭಗವಂತನು ಹೇಳುತ್ತಿದ್ದಾನೆ. ಅಲ್ಲದೆ ತನ್ನನ್ನು ಮುಟ್ಟುವವರನ್ನು ಅಗ್ನಿಯ ಹಾಗೆ ಸುಡುತ್ತದೆಯಾದ್ದರಿಂದ ಅದನ್ನು ಅಗ್ನಿಯೊಡನೆ ಹೋಲಿಸಲಾಗಿದೆ.

"ಜ್ಞಾನಿನೋಽನಿತ್ಯವೈರಿಣಾ"- ಕಾಮವು ಸರ್ವಜೀವಿಗಳಿಗೆ ಅನರ್ಥ ಉಂಟುಮಾಡಿದರೂ ಅಂತಹ ಅನರ್ಥವನ್ನು ಅರ್ಥಮಾಡಿಕೊಂಡು ಅದನ್ನು ತೊಲಗಿಸಿಕೊಳ್ಳಲು ಯತ್ನಿಸುವವನು ಜ್ಞಾನಿಯೊಬ್ಬನೇ. ಆದುದರಿಂದ ಅದು ಆತನಿಗೆ ಶತ್ರುವಿನಂತೆ ಕಾಣುವುದು. ಅಜ್ಞಾನಿಗೆ ಕೂಡ ವಾಸ್ತವವಾಗಿ ಅದು ಶತ್ರುವಾಗಿದ್ದರೂ ಆ ವಿಷಯವನ್ನು ಆತ ತಿಳಿದುಕೊಳ್ಳಲಾರದೆ ಅದನ್ನು ಮಿತ್ರನೆಂದು ಭಾವಿಸಿ ಮಹಾ ಅನರ್ಥಕ್ಕೆ ಈಡಾಗುತ್ತಿದ್ದಾನೆ. ಈ ಕಾರಣದಿಂದ ಕಾಮವು ಜ್ಞಾನಿಗೆ ನಿತ್ಯ ಶತ್ರುವೆಂದು ವರ್ಣಿಸಲ್ಪಟ್ಟಿದೆ.

ಇಂತಹ ನಿತ್ಯ ಶತ್ರುವು ಹೃದಯದಲ್ಲಿರುವವರೆಗೆ ಜೀವಿಗೆ ಮೋಕ್ಷವನ್ನು ಕುರಿತ ವಾರ್ತೆಯೇ ರುಚಿಸುವುದಿಲ್ಲವಾದ್ದರಿಂದ ಅನೇಕ ಸಾಧನೆಗಳ ದ್ವಾರ ಆ ಕಾಮ ಪಿಶಾಚಿಯನ್ನೆ ಆತನು ತೊಲಗಿಸಿ ತನ್ನ ಜನ್ಮಹಕ್ಕಾದ ಆತ್ಮಾನಂದವನ್ನು ಅನುಭವಿಸಿಯೇ ತೀರಬೇಕೆಂದು ಗೀತಾಶಾಸ್ತ್ರದಲ್ಲಿ ಶ್ರೀಕೃಷ್ಣ ಭಗವಂತನು ಆದೇಶಿಸುತ್ತಿದ್ದಾನೆ.

ಪ್ರ : (ಆತ್ಮ) ಜ್ಞಾನವು ಯಾವುದರಿಂದ ಕವಿಯಲ್ಪಟ್ಟಿದೆ?

ಉ : ಕಾಮದಿಂದ

ಪ್ರ : ಅದು ಎಂತಹದು?

ಉ : ೧) ಜ್ಞಾನಿಗೆ ನಿತ್ಯ ಶತ್ರು ೨) ಅಗ್ನಿಯಂತೆ ಎಂದೂ ತೃಪ್ತಿಗೊಳ್ಳುವುದಿಲ್ಲ. ಮತ್ತು ಅಗ್ನಿಯಂತೆ ದಹಿಸುವುದು.

**ಅ||** ಕಾಮವನ್ನು ನಶಿಸುವ ಉಪಾಯವನ್ನು ಹೇಳುತ್ತಾ ಮೊದಲು ಅದರ ಸ್ಥಾನವನ್ನು ತಿಳಿಸಲಾಗುತ್ತಿದೆ.

**೪೦. ಇಂದ್ರಿಯಾಣಿ ಮನೋ ಬುದ್ಧಿಃ ಅಸ್ಯಾಧಿಷ್ಠಾನಮುಚ್ಯತೇ**
**ಏತೈರ್ವಿಮೋಹಯತ್ಯೇಷಃ ಜ್ಞಾನಮಾವೃತ್ಯ ದೇಹಿನಮ್**

**ಅರ್ಥ:** ಇಂದ್ರಿಯಾಣಿ=ಇಂದ್ರಿಯಗಳು; ಮನಃ=ಮನಸ್ಸು; ಬುದ್ಧಿಃ=ಬುದ್ಧಿ; ಅಸ್ಯ=ಇದಕ್ಕೆ (ಈ ಕಾಮಕ್ಕೆ); ಅಧಿಷ್ಠಾನಂ=ಆಶ್ರಯವೆಂದು; ಉಚ್ಯತೇ= ಹೇಳಲ್ಪಟ್ಟಿದೆ. ಏಷಃ=ಇದು(ಈ ಕಾಮವು); ಏತೈ=ಇದರಿಂದ (ಈ ಇಂದ್ರಿಯಾದಿಗಳಿಂದ); ಜ್ಞಾನಂ=(ಆತ್ಮ) ಜ್ಞಾನವನ್ನು; ಆವೃತ್ಯ=ಮುಚ್ಚಿ; ದೇಹಿನಂ=ಮನುಜನನ್ನು; ವಿಮೋಹಯತಿ=ಮೋಹವನ್ನು ವೃದ್ಧಿ ಮಾಡುತ್ತಿದೆ.

**ತಾ||** ಈ ಕಾಮಕ್ಕೆ ಇಂದ್ರಿಯಗಳು, ಮನಸ್ಸು, ಬುದ್ಧಿ ಆಶ್ರಯಗಳೆಂದು ಹೇಳಲ್ಪಟ್ಟಿದೆ. ಆ ಇಂದ್ರಿಯಾದಿಗಳಿಂದ ಕಾಮವು ಆತ್ಮಜ್ಞಾನವನ್ನು ಮುಚ್ಚಿ ಮನುಜನನ್ನು ಮೋಹಕ್ಕೆ ಒಳಪಡಿಸುತ್ತದೆ.

**ವ್ಯಾಖ್ಯೆ:** ಇಲ್ಲಿಯವರೆಗೆ ಕಾಮದ ಸ್ವರೂಪ ಹಾಗು ಸ್ವಭಾವಗಳನ್ನು ವರ್ಣಿಸಿ, ಇನ್ನು ಅದನ್ನು ತೊಲಗಿಸುವ ಉಪಾಯವನ್ನು ಹೇಳುತ್ತಾ ಮೊಟ್ಟಮೊದಲಿಗೆ ಅದು ಆಶ್ರಯಿಸಿದ ಸ್ಥಾನಗಳನ್ನು ಹೇಳುತ್ತಿದ್ದಾನೆ. ಏಕೆಂದರೆ ಶತ್ರುವನ್ನು ಜಯಿಸಬೇಕಾದರೆ ಆತನು ಇರುವ ಸ್ಥಳವನ್ನು ಚೆನ್ನಾಗಿ ತಿಳಿದಿರಬೇಕು. ಈ ಕಾಮಕ್ಕೆ ಆಶ್ರಯ ಸ್ಥಾನಗಳು ಇಂದ್ರಿಯಗಳು, ಮನಸ್ಸು, ಬುದ್ಧಿ. ಇವುಗಳ ಮೂಲಕ ಅದು ಆತ್ಮಜ್ಞಾನವನ್ನು ಮುಚ್ಚಿ ಜೀವಿಯನ್ನು ಮೋಹಗೊಳಿಸುತ್ತಿದೆ. 'ಮೋಹಯತಿ' ಎಂದು ಹೇಳದೆ 'ವಿಮೋಹಯತಿ' ಎಂದು ಹೇಳಲ್ಪಟ್ಟಿರು ವುದರಿಂದ ಕಾಮವು ಜೀವಿಯನ್ನು ಎಷ್ಟು ಬಾಧಿಸುತ್ತದೆಯೋ ಸ್ಪಷ್ಟವಾಗುತ್ತಿದೆ. ಅದು ಜೀವಿಯ ಇಂದ್ರಿಯ, ಮನೋಬುದ್ಧಿಗಳು ಎನ್ನುವ ಸ್ಥಾನಗಳನ್ನು ಆಕ್ರಮಿಸಿ ಕ್ರಮೇಣವಾಗಿ ಜೀವಿಯನ್ನೇ ಪತನಗೊಳಿಸುತ್ತದೆ. ಕಾಮವನ್ನು ಜಯಿಸಬೇಕೆಂದರೆ ಅದರ ಆಶ್ರಯ ಸ್ಥಾನಗಳಾದ ಇಂದ್ರಿಯಾದಿಗಳನ್ನು ಮೊದಲು ಜಯಿಸಬೇಕು. ಈ ವಿಷಯವಾಗಿ ಮುಂದೆ ಬರುವ ಶ್ಲೋಕದಲ್ಲಿ ಭಗವಂತನು ಸ್ಪಷ್ಟವಾಗಿ ವಿವರಣೆ ಕೊಟ್ಟಿರುವನು. ಇಂದ್ರಿಯಗಳನ್ನು ವಿಷಯಗಳ ಕಡೆಗೆ ಹೋಗದೆ ಕಟ್ಟಿ ಹಾಕಿದರೆ ಕಾಮಕ್ಕೆ ನಿಲ್ಲಲು ಸ್ಥಳವಿಲ್ಲದೆ ಕ್ರಮವಾಗಿ ನಶಿಸಿ ಹೋಗುವುದು. ಇದು ಕಾಮದ ಮೇಲಿನ ಜಯಕ್ಕೆ ಸರಿಯಾದ ಉಪಾಯ.

ಪ್ರ : ಕಾಮಕ್ಕೆ ಆಶ್ರಯಗಳಾವುವು?

ಉ : ಇಂದ್ರಿಯಗಳು, ಮನಸ್ಸು, ಬುದ್ಧಿ, ಇವುಗಳಿಂದ ಅದು ಜ್ಞಾನವನ್ನು ಮುಚ್ಚಿ ಜೀವಿಯನ್ನು ಅಜ್ಞಾನದಲ್ಲಿ ಬೀಳಿಸುತ್ತದೆ.

**ಅ||** ಹೀಗೆ ಕಾಮದ ಆಶ್ರಯಗಳನ್ನು ಹೇಳಿ ಇನ್ನು ಅದನ್ನು ನಶಿಸುವಂತೆ ಮಾಡುವ ಉಪಾಯವನ್ನು ಹೇಳಲಾಗುತ್ತಿದೆ-

**೪೧. ತಸ್ಮಾತ್ ತ್ವಮಿಂದ್ರಿಯಾಣ್ಯಾದೌ ನಿಯಮ್ಯ ಭರತರ್ಷಭ**
**ಪಾಪ್ಮಾನಂ ಪ್ರಜಹಿ ಹ್ಯೇನಮ್ ಜ್ಞಾನವಿಜ್ಞಾನನಾಶನಮ್**

**ಅರ್ಥ:** ಭರತರ್ಷಭ=ಭರತವಂಶ ಶ್ರೇಷ್ಠನಾದ ಅರ್ಜುನಾ!, ತಸ್ಮಾತ್= ಆದ್ದರಿಂದ; ತ್ವಂ=ನೀನು; ಆದೌ=ಪ್ರಾರಂಭದಲ್ಲಿ; ಇಂದ್ರಿಯಾಣಿ=ಇಂದ್ರಿಯ ಗಳನ್ನು; ನಿಯಮ್ಯ=ನಿಗ್ರಹಿಸಿ(ಸ್ವಾಧೀನಪಡಿಸಿಕೊಂಡು); ಜ್ಞಾನವಿಜ್ಞಾನ ನಾಶನಮ್=ಜ್ಞಾನವಿಜ್ಞಾನಗಳನ್ನು (ಶಾಸ್ತ್ರಜ್ಞಾನ, ಅನುಭವ ಜ್ಞಾನಗಳನ್ನು) ನಾಶಮಾಡುವುದು; ಪಾಪ್ಮಾನಂ=ಪಾಪಸ್ವರೂಪವಾದದ್ದು, ಏನಂ=ಇದನ್ನು (ಈ ಕಾಮವನ್ನು); ಹಿ=ತಪ್ಪದೆ; ಪ್ರಜಹಿ=ಪೂರ್ತಿಯಾಗಿ ತ್ಯಜಿಸು (ನಶಿಸುವಂತೆ ಮಾಡು).

**ತಾ||** ಭರತವಂಶ ಶ್ರೇಷ್ಠನಾದ ಓ ಅರ್ಜುನಾ! ಆದ್ದರಿಂದ ನೀನು ಮೊದಲು ಇಂದ್ರಿಯಗಳನ್ನು ನಿಗ್ರಹಿಸಿ ಜ್ಞಾನವಿಜ್ಞಾನಗಳನ್ನು (ಶಾಸ್ತ್ರಜ್ಞಾನ, ಅನುಭವ ಜ್ಞಾನಗಳನ್ನು) ನಾಶಮಾಡಬಲ್ಲ, ಪಾಪ ಸ್ವರೂಪವಾದ ಈ ಕಾಮವನ್ನು ತಪ್ಪದೆ ಸಂಪೂರ್ಣವಾಗಿ ತ್ಯಜಿಸುವುದು (ನಾಶ ಮಾಡುವುದು).

**ವ್ಯಾಖ್ಯೆ:** ಕಾಮವನ್ನು ಜಯಿಸಬೇಕೆಂದರೆ ಮೊದಲು ಅದರ ಆಶ್ರಯಗಳನ್ನು ನಮ್ಮ ಹತೋಟಿಗೆ ತೆಗೆದುಕೊಳ್ಳಬೇಕು. ಆ ಆಶ್ರಯಗಳು ಯಾವುವು? ಇಂದ್ರಿಯಗಳು, ಮನಸ್ಸು, ಬುದ್ಧಿಗಳೆಂದು ಮೇಲೆ ಹೇಳಲಾಗಿದೆ. ಅದು ಮೊದಲು ಇಂದ್ರಿಯಗಳನ್ನು ಆಕ್ರಮಿಸಿಕೊಂಡು ನಂತರ ಮನಸ್ಸನ್ನು, ಬುದ್ಧಿಯನ್ನು ವಶಪಡಿಸಿಕೊಳ್ಳುವುದು. ಆದ್ದರಿಂದ ಸಾಧಕನು ಮೊಟ್ಟ ಮೊದಲು ಕಾಮದ ಪ್ರಥಮಾಶ್ರಯವಾದ ಇಂದ್ರಿಯಗಳನ್ನು ಹತೋಟಿಗೆ ತೆಗೆದು

ಕೊಳ್ಳುವುದರಿಂದ ಕಾಮವು ಇನ್ನು ಮುಂದಕ್ಕೆ ಹೋಗಲು ಸಾಧ್ಯವಾಗದೆ ಹಾಗೆಯೇ ಶಮನಗೊಳ್ಳುವುದು. ಆದ್ದರಿಂದಲೇ ಭಗವಂತನು ಕಾಮದ ಮೇಲಿನ ಜಯಕ್ಕೆ ಮೊದಲು ಇಂದ್ರಿಯಗಳನ್ನು ಸ್ವಾಧೀನ ಮಾಡಿಕೊಳ್ಳಬೇಕೆಂದು ಬೋಧಿಸಿರುವನು. "ಆದೌ" ಎಂದು ಹೇಳಿರು ವುದರಿಂದ ಬೇರೆ ಎಲ್ಲಾ ಸಾಧನೆಗಳಿಗಿಂತ ಇಂದ್ರಿಯ ನಿಗ್ರಹಕ್ಕೆ ವಿಶೇಷ ಪ್ರಾಧಾನ್ಯತೆಯನ್ನು ಕೊಡಬೇಕೆಂದು ಸ್ಪಷ್ಟವಾಗುತ್ತಿದೆ. ಸಾಧಕನು ಆಧ್ಯಾತ್ಮ ರಂಗದಲ್ಲಿ ಪಾದಾರ್ಪಣಮಾಡಿ ಮೋಕ್ಷಪ್ರಾಪ್ತಿಗೆ ಪ್ರಯತ್ನ ಮಾಡುತ್ತಿರುವಾಗ ಮೊಟ್ಟಮೊದಲು ಮಾಡಬೇಕಾದ ಕೆಲಸವು ಇದೇ ಆಗಿದೆ. "ಓ ಅರ್ಜುನಾ! ನಿನಗೆ ಬೇರೆ ಎಷ್ಟು ಕೆಲಸಗಳಿದ್ದರೂ, ಮೊದಲು ಈ ಕೆಲಸ ನೋಡು" ಎಂದು ಶ್ರೀಕೃಷ್ಣನು ಅರ್ಜುನನಿಗೆ ಎಚ್ಚರಿಕೆ ನೀಡುತ್ತಿದ್ದಾನೆ. ಸರ್ವಜ್ಞನಾದ ಪರಮಾತ್ಮನು ಹೇಳಿದ ಈ ವಾಕ್ಯದ ಮೇಲೆ ಮುಮುಕ್ಷುಗಳಿಗೆ ಅದೆಷ್ಟು ವಿಶ್ವಾಸವಿರಬೇಕು! ಆದ್ದರಿಂದ ಯಾವ ಇಂದ್ರಿಯಗಳು ಯಾವ ಯಾವ ವಿಷಯಗಳ ಮೇಲೆ ಎರಗುತ್ತವೆಯೋ ಜಾಗ್ರತೆಯಾಗಿ ಪರಿಶೀಲಿಸಿ, ಅಭ್ಯಾಸ ವೈರಾಗ್ಯ ವಿಚಾರಣೆಗಳ ದ್ವಾರ ಅವುಗಳನ್ನು ಹಿಂದಕ್ಕೆ ತಿರುಗಿಸಬೇಕು. ಆಗ ಕಾಮಕ್ಕೆ ಇರಲು ಸ್ಥಾನವಿಲ್ಲದೆ ಪಲಾಯನಗೊಳ್ಳುವುದು.

*"ಪಾಪ್ಮಾನಂ"*- ಕಾಮದ ಅಲ್ಪತ್ವವನ್ನು ಎಲ್ಲರಿಗೂ ತೋರಿಸಲು ಭಗವಂತನು ಮತ್ತೆ ಮತ್ತೆ ಅದನ್ನು ಹಾಗು ಅದರ ಹೀನ ಸ್ವರೂಪವನ್ನು ಹೊರಗೆಡಹುತ್ತಿದ್ದಾನೆ. ಇದೇ ಅಧ್ಯಾಯದ ೩೭ನೆಯ ಶ್ಲೋಕದಲ್ಲಿ ಕಾಮವನ್ನು *"ಮಹಾಪಾಪ್ಮಾ"* ಎಂದು ವರ್ಣಿಸಿ, ಈಗ *'ಪಾಪ್ಮಾನಾಂ'*- ಪಾಪಸ್ವರೂಪವಾದದ್ದು, ಎಂದು ಹೇಳಲಾಗಿದೆ. ಏಕೆಂದರೆ, ಇದರಿಂದಲೇ ಬಹುತೇಕ ಪಾಪಗಳು ಉದ್ಭವಿಸುತ್ತವೆ. ಕಾಮಾಂಧರಾಗಿ ಎಷ್ಟು ಜನ ಎಷ್ಟು ಘೋರಪಾಪಗಳನ್ನು ಮಾಡುತ್ತಿದ್ದಾರೆ ಎನ್ನುವುದು ಲೋಕಕ್ಕೆ ತಿಳಿದ ವಿಷಯವೇ. ಇಷ್ಟೇ ಅಲ್ಲ, ಆ ಕಾಮವು ಮನುಜನ ಜ್ಞಾನ ವಿಜ್ಞಾನಗಳೆರಡನ್ನೂ ನಾಶಮಾಡುವುದೆಂದು ಹೇಳಲಾಗಿದೆ. ಜ್ಞಾನವೆಂದರೆ ಶಾಸ್ತ್ರಜ್ಞಾನ, ವಿಜ್ಞಾನವೆಂದರೆ ಅನುಭವ ಜ್ಞಾನ. ಸಾಧನೆ ದೆಸೆಯಲ್ಲಿ ಕಷ್ಟಬಿದ್ದು ಸಂಪಾದಿಸಿದ ಈ ಎರಡೂ ಕಾಮ ಪ್ರಭಾವದಿಂದ ಬೂದಿಯಾಗಿ ಹೋಗುತ್ತಿವೆ. ಎಷ್ಟೋ ಪಂಡಿತರು, ಶಾಸ್ತ್ರವೇತ್ತರು, ಅನುಭವ ಉಳ್ಳವರೂ ಸಹ ಕಾಮದಿಂದ ಪ್ರಭಾವಿತರಾದಾಗ ತಮ್ಮ ವಿಜ್ಞಾನವನ್ನು ಕಳೆದುಕೊಂಡು ಪಾಮರರ ಹಾಗೆ ಪ್ರವರ್ತಿಸುವುದು ಕಂಡುಬರುತ್ತದೆಯಲ್ಲವೇ! ವಿಜ್ಞಾನ ವಂತರ ವಿಷಯವೇ ಹೀಗಿರಬೇಕಾದರೆ ಇನ್ನು ಸಾಮಾನ್ಯರ ಮಾತು ಬೇರೆ ಹೇಳಬೇಕೇ! ಆದರೆ ಇಂದ್ರಿಯ ನಿಗ್ರಹಣವುಳ್ಳವರನ್ನಾಗಲಿ, ಪೂರ್ಣ ಜ್ಞಾನವುಳ್ಳವರನ್ನಾಗಲಿ ಆ ಕಾಮವೇನೂ ಮಾಡಲಾರದೆಂದು ತಿಳಿಯಬೇಕು..

ಕಾಮಕ್ಕೆ ಇಷ್ಟು ವಿನಾಶಕಾರಿ ಶಕ್ತಿ ಇದ್ದಾಗ್ಯೂ ಯಾರೂ ಏನೂ ಹೆದರಬೇಕಾಗಿಲ್ಲ, ಅಭ್ಯಾಸ, ವಿವೇಕ ವೈರಾಗ್ಯಗಳನ್ನು ಪಾಲಿಸಿ ಅದನ್ನು ಹೊರಗಟ್ಟಬಹುದೆಂದು ಭಗವಂತನು ನುಡಿಯುತ್ತಿದ್ದಾನೆ. ಆದ್ದರಿಂದಲೇ 'ಪ್ರಜಹಿ' ಎಂದು ಹೇಳಲ್ಪಟ್ಟಿರುವುದರಿಂದ ಕಾಮವನ್ನು ಪೂರ್ತಿಯಾಗಿ ಬಿಡಬೇಕೆಂತಲೂ, ಸಂಪೂರ್ಣವಾಗಿ ವಿನಾಶಗೊಳಿಸಬೇಕೆಂದೂ ತಿಳಿಸಿ ದಂತಾಗಿದೆ. (ಇಲ್ಲಿ ಕಾಮವೆಂದರೆ ದೃಶ್ಯ ವಿಷಯ ಸಂಬಂಧಗಳಾದ ಎಲ್ಲಾ ವಾಂಛೆಗಳು ಎನ್ನುವುದು ಭಾವ).

*"ಭರತರ್ಷಭ"*- 'ಓ ಅರ್ಜುನಾ! ನೀನು ಭರತ ಕುಲದಲ್ಲಿ ಶ್ರೇಷ್ಠನಾಗಿ, ಭೌತಿಕ ಬಲ ಸಂಪನ್ನನಾಗಿ ಬೆಳಗುತ್ತಿದ್ದೀಯೇ. ಹಾಗೆಯೇ ಇಂದ್ರಿಯಗಳನ್ನು ಕೂಡ ಜಯಿಸಿ ಆಧ್ಯಾತ್ಮಿಕ ಬಲವನ್ನು ಕೂಡ ಬೆಳೆಸಿಕೊಂಡು ನಿನ್ನ ಶ್ರೇಷ್ಠತೆಯನ್ನು ಇಮ್ಮಡಿಗೊಳಿಸಿಕೊಳ್ಳಬೇಕು' ಎನ್ನುವ ಭಾವ ಈ ಪದದಲ್ಲಿ ವ್ಯಕ್ತವಾಗುತ್ತಿದೆ.

ಪ್ರ : ಪರಮಾತ್ಮರಂಗದಲ್ಲಿ ಸಾಧಕನು ಮೊದಲು ಏನು ಮಾಡಬೇಕು?

ಉ : ಇಂದ್ರಿಯಗಳನ್ನು ನಿಗ್ರಹಿಸಬೇಕು.

ಪ್ರ : ಅದರಿಂದ ಉಂಟಾಗುವ ಲಾಭಗಳೇನು?

ಉ : ಕಾಮವು ತೊಲಗುವುದು.

ಪ್ರ : ಆ ಕಾಮ ಎಂತಹದು?

ಉ : ೧) ಪಾಪ ಜನಕವಾದುದು ೨) ಜ್ಞಾನವಿಜ್ಞಾನಗಳನ್ನು ನಾಶಮಾಡು ವಂತಹದು.

**ಅ॥** ಕಾಮವು ಇಂದ್ರಿಯಗಳನ್ನು, ಮನಸ್ಸನ್ನು, ಬುದ್ಧಿಯನ್ನು ವಶಮಾಡಿಕೊಂಡು ಜೀವಿಯನ್ನು ಮೋಹಗೊಳಿಸುತ್ತಿರುವಾಗ ಇನ್ನು ಅದನ್ನು ಜಯಿಸುವುದು ಹೇಗೆ? ಇಂದ್ರಿಯಗಳನ್ನು ಹೇಗೆ ವಶಪಡಿಸಿಕೊಳ್ಳಬೇಕು? ಎನ್ನುವ ಶಂಕೆಗೆ ಸಮಾಧಾನ ಹೇಳಲು ಇಚ್ಛಿಸಿ ಜೀವಿಯ ಯಥಾರ್ಥ ಸ್ವರೂಪವನ್ನು, ಆತನ ನಿಜ ಸ್ಥಾನವನ್ನು, ಶಕ್ತಿಯನ್ನು ವರ್ಣಿಸಲಾಗುತ್ತಿದೆ-

**೪೨. ಇಂದ್ರಿಯಾಣಿ ಪರಾಣ್ಯಾಹುಃ ಇಂದ್ರಿಯೇಭ್ಯಃ ಪರಂ ಮನಃ**
**ಮನಸಸ್ತು ಪರಾ ಬುದ್ಧಿಃ ಯೋಬುದ್ಧೇಃ ಪರತಸ್ತು ಸಃ**

**ಅರ್ಥ:** ಇಂದ್ರಿಯಾಣಿ=ಇಂದ್ರಿಯಗಳು; ಪರಾಣಿ=ದೇಹಾದಿಗಳಿಗಿಂತ ದೊಡ್ಡವು; ಇಂದ್ರಿಯೇಭ್ಯಃ=ಇಂದ್ರಿಯಗಳಿಗಿಂತ; ಮನಃ=ಮನಸ್ಸು; ಪರಂ= ಹೆಚ್ಚಿನದು; ಮನಸಸ್ತು=ಮನಸ್ಸಿಗಿಂತ; ಬುದ್ಧಿಃ=ಬುದ್ಧಿ; ಪರಾ=ಹೆಚ್ಚಿನದು; ಬುದ್ಧೇಃ=ಬುದ್ಧಿಗಿಂತ; ಪರತಃ=ಹೆಚ್ಚಿನದು; ಯಃ ತು=ಯಾರೋ; ಸಃ=ಅವನೇ ಆತ್ಮ (ಇತಿ=ಎಂದು); ಆಹುಃ=ಹಿರಿಯರು ಹೇಳುವರು.

**ತಾ॥** (ದೇಹಾದಿಗಳಿಗಿಂತ) ಇಂದ್ರಿಯಗಳು ಹೆಚ್ಚಿನವು. ಇಂದ್ರಿಯಗಳಿಗಿಂತ ಮನಸ್ಸು ಹೆಚ್ಚಿನದು. ಮನಸ್ಸಿಗಿಂತ ಬುದ್ಧಿ ಹೆಚ್ಚಿನದು. ಬುದ್ಧಿಗಿಂತ ಹೆಚ್ಚಿನವನು ಯಾವನೋ ಆತನೇ ಆತ್ಮನೆಂದು ಹಿರಿಯರು ಹೇಳುವರು.

**ವ್ಯಾಖ್ಯೆ:** ಇಂದ್ರಿಯಗಳನ್ನು ನಿಗ್ರಹಿಸಬೇಕೆಂದು ಹಿಂದಿನ ಶ್ಲೋಕದಲ್ಲಿ ಹೇಳಲ್ಪಟ್ಟಿತು. ಆದರೆ ಅವುಗಳನ್ನು ನಿಗ್ರಹಿಸುವುದು ಹೇಗೆ? ಆ ಪದ್ಧತಿಯನ್ನು ಎರಡು ಶ್ಲೋಕಗಳ ಮೂಲಕ ತಿಳಿಸಲಾಗುತ್ತಿದೆ. ಯಾರನ್ನೇ ಆಗಲಿ ಹತೋಟಿಯಲ್ಲಿಡಬೇಕೆಂದರೆ ಆತನಿಗಿಂತ ಮೇಲಿನ ಸ್ಥಾನದಲ್ಲಿರುವನಿಂದಲೇ ಸಾಧ್ಯ. ಯಾವುದೇ ವಸ್ತುವನ್ನು ನಿಗ್ರಹಿಸಬೇಕೆಂದರೆ, ಅದಕ್ಕಿಂತ ಶಕ್ತಿಯುತವಾದ ವಸ್ತುವನ್ನು ಉಪಯೋಗಿಸಿದರೆ ಮಾತ್ರ ಸಾಧ್ಯ. ಹಾಗೆಯೇ ಇಂದ್ರಿಯಗಳನ್ನು ಜಯಿಸಬೇಕೆಂದರೆ ಅವುಗಳಿಗಿಂತ ಉತ್ತಮವಾದ ಸ್ಥಾನವನ್ನು ಜೀವಿಯು ಆಕ್ರಮಿಸಬೇಕು. ದೇಹವು ರಥದಂತಹದು. ಅದು ಜಡವಾದುದು. ಇಂದ್ರಿಯಗಳು ಕುದುರೆಯಂತಹವು. ಅವುಗಳಿಗೆ ಸ್ವಲ್ಪ ಚೈತನ್ಯವಿದೆ. ಆದ್ದರಿಂದ ದೇಹಕ್ಕಿಂತ ಇಂದ್ರಿಯಗಳು ಹೆಚ್ಚಿನವು. ಹಾಗೆಯೇ ಇಂದ್ರಿಯಕ್ಕಿಂತ ಮನಸ್ಸು; ಮನಸ್ಸಿಗಿಂತ ಬುದ್ಧಿ, ಬುದ್ಧಿಗಿಂತ ಆತ್ಮ ಹೆಚ್ಚಿನವು. ಒಂದಕ್ಕಿಂತ ಮತ್ತೊಂದು ಅಧಿಕ ಚೈತನ್ಯವನ್ನು ಹೊಂದಿವೆ ಒಂದಕ್ಕಿಂತ ಒಂದು ಶಕ್ತಿವಂತಗಳಾಗಿವೆ. ಮತ್ತೆ ಒಂದಕ್ಕಿಂತ ಒಂದು ಮೇಲಟ್ಟದಲ್ಲಿವೆ. ಎಲ್ಲಕ್ಕಿಂತ ಮೇಲೆ ಆತ್ಮವಿದೆ. ಒಂದು ದೃಷ್ಟಿಯಿಂದ ನೋಡಿದರೆ, ಆತ್ಮವನ್ನು ಬಿಟ್ಟರೆ ಬುದ್ಧಿ ಮುಂತಾದವುಗಳೆಲ್ಲವೂ ಜಡಗಳೇ ಆಗಿವೆ. ಆತ್ಮವೊಂದೇ ಚೈತನ್ಯವಂತ ವಾದುದು. ಆತ್ಮದ ಸಾನ್ನಿಧ್ಯದಲ್ಲಿ (ಅಗ್ನಿ ಸನ್ನಿಧಿಯಲ್ಲಿಯ ಕಬ್ಬಿಣದಂತೆ) ಆ

ಬುದ್ಧ್ಯಾದಿಗಳು ಚೈತನ್ಯವಂತವಾಗಿ ಕಂಡುಬರುತ್ತಿವೆ. ಆತ್ಮೇತರಗಳಾದ ಆ ಬುದ್ಧ್ಯಾದಿಗಳು ಸಮಸ್ತ ಪದಾರ್ಥಗಳಲ್ಲಿ ಪ್ರಕೃತಿಗೆ (ಮಾಯೆಗೆ) ಅಧೀನವಾಗಿ ಕೆಲಸ ಮಾಡುತ್ತಿವೆ. ಅವು ದೃಶ್ಯಗಳು. ಆತ್ಮ ಒಂದೇ ದೃಕ್ಕು. ಆದ್ದರಿಂದ ಅಂತಹ ಆತ್ಮ ಸಾನ್ನಿಧ್ಯವನ್ನು ಮನುಜನು ಅನುಭೂತಿಗೊಳಿಸಿಕೊಂಡರೆ ಇಂದ್ರಿಯಾದಿಗಳೆಲ್ಲವನ್ನೂ ಸುಲಭವಾಗಿ ನಿಗ್ರಹಿಸಬಹುದು. ಆಗ ಮಾತ್ರ ಪೂರ್ಣ ಇಂದ್ರಿಯ ನಿಗ್ರಹಣೆ ಸಾಧ್ಯವಾಗುವುದು. '**ರಸೋಽಪ್ಯಸ್ಯ ಪರಂ ದೃಷ್ಟ್ವಾ ನಿವರ್ತತೇ(೨-೫೯)** ಎಂದು ಭಗವಂತನು ಈಗಾಗಲೇ ಆ ಭಾವವನ್ನು ವ್ಯಕ್ತಮಾಡಿದ್ದಾನೆ. ಇದು ವೇದಾಂತದಲ್ಲಿ ಬಹು ಪ್ರಾಮುಖ್ಯವಾದದ್ದರಿಂದ ಮುಮುಕ್ಷುಗಳೆಲ್ಲರೂ ಇದನ್ನು ಗ್ರಹಿಸಬೇಕು. ಆದ್ದರಿಂದ ಪ್ರತಿಯೊಬ್ಬನು ದೇಹದಲ್ಲಾಗಲಿ, ಇಂದ್ರಿಯಗಳಲ್ಲಾಗಲಿ, ಮನಸ್ಸಿನಲ್ಲಾಗಲಿ, ಬುದ್ಧಿಯಲ್ಲಿಯಾಗಲಿ ನಿವಸಿಸುವುದು ಸಲ್ಲದೆಂದು ಅವುಗಳೆಲ್ಲವುಗಳಿಗೂ ಸಾಕ್ಷಿಯಾದ, ಪರಮವಾದ ಆತ್ಮದಲ್ಲಿಯೇ ನಿವಾಸ ಏರ್ಪಡಿಸಿಕೊಳ್ಳಬೇಕು ಎಂದು ಅರ್ಥ. ಆಗ, ಪೂರ್ಣ ಇಂದ್ರಿಯ ನಿಗ್ರಹಣ, ಅದರಿಂದ ಕಾಮಾದಿಗಳ ಜಯ ತತ್ಫಲಿತವಾಗಿ ಸಂಸಾರ ಬಂಧ ವಿಚ್ಛೇದನ ಸಾಧ್ಯವಾಗುವುದೆಂದು ಇಲ್ಲಿ ಸ್ಪಷ್ಟವಾಗಿ ಹೇಳಲಾಗಿದೆ. ಜೀವಿಯು ತನ್ನ ಉಚ್ಚ ಸ್ಥಾನವನ್ನು ತಿಳಿಯಬೇಕು. ತಾನು ಸರ್ವೋಪರಿಸ್ಥಾನದಲ್ಲಿರುವ ಆತ್ಮವೇ ಎನ್ನುವ ಭಾವನೆ ಹೊಂದಿರಬೇಕು. ಅಂತಹ ನಿಶ್ಚಯದಿಂದ ಇಂದ್ರಿಯಾದಿಗಳ ಜಯ ಅತಿ ಸುಲಭವಾಗಿ ಸಿದ್ಧಿಸುವುದು. ಆತ್ಮದಲ್ಲಿ ಸ್ಥಾವರವನ್ನು ಏರ್ಪಡಿಸಿಕೊಂಡು ಇಂದ್ರಿಯಾದಿಗಳು ಎನ್ನುವ ದುಷ್ಟಮೃಗಗಳನ್ನು ದಹಿಸಬೇಕು. ಆ ಸ್ಥಳವನ್ನು ಬಿಟ್ಟರೆ ಬೇರೆ ಯಾವ ಸ್ಥಾನದಿಂದಲೇ ಆಗಲಿ ಅವುಗಳನ್ನು ಪೂರ್ಣವಾಗಿ ವಶಮಾಡಿಕೊಳ್ಳುವುದು ಅಸಾಧ್ಯವೆಂದು ತಿಳಿಸುತ್ತಾ, ಬುದ್ಧಿಗೆ ಪರವಾದ ಆತ್ಮದಲ್ಲೇ ಸದಾ ಸ್ಥಿರವಾಗಿರುವಂತೆ ಭಗವಂತನು ಈ ಶ್ಲೋಕದಲ್ಲಿ ಮತ್ತು ಮುಂದಿನ ಶ್ಲೋಕದಲ್ಲಿ ಎಚ್ಚರಿಕೆ ಕೊಡುತ್ತಿದ್ದಾನೆ.

ಪ್ರ : ಆತ್ಮದ ಸ್ಥಾನವನ್ನು, ಶಕ್ತಿಯನ್ನು ನಿರೂಪಿಸಿ?

ಉ : ದೇಹದ ಮೇಲೆ ಇಂದ್ರಿಯಗಳು, ಇಂದ್ರಿಯಗಳ ಮೇಲೆ ಮನಸ್ಸು, ಮನಸ್ಸಿನ ಮೇಲೆ ಬುದ್ಧಿ, ಬುದ್ಧಿಯ ಮೇಲೆ ಆತ್ಮ ಇದೆ. ಇವು ಒಂದಕ್ಕಿಂತ ಮತ್ತೊಂದು ಉತ್ತರೋತ್ತರ ಶ್ರೇಷ್ಠವಾದವುಗಳಾಗಿವೆ.

**ಅ||** ಈ ಪ್ರಕಾರವಾಗಿ ಆತ್ಮ ಎಲ್ಲವುಗಳಿಗಿಂತ ಪರಮವೆಂದು ತಿಳಿದುಕೊಂಡು ಆ ಅನುಭವದಿಂದ ಕಾಮಪಿಶಾಚಿಯನ್ನು ಹೊರದೂಡಬೇಕೆಂದು ಆದೇಶವೀಯಲಾಗುತ್ತಿದೆ-

**೪೩. ಏವಂ ಬುದ್ಧೇಃ ಪರಂ ಬುದ್ಧ್ವಾ ಸಂಸ್ತಭ್ಯಾತ್ಮಾನಮಾತ್ಮನಾ**
**ಜಹಿ ಶತ್ರುಂ ಮಹಾಬಾಹೋ ಕಾಮರೂಪಂ ದುರಾಸದಮ್**

**ಅರ್ಥ:** ಮಹಾಬಾಹೋ=ಉದ್ದವಾದ ತೋಳುಗಳುಳ್ಳ ಓ ಅರ್ಜುನಾ!; ಏವಂ=ಈ ಪ್ರಕಾರವಾಗಿ; ಬುದ್ಧೇಃ=ಬುದ್ಧಿಗಿಂತ; ಪರಂ=ಅತೀತವಾದದ್ದಾಗಿ (ಶ್ರೇಷ್ಠವಾದದ್ದಾಗಿ); (ಆತ್ಮಾನಾಂ=ಆತ್ಮವನ್ನು); ಬುದ್ಧ್ವಾ=ತಿಳಿದುಕೊಂಡು; ಆತ್ಮನಾ=(ವಿವೇಕವಂತವಾದ) ಬುದ್ಧಿಯಿಂದ, ಆತ್ಮಾನಾಂ=ಮನಸ್ಸನ್ನು; ಸಂಸ್ತಭ್ಯ=ಸರಿಯಾಗಿ ನಿಗ್ರಹಿಸಿ; ದುರಾಸದಮ್=ಜಯಿಸಲು ಕಷ್ಟಸಾಧ್ಯವಾದ; ಕಾಮರೂಪಂ=ಕಾಮವನ್ನು; ಶತ್ರುಂ=ಶತ್ರುವನ್ನು; ಜಹಿ=ನಶಿಸುವಂತೆ ಮಾಡು (ಬಿಡು ಇಲ್ಲವೆ ಜಯಿಸು).

**ತಾ||** ಉದ್ದ ಬಾಹುಗಳುಳ್ಳ ಓ ಅರ್ಜುನಾ! ಈ ಪ್ರಕಾರವಾಗಿ ಬುದ್ಧಿಗಿಂತ ಅತೀತವಾದ ಆತ್ಮವನ್ನು ತಿಳಿದು (ವಿವೇಕದಿಂದ ಕೂಡಿದ) ಬುದ್ಧಿಯಿಂದ ಮನಸ್ಸನ್ನು ಚೆನ್ನಾಗಿ ತಿದ್ದಿ ಜಯಿಸಲು ಕಷ್ಟಸಾಧ್ಯವಾದಂತಹ ಈ ಕಾಮವೆಂಬ ಶತ್ರುವನ್ನು ನಾಶಮಾಡುವುದು (ಜಯಿಸು).

**ವ್ಯಾಖ್ಯೆ:** ಪ್ರಪಂಚದಲ್ಲಿಯ ಎಲ್ಲಾ ದುಃಖಗಳಿಗೆ ಕಾರಣ ಜೀವಿಯು ತನ್ನ ನಿಜಸ್ವರೂಪವನ್ನು ತಿಳಿದುಕೊಳ್ಳದೆ ಇರುವುದು. ತಾನು ದೇಹವೆಂದು, ಇಂದ್ರಿಯಗಳೆಂದು, ಮನಸ್ಸೆಂದು ತಿಳಿದು ಜೀವಿಯು ಆಯಾ ದೇಹೇಂದ್ರಿಯಾದಿಗಳ ವಿಕಾರವನ್ನು ತನ್ನ ಮೇಲೆ ಆರೋಪಿಸಿಕೊಂಡು ದುಃಖಿಸುತ್ತಿದ್ದಾನೆ. ಈ ದೇಹಾದಿ ರೂಪ ದೃಶ್ಯ ತಾದಾತ್ಮವೇ ಅಶಾಂತಿಗೆ, ದುಃಖಕ್ಕೆ ಮೂಲ. ಆದರೆ ಭಗವಂತನು ಇಲ್ಲಿ ಯಥಾರ್ಥ ತತ್ವವನ್ನು ಬೋಧಿಸುತ್ತಾ 'ಓ ಜೀವಿಯೇ! ನೀನು ಬುದ್ಧಿಗಿಂತ ಪರಮವಾದ ಆತ್ಮವೇ ಹೊರತು ದೇಹಾದಿಗಳಲ್ಲ. ಅಂತಹ ಆತ್ಮ ಸ್ಥಾನದಲ್ಲಿ ಸ್ಥಿರವಾಗಿ ನಿಂತು ಜಯಿಸಲು ದುಸ್ಸಾಧ್ಯವಾದ ಈ ಕಾಮವೆಂಬ ಶತ್ರುವನ್ನು ನಾಶಮಾಡಿ ಪರಮಾನಂದವನ್ನು ಹೊಂದುವುದು' ಎಂದು ಕರುಣೆಯಿಂದ ಬೋಧಿಸುತ್ತಿದ್ದಾನೆ.

ದೇಹಕ್ಕೆ, ಇಂದ್ರಿಯಗಳಿಗೆ, ಮನಸ್ಸಿಗೆ ವಾಸ್ತವವಾಗಿ ಚೈತನ್ಯವನ್ನು ನೀಡುತ್ತಿರುವುದು ಆತ್ಮ. ಆತ್ಮದಿಂದಲೇ ಅವು ಶಕ್ತಿಯನ್ನು ಸೆಳೆಯುತ್ತಿವೆ. ಆದರೆ ಅವು ಕಾಲಕ್ರಮೇಣ ಆತ್ಮವನ್ನು ಮರೆಯುವಂತೆ ಮಾಡಿ ತಾವೇ ಮೇಲಕ್ಕೆದ್ದು ಕೂತಿವೆ. ಜೀವಿಯ ಅಜ್ಞಾನವೇ ಇದಕ್ಕೆ ಕಾರಣ. ಆದ್ದರಿಂದ ವಿಚಾರಣೆಯಿಂದ, ಮಹನೀಯರ ಬೋಧೆಗಳಿಂದ ತನ್ನ ಯಥಾರ್ಥ ಸ್ವರೂಪವನ್ನು (ಆತ್ಮವನ್ನು) ಪುನಃ ಜ್ಞಾಪಿಸಿಕೊಂಡಲ್ಲಿ ಆ ದೇಹೇಂದ್ರಿಯಗಳೆಲ್ಲವೂ ಕ್ರಮೇಣ ಅಣಗಿ ಹೋಗುತ್ತವೆ. ಆದ್ದರಿಂದ ಭಗವಂತನು ಈ ಶ್ಲೋಕದಲ್ಲಿ ಕಾಮದ ಮೇಲಿನ ವಿಜಯಕ್ಕೆ, ಬಂಧರಾಹಿತ್ಯಕ್ಕೆ ಆತ್ಮಜ್ಞಾನವೊಂದೇ ಪರಮ ಶರಣ್ಯವೆಂದು ತಿಳಿಸುತ್ತಾ, ಅಂತಹ ಆತ್ಮದ ಉನ್ನತ ಸ್ಥಿತಿಯನ್ನು, ಪ್ರಚಂಡ ಸಾಮರ್ಥ್ಯವನ್ನು ಹೊರಗೆಡಹುತ್ತಿದ್ದಾನೆ.

ದೇಹೇಂದ್ರಿಯಾದಿಗಳ ವ್ಯವಹಾರಗಳು ಆತ್ಮದೊಡನೆ ಸೇರಿರುವ ಹಾಗೆ ಭ್ರಮೆಯನ್ನು ಉಂಟುಮಾಡಿ ಅದರೊಡನೆ ಸಂಗಮವನ್ನೇರ್ಪಡಿಸಿಕೊಳ್ಳುವುವು. ಆ ಸಂಗಮವನ್ನು, ಗ್ರಂಥಿಯನ್ನು, ವಿವೇಕವೆನ್ನುವ ಶಸ್ತ್ರದಿಂದ ಛೇದಿಸಿ ಹಾಕಿದಲ್ಲಿ ಇನ್ನು ಆ ಇಂದ್ರಿಯಾದಿಗಳೆಲ್ಲವೂ ದುರ್ಬಲಗಳಾಗಿ, ನಿರ್ವೀರ್ಯಗಳಾಗಿ ಹೋಗುವುವು. ಇದನ್ನೇ ಗ್ರಂಥಿ ವಿಚ್ಛೇದನ ಎನ್ನುವರು. ಅಜ್ಞಾನಿ ಈ ದೇಹೇಂದ್ರಿಯಾದಿ ದೃಶ್ಯಗಳಲ್ಲಿ ಬಂಧವೇರ್ಪಡಿಸಿಕೊಳ್ಳುವನು. ಜ್ಞಾನಿ ಆ ಬಂಧವನ್ನು ಬಿಚ್ಚಿ ತನ್ನನ್ನು (ಆತ್ಮವನ್ನು) ಅದರಿಂದ ಬೇರ್ಪಡಿಸಿಕೊಳ್ಳುವನು. ಆಗ ಇಂದ್ರಿಯಾದಿಗಳೆಲ್ಲವೂ ಇದ್ದರೂ ಜೀವಿಯನ್ನು ಬಾಧಿಸಲಾರವು. ಅವು ಆತನಿಗೆ ವಿಧೇಯವಾಗಿರುವುವು. ಇದೇ ವೇದಾಂತದ ಪರಮ ರಹಸ್ಯ. ಒಂದೊಂದು ಇಂದ್ರಿಯವನ್ನು, ಒಂದೊಂದು ದೃಶ್ಯವಸ್ತುವನ್ನು ಹಿಡಿದು ಬಗ್ಗು ಬೀಳಿಸುವುದಕ್ಕಿಂತ ಸಮಸ್ತಗಳಿಗೆ ಮೂಲವಾದ ಆತ್ಮಸ್ಥಾನವನ್ನು ಸೇರುವುದರಿಂದ ಇಂದ್ರಿಯ ಮನಸ್ಸು ಬುದ್ಧಿಗಳಲ್ಲದೆ ಸಮಸ್ತ ದೃಶ್ಯ ಪ್ರಪಂಚ ವಶವಾಗಿ ಹೋಗುವುದು. ಸಂಸಾರ ದುಃಖ ಶಮನ ಹೊಂದಲು ಇದು ಸುಲಭೋಪಾಯ. ನಡೆಯುತ್ತಿರುವ ರೈಲು ಬಂಡಿಯನ್ನು ನಿಲ್ಲಿಸಬೇಕೆಂದು ಸಾವಿರಾರು ಜನರು ಅದನ್ನು ಹಿಡಿದು ಹಿಂದಕ್ಕೆ ಜಗ್ಗಿದರೂ ಅದು ನಿಲ್ಲುವುದಿಲ್ಲ. ಒಂದು ಚಿಕ್ಕ 'ಬ್ರೇಕ್' ಹಾಕಿದರೆ ನಿಂತು ಹೋಗುತ್ತದೆ. ಒಂದು ಫ್ಯಾಕ್ಟರಿಯಲ್ಲಿಯ ಎಲ್ಲಾ ಚಕ್ರಗಳನ್ನು ನಿಲ್ಲಿಸಬೇಕೆಂದರೆ ಇಂಜನ್ನಿನೊಂದಿಗೆ ಸಂಬಂಧವೇರ್ಪಡಿಸುವ ಬೆಲ್ಟ್‌ನ್ನು ಬಿಚ್ಚಿದರೆ ಸಾಕು. ಹಾಗೆಯೇ ಈ ಸಂಸಾರ ಚಕ್ರ ಪರಿಭ್ರಮಣ, ಈ ಅನಾದಿ ದುಃಖ ಜಾಲ, ದೃಶ್ಯದಿಂದ ಆತ್ಮಕ್ಕೆ ಉಂಟಾಗಿರುವ

ಸಂಬಂಧವನ್ನು ಛೇದಿಸಿದರೆ ತಕ್ಷಣ ಇಲ್ಲವಾಗುವುವು. ಆತ್ಮಸ್ವರೂಪವನ್ನು, ಜ್ಞಾನವೊಂದರಿಂದ ಮಾತ್ರ ಪಡೆಯಬಹುದು. ಈ ರಹಸ್ಯವನ್ನೇ ಭಗವಂತನು ಈ ಶ್ಲೋಕದಲ್ಲಿ ವ್ಯಕ್ತಪಡಿಸುತ್ತಿದ್ದಾನೆ. ಆತ್ಮಜ್ಞಾನದಿಂದ ವಾಸನಾಕ್ಷಯವು ತಪ್ಪದೆ ಉಂಟಾಗುತ್ತದೆಂದು ಇಲ್ಲಿ ಹೇಳಲಾಗಿದೆ.

"ದುರಾಸದಮ್"- ಕಾಮವೆನ್ನುವ ಶತ್ರು ಮಹಾಶಕ್ತಿವಂತವಾದದ್ದೆಂದು, ಜಯಿಸಲು ಕಷ್ಟಸಾಧ್ಯವೆಂದು ಹೇಳಲ್ಪಟ್ಟಿದೆ. ಮಹಾ ವಟವೃಕ್ಷ ಬೇರಿನೊಡನೆ ದೃಢವಾಗಿರುವಂತೆ, ಅನೇಕ ಜನ್ಮಗಳಿಂದ ಬಲವನ್ನು ಸಂಪಾದಿಸಿಕೊಂಡ ಕಾಮವು ಹೃದಯಕ್ಷೇತ್ರದಲ್ಲಿ ಚೆನ್ನಾಗಿ ಬೇರೂರಿದೆ. ಕಾಮರೂಪ ಮಹಾವೃಕ್ಷವನ್ನು ಅಸಂಗವೆಂಬ (ಆತ್ಮಜ್ಞಾನ) ಖಡ್ಗದಿಂದ ಮಾತ್ರ ಛೇದಿಸಬಹುದು **(ಅಸಂಗ ಶಸ್ತ್ರೇಣ ದೃಢೇನ ಛಿತ್ವಾ)**.

ಕಾಮವೆಂಬ ಶತ್ರುವನ್ನು ಜಯಿಸಲು ಈ ಚಿಕ್ಕಬಾಹುಗಳು ಸಾಲವು, ಮಹಾಬಾಹುಗಳು, ಶಕ್ತಿವಂತವಾದ ಭುಜಗಳು ಬೇಕೆಂದು ಸೂಚಿಸಲು ಅರ್ಜುನನನ್ನು 'ಮಹಾಬಾಹೋ' ಎಂದು ಭಗವಂತನು ಬಹುಶಃ ಇಲ್ಲಿ ಸಂಬೋಧಿಸಿದನು.

ಆದ್ದರಿಂದ ಶೋಕ ಸಾಗರದಿಂದ ಮುಕ್ತಿ ಹೊಂದಬೇಕೆನ್ನುವರು ಕಾಮಾದಿ ಶತ್ರುಗಳನ್ನು ಜಯಿಸಬೇಕೆನ್ನುವವರು, ಮೋಕ್ಷ ಪದವಿಯನ್ನು ಇಚ್ಛಿಸುವವರು ತಾವು ದೇಹೇಂದ್ರಿಯಾದಿಗಳೆಂದು ಭಾವಿಸದೆ ಅವುಗಳಿಗೆಲ್ಲಾ ಸಾಕ್ಷ್ಯವಾದ ಆತ್ಮವೇ ತಾವೆಂದು ದೃಢವಾಗಿ ನಿಶ್ಚಯಿಸಿಕೊಳ್ಳಬೇಕು. ಅಂತಹ ನಿಶ್ಚಯ ಉಂಟಾದಲ್ಲಿ ಇನ್ನು ತುಂಬು ಯೌವನದಲ್ಲಿರಲಿ, ಪ್ರಾಪಂಚಿಕ ವಿಷಯಗಳ ಮಧ್ಯದಲ್ಲಿ ಸಿಕ್ಕು ಓಲಾಡುತ್ತಿರಲಿ, ಇಂದ್ರಿಯಗಳು ಅವನ ಹತೋಟಿಯಲ್ಲಿಯೇ ಇರುವುವು. ಈ ಪ್ರಕಾರವಾಗಿ ಕಾಮಾದಿಗಳನ್ನು ಜಯಿಸಲು ಆತ್ಮಜ್ಞಾನವೆಂಬ ಅದ್ಭುತ ಸಾಧನೆಯನ್ನು ಭಗವಂತನು ಇಲ್ಲಿ ಬೋಧಿಸಿರುತ್ತಾನೆ.

ಕರ್ಮಯೋಗದ ಬಗ್ಗೆ ಬೋಧಿಸುತ್ತಾ ಕೊನೆಗೆ ಈ ಅಖಂಡ ಜ್ಞಾನ ಬೋಧೆಯನ್ನು ಹೇಳಿರುವುದರಿಂದ ಪ್ರತಿಯೊಬ್ಬರೂ ಮೊಟ್ಟಮೊದಲು ನಿಷ್ಕಾಮ ಕರ್ಮಾಚರಣೆಯ ದ್ವಾರ ಚಿತ್ತಶುದ್ಧಿಯನ್ನು ಪಡೆದು ನಂತರ ದೃಕ್ ದೃಶ್ಯವಿವೇಕರೂಪವಾದ ಈ ಆತ್ಮಜ್ಞಾನವನ್ನು ತಪ್ಪದೆ ಹೊಂದಬೇಕೆಂದು ಸ್ಪಷ್ಟವಾಗಿ ಹೇಳಲ್ಪಟ್ಟಿದೆ.

ಪ್ರ : ಕಾಮವನ್ನು ಜಯಿಸಲು ಉಪಾಯವೇನು?

ಉ : ಬುದ್ಧಿಗಿಂತ ಮೇಲು ಸ್ಥಾನದಲ್ಲಿರುವ ಸಾಕ್ಷಿಯಾದ ಆತ್ಮವನ್ನು ತಿಳಿದುಕೊಂಡು ಅಲ್ಲಿ ಸ್ಥಾನ ಮಾಡಿಕೊಂಡಲ್ಲಿ ಕಾಮವು ಪಲಾಯನ ಮಾಡುತ್ತದೆ.

## ಓಮ್ !

ಇತಿ ಶ್ರೀ ಮದ್ಭಾಗವದ್ಗೀತಾಸೂಪನಿಷತ್ಸು ಬ್ರಹ್ಮವಿದ್ಯಾಯಾಂ ಯೋಗಶಾಸ್ತ್ರೇ

ಶ್ರೀ ಕೃಷ್ಣಾರ್ಜುನ ಸಂವಾದೇ ಕರ್ಮಯೋಗೋ ನಾಮ ತೃತೀಯೋಽಧ್ಯಾಯಃ

ಇದು ಉಪನಿಷತ್ ಪ್ರತಿಪಾದಕವು, ಬ್ರಹ್ಮವಿದ್ಯೆಯು, ಯೋಗಶಾಸ್ತ್ರವು

ಶ್ರೀ ಕೃಷ್ಣಾರ್ಜುನ ಸಂವಾದವೆನ್ನುವ ಶ್ರೀ ಭಗವದ್ಗೀತೆಯಲ್ಲಿಯ ಕರ್ಮಯೋಗವೆನ್ನುವ

ಮೂರನೆಯ ಅಧ್ಯಾಯ

**ಓಮ್ ತತ್ ಸತ್**

# ಶ್ರೀ ಭಗವದ್ಗೀತೆ

## ಅಥ ಚತುರ್ಥೋऽಧ್ಯಾಯಃ

## ನಾಲ್ಕನೆಯ ಅಧ್ಯಾಯ

## ಜ್ಞಾನಯೋಗಃ - ಜ್ಞಾನಯೋಗ

**ಈ ಅಧ್ಯಾಯದ ಹೆಸರು :**

"ಜ್ಞಾನಯೋಗ"- ಈ ಅಧ್ಯಾಯದಲ್ಲಿ ಜ್ಞಾನಸಂಬಂಧವಾದ ವಿಚಾರಣೆಯಿರುವುದರಿಂದ, ಜ್ಞಾನತಪಸ್ಸು, ಜ್ಞಾನಯಜ್ಞ, ಜ್ಞಾನನೌಕೆ, ಜ್ಞಾನಾಗ್ನಿ, ಜ್ಞಾನಖಡ್ಗ- ಮುಂತಾದುವುಗಳನ್ನು ಕುರಿತು ಪ್ರಸ್ತಾಪಿಸಲ್ಪಟ್ಟಿರು ವುದರಿಂದ, ಆಧ್ಯಾತ್ಮ ಜ್ಞಾನದ ಮಹಿಮೆಯನ್ನು ವಿಶೇಷವಾಗಿ ಹೇಳಲ್ಪಟ್ಟಿರುವುದರಿಂದ, ಜ್ಞಾನ ಯಾರಿಗೆ ಮತ್ತು ಹೇಗೆ ಲಭಿಸುವುದೋ ಚೆನ್ನಾಗಿ ವಿಶದೀಕರಿಸಲ್ಪಟ್ಟಿರುವುದರಿಂದ, ಜ್ಞಾನಕ್ಕೆ ಸಂಬಂಧಿಸಿದ ವಿಷಯಗಳೇ ಹೆಚ್ಚಿಗೆ ವರ್ಣಿಸಲ್ಪಟ್ಟಿವೆಯಾದ್ದರಿಂದ ಇದಕ್ಕೆ ಜ್ಞಾನಯೋಗವೆನ್ನುವ ಹೆಸರನ್ನು ಕೊಡಲಾಗಿದೆ.

**ಈ ಅಧ್ಯಾಯದಲ್ಲಿಯ ಪ್ರಧಾನ ವಿಷಯಗಳು:**

೧. ಭಗವಂತನ ಪ್ರಭಾವ, ನಿಷ್ಕಾಮಕರ್ಮಯೋಗದ ಪ್ರಸ್ತಾವನೆ- (೧ರಿಂದ ೧೮ನೆಯ ಶ್ಲೋಕದವರೆಗೆ)

೨. ಜ್ಞಾನಿಯ ಪವಿತ್ರ ಆಚರಣೆ- (೧೯ರಿಂದ ೨೩ನೆಯ ಶ್ಲೋಕದವರೆಗೆ)

೩. ವಿವಿಧ ಯಜ್ಞಗಳ ವರ್ಣನೆ- ಜ್ಞಾನಯಜ್ಞದ ಆಧಿಕ್ಯತೆ- (೨೪ರಿಂದ ೩೨ನೆಯ ಶ್ಲೋಕದವರೆಗೆ)

೪. ಜ್ಞಾನದ ಮಹಿಮೆ (೩೩ರಿಂದ ೪೨ನೆಯ ಶ್ಲೋಕದವರೆಗೆ)

**ಪೂರ್ವಾಧ್ಯಾಯದೊಡನೆ ಈ ಅಧ್ಯಾಯಕ್ಕೆ ಇರುವ ಸಂಬಂಧ:**

ನಿಷ್ಕಾಮಕರ್ಮಾಚರಣೆಯಿಂದ ಚಿತ್ತವು ಶುದ್ಧವಾಗಲು, ಅಂತಹ ನಿರ್ಮಲಚಿತ್ತದಲ್ಲಿ ಜ್ಞಾನವು ಉದಯಿಸುತ್ತದೆನ್ನುವುದು ಪರಮ ಸತ್ಯ. ಹಿಂದಿನ ಅಧ್ಯಾಯವಾದ 'ಕರ್ಮಯೋಗ'ದಲ್ಲಿ ಚಿತ್ತಶುದ್ಧಿಗೆ ಬೇಕಾದ ಕರ್ಮಾಚರಣೆ ಪದ್ಧತಿಗಳನ್ನು ತಿಳಿಸಲಾಗಿದೆ. ಆದ್ದರಿಂದ ಇನ್ನು ಜ್ಞಾನಾವಲಂಬನೆಗೆ ಕ್ಷೇತ್ರವು ಸಿದ್ಧವಾದಂತೆಯೇ ಆಗಿದೆ. ಈ ಕಾರಣದಿಂದಲೇ ಅರ್ಜುನನಿಗೆ ಜ್ಞಾನಯೋಗವನ್ನು ಭಗವಂತನು ಈ ಅಧ್ಯಾಯದಲ್ಲಿ ಪ್ರಸಾದಿಸುತ್ತಿದ್ದಾನೆ. ಜ್ಞಾನವೇ ಈ ಅಧ್ಯಾಯದ ವಿಷಯ. ಈ ಅಧ್ಯಾಯದಲ್ಲಿ ಜ್ಞಾನಸಂಬಂಧವಾದ ವಿಷಯಗಳೇ ಅಲ್ಲದೆ, ಮಧ್ಯೆ ಸ್ವಲ್ಪ ಕರ್ಮಯೋಗದ ಪ್ರಸ್ತಾಪವೂ ಇದೆ. ಹಿಂದಿನ ಅಧ್ಯಾಯಗಳಲ್ಲಿ ವಿವರಿಸಲ್ಪಟ್ಟ ನಿಷ್ಕಾಮಕರ್ಮ ಯೋಗವನ್ನೊಳಗೊಂಡ ಅಧ್ಯಾತ್ಮವಿದ್ಯೆ ಅತಿಪ್ರಾಚೀನವಾದುದೆಂದೂ, ಮೊಟ್ಟಮೊದಲು ಭಗವಂತನು ಅದನ್ನು ಸೂರ್ಯನಿಗೆ ಉಪದೇಶಿಸಿ, ಸೂರ್ಯನ ಮೂಲಕ ಕ್ರಮೇಣ ಮನ್ವಾದಿ ಮಹರ್ಷಿಗಳು ಅದನ್ನು ಅರಿತರೆಂದು, ಈ ಅಧ್ಯಾಯದ ಪ್ರಾರಂಭದಲ್ಲಿ ತಿಳಿಸಲಾಗಿದೆ. ಈ ಪ್ರಕಾರವಾಗಿ ನಿಷ್ಕಾಮಕರ್ಮಯೋಗದ ಪ್ರಶಂಸೆಯಿಂದ ಈ ಅಧ್ಯಾಯ ಆರಂಭಗೊಳ್ಳುತ್ತದೆ. ಮೂರು ಶ್ಲೋಕಗಳ ಮೂಲಕ ಶ್ರೀಕೃಷ್ಣಮೂರ್ತಿ ಈ ಸಂಬಂಧವನ್ನು ವಿವರಿಸುತ್ತಿದ್ದಾನೆ-

**ಶ್ರೀ ಭಗವಾನುವಾಚ:**

**೧. ಇಮಂ ವಿವಸ್ವತೇ ಯೋಗಮ್ ಪ್ರೋಕ್ತವಾನಹಮವ್ಯಯಮ್**
**ವಿವಸ್ವಾನ್ ಮನವೇ ಪ್ರಾಹ ಮನುರಿಕ್ಷ್ವಾಕವೇಽಬ್ರವೀತ್**

ಶ್ರೀ ಭಗವಾನುವಾಚ- ಶ್ರೀ ಭಗವಂತನು ಹೇಳಿದನು.

**ಅರ್ಥ:** ಅವ್ಯಯಂ=ನಾಶರಹಿತವಾದ; ಇಮಂ ಯೋಗಂ=ಈ ನಿಷ್ಕಾಮ ಕರ್ಮಯೋಗವನ್ನು (ತದ್ವಾರ ಹೊಂದಬಹುದಾದ ಜ್ಞಾನನಿಷ್ಠೆಯನ್ನು); ಅಹಂ=ನಾನು; (ಪುರಾ-ಸೃಷ್ಟ್ಯಾದಿಕಾಲದಲ್ಲಿ) ವಿವಸ್ವತೇ=ಸೂರ್ಯನಿಗೆ; ಪ್ರೋಕ್ತವಾನ್=ಹೇಳಿದ್ದೆನು. ವಿವಸ್ವಾನ್=ಸೂರ್ಯನು; ಮನವೇ=(ತನ್ನ ಪುತ್ರನಾದ ವೈವಸ್ವತನಿಗೆ) ಮನುವಿಗೆ; ಪ್ರಾಹ=ಹೇಳಿದನು; ಮನುಃ=ಮನು; ಇಕ್ಷ್ವಾಕವೇ=(ತನ್ನ ಪುತ್ರನಾದ) ಇಕ್ಷ್ವಾಕುವಿಗೆ; ಅಬ್ರವೀತ್=ಹೇಳಿದನು.

**ತಾ||** ಶ್ರೀ ಭಗವಂತನು ಹೇಳಿದನು- ನಾಶರಹಿತವಾದ ಈ ನಿಷ್ಕಾಮ ಕರ್ಮಯೋಗವನ್ನು (ತದ್ವಾರ ಹೊಂದುವ ಜ್ಞಾನನಿಷ್ಠೆಯನ್ನು) ಆದಿಯಲ್ಲಿ ನಾನು ಸೂರ್ಯನಿಗೆ ಉಪದೇಶಿಸಿದ್ದೆನು. ಸೂರ್ಯನು ವೈವಸ್ವತ ಮನುವಿಗೆ ಉಪದೇಶಿಸಿದನು. ಮನುವು ಇಕ್ಷ್ವಾಕುವಿಗೆ ಬೋಧಿಸಿದನು.

**ವ್ಯಾಖ್ಯೆ:** ಈ ನಿಷ್ಕಾಮಕರ್ಮಯೋಗವನ್ನು (ತದ್ವಾರ ಲಭಿಸುವ ಜ್ಞಾನನಿಷ್ಠೆಯನ್ನು) ಪೂರ್ವದಲ್ಲಿ ಭಗವಂತನು ಸೂರ್ಯನಿಗೆ ಉಪದೇಶಿಸಿದನು. ಆತನ ಮೂಲಕ ಬೇರೆಯ ರಾಜರ್ಷಿಗಳು ತಿಳಿದುಕೊಂಡರು. ಈ ಮಹತ್ತರ ಯೋಗ, ಜೀವಿಯ

ಚಿತ್ತವನ್ನು ಶುದ್ಧಪಡಿಸಿ ಸ್ವಸ್ವರೂಪಾನುಭೂತಿಯ ಮೂಲಕ ಸಂಸಾರ ಬಂಧವನ್ನು ಸೀಳಿ, ಮೋಕ್ಷ ವನ್ನುಂಟುಮಾಡುವುದರಿಂದ ಇದನ್ನು ಸಾಧಿಸಿದವರೆಲ್ಲರೂ ಋಷಿಗಳಾಗಿ ಮುಕ್ತಿ ಹೊಂದಿದರು. ಅವರು ಸಂಘದ ಯಾವುದೇ ಹಂತಕ್ಕೆ ಸೇರಿದವರಾಗಿದ್ದರೂ, ಬ್ರಾಹ್ಮಣರಾದರೂ, ರಾಜರಾದರೂ ಅಥವ ಸಾಮಾನ್ಯರಾದರೂ ಸರ್ವರೂ ಪರಮಶ್ರೇಯವನ್ನು ಹೊಂದಿದರು.

"ಅವ್ಯಯಂ"- ಚಿತ್ತಶುದ್ಧಿಯ ಮೂಲಕ ನಾಶರಹಿತವಾದ ಮೋಕ್ಷ ವೆನ್ನುವ ಫಲವನ್ನು ಕೊಡುವುದರಿಂದ ನಿಷ್ಕಾಮಕರ್ಮಯೋಗರೂಪ ಅಧ್ಯಾತ್ಮ ವಿದ್ಯೆಯನ್ನು ಅವ್ಯಯವೆಂದು ಕರೆಯುವರು. ಮತ್ತೆ ಸತ್ಯವು ಯಾವ ಕಾಲದಲ್ಲಿಯೂ ನಾಶವಾಗುವುದಿಲ್ಲವಾದ್ದರಿಂದ, ಆ ಸತ್ಯವನ್ನು ನೀಡುವ ಮಾರ್ಗಕ್ಕೆ ಕೂಡ ನಾಶವಿರುವುದಿಲ್ಲ. ಆದ್ದರಿಂದ ಅದು ಅವ್ಯಯವಾದದ್ದು. ಒಂದು ವೇಳೆ ಅದರ ಪ್ರಚಾರ ದೇಶಕಾಲ ಪರಿಸ್ಥಿತಿಗಳಿಂದ ಲೋಕದಲ್ಲಿ ಸ್ವಲ್ಪ ಏರುಪೇರಾದರೂ ಪೂರ್ತಿಯಾಗಿ ಮಾತ್ರ ಅದೃಶ್ಯವಾಗದು. ಭಗವಂತನೇ ಅವತಾರವೆತ್ತಿ ಅದನ್ನು ಉದ್ಧರಿಸುತ್ತಿರುತ್ತಾನೆ.

ಪ್ರ : ನಿಷ್ಕಾಮ ಕರ್ಮಯೋಗ ಎಂತಹದು?

ಉ : ನಾಶರಹಿತವಾದದ್ದು. ಶಾಶ್ವತ ಮೋಕ್ಷಗಳನ್ನು ಕೊಡುವುದು

ಪ್ರ : ಅದು ಲೋಕದಲ್ಲಿ ಹೇಗೆ ವ್ಯಾಪಿಸಿದೆ?

ಉ : ಮೊಟ್ಟಮೊದಲು ಭಗವಂತನು ಸೂರ್ಯನಿಗೆ ಉಪದೇಶಿಸಿದನು. ನಂತರ ಸೂರ್ಯನು ಮನುವಿಗೆ, ಮನುವು ಇಕ್ಷ್ವಾಕುವಿಗೆ ಬೋಧಿಸಲು, ಕ್ರಮೇಣ ಅದು ಲೋಕವನ್ನು ವ್ಯಾಪಿಸಿತು.

**೨. ಏವಂ ಪರಂಪರಾಪ್ರಾಪ್ತ ಮಿಮಂ ರಾಜರ್ಷಯೋ ವಿದುಃ**
**ಸ ಕಾಲೇನೇಹ ಮಹತಾ ಯೋಗೋ ನಷ್ಟಃ ಪರಂತಪ**

**ಅರ್ಥ:** ಪರಂತಪ=ಓ ಅರ್ಜುನಾ!, ಏವಂ=ಈ ಪ್ರಕಾರವಾಗಿ, ಪರಂಪರಾ ಪ್ರಾಪ್ತಂ=ಪರಂಪರವಾಗಿ ಬಂದ; ಇಮಂ=ಈ ಯೋಗವನ್ನು; ರಾಜ ರ್ಷಯಃ=ರಾಜರ್ಷಿಗಳು; ವಿದುಃ=ತಿಳಿದುಕೊಂಡರು; ಮಹತಾ ಕಾಲೇನ= ಬಹಳ ಕಾಲದ ನಂತರ; ಸಯೋಗಃ=ಆ ಯೋಗವು; ಇಹ=ಈ ಲೋಕದಲ್ಲಿ; ನಷ್ಟಃ=ಇಲ್ಲದಂತಾಯಿತು.

**ತಾ||** ಓ ಅರ್ಜುನಾ! ಈ ಪ್ರಕಾರವಾಗಿ ಪರಂಪರವಾಗಿ ಬಂದ ಈ ನಿಷ್ಕಾಮ ಕರ್ಮಯೋಗವನ್ನು ರಾಜರ್ಷಿಗಳು ತಿಳಿದುಕೊಂಡರು. ಬಹಳ ಕಾಲದ ನಂತರ ಆ ಯೋಗವು ಆ ಲೋಕದಲ್ಲಿ ಕ್ರಮೇಣವಾಗಿ ಇಲ್ಲದಂತಾಯಿತು.

**ವ್ಯಾಖ್ಯೆ:** "ರಾಜರ್ಷಯಃ"- ರಾಜನು ಆಧ್ಯಾತ್ಮವಿದ್ಯೆಯ ಅನುಭೂತಿಯನ್ನು ಹೊಂದಿ ರಾಜರ್ಷಿಯಾಗುವನು. ಅಂದರೆ ರಾಜತ್ವ ಮತ್ತು ಋಷಿತ್ವ ಗಳೆರಡನ್ನು ಹೊಂದಿದವನು ಎಂದರ್ಥ. ಪೂರ್ವದಲ್ಲಿ ಅನೇಕ ಜನ ರಾಜರು ಈ ಪರಮಾತ್ಮ ವಿದ್ಯೆಯನ್ನು ಗ್ರಹಿಸಿ ರಾಜರ್ಷಿಗಳಾದರು. 'ಋಷಿ'- ಎನ್ನುವುದು ಒಂದು ಬಿರುದು; ಅದನ್ನು ಯಾರಾದರೂ ಗಳಿಸಬಹುದು. ಆಧ್ಯಾತ್ಮಜ್ಞಾನವನ್ನು ಚೆನ್ನಾಗಿ ಸಾಧಿಸುವುದರಿಂದ ಸಾಮಾನ್ಯ ಮಾನವನೂ ಸಹ ಮಹರ್ಷಿಯಾಗ ಬಲ್ಲನು. ನಿಷ್ಕಾಮ ಕರ್ಮಯೋಗವನ್ನವಲಂಬಿಸಿ, ಇಂದ್ರಿಯಗಳನ್ನು ಜಯಿಸಿ, ಮನಸ್ಸನ್ನು ಸ್ವಾಧೀನಪಡಿಸಿಕೊಂಡು, ಕಾಮಾದಿಗಳನ್ನು ತ್ಯಜಿಸಿ ಆತ್ಮಾನುಭವವನ್ನು ಪಡೆದವನು ಮಾತ್ರ ಋಷಿಯೆಂದು ಕರೆಯಲ್ಪಡುವನು. ಪೂರ್ವದಲ್ಲಿ ಎಷ್ಟೋ ರಾಜರು ಈ ರೀತಿಯ ಆಚರಣೆಯಿಂದ ರಾಜರ್ಷಿಗಳಾದರೆಂದು ಇಲ್ಲಿ ಹೇಳಲಾಗಿದೆ. ಎಷ್ಟೋ ಕಾರ್ಯಕ್ರಮಗಳು, ವಿಕ್ಷೇಪಗಳು, ವ್ಯವಹಾರಗಳನ್ನು ಹೊಂದಿದ ರಾಜರೇ ಇಂತಹ ಉತ್ತಮ ಸ್ಥಿತಿಯನ್ನು ಸಾಧಿಸಿದರೆಂದರೆ, ಇನ್ನು ಮಹರ್ಷಿಗಳ ವಿಷಯವನ್ನು ಬೇರೆ ಹೇಳಬೇಕೆ? ಕೆಲವರು ಗೃಹಸ್ಥರು ತಮಗೆ ಅನೇಕ ಕುಟುಂಬ ವ್ಯವಹಾರಗಳು, ಉದ್ಯೋಗಗಳು, ವ್ಯವಸಾಯ ಕಾರ್ಯ ಗಳಿರುವುವೆಂದೂ, ಆಧ್ಯಾತ್ಮಿಕ ಸಾಧನೆಗಳಿಗೆ ಏನೂ ಬಿಡುವಿಲ್ಲವೆಂದೂ, ಎಲ್ಲವನ್ನೂ ವರ್ಜಿಸಿದ ಸನ್ಯಾಸಿಗಳಿಗೆ ಮಾತ್ರ ಅದು ಸಾಧ್ಯವೆಂದು ಹೇಳುವರು. ಇದು ಸತ್ಯಕ್ಕೆ ಬಹಳ ದೂರವಾದುದೆಂದು ಈ ಶ್ಲೋಕದಿಂದ ತಿಳಿದುಬರುತ್ತದೆ. ರಾಜನಿಗೆ ಇಲ್ಲದ ವ್ಯವಹಾರಗಳು ಗೃಹಸ್ಥನಿಗಿವೆಯೇ? ಆದ್ದರಿಂದ ಪೂರ್ವ ಕಾಲದ ರಾಜರಂತೆ ಸರ್ವರೂ ನಿಷ್ಕಾಮ ಕರ್ಮಯೋಗಾದಿ ಪರಮಾರ್ಥ ಸಾಧನೆಗಳನ್ನು ಅನುಷ್ಠಾನ ಮಾಡಿ ಮುಕ್ತಿ ಹೊಂದಬಹುದು. ಈ ಶ್ಲೋಕದಲ್ಲಿ ರಾಜರ್ಷಿಗಳು ತಿಳಿದುಕೊಂಡರು ಎಂದು ಹೇಳಲ್ಪಟ್ಟಿರುವುದರಿಂದ ಬೇರೆಯವರು ತಿಳಿದುಕೊಂಡಿರಲಿಲ್ಲವೆಂದು ಅರ್ಥವಲ್ಲ. ಆ ಕಾಲದಲ್ಲಿ ಅದನ್ನು ಆಚರಿಸುವವರಲ್ಲಿ ರಾಜರು ಪ್ರಧಾನರಾಗಿದ್ದರು. ಮತ್ತೆ ಅರ್ಜುನನು ರಾಜನಾಗಿದ್ದರಿಂದ ಪೂರ್ವರಾಜರ ಈ ಮಾರ್ಗವನ್ನು ಅನುಸರಿಸುವುದರಲ್ಲಿ ಆತನಿಗೆ ಕಷ್ಟವೇನೂ ಇಲ್ಲವೆಂದು ತಿಳಿಸಲೋಸುಗ ಹಾಗೆ ಹೇಳಿರಬಹುದು.

"ನಷ್ಟಃ"- ಎನ್ನುವ ಪದಕ್ಕೆ ಪೂರ್ತಿಯಾಗಿ ನಷ್ಟವಾಗಿದೆ ಎಂದು ಅರ್ಥವಲ್ಲ. ಕಾಲಗರ್ಭದಲ್ಲಿ (ಪರಶುರಾಮನು ರಾಜರನ್ನು ವಧಿಸುವ ಮುಂತಾದ ಅವಾಂತರ ಪರಿಸ್ಥಿತಿಗಳಿಂದ) ರಾಜರ್ಷಿಗಳು ತಿಳಿದ ಆ ಬ್ರಹ್ಮವಿದ್ಯೆ ಮತ್ತು ನಿಷ್ಕಾಮಕರ್ಮಯೋಗದ ಪ್ರಚಾರ ಲೋಕದಲ್ಲಿ ಕಡಿಮೆಯಾಗಿತ್ತೆಂದು ಭಾವ. ಇಲ್ಲದಿದ್ದರೆ, ಹಿಂದಿನ ಶ್ಲೋಕದಲ್ಲಿಯೇ ಹೇಳಲ್ಪಟ್ಟ 'ಅವ್ಯಯಂ', (ನಾಶರಹಿತ ವಾದದ್ದು) ಎನ್ನುವ ಶಬ್ದಕ್ಕೆ ಲೋಪವುಂಟಾಗುವುದು. ಪರಮಾತ್ಮನು ಹೇಗೆ ಶಾಶ್ವತವೋ ಹಾಗೆ ಆತನಿಂದ ಸೃಷ್ಟಿಸಲ್ಪಟ್ಟ ಧರ್ಮವೂ ಸಹ ಶಾಶ್ವತವಾದದ್ದೇ.

**೩. ಸ ಏವಾಯಂ ಮಯಾ ತೇಽದ್ಯ ಯೋಗಃ ಪ್ರೋಕ್ತಃ ಪುರಾತನಃ**
**ಭಕ್ತೋಽಸಿ ಮೇ ಸಖಾ ಚೇತಿ ರಹಸ್ಯಂ ಹ್ಯೇತದುತ್ತಮಮ್**

**ಅರ್ಥ:** ಮೇ=ನನ್ನ; ಭಕ್ತಃ=ಭಕ್ತನಾದ; ಸಖಾಚ=ಸ್ನೇಹಿತನಾದ; ಅಸಿ ಇತಿ=ಆಗಿದ್ದೀಯೆಂದು; ಪುರಾತನಃ=ಪ್ರಾಚೀನವಾದ; ಸಃ ಯೇವ ಅಯಂ ಯೋಗಃ=ಆ ನಿಷ್ಕಾಮ ಕರ್ಮಯೋಗವೇ; ಅದ್ಯ=ಈಗ; ತೇ=ನಿನಗೆ; ಮಯಾ=ನನ್ನಿಂದ; ಪ್ರೋಕ್ತಃ=ಹೇಳಲ್ಪಟ್ಟಿದೆ; ಉತ್ತಮಂ=ಶ್ರೇಷ್ಠವಾದ; ಏತತ್=ಈ ಯೋಗವು; ರಹಸ್ಯಂ ಹಿ=ಅತಿ ರಹಸ್ಯವಾದುದು

**ತಾ||** ನೀನು ನನ್ನ ಭಕ್ತನೂ, ಮಿತ್ರನೂ ಆಗಿರುವುದರಿಂದ ಆ ಪುರಾತನವಾದ ನಿಷ್ಕಾಮ ಕರ್ಮಯೋಗವನ್ನು ಈಗ ಮತ್ತೆ ನಿನಗೆ ಹೇಳುತ್ತಿದ್ದೇನೆ. ಇದು ಬಹಳ ಶ್ರೇಷ್ಠವಾದುದು ಮತ್ತು ರಹಸ್ಯವಾದುದೆಂದು ತಿಳಿ.

**ವ್ಯಾಖ್ಯೆ:** ಭಗವಂತನು ಅರ್ಜುನನಿಗೆ ಬೋಧಿಸಿದ ಈ (ನಿಷ್ಕಾಮ ಕರ್ಮ ಯೋಗಾದಿ) ಪರಮಾರ್ಥ ವಿದ್ಯೆ ಹೊಸದಾಗಿ ಆವಿರ್ಭವಿಸಿರುವುದಲ್ಲ. ಅನಾದಿ ಕಾಲದಿಂದಲೂ ಇದೆ. ಆದ್ದರಿಂದಲೇ ಅದು 'ಪುರಾತನ'ವೆಂದು ಹೇಳಲ್ಪಟ್ಟಿದೆ. ಆದರೆ ದೇಶಕಾಲ ಪರಿಸ್ಥಿತಿಗಳನ್ನು ಹಿಡಿದು ಕಾಲಗರ್ಭದಲ್ಲಿ ಅದು ಸ್ವಲ್ಪ ಮರೆಯಾದಾಗ ಸಾಕ್ಷಾತ್ ದೈವವಾಗಲೀ ಇಲ್ಲ ದೈವಾಂಶ ಸಂಭೂತರಾದ ಮಹನೀಯರಾಗಲಿ ಅವತರಿಸಿ ಅದನ್ನು ಉದ್ಧರಿಸುವರು. ಇಂತಹ ಪ್ರಾಚೀನವಾದ ಉತ್ತಮ ವಿದ್ಯೆಯನ್ನು ಶ್ರೀಕೃಷ್ಣಮೂರ್ತಿ ಅರ್ಜುನನಿಗೆ ಈಗ ಬೋಧಿಸಿದನು.

ಈ ಯೋಗವನ್ನು ಅರ್ಜುನನಿಗೇ ಏಕೆ ಬೋಧಿಸಿದನು? ಇದಕ್ಕೆ ಕಾರಣವಿದೆ. ಆ ಕಾರಣವನ್ನು ಈ ಶ್ಲೋಕದಲ್ಲಿ ಸ್ಪಷ್ಟವಾಗಿ ಕೊಡಲಾಗಿದೆ.

ಅರ್ಜುನನು ಪರಮಭಕ್ತ ಹಾಗು ಪರಮ ಮಿತ್ರನಾದ್ದರಿಂದ ಭಗವಂತನು ಅತಿ ರಹಸ್ಯವಾದದ್ದನ್ನು ಆತನಿಗೆ ಉಪದೇಶಿಸಿದನು. ಅರ್ಜುನನ ಹಾಗೇ ಯಾರಾದರೂ ಸರಿಯೇ ನಿರ್ಮಲ ಭಕ್ತಿ ಹಾಗೂ ಪರಮ ಪ್ರೇಮ ಸಂಪಾದಿಸಿಕೊಂಡಿದ್ದಲ್ಲಿ ಅವರಿಗೆ ಭಗವಂತನು ತಪ್ಪದೆ ಆಧ್ಯಾತ್ಮ ಜ್ಞಾನವನ್ನು ಪ್ರಸಾದಿಸುವನು. [ದಧಾಮಿ ಬುದ್ಧಿಯೋಗಂ (೧೦-೧೦)]. ಆದ್ದರಿಂದ ಅರ್ಜುನನ ಹಾಗೆ ಮೊದಲು ಅರ್ಹತೆಯನ್ನು ಸಂಪಾದಿಸಿಕೊಳ್ಳಬೇಕು, ನಂತರ ಜ್ಞಾನವು ಅದಷ್ಟಕ್ಕದೇ ಭಗವತ್ಕೃಪೆಯಿಂದ ಲಭಿಸುವುದು.

"ರಹಸ್ಯಂ ಹ್ಯೇತದುತ್ತಮಮ್"- ಭಗವಂತನು ಬೋಧಿಸಿದ ಈ ಪರಮಾರ್ಥ ವಿದ್ಯೆ, ಈ ನಿಷ್ಕಾಮ ಕರ್ಮತತ್ತ್ವ ಪರಮ ರಹಸ್ಯವಾದುದೆಂದೂ ಮಹೋತ್ಕೃಷ್ಟವಾದುದೆಂದು ತಿಳಿಸಲಾಗಿದೆ. ಸಾಮಾನ್ಯವಾಗಿ ರಹಸ್ಯವನ್ನು ಒಬ್ಬರು ಇನ್ನೊಬ್ಬರಿಗೆ ತಿಳಿಸುವುದಿಲ್ಲ. ಆದರೆ ಅರ್ಜುನನಲ್ಲಿ ಬೇಕಾದ ಯೋಗ್ಯತೆಗಳು (ಭಕ್ತಿ, ಪ್ರೇಮ) ಇರುವುದರಿಂದ ಶ್ರೀಕೃಷ್ಣನು ಆತನಿಗೆ ರಹಸ್ಯವನ್ನು ಬಯಲು ಮಾಡಿದನು. ಮತ್ತೆ, 'ಉತ್ತಮಂ' ಎಂದು ಹೇಳಿರುವುದರಿಂದ ಪ್ರಪಂಚದಲ್ಲಿರುವ ಸಮಸ್ತ ಪದಾರ್ಥಗಳಲ್ಲಿ ಶ್ರೇಷ್ಠವಾದುದು ಈ ಅಧ್ಯಾತ್ಮ ವಿದ್ಯೆಯೇ ಎಂದು ಭಗವಂತನು ಸ್ಪಷ್ಟವಾಗಿ ಹೇಳಿದಂತಾಗಿದೆ.

ಪ್ರ : ಭಗವಂತನು ಅರ್ಜುನನಿಗೆ ಬೋಧಿಸಿದ ಪರಮಾರ್ಥವಿದ್ಯೆ, ನಿಷ್ಕಾಮ ಕರ್ಮತತ್ತ್ವವು ಎಂತಹದು?

ಉ : ೧) ಪುರಾತನವಾದದ್ದು ೨) ಉತ್ತಮವಾದದ್ದು ೩) ರಹಸ್ಯವಾದದ್ದು.

ಪ್ರ : ಇಂತಹ ವಿದ್ಯೆಯನ್ನು ಅರ್ಜುನನಿಗೆ ಮಾತ್ರ ಏಕೆ ಉಪದೇಶಿಸಿದನು?

ಉ : ಭಗವಂತನ ೧) ಪರಮ ಭಕ್ತ ೨) ಪರಮ ಮಿತ್ರನಾದ್ದರಿಂದ.

**ಅ||** ಶ್ರೀಕೃಷ್ಣಮೂರ್ತಿ ಪೂರ್ವದಲ್ಲಿ ಸೂರ್ಯಭಗವಂತನಿಗೆ ಈ ಪರಮಾರ್ಥ ವಿದ್ಯೆಯನ್ನು ಉಪದೇಶಿಸಿದನೆಂಬ ವಾಕ್ಯವನ್ನು ಕೇಳಿದ ತಕ್ಷಣವೇ, ಮೊನ್ನೆ ಮೊನ್ನೆ (ದ್ವಾಪರ ಯುಗಾಂತರದಲ್ಲಿ) ದೇವಕೀ ಗರ್ಭದಲ್ಲಿ ಹುಟ್ಟಿದ ಶ್ರೀಕೃಷ್ಣನು ಸೃಷ್ಟ್ಯಾದಿಯಲ್ಲಿ ಸೂರ್ಯನಿಗೆ ಹೇಗೆ ಬೋಧಿಸಿದನೆಂದು ಅರ್ಜುನನಿಗೆ ಸಂಶಯ ಬಂದು, ಕೂಡಲೇ ಅದರ ನಿವಾರಣೆಗೋಸ್ಕರ ಆತನು ಭಗವಂತನನ್ನು ಈ ರೀತಿ ಪ್ರಶ್ನಿಸಿದನು-

**ಅರ್ಜುನ ಉವಾಚ:**

**೪. ಅಪರಂ ಭವತೋ ಜನ್ಮ ಪರಂ ಜನ್ಮ ವಿವಸ್ವತಃ**
**ಕಥಮೇತದ್ವಿಜಾನೀಯಾಂ ತ್ವಮಾದೌ ಪ್ರೋಕ್ತವಾನಿತಿ**

ಅರ್ಜುನ ಉವಾಚ=ಅರ್ಜುನನು ಹೇಳಿದನು-

**ಅರ್ಥ:** ಭವತಃ=ನಿನ್ನ; ಜನ್ಮ=ಜನ್ಮವು; ಅಪರಂ=ನಂತರದು; ವಿವಸ್ವತಃ= ಸೂರ್ಯನ; ಜನ್ಮ=ಜನ್ಮವು; ಪರಂ=ಪೂರ್ವದ್ದು; ಆದೌ=ಸೃಷ್ಟ್ಯಾರಂಭದಲ್ಲಿ; ತ್ವಂ=ನೀನು; ಪ್ರೋಕ್ತವಾನ್ ಇತಿ(ಯತ್)= ಹೇಳಿದೆನೆನ್ನುವುದು ಏನಿದೆಯೋ; ಏತತ್=ಇದನ್ನು; ಕಥಂ=ಹೇಗೆ; ವಿಜಾನೀಯಾಂ=ತಿಳಿದುಕೊಳ್ಳಬೇಕು!

**ತಾ||** ಅರ್ಜುನನು ಹೇಳಿದನು- (ಓ ಕೃಷ್ಣಾ!) ನಿನ್ನ ಜನ್ಮ ಈಗಿನದು, ಸೂರ್ಯನ ಜನ್ಮವು ಬಹು ಪುರಾತನವಾದುದು. ಹಾಗಿದ್ದಾಗ ನೀನು ಸೂರ್ಯನಿಗೆ ಉಪದೇಶಿಸಿರುವೆ ಎನ್ನುವ ವಿಷಯವನ್ನು ನಾನು ಹೇಗೆ ಗ್ರಹಿಸಬೇಕು?

**ವ್ಯಾಖ್ಯೆ:** ಪೂರ್ವದಲ್ಲಿ ರಾಜಸೂಯಯಾಗದ ಸಂದರ್ಭದಲ್ಲಿ ಅರ್ಜುನನು ಭೀಷ್ಮನಂತಹ ಮಹಾನುಭಾವನ ಬಾಯಿಯಿಂದ ಶ್ರೀಕೃಷ್ಣನ ನಿಜತ್ವವನ್ನು, ಅಂದರೆ ಆತನು ಸಾಕ್ಷಾತ್ ಪರಮಾತ್ಮನೇ ಎನ್ನುವ ಸತ್ಯವನ್ನು ಕೇಳಿದ್ದನು. ಆದರೂ ಈಗ ಶ್ರೀಕೃಷ್ಣನನ್ನು ದೇವಕೀಸುತನನ್ನಾಗಿಯೇ ವೀಕ್ಷಿಸಿ 'ನೀನು ಮೊನ್ನೆ ಮೊನ್ನೆಯೇ ಹುಟ್ಟಿರುವೆಯಲ್ಲ!' ಎಂದು ಕೇಳಿರುವುದಕ್ಕೆ ಕಾರಣವೇನು? ಇದಕ್ಕೆ ಈ ಕೆಳಗಿನ ಕಾರಣಗಳನ್ನು ಕೊಡಬಹುದು. ೧) ಸಾಕ್ಷಾತ್ ಶ್ರೀಕೃಷ್ಣ ನಿಂದಲೇ ಆತನ ಅವ್ಯಯ ಸ್ವರೂಪ ವರ್ಣನೆಯನ್ನು ಅರ್ಜುನನು ಕೇಳ ಬೇಕೆಂದಿರಬಹುದು. ೨) ಈ ಪ್ರಶ್ನೆಯ ದ್ವಾರ ಸಾಮಾನ್ಯ ಜನರ ಮನಸ್ಸಿನಲ್ಲಿರುವ ಸಂಶಯವನ್ನು ನಿವಾರಿಸಬೇಕೆಂದಿರಬಹುದು.

ಶ್ರೀಕೃಷ್ಣಮೂರ್ತಿ ಕೇವಲ ಪಾಂಚಭೌತಿಕ ರೂಪವಲ್ಲ. ಆತನು ತ್ರಿಕಾಲಾಬಾಧ್ಯನಾದ ವಿಶ್ವವ್ಯಾಪಕವಾದ ಪರಮಾತ್ಮ. ಈ ಸತ್ಯವನ್ನು ಭಗವಂತನೇ ಮತ್ತೊಂದು ಶ್ಲೋಕದಲ್ಲಿ ಮುಂದೆ ಹೇಳುವನು. ದೇಹದೃಷ್ಟಿ, ಮನೋದೃಷ್ಟಿ, ಆತ್ಮದೃಷ್ಟಿಯೆನ್ನುವ ಮೂರು ದೃಷ್ಟಿಗಳಿವೆ. ಒಬ್ಬ ವ್ಯಕ್ತಿಯನ್ನು ನೋಡುತ್ತಲೇ ಆತನ ಶರೀರ, ಅಂದಚಂದಗಳು, ಜಾತಿ, ಬಣ್ಣ, ಆಕಾರಗಳು ಮಾತ್ರ ಕೆಲವರ ಸ್ಫುರಣೆಗೆ ಬರುವುವು ಇದೇ ದೇಹದೃಷ್ಟಿ. ಆತನ ಪಾಂಡಿತ್ಯ, ಗುಣಗಳು, ಶೀಲ ಮುಂತಾದುವುಗಳನ್ನು ನೋಡುವುದು ಮನೋದೃಷ್ಟಿ. ಆತನ ನಿರ್ಮಲ ಆತ್ಮರೂಪವನ್ನೇ ವೀಕ್ಷಿಸುವುದು ಆತ್ಮದೃಷ್ಟಿ. ಇದರಲ್ಲಿ ಮೂರನೆಯದಾದ ಆತ್ಮದೃಷ್ಟಿಯನ್ನೇ ಜ್ಞಾನಿಗಳು ಹೊಂದಿರುವರು. ಸಾಮಾನ್ಯ ಜನರು ಮೊದಲಿನ ಎರಡು ದೃಷ್ಟಿಗಳನ್ನವಲಂಬಿಸುವರು. ದೇಹವು ಹಾಗು ಮನಸ್ಸು ಪ್ರಕೃತಿಜನ್ಯಗಳು, ನಶ್ವರಗಳು. ಆ ದೃಷ್ಟಿಗಳು ಸರಿಯಾದವುಗಳಲ್ಲ. ಆದ್ದರಿಂದ ಆತ್ಮದೃಷ್ಟಿಯನ್ನೇ ಪ್ರತಿಯೊಬ್ಬರೂ ಅಭ್ಯಸಿಸಬೇಕು. ಅದನ್ನೇ ಭಗವಂತನು ಯಾವಾಗಲೂ ಪ್ರತಿಪಾದಿಸುತ್ತಿದ್ದಾನೆ.

**ಅ||** ಅರ್ಜುನನ ಆ ಪ್ರಶ್ನೆಗೆ ಉತ್ತರವಾಗಿ ಶ್ರೀಕೃಷ್ಣಮೂರ್ತಿ ತನ್ನ ನಿಜತ್ವವನ್ನು ಪ್ರಕಟಿಸುತ್ತಿದ್ದಾನೆ-

**ಶ್ರೀ ಭಗವಾನುವಾಚ**

**೫. ಬಹೂನಿ ಮೇ ವ್ಯತೀತಾನಿ ಜನ್ಮಾನಿ ತವ ಚಾರ್ಜುನ**
**ತಾನ್ಯಹಂ ವೇದ ಸರ್ವಾಣಿ ನ ತ್ವಂ ವೇತ್ಥ ಪರಂತಪ**

ಶ್ರೀ ಭಗವಾನುವಾಚ- ಶ್ರೀ ಭಗವಂತನು ಹೇಳಿದನು.

**ಅರ್ಥ:** ಅರ್ಜುನ=ಓ ಅರ್ಜುನಾ! ಮೇ=ನನಗೆ; ತವಚ=ನಿನಗೆ; ಬಹೂನಿ= ಅನೇಕ; ಜನ್ಮಾನಿ=ಜನ್ಮಗಳು; ವ್ಯತೀತಾನಿ=ಬಂದು ಹೋಗಿವೆ; ತಾನಿ ಸರ್ವಾಣಿ=ಅವುಗಳೆಲ್ಲವನ್ನೂ; ಅಹಂ=ನಾನು; ವೇದ=ತಿಳಿದಿದ್ದೇನೆ; ಪರಂತಪ=ಓ ಅರ್ಜುನಾ!, ತ್ವಂ=ನೀನು; ನ ವೇತ್ಥ=ತಿಳಿದಿಲ್ಲ.

**ತಾ||** ಶ್ರೀಭಗವಂತನು ಹೇಳಿದನು- ಶತ್ರುಗಳನ್ನು ತಪಿಸುವಂತೆ ಮಾಡಬಲ್ಲ ಓ ಅರ್ಜುನಾ! ನಿನಗೂ ನನಗೂ ಇಲ್ಲಿಯವರೆಗೆ ಅನೇಕ ಜನ್ಮಗಳು ಬಂದು ಹೋಗಿವೆ. ಅವೆಲ್ಲವುಗಳನ್ನು ನಾನು ತಿಳಿದಿದ್ದೇನೆ ಆದರೆ ನಿನಗೆ ಗೊತ್ತಿಲ್ಲ.

**ವ್ಯಾಖ್ಯೆ:** ಈಶ್ವರನೂ, ಜೀವಿಯೂ- ಇಬ್ಬರೂ ವಾಸ್ತವವಾಗಿ ಒಂದೇ ಆತ್ಮಸ್ವರೂಪರು, ಆದರೆ ಈಶ್ವರನು ಮಾಯೆಯನ್ನು ಜಯಿಸಿದವನು; ಜೀವಿಯು ಮಾಯಾಧೀನನು. ಇದೇ ಅವರಿಬ್ಬರಿಗೂ ಇರುವ ಭೇದ. ಈಶ್ವರನು ಮಾಯೆಯನ್ನು ಸ್ವಾಧೀನಪಡಿಸಿಕೊಂಡು ಲೋಕ ಸಂರಕ್ಷಣಾರ್ಥವಾಗಿ ಅನೇಕ ಜನ್ಮಗಳನ್ನು (ಅವತಾರಗಳನ್ನು) ಎತ್ತುತ್ತಿರುತ್ತಾನೆ. ಜೀವಿಯು ಮಾಯಾಧೀನನಾಗಿ, ಕರ್ಮಬದ್ಧನಾಗಿ ಅನೇಕ ಜನ್ಮಗಳನ್ನು ಎತ್ತುತ್ತಿರುವನು. ಈಶ್ವರನು

ಸರ್ವಜ್ಞನಾದುದರಿಂದ ತಾನೆತ್ತಿದ ಆ ಜನ್ಮಗಳ ಅರಿವು ಆತನಿಗಿದೆ. ಜೀವಿಯು ಮಾಯಾಧೀನನಾದುದರಿಂದ ಅಂತಹ ಸ್ಮೃತಿ ಆತನಿಗೆ ಇರುವುದಿಲ್ಲ. ಈ ಸತ್ಯವನ್ನೇ ಭಗವಂತನು ಈ ಶ್ಲೋಕದಲ್ಲಿ ವಿವರಿಸುತ್ತಿದ್ದಾನೆ.

ಅಜ್ಞಾನದಿಂದ ಜೀವಿಯ ದೃಷ್ಟಿ ಈ ವರ್ತಮಾನ ಜನ್ಮಕ್ಕೇ ಪರಿಮಿತಿಯಾಗಿರುವುದು. ಪ್ರತಿ ಜೀವಿಗೆ ವಾಸ್ತವವಾಗಿ ಕೋಟಿಗಟ್ಟಲೆ ಜನ್ಮಗಳು ಬಂದು ಹೋಗಿರುತ್ತವೆ. ಈಗಾಗಲೇ ಎಷ್ಟೋ ತಂದೆ ತಾಯಿಯರು ಆತನಿಗೆ ಬಂದು ಹೋಗಿದ್ದಾರೆ. ಆತ್ಮವಿಜ್ಞಾನದಿಂದ ಕರ್ಮಬಂಧನ ನಶಿಸದೆ ಇದ್ದರೆ ಆತನು ಇನ್ನೂ ಎಷ್ಟೋ ಜನ್ಮಗಳನ್ನು ಎತ್ತಬೇಕಾಗುವುದು. ಪುಣ್ಯವಶಾತ್, ಈಗ ಸರ್ವೋತ್ತಮವಾದ ಮಾನವ ಜನ್ಮ ಲಭಿಸಿದೆ. ಮೋಕ್ಷಕ್ಕೆ ಸೋಪಾನವಾದ ಈ ಮಾನವ ಜನ್ಮವನ್ನು ಹೊಂದಿ ತನ್ನ ಆತ್ಮವನ್ನು ತಿಳಿದು ಮುಕ್ತಿ ಹೊಂದಲು ಪ್ರಯತ್ನಿಸದೆ, ಜನ್ಮಸರಣಿಯನ್ನು ಅಂತ್ಯಮಾಡಿಕೊಳ್ಳದೆ ಇನ್ನೂ ಹೆಚ್ಚು ವಿಷಯ ಭೋಗಗಳಲ್ಲಿ ಮುಳುಗಿ ತತ್ಫಲಿತವಾಗಿ ಇನ್ನೂ ಅನೇಕ ಜನ್ಮಗಳಲ್ಲಿ ಯಾತನೆಗಳನ್ನನುಭವಿಸುವವನು ನಿಶ್ಚಯವಾಗಿ ದೌರ್ಭಾಗ್ಯನೇ ಸರಿ. ಆದ್ದರಿಂದ ಭಗವಂತನು ಈ ಶ್ಲೋಕದಲ್ಲಿ ತಿಳಿಸಿದ ಹಾಗೆ ಪ್ರತಿಯೊಬ್ಬನೂ ತನ್ನ ಪೂರ್ವಜನ್ಮಗಳೆಲ್ಲವನ್ನೂ ಒಂದು ಸಾರಿ ಸ್ಮೃತಿ ಪಥಕ್ಕೆ ತಂದುಕೊಂಡು ಆ ಯಮಯಾತನೆಗಳನ್ನು ಆ ಗರ್ಭನರಕಗಳನ್ನು, ಕ್ಲೇಶಗಳನ್ನು ಸ್ಮರಿಸಿಕೊಂಡು, ಇನ್ನು ಮುಂದೆ ಅಂತಹ ಜನ್ಮಗಳಿಗೆ ಸ್ವಸ್ತಿ ಹೇಳಬೇಕೆಂದು ಕೃತ ನಿಶ್ಚಯನಾಗಬೇಕು. ತಾಯಿ ಗರ್ಭದಲ್ಲಿ ಸುಮಾರು ಏಳನೆಯ ತಿಂಗಳಲ್ಲಿ ಕ್ಷಣಕಾಲ ದಿವ್ಯದೃಷ್ಟಿಯುಂಟಾಗಿ ಜೀವಿಯು ತನ್ನ ಪೂರ್ವಜನ್ಮಗಳೆಲ್ಲವನ್ನು ಅವಲೋಕಿಸಿ ಭೀತಿ ಹೊಂದಿ ಭಗವಂತನನ್ನು ಶರಣು ಹೊಂದಿ ಜನ್ಮ ರಾಹಿತ್ಯಕ್ಕೆ ಈ ಜೀವಿತದಲ್ಲಿ ಸರ್ವಯತ್ನಗಳನ್ನು ಮಾಡುವೆನೆಂದು ವಾಗ್ದಾನ ಮಾಡುವನು ಎನ್ನುವ ಒಂದು ನಂಬಿಕೆಯಿದೆ. ಆದರೆ ಗರ್ಭದಿಂದ ಹೊರಬರುತ್ತಲೇ ಎಲ್ಲವನ್ನೂ ಮರೆತು ಹೋಗುವನು. ಹಾಗೆ ಮಾಡದೆ ಜೀವಿಯು ಭಗವಂತನನ್ನಾಶ್ರಯಿಸಿ ಈ ಜನ್ಮದಲ್ಲೇ ಎಲ್ಲವನ್ನೂ ಸಾಧಿಸುವಂತೆ ನೋಡಿಕೊಳ್ಳಬೇಕು. ಪುರೋಭಿವೃದ್ಧಿಯನ್ನು ಕೋರುವವನು ಪೂರ್ವವೃತ್ತಾಂತವನ್ನು ಮರೆಯಬಾರದು. ಭಗವಂತನು ಅರ್ಜುನನಿಗೆ ಪೂರ್ವಜನ್ಮಗಳ ಬಗ್ಗೆ ಜ್ಞಾಪಿಸಿದನು. ಅರ್ಜುನನ ಹಾಗೆ ಪ್ರತಿ ಮಾನವನಿಗೂ ಅಂತಹ ಜನ್ಮಗಳು ಸಂಭವಿಸಿವೆಯಾದ್ದರಿಂದ ಅವುಗಳನ್ನು ಸ್ಮರಿಸಿ ಈ ಜನ್ಮದಲ್ಲಿಯೇ ಭಕ್ತಿ, ಜ್ಞಾನ ವೈರಾಗ್ಯಾದಿ ಸಾಧನೆಗಳಿಂದ ಆತ್ಮಾನುಭೂತಿಯನ್ನು ಹೊಂದುವುದರ ಮೂಲಕ ಸಂಸಾರ ಬಂಧವಿಮುಕ್ತಿ ಮತ್ತು ಜನ್ಮರಾಹಿತ್ಯವನ್ನುಂಟು ಮಾಡಿಕೊಳ್ಳುವುದು ಜೀವಿಯ ಕರ್ತವ್ಯವಾಗಿದೆ.

**ಅ||** ತನ್ನ ಜನ್ಮಕ್ಕೂ ಬೇರೆ ಜೀವರಾಶಿಗಳ ಜನ್ಮಕ್ಕೂ ಇರುವ ಭೇದವನ್ನು ತೋರಿಸಲು, ತನ್ನ ಜನ್ಮ ರಹಸ್ಯವನ್ನು ಭಗವಂತನು ವಿವರಿಸುತ್ತಿದ್ದಾನೆ-

**೬. ಅಜೋಽಪಿ ಸನ್ನವ್ಯಯಾತ್ಮಾ ಭೂತಾನಾಮೀಶ್ವರೋಽಪಿ ಸನ್**
**ಪ್ರಕೃತಿಂ ಸ್ವಾಮಧಿಷ್ಠಾಯ ಸಂಭವಾಮ್ಯಾತ್ಮಮಾಯಯಾ**

**ಅರ್ಥ:** (ಅಹಂ=ನಾನು); ಅಜಃ ಅಪಿ ಸನ್=ಜನ್ಮವಿಲ್ಲದವನಾದರೂ; ಅವ್ಯಯಾತ್ಮಾ (ಅಪಿ ಸನ್)=ನಾಶರಹಿತ ಸ್ವರೂಪವುಳ್ಳವನಾಗಿದ್ದರೂ; ಭೂತಾನಾಂ= ಪ್ರಾಣಿಗಳಿಗೆ; ಈಶ್ವರಃ ಅಪಿ ಸನ್=ಈಶ್ವರನು (ನಿಯಾಮಕನು) ಆಗಿದ್ದರೂ; ಸ್ವಾಂ=ಸ್ವಕೀಯವಾದ; ಪ್ರಕೃತಿಂ=ಪ್ರಕೃತಿಯನ್ನು; ಅಧಿಷ್ಠಾಯ=ಸ್ವಾಧೀನ ಪಡಿಸಿಕೊಂಡು; ಆತ್ಮಮಾಯಯಾ=ನನ್ನ ಮಾಯಾಶಕ್ತಿಯಿಂದ; ಸಂಭವಾಮಿ=ಹುಟ್ಟುತ್ತಿದ್ದೇನೆ.

**ತಾ||** ನಾನು ಜನ್ಮರಹಿತನು, ನಾಶರಹಿತವಾದ ಸ್ವರೂಪವುಳ್ಳವನು, ಸಮಸ್ತ ಪ್ರಾಣಿಗಳಿಗೆ ಈಶ್ವರನಾಗಿದ್ದರೂ ಸ್ವಕೀಯವಾದ ಪ್ರಕೃತಿಯನ್ನು ವಶಪಡಿಸಿಕೊಂಡು ನನ್ನ ಮಾಯಾಶಕ್ತಿಯಿಂದ ಹುಟ್ಟುತ್ತಿದ್ದೇನೆ (ಅವತರಿಸುತ್ತಿದ್ದೇನೆ).

**ವ್ಯಾಖ್ಯೆ:** 'ನನಗೂ ಅನೇಕ ಜನ್ಮಗಳು ಬಂದು ಹೋಗಿವೆ' ಎಂದು ಶ್ರೀ ಕೃಷ್ಣಮೂರ್ತಿ ಹಿಂದಿನ ಶ್ಲೋಕದಲ್ಲಿ ಹೇಳಿರುವನು. ಆದ್ದರಿಂದ ಭಗವಂತನು ಸರ್ವಜೀವಿಗಳಂತೆ ಜನ್ಮಕರ್ಮಗಳಿಗೆ ಬದ್ಧನಾಗಿರುವನೇ? ಎನ್ನುವ ಸಂಶಯ ಉಂಟಾಗಬಹುದು. ಆದ್ದರಿಂದ ಅದಕ್ಕೆ ಸಮಾಧಾನ ಪೂರ್ವಕವಾಗಿ ಈ ಶ್ಲೋಕದಲ್ಲಿ ಈ ರೀತಿ ಹೇಳಲಾಗಿದೆ. ಭಗವಂತನ ಜನ್ಮ ಬೇರೆಯದು. ಉಳಿದವರ ಜನ್ಮ ಬೇರೆ ರೀತಿಯದು. ಜೀವಿಗಳು ಪ್ರಕೃತಿವಶರಾಗಿ (ಮಾಯೆಗೆ ಒಳಗಾಗಿ) ಕರ್ಮವಶದಿಂದ ಜನ್ಮವೆತ್ತುತ್ತಿದ್ದಾರೆ. ಈಶ್ವರನು ಹಾಗಲ್ಲ ಅವನು ಪ್ರಕೃತಿಗೆ ಅಧೀನನಾಗದೆ, ಮಾಯೆಯನ್ನು ಸ್ವಾಧೀನ ಪಡಿಸಿಕೊಂಡು ಲೋಕೋಪಕಾರಾರ್ಥವಾಗಿ, ಧರ್ಮ ಸಮುದ್ಧರಣೆಗೋಸ್ಕರ ತನ್ನ ಸ್ವಯಿಚ್ಛೆಯಿಂದ ಜನ್ಮವೆತ್ತುತ್ತಿದ್ದಾನೆ. ಇಲ್ಲಿ ಭಗವಂತನ ಮೂರು ಲಕ್ಷಣಗಳು ಹೇಳಲ್ಪಟ್ಟಿವೆ- ೧) ಜನ್ಮರಹಿತನು ೨) ನಾಶರಹಿತನು ೩) ಪ್ರಾಣಿ ಕೋಟಿಗಳ ನಿಯಾಮಕನು- ಎಂದು. ಈ ಪ್ರಕಾರವಾಗಿ, ವಾಸ್ತವವಾಗಿ ಜನ್ಮರಹಿತನಾದರೂ ಸ್ವಕೀಯ ಶಕ್ತಿಯಿಂದ ಲೋಕ ಸಂಗ್ರಹಾರ್ಥವಾಗಿ ಅವತಾರವೆತ್ತುತ್ತಿರುವನು. ಪ್ರಾಣಿಕೋಟಿಗಳ ಮೇಲೆ ಭಗವಂತನಿಗೆ ಎಷ್ಟು ಕರುಣೆಯಿದೆಯೋ, ಧರ್ಮ ಸಮುದ್ಧರಣೆಯಲ್ಲಿ ಆತನಿಗೆ ಎಷ್ಟು ಆತುರತೆಯಿದೆಯೋ, ಈ ಅವತಾರ ತತ್ತ್ವದ ಮೂಲಕ ನಾವು ಗ್ರಹಿಸಿಕೊಳ್ಳಬಹುದು. ಈ ವಾಕ್ಯಗಳಿಂದ ಶ್ರೀಕೃಷ್ಣಮೂರ್ತಿ ಕೇವಲ ವಸುದೇವನ ಸುತನು ಮಾತ್ರವಲ್ಲವೆಂದು, ಅವ್ಯಯನಾದ ಪರಮಾತ್ಮನೇ ಎಂದು, ಜಗನ್ನಿಯಾಮಕನಾದ ಈಶ್ವರನೇ ಎಂದು ಸ್ಪಷ್ಟವಾಗುತ್ತಿದೆ.

ಪ್ರ : ಭಗವಂತನು ಎಂತಹವನು?

ಉ : ೧) ಜನ್ಮರಹಿತನು ೨) ನಾಶರಹಿತನು ೩) ಜಗನ್ನಿಯಾಮಕನು (ಈಶ್ವರನು).

ಪ್ರ : ಜನ್ಮರಹಿತನಾದವನು ಮತ್ತೆ ಏಕೆ ಜನ್ಮಗಳನ್ನೆತ್ತಬೇಕು?

ಉ : ಪ್ರಕೃತಿಯನ್ನು ಸ್ವಾಧೀನಪಡಿಸಿಕೊಂಡು ಲೋಕೋದ್ಧಾರಕ್ಕಾಗಿ ಮಾತ್ರವೇ ಜನ್ಮಿಸುತ್ತಿದ್ದಾನೆಯಾಗಲಿ ಅಜ್ಞಾನಿಗಳ ಹಾಗೆ ಕರ್ಮಕ್ಕೆ ವಶವಾಗಲ್ಲ.

**ಅ||** ತನ್ನ ಜನ್ಮಕ್ಕಿರುವ ಕಾರಣಗಳನ್ನು ಎರಡು ಶ್ಲೋಕಗಳ ಮೂಲಕ ಭಗವಂತನು ಹೇಳುತ್ತಿದ್ದಾನೆ-

**೭. ಯದಾ ಯದಾ ಹಿ ಧರ್ಮಸ್ಯ ಗ್ಲಾನಿರ್ಭವತಿ ಭಾರತ**
**ಅಭ್ಯುತ್ಥಾನಮಧರ್ಮಸ್ಯ ತದಾತ್ಮಾನಂ ಸೃಜಾಮ್ಯಹಮ್**

**ಅರ್ಥ:** ಭಾರತ=ಓ ಅರ್ಜುನಾ!; ಯದಾ ಯದಾ=ಯಾವ ಯಾವಾಗ; ಧರ್ಮಸ್ಯ=ಧರ್ಮಕ್ಕೆ; ಗ್ಲಾನಿಃ=ಹಾನಿಯು; ಅಧರ್ಮಸ್ಯ=ಅಧರ್ಮಕ್ಕೆ; ಅಭ್ಯುತ್ಥಾನಂ=ಅಭಿವೃದ್ಧಿಯು; ಭವತಿ=ಆಗುವುದೋ; ತದಾ=ಆಗ; ಆತ್ಮಾನಾಂ=ನನ್ನನ್ನು; ಅಹಂ=ನಾನು; ಸೃಜಾಮಿ=ಸೃಷ್ಟಿಸಿಕೊಳ್ಳುತ್ತಿದ್ದೇನೆ.

**ತಾ||** ಓ ಅರ್ಜುನಾ! ಯಾವ ಯಾವಾಗ ಧರ್ಮಕ್ಷೀಣಿಸಿ, ಅಧರ್ಮವು ವೃದ್ಧಿಯಾಗುತ್ತದೆಯೋ ಆಗ ನನ್ನನ್ನು ನಾನೇ ಸೃಷ್ಟಿಸಿಕೊಳ್ಳುತ್ತಿರುತ್ತೇನೆ (ಅವತರಿಸುತ್ತಿರುತ್ತೇನೆ).

**ವ್ಯಾಖ್ಯೆ:** ಧರ್ಮವು ಎಷ್ಟು ಶ್ರೇಷ್ಠವಾದುದೋ ಭಗವಂತನ ವಾಕ್ಯದಿಂದ

ಸ್ಪಷ್ಟವಾಗುತ್ತಿದೆ. 'ಧರ್ಮೋ ರಕ್ಷತಿ ರಕ್ಷಿತಃ' ಎಂದ ಹಾಗೆ ಧರ್ಮಾಚರಣೆಯೇ ಮನುಜನನ್ನು ರಕ್ಷಿಸುವುದು. ಜೀವಿಗೆ ಶಾಂತಿಯನ್ನು, ಶಾಶ್ವತ ಸೌಖ್ಯವನ್ನು, ಕೊಡುವುದು ಅದೇ. ಆದ್ದರಿಂದಲೇ ಭಗವಂತನು ಅದರ ರಕ್ಷಣೆಗಾಗಿ ಬದ್ಧಕಂಕಣನಾಗಿರುವವನು. ಧರ್ಮದ ರಕ್ಷಣೆಗೋಸ್ಕರ ಸಾಕ್ಷಾತ್ ಪರಮಾತ್ಮನೇ ಸ್ವಯಂ ಕಾರ್ಯನಿರತನಾಗಿರುವಾಗ ಇನ್ನು ಅದರ ಮಹಾತ್ಮ್ಯೆಯನ್ನು ಬೇರೆ ವರ್ಣಿಸಬೇಕಾಗಿಲ್ಲ. ಹಾಗೆಯೇ ಅಧರ್ಮದ ಅಭಿವೃದ್ಧಿಯನ್ನು ತಾನು ಸಹಿಸಲಾರೆನೆಂದು ಭಗವಂತನು ತಿಳಿಸುವುದರಿಂದ ಅದರ ನಿಕೃಷ್ಟತೆ ಸ್ಪಷ್ಟವಾಗುತ್ತಿದೆ. ಆದ್ದರಿಂದ ಶ್ರೇಯವನ್ನು ಅಪೇಕ್ಷಿಸುವವರೆಲ್ಲರೂ ಧರ್ಮವನ್ನು ಪ್ರೋತ್ಸಾಹಿಸಿ ಅಧರ್ಮವನ್ನು ಧಿಕ್ಕರಿಸಬೇಕು. ಆಗ ಮಾತ್ರ ಅವರು ಈಶ್ವರ ನಿಯಮಕ್ಕನುಗುಣವಾಗಿ ನಡೆಯುವವರಾಗಿದ್ದು ಜನ್ಮ ಸಾರ್ಥಕ ಹೊಂದುವರು.

ಪ್ರ : ಭಗವಂತನು ಯಾವಾಗ ಅವತರಿಸುವನು?

ಉ : ಧರ್ಮವು ಕ್ಷಯಿಸಿ, ಅಧರ್ಮ ವೃದ್ಧಿಯಾದಾಗ.

**೮. ಪರಿತ್ರಾಣಾಯ ಸಾಧುನಾಂ ವಿನಾಶಾಯ ಚ ದುಷ್ಕೃತಾಂ**
**ಧರ್ಮಸಂಸ್ಥಾಪನಾರ್ಥಾಯ ಸಂಭವಾಮಿ ಯುಗೇ ಯುಗೇ**

**ಅರ್ಥ:** ಸಾಧೂನಾಂ=ಸಜ್ಜನರ(ಸನ್ಮಾರ್ಗ ಪ್ರವರ್ತಕರ); ಪರಿತ್ರಾಣಾಯ= ಸಂರಕ್ಷಣೆಗೆ; ದುಷ್ಕೃತಾಂ=ದುರ್ಮಾರ್ಗಿಗಳ; ವಿನಾಶಾಯ ಚ=ವಿನಾಶಕ್ಕೆ; ಧರ್ಮಸಂಸ್ಥಾಪನಾರ್ಥಾಯ=ಧರ್ಮವನ್ನು ಭದ್ರವಾಗಿ ಸ್ಥಾಪಿಸಲು; ಯುಗೇ ಯುಗೇ=ಪ್ರತಿಯುಗದಲ್ಲಿಯೂ (ಪ್ರತಿ ಸಮಯದಲ್ಲೂ ಅಂದರೆ ಆಗಾಗ); ಸಂಭವಾಮಿ=ಅವತರಿಸುತ್ತಿರುತ್ತೇನೆ.

**ತಾ||** ಸಾಧು ಸಜ್ಜನರ ಸಂರಕ್ಷಣೆಗೋಸ್ಕರ, ದುರ್ಮಾರ್ಗಿಗಳನ್ನು ನಾಶ ಮಾಡಲು, ಧರ್ಮವನ್ನು ಸುಭದ್ರಗೊಳಿಸಲು ನಾನು ಪ್ರತಿಯುಗದಲ್ಲಿಯೂ ಅವತರಿಸುತ್ತಿರುತ್ತೇನೆ.

**ವ್ಯಾಖ್ಯೆ:** ಸನ್ಮಾರ್ಗದಲ್ಲಿರುವವರಿಗೆ, ಸತ್ಪ್ರವರ್ತನೆಯುಳ್ಳವರಿಗೆ, ಸಾಧು ಶೀಲರಿಗೆ ಮಾತ್ರ ಭಗವಂತನ ರಕ್ಷೆಯಿರುವುದು. ಸರ್ವೇಶ್ವರನ ಸಂರಕ್ಷಣೆಯನ್ನು ಅಪೇಕ್ಷಿಸುವವರಿಗೆ ತಕ್ಕ ಅರ್ಹತೆಗಳು ಇರಬೇಕು. ಆ ಅರ್ಹತೆ ಒಂದು ಜಾತಿ, ಮತ, ಕುಲದಿಂದ ಬರುವುದಿಲ್ಲ. ಸಾಧುಗುಣ, ಅಂದರೆ ಸತ್ಪ್ರವರ್ತನೆ, ಧರ್ಮಾನುಷ್ಠಾನ, ಸನ್ಮಾರ್ಗ ಮತ್ತು ಸತ್ಯಪಥದಲ್ಲಿ ನಡೆಯುವವರೆಲ್ಲರೂ ಈ ಅರ್ಹತೆ ಹೊಂದಿದ್ದು ಭಗವಂತನಿಂದ ಸಂರಕ್ಷಿಸ ಲ್ಪಡುವರು. ಅವರು ಭಗವಂತನ ಅಭಯಹಸ್ತಕ್ಕೆ ಪಾತ್ರರಾಗಿರುವುದರಿಂದ ಅವರಿಗೆ ಯಾವ ಕೊರತೆಯೂ ಇರುವುದಿಲ್ಲ. ಅವರು ಶೀಘ್ರವಾಗಿಯೇ ಭವಸಾಗರವನ್ನು ದಾಟಿ ಹೋಗುವರು. ಅಂತಹವರ ಸಮುದ್ಧರಣೆ ಹಾಗು ಪರಿರಕ್ಷಣೆಗೆ, ತಾನು ಆಗಾಗ ಅವತರಿಸುತ್ತಿರುವೆನೆಂದು ಭಗವಂತನು ಇಲ್ಲಿ ವಚನವಿತ್ತಿದ್ದಾನೆ.

ಹಾಗೆಯೇ ದುಷ್ಟರನ್ನು ಶಿಕ್ಷಿಸಲೂ ಸಹ ತಾನು ಜನ್ಮಿಸುತ್ತಿರುತ್ತೇನೆಂದು ಹೇಳಿದನು. ಆದ್ದರಿಂದ ದುಷ್ಕಾರ್ಯಗಳ ಘೋರ ಪರಿಣಾಮಗಳನ್ನು ಮೊದಲೇ ಊಹಿಸಿಕೊಂಡು, ಅವುಗಳಿಂದ ದೂರವಾಗಿದ್ದು, ಪಾಪ ಭೀತಿಯುಳ್ಳವನಾಗಿ, ದೈವ ಮಾರ್ಗವನ್ನೇ ಅನ್ವೇಷಿಸಬೇಕು. ಇನ್ನು ಅವತಾರದ ಮೂರನೆಯ ಉದ್ದೇಶ ಧರ್ಮಸಂಸ್ಥಾಪನೆ. ಧರ್ಮವನ್ನು ಉದ್ಧರಿಸಲು ಭಗವಂತನು ಬದ್ಧಕಂಕಣ ನಾಗಿದ್ದಾನೆ. ಆದ್ದರಿಂದ ಭಗವಂತನಿಗೆ ಯಾವುದು ಅತಿ ಪ್ರೀತಿಕರವಾಗಿದೆಯೋ, ಅಂತಹ ಧರ್ಮವನ್ನೇ ಆಶ್ರಯಿಸಿ ಜೀವಿಗಳು ಸರ್ವೇಶ್ವರನ ಕೃಪೆಗೆ ಪಾತ್ರರಾಗಬೇಕು.

ಈ ಶ್ಲೋಕದಲ್ಲಿ ತಿಳಿಸಲ್ಪಟ್ಟ ೧) ಸಾಧು ಸಂರಕ್ಷಣೆ, ೨) ದುಷ್ಟಶಿಕ್ಷಣ ೩) ಧರ್ಮಸಂಸ್ಥಾಪನೆ- ಎನ್ನುವ ಮೂರು ಉದ್ದೇಶಗಳಲ್ಲಿ ಯಾವುದೇ ಒಂದಕ್ಕೆ ಧಕ್ಕೆ ಒದಗಿದರೂ ಭಗವಂತನು ಅವತರಿಸುವನು.

ಇಲ್ಲಿ ಸಾಧುಗಳೆಂದರೆ ಸನ್ಯಾಸಿಗಳೆಂದು, ವೈರಾಗಿಗಳೆಂದು ಅರ್ಥವಲ್ಲ. 'ಸಾಧು'- ಎಂದರೆ "ಒಳ್ಳೆಯ" ಎಂದರ್ಥ. ಒಳ್ಳೆಯ ಪ್ರವರ್ತನೆಯನ್ನು ಹೊಂದಿರುವವರೆಲ್ಲಾ ಸಾಧುಗಳೇ. ಅವರು ಗೃಹಸ್ಥರಾದರೂ ಅಥವ ಬ್ರಹ್ಮಚಾರಿಗಳಾದರೂ ಸರಿಯೇ.

'ಯುಗೇ ಯುಗೇ'- ಎಂದರೆ ಯುಗದಲ್ಲಿ ಒಂದು ಸಾರಿ ಜನ್ಮಿಸುವನು ಎಂದು ಅರ್ಥವಲ್ಲ. ಆಗಾಗ ಎಂದರ್ಥ. ಮೇಲೆ ತಿಳಿಸಿದ ಅವಾಂತರಗಳು ಯಾವಾಗ ಏರ್ಪಡುತ್ತವೆಯೋ ಆಗ ಎಂದು ತಾತ್ಪರ್ಯ.

ಈ ಶ್ಲೋಕದಲ್ಲಿ 'ತ್ರಾಣಾಯ' ಎಂದು ಹೇಳದೆ 'ಪರಿತ್ರಾಣಾಯ' ಎಂದು ಹೇಳಿರುವುದು, 'ಸ್ಥಾಪನಾರ್ಥಾಯ' ಎಂದು ಹೇಳದೆ 'ಸಂಸ್ಥಾಪನಾರ್ಥಾಯ' ಎಂದು ಹೇಳಿರುವುದು ಗಮನಾರ್ಹ. ಆಯಾ ಕ್ರಿಯೆಗಳ ಅಧಿಕ್ಯತೆಗಳನ್ನು ಮಾತ್ರ ಅವು ಸೂಚಿಸುವುವು.

ಭಗವಂತನು ದಯಾರ್ದ್ರ ಹೃದಯನಲ್ಲವೇ! ಹಾಗಿದ್ದಲ್ಲಿ ದುಷ್ಟರನ್ನು ಏಕೆ ಶಿಕ್ಷಿಸುವನೆಂದು ಕೆಲವರು ಪ್ರಶ್ನಿಸಬಹುದು. ವಾಸ್ತವವಾಗಿ ಆ ಶಿಕ್ಷೆಗಳು ಅವರ ಮೇಲೆ ತೋರಿಸಿದ ಅನುಗ್ರಹವೇ ಆಗಿರುವುದು. ಭಗವಂತನ ಆ ಶಿಕ್ಷೆಯಿಂದ ಅವರ ಪಾಪಗಳು ನಿರ್ಮೂಲವಾಗುವುವು. ಮತ್ತೆ ಹಾಗೆ ಶಿಕ್ಷಿಸಲ್ಪಡದೆ ಇದ್ದರೆ ಲೋಕದಲ್ಲಿ ಅಧರ್ಮವು, ದುರ್ಮಾರ್ಗವು ಪ್ರಬಲಿಸಿ ಸಂಘಕ್ಕೆ ಬಹಳ ಪ್ರಮಾದವುಂಟಾಗುವುದು. ಶರೀರದ ಮೇಲೆ ಹುಣ್ಣಾದರೆ ಅದನ್ನು ಶಸ್ತ್ರ ಕ್ರಿಯೆಯ ದ್ವಾರ ತೆಗೆದುಹಾಕಿದರೆ ಶರೀರವು ಪುನಃ ಆರೋಗ್ಯವಾಗುವು ದಲ್ಲವೇ? ಹಾಗೆಯೇ ದುಷ್ಟ ಶಿಕ್ಷಣ ಎಂದು ಗ್ರಹಿಸಿಕೊಳ್ಳಬೇಕು.

**ಅ||** ಭಗವಂತನ ಜನ್ಮಕರ್ಮಗಳನ್ನು ತಿಳಿದುಕೊಳ್ಳುವವರಿಗೆ, ಉಂಟಾಗುವ ಫಲಗಳನ್ನು ವಿವರಿಸಲಾಗುತ್ತಿದೆ-

**೯. ಜನ್ಮ ಕರ್ಮ ಚ ಮೇ ದಿವ್ಯ ಮೇವಂ ಯೋ ವೇತ್ತಿ ತತ್ವತಃ**
**ತ್ಯಕ್ತ್ವಾ ದೇಹಂ ಪುನರ್ಜನ್ಮ ನೈತಿ ಮಾಮೇತಿ ಸೋಽರ್ಜುನಾ**

**ಅರ್ಥ:** ಅರ್ಜುನಾ=ಓ ಅರ್ಜುನಾ!; ಯಃ=ಯಾವನು; ಏವಂ=ಈ ರೀತಿಯಾಗಿ; ಮೇ=ನನ್ನ; ದಿವ್ಯಂ=ದಿವ್ಯವಾದ; ಜನ್ಮ=ಜನ್ಮವನ್ನು; ಕರ್ಮ ಚ=ಕರ್ಮವನ್ನು; ತತ್ವತಃ=ಯಥಾರ್ಥವಾಗಿ; ವೇತ್ತಿ=ತಿಳಿದುಕೊಳ್ಳು ತ್ತಿರುವನೋ; ಸಃ=ಆತನು; ದೇಹಂ=ಶರೀರವನ್ನು; ತ್ಯಕ್ತ್ವಾ=ಬಿಟ್ಟು; ಪುನಃ=ಮತ್ತೆ ಜನ್ಮ=ಜನ್ಮವನ್ನು; ನ ಯೇತಿ=ಹೊಂದುವುದಿಲ್ಲ; ಮಾಂ=ನನ್ನನ್ನು; ಯಾತಿ=ಹೊಂದುವನು.

**ತಾ||** ಅರ್ಜುನಾ! ಯಾರು ಈ ಪ್ರಕಾರವಾಗಿ ನನ್ನ ದಿವ್ಯವಾದ ಜನ್ಮವನ್ನು, ಕರ್ಮವನ್ನು ಕುರಿತು ಯಥಾರ್ಥವಾಗಿ ತಿಳಿದುಕೊಳ್ಳುತ್ತಿದ್ದಾರೋ, ಅವರು ಮರಣಾನಂತರ ಮತ್ತೆ ಜನ್ಮ ಹೊಂದದೆ ನನ್ನನ್ನೇ ಪಡೆಯುತ್ತಾರೆ (ಮೋಕ್ಷವನ್ನು ಹೊಂದುತ್ತಾರೆ.)

**ವ್ಯಾಖ್ಯೆ:** 'ಬ್ರಹ್ಮವಿದ್ಬ್ರಹ್ಮೈವ ಭವತಿ'- ಬ್ರಹ್ಮವನ್ನು ತಿಳಿದುಕೊಂಡವನು ಬ್ರಹ್ಮವೇ ಆಗುತ್ತಿದ್ದಾನೆನ್ನುವ ಉಪನಿಷತ್ ವಾಕ್ಯದ ಸಾರಾಂಶವನ್ನೇ ಈ ಶ್ಲೋಕದಲ್ಲಿ ಹೇಳಲಾಗಿದೆ. ಭಗವಂತನ ದಿವ್ಯವಾದ ಜನ್ಮಕರ್ಮಗಳನ್ನು (ಲೀಲೆಗಳನ್ನು)

ಯಥಾರ್ಥವಾಗಿ ತಿಳಿದುಕೊಳ್ಳುವವನು, ಭಕ್ತಿ ಪಾರವಶ್ಯದಿಂದ ಆತನಲ್ಲಿಯೇ ಚಿತ್ತನಾಗಿ ಭಗವದ್ಧ್ಯಾನ ನಿರತನಾಗಿರುವನು. ಆದ್ದರಿಂದ ಆತನು ಆ ಪರಮಾತ್ಮನನ್ನೇ ಹೊಂದುತ್ತಾನೆ. ಭಗವತ್ ಸ್ವರೂಪವನ್ನು ಸರಿಯಾಗಿ ತಿಳಿಯುವುದು 'ಸಾಧನೆ'. ಅದರಿಂದ ಭಗವದೈಕ್ಯವನ್ನು ಹೊಂದುವುದು 'ಸಾಧ್ಯ'. ಈ ಪ್ರಕಾರವಾಗಿ ಸಾಧನೆ, ಸಾಧ್ಯ- ಎರಡನ್ನೂ ಈ ಶ್ಲೋಕದಲ್ಲಿ ಚರ್ಚಿಸಲಾಗಿದೆ. ಆದರೆ 'ತತ್ವತಃ' ಎಂದು ಹೇಳಿರುವುದರಿಂದ ಭಗವದ್ವಿಷಯವನ್ನು ಸ್ವಾನುಭವದ ದ್ವಾರ ಯಥಾರ್ಥವಾಗಿ ತಿಳಿಯಬೇಕೇ ಹೊರತು, 'ವಾಚಾ' ಜ್ಞಾನದಿಂದಾಗಲೀ, ಅಶಾಸ್ತ್ರೀಯ ಜ್ಞಾನದಿಂದಾಗಲಿ, ಮರುಳಾಗಬಾರದು.

'ದಿವ್ಯಂ' ಎಂದು ಹೇಳಿರುವುದರಿಂದ ಭಗವಂತನ ಲೀಲೆಗಳು, ಜನ್ಮ ಕರ್ಮಗಳು ಅಪ್ರಾಕೃತಗಳೆಂದು ಅರ್ಥವಾಗುತ್ತಿದೆ. ಭಗವಂತನು ಪ್ರಕೃತಿಯನ್ನು ಸ್ವಾಧೀನಪಡಿಸಿಕೊಂಡಿರುವನಾದ್ದರಿಂದ, ಅವನ ಚರ್ಯೆಗಳು ಸಾಮಾನ್ಯ ಪ್ರಾಣಿಗಳ ಚರ್ಯೆಗಳಂತೆ ಇರುವುದಿಲ್ಲ. ಭಗವತ್ತತ್ವಗಳನ್ನು ತಿಳಿಯುವವನು 'ಪುನರ್ಜನ್ಮವನ್ನು ಹೊಂದುವುದಿಲ್ಲ' ಎಂದು ಹೇಳಿ ತಕ್ಷಣ 'ನನ್ನನ್ನೇ ಹೊಂದುವನು' ಎಂದು ಹೇಳಿರುವುದರಿಂದ ಜನ್ಮರಾಹಿತ್ಯಪದವಿ ಶೂನ್ಯವಲ್ಲವೆಂದು, ಕೇವಲ ಸಚ್ಚಿದಾನಂದ ಘನ ಆತ್ಮಸ್ವರೂಪ ಸ್ಥಿತಿಯೆಂದು ಸ್ಪಷ್ಟವಾಗುತ್ತದೆ.

'ದೇಹವನ್ನು ಬಿಟ್ಟು ನನ್ನನ್ನೇ ಹೊಂದುವನು'- ಎನ್ನುವ ವಾಕ್ಯದ ಅರ್ಥವು ದೇಹವನ್ನು ಬಿಟ್ಟ ನಂತರವೇ ಮೋಕ್ಷವನ್ನು ಹೊಂದುವನೆಂದಲ್ಲ. ವಾಸ್ತವವಾಗಿ ಯಾವ ಕ್ಷಣದಲ್ಲಿ ಮನುಜನು ಭಗವತ್ತತ್ವವನ್ನು ಆಳವಾಗಿ ತಿಳಿಯುವನೋ, ಆ ಕ್ಷಣದಲ್ಲಿಯೇ (ದೇಹವಿರುವಾಗಲೇ) ಆತನು ಮೋಕ್ಷವನ್ನು ಹೊಂದುತ್ತಿದ್ದಾನೆ. ದೇಹತ್ಯಾಗದ ನಂತರ ಮತ್ತೆ ದೇಹವನ್ನು ಹೊಂದುವುದಿಲ್ಲ ಎನ್ನುವುದನ್ನು ತಿಳಿಸಲೆಂದು ದೇಹಾಂತರದ ಪ್ರಸ್ತಾಪ ಇಲ್ಲಿ ಮಾಡಲಾಗಿದೆ.

ಪ್ರ : ಭಗವತ್ಸಾಯುಜ್ಯವನ್ನು ಯಾರು ಹೊಂದುವರು?

ಉ : ಭಗವಂತನ ಅಪ್ರಾಕೃತ ಜನ್ಮ ಕರ್ಮಗಳನ್ನು, ತತ್ವಗಳನ್ನು ವಾಸ್ತವವಾಗಿ ತಿಳಿದವರು.

**ಅ||** ಪೂರ್ವದಲ್ಲಿ ಎಷ್ಟೋ ಮಹನೀಯರು ಆ ಪ್ರಕಾರವಾಗಿ ದೈವತತ್ತ್ವವನ್ನು ತಿಳಿದು ಮುಕ್ತಿ ಹೊಂದಿದರೆಂದು ಹೇಳಲಾಗುತ್ತಿದೆ-

**೧೦. ವೀತರಾಗಭಯಕ್ರೋಧಾ ಮನ್ಮಯಾ ಮಾಮುಪಾಶ್ರಿತಾಃ**
**ಬಹವೋ ಜ್ಞಾನತಪಸಾ ಪೂತಾ ಮದ್ಭಾವಮಾಗತಾಃ**

**ಅರ್ಥ:** ವೀತರಾಗಭಯಕ್ರೋಧಾಃ=ಅನುರಾಗ (ಕೋರಿಕೆ), ಭಯ, ಕೋಪವನ್ನು ಬಿಟ್ಟವರು; ಮನ್ಮಯಾಃ=ನನ್ನಲ್ಲೇ ಲಗ್ನವಾಗಿರುವ ಚಿತ್ತವುಳ್ಳವರು (ನನ್ನಲ್ಲೇ ತನ್ಮಯರಾಗಿರುವವರು); ಮಾಂ=ನನ್ನನ್ನು; ಉಪಾಶ್ರಿತಾಃ=ಆಶ್ರಯಿಸಿ ದವರು(ಆದ); ಬಹವಃ=ಅನೇಕರು; ಜ್ಞಾನತಪಸಾ=(ಇಂಥ)ಜ್ಞಾನತಪಸ್ಸಿನಿಂದ; ಪೂತಾಃ=ಪವಿತ್ರರಾಗಿ; ಮದ್ಭಾವಂ=ನನ್ನ ಸ್ವರೂಪವನ್ನು (ಮೋಕ್ಷವನ್ನು); ಆಗತಾಃ=ಹೊಂದಿರುವರು.

**ತಾ||** ಅನುರಾಗ, ಭಯ, ಕ್ರೋಧಗಳನ್ನು ಬಿಟ್ಟವರು, ನನ್ನಲ್ಲೇ ಮಗ್ನವಾಗಿರುವ ಚಿತ್ತವುಳ್ಳವರು, ನನ್ನನ್ನೇ ಆಶ್ರಯಿಸಿದವರೂ ಆದ ಅನೇಕರು ಇಂತಹ ಜ್ಞಾನತಪಸ್ಸಿನಿಂದ ಪವಿತ್ರರಾಗಿ ನನ್ನ ಸ್ವರೂಪ (ಮೋಕ್ಷ)ವನ್ನು ಹೊಂದಿರುವರು.

**ವ್ಯಾಖ್ಯೆ:** 'ಜ್ಞಾನಯೋಗ'ವೆಂಬ ಈ ಅಧ್ಯಾಯದಲ್ಲಿ ಗೀತಾಚಾರ್ಯನು ಜ್ಞಾನವನ್ನು ತಪಸ್ಸು, ಯಜ್ಞ, ಅಗ್ನಿ, ನೌಕೆ, ಖಡ್ಗ ಮುಂತಾದುವುಗಳಿಗೆ ಹೋಲಿಸಿ ವರ್ಣಿಸಿರುವನು. ಇಲ್ಲಿ ಜ್ಞಾನವನ್ನು ತಪಸ್ಸೆಂದು ವರ್ಣಿಸಲಾಗಿದೆ. ಪ್ರಪಂಚದಲ್ಲಿ ಅನೇಕ ತಪಸ್ಸುಗಳಿದ್ದಾಗ್ಯೂ, ಜ್ಞಾನತಪಸ್ಸು ಸರ್ವೋತ್ಕೃಷ್ಟ ವಾದುದು. ಏಕೆಂದರೆ, ಶರೀರದ ಮೇಲಿನ ಮಾಲಿನ್ಯವನ್ನು ನೀರು ತೊಳೆದು ಹಾಕುವಂತೆ ಬಹುಜನ್ಮಾರ್ಜಿತ ಪಾಪಗಳ ವಾಸನಾಮಾಲಿನ್ಯವನ್ನು ಆ ಜ್ಞಾನ ತಪಸ್ಸು ತೊಳೆದು ಹಾಕಿ ಚಿತ್ತವನ್ನು ಶುದ್ಧ ಮಾಡುವುದು. (ಆದ್ದರಿಂದಲೇ 'ಪೂತಾಃ' (ಪವಿತ್ರರಾಗಿ) ಎನ್ನುವ ಪದವನ್ನು ಪ್ರಯೋಗಿಸಲಾಗಿದೆ.) ಮೋಕ್ಷಕ್ಕೆ ಇಲ್ಲಿ ಚಿತ್ತನೈರ್ಮಲ್ಯ ಅತ್ಯಂತ ಅವಶ್ಯಕವಾಗಿದೆ. ಜ್ಞಾನ ತಪಸ್ಸೆಂದರೇನು? ೧) ರಾಗ ಭಯ ಕ್ರೋಧಗಳು ಇಲ್ಲದೇ ಇರುವುದು. ೨) ಭಗವನ್ಮಯ ನಾಗಿರುವುದು ೩) ಭಗವಂತನನ್ನು ಆಶ್ರಯಿಸುವುದು. ಅಂತಹ ಜ್ಞಾನತಪಸ್ಸಿನ ಫಲವೇನು? ೧) ಚಿತ್ತಶುದ್ಧಿ ೨) ಪರಮಾತ್ಮಸ್ವರೂಪ ಪ್ರಾಪ್ತಿ- ಎಂದು ಈ ಶ್ಲೋಕದಲ್ಲಿ ಹೇಳಲಾಗಿದೆ.

*"ವೀತರಾಗಭಯಕ್ರೋಧಾಃ"*- ಜ್ಞಾನತಪಸ್ಸಿನಲ್ಲಿ ಮೊದಲನೆಯ ಸಾಧನೆ, ಕಾಮಕ್ರೋಧ ಭಯಗಳನ್ನು ತ್ಯಜಿಸುವುದು. ಈ ದುಷ್ಟತ್ರಯವು ಸಾಧಕನಿಗೆ ಮಹಾ ಪ್ರಮಾದಕರವಾದದ್ದು, ಆದ್ದರಿಂದ ಪ್ರಯತ್ನ ಪೂರ್ವಕವಾಗಿ ಈ ಮೂರು ದುರ್ಗುಣಗಳನ್ನು ದೂರಮಾಡಿಕೊಳ್ಳಬೇಕು. ಅವು ಹೇಗೆ ನಾಶವಾಗುವುವು? ಅದಕ್ಕೆ ಉಪಾಯವನ್ನು ಕೊಡಲಾಗಿದೆ. 'ಮನ್ಮಯಾಃ' 'ಮಾಮುಪಾಶ್ರಿತಾಃ'- ಎಂದರೆ ನಿರಂತರ ಭಗವಚ್ಚಿಂತನೆ, ಭಗವದಾಶ್ರಯಗಳೇ ಆ ಉಪಾಯಗಳು. ರಾಗ ಭಯ ಕ್ರೋಧ ರಾಹಿತ್ಯವು 'ವಾಸನಾಕ್ಷಯವು' ನಿರಂತರ ಭಗವತ್ತನ್ಮಯತೆ, ಭಗವಾದಶ್ರಯತೆ ಮತ್ತು 'ತತ್ವಜ್ಞಾನ'ಗಳ ಸಹಾಯದಿಂದ ಲಭ್ಯವಾಗಬಲ್ಲದು. ಈ ವಾಸನಾಕ್ಷಯ, ತತ್ವಜ್ಞಾನಗಳು ಒಂದರಿಂದ ಮತ್ತೊಂದು ಪರಿಪೋಷಿಸಲ್ಪಡುವುದರಿಂದ ಎರಡನ್ನೂ ಏಕಕಾಲದಲ್ಲಿಯೇ ಸಮಾನವಾಗಿ ಅಭ್ಯಸಿಸಿಕೊಂಡು ಬರಬೇಕು.

*"ಬಹವಃ"*- ಇಲ್ಲಿಯವರೆಗೆ ಎಷ್ಟೋ ಪುಣ್ಯಾತ್ಮರು ಜ್ಞಾನತಪಸ್ಸಿನಿಂದ ಪುನೀತರಾಗಿ ಬ್ರಹ್ಮಸಾಯುಜ್ಯವನ್ನು ಹೊಂದಿದರೆಂದು ಹೇಳಿರುವುದರಿಂದ, ಅದರ ಮಹಿಮೆಗೆ ಪ್ರತ್ಯಕ್ಷ ಸಾಕ್ಷ್ಯ ಲಭಿಸಿದಂತಾಗಿದೆ. ಪೂರ್ವದಲ್ಲಿ ಎಷ್ಟೋ ಜನ ಅದನ್ನು ಸಾಧಿಸಿ ಮುಕ್ತಿಯನ್ನು ಪಡೆದಿರುವರಾದ್ದರಿಂದ, ಈಗಲೂ, ಮುಂದೆಯೂ ಸಹ ಆ ಪ್ರಕಾರವಾಗಿಯೇ ಪಡೆಯಬಹುದು ಎನ್ನುವುದರಲ್ಲಿ ಸಂದೇಹವಿಲ್ಲ; ಆದ್ದರಿಂದ ಮುಮುಕ್ಷುಗಳು ಶಂಕೆಯನ್ನು ಬಿಟ್ಟು, ಸಾಧನೆಯನ್ನು ತಪ್ಪದೆ ಆಚರಿಸಿ ಶ್ರೇಯವನ್ನು ಹೊಂದಬೇಕು.

ಈ ಶ್ಲೋಕದ ಮೂಲಕ ತಿಳಿಯುವ ಮುಖ್ಯಾಂಶಗಳು-

೧) ಭಗವತ್ಸ್ವರೂಪವನ್ನು ಹೊಂದಲು ಹೃದಯ ನಿರ್ಮಲತೆ ಅತ್ಯಾವಶ್ಯಕ.

೨) ಆ ಹೃದಯ ನಿರ್ಮಲತೆಗೆ ಜ್ಞಾನ ತಪಸ್ಸು ಅವಶ್ಯಕ.

೩) ಜ್ಞಾನತಪಸ್ಸೆಂದರೆ- ೧) ಕಾಮ ಕ್ರೋಧ ಭಯ ರಾಹಿತ್ಯ
೨) ಭಗತ್ತನ್ಮಯತೆ
೩) ಭಗವದಾಶ್ರಯತೆ

ಪ್ರ : ಹೃದಯ ಶುದ್ಧಿ ಯಾವುದರಿಂದ ಉಂಟಾಗುತ್ತದೆ?

ಉ : ಜ್ಞಾನತಪಸ್ಸಿನಿಂದ (ಇದರ ವಿವರಗಳನ್ನು ಮೇಲೆ ತಿಳಿಸಲಾಗಿದೆ)

**ಅ||** ತನ್ನನ್ನು ಯಾವ ಪ್ರಕಾರವಾಗಿ ಜನರು ಸೇವಿಸುವರೋ ಅವರನ್ನು ಆ ಪ್ರಕಾರವಾಗಿಯೇ ಅನುಗ್ರಹಿಸುವೆನೆಂದು ಭಗವಂತನು ಹೇಳುತ್ತಿದ್ದಾನೆ-

**೧೧. ಯೇ ಯಥಾ ಮಾಂ ಪ್ರಪದ್ಯಂತೇ ತಾಂ ಸ್ತಥೈವ ಭಜಾಮ್ಯಹಮ್**
**ಮಮ ವರ್ತ್ಮಾನುವರ್ತಂತೇ ಮನುಷ್ಯಾಃ ಪಾರ್ಥ ಸರ್ವಶಃ**

**ಅರ್ಥ:** ಪಾರ್ಥ=ಓ ಅರ್ಜುನಾ!; ಯೇ=ಯಾರು; ಯಥಾ=ಯಾವ ಪ್ರಕಾರವಾಗಿ; ಮಾಂ=ನನ್ನನ್ನು; ಪ್ರಪದ್ಯಂತೇ=ಆಶ್ರಯಿಸುತ್ತಿರುವರೋ (ಸೇವಿಸುತ್ತಾರೊ); ತಾನ್=ಅವರನ್ನು; ತಥಾ ಏವ=ಆ ಪ್ರಕಾರವಾಗಿಯೇ; ಅಹಂ=ನಾನು; ಭಜಾಮಿ=ಅನುಗ್ರಹಿಸುತ್ತಿದ್ದೇನೆ; ಮನುಷ್ಯಾಃ=ಮನುಷ್ಯರು; ಮಮ=ನನ್ನ; ವರ್ತ್ಮ=ಮಾರ್ಗವನ್ನು; ಸರ್ವಶಃ; ಎಲ್ಲಾ ವಿಧಗಳಲ್ಲಿಯೂ; ಅನುವರ್ತಂತೇ=ಅನುಸರಿಸುತ್ತಿದ್ದಾರೆ.

**ತಾ||** ಓ ಅರ್ಜುನಾ! ಯಾರು ಯಾರು ಯಾವ ಯಾವ ಪ್ರಕಾರವಾಗಿ ನನ್ನನ್ನು ಸೇವಿಸುತ್ತಾರೋ ಅವರನ್ನು ಆ ಪ್ರಕಾರವಾಗಿಯೇ ನಾನು ಅನುಗ್ರಹಿಸುತ್ತೇನೆ. ಮನುಷ್ಯರು ಸರ್ವವಿಧಗಳಲ್ಲಿಯೂ ನನ್ನ ಮಾರ್ಗವನ್ನೇ ಅನುಸರಿಸುತ್ತಿದ್ದಾರೆ.

**ವ್ಯಾಖ್ಯೆ:** 'ಮಾಡಿದವರಿಗೆ ಮಾಡಿದಷ್ಟು ಮಹದೇವ'! ಎನ್ನುವ ಹಾಗೆ ಯಾರ್ಯಾರು ಯಾವ್ಯಾವ ವಿಧವಾಗಿ ಎಷ್ಟೆಷ್ಟು ಭಕ್ತಿಯಿಂದ ಯಾವ್ಯಾವ ರೂಪದಲ್ಲಿ ನನ್ನನ್ನು ಅರ್ಚಿಸುವರೋ, ಅವರನ್ನು ಆಯಾ ವಿಧಗಳಲ್ಲಿಯೇ ಅನುಗ್ರಹಿಸುವೆನೆಂದು ಭಗವಂತನು ಹೇಳುತ್ತಿದ್ದಾನೆ. ಪರಮಾತ್ಮನು ಕಲ್ಪವೃಕ್ಷ. ಆತನ ಬಳಿಗೆ ಹೋಗಿ ಏನನ್ನು ಬೇಡಿದರೂ ಅದನ್ನು ದಯಪಾಲಿಸುವನು. ಯಾವ ಪ್ರಕಾರವಾಗಿ ಕೋರಿದರೂ, ಆ ಪ್ರಕಾರವಾಗಿ ಫಲವನ್ನು ಕೊಡುವನು. ಒಂದು ಪಕ್ಷ ಉತ್ತಮ ಫಲಗಳಾಗಲಿ, ಮೋಕ್ಷವಾಗಲಿ ಉಂಟಾಗದೇ ಇದ್ದಲ್ಲಿ ಅದು ಅವರ ದೋಷವೇ ಆಗಲಿ ಭಗವಂತನದಲ್ಲ. (Sail) ತೆರೆ ಚಾಪೆಯನ್ನು ಮೇಲೆತ್ತಿ ಸುಮ್ಮನೆ ಕುಳಿತರೆ ದೋಣಿ ನಡೆಯುವುದಿಲ್ಲ. ಭಗವದನುಗ್ರಹವೆಂಬ ಗಾಳಿ ಎಲ್ಲೆಲ್ಲೂ ಬೀಸುತ್ತಿದ್ದರೂ ಜನರು ತಮ್ಮ ಹೃದಯವೆಂಬ ತೆರೆ ಚಾಪೆಯನ್ನು ದೈವೋನ್ಮುಖವಾಗಿ ಮಾಡದ ಹೊರತು ಜೀವನ ನೌಕೆ ಮುಂದೆ ಸಾಗದು. ಕಬ್ಬಿಣಕ್ಕೆ ತುಕ್ಕು ಹಿಡಿದಾಗ ಅಯಸ್ಕಾಂತ ಅದನ್ನು ಆಕರ್ಷಿಸದು. ಹಾಗೆಯೇ ಮನಸ್ಸಿನಲ್ಲಿ ವಿಷಯ ಮಾಲಿನ್ಯ, ದೃಶ್ಯ ದೋಷಗಳಿದ್ದಲ್ಲಿ, ಭಗವಂತನು ತನ್ನ ಕಡೆಗೆ ಅದನ್ನು ಆಕರ್ಷಿಸುವುದಿಲ್ಲ. ಆದ್ದರಿಂದ ಅವರವರ ಪ್ರಯತ್ನಗಳ ತೀವ್ರತೆಗೆ ಅನುಗುಣವಾಗಿ ಆಯಾ ಪರಮಾರ್ಥ ಸತ್ಫಲಗಳನ್ನು ಭಗವಂತನು ಅವರಿಗೆ ಕರುಣಿಸುವನು.

"ಮಮವರ್ತ್ಮಾನುವರ್ತಂತೇ"- ಈ ಪ್ರಕಾರವಾಗಿ ಭಗವಂತನು ಭಕ್ತರ ಮೇಲೆ ಪ್ರೇಮ, ದಯೆ ತೋರಿಸುವುದರಿಂದ ಜನರೂ ಸಹ ತಮ್ಮತಮ್ಮಲ್ಲಿ ಅದೇ ಪ್ರೇಮವನ್ನು ಸದ್ಭಾವವನ್ನು ಪ್ರಕಟಿಸಿಕೊಳ್ಳುತ್ತಿದ್ದಾರೆ. ಜನರು ಭಗವನ್ಮಾರ್ಗವನ್ನೇ ಸರ್ವವಿಧಗಳಲ್ಲಿಯೂ ಅನುಸರಿಸುತ್ತಾರೆ. (ದೈವಮಾರ್ಗಗಳಾದ ಕರ್ಮ, ಭಕ್ತಿ, ಧ್ಯಾನ, ಜ್ಞಾನ ಮಾರ್ಗಗಳನ್ನೇ ಜನರು ಆಶ್ರಯಿಸುತ್ತಿದ್ದಾರೆಂದೂ ಅರ್ಥಮಾಡಬಹುದು.)

**ಅ||** ಕೆಲವರು ಇತರೆ ದೇವತೆಗಳನ್ನು ಏಕೆ ಉಪಾಸಿಸುತ್ತಾರೆ ಎನ್ನುವುದನ್ನು ಹೇಳಲಾಗುತ್ತಿದೆ-

**೧೨. ಕಾಂಕ್ಷಂತಃ ಕರ್ಮಣಾಂ ಸಿದ್ಧಿಂ ಯಜಂತ ಇಹ ದೇವತಾಃ**
**ಕ್ಷಿಪ್ರಂ ಹಿ ಮಾನುಷೇ ಲೋಕೇ ಸಿದ್ಧಿರ್ಭವತಿ ಕರ್ಮಜಾ**

**ಅರ್ಥ:** ಕರ್ಮಣಾಂ=ಕರ್ಮಗಳ; ಸಿದ್ಧಿಂ=ಫಲಪ್ರಾಪ್ತಿಯನ್ನು; ಕಾಂಕ್ಷಂತಃ= ಅಪೇಕ್ಷಿಸುವವರು; ಇಹ=ಈ ಲೋಕದಲ್ಲಿ; ದೇವತಾಃ=ದೇವತೆಗಳನ್ನು; ಯಜಂತೇ=ಆರಾಧಿಸುತ್ತಾರೆ; ಹಿ=ಏಕೆಂದರೆ, ಕರ್ಮಣಾಂ=ಕರ್ಮಗಳಿಂದ ಆಗುವ; ಸಿದ್ಧಿಃ=ಫಲಪ್ರಾಪ್ತಿ; ಮಾನುಷೇಲೋಕೇ=ಮನುಷ್ಯಲೋಕದಲ್ಲಿ; ಕ್ಷಿಪ್ರಂ=ಶೀಘ್ರವಾಗಿ; ಭವತಿ=ಉಂಟಾಗುತ್ತದೆ.

**ತಾ||** ಕರ್ಮಗಳ ಫಲಪ್ರಾಪ್ತಿಯನ್ನು ಅಪೇಕ್ಷಿಸುವ ಮಾನವರು ಈ ಪ್ರಪಂಚದಲ್ಲಿ ದೇವತೆಗಳನ್ನು ಆರಾಧಿಸುತ್ತಿದ್ದಾರೆ. ಏಕೆಂದರೆ ಕರ್ಮಫಲಸಿದ್ಧಿ ಈ ಮನುಷ್ಯಲೋಕದಲ್ಲಿ ಶೀಘ್ರವಾಗಿ ಲಭ್ಯವಾಗುತ್ತದೆ.

**ವ್ಯಾಖ್ಯೆ:** ಬೇರೆ ಲೋಕಗಳಿಗಿಂತ ಈ ಮನುಷ್ಯ ಲೋಕದಲ್ಲಿ ಕರ್ಮಗಳಿಗೆ ಫಲಸಿದ್ಧಿ ಶೀಘ್ರವಾಗಿ ಉಂಟಾಗುವುದೆಂದು ಇಲ್ಲಿ ಹೇಳಲಾಗಿದೆ. ಆದ್ದರಿಂದ ಜನರು ಸತ್ಕರ್ಮಾನುಷ್ಠಾನುಪರರಾಗಿ ಇರುವುದಕ್ಕೆ ಶೀಘ್ರವಾಗಿ ಪ್ರಯತ್ನಿಸಬೇಕು. ಇದು ಕರ್ಮಾನುಷ್ಠಾನ ಲೋಕ. ಬೇರೆ ಲೋಕಗಳು ಹೆಚ್ಚಿನ ಮಟ್ಟಿಗೆ ಕರ್ಮ ಫಲಾನುಭವ ಲೋಕಗಳೇ. ಆದ್ದರಿಂದ ಅಲ್ಲಿ ಮೋಕ್ಷ ಸಿದ್ಧಿಗಾಗಿ ಯತ್ನಿಸುವುದಕ್ಕೆ ಅಷ್ಟಾಗಿ ಸಾಧ್ಯವಾಗುವುದಿಲ್ಲ. ನರಕವೆನ್ನುವ ವ್ಯಾಧಿಗೆ (ಭವರೋಗಕ್ಕೆ) ಈ ಮನುಷ್ಯ ಲೋಕದಲ್ಲಿಯೇ ಉತ್ತಮಾನುಷ್ಠಾನದ ಮೂಲಕ ಚಿಕಿತ್ಸೆ ಮಾಡಿಕೊಳ್ಳದಿದ್ದರೆ, ಕರ್ಮಾನುಷ್ಠಾನಕ್ಕೆ ಅವಕಾಶವಿಲ್ಲದ ಬೇರೆಯ ಲೋಕಗಳನ್ನು (ಮರಣಾನಂತರ) ಹೊಂದಿ ಈ ಭವರೋಗ ಪೀಡಿತನು ಏನು ಮಾಡಬಲ್ಲನೆಂದು ವಿಷ್ಣು ಭಗವಂತನು ಪೂರ್ವದಲ್ಲಿ ಗರುಡನನ್ನು ಪ್ರಶ್ನಿಸಿದನು.* ಆದ್ದರಿಂದ ತ್ವರಿತವಾಗಿ ಸತ್ಕರ್ಮಗಳನ್ನಾಚರಿಸಿ ಚಿತ್ತಶುದ್ಧಿಯನ್ನು ಪಡೆದು ತದ್ವಾರ ಜ್ಞಾನಪ್ರಾಪ್ತಿ ಹೊಂದಿ ಈ ಲೋಕದಲ್ಲಿಯೇ ಮೋಕ್ಷಧಾಮವನ್ನು ಅಲಂಕರಿಸುವುದು ಶ್ರೇಯಸ್ಕರ.

ಪ್ರ : ಕರ್ಮದ ಫಲವು ಯಾವ ಲೋಕದಲ್ಲಿ ಉಂಟಾಗುವುದು?

ಉ : ಮನುಷ್ಯ ಲೋಕದಲ್ಲಿ

**ಅ||** ಭಗವಂತನು ತಾನು ಮಾಡಿದ ಜಗತ್ಸೃಷ್ಟಿ ಮೊದಲಾದ ಕಾರ್ಯಗಳೆಲ್ಲವೂ ಕರ್ತೃತ್ವರಹಿತವಾಗಿರುವುವೆಂದು ಈ ಎರಡು ಶ್ಲೋಕಗಳ ಮೂಲಕ ತಿಳಿಸುತ್ತಾನೆ.

**೧೩. ಚಾತುರ್ವರ್ಣ್ಯಂ ಮಯಾಸೃಷ್ಟಂ ಗುಣಕರ್ಮ ವಿಭಾಗಶಃ**
**ತಸ್ಯ ಕರ್ತಾರಮಪಿ ಮಾಂ ವಿದ್ಧ್ಯಕರ್ತಾರಮವ್ಯಯಮ್**

**ಅರ್ಥ:** ಚಾತುರ್ವರ್ಣ್ಯಂ=ನಾಲ್ಕು ವರ್ಣಗಳೂ; ಗುಣಕರ್ಮವಿಭಾಗಶಃ= ಸತ್ವಾದಿ ಗುಣಗಳ, ಆ ಗುಣಗಳಿಂದ ಮಾಡಲ್ಪಡುವ ಕರ್ಮಗಳ, ವಿಭಜನೆಯನ್ನನುಸರಿಸಿ; ಮಯಾ=ನನ್ನಿಂದ; ಸೃಷ್ಟಂ=ಸೃಷ್ಟಿಸಲ್ಪಟ್ಟಿವೆ; ತಸ್ಯ=ಅದಕ್ಕೆ; ಕರ್ತಾರಂ ಅಪಿ=ಕರ್ತನಾದರೂ; ಮಾಂ=ನನ್ನನ್ನು; ಅಕರ್ತಾರಂ=ಕರ್ತನಲ್ಲದವನಂತೆ; ಅವ್ಯಯಂ=ನಾಶರಹಿತನಾಗಿಯೂ (ಇಲ್ಲದೆ ನಿರ್ವಿಕಾರಿಯಾಗಿಯೂ); ವಿದ್ಧಿ=ತಿಳಿ.

**ತಾ||** ಬ್ರಾಹ್ಮಣ, ಕ್ಷತ್ರಿಯಾದಿಗಳೆಂಬ ನಾಲ್ಕು ವರ್ಣಗಳನ್ನು ಸತ್ವಾದಿ ಗುಣಗಳ ಮತ್ತು ಆ ಗುಣಗಳಿಂದ ಮಾಡಲ್ಪಡುವ ಕರ್ಮಗಳ ವಿಭಜನೆಯನ್ನನುಸರಿಸಿ ನಾನು ಸೃಷ್ಟಿಸಿದ್ದೇನೆ. ಅವುಗಳಿಗೆ ನಾನು ಕರ್ತನಾಗಿದ್ದರೂ (ಪ್ರಕೃತಿಗೆ ಅತೀತ

---

* ಇಹೈವ ನರಕವ್ಯಾಧೇಶ್ಚಿಕಿತ್ಸಾಂನ ಕರೋತಿ ಯಃ। ಗತ್ವಾ ನಿರೌಷಧಂ ದೇಶಂ ವ್ಯಾಧಿಸ್ಥಃ ಕಿಂ ಕರಿಷ್ಯತಿ. (ಗರುಡ ಪುರಾಣ)

ನಾಗಿರುವುದರಿಂದ) ವಾಸ್ತವವಾಗಿ ನನ್ನನ್ನು ಅಕರ್ತನೆಂದೂ, ನಾಶರಹಿತನೆಂದೂ (ನಿರ್ವಿಕಾರಿಯೆಂದು) ತಿಳಿಯುವುದು.

**ವ್ಯಾಖ್ಯೆ:** ಗುಣಗಳಿಂದ, ಆಯಾ ಗುಣಗಳಿಗೆ ಸಂಬಂಧಿಸಿದ ಕರ್ಮಗಳಿಂದ ಮಾನವರನ್ನು ನಾಲ್ಕು ವರ್ಣಗಳಾಗಿ (ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರರಾಗಿ) ಭಗವಂತನು ವಿಭಜಿಸಿದನು.

| ಗುಣ | ವರ್ಣ | ಕರ್ಮ |
|---|---|---|
| ಕೇವಲ ಸತ್ವಗುಣವಿರುವವರು | ಬ್ರಾಹ್ಮಣ | ಶಮದಮಾದಿಗಳು, ತಪಸ್ಸು |
| ಸತ್ವಗುಣ ಸ್ವಲ್ಪವಿದ್ದು, ರಜೋಗುಣ ಅಧಿಕವಾಗಿರುವವರು | ಕ್ಷತ್ರಿಯ | ಶೌರ್ಯ, ಧೈರ್ಯ, ಗಾಂಭೀರ್ಯಾದಿ ಸಂಯುಕ್ತ ಯುದ್ಧ ರಾಜ್ಯ ಪಾಲನಾದಿಗಳು. |
| ಸ್ವಲ್ಪ ಸತ್ವಗುಣವಿದ್ದು, ರಜೋಗುಣ ತಮೋಗುಣಗಳನ್ನು ಹೊಂದಿರುವವರು | ವೈಶ್ಯ | ಕೃಷಿ, ಗೋರಕ್ಷಣ, ವಾಣಿಜ್ಯಾದಿಗಳು. |
| ತಮೋಗುಣ ಅಧಿಕವಾಗಿದ್ದು ಸ್ವಲ್ಪ ರಜೋ ಗುಣವನ್ನು ಹೊಂದಿರುವವರು | ಶೂದ್ರ | ಪರಿಚರ್ಯಾದಿಗಳು. |

ಈ ಪ್ರಕಾರವಾಗಿ ಮಾನವರನ್ನು ವಿಭಜಿಸಿ ಭಗವಂತನು ಸೃಷ್ಟಿಕ್ರಿಯೆಯನ್ನು ನಡೆಸಿದರೂ ಸಹ ಆತನು ಕರ್ತೃತ್ವರಹಿತನಾಗಿ, ನಿರ್ವಿಕಾರನಾಗಿಯೇ ಇರುವನು. ಕರ್ತನಾದರೂ ಅಕರ್ತನಾಗಿಯೇ ವಿಜೃಂಭಿಸುತ್ತಿರುತ್ತಾನೆ. ಅದೇ ರೀತಿ ಮಹನೀಯರು ಸಂಗರಹಿತರಾಗಿ ಕ್ರಿಯೆಗಳನ್ನು ಆಚರಿಸುತ್ತಾರಾದ್ದರಿಂದ ಅವರಿಗೆ ಕರ್ಮಬಂಧನವುಂಟಾಗುವುದಿಲ್ಲ.

**೧೪. ನ ಮಾಂ ಕರ್ಮಾಣಿ ಲಿಂಪಂತಿ ನ ಮೇ ಕರ್ಮಫಲೇ ಸ್ಪೃಹಾ**
**ಇತಿ ಮಾಂ ಯೋಽಭಿಜಾನಾತಿ ಕರ್ಮಭಿರ್ನ ಸ ಬಧ್ಯತೇ**

**ಅರ್ಥ:** ಮಾಂ=ನನ್ನನ್ನು; ಕರ್ಮಾಣಿ=ಕರ್ಮಗಳು; ನಲಿಂಪಂತಿ=ಸೋಂಕುವುದಿಲ್ಲ; ಮೇ=ನನಗೆ; ಕರ್ಮಫಲೇ=ಕರ್ಮಫಲದಲ್ಲಿ; ಸ್ಪೃಹಾ= ಕೋರಿಕೆ; ನ=ಇಲ್ಲ; ಇತಿ=ಈ ಪ್ರಕಾರವಾಗಿ; ಮಾಂ=ನನ್ನನ್ನು; ಯಃ=ಯಾರು; ಅಭಿಜಾನಾತಿ=ತಿಳಿದುಕೊಳ್ಳುತ್ತಾರೋ; ಸಃ=ಆತನು; ಕರ್ಮಭಿಃ=ಕರ್ಮಗಳಿಂದ; ನ ಬಧ್ಯತೇ=ಕಟ್ಟು ಬೀಳುವುದಿಲ್ಲ.

**ತಾ॥** ನನ್ನನ್ನು ಕರ್ಮಗಳು ಸೋಂಕುವುದಿಲ್ಲ. ನನಗೆ ಕರ್ಮಫಲದಲ್ಲಿ ಅಪೇಕ್ಷೆಯಿಲ್ಲ. ಈ ಪ್ರಕಾರವಾಗಿ ನನ್ನನ್ನು ಕುರಿತು ಯಾವನು ತಿಳಿದುಕೊಳ್ಳುವನೋ ಆತನು ಕರ್ಮಗಳಿಂದ ಬಂಧಿಸಲ್ಪಡುವುದಿಲ್ಲ.

**ವ್ಯಾಖ್ಯೆ:** ಭಗವಂತನು ಕರ್ಮಫಲದಲ್ಲಿ ಅಪೇಕ್ಷೆಯಿಲ್ಲದೆ ಕರ್ಮಗಳನ್ನು ಆಚರಿಸುತ್ತಿದ್ದಾನೆಂದು ಚೆನ್ನಾಗಿ ಮನನವಾದಾಗ ಜೀವಿಯೂ ಸಹ ಫಲಾಪೇಕ್ಷೆಯಿಲ್ಲದೆ ಕರ್ಮಗಳನ್ನು ಆಚರಿಸುವನು. ತತ್ಫಲಿತವಾಗಿ ಆತನು ಕರ್ಮಗಳಿಗೆ ಅಂಟಿಕೊಳ್ಳದೆ, ಕರ್ಮಬಂಧನದಿಂದ ವಿಮುಕ್ತನಾಗುವನು.

**ಅ॥** ಪೂರ್ವದಲ್ಲಿ ಎಷ್ಟೋ ಮುಮುಕ್ಷುಗಳು ನಿಷ್ಕಾಮವಾಗಿ ಕರ್ಮಗಳನ್ನು ಆಚರಿಸಿ ಶ್ರೇಯವನ್ನು ಹೊಂದಿದರೆಂದು ಹೇಳಲಾಗುತ್ತಿದೆ-

**೧೫. ಏವಂ ಜ್ಞಾತ್ವಾ ಕೃತಂ ಕರ್ಮ ಪೂರ್ವೈರಪಿ ಮುಮುಕ್ಷುಭಿಃ**
**ಕುರು ಕರ್ಮೈವ ತಸ್ಮಾತ್ತ್ವಂ ಪೂರ್ವೈಃ ಪೂರ್ವತರಂ ಕೃತಂ**

**ಅರ್ಥ:** ಏವ=ಈ ಪ್ರಕಾರವಾಗಿ; ಜ್ಞಾತ್ವಾ=ತಿಳಿದುಕೊಂಡು; ಪೂರ್ವೈಃ= ಪೂರ್ವಜರಾದ; ಮುಮುಕ್ಷುಭಿಃ ಅಪಿ=ಮುಮುಕ್ಷುಗಳಿಂದ ಕೂಡ; ಕರ್ಮ= ಕರ್ಮವು; ಕೃತಂ=ಮಾಡಲ್ಪಟ್ಟಿದೆ; ತಸ್ಮಾತ್=ಆದ್ದರಿಂದ; ತ್ವಂ=ನೀನು; ಪೂರ್ವೈಃ=ಪೂರ್ವಜರಂತೆ; ಕೃತಂ=ಮಾಡಲ್ಪಟ್ಟ; ಪೂರ್ವತರಂ=ಬಹಳ ಪುರಾತನವಾದ; ಕರ್ಮಏವ=(ಈ) ಕರ್ತೃತ್ವರಹಿತ (ನಿಷ್ಕಾಮ) ಕರ್ಮವನ್ನೇ; ಕುರು=ಆಚರಿಸುವುದು.

**ತಾ॥** (ತಾನು ವಾಸ್ತವವಾಗಿ ಕರ್ತನಲ್ಲ, ತನಗೆ ಕರ್ಮಫಲದಲ್ಲಿ ಅಪೇಕ್ಷೆಯಿರಬಾರದು-ಎಂದು) ಈ ಪ್ರಕಾರವಾಗಿ ತಿಳಿದುಕೊಂಡು (ಭಗವಂತನ ಕರ್ಮಾಚರಣೆಯಂತೆ) ಪೂರ್ವದಲ್ಲಿ ಎಷ್ಟೋ ಮುಮುಕ್ಷುಗಳು ನಿಷ್ಕಾಮವಾಗಿ ಕರ್ಮಗಳನ್ನಾಚರಿಸಿದರು. ಆದ್ದರಿಂದ (ಓ ಅರ್ಜುನಾ!) ನೀನೂ ಪೂರ್ವಜರಂತೆ ಪುರಾತನವಾದ ನಿಷ್ಕಾಮ ಕರ್ಮವನ್ನೇ ಆಚರಿಸು.

**ವ್ಯಾಖ್ಯೆ:** ನಿಷ್ಕಾಮ ಕರ್ಮಾಚರಣೆ, ಮೋಕ್ಷಕ್ಕೆ ಬುನಾದಿಯೆಂದು ಹೇಳಬಹುದು. ಮೋಕ್ಷಸೌಧ ನಿರ್ಮಾಣ ಅಲ್ಲಿಂದಲೇ ಪ್ರಾರಂಭವಾಗುವುದು. ಆದ್ದರಿಂದಲೇ, 'ಎಷ್ಟೋ ಮುಮುಕ್ಷುಗಳು ಆ ನಿಷ್ಕಾಮಕರ್ಮದ ರಹಸ್ಯವನ್ನು ತಿಳಿದು ಕರ್ಮಾಚರಣೆ ಮಾಡಿ ಪೂರ್ವದಲ್ಲಿ ಮುಕ್ತಿ ಹೊಂದಿದರು. ಆದ್ದರಿಂದ ನೀನೂ ಸಹ ಆ ಪ್ರಕಾರವೇ ಫಲಾಸಕ್ತಿರಹಿತವಾಗಿ ಕರ್ಮಗಳನ್ನು ಮಾಡುವುದು' ಎಂದು ಭಗವಂತನು ಅರ್ಜುನನನ್ನು ಆದೇಶಿಸಿರುತ್ತಾನೆ. 'ಕುರು ಕರ್ಮೈವ'-'ಕರ್ಮವನ್ನೇ ಮಾಡು' ಎಂದು ಶ್ರೀಕೃಷ್ಣಮೂರ್ತಿ ಅಸಂದಿಗ್ಧವಾಗಿ ಹೇಳಿರುವುದರಿಂದ ಅನಾಸಕ್ತ ಕರ್ಮದ ಪ್ರಾಮುಖ್ಯತೆ ಇಲ್ಲಿ ಗೊತ್ತಾಗುತ್ತಿದೆ. ಮತ್ತೆ 'ಪೂರ್ವತರಂ' ಎಂದು ಹೇಳಲ್ಪಟ್ಟಿರುವುದರಿಂದ ಈ ನಿಷ್ಕಾಮಕರ್ಮ ಮಾರ್ಗವು ಹೊಸದಾಗಿ ಹುಟ್ಟಿರುವುದಲ್ಲವೆಂದೂ, ಅನಾದಿಕಾಲದಿಂದಲೂ ಎಷ್ಟೋ ಜನರನ್ನು ಮುಕ್ತಿಗೊಳಿಸಿರುವುದೆಂದೂ ಸ್ಪಷ್ಟವಾಗುತ್ತಿದೆ. ಪೂರ್ವಿಕರಿಗೆ ಸಹಾಯ ಮಾಡಿದ ಈ ಭವರೋಗ ದಿವ್ಯೌಷಧವು, ಈಗಿನವರಿಗೂ ಸಹ ತಪ್ಪದೆ ಒಳ್ಳೆಯದನ್ನೇ ಮಾಡುತ್ತಾ ಬಂದಿದೆ. ಆದ್ದರಿಂದ ಅದರ ಮೇಲೆ ವಿಶ್ವಾಸವನ್ನಿಟ್ಟು, ಆಚರಿಸಿ ಮುಕ್ತಿ ಹೊಂದಬೇಕೆಂದು ಭಗವಂತನು ಬೋಧಿಸುತ್ತಿದ್ದಾನೆ.

**ಅ॥** ಜ್ಞಾನಕ್ಕೆ ಅತ್ಯಾವಶ್ಯಕವಾದುದು ಚಿತ್ತಶುದ್ಧಿ. ಅಂತಹ ಚಿತ್ತಶುದ್ಧಿ ನಿಷ್ಕಾಮ ಕರ್ಮಾಚರಣೆಯಿಂದ ಸಿದ್ಧಿಸುವುದು. ಆದ್ದರಿಂದಲೇ ಆ ಅನಾಸಕ್ತ ಕರ್ಮಾಚರಣೆಯ ಪದ್ಧತಿಯನ್ನು ಭಗವಂತನು ೧೫ ಶ್ಲೋಕಗಳ ಮೂಲಕ (೧೮ ನೆ ಶ್ಲೋಕದಿಂದ ೩೨ನೆ ಶ್ಲೋಕದವರೆಗೆ) ಮುಂದೆ ವಿವರಿಸುತ್ತಿದ್ದಾನೆ-

**೧೬. ಕಿಂ ಕರ್ಮ ಕಿಮಕರ್ಮೇತಿ ಕವಯೋಽಪ್ಯತ್ರ ಮೋಹಿತಾಃ**
**ತತ್ತೇ ಕರ್ಮ ಪ್ರವಕ್ಷ್ಯಾಮಿ ಯಜ್ಞಾತ್ವಾ ಮೋಕ್ಷ್ಯಸೇಽಶುಭಾತ್**

**ಅರ್ಥ:** ಕರ್ಮ=ಕರ್ಮವು; ಕಿಂ=ಯಾವುದು; ಅಕರ್ಮ=ಅಕರ್ಮವು; ಕಿಂ= ಯಾವುದು; ಇತಿ ಅತ್ರ=ಎನ್ನುವ ಈ ವಿಷಯವನ್ನು; ಕವಯಃ ಅಪಿ= ಮೇಧಾವಿಗಳೂ ಸಹ; ಮೋಹಿತಾಃ=ಮೋಹಗೊಂಡಿರುತ್ತಾರೆ; ಯತ್= ಯಾವುದನ್ನು; ಜ್ಞಾತ್ವಾ=ತಿಳಿದುಕೊಂಡು; ಅಶುಭಾತ್=ಅಶುಭದಿಂದ (ಸಂಸಾರ ಬಂಧನವೆನ್ನುವ ಅನರ್ಥದಿಂದ); ಮೋಕ್ಷ್ಯಸೇ=ವಿಮುಕ್ತನಾಗ ಬಲ್ಲೆಯೋ; ತತ್ಕರ್ಮ=ಆ ಕರ್ಮವನ್ನು; ತೇ=ನಿನಗೆ; ಪ್ರವಕ್ಷ್ಯಾಮಿ= ವಿಶದವಾಗಿ ಹೇಳುವೆನು.

**ತಾ॥** ಕರ್ಮ ಎಂತಹದು, ಅಕರ್ಮ ಎಂತಹದು ಎನ್ನುವ ವಿಷಯವನ್ನು ಪಂಡಿತರೂ ಕೂಡ ಸರಿಯಾಗಿ ತಿಳಿದುಕೊಳ್ಳಲಾರದೆ ಹೋಗುತ್ತಿದ್ದಾರೆ.

ಯಾವುದನ್ನು ತಿಳಿಯುವುದರಿಂದ ನೀನು ಸಂಸಾರ ಬಂಧನದಿಂದ ವಿಮುಕ್ತನಾಗುವೆಯೋ ಅಂತಹ ಕರ್ಮರಹಸ್ಯವನ್ನು ನಿನಗೆ ಈಗ ತಿಳಿಸುತ್ತಿದ್ದೇನೆ.

**ವ್ಯಾಖ್ಯೆ:** ಕರ್ಮರಹಸ್ಯವು ಬಹಳ ನಿಗೂಢವಾದುದು. ಆದ್ದರಿಂದ ದೊಡ್ಡ ದೊಡ್ಡ ವಿದ್ವಾಂಸರು, ಶಾಸ್ತ್ರಜ್ಞರೂ ಕೂಡ ಅದನ್ನು ತಿಳಿದುಕೊಳ್ಳಲಾರದವರಾಗಿದ್ದಾರೆ. ಭಗವಂತನು ಕರುಣೆಯಿಂದ ಇಲ್ಲಿ ಅದನ್ನು ಬೋಧಿಸತೊಡಗಿರುವನು. ಆ ಕರ್ಮತತ್ವವನ್ನು ತಿಳಿಯುವುದರಿಂದ ಉಂಟಾಗುವ ಉಪಯೋಗವೇನು? ಮನುಜನು ಅಶುಭವಾದ ಈ ಸಂಸಾರ ದುಃಖದಿಂದ ಬಿಡುಗಡೆಯನ್ನು ಹೊಂದುವನು. ಆದ್ದರಿಂದ ಸಾಂಸಾರಿಕ ಕ್ಲೇಶಗಳಿಂದ ವಿಮುಕ್ತರಾಗಬಯಸುವವರೆಲ್ಲರೂ ಭಗವಂತನು ತಿಳಿಸಿರುವ ಈ ಕರ್ಮಪದ್ಧತಿಯನ್ನು ಚೆನ್ನಾಗಿ ತಿಳಿದುಕೊಳ್ಳಬೇಕು.

ಪ್ರ: ಅಶುಭವಾದ ಸಂಸಾರ ಬಂಧನದಿಂದ ವಿಮುಕ್ತಿ ಹೊಂದುವ ಉಪಾಯವೇನು?

ಉ: ಕರ್ಮ ಯಾವುದೋ ಅಕರ್ಮ ಯಾವುದೋ ಚೆನ್ನಾಗಿ ತಿಳಿದುಕೊಂಡು ಅದರ ಪ್ರಕಾರ ನಡೆಯುವುದರಿಂದ.

**ಅ||** ಕರ್ಮ, ಅಕರ್ಮ, ವಿಕರ್ಮ ಎನ್ನುವ ಮೂರನ್ನೂ ತಿಳಿದುಕೊಳ್ಳಬೇಕೆಂದು ಭಗವಂತನು ಬೋಧಿಸುತ್ತಿದ್ದಾನೆ-

**೧೭. ಕರ್ಮಣೋ ಹ್ಯಪಿ ಬೋದ್ಧವ್ಯಂ ಬೋದ್ಧವ್ಯಂ ಚ ವಿಕರ್ಮಣಃ**
**ಅಕರ್ಮಣಶ್ಚ ಬೋದ್ಧವ್ಯಂ ಗಹನಾ ಕರ್ಮಣೋ ಗತಿಃ**

**ಅರ್ಥ:** ಕರ್ಮಣಃ ಅಪಿ=ಶಾಸ್ತ್ರ ವಿಹಿತವಾದ ಕರ್ಮದ(ಸ್ವರೂಪ); ಬೋದ್ಧವ್ಯಂ=ತಿಳಿದುಕೊಳ್ಳಬೇಕಾದದ್ದು; ವಿಕರ್ಮಣಶ್ಚ=ಶಾಸ್ತ್ರ ನಿಷಿದ್ಧವಾದ ಕರ್ಮದ ಸ್ವರೂಪ; ಬೋದ್ಧವ್ಯಂ=ತಿಳಿದುಕೊಳ್ಳಬೇಕಾದದ್ದು; ಅಕರ್ಮಣಃ ಚ=ಕರ್ಮರಹಿತ ಸ್ಥಿತಿಯ ಸ್ವರೂಪ; ಬೋದ್ಧವ್ಯಂ=ತಿಳಿದು ಕೊಳ್ಳಬೇಕಾದದ್ದು; ಹಿ=ಏಕೆಂದರೆ; ಕರ್ಮಣಂ=ಕರ್ಮದ; ಗತಿಃ=ತತ್ವ; ಗಹನಾ=ಬಹಳ ಆಳವಾದದ್ದು (ತಿಳಿಯುವುದಕ್ಕೆ ಕಷ್ಟವಾದದ್ದು).

**ತಾ||** ಶಾಸ್ತ್ರಗಳಿಂದ ವಿಧಿಸಲ್ಪಟ್ಟ ಕರ್ಮಗಳ, ನಿಷೇಧಿಸಲ್ಪಟ್ಟ ವಿಕರ್ಮಗಳ ಹಾಗು ಏನೂ ಮಾಡದೆ ಸುಮ್ಮನೆ ಇರುವ ಅಕರ್ಮದ ಸ್ವರೂಪವನ್ನೂ ಚೆನ್ನಾಗಿ ತಿಳಿದುಕೊಳ್ಳಬೇಕಾಗಿದೆ. ಏಕೆಂದರೆ ಕರ್ಮದ ವಾಸ್ತವ ತತ್ವವು ಬಹಳ ಗಹನವಾದದ್ದು (ತಿಳಿಯುವುದು ಬಹಳ ಕಷ್ಟ).

**ವ್ಯಾಖ್ಯೆ:** ಕರ್ಮ=ಮಾಡಬೇಕಾದ ಕರ್ಮ (ವಿಹಿತ ಕರ್ಮ)
ವಿಕರ್ಮ=ಮಾಡಬಾರದ ಕರ್ಮ (ನಿಷಿದ್ಧ ಕರ್ಮ)
ಅಕರ್ಮ=ಸುಮ್ಮನೆ ಇರುವ ಸೋಮಾರಿಯ ಸ್ಥಿತಿ

ಕರ್ಮಾಕರ್ಮವಿಕರ್ಮಗಳಿಗೆ ಇನ್ನೊಂದು ಅರ್ಥವನ್ನು ಕೊಡಬಹುದು.
ಕರ್ಮ=ಸಾಮಾನ್ಯವಾದ ಕರ್ಮ

ವಿಕರ್ಮ=ಸಾಮಾನ್ಯ ಕರ್ಮವನ್ನೇ ಕಾಮಕ್ರೋಧಾಧಿರಹಿತವಾಗಿ, ನಿಷ್ಕಾಮವಾಗಿ, ದೈವಾರ್ಪಿತ ಬುದ್ಧಿಯಿಂದ ಆಚರಿಸುವುದು.

ಅಕರ್ಮ=ಅಂತಹ ಕರ್ಮವನ್ನು ಅನಾಸಕ್ತಿಯಿಂದ ಆಚರಿಸುವಾಗ ಚಿತ್ತಶುದ್ಧಿಯಿಂದ ಉಂಟಾಗುವ ನೈಷ್ಕರ್ಮ್ಯಾತ್ಮಸ್ಥಿತಿ ಅಂದರೆ ಕರ್ಮ ಹಾಗು ವಿಕರ್ಮಗಳ ಸಂಯೋಗದಿಂದುಂಟಾಗುವ ಕರ್ತೃತ್ವರಹಿತ ನಿಷ್ಕ್ರಿಯ ಆತ್ಮಸ್ಥಿತಿಯೇ ಅಕರ್ಮ.

ಕರ್ಮಯೋಗವನ್ನು ನಿರ್ದಿಷ್ಟವಾಗಿ ಆಚರಿಸಬೇಕಾದರೆ, ಕರ್ಮ, ಅಕರ್ಮ ಹಾಗು ವಿಕರ್ಮಗಳ ಸ್ವರೂಪವನ್ನು ಚೆನ್ನಾಗಿ ತಿಳಿದುಕೊಂಡಿರಬೇಕು. ಆ ಕರ್ಮತತ್ವವು ಬಹಳ ನಿಗೂಢವಾದುದು. ಆದ್ದರಿಂದ ಭಗವಂತನು ಅದನ್ನು ವಿಶದವಾಗಿ ಹೇಳಲು ಅನುವಾದನು.

**ಅ||** ಕರ್ಮವನ್ನು ಹೇಗೆ ಆಚರಿಸಬೇಕೆನ್ನುವುದನ್ನು ತಿಳಿಸಲಾಗುತ್ತಿದೆ-

**೧೮. ಕರ್ಮಣ್ಯಕರ್ಮ ಯಃ ಪಶ್ಯೇದಕರ್ಮಣಿ ಚ ಕರ್ಮ ಯಃ**
**ಸ ಬುದ್ಧಿಮಾನ್ ಮನುಷ್ಯೇಷು ಸ ಯುಕ್ತಃ ಕೃತ್ಸ್ನಕರ್ಮಕೃತ್**

**ಅರ್ಥ:** ಕರ್ಮಣಿ=ಕರ್ಮದಲ್ಲಿ; ಅಕರ್ಮ=ಅಕರ್ಮವನ್ನು; ಯಃ=ಯಾರು; ಪಶ್ಯೇತ್=ನೋಡುವರೊ; ಅಕರ್ಮಣಿ ಚ=ಅಕರ್ಮದಲ್ಲಿ; ಕರ್ಮ=ಕರ್ಮವನ್ನು; ಯಃ=ಯಾರು; (ಪಶ್ಯೇತ್=ನೋಡುವರೊ) ಸಃ=ಆತನು; ಮನುಷ್ಯೇಷು= ಮನುಜರಲ್ಲಿ; ಬುದ್ಧಿಮಾನ್=ವಿವೇಕವಂತನು; ಸಃ=ಆತನು; ಯುಕ್ತ= ಯೋಗದಿಂದ ಕೂಡಿದವನೂ; ಕೃತ್ಸ್ನಕರ್ಮಕೃತ್=ಸಕಲ ಕರ್ಮಗಳನ್ನಾಚರಿಸುವವನು, (ಭವತಿ=ಆಗುತ್ತಿದ್ದಾನೆ).

**ತಾ||** ಯಾವನು ಕರ್ಮದಲ್ಲಿ ಅಕರ್ಮವನ್ನು, ಅಕರ್ಮದಲ್ಲಿ ಕರ್ಮವನ್ನು ನೋಡುವನೋ ಆತನು ಮನುಜರಲ್ಲಿ ವಿವೇಕವಂತನೂ, ಯೋಗಯುಕ್ತನೂ, ಸಕಲ ಕರ್ಮಗಳನ್ನು ಆಚರಿಸುವವನೂ ಆಗುತ್ತಾನೆ.

**ವ್ಯಾಖ್ಯೆ: ಕರ್ಮದಲ್ಲಿ ಅಕರ್ಮವನ್ನು ನೋಡುವುದು:-** ಕರ್ತೃತ್ವವಿಲ್ಲದೆ, ಫಲವನ್ನು ಇಚ್ಛಿಸದೆ ಎಷ್ಟು ಕರ್ಮ ಮಾಡಿದರೂ ಅದು ಬಂಧವನ್ನು ಉಂಟುಮಾಡಲಾರದು. ಅದು ಮಾಡದೆ ಇರುವುದಕ್ಕೆ ಸಮಾನ. ಅಂದರೆ ಅದು ಅಕರ್ಮವೇ ಆಗುವುದು. ಕನ್ನಡಿಯು ಪ್ರತಿಬಿಂಬ ಕ್ರಿಯೆಯನ್ನು ದಿನವೆಲ್ಲವೂ ಮಾಡುತ್ತಿದ್ದರೂ ಆ ಪ್ರತಿಬಿಂಬಿತ ವಸ್ತುಗಳು ಅದಕ್ಕೆ ಅಂಟದೆ ಇರುವುದರಿಂದ ಕನ್ನಡಿಯು ಏನೂ ಮಾಡಲಿಲ್ಲವೇನೋ ಎನ್ನುವ ಹಾಗೆ ನಿರ್ಮಲವಾಗಿಯೂ, ನಿಷ್ಕ್ರಿಯವಾಗಿಯೂ ಇರುವುದು. ಮಹನೀಯರಾದವರು, ಆತ್ಮಸ್ಥಿತಿಯಲ್ಲಿದ್ದವರಾಗಿ ತಮ್ಮತಮ್ಮ ದೇಹೇಂದ್ರಿಯಾದಿಗಳಿಂದ ಅನೇಕ ಲೋಕೋಪಕಾರ ಕಾರ್ಯಗಳನ್ನು ಇಲ್ಲವೆ ತಮ್ಮ ಜೀವನಯಾತ್ರೆಗೆ ಸಂಬಂಧಿಸಿದ ಕಾರ್ಯಗಳನ್ನು ಮಾಡಿದರೂ ಅವುಗಳನ್ನು ಮಾಡದೆ ಇರುವುದಕ್ಕೆ ಸಮಾನ. ಅನಾಸಕ್ತಿಯಿಂದ ಕಾರ್ಯವನ್ನಾಚರಿಸುವುದರಿಂದ ಕರ್ಮ ಅಕರ್ಮವಾಗಿ, ನೈಷ್ಕರ್ಮ್ಯವಾಗಿ ರೂಪುಗೊಂಡು ಬಂಧವನ್ನುಂಟುಮಾಡುವುದಿಲ್ಲ. ಕರ್ಮದಲ್ಲಿ ಅಕರ್ಮವನ್ನು ನೋಡುವುದೆಂದರೆ ಇದನ್ನು ತಿಳಿಯುವುದೇ ಆಗಿದೆ. ಅಹಂಕಾರದಿಂದ, ಕರ್ತೃತ್ವಬುದ್ಧಿಯಿಂದ, ಆಸಕ್ತಿ, ಸಂಗಗಳಿಂದ ಮಾಡಲ್ಪಡುವ ಕರ್ಮವು ಬಂಧವನ್ನು ಉಂಟುಮಾಡುವುದಾಗಲೀ, ಅಸಕ್ತ ಬುದ್ಧಿಯಿಂದ ಮಾಡಲ್ಪಡುವ ಕರ್ಮವಲ್ಲ, ಅನಾಸಕ್ತ ಕರ್ಮ ಅಕರ್ಮವೇ ಆಗುವುದು. ಅಂದರೆ ಕರ್ಮರಾಹಿತ್ಯಕ್ಕೆ ಸಮಾನವಾಗಿರುವುದು. ಈ ಪ್ರಕಾರವಾಗಿ ಕರ್ಮದಲ್ಲಿ ಕರ್ಮರಾಹಿತ್ಯವನ್ನು, ಇಲ್ಲ ಅಕರ್ಮವನ್ನು ಯಾವನು ನೋಡುವನೋ ಆತನು ಮನುಜರಲ್ಲಿ ವಿವೇಕವಂತನು, ಯೋಗಯುಕ್ತನು ಎನಿಸಿಕೊಳ್ಳುವನು. ಆತನು ಕ್ರಮವಾಗಿ ನಿಷ್ಕಾಮ ಕರ್ಮವನ್ನು ಅವಲಂಬಿಸುವುದರ ಮೂಲಕ ಚಿತ್ತಶುದ್ಧಿಯನ್ನು, ಆತ್ಮಸ್ಥಿತಿಯನ್ನು ಪಡೆದು, ಜೀವನ ಲಕ್ಷ್ಯವನ್ನು ಸಾಧಿಸಿದವನಂತಾಗಿ ಸಕಲ ಕರ್ಮಗಳ ಫಲವನ್ನು ಹೊಂದಿದಂತಾಗುತ್ತದೆ. ಆದ್ದರಿಂದಲೇ ಆತನನ್ನು 'ಬುದ್ಧಿಮಾನ್, ಯುಕ್ತಃ, ಕೃತ್ಸ್ನಕರ್ಮಕೃತ್' ಎನ್ನುವ ಮೂರು ವಿಶೇಷಣಗಳಿಂದ ಇಲ್ಲಿ ಸ್ತುತಿಸಲಾಗಿದೆ. ಹಾಗಲ್ಲದೆ ಕರ್ಮ ಕೆಟ್ಟದ್ದು,

ಅದು ಕೆಲಸಕ್ಕೆ ಬಾರದು, ಯಾವ ರೂಪದಲ್ಲಿದ್ದರೂ ಅದು ಬಂಧಕರವೇ ಎಂದು ತಿಳಿಯುವವರು ಕರ್ಮದಲ್ಲಿ ಅಕರ್ಮವನ್ನು ನೋಡದವರು. ಅವರು ಬುದ್ಧಿವಂತರಲ್ಲ, ಬುದ್ಧಿಮಾಂದ್ಯರು.

**ಅಕರ್ಮದಲ್ಲಿ ಕರ್ಮವನ್ನು ನೋಡುವುದು:** ಕೆಲವರು ವಾಸನಾಯುಕ್ತರಾಗಿ ಪ್ರಕೃತಿಜನ್ಯ ಗುಣಗಳನ್ನು ಹೋಗಲಾಡಿಸಿಕೊಳ್ಳದೆ ದೇಹೇಂದ್ರಿಯಾದಿಗಳಿಂದ ಮಾತ್ರ ಕರ್ಮಗಳನ್ನು ಪರಿತ್ಯಜಿಸಿ ಯಾವ ಕರ್ಮವನ್ನೂ ಮಾಡದೆ ಸೋಮಾರಿಗಳಾಗಿರುವರು. ಅವರ 'ಅಕರ್ಮ'ದಲ್ಲಿ ಮಹಾಬಂಧಕರವಾದ 'ಕರ್ಮ'ವಿದೆ. ಹೊರಗೆ ಕರ್ಮ ಮಾಡದೇ ಇದ್ದರೂ ಮನಸ್ಸಿನಿಂದ ಅವರು ಕರ್ಮವನ್ನು ಮಾಡುತ್ತಲೇ ಇರುತ್ತಾರೆ. ಇಂದ್ರಿಯಗಳು ಚಲಿಸದಿದ್ದರೂ ಮನಸ್ಸು, ಸಂಕಲ್ಪಗಳು, ವಾಸನೆಗಳು ಚಲಿಸುತ್ತಲೇ ಇರುತ್ತವೆ. ಶರೀರವು ಒಂದು ಕಡೆ ನಿಶ್ಚಲವಾಗಿ ನಿಷ್ಕ್ರಿಯವಾಗಿದ್ದರೂ ಮನಸ್ಸು ಮೂರು ಲೋಕಗಳನ್ನು ಸುತ್ತಿಬರುತ್ತಿರುತ್ತದೆ. ಅಂತಹವನ ಅಕರ್ಮದಲ್ಲಿ ಬಂಧದಾಯಕವಾದ ಕರ್ಮ ಅಂತರ್ಭೂತವಾಗಿರುತ್ತದೆ. ಹೀಗೆ ತಿಳಿಯುವುದರಿಂದ ಅಕರ್ಮದಲ್ಲಿ ಕರ್ಮವನ್ನು ನೋಡಿದಂತಾಗುವುದು. ಬಂಧವನ್ನು, ಬಂಧರಾಹಿತ್ಯವನ್ನು ವಾಸನೆಗಳು, ಅಹಂಭಾವ, ಮನಸ್ಸುಗಳು ನಿರ್ಣಯಿಸುವುವೇ ಆಗಲಿ; ಇಂದ್ರಿಯಗಳು, ದೇಹವಲ್ಲವೆಂದು ತಿಳಿದುಕೊಳ್ಳಬೇಕು. ಒಂದು ವೇಳೆ ಕರ್ಮೇಂದ್ರಿಯಗಳನ್ನು ಬಿಗಿ ಹಿಡಿದು ಚಿತ್ತದಿಂದ ಎಲ್ಲಾ ಕೆಲಸಗಳನ್ನು ಮಾಡುತ್ತಿದ್ದರೆ ಅದು ಮಿಥ್ಯಾಚಾರವೇ ಆಗುತ್ತದೆ ಎಂದು ಹಿಂದಿನ ಅಧ್ಯಾಯದಲ್ಲಿ ಭಗವಂತನು ತಿಳಿಸಿಯೇ ಇದ್ದಾನೆ. ಈ ಪ್ರಕಾರವಾಗಿ ಅಕರ್ಮದಲ್ಲಿ ಕರ್ಮವನ್ನು ನೋಡುವವನು ಕೂಡ ವಿವೇಕವಂತನೇ ಆಗಿರುವುದರಿಂದ ಅವನೂ ಕ್ರಮವಾಗಿ ಉತ್ತಮಾಚರಣೆಯ ದ್ವಾರ ಆತ್ಮಸ್ಥಿತಿಯನ್ನು ಜೀವನ ಲಕ್ಷ್ಯವನ್ನು ಹೊಂದಿ ಸಕಲ ಕರ್ಮಾಚರಣೆ ಮಾಡಿದಂತಹವನೇ ಆಗುತ್ತಾನೆಂದು ಇಲ್ಲಿ ತಿಳಿಸಲಾಗಿದೆ.

ಪ್ರಪಂಚದಲ್ಲಿರುವ ಎಲ್ಲಾ ವಿದ್ವಾಂಸರನ್ನು, ಪಂಡಿತರನ್ನು, ಕವಿಗಳನ್ನು 'ಬುದ್ಧಿವಂತ'ರೆಂದು ಹೇಳಲಾಗುವುದಿಲ್ಲ. ಏಕೆಂದರೆ ಸತ್ಯವನ್ನು ತಿಳಿದವನೇ ಬುದ್ಧಿಶಾಲಿ. ಮೇಲೆ ತಿಳಿಸಿದ ಕರ್ಮರಹಸ್ಯವನ್ನು ತಿಳಿದು ವರ್ತಿಸುವವನೇ (ತದ್ವಾರ ಜೀವನ ಲಕ್ಷ್ಯವಾದ ಆತ್ಮಸಾಕ್ಷಾತ್ಕಾರವನ್ನು ಪಡೆಯಬಲ್ಲವನೇ) ಬುದ್ಧಿವಂತನೆಂದು ಭಗವಂತನು ಈ ಶ್ಲೋಕದಲ್ಲಿ ತಿಳಿಸಿದ್ದಾನೆ. ಆದ್ದರಿಂದ ವಿವೇಕದಿಂದ ಉತ್ತಮಾಚರಣೆ ಮಾಡುವುದೇ ಶ್ರೇಯಸ್ಕರ.

ಪ್ರ : ಮನುಜರಲ್ಲಿ ಬುದ್ಧಿವಂತನು ಯಾರು?

ಉ : ಕರ್ಮದಲ್ಲಿ ಅಕರ್ಮವನ್ನು, ಅಕರ್ಮದಲ್ಲಿ ಕರ್ಮವನ್ನು ನೋಡಬಲ್ಲವನು.

ಪ್ರ : ಅಂತಹವನು ಯಾವ ಫಲವನ್ನು ಹೊಂದುವನು?

ಉ : ಕ್ರಮವಾಗಿ ಆತ್ಮ ಸಾಕ್ಷಾತ್ಕಾರವನ್ನು ಹೊಂದುವುದರಿಂದ ಆತನು ಸಮಸ್ತ ಕರ್ಮಗಳನ್ನು ಆಚರಿಸಿದ ಫಲವನ್ನೇ ತಪ್ಪದೆ ಹೊಂದುವನು.

**ಅ॥** ಅಸಂಗ ಕರ್ಮಾಚರಣಶೀಲರನ್ನು ಕುರಿತು, ಅವರ ಮಹಿಮೆಯನ್ನು ಕುರಿತು ಐದು ಶ್ಲೋಕಗಳ ದ್ವಾರ ತಿಳಿಸಲಾಗುತ್ತಿದೆ-

**೧೯. ಯಸ್ಯ ಸರ್ವೇ ಸಮಾರಂಭಾಃ ಕಾಮಸಂಕಲ್ಪವರ್ಜಿತಾಃ**
**ಜ್ಞಾನಾಗ್ನಿ ದಗ್ಧಕರ್ಮಾಣಂ ತಮಾಹುಃ ಪಂಡಿತಂ ಬುಧಾಃ**

**ಅರ್ಥ:** ಯಸ್ಯ=ಯಾರ; ಸರ್ವೇ=ಸಮಸ್ತವಾದ; ಸಮಾರಂಭಾಃ=ಕರ್ಮಗಳು; ಕಾಮಸಂಕಲ್ಪವರ್ಜಿತಾಃ=ಕೋರಿಕೆ, ಸಂಕಲ್ಪಗಳಿಲ್ಲದಂತಹವಾಗಿ; ಜ್ಞಾನಾಗ್ನಿ ದಗ್ಧ ಕರ್ಮಾಣಂ=ಜ್ಞಾನವೆನ್ನುವ ಅಗ್ನಿಯಿಂದ ದಹಿಸಲ್ಪಟ್ಟ ಕರ್ಮಗಳ; ತಂ=ಆತನನ್ನು; ಪಂಡಿತಂ=ಪಂಡಿತನೆಂದು; ಬುಧಾಃ=ಬುದ್ಧಿವಂತರು; ಆಹುಃ=ಹೇಳುವರು.

**ತಾ॥** ಯಾವನ ಸಮಸ್ತ ಕರ್ಮಗಳು ಕೋರಿಕೆ, ಸಂಕಲ್ಪಗಳು ಇಲ್ಲದೆ ಇರುವವೋ, ಜ್ಞಾನವೆನ್ನುವ ಅಗ್ನಿಯಿಂದ ದಹಿಸಲ್ಪಟ್ಟ ಕರ್ಮವುಳ್ಳ ಅವನನ್ನು ಪಂಡಿತನೆಂದು ಜ್ಞಾನಿಗಳು ಕರೆಯುವರು.

**ವ್ಯಾಖ್ಯೆ:** ಪಂಡಿತರೆಂದರೆ ಯಾರು ಎನ್ನುವುದನ್ನು ಈ ಶ್ಲೋಕದಲ್ಲಿ ಹೇಳಲಾಗಿದೆ. ಭಗವಂತನ ದೃಷ್ಟಿಯಲ್ಲಿ ಪಾಂಡಿತ್ಯವೆಂದರೆ ಕೇವಲ ಪ್ರಾಪಂಚಿಕ ವಿದ್ಯೆಗಳನ್ನು ತಿಳಿದಿರುವುದಲ್ಲ. ಹೃದಯ ಶುದ್ಧಿಯುಂಟಾಗಿ, ಕಾಮಸಂಕಲ್ಪವಿಲ್ಲದೆ, ಆತ್ಮಜ್ಞಾನದಿಂದ ಕೂಡಿರುವುದೇ ಜ್ಞಾನ. ಯಾವನ ಸಮಸ್ತ ಕಾರ್ಯಗಳು ಕೋರಿಕೆ ಹಾಗು ಸಂಕಲ್ಪರಹಿತವಾಗಿರುವುವೋ, ಯಾವನ ಕರ್ಮಗಳು ಜ್ಞಾನಾಗ್ನಿಯಿಂದ ದಗ್ಧವಾಗಿರುವುವೋ ಆತನನ್ನು ಪಂಡಿತನೆಂದು ಇಲ್ಲಿ ಕರೆಯಲಾಗಿದೆ.

*'ಆರಂಭಾಃ'* (ಕ್ರಿಯೆಗಳು) ಎಂದು ಹೇಳದೆ *'ಸಮಾರಂಭಾಃ'* ಎಂದು ಹೇಳಿರುವುದರಿಂದ ಮಹನೀಯರು ಉತ್ತಮ ಕಾರ್ಯಗಳನ್ನೇ ಮಾಡುವರೆಂದು ಸೂಚಿಸಿದಂತಾಗಿದೆ. 'ಕಾಮ' ಎಂದರೆ ಭೋಗ ಸಂಬಂಧವಾದ ಇಚ್ಛೆ. ದಾರಾಪುತ್ರಾಗೃಹಾದಿಕ್ಷೇತ್ರಗಳಲ್ಲಿ ಮಮಕಾರ ಎಂದು ಭಾವ. ಇಲ್ಲಿ ಸಂಕಲ್ಪವೆಂದರೆ ಅಹಂಭಾವದಿಂದ ಕೂಡಿದ ಸಂಕಲ್ಪವೆಂದರ್ಥ. ಏಕೆಂದರೆ ಸಂಕಲ್ಪ ವರ್ಜಿತ ಸ್ಥಿತಿಯಲ್ಲಿ ಕಾರ್ಯಗಳು (ಸಮಾರಂಭಾಃ) ಸಂಭವಿಸುವುದೇ ಇಲ್ಲ! ಯಾರು ತಾವು ಮಾಡುವ ಸಮಸ್ತ ಕಾರ್ಯಗಳನ್ನು ಕೋರಿಕೆ(ಆಶೆ)ಯಿಲ್ಲದೆ ಮಾಡುವರೋ ಮತ್ತೆ ಆಯಾ ಕಾರ್ಯಗಳಲ್ಲಿ ಸಂಕಲ್ಪ, ಕರ್ತೃತ್ವ ಹಾಗು ಅಹಂಭಾವಗಳನ್ನು ಹೊಂದಿರುವುದಿಲ್ಲವೋ, ಅಂದರೆ ನಿಷ್ಕಾಮಬುದ್ಧಿಯಿಂದ ಯಾರು ಕರ್ಮಗಳನ್ನು ಮಾಡುವರೋ, ಅವರು ಚಿತ್ತಶುದ್ಧಿಯನ್ನು ಪಡೆದು ಆತ್ಮಜ್ಞಾನವನ್ನು ತಪ್ಪದೆ ಹೊಂದುವರು. ಜ್ಞಾನಾಗ್ನಿಯಿಂದ ಅವರ ಸಮಸ್ತ ಕರ್ಮಗಳು ದಗ್ಧವಾಗಿ ಹೋಗಿರುವುವು. ಅವರೇ ಜೀವನ್ಮುಕ್ತರು. ಅವರೇ ಪಂಡಿತರು, ಕರ್ಮಗಳು ದೊಡ್ಡ ಅರಳೆ ರಾಶಿಯಂತಹವು. ಕೋಟಿ ಕೋಟಿ ಜನ್ಮಗಳಿಂದ ಮಾಡಲ್ಪಟ್ಟ ಕರ್ಮಗಳೆಲ್ಲವನ್ನು ಕೂಡ ಆತ್ಮಜ್ಞಾನವೆಂಬ ಒಂದು ಕಿಡಿ ಭಸ್ಮೀಭೂತಗೊಳಿಸಬಲ್ಲದು. ಆದ್ದರಿಂದ ಜ್ಞಾನಸಮುತ್ಪಾದನೆಗೆ ಹೇತುವಾದ ಚಿತ್ತಶುದ್ಧಿ, ಅದಕ್ಕೆ ಕಾರಣಭೂತವಾದ ನಿಷ್ಕಾಮಕರ್ಮಾಚರಣೆ ಮೋಕ್ಷಮಾರ್ಗದಲ್ಲಿ ಎಷ್ಟು ಮುಖ್ಯವಾದುವೋ ಯೋಚಿಸಿಕೊಳ್ಳಬಹುದು.

*"ಸರ್ವೇ ಸಮಾರಂಭಾಃ"*- ಎಂದು ಹೇಳಿರುವುದರಿಂದ ಸಮಸ್ತ ಕಾರ್ಯಗಳು ಕಾಮಸಂಕಲ್ಪವರ್ಜಿತಗಳಾಗಿ ಇರಬೇಕೆಂದು ಸ್ಪಷ್ಟವಾಗುತ್ತಿದೆ.

ಪೂರ್ವದಲ್ಲಿ ತಿಳಿಯದೆ ಮಾಡಲ್ಪಟ್ಟ ಕರ್ಮಗಳನ್ನು ಕುರಿತು ಮನುಜನು ಅನಾವಶ್ಯಕವಾಗಿ ಅಂಜಿದರೂ ಲಾಭವಿಲ್ಲ. ಪ್ರಯತ್ನಪೂರ್ವಕವಾಗಿ ನಿಷ್ಕಾಮಕರ್ಮಾಚರಣಾದಿಗಳ ದ್ವಾರ ಜ್ಞಾನವನ್ನು ಸಂಪಾದಿಸಿಕೊಂಡರೆ ಸಾಕು, ಹಿಂದಿನವೆಲ್ಲವೂ ನಷ್ಟವಾಗಿ ಹೋಗುವವೆನ್ನುವ ಸತ್ಯವನ್ನು ಈ ಶ್ಲೋಕವು ತಿಳಿಸುತ್ತಿದೆ. ಮಾನವನು ತಾನು ಮಾಡುವ ಕರ್ಮಗಳು ಕಾಮ ಸಂಕಲ್ಪವರ್ಜಿತಗಳಾಗಿರುವಂತೆ ನೋಡಿಕೊಳ್ಳಬೇಕು. ಅಹಂಭಾವಯುಕ್ತವಾದ ಸಂಕಲ್ಪವೇ ಬಂಧ. ಕರ್ತೃತ್ವವೇ ಬಂಧ. ಆಸಕ್ತಿಯೇ ಬಂಧ. ಸಂಕಲ್ಪರಾಹಿತ್ಯವೇ ಮೋಕ್ಷ. ಹಾಗೆ ಕಾಮ ಸಂಕಲ್ಪರಹಿತವಾಗಿ ಕಾರ್ಯಗಳನ್ನು ಆಚರಿಸುವವನೇ ಪಂಡಿತನೆಂದು ಬುದ್ಧಿವಂತರು (ಬುಧಾಃ) ಹೇಳುತ್ತಾರೆ. ಸಾಮಾನ್ಯರಲ್ಲ.

ಪಂಡಿತನು ಎಷ್ಟು ಕರ್ಮಗಳನ್ನು ಮಾಡಿದರೂ ಶಾಂತಿಯನ್ನೇ ಪಡೆಯುವನು. ಹಾಗಲ್ಲದೇ ಕಾಮಸಂಕಲ್ಪಗಳಿಂದ ಕೂಡಿರುವವನು ಯಾವ ಕಾರ್ಯವನ್ನೂ ಮಾಡದೆ ಸುಮ್ಮನಿದ್ದಾಗ್ಯೂ ಅಶಾಂತಿಯನ್ನೇ ಹೊಂದುವನು. ಇದೇ ಕರ್ಮರಹಸ್ಯ.

ಪಂಡಿತನ ಲಕ್ಷಣವನ್ನು ಈ ಶ್ಲೋಕದಲ್ಲಿ ತಿಳಿಸಲಾಗಿದೆ. ಆದ್ದರಿಂದ ಭಗವಂತನ ಮೂಲಕ ತಿಳಿಸಲ್ಪಡುವ ಈ 'ಪಂಡಿತ'ನ ಬಿರುದಿಗಾಗಿ ಸರ್ವರೂ ಪ್ರಯತ್ನಶೀಲರಾಗಬೇಕು.

ಪ್ರ : ಪಂಡಿತರೆಂದರೆ ಯಾರು ?

ಉ : ಯಾರ ಸಮಸ್ತ ಕಾರ್ಯಗಳು ೧) ಕಾಮಸಂಕಲ್ಪವರ್ಜಿತವಾಗಿವೆಯೋ, ೨) ಯಾರ ಕರ್ಮಗಳು ಜ್ಞಾನಾಗ್ನಿಯಿಂದ ದಗ್ಧವಾಗಿವೆಯೋ ಅವರೇ ಪಂಡಿತರು.

ಪ್ರ : ಕರ್ಮವನ್ನು ಹೇಗೆ ಆಚರಿಸಬೇಕು?

ಉ : ಕೋರಿಕೆಗಳಿಲ್ಲದೆ, ಕರ್ತೃತ್ವವಿಲ್ಲದೆ (ಅಹಂಭಾವವಿಲ್ಲದೆ) ಸಂಕಲ್ಪವಿಲ್ಲದೆ ಆಚರಿಸಬೇಕು.

ಪ್ರ : ಕರ್ಮರಾಶಿ ಯಾವುದರಿಂದ ನಶಿಸುವುದು?

ಉ : ಜ್ಞಾನಾಗ್ನಿಯಿಂದ

**೨೦. ತ್ಯಕ್ತ್ವಾ ಕರ್ಮಫಲಾಸಂಗಂ ನಿತ್ಯತೃಪ್ತೋ ನಿರಾಶ್ರಯಃ**
**ಕರ್ಮಣ್ಯಭಿಪ್ರವೃತ್ತೋऽಪಿ ನೈವ ಕಿಂಚಿತ್ಕರೋತಿ ಸಃ**

**ಅರ್ಥ:** ಕರ್ಮಫಲಾಸಂಗಂ=ಕರ್ಮಫಲದಲ್ಲಿ ಆಸಕ್ತಿಯನ್ನು; ತ್ಯಕ್ತ್ವಾ=ಬಿಟ್ಟು; ನಿತ್ಯತೃಪ್ತಃ=ನಿರಂತರವೂ ಸಂತೃಪ್ತಿಯಿಂದಿರುವವನು; ನಿರಾಶ್ರಯಃ= ಯಾವುದನ್ನೂ ಆಶ್ರಯಿಸದವನು (ಆಗಿ); ಕರ್ಮಣಿ=ಕರ್ಮದಲ್ಲಿ; ಅಭಿಪ್ರವೃತ್ತಃ ಅಪಿ=ಪ್ರವರ್ತಿಸುವವನಾದರೂ; ಸಃ=ಅವನು; ಕಿಂಚಿತ್= ಸ್ವಲ್ಪವಾದರೂ(ಕರ್ಮವನ್ನು); ನ ಕರೋತಿ ಏವ=ಮಾಡುವುದೇ ಇಲ್ಲ.

**ತಾ||** ಯಾವನು ಕರ್ಮಫಲಗಳಲ್ಲಿ ಆಸಕ್ತಿ ಬಿಟ್ಟು ನಿರಂತರವೂ ಸಂತೃಪ್ತಿ ಹೊಂದಿದವನಾಗಿ ಯಾವುದನ್ನೂ ಆಶ್ರಯಿಸದೇ ಇರುವನೋ, ಅವನು ಕರ್ಮದಲ್ಲಿ ಪ್ರವರ್ತಿಸಿದರೂ ಮಾಡದವನೇ ಆಗುತ್ತಾನೆ.

**ವ್ಯಾಖ್ಯೆ:** ೧) ಕರ್ಮಫಲದಲ್ಲಿ ಆಸಕ್ತಿಯಿಲ್ಲದೇ ಇರುವವನು ೨) ನಿರಂ ತರವೂ ತೃಪ್ತಿ ಹೊಂದಿರುವವನು ೩) ದೃಶ್ಯ ವಸ್ತುಗಳನ್ನು ಆಶ್ರಯಿಸದ ವನು (ಆತ್ಮವನ್ನೇ ಆಶ್ರಯವಾಗಿ ಹೊಂದಿರುವವನು)- ಇಂತಹ ಲಕ್ಷಣಗಳುಳ್ಳ ಮನುಜನು ಎಷ್ಟು ಕರ್ಮಗಳನ್ನಾಚರಿಸಿದರೂ ಏನನ್ನೂ ಆಚರಿಸದಂಥವನೇ ಆಗುತ್ತಾನೆಂದು ಇಲ್ಲಿ ಹೇಳಲ್ಪಟ್ಟಿದೆ. ಜೀವನ್ಮುಕ್ತನಾದ ಮಹನೀಯನು ಈ ಸ್ಥಿತಿಯನ್ನು ಸಂಪಾದಿಸಿ ಲೋಕಸಂಗ್ರಹಾರ್ಥವಾಗಿ ಅನೇಕ ಕಾರ್ಯಗಳನ್ನಾಚರಿಸುವನು.

೧. ಮಹನೀಯರು ಕರ್ಮಗಳನ್ನು ಮಾಡುವವರೇ ಹೊರತು ಕರ್ಮ ಫಲದಲ್ಲಿ ಅವರಿಗೆ ಆಸಕ್ತಿಯಿರುವುದಿಲ್ಲ. ಫಲಾಭಿಸಂಧಿರಹಿತವಾಗಿ ಈಶ್ವರಾರ್ಪಣಬುದ್ಧಿಯಿಂದ ಅವರು ಕಾರ್ಯವನ್ನು ಆಚರಿಸುತ್ತಿರುವರು.

೨. ಮತ್ತೆ ಅವರು ನಿತ್ಯತೃಪ್ತರಾಗಿರುವರು. ಪಡೆಯಬೇಕಾದದ್ದೆಲ್ಲವನ್ನೂ ಅವರು ಆತ್ಮದಲ್ಲಿಯೇ ಹೊಂದಿದ್ದಾರೆ. ಆದ್ದರಿಂದ ಮಹಾಸಂತೃಪ್ತ ರಾಗಿರುವರು. 'ನಿತ್ಯ' ಎನ್ನುವ ಪದದಿಂದ ಅವರ ತೃಪ್ತಿ ಯಾವುದೋ ಒಂದು ಸಮಯಕ್ಕೆ ಪರಿಮಿತವಾದುದಲ್ಲವೆಂದೂ, ಸರ್ವಕಾಲ ದಲ್ಲಿಯೂ ಅವರು ತೃಪ್ತರಾಗಿರುವರು ಎಂದು ತಿಳಿಯುತ್ತದೆ.

೩. ಇನ್ನು ಮೂರನೆಯದು ನಿರಾಶ್ರಯತೆ. ಮಹಾತ್ಮರು ನಶ್ವರವಾದ ದೃಶ್ಯ ಪದಾರ್ಥಗಳನ್ನು ಎಂದೆಂದಿಗೂ ಆಶ್ರಯಿಸುವುದಿಲ್ಲ. ಶಾಶ್ವತವಾದ ಆತ್ಮವನ್ನೇ ಸದಾ ಆಶ್ರಯಿಸುವರು. ಈ ಪ್ರಕಾರವಾಗಿ ಕರ್ಮಫಲಾಸಕ್ತಿ ರಾಹಿತ್ಯ, ನಿತ್ಯತೃಪ್ತಿ, ನಿರಾಶ್ರಯತೆ ಎನ್ನುವ ಮೂರು ಸುಗುಣಗಳನ್ನು ಹೊಂದಿರುವ ಮಹನೀಯನು ಕರ್ಮಗಳನ್ನು ಆಚರಿಸಿದರೂ ಯಾವ ಕರ್ಮವನ್ನೂ ಆಚರಿಸದಂಥವನೇ ಆಗಿರುವನು. ಇದು ಕರ್ಮದಲ್ಲಿಯ ಅಕರ್ಮತೆ. 'ಪ್ರವೃತ್ತೋऽಪಿ' ಎಂದು ಹೇಳದೆ 'ಅಭಿಪ್ರವೃತ್ತೋऽಪಿ' ಎಂದು ಹೇಳಿರುವುದರಿಂದ ಜ್ಞಾನಿ ಅನೇಕ ಕಾರ್ಯಗಳನ್ನು ಆಚರಿಸಬಲ್ಲನೆಂದು ಸ್ಪಷ್ಟವಾಗುತ್ತಿದೆ.

ಪ್ರ : ಅನೇಕ ಕಾರ್ಯಗಳನ್ನು ಆಚರಿಸಿದರೂ ಯಾವುದನ್ನೂ ಆಚರಿಸದಂತಿರು ವವನು ಯಾರು ?

ಉ : ೧) ಕರ್ಮಫಲಾಸಕ್ತಿಯನ್ನು ತ್ಯಜಿಸಿದವನು.

೨) ನಿರಂತರತೃಪ್ತಿ ಹೊಂದಿರುವವನು.

೩) ಯಾವುದನ್ನೂ ಆಶ್ರಯಿಸದವನು. (ದೃಕ್-ವಸ್ತುವಾದ ಆತ್ಮವನ್ನೇ ಆಶ್ರಯಿಸುವವನು)

**ಅ||** ಈ ಸದ್ಗುಣಗಳನ್ನು ಹೊಂದಿ ಕರ್ಮಾಚರಣೆ ಮಾಡಿದರೆ ಪಾಪವು ಸಂಭವಿಸುವುದಿಲ್ಲವೆಂದು ಹೇಳಲಾಗುತ್ತಿದೆ-

**೨೧. ನಿರಾಶೀರ್ಯತಚಿತ್ತಾತ್ಮಾ ತ್ಯಕ್ತಸರ್ವಪರಿಗ್ರಹಃ**
**ಶಾರೀರಂ ಕೇವಲಂ ಕರ್ಮ ಕುರ್ವನ್ನಾಪ್ನೋತಿ ಕಿಲ್ಬಿಷಮ್**

**ಅರ್ಥ:** ನಿರಾಶೀಃ=ಆಶೆಯಿಲ್ಲದವನು; ಯತಚಿತ್ತಾತ್ಮ=ನಿಗ್ರಹಿಸಲ್ಪಟ್ಟ ಇಂದ್ರಿಯ ಮನಗಳನ್ನು ಹೊಂದಿದವನು; ತ್ಯಕ್ತಸರ್ವಪರಿಗ್ರಹಃ=ಸಮಸ್ತ ವಸ್ತು ಸ್ವೀಕಾರಗಳನ್ನು ಬಿಟ್ಟವನು(ಆಗಿ); ಶಾರೀರಂ ಕೇವಲಂ ಕರ್ಮ=ಶರೀರ ಮಾತ್ರದಿಂದ (ದೇಹಧಾರಣೆ, ಲೋಕಸಂಗ್ರಹಾದಿ) ಕರ್ಮಗಳನ್ನು; ಕುರ್ವಂ= ಮಾಡುತ್ತ (ಇದ್ದರೂ); ಕಿಲ್ಬಿಷಂ=ಪಾಪವನ್ನು; ನ ಅಪ್ನೋತಿ= ಹೊಂದುವುದಿಲ್ಲ.

**ತಾ||** ಆಶೆಯಿಲ್ಲದವನು, ಇಂದ್ರಿಯ ಮನಸ್ಸುಗಳನ್ನು ನಿಗ್ರಹಿಸಿದವನು, ಯಾವ ವಸ್ತುವನ್ನೂ ಇನ್ನೊಬ್ಬರಿಂದ ಪರಿಗ್ರಹಿಸದವನೂ ಆದ ಮನುಷ್ಯನು ಶರೀರ ಮಾತ್ರದಿಂದ (ದೇಹಧಾರಣಾದಿ) ಕರ್ಮಗಳನ್ನು ಮಾಡಿದರೂ ಪಾಪವನ್ನು ಹೊಂದುವುದಿಲ್ಲ.

**ವ್ಯಾಖ್ಯೆ:** ಕರ್ಮವನ್ನು ಮಾಡಬೇಕಾದ ರೀತಿಯಲ್ಲಿ ಮಾಡಿದರೆ ಅದು ಬಂಧವನ್ನಾಗಲಿ, ಪಾಪವನ್ನಾಗಲಿ ಯಾವಾಗಲೂ ಉಂಟುಮಾಡದು. ಈ ಶ್ಲೋಕದಲ್ಲಿ ಮೂರು ಮಹತ್ತರ ಸದ್ಗುಣಗಳನ್ನು ಹೇಳಲಾಗಿದೆ-

೧) ಆಶೆಯಿಲ್ಲದಿರುವುದು ೨) ಇಂದ್ರಿಯ ಮನಸ್ಸುಗಳನ್ನು ವಶದಲ್ಲಿಟ್ಟು ಕೊಳ್ಳುವುದು ೩) ಯಾವ ವಸ್ತುವನ್ನೂ ಪರಿಗ್ರಹಿಸದೆ ಇರುವುದು (ವಸ್ತುಗಳ ಮೇಲೆ ಮಮಕಾರವಿಲ್ಲದೆ ಇರುವುದು). ಈ ಮೂರು ಲಕ್ಷಣಗಳನ್ನು ಹೊಂದಿದವನು ಕೇವಲ ಉಪಾಧಿಯಿಂದ ಎಷ್ಟು ಕರ್ಮ ಮಾಡಿದರೂ ಪಾಪವನ್ನು ಹೊಂದುವುದಿಲ್ಲ. ಏಕೆಂದರೆ, ಆಶೆಯಿಲ್ಲದವನ ಮನಸ್ಸು ಬಹಿರ್ಮುಖವಾಗಿ ವಿಷಯಾದಿಗಳ ಕಡೆ ಹೋಗದೆ, ಅಂತರ್ಮುಖವಾಗಿ,

ಆತ್ಮೋನ್ಮುಖವಾಗಿರುವುದರಿಂದ ಆತನು ಕರ್ಮಗಳನ್ನು ಮಾಡಿದರೂ, ಫಲಾಭಿಲಾಷಾರಹಿತನಾಗಿರುವನು. ಹಾಗೆಯೇ ಇಂದ್ರಿಯ ಮನಸ್ಸುಗಳು ಸ್ವಾಧೀನವಾಗಿರುವವನ ಚಿತ್ತವು ಕರ್ಮದಲ್ಲಿ ಕರ್ತೃತ್ವ ಭಾವನೆ, ಸಂಗವಿಲ್ಲದೆ ಇರುವುವು. ಇನ್ನು ಮೂರನೆಯದಾದ ಅಪರಿಗ್ರಹವುಳ್ಳವನ ಮನಸ್ಸು ಯಾವುದರಲ್ಲಿಯೂ ಮಮತ್ವ, ಆಸಕ್ತಿಯನ್ನು ಹೊಂದಿರುವುದಿಲ್ಲ. ಆದ್ದರಿಂದ ಈ ಸದ್ಗುಣಗಳನ್ನು ಹೊಂದಿರುವವನ ಕ್ರಿಯೆಗಳೆಲ್ಲವೂ ಫಲಾಭಿ ಲಾಷಾರಹಿತವಾಗಿ, ಅಸಕ್ತವಾಗಿರುವುದರಿಂದ ಕರ್ತೃವಿಗೆ ಪಾಪವೇನೂ ಅಂಟುವುದಿಲ್ಲ. ಈ ರಹಸ್ಯವನ್ನೇ ಈ ಶ್ಲೋಕದಲ್ಲಿ ತಿಳಿಸಲಾಗಿದೆ.

"ತ್ಯಕ್ತಸರ್ವಪರಿಗ್ರಹಃ"- 'ಸರ್ವ' ಎನ್ನುವ ಪದ ಪ್ರಯೋಗಿಸಲ್ಪಟ್ಟಿರು ವುದರಿಂದ, ಸಮಸ್ತ ಪದಾರ್ಥಗಳ ಪರಿಗ್ರಹಣವನ್ನು ತ್ಯಜಿಸಿದವನೆಂದು ಅರ್ಥವಾಗುತ್ತಿದೆ. ಹೇಗೆಂದರೆ, ವಸ್ತು ಪರಿಗ್ರಹಣದಿಂದ, ವಸ್ತುಗಳನ್ನು ಸ್ವೀಕರಿಸುವುದರ ಜೊತೆಯಲ್ಲಿ ಅವುಗಳ ಕರ್ಮಗಳನ್ನು ಕೂಡ ತಾನು ಸ್ವೀಕರಿಸಬೇಕಾಗಿ ಬರುತ್ತದೆ. ಆ ಕರ್ಮವನ್ನು ತನ್ನ ಜ್ಞಾನಾಗ್ನಿಯಿಂದ ಭಸ್ಮೀಭೂತ ಮಾಡುವ ಶಕ್ತಿ ತನಗಿಲ್ಲದಿದ್ದಲ್ಲಿ, ಅದು ಸಾಧಕನಿಗೆ ಅಶಾಂತಿಯನ್ನುಂಟು ಮಾಡುವುದು. ಆದ್ದರಿಂದಲೇ ಮುಮುಕ್ಷುವಾಗುವವನಿಗೆ ಪರರ ವಸ್ತುಗಳನ್ನು ಗ್ರಹಿಸಬಾರದೆನ್ನುವ "ಅಪರಿಗ್ರಹ" ನಿಯಮವು ಶಾಸ್ತ್ರಗಳಲ್ಲಿ ವಿಧಿಸಲಾಗಿದೆ.*

ಪ್ರ : ಕರ್ಮ ಮಾಡಿದರೂ ಯಾರು ಪಾಪವನ್ನು ಹೊಂದುವುದಿಲ್ಲ?

ಉ : ೧) ಆಶೆಯಿಲ್ಲದವನು ೨) ಇಂದ್ರಿಯ ಮನಸ್ಸುಗಳನ್ನು ಸ್ವಾಧೀನಪಡಿಸಿ ಕೊಂಡವನು ೩) ಇತರರಿಂದ ಯಾವ ವಸ್ತುವನ್ನೂ ಪರಿಗ್ರಹಿಸದವನು.

**ಅ॥** ಕರ್ಮಗಳನ್ನು ಮಾಡಿದರೂ ಯಾವನು ಬಂಧನಕೊಳ್ಳಗಾಗುವುದಿಲ್ಲ ವೆನ್ನುವುದನ್ನು ವಿವರಿಸಲಾಗುತ್ತಿದೆ-

**೨೨. ಯದೃಚ್ಛಾಲಾಭಸಂತುಷ್ಟೋ ದ್ವಂದ್ವಾತೀತೋ ವಿಮತ್ಸರಃ**
**ಸಮಃ ಸಿದ್ಧಾವಸಿದ್ಧೌ ಚ ಕೃತ್ವಾಪಿ ನ ನಿಬಧ್ಯತೇ**

**ಅರ್ಥ:** ಯದೃಚ್ಛಾಲಾಭಸಂತುಷ್ಟಃ=ಅಪ್ರಯತ್ನವಾಗಿ ಸಿಕ್ಕಿದ್ದರಿಂದ ಸಂತೋಷವನ್ನು ಹೊಂದುವವನು; ದ್ವಂದ್ವಾತೀತಃ=ಶೀತೋಷ್ಣ, ಸುಖದುಃಖಾದಿ ದ್ವಂದ್ವಗಳನ್ನು ಅತಿಕ್ರಮಿಸಿದವನು (ಲಕ್ಷ್ಯವಿಲ್ಲದೆ ಇರುವವನು); ವಿಮತ್ಸರಃ=ಮಾತ್ಸರ್ಯವಿಲ್ಲ ದವನು; ಸಿದ್ಧೌ=(ಫಲದ) ಪ್ರಾಪ್ತಿಯಲ್ಲಿ (ಇಲ್ಲವೆ ಕಾರ್ಯದ ಸಿದ್ಧಿಯಲ್ಲಿ); ಅಸಿದ್ಧೌಚ=ಫಲಪ್ರಾಪ್ತವಾಗದೇ ಇದ್ದರೂ; ಸಮಃ=ಸಮಬುದ್ಧಿಯುಳ್ಳವನು; ಕೃತ್ವಾಅಪಿ=ಕರ್ಮವನ್ನು ಮಾಡಿದರೂ; ನ ನಿಬಧ್ಯತೇ=ಬಂಧನಕ್ಕೊಳ ಗಾಗುವುದಿಲ್ಲ.

**ತಾ॥** ಅಪ್ರಯತ್ನದಿಂದ ಕರ್ಮಾನುಸಾರವಾಗಿ ಎಷ್ಟು ಲಭಿಸುತ್ತದೆಯೋ ಅದರಿಂದ ಸಂತುಷ್ಟವನ್ನು ಹೊಂದುವವನು, ಸುಖದುಃಖಾದಿ ದ್ವಂದ್ವಗಳನ್ನು ದಾಟಿದವನು, ಮಾತ್ಸರ್ಯವಿಲ್ಲದವನು, ಫಲದ ಪ್ರಾಪ್ತಾಪ್ರಾಪ್ತಿಗಳಲ್ಲಿ ಸಮ ಬುದ್ಧಿ ಹೊಂದಿರುವವನು (ಕಾರ್ಯಸಿದ್ಧಿಸಿದರೂ ಸಿದ್ಧಿಸದಿದ್ದರೂ ಸಮಭಾವದಿಂದಿರುವವನು) ಇಂತಹ ಮನುಷ್ಯನು ಕರ್ಮವನ್ನು ಮಾಡಿದರೂ ಬಂಧನಕ್ಕೊಳಗಾಗುವುದಿಲ್ಲ.

**ವ್ಯಾಖ್ಯೆ:** ಹಿಂದಿನ ಶ್ಲೋಕದಂತೆಯೇ ಕರ್ಮವನ್ನಾಚರಿಸುತ್ತಿದ್ದರೂ ಸಹ ಅದರಿಂದ ಬಂಧಿಸಲ್ಪಡದೆ ಉಳಿಯುವವನ ಲಕ್ಷಣಗಳನ್ನು ಇಲ್ಲಿ ಮತ್ತೆ ಹೇಳಲಾಗಿದೆ. ಕರ್ಮಾನುಸಾರವಾಗಿ ಸಿಕ್ಕಿದ್ದರಲ್ಲಿ ಸಂತುಷ್ಟಿ ಹೊಂದುವುದು, ದ್ವಂದ್ವಗಳಿಗೆ ಲಕ್ಷ್ಯ ಕೊಡದೆ ಇರುವುದು, ಮಾತ್ಸರ್ಯವಿಲ್ಲದೆ ಇರುವುದು, ಕಾರ್ಯವು ಸಿದ್ಧಿಸಿದರೂ ಸಿದ್ಧಿಸದಿದ್ದರೂ ಸಮಭಾವದಿಂದಿರುವುದು; ಈ ನಾಲ್ಕು ಗುಣಗಳನ್ನು ಮತ್ತು ಹಿಂದಿನ ಶ್ಲೋಕದಲ್ಲಿ ತಿಳಿಸಲ್ಪಟ್ಟ ಮೂರು ಗುಣಗಳನ್ನು ಜ್ಞಾನಗುಣಗಳೆಂದು ಕರೆಯುವರು. ಇವು ಜೀವನ್ಮುಕ್ತನ ಲಕ್ಷಣಗಳೆಂದು ಸ್ಪಷ್ಟವಾಗಿ ಹೇಳಲಾಗಿದೆಯಾದ್ದರಿಂದ, ಜ್ಞಾನದಲ್ಲಿ ಚೆನ್ನಾಗಿ ಪ್ರಾವೀಣ್ಯ ಹೊಂದಿದ ಮೇಲೆಯೇ ಕರ್ಮವನ್ನು ಶುದ್ಧವಾಗಿ, ಬಂಧರಹಿತವಾಗಿ ಆಚರಿಸುವುದು ಸಾಧ್ಯವಾಗುವುದು ಎಂದು ಅರ್ಥವಾಗುತ್ತದೆ. ಜ್ಞಾನ, ಕರ್ಮ ಎನ್ನುವ ಈ ಎರಡೂ ಒಂದಕ್ಕೊಂದು ಪರಸ್ಪರ ಸಹಾಯಕವಾಗುತ್ತವೆ. ನಿಷ್ಕಾಮಕರ್ಮದ ದ್ವಾರ (ಚಿತ್ತಶುದ್ಧಿಯ ಮೂಲಕ) ಜ್ಞಾನವುಂಟಾಗುತ್ತದೆ. ಜ್ಞಾನವುಂಟಾದ ನಂತರವೇ ನಿಷ್ಕಾಮ ಕರ್ಮವನ್ನು ಆಚರಿಸಲು ಸಹಾಯವಾಗುತ್ತದೆ. ಬಹುಶಃ ಅದರಿಂದಲೇ ಕರ್ಮಯೋಗ (೩ನೆಯ ಅಧ್ಯಾಯ)ದಲ್ಲಿ ಅಖಂಡ ಜ್ಞಾನದ ಬಗ್ಗೆ, 'ಜ್ಞಾನಯೋಗ' (೪ನೆಯ ಅಧ್ಯಾಯ)ದ ಮಧ್ಯೆ ಕರ್ಮಾಚರಣೆಯ ಬಗ್ಗೆ ಬೋಧಿಸಲಾಗಿದೆ. ಮೇಲೆ ತಿಳಿಸಿದ ಜ್ಞಾನಗುಣಗಳನ್ನು ಹೊಂದಿದವರು ನಿರಂತರ ಸಮಭಾವ ಸ್ಥಿತಿಯಲ್ಲೇ ಇರುವರು, ಶರೀರಾದಿಗಳಿಂದ ಅವರು ಕರ್ಮಗಳನ್ನು ಮಾಡುತ್ತಿದ್ದರೂ ಅವುಗಳಿಗೆ ಅಂಟಿಕೊಳ್ಳದೆ, ಅಸಕ್ತರಾಗಿಯೇ ಇರುವರು. ಆದುದರಿಂದಲೇ ಅವರು ಆ ಕರ್ಮಗಳಿಂದ ಯಾವಾಗಲೂ ಬಂಧಿಸಲ್ಪಡುವುದಿಲ್ಲವೆಂದು ಭಗವಂತನು ಇಲ್ಲಿ ತಿಳಿಸುತ್ತಿದ್ದಾನೆ.

ಪ್ರ : ಕಾರ್ಯವನ್ನು ಮಾಡಿದ ನಂತರವೂ ಅವುಗಳಿಂದ ಯಾರು ಬಂಧಿಸಲ್ಪಡುವುದಿಲ್ಲ?

ಉ : ೧) ಅಪ್ರಯತ್ನದಿಂದ ಕರ್ಮಾನುಸಾರವಾಗಿ ಏನು ಲಭಿಸುತ್ತದೆಯೋ ಅದರಿಂದ ಸಂತುಷ್ಟರಾಗುವರು ೨) ಸುಖದುಃಖಾದಿ ದ್ವಂದ್ವಗಳನ್ನು ದಾಟಿದವರು ೩) ಮಾತ್ಸರ್ಯವಿಲ್ಲದವರು ೪) ಕಾರ್ಯದ ಸಿದ್ಧಾಸಿದ್ಧಿಗಳಲ್ಲಿ ಸಮಭಾವವಿರುವವರು.

**ಅ॥** ಕರ್ಮಗಳನ್ನು ಮಾಡಿಯೂ ಕರ್ಮರಾಹಿತ್ಯವನ್ನು ಯಾರು ಪಡೆಯಬಲ್ಲರು ಎನ್ನುವ ಬಗ್ಗೆ ಹೇಳಲಾಗುತ್ತಿದೆ-

**೨೩. ಗತಸಂಗಸ್ಯ ಮುಕ್ತಸ್ಯ ಜ್ಞಾನಾವಸ್ಥಿತಚೇತಸಃ**
**ಯಜ್ಞಾಯಾಚರತಃ ಕರ್ಮ ಸಮಗ್ರಂ ಪ್ರವಿಲೀಯತೇ**

**ಅರ್ಥ:** ಗತಸಂಗಸ್ಯ=ಯಾವುದರಲ್ಲಿಯೂ ಸಂಗ (ಆಸಕ್ತಿ)ಇಲ್ಲದವನು; ಮುಕ್ತಸ್ಯ=(ರಾಗ ದ್ವೇಷ ಕಾಮಕ್ರೋಧಾದಿರೂಪ) ಸಂಸಾರ ಬಂಧಗಳಿಂದ ಮುಕ್ತನಾದವನು; ಜ್ಞಾನಾವಸ್ಥಿತ ಚೇತಸಃ=ಆತ್ಮಜ್ಞಾನದಲ್ಲಿ ಸ್ಥಿರವಾಗಿರುವ ಮನಸ್ಸುಳ್ಳವನು; ಯಜ್ಞಾಯ=ಭಗವತ್ಪ್ರೀತ್ಯರ್ಥ, ಪರಪ್ರಾಣಿಹಿತಕ್ಕೋಸ್ಕರ, ಇಲ್ಲವೇ ಧರ್ಮಕ್ಕಾಗಿ; ಆಚರತಃ=ಕರ್ಮವನ್ನು ಆಚರಿಸುವ ಮನುಜನ; ಕರ್ಮ= ಕರ್ಮವು; ಸಮಗ್ರಂ=ಸಂಪೂರ್ಣವಾಗಿ; ಪ್ರವಿಲೀಯತೆ=ವಿಲೀನವಾಗಿ ಹೋಗುತ್ತದೆ (ಬಂಧಾದಿಗಳನ್ನು ಉಂಟುಮಾಡದೆ ನಶಿಸಿಹೋಗುತ್ತದೆ)

**ತಾ॥** ಯಾವುದರಲ್ಲಿಯೂ ಸಂಗ (ಆಸಕ್ತಿಯು) ಇಲ್ಲದವನು, ರಾಗದ್ವೇಷಕಾಮ ಕ್ರೋಧಾದಿ ರೂಪ ಸಂಸಾರ ಬಂಧಗಳಿಂದ ವಿಮುಕ್ತನಾದವನು, ಆತ್ಮಜ್ಞಾನದಲ್ಲೇ

---

* ಯಮ, ಅಹಿಂಸಾ, ಸತ್ಯ, ಅಸ್ತೇಯ(ಕಳ್ಳತನ ಮಾಡದೆ ಇರುವುದು), ಬ್ರಹ್ಮಚರ್ಯ, ಅಪರಿಗ್ರಹ

ಮನಸ್ಸನ್ನು ಸ್ಥಿರಗೊಳಿಸಿಕೊಂಡವನು, (ಭಗವತ್ಪ್ರೀತ್ಯರ್ಥ, ಪರಪ್ರಾಣಿ ಹಿತಾರ್ಥವಾಗಿ, ಇಲ್ಲವೇ ಧರ್ಮ ನಿಮಿತ್ತವಾಗಿ) ಕರ್ಮವನ್ನು ಆಚರಿಸುತ್ತಿದ್ದರೂ ಅವನ ಕರ್ಮಗಳೆಲ್ಲವೂ ವಿಲೀನವಾಗಿ ಹೋಗುತ್ತವೆ (ಜನ್ಮ ಬಂಧಾದಿಗಳನ್ನು ಉಂಟುಮಾಡದೆ ನಷ್ಟವಾಗುವುವು).

**ವ್ಯಾಖ್ಯೆ:** "ಗತಸಂಗಸ್ಯ" ಸಂಗ (attachment)ದಿಂದ, ಫಲಾಸಕ್ತಿ ಯಿಂದ ಆಚರಿಸಿದಾಗ ಕರ್ಮ ಬಂಧವನ್ನುಂಟುಮಾಡುವುದು. ಜನ್ಮಕ್ಕೆ ಕಾರಣವಾಗುವುದು. ಸಂಗರಹಿತವಾಗಿ, ಫಲಾಭಿಲಾಷಾವರ್ಜಿತವಾಗಿ ಆಚರಿಸಿದಾಗ ಆ ಕರ್ಮವೇ ಜೀವನ್ಮುಕ್ತಿಗೆ ದಾರಿ ಮಾಡಿಕೊಡುವುದು.

ಪ್ರಪಂಚದಲ್ಲಿ ಅನೇಕ ಕೋಟಿ ಜೀವರಾಶಿಗಳಿದ್ದಾಗ್ಯೂ, ಈ ಶ್ಲೋಕದಲ್ಲಿ ಹೇಳಲ್ಪಟ್ಟ ನಾಲ್ಕು ಲಕ್ಷಣಗಳುಳ್ಳವರ ಕರ್ಮವೇ ವಿಜಯವಾಗುವುದಾಗಲೀ ಬೇರೆಯವರದಲ್ಲ. ಅವರು ಮಾತ್ರ ಕರ್ಮರಾಹಿತ್ಯವನ್ನು, ನೈಷ್ಕರ್ಮ್ಯ ಸ್ಥಿತಿಯನ್ನು ಹೊಂದುವರು. ಅವು ಯಾವುವೆಂದರೆ - ೧) ಸಂಗ (ವಿಷಯಾಸಕ್ತಿ, ಫಲಾಸಕ್ತಿ) ವಿಲ್ಲದೇ ಇರುವುದು. ೨) ರಾಗದ್ವೇಷಕಾಮಕ್ರೋಧಾದಿ ರೂಪಗಳಾದ ಸಂಸಾರ ಬಂಧನಗಳಿಂದ ಬಿಡುಗಡೆ ಹೊಂದುವುದು. ೩) ಆತ್ಮ ಜ್ಞಾನದಲ್ಲೇ ಯಾವಾಗಲೂ ಚಿತ್ತವನ್ನು ಸ್ಥಿರವಾಗಿಡುವುದು. ೪) ಭಗವತ್ಪ್ರೀತ್ಯರ್ಥ, ಪರಹಿತಾರ್ಥಗಳಿಗಾಗಿ ಕರ್ಮ ಮಾಡುವುದು.

"*ಜ್ಞಾನಾವಸ್ಥಿತ ಚೇತಸಃ*"- ಜ್ಞಾನದಲ್ಲಿ ಸದಾ ಸ್ಥಿರಗೊಂಡಿರುವ ಚಿತ್ತವನ್ನು ಹೊಂದಿರುವವನ ಕರ್ಮಗಳು ನಶಿಸಿಹೋಗುವವೆಂದು ಹೇಳಲಾಗಿದೆ. ಅಂತಹವರು ಎಷ್ಟು ಕರ್ಮಗಳನ್ನಾಚರಿಸಿದರೂ ಅವೆಲ್ಲವೂ ಆ ಜ್ಞಾನಸಾಗರದಲ್ಲಿ ವಿಲೀನವಾಗಿ ಹೋಗುವುವು ಎಂದರ್ಥ. ಆದ್ದರಿಂದ ಕರ್ಮರಾಹಿತ್ಯಕ್ಕೆ ಜ್ಞಾನವು ಅತ್ಯಾವಶ್ಯಕವೆಂದು ಈ ಶ್ಲೋಕದ ದ್ವಾರ ತಿಳಿಯುತ್ತಿದೆ. ಜ್ಞಾನವಿಲ್ಲದವನ ಚಿತ್ತ ದೃಶ್ಯವನ್ನು ಸತ್ಯವೆಂದು ತಿಳಿದು, ಅದರಲ್ಲೇ ಮುಳುಗಿ, ಸಂಗವಂತನಾಗಿ, ಕರ್ತೃತ್ವಾದಿಗಳನ್ನು ಹೊಂದಿರುತ್ತಾನಾದ್ದರಿಂದ, ಅವನ ಕರ್ಮಗಳು ನಶಿಸದೆ ಬಂಧವನ್ನೇ ಉಂಟು ಮಾಡುತ್ತವೆ.

"*ಯಜ್ಞಾಯಾಚರತಃ*" '**ಯಜ್ಞಾರ್ಥಾತ್ಕರ್ಮಣೋಽನ್ಯತ್ರ ಲೋಕೋಽಯಂ ಕರ್ಮಬಂಧನಃ**' ಅಂದರೆ ಯಜ್ಞ(ದೈವ, ಧರ್ಮ, ಪರಹಿತ)ವಲ್ಲದೆ ಉಳಿದ ಎಲ್ಲಾ ಕರ್ಮಗಳು ಬಂಧವನ್ನುಂಟು ಮಾಡುವವೆಂದು ಭಗವಂತನು ಈಗಾಗಲೇ (೩ನೆಯ ಅಧ್ಯಾಯದಲ್ಲಿ) ಹೇಳಿರುತ್ತಾನೆ.

"ಪ್ರವಿಲೀಯತೆ"- 'ಲೀಯತೆ' ಎಂದಾಗಲಿ 'ವಿಲೀಯತೆ' ಎಂದಾಗಲಿ ಹೇಳದೆ 'ಪ್ರವಿಲೀಯತೆ' ಎಂದು ಹೇಳಿರುವುದರಿಂದ ಅವರ ಕರ್ಮವು ಸ್ವಲ್ಪವೂ ಶೇಷವಾಗಿ ಉಳಿಯದೆ ಪೂರ್ತಿಯಾಗಿ ನಶಿಸಿ ಹೋಗುವುದೆಂದರ್ಥ. ಮತ್ತೆ 'ಸಮಗ್ರಂ' ಎನ್ನುವ ಪದವನ್ನು ಪ್ರಯೋಗಿಸಿರುವುದರಿಂದ ಸಂಚಿತಾದಿ ಕರ್ಮಗಳಾವುವೂ ಉಳಿಯದೆ ಒಟ್ಟಾರೆ ಎಲ್ಲಾ ಕರ್ಮಗಳು ಜ್ಞಾನಕುಂಡದಲ್ಲಿ ಆಹುತಿಯಾಗಿ ಹೋಗುವುವೆಂದು ಭಾವ.

ಸಾಧಕರಿಗೂ, ಭಕ್ತರಿಗೂ, ಮುಮುಕ್ಷುಗಳಿಗೂ ಈ ವ್ಯಾಖ್ಯೆಗಳಿಂದ ಪರಮ ಧೈರ್ಯವುಂಟಾಗುತ್ತದೆ. ಏಕೆಂದರೆ ಪ್ರತಿಯೊಬ್ಬರೂ ಅಪೇಕ್ಷಿಸುವುದು ಈ ಕರ್ಮರಾಹಿತ್ಯ ಹಾಗೂ ಬಂಧರಾಹಿತ್ಯವನ್ನೇ ಅಲ್ಲವೇ! ಆ ಮಹೋನ್ನತ ಸ್ಥಿತಿ ಯಾವ ಪ್ರಕಾರವಾಗಿ ಉಂಟಾಗುವುದೋ ಈ ಶ್ಲೋಕದಲ್ಲಿ ಸೂಚಿಸಲಾಗಿದೆ. ಕರ್ಮವನ್ನು ಮಾಡದೆ ಸುಮ್ಮನೆ ಕುಳಿತುಕೊಳ್ಳುವುದನ್ನು ಇಲ್ಲಿ ಉಪದೇಶಿಸಲಾಗಿಲ್ಲ. ಗೀತೆಯ ಆಶಯ ಅದಲ್ಲ. ಕರ್ಮ ಎಷ್ಟು ಮಾಡಿದರೂ ಅದು ಬಂಧಕರವಾಗದಿರುವ ಪದ್ಧತಿಯನ್ನು ಇಲ್ಲಿ ಕಲಿಸಲಾಗಿದೆ. ಆದ್ದರಿಂದ ಈ ನಾಲ್ಕು ಲಕ್ಷಣಗಳನ್ನು ಪ್ರತಿಯೊಬ್ಬರೂ ಅನುಷ್ಠಾನ ಮಾಡಿ ಕರ್ಮಬಂಧನದಿಂದ ವಿಮುಕ್ತರಾಗಬೇಕಾಗಿದೆ.

**ಅ॥** ಮೇಲೆ ತಿಳಿಸಿದ "ಯಜ್ಞ" - ಎನ್ನುವ ವಿಷಯವನ್ನು ಕುರಿತು ಏಳು ಶ್ಲೋಕಗಳ ಮೂಲಕ ವಿವರಣೆ ಕೊಡಲಾಗುತ್ತಿದೆ-

> ೨೪. ಬ್ರಹ್ಮಾರ್ಪಣಂ ಬ್ರಹ್ಮಹವಿಃ ಬ್ರಹ್ಮಾಗ್ನೌ ಬ್ರಹ್ಮಣಾ ಹುತಮ್
> ಬ್ರಹ್ಮೈವ ತೇನ ಗಂತವ್ಯಂ ಬ್ರಹ್ಮಕರ್ಮಸಮಾಧಿನಾ

**ಅರ್ಥ:** (ಯಜ್ಞದಲ್ಲಿ) ಅರ್ಪಣಂ=(ಸ್ರುಕ್, ಸ್ರುವಾದಿ ಮೊದಲಾದ) ಹೋಮಸಾಧನೆಗಳು; ಬ್ರಹ್ಮ=ಬ್ರಹ್ಮವೇ; ಹವಿಃ=(ಅನ್ನ, ತುಪ್ಪ ಮೊದಲಾದ) ಹೋಮ ದ್ರವ್ಯಗಳು; ಬ್ರಹ್ಮ=ಬ್ರಹ್ಮವೇ; ಬ್ರಹ್ಮಾಗ್ನೌ=ಬ್ರಹ್ಮರೂಪ ಅಗ್ನಿ; ಬ್ರಹ್ಮಣಾ=ಬ್ರಹ್ಮಸ್ವರೂಪನಾದ ಯಜಮಾನನಿಂದ; ಹುತಂ=ಮಾಡಲ್ಪಟ್ಟ ಹೋಮವು (ಬ್ರಹ್ಮೈವ=ಬ್ರಹ್ಮವೇ); ಬ್ರಹ್ಮಕರ್ಮಸಮಾಧಿನಾ=ಸರ್ವವೂ ಬ್ರಹ್ಮ ಸ್ವರೂಪವೇ ಎನ್ನುವ ಏಕಾಗ್ರಭಾವದಿಂದ ಆ ಯಜ್ಞಾದಿಕರ್ಮಗಳನ್ನು ಮಾಡುವ, ತೇನ=ಆತನ ಕ್ರಿಯೆಯಿಂದ (ಬ್ರಹ್ಮನಿಷ್ಠನಿಂದ); ಗಂತವ್ಯಂ=ಹೊಂದ ಬೇಕಾದ ಫಲವೂ; ಬ್ರಹ್ಮ ಏವ=ಬ್ರಹ್ಮವೇ ಆಗಿರುವುದು.

**ತಾ॥** ಯಜ್ಞಗಳಲ್ಲಿಯ ಹೋಮ ಸಾಧನೆಗಳು, ಹೋಮದ್ರವ್ಯಗಳು, ಹೋಮಾಗ್ನಿ, ಹೋಮವನ್ನು ಮಾಡುವವನು, ಹವನ - ಎಲ್ಲವೂ ಬ್ರಹ್ಮ ಸ್ವರೂಪಗಳೇ ಎನ್ನುವ ಏಕಾಗ್ರಭಾವದಿಂದ ಆ ಯಜ್ಞಾದಿಕರ್ಮಗಳನ್ನು ಮಾಡುವ ಮನುಜನು ಹೊಂದಲು ಯೋಗ್ಯವಾದ ಸ್ಥಾನವೂ ಕೂಡ ಬ್ರಹ್ಮವೇ ಆಗಿರುವುದು.

**ವ್ಯಾಖ್ಯೆ:** ಈ ಪ್ರಪಂಚದಲ್ಲಿ ಸಮಸ್ತವೂ ಬ್ರಹ್ಮಸ್ವರೂಪವೇ ಹೊರತು ಬೇರೆಯಲ್ಲ. ಈ ವಿಷಯವನ್ನು ಸದಾ ಜ್ಞಾಪಕದಲ್ಲಿಟ್ಟುಕೊಂಡು ಕರ್ಮ ಮಾಡಬೇಕು. ಅಂದರೆ ಚಿತ್ತದಲ್ಲಿ ಬ್ರಹ್ಮಭಾವನೆ, ದೈವಭಾವನೆ ಉಂಟಾಗಿ ಕರ್ಮ ಮಾಡಬೇಕು. ಆಗ ಆ ಕರ್ಮವು ಯಜ್ಞವಾಗಿ ರೂಪಾಂತರಗೊಳ್ಳುವುದು.

ಸಮಸ್ತವೂ ಬ್ರಹ್ಮಸ್ವರೂಪವು ಹೇಗೆಂದರೆ, ಈ ನಾಮರೂಪಾತ್ಮಕ ಜಗತ್ತೆಲ್ಲವೂ ಬ್ರಹ್ಮದಲ್ಲಿ ಮಿಥ್ಯೆಯಾಗಿ ಆರೋಪಿಸಲ್ಪಟ್ಟಿದೆ. ಆರೋಪಿತ ವಸ್ತುವು ಅಧಿಷ್ಠಾನಕ್ಕಿಂತ ಬೇರೆಯಲ್ಲ. ಭ್ರಾಂತಿಯಿಂದ ಹಗ್ಗದಲ್ಲಿ ಸರ್ಪವನ್ನು ಕಲ್ಪಿಸಿಕೊಂಡಂತೆ. ಆ ಕಲ್ಪಿತ ಸರ್ಪವು (ಹಗ್ಗ) ರಜ್ಜುವಿಗಿಂತ ಭಿನ್ನವಾದುದಲ್ಲ. ಹಗ್ಗದ ಸ್ವರೂಪವೇ ಆಗಿರುವುದು. ಹಾಗೆಯೇ ಅಜ್ಞಾನದಿಂದ ಈ ಜಗತ್ತನ್ನು ಬ್ರಹ್ಮನಲ್ಲಿ ಆರೋಪಿಸಲಾಗಿದೆ. ಆರೋಪಿತ ವಸ್ತುವು ಅಧಿಷ್ಠಾನಕ್ಕಿಂತ ಬೇರೆಯಾಗಿರಲು ಸಾಧ್ಯವಿಲ್ಲ. ಆದ್ದರಿಂದ ಈ ಜಗತ್ತು ಬ್ರಹ್ಮಸ್ವರೂಪವೇ. ಜಗತ್ತಿನಲ್ಲಿಯ ಪ್ರತಿವಸ್ತುವೂ ಪ್ರತಿಕಾರ್ಯವೂ ಬ್ರಹ್ಮಸ್ವರೂಪವೇ. ಈ ಸತ್ಯವನ್ನೇ ಈ ಶ್ಲೋಕದಲ್ಲಿ ನಿರೂಪಿಸಲಾಗಿದೆ.

ಇಲ್ಲಿ ಯಜ್ಞದಲ್ಲಿ ಹೋಮವೆನ್ನುವ ಕ್ರಿಯೆಯನ್ನು ದೃಷ್ಟಾಂತವಾಗಿ ತೆಗೆದುಕೊಳ್ಳಲಾಗಿದೆ. ಪೂರ್ವಕಾಲದಲ್ಲಿ ಅದರಲ್ಲೂ ಮುಖ್ಯವಾಗಿ ದ್ವಾಪರಯುಗದಲ್ಲಿ ಯಜ್ಞಯಾಗಾದಿಗಳು ವಿಶೇಷವಾಗಿ ನಡೆಯುತ್ತಿದ್ದ ವಾದ್ದರಿಂದ 'ಹೋಮ ಕಾರ್ಯ' ಎಲ್ಲರಿಗೂ ತಿಳಿದ ವಿಷಯವಾದ್ದರಿಂದ ಅದನ್ನೇ ಇಲ್ಲಿ ಭಗವಂತನು ದೃಷ್ಟಾಂತವಾಗಿ ತೆಗೆದುಕೊಂಡಿದ್ದಾನೆ ಇದರಿಂದ ಹೋಮದ ಬಗ್ಗೆ ಇಲ್ಲಿ ವಿಶೇಷವಾಗಿ ಹೇಳಲಾಗಿದ್ದರೂ ಸಮಸ್ತ ಕಾರ್ಯಗಳನ್ನು

ಆ ಪ್ರಕಾರವಾಗಿಯೇ ಊಹಿಸಿಕೊಳ್ಳಬೇಕು. ಇಲ್ಲಿ ಹೋಮ ಮಾಡುವ ಯಜಮಾನ, ಹವಿಸ್ಸು, ಅಗ್ನಿ- ಎಲ್ಲವೂ ಬ್ರಹ್ಮಸ್ವರೂಪಗಳೇ ಹೇಗೋ ಹಾಗೆಯೇ ಪ್ರತಿಕಾರ್ಯದಲ್ಲೂ ಮಾಡುವವನು, ಮಾಡಲ್ಪಟ್ಟದ್ದು ಎಲ್ಲವೂ ಬ್ರಹ್ಮ ಸ್ವರೂಪಗಳೇ ಆಗುವುವು. **'ಸರ್ವಂಖಲ್ವಿದಂಬ್ರಹ್ಮ'** (ಛಾಂದೋಗ್ಯ- III-14-1) ಎಂದು ಛಾಂದೋಗ್ಯೋಪನಿಷತ್ತು ತಿಳಿಸಿದ ಹಾಗೆ ಈ ಸಮಸ್ತವೂ ಬ್ರಹ್ಮವೇ ಎನ್ನುವ ಭಾವದಿಂದ ಜಗತ್ತಿನಲ್ಲಿ ನಡೆಯುವವನು ಧನ್ಯ.

'ಸಮಾಧಿನಾ'- ಎಂದು ಹೇಳಲ್ಪಟ್ಟಿರುವುದರಿಂದ ಏಕಾಗ್ರಚಿತ್ತದಿಂದ, ಅಂದರೆ ಬ್ರಹ್ಮಭಾವವನ್ನು ಬಿಡದೆ ಆಯಾ ಕರ್ಮಗಳನ್ನಾಚರಿಸಬೇಕೆಂದು ಉದ್ಬೋಧಿಸಲಾಗಿದೆ. ಅಲ್ಲಿ ಕರ್ಮ ಕರ್ಮವಾಗಿ ಉಳಿಯದೆ ಧ್ಯಾನ ವಾಗಿಯೂ, ಸಮಾಧಿಯಾಗಿಯೂ ಪರಿವರ್ತನೆಗೊಳ್ಳುವುದು. ಕರ್ಮ ಯಾವ ಪ್ರಕಾರ ಜ್ಞಾನರೂಪದಲ್ಲಿ ಪರಿವರ್ತನೆಗೊಳ್ಳಬಲ್ಲದು ಎನ್ನುವುದನ್ನು ಇಲ್ಲಿ ಹೇಳಲಾಗಿದೆ. ಬ್ರಹ್ಮಭಾವದಿಂದ ಏಕಾಗ್ರ ದೈವಭಾವನೆಯಿಂದ ಕರ್ಮ ಮಾಡಿದರೆ ಆ ಕರ್ಮ ತನ್ನ ಕರ್ಮತ್ವವನ್ನು ಕಳೆದುಕೊಂಡು ಜ್ಞಾನರೂಪವನ್ನು, ಸಮಾಧಿರೂಪವನ್ನು ಹೊಂದಬಲ್ಲದು.

ಈ ಪ್ರಕಾರವಾಗಿ ಸಮಸ್ತವೂ ಬ್ರಹ್ಮವೇ ಎನ್ನುವ ನಿಶ್ಚಯವುಂಟಾಗಿ ಅಂತಹ ಬ್ರಹ್ಮಭಾವನೆಯಿಂದ ಕರ್ಮಮಾಡುವವನು ಹೊಂದುವ ಫಲವೇನು? 'ಬ್ರಹ್ಮೈವ ತೇನ ಗಂತವ್ಯಂ'- ಎಂದು ಹೇಳುವುದರಿಂದ ಅವನು ಬ್ರಹ್ಮವನ್ನೇ ಹೊಂದುವನೆಂದು ಸ್ಪಷ್ಟವಾಗಿ ತಿಳಿಸಲಾಗಿದೆ. ಮನುಜನು ನಿರಂತರವಾಗಿ ಯಾವುದನ್ನು ಕುರಿತು ಚಿಂತಿಸುತ್ತಿರುತ್ತಾನೋ, ಆ ಸ್ವರೂಪವೇ ಆಗುವನು. ಕಾರ್ಯಗಳಲ್ಲಿ ನಿರಂತರ ಬ್ರಹ್ಮಭಾವನೆ ಹೊಂದುವುದರಿಂದ ಮನುಜನು ಬ್ರಹ್ಮವೇ ಆಗುತ್ತಿದ್ದಾನೆ. ಸಾಮಾನ್ಯವಾದ ಕರ್ಮ ಜೀವಿಗೆ ಯಾವ ಪ್ರಕಾರವಾಗಿ ಬ್ರಹ್ಮಪ್ರಾಪ್ತಿಗೆ ಕಾರಣವಾಗಬಹುದೆನ್ನುವುದನ್ನು ಈ ಶ್ಲೋಕ ಸ್ಪಷ್ಟೀಕರಿಸುತ್ತಿದೆ.

ಆದ್ದರಿಂದ ಯಾವ ಕಾರ್ಯವನ್ನಾದರೂ ಪ್ರಾರಂಭಿಸುವುದಕ್ಕಿಂತ ಮುಂಚೆ ಈ ಶ್ಲೋಕವನ್ನು ಪಠಿಸಿ ಶ್ಲೋಕಾರ್ಥವನ್ನು ಚೆನ್ನಾಗಿ ಮನನ ಮಾಡುವುದರಿಂದ ಬ್ರಹ್ಮಭಾವನೆಯಿಂದ ಸತ್ಫಲಿತಗಳು ತಪ್ಪದೆ ಉಂಟಾಗುವುವು. ಕೆಲವರು ಭೋಜನ ಮಾಡುವಾಗ ಈ ಶ್ಲೋಕವನ್ನು ಪಠಿಸುವ ಆಚಾರವಿದೆ.

**ಅ॥** ವಿವಿಧ ಯಜ್ಞಗಳನ್ನು ತಿಳಿಸಲಾಗುತ್ತಿದೆ-

**೨೫. ದೈವಮೇವಾಪರೇ ಯಜ್ಞಂ ಯೋಗಿನಃ ಪರ್ಯುಪಾಸತೇ**
**ಬ್ರಹ್ಮಾಗ್ನಾವಪರೇ ಯಜ್ಞಂ ಯಜ್ಞೇನೈವೋಪಜುಹ್ವತಿ**

**ಅರ್ಥ:** ಅಪರೇ=ಕೆಲವರು; ಯೋಗಿನಃ=ಯೋಗಿಗಳು; ದೈವಮ್=ದೇವತೆಗಳನ್ನುದ್ದೇಶಿಸಿದಂತಹ (ದೇವತಾರಾಧನರೂಪವಾದ); ಯಜ್ಞಮ್ ಏವ=ಯಜ್ಞವನ್ನೇ; ಪರ್ಯುಪಾಸತೇ=ಅನುಷ್ಠಾನ ಮಾಡುತ್ತಿದ್ದಾರೆ; ಅಪರೇ=ಮತ್ತೆ ಕೆಲವರು; ಯಜ್ಞೇನೈವ=ಜೀವಬ್ರಹ್ಮೈಕ್ಯಭಾವದಿಂದ; ಯಜ್ಞಮ್=ಜೀವಿಯನ್ನು (ಚಿತ್ತ) ಬ್ರಹ್ಮಾಗ್ನೌ=ಬ್ರಹ್ಮವೆನ್ನುವ ಅಗ್ನಿಯಲ್ಲಿ; ಉಪಜುಹ್ವತಿ=ಹೋಮವನ್ನು ಮಾಡುತ್ತಿದ್ದಾರೆ.

**ತಾ॥** ಕೆಲವರು ಯೋಗಿಗಳು ದೇವತಾರಾಧನರೂಪವಾದ ಯಜ್ಞವನ್ನು ಅನುಷ್ಠಾನ ಮಾಡುತ್ತಿದ್ದಾರೆ. ಮತ್ತೆ ಕೆಲವರು ಜೀವಬ್ರಹ್ಮೈಕ್ಯಭಾವನೆಯಿಂದ ಕೂಡಿ ಜೀವಿಯನ್ನು (ಅವರ ಚಿತ್ತವನ್ನು) ಪರಬ್ರಹ್ಮವೆನ್ನುವ ಅಗ್ನಿಯಲ್ಲಿ ಹೋಮವನ್ನು ಮಾಡುತ್ತಿದ್ದಾರೆ. (ಆಹುತಿಯನ್ನು ಕೊಡುತ್ತಿದ್ದಾರೆ).

**ವ್ಯಾಖ್ಯೆ:** ಯಜ್ಞಕ್ಕಾಗಿ ಕರ್ಮವನ್ನಾಚರಿಸುವವನ ಕರ್ಮವು ಪರಿಪೂರ್ಣವಾಗಿ ವಿಲೀನವಾಗಿ ಹೋಗುವುದೆಂದು ೨೩ನೆಯ ಶ್ಲೋಕದಲ್ಲಿ ತಿಳಿಸಲಾಗಿದೆ. ಇನ್ನು ಆ ಯಜ್ಞದ ವಿವಿಧ ವಿಧಗಳನ್ನು ಹೇಳಲಾಗಿದೆ- ಕೆಲವರು ೧) ದೈವಯಜ್ಞವನ್ನು ಆಚರಿಸುವರು, ಅಂದರೆ ದೇವತಾರಾದನೆ, ದೇವತೋಪಾಸನೆ, ದೇವತಾಧ್ಯಾನ, ದೇವತ ಕೈಂಕರ್ಯ, ದೇವತಾ ಪ್ರಾರ್ಥನೆ ಇತ್ಯಾದಿ ಕಾರ್ಯಗಳನ್ನು ಆಚರಿಸುತ್ತಾರೆ. ಇವರು ಕರ್ಮ ಯೋಗಿಗಳು, ಇಲ್ಲವೆ ಭಕ್ತಿಯೋಗಿಗಳೆಂದು ಹೇಳಬಹುದು.

೨) ಮತ್ತೆ ಕೆಲವರು, ಬ್ರಹ್ಮೈಕ್ಯ ಭಾವದಿಂದ ಚಿತ್ತವನ್ನು (ಜೀವಿಯ) ಬ್ರಹ್ಮವೆನ್ನುವ ಅಗ್ನಿಯಲ್ಲಿ ಆಹುತಿ ಮಾಡುತ್ತಿದ್ದಾರೆ. ಅಗ್ನಿ ಸಮಸ್ತವನ್ನೂ ಭಕ್ಷಿಸಿ ತನ್ನಲ್ಲಿ ವಿಲೀನಗೊಳಿಸಿಕೊಳ್ಳುತ್ತದೆ. ಹಾಗೆಯೇ ಬ್ರಹ್ಮದಲ್ಲಿ ದೃಶ್ಯ ವಸ್ತುಗಳೆಲ್ಲವೂ ಲೀನವಾಗಿ ಹೋಗುವುವು. ಚಿತ್ತವು (ಜೀವಿಯು) ಕೂಡ ದೃಶ್ಯದಂತರ್ಭಾವ ವಾಗಿರುವುದರಿಂದ, ಜೀವಬ್ರಹ್ಮೈಕ್ಯ ಭಾವನೆಯಿಂದ ಮಹನೀಯರು ಅದನ್ನು ಬ್ರಹ್ಮವೆನ್ನುವ ಅಗ್ನಿಯಲ್ಲಿ (ಆತ್ಮದಲ್ಲಿ) ಹೋಮ ಮಾಡುತ್ತಿದ್ದಾರೆ. ಅಂದರೆ ಲಯಗೊಳಿಸುತ್ತಿದ್ದಾರೆ. ಇದೇ ಬ್ರಹ್ಮಯಜ್ಞ, ಇದನ್ನು ಆಚರಿಸುವವರನ್ನು ಜ್ಞಾನಯೋಗಿಗಳೆಂದು ಕರೆಯುವರು. ಈ ರೀತಿ ಯಜ್ಞವನ್ನು ಆಚರಿಸುವವರು (ಭ್ರಮರ ಕೀಟ ನ್ಯಾಯದಂತೆ) ಬ್ರಹ್ಮದಲ್ಲಿ ಐಕ್ಯವನ್ನು ಹೊಂದುತ್ತಿದ್ದಾರೆ. ಯಾವ ವಸ್ತುವನ್ನು ಅಗ್ನಿಯಲ್ಲಿ ಹಾಕಿದರೂ ಅದು ಅಗ್ನಿರೂಪವೇ ಆಗುವುದು. ಹಾಗೆಯೇ ಬ್ರಹ್ಮದಲ್ಲಿ ಬೇಯಿಸಲ್ಪಟ್ಟ ಮನಸ್ಸು (ಜೀವಿಯು) ಬ್ರಹ್ಮವನ್ನೇ ಹೊಂದುವುದು. ಅದೇ ಮೋಕ್ಷ ಸ್ಥಿತಿ. ಆತ್ಮವಿಚಾರಣೆಯಿಂದ, ವಿಷಯ ವಿರಕ್ತಿಯಿಂದ ತನ್ನಲ್ಲಿಯ ವಾಸನೆಗಳು, ದೃಶ್ಯ ಸಂಸ್ಕಾರಗಳು ನಿರ್ಮೂಲವಾಗಿ ತದ್ವಾರ ಉಂಟಾಗುವ ಶುದ್ಧ ಸಾತ್ವಿಕ ಚಿತ್ತವು ಬ್ರಹ್ಮದಲ್ಲಿ ವಿಲೀನವಾಗಿ ಹೋಗುವುದು. ಅದನ್ನೇ ಬ್ರಹ್ಮಯಜ್ಞವೆನ್ನುವರು.

ಪ್ರ : ಯಜ್ಞಗಳಲ್ಲಿ ಕೆಲವುಗಳನ್ನು ಹೆಸರಿಸುವುದು?

೧) ದೈವಯಜ್ಞ(ದೇವತಾರಾಧನೆ, ದೇವತೋಪಾಸನೆ- ಇತ್ಯಾದಿ ಯಜ್ಞಗಳು)

೨) ಬ್ರಹ್ಮಯಜ್ಞ(ವಿಚಾರಣೆಯಿಂದ, ಪವಿತ್ರತೆಯಿಂದ, ಚಿತ್ತವನ್ನು ಬ್ರಹ್ಮದಲ್ಲಿ ಅಂದರೆ ಆತ್ಮದಲ್ಲಿ ಲೀನಮಾಡುವುದು).

**೨೬. ಶ್ರೋತ್ರಾದೀನೀಂದ್ರಿಯಾಣ್ಯನ್ಯೇ ಸಂಯಮಾಗ್ನಿಷು ಜುಹ್ವತಿ**
**ಶಬ್ದಾದೀನ್ವಿಷಯಾನನ್ಯ ಇಂದ್ರಿಯಾಗ್ನಿಷು ಜುಹ್ವತಿ**

**ಅರ್ಥ:** ಅನ್ಯೇ=ಕೆಲವರು; ಶ್ರೋತ್ರಾದೀನಿ=ಕೇಳುವ (ಕಿವಿ ಮುಂತಾದುವು) ಇಂದ್ರಿಯಾಣಿ=ಇಂದ್ರಿಯಗಳು; ಸಂಯಮಾಗ್ನಿಷು=ನಿಗ್ರಹವೆನ್ನುವ ಅಗ್ನಿಗಳಲ್ಲಿ; ಜುಹ್ವತಿ=ಹೋಮವನ್ನು ಮಾಡುತ್ತಿದ್ದಾರೆ; ಅನ್ಯೇ=ಮತ್ತೆ ಕೆಲವರು; ಶಬ್ದಾದೀನ್=ಶಬ್ದ ಮೊದಲಾದ; ವಿಷಯಾನ್=ವಿಷಯಗಳನ್ನು, ಇಂದ್ರಿಯಾಗ್ನಿಷು=ಇಂದ್ರಿಯಗಳೆನ್ನುವ ಅಗ್ನಿಗಳಲ್ಲಿ; ಜುಹ್ವತಿ=ಹೋಮ ಮಾಡುತ್ತಿದ್ದಾರೆ.

**ತಾ॥** ಕೆಲವರು ಕಿವಿ ಮೊದಲಾದ ಇಂದ್ರಿಯಗಳನ್ನು ನಿಗ್ರಹವೆಂಬ ಅಗ್ನಿಯಲ್ಲಿ ಮತ್ತೆ ಕೆಲವರು ಶಬ್ದಾದಿ ವಿಷಯಗಳನ್ನು ಇಂದ್ರಿಯಗಳೆಂಬ ಅಗ್ನಿಗಳಲ್ಲಿ ಹೋಮ ಮಾಡುತ್ತಿದ್ದಾರೆ.

**ವ್ಯಾಖ್ಯೆ:** ೧) ಇಂದ್ರಿಯ ನಿಗ್ರಹ ೨) ಶಬ್ದಾದಿ ವಿಷಯ ತ್ಯಾಗ- ಎನ್ನುವ ಎರಡನ್ನೂ ಯಜ್ಞಗಳೆಂದು ಇಲ್ಲಿ ಕರೆಯಲಾಗಿದೆ.

ಇಂದ್ರಿಯ ನಿಗ್ರಹವು ಆಧ್ಯಾತ್ಮ ಶಾಸ್ತ್ರದಲ್ಲಿ ಪ್ರಾಮುಖ್ಯ ಸ್ಥಾನವನ್ನು ಆಕ್ರಮಿಸಿಕೊಂಡಿದೆ. ಮೋಕ್ಷ ಸೌಧವನ್ನು ಏರಲು ಅದು (Ladder) ಏಣಿಯಂತಹದು. ಆದ್ದರಿಂದಲೇ ಇದರ ಬಗ್ಗೆ ಎರಡನೆಯ, ಮೂರನೆಯ ಅಧ್ಯಾಯಗಳಲ್ಲಿ ಭಗವಂತನು ವಿಪುಲವಾಗಿ ಬೋಧಿಸಿದ್ದಾನೆ. **'ತಸ್ಮಾತ್ತ್ವ ಮಿಂದ್ರಿಯಾಣ್ಯಾದೌ ನಿಯಮ್ಯ ಭರತರ್ಷಭ'**- ಎಂದು ಹೇಳುತ್ತ ಇಂದ್ರಿಯ ನಿಗ್ರಹವನ್ನೇ ಪ್ರಥಮ ಸಾಧನೆಯಾಗಿ ಶ್ರೀ ಕೃಷ್ಣಮೂರ್ತಿ ಸೂಚಿಸಿದನು. ಇಂದ್ರಿಯಗಳನ್ನು ನಿರೋಧಿಸದೆ ಹೇಳುವ ವೇದಾಂತ ವಚನಗಳು ನಿರ್ವೀರ್ಯ ಹಾಗೂ ನಿಸ್ತೇಜಗಳಾದವುಗಳಾಗುತ್ತವೆ. ಅದು 'ವಾಚಾವೇದಾಂತ'ವೇ ಆಗುತ್ತದೆ. ಇಂದ್ರಿಯಗಳನ್ನು ಜಯಿಸಿ ಮಾತನಾಡದೇ ಇದ್ದರೂ ಅಂತಹ ಸಂಯಮಶೀಲನಿಂದ ವೇದಾಂತ ಬೋಧೆ ದಿಗಂತದಲ್ಲಿ ಪ್ರಸರಿಸುತ್ತಿರುತ್ತದೆ. ಮಹೋನ್ನತವಾದ ಆ ನಿಗ್ರಹರೂಪ ಸಾಧನೆಯನ್ನು ಒಂದು ಯಜ್ಞವೆಂದು ಇಲ್ಲಿ ವರ್ಣಿಸಲಾಗಿದೆ. ಮೋಕ್ಷವನ್ನು ಹೊಂದಬೇಕೆಂದರೆ ಮನಸ್ಸನ್ನು ನಿಗ್ರಹಿಸಬೇಕು. ಮನಸ್ಸನ್ನು ನಿಗ್ರಹಿಸಬೇಕೆಂದರೆ ಇಂದ್ರಿಯಗಳನ್ನು ನಿರೋಧಿಸಬೇಕು. ಆದ್ದರಿಂದ ಮುಮುಕ್ಷುವಿಗೆ ಇಂದ್ರಿಯ ನಿಗ್ರಹ ಬಹಳ ಅತ್ಯಾವಶ್ಯಕವಾಗಿದೆ. ಅನೇಕ ವ್ರತಗಳ, ಸಂಯಮಗಳ ಹಾಗು ನಿಯಮಗಳ ಮೂಲಕ ಇಂದ್ರಿಯಗಳೆಲ್ಲವನ್ನೂ ಸ್ವಾಧೀನಗೊಳಿಸಿಕೊಳ್ಳಬೇಕು. ಸಂಯಮವೆನ್ನುವ ಅಗ್ನಿಯಲ್ಲಿ ಇಂದ್ರಿಯಗಳನ್ನು ಹೋಮ ಮಾಡುವುದೆಂದರೆ ಇದೇ. ಅನೇಕ ಇಂದ್ರಿಯಗಳಿರುವುದರಿಂದ ಒಂದೊಂದನ್ನು ಬಿಡಿಬಿಡಿಯಾಗಿ ಸಂಯಮಗೊಳಿಸಬೇಕೆಂದು ತಿಳಿಸಲೆಂದು 'ಇಂದ್ರಿಯಾಗ್ನಿಗಳು' ಎನ್ನುವ ಬಹುವಚನ ಪ್ರಯೋಗ ಮಾಡಲ್ಪಟ್ಟಿದೆ.

ಇನ್ನು ಎರಡನೆಯ ಯಜ್ಞವಾದ ಶಬ್ದಾದಿ ವಿಷಯನಿರೋಧವೂ ಸಹ ಮೇಲಿನ ಯಜ್ಞದಂತೆಯೇ ಇರುವುದು. ಇಂದ್ರಿಯಗಳು ಶಬ್ದಾದಿ ವಿಷಯಗಳೆಂಬ ಕ್ಷೇತ್ರಗಳಲ್ಲಿ ಸಂಚರಿಸುತ್ತಿರುವುವು. ಆಯಾ ವಿಷಯಗಳಲ್ಲಿಯ ದೋಷಗಳನ್ನು ವಿಚಾರಿಸಿ ಅವುಗಳ ಮೇಲಿನ ಪ್ರೀತಿಯನ್ನು ಬಿಡಬೇಕು. ಈ ರೀತಿ ಮಾಡುವುದರಿಂದ ವಿಷಯಗಳೆಂಬ ಹವಿಸ್ಸನ್ನು ಇಂದ್ರಿಯಗಳೆಂಬ ಅಗ್ನಿಯಲ್ಲಿ ಹೋಮ ಮಾಡಿದಂತೆ ಆಗುವುದು. ವಿಷಯಗಳಲ್ಲಿಯ ದೋಷವನ್ನು ನೋಡುವುದರಿಂದ ಇಂದ್ರಿಯಗಳು ಅವುಗಳ ಕಡೆಗೆ ಓಡದೆ ನಿಲ್ಲುವುವು. ಇಂದ್ರಿಯಗಳು ಯಾವಾಗ ನಿಶ್ಚಲವಾಗಿರುವುವೋ ಆಗ ದ್ರಷ್ಟನಾದ ಜೀವಿಯು ಸ್ವಸ್ವರೂಪವಾದ ಆತ್ಮದಲ್ಲಿ ಸ್ಥಿರತೆಯನ್ನು ಹೊಂದುವನು. ಅದನ್ನೇ ಮೋಕ್ಷವೆನ್ನುವರು.

ಪ್ರ : ಮತ್ತೆ ಕೆಲವು ಯಜ್ಞಗಳ ಉದಾಹರಣೆಗಳನ್ನು ಕೊಡುವುದು?

ಉ : ೧) ಇಂದ್ರಿಯನಿಗ್ರಹಣೆ ೨) ವಿಷಯತ್ಯಾಗ

**೨೭. ಸರ್ವಾಣೀಂದ್ರಿಯಕರ್ಮಾಣಿ ಪ್ರಾಣಕರ್ಮಾಣಿ ಚಾಪರೇ**
**ಆತ್ಮಸಂಯಮಯೋಗಾಗ್ನೌ ಜುಹ್ವತಿ ಜ್ಞಾನದೀಪಿತೇ**

**ಅರ್ಥ:** ಅಪರೇ=ಮತ್ತೆ ಕೆಲವರು; ಸರ್ವಾಣಿ=ಸಮಸ್ತವಾದ; ಇಂದ್ರಿಯ ಕರ್ಮಾಣಿ=ಇಂದ್ರಿಯ ವ್ಯಾಪಾರಗಳನ್ನು; ಪ್ರಾಣ ಕರ್ಮಾಣಿ ಚ=ಪಂಚ ಪ್ರಾಣಗಳ ವ್ಯಾಪಾರಗಳನ್ನು; ಜ್ಞಾನದೀಪಿತೆ=ಜ್ಞಾನದಿಂದ ಪ್ರಕಾಶಿಸಲ್ಪಟ್ಟ; ಆತ್ಮಸಂಯಮ ಯೋಗಾಗ್ನೌ=ಮನೋನಿಗ್ರಹವೆನ್ನುವ ಯೋಗದ (ಸಮಾಧಿ ಯೋಗದ) ಅಗ್ನಿಯಲ್ಲಿ; ಜುಹ್ವತಿ=ಹೋಮ ಮಾಡುತ್ತಿದ್ದಾರೆ.

**ತಾ||** ಮತ್ತೆ ಕೆಲವರು ಇಂದ್ರಿಯಗಳ ಹಾಗು ಪ್ರಾಣಗಳ ವ್ಯಾಪಾರಗಳೆಲ್ಲವನ್ನು ಜ್ಞಾನದಿಂದ ಪ್ರಕಾಶಿಸಲ್ಪಟ್ಟ 'ಮನೋನಿಗ್ರಹ'ವೆನ್ನುವ ಯೋಗದ (ಸಮಾಧಿಯೋಗ) ಅಗ್ನಿಯಲ್ಲಿ ಹೋಮ ಮಾಡುತ್ತಿದ್ದಾರೆ.

**ವ್ಯಾಖ್ಯೆ:** ಮೋಕ್ಷಪ್ರಾಪ್ತಿಗೆ ಮನಸ್ಸು ಅಡ್ಡವಾಗಿದೆ. ಅದು ಅನೇಕ ಜನ್ಮಾಂತರ ದುಃಸಂಸ್ಕಾರಗಳಿಂದ ಕೂಡಿ ಮಹಾಪ್ರಬಲವಾಗಿದೆ. ಅದನ್ನು ನಿಗ್ರಹಿಸಬೇಕಾದರೆ ಇಂದ್ರಿಯ ನಿರೋಧ, ಪ್ರಾಣಾಯಾಮ ಮುಂತಾದುವು ಅವಶ್ಯಕ. ಏಕೆಂದರೆ ಮನಸ್ಸನ್ನು ಯಾರೂ ಜಯಿಸಲಾರರು. ಆದ್ದರಿಂದ ಮನಸ್ಸಂಯಮಕ್ಕೆ ಸಹಾಯಕವಾಗಿ ಇಂದ್ರಿಯ ನಿಗ್ರಹ, ಪ್ರಾಣಾಯಾಮಗಳನ್ನು ಆಚರಿಸುತ್ತಿರಬೇಕು. ಈ ವಿಷಯವನ್ನೇ ಆಲಂಕಾರಿಕ ಭಾಷೆಯಲ್ಲಿ 'ಆತ್ಮ ಸಂಯಮ ಯೋಗವೆನ್ನುವ ಅಗ್ನಿಯಲ್ಲಿ ಇಂದ್ರಿಯ ಕರ್ಮಗಳು, ಪ್ರಾಣ ಕರ್ಮಗಳು ಬೇಯಿಸಲ್ಪಡುತ್ತಿವೆ' ಎಂದು ಇಲ್ಲಿ ತಿಳಿಸಲಾಗಿದೆ.

"ಜ್ಞಾನದೀಪಿತೇ"- ಎನ್ನುವ ಪದವನ್ನು ಚೆನ್ನಾಗಿ ಗಮನಿಸಬೇಕು. ಮನಸ್ಸಿನ ಸಂಯಮ ಹಾಗು ಮನೋ ನಿಗ್ರಹಗಳು ಆತ್ಮಜ್ಞಾನದಿಂದ ಚೆನ್ನಾಗಿ ಪ್ರಕಾಶಿಸುವುವು, ವೃದ್ಧಿಯಾಗಬಲ್ಲವು. ತತ್ತ್ವಜ್ಞಾನದ ಸಹಾಯವಿಲ್ಲದಿದ್ದಲ್ಲಿ ವಾಸನಾಕ್ಷಯ (ಮನೋನಿಗ್ರಹ) ಸಿದ್ಧಿಸುವುದು ಬಹಳ ಕಷ್ಟ. ಆದ್ದರಿಂದಲೇ 'ಜ್ಞಾನದೀಪಿತೇ'- 'ಜ್ಞಾನದಿಂದ ವೃದ್ಧಿ ಹೊಂದಲ್ಪಟ್ಟ ಮನೋನಿಗ್ರಹ' ಎಂದು ಇಲ್ಲಿ ಹೇಳಲಾಗಿದೆ. ಮನಸ್ಸಿನ ಸಂಯಮವು ಅಗ್ನಿಯಾದರೆ ತತ್ತ್ವಜ್ಞಾನ (ವಿಚಾರಣೆ) ಬೀಸಣಿಕೆಯಂತಹದು. ಆದ್ದರಿಂದ ಮನೋನಿಗ್ರಹ ಎನ್ನುವ ಸಂಯಮಾಗ್ನಿ ದೇದೀಪ್ಯಮಾನವಾಗಿ ಪ್ರಜ್ವಲಿಸಲು ತತ್ತ್ವಜ್ಞಾನದ ಸಹಾಯವನ್ನು ತಪ್ಪದೆ ಹೊಂದಬೇಕು. 'ಈ ಜಗತ್ತು ಏನು?' ವಿಷಯಗಳು ಶಾಶ್ವತವೇ? ಶಾಶ್ವತವಾದ ಪದಾರ್ಥವಾವುದು? ಎನ್ನುವ ವಿಚಾರಣೆಯಿಂದ (ಜ್ಞಾನದಿಂದ) ಮನಸ್ಸನ್ನು, ನಶ್ವರಗಳಾದ ವಿಷಯಗಳ ಕಡೆಗೆ ಹೋಗಬಿಡದೆ ಶಾಶ್ವತವಾದ ಆತ್ಮದ ಕಡೆಗೇ ಪಯಣಿಸುವಂತೆ ಮಾಡಬೇಕು. ಮತ್ತೆ 'ಜ್ಞಾನದೀಪಿತೇ' ಎಂದು ಹೇಳಲ್ಪಟ್ಟಿರುವುದರಿಂದ ಸಮಾಧಿಸ್ಥಿತಿ, ಮನಸ್ಸಂಯಮ ಸ್ಥಿತಿ ಒಂದು ಶೂನ್ಯಾವಸ್ಥೆ ಅಲ್ಲವೆಂದು ಕೇವಲ ಪ್ರಜ್ಞಾಮಯವಾದ, ಜ್ಞಾನವಂತವಾದ ಚಿನ್ಮಯಸ್ಥಿತಿಯೇ ಎಂದು ಸ್ಪಷ್ಟವಾಗುತ್ತಿದೆ.

ಪ್ರ : ಮನಸ್ಸಂಯಮವು ಯಾವುದರಿಂದ ವೃದ್ಧಿಯಾಗುವುದು?

ಉ : ಜ್ಞಾನದಿಂದ, ತತ್ತ್ವ ವಿಚಾರದಿಂದ

**೨೮. ದ್ರವ್ಯಯಜ್ಞಾಸ್ತಪೋಯಜ್ಞಾ ಯೋಗಯಜ್ಞಾಸ್ತಥಾಽಪರೇ**
**ಸ್ವಾಧ್ಯಾಯ ಜ್ಞಾನಯಜ್ಞಾಶ್ಚ ಯತಯಃ ಸಂಶಿತವ್ರತಾಃ**

**ಅರ್ಥ:** ಅಪರೇ=ಕೆಲವರು; ದ್ರವ್ಯಯಜ್ಞಾಃ=ದ್ರವ್ಯವನ್ನು ಸದ್ವಿಷಯಗಳಲ್ಲಿ ವಿನಿಯೋಗಿಸುವ ಯಜ್ಞ ಮಾಡುವವರು; (ಅಪರೇ=ಕೆಲವರು) ತಪೋಯಜ್ಞಾ=ತಪಸ್ಸನ್ನೇ ಯಜ್ಞವಾಗಿ ಉಳ್ಳವರು (ಅಪರೇ=ಮತ್ತೆ ಕೆಲವರು) ಯೋಗಯಜ್ಞಾ=ಪ್ರಾಣಾಯಾಮಾದಿ ಅಷ್ಟಾಂಗಯೋಗಗಳನ್ನು ಯಜ್ಞಗಳನ್ನಾಗಿ ಹೊಂದಿರುವವರು; ತಥಾ=ಆ ಪ್ರಕಾರವಾಗಿಯೇ; (ಅಪರೇ=ಮತ್ತೆ ಕೆಲವರು) ಸ್ವಾಧ್ಯಾಯ ಜ್ಞಾನ ಯಜ್ಞಾಶ್ಚ=ವೇದಾಧ್ಯಯನ, ವೇದಾರ್ಥ ಜ್ಞಾನಸಮು ಪಾರ್ಜನೆಯನ್ನು ಯಜ್ಞವಾಗಿ ಹೊಂದಿರುವವರು (ಆಗಿದ್ದಾರೆ) (ಅವರೆಲ್ಲರೂ); ಯತಯಃ=ಪ್ರಯತ್ನಶೀಲರು; ಸಂಶಿತವ್ರತಾಃ=ದೃಢವ್ರತಗಳನ್ನು ಪಾಲಿಸುವವರು ಎಂದು ಒಪ್ಪಬೇಕು.

**ತಾ||** ಕೆಲವರು ದ್ರವ್ಯವನ್ನು ದಾನಧರ್ಮಾದಿ ಸದ್ವಿಷಯಗಳಲ್ಲಿ ವಿನಿಯೋಗಿಸುವುದೇ ಯಜ್ಞವೆಂದು, ಕೆಲವರು ತಪಸ್ಸನ್ನೇ ಯಜ್ಞವೆಂದು, ಕೆಲವರು

(ಪ್ರಾಣಾಯಾಮಾದಿ ಅಷ್ಟಾಂಗ) ಯೋಗವನ್ನು ಯಜ್ಞವೆಂದು ಭಾವಿಸಿ ಆಚರಿಸುತ್ತಿದ್ದಾರೆ. ಅವರೆಲ್ಲರೂ ಪ್ರಯತ್ನಶೀಲರು ಹಾಗು ದೃಢವ್ರತಗಳುಳ್ಳವರೆಂದು ಕರೆಯಲ್ಪಡುವರು.

**ವ್ಯಾಖ್ಯೆ:** ಮತ್ತೆ ಬೇರೆ ಕೆಲವು ವಿಧವಾದ ಯಜ್ಞಗಳನ್ನು ಇಲ್ಲಿ ಹೇಳಲಾಗಿದೆ-

೧) ದ್ರವ್ಯಯಜ್ಞ: ಅವರವರ ಧನವನ್ನು, ವಸ್ತುಗಳನ್ನು ಸತ್ಪಾತ್ರರಿಗೆ ದಾನ ಮಾಡುತ್ತಾ, ಸದ್ವಿಷಯಗಳಿಗೆ ವಿನಿಯೋಗಿಸುತ್ತಿರುತ್ತಾರೆ. ಇಂತಹ ದಾನಧರ್ಮಗಳು ಕೂಡ ಒಂದು ಯಜ್ಞವೇ ಎಂದು ಇಲ್ಲಿ ತಿಳಿಸಲಾಗಿದೆ.

೨) ತಪೋಯಜ್ಞ: ವ್ರತೋಪವಾಸಾದಿಗಳಿಂದ ದೇಹೇಂದ್ರಿಯ ಮನಸ್ಸುಗಳನ್ನು ತಪಿಸಿ ಕ್ರಮವಾಗಿ ಅವುಗಳನ್ನು ಸ್ವಾಧೀನಪಡಿಸಿಕೊಳ್ಳುವುದನ್ನು ಯಜ್ಞವೆಂದು ಕರೆಯುವರು.

೩) ಯೋಗಯಜ್ಞ: ಯಮ ನಿಯಮಾದಿ ರೂಪಗಳುಳ್ಳ ಅಷ್ಟಾಂಗಯೋಗಾಚರಣೆಯನ್ನು ಯೋಗಯಜ್ಞವೆನ್ನುವರು.

೪) ಸ್ವಾಧ್ಯಾಯ ಜ್ಞಾನಯಜ್ಞ: ವೇದಾಧ್ಯಯನ, ಶಾಸ್ತ್ರಪಠಣ ಮಾಡುವುದು ಅವುಗಳ ಅರ್ಥಗಳನ್ನು ಮನನ ಮಾಡಿ ಅನುಷ್ಠಾನ ಮಾಡುವುದೂ ಸಹ ಒಂದು ಯಜ್ಞವೇ.

ಈ ಪ್ರಕಾರವಾಗಿ ಜನರು ಅವರವರ ಸಂಸ್ಕಾರಗಳು, ಅಭಿರುಚಿಗಳನ್ನನುಸರಿಸಿ ಭಿನ್ನಭಿನ್ನಗಳಾದ ಮಾರ್ಗಗಳನ್ನನುಸರಿಸಿ ವಿದವಿಧವಾದ ಯಜ್ಞಗಳನ್ನಾಚರಿಸುತ್ತಾ ಚಿತ್ತಶುದ್ಧಿಯನ್ನು ಪಡೆದು ಕೊನೆಗೆ ಪರಮಾತ್ಮನನ್ನು ಸೇರುತ್ತಿದ್ದಾರೆ. ಇವರೆಲ್ಲರೂ ಯತಿಗಳೇ. ಅಂದರೆ ಪ್ರಯತ್ನಶೀಲರೆಂದು ಅರ್ಥ. ಮೋಕ್ಷಕ್ಕೆ, ಭಗವತ್ಸಾಕ್ಷಾತ್ಕಾರಕ್ಕೆ ಯತ್ನಿಸುವವರೆಲ್ಲಾ ಯತಿಗಳೇ.

*"ಸಂಶಿತವ್ರತಾಃ"*- ಎಂದು ಹೇಳಲ್ಪಟ್ಟಿರುವುದರಿಂದ ಇವರೆಲ್ಲರೂ ದೃಢತರವಾದ ವ್ರತನಿಷ್ಠರಾಗಿ ಕಠೋರನಿಯಮಗಳನ್ನು ಆಚರಿಸುತ್ತಾ ಮನಸ್ಸಿನಲ್ಲಿ ಜನ್ಮಜನ್ಮಾಂತರಗಳಿಂದ ಘನೀಭವಿಸಿರುವ ವಾಸನೆಗಳನ್ನು, ದೃಶ್ಯಸಂಸ್ಕಾರಗಳನ್ನು ಹೊರದೂಡುತ್ತಿದ್ದಾರೆಂದರ್ಥ. ಸೋಮಾರಿ ಯಾದವನು ಮೋಕ್ಷಮಾರ್ಗದಲ್ಲಿ ಒಂದು ಅಡಿಯೂ ಮುಂದಕ್ಕೆ ಹೋಗಲಾರನು. ಅಂಗಡಿಯ ವಸ್ತುಗಳಿಗೆ ಬೆಲೆ ಕೊಟ್ಟು ತಂದಂತೆ ಮೋಕ್ಷಕ್ಕೆ ದೊಡ್ಡ ಬೆಲೆಯನ್ನು ಕೊಡಲೇಬೇಕು. ಅದೇ ತ್ಯಾಗ. ಬ್ರಹ್ಮಾನಂದವೆಂಬ ವಸ್ತುವನ್ನು ಹೊಂದ ಬೇಕೆಂದರೆ ಅಲ್ಪ ವಿಷಯ ಸುಖತ್ಯಾಗವೆಂಬ ಬೆಲೆಯನ್ನು ಕೊಡಲೇಬೇಕು. ಪ್ರಾರಂಭದಲ್ಲಿ ಸ್ವಲ್ಪ ಕಷ್ಟ ಬೀಳಬೇಕು. ಶ್ರಮಕ್ಕೆ ಶಮವಿರಬೇಕು. ಯತಿಗಳಾಗಿ (ಪ್ರಯತ್ನವಂತರಾಗಿ), ಸಂಶಿತವ್ರತರಾಗಿ ಈ ಕಾರ್ಯವನ್ನು ಹೇಗಾದರೂ ಸಾಧಿಸಿಯೇ ಬಿಡಬೇಕು. ಇಲ್ಲಿ ಯತಿಗಳೆಂದರೆ ಸನ್ಯಾಸಿಗಳೆಂದು ಅರ್ಥವಲ್ಲ. ಪ್ರಯತ್ನಶೀಲರೇ ಹೌದು. ಮತ್ತೆ 'ಸಂಶಿತವ್ರತಾಃ' ಎಂದು ಹೇಳಿರುವುದರಿಂದ ಸಾಮಾನ್ಯ ವ್ರತಗಳಿಂದ, ನಿಯಮಗಳಿಂದ ಮಾಯೆ ಬಗ್ಗುವುದಿಲ್ಲವೆಂದು, ದೃಢವ್ರತಗಳು, ಕಠಿಣ ನಿಯಮಗಳನ್ನು ಆಚರಿಸಿದಾಗಲೇ ಅದು ದಾರಿಗೆ ಬರುತ್ತದೆಂದು ಮುಮುಕ್ಷುಗಳಿಗೆ ಎಚ್ಚರಿಕೆ ಕೊಡಲಾಗಿದೆ. ದೃಢವಾಗಿ ಬೇರೂರಿದ ಆಲದ ಮರವನ್ನು ಕಡಿಯಲು ಚಿಕ್ಕ ಚಾಕುಗಳಲ್ಲದೆ, ಉಕ್ಕಿನಿಂದ ಮಾಡಲ್ಪಟ್ಟ ದೊಡ್ಡ ಕೊಡಲಿಗಳೇ ಬೇಕಲ್ಲವೇ!

**೨೯. ಅಪಾನೇಜುಹ್ವತಿ ಪ್ರಾಣಂ ಪ್ರಾಣೇಽಪಾನಂ ತಥಾಽಪರೇ**
**ಪ್ರಾಣಾಪಾನಗತೀ ರುದ್ಧ್ವಾ ಪ್ರಾಣಾಯಾಮಪರಾಯಣಾಃ**

**ಅರ್ಥ:** ಪ್ರಾಣಾಯಾಮಪರಾಯಣಾಃ=ಪ್ರಾಣಾಯಮ ತತ್ಪರರಾದ; ಅಪರೇ=ಕೆಲವರು; ಪ್ರಾಣಾಪಾನಗತೀ=ಪ್ರಾಣಾಪಾನಗಳ ಮಾರ್ಗಗಳನ್ನು; ರುದ್ಧ್ವಾ=ನಿರೋಧಿಸಿ(ಕುಂಭಕ ಮಾಡಿ); ಅಪಾನೇ=ಅಪಾನವಾಯುವಿನಲ್ಲಿ; ಪ್ರಾಣಂ=ಪ್ರಾಣವಾಯುವನ್ನು(ಪೂರಕವನ್ನು); ತಥಾ=ಹಾಗೆಯೇ; ಪ್ರಾಣೇ= ಪ್ರಾಣವಾಯುವಿನಲ್ಲಿ; ಅಪಾನಂ=ಅಪಾನವಾಯುವನ್ನು (ರೇಚಕವನ್ನು), ಜುಹ್ವತಿ=ಹೋಮ ಮಾಡುತ್ತಿದ್ದಾರೆ.

**ತಾ||** ಪ್ರಾಣಾಯಾಮ ತತ್ಪರರಾದ ಕೆಲವರು ಪ್ರಾಣಪಾನಗಳ ಗತಿಗಳನ್ನು (ಮಾರ್ಗಗಳನ್ನು) ನಿರೋಧಿಸಿ ಅಪಾನವಾಯುವಿನಲ್ಲಿ ಪ್ರಾಣವಾಯುವನ್ನು, ಪ್ರಾಣವಾಯುವಿನಲ್ಲಿ ಅಪಾನವಾಯುವನ್ನು ಹೋಮ ಮಾಡುತ್ತಿದ್ದಾರೆ. (ಪೂರಕ, ಕುಂಭಕ, ರೇಚಕಗಳನ್ನು ಆಚರಿಸುತ್ತಿದ್ದಾರೆನ್ನುವುದು ಅರ್ಥ)

**ವ್ಯಾಖ್ಯೆ:** ಪ್ರಾಣಾಯಾಮವೂ ಕೂಡ ಒಂದು ಯಜ್ಞವೆಂದು ಇಲ್ಲಿ ವರ್ಣಿಸಲಾಗಿದೆ. ಪ್ರಾಣಾಯಾಮವು ಅಷ್ಟಾಂಗಯೋಗದ ಯಮನಿಯ ಮಾದಿಗಳಲ್ಲಿ ನಾಲ್ಕನೆಯದು. ಶರೀರದ ಆರೋಗ್ಯವನ್ನು ಕಾಪಾಡಿಕೊಳ್ಳುವುದಕ್ಕೆ, ಮನಸ್ಸಿನ ಚಂಚಲತೆಯ ರೂಪವನ್ನು ಬದಲಿಸಲು ಪ್ರಾಣಾಯಾಮವು ಬಹಳ ಅವಶ್ಯಕ. ಇದು ಪೂರಕ, ಕುಂಭಕ, ರೇಚಕಗಳೆನ್ನುವ ಮೂರು ಭಾಗಗಳಲ್ಲಿದೆ. ಈ ಶ್ಲೋಕದಲ್ಲಿ ಅಪಾನದಲ್ಲಿ ಪ್ರಾಣವನ್ನು ಹೋಮ ಮಾಡುವುದೆಂದರೆ ಪೂರಕ. ಪ್ರಾಣದಲ್ಲಿ ಅಪಾನವನ್ನು ಹೋಮಮಾಡುವುದೆಂದರೆ ರೇಚಕ. ಪ್ರಾಣಾಪಾನಗಳೆಂಬ ಗತಿಗಳನ್ನು ನಿರೋಧಿಸುವುದೇ ಕುಂಭಕ. ಈ ಪೂರಕ ಕುಂಭಕ, ರೇಚಕಗಳನ್ನಾಚರಿಸುವಾಗ ಯಾವುದಾದರೂ (ಪ್ರಣವಾದಿ) ದಿವ್ಯಮಂತ್ರವನ್ನು ಮಾನಸಿಕವಾಗಿ ಮನನ ಮಾಡಿ, ದೈವಭಾವನೆಯನ್ನು ಹೊಂದುವುದರಿಂದ ಪ್ರಾಣಾಯಾಮವು ಮನಸ್ಸನ್ನು ಬಹಿರ್ಮುಖವಾಗಿ ಹೋಗಬಿಡದೆ ನಿಶ್ಚಲವಾಗಿರುವಂತೆ ಮಾಡುವುದು. ಏಕೆಂದರೆ ಪ್ರಾಣಕ್ಕೆ ಮತ್ತು ಮನಸ್ಸಿಗೆ ಬಹಳ ಸನ್ನಿಹಿತವಾದ ಸಂಬಂಧವಿದೆ. ಮನೋನಿರೋಧದಿಂದ ಪ್ರಾಣ ನಿರೋಧ, ಪ್ರಾಣ ನಿರೋಧದಿಂದ ಮನೋನಿರೋಧ ಸಂಭವಿಸುತ್ತವೆ. ಆದ್ದರಿಂದ ಮನಸ್ಸಿನ ಚಪಲತೆ ಉಡುಗಲು ಸಾಧಕನು ಪ್ರಾರಂಭದಲ್ಲಿ ಪ್ರಾಣಾಯಾಮವನ್ನು ಅನುಸರಿಸುವುದು ಉತ್ತಮ. ಆದರೆ ಇದನ್ನು ಅನುಭವಸ್ಥರಿಂದ ಕಲಿಯಬೇಕು. ಇಂತಹ ಪ್ರಾಣಾಯಾಮವನ್ನು ಒಂದು ಯಜ್ಞವೆಂದು ಇಲ್ಲಿ ಹೇಳಲಾಗಿದೆ.

**೩೦. ಅಪರೇ ನಿಯತಾಹಾರಾಃ ಪ್ರಾಣಾನ್ ಪ್ರಾಣೇಷು ಜುಹ್ವತಿ**
**ಸರ್ವೇಽಪ್ಯೇತೇ ಯಜ್ಞವಿದೋ ಯಜ್ಞಕ್ಷಪಿತಕಲ್ಮಷಾಃ**

**ಅರ್ಥ:** ಅಪರೇ=ಮತ್ತೆ ಕೆಲವರು; ನಿಯತಾಹಾರಾಃ=ಆಹಾರದಲ್ಲಿ ಕಟ್ಟುನಿಟ್ಟು ಇರುವವರಾಗಿ; ಪ್ರಾಣಾನ್=ಪ್ರಾಣಾದಿ ವಾಯುಗಳನ್ನು; (ಇಂದ್ರಿಯ ವ್ಯಾಪಾರಗಳನ್ನು); ಪ್ರಾಣೇಷು=ಪ್ರಾಣಾದಿವಾಯುಗಳಲ್ಲಿ; (ವಶೀಕೃತೇಂದ್ರಿಯಗಳಲ್ಲಿ); ಜುಹ್ವತಿ=ಹೋಮ ಮಾಡುತ್ತಿದ್ದಾರೆ. ಏತೇ ಸರ್ವೇಽಪಿ=ಇವರೆಲ್ಲರೂ; ಯಜ್ಞವಿದಃ=ಯಜ್ಞಗಳನ್ನು ತಿಳಿದವರು; ಯಜ್ಞಕ್ಷಪಿತಕಲ್ಮಷಾಃ=ಪಾಪಗಳನ್ನು ಯಜ್ಞದಿಂದ ನಾಶ ಮಾಡಿಕೊಂಡವರು (ಆಗುತ್ತಿದ್ದಾರೆ).

**ತಾ||** ಮತ್ತೆ ಕೆಲವರು ಆಹಾರ ವಿಷಯಗಳಲ್ಲಿ ಕಟ್ಟುನಿಟ್ಟಾಗಿದ್ದು ಪ್ರಾಣಾದಿ ವಾಯುಗಳನ್ನು ಪ್ರಾಣಾದಿವಾಯುಗಳಲ್ಲೇ ಹೋಮವನ್ನು ಮಾಡುತ್ತಿದ್ದಾರೆ (ಇಂದ್ರಿಯ ವ್ಯಾಪಾರಗಳನ್ನು ವಶೀಕೃತೇಂದ್ರಿಯಗಳಲ್ಲಿ ಬೇಯಿಸುತ್ತಿದ್ದಾರೆ). ಇವರೆಲ್ಲರೂ ಯಜ್ಞವನ್ನು ತಿಳಿದವರು, ಯಜ್ಞದಿಂದ ಪಾಪಗಳನ್ನು ನಾಶಮಾಡಿಕೊಂಡವರೂ ಆಗಿದ್ದಾರೆ.

**ವ್ಯಾಖ್ಯೆ:** ಶ್ರೀಕೃಷ್ಣ ಪರಮಾತ್ಮ ಈ ಶ್ಲೋಕದಿಂದ ವಿವಿಧ ಯಜ್ಞಗಳ ವರ್ಣನೆಯನ್ನು ಪೂರ್ತಿಮಾಡುತ್ತಿದ್ದಾನೆ. ಒಟ್ಟು ಹನ್ನೆರಡು ವಿಧಗಳಾದ ಯಜ್ಞಗಳನ್ನು ಭಗವಂತನು ಇಲ್ಲಿ ಕೊಟ್ಟಿದ್ದಾನೆ. ಅದರಲ್ಲಿ ಕೊನೆಯದು ಆಹಾರಸಂಯಮ. ಆಹಾರ ನಿಯಮವನ್ನು ಕೂಡ ಒಂದು ಯಜ್ಞವೆಂದು ಪರಿಗಣಿಸಲಾಗಿದೆ. ಆಹಾರವು ಸಾಮಾನ್ಯ ವಿಷಯವೆಂದು ಕೆಲವರು ತಿಳಿಯಬಹುದು. ಆದರೆ ಗೀತಾಚಾರ್ಯನು ಭಗವದ್ಗೀತೆಯಲ್ಲಿ ಅದಕ್ಕೆ ಸಮುಚಿತವಾದ ಸ್ಥಾನ ಕೊಟ್ಟು ಗೌರವಿಸಿರುವನು. ಅನೇಕ ಕಡೆಗಳಲ್ಲಿ ಅದರ ಬಗ್ಗೆ ಪ್ರಸ್ತಾಪವಿದೆ. ಅದನ್ನು ನಿಕೃಷ್ಟವಾಗಿ ಕಾಣದೆ, ಮೋಕ್ಷಕ್ಕೆ ಬೇಕಾದ ಪ್ರಧಾನ ಸಾಧನೆಗಳಲ್ಲಿ ಅದನ್ನೂ ಸೇರಿಸಿರುವನು. ಏಕೆಂದರೆ ಆಹಾರದಿಂದಲೇ ಮನಸ್ಸು ಏರ್ಪಾಟಾಗುತ್ತಿದೆ. ಆಹಾರದ ಸ್ಥೂಲಾಂಶದಿಂದ ಶರೀರವೂ, ಸೂಕ್ಷ್ಮಾಂಶದಿಂದ ಮನಸ್ಸೂ ಉಂಟಾಗುತ್ತವೆ. ಆಹಾರದ ಶುದ್ಧತೆಯಿಂದ ಮನಸ್ಸೂ ಶುದ್ಧಿಗೊಳ್ಳುತ್ತದೆ. ಆಹಾರವು ಸಾತ್ವಿಕವಾಗಿದ್ದಲ್ಲಿ ಆ ಸಾತ್ವಿಕತೆಯಿಂದ ಏರ್ಪಡಾಗುವ ಮನಸ್ಸೂ ಕೂಡ ಸಾತ್ವಿಕವಾಗಿರುವುದು. ರಜೋಗುಣಾತ್ಮಕಗಳಾದ ಮಾಂಸಾದಿ ಆಹಾರಗಳನ್ನು ಸ್ವೀಕರಿಸುವ ಮಾನವರಲ್ಲಿ, ಜಂತುಗಳಲ್ಲಿರಬೇಕಾದ ಕ್ರೂರತೆಗಳು ಪ್ರತ್ಯಕ್ಷವಾಗಿ ಕಂಡು ಬರುತ್ತವೆಯಲ್ಲವೇ!

ದೊಡ್ಡ ಕಾರ್ಖಾನೆಯಲ್ಲಿ ಒಂದು ಚಿಕ್ಕ ಮೊಳೆ ಸರಿಯಾಗಿಲ್ಲದಿದ್ದರೆ ಆ ಕಾರ್ಖಾನೆ ಹೇಗೆ ನಿಂತು ಹೋಗುವುದೋ, ರೈಲು ಪಟ್ಟಿಗಳ ಒಂದು ಚಿಕ್ಕ ಭಾಗ ಕದಲಿದರೆ ಓಡುವ ರೈಲಿಗೆ ಹೇಗೆ ಪ್ರಮಾದವೋ ಹಾಗೆ ಆಹಾರ ನಿಯಮವೆನ್ನುವ ಒಂದು ಚಿಕ್ಕ ವಿಷಯ ಸರಿಯಾಗಿ ಪಾಲಿಸದಿದ್ದರೆ ಮೋಕ್ಷ ಪ್ರಯತ್ನರೂಪ ಯಂತ್ರಾಂಗವೆಲ್ಲವೂ ಸ್ಥಬ್ಧವಾಗುವುದು. ಆಹಾರವು ಶುದ್ಧವಾಗಿದ್ದಲ್ಲಿ ಮನಸ್ಸು ಶುದ್ಧಿಯಾಗುವುದು. ಮನಸ್ಸು ಶುದ್ಧವಾಗಿದ್ದಾಗ ಮಾತ್ರ ಮೋಕ್ಷ ಪ್ರಾಪ್ತಿಯಾಗುವುದಾದ್ದರಿಂದ ಆಹಾರ ಸಂಯಮವನ್ನು ಭಗವಂತನು ಒಂದು ಯಜ್ಞವಾಗಿ ಇಲ್ಲಿ ವರ್ಣಿಸಿ ಹೇಳಿದ್ದಾನೆ. ಆಹಾರ ಯಾವ ವಿಧದಲ್ಲಿರಭೇಕೆಂದರೆ- ೧) ಮಿತವಾಗಿ ೨) ಸಾತ್ವಿಕವಾಗಿ ೩) ನ್ಯಾಯಾರ್ಜಿತವಾಗಿ ೪) ಭಗವದರ್ಪಿತವಾಗಿ ೫) ನಿಯಮಿತ ಕಾಲದಲ್ಲಿ ಸೇವಿಸಬೇಕು. ಈ ಐದು ಶುದ್ಧಿಗಳನ್ನು ಆಹಾರದ ವಿಷಯದಲ್ಲಿ ಗಮನಿಸಬೇಕು.

ಈ ಪ್ರಕಾರವಾಗಿ ಅನೇಕ ಮೋಕ್ಷಸಾಧನೆಗಳನ್ನು ಕುರಿತು ಇಲ್ಲಿಯವರೆಗೆ ಭಗವಂತನು ತಿಳಿಸಿರುವನು. ಆ ಸಾಧನೆಗಳೆಲ್ಲವುಗಳಿಗೆ 'ಯಜ್ಞ'ಗಳೆಂಬ ಪವಿತ್ರ ನಾಮಕರಣ ಮಾಡಿದನು. ಯಜ್ಞವೆಂದರೆ ಏನೋ ಅಸಾಧ್ಯವಾದ ಕರ್ಮಕಾಂಡವೆಂದು ಅಂಜುವವರಿಗೆ ಅಭಯವನ್ನಿತ್ತು ವಾಸ್ತವ ಯಜ್ಞತತ್ವವನ್ನು ಬಹಿರಂಗ ಮಾಡಿರುವನು. ಇಲ್ಲಿ ಪಶು ಹಿಂಸೆಯಿಂದ ಕೂಡಿದ ಯಜ್ಞವನ್ನು ತಿಳಿಸಲಿಲ್ಲ ಎನ್ನುವುದು ಗಮನಾರ್ಹ. ಈ ಮೇಲಿನ ಸಾಧನೆಗಳನ್ನು ತಿಳಿದವರನ್ನು ಅದನ್ನು ಅನುಷ್ಠಾನ ಮಾಡುವವರನ್ನು 'ಯಜ್ಞವಿದಃ' ಎಂದು ಭಗವಂತನು ಕರೆದನು. ಅಂದರೆ ಯಜ್ಞದ ತತ್ತ್ವವನ್ನು (Science) ತಿಳಿದವರೆಂದು ಅರ್ಥ.

ಈ ಯಜ್ಞಗಳಿಂದ ಉಂಟಾಗುವ ಫಲವೇನು? ಅವುಗಳಿಂದ ಪಾಪವು ನಶಿಸುವುದು (ಕ್ಷಪಿತಕಲ್ಮಷಾಃ). ಅನೇಕ ಜನ್ಮಗಳಿಂದ ಮನಸ್ಸಿಗೆ ಹಿಡಿದ ಪಾಚಿ ತೊಲಗಿ ಹೋಗುವುದು. ಪಾಪವನ್ನು ನಿವಾರಿಸಿಕೊಳ್ಳಲು ಈ ಯಜ್ಞರೂಪ ಪುಣ್ಯಾಚರಣವೇ ಶರಣು. 'ನನ್ನ ಪಾಪವು ಹೇಗೆ ಹೋಗುವುದು'? ಎಂದು ಬಹಳಷ್ಟು ಜನ ಪ್ರಶ್ನಿಸುತ್ತಾರೆ. ಅದಕ್ಕೆ ಉಪಾಯವನ್ನು ಭಗವಂತನೇ ಇಲ್ಲಿ ತಿಳಿಸಿದ್ದಾನೆ. ಯಜ್ಞಗಳೆನ್ನುವ ಈ ಪುಣ್ಯ ಕಾರ್ಯಗಳ ಅನುಷ್ಠಾನವೇ ಪಾಪಹರಣಕ್ಕಿರುವ ಏಕೈಕ ಉಪಾಯವೆಂದು ಇಲ್ಲಿ ಸ್ಪಷ್ಟವಾಗಿ ತಿಳಿಸಲಾಗಿದೆ. ಪಾಪವು ನಶಿಸದೇ ಇದ್ದರೆ ಚಿತ್ತವು ಶುದ್ಧವಾಗುವುದಿಲ್ಲ. ಚಿತ್ತವು ಶುದ್ಧವಾಗದಿದ್ದಲ್ಲಿ ಆತ್ಮಜ್ಞಾನ ಉದಯಿಸುವುದಿಲ್ಲ. ಆತ್ಮಜ್ಞಾನವಾಗದಿದ್ದರೆ ಮೋಕ್ಷರೂಪ ಪರಮ ಶಾಂತಿ ಲಭಿಸುವುದಿಲ್ಲ. ಆದ್ದರಿಂದ ಮೊದಲು ಪಾಪವು ನಶಿಸಬೇಕು. ಅದಕ್ಕಾಗಿ ಈ ಮೇಲೆ ತಿಳಿಸಿದ ೧೨ ಯಜ್ಞಗಳಲ್ಲಿ ಎಲ್ಲವನ್ನಾಗಲಿ, ಕೆಲವನ್ನಾಗಲಿ ಇಲ್ಲ ಕನಿಷ್ಠ ಒಂದನ್ನಾಗಲಿ ಮುಮುಕ್ಷುವು ತಪ್ಪದೆ ಆಚರಿಸಬೇಕು. ಬಂಧ ವಿಮುಕ್ತಿಗೆ ಇದನ್ನು ಬಿಟ್ಟರೆ ಬೇರೆ ಮಾರ್ಗವಿಲ್ಲ.

ಪ್ರ : ಯಜ್ಞವನ್ನು ಆಚರಿಸುವುದರಿಂದ ಉಂಟಾಗುವ ಫಲವೇನು?

ಉ : ಪಾಪವು ನಷ್ಟವಾಗುವುದು

ಪ್ರ : ಆದ್ದರಿಂದ ಪಾಪವು ನಶಿಸುವುದಕ್ಕೆ ಉಪಾಯವೇನು?

ಉ : ಯಜ್ಞಾಚರಣೆ, ಸತ್ಕರ್ಮಾನುಷ್ಠಾನ.

**ಅ||** ಯಜ್ಞಗಳನ್ನು ಆಚರಿಸುವುದರಿಂದ ಸಿಗುವ ಸತ್ಫಲಿತಗಳನ್ನು, ಆಚರಿಸದೇ ಇರುವುದರಿಂದ ಉಂಟಾಗುವ ದುಷ್ಪರಿಣಾಮಗಳನ್ನು ವಿವರಿಸಲಾಗಿದೆ-

**೩೧. ಯಜ್ಞಶಿಷ್ಟಾಮೃತಭುಜೋ ಯಾಂತಿ ಬ್ರಹ್ಮ ಸನಾತನಮ್**
**ನಾಯಂ ಲೋಕೋಽಸ್ತ್ಯಯಜ್ಞಸ್ಯ ಕುತೋಽನ್ಯಃ ಕುರುಸತ್ತಮ**

**ಅರ್ಥ:** ಕುರುಸತ್ತಮ=ಕುರುವಂಶ ಶ್ರೇಷ್ಠನಾದ ಅರ್ಜುನ; ಯಜ್ಞಶಿಷ್ಟಾಮೃತ ಭುಜಃ=(ಮೇಲೆ ತಿಳಿಸಿದ) ಯಜ್ಞಗಳ ನಂತರ ಉಳಿದ ಅಮೃತ ರೂಪವಾದ ಅನ್ನವನ್ನು ಭುಜಿಸುವವನು; ಸನಾತನಂ=ಶಾಶ್ವತವಾದ; ಬ್ರಹ್ಮ=ಬ್ರಹ್ಮವನ್ನು; ಯಾಂತಿ=ಹೊಂದುತ್ತಿದ್ದಾನೆ; ಅಯಜ್ಞಸ್ಯ=ಯಜ್ಞವೊಂದನ್ನಾದರೂ ಮಾಡದೆ ಇರುವವನಿಗೆ; ಅಯಂ=ಈ; ಲೋಕಃ=ಲೋಕವು; ನಾಸ್ತಿ= ಇಲ್ಲವಾಗಿರು ವಾಗ; ಅನ್ಯಃ=ಪರಲೋಕ; ಕುತಃ=ಎಲ್ಲಿಯದು?

**ತಾ||** ಕುರುವಂಶ ಶ್ರೇಷ್ಠನಾದ ಅರ್ಜುನಾ! (ಮೇಲೆ ತಿಳಿಸಿದ) ಯಜ್ಞ ಗಳನ್ನಾಚರಿಸಿದ ನಂತರ ಉಳಿದ ಅನ್ನವನ್ನು ಭುಜಿಸುವವನು ಶಾಶ್ವತ ಪರಬ್ರಹ್ಮವನ್ನು ಹೊಂದುವನು. ಅಂತಹ ಒಂದಾದರೂ ಯಜ್ಞವನ್ನು ಮಾಡದವನಿಗೆ ಇಹಲೋಕದಲ್ಲಿ ಸುಖವಿಲ್ಲ. ಹಾಗಿರುವಾಗ ಇನ್ನು ಪರಲೋಕದ ಸುಖವೆಲ್ಲಿಯದು?

**ವ್ಯಾಖ್ಯೆ:** ಇಲ್ಲಿಯವರೆಗೆ ಅನೇಕ ಯಜ್ಞಗಳನ್ನು ಹೇಳಿ, ಈಗ ಅವುಗಳ ಮಹಾತ್ಮ್ಯೆಗಳನ್ನು ಭಗವಂತನು ವರ್ಣಿಸುತ್ತಿದ್ದಾನೆ. ಮೇಲೆ ತಿಳಿಸಿದ ಯಜ್ಞಗಳಲ್ಲಿ ಎಲ್ಲವನ್ನಾಗಲಿ, ಕೆಲವನ್ನಾಗಲಿ ಇಲ್ಲವೆ ಒಂದನ್ನಾಗಲಿ ಆಚರಿಸಿ ಅಥವ ಯಾವುದಾದರೂ ದೈವಕಾರ್ಯವನ್ನಾಗಲಿ, ಪರಮಾರ್ಥ ಸಾಧನೆಯನ್ನಾಗಲಿ ಮಾಡಿ ನಂತರ ಭುಜಿಸುವಂತಹ ಅನ್ನ ಅಮೃತ ವಾಗುವುದು. ಆದ್ದರಿಂದಲೇ ಅದನ್ನು ಭುಜಿಸುವವನು **'ಯಾಂತಿ ಬ್ರಹ್ಮ ಸನಾತನಮ್'**- ಜನನ ಮರಣ ರಹಿತವಾದ ಶಾಶ್ವತ ಪರಬ್ರಹ್ಮವನ್ನು ಹೊಂದುವನೆಂದು ಇಲ್ಲಿ ಹೇಳಲಾಗಿದೆ. ಹಿಂದಿನ ಶ್ಲೋಕದಲ್ಲಿಯೂ **'ಯಜ್ಞ ಕ್ಷಪಿತಕಲ್ಮಷಾಃ'**- ಯಜ್ಞದಿಂದ (ದೈವಕಾರ್ಯದಿಂದ) ಪಾಪವು ನಶಿಸುವುದೆಂದು ಹೇಳಲಾಗಿದೆ. ಪಾಪಕ್ಷಯದಿಂದ ಚಿತ್ತವು ನಿಷ್ಕಲ್ಮಷ ವಾಗುವುದು. ಶುದ್ಧಚಿತ್ತದಲ್ಲಿ ಅಧಿಷ್ಠಾನಾತ್ಮ ದೇದೀಪ್ಯಮಾನವಾಗಿ ಪ್ರಕಾಶಿಸುವುದು. ಅಂದರೆ ಚಿತ್ತವು ಆತ್ಮದಲ್ಲಿ ಲಯಿಸಿ ಆತ್ಮಮಾತ್ರ ಉಳಿಯುವುದು. ಅದೇ ಸನಾತನ ಬ್ರಹ್ಮಪದವಿ. ಆದ್ದರಿಂದಲೇ ಯಜ್ಞಶೇಷವನ್ನು ಭುಜಿಸುವವರು ಪರಬ್ರಹ್ಮವನ್ನು ಹೊಂದುವರೆಂದು ಹೇಳಲಾಗಿದೆ. ಆಹಾ! ಎಂತಹ ಅದ್ಭುತ ಫಲ!

ಕಾರ್ಯದ ಮಹಿಮೆ, ಫಲದ ಮಹಿಮೆಯ ಮೇಲೆ ಆಧಾರ ಪಟ್ಟಿರುತ್ತದೆ. ಇಲ್ಲಿ ಯಜ್ಞವೆಂಬ ಕಾರ್ಯದ ಫಲವು ಸಾಕ್ಷಾತ್ ಬ್ರಹ್ಮವೇ ಆದುದರಿಂದ ಯಜ್ಞದ ಮಹತ್ತು ಎಂತಹುದೋ ಊಹಿಸಬಹುದು. ಪ್ರಪಂಚದಲ್ಲಿ ಎಷ್ಟೋ ಶ್ರಮಿಸಿದರೆ ಒಂದಿಷ್ಟು ಧನ, ಕ್ಷೇತ್ರ, ಯಶಸ್ಸು ಲಭಿಸುತ್ತವೆ ಆದರೆ ಅವು ಕ್ಷಣಿಕಗಳು. ಈ ಶರೀರದೊಡನೆ ನಶಿಸುವಂತಹವು. ಬ್ರಹ್ಮವಾದರೋ, ಸನಾತನ ಮತ್ತು ಅಮರ ಸ್ವರೂಪವಾದದ್ದು. ಪ್ರತಿಯೊಬ್ಬನ ಗಮ್ಯಸ್ಥಾನವು ಅದೇ ಆಗಿದೆ. ಹಾಗಿರುವಾಗ ಈ ಜನ್ಮದಲ್ಲಿಯೇ ಅದನ್ನು ಏಕೆ ಸಾಧಿಸಬಾರದು? ಸಾಧಿಸುವುದಕ್ಕೆ ಉಪಾಯವನ್ನು ಭಗವಂತನೇ ಇಲ್ಲಿ ತಿಳಿಸಿರುವನು. ಯಜ್ಞವೇ ಅದಕ್ಕೆ ಉಪಾಯ. ಅಂದರೆ ಭಗವತ್ಕಾರ್ಯ. ಆಧ್ಯಾತ್ಮ ಸಾಧನೆ ಪರಹಿತ ವರ್ತನೆಗಳು ಯಜ್ಞಗಳೇ ಹೌದು. ಆ ಯಜ್ಞಗಳ ಸ್ವರೂಪ ಹಾಗೂ ರೀತಿಗಳನ್ನು ಈಗಾಗಲೇ ಹೇಳಲಾಗಿದೆ. ಅವುಗಳನ್ನಾಚರಿಸಿದರೂ ಸಾಕು.

ಹಾಗೆ ಯಾವುದಾದರೂ ಯಜ್ಞ ಅಥವ ಸತ್ಕಾರ್ಯ ಮಾಡದೆ ಅನ್ನವನ್ನು ಭುಜಿಸುವುದಿಲ್ಲವೆನ್ನುವ ಶಪಥ, ದೃಢವ್ರತವನ್ನು ಪಾಲಿಸಬೇಕು. ಏಕೆಂದರೆ ಆ ನಿಯಮವೇ ಕ್ರಮವಾಗಿ ಮುಕ್ತಿಗೆ ದಾರಿಮಾಡಿಕೊಡುವುದು. ಹಾಗೆ ಯಜ್ಞವನ್ನಾಚರಿಸದೆ ಭುಜಿಸುವವನು ಪಾಪವನ್ನು ಭುಜಿಸಿದಂತೆಯೇ ಎಂದು ಈಗಾಗಲೇ ಭಗವಂತನು ತಿಳಿಸಿದ್ದಾನೆ. ಅಂತಹವನಿಗೆ ಇಹವೂ ಇಲ್ಲ, ಪರವೂ ಇಲ್ಲ, ನೋಡಿದಿರಾ! ಯಜ್ಞವನ್ನಾಚರಿಸದವನಿಗೆ, ದೈವಕಾರ್ಯ ಮಾಡದವನಿಗೆ ಉಂಟಾಗುವ ಘೋರಪತನ! ಭಯಂಕರವಾದ ದುಷ್ಫಲಿತ! ಉತ್ತಮವಾದ ಮಾನವ ಜನ್ಮಹೊಂದಿಯೂ ದೈವ ವಿಚಾರಣೆ ಮಾಡದೆ ನಶ್ವರವಾದ ದೃಶ್ಯ ವಸ್ತುಗಳ ಹಿಂದೆ ಓಡುವವನು ಎಂತಹ ಅವಿವೇಕಿ! ಆದ್ದರಿಂದಲೇ ಭಗವಂತನಿಲ್ಲಿ ಸತ್ಕರ್ಮವಿಮುಖರಿಗೆ ತೀವ್ರವಾದ ಎಚ್ಚರಿಕೆ ಕೊಟ್ಟಿರುತ್ತಾನೆ. "ಓ ಜೀವಿಗಳೇ! ಉತ್ತಮ ಜನ್ಮವನ್ನು ಪಡೆದೂ ಸತ್ಕಾರ್ಯ ಗಳನ್ನು ಆಚರಿಸದೆ, ಪರಮಾರ್ಥ ಸಾಧನೆಯನ್ನು ಸ್ವಲ್ಪವೂ ಮಾಡದಿದ್ದರೆ ನಿಮಗೆ ಇಹಲೋಕದ ಸುಖವಂತೂ ಹೇಗೂ ದಕ್ಕುವುದಿಲ್ಲ ಇನ್ನು ಪರಲೋಕದ ಸುಖದ ಪ್ರಶ್ನೆಯೇ ಇಲ್ಲ". ಆದ್ದರಿಂದ ಭಗವದ್ವಾಕ್ಯಗಳಲ್ಲಿ ವಿಶ್ವಾಸವಿಟ್ಟು ಪ್ರತಿಯೊಬ್ಬರೂ ಈ ಯಜ್ಞಗಳನ್ನು ತಪ್ಪದೆ ಆಚರಿಸಬೇಕು.

"ಯಜ್ಞಶಿಷ್ಟಾಶಿನಃ"- 'ಯಜ್ಞದ ಶೇಷ ಅನ್ನವನ್ನು ಭುಜಿಸುವವರು' ಎಂದು ಇಲ್ಲಿ ಹೇಳಲಾಗಿದೆಯಲ್ಲಾ ವಾಸ್ತವವಾಗಿ ಭಗವಂತನು ತಿಳಿಸಿದ "ಜ್ಞಾನ, ಇಂದ್ರಿಯ ನಿಗ್ರಹ, ತಪಸ್ಸು, ಪ್ರಾಣಾಯಾಮ ಮುಂತಾದ ಯಜ್ಞಗಳಲ್ಲಿ ಅನ್ನವೆಂಬುದೇ ಇಲ್ಲವಲ್ಲ ಎಂದು ಪ್ರಶ್ನಿಸಬಹುದು. ಉತ್ತರವಾಗಿ, ಈ ಪದಕ್ಕೆ ಕೆಳಕಂಡಂತೆ ಅರ್ಥವನ್ನು ಹೇಳಿಕೊಳ್ಳಬೇಕಾಗಿದೆ. ಯಜ್ಞಗಳನ್ನಾಚರಿಸಿದ ನಂತರ ಭುಜಿಸಲ್ಪಡುವ ಆಹಾರವು ಅಮೃತ ತುಲ್ಯವಾದುದರಿಂದ ಅದನ್ನು ಭುಜಿಸುವವರು ಪಾಪರಹಿತರಾಗುವರು. ಅದೇ ರೀತಿ ಯಜ್ಞಾಚರಣೆಯಿಂದ ಉಂಟಾಗುವ ಅಮೃತ ತುಲ್ಯವಾದ ಮನಶ್ಶಾಂತಿಯನ್ನು, ಶಾಶ್ವತ ಸುಖವನ್ನು ಅವರು ಅನುಭವಿಸುವರು ಎಂದು ಹೇಳಬಹುದು.

ಪ್ರ : ಬ್ರಹ್ಮವೆಂತಹದು?

ಉ : ಶಾಶ್ವತ ಹಾಗೂ ನಾಶರಹಿತವಾದದ್ದು.

ಪ್ರ : ಅದನ್ನು ಯಾರು ಹೊಂದುವರು?

ಉ : ಯಜ್ಞಗಳನ್ನು (ಸತ್ಕಾರ್ಯಗಳನ್ನು) ಆಚರಿಸಿ ಶೇಷವಾಗಿ ಉಳಿಯುವ ಅನ್ನವನ್ನು ಭುಜಿಸುವವರು.

ಪ್ರ : ಯಜ್ಞಗಳನ್ನಾಚರಿಸದವನಿಗೆ ಎಂತಹ ದುರ್ಗತಿ ಒದಗುವುದು?

ಉ : ಅವನಿಗೆ ಇಹಲೋಕ ಸುಖವಾಗಲಿ, ಪರಲೋಕ ಸುಖವಾಗಲಿ ಲಭಿಸದು.

**ಅ||** ಇನ್ನು ಯಜ್ಞಸಂಬಂಧವಾದ ಚರ್ಚೆಯನ್ನು ಮುಕ್ತಾಯಗೊಳಿಸಲಾಗುತ್ತಿದೆ-

**೩೨. ಏವಂ ಬಹುವಿಧಾ ಯಜ್ಞಾ ವಿತತಾ ಬ್ರಹ್ಮಣೋ ಮುಖೇ**
**ಕರ್ಮಜಾನ್ ವಿದ್ಧಿ ತಾನ್ ಸರ್ವಾನೇವಂ ಜ್ಞಾತ್ವಾ ವಿಮೋಕ್ಷ್ಯಸೇ**

**ಅರ್ಥ:** ಏವಂ=ಈ ಪ್ರಕಾರವಾಗಿ; ಬಹುವಿಧಾಃ=ಅನೇಕ ವಿಧಗಳಾದ; ಯಜ್ಞಾಃ=ಯಜ್ಞಗಳು; ಬ್ರಹ್ಮಣಃ ಮುಖೇ=ವೇದದಲ್ಲಿ; ವಿತತಾಃ= ಸವಿಸ್ತಾರವಾಗಿ ಹೇಳಲ್ಪಟ್ಟಿವೆ; ತಾನ್ ಸರ್ವಾನ್=ಅವುಗಳೆಲ್ಲವನ್ನೂ; ಕರ್ಮಜಾನ್=ಕರ್ಮದಿಂದ ಹುಟ್ಟಿದವೆಂದು; ವಿದ್ಧಿ=ತಿಳಿಯುವುದು; ಏವಂ=ಹೀಗೆ; ಜ್ಞಾತ್ವಾ=ತಿಳಿದುಕೊಂಡು; ವಿಮೋಕ್ಷ್ಯಸೇ=ವಿಮುಕ್ತಿಯನ್ನು ಹೊಂದುವೆ.

**ತಾ||** ಈ ಪ್ರಕಾರವಾಗಿ ಅನೇಕ ವಿಧಗಳಾದ ಯಜ್ಞಗಳು ವೇದಗಳಲ್ಲಿ ಸವಿಸ್ತಾರವಾಗಿ ತಿಳಿಸಲ್ಪಟ್ಟಿವೆ. ಅವೆಲ್ಲವೂ ಕರ್ಮಗಳಿಂದ ಹುಟ್ಟಿರುವುವು (ಕರ್ಮಗಳಿಗೆ ಸಂಬಂಧಿಸಿರುವುವು) ಎಂದು ನೀನು ತಿಳಿಯುವುದು. ಹೀಗೆ ತಿಳಿಯುವುದರಿಂದ ನೀನು ವಿಮುಕ್ತನಾಗುವೆ.

**ವ್ಯಾಖ್ಯೆ:** ಮೇಲೆ ತಿಳಿಸಲ್ಪಟ್ಟ ಯಜ್ಞಗಳೇ ಅಲ್ಲದೆ ಇನ್ನೂ ಎಷ್ಟೋ ಯಜ್ಞಗಳು ವೇದಗಳಲ್ಲಿ ವಿಸ್ತಾರವಾಗಿ ಹೇಳಲ್ಪಟ್ಟಿವೆಯೆಂದು ಇಲ್ಲಿ ಹೇಳಲಾಗಿದೆ. ಆದ್ದರಿಂದ ಈ ಕೆಲವುಗಳಿಂದಲೇ ಯಜ್ಞವು ಪೂರ್ತಿಯಾಗುತ್ತದೆಂದು ಯಾರೂ ಭಾವಿಸಬಾರದು. ವೇದವು ಪರಬ್ರಹ್ಮನಿಂದ ಉಂಟಾಗಿರುವುದ ರಿಂದ 'ಬ್ರಹ್ಮದ ಮುಖ'ವೆಂದು ಹೇಳಲಾಗಿದೆ.

**"ಕರ್ಮಜಾನ್"**- ಮನೋ ವಾಕ್ಕುಗಳ, ಇಂದ್ರಿಯಾದಿಗಳ ಪ್ರಯತ್ನಾದಿ ಗಳಿಂದಲೇ ಈ ಯಜ್ಞಗಳು ಸಂಭವಿಸುತ್ತಿವೆ. ಇವು ಪುರುಷ ಪ್ರಯತ್ನ ಗಳಿಂದಲೇ ಸಾಧಿಸಲ್ಪಡುತ್ತಿವೆ. ಸೋಮಾರಿತನದಿಂದಲ್ಲ! ಬರೀ ಮಾತು ಗಳಿಂದಲ್ಲ. ಆಧ್ಯಾತ್ಮ ವಿದ್ಯೆ ಅನುಭವೈಕವೇದ್ಯ ಶಾಸ್ತ್ರವೇ ಆಗಲಿ (Practical Science). 'ವಾಚಾ ವಿದ್ಯೆಯಲ್ಲ'. ಆದ್ದರಿಂದ ಜನರು ಅದನ್ನು ಅವರವರ ಇಂದ್ರಿಯ ಮನೋವಾಕ್ಕುಗಳ ಪ್ರಯತ್ನಾದಿಗಳಿಂದ ಸಾಧಿಸಬೇಕು. 'ಯಜ್ಞವಾಗಲಿ, ಮೋಕ್ಷವಾಗಲಿ ಅಕಸ್ಮಾತ್ತಾಗಿ ಲಭಿಸುವುದಲ್ಲ. ಅವು ಕರ್ಮಗಳಿಂದಲೇ, ಸ್ವಪ್ರಯತ್ನದಿಂದಲೇ ಸಿದ್ಧಿಸುವುವು' ಎಂದು ಭಗವಂತನು ಇಲ್ಲಿ ಹೇಳುತ್ತಿದ್ದಾನೆ. 'ಈ ರಹಸ್ಯವನ್ನು ತಿಳಿದು ಕೊಂಡಲ್ಲಿ ವಿಮುಕ್ತರಾಗಬಲ್ಲರು' ಎನ್ನುವುದು ಈ ವಾಕ್ಯದ ಭಾವ. ಈ ರೀತಿಯಾಗಿ ದೇಹೇಂದ್ರಿಯ ಮನಸ್ಸುಗಳ ವ್ಯಾಪಾರದಿಂದಲೇ (ಪ್ರಯತ್ನದಿಂದಲೇ) ಯಜ್ಞವನ್ನು ಸಾಧಿಸಬಹುದೆಂದು, ಸೋಮಾರಿತನದಿಂದ ಅಲ್ಲವೆಂದು ತಿಳಿದವನು ತಪ್ಪದೆ ಪ್ರಯತ್ನಿಸಿ ಆ ಯಜ್ಞಾದಿ ಕಾರ್ಯಗಳನ್ನು ನಿರ್ವಹಿಸಿ ತದ್ವಾರ ಸನಾತನ ಬ್ರಹ್ಮವನ್ನು ಸೇರುವನು.'

ಇಲ್ಲಿ 'ಕರ್ಮಜಾನ್'ಯೆನ್ನುವ ಪದ ಪ್ರಯೋಗದಿಂದ ಭಗವಂತನು ಸೋಮಾರಿತನವನ್ನು ಅಲ್ಲಗಳೆದು 'ವಾಚಾ' ವೇದಾಂತವನ್ನು ಖಂಡಿಸಿರುವನು.

"ವಿಮೋಕ್ಷ್ಯಸೇ"- 'ಮೋಕ್ಷ್ಯಸೇ' ಎಂದು ಹೇಳದೆ 'ವಿಮೋಕ್ಷ್ಯಸೇ'

ಎಂದು ಹೇಳಿರುವುದರಿಂದ ಯಜ್ಞಾಚರಣೆಯಿಂದ ತಪ್ಪದೆ ವಿಮುಕ್ತನಾಗುವನೆಂದು ತಿಳಿಸಿದಂತಾಗಿದೆ.

ಪ್ರ : ಈ ಯಜ್ಞಗಳೆಲ್ಲವನ್ನೂ ಎಲ್ಲಿ ತಿಳಿಸಲಾಗಿದೆ?

ಉ : ವೇದಗಳಲ್ಲಿ ವಿಸ್ತಾರವಾಗಿ ವರ್ಣಿಸಲ್ಪಟ್ಟಿವೆ.

ಪ್ರ : ಅವು ಯಾವುದರಿಂದ ಸಿದ್ಧಿಸುವುವು?

ಉ : ದೇಹೇಂದ್ರಿಯ ಮನೋವ್ಯಾಪಾರಗಳಿಂದ ಸೋಮಾರಿತನದಿಂದಲ್ಲ.

ಪ್ರ : ಈ ಸತ್ಯವನ್ನು ತಿಳಿಯುವುದರಿಂದ ಉಂಟಾಗುವ ಫಲವೇನು?

ಉ : ಮನುಜನು ಪ್ರಯತ್ನಪೂರ್ವಕವಾಗಿ ಯಜ್ಞಗಳನ್ನು ಸಾಧಿಸಿ ವಿಮುಕ್ತನಾಗುವನು.

ಪ್ರ : ಇಲ್ಲಿಯವರೆಗೆ ಹೇಳಲ್ಪಟ್ಟ ಯಜ್ಞಗಳು ಯಾವುವು?

ಉ : ಒಟ್ಟು ಹನ್ನೆರಡು- ಅವು ಕ್ರಮವಾಗಿ

ಶ್ಲೋಕ ೨೫ { ೧) ದೈವಯಜ್ಞ
೨) ಬ್ರಹ್ಮಯಜ್ಞ

ಶ್ಲೋಕ ೨೬ { ೩) ಇಂದ್ರಿಯ ಸಂಯಮಯಜ್ಞ
೪) ಶಬ್ದಾದಿ ವಿಷಯ ನಿರೋಧಯಜ್ಞ

ಶ್ಲೋಕ ೨೭ ೫) ಮನೋನಿಗ್ರಹಯಜ್ಞ

ಶ್ಲೋಕ ೨೮ { ೬) ದ್ರವ್ಯಯಜ್ಞ
೭) ತಪೋಯಜ್ಞ
೮) ಯೋಗಯಜ್ಞ
೯) ಸ್ವಾಧ್ಯಾಯಯಜ್ಞ
೧೦) ಜ್ಞಾನಯಜ್ಞ

ಶ್ಲೋಕ ೨೯ ೧೧) ಪ್ರಣಾಯಾಮಯಜ್ಞ

ಶ್ಲೋಕ ೩೦ ೧೨) ಆಹಾರ ನಿಯಮ ಯಜ್ಞ

ಈ ಯಜ್ಞಗಳೆಲ್ಲವೂ ಜೀವಿಯ ಪಾಪವನ್ನು ಹೋಗಲಾಡಿಸಿ ಚಿತ್ತಶುದ್ಧಿಯನ್ನುಂಟುಮಾಡಿ ಮೋಕ್ಷವನ್ನು ಕೊಡುತ್ತವೆ. ಆದ್ದರಿಂದ ಮುಮುಕ್ಷುಗಳು ಇವುಗಳನ್ನು ಆಚರಿಸಬೇಕೆಂದು ಭಗವಂತನು ತಿಳಿಸುತ್ತಿದ್ದಾನೆ.

ಅ॥ ಯಜ್ಞಗಳೆಲ್ಲವುಗಳಲ್ಲಿ ಯಾವುದು ಸರ್ವಶ್ರೇಷ್ಠವೆಂದು ಹೇಳಲ್ಪಡುತ್ತಿದೆ-

**೩೩. ಶ್ರೇಯಾನ್ ದ್ರವ್ಯಮಯಾದ್ಯಜ್ಞಾ ಜ್ಞಾನಯಜ್ಞಃ ಪರಂತಪ**
**ಸರ್ವಂ ಕರ್ಮಾಖಿಲಂ ಪಾರ್ಥ ಜ್ಞಾನೇ ಪರಿಸಮಾಪ್ಯತೇ**

**ಅರ್ಥ:** ಪರಂತಪ=ಓ ಅರ್ಜುನಾ! ದ್ರವ್ಯಮಯಾತ್=ದ್ರವ್ಯದಿಂದ ಸಾಧ್ಯವಾಗುವ; ಯಜ್ಞಾತ್=ಯಜ್ಞಕ್ಕಿಂತ; ಜ್ಞಾನಯಜ್ಞಃ=ಜ್ಞಾನಯಜ್ಞವು; ಶ್ರೇಯಾನ್=ಉತ್ತಮವಾದುದು; ಪಾರ್ಥ=ಓ ಅರ್ಜುನಾ! ಸರ್ವಂ ಕರ್ಮ=ಕರ್ಮಗಳೆಲ್ಲವೂ; ಅಖಿಲಂ(ಸತ್)=ಪರಿ ಪೂರ್ಣವಾಗಿ (ಫಲಸಹಿತ); ಜ್ಞಾನೇ=ಜ್ಞಾನದಲ್ಲಿ; ಪರಿಸಮಾಪ್ಯತೆ=ಪರಿಸಮಾಪ್ತಿಯನ್ನು ಹೊಂದುತ್ತವೆ (ಪರ್ಯವಸನಗೊಳ್ಳುತ್ತವೆ ಅಥವ ಅಂತರ್ಭೂತವಾಗುತ್ತಿವೆ).

ತಾ॥ ಓ ಅರ್ಜುನಾ! ದ್ರವ್ಯದಿಂದ ಸಾಧಿಸಲ್ಪಡುವ ಯಜ್ಞಕ್ಕಿಂತ ಜ್ಞಾನಯಜ್ಞ ಶ್ರೇಷ್ಠವಾದುದು. ಏಕೆಂದರೆ ಸಮಸ್ತ ಕರ್ಮಗಳೂ ಪರಿಪೂರ್ಣವಾಗಿ (ಫಲ ಸಹಿತವಾಗಿ) ಜ್ಞಾನದಲ್ಲಿಯೇ ಪರ್ಯವಸನಗೊಳ್ಳುತ್ತಿವೆ (ಅಂತರ್ಭೂತವಾಗುತ್ತಿವೆ).

ವ್ಯಾಖ್ಯೆ: ಜ್ಞಾನಯಜ್ಞವೆಂದರೆ ತತ್ತ್ವವಿಚಾರಣೆ, ತತ್ತ್ವಂಪದಾರ್ಥಶೋಧನೆ, ಆತ್ಮಾನಾತ್ಮವಿವೇಕ, ದೃಗ್ದೃಶ್ಯ ವಿವೇಚನೆ, ಶ್ರವಣಮನನನಿದಿಧ್ಯಾಸಗಳು, ಇಂದ್ರಿಯ ಮನೋನಿಗ್ರಹ, ವಾಸನಾಕ್ಷಯ ಮುಂತಾದುವು. ದ್ರವ್ಯಯಜ್ಞಗಳೆಂದರೆ, ಧನಧಾನ್ಯ ವಸ್ತುಗಳಿಂದ ಸಾಧಿಸಲ್ಪಡುವ ಸತ್ಕಾರ್ಯ ಮುಂತಾದವುಗಳು. ದ್ರವ್ಯಯಜ್ಞಗಳಿಗಿಂತ ಜ್ಞಾನಯಜ್ಞ ಉತ್ಕೃಷ್ಟ ವಾದುದೆಂದು ಇಲ್ಲಿ ಹೇಳಲಾಗಿದೆ. ಏಕೆಂದರೆ ಪ್ರತಿ ಜೀವಿಯ ಅಂತಿಮ ಲಕ್ಷ್ಯ ಮರೆತುಹೋದ ತನ್ನ ನಿಜ ಸ್ವರೂಪವನ್ನು ಮತ್ತೆ ಜ್ಞಾಪಿಸಿಕೊಳ್ಳುವುದೇ ಆಗಿದೆ. ಅಂದರೆ ಆತ್ಮಜ್ಞಾನ ಹೊಂದುವುದೆಂದರ್ಥ. ಬೇರೆ ಎಲ್ಲಾ ಸಾಧನೆಗಳು, ಎಲ್ಲಾ ಪರಮಾರ್ಥಕರ್ಮಗಳು ಕೊನೆಗೆ ಆ ಜ್ಞಾನರೂಪ ಲಕ್ಷ್ಯವನ್ನು ಹೊಂದುವಂತೆ ಮಾಡುವುವು. ಪರಮಾರ್ಥಕರ್ಮಗಳ ಫಲಗಳು ಜ್ಞಾನದ ಮಹಾಫಲವಾದ ಬ್ರಹ್ಮಾನಂದದಲ್ಲಿ ಅಡಗಿಯೇ ಇವೆ. ಆದ್ದರಿಂದಲೇ ಜ್ಞಾನಯಜ್ಞವು ಬೇರೆ ಎಲ್ಲಾ ಯಜ್ಞಗಳಿಗಿಂತ, ಬೇರೆ ಎಲ್ಲಾ (ಪರಮಾರ್ಥ) ಕರ್ಮಗಳಿಗಿಂತ ಸರ್ವಶ್ರೇಷ್ಠವೆಂದು ಹೇಳಲಾಗಿದೆ.

ಜ್ಞಾನವೇ ಎಲ್ಲಾ ಕರ್ಮಗಳ ಪರಾಕಾಷ್ಠ ಸ್ಥಿತಿ. ಅಂದರೆ ಬೇರೆ ಸಾಧನೆಗಳು, ಕರ್ಮಾದಿಗಳು ವ್ಯರ್ಥವಾದವುವೆಂದಲ್ಲ ಅವು ಜೀವಿಗೆ ಚಿತ್ತಶುದ್ಧಿಯನ್ನುಂಟುಮಾಡಿ ಜ್ಞಾನ ಪ್ರಾಪ್ತಿಗೆ ದಾರಿಯುಂಟು ಮಾಡುವುವು. ಕರ್ಮ ಜೀವಿಯನ್ನು ಜ್ಞಾನದ ಬಳಿಗೆ ಸೇರಿಸಿ ನಂತರ 'ನದಿ ಸಮುದ್ರದಲ್ಲಿ ಲಯವಾದಂತೆ' ಜ್ಞಾನದಲ್ಲಿ ಲಯಗೊಳ್ಳುವುದು. 'ಜ್ಞಾನೇಪರಿಸಮಾಪ್ಯತೇ' ಎನ್ನುವ ವಾಕ್ಯದ ಅರ್ಥವು ಇದೇ ಆಗಿದೆ. ಇದರಿಂದ ಸಮುದ್ರದಲ್ಲಿ ನದಿ ಅಂತರ್ಭೂತವಾಗಿರುವ ಹಾಗೆ ಜ್ಞಾನದಲ್ಲಿ ಸಮಸ್ತ ಕರ್ಮಗಳು, ಕರ್ಮಫಲಗಳು ಅಂತರ್ಭೂತವಾಗಿ ಇರುವುವೇ ಹೊರತು ನಷ್ಟವಾಗುವುದಿಲ್ಲವೆನ್ನುವುದು ಅರ್ಥವಾಗುತ್ತಿದೆ. ಮಾಡಿದ ಸತ್ಕರ್ಮ ಯಾವಾಗಲೂ ವ್ಯರ್ಥವಾಗುವುದಿಲ್ಲ. ಆದ್ದರಿಂದಲೇ ಕರ್ಮ 'ಅಖಿಲಂ' (ಸತ್)=ಎಳ್ಳಷ್ಟೂ ನಾಶವಾಗದೆ, ನಿಶ್ಶೇಷವಾಗಿ, ಫಲಸಹಿತವಾಗಿ, ಜ್ಞಾನದಲ್ಲಿ ಪರ್ಯವಸನಗೊಳ್ಳುತ್ತದೆಂದು ಇಲ್ಲಿ ಹೇಳಲಾಗಿದೆ.

ಆದ್ದರಿಂದ ಪ್ರತಿಯೊಬ್ಬರೂ ಜ್ಞಾನವನ್ನೇ ಲಕ್ಷ್ಯವಾಗಿಟ್ಟುಕೊಂಡು, ತತ್ಪ್ರಾಪ್ತಿಗಾಗಿ ಕರ್ಮಾದಿಗಳ ಸಹಾಯವನ್ನು ತೆಗೆದುಕೊಳ್ಳಬೇಕು. ಯಾವ ಸಾಧನೆಯಾದರೂ, ಯಾವ ಮಾರ್ಗವಾದರೂ, ಯಾವ ಸಂಪ್ರದಾಯವಾದರೂ ಜ್ಞಾನೋದಯವನ್ನೇ ಚರಮಸ್ಥಿತಿಯಾಗಿ ಹೊಂದಿರುವುವು. ಪ್ರತಿಯೊಬ್ಬರೂ ಅಂತಹ ಜ್ಞಾನವನ್ನು ಹೊಂದಿ ಮೋಕ್ಷವನ್ನು ಪಡೆಯಬೇಕಾಗಿದೆ **(ಜ್ಞಾನಾದೇವತುಕೈವಲ್ಯಂ)**. ಈ ಶ್ಲೋಕದಲ್ಲಿ ಕರ್ಮವನ್ನು ಸಾಧನೆಯಾಗಿ, ಜ್ಞಾನವನ್ನು ಸಾಧ್ಯವಾಗಿ ನಿರೂಪಿಸಲಾಗಿದೆ. ಕರ್ಮವು ಜೀವಿಯನ್ನು ಜ್ಞಾನಸೌಧದವರೆಗೆ ತೆಗೆದುಕೊಂಡು ಹೋಗಿ ಬಿಡುವುದು. ನಂತರ ಜ್ಞಾನವೇ ಆತನನ್ನು ಸೌಧದ ಅಗ್ರ ಮೋಕ್ಷಸ್ಥಾನಕ್ಕೆ ಸೇರಿಸುವುದು. ಇದರಿಂದ ಜ್ಞಾನವು ಅಕಸ್ಮಾತ್ತಾಗಿ ಲಭಿಸುವ ವಸ್ತುವಲ್ಲವೆಂತಲೂ, ಪರಮಾರ್ಥ ಕರ್ಮಗಳನ್ನು ಮಾಡುತ್ತಾ ಮಾಡುತ್ತಾ ಚಿತ್ತ ಶುದ್ಧಿಯುಂಟಾದ ನಂತರ ಉದಯಿಸುವ ಸ್ಥಿತಿಯೆಂದು ಅರ್ಥವಾಗುತ್ತದೆ. ಆದ್ದರಿಂದ ಸತ್ಕರ್ಮಗಳು ಮೋಕ್ಷಪ್ರಾಪ್ತಿ ಪಡೆಯಲು ಜೀವಿಗೆ ಅತ್ಯವಶ್ಯಕ ಎನ್ನುವುದು ಸ್ಪಷ್ಟವಾಗುತ್ತದೆ. ನಿರಂತರ

ದೈವ ಚಿಂತನೆಯಿಂದ ಸತ್ಕಾರ್ಯಾಚರಣೆಯಿಂದ, ಭಗವದಾರಾಧನೆಯಿಂದ ಭಗವಂತನು ಕರುಣಿಸಿ ಜೀವಿಗೆ ಜ್ಞಾನವನ್ನು (ಬುದ್ಧಿಯೋಗವನ್ನು) ಪ್ರಸಾದಿಸುವನು. ಅದರಿಂದ ಆತನು ಮುಕ್ತಿ ಹೊಂದುವನು. ಆದ್ದರಿಂದ ಜ್ಞಾನವನ್ನು ಲಕ್ಷ್ಯವಾಗಿಟ್ಟುಕೊಂಡು, ಅಂತಹ ಲಕ್ಷ್ಯಸಾಧನೆಗಾಗಿ ಕರ್ಮವನ್ನಾಚರಿಸುತ್ತಾ ಬರಬೇಕು. ಒಂದು ವೇಳೆ ಸಾಧ್ಯ ವಸ್ತುವನ್ನು ಹೊಂದಿದರೂ ಲೋಕ ಸಂಗ್ರಹಾರ್ಥವಾಗಿ ಅನೇಕ ಮಹಾತ್ಮರು ಕರ್ಮಗಳನ್ನು ಬಿಡದೆ ಆಚರಿಸುತ್ತಲೇ ಇರುವರು. ಈ ಶ್ಲೋಕದಲ್ಲಿ ಜ್ಞಾನದ ಶ್ರೇಷ್ಠತೆ, ಕರ್ಮದ ಅವಶ್ಯಕತೆ- ಎರಡನ್ನೂ ಪ್ರತಿಪಾದಿಸಲಾಗಿದೆ.

"ಸರ್ವಂ" ಎನ್ನುವ ಪದವು ಸಮಸ್ತ ಕರ್ಮಗಳನ್ನು, ಸಾಧನೆಗಳನ್ನು, ಮತ್ತು ಮೇಲೆ ತಿಳಿಸಿದ ಯಜ್ಞಗಳೆಲ್ಲವನ್ನೂ ಸೂಚಿಸುವುದು.

ಪ್ರ : ಯಜ್ಞಗಳಲ್ಲೆಲ್ಲಾ ಯಾವ ಯಜ್ಞ ಶ್ರೇಷ್ಠವಾದುದು?

ಉ : ಜ್ಞಾನಯಜ್ಞ

ಪ್ರ : ಅಂದರೆ ಬೇರೆ ಯಜ್ಞಗಳು, ಕರ್ಮಗಳು ವ್ಯರ್ಥವೇ?

ಉ : ಅಲ್ಲ; ಅವು ಜ್ಞಾನೋತ್ಪಾದನೆಯನ್ನು ಮಾಡಿ ಕೊನೆಗೆ ಜ್ಞಾನದಲ್ಲಿ ಲಯಗೊಳ್ಳುವುವು; ಕರ್ಮವು ಜೀವಿಯನ್ನು ಜ್ಞಾನದವರೆಗೆ ತೆಗೆದುಕೊಂಡು ಹೋಗಿ ಬಿಡುವುದು. ಅಲ್ಲಿಂದ ಜ್ಞಾನವು ಮೋಕ್ಷದವರೆಗೆ ಜೀವಿಯನ್ನು ತೆಗೆದುಕೊಂಡು ಹೋಗುವುದು.

**ಅ||** ಜ್ಞಾನವನ್ನು ಹೊಂದುವ ಉಪಾಯವನ್ನು ತಿಳಿಸಲಾಗುತ್ತಿದೆ-

**೩೪. ತದ್ವಿದ್ಧಿ ಪ್ರಣಿಪಾತೇನ ಪರಿಪ್ರಶ್ನೇನ ಸೇವಯಾ**
**ಉಪದೇಕ್ಷ್ಯಂತಿ ತೇ ಜ್ಞಾನಂ ಜ್ಞಾನಿನಸ್ತತ್ತ್ವದರ್ಶಿನಃ**

**ಅರ್ಥ:** ತತ್‌ಜ್ಞಾನಂ=ಆ ಜ್ಞಾನವನ್ನು; ಪ್ರಣಿಪಾತೇನ=ಸಾಷ್ಟಾಂಗ ನಮಸ್ಕಾರದಿಂದ; ಪರಿಪ್ರಶ್ನೇನ=ಸಮಯ ನೋಡಿ ವಿನಯದಿಂದ ಪ್ರಶ್ನಿಸುವುದರಿಂದ; ಸೇವಯಾ=ಸೇವೆಯಿಂದ; ವಿದ್ಧಿ=ತಿಳಿದುಕೊಳ್ಳುವುದು; ತತ್ತ್ವದರ್ಶಿನಃ= ತತ್ತ್ವವೇತ್ತರಾದ (ಬ್ರಹ್ಮಾನುಭವವನ್ನು ಹೊಂದಿರುವ); ಜ್ಞಾನಿನಃ=ಜ್ಞಾನಿಗಳು; ತೇ=ನಿನಗೆ; ಉಪದೇಕ್ಷ್ಯಂತಿ=ಉಪದೇಶಿಸುವರು.

**ತಾ||** (ಓ ಅರ್ಜುನಾ) ಅಂತಹ ಜ್ಞಾನವನ್ನು ನೀನು ತತ್ತ್ವವೇತ್ತರಾದ ಜ್ಞಾನಿಗಳಿಗೆ ಸಾಷ್ಟಾಂಗ ನಮಸ್ಕಾರ ಮಾಡಿ, ಸೇವೆಮಾಡಿ, ವಿನಯದಿಂದ ಪ್ರಶ್ನಿಸಿ ತಿಳಿಯುವವನಾಗು. ಅವರು ತಪ್ಪದೆ ನಿನಗೆ ಆತ್ಮಜ್ಞಾನವನ್ನು ಉಪದೇಶಿಸುವರು.

**ವ್ಯಾಖ್ಯೆ:** ಜ್ಞಾನವು ಶ್ರೇಷ್ಠವಾದುದೆಂದು ಹಿಂದಿನ ಶ್ಲೋಕದಲ್ಲಿ ಹೇಳಲಾಗಿದೆ. ಆದರೆ ಜ್ಞಾನವು ಹೇಗೆ ಲಭಿಸುವುದು? ಯಾರಿಂದ ಲಭಿಸುವುದು? ಎನ್ನುವ ಪ್ರಶ್ನೆಗಳಿಗೆ ಇಲ್ಲಿ ಸಮಾಧಾನ ಕೊಡಲಾಗಿದೆ.

"ತತ್ತ್ವದರ್ಶಿನಃ"- ತತ್ತ್ವವೇತ್ತರಾದ ಜ್ಞಾನ ಪುಂಗವರಿಂದ ಆ ಜ್ಞಾನವು ಲಭಿಸಬಲ್ಲದು. "ತತ್ತ್ವದರ್ಶಿನಃ"- ಎಂದು ಹೇಳಲ್ಪಟ್ಟಿರುವುದರಿಂದ 'ವಾಚಾ ವೇದಾಂತಿ'ಗಳಿಂದ ಅಲ್ಲವೆಂದು, ಪರಮಾತ್ಮ ತತ್ತ್ವವನ್ನು ಪ್ರತ್ಯಕ್ಷವಾಗಿ ಅನುಭವ ಮಾಡಿಕೊಂಡವರಿಂದ ಎನ್ನುವುದು ಸ್ಪಷ್ಟವಾಗುತ್ತಿದೆ. ವೇದಾಂತವನ್ನು ಬೋಧಿಸುವವರು, ಶಾಸ್ತ್ರ ಪಾಂಡಿತ್ಯವನ್ನು ಹೊಂದಿರುವವರು, ಪ್ರಪಂಚದಲ್ಲಿ ಬಹಳ ಜನವಿರಬಹುದಾದರೂ, ಪ್ರತ್ಯಕ್ಷವಾಗಿ ಅನುಭವ ಮಾಡಿಕೊಂಡು ಬೋಧಿಸುವವರು ಬಹಳ ವಿರಳ. ಅಂತಹ ಅನುಭವಜ್ಞರ ವಾಕ್ಯಗಳಿಗೆ ಲೋಕದಲ್ಲಿ ಬಹಳ ಬೆಲೆಯಿದೆ. 'ದರ್ಶಿನಃ' ಎನ್ನುವ ಪದದಿಂದ ಪರಮಾತ್ಮನು ಅಸಾಧ್ಯವಾದ ಯಾವುದೋ ಒಂದು ವಸ್ತುವಲ್ಲವೆಂದೂ, ಪ್ರತಿಯೊಬ್ಬರೂ ಸರಿಯಾದ ಪ್ರಯತ್ನ ಮಾಡಿದರೆ, ಕಣ್ಣಾರೆ ನೋಡಬಹುದೆಂದು (ಅನುಭೂತಿಯನ್ನು ಮಾಡಿಕೊಳ್ಳಬಹುದೆಂದು) ವಿದಿತವಾಗುತ್ತದೆ. ಆದರೆ ಗೋವು, ಗೋಡೆ ಮುಂತಾದ ವಸ್ತುಗಳಂತೆ ತನಗಿಂತ ಭಿನ್ನವಾಗಿ ಆತ ಕಾಣಿಸುವುದಿಲ್ಲ. ತನ್ನ ಸ್ವರೂಪದಲ್ಲೇ ಅಡಗಿರುವನು. ('ತತ್ತ್ವದರ್ಶಿನಃ', ಎನ್ನುವ ಪದದಿಂದ ಮುಮುಕ್ಷುಗಳಿಗೆ ಆತ್ಮತತ್ತ್ವದ ಬಗ್ಗೆ ಪರಮ ಧೈರ್ಯ ಲಭಿಸುವುದು. ಏಕೆಂದರೆ, ಆತ್ಮವೆನ್ನುವುದನ್ನು ಪ್ರಯತ್ನದಿಂದ ಪ್ರತಿಯೊಬ್ಬರೂ ದರ್ಶಿಸಬಹುದೆಂದು ಈ ಪದದಿಂದ ವ್ಯಕ್ತವಾಗುತ್ತಿದೆ.) ತತ್ತ್ವದರ್ಶಿಗಳಾದ ಮಹಾತ್ಮರು ಜನರಿಗೆ ಜ್ಞಾನವನ್ನು ಬೋಧಿಸುವರು. ಆದರೆ ಎಲ್ಲರಿಗೂ ಬೋಧಿಸುವರೇ? ಇಲ್ಲ; ಅದಕ್ಕೆ ಮೂರು ಷರತ್ತುಗಳು ಇವೆ. ಅವುಗಳನ್ನು ಪಾಲಿಸುವವರಿಗೆ ಮಾತ್ರ ಅದನ್ನು ಬೋಧಿಸುವರು. ಅವು ಯಾವುವೆಂದರೆ-

೧) "ಪ್ರಣಿ ಪಾತೇನ" (ಪಾತ=ಬೀಳುವುದು, ನಿಪಾತ= ಚೆನ್ನಾಗಿ ಬೀಳುವುದು, ಪ್ರಣಿಪಾತ=ಪೂರ್ತಿಯಾಗಿ, ದೀರ್ಘವಾಗಿ ಬೀಳುವುದು) ಸಾಧಕನು ಮಹಾತ್ಮನಾದ ಜ್ಞಾನಿಗೆ ಭಕ್ತಿ ಪೂರ್ವಕವಾಗಿ ವಿನಯ ವಿಧೇಯತೆಗಳಿಂದ ಸಾಷ್ಟಾಂಗ ನಮಸ್ಕಾರವನ್ನಾಚರಿಸಬೇಕು. ತನ್ನ ಗರ್ವವನ್ನು, ಅಹಂಕಾರವನ್ನು, ದರ್ಪವನ್ನು ಪೂರ್ತಿಯಾಗಿ ಬಿಟ್ಟಿರಬೇಕು. ನಿರಹಂಕಾರವಾಗಿ ನಿರ್ಗರ್ವಿಯಾಗಿ ವಿನಯದಿಂದಿರಬೇಕು. ತಾನು ದೊಡ್ಡವನು ಎನ್ನುವ ಭಾವವಿರಬಾರದು. ಏಕೆಂದರೆ ದೇಹಾಭಿಮಾನವೆನ್ನುವ ಪಿಶಾಚಿ ಒಳಗಿರುವವರೆಗೆ ಗುರುಬೋಧೆ ಹೃದಯದಲ್ಲಿ ಪ್ರವೇಶಿಸದು. (ಕೊಳೆಯಾದ ಬಟ್ಟೆಗೆ ಬಣ್ಣ ಹತ್ತದಂತೆ). ಸಾಷ್ಟಾಂಗ ನಮಸ್ಕಾರದಿಂದ ಅಭಿಮಾನ ಸತ್ತು ಹೋಗುವುದು. ಸಾಧಕನಿಗೆ ಈ ನಿರಭಿಮಾನತ್ವ ಪ್ರಪ್ರಥಮವಾದ ಅವಶ್ಯಕತೆಯಾಗಿದೆ. ನಿಂತು ನಮಸ್ಕರಿಸಿದರೆ ಸಾಲದೆ? ಬಗ್ಗಿ ನಮಸ್ಕರಿಸಿದರೆ ಸಾಲದೆ? ಅದು ಸಾಕಾಗುವುದಿಲ್ಲ. ಅಷ್ಟಾಂಗಗಳು ನೆಲವನ್ನು ಸ್ಪುರಿಸಿ ಸಾಷ್ಟಾಂಗ ನಮಸ್ಕಾರವನ್ನು ಮಾಡಬೇಕಾದದ್ದೇ ಎಂದು ಹೇಳಿದ್ದಾರೆ. ಇದರ ಆಂತರ್ಯವೇನು? ಇದು ಒಂದು ದೊಡ್ಡ ಸಾಧನೆ. ಆ ಸಾಧನೆಯಿಂದ ದೇಹದಲ್ಲಿ ಬೆಳೆದಿರುವ ಕೊಬ್ಬು (ಅಹಂಕಾರವು) ಕರಗಿ ಹೋಗುವುದು. ವಾಸ್ತವವಾಗಿ ಮಹನೀಯರು ತಾವು ನಮಸ್ಕರಿಸಿಕೊಳ್ಳಬೇಕೆಂದು ಯಾವಾಗಲೂ ಆಶಿಸುವುದಿಲ್ಲ. ಆದರೆ ಸಾಧಕನಲ್ಲಿ ವಿನಯ ವಿಧೇಯತೆಗಳು ಇವೆಯೋ ಇಲ್ಲವೋ ಎನ್ನುವುದನ್ನು ಈ ಕ್ರಿಯೆಗಳಿಂದ ಪರೀಕ್ಷಿಸಿ ಅನಂತರ ಉಪದೇಶಿಸುವರು.

ಪ್ರಪಂಚದ ದೃಷ್ಟಿಯಲ್ಲಿ ಮನುಷ್ಯನು ದೊಡ್ಡ ಮನುಷ್ಯನಾಗಿರಬಹುದು! ಅಧಿಕಾರವಿರಬಹುದು! ರಾಜಾಧಿರಾಜನಾಗಿರಬಹುದು! ಆದರೆ ದೇವರ ಬಳಿ, ಗುರುವಿನ ಹತ್ತಿರ ಮಹನೀಯರಾದ ತತ್ವವೇತ್ತರ ಬಳಿ ಆ ಅಧಿಕಾರವು ನಡೆಯದು. ಪರಮಾರ್ಥ ದೃಷ್ಟಿಯಲ್ಲಿ ವ್ಯಾವಹಾರಿಕ ಪದವಿಗಳಿಗೆ ಬೆಲೆಯಿಲ್ಲ. ಭೌತಿಕ ಬಲಸಂಪತ್ತುಗಳು ಆಧ್ಯಾತ್ಮಿಕ ಸಂಪದಕ್ಕೆ ತಲೆ ಬಗ್ಗಿಸಲೇಬೇಕು. ಬ್ರಹ್ಮಬಲವೇ ನಿಜವಾದ ಬಲ. ವಿಶ್ವಾಮಿತ್ರನು ವಿಶೇಷವಾದ ಭೌತಿಕ ಬಲವನ್ನು ಹೊಂದಿದ್ದರೂ, '**ಧಿಕ್‌ಬಲಂ ಕ್ಷತ್ರಿಯ ಬಲಂ, ಬ್ರಹ್ಮ ತೇಜೋ ಬಲಂ ಬಲಮ್**' ಎಂದು ಹೇಳಿ ವಶಿಷ್ಠ ಮಹರ್ಷಿಗೆ ಸಾಷ್ಟಾಂಗ ನಮಸ್ಕಾರ ಮಾಡಿ ಬ್ರಹ್ಮರ್ಷಿ ಎಂದು ಆತನಿಂದ ಸ್ತುತಿಸಲ್ಪಟ್ಟದ್ದು ಸರ್ವರಿಗೂ ತಿಳಿದ ವಿಷಯವಲ್ಲವೇ! ಆದುದರಿಂದಲೇ ಪೂರ್ವ ಕಾಲದಲ್ಲಿಯೇ ಅಲ್ಲದೆ, ಈ ಕಾಲದಲ್ಲಿಯೂ ಕೂಡ ರಾಜಾಧಿರಾಜರು, ಶ್ರೀಮಂತರು ಎಲ್ಲೋ ಏಕಾಂತದಲ್ಲಿ ಕೌಪೀನಧಾರಿಯಾಗಿರುವ ಜ್ಞಾನಿಯ ಬಳಿಗೆ ಹೋಗಿ ಕೈಕಟ್ಟಿಕೊಂಡು ನಿಂತು,

ಸಾಷ್ಟಾಂಗ ನಮಸ್ಕಾರ ಮಾಡಿ ಉಪದೇಶವನ್ನು ಹೊಂದುತ್ತಿದ್ದಾರೆ. ಒಂದು ವೇಳೆ ಗರ್ವದಿಂದ ಗುರುಗಳ ಬಳಿಗೆ ಹೋದಲ್ಲಿ ಆ ಠೀವಿ, ಅಭಿಮಾನವನ್ನು ನೋಡಿ ಅವರು ಉಪದೇಶಿಸಲು ನಿರಾಕರಿಸಿದರೆ ಕೊನೆಗೆ ನಷ್ಟಪಡುವವರು ಯಾರು? ಆದ್ದರಿಂದಲೇ ಯಾವ ಮತದವರೇ ಆಗಲಿ ದೇವಾಲಯಗಳಲ್ಲಿ, ದೊಡ್ಡವರ ಸನ್ನಿಧಿಯಲ್ಲಿ, ಪಾದರಕ್ಷೆ, ತಲೆಯ ಮೇಲಿನ ರಕ್ಷೆ ತೆಗೆದು ಹಾಕುವರು (ಆ ವಸ್ತುಗಳಲ್ಲಿ ಅಭಿಮಾನವನ್ನು ಪ್ರದರ್ಶಿಸುವ ಗುಣಗಳಿವೆಯಾದ್ದರಿಂದ).

೨) "ಪರಿಪ್ರಶ್ನೇನ"- ಮೇಲೆ ತಿಳಿಸಿದ ಹಾಗೆ ದೊಡ್ಡವರಿಗೆ ಸಾಷ್ಟಾಂಗ ನಮಸ್ಕಾರ ಮಾಡಿ, ನಂತರ ತನ್ನ ಸಂದೇಹವನ್ನು ಕುರಿತು ವಿನಯದಿಂದ, ಸಮಯಾಸಮಯಗಳನ್ನು ನೋಡಿ ಪ್ರಶ್ನಿಸಬೇಕು. ಆದ್ದರಿಂದಲೇ 'ಪ್ರಶ್ನೆ' ಎಂದು ಹೇಳದೆ 'ಪರಿಪ್ರಶ್ನೆ' ಎಂದು ಹೇಳಲಾಗಿದೆ. ಸೌಮ್ಯ ವಾಕ್ಯಗಳಲ್ಲಿ ಭಕ್ತಿಭಾವದಿಂದ ಪ್ರಶ್ನಿಸಬೇಕೆಂದು ಭಾವ.

೩) "ಸೇವಯಾ"- ಇನ್ನು ಮೂರನೆಯದು ಸೇವೆ. ಹಿರಿಯರ ಸೇವೆ ಮಾಡಿ ಅವರ ಅನುಗ್ರಹವನ್ನು ಸಂಪಾದಿಸಬೇಕು. ಗುರುಸೇವೆಯಿಂದ ಗುರುಗಳ ಹೃದಯವನ್ನು ಸೂರೆಗೊಳ್ಳಬಹುದು. ಅವರ ಅನುಗ್ರಹ, ಕಟಾಕ್ಷ ವಿಲ್ಲದೆಯಿದ್ದಲ್ಲಿ ಪರಮಾತ್ಮ ರಂಗದಲ್ಲಿ ಸಾಧಕನು ಒಂದು ಹೆಜ್ಜೆಯನ್ನಾದರೂ ಮುಂದೆ ಹಾಕಲಾರ. ಆದ್ದರಿಂದಲೇ ಗುರುಸೇವೆ, ದೈವಸೇವೆ ಅತ್ಯವಶ್ಯಕಗಳೆಂದು ಶಾಸ್ತ್ರಗಳಲ್ಲಿ ಹೇಳಲಾಗಿದೆ. ಮಾಯೆಯನ್ನು ದಾಟಬೇಕೆಂದರೆ, ಮಾಯೆಯನ್ನು ಜಯಿಸಿದ ಮಹನೀಯರ ರಕ್ಷೆ ಇರಬೇಕು. ಗುರುಸೇವೆಯಲ್ಲಿ ಬಹಳ ಪ್ರಯೋಜನವಿದೆ.

ಈ ಪ್ರಕಾರವಾಗಿ ೧) ಸಾಷ್ಟಾಂಗವಂದನೆ ೨) ಪರಿಪ್ರಶ್ನೆ ೩) ಸೇವೆ- ಎನ್ನುವ ಮೂರನ್ನು ಆಚರಣೆಯಲ್ಲಿಟ್ಟುಕೊಂಡಾಗ, ತಮ್ಮ ಕೃಪಾದೃಷ್ಟಿಯನ್ನು ಆ ಮುಮುಕ್ಷುವಿನ ಮೇಲೆ ತೋರಿಸಿ 'ತಪ್ಪದೆ ಉಪದೇಶಿಸುವರು (ಉಪದೇಕ್ಷ್ಯಂತಿ) ಎಂದು ಅಸಂದಿಗ್ಧವಾಗಿ ಇಲ್ಲಿ ಹೇಳಲಾಗಿದೆ. ಶಿಷ್ಯನು ತಾನು ಕೇಳಬೇಕಾದ ಪದ್ಧತಿಯಲ್ಲಿ ಕೇಳಿದರೆ ಗುರು ತಾನು ಹೇಳಬೇಕಾದ ಪದ್ಧತಿಯಲ್ಲಿ ಹೇಳುವನು. ಶಿಷ್ಯನು ತನ್ನ ಕರ್ತವ್ಯವನ್ನು ಪರಿಪಾಲಿಸದೆ ಇದ್ದರೆ ಗುರುವಿನಿಂದ ಬೋಧೆ ಎಂದೆಂದಿಗೂ ಸಿಗುವುದಿಲ್ಲ.

ಆದರೆ, ಆ ಗುರುಗಳು ಏನನ್ನು ಉಪದೇಶಿಸುವರು? ಜ್ಞಾನವನ್ನು. ಅಜ್ಞಾನದಲ್ಲಿರುವವನಿಗೆ ಇನ್ನೇನು ಬೇಕು? ಯಾವುದು ಸತ್ಯವೋ, ಯಾವುದು ನಿತ್ಯವೋ ಅದನ್ನೇ ಅವರು ಉಪದೇಶಿಸುವರು. ಶಿಷ್ಯನು ಧನ್ಯನಾಗುವನು.

ಆಧ್ಯಾತ್ಮಕ್ಷೇತ್ರದಲ್ಲಿ ಮುಂದುವರಿಯಲು ಗುರುವಿನ ಸಹಾಯ ತಪ್ಪದೆ ಬೇಕೆಂದು ಈ ಶ್ಲೋಕದಿಂದ ತಿಳಿದುಬರುತ್ತದೆ. ಮತ್ತೆ ಗುರುವಿನ ಸನ್ನಿಧಿಯಲ್ಲಿ ಗುರುಕುಲವಾಸದಲ್ಲಿ ಶಿಷ್ಯನು ಹೇಗೆ ಪ್ರವರ್ತಿಸಬೇಕು ಎನ್ನುವ ಪದ್ಧತಿಯನ್ನು ಇಲ್ಲಿ ಚೆನ್ನಾಗಿ ತಿಳಿಸಲಾಗಿದೆ. ಆದ್ದರಿಂದ ಮುಮುಕ್ಷುಗಳು ಇವುಗಳನ್ನು ಚೆನ್ನಾಗಿ ಗಮನಿಸಬೇಕು.

ಶ್ರೀಕೃಷ್ಣಪರಮಾತ್ಮ ತಾನು ಅರ್ಜುನನಿಗೆ ಆತ್ಮಜ್ಞಾನ ಉಪದೇಶಿಸಿದರೂ ಮತ್ತೆ ತತ್ವಜ್ಞರ ಬಳಿಗೆ ಹೋಗಿ ಅದನ್ನು ತಿಳಿದುಕೊಳ್ಳಬೇಕೆಂದು ಏಕೆ ಬೋಧಿಸಿದನು? ೧) ತಾನು ಉಪದೇಶಿಸಿದ ಜ್ಞಾನವು ಚೆನ್ನಾಗಿ ದೃಢವಾಗಲೆಂದು ಮಹನೀಯರ ಬಳಿಗೆ ಹೋಗಿ ತಿಳಿದುಕೊಳ್ಳಬೇಕೆಂದು ಹೇಳಿರಬಹುದು. ೨) ಇಲ್ಲದಿದ್ದರೆ ಗುರುಶಿಷ್ಯ ಸಂಬಂಧವಾದ ಸರ್ವೇ ಸಾಮಾನ್ಯ ಪದ್ಧತಿಯನ್ನು ಇದರ ಮೂಲಕ ಲೋಕಕ್ಕೆ ಸೂಚಿಸಿರಬಹುದು.

ಪ್ರ : ಜ್ಞಾನವು ಯಾರಿಂದ ಲಭಿಸುವುದು?

ಉ : ಅನುಭವಯಜ್ಞರು ಮತ್ತು ತತ್ವವೇತ್ತರಿಂದ.

ಪ್ರ : ಅಂಥಹ ಸದ್ಗುರುಗಳ ಬಳಿ ಮುಮುಕ್ಷು ಹೇಗೆ ಪ್ರವರ್ತಿಸಬೇಕು?

ಉ : ೧) ಸಾಷ್ಟಾಂಗ ವಂದನೆಯನ್ನು ಆಚರಿಸಬೇಕು. ೨) ವಿನಯದಿಂದ ಸಮಯಾಸಮಯಗಳನ್ನು ನೋಡಿ ಪ್ರಶ್ನಿಸಬೇಕು. ೩) ಸೇವೆಯನ್ನು ಮಾಡಬೇಕು.

**ಅ॥** ಜ್ಞಾನವನ್ನು ಹೊಂದುವುದರಿಂದ ಉಂಟಾಗುವ ಫಲಗಳನ್ನು ತಿಳಿಸಲಾಗುತ್ತಿದೆ-

**೩೫. ಯಜ್ಜ್ಞಾತ್ವಾ ನ ಪುನರ್ಮೋಹಮೇವಂ ಯಾಸ್ಯಸಿ ಪಾಂಡವ**
**ಯೇನ ಭೂತಾನ್ಯಶೇಷೇಣ ದ್ರಕ್ಷ್ಯಸ್ಯಾತ್ಮನ್ಯಥೋ ಮಯಿ**

**ಅರ್ಥ:** ಪಾಂಡವ=ಓ ಅರ್ಜುನಾ!; ಯತ್=ಏನನ್ನು(ಯಾವ ಜ್ಞಾನವನ್ನು); ಜ್ಞಾತ್ವಾ=ತಿಳಿದುಕೊಂಡು; ಪುನಃ=ಮತ್ತೆ; ಏವಂ=ಇಂತಹ; ಮೋಹಂ= ಮೋಹವನ್ನು (ಅಜ್ಞಾನವನ್ನು); ನ ಯಾಸ್ಯಸಿ=ಹೊಂದುವುದಿಲ್ಲವೋ; ಏನ=ಯಾವುದರಿಂದ; ಭೂತಾನಿ ಅಶೇಷೇಣ- ಸಮಸ್ತ ಪ್ರಾಣಿಗಳನ್ನು; ಆತ್ಮನಿ= ನಿನ್ನಲ್ಲಿ; ಅಥೋ=ಹಾಗೆಯೇ; ಮಯಿ=ನನ್ನಲ್ಲಿ; ದ್ರಕ್ಷ್ಯಸಿ= ನೋಡಬಲ್ಲೆಯೋ; (ತತ್=ಅಂತಹ; ಜ್ಞಾನಂ=ಜ್ಞಾನವನ್ನು, ವಿದ್ಧಿ=ತಿಳಿದುಕೊ).

**ತಾ॥** ಓ ಅರ್ಜುನಾ! ಯಾವುದನ್ನು ತಿಳಿದುಕೊಳ್ಳುವುದರಿಂದ ಇಂತಹ ಮೋಹವನ್ನು ನೀನು ಪುನಃ ಪಡೆಯುವುದಿಲ್ಲವೋ ಮತ್ತೆ ಯಾವುದರಿಂದ ಸಮಸ್ತ ಪ್ರಾಣಿಗಳನ್ನು ನಿನ್ನಲ್ಲಿಯೂ, ನನ್ನಲ್ಲಿಯೂ ನೋಡಬಲ್ಲೆಯೋ (ಅಂತಹ ಜ್ಞಾನವನ್ನು ತತ್ವವೇತ್ತರಿಂದ ತಿಳಿದುಕೊಳ್ಳುವುದು).

**ವ್ಯಾಖ್ಯೆ:** ಜ್ಞಾನವನ್ನು ಹೊಂದುವುದರಿಂದ ಎರಡು ಫಲಗಳುಂಟಾಗುವುವು. ೧) ಅಲ್ಲಿಯವರೆಗೆ ಇದ್ದ ಮೋಹ (ಅಜ್ಞಾನ) ನಶಿಸುವುದು. ೨) ಸಮಸ್ತ ಪ್ರಾಣಿ ಕೋಟಿಗಳನ್ನು ತನ್ನಲ್ಲಿಯೂ ಹಾಗೂ ಭಗವಂತನಲ್ಲಿಯೂ ವೀಕ್ಷಿಸಬಲ್ಲನು. ಈ ಎರಡನ್ನೂ ಕುರಿತು ಸ್ವಲ್ಪ ವಿಚಾರಿಸೋಣ.

೧) ಕಣ್ಣುಗಳಿರುವುದಕ್ಕೆ ಗುರುತು ತಗ್ಗಿನಲ್ಲಿ ಮುಗ್ಗರಿಸಿ ಬೀಳದೇ ಇರುವುದು. ಯಾರಾದರೂ ತಗ್ಗಿನಲ್ಲಿ ಬಿದ್ದರೆ ಆತನಿಗೆ ಕಣ್ಣುಗಳಿಲ್ಲವೆಂದರ್ಥ. ಹಾಗೆಯೇ ಜ್ಞಾನ ಹೊಂದಿದವನ ಗುರುತು ಮತ್ತೆ ಮೊದಲಿನಂತೆ ಮೋಹಗೊಳ್ಳದೆ ಇರುವುದು. ದೃಕ್ಸ್ವರೂಪವಾದ ಆತ್ಮವೊಂದೇ ಸತ್ಯ. ಬೇರೆ ದೃಶ್ಯ ಪದಾರ್ಥಗಳೆಲ್ಲವೂ ಅಸತ್ಯವೆನ್ನುವುದೇ ಜ್ಞಾನ. ಆ ಜ್ಞಾನ ಹೊಂದಿದವನು ಮತ್ತೆ ದೃಶ್ಯವಸ್ತುಗಳನ್ನು ಕುರಿತು ಶೋಕವನ್ನು ಅಥವ ಮೋಹವನ್ನು ಹೇಗೆ ಹೊಂದುವನು?*

ಮಾವಿನಕಾಯಿ ಎಳೆಯದಾಗಿದ್ದಾಗ ಒಗರು ಹಾಗು ಹುಳಿಯಾಗಿರುವುದು. ಮಾಗಿದ ನಂತರ ಎಲ್ಲಿ ಕಡಿದರೂ ಸಿಹಿಯಾಗಿಯೇ ಇರುವುದು. ಮೊದಲಿದ್ದ ಹುಳಿ, ಒಗರು ಇರುವುದಿಲ್ಲ. ಒಂದು ವೇಳೆ ಇದ್ದರೆ ಅದು ಇನ್ನೂ ಪಕ್ವವಾಗಿಲ್ಲ

* ಯಸ್ಮಿನ್ ಸರ್ವಾಣಿ ಭೂತಾನ್ಯಾತ್ಮೈವಾಭೂದ್ವಿಜಾನತಃ। ತತ್ರ ಕೋ ಮೋಹಃ ಕಃ ಶೋಕ ಏಕತ್ವಮನುಪಶ್ಯತಃ (ಈಶಾವಾಸ್ಯೋಪನಿಷತ್ತು)

ವೆಂದರ್ಥ. ಹಾಗೆಯೇ ಇಲ್ಲಿಯವರೆಗೆ ಅರ್ಜುನನು ಬಂಧ್ವಾದಿಗಳನ್ನು ನೋಡಿ 'ಇವರು ನನ್ನವರು' ಇವರನ್ನು ಹೇಗೆ ವಧಿಸಬಲ್ಲೆ? ಎನ್ನುವ ಮೋಹದಲ್ಲಿ ಬಿದ್ದಿದ್ದನು. ಜ್ಞಾನಪ್ರಾಪ್ತಿಯ ನಂತರ ಆ ಮೋಹವು ತಾನೇ ತಾನಾಗಿ ಮಾಯವಾಗುವುದೆಂದು ಭಗವಂತನು ಅರ್ಜುನನಿಗೆ ಬೋಧಿಸಿದನು.

ಜನರಲ್ಲಿ ಕೆಲವರು ತಮಗೆ ಜ್ಞಾನವುಂಟಾಗಿದೆಯೆಂದು ಹೇಳಬಹುದು ಆದರೆ ಆಚರಣೆಯಲ್ಲಿ, ಅನುಷ್ಠಾನದಲ್ಲಿ, ವಿಷಯಪ್ರವೃತ್ತಿಯಲ್ಲಿ ಲೋಪಗಳು ಇದ್ದರೆ ಅಂತಹವರು ಇನ್ನೂ ಜ್ಞಾನವನ್ನು ಹೊಂದಿಲ್ಲವೆಂದು ಈ ಭಗವತ್ವಾಕ್ಯದಿಂದ ಸ್ಪಷ್ಟವಾಗುತ್ತದೆ. ಮೋಹವನ್ನು, ವಿಷಯಾಸಕ್ತತೆಯನ್ನು ತ್ಯಜಿಸಿ ಇರುವುದೇ ಜ್ಞಾನದ ಚಿಹ್ನೆ. ಭಗವಂತನ ಈ ವಾಕ್ಯಗಳಿಂದ ಆಚರಣಾ ಶೂನ್ಯರಾದ ಶುಷ್ಕವೇದಾಂತಿಗಳಿಗೆ ದೊಡ್ಡ ಆಘಾತವುಂಟಾಗುತ್ತದೆ. ಅವರು ತಮ್ಮ ಆಚರಣೆಯನ್ನು ಶುದ್ಧಪಡಿಸಿಕೊಂಡು ಲೋಕಕ್ಕೆ ಆದರ್ಶವಂತ ರಾಗಬೇಕು. ಭಗವದ್ಗೀತೆಯು ಅನುಷ್ಠಾನವನ್ನು ಹೆಚ್ಚಾಗಿ ಪ್ರೋತ್ಸಾಹಿಸು ತ್ತದೆಂದು ಈ ವಾಕ್ಯಗಳಿಂದ ಚೆನ್ನಾಗಿ ತಿಳಿದುಬರುತ್ತದೆ. ಆದ್ದರಿಂದ ಸಾಧಕನು ಒಂದೊಂದು ಸಾಧನೆಯನ್ನು ಅನುಷ್ಠಾನಗೊಳಿಸಿಕೊಳ್ಳುತ್ತಾ ಅದು ಪೂರ್ತಿಯಾಗಿ ಸಿದ್ಧಿಸಿರುವುದೇ, ಇಲ್ಲವೇ ಎಂದು ತನ್ನನ್ನು ತಾನೇ ಪರೀಕ್ಷಿಸಿಕೊಳ್ಳುತ್ತಿರಬೇಕು. ಕಾಮವು ಪೂರ್ತಿಯಾಗಿ ದೂರವಾಗಿದೆಯೇ? ಕ್ರೋಧವು ಅಂತ್ಯವಾಗಿದೆಯೇ? ಅಸೂಯೆ ಹತೋಟಿಯಲ್ಲಿದೆಯೇ? ದೈವಗುಣವನ್ನು ಹೊಂದಿದ್ದೇನೆಯೇ? ಎಂದು ಪರೀಕ್ಷಿಸಿಕೊಳ್ಳುತ್ತಿರಬೇಕು. ಹೃದಯ ಶೋಧನೆಯನ್ನು ಮಾಡಬೇಕು. ಒಳಗೆ ಇರುವ ವಾಸನೆಗಳನ್ನು ಹುಡುಕಿ ಹೊರದೂಡಬೇಕು. ಆತ್ಮಜ್ಞಾನವು ಗಾಢವಾದ ನಂತರ ಈ ಕಾಮಾದಿ ದುರ್ಗುಣಗಳಿರುವುದಕ್ಕೆ ಅವಕಾಶವೇ ಇಲ್ಲ.

(೨) ಇನ್ನು ಎರಡನೆಯ ವಿಷಯ- ಜ್ಞಾನವನ್ನು ಹೊಂದಿದವರು ಸಮಸ್ತ ಪ್ರಾಣಿಕೋಟಿಗಳನ್ನು ತನ್ನಲ್ಲಿಯೂ, ಪರಮಾತ್ಮನಲ್ಲಿಯೂ ನೋಡುವುದನ್ನು ಕುರಿತು ವಿಚಾರಿಸೋಣ. ಈ ಬ್ರಹ್ಮಾಂಡವೆಲ್ಲವೂ, ಈ ಚರಾಚರ ಜಗತ್ತೆಲ್ಲವೂ ಆತ್ಮದಲ್ಲಿ ಕಲ್ಪಿತವಾಗಿದೆ. ಸರ್ಪವು ಎಲ್ಲಿದೆ? ಹಗ್ಗದಲ್ಲಿಯೇ ಇದೆ. ಸ್ವಪ್ನವು ಎಲ್ಲಿದೆ? ಎಚ್ಚರವಾಗಿರುವವನಲ್ಲಿಯೇ. 'ಆರೋಪಿತ ವಸ್ತು ಅಧಿಷ್ಠಾನದಲ್ಲಿಯೇ ಇದೆ'. ಆದ್ದರಿಂದ ಅಧಿಷ್ಠಾನದ ಆತ್ಮಸ್ವರೂಪವನ್ನು ಅನುಭೂತಿಗೊಳಿಸಿಕೊಂಡ ಜ್ಞಾನಿಗೆ ಆರೋಪಿತವಾದ ಈ ಸಮಸ್ತ ಜಗತ್ತು ತನ್ನಲ್ಲಿಯೇ ಗೋಚರಿಸುವುದು. ಇಲ್ಲದೆ ಇನ್ನೊಂದು ವಿಧವಾಗಿ ಆಲೋಚಿಸಿ ನೋಡಿದರೆ ಈ ಸಮಸ್ತ ಬ್ರಹ್ಮಾಂಡವು ಮನಸ್ಸಿನ ಕಲ್ಪನೆಯೇ ಆಗಿದೆ. ಆ ಮನಸ್ಸೋ ಆತ್ಮದಲ್ಲಿ (ಮಿಥ್ಯಾರೂಪದಲ್ಲಿ) ಸ್ಥಿತಿ ಹೊಂದಿದೆ. ಆದ್ದರಿಂದ ಸಮಸ್ತ ಜಗತ್ತನ್ನು, ಪ್ರಾಣಿಕೋಟಿಗಳನ್ನು ಆತ್ಮದಲ್ಲಿ (ತನ್ನಲ್ಲಿ) ಜ್ಞಾನಿ ನೋಡಬಲ್ಲನು. ಈ ಸತ್ಯವನ್ನೇ ಇಲ್ಲಿ ತಿಳಿಸಲಾಗಿದೆ.

'ಅಥೋಮಯಿ'ಎನ್ನುವುದರಿಂದ ತನ್ನಲ್ಲಿ ಹಾಗೂ ಭಗವಂತನಲ್ಲಿ ಸಮಸ್ತ ಭೂತಗಳನ್ನು ನೋಡಬಲ್ಲನೆಂದರ್ಥ. ಆದರೆ ಭಗವಂತನು ತನಗಿಂತ ಭಿನ್ನವಲ್ಲ. ಜ್ಞಾನವು ಯಾವಾಗ ಉದಯಿಸುವುದೋ ಆಗ ತಾನೇ ಭಗವಂತನಾಗುವನು **(ಜ್ಞಾನೀತ್ವಾತ್ಮೈವ ಮೇಮತಮ್)**. ಆದ್ದರಿಂದ ತನ್ನಲ್ಲಿ ಯಾವಾಗ ಜಗತ್ತೆಲ್ಲವನ್ನು ಕಾಣುವನೋ, ಆಗ ಭಗವಂತನಲ್ಲಿ ಜಗತ್ತನ್ನು ನೋಡಿದಂತೇ ಆಯಿತಲ್ಲವೇ! ಆದರೆ ಈ ಸ್ಥಿತಿ ಅಜ್ಞಾನ ಕಾಲದಲ್ಲಿ ಉಂಟಾಗುವುದಿಲ್ಲ. ಜ್ಞಾನ ಪ್ರಾಪ್ತಿಯಿಂದ ದ್ವೈತ ಭಾವವು ನಿರ್ಮೂಲವಾಗಿ, ಅದ್ವೈತ ಭಾವವೇರ್ಪಟ್ಟಾಗ ಸಿದ್ಧಿಸುವುದು. ಆಗ ಗುರುವಿಗೂ ಶಿಷ್ಯನಿಗೂ, ಭಗವಂತನಿಗೂ ಭಕ್ತನಿಗೂ ಯಾವ ಭೇದವೂ ಇಲ್ಲದೆ ಎಲ್ಲವೂ ಏಕ ಸ್ವರೂಪವಾಗಿ ಬೆಳಗುವುದು.

ಇಲ್ಲಿ ಅರ್ಜುನನು=x, ಶ್ರೀಕೃಷ್ಣ=y, ಸಮಸ್ತ ಪ್ರಾಣಿಕೋಟಿಗಳು=z ಎಂದುಕೊಂಡರೆ-

**"ದ್ರಕ್ಷ್ಯಾತ್ಮನ್ಯಥೋಮಯಿ"** ಎನ್ನುವ ವಾಕ್ಯದ ಮೂಲಕ ಆತ್ಮನಿ= ತನ್ನಲ್ಲಿ (ಅರ್ಜುನನಲ್ಲಿ) ಸಮಸ್ತ ಪ್ರಾಣಿಕೋಟಿಗಳನ್ನು ನೋಡುವವನಾದ್ದರಿಂದ, x=z ಆಗುತ್ತಿದೆ. ಹಾಗೆಯೇ ಮಯಿ=ಶ್ರೀಕೃಷ್ಣನಲ್ಲಿ ಸಮಸ್ತ ಪ್ರಾಣಿಕೋಟಿ ಗಳನ್ನು ನೋಡಬಲ್ಲವನಾದ್ದರಿಂದ y=z ಆಗುತ್ತಿದೆ.

ಆದ್ದರಿಂದ x=z (ಅರ್ಜುನ=ಸಮಸ್ತ ಪ್ರಾಣಿಕೋಟಿಗಳು)
y=z (ಕೃಷ್ಣ=ಸಮಸ್ತ ಪ್ರಾಣಿಕೋಟಿಗಳು)
ಆದ್ದರಿಂದ x=y (ಅರ್ಜುನ=ಕೃಷ್ಣ) ಎಂದರ್ಥವಾಗುತ್ತದೆ.

ಸಮಸ್ತ ಪ್ರಾಣಿಕೋಟಿಗಳು ಎರಡು ವಸ್ತುಗಳಲ್ಲಿ ಬೇರೆ ಬೇರೆಯಾಗಿ ಇರುವ ಸಂಭವವಿಲ್ಲವಾದ್ದರಿಂದ ಗಣಿತ ಶಾಸ್ತ್ರದಂತೆ (Mathematical point of view) ನೋಡಿದರೂ ಅವೆರಡೂ ಒಂದೇ ಆಗಿರಬೇಕು. ಆದ್ದರಿಂದ ಜ್ಞಾನಾನಂತರ ಜೀವಿಯು ಸಾಕ್ಷಾತ್ ಶ್ರೀಕೃಷ್ಣಪರಮಾತ್ಮನೇ ಆಗುತ್ತಿದ್ದಾನೆಂದರ್ಥ.

ಇದರಿಂದ ಜ್ಞಾನವು ಎಷ್ಟು ಮಹತ್ತರವಾದುದೋ ತಿಳಿಯುವುದು. ಪ್ರಪಂಚದಲ್ಲಿ ಎಷ್ಟೋ ಕಷ್ಟಬಿದ್ದರೆ ಸ್ವಲ್ಪ ಧನ, ಕ್ಷೇತ್ರ, ಅಧಿಕಾರಗಳು ಮಾತ್ರ ಲಭಿಸುವುವು. ಆದರೆ ಸ್ವಲ್ಪ ಪರಿಶ್ರಮದಿಂದ, ಸಾಧನೆಯಿಂದ ಇಂದ್ರಿಯನಿಗ್ರಹದಿಂದ, ಆತ್ಮ ವಿಚಾರಣೆಯಿಂದ, ಭಕ್ತಿಯಿಂದ ಬ್ರಹ್ಮಾಂಡ ವೆಲ್ಲವನ್ನೂ ಜೀವಿಯು ಹೊಂದುತ್ತಿದ್ದಾನೆ. ಇಷ್ಟೇಕೆ ಸಾಕ್ಷಾತ್ ಭಗವಂತನೇ ಆಗುತ್ತಿದ್ದಾನೆ. ಎಂತಹ ಉತ್ಕೃಷ್ಟ ಪದವಿ! ಆದ್ದರಿಂದ ಶ್ರೀಕೃಷ್ಣ ಮೂರ್ತಿಯ ಈ ವಾಕ್ಯದಲ್ಲಿ ಅಕುಂಠಿತ ವಿಶ್ವಾಸವನ್ನಿಟ್ಟು ಆ ಮಹೋನ್ನತ ಪದವಿಯನ್ನು ಪಡೆಯುವುದಕ್ಕಾಗಿ, ಮಹನೀಯರನ್ನು ಸೇವಿಸಿ, ಈ ಜನ್ಮದಲ್ಲೇ ಆತ್ಮಜ್ಞಾನವನ್ನು ಸಂಪಾದಿಸಿಕೊಳ್ಳಬೇಕು.

ಪ್ರ : ಜ್ಞಾನವನ್ನು ಹೊಂದುವುದರಿಂದ ಉಂಟಾಗುವ ಫಲವೇನು?

ಉ : ೧) ಮತ್ತೆ ಜೀವಿಯು ಮೋಹದಲ್ಲಿ (ಅಜ್ಞಾನದಲ್ಲಿ) ಬೀಳುವುದಿಲ್ಲ.

೨) ಸಮಸ್ತ ಪ್ರಾಣಿಕೋಟಿಗಳನ್ನು ತನ್ನಲ್ಲಿಯೂ, ಭಗವಂತನಲ್ಲಿಯೂ ನೋಡಬಲ್ಲನು.

**ಅ||** ಜ್ಞಾನದ ಪ್ರಭಾವವನ್ನು ವರ್ಣಿಸಲಾಗುತ್ತಿದೆ-

**೩೬. ಅಪಿ ಚೇದಸಿ ಪಾಪೇಭ್ಯಃ ಸರ್ವೇಭ್ಯಃ ಪಾಪಕೃತ್ತಮಃ**
**ಸರ್ವಂ ಜ್ಞಾನಪ್ಲವೇನೈವ ವೃಜಿನಂ ಸಂತರಿಷ್ಯಸಿ**

**ಅರ್ಥ:** ಸರ್ವೇಭ್ಯಃ ಪಾಪೇಭ್ಯಃ=ಪಾಪಾತ್ಮರೆಲ್ಲರಿಗಿಂತಲೂ; (ತ್ವಂ=ನೀನು) ಪಾಪಕೃತ್ತಮಃ=ಹೆಚ್ಚಿಗೆ ಪಾಪವನ್ನು ಮಾಡಿದವನು; ಅಸಿಚೇತ್ ಅಪಿ= ಆಗಿದ್ದರೂ; ಸರ್ವಂ=ಸಮಸ್ತವಾದ; ವೃಜಿನಂ=ಪಾಪವನ್ನು; ಜ್ಞಾನಪ್ಲವೇನ ಏವ=ಜ್ಞಾನವೆನ್ನುವ ದೋಣಿಯಿಂದಲೇ; ಸಂತರಿಷ್ಯಸಿ=ಸುಲಭವಾಗಿ ದಾಟಬಲ್ಲೆ.

**ತಾ||** (ಒಂದು ವೇಳೆ) ಪಾಪಾತ್ಮರೆಲ್ಲರಿಗಿಂತಲೂ ನೀನು ಹೆಚ್ಚಿಗೆ ಪಾಪವನ್ನು

ಮಾಡಿದ್ದರೇನು? ಆ ಸಮಸ್ತ ಪಾಪ ಸಮುದ್ರವನ್ನು ಜ್ಞಾನವೆನ್ನುವ ದೋಣಿಯಿಂದ ಸುಲಭವಾಗಿ ದಾಟಬಲ್ಲೆ.

**ವ್ಯಾಖ್ಯೆ:** ಮಹಾಪಾಪಾತ್ಮನಾದರೂ ಜ್ಞಾನದಿಂದ ಪಾಪರಹಿತನಾಗಿ ಮುಕ್ತಿ ಹೊಂದಬಲ್ಲನೆಂದು ಇಲ್ಲಿ ಹೇಳಲಾಗಿದೆ. ಜ್ಞಾನದ ಮಹತ್ತರ ಶಕ್ತಿ ಇದರಿಂದ ತಿಳಿದುಬರುತ್ತದೆ. ಅಲ್ಪ ಪಾಪವನ್ನೇ ಅಲ್ಲ; ಬೆಟ್ಟದಷ್ಟು ಪಾಪವನ್ನೂ ಕೂಡ ಭಸ್ಮೀಭೂತ ಮಾಡಬಲ್ಲ ಶಕ್ತಿ ಜ್ಞಾನಕ್ಕೆ ಇದೆ. ಆದ್ದರಿಂದಲೇ ಭಗವಂತನು ಇಲ್ಲಿ ಪ್ರಪಂಚದಲ್ಲಿಯ ಪಾಪಾತ್ಮರೆಲ್ಲರಿಗಿಂತಲೂ ಮಹಾ ಪಾಪವನ್ನು ಮಾಡಿದವನ ದೃಷ್ಟಾಂತವನ್ನು ತೆಗೆದುಕೊಂಡು ಅವನೂ ಕೂಡ ಜ್ಞಾನದಿಂದ ಮುಕ್ತಿ ಹೊಂದುವನೆಂದು ಹೇಳಿದನು. ('ಪಾಪಕೃತ್,' 'ಪಾಪಕೃತ್ತರಃ,' 'ಪಾಪಕೃತ್ತಮಃ')- 'ತಮ' ಪ್ರತ್ಯಯವನ್ನುಪಯೋಗಿಸುವುದರ ಮೂಲಕ ಪಾಪದ ತೀವ್ರತೆಯನ್ನು ಇಲ್ಲಿ ವ್ಯಕ್ತಪಡಿಸಲಾಗಿದೆ. ಅಂತಹ ಘೋರಪಾಪಿಯೂ ಕೂಡ ಜ್ಞಾನಪ್ರಭಾವದಿಂದ ಪಾಪರಹಿತನಾಗಿ ಮುಕ್ತಿ ಹೊಂದುತ್ತಿರಲು, ಇನ್ನು ಅಲ್ಪ ಪಾಪಗಳನ್ನು ಮಾಡಿದವರ ಬಗ್ಗೆ ಬೇರೆ ಹೇಳಬೇಕೇ? ಆದ್ದರಿಂದ ಪಾಪಾತ್ಮರು ಇನ್ನು ಭಯಪಡಬೇಕಾಗಿಲ್ಲ. ಅವರು ಗತಿಸಿದ ತಮ್ಮ ಪಾಪಗಳನ್ನು ಕುರಿತು ಪಶ್ಚಾತ್ತಾಪಪಟ್ಟು ಇನ್ನುಮುಂದೆ ಪಾಪಗಳನ್ನು ಮಾಡದೆ ಜ್ಞಾನೋಪಾರ್ಜನೆಗೆ ಬೇಕಾದ ಸಾಧನೆಗಳನ್ನು ಅನುಸರಿಸಿದರೆ ಸಾಕು ಉದ್ಧಾರವಾಗುವರು.

ಮಹಾಪಾಪಿಯೂ ಸಹ ಜ್ಞಾನದಿಂದ ಮುಕ್ತಿ ಹೊಂದುವನೆಂದು ಹೇಳಿರುವುದರಿಂದ ಪಾಪವನ್ನು ಪ್ರೋತ್ಸಾಹಿಸಿದಂತೆ ಆಯಿತಲ್ಲ ಎಂದು ಭಾವಿಸಬಾರದು. ಅದು ಭಗವಂತನ ಅಭಿಮತವಲ್ಲ. ಈವರೆವಿಗೆ ಅಜ್ಞಾನದಿಂದ ಪಾಪಗಳನ್ನು ಮಾಡಿದ್ದರೂ ಇನ್ನು ಮುಂದೆ ಹಾಗೆ ಮಾಡದೆ ಜ್ಞಾನ ಸಂಪಾದನೆ ಮಾಡುವುದರಿಂದ ಮುಕ್ತನಾಗುವನೆಂದಷ್ಟೇ ಹೇಳಲಾಗಿದೆ. ಜ್ಞಾನೋತ್ಕರ್ಷತ್ವವನ್ನು ಹೊಗಳುವುದೇ ಈ ಶ್ಲೋಕದ ಅಂತರ್ಯ. ಆದ್ದರಿಂದ ಪಾಪಾತ್ಮರು ಅಂಜುವ ಕೆಲಸವಿಲ್ಲ. ಅವರು ಧೈರ್ಯದಿಂದ ಸನ್ಮಾರ್ಗವನ್ನವಲಂಬಿಸಿದರೆ ಶ್ರೇಯಸ್ಸನ್ನು ಹೊಂದುವರು. ಸಮುದ್ರವು ಎಷ್ಟು ವಿಶಾಲವಾಗಿದ್ದರೂ ಒಂದು ಚಿಕ್ಕ ದೋಣಿಯಿಂದ ಅದನ್ನು ದಾಟಬಹುದು. ಹಾಗೆಯೇ ಪಾಪ ಸಮುದ್ರವು ಎಷ್ಟು ಅಗಾಧವಾಗಿದ್ದರೂ ಜ್ಞಾನವೆನ್ನುವ ನಾವೆಯಿಂದ ಅದನ್ನು ಸುಲಭವಾಗಿ ದಾಟಬಹುದೆಂದು ಇಲ್ಲಿ ಹೇಳಲಾಗಿದೆ. 'ತರಿಷ್ಯಸಿ' ಎಂದು ಹೇಳದೆ 'ಸಂತರಿಷ್ಯಸಿ' ಎಂದು ಹೇಳಿರುವುದರಿಂದ ಜ್ಞಾನಪ್ರಾಪ್ತಿಯಿಂದ ಪಾಪಿಯು ಸಂಸಾರ ಸಮುದ್ರವನ್ನು ಸುಲಭವಾಗಿ ದಾಟಬಲ್ಲನೆಂದು ಸ್ಪಷ್ಟವಾಗುತ್ತಿದೆ. ವಾಲ್ಮೀಕಿ ಮಹರ್ಷಿಯೇ ಇದಕ್ಕೆ ಪ್ರಬಲವಾದ ದೃಷ್ಟಾಂತ.

"ಪಾಪಿಯಾದವನು ಶಾಸ್ತ್ರವನ್ನು ಓದಬಾರದು; ವೇದಾಂತವನ್ನು ಮುಟ್ಟಬಾರದು! ಓಂಕಾರವನ್ನುಚ್ಚರಿಸಬಾರದು; ಗೀತೆಯನ್ನು ಪಠಿಸಬಾರದು" ಎನ್ನುವ ವಾಕ್ಯಗಳಿಗೆ ಅರ್ಥವೇ ಇಲ್ಲವೆಂದು ತಿಳಿಯುತ್ತದೆ. ರೋಗಿಗೆ ಔಷಧಿಯ ಅವಶ್ಯಕತೆಯಿದ್ದ ಹಾಗೆ ಪಾಪಾತ್ಮನಿಗೆ, ಬದ್ಧನಿಗೇ ವಿಮುಕ್ತಿ ಸಾಧನವಾದ ಜ್ಞಾನವು ಮುಖ್ಯವಾಗಿ ಅವಶ್ಯಕ. ಆದ್ದರಿಂದ ದುಃಖಸಾಗರವನ್ನು ದಾಟಬಯಸುವವರು ಪಾಪಾತ್ಮರಾಗಿರಲಿ, ಪುಣ್ಯಾತ್ಮರಾಗಿರಲಿ ನಿರ್ಭಯವಾಗಿ ಜ್ಞಾನಸಂಪಾದನೆಯಿಂದ ಮುಕ್ತಿ ಹೊಂದಬಹುದೆಂದು ಭಗವಂತನು ಅಭಯವಿತ್ತಿದ್ದಾನೆ.

'ಚೇತ್' 'ಅಪಿ' ಎನ್ನುವ ಎರಡು ಪ್ರತ್ಯಯಗಳಿಂದ ಅರ್ಜುನನು ಪಾಪಿಯಲ್ಲವೆನ್ನುವುದನ್ನು ಸ್ಪಷ್ಟೀಕರಿಸಲಾಗಿದೆ. ಆತನು ದೈವಗುಣಗಳನ್ನು ಹೊಂದಿದವನೇ ಎಂದು ಮುಂದೆ ಹೇಳಲಾಗುತ್ತದೆ. [**ಮಾ ಶುಚಃ ಸಂಪದಂ ದೈವೀಮಭಿಜಾತೋಽಸಿ** (೧೬-೫)].

ಪ್ರ : ಪಾಪವನ್ನು ಹೋಗಲಾಡಿಸಿಕೊಳ್ಳುವುದು ಹೇಗೆ?

ಉ : ಜ್ಞಾನವನ್ನು ಸಂಪಾದಿಸುವುದರಿಂದ.

ಪ್ರ : ಜ್ಞಾನದ ಪ್ರಭಾವವೆಂತಹದು?

ಉ : ಮಹಾಪಾಪಾತ್ಮನಾದರೂ ಜ್ಞಾನವೆನ್ನುವ ನಾವೆಯಿಂದ ಪಾಪ ಸಮುದ್ರವನ್ನು ದಾಟಬಲ್ಲನು.

**ಅ:** ಅಗ್ನಿಯ ದೃಷ್ಟಾಂತದಿಂದ ಜ್ಞಾನದ ಮಹಿಮೆಯನ್ನು ವರ್ಣಿಸ ಲಾಗುತ್ತಿದೆ-

**೩೭. ಯಥೈಧಾಂಸಿ ಸಮಿದ್ಧೋಽಗ್ನಿರ್ಭಸ್ಮಸಾತ್ಕುರುತೇಽರ್ಜುನ**
**ಜ್ಞಾನಾಗ್ನಿಃ ಸರ್ವಕರ್ಮಾಣಿ ಭಸ್ಮಸಾತ್ಕುರುತೇ ತಥಾ**

**ಅರ್ಥ:** ಅರ್ಜುನ=ಓ ಅರ್ಜುನಾ!; ಸಮಿದ್ಧಃ=ಚೆನ್ನಾಗಿ ಉರಿಯುವ; ಅಗ್ನಿಃ=ಅಗ್ನಿ; ಯೇಧಾಂಸಿ=ಕಟ್ಟಿಗೆಗಳನ್ನು; ಯಥಾ=ಯಾವ ಪ್ರಕಾರವಾಗಿ; ಭಸ್ಮಸಾತ್=ಭಸ್ಮಗೊಳಿಸುವುದೋ; ತಥಾ=ಆ ಪ್ರಕಾರವಾಗಿಯೇ; ಜ್ಞಾನಾಗ್ನಿಃ=ಜ್ಞಾನವೆನ್ನುವ ಅಗ್ನಿ; ಸರ್ವಕರ್ಮಾಣಿ=ಸಮಸ್ತ ಕರ್ಮಗಳನ್ನು; ಭಸ್ಮಸಾತ್ ಕುರುತೇ=ಭಸ್ಮ ಮಾಡಿ ಹಾಕುತ್ತಿದೆ (ನಶಿಸುವಂತೆ ಮಾಡುತ್ತದೆ).

**ತಾ||** ಅರ್ಜುನಾ! ಧಗಧಗ ಉರಿಯುತ್ತಿರುವ ಅಗ್ನಿ ಕಟ್ಟಿಗೆಗಳನ್ನು ಯಾವ ಪ್ರಕಾರವಾಗಿ ಬೂದಿ ಮಾಡಿ ಹಾಕುವುದೋ ಆ ಪ್ರಕಾರವಾಗಿ ಜ್ಞಾನವೆನ್ನುವ ಅಗ್ನಿ ಸಮಸ್ತ ಕರ್ಮಗಳನ್ನು ಭಸ್ಮಮಾಡಿ ಹಾಕುತ್ತದೆ.

**ವ್ಯಾಖ್ಯೆ:** ಜ್ಞಾನವನ್ನು ಅಗ್ನಿಯೊಂದಿಗೆ ಹೋಲಿಸಿ ಅದರ ಮಹಿಮೆಯನ್ನು ಇಲ್ಲಿ ವರ್ಣಿಸುತ್ತಿದ್ದಾನೆ- ದುಃಖರಾಹಿತ್ಯವು, ಜನ್ಮರಾಹಿತ್ಯದಿಂದಲೇ ಸಿದ್ಧಿಸುವುದು. ಜನ್ಮರಾಹಿತ್ಯವು ಕರ್ಮರಾಹಿತ್ಯದಿಂದಲೇ ಸಾಧ್ಯ. ಕರ್ಮರಾಹಿತ್ಯವು ಜ್ಞಾನಪ್ರಾಪ್ತಿಯಿಂದ ಒದಗುವುದು. ಬೆಟ್ಟದಷ್ಟು ಕಟ್ಟಿಗೆಗಳ ರಾಶಿಯನ್ನು ಅಗ್ನಿ ಬೂದಿ ಮಾಡಿ ಹಾಕಬಲ್ಲದು. ಹಾಗೆಯೇ ಸಂಚಿತ ಕರ್ಮಗಳೇನಕವಿದ್ದರೂ, ಅವುಗಳೆಲ್ಲವನ್ನೂ ಜ್ಞಾನವೆನ್ನುವ ಅಗ್ನಿ ನಾಶಮಾಡಬಲ್ಲದು. ಆದರೆ ಚೆನ್ನಾಗಿ ಉರಿಯುತ್ತಿರುವ ಅಗ್ನಿ ಮಾತ್ರ ಆ ಕಾರ್ಯವನ್ನು ಸಾಧಿಸಬಲ್ಲದು; ಮಂದಾಗ್ನಿಯಲ್ಲ. ಆದ್ದರಿಂದಲೇ 'ಸಮಿದ್ಧೋಗ್ನಿಃ' ಎನ್ನುವ ಪದವನ್ನುಪಯೋಗಿಸಲಾಗಿದೆ. ಜ್ಞಾನವು ಪರಿಪೂರ್ಣವಾಗಿ ಪ್ರಾಪ್ತಿಯಾಗದಿದ್ದಲ್ಲಿ ಕರ್ಮ ಸಂಚಯವು ನಾಶವಾಗದು. ಸ್ವಪ್ನವೆನ್ನುವ ಕರ್ಮ ಎಚ್ಚೆತ್ತ ನಂತರ ಹೇಗೆ ನಶಿಸುವುದೋ, ಹಾಗೆ ಜ್ಞಾನಪ್ರಾಪ್ತಿರೂಪ ಜಾಗೃತಿಯಿಂದ ಸಂಸಾರ ಸ್ವಪ್ನ ಸಂಬಂಧ ಕರ್ಮವೆಲ್ಲವೂ ನಷ್ಟವಾಗಿ ಹೋಗುವುದು. 'ಸರ್ವಕರ್ಮಾಣಿ' ಎಂದು ಹೇಳಿರುವುದರಿಂದ ಸಮಸ್ತ ಕರ್ಮಗಳನ್ನು, ಕರ್ಮ ಬಂಧನಗಳನ್ನು ಜ್ಞಾನದಿಂದ ಮನುಷ್ಯನು ದಾಟಬಲ್ಲನೆಂದು ಸ್ಪಷ್ಟವಾಗುತ್ತದೆ. (ಜ್ಞಾನವೆಂದರೆ ಆತ್ಮಾನಾತ್ಮ ವಿಚಾರಣೆಯಿಂದ ದೃಶ್ಯವನ್ನು ಮಿಥ್ಯೆಯಾಗಿ ತಿಳಿದು, ಹೊರದೂಡಿ ದೃಗ್ರೂಪ ಆತ್ಮವನ್ನು ಅವಲಂಬಿಸುವುದು). ಜನನ ಮರಣ ರೂಪ ಕರ್ಮಫಲವನ್ನು ತಪ್ಪಿಸಿಕೊಳ್ಳಬೇಕೆನ್ನುವವನು ಜ್ಞಾನವನ್ನು ತಪ್ಪದೆ ಸಂಪಾದಿಸಿಕೊಳ್ಳಬೇಕೆಂದು ಈ ಶ್ಲೋಕದ ದ್ವಾರ ಸ್ಪಷ್ಟವಾಗುತ್ತಿದೆ. '**ಕ್ಷೀಯಂತೇ ಚಾಸ್ಯ ಕರ್ಮಾಣಿ ತಸ್ಮಿನ್ದೃಷ್ಟೇ ಪರಾವರೇ**' (ಪರಮಾತ್ಮನನ್ನು ಅಪೇಕ್ಷಿಸಿದವನ ಕರ್ಮಗಳೆಲ್ಲವೂ ನಶಿಸಿ ಹೋಗುತ್ತವೆ) ಎನ್ನುವ ಮುಂಡಕೋಪನಿಷತ್ ವಾಕ್ಯವು ಈ ಸತ್ಯವನ್ನೇ ಋಜು ಮಾಡುತ್ತಿದೆ.

ಪ್ರ : ಕರ್ಮ ಸಂಚಯವು ಹೇಗೆ ನಾಶವಾಗುವುದು?

ಉ: ಜ್ಞಾನದಿಂದ (ಉರಿಯುತ್ತಿರುವ ಅಗ್ನಿ, ಕಟ್ಟಿಗೆಗಳನ್ನು ದಹಿಸುವಂತೆ, ಜ್ಞಾನವು ಕರ್ಮಗಳೆಲ್ಲವನ್ನು ಭಸ್ಮಗೊಳಿಸುವುದು).

ಪ್ರ : ಜ್ಞಾನದ ಮಹಿಮೆಯೇನು?

ಉ: ಅದು ಕರ್ಮರಾಶಿಗಳನ್ನು ನಿರ್ಮೂಲ ಮಾಡಿ ಜೀವಿಯನ್ನು ಬಂಧ ವಿಮುಕ್ತನನ್ನಾಗಿ ಮಾಡಬಲ್ಲದು.

**ಅ||** ಜ್ಞಾನವು ಹೇಗೆ ಉಂಟಾಗುವುದೆನ್ನುವುದನ್ನು ವಿವರಿಸಲಾಗುತ್ತಿದೆ-

**೩೮. ನ ಹಿ ಜ್ಞಾನೇನ ಸದೃಶಂ ಪವಿತ್ರಮಿಹ ವಿದ್ಯತೇ**
**ತತ್ ಸ್ವಯಂ ಯೋಗಸಂಸಿದ್ಧಃ ಕಾಲೇನಾತ್ಮನಿ ವಿಂದತಿ**

**ಅರ್ಥ:** ಇಹ=ಈ ಪ್ರಪಂಚದಲ್ಲಿ; ಜ್ಞಾನೇನ=ಜ್ಞಾನಕ್ಕೆ, ಸದೃಶಂ=ಸಮಾನವಾದ, ಪವಿತ್ರಂ=ಪವಿತ್ರವಾದ; ನವಿದ್ಯತೇ ಹಿ=(ಯಾವುದೂ) ಇಲ್ಲವೇ ಇಲ್ಲ! ತತ್=ಅಂತಹ ಜ್ಞಾನವನ್ನು; ಯೋಗ ಸಂಸಿದ್ಧಃ=(ಕರ್ಮ) ಯೋಗಸಿದ್ಧಿಯನ್ನು ಹೊಂದಿದವನು; ಕಾಲೇನ=ಕಾಲ ಕ್ರಮೇಣ; ಆತ್ಮನಿ=ತನ್ನಲ್ಲಿ; ಸ್ವಯಂ=ಸ್ವಯಂ ಆಗಿ; ವಿಂದತಿ=ಹೊಂದುತ್ತಿದ್ದಾನೆ (ಅನುಭವಿಸುತ್ತಿದ್ದಾನೆ).

**ತಾ||** ಈ ಪ್ರಪಂಚದಲ್ಲಿ ಜ್ಞಾನಕ್ಕೆ ಸಮಾನವಾದ ಪವಿತ್ರವಾದ ವಸ್ತುವು ಯಾವುದೂ ಇಲ್ಲ. ಅಂತಹ ಜ್ಞಾನವನ್ನು, (ಕರ್ಮ) ಯೋಗಸಿದ್ಧಿಯನ್ನು ಹೊಂದಿದವನು ಕಾಲಕ್ರಮೇಣ ತನ್ನಲ್ಲೇ ಸ್ವಯಂ ಆಗಿ ಪಡೆಯುತ್ತಿದ್ದಾನೆ.

**ವ್ಯಾಖ್ಯೆ:** ಈ ಪ್ರಪಂಚದಲ್ಲಿ ಪವಿತ್ರವಾದ ವಸ್ತುಗಳು ಎಷ್ಟೋ ಇವೆ. ಆದರೆ ಎಲ್ಲವುಗಳಿಗಿಂತ ಪರಮ ಪವಿತ್ರವಾದದ್ದು ಜ್ಞಾನವೇ ಎಂದು ಇಲ್ಲಿ ಹೇಳಲಾಗಿದೆ. ಮನುಜನನ್ನು ಪುನೀತನನ್ನಾಗಿ ಮಾಡುವುದರಲ್ಲಿ ಜ್ಞಾನಕ್ಕೆ ಸಮಾನವಾದದ್ದು ಇನ್ನೊಂದಿಲ್ಲ. ಅದು ಜೀವಿಯ ಅಜ್ಞಾನರೂಪ ಮಾಲಿನ್ಯವನ್ನು ಹೋಗಲಾಡಿಸಿ ಆತ್ಮಾನುಭೂತಿಯನ್ನುಂಟು ಮಾಡುವುದು. ಸ್ಥೂಲದೇಹಕ್ಕೆ ಸಂಬಂಧಿಸಿದ ಕಲ್ಮಷಗಳನ್ನು ಹೋಗಲಾಡಿಸುವುದಕ್ಕೆ ಸಾಬೂನು, ಶಿಕಾಯಿ ಮುಂತಾದ ಎಷ್ಟೋ ವಸ್ತುಗಳಿವೆ. ಹಾಗೆಯೇ ಸೂಕ್ಷ್ಮ ದೇಹವಾದ ಚಿತ್ತಕ್ಕೆ ಹಿಡಿದ ಮಾಲಿನ್ಯವನ್ನು ನಿರ್ಮೂಲಿಸಲು ಕರ್ಮ, ಉಪಾಸನೆ, ಧ್ಯಾನ, ಯೋಗ, ಜ್ಞಾನ ಮುಂತಾದ ಸಾಧನಗಳಿವೆ. ಅವುಗಳೆಲ್ಲವುಗಳಲ್ಲಿ ಜ್ಞಾನ ಸರ್ವಶ್ರೇಷ್ಠವೆಂದು ಭಗವಂತನು ಹೇಳುತ್ತಿದ್ದಾನೆ.

ಆದರೆ ಆ ಜ್ಞಾನ ಹೇಗೆ ಲಭಿಸುವುದು? "ಸ್ವಯಂ"- ಸ್ವಕೀಯ ಪ್ರಯತ್ನದಿಂದ. ತನ್ನನ್ನು ತಾನೇ ಉದ್ಧರಿಸಿಕೊಳ್ಳಬೇಕು. ತನ್ನ ಹಸಿವೆಯನ್ನು ತಾನೇ ತೀರಿಸಿಕೊಳ್ಳಬೇಕು. ಗುರು, ದೈವ, ಹಿರಿಯರು ಸಹಾಯವನ್ನು ಮಾತ್ರ ಮಾಡಬಲ್ಲರು. ಪ್ರಯತ್ನಮಾಡಬೇಕಾದದ್ದು ತಾನೇ. ಅನುಭವಿಸಬೇಕಾದದ್ದು ತಾನೇ. ಸ್ವಪ್ರಯತ್ನದಿಂದಲೇ ಜ್ಞಾನವನ್ನು ಸಂಪಾದಿಸಿಕೊಳ್ಳಬೇಕು. ಆದ್ದರಿಂದಲೇ 'ಸ್ವಯಂ' ಎನ್ನುವ ಪದವನ್ನು ಇಲ್ಲಿ ಉಪಯೋಗಿಸಲಾಗಿದೆ.

*"ಯೋಗ ಸಂಸಿದ್ಧ"*- ಜ್ಞಾನವನ್ನು ಹೊಂದುವುದಕ್ಕೆ ಮೊದಲು ಯೋಗ ಸಂಸಿದ್ಧನಾಗಬೇಕು. ಅಂದರೆ ಕರ್ಮಯೋಗದಲ್ಲಿ ಬಹಳ ಚತುರತೆಯನ್ನು ಹೊಂದಿರಬೇಕು. ನಿಷ್ಕಾಮ ಕರ್ಮವನ್ನು ಚೆನ್ನಾಗಿ ಅನುಷ್ಠಾನ ಮಾಡಿ, ಚಿತ್ತಶುದ್ಧಿಯನ್ನು ಪಡೆಯಬೇಕು. ವಸ್ತ್ರದ ಕೊಳೆ ಹೋದ ನಂತರವೇ ಅದಕ್ಕೆ ಬಣ್ಣ ಹತ್ತಿದಂತೆ ನಿಷ್ಕಾಮ ಕರ್ಮ ಸಾಧನ ಚತುಷ್ಟಯಸಂಪತ್ತು ಮೊದಲಾದ ಚಿತ್ತಶುದ್ಧಿಕರ ಪ್ರಯತ್ನಗಳಿಂದ ಹೃದಯವು ನಿರ್ಮಲವಾದಾಗ ಜ್ಞಾನವು ಉದಯಿಸುವುದು.

ಆದರೆ ಆ ಜ್ಞಾನವು ಎಲ್ಲಿ ಉದಯಿಸುವುದು? "ಆತ್ಮನಿ"- ತನ್ನಲ್ಲೇ. ತನ್ನ ಹೃದಯದಲ್ಲಿಯೇ ಜ್ಞಾನವು ವ್ಯಕ್ತವಾಗುವುದಾಗಲಿ ಅನ್ಯತ್ರವಲ್ಲ. ಅದು ಇನ್ನೊಬ್ಬನು ಅನುಭವಿಸುವ ವಸ್ತುವಲ್ಲ. ತನಗೆ ತಾನೇ ಅನುಭವಿಸು ವಂತಹದು. ಆದುದರಿಂದಲೇ 'ಆತ್ಮನಿ' ಎನ್ನುವ ಪದ ಪ್ರಯೋಗಿಸಲ್ಪಟ್ಟಿದೆ. ಆ ಜ್ಞಾನವು ಯಾವಾಗ ಉಂಟಾಗುವುದು?

*"ಕಾಲೇನ"*- ಕಾಲಕ್ರಮವಾಗಿ (ಕರ್ಮಯೋಗದಲ್ಲಿ ಸಿದ್ಧಿಯನ್ನು ಪಡೆದ ನಂತರ) ಜೀವಿಯಲ್ಲಿ ಅದು ಉದಯಿಸುವುದು. 'ಮೋಕ್ಷವು ಯಾವಾಗ ಸಿದ್ಧಿಸುವುದು? ಜ್ಞಾನವು ಯಾವಾಗ ಉಂಟಾಗುವುದು?' ಎನ್ನುವ ಪ್ರಶ್ನೆಗಳಿಗೆ ಭಗವಂತನು ಇಲ್ಲಿ ಸರಿಯಾದ ಸಮಾಧಾನವನ್ನು ಕೊಟ್ಟಿದ್ದಾನೆ. ಮೋಕ್ಷಕ್ಕೆ ಕಾಲ ನಿಯಮವಿಲ್ಲ. ಚಿತ್ತವು ಯಾವಾಗ ಪರಿಪಕ್ವವಾಗುವುದೋ ಆಗ ಲಭಿಸುವುದು. ಅವರವರ ಸಾಧನೆಗಳ ತೀವ್ರತೆಯನ್ನು ಹಿಡಿದು ಕೆಲವರಿಗೆ ಶೀಘ್ರವಾಗಿ ಮತ್ತೆ ಕೆಲವರಿಗೆ ಅಂತ್ಯ ಕಾಲದಲ್ಲಿ ಸಿದ್ಧಿಸುವುದು. ಅವರವರ ಪ್ರಯತ್ನಗಳ ಮೇರೆಗೆ ಕಾಲಕ್ರಮದಲ್ಲಿ ಸರ್ವರಿಗೂ ಅದು ಲಭಿಸುವುದು. ಆದ್ದರಿಂದ ಮೋಕ್ಷದ ವಿಷಯದಲ್ಲಿ, ಜ್ಞಾನದ ವಿಷಯದಲ್ಲಿ ಯಾರೂ ನಿರುತ್ಸಾಹ ಬೀಳಬೇಕಾಗಿಲ್ಲ. ಅದು ಅವರವರ ಪ್ರಯತ್ನಗಳನ್ನು ಹಿಡಿದು ಕಾಲಕ್ರಮೇಣ ಸರ್ವರಿಗೂ ಲಭಿಸುವುದು. ಆದರೆ ಪ್ರಯತ್ನವನ್ನು ಮಾತ್ರ ಬಿಡಬಾರದು. ಹಸಿಕಾಯಿ ಹಣ್ಣಾಗಬೇಕೆಂದರೆ ಸ್ವಲ್ಪ ಕಾಲ ಹಿಡಿಯುವುದು. ಕ್ರಮೇಣ ಅದು ಪಕ್ವವಾಗಬೇಕು. ಆದರೆ ಗಿಡಕ್ಕೆ ನೀರು ಮಾತ್ರ ತಪ್ಪದೆ ಹಾಕುತ್ತಿರಬೇಕು. ಶಿಶುವು ಜನ್ಮಿಸಬೇಕಾದರೆ ತಾಯಿ ಒಂಭತ್ತು ತಿಂಗಳು ಕಾಯಬೇಕಲ್ಲವೇ! ಸಹನೆಯಿಂದ, ನಿಶ್ಚಲಮನಸ್ಸಿನಿಂದ, ನಿಷ್ಕಾಮ ಕರ್ಮಯೋಗಾದಿ ಸಾಧನೆಗಳನ್ನು ಅವಲಂಬಿಸಿ ಹೃದಯ ನೈರ್ಮಲ್ಯವನ್ನು ಸಂಪಾದಿಸಿದಲ್ಲಿ, ಜ್ಞಾನವು ಅದಷ್ಟಕ್ಕೆ ಅದೇ ಭಗವದನುಗ್ರಹದಿಂದ ಜೀವಿಯಲ್ಲಿ ಅಭಿವ್ಯಕ್ತವಾಗುವುದು. ಇದು 'ಕಾಲೇನ' ಎನ್ನುವ ಪದದ ವಿವರಣೆ.

ಈ ಪ್ರಕಾರವಾಗಿ ಜ್ಞಾನದ ಸರ್ವಶ್ರೇಷ್ಠತೆಯನ್ನು, ಅದು ಯಾವಾಗ ಯಾವ ಪ್ರಕಾರದಲ್ಲಿ ಹೇಗೆ ಸಂಭವಿಸುವುದೆನ್ನುವ ವಿಷಯವನ್ನು ಸಂಕ್ಷೇಪವಾಗಿ ಈ ಶ್ಲೋಕದಲ್ಲಿ ತಿಳಿಸಲಾಗಿದೆ. ಆದ್ದರಿಂದ ಮುಮುಕ್ಷುಗಳು ಇದನ್ನು ಚೆನ್ನಾಗಿ ಜ್ಞಾಪಕವಿಟ್ಟುಕೊಂಡು, ಜೀವನದಲ್ಲಿ ಅಳವಡಿಸಿಕೊಂಡು ಜ್ಞಾನವಂತರಾಗಿ ಉದ್ಧಾರವಾಗಬೇಕು.

ಪ್ರ : ಪ್ರಪಂಚದಲ್ಲಿ ಮಹಾ ಪವಿತ್ರವಾದ ವಸ್ತುವು ಯಾವುದು?

ಉ : ಆತ್ಮಜ್ಞಾನ.

ಪ್ರ : ಅದು ೧) ಹೇಗೆ ೨) ಎಲ್ಲಿ ೩) ಯಾವಾಗ ಜೀವಿಗೆ ಲಭಿಸುವುದು?

ಉ: ೧) ಕರ್ಮಯೋಗಸಿದ್ಧಿಯಿಂದ ೨) ತನ್ನಲ್ಲೇ ೩) ಕಾಲಕ್ರಮೇಣ ಲಭಿಸುವುದು.

**ಅ||** ಜ್ಞಾನವನ್ನು ಯಾರು ಹೊಂದುವರು ಮತ್ತು ಹೊಂದಿದ ನಂತರ ಅವರಿಗೆ ಯಾವ ಫಲಗಳು ಉಂಟಾಗುವುವು ಎನ್ನುವುದನ್ನು ವಿವರಿಸಲಾಗುತ್ತಿದೆ-

೩೯. ಶ್ರದ್ಧಾವಾನ್ ಲಭತೇ ಜ್ಞಾನಂ ತತ್ಪರಃ ಸಂಯತೇಂದ್ರಿಯಃ
ಜ್ಞಾನಂ ಲಬ್ಧ್ವಾ ಪರಾಂ ಶಾಂತಿಮಚಿರೇಣಾಧಿಗಚ್ಛತಿ

**ಅರ್ಥ:** ಶ್ರದ್ಧಾವಾನ್=ಶ್ರದ್ಧೆಯುಳ್ಳವನು; ತತ್ಪರಃ=ತದೇಕಚಿತ್ತದಿಂದ ಕೂಡಿದವನು; ಸಂಯತೇಂದ್ರಿಯಃ=ಇಂದ್ರಿಯಗಳನ್ನು ಜಯಿಸಿದವನು; ಜ್ಞಾನಂ=(ಆತ್ಮ) ಜ್ಞಾನವನ್ನು; ಲಭತೇ=ಹೊಂದುತ್ತಿದ್ದಾನೆ; ಜ್ಞಾನಃ= ಜ್ಞಾನವನ್ನು; ಲಬ್ಧ್ವಾ=ಹೊಂದಿ; ಪರಾಂ=ಮಹತ್ತಾದ; ಶಾಂತಂ= ಶಾಂತಿಯನ್ನು; ಅಚಿರೇಣ=ಶೀಘ್ರವಾಗಿ; ಅಧಿಗಚ್ಛತಿ=ಹೊಂದುತ್ತಿದ್ದಾನೆ.

**ತಾ||** (ಗುರು ಹಾಗು ಶಾಸ್ತ್ರ ವಾಕ್ಯಗಳಲ್ಲಿ) ಶ್ರದ್ಧೆಯುಳ್ಳವನು, (ಆಧ್ಯಾತ್ಮಿಕ ಸಾಧನೆಗಳಲ್ಲಿ) ತದೇಕ ನಿಷ್ಠೆಯಿಂದ ಕೂಡಿದವನು, ಇಂದ್ರಿಯಗಳನ್ನು ಜಯಿಸಿದವನೂ ಆದ ಮನುಷ್ಯನು ಜ್ಞಾನವನ್ನು ಹೊಂದುತ್ತಿದ್ದಾನೆ. ಜ್ಞಾನವನ್ನು ಹೊಂದಿ ಆತನು ಪರಮ ಶಾಂತಿಯನ್ನು ಶೀಘ್ರವಾಗಿ ಪಡೆಯುವನು.

**ವ್ಯಾಖ್ಯೆ:** ಜ್ಞಾನವನ್ನು ಯಾರು ಹೊಂದಬಲ್ಲರು ಎನ್ನುವುದನ್ನು ಇಲ್ಲಿ ವಿವರಿಸಲಾಗಿದೆ. ಜ್ಞಾನವನ್ನು ಹೊಂದಬೇಕೆಂದರೆ ಮೂರು ಸುಗುಣಗಳನ್ನು ಹೊಂದಿರಬೇಕು. ಅವು ಯಾವುವೆಂದರೆ- ೧) ಶ್ರದ್ಧೆ ೨) ತದೇಕನಿಷ್ಠೆ ೩) ಇಂದ್ರಿಯನಿಗ್ರಹಣೆ. ಇವು ಇಲ್ಲದವರು ಜ್ಞಾನವನ್ನು ಹೊಂದಲು ಸಾಧ್ಯವಿಲ್ಲ.

ಶ್ರದ್ಧೆ- ಯಾವ ಕಾರ್ಯದಲ್ಲಾದರೂ ಶ್ರದ್ಧೆ ಅಧಿಕವಾಗಿದ್ದಾಗಲೇ ಸತ್ಫಲಿತಗಳು ಉಂಟಾಗುವವು. ಗುರುವಿನಲ್ಲಾಗಲಿ, ದೈವದಲ್ಲಾಗಲಿ, ಶಾಸ್ತ್ರದಲ್ಲಾಗಲಿ ಜೀವಿಗೆ ಎಷ್ಟು ಶ್ರದ್ಧೆ ಅಧಿಕವಾಗಿದೆಯೋ ಅಷ್ಟು ಉತ್ತಮ ಫಲಗಳನ್ನು ಆತನು ಪಡೆಯುವನು. 'ಇದು ತಪ್ಪದೆ ಒಳ್ಳೆಯದನ್ನು ಮಾಡುವುದು' ಎನ್ನುವ ಅಚಂಚಲ ವಿಶ್ವಾಸದಿಂದ ಸಾಧನೆಯನ್ನು ಮಾಡಬೇಕೇ ಹೊರತು 'ಇದು ಸಿದ್ಧಿಸುವುದೋ ಇಲ್ಲವೋ, ಇದರಿಂದ ಒಳ್ಳೆಯದಾಗುವುದೋ ಇಲ್ಲವೋ' ಎನ್ನುವ ಅನುಮಾನ ಸ್ಥಿತಿ ಇರಬಾರದು. ಆದ್ದರಿಂದಲೇ ಭಗವಂತನು ಈ ಶ್ರದ್ಧೆಯೆನ್ನುವ ಸುಗುಣದ ಬಗ್ಗೆ ಗೀತೆಯಲ್ಲಿ ಅನೇಕ ಕಡೆ ಒತ್ತಿ ಹೇಳಿರುತ್ತಾನೆ.

*"ತತ್ಪರಃ"*- ಇನ್ನು ಎರಡನೆಯ ಸುಗುಣ 'ತದೇಕ ನಿಷ್ಠೆ'; ಹಿಡಿದ ಪಟ್ಟು ಬಿಡದೆ, ಏಕಾಗ್ರತೆಯಿಂದ, ತದೇಕ ಚಿಂತನೆಯಿಂದ ಜ್ಞಾನವನ್ನು ಸಾಧಿಸಬೇಕು. ಶರೀರ, ವಾಕ್ಕು, ಮನಸ್ಸು ಎನ್ನುವ ತ್ರಿಕರಣಗಳು ಸದಾ ಆ ಕಾರ್ಯದಲ್ಲಿಯೇ ಸಂಲಗ್ನವಾಗಬೇಕು. ಇತರ ಕಾರ್ಯಗಳನ್ನು ಕಡಿಮೆ ಮಾಡಿಕೊಂಡು, ಈ ಜ್ಞಾನ ಪ್ರಾಪ್ತಿರೂಪ ಕಾರ್ಯದಲ್ಲೇ ಚಿತ್ತವನ್ನು ಕೇಂದ್ರೀಕರಿಸಬೇಕು. ಚಿತ್ತದ ಶಕ್ತಿಯನ್ನು ಒಂದೇ ವಸ್ತುವಿನಲ್ಲಿ ಕೇಂದ್ರೀಕರಿಸಿದರೆ ಅಲ್ಲಿ ಅಖಂಡ ಶಕ್ತಿ ಹುಟ್ಟಿ ಲಕ್ಷ್ಯವನ್ನು ಅದು ಕರತಲಾಮಲಕವಾಗಿಸುವುದು. ಆದುದರಿಂದ ಮನಸ್ಸನ್ನು ದೃಶ್ಯ ವಿಷಯಗಳಿಂದ ದೂರಮಾಡಿ ಪರಮಾರ್ಥ ವಿಚಾರ್ದದ ಕಡೆಗೆ ತಿರುಗಿಸಿ ತದೇಕ ನಿಷ್ಠೆಯಿಂದ ಅದನ್ನು ಸಾಧಿಸಬೇಕು. ಆಗಲೇ ಆ ಜ್ಞಾನವು ಶೀಘ್ರವಾಗಿ ಸಿದ್ಧಿಸುವುದು.

*"ಸಂಯತೇಂದ್ರಿಯಃ"*- ಜ್ಞಾನಪ್ರಾಪ್ತಿಗೆ ಮೂರನೆಯ ಅವಶ್ಯಕತೆ ಇಂದ್ರಿಯ ನಿಗ್ರಹಣೆ. ಇಂದ್ರಿಯಗಳ ಮೂಲಕ ಮನಸ್ಸು ಬಹಿರ್ ಪ್ರಪಂಚದ ಕಡೆ ಹೊರಗೋಡುತ್ತಿದ್ದರೆ ಹೃದಯಾಂತರ್ವರ್ತಿಯಾದ ಆತ್ಮವನ್ನು ಯಾವ ಕಾಲದಲ್ಲಿಯೂ ತಿಳಿದುಕೊಳ್ಳಲು ಸಾಧ್ಯವಿಲ್ಲ. ಜ್ಞಾನನಿಷ್ಠೆಯಲ್ಲಿ ಏಕಾಗ್ರತೆ ಸಂಭವಿಸುವುದಿಲ್ಲ. ಆದ್ದರಿಂದ ಅಂತರ್ಮುಖತ್ವವನ್ನವಲಂಬಿಸಬೇಕು. ಅದು ಇಂದ್ರಿಯ ನಿಗ್ರಹವಿಲ್ಲದೆ ಎಂದಿಗೂ ಸಿದ್ಧಿಸುವುದಿಲ್ಲ. ಆದ್ದರಿಂದ ಜ್ಞಾನ ಪ್ರಾಪ್ತಿಗೆ, ಆತ್ಮಸಾಕ್ಷಾತ್ಕಾರಕ್ಕೆ ಇಂದ್ರಿಯ ನಿಗ್ರಹವು ಅತ್ಯಾವಶ್ಯಕವಾದದ್ದು. 'ಯತೇಂದ್ರಿಯಂ' ಎಂದು ಹೇಳದೆ 'ಸಂಯತೇಂದ್ರಿಯಂ' ಎಂದು ಹೇಳಲ್ಪಟ್ಟಿರುವುದರಿಂದ ಇಂದ್ರಿಯಗಳನ್ನು ಪರಿಪೂರ್ಣವಾಗಿ ನಿಗ್ರಹಿಸ ಬೇಕೆಂದು, ಸಾಮಾನ್ಯ ನಿಗ್ರಹವು ಸಾಲದೆಂದು ಸೂಚಿತವಾಗುತ್ತಿದೆ. ಸಾಧಕನಿಗೆ ಇಂದ್ರಿಯಗಳು ಪ್ರಬಲಶತ್ರುಗಳು. ನಿತ್ಯವೈರಿಗಳು ಶತ್ರುಗಳನ್ನು ನಿರೋಧಿಸದಿದ್ದರೆ (ಆತ್ಮ) ಸಾಮ್ರಾಜ್ಯವು ಲಭಿಸುವುದಿಲ್ಲ. ಆದ್ದರಿಂದಲೇ ಜ್ಞಾನಪ್ರಾಪ್ತಿಗೆ ಇಂದ್ರಿಯ ಸಂಯಮ ಅತ್ಯಾವಶ್ಯಕವೆಂದು ಇಲ್ಲಿ ತಿಳಿಸಲು ಕಾರಣವಾಗಿದೆ.

ಈ ಪ್ರಕಾರವಾಗಿ ಶ್ರದ್ಧೆ, ತದೇಕನಿಷ್ಠೆ, ಇಂದ್ರಿಯ ನಿಗ್ರಹಗಳನ್ನವಲಂಬಿಸಿ ಜ್ಞಾನವನ್ನು ಹೊಂದಿದರೆ ಉಂಟಾಗುವ ಫಲವೇನು? 'ಪರಮಶಾಂತಿ' (ಸಾಮಾನ್ಯ ಶಾಂತಿಯಲ್ಲ). ಜ್ಞಾನವನ್ನು ಹೊಂದಿದ ತಕ್ಷಣವೇ ಈ ಪರಮಶಾಂತಿ ಜೀವಿಗೆ ಲಭಿಸುವುದು. ಅದೇ ಮೋಕ್ಷಸ್ಥಿತಿ. 'ಅಚಿರೇಣ' ಎಂದು ಹೇಳಿರುವುದರಿಂದ ಅಂತಹ ಫಲ ಜ್ಞಾನಾನಂತರ ಶೀಘ್ರವಾಗಿ ಉಂಟಾಗುವುದೆಂದು ಅರ್ಥ. ಸೂರ್ಯೋದಯದಿಂದ ಅಂಧಕಾರವು ಮಾಯವಾಗಿ ಪರಮಪ್ರಕಾಶ ತಕ್ಷಣವೇ ನಾಲ್ಕು ದೆಶೆಗಳಲ್ಲಿ ವ್ಯಾಪಿಸಿದಂತೆ ಜ್ಞಾನೋದಯದಿಂದ ಸಂಸಾರ ದುಃಖ ಅಂತ್ಯವಾಗಿ ಮೋಕ್ಷರೂಪ ಪರಮಶಾಂತಿ ಕೂಡಲೇ ಲಭ್ಯವಾಗುವುದು. ಶಾಂತಿಯನ್ನು ಹೊಂದುವ ಮಾರ್ಗವೇನು? ಎಂದು ಪ್ರಪಂಚದಲ್ಲಿ ಅನೇಕರು ಪ್ರಶ್ನಿಸುತ್ತಿದ್ದಾರೆ. ಅದಕ್ಕೆ ಉತ್ತರವನ್ನು ಈ ಶ್ಲೋಕದಲ್ಲಿ ಭಗವಂತನು ತಿಳಿಸಿದ್ದಾನೆ. "ಓ ಜೀವಿಗಳಿರಾ! ನೀವು ಪರಮ ಶಾಂತಿಯನ್ನು ಇಚ್ಛಿಸಿದರೆ ಮೊದಲು ಆತ್ಮಜ್ಞಾನವನ್ನು ಪಡೆಯಿರಿ" ಎಂದು ಬೋಧಿಸಿದ್ದಾನೆ. ಪ್ರಪಂಚದಲ್ಲಿ ದೃಶ್ಯವಸ್ತುಗಳಿಂದ ದೊರೆಯುವುದು ಅಲ್ಪ ಶಾಂತಿಯೇ ಆಗಲಿ ಪರಮ ಶಾಂತಿಯಲ್ಲ ಎನ್ನುವುದನ್ನು ಮರೆಯಬಾರದು. ಆದ್ದರಿಂದ ಅದಕ್ಕಾಗಿ ಕೈಚಾಚದೆ ಜ್ಞಾನಜನ್ಯವಾದ ಈ ಪರಮಶಾಂತಿಗೆ ಯತ್ನಿಸಬೇಕು. ಶಾಂತಿಯ ರಾಜಮಾರ್ಗವನ್ನು ಭಗವಂತನು ಇಲ್ಲಿ ತೋರಿಸಿರುವನು. ಆದ್ದರಿಂದ ಅಶಾಂತಿಯಿಂದ ಪರಿತಪಿಸುತ್ತಿರುವ ಜೀವಿಗಳು ಅದಕ್ಕಾಗಿ ಏಕೆ ಕೃಷಿಮಾಡಬಾರದು?

ಪ್ರ : ಜ್ಞಾನವನ್ನು ಯಾವನು ಹೊಂದಬಲ್ಲನು?

ಉ : ೧) ಶ್ರದ್ಧೆಯುಳ್ಳವನು ೨) ತದೇಕನಿಷ್ಠೆಯುಳ್ಳವನು ೩) ಇಂದ್ರಿಯ ನಿಗ್ರಹವುಳ್ಳವನು.

ಪ್ರ : ಜ್ಞಾನಪ್ರಾಪ್ತಿಯಿಂದುಂಟಾಗುವ ಫಲವೇನು?

ಉ : ಪರಮಶಾಂತಿ

ಪ್ರ : ಶಾಂತಿಗೆ ಮಾರ್ಗವೇನು?

ಉ : ಜ್ಞಾನಪ್ರಾಪ್ತಿ

**ಅ||** ಶ್ರದ್ಧೆಯಿಲ್ಲದವನಿಗೆ ಉಂಟಾಗುವ ದುರ್ಗತಿಯನ್ನು ವಿವರಿಸಲಾಗುತ್ತಿದೆ-

೪೦. ಅಜ್ಞಶ್ಚಾಶ್ರದ್ಧಧಾನಶ್ಚ ಸಂಶಯಾತ್ಮಾ ವಿನಶ್ಯತಿ
ನಾಯಂ ಲೋಕೋಽಸ್ತಿ ನ ಪರೋ ನ ಸುಖಂ ಸಂಶಯಾತ್ಮನಃ

**ಅರ್ಥ:** ಅಜ್ಞಶ್ಚಾ=ಜ್ಞಾನವಿಲ್ಲದವನು; ಅಶ್ರದ್ಧಧಾನಶ್ಚ=ಶ್ರದ್ಧೆಯಿಲ್ಲದವನು; ಸಂಶಯಾತ್ಮಾ=(ಶಾಸ್ತ್ರ, ಗುರು ವಾಕ್ಯಗಳನ್ನು) ಸಂದೇಹಿಸುವ ಮನಸ್ಸುಳ್ಳವನು; ವಿನಶ್ಯತಿ=ನಾಶವಾಗುತ್ತಿದ್ದಾನೆ; ಸಂಶಯಾತ್ಮನಃ=ಸಂಶಯಚಿತ್ತನಿಗೆ; ಅಯಂ=ಈ; ಲೋಕಃ=ಲೋಕವು; ನಾಸ್ತಿ=ಇಲ್ಲ; ಪರಃ=ಪರಲೋಕವು; ನ=ಇಲ್ಲ; ಸುಖಂ=ಸುಖ.

**ತಾ||** ಜ್ಞಾನವಿಲ್ಲದವನು, ಶ್ರದ್ಧಾರಹಿತನು, ಸಂಶಯಚಿತ್ತನು ವಿನಾಶವನ್ನೇ ಹೊಂದುವನು. ಸಂಶಯಚಿತ್ತನಿಗೆ ಇಹಲೋಕವಾಗಲಿ, ಪರಲೋಕವಾಗಲಿ, ಸೌಖ್ಯವಾಗಲಿ ಇಲ್ಲ.

**ವ್ಯಾಖ್ಯೆ:** ಗುರು ವಾಕ್ಯಗಳಲ್ಲಿ, ಶಾಸ್ತ್ರ ವಾಕ್ಯಗಳಲ್ಲಿ, ಪರಮಾತ್ಮ ಸತ್ಯಗಳಲ್ಲಿ ವಿಶ್ವಾಸ ಹಾಗು ಶ್ರದ್ಧೆಯುಳ್ಳವನು ಜ್ಞಾನಪ್ರಾಪ್ತಿಯಿಂದ ಪರಮ ಶಾಂತಿಯನ್ನು ಹೊಂದುವನೆಂದು ಹಿಂದಿನ ಶ್ಲೋಕದಲ್ಲಿ ಹೇಳಲಾಯಿತು. ಶ್ರದ್ಧೆಯಿಲ್ಲದವನು ಜ್ಞಾನ ಹೀನನಾಗಿ ಸಂಸಾರ ಕೂಪದಲ್ಲಿ ಬಿದ್ದು ನಶಿಸುವನೆಂದು ಈ ಶ್ಲೋಕದಲ್ಲಿ ತಿಳಿಸಲಾಗಿದೆ. ೧) ಅಜ್ಞಾನಿ ೨) ಶ್ರದ್ಧೆಯಿಲ್ಲದವನು ೩) ಸಂಶಯ ಚಿತ್ತರೆಂಬ ಈ ಮೂವರೂ ಎಂದಿಗೂ ಉದ್ಧಾರವಾಗುವುದಿಲ್ಲವೆಂದೂ, ವಿನಾಶವನ್ನೇ ಹೊಂದುವರೆಂದೂ ಹೇಳಲಾಗಿದೆ. ಇದರಲ್ಲಿ ಅಜ್ಞಾನಿ ಪರಮಾರ್ಥ ವಿಷಯ ತಿಳಿಯದೆ, ತಿಳಿಯಲೂ ಯತ್ನಿಸದೆ, ದೃಶ್ಯವನ್ನು ಸತ್ಯವೆಂದು ನಂಬಿ ಜನನಮರಣಗಳ ಪಾಲಾಗಿ ನಾಶವಾಗುವನು. ಶ್ರದ್ಧೆಯಿಲ್ಲದವನು ಶಾಸ್ತ್ರಾದಿಗಳಲ್ಲಿ ಅವಿಶ್ವಾಸದಿಂದ ವರ್ತಿಸಿ, ಅವುಗಳನ್ನು ಅನುಸರಿಸದೆ ಧರ್ಮಚ್ಯುತನಾಗಿ ನಾಶವಾಗುವನು. ಇನ್ನು ಮೂರನೆಯವನಾದ ಸಂಶಯಚಿತ್ತನು ಪ್ರತಿಯೊಂದನ್ನೂ ಸಂಶಯಿಸುತ್ತ ಮೂಢನಾಗಿ, ಪರಮಾರ್ಥಸಾಧನೆ ಮಾಡದೆ ಸೋಮಾರಿಯಾಗಿದ್ದು ನಾಶವಾಗುವನು. 'ನಶ್ಯತಿ' ಎಂದು ಹೇಳದೆ 'ವಿನಶ್ಯತಿ' ಎಂದು ಹೇಳಿರುವುದರಿಂದ ಆ ಮೂವರೂ ಘೋರ ವಿನಾಶವನ್ನು ಹೊಂದುವರೆಂದು ಸ್ಪಷ್ಟವಾಗುತ್ತಿದೆ.

ಈ ಪ್ರಕಾರವಾಗಿ ಮೇಲಿನ ಮೂವರ ಬಗ್ಗೆ ಹೇಳಿ ಮತ್ತೆ ಎರಡನೆಯ ಪಾದದಲ್ಲಿ ಸಂಶಯಾತ್ಮನನ್ನು ಪ್ರಸ್ತಾಪಿಸಿ ಆತನಿಗೆ ಇಹಪರ ಸೌಖ್ಯಗಳಾಗಲಿ, ಮನಶ್ಶಾಂತಿಯಾಗಲಿ ಇರುವುದಿಲ್ಲವೆಂದು ಭಗವಂತನು ತಿಳಿಸಿದನು. ಸಂಶಯವು ಮನಸ್ಸನ್ನು ಹೀರಿ ಹಿಪ್ಪೆ ಮಾಡುವುದು. ಆದುದರಿಂದ ಮುಮುಕ್ಷುವು ಶಾಸ್ತ್ರ, ಗುರುವಾಕ್ಯಗಳಲ್ಲಿ ವಿಶ್ವಾಸ, ಶ್ರದ್ಧೆಗಳನ್ನಿಟ್ಟು ಸಂಶಯವನ್ನು ಹೊರದೋಡಿಸಿ ಆಧ್ಯಾತ್ಮ ಪಥದಲ್ಲಿ ಪುರೋಗಮಿಸಬೇಕು. ಆಗಲೇ ಪೂರ್ಣ ಸುಖ(ಮೋಕ್ಷಸ್ಥಿತಿ) ಉಂಟಾಗುವುದು.

ಪ್ರ : ಈ ಪ್ರಪಂಚದಲ್ಲಿ ವಿನಾಶವನ್ನು ಹೊಂದುವವರು ಯಾರು?

ಉ : ೧) ಅಜ್ಞಾನಿ ೨) ಶ್ರದ್ಧಾವಿಹೀನನು ೩) ಸಂಶಯಚಿತ್ತನು.

ಪ್ರ : ಸಂಶಯಾತ್ಮನಿಗೆ ಎಂತಹ ದುರ್ಗತಿ ಒದಗುವುದು?

ಉ : ಆತನಿಗೆ ಇಹಲೋಕ ಸುಖವಾಗಲಿ, ಪರಲೋಕ ಸುಖವಾಗಲಿ ಮನಶ್ಶಾಂತಿಗಳಾಗಲಿ ಇರುವುದಿಲ್ಲ.

ಪ್ರ : ಆದ್ದರಿಂದ ಮುಮುಕ್ಷುವಿನ ಕರ್ತವ್ಯವೇನು?

ಉ : ೧) ಅಜ್ಞಾನವನ್ನು ಬಿಟ್ಟು ಜ್ಞಾನವನ್ನು ಸಂಪಾದಿಸಬೇಕು.

೨) ಶಾಸ್ತ್ರ, ಗುರುವಾಕ್ಯಗಳಲ್ಲಿ ಅಶ್ರದ್ಧರಾಗಿರಬಾರದು.

೩) ಪರಮಾರ್ಥ ಸತ್ಯಗಳಲ್ಲಿ ಸಂಶಯವಿರಬಾರದು.

**ಅ||** ಜ್ಞಾನಿಯನ್ನು ಕರ್ಮಗಳು ಬಂಧಿಸುವುದಿಲ್ಲವೆಂದು ಹೇಳಲಾಗುತ್ತಿದೆ-

**೪೧. ಯೋಗಸನ್ನಸ್ತಕರ್ಮಾಣಂ ಜ್ಞಾನಸಂಛಿನ್ನಸಂಶಯಮ್**
**ಆತ್ಮವಂತಂ ನ ಕರ್ಮಾಣಿ ನಿಬಧ್ನಂತಿ ಧನಂಜಯ**

**ಅರ್ಥ:** ಧನಂಜಯ=ಓ ಅರ್ಜುನಾ!; ಯೋಗಸನ್ನಸ್ತಕರ್ಮಾಣಮ್=ನಿಷ್ಕಾಮ ಕರ್ಮಯೋಗದಿಂದ ಕರ್ಮಫಲವನ್ನು ತ್ಯಜಿಸಿದವನು, ಅಥವ ಈಶ್ವರಾರ್ಪಣ ಮಾಡಿದವನು; ಜ್ಞಾನಸಂಛಿನ್ನಸಂಶಯಮ್=ಜ್ಞಾನದಿಂದ ಸಂಶಯಗಳನ್ನು ನಿವಾರಿಸಿಕೊಂಡವನು; ಆತ್ಮವಂತಮ್=ಆತ್ಮನಿಷ್ಠನ; ಕರ್ಮಾಣಿ=ಕರ್ಮಗಳು; ನ ನಿಬಧ್ನಂತಿ=ಬಂಧಿಸುವುದಿಲ್ಲ.

**ತಾ||** ಓ ಅರ್ಜುನಾ! ನಿಷ್ಕಾಮ ಕರ್ಮಯೋಗದಿಂದ ಕರ್ಮಫಲಗಳನ್ನು ತ್ಯಜಿಸಿದವನನ್ನು, ಇಲ್ಲವೆ ಈಶ್ವರಾರ್ಪಣೆ ಮಾಡಿದವನನ್ನು ಜ್ಞಾನದಿಂದ ಸಂಶಯಗಳನ್ನು ನಿವಾರಿಸಿಕೊಂಡ ಆತ್ಮನಿಷ್ಠನನ್ನು (ಬ್ರಹ್ಮಜ್ಞಾನಿಯನ್ನು) ಕರ್ಮಗಳು ಬಂಧಿಸುವುದಿಲ್ಲ.

**ವ್ಯಾಖ್ಯೆ:** ಕರ್ಮಗಳು ಯಾರನ್ನು ಬಂಧಿಸುವುದಿಲ್ಲ ಎನ್ನುವ ಪ್ರಶ್ನೆಗೆ ಇಲ್ಲಿ ಉತ್ತರ ಕೊಡಲಾಗಿದೆ. ಕರ್ಮಫಲವನ್ನು ತ್ಯಜಿಸಿ ಜ್ಞಾನದಿಂದ ಸಮಸ್ತ ಸಂಶಯಗಳನ್ನು ಹೋಗಲಾಡಿಸಿಕೊಂಡು ಆತ್ಮದಲ್ಲಿ ಸ್ಥಿರತೆಯನ್ನು ಹೊಂದಿರುವ ಜ್ಞಾನಿಯನ್ನು ಕರ್ಮಗಳು ಬಂಧಿಸಲಾರವು. ಕರ್ಮಫಲಗಳನ್ನು ಈಶ್ವರಾರ್ಪಣೆ ಮಾಡಿ ಸಂಗರಹಿತನಾಗಿ, ಆತ್ಮದಲ್ಲಿ ಸ್ಥಿತನಾಗಿರುವವನಿಗೆ ದೃಶ್ಯವಾದ ದೇಹದಲ್ಲಿ ಅಹಂಭಾವವು ಇರುವುದಿಲ್ಲವಾದ್ದರಿಂದ, ಕರ್ತೃತ್ವಭಾವವಿಲ್ಲದವನಾಗಿರುವುದರಿಂದ ಕರ್ಮಗಳು ಆತನನ್ನು ಬಂಧಿಸುವುದಿಲ್ಲ. ಅಂತಹವನು ನಿರಂತರ ಕರ್ಮಗಳನ್ನಾಚರಿಸಿದರೂ ಅವುಗಳಿಂದ ಬಂಧಕ್ಕೆ ಒಳಗಾಗುವುದಿಲ್ಲ. ಏಕೆಂದರೆ ಬಂಧವೆನ್ನುವುದು ಕರ್ಮಗಳನ್ನು ಮಾಡುವುದರಲ್ಲಿ, ಮಾಡದೆ ಇರುವುದರಲ್ಲಿ ಇಲ್ಲ. ಫಲಾಭಿಲಾಷೆಯಲ್ಲಿ, ಕರ್ತೃತ್ವ ಬುದ್ಧಿಯಲ್ಲಿ, ಸಂಗದಲ್ಲಿ ಮಾತ್ರವೇ ಬಂಧವಿರುವುದು. ಆತ್ಮನಿಷ್ಠನ ಸಮಸ್ತ ಕರ್ಮಗಳು ಜ್ಞಾನಾಗ್ನಿಯಿಂದ ದಗ್ಧವಾಗಿ ಹೋಗಿರುವುದರಿಂದ ಇನ್ನು ಅವನನ್ನು ಅವು ಹೇಗೆ ಬಂಧಿಸಬಲ್ಲವು?

"*ಜ್ಞಾನಸಂಛಿನ್ನ ಸಂಶಯಮ್*"- ಜ್ಞಾನವು ಉಂಟಾಗದವರೆಗೆ ಜೀವಿಯನ್ನು ಸಂಶಯಗಳು ಬಾಧಿಸುತ್ತಲೇ ಇರುತ್ತವೆ. ಪ್ರತ್ಯಕ್ಷ ಜ್ಞಾನವುಂಟಾದ ನಂತರ ಸಂದೇಹಗಳೆಲ್ಲವೂ ಮಾಯವಾಗುವುವು. **ಛಿದ್ಯಂತೇ ಸರ್ವಸಂಶಯಾಃ**

"*ಆತ್ಮವಂತಮ್*"- ಆತ್ಮನಿಷ್ಠನನ್ನು, ಬ್ರಹ್ಮಜ್ಞಾನ ಸಂಪನ್ನನನ್ನು ಕರ್ಮಗಳು ಬಂಧಿಸಲಾರವು. ಪ್ರಪಂಚದಲ್ಲಿ ಆತ್ಮಜ್ಞಾನಿ ಒಬ್ಬನನ್ನು ಬಿಟ್ಟು ಬೇರೆಯವರನ್ನೆಲ್ಲಾ (ಧನವಂತರಾಗಲಿ, ಬಲವಂತರಾಗಲಿ, ವಿದ್ಯಾವಂತರಾಗಲಿ, ಸೌಂದರ್ಯವಂತರಾಗಲಿ) ಕರ್ಮಗಳು ಬಂಧಿಸುವುವು. ಆದ್ದರಿಂದ ಆತ್ಮಜ್ಞಾನವನ್ನು ಪಡೆದು ಆತ್ಮವಂತನಾಗಲು ಸರ್ವರೂ ಯತ್ನಶೀಲರಾಗಬೇಕು.

ಪ್ರ : ಕರ್ಮಗಳು ಯಾರನ್ನು ಬಂಧಿಸುವುದಿಲ್ಲ?

ಉ : ೧) ನಿಷ್ಕಾಮ ಕರ್ಮಯೋಗದಿಂದ ಕರ್ಮಫಲಗಳನ್ನು ತ್ಯಜಿಸುವವರನ್ನು ಇಲ್ಲವೆ ಈಶ್ವರಾರ್ಪಣೆ ಮಾಡುವವರನ್ನು ೨) ಜ್ಞಾನದಿಂದ ಸಂಶಯಗಳನ್ನು ದೂರಮಾಡಿಕೊಂಡವರನ್ನು ೩) ಆತ್ಮನಿಷ್ಠನನ್ನು ಕರ್ಮಗಳು ಬಂಧಿಸುವುದಿಲ್ಲ.

ಪ್ರ : ಆದ್ದರಿಂದ ಕರ್ಮಗಳಿಂದ ಬಂಧಿಸಲ್ಪಡದೆ ಇರಲು ಸಾಧಕನು ಏನು ಮಾಡಬೇಕು ?

ಉ : ೧) ಕರ್ಮಫಲಗಳನ್ನು ತ್ಯಜಿಸಬೇಕು. ೨) ಜ್ಞಾನವನ್ನು ಸಂಪಾದಿಸಿಕೊಂಡು ಸಂಶಯ ನಿವೃತ್ತಿ ಮಾಡಿಕೊಳ್ಳಬೇಕು. ೩) ಆತ್ಮದಲ್ಲಿಯೇ ಸ್ಥಿತಿಗೊಂಡಿರಬೇಕು.

**ಅ||** ಜ್ಞಾನದಿಂದ ಅಜ್ಞಾನವನ್ನು ಹೊರಗಟ್ಟಿ ಲೋಕಹಿತಕ್ಕಾಗಿ (ನಿಷ್ಕಾಮ) ಕರ್ಮಯೋಗವನ್ನು ಆಶ್ರಯಿಸಬೇಕೆಂದು ಭಗವಂತನು ಅರ್ಜುನನಿಗೆ ಬೋಧಿಸುತ್ತಿದ್ದಾನೆ-

೪೨. ತಸ್ಮಾದಜ್ಞಾನಸಂಭೂತಂ ಹೃತ್ಸ್ಥಂ ಜ್ಞಾನಾಸಿನಾತ್ಮನಃ
ಛಿತ್ವೈನಂ ಸಂಶಯಂ ಯೋಗಮಾತಿಷ್ಠೋತಿಷ್ಠ ಭಾರತ

**ಅರ್ಥ:** ಭಾರತ=ಓ ಅರ್ಜುನಾ!; ತಸ್ಮಾತ್=ಅದರಿಂದ; ಆತ್ಮನಃ=ನಿನ್ನ; ಹೃತ್ಸ್ಥಂ=ಹೃದಯದಲ್ಲಿರುವುದು; ಅಜ್ಞಾನಸಂಭೂತಮ್=ಅಜ್ಞಾನದಲ್ಲಿ ಹುಟ್ಟಿರುವುದು (ಆದ); ಏನಂ ಸಂಶಯಮ್=ಈ ಸಂದೇಹವನ್ನು; ಜ್ಞಾನಾಸಿನಾ=ಜ್ಞಾನವೆಂಬ ಖಡ್ಗದಿಂದ; ಛಿತ್ವಾ=ಛೇದಿಸಿ; ಯೋಗಂ=(ಜ್ಞಾನ ಯೋಗಸಾಧನವಾದ) ನಿಷ್ಕಾಮ ಕರ್ಮಯೋಗವನ್ನು; ಆತಿಷ್ಠ= ಆಚರಿಸುವುದು; ಉತ್ತಿಷ್ಠ=ಏಳು.

**ತಾ||** ಓ ಅರ್ಜುನಾ! ಆದ್ದರಿಂದ ನಿನ್ನ ಹೃದಯದಲ್ಲಿರುವ, ಅಜ್ಞಾನದಿಂದ ಹುಟ್ಟಿದ ಈ ಸಂಶಯವನ್ನು ಜ್ಞಾನವೆಂಬ ಖಡ್ಗದಿಂದ ಛೇದಿಸಿ ಹಾಕಿ ನಿಷ್ಕಾಮ ಕರ್ಮಯೋಗವನ್ನು ಆಚರಿಸು ಏಳು.

**ವ್ಯಾಖ್ಯೆ:** ಈ ಪ್ರಕಾರವಾಗಿ ಈ ಅಧ್ಯಾಯದಲ್ಲಿ ಜ್ಞಾನವನ್ನು, ಜ್ಞಾನಮಹಾತ್ಮ್ಯೆಯನ್ನು, ಜ್ಞಾನಯೋಗದ ಸಹಾಯದಿಂದ ಸಂಭವವಾಗುವ ನಿಷ್ಕಾಮ ಕರ್ಮಯೋಗವನ್ನು ಬೋಧಿಸಿ, ಕೊನೆಗೆ ಭಗವಂತನು ಅರ್ಜುನನನ್ನು ಕಾರ್ಯಾಚರಣೆಗಾಗಿ ಹುರಿದುಂಬಿಸುತ್ತಿದ್ದಾನೆ. ಕರ್ತವ್ಯ ನಿಷ್ಠೆಯನ್ನು ಬೋಧಿಸುತ್ತಿದ್ದಾನೆ. ಏಳು (ಉತ್ತಿಷ್ಠ) 'ಕಾರ್ಯರಂಗದಲ್ಲಿ ಧುಮುಕು' ಎಂದು ಉತ್ತೇಜನವೀಯುತ್ತಿದ್ದಾನೆ.

"ಅಜ್ಞಾನಸಂಭೂತಮ್"- ಸಂಶಯ, ಮೋಹಾದಿಗಳೆಲ್ಲವೂ ಅಜ್ಞಾನದಿಂದಲೇ ಹುಟ್ಟುತ್ತಿವೆ. ಅವುಗಳೆಲ್ಲವುಗಳಿಗೆ ಅಜ್ಞಾನವು ತಾಯಿಯಂತಹದು. ಸಮಸ್ತ ದುರ್ಗುಣಗಳು, ದುರ್ವಾಸನೆಗಳು, ದುಸ್ಸಂಕಲ್ಪಗಳು, ಸಂಶಯಗಳು ಅಲ್ಲಿಯೇ ಹುಟ್ಟುತ್ತಿವೆ.

"ಜ್ಞಾನಾಸಿನಾ"- ಅಜ್ಞಾನವನ್ನು ಹೊರದೂಡಲು ಜ್ಞಾನವೇ ಸಮರ್ಥವಾದುದಲ್ಲದೆ ಬೇರೆ ಯಾವ ಸಾಧನೆಗಳಿಂದ ಸಾಧ್ಯವಿಲ್ಲ. ಆದ್ದರಿಂದಲೇ ಅದನ್ನು ಛೇದಿಸಲು ಜ್ಞಾನವೆಂಬ ಖಡ್ಗವನ್ನು ಪ್ರಯೋಗಿಸಬೇಕೆಂದು ಭಗವಂತನು ಬೋಧಿಸಿದನು. ಅಂಧಕಾರವನ್ನು ಹೋಗಲಾಡಿಸಲು ಪ್ರಕಾಶವೊಂದೇ ಸಮರ್ಥವಾದುದಲ್ಲವೇ! ಹಾಗೆಯೇ ಅಜ್ಞಾನಾಂಧಕಾರವನ್ನು ಜ್ಞಾನಪ್ರಕಾಶದಿಂದ ಮಾತ್ರ ನಿರ್ಮೂಲನಗೊಳಿಸಬಹುದು.

"ಹೃತ್ಸ್ಥಮ್"- ಎಂದು ಹೇಳಿರುವುದರಿಂದ ಅನಾದಿ ಕಾಲದಿಂದ ಆ ಸಂಶಯ ಮೋಹಾದಿಗಳು ಹೃದಯದಲ್ಲೇ ಮನೆಮಾಡಿಕೊಂಡು ಬಂದಿವೆಯೆಂದು ಸ್ಪಷ್ಟವಾಗುತ್ತಿದೆ. ಶತ್ರು ಎಲ್ಲೋ ದೂರದಲ್ಲಿಲ್ಲ. ಅತಿ ಸಮೀಪದಲ್ಲಿರುವ ಹೃದಯದಲ್ಲಿಯೇ ಇದ್ದಾನೆಂದು ತಿಳಿಯಬೇಕು.

"ಯೋಗಮಾತಿಷ್ಠ"- ಜ್ಞಾನ ಪ್ರಾಪ್ತಿಯ ನಂತರ ಲೋಕಹಿತಕ್ಕಾಗಿ ನಿಷ್ಕಾಮಕರ್ಮಯೋಗಾಚರಣೆಯನ್ನು ಅವಲಂಬಿಸಬೇಕೆಂದು ಭಗವಂತನು ಅರ್ಜುನನಿಗೆ ಬೋಧಿಸುತ್ತಿದ್ದಾನೆ. ಜ್ಞಾನಿಗೆ ಕರ್ಮವನ್ನು ಮಾಡುವುದ ರಲ್ಲಾಗಲಿ, ತ್ಯಜಿಸುವುದರಲ್ಲಾಗಲಿ ಎಂತಹ ಉತ್ಸಾಹವಿಲ್ಲದಿದ್ದರೂ ಧರ್ಮಸಮುದ್ಧರಣೆ ಗೋಸ್ಕರ ಲೋಕ ಸಂಗ್ರಹಾರ್ಥವಾಗಿ, ಸಾಮಾನ್ಯವಾಗಿ ಆತನು ನಿಷ್ಕಾಮ ಬುದ್ಧಿಯಿಂದ ಕರ್ಮ ಮಾಡುತ್ತಲೇ ಇರುವನು. ಆದ್ದರಿಂದಲೇ ಭಗವಂತನು ಇಲ್ಲಿ ಅರ್ಜುನನನ್ನು ಕುರಿತು, 'ಓ ಅರ್ಜುನಾ! ಮುಂದೆ ನೀನು ಜ್ಞಾನವನ್ನು ಸಂಪಾದಿಸು, ಅಂತಹ ಜ್ಞಾನಖಡ್ಗದಿಂದ ಅವಿದ್ಯಾ ಹೃದಯ ಗ್ರಂಥಿಯನ್ನು ಛೇದಿಸಿ ಹಾಕು; ನಂತರ, ಲೋಕಹಿತಕ್ಕಾಗಿ ಕರ್ಮವನ್ನು ಅನುಸರಿಸು! ಎಂದು ಉಪದೇಶಿಸುತ್ತಿದ್ದಾನೆ.

"ಉತ್ತಿಷ್ಠ"- 'ಏಳು!' ಎಂದು ಶ್ರೀಕೃಷ್ಣನು ಧೈರ್ಯೋದ್ಬೋಧಕವಾದ ವಾಕ್ಯವನ್ನು ಹೇಳಿದನು. ಮಹಾತ್ಮರಾದವರು ನಿದ್ರಿಸುವವರನ್ನು ಇಂತಹ ವಾಕ್ಯಗಳಿಂದ ಎಚ್ಚರಿಸುವರು. ಕೂತು ಮೂಲುಗುತ್ತಿರುವವರಿಗೆ ಧೈರ್ಯವನ್ನು ಹೇಳಿ ಕಾರ್ಯರಂಗದಲ್ಲಿ ಧುಮುಕುವಂತೆ ಮಾಡುವರು. ಇಲ್ಲಿ ಅಕರ್ಮಣಿಯಾಗಿ ರಥದಲ್ಲಿ ನಿಸ್ತೇಜನಾಗಿ ಕುಳಿತುಬಿದ್ದ ಅರ್ಜುನನಿಗೆ ಭಗವಂತನು ಧೈರ್ಯವನ್ನು ತುಂಬಿ 'ಉತ್ತಿಷ್ಠ'- (ಏಳು) ಎನ್ನುತ್ತಿದ್ದಾನೆ! ಆದ್ದರಿಂದ ಈ ಭಗವಂತನ ವಾಕ್ಯವನ್ನು ಸಂಸ್ಮರಿಸಿ ಬೇರೆಯವರೂ ಅರ್ಜುನನ ಹಾಗೆ ತಮ್ಮ ತಮ್ಮ ಹೃದಯಗಳಲ್ಲಿ ಜನ್ಮಜನ್ಮಾಂತರಗಳಿಂದ ಗಾಢವಾಗಿ ನಾಟಿಕೊಂಡಿರುವ ಅವಿದ್ಯಾ ಗ್ರಂಥಿಯನ್ನು ಜ್ಞಾನಖಡ್ಗದಿಂದ ಕತ್ತರಿಸಿ ಹಾಕಿ ಕರ್ತವ್ಯೋನ್ಮುಖರಾಗಬೇಕಾಗಿದೆ. ಎಷ್ಟು ಸಾಧನೆಗಳನ್ನು ಅವಲಂಬಿಸಿದರೂ ಕೊನೆಗೆ ಆತ್ಮಜ್ಞಾನವೊಂದೇ ಬಂಧವಿಮುಕ್ತಿಗೆ ಶರಣ್ಯ. ಆತ್ಮಜ್ಞಾನವನ್ನು ಹೊಂದಿದ ನಂತರವೇ ನಿಷ್ಕಾಮ ಕರ್ಮಯೋಗವನ್ನು ಇನ್ನೂ ಉತ್ತಮವಾಗಿ ಆಚರಿಸುವ ಅವಕಾಶವಿದೆಯೆಂದು ತಿಳಿಯಬೇಕು.

ಪ್ರ : ಸಂಶಯ, ಮೋಹಾದಿಗಳು ಎಲ್ಲಿ ವಾಸಿಸುವುವು?

ಉ : ಹೃದಯದಲ್ಲಿ.

ಪ್ರ : ಅವು ಯಾವುದರಿಂದ ಹುಟ್ಟುವುವು?

ಉ : ಅಜ್ಞಾನದಿಂದ.

ಪ್ರ : ಆ ಅಜ್ಞಾನ ಹೇಗೆ ನಶಿಸುವುದು?

ಉ : ಜ್ಞಾನವೆನ್ನುವ ಖಡ್ಗದಿಂದ ಕತ್ತರಿಸಿದಾಗ.

ಪ್ರ : ಅಜ್ಞಾನವು ನಾಶವಾದನಂತರ ಮಹನೀಯರು ಸಾಮಾನ್ಯವಾಗಿ ಏನು ಮಾಡುವರು?

ಉ : ಲೋಕೋಪಕಾರಾರ್ಥವಾಗಿ ನಿಷ್ಕಾಮಕರ್ಮಯೋಗವನ್ನು ಆಚರಿಸುವರು.

**ಓಮ್**

ಇತಿ ಶ್ರೀಮದ್ಭಾಗವದ್ಗೀತಾಸೂಪನಿಷತ್ಸು ಬ್ರಹ್ಮವಿದ್ಯಾಯಾಂ ಯೋಗಶಾಸ್ತ್ರೇ

ಶ್ರೀಕೃಷ್ಣಾರ್ಜುನ ಸಂವಾದೇ ಜ್ಞಾನಯೋಗೋ ನಾಮ ಚತುರ್ಥೋಽಧ್ಯಾಯಃ

ಇದು ಉಪನಿಷತ್ಪ್ರತಿಪಾದಕವು, ಬ್ರಹ್ಮವಿದ್ಯೆಯು, ಯೋಗಶಾಸ್ತ್ರವು,

ಶ್ರೀಕೃಷ್ಣಾರ್ಜುನ ಸಂವಾದವಾದ ಶ್ರೀಭಗವದ್ಗೀತೆಯಲ್ಲಿಯ ಜ್ಞಾನಯೋಗವೆನ್ನುವ

ನಾಲ್ಕನೆಯ ಅಧ್ಯಾಯ

**ಓಮ್ ತತ್ ಸತ್**

# ಶ್ರೀ ಭಗವದ್ಗೀತೆ

## ಅಥ ಪಂಚಮೋಽಧ್ಯಾಯಃ
## ಐದನೆಯ ಅಧ್ಯಾಯ
## ಕರ್ಮಸನ್ಯಾಸಯೋಗಃ - ಕರ್ಮಸನ್ಯಾಸಯೋಗ

**ಈ ಅಧ್ಯಾಯದ ಹೆಸರು :**

**"ಕರ್ಮಸನ್ಯಾಸ ಯೋಗ"**- ಸನ್ಯಾಸವೆಂದರೆ ತ್ಯಾಗ. ಕರ್ಮತ್ಯಾಗವು ಪ್ರಾರಂಭದಲ್ಲಿ ಕೆಲಸಕ್ಕೆಬಾರದೆಂದೂ, ಕರ್ಮ ಫಲತ್ಯಾಗ ರೂಪವಾದ ನಿಷ್ಕಾಮಕರ್ಮಯೋಗವನ್ನು ಆಚರಿಸುತ್ತಾ ಬಂದು ಚಿತ್ತಶುದ್ಧಿ ಹೊಂದಿದ ನಂತರ ನಿರ್ವಿಷಯ ಆತ್ಮಸ್ಥಿತಿಯಲ್ಲಿ ಇಲ್ಲವೆ ಅಂತಹ ಸ್ಥಿತಿಯನ್ನು ಪ್ರಾಪ್ತಿ ಮಾಡಿಕೊಳ್ಳುವುದಕ್ಕಾಗಿ ಕರ್ಮತ್ಯಾಗವೆನ್ನುವದು ಸಂಭವಿಸಿದರೂ, ಸಾಧಕರಿಗೆ ಕರ್ಮಸನ್ಯಾಸಕ್ಕಿಂತ ಕರ್ಮಯೋಗವೇ ಶ್ರೇಷ್ಠವೆಂದು ಈ ಅಧ್ಯಾಯದಲ್ಲಿ ಹೇಳಲಾಗಿದೆ. ಈ ಪ್ರಕಾರವಾಗಿ ಕರ್ಮಸನ್ಯಾಸದ ಬಗ್ಗೆ ವಿವರವಾಗಿ ಬೋಧಿಸಿರುವ ಅಧ್ಯಾಯವಾದುದರಿಂದ ಇದಕ್ಕೆ ಕರ್ಮಸನ್ಯಾಸ ಯೋಗವೆಂದು ಕರೆಯುವರು. ಇಲ್ಲವೆ 'ಸನ್ಯಾಸ'ವೆನ್ನುವ ಪದವನ್ನು ಸಾಂಖ್ಯಕ್ಕೆ, ಜ್ಞಾನಕ್ಕೆ ಪರ್ಯಾಯವಾಗಿ ಉಪಯೋಗಿಸಲ್ಪಟ್ಟಿದ್ದು, ಈ ಅಧ್ಯಾಯದಲ್ಲಿ ಕರ್ಮ ಯೋಗ, ಜ್ಞಾನಯೋಗ ಎರಡನ್ನೂ ಕುರಿತ ವಿವರಣೆಯಿರುವುದರಿಂದ ಇದಕ್ಕೆ ಕರ್ಮಸನ್ಯಾಸವೆಂಬ ಹೆಸರು ಬಂದಿರಲು ಸಾಧ್ಯ.

**ಈ ಅಧ್ಯಾಯದಲ್ಲಿಯ ಪ್ರಧಾನ ವಿಷಯಗಳು:**

೧) ಸಾಂಖ್ಯಯೋಗ, (ನಿಷ್ಕಾಮ) ಕರ್ಮಯೋಗಗಳನ್ನು ಕುರಿತ ನಿರ್ಣಯ. (೧ ಶ್ಲೋಕದಿಂದ ೬ನೆಯ ಶ್ಲೋಕದವರೆಗೆ)

೨) ಸಾಂಖ್ಯಯೋಗಿಯ, ಕರ್ಮಯೋಗಿಯ ಲಕ್ಷಣಗಳು, ಅವರ ಮಹಿಮೆ (೭ ಶ್ಲೋಕದಿಂದ ೧೨ ಶ್ಲೋಕದವರೆಗೆ)

೩) ಜ್ಞಾನಯೋಗದ ವಿವರಣೆ (೧೩ಶ್ಲೋಕದಿಂದ ೨೬ ಶ್ಲೋಕದವರೆಗೆ)

೪) ಭಕ್ತಿಸಹಿತವಾದ ಧ್ಯಾನಯೋಗದ ವರ್ಣನೆ. (೨೭ ಶ್ಲೋಕದಿಂದ ೨೯ ಶ್ಲೋಕದವರೆಗೆ)

**ಪೂರ್ವಾಧ್ಯಾಯದೊಡನೆ ಈ ಅಧ್ಯಾಯಕ್ಕೆ ಇರುವ ಸಂಬಂಧ:**

೩ನೆಯ ಹಾಗು ೪ನೆಯ ಅಧ್ಯಾಯಗಳಲ್ಲಿ ಭಗವಂತನು ನಿಷ್ಕಾಮ ಕರ್ಮಯೋಗವನ್ನು ಅಲ್ಲಲ್ಲಿ ಪ್ರಸ್ತಾಪಿಸುತ್ತಾ ಬಂದನು. ಅದರ ಆಚರಣೆಯಿಂದ ಕ್ರಮವಾಗಿ ಜ್ಞಾನವು ಸಿದ್ಧಿಸುವುದೆಂದು ಹೇಳಿದನು. (೪-೩೮). ಆದರೂ ಜ್ಞಾನವನ್ನು ಕುರಿತ ಉದ್ಘಾಟನೆ, ಪೀಠಿಕೆಗಳು ಅಲ್ಲಲ್ಲಿ ಕಂಡುಬಂದುವು. ಅಂತಹ ಜ್ಞಾನವನ್ನು ಮಹನೀಯರನ್ನು ಸೇವಿಸುವುದರ ಮೂಲಕ ತಿಳಿದು ಕೊಳ್ಳಬೇಕೆಂದು ಭಗವಂತನು ತಿಳಿಸಿದನು. ಆದ್ದರಿಂದ ಈ ಜ್ಞಾನ, ಕರ್ಮ ಎರಡರಲ್ಲಿ ಯಾವುದು ಶ್ರೇಷ್ಠ ಎನ್ನುವ ಸಂಶಯವು ಅರ್ಜುನನಿಗೆ ಉಂಟಾಗಲು, ಅದರ ನಿವಾರಣೆಗೆ, ಶ್ರೀಕೃಷ್ಣಮೂರ್ತಿಯನ್ನು ತಕ್ಷಣ ಪ್ರಶ್ನಿಸಿದನು. ಅರ್ಜುನನ ಆ ಪ್ರಶ್ನೆಯಿಂದ ಈ ಅಧ್ಯಾಯವು ಪ್ರಾರಂಭವಾಗುತ್ತಿದೆ.

**ಅರ್ಜುನ ಉವಾಚ:**

**೧. ಸಂನ್ಯಾಸಂ ಕರ್ಮಣಾಂ ಕೃಷ್ಣ ಪುನರ್ಯೋಗಂ ಚ ಶಂಸಸಿ**
**ಯಚ್ಛ್ರೇಯ ಏತಯೋರೇಕಂ ತನ್ಮೇ ಬ್ರೂಹಿ ಸುನಿಶ್ಚಿತಮ್**

ಅರ್ಜುನ ಉವಾಚ=ಅರ್ಜುನನು ಹೇಳಿದನು.

**ಅರ್ಥ:** ಕೃಷ್ಣ=ಓ ಕೃಷ್ಣಮೂರ್ತಿ!; ಕರ್ಮಣಾಮ್=ಕರ್ಮಗಳ; ಸನ್ಯಾಸಮ್= ಪರಿತ್ಯಾಗವನ್ನು; ಪುನಃ=ಮತ್ತೆ; ಯೋಗಂ ಚ=ಕರ್ಮಯೋಗವನ್ನು; ಶಂಸಸಿ=ಪ್ರಶಂಸಿಸುತ್ತೀಯೆ; ಏತಯೋಃ=ಈ ಎರಡರಲ್ಲಿ; ಯತ್= ಯಾವುದು; ಶ್ರೇಯಃ=ಶ್ರೇಯಸ್ಕರವಾದುದೋ; ಸುನಿಶ್ಚಿತಮ್ ತತ್ ಏಕಂ= ಚೆನ್ನಾಗಿ ನಿಶ್ಚಯಿಸಲ್ಪಟ್ಟ ಒಂದನ್ನು; ಮೇ ಬ್ರೂಹಿ=ನನಗೆ ಹೇಳುವುದು.

**ತಾ||** ಅರ್ಜುನನು ಹೇಳಿದನು- ಓ ಕೃಷ್ಣಮೂರ್ತಿ! ನೀನು ಒಮ್ಮೆ ಕರ್ಮಗಳ ತ್ಯಾಗವನ್ನು (ಕರ್ಮತ್ಯಾಗ ಪೂರ್ವಕವಾದ ಜ್ಞಾನವನ್ನು) ಮತ್ತೊಮ್ಮೆ ಕರ್ಮಯೋಗವನ್ನು ಪ್ರಶಂಸಿಸುತ್ತಿದ್ದೀಯೆ ಆದ್ದರಿಂದ ಈ ಎರಡರಲ್ಲಿ ಯಾವುದು ಶ್ರೇಷ್ಠವೋ ಚೆನ್ನಾಗಿ ನಿಶ್ಚಯಿಸಿ ನನಗೆ ಆ ಒಂದನ್ನು ಹೇಳುವುದು.

**ವ್ಯಾಖ್ಯೆ:** ವಾಸ್ತವವಾಗಿ ಶ್ರೀಕೃಷ್ಣಮೂರ್ತಿ ಕರ್ಮಗಳ ತ್ಯಾಗವನ್ನು ಎಲ್ಲಿಯೂ ಬೋಧಿಸಲಿಲ್ಲ. ಕರ್ಮಫಲತ್ಯಾಗವನ್ನು ಮಾತ್ರ ಬೋಧಿಸಿದನು. ಆದ್ದರಿಂದ ಇಲ್ಲಿ ಕರ್ಮಸನ್ಯಾಸದ ಅರ್ಥ ಕರ್ಮತ್ಯಾಗ ಪೂರ್ವಕವಾದ ಜ್ಞಾನವೆಂದೇ ಆಗಿದೆ. ಅರ್ಜುನನ, ಜ್ಞಾನಯೋಗ, ಕರ್ಮಯೋಗಗಳಲ್ಲಿ ಯಾವುದು ಶ್ರೇಷ್ಠ, ಯಾವುದು ಶ್ರೇಯೋದಾಯಕವಾದುದೆನ್ನುವ ಪ್ರಶ್ನೆ ಸಮಂಜಸವೇ ಆಗಿದೆ. ಏಕೆಂದರೆ ಶ್ರೀಕೃಷ್ಣಮೂರ್ತಿ-

ಕಾರ್ಯಂ ಕರ್ಮ ಸಮಾಚರ (೩-೧೯)

ಯದ್ಧ್ಯಸ್ವ ವಿಗತಜ್ವರಃ (೩-೩೦)

ಕುರು ಕರ್ಮೈವ ತಸ್ಮಾತ್ತ್ವಂ (೪-೧೫)

ಯೋಗಮಾತಿಷ್ಠೋತ್ತಿಷ್ಠ ಭಾರತ (೪-೪೨)

ಮುಂತಾದ ವಾಕ್ಯಗಳಿಂದ ಕರ್ಮಯೋಗವನ್ನು ಆಶ್ರಯಿಸಬೇಕೆಂದು ಅರ್ಜುನನಿಗೆ ಅಸಂಧಿಗ್ಧವಾಗಿ ಹೇಳಿದ್ದಾನೆ. ಆದರೂ ಕೆಲವು ಕಡೆ-

> ಶ್ರೇಯಾನ್ ದ್ರವ್ಯಮಯಾದ್ಯಜ್ಞ ಜ್ಞಾನಯಜ್ಞಃ ಪರಂತಪ
> ಸರ್ವಂ ಕರ್ಮಾಖಿಲಂ ಪಾರ್ಥ ಜ್ಞಾನೇ ಪರಿಸಮಾಪ್ಯತೇ (೪-೩೩)
> ತದ್ವಿದ್ಧಿ ಪ್ರಣಿಪಾತೇನ (೪-೩೪)

ಮುಂತಾದ ವಾಕ್ಯಗಳ ದ್ವಾರ ಜ್ಞಾನಯೋಗದ ಶ್ರೇಷ್ಠತೆಯನ್ನು ಪ್ರತಿಪಾದಿಸಿ ಅದನ್ನು ಅವಲಂಬಿಸಬೇಕೆಂದು ಭಗವಂತನು ಅರ್ಜುನನಿಗೆ ಆದೇಶಿಸಿದನು. ಎರಡನ್ನೂ ಶ್ರದ್ಧೆಯಾಗಿ ಕೇಳಿದ ಅರ್ಜುನನಿಗೆ ಅವುಗಳಲ್ಲಿ ಯಾವುದು ಉತ್ತಮ ಎನ್ನುವ ಸಂಶಯ ಉದಯಿಸಿತು. ಇದೇ ರೀತಿ ಹಿಂದೆ ಮೂರನೆಯ ಅಧ್ಯಾಯದ ಪ್ರಾರಂಭದಲ್ಲಿ, ಅರ್ಜುನನಿಗೆ ಉಂಟಾದ ಸಂದೇಹ ಇಲ್ಲಿ ಗಮನಿಸಬೇಕಾಗಿದೆ.

**ಅ||** ಆ ಪ್ರಶ್ನೆಗಳಿಗೆ ಭಗವಂತನು ಪ್ರತ್ಯುತ್ತರ ಕೊಡುತ್ತಿದ್ದಾನೆ-

**ಶ್ರೀ ಭಗವಾನುವಾಚ :**

> **೨. ಸಂನ್ಯಾಸಃ ಕರ್ಮಯೋಗಶ್ಚ ನಿಶ್ಶ್ರೇಯಸಕರಾ ಉಭೌ**
> **ತಯೋಸ್ತು ಕರ್ಮಸನ್ನ್ಯಾಸಾತ್ಕರ್ಮಯೋಗೋ ವಿಶಿಷ್ಯತೇ**

ಶ್ರೀ ಭಗವಾನುವಾಚ- ಭಗವಂತನು ಹೇಳಿದನು.

**ಅರ್ಥ:** ಸನ್ಯಾಸಃ=ಕರ್ಮತ್ಯಾಗ (ಕರ್ಮತ್ಯಾಗ ಪೂರ್ವಕವಾದ ಜ್ಞಾನಯೋಗ); ಕರ್ಮಯೋಗಃ ಚ=ಕರ್ಮಯೋಗವೂ; ಉಭೌ=ಎರಡೂ ನಿಶ್ಶ್ರೇಯಸಕರೌ =ಮೋಕ್ಷವನ್ನು ಉಂಟುಮಾಡುವಂತಹವು; ತಯೋಃ ತು=ಆ ಎರಡರಲ್ಲಿ; ಕರ್ಮಸನ್ಯಾಸಾತ್=ಕರ್ಮತ್ಯಾಗಕ್ಕಿಂತ; ಕರ್ಮಯೋಗಃ=ಕರ್ಮಯೋಗವೇ; ವಿಶಿಷ್ಯತೇ=ಶ್ರೇಷ್ಠವಾದುದಾಗಿದೆ.

**ತಾ||** ಶ್ರೀ ಭಗವಂತನು ಹೇಳಿದನು- ಕರ್ಮತ್ಯಾಗ (ಕರ್ಮತ್ಯಾಗ ಪೂರ್ವಕವಾದ ಜ್ಞಾನಯೋಗ), ಕರ್ಮಯೋಗ ಎನ್ನುವ ಎರಡೂ ಮೋಕ್ಷವನ್ನುಂಟು ಮಾಡುವುವು. ಆದರೆ ಆ ಎರಡರಲ್ಲಿ (ಪ್ರಾರಂಭದಲ್ಲಿ) ಕರ್ಮತ್ಯಾಗಕ್ಕಿಂತ ಕರ್ಮಯೋಗವೇ ಶ್ರೇಷ್ಠವಾದುದು.

**ವ್ಯಾಖ್ಯೆ:** ಕರ್ಮಸನ್ಯಾಸ ಪೂರ್ವಕ ಜ್ಞಾನಯೋಗ, ಕರ್ಮಾಚರಣೆ ಪೂರ್ವಕ ನಿಷ್ಕಾಮ ಕರ್ಮಯೋಗವೆನ್ನುವ ಈ ಎರಡೂ ಉತ್ತಮ ಶ್ರೇಯಸ್ಸನ್ನುಂಟು ಮಾಡುವುವು. ಎರಡೂ ಮೋಕ್ಷಪ್ರದಗಳೇ ಹೌದು. ಆದರೂ ಪ್ರಾರಂಭ ಸ್ಥಿತಿಯಲ್ಲಿರುವವರಿಗೆ ಕರ್ಮಗಳನ್ನು ಬಿಡುವುದಕ್ಕಿಂತ ಕರ್ಮಗಳನ್ನು (ನಿಷ್ಕಾಮವಾಗಿ) ಆಚರಿಸುವುದೇ ಉತ್ತಮ. ಅವರಿಗೆ ಕರ್ಮಸನ್ಯಾಸಕ್ಕಿಂತ ಕರ್ಮಯೋಗವೇ ಶ್ರೇಯಸ್ಕರ. ಅರ್ಜುನನು ನಿರ್ವಿಷಯ ಜ್ಞಾನಸ್ಥಿತಿಯನ್ನು ಇನ್ನೂ ಹೊಂದದಿರುವುದರಿಂದ, ಆತನನ್ನು ದೃಷ್ಟಿಯಲ್ಲಿಟ್ಟುಕೊಂಡು ಈ ಪ್ರಕಾರವಾಗಿ ಭಗವಂತನು ಹೇಳಿರಬಹುದು. ಮತ್ತೆ ಪ್ರಪಂಚದಲ್ಲಿ ಜ್ಞಾನಿಗಳಿಗಿಂತ ಅಜ್ಞಾನಿಗಳೇ ಅಧಿಕ ಸಂಖ್ಯೆಯಲ್ಲಿದ್ದಾರೆ. ಅವರೆಲ್ಲರ ಶ್ರೇಯವನ್ನನುದ್ದೇಶಿಸಿಯೂ ಭಗವಂತನು ಕರ್ಮಸನ್ಯಾಸವನ್ನು ಅಂದರೆ ಕರ್ಮಪರಿತ್ಯಾಗವನ್ನು ಇಲ್ಲಿ ಪ್ರೋತ್ಸಾಹಿಸಲಿಲ್ಲವೆಂದು ಊಹಿಸಬಹುದು. ಹೀಗೆ ಹೇಳುವುದರಿಂದ ಪ್ರತಿಯೊಬ್ಬರೂ ತಾವು ನಿರ್ವಿಷಯ ಸ್ಥಿತಿಯನ್ನು ಹೊಂದುವುದಕ್ಕೆ ಮುಂಚೆಯೇ ಕರ್ಮಗಳನ್ನು ಬಿಟ್ಟರೆ ಸೋಮಾರಿಗಳಾಗಿ, ಭಕ್ತಿಗೆ, ಮುಕ್ತಿಗೆ ಎರಡಕ್ಕೂ ದೂರವಾಗುವರು. ಆದ್ದರಿಂದ ಜನಸಾಮಾನ್ಯರ ಶ್ರೇಯದ ದೃಷ್ಟಿಯಿಂದ ಭಗವಂತನು ಈ ಪ್ರಕಾರವಾಗಿ ಕರ್ಮಯೋಗದ ವಿಶಿಷ್ಟತೆಯನ್ನು ಪ್ರತಿಪಾದಿಸಿದನು.

ಪ್ರ : ಕರ್ಮಸನ್ಯಾಸಪೂರ್ವಕವಾದ ಜ್ಞಾನಯೋಗ ಶ್ರೇಷ್ಠವೋ, ಕರ್ಮಾಚರಣ ಪೂರ್ವಕವಾದ ನಿಷ್ಕಾಮಕರ್ಮಯೋಗ ಶ್ರೇಷ್ಠವೋ?

ಉ : ಎರಡೂ ಶ್ರೇಷ್ಠವಾದವುಗಳೇ. ಎರಡೂ ಮುಕ್ತಿ ಪ್ರದಾಯಕಗಳೇ. ಆದರೂ ಸಾಧಕನಿಗೆ ಪ್ರಾರಂಭ ಸ್ಥಿತಿಯಲ್ಲಿ ಕರ್ಮಾಚರಣೆಯೇ ಶ್ರೇಯೋದಾಯಕವಾದುದು.

**ಅ||** ರಾಗದ್ವೇಷಗಳಿಲ್ಲದ ನಿಷ್ಕಾಮ ಕರ್ಮಯೋಗಿಯನ್ನು ಸ್ತುತಿಸಲಾಗುತ್ತಿದೆ-

> **೩. ಜ್ಞೇಯಸ್ಸ ನಿತ್ಯಸನ್ನ್ಯಾಸೀ ಯೋ ನ ದ್ವೇಷ್ಟಿ ನ ಕಾಂಕ್ಷತಿ**
> **ನಿರ್ದ್ವಂದ್ವೋ ಹಿ ಮಹಾಬಾಹೋ ಸುಖಂ ಬಂಧಾತ್ಪ್ರಮುಚ್ಯತೇ**

**ಅರ್ಥ:** ಮಹಾಬಾಹೋ=ಉದ್ದ ತೋಳುಗಳುಳ್ಳ ಓ ಅರ್ಜುನಾ!; ಯಃ= ಯಾರು; ನ ದ್ವೇಷ್ಟಿ=ದ್ವೇಷಿಸುವುದಿಲ್ಲವೋ; ನ ಕಾಂಕ್ಷತಿ=ಕೋರುವುದಿಲ್ಲವೋ; ಸಃ=ಆತನು; ನಿತ್ಯಸನ್ಯಾಸಿ=ಯಾವಾಗಲೂ ಸನ್ಯಾಸಿಯಾಗಿ; ಜ್ಞೇಯಃ=ತಿಳಿದು ಕೊಳ್ಳಲ್ಪಡಬೇಕಾದವನು; ಹಿ=ಏಕೆಂದರೆ; ನಿರ್ದ್ವಂದ್ವಃ=(ರಾಗದ್ವೇಷಾದಿ) ದ್ವಂದ್ವಗಳಿಲ್ಲದವನು; ಸುಖಂ=ಸುಲಭವಾಗಿ; ಬಂಧಾತ್=(ಸಂಸಾರ) ಬಂಧನದಿಂದ; ಪ್ರಮುಚ್ಯತೆ=ಬಿಡುಗಡೆ ಹೊಂದುತ್ತಾನೆ.

**ತಾ||** ಉದ್ದ ಬಾಹುಗಳುಳ್ಳ ಓ ಅರ್ಜುನಾ! ಯಾರು(ಯಾವ ಕರ್ಮಯೋಗಿ) ಯಾವುದನ್ನೂ ದ್ವೇಷಿಸುವುದಿಲ್ಲವೋ, ಯಾವುದನ್ನೂ ಅಪೇಕ್ಷಿಸುವುದಿಲ್ಲವೋ ಅಂತಹವನನ್ನು ಸದಾ ಸನ್ಯಾಸಿ (ತ್ಯಾಗಿ)ಯೆಂದೇ ತಿಳಿಯಬೇಕು. ಏಕೆಂದರೆ, (ರಾಗದ್ವೇಷಾದಿ) ದ್ವಂದ್ವಗಳಿಲ್ಲದವನು, ಸುಲಭವಾಗಿ ಸಂಸಾರ ಬಂಧನದಿಂದ ವಿಮುಕ್ತನಾಗಬಲ್ಲನು.

**ವ್ಯಾಖ್ಯೆ:** ಸನ್ಯಾಸವೆಂದರೆ ರಾಗದ್ವೇಷಾದಿಗಳನ್ನು, ಸುಖದುಃಖಾದಿ ದ್ವಂದ್ವಗಳನ್ನು ತ್ಯಜಿಸುವುದೇ ಆಗಲಿ ಕರ್ಮಗಳನ್ನು ಮಾತ್ರ ತ್ಯಜಿಸುವುದು ಅಲ್ಲವೆಂದು ಇಲ್ಲಿ ಸ್ಪಷ್ಟೀಕರಿಸಲಾಗಿದೆ. ಹಾಗೆ ರಾಗದ್ವೇಷಾದಿಗಳನ್ನು ಬಿಡುವವನೇ 'ನಿತ್ಯಸನ್ಯಾಸಿ'ಯೆನಿಸಿಕೊಳ್ಳುವನು. ಬೇರೆಯವರು 'ಅನಿತ್ಯ ಸನ್ಯಾಸಿ'ಗಳೇ ಎಂದು ಭಾವ. ಸನ್ಯಾಸಿಗಳು (ಕುಟೀಚಕ, ಬಹೂದಕ ಮುಂತಾದವರು) ಅನೇಕ ತರಗತಿಗಳವರು ಇದ್ದರೂ ಇಲ್ಲಿ ಎರಡು ತರಗತಿಗಳವರನ್ನು ಮಾತ್ರ ಸೂಚಿಸಲ್ಪಡಲಾಗಿದೆ- ೧) ನಿತ್ಯ ಸನ್ಯಾಸಿಗಳು ೨) ಅನಿತ್ಯ ಸನ್ಯಾಸಿಗಳು. ರಾಗದ್ವೇಷರಹಿತನು, ದ್ವಂದ್ವವಿಮುಕ್ತನು ನಿತ್ಯಸನ್ಯಾಸಿ. ಸನ್ಯಾಸಿ ವೇಷವನ್ನು ಮಾತ್ರ ಹಾಕಿಕೊಂಡು ಅಂತಃಕರಣದಲ್ಲಿ ರಾಗ, ಕಾಮ, ದ್ವಂದ್ವಾದಿಗಳನ್ನು ಹೊಂದಿರುವವನು ಅನಿತ್ಯ ಸನ್ಯಾಸಿ ಅಂದರೆ ಹೃದಯ ಪರಿವರ್ತನೆಯಿಲ್ಲದೆ ಬಾಹ್ಯದಲ್ಲಿ ಮಾತ್ರ ಬದಲಾಗಿರುವವನು- ಎಂದರ್ಥ. ಆದ್ದರಿಂದ ರಾಗ, ದ್ವೇಷ, ದ್ವಂದ್ವಗಳನ್ನು ಬಿಡುವುದೇ ಸನ್ಯಾಸ. ವಾಸನಾತ್ಯಾಗವೇ ವಾಸ್ತವವಾಗಿ ಸನ್ಯಾಸ. ಅದಿಲ್ಲದವನು ಸನ್ಯಾಸಿ ವೇಷ ಧರಿಸಿದರೂ ಪತಿತನೇ. ಅದಿರುವವನು ಗೃಹಸ್ಥನಾದರೂ ಸನ್ಯಾಸಿಯೇ.

"ಸುಖಂ ಬಂಧಾತ್"- ಸಂಸಾರ ಬಂಧ ಬಹಳ ಗಟ್ಟಿಯಾದುದು. ಅದು ದೃಢವಾದ ಗ್ರಂಥಿಯಿಂದ ಕೂಡಿದೆ. ಬಹು ಜನ್ಮಗಳಿಂದ ಅದು ಗಟ್ಟಿಯಾಗುತ್ತಾ ಬಂದಿದೆ. ಅದರಿಂದ ಬಿಡಿಸಿಕೊಳ್ಳುವುದು ಬಹಳ ಕಷ್ಟ.

ಆದರೂ ರಾಗದ್ವೇಷಾದಿಗಳನ್ನು ಬಿಟ್ಟವರು ಅದನ್ನು ಸುಲಭವಾಗಿ, ಅನಾಯಾಸವಾಗಿ ಛೇದಿಸಬಲ್ಲರೆಂದು ಭಗವಂತನು ಇಲ್ಲಿ ಹೇಳಿದ್ದಾನೆ. ಆದ್ದರಿಂದಲೇ 'ಸುಖಂ' (ಸುಲಭವಾಗಿ) ಎನ್ನುವ ಪದವು ಪ್ರಯೋಗಿಸಲ್ಪಟ್ಟಿದೆ. ಸಂಸಾರ ಬಂಧನದಿಂದ ಮುಕ್ತರಾಗಲು ಯಾವುದಾದರೂ ಸುಲಭೋಪಾಯವಿದೆಯೇ ಎಂದು ಅನೇಕರು ಪ್ರಶ್ನಿಸುತ್ತಿದ್ದಾರೆ. ಭಗವಂತನು ಅದಕ್ಕಿಲ್ಲಿ ಸರಿಯಾದ ಉತ್ತರವನ್ನು ಕೊಟ್ಟಿರುತ್ತಾನೆ. ರಾಗದ್ವೇಷಗಳನ್ನು ಬಿಡುವುದೇ ಆ ಉಪಾಯ. ಅಂತಹವನು ಗೃಹಸ್ಥನಾದರೂ ಕರ್ಮಗಳನ್ನು ಆಚರಿಸುತ್ತಿದ್ದರೂ ಸದಾ ಸನ್ಯಾಸಿ (ನಿತ್ಯ ಸನ್ಯಾಸಿ)ಯೇ ಆಗುವನು.

ಅಂತಃಕರಣದಲ್ಲಿಯ ದೋಷಗಳನ್ನು ಬಿಡುವುದೇ ನಿಜವಾದ ಸನ್ಯಾಸವೆಂದು, ನಿತ್ಯಸನ್ಯಾಸವೆಂದು ಭಗವಂತನು ಹೇಳಿರುವುದರಿಂದ ಇನ್ನು ವೇಷಧಾರಿಗಳಾದ ಕಪಟ ಸನ್ಯಾಸಿಗಳ ಆಟ ನಿಂತಂತೇ ಆಯಿತು. ಅವರು ಅನಿತ್ಯ ಸನ್ಯಾಸಿಗಳ ಗುಂಪಿಗೆ ಸೇರಿದವರಾಗಿದ್ದಾರೆ. ಆದುದರಿಂದ ಕೃತ್ರಿಮತೆಯ ಗೋಜಿಗೆ ಹೋಗದೆ ಭಗವಂತನು ತಿಳಿಸಿದ ಬಂಧವಿಮುಕ್ತಿಕರವಾದ ಪವಿತ್ರ ಮಾರ್ಗವನ್ನೇ ಸರ್ವರೂ ಅನುಸರಿಸಬೇಕು.

ಪ್ರ : 'ನಿತ್ಯ ಸನ್ಯಾಸಿ' ಯಾರು ?

ಉ : ೧) ಯಾವುದನ್ನೂ ದ್ವೇಷಿಸದವನು ೨) ಯಾವುದನ್ನೂ ಇಚ್ಛಿಸದವನು ೩) ಸುಖದುಃಖಾದಿ ದ್ವಂದ್ವಗಳಿಲ್ಲದವನು.

ಪ್ರ : ಅಂತಹ ನಿತ್ಯ ಸನ್ಯಾಸದ ಫಲವೇನು?

ಉ : ಅದರಿಂದ ಮನುಜನು ಸಂಸಾರ ಬಂಧವನ್ನು ಸುಲಭವಾಗಿ ದಾಟಬಲ್ಲನು.

ಪ್ರ : ಸಂಸಾರ ಬಂಧದಿಂದ ಸುಲಭವಾಗಿ ತಪ್ಪಿಸಿಕೊಳ್ಳುವ ಮಾರ್ಗವೇನು?

ಉ : ರಾಗ ದ್ವೇಷಾದಿಗಳಿಲ್ಲದಿರುವುದು, ದ್ವಂದ್ವ ನಿರ್ಮೂಲನದಿಂದ

**ಅ॥** ಕರ್ಮಯೋಗ, ಜ್ಞಾನಯೋಗ ಎರಡರ ಫಲವೊಂದೇ ಎಂದು ಎರಡು ಶ್ಲೋಕಗಳ ದ್ವಾರ ಹೇಳಲಾಗುತ್ತಿದೆ-

**೪. ಸಾಂಖ್ಯಯೋಗೌ ಪೃಥಗ್ಬಾಲಾಃ ಪ್ರವದಂತಿ ನ ಪಂಡಿತಾಃ**
**ಏಕಮಪ್ಯಾಸ್ಥಿತಃ ಸಂಯಕ್ ಉಭಯೋರ್ವಿಂದತೇ ಫಲಮ್**

**ಅರ್ಥ:** ಸಾಂಖ್ಯಯೋಗೌ=ಜ್ಞಾನಯೋಗ, ಕರ್ಮಯೋಗಗಳು; ಪೃಥಕ್=ಬೇರೆಬೇರೆಯೆಂದು; ಬಾಲಾಃ=ಅವಿವೇಕಿಗಳು; ಪ್ರವದಂತಿ=ಹೇಳುತ್ತಿದ್ದಾರೆ; ಪಂಡಿತಾಃ=ವಿವೇಕವಂತರು; ನ(ಪ್ರವದಂತಿ)=ಹಾಗೆ ಹೇಳುವುದಿಲ್ಲ; ಉಭಯೋಃ=ಆ ಎರಡರಲ್ಲಿ; ಏಕಂ ಅಪಿ=ಒಂದನ್ನಾದರೂ; ಸಂಯಕ್=ಚೆನ್ನಾಗಿ; ಆಸ್ಥಿತಃ=ಆಚರಿಸುವವನು. (ಉಭಯೋಃ) ಫಲಮ್=ಎರಡರ ಫಲವನ್ನು (ಮೋಕ್ಷವನ್ನು); ವಿಂದತೆ=ಹೊಂದುತ್ತಿದ್ದಾನೆ.

**ತಾ॥** (ಕರ್ಮಸನ್ಯಾಸಪೂರ್ವಕವಾದ) ಜ್ಞಾನಯೋಗ, ಕರ್ಮಯೋಗಗಳು ಬೇರ ಬೇರೆಯೆಂದು (ಬೇರೆ ಬೇರೆ ಫಲಗಳನ್ನು ಹೊಂದಿವೆಯೆಂದು) ಅವಿವೇಕಿಗಳು ಹೇಳುವುವರೇ ಹೊರತು ವಿವೇಕವಂತರಲ್ಲ. ಆ ಎರಡರಲ್ಲಿ ಯಾವುದೇ ಒಂದನ್ನು ಚೆನ್ನಾಗಿ ಅನುಷ್ಠಾನ ಮಾಡಿದರೂ ಎರಡರ ಫಲಗಳನ್ನೂ (ಮೋಕ್ಷವನ್ನು) ಮನುಜನು ಹೊಂದುತ್ತಿದ್ದಾನೆ.

**ವ್ಯಾಖ್ಯೆ:** ಪಂಡಿತರೆಂದರೆ ಇಲ್ಲಿ ಪಾರಮಾರ್ಥಿಕ ಅನುಭವ ಜ್ಞಾನವನ್ನು ಹೊಂದಿರುವ ಮಹನೀಯರೆಂದೇ ಅರ್ಥವಾಗಲಿ, ಕಾವ್ಯಾಲಂಕಾರಾದಿ ಸಾಹಿತ್ಯ ಪರಿಜ್ಞಾನವನ್ನು ಹೊಂದಿದವರೆಂದು ಅರ್ಥವಲ್ಲ. ಜ್ಞಾನಯೋಗ, ಕರ್ಮಯೋಗಗಳು ಬೇರೆ ಬೇರೆಯ ಫಲಗಳನ್ನು ಕೊಡುವುವು ಎಂದು ಬಾಲಕರು (ಬಾಲಾಃ) ಹೇಳುವವರೇ ಹೊರತು ತಿಳಿದವರಲ್ಲವೆಂದು ಭಗವಂತನು ಇಲ್ಲಿ ನುಡಿದನು. ಏಕೆಂದರೆ ಯಾವ ಯೋಗವನ್ನು ಅನುಷ್ಠಿಸಿದರೂ ಆತ್ಮಸಾಕ್ಷಾತ್ಕಾರ ರೂಪವಾದ ಮೋಕ್ಷವೆನ್ನುವ ಒಂದೇ ಫಲವುಂಟಾಗುತ್ತದೆ. ಕೆಲವರು ಉತ್ತಮಾಧಿಕಾರಿಗಳು ಅವರವರ ಸಂಸ್ಕಾರವನ್ನನುಸರಿಸಿ ಆತ್ಮವಿಚಾರಣಾರೂಪ ಜ್ಞಾನಯೋಗವನ್ನವಲಂಬಿಸಿ ದೃಗ್ದೃಶ್ಯಗಳನ್ನು ವಿವೇಚಿಸಿ ಸ್ವಸ್ವರೂಪವನ್ನು ತಿಳಿದು ಮೋಕ್ಷ ಫಲವನ್ನು ಪಡೆಯುವರು. ಮತ್ತೆ ಕೆಲವರು ಅವರ ಚಿತ್ತವೃತ್ತಿಯನ್ನನುಸರಿಸಿ ನಿಷ್ಕಾಮ ಕರ್ಮಯೋಗವನ್ನಾಚರಿಸಿ ಸಮಸ್ತ ಕರ್ಮಗಳನ್ನು ಈಶ್ವರಾರ್ಪಣ ಮಾಡಿ ಸ್ವಾರ್ಥರಹಿತರಾಗಿ, ಫಲಾಭಿಲಾಷೆಯನ್ನು ವರ್ಜಿಸಿ ಚಿತ್ತಶುದ್ಧಿಯನ್ನು ಪಡೆದು ತದ್ವಾರ ಸ್ವಸ್ವರೂಪ ಪರಿಜ್ಞಾನವನ್ನು ಹೊಂದಿ ಮೋಕ್ಷವನ್ನು ಹೊಂದುತ್ತಿದ್ದಾರೆ. ಈ ಪ್ರಕಾರವಾಗಿ ಎರಡರಲ್ಲಿಯೂ ಅಹಂಭಾವ ರಾಹಿತ್ಯವೇ, ಕರ್ತೃತ್ವ ಬುದ್ಧಿರಹಿತವೇ, ಸಂಕುಚಿತ ಜೀವ ಭಾವ ವಿನಾಶವೇ ಅಡಗಿದೆ. ಜೀವತ್ವವು ದೂರವಾದಾಗ ಉಳಿಯುವುದು ಶಿವತ್ವವೇ ಅಲ್ಲವೇ! ಆದ್ದರಿಂದಲೇ ಸಾಂಖ್ಯ(ಜ್ಞಾನ)ಯೋಗ, ಕರ್ಮಯೋಗಗಳಲ್ಲಿ ಯಾವುದೋ ಒಂದರಲ್ಲಿ ಚೆನ್ನಾಗಿ ಸ್ಥಿರಗೊಂಡರೆ ಎರಡೂ ಯೋಗಗಳ ಏಕೈಕ ಫಲವಾದ ಮೋಕ್ಷ ಲಭಿಸುವುದೆಂದು ಹೇಳಲು ಕಾರಣವಾಗಿದೆ.

"ಸಮ್ಯಕ್"- ಯಾವ ಯೋಗವೇ ಆಗಲಿ ಅದರಲ್ಲಿ ಸರಿಯಾದ, ದೃಢವಾದ (ಅಚಂಚಲವಾದ) ಸ್ಥಿತಿಯನ್ನು ಹೊಂದಿದ ನಂತರವೇ ಮೋಕ್ಷ ಫಲವು ಲಭಿಸುವುದಾಗಲಿ ಅಲ್ಪ ಸ್ವಲ್ಪ ಅನುಭವದಿಂದ ಅಲ್ಲ. ಅಸ್ಥಿರವಾದ ಸ್ಥಿತಿಯಿಂದಲ್ಲ. ಅಂದರೆ ಯಾವ ಮಾರ್ಗವೇ ಆಗಲಿ ಅದರಲ್ಲಿ ಪರಿಪಕ್ವತೆಯನ್ನು ಹೊಂದಬೇಕು. ಅದರಲ್ಲಿ ಪ್ರಾವೀಣ್ಯತೆ (Expert) ಬರಬೇಕು. ಈ ಭಾವವನ್ನು ತಿಳಿಸಲು 'ಸಮ್ಯಕ' ಎನ್ನುವ ಪದವನ್ನು ಇಲ್ಲಿ ಪ್ರಯೋಗಿಸಲಾಗಿದೆ.

ಉತ್ತಮ ಜ್ಞಾನಿಗಳು, ಲೋಕೋಪಕಾರಾರ್ಥವಾಗಿ ಕರ್ಮವನ್ನು (ಫಲಾಭಿಸಂಧಿರಹಿತವಾಗಿ) ಮಾಡುತ್ತಲೇ ಇರುವರು. ಉತ್ತಮ ಕರ್ಮಯೋಗನಿಷ್ಠರು, ಸ್ವಾರ್ಥರಹಿತರಾಗಿ, ಯಾವ ಫಲವನ್ನೂ ಕೋರದೆ, ಅಂತರಂಗದಲ್ಲಿ ಎಲ್ಲವೂ ಭಗವತ್ಸ್ವರೂಪವೇ **(ಸರ್ವಂ ಖಲ್ವಿದಂ ಬ್ರಹ್ಮ)** ಎನ್ನುವ ಜ್ಞಾನಭಾವವನ್ನು ಹೊಂದಿರುತ್ತಾರೆ. ಆದ್ದರಿಂದ ಪರಿಪಕ್ವದೆಶೆಯಲ್ಲಿ, ಜ್ಞಾನ ಹಾಗೂ ಕರ್ಮಯೋಗಗಳೆರಡೂ ಒಂದೇ ಆಗಿರುವುವು. ಒಂದೇ ಫಲವನ್ನುಂಟುಮಾಡುವುವು. ಎರಡರ ಲಕ್ಷ್ಯವೂ ಚಿತ್ತವಿಲಯವೇ ಆಗಿದೆ; ಹೀಗಿರುವಾಗ ಈ ಜ್ಞಾನ ಹಾಗು ಕರ್ಮಯೋಗಗಳು, ಬೇರೆ ಬೇರೆಯೆಂದು ಹೇಳುವವರು ನಿಜವಾಗಿ ಚಿಕ್ಕಮಕ್ಕಳೇ ಎಂದೆನಿಸಿಕೊಳ್ಳುವರು. ಅವರ ಬುದ್ಧಿ ಇನ್ನೂ ವಿಕಾಸವಾಗಿಲ್ಲವೆಂದರ್ಥ.

ವಿಶಾಲಭಾವವುಳ್ಳವರು ಎಂದೂ ಯಾವ ಮಾರ್ಗವನ್ನೂ ದೂಷಿಸುವುದಿಲ್ಲ. ಎಲ್ಲಾ ಮಾರ್ಗಗಳು ಭಗವತ್ಸಾನ್ನಿಧ್ಯಕ್ಕೆ ತೆಗೆದುಕೊಂಡು ಹೋಗವುವೇ ಎಂದು ತಿಳಿದು ಸರ್ವಮತ ಸಹನೆಯನ್ನು ಹೊಂದಿ ಎಲ್ಲಾ ಮತಗಳನ್ನು ಆಮೋದಿಸುವರು. ವೃತ್ತದ ಹೊರಭಾಗದಿಂದ ಯಾವ ವ್ಯಾಸವನ್ನು (Radius) ಅನುಸರಿಸಿಹೋದರೂ ಕೊನೆಗೆ ಎಲ್ಲರೂ ಕೇಂದ್ರವನ್ನೇ (Cen-

tre) ಸೇರುವರು. ಹಾಗೆಯೇ ಜ್ಞಾನ, ಕರ್ಮಾದಿ ವಿವಿಧ ಮಾರ್ಗಗಳು ಮೋಕ್ಷರೂಪ ಸ್ಥಾನಕ್ಕೆ ಜೀವಿಯನ್ನು ತೆಗೆದುಕೊಂಡು ಹೋಗುತ್ತವೆ. ಈ ಶ್ಲೋಕದಲ್ಲಿ 'ಜ್ಞಾನ, ಕರ್ಮಯೋಗಗಳಲ್ಲಿ ಯಾವೊಂದರಲ್ಲಿ ಚೆನ್ನಾಗಿ ಸ್ಥಿರತೆ ಹೊಂದಿದರೂ ಎರಡರ ಫಲವನ್ನೂ ಹೊಂದುವೆ' ಎಂದು ಭಗವಂತನು ಹೇಳಿರುವನು. ಎರಡರ ಫಲವೂ ಒಂದೇ ಆಗಿರುವಾಗ ಮಾತ್ರ ಅದು ಸಾಧ್ಯ. ಈ ವಿಧವಾಗಿ ಸರ್ವಮಾರ್ಗ, ಸರ್ವಮತ ಸಮನ್ವಯ ಈ ಶ್ಲೋಕದಲ್ಲಿ ವ್ಯಕ್ತವಾಗಿದೆ. ಮತಗಳ ವಿಷಯದಲ್ಲಿ, ಮಾರ್ಗಗಳ ವಿಷಯದಲ್ಲಿ ವಿಶಾಲಭಾವವನ್ನು ಹೊಂದಿರಬೇಕೆಂದು ಭಗವಂತನು ಎಚ್ಚರಿಕೆ ಕೊಟ್ಟಿದ್ದಾನೆ. ಎಲ್ಲಾ ನದಿಗಳು ಬೇರೆ ಬೇರೆಯಾಗಿ ಪ್ರವಹಿಸಿದರೂ ಕೊನೆಗೆ ಸಮುದ್ರವೆನ್ನುವ ಗಮ್ಯಸ್ಥಾನವನ್ನು ಸೇರಿದ ಹಾಗೆ, ಜ್ಞಾನ, ಕರ್ಮ, ಧ್ಯಾನ, ಭಕ್ತಿ ಯೋಗಾದಿಗಳೆಲ್ಲವೂ ಆತ್ಮಸಾಕ್ಷಾತ್ಕಾರವೆಂಬ ಒಂದೇ ಲಕ್ಷ್ಯಕ್ಕೆ ಜೀವಿಯನ್ನು ತೆಗೆದುಕೊಂಡು ಹೋಗುತ್ತವೆ.

ಪ್ರ : ಜ್ಞಾನ ಹಾಗೂ ಕರ್ಮಯೋಗಗಳು ಬೇರೆ ಬೇರೆಯೇ?

ಉ : ಅಲ್ಲ, ಚೆನ್ನಾಗಿ ಆಚರಿಸಿದಲ್ಲಿ ಎರಡೂ ಒಂದೇ ಮೋಕ್ಷ ರೂಪ ಫಲವನ್ನು ಕೊಡುತ್ತವೆ.

ಪ್ರ : ಆದ್ದರಿಂದ ಮೋಕ್ಷ ಪ್ರಾಪ್ತಿಗೆ ಉಪಾಯವೇನು?

ಉ : ಜ್ಞಾನಯೋಗವನ್ನಾಗಲಿ ಅಥವ ಕರ್ಮಯೋಗವನ್ನಾಗಲಿ ಕೊನೆಯವರೆಗೂ ಚೆನ್ನಾಗಿ ಅನುಷ್ಠಾನ ಮಾಡಬೇಕು. ಆಗ ಎರಡರ ಏಕೈಕ ಫಲವಾದ ಮೋಕ್ಷವು ಲಭಿಸುವುದು.

**೫. ಯತ್ಸಾಂಖ್ಯೈಃ ಪ್ರಾಪ್ಯತೇ ಸ್ಥಾನಂ ತದ್ಯೋಗೈರಪಿ ಗಮ್ಯತೇ**
**ಏಕಂ ಸಾಂಖ್ಯಂ ಚ ಯೋಗಂ ಚ ಯಃ ಪಶ್ಯತಿ ಸ ಪಶ್ಯತಿ**

**ಅರ್ಥ:** ಸಾಂಖ್ಯೈ=ಜ್ಞಾನನಿಷ್ಠರಿಂದ, ಯತ್‌ಸ್ಥಾನಮ್=ಯಾವ ಸ್ಥಾನವು (ಮೋಕ್ಷವು); ಪ್ರಾಪ್ಯತೇ=ಹೊಂದಲ್ಪಡುವುದೋ; ತತ್=ಅದು; ಯೋಗೈಃ ಅಪಿ=ಕರ್ಮಯೋಗಿಗಳಿಂದಲೂ; ಗಮ್ಯತೆ=ಹೊಂದಲ್ಪಡುವುದು. ಸಾಂಖ್ಯಂ ಚ=ಜ್ಞಾನಯೋಗವನ್ನು; ಯೋಗಂ ಚ=ಕರ್ಮಯೋಗವನ್ನು; ಏಕಂ= ಒಂದಾಗಿ (ಒಂದೇ ಫಲವುಳ್ಳದ್ದಾಗಿ); ಯಃ=ಯಾವನು; ಪಶ್ಯತಿ=ನೋಡುತ್ತಾನೋ (ತಿಳಿದುಕೊಳ್ಳುತ್ತಾನೊ); ಸಃ(ಏವ)=ಆತನೇ; ಪಶ್ಯತಿ= ನಿಜವಾಗಿ ನೋಡುವವನು.

**ತಾ||** ಜ್ಞಾನಯೋಗಿಗಳಿಂದ ಯಾವ ಸ್ಥಾನವು (ಮೋಕ್ಷವು) ಪಡೆಯಲ್ಪಡುತ್ತದೋ, ಅದೇ ಕರ್ಮಯೋಗಿಗಳಿಂದಲೂ ಪಡೆಯಲ್ಪಡುತ್ತದೆ. ಜ್ಞಾನ ಹಾಗೂ ಕರ್ಮಯೋಗಗಳನ್ನು ಒಂದಾಗಿ (ಒಂದೇ ಫಲವನ್ನುಂಟು ಮಾಡುವವೆಂದು) ನೋಡುವವನೇ ನಿಜವಾಗಿ ನೋಡುವವನು (ತಿಳಿದವನು).

**ವ್ಯಾಖ್ಯೆ:** ಹಿಂದಿನ ಶ್ಲೋಕದ ಭಾವವನ್ನೇ ಮತ್ತೆ ಇಲ್ಲಿ ವ್ಯಕ್ತ ಮಾಡಲಾಗಿದೆ. ಜ್ಞಾನ ಹಾಗೂ ಕರ್ಮಯೋಗಗಳೆರಡೂ ಒಂದೇ ಫಲವನ್ನು ಕೊಡುವವೆಂದು ತಿಳಿದವರೇ ಪರಮಾರ್ಥವನ್ನು ತಿಳಿದಂಥವರಾಗುತ್ತಾರೆ. ಅವರೇ ನಿಜವಾಗಿ ನೋಡುವವರು. ಬೇರೆಯವರು ನೇತ್ರಗಳಿದ್ದರೂ ಕುರುಡರು ಎಂದು ಭಾವ. ಸತ್ಯವನ್ನು ಅವಲೋಕಿಸುವುದೇ ನೇತ್ರಗಳ ಕರ್ತವ್ಯ, ಯಥಾರ್ಥವನ್ನು ನೋಡುವುದೇ ವಿವೇಕದ ಚಿಹ್ನೆ. ಆದ್ದರಿಂದ ಅವಿವೇಕವೆಂಬ ಅಂಧತ್ವವನ್ನು ತ್ಯಜಿಸಿ ದೂರದೃಷ್ಟಿ, ವಿಶಾಲಭಾವದಿಂದ, ಯಾವ ಯೋಗವನ್ನು ಅನುಸರಿಸಿದರೂ ಮೋಕ್ಷವನ್ನೇ ಕೊಡುತ್ತದೆ. ಆದ್ದರಿಂದ ಕರ್ಮಯೋಗಿಗಳು ತಾವು ಅಲ್ಪರೆಂದು ಭಾವಿಸದೆ, ಜ್ಞಾನಯೋಗಿಗಳು ತಾವು ಶ್ರೇಷ್ಠರೆಂದು ಭಾವಿಸದೆ, ನಿರ್ಭಯವಾಗಿ ಅವರವರ ಮಾರ್ಗವನ್ನು 'ಸಂಯಕ್ ರೀತಿಯನ್ನು' ಅನುಸರಿಸಿ ಗಮ್ಯವನ್ನು ಸೇರಬಹುದು. ಸಾಧ್ಯ(ಲಕ್ಷ್ಯ) ಒಂದೇ ವಸ್ತು (ಪರಮಾತ್ಮ) ಆಗಿರುವುದರಿಂದ ಸಾಧನೆಗಳಲ್ಲಿ ಒಂದು ವೇಳೆ ಭಿನ್ನತ್ವ ಗೋಚರಿಸಿದರೂ ಅದು ಭಿನ್ನತ್ವವಲ್ಲವೆಂದು ನೋಡುವುದೇ ಮನುಜನ ಪ್ರಜ್ಞೆ- ಎಂದು ಇಲ್ಲಿ ತಿಳಿಸಲಾಗಿದೆ. ಅಮೇರಿಕಾ ಹೋಗಬೇಕೆಂದರೆ ಪೂರ್ವಕ್ಕೆ ಪ್ರಯಾಣ ಮಾಡಿದರು, ಪಶ್ಚಿಮಕ್ಕೆ ಪ್ರಯಾಣ ಮಾಡಿದರೂ ಒಂದೇ, ಯಾವ ದಿಕ್ಕಿನಲ್ಲಿ ನಡೆದರೂ ಗಮ್ಯವನ್ನು ಸೇರುವರಲ್ಲವೇ!

ಪ್ರ : ಪ್ರಪಂಚದಲ್ಲಿ ನಿಜವಾಗಿ ನೋಡುವವನು ಯಾರು? (ವಿವೇಕವಂತನು ಯಾರು)?

ಉ : ಜ್ಞಾನ ಹಾಗೂ ಕರ್ಮಯೋಗಗಳು ಒಂದೇ (ಒಂದೇ ಫಲವನ್ನು ಉಂಟು ಮಾಡುವುವು) ಎನ್ನುವ ವಿವೇಕವನ್ನು ಹೊಂದಿರುವವನೇ ನಿಜವಾಗಿ ನೋಡುವವನು (ವಿವೇಕವಂತನು).

**ಅ||** ಕರ್ಮಯೋಗದಿಂದ ಚಿತ್ತಶುದ್ಧಿ ಹೊಂದದಿದ್ದರೆ ಜ್ಞಾನಯೋಗದಲ್ಲಿ ಸ್ಥಿರತೆ ಗಳಿಸುವುದು ಕಷ್ಟ ಎಂದು ಹೇಳಲಾಗುತ್ತಿದೆ-

**೬. ಸಂನ್ಯಾಸಸ್ತು ಮಹಾಬಾಹೋ ದುಃಖಮಾಪ್ತುಮಯೋಗತಃ**
**ಯೋಗಯುಕ್ತೋ ಮುನಿರ್ಬ್ರಹ್ಮ ನ ಚಿರೇಣಾಧಿಗಚ್ಛತಿ**

**ಅರ್ಥ:** ಮಹಾಬಾಹೋ=ಉದ್ದ ಬಾಹುಗಳುಳ್ಳ ಅರ್ಜುನಾ!; ಸನ್ಯಾಸಃ ತು=ಜ್ಞಾನಯೋಗ (ಕರ್ಮಸನ್ಯಾಸ ರೂಪವಾದ ಜ್ಞಾನನಿಷ್ಠೆ)ಆದರೋ; ಅಯೋಗತಃ=ಕರ್ಮಯೋಗವಿಲ್ಲದೆ; ಆಪ್ತುಂ=ಹೊಂದುವುದು; ದುಃಖಮ್= ಕಷ್ಟ(ಅಶಕ್ಯ); ಯೋಗಯುಕ್ತಃ=ಕರ್ಮಯೋಗದಿಂದ ಕೂಡಿದ; ಮುನಿಃ=(ದೈವ) ಮನನಶೀಲನು; ನಚಿರೇಣ=ಶೀಘ್ರವಾಗಿ; ಬ್ರಹ್ಮ=ಬ್ರಹ್ಮವನ್ನು; ಅಧಿಗಚ್ಛತಿ= ಹೊಂದುತ್ತಿದ್ದಾನೆ.

**ತಾ||** ಉದ್ದ ಬಾಹುಗಳುಳ್ಳ ಓ ಅರ್ಜುನಾ! (ಕರ್ಮ ಸನ್ಯಾಸ ರೂಪವಾದ) ಜ್ಞಾನಯೋಗವನ್ನು ಕರ್ಮಯೋಗವಿಲ್ಲದೆ ಪಡೆಯುವುದು ಬಹಳ ಕಷ್ಟ. ಕರ್ಮಯೋಗದಿಂದ ಕೂಡಿದ (ದೈವ) ಮನನ ಶೀಲನು ಶೀಘ್ರವಾಗಿ (ಲಕ್ಷ್ಯವನ್ನು) ಬ್ರಹ್ಮವನ್ನು ಹೊಂದುತ್ತಿದ್ದಾನೆ.

ವ್ಯಾಖ್ಯೆ : ಕರ್ಮಯೋಗದ ಸಹಾಯವಿಲ್ಲದೆ ಕರ್ಮ ಸನ್ಯಾಸರೂಪವಾದ ಜ್ಞಾನನಿಷ್ಠೆಯನ್ನು ಪಡೆಯುವುದು ಕಷ್ಟವೆಂದು ಇಲ್ಲಿ ಹೇಳಲಾಗಿದೆ. ಅಂದರೆ ಕರ್ಮಯೋಗದಲ್ಲಿ ಮುಳುಗಿ ತೇಲಿದ ನಂತರವೇ ಜ್ಞಾನಯೋಗವು ಸಿದ್ಧಿಸುವುದೆಂದರ್ಥ. ಕರ್ಮಗಳೆಲ್ಲವನ್ನೂ ಪೂರ್ತಿಯಾಗಿ ಬಿಟ್ಟು ಕೇವಲ ದೃಕ್ಸ್ವರೂಪವಾದ ಆತ್ಮದಲ್ಲಿ ನಿಲುಕಡೆ (ಸ್ಥಿರತೆ) ಹೊಂದಿರುವುದು ಸಾಮಾನ್ಯವಾದ ಕೆಲಸವಲ್ಲ. ಅಂತಹ ಜ್ಞಾನಸ್ಥಿತಿ ಸರ್ವರಿಗೂ ಕೂಡಲೇ ಲಭಿಸದು. ಅದಕ್ಕೆ ಎಷ್ಟೋ ಚಿತ್ತಶುದ್ಧಿಕರವಾದ ಸಾಧನೆಗಳನ್ನು ಮೊದಲು ಮಾಡಬೇಕಾಗಿರುತ್ತದೆ. ನಿಷ್ಕಾಮಕರ್ಮಯೋಗವನ್ನು ಅವಲಂಬಿಸಿರಬೇಕಾಗುತ್ತದೆ. ಕರ್ಮಯೋಗವು ಪ್ರಾಥಮಿಕ ವಿದ್ಯೆ (Elementary Course)ಯಂತಹದು; ಜ್ಞಾನಯೋಗ ಉನ್ನತವಿದ್ಯೆ (College course) ಯಂತಹದು. ಆದ್ದರಿಂದ ಮೊದಲು ಕರ್ಮಯೋಗದಲ್ಲಿ ತೇರ್ಗಡೆ ಹೊಂದದವರು, ಜ್ಞಾನಾನುಭವವನ್ನು ಪಡೆಯಲಾರರು. ಆದ್ದರಿಂದಲೇ

ಭಗವಂತನು ಇಲ್ಲಿ ಕರ್ಮಸನ್ಯಾಸವನ್ನು ಪ್ರಾರಂಭದಲ್ಲಿಯೇ ಮಾಡಬಾರದೆಂದು ಎಚ್ಚರಿಕೆ ಕೊಟ್ಟಿದ್ದಾನೆ. ಕರ್ಮಯೋಗವನ್ನು ಚೆನ್ನಾಗಿ ಅಭ್ಯಸಿಸಿ, ಚಿತ್ತಶುದ್ಧಿಯನ್ನು ಪಡೆದು ನಂತರ ಜ್ಞಾನಾರ್ಜನೆಯನ್ನು ಮಾಡಿದರೆ ಅತಿ ಶೀಘ್ರವಾಗಿ ಪರಬ್ರಹ್ಮವನ್ನು ಸೇರಲು ಸಾಧ್ಯವಾಗುತ್ತದೆಂದು ಕರುಣೆಯಿಂದ ಬೋಧಿಸುತ್ತಿದ್ದಾನೆ. 'ನ ಚಿರೇಣ' ಎಂದು ಹೇಳುವುದರಿಂದ ಅಂತಹವರಿಗೆ ಬ್ರಹ್ಮಪ್ರಾಪ್ತಿಯಲ್ಲಿ ವಿಳಂಬವುಂಟಾಗುವುದಿಲ್ಲವೆಂದು, ಶೀಘ್ರವಾಗಿಯೇ ಅವರು ಲಕ್ಷ್ಯವನ್ನು ಸೇರಿಕೊಳ್ಳುವರೆಂದು ಸ್ಪಷ್ಟವಾಗುತ್ತಿದೆ.

"ಮುನಿಃ"- ಮನನಶೀಲನೆಂದು ಹೇಳಲ್ಪಟ್ಟಿರುವುದರಿಂದ ಕರ್ಮಯೋಗದೊಂದಿಗೆ ಭಗವತ್ಸ್ವರೂಪದ ಮನನವನ್ನು ಕೂಡ ಮಾಡುವುದು ಅವಶ್ಯವೆಂದು ತಿಳಿದುಬರುತ್ತಿದೆ. ಅಂದರೆ ಕರ್ಮಯೋಗದೊಂದಿಗೆ ಪರಮಾತ್ಮಧ್ಯಾನವನ್ನು, ಭಗವಚ್ಚಿಂತನೆಯನ್ನು ಕೂಡ ಆಚರಿಸುವವನು ಅನತಿಕಾಲದಲ್ಲಿಯೇ ಜ್ಞಾನವನ್ನು ಪಡೆದು ಬ್ರಹ್ಮಸಾಕ್ಷಾತ್ಕಾರವನ್ನು ಹೊಂದಬಲ್ಲನೆನ್ನುವುದು ಭಾವ.

ಈ ಪ್ರಕಾರವಾಗಿ ಪ್ರಾರಂಭದಲ್ಲಿ (ನಿಷ್ಕಾಮ) ಕರ್ಮಯೋಗದಲ್ಲಿ ಅನುಭವವನ್ನು ಸಂಪಾದಿಸಿ, ತದ್ವಾರ ಚಿತ್ತಶುದ್ಧಿಯನ್ನು ಪಡೆಯದೆ ಅಕಸ್ಮಾತ್ತಾಗಿ ಜ್ಞಾನಯೋಗಕ್ಕೆ, ಕರ್ಮಸನ್ಯಾಸಕ್ಕೆ ಉಪಕ್ರಮಿಸಿದರೆ ಸಾಧನೆಯಲ್ಲಿ ಅನೇಕ ಕಷ್ಟಗಳನ್ನು ಎದುರಿಸಬೇಕಾಗಿಬರುವುದು. ಏಕೆಂದರೆ ಕರ್ಮಸನ್ಯಾಸ, ಜ್ಞಾನನಿಷ್ಠೆ-ವಾಸನಾರಹಿತ ಸ್ಥಿತಿಯಲ್ಲಿ ಮಾತ್ರ ಸಂಭವಿಸುವುವು. ವಾಸನೆಗಳು ಹೃದಯದಲ್ಲಿ ಎಲ್ಲಿಯವರೆಗೆ ಅಂತರ್ಗತವಾಗಿರುವುದೋ, ಪಾಪ ಮಲಿನತೆ ಚಿತ್ತವನ್ನು ಎಲ್ಲಿಯವರೆಗೆ ಆಕ್ರಮಿಸಿರುವುವೋ ಅಲ್ಲಿಯವರೆಗೆ ಜ್ಞಾನವು ಆವಿರ್ಭವಿಸುವ ಪ್ರಶ್ನೆಯೇ ಇಲ್ಲ. ಅವಸರಪಟ್ಟು ಬಾಹ್ಯಸನ್ಯಾಸವನ್ನು ಸ್ವೀಕರಿಸಿದರೂ ಒಳಗೆ ಮನಸ್ಸು ಕೇಕೆ ಹಾಕಿ ಕುಪ್ಪಳಿಸುತ್ತ ಜೀವಿಗೆ ಅಶಾಂತಿಯನ್ನೇ ತಂದೊಡ್ಡುವುದು. ಆದ್ದರಿಂದ ಯಾವ ಸಾಧನೆಗಾದರೂ ಮೊದಲು ಚಿತ್ತಶುದ್ಧಿ, ಪಾಪರಾಹಿತ್ಯ ಬಹಳ ಅವಶ್ಯಕ. ಅದಕ್ಕೆ ಕರ್ಮಯೋಗ ಬಹಳ ಉಪಯೋಗವಾಗಬಲ್ಲದೆಂದು ಈ ಶ್ಲೋಕದಲ್ಲಿ ತಿಳಿಸಲಾಗಿದೆ. ಬುನಾದಿಯನ್ನು ಮೊದಲು ಭದ್ರಪಡಿಸಿಕೊಳ್ಳಿ ಎಂದು ಎಚ್ಚರಿಸುತ್ತಿದ್ದಾನೆ. ಕರ್ಮಯೋಗವೇ ಆ ಬುನಾದಿ. ಅದನ್ನು ಆಶ್ರಯಿಸದೆ ಮೋಕ್ಷಸೌಧ ನಿರ್ಮಾಣಕ್ಕೆ ಉಪಕ್ರಮಿಸಿದರೆ, ಅದು ಕಾಲಕ್ರಮೇಣ ಬಿದ್ದು ಹೋಗುವುದು. ಅನೇಕರು ಆ ಪ್ರಕಾರವಾಗಿ ಪತನವಾಗಿ ಹೋಗಿರುವುದರ ದೃಷ್ಟಾಂತಗಳು ಚರಿತ್ರೆಯಲ್ಲಿವೆ. ಆದ್ದರಿಂದ ಪ್ರಾರಂಭದಲ್ಲಿ ಕರ್ಮಯೋಗದಲ್ಲಿ ದಕ್ಷತೆ ಸಂಪಾದಿಸಬೇಕು. ವೇದಾಂತ ಶಾಸ್ತ್ರದಲ್ಲಿ ಇದು ಒಂದು ಪರಮ ರಹಸ್ಯ. ಇದನ್ನು ತಿಳಿಯದೆ ಕೆಲವರು 'ನಮಗೆ ಜ್ಞಾನವೇ ಬೇಕು ಎಂದು ಮೊದಮೊದಲೇ ಹಟವಿಡಿದು, ಚಿತ್ತಪರಿಪಕ್ವತೆಯಿಲ್ಲದೆಯಿರುವುದರಿಂದ ಆ ಜ್ಞಾನಾರ್ಜನೆಯಲ್ಲಿ ವಿಫಲರಾಗುತ್ತಾರೆ. ಹೀಗೆ ಕರ್ಮಕ್ಕಾಗಲಿ ಇಲ್ಲವೆ ಜ್ಞಾನಕ್ಕಾಗಲಿ ಕೆಲಸಕ್ಕೆ ಬಾರದೆ ಉಭಯಭ್ರಷ್ಟರಾಗುತ್ತಾರೆ. ಇಂತಹ ಪ್ರಮಾದದಿಂದ ತಪ್ಪಿಸಿಕೊಳ್ಳಲು ಭಗವಂತನು ಈ ಶ್ಲೋಕದಲ್ಲಿ ಒಳ್ಳೆಯ ಆದೇಶವನ್ನಿತ್ತಿದ್ದಾನೆ. ಅದನ್ನು ಶಿರಸಾವಹಿಸಿ ಅನುಸರಿಸಿ ಸಾಧಕರು ಪರಮಶ್ರೇಯವನ್ನು ಹೊಂದಬೇಕಾಗಿದೆ.

ಆಯುರ್ವೇದದಲ್ಲಿ ವೈದ್ಯರು ರೋಗಿಗೆ ಔಷಧವನ್ನು ಕೊಡುವುದಕ್ಕಿಂತ ಮುಂಚೆ ಭೇದಿಗೆ ಮಾತ್ರೆ ಕೊಡುವರು. ಅದರಿಂದ ಕರುಳು ಶುಭ್ರವಾಗಿ ಔಷಧಿ ಸರಿಯಾಗಿ ರಕ್ತದಲ್ಲಿ ಸೇರುವುದು. ಹಾಗೆಯೇ ನಿಷ್ಕಾಮ ಕರ್ಮಯೋಗದಿಂದ ಮೊದಲು ಚಿತ್ತವನ್ನು ತೊಳೆದರೆ ಜ್ಞಾನವೆನ್ನುವ ಔಷಧಿ ಮನಸ್ಸನ್ನು ಸೇರುವುದು. ಆದ್ದರಿಂದ ಕರ್ಮಯೋಗವೆನ್ನುವ 'ಶುದ್ಧಿ ಕರ್ಮ' (Cleaning Process)ವನ್ನು ಸರ್ವರೂ ಮೊದಲು ಅವಲಂಬಿಸಬೇಕೆಂದು ಈ ಶ್ಲೋಕವು ಬೋಧಿಸುತ್ತಿದೆ.

ಪ್ರ : ಜ್ಞಾನಯೋಗ ಯಾವಾಗ ಸಿದ್ಧಿಸುವುದು ?

ಉ : ಕರ್ಮಯೋಗದಲ್ಲಿ ಚೆನ್ನಾಗಿ ಪರಿಪಕ್ವವಾದ ನಂತರ

ಪ್ರ : ಬ್ರಹ್ಮವನ್ನು ಶೀಘ್ರವಾಗಿ ಯಾರು ಹೊಂದುವರು ?

ಉ : ಕರ್ಮಯೋಗವನ್ನಾಚರಿಸಿದ ಮನನಶೀಲನು (ಕ್ರಮವಾಗಿ ಅದರಿಂದ ಚಿತ್ತಶುದ್ಧಿಯನ್ನು, ಜ್ಞಾನವನ್ನು ಪಡೆಯುವುದರಿಂದ) ಬ್ರಹ್ಮವನ್ನು ಶೀಘ್ರವಾಗಿ ಹೊಂದುವನು.

**ಅ॥** ಜಿತೇಂದ್ರಿಯನಾದ ಕರ್ಮಯೋಗಿ ಕರ್ಮಗಳನ್ನಾಚರಿಸಿದರೂ ಅವುಗಳಿಂದ ಬಂಧಿಸಲ್ಪಡುವುದಿಲ್ಲ ಎಂದು ತಿಳಿಸಲಾಗುತ್ತಿದೆ-

**೭. ಯೋಗಯುಕ್ತೋ ವಿಶುದ್ಧಾತ್ಮಾ ವಿಜಿತಾತ್ಮಾ ಜಿತೇಂದ್ರಿಯಃ**
**ಸರ್ವಭೂತಾತ್ಮಭೂತಾತ್ಮಾ ಕುರ್ವನ್ನಪಿ ನ ಲಿಪ್ಯತೇ**

**ಅರ್ಥ:** ಯೋಗಯುಕ್ತಃ=(ನಿಷ್ಕಾಮ) ಕರ್ಮಯೋಗವನ್ನು ಆಚರಿಸುವವನು; ವಿಶುದ್ಧಾತ್ಮಾ=ಪರಿಶುದ್ಧವಾದ ಹೃದಯವನ್ನು ಹೊಂದಿರುವವನು; ವಿಜಿತಾತ್ಮಾ=ನಿಗ್ರಹಗೊಂಡ ಮನಸ್ಸಿನಿಂದ ಕೂಡಿದವನು; ಜಿತೇಂದ್ರಿಯಃ=ಇಂದ್ರಿಯಗಳನ್ನು ಜಯಿಸಿದವನು; ಸರ್ವಭೂತಾತ್ಮಭೂತಾತ್ಮಾ=ಸಮಸ್ತ ಪ್ರಾಣಿಕೋಟಿಗಳಲ್ಲಿಯ ಆತ್ಮವೂ, ತನ್ನಲ್ಲಿರುವ ಆತ್ಮವೂ ಒಂದೇ ಎಂದು ತಿಳಿದುಕೊಂಡವನು; ಕುರ್ವನ್ ಅಪಿ=ಕರ್ಮಗಳನ್ನು ಮಾಡುತ್ತಿದ್ದರೂ; ನ ಲಿಪ್ಯತೇ=ಕರ್ಮಬಂಧನಕ್ಕೊಳಗಾಗುವುದಿಲ್ಲ.

**ತಾ॥** (ನಿಷ್ಕಾಮ) ಕರ್ಮಯೋಗವನ್ನಾಚರಿಸುವವನು, ಪರಿಶುದ್ಧವಾದ ಹೃದಯವುಳ್ಳವನು, ನಿಗ್ರಹಗೊಂಡ ಮನಸ್ಸುಳ್ಳವನು, ಇಂದ್ರಿಯಗಳನ್ನು ಜಯಿಸಿದವನು, ಸಮಸ್ತ ಪ್ರಾಣಿಗಳ ಆತ್ಮ ಹಾಗು ತನ್ನ ಆತ್ಮವೂ ಒಂದೇ ಎಂದು ತಿಳಿದಿರುವ ಮನುಷ್ಯನು ಕರ್ಮಗಳನ್ನು ಮಾಡಿದರೂ ಅವುಗಳಿಂದ ಬಂಧನಕ್ಕೊಳಗಾಗುವುದಿಲ್ಲ.

**ವ್ಯಾಖ್ಯೆ:** ಕರ್ಮಗಳನ್ನು ಮಾಡುತ್ತಿದ್ದರೂ ಕರ್ಮಬಂಧನಕ್ಕೆ ಸಿಕ್ಕದೆ ಇರಬೇಕೆಂದರೆ ಐದು ಲಕ್ಷಣಗಳು ಇರಬೇಕೆಂದು ಹೇಳಲಾಗುತ್ತಿದೆ- ಅವು ಯಾವುವೆಂದರೆ ೧) ನಿಷ್ಕಾಮ ಕರ್ಮಾಚರಣೆ ೨) ನಿರ್ಮಲ ಹೃದಯ ೩) ಮನೋನಿಗ್ರಹ ೪) ಇಂದ್ರಿಯಜಯ ೫) ಸರ್ವತ್ರ ಏಕಾತ್ಮದರ್ಶನ. ಇವು ಸಾಕ್ಷಾತ್ ಜ್ಞಾನಿಯ ಲಕ್ಷಣಗಳೆಂದು ವಿದಿತವಾಗುತ್ತದೆ. ಇದರಿಂದ ಕರ್ಮಯೋಗ, ಜ್ಞಾನಯೋಗಗಳು ಪರಾಕಾಷ್ಠೆ ದಶೆಯಲ್ಲಿ ಒಂದನ್ನೊಂದು ಹೋಲುತ್ತವೆ ಎಂದು ಸ್ಪಷ್ಟವಾಗುತ್ತಿದೆ. ಈ ಐದು ಲಕ್ಷಣಗಳುಂಟಾಗಿ ಕರ್ಮವನ್ನಾಚರಿಸುವವನು ಕರ್ಮಗಳಿಂದ ಬದ್ಧನಾಗುವುದಿಲ್ಲ. ಹಾಗಿಲ್ಲದೆ ಕಾಮ್ಯಭಾವದಿಂದ, ಮಲಿನ ಚಿತ್ತದಿಂದ, ಕರ್ತೃತ್ವ ಬುದ್ಧಿಯಿಂದ, ನಿಗ್ರಹಿಸದ ಇಂದ್ರಿಯಗಳಿಂದ ಆಚರಿಸಿದಲ್ಲಿ ಕರ್ಮಗಳಿಂದ ಬಂಧಿಸಲ್ಪಡುವನು.

ಅಂತಃಕರಣವು ಅನೇಕ ದುಃಸಂಕಲ್ಪಗಳಿಂದ ದುರ್ಗುಣಗಳಿಂದ, ದುರ್ವಾಸನೆಗಳಿಂದ ಕೂಡಿದ್ದಲ್ಲಿ ಜೀವಿಯು ಆಚರಿಸುವ ಕರ್ಮವು ಮಲಿನವಾಗಿ ಅವನು ಬದ್ಧನಾಗುವನು. ಸರ್ವಭೂತಗಳಲ್ಲಿ ತನ್ನ ಆತ್ಮವೇ

ಇದೆ ಎನ್ನುವ ಭಾವವಿಲ್ಲದೆ ಹೋದರೆ, ಪರ ಪ್ರಾಣಿಗೆ ಅಪಕಾರವನ್ನುಂಟು ಮಾಡಿ, ಇತರರ ಮೇಲೆ ದ್ವೇಷವನ್ನು ತೋರಿಸುವನು. ದಯೆ, ಪ್ರೇಮ, ಕರುಣೆ ಮುಂತಾದ ಸುಗುಣಗಳು ಆತನ ಕ್ರಿಯೆಯಲ್ಲಿ ವ್ಯಕ್ತವಾಗುವುದಿಲ್ಲ ವಾದ್ದರಿಂದ ಅಂತಹವನು ತನ್ನ ದೋಷಯುಕ್ತವಾದ ಕರ್ಮದಿಂದ ತಪ್ಪದೆ ಬದ್ಧನಾಗುವನು. ಆದ್ದರಿಂದ ಕರ್ಮದಿಂದ ಬಂಧವುಂಟಾಗದಿರಲು ಸರ್ವತ್ರ ಏಕಾತ್ಮ ದರ್ಶನವೂ ಕೂಡ ಒಂದು ಅವಶ್ಯಕತೆಯೇ ಆಗಿದೆ. ಹಾಗೆಯೇ ಇಂದ್ರಿಯ, ಮನೋನಿಗ್ರಹಗಳು ಕರ್ಮಬಂಧವಿಮುಕ್ತಿಗೆ ಅವಶ್ಯಕಗಳು ಎಂದು ಭಗವಂತನು ಇಲ್ಲಿ ತಿಳಿಸಿದ್ದಾನೆ. ಈ ಪ್ರಕಾರವಾಗಿ ಮೇಲೆ ತಿಳಿಸಿದ ಐದು ಲಕ್ಷಣಗಳನ್ನು ಹೊಂದಿ ಕರ್ಮಗಳನ್ನಾಚರಿಸಿದರೆ ಜೀವಿಯು ಅವುಗಳಿಂದ ಯಾವ ರೀತಿಯಲ್ಲೂ ಬಂಧನಕ್ಕೊಳಗಾಗದೆ ನಿರ್ಲಿಪ್ತನಾಗಿ, ಬಂಧರಹಿತನಾಗಿ ಬೆಳಗುವನು. ಆದ್ದರಿಂದ ಮುಮುಕ್ಷುಗಳು ಆ ಸದ್ಗುಣಗಳನ್ನು ತಪ್ಪದೆ ಆಶ್ರಯಿಸಬೇಕು.

ಪ್ರ : ಕರ್ಮಗಳನ್ನು ಆಚರಿಸಿದರೂ ಅವುಗಳಿಂದ ಯಾರು ಬಂಧನಕ್ಕೊಳ ಗಾಗುವುದಿಲ್ಲ?

ಉ : ೧) ನಿಷ್ಕಾಮ ಕರ್ಮಾಚರಣೆ ೨) ನಿರ್ಮಲ ಹೃದಯ ೩) ಮನೋ ಜಯ ೪) ಇಂದ್ರಿಯಜಯ ೫) ಸರ್ವತ್ರ ಏಕಾತ್ಮದರ್ಶನ ಎನ್ನುವ ಈ ಐದು ಸುಲಕ್ಷಣಗಳನ್ನು ಹೊಂದಿದ್ದರೆ ಕರ್ಮ ಮಾಡಿದರೂ ಬದ್ಧನಾಗು ವುದಿಲ್ಲ.

**ಅ॥** ತತ್ವಜ್ಞನಾದ ಯೋಗಿ ಪ್ರಪಂಚದಲ್ಲಿ ವ್ಯವಹರಿಸುವಾಗ ಹೇಗಿರುವನೋ ಎರಡು ಶ್ಲೋಕಗಳ ಮೂಲಕ ತಿಳಿಸಲಾಗುತ್ತಿದೆ-

**೮. ನೈವ ಕಿಂಚಿತ್ಕರೋಮೀತಿ ಯುಕ್ತೋ ಮನ್ಯೇತ ತತ್ವವಿತ್**
**ಪಶ್ಯನ್ ಶೃಣ್ವನ್ ಸ್ಪೃಶನ್ ಜಿಘ್ರನ್ ಅಶ್ನನ್ ಗಚ್ಛನ್ ಸ್ವಪನ್ ಶ್ವಸನ್**

**೯. ಪ್ರಲಪನ್ ವಿಸೃಜನ್ ಗೃಹ್ಣನ್ನುನ್ಮಿಷನ್ನಿಮಿಷನ್ನಪಿ**
**ಇಂದ್ರಿಯಾಣೀಂದ್ರಿಯಾರ್ಥೇಷು ವರ್ತಂತ ಇತಿ ಧಾರಯನ್**

**ಅರ್ಥ:** ತತ್ವವಿತ್=ಪರಮಾರ್ಥ ತತ್ವವನ್ನು ತಿಳಿದವನಾದ; ಯುಕ್ತ=ಯೋಗ ಯುಕ್ತನು(ಆತ್ಮದಲ್ಲಿ ಸ್ಥಿರಚಿತ್ತವುಳ್ಳವನು); ಪಶ್ಯನ್=ನೋಡುತ್ತಿದ್ದರೂ; ಶೃಣ್ವನ್=ಕೇಳುತ್ತಿದ್ದರೂ; ಸ್ಪೃಶನ್=ಸ್ಪರ್ಶಿಸುತ್ತಿದ್ದರೂ; ಜಿಘ್ರನ್=ವಾಸನೆ ನೋಡುತ್ತಿದ್ದರೂ; ಅಶ್ನನ್=ತಿನ್ನುತ್ತಿದ್ದರೂ; ಗಚ್ಛನ್=ನಡೆಯುತ್ತಿದ್ದರೂ; ಸ್ವಪನ್=ನಿದ್ರಿಸುತ್ತಿದ್ದರೂ; ಶ್ವಸನ್=ಉಚ್ಛ್ವಾಸ ನಿಶ್ವಾಸಗಳಲ್ಲಿ; ಪ್ರಲಪನ್= ಮಾತಾಡುತ್ತಿದ್ದರೂ; ವಿಸೃಜನ್=ಬಿಡುತ್ತಿದ್ದರೂ; ಗೃಹ್ಣನ್=ಗ್ರಹಿಸುತ್ತಿದ್ದರೂ; ಉನ್ಮಿಷನ್‌ನಿಮಿಷನ್‌ಅಪಿ=ಕಣ್ಣುರೆಪ್ಪೆಗಳನ್ನು ಹೊಡೆಯುತ್ತಿರುವಾಗ; ಇಂದ್ರಿಯಾಣಿ=ಇಂದ್ರಿಯಗಳು; ಇಂದ್ರಿಯಾರ್ಥೇಷು=(ಶಬ್ದಾದಿ) ವಿಷಯ ಗಳಲ್ಲಿ; ವರ್ತಂತೇ+ಇತಿ=ಪ್ರವರ್ತಿಸುತ್ತಿವೆಯೆಂದು; ಧಾರಯನ್=ನಿಶ್ಚಯಿಸಿ ದಂತವನಾಗಿ; ಕಿಂಚಿತ್=ಸ್ವಲ್ಪವಾದರೂ; ನ ಏವಕರೋಮಿತಿ=ನಾನು ಮಾಡುವುದಿಲ್ಲವೆಂದೇ; ಮನ್ಯೇತ=ತಿಳಿಯುತ್ತಾನೆ.

**ತಾ॥** ಪರಮಾತ್ಮ ತತ್ವವನ್ನು ತಿಳಿದ ಯೋಗಯುಕ್ತನು (ಆತ್ಮದಲ್ಲಿ ಸ್ಥಿರಚಿತ್ತವುಳ್ಳವನು) ನೋಡುತ್ತಿದ್ದರೂ, ಕೇಳುತ್ತಿದ್ದರೂ, ಸ್ಪರ್ಶಿಸುತ್ತಿದ್ದರೂ, ವಾಸನೆ ನೋಡುತ್ತಿದ್ದರೂ, ತಿನ್ನುತ್ತಿದ್ದರೂ, ನಡೆಯುತ್ತಿದ್ದರೂ, ನಿದ್ರಿಸುತ್ತಿದ್ದರೂ, ಉಚ್ಛ್ವಾಸ ನಿಶ್ವಾಸಗಳನ್ನು ಮಾಡುತ್ತಿದ್ದರು, ಮಾತಾಡುತ್ತಿದ್ದರೂ, ವಿಸರ್ಜನೆ ಮಾಡುತ್ತಿದ್ದರೂ, ಗ್ರಹಿಸುತ್ತಿದ್ದರೂ, ಕಣ್ಣುರೆಪ್ಪೆ ಹೊಡೆಯುತ್ತಿದ್ದರೂ, ಈ ಎಲ್ಲಾ ಕ್ರಿಯೆಗಳು ನಡೆಯುತ್ತಿರುವಾಗಲೂ ಇಂದ್ರಿಯಗಳು (ಅವುಗಳ) ವಿಷಯಗಳಲ್ಲಿ ಪ್ರವರ್ತಿಸುತ್ತಿವೆಯೆಂದು ನಿಶ್ಚಯಿಸಿದವನಾಗಿ; ನಾನು ಸ್ವಲ್ಪವಾದರೂ ಏನನ್ನೂ ಮಾಡುತ್ತಿಲ್ಲ- ಎಂದೇ ತಿಳಿಯುವನು (ಆಯಾ ಕಾರ್ಯಗಳಲ್ಲಿ ಕರ್ತೃತ್ವ ಬುದ್ಧಿಯಿಲ್ಲದೆ ಇರುವನು)

**ವ್ಯಾಖ್ಯೆ:** ಆತ್ಮ ದೇಹೇಂದ್ರಿಯ ಮನಸ್ಸುಗಳಿಗೆ ಅತೀತವಾದುದು. ಸಾಕ್ಷಿಯಾಗಿದ್ದು ಆಯಾ ಚಿತ್ತವೃತ್ತಿಗಳನ್ನು ಅದು ವೀಕ್ಷಿಸುತ್ತದೆ. ಆದ್ದರಿಂದ ಯಾವ ಕಾರ್ಯಕ್ಕೂ ಅದು ಕರ್ತನಲ್ಲ. ಅವಿದ್ಯಾದೋಷದಿಂದ ಜೀವಿಯು ಸ್ವಸ್ವರೂಪವನ್ನು ಮರೆತು ದೇಹೇಂದ್ರಿಯ ಮನಸ್ಸುಗಳಲ್ಲಿ ತಾದಾತ್ಮ್ಯ ಹೊಂದಿ ತಾನೇ ದೇಹವೆಂದು, ತಾನೇ ಇಂದ್ರಿಯಗಳೆಂದು, ಮನಸ್ಸೆಂದು ಭಾವಿಸಿ ಅವುಗಳ ಕ್ರಿಯೆಗಳನ್ನು, ವಿಕಾರಗಳನ್ನು ತನ್ನ ಮೇಲೆ ವ್ಯರ್ಥವಾಗಿ ಆರೋಪಿಸಿ ಕೊಂಡು ದುಃಖಗಳನ್ನನುಭವಿಸುತ್ತಿದ್ದಾನೆ. ಆದರೆ ತತ್ವಜ್ಞಾನದಿಂದ ಅವಿದ್ಯಾದೋಷದಿಂದ ಮುಕ್ತನಾದ ಮಹನೀಯನು ಆತ್ಮಸ್ವರೂಪ ಸ್ಥಿತಿಯುಳ್ಳವನಾಗಿ 'ಆಯಾ ಇಂದ್ರಿಯಗಳು ಆಯಾ ಇಂದ್ರಿಯ ಕಾರ್ಯಗಳಲ್ಲಿ, ಇಂದ್ರಿಯಾರ್ಥಗಳಲ್ಲಿ ಪ್ರವರ್ತಿಸುತ್ತಿವೆ. ನಾನು ಅವುಗಳಿಗೆ ಸಾಕ್ಷಿ. ನಾನು ಏನನ್ನೂ ಮಾಡುತ್ತಿಲ್ಲ' ಎಂದು ನಿಶ್ಚಯಿಸಿಕೊಂಡು ನಿರ್ವಿಕಾರ ನಾಗಿರುವನು. ಇಂದ್ರಿಯ ಜನಿತ ಸುಖದುಃಖಗಳನ್ನು ಲೆಕ್ಕಿಸದೆ, ನಿತ್ಯನಿರತಿಶಯ ಸಹಜಾನಂದವನ್ನೇ ಅನುಭವಿಸುತ್ತಿರುತ್ತಾನೆ.

ಆದರೆ ಕೆಲವು ಶುಷ್ಕ ವೇದಾಂತಿಗಳು ಆತ್ಮಜ್ಞಾನ ಹೊಂದದೆಯೇ, ಅವಿದ್ಯೆ ನಾಶವಾಗದೆಯೇ, ದೇಹಾದಿ ತಾದಾತ್ಮ್ಯಗಳನ್ನು ಬಿಡದೆಯೇ, ವಿಷಯ ಲೋಲರಾಗಿ, ಇಂದ್ರಿಯಗಳಿಂದ ಅನೇಕ ವಿಷಯ ಭೋಗಗಳನ್ನು ಅನುಭವಿಸುತ್ತ 'ನಾನು ಅವುಗಳಿಗೆ ಸಾಕ್ಷಿ' ಎಂದು ಬಾಯಿಯಲ್ಲಿ ಮಾತ್ರ ಹೇಳುತ್ತಿರುತ್ತಾರೆ. ಅದು ಬಹಳ ಘೋರವಾದುದು. ಇದನ್ನು ಅವಲೋಕಿಸಿ, ಭಗವಂತನು ಮೇಲಿನ ಏಳನೆಯ ಶ್ಲೋಕದಲ್ಲಿ ಜ್ಞಾನಿಗೆ ಇರಬೇಕಾದ ಐದು ಲಕ್ಷಣಗಳನ್ನು ಹೇಳುತ್ತಿದ್ದಾನೆ. **(ಯೋಗಯುಕ್ತೋ ವಿಶುದ್ಧಾತ್ಮಾ...).** ಆ ಗುಣಗಳು ಉಂಟಾಗಿ ಅವಿದ್ಯೆ ನಶಿಸಿದ ನಂತರವೇ ಇಂತಹ ಸಾಕ್ಷಿ ಮನೋಭಾವ ಸಿದ್ಧಿಸುವುದೇ ಹೊರತು ಅನ್ಯಥಾ ಅಲ್ಲ. ಒಂದು ಕೆನ್ನೆ ದೃಶ್ಯದೊಡನೆ ತಾದಾತ್ಮ್ಯ ಹೊಂದುತ್ತಾ ಮತ್ತೊಂದು ಕೆನ್ನೆ 'ನಾನು ಸಾಕ್ಷಿ' ಎಂದು ಹೇಳುವುದು ಬಾಲಕರ ಪ್ರಲಾಪವೇ ಆಗಲಿ ಬುದ್ಧಿವಂತರ ವಚನಗಳಲ್ಲ. ಸಾಕ್ಷಿಭಾವದಲ್ಲಿ ಸ್ಥಿರತೆ ಹೊಂದಿದವನ ಇಂದ್ರಿಯಗಳು ಎಂದೂ ದುರ್ವಿಷಯದಲ್ಲಿ ಪ್ರವರ್ತಿಸುವುದಿಲ್ಲ. ಏಕೆಂದರೆ, ತಮೋಗುಣದಿಂದ ರಜೋಗುಣಕ್ಕೆ, ರಜೋಗುಣದಿಂದ ಸತ್ವಕ್ಕೆ, ಸತ್ವ ಗುಣದಿಂದ ವಿಶುದ್ಧ ಸತ್ವಕ್ಕೆ ಏರಿದ ವಿವೇಕವಂತನ ಮನಸ್ಸು ಕೆಳಗೆ ಜಾರಿ ರಜಸ್ತಮಸ್ಸುಗಳಲ್ಲಿ, ಭೋಗವಿಲಾಸಗಳಲ್ಲಿ, ದುರ್ವಾಸನಾದಿ ಚೇಷ್ಟೆಗಳಲ್ಲಿ ಯಾವಾಗಲೂ ಪ್ರವರ್ತಿಸುವುದಿಲ್ಲ. ಕಡೆದ ನಂತರ ಬೆಣ್ಣೆ ಹೇಗೆ ಮಜ್ಜಿಗೆಯಲ್ಲಿ ಮುಳುಗುವುದಿಲ್ಲವೋ ಹಾಗೆಯೇ ಸಂಸಾರ ಸಾಗರವನ್ನು ವಿಚಾರಣೆಯಿಂದ ಮಥಿಸಿ ಪರಮಾತ್ಮನನ್ನು ಹೊರ ತೆಗೆದು ಅವನನ್ನು ಅನುಭವಿಸುತ್ತಿರುವ ಜ್ಞಾನಿ ಮತ್ತೆ ಮಿಥ್ಯಾರೂಪವಾದ ಸಂಸಾರ ಭೋಗಗಳಲ್ಲಿ ಮುಳುಗುವುದಿಲ್ಲ. ನಿದ್ರೆಯಿಂದ ಎದ್ದವನು ಮತ್ತೆ ಸ್ವಪ್ನ ಸೌಂದರ್ಯಗಳಲ್ಲಿ ಆಸಕ್ತಿ ಹೊಂದುವುದಿಲ್ಲವಲ್ಲ!

ಅವಿದ್ಯೆ ನಶಿಸಿ, ದೃಶ್ಯ ತಾದಾತ್ಮ್ಯವನ್ನು ಬಿಟ್ಟು ಆತ್ಮದೊಂದಿಗೆ ಐಕ್ಯವನ್ನು ಹೊಂದಿದ ಮಹನೀಯನಿಗೆ ಈ ಸಾಕ್ಷೀಭಾವದ ಅನುಭೂತಿಯಾಗುವುದು. ಆದ್ದರಿಂದಲೇ ಅಂತಹವನು ತಿನ್ನುತ್ತಿದ್ದರೂ, ಕುಡಿಯುತ್ತಿದ್ದರೂ,

ಮಾತನಾಡುತ್ತಿದ್ದರೂ ತಾನೇನೂ ಮಾಡುತ್ತಿಲ್ಲವೆಂದು ಭಾವಿಸುತ್ತಿರುತ್ತಾನೆ ಎಂದು ಭಗವಂತನು ಇಲ್ಲಿ ಹೇಳಿದನು. ಆತನ ಇಂದ್ರಿಯಗಳು ವಿಷಯ ವಾಸನಾವರ್ಜಿತಗಳಾಗಿರುವುವು. ಅಂತಹ ಇಂದ್ರಿಯಗಳಿಂದ ಅವರು ಲೋಕೋಪಕಾರ್ಯ ಕಾರ್ಯಗಳನ್ನು, ದೇಹ ಯಾತ್ರೋಪಯುಕ್ತ ಕಾರ್ಯಗಳನ್ನು ಮಾಡುತ್ತಿರುವರು. ಹಾಗೆ ಮಾಡಿದರೂ ಸಹ ಕರ್ತೃತ್ವವಿಲ್ಲದೆ ಇರುವರು. ಅಜ್ಞಾನಿ ಕರ್ತೃತ್ವವನ್ನು ಹೊಂದಿ ಬದ್ಧನಾಗುವನು.

ಆದ್ದರಿಂದ ಮೊದಲು ನಿಷ್ಕಾಮಕರ್ಮ, ಭಕ್ತಿ, ಧ್ಯಾನಾದಿ ಸಾಧನೆಗಳ ದ್ವಾರ ಚಿತ್ತವನ್ನು ಶುದ್ಧ ಮಾಡಿಕೊಂಡು (ಆತ್ಮ) ತತ್ತ್ವವನ್ನು ಚೆನ್ನಾಗಿ ಗ್ರಹಿಸಿ ತತ್ತ್ವವೇತ್ತನಾಗಬೇಕು. ಆತನು ಆಗ ಕರ್ಮಗಳನ್ನು ಮಾಡಿದರೂ ಮಾಡದಿದ್ದರೂ ಯಾವ ವಿಧವಾದ ಬಂಧವನ್ನು ಹೊಂದುವುದಿಲ್ಲ. ಆತನ ಚಿತ್ತವು ಆಗ ಹುರಿದ ಬೀಜದಂತೆ ವಿಷಯಸಂಸ್ಕಾರವರ್ಜಿತವಾಗಿರುವುದು. ಕ್ರಿಯೆಗಳಲ್ಲಿ ಸಾಕ್ಷೀ ಭಾವವನ್ನು ಹೊಂದಿರುವವನು ಧರ್ಮಕ್ಕೆ ವಿರುದ್ಧವಲ್ಲದ ಕಾರ್ಯಗಳನ್ನೇ ಆಚರಿಸುವನು. ಒಂದು ವೇಳೆ ಯಾರಾದರೂ ಅನ್ಯಥಾ ಆಚರಿಸಿದರೆ ಅವರಿನ್ನೂ ತತ್ತ್ವವೇತ್ತರಾಗಿಲ್ಲವೆಂದೇ ಅರ್ಥ. ಆದ್ದರಿಂದ ಮುಮುಕ್ಷುವು ಪ್ರಪ್ರಥಮವಾಗಿ ಭಗವಂತನು ತಿಳಿಸಿದ ಐದು ಸುಲಕ್ಷಣಗಳನ್ನು ಹೊಂದಿ ತತ್ತ್ವವೇತ್ತನಾಗಬೇಕು. ಆಗಲೇ ಆತನು ಜಗನ್ನಾಟಕವನ್ನು, ದೇಹೇಂದ್ರಿಯ ವ್ಯವಹಾರಗಳನ್ನು ಸಾಕ್ಷಿಯಾಗಿ ವೀಕ್ಷಿಸುವ ಶಕ್ತಿಯನ್ನು ಸಂಪಾದಿಸಿಕೊಳ್ಳಬಲ್ಲನು.

ಪ್ರ: ತತ್ತ್ವವೇತ್ತನು ಇಂದ್ರಿಯಗಳಿಂದ ತಿನ್ನುವುದು, ಕುಡಿಯುವುದು ಮೊದಲಾದ ಅನೇಕ ಕಾರ್ಯಗಳನ್ನು ಮಾಡುತ್ತಿದ್ದರೂ ಯಾವ ಭಾವವನ್ನು ಹೊಂದಿರುವನು?

ಉ : 'ನಾನೇನೂ ಮಾಡುತ್ತಿಲ್ಲ, ಆಯಾ ಇಂದ್ರಿಯಗಳು ಆಯಾ ಕಾರ್ಯಗಳನ್ನು ಮಾಡಿಕೊಳ್ಳುತ್ತಿವೆ. ನಾನು ಸಾಕ್ಷಿ' (ನಿರ್ವಿಕಾರ ಆತ್ಮ) ಎನ್ನುವ ಭಾವವನ್ನು ಹೊಂದಿರುವನು.

**ಅ||** ಕರ್ಮಗಳನ್ನು ಮಾಡಿದರೂ ಬಂಧನಕ್ಕೊಳಗಾಗದಂತಹ ಉಪಾಯವನ್ನು ಹೇಳಲಾಗುತ್ತಿದೆ-

**೧೦. ಬ್ರಹ್ಮಣ್ಯಾಧಾಯ ಕರ್ಮಾಣಿ ಸಂಗಂ ತ್ಯಕ್ತ್ವಾ ಕರೋತಿ ಯಃ**
**ಲಿಪ್ಯತೇ ನ ಸ ಪಾಪೇನ ಪದ್ಮಪತ್ರಮಿವಾಂಭಸಾ**

**ಅರ್ಥ:** ಯಃ=ಯಾರು; ಕರ್ಮಾಣಿ=ಕರ್ಮಗಳನ್ನು; ಬ್ರಹ್ಮಣಿ= ಪರಮಾತ್ಮನಲ್ಲಿ; ಆಧಾಯ=ಸಮರ್ಪಿಸಿ; ಸಂಗಂ=(ಆಸಕ್ತಿ) ಫಲಾಪೇಕ್ಷೆಯನ್ನು; ತ್ಯಕ್ತ್ವಾ=ಬಿಟ್ಟು; ಕರೋತಿ=ಮಾಡುತ್ತಿದ್ದಾನೋ; ಸಃ=ಆತನು; ಅಂಭಸಾ= ನೀರಿನಿಂದ; ಪದ್ಮಪತ್ರಂ ಇವ=ತಾವರೆ ಎಲೆಯ ಹಾಗೆ; ಪಾಪೇನ= ಪಾಪದಿಂದ; ನ ಲಿಪ್ಯತೇ=ಅಂಟಿಕೊಳ್ಳುವುದಿಲ್ಲ.

**ತಾ||** ಯಾವನು ತಾನು ಮಾಡುವ ಕರ್ಮಗಳನ್ನು ಪರಮಾತ್ಮನಿಗೆ ಅರ್ಪಿಸಿ ಸಂಗವನ್ನು (ಆಸಕ್ತಿಯನ್ನು) ಬಿಟ್ಟು ಕಾರ್ಯ ಮಾಡುತ್ತಿದ್ದಾನೋ ಅಂತಹವನು ತಾವರೆಯ ಎಲೆಗೆ ನೀರು ಅಂಟದಿರುವಂತೆ ಪಾಪದಿಂದ ಅಂಟಿಕೊಳ್ಳದೆ ಇರುವನು.

**ವ್ಯಾಖ್ಯೆ:** ತಾನು ಮಾಡುವ ಸಮಸ್ತ ಕರ್ಮಗಳನ್ನು ಬ್ರಹ್ಮದಲ್ಲಿ (ಆತ್ಮದಲ್ಲಿ) ಸಮರ್ಪಿಸಿ, ಈ ಸಮಸ್ತ ದೃಶ್ಯವೂ, ಕರ್ಮಗಳು, ವ್ಯವಹಾರಗಳು ಕನ್ನಡಿಯ ಪ್ರತಿಬಿಂಬದಂತೆ ಬ್ರಹ್ಮದಲ್ಲಿ ಕಲ್ಪಿತವಾಗಿವೆಯೆಂದು ಭಾವಿಸಿ, ಅಹಂಭಾವವಾಗಲಿ, ಕರ್ತೃತ್ವ ಬುದ್ಧಿಯಾಗಲಿ ಇಲ್ಲದೆ ಅಸಕ್ತ ಬುದ್ಧಿ (non-attachment) ಯಿಂದ ಕರ್ಮಗಳನ್ನು ಆಚರಿಸುವವನನ್ನು ಕರ್ಮಜನಿತವಾದ ಪಾಪವಾಗಲಿ, ಬಂಧವಾಗಲಿ ಸ್ಪರ್ಶಿಸುವುದಿಲ್ಲ. ಈ ಸತ್ಯವನ್ನು ನಿರೂಪಿಸಲು ಇಲ್ಲಿ ಕಮಲದ ದೃಷ್ಟಾಂತವನ್ನು ಕೊಡಲಾಗಿದೆ. ಕಮಲ ನೀರಿನಲ್ಲಿ ಇದ್ದರೂ ನೀರು ಅದಕ್ಕೆ ಅಂಟಿಕೊಳ್ಳದೆ, ಜಾರಿ ಹೋಗುವುದು. ಅದೇ ರೀತಿ ಅನೇಕ ಕರ್ಮಗಳನ್ನಾಚರಿಸಿದರೂ, ಅವುಗಳಲ್ಲಿ ಸಂಗ, ಆಸಕ್ತಿ, ಕರ್ತೃತ್ವವಿಲ್ಲದವರು ಪಾಪಗಳಿಂದಲೇ ಆಗಲಿ, ಬಂಧಗಳಿಂದಲೇ ಆಗಲಿ ಸ್ಪರ್ಶಿಸಲ್ಪಡರು. ಆದ್ದರಿಂದಲೇ ಜೀವನ್ಮುಕ್ತರಾದ ಮಹನೀಯರು ತಾವು ಉದ್ಧಾರ ಹೊಂದಿ ಇತರರನ್ನು ಉದ್ಧಾರ ಮಾಡುವ ದೃಷ್ಟಿಯಿಂದ ಎಷ್ಟೋ ಕಾರ್ಯಗಳನ್ನು ನಿರಂತರವಾಗಿ ಮಾಡುತ್ತಿದ್ದರೂ, ಕರ್ಮಬಂಧನದಿಂದ ವಿಮುಕ್ತರಾಗೇ ಇರುತ್ತಾರೆ. ಇದೇ ಕರ್ಮಯೋಗದ ರಹಸ್ಯ.

ಫಲಾಪೇಕ್ಷೆಯಿಲ್ಲದೆ ಈಶ್ವರಾರ್ಪಣ ಬುದ್ಧಿಯಿಂದ ಇಲ್ಲವೆ ಬ್ರಹ್ಮಾರ್ಪಣ ಬುದ್ಧಿಯಿಂದ ಅಸಕ್ತನಾಗಿ ಕರ್ಮಗಳನ್ನು ಆಚರಿಸಿದರೆ ಕರ್ತನಿಗೆ ಅವುಗಳಿಂದ ಬಂಧವುಂಟಾಗುವುದಿಲ್ಲ. ಸಂಗವೇ ಬಂಧನಕ್ಕೆ ಕಾರಣ. ಅಸಂಗವೇ ಮೋಕ್ಷಕ್ಕೆ ಹೇತು. ಕಮಲವನ್ನು ಬಿಟ್ಟು ಬೇರೆ ಎಲ್ಲಾ ಎಲೆಗಳಿಗೆ ಹೇಗೆ ನೀರು ಅಂಟಿಕೊಳ್ಳುತ್ತದೆಯೋ ಹಾಗೆಯೇ ಕರ್ತೃತ್ವ ಬುದ್ಧಿ, ಸಂಗ (ಆಸಕ್ತಿ)ಗಳಿಂದ ಕರ್ಮಮಾಡುವವರಿಗೆ ಪಾಪವು ಸೋಂಕುತ್ತದೆ. ಆದ್ದರಿಂದ ಬಂಧರಾಹಿತ್ಯಕ್ಕೆ ಕರ್ಮಗಳನ್ನು ಅನಾಸಕ್ತವಾಗಿ, ನಿಷ್ಕಾಮವಾಗಿ, ಭಗವದರ್ಪಣ ಬುದ್ಧಿಯಿಂದ ಆಚರಿಸಬೇಕು.

ಇಲ್ಲಿ 'ಪಾಪೇನ' ಎನ್ನುವ ಪದಕ್ಕೆ 'ಕರ್ಮಬಂಧನ'ದಿಂದ ಎನ್ನುವ ಅರ್ಥವನ್ನು ಹೇಳಿದರೂ ಸಮುಚಿತವಾಗಿಯೇ ಇದೆ.

ಪ್ರ : ಕರ್ಮಗಳನ್ನು ಮಾಡಿದರೂ ಪಾಪದಿಂದ ಯಾರು ಅಂಟಿಕೊಳ್ಳದೆ ಇರುವರು?

ಉ : ೧) ತಾವು ಮಾಡುವ ಕರ್ಮಗಳನ್ನು ಭಗವಂತನಿಗೆ ಸಮರ್ಪಿಸುವವರು ೨) ಸಂಗವನ್ನು (ಆಸಕ್ತಿಯನ್ನು) ಬಿಟ್ಟು ಕಾರ್ಯವನ್ನು ಮಾಡುವವರು ಆ ಕರ್ಮಗಳಿಂದ ಬಂಧಿಸಲ್ಪಡರು ಮತ್ತು ಪಾಪವನ್ನು ಹೊಂದುವುದಿಲ್ಲ.

ಪ್ರ : ಯಾವ ಪ್ರಕಾರವಾಗಿ?

ಉ : ಕಮಲವು ನೀರಿನಿಂದ ಅಂಟದೆ ಇರುವಂತೆ.

**ಅ||** ಮಹನೀಯರು ಸಂಗವನ್ನು ಬಿಟ್ಟು ಕರ್ಮಗಳನ್ನು ಮಾಡುವರು ಎನ್ನುವುದನ್ನು ಹೇಳಲಾಗುತ್ತಿದೆ-

**೧೧. ಕಾಯೇನ ಮನಸಾ ಬುದ್ಧ್ಯಾ ಕೇವಲೈರಿಂದ್ರಿಯೈರಪಿ**
**ಯೋಗಿನಃ ಕರ್ಮ ಕುರ್ವಂತಿ ಸಂಗಂ ತ್ಯಕ್ತ್ವಾತ್ಮಶುದ್ಧಯೇ**

**ಅರ್ಥ:** ಯೋಗಿನಃ=(ನಿಷ್ಕಾಮಕರ್ಮ) ಯೋಗಿಗಳು; ಆತ್ಮಶುದ್ಧಯೇ=ಚಿತ್ತ ಶುದ್ಧಿಗೋಸ್ಕರ; ಸಂಗಮ್=ಫಲಾಸಕ್ತಿಯನ್ನು; ತ್ಯಕ್ತ್ವಾ=ಬಿಟ್ಟು; ಕಾಯೇನ= ಶರೀರದಿಂದ; ಮನಸಾ=ಮನಸ್ಸಿನಿಂದ; ಬುದ್ಧ್ಯಾ=ಬುದ್ಧಿಯಿಂದ; ಕೇವಲೈಃ= ಏನೂ ಇಲ್ಲದಂತಹ (ಮಮತ್ವ, ಅಭಿಮಾನವಿಲ್ಲದ); ಇಂದ್ರಿಯೈಃ ಅಪಿ= ಇಂದ್ರಿಯಗಳಿಂದ; ಕರ್ಮ=ಕರ್ಮವನ್ನು; ಕುರ್ವಂತಿ=ಮಾಡುತ್ತಿದ್ದಾರೆ.

**ತಾ||** (ನಿಷ್ಕಾಮ ಕರ್ಮ) ಯೋಗಿಗಳು ಚಿತ್ತಶುದ್ಧಿಗಾಗಿ ಫಲಾಸಕ್ತಿಯನ್ನು ಬಿಟ್ಟು ಶರೀರದಿಂದ, ಮನಸ್ಸಿನಿಂದ, ಬುದ್ಧಿಯಿಂದ, ಅಭಿಮಾನವಿಲ್ಲದ ಇಂದ್ರಿಯಗಳಿಂದ ಕರ್ಮಗಳನ್ನು ಮಾಡುತ್ತಿದ್ದಾರೆ.

**ವ್ಯಾಖ್ಯೆ:** ನಿಷ್ಕಾಮ ಕರ್ಮಾಚರಣೆಯಿಂದ ಚಿತ್ತಶುದ್ಧಿಯುಂಟಾಗುವುದು. ಯೋಗಿಗಳು ತಮ್ಮ ಚಿತ್ತಶುದ್ಧಿಗಾಗಿ ಶರೀರವಾಕ್ಮನಗಳಿಂದ, ಬುದ್ಧಿಯಿಂದ, ಇಚ್ಛಾದ್ವೇಷಗಳಿಲ್ಲದ ಇಂದ್ರಿಯಗಳಿಂದ ಅಸಂಗವಾಗಿ, ಫಲಾಸಕ್ತಿರಹಿತವಾಗಿ ಕರ್ಮಗಳನ್ನು ಮಾಡುತ್ತಾರೆ. ಮಮತ್ವವಾಗಲಿ ಅಭಿಮಾನವಾಗಲಿ, ರಾಗದ್ವೇಷಗಳಾಗಲಿ ಇಲ್ಲದಿರುವ ಇಂದ್ರಿಯಗಳನ್ನು ಕೇವಲೇಂದ್ರಿಯ ಗಳೆನ್ನುವರು. ಅಂತಹ ಕಲ್ಮಷರಹಿತವಾದ ಇಂದ್ರಿಯಗಳಿಂದ ಅವರು ಕಾರ್ಯಗಳನ್ನು ಮಾಡುವರು. ಈ 'ಕೇವಲ' ಎನ್ನುವ ಪದವನ್ನು ದೇಹ ಮನೋಬುದ್ಧಿಗಳಿಗೆ ಕೂಡ ಅನ್ವಯಿಸಿ ಅರ್ಥವನ್ನು ಹೇಳಬಹುದು. ಅಂದರೆ ಯೋಗಿ ಅಭಿಮಾನವಿಲ್ಲದ ದೇಹಾದಿಗಳಿಂದ ಕಾರ್ಯಗಳನ್ನು ಮಾಡುತ್ತಿರುವವ ನೆಂದರ್ಥ.

ಈ ರೀತಿಯ ಅಸಂಗಾಚರಣೆಯಿಂದ ಚಿತ್ತವು ಪರಮ ನಿರ್ಮಲತ್ವವನ್ನು ಹೊಂದುವುದು. ಮೋಕ್ಷಪ್ರಾಪ್ತಿಗೆ ಆವಶ್ಯಕವಾದ ಜ್ಞಾನ ಉದಯಿಸಲು ಈ ಮನೋನೈರ್ಮಲ್ಯ ಅತ್ಯವಶ್ಯಕ. ಏಕೆಂದರೆ ಮಲಿನ ಚಿತ್ತದಲ್ಲಿ ಜ್ಞಾನವು ಅಂಕುರಿಸುವುದಿಲ್ಲ. ಆದ್ದರಿಂದಲೇ ಚಿತ್ತನೈರ್ಮಲ್ಯ ನಿಮಿತ್ತವಾಗಿ ಯೋಗಿಗಳು ಅನಾಸಕ್ತವಾಗಿ ಕಾರ್ಯವನ್ನು ಆಚರಿಸುವರೆಂದು ಇಲ್ಲಿ ಹೇಳಲಾಗಿದೆ. ಜ್ಞಾನವನ್ನು ಹೊಂದಿದ ನಂತರವೂ ಸಹ ಮಹನೀಯರು ಕೇವಲೇಂದ್ರಿಯಗಳಿಂದ ತಮ್ಮ ಜೀವನ ಯಾತ್ರೆಯನ್ನು, ಲೋಕೋಪಕಾರ ಕಾರ್ಯಗಳನ್ನು ಆಚರಿಸುವರು. ಆದ್ದರಿಂದ ಮುಮುಕ್ಷುವು ಫಲಾಸಕ್ತಿರಹಿತವಾಗಿ, ಅಭಿಮಾನ ವರ್ಜಿತಗಳಾದ ತನ್ನ ದೇಹೇಂದ್ರಿಯಾದಿಗಳಿಂದ ಕರ್ಮವನ್ನು ಮಾಡುತ್ತಾ ಚಿತ್ತಶುದ್ಧಿಯನ್ನೂ, ತದ್ವಾರ ಜ್ಞಾನವನ್ನು ಪಡೆದು ವಿಮುಕ್ತನಾಗಬೇಕು.

ಪ್ರ : ನಿಷ್ಕಾಮ ಕರ್ಮಯೋಗಿಗಳು ಕರ್ಮವನ್ನು ಹೇಗೆ ಆಚರಿಸುವರು?

ಉ : ಫಲಾಸಕ್ತಿಯನ್ನು, (ಸಂಗವನ್ನು) ತ್ಯಜಿಸಿ ಅಭಿಮಾನರಹಿತವಾದ ದೇಹೇಂದ್ರಿಯಾದಿಗಳಿಂದ ಕಾರ್ಯಗಳನ್ನು ಮಾಡುವವರಿಗೆ ಚಿತ್ತಶುದ್ಧಿ ಉಂಟಾಗುವುದು.

ಪ್ರ : ನಿಷ್ಕಾಮ ಕರ್ಮಯೋಗಿಗಳು ಕರ್ಮವನ್ನು ಹೇಗೆ ಆಚರಿಸುವರು?

ಉ : ೧) ಸಂಗ (ಫಲಾಸಕ್ತಿ)ವನ್ನು ಬಿಟ್ಟು ೨) ಮಮತ್ವಾದಿಗಳಿಲ್ಲದ ಇಂದ್ರಿಯಗಳಿಂದ, ದೇಹಾದಿಗಳಿಂದ ಕರ್ಮ ಮಾಡುವರು.

ಪ್ರ : ಹಾಗೆ ಮಾಡುವುದರಿಂದ ಲಭಿಸುವ ಫಲವೇನು ?

ಉ : ಚಿತ್ತಶುದ್ಧಿ

**ಅ॥** ನಿಷ್ಕಾಮಕರ್ಮ, ಸಕಾಮ ಕರ್ಮಗಳ ಫಲವನ್ನು ಬೇರೆಬೇರೆಯಾಗಿ ತಿಳಿಸಲಾಗುತ್ತಿದೆ-

**೧೨. ಯುಕ್ತಃ ಕರ್ಮಫಲಂ ತ್ಯಕ್ತ್ವಾ ಶಾಂತಿಮಾಪ್ನೋತಿ ನೈಷ್ಠಿಕೀಮ್**
**ಅಯುಕ್ತಃ ಕಾಮಕಾರೇಣ ಫಲೇ ಸಕ್ತೋ ನಿಬಧ್ಯತೇ**

**ಅರ್ಥ:** ಯುಕ್ತಃ=ಯೋಗಯುಕ್ತನು(ನಿಷ್ಕಾಮಕರ್ಮಯೋಗಿ); ಕರ್ಮ ಫಲಮ್=ಕರ್ಮಗಳ ಫಲವನ್ನು; ತ್ಯಕ್ತ್ವಾ=ಬಿಟ್ಟು; ನೈಷ್ಠಿಕೀಮ್=ಆತ್ಮನಿಷ್ಠಾ ಸಂಬಂಧವಾದ ಶಾಶ್ವತವಾದ; ಶಾಂತಿಂ=ಶಾಂತಿಯನ್ನು; ಆಪ್ನೋತಿ= ಹೊಂದುತ್ತಿದ್ದಾನೆ. ಅಯುಕ್ತಃ=ಯೋಗಯುಕ್ತನಲ್ಲದವನು (ಫಲಾಪೇಕ್ಷೆಯಿಂದ ಕರ್ಮಗಳನ್ನು ಮಾಡುವನು); ಕಾಮಕಾರೇಣ=ಆಶೆ (ಫಲಾಪೇಕ್ಷೆ)ಯ ಪ್ರೇರಣೆಯಿಂದ; ಫಲೇ=ಕರ್ಮಫಲದಲ್ಲಿ; ಸಕ್ತಃ=ಆಸಕ್ತಿಯುಳ್ಳವನಾಗಿ; ನಿಬಧ್ಯತೇ=(ಕರ್ಮ ಬಂಧನದಿಂದ) ಬಂಧಿತನಾಗುವನು.

**ತಾ॥** ಯೋಗಯುಕ್ತನು (ನಿಷ್ಕಾಮ ಕರ್ಮಯೋಗಿ) ಕರ್ಮಗಳ ಫಲವನ್ನು ಬಿಟ್ಟು (ಚಿತ್ತಶುದ್ಧಿಯಿಂದ) ಆತ್ಮನಿಷ್ಠಾಸಂಬಂಧವಾದ ಶಾಶ್ವತವಾದ ಶಾಂತಿಯನ್ನು ಹೊಂದುತ್ತಿದ್ದಾನೆ. ಯೋಗಯುಕ್ತನಲ್ಲದವನು (ಫಲಾ ಪೇಕ್ಷೆಯಿಂದ ಕರ್ಮ ಮಾಡುವವನು) ಆಶೆಯಿಂದ ಪ್ರೇರಿತನಾಗಿ ಕರ್ಮಫಲದಲ್ಲಿ ಆಸಕ್ತಿ ಉಂಟಾಗಿ ಬದ್ಧನಾಗುತ್ತಿದ್ದಾನೆ.

**ವ್ಯಾಖ್ಯೆ:** ಬಂಧನಕ್ಕೆ ಕಾರಣ ಆಶೆಯಾದರೆ, ಮೋಕ್ಷಕ್ಕೆ ಕಾರಣ ಆಶಾರಾಹಿತ್ಯ ವೆಂದು ಈ ಶ್ಲೋಕದಲ್ಲಿ ಸ್ಪಷ್ಟವಾಗಿ ತಿಳಿಸಲ್ಪಟ್ಟಿದೆ. ಫಲಾಪೇಕ್ಷೆಯಿಲ್ಲದೆ ಕರ್ಮಗಳನ್ನು ಮಾಡುವವನಿಗೆ ಚಿತ್ತವು ನಿರ್ಮಲವಾಗುವುದರಿಂದ ಆತ್ಮನಿಷ್ಠೆ ಉದಯಿಸಿ ಶಾಶ್ವತವಾದ ಶಾಂತಿ ಲಭಿಸುತ್ತಿದೆ. ಇದರಿಂದ ಕರ್ಮಯೋಗ, ಜ್ಞಾನಯೋಗಗಳೆರಡೂ ಆತ್ಮಶಾಂತಿಯೆನ್ನುವ ಒಂದೇ ಫಲವನ್ನು ಉಂಟು ಮಾಡುತ್ತವೆಂದು ತಿಳಿದುಬರುತ್ತಿದೆ. ಕರ್ಮಯೋಗವು ಏನೂ ಕಡಿಮೆಯಲ್ಲ ವೆಂದು ಅದರ ಫಲವೂ ನೈಷ್ಠಿಕವಾದ (ಆತ್ಮ ನಿಷ್ಠೆಯಿಂದುಂಟಾಗುವ) ಪರಮಶಾಂತಿಯೇ ಎಂದು ಈ ಶ್ಲೋಕದಲ್ಲಿ ಸ್ಪಷ್ಟೀಕರಿಸಲಾಗಿದೆ.

ಮೋಕ್ಷರೂಪ ಪರಮಶಾಂತಿಗೆ ಆಶಾರಾಹಿತ್ಯವು ಹೇಗೆ ಹೇತುವೋ ಹಾಗೆ ಬಂಧನಕ್ಕೆ ಆಶೆಯೇ ಕಾರಣ. ಫಲಾಪೇಕ್ಷೆಯೇ ಬಂಧ. 'ಬಧ್ಯತೆ' ಎಂದು ಹೇಳದೆ 'ನಿಬಧ್ಯತೆ' ಎಂದು ಹೇಳಿರುವುದರಿಂದ ಫಲಾಸಕ್ತಿಯುಳ್ಳವನು ಸಂಸಾರ ಬಂಧನದಲ್ಲಿ ಸುಲಭವಾಗಿ ಸಿಕ್ಕಿಹಾಕಿಕೊಳ್ಳುವನು ಎಂದು ಅರ್ಥವಾಗುತ್ತದೆ. ಆದ್ದರಿಂದ ಸಾಧಕರು ಈ ವಿಷಯದಲ್ಲಿ ಜಾಗರೂಕರಾಗಿದ್ದು ಅವರು ಮಾಡುವ ಸಮಸ್ತ ಕಾರ್ಯಗಳನ್ನು ಈಶ್ವರಾರ್ಪಣ ಬುದ್ಧಿಯಿಂದ ಮಾಡುತ್ತಾ ಫಲಗಳಲ್ಲಿ ಅಪೇಕ್ಷೆಯಿಲ್ಲದೆ ಇರಬೇಕು. ಆಗಲೇ ಸ್ಥಿರವಾದ ಶಾಂತಿ ಲಭಿಸುವುದು.

ಶಾಂತಿಗೆ ಉಪಾಯವಾವುದೋ ಭಗವಂತನು ಈ ಶ್ಲೋಕದಲ್ಲಿ ನಿರೂಪಿಸಿ ದ್ದಾನೆ. ಪ್ರತಿಯೊಬ್ಬರೂ ಶಾಂತಿಗಾಗಿ, ಸುಖಕ್ಕಾಗಿ ಪರಿತಪಿಸುತ್ತಿದ್ದಾರೆ. ಆದರೆ ಅದು ಹೇಗೆ ಲಭಿಸುವುದೋ ತಿಳಿಯದೆ ಕಕ್ಕಾಬಿಕ್ಕಿಯಾಗಿದ್ದಾರೆ. ಫಲಾಪೇಕ್ಷೆಯನ್ನು ಬಿಟ್ಟು ನಿಷ್ಕಾಮವಾಗಿ ಕರ್ಮಗಳನ್ನು ಆಚರಿಸುವುದೇ ಶಾಂತಿಗೆ ಮಾರ್ಗ. ಈ ವಿಧವಾಗಿ ನಿಷ್ಕಾಮ ಕರ್ಮನಿಷ್ಠೆಯಿಂದ, ಜ್ಞಾನನಿಷ್ಠೆ ಯಿಂದ ಉಂಟಾಗುವ ಪರಮಶಾಂತಿ ಜೀವಿಗೆ ಕೈಗೂಡುತ್ತದೆ. ಹಾಗೆಯೇ ಬಂಧಕ್ಕೆ ಕಾರಣವನ್ನು ಕೂಡ ಈ ಶ್ಲೋಕದಲ್ಲಿ ತಿಳಿಸಿ ಈ ವಿಷಯದಲ್ಲಿ ಬಹಳ ಜಾಗರೂಕರಾಗಿರಬೇಕೆಂದು ಭಗವಂತನು ಎಚ್ಚರಿಕೆ ಕೊಡುತ್ತಿದ್ದಾನೆ. ಕಾಮವೇ ಬಂಧನಕ್ಕೆ ಕಾರಣ. ಆಶೆ, ಫಲಾಸಕ್ತಿ ಹಾಗು ಸಂಗವೇ ದುಃಖಕ್ಕೆ ಮತ್ತು ಅಶಾಂತಿಗೆ ಹೇತು. ಆದ್ದರಿಂದ ಅವುಗಳನ್ನು ಹತ್ತಿರಕ್ಕೆ ಸೇರಿಸಬಾರದು. ಸಾಧಕರು ಭಗವಂತನ ಈ ಜಾಗ್ರತೆಗಳನ್ನು ಅನುಸರಿಸಿ ತಮ್ಮ ಜೀವನ ಯಾತ್ರೆಯನ್ನು ನಿಷ್ಕಾಮ ಮಾರ್ಗದ ಕಡೆಗೆ ತಿರುಗಿಸಿ ನೈಷ್ಠಿಕ ಶಾಂತಿಯನ್ನು ಅನುಭವಿಸಬೇಕು.

ಪ್ರ : ನಿಷ್ಕಾಮಕರ್ಮಯೋಗಿ ಯಾವ ಫಲವನ್ನು ಹೊಂದುವನು? ಯಾವುದರಿಂದ?

ಉ : ಆತ್ಮನಿಷ್ಠೆಯಿಂದ ಉಂಟಾಗುವ ಪರಮ ಶಾಂತಿಯನ್ನು ಹೊಂದುವನು. (ಫಲಾಪೇಕ್ಷೆಯಿಲ್ಲದ ಕಾರಣದಿಂದ)

ಪ್ರ : ಕಾಮ್ಯಕರ್ಮಗಳನ್ನು ಮಾಡುವವನು ಯಾವ ಫಲವನ್ನು ಹೊಂದುವನು? ಯಾವುದರಿಂದ?

ಉ : ಸಂಸಾರ ಬಂಧನದಲ್ಲಿ ಸಿಕ್ಕಿ ಬೀಳುವನು. ಫಲಾಸಕ್ತಿಯಿಂದ.

ಪ್ರ : ಇದರಿಂದ ಬಂಧ ಹಾಗೂ ಮೋಕ್ಷಗಳಿಗೆ ಕಾರಣವು ಏನೆಂದು ತಿಳಿಯುತ್ತದೆ?

ಉ : ಕರ್ಮಗಳಲ್ಲಿ ಫಲಾಪೇಕ್ಷೆ ಹೊಂದಿರುವುದೇ ಬಂಧ. ಅದು ಇಲ್ಲದಿರುವುದೇ (ಅನಾಸಕ್ತಿ) ಮೋಕ್ಷ.

ಪ್ರ : ಪರಮ ಶಾಂತಿಗೆ ಮಾರ್ಗವೇನು?

ಉ : ಕೋರಿಕೆಗಳಿಲ್ಲದಿರುವುದು. ಕರ್ಮಫಲಗಳಲ್ಲಿ ಆಸಕ್ತಿಯನ್ನು ತ್ಯಜಿಸುವುದು.

ಪ್ರ : ಬಂಧನಕ್ಕೆ ಕಾರಣವೇನು?

ಉ : ಕಾಮವೇ, ಕರ್ಮಫಲಾಸಕ್ತಿಯೇ.

**ಅ।।** ಇಂದ್ರಿಯನಿಗ್ರಹಪರನಾದ ಯೋಗಿಯ ಸ್ಥಿತಿಯನ್ನು ವರ್ಣಿಸಲಾಗುತ್ತಿದೆ-

**೧೩. ಸರ್ವಕರ್ಮಾಣಿ ಮನಸಾ ಸನ್ನ್ಯಸ್ಯಾಸ್ತೇ ಸುಖಂ ವಶೀ**
**ನವದ್ವಾರೇ ಪುರೇ ದೇಹೀ[1] ನೈವ ಕುರ್ವನ್ನಕಾರಯನ್**

**ಅರ್ಥ:** ವಶೀ=ಇಂದ್ರಿಯನಿಗ್ರಹಣವುಳ್ಳವನು; ದೇಹೀ=ದೇಹಧಾರಿ (ಜೀವಿ); ಮನಸಾ=ಮನಸ್ಸಿನಿಂದ; ಸರ್ವಕರ್ಮಾಣಿ=ಸಮಸ್ತ ಕರ್ಮಗಳನ್ನು (ಕರ್ಮಫಲಗಳನ್ನು); ಸನ್ನ್ಯಸ್ಯ=ಪರಿತ್ಯಜಿಸಿ; ನ ಏವ ಕುರ್ವನ್=ಏನೂ ಮಾಡದವನಂತವನಾಗಿ; ನ ಕಾರಯನ್=ಮಾಡಿಸದಂತವನಾಗಿ; ನವದ್ವಾರೇ=ಒಂಭತ್ತು ದ್ವಾರಗಳುಳ್ಳ; ಪುರೇ=ಪಟ್ಟಣವಾದ ಶರೀರದಲ್ಲಿ; ಸುಖಂ=ಹಾಯಾಗಿ; ಆಸ್ತೆ=ಇರುತ್ತಿದ್ದಾನೆ.

**ತಾ।।** ಇಂದ್ರಿಯ ನಿಗ್ರಹವುಳ್ಳ ದೇಹಧಾರಿ ಮನಸ್ಸಿನಿಂದ ಸಮಸ್ತ ಕರ್ಮಗಳನ್ನು (ಕರ್ಮಫಲಗಳನ್ನು) ಪರಿತ್ಯಜಿಸಿ, ಏನನ್ನೂ ಮಾಡದವನಾಗಿ, ಮಾಡಿಸದಂತವನಾಗಿ ಒಂಭತ್ತು ದ್ವಾರಗಳುಳ್ಳ ಪಟ್ಟಣವಾದಂತಹ ಶರೀರದಲ್ಲಿ ಹಾಯಾಗಿರುತ್ತಿದ್ದಾನೆ.

**ವ್ಯಾಖ್ಯೆ:** ಜೀವನವನ್ನು ಹೇಗೆ ಆನಂದಮಯವಾಗಿ ಮಾಡಿಕೊಳ್ಳಬಹುದು ಎನ್ನುವ ಪದ್ಧತಿಯನ್ನು ಇಲ್ಲಿ ಕೊಡಲಾಗಿದೆ. ಪ್ರಪ್ರಥಮವಾಗಿ ಮನುಜನು ತನ್ನ ಇಂದ್ರಿಯಗಳನ್ನು ಸ್ವಾಧೀನಪಡಿಸಿಕೊಳ್ಳಬೇಕು. 'ವಶೀ' ಎನ್ನುವುದರ ಅರ್ಥ ಇದೇ ಆಗಿದೆ. ಇಂದ್ರಿಯಗಳು ವಶವಾಗದಿದ್ದಲ್ಲಿ ಜಗತ್ತೆಲ್ಲವೂ ವಶವಾದರೂ ಪ್ರಯೋಜನವಿಲ್ಲ. ಪೂರ್ಣಸುಖವು ಇಂದ್ರಿಯ ನಿಗ್ರಹವುಳ್ಳವನಿಗೇ ಲಭಿಸುವುದೆಂದು ಇಲ್ಲಿ ತಿಳಿಯಪಡಿಸಲಾಗಿದೆ ('ವಶೀ ಸುಖಂ ಆಸ್ತೇ'). ಆದ್ದರಿಂದ ಸುಖವನ್ನು ಅಪೇಕ್ಷಿಸುವವನು ತನ್ನ ಇಂದ್ರಿಯಗಳನ್ನು, ಮನಸ್ಸನ್ನು ವಶದಲ್ಲಿಟ್ಟುಕೊಳ್ಳಬೇಕು.

ಸಂಯಮಶೀಲನು ಮನಸ್ಸಿನಿಂದ ಸಮಸ್ತ ಕರ್ಮಗಳ ಫಲಗಳನ್ನು ತ್ಯಜಿಸಿ ಈ ದೇಹವೆನ್ನುವ ನಗರದಲ್ಲಿ ತಾನು ಏನೂ ಮಾಡದೆ ಮಾಡಿಸದೆ ಸುಖವಾಗಿರುವನು. ಯಾವಾಗ ಕರ್ಮಫಲಗಳನ್ನು ತ್ಯಜಿಸುವನೋ ಆಗ ಆ ಕರ್ಮಗಳನ್ನು ಮಾಡಿದರೂ ಅವು ತನಗೆ ಅಂಟಿಕೊಳ್ಳದೆ ಇರುವುದರಿಂದ ಮಾಡದ ಹಾಗೆಯೇ. ಇಂದ್ರಿಯಗಳು ಅವುಗಳ ಕಾರ್ಯಗಳನ್ನು ಮಾಡುತ್ತಿದ್ದರೂ ತಾನು ಮಾತ್ರ ಅಸಕ್ತ ಬುದ್ಧಿಯಿಂದ, ಸಾಕ್ಷೀಭಾವದಲ್ಲಿ ಸ್ಥಿರವಾಗಿರುವನು. ಇಲ್ಲಿ 'ಮನಸಾ' ಎಂದು ಹೇಳಿರುವುದರಿಂದ ದೇಹದಿಂದ ಕರ್ಮಗಳನ್ನು ಮಾಡಿದರೂ ಕರ್ಮಫಲಗಳನ್ನು ತ್ಯಜಿಸಿರುವುದರಿಂದ, ಮನಸ್ಸಿನಿಂದ ಕರ್ಮ ಪರಿತ್ಯಾಗ, ಕರ್ಮಸನ್ಯಾಸವನ್ನು ಮಾಡಿದ ಹಾಗೆಯೇ ಆಗುತ್ತದೆ. ಕರ್ಮಗಳನ್ನು ಮಾಡದೇ ಇರುವುದು ವಿಶೇಷವೇನಲ್ಲ. ಮನಸ್ಸಿನಿಂದ ಅವುಗಳನ್ನು ತ್ಯಜಿಸುವುದೇ ವಿಶೇಷ. ಸಮಸ್ತ ಕರ್ಮಗಳನ್ನು ಮನಸ್ಸಿನಿಂದ ಪರಿತ್ಯಜಿಸಬೇಕೆಂದು ಭಗವಂತನು ಉದ್ಬೋಧಿಸುತ್ತಿದ್ದಾನೆ. ಕರ್ಮಗಳ ಫಲಗಳನ್ನು ಕೋರದೆ, ಅವುಗಳಲ್ಲಿ ಸಕ್ತನಾಗದೆ ಇರುವುದೇ ಮನಸ್ಸಿನಿಂದ ಮಾಡಲ್ಪಡುವ ಕರ್ಮ ಸನ್ಯಾಸ. 'ಸರ್ವ ಕರ್ಮಾಣಿ' ಎಂದು ಹೇಳಿರುವುದರಿಂದ, ನಿಷ್ಕಾಮಬುದ್ಧಿ ಹೊಂದಿದ್ದರೆ, ದೇಹದಿಂದ ಎಷ್ಟು ಕರ್ಮಗಳನ್ನು ಆಚರಿಸಿದರೂ ಮನಸ್ಸಿನಲ್ಲಿ ಆಚರಿಸದಂತೆಯೇ ಎಂದು ಭಾವ. ಈ ಪ್ರಕಾರವಾಗಿ ಇಂದ್ರಿಯ ನಿಗ್ರಹಪರರಾಗಿ, ಮನಸ್ಸಿನಿಂದ ಸಮಸ್ತ ಕಾರ್ಯಗಳ ಫಲವನ್ನು ತ್ಯಜಿಸಿದವರು, ಶರೀರದಿಂದ ಅದೆಷ್ಟು ಕಾರ್ಯಗಳನ್ನು ಮಾಡಿದರೂ ನವದ್ವಾರ ಪುರವಾದ ಈ ದೇಹದಲ್ಲಿ ಯಾವ ಕಾರ್ಯವನ್ನೂ ಮಾಡದಂತೆ, ಮಾಡಿಸದಂತೆ, ತಟಸ್ಥವಾಗಿ, ಸಾಕ್ಷೀಭಾವದಿಂದ ನಿಶ್ಚಿಂತವಾಗಿ ಆತ್ಮದಲ್ಲಿ ಸುಖವಾಗಿ ಬೆಳಗುವರೆಂದು ಇಲ್ಲಿ ಬೋಧಿಸಲಾಗಿದೆ.

ಇದಕ್ಕೆ ಮತ್ತೊಂದು ಅರ್ಥವನ್ನು ಕೊಡುತ್ತಾರೆ. 'ಇಂದ್ರಿಯ ನಿಗ್ರಹ ಪರನಾದ ಯೋಗಿ ಆತ್ಮದಲ್ಲಿ ಸ್ಥಿರವುಳ್ಳವನಾಗಿ ಮನಸ್ಸಿನಿಂದ ದೃಶ್ಯರೂಪಗಳಾದ ಸಮಸ್ತ ಕಾರ್ಯಗಳನ್ನು ತ್ಯಜಿಸಿ ತಾನು ಏನೂ ಮಾಡದೆ, ಮಾಡಿಸದೆ, ಸಾಕ್ಷಿಯಾಗಿದ್ದು ಈ ದೇಹವೆನ್ನುವ ಪಟ್ಟಣದಲ್ಲಿ ಸುಖವಾಗಿರುತ್ತಾನೆ.'

ಇನ್ನೊಂದು ಅರ್ಥ- ಮನಸಾ ಸಮಸ್ತ ಕಾರ್ಯಗಳನ್ನು (ದೃಶ್ಯ ರೂಪವಾದ) ದೇಹವೆನ್ನುವ ಪಟ್ಟಣಕ್ಕೆ ಬಿಟ್ಟು ಬಿಟ್ಟು ತಾನು ಮಾತ್ರ ನಿಶ್ಚಿಂತೆಯಾಗಿ ಆತ್ಮದಲ್ಲಿ ಸ್ಥಿತನಾಗಿರುವನು.

ಸುಖವನ್ನು ಕೋರುವವನು ಎರಡು ಸಾಧನೆಗಳನ್ನು ತಪ್ಪದೆ ಆಚರಿಸಬೇಕೆಂದು ಈ ಶ್ಲೋಕದ ದ್ವಾರ ತಿಳಿಯುತ್ತಿದೆ. ಅವು ಯಾವುವೆಂದರೆ ೧) ಇಂದ್ರಿಯ ನಿಗ್ರಹಣೆ, ಮನೋಜಯ ೨) ಸರ್ವಕರ್ಮಫಲ ತ್ಯಾಗ.

"ನವದ್ವಾರಗಳು"- ಎರಡು ಕಣ್ಣು+ಎರಡು ಕಿವಿ+ಎರಡು ನಾಸಿಕ+ಒಂದು ಬಾಯಿ+ಒಂದು ಮೂತ್ರದ್ವಾರ+ಒಂದು ಮಲದ್ವಾರ=ಒಂಭತ್ತು (ಸ್ಪರ್ಶದ್ವಾರ ಶರೀರವೆಲ್ಲವನ್ನೂ ವ್ಯಾಪಿಸಿದೆ ಅದನ್ನು ಸೇರಿಸಿದರೆ ಹತ್ತು ಆಗುವುವು). ಪೂರ್ವಕಾಲದಲ್ಲಿ ದೊಡ್ಡ ನಗರಗಳಿಗೆ ದ್ವಾರಗಳಿರುತ್ತಿದ್ದವು. ಆ ನಗರಗಳಲ್ಲಿ ರಾಜರು ನಿವಸಿಸುತ್ತಿದ್ದರು. ದ್ವಾರಗಳು ಸುರಕ್ಷಿತವಾಗಿದ್ದಾಗಲೇ ರಾಜನು ಸುಖವಾಗಿರಬಲ್ಲನು. ಹಾಗೆಯೇ ನವದ್ವಾರ ಪುರವಾದ ದೇಹದಲ್ಲಿ ರಾಜನಾದ ಜೀವಿಯು ಇಂದ್ರಿಯನಿಗ್ರಹವನ್ನು ಹೊಂದಿರುವಾಗ ಮಾತ್ರವೇ ಸುಖವಾಗಿರಬಲ್ಲನು. ಇಲ್ಲದೆ ಇದ್ದರೆ ಜೀವಿಗೆ ಯಾವಾಗಲೂ ಅಶಾಂತಿಯೇ (ಶತ್ರುಗಳು ಆಕ್ರಮಿಸಿದ ದ್ವಾರಗಳುಳ್ಳ ಪಟ್ಟಣದಲ್ಲಿರುವ ರಾಜನಂತೆ)

ಪ್ರ : ಮನುಜನಿಗೆ ಸುಖ ಹೇಗೆ ಪ್ರಾಪ್ತಿಯಾಗುವುದು?

---

1. ದೇಹೇ- ಪಾಠಾಂತರ.

ಉ : ೧) ಇಂದ್ರಿಯಗಳನ್ನು ಸ್ವಾಧೀನಪಡಿಸಿಕೊಂಡು ೨) ಸಮಸ್ತ ಕರ್ಮಗಳನ್ನು ಇಲ್ಲವೆ ಅವುಗಳ ಫಲಗಳನ್ನು ಮನಸ್ಸಿನಿಂದ ತ್ಯಜಿಸಿದರೆ ಸುಖವು ಪ್ರಾಪ್ತಿಯಾಗುವುದು.

ಪ್ರ : ಕರ್ಮಗಳನ್ನು ತ್ಯಜಿಸಬೇಕಾದದ್ದು ಶರೀರದಿಂದಲೇ ಅಥವಾ ಮನಸ್ಸಿನಿಂದಲೇ?

ಉ : ಶರೀರದಿಂದಲ್ಲ, ಮನಸ್ಸಿನಿಂದ.

**ಅ||** ಕರ್ಮ, ಕರ್ತೃತ್ವಗಳು, ಪ್ರಕೃತಿ (ಮಾಯೆ)ಯಿಂದಲೇ ಸಂಭವಿಸುತ್ತಿವೆ ಎಂದು ಹೇಳಲಾಗುತ್ತಿದೆ-

**೧೪. ನ ಕರ್ತೃತ್ವಂ ಕರ್ಮಾಣಿ ಲೋಕಸ್ಯ ಸೃಜತಿ ಪ್ರಭುಃ**
**ನ ಕರ್ಮಫಲಸಂಯೋಗಂ ಸ್ವಭಾವಸ್ತು ಪ್ರವರ್ತತೇ**

**ಅರ್ಥ:** ಪ್ರಭುಃ=ಭಗವಂತನು (ಆತ್ಮ); ಲೋಕಸ್ಯ=ಲೋಕಕ್ಕೆ (ಪ್ರಾಣಿಗಳಿಗೆ); ಕರ್ತೃತ್ವಮ್=ಕರ್ತೃತ್ವವನ್ನು; ನ ಸೃಜತಿ=ಉಂಟುಮಾಡಲಿಲ್ಲ; ಕರ್ಮಾಣಿ=ಕರ್ಮಗಳನ್ನು; ನ=ಉಂಟುಮಾಡುವುದಿಲ್ಲ; ಕರ್ಮಫಲ ಸಂಯೋಗಮ್=ಕರ್ಮ ಫಲಗಳ ಸಂಬಂಧವನ್ನು; ನ ಸೃಜತಿ=ಉಂಟುಮಾಡುತ್ತಿಲ್ಲ; ಸ್ವಭಾವಃ ತು=(ದೇಹಾಭಿಮಾನ ವಾಸನಾ ಮೂಲಗಳಾದ) ಪ್ರಕೃತಿಯೇ (ಜನ್ಮಾಂತರ ಸಂಸ್ಕಾರವೇ); ಪ್ರವರ್ತತೆ=ಪ್ರವರ್ತಿಸುತ್ತಿದೆ (ಕರ್ತೃತ್ವಾದಿಗಳನ್ನುಂಟು ಮಾಡುತ್ತಿದೆ).

**ತಾ||** ಭಗವಂತನು (ಆತ್ಮ) ಜೀವಿಗಳಿಗೆ ಕತೃತ್ವವನ್ನಾಗಲಿ, ಕರ್ಮಗಳನ್ನಾಗಲಿ, ಕರ್ಮಫಲದೊಂದಿಗಿರುವ ಸಂಬಂಧವನ್ನಾಗಲಿ ಉಂಟುಮಾಡುವುದಿಲ್ಲ. ಮತ್ತೇನೆಂದರೆ, ಪ್ರಕೃತಿಯೇ (ಪ್ರಕೃತಿ ಸಂಬಂಧದಿಂದ ಉಂಟಾದ ಜನ್ಮಾಂತರ ಸಂಸ್ಕಾರವೇ) ಆಯಾ ಕತೃತ್ವಾದಿಗಳನ್ನು ಉಂಟುಮಾಡುತ್ತಿದೆ.

**ವ್ಯಾಖ್ಯೆ:** ಸೃಷ್ಟಿಕರ್ತನಾದ ಪರಮೇಶ್ವರನು ಜೀವರಾಶಿಗಳಲ್ಲಿ ಯಾವುದಕ್ಕೂ ಕರ್ತೃತ್ವವನ್ನು ಸೃಷ್ಟಿಸಲಿಲ್ಲ. ಪ್ರಕೃತಿಜನ್ಯಗಳಾದ ಅವರವರ ಜನ್ಮಾಂತರ ಸಂಸ್ಕಾರಗಳನ್ನನುಸರಿಸಿ ಜನರು ಆಯಾ ಕರ್ಮಗಳನ್ನು ಮಾಡುತ್ತಾ, ಕರ್ತೃತ್ವವುಳ್ಳವರಾಗಿ, ಆಯಾ ಕರ್ಮಗಳ ಫಲಗಳನ್ನು ಅನುಭವಿಸುವರು. 'ಭೂಮಿಯಲ್ಲಿ ಏನು ಬಿತ್ತುವರೋ ಅದೇ ಫಲವನ್ನು ಪಡೆಯುವರು' (Who sows must reap) ಎಂದ ಹಾಗೆ ಯಾರು ಏನನ್ನು ಬಿತ್ತುವರೋ ಅವರು ಅದನ್ನೇ ಅನುಭವಿಸುವರು. ಮಾವಿನ ಬೀಜವನ್ನು ನಾಟಿದರೆ ಸಿಹಿಯಾದ ಫಲವನ್ನು ಪಡೆಯುವರು. ಬೇವಿನ ಬೀಜ ನೆಟ್ಟಲ್ಲಿ ಕಹಿ ಫಲವನ್ನು ಅನುಭವಿಸುವರು. ಪಾಪ ಸಂಸ್ಕಾರವಿದ್ದರೆ ದುಷ್ಕಾರ್ಯಗಳನ್ನಾಚರಿಸಿ ದುಃಖವನ್ನು ಅನುಭವಿಸುವರು. ಪುಣ್ಯಸಂಸ್ಕಾರದಿಂದ ಸತ್ಕಾರ್ಯಗಳನ್ನಾಚರಿಸಿ ಸುಖವನ್ನು ಅನುಭವಿಸುವರು. ಆದ್ದರಿಂದ ಜನರು ತಮ್ಮ ಪೂರ್ವದ ಪಾಪಸ್ವಭಾವವನ್ನು ಈಗಿನ ಪುರುಷ ಪ್ರಯತ್ನ ಜನ್ಯವಾದ ಪುಣ್ಯ ಸ್ವಭಾವದಿಂದ ಪರಾಜಿತಗೊಳಿಸಿ ಸನ್ಮಾರ್ಗದಲ್ಲಿ ನಡೆಯಬೇಕಾಗಿದೆ. ಪಾಪಸ್ವಭಾವವು ಅಭ್ಯಾಸದಿಂದ ಹೇಗೆ ಏರ್ಪಟ್ಟಿದೆಯೋ ಹಾಗೆಯೇ ಪುಣ್ಯ ಸ್ವಭಾವವೂ ಅಭ್ಯಾಸದಿಂದ ಏರ್ಪಾಡಾಗಬಲ್ಲದು. ಆದ್ದರಿಂದ 'ನನ್ನ ದುರದೃಷ್ಟ ಹೀಗಿದೆ' ಎಂದು ಯಾರು ಅಂಜದೆ ಪುರುಷ ಪ್ರಯತ್ನ ಬಲದಿಂದ ಪರಮಾರ್ಥ ಪಥವನ್ನು ಕೈಹಿಡಿದು ಕೃತಾರ್ಥರಾಗಬೇಕಾಗಿದೆ. ಇದರಿಂದ ಜೀವಿಯು ತನ್ನನ್ನು ಉದ್ಧರಿಸಿ ಕೊಳ್ಳುವುದಕ್ಕಾಗಲಿ, ಪತನ ಹೊಂದುವುದಕ್ಕಾಗಲಿ ತಾನೇ ಕಾರಣನೆಂದು ಅರ್ಥವಾಗುತ್ತಿದೆ. ಈ ವಿಷಯದಲ್ಲಿ ಬೇರೆಯವರ ಕೈವಾಡವೇನೂ ಇರುವುದಿಲ್ಲ. ಆದ್ದರಿಂದ ಅನೇಕ ಅವಕಾಶಗಳಿಂದ ಕೂಡಿದ ಮಾನವ ಜನ್ಮವನ್ನು ಆತ್ಮೋದ್ಧಾರಣ ನಿಮಿತ್ತವಾಗಿ ಸದ್ವಿನಿಯೋಗಪಡಿಸಿಕೊಳ್ಳಬೇಕು.

ಪ್ರ : ಜೀವಿಯ ಕರ್ಮಗಳಲ್ಲಿ ಭಗವಂತನಿಗೆ ಎಷ್ಟು ಸಂಬಂಧವಿದೆ?

ಉ : ಜೀವಿಗಳ ಕರ್ಮಗಳಲ್ಲಿ ಭಗವಂತನಿಗೆ ಯಾವ ಸಂಬಂಧವೂ ಇಲ್ಲ.

ಪ್ರ : ಯಾವುದರಿಂದ ಜೀವಿಗೆ ಕರ್ಮಗಳು ಉಂಟಾಗುತ್ತವೆ?

ಉ : ಪ್ರಕೃತಿಯಿಂದ (ತಮ್ಮ ಜನ್ಮಾಂತರ ಸಂಸ್ಕಾರಗಳಿಂದ)

**ಅ||** ಜೀವಿಯ ಪುಣ್ಯ ಪಾಪಗಳಿಗೆ ಭಗವಂತನ ಸಂಬಂಧವಿಲ್ಲವೆನ್ನುವ ವಿಷಯವನ್ನು ಮತ್ತೆ ಮುಂದುವರಿಸಲಾಗುತ್ತಿದೆ-

**೧೫. ನಾದತ್ತೇ ಕಸ್ಯಚಿತ್ಪಾಪಂ ನ ಚೈವ ಸುಕೃತಂ ವಿಭುಃ**
**ಅಜ್ಞಾನೇನಾವೃತಂ ಜ್ಞಾನಂ ತೇನ ಮುಹ್ಯಂತಿ ಜಂತವಃ**

**ಅರ್ಥ:** ವಿಭುಃ=ಭಗವಂತನು(ಆತ್ಮ); ಕಸ್ಯಚಿತ್=ಯಾವೊಬ್ಬನ; ಪಾಪಮ್=ಪಾಪವನ್ನು; ನ ಆದತ್ತೇ=ಸ್ವೀಕರಿಸುವುದಿಲ್ಲ; ಸುಕೃತಂ ಚ ಏವ=ಪುಣ್ಯಗಳನ್ನೂ; ನ=ಸ್ವೀಕರಿಸುವುದಿಲ್ಲ; ಅಜ್ಞಾನೇನ=ಅಜ್ಞಾನದಿಂದ; ಜ್ಞಾನಂ=ಜ್ಞಾನ; ಆವೃತಂ=ಆವರಿಸಲ್ಪಟ್ಟಿದೆ; ತೇನ=ಆದ್ದರಿಂದ; ಜಂತವಃ=ಪ್ರಾಣಿಗಳು; ಮುಹ್ಯಂತಿ=ಮೋಹಗೊಳ್ಳುತ್ತಿದ್ದಾರೆ.

**ತಾ||** ಪರಮಾತ್ಮನು ಯಾವೊಬ್ಬನ ಪಾಪವನ್ನಾಗಲಿ, ಪುಣ್ಯವನ್ನಾಗಲಿ ಸ್ವೀಕರಿಸುವುದಿಲ್ಲ. ಅಜ್ಞಾನದಿಂದ ಜ್ಞಾನವು ಆವೃತವಾಗಿದೆ. ಆದ್ದರಿಂದ ಜೀವಿಗಳು ಭ್ರಮೆಗೊಳಗಾಗುತ್ತಿದ್ದಾರೆ.

**ವ್ಯಾಖ್ಯೆ:** ಒಬ್ಬನ ಪುಣ್ಯದಿಂದಾಗಲಿ, ಪಾಪದಿಂದಾಗಲಿ ಈಶ್ವರನಿಗೆ ಸಂಬಂಧ ವಿಲ್ಲ. ಆ ಪುಣ್ಯ ಪಾಪಗಳನ್ನಾಗಲಿ ಅವುಗಳ ಫಲಗಳನ್ನಾಗಲಿ ಅವನು ಸ್ವೀಕರಿಸುವುದಿಲ್ಲ. ಅವನು ತಟಸ್ಥ, ಸಾಕ್ಷಿ; ಸರ್ವಭೂತಗಳಲ್ಲಿ ಸಾಕ್ಷಿಯಾಗಿ ವರ್ತಿಸುತ್ತ ಅವರು ಮಾಡುವ ಪುಣ್ಯಪಾಪಗಳನ್ನು ನೋಡುತ್ತಾನೆ. ಜೀವಿಗಳು ಯಾವ ಕಾರಣದಿಂದ ಮೋಹಕ್ಕೊಳಗಾಗಿದ್ದಾರೆ ಎನ್ನುವ ಪ್ರಶ್ನೆಗೆ ಶ್ರೀಕೃಷ್ಣ ಪರಮಾತ್ಮ ಎರಡನೆಯ ಪಾದದಲ್ಲಿ ಹೀಗೆ ಉತ್ತರವಿತ್ತಿದ್ದಾನೆ-

ಪ್ರತಿ ಜೀವಿಯು ಸಚ್ಚಿದಾನಂದಘನವಾದ ಆತ್ಮವೇ ಹೊರತು ದೃಶ್ಯವಸ್ತುವಲ್ಲ. ಅವಿನಾಶಿಯಾದ ಪರಬ್ರಹ್ಮವೇ ಆಗಲಿ ನಾಶವಾಗುವ ಉಪಾಧಿಯಲ್ಲ. ಆದರೆ ಆ ಸತ್ಯವು ಅನಾದಿಯಾದ ಅಜ್ಞಾನದಿಂದ ಮುಚ್ಚಲ್ಪಟ್ಟು ಜೀವಿಗೆ ತಿಳಿಯದಾಗಿದೆ. ತನ್ನ ನಿಜರೂಪವಾದ ಆತ್ಮನನ್ನು ಆತನು ಮರೆತು ತನ್ನನ್ನು ದೇಹಾದಿ ಅನ್ಯ ರೂಪಗಳೆಂದು ಭಾವಿಸುತ್ತಾನೆ. ತತ್ಫಲಿತವಾಗಿ ಜನನ ಮರಣ ರೂಪ ಸಂಸಾರ ಬಂಧವೇರ್ಪಟ್ಟು ದುಃಖವನ್ನು ಅನುಭವಿಸುತ್ತಿದ್ದಾನೆ. ಆದರೆ ಈ ಬಂಧವು ಶಾಶ್ವತವಲ್ಲ (ಈ ವಿಷಯ ಮುಂದಿನ ಶ್ಲೋಕದಲ್ಲಿ ತಿಳಿಯುವುದು). ಯಾವ ಕ್ಷಣದಲ್ಲಿ ಜೀವಿಯು ಪ್ರಯತ್ನ ಪೂರ್ವಕವಾಗಿ ಆತ್ಮಜ್ಞಾನವನ್ನು ಸಂಪಾದಿಸಿಕೊಳ್ಳುವನೋ, ಆ ಕ್ಷಣದಲ್ಲಿಯೇ ಅಜ್ಞಾನ ಮಾಯವಾಗಿ ನಿಜವಾದ ಆತ್ಮಸ್ವರೂಪವು ಸಾಕ್ಷಾತ್ಕಾರ ವಾಗುತ್ತದೆ. ಅದೇ ಮೋಕ್ಷ. ಆದ್ದರಿಂದ ತನ್ನನ್ನು ಕವಿದ ಅವಿದ್ಯೆಯನ್ನು, ಅಜ್ಞಾನವನ್ನು ದೂರಮಾಡಿಕೊಳ್ಳುವುದೇ ಜೀವಿಯ ಕರ್ತವ್ಯವಾಗಲಿ, ಹೊಸದಾಗಿ ಆತ್ಮವನ್ನಾಗಲಿ, ದೈವವನ್ನಾಗಲಿ ಹೊಂದುವುದಲ್ಲ.

ಜೀವಿಗಳು ಅವರವರ ಪಾಪಪುಣ್ಯಗಳನ್ನು ಅವರೇ ವಿನ್ಯಾಸಮಾಡಿ ಕೊಂಡು ಅವುಗಳ ಫಲವನ್ನು ಅವರೇ ಅನುಭವಿಸುತ್ತಿದ್ದಾರೆ. ಇಲ್ಲಿ ಆ

ಭಗವಂತನಿಗೆ ಯಾವ ಸಂಬಂಧವೂ ಇಲ್ಲ. ಪಾಪ ಪುಣ್ಯಗಳ ಫಲಗಳನ್ನು ಆತನು ಸ್ವೀಕರಿಸುವುದಿಲ್ಲ. ಆದ್ದರಿಂದ ಭಗವದ್ಭಕ್ತಿ ಹುಟ್ಟಿ ತಮ್ಮನ್ನು ಕವಿದಿರುವ ಅಜ್ಞಾನವನ್ನು ಜ್ಞಾನಸಂಪಾದನೆಯ ಮೂಲಕ ಸ್ವಪ್ರಯತ್ನದಿಂದ ಹೊರಹಾಕಿ ಜೀವಿಯು ಮುಕ್ತನಾಗಬೇಕು.

ಜೀವಿಗಳು ಏಕೆ ಹೀಗೆ ದುಃಖ ಪಡುತ್ತಿದ್ದಾರೆ ಎನ್ನುವುದಕ್ಕೆ ಈ ಶ್ಲೋಕದಲ್ಲಿ ಕಾರಣವನ್ನು ತಿಳಿಸಿ ಅದರ ದುಃಖನಿವಾರಣೋಪಾಯವನ್ನು ಬರುವ ಶ್ಲೋಕದಲ್ಲಿ ತಿಳಿಸಲಾಗಿದೆ.

ಪ್ರ : ಜೀವಿಗಳು ದುಃಖಿಗಳಾಗಿರುವುದಕ್ಕೆ ಕಾರಣವೇನು ?

ಉ : ಅಜ್ಞಾನದಿಂದ ಅವರ ಜ್ಞಾನವು (ಚಿನ್ಮಯ ಆತ್ಮರೂಪ) ಕವಿಯಲ್ಪಟ್ಟಿರುವುದರಿಂದ.

**ಅ॥** ಜೀವಿಗಳ ಅಜ್ಞಾನವು ಹೇಗೆ ನಿವಾರಣೆಯಾಗುವುದೋ ವಿವರಿಸಲಾಗುತ್ತಿದೆ-

**೧೬. ಜ್ಞಾನೇನ ತು ತದಜ್ಞಾನಂ ಏಷಾಂ ನಾಶಿತಮಾತ್ಮನಃ**
**ತೇಷಾಮಾದಿತ್ಯವಜ್ಞಾನಮ್ ಪ್ರಕಾಶಯತಿ ತತ್ಪರಮ್**

**ಅರ್ಥ:** ಆತ್ಮನ=ಆತ್ಮದ; ಜ್ಞಾನೇನ ತು=ಜ್ಞಾನದಿಂದ; ಏಷಾಮ್=ಯಾರ; ತದಜ್ಞಾನಮ್=ಆ ಅಜ್ಞಾನವು; ನಾಶಿತಮ್=ನಾಶಮಾಡಲ್ಪಡುವುದೋ; ತೇಷಾಮ್=ಅವರ; ಜ್ಞಾನಃ=ಜ್ಞಾನ; ಆದಿತ್ಯವತ್=ಸೂರ್ಯನ ಹಾಗೆ; ತತ್ಪರಮ್=ಆ ಪರಬ್ರಹ್ಮ ಸ್ವರೂಪವನ್ನು; ಪ್ರಕಾಶಯತಿ=ಪ್ರಕಾಶಿಸುವಂತೆ ಮಾಡುತ್ತದೆ (ಸ್ವಸ್ವರೂಪಾನುಭವವನ್ನು ನೀಡುವುದು).

**ತಾ॥** ಆತ್ಮಜ್ಞಾನದಿಂದ ಯಾರ ಅಜ್ಞಾನವು ನಾಶವಾಗಿರುವುದೋ, ಅಂತಹವರ ಜ್ಞಾನವು ಸೂರ್ಯನ ಹಾಗೆ ಆ ಪರಬ್ರಹ್ಮಸ್ವರೂಪವನ್ನು ಪ್ರಕಾಶಿಸುತ್ತದೆ (ಸ್ವಸ್ವರೂಪಾನುಭವವನ್ನುಂಟು ಮಾಡುತ್ತಿದೆ).

**ವ್ಯಾಖ್ಯೆ:** ಹಿಂದಿನ ಶ್ಲೋಕದಲ್ಲಿ ಜೀವಿಯನ್ನು ಪೀಡಿಸುವ 'ರೋಗ'ವನ್ನು ಕುರಿತು ಹೇಳಲಾಯಿತು. ಈ ಶ್ಲೋಕದಲ್ಲಿ ಅದಕ್ಕೆ ಔಷಧವನ್ನು ಸೂಚಿಸಲಾಗಿದೆ. ದುಃಖವೇ ಆ ರೋಗ. ಜ್ಞಾನವೇ ಅದಕ್ಕೆ ಔಷಧ. ದುಃಖಕ್ಕೆ ಕಾರಣ ಅಜ್ಞಾನವೆಂದು ಈಗಾಗಲೇ ಹೇಳಲ್ಪಟ್ಟಿದೆ. ದುಃಖವು ಹೋಗ ಬೇಕೆಂದರೆ, ಅಜ್ಞಾನವು ನಾಶವಾಗಬೇಕು. ಅದು ಹೇಗೆ ನಾಶವಾಗುವುದು ? ಜ್ಞಾನದಿಂದ, ತತ್ತ್ವ ವಿವೇಚನೆಯಿಂದ, ಮಹಾವಾಕ್ಯ ವಿಚಾರಣೆಯಿಂದ.

'ಆತ್ಮನಃ ಜ್ಞಾನೇನ' ಎಂದು ಹೇಳಿರುವುದರಿಂದ ಆತ್ಮಜ್ಞಾನವನ್ನು ಪ್ರಯತ್ನ ಪೂರ್ವಕವಾಗಿ ಶ್ರವಣ ಮನನ ನಿದಿ ಧ್ಯಾಸಗಳ ಮೂಲಕ ಯಾರು ಪಡೆಯುವರೋ, ಅವರ ಅಜ್ಞಾನವು ಜ್ಞಾನದಿಂದ ಮಾಯವಾಗಿ ಹೋಗುವುದೆಂದು ವಿದಿತವಾಗುತ್ತದೆ.

"ಆದಿತ್ಯವತ್"- ದಟ್ಟವಾದ ಮೇಘದಿಂದ ಸೂರ್ಯನು ಕವಿಯಲ್ಪಟ್ಟಾಗ ಲೋಕವು ಅಂಧಕಾರದಲ್ಲಿರುವುದು. ಆದರೆ ಪ್ರಬಲವಾದ ಗಾಳಿಯಿಂದ ಆ ಮೇಘವು ದೂರವಾದಾಗ ಸೂರ್ಯನು ದೇದೀಪ್ಯಮಾನವಾಗಿ ಪ್ರಕಾಶಿಸುವನು. ತತ್ಫಲಿತವಾಗಿ ಅಂಧಕಾರವು ನಶಿಸುವುದು. ಹಾಗೆಯೇ ಆತ್ಮವಸ್ತುವು ಸೂರ್ಯನ ಹಾಗೆ ಸ್ವತಃ ಪ್ರಕಾಶಮಾನವಾಗಿ ವಿರಾಜಿಸುತ್ತಿದೆ. ಅಜ್ಞಾನವೆನ್ನುವ ಮೋಡವು ಅದನ್ನು ಕವಿದಿರುವುದರಿಂದ ಆತ್ಮವನ್ನು ಅರ್ಥಮಾಡಿಕೊಳ್ಳಲಾರದೆ ಜೀವಿಯು ಅನಾದಿ ಕಾಲದಿಂದಲೂ ದುಃಖದ ಪಾಲಾಗುತ್ತಿದ್ದಾನೆ. ಈಗ ಮಾಡಬೇಕಾದ ಕೆಲಸ ಹೊಸದಾಗಿ ಆತ್ಮವನ್ನು ಸೃಷ್ಟಿಸುವುದಲ್ಲ, ಅದನ್ನು ಆವರಿಸಿರುವ ಅಜ್ಞಾನವೆನ್ನುವ ಮೇಘವನ್ನು ಆತ್ಮಜ್ಞಾನ ರೂಪವೆನ್ನುವ ಪ್ರಚಂಡ ವಾಯುವಿನಿಂದ ತೊಲಗಿಸುವುದೇ ಆಗಿದೆ. ಆಗ ಆತ್ಮರೂಪನಾದ ಆದಿತ್ಯನು ವ್ಯಕ್ತವಾಗುವನು. ಅದನ್ನೇ ಮೋಕ್ಷ ಸ್ಥಿತಿಯೆನ್ನುವರು.

ಇಲ್ಲವೆ, ಸೂರ್ಯನು ಸರ್ವವಸ್ತುಗಳನ್ನು ಪ್ರಕಾಶಿಸಿದ ಹಾಗೆ ಜ್ಞಾನದಿಂದ ಅಜ್ಞಾನವನ್ನು ತೊಲಗಿಸಿದರೆ ಆ ಜ್ಞಾನವು ಪರಮಾತ್ಮನನ್ನು ಪ್ರಕಾಶಿಸುತ್ತದೆ, ಅನುಭೂತಿಗೊಳ್ಳುವಂತೆ ಮಾಡುವುದು. ಜ್ಞಾನವು ಪರಮಾತ್ಮನನ್ನು ಪ್ರಕಾಶಿಸುತ್ತದೆ ಎಂದು ಹೇಳಿದಾಗ ಪರಮಾತ್ಮನನ್ನು ಜಡವೆಂದುಕೊಳ್ಳಬಾರದು. ಅದು ಸ್ವಯಂ ಪ್ರಕಾಶವಾದುದು. ಅದನ್ನು ಪ್ರಕಾಶ ಮಾಡಲು ಬೇರೊಂದು ಪದಾರ್ಥದ ಅವಶ್ಯಕತೆಯಿಲ್ಲ. **'ತಸ್ಯ ಭಾಸಾ ಸರ್ವಮಿದಂ ವಿಭಾತಿ'** ಎಂದು ಹೇಳಿದ ಹಾಗೆ ಅದರಿಂದಲೇ ಎಲ್ಲವೂ ಪ್ರಕಾಶಗೊಳ್ಳುತ್ತಿವೆ. ಆದ್ದರಿಂದ ಜ್ಞಾನರೂಪ ಬುದ್ಧಿಯಿಂದ ಅಜ್ಞಾನವೃತ್ತಿ ನಶಿಸಿ ಅಧಿಷ್ಠಾನನಾದ ಆತ್ಮ ಜೀವಿಗೆ ಅನುಭೂತವಾಗುತ್ತಿದೆ ಎನ್ನುವುದು 'ಜ್ಞಾನ ಆತ್ಮವನ್ನು ಪ್ರಕಾಶಿಸುತ್ತಿದೆ' ಎನ್ನುವುದರ ಅರ್ಥ. ದೀಪದ ಮೇಲೆ ಮಡಕೆಯನ್ನು ಮುಚ್ಚಿದಾಗ ದೀಪದ ಪ್ರಕಾಶ ಹೊರಗಡೆಗೆ ಕಾಣಿಸುವುದಿಲ್ಲ. ಇದು ಅಜ್ಞಾನ ಸ್ಥಿತಿ. ಕಟ್ಟಿಗೆಯಿಂದ ಮಡಕೆಯನ್ನು ಒಡೆದು ಹಾಕಿದರೆ, ದೀಪವು ಅದಷ್ಟಕ್ಕದೇ ವ್ಯಕ್ತವಾಗಿ ಪ್ರಕಾಶಿಸುವುದು. ಇದು ಜ್ಞಾನಸ್ಥಿತಿ. ಜ್ಞಾನವೆನ್ನುವ ದಂಡದಿಂದ ಅಜ್ಞಾನಾವರಣವೆನ್ನುವ ಘಟವನ್ನು ತೊಲಗಿಸಿದಾಗ ಆತ್ಮವೆನ್ನುವ ದೀಪ ಸ್ವತಃ ಸಿದ್ಧವಾಗಿ ಬೆಳಗುತ್ತಾ ವ್ಯಕ್ತವಾಗುವುದು. ಜೀವಿಗಳು ಅನಾದಿಯಿಂದ ಬಂದಿರುವ ಮೋಹದಿಂದ ತಪ್ಪಿಸಿಕೊಂಡು ದುಃಖರಹಿತರಾಗಬೇಕೆಂದರೆ ಆತ್ಮಜ್ಞಾನವು ಅತ್ಯಾವಶ್ಯಕವೆಂದು ಈ ಶ್ಲೋಕದಿಂದ ಸ್ಪಷ್ಟವಾಗುತ್ತದೆ. ಆದ್ದರಿಂದ ನಿಷ್ಕಾಮ ಕರ್ಮ, ಭಕ್ತಿ, ಧ್ಯಾನ, ವೈರಾಗ್ಯಾದಿ ಸಾಧನೆಗಳಿಂದ ಕಷ್ಟಪಟ್ಟು ಜ್ಞಾನವನ್ನು ಸಂಪಾದಿಸಲು ಯತ್ನಿಸಬೇಕು. ಮೋಕ್ಷಕ್ಕೆ ಅದು ಒಂದೇ ದಾರಿ.

"ಏಷಾಮ್"- ಎಂದು ಹೇಳಲ್ಪಟ್ಟಿರುವುದರಿಂದ ಸರ್ವರೂ (ಯಾರೇ ಆಗಲಿ) ಆ ಜ್ಞಾನವನ್ನು ಸಂಪಾದಿಸುವುದರಿಂದ ಉದ್ಧಾರವಾಗುವರೆಂದು ಸ್ಪಷ್ಟವಾಗುತ್ತಿದೆ. ಪ್ರತಿ ಜೀವಿಯ ಹೃದಯದಲ್ಲಿ ಆತ್ಮ ದೇದೀಪ್ಯಮಾನವಾಗಿ ಪ್ರಕಾಶಿಸುತ್ತಿದೆ (Each Soul is potentially divine). ಅಜ್ಞಾನದ ಆವರಣದಿಂದ ಅದು ಕವಿಯಲ್ಪಟ್ಟಿದೆ. ಆ ಆವರಣವನ್ನು ಯಾರು ಪ್ರಯತ್ನ ಪೂರ್ವಕವಾಗಿ ಜ್ಞಾನದಿಂದ ತೊಲಗಿಸಿಕೊಳ್ಳುವರೋ ಅವರಿಗೆ ಸ್ವಸ್ವರೂಪಾನುಭವ (ಮೋಕ್ಷ) ಉಂಟಾಗುವುದು (ಅವರು ಯಾವ ಕುಲದವರಾದರೂ ಸರಿಯೇ).

ಪ್ರತಿ ಜೀವಿಯೂ ಒಬ್ಬ ಸೂರ್ಯನು. ಅಷ್ಟೇ ಅಲ್ಲ, ಸೂರ್ಯರಿಗೆ ಸೂರ್ಯನು. **'ನ ತತ್ರ ಸೂರ್ಯೋಭಾತಿ'** ಎಂದ ಹಾಗೆ ಈ ದೃಶ್ಯರೂಪವಾದ ಸೂರ್ಯನು ಆ ಆತ್ಮಸೂರ್ಯನ ಮುಂದೆ ತಲೆ ಬಾಗಿಸುವನು. ಆದರೂ ಜನರು ಕತ್ತಲೆಯಲ್ಲಿ ಬಿದ್ದು ಹೊರಳಾಡುತ್ತಿದ್ದಾರೆ. ಇದೇ ಜಗನ್ಮಾಯೆ. ಆದ್ದರಿಂದ ಸದ್ಗುರುಗಳಾದ ಮಹಾತ್ಮರಿಂದ, ಸಚ್ಛಾಸ್ತ್ರಗಳಿಂದ, ಸರ್ವೇಶ್ವರನಲ್ಲಿ ಭಕ್ತಿಯಿಡುವುದರಿಂದ ಆ ಮಾಯೆಯನ್ನು ತೊಲಗಿಸಿ ಹಾಕುವಂತಹ ಆತ್ಮಜ್ಞಾನ ಉಪಾಯವನ್ನು ತಿಳಿದು ಜನರು ಸ್ವಸ್ವರೂಪ ಸಾಕ್ಷಾತ್ಕಾರವನ್ನು ಹೊಂದಿ ಕೃತಾರ್ಥರಾಗಬೇಕು.

"ತತ್ಪರಮ್"- ಆ ಪರಬ್ರಹ್ಮಸ್ವರೂಪವನ್ನು [ತತ್=ಆ; ಪರಂ=ಪರಬ್ರಹ್ಮ ಸ್ವರೂಪ ಇಲ್ಲವೆ, ತತ್=ಆ ಅಜ್ಞಾನಕ್ಕಿಂತ ಪರಮ್=ಭಿನ್ನವಾದ (ಪರಮಾತ್ಮನನ್ನು)]

ಪ್ರ : ಅಜ್ಞಾನವು ಹೇಗೆ ನಶಿಸುವುದು?

ಉ : ಆತ್ಮಜ್ಞಾನದಿಂದ

ಪ್ರ : ಅಲ್ಲಿ ಏನು ಸಂಭವಿಸುವುದು?

ಉ : ಚಿದ್ರೂಪನಾದ ಆತ್ಮ (ಆತ್ಮ ಭಾಸ್ಕರನು) ಸ್ವಯಂ ಆಗಿ ಪ್ರಕಾಶಿಸುವನು. (ಅನುಭೂತಿಗೊಳ್ಳುವನು)

**ಅ॥** ಅಂತಹ ಆತ್ಮಜ್ಞಾನ ಲಭಿಸುವ ಪದ್ಧತಿಯನ್ನು ಹೇಳಲಾಗುತ್ತಿದೆ-

**೧೭. ತದ್ಬುದ್ಧಯ ಸ್ತದಾತ್ಮಾನ ಸ್ತನ್ನಿಷ್ಠಾ ಸ್ತತ್ಪರಾಯಣಃ**
**ಗಚ್ಛಂತ್ಯ ಪುನಾರಾವೃತ್ತಿಂ ಜ್ಞಾನನಿರ್ಧೂತಕಲ್ಮಷಾಃ**

**ಅರ್ಥ:** ತದ್ಬುದ್ಧಯಃ=ಆ ಪರಮಾತ್ಮನಲ್ಲಿಯೇ ಬುದ್ಧಿ ಹೊಂದಿರುವರು; ತತ್ ಆತ್ಮಾನಃ=ಆ ಪರಮಾತ್ಮನಲ್ಲೇ ಮನಸ್ಸುಳ್ಳವರು; ತತ್ ನಿಷ್ಠಾಃ=ಆ ಪರಮಾತ್ಮನಲ್ಲಿಯೇ ನಿಷ್ಠೆಯುಳ್ಳವರು; ತತ್ ಪರಾಯಣಾಃ=ಆ ಪರಮಾತ್ಮನನ್ನೇ ಪರಮಗತಿಯಾಗಿ (ಶರಣ್ಯವಾಗಿ) ತಿಳಿದವರು; ಜ್ಞಾನನಿರ್ಧೂತಕಲ್ಮಷಾಃ (ಸಂತಃ)=ಪಾಪಗಳನ್ನು ಜ್ಞಾನದಿಂದ ಶುದ್ಧಿ ಮಾಡಿಕೊಂಡವರು; ಅಪುನರಾವೃತ್ತಿಂ=ಪುನರ್ಜನ್ಮರಹಿತಸ್ಥಿತಿ (ಮೋಕ್ಷ); ಗಚ್ಛಂತಿ=ಹೊಂದುತ್ತಿದ್ದಾರೆ.

**ತಾ॥** ಆ ಪರಮಾತ್ಮನಲ್ಲಿಯೇ ಬುದ್ಧಿಯುಳ್ಳವರು, ಆ ಪರಮಾತ್ಮನಲ್ಲೇ ಮನಸ್ಸನ್ನು ನೆಲೆಮಾಡಿಕೊಂಡಿರುವರು; ಅವನಲ್ಲಿಯೇ ನಿಷ್ಠೆಯುಳ್ಳವರು; ಅವನನ್ನೇ ಪರಮಗತಿಯಾಗಿ ತಿಳಿದವರು. ತಮ್ಮ ಪಾಪಗಳನ್ನು ಜ್ಞಾನದಿಂದ ಶುದ್ಧಿಮಾಡಿಕೊಂಡವರು; ಪುನರಾವೃತ್ತಿರಹಿತವಾದ (ಪುನರ್ಜನ್ಮವರ್ಜಿತವಾದ) ಶಾಶ್ವತ ಮೋಕ್ಷ ಪದವಿಯನ್ನು ಹೊಂದುತ್ತಿದ್ದಾರೆ.

**ವ್ಯಾಖ್ಯೆ:** ಈ ಶ್ಲೋಕದಲ್ಲಿ ಭಗವಂತನು ಆತ್ಮಜ್ಞಾನ ಸಂಪ್ರಾಪ್ತಿಗೆ ಒಳ್ಳೆಯ ಸಾಧನೆಯನ್ನು ಉಪದೇಶಿಸುತ್ತಿದ್ದಾನೆ. ಮೋಕ್ಷ ಪದವಿ, ಮಾತುಗಳಿಂದ ಸಿದ್ಧಿಸುವುದಲ್ಲ. ತೀವ್ರಸಾಧನೆ, ಸತತಾಭ್ಯಾಸವನ್ನು ಮಾಡುವವರಿಗೆ ಮಾತ್ರ ಅದು ಸಾಧ್ಯವಾಗುವುದು. ಹಿಂದಿನ ಶ್ಲೋಕದಲ್ಲಿ ಜ್ಞಾನದಿಂದ ಅಜ್ಞಾನವೆನ್ನುವ ಮೇಘ ನಶಿಸಿ ಆತ್ಮಭಾಸ್ಕರನು ಪ್ರತ್ಯಕ್ಷನಾಗುವನೆಂದು ತಿಳಿಸಲ್ಪಟ್ಟಿದೆ. ಆ ಜ್ಞಾನವು ಹೇಗೆ ಲಭಿಸುವುದು? ಎನ್ನುವ ಪ್ರಶ್ನೆಗೆ ಇಲ್ಲಿ ಉತ್ತರವೀಯುತ್ತಿದ್ದಾನೆ.

ಯಾವ ಕಾರ್ಯವನ್ನಾದರೂ ಏಕಾಗ್ರತೆ, ತದೇಕ ಚಿಂತನೆ, ತನ್ಮಯತೆಗಳಿಂದ ಸುಲಭವಾಗಿ ಸಾಧಿಸಬಹುದು. ಹಾಗೆಯೇ ಆತ್ಮ ಎನ್ನುವ ಲಕ್ಷ್ಯವನ್ನು ಸಾಧಿಸಬಯಸುವವರು, ಆ ಆತ್ಮದಲ್ಲೇ ಬುದ್ಧಿಯುಳ್ಳವರಾಗಿ ಅದರಲ್ಲಿಯೇ ಮನಸ್ಸನ್ನು ನಿಲ್ಲಿಸಿ, ಅದರಲ್ಲೇ ನಿಷ್ಠೆಯುಳ್ಳವರಾಗಿ, ಅದನ್ನೇ ಆಶ್ರಯಿಸಿ ತದೇಕ ಪರಾಯಣರಾಗಿ ವರ್ತಿಸಬೇಕೆಂದು ಇಲ್ಲಿ ಬೋಧಿಸಲಾಗಿದೆ. 'ಭ್ರಮರ ಕೀಟ ನ್ಯಾಯ'ದಲ್ಲಿ ಕೀಟವು (ಹುಳ) ಭ್ರಮರವನ್ನೇ (ದುಂಬಿಯನ್ನೇ) ಚಿಂತಿಸುತ್ತಾ ತದಾಕಾರಸ್ಥಿತಿ ಹೊಂದುವುದು ಲೋಕವಿದಿತ. ಹಾಗೆಯೇ ಮನಸ್ಸು ಯಾವುದರ ಬಗ್ಗೆ ತೀವ್ರವಾಗಿ ಆಲೋಚಿಸುವುದೋ ಅದರಲ್ಲೇ ತನ್ಮಯವಾಗಿ ಹೋಗುವುದು. ಮಹನೀಯರೆಲ್ಲರೂ ಇಂತಹ ತೀವ್ರಸಾಧನೆಯನ್ನು ಮಾಡಿಯೇ ಜ್ಞೇಯೈಕಸ್ಥಿತಿಯನ್ನು ಶೀಘ್ರವಾಗಿ ಪಡೆದರು. ಹಾಗಲ್ಲದೆ, ಮನಸ್ಸಿನ ಸ್ವಲ್ಪ ಭಾಗವನ್ನು ದೃಶ್ಯ ಸೌಖ್ಯಗಳಲ್ಲಿ ಮತ್ತೆ ಸ್ವಲ್ಪ ಭಾಗವನ್ನು ದೈವಚಿಂತನೆಯಲ್ಲಿ ವಿನಿಯೋಗಿಸಿದರೆ ಏಕಾಗ್ರತೆ, ತದೇಕ ನಿಷ್ಠೆಯಿಲ್ಲದ ಕಾರಣದಿಂದ ಭಗವತ್ಸಾಕ್ಷಾತ್ಕಾರವು ಕೂಡಲೇ ಉಂಟಾಗುವುದಿಲ್ಲ. ಆದ್ದರಿಂದ ಪರಮಾತ್ಮ ಪ್ರಾಪ್ತಿಗೆ ಸಾಧಕನು ತನ್ನ ಚಿತ್ತವನ್ನು ಪೂರ್ಣವಾಗಿ ಆ ಆತ್ಮರೂಪಲಕ್ಷ್ಯದಲ್ಲಿಯೇ ಸಂಲಗ್ನ ಮಾಡಿ, ತನ್ನ ಸರ್ವಶಕ್ತಿಗಳನ್ನು ಅಲ್ಲಿಯೇ ಕೇಂದ್ರೀಕರಿಸಬೇಕು.

**"ಅಪುನರಾವೃತ್ತಿಮ್"**- ಪುನರಾವೃತ್ತಿಯೆಂದರೆ ಮತ್ತೆ ಹುಟ್ಟುವುದು. ಮತ್ತೆ ಸಂಸಾರ ಬಂಧವನ್ನು ಹೊಂದುವುದು. ಅದು ಇಲ್ಲದಿರುವುದೇ ಮರಣರಹಿತ ಶಾಶ್ವತ ಕೈವಲ್ಯ ಪದವಿ. ಅಂತಹ ಮಹತ್ತರ ಪದವಿ ಯಾರಿಗೆ ಲಭಿಸುವುದು? ಕಲ್ಮಷ ನಶಿಸಿದವರಿಗೆ, ಪಾಪವು ತೊಲಗಿದವರಿಗೆ, ಅಜ್ಞಾನ, ಅವಿದ್ಯೆ ಉಡುಗಿದವರಿಗೆ. ಆ ಕಲ್ಮಷವು ಹೇಗೆ ನಶಿಸುವುದು? ಜ್ಞಾನದಿಂದ. ಆದ್ದರಿಂದಲೇ **'ಜ್ಞಾನನಿರ್ಧೂತ ಕಲ್ಮಷಾಃ'** ಎಂದು ಹೇಳಲ್ಪಟ್ಟಿದೆ. ಆತ್ಮಜ್ಞಾನದಿಂದ ಮಾಯಾದೋಷ (ಕಲ್ಮಷ) ಸಮೂಲವಾಗಿ ನಾಶವಾಗುವುದು. ಜೀವಿಯಲ್ಲಿ ಪಾಪವಾಗಲಿ, ಮಾಲಿನ್ಯವಾಗಲಿ, ಇರುವವರೆಗೂ ಆತ್ಮೋದಯವು ಉಂಟಾಗುವುದಿಲ್ಲ. ಆದ್ದರಿಂದ ಅದನ್ನು ಮೊದಲು ಜ್ಞಾನದಿಂದ ತೂರಿಬಿಡಬೇಕು. ಜ್ಞಾನವು ನಿರಂತರ ಆತ್ಮಚಿಂತನೆ, ಆತ್ಮನಿಷ್ಠೆ ಮತ್ತು ಆತ್ಮ ಪರಾಯಣಗಳಿಂದ ಲಭಿಸುವುದು.

ಆದ್ದರಿಂದ ಸೋಮಾರಿತನಕ್ಕೆ ಸ್ವಸ್ತಿ ಹೇಳಿ ಪುರುಷ ಪ್ರಯತ್ನವನ್ನಾಶ್ರಯಿಸಿ, ಆತ್ಮಪದವಿಯನ್ನು ಕೈವಶಪಡಿಸಿಕೊಳ್ಳಬೇಕು. ಅಶಾಶ್ವತವಾದ ಪ್ರಾಪಂಚಿಕ ವಸ್ತುಗಳನ್ನು ಸಂಪಾದಿಸುವುದರಲ್ಲಿ ಸಾಮಾನ್ಯ ಜನರು ಎಷ್ಟೋ ಏಕಾಗ್ರತೆಯನ್ನು ಪ್ರದರ್ಶಿಸಿ ರಾತ್ರಿ ಹಗಲು ಕೃಷಿ ಮಾಡುತ್ತಿದ್ದಾರಲ್ಲವೇ! ಹಾಗಿರಲು ಶಾಶ್ವತವಾದ, ದುಃಖ ವರ್ಜಿತವಾದ, ಪುನರಾವೃತ್ತಿರಹಿತವಾದ ಮೋಕ್ಷಪದವಿಗೆ, ದೈವಕ್ಕೆ ಏಕಾಗ್ರತೆಯಿಂದ ತೀವ್ರ ಪ್ರಯತ್ನವನ್ನೇಕೆ ಮಾಡಬಾರದು? ತನ್ನ ಶಕ್ತಿಯನ್ನು, ಯುಕ್ತಿಯನ್ನು, ಬಲವನ್ನು, ನಿಷ್ಠೆಯನ್ನು, ದೃಶ್ಯಗಳಿಂದ ದೈವದ ಕಡೆಗೆ ಮರಳಿಸಿದರೆ ಸಾಕು. ಮೋಕ್ಷವು ಕರತಲಾಮಲಕವಾಗುವುದು. ಆದ್ದರಿಂದ ದೈವದಲ್ಲಿ (ಆತ್ಮದಲ್ಲಿ) ಅತ್ಯಂತ ಪ್ರೀತಿ, ಶ್ರದ್ಧೆಯುಂಟಾಗಿ, ತದೇಕ ನಿಷ್ಠೆಯಿಂದ ವಿಚಾರಣಾದಿಗಳನ್ನು ಮಾಡುತ್ತಾ ಆತ್ಮಜ್ಞಾನವನ್ನು ಸಂಪಾದಿಸಬೇಕೆಂದು ಭಗವಂತನು ಇಲ್ಲಿ ಆದೇಶಿಸುತ್ತಿದ್ದಾನೆ. ಮೋಕ್ಷವನ್ನು ಹೊಂದಲು ಇದೇ ಪದ್ಧತಿಯೆಂದು ಅಪ್ಪಣೆ ಕೊಡುತ್ತಿದ್ದಾನೆ. ಆದ್ದರಿಂದ ಮುಮುಕ್ಷುಗಳು ಭಗವಾದೇಶದ ಪ್ರಕಾರ ನಿರಂತರ ಅಭ್ಯಾಸದಿಂದ ಆತ್ಮನಿಷ್ಠೆಯನ್ನು ಬೆಳೆಸಿಕೊಂಡು ಜನ್ಮರಾಹಿತ್ಯವಾದ ಕೈವಲ್ಯ ಪದವಿಯನ್ನು ಪಡೆಯಬೇಕು.

ಇಲ್ಲಿ 'ತತ್' ಎಂದರೆ ಹಿಂದಿನ ಶ್ಲೋಕದಲ್ಲಿ 'ತತ್ಪರಮ್' ಎಂದು ವರ್ಣಿಸಲ್ಪಟ್ಟ ಪರಮಾತ್ಮ ಎಂದರ್ಥ.

ಗೀತೆಯಲ್ಲಿ ಆ ಪರಮಾತ್ಮ ಪದವು- ೧) ಅಕ್ಷಯ ಸುಖ ೨) ನಿರ್ವಾಣ ಬ್ರಹ್ಮ ೩) ಉತ್ತಮ ಸುಖ ೪) ಪರಮಗತಿ ೫) ಪರಮಧಾಮ ೬) ಅವ್ಯಯಪದ- ಮುಂತಾದ ಹೆಸರುಗಳಿಂದ ವರ್ಣಿಸಲ್ಪಟ್ಟಿದೆ.

ಪ್ರ : ಮೋಕ್ಷದ ಸ್ವರೂಪ ಎಂತಹದು?

ಉ : ಪುನರಾವೃತ್ತಿರಹಿತವಾದದ್ದು- ಜನ್ಮರಹಿತವಾದ ಶಾಶ್ವತಾನಂದ ಪದವಿಯೇ ಅದು.

ಪ್ರ : ಅದು ಯಾರಿಗೆ ಲಭಿಸುವುದು?

ಉ : ಅಜ್ಞಾನ, ಕಲ್ಮಷ ನಶಿಸಿದವರಿಗೆ ಮತ್ತು ಪಾಪ ಉಡುಗಿದವರಿಗೆ ಮಾತ್ರ ಅದು ಲಭಿಸುವುದು.

ಪ್ರ : ಪಾಪವು ಹೇಗೆ ನಶಿಸುವುದು?

ಉ : ಆತ್ಮಜ್ಞಾನದಿಂದ ಪಾಪವು ಮಾಯವಾಗುವುದು.

ಪ್ರ : ಆತ್ಮಜ್ಞಾನ ಹೇಗೆ ಪ್ರಾಪ್ತಿಯಾಗುವುದು?

ಉ : ಆತ್ಮದಲ್ಲಿಯೇ ಬುದ್ಧಿ ನೆಲೆಸಿ, ಆತ್ಮವನ್ನೇ ಕುರಿತು ಚಿಂತನೆ ಮಾಡುತ್ತ, ಆತ್ಮದಲ್ಲಿಯೇ ಮನಸ್ಸನ್ನು ಸಂಲಗ್ನಿಸಿ, ಆತ್ಮದಲ್ಲಿಯೇ ನಿಷ್ಠೆ ಹೊಂದಿ, ಆತ್ಮ ಪರಾಯಣನಾಗಿದ್ದರೆ ಅದು ಲಭಿಸುವುದು.

**ಅ||** ಅಂತಹ ಜ್ಞಾನಿಗಳ ಸಮದೃಷ್ಟಿಯನ್ನು ವರ್ಣಿಸಲಾಗುತ್ತಿದೆ-

**೧೮. ವಿದ್ಯಾವಿನಯಸಂಪನ್ನೇ ಬ್ರಾಹ್ಮಣೇ ಗವಿ ಹಸ್ತಿನಿ**
**ಶುನಿ ಚೈವ ಶ್ವಪಾಕೇ ಚ ಪಂಡಿತಾಃ ಸಮದರ್ಶಿನಃ**

**ಅರ್ಥ:** ವಿದ್ಯಾವಿನಯಸಂಪನ್ನೇ=ವಿದ್ಯಾ,.ವಿನಯಗಳನ್ನು ಹೊಂದಿದವನು; ಬ್ರಾಹ್ಮಣೇ=ಬ್ರಾಹ್ಮಣನಲ್ಲಿ; ಗವಿ=ಗೋವಿನಲ್ಲಿಯು; ಹಸ್ತಿನಿ=ಆನೆಯಲ್ಲಿಯು; ಶುನಿ ಚ ಏವ=ನಾಯಿಯಲ್ಲಿಯು; ಶ್ವಪಾಕೇ ಚ=ನಾಯಿ ಮಾಂಸವನ್ನು ತಿನ್ನುವ ಚಂಡಾಲನಲ್ಲಿ; ಸಮದರ್ಶಿನಃ=ಸಮದೃಷ್ಟಿಯುಳ್ಳವರು (ಅವರೆಲ್ಲರನ್ನೂ ಸಮವಾಗಿ ನೋಡುವವರು); ಪಂಡಿತಾಃ=ಜ್ಞಾನಿಗಳು (ಎಂದು ಹೇಳಲ್ಪಡುವರು).

**ತಾ||** ವಿದ್ಯೆ, ವಿನಯಗಳಿಂದ ಕೂಡಿದ ಬ್ರಾಹ್ಮಣನಲ್ಲಿಯೂ, ಗೋವಿನಲ್ಲಿಯೂ, ಆನೆಯಲ್ಲಿಯೂ, ನಾಯಿಯಲ್ಲಿಯೂ, ನಾಯಿ ಮಾಂಸವನ್ನು ತಿನ್ನುವ ಚಂಡಾಲ ನಲ್ಲಿಯೂ ಸಮದೃಷ್ಟಿ ಹೊಂದಿರುವವರು (ಅವರನ್ನು ಸಮವಾಗಿ ನೋಡು ವವರು) ಜ್ಞಾನಿಗಳು (ಆತ್ಮಾನುಭವ ಹೊಂದಿರುವವರು) ಎಂದೆನಿಸಿ ಕೊಳ್ಳುತ್ತಾರೆ.

**ವ್ಯಾಖ್ಯೆ:** ಜ್ಞಾನನಿಷ್ಠರು ಸಮಸ್ತವನ್ನೂ ಆತ್ಮರೂಪವೆಂದೇ ಭಾವಿಸುವರು. ಆದ್ದರಿಂದ ಎಲ್ಲಾ ಪ್ರಾಣಿಗಳಲ್ಲಿಯೂ ಅವರು ಆತ್ಮವನ್ನೇ ದರ್ಶಿಸುತ್ತ ಸಮಭಾವ ಹೊಂದಿ, ಪ್ರೇಮವನ್ನು, ದಯೆಯನ್ನು ಯಥೇಚ್ಛವಾಗಿ ತೋರಿಸುತ್ತಾರೆ. ಜ್ಞಾನಿಗಳ 'ಸರ್ವಭೂತಗಳ ಮೇಲಿನ ಸಮದೃಷ್ಟಿಯನ್ನು', ತಿಳಿಸುವುದಕ್ಕೋಸ್ಕರ ಇಲ್ಲಿ ಮಾನವರಲ್ಲಿ, ಜಂತುಗಳಲ್ಲಿ ಕೆಲವು ಪ್ರಾಣಿಗಳನ್ನು ಮಾತ್ರ ಉದಾಹರಣೆಗಾಗಿ ತೆಗೆದುಕೊಳ್ಳಲಾಗಿದೆ. ಮಾನವರಲ್ಲಿ ಉತ್ತಮ ತರಗತಿಗೆ ಸೇರಿದ ವಿದ್ಯಾವಿನಯ ಸಂಪನ್ನನಾದ ಬ್ರಾಹ್ಮಣನನ್ನು ಆರಿಸಿಕೊಳ್ಳಲಾಗಿದೆ. ಹಾಗೆಯೇ ನೀಚ ಶ್ರೇಣಿಯಿಂದ ನಾಯಿಮಾಂಸವನ್ನು ತಿನ್ನುವ ಚಂಡಾಲನನ್ನು ಆರಿಸಿಕೊಳ್ಳಲಾಗಿದೆ. ಇವರಿಬ್ಬರೂ ಮಾನವ ಸಂಗದ ಊರ್ಧ್ವ ಮತ್ತು ಅಧಃಪರಾಕಾಷ್ಠಗಳನ್ನು ಸೂಚಿಸುತ್ತಾರಾದ್ದರಿಂದ ಇವರನ್ನು ನಿರೂಪಿಸುವುದರ ಮೂಲಕ ಸಂಗವೆಲ್ಲವನ್ನು ನಿರೂಪಿಸಿದಂತಾಯಿತು. ಹಾಗೆಯೇ ಜಂತುಗಳಲ್ಲಿ ಗೋವು ಉತ್ತಮ ತರಗತಿಗೆ ಸೇರಿದುದು. ಆನೆ ಮಧ್ಯ ತರಗತಿಯದು, ನಾಯಿ ಅಧಮ ತರಗತಿಯನ್ನು ಪ್ರತಿನಿಧಿಸುತ್ತದೆ. ಆದ್ದರಿಂದ ಆ ಮೂರರನ್ನು ಆರಿಸುವುದರಿಂದ ಜಂತು ಜಾತಿಯೆಲ್ಲವನ್ನೂ ಮುಟ್ಟಿದಂತಾಯಿತು. ಇವುಗಳೆಲ್ಲವನ್ನೂ ಸಮವಾಗಿ ವೀಕ್ಷಿಸುವವನೇ ಜ್ಞಾನಿ ಅಥವ ಪಂಡಿತ. ಸಾಮಾನ್ಯವಾಗಿ ಪಂಡಿತನೆಂದರೆ ಪಾಂಡಿತ್ಯಪ್ರಕರ್ಷ, ಸಾಹಿತ್ಯ ಕೌಶಲ ವುಳ್ಳವನೆಂದು ಜನರು ಭಾವಿಸುವರು. ಆದರೆ ಭಗವಂತನು ಇಲ್ಲಿ ಸಮ ದೃಷ್ಟಿಯುಳ್ಳವನೇ ಪಂಡಿತನೆಂದು ಹೇಳಿದನು. ಇಂತಹ ಸಮದೃಷ್ಟಿಯುಳ್ಳವರು ಅವಿದ್ಯಾವಂತರಾದರೂ ಮಹಾಪಂಡಿತರೇ. ಅದು ಇಲ್ಲದವರು ಎಂತಹ ಮಹಾಪಾಂಡಿತ್ಯವನ್ನು ಹೊಂದಿದ್ದರೂ ಪರಮಾತ್ಮನ ದೃಷ್ಟಿಯಲ್ಲಿ ಅಜ್ಞಾನಿಗಳೇ.

ಜನರಲ್ಲಿ ಕೆಲವರಿಗೆ ದೇಹದೃಷ್ಟಿ, ಕೆಲವರಿಗೆ ಮನೋದೃಷ್ಟಿ, ಕೆಲವರಿಗೆ ಆತ್ಮದೃಷ್ಟಿಯಿರುವುದು. ದೇಹದೃಷ್ಟಿಯುಳ್ಳವರು ಅಧಮರು. ಒಂದು ಪ್ರಾಣಿಯನ್ನು ನೋಡಿದಾಗ ಆ ಪ್ರಾಣಿಯ ದೇಹ ಸೌಂದರ್ಯ, ಎತ್ತರ, ತೂಕ ಮುಂತಾದವುಗಳನ್ನು ಮಾತ್ರ ಅವರು ನೋಡುವರು. ಮನೋದೃಷ್ಟಿ ಯುಳ್ಳವರು ಮಧ್ಯಮರು. ಇವರು ಪ್ರಾಣಿಯ ಮನೋಭಾವವನ್ನು, ವಿದ್ಯೆಯನ್ನು, ಕವಿತ್ವವನ್ನು ನೋಡುವರು. ಇನ್ನು ಆತ್ಮ ದೃಷ್ಟಿಯುಳ್ಳವರು ಉತ್ತಮರು. ಇವರು ಯಾವ ಪ್ರಾಣಿಯನ್ನು ನೋಡಿದರೂ ಒಳಗಿನ ಆತ್ಮವನ್ನೇ ವೀಕ್ಷಿಸುವರು. ದೇಹಗಳು, ಮನಸ್ಸುಗಳು, ಬೇರೆ ಬೇರೆ ಯಾಗಿದ್ದರೂ, ಸರ್ವಜೀವಿಗಳಲ್ಲಿ ಇರುವ ಆತ್ಮ ಮಾತ್ರ ಒಂದೇ. ಆದ್ದರಿಂದ ಅವರು ಸಮಸ್ತ ಪ್ರಾಣಿಕೋಟಿಗಳಲ್ಲಿ ಸಮಭಾವ ಹೊಂದಿರುವರು. ಜನಗಳು ಸರ್ವೇಸಾಮಾನ್ಯ ವಾಗಿ ಮೇಲೆ ತಿಳಿಸಿದ ಮಧ್ಯಮ ಹಾಗು ಅಧಮ ತರಗತಿಗಳಿಗೆ ಸೇರಿದವರೇ ಆಗಿದ್ದಾರೆ. ಉತ್ತಮ ತರಗತಿಗೆ ಸೇರಿದ ಜ್ಞಾನಿಗಳು ಬಹಳ ವಿರಳ. ಅಂತಹವರನ್ನು ಕುರಿತೇ ಈ ಶ್ಲೋಕದಲ್ಲಿ ಪ್ರಸ್ತಾಪಿಸಲಾಗಿದೆ.

ಪ್ರೇಮವೆನ್ನುವ ದೈವಗುಣವನ್ನು ಮಾನವರಿಗೆ ಮಾತ್ರ ಮೀಸಲಾಗಿಡದೆ ಜಂತುಗಳ ಮೇಲೆಯೂ ಅದನ್ನು ವಿಸ್ತರಿಸಬೇಕೆಂದು ಈ ಶ್ಲೋಕವು ತಿಳಿಸುತ್ತಿದೆ. ಇಷ್ಟೇ ಅಲ್ಲದೆ, ಸಮಸ್ತ ಚರಾಚರ ಪ್ರಾಣಿಕೋಟಿಗಳ ಮೇಲೆ ಅದನ್ನು ವಿಸ್ತರಿಸುವುದೇ ಆದರ್ಶ ಮಾನವನ ಚಿಹ್ನೆ. ಆದ್ದರಿಂದಲೇ ಇಲ್ಲಿ ಜಂತುವರ್ಗದ ಕೆಲವು ಹೆಸರುಗಳನ್ನೂ ಸೇರಿಸಲಾಗಿದೆ. ಗೋವಿನ ಮೇಲೆ, ಆನೆಯ ಮೇಲೆ, ನಾಯಿಯ ಮೇಲೆ, ಕ್ರಿಮಿಯ ಮೇಲೆ, ಕೀಟಕದ ಮೇಲೆ ಪ್ರೇಮ, ದಯೆಯುಂಟಾಗಬೇಕು. ಇದೇ ವಿಶಾಲಭಾವ. ಇದೇ ಆತ್ಮದೃಷ್ಟಿ. ಈ ವಿಶಾಲಭಾವವನ್ನೇ ಗೀತೆ ಪ್ರೋತ್ಸಾಹಿಸುತ್ತಿದೆ. ಆದ್ದರಿಂದ ಮುಮುಕ್ಷುಗಳು ಭಗವಂತನು ತಿಳಿಸಿದ ಈ ವಿಶಾಲ ಆತ್ಮದೃಷ್ಟಿಯನ್ನೇ ಅಳವಡಿಸಿಕೊಳ್ಳಬೇಕು. ಯಾವ ಪ್ರಾಣಿಯನ್ನೇ ನೋಡಲಿ ಕೂಡಲೇ ಒಳಗಿನ ಆತ್ಮ ಗೋಚರಿಸಬೇಕು. ಆಗಲೇ ಸರ್ವ ಪ್ರಾಣಿಕೋಟಿಗಳ ಮೇಲ ಪರಿಪೂರ್ಣವಾದ ದಯೆ ಉದಯಿಸುತ್ತದೆ. ಸರ್ವಮಾನವ ಭ್ರಾತೃತ್ವ (Fraternity) ಒಳ್ಳೆಯದೇ ಆಗಲಿ ಅದು ಸಾಕಾಗುವುದಿಲ್ಲ. ಇನ್ನೂ ಮುಂದುವರಿದು ಸರ್ವಾತ್ಮದೃಷ್ಟಿಯನ್ನು ಅಳವಡಿಸಿಕೊಳ್ಳಬೇಕು. ಅಂದರೆ ಎಲ್ಲಾ ಪ್ರಾಣಿಗಳಲ್ಲಿ ತನ್ನ ಆತ್ಮವನ್ನೇ ವೀಕ್ಷಿಸುವುದನ್ನು ಅಭ್ಯಸಿಸಬೇಕು. ಇಂತಹ ವಿಶ್ವ ಪ್ರೇಮವನ್ನೇ ಈ ಶ್ಲೋಕದಲ್ಲಿ ತಿಳಿಸಲಾಗಿದೆ. ಒಂದು ಶರೀರದಲ್ಲಿ ಕಣ್ಣು, ಮೂಗು, ಕಿವಿ ಮುಂತಾದ ಬೇರೆ ಬೇರೆ ಅವಯವಗಳಿದ್ದರೂ, ಎಲ್ಲವುಗಳಲ್ಲಿ ಮನುಜನಿಗೆ ಸಮಾನವಾದ ಪ್ರೇಮಾಸಕ್ತಿಗಳು ಹೇಗಿರುವುವೋ, ಅವುಗಳಲ್ಲಿ ಯಾವುದಾದರೂ ಒಂದಕ್ಕೆ ನೋವಾದರೆ ತನಗೇ ನೋವಾದಂತೆ ಹೇಗೆ ಭಾವಿಸಿ ಆ ಬಾಧೆಯನ್ನು ನಿವಾರಿಸಲು ಯತ್ನಿಸುವನೋ ಹಾಗೆಯೇ ವಿಶ್ವವೆಲ್ಲವೂ ಒಂದೇ ಆತ್ಮದ ಶರೀರವೆಂದು ಭಾವಿಸಿ ಸರ್ವಜೀವಿಗಳನ್ನು ಸಮಭಾವದಿಂದ ನೋಡಬೇಕೆಂದು, ಅಂತಹವನೇ ಜ್ಞಾನಿಯೆಂದು ಇಲ್ಲಿ ತಿಳಿಸಲಾಗಿದೆ.

ಒಬ್ಬನು ಜ್ಞಾನಿಯೇ ಅಲ್ಲವೇ, ಪಂಡಿತನು ಹೌದೋ ಅಲ್ಲವೋ ಎಂದು ಪರೀಕ್ಷಿಸಲು ಈ ಸಮದೃಷ್ಟಿಯೇ ಗುರುತು. 'ಆತ್ಮ ಸರ್ವವ್ಯಾಪಿ' ಎನ್ನುವ ಸಿದ್ಧಾಂತವನ್ನು ಹೇಳುವವರು, ಸರ್ವಭೂತದಯೆ, ಸಮತ್ವವನ್ನು

ಹೊಂದಿಲ್ಲದಿದ್ದರೆ ಅವರದು 'ವಾಚಾವೇದಾಂತ'ವೇ ಆಗುವುದು. ಆದ್ದರಿಂದ ಸಮದರ್ಶಿತ್ವವನ್ನು ಅಭ್ಯಸಿಸಿ, ಅನುಷ್ಠಾನವೇದಾಂತಿಗಳಾಗಿ ಜೀವಿಸಬೇಕು. ಈ ಶ್ಲೋಕದಲ್ಲಿ ಆಚರಣ ವೇದಾಂತವನ್ನು ಒತ್ತಿ ಹೇಳಲಾಗಿದೆ.

ಪ್ರ : ಪಂಡಿತನೆಂದರೆ (ಜ್ಞಾನಿ) ಎಂತವನು?

ಉ : ೧. ವಿದ್ಯೆ, ವಿನಯಗಳನ್ನುಳ್ಳ ಬ್ರಾಹ್ಮಣನಲ್ಲಿ ೨. ಹಸುವಿನಲ್ಲಿ ೩. ಆನೆಯಲ್ಲಿ ೪. ನಾಯಿಯಲ್ಲಿ ೫. ನಾಯಿಮಾಂಸ ತಿನ್ನುವ ಚಂಡಾಲನಲ್ಲಿ -ಸಮಭಾವವುಳ್ಳವನೇ ಪಂಡಿತನು, ಜ್ಞಾನಿ.

**ಅ||** ಅಂತಹ ಸಮತ್ವಂ ಸ್ಥಿತಿಯ ಮಹಿಮೆಯನ್ನು ವರ್ಣಿಸಲಾಗುತ್ತಿದೆ

**೧೯. ಇಹೈವ ತೈರ್ಜಿತಃ ಸರ್ಗೋ ಏಷಾಂ ಸಾಮ್ಯೇ ಸ್ಥಿತಂ ಮನಃ**
**ನಿರ್ದೋಷಂ ಹಿ ಸಮಂ ಬ್ರಹ್ಮ ತಸ್ಮಾದ್ಬ್ರಹ್ಮಣಿತೇ ಸ್ಥಿತಾಃ**

**ಅರ್ಥ:** ಏಷಾಂ=ಯಾರ; ಮನಃ=ಮನಸ್ಸು; ಸಾಮ್ಯೇ=ಸಮಭಾವವನ್ನು (ನಿಶ್ಚಲ ಸಮಸ್ಥಿತಿ ಅಥವ ಸರ್ವಭೂತಗಳಲ್ಲಿ ಆತ್ಮವನ್ನು ಸಮವಾಗಿ ನೋಡುವುದು); ಸ್ಥಿತಮ್=ಸ್ಥಿರವಾಗಿರುವುದು; ತೈಃ=ಅವರಿಂದ; ಇಹೈವ=ಇಲ್ಲಿಯೇ (ಈ ಶರೀರದಲ್ಲಿರುವಾಗಲೇ); ಸರ್ಗಃ=ಜನನ ಮರಣ ರೂಪ ಸಂಸಾರ; ಜಿತಃ= ಜಯಿಸಲ್ಪಟ್ಟಿದೆ; ಹಿ=ಏಕೆಂದರೆ; ಬ್ರಹ್ಮ=ಬ್ರಹ್ಮವು (ಆತ್ಮ); ನಿರ್ದೋಷಮ್= ದೋಷರಹಿತವಾದದ್ದು; ಸಮಮ್=ಸಮವಾದುದು; ತಸ್ಮಾತ್=ಆದ್ದರಿಂದ; ತೇ=ಅವರು; ಬ್ರಹ್ಮಣಿ=ಬ್ರಹ್ಮದಲ್ಲಿ; ಸ್ಥಿತಾಃ=ಇರುವವರು ಆಗುತ್ತಾರೆ.

**ತಾ||** ಯಾರ ಮನಸ್ಸು ಸಮಭಾವದಲ್ಲಿ (ನಿಶ್ಚಲಸಮಸ್ಥಿತಿಯಲ್ಲಿ ಇಲ್ಲವೇ ಸರ್ವ ಪ್ರಾಣಿಗಳಲ್ಲಿ ಆತ್ಮವನ್ನು ಸಮನಾಗಿ ನೋಡುವುದರಲ್ಲಿ) ಸ್ಥಿರವಾಗಿರುವುದೋ ಅಂತಹವರು ಈ ಜನ್ಮದಲ್ಲಿಯೇ ಜನನ ಮರಣ ರೂಪ ಸಂಸಾರವನ್ನು ಜಯಿಸಿದವರಾಗುತ್ತಾರೆ; ಏಕೆಂದರೆ ಬ್ರಹ್ಮವು ದೋಷ ರಹಿತವಾದದ್ದು, ಸಮವಾದದ್ದು ಆದ್ದರಿಂದ ಅಂಥ ಬ್ರಹ್ಮವೇ ತಾವೆಂದು ತಿಳಿದುಕೊಂಡವರು ಬ್ರಹ್ಮಸ್ವರೂಪಿಗಳೇ ಆಗುತ್ತಾರೆ.

**ವ್ಯಾಖ್ಯೆ:** ಜನನ ಮರಣರೂಪ ಸಂಸಾರವನ್ನು ದಾಟಲು, ಬಂಧದಿಂದ ವಿಮುಕ್ತಿ ಹೊಂದಲು ಉಪಾಯವನ್ನಿಲ್ಲಿ ಹೇಳಲಾಗುತ್ತಿದೆ. ಬಂಧಕ್ಕಾಗಲಿ, ಮೋಕ್ಷಕ್ಕಾಗಲಿ ಮನಸ್ಸೇ ಕಾರಣ. ಮನಸ್ಸು ಚಪಲವಾಗಿದ್ದಲ್ಲಿ ಬಂಧನ, ನಿಶ್ಚಲವಾಗಿದ್ದಲ್ಲಿ ಮೋಕ್ಷ. ಮನಸ್ಸು ಮಲಿನವಾಗಿದ್ದರೆ ಬಂಧನ, ನಿರ್ಮಲವಾಗಿದ್ದರೆ ಮೋಕ್ಷ. ಆದ್ದರಿಂದಲೇ ಭಗವಂತನು ಯಾರ ಮನಸ್ಸು ಸಮವಾಗಿ (in the State of Equilibrium)ದೆಯೋ- ಸರ್ವಭೂತಗಳಲ್ಲಿ ಸಮದೃಷ್ಟಿ ಹೊಂದಿರುವರೋ ಅಂತಹವರು ಸಂಸ್ಕೃತಿಯನ್ನು ಜಯಸಿದಂತೆಯೇ ಎಂದು ಹೇಳುತ್ತಿದ್ದಾನೆ. ಏಕೆಂದರೆ ಪರಬ್ರಹ್ಮವು ದೋಷರಹಿತವಾದದ್ದು; ಸಮವಾದದ್ದು **(ನಿರ್ದೋಷಂ ಹಿ ಸಮಮ್)**. ಯಾರ ಮನಸ್ಸು ಈ ಪ್ರಕಾರವಾಗಿ ದೋಷರಹಿತವಾಗಿ, ಸಮವಾಗಿರುವುದೊ, ಅವರು ತಪ್ಪದೆ ಆ ಬ್ರಹ್ಮದಲ್ಲೇ ನಿವಸಿಸುವಂತವರಾಗುತ್ತಾರೆ. **(ಬ್ರಹ್ಮಣಿತೇ ಸ್ಥಿತಾಃ)** ಅಂದರೆ ಮೋಕ್ಷಕ್ಕೆ ಭಾಗಿಗಳಾಗುವರು. ಸಜಾತೀಯ ವಸ್ತುವಿನಲ್ಲಿ ಸಜಾತೀಯ ವಸ್ತುವೇ ಮಿಶ್ರವಾಗುವುದಾಗಲಿ ವಿಜಾತೀಯ ವಸ್ತುವಲ್ಲ. ನೀರಿನಲ್ಲಿ ನೀರು ಕಲೆಯುವುದಾಗಲಿ ಎಣ್ಣೆಯಲ್ಲ. ಎಣ್ಣೆಯಲ್ಲಿ ಎಣ್ಣೆ ಕಲೆಯುವುದೇ ಆಗಲಿ ನೀರಲ್ಲ. ಹಾಗೆ ಬ್ರಹ್ಮನಲ್ಲಿ ಏಕವಾಗಬೇಕೆಂದರೆ, ಇಲ್ಲವೆ ಬ್ರಹ್ಮದಲ್ಲಿ ಲಯವಾಗಬೇಕಾದರೆ, ಆ ಬ್ರಹ್ಮದ ಲಕ್ಷಣಗಳುಳ್ಳ ವಸ್ತುವೇ ಆಗಬೇಕು. ಆ ಬ್ರಹ್ಮದ ಎರಡು ಲಕ್ಷಣಗಳನ್ನು ಇಲ್ಲಿ ಹೇಳಲಾಗಿದೆ. ೧. ದೋಷರಾಹಿತ್ಯ ೨. ಸಮತ್ವ. ಆದ್ದರಿಂದ ಮನಸ್ಸು ಈ ಎರಡು ಸುಲಕ್ಷಣಗಳನ್ನು ಪ್ರಯತ್ನಪೂರ್ವಕವಾಗಿ ಸ್ವೀಕರಿಸಿದ್ದೇ ಆದರೆ, ಆಗ ಅದು ಬ್ರಹ್ಮನಲ್ಲಿ ಲಯವಾಗಲು ಅರ್ಹವಾಗುವುದು. ಈ ಪರಮ ಸತ್ಯವನ್ನೇ ಭಗವಂತನು ಈ ಶ್ಲೋಕದಲ್ಲಿ ವಿವರಿಸಿದ್ದಾನೆ.

**'ಸತ್ವಪುರುಷಯೋಃ ಶುದ್ಧಿಸಾಮ್ಯೇ ಕೈವಲ್ಯಮ್'** ಎಂದು ಪತಂಜಲಿ ಮಹರ್ಷಿ ಹೇಳುತ್ತಿದ್ದಾರೆ. ಅಂದರೆ ಶುದ್ಧತೆಯಲ್ಲಿ, ನಿರ್ವಿಷಯತ್ವದಲ್ಲಿ ಸಮತ್ವದಲ್ಲಿ ಮನಸ್ಸು ಬ್ರಹ್ಮದೊಡನೆ ಸಮಾನ ಸ್ಥಾಯಿಯನ್ನು ಯಾವಾಗ ಹೊಂದುವುದೋ, ಅದೇ ಮೋಕ್ಷ ಸ್ಥಿತಿ. ಮನಸ್ಸು ಯಾವಾಗ ನಿರ್ಮಲವಾಗಿ, ಕ್ರಮೇಣ ಆತ್ಮದಲ್ಲಿ (ಬ್ರಹ್ಮದಲ್ಲಿ) ಸ್ಥಿರ ಹೊಂದಿ ಅತ್ಯಂತ ಶುದ್ಧತ್ವ, ನಿರ್ದೋಷತ್ವ ಹಾಗು ಸಮತ್ವಗಳನ್ನು ಹೊಂದುವುದೋ ಆಗ ಮನುಜನು ಕೈವಲ್ಯವನ್ನು ಪಡೆಯುವವನೆಂದರ್ಥ. ಮೋಕ್ಷ ಪ್ರಾಪ್ತಿಗೆ ಅದು ಸುಮೂಹರ್ತ.

**ನ ಮೋಕ್ಷೋ ನಭಸಃ ಪೃಷ್ಠೇ ಪಾತಾಲೇ ನ ಚ ಭೂತಲೇ**
**ಮೋಕ್ಷೋ ಹಿ ಚೇತೋ ವಿಮಲಂ ಸಂಯಜ್ಞಾನವಿಬೋಧಿತಮ್**
**(ವಸಿಷ್ಠಗೀತೆ)**

ಎಂದು ವಸಿಷ್ಠ ಮಹರ್ಷಿಯು ನಡಿದಿದ್ದಾರೆ. ಅಂದರೆ 'ಮೋಕ್ಷವೆನ್ನುವುದು ಆಕಾಶದಲ್ಲಿಯಾಗಲಿ, ಪಾತಾಳದಲ್ಲಿಯಾಗಲಿ, ಭೂತಳದಲ್ಲಾಗಲಿ ಇಲ್ಲ, ಸಂಯಕ್ - ಜ್ಞಾನದಿಂದ ಉಂಟಾಗುವ ನಿರ್ಮಲ ಚಿತ್ತವೇ ಮೋಕ್ಷ'. ಆದ್ದರಿಂದ ಪ್ರತಿಯೊಬ್ಬರೂ ಅವರವರ ಮನಸ್ಸುಗಳನ್ನು ಪ್ರಯತ್ನ ಪೂರ್ವಕವಾಗಿ ನಿರ್ಮಲ ಮಾಡಿಕೊಂಡು ನಿಶ್ಚಲ ಸ್ಥಿತಿಯಲ್ಲಿರುವಂತೆ ಮಾಡಿ, ಸಮಭಾವದಿಂದ (ಸರ್ವತ್ರ ಸಮದೃಷ್ಟಿ) ಇದ್ದಲ್ಲಿ ಆ ಕ್ಷಣದಲ್ಲೇ ಮೋಕ್ಷವನ್ನು ಪಡೆಯಬಹುದು. ಸಂಸಾರವನ್ನು ಜಯಿಸಬಹುದು.

"ಇಹೈವ"- ಎಂದು ಹೇಳಿರುವುದರಿಂದ ಮೇಲಿನ ಗುಣಗಳನ್ನು ಹೊಂದಿರುವವರು ಇಲ್ಲಿಯೇ ಈ ಜನ್ಮದಲ್ಲಿಯೇ ಮುಕ್ತಿ ಹೊಂದುವರೆಂದು ಸ್ಪಷ್ಟಮಾಡಲಾಗಿದೆ. ಈಗ ಸಾಧನೆ ಪ್ರಾರಂಭಿಸಿದರೆ ಯಾವಾಗೋ ಯಾವುದೋ ಜನ್ಮದಲ್ಲಿ ಮುಕ್ತಿ ಲಭಿಸಬಹುದೆಂದು ಯಾರೂ ನಿರಾಶೆಗೊಳ್ಳಬೇಕಾಗಿಲ್ಲ. ಫಲವು ಈಗಲೇ ಕೈಗೆ ಸಿಗುವುದು. ಮೋಕ್ಷಕ್ಕೆ ಕಾಲನಿಯಮವಾಗಲಿ, ದೇಶನಿಯಮವಾಗಲಿ ಇಲ್ಲ. ಯಾವ ಸಮಯದಲ್ಲಿ ಅಥವ ಯಾವ ಸ್ಥಳದಲ್ಲಿ ಮನಸ್ಸು ನಿರ್ಮಲ, ನಿಶ್ಚಲ, ಸಮಸ್ಥಿತಿಯನ್ನು ಹೊಂದುವುದೋ ಆ ಸಮಯದಲ್ಲೇ ಮನುಜನು ಮುಕ್ತನಾಗುವನೆಂದು ಇಲ್ಲಿ ಹೇಳಲಾಗಿದೆ.

"ಸಾಮ್ಯೇ ಸ್ಥಿತಮ್"- ಎನ್ನುವುದರ ಅರ್ಥ ಚಿತ್ತವು ಚಾಂಚಲ್ಯವಾಗಿರದೆ, ಸಮವಾಗಿ, ನಿಶ್ಚಲವಾಗಿದ್ದು ಸರ್ವಭೂತಗಳಲ್ಲಿ ಸಮವಾಗಿ ವ್ಯಾಪಿಸಿರುವ ಆತ್ಮವನ್ನು ವೀಕ್ಷಿಸುವುದಾಗಿದೆ. ಪ್ರಾಣಿಗಳನ್ನು ನೋಡಿದಾಗ ದೇಹ ದೃಷ್ಟಿಯಾಗಲಿ ಮನೋದೃಷ್ಟಿಯಾಗಲಿ ಇರದೆ ಆತ್ಮದೃಷ್ಟಿಯುಳ್ಳವನು ಸರ್ವಭೂತಗಳನ್ನು ಸಮವಾಗಿ ವೀಕ್ಷಿಸುವನು. ಅಂತಹ ಸಮದೃಷ್ಟಿಯುಂಟಾಗಿ ಚಿತ್ತದಲ್ಲಿ ಯಾವ ಪರಿಸ್ಥಿತಿಯಲ್ಲೂ ಕಲ್ಲೋಲ, ವಿಕ್ಷೇಪವಿಲ್ಲದೆ ನಿಶ್ಚಲತ್ವವನ್ನು ಕಾಪಾಡಿಕೊಳ್ಳುವನು.

ಈ ಪ್ರಕಾರವಾಗಿ ಮೋಕ್ಷವನ್ನು ಪಡೆಯಲು ಸಂಸಾರಬಂಧನವನ್ನು ವಿಚ್ಛಿನ್ನ ಮಾಡಲು, ಮಾಯೆಯನ್ನು ಜಯಿಸಲು ಭಗವಂತನು ಜೀವಿಗಳಿಗೆ ಈ ಪಾಠವನ್ನು ಬೋಧಿಸಿದನು. ಅಲ್ಲದೆ ಈ ಶರೀರವಿರುವಾಗಲೇ ಕೈವಲ್ಯ ಸ್ಥಿತಿಯನ್ನು ಪಡೆಯಬಹುದೆಂದು 'ವಾಗ್ದಾನ'ವಿತ್ತಿದ್ದಾನೆ. 'ಏಷಾಂ' ಎಂದು

ಹೇಳಿರುವುದರಿಂದ ಪ್ರತಿಯೊಬ್ಬರೂ ಆ ಸ್ಥಿತಿಯನ್ನು ಪಡೆಯಬಹುದೆಂದು ಅರ್ಥವಾಗುತ್ತಿದೆ.

ಪ್ರ : ಈ ಸಂಸಾರವನ್ನು ಯಾರು ಜಯಿಸುವರು?

ಉ : ಯಾರ ಮನಸ್ಸು ದೋಷರಹಿತವಾಗಿ ಸಮಭಾವದಿಂದ ಇರುವುದೋ ಅವರು ಜಯಿಸಬಲ್ಲರು.

ಪ್ರ : ಭವ ದುಃಖವನ್ನು ದಾಟಲು ಉಪಾಯಗಳೇನು?

ಉ : ೧. ಮನಸ್ಸಿನಲ್ಲಿ ಯಾವ ವಿಧವಾದ ಪಾಪವೂ, ದೋಷವೂ ಇಲ್ಲದಿರುವುದು ೨. ನಿಶ್ಚಲ ಸ್ಥಿತಿಯುಂಟಾಗಿ ಸರ್ವಭೂತಗಳಲ್ಲಿ ಸಮದೃಷ್ಟಿ (ಆತ್ಮದೃಷ್ಟಿ)ಯನ್ನು ಹೊಂದಿರುವುದು.

ಪ್ರ: ಬ್ರಹ್ಮವು ಎಂತಹದು?

ಉ: ೧. ದೋಷರಹಿತವಾದದ್ದು ೨. ಸಮವಾದದ್ದು.

ಪ್ರ : ಜೀವಿಗಳು ಮೋಕ್ಷವನ್ನು ಯಾವಾಗ ಹೊಂದುವರು?

ಉ : ಯಾವ ಕ್ಷಣದಲ್ಲಿ ಮನಸ್ಸನ್ನು ನಿರ್ಮಲ ಮಾಡಿಕೊಳ್ಳುವರೋ ಮನಸ್ಸಿನಲ್ಲಿ ಸಮಸ್ಥಿತಿಯನ್ನು ಕಾಪಾಡಿಕೊಂಡು ಸಮದೃಷ್ಟಿಯನ್ನು ಹೊಂದಿರುವರೋ ಆ ಕ್ಷಣದಲ್ಲಿಯೇ ಮೋಕ್ಷವನ್ನು ಹೊಂದುವರು.

**ಅ॥** ಬ್ರಹ್ಮಜ್ಞಾನಿಯ ಇನ್ನೂ ಕೆಲವು ಲಕ್ಷಣಗಳನ್ನು ಹೇಳಲಾಗುತ್ತಿದೆ-

**೨೦. ನ ಪ್ರಹೃಷ್ಯೇತ್ಪ್ರಿಯಂ ಪ್ರಾಪ್ಯ ನೋದ್ವಿಜೇತ್ಪ್ರಾಪ್ಯ ಚಾಪ್ರಿಯಮ್**
**ಸ್ಥಿರಬುದ್ಧಿರಸಂಮೂಢೋ ಬ್ರಹ್ಮವಿದ್ಬ್ರಹ್ಮಣಿ ಸ್ಥಿತಃ**

**ಅರ್ಥ:** ಸ್ಥಿರಬುದ್ಧಿಃ=ನಿಶ್ಚಲವಾದ ಬುದ್ಧಿಯುಳ್ಳವನು; ಅಸಂಮೂಢಃ= ಮೋಹರಹಿತನು; ಬ್ರಹ್ಮಣಿ=ಬ್ರಹ್ಮದಲ್ಲಿ; ಸ್ಥಿತಃ=ಸ್ಥಿರತೆ ಹೊಂದಿರುವನು; ಬ್ರಹ್ಮವಿತ್=ಬ್ರಹ್ಮಜ್ಞಾನಿ; ಪ್ರಿಯಂ=ಇಷ್ಟವಾದದ್ದನ್ನು; ಪ್ರಾಪ್ಯ=ಹೊಂದಿ; ನ ಪ್ರಹೃಷ್ಯೇತ್=ಸಂತೋಷಿಸುವುದಿಲ್ಲ; ಅಪ್ರಿಯಂ ಚ=ಇಷ್ಟವಿಲ್ಲದೆ ಇರುವುದನ್ನು; ಪ್ರಾಪ್ಯ=ಹೊಂದಿ; ನ ಉದ್ವಿಜೇತ್=ದುಃಖವನ್ನು ಹೊಂದುವುದಿಲ್ಲ.

**ತಾ॥** ಸ್ಥಿರವಾದ ಬುದ್ಧಿಯುಳ್ಳವನು, ಮೋಹರಹಿತನು, ಬ್ರಹ್ಮದಲ್ಲಿ ಸ್ಥಿರವಾಗಿ ಉಳ್ಳವನೂ ಆದ ಬ್ರಹ್ಮಜ್ಞಾನಿ ಇಷ್ಟವಾದದ್ದು ಬಂದಾಗ ಸಂತೋಷವನ್ನಾಗಲಿ, ಅನಿಷ್ಟವಾದದ್ದು ಬಂದಾಗ ದುಃಖವನ್ನಾಗಲಿ ಹೊಂದುವುದಿಲ್ಲ.

**ವ್ಯಾಖ್ಯೆ:** ಬ್ರಹ್ಮಸಾಕ್ಷಾತ್ಕಾರ ಹೊಂದಿದವನ ಚಿಹ್ನೆ ಯಾವುದೋ ಇಲ್ಲಿ ಹೇಳಲಾಗಿದೆ. ಅಜ್ಞಾನಿಗೆ, ಜ್ಞಾನಿಗೆ ಇರುವ ಭೇದವು ಅವರ ಆಚರಣೆಯಲ್ಲಿ ವ್ಯಕ್ತವಾಗುವುದು. ಕುರುಡನಿಗೆ, ಕಣ್ಣುಳ್ಳವನಿಗೆ ಇರುವ ಭೇದವು ಅವರ ನಡಿಗೆಯಲ್ಲೇ ತಿಳಿದು ಬರುತ್ತದೆ. ಬ್ರಹ್ಮಜ್ಞಾನಿ ಎಂತಹ ವಿಪತ್ಕರ ಪರಿಸ್ಥಿತಿಗಳಲ್ಲಾಗಲಿ, ಅಪ್ರಿಯ ಸಂದರ್ಭಗಳಲ್ಲಾಗಲಿ ವ್ಯಸನ ಹೊಂದುವುದಿಲ್ಲ. ಹಾಗೆಯೇ ಎಂತಹ ಸೌಖ್ಯಪ್ರದವಾದ ಪರಿಸ್ಥಿತಿಯಲ್ಲೂ ಉಬ್ಬಿ ಹೋಗುವುದಿಲ್ಲ. ಎರಡರಲ್ಲೂ ಆತನ ಚಿತ್ತವು ಸಮಭಾವದಿಂದಿರುವುದು.

ಏಕೆಂದರೆ, ಬ್ರಹ್ಮವನ್ನು ತಿಳಿದವನಿಗೆ ಈ ಪ್ರಪಂಚ ಸ್ವಪ್ನತುಲ್ಯವಾಗಿ, ಮಿಥ್ಯೆಯಾಗಿ ಗೋಚರಿಸುವುದು. ಅಂತಹ ಮಿಥ್ಯಾ ಪ್ರಪಂಚದಲ್ಲಿ ಪ್ರಿಯವಸ್ತುವನ್ನು ಹೊಂದುವುದರಿಂದ ಸಂತೋಷವಾಗಲಿ, ಅಪ್ರಿಯ ವಸ್ತುವನ್ನು ಹೊಂದುವುದರಿಂದ ದುಃಖವಾಗಲಿ ಆತನಿಗೆ ಹೇಗೆ ಉಂಟಾಗಬಲ್ಲದು? ಪ್ರಪಂಚವು ಸತ್ಯವೆಂದು ತಿಳಿದುಕೊಂಡವರಿಗೆ ಮಾತ್ರ ಆ ಸುಖದುಃಖಾದಿ ಭಾವಗಳು ಇರುವುವು.

''ಸ್ಥಿರಬುದ್ಧಿರಸಂಮೂಢೋ''- ಬ್ರಹ್ಮಜ್ಞನ ಬುದ್ಧಿ ವಿಕ್ಷೇಪರಹಿತವಾಗಿ ಮೇರು ಪರ್ವತದಂತೆ ಸ್ಥಿರವಾಗಿರುವುದು. ಅಜ್ಞಾನಿಯ ಬುದ್ಧಿ ಕಾಮಾದಿಗಳಿಂದ ಕೂಡಿ ಚಂಚಲವಾಗಿ ವರ್ತಿಸುವುದು. ಪ್ರಕಾಶವುಂಟಾದವನು ಅಂಧಕಾರವನ್ನು ತಿರಸ್ಕರಿಸಿದಂತೆ ಬ್ರಹ್ಮಜ್ಞನಿಗೆ ಮೋಹವಾಗಲೀ, ಸಂಶಯವಾಗಲೀ ಯಾವಾಗಲೂ ಉಂಟಾಗುವುದಿಲ್ಲ. ಆದ್ದರಿಂದಲೇ ಆತನು ಅಸಂಮೂಢನೆಂದು (ಮೋಹ ರಹಿತನೆಂದು) ಕರೆಯಲ್ಪಡುತ್ತಾನೆ. 'ಬಿಸಿಲ್ಗುದುರೆಗಳು' ಎಂದು ತಿಳಿದವರು ಅವುಗಳ ಹಿಂದೆ ಓಡುವುದಿಲ್ಲ. ಮೋಹವನ್ನು ಹೊಂದುವುದಿಲ್ಲ. ತಿಳಿಯದವರು ಮಾತ್ರ ಓಡಿ ದುಃಖವನ್ನು ಅನುಭವಿಸುವರು.

ಇದರಿಂದ ಮೇಲೆ ತಿಳಿಸಿದ ಮೂರು ಸುಲಕ್ಷಣಗಳನ್ನು (ಸಮಭಾವ, ಸ್ಥಿರಬುದ್ಧಿ, ಮೋಹರಾಹಿತ್ಯ) ಚೆನ್ನಾಗಿ ಅಭ್ಯಸಿಸುತ್ತಾ ಬಂದವನಿಗೆ ಕಾಲಕ್ರಮೇಣ ಬ್ರಹ್ಮದಲ್ಲಿ ಸ್ಥಿರತೆ ಸಂಭವಿಸುವುದೆಂದು ಸ್ಪಷ್ಟವಾಗುತ್ತದೆ.

ಪ್ರ : ಬ್ರಹ್ಮವೇತ್ತನಾದ ಮಹನೀಯನ ಲಕ್ಷಣಗಳು ಯಾವುವು?

ಉ: ೧. ಪ್ರಿಯವಸ್ತು ಲಭಿಸಿದಾಗ ಉಬ್ಬುವುದಾಗಲಿ, ಅಪ್ರಿಯ ವಸ್ತುವು ಲಭಿಸಿದಾಗ ಕುಗ್ಗುವುದಾಗಲಿ ಇಲ್ಲದೇ ಇರುವುದು. ೨. ಸ್ಥಿರ ಬುದ್ಧಿಯಿಂದಿರುವುದು ೩. ಮೋಹವು ಇಲ್ಲದೇ ಇರುವುದು.

**ಅ॥** ಅಂತಹ ಬ್ರಹ್ಮಸ್ಥಿತಿಯಲ್ಲಿ (ಆತ್ಮದಲ್ಲಿ) ಸ್ಥಿರತೆ ಹೊಂದುವ ಉಪಾಯವನ್ನು ಕೊಡಲಾಗುತ್ತಿದೆ-

**೨೧. ಬಾಹ್ಯಸ್ಪರ್ಶೇಷ್ವಸಕ್ತಾತ್ಮಾ ವಿಂದತ್ಯಾತ್ಮನಿ ಯತ್ಸುಖಮ್.**
**ಸ ಬ್ರಹ್ಮಯೋಗ ಯುಕ್ತಾತ್ಮಾ ಸುಖಮಕ್ಷಯಮಶ್ನುತೇ**

**ಅರ್ಥ:** ಬಾಹ್ಯ ಸ್ಪರ್ಶೇಷು=ಬಾಹ್ಯದ ಶಬ್ದಾದಿ ವಿಷಯಗಳಲ್ಲಿ; ಅಸಕ್ತಾತ್ಮಾ= ಆಸಕ್ತಿಯಿಲ್ಲದ ಮನಸ್ಸುಳ್ಳವನು; ಆತ್ಮನಿ=ಆತ್ಮದಲ್ಲಿ; ಯತ್ಸುಖಮ್=ಯಾವ ಸುಖವುಂಟಾಗುವುದೊ; (ತತ್ಸುಕಮ್) ವಿಂದತಿ=ಅಂತಹ ಸುಖವನ್ನು ಹೊಂದುತ್ತಿದ್ದಾನೆ; ಸಃ=ಆತನು; ಬ್ರಹ್ಮಯೋಗಯುಕ್ತಾತ್ಮಾ=ಬ್ರಹ್ಮನಿಷ್ಠೆಯೆನ್ನುವ ಸಮಾಧಿಯಲ್ಲಿರುವಂಥವನಾಗಿ; ಅಕ್ಷಯಂ=ನಾಶರಹಿತವಾದ ಸುಖಮ್=ಸುಖವನ್ನು; ಅಶ್ನುತೇ=ಹೊಂದುತ್ತಿದ್ದಾನೆ.

**ತಾ॥** ಬಾಹ್ಯ ಶಬ್ದಾದಿ ವಿಷಯಗಳಲ್ಲಿ ಆಸಕ್ತಿಯಿಲ್ಲದವನು, ಆತ್ಮದಲ್ಲಿ ಯಾವ (ನಿರತಿಶಯ) ಸುಖವಿದೆಯೋ ಆ ಸುಖವನ್ನೇ ಹೊಂದುತ್ತಿದ್ದಾನೆ. ಆತನು ಬ್ರಹ್ಮನಿಷ್ಠೆಯೆನ್ನುವ ಸಮಾಧಿಯಿಂದ ಕೂಡಿದವನಾಗಿ (ಬ್ರಹ್ಮಾನುಸಂಧಾನ ಪರನಾಗಿ) ಅಕ್ಷಯವಾದ ಸುಖವನ್ನು ಪಡೆಯುತ್ತಿದ್ದಾನೆ.

**ವ್ಯಾಖ್ಯೆ:** ಆತ್ಮದಲ್ಲಿ ಸ್ಥಿರತೆಯುಂಟಾಗಬೇಕೆಂದರೆ ಶಬ್ದಾದಿ ವಿಷಯಗಳಿಂದ ಮನಸ್ಸು ಮರಳಬೇಕು. ಬಾಹ್ಯ ವಿಷಯಗಳಲ್ಲಿ ಆಸಕ್ತಿಯಿಲ್ಲದ ಮನಸ್ಸು ಅಂತರ್ಮುಖವಾಗಿ ಆತ್ಮದಲ್ಲಿ ಸ್ಥಿರತೆ ಹೊಂದಿ ಅಕ್ಷಯ ಸುಖವನ್ನು ಹೊಂದುತ್ತಿದೆಯೆಂದು ಇಲ್ಲಿ ಹೇಳಲಾಗಿದೆ.

ಅಕ್ಷಯ ಸುಖವು ಹೊರಗೆ ಎಲ್ಲಿಯೂ ಇಲ್ಲ. ಅದು ಆತ್ಮದಲ್ಲಿಯೇ ಇದೆ. ಪ್ರಪಂಚದಲ್ಲಿ ವಿಷಯಾದಿಗಳಲ್ಲಿರುವ ಸುಖವು ಕ್ಷಯವಾಗುವಂತಹದು. ಅಶಾಶ್ವತವಾದುದು, ದುಃಖ ಮಿಶ್ರಿತವಾದದು, ಬಂದು ಹೋಗುವಂತಹದು **(ಆಗಮಾಪಾಯಿನಃ)** ಅದು ಪ್ರತಿಬಿಂಬ ಸುಖವು. ಬಿಂಬ ಭೂತವಾದ ಸುಖವು ಆತ್ಮದಲ್ಲಿ ಮಾತ್ರ ಇದೆ. ಸುಖದ ಪ್ರಧಾನಕೇಂದ್ರ (Head Quarters)

ಒಳಗಡೆ ಇದೆಯಲ್ಲದೆ ಹೊರಗಲ್ಲ. ಆತ್ಮಸುಖವೇ ವಸ್ತುಗಳಲ್ಲಿ ಪ್ರತಿಬಿಂಬಿಸಿ ವಿಷಯ ಸುಖವಾಗಿ ವ್ಯಕ್ತವಾಗುತ್ತಿದೆ. ಈ ಸತ್ಯವನ್ನು ತಿಳಿದುಕೊಳ್ಳದೆ ಅವಿವೇಕಿಗಳಾದ ಜನರು ಸುಖವು ಹೊರಗಿದೆಯೆಂದು ಭಾವಿಸಿ ಎಲುಬನ್ನು ಕಡಿಯುವ ನಾಯಿ ತನ್ನ ಬಾಯಿಯಿಂದ ಸೋರಿದ ರಕ್ತವನ್ನೇ ಆಸ್ವಾದಿಸುತ್ತಾ ಅದು ಎಲುಬಿನಿಂದ ಬಂದಿದೆಯೆಂದು ಭ್ರಮಿಸುವಂತೆ ಆ ಶಬ್ದಸ್ಪರ್ಶಾದಿ ವಿಷಯಗಳ ಕಡೆಗೆ ಓಡುತ್ತಾ, ಬಿಸಿಲ್ಗುದುರೆಗಳ ಹಾಗೆ ಇರುವ ಅವುಗಳ ಹಿಂದೆ ಬೆನ್ನಟ್ಟಿ ಜೀವನವನ್ನು ವ್ಯರ್ಥಮಾಡಿಕೊಳ್ಳುತ್ತಿದ್ದಾರೆ. ಪ್ರತಿಬಿಂಬರೂಪ ಕ್ಷಣಿಕ ಸುಖವನ್ನು ಶಾಶ್ವತ ಸುಖವೆಂದು ಭ್ರಮಿಸಿ ಮಹಾ ಪ್ರಮಾದಕ್ಕೆ ಗುರಿಯಾಗುತ್ತಿದ್ದಾರೆ.

ಆದರೆ ಜ್ಞಾನಿಯಾದವನು ಬಾಹ್ಯ ವಿಷಯಗಳಲ್ಲಿ ಆಸಕ್ತಿ ತೋರಿಸದೆ, ಅಭ್ಯಂತರ ಆತ್ಮಸುಖಕ್ಕೋಸ್ಕರ ಅನ್ವೇಷಣೆ ಮಾಡುತ್ತಾ, ಅದನ್ನು ಪಡೆದು ಕೃತಾರ್ಥನಾಗುತ್ತಿದ್ದಾನೆ. ವಿಷಯಗಳ ಮೇಲೆ ವಿರಕ್ತಿ ಉಂಟಾಗದಿದ್ದರೆ ಮನಸ್ಸು ಅಲ್ಲಿಂದ ಮರಳಿ ಅಂತರ್ಮುಖವಾಗಲಾರದು. ಧ್ಯಾನವು ಸರಿಯಾಗಿ ನಡೆಯದು. ಆದ್ದರಿಂದ ಅಂತರಾತ್ಮಸುಖಾನುಭವಕ್ಕೆ ಬಾಹ್ಯ ವಸ್ತು ವ್ಯಾಮೋಹ ನಶಿಸಿ, ದೃಶ್ಯ ಪದಾರ್ಥಗಳ ಮೇಲೆ ವಿರಕ್ತಿ ಹುಟ್ಟಬೇಕು. ಆದ್ದರಿಂದಲೇ ಭಗವಂತನು ಇಲ್ಲಿ **'ಬಾಹ್ಯ ಸ್ಪರ್ಶೇಷ್ವಸಕ್ತಾತ್ಮಾ'** ಎನ್ನುವ ಷರತ್ತನ್ನು ವಿಧಿಸಲು ಕಾರಣವಾಗಿದೆ. ಆತ್ಮಸುಖವನ್ನು ಅನುಭವಿಸಬೇಕೆಂದರೆ, ಮೊದಲು ಸ್ವಲ್ಪ 'ತೆರಿಗೆ' (Tax) ಸಲ್ಲಿಸಬೇಕು. ಅದೇ ವಿಷಯಸುಖತ್ಯಾಗ. ಅಧಿಕ ಸುಖಕ್ಕೋಸ್ಕರ ಅಲ್ಪ ಸುಖವನ್ನು ಮನುಜನು ತ್ಯಜಿಸಬೇಕಾಗುವುದು. **'ತ್ಯಾಗೇನೈಕೇ ಅಮೃತತ್ವಮಾನಶುಃ'** ಎನ್ನುವ ಶ್ರುತಿ ವಾಕ್ಯವು ಈ ಸತ್ಯವನ್ನೇ ಬೋಧಿಸುತ್ತದೆ. ಆದ್ದರಿಂದ ಇಂದ್ರಿಯಗಳನ್ನು ವಿಷಯಗಳ ಕಡೆಗೆ ಹೋಗಗೊಡದೆ ನಿಗ್ರಹಿಸಿ **'ದುಃಖ ದೋಷಾನುದರ್ಶನಮ್'** ಎಂದು ಭಗವಂತನು ತಿಳಿಸಿದ ಹಾಗೆ ವಿಷಯಗಳ ನಶ್ವರತ್ವಾದಿ ದೋಷಗಳನ್ನು ಮಾತು ಮಾತಿಗೆ ಚಿಂತನೆ ಮಾಡುತ್ತ ವಿರಕ್ತಿಯನ್ನು ಅಭ್ಯಸಿಸಬೇಕು. ಆಗಲೇ ಆತ್ಮಧ್ಯಾನವು ನಿರಾತಂಕವಾಗಿ ಸಾಗಿ, ಅಕ್ಷಯ ಸುಖಾನುಭವವು ಸಂಭವಿಸುವುದು.

ಪ್ರಪಂಚದಲ್ಲಿ ಸರ್ವಜೀವಿಗಳು ತಮಗೆ ನಿರತಿಶಯ ಸುಖವು ಬೇಕೆಂದು ಕೋರುತ್ತಿರುವರು. ಆದರೆ ಆ ಸುಖ ಹೇಗೆ ಲಭಿಸುವುದೋ ತಿಳಿಯದೆ ನಾನಾ ಕಷ್ಟಗಳನ್ನು ಎದುರಿಸುತ್ತಿದ್ದಾರೆ. ಭಗವಂತನು ಕರುಣೆಯಿಂದ ಅಕ್ಷಯ ಪ್ರಾಪ್ತಿಗೆ ಇಲ್ಲಿ ಮಾರ್ಗವನ್ನು ತೋರಿಸಿರುವನು. ಅದೇ ವಿಷಯವಿರಕ್ತಿ. ಅದನ್ನು ಅವಲಂಬಿಸಿ ನಿರತಿಶಯಾನಂದವನ್ನು ಪಡೆದು ಜನ್ಮವನ್ನು ಧನ್ಯಗೊಳಿಸಿ ಕೊಳ್ಳಬೇಕು.

ಈ ಶ್ಲೋಕದಿಂದ ಈ ಕೆಳಗಿನ ಅಂಶಗಳು ಸ್ಪಷ್ಟವಾಗುತ್ತಿವೆ-

೧. ಸುಖವು ಬಾಹ್ಯದಲ್ಲಿಲ್ಲ; ಆಂತರ್ಯದಲ್ಲಿ(ಆತ್ಮದಲ್ಲಿ) ಇದೆ.

೨. ಬಾಹ್ಯ ಸುಖವು ಕ್ಷಯಶೀಲವಾದುದು (ನಶ್ವರ); ದುಃಖ ಮಿಶ್ರಿತವಾದುದು.

೩. ಶಬ್ದಾದಿ ವಿಷಯಗಳು ಆತ್ಮಸುಖಕ್ಕೆ ಅಡ್ಡಿಯಾಗಿವೆ. ಆದ್ದರಿಂದ ಅವುಗಳೆಡೆಗೆ ಆಸಕ್ತಿಯಿರಬಾರದು. ಅವುಗಳ ಹಿಂದೆ ಓಡುವವನು ಆತ್ಮಸುಖವನ್ನು ಅನುಭವಿಸಲು ಸಾಧ್ಯವಿಲ್ಲ.

ಪ್ರ : ಆತ್ಮ ಸುಖವೆಂತಹದು?

ಉ : ಅಕ್ಷಯವಾದದು (ನಾಶರಹಿತವಾದುದು)

ಪ್ರ : ಅದು ಹೇಗೆ ಲಭಿಸುವುದು?

ಉ : ಶಬ್ದಾದಿ ವಿಷಯಗಳಲ್ಲಿ ಆಸಕ್ತಿಬಿಟ್ಟು ಆತ್ಮದಲ್ಲಿ ನಿಷ್ಠೆಯನ್ನು ಹೊಂದುವುದರಿಂದ (ಬ್ರಹ್ಮಯೋಗದಿಂದ) ಲಭಿಸುವುದು.

**ಅ॥** ವಿಷಯ ಭೋಗಗಳು ದುಃಖಕರಗಳು, ಬಂಧಜನಕಗಳು ಆದ್ದರಿಂದ ಅವುಗಳನ್ನು ಆಶ್ರಯಿಸಬಾರದೆಂದು ಬೋಧಿಸಲ್ಪಟ್ಟಿದೆ-

**೨೨. ಯೇ ಹಿ ಸಂಸ್ಪರ್ಶಜಾ ಭೋಗಾ ದುಃಖಯೋನಯ ಏವ ತೇ**
**ಆದ್ಯಂತವಂತಃ ಕೌಂತೇಯ ನ ತೇಷು ರಮತೇ ಬುಧಃ**

**ಅರ್ಥ:** ಕೌಂತೇಯ=ಓ ಅರ್ಜುನಾ! ಸಂಸ್ಪರ್ಶಜಾಃ=(ಇಂದ್ರಿಯ) ವಿಷಯಸಂಯೋಗದಿಂದ ಉಂಟಾಗುವ; ಭೋಗಾಃ=ಭೋಗಗಳು; ಯೇ (ಸಂತಿ)=ಯಾವುವು (ಉಂಟಾಗುವುವೋ); ತೇ=ಅವು; ದುಃಖಯೋನಯಃ ಏವಹಿ=ದುಃಖಕಾರಣಗಳೇ ಆಗುತ್ತಿವೆ; (ಮತ್ತೆ) ಆದ್ಯಂತವಂತಃ=ಮೊದಲು ಕೊನೆ ಹೊಂದಿರುವುವು (ಸ್ವಲ್ಪ ಕಾಲವಿರುವುವು); (ತತಃ ಆದ್ದರಿಂದ); ಬುಧಃ=ವಿವೇಕವಂತನು; ತೇಷು=ಅವುಗಳಲ್ಲಿ; ನ ರಮತೇ= ಕ್ರೀಡಿಸುವುದಿಲ್ಲ (ಪ್ರೀತಿಯನ್ನು ಹೊಂದುವುದಿಲ್ಲ).

**ತಾ॥** ಅರ್ಜುನಾ! (ಇಂದ್ರಿಯ) ವಿಷಯ ಸಂಯೋಗಗಳಿಂದ ಉಂಟಾಗುವ ಭೋಗಗಳು ದುಃಖಕ್ಕೆ ಕಾರಣಗಳು, ಅಲ್ಪಕಾಲವಿರುವುವು ಆಗಿವೆ. ಆದ್ದರಿಂದ ವಿವೇಕವಂತನು ಅವುಗಳಲ್ಲಿ ಕ್ರೀಡಿಸುವುದಿಲ್ಲ (ಆಸಕ್ತಿ ಹೊಂದುವುದಿಲ್ಲ).

**ವ್ಯಾಖ್ಯೆ:** ವಿಷಯ ವಿರಕ್ತಿ ಉಂಟಾಗಬೇಕೆಂದು ಹಿಂದಿನ ಶ್ಲೋಕದಲ್ಲಿ ಬೋಧಿಸಲಾಗಿದೆ. ಅದು ಏಕೆ ಉಂಟಾಗಬೇಕು ಎನ್ನುವ ಪ್ರಶ್ನೆಗೆ ಇಲ್ಲಿ ಉತ್ತರ ವನ್ನೀಯಲಾಗಿದೆ. ವಿಷಯೇಂದ್ರಿಯ ಸಂಯೋಗದಿಂದ ಉಂಟಾಗುವ ಸುಖವು ವಾಸ್ತವ ಸುಖವಲ್ಲ. ಮೇಲೆ ಸ್ವಲ್ಪ ಸುಖವಾಗಿ ಕಂಡರೂ ಒಳಗೆ ಅಪಾರ ದುಃಖವಿರುತ್ತದೆ. ಆದ್ದರಿಂದಲೇ ಅದನ್ನು 'ದುಃಖಯೋನಿ' ಎಂದು ಭಗವಂತನು ವರ್ಣಿಸಿರುವನು.

**ಸೌಖ್ಯಂತು ಬಿಂದುಮಾತ್ರೇಣ ದುಃಖಂ ಪರ್ವತಮೇವ ಚ**
'ಮೊದಲು ಸ್ವಲ್ಪ ಸುಖವಾಗಿ ಕಂಡರೂ, ಕೂಡಲೇ ಪರ್ವತದಷ್ಟು ದುಃಖವು ಬಂದು ಮೇಲೆರಗುವುದು' ಎಂದು ವಿಷಯ ಸೌಖ್ಯಗಳನ್ನು ಹಿರಿಯರು ವರ್ಣಿಸಿರುವರು. ಅವು ಕ್ಷಣಿಕಗಳು. ಆದ್ಯಂತಗಳಿಂದ ಕೂಡಿವೆ. ಆದ್ದರಿಂದ ವಿವೇಕಿಗಳು ಯಾರೂ ಅವುಗಳಲ್ಲಿ ರಮಿಸುವುದಿಲ್ಲವೆಂದು ಇಲ್ಲಿ ಹೇಳಲಾಗಿದೆ.

*"ದುಃಖಯೋನಯಃ"*- ವಿಷಯ ಸುಖವು ತನ್ನ ಗರ್ಭದಲ್ಲಿ ದುಃಖವನ್ನು ಹೊಂದಿದೆಯಾದ್ದರಿಂದ ವಿಷಯಗಳನ್ನು ಅನುಭವಿಸಬಯಸುವವನು ಆ ಸುಖಗಳಲ್ಲಿರುವ ದುಃಖಗಳನ್ನು ಕೂಡ ಅನುಭವಿಸಬೇಕಾಗಿಯೇ ಇರುತ್ತದೆ. ಇದೆಲ್ಲವನ್ನೂ ತಿಳಿದೇ ವಿವೇಕವಂತನಾದವನು ಅವುಗಳ ಜೋಲಿಗೆ ಹೋಗುವುದಿಲ್ಲ. ಅವುಗಳ ಬಗ್ಗೆ ವಿರಕ್ತಿಹೊಂದಿರುವನು. ಶರೀರದ ಮೇಲೆ ಎಕ್ಸ್‌ರೇ ಕಿರಣಗಳನ್ನು ಹಾಯಬಿಟ್ಟಾಗ ಒಳಗಿರುವ ಮೂಳೆಗಳು ಮೊದಲಾದುವು ಹೇಗೆ ಕಾಣಿಸುವುವೋ, ಹಾಗೆ ಜ್ಞಾನಿಯು ದೃಶ್ಯಸುಖವನ್ನು ನೋಡಿದ ಕೂಡಲೇ ವಿವೇಕವೆನ್ನುವ ಕಿರಣ ಜಾಲವನ್ನು ಅದರ ಮೇಲೆ ಹಾಯಿಸಿ ಅದರ ಒಳಗಿರುವ ದುಃಖವನ್ನು ವೀಕ್ಷಿಸಿ ಅದರೆಡೆಗೆ ಉಪೇಕ್ಷಾಭಾವವನ್ನು ಹೊಂದುವನು. **'ನತೇಷು ರಮತೇ ಬುಧಃ'** ಎನ್ನುವುದರ ಅರ್ಥ ಇದೇ ಆಗಿದೆ. ಅಜ್ಞಾನಿಯಾದರೋ, ದೃಶ್ಯವಸ್ತುಗಳ

ಮೇಲಿರುವ ಥಳಕು ಬೆಳಕುಗಳನ್ನು, ಸುಖಾಭಾಸವನ್ನು ನೋಡಿ ಹಿಗ್ಗಿ ಹೀರೇಕಾಯಿ ಆಗಿ ಆ ವಿಷಯಸುಖಗಳನ್ನು ಅನುಭವಿಸಿ ಗುಂಡಿಯಲ್ಲಿ ಬೀಳುತ್ತಿದ್ದಾನೆ. ಗಾಳಕ್ಕೆ ಸಿಕ್ಕ ಮೀನಿನಂತೆ ವಿನಾಶವನ್ನು ಹೊಂದುತ್ತಿದ್ದಾನೆ. ಹೇಗೆಂದರೆ, ಮೀನು ಮಾಂಸದ ತುಂಡನ್ನು ನೋಡಿ ಆನಂದಪಟ್ಟು ಅದನ್ನು ಸಮೀಪಿಸಿ ಭಕ್ಷಿಸುವುದು. ಆದರೆ ಅದರೊಳಗೆ ನಿಗೂಢವಾಗಿರುವ ಗಾಳವನ್ನು ಅದು ಊಹಿಸುವುದಿಲ್ಲವಾದ್ದರಿಂದ ಮೃತ್ಯು ಪಾಲಾಗುತ್ತದೆ. 'ದುಃಖಯೋನಯಃ' ಎನ್ನುವ ಪದದ ಅಂತರ್ಯವಿದೇ.

ಈ ಶ್ಲೋಕದ ದ್ವಾರ ದೃಶ್ಯಸೌಖ್ಯಗಳ ಎರಡು ದೋಷಗಳನ್ನು ಬಯಲು ಮಾಡಲಾಗಿದೆ- ೧) ಹೊರಗೆ ಸುಖವಾಗಿ ಕಂಡರೂ ಒಳಗೆ ದುಃಖವು ತುಂಬಿರುವುದು ೨) ಆದ್ಯಂತಗಳುಳ್ಳವಾದ್ದರಿಂದ ಅವು ಕ್ಷಣಿಕಗಳು. ಅಂದರೆ ದುಃಖಜನಕತ್ವ, ಕ್ಷಣಿಕತೆ ಎನ್ನುವ ಎರಡು ಪ್ರಬಲ ದೋಷಗಳು ವಿಷಯ ಭೋಗಗಳಲ್ಲಿವೆ. ಆತ್ಮಸುಖವಾದರೋ ಹಾಗಲ್ಲ. ಅದರಲ್ಲಿ ದುಃಖವು ಲವಲೇಶವಾದರೂ ಎಲ್ಲಿಯೂ ಇರುವುದಿಲ್ಲ. ತೈಲಧಾರೆಯಂತಿರುವ ಅವಿಚ್ಛಿನ್ನವಾದಂತಹ ಸುಖ ಅದು. ಮತ್ತೆ ಶಾಶ್ವತವಾದುದು. ವಿಷಯಸುಖವನ್ನು ಚಿಕ್ಕ ದೀಪಕ್ಕೆ ಹೋಲಿಸಿದರೆ ಆತ್ಮಸುಖವನ್ನು ಅಸ್ತಮಯವಿಲ್ಲದ ಸೂರ್ಯನಿಗೆ ಹೋಲಿಸಬಹುದು. ದೀಪವು ಯಾವಾಗಲಾದರೂ ಆರಿ ಹೋಗಬಹುದು. ಆದರೆ ಆತ್ಮಭಾಸ್ಕರನು ಎಂದೆಂದಿಗೂ ಉಪಶಮಿಸುವುದಿಲ್ಲ. ಇಂದ್ರಿಯ ಸುಖಗಳು ಚಿಕ್ಕ ಮಡುವಿನಂತವು, ಕ್ಷಣಕಾಲದಲ್ಲಿ ಒಣಗಿ ಹೋಗುವುವು. ಆತ್ಮಾನಂದವು ಸಮುದ್ರದಂತಹದು. ಅದು ಎಂದೆಂದಿಗೂ ಕುಗ್ಗುವುದಿಲ್ಲ. ಈ ಭೇದ ತಿಳಿದೇ, ಮಹನೀಯರಾದವರು ವಿಷಯ ಭೋಗಗಳಲ್ಲಿ ವಿರಕ್ತಿ ಹೊಂದಿ ಆತ್ಮಾನಂದವನ್ನೇ ಆಶ್ರಯಿಸುವರು. 'ಬುಧಃ'- ತಿಳಿದವನು, ದೃಶ್ಯಸುಖಗಳಲ್ಲಿ ರಮಿಸುವುದಿಲ್ಲ ಎಂದು ಹೇಳುವುದರಿಂದ ಅವುಗಳಲ್ಲಿ ರಮಿಸುವನು ಬುದ್ಧಿಹೀನನೆಂದು ಸ್ಪಷ್ಟವಾಗುತ್ತಿದೆ. ಎಷ್ಟು ಧನವಂತನಾದರೂ, ಅಧಿಕಾರವಂತನಾದರೂ, ವಿದ್ಯಾವಂತನಾದರೂ, ಬಲವಂತನಾದರೂ ವಿಷಯಗಳ ಕಡೆಗೆ ಓಡಿದರೆ ಆತನು ಭಗವದ್ದೃಷ್ಟಿಯಲ್ಲಿ ಬುದ್ಧಿಹೀನನೇ (ಅಬುಧಃ) ಎಂದು ಹೇಳಬೇಕಾಗುತ್ತದೆ-

ಪ್ರ : ವಿಷಯಸುಖಗಳ ಪ್ರಭಾವ ಎಂತಹದು?

ಉ : ೧) ಅವು ದುಃಖವನ್ನು ಒಳಗೆ ಹೊಂದಿರುವುವು (ದುಃಖ ಜನಕಗಳು) ೨) ಅಲ್ಪಕಾಲ ಮಾತ್ರ ಇರುವುವು (ಕ್ಷಣಿಕಗಳು).

ಪ್ರ : ಆದ್ದರಿಂದ ವಿವೇಕವಂತನಾದವನು ಏನು ಮಾಡಬೇಕು?

ಉ: ಅಂತಹ ನಶ್ವರ ಸುಖಗಳಲ್ಲಿ ರಮಿಸದೆ, ಆತ್ಮಸುಖವನ್ನೇ ಅನ್ವೇಷಿಸಬೇಕು.

ಪ್ರ : ವಿಷಯಗಳ ಕಡೆಗೆ ಓಡುವವನು ಯಾರು?

ಉ : ಬುದ್ಧಿಯಿಲ್ಲದವನು, ಅಜ್ಞಾನಿ.

**ಅ||** ವಿಷಯಲೋಲುಪತೆಯನ್ನು (ಕಾಮಕ್ರೋಧಾದಿಗಳನ್ನು) ತ್ಯಜಿಸುವವನೇ ಸುಖವನ್ನು ಹೊಂದುವನೆಂದು ತಿಳಿಸಲಾಗುತ್ತಿದೆ-

**೨೩. ಶಕ್ನೋತೀಹೈವ ಯಸ್ಸೋಢುಂ ಪ್ರಾಕ್ಛರೀರವಿಮೋಕ್ಷಣಾತ್**
**ಕಾಮಕ್ರೋಧೋದ್ಭವಂ ವೇಗಂ ಸ ಯುಕ್ತಃ ಸ ಸುಖೀ ನರಃ**

**ಅರ್ಥ:** ಯಃ=ಯಾರು; ಶರೀರ ವಿಮೋಕ್ಷಣಾತ್=ಶರೀರವನ್ನು ಬಿಡುವ; ಪ್ರಾಕ್=ಮುಂದೆ; ಇಹ ಏವ=ಇಲ್ಲಿಯೇ (ಈ ಲೋಕದಲ್ಲೇ); ಕಾಮ ಕ್ರೋದೋದ್ಭವಂ=ಕಾಮಕ್ರೋಧಗಳಿಂದ ಜನಿಸಿದ; ವೇಗಂ=ಕ್ಷೋಭೆಯನ್ನು (ತೀವ್ರತೆಯನ್ನು); ಸೋಢುಂ=ಸಹಿಸಲು (ಜಯಿಸಲು); ಶಕ್ನೋತಿ=ಸಮರ್ಥ ನಾಗುತ್ತಿದ್ದಾನೋ; ಸಃ ನರಃ=ಆ ಮನುಜನು; ಯುಕ್ತಃ=ಯೋಗಿಯು; ಸಃ=ಆತನು; ಸುಖೀ=ಸುಖವಂತವನಾಗುವನು.

**ತಾ||** ಯಾರು ಈ ಶರೀರವನ್ನು ಬಿಡುವುದಕ್ಕೆ ಮುಂಚೆಯೇ ಇಲ್ಲಿಯೇ (ಈ ಜನ್ಮದಲ್ಲೇ) ಕಾಮಕ್ರೋಧಗಳ ವೇಗಗಳನ್ನು ನಿಗ್ರಹಿಸುತ್ತಾನೋ, ಆತನೇ ಯೋಗಿಯೂ (ಚಿತ್ತೋಪರತಿಯುಳ್ಳವನು), ಸುಖವಂತನೂ ಆಗುವನು.

**ವ್ಯಾಖ್ಯೆ:** ಮೋಕ್ಷಕ್ಕೆ ಬೇಕಾದ ಸಾಧನ ಸಾಮಗ್ರಿಗಳನ್ನು ಈ ಜೀವನದಲ್ಲೇ ಒದಗಿಸಿಕೊಳ್ಳಬೇಕು. ಮತ್ತೆ ಬೇರೆ ಲೋಕದಲ್ಲಾಗಲಿ, ಜನ್ಮದಲ್ಲಾಗಲಿ ಆ ಕಾರ್ಯ ಸಾಧ್ಯವಾಗದು. ಭೂಲೋಕ ಕರ್ಮಭೂಮಿ. ಸಾಧನೆ ಮಾಡಲು ಸರಿಯಾದ ಪ್ರದೇಶ. ಸ್ವರ್ಗಾದಿ ಊರ್ಧ್ವಲೋಕಗಳಲ್ಲಾಗಲಿ, ಪಾತಾಳಾದಿ ಅಧೋಲೋಕಗಳಲ್ಲಾಗಲಿ ಪರಮಾತ್ಮಸಾಧನೆಗೆ ಅವಕಾಶಗಳಿರುವುದಿಲ್ಲ (ಅವು ಕರ್ಮಾನುಭವ ಲೋಕಗಳು). ಆದ್ದರಿಂದ 'ಇಹೈವ' ಎನ್ನುವ ಪದವನ್ನು ಇಲ್ಲಿ ಬಳಸಲಾಗಿದೆ. ಈ ಮೊದಲೇ ೧೯ನೆಯ ಶ್ಲೋಕದಲ್ಲಿ 'ಇಹೈವ ತೈರ್ಜಿತಃ ಸ್ವರ್ಗಃ' ಎಂದು ಹೇಳಲ್ಪಟ್ಟಿತ್ತು. ಈ ಪ್ರಕಾರವಾಗಿ 'ಇಹೈವ' (ಇಲ್ಲಿಯೇ) ಎನ್ನುವ ಪದವು ಒಂದೇ ಅಧ್ಯಾಯದಲ್ಲಿ ಒಂದೇ ಸಂದರ್ಭದಲ್ಲಿ ಎರಡು ಸಾರಿ ಉಪಯೋಗಿಸಿರುವುದರಿಂದ 'ಇಲ್ಲಿಯೇ' ಈ ಲೋಕದಲ್ಲೇ, ಈ ಜನ್ಮದಲ್ಲೇ ಅಧ್ಯಾತ್ಮಸಾಧನೆಯನ್ನು ತ್ವರಿತವಾಗಿ ಪೂರ್ತಿಮಾಡಬೇಕೆಂದು ಭಗವಂತನು ಒತ್ತಿ ಹೇಳಿದಂತಾಗಿದೆ.

"ಪ್ರಾಕ್ಛರೀರ ವಿಮೋಕ್ಷಣಾತ್"- ಶರೀರವನ್ನು ಬಿಡುವುದಕ್ಕಿಂತ ಮುಂಚೆಯೇ - ಅಂದರೆ ಮರಣ ಬರುವುದಕ್ಕೆ ಮುಂಚೆಯೇ ಕಾಮ ಕ್ರೋದಾಧಿಗಳ ಮೇಲಿನ ವಿಜಯವನ್ನು ಸಾಧಿಸಬೇಕೆಂದು ಎಚ್ಚರಿಸಿದ್ದಾನೆ. ಏಕೆಂದರೆ ಬರುವ ಜನ್ಮ ಮಾನವ ಜನ್ಮವೇ ಆಗಿರುತ್ತದೆಯೆಂದೂ ಇಲ್ಲವೆ ಒಂದು ವೇಳೆ ಆದರೂ ಮೋಕ್ಷ ಸಾಧನೆಗೆ ಅವಕಾಶಗಳಿರುತ್ತವೆಯೆಂದಾಗಲಿ ಯಾವ ನಂಬಿಕೆಯೂ ಇಲ್ಲ. ಆದ್ದರಿಂದ ಈ ಜೀವನವನ್ನೇ ಸದುಪಯೋಗ ಪಡಿಸಿಕೊಂಡು ನಿರಂತರವಾಗಿ ಪರಮಾತ್ಮಲಕ್ಷ್ಯದ ಪ್ರಯತ್ನ ಮಾಡಬೇಕು.

*'ಶೀರ್ಯತೇ ಇತಿ ಶರೀರಂ'*- ಶಿಥಿಲವಾಗಿ ಹೋಗುವುದೇ ಶರೀರ. ಆದ್ದರಿಂದ ಅದು ಬಹಳ ಕಾಲವಿರದು. ಅದು ಬುದ್ಬುಧ ಪ್ರಾಯವಾದದ್ದು. ಮತ್ತೆ ಮೃತ್ಯುವೆನ್ನುವುದು ಇಂತಹ ಸಮಯದಲ್ಲಿ ಬರುತ್ತದೆಂದು ಯಾರೂ ಹೇಳಲಾರರು. ವೃದ್ಧಾಪ್ಯದಲ್ಲೇ ಅಲ್ಲದೆ, ಬಾಲ್ಯ ಯೌವನಗಳಲ್ಲಿಯೂ ಜನರು ಮರಣಿಸುತ್ತಿದ್ದಾರೆ. ಆದ್ದರಿಂದ ಸಾಧನೆಯನ್ನು ವೃದ್ಧಾಪ್ಯದವರೆಗೆ ಮುಂದೆ ಹಾಕುವುದು ಅವಿವೇಕವೇ ಸರಿ. ಮತ್ತೆ ವೃದ್ಧಾಪ್ಯದಲ್ಲಿ ಶಕ್ತಿ ಸಾಮರ್ಥ್ಯಗಳು ಉಡುಗಿ ಹೋಗುವುದರಿಂದ ಧ್ಯಾನಾದಿ, ಇಂದ್ರಿಯ ಮನೋನಿಗ್ರಹಾದಿಗಳು, ಅಂದುಕೊಂಡ ಹಾಗೆ ನಡೆಯುವುದು ಕಷ್ಟ. ಆದ್ದರಿಂದ ಶರೀರ ಪತನವಾಗುವುದಕ್ಕಿಂತ ಮುಂಚೆಯೇ ಕಾಮಾದಿಗಳ ವೇಗವನ್ನು ನಿಗ್ರಹಿಸಿ, ಧ್ಯಾನಾದಿಗಳನ್ನು ಆಚರಿಸಬೇಕೆಂದು ಭಗವಂತನು ಇಲ್ಲಿ ಆದೇಶ ಕೊಡುತ್ತಿದ್ದಾನೆ. ಹಾಗೆ ಮಾಡುವವನೇ ಸುಖವಂತನೆಂದೂ ಹೇಳುತ್ತಿದ್ದಾನೆ (ಸ ಸುಖೀ). ಹಾಗೆ ಮಾಡದಿದ್ದಲ್ಲಿ ಮಹಾವಿನಾಶ ವೊದಗುವುದೆಂದು ಶ್ರುತಿಗಳು ಘೋಷಿಸುತ್ತಿವೆ.*

ಇದರಿಂದ ಸುಖವನ್ನಪೇಕ್ಷಿಸುವವನು ಮೊದಲು ತನ್ನಲ್ಲಿ ಮನೆ ಮಾಡಿಕೊಂಡಿರುವ ಮುಖ್ಯ ಶತ್ರುಗಳಾದ ಕಾಮಕ್ರೋಧಗಳನ್ನು

ಜಯಿಸಬೇಕೆಂದು ಸ್ಪಷ್ಟವಾಗುತ್ತಿದೆ. ಅರಿಷಡ್ವರ್ಗಗಳಲ್ಲಿ ಕಾಮಕ್ರೋಧಗಳು ಪ್ರಧಾನವಾಗಿರುವುದರಿಂದ ಆ ಎರಡನ್ನೇ ಇಲ್ಲಿ ಪ್ರತಿನಿಧಿ ಪೂರ್ವಕವಾಗಿ ಹೇಳಲ್ಪಟ್ಟಿದ್ದರೂ ಬೇರೆಯ ದೋಷಗಳೂ ಕೂಡ ಅವುಗಳ ಹಾಗೆ ಎಂದು ತಿಳಿಯಬೇಕು. ಅಂದರೆ ಎಲ್ಲವನ್ನೂ ಜಯಿಸಬೇಕೆಂದು ಭಾವ. ಅವು ಪ್ರಬಲ ಶತ್ರುಗಳು ಹಾಗು ನಿತ್ಯವೈರಿಗಳಾದ್ದರಿಂದ ಸಾಧಕನು ಒಂದು ಕಣ್ಣಿನಲ್ಲಿ ನಿರಂತರ ಅವುಗಳ ಮೇಲೆ ನಿಗಾವಿಟ್ಟಿರಬೇಕು.

'ಓ ಜೀವಿಗಳಿರಾ! ಶರೀರವನ್ನು ಬಿಡುವುದಕ್ಕೆ ಮುಂಚೆಯೇ ಇಂದ್ರಿಯ ಗಳನ್ನು, ಮನಸ್ಸನ್ನು, ಕಾಮಕ್ರೋಧಾದಿ ಅರಿಷಡ್ವರ್ಗಗಳನ್ನು ಜಯಿಸಲು ಯತ್ನಿಸಿರಿ. ಮರಣವು ಯಾವ ಸಮಯದಲ್ಲಿ ಬರುವುದೋ ಯಾರಿಗೂ ಗೊತ್ತಿಲ್ಲವಾದ್ದರಿಂದ ಎಲ್ಲಾ ಕಾಲದಲ್ಲಿ, ಸಾಧನೆಯಲ್ಲಿ ಮಗ್ನರಾಗಿರಿ. ಅಮೂಲ್ಯವಾದ ಈ ಮಾನವ ಜೀವನವನ್ನು, ಭೋಗಾದಿಗಳಲ್ಲಿ ಕಳೆದು ವ್ಯರ್ಥಗೊಳಿಸಿಕೊಳ್ಳಬೇಡಿ. ಈ ಪ್ರಕಾರ ನಿಮ್ಮ ಮನೋವಿಕಾರಗಳನ್ನು ನೀವು ಜಯಿಸಿದಲ್ಲಿ ಅಪಾರಸುಖವನ್ನು (ಆತ್ಮಾನಂದವನ್ನು) ಪಡೆಯಬಲ್ಲಿರಿ' ಎಂದು ಭಗವಂತನು ಈ ಶ್ಲೋಕದ ಮೂಲಕ ಜೀವಿಗಳನ್ನು ಎಚ್ಚರಿಸುತ್ತಿದ್ದಾನೆ.

ಅಧ್ಯಾತ್ಮ ಮಾರ್ಗದಲ್ಲಿ ಪ್ರಮತ್ತತೆ, ಸೋಮಾರಿತನ ಕೆಲಸಕ್ಕೆಬಾರದು. ಆಯುವಿನ ಒಂದೊಂದು ಕ್ಷಣ ಹೋದಂತೆಲ್ಲಾ, ತಿರುಗಿ ಎಷ್ಟು ಕೋಟಿ ರತ್ನಗಳನ್ನು ಕೊಟ್ಟರೂ ಅದು ಮತ್ತೆ ಲಭಿಸದು.@ ಆದ್ದರಿಂದ ಕಾಲವನ್ನು ವ್ಯರ್ಥವಾಗಿ ಕಳೆಯದೆ ಇಂದ್ರಿಯ ಜಯದ ದ್ವಾರ ಆತ್ಮಾನ್ವೇಷಣೆಯನ್ನು ಮಾಡಬೇಕು.

"ವೇಗಂ"- ಎಂದು ಹೇಳುವುದರಿಂದ ಆ ಕಾಮಾದಿಗಳು ಸಂಕ್ಷೋಭೆ ಯನ್ನುಂಟುಮಾಡುವುವು ಎಂದು ವ್ಯಕ್ತವಾಗುತ್ತದೆ'.

"ಸ ನರಃ"- ಎನ್ನುವುದಕ್ಕೆ - 'ಈ ಪ್ರಕಾರವಾಗಿ ಕಾಮಾದಿಗಳನ್ನು ಜಯಿಸುವವನೇ ನರನು (ಮಾನವನು) ಎಂದು ಹೇಳಲಾಗಿದೆ.

"ಶಕ್ನೋತಿ"- ಎನ್ನುವ ಪದದಿಂದ' ಭಕ್ತಿ ವೈರಾಗ್ಯಾದಿಗಳ ಮೂಲಕ ಕಾಮಾದಿಗಳನ್ನು ಸುಲಭವಾಗಿ ಅಣಗಿ ಹಾಕಬಹುದೆಂದು ಸ್ಪಷ್ಟವಾಗುತ್ತಿದೆ.

ಈ ಶ್ಲೋಕದ ದ್ವಾರ ಈ ಕೆಳಗಿನ ವಿಷಯಗಳು ತಿಳಿಯುತ್ತಿವೆ.

೧) ಶರೀರ ಪತನವಾಗುವುದಕ್ಕೆ ಮುಂಚೆಯೇ ಮೋಕ್ಷ ಪ್ರಯತ್ನವನ್ನು ಮಾಡಬೇಕು.

೨) ಮೋಕ್ಷ ಪ್ರಯತ್ನಗಳಲ್ಲಿ ಮುಖ್ಯವಾದುದು ಕಾಮಕ್ರೋಧಾದಿಗಳನ್ನು ಜಯಿಸುವುದು.

೩) ಹಾಗೆ ಅವುಗಳನ್ನು ಜಯಿಸುವವನು ಮಾತ್ರ ಪೂರ್ಣ ಸುಖವನ್ನು ಹೊಂದುವನೇ ಹೊರತು ಬೇರೆಯವರಲ್ಲ.

**ಅ॥** ಈ ಪ್ರಕಾರವಾಗಿ ಕಾಮಾದಿಗಳನ್ನು ಜಯಿಸಿ ಅಂತರ್ಮುಖ ದೃಷ್ಟಿ ಯುಳ್ಳವನು ಬ್ರಹ್ಮಾನುಭೂತಿಯನ್ನು ಹೊಂದುವನೆಂದು ಹೇಳಲಾಗುತ್ತಿದೆ-

**೨೪. ಯೋಽನ್ತಃಸುಖೋಽನ್ತರಾರಾಮ ಸ್ತಥಾಽಂತರ್ಜ್ಯೋತಿರೇವ ಯಃ**
**ಸ ಯೋಗೀ ಬ್ರಹ್ಮನಿರ್ವಾಣಮ್ ಬ್ರಹ್ಮಭೂತೋಽಧಿಗಚ್ಛತಿ**

**ಅರ್ಥ:** ಯಃ=ಯಾರು; ಅಂತಃಸುಖಃ=ಅಂತರಾತ್ಮದಲ್ಲೇ ಸುಖವುಳ್ಳವನು; ಅಂತರಾರಾಮಃ=ಆತ್ಮದಲ್ಲಿಯೇ ಕ್ರೀಡಿಸುವವನು; ತಥಾ=ಆ ಪ್ರಕಾರವಾಗಿ; ಯಃ=ಯಾರು; ಅಂತರ್ಜ್ಯೋತಿಃ ಏವ=ಆತ್ಮದಲ್ಲಿಯೇ ಪ್ರಕಾಶ ಹೊಂದಿರುವವನು (ಆಗಿದ್ದಾನೋ); ಸಃ ಯೋಗೀ=ಆ ಯೋಗಿ (ಬ್ರಹ್ಮನಿಷ್ಠನು); ಬ್ರಹ್ಮಭೂತಃ=ಬ್ರಹ್ಮಸ್ವರೂಪನಾಗಿ; ಬ್ರಹ್ಮನಿರ್ವಾಣಮ್=ಬ್ರಹ್ಮಸಾಯುಜ್ಯವನ್ನು (ಬ್ರಹ್ಮಾನಂದವನ್ನು ಇಲ್ಲವೆ ಮೋಕ್ಷವನ್ನು); ಅಧಿಗಚ್ಛತಿ=ಹೊಂದುತ್ತಿದ್ದಾನೆ.

**ತಾ॥** ಯಾವನು ಆತ್ಮದಲ್ಲಿಯೇ ಸುಖವನ್ನು ಹೊಂದಿ, ಆತ್ಮದಲ್ಲಿಯೇ ಕ್ರೀಡಿಸುತ್ತ, ಆತ್ಮದಲ್ಲಿಯೇ ಪ್ರಕಾಶ ಹೊಂದಿದವನಾಗಿರುವನೋ ಆ ಯೋಗಿ ಬ್ರಹ್ಮಸ್ವರೂಪನಾಗಿದ್ದು ಬ್ರಹ್ಮಸಾಕ್ಷಾತ್ಕಾರವನ್ನು (ಮೋಕ್ಷವನ್ನು) ಹೊಂದುವನು.

**ವ್ಯಾಖ್ಯೆ:** ಬ್ರಹ್ಮಸಾಕ್ಷಾತ್ಕಾರ (ಬ್ರಹ್ಮಾನಂದವು) ಯಾರಿಗುಂಟಾಗುವುದು ಎನ್ನುವುದನ್ನು ಈ ಶ್ಲೋಕದಲ್ಲಿ ವಿವರಿಸಲಾಗುತ್ತಿದೆ. ಸರ್ವೋನ್ನತವಾದ ಬ್ರಹ್ಮನಿರ್ವಾಣ ಸ್ಥಿತಿಯನ್ನು ಪ್ರಯತ್ನದಿಂದ ಸರ್ವರೂ ಹೊಂದಬಲ್ಲರು. ಆ ಪ್ರಯತ್ನವೇನೆಂದರೆ, ಬಾಹ್ಯಸುಖಗಳನ್ನು ಇಚ್ಛಿಸದೆ ದೃಷ್ಟಿಯನ್ನು ಅಂತರಂಗಕ್ಕೆ ಮರಳಿಸಿ ಆತ್ಮಸುಖವನ್ನೇ ಅನ್ವೇಷಿಸುವುದು ಹಾಗು (ಇಂದ್ರಿಯಾರ್ಥಗಳಲ್ಲಿ ಕ್ರೀಡಿಸದೆ) ಆತ್ಮದಲ್ಲೇ ರಮಿಸುವುದಾಗಿರುವುದು. ಅಂದರೆ ಇಂದ್ರಿಯಾದಿಗಳನ್ನು, ಮನಸ್ಸನ್ನು ವಿಷಯಾದಿಗಳ ಮೇಲೆ, ಭೋಗವಿಲಾಸಗಳ ಕಡೆಗೆ ಓಡದಂತೆ ನಿಗ್ರಹಿಸಿ, ವಿವೇಕ ವೈರಾಗ್ಯಾದಿಗಳಿಂದ ಅವುಗಳನ್ನು ಸ್ವಸ್ವರೂಪಾತ್ಮದಲ್ಲಿ ಸ್ಥಾಪಿಸುವುದೇ ಆಗಿದೆ.

ಈ ಶ್ಲೋಕದಲ್ಲಿ ಮೂರು ವಿಷಯಗಳು ಪ್ರಸ್ತಾಪಿಸಲ್ಪಟ್ಟಿವೆ- ೧) ಸುಖ ೨) ಕ್ರೀಡೆ ೩) ಜ್ಯೋತಿ ಒಂದೊಂದನ್ನು ಕುರಿತು ಸಂಕ್ಷೇಪವಾಗಿ ಇಲ್ಲಿ ವಿಚಾರಿಸೋಣ-

೧) **'ಸುಖ'**- ಸಾಮಾನ್ಯ ಜನರು ಸುಖಕ್ಕೋಸ್ಕರ ಬಾಹ್ಯಪದಾರ್ಥಗಳನ್ನೇ ಬಯಸುತ್ತಿರುತ್ತಾರೆ. ತದ್ವಾರ ಅವರು ಅಲ್ಪವಾದ ಪ್ರತಿಬಿಂಬ ಸುಖವನ್ನೇ ಪಡೆದು ಅದನ್ನೇ ದೊಡ್ಡದೆಂದು ತಿಳಿದು ತೃಪ್ತಿಪಡುತ್ತಿದ್ದಾರೆ. ಆದರೆ ವಾಸ್ತವವಾಗಿ ವಿಚಾರಿಸಿದರೆ ಸುಖವು ಬಾಹ್ಯದಲ್ಲಿಲ್ಲ, ಒಳಗೇ ಇದೆ. ಸುಖದ ಪ್ರಧಾನ ಕೇಂದ್ರವು ಅಂತರಾತ್ಮದಲ್ಲಿಯೇ ಇದೆ. ಅದು ಶಾಶ್ವತವಾದ ಸುಖ. ಬಿಂಬಾನಂದವು. ಬಾಹ್ಯಸುಖವಾದರೋ ಅಶಾಶ್ವತ, ಕ್ಷಣಿಕ, ಪ್ರತಿಬಿಂಬ ಹಾಗು ದುಃಖಮಿಶ್ರಿತವಾದದ್ದು, ಈ ಸತ್ಯವನ್ನರಿತು ವಿವೇಕವಂತರು ತಮ್ಮ ಶಕ್ತಿಯನ್ನು ಅಂತರ್ಮುಖ ಮಾಡಿಕೊಂಡು ಆತ್ಮಸುಖವನ್ನೇ ಕೋರುವರು. ಅಂತಹವರು ಧನ್ಯರು, ಕೃತಕೃತ್ಯರು. ಅಚಿರಕಾಲದಲ್ಲಿಯೇ ಅವರು ಬ್ರಹ್ಮಭೂತಿಗಳಾಗಿ ಬೆಳಗುವರು.

೨) **'ಕ್ರೀಡೆ'**- ಅವಿವೇಕಿಗಳು ಬಾಹ್ಯವಸ್ತುಗಳಲ್ಲೇ ಕ್ರೀಡಿಸುವರು. ವಿಷಯ ಕ್ಷೇತ್ರಗಳಲ್ಲಿ ರಮಿಸುವರು. ಅವರಿಗೆ ಅದೇ ಕ್ರೀಡಾಸ್ಥಾನ. ಆದರೆ ವಿವೇಕಿಗಳು ದೃಶ್ಯಪದಾರ್ಥಗಳನ್ನು ಚಂಚಲವೆಂದು ಗ್ರಹಿಸಿ, ಅವುಗಳನ್ನು ಉಪೇಕ್ಷಿಸಿ ಆತ್ಮಧ್ಯಾನದಲ್ಲೇ ಕಾಲಕಳೆಯುವರು. ಅವರಿಗೆ ಅದೇ ಆರಾಮಸ್ಥಳ,

---

* ನ ಚೇದಿಹಾವೇದಿನ್ಮಹತೀ ವಿನಷ್ಟಿಃ (ಕೇನೋಪನಿಷತ್ತು)

@ ಆಯುಷಃ ಕ್ಷಣ ಏಕೋಽಪಿ ಸರ್ವರತ್ನೈರ್ನ ಲಭ್ಯತೇ। ನೀಯತೇ ತದ್ವೃಥಾ ಏನ ಪ್ರಮಾದಃ ಸುಮಹಾನಹೋ (ವಸಿಷ್ಠ ಗೀತೆ)

ಉದ್ಯಾನವನ, ಕ್ರೀಡಾಂಗಣ, ವಿಹಾರಪ್ರದೇಶ. ಬಹಿರ್ಮುಖ ದೃಷ್ಟಿಯುಳ್ಳವರಿಗೆ ಅದರ ಬೆಲೆ ತಿಳಿಯದು. ಅಂತಹ ವಸ್ತುವೊಂದಿದೆಯೆಂದೂ ಅವರಿಗೆ ಗೊತ್ತಿಲ್ಲ. ವಿವೇಕವಂತರಾದರೋ ಅದರ ಸತ್ವವನ್ನು ಗ್ರಹಿಸಿ ಅದರಲ್ಲೇ ಕ್ರೀಡಿಸುತ್ತ ಅನಂತ ಶಾಂತಿಯನ್ನು ಪಡೆಯುವರು.

೩) **'ಜ್ಯೋತಿ'**- ಸಾಮಾನ್ಯರಿಗೆ ಬಾಹ್ಯದಲ್ಲಿರುವ ಸೂರ್ಯಚಂದ್ರಾದಿಗಳೇ ಜ್ಯೋತಿಗಳು. ಆದರೆ ಅವುಗಳನ್ನು ಪ್ರಕಾಶಿಸುವ ಜ್ಯೋತಿ ಇನ್ನೊಂದಿದೆ **(ತಸ್ಯ ಭಾಸಾ ಸರ್ವಮಿದಂ ವಿಭಾತಿ)**. ಅದೇ ಆತ್ಮ. ಸೂರ್ಯನನ್ನು ನೇತ್ರವು ಪ್ರಕಾಶಿಸುವುದು. ನೇತ್ರವನ್ನು ಬುದ್ಧಿ ಪ್ರಕಾಶಿಸುವುದು. ಬುದ್ಧಿಯನ್ನು ಆತ್ಮ ಪ್ರಕಾಶಿಸುವುದು. ಅದು ಜ್ಯೋತಿರ್ಜ್ಯೋತಿ, ಪರಂಜ್ಯೋತಿ. ಮಹನೀಯರು ಅಂತಹ ಆತ್ಮಜ್ಯೋತಿಯನ್ನು ಆಶ್ರಯಿಸಿ ಶಾಶ್ವತ ಪ್ರಕಾಶ ಸ್ವರೂಪರಾಗಿ ವರ್ತಿಸುವರು. ಜೀವನ್ಮುಕ್ತರಾಗಿ ಬೆಳಗುವರು.

ಈ ಪ್ರಕಾರವಾಗಿ ದೃಶ್ಯವ್ಯಾಮೋಹವನ್ನು ಬಿಟ್ಟು ಆತ್ಮವನ್ನೇ ಸುಖಸ್ಥಾನವಾಗಿ, ಕ್ರೀಡಾಸ್ಥಳವಾಗಿ, ಪ್ರಕಾಶಕ್ಷೇತ್ರವಾಗಿ ತೆಗೆದುಕೊಂಡವನು, ನಿರಂತರವೂ ಆತ್ಮಧ್ಯಾನ ಪರಾಯಣನೇ ಆಗಿ ಬ್ರಹ್ಮಭೂತನಾಗಿ, ಬ್ರಹ್ಮನಿರ್ವಾಣವನ್ನು (ಮೋಕ್ಷವನ್ನು) ಪಡೆಯುತ್ತಿದ್ದಾನೆ.

ಪ್ರ : ಬ್ರಹ್ಮ ಸಾಯುಜ್ಯವನ್ನು (ಮೋಕ್ಷವನ್ನು) ಯಾರು ಹೊಂದಬಲ್ಲರು?

ಉ : ೧) ಬಾಹ್ಯಸುಖಗಳನ್ನು ಬಿಟ್ಟು ಆತ್ಮದಲ್ಲಿಯೇ ಸುಖವನ್ನು ನೋಡುವವನು, ೨) ಬಾಹ್ಯಕ್ರೀಡೆಗಳಲ್ಲಿ ಆಸಕ್ತಿಯಿಲ್ಲದೆ ಆತ್ಮದಲ್ಲಿಯೇ ಕ್ರೀಡಿಸುವವನು ೩) ಬಾಹ್ಯ ಪ್ರಕಾಶಗಳಲ್ಲಿ ದೃಷ್ಟಿಯಿಡದೆ ಆತ್ಮದಲ್ಲಿಯೇ ಸ್ಥಿರಗೊಂಡಿರುವವನು ಬ್ರಹ್ಮನಿರ್ವಾಣವನ್ನು (ಮೋಕ್ಷ) ಹೊಂದುವನು.

**ಅ॥** ಹಾಗೆ ಬ್ರಹ್ಮಸಾಕ್ಷಾತ್ಕಾರ ಪಡೆದವರ ಲಕ್ಷಣಗಳನ್ನು ಎರಡು ಶ್ಲೋಕಗಳ ದ್ವಾರ ವಿವರಿಸಿ ಹೇಳಲಾಗುತ್ತಿದೆ-

**೨೫. ಲಭಂತೇ ಬ್ರಹ್ಮನಿರ್ವಾಣಮೃಷಯಃ ಕ್ಷೀಣಕಲ್ಮಷಾಃ**
**ಛಿನ್ನದ್ವೈಧಾ ಯತಾತ್ಮಾನಃ ಸರ್ವಭೂತಹಿತೇರತಾಃ**

**ಅರ್ಥ:** ಕ್ಷೀಣಕಲ್ಮಷಾಃ=ಪಾಪವನ್ನು ಹೋಗಲಾಡಿಸಿಕೊಂಡವರು; ಛಿನ್ನದ್ವೈಧಾಃ=ಸಂಶಯಗಳಿಲ್ಲದವರು; ಯತಾತ್ಮಾನಃ=ಸ್ವಾಧೀನವಾದ ಇಂದ್ರಿಯಗಳನ್ನು, ಮನಸ್ಸನ್ನು ಹೊಂದಿದವರು; ಸರ್ವಭೂತಹಿತೇ=ಸಮಸ್ತ ಪ್ರಾಣಿಗಳ ಹಿತದಲ್ಲಿ; ರತಾಃ=ಆಸಕ್ತಿಯುಳ್ಳವರು (ಆಗಿ); ಋಷಯಃ= ಋಷಿಗಳು (ಜ್ಞಾನಿಗಳು); ಬ್ರಹ್ಮನಿರ್ವಾಣಮ್=ಬ್ರಹ್ಮ ಸಾಯುಜ್ಯವನ್ನು (ಮೋಕ್ಷವನ್ನು, ಬ್ರಹ್ಮಾನಂದವನ್ನು); ಲಭಂತೇ=ಹೊಂದುತ್ತಿದ್ದಾರೆ.

**ತಾ॥** ಪಾಪರಹಿತರು, ಸಂಶಯವರ್ಜಿತರು, ಇಂದ್ರಿಯ ಮನಸ್ಸುಗಳನ್ನು ಸ್ವಾಧೀನ ಪಡಿಸಿಕೊಂಡವರು, ಸಮಸ್ತ ಪ್ರಾಣಿಗಳ ಕ್ಷೇಮದಲ್ಲಿ ಆಸಕ್ತಿಯುಳ್ಳ ಋಷಿಗಳು (ಅತೀಂದ್ರಿಯ ಜ್ಞಾನಿಗಳು), ಬ್ರಹ್ಮಸಾಕ್ಷಾತ್ಕಾರವನ್ನು (ಮೋಕ್ಷವನ್ನು) ಹೊಂದುತ್ತಿದ್ದಾರೆ.

**ವ್ಯಾಖ್ಯೆ:** ಬ್ರಹ್ಮಸಾಯುಜ್ಯವಾದ ಮೋಕ್ಷವು ಯಾರಿಗೆ ಲಭಿಸುವುದು ಎನ್ನುವುದನ್ನು ಈ ಶ್ಲೋಕದಲ್ಲಿ ಇನ್ನೂ ವಿವರವಾಗಿ ಕೊಡಲಾಗಿದೆ. ಋಷಿಗಳು ಮೋಕ್ಷಧಾಮವನ್ನಲಂಕರಿಸುವರು ಎಂದು ಇಲ್ಲಿ ಹೇಳಲಾಗಿದೆ. ಋಷಿಗಳು ಎಂದರೆ ಯಾರು? 'ಹೃಷೀಕಮ್'ಗಳನ್ನು (ಇಂದ್ರಿಯಗಳನ್ನು) ಜಯಿಸಿ ಮನಸ್ಸನ್ನು ಪರಮಾತ್ಮನಲ್ಲಿ ಸಂಲಗ್ನಿಸುವವರೇ ಋಷಿಗಳು. ಋಷಿತ್ವವೆನ್ನುವುದು ಒಂದು ಮಹೋನ್ನತ ಪದವಿ. ಅದು (ಬಿ. ಎ., ಎಂ.ಎ., ಗಳಂತೆ) ಒಂದು 'ಡಿಗ್ರಿ'. ಪ್ರಯತ್ನಿಸುವುದರಿಂದ ಸರ್ವರೂ ಅದನ್ನು ಹೊಂದಬಹುದು. ನಿನ್ನೆ ಅಜ್ಞಾನಿಯಾಗಿದ್ದವನು ಸತ್ಪ್ರಯತ್ನಗಳಿಂದ ನಾಳೆ ಋಷಿಯಾಗಬಹುದು. ವಿಶ್ವವಿದ್ಯಾಲಯದ ಡಿಗ್ರಿಗಳಿಗೆ ಹತ್ತು, ಹದಿನೈದು ವರ್ಷಗಳಕಾಲ ವಿದ್ಯಾರ್ಥಿಗಳು ಹೇಗೆ ವ್ಯಾಸಂಗ ಮಾಡುತ್ತಿರುವರೋ ಹಾಗೆ ಈ ಋಷಿತ್ವಕ್ಕೆ ಅನವರತ ಸಾಧನೆ ಮಾಡಬೇಕು. ಆ ಸಾಧನೆಯಲ್ಲಿ ತೇರ್ಗಡೆಯಾದವನು ಇನ್ನು ಸಾಮಾನ್ಯ ಮಾನವನಾಗಿ ಉಳಿಯುವುದಿಲ್ಲ. ಋಷಿಯಾಗುವನು. ಅಷ್ಟೇಕೆ, ಸಾಕ್ಷಾತ್ ಭಗವಂತನಾಗಿ ಹೋಗುವನು **(ಬ್ರಹ್ಮವಿದ್ಬ್ರಹ್ಮೈವಭವತಿ)** ಆ ಸಾಧನೆಯಲ್ಲಿ ಮುಖ್ಯವಾದ ನಾಲ್ಕನ್ನು ಇಲ್ಲಿ ಪ್ರಸ್ತಾಪಿಸಲಾಗಿದೆ.

೧) ಪಾಪರಾಹಿತ್ಯ ೨) ಸಂಶಯ ಹಾಗೂ ದ್ವಂದ್ವಗಳಿಲ್ಲದೇ ಇರುವುದು ೩) ಇಂದ್ರಿಯ ಮನೋನಿಗ್ರಹಣ ೪) ಸರ್ವಭೂತದಯೆ ಇವು ಸಾಧಕನಿಗೆ ಅಮೂಲ್ಯವಾದುವು ಆದ್ದರಿಂದ ಇವುಗಳನ್ನು ಕುರಿತು ಸ್ವಲ್ಪ ಯೋಚಿಸಬೇಕಾಗಿದೆ.

೧) **"ಪಾಪರಾಹಿತ್ಯ"**- ಪ್ರತಿ ಜೀವಿಯ ಚಿತ್ತದಲ್ಲಿ ಅನೇಕ ಜನ್ಮಾರ್ಜಿತ ಪಾಪಗಳಿರುವುವು. ಅವು ಪರಮಾರ್ಥ ಮಾರ್ಗಕ್ಕೆ ಅಡ್ಡಗೋಡೆಯಾಗಿವೆ. ಪಾಪಚಿತ್ತದಲ್ಲಿ ಆತ್ಮಜ್ಞಾನ ಉದಯಿಸದು. ಆದ್ದರಿಂದ ಪುಣ್ಯಕಾರ್ಯಗಳಿಂದ, ನಿಷ್ಕಾಮ ಕರ್ಮಾಚರಣೆಯಿಂದ ಭಕ್ತಿ ಧ್ಯಾನಾದಿಗಳಿಂದ ಆ ಪಾಪವನ್ನು ಹೋಗಲಾಡಿಸಿಕೊಂಡು ವಸ್ತ್ರವನ್ನು ಒಗೆದ ಹಾಗೆ ಚಿತ್ತವನ್ನು ಕಲ್ಮಷರಹಿತವಾಗಿ ಮಾಡಿಕೊಳ್ಳಬೇಕು.

೨) **"ಸಂಶಯರಾಹಿತ್ಯ"**- ಸಂಶಯಗಳು, ದ್ವಂದ್ವಗಳು ಮುಂತಾದುವುಗಳನ್ನು ವಿವೇಕದ ಸಹಾಯದಿಂದ ಹೊರಬೇಕು. **'ಛಿದ್ಯಂತೇ ಸರ್ವ ಸಂಶಯಾಃ'** ಎಂದ ಹಾಗೆ ಪರಮಾರ್ಥ ಜ್ಞಾನದಿಂದ, ತತ್ತ್ವವಿಚಾರಣೆಯಿಂದ ಸರ್ವಸಂಶಯಗಳನ್ನೂ ನಿವಾರಿಸಿಕೊಳ್ಳಬೇಕು.

೩) **"ಇಂದ್ರಿಯ ಮನೋನಿಗ್ರಹಣ"**- ದೃಶ್ಯ ವಸ್ತುಗಳ ಕಡೆಗೆ ಓಡುತ್ತಿರುವ ಇಂದ್ರಿಯಗಳು, ಮನಸ್ಸು, ಮೋಕ್ಷಕ್ಕೆ ಪ್ರತಿಬಂಧಕಗಳಾಗಿರುವುವು. ವಿವೇಕ ವೈರಾಗ್ಯಾದಿಗಳಿಂದ ಅವುಗಳನ್ನು ಸ್ವಾಧೀನಪಡಿಸಿಕೊಂಡು ಮನಸ್ಸನ್ನು ಆತ್ಮದಲ್ಲಿ ಸ್ಥಾಪಿಸಿಕೊಳ್ಳಬೇಕು. ಇಂದ್ರಿಯ ಜಯವಿಲ್ಲದೆ ಮೋಕ್ಷ ಮಾರ್ಗದಲ್ಲಿ ಒಂದು ಹೆಜ್ಜೆಯೂ ಮುಂದೆ ಹೋಗಲು ಸಾಧ್ಯವಿಲ್ಲ. ಕೈವಶವಾಗದ ಕುದುರೆಗಳಿಂದ ನಡೆಯುವ ರಥವು ಗಮ್ಯಸ್ಥಾನವನ್ನು ಹೇಗೆ ಸೇರುವುದಿಲ್ಲವೋ ಹಾಗೆ ಸಂಶಯ ರಹಿತನಾಗದ ಮನುಷ್ಯನು ಮುಕ್ತಿಧಾಮವನ್ನು ಸೇರಲಾರ. ಆದ್ದರಿಂದ ಇಂದ್ರಿಯಗಳನ್ನು ತನ್ನ ಹತೋಟಿಯಲ್ಲಿಟ್ಟುಕೊಳ್ಳಬೇಕು.

೪) **"ಸರ್ವಭೂತದಯೆ"**- *'ಸರ್ವಭೂತಹಿತೇರತಾಃ'* ಎನ್ನುವ ವಾಕ್ಯವು ಮತ್ತು ಅದರ ಭಾವವು, ಗೀತೆಯಲ್ಲಿ ಅನೇಕ ಕಡೆ ಕಂಡುಬರುತ್ತಿದೆ. ಇದು ಅನುಷ್ಠಾನ ವೇದಾಂತದ ಸೂತ್ರ. 'ಎಲ್ಲವೂ ಬ್ರಹ್ಮವೇ' ಎನ್ನುವುದು ಸಿದ್ಧಾಂತ. 'ಸರ್ವಭೂತದಯೆ' ಎನ್ನುವುದು ಆ ಸಿದ್ಧಾಂತದ ಆಚರಣಾ ರೂಪ. ಒಂದು ಪ್ರಾಣಿಯನ್ನು ದೂಷಿಸುತ್ತಾ, ದ್ವೇಷಿಸುತ್ತಿರುವವನು ಎಂದೆಂದಿಗೂ ಸರ್ವಾತ್ಮಭಾವವುಳ್ಳವನಾಗುವುದಿಲ್ಲ. 'ಎಲ್ಲವೂ ಆತ್ಮ' ಎನ್ನುವ ಭಾವವನ್ನು ಜೀರ್ಣಿಸಿಕೊಂಡವನು ಒಂದು ಪ್ರಾಣಿಗೂ ಅಪಕಾರ ಮಾಡುವುದಿಲ್ಲ, ಮಾಡಲು ಸಾಧ್ಯವೇ ಇಲ್ಲ. ಹಿತವನ್ನೇ ಕೋರುವನು. ಹೇಗೆಂದರೆ ವಿಶ್ವವೆಲ್ಲವನ್ನೂ

ಆತ್ಮರೂಪವಾಗಿ (ತನ್ನ ರೂಪವಾಗಿ) ನೋಡುವವನು, ಯಾವುದೇ ಒಂದು ಪ್ರಾಣಿಗೆ ಅಪಕಾರ ಮಾಡಿದರೆ ತನಗೆ ತಾನು ಅಪಕಾರ ಮಾಡಿಕೊಂಡಂತೆ ಭಾವಿಸುವನು. ಆದ್ದರಿಂದ ಸರ್ವಾತ್ಮಭಾವವುಳ್ಳವನಲ್ಲಿ ಯಾವಾಗಲೂ ಸರ್ವಭೂತದಯೆ ತುಂಬಿ ತುಳುಕುತ್ತಿರುತ್ತದೆ. ಒಬ್ಬನು ಆತ್ಮಜ್ಞಾನಿ ಹೌದೋ ಅಲ್ಲವೋ ಎನ್ನುವುದನ್ನು ನಿಷ್ಕರ್ಷೆಯಾಗಿ ಹೇಳಲು ಇದು ಒಂದು ಒಳ್ಳೆಯ ಮಾಪನ. ಧ್ಯಾನಾನುಷ್ಠಾನಗಳು ಔಷಧಗಳಾದರೆ 'ಸರ್ವಭೂತದಯೆ'ಯನ್ನು ಪಥ್ಯವೆಂದು ಹೇಳಬಹುದು. ಔಷಧ ಸೇವಿಸಿ ಪಥ್ಯ ಸರಿಯಾಗಿ ಮಾಡದಿದ್ದರೆ ರೋಗ ವಾಸಿಯಾಗದಂತೆ, ಭಗವದ್ಧ್ಯಾನವನ್ನು ಮಾಡುತ್ತ ಭೂತದಯೆ, ಜೀವಕಾರುಣ್ಯವಿಲ್ಲದೆ ಇದ್ದರೆ ಆ ಧ್ಯಾನ ಸಕ್ರಮವಾಗಿರುವುದಿಲ್ಲವಾದ್ದರಿಂದ ಭವರೋಗ ಅದರಿಂದ ವಾಸಿಯಾಗುವುದಿಲ್ಲ. ಇಲ್ಲಿ 'ಸರ್ವಭೂತಹಿತೇರತಾಃ' ಎಂದು ಹೇಳಿರುವುದರಿಂದ ಯಾವುದೋ ಒಂದು ಪ್ರಾಣಿಯ ಮೇಲೆ ದಯೆ ತೋರಿಸಿದರೆ ಸಾಲದೆಂದೂ, ಸಮಸ್ತ ಪ್ರಾಣಿಕೋಟಿಗಳ ಮೇಲೆ ಕರುಣೆ ಉಂಟಾಗಿ ಅವುಗಳ ಕ್ಷೇಮಕ್ಕೆ ಯತ್ನಿಸಬೇಕೆಂದು ಸೂಚಿತವಾಗುತ್ತಿದೆ.

ಈ ಪ್ರಕಾರವಾಗಿ ಮೇಲಿನ ನಾಲ್ಕು ಲಕ್ಷಣಗಳನ್ನು ಹೊಂದಿ ಋಷಿಯಾಗಿ ಬೆಳಗುವವನು ಬ್ರಹ್ಮನಿರ್ವಾಣ ರೂಪವಾದ ಮೋಕ್ಷವನ್ನು ಪಡೆಯುತ್ತಾನೆ.

ಪ್ರ : ಬ್ರಹ್ಮಸಾಕ್ಷಾತ್ಕಾರ (ಮೋಕ್ಷ)ವನ್ನು ಯಾರು ಹೊಂದಬಲ್ಲರು?

ಉ : ೧) ಪಾಪನಿವೃತ್ತಿ ಹೊಂದಿದವರು ೨) ಸಂಶಯ, ದ್ವಂದ್ವ ತೊಲಗಿದವರು ೩) ಇಂದ್ರಿಯ ಮನೋನಿಗ್ರಹ ಹೊಂದಿದವರು ೪) ಸರ್ವಭೂತಹಿತವನ್ನು ಆಚರಿಸುವರು, ಬ್ರಹ್ಮಸಾಯುಜ್ಯವನ್ನು (ಮೋಕ್ಷವನ್ನು) ಹೊಂದುವರು.

ಪ್ರ : ಋಷಿಗಳೆಂದರೆ ಯಾರು?

ಉ : ಮೇಲೆ ತಿಳಿಸಿದ ನಾಲ್ಕು ಸುಗುಣಗಳನ್ನು ಹೊಂದಿದವರು.

೨೬. ಕಾಮಕ್ರೋಧವಿಯುಕ್ತಾನಾಂ ಯತೀನಾಂ ಯತಚೇತಸಾಮ್
ಅಭಿತೋ ಬ್ರಹ್ಮನಿರ್ವಾಣಂ ವರ್ತತೇ ವಿದಿತಾತ್ಮನಾಮ್

**ಅರ್ಥ:** ಕಾಮಕ್ರೋಧವಿಯುಕ್ತಾನಾಂ=ಕಾಮಕ್ರೋಧಗಳಿಂದ ವಿಮುಕ್ತರಾದವರು; ಯತ ಚೇತಸಾಮ್=ನಿಗ್ರಹಿಸಿಲ್ಪಟ್ಟ ಚಿತ್ತವುಳ್ಳವರು (ಮನೋನಿಗ್ರಹವುಳ್ಳವರು); ವಿದಿತಾತ್ಮನಾಮ್=ಆತ್ಮತತ್ವವನ್ನು ತಿಳಿದವರು (ಆದ); ಯತೀನಾಮ್= ಯತ್ನಶೀಲರಿಗೆ; ಬ್ರಹ್ಮನಿರ್ವಾಣಮ್=ಬ್ರಹ್ಮಸಾಯುಜ್ಯ (ಮೋಕ್ಷ, ಬ್ರಹ್ಮಾನಂದ); ಅಭಿತಃ=ಸರ್ವತ್ರವೂ (ದೇಹವಿರುವಾಗಲೂ, ಇಲ್ಲದಾಗಲೂ); ವರ್ತತೇ= ಇರುವುದು.

**ತಾ||** ಕಾಮಕ್ರೋಧಾಧಿಗಳು ಇಲ್ಲದವರು, ಮನೋನಿಗ್ರಹವನ್ನು ಹೊಂದಿದವರು ಹಾಗು ಆತ್ಮತತ್ವವನ್ನು ತಿಳಿದ ಯತ್ನಶೀಲರಿಗೆ ಬ್ರಹ್ಮಸಾಯುಜ್ಯ (ಮೋಕ್ಷ, ಬ್ರಹ್ಮಾನಂದ)ವು ಸರ್ವತ್ರ (ಶರೀರವಿರುವಾಗಲೂ, ಇಲ್ಲದಾಗಲೂ) ಯಾವಾಗಲೂ ಬೆಳಗುತ್ತಲೇ ಇರುತ್ತದೆ.

**ವ್ಯಾಖ್ಯೆ:** ಮೋಕ್ಷವು ಎಲ್ಲಿದೆ? ಅದನ್ನು ಯಾರು ಹೊಂದಬಲ್ಲರು? ಎನ್ನುವ ಪ್ರಶ್ನೆಗಳಿಗೆ ಇಲ್ಲಿ ಉತ್ತರ ಕೊಡಲಾಗಿದೆ.

೧) ಕಾಮಕ್ರೋಧಗಳು ತೊಲಗುವಿಕೆ (ವಾಸನಾಕ್ಷಯ)

೨) ಚಿತ್ತವು ಸ್ವಾಧೀನದಲ್ಲಿರುವಿಕೆ (ಮನೋನಾಶ)

೩) ಆತ್ಮವನ್ನು ತಿಳಿಯುವಿಕೆ (ತತ್ತ್ವಜ್ಞಾನ)

ಮೂರು ಸುಲಕ್ಷಣಗಳನ್ನು ಹೊಂದಿರುವವರ ಸುತ್ತ ಮೋಕ್ಷವು ಯಾವಾಗಲೂ ವಿರಾಜಮಾನವಾಗಿಯೇ ಇರುವುದೆಂದು ಹೇಳಲಾಗಿದೆ. ಅಂದರೆ ವೇದಾಂತ ಶಾಸ್ತ್ರಗಳಲ್ಲಿ ಪದೇ ಪದೇ ಹೇಳಲ್ಪಡುವ ವಾಸನಾಕ್ಷಯ, ಮನೋನಾಶ, ತತ್ವಜ್ಞಾನಗಳನ್ನು ಪ್ರಮುಖ ಸಾಧನಾತ್ರಯವಾಗಿ ಮಾಡಿಕೊಂಡಿರುವವನು ಮೋಕ್ಷರೂಪನೇ ಆಗಿರುವನು. ಈ ಮೂರು ಸಾಧನೆಗಳ ಬಗ್ಗೆ ಗೀತೆಯಲ್ಲಿ ಭಗವಂತನು ಅನೇಕ ಕಡೆ ಪ್ರಸ್ತಾಪಿಸಿದ್ದಾನೆ. ಇದರಲ್ಲಿ ತತ್ತ್ವಜ್ಞಾನದ ಸಹಾಯದಿಂದ ಕಾಮಾದಿ ವಾಸನೆಗಳು ಕ್ಷಯಹೊಂದಿದರೆ ಮನೋನಾಶ ಅದಷ್ಟಕ್ಕದೇ ಸಿದ್ಧಿಸುವುದು. ಈ ಮೂರು ಸಾಧನೆಗಳನ್ನು ಒಂದರಿಂದೊಂದನ್ನು ಬೇರ್ಪಡಿಸಲು ಸಾಧ್ಯವಿಲ್ಲವಾದ್ದರಿಂದ ಮೂರನ್ನೂ ಏಕಕಾಲದಲ್ಲಿಯೇ ಸಾಧಿಸಬೇಕೆಂದು ಶಾಸ್ತ್ರಗಳು ಹೇಳುತ್ತಿವೆ. ಪ್ರಯತ್ನ ಶೀಲರಿಗೆ ಮೋಕ್ಷವು ಲಭಿಸುವುದೇ ಹೊರತು ಸೋಮಾರಿಗಳಿಗಲ್ಲ. ಬಹುಶಃ ಈ ತತ್ತ್ವವನ್ನು ತಿಳಿಸುವುದಕ್ಕೆಂದು 'ಯತೀನಾಂ' ಎನ್ನುವ ಪದ ಇಲ್ಲಿ ಉಪಯೋಗಿಸಲ್ಪಟ್ಟಿದೆ. ಯತಿಗಳೆಂದರೆ ಯತ್ನಶೀಲರೆಂದು ಅರ್ಥ. '**ಉದ್ಯೋಗಿನಂ ಪುರುಷಸಿಂಹ ಮುಪೈತಿ ಲಕ್ಷ್ಮೀಃ**'- ಎಂದ ಹಾಗೆ ಪ್ರಯತ್ನ ಶೀಲರನ್ನೇ ಲಕ್ಷ್ಮಿವರಿಸುವುದು. ಧನಲಕ್ಷ್ಮಿಯಾಗಲಿ, ಮೋಕ್ಷ ಲಕ್ಷ್ಮಿಯಾಗಲಿ. ಆದ್ದರಿಂದ ಭಗವಂತನ ಮೇಲೆ ಸದ್ಗುರುವಿನ ಮೇಲೆ ಸಚ್ಛಾಸ್ತ್ರಗಳ ಮೇಲೆ ಪೂರ್ಣ ವಿಶ್ವಾಸವಿಟ್ಟು ಸಾಧನೆ ಮಾಡುತ್ತಾ ಬರಬೇಕು. ಮೋಕ್ಷಪ್ರಾಪ್ತಿಗೆ ಮೇಲೆ ತಿಳಿಸಿದ ಮೂರು ಸಾಧನೆಗಳನ್ನು ತಾಳ್ಮೆಯಿಂದ ಅನುಸರಿಸಬೇಕು.

ಮೊದಲ ಸಾಧನೆ, ಕಾಮಾದಿಗಳ ತ್ಯಾಗ. ಕಾಮಕ್ರೋಧಾದಿ ದುರ್ಗುಣಗಳು ಆತ್ಮಸ್ವರೂಪವನ್ನು ಕುರಿತ ಮನನದಿಂದ, ದೃಶ್ಯವನ್ನು ಮಿಥ್ಯೆ ಎಂದು ತಿಳಿಯುವುದರಿಂದ ತೊಲಗುವುವು. ೨) ಎರಡನೆಯದು ಮನೋನಿಗ್ರಹ. ಮನಸ್ಸು ಹತೋಟಿಗೆ ಬರಬೇಕೆಂದರೆ ಅದರಲ್ಲಿಯ ರಜೋ, ತಮೋ ಗುಣಗಳು ನಶಿಸಬೇಕು. ಕಬ್ಬಿಣವನ್ನು ಹಾಗೆಯೇ ಯಾರೂ ಬಗ್ಗಿಸಲಾರರು. ಅಗ್ನಿಯಿಂದ ಕಾದು ಕೆಂಪಾದಾಗ ಮಾತ್ರ ಬಗ್ಗಿಸಬಲ್ಲರು. ಹಾಗೆಯೇ ಜ್ಞಾನಾಗ್ನಿಯಿಂದ ಚಿತ್ತವನ್ನು ಚೆನ್ನಾಗಿ ಪುಟಹಾಕಿ ಪಾಪಗಳನ್ನು, ರಜಸ್ತಮಗಳನ್ನು ತ್ಯಜಿಸಬೇಕು. ಆಗಲೇ ಅದು ಸ್ವಾಧೀನವಾಗಬಲ್ಲದು. ಈ ಸಂಸಾರ ಚಕ್ರಕ್ಕೆಲ್ಲಾ ಚಿತ್ತವೇ ಮೂಲವಾಗಿರುವುದು. ಚಿತ್ತವು ಚಂಚಲವಾಗಿದ್ದರೆ ಪ್ರಪಂಚವೆಲ್ಲಾ ಚಂಚಲವಾಗಿರುವುದು. ಚಿತ್ತವು ಶಮನ ಹೊಂದಿದರೆ ಜಗತ್ತು ಶಮನ ಹೊಂದುವುದು. ಆ ಚಿತ್ತವನ್ನು ಜಯಿಸಲು ಸರ್ವೋತ್ತಮ ಉಪಾಯವೆಂದರೆ ಅದಕ್ಕಿಂತ ಉತ್ತಮ ಸ್ಥಾನದಲ್ಲಿರುವ ಆತ್ಮದ ಮೊರೆ ಹೋಗಬೇಕು. '**ಏವಂ ಬುದ್ಧೇಃ ಪರಂ ಬುದ್ಧ್ವಾ**' ಎನ್ನುವಂತೆ ಆತ್ಮದಲ್ಲಿ ಸ್ಥಿರವಾಗಿದ್ದರೆ ಚಿತ್ತವು, ಇಂದ್ರಿಯಗಳು ಸುಲಭವಾಗಿ ವಶೀಕೃತವಾಗುವುವು.

೩) ಇನ್ನು ಮೂರನೆಯ ಸಾಧನೆ, ಆತ್ಮಜ್ಞಾನ. ಆತ್ಮಸ್ವರೂಪವೆಂಥ ಹುದೋ ತಿಳಿದುಕೊಂಡು ಅದನ್ನೇ ನಿರಂತರ ಮನನ ಮಾಡುತ್ತಿರಬೇಕು. ತಾನು ಶರೀರ, ಇಂದ್ರಿಯ, ಮನಸ್ಸು, ಬುದ್ಧಿಯಲ್ಲವೆಂದೂ ಅವುಗಳೆಲ್ಲವು ಗಳಿಗೂ ಸಾಕ್ಷಿಯಾದ ಆತ್ಮವೆಂದು, ಪ್ರಜ್ಞೆಯೆಂದು ತಿಳಿದುಕೊಂಡು ಅಂಥಹ ಸಾಕ್ಷಿ ಸ್ಥಿತಿಯಲ್ಲಿ ಸ್ಥಿರ ಹೊಂದುವುದನ್ನು ಅಭ್ಯಸಿಸಬೇಕು. ತಾನು ನಾಶವಾಗುವ ನಲ್ಲವನೆಂದೂ, ನಶಿಸುವುದು ಪಂಚಭೂತಾತ್ಮಕ ದೇಹವೆಂದೂ, ದೃಶ್ಯವೆಲ್ಲವೂ ವಿಕಾರ ಹೊಂದುವ ಗುಣವುಳ್ಳದೆಂದೂ, ತಾನು ನಿರ್ವಿಕಾರನೆಂದೂ ಚಿಂತನೆ ಮಾಡಬೇಕು. ಇದು ತತ್ತ್ವಜ್ಞಾನಾಭ್ಯಾಸ.

ಈ ಪ್ರಕಾರವಾಗಿ ಮೇಲಿನ ಮೂರು ಸಾಧನೆಗಳನ್ನು ಚೆನ್ನಾಗಿ ಆಚರಿಸಿದವರು ಕೃತಕೃತ್ಯರಾಗುವರು. ಮೋಕ್ಷವು (ಬ್ರಹ್ಮನಿರ್ವಾಣ) ಅವರ ಸುತ್ತ ನಿವಸಿಸುತ್ತಿರುವುದು. ಅವರು ಸಾಕ್ಷಾತ್ ಮೋಕ್ಷಸ್ವರೂಪಿಗಳೇ, ಬ್ರಹ್ಮಸ್ವರೂಪಿಗಳೇ ಆಗಿದ್ದಾರೆ. ಮೋಕ್ಷವು ಎಲ್ಲಿಯೋ ಆಕಾಶದಲ್ಲಿ, ಪಾತಾಳದಲ್ಲಿ ಇದೆಯೆಂದು ಭ್ರಮಿಸುವವರ ಚಿತ್ತವನ್ನು ಈ ಶ್ಲೋಕದ ಮೂಲಕ ಭಗವಂತನು ಭಿದ್ರಿಸಿ ನಿರ್ಮಲಚಿತ್ತದಲ್ಲಿಯೇ ಮೋಕ್ಷವು ಸದಾ ಬೆಳಗುತ್ತಿದೆಯೆಂದು ಹೇಳಿದನು.

ಪ್ರ : ಬ್ರಹ್ಮನಿರ್ವಾಣವನ್ನು (ಮೋಕ್ಷವನ್ನು) ಯಾರು ಹೊಂದುವರು?

ಉ : ೧) ಕಾಮಕ್ರೋಧಾದಿಗಳು ತೊಲಗಿದವರು ೨) ಚಿತ್ತವು ಸ್ವಾಧೀನದಲ್ಲಿರುವವರು ೩) ಆತ್ಮವನ್ನು ತಿಳಿದವರು ಮಾತ್ರ ಹೊಂದುವರು.

ಪ್ರ : ಮೋಕ್ಷಸ್ಥಾನವನ್ನು ಸೋಮಾರಿಗಳು ಹೊಂದಬಲ್ಲರೇ?

ಉ : ಇಲ್ಲ. ಯತ್ನಶೀಲರು ಮಾತ್ರ ಪಡೆಯಬಲ್ಲರು.

ಪ್ರ : ಮೋಕ್ಷವು ಎಲ್ಲಿದೆ?

ಉ : ಮೇಲೆ ತಿಳಿಸಿದ ಸುಲಕ್ಷಣಗಳನ್ನು ಹೊಂದಿದವರು ಎಲ್ಲಿರುವರೋ, ಅವರ ಸುತ್ತ ಮುತ್ತಲೇ ಮೋಕ್ಷವಿರುವುದು. ಆದ್ದರಿಂದ ಮೋಕ್ಷಕ್ಕೆ ಬೇರೊಂದು ಕಡೆ ಹೋಗುವ ಅವಶ್ಯಕವಿಲ್ಲ. ತನ್ನ ಚಿತ್ತವನ್ನು ಶುದ್ಧ ಮಾಡಿಕೊಂಡಲ್ಲಿ ಮೋಕ್ಷವು ತಾನೇ ಅಲ್ಲಿಗೆ ಬಂದು ಸೇರುತ್ತದೆ.

**ಅ॥** ಧ್ಯಾನ ಪದ್ಧತಿಯನ್ನು ವಿವರಿಸುತ್ತಾ ಆತ್ಮಜ್ಞಾನ ಪರಾಯಣನು ಸದಾ ಮುಕ್ತನೇ ಎಂದು ಹೇಳುತ್ತಿದ್ದಾನೆ-

> ೨೭. **ಸ್ಪರ್ಶಾನ್ ಕೃತ್ವಾ ಬಹಿರ್ಬಾಹ್ಯಾಂಶ್ಚಕ್ಷುಶ್ಚೈವಾನ್ತರೇ ಭ್ರುವೋಃ**
> **ಪ್ರಾಣಾಪಾನೌ ಸಮೌ ಕೃತ್ವಾ ನಾಸಾಭ್ಯಂತರಚಾರಿಣೌ**
>
> ೨೮. **ಯತೇಂದ್ರಿಯಮನೋಬುದ್ಧಿರ್ಮುನಿರ್ಮೋಕ್ಷಪರಾಯಣಃ**
> **ವಿಗತೇಚ್ಛಾಭಯಕ್ರೋಧೋ ಯಸ್ಸದಾಮುಕ್ತ ಏವ ಸಃ**

**ಅರ್ಥ:** ಯಃ=ಯಾರು; ಬಾಹ್ಯಾನ್ ಸ್ಪರ್ಶಾನ್=ಹೊರಗಡೆ ಇರುವ ಶಬ್ದ ಸ್ಪರ್ಶಾದಿ ವಿಷಯಗಳನ್ನು; ಬಹಿಃಕೃತ್ವಾ=ಹೊರಗಡೆ ಓಡಿಸಿ, ಚಕ್ಷುಃ= ದೃಷ್ಟಿಯನ್ನು; ಭ್ರುವೋಃ ಅಂತರೇ ಏವ=ಭ್ರೂಮಧ್ಯದಲ್ಲಿಯೇ (ಎರಡು ಕಣ್ಣುಗಳ ಮಧ್ಯೆ) (ಕೃತ್ವಾ=ನಿಲ್ಲಿಸಿ); ನಾಸಾಭ್ಯಂತರಚಾರಿಣೌ=ಮೂಗಿ ನಲ್ಲಿಯೇ ಸಂಚರಿಸುವಂತಹ; ಪ್ರಾಣಾಪಾನೌ=ಪ್ರಾಣಾಪಾನ ವಾಯುಗಳನ್ನು; ಸಮೌ ಚ ಕೃತ್ವಾ=ಸಮವಾಗಿ ಮಾಡಿ; ಯತೇಂದ್ರಿಯ ಮನೋಬುದ್ಧಿಃ= ಸ್ವಾಧೀನಪಡಿಸಿ ಕೊಂಡ ಇಂದ್ರಿಯ, ಮನಸ್ಸು, ಬುದ್ಧಿಗಳುಳ್ಳವನಾಗಿ; ವಿಗತೇಚ್ಛಾಭಯಕ್ರೋಧಃ= ಕೋರಿಕೆ, ಭಯ, ಕೋಪಗಳನ್ನು ಬಿಟ್ಟವನಾಗಿ; ಮೋಕ್ಷ ಪರಾಯಣಃ= ಮೋಕ್ಷಾಸಕ್ತನಾಗಿ; ಮುನಿಃ=(ಆತ್ಮ) ಮನನಶೀಲನಾಗಿ; (ವರ್ತತೇ= ಇರುವನೋ); ಸಃ=ಆತನು; ಸದಾ=ಯಾವಾಗಲೂ; ಮುಕ್ತಃ ಏವ=ಮುಕ್ತನೇ ಆಗುವನು.

**ತಾ॥** ಯಾವನು ಹೊರಗಡೆಯಿರುವ ಶಬ್ದಸ್ಪರ್ಶಾದಿ ವಿಷಯಗಳನ್ನು ಹೊರಗಡೆಗೇ ಓಡಿಸಿ (ಒಳಗೆ ಪ್ರವೇಶಿಸ ಬಿಡದೆ) ದೃಷ್ಟಿಯನ್ನು ಭ್ರೂಮಧ್ಯದಲ್ಲಿ ನಿಲ್ಲಿಸಿ, ನಾಸಿಕಾಪುಟಗಳಲ್ಲಿ ಸಂಚರಿಸುವ ಪ್ರಾಣಾಪಾನ ವಾಯುಗಳನ್ನು ಸಮವಾಗಿ ಪ್ರವಹಿಸುವಂತೆ ಮಾಡಿ; ಇಂದ್ರಿಯ ಮನೋ ಬುದ್ಧಿಗಳನ್ನು ನಿಗ್ರಹಿಸಿ; ಇಚ್ಛಾ, ಭಯ, ಕ್ರೋಧಗಳು ಇಲ್ಲದವನಾಗಿ, ಮೋಕ್ಷಾಸಕ್ತನಾಗಿ(ಆತ್ಮ) ಮನನಶೀಲನಾಗಿರುವನೋ ಅಂಥಹವನು ಯಾವಾಗಲೂ ಮುಕ್ತನೇ ಆಗಿರುವನು.

**ವ್ಯಾಖ್ಯೆ: "ಸ್ಪರ್ಶಾನ್ ಕೃತ್ವಾ ಬಹಿರ್ಬಾಹ್ಯಾನ್"**- ಶಬ್ದಾದಿ ವಿಷಯಗಳ ಕ್ಷೇತ್ರ ಬಹಿರ್ ಪ್ರಪಂಚ. ಜೀವಿಯ ಅಂತಃ ಕ್ಷೇತ್ರವಾದ ಹೃದಯವನ್ನು ಪ್ರವೇಶಿಸಲು ಅವುಗಳಿಗೇನು ಹಕ್ಕಿದೆ? ಎಂದು ವಿವೇಕಿಯು ಆಲೋಚಿಸಿ 'ಅವು ಎಲ್ಲಿ ಇದ್ದಾವೋ ಅಲ್ಲಿಯೇ ಇರಲಿ' ಎಂದು ನಿಶ್ಚಯಿಸಿ, ಬಾಹ್ಯವಿಷಯಗಳನ್ನು ಒಳಗೆ ಬಿಡದೆ ಒಂದು ವೇಳೆ ಬಂದರೂ ಪ್ರಯತ್ನಪೂರ್ವಕವಾಗಿ ಹೊರಗೆ ದಬ್ಬಿಹಾಕುವನು. ಅವಿವೇಕಿಯಾದರೋ ಅವುಗಳನ್ನು ಸ್ವೇಚ್ಛೆಯಾಗಿ ಒಳಗೆ ಬರಬಿಡುವನು. ತತ್ಫಲಿತವಾಗಿ ವಿಷಯ ಲೋಲನಾಗಿ ಸಂಸಾರ ಜಂಜಾಟದಲ್ಲಿ ಬಿದ್ದು ಹೋಗುತ್ತಿರುವನು. ಆದ್ದರಿಂದ ವಿವೇಕಿಯು ಇಂದ್ರಿಯ ದ್ವಾರಗಳ ಹತ್ತಿರ, ಮನೋದ್ವಾರಗಳ ಬಳಿ 'ಕಾವಲು' ಏರ್ಪಡಿಸಿ "ಒಳಕ್ಕೆ ಹೋಗಬಾರದು" (No admission)ಎಂದು ವಿಷಯಗಳನ್ನು ಆದೇಶಿಸುತ್ತ, ದೃಶ್ಯರೂಪ ಇಂದ್ರಿಯಾರ್ಥಗಳನ್ನು ಹೃದಯ ಸಾಮ್ರಾಜ್ಯದ ಒಳಗೆ ಸೇರದಂತೆ ಸದಾ ಜಾಗರೂಕನಾಗಿರಬೇಕು.

*"ಚಕ್ಷುಶ್ಚೈವಾಂತರೇಭ್ರುವೋಃ"*- ಈ ಪ್ರಕಾರವಾಗಿ ಶಬ್ದಾದಿ ಬಾಹ್ಯ ವಿಷಯಗಳನ್ನು ನಿರೋಧಿಸಿ ಧ್ಯಾನನಿಷ್ಠನು ದೃಷ್ಟಿಯನ್ನು ಭ್ರೂಮಧ್ಯದಲ್ಲಿ ನಿಲ್ಲಿಸುವನು. ಇದನ್ನೇ ಖೇಚರೀ ಮುದ್ರೆ ಎನ್ನುವರು. ಧ್ಯಾನವನ್ನು ಮಾಡುವವನು ಕಣ್ಣು ತೆರೆದಿದ್ದರೆ ಸುತ್ತು ಇರುವ ವಸ್ತುಗಳು ಕಾಣುವುದರಿಂದ ಚಿತ್ತ ವಿಕ್ಷೇಪವುಂಟಾಗುವುದು. ಕಣ್ಣು ಮುಚ್ಚಿಕೊಂಡರೆ ನಿದ್ರೆಯಲ್ಲಿ (ತಮಸ್ಸಿನಲ್ಲಿ) ಬಿದ್ದು ಹೋಗುವ ಪ್ರಮಾದವಿದೆ. ಆದ್ದರಿಂದಲೇ ಆತನು ಮಧ್ಯಮಾರ್ಗವನ್ನು ಹಿಡಿದು ನಿಮೀಲಿತ ನೇತ್ರನಾಗಿ ಭ್ರೂಮಧ್ಯದಲ್ಲಿ ದೃಷ್ಟಿಯನ್ನು ನಿಲ್ಲಿಸಿ ಧ್ಯಾನಿಸುತ್ತಿರುವನು. ಭ್ರೂಮಧ್ಯವೆಂದರೆ ಎರಡು ಕಣ್ಣುಗಳ ಮಧ್ಯೆ ಎಂದರ್ಥ. ಅಲ್ಲಿ ಆಜ್ಞಾಚಕ್ರವಿರುವುದು. ನೇತ್ರಗಳಿಗೆ ಅತಿ ಸಮೀಪವಿರುವುದರಿಂದ ಭ್ರೂಮಧ್ಯ ಸ್ಥಾನದಲ್ಲಿ ದೃಷ್ಟಿಯನ್ನು ನಿಲ್ಲಿಸಿ ಧ್ಯಾನಿಸುವುದು ಸಾಧಕನಿಗೆ ಬಹಳ ಅನುಕೂಲವಾಗಿರುವುದು. ಆದರೂ ಕೆಲವರು ನಾಸಿಕಾಗ್ರದಲ್ಲಿ, ಕೆಲವರು ಹೃದಯ ಸ್ಥಾನದಲ್ಲಿ, ಮತ್ತೆ ಕೆಲವರು ಸಹಸ್ರಾರದಲ್ಲಿಯೂ ದೃಷ್ಟಿಯನ್ನು ನಿಲ್ಲಿಸಿ ಧ್ಯಾನಿಸುತ್ತಿರುವರು. ಯಾರಿಗೆ ಹೇಗೆ ಅನುಕೂಲವೋ ಹಾಗೆ ಮಾಡಿಕೊಳ್ಳ ಬಹುದು. ಚಿತ್ತವು ಬಹಿರ್ಮುಖವಾಗಿ ಚದರದೆ ಇರುವುದೇ ಮುಖ್ಯ.

*"ಪ್ರಾಣಾಪಾನೌ ಸಮೌ ಕೃತ್ವಾ"*- ಸಾಮಾನ್ಯವಾಗಿ ಜನರಲ್ಲಿ ಪ್ರಾಣಾಪಾನ ವಾಯುಗಳು ಸಮವಾಗಿ ಪ್ರವಹಿಸುವುದಿಲ್ಲ. ಪ್ರಾಣಾಯಾಮಾಭ್ಯಾಸದಿಂದ ಅವುಗಳನ್ನು ಕ್ರಮಬದ್ಧವಾಗಿ ನಡೆಯುವ ಹಾಗೆ ಮಾಡುವುದು, ಆರೋಗ್ಯಕ್ಕೂ ಹಾಗೂ ಚಿತ್ತೈಕಾಗ್ರತೆಗೂ ಅವಶ್ಯಕ. ಆದ್ದರಿಂದಲೇ ಪ್ರಾಣಾಯಾಮವೆನ್ನುವುದು ಅಷ್ಟಾಂಗಯೋಗದ ಒಂದು ಭಾಗ. ಪ್ರಾಣಕ್ಕೆ, ಮನಸ್ಸಿಗೆ ಅತ್ಯಂತ ಸನ್ನಿಹಿತವಾದ ಸಂಬಂಧವಿದೆ. ಒಂದನ್ನು ನಿರೋಧಿಸಿದರೆ ಇನ್ನೊಂದು ವಿರುದ್ಧವಾಗುವುದು. ಆದ್ದರಿಂದ ಅತಿಸೂಕ್ಷ್ಮವಾದ ಮನಸ್ಸನ್ನು ನಿಗ್ರಹಿಸುವುದರಲ್ಲಿ ಸಹಾಯಕ ವಾಗುವುದೆಂದು ಪ್ರಾಣಾಯಾಮವನ್ನು ಶಾಸ್ತ್ರಗಳಲ್ಲಿ ವಿಧಿಸಿದರು. ಪ್ರಾಣಾಪಾನಗಳನ್ನು ಸಮವಾಗಿ ಪ್ರವಹಿಸುವುದರಿಂದ ಮನಸ್ಸು ಚಪಲತೆಯನ್ನು ತ್ಯಜಿಸಿ ಏಕಾಗ್ರತೆಯನ್ನು ಹೊಂದಬಲ್ಲದು.

*"ಯತೇಂದ್ರಿಯಮನೋಬುದ್ಧಿಃ"*- ಇಂದ್ರಿಯಗಳು, ಕಾಮ, ಮನಸ್ಸು, ಬುದ್ಧಿ- ಇವುಗಳೆಲ್ಲವನ್ನು ಸಾಧಕನು ತನ್ನ ಹತೋಟಿಯಲ್ಲಿಟ್ಟುಕೊಳ್ಳಬೇಕು. ಅವು ಹೇಳಿದ ಹಾಗೆ ತಾನು ಕುಣಿಯಬಾರದು. ತಾನು ಹೇಳಿದ ಹಾಗೆ ಅವು ನಡೆಯಬೇಕು. ಇದನ್ನೇ ಇಂದ್ರಿಯ ನಿಗ್ರಹಣವೆನ್ನುವರು. ಅಜ್ಞಾನಿ ಅವುಗಳಿಗೆ ದಾಸಾನುದಾಸನಾಗಿ ಪ್ರವರ್ತಿಸುವನು. ಜ್ಞಾನಿ ಅವುಗಳನ್ನು ನಿಗ್ರಹಿಸಿ ತನ್ನ

ವಶದಲ್ಲಿಟ್ಟುಕೊಳ್ಳುವನು. ವಾಸ್ತವವಾಗಿ ತಾನು ಅವುಗಳಿಗಿಂತ ಮೇಲಿರುವ ಆತ್ಮನೇ ಆಗಲಿ, ಅವುಗಳೊಳಗಿರುವ ವಸ್ತುವಲ್ಲ. ಈ ಸತ್ಯವನ್ನು ತಿಳಿದು ಅಭ್ಯಾಸ ವೈರಾಗ್ಯ ವಿಚಾರಣಾದಿಗಳ ದ್ವಾರ ಇಂದ್ರಿಯ ಮನಸ್ಸುಗಳನ್ನು ಸ್ವಾಧೀನಪಡಿಸಿಕೊಳ್ಳಬೇಕು.

*"ಮೋಕ್ಷ ಪರಾಯಣಃ"*- ಅಜ್ಞಾನಿಗಳು ಭೋಗಪರಾಯಣ ರಾಗಿರುವರು. ಮುಮುಕ್ಷುಗಳು ಮೋಕ್ಷಪರಾಯಣರಾಗಿ ವರ್ತಿಸುವರು. ಕೈವಲ್ಯಪ್ರಾಪ್ತಿಗೆ ತೀವ್ರ ಮುಮುಕ್ಷುತೆ ಅತ್ಯವಶ್ಯಕ. ಮೋಕ್ಷಕ್ಕೋಸ್ಕರ ಪರಿತಪಿಸುವವರಿಗೆ ಮೋಕ್ಷಲಕ್ಷ್ಮಿ ಸ್ವಸಂಪ್ರಾಪ್ತಿಯಾಗುವುದು. 'ಯಾವಾಗ ನಾನು ಬಂಧನದಿಂದ ಬಿಡುಗಡೆ ಹೊಂದುವೆನು? ಯಾವಾಗ ಜನನ ಮರಣ ರಹಿತವಾದ ಶಾಶ್ವತ ಪದವಿ ನನಗೆ ಸಂಪ್ರಾಪ್ತಿಸುವುದು.?, ಎಂದು ತೀವ್ರ ಆವೇದನೆಯಿಂದ ಪರಿತಪಿಸುವವನಿಗೆ ಮುಕ್ತಿ ಬಗಲಿನಲ್ಲಿಯೇ ಇರುವುದು. ಭಗವಂತನ ದರ್ಶನವಾಗಲಿಲ್ಲವಲ್ಲವೆಂದು ರಾತ್ರಿ ಹಗಲು ಪ್ರಲಾಪಿಸುತ್ತಾ, ಕಣ್ಣೀರನ್ನು ಧಾರೆಯಾಗಿ ಸುರಿಸಿ ದೈವಚಿತ್ತರಾಗಿದ್ದ ಮಹನೀಯರನ್ನು ಕುರಿತು ನಾವು ಚರಿತ್ರೆಯಲ್ಲಿ ಕೇಳಿದ್ದೇವಲ್ಲಾ! ಅವರೇ ಮೋಕ್ಷ ಪರಾಯಣರು. ಅಂಥಹವರು ಮುಕ್ತಿ ಸಾಧನೆಗಳನ್ನು ಅತಿಶ್ರದ್ಧಾಭಕ್ತಿಗಳಿಂದ ಆಚರಿಸುವರು.

*"ವಿಗತೇಚ್ಛಾಭಯಕ್ರೋಧಃ"*- ಕಾಮಾದಿ ದುರ್ವಾಸನಾರಾಹಿತ್ಯಗಳನ್ನು ಕುರಿತು ಈವರೆಗೆ ಎಷ್ಟೋ ಸಾರಿ ಭಗವಂತನು ಎಚ್ಚರಿಸಿದ್ದಾನೆ. ಇನ್ನೂ ಮುಂದೆ ಬಹಳ ಸಾರಿ ಹೇಳುವನು. ಅವುಗಳ ನಿರ್ಮೂಲನವು ಹೃದಯ ಶುದ್ಧಿಗೆ ಆತ್ಮಜ್ಞಾನೋದಯಕ್ಕೆ ಅತ್ಯಾವಶ್ಯಕವಾದುದರಿಂದ ಪದೇ ಪದೇ ಅವುಗಳನ್ನು ಕುರಿತು ಹೇಳಲು ಕಾರಣವಾಗಿದೆ. ಕಾಮ, ಕ್ರೋಧ, ಭಯ- ಈ ಮೂರು ದುರ್ಗುಣ ಸಂಘದ ನಾಯಕರು. ನಾಯಕರನ್ನು ಜಯಿಸಿದರೆ ಬೇರೆಯವರು ಕ್ಷಣದಲ್ಲೇ ಸ್ವಾಧೀನವಾಗುವರು. ಈ ಮೂರು ದುರ್ಗುಣಗಳು ಹೃದಯವನ್ನು ಬಿಟ್ಟು ಹೊರಹೊರಟರೆ, ಪಾಚಿಯಿಲ್ಲದ ಸರೋವರದಂತೆ, ಧೂಳು ಒರೆಸಲ್ಪಟ್ಟ ಕನ್ನಡಿಯಂತೆ, ಗಾಜನ್ನು ಶುಭ್ರ ಗೊಳಿಸಿದ ಲಾಟೀನಿನಂತೆ ಹೃದಯವು ನಿರ್ಮಲವಾಗಿ ಬೆಳಗುವುದು. ನಿರ್ಮಲ ಹೃದಯದಲ್ಲಿ ಜ್ಞಾನಭಾಸ್ಕರನು ಉದಯಿಸುವನು.

'ಮುನಿಃ'=ಮನನ ಶೀಲನಾಗಿರುವವನು.

*"ಸದಾ ಮುಕ್ತಃ"*- ಎಂದು ಹೇಳುವುದರಿಂದ ಮೇಲೆ ತಿಳಿಸಿದ ಸದ್ಗುಣ ಗಳಿಂದ ವಿರಾಜಿತನಾದವನು ಯಾವಾಗಲೂ ಮುಕ್ತನೇ ಆಗಿರುವನು ಎಂದು ಭಾವ. ಮೋಕ್ಷಕ್ಕಾಗಿ ಬೇರೊಂದು ಲೋಕಕ್ಕೆ ಹೋಗುವ ಅವಶ್ಯಕವಿಲ್ಲ. ಮತ್ತೊಂದು ದೇಹವನ್ನು ಧರಿಸಬೇಕಾಗಿಲ್ಲ. ಯಾವಾಗ ಬರುವುದೋ ಎಂದು ಕಾಯಬೇಕಾಗಿಲ್ಲ. ಈ ಸಾಧನೆಗಳಲ್ಲಿ ಕರತಲಾಮಲಕವಾದ ಮರುಕ್ಷಣವೇ ಮನುಜನು ಮುಕ್ತನಾಗಿ ಹೊರಬೀಳುವನೆಂದು ಭಗವಂತನು ಇಲ್ಲಿ ಅಭಯವಿತ್ತನು.

ಪ್ರ : ಮೋಕ್ಷ ಪ್ರಾಪ್ತಿಗೆ ಉಪಾಯಗಳೇನು?

ಉ : ೧) ಶಬ್ದಾದಿ ವಿಷಯ ತ್ಯಾಗ ೨) ಏಕಾಗ್ರ ಧ್ಯಾನ ೩) ಪ್ರಾಣಾಯಾಮ ೪) ಇಂದ್ರಿಯ ಮನೋಬುದ್ಧಿಗಳ ನಿಗ್ರಹಣೆ ೫) ಮನನಶೀಲತ್ವ ೬) ಮೋಕ್ಷ ಪರಾಯಣತ್ವ ೭) ಕಾಮಕ್ರೋಧ ಭಯ ರಾಹಿತ್ಯ.

**ಅ॥** ಮೋಕ್ಷ ಪ್ರಾಪ್ತಿಗೆ ಭಕ್ತಿರೂಪದ ಸುಲಭೋಪಾಯವನ್ನು ಸೂಚಿಸುತ್ತಿದ್ದಾನೆ-

**೨೯. ಭೋಕ್ತಾರಂ ಯಜ್ಞತಪಸಾಂ ಸರ್ವಲೋಕಮಹೇಶ್ವರಮ್**
**ಸುಹೃದಂ ಸರ್ವಭೂತಾನಾಂ ಜ್ಞಾತ್ವಾ ಮಾಂ ಶಾಂತಿಮೃಚ್ಛತಿ**

**ಅರ್ಥ:** ಯಜ್ಞತಪಸಾಂ=ಯಜ್ಞಗಳಿಗೆ, ತಪಸ್ಸುಗಳಿಗೆ; ಭೋಕ್ತಾರಮ್=ಭೋಕ್ತ (ಅನುಭವಿಸುವವನು)ನು; ಸರ್ವಲೋಕ ಮಹೇಶ್ವರಮ್=ಸಮಸ್ತ ಲೋಕಗಳಿಗೆ ಈಶ್ವರನು (ನಿಯಾಮಕ, ಪ್ರಭು); ಸರ್ವಭೂತಾನಾಮ್= ಸಮಸ್ತ ಪ್ರಾಣಿಗಳಿಗೆ; ಸುಹೃದಂ=ಪ್ರತಿಫಲವನ್ನು ಕೋರದೆ ಹಿತ ಬಯಸುವವನು; ಮಾಂ=ನನ್ನನ್ನು; ಜ್ಞಾತ್ವಾ=ತಿಳಿದು(ಮನುಜನು); ಶಾಂತಿಂ= ಶಾಂತಿಯನ್ನು; ಋಚ್ಛತಿ= ಹೊಂದುತ್ತಿದ್ದಾನೆ.

**ತಾ॥** ಯಜ್ಞಗಳ, ತಪಸ್ಸುಗಳ ಭೋಕ್ತ (ಫಲವನ್ನನುಭವಿಸುವವನು)ನೆಂದು, ಸಮಸ್ತ ಲೋಕಗಳ ಈಶ್ವರನು (ಪ್ರಭು, ಶಾಸಕನು)ಎಂದು, ಸಮಸ್ತ ಪ್ರಾಣಿಗಳ ಹಿತಕಾರಿಯೆಂದು ನನ್ನನ್ನು ತಿಳಿದು ಮನುಜನು ಶಾಂತಿಯನ್ನು ಹೊಂದುತ್ತಿದ್ದಾನೆ.

**ವ್ಯಾಖ್ಯೆ:** ಶಾಂತಿಯನ್ನು ಸಾಧಿಸುವುದು ಹೇಗೆ? ದುಃಖನಿವೃತ್ತಿ, ಪರಮಶಾಂತಿರೂಪ ಮೋಕ್ಷವು ಹೇಗೆ ಒದಗುವುದು? ಎನ್ನುವ ಪ್ರಶ್ನೆಗಳಿಗೆ ಇಲ್ಲಿ ಉತ್ತರ ಕೊಡಲಾಗಿದೆ. ಯಾರು ಭಗವಂತನನ್ನು (ಆತ್ಮವನ್ನು) ತಿಳಿದುಕೊಳ್ಳುವನೋ ಆತನೇ ಶಾಂತಿಯನ್ನು ಹೊಂದುವನೆಂದು ಹೇಳಲಾಗಿದೆ. ಆದರೆ ಆ ಭಗವಂತನು ಎಂಥಹವನು? ಆತನ ಲಕ್ಷಣಗಳು ಎಂಥಹವು ಎಂದು ಇಲ್ಲಿ ಕೊಡಲಾಗಿದೆ- ೧) ಸಮಸ್ತ ಯಜ್ಞಗಳ, ತಪಸ್ಸುಗಳ ಫಲವನ್ನು ಅನುಭವಿಸುವವನು. ಪರಮಾತ್ಮ ಚರಾಚರ ಪ್ರಾಣಿಕೋಟಿಗಳಲ್ಲಿ ವ್ಯಾಪಿಸಿ ರುವುದರಿಂದ ಸಮಸ್ತ ಪುಣ್ಯ ಕಾರ್ಯಗಳ, ಧರ್ಮಕಾರ್ಯಗಳ ಕರ್ತನೂ, ಫಲಭೋಕ್ತನೂ ಆತನೇ ಆಗಿರುವನು. ೨) ಮತ್ತೆ ಆತನು ಸಮಸ್ತ ಪ್ರಪಂಚಕ್ಕೆ ಪ್ರಭು, ಶಾಸಕನೂ, ನಿಯಾಮಕನೂ ಆಗಿದ್ದಾನೆ. ಒಂದು ಲೋಕಕ್ಕಲ್ಲ 'ಸರ್ವಲೋಕಕ್ಕೆ'- ಆತನು ಈಶ್ವರನೇ ಅಲ್ಲ; 'ಮಹೇಶ್ವರನು.' ಈತನನ್ನು ಮೀರಿ ಬೇರೆ ಯಾರೂ ಇಲ್ಲವೇ ಇಲ್ಲವೆಂದರ್ಥ. ೩) ಈ ಪ್ರಕಾರವಾಗಿ ಸರ್ವಲೋಕಗಳ ನಿಯಾಮಕನಾಗಿದ್ದರೂ ಆತನ ಹೃದಯ ಅತಿ ಕೋಮಲವಾಗಿರುವುದು. ಏಕೆಂದರೆ ಸಮಸ್ತ ಪ್ರಾಣಿ ಕೋಟಿಗಳಿಗೆ ಆತನು ಪರಮಮಿತ್ರ, ಉಪಕಾರಿ, ಹಿತಕಾರಿ, 'ಸುಹೃತ್ತು'. (ಪ್ರತಿಫಲವನ್ನು ಕೋರದೆ ಸಹಾಯ ಮಾಡುವವರನ್ನು 'ಸುಹೃತ್ತು' ಎನ್ನುವರು). 'ಸರ್ವ ಭೂತಾನಾಂ' ಎಂದು ಹೇಳಿರುವುದರಿಂದ ಒಬ್ಬರಿಬ್ಬರಲ್ಲದೆ, ಸಮಸ್ತ ಪ್ರಾಣಿಗಳ ಒಳಿತಿಗೆ ಆತನು ಬದ್ಧ ಕಂಕಣನಾಗಿದ್ದಾನೆಂದು ಭಾವ. ಜೀವಿಗಳನ್ನು ಈ ಸಂಸಾರದುಃಖ ಸಾಗರದಿಂದ ಉದ್ಧರಿಸಿ ಮುಕ್ತಿ ಕೊಡಲು ಈ ಗೀತಾಜ್ಞಾನವನ್ನು ಲೋಕಕ್ಕೆ ಪ್ರಸಾದಿಸುವುದೇ ಆತನ ಪರಮ ವಾತ್ಸಲ್ಯತೆಗೆ, ಸಹೃದಯತ್ವಕ್ಕೆ ನಿದರ್ಶನ. ಮತ್ತೆ ವೇದಶಾಸ್ತ್ರಗಳನ್ನು ಸೃಷ್ಟಿಸಿ ಜನರಿಗೆ ಮಹೋಪಕಾರ ಮಾಡಿರುವನು. **'ತೇಷಾಮಹಂಸಮುದ್ಧರ್ತಾ'** ಎಂದ ಹಾಗೆ ಭಕ್ತರನ್ನು ಕಾಪಾಡುವುದಕ್ಕೆ ಆತನು ಸಂಸಿದ್ಧನಾಗಿಯೇ ಇದ್ದಾನೆ. ಈ ದೇಹರಚನೆಯನ್ನಾಗಲಿ, ಪ್ರಪಂಚರಚನೆ ಯನ್ನಾಗಲಿ ವಿವೇಚಿಸಿ ನೋಡಿದಲ್ಲಿ ಆ ಭಗವಂತನ ದಯಾಳುತ್ವ ಪ್ರತಿ ವಿಷಯದಲ್ಲೂ ಗೋಚರಿಸುವುದು. ಇಂಥಹ ಲಕ್ಷಣಗಳುನ್ನು ಪರಮಾತ್ಮ ಹೊಂದಿರುವನೆಂದು ಇಲ್ಲಿ ತಿಳಿಸಲಾಗಿದೆ.

ಈ ಪ್ರಕಾರವಾದ ಭಗವಂತನ ಮಹಿಮೆಯನ್ನು ತಿಳಿದವನು ಸುಮ್ಮನಿರದೆ ಅನವರತ ಆತನನ್ನೇ ಧ್ಯಾನಿಸುತ್ತ, ಭಕ್ತಿಯಿಂದ ಸೇವಿಸುತ್ತಾನಾದ್ದರಿಂದ ತತ್ಫಲಿತವಾಗಿ ಆತನು ಪರಮ ಶಾತಿಯನ್ನು ಹೊಂದುವನು. **'ತೇಷಾಂ ಶಾಂತಿ ಶ್ಯಾಶ್ವತೀ ನೇತರೇಷಾಮ್'**- ಆ ಪರಮಾತ್ಮನನ್ನು ತಿಳಿದುಕೊಂಡವರಿಗೇ ಶಾಶ್ವತವಾದ ಶಾಂತಿ ಲಭಿಸುವುದೆಂದೂ, ಬೇರೆಯವರಿಗಲ್ಲವೆಂದೂ

ಉಪನಿಷತ್ತುಗಳು ಉದ್ಘೋಷಿಸುತ್ತಿವೆ. ಪ್ರತಿಯೊಬ್ಬರೂ ಶಾಂತಿಯನ್ನು, ಸುಖವನ್ನೇ ಕೋರುತ್ತಿದ್ದಾರೆ. ಅಂಥಹ ಶಾಂತಿಯ ಲಾಭಕ್ಕೆ ಶ್ರೀಕೃಷ್ಣಪರಮಾತ್ಮ ಇಲ್ಲಿ ಸರಿಯಾದ ಉಪಾಯವನ್ನು ಪ್ರಸಾದಿಸಿದ್ದಾನೆ. ಅದನ್ನು ಗ್ರಹಿಸಿ, ಅಂದರೆ ಭಗವತ್ತತ್ವವನ್ನು ತಿಳಿದು ಪ್ರತಿಯೊಬ್ಬರೂ ಶಾಂತಿಯನ್ನು ಪಡೆಯಬೇಕು. ಪರಮಾತ್ಮ ಸರ್ವಲೋಕೈಕ ಪ್ರಭು ಎಂದು ತಿಳಿದುಕೊಂಡು ಆತನನ್ನು ಧ್ಯಾನಿಸುವುದೇ ಶಾಂತಿಗೆ ರಾಜಮಾರ್ಗ. ಭಕ್ತಿಯೇ ಶಾಂತಿಗೆ ದಾರಿ. 'ಜ್ಞಾತ್ವಾ' ಎಂದು ಹೇಳಿರುವುದರಿಂದ ಮೊದಲು ಭಗವಂತನ ಸ್ವರೂಪವನ್ನು, ಭಗವತ್ತತ್ವವನ್ನು ಚೆನ್ನಾಗಿ ತಿಳಿದುಕೊಳ್ಳಬೇಕೆನ್ನುವುದು ಭಾವ. ಆಗಲೇ ಜ್ಞೇಯ(ಧ್ಯೇಯ) ವಸ್ತುವಾದ ಪರಮಾತ್ಮನಲ್ಲಿ ಭಕ್ತಿ ಚೆನ್ನಾಗಿ ಸ್ಥಿರವಾಗುವುದು. ಒಂದು ವಸ್ತುವಿನ ಮಹಿಮೆ ಪೂರ್ತಿಯಾಗಿ ಗೊತ್ತಾಗದಿದ್ದರೆ ಅದರ ಮೇಲೆ ವಿಶ್ವಾಸವೇರ್ಪಡುವುದಿಲ್ಲವಲ್ಲಾ!

ಒಬ್ಬ ಚಿಕ್ಕ ಸರ್ಕಾರಿ ಅಧಿಕಾರಿ ಒಂದು ಗ್ರಾಮಕ್ಕೆ ಬಂದರೆ ಜನರು ಆತನನ್ನು ಎಷ್ಟೋ ಆದರಿಸಿ ಗೌರವಿಸುವರು. ಒಬ್ಬ ರಾಜನು ಬಂದರೆ ಇನ್ನೂ ಹೆಚ್ಚಾಗಿ ಗೌರವಿಸುವರು. ಆದರೆ ರಾಜಾಧಿರಾಜನಾದ, ಚಕ್ರವರ್ತಿಗಳಿಗೆ ಚಕ್ರವರ್ತಿಯಾದ, ಸಮಸ್ತ ಬ್ರಹ್ಮಾಂಡಗಳಿಗೆ ಅಧಿಪತಿಯಾದ ಸರ್ವೇಶ್ವರನು ಹತ್ತಿರವಿದ್ದಾಗ್ಯೂ ಕೆಲ ಜನರಿಗೆ ಆತನ ಮೇಲೆ ವಿಶ್ವಾಸವಿಲ್ಲದಿರುವುದು ಅತ್ಯಂತ ಶೋಚನೀಯ. ಇಂಥಹ ದೈವ ವಿಶ್ವಾಸರಾಹಿತ್ಯವೇ ಜೀವಿಯ ಪತನಕ್ಕೆ, ಅಶಾಂತಿಗೆ ಪ್ರಧಾನ ಕಾರಣ. ಆದ್ದರಿಂದ ಭಗವಂತನ ಮಹಿಮೆಯನ್ನು ಗುರ್ತಿಸಿ ಭಕ್ತಿಯಿಂದ ನಿರತವಾಗಿ ಆತನನ್ನು ಸೇವಿಸುವುದೇ, ಧ್ಯಾನಿಸುವುದೇ ಶಾಂತಿಗೆ, ಸುಖಕ್ಕೆ, ಜನ್ಮರಾಹಿತ್ಯಕ್ಕೆ ಇರುವ ಏಕೈಕ ಮಾರ್ಗ. ಈ ಸತ್ಯವನ್ನೇ ಈ ಶ್ಲೋಕದಲ್ಲಿ ತಿಳಿಸಲಾಗಿದೆ.

ಇಲ್ಲಿಯವರೆಗೆ ಈ ಅಧ್ಯಾಯದಲ್ಲಿ, ಇಂದ್ರಿಯ ನಿಗ್ರಹ, ತತ್ವ ವಿಚಾರಣಾದಿಯಂತಹ ಅನೇಕ ಸಾಧನೆಗಳನ್ನು ಹೇಳಲ್ಪಟ್ಟಿದ್ದರೂ ಅಧ್ಯಾಯಾಂತದಲ್ಲಿ ಭಕ್ತಿಮಾರ್ಗವನ್ನು ಉಪದೇಶಿಸಿರುವುದರಿಂದ ಪ್ರತಿಯೊಬ್ಬರೂ ಅತ್ಯಂತ ಸುಲಭವಾದ ಆ ಭಕ್ತಿಯನ್ನು ಮೊದಲು ಅನುಸರಿಸಿದರೆ ಭಗವತ್ಕೃಪೆಯಿಂದ ಕ್ರಮವಾಗಿ ಆಧ್ಯಾತ್ಮ ಮಾರ್ಗದಲ್ಲಿ ವಿಕಾಸ ಹೊಂದಿ ಕೊನೆಗೆ ಭಗವದೈಕ್ಯದಿಂದ ಪರಮ ಶಾಂತಿಯನ್ನು ಪಡೆಯುವರೆನ್ನುವುದು ಸ್ಪಷ್ಟವಾಗುತ್ತಿದೆ.

ಪ್ರ : ಶಾಂತಿ ಹೊಂದಲು ಮಾರ್ಗವೇನು ?

ಉ: ಭಗವಂತನ ಸ್ವರೂಪವನ್ನು ತಿಳಿದು ಭಕ್ತಿಯಿಂದ ಆತನನ್ನು ಆರಾಧಿಸುವುದೇ, ಧ್ಯಾನಿಸುವುದೇ ಶಾಂತಿಗೆ ಮಾರ್ಗ.

ಪ್ರ : ಭಗವಂತನ ಸ್ವರೂಪ ಎಂಥಹದು ? ಆತನು ಎಂಥವನು ?

ಉ : ಆತನು ೧) ಸಮಸ್ತಯಜ್ಞಗಳಿಗೆ, ತಪಸ್ಸುಗಳಿಗೆ ಭೋಕ್ತ ೨) ಸಮಸ್ತ ಲೋಕಗಳಿಗೆ ಪ್ರಭು, ಅಧಿಪತಿ. ೩) ಸರ್ವಜೀವಿಗಳ ಆಪ್ತಮಿತ್ರನು. ಹಿತಕಾರಿ.

ಓಮ್

ಇತಿ ಶ್ರೀಮದ್ಭಗವದ್ಗೀತಾಸೂಪನಿಷತ್ಸು ಬ್ರಹ್ಮವಿದ್ಯಾಯಾಂ ಯೋಗಶಾಸ್ತ್ರೇ

ಶ್ರೀಕೃಷ್ಣಾರ್ಜುನ ಸಂವಾದೇ ಕರ್ಮಸಂನ್ಯಾಸಯೋಗೋ ನಾಮ ಪಂಚಮೋಧ್ಯಾಯಃ

ಇದು ಉಪನಿಷತ್ ಪ್ರತಿಪಾದಕವು, ಬ್ರಹ್ಮವಿದ್ಯೆಯು, ಯೋಗಶಾಸ್ತ್ರವು,

ಶ್ರೀಕೃಷ್ಣಾರ್ಜುನ ಸಂವಾದವಾದ ಶ್ರೀಭಗವದ್ಗೀತೆಯಲ್ಲಿಯ ಕರ್ಮಸಂನ್ಯಾಸಯೋಗವೆನ್ನುವ
ಐದನೆಯ ಅಧ್ಯಾಯ

ಓಮ್ ತತ್ ಸತ್

# ಶ್ರೀ ಭಗವದ್ಗೀತೆ

## ಅಥ ಷಷ್ಠೋऽಧ್ಯಾಯಃ
## ಆರನೆಯ ಅಧ್ಯಾಯ
## ಆತ್ಮಸಂಯಮಯೋಗಃ - ಆತ್ಮಸಂಯಮಯೋಗ

**ಈ ಅಧ್ಯಾಯದ ಹೆಸರು:**

ಈ ಅಧ್ಯಾಯಕ್ಕೆ ಆತ್ಮಸಂಯಮಯೋಗವೆಂದು ಹೆಸರು. ಇದನ್ನೇ ಧ್ಯಾನಯೋಗವೆಂದೂ ಕರೆಯುವರು. ಇಲ್ಲಿ 'ಆತ್ಮ' ಎನ್ನುವ ಪದಕ್ಕೆ ಶರೀರ, ಇಂದ್ರಿಯಗಳು ಮನಸ್ಸು, ಬುದ್ಧಿ- ಎನ್ನುವ ಅರ್ಥಗಳಿವೆ. ಅವೆಲ್ಲವುಗಳ ನಿಗ್ರಹವನ್ನು ಹೇಗೆ ಸಾಧಿಸಬೇಕು ಎನ್ನುವ ಪದ್ಧತಿಯನ್ನು ಈ ಅಧ್ಯಾಯದಲ್ಲಿ ಬೋಧಿಸಲ್ಪಟ್ಟಿರುವುದರಿಂದ ಇದಕ್ಕೆ ಆತ್ಮಸಂಯಮಯೋಗವೆನ್ನುವ ಹೆಸರನ್ನು ಕೊಟ್ಟಿದ್ದಾರೆ.

**ಈ ಅಧ್ಯಾಯದಲ್ಲಿಯ ಪ್ರಧಾನ ವಿಷಯಗಳು:**

ನಿಷ್ಕಾಮ ಕರ್ಮಯೋಗದ ಪ್ರಸ್ತಾವನೆ ಯೋಗಾರೂಢನ ಲಕ್ಷಣಗಳು-
(೧ನೇ ಶ್ಲೋಕದಿಂದ ೪ನೇ ಶ್ಲೋಕದವರೆಗೆ)

ಆತ್ಮೋದ್ಧಾರಣೆ, ಜಿತೇಂದ್ರಿಯನಾದ ಜ್ಞಾನಿಯ ಸ್ವಭಾವಗಳು-
(೫ನೇ ಶ್ಲೋಕದಿಂದ ೧೦ನೇ ಶ್ಲೋಕದವರೆಗೆ)

ಧ್ಯಾನಯೋಗ ಪದ್ಧತಿ- (೧೧ನೇ ಶ್ಲೋಕದಿಂದ ೩೨ನೆಯ ಶ್ಲೋಕದವರೆಗೆ)

ಮನೋನಿಗ್ರಹದ ವಿಚಾರಣೆ-
(೩೩ನೆಯ ಶ್ಲೋಕದಿಂದ ೩೬ನೆಯ ಶ್ಲೋಕದವರೆಗೆ)

ಯೋಗಭ್ರಷ್ಟನ ಸದ್ಗತಿ, ಧ್ಯಾನಯೋಗದ ಮಹಿಮೆ-
(೩೭ನೆಯ ಶ್ಲೋಕದಿಂದ ೪೭ನೆಯ ಶ್ಲೋಕದವರೆಗೆ)

**ಪೂರ್ವಾಧ್ಯಾಯದೊಡನೆ ಈ ಅಧ್ಯಾಯಕ್ಕೆ ಇರುವ ಸಂಬಂಧ:**

೫ನೆಯ ಅಧ್ಯಾಯದ ಪ್ರಾರಂಭದಲ್ಲಿ ಕರ್ಮಸನ್ಯಾಸ (ಜ್ಞಾನಯೋಗ) ಹಿರಿಮೆಯದೇ, ಕರ್ಮಯೋಗ ವಿಶಿಷ್ಟವಾದುದೇ ಎನ್ನುವ ಅರ್ಜುನನ ಪ್ರಶ್ನೆಗೆ ಉತ್ತರಿಸುತ್ತಾ, ಶ್ರೀಕೃಷ್ಣಪರಮಾತ್ಮನು ಎರಡೂ ವಿಶಿಷ್ಟವಾದುವುಗಳೇ, ಆದರೂ ಸಾಧಕರಿಗೆ ಮೊಟ್ಟಮೊದಲಿಗೆ ಕರ್ಮಯೋಗವೇ ಸುಲಭ ಸಾಧ್ಯವಾದುದರಿಂದ ಅದೇ ಶ್ರೇಯಸ್ಕರವೆಂದು ಹೇಳಿದನು. ನಂತರ ಆ ಎರಡು ಮಾರ್ಗಗಳನ್ನು ಕುರಿತು ಆಳವಾಗಿ ವಿಚಾರಣೆ ನಡೆಸಿ ಕಟ್ಟಕಡೆಗೆ ಆ ಎರಡಕ್ಕೂ ಸಹಾಯಭೂತ ವಾಗಿರುವಂತಹ ಧ್ಯಾನಯೋಗ (ಆತ್ಮಸಂಯಮಯೋಗ) ವನ್ನು ಪ್ರಸ್ತಾಪಿಸಿದನು. ಆದರೆ ಅದನ್ನು ಕುರಿತು ಅಲ್ಲಿ ವಿವರವಾಗಿ ತಿಳಿಸಲಿಲ್ಲ. ಆದ್ದರಿಂದ ೬ನೆಯ ಅಧ್ಯಾಯವನ್ನು ಪೂರ್ತಿಯಾಗಿ ಆ ಧ್ಯಾನಯೋಗದ ವಿವರಕ್ಕಾಗಿ ಭಗವಂತನು ಮೀಸಲಾಗಿಟ್ಟನು. ಈ ಪ್ರಕಾರವಾಗಿ ಧ್ಯಾನಯೋಗ (ಆತ್ಮಸಂಯಮಯೋಗ) ವನ್ನು ಚೆನ್ನಾಗಿ ವರ್ಣಿಸಲು ಉದ್ದೇಶಿಸಿ ಗೀತಾಚಾರ್ಯನು ಪ್ರಪ್ರಥಮವಾಗಿ ನಿಷ್ಕಾಮಕರ್ಮಯೋಗವನ್ನು ಕುರಿತು ಒಂದೆರಡು ಮಾತುಗಳನ್ನು ಹೇಳುತ್ತಾ ಈ ಅಧ್ಯಾಯವನ್ನು ಆರಂಭಿಸುತ್ತಿದ್ದಾನೆ-

**ಶ್ರೀ ಭಗವಾನುವಾಚ:**

**೧. ಅನಾಶ್ರಿತಃ ಕರ್ಮಫಲಂ ಕಾರ್ಯಂ ಕರ್ಮ ಕರೋತಿ ಯಃ**
**ಸ ಸಂನ್ಯಾಸೀ ಚ ಯೋಗೀ ಚ ನ ನಿರಗ್ನಿರ್ನಚಾಕ್ರಿಯಃ**

ಶ್ರೀ ಭಗವಾನುವಾಚ- ಶ್ರೀ ಭಗವಂತನು ಹೇಳಿದನು-

**ಅರ್ಥ:** ಯಃ=ಯಾರು; ಕರ್ಮಫಲಂ=ಕರ್ಮಗಳ ಫಲಗಳನ್ನು; ಅನಾಶ್ರಿತಃ= ಅಪೇಕ್ಷಿಸದವನಾಗಿ; ಕಾರ್ಯಂ=ಮಾಡಬೇಕಾದ; ಕರ್ಮ=ಕರ್ಮವನ್ನು; ಕರೋತಿ=ಮಾಡುತ್ತಿದ್ದಾನೋ; ಸಃ=ಆತನು; ಸಂನ್ಯಾಸಿ=ಸಂನ್ಯಾಸಿಯು; ಯೋಗೀ ಚ=ಯೋಗಿಯು (ಭವತಿ=ಆಗುತ್ತಿದ್ದಾನೆ); ನಿರಗ್ನಿಃ=ಅಗ್ನಿಹೋತ್ರವನ್ನು ಬಿಟ್ಟವನು; ನ=ಅಲ್ಲ; ಅಕ್ರಿಯಃ ಚ=ಕರ್ಮಗಳನ್ನು ಬಿಟ್ಟವನು; ನ=(ಸಂನ್ಯಾಸಿ, ಯೋಗಿ) ಅಲ್ಲ.

**ತಾ||** ಶ್ರೀ ಭಗವಂತನು ಹೇಳಿದನು- ಯಾವನು ತಾನು ಮಾಡಬೇಕಾದ ಕರ್ಮಗಳನ್ನು ಫಲಾಪೇಕ್ಷೆಯಿಲ್ಲದೆ ಮಾಡುವನೊ ಆತನು ಸಂನ್ಯಾಸಿ ಅಥವ ಯೋಗಿ ಎಂದು ಕರೆಯಲ್ಪಡುವನು. ಆದರೆ ಅಗ್ನಿಹೋತ್ರ ಹಾಗು ಕರ್ಮಗಳನ್ನು ತ್ಯಜಿಸಿದವನು ಯೋಗಿ ಅಥವ ಸಂನ್ಯಾಸಿ ಎಂದೆಂದಿಗೂ ಆಗುವುದಿಲ್ಲ.

**ವ್ಯಾಖ್ಯೆ:** ಸಂನ್ಯಾಸಿಯೆಂದರೆ ಕೆಲವರು ಅಗ್ನಿಹೋತ್ರಗಳನ್ನೆಲ್ಲಾ ತ್ಯಜಿಸಿದವನು, ಕಾಷಾಯ ವಸ್ತ್ರಗಳನ್ನು ಧರಿಸಿದವನೆಂದು ತಿಳಿಯುತ್ತಾರೆ. ಮತ್ತೆ ಕೆಲವರು ಯೋಗಿಯೆಂದರೆ ಕರ್ಮಗಳನ್ನೆಲ್ಲಾ ಬಿಟ್ಟು ಏಕಾಂತದಲ್ಲಿ ಯಾವುದೋ ಗುಹೆಯಲ್ಲಿರುವವನೆಂದು ಭಾವಿಸುವರು. ಆದರೆ ಇವೆಲ್ಲವೂ ಬಾಹ್ಯ ಚಿಹ್ನೆಗಳು. ಇಷ್ಟು ಮಾತ್ರದಿಂದ ಯಾರನ್ನೂ ಸಂನ್ಯಾಸಿಗಳೆಂದಾಗಲಿ, ಯೋಗಿಗಳೆಂದಾಗಲಿ ಹೇಳಲಾಗುವುದಿಲ್ಲ. ಒಳಗಿನ ವಾಸನೆಗಳು ನಶಿಸಬೇಕು. ಸಂಗ (attachment) ತೊಲಗಬೇಕು. ಫಲಾಪೇಕ್ಷೆಯನ್ನು ಬಿಡಬೇಕು. ಬಾಹ್ಯದೊಂದಿಗೆ ಅಭ್ಯಂತರ (ಅಂತರ)ವೂ ಬದಲಾಗಬೇಕು. ಆಗಲೇ ಅವರನ್ನು ಸಂನ್ಯಾಸಿ ಅಥವ ಯೋಗಿಗಳೆಂದು ಕರೆಯುವರು ಎಂದು ಭಗವಂತನು ಇಲ್ಲಿ ಉಪದೇಶಿಸುತ್ತಿದ್ದಾನೆ.

ಮಾಡಬೇಕಾದ ಕರ್ಮಗಳನ್ನು ಮಾಡುವುದು, ಅವುಗಳನ್ನೂ ಕೂಡ ಫಲಾಪೇಕ್ಷೆಯಿಲ್ಲದೆ ಮಾಡುವುದು ಸಂನ್ಯಾಸಿಯ, ಯೋಗಿಯ ಲಕ್ಷಣಗಳೆಂದು ಇಲ್ಲಿ ಹೇಳಲ್ಪಟ್ಟಿದೆ. ಆದ್ದರಿಂದ ಕರ್ಮಗಳನ್ನು ಸಂಪೂರ್ಣವಾಗಿ ಬಿಟ್ಟು ಸೋಮಾರಿಗಳಾಗಿ, ತಮಸ್ಸಿನಲ್ಲಿ ಬಿದ್ದು, ಏಕಾಂತದಲ್ಲಿ ವ್ಯರ್ಥವಾಗಿ ಕಾಲಕಳೆಯುವವರು ಇಲ್ಲವೆ, ಕಾಷಾಯ ವಸ್ತ್ರಗಳನ್ನು ಧರಿಸಿ ಅಗ್ನಿಹೋತ್ರವನ್ನು ವಿಸರ್ಜಿಸಿ ದೇಶ ತಿರುಗುವವರು ಸಂನ್ಯಾಸಿ ಅಥವ ಯೋಗಿಗಳು ಎಂದೆಂದಿಗೂ ಆಗುವುದಿಲ್ಲವೆಂದು ಈ ಶ್ಲೋಕವು ಸ್ಪಷ್ಟವಾಗಿ ಹೇಳುತ್ತಿದೆ. ಸಂನ್ಯಾಸದ ಚಿಹ್ನೆ ಕರ್ಮಫಲ ತ್ಯಾಗವೇ ಹೌದು. ಸಂಗರಾಹಿತ್ಯವೇ ಯತೀಶ್ವರನ ಗುರುತು. ಆದ್ದರಿಂದ ಒಬ್ಬನು ವಾಸ್ತವವಾಗಿ ಸಂನ್ಯಾಸಿ ಹೌದೇ ಅಲ್ಲವೇ ಎಂದು ಪರೀಕ್ಷಿಸಲು ಆತನ ಆಚರಣೆಯನ್ನು ನೋಡಿದರೆ ಸಾಕು. ಇಲ್ಲಿ ಎರಡು ವಿಷಯಗಳು ಪ್ರಸ್ತಾಪಿಸಲ್ಪಟ್ಟಿವೆ ೧) ಮಾಡಬೇಕಾದ ಕರ್ಮ ('ಕಾರ್ಯಂ ಕರ್ಮ') ಮಾಡುವುದು. ೨) ಅದನ್ನೂ ಕೂಡ ಫಲಾಪೇಕ್ಷೆಯಿಲ್ಲದೆ ಮಾಡುವುದು.

ಅಧರ್ಮ ಕಾರ್ಯಗಳನ್ನು, ಶಾಸ್ತ್ರ ವಿರುದ್ಧ ಕಾರ್ಯಗಳನ್ನು, ಪಾಪ ಕಾರ್ಯಗಳನ್ನು ಯಾವಾಗಲೂ ಮಾಡಬಾರದು. ಧರ್ಮಕಾರ್ಯಗಳನ್ನೇ, ಶಾಸ್ತ್ರವಿಹಿತಕಾರ್ಯಗಳನ್ನೇ, ಪುಣ್ಯಕಾರ್ಯಗಳನ್ನೇ ಮಾಡಬೇಕು. ಅವುಗಳನ್ನೂ ಕೂಡ ಫಲಾಪೇಕ್ಷೆಯಿಲ್ಲದೆ ಮಾಡಬೇಕು. ಇದೇ ಮಹೋನ್ನತವಾದ ಆಚರಣೆ. ಆ ವಿಧವಾಗಿ ಪ್ರವರ್ತಿಸುವವನೇ ವಾಸ್ತವವಾಗಿ ಸಂನ್ಯಾಸಿ. ಹಾಗೆ ಪ್ರವರ್ತಿಸುವವನು ಗೃಹಸ್ಥನಾದರೂ ಸನ್ಯಾಸಿಯೇ ಆಗುವನು. ಮತ್ತೆ ಸಂನ್ಯಾಸಿಗಳು ಹೊಂದುವ ಉತ್ತಮ ಫಲವನ್ನು ಆತನೂ ಹೊಂದಬಲ್ಲನು. ಸಂನ್ಯಾಸಿಯಾಗಲು ಇಲ್ಲಿ ಒಂದು ವರ್ಗವಾಗಲಿ, ಜಾತಿಯಾಗಲಿ, ಮತವಾಗಲಿ ಅವಶ್ಯಕವೆಂದು ಹೇಳಲ್ಪಟ್ಟಿಲ್ಲ. ಮೇಲೆ ತಿಳಿಸಿದ ಎರಡು ಸುಲಕ್ಷಣಗಳನ್ನು (ಧರ್ಮಾಚರಣೆ, ನಿಷ್ಕಾಮಾಚರಣೆ) ಹೊಂದಿದ್ದರೆ ಸಾಕೆಂದು ಹೇಳಲಾಗಿದೆ.

ಪ್ರ : ಸಂನ್ಯಾಸಿಯೆಂದರೆ ಯಾರು? ಯೋಗಿ ಯಾರು?

ಉ : ಮಾಡಬೇಕಾದ ಕಾರ್ಯಗಳನ್ನು ಫಲಾಪೇಕ್ಷೆಯಿಲ್ಲದೆ ಮಾಡುವವನೇ ಸಂನ್ಯಾಸಿ; ಅಷ್ಟೇ ಅಲ್ಲದೆ ಕೇವಲ ಅಗ್ನಿಹೋತ್ರವನ್ನು ಬಿಟ್ಟವನಲ್ಲ. ಮತ್ತೆ ಆ ಸುಲಕ್ಷಣಗಳನ್ನು ಹೊಂದಿದವನೇ ಯೋಗಿ; ಕೇವಲ ಕರ್ಮಗಳನ್ನು ತ್ಯಜಿಸಿದವನಲ್ಲ.

**ಅ||** ಮೇಲೆ ತಿಳಿಸಿದ ಸಂನ್ಯಾಸ, ಯೋಗಗಳೆರಡೂ ಒಂದೇ ಎಂದು ಹೇಳಲಾಗುತ್ತಿದೆ-

**೨. ಯಂ ಸಂನ್ಯಾಸಮಿತಿ ಪ್ರಾಹುರ್ಯೋಗಂ ತಂ ವಿದ್ಧಿ ಪಾಂಡವ**
**ನ ಹ್ಯಸಂನ್ಯಸ್ತಸಂಕಲ್ಪೋ ಯೋಗೀ ಭವತಿ ಕಶ್ಚನ**

**ಅರ್ಥ:** ಪಾಂಡವ=ಓ ಅರ್ಜುನಾ!; ಯಂ=ಯಾವುದನ್ನು; ಸಂನ್ಯಾಸಮಿತಿ= ಸಂನ್ಯಾಸವೆಂದು; ಪ್ರಾಹುಃ=ಹೇಳುವರೋ; ತಂ=ಅದನ್ನು; ಯೋಗಂ(ಇತಿ)= ಯೋಗವೆಂದು; ವಿದ್ಧಿ=ತಿಳಿದುಕೊ; ಹಿ=ಏಕೆಂದರೆ; ಅಸಂನ್ಯಸ್ತಸಂಕಲ್ಪಃ= (ಫಲಾಪೇಕ್ಷಾಕಾಮಕ್ರೋಧಾದಿರೂಪ) ಸಂಕಲ್ಪವನ್ನು ಬಿಡದವನು; ಕಶ್ಚನ=ಯಾವನೂ; ಯೋಗೀ=ಯೋಗಿ; ನ ಭವತಿ=ಆಗಲಾರನು.

**ತಾ||** ಓ ಅರ್ಜುನಾ!, ಯಾವುದನ್ನು ಸಂನ್ಯಾಸವೆಂದು ಹೇಳುವರೋ ಅದನ್ನೇ ಯೋಗವೆಂದು ತಿಳಿಯುವುದು. ಏಕೆಂದರೆ, (ಕಾಮಾದಿ) ಸಂಕಲ್ಪವನ್ನು ಬಿಡದವನು (ಸಂಕಲ್ಪರಹಿತನಲ್ಲದವನು) ಯಾವನೂ ಯೋಗಿಯಾಗಲಾರನು.

ವ್ಯಾಖ್ಯೆ: ಜ್ಞಾನಯೋಗಿ ಆತ್ಮಾನಾತ್ಮ ವಿವೇಚನೆಯಿಂದ, ದೇಹಾದಿ ದೃಶ್ಯ ಪದಾರ್ಥಗಳನ್ನು ಕುರಿತ ಸಂಕಲ್ಪವನ್ನು ತ್ಯಜಿಸಿ ಆತ್ಮದಲ್ಲಿಯೇ ಸ್ಥಿರಚಿತ್ತನಾಗಿರುವವನು. ಕರ್ಮಯೋಗಿ ಕರ್ತೃತ್ವವನ್ನು ಬಿಟ್ಟು, ಫಲಾಪೇಕ್ಷೆಯಿಲ್ಲದೆ 'ನಾನು, ನನ್ನದು' ಎನ್ನುವ ಸಂಕಲ್ಪಗಳನ್ನು ಬಿಟ್ಟು ಈಶ್ವರಾರ್ಪಣ ಬುದ್ಧಿಯಿಂದ ಕರ್ಮಗಳನ್ನು ಮಾಡುವವನು. ಧ್ಯಾನಯೋಗಿ ಬಹಿರ್ಮುಖ ವೃತ್ತಿಗಳನ್ನು ತ್ಯಜಿಸಿ ಅಂತರ್ಮುಖನಾಗಿ ಪರಮಾತ್ಮನನ್ನು ಧ್ಯಾನಿಸುತ್ತಿರುತ್ತಾನೆ. ಭಕ್ತಿಯೋಗಿ ಪರಮಾತ್ಮನೊಬ್ಬನನ್ನು ಬಿಟ್ಟು ಬೇರೆ ಯಾವ ವಸ್ತುಗಳಲ್ಲಿಯೂ ಪ್ರೀತಿಯಿಲ್ಲದವನಾಗಿ ಅವುಗಳನ್ನು ಕುರಿತ ಸಂಕಲ್ಪಗಳನ್ನು ತ್ಯಜಿಸಿ, ದೈವಪರಾಯಣನಾಗಿ ಬೆಳಗುವನು. ಈ ಪ್ರಕಾರವಾಗಿ ಎಲ್ಲಾ ಯೋಗಗಳಲ್ಲಿ ದೃಶ್ಯ ಪದಾರ್ಥಗಳನ್ನು ಕುರಿತ ಸಂಕಲ್ಪಗಳನ್ನು ತ್ಯಜಿಸುವುದೇ ಪ್ರಾಮುಖ್ಯವಾಗಿದೆ. ಮತ್ತೆ ದೈವ ಪರಾಯಣತ್ವವು ಎಲ್ಲದರಲ್ಲಿಯೂ ಇದೆ. ಆದ್ದರಿಂದಲೇ ಭಗವಂತನು ಈ ಶ್ಲೋಕದಲ್ಲಿ ಸಂನ್ಯಾಸ(ಜ್ಞಾನಯೋಗ), ಯೋಗ (ನಿಷ್ಕಾಮ ಕರ್ಮಯೋಗ, ಭಕ್ತಿಯೋಗ) ಎರಡನ್ನೂ ಒಂದೇ ಎಂದು ಬೋಧಿಸುತ್ತಿದ್ದಾನೆ. ಕಾಮಕ್ರೋಧಾದಿಸಂಕಲ್ಪಗಳನ್ನು, ಫಲಾಪೇಕ್ಷಾದಿ ಸಂಕಲ್ಪಗಳನ್ನು ಅಷ್ಟೇಕೆ ದೃಶ್ಯಪದಾರ್ಥಗಳನ್ನು ಕುರಿತ ಎಲ್ಲಾ ಸಂಕಲ್ಪಗಳನ್ನು ಬಿಡದವನು ಯೋಗಿ (ಜ್ಞಾನಯೋಗಿ, ಕರ್ಮಯೋಗಿ, ಭಕ್ತಿಯೋಗಿ, ಧ್ಯಾನಯೋಗಿ) ಯಾಗಲಾರನೆಂದು ಘಂಟಾಘೋಷವಾಗಿ ಹೇಳಿರುವನು. ಆದ್ದರಿಂದ ಸಂಕಲ್ಪ ತ್ಯಾಗವೇ ನಿಜವಾದ ಸಂನ್ಯಾಸ ಮತ್ತು ನಿಜವಾದ ಯೋಗ. ಸಂಕಲ್ಪ ತ್ಯಾಗವಿಲ್ಲದೆ ಕೇವಲ ಕರ್ಮಗಳನ್ನು ತ್ಯಜಿಸಿ, ಅಕ್ರಿಯನಾಗಿ ಸುಮ್ಮನಿರುವವನನ್ನು ಸಂನ್ಯಾಸಿಯೆಂದಾಗಲಿ, ಯೋಗಿಯೆಂದಾಗಲಿ ಹೇಳಲಾಗದು.

ಪ್ರ : ಸಂನ್ಯಾಸ, ಯೋಗಗಳು ಬೇರೆ ಬೇರೆಯೇ?

ಉ : ಅಲ್ಲ, ಎರಡೂ ಒಂದೇ- ಯಾವುದನ್ನು ಸನ್ಯಾಸವೆಂದು ಹೇಳುವರೋ ಅದನ್ನೇ ಯೋಗವೆಂದು ತಿಳಿಯಬೇಕು.

ಪ್ರ : ಮನುಜನು ಯಾವಾಗ ಯೋಗಿಯಾಗುವನು?

ಉ : ದೇಹಾದಿ ದೃಶ್ಯ ಪದಾರ್ಥಗಳನ್ನು ಕುರಿತ ಸಂಕಲ್ಪಗಳನ್ನು ಬಿಟ್ಟಾಗ ಮಾತ್ರ. ಅವುಗಳನ್ನು ಬಿಡದೆ ಇದ್ದರೆ ಆತನು ಯೋಗಿಯಾಗಲಿ, ಸಂನ್ಯಾಸಿಯಾಗಲೀ ಎಂದೆಂದಿಗೂ ಆಗಲಾರನು.

**ಅ||** ಸಾಧಕನಿಗೆ ಪ್ರಾರಂಭದೆಸೆಯಲ್ಲಿ ಕರ್ಮ ಆವಶ್ಯಕವೆಂದು ತಿಳಿಯಪಡಿಸಲಾಗುತ್ತಿದೆ-

**೩. ಆರುರುಕ್ಷೋರ್ಮುನೇರ್ಯೋಗಂ ಕರ್ಮಕಾರಣಮುಚ್ಯತೇ**
**ಯೋಗಾರೂಢಸ್ಯ ತಸ್ಯೈವ ಶಮಃ ಕಾರಣಮುಚ್ಯತೇ**

**ಅರ್ಥ:** ಯೋಗಾಂ=ಯೋಗದಲ್ಲಿ (ಜ್ಞಾನಯೋಗ, ಧ್ಯಾನಯೋಗಗಳನ್ನು) ಆರುರುಕ್ಷೋಃ=ಪ್ರಗತಿಹೊಂದಬೇಕೆಂದಿರುವ; ಮುನೇಃ=ಮನನಶೀಲನಿಗೆ; ಕರ್ಮ=ಕರ್ಮವು; ಕಾರಣಂ=ಸಾಧನವೆಂದು; ಉಚ್ಯತೇ=ಹೇಳಲ್ಪಟ್ಟಿದೆ. ಯೋಗಾರೂಢಸ್ಯ=ಯೋಗವನ್ನು (ಜ್ಞಾನಯೋಗ, ಧ್ಯಾನಯೋಗ) ಚೆನ್ನಾಗಿ ಅಭ್ಯಾಸಮಾಡಿದ; ತಸ್ಯ ಏವ=ಆತನಿಗೇ; ಶಮಃ=ಉಪರತಿ (ಕರ್ಮನಿವೃತ್ತಿ); ಕಾರಣಂ=ಸಾಧನವೆಂದು; ಉಚ್ಯತೇ=ಹೇಳಲ್ಪಟ್ಟಿದೆ.

**ತಾ||** ಯೋಗದಲ್ಲಿ (ಜ್ಞಾನಯೋಗ, ಧ್ಯಾನಯೋಗಗಳಲ್ಲಿ) ಪ್ರಗತಿ ಹೊಂದಬೇಕೆಂದು ಇರುವ ಮುನಿಗೆ (ಮನನಶೀಲನಿಗೆ) ಕರ್ಮ

ಸಾಧನೆಯೆಂದೂ; ಯೋಗವನ್ನು ಚೆನ್ನಾಗಿ ಕರತಲಾಮಲಕಗೊಳಿಸಿಕೊಂಡ ಮುನಿಗೆ ಉಪರತಿ (ಕರ್ಮನಿವೃತ್ತಿ) ಸಾಧನೆಯೆಂದು ಹೇಳಲ್ಪಟ್ಟಿದೆ.

**ವ್ಯಾಖ್ಯೆ:** ಜ್ಞಾನಯೋಗ ಅಥವ ಧ್ಯಾನಯೋಗಗಳನ್ನು ಸಾಧಿಸಲು ನಿಷ್ಕಾಮ ಕರ್ಮಯೋಗ ಒಂದು ಸಾಧನೆ ಎಂದು ಹೇಳಲಾಗಿದೆ. ಜ್ಞಾನಯೋಗ ಇಲ್ಲವೆ ಧ್ಯಾನಯೋಗದಲ್ಲಿ ಸ್ವಲ್ಪ ಸ್ಥಿರತೆ ಹೊಂದಿದವನಿಗೆ, ಅವುಗಳಲ್ಲಿ ಇನ್ನೂ ದೃಢತೆಯನ್ನು ಹೊಂದಲು ಕರ್ಮನಿವೃತ್ತಿ ರೂಪಹಾದ ಶಮ (ಶಾಂತಿ, ಚಿತ್ತೋಪರತಿ)ವನ್ನು ಸಾಧನೆಯನ್ನಾಗಿ ಸೂಚಿಸಲಾಗಿದೆ. ಇದರಿಂದ ಸಾಧಕನು ಧ್ಯಾನಯೋಗದಲ್ಲಿ ಪ್ರವೇಶಿಸಲು ಅವಶ್ಯಕವಾದ ಚಿತ್ತಶುದ್ಧಿಗಾಗಿ ನಿಷ್ಕಾಮ ಕರ್ಮಯೋಗವನ್ನು ಪ್ರಾರಂಭದಲ್ಲಿ ಆಚರಿಸಬೇಕೆಂದೂ ಧ್ಯಾನದಲ್ಲಿ ಸ್ವಲ್ಪ ಸ್ಥಿರತೆ ಬಂದ ನಂತರ ಕರ್ಮಾನುಷ್ಠಾನವನ್ನು ಕಡಿಮೆ ಮಾಡಿ ಕರ್ಮನಿವೃತ್ತಿರೂಪ ಚಿತ್ತೋಪರತಿಯನ್ನು ಅನುಸರಿಸಬೇಕೆಂದು ತಿಳಿಯುತ್ತದೆ.

ಸಾಧಕನಿಗೆ ಚಿತ್ತಶುದ್ಧಿ ಉಂಟಾಗಲು ನಿಷ್ಕಾಮ ಕರ್ಮಾನುಷ್ಠಾನ ಪ್ರಾರಂಭದಲ್ಲಿ ಬಹಳ ಉಪಕಾರವಾಗುತ್ತದೆ. ಕರ್ಮಾನುಷ್ಠಾನ ಧ್ಯಾನದ ಪ್ರವೇಶ ಸ್ಥಿತಿಯವರೆಗೆ ಕೊಂಡೊಯ್ಯುವುದು ನಂತರ, ಕರ್ಮ ನಿವೃತ್ತಿರೂಪ ಚಿತ್ತೋಪರತಿ, ಶಮ (ಶಾಂತಿ) ಆತನನ್ನು ಇನ್ನೂ ಮೇಲೆ (ಧ್ಯಾನಾರೂಢ ಸ್ಥಿತಿಗೆ) ತೆಗೆದುಕೊಂಡು ಹೋಗುವುದು. ಅಂದರೆ ಅಲ್ಲಿ ಬಾಹ್ಯಕರ್ಮನಿವೃತ್ತಿಯುಂಟಾಗಿ ಶ್ರವಣ, ಮನನ, ನಿದಿಧ್ಯಾಸ ರೂಪಗಳಾದ ಅಂತರಂಗ ಪ್ರಯತ್ನಗಳು ಪ್ರಾರಂಭವಾಗುವುವು ಎಂದರ್ಥ. ಆ ಸಮಯದಲ್ಲಿ ಆತನ ಚಿತ್ತವು ಕರ್ಮಕಲಾಪಗಳಲ್ಲಿ ಆಸಕ್ತಿ ಹೊಂದದೆ, ಕರ್ಮನಿವೃತ್ತಿಯಲ್ಲಿಯೇ ರಮಿಸುವುದು. ದೃಷ್ಟಿಯನ್ನು ಬಹಿರ್ಮುಖವಾಗಿ ಹೋಗಗೊಡದೆ ಅಂತರ್ಮುಖ ಮಾಡಿ ಚಿತ್ತಶಾಂತಿಯನ್ನು ಕೋರುತ್ತಿರುವನು. ಅಂತಹ ಶಮವೇ ಕ್ರಮೇಣ ಆತನಿಗೆ ಧ್ಯಾನಯೋಗದಲ್ಲಿ ನಿಸ್ಸಂಕಲ್ಪ ಸ್ಥಿತಿಯನ್ನುಂಟುಮಾಡಿ ಆತ್ಮಸ್ವರೂಪಾನುಭವಕ್ಕೆ ತೆಗೆದುಕೊಂಡು ಹೋಗುವುದು.

ಆದ್ದರಿಂದ ಆಧ್ಯಾತ್ಮರಂಗದಲ್ಲಿ, ಪ್ರಾರಂಭ ಸ್ಥಿತಿಯಲ್ಲಿ ಪ್ರತಿಯೊಬ್ಬರೂ ಪುಣ್ಯಕರ್ಮಾಚರಣೆ, ನಿಷ್ಕಾಮಕರ್ಮಸಾಧನೆ ತಪ್ಪದೆ ಮಾಡಬೇಕು. ಹಾಗೆ ಮಾಡದಿದ್ದಲ್ಲಿ ಚಿತ್ತದಲ್ಲಿ ತಮಸ್ಸು, ಸೋಮಾರಿತನ ಪ್ರವೇಶಿಸುವುದರಿಂದ ಅದು ಜಡಪ್ರಾಯವಾಗಿ ಜ್ಞಾನಯೋಗದಲ್ಲಾಗಲಿ, ಧ್ಯಾನಯೋಗದಲ್ಲಾಗಲಿ ಪ್ರವೇಶಿಸಲು ಅನರ್ಹವಾಗುವುದು. ಹಣ್ಣಿನ ಮೇಲೆ ಇರುವ ಹೆಕ್ಕು ಕಾಲಕ್ರಮೇಣ ಅದಷ್ಟಕ್ಕೆ ಅದೇ ಬಿದ್ದು ಹೋಗಬೇಕೇ ಹೊರತು ಬಲಾತ್ಕಾರವಾಗಿ ಕಿತ್ತರೆ ಹಣ್ಣು ಉಲ್ಬಣವಾಗಿ ತೊಂದರೆ ಮಾಡುತ್ತದೆ. ಹಾಗೆಯೇ ಧ್ಯಾನದಲ್ಲಿ ಸ್ಥಿರತೆ ಹೊಂದಿದ ನಂತರ ಕರ್ಮ ಅದಷ್ಟಕ್ಕದೇ ತೊಲಗಿ ಹೋಗುವುದು. ಅಪರಿಪಕ್ವ ದೆಸೆಯಲ್ಲಿ ಅದನ್ನು ತೊಲಗಿಸಿದರೆ ಲಕ್ಷ್ಯ ಪ್ರಾಪ್ತಿಯಾಗುವುದಿಲ್ಲ. ಆದ್ದರಿಂದ ಪ್ರಾರಂಭದಲ್ಲಿ ಸತ್ಕಾರ್ಯಗಳನ್ನು ಮಾಡುತ್ತಾ ಬಂದು ಚಿತ್ತವು ಶುದ್ಧವಾಗಿ ಧ್ಯಾನದಲ್ಲಿ ಯಾವಾಗ ಸ್ಥಿರಗೊಳ್ಳುವುದೋ ಆಗ ಕರ್ಮಾನುಷ್ಠಾನವನ್ನು ಕಡಿಮೆ ಮಾಡಿ ಉಪರತಿಯನ್ನು(ಶಮವನ್ನು) ಅವಲಂಬಿಸಿ ಮುಂದಕ್ಕೆ ಸಾಗಬೇಕು. ಮನಸ್ಸು ಅಂತರ್ಮುಖವಾಗಿ ವಿಚಾರಣೆ ಧ್ಯಾನಾದಿಗಳನ್ನು ಮಾಡಬೇಕು. ಆಗ ಕ್ರಮೇಣ ಧ್ಯಾನದಲ್ಲಿ ಆರೂಢತೆ ಉಂಟಾಗಿ ಆತ್ಮಸ್ವರೂಪಾನುಭವ ಉಂಟಾಗುವುದು.

| | | |
|---|---|---|
| ೧) ಆರುರುಕ್ಷು- ಪ್ರಾರಂಭ ದೆಸೆ | | High School Course |
| ೨) ಯೋಗಾರೂಢಯತ್ನಪರನು- ಮಧ್ಯಮದೆಸೆ | | College Course |
| ೩) ಯೋಗಾರೂಢನು- ಅಂತಿಮದೆಸೆ | | Graduate |

ಇದರಲ್ಲಿ ಮೊದಲ ಎರಡು ರೀತಿಯ ಸಾಧಕರನ್ನು ಕುರಿತು ಈ ಶ್ಲೋಕದಲ್ಲಿ ಹೇಳಲಾಗಿದೆ. ಪ್ರಥಮ ದೆಸೆಯಲ್ಲಿ ಚೆನ್ನಾಗಿ ಅನುಭವವನ್ನು ಹೊಂದದಿದ್ದರೆ, ಮಧ್ಯದೆಸೆಯಲ್ಲಾಗಲಿ, ಅಂತಿಮ ದೆಸೆಯಲ್ಲಾಗಲಿ ವಿಜಯವನ್ನು ಹೊಂದುವುದಿಲ್ಲ. ಪ್ರಾಥಮಿಕ ಪಾಠಶಾಲೆಯಲ್ಲಿ ವಿದ್ಯೆಯನ್ನು ಚೆನ್ನಾಗಿ ಕಲಿಯದವನು ಉನ್ನತ ಪಾಠಶಾಲೆಯ ವಿದ್ಯೆಯನ್ನು ಅಭ್ಯಾಸ ಮಾಡಲಾರನಲ್ಲವೇ! ಆದ್ದರಿಂದ ಆಧ್ಯಾತ್ಮರಂಗದಲ್ಲಿ ಪ್ರಾರಂಭದಲ್ಲಿ ಕರ್ಮಗಳನ್ನು ಬಿಡದೆ, ನಿಷ್ಕಾಮವಾಗಿ ಅವುಗಳನ್ನು ಆಚರಿಸುತ್ತ, ಸ್ವಲ್ಪ ಪರಿಪಕ್ವದೆಸೆ ಏರ್ಪಟ್ಟಾಗ ಕರ್ಮನಿವೃತ್ತಿಯನ್ನವಲಂಬಿಸಿ ಅಂತರ್ಮುಖನಾಗಿ ಮುಂದಕ್ಕೆ ಸಾಗಬಹುದು. ಚಿತ್ತವು ಅಂತರ್ಮುಖವಾದಾಗ ಕರ್ಮಾಚರಣೆಯು ಕೂಡ ಸಾಧ್ಯವಾಗದು. ಅಲ್ಲಿ ಕರ್ಮ ಭಾರವಾಗಿ ತೋರುವುದು. ಕರ್ಮ ನಿವೃತ್ತಿಗೆ ಅದು ಸರಿಯಾದ ಸಮಯ. ಅದಕ್ಕಿಂತ ಮೊದಲಲ್ಲ. ಈ ವಿಷಯವನ್ನು ಸಾಧಕರು ಚೆನ್ನಾಗಿ ಮನಸ್ಸಿನಲ್ಲಿಟ್ಟುಕೊಳ್ಳಬೇಕು-

**ಅ॥** ಯೋಗಾರೂಢನ ಲಕ್ಷಣಗಳನ್ನು ಹೇಳಲಾಗುತ್ತಿದೆ-

**೪. ಯದಾ ಹಿ ನೇಂದ್ರಿಯಾರ್ಥೇಷು* ನ ಕರ್ಮಸ್ವನುಷಜ್ಜತೇ**
**ಸರ್ವಸಂಕಲ್ಪಸಂನ್ಯಾಸೀ ಯೋಗಾರೂಢಸ್ತದೋಚ್ಯತೇ**

**ಅರ್ಥ:** ಯದಾಹಿ=ಯಾವಾಗ; ಇಂದ್ರಿಯಾರ್ಥೇಷು=ಶಬ್ದಾದಿ ವಿಷಯ ಗಳಲ್ಲಿ; ನ ಅನುಷಜ್ಜತೇ=ಆಸಕ್ತಿಯನ್ನು ಇಟ್ಟಿರುವುದಿಲ್ಲವೋ; ಕರ್ಮಸು=ಕರ್ಮ ಗಳಲ್ಲಿ; ನ (ಅನುಷಜ್ಜತೇ)=ಆಸಕ್ತಿ ಹೊಂದಿರುವುದಿಲ್ಲವೋ (ಅಂಟಿಕೊಳ್ಳು ವುದಿಲ್ಲವೋ); ಸರ್ವಸಂಕಲ್ಪಸಂನ್ಯಾಸೀ(ಭವತಿ)=ಸಮಸ್ತ ಸಂಕಲ್ಪಗಳನ್ನು ಬಿಟ್ಟಿರುವನೋ; ತದಾ=ಆಗ; ಯೋಗಾರೂಢಃ=ಯೋಗಾರೂಢನೆಂದು; ಉಚ್ಯತೇ= ಕರೆಯಲ್ಪಡುತ್ತಾನೆ.

**ತಾ॥** ಯಾವನು ಶಬ್ದಾದಿ ವಿಷಯಗಳಲ್ಲಿ, ಕರ್ಮಗಳಲ್ಲಿ, ಆಸಕ್ತಿ ಹೊಂದಿರುವುದಿಲ್ಲವೋ ಹಾಗು ಸಮಸ್ತ ಸಂಕಲ್ಪಗಳನ್ನು ಬಿಟ್ಟಿರುವನೋ, ಆ ಮನುಜನನ್ನು ಯೋಗಾರೂಢನೆಂದು ಕರೆಯುವರು.

**ವ್ಯಾಖ್ಯೆ:** 'ಯದಾ, ತದಾ' ಎನ್ನುವ ಎರಡು ಪದಗಳು ಇಲ್ಲಿ ಪ್ರಯೋಗಿಸಲ್ಪಟ್ಟಿರುವುದರಿಂದ ಮೇಲೆ ತಿಳಿಸಿದ ಮೂರು ಲಕ್ಷಣಗಳನ್ನು ಯಾವಾಗ ಮನುಜನು ಹೊಂದುವನೋ ಆಗಲೇ ಆತನಿಗೆ ಯೋಗಾರೂಢತ್ವ ಸಿದ್ಧಿಸುವುದೆಂದು ಭಾವ. ಅದಕ್ಕಿಂತ ಮುಂಚೆ ಅಲ್ಲ. ಆ ಮೂರು ಲಕ್ಷಣಗಳು ಯಾವುವೆಂದರೆ- ೧) ಇಂದ್ರಿಯಾರ್ಥಗಳಾದ ಶಬ್ದಸ್ಪರ್ಶಾದಿ ವಿಷಯಗಳಲ್ಲಿ ಅನಾಸಕ್ತಿ ೨) ಕರ್ಮಗಳಲ್ಲಿ ಆಸಕ್ತಿಯಿಲ್ಲದೇ ಇರುವುದು ೩) ಸಮಸ್ತ ಸಂಕಲ್ಪಗಳನ್ನು ಬಿಡುವುದು- ಒಬ್ಬನು ಯೋಗಾರೂಢನಾಗಿರುವುದು ಆಗದೆ ಇರುವುದು, ಪರಿಪೂರ್ಣಧ್ಯಾನ ನಿಷ್ಠನಾಗಿರುವುದು ಆಗದೆ ಇರುವುದು ಈ ಪರೀಕ್ಷೆಯಿಂದ ಸುಲಭವಾಗಿ ತಿಳಿದುಕೊಳ್ಳಬಹುದು. ಧ್ಯಾನದಲ್ಲಿ, ಯೋಗದಲ್ಲಿ ಪರಿಪೂರ್ಣತೆಯನ್ನು ಹೊಂದಿದ್ದೇವೆ ಎಂದು ತಿಳಿದವರು ಈ ಮೂರು ಲಕ್ಷಣಗಳು ತಮ್ಮಲ್ಲಿ ಮನೆಮಾಡಿಕೊಂಡಿವೆಯೇ ಎಂದು ವಿಚಾರಿಸಿಕೊಳ್ಳಬೇಕು.

---

* ಚೇಂದ್ರಿಯಾರ್ಥೇಷು - ಪಾಠಾಂತರವು.

೧) ಇಂದ್ರಿಯಾರ್ಥಗಳಾದ ವಿಷಯಾದಿಗಳಲ್ಲಿ ಆಸಕ್ತಿ ಹೊಂದಿದವರಿಗೆ ಧ್ಯಾನದಲ್ಲಿ ಏಕಾಗ್ರತೆ ಉಂಟಾಗುವುದಿಲ್ಲ. ಅವುಗಳಲ್ಲಿ ವಿರಕ್ತಿ ಹುಟ್ಟಿದಾಗ ಮಾತ್ರ ಮನಸ್ಸು ಹೊರಗೆ ಓಡದೆ ಅಂತರ್ಮುಖವಾಗಿ ಏಕಾಗ್ರತೆಯನ್ನು ಹೊಂದಬಲ್ಲುದು. ಆದ್ದರಿಂದಲೇ ವಿಷಯಾದಿಗಳಲ್ಲಿ ಆಸಕ್ತಿಯಿಲ್ಲದವನು ಮಾತ್ರವೇ ಯೋಗಾರೂಢನಾಗಬಹುದೆಂದು ಇಲ್ಲಿ ಹೇಳಲಾಗಿದೆ. ೨) ಇನ್ನು ಎರಡನೆಯದು ಕರ್ಮಗಳಲ್ಲಿ ಆಸಕ್ತಿಯಿಲ್ಲದೇ ಇರುವುದು. ಅಂತರಂಗದಲ್ಲಿ ಚಿತ್ತವು ಆತ್ಮದಲ್ಲಿಯೇ ಪ್ರೀತಿ ಹೊಂದಿದ್ದರೆ, ಇನ್ನು ಬಾಹ್ಯ ಸಂಬಂಧವಾದ ಯಾವ ಕರ್ಮವೂ ರುಚಿಸದು. ಮೇಲಾಗಿ ಇಂದ್ರಿಯಗಳು ಮತ್ತು ಮನಸ್ಸು ಅಂತರ್ಮುಖಿಗೊಂಡು ಉಪರತಿಯನ್ನು ಹೊಂದುವುದರಿಂದ ಕರ್ಮ ಪ್ರವೃತ್ತಿಯು ಅಲ್ಲಿ ಸಂಭವಿಸದು. ಆದರೆ ಇದು ಸಾಧನೆಯ ಉನ್ನತ ದೆಸೆಯಲ್ಲಿ ಸಂಭವಿಸುವ ವಿಷಯವೇ ಆಗಿದೆ. ಸಾಧನೆ ಪೂರ್ತಿಯಾಗಿ ಸಾಧ್ಯವಸ್ತು (ಆತ್ಮ) ಲಭಿಸಿದ ನಂತರವೂ ಕೆಲವರು ಜೀವನ್ಮುಕ್ತರು ಲೋಕೋಪಕಾರಾರ್ಥವಾಗಿ ಕಾರ್ಯಗಳನ್ನು ಅಸಕ್ತರಾಗಿ ಆಚರಿಸುತ್ತಲೇ ಇರುವರು. ೩) ಇನ್ನು ಮೂರನೆಯದು ಸರ್ವಸಂಕಲ್ಪ ಸಂನ್ಯಾಸ- ಸಂಕಲ್ಪಗಳು ಮೂರು ವಿಧಗಳು- ೧) ಮಲಿನ ಸಂಕಲ್ಪ ೨) ಶುದ್ಧ ಸಂಕಲ್ಪ ೩) ನಿಸ್ಸಂಕಲ್ಪ (ಸಂಕಲ್ಪರಾಹಿತ್ಯ). ಸಾಧನದ ಪ್ರಾರಂಭ ದೆಸೆಯಲ್ಲಿ ಶುದ್ಧ ಸಂಕಲ್ಪಗಳಿಂದ ಮಲಿನ ಸಂಕಲ್ಪಗಳನ್ನು ನಿರ್ಮೂಲಿಸಬೇಕು. ಅಂದರೆ ಶಾಸ್ತ್ರ, ಸಜ್ಜನ ಸಂಪರ್ಕಾದಿಗಳಿಂದ ಜನ್ಯವಾದ ಪವಿತ್ರ (ಪುಣ್ಯ) ಸಂಕಲ್ಪಗಳಿಂದ ಮೊದಲ ಪಾಪ ಸಂಕಲ್ಪಗಳನ್ನು ತೊಳೆದು ಹಾಕಬೇಕು. ಚಿತ್ತದಲ್ಲಿ ಪೂರ್ಣವಾಗಿ ಶುದ್ಧ ಸಂಕಲ್ಪ ಹಾಗು ದೈವ ಸಂಕಲ್ಪಗಳೇ ಇರುವ ಹಾಗೆ ಪ್ರಯತ್ನ ಮಾಡಬೇಕು. ಅಲ್ಲಿಂದ ಇನ್ನೂ ಒಂದು ಮೆಟ್ಟಲು ಮೇಲ ಹೇಗೆ ಆತ್ಮದಲ್ಲಿ ಸ್ಥಿರತೆ ಹೊಂದಿ, ಸಂಕಲ್ಪರಹಿತವಾದ ನಿಸ್ಸಂಕಲ್ಪತ್ವವನ್ನು ಹೊಂದಬೇಕು. ಅಂದರೆ ಅಲ್ಲಿ ದೃಶ್ಯ ಪದಾರ್ಥಗಳನ್ನು ಕುರಿತ ಯಾವ ವಿಧವಾದ ಸಂಕಲ್ಪವೂ ಇರುವುದಿಲ್ಲ. ಚಿತ್ತವು ಕೇವಲ ಆತ್ಮಾಕಾರವಾಗಿ ಪ್ರಕಾಶಿಸುತ್ತದೆ. *'ಸರ್ವಸಂಕಲ್ಪ ಸಂನ್ಯಾಸ'* ಸ್ಥಿತಿ ಎಂದರೆ ಶೂನ್ಯವೆಂದು ಯಾರೂ ಭಾವಿಸಬಾರದು. ಏಕೆಂದರೆ ಆಗ ಪ್ರಜ್ಞಾರೂಪವಾದ ಆತ್ಮಚೈತನ್ಯವು ಎಚ್ಚೆತ್ತೇ ಇರುವುದು. ಚಿತ್ತವು ಅದರಲ್ಲಿಯೇ ಲಯವಾಗಿ, ಅಂತರ್ಭೂತವಾಗಿರುವುದು. (ಸಮಾಧಿಯಿಂದ ವ್ಯುತ್ಥಾನ ದೆಸೆಗೆ ಬಂದ ನಂತರ ಅಂತಹ ಮಹನೀಯರಲ್ಲಿ ಕೆಲವರು ಬ್ರಹ್ಮಾಕಾರ ವೃತ್ತಿಯನ್ನು ಬಿಡದೆ ಶುದ್ಧಸಂಕಲ್ಪವನ್ನಾಚರಿಸಿ ಲೋಕೋಪಕಾರ ಕಾರ್ಯಗಳನ್ನು ಮಾಡುವರು).

ಈ ಪ್ರಕಾರವಾಗಿ ಮೇಲೆ ತಿಳಿಸಿದ ಮೂರು ಲಕ್ಷಣಗಳನ್ನು ಸಾಧಕನು ಚೆನ್ನಾಗಿ ಅಭ್ಯಸಿಸಿ ಕ್ರಮವಾಗಿ ಯೋಗಾರೂಢನಾದರೆ ಜೀವನವು ಧನ್ಯವಾಗುವುದು.

ಪ್ರ : ಯೋಗಾರೂಢನ ಲಕ್ಷಣಗಳಾವುವು ?

ಉ : ೧) ಇಂದ್ರಿಯಾರ್ಥಗಳಾದ ಶಬ್ದ ಸ್ಪರ್ಶಾದಿ ವಿಷಯಗಳಲ್ಲಿ ಆಸಕ್ತಿಯಿಲ್ಲದೇ ಇರುವುದು.

೨) ಕರ್ಮಗಳಲ್ಲಿ ಆಸಕ್ತಿಯಿಲ್ಲದೇ ಇರುವುದು.

೩) ಸಮಸ್ತ ಸಂಕಲ್ಪಗಳನ್ನು ತ್ಯಜಿಸಿ ಆತ್ಮದಲ್ಲಿ ಮಾತ್ರ ಸ್ಥಿತನಾಗಿರುವನು.

**ಅ।।** (ಯೋಗಾರೂಢ ಸ್ಥಿತಿಯನ್ನು ಹೊಂದಲು) ತನ್ನನ್ನು ತಾನೇ ಉದ್ಧರಿಸಿಕೊಳ್ಳಬೇಕೆಂದು ತಿಳಿಸಲಾಗುತ್ತಿದೆ-

**೫. ಉದ್ಧರೇದಾತ್ಮನಾಽಽತ್ಮಾನಂ ನಾತ್ಮಾನಮವಸಾದಯೇತ್**
**ಆತ್ಮೈವ ಹ್ಯಾತ್ಮನೋ ಬಂಧುರಾತ್ಮೈವ ರಿಪುರಾತ್ಮನಃ**

**ಅರ್ಥ:** ಆತ್ಮನಾ=ತನ್ನಿಂದ; ಆತ್ಮಾನಾಂ=ತನ್ನನ್ನು; ಉದ್ಧರೇತ್=ಉದ್ಧರಿಸಿಕೊಳ್ಳಬೇಕು; ಆತ್ಮಾನಮ್=ತನ್ನನ್ನು; ನ ಅವಸಾದಯೇತ್=ಅಧೋಗತಿಗೆ ಹೋಗಲು ಬಿಡಬಾರದು; ಹಿ=ಏಕೆಂದರೆ; ಆತ್ಮನಃ=ತನಗೆ; ಆತ್ಮೈವ=ತಾನೇ; ಬಂಧುಃ=ಬಂಧು; ಆತ್ಮನಃ=ತನಗೆ; ಆತ್ಮೈವ=ತಾನೇ; ರಿಪುಃ=ಶತ್ರು.

**ತಾ।।** ತನ್ನನ್ನು ತಾನೇ ಉದ್ಧರಿಸಿಕೊಳ್ಳಬೇಕು. ತನ್ನನ್ನು ತಾನೇ ಅಧೋಗತಿಗೆ ಜಾರಲು ಬಿಡಬಾರದು. ಏಕೆಂದರೆ (ಇಂದ್ರಿಯ ಮನಸ್ಸುಗಳನ್ನು ಜಯಿಸಿದರೆ) ತನಗೆ ತಾನೇ ಬಂಧು, (ಜಯಿಸಲ್ಪಡದಿದ್ದರೆ) ತನಗೆ ತಾನೇ ಶತ್ರುವಾಗುವನು.

**ವ್ಯಾಖ್ಯೆ:** ಪ್ರತಿ ಜೀವಿಯು ತನ್ನನ್ನು ತಾನೇ ಉದ್ಧರಿಸಿಕೊಳ್ಳಬೇಕೆಂದು ಭಗವಂತನು ಉದ್ಬೋಧಿಸುತ್ತಿದ್ದಾನೆ. ಗುರುಗಳು, ಶಾಸ್ತ್ರಗಳು, ದೈವದ ದಾರಿ ತೋರಿಸುವುವೇ ಆಗಲಿ, ನಡೆಯಬೇಕಾದದ್ದು ತಾನೇ. ತನ್ನ ಕಾಲಿನ ಮೇಲೆ ತಾನು ನಡೆಯಬೇಕು. ತನ್ನ ಕಣ್ಣುಗಳಿಂದ ತಾನು ನೋಡಬೇಕು. ತನ್ನ ಹಸಿವನ್ನು ತಾನೇ ತೀರಿಸಿಕೊಳ್ಳಬೇಕು.

'God helps those who help themselves' ಎಂದು ಹೇಳಿರುವಂತೆ ತಮ್ಮನ್ನು ತಾವು ಉದ್ಧರಿಸಿಕೊಳ್ಳಲು ಅನುವಾಗುವವರಿಗೆ ಭಗವಂತನು ಸಹಾಯ ಮಾಡುವನು. ಸೋಮಾರಿಗಳಾಗಿ ಸ್ವಲ್ಪವಾದರೂ ಇಂದ್ರಿಯ ನಿಗ್ರಹ, ವೈರಾಗ್ಯವಿಲ್ಲದೆ, ಭೋಗಪರಾಯಣರಾಗಿ- 'ದೇವರೇ ನಮಗೆ ಮೋಕ್ಷವನ್ನು ಕೊಡಿಸು' ಎಂದುಕೊಳ್ಳುವುದಾಗಲಿ, 'ಗುರುವೇ ನಮ್ಮನ್ನು ಕೈವಲ್ಯ ಧಾಮಕ್ಕೆ ತೆಗೆದುಕೊಂಡು ಹೋಗು' ಎಂದುಕೊಳ್ಳುವುದಾಗಲಿ ಹುಚ್ಚೇ ಸರಿ. ಭಗವಂತನಾಗಲಿ, ಶಾಸ್ತ್ರವಾಗಲಿ, ಗುರುಗಳಾಗಲಿ ಸೋಮಾರಿಗಳಿಗೆ ಮತ್ತು ಅಕರ್ಮಣಿಗಳಿಗೆ ಉಚಿತವಾಗಿ ಮೋಕ್ಷಕ್ಕೆ ಪ್ರವೇಶಪತ್ರ (passport)ವನ್ನು ಕೊಡಲು ಕೂತಿಲ್ಲ. ಸಾಮಾನ್ಯವಾಗಿ ಒಂದು ಚಿಕ್ಕ ವಸ್ತುವನ್ನು ಬಜಾರಿನಲ್ಲಿ ಕೊಳ್ಳಬೇಕೆಂದರೆ ಹಣವನ್ನು ಖರ್ಚುಮಾಡಬೇಕಾಗುವುದು. ವಸ್ತುವಿನ ಪ್ರಾಮುಖ್ಯತೆಯನ್ನು ಹಿಡಿದು ಅದರ ಬೆಲೆ ನಿಷ್ಕರ್ಷೆಯಾಗುವುದು, ಹಾಗಿರಬೇಕಾದರೆ ಮೋಕ್ಷ, ದುಃಖರಾಹಿತ್ಯ, ಜನನ ಮರಣ ರೂಪವಾದ ಬಂಧ ವಿಚ್ಛೇದ, ಪರಮಾನಂದ ಪ್ರಾಪ್ತಿಯೆನ್ನುವ ವಸ್ತುವನ್ನು ಅಭಿಲಾಷಿಸುವವನು ಅದೆಷ್ಟು ಬೆಲೆಯನ್ನು ಕೊಡಬೇಕಾಗಿರುತ್ತದೆ? ಸೋಮಾರಿಯಾಗಿದ್ದಲ್ಲಿ ಅದು ಸಾಧ್ಯವಾಗುವುದೇ? ಎಷ್ಟೋ ತ್ಯಾಗ, ಸಾಧನೆ, ಇಂದ್ರಿಯ ನಿಗ್ರಹಣ ಅದಕ್ಕೆ ಅವಶ್ಯಕ. ಅಂತಹ ಆಧ್ಯಾತ್ಮ ಸಾಧನೆಯ ಮೌಲ್ಯವನ್ನು ಜೀವಿಯು ಕೊಡದಿದ್ದರೆ ಸಾಕ್ಷಾತ್ ಪರಮೇಶ್ವರನು ಕೂಡ ಜೀವಿಗೆ ಏನನ್ನೂ ದಯಪಾಲಿಸುವುದಿಲ್ಲ. ಆದ್ದರಿಂದ ಶ್ರಮಪಡಬೇಕು. ಹಿರಿಯರು ಬೋಧಿಸಿದ ಮಾರ್ಗವನ್ನನುಸರಿಸಬೇಕು. ತನ್ನನ್ನು ತಾನೇ ಉದ್ಧರಿಸಿಕೊಳ್ಳಬೇಕು. ಈ ಸತ್ಯವನ್ನೇ ಭಗವಂತನು ಈ ಶ್ಲೋಕದಲ್ಲಿ ಸ್ಪಷ್ಟಪಡಿಸಿದ್ದಾನೆ.

ಮಹಾತ್ಮರಾದವರು ಎಷ್ಟೋ ಶ್ರಮವಹಿಸಿ, ಕಷ್ಟಗಳನ್ನು ಎದುರಿಸಿ, ಶೀತೋಷ್ಣಾದಿದ್ವಂದ್ವಗಳನ್ನು ಸಹಿಸಿ ಎಷ್ಟೋ ವರ್ಷಗಳ ಕಾಲ ಕಠೋರವಾದ ಸಾಧನೆಗಳನ್ನು ಮಾಡಿ ತಮ್ಮ ಚಿತ್ತವನ್ನು, ಇಂದ್ರಿಯಗಳನ್ನು ತಾವೇ ನಿಗ್ರಹಿಸಿಕೊಂಡು ಧನ್ಯರಾದರು. ಹಾಗೆಯೇ ಬೇರೆಯವರೂ ಸಹ ಪ್ರಯತ್ನಪೂರ್ವಕವಾಗಿ ತಮ್ಮ ಚಿತ್ತವನ್ನು ತಾವೇ, ವೈರಾಗ್ಯ ಬೋಧನೆಗಳ ದ್ವಾರ ಶುದ್ಧಪಡಿಸಿಕೊಳ್ಳಬೇಕು. ಹಾಗೆ ಶುದ್ಧಗೊಂಡ ಮನಸ್ಸು ಜನರನ್ನು

ಸಂಸಾರವೆಂಬ ಪ್ರಪಾತದಿಂದ ಹೊರಗೆ ತೆಗೆಯುವುದು. ಗುರುವು ಶಿಷ್ಯನಿಗೆ ಉಪದೇಶಿಸುವುದು ಸಂಪ್ರದಾಯವನ್ನು ಪಾಲಿಸಲೆಂದೇ ಆಗಲಿ ಅಸಲಿನ ಕೆಲಸ ಶಿಷ್ಯನ ಕೈಯಲ್ಲಿಯೇ ಇದೆಯೆಂದು ವಸಿಷ್ಠ ಮುನೀಂದ್ರರು ಶ್ರೀರಾಮ ಚಂದ್ರನಿಗೆ ಹೇಳಿದ್ದಾರೆ. ಮನುಜನು ತನ್ನ ರೋಗಕ್ಕೆ ತಾನೇ ಔಷಧಿ ಸೇವಿಸಿ ಹೇಗೆ ಗುಣಪಡಿಸಿಕೊಳ್ಳುತ್ತಿದ್ದಾನೊ, ತನ್ನ ಹಸಿವನ್ನು ತಾನೇ ಅನ್ನವನ್ನು ತಿಂದು ಹೇಗೆ ತೀರಿಸಿಕೊಳ್ಳುತ್ತಿದ್ದಾನೊ, ಹಾಗೆ ಭವರೋಗ ಪೀಡಿತನಾದ ಜೀವಿಯು ತಾನೇ ಸ್ವಯಂ ಸಾಧನೆ ಮಾಡಿ ಮುಕ್ತಿ ಹೊಂದಬೇಕು. **'ಉದ್ಧರೇದಾತ್ಮನಾ ತ್ಮಾನಮ್'** ಎನ್ನುವುದರ ಅರ್ಥವು ಇದೇ ಆಗಿದೆ.

ಮತ್ತೆ ತಾನು ಅಧೋಗತಿಗೆ ಇಳಿಯದಂತೆ ನೋಡಿಕೊಳ್ಳಬೇಕು. ಪ್ರಪಂಚದಲ್ಲಿ ತನ್ನ ಉದ್ಧಾರಕರು ಬಂಧು ಮಿತ್ರಾದಿಗಳು ಮುಂತಾದವರ್ಯಾರೂ ಅಲ್ಲ; ತನ್ನ ಶುದ್ಧ ಮನಸ್ಸೇ. ದೃಶ್ಯವಾಸನೆಗಳಾವುವೂ ಇಲ್ಲದೆ ವಿಷಯರಾಹಿತ್ಯವಾಗಿರುವ ನಿರ್ಮಲ ಚಿತ್ತವೇ ತನ್ನನ್ನು ಉದ್ಧರಿಸಬಲ್ಲದು. ಹಾಗೆಯೇ ತನ್ನ ಮಲಿನ ಮನಸ್ಸೇ, ಪತನಕ್ಕೆ ಕಾರಣವಾದುದರಿಂದ ಅದೇ ತನ್ನ ಶತ್ರು. ಮನಸ್ಸು, ಇಂದ್ರಿಯಗಳು ವಶದಲ್ಲಿದ್ದರೆ ಅವು ಬಂಧುಗಳು. ವಶದಲ್ಲಿ ಇಲ್ಲದಿದ್ದರೆ ಅವೇ ಶತ್ರುಗಳು- ಈ ಸತ್ಯವನ್ನೇ ಭಗವಂತನು ಈ ಶ್ಲೋಕದಲ್ಲಿ ಹಾಗು ಮುಂದೆ ಬರುವ ಶ್ಲೋಕದಲ್ಲಿ ನಿರೂಪಿಸಿದ್ದಾನೆ.

ಸಾಮಾನ್ಯವಾಗಿ ಪ್ರತಿಯೊಬ್ಬನ ಮನಸ್ಸಿನಲ್ಲಿ ಎರಡು ಭಾಗಗಳಿರುತ್ತವೆ. ಒಂದು ಒಳ್ಳೆಯ ಭಾಗ, ಇನ್ನೊಂದು ಕೆಟ್ಟ ಭಾಗ. ಒಂದು ಧರ್ಮದ ಕಡೆ ಎಳೆಯುತ್ತದೆ. ಇನ್ನೊಂದು ಅಧರ್ಮದ ಕಡೆ ಎಳೆಯುತ್ತದೆ. ಇವುಗಳಲ್ಲಿ ಮೊದಲಿನದರಿಂದ ಎರಡನೆಯದನ್ನು ಪ್ರಯತ್ನಪೂರ್ವಕವಾಗಿ ಸೋಲಿಸಿ ಅದನ್ನು ಧರ್ಮದ ಕಡೆಗೆ ತಿರುಗಿಸಿಕೊಳ್ಳಬೇಕು. ಇದು ಪುರುಷಪ್ರಯತ್ನದಿಂದ ಸಾಧ್ಯ. ಈ ಪ್ರಕಾರವಾಗಿ ತನ್ನನ್ನು ತಾನು ಉದ್ಧರಿಸಿಕೊಳ್ಳಬೇಕು. ಬಂಧು ತನ್ನಲ್ಲಿಯೇ ಇದ್ದಾನೆ. ಶತ್ರುವೂ ತನ್ನಲ್ಲಿಯೇ ಇರುವನು. ಶುದ್ಧ ಚಿತ್ತವೇ ಬಂಧು; ವಶೀಕೃತ ಮನಸ್ಸೇ ಬಂಧುವಾದ್ದರಿಂದ, ಅದನ್ನೇ ಆಶ್ರಯಿಸಬೇಕು. ಅದು ಜೀವಿಗೆ ಮಹೋಪಕಾರವನ್ನು ಮಾಡಬಲ್ಲದು. ಹಾಗೆಯೇ ಮಲಿನಚಿತ್ತ, ಅವಶೀಕೃತ ಮನಸ್ಸು ತನಗೆ ಶತ್ರು. ಅದು ತನಗೆ ಮಹಾ ಅಪಕಾರವನ್ನು ಮಾಡಬಲ್ಲದು. ಬಾಹ್ಯಶತ್ರು ಈ ಜನ್ಮದಲ್ಲಿ ಮಾತ್ರ ಹಿಂಸಿಸಿದರೆ, ಅಂತಃಶತ್ರುವಾದ ಮಲಿನಚಿತ್ತ, ಜನ್ಮಜನ್ಮಾಂತರಗಳವರೆಗೆ ಜೀವಿಯ ಬೆನ್ನುಹತ್ತಿ ಬಾಧಿಸುವುದು. ಆದ್ದರಿಂದ ಅಂತಹ ಅಂತಃಶತ್ರುವನ್ನು ಮೊದಲು ತೊಲಗಿಸಿಕೊಂಡು ಪರಮಶಾಂತಿಯನ್ನು ಹೊಂದಬೇಕು.

'ಉದ್ಧರೇತ್'- (ತನ್ನನ್ನು ತಾನು ಉದ್ಧರಿಸಿಕೊಳ್ಳಬೇಕು) ಎಂದು ಹೇಳಿರುವುದರಿಂದ ಜೀವಿಗೆ ಪ್ರಾರಬ್ಧವೆನ್ನುವುದು ಅಡ್ಡ ಬರುವುದಿಲ್ಲವೆಂದೂ ತನ್ನನ್ನು ತಾನು ಯಾವಾಗಲಾದರೂ ಉದ್ಧರಿಸಿಕೊಳ್ಳಲು ಸಾಧ್ಯವೆಂದೂ ಬೋಧಿಸಿದಂತಾಗಿದೆ.

ಪ್ರ : ಈ ಸಂಸಾರದಲ್ಲಿ ಜೀವಿಯನ್ನು ಯಾರು ಉದ್ಧರಿಸುವರು?

ಉ : ತನ್ನನ್ನು ತಾನೇ ಉದ್ಧರಿಸಿಕೊಳ್ಳಬೇಕು. ತನ್ನನ್ನು ತಾನೇ ಅಧೋಗತಿಗೆ ಇಳಿಸಿಕೊಳ್ಳಬಾರದು.

ಪ್ರ : ಮನುಜನಿಗೆ ಬಂಧು ಯಾರು? ಶತ್ರು ಯಾರು?

ಉ : ತನಗೆ ತಾನೇ ಬಂಧು (ತನ್ನ ಮನಸ್ಸನ್ನು ತಾನು ಜಯಿಸಿದರೆ), ತನಗೆ ತಾನೇ ಶತ್ರು (ತನ್ನ ಮನಸ್ಸನ್ನು ತಾನು ಜಯಿಸದಿದ್ದರೆ)

**ಅ||** ಮೇಲಿನ ವಿಷಯವನ್ನೇ ಇನ್ನೂ ವಿಶದವಾಗಿ ಹೇಳಲಾಗುತ್ತಿದೆ-

**೬. ಬಂಧುರಾತ್ಮಾತ್ಮನಸ್ತಸ್ಯ ಯೇನಾತ್ಮೈವಾತ್ಮನಾ ಜಿತಃ**
**ಅನಾತ್ಮನಸ್ತು ಶತ್ರುತ್ವೇ ವರ್ತೇತಾತ್ಮೈವ ಶತ್ರುವತ್**

**ಅರ್ಥ:** ಏನ=ಯಾರಿಂದ; ಆತ್ಮನೈವ=ತನ್ನಿಂದಲೇ (ತನ್ನ ವಿವೇಕದಿಂದ); ಆತ್ಮಾ=ಮನಸ್ಸು; ಜಿತಃ=ಜಯಿಸಲ್ಪಟ್ಟಿದೆಯೋ; ತಸ್ಯ=ಅಂತಹವನ; ಆತ್ಮಾ= ಮನಸ್ಸು; ಆತ್ಮನಃ=ತನಗೆ; ಬಂಧುಃ=ಬಂಧು; ಅನಾತ್ಮನಸ್ತು=ಮನಸ್ಸನ್ನು ಜಯಿಸದವನಿಗೆ; ಆತ್ಮಾ=ತನ್ನ ಮನಸ್ಸೇ; ಶತ್ರುವತ್=ಶತ್ರುವಿನ ಹಾಗೆ; ಶತ್ರುತ್ವೇ ಏವ=ಅಪಕಾರದಲ್ಲಿಯೇ; ವರ್ತೇತ=ಪ್ರವರ್ತಿಸುವುದು.

**ತಾ||** ಯಾವನು (ವಿವೇಕ ವೈರಾಗ್ಯಾದಿಗಳಿಂದ) ತನ್ನ ಮನಸ್ಸನ್ನು ತಾನು ಜಯಿಸುವನೋ, ಅಂತಹ ಜಯಿಸಲ್ಪಟ್ಟ ಮನಸ್ಸು ತನಗೆ ಬಂಧುವಿನ ಹಾಗೆ ಇರುವುದು (ಉಪಕಾರ ಮಾಡುವುದು); ಜಯಿಸದೆ ಇರುವ ಮನಸ್ಸು ಶತ್ರುವಿನ ಹಾಗೆ ಇರುವುದು (ಅಪಕಾರ ಮಾಡುವುದು).

**ವ್ಯಾಖ್ಯೆ:** ಹಿಂದಿನ ಶ್ಲೋಕದಲ್ಲಿ ಸೂಕ್ಷ್ಮವಾಗಿ ತಿಳಿಸಿದ ಅಂಶಗಳನ್ನೇ ಇಲ್ಲಿ ವಿಶದವಾಗಿ ತಿಳಿಸುತ್ತಿದ್ದಾನೆ. ಮನುಜನಿಗೆ ಬಂಧು, ಶತ್ರುಗಳೆರಡೂ ತನ್ನಲ್ಲಿಯೇ ಇದ್ದಾರೆ. ಜಯಿಸಲ್ಪಟ್ಟ ಮನಸ್ಸೇ ಬಂಧು. ಅದು ಜೀವಿಯನ್ನು ಜನನ ಮರಣ ಸಂಸಾರ ಸಮುದ್ರದಿಂದ ಉದ್ಧರಿಸುವುದು. ಶಾಂತಿಯನ್ನು ಉಂಟುಮಾಡುವುದು. ಸಚ್ಚಿದಾನಂದ ಆತ್ಮವನ್ನು ಪಡೆಯುವಂತೆ ಮಾಡುವುದು. ಈ ಪ್ರಕಾರವಾಗಿ ಅದು ಜೀವಿಗೆ ಮಹತ್ತರವಾದ ಉಪಕಾರವನ್ನು ಮಾಡುತ್ತದೆ. ಬಾಹ್ಯಬಂಧುಗಳು ಸ್ವಲ್ಪ ಉಪಕಾರ ಮಾಡಿದಂತೆ ಕಂಡರೂ, ಸ್ನೇಹ ರಾಗಾದಿಗಳಿಂದ ಆಧ್ಯಾತ್ಮ ಮಾರ್ಗದಲ್ಲಿ ಅಡಚಣೆಯಾಗಿಯೇ ಇರುವರು. ಒಳಗಿನ ಬಂಧುವಾದ ಸಂಯಮಚಿತ್ತ ಹಾಗಲ್ಲ. ಅದು ಮೋಕ್ಷಪ್ರಾಪ್ತಿರೂಪವಾದ ಶಾಶ್ವತ ಉಪಕಾರವನ್ನೇ ಮಾಡುವುದು. ಹಾಗೆಯೇ ಜಯಿಸದ ಮನಸ್ಸು ಶತ್ರುವಾಗಿ ವ್ಯವಹರಿಸುವುದು ಎಂದು ಹೇಳಲಾಗಿದೆ. ಏಕೆಂದರೆ ಅದು ಜೀವಿಯನ್ನು ಭವಾರಣ್ಯದಲ್ಲಿ ತಳ್ಳಿ, ಕಾಮಕ್ರೋಧಾದಿ ಘೋರ ಜಂತುಗಳಿಗೆ ಬಲಿಕೊಟ್ಟು, ಜನ್ಮ ಜನ್ಮಾಂತರಗಳವರೆಗೆ ಆತನನ್ನು ಪತನಗೊಳಿಸುವುದು. ಆದ್ದರಿಂದ ಜೀವಿಯು ಪ್ರಯತ್ನ ಪೂರ್ವಕವಾಗಿ ವಿವೇಕಾದಿಗಳಿಂದ ತನ್ನ ಮನಸ್ಸನ್ನು ಜಯಿಸಿ, ಶತ್ರುವನ್ನು ಮಿತ್ರನನ್ನಾಗಿ ಮಾಡಿಕೊಂಡು, ಬಂಧುವಾಗಿ ಮಾಡಿಕೊಂಡು ಆತನ ಮೂಲಕ ಮುಕ್ತಿಧಾಮವನ್ನು ಸೇರಿ ಸುಖವನ್ನು ಹೊಂದಬೇಕು.

**ಆತ್ಮ:** ಎನ್ನುವುದಕ್ಕೆ ಇಲ್ಲಿ ಅರ್ಥ ಕೇವಲ ಮನಸ್ಸೆಂದಲ್ಲ; ಇಂದ್ರಿಯಗಳು, ಶರೀರ- ಎಂದು ಕೂಡ ಹೇಳಬೇಕು.

ಆತ್ಮನಾ ಜಿತಃ- ಎಂದು ಹೇಳಿರುವುದರಿಂದ ತನ್ನ ಮನಸ್ಸನ್ನು ತಾನೇ ಜಯಿಸಿಕೊಳ್ಳಬೇಕೆಂದು ಸ್ಪಷ್ಟವಾಗುತ್ತದೆ.

ಪ್ರ : ಮನುಜನಿಗೆ ಬಂಧು ಯಾರು?

ಉ : ತನ್ನಿಂದ ಸ್ವಾಧೀನಪಡಿಸಿಕೊಂಡ ತನ್ನ ಮನಸ್ಸೇ ತನಗೆ ಬಂಧು.

ಪ್ರ : ಶತ್ರು ಯಾರು?

ಉ : ಹಾಗೆ ತನ್ನಿಂದ ಜಯಿಸದೇ ಇರುವ ತನ್ನ ಮನಸ್ಸೇ ತನಗೆ ಶತ್ರು.

**ಅ||** ಈ ಪ್ರಕಾರವಾಗಿ ದೇಹೇಂದ್ರಿಯ ಮನಸ್ಸುಗಳನ್ನು ಸ್ವಾಧೀನ ಪಡಿಸಿಕೊಳ್ಳುವುದರಿಂದ ಉಂಟಾಗುವ ಫಲಗಳನ್ನು ಹೇಳಲಾಗುತ್ತಿದೆ-

೭. ಜಿತಾತ್ಮನಃ ಪ್ರಶಾಂತಸ್ಯ ಪರಮಾತ್ಮಾ ಸಮಾಹಿತಃ
ಶೀತೋಷ್ಣಸುಖದುಃಖೇಷು ತಥಾ ಮಾನಾಪಮಾನಯೋಃ

**ಅರ್ಥ:** ಜಿತಾತ್ಮನಃ=ಜಯಿಸಲ್ಪಟ್ಟ ಮನಸ್ಸುಳ್ಳವನು; ಪ್ರಶಾಂತಸ್ಯ=ಪರಮ ಶಾಂತಿಯಿಂದ ಕೂಡಿದ ಮನುಷ್ಯನಿಗೆ; ಶೀತೋಷ್ಣಸುಖದುಃಖೇಷು= ಶೀತೋಷ್ಣ, ಸುಖದುಃಖಾದಿ ದ್ವಂದ್ವಗಳಲ್ಲಿ; ತಥಾ=ಹಾಗೆಯೇ; ಮಾನಪಮಾನಯೋಃ=ಮಾನ, ಅವಮಾನಗಳಲ್ಲಿ; ಪರಮಾತ್ಮಾ= ಪರಮಾತ್ಮನು; ಸಮಾಹಿತಃ=ಅನುಭವದಲ್ಲಿಯೇ ಇರುವುದು, ಸ್ಥಿರವಾಗಿರುವುದು (ಇಲ್ಲವೆ, ಆತ್ಮ=ಮನಸ್ಸು, ಪರಂ=ಹೆಚ್ಚಾಗಿ; ಸಮಾಹಿತಃ=ಆತ್ಮಾನುಭವದಲ್ಲಿಯೇ ಇರುವುದು ಎಂದು ಹೇಳಬಹುದು.)

**ತಾ||** ಮನಸ್ಸನ್ನು ಜಯಿಸಿದ, ಪರಮಶಾಂತಿಯಿಂದ ಕೂಡಿದ ಮನುಜನಿಗೆ ಶೀತೋಷ್ಣ, ಸುಖದುಃಖಾದಿಗಳಲ್ಲಿಯೂ ಮತ್ತು ಮಾನಪಮಾನಗಳಲ್ಲಿಯೂ ಪರಮಾತ್ಮಾನುಭವವು ಸ್ವಲ್ಪವೂ ವಿಚಲಿತವಾಗುವುದಿಲ್ಲ. (ಇಲ್ಲವೆ, ಅಂತಹವನ ಮನಸ್ಸು ಶೀತೋಷ್ಣಾದಿಗಳಲ್ಲಿ ವರ್ತಿಸದೆ ಆತ್ಮಾನುಭವದಲ್ಲಿಯೇ ಇರುವುದು).

**ವ್ಯಾಖ್ಯೆ:** ಸಾಮಾನ್ಯರ ಮನಸ್ಸುಗಳು ಶೀತೋಷ್ಣಗಳು, ಸುಖ-ದುಃಖಗಳು ಹಾಗು ಮಾನಾಪಮಾನಗಳಿಂದ ತಲೆಕೆಳಗಾಗುತ್ತವೆ. ಅದು ತನ್ನ ಸಮತ್ವ (Balance)ವನ್ನು ಕಳೆದುಕೊಂಡು ಚಪಲವಾಗುವುದು. ಸುಖವು ಬಂದಾಗ ಉಬ್ಬುವುದು, ದುಃಖವು ಬಂದಾಗ ಕುಗ್ಗುವುದು, ಹಾಗೆಯೇ ಯಾರಾದರೂ ತನ್ನನ್ನು ಹೊಗಳಿದಾಗ ಉಬ್ಬಿ ಹೋಗುವುದೂ, ನಿಂದಿಸಿದಾಗ ಅಧೀರನಾಗುವುದೂ ಸಂಭವಿಸುತ್ತಿರುತ್ತವೆ. ಈ ಪ್ರಕಾರವಾಗಿ ಅಜ್ಞಾನಿಯಾದ ಜೀವಿಯು ದ್ವಂದ್ವಗಳಿಗೆ ದಾಸನಾಗಿ, ಅವು ಹೇಳಿದ ಹಾಗೆ ಕೇಳುತ್ತ, ಅವುಗಳ ದಯಾದಾಕ್ಷಿಣ್ಯಗಳಿಂದ ಬದುಕುತ್ತಿದ್ದಾನೆ. ಆದ್ದರಿಂದಲೇ, ಒಂದು ಕ್ಷಣ ಕಾಲವಾದರೂ ಆತನ ಚಿತ್ತವು ಸ್ಥಿರವಾಗಿರದೆ, ಶಾಂತಿ ಹೊಂದುವುದಿಲ್ಲ. ಆದರೆ ಮನಸ್ಸು ಮತ್ತು ಇಂದ್ರಿಯಗಳನ್ನು ಜಯಿಸಿದವನ ಸ್ಥಿತಿ ಹಾಗಿರುವುದಿಲ್ಲ. ಎಷ್ಟು ದ್ವಂದ್ವಗಳು ಅಡ್ಡ ಬಂದರೂ, ಆತನ ಚಿತ್ತವು ನಿಶ್ಚಲವಾಗಿರುವುದು. ಆತನು ಪ್ರಶಾಂತವಾಗಿದ್ದು ಸದಾ ಪರಮಾತ್ಮನಲ್ಲೇ ಸ್ಥಿರವಾಗಿರುವನೆಂದು ಇಲ್ಲಿ ಹೇಳಲಾಗಿದೆ. ಸಮುದ್ರತರಂಗಗಳಾಗಲಿ, ಬಿರುಗಾಳಿಯಾಗಲಿ ಮಹಾಪರ್ವತವನ್ನು ಮಿಸುಗಾಡಿಸದಂತೆ, ಸುಖ ದುಃಖಾದಿಗಳು ಜಿತಮಾನಸನನ್ನು ಏನೂ ಮಾಡಲಾರವು. ಆತನು ಯಾವಾಗಲು ಪರಮಾತ್ಮನಲ್ಲೇ ಸುಸ್ಥಿತನಾಗಿ ಮಹತ್ತರ ಶಾಂತಿಯನ್ನು ಅನುಭವಿಸುತ್ತಿರುತ್ತಾನೆ. ಆದ್ದರಿಂದ ಅಭ್ಯಾಸ ವೈರಾಗ್ಯ ವಿವೇಕಗಳ ದ್ವಾರ ಇಂದ್ರಿಯಮನಸ್ಸುಗಳನ್ನು ಹೇಗಾದರೂ ಜಯಿಸುವುದು ಅತಿಮುಖ್ಯವೆಂದು ಈ ಶ್ಲೋಕದ ದ್ವಾರ ತಿಳಿಯುತ್ತದೆ.

ಕೆಲವರು 'ಪ್ರಶಾಂತಸ್ಯ' ಎನ್ನುವ ಪದವನ್ನು ಶೀತೋಷ್ಣಾದಿಗಳಿಗೆ ಅನ್ವಯಿಸಿ 'ಶೀತೋಷ್ಣಸುಖದುಃಖಾದಿಗಳಿಂದ ವಿಚಲಿತನಾಗದೆ ಪರಮ ಶಾಂತಿಯಿಂದಿರುವವನ ಮನಸ್ಸು ಪರಮಾತ್ಮಾನುಭವದಲ್ಲಿಯೇ ಇರುವುದು' ಎನ್ನುವ ಅರ್ಥವನ್ನು ಹೇಳುವರು. ಭಾವವೆಲ್ಲವೂ ಒಂದೇ.

ಪ್ರ : ಯಾರ ಚಿತ್ತವು ಶೀತೋಷ್ಣಾದಿ ದ್ವಂದ್ವಗಳಲ್ಲಿ ನಿಶ್ಚಲವಾಗಿರುವುದು?

ಉ : ಇಂದ್ರಿಯ ಹಾಗು ಮನಸ್ಸುಗಳನ್ನು ಜಯಿಸಿದವನ ಮತ್ತು ಪ್ರಶಾಂತ ಹೃದಯವನ್ನು ಹೊಂದಿದವನ ಚಿತ್ತವು ದ್ವಂದ್ವಗಳಲ್ಲಿ ನಿಶ್ಚಲವಾಗಿರುವುದು.

ಪ್ರ : ಆದ್ದರಿಂದ ಮನೋಜಯದಿಂದ ಉಂಟಾಗುವ ಮಹಾ ಫಲವೇನು?

ಉ : ಮನೋಜಯವನ್ನು ಹೊಂದಿದವನು, ಶೀತೋಷ್ಣ ಸುಖ ದ್ವಂದ್ವಾದಿಗಳಿಂದ ವಿಚಲಿತನಾಗದೆ ಸದಾ ಪರಮಾತ್ಮನಲ್ಲೇ ಸ್ಥಿರವಾಗಿರುವನು, ತತ್ಫಲಿತವಾಗಿ ಪರಮ ಶಾಂತಿಯನ್ನೇ ಯಾವಾಗಲೂ ಅನುಭವಿಸುತ್ತಿರುತ್ತಾನೆ.

**ಅ||** ಹಾಗೆ ಪರಮಾತ್ಮನಲ್ಲಿ ಸ್ಥಿರಗೊಂಡಿರುವವನ ಲಕ್ಷಣಗಳನ್ನು ಎರಡು ಶ್ಲೋಕಗಳ ದ್ವಾರ ಹೇಳಲಾಗುತ್ತಿದೆ-

೮. ಜ್ಞಾನ ವಿಜ್ಞಾನತೃಪ್ತಾತ್ಮಾ ಕೂಟಸ್ಥೋ ವಿಜಿತೇಂದ್ರಿಯಃ
ಯುಕ್ತ ಇತ್ಯುಚ್ಯತೇ ಯೋಗೀ ಸಮಲೋಷ್ಟಾಶ್ಮ ಕಾಂಚನಃ

**ಅರ್ಥ:** ಜ್ಞಾನವಿಜ್ಞಾನತೃಪ್ತಾತ್ಮಾ=ಶಾಸ್ತ್ರಜ್ಞಾನದಿಂದ, ಅನುಭವ ಜ್ಞಾನದಿಂದ ತೃಪ್ತಿ ಹೊಂದಿದ ಮನಸ್ಸುಳ್ಳವನು; ಕೂಟಸ್ಥಃ=ನಿರ್ವಿಕಾರನು (ಚಲಿಸದೆ ಇರುವವನು); ವಿಜಿತೇಂದ್ರಿಯಃ=ಇಂದ್ರಿಯಗಳನ್ನು ಜಯಿಸಿದವನು; ಸಮಲೋಷ್ಟಾಶ್ಮಕಾಂಚನಃ=ಮಣ್ಣು, ಕಲ್ಲು, ಚಿನ್ನಗಳಲ್ಲಿ ಸಮಬುದ್ಧಿ ಹೊಂದಿ (ಇರುವವನು); ಯೋಗೀ=ಯೋಗನಿಷ್ಠನು; ಯುಕ್ತಃ=ಯೋಗಾರೂಢನು (ಆತ್ಮಾನುಭವದಿಂದ ಕೂಡಿದವನು); ಇತಿ=ಎಂದು; ಯುಚ್ಯತೇ= ಹೇಳಲ್ಪಡುತ್ತದೆ.

**ತಾ||** ಶಾಸ್ತ್ರಜ್ಞಾನ, ಅನುಭವಜ್ಞಾನಗಳಿಂದ ತೃಪ್ತಿಹೊಂದಿದ ಮನಸ್ಸುಳ್ಳವನು, ನಿರ್ವಿಕಾರನು, ಇಂದ್ರಿಯಗಳನ್ನು ಜಯಿಸಿದವನು ಹಾಗು ಮಣ್ಣು, ಕಲ್ಲು, ಚಿನ್ನಗಳಲ್ಲಿ ಭೇದವನ್ನು ಕಾಣದ ಯೋಗಿಯನ್ನು ಯೋಗಾರೂಢನೆಂದು (ಆತ್ಮಾನುಭವಯುಕ್ತನೆಂದು) ಕರೆಯುವರು.

**ವ್ಯಾಖ್ಯೆ:** ಯೋಗವೆಂದರೆ ಕೂಡುವಿಕೆ, ಜೀವ ಬ್ರಹ್ಮೈಕ್ಯತೆ. ಅಂತಹ ಐಕ್ಯವನ್ನು ಉಂಟುಮಾಡುವ ಪ್ರಯತ್ನಗಳನ್ನು ಯೋಗವೆಂದೇ ಹೇಳಬಹುದು. ಆ ಪ್ರಯತ್ನಗಳನ್ನಾಚರಿಸುವವನು ಯೋಗಿ. ಯೋಗಿಗಳು ಅನೇಕರು ಇದ್ದರೂ ಅದರಲ್ಲಿ ಆರೂಢಸ್ಥಿತಿಯನ್ನು ಹೊಂದಿದವರು ಬಹಳ ವಿರಳ. ಆರೂಢಸ್ಥಿತಿಯನ್ನು ಹೊಂದಿರುವ ಉತ್ತಮಯೋಗಿಗಳ ಲಕ್ಷಣಗಳು ಯಾವುವೆನ್ನುವುದನ್ನು ಈ ಶ್ಲೋಕದಲ್ಲಿ ವಿವರಿಸಲಾಗಿದೆ. ಯಾವನೇ ಆಗಲಿ ಪರಿಪಕ್ವದೆಸೆಯನ್ನು ಹೊಂದಿದ್ದಾನೆಯೇ ಅಥವ ಇಲ್ಲವೇ ಎನ್ನುವುದನ್ನು ಈ ಗುರುತುಗಳಿಂದ ತಿಳಿದುಕೊಳ್ಳಬಹುದು.

ಅವು ಯಾವುವೆಂದರೆ-

೧) ಜ್ಞಾನ, ವಿಜ್ಞಾನಗಳಿಂದಲೇ ತೃಪ್ತಿ ಹೊಂದುವುದು.

೨) ಕೂಟಸ್ಥನಾಗಿ (ನಿರ್ವಿಕಾರನಾಗಿ) ಇರುವುದು.

೩) ಇಂದ್ರಿಯಗಳನ್ನು ಜಯಿಸುವುದು.

೪) ಮಣ್ಣು, ಕಲ್ಲು, ಬಂಗಾರ- ಇವುಗಳನ್ನು ಸಮವಾಗಿ ಕಾಣುವುದು.

ಈ ನಾಲ್ಕು ಲಕ್ಷಣಗಳು ಸಾಧಕನಿಗೆ ಅತ್ಯಂತ ಅವಶ್ಯಕಗಳಾದ್ದರಿಂದ ಅವುಗಳನ್ನು ಕುರಿತು ಸ್ವಲ್ಪ ವಿಚಾರಿಸೋಣ-

೧) ಗೀತೆಯಲ್ಲಿ ಭಗವಂತನು ಅಲ್ಲಲ್ಲಿ ಜ್ಞಾನವಿಜ್ಞಾನಗಳನ್ನು ಬೇರೆ ಬೇರೆಯಾಗಿ ಹೇಳಿರುವುದು ಗಮನಾರ್ಹ. ಜ್ಞಾನವೆಂದರೆ ಶಾಸ್ತ್ರಾದಿಗಳ ಮೂಲಕ, ಗುರೂಪದೇಶದ ಮೂಲಕ, ಹಿರಿಯರ ಬೋಧೆಗಳ ಮೂಲಕ ತತ್ವವನ್ನು ತಿಳಿದುಕೊಳ್ಳುವುದು. ವಿಜ್ಞಾನವೆಂದರೆ ಆ ತತ್ವಗಳನ್ನು ಪೂರ್ಣವಾಗಿ ಅನುಭೂತಿಗೊಳಿಸಿಕೊಳ್ಳುವುದು. ಜ್ಞಾನವೆನ್ನುವುದು ಪಾಕಶಾಸ್ತ್ರವನ್ನು ಕಲಿತುಕೊಂಡಂತೆ. ವಿಜ್ಞಾನವು ಆ ಪಾಕಶಾಸ್ತ್ರವನ್ನು ಅನುಸರಿಸಿ ಅನ್ನಮಾಡಿ

ಭುಜಿಸುವಂತಹದು. ಹಸಿವು ತೀರಲು ಎರಡೂ ಅವಶ್ಯಕಗಳೇ. ಮೊದಲು ಪರಮಾತ್ಮನ ತತ್ತ್ವವನ್ನು ತಿಳಿದು ನಂತರ ಅದನ್ನು ಸಾಕ್ಷಾತ್ಕಾರ ಮಾಡಿಕೊಳ್ಳಬೇಕು. ಮೊದಲನೆಯದು ಜ್ಞಾನ, ಎರಡನೆಯದು ವಿಜ್ಞಾನ. ಜನರಲ್ಲಿ ಕೆಲವರು ಜ್ಞಾನಮಾತ್ರದಿಂದ ತೃಪ್ತಿ ಹೊಂದುವರು. ಅದು ಸಾಲದೆಂದೂ, ವಿಜ್ಞಾನವನ್ನು ಉಪಯೋಗಿಸಿಕೊಂಡು ಜ್ಞಾನವಿಜ್ಞಾನಗಳೆರಡರಿಂದ ತೃಪ್ತಿಯನ್ನು ಪಡೆಯಬೇಕೆಂದೂ, ಅಂಥವನೇ ಯೋಗಾರೂಢನೆಂದೂ, ಉತ್ತಮ ಯೋಗಿಯೆಂದೂ ಇಲ್ಲಿ ಹೇಳಲಾಗಿದೆ. (ಲೋಕದಲ್ಲಿ ಕೆಲವರು ಧನವನ್ನು, ಕೆಲವರು ಅಧಿಕಾರವನ್ನು, ಕೆಲವರು ವಿಷಯಭೋಗಗಳನ್ನು ಹೊಂದಿ ತೃಪ್ತಿಪಡುತ್ತಿದ್ದಾರೆ. ಇವರೆಲ್ಲರೂ ಕೆಳದರ್ಜೆಯವರು. ಜ್ಞಾನ, ವಿಜ್ಞಾನಗಳಿಂದ ತೃಪ್ತಿ ಹೊಂದುವವನೇ ಸರ್ವೋತ್ತಮನು).

೨) ಇನ್ನು ಎರಡನೆಯ ಲಕ್ಷಣ ಕೂಟಸ್ಥತೆ. ಅಂದರೆ ನಿಶ್ಚಲತೆ, ನಿರ್ವಿಕಾರತೆ. ಕೂಟವೆಂದರೆ ಅಕ್ಕಸಾಲಿಗನ ಅಡಿಗಲ್ಲು. ಅದರ ಮೇಲೆ ಸ್ವರ್ಣಕಾರನು ಎಷ್ಟು ಆಭರಣಗಳನ್ನು ತಯಾರು ಮಾಡಿದರೂ ಅದು ನಿಶ್ಚಲವಾಗಿ, ನಿರ್ವಿಕಾರ ವಾಗಿರುವುದು. ಹಾಗೆಯೇ ಯಾವನ ಮನಸ್ಸು ಸುಖ ದುಃಖಾದಿಗಳು, ಲಾಭನಷ್ಟಗಳು, ಮಾನಾಪಮಾನಗಳು ಲೆಕ್ಕವಿಲ್ಲದಷ್ಟು ಬಂದರೂ ವಿಕಾರ ಹೊಂದದೆ ಸಮಸ್ಥಿತಿಯಲ್ಲಿರುವುದೋ, ಅವನೇ ಕೂಟಸ್ಥನು. ಅಂತಹವನೇ ಉತ್ತಮ ಯೋಗಿ; ಇಲ್ಲವೆ ಕೂಟಸ್ಥನೆಂದರೆ ಆತ್ಮವೆಂದೂ ಹೇಳಬಹುದು. **'ಕೂಟಸ್ಥೋಽಕ್ಷರ ಉಚ್ಯತೇ'** ಎಂದು ಗೀತೆಯಲ್ಲಿ ಒಂದು ಕಡೆ ಹೇಳಲ್ಪಟ್ಟಿದೆಯಲ್ಲವೇ! ಕೂಟಸ್ಥಾತ್ಮದಲ್ಲಿ ಏಕತೆಯನ್ನು ಹೊಂದಿದವನೇ ಯೋಗಾರೂಢನು ಎಂದರ್ಥ.

೩) ಮೂರನೆಯ ಲಕ್ಷಣ ವಿಜಿತೇಂದ್ರಿಯತೆ. ಅಂದರೆ, ಇಂದ್ರಿಯ ಮತ್ತು ಮನಸ್ಸುಗಳನ್ನು ಜಯಿಸುವುದು. 'ಜಿತೇಂದ್ರಿಯಃ' ಎಂದು ಹೇಳದೆ 'ವಿಜಿತೇಂದ್ರಿಯಃ' ಎಂದು ಹೇಳಿರುವುದರಿಂದ ಇಂದ್ರಿಯಗಳನ್ನು ಸಂಪೂರ್ಣವಾಗಿ ನಿಗ್ರಹಿಸಬೇಕೆಂಬ ಭಾವ. ವಾಸನೆಗಳು ಎಷ್ಟು ಸ್ವಲ್ಪ ಶೇಷವಾಗಿ ಉಳಿದಿದ್ದರೂ ಅವು ತಿರುಗಿ ಸಾಧಕನನ್ನು ಉದ್ರೇಕಗೊಳಿಸುವುವು. ಆದ್ದರಿಂದ ಅವುಗಳನ್ನು ಸಮೂಲವಾಗಿ ನಿರ್ಮೂಲನ ಮಾಡಿ ಇಂದ್ರಿಯ ಮನಸ್ಸುಗಳನ್ನು ಪರಿಪೂರ್ಣವಾಗಿ ಹತೋಟಿಯಲ್ಲಿಟ್ಟುಕೊಂಡಿರುವವನೇ ವಿಜಿತೇಂದ್ರಿಯನು. ಈ ಕಾರ್ಯದಲ್ಲಿ ತತ್ತ್ವವಿಚಾರಣೆ ಸಹಾಯವಾಗಬಲ್ಲದು. ಆದ್ದರಿಂದ ವಿವೇಕ ವೈರಾಗ್ಯಾದಿಗಳಿಂದ ಇಂದ್ರಿಯಗಳನ್ನು ನಿಗ್ರಹಿಸಿ ಯೋಗಾರೂಢತೆಯನ್ನು ಹೊಂದಬೇಕು.

೪) ಇನ್ನು ಯೋಗಾರೂಢನ ನಾಲ್ಕನೆಯ ಲಕ್ಷಣವಾದ ಸಮದೃಷ್ಟಿ. ಮಣ್ಣಿನ ಹೆಂಟೆ, ಕಲ್ಲು, ಬಂಗಾರ ಇವುಗಳನ್ನು ಸಮವಾಗಿ ನೋಡುವುದು. ಮಣ್ಣನ್ನು, ಕಲ್ಲನ್ನು ಸಮವಾಗಿ ನೋಡುವುದರಲ್ಲಿ ಏನೂ ಕಷ್ಟವಿಲ್ಲ. ಆದರೆ ಕಲ್ಲನ್ನು ಚಿನ್ನವನ್ನು ಸಮವಾಗಿ ನೋಡುವುದರಲ್ಲಿ ಪ್ರಯಾಸವಾಗುವುದು. ಕೆಲವು ಉಪಾಯಗಳಿಂದ ಈ ಪ್ರಯಾಸವನ್ನು ದೂರಮಾಡಿಕೊಳ್ಳಬಹುದು. ಅವು ಯಾವುವೆಂದರೆ-

೧) ಈ ಪ್ರಪಂಚದ ಸಮಸ್ತ ಪದಾರ್ಥಗಳು ಪಂಚಭೂತಗಳ ವಿಕಾರಗಳೇ ಆಗಿವೆ. ಗಿಡ, ಹುತ್ತ, ಸೂರ್ಯ, ಚಂದ್ರ, ದೇಹ, ಕಲ್ಲು, ಬಂಗಾರ- ಎಲ್ಲವೂ ಪಂಚಭೂತಾತ್ಮಕಗಳೇ. ಈ ಸತ್ಯವನ್ನು ಚೆನ್ನಾಗಿ ಅರ್ಥ ಮಾಡಿಕೊಂಡ ವಿಜ್ಞಾನಿಗೆ ಪ್ರಪಂಚದಲ್ಲಿ ಯಾವ ವಸ್ತುವನ್ನೂ ನೋಡಿದರೂ, ಕೂಡಲೇ ಅವುಗಳಿಗೆ ಅಧಿಷ್ಠಾನವಾದ ಭೂಮಿ ಮೊದಲಾದ ಪಂಚಭೂತಗಳಾಗಲಿ, ಇಲ್ಲವೆ ಪಂಚಭೂತಗಳಿಗೆ ಆಧಾರವಾದ ಪರಮಾತ್ಮನಾಗಲಿ ಜ್ಞಾಪಕಕ್ಕೆ ಬರುವುದರಿಂದ ಅವುಗಳಲ್ಲಿ ಸಮತ್ವವನ್ನೇ ವೀಕ್ಷಿಸುವನು. ೨) ಈ ಪ್ರಪಂಚದಲ್ಲಿ ಒಂದು ವಸ್ತುವಿಗೆ ಬೆಲೆ ಮತ್ತೊಂದು ವಸ್ತುವಿಗೆ ಬೆಲೆಯಿಲ್ಲದ ಸ್ಥಿತಿಯನ್ನು ಉಂಟುಮಾಡಿರುವುದು ಅವರವರ ಮನಸ್ಸೇ. ಮಣ್ಣು ಅಧಿಕವಾಗಿ ಎಲ್ಲೆಲ್ಲೂ ಸಿಗುತ್ತದಾದ್ದರಿಂದ ಅದಕ್ಕೆ ಕಡಿಮೆ ಬೆಲೆಯನ್ನು, ಬಂಗಾರ ಕಡಿಮೆ ಲಭ್ಯವಿರುವುದರಿಂದ ಅದಕ್ಕೆ ಹೆಚ್ಚಿನ ಮೌಲ್ಯವನ್ನು ಮನಸ್ಸೇ ಕಲ್ಪಿಸಿದೆ. ಚಿಕ್ಕ ಮಗುವಿನ ಎದುರಿಗೆ ಬಂಗಾರವಿಟ್ಟರೆ ಅದರ ಮೌಲ್ಯದ ಮನೋಕಲ್ಪನೆಯಿಲ್ಲ ವಾದ್ದರಿಂದ ಅದನ್ನು ಅದು ಲೆಕ್ಕಿಸುವುದಿಲ್ಲ, ಹಾಗೆಯೇ ಜ್ಞಾನಿಗೆ ಭೇದ ಜನಕವಾದ ಮನಃಕಲ್ಪನವಿಲ್ಲವಾದ್ದರಿಂದ ಮಣ್ಣು, ಕಲ್ಲು, ಬಂಗಾರವೆನ್ನುವ ಮೂರು ವಸ್ತುಗಳೇ ಅಲ್ಲದೆ ಸಮಸ್ತ ಪದಾರ್ಥಗಳೂ ಆತನಿಗೆ ಸಮವಾಗಿಯೇ ತೋರುವುವು. ೩) ಆರೂಢ ಸ್ಥಿತಿಯನ್ನು ಹೊಂದಿದ ಯೋಗಿಗೆ ಬ್ರಹ್ಮ (ಆತ್ಮ)ವೊಂದೇ ಸತ್ಯ. ದೃಶ್ಯವೆಲ್ಲವೂ ಸ್ವಪ್ನದಂತೆ ಮಿಥ್ಯವಾಗಿ ತೋರುವುದು. ಅಸತ್ಯವಾದ ಈ ಜಗತ್ತಿನಲ್ಲಿ ಒಂದು ಅಲ್ಪವೇನು ಮತ್ತೊಂದು ಅಧಿಕವೇನು? ಸ್ವಪ್ನದಲ್ಲಿ ರಾಜನು, ಸಾಮಾನ್ಯ ಪೌರನು ಒಂದೇ ಆಗಿರುವಂತೆ ಉತ್ತಮ ಯೋಗಿಗೆ ಕಲ್ಲು, ಬಂಗಾರ ಮುಂತಾದ ಮಿಥ್ಯಾರೂಪ ದೃಶ್ಯ ವಸ್ತುಗಳೆಲ್ಲವುಗಳಲ್ಲಿ ಸಮತ್ವವೇ ಗೋಚರಿಸುವುದು. ೪) ಆತ್ಮಪ್ರಾಪ್ತಿಗೆ ಮಣ್ಣು ಉಪಯೋಗ ಬೀಳುವುದಿಲ್ಲ. ಹಾಗೆಯೇ ಚಿನ್ನವೂ ಉಪಯೋಗವಿಲ್ಲ. ಈ ಸತ್ಯವನ್ನು ತಿಳಿದಿರುವುದರಿಂದ ಯೋಗಿಯ ದೃಷ್ಟಿಯಲ್ಲಿ ಅವೆರಡೂ ಸಮವಾಗಿಯೇ ಇರುವುವು.

ಪ್ರ : ಆರೂಢ ಸ್ಥಿತಿಯನ್ನು ಹೊಂದಿದ ಉತ್ತಮ ಯೋಗಿಯ ಲಕ್ಷಣಗಳಾವುವು?

ಉ : ೧) ಶಾಸ್ತ್ರಜ್ಞಾನ, ಅನುಭವಜ್ಞಾನ ಎರಡೂ ಉಂಟಾಗಿ ಅವುಗಳಲ್ಲಿ ತೃಪ್ತಿ ಹೊಂದಿರುವುದು.

೨) ನಿರ್ವಿಕಾರನಾಗಿ (ಕೂಟಸ್ಥನಾಗಿ)ರುವುದು.

೩) ಇಂದ್ರಿಯ ಹಾಗು ಮನಸ್ಸುಗಳನ್ನು ಜಯಿಸಿರುವುದು.

**ಅ॥** ಕೊನೆಯ ಲಕ್ಷಣವಾದ ಸಮದೃಷ್ಟಿಯ ವಿವರಣೆ ಮುಂದುವರಿಯುತ್ತಿದೆ-

**೯. ಸುಹೃನ್ಮಿತ್ರಾರ್ಯುದಾಸೀನ ಮಧ್ಯಸ್ಥ ದ್ವೇಷ್ಯ ಬಂಧುಷು**
**ಸಾಧುಷ್ವಪಿ ಚ ಪಾಪೇಷು ಸಮಬುದ್ಧಿ ರ್ವಿಶಿಷ್ಯತೇ**

**ಅರ್ಥ:** ಸುಹೃತ್=ಪ್ರತಿಫಲಾಪೇಕ್ಷೆಯಿಲ್ಲದೆ ಉಪಕಾರ ಮಾಡುವವರಲ್ಲಿ; ಮಿತ್ರ=ಫಲಿಫಲವೊದಗುವುದೆಂದು ಭಾವಿಸಿ ಉಪಕಾರ ಮಾಡುವರಲ್ಲಿ; ಅರಿ=ಶತ್ರುಗಳಲ್ಲಿ; ಉದಾಸೀನ=ತಟಸ್ಥರಲ್ಲಿ; ಮಧ್ಯಸ್ಥ= ಮಧ್ಯವರ್ತಿಗಳಲ್ಲಿ; ದ್ವೇಷ್ಯ=ದ್ವೇಷಿಸುವರಲ್ಲಿ(ವಿರೋಧಿಗಳಲ್ಲಿ); ಬಂಧುಷು=ಬಂಧುಗಳಲ್ಲಿ; ಸಾಧುಷು ಅಪಿ=ಸಜ್ಜನರಲ್ಲಿ; ಪಾಪೇಷು ಚ=ಪಾಪಿಗಳಲ್ಲಿ; ಸಮಬುದ್ಧಿಃ= ಸಮಭಾವವುಳ್ಳವನು; ವಿಶಿಷ್ಯತೇ=ಶ್ರೇಷ್ಠನೆನಿಸಿಕೊಳ್ಳುವನು.

**ತಾ॥** ಪ್ರತ್ಯುಪಕಾರವನ್ನು ಅಪೇಕ್ಷಿಸದೆ ಉಪಕಾರ ಮಾಡುವವರನ್ನು, ಪ್ರತಿಫಲವನ್ನು ಅಪೇಕ್ಷಿಸಿ ಉಪಕಾರ ಮಾಡುವವರನ್ನು, ಶತ್ರುಗಳನ್ನು, ತಟಸ್ಥರನ್ನು, ಮಧ್ಯವರ್ತಿಗಳನ್ನು, ದ್ವೇಷಿಸುವವರನ್ನು (ವಿರೋಧಿಗಳನ್ನು), ಬಂಧುಗಳನ್ನು, ಸಜ್ಜನರನ್ನು, ಪಾಪಿಗಳನ್ನು ಸಮಭಾವದಿಂದ ನೋಡುವವನೇ ಶ್ರೇಷ್ಠನು.

**ವ್ಯಾಖ್ಯೆ:** ಮನುಜರಲ್ಲಿ ಯಾರು ಉತ್ತಮರು ಎನ್ನುವುದನ್ನು ಈ ಶ್ಲೋಕದಲ್ಲಿ ತಿಳಿಸಲಾಗಿದೆ. ಸಾಮಾನ್ಯವಾಗಿ ಹೆಚ್ಚು ಧನ, ಸೌಂದರ್ಯ ಅಥವ ಲೌಕಿಕ ವಿದ್ಯೆಯನ್ನು ಹೊಂದಿರುವವನನ್ನು ಜನರು ದೊಡ್ಡವನೆಂದು ಕರೆಯುವರು. ಆದರೆ ಭಗವಂತನು ಹಾಗೆ ಹೇಳಲಿಲ್ಲ. ಯಾರು ಸರ್ವಜೀವಿಗಳಲ್ಲಿ ಸಮಬುದ್ಧಿ ಹೊಂದಿರುವರೋ, ಅವರೇ ಶ್ರೇಷ್ಠರೆಂದು ನುಡಿದನು. ಆ ಎಲ್ಲಾ ಜೀವಿಗಳಲ್ಲಿ ಕೆಲವರನ್ನು ಮಾತ್ರ ಇಲ್ಲಿ ಉದಾಹರಣಾಪೂರ್ವಕವಾಗಿ ಉಲ್ಲೇಖಿಸಲಾಗಿದೆ. ಅವರನ್ನು ಮೂರು ವರ್ಗಗಳಾಗಿ ವಿಭಜಿಸಬಹುದು.

೧) ಸುಹೃತ್, ಮಿತ್ರ, ಬಂಧು, ಸಾಧು- ಎನ್ನುವ ನಾಲ್ವರು ಒಂದು ಗುಂಪು.

೨) ಮಧ್ಯಸ್ಥ, ಉದಾಸೀನ- ಎನ್ನುವ ಈ ಈರ್ವರು ಒಂದು ಗುಂಪು.

೩) ಶತ್ರು, ದ್ವೇಷಿ, ಪಾಪಿ- ಎನ್ನುವ ಈ ಮೂವರೂ ಒಂದು ಗುಂಪು.

ಇಲ್ಲಿ ಮೊದಲನೆಯವರು ಉಪಕಾರ ಮಾಡುವವರು; ಎರಡನೆಯವರು ಉಪಕಾರ, ಅಪಕಾರ ಎರಡೂ ಮಾಡದವರು, ಮೂರನೆಯವರು ಕೇವಲ ಅಪಕಾರವನ್ನೇ ಮಾಡುವವರು. ಇವರಲ್ಲಿ ಮೊದಲನೆಯವರ ಬಗ್ಗೆ ಜನಗಳಿಗೆ ಪ್ರೀತಿ, ಎರಡನೆಯವರ ಮೇಲೆ ತಟಸ್ಥಭಾವ ಮೂರನೆಯವರ ಮೇಲೆ ದ್ವೇಷವೂ ಉಂಟಾಗುವುದು. ಆದರೆ ಉತ್ತಮ ಯೋಗಿಯು ಈ ಮೂರು ಗುಂಪುಗಳಿಗೆ ಸೇರಿದವರನ್ನು ಸಮಭಾವದಿಂದ ಕಾಣುವನು. ಅಧಮನಿಗೆ ಒಬ್ಬ ವ್ಯಕ್ತಿಯನ್ನು ನೋಡುತ್ತಲೇ ದೇಹಭಾವ ಮಾತ್ರ ಉಂಟಾಗುತ್ತದೆ. ಆತನು ವ್ಯಕ್ತಿಯ ಬಣ್ಣ ಯಾವುದು? ಕುರೂಪಿಯೇ, ಸುಂದರನೇ ಮುಂತಾದುವುಗಳನ್ನು ಪರೀಕ್ಷಿಸುವನು. ಆತನಿಗೆ ದೇಹದೃಷ್ಟಿ ಮಾತ್ರವಿರುವುದು. ಮಧ್ಯಮನಾದರೋ ಒಂದು ವ್ಯಕ್ತಿಯನ್ನು ನೋಡುತ್ತಲೇ ಆತನ ವಿದ್ಯೆ, ಜಾಣ್ಮೆ ಮುಂತಾದುವನ್ನು ವೀಕ್ಷಿಸುವನು. ಈತನದು ಮನೋದೃಷ್ಟಿ. ಆದರೆ ಉತ್ತಮನು ಒಬ್ಬ ವ್ಯಕ್ತಿಯನ್ನು ನೋಡುತ್ತಲೇ ಆತನ ಆತ್ಮವನ್ನು ಪರೀಕ್ಷಿಸುವನು. ಆತನದು ಆತ್ಮದೃಷ್ಟಿ. ವ್ಯಕ್ತಿಯ ದೇಹದ ಮೇಲಾಗಲಿ, ಮನಸ್ಸಿನ ಮೇಲಾಗಲಿ ಆತನ ದೃಷ್ಟಿ ಹರಿಯದು. ಸರ್ವಭೂತಗಳಲ್ಲಿ ಇರುವ ಆತ್ಮವೊಂದೇಯಾಗಿರುವುದರಿಂದ, ಆತನ ದೃಷ್ಟಿಯಲ್ಲಿ ಶತ್ರು ಮಿತ್ರ ಉದಾಸೀನರೆಲ್ಲರೂ ಸಮವಾಗಿ ಕಾಣಿಸುವರು. ವಿಭಕ್ತವಾದ ಪ್ರಪಂಚದಲ್ಲಿ ಅವಿಭಕ್ತತ್ವವನ್ನೇ ಆತನು ನೋಡುವನು. ಆದ್ದರಿಂದ ಅಂತಹವನನ್ನು ಸರ್ವಶ್ರೇಷ್ಠನೆಂದೇ ಇಲ್ಲಿ ಹೇಳಲಾಗಿದೆ. ಈ ಕಾರಣದಿಂದ ಪ್ರತಿ ಜೀವಿಯೂ ಉತ್ತಮ ಸ್ಥಿತಿಯನ್ನು ಹೊಂದಲು ಪ್ರಯತ್ನಪೂರ್ವಕವಾಗಿ ದೇಹ ಭಾವವನ್ನು, ಮನೋಭಾವವನ್ನು ತಗ್ಗಿಸಿಕೊಂಡು ಆತ್ಮಭಾವನೆಯನ್ನು ಬೆಳೆಸಿಕೊಳ್ಳಬೇಕು. ಆಗಲೇ ಆತನಿಗೆ ಸಮಬುದ್ಧಿ ಉದಯಿಸಿ ಜನರಲ್ಲಿ ಸರ್ವೋತ್ತಮನಾಗಿ ಬೆಳಗುವನು.

ಪ್ರ : ಮನುಜರಲ್ಲಿ ಉತ್ತಮನಾರು?

ಉ : ಶತ್ರು ಮಿತ್ರ ಉದಾಸೀನರಲ್ಲಿ ಸಮಬುದ್ಧಿಯುಳ್ಳವನೇ ಉತ್ತಮನು.

**ಅ||** ಯೋಗಾರೂಢ ದೆಸೆಯನ್ನು ಹೊಂದಿ ಭಗವತ್ಸಾಕ್ಷಾತ್ಕಾರವಾಗಲು ಬೇಕಾದ ಧ್ಯಾನಯೋಗವನ್ನು ವಿವರಿಸುತ್ತಾ ಮೊದಲನೆಯದಾದ ಜ್ಞಾನ ಪದ್ಧತಿಯನ್ನು ತಿಳಿಸಲಾಗುತ್ತಿದೆ-

**೧೦. ಯೋಗೀ ಯುಂಜೀತ ಸತತಮಾತ್ಮಾನಂ ರಹಸಿ ಸ್ಥಿತಃ**
**ಏಕಾಕೀ ಯತಚಿತ್ತಾತ್ಮಾ ನಿರಾಶೀರಪರಿಗ್ರಹಃ**

**ಅರ್ಥ:** ಯೋಗೀ=ಯೋಗಿಯಾದವನು; ರಹಸಿ=ಏಕಾಂತ ಪ್ರದೇಶದಲ್ಲಿ; ಸ್ಥಿತಃ=ಇರುವವನಾಗಿ; ಏಕಾಕೀ=ಒಬ್ಬನೇ ಇದ್ದು; ಯತಚಿತ್ತಾತ್ಮಾ=ಸ್ವಾಧೀನಪಡಿಸಿಕೊಂಡ ಮನೋ ಬುದ್ಧಿ ಇಂದ್ರಿಯಗಳನ್ನು ಹೊಂದಿದವನಾಗಿ; ನಿರಾಶೀಃ=ಆಶೆಯಿಲ್ಲದವನಾಗಿ; ಅಪರಿಗ್ರಹಃ=ಇತರರಿಂದ ಏನನ್ನೂ ಸ್ವೀಕರಿಸದೆ; ಸತತಂ=ಯಾವಾಗಲೂ; ಆತ್ಮಾನಾಮ್=ಮನಸ್ಸನ್ನು; ಯುಂಜೀತ= ಆತ್ಮದಲ್ಲಿ ಸ್ಥಿರಗೊಳಿಸಿಕೊಳ್ಳಬೇಕು(ಲಯಗೊಳಿಸಬೇಕು).

**ತಾ||** (ಧ್ಯಾನಯೋಗವನ್ನು ಅಭ್ಯಾಸ ಮಾಡುವ) ಯೋಗಿ ಏಕಾಂತ ಪ್ರದೇಶದಲ್ಲಿ ಒಬ್ಬನೇ ಇದ್ದು ಮನಸ್ಸನ್ನು, ದೇಹೇಂದ್ರಿಯಗಳನ್ನು ಸ್ವಾಧೀನಪಡಿಸಿಕೊಂಡು, ಆಶೆಯಿಲ್ಲದವನಾಗಿ, ಪರರಿಂದ ಏನನ್ನೂ ಸ್ವೀಕರಿಸದೆ ಯಾವಾಗಲೂ ಮನಸ್ಸನ್ನು ಆತ್ಮದಲ್ಲಿಯೇ ಸ್ಥಿರಗೊಳಿಸಿಕೊಳ್ಳಬೇಕು (ಲಯಗೊಳಿಸಬೇಕು).

**ವ್ಯಾಖ್ಯೆ:** ಇಲ್ಲಿಂದ ಇನ್ನು ಮುಂದೆ ಧ್ಯಾನಾಭ್ಯಾಸಗಳ ಪದ್ಧತಿಗಳೆಲ್ಲವನ್ನೂ ವಿಶದವಾಗಿ ಭಗವಂತನು ತಿಳಿಸುತ್ತಿದ್ದಾನೆ. ಇಲ್ಲಿ ಯೋಗಿಯೆಂದರೆ ಪೂರ್ಣತ್ವವನ್ನು ಹೊಂದಿರುವವನಲ್ಲವೆಂದೂ, ಪರಮಾತ್ಮಸಾಧಕನು ಮಾತ್ರವೇ ಎಂದು ಗ್ರಹಿಸಬೇಕು. ಅಂದರೆ ಧ್ಯಾನಾಭ್ಯಾಸಿ ಎಂದರ್ಥ. ಅಂತಹವನು ಧ್ಯಾನದಲ್ಲಿ ಪರಿಪಕ್ವತೆ ಹೊಂದಲು ಐದು ನಿಯಮಗಳನ್ನು ಆಚರಿಸಬೇಕೆಂದು ಹೇಳಲಾಗಿದೆ. ಅವು ಯಾವುವೆಂದರೆ- ೧) ಏಕಾಂತ ಸ್ಥಳದಲ್ಲಿ ಇರುವುದು ೨) ಒಬ್ಬನೇ ಧ್ಯಾನಿಸುವುದು ೩) ಇಂದ್ರಿಯ, ಮನಸ್ಸು, ದೇಹಗಳನ್ನು ನಿಗ್ರಹಿಸುವುದು ೪) ಆಶೆಯಿಲ್ಲದಿರುವುದು ೫) ವಸ್ತುಗಳನ್ನು ಪರಿಗ್ರಹಿಸದೇ ಇರುವುದು.

ಈ ಐದು ನಿಯಮಗಳನ್ನು ಸರಿಯಾಗಿ ಪಾಲಿಸಿ, ಸಾಧಕನು ಆತ್ಮಧ್ಯಾನದಲ್ಲೇ ಯಾವಾಗಲೂ ಕಾಲವನ್ನು ಕಳೆಯುತ್ತಿರಬೇಕು.

"ರಹಸಿ"- ಧ್ಯಾನ ಮಾಡುವಾಗ ಬಹಿರಂಗ ಸ್ಥಳದಲ್ಲಿ ಕುಳಿತುಕೊಳ್ಳಬಾರದು. ಹಾಗೆ ಮಾಡಿದಲ್ಲಿ ವಿಕ್ಷೇಪ ಉಂಟಾಗುವುದು. ಧ್ಯಾನ ಮಾಡುವುದು ಇನ್ನೊಬ್ಬರನ್ನು ಮೆಚ್ಚಿಸುವುದಕ್ಕಲ್ಲ. ಮತ್ತೊಬ್ಬರು ನೋಡಬೇಕೆಂದಲ್ಲ. ಧ್ಯಾನವೆನ್ನುವುದು ಭಕ್ತ ಹಾಗು ಭಗವಂತನ ಮಧ್ಯೆ ಇರುವ ವೈಯಕ್ತಿಕ ಸಂಬಂಧವಾದ್ದರಿಂದ ಏಕಾಂತ ಸ್ಥಳವನ್ನೇ ಆಶ್ರಯಿಸಬೇಕೆಂದು ಇಲ್ಲಿ ಹೇಳಲಾಗಿದೆ. ಆದ್ದರಿಂದಲೇ ಪೂರ್ವಕಾಲದಲ್ಲಿ ಋಷಿಗಳು, ಮುನಿಗಳು, ತಪಸ್ವಿಗಳು ತಮ್ಮ ಧ್ಯಾನಾನುಷ್ಠಾನ ನಿರಾತಂಕವಾಗಿ ನಡೆಯಲೆಂದು ಪರ್ವತ ಗುಹೆಗಳನ್ನು, ನದೀತೀರಗಳನ್ನು, ಅರಣ್ಯ ಪ್ರದೇಶಗಳನ್ನು ಆರಿಸಿಕೊಳ್ಳುತ್ತಿದ್ದರು. ಅಲ್ಲಿ ವಿಕ್ಷೇಪ ಜನಕ ಶಕ್ತಿಗಳು ಯಾವುವೂ ಇಲ್ಲದೇ ಇರುವುದೇ ಅಲ್ಲದೆ ಪ್ರಕೃತಿಯ ರಮಣೀಯತೆಯಿಂದ ಚಿತ್ತಕ್ಕೆ ಆಹ್ಲಾದ ಕೂಡ ಉಂಟಾಗುವುದು. ಆದರೆ ಗೃಹಸ್ಥರಾದವರು ಅಂತಹ ಏಕಾಂತ ಪ್ರದೇಶವನ್ನು ತಮ್ಮ ಗೃಹದಲ್ಲಿಯೇ ಕಲ್ಪಿಸಿಕೊಳ್ಳಬಹುದು. ತಮ್ಮ ಮನೆಯಲ್ಲಿ ಪ್ರತ್ಯೇಕವಾದ ಒಂದು ಕೊಠಡಿಯನ್ನು ಜಪ ಧ್ಯಾನ ಪೂಜಾದಿಗಳಿಗೆ ವಿನಿಯೋಗಿಸಿ, ಬೇರೆ ಯಾರನ್ನೂ ಒಳಗೆ ಬರದಂತೆ ನೋಡಿಕೊಂಡು ಮಹನೀಯರ ಪಟಗಳನ್ನಿಟ್ಟು ಪುಷ್ಪ ಧೂಪ ದೀಪಾದಿಗಳಿಂದ ಅಲಂಕರಿಸಿ ಶುಚಿಯಾಗಿ ಇಟ್ಟುಕೊಳ್ಳಬಹುದು. ಆಗ ಅದು ಏಕಾಂತ ಸ್ಥಳವೇ ಆಗಬಲ್ಲದು. ಹಾಗಲ್ಲದೆ 'ರಹಸಿ' ಎನ್ನುವ ಪದಕ್ಕೆ ಬೆಟ್ಟ, ಗುಹೆ, ನದೀತೀರ, ಅರಣ್ಯ ಸ್ಥಳಗಳು ಮಾತ್ರ ಎಂದು ಅರ್ಥ ಹೇಳಿದ್ದೇ ಆದರೆ ಪ್ರಪಂಚದಲ್ಲಿರುವ ನೂರಕ್ಕೆ ತೊಂಬತ್ತರಷ್ಟು ಗೃಹಸ್ಥರೆಲ್ಲಾ ಭಗವಂತನು ಸೂಚಿಸಿದ ಈ ಧ್ಯಾನ ಸ್ಥಳವನ್ನು ಆಶ್ರಯಿಸಲು ಅಸಾಧ್ಯವಾಗುವುದು.

ಈ ಪ್ರಕಾರವಾದ ಏಕಾಂತ ಸ್ಥಳದಲ್ಲಿ ನಾಲ್ಕಾರು ಜನ ಕೂಡಿ ಧ್ಯಾನಿಸ

ಬಾರದು. ಒಂಟಿಯಾಗಿ ಧ್ಯಾನಿಸಬೇಕು. ಆದ್ದರಿಂದಲೇ "ಏಕಾಕೀ" ಎಂದು ಹೇಳಲಾಗಿದೆ. ಇಬ್ಬರು ಮೂವರು ಸೇರಿದಲ್ಲಿ ಧ್ಯಾನ ಕಾಲದಲ್ಲಿ ಮನಸ್ಸಿಗೆ ವಿಕ್ಷೇಪವುಂಟಾಗಬಹುದು. ಲೋಕಾಭಿರಾಮ ಮಾತುಗಳು ಅವರ ಮಧ್ಯೆ ಪ್ರಾರಂಭವಾಗಬಹುದು. "ಏಕ್ ನಿರಂಜನ್, ದೋ ಗಡಬಡ್" ಎನ್ನುವ ವಾಕ್ಯವು ಎಲ್ಲರಿಗೂ ಗೊತ್ತೇ ಅಲ್ಲವೇ! ಈ ವಿಧವಾಗಿ ಸ್ಥಳನಿರ್ಣಯ ಮಾಡಿ ಮಿತಾಹಾರಾದಿಗಳ ಮೂಲಕ ದೇಹವನ್ನು, ಭಕ್ತಿ ವೈರಾಗ್ಯ ವಿಚಾರಗಳ ಮೂಲಕ ಇಂದ್ರಿಯ ಮನಸ್ಸುಗಳನ್ನು ನಿಗ್ರಹಿಸಿ ದೃಶ್ಯ ಪದಾರ್ಥಗಳ ಮೇಲಿನ ಆಸೆಯನ್ನು ಬಿಡಬೇಕು. ಏಕೆಂದರೆ, ಯಾವುದೇ ವಸ್ತುವಿನ ಮೇಲೆ ಆಶೆಯುಂಟಾದ ಕೂಡಲೇ ಮನಸ್ಸು ಅದರ ಬಗ್ಗೆಯೇ ಚಿಂತಿಸುವುದರಿಂದ ಭಗವದ್ಧ್ಯಾನಕ್ಕೆ ಅಡಚಣೆ ಉಂಟಾಗುವುದು. ಆಶೆ ಪಿಶಾಚಿಯಂತಹದು. ಅದನ್ನು ವಿಚಾರಣೆ ಹಾಗು ವಿವೇಚನೆಗಳಿಂದ ಹೃದಯದಿಂದ ಹೊರಗಟ್ಟಬೇಕು ಮತ್ತೆ ಧ್ಯಾನಯೋಗಿ (ದೇಹಧಾರಣೆಗೆ ಅವಶ್ಯಕವಾದದ್ದು ಬಿಟ್ಟು) ಪರರಿಂದ ಯಾವ ವಸ್ತುವನ್ನೂ ಪರಿಗ್ರಹಿಸಬಾರದು. ಪರಿಗ್ರಹಣದಿಂದ ಮನುಷ್ಯನಿಗೆ ಪುಣ್ಯವು ಕ್ಷಯಿಸುವುದು. ಬೇರೆಯವರ ಕರ್ಮ ತನಗೆ ಅಂಟುವುದು. ಮತ್ತೆ ವಸ್ತುಗಳ ಯೋಗಕ್ಷೇಮವನ್ನು ಕುರಿತೇ ಮನಸ್ಸು ಅಹರ್ನಿಶ ಆಲೋಚಿಸುತ್ತಿರುತ್ತದೆ. ಆದ್ದರಿಂದ ಇವು ಸಾಧಕನಿಗೆ ಬಂಧಕರವೆಂದು ತಿಳಿದು ದೊಡ್ಡವರು ಅಪರಿಗ್ರಹದ ನಿಯಮವನ್ನು ಏರ್ಪಡಿಸಿದರು.

ಈ ವಿಧವಾಗಿ ಮೇಲೆ ತಿಳಿಸಿದ ಐದು ನಿಯಮಗಳನ್ನು ಆಚರಿಸಿ ಸಾಧಕನು ನಿರಂತರವಾಗಿ ತನ್ನ ಚಿತ್ತವನ್ನು ಆತ್ಮದಲ್ಲಿಯೇ ಸ್ಥಿರಗೊಳಿಸಿ ಕೊಳ್ಳಬೇಕು. ಈ ರೀತಿಯ ಸ್ಥಿತಿಯನ್ನು ಯಾವುದೋ ಒಂದಾನೊಂದು ನಿರ್ದಿಷ್ಟ ಸಮಯದಲ್ಲಿ ಹೊಂದಿದ್ದರೆ ಸಾಲದು; ನಿರಂತರವೂ ಇರಬೇಕು. ಆದ್ದರಿಂದಲೇ 'ಸತತಂ' ಎನ್ನುವ ಪದವನ್ನು ಇಲ್ಲಿ ಉಪಯೋಗಿಸಲಾಗಿದೆ. **'ನಾಸ್ತಿ ಜಾಗರತೋ ಭಯಂ'** ಎಂದ ಹಾಗೆ ನಿರಂತರವೂ ಭಗವದ್ವಿಷಯದಲ್ಲಿ ಜಾಗರೂಕರಾಗಿದ್ದರೆ, ಕಾಮಾದಿ ಶಕ್ತಿಗಳು ಒಳಗೆ ಪ್ರವೇಶಿಸಲಾರವು. ಯಾವಾಗಲೂ ಎಚ್ಚೆತ್ತಿದ್ದರೆ ಕಳ್ಳರು ಒಳಗೆ ಬರುವುದಿಲ್ಲವಲ್ಲವೇ! ದೀಪವು ಯಾವಾಗಲೂ ಉರಿಯುತ್ತಿದ್ದರೆ ಕತ್ತಲಿಗೆ ಅವಕಾಶವಿಲ್ಲವಲ್ಲವೇ!

ಪ್ರ : ಯೋಗಾಭ್ಯಾಸಿ ಎಂತಹ ನಿಯಮಗಳನ್ನು ಹೊಂದಿರಬೇಕು?

ಉ : ೧) ಏಕಾಂತ ಸ್ಥಳವನ್ನು ಆಶ್ರಯಿಸಬೇಕು ೨) ಏಕಾಕಿಯಾಗಿ ಧ್ಯಾನ ಮಾಡಬೇಕು ೩) ದೇಹೇಂದ್ರಿಯ ಮನಗಳನ್ನು ಸ್ವಾಧೀನದಲ್ಲಿಟ್ಟುಕೊಳ್ಳಬೇಕು. ೪) ಆಶೆಯಿಲ್ಲದಿರಬೇಕು ೫) ಅಪರಿಗ್ರಹ ನಿಯಮ (ಬೇರೆಯವರಿಂದ ಏನನ್ನೂ ಸ್ವೀಕರಿಸದೆ ಇರುವದನ್ನು) ಪಾಲಿಸಬೇಕು.

ಪ್ರ : ಈ ನಿಯಮಗಳನ್ನು ಪಾಲಿಸಿ ಸಾಧಕನು ಮುಂದೆ ಏನು ಮಾಡಬೇಕು?

ಉ : ತನ್ನ ಚಿತ್ತವನ್ನು ನಿರಂತರವಾಗಿ ಆತ್ಮದಲ್ಲಿಯೇ ಲಯಗೊಳಿಸಬೇಕು. ಅಂದರೆ ಆತ್ಮಧ್ಯಾನವನ್ನು ಆಚರಿಸುತ್ತಿರಬೇಕು.

**ಅ॥** ಧ್ಯಾನಕ್ಕೆ ಬೇಕಾದ ಸ್ಥಳ, ಆಸನ, ಕುಳಿತುಕೊಳ್ಳುವ ಪದ್ಧತಿ ಮತ್ತು ಧ್ಯಾನಕ್ರಮವನ್ನು ಹೇಳಲಾಗುತ್ತಿದೆ-

೧೧. **ಶುಚೌ ದೇಶೇ ಪ್ರತಿಷ್ಠಾಪ್ಯ ಸ್ಥಿರಮಾಸನಮಾತ್ಮನಃ**
**ನಾತ್ಯುಚ್ಛ್ರಿತಂ ನಾತಿನೀಚಂ ಚೈಲಾಜಿನಕುಶೋತ್ತರಮ್**

೧೨. **ತತ್ರೈಕಾಗ್ರಂ ಮನಃ ಕೃತ್ವಾ ಯತಚಿತ್ತೇಂದ್ರಿಯಕ್ರಿಯಃ**
**ಉಪಾವಿಶ್ಯಾಸನೇ ಯುಂಜಾದ್ಯೋಗ ಮಾತ್ಮವಿಶುದ್ಧಯೇ**

**ಅರ್ಥ:** ಶುಚೌ=ಪರಿಶುದ್ಧವಾದ; ದೇಶೇ=ಸ್ಥಳದಲ್ಲಿ; ನ ಅತ್ಯುಚ್ಛ್ರಿತಮ್=ಹೆಚ್ಚಿಗೆ ಎತ್ತರವಿಲ್ಲದ್ದು; ನ ಅತಿನೀಚಮ್=ಹೆಚ್ಚಿಗೆ ತಗ್ಗಾಗಿ ಇಲ್ಲದಿರುವುದು; ಚೈಲಾಜಿನಕುಶೋತ್ತರಮ್=ಕೆಳಗೆ ದರ್ಭಾಸನೆ; ಅದರ ಮೇಲೆ ಚರ್ಮ (ಜಿಂಕೆಯ ಅಥವ ಹುಲಿಯ ಚರ್ಮ) ಅದರ ಮೇಲೆ ವಸ್ತ್ರ; ಸ್ಥಿರಂ=ಕದಲದೆ ಇರುವುದು (ಆಗಿ); ಆಸನಂ=ಆಸನವನ್ನು (ಪೀಠವನ್ನು); ಆತ್ಮನಃ=ತನಗೆ; ಪ್ರತಿಷ್ಠಾಪ್ಯ=ತಯಾರು ಮಾಡಿಕೊಂಡು; ತತ್ರಾಸನೆ=ಆ ಆಸನದ ಮೇಲೆ; ಉಪವಿಶ್ಯ=ಕುಳಿತು; ಮನಃ=ಮನಸ್ಸನ್ನು; ಏಕಾಗ್ರಮ್=ಏಕಾಗ್ರವಾಗಿ (ನಿಶ್ಚಲವಾಗಿ); ಕೃತ್ವಾ=ಮಾಡಿ; ಯತಚಿತ್ತೇಂದ್ರಿಯಕ್ರಿಯಃ=ಇಂದ್ರಿಯ ಮನೋ ವ್ಯಾಪಾರಗಳನ್ನು ಹತೋಟಿಯಲ್ಲಿಟ್ಟುಕೊಂಡು (ಸ್ವಾಧೀನಪಡಿಸಿಕೊಂಡು); ಆತ್ಮವಿಶುದ್ಧಯೇ=ಅಂತಃಕರಣಶುದ್ಧಿಗಾಗಿ; ಯೋಗಮ್=ಪರಮಾತ್ಮ ಧ್ಯಾನವನ್ನು; ಯುಂಜಾತ್=ಅಭ್ಯಸಿಸಬೇಕು.

**ತಾ॥** ಪರಿಶುದ್ಧವಾದ ಹೆಚ್ಚಿಗೆ ಎತ್ತರವಾಗಿಲ್ಲದ ಅಥವ ಹೆಚ್ಚಿಗೆ ತಗ್ಗಿಲ್ಲದ ಸ್ಥಳದಲ್ಲಿ ಕೆಳಗೆ ಧರ್ಭಾಸನೆ, ಅದರ ಮೇಲೆ ಚರ್ಮ (ಜಿಂಕೆ ಅಥವ ಹುಲಿಯ ಚರ್ಮ) ಅದರ ಮೇಲೆ ಶುಭ್ರವಾದ ವಸ್ತ್ರವನ್ನು ಹಾಕಿ ಅಲುಗಾಡದೆ ಭದ್ರವಾಗಿರುವ ಆಸನವನ್ನು (ಪೀಠವನ್ನು) ತಯಾರು ಮಾಡಿಕೊಂಡು ಅದರ ಮೇಲೆ ಕುಳಿತು, ಮನಸ್ಸನ್ನು ಏಕಾಗ್ರಗೊಳಿಸಿಕೊಂಡು ಇಂದ್ರಿಯ ಮನೋವ್ಯಾಪಾರಗಳನ್ನು ಹತೋಟಿಯಲ್ಲಿಟ್ಟುಕೊಂಡು (ಸ್ವಾಧೀನ ಪಡಿಸಿಕೊಂಡು) ಅಂತಃಕರಣಶುದ್ಧಿಗೆ (ಪರಮಾತ್ಮನ) ಧ್ಯಾನವನ್ನು ಅಭ್ಯಾಸ ಮಾಡಬೇಕು.

**ವ್ಯಾಖ್ಯೆ:** ಧ್ಯಾನ ಮಾಡುವಾಗ ಎಲ್ಲಿ ಕುಳಿತುಕೊಳ್ಳಬೇಕು, ಹೇಗೆ ಕುಳಿತು ಕೊಳ್ಳಬೇಕು, ಏನು ಮಾಡಬೇಕು ಎನ್ನುವ ಪದ್ಧತಿಗಳೆಲ್ಲವನ್ನೂ ಇಲ್ಲಿ ಕೊಡಲಾಗಿದೆ. ಭಗವದ್ಗೀತೆಯ ವಿಶೇಷತೆ ಇಲ್ಲಿಯೇ ಇದೆ. ಸಾಧಕನಿಗೆ ಬೇಕಾದ ಎಲ್ಲವನ್ನೂ ಚಿಕ್ಕವಿಷಯದಿಂದ ಹಿಡಿದು ದೊಡ್ಡ ವಿಷಯದವರೆಗೆ ಕೂಲಂಕುಷವಾಗಿ ಗೀತೆ ಚರ್ಚಿಸಿ ಹಾಕಿದೆ. ಮೊಟ್ಟಮೊದಲು ಧ್ಯಾನಕ್ಕಾಗಿ ಕುಳಿತುಕೊಳ್ಳುವ ಸ್ಥಳವನ್ನು ಪರಿಶುಭ್ರವಾಗಿಡಬೇಕೆಂದು ಹೇಳಲಾಗಿದೆ. 'ಶುಚೌದೇಶೇ' ಎಂದು ಹೇಳಿರುವುದರಿಂದ ಧ್ಯಾನನಿಷ್ಠೆಗಾಗಿ ಯಾವ ದೇಶಕ್ಕೂ ಹೋಗಬೇಕಾಗಿಲ್ಲವೆಂದು, ಶುಭ್ರ ಸ್ಥಳವೊಂದಿದ್ದರೆ ಸಾಕೆಂದು ತಿಳಿಯುತ್ತದೆ. ತಾನು ಧ್ಯಾನಿಸುವ ಏಕಾಂತದ ಸ್ಥಳ ಪರಿಶುಭ್ರವಾಗಿದ್ದಲ್ಲಿ ಅದು ಧ್ಯಾನಕ್ಕೆ ಸರಿಯಾದ ಸ್ಥಳ. ಶುಭ್ರತೆಯ ಬಗ್ಗೆ ಭಗವಂತನು ಹೇಗೆ ಒತ್ತಿ ಹೇಳಿರುವನೆನ್ನುವುದು ಗಮನಿಸಬೇಕಾಗಿದೆ. ಕೆಲವರು 'ಸ್ಥಳ ಹೇಗಿದ್ದರೇನು ಮನಸ್ಸು ಪ್ರಧಾನ'ವೆಂದು ಹೇಳುವರು. ಅಸಂಶಯವಾಗಿ ಮನಸ್ಸೇ ಪ್ರಧಾನ ವಾಗಿದ್ದರೂ, ಪರಿಸರ ನಿರ್ಮಲವಾಗಿದ್ದಾಗಲೇ ಆ ಮನಸ್ಸು ಊರ್ಧ್ವಮುಖ ವಾಗಿ ನಡೆಯಲು ಅನುಕೂಲವಾಗುತ್ತದೆ. ಉನ್ನತವಾದ ಹಾಗು ಪವಿತ್ರ ಭಾವಗಳು ಅಲ್ಲಿ ಉಂಟಾಗುತ್ತಿರುತ್ತವೆ. ಮಲಿನ ಪ್ರದೇಶದ ದುಷ್ಪಭಾವ ಸಾಧಕನ ಮನಸ್ಸಿನ ಮೇಲೆ ತಪ್ಪದೆ ಇರುತ್ತದೆ. ಮಹನೀಯರಾದವರು ತಮ್ಮ ಮನಸ್ಸನ್ನು ಎಷ್ಟು ಪವಿತ್ರವಾಗಿಟ್ಟುಕೊಂಡಿರುವರೋ ಅಷ್ಟು ಪವಿತ್ರವಾಗಿ ತಮ್ಮ ದೇಹವನ್ನು, ತಮ್ಮ ಮಾತನ್ನು, ತಾವು ಇರುವ ಪ್ರದೇಶವನ್ನು ಕೂಡ ಇಟ್ಟುಕೊಂಡಿರುವರು. ಅವರ ಶುದ್ಧತೆ ಪ್ರತಿ ಚಿಕ್ಕ ವಿಷಯದಲ್ಲೂ ಪ್ರತಿಬಿಂಬಿಸುತ್ತಿರುತ್ತದೆ. ಆದ್ದರಿಂದ ಸಾಧಕರು ತಾವು ಧ್ಯಾನಿಸುವ ಸ್ಥಳವನ್ನು ಚೆನ್ನಾಗಿ ಶುಭ್ರವಾಗಿಟ್ಟುಕೊಂಡಿರಬೇಕು.

ಧ್ಯಾನಾಭ್ಯಾಸಿ ಕುಳಿತುಕೊಳ್ಳುವ ಸ್ಥಳ ಅಥವ ಪೀಠ ಹೆಚ್ಚು ಎತ್ತರವಾಗಲಿ ಅಥವ ಹೆಚ್ಚು ಕೆಳಗಾಗಲಿ ಇರಬಾರದೆಂದು ಭಗವಂತನು ಹೇಳಿದನು. ಹೆಚ್ಚಿನ ಎತ್ತರದಲ್ಲಿದ್ದಲ್ಲಿ ಧ್ಯಾನದಲ್ಲಿ ಮೈಮರೆತು (ತಮಸ್ಸು ಸ್ವಭಾವದಿಂದ) ಕೆಳಗೆ ಬೀಳಬಹುದು. ಹಾಗೆಯೇ ಹೆಚ್ಚು ಕೆಳಗಿದ್ದರೆ ನೀರು ಕ್ರಿಮಿ ಕೀಟಾದಿಗಳು ತೊಂದರೆ ಕೊಡುವ ಸಾಧ್ಯತೆಗಳಿರುವುವು. ಆದ್ದರಿಂದ ಸ್ವಲ್ಪ ಎತ್ತರವಿರುವ ಕಟ್ಟೆಯ ಮೇಲಾಗಲಿ, ಪೀಠದ ಮೇಲಾಗಲಿ ಕುಳಿತು, ಧ್ಯಾನ ಮಾಡುವುದು ಉತ್ತಮವೆಂದು ಹೇಳಲ್ಪಟ್ಟಿದೆ. ಸ್ಥಳ ಒರಟಾಗಿದ್ದರೆ ಸ್ವಲ್ಪ ತೊಂದರೆಯಾಗ ಬಹುದಾದ್ದರಿಂದ, ಅದರ ಮೇಲೆ ದರ್ಭಾಸನೆಯನ್ನು ಹಾಕಿ, ಅದರ ಮೇಲೆ ಜಿಂಕೆಯ ಚರ್ಮ (ಇಲ್ಲವೆ ಹುಲಿಯ ಚರ್ಮ)ವನ್ನು ಹಾಕಿ ಅದರ ಮೇಲೆ ವಸ್ತ್ರವನ್ನು ಹಾಕಿ ಕುಳಿತುಕೊಳ್ಳಲು ನಿರ್ದೇಶಿಸಲಾಗಿದೆ. ಆಸನವು ಸ್ವಲ್ಪವೂ ಕದಲದೆ ಸಮವಾಗಿ ಸ್ಥಿರವಾಗಿರಬೇಕು. ಒಂದು ಯಂತ್ರವನ್ನು ನೆಲದ ಮೇಲೆ ಸ್ಥಾಪಿಸುವಾಗ ನೆಲ ಚದರವಾಗಿ ಗಟ್ಟಿಯಾಗಿದೆಯೇ ಇಲ್ಲವೇ ಎನ್ನುವುದನ್ನು ಚೆನ್ನಾಗಿ ವಿಚಾರಿಸುವರಲ್ಲವೇ! ಹಾಗೆಯೇ ಧ್ಯಾನಾಭ್ಯಾಸಿ ಕುಳಿತುಕೊಳ್ಳುವ ಆಸನ ಸ್ಥಿರವಾಗಿದ್ದರೆ ಧ್ಯಾನವು ನಿರಾತಂಕವಾಗಿ ನಡೆಯುವುದು. ಯಾವ ಪ್ರಕಾರವಾಗಿ ಕುಳಿತುಕೊಳ್ಳಬೇಕೆನ್ನುವ ಪ್ರಶ್ನೆ ಬಂದಾಗ, ಒಂದು ರೀತಿಯ ನಿರ್ದಿಷ್ಟ ಆಸನವನ್ನು ಹೇಳದೆ ಸ್ಥಿರವಾದ ಆಸನವನ್ನು (ಸ್ಥಿರಮಾಸನಂ) ಹಾಕಿಕೊಳ್ಳಬೇಕೆಂದು ಗೀತಾಚಾರ್ಯನು ಹೇಳಿದನು. ಅಂದರೆ ಅವರವರ ದೇಹಾನುಕೂಲದಂತೆ ಪದ್ಮಾಸನವಾಗಲಿ, ಸಿದ್ಧಾಸನವಾಗಲಿ ಇಲ್ಲವೆ ಬೇರೆ ಯಾವುದೇ ಸ್ಥಿರವಾದ ಬಹಳ ಹೊತ್ತು ಕುಳಿತುಕೊಳ್ಳಲು ಅನುಕೂಲವಾಗುವ ಆಸನವನ್ನು ಅವಲಂಬಿಸಬಹುದೆಂದು ಹೇಳಲಾಗಿದೆ. ಪತಂಜಲಿ, ಈ ಸಂದರ್ಭದಲ್ಲಿ '**ಸ್ಥಿರಸುಖಮಾಸನಮ್**' ಎಂದು ಹೇಳಿದ್ದಾರೆ. ಅಂದರೆ ಯಾವ ಆಸನ ಸಾಧಕನಿಗೆ ಸುಖವಾಗಿರುವುದೋ, ಸ್ಥಿರವಾಗಿರುವುದೋ, ಅದನ್ನೇ ಅನುಸರಿಸಬಹುದೆಂದು ಬೋಧಿಸಿದನು.

ಈ ಪ್ರಕಾರವಾದ ಆಸನದ ಮೇಲೆ ಕೂತು ಸಾಧಕನು ಇಂದ್ರಿಯ ಮನೋವೃತ್ತಿಗಳನ್ನು ಬಹಿರ್ಮುಖವಾಗಿ ಹೋಗಗೊಡದೆ, ನಿಗ್ರಹಿಸಿ ಅಂತರ್ಮುಖವಾಗಿ ಪರಮಾತ್ಮನ ಧ್ಯಾನದಲ್ಲಿ ತೊಡಗಬೇಕು. ಮನಸ್ಸನ್ನು ಪ್ರಾಪಂಚಿಕ ವಸ್ತುಗಳ ಮೇಲೆ ಬಿಡದೆ ದೈವದಲ್ಲೇ ಏಕಾಗ್ರ ಗೊಳಿಸಿಕೊಳ್ಳಬೇಕು. ಏಕಾಗ್ರತೆ (Concentration)ಯಲ್ಲಿ ಬಹಳ ಶಕ್ತಿಯಿದೆ. ಸಾಮಾನ್ಯವಾದ ಸೂರ್ಯಕಿರಣ ಭೂತ ಕನ್ನಡಿಯ ಮೂಲಕ ಹಾದಾಗ ಒಂದೇ ಸ್ಥಾನದಲ್ಲಿ ಕೇಂದ್ರೀಭೂತವಾಗುವುದರಿಂದ ಕೆಳಗಿನ ಕಾಗದವನ್ನು ಹೇಗೆ ಸುಟ್ಟು ಹಾಕುವುದೋ ಹಾಗೆಯೇ ಮನಸ್ಸಿನ ಶಕ್ತಿಯನ್ನು ಪ್ರಾಪಂಚಿಕ ಪದಾರ್ಥಗಳಿಂದ ಮರಳಿಸಿ ದೈವ (ಆತ್ಮ)ದ ಕಡೆಗೆ ತಿರುಗಿಸಿ, ಏಕಾಗ್ರತೆ ವಹಿಸಿದರೆ ಅಖಂಡ ಶಕ್ತಿ ಪ್ರಾದುರ್ಭವಿಸಿ ಅದು ಅಜ್ಞಾನಪಟಲವನ್ನು ಭಸ್ಮೀಭೂತ ಮಾಡಬಲ್ಲದು.

ಈ ವಿಧವಾಗಿ ಮನಸ್ಸನ್ನು ಏಕಾಗ್ರಗೊಳಿಸಿ ಅಂತಃಕರಣಶುದ್ಧಿಗಾಗಿ ಧ್ಯಾನವನ್ನುಪಕ್ರಮಿಸಬೇಕು. ಏಕೆಂದರೆ ಹೃದಯ ನೈರ್ಮಲ್ಯ ಹಾಗು ಅಂತಃಕರಣಶುದ್ಧಿ ಆತ್ಮಸಾಕ್ಷಾತ್ಕಾರಕ್ಕೆ ಅತ್ಯವಶ್ಯಕ. ನಿರ್ಮಲ ಹೃದಯದಲ್ಲಿ ಮಾತ್ರ ಆತ್ಮೋದಯವಾಗುವುದು.

ಮೇಲಿನ ಶ್ಲೋಕದಲ್ಲಿ 'ಅಜಿನ' ಎಂದು ಹೇಳಿದೆಯೆಂದು ಜಿಂಕೆ ಮೊದಲಾದವುಗಳನ್ನು ಕೊಂದು ಅವುಗಳ ಚರ್ಮವನ್ನು ಉಪಯೋಗಿಸ ಬಹುದೆಂದು ಅರ್ಥ ಮಾಡಬಾರದು. ಮರಣಿಸಿದ ಪ್ರಾಣಿಗಳ ಚರ್ಮವನ್ನು ಉಪಯೋಗಿಸಬಹುದೆಂದೇ ಭಾವ. ಇಲ್ಲದಿದ್ದರೆ ಹಿಂಸಾದೋಷ ಆವರಿಸಬಲ್ಲದು.

ಪ್ರ : ಧ್ಯಾನಾಭ್ಯಾಸಿ ಮೊಟ್ಟಮೊದಲು ಅನುಸರಿಸಬೇಕಾದ ಪದ್ಧತಿಗಳಾವುವು?

ಉ : ೧) ಧ್ಯಾನಕ್ಕಾಗಿ ನಿರ್ಮಲವಾದ ಸ್ಥಳವನ್ನು ಆರಿಸಿಕೊಳ್ಳಬೇಕು. ಇಲ್ಲವೆ, ತಾನು ಇರುವ ಸ್ಥಳವನ್ನೇ ಪರಿಶುಭ್ರ ಮಾಡಿಕೊಂಡು ಉಪಯೋಗಿಸಬೇಕು. ೨) ಎತ್ತರವಾದ ಅಥವ ತಗ್ಗಾದ ಸ್ಥಳದಲ್ಲಿ ಕೂತುಕೊಳ್ಳಬಾರದು. ೩) ಕೂತಾಗ ಕೆಳಗೆ ದರ್ಭಾಸನೆ, ಅದರ ಮೇಲೆ ಚರ್ಮ, ಅದರ ಮೇಲೆ ವಸ್ತ್ರವನ್ನು ಹಾಕಿಕೊಳ್ಳಬೇಕು. ೪) ಕೂರುವ ಪೀಠ ಅಲುಗಾಡದಂತಿರಬೇಕು. ಮತ್ತೆ ಯಾವ ಆಸನ ಹಾಕಿ ಕೂತರೆ ತಾನು ಸ್ಥಿರವಾಗಿ ಸುಖವಾಗಿರಬಲ್ಲನೊ ಅದನ್ನೇ ಹಾಕಿಕೊಳ್ಳಬೇಕು. ೫) ಇಂದ್ರಿಯ, ಮನೋವೃತ್ತಿಗಳನ್ನು ನಿಗ್ರಹಿಸಬೇಕು. ೬) ಮನಸ್ಸನ್ನು ಏಕಾಗ್ರಪಡಿಸಬೇಕು.

ಪ್ರ : ಈ ಧ್ಯಾನವನ್ನು ಏಕೆ ಮಾಡಬೇಕು?

ಉ : ಹೃದಯ ಸಿದ್ಧಿಗೆ, ಅಂತಃಕರಣದ ನಿರ್ಮಲತೆಗೆ. ನಿರ್ಮಲಾಂತಃಕರಣ ದಲ್ಲಿಯೇ (ಶುದ್ಧ ಹೃದಯದಲ್ಲಿ) ಪರಮಾತ್ಮಸಾಕ್ಷಾತ್ಕರಿಸುವನು.

**ಅ||** ಧ್ಯಾನಾಭ್ಯಾಸಿ ಹೇಗೆ ಕುಳಿತುಕೊಳ್ಳಬೇಕು ಆತನ ದೃಷ್ಟಿಯನ್ನು ಎಲ್ಲಿ ನಿಲ್ಲಿಸಬೇಕೆನ್ನುವುದನ್ನು ಹೇಳಲಾಗುತ್ತಿದೆ-

**೧೩. ಸಮಂ ಕಾಯಶಿರೋಗ್ರೀವಂ ಧಾರಯನ್ನಚಲಂ ಸ್ಥಿರಃ**
**ಸಂಪ್ರೇಕ್ಷ್ಯ ನಾಸಿಕಾಗ್ರಂ ಸ್ವಂ ದಿಶಶ್ಚಾನವಲೋಕಯನ್**

**೧೪. ಪ್ರಶಾಂತಾತ್ಮಾ ವಿಗತಭೀ ರ್ಬ್ರಹ್ಮಚಾರಿವ್ರತೇ ಸ್ಥಿತಃ**
**ಮನಸ್ಸಂಯಮ್ಯ ಮಚ್ಚಿತ್ತೋ ಯುಕ್ತ ಆಸೀತ ಮತ್ಪರಃ**

**ಅರ್ಥ:** ಕಾಯಶಿರೋಗ್ರೀವಂ=ಶರೀರ, ಶಿರಸ್ಸು, ಕಂಠ; ಸಮಂ=ಸಮವಾಗಿ; ಅಚಲಂ=ಕದಲದೆ; ಧಾರಯನ್=ನಿಲ್ಲಿಸಿ; ಸ್ಥಿರಃ=ಸ್ಥಿರವಾಗಿದ್ದು; ದಿಶಃ ಚ=ದಿಕ್ಕುಗಳನ್ನು ಸಹ; ಅನವಲೋಕಯನ್=ನೋಡದೆ; ಸ್ವಮ್=ತನ್ನ; ನಾಸಿಕಾಗ್ರಮ್=ಮೂಗಿನ ತುದಿಯನ್ನು; ಸಂಪ್ರೇಕ್ಷ್ಯ=ದೃಷ್ಟಿಯಿಟ್ಟು; ಪ್ರಶಾಂತಾತ್ಮಾ=ಶಾಂತಿಯ ಅಂತಃಕರಣವುಳ್ಳವನಾಗಿ; ವಿಗತಭೀಃ=ಭಯವನ್ನು ಬಿಟ್ಟು; ಬ್ರಹ್ಮಚಾರಿವ್ರತೇ=ಬ್ರಹ್ಮಚರ್ಯವ್ರತದಲ್ಲಿ; ಸ್ಥಿತಃ=ಇರುವವನು (ಆಗಿ); ಮನಃ=ಮನಸ್ಸನ್ನು; ಸಂಯಮ್ಯ=ಚೆನ್ನಾಗಿ ನಿಗ್ರಹಿಸಿ (ಸ್ವಾಧೀನಪಡಿಸಿಕೊಂಡು); ಮಚ್ಚಿತ್ತಃ=ನನ್ನಲ್ಲಿ ಚಿತ್ತವುಳ್ಳವನಾಗಿ; ಮತ್ಪರಃ=ನಾನೇ ಪರಮಗತಿಯೆಂದು ನಂಬಿದವನಾಗಿ (ನನ್ನನ್ನೇ ಧ್ಯಾನಿಸುತ್ತಾ); ಯುಕ್ತಃ=ಸಮಾಧಿಯುಕ್ತನಾಗಿ; ಆಸೀತ=ಇರಬೇಕು.

**ತಾ||** (ಧ್ಯಾನ ಮಾಡುವವನು) ಶರೀರ, ಶಿರಸ್ಸು, ಕಂಠಗಳನ್ನು ಸಮವಾಗಿ (ನೇರವಾಗಿ) ನಿಲ್ಲಿಸಿ, ಕದಲದೆ, ಸ್ಥಿರವಾಗಿದ್ದು ದಿಕ್ಕುಗಳನ್ನು ನೋಡದೆ ನಾಸಿಕಾಗ್ರವನ್ನು ವೀಕ್ಷಿಸುತ್ತ, ಪ್ರಶಾಂತ ಹೃದಯಿಯಾಗಿ, ನಿರ್ಭಯ ಚೇತಸ್ಕನಾಗಿ, ಬ್ರಹ್ಮಚರ್ಯ ವ್ರತ ನಿಷ್ಠೆಯನ್ನು ಪಾಲಿಸಿ ಮನಸ್ಸನ್ನು ಚೆನ್ನಾಗಿ ನಿಗ್ರಹಿಸಿ, ನನ್ನಲ್ಲಿ ಚಿತ್ತವುಳ್ಳವನಾಗಿ, ನನ್ನನ್ನೇ ಪರಮಗತಿಯೆಂದು ನಂಬಿ, ಸಮಾಧಿ (ಧ್ಯಾನ) ಯುಕ್ತನಾಗಿರಬೇಕು.

**ವ್ಯಾಖ್ಯೆ:** ಧ್ಯಾನ ಮಾಡುವವನು ಆಸನದ ಮೇಲೆ ಕೂತಿದ್ದು ಶರೀರ, ಕಂಠ, ಶಿರಸ್ಸು- ಎನ್ನುವ ಈ ಮೂರನ್ನು ಸಮವಾಗಿರಿಸಿ, ಅಂದರೆ ಎಳ್ಳಷ್ಟೂ ಬಗ್ಗಿಸದೆ ನೇರವಾಗಿಡಬೇಕೆಂದು ತಿಳಿಸಲಾಗಿದೆ. ಏಕೆಂದರೆ, ಆ ಮೂರೂ

ನೇರವಾಗಿದ್ದಾಗ ಮಾತ್ರ ಸುಷುಮ್ನ ನಾಡಿಯಿಂದ ಕುಂಡಲಿನೀ ಶಕ್ತಿ ಅವಿಚ್ಛಿನ್ನವಾಗಿ ಸಹಸ್ರಾರಕ್ಕೆ ಪ್ರವಹಿಸಲು ಸಹಾಯಕವಾಗುವುದು. ಆಗ ಮಾತ್ರ ಸಾಧಕನಿಗೆ ಪರಮಾರ್ಥಾನುಭವಗಳು ಸಾಧ್ಯ. ಮಿಲಿಟರಿಯವರು, ಪೋಲೀಸಿನವರು ಕವಾಯತು ಮಾಡುವಾಗ, ನಡೆಯುವಾಗ ಯಾವ ವಿಧವಾಗಿ ಮೇಲಿನ ಮೂರು ಅಂಗಗಳನ್ನು ಸಮವಾಗಿ ನಿಲ್ಲಿಸುವರೋ ಹಾಗೆ ಧ್ಯಾನಾಭ್ಯಾಸಿಯು ನಿಶ್ಚಲವಾಗಿ ಕುಳಿತು ಧ್ಯಾನಿಸಬೇಕು. 'ಸ್ಥಿರಃ' ಎಂದು ಹೇಳಿರುವುದರಿಂದ ಧ್ಯಾನಕಾಲದಲ್ಲಿ ಮಧ್ಯೆ ಮಧ್ಯೆ ಏಳದೆ ಧ್ಯಾನ ಸಮಾಪ್ತಿಯಾಗುವವರೆಗೆ ನಿಶ್ಚಲವಾಗಿ ಕೂತಿರಬೇಕೆಂದು ಭಾವ.

ಹಾಗೆ ನಿಶ್ಚಲವಾಗಿ ಕುಳಿತು, ದೃಷ್ಟಿಯನ್ನು ಎಲ್ಲಾ ಕಡೆಗಳಿಗೆ ಹೋಗಬಿಡದೆ, ಧ್ಯಾನಮಗ್ನನಾಗಬೇಕು. ದಿಕ್ಕುಗಳನ್ನು ನೋಡಿದರೆ 'ಅದು ಏನು, ಅವರ್ಯಾರು' ಮುಂತಾದ ಸಂಕಲ್ಪಗಳು ಉದಯಿಸಿ ವಿಕ್ಷೇಪ ಉಂಟಾಗುವ ಸಾಧ್ಯತೆಗಳಿರುವುದರಿಂದ ಧ್ಯಾನಕಾಲದಲ್ಲಿ ದಿಕ್ಕುಗಳನ್ನು ನೋಡಬಾರದೆಂದು ಎಚ್ಚರಿಸಲಾಗಿದೆ. ಈ ಪ್ರಕಾರವಾಗಿ ದೃಷ್ಟಿಯನ್ನು ಬಾಹ್ಯದಿಂದ ಮರಳಿಸಿ ಇಲ್ಲಿ ಅಲ್ಲಿ ಹೋಗಬಿಡದೆ ತನ್ನ ನಾಸಿಕಾಗ್ರದ (ಮೂಗಿನ ತುದಿ) ಮೇಲೆ ನಿಲ್ಲಿಸಿ ಧ್ಯಾನಕ್ಕೆ ಉಪಕ್ರಮಿಸಬೇಕು. ಇದನ್ನೇ 'ಭೂಚರೀ' ಮುದ್ರೆ ಎನ್ನುವರು. ಆ ರೀತಿ ದೃಷ್ಟಿಯನ್ನು ಅಲ್ಲಿ ನಿಲ್ಲಿಸಿದ್ದೇ ಆದರೆ ಮನಸ್ಸು ಕ್ರಮವಾಗಿ ನಿಶ್ಚಲವಾಗಬಲ್ಲದು. ಕೆಲವರು ದೃಷ್ಟಿಯನ್ನು ಭ್ರೂಮಧ್ಯದಲ್ಲಿ ನಿಲ್ಲಿಸಿದರೆ, ಮತ್ತೆ ಕೆಲವರು ಹೃದಯ ಸ್ಥಾನದಲ್ಲಿಯೂ, ಕೆಲವರು ಸಹಸ್ರಾರದಲ್ಲಿಯೂ ನಿಲ್ಲಿಸುವರು. ಅವರವರ ಅನುಕೂಲತೆಗಳನ್ನು ಹಿಡಿದು ಆಯಾ ಸ್ಥಾನಗಳನ್ನು ನಿರ್ಣಯಿಸಿಕೊಳ್ಳಬಹುದು. ಪ್ರಾರಂಭ ದೆಸೆಯಲ್ಲಿ ಕಣ್ಣುಗಳನ್ನು ಪೂರ್ತಿಯಾಗಿ ತೆರೆದರೆ ದೃಶ್ಯವಸ್ತುಗಳು ಗೋಚರಿಸುವುವು. ಪೂರ್ತಿಯಾಗಿ ಮುಚ್ಚಿದರೆ ನಿದ್ರೆ ಬರುವ ಪ್ರಮಾದವಿದೆಯಾದ್ದರಿಂದ, ಅರ್ಧ ನಿಮೀಲಿತ ನೇತ್ರನಾಗಿ ನಾಸಿಕಾಗ್ರ ಸ್ಥಾನದಲ್ಲಿ ದೃಷ್ಟಿಯನ್ನು ನಿಲ್ಲಿಸಿ, ಧ್ಯಾನಿಸಿದಲ್ಲಿ ಧ್ಯಾನವು ಸವ್ಯವಾಗಿ ಸಾಗುವುದು. ಧ್ಯಾನದ ಸಮಯದಲ್ಲಿ ದೃಶ್ಯದಿಂದ ವಿಕ್ಷೇಪವುಂಟಾಗದ ಹಾಗೆ ಇರಲು ಭಗವಂತನು ಕಣ್ಣಿಗೆ ರೆಪ್ಪೆಯನ್ನೂ ಏರ್ಪಾಟು ಮಾಡಿದ್ದಾನೆ. ಇನ್ನು ಯಾವ ಇಂದ್ರಿಯಕ್ಕೂ ಅಂತಹ ಬಾಗಿಲು ಇಲ್ಲ. ಆಹಾ! ಜೀವರಾಶಿಗಳ ಮೇಲೆ ಭಗವಂತನಿಗೆ ಅದೆಷ್ಟು ಕರುಣೆ!

ಈ ಪ್ರಕಾರವಾಗಿ ಧ್ಯಾನಕಾಲದಲ್ಲಿ ದೃಷ್ಟಿಯನ್ನು ಬಾಹ್ಯದಿಂದ ಅಂತರ್ಮುಖವಾಗಿ ತಿರುಗಿಸಿ, ಒಂದು ಕಡೆ ಏಕಾಗ್ರವಾಗಿ ನಿಲ್ಲಿಸಿ, ಪರಮಾತ್ಮನೇ ಪರಮಗತಿಯೆಂದು ನಂಬಿ ಅವನನ್ನೇ ಧ್ಯಾನಿಸಬೇಕು. 'ನನ್ನಲ್ಲೇ ಚಿತ್ತವಿಟ್ಟು ನನ್ನನ್ನೇ ಧ್ಯಾನಿಸ'ಬೇಕೆಂದು ಇಲ್ಲಿ ಶ್ರೀಕೃಷ್ಣಪರಮಾತ್ಮ ನುಡಿದಿರುವನು. ಶ್ರೀಕೃಷ್ಣಮೂರ್ತಿ ಸರ್ವಜೀವಿಗಳ ಹೃದಯಾಂತರಾಳಗಳಲ್ಲಿ ಬುದ್ಧಿಗೆ ಸಾಕ್ಷಿಯಾಗಿ ಬೆಳಗುವಂಥ ಆತ್ಮವೇ ಆದುದರಿಂದ, ಆ ಆತ್ಮವನ್ನೇ ಧ್ಯಾನಿಸಬೇಕೆಂದರ್ಥ. ಹಾಗೆ ಧ್ಯಾನಿಸಲು ಮೊದಲು ಧ್ಯಾನಿಗೆ ನಾಲ್ಕು ಸುಲಕ್ಷಣಗಳಿರಬೇಕೆಂದು ಹೇಳಲಾಗಿದೆ- ಅವು ಯಾವುವೆಂದರೆ- ೧) ಪ್ರಶಾಂತ ಚಿತ್ತತೆ ೨) ನಿರ್ಭಯತೆ ೩) ಬ್ರಹ್ಮಚರ್ಯವ್ರತ ೪) ಮನಸ್ಸಂಯಮ.

ಸಮುದ್ರ ಯಾವ ಪ್ರಕಾರವಾಗಿ ಶಾಂತವಾಗಿ ಗಂಭೀರವಾಗಿರುವುದೋ ಹಾಗೆ ಸಾಧಕನ ಅಂತಃಕರಣವು ಪ್ರಶಾಂತವಾಗಿರಬೇಕು. 'ಶಾಂತಾತ್ಮಾ' ಎಂದು ಹೇಳದೆ 'ಪ್ರಶಾಂತಾತ್ಮಾ' ಎಂದು ಹೇಳಿರುವುದರಿಂದ ಚಿತ್ತದಲ್ಲಿ ಅತ್ಯಂತ ಪ್ರಶಾಂತಿ ನೆಲೆಸಿರಬೇಕೆಂದು ಅರ್ಥವಾಗುತ್ತದೆ. ಸಾಧಕನ ಹೃದಯದಲ್ಲಿ ಭಯವು ಸ್ವಲ್ಪವೂ ಇರಬಾರದು. ದೃಶ್ಯಪದಾರ್ಥಗಳೆಲ್ಲವೂ ವಾಸ್ತವವಾಗಿ ಮಿಥ್ಯಾರೂಪಗಳೇ ಆದುದರಿಂದ ಸಾಧಕನು ಇನ್ನು ಅವುಗಳಿಗೆ ಭಯಪಡಬೇಕಾದ ಕೆಲಸವಿಲ್ಲ. ಎಲ್ಲವೂ ತನ್ನ (ಆತ್ಮ) ಸ್ವರೂಪವೇ ಆದುದರಿಂದ ತನ್ನನ್ನು ಕುರಿತು ತಾನು ಭಯಪಡಬೇಕಾದ ಅಗತ್ಯವಿಲ್ಲ. ತನ್ನ (ಆತ್ಮ) ಸ್ವರೂಪವನ್ನು ಮರೆತು ದೃಶ್ಯವನ್ನು ಸತ್ಯವೆಂದು ತಿಳಿದಾಗಲೇ ಭಯವು ಜೀವಿಯನ್ನು ಬಾಧಿಸುವುದು. ಶ್ರುತಿ ವಾಕ್ಯಗಳು ಈ ಸತ್ಯವನ್ನೇ ಪ್ರಬೋಧಿಸುತ್ತಿವೆ.* ಇಂತಹ ಪೂರ್ಣ ನಿರ್ಭಯತೆ ಪ್ರಾರಂಭದೆಸೆಯಲ್ಲಿ ಸಾಧಕನಿಗೆ ಉಂಟಾಗದಿದ್ದರೂ, ಭಕ್ತಿ ವೈರಾಗ್ಯ ತತ್ತ್ವ ವಿಚಾರಣಾದಿಗಳ ಅಭ್ಯಾಸದ ದ್ವಾರ ಭಯರಾಹಿತ್ಯವನ್ನು ಸಂಪಾದಿಸಿಕೊಂಡ ನಂತರವೇ ಚಿತ್ತವು ಧ್ಯಾನದಲ್ಲಿ ಸ್ಥಿರತೆಯನ್ನು ಹೊಂದಬಲ್ಲದು. ಆದ್ದರಿಂದಲೇ 'ವಿಗತಭೀಃ' ಎಂದು ಹೇಳುತ್ತ ನಿರ್ಭಯತ್ವವನ್ನು ಧ್ಯಾನಶೀಲನ ಒಂದು ಅಂಗವಾಗಿ, ಆವಶ್ಯಕತೆಯಾಗಿ ಇಲ್ಲಿ ವರ್ಣಿಸಲಾಗಿದೆ.

ಧ್ಯಾನಶೀಲನು ಬ್ರಹ್ಮಚರ್ಯವನ್ನು ಚೆನ್ನಾಗಿ ಕಾಪಾಡಿಕೊಳ್ಳಬೇಕು. ಬ್ರಹ್ಮಚರ್ಯದಿಂದ ಸಾಧಕನಿಗೆ ಶಾರೀರಿಕವಾಗಿ, ಮಾನಸಿಕವಾಗಿ ಅಪರಿಮಿತವಾದ ಶಕ್ತಿ ಬರುತ್ತದೆ. ಬ್ರಹ್ಮಚರ್ಯವೆನ್ನುವ ಪದಕ್ಕೆ 'ಬ್ರಹ್ಮದಲ್ಲಿ ಚಲಿಸುವುದು' ಎನ್ನುವ ಅರ್ಥವಿದ್ದಾಗಲೂ 'ಕಾಮಸಂಬಂಧವಾದ ಚೇಷ್ಟೆಗಳೂ, ಸಂಕಲ್ಪಗಳಾವುವೂ ಇಲ್ಲದೇ ಇರುವುದು' ಎನ್ನುವ ಅರ್ಥದಲ್ಲೇ ಅದನ್ನು ಹೆಚ್ಚಾಗಿ ಉಪಯೋಗಿಸಲ್ಪಡುತ್ತದೆ. ಗೃಹಸ್ಥರಿಗೆ ಗೃಹಸ್ಥ ಬ್ರಹ್ಮಚರ್ಯವನ್ನು ವಿಧಿಸಲಾಗಿದೆ. ಬ್ರಹ್ಮಚರ್ಯವನ್ನು ಕೇವಲ ಶರೀರಕ್ಕೆ ಪರಿಮಿತಗೊಳಿಸದೆ ಮನೋವಾಕ್ಕುಗಳಿಗೂ ವಿಸ್ತರಿಸಿ ಯಾವ ವಿಷಯ ಸಂಕಲ್ಪವನ್ನೂ ಮನಸ್ಸಿನಲ್ಲಿ ಮನೆಮಾಡಿಕೊಳ್ಳಲು ಬಿಡದೆ ತ್ರಿಕರಣ ಶುದ್ಧಿಯಿಂದ ಆ ವ್ರತವನ್ನು ಪಾಲಿಸಬೇಕು. ಬ್ರಹ್ಮಚರ್ಯದ ಫಲ ಅಪಾರ. ಪ್ರಪಂಚದಲ್ಲಿ ಇಲ್ಲಿಯವರೆಗೆ ಅವತರಿಸಿದ ಮಹಾತ್ಮರೆಲ್ಲರೂ, ಲೋಕವನ್ನು ಕಂಪಿಸಿದ ಮಹನೀಯರೆಲ್ಲರೂ ಯಾವುದೋ ರೂಪದಲ್ಲಿ ಬ್ರಹ್ಮಚರ್ಯವನ್ನು ಅನುಸರಿಸಿಯೇ ಅಂತಹ ಅಪಾರಶಕ್ತಿಯನ್ನು ಸಂಪಾದಿಸಿದರು. ತೈಲವಿಲ್ಲದೆ ದೀಪ ಹೇಗೆ ಉರಿಯುವುದಿಲ್ಲವೋ ಹಾಗೆಯೇ ವೀರ್ಯವು ವ್ಯರ್ಥವಾದರೆ ಜ್ಞಾನದೀಪವು ಯಾವಾಗಲೂ ಬೆಳಗುವುದಿಲ್ಲ. ವೀರ್ಯವೇ ಓಜಸ್ಸಾಗಿ ಪರಿಣಮಿಸಿ ಮೆದುಳಿಗೆ ಹಾಗೂ ಬೇರೆಯ ಅಂಗಗಳಿಗೆ ಪುಷ್ಟಿಯನ್ನು ಕೊಟ್ಟು ವಿಕಾಸವನ್ನುಂಟುಮಾಡುವುದು. ಎಷ್ಟೋ ಬಿಂದುಗಳು ರಕ್ತಸೇರಿ ಒಂದು ಬಿಂದು ವೀರ್ಯ ತಯಾರಾಗುವುದು. ಆದ್ದರಿಂದ ಅದು ದೇಹದಲ್ಲಿ ಸಾರತಮವಾದ ವಸ್ತು. ಅಂತಹ ಅಮೂಲ್ಯ ವಸ್ತುವನ್ನು ವಿಷಯ ಭೋಗಗಳಲ್ಲಿ ವ್ಯರ್ಥಮಾಡುವುದು ಮುಮುಕ್ಷುಗಳಿಗೆ ಸಾಧುವಲ್ಲ. ಅದನ್ನೇ ಧ್ಯಾನದಲ್ಲಿ ವಿನಿಯೋಗಿಸಬೇಕು. ಬ್ರಹ್ಮಚರ್ಯ ಅತಿ ಮುಖ್ಯವಾದುದು ಆದ್ದರಿಂದಲೇ ಗೀತೆಯಲ್ಲಿ ವ್ರತವೆನ್ನುವ ಪದವನ್ನು ಅದಕ್ಕೆ ಜೋಡಿಸಲಾಗಿದೆ. **(ಬ್ರಹ್ಮಚಾರಿವ್ರತೇ ಸ್ಥಿತಃ)** ಇದರಿಂದ ಇದು ಸರ್ವೋತ್ತಮ ಸಾಧನವೆಂದು ಸ್ಪಷ್ಟವಾಗುತ್ತಿದೆ. ವ್ರತವನ್ನು ಯಾವ ಪ್ರಕಾರವಾಗಿ ಶ್ರದ್ಧೆಯಿಂದ, ಅತಿ ಜಾಗರೂಕತೆಯಿಂದ ನಿಯಮ ಪೂರ್ವಕವಾಗಿ ಅನುಸರಿಸುವರೋ ಆ

---

* ೧. ಯದಾ ಹ್ಯೇವೈಷ ಏ ತಸ್ಮಿನ್ನುದರಮಂತರಂ ಕುರುತೇ ಅಥ ತಸ್ಯ ಭಯಂ ಭವತಿ

೨. ದ್ವಿತೀಯಾದ್ವೈ ಭಯಂ ಭವತಿ

ಪ್ರಕಾರವೇ ಇದನ್ನೂ ಅನುಷ್ಠಾನ ಮಾಡಬೇಕೆನ್ನುವುದು ಆ 'ವ್ರತ' ಶಬ್ದದ ಭಾವ. ಆದ್ದರಿಂದ ಧ್ಯಾನಶೀಲನು ವ್ರತಚೂಡಾಮಣಿಯಾದ ಈ ಬ್ರಹ್ಮಚರ್ಯವನ್ನು ತಪ್ಪದೆ ಆಚರಿಸಬೇಕು.

ಈ ಪ್ರಕಾರವಾಗಿ ಸಾಧಕನು ಸರಿಯಾದ ನಿಯಮಗಳನ್ನು ಪಾಲಿಸಿ ಮನಸ್ಸನ್ನು ಸಂಯಮಗೊಳಿಸಿಕೊಂಡು ಆತ್ಮದಲ್ಲಿಯೇ ಸ್ಥಿತಿಹೊಂದಿ ಆತ್ಮಧ್ಯಾನ ಪರಾಯಣನಾಗಿ ಬೆಳಗಬೇಕು. 'ಮಚ್ಚಿತ್ತಃ' 'ಮತ್ಪರಃ' ಮುಂತಾದ ಪದಗಳಿಂದ ಧ್ಯಾನಯೋಗಿ ಇತರ ಬೇರೆ ಯಾವುದನ್ನೂ ಚಿಂತಿಸದೆ ಭಗವಂತನನ್ನೇ (ಆತ್ಮನನ್ನೇ) ಚಿಂತಿಸುತ್ತಾ ಭಗವಂತನಲ್ಲಿಯೇ ಮನಸ್ಸನ್ನು ಲಯಗೊಳಿಸಿರಬೇಕೆಂದು ಸ್ಪಷ್ಟವಾಗುತ್ತಿದೆ.

ಪ್ರ : ಧ್ಯಾನ ಮಾಡುವವನು ಆಸನದ ಮೇಲೆ ಹೇಗೆ ಕುಳಿತಿರಬೇಕು?

ಉ : ಶರೀರ, ಕಂಠ, ಶಿರಸ್ಸು- ಮೂರನ್ನೂ ಸಮವಾಗಿ ನಿಲ್ಲಿಸಿ, ಸ್ವಲ್ಪವೂ ಕದಲದೆ ಧ್ಯಾನ ಪೂರ್ತಿಯಾಗುವವರೆಗೆ ಮಧ್ಯದಲ್ಲಿ ಏಳದೆ ಸ್ಥಿರವಾಗಿ ಕುಳಿತುಕೊಳ್ಳಬೇಕು.

ಪ್ರ : ದೃಷ್ಟಿಯನ್ನು ಎಲ್ಲಿ ನಿಲ್ಲಿಸಬೇಕು?

ಉ : ನಾಸಿಕಾಗ್ರದಲ್ಲಿ (ಮೂಗಿನ ತುದಿಯ ಮೇಲೆ).

ಪ್ರ : ಧ್ಯಾನಾಭ್ಯಾಸಿ ಎಂತಹ ಲಕ್ಷಣಗಳನ್ನು ಹೊಂದಿರಬೇಕು?

ಉ : ೧) ಪ್ರಶಾಂತ ಚಿತ್ತನಾಗಿರಬೇಕು ೨) ನಿರ್ಭಯನಾಗಿರಬೇಕು ೩) ಬ್ರಹ್ಮಚರ್ಯ ವ್ರತವನ್ನು ಪಾಲಿಸಬೇಕು ೪) ಮನಸ್ಸನ್ನು (ವಿಷಯಗಳ ಮೇಲೆ ಹೋಗಬಿಡದೆ) ಸಂಯಮಗೊಳಿಸಬೇಕು.

ಪ್ರ : ಇಂತಹ ಲಕ್ಷಣಗಳನ್ನು ಹೊಂದಿದ ನಂತರ ಏನು ಮಾಡಬೇಕು?

ಉ : ಆತ್ಮದಲ್ಲಿಯೇ ಚಿತ್ತವನ್ನು ಲಗ್ನಮಾಡಿ, ಆತ್ಮಪರಾಯಣನಾಗಿ, ಆತ್ಮವನ್ನೇ ಧ್ಯಾನಿಸುತ್ತ ಕೇವಲ ಆತ್ಮಸ್ವರೂಪನಾಗಿ ಬೆಳಗಬೇಕು.

**ಅ॥** ಧ್ಯಾನದ ಫಲವನ್ನು ಹೇಳಲಾಗುತ್ತಿದೆ-

**೧೫. ಯುಂಜನ್ನೇವಂ ಸದಾऽऽತ್ಮಾನಂ ಯೋಗೀ ನಿಯತಮಾನಸಃ**
**ಶಾಂತಿಂ ನಿರ್ವಾಣಪರಮಾಂ ಮತ್ಸಂಸ್ಥಾ ಮಧಿಗಚ್ಛತಿ**

**ಅರ್ಥ:** ನಿಯತಮಾನಸಃ=ಮನೋನಿಗ್ರಹವುಳ್ಳ; ಯೋಗೀ=ಯೋಗಿ; ಸದಾ= ಯಾವಾಗಲೂ; ಏವಂ=ಈ ರೀತಿಯಾಗಿ; ಆತ್ಮಾನಮ್=ಮನಸ್ಸನ್ನು; ಯುಂಜಾನ್=ಆತ್ಮಧ್ಯಾನದಲ್ಲೇ ನಿಲ್ಲಿಸಿ; ಮತ್ಸಂಸ್ಥಾಮ್=ನನ್ನಲ್ಲಿ ಇರುವಂತಹದು (ನನ್ನ ಸ್ವರೂಪವಾಗಿರುವುದು); ನಿರ್ವಾಣಪರಮಾಮ್= ಉತ್ಕೃಷ್ಟ ಮೋಕ್ಷರೂಪವಾದದ್ದು (ಪರಮಾನಂದ ರೂಪವಾದದ್ದು) ಆದ; ಶಾಂತಿಂ= ಶಾಂತಿಯನ್ನು; ಅಧಿಗಚ್ಛತಿ=ಹೊಂದುತ್ತಿದ್ದಾನೆ.

**ತಾ॥** ಮನೋನಿಗ್ರಹ ಹೊಂದಿದ ಯೋಗಿ ಈ ಪ್ರಕಾರವಾಗಿ ಯಾವಾಗಲೂ ಮನಸ್ಸನ್ನು ಆತ್ಮಧ್ಯಾನದಲ್ಲಿ ನಿಲ್ಲಿಸಿ, ನನ್ನಲ್ಲಿ ಇರುವ (ನನ್ನ ಸ್ವರೂಪವೇ ಆದ), ಉತ್ಕೃಷ್ಟ ಮೋಕ್ಷರೂಪವಾದ (ಪರಮಾನಂದ ರೂಪವಾದ) ಶಾಂತಿಯನ್ನು ಹೊಂದುತ್ತಿದ್ದಾನೆ.

**ವ್ಯಾಖ್ಯೆ:** ಮೇಲೆ ತಿಳಿಸಿದ ಪ್ರಕಾರ ಧ್ಯಾನ ಮಾಡುತ್ತ ಬರಲು ಸಾಧಕನಿಗೆ ಎಂತಹ ಫಲವು ಕೈಗೂಡುವುದೋ ಈ ಶ್ಲೋಕದಲ್ಲಿ ವಿವರಿಸಲಾಗಿದೆ. ಆತನಿಗೆ ಪರಮಶಾಂತಿ ಲಭಿಸುವುದು. ಆ ಶಾಂತಿ ಎಂತಹದು? ಸಾಕ್ಷಾತ್ ಭಗವಂತನಲ್ಲಿ ವಾಸಿಸುವಂತಹದು, ಭಗವತ್ಸ್ವರೂಪವೇ ಅದು. ದೃಶ್ಯ, ವಿಷಯಗಳಲ್ಲಿರುವ ಭೋಗಜನಿತ ಸುಖವಾಗಲಿ ಅಥವ ಶಾಂತಿಯಾಗಲೀ ಕ್ಷಣಿಕವಾದವುಗಳು. ಆದ್ದರಿಂದ ಮಹನೀಯರು ಶಾಂತಿಗಾಗಿ ಹೊರಗೆ ಹುಡುಕಾಡದೆ, ಹೃದಯವನ್ನೇ ಪರಿಶೋಧಿಸಿಕೊಂಡು, ಅದನ್ನು ಹೊಂದಿ ಧನ್ಯರಾಗುವರು. ಆದರೆ ಅಂತಹ ನಿರತಿಶಯ ಶಾಂತಿಯನ್ನು ಹೊಂದಬೇಕಾದರೆ, ೧) ಮನೋನಿಗ್ರಹ ೨) ಸತತಾಭ್ಯಾಸವಿರಬೇಕೆಂದು ಇಲ್ಲಿ ಬೋಧಿಸಲಾಗಿದೆ. 'ಸದಾಯುಂಜನ್' ಎಂದು ಹೇಳಿರುವುದರಿಂದ ಮಾಯೆಯನ್ನು ಜಯಿಸಲು ಎಲ್ಲೋ ಅಲ್ಪ ಸ್ವಲ್ಪ ಅಭ್ಯಾಸ ಸಾಲದೆಂದೂ ನಿರಂತರಾಭ್ಯಾಸವೇ ಶರಣ್ಯವೆಂದು ವಿಶದವಾಗುತ್ತದೆ. ವೈರಾಗ್ಯ ವಿಚಾರಣಾದಿಗಳ ದ್ವಾರ ಇಂದ್ರಿಯ ಮನಸ್ಸುಗಳನ್ನು ವಿಷಯಗಳ ಮೇಲೆ ಹೋಗಬಿಡದೆ ಅಭ್ಯಾಸದಿಂದ ನಿಧಾನವಾಗಿ ಅವುಗಳನ್ನು ಸ್ವಾಧೀನ ಪಡಿಸಿಕೊಂಡು ಅಂತರ್ಮುಖ ಮಾಡಿಕೊಂಡು ಆತ್ಮಧ್ಯಾನದಲ್ಲಿ ಸ್ಥಿರಗೊಳ್ಳ ಬೇಕು. ಆಗಲೇ ಪರಮ ನಿರ್ವಾಣರೂಪವಾದ ಆತ್ಯಂತಿಕ ಶಾಂತಿಯೆನ್ನುವ ಫಲವನ್ನು ಪಡೆಯಬಲ್ಲನು. ಎಷ್ಟು ಬೆಲೆ ಕೊಡುತ್ತೀರೋ ಅಷ್ಟು ಫಲವು ಕೈಗೂಡುವುದು. ವಿಷಯತ್ಯಾಗ, ಅವಿದ್ಯಾತ್ಯಾಗ ಎನ್ನುವ ಬೆಲೆಯನ್ನು ಕೊಟ್ಟರೆ ಮೋಕ್ಷರೂಪ ಪರಮಶಾಂತಿ ಎನ್ನುವ ಫಲ ಲಭಿಸುವುದು. ಆದ್ದರಿಂದ 'ನನಗಿನ್ನೂ ಶಾಂತಿ ಸಿಗಲಿಲ್ಲವಲ್ಲ' ಎಂದು ಯಾರೂ ದುಃಖಿಸುವ ಕೆಲಸವಿಲ್ಲ. ಭಗವಂತನು ತಿಳಿಸಿದ ಈ (ಧ್ಯಾನರೂಪ) ಸಾಧನ ಸಂಪತ್ತನ್ನು ಸಂಪಾದಿಸಿಕೊಂಡರೆ ಸಾಕು. ಶಾಂತಿ ಕರತಲಾಮಲಕವಾಗುವುದು.

ಪ್ರ : ಇಂತಹ ಧ್ಯಾನಯೋಗದಿಂದ ಉಂಟಾಗುವ ಫಲಿತವೇನು?

ಉ : ಪರಮಶಾಂತಿಯನ್ನು ಜೀವಿಯು ಹೊಂದುವನು.

ಪ್ರ : ಆ ಶಾಂತಿಯ ಸ್ವರೂಪವೆಂತಹದು?

ಉ : ಮೋಕ್ಷರೂಪವಾದದ್ದು, ಪರಮಾತ್ಮದಲ್ಲಿರುವುದು (ಪರಮಾತ್ಮಸ್ವರೂಪವೇ ಆಗಿದೆ).

ಪ್ರ : ಇಂತಹ ಅಪೂರ್ವ ಫಲವನ್ನು ಹೊಂದಲು ಸಾಧಕನು ಏನು ಮಾಡಬೇಕು?

ಉ : ೧) ಮನಸ್ಸನ್ನು ಸ್ವಾಧೀನಪಡಿಸಿಕೊಳ್ಳಬೇಕು ೨) ನಿರಂತರ ಆತ್ಮಧ್ಯಾನವನ್ನು ಅಭ್ಯಸಿಸಬೇಕು.

**ಅ॥** ಇನ್ನು ಧ್ಯಾನಯೋಗಿಯ ಆಹಾರಾದಿ ನಿಯಮಗಳನ್ನು ಕುರಿತು ಎರಡು ಶ್ಲೋಕಗಳ ಮೂಲಕ ಹೇಳಲಾಗುತ್ತಿದೆ-

**೧೬. ನಾತ್ಯಶ್ನತಸ್ತು ಯೋಗೋऽಸ್ತಿ ನ ಚೈಕಾಂತಮನಶ್ನತಃ**
**ನ ಚಾತಿ ಸ್ವಪ್ನಶೀಲಸ್ಯ ಜಾಗ್ರತೋ ನೈವ ಚಾರ್ಜುನ**

**ಅರ್ಥ:** ಅರ್ಜುನ=ಓ ಅರ್ಜುನಾ! ಯೋಗಃ=(ಧ್ಯಾನ) ಯೋಗ; ಅತಿ ಅಶ್ನತಃತು=ಅಧಿಕವಾಗಿ ತಿನ್ನುವವನಿಗೆ; ನ ಅಸ್ತಿ=ಉಂಟಾಗುವುದಿಲ್ಲ; ಏಕಾಂತಮ್ ಅನಶ್ನತಃ ಚ=ಏನೂ ತಿನ್ನದೆ ಇರುವವನಿಗೆ; ನ=ಉಂಟಾಗದು; ಅತಿ ಸ್ವಪ್ನಶೀಲಸ್ಯಚ=ಹೆಚ್ಚಿಗೆ ನಿದ್ರಿಸುವವನಿಗೆ; ನ=ಉಂಟಾಗದು; ಜಾಗ್ರತಃ ಚ=ಹೆಚ್ಚಾಗಿ ಎಚ್ಚರವಿರುವವನಿಗೆ; ನೈವ=ಉಂಟೇ ಆಗುವುದಿಲ್ಲ.

**ತಾ॥** ಅರ್ಜುನಾ! ಈ ಧ್ಯಾನಯೋಗ ಅಧಿಕವಾಗಿ ಭುಜಿಸುವವನಿಗೆ, ಏನೂ ಭುಜಿಸದವನಿಗೆ, ಹಾಗೆಯೇ ಅಧಿಕವಾಗಿ ನಿದ್ರಿಸುವವನಿಗೆ ಮತ್ತು (ನಿದ್ರೆಯೇ ಮಾಡದೆ) ಯಾವಾಗಲೂ ಎಚ್ಚೆತ್ತಿರುವವನಿಗೆ ಉಂಟಾಗಲಾರದು.

**ವ್ಯಾಖ್ಯೆ:** ಧ್ಯಾನಯೋಗಕ್ಕೆ ಸಹಾಯಭೂತಗಳಾದ ಆಹಾರವಿಹಾರಗಳನ್ನು ಕುರಿತು ಇಲ್ಲಿ ಹೇಳಲಾಗಿದೆ. 'ಯೋಗ'ವೆನ್ನುವ ಪದಕ್ಕೆ ಭಗವಂತನ ಬಳಿಗೆ ಸೇರಿಸುವ ಮಾರ್ಗ ಎಂದು ಅರ್ಥವನ್ನು ಹೇಳಬಹುದು. ಆದರೂ ಇಲ್ಲಿ ಪ್ರಸ್ತುತ ವಿಷಯ ಧ್ಯಾನಯೋಗವಾದುದರಿಂದ ಯೋಗವೆನ್ನುವ ಪದಕ್ಕೆ ಧ್ಯಾನಯೋಗವೆನ್ನುವ ಅರ್ಥ ಸರಿಯಾಗಿದೆ. ಆದರೆ ಈಗ ಹೇಳಲ್ಪಡುವ ಆಹಾರಾದಿ ನಿಯಮಗಳು ಎಲ್ಲಾ ರೀತಿಯ ಯೋಗಗಳಿಗೂ ಅವಶ್ಯಕವೆಂದು ತಿಳಿಯಬೇಕು.

ಅಧಿಕಾಹಾರವನ್ನು ಭುಜಿಸುವವನಿಗೆ ಧ್ಯಾನ ಸಿದ್ಧಿಸುವುದಿಲ್ಲವೆಂದು ಹೇಳಲಾಗಿದೆ. ಮಿತಾಹಾರವನ್ನು* ಸೇವಿಸಿದವರಿಗೆ ಮಾತ್ರ ಧ್ಯಾನ ಚೆನ್ನಾಗಿ ನಡೆಯುವುದು. ಆಹಾರವೆನ್ನುವುದು ಪರಮಾರ್ಥ ಸಾಧನೆಗಳಲ್ಲಿ ವಿಶೇಷ ವಿಷಯವಲ್ಲವೆಂದು ತಿಳಿದು ಕೆಲವರು ಅದನ್ನು ಉಪೇಕ್ಷಿಸುವರು. ಆದರೆ ಭಗವಂತನು ಅದಕ್ಕೆ ಅಮಿತ ಪ್ರಾಧಾನ್ಯತೆ ಕೊಟ್ಟು ಅದರ ವಿಷಯವಾಗಿ ಜಾಗರೂಕತೆ ವಹಿಸಬೇಕೆಂದು ಗೀತೆಯಲ್ಲಿ ಅನೇಕ ಕಡೆ ಒತ್ತಿ ಹೇಳಿದನು. ಒಂದು ಚಿಕ್ಕ ಮೊಳೆ ಸರಿಯಾಗಿಲ್ಲದಿದ್ದರೆ ದೊಡ್ಡ ಯಂತ್ರವೆಲ್ಲವೂ ಹೇಗೆ ನಿಂತುಹೋಗುವುದೋ ಹಾಗೆಯೇ ಆಹಾರದ ವಿಷಯವೂ ಕೂಡ. ಅದು ಸರಿಯಾಗಿ ಇಲ್ಲದಿದ್ದರೆ ಮೋಕ್ಷ ಸಾಧನೆಯಾಗುವುದಿಲ್ಲ. ಜೀವನವೆಲ್ಲವನ್ನೂ ೧) ಆಹಾರ ೨) ನಿದ್ರೆ ಎನ್ನುವ ಇಬ್ಬರು ಕಳ್ಳರು ಅಪಹರಿಸಿ ಹಾಕುತ್ತಾರೆ. ಅವಿವೇಕಿಗಳಿಗೆ ಬಹಳಷ್ಟು ಕಾಲವೆಲ್ಲ ಆ ಎರಡರಲ್ಲೇ ಕಳೆದು ಹೋಗುತ್ತಿದೆ. ಅಮೂಲ್ಯವಾದ ಈ ಮಾನವ ಜೀವನವನ್ನು, ಬಂಧ ವಿಮುಕ್ತಿಗಾಗಿ ಪ್ರಯತ್ನಿಸಬೇಕಾದ ಈ ಉತ್ತಮ ಜೀವನವನ್ನು ಆ ಪ್ರಕಾರವಾಗಿ ಆಹಾರ ನಿದ್ರಾದಿಗಳಲ್ಲಿ ವ್ಯರ್ಥಮಾಡುವುದು ಸರಿಯಲ್ಲ. ಆಹಾರ ಅವಶ್ಯಕವಾಗಿರುವಂತೆ ನಿದ್ರೆಯೂ ಬೇಕಾದದ್ದೇ. ಆದರೆ ಜೀವನ ನಿರ್ವಹಣೆಗೆ ಪರಮಾತ್ಮ ಚಿಂತನೆಗೆ ಎಷ್ಟು ಅವಶ್ಯಕವೋ ಅಷ್ಟು ಮಾತ್ರ ಇದ್ದರೆ ಸಾಕು. ಅದಕ್ಕಿಂತ ಹೆಚ್ಚಾಗಲಿ, ಅಲ್ಪವಾಗಲಿ ಇದ್ದರೆ ಭಗವಚ್ಚಿಂತನೆ ನಡೆಯುವುದಿಲ್ಲ. ಈ ವಿಷಯವನ್ನೇ ಭಗವಂತನು ಎರಡು ಶ್ಲೋಕಗಳ ಮೂಲಕ ಚೆನ್ನಾಗಿ ನಿರೂಪಿಸಿದ್ದಾನೆ.

ಅಧಿಕ ಭೋಜನದಿಂದ ಶರೀರ ಭಾರವಾಗಿ ಮತ್ತಾಗುವುದರಿಂದ ಧ್ಯಾನದಲ್ಲಿ ಕುಳಿತುಕೊಳ್ಳಲೂ ಸಾಧ್ಯವಾಗುವುದಿಲ್ಲ. '*ಸಮಂ ಕಾಯ ಶಿರೋಗ್ರೀವಂ*' (ಶರೀರ, ಕಂಠ, ಶಿರಸ್ಸುಗಳನ್ನು ನೇರವಾಗಿಟ್ಟಿರುವುದು) ಸಾಧ್ಯವಾಗುವುದಿಲ್ಲ. ಒಂದು ವೇಳೆ ಬಲವಂತವಾಗಿ ಕೂತರೂ ನಿದ್ರೆ ಬಂದುಬಿಡುವುದು. ಒಂದು ವೇಳೆ ನಿದ್ರೆ ಬರದೆ ಇದ್ದರೂ, ಹೊಟ್ಟೆ ಭಾರವಾಗಿರುವುದರಿಂದ ದೇಹಭಾವನೆ ಉಂಟಾಗುತ್ತಲೇ ಇರುತ್ತದೆ. ಧ್ಯಾನದಲ್ಲಿ ದೇಹ, ಇಂದ್ರಿಯಗಳು ಮತ್ತು ಮನಸ್ಸನ್ನು ದಾಟಿ ಅವುಗಳಾಚೆ ಯಿರುವ ಆತ್ಮನ ಬಳಿಗೆ ಹೋಗಬೇಕಾದವರು, ದೇಹಸ್ಫುರಣೆಯಿಂದ ದೇಹದ ಹತ್ತಿರವೇ ನಿಂತುಹೋಗುವರು. ಈ ಪ್ರಕಾರವಾಗಿ ಅಧಿಕ ಆಹಾರ ಧ್ಯಾನಕ್ಕೆ ಅಡ್ಡಿತರುವುದು. ಆದ್ದರಿಂದ ಮಿತಾಹಾರಿಯಾಗಿರಬೇಕು. ಹಾಗೆಯೇ ಏನೂ ಆಹಾರವನ್ನು ಭುಜಿಸದವರಿಗೆ ಧ್ಯಾನ ಸಾಧ್ಯವಿಲ್ಲ. ಏಕೆಂದರೆ, ಆಹಾರದಿಂದಲೇ ಶರೀರ, ಮನಸ್ಸು ಏರ್ಪಾಡಾಗಿವೆ. ಆಹಾರವಿಲ್ಲದಿದ್ದರೆ ಅವು ಕ್ಷೀಣಿಸಿ ಶರೀರಕ್ಕೆ ಕುಳಿತುಕೊಳ್ಳಲು, ಮನಸ್ಸಿಗೆ ಧ್ಯಾನಿಸಲು ಶಕ್ತಿಯಿರುವುದಿಲ್ಲ. ಆದ್ದರಿಂದ ಧ್ಯಾನಯೋಗಿ ಶುಷ್ಕೋಪವಾಸಾದಿಗಳನ್ನು ಹೆಚ್ಚಾಗಿ ಮಾಡಬಾರದು. ಯಾವಾಗಾದರೂ ಆರೋಗ್ಯ ನಿಮಿತ್ತವಾಗಿ ಪಕ್ಷದಲ್ಲಿ ಒಮ್ಮೆ (ಏಕಾದಶಿ ಮುಂತಾದ ತಿಥಿಗಳಲ್ಲಿ) ಉಪವಾಸ ಮಾಡಬಹುದು. ಈ ವಿಧವಾಗಿ ಅಧಿಕಾಹಾರವನ್ನು, ಯಾವ ಆಹಾರವೂ ಇಲ್ಲದೆ ಇರುವ ಎರಡನ್ನೂ ಬಿಟ್ಟು ಮಿತಾಹಾರಿಯಾಗಿ ಧ್ಯಾನಯೋಗವನ್ನು ಆಚರಿಸುವವರು ವಿಜಯವನ್ನು ಹೊಂದುವರು.

ಹಾಗೆಯೇ ನಿದ್ರಾ ವಿಷಯದಲ್ಲಿ ಕೂಡ ಜಾಗರೂಕರಾಗಿ ಪ್ರವರ್ತಿಸಿ ಅಧಿಕ ನಿದ್ರೆಯನ್ನು, ನಿದ್ರೆಯಿಲ್ಲದ್ದನ್ನು ಎರಡನ್ನೂ ಬಿಟ್ಟು, ಮಿತನಿದ್ರೆ ಮಾಡುತ್ತಿದ್ದರೆ ಯೋಗವು ಚೆನ್ನಾಗಿ ಸಾಗುವುದು. ಶರೀರ ನಿರ್ಮಾಣವನ್ನನು ಸರಿಸಿ ಉಪಾಧಿಗೆ ಸ್ವಲ್ಪ ವಿಶ್ರಾಂತಿ ಪ್ರತಿದಿನವೂ ಅವಶ್ಯಕವಾಗಿದೆ. ಅದು ಬಿಟ್ಟು ಮಿತತಪ್ಪಿ ವರ್ತಿಸುವುದು, ಪ್ರಮಾದಕ್ಕೆ ಹೇತುವೇ ಆಗುವುದು. ಆದ್ದರಿಂದ ಸಾಧಕನು ಆಹಾರ, ನಿದ್ರೆ ಎರಡು ವಿಷಯಗಳಲ್ಲಿ ಮಿತತ್ವವನ್ನು (Moderation)ಅನುಸರಿಸುತ್ತ ಆಧ್ಯಾತ್ಮಿಕ ಸಾಧನೆಗಳಲ್ಲಿ ಮುಂದುವರಿಯ ಬೇಕೆಂದು ಭಗವಂತನು ಇಲ್ಲಿ ಉದ್ಬೋಧಿಸುತ್ತಿದ್ದಾನೆ.

ಪ್ರ : ಧ್ಯಾನಯೋಗಿ ಆಹಾರ ನಿದ್ರೆಗಳಲ್ಲಿ ಹೇಗೆ ಪ್ರವರ್ತಿಸಬೇಕು?

ಉ: ಅವುಗಳನ್ನು ಮಿತವಾಗಿ ಸೇವಿಸಬೇಕು. ಅಧಿಕಾಹಾರ, ಆಹಾರವಿಲ್ಲದೇ ಇರುವುದು, ಅಧಿಕನಿದ್ರೆ, ನಿದ್ರಾರಾಹಿತ್ಯವನ್ನು ತ್ಯಜಿಸಿ ಮಿತಾಹಾರ, ಮಿತ ನಿದ್ರೆಗಳನ್ನು ಆಶ್ರಯಿಸಬೇಕು.

**ಅ।।** ಮೇಲಿನ ವಿಷಯವೇ ಪುನಃ ಹೇಳಲ್ಪಡುತ್ತಿದೆ-

**೧೭. ಯುಕ್ತಾಹಾರವಿಹಾರಸ್ಯ ಯುಕ್ತಚೇಷ್ಟಸ್ಯ ಕರ್ಮಸು**
**ಯುಕ್ತಸ್ವಪ್ನಾವಬೋಧಸ್ಯ ಯೋಗೋ ಭವತಿ ದುಃಖಹಾ**

**ಅರ್ಥ:** ಯುಕ್ತಾಹಾರ ವಿಹಾರಸ್ಯ=ಮಿತವಾದ ಆಹಾರ, ನಡತೆಗಳನ್ನು ಹೊಂದಿರುವವನು; ಕರ್ಮಸು=ಕರ್ಮಗಳಲ್ಲಿ; ಯುಕ್ತಚೇಷ್ಟಸ್ಯ=ಮಿತವಾದ ಪ್ರವರ್ತನೆಯನ್ನು ಹೊಂದಿರುವವನು; ಯುಕ್ತಸ್ವಪ್ನಾವಬೋಧಸ್ಯ= ಮಿತವಾದ ನಿದ್ರೆ, ಎಚ್ಚರಹೊಂದಿರುವವನು (ಆದ ಮನುಜನಿಗೆ); ಯೋಗಃ= ಯೋಗವು; ದುಃಖಹಾ=(ಜನನ ಮರಣಾದಿ) ದುಃಖಗಳನ್ನು ಹೋಗಲಾಡಿಸಲು; ಭವತಿ=ಅನುವಾಗುತ್ತದೆ.

**ತಾ।।** ಮಿತವಾದ ಆಹಾರ, ನಡತೆಗಳನ್ನು ಹೊಂದಿರುವವನು, ಕರ್ಮಗಳಲ್ಲಿ ಮಿತವಾಗಿ ಪ್ರವರ್ತಿಸುವವನು, ಮಿತನಿದ್ರೆ, ಜಾಗ್ರತೆಗಳುಳ್ಳ ಮನುಷ್ಯನಿಗೆ ಯೋಗವು (ಜನನ ಮರಣಾದಿ ಸಂಸಾರ) ದುಃಖಗಳನ್ನು ಹೋಗಲಾಡಿಸಲು ಅನುವಾಗುವುದು.

**ವ್ಯಾಖ್ಯೆ:** ಹಿಂದಿನ ಶ್ಲೋಕದಲ್ಲಿ ಆಹಾರ, ನಿದ್ರೆ ವಿಷಯಗಳಲ್ಲಿ ಯೋಗಿ ಹೇಗೆ ಪ್ರವರ್ತಿಸಬೇಕೆಂದು ಹೇಳಲಾಯಿತು. ಇಲ್ಲಿ ಅದಕ್ಕೆ ಬೇಕಾದ ಕ್ರಿಯೆ ಹಾಗು ವ್ಯವಹಾರಗಳನ್ನು ಹೇಗೆ ಮಾಡಬೇಕೆನ್ನುವುದನ್ನು ಹೇಳಲಾಗಿದೆ. ಆಹಾರ ವಿಹಾರಗಳಲ್ಲಿ, ಕರ್ಮಗಳಲ್ಲಿ ನಿದ್ರಾಜಾಗರಣೆಗಳಲ್ಲಿ ಮಿತವಾಗಿರುವವನಿಗೆ, ಯೋಗವು ದುಃಖವನ್ನು ಹೋಗಲಾಡಿಸುವುದೆಂದು ಬೋಧಿಸಲಾಗಿದೆ. ಮಿತಿತಪ್ಪಿ ಪ್ರವರ್ತಿಸಿದಲ್ಲಿ ಆ ಯೋಗವು ಜೀವಿಯ ದುಃಖವನ್ನು

---

* ಮಿತಾಹಾರ ಲಕ್ಷಣ- ದ್ವೌ ಭಾಗೌ ಪೂರಯೇದನ್ನೈಃ ತೋಯೇನೈಕಂ ಪ್ರಪೂರಯೇತ್। ಮಾರುತಸ್ಯ ಪ್ರಚಾರಾರ್ಥಂ ಚತುರ್ಥಮವಶೇಷಯೇತ್
ಹೊಟ್ಟೆಯಲ್ಲಿ ಅರ್ಧಭಾಗವನ್ನು ಅನ್ನಾದಿಗಳಿಂದ, ಕಾಲು ಭಾಗವನ್ನು ನೀರಿನಿಂದ ತುಂಬಿ ಉಳಿದ ಕಾಲು ಭಾಗವನ್ನು ಗಾಳಿಗಾಗಿ ಖಾಲಿಯಾಗಿರಿಸಬೇಕು.

ಹೋಗಲಾಡಿಸದೆನ್ನುವುದು ಭಾವ. ಆದ್ದರಿಂದ ಸಾಧಕರಿಗೆ ದುಃಖ ಅಂತ್ಯವಾಗದಿದ್ದಲ್ಲಿ ಅದಕ್ಕೆ ಕಾರಣ ಅವರ ಸಾಧನೆ ಹಾಗು ಪದ್ಧತಿಗಳ ಲೋಪವೇ ಆಗಿರುವುದಲ್ಲದೆ, ಯೋಗದ ದೋಷವಲ್ಲ. ಅನಿಯಮಿತವಾಗಿ ವ್ಯವಹರಿಸಿದಲ್ಲಿ ಯೋಗವು ಸತ್ಫಲಿತಗಳನ್ನು ಕೊಡುವುದಿಲ್ಲ. ಒಳ್ಳೆಯ ಔಷಧವಾದರೂ ಸೇವಿಸಬೇಕಾದ ಪದ್ಧತಿಯಿಂದ ಅನುಸರಿಸಿದರೆ ಮಾತ್ರ ವ್ಯಾಧಿನಿವಾರಣೆಯಾಗುವುದಾಗಲಿ ಅನ್ಯಥಾ ಅಲ್ಲ. ಆ ವಿಷಯವನ್ನೇ ಇಲ್ಲಿ ಸ್ಪಷ್ಟವಾಗಿ ಹೇಳಲಾಗಿದೆ. ಕೆಲವರು ಧ್ಯಾನವನ್ನು ಪ್ರಾರಂಭಿಸಿ, ಇಲ್ಲವೆ ಇತರ ಪರಮಾತ್ಮಸಾಧನೆಗಳನ್ನು ಮೊದಲು ಮಾಡಿ ಆವೇಶದಿಂದ ರಾತ್ರಿಹಗಲು ಕಷ್ಟಪಟ್ಟು, ಕೊನೆಗೆ ಶರೀರ, ಮನಸ್ಸು ಅಸ್ವಸ್ಥವಾಗಲು ಆ ಲೋಪವನ್ನು ಯೋಗದ ಮೇಲೆ ಆರೋಪಿಸುತ್ತಾರೆ. ಅದು ಸರಿಯಲ್ಲ. ಅದು ಯೋಗದ ದೋಷವಲ್ಲ, ತಮ್ಮ ಪ್ರವರ್ತನೆಯ ಲೋಪವದು. ಯೋಗವು "ದುಃಖಹಾ" ಎಂದು ಹೇಳಲ್ಪಟ್ಟಿದೆಯಾಗಲೀ "ದುಃಖಜಃ" ಎಂದಲ್ಲ. ಯೋಗವು ದುಃಖವನ್ನು ಹೋಗಲಾಡಿಸುವುದೇ ಆಗಲಿ ಉಂಟು ಮಾಡುವುದಿಲ್ಲ. ಒಂದು ವೇಳೆ ಯೋಗದಿಂದ ದುಃಖವೊದಗಿದರೆ ಅದು ಯೋಗ ಸಾಧನೆಯ ಕ್ರಮದಲ್ಲಿ ತಾನು ಮಾಡಿದ ಲೋಪದಿಂದಲೇ ಹೊರತು ಬೇರೊಂದಲ್ಲ.

ದೀಪದ ಬತ್ತಿಯನ್ನು ಮಿತವಾಗಿರಿಸಿದಲ್ಲಿ ರಾತ್ರಿಯೆಲ್ಲಾ ಬೆಳಗುವುದು. ಬತ್ತಿಯನ್ನು ಚೆನ್ನಾಗಿ ಮೇಲೆತ್ತಿದ್ದರೆ ಚಿಮಣಿ ಮಸಿ ಹಿಡಿದು ಬೆಳಕೇ ಇಲ್ಲದಂತಾಗುವುದು. ಬತ್ತಿಯನ್ನು ಬಹಳ ಕಡಿಮೆ ಮಾಡಿದರೆ ಪ್ರಕಾಶವೇ ಇರುವುದಿಲ್ಲವಾದ್ದರಿಂದ, ಮಿತವೇ (ಯುಕ್ತತ್ವವೇ) ಶ್ರೇಯಸ್ಕರ. ಬುದ್ಧದೇವನು ತನ್ನ ಸಾಧನೆಯ ಕಾಲದಲ್ಲಿ ಒಮ್ಮೆ ಆಹಾರವನ್ನು ಪೂರ್ತಿ ಬಿಟ್ಟು ಧ್ಯಾನ ಸರಿಯಾಗಿ ಸಾಗದೆ ಮತ್ತೆ ಸ್ವಲ್ಪ ಆಹಾರವನ್ನು ಸೇವಿಸಿದನೆಂದು ಚರಿತ್ರೆಯಲ್ಲಿದೆ. ಆದ್ದರಿಂದ '**ಅತಿ ಸರ್ವತ್ರ ವರ್ಜಯೇತ್**' ಎನ್ನುವ ಸೂತ್ರವನ್ನು ಸಾಧಕನು ಚೆನ್ನಾಗಿ ಮನಸ್ಸಿನಲ್ಲಿಟ್ಟುಕೊಂಡು ಪ್ರವರ್ತಿಸಬೇಕು. ಸಾಧಕನು ಆಹಾರ ವಿಹಾರ ನಿದ್ರಾದಿಗಳಲ್ಲಿ ಮಿತಿ ತಪ್ಪಿ ವ್ಯವಹರಿಸದೆ ಯುಕ್ತಾಹಾರ ವಿಹಾರನಾಗಿ ಧ್ಯಾನಯೋಗವನ್ನು ಆಚರಿಸುತ್ತಾ ತದ್ವಾರ ದುಃಖವನ್ನು ಅಂತ್ಯಮಾಡಿಕೊಳ್ಳಬೇಕು.

ಇದರಿಂದ ದುಃಖವನ್ನು ಹೋಗಲಾಡಿಸಿಕೊಳ್ಳಬೇಕೆಂದು ಅಪೇಕ್ಷಿಸುವವರು ಯೋಗವನ್ನು (ಆತ್ಮಧ್ಯಾನ) ಆಶ್ರಯಿಸಬೇಕೆಂದೂ, ಆ ಯೋಗವನ್ನು ಯುಕ್ತಾಹಾರವಿಹಾರಾದಿಗಳಿಂದ ಪಾಲಿಸಬೇಕಾಗಲಿ ಇಷ್ಟ ಬಂದ ಹಾಗಲ್ಲವೆಂದು ಸ್ಪಷ್ಟವಾಗುತ್ತಿದೆ.

ಪ್ರ : (ಧ್ಯಾನ)ಯೋಗದ ಫಲವೇನು?

ಉ : ದುಃಖರಾಹಿತ್ಯ

ಪ್ರ : ಯೋಗವನ್ನು ಯಾವ ನಿಯಮಗಳಿಂದ ಆಚರಿಸಬೇಕು?

ಉ: ೧) ಮಿತಾಹಾರ ೨) ಮಿತವಿಹಾರ ೩) ಮಿತಕರ್ಮ ೪) ಮಿತನಿದ್ರೆ ೫) ಮಿತಜಾಗರಣೆಗಳಿಂದ ಪ್ರಯತ್ನಿಸಬೇಕು. ಯಾವುದರಲ್ಲೂ ಮಿತಿಯನ್ನು ಮೀರಬಾರದು.

ಪ್ರ : ದುಃಖ ಅಂತ್ಯವಾಗುವ ಉಪಾಯವೇನು?

ಉ : ಯೋಗ (ದೈವ ಧ್ಯಾನ- ಆತ್ಮಚಿಂತನೆ).

**ಅ||** ಧ್ಯಾನಯೋಗಿಯ ಲಕ್ಷಣಗಳನ್ನು ಹೇಳಲಾಗುತ್ತಿದೆ-

**೧೮. ಯದಾ ವಿನಿಯತಂ ಚಿತ್ತಮಾತ್ಮನ್ಯೇವಾವತಿಷ್ಠತೇ**
**ನಿಸ್ಪೃಹಸ್ಸರ್ವಕಾಮೇಭ್ಯೋ ಯುಕ್ತ ಇತ್ಯುಚ್ಯತೇ ತದಾ**

**ಅರ್ಥ:** ಯದಾ=ಯಾವಾಗಲೂ; ಚಿತ್ತಮ್=ಮನಸ್ಸು; ವಿನಿಯತಂ=(ಸತ್) ಚೆನ್ನಾಗಿ ನಿಗ್ರಹಿಸಲ್ಪಟ್ಟ; ಆತ್ಮನ್ಯೇವ=ಆತ್ಮದಲ್ಲಿಯೇ; ಅವತಿಷ್ಠತೇ= ನಿಂತಿರುತ್ತದೆಯೋ; (ಯದಾ=ಯಾವಾಗಲೂ, ಯೋಗಿ=ಯೋಗಿ) ಸರ್ವ ಕಾಮೇಭ್ಯಃ=ಸಮಸ್ತ ಕೋರಿಕೆಗಳಿಂದ; ನಿಸ್ಪೃಹಃ=ನಿವೃತ್ತನಾಗಿ (ಅಭಿಲಾಷೆ ಯಿಲ್ಲದವನಾಗಿ) (ಇರುವನೊ), ತದಾ=ಆಗ; ಯುಕ್ತಃ=ಯೋಗಸಿದ್ಧಿಯನ್ನು ಹೊಂದಿದವನೆಂದು; (ಸಮಾಧಿಯುಕ್ತನೆಂದು); ಉಚ್ಯತೇ=ಹೇಳಲ್ಪಡು ತ್ತಿದ್ದಾನೆ.

**ತಾ||** ಯಾವಾಗ ಮನಸ್ಸು ಚೆನ್ನಾಗಿ ನಿಗ್ರಹಿಸಲ್ಪಟ್ಟು ಆತ್ಮದಲ್ಲೇ ಸ್ಥಿರವಾಗಿ ನಿಲ್ಲುವುದೋ, ಮತ್ತೆ ಯಾವಾಗ ಯೋಗಿ ಸಮಸ್ತ ಕೋರಿಕೆಗಳಿಂದ ನಿವೃತ್ತ ನಾಗುವನೋ, ಆಗಲೇ ಆತನು ಯೋಗಸಿದ್ಧಿಯನ್ನು ಹೊಂದಿದವನೆಂದು (ಸಮಾಧಿಯುಕ್ತನೆಂದು) ಹೇಳಲ್ಪಡುವನು.

**ವ್ಯಾಖ್ಯೆ:** ಯೋಗಸಿದ್ಧಿ ಮನುಜನಿಗೆ ಯಾವಾಗ ಸಿದ್ಧಿಸುವುದೋ ಇಲ್ಲಿ ಹೇಳಲಾಗಿದೆ. ಮೋಕ್ಷಕ್ಕೆ ಕಾಲ ನಿಯಮಗಳಾವುವೂ ಇಲ್ಲವೆಂದು ಈಗಾಗಲೇ ಅನೇಕ ಕಡೆಗಳಲ್ಲಿ ಹೇಳಲಾಗಿದೆ. ಯಾವಾಗ ಮನುಜನು ಮೇಲೆ ತಿಳಿಸಿದ ಮೂರು ಲಕ್ಷಣಗಳನ್ನು- ಅಂದರೆ ೧) ಸರ್ವಕಾಮನಾರಾಹಿತ್ಯ ೨) ಮನೋ ನಿಗ್ರಹಣೆ ೩) ಆತ್ಮಸ್ಥಿತಿಗಳನ್ನು ಹೊಂದಿರುವನೋ ಆಗ ಆತನು ಮೋಕ್ಷಕ್ಕೆ ಭಾಗಿಯಾಗುವನು. ಭಗವಂತನು ತಿಳಿಸಿದ ಈ ಮೂರು ಲಕ್ಷಣಗಳನ್ನೇ ೧) ವಾಸನಾಕ್ಷಯ ೨) ಮನೋನಾಶ ೩) ತತ್ತ್ವಜ್ಞಾನಗಳೆಂದೂ ಕರೆಯುವರು. ಅದರಲ್ಲಿ ಒಂದರಿಂದ ಮತ್ತೊಂದನ್ನು ಸಾಧಿಸಬಹುದು.

*೧) "ನಿಸ್ಪೃಹಃ ಸರ್ವಕಾಮೇಭ್ಯೋ"*: ಕೋರಿಕೆಗಳು (ಆಶೆಗಳು) ಜೀವಿಯನ್ನು ಬಂಧಿಸುವ ಶೃಂಖಲೆಗಳು. ವಿಷಯ ಭೋಗಗಳಲ್ಲಿ ಜೀವಿಗೆ ಯಾವಾಗ ಆಶೆಯುಂಟಾಗುವುದೋ ಆಗ ಚಿತ್ತ ಸ್ವಾಧೀನದಲ್ಲಿರದೆ, ಮಹಾಚಂಚಲವಾಗಿ ಪ್ರವರ್ತಿಸುವುದರಿಂದ, ಅಲ್ಲಿ ಧ್ಯಾನ ಸ್ಥಿರವಾಗುವುದಿಲ್ಲ. ಆದ್ದರಿಂದ ಕಟ್ಟಿಗೆಗಳನ್ನು ತೆಗೆದುಹಾಕಿದರೆ ಅಗ್ನಿ ತಣ್ಣಗಾದಂತೆ, ವಿವೇಕ ವೈರಾಗ್ಯಾದಿಗಳಿಂದ ಒಂದೊಂದು ಕೋರಿಕೆಯನ್ನೂ, ಭೋಗಾಶೆಯನ್ನೂ, ವಿಷಯ ಸಂಕಲ್ಪವನ್ನೂ ಹೃದಯದಿಂದ ಆರಿಸಿ ತೆಗೆದು ಹೊರಗೆ ಬಿಸಾಡಿದರೆ ಇನ್ನು ಮನಸ್ಸು ಅದೃಷ್ಟಕ್ಕದೇ ಅಧಿಷ್ಠಾನವಾದ ಆತ್ಮದಲ್ಲಿ ಲಯಿಸುವುದು. 'ಸರ್ವಕಾಮೇಭ್ಯಃ' ಎಂದು ಹೇಳಿರುವುದರಿಂದ ಯಾವೋ ಕೆಲವು ಆಸೆ, ಕೋರಿಕೆಗಳು ನಶಿಸಿ ಹೋದರೆ ಸಾಲದೆಂದೂ, ಎಲ್ಲವೂ ತೊಲಗಬೇಕೆಂದು ವಿದಿತವಾಗುತ್ತಿದೆ.

*೨) "ವಿನಿಯತಂ ಚಿತ್ತಮ್"*; ಚಿತ್ತವನ್ನು ಪರಿಪೂರ್ಣವಾಗಿ ನಿಗ್ರಹಿಸಬೇಕು. ಸಾಮಾನ್ಯ ನಿಗ್ರಹ ಸಾಕಾಗುವುದಿಲ್ಲ. ಆದ್ದರಿಂದಲೇ ವಿನಿಯತಂ (ಯತಂ= ಸ್ವಾಧೀನಗೊಂಡ, ನಿಯತಂ=ವಿಶೇಷವಾಗಿ ಸ್ವಾಧೀನಗೊಂಡ; ವಿನಿಯತಂ= ಬಹಳಷ್ಟು ವಿಶೇಷವಾಗಿ ನಿಗ್ರಹಿಸಲ್ಪಟ್ಟ) ಪದ ಪ್ರಯೋಗಿಸಲ್ಪಟ್ಟಿದೆ. ತನ್ನ ಸ್ವಾಧೀನದಲ್ಲಿರುವ ಕುದುರೆಗಳಿಂದ ರಥಿಕನು ಗಮ್ಯಸ್ಥಾನವನ್ನು ನಿರಾತಂಕವಾಗಿ ಸೇರಿಕೊಂಡಂತೆ, ಸ್ವಾಧೀನಪಡಿಸಿಕೊಂಡ ಇಂದ್ರಿಯ ಮನಸ್ಸುಗಳುಳ್ಳವನು ಮೋಕ್ಷವೆನ್ನುವ ಗಮ್ಯವನ್ನು ಶೀಘ್ರವಾಗಿ ಸೇರಬಲ್ಲನು.

೩) "ಆತ್ಮನ್ಯೇವಾವತಿಷ್ಠತೇ"- ಚಿತ್ತದಲ್ಲಿಯ ಆಶೆಗಳೆಲ್ಲವೂ ನಶಿಸಿದಾಗ, ಇನ್ನು ಚಿತ್ತವು ತನ್ನ ರೂಪವನ್ನು ಕಳೆದುಕೊಂಡು ಅಧಿಷ್ಠಾನವಾದ ಆತ್ಮದಲ್ಲಿ ಲಯವಾಗುವುದು. ಚಿತ್ತ ಕದಲದೆ ಆತ್ಮದಲ್ಲಿ ಸ್ಥಿತಿಗೊಂಡಿರುವುದೇ ಮೋಕ್ಷ.

ಈ ಪ್ರಕಾರವಾಗಿ ಮೇಲಿನ ಮೂರು ಲಕ್ಷಣಗಳನ್ನು ಹೊಂದಿದವನು ಯೋಗಸಿದ್ಧನೆಂದು ಹೇಳಲ್ಪಡುವನು.

ಪ್ರ : ಜೀವಿಯು ಯೋಗಸಿದ್ಧನೆಂದು ಇಲ್ಲವೆ ಮೋಕ್ಷಯುಕ್ತನೆಂದು ಯಾವಾಗ ಕರೆಯಲ್ಪಡುವನು?

ಉ: ೧) ಯಾವ ಒಂದು ಕೋರಿಕೆಯೂ ಇಲ್ಲದೆ ೨) ಮನಸ್ಸನ್ನು ಪೂರ್ಣವಾಗಿ ನಿಗ್ರಹಿಸಿ ೩) ಆತ್ಮದಲ್ಲಿ ಯಾವಾಗ ಅದನ್ನು ಸ್ಥಾಪಿಸುವನೋ ಆಗ ಆತನನ್ನು ಯೋಗಸಿದ್ಧನೆಂದು, ಇಲ್ಲವೆ ಮೋಕ್ಷಯುಕ್ತನೆಂದು ಕರೆಯುವರು.

ಪ್ರ : ಮೋಕ್ಷ ಪ್ರಾಪ್ತಿಗೆ ಉಪಾಯಗಳೇನು?

ಉ: ೧) ಎಲ್ಲಾ ಕೋರಿಕೆ, ಆಸೆಗಳನ್ನು ಬಿಡುವುದು ೨) ಮನಸ್ಸನ್ನು ನಿಗ್ರಹಿಸುವುದು (ಸ್ವಾಧೀನಪಡಿಸಿಕೊಳ್ಳುವುದು) ೩) ಮನಸ್ಸನ್ನು ಆತ್ಮದಲ್ಲಿ ಸ್ಥಾಪಿಸುವುದು.

**ಅ||** ಸಮಾಧಿ ಸ್ಥಿತಿಯಲ್ಲಿ ಯೋಗಿಯ ಮನಸ್ಸು ಹೇಗಿರುವುದೋ ತಿಳಿಸಲಾಗುತ್ತಿದೆ-

**೧೯. ಯಥಾ ದೀಪೋ ನಿವಾತಸ್ಥೋ ನೇಂಗತೇ ಸೋಪಮಾ ಸ್ಮೃತಾ**
**ಯೋಗಿನೋ ಯತಚಿತ್ತಸ್ಯ ಯುಂಜತೋ ಯೋಗಮಾತ್ಮನಃ**

**ಅರ್ಥ:** ನಿವಾತಸ್ಥಃ=ಗಾಳಿ ಬೀಸದ ಸ್ಥಳದಲ್ಲಿ; ದೀಪಃ=ದೀಪವು; ಯಥಾ= ಯಾವ ಪ್ರಕಾರವಾಗಿ; ನ ಇಂಜತೇ=ಕದಲದೆ ಇರುವುದೋ; ಸಾ=ಅದು (ಅಂತಹ ನಿಷ್ಠೆ); ಆತ್ಮನಃ ಯೋಗಮ್=ಆತ್ಮ ಧ್ಯಾನವನ್ನು; ಯುಂಜತಃ= ಅಭ್ಯಸಿಸುತ್ತಿರುವ (ಅನುಷ್ಠಾನ ಮಾಡುತ್ತಿರುವ); ಯೋಗಿನಃ=ಯೋಗಿಯ; ಯತಚಿತ್ತಸ್ಯ=ನಿಗ್ರಹಿಸಲ್ಪಟ್ಟ ಮನಸ್ಸಿಗೆ; ಉಪಮಾ=ದೃಷ್ಟಾಂತವಾಗಿ; ಸ್ಮೃತಾ= ಹೇಳಲಾಗಿದೆ.

**ತಾ||** ಗಾಳಿ ಬೀಸದ ಸ್ಥಳದಲ್ಲಿರುವ ದೀಪವು ಯಾವ ಪ್ರಕಾರವಾಗಿ ಕದಲದೆ ನಿಶ್ಚಲವಾಗಿರುವುದೋ ಆ ಪ್ರಕಾರವೇ ಆತ್ಮಧ್ಯಾನವನ್ನು ಪಾಲಿಸುತ್ತಿರುವ ಯೋಗಿಯ ಸ್ವಾಧೀನಪಡಿಸಿಕೊಂಡ ಚಿತ್ತವು ನಿಶ್ಚಲವಾಗಿರುವುದು. ಆದ್ದರಿಂದಲೇ ಯೋಗಿಯ ನಿಶ್ಚಲಮನಸ್ಸಿಗೆ ದೀಪವನ್ನು ದೃಷ್ಟಾಂತವಾಗಿ ಕೊಡಲಾಗಿದೆ.

**ವ್ಯಾಖ್ಯೆ:** ಪರ್ವತವು ನಿಶ್ಚಲವಾಗಿದ್ದರೂ ಅದಕ್ಕೆ ಪ್ರಕಾಶವಿಲ್ಲವಾದ್ದರಿಂದ 'ಪರ್ವತ'ದ ದೃಷ್ಟಾಂತವನ್ನು ಇಲ್ಲಿ ತೆಗೆದುಕೊಳ್ಳಲಿಲ್ಲ. ಗಾಳಿ ಬೀಸದ ಕಡೆ ಉರಿಯುತ್ತಿರುವ ದೀಪವು ನಿಶ್ಚಲವಾಗಿ ಪ್ರಕಾಶವಂತವಾಗಿರುವುದು. ಆದ್ದರಿಂದಲೇ ಯೋಗಿಯ ಜ್ಞಾನ ಹಾಗು ತೇಜೋಮಯವಾದ ನಿಶ್ಚಲ ಚಿತ್ತಕ್ಕೆ ಈ ದೃಷ್ಟಾಂತವು ಸಮೀಪವಾಗಿರುವುದು. ನಿತ್ಯ ಜೀವನದಲ್ಲಿಯ ಸರ್ವಸಾಮಾನ್ಯ ದೃಷ್ಟಾಂತಗಳಿಂದ ಬೋಧಿಸುವುದು ಗೀತೆಯ ವಿಶಿಷ್ಟತೆ. ದೃಷ್ಟಾಂತಗಳಿಂದ ವಿಷಯವು ಚೆನ್ನಾಗಿ ಅರ್ಥವಾಗುವುದು. ಕಿಟಕಿಗಳು ಹಾಗು ಬಾಗಿಲುಗಳನ್ನು ತೆಗೆದಿಟ್ಟ ಕೊಠಡಿಯಲ್ಲಿರುವ ದೀಪವು ಆಯಾ ದ್ವಾರಗಳಿಂದ ಬರುವ ಗಾಳಿಯಿಂದ ಚಲಿಸುವುದು ಇಲ್ಲವೆ ಆರಿಹೋಗುವುದು. ಹಾಗೆಯೇ ಅಜ್ಞಾನಿಯ ಚಿತ್ತ ಇಂದ್ರಿಯ ದ್ವಾರಗಳಿಂದ ಪ್ರವೇಶಿಸುವ ವಿಷಯಗಳಿಂದ ಮಹಾ ಚಪಲವಾಗಿರುವುದು. ಯೋಗಿಯಾದರೋ ಶಬ್ದಾದಿ ವಿಷಯಗಳಲ್ಲಿ ಆಸಕ್ತಿಯಿಲ್ಲದೆ **'ಸರ್ವದ್ವಾರಾಣಿ ಸಂಯಮ್ಯ'** ಎಂದ ಹಾಗೆ ಇಂದ್ರಿಯ ದ್ವಾರಗಳಿಂದ ವಿಷಯ ವಾಯುಗಳು ಒಳ ಪ್ರವೇಶಿಸದ ಹಾಗೆ ನಿಯಮಿಸಿಕೊಳ್ಳುವುದರಿಂದ ಆತನ ಮನಸ್ಸೆನ್ನುವ ಜ್ಯೋತಿ ನಿಶ್ಚಲವಾಗಿ ಆತ್ಮದಲ್ಲಿ ಸ್ಥಿತಿಹೊಂದಿರುವುದು. ನಿಶ್ಚಲವಾದ ನಿರ್ಮಲ ಜಲದಲ್ಲಿ ಸೂರ್ಯನ ಪ್ರತಿಬಿಂಬವು ಚೆನ್ನಾಗಿ ಕಂಡಂತೆ ನಿಶ್ಚಲ ಮತ್ತು ನಿರ್ಮಲವಾದ ಮನಸ್ಸಿನಲ್ಲಿ ಆತ್ಮವಸ್ತುವು ಚೆನ್ನಾಗಿ ಪ್ರತಿಬಿಂಬಿಸಿ (ಇಲ್ಲವೆ ಅಂತಹ ಮನಸ್ಸು ಅಧಿಷ್ಠಾನವಾದ ಆತ್ಮನಲ್ಲಿ ಲಯಿಸಿ) ಬ್ರಹ್ಮಾನಂದಾನುಭೂತಿಯಾಗುತ್ತಿರುತ್ತದೆ. ಅಜ್ಞಾನಿಗೆ ತನ್ನ ಚಂಚಲವಾದ ಮನಸ್ಸಿನಲ್ಲಿ ಆತ್ಮ ಪ್ರತಿಬಿಂಬಿಸದೆ ದುಃಖಾನುಭೂತಿಯೇ ಉಂಟಾಗುತ್ತದೆ. ಆದ್ದರಿಂದ ೧) ಚಿತ್ತವನ್ನು ಸ್ವಾಧೀನಪಡಿಸಿಕೊಳ್ಳುವುದು ೨) ಅದನ್ನು ಆತ್ಮಧ್ಯಾನದಲ್ಲಿ ಸ್ಥಿರಗೊಳಿಸುವುದು. ಈ ಎರಡು ಕ್ರಿಯೆಗಳಿಂದ, ಯೋಗಿಗೆ ನಿಶ್ಚಲದೀಪದಿಂದ ಉಂಟಾದ ಪ್ರಕಾಶದಂತೆ ಆತ್ಮಾನಂದವು ವ್ಯಕ್ತವಾಗುತ್ತದೆ. ಅದು ಮೋಕ್ಷ.

ಪ್ರ : ಆತ್ಮ ಧ್ಯಾನವನ್ನು ಆಚರಿಸುವ ಯೋಗಿಯ ಮನಸ್ಸನ್ನು ಯಾವುದ ರೊಂದಿಗೆ ಹೋಲಿಸಬಹುದು?

ಉ: ಗಾಳಿ ಇಲ್ಲದ ಸ್ಥಳದಲ್ಲಿ ಇರುವ ದೀಪದೊಂದಿಗೆ (ಎಂದರೆ ಆ ದೀಪದಂತೆ ಯೋಗಿಯ ಮನಸ್ಸು ನಿಶ್ಚಲವಾಗಿ ಮತ್ತು ಪ್ರಕಾಶಮಾನವಾಗಿ (ಚಿನ್ಮಯವಾಗಿ) ಇರುವುದೆಂದು ಭಾವ.

ಪ್ರ : ಮನಸ್ಸು ಆತ್ಮದಲ್ಲಿ ನೆಲೆಸಿರಬೇಕೆಂದರೆ, ಅದು ಹೇಗೆ ಇರಬೇಕು?

ಉ : ನಿಗ್ರಹಿಸಲ್ಪಟ್ಟದ್ದಾಗಿ, ಸ್ವಾಧೀನಪಟ್ಟದ್ದಾಗಿರಬೇಕು.

**ಅ||** ಆತ್ಮಸಾಕ್ಷಾತ್ಕಾರ ರೂಪವಾದ (ಧ್ಯಾನ)ಯೋಗದ ಮಹಿಮೆಯನ್ನು ನಾಲ್ಕು ಶ್ಲೋಕಗಳ ಮೂಲಕ ಹೇಳಲಾಗುತ್ತಿದೆ-

**೨೦. ಯತ್ರೋಪರಮತೇ ಚಿತ್ತಂ ನಿರುದ್ಧಂ ಯೋಗ ಸೇವಯಾ**
**ಯತ್ರ ಚೈವಾತ್ಮನಾऽऽತ್ಮಾನಂ ಪಶ್ಯನ್ನಾತ್ಮನಿ ತುಷ್ಯತಿ**

**೨೧. ಸುಖಮಾತ್ಯಂತಿಕಂ ಯತ್ತದ್ಬುದ್ಧಿಗ್ರಾಹ್ಯಮತೀಂದ್ರಿಯಮ್**
**ವೇತ್ತಿ ಯತ್ರ ನ ಚೈವಾಯಂ ಸ್ಥಿತಶ್ಚಲತಿ ತತ್ತ್ವತಃ**

**೨೨. ಯಂ ಲಬ್ಧ್ವಾ ಚಾಪರಂ ಲಾಭಂ ಮನ್ಯತೇ ನಾಧಿಕಂ ತತಃ**
**ಯಸ್ಮಿನ್ ಸ್ಥಿತೋ ನ ದುಃಖೇನ ಗುರುಣಾಪಿ ವಿಚಾಲ್ಯತೇ**

**೨೩. ತಂ ವಿದ್ಯಾದ್ದುಃಖಸಂಯೋಗವಿಯೋಗಂ ಯೋಗಸಂಜ್ಞಿತಮ್**
**ಸ ನಿಶ್ಚಯೇನ ಯೋಕ್ತವ್ಯೋ ಯೋಗೋऽನಿರ್ವಿಣ್ಣಚೇತಸಾ**

**ಅರ್ಥ:** ಯೋಗಸೇವಯಾ=ಯೋಗಾಭ್ಯಾಸದಿಂದ; ನಿರುದ್ಧಮ್=ನಿಗ್ರಹಿಸಲ್ಪಟ್ಟ (ವಿಷಯಗಳಿಂದ ಮರಳಿಸಲ್ಪಟ್ಟ); ಚಿತ್ತಮ್=ಮನಸ್ಸು; ಯತ್ರ=ಎಲ್ಲಿ; ಉಪರಮತೇ=ಶಾಂತಿಯನ್ನು ಹೊಂದುತ್ತಿದೆಯೋ; ಯತ್ರಚ=ಎಲ್ಲಿ; ಆತ್ಮನಾ=(ಪರಿಶುದ್ಧವಾದ) ಮನಸ್ಸಿನಿಂದ; ಆತ್ಮಾನಾಮ್=ಆತ್ಮವನ್ನು (ಸ್ವಸ್ವ ರೂಪವನ್ನು); ಪಶ್ಯನ್=ನೋಡುತ್ತಾ(ಅನುಭವಿಸುತ್ತಾ); ಆತ್ಮನ್ಯೇವ=ತನ್ನಲ್ಲೇ; ತುಷ್ಯತಿ=ಆನಂದವನ್ನು ಹೊಂದುವನೋ; ಯತ್ರ=ಎಲ್ಲಿ; ಸ್ಥಿತಃ=ಸ್ಥಿರವಾಗಿರುವ; ಅಯಮ್=ಈ ಯೋಗಿ; ಯತ್=ಯಾವುದು; ಅತೀಂದ್ರಿಯಮ್=ಇಂದ್ರಿಯ ಗಳಿಗೆ ಅಗೋಚರವಾದ; ಬುದ್ಧಿಗ್ರಾಹ್ಯಂ=ಬುದ್ಧಿಯಿಂದ (ಪ್ರಜ್ಞೆಯಿಂದ) ಗ್ರಹಿಸಬಹುದಾಗಿದ್ದು; ಆತ್ಯಂತಿಕಮ್ ಚ=ಅಂತವಿಲ್ಲದ್ದು; ತತ್‌ಸುಖಮ್=ಆ ಸುಖವನ್ನು; ವೇತ್ತಿ=ತಿಳಿದುಕೊಳ್ಳುತ್ತಿದ್ದಾನೋ; ಚ=ಮತ್ತೆ; ತತ್ತ್ವತಃ=ಸ್ವಾನು ಭವದಿಂದ; ನೈವ ಚಲತಿ=ಯಾವ ಮಾತ್ರವೂ ಚಲಿಸದೆ; ಯಮ್= ಯಾವುದನ್ನು; ಲಬ್ಧ್ವಾ=ಹೊಂದಿದ ನಂತರ; ಅಪರಮ್=ಬೇರೆ; ಲಾಭಮ್= ಲಾಭವನ್ನು; ತತಃ=ಅಷ್ಟಕ್ಕಿಂತ; ಅಧಿಕಮ್=ಹೆಚ್ಚಾಗಿ; ನ ಮನ್ಯತೇ=

ಇಚ್ಛಿಸುವುದಿಲ್ಲವೋ; ಯಸ್ಮಿನ್=ಯಾವುದರಲ್ಲಿ; ಸ್ಥಿತಃ=ಇದ್ದವನಾಗಿ; ಗುರುಣಾ=ದೊಡ್ಡದಾದ; ದುಃಖೇನ ಅಪಿ=ದುಃಖದಿಂದಲಾದರೂ; ನ ವಿಚಾಲ್ಯತೇ=ವಿಚಲಿತನಾಗುವುದಿಲ್ಲವೋ; ದುಃಖ ಸಂಯೋಗ ವಿಯೋಗಮ್=ದುಃಖಸಂಬಂಧವೇನೂ ಇಲ್ಲದ; ತಮ್=ಅದನ್ನು; ಯೋಗ ಸಂಜ್ಞಿತಮ್= (ಧ್ಯಾನ) ಯೋಗವೆನ್ನುವ ಹೆಸರುಳ್ಳದ್ದಾಗಿ; ವಿದ್ಯಾತ್=ತಿಳಿಯಬೇಕು; ಸ ಯೋಗಃ=ಆ (ಧ್ಯಾನ)ಯೋಗ; ಅನಿರ್ವಿಣ್ಣಚೇತಸಾ=ಸಂಕರವಾಗದ(ದುಃಖ ಪಡದ, ಚಡಪಡಿಸದ ಮನಸ್ಸಿನಿಂದ; ನಿಶ್ಚಯೇನ=ನಿಶ್ಚಯದಿಂದ; ಯೋಕ್ತವ್ಯಃ=ಹೊಂದಬೇಕಾದದ್ದು.

**ತಾ॥** ಯೋಗಾಭ್ಯಾಸದಿಂದ ನಿಗ್ರಹಿಸಲ್ಪಟ್ಟ ಮನಸ್ಸು ಎಲ್ಲಿ ಪರಮ ಶಾಂತಿಯನ್ನು ಹೊಂದುತ್ತಿದೆಯೋ (ಪರಿಶುದ್ಧವಾದ) ಮನಸ್ಸಿನಿಂದ ಆತ್ಮವನ್ನು ಸಂದರ್ಶಿಸುತ್ತ (ಅನುಭವಿಸುತ್ತ), ತನ್ನಲ್ಲೇ (ಸ್ವರೂಪದಲ್ಲೇ) ಆನಂದವನ್ನು ಪಡೆಯುತ್ತಾ ಇರುವ ಯೋಗಿ; ಇಂದ್ರಿಯಗಳಿಗೆ ಗೋಚರವಾಗದ, (ನಿರ್ಮಲ); ಬುದ್ಧಿಯಿಂದ ಮಾತ್ರ ಗ್ರಹಿಸಲ್ಪಡುವ ಅಂತ್ಯವಿಲ್ಲದ ಸುಖವನ್ನು ಅನುಭವಿಸುತ್ತ, ಮತ್ತೆ ಸ್ವಾನುಭವದಿಂದ ಆ ಸ್ಥಾನದಿಂದ ಚಲಿಸದೆ ಇರುವನೋ; ಯಾವುದನ್ನು ಹೊಂದಿದ ನಂತರ ಇತರ ಯಾವ ಲಾಭವನ್ನೂ ಅದಕ್ಕಿಂತ ದೊಡ್ಡದೆಂದು ಭಾವಿಸುವುದಿಲ್ಲವೋ, ಯಾವುದರಲ್ಲಿದ್ದವನಾಗಿ ಮಹತ್ತರ ದುಃಖದಿಂದ ಕೂಡ ಅಚಲಿತನಾಗಿರುವನೋ, ದುಃಖ ಸಂಬಂಧವು ಲೇಶವಾದರೂ ಇಲ್ಲದ ಅಂತಹ ಸ್ಥಿತಿಯನ್ನೇ ಯೋಗ (ಆತ್ಮೈಕ್ಯ, ಆತ್ಮಸಾಕ್ಷಾತ್ಕಾರ)ವೆಂದು ತಿಳಿಯಬೇಕು. ಅಂತಹ ಆತ್ಮಸಾಕ್ಷಾತ್ಕಾರ ರೂಪ ಯೋಗವನ್ನು ದುಃಖದಿಂದ ವಿಚಲಿತರಾಗದೆ, ಧೀರ ಮನಸ್ಸಿನಿಂದ, ಕಡು ನಿಶ್ಚಯದಿಂದ ಸಾಧಿಸಬೇಕಾಗಿದೆ.

**ವ್ಯಾಖ್ಯೆ:** ಜೀವ ಬ್ರಹ್ಮೈಕ್ಯ ರೂಪವಾದ, ಆತ್ಮ ಸಾಕ್ಷಾತ್ಕಾರ ರೂಪವಾದ ಈ (ಧ್ಯಾನ)ಯೋಗದ ಮಹಿಮೆಯಂತಹುದೋ, ಈ ನಾಲ್ಕು ಶ್ಲೋಕಗಳಲ್ಲಿ ತಿಳಿಸಲಾಗಿದೆ. ಧ್ಯಾನಯೋಗದಿಂದ ಮನಸ್ಸು ಆತ್ಮದಲ್ಲಿ ಲಯವಾಗಿ ಪರಮಶಾಂತಿ ಹಾಗು ಸುಖವನ್ನು ಹೊಂದುವುದು. ಅದು ಜೀವನ ಲಕ್ಷ್ಯ. ಆದರೆ ನಿಗ್ರಹಿಸಲ್ಪಟ್ಟ ಮನಸ್ಸು ಮಾತ್ರ ಹಾಗೆ ಲಯ ಹೊಂದಲು ಸಾಧ್ಯ. ಅಂದರೆ ವಿಷಯಗಳಿಂದ ಮರಳಿದ, ವಾಸನಾರಹಿತವಾದ ಮನಸ್ಸೇ ಆತ್ಮೈಕ್ಯವನ್ನು ಪಡೆಯಲು ಸಾಧ್ಯ. ಮನಸ್ಸನ್ನು ಹೇಗೆ ನಿಗ್ರಹಿಸಬೇಕು? 'ಯೋಗಸೇವಯೊ'- ಯೋಗಾಭ್ಯಾಸದಿಂದ, ಸಾಧನೆಯಿಂದ ಮನಸ್ಸು ನಿಗ್ರಹಗೊಳ್ಳುವುದು. ಅಭ್ಯಾಸ ವೈರಾಗ್ಯಗಳಿಂದ ಮಾತ್ರ ಮನಸ್ಸು ದಾರಿಗೆ ಬರುವುದು. ಆದ್ದರಿಂದ 'ಯೋಗಸೇವೆ' ತಪ್ಪದೆ ಮಾಡಬೇಕು. ಅಜ್ಞಾನಿಗಳು 'ವಿಷಯಸೇವೆ' ಹೇಗೆ ಮಾಡುತ್ತಾರೋ ಹಾಗೆ ವಿಜ್ಞಾನಿಗಳು 'ಯೋಗಸೇವೆ' ಮಾಡುವರು. ಆದ್ದರಿಂದ ವಿಷಯಸೇವೆಯನ್ನು ದೈವಸೇವೆಯನ್ನಾಗಿ ಪರಿವರ್ತಿಸಿಕೊಂಡಾಗ ಮಾತ್ರ ಜೀವಿಗೆ ಮುಕ್ತಿ ದೊರಕಬಲ್ಲದು.

ಯೋಗಾಭ್ಯಾಸದ ಮೂಲಕ ಜೀವಿಯು ತನ್ನ ಪರಿಶುದ್ಧ ಮನಸ್ಸಿನಿಂದ ಅಂತರಂಗದಲ್ಲಿ ಆತ್ಮವನ್ನು ಅವಲೋಕಿಸಿ ಮಹದಾನಂದವನ್ನು ಹೊಂದುತ್ತಿದ್ದಾನೆ. 'ಪಶ್ಯನ್' ಎಂದು ಹೇಳಿರುವುದರಿಂದ ಆತ್ಮ ವಸ್ತುವು ಪರೋಕ್ಷವಲ್ಲವೆಂದೂ, ಪ್ರತ್ಯಕ್ಷವಾಗಿ ಅದನ್ನು ನೋಡಬಹುದೆಂದು (ಅನುಭೂತಿಗೊಳಿಸಿಕೊಳ್ಳಬಹುದೆಂದು) ಸ್ಪಷ್ಟವಾಗುತ್ತಿದೆ. ಇಲ್ಲಿ 'ನೋಡುವುದು' ಎಂದರೆ, ದೃಶ್ಯವಸ್ತುವನ್ನು ನೋಡಿದ ಹಾಗಲ್ಲ, ಅದ್ವಯ ಆತ್ಮ ಸ್ಥಿತಿಯಲ್ಲಿ ನೋಡುವುದು ಎನ್ನುದು ಅಸಂಭವ. ಆದ್ದರಿಂದ 'ಅನುಭವಿಸುವುದು' ಎಂದು ಅದರರ್ಥ. ಆದರೆ ಶುದ್ಧವಾದ ಮನಸ್ಸು ಮಾತ್ರವೇ ಆತ್ಮವನ್ನು ಅನುಭವಿಸಬಲ್ಲದು. ಮಲಿನ ಮನಸ್ಸಲ್ಲ. ಆತ್ಮವನ್ನು ದರ್ಶಿಸಲು ಪ್ರಪಂಚದಲ್ಲಿಯ ಯಾವ ವಸ್ತುವೂ ಕೆಲಸಕ್ಕೆ ಬರುವುದಿಲ್ಲ. ತನ್ನ ಶುದ್ಧ ಮನಸ್ಸೇ ಸಹಾಯಕವಾಗುವುದು.

ಆದರೆ ಆ ಆತ್ಮ ಎಲ್ಲಿದೆ? ಭಗವಂತನು ಎಲ್ಲಿದ್ದಾನೆ? 'ಆತ್ಮನಿ'- ತನ್ನಲ್ಲೇ. ಅವನಿಗಾಗಿ ಎಲ್ಲೋ ಹೊರಗಡೆ ಹುಡುಕುವ ಅಗತ್ಯವಿಲ್ಲ. ತನ್ನ ಹೃದಯವನ್ನು ಪರಿಶೋಧಿಸಿಕೊಂಡರೆ ಸಾಕು. ಭಗವಂತನು ತನ್ನಲ್ಲೇ ಅತಿ ಸಮೀಪದಲ್ಲಿರುವನು. ಆದ್ದರಿಂದ ಈ ವಾಕ್ಯವು ಸಾಧಕರಿಗೆ ಬಹಳ ಧೈರ್ಯವನ್ನು ತಂದುಕೊಡುತ್ತದೆ. ಹಾಗೆ ಆತ್ಮವನ್ನು ತನ್ನಲ್ಲಿ ಕಾಣುವಂತಾದರೆ ಉಂಟಾಗುವ ಪ್ರಯೋಜನವೇನು? 'ತುಷ್ಯತಿ'- ಮಹದಾನಂದವನ್ನು ಅನುಭವಿಸುತ್ತಿದ್ದಾನೆ. ಇದೇ ಅದರ ಪ್ರಯೋಜನ. ಅಲ್ಪ ಸುಖಗಳಿಗಾಗಿ ಹೊರಗೆ ಹುಡುಕಿ ಹುಡುಕಿ, ಬೆಂದು ಬೇಸತ್ತು ಕೊನೆಗೆ ಅಂತರ್ಮುಖನಾಗಿ ಮನುಜನು ಪರಮಾನಂದವನ್ನು ತನ್ನಲ್ಲೇ ಕಂಡುಕೊಂಡು ಧನ್ಯನಾಗುತ್ತಿದ್ದಾನೆ.

ಆ ಸುಖವು ಎಂತಹದು? ಅನಂತವಾದದ್ದು, ಇಂದ್ರಿಯಾತೀತವಾದದ್ದು. ನಿರ್ಮಲ ಬುದ್ಧಿಯಿಂದ ಗ್ರಹಿಸಬಹುದಾಗಿರುವುದು. ಬುದ್ಧಿ ನಿರ್ಮಲವಾಗಿರುವಾಗ ಅದು ತನ್ನ ಉಪಾಧಿ ರೂಪವನ್ನು ಕಳೆದುಕೊಂಡು ಆತ್ಮಾಕಾರವಾಗುವುದು. ನಿರ್ಮಲ ಬುದ್ಧಿಯಿಂದ ಆತ್ಮಸುಖದ ಅನುಭೂತಿಯಾಗಬಲ್ಲದು. ಅದು ಇಂದ್ರಿಯಗಳಿಗೆ ಗೋಚರವಾಗದ್ದು. ಇಂದ್ರಿಯಗಳಿಗೆ ದಾಸರಾಗಿ ಬಹಿರ್ಮುಖ ದೃಷ್ಟಿಯುಳ್ಳವರಿಗೆ ಅದು ಎಂದಿಗೂ ಅರ್ಥವಾಗುವುದಿಲ್ಲ. ಒಂದು ಕಡೆ ಆತ್ಮಸುಖವು ಇಂದ್ರಿಯಗಳಿಗೆ ಗೋಚರವಾಗದ್ದು ಎಂದು ಹೇಳಲಾಗಿದೆ. ಮತ್ತೆ ಒಂದು ಇಂದ್ರಿಯವೇ ಆದ ಬುದ್ಧಿಯಿಂದ ಅದನ್ನು ಅರ್ಥ ಮಾಡಿಕೊಳ್ಳಲು ಸಾಧ್ಯ ಎಂದು ಹೇಳಲಾಗುತ್ತಿದೆ. ಇವು ಪರಸ್ಪರ ವಿರುದ್ಧವಲ್ಲವೇ ಎಂದು ಕೇಳಿದರೆ, ಅದಕ್ಕೆ ಉತ್ತರ 'ಅಲ್ಲ'. ಬುದ್ಧಿ ಅತ್ಯಂತ ಶುದ್ಧವಾದಾಗ ಅದು ತನ್ನ ಇಂದ್ರಿಯ ರೂಪವನ್ನು ಕಳೆದುಕೊಂಡು ಬ್ರಹ್ಮಾಕಾರವಾಗಿಯೇ ಪರಿಣಮಿಸುವುದು. (ಉಪ್ಪು ಹರಳು, ಆಲಿಕಲ್ಲು ಸಮುದ್ರದಲ್ಲಿ ಕಲೆತುಹೋದಂತೆ). ಮತ್ತೆ 'ಬುದ್ಧಿಗ್ರಾಹ್ಯ'ವೆಂದು ಹೇಳಿರುವುದರಿಂದ ಆತ್ಮ ಪ್ರತಿಯೊಬ್ಬರಿಂದ ಗ್ರಹಿಸಲ್ಪಡುವುದೆಂದೂ, ಶಂಕಿಸುವ ಕೆಲಸವಿಲ್ಲವೆಂದೂ, ಅವರವರ ಬುದ್ಧಿಯನ್ನು ಶುದ್ಧಮಾಡಿಕೊಂಡರೆ ಸಾಕೆಂದು ಸ್ಪಷ್ಟಮಾಡಲಾಗಿದೆ. 'ಅತೀಂದ್ರಿಯಮ್' ಎಂದು ಹೇಳಿರುವುದರಿಂದ ಇಂದ್ರಿಯ ಸುಖಗಳಲ್ಲಿಯೇ ಕಾಲಕ್ಷೇಪ ಮಾಡುವವರಿಗೆ ಆ ಆತ್ಮಾನಂದವು ಕನಸಿನಲ್ಲಿಯೂ ಸಿಗುವುದಿಲ್ಲವೆಂದು ಹೇಳಲಾಗಿದೆ. ಮತ್ತೆ ಆತ್ಮ ಸುಖ, ಅನಂತ (ಆತ್ಯಂತಿಕಮ್) ಎಂದು ಹೇಳಲ್ಪಟ್ಟಿರುವುದರಿಂದ ಬೇರೆಯ ಎಲ್ಲಾ ದುಶ್ಯಸುಖಗಳು ಅಂತ್ಯವಾಗುವವೆಂದು, ಆದ್ದರಿಂದ ಅವುಗಳ ಬೆನ್ನುಹತ್ತಬಾರದೆಂದು ಸೂಚಿಸಲಾಗಿದೆ.

ಅಂತಹ ಆತ್ಮಾನಂದದಲ್ಲಿ ಮಗ್ನನಾಗಿರುವ ಯೋಗಿ ಅಲ್ಲಿಂದ ಮತ್ತೆ ಚಲಿಸುವುದಿಲ್ಲವೆಂದು ಅದರಲ್ಲಿಯೇ ರಮಿಸುವನೆಂದು ಇಲ್ಲಿ ಹೇಳಲಾಗಿದೆ. ಮಕರಂದವನ್ನು ಪಾನ ಮಾಡುವ ಭೃಂಗ ಕುಸುಮವನ್ನು ಬಿಟ್ಟು ಹೋಗಲು ಇಚ್ಛಿಸುವುದೇ? ಸತ್ಯ ವಸ್ತುವನ್ನು ಪಡೆದವನು ಮತ್ತೆ ಮಿಥ್ಯ ವಸ್ತುವಿನ ಕಡೆ ಓಡುವನೇ? ಬಿಂಬವನ್ನು ಹೊಂದಿದವನು ಪ್ರತಿಬಿಂಬಕ್ಕೆ ಕೈಚಾಚುವನೇ? ಒಂದು ವೇಳೆ ಹಾಗೆ ಚಾಚಿದರೆ ಆತ ಇನ್ನೂ ಆ ಪೂರ್ಣ ವಸ್ತುವನ್ನು ಪಡೆದಿಲ್ಲವೆಂದೇ ಅರ್ಥ. ಸ್ವಪ್ನ ಸುಖಕ್ಕಾಗಿ ಓಡುವವನು ಇನ್ನೂ ಎಚ್ಚೆತ್ತಿಲ್ಲವೆಂದೇ ಅರ್ಥ.

ಪ್ರಪಂಚದಲ್ಲಿಯ ಎಲ್ಲಾ ಲಾಭಗಳಿಗಿಂತ ಉನ್ನತವಾದ ಲಾಭವು ಆತ್ಮಾನಂದವೇ. ಆದ್ದರಿಂದ ಧ್ಯಾನಯೋಗಿ ಅದನ್ನು ಪಡೆದನಂತರ ಅದನ್ನೇ ಸರ್ವೋತ್ತಮವಾದ ಲಾಭವೆಂದೆಣಿಸಿ ಬೇರೆಯ ಪ್ರಾಪಂಚಿಕ ಲಾಭಗಳೆಲ್ಲವನ್ನೂ ಹೀನವಾಗಿ ಕಾಣುವನು. ಲೋಕದಲ್ಲಿ ಪ್ರತಿಜೀವಿಯೂ ಲಾಭವನ್ನೇ ಕೋರುವನು. ವರ್ತಕನು ಧಾನ್ಯವನ್ನು ಅಳೆಯಲು ಪ್ರಾರಂಭಿಸುವಾಗ 'ಒಂದು' ಎನ್ನದೆ 'ಲಾಭ' ಎನ್ನುತ್ತಾನೆ. ಆದರೆ ಪ್ರಾಪಂಚಿಕ ಲಾಭಗಳು ಎಷ್ಟು ಬಂದರೂ ಅವು ಸ್ವಲ್ಪ ಕಾಲಕ್ಕೆ ನಶಿಸಿ ಹೋಗುವುವು. ಒಂದು ವೇಳೆ ಅವು ನಶಿಸದಿದ್ದರೂ ಅನುಭವಿಸುವ ತನ್ನ ಉಪಾಧಿಯಾದರೂ ನಶಿಸಿ ಹೋಗುವುದು. ಆದ್ದರಿಂದ ಅವು ಪರಮ ಲಾಭಗಳಲ್ಲ. ಕ್ಷಣಿಕ ಲಾಭಗಳು. ಆತ್ಯಂತಿಕ ಶಾಂತಿ, ಜನನ ಮರಣ ದುಃಖರಾಹಿತ್ಯ, ನಿರತಿಶಯ ಸುಖ ಉಂಟುಮಾಡುವ ಆತ್ಮಾನುಭವವೇ ಪರಮಲಾಭ. ಆದ್ದರಿಂದಲೇ ಅದನ್ನು ಹೊಂದಿದವನು ಬೇರೆ ಯಾವ ವಸ್ತುಗಳನ್ನೇ ಆಗಲಿ, ಲಾಭವನ್ನಾಗಲಿ, ಕೊನೆಗೆ ಬ್ರಹ್ಮಾಂಡಾಧಿಪತ್ಯವನ್ನಾಗಲಿ ಉತ್ತಮವೆಂದು ಭಾವಿಸುವುದಿಲ್ಲವೆಂದು ಇಲ್ಲಿ ಹೇಳಲಾಗಿದೆ. ಆದ್ದರಿಂದ ವಿವೇಕವಂತನು ಈ ಭಗವದ್ವಾಕ್ಯದ ಮೇಲೆ ವಿಶ್ವಾಸವಿಟ್ಟು, ನಶ್ವರ ಪ್ರಾಪಂಚಿಕ ಲಾಭಗಳ ಮೇಲೆ ತೀಕ್ಷ್ಣವಾಗಿ ದೃಷ್ಟಿ ಹರಿಸದೆ, ಕ್ಷಣಿಕಗಳಾದ ದೃಶ್ಯವಸ್ತುಗಳ ಸಂಪಾದನೆಯಲ್ಲೇ ಕಾಲವನ್ನು ವ್ಯರ್ಥಮಾಡದೆ, ಆತ್ಮಪ್ರಾಪ್ತಿಗಾಗಿ ಯತ್ನಿಸಬೇಕು.

ಅಂತಹ ಆತ್ಮಸ್ಥಿತಿಯಲ್ಲಿರುವವನು, ಇನ್ನು ಭಯಂಕರವಾದ ದುಃಖ ಬಂದು ಮೇಲೆ ಬಿದ್ದರೂ ವಿಚಲಿತನಾಗುವುದಿಲ್ಲ. ಇದರಿಂದ ಸರ್ವದುಃಖ ನಿವಾರಣೋಪಾಯ ಆತ್ಮಸಾಕ್ಷಾತ್ಕಾರವೇ ಎಂದು ಸ್ಪಷ್ಟವಾಗುತ್ತಿದೆ. ಸ್ವಪ್ನದಲ್ಲಿಯ ಆಪತ್ತುಗಳು ಎಚ್ಚೆತ್ತವನನ್ನು ಏನೂ ಮಾಡದಂತೆ ಆತ್ಮಾನುಭವಿಯನ್ನು ಮಹಾದುಃಖಗಳು ಕೂಡ ಸ್ವಲ್ಪವೂ ವಿಚಲಿತಗೊಳಿಸು ವುದಿಲ್ಲ. ಹೀಗಿರುವಾಗ, ಇನ್ನು ಸಾಮಾನ್ಯ ದುಃಖಗಳನ್ನು ಕುರಿತು ಬೇರೆ ಹೇಳಬೇಕೇ? ಆತ್ಮಜ್ಞಾನವಿಲ್ಲದವನನ್ನು, ದೇಹಾಭಿಮಾನಿಯನ್ನು, ದೃಶ್ಯವನ್ನು ಸತ್ಯವೆಂದು ನಂಬುವವನನ್ನು ಚಿಕ್ಕ ದುಃಖ ಕೂಡ ತಲೆಕೆಳಗು ಮಾಡಬಲ್ಲದು. 'ಗೋಷ್ಪದಂ ಸಾಗರಾಯತೇ' ಎಂದ ಹಾಗೆ ಗೋವಿನ ಹೆಜ್ಜೆಯಲ್ಲಿಯ ನೀರಿನಷ್ಟು ದುಃಖ ಆತನಿಗೆ ಮಹಾಸಾಗರದಂತಾಗುತ್ತದೆ. ಆದ್ದರಿಂದ ದುಃಖವು ಎಳ್ಳಷ್ಟೂ ಸಂಪ್ರಾಪ್ತಿಯಾಗಬಾರದೆಂದರೆ, ಆತ್ಮಸ್ಥಿತಿಯನ್ನು ಪಡೆಯಬೇಕು. ಅದು ಬಿಟ್ಟರೆ ಬೇರೆ ಗತ್ಯಂತರವಿಲ್ಲ.

ಆ ಆತ್ಮಸ್ಥಿತಿಯೇ ಯೋಗವೆಂದು ಹೇಳಲ್ಪಡುವುದು. ದುಃಖದ ನಿರ್ಮೂಲ ಸ್ಥಿತಿಯೇ ಅದು. ಆದ್ದರಿಂದಲೇ '**ದುಃಖ ಸಂಯೋಗ ವಿಯೋಗಮ್**' ಎಂದು ಭಗವಂತನು ಅದನ್ನು ವರ್ಣಿಸಿದನು. ಪ್ರಪಂಚದಲ್ಲಿ ಧನವಿಯೋಗ, ಪುತ್ರವಿಯೋಗ ಮೊದಲಾದ ಯಾವ ವಿಯೋಗವಾದರೂ ಕ್ಲೇಶವನ್ನುಂಟು ಮಾಡುವುದೇ ಆಗಲಿ ಭಗವಂತನು ತಿಳಿಸಿದ ಈ ಆತ್ಮಸ್ಥಿತಿ ರೂಪವಾದ 'ದುಃಖಸಂಯೋಗ ವಿಯೋಗಮ್' ಮಾತ್ರ ಬ್ರಹ್ಮಾನಂದವನ್ನುಂಟು ಮಾಡುವುದು. ಆದರೆ ಅಂತಹ ಸ್ಥಿತಿ ಯಾರಿಗೆ ಸಾಧ್ಯವಾಗುವುದು? ದೃಢ ಮನಸ್ಸುಳ್ಳ ಧೀರ ಚಿತ್ತವುಳ್ಳವನಿಗೇ ಸಾಧ್ಯ. ದುರ್ಬಲ ಚಿತ್ತನಿಗೆ ಅದು ಲಭಿಸದು. ಆದ್ದರಿಂದಲೇ 'ಅನಿರ್ವಿಣ್ಣ ಚೇತಸಾ' ಎಂದು ಇಲ್ಲಿ ಹೇಳಲಾಗಿದೆ. ಧೈರ್ಯ ಸಾಹಸಗಳಿಂದ ಕೂಡಿ, 'ನಾನು ತಪ್ಪದೆ ಹೊಂದುವೆನು' ಎನ್ನುವ ವಿಶ್ವಾಸವಿರುವ ಮನಸ್ಸೇ ಪರಮಾತ್ಮ ರೂಪ ಲಕ್ಷ್ಯವನ್ನು ಹೊಂದಬಲ್ಲದು. ೧) ಅಭ್ಯಾಸ ಕಾಲದಲ್ಲಿ ಎಷ್ಟು ಆತಂಕಗಳು ಬಂದೊದಗಿದರೂ ಜಗ್ಗದೆ ಇರುವ ೨) ದೃಢ ನಿಶ್ಚಲತೆಯಿಂದ ಇರುವ (ಅನಿರ್ವಿಣ್ಣ, ನಿಶ್ಚಯ) ಚಿತ್ತವೇ ಆತ್ಮಾನುಭೂತಿಯನ್ನು ಪಡೆಯಬಲ್ಲದೆಂದು ಇಲ್ಲಿ ಸ್ಪಷ್ಟವಾಗಿ ಹೇಳಲಾಗಿದೆ. ಸಾಧಕನನ್ನು ಬೀಳಿಸಲು ಮಾಯೆ ಅನೇಕ ವಿಧಗಳಿಂದ ಪ್ರಯತ್ನಿಸುತ್ತಿರುತ್ತದೆ. ಒಮ್ಮೊಮ್ಮೆ ಸುಖಗಳನ್ನು ಕೊಟ್ಟು, ಒಮ್ಮೊಮ್ಮೆ ದುಃಖಗಳನ್ನು ಕೊಟ್ಟು ಅದು ಮೋಸ ಮಾಡುತ್ತಿರುತ್ತದೆ. ಅಲ್ಲಿ ವಿವೇಕವಂತನು ಇದು 'ಮಾಯಾಪರೀಕ್ಷೆ' ಎಂದು ತಿಳಿದು ಭಗವಂತನ ಮೇಲೆ, ಸದ್ಗುರುವಿನ ಮೇಲೆ ಅಪರಿಮಿತ ವಿಶ್ವಾಸವಿಟ್ಟು ಧೈರ್ಯದಿಂದ ಮೋಕ್ಷಮಾರ್ಗದಲ್ಲೇ ಮುಂದಕ್ಕೆ ಸಾಗಿ ಹೋಗಬೇಕು.

ಪ್ರ : ಚಿತ್ತವು ಯಾವುದರಿಂದ ನಿರೋಧಿಸಲ್ಪಡುತ್ತದೆ?

ಉ : ಯೋಗ ಸೇವೆಯಿಂದ (ಅಭ್ಯಾಸ ವೈರಾಗ್ಯಾದಿಗಳಿಂದ).

ಪ್ರ : ಯಾವ ಚಿತ್ತ ಆತ್ಮದಲ್ಲಿ ಲಯಗೊಳ್ಳುವುದು?

ಉ : ವಿಷಯಗಳಿಂದ ನಿಗ್ರಹಿಸಲ್ಪಟ್ಟ ಚಿತ್ತ.

ಪ್ರ : ಆತ್ಮವನ್ನು ಯಾವುದರಿಂದ ನೋಡಬಹುದು?

ಉ : ಶುದ್ಧ ಮನಸ್ಸಿನಿಂದ (ನಿರ್ಮಲ ಬುದ್ಧಿಯಿಂದ).

ಪ್ರ : ಎಲ್ಲಿ ?

ಉ : ತನ್ನಲ್ಲಿಯೇ, ತನ್ನ ಹೃದಯದಲ್ಲಿಯೇ.

ಪ್ರ : ಆತ್ಮದರ್ಶನದಿಂದ ಉಂಟಾಗುವ ಫಲಗಳೇನು?

ಉ: ಅಲ್ಲಿ ಜೀವಿಗೆ ಅಪರಿಮಿತವಾದ ಆನಂದ ಉಂಟಾಗುವುದು. (ಮೋಕ್ಷವು ಸಂಪ್ರಾಪ್ತಿಯಾಗುವುದು).

ಪ್ರ : ಆತ್ಮ ಸುಖ ಎಂತಹದು?

ಉ : ಇಂದ್ರಿಯಗಳಿಗೆ ಅಗೋಚರವಾದದ್ದು.

ಪ್ರ : ಇಂದ್ರಿಯಗಳಿಗೆ ಅಗೋಚರವಾಗಿದ್ದ ಪಕ್ಷದಲ್ಲಿ ಅದನ್ನು ತಿಳಿದು ಕೊಳ್ಳುವುದು ಹೇಗೆ?

ಉ: ನಿರ್ಮಲ ಬುದ್ಧಿಯಿಂದ, ವಿಶುದ್ಧ ಮನಸ್ಸಿನಿಂದ ಅದನ್ನು ತಿಳಿದು ಕೊಳ್ಳಬಹುದು (ಬುದ್ಧಿಗ್ರಾಹ್ಯಂ).

ಪ್ರ : ಆತ್ಮಸ್ಥಿತಿಯನ್ನು ಪಡೆದವನು ಏನು ಮಾಡುವನು?

ಉ : ನಿರಂತರ ಆತ್ಮದಲ್ಲಿಯೇ ರಮಿಸುವನು. ಅಲ್ಲಿಂದ ಕದಲುವುದಿಲ್ಲ.

ಪ್ರ : ಪ್ರಪಂಚದಲ್ಲಿ ಎಲ್ಲಾ ಲಾಭಗಳಿಗಿಂತ ಹೆಚ್ಚಿನ ಲಾಭವಾವುದು?

ಉ : ಆತ್ಮಲಾಭ (ಆತ್ಮಪ್ರಾಪ್ತಿ).

ಪ್ರ : ಆತ್ಮ ಸ್ಥಿತಿಯಲ್ಲಿರುವವನ ಚಿಹ್ನೆಗಳೇನು?

ಉ: ಎಂತಹ ಘೋರ ದುಃಖಗಳು ಬಂದೊದಗಿದರೂ ಸ್ವಲ್ಪವೂ ವಿಚಲಿತನಾಗುವುದಿಲ್ಲ.

ಪ್ರ : ಆದ್ದರಿಂದ ದುಃಖ ನಿವಾರಣೆಯಾಗಲು ಉಪಾಯವೇನು?

ಉ : ಆತ್ಮದಲ್ಲಿ ಸ್ಥಿತನಾಗಿರುವುದೇ. ಆತ್ಮಾನುಭವವನ್ನು ಹೊಂದುವುದೇ.

ಪ್ರ : ಆತ್ಮಸ್ಥಿತಿ ಎಂತಹದು?

ಉ : ದುಃಖ ಸಂಪರ್ಕವೇನೂ ಇಲ್ಲದಂತಹದು.

ಪ್ರ : ಅದು ಹೇಗೆ ಲಭಿಸಬಲ್ಲದು?

ಉ: ೧) ಕಷ್ಟಗಳಿಗೆ ಜಗ್ಗದ ಮನಸ್ಸಿನಿಂದ ೨) ಸತತ ಅಭ್ಯಾಸದಿಂದ, ಉದ್ವೇಗವಿಲ್ಲದ ಚಿತ್ತದಿಂದ ಲಭಿಸುವುದು.

**ಅ॥** ಅಂತಹ ಆತ್ಮಸ್ಥಿತಿಯನ್ನು ಪಡೆಯಲು ಅವಲಂಬಿಸಬೇಕಾದ ಧ್ಯಾನ ಪದ್ಧತಿಯನ್ನು ಎರಡು ಶ್ಲೋಕಗಳ ಮೂಲಕ ಹೇಳಲಾಗುತ್ತಿದೆ.

**೨೪. ಸಂಕಲ್ಪಪ್ರಭವಾನ್ ಕಾಮಾನ್ ತ್ಯಕ್ತ್ವಾ ಸರ್ವಾನಶೇಷತಃ**
**ಮನಸೈವೇಂದ್ರಿಯಗ್ರಾಮಮ್ ವಿನಿಯಮ್ಯ ಸಮಂತತಃ**

**೨೫. ಶನೈಃ ಶನೈರುಪರಮೇದ್ಬುದ್ಧ್ಯಾ ಧೃತಿಗೃಹೀತಯಾ**
**ಆತ್ಮಸಂಸ್ಥಂ ಮನಃ ಕೃತ್ವಾ ನ ಕಿಂಚಿದಪಿ ಚಿಂತಯೇತ್**

**ಅರ್ಥ:** ಸಂಕಲ್ಪ ಪ್ರಭವಾನ್=ಸಂಕಲ್ಪದಿಂದ ಉಂಟಾಗುವ; ಕಾಮಾನ್=ಕೋರಿಕೆಗಳನ್ನು; ಸರ್ವಾನ್=ಎಲ್ಲವನ್ನೂ; ಅಶೇಷತಃ=ಪೂರ್ತಿಯಾಗಿ; ತ್ಯಕ್ತ್ವಾ=ಬಿಟ್ಟುಬಿಟ್ಟು; ಮನಸಾ ಏವ=ಮನಸ್ಸಿನಿಂದಲೇ; ಇಂದ್ರಿಯಗ್ರಾಮಮ್=ಇಂದ್ರಿಯ ಸಮೂಹವನ್ನು; ಸಮಂತತಃ=ಎಲ್ಲಾ ದಿಕ್ಕುಗಳಿಂದ (ಸಮಸ್ತ ವಿಷಯಗಳಿಂದ); ವಿನಿಯಮ್ಯ=ಚೆನ್ನಾಗಿ ನಿಗ್ರಹಿಸಿ; ಧೃತಿಗ್ರಹೀತಯಾ=ಧೈರ್ಯವನ್ನವಲಂಬಿಸಿದ; ಬುದ್ಧ್ಯಾ=ಬುದ್ಧಿಯಿಂದ; ಶನೈಃ ಶನೈಃ=ಮೆಲ್ಲ ಮೆಲ್ಲಗೆ; ಉಪರಮೇತ್=(ದೃಶ್ಯ ಪ್ರಪಂಚದಿಂದ ವಿರಮಿಸಿ ಅಂತರಂಗದಲ್ಲಿ) ವಿಶ್ರಾಂತಿ ಹೊಂದಬೇಕು (ಉಪರತಿಯನ್ನು ಹೊಂದಬೇಕು); ಮನಃ=ಮನಸ್ಸನ್ನು; ಆತ್ಮಸಂಸ್ಥಮ್=ಆತ್ಮದಲ್ಲಿರುವಂತೆ; ಕೃತ್ವಾ=ಮಾಡಿ; ಕಿಂಚಿತ್ ಅಪಿ=ಆತ್ಮಕ್ಕೆ ವ್ಯತಿರಿಕ್ತವಾದ ಏನನ್ನೂ; ನ ಚಿಂತಯೇತ್=ಯೋಚಿಸಬಾರದು.

**ತಾ॥** ಸಂಕಲ್ಪದಿಂದ ಉಂಟಾಗುವ ಕೋರಿಕೆಗಳೆಲ್ಲವನ್ನು ಸಂಪೂರ್ಣವಾಗಿ ತ್ಯಜಿಸಿ, ಮನಸ್ಸಿನಿಂದ ಇಂದ್ರಿಯಗಳನ್ನು ಎಲ್ಲಾ ದಿಶೆಗಳಿಂದ ಚೆನ್ನಾಗಿ ನಿಗ್ರಹಿಸಿ, ಧೈರ್ಯದಿಂದ ಕೂಡಿದ ಬುದ್ಧಿಯಿಂದ ಮೆಲ್ಲ ಮೆಲ್ಲಗೆ ಬಾಹ್ಯ ಪ್ರಪಂಚದಿಂದ ಆ ಮನಸ್ಸನ್ನು ಮರಳಿಸಿ ಅಂತರಂಗದಲ್ಲಿ ವಿಶ್ರಾಂತಿ ಹೊಂದಬೇಕು (ಉಪರತಿಯನ್ನು ಹೊಂದಬೇಕು). ಮತ್ತೆ ಮನಸ್ಸನ್ನು ಆತ್ಮದಲ್ಲಿ ಸ್ಥಾಪಿಸಿ ಆತ್ಮೇತರವಾದ ಯಾವುದನ್ನೂ ಚಿಂತಿಸದೆ ಇರಬೇಕು.

**ವ್ಯಾಖ್ಯೆ:** ಧ್ಯಾನ ಮಾಡುವಾಗ ಹೇಗೆ ಕುಳಿತುಕೊಳ್ಳಬೇಕು, ದೃಷ್ಟಿಯನ್ನು ಎಲ್ಲಿ ನಿಲ್ಲಿಸಬೇಕು ಎನ್ನುವ ವಿಷಯಗಳನ್ನು ಈಗಾಗಲೇ ಹೇಳಲಾಗಿದೆ. ಇನ್ನು ಧ್ಯಾನವನ್ನು ಹೇಗೆ ಮಾಡಬೇಕೆನ್ನುವ ಪದ್ಧತಿಯನ್ನು ಇಲ್ಲಿ ನಿರೂಪಿಸಲಾಗಿದೆ.

ಕೋರಿಕೆಗಳನ್ನೆಲ್ಲಾ ಪೂರ್ತಿಯಾಗಿ ತ್ಯಜಿಸಬೇಕೆಂದು ಮೊಟ್ಟಮೊದಲಿಗೆ ಹೇಳಲಾಯಿತು. ಕೋರಿಕೆಗಳು ಎಲ್ಲಿಂದ ಹುಟ್ಟುವುವು? ಸಂಕಲ್ಪದಿಂದ. ಸಂಕಲ್ಪವೇ ಕೋರಿಕೆಗಳಿಗೆ, ಆಸೆಗಳಿಗೆ ತಾಯಿ. ಆದ್ದರಿಂದಲೇ 'ಸಂಕಲ್ಪ ಪ್ರಭವಾನ್' ಎಂದು ಹೇಳಲಾಗಿದೆ. ವಿವೇಕ ವೈರಾಗ್ಯಾದಿಗಳಿಂದ ವಿಷಯಗಳನ್ನು ಕುರಿತ ಸಂಕಲ್ಪಗಳೇ ಉದಯಿಸದಂತೆ ನೋಡಿಕೊಂಡರೆ, ಕೋರಿಕೆಗಳು ಹುಟ್ಟುವುದಿಲ್ಲ. ಈ ಪ್ರಕಾರವಾಗಿ ಕೋರಿಕೆಗಳನ್ನು ಪೂರ್ತಿಯಾಗಿ ಬಿಟ್ಟುಬಿಡಬೇಕೆಂದು ಆದೇಶಿಸಲಾಗಿದೆ. 'ಸರ್ವಾನ್' ಎಂದು ಹೇಳಿರುವುದರಿಂದ ಯಾವುದೋ ಒಂದೆರಡು ಕೋರಿಕೆಗಳನ್ನು ಬಿಟ್ಟರೆ ಸಾಲದೆಂದೂ, ಎಲ್ಲವನ್ನೂ ಬಿಡಬೇಕೆಂದು ಅರ್ಥವಾಗುತ್ತಿದೆ. ಏಕೆಂದರೆ ಒಂದೇ ಒಂದು ವಿಷಯಾಸೆ ಉಳಿದಿದ್ದರೂ ಅದು ಸಾಧಕನಿಗೆ ಅಪಾರವಾದ ಕೇಡನ್ನು ಮಾಡುವುದು. ಆದ್ದರಿಂದಲೇ ಭಗವಂತನು ಗೀತೆಯಲ್ಲಿ ಕೋರಿಕೆಗಳನ್ನು ಬಿಡಬೇಕೆಂದು ಬೋಧಿಸಿದಾಗಲೆಲ್ಲ 'ಸಮಸ್ತ ಕೋರಿಕೆಗಳನ್ನು' ಎಂದು ಒತ್ತಿ ಹೇಳುತ್ತಾನೆ. ಅಗ್ನಿಯಾಗಲಿ, ಶತ್ರುವಾಗಲಿ, ರೋಗವಾಗಲಿ, ಸಾಲವಾಗಲಿ, ವಿಷಯಾಶೆಯಾಗಲಿ ಸ್ವಲ್ಪ ಶೇಷವಾಗಿದ್ದರೂ, ಅದು ಕಾಲಕ್ರಮೇಣ ದೊಡ್ಡ ಅಪಕಾರ ಮಾಡುವುದು. ಆದ್ದರಿಂದ ವಿಷಯ ವಾಂಛನೆಗಳೆಲ್ಲವನ್ನೂ ತ್ಯಜಿಸಬೇಕು. ಆದರೆ ಎಲ್ಲವನ್ನೂ ಸ್ವಲ್ಪ ಸ್ವಲ್ಪ ತೊಲಗಿಸಿದರೆ ಸಾಲದೇ ಎಂದರೆ, ಸಾಲದೆಂದು ಹೇಳುವುದಕ್ಕಾಗಿ 'ಅಶೇಷತಃ' (ಪೂರ್ತಿಯಾಗಿ) ಎನ್ನುವ ಪದವನ್ನು ಕೂಡ ಪ್ರಯೋಗಿಸಲಾಗಿದೆ. ಕಾಮವು ಎಲ್ಲವುಗಳಿಗಿಂತ ಪ್ರಬಲಶತ್ರುವಾದದ್ದರಿಂದ ಅದರ ವಿಷಯವಾಗಿ ಅಜಾಗ್ರತೆ ಕೆಲಸಕ್ಕೆ ಬಾರದೆಂದು ಸಾಧಕರನ್ನು ಬಹುಶಃ ಎಚ್ಚರಿಸಲೆಂದು 'ಸರ್ವಾನ್' 'ಅಶೇಷತಃ' ಎನ್ನುವ ಎರಡು ವಿಶೇಷಣಗಳನ್ನು ಅದಕ್ಕೆ ಸೇರಿಸಲಾಗಿದೆ. ಅಂದರೆ ಕೆಲವು ಕೋರಿಕೆಗಳನ್ನು ಪೂರ್ತಿಯಾಗಿ ಬಿಡುವುದಾಗಲಿ ಅಥವ ಎಲ್ಲವನ್ನೂ ಸ್ವಲ್ಪ ಸ್ವಲ್ಪ ಬಿಡುವುದಾಗಲಿ ಸಾಲದೆಂದೂ, ಎಲ್ಲವನ್ನೂ ಸಂಪೂರ್ಣವಾಗಿ ಬಿಡಬೇಕೆಂದು ಬೋಧಿಸಲ್ಪಟ್ಟಿದೆ. ಕೋರಿಕೆಗಳು ಇದ್ದೆಡೆ ಅವುಗಳನ್ನು ಅನುಭವಿಸಲೆಂದು ಚಿತ್ತವು ಬಹಿರ್ಮುಖವಾಗಿ ಓಡುತ್ತಿರುತ್ತದೆ. ಅವು ಇಲ್ಲದಿದ್ದರೆ ಅಂತರ್ಮುಖವಾಗಿ ಪ್ರವರ್ತಿಸುವುದು. ಆದ್ದರಿಂದಲೇ ಜ್ಞಾನನಿಷ್ಠನಿಗೆ ಕಾಮನಾತ್ಯಾಗವು ಬಹಳ ಅವಶ್ಯಕ.

ಈ ವಿಧವಾಗಿ ಸಮಸ್ತ ಕಾಮನೆಗಳನ್ನು ಸಂಪೂರ್ಣವಾಗಿ ಬಿಟ್ಟು, ಮನಸ್ಸಿನಿಂದಲೇ ಇಂದ್ರಿಯಗಳ ಸಮೂಹವನ್ನು (ಆಮೆ ತನ್ನ ಅವಯವಗಳನ್ನು ಒಳಗೆ ಎಳೆದುಕೊಂಡಂತೆ) ಶಬ್ದಾದಿ ವಿಷಯಗಳಿಂದ ಸೆಳೆದು ಒಳಗೆ ತಿರುಗಿಸಬೇಕು. ಇಂದ್ರಿಯಗಳೆನ್ನುವ ಕುದುರೆಗಳನ್ನು ಮನಸ್ಸೆನ್ನುವ ಕಡಿವಾಣದಿಂದ ಎಳೆದು ಹತೋಟಿಯಲ್ಲಿಟ್ಟಿರಬೇಕು. ಇಲ್ಲಿ 'ನಿಯಮ್ಯ' ಎಂದು ಹೇಳದೆ 'ವಿನಿಯಮ್ಯ' ಎಂದು ಹೇಳಿರುವುದರಿಂದ ಮನಸ್ಸಿನಿಂದ ಇಂದ್ರಿಯಗಳನ್ನು ಪರಿಪೂರ್ಣವಾಗಿ ನಿಗ್ರಹಿಸಬೇಕೆಂದು, 'ಗ್ರಾಮಂ' (ಸಮೂಹ) ಎಂದು ಹೇಳಿರುವುದರಿಂದ ಒಂದು ಇಂದ್ರಿಯವನ್ನು ಅಲ್ಲದೆ ಎಲ್ಲಾ ಇಂದ್ರಿಯಗಳನ್ನು ನಿರೋಧಿಸಬೇಕೆಂದೂ, 'ಸಮಂತತಃ' ಎನ್ನುವ ಪದವನ್ನುಪಯೋಗಿಸಿರುವುದರಿಂದ ಒಂದು ಕಡೆಯಿಂದಲ್ಲದೆ ಎಲ್ಲಾ ಕಡೆಗಳಿಂದ ಇಂದ್ರಿಯಗಳನ್ನು ಹಿಂದಕ್ಕೆ ಜಗ್ಗಿ ಹೃದಯದಲ್ಲಿ ಸೇರಿಸಬೇಕೆಂದು ಸ್ಪಷ್ಟವಾಗುತ್ತಿದೆ. ಇಂದ್ರಿಯಗಳನ್ನು ನಿಗ್ರಹಿಸುವ ಶಕ್ತಿ ಮನಸ್ಸಿಗೆ ಇದೆ. ಮನಸ್ಸು ವಿವೇಕ ವೈರಾಗ್ಯಯುಕ್ತವಾದರೆ ಇಂದ್ರಿಯಗಳನ್ನು ಎಳೆದು ತನ್ನ ವಶದಲ್ಲಿಟ್ಟುಕೊಳ್ಳ ಬಹುದು. ಇಲ್ಲದಿದ್ದರೆ ಇಂದ್ರಿಯಗಳು ಹೇಳಿದಂತೆ ಅದು ಕುಣಿಯುವುದು. ಆದ್ದರಿಂದ ವಿವೇಕಯುಕ್ತವಾದ ಮನಸ್ಸಿನಿಂದ ಇಂದ್ರಿಯ ಸಮೂಹವನ್ನು ಪರಿಪೂರ್ಣವಾಗಿ ನಿಗ್ರಹಿಸಬೇಕೆಂದು ಬೋಧಿಸಲಾಗಿದೆ.

ನಂತರ ಧೈರ್ಯದಿಂದ ಕೂಡಿದ ಬುದ್ಧಿಯಿಂದ ಮನಸ್ಸನ್ನು ಮೆಲ್ಲಮೆಲ್ಲಗೆ ಬಾಹ್ಯ ಪ್ರಪಂಚದಿಂದ (ವಿಷಯಾದಿಗಳಿಂದ) ಮರಳಿಸಿ ಆತ್ಮದಲ್ಲಿ ಸ್ಥಾಪಿಸಬೇಕು. ಮನಸ್ಸನ್ನು ಸ್ವಾಧೀನಮಾಡಿಕೊಳ್ಳುವ ಶಕ್ತಿ ಬುದ್ಧಿಗೆ ಇದೆ. **'ಮನಸಸ್ತು ಪರಾಬುದ್ಧಿಃ'** ಎಂದು ಈಗಾಗಲೇ ಹೇಳಲಾಗಿದೆಯಲ್ಲವೇ! ಅಜ್ಞಾನಿಗಳಲ್ಲಿ ಮನಸ್ಸು ಹೇಳಿದ ಹಾಗೆ ಬುದ್ಧಿ ಕುಣಿಯುವುದು. ಜ್ಞಾನಿಗಳಲ್ಲಿ ಬುದ್ಧಿ ಹೇಳಿದ ಹಾಗೆ ಮನಸ್ಸು ಕೇಳುವುದು. ಆದರೆ ಜನ್ಮಾಂತರ ವಿಷಯವಾಸನೆಗಳಿಂದ ಕೂಡಿದ ಮನಸ್ಸು ಸಾಮಾನ್ಯ ಬುದ್ಧಿಗೆ ಜಗ್ಗುವುದಿಲ್ಲ. ಆದ್ದರಿಂದಲೇ **'ಧೃತಿಗೃಹೀತಯಾ'**- ಎಂದು ಹೇಳಲಾಗಿದೆ. ಅಂದರೆ ಧೈರ್ಯದಿಂದ ಕೂಡಿದ ಬುದ್ಧಿಯಿಂದ ಮನಸ್ಸನ್ನು ಸ್ವಾಧೀನಪಡಿಸಿಕೊಳ್ಳಬೇಕು. ಮನಸ್ಸು

ಹುಲಿಯಂತವ್ದಾದ್ದರಿಂದ ಬುದ್ಧಿ ಮೇಕೆಯಾಗಿರಬಾರದು. ಸಿಂಹದಂತಿರ ಬೇಕು. 'ಸೈಂಹೀವೃತ್ತಿ'ಯನ್ನು ಆಚರಿಸಬೇಕು. **'ಬುದ್ಧ್ಯಾ ಧೃತಿಗೃಹೀತಯಾ'** ಎನ್ನುವುದರ ಅರ್ಥವಿದೆಯೇ. ಧೈರ್ಯ ಸ್ಥೈರ್ಯಗಳಿಂದ ಕೂಡಿದ ಬುದ್ಧಿಯಿಂದ ಮನಸ್ಸನ್ನು ಅಂತರ್ಮುಖಿಗೊಳಿಸಬೇಕು.

ಆದರೆ ಈ ಕಾರ್ಯದಲ್ಲಿ ಅವಸರ ಕೆಲಸಕ್ಕೆ ಬಾರದು. 'ಶನೈಃ ಶನೈಃ'- ಮೆಲ್ಲ ಮೆಲ್ಲಗೆ ಮನಸ್ಸನ್ನು ಲಾಲಿಸಿ ಹಿಂದಕ್ಕೆ ತೆಗೆದುಕೊಂಡು ಬರಬೇಕು. ಬಲಾತ್ಕಾರ ಕೆಲಸಕ್ಕೆ ಬಾರದು. **'ಲಾಲಯೇತ್ ಚಿತ್ತಬಾಲಕಮ್'** ಎಂದು ವಸಿಷ್ಠರು ಹೇಳಿದ ಹಾಗೆ ಮನಸ್ಸೆನ್ನುವ ಬಾಲನನ್ನು ಲಾಲಿಸಿ, ಪಾಲಿಸಿ, ವಿವೇಕದಿಂದ ನಿಧಾನವಾಗಿ ಬಾಹ್ಯ ಪ್ರಪಂಚದಿಂದ ಅದನ್ನು ಮರಳಿಸಿ ಅಂತರ್ಮುಖ ಮಾಡಬೇಕು. ಸಾಧಕರಲ್ಲಿ ಕೆಲವರು ಭಗವಂತನ ಈ ಆದೇಶವನ್ನು ಪಾಲಿಸದೆ ಅವಸರಪಟ್ಟು ಮನಸ್ಸನ್ನು ಬಲಾತ್ಕಾರವಾಗಿ ಎಳೆದು ಕೊನೆಗೆ ಅಪಜಯವನ್ನು ಹೊಂದುತ್ತಿದ್ದಾರೆ. ಚಿಕ್ಕ ಕೆಂಡದ ಮೇಲೆ ಕಟ್ಟಿಗೆ ರಾಶಿ ಸುರಿದರೆ ಅದು ಆರಿಹೋಗುವಂತೆ ಅವಸರದಿಂದ ಮೊದ ಮೊದಲೇ ದೊಡ್ಡ ದೊಡ್ಡ ಸಾಧನೆಗಳನ್ನು ಮಾಡಿದಲ್ಲಿ ಶರೀರ, ಮನಸ್ಸು ತಟ್ಟಿಕೊಳ್ಳದೆ ಲಕ್ಷ್ಯಕ್ಕೇ ಧಕ್ಕೆ ಉಂಟಾಗುವುದು.

'Slow and steady wins the race', ಎನ್ನುವ ಆಂಗ್ಲ ಗಾದೆಯನ್ನನುಸರಿಸಿ ಮೆಲ್ಲಮೆಲ್ಲಗೆ ಸಾಧಿಸುತ್ತಾ ಬಂದರೆ ಜಯವು ಪ್ರಾಪ್ತಿಯಾಗಬಲ್ಲದು.

ಈ ಪ್ರಕಾರವಾಗಿ ಧೀರಬುದ್ಧಿಯಿಂದ ಮನಸ್ಸನ್ನು ಮೆಲ್ಲಮೆಲ್ಲಗೆ ನಿಗ್ರಹಿಸಿ ನಂತರ ಅದನ್ನು ಸುಮ್ಮನೆ ಪಕ್ಕಕ್ಕಿಡದೆ ಆತ್ಮದಲ್ಲಿ ನೆಲೆಗೊಳಿಸಬೇಕು. ಆತ್ಮಚಿಂತನೆ ಎನ್ನುವ ಆಹಾರವನ್ನು ಅದಕ್ಕೆ ನೀಡಬೇಕು. ಆಗ ಆಲಿಕಲ್ಲು ಸಮುದ್ರದಲ್ಲಿ ಕರಗಿಹೋಗುವಂತೆ ಆ ಮನಸ್ಸು ಆತ್ಮಸಾಗರದಲ್ಲಿ (ಬ್ರಹ್ಮಾವರಣದಲ್ಲಿ) ವಿಲೀನವಾಗಿ ಆತ್ಮಾಕಾರವಾಗುವುದು. ಅದೇ ಮೋಕ್ಷ. ಆದರೆ ಮನಸ್ಸನ್ನು ಹಾಗೆ ಆತ್ಮದಲ್ಲಿ ಸ್ಥಾಪಿಸಿ ಮತ್ತೆ ಆತ್ಮೇತರವಾದ ಯಾವುದನ್ನೂ ಚಿಂತಿಸದೆ ಇರಬೇಕು. ಆದ್ದರಿಂದಲೇ, **'ನ ಕಿಂಚಿದಪಿ ಚಿಂತಯೇತ್'** ಎಂದು ಎಚ್ಚರಿಸಲಾಗಿದೆ. ಏಕೆಂದರೆ, ಔಷಧವನ್ನು ಸೇವಿಸಿ ಪಥ್ಯವನ್ನಾಚರಿಸದಿದ್ದರೆ ರೋಗವು ಹೇಗೆ ವಾಸಿಯಾಗುವುದಿಲ್ಲವೋ ಹಾಗೆಯೇ ಆತ್ಮದಲ್ಲಿ ಮನಸ್ಸನ್ನು ಸ್ಥಾಪಿಸಿ, ದೃಶ್ಯವಸ್ತುಗಳನ್ನು ಕುರಿತು ಚಿಂತಿಸುತ್ತಿದ್ದರೆ ಲಕ್ಷ್ಯ ಲಭ್ಯವಾಗುವುದಿಲ್ಲ. ಆದ್ದರಿಂದ ಆತ್ಮಧ್ಯಾನ ಎನ್ನುವ ಔಷಧಿಗೆ 'ಆತ್ಮೇತರ'ವಾದ ಏನನ್ನೂ ಚಿಂತಿಸದೇ ಇರುವಂಥ ಪಥ್ಯವನ್ನು ಜೋಡಿಸಿದಾಗ ಮಾತ್ರ ಭವರೋಗವನ್ನು ಅದು ವಾಸಿಮಾಡಬಲ್ಲದು. ಈ ವಿಷಯವನ್ನು ಸಾಧಕರು ಚೆನ್ನಾಗಿ ತಿಳಿದುಕೊಂಡು ಧ್ಯಾನಕಾಲದಲ್ಲಿ (ಆತ್ಮವನ್ನು ಬಿಟ್ಟು) ಬೇರೆ ಯಾವ ಅನ್ಯ ವಸ್ತುಗಳನ್ನೂ ಸಂಕಲ್ಪಿಸದೆ ಇರಲು ಯತ್ನಿಸಬೇಕು.

**'ಆತ್ಮಸಂಸ್ಥಂ ಮನಃ ಕೃತ್ವಾ ನ ಕಿಂಚಿದಪಿ ಚಿಂತಯೇತ್'**

(ಆತ್ಮದಲ್ಲಿ ಮನಸ್ಸನ್ನು ಸ್ಥಿರಗೊಳಿಸಿ, ಅನ್ಯವಾದ ಬೇರೆ ಯಾವುದನ್ನೂ ಚಿಂತಿಸಬಾರದು) ಎನ್ನುವ ಈ ಗೀತಾವಾಕ್ಯ ಸಮಸ್ತ ಶಾಸ್ತ್ರಗಳ ಸಾರ, ಸಮಸ್ತ ಸಾಧನೆಗಳ ಸಂಕ್ಷಿಪ್ತ ರೂಪವೂ ಆಗಿರುವುದರಿಂದ ಮುಮುಕ್ಷುಗಳು ಅದನ್ನು ಮತ್ತೆ ಮತ್ತೆ ಸ್ಮರಿಸುತ್ತಾ ಅನುಷ್ಠಾನಕ್ಕೆ ತೆಗೆದುಕೊಂಡು ಬರಬೇಕು ಅಂದರೆ ದೃಶ್ಯವನ್ನು ಸ್ಮರಿಸದೆ ದೃಗ್ರೂಪವಾದ ಆತ್ಮದಲ್ಲಿಯೇ ಮನಸ್ಸನ್ನು ನಿಲ್ಲಿಸಬೇಕು.

ಪ್ರ : ಧ್ಯಾನಾಭ್ಯಾಸಿ ಅವಲಂಬಿಸಬೇಕಾದ ನಿಯಮಗಳೇನು?

ಉ : ೧) ಕೋರಿಕೆಗಳನ್ನು ಪೂರ್ತಿಯಾಗಿ ಬಿಡಬೇಕು.

೨) ಮನಸ್ಸನ್ನು, ಇಂದ್ರಿಯಗಳನ್ನು ವಿಷಯಗಳಿಂದ ತಿರುಗಿಸಬೇಕು.

೩) ಧೈರ್ಯೋಪೇಯವಾದ ಬುದ್ಧಿಯಿಂದ ಮನಸ್ಸನ್ನು ಬಾಹ್ಯ ಪ್ರಪಂಚದಿಂದ ನಿಧಾನವಾಗಿ ಮರಳಿಸಿ ಆತ್ಮದಲ್ಲಿ ಸ್ಥಾಪಿಸಬೇಕು.

೪) ಹಾಗೆ ಮನಸ್ಸನ್ನು ಆತ್ಮದಲ್ಲಿ ನಿಲ್ಲಿಸಿ ಆತ್ಮೇತರವಾದ ಏನನ್ನೂ ಚಿಂತಿಸಬಾರದು.

ಪ್ರ : ಕೋರಿಕೆಗಳು ಯಾವುದರಿಂದ ಹುಟ್ಟುವುವು?

ಉ : ಸಂಕಲ್ಪಗಳಿಂದ.

ಪ್ರ : ಸಾಧಕನು ಎಂತಹ ಬುದ್ಧಿಯನ್ನು ಹೊಂದಿರಬೇಕು?

ಉ : ಧೈರ್ಯದಿಂದ ಕೂಡಿದ ಬುದ್ಧಿಯನ್ನು ಹೊಂದಿರಬೇಕು.

ಪ್ರ : ಸಾಧನೆ ಹೇಗೆ ಮಾಡಬೇಕು?

ಉ : ಮೆಲ್ಲಮೆಲ್ಲಗೆ ಮಾಡಬೇಕು. ಅವಸರ ಕೆಲಸಕ್ಕೆ ಬಾರದು.

**ಅ॥** ಪೂರ್ವಾಭ್ಯಾಸ ಬಲದಿಂದ ಒಂದು ವೇಳೆ ಸಾಧಕನಿಗೆ ಧ್ಯಾನ ಕಾಲದಲ್ಲಿ ಮನಸ್ಸು ಹೊರಗೋಡಿದರೆ ಏನು ಮಾಡಬೇಕೆನ್ನುವುದನ್ನು ತಿಳಿಸಲಾಗುತ್ತಿದೆ-

**೨೬. ಯತೋ ಯತೋ ನಿಶ್ಚರತಿ ಮನಶ್ಚಂಚಲಮಸ್ಥಿರಮ್**
**ತತಸ್ತತೋ ನಿಯಮ್ಯೈತದಾತ್ಮನ್ಯೇವ ವಶಂ ನಯೇತ್**

**ಅರ್ಥ:** ಚಂಚಲಮ್=ಚಪಲ ಸ್ವಭಾವವುಳ್ಳದ್ದು; ಅಸ್ಥಿರಮ್=ಸ್ಥಿರವಿಲ್ಲದ್ದು; ಮನಃ=ಮನಸ್ಸು; ಯತಃಯತಃ=ಎಲ್ಲೆಲ್ಲಿ (ಯಾವ ಯಾವ ವಿಷಯಗಳಲ್ಲಿ); ನಿಶ್ಚರತಿ=ಸಂಚರಿಸುವುದೋ; ತತಃ ತತಃ=ಅಲ್ಲಲ್ಲಿಂದ; ಏತತ್=ಅದನ್ನು (ಮನಸ್ಸನ್ನು); ನಿಯಮ್ಯ=ಮರಳಿಸಿ (ವಶಪಡಿಸಿಕೊಂಡು); ಆತ್ಮನಿ ಏವ= ಆತ್ಮದಲ್ಲಿಯೇ; ವಶಂ=ಅಧೀನತೆಯನ್ನು; ನಯೇತ್=ಹೊಂದಿರಬೇಕು (ಆತ್ಮದಲ್ಲೇ ಸ್ಥಿರವಾಗಿರುವಂತೆ ಮಾಡಬೇಕು).

**ತಾ॥** ಚಪಲ ಸ್ವಭಾವವುಳ್ಳದ್ದು, ಸ್ಥಿರವಿಲ್ಲದ್ದು ಆದ ಮನಸ್ಸು ಎಲ್ಲೆಲ್ಲಿ (ಯಾವ ಯಾವ ವಿಷಯಗಳಲ್ಲಿ) ಸಂಚರಿಸುತ್ತದೋ ಅಲ್ಲಲ್ಲಿಂದ ಅದನ್ನು ಮರಳಿಸಿ ಆತ್ಮದಲ್ಲೇ ಸ್ಥಾಪಿಸಬೇಕು. ಆತ್ಮಕ್ಕೆ ಅದನ್ನು ಅಧೀನವಾಗಿರಿಸಬೇಕು.

**ವ್ಯಾಖ್ಯೆ:** ಮನಸ್ಸನ್ನು ಆತ್ಮದಲ್ಲೇ ನಿಲ್ಲಿಸಿ ಇತರೆ ಯಾವುದನ್ನೂ ಆಲೋಚಿಸಬಾರದು ಎಂದು ಹಿಂದಿನ ಶ್ಲೋಕದಲ್ಲಿ ಹೇಳಲಾಗಿದೆ. ಒಂದು ವೇಳೆ ಆತ್ಮದಲ್ಲಿ ಅದು ನಿಲ್ಲದೆ ಹೊರಗೆ ಓಡಿದರೆ ಆಗ ಏನು ಮಾಡಬೇಕು ಎನ್ನುವ ಶಂಕೆಗೆ ಇಲ್ಲಿ ಸಮಾಧಾನ ಕೊಡಲಾಗಿದೆ. ಗೀತೆ ಅನುಭವ ಪೂರ್ವಕವಾದ ಶಾಸ್ತ್ರ (Practical Science)ವಾದುದರಿಂದ ಸಾಧಕನು ಎದುರಿಸುವ ಕಷ್ಟನಷ್ಟಗಳೆಲ್ಲವು ಗಳನ್ನು ಮೊದಲೇ ಊಹಿಸಿ ಸಮಾಧಾನವನ್ನು ಕೊಡಲಾಗಿದೆ.

ಮನಸ್ಸು ಬಹಳ ಚಪಲವಾದುದು. ಪ್ರಾರಂಭ ಸ್ಥಿತಿಯಲ್ಲಿ ಅದು ಸ್ಥಿರವಾಗಿರದು. ಆತ್ಮಧ್ಯಾನದಲ್ಲಿ ಅದನ್ನು ಸಂಲಗ್ನಿಸಿದರೂ ಹಿಂದಿನ ಅಭ್ಯಾಸದಿಂದ ಆಕಸ್ಮಾತ್ತಾಗಿ ಹೊರಗಡೆಗೆ ಓಡಿ ವಿಷಯದ ಮೇಲೆ ಬೀಳುತ್ತಿರುತ್ತದೆ. ಆಗ ಸಾಧಕನು ಏನು ಮಾಡಬೇಕು? ಎಲ್ಲೆಲ್ಲಿಗೆ ಅದು ಓಡುವುದೋ ಅಲ್ಲಲ್ಲಿಂದ (ಆಯಾ ವಿಷಯಗಳಿಂದ) ಮರಳಿಸಬೇಕು. ಆದರೆ ಅದು ಸುಮ್ಮನೆ ಹಿಂತಿರುಗುವುದೇ? ಆಯಾ ವಿಷಯಗಳಲ್ಲಿರುವ ನಶ್ವರಾತ್ವಾದಿ

ದೋಷಗಳನ್ನು ವಿಚಾರಿಸಿ ಮನಸ್ಸಿಗೆ ನೆಮ್ಮದಿಯಾಗಿ ತಿಳಿಹೇಳಿದಲ್ಲಿ ಅವುಗಳ ಮೇಲೆ ವಿರಕ್ತಿ ಹುಟ್ಟಿ, ಅಸಹ್ಯವೇರ್ಪಡುವುದು. ಆಗ ಅದು ಅಲ್ಲಿಂದ ಮರಳುವುದು. 'ದುಃಖದೋಷಾನುದರ್ಶನಮ್' ಎನ್ನುವ ಈ ಪದ್ಧತಿಯನ್ನು ಭಗವಂತನು ಮುಂದೆ ಹೇಳುವನು. ಆದ್ದರಿಂದ ವಿವೇಕ ವೈರಾಗ್ಯಾದಿಗಳ ಸಹಾಯದಿಂದ ಮನಸ್ಸಿಗೆ ವಿಷಯಗಳಲ್ಲಿಯ ದೋಷಗಳನ್ನು ಚೆನ್ನಾಗಿ ವಿವರಿಸಿ, ಅಲ್ಲಿಂದ ಅದನ್ನು ಮರಳಿಸಿ ಆತ್ಮದಲ್ಲಿ ಸ್ಥಾಪಿಸಬೇಕು. ಬಾಹ್ಯದಲ್ಲಿರುವುದು ದುಃಖಮಿಶ್ರಿತವಾದ ಕ್ಷಣಿಕ ಸುಖವೆಂದೂ, ಅಭ್ಯಂತರದಲ್ಲಿಯ ಆತ್ಮದಲ್ಲಿರುವುದು ನಿರತಿಶಯವಾದ ವಿಚ್ಛಿನ್ನ ಸುಖವೆಂದು ಬೋಧಿಸಿದಾಗ ಮಾತ್ರ ಮನಸ್ಸು ತುಚ್ಛ ಸುಖಗಳಿಗಾಗಿ ಇಷ್ಟಪಡದೆ, ವಿಷಯಗಳಿಂದ ಹಿಂದಿರುಗಿ ಆತ್ಮದ ಕಡೆಗೆ ವಾಲುವುದು. ಈ ಪ್ರಕಾರವಾಗಿ ವಿವೇಕಿಯಾದವನು ಮನಸ್ಸನ್ನು ಆತ್ಮದಲ್ಲಿರಿಸಿ ಆತ್ಮಕ್ಕೆ ಅಧೀನವಾಗಿರಿಸಬೇಕೆಂದು ಇಲ್ಲಿ ಹೇಳಲಾಗಿದೆ. ಅಜ್ಞಾನಿಗಳಲ್ಲಿ ಆತ್ಮ ಮನಸ್ಸಿಗೆ ಅಧೀನವಾಗಿರುವುದು. ಅಂದರೆ ಮನಸ್ಸು ಹೇಳಿದ ಹಾಗೆ ಮನುಜನು ಕುಣಿಯುತ್ತಾನೆ. ಹಾಗಲ್ಲದೆ ಮನಸ್ಸು ಆತ್ಮಕ್ಕೆ ಅಧೀನವಾದಾಗಲೇ ಶಾಂತಿ ಸುಖಗಳು ಉಂಟಾಗುತ್ತವೆ. ಆತ್ಮದ್ದು ಮೇಲುಗೈಯಾಗಿರಬೇಕೇ ಹೊರತು ಮನಸ್ಸಿನದಲ್ಲ. ಆದ್ದರಿಂದಲೇ **'ಆತ್ಮನ್ಯೇವ ವಶಂ ನಯೇತ್'**- ಮನಸ್ಸನ್ನು ಆತ್ಮಕ್ಕೆ ಅಧೀನವಾಗಿರಿಸಬೇಕೆಂದು ಭಗವಂತನು ಆದೇಶಿಸುತ್ತಿದ್ದಾನೆ.

ಸಾಧಕನು ಮನಸ್ಸಿನ ಚರ್ಯೆಗಳನ್ನು ಚೆನ್ನಾಗಿ ಗಮನಿಸುತ್ತಿರಬೇಕು. ಅಜ್ಞಾನಿಯು ತನ್ನ ಮನಸ್ಸಿನಲ್ಲಿ ಐಕ್ಯವಾಗಿ ಹೋಗಿ ಮನೋವಿಕಾರಗಳನ್ನು ತನಗಿಂತ ಭಿನ್ನವಾಗಿ ನೋಡಲು ಸಾಧ್ಯವಿಲ್ಲದವನಾಗಿದ್ದಾನೆ. ಆದ್ದರಿಂದ ಅವುಗಳನ್ನು ನಿಗ್ರಹಿಸಲಾರದೆ ಹೋಗುವನು. ವಿವೇಕವಂತನಾದರೋ ತನ್ನಲ್ಲಿ ವಿಕಾರ ಉದಯಿಸುತ್ತಲೇ ಅದನ್ನು ಸಾಕ್ಷಿಯಾಗಿ ನೋಡುತ್ತಾ ನಿಗ್ರಹಿಸಬಲ್ಲನು. ಮನಸ್ಸಿನ ಸೂಕ್ಷ್ಮ ಚಲನೆಗಳನ್ನು ಅಜ್ಞಾನಿ ನೋಡಲಾರನು. ಧ್ಯಾನಯೋಗಿಯಾದರೋ ಅದರ ಚರ್ಯೆಗಳನ್ನು ಚೆನ್ನಾಗಿ ವೀಕ್ಷಿಸುತ್ತಿರುತ್ತಾನೆ. ಇಂತಹ ವೀಕ್ಷಣಾಭಾವವನ್ನು ಅಭ್ಯಸಿಸಬೇಕೆಂದು ಭಗವಂತನು ಈ ಶ್ಲೋಕದಲ್ಲಿ ಬೋಧಿಸುತ್ತಿದ್ದಾನೆ. ಸಂಕಲ್ಪವು ಮನಸ್ಸಿನ ಒಂದು ರೂಪ. ಆದ್ದರಿಂದ ಯಾವ ಯಾವ ಸಂಕಲ್ಪವು ಒಳಗೆ ಉದಯಿಸಿ ದೃಶ್ಯ ವಿಷಯಗಳ ಕಡೆ ಹೋಗುತ್ತಿರುವುದೋ ಅದನ್ನು ಅಲ್ಲಿಂದ ತಿರುಗಿಸಿ ತಂದು ಆತ್ಮದಲ್ಲಿ ನೆಲೆಗೊಳಿಸಬೇಕು. ಇದು ಬಿಟ್ಟರೆ ಶಾಂತಿಗೆ ಬೇರೆ ಮಾರ್ಗವಿಲ್ಲ. ಅಂತಹ ಆತ್ಮಸ್ಥಿತಿಯೇ ಜೀವನದ ಪರಮಲಕ್ಷ್ಯ.

ಪ್ರ : ಮನಸ್ಸಿನ ಸ್ವಭಾವ ಎಂತಹದು?

ಉ : ಚಂಚಲವಾದದ್ದು, ಸ್ಥಿರತೆಯಿಲ್ಲದ್ದು.

ಪ್ರ : ಮನಸ್ಸು ಆತ್ಮದಲ್ಲಿ ನಿಲ್ಲದೆ ಹೊರಗೋಡಿದರೆ ಏನು ಮಾಡಬೇಕು?

ಉ: ಎಲ್ಲೆಲ್ಲಿ ಅದು ಹೋಗುವುದೋ, ಅಲ್ಲಿಂದ (ವಿವೇಕದ ಸಹಾಯದಿಂದ) ಅದನ್ನು ಮರಳಿಸಿ ತಿರುಗಿ ಆತ್ಮದಲ್ಲಿ ಸ್ಥಾಪಿಸಬೇಕು. ಅದನ್ನು ಆತ್ಮಕ್ಕೆ ಅಧೀನಗೊಳಿಸಬೇಕು.

**ಅ॥** ಮನಸ್ಸನ್ನು ವಿಷಯಗಳಿಂದ ಮರಳಿಸಿ ಆತ್ಮದಲ್ಲಿ ಸ್ಥಾಪಿಸುವುದರಿಂದ ಉಂಟಾಗುವ ಫಲಗಳನ್ನು ಹೇಳಲಾಗಿದೆ-

**೨೭. ಪ್ರಶಾಂತಮನಸಂ ಹ್ಯೇನಂ ಯೋಗಿನಂ ಸುಖಮುತ್ತಮಮ್**
**ಉಪೈತಿ ಶಾಂತರಜಸಂ ಬ್ರಹ್ಮಭೂತಮಕಲ್ಮಷಮ್**

**ಅರ್ಥ:** ಪ್ರಶಾಂತಮನಸಮ್=ವಿಶೇಷವಾಗಿ ಶಾಂತಿಮನಸ್ಕನಾದವನು, ಶಾಂತರಜಸಮ್=(ಕಾಮಕ್ರೋಧಾದಿರೂಪ) ರಜೋಗುಣ ವಿಕಾರಗಳಿಲ್ಲದವನು; ಬ್ರಹ್ಮಭೂತಮ್=ಬ್ರಹ್ಮಭಾವವನ್ನು ಹೊಂದಿದವನು; ಅಕಲ್ಮಷಮ್=ದೋಷರಹಿತನು (ಆಗಿ); ಏನಮ್=ಈ; ಯೋಗಿನಮ್=ಯೋಗಿಯನ್ನು; ಉತ್ತಮಮ್=ಶ್ರೇಷ್ಠವಾದ; ಸುಖಮ್=ಸುಖವು; ಉಪ ಏತಿಹಿ=ಹೊಂದುತ್ತಿರುವುದಲ್ಲವೇ!

**ತಾ॥** ಪ್ರಶಾಂತ ಚಿತ್ತನು, (ಕಾಮಕ್ರೋಧಾದಿ) ರಜೋಗುಣ ವಿಕಾರಾದಿಗಳಿಲ್ಲದವನು, ಬ್ರಹ್ಮಭೂತವನ್ನು ಹೊಂದಿದವನು ಹಾಗು ದೋಷರಹಿತನಾದ ಈ ಧ್ಯಾನಯೋಗಿಯು ಸರ್ವೋತ್ತಮವಾದ ಸುಖವನ್ನು (ಆತ್ಮಾನಂದವನ್ನು) ಹೊಂದುತ್ತಿರುವನಲ್ಲವೇ!. (ಹಾಗೆ ಹೊಂದುವುದು ಶಾಸ್ತ್ರ ಪ್ರಸಿದ್ಧವೆಂದು ಭಾವ)

**ವ್ಯಾಖ್ಯೆ:** ನಿರತಿಶಯ ಸುಖ ಯಾರಿಗೆ ಉಂಟಾಗುವುದೋ ಇಲ್ಲಿ ವಿವರಿಸಲಾಗಿದೆ. ಪ್ರಪಂಚದಲ್ಲಿ ಸಾಮಾನ್ಯ ಜನರೆಲ್ಲಾ ಅನುಭವಿಸುವುದು ಉತ್ತಮ ಸುಖವಲ್ಲ. ದೃಶ್ಯ ವಸ್ತುಗಳಲ್ಲಿ ಪೂರ್ಣ ಸುಖವಿಲ್ಲ. ಕಾಲಕ್ಕೆ, ದೇಶಕ್ಕೆ ಒಳಗಾಗಿರುವ ಸುಖವು ಶಾಶ್ವತವಾದುದು ಆಗುವುದೇ ಇಲ್ಲ. ಅದು ಇಂದ್ರಿಯ ಸುಖವಾದರೂ, ಹಿರಣ್ಯಗರ್ಭ ಸುಖವಾದರೂ ಸರಿಯೇ. ಆತ್ಮಸುಖವೊಂದೇ ದೇಶಕಾಲವಸ್ತುಗಳಿಗೆ ಒಳಗಾಗದೆ ಇದೆ. ಅದ್ದರಿಂದಲೇ ಅದನ್ನು ಇಲ್ಲಿ 'ಉತ್ತಮ ಸುಖ'ವೆಂದು ಹೇಳಲಾಗಿದೆ. ಇದರಿಂದ, ಬೇರೆ ಸುಖಗಳೆಲ್ಲವೂ ನಿಕೃಷ್ಟವೆಂದೇ ಅರ್ಥವಾಗುತ್ತದೆ. ವಿವೇಕಿಗಳು ಅದಕ್ಕಾಗಿ ಪ್ರಯತ್ನಿಸದೆ ಪರಿಪೂರ್ಣ ಆತ್ಮಸುಖವನ್ನೇ ಅನ್ವೇಷಿಸುವರು. ಯಾವ ಯಾವ ಸಾಧನೆಗಳನ್ನು ಅವಲಂಬಿಸುವುದರಿಂದ ಮಹೋನ್ನತ ಸುಖ ಜೀವಿಗೆ ಪ್ರಾಪ್ತಿಯಾಗುವುದೆನ್ನುವುದನ್ನು ಈ ಶ್ಲೋಕದಲ್ಲಿ ತಿಳಿಸಲಾಗಿದೆ.

೧) ಮನಸ್ಸನ್ನು ಪ್ರಶಾಂತವಾಗಿಡುವುದು.

೨) ರಜೋಗುಣ ತಮೋಗುಣ ವಿಕಾರಗಳಾವುವೂ ಚಿತ್ತದಲ್ಲಿ ಇಲ್ಲದಂತೆ ನೋಡಿಕೊಳ್ಳುವುದು.

೩) ಹೃದಯದಲ್ಲಿ ವಾಸನಾಮಾಲಿನ್ಯವಾಗಲಿ, ಪಾಪದೋಷವಾಗಲಿ ಇಲ್ಲದಿರುವುದು.

ಎನ್ನುವ ಮೂರು ಸಾಧನೆಗಳಿಂದ ಮನುಜನು ಬ್ರಹ್ಮಸ್ವರೂಪಿಯೇ ಆಗಬಲ್ಲನು. ಆಗ ಮೇಲೆ ತಿಳಿಸಿದ ಉತ್ತಮ ಸುಖವು ಆತನನ್ನು ಹುಡುಕಿಕೊಂಡು ಬಂದು ಆತನ ವಶವಾಗುವುದು. ಲೋಕದಲ್ಲಿ ಜನರೆಲ್ಲರೂ ಸುಖವೆಲ್ಲಿದೆಯೆಂದು ಹುಡುಕುತ್ತಾ ಅದರ ಹಿಂದೆ ಓಡುತ್ತಾ ಪರದಾಡುತ್ತಾ ಇರಬೇಕಾದರೆ, ಮೇಲಿನ ಸುಗುಣಗಳುಳ್ಳ ಯೋಗಿಯನ್ನು ಸುಖವು ತನ್ನಷ್ಟಕ್ಕೆ ತಾನೇ ಬಂದು ಸೇರುವುದಂತೆ! ಆಹಾ! ಯೋಗಿಯದು ಎಂತಹ ಮಹೋನ್ನತ ಸ್ಥಿತಿಯೋ ಆಲೋಚಿಸಿ! ಆ ಸ್ಥಿತಿಯನ್ನು ಪ್ರತಿಯೊಬ್ಬರೂ ಹೊಂದಬಹುದು. ಆದರೆ ಮೇಲೆ ತಿಳಿಸಿದ ಮೂರು ಸಾಧನೆಗಳನ್ನು ಮಾತ್ರ ತಪ್ಪದೆ ಆಚರಿಸಬೇಕು.

ಪರಮಾತ್ಮನನ್ನು ಹೊಂದಲು ಅಡ್ಡಗೋಡೆಯಂತೆ ಅಡಚಣೆಯಾಗಿರುವ ಚಿತ್ತಮಾಲಿನ್ಯವನ್ನು ಮೊದಲು ತೊಲಗಿಸಬೇಕು. ದೃಶ್ಯವಾಸನೆಗಳನ್ನು ನಿರ್ಮೂಲಮಾಡಿ ಚಿತ್ತವನ್ನು 'ಅಕಲ್ಮಷ'ವಾಗಿ ಮಾಡಬೇಕು. ಅನೇಕ ವರ್ಷಗಳಿಂದ ಮುಚ್ಚಲ್ಪಟ್ಟ ಮನೆಯನ್ನು ಒಂದು ಸಾರಿ ತೆರೆದು ನೋಡಿದರೆ, ಒಳಗೆ ಧೂಳು, ಬೂಜು, ಕಸ, ಇಲಿಗಳು, ಬಾವಲಿಗಳು, ಹೆಗ್ಗಣಗಳು,

ಹಾವುಗಳು, ಚೇಳುಗಳು, ಪಿಶಾಚಿಗಳು ನಿವಸಿಸುತ್ತಿರುತ್ತವೆಯಲ್ಲವೇ! ಆಗ ಅವುಗಳನ್ನೆಲ್ಲಾ ನಿರ್ಮೂಲಗೊಳಿಸಿ ಕಸಗುಡಿಸಿ, ತೊಳೆದಾಗ ಮಾತ್ರ ಆ ಮನೆ ಹೇಗೆ ನಿವಾಸಯೋಗ್ಯವಾಗುವುದೋ, ಹಾಗೆಯೇ ಜೀವಿಯ ಉಪಾಧಿ ಎಷ್ಟು ಜನ್ಮಗಳಿಂದಲೋ ಅಜ್ಞಾನಾಂಧಕಾರದಲ್ಲಿ ಮುಳುಗಿ ಹೋಗಿರುವುದರಿಂದ, ಕಾಮಕ್ರೋಧಾದಿ ಸರ್ಪಗಳು, ರಾಗದ್ವೇಷಾದಿ ಮೂಷಿಕಗಳು ಅದರಲ್ಲಿ ಸೇರಿವೆ. ವಿವೇಕ, ವೈರಾಗ್ಯ, ಭಕ್ತ್ಯಾದಿ ಮಾರ್ಗಗಳಿಂದ ಪಾಪ ಹಾಗು ವಾಸನಾಧೂಳಿಯನ್ನು ಪ್ರಕ್ಷಾಳನೆ ಮಾಡಿ ಜ್ಞಾನ ಜ್ಯೋತಿಯನ್ನು ಹೊತ್ತಿಸುವುದರಿಂದ ಆತ್ಮದೇವನಿಗೆ ನಿವಾಸಯೋಗ್ಯವಾಗುವುದು. ಮಲಿನ ಹೃದಯದಲ್ಲಿ ಭಗವಂತನು ನಿವಸಿಸುವುದಿಲ್ಲ. ಆದ್ದರಿಂದಲೇ 'ಶಾಂತರಜಸಮ್' 'ಅಕಲ್ಮಷಮ್' ಮುಂತಾದ ಪದಗಳ ಮೂಲಕ ಹೃದಯನೈರ್ಮಲ್ಯದ ಆವಶ್ಯಕತೆಯನ್ನು ಗೀತಾಚಾರ್ಯನು ಒತ್ತಿ ಹೇಳಿರುವನು. 'ಪ್ರಶಾಂತ ಮನಸಮ್' ಎಂದು ಹೇಳುವುದರಿಂದ ಮನಸ್ಸು ಯಾವ ವಿಧವಾದ ಅಡೆತಡೆಗಳು ಚಾಪಲ್ಯವಿಲ್ಲದೆ, ಸಮವಾಗಿ, ಶಾಂತವಾಗಿ ಇರಬೇಕೆಂದು ಉದ್ಬೋಧಿಸಿದಂತಾಗಿದೆ. ಆದ್ದರಿಂದ ಭಗವತ್ಸಾಕ್ಷಾತ್ಕಾರಕ್ಕೆ, ಆತ್ಯಂತಿಕ ಸುಖಾನುಭೂತಿಗೆ ಮನಸ್ಸಿನ (೧) ನಿಶ್ಚಲತೆ (೨) ನಿರ್ಮಲತೆ ಎರಡೂ ಪರಮಾವಶ್ಯಕಗಳು ಎಂದು ಸ್ಪಷ್ಟವಾಗುತ್ತಿದೆ.

ಇಂತಹ ಸುಗುಣಗಳನ್ನು ಹೊಂದಿರುವವನು ಸಾಕ್ಷಾತ್ ಬ್ರಹ್ಮಸ್ವರೂಪಿಯೇ. ಏಕೆಂದರೆ ಆವರಣ ತೊಲಗಿದಾಗ ಜೀವಿಯು ಶಿವನೇ ಆಗುತ್ತಿದ್ದಾನೆ. ಚಿತ್ತದಲ್ಲಿಯ ದೋಷಗಳು ತೊಲಗಿ ಹೋದಾಗ 'ಚಿತ್ತವು' ನಿರ್ಮಲವಾಗುವುದು. ಅಂದರೆ ಚಿದ್ರೂಪಾತ್ಮದಲ್ಲಿ ಲಯವಾಗಿ ಬ್ರಹ್ಮಾಕಾರವಾಗಿ ಬೆಳಗುತ್ತದೆ. ಆದ್ದರಿಂದ ಅಲ್ಲಿ ಜೀವಿಯು ಬ್ರಹ್ಮಭೂತನಾಗುವನು. ಆ ಬ್ರಹ್ಮಭೂತನ ಬಳಿಗೆ ಉತ್ತಮ ಸುಖವು ಓಡಿ ಬಂದು ಸೇರುವುದು. ಮೋಕ್ಷಲಕ್ಷ್ಮಿ ಆತನ ಕೊರಳಿಗೆ ಮಾಲೆ ಹಾಕುವಳು. ಯಾವುದರಿಂದ ಮೋಕ್ಷವು ಪ್ರಾಪ್ತಿಯಾಗುವುದೋ ಆ ಪ್ರಯತ್ನದಲ್ಲಿಯೇ ದೃಷ್ಟಿಯಿಟ್ಟು ಅದನ್ನು ಸಾಧಿಸುವುದರಲ್ಲೇ ಏಕಚಿತ್ತನಾಗಿದ್ದಲ್ಲಿ ಮೋಕ್ಷವು ತನ್ನಷ್ಟಕ್ಕೆ ತಾನೇ ಬಂದು ಸೇರುವುದು. ಅಲ್ಲಿ ತಾನು ಬೇಡವೆಂದರೂ ಬ್ರಹ್ಮಾನಂದ ತನಗೆ ತಾನೇ ಪ್ರಾಪ್ತಿಯಾಗುವುದು. ಆದ್ದರಿಂದ 'ನನಗಿನ್ನೂ ಮೋಕ್ಷವೇರ್ಪಡಲಿಲ್ಲವಲ್ಲ, ಆನಂದವು ನನಗೆ ಉಂಟಾಗಲಿಲ್ಲವಲ್ಲ' ಎಂದು ಯಾರೂ ಅಂಜಬೇಕಾಗಿಲ್ಲ. ಯಾವ ಕ್ಷಣದಲ್ಲಿ ಜನರು ತಮ್ಮ ಮನಸ್ಸನ್ನು ಕಲ್ಮಷರಹಿತವಾಗಿ, ರಜೋ ತಮೋಗುಣಗಳಿಂದ ವರ್ಜಿತಗೊಳಿಸಿಕೊಳ್ಳುವರೋ ಆ ಕ್ಷಣದಲ್ಲೇ ಸರ್ವೋತ್ತಮ ಸುಖ ಬಂದು ಅವರನ್ನು ವರಿಸುವುದು- ಎಂದು ಭಗವಂತನು ಈ ಶ್ಲೋಕದಲ್ಲಿ ಸರ್ವರಿಗೂ ಅಭಯ ನೀಡಿರುವನು. ಆದ್ದರಿಂದ ತತ್ಪ್ರಯತ್ನಗಳನ್ನು ಆಚರಿಸಿ ಆನಂದಾನುಭೂತಿಯನ್ನು ಪಡೆದು ಜನ್ಮವನ್ನು ಧನ್ಯಗೊಳಿಸಿಕೊಳ್ಳಬೇಕು.

ಪ್ರ : ಪ್ರಪಂಚದಲ್ಲಿಯ ಎಲ್ಲಾ ಸುಖಗಳಲ್ಲಿ ಉತ್ತಮವಾದ ಸುಖ ಯಾವುದು?

ಉ : ಮೋಕ್ಷ ಸುಖ (ಆತ್ಮಾನಂದ).

ಪ್ರ : ಅದನ್ನು ಯಾರು ಹೊಂದಬಲ್ಲರು?

ಉ: ೧) ಪ್ರಶಾಂತ ಚಿತ್ತರು ೨) ರಜೋ ತಮೋಗುಣ ರಹಿತರು ೩) ದೋಷ ವರ್ಜಿತರು- ಆದವರು ಆ ಉತ್ತಮ ಸುಖವನ್ನು ಹೊಂದಬಲ್ಲರು.

ಪ್ರ : ಆದ್ದರಿಂದ ಉತ್ತಮ ಸುಖವನ್ನು ಪಡೆಯುವ ಉಪಾಯಗಳಾವುವು?

ಉ: ೧) ಮನಸ್ಸನ್ನು ಪ್ರಶಾಂತವಾಗಿಟ್ಟುಕೊಳ್ಳಬೇಕು ೨) ಮನಸ್ಸಿನಿಂದ ರಜೋಗುಣ ತಮೋಗುಣ ಕಾಮಾದಿ ವಿಕಾರಗಳನ್ನು ತೊಲಗಿಸಬೇಕು. ೩) ಮನಸ್ಸಿನಲ್ಲಿಯ ವಾಸನಾಮಾಲಿನ್ಯವನ್ನು, ಪಾಪವನ್ನೂ ಹೊರಹಾಕಿ ಅದನ್ನು ದೋಷರಹಿತವಾಗಿ ಮಾಡಿಕೊಳ್ಳಬೇಕು.

ಅ|| ಆತ್ಮಧ್ಯಾನಪರನಾದ ನಿರ್ಮಲಚಿತ್ತನಿಗೆ ಉಂಟಾಗುವ ಫಲಗಳನ್ನು ಮತ್ತೆ ಹೇಳಲಾಗುತ್ತಿದೆ-

**೨೮. ಯುಂಜನ್ನೇವಂ ಸದಾಽಽತ್ಮಾನಂ ಯೋಗೀ ವಿಗತಕಲ್ಮಷಃ**
**ಸುಖೇನ ಬ್ರಹ್ಮಸಂಸ್ಪರ್ಶಮತ್ಯಂತಂ ಸುಖಮಶ್ನುತೇ**

**ಅರ್ಥ:** ಏವಮ್=ಈ ಪ್ರಕಾರವಾಗಿ; ಸದಾ=ಯಾವಾಗಲೂ, ಆತ್ಮಾನಮ್= ಮನಸ್ಸನ್ನು; ಯುಂಜಾನ್=ಆತ್ಮದಲ್ಲಿ ನಿಲ್ಲಿಸಿ; ವಿಗತಕಲ್ಮಷಃ=ದೋಷರಹಿತನಾದ; ಯೋಗೀ=ಯೋಗಿ; ಸುಖೇನ=ಸುಲಭವಾಗಿ; ಬ್ರಹ್ಮಸಂಸ್ಪರ್ಶಮ್=ಬ್ರಹ್ಮಾನುಭವರೂಪವಾದ; ಅತ್ಯಂತಮ್=ಅತಿ ಶ್ರೇಷ್ಠವಾದ; ಸುಖಮ್=ಆನಂದವನ್ನು; ಅಶ್ನುತೇ=ಹೊಂದುತ್ತಿದ್ದಾನೆ.

**ತಾ||** ಈ ಪ್ರಕಾರವಾಗಿ ಮನಸ್ಸನ್ನು ಯಾವಾಗಲೂ ಆತ್ಮದಲ್ಲಿಯೇ ನಿಲ್ಲಿಸಿರುವ ದೋಷರಹಿತನಾದ ಯೋಗಿಯು ಬ್ರಹ್ಮಾನುಭವರೂಪವಾದ ಪರಮ ಸುಖವನ್ನು ಸುಲಭವಾಗಿ ಹೊಂದುತ್ತಿದ್ದಾನೆ.

**ವ್ಯಾಖ್ಯೆ:** ಬ್ರಹ್ಮಾನಂದ ಸುಲಭವಾಗಿ ಲಭಿಸುವ ಉಪಾಯವನ್ನು ಇಲ್ಲಿ ಹೇಳಲಾಗುತ್ತಿದೆ. ಅನೇಕರು ಈ ಪ್ರಶ್ನೆಯನ್ನೇ ಕೇಳುತ್ತಿದ್ದಾರೆ. 'ಮೋಕ್ಷವು ಸುಲಭವಾಗಿ ಲಭಿಸುವ ಮಾರ್ಗವೇನು?' ಎಂದು. ಅದಕ್ಕೆ ಭಗವಂತನೇ ಈ ಶ್ಲೋಕದಲ್ಲಿ ಸಮಾಧಾನವಿತ್ತಿರುವನು. ಮೋಕ್ಷವು ಸುಲಭವಾಗಿ ಲಭಿಸಬೇಕೆಂದರೆ ಎರಡು ಸಾಧನೆಗಳನ್ನು ಮಾಡಬೇಕು- ೧) ಮನಸ್ಸಿನಿಂದ ಪಾಪವೆಂಬ ದುರ್ಗುಣಗಳನ್ನು, ಕಾಮಾಕ್ರೋಧಾದಿಗಳನ್ನು ಹೊರಗಟ್ಟಬೇಕು. ೨) ಮನಸ್ಸನ್ನು ನಿರಂತರವಾಗಿ ಆತ್ಮದಲ್ಲಿ ಲಯಿಸಿರಬೇಕು. (ಆತ್ಮಧ್ಯಾನಪರನಾಗಿರಬೇಕು) ಮೊಟ್ಟ ಮೊದಲಿಗೆ ಚಿತ್ತದಲ್ಲಿಯ ಕಲ್ಮಷ (ದೋಷ)ವನ್ನು ದೂರಗೊಳಿಸಬೇಕು (ವಿಗತಕಲ್ಮಷಃ). ಈ ಕಲ್ಮಷರಾಹಿತ್ಯವನ್ನು ಕುರಿತು ಭಗವಂತನು ಗೀತೆಯಲ್ಲಿ ಪದೇ ಪದೇ ಎಚ್ಚರಿಕೆ ಕೊಡುತ್ತಿದ್ದಾನೆ. ಏಕೆಂದರೆ ಮಲಿನ ಚಿತ್ತದಲ್ಲಿ ಆತ್ಮಜ್ಞಾನ ಉದಯಿಸುವುದಿಲ್ಲ. ಕಲ್ಮಷ ಚಿತ್ತವು ಆತ್ಮದಲ್ಲಿ ಲಯಿಸುವುದಿಲ್ಲ. ದೃಶ್ಯ ವಾಸನೆಗಳು, ಪಾಪವುಳ್ಳ ಮನಸ್ಸು ವಿಜಾತೀಯವಾಗಿರುವುದರಿಂದ ಸಜಾತೀಯವಾದ ಆತ್ಮದಲ್ಲಿ ಅದು ಬೆರೆಯದು. ಆದ್ದರಿಂದ ಅದರಲ್ಲಿಯ ದೋಷಗಳನ್ನು ಪ್ರಯತ್ನ ಪೂರ್ವಕವಾಗಿ ತೊಲಗಿಸಿ ಅದನ್ನು ನಿರ್ಮಲ ಮಾಡಿದಲ್ಲಿ ಮಾತ್ರ ಅದು ಆತ್ಮದಲ್ಲಿ ವಿಲೀನವಾಗುವುದು. ವಾಸನಾರಾಹಿತ್ಯ, ಆತ್ಮಚಿಂತನೆ ಎರಡೂ ಆವಶ್ಯಕಗಳೇ ಎಂದು ಈ ಶ್ಲೋಕದಲ್ಲಿ ಹೇಳಲಾಗಿದೆ. ಒಂದು ಕಡೆ ಚಿತ್ತವನ್ನು ನಿರ್ಮಲ ಮಾಡುತ್ತಾ ಮತ್ತೊಂದು ಕಡೆ ಆತ್ಮಚಿಂತನದಿಂದ ಅದನ್ನು ಆತ್ಮದಲ್ಲಿ ಬೆಳಗುವ ಯತ್ನವನ್ನು ಮಾಡುತ್ತಾ ಇರಬೇಕು.

ಈ ಪ್ರಯತ್ನವನ್ನು ಯಾವಾಗಲೋ ಒಮ್ಮೆ ಮಾಡಿದರೆ ಸಾಲದೆಂದೂ ನಿರಂತರ ಮಾಡುತ್ತಿರಬೇಕೆಂದು ತಿಳಿಸಲಾಗಿದೆ. 'ಸದಾ' ಎನ್ನುವ ಪದದ ಅರ್ಥವು ಇದೇ ಆಗಿದೆ. ಮೇಲೆ ತಿಳಿಸಿದ ಸಾಧನೆಗಳನ್ನು ಮಾಡುವವರಿಗೆ ಬ್ರಹ್ಮ ಸಾಕ್ಷಾತ್ಕಾರ ಸುಲಭವಾಗಿ ಲಭಿಸುವುದು; ಮಾಡದವರಿಗೆ ಎಷ್ಟು ಕಷ್ಟಪಟ್ಟರೂ ಲಭಿಸದು. 'ಬ್ರಹ್ಮಸಂಸ್ಪರ್ಶಮ್' ಎಂದು ಹೇಳಿರುವುದರಿಂದ

ಯೋಗಿ ಸಾಕ್ಷಾತ್ ಪರಮಾತ್ಮನನ್ನು ಸ್ಪರ್ಶಿಸುವನೆಂದು ಸ್ಪಷ್ಟವಾಗಿದೆ. ಪ್ರಪಂಚದ ದೃಶ್ಯವಿಷಯಗಳಲ್ಲಿ ಕಾಲಕಳೆಯುವ ಯಾವ ವ್ಯಕ್ತಿಯೇ ಆಗಲಿ, ದೃಶ್ಯ ವಸ್ತು ಯಾವುದಾದರೂ ಸರಿಯೇ, ಬ್ರಹ್ಮವನ್ನು ಸೇರಲಾರನು. ಮಿಥ್ಯಾವಸ್ತುವು ಸತ್ಯವಸ್ತುವನ್ನು ಹೇಗೆ ಸ್ಪರ್ಶಿಸಬಲ್ಲದು. ಸ್ವಪ್ನ ಪದಾರ್ಥವು ಜಾಗ್ರತೆಯನ್ನು ತಾಕಬಲ್ಲದೆ? ನಿರ್ಮಲ ಚಿತ್ತನಾದ ಆತ್ಮಧ್ಯಾನ ಪರಾಯಣನಾಗಿರುವವನೇ ಬ್ರಹ್ಮವನ್ನು (ಆತ್ಮವನ್ನು) ತಾಕಬಲ್ಲನು. ಬ್ರಹ್ಮದಲ್ಲಿ ಲೀನವಾಗಬಲ್ಲನು. ಆಗ ಅಲ್ಲಿ ಆತನಿಗೆ ಸಿಗುವ ಸುಖ ಅಷ್ಟಿಷ್ಟಲ್ಲ. **'ಯೋವೈ ಭೂಮಾ ತತ್ಸುಖಮ್, ನಾಲ್ಪೇ ಸುಖಮಸ್ತಿ'** (ಛಾಂ. ೭-೨೩-೧) ಅಂದ ಹಾಗೆ ಭೂಮಾ ರೂಪವಾದ ಅನಂತ ಸೌಖ್ಯವು ಆತನಿಗೆ ಉಂಟಾಗುವುದು. ದೃಶ್ಯ ವಸ್ತುಗಳಲ್ಲಿ ಆ ಸುಖವಿರದು. ಆದುದರಿಂದಲೇ ಆ ಆತ್ಮಸುಖವನ್ನು **'ಅತ್ಯಂತ ಸುಖಮ್'** ಎಂದು ಇಲ್ಲಿ ವರ್ಣಿಸಲಾಗಿದೆ. ಹಿರಣ್ಯ ಗರ್ಭನ ಸುಖವೂ ಸಹ ಆ ಆತ್ಮಾನಂದ ಸಾಗರದಲ್ಲಿ ಒಂದು ಬಿಂದು ಎಂದು ಉಪನಿಷತ್ತುಗಳು ಘೋಷಿಸುತ್ತಿವೆ. ಆ ಆತ್ಮಾನಂದವನ್ನು ಯಾರಾದರೂ ಹೊಂದಬಹುದು. ಮೇಲೆ ತಿಳಿಸಿದ ಪ್ರಯತ್ನಗಳನ್ನಾಚರಿಸಿದಲ್ಲಿ ಈ ಜೀವನದಲ್ಲೇ ಹೊಂದಬಲ್ಲರು.

ಪ್ರ : ಮೋಕ್ಷ ಸುಖವನ್ನು ಸುಲಭವಾಗಿ ಪಡೆಯುವ ಉಪಾಯಗಳೇನು?

ಉ: ೧) ಮನಸ್ಸಿನಲ್ಲಿಯ ಪಾಪವಾಸನೆಗಳನ್ನು, ದೋಷಗಳನ್ನು ಹೋಗಲಾಡಿಸಿಕೊಳ್ಳುವುದು ೨) ಮನಸ್ಸನ್ನು ನಿರಂತರವಾಗಿ ಆತ್ಮಜ್ಞಾನದಲ್ಲಿ ಲಗ್ನ ಮಾಡುವುದು.

ಪ್ರ : ಮೋಕ್ಷ ಸುಖ ಎಂತಹದು?

ಉ: ೧) ನಿರತಿಶಯವಾದುದು ೨) ಬ್ರಹ್ಮವನ್ನು ಸ್ಪರ್ಶಿಸಿರುವುದು (ಬ್ರಹ್ಮಾನುಭವ ರೂಪಿಯಾದದ್ದು).

**ಅ||** ಪ್ರಪಂಚದಲ್ಲಿ ವ್ಯವಹರಿಸುವಾಗ ಧ್ಯಾನಯೋಗಿ ಎಂತಹ ಭಾವವನ್ನು ಹೊಂದಿರುವವನೋ ಹೇಳಲಾಗುತ್ತಿದೆ-

**೨೯. ಸರ್ವಭೂತಸ್ಥಮಾತ್ಮಾನಂ ಸರ್ವಭೂತಾನಿ ಚಾತ್ಮನಿ**
**ಈಕ್ಷತೇ ಯೋಗಯುಕ್ತಾತ್ಮಾ ಸರ್ವತ್ರ ಸಮದರ್ಶನಃ**

**ಅರ್ಥ:** ಯೋಗಯುಕ್ತಾತ್ಮಾ=ಯೋಗದಿಂದ ಕೂಡಿರುವ ಮನಸ್ಸುಳ್ಳವನು; ಸರ್ವತ್ರ=ಸಮಸ್ತ ಚರಾಚರ ಪ್ರಾಣಿಗಳಲ್ಲಿ; ಸಮದರ್ಶನಃ=ಸಮದೃಷ್ಟಿಯುಳ್ಳವನಾಗಿ; ಆತ್ಮಾನಾಮ್=ತನ್ನನ್ನು; ಸರ್ವಭೂತಸ್ಥಮ್=ಸಮಸ್ತ ಭೂತ ಕೋಟಿಗಳಲ್ಲಿರುವ ಅವನನ್ನು; ಸರ್ವಭೂತಾನಿ=ಸಮಸ್ತ ಭೂತಗಳನ್ನು; ಆತ್ಮನಿ ಚ=ತನ್ನಲ್ಲಿ ಇರುವಂತೆ; ಈಕ್ಷತೇ=ನೋಡುತ್ತಿದ್ದಾನೆ.

**ತಾ||** ಯೋಗದಿಂದ ಕೂಡಿದ ಮನಸ್ಸುಳ್ಳವನು (ಆತ್ಮೈಕ್ಯವನ್ನು ಹೊಂದಿದ ಯೋಗಿ) ಸಮಸ್ತ ಚರಾಚರ ಪ್ರಾಣಿಕೋಟಿಗಳಲ್ಲಿ ಸಮದೃಷ್ಟಿ ಹೊಂದಿದವನಾಗಿ ತನ್ನನ್ನು ಸರ್ವಭೂತಗಳಲ್ಲಿಯೂ ಹಾಗು ಸರ್ವಭೂತಗಳನ್ನು ತನ್ನಲ್ಲಿಯೂ ನೋಡುತ್ತಿದ್ದಾನೆ.

**ವ್ಯಾಖ್ಯೆ:** ಇಲ್ಲಿ ಯೋಗವೆಂದರೆ ಜೀವ ಬ್ರಹ್ಮೈಕ್ಯ. ಮನಸ್ಸು ಆತ್ಮದಲ್ಲಿ ಬೆರೆತು ಹೋಗುವುದೇ (ಐಕ್ಯ ಹೊಂದುವುದು, ವಿಲೀನವಾಗಿ ಹೋಗುವುದೇ) ಯೋಗ. ಅಂತಹ ಯೋಗವನ್ನು ಸಾಧಿಸಿದ ಮಹನೀಯನ ಲಕ್ಷಣಗಳನ್ನು ಇಲ್ಲಿ ವಿವರಿಸುತ್ತಿದ್ದಾನೆ. ಆತನು ಸಮಸ್ತ ಪ್ರಾಣಿಗಳಲ್ಲಿ ತನ್ನನ್ನು, ತನ್ನಲ್ಲಿ ಸಮಸ್ತ ಪ್ರಾಣಿಗಳನ್ನು ವೀಕ್ಷಿಸುತ್ತ ಸರ್ವತ್ರ ಸಮದೃಷ್ಟಿಯನ್ನು ಹೊಂದಿರುವನೆಂದು ಹೇಳಲಾಗಿದೆ. ಅದು ಹೇಗೆ ಸಾಧ್ಯವಾಗುವುದೋ ವಿಚಾರಿಸೋಣ.

ಈ ದೃಶ್ಯ ಜಗತ್ತೆಲ್ಲವೂ ಅಧಿಷ್ಠಾನವಾದ ಆತ್ಮದಲ್ಲಿ ಕಲ್ಪಿತವಾಗಿದೆ. ಸರ್ಪವು ರಜ್ಜುವಿನಲ್ಲಿ ಕಲ್ಪಿತವಾದಂತೆ, ಸ್ವಪ್ನವು ಜಾಗ್ರತ ಪುರುಷನಲ್ಲಿ ಕಲ್ಪಿತಗೊಂಡಂತೆ ಈ ಸಮಸ್ತ ಪ್ರಪಂಚವು, ಸಮಸ್ತ ಪ್ರಾಣಿಕೋಟಿಗಳು, ಅಷ್ಟೇಕೆ, ಬ್ರಹ್ಮಾಂಡವೆಲ್ಲವೂ ಆತ್ಮದಲ್ಲಿಯೇ ಆರೋಪಿತವಾಗಿದೆ. ಆರೋಪಿತ ವಸ್ತುವು ಅಧಿಷ್ಠಾನದಲ್ಲೇ ವಾಸಿಸುವುದಾಗಲಿ ಅನ್ಯತ್ರವಲ್ಲ. ಅನ್ಯತ್ರ ಅದು ವಾಸಿಸುವ ಅವಕಾಶವೇ ಇಲ್ಲ. ಆದ್ದರಿಂದ ಆತ್ಮವೇ ತಾನೆಂದು ಅನುಭೂತಿಗೊಳಿಸಿಕೊಂಡ ಯೋಗಿ ತನ್ನಲ್ಲೇ ಈ ಜಗತ್ತೆಲ್ಲವನ್ನೂ ವೀಕ್ಷಿಸುವನು. ಮತ್ತೆ ಜಗತ್ತಿನಲ್ಲೆಲ್ಲಾ ಅಧಿಷ್ಠಾನವಾದ ಆತ್ಮವೇ ವ್ಯಾಪಿಸಿರುವುದಾದ್ದರಿಂದ ಜಗತ್ತಿನಲ್ಲೆಲ್ಲಾ ತನ್ನನ್ನೇ ನೋಡುವನು. ಇಂತಹ ಸ್ಥಿತಿಯು (ಧ್ಯಾನಯೋಗದಿಂದಲೇ ಆಗಲಿ ಅಥವ ಬೇರೆ ಯಾವ ಯೋಗದಿಂದಲೇ ಆಗಲಿ) ಮನಸ್ಸನ್ನು ಆತ್ಮದಲ್ಲಿ ಐಕ್ಯಗೊಳಿಸಿಕೊಂಡು ಆತ್ಮ ಸಾಕ್ಷಾತ್ಕಾರವನ್ನು ಹೊಂದಿದ ಯೋಗಿಗೆ ಉಂಟಾಗುವುದಾಗಲೀ ಬೇರೆಯವರಿಗಲ್ಲ. ಏಕೆಂದರೆ ತಾನು ಆತ್ಮವೇ ಆಗಲಿ ದೇಹವಲ್ಲವೆಂದು ಉಪಾಧಿಯಲ್ಲವೆಂದು ತಿಳಿದಾಗ ಮಾತ್ರ ಈ ಸರ್ವಾತ್ಮ ಸ್ಥಿತಿ ಸಂಭವಿಸುವುದು. ತಾನು ದೇಹ ಎಂದುಕೊಳ್ಳುವವನು ಇನ್ನೂ ಆತ್ಮವನ್ನು ಸೇರಲಿಲ್ಲವಾದ್ದರಿಂದ ಸರ್ವಭೂತಗಳಲ್ಲಿ ತನ್ನನ್ನಾಗಲಿ, ತನ್ನಲ್ಲಿ ಸರ್ವ ಭೂತಗಳನ್ನಾಗಲಿ ನೋಡಲಾರನು. ದೇಹಭಾವವು ಸಂಕುಚಿತವಾದುದು. ಅಂತಹ ಭಾವನೆಯುಳ್ಳವನು ವಿಶಾಲತ್ವವನ್ನು ಹೊಂದಲಾರ. ದೇಹಕ್ಕೂ ದೇಹಕ್ಕೂ ಮಧ್ಯೆ ಇರುವ ಭೇದವನ್ನೇ ಆತನು ನೋಡುವನು. ಭೇದವೇ ಸ್ಪರ್ಧೆಗೆ, ಅಶಾಂತಿಗೆ ಕಾರಣ. ಆತ್ಮಭಾವನೆಯುಳ್ಳವರು ಉಪಾಧಿಗಳಲ್ಲಿ ಭೇದ ನೋಡದೆ ಎಲ್ಲವನ್ನೂ ಆತ್ಮವಾಗಿಯೇ ಕಾಣುವರು. ಅಂತಹವನಿಗೆ ಇನ್ನು ಪರಪ್ರಾಣಿಗಳ ಮೇಲೆ ದ್ವೇಷವಿರದು. ಎಲ್ಲವೂ ತನ್ನ ಆತ್ಮವೇ, ತನ್ನ ಶರೀರವೇ, ತನ್ನ ಮನಸ್ಸೇ ಅಂದುಕೊಂಡವನಿಗೆ ಮಾತ್ರ ಪೂರ್ಣದಯೆ, ಪೂರ್ಣಕರುಣೆ, ಪೂರ್ಣಪ್ರೇಮ ಉಂಟಾಗಬಲ್ಲದು. ಇದರಿಂದ ನೈತಿಕ ಕ್ಷೇತ್ರ (Ethical field)ಕ್ಕೆ ಆಧಾರ ಆಧ್ಯಾತ್ಮಕ್ಷೇತ್ರವೇ (Spiritual field) ಎಂದು ಸ್ಪಷ್ಟವಾಗುತ್ತಿದೆ. 'ಸರ್ವವೂ ಆತ್ಮವೇ, ಆತ್ಮದಲ್ಲಿಯೇ ಸಮಸ್ತವೂ ಇದೆ' ಎನ್ನುವ ಆಧ್ಯಾತ್ಮಿಕ ಸಿದ್ಧಾಂತವೇ ಸಮಸ್ತ ನೈತಿಕ ಸಂಪತ್ತಿಗೆ, ಸಮಸ್ತ ಗುಣಗಳಿಗೆ ಮೂಲವಾಗಿದೆ.

ಸಾಧಕನು ಯೋಗದಲ್ಲಿ ಪೂರ್ಣತೆಯನ್ನು ಪಡೆಯಲು ಇಂತಹ ಸರ್ವಸಮತ್ವವನ್ನು, ವಿಶಾಲದೃಷ್ಟಿಯನ್ನು ಅಳವಡಿಸಿಕೊಳ್ಳಬೇಕು. ಸಮದೃಷ್ಟಿಯುಳ್ಳವನೇ ನಿಜವಾದ ಯೋಗಿಯೆಂದು ತಿಳಿಯಬೇಕು. ಒಬ್ಬನು ಯೋಗಿಯೇ ಅಥವ ಇಲ್ಲವೇ ಎಂದು ತಿಳಿದುಕೊಳ್ಳಲು ಈ ಸರ್ವಭೂತ ದಯೆ ಮತ್ತು ಸಮತ್ವ ಉಪಯೋಗವಾಗುವುದು.

ಪ್ರ : (ಆರೂಢನಾದ) ಯೋಗಿ ಎಂತಹ ಲಕ್ಷಣಗಳನ್ನು ಹೊಂದಿರುವನು?

ಉ: ಎಲ್ಲಾ ಕಡೆ ಸಮದೃಷ್ಟಿಯುಳ್ಳವನಾಗಿ, ಸಮಸ್ತ ಪ್ರಾಣಿ ಕೋಟಿಗಳಲ್ಲಿ ತನ್ನನ್ನೂ (ಆತ್ಮವನ್ನು) ತನ್ನಲ್ಲಿ (ಆತ್ಮದಲ್ಲಿ) ಸಮಸ್ತ ಪ್ರಾಣಿಕೋಟಿಗಳನ್ನು ನೋಡುತ್ತಾನೆ.

**ಅ||** ಎಲ್ಲೆಲ್ಲೂ ಭಗವಂತನನ್ನೇ ನೋಡುವವನು ಭಗವದ್ದೃಷ್ಟಿಯಿಂದ ಯಾವಾಗಲೂ ದೂರವಾಗುವುದಿಲ್ಲವೆಂದು ತಿಳಿಸಲಾಗುತ್ತಿದೆ-

**೩೦. ಯೋ ಮಾಂ ಪಶ್ಯತಿ ಸರ್ವತ್ರ ಸರ್ವಂ ಚ ಮಯಿ ಪಶ್ಯತಿ**
**ತಸ್ಯಾಹಂ ನ ಪ್ರಣಶ್ಯಾಮಿ ಸ ಚ ಮೇ ನ ಪ್ರಣಶ್ಯತಿ**

**ಅರ್ಥ:** ಯಃ=ಯಾವನು; ಸರ್ವತ್ರ=ಸಮಸ್ತ ಭೂತಗಳಲ್ಲಿ; ಮಾಮ್=ನನ್ನನ್ನು; ಪಶ್ಯತಿ=ನೋಡುತ್ತಿದ್ದಾನೋ; ಸರ್ವಂಚ=ಸಮಸ್ತ ಭೂತಗಳನ್ನು; ಮಯಿ=ನನ್ನಲ್ಲಿ; ಪಶ್ಯತಿ=ನೋಡುತ್ತಿದ್ದಾನೊ; ತಸ್ಯ=ಆತನಿಗೆ; ಅಹಂ=ನಾನು; ನ ಪ್ರಣಶ್ಯಾಮಿ=ಕಾಣಿಸದೆ ಇರುವುದಿಲ್ಲ; ಸಃ ಚ=ಆತನು; ಮೇ=ನನಗೆ ನ ಪ್ರಣಶ್ಯತಿ=ಕಾಣಿಸದೆ ಹೋಗುವುದಿಲ್ಲ.

**ತಾ||** ಯಾವನು ಸಮಸ್ತ ಭೂತಗಳಲ್ಲಿ ನನ್ನನ್ನು ನೋಡುತ್ತಿದ್ದಾನೋ, ಮತ್ತೆ ನನ್ನಲ್ಲಿಯೇ ಸಮಸ್ತ ಭೂತಗಳನ್ನು ನೋಡುತ್ತಿರುವನೋ ಅಂತಹವನಿಗೆ ನಾನು ಕಾಣಿಸದೆ ಹೋಗುವುದಿಲ್ಲ, ನನಗೆ ಆತನು ಕಾಣಿಸದೆ ಇರುವುದಿಲ್ಲ.

**ವ್ಯಾಖ್ಯೆ:** ಶ್ರೀಕೃಷ್ಣ ಭಗವಂತನು ಸರ್ವಜೀವಿಗಳ ಆತ್ಮರೂಪನಾದುದರಿಂದ ಹಿಂದಿನ ಶ್ಲೋಕದಲ್ಲಿ ಹೇಳಲ್ಪಟ್ಟ ಯೋಗಯುಕ್ತನು, ಸರ್ವಾತ್ಮದರ್ಶನವುಳ್ಳವನು ಸರ್ವಜೀವಿಗಳಲ್ಲಿ ಶ್ರೀಕೃಷ್ಣನನ್ನು (ಭಗವಂತನನ್ನು) ಹಾಗು ಶ್ರೀಕೃಷ್ಣನಲ್ಲಿ (ಭಗವಂತನಲ್ಲಿ) ಸರ್ವಜೀವಿಗಳನ್ನು ನೋಡುವವನೆಂದರ್ಥ. ಈ ಪ್ರಕಾರವಾಗಿ ಯಾವನು ಸಮಸ್ತ ಭೂತಗಳಲ್ಲಿ ಪರಮಾತ್ಮನನ್ನು ಮತ್ತು ಪರಮಾತ್ಮನಲ್ಲಿ ಸಮಸ್ತ ಭೂತಗಳನ್ನು ನೋಡುವನೋ ಅಂತಹವನಿಗೆ ಇನ್ನು ಪರಮಾತ್ಮನು ಕಾಣಿಸದೆ ಇರಲು ಹೇಗೆ ಸಾಧ್ಯ? ಇಲ್ಲಿ ಕಾಣಿಸುವುದೆಂದರೆ ಯಾವುದೋ ಒಂದು ದೃಶ್ಯವಸ್ತುವನ್ನು ನೋಡಿದ ಹಾಗಲ್ಲ. ಸಾಕ್ಷಾತ್ಕಾರವಾಗುವುದು (ಅನುಭವವಾಗುವುದು) ಎಂದರ್ಥ. ಜೀವಿಯು ಪರಮಾತ್ಮನಲ್ಲಿ ಐಕ್ಯವಾದ ನಂತರ ಇಬ್ಬರೂ ಒಂದೇ ಚೈತನ್ಯ ವಸ್ತುವಾಗಿರುವಾಗ, ಒಬ್ಬರು ಇನ್ನೊಬ್ಬರಿಗೆ ತಿಳಿಯದೆ ಹೇಗಿರಬಲ್ಲರು?

(ದ್ವೈತ ದೃಷ್ಟಿಯಿಂದ ನೋಡಿದರೂ) ಭಗವಂತನ ಅನುಗ್ರಹ ಯಾರ ಮೇಲೆ ಇರುವುದು ಎಂದು ಕೇಳುವ ಪ್ರಶ್ನೆಗೆ ಇಲ್ಲಿ ಸಮಾಧಾನ ಕೊಡಲಾಗಿದೆ. ಯಾವನು ಸಮಸ್ತ ಪ್ರಾಣಿ ಕೋಟಿಗಳಲ್ಲಿ ಭಗವಂತನನ್ನು (ದೈವವನ್ನು) ಮತ್ತೆ ಭಗವಂತನಲ್ಲಿ ಸಮಸ್ತ ಪ್ರಾಣಿಕೋಟಿಗಳನ್ನು ವೀಕ್ಷಿಸುವನೋ ಅವನ ಮೇಲೆ ಭಗವಂತನಿಗೆ ಪೂರ್ಣಾನುಗ್ರಹವಿರುವುದೆಂದು ಸ್ಪಷ್ಟವಾಗುತ್ತಿದೆ. ಏಕೆಂದರೆ '**ಸಚಮೇ ನಪ್ರಣಶ್ಯತಿ**' ಆತನು ನನಗೆ ಕಾಣಿಸದೆ ಹೋಗುವುದಿಲ್ಲ ಎಂದು ಭಗವಂತನು ತಿಳಿಸಿರುವನು. ಆತನು ಭಗವಂತನ ದೃಷ್ಟಿಯಲ್ಲಿ ಇರುವನೆಂದೂ, ಭಗವಂತನಿಗೆ ಆತನು ಪರಮ ಪ್ರಿಯನೆಂದೂ ಭಾವ. ಸರ್ವಜೀವಿಗಳು ಭಗವಂತನ ಮಕ್ಕಳಾದರೂ ತನ್ನನ್ನು ಆಶ್ರಯಿಸಿದವರನ್ನೇ ಆತನು ಹೆಚ್ಚು ಪ್ರೀತಿಸುವನು. ಭಗವದ್ದೃಷ್ಟಿಯನ್ನು ಅವರೇ ಹೆಚ್ಚಾಗಿ ಆಕರ್ಷಿಸುವರು. ಆಹಾ! ಅವರು ಎಷ್ಟು ಅದೃಷ್ಟವಂತರು! ಅವರ ಜೀವನವು ಧನ್ಯವಾದಂತೆಯೇ. ಪ್ರಪಂಚದಲ್ಲಿ ಚಿಕ್ಕ ಚಿಕ್ಕ ಅಧಿಕಾರಿಗಳ ದೃಷ್ಟಿಯನ್ನು ಆಕರ್ಷಿಸುವುದಕ್ಕಾಗಿ ಹೆಚ್ಚು ತಾಪತ್ರಯ ಬೀಳುವುದಕ್ಕಿಂತ ಭಕ್ತಿ ವೈರಾಗ್ಯ, ಧ್ಯಾನಾದಿಗಳ ದ್ವಾರ ಜಗನ್ನಾಥನ ದೃಷ್ಟಿಯಲ್ಲಿ ಬೀಳುವುದು ಉತ್ತಮ. ಆತನ ಆಶೀರ್ವಾದವನ್ನು ಪಡೆಯಲು ಯತ್ನಿಸುವುದು ಒಳ್ಳೆಯದು. ಆದರೆ ಅದು ಹೇಗೆ ಲಭಿಸುವುದು? ಅವನ ಕೃಪಾಕಟಾಕ್ಷ ಹೇಗೆ ಪ್ರಾಪ್ತಿಯಾಗುವುದು? ಅದಕ್ಕೆ ಉತ್ತರ ಈ ಶ್ಲೋಕದಲ್ಲಿದೆ. (ಧ್ಯಾನಾದಿಗಳ ಮೂಲಕ) ಸರ್ವಜೀವ ರಾಶಿಗಳಲ್ಲಿ, ಪರಮಾತ್ಮನ ಪರಮಾತ್ಮನನ್ನು ಸರ್ವಜೀವರಾಶಿಗಳಲ್ಲಿ ನೋಡುವಂತಹ ಅನುಭವವನ್ನು ಸಂಪಾದಿಸಿಕೊಂಡರೆ ಸಾಕು, ಭಗವತ್ಕೃಪೆ ಆತನ ಮೇಲೆ ಹರಿಯುವುದು. ಭೇದ ಬುದ್ಧಿಯಿರುವವರಿಗೆ ಅದು ಯಾವಾಗಲೂ ಲಭ್ಯವಾಗುವುದಿಲ್ಲ.

ಈ ಶ್ಲೋಕದಲ್ಲಿ ಯಚ್ಛಬ್ದ ಪ್ರಯೋಗ ಮಾಡಿರುವುದು ಗಮನಾರ್ಹ. 'ಯಃ' ಯಾರಾದರೂ ಸರಿಯೇ- ಈ ಪ್ರಕಾರವಾಗಿ ಸಾಧನೆ ಮಾಡಿದರೆ ಭಗವದನುಗ್ರಹವೆಂಬ ಮಹತ್ತರ ಫಲವನ್ನು ಪಡೆಯುವರು. ಜಾತಿ ಮತ ಕುಲಗಳ ಪ್ರಸಕ್ತಿ ಇಲ್ಲಿ ಇಲ್ಲವೇ ಇಲ್ಲ.

ಪ್ರ : ಭಗವಂತನು ಯಾರಿಗೆ ಗೋಚರಿಸುವನು? ಇಲ್ಲವೆ, ಭಗವದ್ದೃಷ್ಟಿಗೆ ಯಾರು ಗೋಚರಿಸುವರು?

ಉ: ಸಮಸ್ತ ಭೂತಕೋಟಿಯಲ್ಲಿ ಭಗವಂತನನ್ನು, ಭಗವಂತನಲ್ಲಿ ಸಮಸ್ತ ಭೂತಕೋಟಿಗಳನ್ನು ನೋಡುವವನಿಗೆ ಭಗವಂತನು ತಪ್ಪದೆ ಗೋಚರಿಸುವನು. ಮತ್ತೆ ಭಗವದ್ದೃಷ್ಟಿಗೆ ಅಂತಹವನು ತಪ್ಪದೆ ಬೀಳುವನು.

ಪ್ರ : (ಇದರಿಂದ) ಭಗವದ್ದೃಷ್ಟಿಗೆ ಬೀಳಲು ಇಲ್ಲವೆ ಭಗವಂತನಿಗೆ ಪ್ರೀತಿ ಪಾತ್ರನಾಗಲು ಏನು ಮಾಡಬೇಕು?

ಉ : ಸಮಸ್ತ ಪ್ರಾಣಿಗಳಲ್ಲಿ ಪರಮಾತ್ಮನನ್ನು, ಪರಮಾತ್ಮನಲ್ಲಿ ಸಮಸ್ತ ಪ್ರಾಣಿಗಳನ್ನು ನೋಡಬೇಕು (ಸಮಸ್ತ ಪ್ರಾಣಿಗಳ ಹಿತವನ್ನು ಅಪೇಕ್ಷಿಸುತ್ತಿರಬೇಕು).

**ಅ||** ಅಂತಹ ಸರ್ವಾತ್ಮದೃಷ್ಟಿಯುಳ್ಳವರು ಯಾವ ಕಾರ್ಯವನ್ನು ಮಾಡಿದರೂ ನಿರಂತರ ಪರಮಾತ್ಮನಲ್ಲಿಯೇ ವಾಸಿಸುತ್ತಿರುತ್ತಾರೆಂದು ಹೇಳಲಾಗುತ್ತಿದೆ-

**೩೧. ಸರ್ವಭೂತಸ್ಥಿತಂ ಯೋ ಮಾಮ್ ಭಜತ್ಯೇಕತ್ವಮಾಸ್ಥಿತಃ**
**ಸರ್ವಥಾ ವರ್ತಮಾನೋಽಪಿ ಸ ಯೋಗೀ ಮಯಿ ವರ್ತತೇ**

**ಅರ್ಥ:** ಸರ್ವಭೂತಸ್ಥಿತಮ್=ಸಮಸ್ತ ಭೂತಗಳಲ್ಲಿರುವ; ಮಾಮ್=ನನ್ನನ್ನು; ಯಃ=ಯಾವನು; ಏಕತ್ವಮ್=ಅಭೇದ ಬುದ್ಧಿಯನ್ನು; (ಸರ್ವತ್ರ ಒಂದೇ ಪರಮಾತ್ಮ ಎನ್ನುವ ಭಾವವನ್ನು); ಆಸ್ಥಿತಃ=ಹೊಂದಿದವನಾಗಿ; ಭಜತಿ=ಸೇವಿಸುತ್ತಿದ್ದಾನೊ; ಸಃ ಯೋಗಿ=ಆ ಯೋಗೀ; ಸರ್ವಥಾ ವರ್ತಮಾನಃ ಅಪಿ=ಯಾವ ವಿಧವಾಗಿ ಪ್ರವರ್ತಿಸುತ್ತಿದ್ದರೂ (ವ್ಯವಹರಿಸುತ್ತಿದ್ದರೂ ಇಲ್ಲವೆ ಧ್ಯಾನದಲ್ಲಿದ್ದರೂ); ಮಯಿ=ನನ್ನಲ್ಲೇ; ವರ್ತತೇ=ಇರುವವನು ಆಗಿರುತ್ತಾನೆ.

**ತಾ||** ಯಾವನು ಸಮಸ್ತ ಭೂತಗಳಲ್ಲಿರುವ ನನ್ನನ್ನು ಅಭೇದ ಬುದ್ಧಿ (ಸರ್ವತ್ರ ಒಂದೇ ಪರಮಾತ್ಮ ಎನ್ನುವ ಭಾವನೆ)ಯಿಂದ ಸೇವಿಸುತ್ತಿದ್ದಾನೋ ಅಂತಹ ಯೋಗಿ ಹೇಗೆ ಪ್ರವರ್ತಿಸುತ್ತಿದ್ದರೂ (ಸಮಾಧಿ ನಿಷ್ಠೆಯಲ್ಲಿದ್ದರೂ ಇಲ್ಲವೆ ವ್ಯವಹಾರವನ್ನು ನಡೆಸುತ್ತಿದ್ದರೂ) ನನ್ನಲ್ಲೇ (ಆತ್ಮದಲ್ಲೇ) ಇರುವಂತವನಾಗಿರುತ್ತಾನೆ.

**ವ್ಯಾಖ್ಯೆ:** ೧) ಭಗವಂತನು ಎಲ್ಲಿದ್ದಾನೆ? ೨) ಯಾವ ಉಪಾಯದಿಂದ ಮನುಷ್ಯನು ಭಗವಂತನಲ್ಲಿ ಸ್ಥಾನವನ್ನು ಸಂಪಾದಿಸಿಕೊಳ್ಳಬಲ್ಲನು? ಎನ್ನುವ ಪ್ರಶ್ನೆಗಳಿಗೆ ಇಲ್ಲಿ ಸಮಾಧಾನ ಕೊಡಲಾಗಿದೆ. ದೇವರು ಎಲ್ಲಿದ್ದಾನೆ ಎನ್ನುವ ಸಂಶಯವು ಸಾಮಾನ್ಯವಾಗಿ ಪ್ರತಿಯೊಬ್ಬರಿಗೂ ಉಂಟಾಗುತ್ತಿರುತ್ತದೆ. ದೇವರು ಒಂದು ಕಡೆ ಮಾತ್ರವಲ್ಲ, ಸಮಸ್ತ ಚರಾಚರ ಪ್ರಾಣಿಕೋಟಿಗಳಲ್ಲಿ ನಿವಸಿಸುತ್ತಿದ್ದಾನೆ. ದೇವರು ಇಲ್ಲದ ಸ್ಥಳವಿಲ್ಲ. ಹಾಲಿನಲ್ಲಿರುವ ಬೆಣ್ಣೆಯಂತೆ, ಪುಷ್ಪಮಾಲೆಯ ದಾರದಂತೆ, ಎಳ್ಳಿನಲ್ಲಿರುವ ಎಣ್ಣೆಯಂತೆ, ಕಬ್ಬಿನಲ್ಲಿರುವ ರಸದಂತೆ ಭಗವಂತನು ಸಮಸ್ತ ಭೂತಗಳಲ್ಲಿ ವ್ಯಾಪಿಸಿರುವನೆಂದು ಇಲ್ಲಿ ಸ್ಪಷ್ಟವಾಗಿ ತಿಳಿಸಲಾಗಿದೆ. ಆದ್ದರಿಂದ ಸರ್ವಪ್ರಾಣಿಗಳು ಭಗವತ್ಸ್ವರೂಪಿಗಳೇ

ಎಂದು ಭಾವಿಸಿ ಯಾರಿಗೂ ಅಪಕಾರ ಮಾಡಬಾರದು. ಪ್ರಾಣಿಕೋಟಿಗಳ ಮೇಲೆ ದಯೆ, ಕರುಣೆ ಇರಬೇಕು. ಅವುಗಳಿಗೆ ಹಿತವನ್ನು ಕೋರಬೇಕು. ಅದೇ ಮಾಧವ ಸೇವೆ.

ಇನ್ನು ಎರಡನೆಯ ಪ್ರಶ್ನೆ- ಯಾವ ಉಪಾಯದಿಂದ ಮನುಜನು ಪರಮಾತ್ಮನಲ್ಲಿ ಸ್ಥಿತಿಯನ್ನು ಹೊಂದಬೇಕು? ಸರ್ವತ್ರ ಒಂದೇ ಪರಮಾತ್ಮ ವ್ಯಾಪಿಸಿದ್ದಾನೆಂಬ ಅಭೇದ ಜ್ಞಾನವುಂಟಾಗಿ ಅವನನ್ನು ಸೇವಿಸುವವರು, ಧ್ಯಾನಿಸುವವರು ಕೊನೆಗೆ ಆತನನ್ನೇ ಪಡೆಯುತ್ತಿದ್ದಾರೆ. ಒಂದೇ ಸೂರ್ಯ ಬಿಂಬ ಭಿನ್ನ ಭಿನ್ನ ಜಲೋಪಾದಿಗಳಲ್ಲಿ ವಿವಿಧವಾಗಿ ಪ್ರತಿಬಿಂಬಿತವಾದಂತೆ, ಒಬ್ಬ ವ್ಯಕ್ತಿ ಅನೇಕ ವೇಷಗಳನ್ನು ಹಾಕಿದ ಹಾಗೆ, ಒಂದೇ ಬಂಗಾರ ಭಿನ್ನ ಭಿನ್ನ ಆಭರಣಗಳ ರೂಪದಲ್ಲಿರುವಂತೆ, ಒಂದೇ ಮಣ್ಣು ವಿವಿಧ ಘಟಗಳಲ್ಲಿ ಅನುಸ್ಯೂತವಾಗಿರುವಂತೆ, ಉಪಾಧಿಗಳು ಬೇರೆ ಬೇರೆಯಾಗಿದ್ದರೂ ಒಬ್ಬನೇ ಪರಮಾತ್ಮ ಸಮಸ್ತ ಚರಾಚರ ಪ್ರಾಣಿಕೋಟಿಗಳಲ್ಲಿ ಅಭಿನ್ನವಾಗಿ ವ್ಯಾಪಿಸಿದ್ದಾನೆನ್ನುವ ಏಕತ್ವ ಬುದ್ಧಿಯುಂಟಾಗಿ, ಸರ್ವಾಂತರ್ಯಾಮಿಯಾದ ಅಂತಹ ಭಗವಂತನನ್ನು ಸೇವಿಸಿ, ಧ್ಯಾನಿಸುವವನು ಕೊನೆಗೆ ಆತನನ್ನೇ ಹೊಂದುವನು. ಇದೇ ದೈವ ಪ್ರಾಪ್ತಿಗೆ ಉಪಾಯ.

ಅಂತಹ ಏಕಾತ್ಮಬುದ್ಧಿ, ಅಭೇದಾತ್ಮತತ್ತ್ವಪರಿಜ್ಞಾನವುಳ್ಳವನು, ಯಾವ ವಿಧವಾಗಿ ಪ್ರವರ್ತಿಸಿದರೂ ಭಗವಂತನಲ್ಲೇ ಇರುತ್ತಾನೆಂದು ಹೇಳಲ್ಪಟ್ಟಿದೆ. ಅಂದರೆ ಆತನು ಸಮಾಧಿನಿಷ್ಠೆಯಲ್ಲಿದ್ದರೂ, ಇಲ್ಲವೆ ವ್ಯವಹರಿಸುತ್ತಿದ್ದರೂ, ಇಲ್ಲವೆ ಸುಮ್ಮನೆ ಇದ್ದರೂ ಚಿತ್ತವು ಯಾವಾಗಲೂ ಧ್ಯೇಯದಲ್ಲಿಯೇ (ಆತ್ಮದಲ್ಲಿಯೇ) ತನ್ಮಯವಾಗಿರುವುದು. ಸಮುದ್ರಯಾನ ಮಾಡುವವರ ಹತ್ತಿರವಿರುವ 'ಕಂಪಾಸಿ'ನ ಮುಳ್ಳು ಯಾವ ಕಡೆ ತಿರುಗಿದರೂ ಉತ್ತರವನ್ನೇ ತೋರಿಸಿದ ಹಾಗೆ, ಏಕಾತ್ಮ ಜ್ಞಾನವುಳ್ಳ ಮಹಾನೀಯರು ಪ್ರಪಂಚದಲ್ಲಿ ಅನೇಕ ಕಾರ್ಯಗಳನ್ನು ಮಾಡುತ್ತಿದ್ದರೂ ಭಗವಂತನಲ್ಲಿಯೇ ಲೀನವಾಗಿರುವರು. ಆದ್ದರಿಂದಲೇ ಆತ್ಮಜ್ಞರಾದ ಮಹನೀಯರು ಪ್ರಪಂಚದಲ್ಲಿ ಲೋಕಸಂಗ್ರಹಾರ್ಥವಾಗಿ ಕಾರ್ಯಗಳನ್ನು ಮಾಡಿದರೂ ಅವರ ಭಗವತ್ ಸ್ಥಿತಿಗೆ ಎಳ್ಳಷ್ಟೂ ಭಂಗವುಂಟಾಗುವುದಿಲ್ಲ.

ಆದರೆ **"ಸರ್ವಥಾ ವರ್ತಮಾನೋಽಪಿ'** ಎನ್ನುವುದರ ಅರ್ಥ ಜ್ಞಾನಿಯು ಇಷ್ಟಬಂದ ಹಾಗೆ ಪ್ರವರ್ತಿಸಬಹುದೆಂದಲ್ಲ, ಇಲ್ಲವೆ ದುಶ್ಶೀಲನಾಗಿರ ಬಹುದೆಂದಲ್ಲ; ಆ ರೀತಿಯ ದುಷ್ಪ್ರವರ್ತನೆ ಉಳ್ಳವನು ಜ್ಞಾನಿಯೇ ಅಲ್ಲ. ಪರಮಾತ್ಮಾನುಭವ ಉಂಟಾಗಲು ವಿಶುದ್ಧ ಸತ್ವಗುಣ ಉಂಟಾಗಿರಬೇಕಲ್ಲವೇ! ಆ ರೀತಿಯ ಮಹೋನ್ನತ ಶೀಲಸಂಪತ್ತನ್ನು ಹೊಂದಿದವನು ಮತ್ತೆ ಕೆಳಗೆ ಇಳಿದು ರಜೋಗುಣ, ತಮೋಗುಣಗಳನ್ನು ಆಶ್ರಯಿಸುವನೇ? ಹಾಗೆ ಯಾವಾಗಲೂ ನಡೆಯದು. ಒಂದು ವೇಳೆ ಆ ರೀತಿ ನಡೆದರೆ ಆತನು ಜ್ಞಾನಿಯೇ ಅಲ್ಲವೆಂಧು ನಿಶ್ಚಯವಾಗಿ ಹೇಳಬಹುದು. ಆದ್ದರಿಂದ ಶುಷ್ಕ ವೇದಾಂತವನ್ನಾಶ್ರಯಿಸದೆ ಮುಮುಕ್ಷುಗಳು ಜಾಗರೂಕ ರಾಗಿರಬೇಕು. ತಮ್ಮ ಪ್ರವರ್ತನೆಯಲ್ಲಿ ಯಾವ ರೀತಿಯ ಲೋಪವೂ ಬರದೆ ನೋಡಿಕೊಳ್ಳಬೇಕು. ಇಂತಹ ಪದಗಳ ಅರ್ಥವನ್ನು ಬಹು ಎಚ್ಚರಿಕೆಯಿಂದ ಗಮನಿಸಬೇಕು. 'ಯಾವ ವಿಧವಾಗಿ ಪ್ರವರ್ತಿಸಿದರೂ' ಎನ್ನುವುದರ ಭಾವ ಇಲ್ಲಿ 'ಸರ್ವಾತ್ಮವಿಜ್ಞಾನ ಉಳ್ಳವನು ಧ್ಯಾನದಲ್ಲಿದ್ದರೂ, ಲೋಕವ್ಯವಹಾರ ವನ್ನಾಚರಿಸಿದರೂ, ಹೇಗಿದ್ದರೂ ಆತನ ಆತ್ಮಸ್ಥಿತಿಗೆ ಲೋಪವುಂಟಾಗುವುದಿಲ್ಲ' ಎಂದು ಅರ್ಥವಾಗುತ್ತದೆ.

ಪ್ರ : ಭಗವಂತನು ಎಲ್ಲಿ ಇದ್ದಾನೆ?

ಉ : ಸಮಸ್ತ ಚರಾಚರ ಪ್ರಾಣಿಕೋಟಿಗಳಲ್ಲಿ ವ್ಯಾಪಿಸಿದ್ದಾನೆ.

ಪ್ರ : ಭಗವಂತನಲ್ಲಿ ಸ್ಥಿತಿ ಹೊಂದಬೇಕೆಂದರೆ ಜೀವಿ ಏನು ಮಾಡಬೇಕು?

ಉ: ಸರ್ವತ್ರ ಏಕಾತ್ಮಬುದ್ಧಿ ಉಂಟಾಗಿ ಅಂತಹ ಅದ್ವಯ ಪರಮಾತ್ಮನನ್ನು ಸೇವಿಸಿ ಧ್ಯಾನಿಸಬೇಕು.

ಪ್ರ : ಆತ್ಮಜ್ಞನಾದ ಮಹನೀಯನು ಲೋಕದಲ್ಲಿ ವ್ಯವಹರಿಸಿದರೂ ಆತನ ಭಗವತ್ ಸ್ಥಿತಿಗೆ ಹಾನಿ ಉಂಟಾಗುವುದೇ?

ಉ: ಉಂಟಾಗುವುದಿಲ್ಲ. ಆತ ಹೇಗೆ ಪ್ರವರ್ತಿಸಿದರೂ ಆತನ ಭಗವತ್ ಸ್ಥಿತಿಗೆ ಲೋಪವುಂಟಾಗುವುದಿಲ್ಲ.

**ಅ||** ಆತ್ಮದೃಷ್ಟಿ ಉಂಟಾಗಿ ಸರ್ವಜೀವಿಗಳನ್ನು ತನ್ನಂತೆಯೇ ಸಮವಾಗಿ ನೋಡುವವನು ಸರ್ವೋತ್ತಮನು ಎಂದು ಹೇಳಲಾಗುತ್ತಿದೆ-

**೩೨. ಆತ್ಮೌಪಮ್ಯೇನ ಸರ್ವತ್ರ ಸಮಂ ಪಶ್ಯತಿ ಯೋಽರ್ಜುನ**
**ಸುಖಂ ವಾ ಯದಿ ವಾ ದುಃಖಂ ಸ ಯೋಗೀ ಪರಮೋ ಮತಃ**

**ಅರ್ಥ:** ಅರ್ಜುನಾ=ಓ ಅರ್ಜುನಾ! ಸರ್ವತ್ರ=ಸಮಸ್ತ ಪ್ರಾಣಿಗಳಲ್ಲಿ; ಸುಖಂ ವಾ=ಸುಖವನ್ನಾಗಲಿ; ದುಃಖಂ ಯದಿವಾ=ದುಃಖವನ್ನಾಗಲಿ; ಆತ್ಮೌಪ ಮ್ಯೇನ=ತನ್ನಂತೆಯೇ ಭಾವಿಸಿ(ತನ್ನ ಆತ್ಮಹಾಗು ಬೇರೆಯವರ ಆತ್ಮ ಒಂದೇ ಎನ್ನುವ ಭಾವದೊಡನೆ); ಸಮಮ್=ಸಮಾನವಾಗಿ; ಯಃ=ಯಾವನು; ಪಶ್ಯತಿ=ನೋಡುತ್ತಿದ್ದಾನೋ; ಸಃ ಯೋಗೀ=ಆ ಯೋಗೀ; ಪರಮಃ(ಇತಿ)= ಶ್ರೇಷ್ಠನೆಂದು; ಮತಃ=ಅಭಿಪ್ರಾಯ ಹೊಂದಿರುವರು.

**ತಾ||** ಓ ಅರ್ಜುನಾ! ಸಮಸ್ತ ಪ್ರಾಣಿಗಳ ಸುಖವನ್ನಾಗಲಿ, ದುಃಖವನ್ನಾಗಲಿ ತನ್ನೊಡನೆ ಹೋಲಿಸಿಕೊಂಡು (ತನ್ನ ಆತ್ಮಹಾಗು ಅವರ ಆತ್ಮ ಬೇರೆ ಅಲ್ಲ ಎನ್ನುವ ಭಾವದಿಂದ), ಎಲ್ಲರನ್ನೂ ತನ್ನ ಹಾಗೆ ಸಮಾನವಾಗಿ ಯಾವನು ನೋಡುವನೋ, ಅವನನ್ನು ಶ್ರೇಷ್ಠನಾದ ಯೋಗಿಯೆನ್ನುವರು.

**ವ್ಯಾಖ್ಯೆ:** ಈ ಶ್ಲೋಕದಲ್ಲಿ ಆಚರಣ ವೇದಾಂತ (Practical Vedanta)ವನ್ನು ಉಪದೇಶಿಸಲಾಗಿದೆ. ಒಬ್ಬನಿಗೆ ಬೋಧೆ ಸರಿಯಾಗಿ ಅರ್ಥವಾಗಿದೆಯೇ ಇಲ್ಲವೇ ಎನ್ನುವುದು ಅವನ ಆಚರಣೆಯ ದ್ವಾರ ತಿಳಿಯುತ್ತದೆ. ಮಾತಿನ ದ್ವಾರ 'ಎಲ್ಲವೂ ಬ್ರಹ್ಮವೇ, ಎಲ್ಲವೂ ದೈವವೇ' ಎಂದು ಹೇಳುತ್ತ ಆಚರಣೆಗೆ ಬಂದಾಗ ಪರ ಪ್ರಾಣಿಗೆ ಅಪಕಾರ ಮಾಡುವುದು ಸರಿಯಾದ ಪದ್ಧತಿಯಲ್ಲ. ಅದು ಅನುಭವ ವೇದಾಂತವಲ್ಲ. ಬೋಧೆಯನ್ನು ತ್ರಿಕರಣಶುದ್ಧವಾಗಿ ಆಚರಿಸಬೇಕು. ತಾನು ಸಂಕಲ್ಪಿಸಿದ್ದನ್ನೇ ಹೇಳಬೇಕು. ಹೇಳಿದ್ದನ್ನೇ ಮಾಡಬೇಕು. ವೇದಾಂತವು ನಿತ್ಯ ವ್ಯವಹಾರದಲ್ಲಿ ಉಪಯೋಗವಾಗಬೇಕು. ಮಹನೀಯರು ಆ ಪ್ರಕಾರವಾಗಿ ಹಿಂದೆ ಮಾಡಿ ತೋರಿಸಿದರು. ಇಲ್ಲದೆ ಇದ್ದರೆ ಸಿದ್ಧಾಂತವು **'ಪುಷ್ಪಿತಾಂ ವಾಚಮ್'** ಎಂದ ಹಾಗೆ ನಿಷ್ಫಲವಾಗುವುದು. ಆದ್ದರಿಂದ 'ಎಲ್ಲೆಲ್ಲೂ ಒಂದೇ ಆತ್ಮವಿದೆ' ಎನ್ನುವ ಸಿದ್ಧಾಂತವನ್ನು ಆಚರಣೆಯಲ್ಲಿ ಇಟ್ಟಾಗ ಸಮಸ್ತ ಪ್ರಾಣಿಗಳಲ್ಲಿ ದಯೆ, ಕರುಣೆ, ಪ್ರೇಮದಿಂದ ಇರಬೇಕಾಗಿ ಬರುವುದು. ತನ್ನ ದೇಹಕ್ಕೆ, ತನ್ನ ಮನಸ್ಸಿಗೆ ತಾನು ಹೇಗೆ ಸುಖವನ್ನು, ಶಾಂತಿಯನ್ನು, ದುಃಖಾಭಾವವನ್ನು ಕೋರುತ್ತಿದ್ದಾನೋ ಹಾಗೆ

ಪರರ ವಿಷಯದಲ್ಲೂ ಭಾವಿಸಬೇಕು. ಇದು ಆತ್ಮೌಪಮ್ಯಸ್ಥಿತಿ. ಈ ಪ್ರಕಾರವಾಗಿ ಸುಖ ದುಃಖಗಳಲ್ಲಿ ತನ್ನೊಂದಿಗೆ ಇತರರನ್ನೂ ಕೂಡ ಸಮವಾಗಿ ನೋಡುವ ಯೋಗಿಯೇ, ಯೋಗಿಗಳೆಲ್ಲರಲ್ಲಿ ಸರ್ವಶ್ರೇಷ್ಠನೆಂದು ಭಗವಂತನು ಹೇಳಿದನು.

ಆದ್ದರಿಂದ ಮನುಜರಲ್ಲಿಯ ಶ್ರೇಷ್ಠತೆ ಅವರ ಆಚರಣೆಯ ಮೇಲೆ ಆಧಾರವಾಗಿದೆಯೆಂದು ಭಗವದ್ವಾಕ್ಯಗಳಿಂದ ಸ್ಪಷ್ಟವಾಗುತ್ತಿದೆ. 'ಓ ಜೀವಿಗಳಿರಾ! ಎಲ್ಲವೂ ಬ್ರಹ್ಮವೇ' ಎನ್ನುವ ಸಿದ್ಧಾಂತವನ್ನು ಆಚರಣೆಯಲ್ಲಿ ತೆಗೆದುಕೊಂಡು ಬಂದು ಸರ್ವಜೀವಿಗಳ ಕಡೆಗೆ ಪ್ರೇಮವನ್ನು, ಕಾರುಣ್ಯವನ್ನು ಮಳೆಗೆರೆಯಬೇಕು. ಆಗಲೇ ನೀವು ನಿಜವಾದ ಭಕ್ತರು, ಯೋಗಿಗಳು ಆಗಬಲ್ಲರು' ಎಂದು ಭಗವಂತನು ಇಲ್ಲಿ ನಿಸ್ಸಂಕೋಚವಾಗಿ ಹೇಳಿರುವನು. ಈ ವಾಕ್ಯಗಳು ವಾಚಾ ವೇದಾಂತಿಗಳಾದ ಸೋಮಾರಿಗಳ ಹೃದಯಗಳನ್ನು ಸೀಳುತ್ತವೆ. ಆಧ್ಯಾತ್ಮರಂಗದಲ್ಲಿ 'ವಾಚಾವೇದಾಂತ'ಕ್ಕೆ, ಸೋಮಾರಿತನಕ್ಕೆ ಸ್ಥಳವಿಲ್ಲದೆ ಮಾಡಲು, ಇಂತಹ ತಮಃಪ್ರಭಂಜಕ ವಾಕ್ಯಗಳನ್ನು ಮುಮುಕ್ಷುಗಳು ಜಾಗರೂಕರಾಗಿ **'ಸರ್ವಂ ಖಲ್ವಿದಂ ಬ್ರಹ್ಮ'** ಇತ್ಯಾದಿ ಪರಮಾತ್ಮ ಸೂತ್ರಗಳನ್ನು ಆಚರಿಸಿ ಸರ್ವಭೂತಗಳನ್ನು ತಮ್ಮಂತೆ ನೋಡಿ ದಯಾರ್ದ್ರ ಹೃದಯಿಗಳಾಗಿ ವರ್ತಿಸಬೇಕು. ಅಂತಹವರೇ ಭಗವದ್ದೃಷ್ಟಿಯಲ್ಲಿ ಸರ್ವಶ್ರೇಷ್ಠರು.

ಪಶ್ಚಿಮ ದೇಶಗಳ ಮತ ಹಾಗು ಸಂಘಗಳಲ್ಲಿ 'ಸೋದರತೆ' (Brother hood)ಗೆ ಜನರು ಬಹಳ ಪ್ರಾಮುಖ್ಯತೆಯನ್ನು ತೋರಿಸುವರು. ಒಳ್ಳೆಯದೇ ಆದರೆ ಅದು ಸಾಲದು, ಏಕೆಂದರೆ ಸೋದರರಲ್ಲಿ ಕೂಡ ಪರಸ್ಪರ ಎಷ್ಟೋ ವೈಮನಸ್ಸುಗಳು, ಅಭಿಪ್ರಾಯ ಭೇದಗಳು, ವೈರಗಳು ಉದಯಿಸುತ್ತಿರುತ್ತವೆ. ಆದ್ದರಿಂದ ಸೋದರತ್ವವು ಪ್ರೇಮದ ಪರಾಕಾಷ್ಠೆಯನ್ನು ಸೂಚಿಸುವುದಿಲ್ಲ. ಗೀತಾದಿ ಗ್ರಂಥಗಳು, ಉಪನಿಷತ್ತುಗಳು, ಪ್ರೇಮದ ಚರಮಸ್ಥಿತಿಯನ್ನು ಬೋಧಿಸುತ್ತ 'ಆತ್ಮೌಪಮ್ಯಭಾವ'ವನ್ನು ಉದ್ಬೋಧಿಸಿವೆ. 'ಸೋದರತ್ವ'ವನ್ನು ದಾಟಿ ಒಂದು ಮೆಟ್ಟಲು ಇನ್ನೂ ಮೇಲೆ ಹೋಗಿ ವಿಶ್ವವೆಲ್ಲವನ್ನೂ ಒಂದೇ ಆತ್ಮರೂಪವಾಗಿ ಅಪ್ಪಿಕೊಳ್ಳುವಂತೆ ಮಾಡಿವೆ. ಇದೇ ಗೀತೆಯ ಮತ್ತು ಉಪನಿಷತ್ತುಗಳ ಘನತೆ; ಹೈಂದವ ಮತ ಸಿದ್ಧಾಂತದ ಪ್ರಕರ್ಷತೆ.

ಈ ಶ್ಲೋಕದಲ್ಲಿ 'ಸರ್ವತ್ರ' ಎಂದು ಹೇಳಿರುವುದರಿಂದ ಪ್ರೇಮ ತೋರಿಸಬೇಕಾಗಿರುವುದು ಯಾರೋ ಒಬ್ಬರ ಮೇಲಲ್ಲವೆಂದೂ, ಕೇವಲ ಮಾನವರ ಮೇಲೆಯೇ ಅಲ್ಲವೆಂದು, ಸಮಸ್ತ ಚರಾಚರ ಭೂತಕೋಟಿಯ ಮೇಲೆ ದಯಾದಿ ಸದ್ಗುಣಗಳನ್ನು ಪ್ರದರ್ಶಿಸಬೇಕೆಂದು ಸ್ಪಷ್ಟವಾಗುತ್ತಿದೆ.

**'ಸಯೋಗೀ ಪರಮೋ ಮತಃ'** ಎಂದು ಬೋಧಿಸುವುದರಿಂದ ಸಾಮಾನ್ಯ ಯೋಗಿಗಳ ಹಾಗಿರದೆ (ಆತ್ಮೌಪಮ್ಯ ದೃಷ್ಟಿಯುಂಟಾಗಿ) ಸರ್ವಶ್ರೇಷ್ಠ ಯೋಗಿಗಳಾಗಿ ಬೆಳಗಬೇಕೆಂದು ಸೂಚಿಸಿದಂತಾಗಿದೆ.

**ಅ॥** ಭಗವಂತನು ಬೋಧಿಸಿದ ಜೀವಬ್ರಹ್ಮೈಕ್ಯ ರೂಪವಾದ ಇಲ್ಲವೆ ಸರ್ವಾತ್ಮ ದೃಷ್ಟಿರೂಪವಾದ ಈ ಯೋಗವನ್ನು ಅರ್ಜುನನು ಅರ್ಥಮಾಡಿಕೊಳ್ಳಲು ಸಾಧ್ಯವಾಗದೆ ಈ ಕೆಳಕಂಡಂತೆ ಭಗವಂತನನ್ನು ಪ್ರಶ್ನಿಸುತ್ತಿದ್ದಾನೆ.

**ಅರ್ಜುನ ಉವಾಚ :**

**೩೩. ಯೋಽಯಂ ಯೋಗಸ್ತ್ವಯಾ ಪ್ರೋಕ್ತಃಸಾಮ್ಯೇನ ಮಧುಸೂದನ**
**ಏತಸ್ಯಾಹಂ ನ ಪಶ್ಯಾಮಿ ಚಂಚಲತ್ವಾತ್ ಸ್ಥಿತಿಂ ಸ್ಥಿರಾಮ್**

ಅರ್ಜುನನ ಉವಾಚ : ಅರ್ಜುನನು ಹೀಗೆ ಪ್ರಶ್ನಿಸಿದನು:

**ಅರ್ಥ:** ಮಧುಸೂದನ=ಓ ಕೃಷ್ಣಾ!; ಸಾಮ್ಯೇನ (ಸಾಧ್ಯಃ)=(ಮನಸ್ಸಿನ) ಸಮತ್ವದಿಂದ ಸಿದ್ಧಿಸಲ್ಪಟ್ಟ; ಯಃ ಅಯಂ ಯೋಗಃ=ಯಾವ ಈ ಯೋಗವು; ತ್ವಯಾ=ನಿನ್ನಿಂದ; ಪ್ರೋಕ್ತ=ಹೇಳಲ್ಪಟ್ಟಿದೆಯೋ; ಏತಸ್ಯ=ಇದರ; ಸ್ಥಿರಾಮ್= ಸ್ಥಿರವಾದ; ಸ್ಥಿತಿಮ್=ನಿಲುಕಡೆ(ಸ್ಥಿತಿಯನ್ನು)ಯನ್ನು; ಚಂಚಲತ್ವಾತ್=ಮನಸ್ಸಿನ ಚಾಂಚಲ್ಯದಿಂದ; ಅಹಮ್=ನಾನು; ನಪಶ್ಯಾಮಿ=ನೋಡಲಾರದವನಾಗಿದ್ದೇನೆ (ತಿಳಿಯದವನಾಗಿದ್ದೇನೆ)

**ತಾ॥** ಅರ್ಜುನನು ಹೀಗೆ ಪ್ರಶ್ನಿಸಿದನು- ಓ ಕೃಷ್ಣಾ! ಮನಸ್ಸಿನ ಸಮತ್ವದಿಂದ (ಸಮಭಾವದಿಂದ, ನಿಶ್ಚಲತೆಯಿಂದ) ಸಿದ್ಧಿಸಲ್ಪಡುವ ಯಾವ ಯೋಗವನ್ನು ನೀನು ಉಪದೇಶಿಸಿದೆಯೋ ಅದರಲ್ಲಿ ಸ್ಥಿರವಾದ ಅನುಭವವನ್ನು (ಸ್ಥಿತಿಯನ್ನು) ಮನಸ್ಸಿನ ಚಪಲತೆಯಿಂದ ನಾನು ಪಡೆಯದವನಾಗಿದ್ದೇನೆ.

**ವ್ಯಾಖ್ಯೆ:** ಶ್ರೀಕೃಷ್ಣ ಪರಮಾತ್ಮನು ಆತ್ಮತತ್ತ್ವದ ಬಗ್ಗೆ ಗಂಭೀರವಾಗಿ ಬೋಧಿಸುತ್ತಾ ಮುಂದುವರಿಯುತ್ತಿರಲು, ಅಕಸ್ಮಾತ್ತಾಗಿ, ಮಧ್ಯೆ ಅರ್ಜುನನು ತನಗುಂಟಾದ ಸಂದೇಹವನ್ನು ಕೇಳಿದನು. ಈ ಪ್ರಕಾರವಾಗಿ ಅರ್ಜುನನು ಮಧ್ಯದಲ್ಲಿ ಬಾಯಿ ಹಾಕಿ ಪ್ರಶ್ನಿಸದೇ ಇದ್ದಿದ್ದರೆ ಇನ್ನೂ ಎಷ್ಟೋ ಅಖಂಡವಾದ ಆತ್ಮತತ್ತ್ವಬೋಧಾ ಮೃತವನ್ನು ಶ್ರೀಕೃಷ್ಣ ಪರಮಾತ್ಮನು ಮಾಡಿರುತ್ತಿದ್ದನೇನೋ! ಆದರೂ ಅರ್ಜುನನ ಪ್ರಶ್ನೆ ಮುಮುಕ್ಷುಗಳಿಗೆ ಬಹಳ ಉಪಕಾರಿಯೇ ಆಗಿದೆ. "ದೇವಾ! ಜೀವಾತ್ಮ ಪರಮಾತ್ಮರನ್ನು ಏಕರೂಪವಾಗಿ ಕಾಣುವ ಈ ಧ್ಯಾನಯೋಗದಲ್ಲಿ, ಮನಸ್ಸಿನ ಚಂಚಲತೆಯ ಕಾರಣದಿಂದ ನನಗೆ ಸ್ಥಿರವಾದ ನಿಲುಕಡೆ ಇಲ್ಲವಾಗಿದೆ," ಎಂದು ಅರ್ಜುನನು ತನ್ನ ಪರಿಸ್ಥಿತಿಯನ್ನು ಭಗವಂತನ ಮುಂದಿಟ್ಟನು. ಶಿಷ್ಯನು ಗುರುವಿನ ಬಳಿ ತನ್ನ ಹೃದಯವನ್ನು ಬಿಚ್ಚಿ ಮಾತನಾಡಬೇಕು. ಯಾವುದನ್ನೂ ಮುಚ್ಚಿಡಬಾರದು. ವೈದ್ಯನ ಬಳಿ ರೋಗಿ ತನ್ನ ಪರಿಸ್ಥಿತಿಯನ್ನು ಇದ್ದದ್ದು ಇದ್ದ ಹಾಗೆ ಹೇಳಬೇಕೇ ಹೊರತು ಬಚ್ಚಿಟ್ಟರೆ ಕೆಲಸಕ್ಕೆ ಬರುವುದಿಲ್ಲ. ಇಲ್ಲದಿದ್ದರೆ ವಿಪರೀತ ಪರಿಣಾಮಗಳು ಉಂಟಾಗಬಹುದು. ತನ್ನ ಅಂತರಂಗಿಕ ಭಾವವನ್ನು, ಹೃದಯ ಬಿಚ್ಚಿ ಹೇಳಿದಾಗ ಮಾತ್ರ ಶಿಷ್ಯನು ಗುರುವಿನಿಂದ ಸತ್ಫಲಿತಗಳನ್ನು ಹೊಂದಬಲ್ಲನು. ಆತ್ಮೋನ್ನತಿಯನ್ನು ಪಡೆಯಬಲ್ಲನು. ಅರ್ಜುನನು ಒಳ್ಳೆಯ ಶಿಷ್ಯನಾದುದರಿಂದಲೇ ತನ್ನ ಹೃದಯವನ್ನು ಬಿಚ್ಚಿ ಭಗವಂತನ ಮುಂದಿಟ್ಟನು. ತನ್ನ ಮನಸ್ಸು ಚಪಲವಾಗಿರುವುದೆಂದೂ, ತತ್ಫಲಿತವಾಗಿ ಆತ್ಮದಲ್ಲಿ ಸ್ಥಿರತೆಯನ್ನು ಹೊಂದಲಾಗುತ್ತಿಲ್ಲವೆಂದೂ, ಆ ಚಪಲತೆಯನ್ನು ಹೋಗಲಾಡಿಸಲು ಉಪಾಯವನ್ನು ಹೇಳಬೇಕೆಂದು ಬೇಡಿದನು.

ಅರ್ಜುನನು ಪ್ರಪಂಚದಲ್ಲಿಯ ಸಕಲ ಮುಮುಕ್ಷುಗಳ ಪ್ರತಿನಿಧಿ ಯಾಗಿದ್ದಾನೆ. ಅವರೆಲ್ಲರ ಪರವಾಗಿ ಆತನು 'ವಕಾಲತ್ತು' ತೆಗೆದುಕೊಂಡಿದ್ದಾನೆ. ಆದ್ದರಿಂದ ಸಾಧಕರೆಲ್ಲರನ್ನು ಸಾಮಾನ್ಯವಾಗಿ ಬಾಧಿಸುವ ಸಂಶಯವನ್ನೇ ಆತನು ಶ್ರೀಕೃಷ್ಣನ ಮುಂದಿಟ್ಟನು. ಅದಕ್ಕೆ ಭಗವಂತನು ಕೊಡುವ ಉತ್ತರ ಅರ್ಜುನನಿಗೇ ಅಲ್ಲದೆ ಸಮಸ್ತ ಮುಮುಕ್ಷು ಲೋಕಕ್ಕೇ ಕೊಟ್ಟಂತೆ ಆಗಿದೆ.

'ಸಾಮ್ಯೇನ' ಎಂದು ಹೇಳಿರುವುದರಿಂದ ಧ್ಯಾನಯೋಗ ಮನಸ್ಸಿನ ಸಮತ್ವದಿಂದ ನಿಶ್ಚಲತ್ವದಿಂದ ಸಿದ್ಧಿಸುವುದೆಂದು ಸ್ಪಷ್ಟವಾಗುತ್ತಿದೆ. ಸೂಜಿರಂಧ್ರದಲ್ಲಿ ದಾರವನ್ನು ಏರಿಸಬೇಕೆಂದರೆ ಏಕಾಗ್ರವಾಗಿ ನಿಶ್ಚಲವಾಗಿದ್ದರೆ ಮಾತ್ರ ಸಾಧ್ಯ. ಹಾಗೆಯೇ ಮನಸ್ಸು ಬ್ರಹ್ಮರಂಧ್ರದಲ್ಲಿ, ಮೋಕ್ಷ ದ್ವಾರದಲ್ಲಿ ಪ್ರವೇಶಿಸಬೇಕೆಂದರೆ ನಿಶ್ಚಲವಾಗಿರಬೇಕು. ಫೋಟೋ ತೆಗೆಯುವಾಗ ವ್ಯಕ್ತಿ ನಿಶ್ಚಲವಾಗಿರದಿದ್ದರೆ ಚಿತ್ರ ಸರಿಯಾಗಿ ಬರುವುದಿಲ್ಲವಲ್ಲವೇ! ಆದ್ದರಿಂದ ಮನಸ್ಸು ಚಪಲವಾಗಿದ್ದರೆ ಧ್ಯೇಯ ವಸ್ತುವು ಸರಿಯಾಗಿ ಅನುಭೂತಿ

ಯಾಗುವುದಿಲ್ಲ. ಅರ್ಜುನನಿಗೆ ಅಂತಹ ಮನೋ ನಿಶ್ಚಲತೆ ಇನ್ನೂ ಉಂಟಾಗಿರಲಿಲ್ಲವಾದ್ದರಿಂದ ಭಗವಂತನನ್ನು, ಅದನ್ನು ಕುರಿತು ಪ್ರಶ್ನಿಸಿದನು.

ಇಲ್ಲಿ 'ಸಾಮ್ಯೇನ' ಎನ್ನುವ ಪದಕ್ಕೆ 'ಸಮದೃಷ್ಟಿ ರೂಪದಲ್ಲಿ ಇಲ್ಲವೆ ಸರ್ವಾತ್ಮದೃಷ್ಟಿ ರೂಪದಲ್ಲಿ' ಎಂದೂ ಅರ್ಥವನ್ನು ಹೇಳಬಹುದು.

ಪ್ರ : ಯೋಗವು ಯಾವುದರಿಂದ ಸಿದ್ಧಿಸುವುದು?

ಉ: ಮನೋ ನಿಶ್ಚಲತೆಯಿಂದ, ಸಮತ್ವದಿಂದ ಸಿದ್ಧಿಸುವುದು (ಮನಸ್ಸು ಚಪಲವಾಗಿದ್ದರೆ ಯೋಗದಲ್ಲಿ ಸ್ಥಿರತೆ ಇರದು).

**ಅ||** ಮನಸ್ಸನ್ನು ನಿಗ್ರಹಿಸುವುದು ಬಹಳ ಕಷ್ಟವೆಂದು ಅರ್ಜುನನು ಹೇಳುತ್ತಿದ್ದಾನೆ-

**೩೪. ಚಂಚಲಂ ಹಿ ಮನಃ ಕೃಷ್ಣ ಪ್ರಮಾಥಿ ಬಲವದ್ದೃಢಮ್**
**ತಸ್ಯಾಹಂ ನಿಗ್ರಹಂ ಮನ್ಯೇ ವಾಯೋರಿವ ಸುದುಷ್ಕರಮ್**

**ಅರ್ಥ:** ಕೃಷ್ಣ=ಓ ಕೃಷ್ಣಾ! ಮನಃ=ಮನಸ್ಸು; ಚಂಚಲಮ್=ಚಂಚಲವಾದದ್ದು; ಪ್ರಮಾಥಿ=(ದೇಹೇಂದ್ರಿಯಾದಿಗಳನ್ನು) ಕ್ಷೋಭೆ ಮಾಡುವಂತಹದು; ಬಲವತ್=ಬಲವಂತವಾದುದು (ನಿಗ್ರಹಿಸಲು=ಕಷ್ಟಸಾಧ್ಯವಾದದ್ದು); ದೃಢಂ ಹಿ=(ವಿಷಯ ಪ್ರವರ್ತನೆಯಲ್ಲಿ) ದೃಢವಾದದ್ದಲ್ಲವೇ! ತಸ್ಯ=ಅದರ; ನಿಗ್ರಹಮ್=ನಿರೋಧ; ವಾಯೋಃ ಇವ=ಗಾಳಿಯನ್ನು ನಿಗ್ರಹಿಸುವುದಕ್ಕಿಂತ; ಸುದುಷ್ಕರಮ್=ಹೆಚ್ಚಿನ ಕಷ್ಟವಾದುದೆಂದು; ಅಹಮ್=ನಾನು; ಮನ್ಯೇ=ಭಾವಿಸುತ್ತಿದ್ದೇನೆ.

**ತಾ||** ಕೃಷ್ಣಾ! ಮನಸ್ಸು ಚಂಚಲವಾದುದು, ವಿಕ್ಷೋಭೆಯನ್ನುಂಟು ಮಾಡುವುದು, ಬಲವಂತವಾದುದು! ಅದನ್ನು ನಿಗ್ರಹಿಸುವುದು ಗಾಳಿಯ ಮೂಟೆಯನ್ನು ಕಟ್ಟುವಂತೆ ಅತಿ ಕಷ್ಟವಾದದ್ದು ಎಂದು ನಾನು ಭಾವಿಸುತ್ತೇನೆ.

**ವ್ಯಾಖ್ಯೆ:** ಮನಸ್ಸು ನಿಶ್ಚಲವಾಗಿರುವುದರಿಂದಲೇ ಯೋಗ (ಆತ್ಮೈಕ್ಯ) ಸಾಧ್ಯವಾಗುವುದು. ಆದರೆ ಮನಸ್ಸು ಬಹಳ ಚಂಚಲವಾದದ್ದು. ಅದು ದೇಹೇಂದ್ರಿಯಾದಿಗಳಿಗೆ ಕ್ಷೋಭೆ ಉಂಟುಮಾಡಿ ಕ್ಷೀರಸಾಗರವನ್ನು ಮಂದರ ಪರ್ವತ ಮಥಿಸಿದಂತೆ ತೀವ್ರವಾಗಿ ಮಥಿಸಿ ಹಾಕುತ್ತದೆ. ಮತ್ತೆ ಅನೇಕ ಜನ್ಮಾರ್ಜಿತ ವಾಸನೆಗಳನ್ನು, ಸಂಸ್ಕಾರಗಳನ್ನು, ದೃಶ್ಯ ವೃತ್ತಿಗಳನ್ನು ಹೊಂದಿ ಬಲವತ್ತರವಾಗಿ ದೃಢವಾಗಿದೆ. ಆದ್ದರಿಂದ ಅದನ್ನು ನಿಗ್ರಹಿಸಲು ಸಾಧ್ಯವಿಲ್ಲದಾಗಿದೆ. ಈ ಪ್ರಕಾರವಾಗಿ ಅರ್ಜುನನು ಮನಸ್ಸನ್ನು ವರ್ಣಿಸುತ್ತ ಅದರ ಸ್ವರೂಪವನ್ನು ನಾಲ್ಕು ವಿಶೇಷಣಗಳಿಂದ ಹೇಳಿದನು. ಅವು- ೧) ಚಪಲತೆ ೨) ಕ್ಷೋಭಜನಕತೆ ೩) ಬಲತ್ವ ೪) ದೃಢತೆ. ಮನಸ್ಸಿನ ಈ ಲಕ್ಷಣಗಳು ಸರ್ವರಿಗೂ ಅನುಭವ ವೇದ್ಯಗಳೇ. ಚಾಪಲ್ಯದ ಮನಸ್ಸನ್ನು ಮುಳ್ಳು ತುಳಿದ, ಹೆಂಡ ಕುಡಿದ, ದೆವ್ವ ಹಿಡಿದ ಮತ್ತು ಅದರ ಮೇಲೆ ಚೇಳುಕಡಿದ ಕೋತಿಯೊಂದಿಗೆ ಹೋಲಿಸಬಹುದು. ಮನಸ್ಸನ್ನು ಸಾಧಕನಿಗೆ ಕಷ್ಟಗಳನ್ನು ಕೊಡುವ ವಿಷಯ ಎಲ್ಲರಿಗೂ ವಿದಿತವೇ. ದೇಹೇಂದ್ರಿಯ ಗಳನ್ನು, ಹೃದಯವನ್ನು ಅದು ಶಾಂತವಾಗಿರಲು ಬಿಡುವುದಿಲ್ಲ, ಒಂದೊಂದು ಘಟನೆಯಲ್ಲಿಯೂ ಅವನನ್ನು ವಿಚಲಿತಗೊಳಿಸುವುದು. ಅಶಾಂತಿಯನ್ನುಂಟು ಮಾಡುವುದು. ಮತ್ತೆ ಮಾಮೂಲು ಶಾಂತ ಸ್ಥಿತಿಗೆ ಬರಲು ಕೆಲವು ತಿಂಗಳುಗಳು ಹಿಡಿಯಬಹುದು.

ಈ ಪ್ರಕಾರವಾಗಿ ಮನಶ್ಶಕ್ತಿಯನ್ನು ಕುರಿತು ಅರ್ಜುನನು ವರ್ಣಿಸಿ ಅದನ್ನು ನಿಗ್ರಹಿಸುವುದು ಬಹಳ ಕಷ್ಟವೆಂದು ಹೇಳಿ, ಅದನ್ನು ಹೇಗೆ ಸ್ವಾಧೀನಪಡಿಸಿಕೊಳ್ಳಬೇಕೆನ್ನುವುದನ್ನು ತಿಳಿಸಬೇಕೆಂದು ಭಗವಂತನನ್ನು ಪ್ರಾರ್ಥಿಸಿದನು. 'ದುಷ್ಕರಂ' ಎಂದು ಹೇಳದೆ 'ಸುದುಷ್ಕರಂ' ಎಂದು ಹೇಳಿರುವುದರಿಂದ ಮನೋನಿಗ್ರಹ ಅತಿ ಪ್ರಯಾಸಕರವಾದದ್ದೆಂದು ಸ್ಪಷ್ಟವಾಗುತ್ತಿದೆ.

ಪ್ರ : ಮನಸ್ಸಿನ ಸ್ವಭಾವ ಎಂತಹದು?

ಉ : ಅದು ೧) ಚಂಚಲವಾದದ್ದು ೨) ದೇಹೇಂದ್ರಿಯಾದಿಗಳನ್ನು ಕ್ಷೋಭೆಗೆ ಒಳಗೊಳಿಸುವುದು ೩) ಬಲವತ್ತರವಾದುದು ೪) ದೃಢವಾದುದು.

**ಅ||** ಅರ್ಜುನನ ಕೋರಿಕೆಯಂತೆ ಶ್ರೀಕೃಷ್ಣ ಪರಮಾತ್ಮನು ಮನಸ್ಸನ್ನು ನಿಗ್ರಹಿಸುವ ಉಪಾಯವನ್ನು ಬೋಧಿಸುತ್ತಿದ್ದಾನೆ-

**ಶ್ರೀ ಭಗವಾನುವಾಚ**

**೩೫. ಅಸಂಶಯಂ ಮಹಾಬಾಹೋ ಮನೋ ದುರ್ನಿಗ್ರಹಂ ಚಲಂ**
**ಅಭ್ಯಾಸೇನ ತು ಕೌಂತೇಯ ವೈರಾಗ್ಯೇಣ ಚ ಗೃಹ್ಯತೇ**

ಶ್ರೀ ಭಗವಾನುವಾಚ- ಶ್ರೀ ಭಗವಂತನು ಹೇಳಿದನು.

**ಅರ್ಥ:** ಮಹಾಬಾಹೋ=ದೊಡ್ಡ ಬಾಹುಗಳುಳ್ಳ ಅರ್ಜುನಾ!; ಮನಃ= ಮನಸ್ಸು; ದುರ್ನಿಗ್ರಹಮ್=ನಿಗ್ರಹಿಸಲು ಕಷ್ಟಸಾಧ್ಯವಾದುದು; ಚಲಮ್= ಚಂಚಲವಾದದ್ದು (ಇತ್ಯತ್ರ=ಎಂದು ಹೇಳಿರುವುದರಲ್ಲಿ); ಅಸಂಶಯಮ್= ಸಂದೇಹವಿಲ್ಲ (ತಥಾಪಿ=ಆದರೂ); ಕೌಂತೇಯ=ಓ ಅರ್ಜುನಾ!; ಅಭ್ಯಾಸೇನ ತು=ಅಭ್ಯಾಸದಿಂದಲೂ; ವೈರಾಗ್ಯೇಣ ಚ=ವೈರಾಗ್ಯದಿಂದಲೂ; ಗೃಹ್ಯತೇ=(ಆ ಮನಸ್ಸು) ನಿಗ್ರಹಿಸಲ್ಪಡುತ್ತದೆ.

**ತಾ||** ಶ್ರೀಭಗವಂತನು ಹೇಳಿದನು- ಉದ್ದ ಬಾಹುಗಳುಳ್ಳ ಓ ಅರ್ಜುನಾ! ಮನಸ್ಸನ್ನು ನಿಗ್ರಹಿಸುವುದು ಕಷ್ಟ. ಮತ್ತೆ ಅದು ಚಂಚಲವಾದುದು. ಇದರಲ್ಲಿ ಯಾವ ಸಂಶಯವೂ ಇಲ್ಲ. ಆದರೂ ಅಭ್ಯಾಸ ಮತ್ತು ವೈರಾಗ್ಯಗಳಿಂದ ಅದನ್ನು ನಿಗ್ರಹಿಸಬಹುದು.

**ವ್ಯಾಖ್ಯೆ:** ಮನಸ್ಸು ಚಂಚಲವಾದುದು, ಅದು ನಿಗ್ರಹಿಸಲು ಕಷ್ಟವಾದುದು (ಪ್ರಯಾಸದ ಕೆಲಸ)- ಎನ್ನುವ ವಿಷಯವನ್ನು ಶ್ರೀಕೃಷ್ಣಮೂರ್ತಿ ಕೂಡ ಅನುಮೋದಿಸಿರುವನು. ಆದರೆ ಅಷ್ಟು ಮಾತ್ರದಿಂದ ಭಯಪಡಬೇಕಾದ ಕೆಲಸವಿಲ್ಲವೆಂದೂ, ಅಭ್ಯಾಸ ವೈರಾಗ್ಯಗಳಿಂದ ಅದನ್ನು ನಿಗ್ರಹಿಸಬಹುದೆಂದು ಧೈರ್ಯವನ್ನು ಕೊಟ್ಟಿರುವನು. ವಸ್ತುವಾಗಲಿ, ವ್ಯಕ್ತಿಯಾಗಲಿ, ಬಲಶಾಲಿ ಯಾದ ಮಾತ್ರಕ್ಕೆ ಯಾರೂ ಅಂಜಬೇಕಾಗಿಲ್ಲ. ಅದನ್ನು ಸದೆಬಡಿಯಲು ತಕ್ಕ ಆಯುಧವನ್ನು ಹುಡುಕಿಕೊಂಡರೆ ಸಾಕು. ಆನೆ ಬಹಳ ದೊಡ್ಡದು. ಆದರೇನು? ಒಂದು ಚಿಕ್ಕ ಅಂಕುಶವನ್ನು ಸಂಪಾದಿಸಿಕೊಂಡರೆ ಸಾಕು. ಅದನ್ನು ಆಟವಾಡಿಸಬಹುದು. ಹಾಗೆಯೇ ಸಿಂಹ, ಹುಲಿ ಮುಂತಾದುವುಗಳು ಭಯಂಕರವಾದ ಮೃಗಗಳು ಆದರೂ ಒಂದು ಚಿಕ್ಕ ತುಪಾಕಿ ಗುಂಡಿಗೆ ಹೆದರಿ ಓಡುತ್ತವೆ. ಎತ್ತು ಶಕ್ತಿಯುತವಾದದ್ದಾದರೂ ಮೂಗುದಾರಕ್ಕೆ ಬಗ್ಗುತ್ತದೆಯಲ್ಲವೇ? ಹಾಗೆಯೇ ಮನಸ್ಸಿನ ಬಲ, ಸಾಮರ್ಥ್ಯಗಳನ್ನು ನೋಡಿ 'ಗಾಬರಿ' ಬೀಳಬಾರದೆಂದೂ, ಅದನ್ನು ದಾರಿಗೆ ತಂದುಕೊಳ್ಳುವ ಉಪಾಯವಿದೆಯೆಂದೂ ತಿಳಿಸಿ, ಅದನ್ನು ಹೇಳುತ್ತಿರುವನು. ಮನಸ್ಸು 'ದುರ್ನಿಗ್ರಹ'ವಾದುದೇ ಆಗಲಿ 'ಅನಿಗ್ರಹ'ವಾದುದಲ್ಲ. ಅದನ್ನು ಜಯಿಸುವುದು

ಕಷ್ಟಸಾಧ್ಯವೇ ಆಗಲಿ ಅಸಾಧ್ಯವಲ್ಲ. ಸರಿಯಾದ ಪ್ರಯತ್ನದಿಂದ ಅದನ್ನು ತಪ್ಪದೆ ನಿಗ್ರಹಿಸಬಹುದು.

ಇನ್ನು ಅದನ್ನು ನಿಗ್ರಹಿಸಲು ಭಗವಂತನು ಬೋಧಿಸಿದ ಉಪಾಯಗಳನ್ನು ಕುರಿತು ವಿಚಾರಿಸೋಣ. ಈ ಘಟ್ಟವು ಸಾಧಕಲೋಕಕ್ಕೆ ಅತಿ ಮುಖ್ಯವಾದುದು. ಏಕೆಂದರೆ ಯಾವುದಕ್ಕೆ ವಶೀಭೂತರಾಗಿ ಜನರು ಅನಾದಿಕಾಲದಿಂದ ಈ ಸಂಸಾರ ಸಾಗರದಲ್ಲಿ ಬಿದ್ದು ದಾರಿಕಾಣದೆ ಮುಳುಗುತ್ತಿದ್ದಾರೋ, ಈ ಜನನ ಮರಣಾದಿ ದುಃಖಗಳಿಗೆ ಒಳಗಾಗುತ್ತಿದ್ದಾರೋ ಯಾವುದು ಈ ಆತ್ಮಾನುಭೂತಿಗೆ ಪ್ರಧಾನವಾದ ಅಡ್ಡಗೋಡೆಯಂತೆ ನಿಂತಿದೆಯೋ ಆ ಮನಸ್ಸಿನ ನಿಗ್ರಹವನ್ನು ಕುರಿತು ಇಲ್ಲಿ ಹೇಳಲಾಗಿದೆ. ಅದರಲ್ಲಿ ಸಾಕ್ಷಾತ್ ಅವತಾರ ಮೂರ್ತಿಯಾದ ಶ್ರೀಕೃಷ್ಣ ಭಗವಂತನ ಮುಖಾರವಿಂದದಿಂದ ಆ ಉಪಾಯವು ಹೊರಬಿದ್ದಿರುವುದರಿಂದ ಅದು ಬಹಳ ಪ್ರಾಧಾನ್ಯತೆಯನ್ನು ಹೊಂದಿದೆ. ಮನಸ್ಸನ್ನು ನಿಗ್ರಹಿಸುವುದು ಹೇಗೆ? ಎನ್ನುವ ಈ ಪ್ರಶ್ನೆಯನ್ನೇ ಸರ್ವೇಸಾಮಾನ್ಯವಾಗಿ ಪ್ರತಿಯೊಬ್ಬರೂ ಕೇಳುತ್ತಿರುವರು. ಈ ಪ್ರಶ್ನೆಯನ್ನು ನಿವಾರಿಸಿದಲ್ಲಿ ಆಧ್ಯಾತ್ಮಿಕ ಸಾಧನೆಯೆಲ್ಲವೂ ಅಂತಿಮ ಘಟ್ಟಕ್ಕೆ ಬಂದಂತೇ ಸರಿ. ಆದ್ದರಿಂದ ಇದನ್ನು ಕುರಿತು ಭಗವಂತನು ಏನು ಬೋಧಿಸಿದನೆಂದು ತಿಳಿದುಕೊಳ್ಳುವುದು ಅತ್ಯಾವಶ್ಯಕ.

೧) ಅಭ್ಯಾಸ ೨) ವೈರಾಗ್ಯ ಎನ್ನುವ ಈ ಎರಡು ಉಪಾಯಗಳಿಂದ ಮನಸ್ಸು ತಪ್ಪದೆ ನಿಗ್ರಹಿಸಲ್ಪಡುವುದು ಎಂದು ಭಗವಂತನು ವಾಗ್ದಾನ ಕೊಟ್ಟಿರುವನು. ಪತಂಜಲಿ ಮಹರ್ಷಿಯೂ ಹಾಗೆ ನುಡಿದಿರುವರು.* ವೈರಾಗ್ಯವೆಂದರೆ ದೃಶ್ಯವಿಷಯಗಳಲ್ಲಿ ನಶ್ವರತ್ವಾದಿ ದೋಷಗಳನ್ನು ವಿಚಾರಿಸಿ ಅವುಗಳೆಡೆಗೆ ವಿರಕ್ತಿ ಭಾವ ಹೊಂದುವುದು. ಅದರಿಂದ ಮನಸ್ಸು ಬಹಿರ್ಮುಖವಾಗಿ ಹೊರಗೋಡದೆ ಅಂತರ್ಮುಖವಾಗುವುದು. ವೈರಾಗ್ಯವನ್ನು ಏಕೆ ಹೊಂದಬೇಕೆಂದರೆ ಈ ದೃಶ್ಯ ಪ್ರಪಂಚದ ಸಮಸ್ತ ಪದಾರ್ಥಗಳು ಕಾಲಕ್ರಮೇಣ ನಶಿಸುವುವೇ ಆಗಿವೆ. ಕೊನೆಗೆ ಶರೀರವೂ ನಶಿಸಿಯೇ ಹೋಗುವುದು. ಅಶಾಶ್ವತಗಳಾದ ಇಂತಹ ಪದಾರ್ಥಗಳ ಮೇಲೆ ಅಪೇಕ್ಷೆ ಸಲ್ಲದು. [ಶಾಶ್ವತ ವಸ್ತು ಆತ್ಮವೊಂದೇ (ದೈವವೇ). ಆದ್ದರಿಂದ ಅದರ ಬಗ್ಗೆ ಮಾತ್ರ ಕೋರಿಕೆಯಿರಬೇಕು]. ಪ್ರಾಪಂಚಿಕ ಭೋಗಗಳನ್ನು ಎಷ್ಟು ಅನುಭವಿಸಿದರೂ ತೃಪ್ತಿಯುಂಟಾಗುವುದಿಲ್ಲ. ಆಸೆ ಕಡಿಮೆಯಾಗದು. ಮತ್ತೆ ಅವುಗಳಲ್ಲಿ ದ್ವಿಗುಣೀಕೃತ ಅಪೇಕ್ಷೆ ಉದಯಿಸುವುದು. ಅದರಿಂದ ವಾಸನೆಗಳು ಮತ್ತೆ ಬಲವಾಗಿ ಸಂಸಾರ ಬಂಧ ವೃದ್ಧಿಯಾಗುವುದು. ಮೇಲಾಗಿ ಮನಸ್ಸು ವಿಷಯಾನುಭವಕ್ಕಾಗಿ ಬಹಿರ್ಮುಖವಾದಷ್ಟು, ಆತ್ಮವಸ್ತುವು ದೂರವಾಗುತ್ತ ಹೋಗುತ್ತದೆ. ಧ್ಯಾನದಲ್ಲಿ ಮನಸ್ಸು ನಿಲ್ಲುವುದಿಲ್ಲ. ಆದ್ದರಿಂದ ಮನಸ್ಸು ನಿಶ್ಚಲವಾಗಲು, ಸ್ವಾಧೀನವಾಗಲು ವಿಷಯ ವೈರಾಗ್ಯವು ಅತ್ಯವಶ್ಯಕ.

ಇನ್ನು ಮನೋ ನಿಗ್ರಹದಲ್ಲಿ ಗಮನಿಸಬೇಕಾದ ಎರಡನೆಯ ಅಂಶ ಅಭ್ಯಾಸ. ಅಭ್ಯಾಸ ಮತ್ತು ಸತತ ಪ್ರಯತ್ನಗಳಿಂದ ಯಾವ ಕಾರ್ಯವನ್ನಾದರೂ ಸಾಧಿಸಬಹುದು. 'ಸತು ದೀರ್ಘ ಕಾಲನೈರಂತರ್ಯಸತ್ಕಾರ ಸೇವಿತೋ ದೃಢಭೂಮಿಃ'- ದೀರ್ಘಕಾಲ ನಿರಂತರಾಭ್ಯಾಸದಿಂದ ಮನೋನಿಗ್ರಹ ತಪ್ಪದೆ ಸಾಧ್ಯವಾಗುವುದು ಎಂದು ಪತಂಜಲಿ ಮಹರ್ಷಿ ಹೇಳಿದ್ದಾನೆ. ಸೋಮಾರಿಗಳಿಗೆ ಮನಸ್ಸು ಬಗ್ಗುವುದಿಲ್ಲ. ಏಕೆಂದರೆ ಅದನ್ನು ಬಗ್ಗಿಸಲು ಅವರು ಪ್ರಯತ್ನವನ್ನೇ ಮಾಡುವುದಿಲ್ಲ. ಪ್ರಯತ್ನವಾಗಲಿ, ಅಭ್ಯಾಸವಾಗಲಿ ಇಲ್ಲದೆ ಇದ್ದರೆ ಲೌಕಿಕರಂಗದಲ್ಲಾಗಲಿ, ಪರಮಾರ್ಥ ರಂಗದಲ್ಲಾಗಲಿ ಯಾವ ಕಾರ್ಯವನ್ನೂ ಸಾಧಿಸಲಾಗುವುದಿಲ್ಲ. ಒಂದು ಚಿಕ್ಕ ಪರೀಕ್ಷೆಯಲ್ಲಿ ಉತ್ತೀರ್ಣರಾಗಬೇಕೆಂದರೆ ಎಷ್ಟೋ ದಿನಗಳು ಕಷ್ಟ ಪಡಬೇಕಾಗಿದ್ದಾಗ ಇನ್ನು ಎಷ್ಟೋ ಜನ್ಮಗಳಿಂದ ಗಟ್ಟಿಯಾಗಿ ಕಲ್ಲಾಗಿರುವ ಮನಸ್ಸನ್ನು ಕರಗಿಸಲು ಎಷ್ಟು ಶ್ರಮ, ಎಷ್ಟು ಅಭ್ಯಾಸ ಅವಶ್ಯಕವೆನ್ನುವುದನ್ನು ಊಹಿಸಬಹುದು. ಆದ್ದರಿಂದ ಪ್ರತಿದಿನವೂ ಮನಸ್ಸನ್ನು ವಿಚಾರ ವೈರಾಗ್ಯಗಳ ನೆರವಿನಿಂದ ಬಾಹ್ಯದಿಂದ ಮರಳಿಸಿ ಅಂತರಂಗದಲ್ಲಿ, ಆತ್ಮಧ್ಯಾನದಲ್ಲಿ ನಿಯೋಗಿಸುವ ಅಭ್ಯಾಸವನ್ನು ಬಹು ವಿಧಗಳಾಗಿ ಆಚರಿಸುತ್ತಿರಲು, ಅಚಿರಕಾಲದಲ್ಲಿಯೇ ಮನಸ್ಸು ಸ್ವಾಧೀನವಾಗಿ ಆತ್ಮದಲ್ಲೇ ಸ್ಥಿರ ಹೊಂದುವುದು.

ಈ ಶ್ಲೋಕದಲ್ಲಿ ಅರ್ಜುನನನ್ನು 'ಮಹಾಬಾಹೋ' ಎಂದು ಶ್ರೀಕೃಷ್ಣನು ಸಂಬೋಧಿಸಿದನು. 'ಓ ಅರ್ಜುನಾ! ನೀನು ದೊಡ್ಡ ಭುಜಬಲ, ಪರಾಕ್ರಮ ಹೊಂದಿದವನು, ಭೌತಿಕ ಶಕ್ತಿ ಸಮನ್ವಯನು. ಅಂತಹ ನಿನ್ನ ಶಕ್ತಿಯನ್ನು ಆಧ್ಯಾತ್ಮರಂಗದಲ್ಲಿ ಕೂಡ ಉಪಯೋಗಿಸಿ ಅಭ್ಯಾಸ ವೈರಾಗ್ಯಗಳ ದ್ವಾರ ಮನಸ್ಸನ್ನು ನಿಗ್ರಹಿಸಿ ವಿಜಯವನ್ನು ಹೊಂದುವುದು' ಎಂದು ಈ ಸಂಬೋಧನೆಯ ಮೂಲಕ ಭಗವಂತನು ತಿಳಿಸಿದಂತಾಗಿದೆ. ಅರ್ಜುನನು ಮನೋನಿಗ್ರಹ ದುಸ್ತರವೆಂದು ಹೇಳಿರುವುದನ್ನು ನೋಡಿ ಆತನಿಗೆ ಧೈರ್ಯ ತುಂಬಲು 'ಮಹಾಬಾಹೋ' ಎಂದು ಇಲ್ಲಿ ಸಂಬೋಧಿಸಿದ್ದರೂ ಇರಬಹುದು.

ಪ್ರ : ಮನಸ್ಸು ಎಂತಹದು?

ಉ : ೧) ಚಂಚಲವಾದದ್ದು ೨) ನಿಗ್ರಹಿಸಲು ಕಷ್ಟಸಾಧ್ಯವಾದುದು.

ಪ್ರ : ಯಾವ ಸಾಧನೆಗಳಿಂದ ಮನಸ್ಸು ನಿಗ್ರಹಿಸಲ್ಪಡುತ್ತದೆ?

ಉ : ೧) ಅಭ್ಯಾಸ ೨) ವೈರಾಗ್ಯ- ಎನ್ನುವ ಈ ಎರಡರಿಂದ.

**ಅ॥** ಮನಸ್ಸನ್ನು ಏಕೆ ನಿಗ್ರಹಿಸಬೇಕೆನ್ನುವುದನ್ನು ಹೇಳಲ್ಪಡುತ್ತಿದೆ-

**೩೬. ಅಸಂಯತಾತ್ಮನಾ ಯೋಗೋ ದುಷ್ಪ್ರಾಪ ಇತಿ ಮೇ ಮತಿಃ**
**ವಶ್ಯಾತ್ಮನಾ ತು ಯತತಾ ಶಕ್ಯೋಽವಾಪ್ತುಮುಪಾಯತಃ**

**ಅರ್ಥ:** ಅಸಂಯತಾತ್ಮನಾ=ನಿಗ್ರಹಿಸಲ್ಪಡದ ಮನಸ್ಸುಳ್ಳವನಿಂದ; ಯೋಗಃ= ಯೋಗವು(ಬ್ರಹ್ಮೈಕ್ಯ); ದುಷ್ಪ್ರಾಪಃ=ಹೊಂದಲಶಕ್ಯವಾದುದು; ಇತಿ=ಎಂದು; ಮೇ=ನನ್ನ; ಮತಿಃ=ಅಭಿಪ್ರಾಯ; ವಶ್ಯಾತ್ಮನಾ ತು ಯತತಾ=ಸ್ವಾಧೀನವಾದ ಮನಸ್ಸು ಹೊಂದಿ ಪ್ರಯತ್ನದಿಂದ; ಉಪಾಯತಃ=ಉಪಾಯದಿಂದ; ಅವಾಪ್ತುಮ್= ಹೊಂದುವುದಕ್ಕೆ; ಶಕ್ಯಃ=ಸಾಧ್ಯ.

**ತಾ॥** ನಿಗ್ರಹಿಸಲ್ಪಡದ ಮನಸ್ಸುಳ್ಳವನಿಂದ ಯೋಗವು (ಬ್ರಹ್ಮೈಕ್ಯ) ಅಸಾಧ್ಯ ಎನ್ನುವುದು ನನ್ನ ಅಭಿಪ್ರಾಯ. ಸ್ವಾಧೀನವಾದ ಮನಸ್ಸಿನಿಂದ, ಸತತ ಪ್ರಯತ್ನದಿಂದ, ಉಪಾಯದಿಂದ ಅದನ್ನು ಪಡೆಯಬಹುದು.

**ವ್ಯಾಖ್ಯೆ:** ಮನಸ್ಸನ್ನು ನಿಗ್ರಹಿಸದವನಿಗೆ ಆತ್ಮಸಾಕ್ಷಾತ್ಕಾರವು ಲಭಿಸದು. ಧ್ಯಾನಯೋಗದಲ್ಲಿ ಸ್ಥಿರತೆ ಸಂಭವಿಸುವುದಿಲ್ಲ. ಅದು ನಿಗ್ರಹಿಸಿದವನಿಗೆ ಆತ್ಮೈಕ್ಯವು ಸಾಧ್ಯವಾಗುವುದು ಎಂದು ಭಗವಂತನು ಇಲ್ಲಿ ತಿಳಿಸುತ್ತಿದ್ದಾನೆ.

* ಅಭ್ಯಾಸವೈರಾಗ್ಯಾಭ್ಯಾಂ ತನ್ನಿರೋಧಃ (ಪತಂಜಲಿ)

ಆದ್ದರಿಂದ ಮೋಕ್ಷಾಪೇಕ್ಷಿಗಳೆಲ್ಲರೂ ಅನೇಕ ಸಾಧನೆಗಳಿಂದ, ತಕ್ಕ ಉಪಾಯಗಳಿಂದ ಮೊಟ್ಟಮೊದಲು ತಮ್ಮ ಮನಸ್ಸನ್ನು, ಇಂದ್ರಿಯಗಳನ್ನು ನಿಗ್ರಹಿಸಬೇಕು. ಅವು ಒಂದು ವೇಳೆ ಹಿಡಿತವಿಲ್ಲದೆ ವಿಷಯಾರಣ್ಯದಲ್ಲಿ ಸಂಚರಿಸುತ್ತಿದ್ದರೆ ಮೋಕ್ಷದ ಪ್ರಶ್ನೆ ಏಳುವುದೇ ಇಲ್ಲ. ಏಕೆಂದರೆ ಮನಸ್ಸು ಆಶಾಪಾಶಗಳಿಂದ ಕೂಡಿ ಬಹಿರ್ಮುಖವಾಗಿ ಪ್ರವರ್ತಿಸುವುದರಿಂದ, ಆತ್ಮದಲ್ಲಿ (ದೈವದಲ್ಲಿ) ಪ್ರೀತಿಯಿಲ್ಲದೆ ಅಂತರ್ಮುಖವಾಗದೆ ಇರುವುದರಿಂದ ಆತ್ಮಸ್ವರೂಪವನ್ನು ತಿಳಿಯಲಾರದವನಾಗುತ್ತಾನೆ.

ಆದರೆ, ಮನಸ್ಸಂಯಮ ಹೇಗೆ ಲಭಿಸುವುದು? ಇದಕ್ಕೆ ಭಗವಂತನೇ ಹಿಂದಿನ ಶ್ಲೋಕದಲ್ಲಿ ಸಮಾಧಾನ ಕೊಟ್ಟಿರುತ್ತಾನೆ. ಅಭ್ಯಾಸ, ವೈರಾಗ್ಯವೆನ್ನುವ ಎರಡನ್ನು ಆಶ್ರಯಿಸುವುದರಿಂದ ಮನಸ್ಸು ಸ್ವಾಧೀನವಾಗಬಲ್ಲದು. 'ಯತತಾ' (ಪ್ರಯತ್ನಿಸುವವನಿಂದ) ಎಂದು ಇಲ್ಲಿ ಹೇಳಿರುವುದರಿಂದ ಯೋಗ, ಇಲ್ಲವೆ ಆತ್ಮಾಸಾಕ್ಷಾತ್ಕಾರ ಸಿದ್ಧಿಸಲು ಪ್ರಯತ್ನ ಅತ್ಯಾವಶ್ಯಕವೆಂದೂ, ಪ್ರಯತ್ನಶೀಲನಿಗೆ ಮಾತ್ರ ಯೋಗವು ಸಂಭವಿಸುತ್ತದೆಯೇ ಹೊರತು ಸೋಮಾರಿಗಳಿಗಲ್ಲವೆಂದು ಸ್ಪಷ್ಟವಾದಂತಾಗಿದೆ. ಸೋಮಾರಿ, ಅಕರ್ಮಣಿ, ಅಲಸಿ ಯಾವ ರಂಗದಲ್ಲಿಯೂ ವೃದ್ಧಿಗೆ ಬರುವುದಿಲ್ಲ. ಪರಮಾತ್ಮ ರಂಗದಲ್ಲಿ ಅಸಲು ಬರಲು ಸಾಧ್ಯವೇ ಇಲ್ಲ. ಜನ್ಮಜನ್ಮಾಂತರಗಳಿಂದ ಜೀವಿಯ ಬೆನ್ನಟ್ಟುತ್ತಿರುವ ದುಷ್ಟ ವಾಸನೆಗಳನ್ನು ಅಂತ್ಯಗೊಳಿಸಲು ಪ್ರಬಲವಾದ ಪುರುಷ ಪ್ರಯತ್ನ ಬಹಳ ಅವಶ್ಯಕ. ಮತ್ತೆ 'ಉಪಾಯತಃ' ಎಂದು ಹೇಳಿರುವುದರಿಂದ ಮಾಯೆಯನ್ನು ಜಯಿಸಲು, ಪರಮಾತ್ಮನನ್ನು (ಯೋಗಸಿದ್ಧಿ) ಹೊಂದಲು ಯುಕ್ತಿಯು ಅತ್ಯಾವಶ್ಯಕ. ಕೆಲವು ಕಡೆ ಶಕ್ತಿ, ಕೆಲವು ಕಡೆ ಯುಕ್ತಿ ಶತ್ರುಜಯದಲ್ಲಿ ಕೆಲಸಕ್ಕೆ ಬರುವುವು. ಎಷ್ಟು ದೊಡ್ಡ ಕಾರ್ಯವಾದರೂ ಕೆಲವು ಸಂದರ್ಭಗಳಲ್ಲಿ ಯುಕ್ತಿಯಿಂದ ಅತಿ ಶೀಘ್ರವಾಗಿ ನೆರವೇರಬಲ್ಲದು. ಅಂತಹ ಯುಕ್ತಿಗಳನ್ನು, ಉಪಾಯಗಳನ್ನು ಮುಮುಕ್ಷುವು ಅಳವಡಿಸಿಕೊಂಡು, ಇನ್ನೂ ಬೇರೆ ಅನೇಕ ಮಾರ್ಗಗಳಿಂದ ಹೇಗಾದರೂ ಮಾಡಿ ಭಗವತ್ಸಾಕ್ಷಾತ್ಕಾರವನ್ನು ಹೊಂದಬೇಕು.

**'ಮೇ ಮತಿಃ'** (ನನ್ನ ನಿಶ್ಚಯವು) ಎಂದು ಭಗವಂತನು ಇಲ್ಲಿ ಹೇಳಿರುವುದರಿಂದ ಮನೋನಿಗ್ರಹವಿಲ್ಲದವನಿಗೆ ದೈವಸಾಕ್ಷಾತ್ಕಾರವಾಗುವುದಿಲ್ಲ, ಮನೋನಿಗ್ರಹವುಳ್ಳವನಿಗೆ ಮಾತ್ರ ಅದು ಲಭ್ಯವಾಗುವುದೆನ್ನುವುದು ಸಾಕ್ಷಾತ್ ಭಗವಂತನ ನಿಶ್ಚಿತಾಭಿಪ್ರಾಯ ವಾಗಿರುವುದರಿಂದ ಮುಮುಕ್ಷುಗಳು ಈ ವಾಕ್ಯಗಳಲ್ಲಿ ಎಷ್ಟು ವಿಶ್ವಾಸವಿಟ್ಟಿರ ಬೇಕೋ, ಎಷ್ಟು ಪರಿಪೂರ್ಣವಾಗಿ ಇವುಗಳನ್ನು ಸ್ವೀಕರಿಸಬೇಕೋ ಅರ್ಥವಾಗುವುದು. ಆದ್ದರಿಂದ 'ನಮ್ಮ ಮನಸ್ಸು ಜಯಿಸಲ್ಪಡುವುದೋ ಇಲ್ಲವೋ, ಮೋಕ್ಷವು ಸಿದ್ಧಿಸುವುದೋ ಇಲ್ಲವೋ' ಎನ್ನುವ ಸಂಶಯವನ್ನು ಯಾರೂ ಇಟ್ಟುಕೊಳ್ಳದೆ ಭಗವದ್ವಾಕ್ಯಗಳ ಮೇಲೆ ಪರಮವಿಶ್ವಾಸವಿಟ್ಟು ಅಭ್ಯಾಸ ವೈರಾಗ್ಯಾದಿ ಉಪಾಯಗಳನ್ನಾಶ್ರಯಿಸಿ, ಯತ್ನಿಸುತ್ತಾ, ಮನಸ್ಸನ್ನು ಸ್ವಾಧೀನ ಪಡಿಸಿಕೊಂಡು ಆತ್ಮಸಾಕ್ಷಾತ್ಕಾರ ರೂಪ ಯೋಗವನ್ನು ಈ ಜನ್ಮದಲ್ಲಿಯೇ ಸಾಧಿಸಿಕೊಳ್ಳಬೇಕು.

ಪ್ರ: ಯೋಗ ಸಿದ್ಧಿಯನ್ನು (ಆತ್ಮಸಾಕ್ಷಾತ್ಕಾರ) ಯಾರು ಹೊಂದಬಲ್ಲರು? ಯಾರು ಹೊಂದಲು ಸಾಧ್ಯವಿಲ್ಲ?

ಉ: ಮನೋನಿಗ್ರಹವುಂಟಾಗಿ ಉಪಾಯದಿಂದ ಯತ್ನಿಸುವವನು ಹೊಂದಬಲ್ಲನು. ಅದು ಇಲ್ಲದವನು ಹೊಂದುವುದಿಲ್ಲ.

ಪ್ರ: ಮೋಕ್ಷ ಎಂತಹವನಿಗೆ ಲಭ್ಯವಾಗುವುದು?

ಉ: ಪ್ರಯತ್ನಶೀಲನಾದವನಿಗೆ ಲಭ್ಯವಾಗುವುದಾಗಲೀ ಯತ್ನರಹಿತನಾದ ಸೋಮಾರಿಗಲ್ಲ.

**ಅ||** ಯೋಗದಲ್ಲಿ ಶ್ರದ್ಧೆಯಿಂದೇನೋ ಇದ್ದು, ಒಂದು ಪಕ್ಷ ಮನೋನಿಗ್ರಹ ವನ್ನು ಹೊಂದುವುದಕ್ಕಿಂತ ಮುಂಚೆ ಸಾಧಕನು ಮರಣಿಸಿದರೆ ಯಾವ ಗತಿಯನ್ನು ಹೊಂದುವನು ಎಂದು ಅರ್ಜುನನು ಪರಮಾತ್ಮನನ್ನು ಪ್ರಶ್ನಿಸುತ್ತಿದ್ದಾನೆ-

**ಅರ್ಜುನ ಉವಾಚ:**

**೩೭. ಅಯತಿಃ ಶ್ರದ್ಧಯೋಪೇತೋ ಯೋಗಾಚ್ಚಲಿತಮಾನಸಃ**
**ಅಪ್ರಾಪ್ಯಯೋಗಸಂಸಿದ್ಧಿಮ್ ಕಾಂ ಗತಿಂ ಕೃಷ್ಣ ಗಚ್ಛತಿ**

ಅರ್ಜುನ ಉವಾಚ- ಅರ್ಜುನನು ಕೇಳಿದನು-

**ಅರ್ಥ:** ಕೃಷ್ಣ=ಓ ಕೃಷ್ಣಾ!; ಶ್ರದ್ಧಯಾ=ಶ್ರದ್ಧೆಯಿಂದ; ಉಪೇತಃ=ಕೂಡಿದವ ನಾಗಿದ್ದು (ಆದರೆ); ಅಯತಿಃ=ಮನೋನಿಗ್ರಹಶಕ್ತಿಯಿಲ್ಲದವನಾಗಿ; ಯೋಗಾತ್=ಯೋಗದಿಂದ; ಚಲಿತ ಮಾನಸಃ=ಜಾರಿದ ಮನಸ್ಸುಳ್ಳವನು (ಆದ ಸಾಧಕನು); ಯೋಗಸಂಸಿದ್ಧಿಮ್=ಯೋಗಸಿದ್ಧಿಯನ್ನು (ಆತ್ಮ ಸಾಕ್ಷಾತ್ಕಾರವನ್ನು); ಅಪ್ರಾಪ್ಯ=ಹೊಂದದೆ; ಕಾಂ ಗತಿಮ್=ಯಾವ ಗತಿಯನ್ನು; ಗಚ್ಛತಿ=ಹೊಂದುತ್ತಿದ್ದಾನೆ.

**ತಾ||** ಅರ್ಜುನನು ಹೀಗೆ ಕೇಳಿದನು- ಕೃಷ್ಣಾ! ಶ್ರದ್ಧೆಯಿಂದ ಕೂಡಿದ, ಆದರೆ ನಿಗ್ರಹಶಕ್ತಿಯಿಲ್ಲದೆ ಯೋಗದಿಂದ ಕೆಳಜಾರಿದ ಮನಸ್ಸುಳ್ಳ ಸಾಧಕನು ಯೋಗಸಿದ್ಧಿಯನ್ನು (ಆತ್ಮಸಾಕ್ಷಾತ್ಕಾರವನ್ನು) ಹೊಂದದೆ ಮರಣಿಸಿದರೆ ಮತ್ತೆ ಯಾವ ಗತಿಯನ್ನು ಹೊಂದುತ್ತಾನೆ?

**ವ್ಯಾಖ್ಯೆ:** ಮನಸ್ಸನ್ನು ನಿಗ್ರಹಿಸಿದರೆ ಯೋಗಸಿದ್ಧಿ (ಆತ್ಮಸಾಕ್ಷಾತ್ಕಾರ) ಉಂಟಾಗುವುದೆಂದು ಶ್ರೀಕೃಷ್ಣಮೂರ್ತಿ ಹೇಳಲು, ಅಲ್ಲಿ ಅರ್ಜುನನಿಗೆ ಒಂದು ಸಂದೇಹವುಂಟಾಗಿದೆ. ಒಬ್ಬನಿಗೆ ಯೋಗದಲ್ಲಿ, ಧ್ಯಾನದಲ್ಲಿ, ಗುರುವಾಕ್ಯ ದಲ್ಲಿ ಶ್ರದ್ಧೆಯೇನೋ ಇದೆ; ವಿಶ್ವಾಸವಿದೆ. ಸಾಧನೆ ಮಾಡುತ್ತಿದ್ದಾನೆ. ಆದರೆ ಮನಸ್ಸು ಧ್ಯಾನದಲ್ಲಿ ಸ್ಥಿರತೆ ಹೊಂದುತ್ತಿಲ್ಲ. ಅದು ಸ್ವಾಧೀನವಾಗುತ್ತಿಲ್ಲ. ಅಂತಹವನು ಲಕ್ಷ್ಯವನ್ನು ಹೊಂದದೆ ಮರಣಿಸಿದರೆ ಯಾವ ಗತಿಯನ್ನು ಹೊಂದುವನು?- ಎನ್ನುವುದು ಅರ್ಜುನನ ಪ್ರಶ್ನೆ. ಈ ಪ್ರಶ್ನೆ ಸಾಮಾನ್ಯವಾಗಿ ಲೋಕದಲ್ಲಿ ಬಹಳಷ್ಟು ಜನರಿಗೆ ಉಂಟಾಗುತ್ತದೆ. ಏಕೆಂದರೆ, ಈ ಜನ್ಮದಲ್ಲಿಯೇ ಮೋಕ್ಷಸಿದ್ಧಿಗಾಗಿ ತೀವ್ರ ಪ್ರಯತ್ನವನ್ನು ಮಾಡುವವರು ಬಹಳ ವಿರಳ. ಮಧ್ಯ ತರಗತಿಯವರಾದ ಏನೋ ಸ್ವಲ್ಪ ಮಟ್ಟಿಗೆ ನಿಷ್ಠೆಯುಳ್ಳವರೇ ಹೆಚ್ಚು. ಆದ್ದರಿಂದ ಅಂತಹವರು ಈ ಜನ್ಮದಲ್ಲಿ ಯೋಗದ ಪರಾಕಾಷ್ಠೆಯನ್ನು ಪಡೆಯದೆ ಮರಣಿಸಿದರೆ ಅವರ ಗತಿ ಏನು? ಎನ್ನುವ ಸಂಶಯವು ಅನೇಕರಿಗೆ ಬಂದೇ ಬರುತ್ತಿರುತ್ತದೆ. ಅದಕ್ಕೆ ಭಗವಂತನು ಕೊಟ್ಟ ಉತ್ತರವು ಸಾಧಕ ಲೋಕಕ್ಕೆ ಉತ್ಸಾಹಜನಕವಾಗಿದೆ. ಶ್ರದ್ಧಾಭಕ್ತಿಗಳಿದ್ದರೂ ಈ ಜನ್ಮದಲ್ಲಿಯೇ ಪೂರ್ಣತ್ವವನ್ನು ಹೊಂದದವರು ಅನೇಕರು ಮುಂದೆ ತಮ್ಮ ಗತಿಯೇನು ಎಂದು ಅಂಜುವರು. ಆದರೆ ಅವರ ಭಯವನ್ನು ಅರ್ಜುನನ ಈ ಪ್ರಶ್ನೆ ಹಾಗು ಅದಕ್ಕೆ ಭಗವಂತನು ಕೊಟ್ಟ ಸಮಾಧಾನ ತೊಲಗಿಸಿ ಹಾಕುತ್ತದೆ.

ಪ್ರ : ಅರ್ಜುನನು ಶ್ರೀಕೃಷ್ಣನನ್ನು ಏನೆಂದು ಪ್ರಶ್ನಿಸಿದನು?

ಉ : ದೈವಪ್ರಾಪ್ತಿಗಾಗಿ ಶ್ರದ್ಧೆಯಿಂದ ಯತ್ನಿಸುವವನು, ಮನೋನಿಗ್ರಹ

ಶಕ್ತಿಯಿಲ್ಲದೆ ಯೋಗಸಿದ್ಧಿಯನ್ನು ಹೊಂದದೆ ಮರಣಿಸಿದರೆ ಆತನು ಯಾವಗತಿ ಪಡೆಯುವನು? ಎನ್ನುವುದು ಅರ್ಜುನನ ಪ್ರಶ್ನೆ.

**೩೮. ಕಚ್ಚಿನ್ನೋಭಯವಿಭ್ರಷ್ಟಃ ಛಿನ್ನಾಭ್ರಮಿವ ನಶ್ಯತಿ**
**ಅಪ್ರತಿಷ್ಠೋ ಮಹಾಬಾಹೋ ವಿಮೂಢೋ ಬ್ರಹ್ಮಣಃ ಪಥಿ**

**ಅರ್ಥ:** ಮಹಾಬಾಹೋ=ಉದ್ದ ತೋಳುಗಳುಳ್ಳ ಓ ಕೃಷ್ಣಾ!; ಬ್ರಹ್ಮಣಃ= ಬ್ರಹ್ಮದ; ಪಥಿ=ಮಾರ್ಗದಲ್ಲಿ (ಮೋಕ್ಷ ಮಾರ್ಗವಾದ ಯೋಗದಲ್ಲಿ); ಅಪ್ರತಿಷ್ಠಃ=ಸ್ಥಿರತೆಯಿಲ್ಲದವನಾಗಿ; ವಿಮೂಢಃ=ಮೂಢನು; ಉಭಯ ವಿಭ್ರಷ್ಟಃ=ಇಹಪರಗಳೆರಡಕ್ಕೂ ಕೆಟ್ಟವನಾಗಿ; ಛಿನ್ನಾಭ್ರಮಿವ=ಚದುರಿದ ಮೇಘದಂತೆ; ನ ನಶ್ಯತಿ ಕಚ್ಚಿತ್=ನಾಶವಾಗುವುದಿಲ್ಲವೇ ಹೇಗೆ?

**ತಾ||** ಉದ್ದ ಬಾಹುಗಳುಳ್ಳ ಓ ಕೃಷ್ಣಾ! ಬ್ರಹ್ಮ ಮಾರ್ಗದಲ್ಲಿ (ಯೋಗದಲ್ಲಿ) ಸ್ಥಿರತೆ ಹೊಂದಲಾರದ ಮೂಢನು ಇಹಪರಗಳೆರಡಕ್ಕೂ ಕೆಟ್ಟವನಾಗಿ ಚದುರಿದ ಮೇಘದಂತೆ ನಶಿಸಿ ಹೋಗುವುದಿಲ್ಲವೇ?

**ವ್ಯಾಖ್ಯೆ:** ಆಧ್ಯಾತ್ಮ ಮಾರ್ಗದಲ್ಲಿ ಪ್ರವೇಶಿಸಿಯೂ ಅದರಲ್ಲಿ ಸ್ಥಿರತೆಯನ್ನು ಹೊಂದದವನ ವಿಷಯವಾಗಿ ಇಲ್ಲಿ ಪ್ರಶ್ನಿಸಲಾಗಿದೆ. 'ಉಭಯವಿಭ್ರಷ್ಟಃ' ಎನ್ನುವ ಪದಕ್ಕೆ ಕೆಲವರು ಕರ್ಮ ಹಾಗು ಯೋಗ ಮಾರ್ಗಗಳಿಂದ ಮತ್ತೆ ಕೆಲವರು ಸ್ವರ್ಗಮೋಕ್ಷಗಳಿಂದ ಎಂದೂ ಅರ್ಥ ಹೇಳುವರು.

**ಅ||** ತನ್ನ ಈ ಪ್ರಶ್ನೆಗೆ ಸಮಾಧಾನವನ್ನು ಹೇಳಬೇಕೆಂದು ಅರ್ಜುನನು ಭಗವಂತನನ್ನು ಪ್ರಾರ್ಥಿಸುತ್ತಿದ್ದಾನೆ-

**೩೯. ಏತನ್ಮೇ ಸಂಶಯಂ ಕೃಷ್ಣ ಛೇತ್ತುಮರ್ಹಸ್ಯಶೇಷತಃ.**
**ತ್ವದನ್ಯಃ ಸಂಶಯಸ್ಯಾಸ್ಯ ಛೇತ್ತಾ ನ ಹ್ಯುಪಪದ್ಯತೇ**

**ಅರ್ಥ:** ಕೃಷ್ಣ=ಓ ಕೃಷ್ಣಾ!; ಮೇ=ನನ್ನ; ಏತಂ=ಈ; ಸಂಶಯಮ್= ಸಂದೇಹವನ್ನು; ಅಶೇಷತಃ=ಪೂರ್ತಿಯಾಗಿ; ಛೇತ್ತುಮ್=ಹೋಗಲಾಡಿಸಲು; ಅರ್ಹಸಿ=ಅರ್ಹನಾದವನಾಗಿದ್ದೀಯೆ; ಅಸ್ಯ=ಈ; ಸಂಶಯಸ್ಯ=ಸಂದೇಹ ವನ್ನು; ಛೇತ್ತಾ=ಹೋಗಲಾಡಿಸುವವನು; ತ್ವತ್=ನಿನಗಿಂತ; ಅನ್ಯಃ= ಬೇರೊಬ್ಬನು; ನ ಹ್ಯುಪಪದ್ಯತೇ=ಲಭಿಸುವುದಿಲ್ಲವಲ್ಲ!

**ತಾ||** ಕೃಷ್ಣಾ! ಈ ನನ್ನ ಸಂದೇಹವನ್ನು ಪೂರ್ತಿಯಾಗಿ ನಿವಾರಿಸಲು ನೀನೇ ಸರಿಯಾದವನು (ಸಮರ್ಥನು). ನೀನಲ್ಲದೆ ಬೇರೆ ಯಾರೂ ಈ ಸಂದೇಹವನ್ನು ಹೋಗಲಾಡಿಸಲು ಸಾಧ್ಯವಿಲ್ಲ.

**ವ್ಯಾಖ್ಯೆ:** ಅರ್ಜುನನು ಗುರುವಾದ ಶ್ರೀಕೃಷ್ಣಮೂರ್ತಿಯಲ್ಲಿ ಅನನ್ಯ ಭಕ್ತಿ ಭಾವವನ್ನು, ಸಂಪೂರ್ಣ ವಿಶ್ವಾಸವನ್ನು ಪ್ರದರ್ಶಿಸುತ್ತಿದ್ದಾನೆ. 'ಪರಿಪ್ರಶ್ನೇನ ಸೇವಯಾ' (೪-೩೪) ಎನ್ನುವ ವಾಕ್ಯದ 'ಪರಿಪ್ರಶ್ನೆ'ಗೆ ಇದು ಸರಿಯಾದ ಉದಾಹರಣೆ. ಶಿಷ್ಯನು ಗುರುವನ್ನು ಪ್ರಶ್ನಿಸುವಾಗ ಎಷ್ಟೋ ವಿನಯ ವಿಧೇಯತೆಗಳನ್ನು ತೋರಿಸಬೇಕು. ಆಗಲೇ ಗುರುವಿಗೆ ಸಂತೋಷವಾಗಿ ಶಿಷ್ಯನ ಮೇಲೆ ತನ್ನ ಅನುಗ್ರಹವನ್ನು ತೋರಿಸುವನು. ಗುರು, ದೈವ ಹಾಗು ಹಿರಿಯರೊಂದಿಗೆ ದರ್ಪವು ಕೆಲಸಕ್ಕೆ ಬಾರದು. ಅಹಂಭಾವ, ದರ್ಪಗಳುಳ್ಳವನು ಗುರು ಮತ್ತು ದೈವಾನುಗ್ರಹಗಳಿಗೆ ಎಂದೆಂದಿಗೂ ಪಾತ್ರನಾಗುವುದಿಲ್ಲ.

ಶ್ರೀಕೃಷ್ಣಮೂರ್ತಿ ತ್ರಿಲೋಕನಾಥನು, ಸಾಕ್ಷಾತ್ ಈಶ್ವರನು. ಸಮಸ್ತ ಬ್ರಹ್ಮಾಂಡದಲ್ಲಿರುವ ಭೂತಕೋಟಿಗಳ ಭೂತಭವಿಷ್ಯದ್ವರ್ತಮಾನದ ಗತಿಗಳನ್ನೆಲ್ಲಾ ತಿಳಿದವನು. ಆದ್ದರಿಂದ ಯೋಗಭ್ರಷ್ಟರ ಭಾವೀ ಚರಿತ್ರೆಯನ್ನು ಚೆನ್ನಾಗಿ ಅರಿತವನೇ ಆಗಿರುವನು. ಅಂತಹ ಮಹನೀಯನು ತನ್ನೆದುರಿಗೆ ಇರಬೇಕಾದರೆ ಇನ್ನು ಇನ್ನೊಬ್ಬರನ್ನು ತನ್ನ ಸಂಶಯ ನಿವೃತ್ತಿಗಾಗಿ ಅರ್ಜುನನು ಹೇಗೆ ಆಶ್ರಯಿಸಬಲ್ಲನು? ಆ ಸಮರ್ಥತೆ ಬೇರೆ ಯಾರಿಗಿದೆಯೆಂದು! ಆದ್ದರಿಂದಲೇ ಅರ್ಜುನನು ನೀನೇ ನನ್ನ ಸಂಶಯವನ್ನು ನಿವಾರಿಸಲು ಯೋಗ್ಯನಾದವನು ಬೇರೆಯವರು ಅಲ್ಲವೆಂದು ಹೇಳಲು ಕಾರಣವಾಗಿದೆ.

**ಅ||** ಅರ್ಜುನನ ಆ ಪ್ರಶ್ನೆಗೆ ಭಗವಂತನು ಉತ್ತರ ಕೊಡುತ್ತಿದ್ದಾನೆ-

**ಶ್ರೀ ಭಗವಾನುವಾಚ**

**೪೦. ಪಾರ್ಥ ನೈವೇಹ ನಾಮುತ್ರ ವಿನಾಶಸ್ತಸ್ಯ ವಿದ್ಯತೇ**
**ನ ಹಿ ಕಲ್ಯಾಣಕೃತ್ ಕಶ್ಚಿತ್ ದುರ್ಗತಿಂ ತಾತ ಗಚ್ಛತಿ**

ಶ್ರೀ ಭಗವಾನುವಾಚ- ಶ್ರೀ ಭಗವಂತನು ಹೇಳಿದನು.

**ಅರ್ಥ:** ಪಾರ್ಥ=ಓ ಅರ್ಜುನಾ!; ತಸ್ಯ=ಅವನಿಗೆ (ಯೋಗಭ್ರಷ್ಟನಿಗೆ); ಇಹ=ಈ ಲೋಕದಲ್ಲಿ; ವಿನಾಶಃ=ವಿನಾಶವು; ನ ವಿದ್ಯತೆ ಏವ=ಇಲ್ಲವೇ ಇಲ್ಲ; ಅಮುತ್ರ=ಪರಲೋಕದಲ್ಲಿ; ನ=ಇಲ್ಲ; ತಾತ=ತಂದೆ! ಕಲ್ಯಾಣಕೃತಮ್= ಒಳ್ಳೆಯ ಕೆಲಸ ಮಾಡುವವನು; ಕಶ್ಚಿತ್=ಯಾವನೂ; ದುರ್ಗತಿಮ್= ದುರ್ಗತಿಯನ್ನು; ನಗಚ್ಛತಿಹಿ=ಹೊಂದುವುದಿಲ್ಲ.

**ತಾ||** ಶ್ರೀಭಗವಂತನು ಹೇಳಿದನು- ಓ ಅರ್ಜುನಾ! ಅಂತಹ ಯೋಗಭ್ರಷ್ಟನಿಗೆ ಈ ಲೋಕದಲ್ಲಾಗಲಿ, ಪರಲೋಕದಲ್ಲಾಗಲಿ ವಿನಾಶವು ಉಂಟಾಗುವುದೇ ಇಲ್ಲ. ತಂದೇ! ಒಳ್ಳೆಯ ಕೆಲಸವನ್ನು ಮಾಡುವ ಯಾವನೂ ದುರ್ಗತಿಯನ್ನು ಹೊಂದುವುದಿಲ್ಲ.

**ವ್ಯಾಖ್ಯೆ:** ಸತ್ಕಾರ್ಯತತ್ಪರರಿಗೆ ಭಗವಂತನು ಅಭಯವಿತ್ತಿದ್ದಾನೆ. ಯೋಗಾಭ್ಯಾಸ, ಧ್ಯಾನ ಮುಂತಾದುವುಗಳನ್ನು ಮಾಡುವವರು ಒಂದು ವೇಳೆ ತಮ್ಮ ಲಕ್ಷ್ಯವನ್ನು ಸೇರದೆ ಮರಣಿಸಿದರೆ ಅವರಿಗೆ ದುರ್ಗತಿ ಉಂಟಾಗುವುದಿಲ್ಲವೆಂದು ಸಾಧಕರಿಗೆ ಭಗವಂತನು ವಾಗ್ದಾನವನ್ನು ಕೊಟ್ಟಿರುವನು. ಇಷ್ಟೇ ಅಲ್ಲ, ಒಳ್ಳೆಯ ಕೆಲಸವನ್ನು ಮಾಡುವವನಿಗೆ ಯಾವಾಗಲೂ ವಿನಾಶವಾಗಲಿ, ದುರ್ಗತಿ ಯಾಗಲೀ ಉಂಟಾಗುವುದೇ ಇಲ್ಲವೆಂದು ಹೇಳಿರುವನು. ಭಗವಂತನ ಈ ವಾಕ್ಯ ಭಕ್ತರಿಗೆ, ಸಾಧಕರಿಗೆ ಬ್ರಹ್ಮ ಮಾರ್ಗದಲ್ಲಿ ನಡೆಯುವವರಿಗೆ ಸಂಜೀವಿನಿಯಂತಹದು. ಅವರಿಗೆ ಈ ವಾಗ್ದಾನ ಎಷ್ಟೋ ಉತ್ಸಾಹವನ್ನುಂಟು ಮಾಡುತ್ತಿದೆ. ತಮ್ಮ ಸದ್ಗತಿಯ ವಿಷಯದಲ್ಲಿ ಸಂಶಯಾಸ್ಪದವಾಗಿದ್ದು ಸತ್ಕಾರ್ಯ ಪರಾಯಣ ಮಾಡುವವ ರೆಲ್ಲರಿಗೂ ಗೀತಾಚಾರ್ಯನ ಈ ವಾಕ್ಯವು ಪ್ರಾಣವನ್ನು ಕೊಟ್ಟಂತಿದೆ. ಈ ಶ್ಲೋಕವನ್ನು ಕಂಠಸ್ಥ ಮಾಡಿ ಆಗಾಗ ಸ್ಮರಿಸುತ್ತಿದ್ದರೆ ಇನ್ನು ಭಯ, ದುಃಖ ಮತ್ತು ಸಂದೇಹಗಳು ಮುಮುಕ್ಷುವಿಗೆ ಉಂಟಾಗಲು ಸಾಧ್ಯವೇ ಇಲ್ಲ. ಇಂತಹ ಧೈರ್ಯೋದ್ಬೋಧಕ ವಾಕ್ಯಗಳಿಂದಲೇ ಸಾಧಕನು ಪರಮಾತ್ಮ ರಂಗದಲ್ಲಿ, ಶ್ರದ್ಧಾಭಕ್ತಿಗಳಿಂದ ವ್ಯವಹರಿಸಬಲ್ಲನು. ಕೆಟ್ಟ ಕೆಲಸಕ್ಕೆ ಭಯಬೀಳಬೇಕೇ ಹೊರತು ಒಳ್ಳೆಯ ಕೆಲಸ ಎಷ್ಟು ಚಿಕ್ಕದಾದರೂ ಅಂಜಬೇಕಾಗಿಲ್ಲವೆಂದು ಸ್ಪಷ್ಟವಾಗುತ್ತಿದೆ. ಅವರವರು ಮಾಡುವ ಸತ್ಕಾರ್ಯಗಳನ್ನನುಸರಿಸಿ ಜನರಿಗೆ ಲಭಿಸುವ ಸತ್ಫಲಿತಗಳಲ್ಲಿ ಸ್ವಲ್ಪ ತಾರತಮ್ಯವಿರಬಹುದೇ ಆಗಲಿ ದುಷ್ಫಲಿತಗಳು ಮಾತ್ರ ಯಾವಾಗಲೂ ಉಂಟಾಗುವುದಿಲ್ಲ.

'ಇಹ', 'ಅಮುತ್ರ' ಎನ್ನುವ ಎರಡು ಪದಗಳನ್ನು ಇಲ್ಲಿ ಪ್ರಯೋಗಿಸಲ್ಪಟ್ಟಿರುವುದರಿಂದ ಇಹಲೋಕದಲ್ಲಾಗಲಿ, ಪರಲೋಕದಲ್ಲಾಗಲಿ ಬೇರೆಯೆಲ್ಲಾದರಾಗಲಿ ಸತ್ಕಾರ್ಯಪರನಿಗೆ ತೊಂದರೆಯಿಲ್ಲವೆನ್ನುವುದು ಭಾವ. ಮತ್ತೆ 'ಕಲ್ಯಾಣಕೃತ್' (ಶುಭಕಾರ್ಯ) ಎನ್ನುವ ಸರ್ವಸಾಮಾನ್ಯ ಪದ (General term) ಪ್ರಯೋಗಿಸಲ್ಪಟ್ಟಿರುವುದರಿಂದ ಎಂತಹ ಪುಣ್ಯ ಅಥವ ಸತ್ಕಾರ್ಯವಾದರೂ ಸರಿಯೇ ಉತ್ತಮ ಗತಿಯನ್ನೇ ಉಂಟುಮಾಡುವುದಾಗಲಿ ದುರ್ಗತಿಯನ್ನು ಅಲ್ಲವೆಂದು ಸ್ಪಷ್ಟವಾಗುತ್ತಿದೆ. ಯೋಗಾಭ್ಯಾಸವು ಒಂದು ಸತ್ಕಾರ್ಯವೇ ಆಗಿರುವುದರಿಂದ ಯೋಗವನ್ನು ಸ್ವಲ್ಪ ಆಚರಿಸಿ ಮರಣಿಸಿದರೂ ಆತನಿಗೆ ದುರ್ಗತಿ ಎಂದೂ ಸಂಭವಿಸದೆ ಸದ್ಗತಿಯೇ ಉಂಟಾಗುವುದೆನ್ನುವ ಭಗವಂತನ ಈ ಉತ್ತರದಿಂದ ಅರ್ಜುನನ ಸಂಶಯವು ನಿವೃತ್ತಿಯಾದಂತೆಯೇ ಸರಿ.

ಮತ್ತೆ ಶ್ರೀಕೃಷ್ಣ ಪರಮಾತ್ಮನು ಹೇಳಿದ ಈ ಪ್ರತ್ಯುತ್ತರದಲ್ಲಿ ಪಾಪಾತ್ಮರಿಗೆ, ದುಷ್ಕಾರ್ಯಪರರಿಗೆ, ಅಶುಭಾಚರಣೆಗಳಿಗೆ ದುರ್ಗತಿ ತಪ್ಪದೆ ಉಂಟಾಗುತ್ತದೆಂದು ಧ್ವನಿಸುತ್ತಿದೆ. ಪಾಪಿಗಳಿಗೆ ಈ ಲೋಕದಲ್ಲಿಯೇ ಅಲ್ಲದೆ ಪರಲೋಕದಲ್ಲಿಯೂ ಕೂಡ ವಿನಾಶವೇ ಉಂಟಾಗುವುದೆಂದು ಸ್ಪಷ್ಟವಾಗುತ್ತಿದೆ. (ವಿನಾಶವೆಂದರೆ ನೀಚ ಜನ್ಮ, ದುಃಖ ಮೊದಲಾದವು ಉಂಟಾಗುತ್ತವೆ ಎಂದು). ಆದ್ದರಿಂದ ದುಷ್ಕಾರ್ಯಗಳನ್ನು ತ್ಯಜಿಸಿ ಸತ್ಕಾರ್ಯಾಚರಣಶೀಲರಾಗಿ, ಆಧ್ಯಾತ್ಮಸಾಧನಾಪರರಾಗಿ ಶ್ರೇಯವನ್ನು ಹೊಂದಬೇಕು. ಲಕ್ಷ್ಯವಾದ ಆತ್ಮಸಾಕ್ಷಾತ್ಕಾರವನ್ನು ಈ ಜನ್ಮದಲ್ಲೇ ಹೊಂದಲು ಪ್ರಯತ್ನಿಸಬೇಕು. ಒಂದು ವೇಳೆ ಹೊಂದಲಸಾಧ್ಯವಾದರೆ, ಮೇಲಿನ ಭಗವದ್ವಾಕ್ಯಗಳಿಂದ ಧೈರ್ಯವನ್ನು ಹೊಂದಿ ಮುಂದಕ್ಕೆ ಸಾಗುತ್ತಿರಬೇಕು.

ಪ್ರ : ಯೋಗಭ್ರಷ್ಟನಿಗೆ ಎಂತಹ ಗತಿ ಲಬಿಸುವುದು?

ಉ: ಆತನಿಗೆ ಈ ಲೋಕದಲ್ಲಾಗಲಿ, ಪರಲೋಕದಲ್ಲಾಗಲಿ ದುರ್ಗತಿ ಎಂದೆಂದಿಗೂ ಸಂಭವಿಸುವುದಿಲ್ಲ. ಸದ್ಗತಿಯೇ ಉಂಟಾಗುವುದು.

ಪ್ರ: ಇಲ್ಲಿ ಶ್ರೀಕೃಷ್ಣಮೂರ್ತಿ ಸಿದ್ಧಾಂತೀಕರಿಸಿದ ವಿಷಯವೇನು?

ಉ: 'ಶುಭಕಾರ್ಯಗಳನ್ನು ಮಾಡುವ ಯಾರಿಗೂ ದುರ್ಗತಿ ಉಂಟಾಗುವುದಿಲ್ಲ, ಸದ್ಗತಿಯೇ ಉಂಟಾಗುವುದು.' ಎನ್ನುವ ಪರಮಸತ್ಯವನ್ನು ಇಲ್ಲಿ ಹೇಳಲಾಗಿದೆ.

**ಅ॥** ದೇಹ ವಿಯೋಗಾನಂತರ ಯೋಗಭ್ರಷ್ಟನು ಎಂತಹ ಸದ್ಗತಿಯನ್ನು ಹೊಂದುವನು ಎನ್ನುವುದನ್ನು ವಿವರಿಸಲಾಗುತ್ತಿದೆ-

**೪೧. ಪ್ರಾಪ್ಯ ಪುಣ್ಯಕೃತಾಂ ಲೋಕಾನುಷಿತ್ವಾ ಶಾಶ್ವತೀಃ ಸಮಾಃ**
**ಶುಚೀನಾಂ ಶ್ರೀಮತಾಂ ಗೇಹೇ ಯೋಗಭ್ರಷ್ಟೋಽಭಿಜಾಯತೇ**

**ಅರ್ಥ:** ಯೋಗಭ್ರಷ್ಟಃ=ಯೋಗದಿಂದ ವಂಚಿತನಾದವನು (ಯೋಗ ಸಿದ್ಧಿಯನ್ನು ಹೊಂದದವನು); (ಮರಣಾನಂತರ) ಪುಣ್ಯಕೃತಾಮ್=ಪುಣ್ಯ ಮಾಡಿದವರ; ಲೋಕಾನ್=ಲೋಕಗಳನ್ನು; ಪ್ರಾಪ್ಯ=ಹೊಂದಿ; ಶಾಶ್ವತೀಃ= ಬಹಳಷ್ಟು; ಸಮಾಃ=ವರ್ಷಗಳು; ಉಷಿತ್ವಾ=(ಅಲ್ಲಿ) ನಿವಸಿಸಿ; (ನಂತರ) ಶುಚೀನಾಮ್=ಪರಿಶುದ್ಧರಾದ (ಸದಾಚಾರವಂತರಾದ); ಶ್ರೀಮತಾಂ=ಶ್ರೀಮಂತರ; ಗೇಹೇ=ಗೃಹದಲ್ಲಿ; ಅಭಿಜಾಯತೇ=ಹುಟ್ಟುತ್ತಿದ್ದಾನೆ.

**ತಾ॥** ಯೋಗಭ್ರಷ್ಟನು (ಮರಣನಂತರ) ಪುಣ್ಯಾತ್ಮರ ಲೋಕವನ್ನು ಹೊಂದಿ ಅಲ್ಲಿ ಅನೇಕ ವರ್ಷಗಳು ವಾಸಿಸಿ ನಂತರ ಪರಿಶುದ್ಧರಾದ (ಸದಾಚಾರವಂತರಾದ) ಶ್ರೀಮಂತರ ಗೃಹದಲ್ಲಿ ಜನ್ಮಿಸುತ್ತಾನೆ.

**ವ್ಯಾಖ್ಯೆ:** ಯೋಗಭ್ರಷ್ಟನಾದವನು ದುರ್ಗತಿಯನ್ನು ಹೊಂದುವುದಿಲ್ಲವೆಂದು ಹಿಂದಿನ ಶ್ಲೋಕದಲ್ಲಿ ಹೇಳಲಾಗಿದೆ. ಮತ್ತೆ ಯಾವ ರೀತಿಯ ಸದ್ಗತಿಯನ್ನು ಹೊಂದುವನೋ ಈ ಶ್ಲೋಕದಲ್ಲಿ ನಿರೂಪಿಸಲಾಗಿದೆ. ಆತನು (ಮರಣಾನಂತರ) ಪುಣ್ಯವಂತರ ಲೋಕಕ್ಕೆ ಹೋಗಿ, ಅಲ್ಲಿ ಬಹುಕಾಲ ವಾಸಿಸಿ, ನಂತರ ಸದಾಚಾರ ಪರರಾದ ಧನವಂತರ ಗೃಹದಲ್ಲಿ ಜನಿಸುವನು. ಹಾಗೆ ಜನ್ಮಿಸಿ ತಾನು ಈವರೆಗೇ ಬಿಟ್ಟುಹೋದ ಯೋಗಾಭ್ಯಾಸವನ್ನು ಮತ್ತೆ ಮುಂದುವರಿಸುವನು. ಪುಣ್ಯಾತ್ಮರ ಲೋಕದಲ್ಲಿ ಸುಖವೇ ಇರುವುದಾಗಲಿ ದುಃಖವು ಇರುವುದಿಲ್ಲ. ಮತ್ತೆ ಶ್ರೀಮಂತರ ಗೃಹಗಳಲ್ಲಿ ದಾರಿದ್ರ್ಯಾದಿ ಬಾಧೆಗಳಾವುವೂ ಇರುವುದಿಲ್ಲ. ಅವರು ಸದಾಚಾರ ಪರರಾದ ಶ್ರೀಮಂತರಾದುದರಿಂದ ಭೋಗವಿಲಾಸಾದಿ ದುಃಚೇಷ್ಟೆಗಳಾವುವೂ ಅವರಿಗಿರು ವುದಿಲ್ಲ. ಅದು ಯೋಗಾಭ್ಯಾಸವನ್ನು ಮುಂದುವರಿಸಲು ಸೂಕ್ತವಾದ ಸ್ಥಾನವೇ ಆಗಿರುವುದು. ಆದ್ದರಿಂದ ಯೋಗಭ್ರಷ್ಟನಿಗೆ ಮರಣಾನಂತರ ಎಲ್ಲೆಲ್ಲೂ ಅನುಕೂಲ ವಾತಾವರಣವೇ ಸಂಭವಿಸುವುದು. ಆತನಿಗೆ ಸದ್ಗತಿಯೇ ಲಭಿಸುವುದೆಂದು ಸ್ಪಷ್ಟವಾಗುತ್ತಿದೆ.

ಈ ಶ್ಲೋಕದಲ್ಲಿ 'ಶುಚೀನಾಂ' 'ಶ್ರೀಮತಾಂ' ಎನ್ನುವ ಎರಡು ವಿಶೇಷಣಗಳು ಉಪಯೋಗಿಸಲ್ಪಟ್ಟಿವೆ. 'ಪರಿಶುದ್ಧರಾದ, ಶ್ರೀಮಂತರಾದ' ಎನ್ನುವುದು ಅವುಗಳ ಅರ್ಥ. ದರಿದ್ರರಾದ ಸದಾಚಾರಪರರ ಮನೆಗಳಲ್ಲಿ ಯೋಗಭ್ರಷ್ಟನು ಒಂದು ವೇಳೆ ಜನಿಸಿದರೆ ಅಲ್ಲಿ ಭೋಜನಾದಿ ನಿರ್ವಹಣೆಗಳಿಗೆ ಶ್ರಮವಹಿಸಬೇಕಾಗುತ್ತದೆ. ತತ್ಫಲಿತವಾಗಿ ಯೋಗಕ್ಕೆ ಭಂಗವುಂಟಾಗಬಹುದು. ಹಾಗೆಯೇ ಕೇವಲ ಶ್ರೀಮಂತರ ಮನೆಯಲ್ಲಿ ಜನ್ಮಿಸಿದರೆ ಭೋಗವಿಲಾಸಗಳಲ್ಲಿ ಮುಳುಗಿ ಹೋಗುವ ಸಂಭವವಿದೆಯಾದ್ದರಿಂದ ದಾರಿದ್ರ್ಯವಿಲ್ಲದ, ದುರಾಚಾರವಿಲ್ಲದ ಮನೆಗಳಲ್ಲಿಯೇ ಯೋಗಭ್ರಷ್ಟನನ್ನು ಭಗವಂತನು ಹುಟ್ಟಿಸುತ್ತಿದ್ದಾನೆ. ಆಗ ದೈವಧ್ಯಾನಕ್ಕೆ ಯಾವ ಆತಂಕವೂ ಆತನಿಗಿರುವುದಿಲ್ಲ. ಆಹಾ! ಸಾಧಕರ ಮೇಲೆ, ಭಕ್ತರ ಮೇಲೆ ಭಗವಂತನಿಗೆ ಎಂತಹ ಪ್ರೇಮ! ತನ್ನನ್ನು ಧ್ಯಾನಿಸುವವರನ್ನು ಸಾವಿರ ಕಣ್ಣುಗಳಿಂದ ಆತನು ರಕ್ಷಿಸುತ್ತಾನಾದ್ದರಿಂದ ಇನ್ನು ಮನುಜನು ದೈವಮಾರ್ಗವನ್ನು ಅವಲಂಬಿಸಲು ಸಂಕೋಚವೇಕೆ?

೧) ಯೋಗಭ್ರಷ್ಟನು ಪುಣ್ಯವಂತರ ಲೋಕಕ್ಕೆ ಹೋಗುವನೆಂದು ಹೇಳಿರುವುದರಿಂದ ಯೋಗವು ಮಹಾಪುಣ್ಯಪ್ರದವೆಂದು ಸ್ಪಷ್ಟವಾಗುತ್ತಿದೆ ೨) ಮತ್ತೆ ಯೋಗ್ಯವಾದ ಜನ್ಮವನ್ನು ಹೊಂದಿ ಯೋಗವನ್ನು ಮುಂದುವರೆಸುವ ಸಾಧ್ಯತೆಗಳಿರುವುದರಿಂದ (ಈ ವಿಷಯ ಮುಂದಿನ ಶ್ಲೋಕದಲ್ಲಿ ಬರುವುದು) ಅಭ್ಯಾಸ ನಿಷ್ಫಲವಾಗುವುದಿಲ್ಲವೆಂದು ತಿಳಿಯುತ್ತದೆ. ೩) ಧನದ ಜೊತೆಗೆ ಸದಾಚಾರವಿದ್ದರೆ ಅದು ಶೋಭಿಸುವುದೆಂದು ಈ ಶ್ಲೋಕ ತಿಳಿಸುತ್ತದೆ. ಆದ್ದರಿಂದ ಐಶ್ವರ್ಯವಂತರು ತಮ್ಮ ಐಶ್ವರ್ಯದೊಡನೆ ಶುಚಿತ್ವ (ಸದಾಚಾರ ಸಂಪನ್ನತ್ವ)ವನ್ನು ಕೂಡ ಪಾಲಿಸಲು ಪ್ರಯತ್ನಿಸಬೇಕು. ಧನತ್ವಕ್ಕೆ ಶುಚಿತ್ವವನ್ನು ಜೋಡಿಸಬೇಕು. ಒಂದು ವೇಳೆ ಆ ಎರಡರಲ್ಲಿ ಯಾವುದು ಉತ್ತಮ ಎನ್ನುವ ಪ್ರಶ್ನೆ ಬಂದರೆ, ಶುಚಿತ್ವಕ್ಕೆ (ಸದಾಚಾರಕ್ಕೆ) ಪ್ರಾಮುಖ್ಯತೆ ಕೊಡಬೇಕಾಗಿ ಬರುವುದು. ಏಕೆಂದರೆ ಅದು ಭಗವಂತನ ಸಾಮೀಪ್ಯಕ್ಕೆ ಜೀವಿಯನ್ನು ತೆಗೆದುಕೊಂಡು ಹೋಗಬಲ್ಲದು.

ಗೀತೆಯ ಎರಡನೆಯ ಅಧ್ಯಾಯದ ಪ್ರಾರಂಭದಲ್ಲಿ ಕೆಲವು ಶ್ಲೋಕಗಳು ('ದೇಹಿನೋಽಸ್ಮಿನ್ ಯಥಾ ದೇಹೇ' ಮುಂತಾದುವು), ಈ ಆರನೆಯ ಅಧ್ಯಾಯದ ಕೊನೆಯಲ್ಲಿರುವ ಶ್ಲೋಕಗಳು ('ಪ್ರಾಪ್ಯಪುಣ್ಯಕೃತಾಂ ಲೋಕಾನ್!' ಮುಂತಾದುವು) 'ಜನ್ಮಾಂತರ ಸಿದ್ಧಾಂತ'ವನ್ನು ಸಿದ್ಧಪಡಿಸುತ್ತಿವೆ.

ಪ್ರ: ಯೋಗಭ್ರಷ್ಟನು ಮರಣಿಸಿದ ನಂತರ ಎಂತಹ ಸದ್ಗತಿಯನ್ನು ಹೊಂದುವನು?

ಉ: ಆತನು ಮೊದಲು ಪುಣ್ಯವಂತರ ಲೋಕಕ್ಕೆ ಹೋಗಿ ಅಲ್ಲಿ ಬಹಳ ಕಾಲ ನಿವಸಿಸಿ ನಂತರ ಸದಾಚಾರಪರರಾದ ಶ್ರೀಮಂತರ ಗೃಹಗಳಲ್ಲಿ ಜನ್ಮಿಸಿ ತಾನು ಈವರೆಗೆ ಪೂರ್ತಿ ಮಾಡದೆ ಬಿಟ್ಟು ಹೋದ ಯೋಗವನ್ನು ಅಲ್ಲಿ ಮತ್ತೆ ಮುಂದುವರಿಸುವನು.

**ಅ॥** ಈ ಪ್ರಕಾರವಾಗಿ ಸಾಮಾನ್ಯ ಯೋಗಿಗಳನ್ನು ಕುರಿತು ಹೇಳಿ ಇನ್ನು ಉತ್ತಮ ತರಗತಿಯ ಯೋಗಿಗಳ (ಮರಣಾನಂತರದ) ಸ್ಥಿತಿಗತಿಗಳ ಬಗ್ಗೆ ತಿಳಿಸಲಾಗುತ್ತಿದೆ-

**೪೨. ಅಥವಾ ಯೋಗಿನಾಮೇವ ಕುಲೇ ಭವತಿ ಧೀಮತಾಮ್**
**ಏತದ್ಧಿ ದುರ್ಲಭತರಂ ಲೋಕೇ ಜನ್ಮ ಯದೀದೃಶಮ್**

**ಅರ್ಥ:** ಅಥವಾ=ಇಲ್ಲವೆ; (ಉತ್ತಮ ತರಗತಿ ಯೋಗಿಯಾದರೆ); ಧೀಮತಾಮ್=ಜ್ಞಾನವಂತರಾದ; ಯೋಗಿನಾಂ=ಯೋಗಿಗಳ; ಕುಲೇ ಏವ= ವಂಶದಲ್ಲಿಯೇ; ಭವತಿ=ಹುಟ್ಟುತ್ತಿದ್ದಾನೆ; ಈ ದೃಶಂ=ಈ ಪ್ರಕಾರವಾಗಿ; ಜನ್ಮ=ಜನ್ಮವು; ಯತ್=ಯಾವುದು ಇದೆಯೋ; ಏತತ್ ಹಿ=ಅದು; ಲೋಕೇ=ಪ್ರಪಂಚದಲ್ಲಿ; ದುರ್ಲಭತರಂ=ದುರ್ಲಭವಾದುದು.

**ತಾ॥** ಇಲ್ಲವೆ, (ಉತ್ತಮ ತರಗತಿಯ ಯೋಗಿಯಾದರೆ) ಜ್ಞಾನವಂತರಾದ ಯೋಗಿಗಳ ವಂಶದಲ್ಲೇ ಜನ್ಮಿಸುವನು. ಈ ಪ್ರಕಾರವಾದ ಜನ್ಮವು ಲೋಕದಲ್ಲಿ ಮಹಾ ದುರ್ಲಭವಾದುದು.

**ವ್ಯಾಖ್ಯೆ:** ಅಲ್ಪ ಸ್ವಲ್ಪ ಸಾಧನೆ ಮಾಡಿ ಮರಣಿಸಿದ ಯೋಗಿಗಳನ್ನು ಕುರಿತು ಹಿಂದಿನ ಶ್ಲೋಕದಲ್ಲಿ ವರ್ಣಿಸಲಾಯಿತು. ಯೋಗಸಾಧನೆ ತೀವ್ರವಾಗಿ ಮಾಡಿ ಲಕ್ಷ್ಯವನ್ನು ಮಾತ್ರ ಹೊಂದದೆ ಮರಣಿಸಿದವರ ಸ್ಥಿತಿಯನ್ನು ಅವರಿಗೆ ಉಂಟಾಗುವ ಗತಿಯನ್ನು ಇಲ್ಲಿ ವಿವರಿಸಲಾಗಿದೆ. ಅವರು ಮರಣಿಸಿದ ನಂತರ ಧೀಮಂತರಾದ ಯೋಗಿಗಳ ವಂಶದಲ್ಲಿ, ತಪಸ್ಸಂಪನ್ನರಾದ ಮಹಾತ್ಮರ ಸಂಪ್ರದಾಯದಲ್ಲಿ ಜನ್ಮಿಸುವರು (ಹಿಂದಿನ ಶ್ಲೋಕದಲ್ಲಿ ವರ್ಣಿಸಲ್ಪಟ್ಟವರು ನೂರಿಗೆ ನಲವತ್ತು ಅಂಕಗಳನ್ನು ಪಡೆದವರೆಂದು ಹೇಳಿದರೆ, ಇವರು 80% ಸಂಪಾದಿಸಿದಂಥವರೆಂದು ಹೇಳಬಹುದು) ಉತ್ತಮ ಯೋಗಿಪುಂಗವರ ವಂಶದಲ್ಲಿ ಉಂಟಾಗುವ ಅಂತಹ ಜನ್ಮ ಲೋಕದಲ್ಲಿ ಮಹಾದುರ್ಲಭವಾದುದೆಂದು ಭಗವಂತನು ನುಡಿದಿರುವನು. ಅವರು ಧೀಮಂತರು (ಜ್ಞಾನವಂತರು) ಹಾಗು ಆತ್ಮಾನುಭವವನ್ನು ಪಡೆದವರಾದ್ದರಿಂದ ಹಾಗೆ ಜನಿಸುವರು. ವಂಶಪಾರ್ಯಂಪರ್ಯ ಸತ್ಸಂಸ್ಕಾರವನ್ನು ಅನುಸರಿಸಿ ಹುಟ್ಟುವುದಕ್ಕಿಂತ ಮುಂಚೆಯೇ ಅವರಿಗೆ ಶುಕ ಮುನಿಯಂತೆ ಭಕ್ತಿ ಜ್ಞಾನ ವೈರಾಗ್ಯಗಳಿಂದ ಕೂಡಿರುವ ಅವಕಾಶವೇರ್ಪಡುವುದು. ಬಾಲ್ಯದಿಂದಲೂ ದೈವ ವಾತಾವರಣ ದಲ್ಲಿ ಬೆಳೆಯುವುದು ಸಾಮಾನ್ಯ ವಿಷಯವಲ್ಲ. ಅದು ಮಹಾತಪಃಫಲ. ಅನೇಕ ಜನ್ಮಗಳ ಪುಣ್ಯ ಸಂಸ್ಕಾರದ ಫಲ. ಆ ರೀತಿಯ ಉತ್ತಮ ಸಂಸ್ಕಾರವುಳ್ಳ ಯೋಗಭ್ರಷ್ಟನಿಗೆ ಪ್ರಾರಂಭದಿಂದಲೇ ಯಾವ ವಿಕ್ಷೇಪವೂ ಇಲ್ಲದೆ ಸಾಧನೆ ಮುಂದುವರೆಯುವುದು. ಏಕೆಂದರೆ, ಆತನು ಜನ್ಮಿಸಿದ ಯೋಗಿಗಳ ಸಂಪ್ರದಾಯದಲ್ಲಿ ನಿರಂತರ ಆಧ್ಯಾತ್ಮ ವಿಚಾರಣೆ; ಯೋಗಸಾಧನೆ, ನಿಯಮ ನಿಷ್ಠೆಗಳು, ಪರಮಾರ್ಥ ಗ್ರಂಥ ಪಠಣ ಮುಂತಾದುವೇ ವಿರಾಜಿಸುತ್ತಿರುತ್ತವೆ. ತದ್ವಿರುದ್ಧವಾಗಿ ಬೋಧಿಸುವವರಾಗಲಿ, ಆಚರಿಸುವವರಾಗಲಿ ಅಲ್ಲಿರುವುದಿಲ್ಲ. ಆದ್ದರಿಂದ ಪೂರ್ವದಲ್ಲಿ ತಾನು ಮುಗಿಸದೆ ಬಿಟ್ಟ ಸಾಧನೆಯ ಶೇಷವನ್ನು ಅತಿ ತ್ವರೆಯಲ್ಲಿ ಪೂರ್ತಿಮಾಡಿ ಕೃತಾರ್ಥನಾಗುವ ಅವಕಾಶ ಅಲ್ಲಿ ಏರ್ಪಾಡಾಗಿರುತ್ತದೆ.

ಪ್ರಪಂಚದಲ್ಲಿಯ ಎಲ್ಲಾ ಜನ್ಮಗಳಿಗಿಂತ ಯೋಗಿಗಳ ವಂಶದಲ್ಲಿ ಜನಿಸುವುದೇ ಸರ್ವೋತ್ಕೃಷ್ಟವಾದುದೆಂದು ಭಗವಂತನು ಹೇಳುವುದರಲ್ಲಿ ಅದರ ಹಿರಿಮೆ ಅರ್ಥವಾಗುತ್ತಿದೆ. 'ಲೋಕದಲ್ಲಿ ಧನಿಕರಾಗಿ ಹುಟ್ಟುವುದು ದೊಡ್ಡದಲ್ಲ. ರಾಜಾಧಿರಾಜರ ಜನ್ಮ ದೊಡ್ಡದಲ್ಲ, ಇಂದ್ರನ ಜನ್ಮ ದೊಡ್ಡದಲ್ಲ, ಚಂದ್ರನ ಜನ್ಮ ದೊಡ್ಡದಲ್ಲ, ಧೀಮಂತರಾದ ಯೋಗಿಗಳ ಜನ್ಮವೇ ದೊಡ್ಡದು' ಎಂದು ಭಗವಂತನು ಮುಕ್ತ ಕಂಠದಿಂದ ಹೇಳುತ್ತಿದ್ದಾನೆ. ಆದ್ದರಿಂದಲೇ ಅಂತಹ ಜನ್ಮ ದುರ್ಲಭವೆಂದು ಹೇಳದೆ, 'ದುರ್ಲಭತರ' ವೆಂದು ಹೇಳಿದನು. ಆದ್ದರಿಂದ ದೈವತ್ವದಲ್ಲಿ, ಯೋಗಾಭ್ಯಾಸದಲ್ಲಿ, ಆತ್ಮಾನುಭೂತಿಯಲ್ಲಿ ಮಾತ್ರವೇ ವಾಸ್ತವವಾದ ಹಿರಿಮೆಯಿದೆಯೆಂದು ಗ್ರಹಿಸಿ ವಿವೇಕಿಗಳು ಅವುಗಳಿಗಾಗಿ ತೀವ್ರವಾದ ಸಾಧನೆಯನ್ನು ಈ ಜನ್ಮದಲ್ಲಿಯೇ ಆಚರಿಸಬೇಕು. ಪರಮಾರ್ಥ ಸಾಧನೆ ಎಷ್ಟು ಅಧಿಕವಾಗಿ ಮಾಡಿದರೆ ಅಷ್ಟು ಮೇಲಾಗುವುದು. ಅದರಿಂದ ಜನ್ಮ ಪಾವನವಾಗುವುದು. ಮೋಕ್ಷವು ಸನ್ನಿಹಿತವಾಗುವುದು.

'ಕುಲೇ' ಎನ್ನುವ ಪದಕ್ಕೆ ವಂಶ ಇಲ್ಲವೆ ಸಂಪ್ರದಾಯ ಎನ್ನುವ ಅರ್ಥವನ್ನೂ ಹೇಳಬಹುದು.

ಪ್ರ : ಉತ್ತಮ ತರಗತಿಯ ಯೋಗಸಾಧಕರಿಗೆ (ಯೋಗ ಸಾಧನೆ ಅಧಿಕವಾಗಿ ಮಾಡಿ ಲಕ್ಷ್ಯವನ್ನು ಹೊಂದದೆ ಮರಣಿಸಿದವರಿಗೆ) ಎಂತಹ ಸದ್ಗತಿ ಉಂಟಾಗುವುದೋ ವಿವರಿಸುವುದು?

ಉ : ಅಂತಹವರು ಧೀಮಂತರಾದ ಯೋಗಿಗಳ ಕುಟುಂಬದಲ್ಲಿ ಜನ್ಮಿಸುವರು (ಅಲ್ಲಿ ಹುಟ್ಟನಿಂದಲೇ ಯೋಗಾಭ್ಯಾಸವನ್ನಾಚರಿಸಿ ಮುಕ್ತಿ ಹೊಂದುವರೆನ್ನುವುದು ಭಾವ).

ಪ್ರ : ಪ್ರಪಂಚದಲ್ಲಿ ಎಲ್ಲಾ ಜನ್ಮಗಳಿಗಿಂತ ಶ್ರೇಷ್ಠವಾದ ಜನ್ಮ ಯಾವುದು?

ಉ: ಧೀಮಂತರಾದ (ಜ್ಞಾನಸಂಪನ್ನರಾದ) ಯೋಗಿಗಳ ಕುಟುಂಬದಲ್ಲಿ ಇಲ್ಲವೆ ಸಂಪ್ರದಾಯದಲ್ಲಿ ಜನ್ಮಿಸುವುದು.

**ಅ॥** ಹಾಗೆ ಯೋಗಿಗಳ ವಂಶದಲ್ಲಿ ಜನ್ಮಿಸಿದ ನಂತರ ಜೀವನಕ್ರಮ ಹೇಗಿರುತ್ತದೆನ್ನುವುದನ್ನು ವಿವರಿಸಲಾಗುತ್ತಿದೆ.

**೪೩. ತತ್ರ ತಂ ಬುದ್ಧಿಸಂಯೋಗಂ ಲಭತೇ ಪೌರ್ವದೇಹಿಕಮ್**
**ಯತತೇ ಚ ತತೋ ಭೂಯಃಸಂಸಿದ್ಧೌ ಕುರುನಂದನ**

**ಅರ್ಥ:** ಕುರುನಂದನ=ಓ ಅರ್ಜುನಾ! ತತ್ರ=ಆ ಜನ್ಮಗಳಲ್ಲಿ (ಆತನು); ಪೌರ್ವ ದೈಹಿಕಮ್=ಪೂರ್ವ ದೇಹದಲ್ಲಿ; ತಮ್=ಆ; ಬುದ್ಧಿಸಂಯೋಗಮ್= ಯೋಗವಿಷಯ ಸಂಬಂಧವಾದ ಬುದ್ಧಿಯ ಸಂಪರ್ಕ; ಲಭತೇ=ಹೊಂದುತ್ತಿದ್ದಾನೆ; ತತಃ=ಅಂತಹ ಪೂರ್ವಜನ್ಮ ಸಂಸ್ಕಾರದಿಂದ; ಭೂಯಃ=ಮತ್ತೆ (ಅಧಿಕವಾಗಿ); ಸಂಸಿದ್ಧೌ=ಸಂಪೂರ್ಣ ಯೋಗಸಿದ್ಧಿ(ಮೋಕ್ಷಕ್ಕೆ)ಗೆ; ಯತತೇಚ=ಪ್ರಯತ್ನವನ್ನು ಮಾಡುತ್ತಾನೆ.

**ತಾ||** ಅರ್ಜುನಾ! ಈ ರೀತಿ ಯೋಗಿಗಳ ವಂಶದಲ್ಲಿ ಜನಿಸಿ ಪೂರ್ವದೇಹದ (ಯೋಗ ವಿಷಯ ಸಂಬಂಧ) ಬುದ್ಧಿಯೊಡನೆ ಸಂಪರ್ಕಿಸಿ, ಪೂರ್ವಜನ್ಮ ಸಂಸ್ಕಾರದಿಂದ ಮತ್ತೆ ಸಂಪೂರ್ಣ ಯೋಗಸಿದ್ಧಿಗೆ (ಮೋಕ್ಷಕ್ಕೆ) ಅಧಿಕ ಪ್ರಯತ್ನವನ್ನು ಮಾಡುತ್ತಾನೆ.

**ವ್ಯಾಖ್ಯೆ:** ಆತನು ಹಾಗೆ ಯೋಗಿಗಳ ವಂಶದಲ್ಲಿ ಜನ್ಮಿಸಿ ಏನು ಮಾಡುವನು ಎನ್ನುವುದನ್ನು ಇಲ್ಲಿ ವಿವರಿಸಲಾಗಿದೆ. ಪೂರ್ವ ಜನ್ಮದಲ್ಲಿ ತಾನು ಅಭ್ಯಸಿಸಿ ಅಸಂಪೂರ್ತಿಯಾಗಿ ನಿಲ್ಲಿಸಿದ ಯೋಗವನ್ನು ಮತ್ತೆ ಪ್ರಾರಂಭಿಸಿ ಪೂರ್ಣಸಿದ್ಧಿ ಉಂಟಾಗುವವರೆಗೆ ಅದನ್ನು ಸಾಧಿಸುವನು. ಎಲ್ಲಿ ಬಿಟ್ಟಿದ್ದನೋ ಅಲ್ಲಿಂದ ಮತ್ತೆ ಪ್ರಾರಂಭಿಸುವನು. ಆತನ ಪೂರ್ವದ ಶರೀರ ನಾಶವಾಗಿರುವುದೇ ಆಗಲಿ ಪೂರ್ವದ ಮನಸ್ಸು, ಬುದ್ಧಿ, ಸಂಸ್ಕಾರಗಳು ನಾಶವಾಗಿರುವುದಿಲ್ಲ. ಮೋಕ್ಷ ಸಂಬಂಧ ಪ್ರಯತ್ನಗಳು ಸೂಕ್ಷ್ಮವಾಗಿ ಇದ್ದೇ ಇರುವುವು. ಆದ್ದರಿಂದ ಪೂರ್ವ ಜನ್ಮದಲ್ಲಿಯ ಬುದ್ಧಿಯೊಡನೆ ಸಂಯೋಗವನ್ನು ಇಲ್ಲಿ ಮತ್ತೆ ಹೊಂದುವನೆಂದು ಹೇಳಲ್ಪಟ್ಟಿದೆ (ಸಂಬಂಧ ಕಳಚಿಕೊಂಡಿಲ್ಲವೆಂದು ಅರ್ಥ). ಅದು ಪುಣ್ಯ ಬುದ್ಧಿಯಾಗಿದ್ದಲ್ಲಿ ಆ ಪುಣ್ಯಸಂಸ್ಕಾರವೇ ಈಗ ವಿಜೃಂಭಿಸುವುದು. ಪಾಪ ಬುದ್ಧಿಯಾದಲ್ಲಿ ಪಾಪಸಂಸ್ಕಾರಗಳು ಒದಗುವುವು. ಆದ್ದರಿಂದ ಪೂರ್ವಜನ್ಮದಲ್ಲಿ ತಾನು ಮಾಡಿದ್ದು ನಶಿಸದೆ ಈ ಜನ್ಮದಲ್ಲಿ ಮತ್ತೆ ಉದಯಿಸುವುದು. ಇದು ಲೆಕ್ಕ ಪುಸ್ತಕಗಳಲ್ಲಿಯ 'brought over' ಪದ್ಧತಿಯ ಹಾಗೆ. ಹೇಗೆ ಅಂಗಡಿಯಲ್ಲಿ ಲೆಕ್ಕ ಬರೆಯುವವರು ಒಂದು ಪೇಜು ಲೆಕ್ಕ ಪೂರ್ತಿಯಾಗುತ್ತಲೇ ಕೂಡಿ ಆ ಮೊತ್ತವನ್ನು ಮತ್ತೊಂದು ಪೇಜಿನ ಮೇಲೆ ಹಾಕಿ ಲೆಕ್ಕ ಮುಂದುವರೆಸುವರೋ ಹಾಗೆಯೇ ಯೋಗಿಯಾಗುವವನು ಪೂರ್ವಜನ್ಮದಲ್ಲಿ ಯೋಗಾಭ್ಯಾಸವನ್ನು ಎಲ್ಲಿ ನಿಲ್ಲಿಸಿದ್ದನೋ ಅಲ್ಲಿಂದಲೇ ತಿರುಗಿ ಈಗ ಪ್ರಾರಂಭಿಸಿ ಮೋಕ್ಷಸಿದ್ಧಿ ಉಂಟಾಗುವವರೆಗೆ ನಿರ್ವಿರಾಮವಾಗಿ ಪ್ರಯತ್ನ ಮಾಡುವನು. 'ಸಂಸಿದ್ಧೌ' (ಸಮ್ಯಕ್-ಸಿದ್ಧೌ) ಎಂದು ಹೇಳಿರುವುದರಿಂದ ಪೂರ್ಣಸಿದ್ಧಿಗೆ ಆತನು ಯತ್ನಶೀಲನಾಗುವನೆಂದು ಸ್ಪಷ್ಟವಾಗುತ್ತಿದೆ. ಯೋಗಿಗಳ ವಂಶದಲ್ಲಿ ಜನ್ಮಿಸುವುದರಿಂದ ಆಧ್ಯಾತ್ಮಿಕ ವಾತಾವರಣವೇ ಅಲ್ಲಿ ಇರುವುದರಿಂದ ಆತನ ಸಾಧನೆಗೆ ಎಳ್ಳಷ್ಟೂ ಪ್ರತಿಬಂಧಕವಿರುವುದಿಲ್ಲ.

ಇದರಿಂದ ಪುಣ್ಯ, ಪಾಪ, ಜ್ಞಾನ, ಅಜ್ಞಾನ, ಸದ್ವಾಸನೆ, ದುರ್ವಾಸನೆಗಳು ಜನ್ಮ ಜನ್ಮಾಂತರ ಜೀವಿಯ ಹಿಂದೆ ನೆರಳಾಗಿ ಬರುತ್ತಲೇ ಇರುತ್ತವೆಂದು ಅರ್ಥವಾಗುತ್ತದೆ. ಜ್ಞಾನಾಗ್ನಿಯಲ್ಲಿ ದಗ್ಧವಾದಾಗ ಮಾತ್ರ ಕರ್ಮ ಅಂತ್ಯಗೊಂಡು ಜೀವಿಗೆ ಈ ಸಂಸಾರ ಚಕ್ರ ಭ್ರಮಣೆಯಿಂದ ವಿಮುಕ್ತಿಯನ್ನು ಕಲ್ಪಿಸುವುದು. ಆದ್ದರಿಂದ ಶರೀರ ಪತನವಾಗುವುದಕ್ಕೆ ಮುಂಚೆಯೇ ಜೀವಿಯು ತನ್ನ ಬುದ್ಧಿಗೆ ಪೂರ್ಣವಾದ ಪಾರಮಾರ್ಥಿಕ ವಿಕಾಸವನ್ನು ಕಲ್ಪಿಸಬೇಕು. ಅನೇಕ ಸಾಧನೆಗಳ ದ್ವಾರ ಅದಕ್ಕೆ ದೈವ ಸಂಸ್ಕಾರಗಳನ್ನೇ ಉಂಟುಮಾಡಬೇಕು. ಏಕೆಂದರೆ, ಅಂತಹ ಸಂಸ್ಕಾರವೊಂದೇ ಮರಣ ಕಾಲದಲ್ಲಿ ಜೀವಿಯ ಹಿಂದೆ ಬರುವುದು. ಬೇರೆಯ ವಸ್ತುಗಳೆಲ್ಲವೂ, ಅಷ್ಟೇ ಏಕೆ, ದೇಹವೂ ಕೂಡ ಇಲ್ಲಿಯೇ ನಿಂತು ಹೋಗುವುದು. ಆದ್ದರಿಂದ ವಿವೇಕಿಯು ತನ್ನ ಹಿಂದೆ ಯಾವಾಗಲೂ ಇರುವ ಸೂಕ್ಷ್ಮದೇಹವನ್ನು (ಮನಸ್ಸನ್ನು, ಬುದ್ಧಿಯನ್ನು) ಪರಿಶುದ್ಧವಾಗಿ, ದೈವಗಂಧಮಯವಾಗಿ ಮತ್ತು ಆತ್ಮಜ್ಞಾನ ಸಂಪನ್ನವಾಗಿರಿಸಿಕೊಳ್ಳಬೇಕು. ಮಾಡಿದ ಪುಣ್ಯವಾಗಲೀ ಪಾಪವಾಗಲಿ ನಶಿಸುವುದಿಲ್ಲವಾದ್ದರಿಂದ ಸ್ವಲ್ಪ ಜಪ, ಧ್ಯಾನ, ಜ್ಞಾನ, ಪರೋಪಕಾರ ಅಥವ ಧರ್ಮವನ್ನು ಈ ಜನ್ಮದಲ್ಲಿ ಮಾಡಿದರೆ ಅದು ಮುಂದಿನ ಜನ್ಮದಲ್ಲಿ ಇನ್ನೂ ವಿಕಾಸ ಹೊಂದಿ ಜನನ ಮರಣ ರೂಪವಾದ ಮಹಾ ಭಯದಿಂದ ಜೀವಿಯನ್ನು ಸಂರಕ್ಷಿಸಬಲ್ಲದು [**ಸ್ವಲ್ಪ ಮಪ್ಯಸ್ಯ ಧರ್ಮಸ್ಯ ತ್ರಾಯತೇ ಮಹತೋ ಭಯಾತ್ (೨-೪೦)**]. ಆದ್ದರಿಂದ ಹೃದಯವನ್ನು ದೈವ ಹಾಗು ಧರ್ಮಮಯ ಮಾಡುತ್ತಾ ಈ ಜನ್ಮದಲ್ಲಿಯೇ ಈ ಚಕ್ರವನ್ನು ಕೊನೆಗೊಳಿಸಲು ಕೃತನಿಶ್ಚಯನಾಗಬೇಕು. ಒಂದು ವೇಳೆ ಜೀವಿತಾಂತ್ಯದವರೆಗೆ ಮೋಕ್ಷ ಲಕ್ಷ್ಯವನ್ನು ಹೊಂದಲಾಗದಿದ್ದರೆ ಮತ್ತೊಂದು ಜನ್ಮದಲ್ಲಾದರೂ ಮುಂದುವರಿಸಿ ಅದನ್ನು ಪೂರ್ತಿ ಮಾಡಬೇಕು. ಅಮೂಲ್ಯವಾದ ಈ ಮಾನವ ಜನ್ಮವನ್ನು ಭೋಗವಿಲಾಸ ಗಳಲ್ಲಿ ವ್ಯರ್ಥಮಾಡಬಾರದು. ಪರಮಾರ್ಥ ಲಕ್ಷ್ಯವನ್ನು ತ್ವರೆಯಾಗಿ ಸಂಪಾದಿಸಬೇಕು. ಇಲ್ಲದಿದ್ದರೆ ನಂತರ ಪಶ್ಚಾತ್ತಾಪವನ್ನು ಪಡಬೇಕಾಗುತ್ತದೆ.

ಪ್ರ : ಹಾಗೆ ಯೋಗಿಗಳ ವಂಶದಲ್ಲಿ ಜನ್ಮಿಸಿ ಸಾಧಕನು ಏನು ಮಾಡುವನು?

ಉ: ಪೂರ್ವದಲ್ಲಿ ತಾನು ಅಸಂಪೂರ್ತಿಯಾಗಿ ಮಾಡಿಬಿಟ್ಟ ಯೋಗವನ್ನು ಪೂರ್ಣಸಿದ್ಧಿ ಉಂಟಾಗುವವರೆಗೆ ಮತ್ತೆ ಸಾಧಿಸುವನು.

ಪ್ರ : ಹುಟ್ಟುತ್ತಲೇ ಆತನಿಗೆ ಯೋಗಸಂಸ್ಕಾರವು ಹೇಗೆ ಉಂಟಾಗುವುದು?

ಉ: ಪೂರ್ವಜನ್ಮದ ಯೋಗಸಂಬಂಧ ಬುದ್ಧಿಯಿಂದ ಆತನಿಗೆ ಅದರಲ್ಲಿ ಸಂಯೋಗ ಉಂಟಾಗಿ, ಸರಿಯಾದ ಯೋಗಸಂಸ್ಕಾರವೇರ್ಪಡುವುದು.

**ಅ||** ಯೋಗದ ಮಹಿಮೆಯನ್ನು ವರ್ಣಿಸಲಾಗುತ್ತಿದೆ-

**೪೪. ಪೂರ್ವಾಭ್ಯಾಸೇನ ತೇನೈವ ಹ್ರಿಯತೇ ಹ್ಯವಶೋಽಪಿ ಸಃ**
**ಜಿಜ್ಞಾಸುರಪಿ ಯೋಗಸ್ಯ ಶಬ್ದಬ್ರಹ್ಮಾತಿವರ್ತತೇ**

**ಅರ್ಥ:** ಸಃ=ಆತನು(ಯೋಗಭ್ರಷ್ಟನು); ಅವಶಃ ಅಪಿ=ಯೋಗಾಭ್ಯಾಸಕ್ಕೆ ತಾನೇ ತಾನಾಗಿ (ಮೊದಲು) ನಿಶ್ಚಯಿಸದೆ ಇದ್ದರು; ತೇನ=ಆ; ಪೂರ್ವಾಭ್ಯಾ ಸೇನ ಏವ=ಪೂರ್ವಜನ್ಮದ ಅಭ್ಯಾಸ ಬಲದಿಂದ; ಹ್ರಿಯತೇಹಿ=(ಯೋಗದೆಡೆಗೆ ಬಲಾತ್ಕಾರವಾಗಿ) ಎಳೆಯಲ್ಪಡುತ್ತಾನೆ; ಯೋಗಸ್ಯ=ಯೋಗದ; ಜಿಜ್ಞಾಸುಃ ಅಪಿ=ತತ್ವವನ್ನು ಅರ್ಥಮಾಡಿಕೊಳ್ಳಬೇಕೆನ್ನುವ ಆಲೋಚನೆಯಿಂದ ಮಾತ್ರ; ಶಬ್ದ ಬ್ರಹ್ಮ=ವೇದವನ್ನು (ವೇದೋಕ್ತ ಕರ್ಮಾನುಷ್ಠಾನ ಫಲವನ್ನು); ಅತಿವರ್ತತೇ=ಅತಿಕ್ರಮಿಸುತ್ತಿದ್ದಾನೆ(ದಾಟುತ್ತಿದ್ದಾನೆ).

**ತಾ||** ಆತನು (ಯೋಗಭ್ರಷ್ಟನು) ಯೋಗಾಭ್ಯಾಸಕ್ಕೆ ತಾನಾಗಿ (ಮೊದಲು) ನಿಶ್ಚಯಿಸದೇ ಇದ್ದರೂ ಪೂರ್ವಜನ್ಮದ ಅಭ್ಯಾಸ ಬಲದಿಂದ ಯೋಗದ ಕಡೆಗೆ ಎಳೆಯಲ್ಪಡುತ್ತಿದ್ದಾನೆ. ಯೋಗವನ್ನು ತಿಳಿದುಕೊಳ್ಳಬೇಕೆನ್ನುವ ಉದ್ದೇಶವನ್ನು ಹೊಂದಿದ ಮಾತ್ರದಿಂದಲೇ (ಯೋಗಾಭ್ಯಾಸವನ್ನು ಮಾಡುವ ಇಚ್ಛೆ ಮಾತ್ರದಿಂದ) ವೇದಗಳಲ್ಲಿ ಹೇಳಲ್ಪಟ್ಟ ಕರ್ಮಾನುಷ್ಠಾನ ಫಲವನ್ನು ದಾಟುತ್ತಿದ್ದಾನೆ.

**ವ್ಯಾಖ್ಯೆ:** ಪೂರ್ವಜನ್ಮದಲ್ಲಿ ಮಾಡಿದ ಯೋಗಸಾಧನೆಯ ಫಲದ ಪ್ರಾಮುಖ್ಯತೆಯನ್ನು ಹೇಳಲಾಗುತ್ತಿದೆ. ಈ ಜನ್ಮದಲ್ಲಿ ಯೋಗದ ಬಗ್ಗೆ ತಾನಾಗಿ ಏನೂ ನಿಶ್ಚಯ ಮಾಡದೆ ಇದ್ದರೂ ಯೋಗಭ್ರಷ್ಟನು ಪೂರ್ವ ಸಂಸ್ಕಾರ ಪ್ರಾಬಲ್ಯದಿಂದ ಯೋಗದ ಕಡೆಗೆ ಸೆಳೆಯಲ್ಪಡುತ್ತಾನೆ. ಸಂಸ್ಕಾರದ ಪ್ರಾಬಲ್ಯವು ಎಂತಹುದೋ ನೋಡಿ! ಎಂದೋ ಮಾಡಿದ ಪುಣ್ಯವು ಯಾವ ಪ್ರಕಾರವಾಗಿ ಉಪಯೋಗಕ್ಕೆ ಬರುವುದೋ ಭಗವಂತನು ಹೇಳುತ್ತಿರುವನು. ಮಾಡಿದ ಪುಣ್ಯವಾಗಲೀ, ಪಾಪವಾಗಲೀ, ತಮ್ಮ ತಮ್ಮ ಕರ್ತವ್ಯಗಳನ್ನು ನಿಭಾಯಿಸಿಯೇ ತೀರುವುವು. ಪುಣ್ಯವು ಪುಣ್ಯ ಬುದ್ಧಿಯನ್ನೇ ಉಂಟು

ಮಾಡುತ್ತದೆ. ಪಾಪವು ಪಾಪಬುದ್ಧಿಯನ್ನೇ ಉಂಟುಮಾಡುತ್ತದೆ. ಕೆಲವರಿಗೆ ಹುಟ್ಟುತ್ತಲೇ ವಿರಕ್ತಿ, ಭಗವದ್ಭಕ್ತಿ, ಯೋಗಾಭ್ಯಾಸ ಕುಶಲತೆ, ಪರಮಾರ್ಥ ವಿಚಾರಣೆಯ ಹಂಬಲ ಉಂಟಾಗುವುದಕ್ಕೆ ಇದೇ ಕಾರಣ. ಪೂರ್ವ ಪುಣ್ಯ, ಯೋಗಾಭ್ಯಾಸ ಪ್ರಬಲವಾಗಿರುವವನು ಒಂದು ವೇಳೆ ಸುಮ್ಮನೆ ಇರ ಬೇಕೆಂದರೂ ಅವು ಇರಲು ಬಿಡದೆ ಪೂರ್ವಸಂಸ್ಕಾರವಶದಿಂದ ಬಲಾತ್ಕಾರವಾಗಿ ಆತನಿಂದ ಪುಣ್ಯ ಕರ್ಮಗಳನ್ನೇ ಮಾಡಿಸುತ್ತವೆ. ಯೋಗಾಭ್ಯಾಸದೊಳಗೆ ಆತನನ್ನು ಇಳಿಸುವುವು. ಆದ್ದರಿಂದ ಶ್ರೇಯವನ್ನು ಅಪೇಕ್ಷಿಸುವ ಜೀವಿಯು ತನ್ನ ಮನಸ್ಸನ್ನು ಪುಣ್ಯವಂತವಾಗಿ, ಪರಮಾರ್ಥ ಸಂಸ್ಕಾರಯುತವಾಗಿ, ಯೋಗಾಭ್ಯಾಸ ಕುಶಲವಾಗಿ, ಈ ಜನ್ಮದಲ್ಲಿಯೇ ಮಾಡಿಕೊಳ್ಳಬೇಕು. ಇನ್ನು ಈ ಶ್ಲೋಕದ ಎರಡನೆಯ ಪಾದದಲ್ಲಿ ಭಗವಂತನು ಯೋಗದ ಮಹಿಮೆ ಎಂತಹುದು ಎನ್ನುವುದನ್ನು ನಿರೂಪಿಸಿದ್ದಾನೆ. ಯೋಗವನ್ನು (ಜೀವಬ್ರಹ್ಮೈಕ್ಯ) ತಿಳಿದುಕೊಳ್ಳಬೇಕೆಂಬ ಜಿಜ್ಞಾಸೆ ಮನುಜನಿಗೆ ಉದಯವಾದ ಮಾತ್ರದಿಂದಲೇ ಆತನು ಶಬ್ದ ಬ್ರಹ್ಮವನ್ನು- ಅಂದರೆ ವೇದೋಕ್ತವಾದ ಕರ್ಮಾನುಷ್ಠಾನದ ಫಲವನ್ನು, ಇಲ್ಲವೆ ಶಾಸ್ತ್ರ ಜನ್ಯ ಜ್ಞಾನದ (ಪರೋಕ್ಷ ಜ್ಞಾನ) ಫಲವನ್ನು ದಾಟುತ್ತಿದ್ದಾನೆಂದು ಹೇಳಲಾಗಿದೆ. ಇದರಿಂದ ಆತ್ಮಧ್ಯಾನರೂಪವಾದ ಯೋಗಕ್ಕೆ ಎಷ್ಟು ಮಹಿಮೆಯಿರುವುದೋ ವ್ಯಕ್ತವಾಗುತ್ತದೆ. ಯೋಗವನ್ನು ತಿಳಿದುಕೊಳ್ಳಬೇಕೆನ್ನುವ ಹಂಬಲದಿಂದಲೇ ಶಬ್ದಬ್ರಹ್ಮವನ್ನು ಮನುಜನು ದಾಟುತ್ತಿದ್ದರೆ ಇನ್ನು ಯೋಗವನ್ನಾಚರಿಸುವುದರಿಂದ ಎಷ್ಟು ಫಲವಿದೆಯೋ ಬೇರೆ ಹೇಳಬೇಕಾಗಿಲ್ಲ.

ಪ್ರ : ಯೋಗಭ್ರಷ್ಟನು ಈ ಜನ್ಮದಲ್ಲಿ ಮತ್ತೆ ಯೋಗದ ಕಡೆಗೆ ಹೇಗೆ ಆಕರ್ಷಿಸಲ್ಪಡುವನು?

ಉ: ಪೂರ್ವಜನ್ಮ ಯೋಗಾಭ್ಯಾಸದ ಸಂಸ್ಕಾರ ಆ ಪ್ರಕಾರವಾಗಿ ಆತನನ್ನು ಬಲಾತ್ಕಾರವಾಗಿ ಯೋಗದ ಕಡೆಗೆ ಎಳೆಯುತ್ತದೆ.

ಪ್ರ : ಯೋಗದ ಮಹಿಮೆಯೆಂತಹದು?

ಉ: ಅದನ್ನು ಕುರಿತ ಜಿಜ್ಞಾಸೆ ಮಾತ್ರದಿಂದ ಮನುಷ್ಯನು ಶಬ್ದಬ್ರಹ್ಮವನ್ನು (ವೇದೋಕ್ತ ಕರ್ಮಾನುಷ್ಠಾನದ ಫಲವನ್ನು) ದಾಟುತ್ತಿದ್ದಾನೆ.

**ಅ॥** ಯೋಗಭ್ರಷ್ಟನು ಯಾವ ಸದ್ಗತಿಯನ್ನು ಪಡೆಯುವನು ಎನ್ನುವುದನ್ನು ವಿವರಿಸಲಾಗುತ್ತಿದೆ-

**೪೫. ಪ್ರಯತ್ನಾದ್ಯತಮಾನಸ್ತು ಯೋಗೀ ಸಂಶುದ್ಧಕಿಲ್ಬಿಷಃ**
**ಅನೇಕಜನ್ಮಸಂಸಿದ್ಧಃ ತತೋ ಯಾತಿ ಪರಾಂ ಗತಿಮ್**

**ಅರ್ಥ:** ಪ್ರಯತ್ನಾತ್=ದೃಢವಾದ ಪ್ರಯತ್ನದಿಂದ; ಯತಮಾನಃ=ಯತ್ನಿಸುತ್ತಿರುವ; ಯೋಗೀತು=ಯೋಗಿಯಾದರೋ; ಸಂಶುದ್ಧ ಕಿಲ್ಬಿಷಃ=ಪಾಪದಿಂದ ಬಿಡುಗಡೆಯಾದವನಾಗಿ (ದೋಷರಹಿತನಾಗಿ); ಅನೇಕ ಜನ್ಮಸಂಸಿದ್ಧಃ= ಅನೇಕ ಜನ್ಮಗಳಲ್ಲಿ ಮಾಡಲ್ಪಟ್ಟ ಅಭ್ಯಾಸ ವಿಶೇಷದಿಂದ ಹೊಂದಲ್ಪಟ್ಟ ಯೋಗಸಿದ್ಧಿ ಹೊಂದಿದವನಾಗಿ; ತತಃ=ನಂತರ; ಪರಾಂ=ಸರ್ವೋತ್ತಮವಾದ; ಗತಿಮ್=ಗತಿಯನ್ನು (ಮೋಕ್ಷವನ್ನು); ಯಾತಿ=ಹೊಂದುತ್ತಿದ್ದಾನೆ.

**ತಾ॥** ದೃಢವಾದ ನಿರ್ಧಾರದಿಂದ ಪ್ರಯತ್ನಿಸಿದಂಥ ಯೋಗಿ ಪಾಪರಹಿತನಾಗಿ ಅನೇಕ ಜನ್ಮಗಳಿಂದ ಮಾಡಲ್ಪಟ್ಟ ಅಭ್ಯಾಸದಿಂದ ಯೋಗ ಸಿದ್ಧಿಯನ್ನು ಹೊಂದಿ ನಂತರ ಸರ್ವೋತ್ತಮವಾದ (ಮೋಕ್ಷ) ಗತಿಯನ್ನು ಪಡೆಯುತ್ತಿದ್ದಾನೆ.

**ವ್ಯಾಖ್ಯೆ:** ಯೋಗಿ ಯಾವ ಪ್ರಕಾರವಾಗಿ ಸರ್ವೋತ್ತಮವಾದ ಮೋಕ್ಷ ಪದವಿಯನ್ನು ಪಡೆಯಬಲ್ಲನು ಎನ್ನುವುದನ್ನು ಇಲ್ಲಿ ವಿವರಿಸಲಾಗಿದೆ. ಮೋಕ್ಷ ಪ್ರಾಪ್ತಿಗೆ ಅವಶ್ಯಕವಾಗಿರುವ ಮೂರು ವಿಷಯಗಳು ಇಲ್ಲಿ ಪ್ರಸ್ತಾಪಿಸಲ್ಪಟ್ಟಿವೆ. ೧) ಅಚಂಚಲವಾದ ಪ್ರಯತ್ನ ೨) ಅನೇಕ ಜನ್ಮಗಳಿಂದ ಮಾಡುತ್ತಾ ಬಂದಿರುವ ಅಭ್ಯಾಸ ೩) ಪಾಪರಾಹಿತ್ಯ- ಮೋಕ್ಷಸೌಧವನ್ನು ಏರಲು ಈ ಮೂರು ಅತ್ಯಾವಶ್ಯಕ.

ಯಾವ ಕಾರ್ಯದಲ್ಲಾದರೂ ದೃಢಪ್ರಯತ್ನ ಹಾಗು ದೃಢಪ್ರತಿಜ್ಞೆ ಅತ್ಯವಶ್ಯಕ. ಪ್ರಾಪಂಚಿಕ ಕಾರ್ಯಗಳಲ್ಲಿಯೇ ಅವು ಅವಶ್ಯಕವಾಗಿರುವಾಗ ಇನ್ನು ಆಧ್ಯಾತ್ಮಿಕ ರಂಗದಲ್ಲಿ ಅವು ಅತಿ ಅಗತ್ಯವಾದವುಗಳೆಂದು ಬೇರೆ ಹೇಳಬೇಕಾಗಿಲ್ಲ. **'ನಾಯಮಾತ್ಮಾ ಬಲಹೀನೇನ ಲಭ್ಯಃ'**- 'ಈ ಆತ್ಮ ದುರ್ಬಲನಿಂದ ಹೊಂದಲಾಗುವುದಿಲ್ಲ; ಸೋಮಾರಿಗಳಿಗೆ ಇದು ಶಕ್ಯವಲ್ಲ'ವೆಂದು ಉಪನಿಷತ್ತುಗಳು ಘೋಷಿಸುತ್ತಿವೆ. ಆದ್ದರಿಂದ ಪ್ರಯತ್ನವು ಅವಶ್ಯಕ. ಆ ಪ್ರಯತ್ನವಾದರೋ ಅಧ್ಯವಸಾಯದಿಂದ ಕೂಡಿಕೊಂಡಿರ ಬೇಕು. ಇಲ್ಲದಿದ್ದರೆ ಮಾಯೆ ಒಂದು ಸಾರಿ ಹೊಂಚುಹಾಕಿ ಆತನನ್ನು ಕಬಳಿಸುವುದು. **'ಕಶ್ಚಿತ್ ಧೀರಃ ಪ್ರತ್ಯಗಾತ್ಮಾನ ಮೈಕ್ಷತ್'**- ಎಂದು ಉಪನಿಷತ್ತು ಹೇಳಿದ ಹಾಗೆ ಧೈರ್ಯ, ಸಾಹಸ ಉಳ್ಳವನು ಮಾತ್ರ ಆತ್ಮಲಾಭವನ್ನು ಪಡೆಯಬಲ್ಲನು.

ದೃಢ ಪ್ರಯತ್ನವು ಈ ಜನ್ಮದಲ್ಲಿ ಯೋಗಿಗೆ ಉಂಟಾಗುತ್ತಿರುವುದೆಂದರೆ ಅದು ಪೂರ್ವದಲ್ಲಿ ಎಷ್ಟೋ ಜನ್ಮಗಳಿಂದ ಮಾಡುತ್ತಾ ಬಂದಿರುವ ಅಭ್ಯಾಸದ ಫಲ ಎಂದು ತಿಳಿಯಬೇಕು. ಮಾನವ ಜನ್ಮ ಲಭಿಸುವುದು, ಮೋಕ್ಷದ ಬಯಕೆ ಉಂಟಾಗುವುದು, ಪರಮಾರ್ಥ ಸಂಸ್ಕಾರ ಜನಿಸುವುದು ಬಹು ಜನ್ಮಾರ್ಜಿತ ಸುಕೃತ ಫಲವೆಂದು ಶಾಸ್ತ್ರಗಳು ಹೇಳುತ್ತವೆ. ಆದ್ದರಿಂದ ಈ ಜನ್ಮದಲ್ಲಿ ಒಬ್ಬನಿಗೆ ಯೋಗದಲ್ಲಿ ದೃಢತರಾಭ್ಯಾಸದ ಹಂಬಲವುಂಟಾದರೆ ಅದು ಎಷ್ಟೋ ಜನ್ಮಗಳಿಂದ ಕ್ರಮೇಣ ಪರಿಪಕ್ವವಾದ ಸ್ಥಿತಿ ಎಂದು ತಿಳಿಯಬೇಕು. ಆದರೆ ಈ ವಾಕ್ಯದಿಂದ ಮೋಕ್ಷಕ್ಕೆ ಎಷ್ಟೋ ಜನ್ಮಗಳು ಅಗತ್ಯವೆಂದು ಯಾರೂ ಭಾವಿಸಬಾರದು. ಹಾಗೆ ಭಾವಿಸಿ ಅಂಜಬಾರದು. ತೀವ್ರ ಯತ್ನದಿಂದ ಈ ಜನ್ಮದಲ್ಲಿಯೇ, ಇಲ್ಲವೆ ಈ ಕ್ಷಣದಲ್ಲಿಯೇ ಮೋಕ್ಷ ಸಿದ್ಧಿಯನ್ನು ಪಡೆಯಬಹುದು. ಅನೇಕ ಜನ್ಮಗಳವರೆಗೆ ಕಾಯಬೇಕಾದ ಕೆಲಸವಿಲ್ಲ. ಈಗಾಗಲೇ ನಾನು ಅನೇಕ ಜನ್ಮಗಳಲ್ಲಿ ಮಾಡಿದ ಪ್ರಯತ್ನದಿಂದಲೇ ಈಗ ಈ ಅಂತಃಕರಣಶುದ್ಧಿ, ದೈವ ಜಿಜ್ಞಾಸೆಗಳು ಹುಟ್ಟಿರುವವೆಂದು ದೃಢವಾಗಿ ನಂಬಿದರೆ ಸಾಕು.

ಇನ್ನು ಮೂರನೆಯದು ಪಾಪರಾಹಿತ್ಯ. ಚಿತ್ತದಲ್ಲಿ ಪಾಪವಾಸನೆಗಳು ಇರುವವರೆಗೆ ಆತ್ಮ ಪ್ರಕಾಶಿಸುವುದಿಲ್ಲ. ಆದ್ದರಿಂದ ಆತ್ಮಾನುಭೂತಿ ಸಿದ್ಧಿಸಬೇಕೆಂದರೆ ಪಾಪವು ಪೂರ್ಣವಾಗಿ ನಿರ್ನಾಮವಾಗಬೇಕು. ಜಪ, ಧ್ಯಾನಾದಿಗಳಿಂದ, ಭಕ್ತಿಯಿಂದ, ನಿಷ್ಕಾಮಕರ್ಮದಿಂದ ಪಾಪ ದೋಷಗಳನ್ನು ನಿವಾರಿಸಿಕೊಂಡು ಹೃದಯವನ್ನು ಪವಿತ್ರಗೊಳಿಸಿಕೊಳ್ಳಬೇಕು. ಆಗ ಚಿತ್ತವು ನಿರ್ಮಲವಾದ ಸರೋವರದಂತೆ ಬೆಳಗುತ್ತದೆ. ಆತ್ಮೋದಯಕ್ಕೆ ಅಂತಹ ಹೃದಯ ನೈರ್ಮಲ್ಯತೆ ಅತ್ಯಾವಶ್ಯಕ. ಆದ್ದರಿಂದಲೇ ಭಗವಂತನು **'ಸಂಶುದ್ಧ ಕಿಲ್ಬಿಷಃ'** ಅಂದರೆ ಪಾಪವನ್ನು ಪೂರ್ತಿಯಾಗಿ ತೊಲಗಿಸಿಕೊಂಡವನು ಮಾತ್ರ ಮೋಕ್ಷಸಿದ್ಧಿಯನ್ನು ಹೊಂದುವನೆಂದು ಹೇಳಿರುವನು. ಕಸ ಗುಡಿಸುವುದಕ್ಕೆ ಪೊರಕೆ ಹೇಗೆ ಅವಶ್ಯಕವೋ, ಮಲವನ್ನು ತೊಳೆಯಲು ಜಲವು ಹೇಗೆ

ಅವಸರವೋ, ಹೃದಯದಲ್ಲಿರುವ ಪಾಪಗಳನ್ನು ತೊಳೆಯಲು ದೈವಧ್ಯಾನ, ಆತ್ಮವಿಚಾರಣೆ, ನಿಷ್ಕಾಮ ಕರ್ಮ ಮುಂತಾದವುಗಳು ಅಷ್ಟೇ ಅವಶ್ಯಕವಾಗಿವೆ. ಅವುಗಳ ಸಹಾಯದಿಂದ ಯೋಗಿಯು ನಿರ್ಧೂತ ಕಲ್ಮಷನಾಗಿ ಬೆಳಗುವನು.

**'ಪರಾಂಗತಿಮ್'** ಎಂದು ಹೇಳಿರುವುದರಿಂದ ಮೋಕ್ಷಪದವಿ ಪ್ರಪಂಚದಲ್ಲಿರುವ ಎಲ್ಲಾ ಪದವಿಗಳಿಗಿಂತ ಸರ್ವಶ್ರೇಷ್ಠವಾದುದೆಂದು ಸ್ಪಷ್ಟವಾಗುತ್ತದೆ. ಏಕೆಂದರೆ ಬೇರೆ ಪದವಿಗಳೆಲ್ಲವೂ ಪುನರಾವೃತ್ತಿಯನ್ನು ಉಂಟುಮಾಡುತ್ತವೆ. ಮೋಕ್ಷಪದವಿ (ದೈವಸ್ಥಿತಿ)ಯೊಂದೇ ಪುನರಾವೃತ್ತಿ ರಹಿತವಾದುದು. ಅಂತಹ ಸರ್ವಶ್ರೇಷ್ಠ ಪದವಿಯನ್ನು ಹೊಂದುವ ಮಾರ್ಗವನ್ನು ಸರ್ವೇಶ್ವರನು ಇಲ್ಲಿ ತೋರಿಸಿರುವನು (ಪಾಪರಾಹಿತ್ಯಾದಿ ಸಾಧನೆಗಳು). ಅದನ್ನನುಸರಿಸಿ ಬ್ರಹ್ಮಾನುಭೂತಿಯನ್ನು ಪಡೆದು ಜೀವಿಗಳು ಧನ್ಯರಾಗಬೇಕು.

ಪ್ರ : ಪ್ರಪಂಚದಲ್ಲಿ ಉತ್ತಮ ಗತಿ ಯಾವುದು?

ಉ: ಆತ್ಮಸಾಕ್ಷಾತ್ಕಾರ(ಬ್ರಹ್ಮಾನುಭೂತಿ)ಮೋಕ್ಷ.

ಪ್ರ : ಅದು ಜೀವಿಗೆ ಹೇಗೆ ಲಭಿಸುವುದು?

ಉ: ೧) ಹಿಡಿದಿದ್ದನ್ನು ಬಿಡದೆ ಮಾಡುವ ಪ್ರಯತ್ನದಿಂದ ೨) ಬಹುಜನ್ಮಗಳ ಧ್ಯಾನಾಭ್ಯಾಸಗಳಿಂದ ೩) ಪಾಪರಾಹಿತ್ಯದಿಂದ ಲಭಿಸುವುದು.

**ಅ||** ಯೋಗಿಯ ವಿಶೇಷತೆ ವರ್ಣಿಸಲ್ಪಡುತ್ತಿದೆ-

**೪೬. ತಪಸ್ವಿಭ್ಯೋಽಧಿಕೋ ಯೋಗೀ ಜ್ಞಾನಿಭ್ಯೋಽಪಿ ಮತೋಽಧಿಕಃ**
**ಕರ್ಮಿಭ್ಯಶ್ಚಾಧಿಕೋ ಯೋಗೀ ತಸ್ಮಾದ್ಯೋಗೀ ಭವಾರ್ಜುನ**

ಅರ್ಥ : ಅರ್ಜುನ=ಓ ಅರ್ಜುನಾ!; ಯೋಗೀ=ಯೋಗಿ; ತಪಸ್ವಿಭ್ಯಃ=(ಕೃಚ್ಛ್ರಚಾಂದ್ರಾಯಣಾದಿ) ತಪಸ್ಸುಗಳನ್ನು ಮಾಡುವವರಿಗಿಂತ; ಅಧಿಕಃ=ಶ್ರೇಷ್ಠನು; ಜ್ಞಾನಿಭ್ಯಃ ಅಪಿ=ಶಾಸ್ತ್ರ ಜ್ಞಾನವನ್ನು ಹೊಂದಿದವರಿಗಿಂತ; ಅಧಿಕಃ=ಶ್ರೇಷ್ಠನೆಂದು; ಮತಃ=ಅಭಿಪ್ರಾಯವಾಗಿದೆ; ಯೋಗೀ=ಯೋಗಿ; ಕರ್ಮಿಭ್ಯಃ ಚ=(ಅಗ್ನಿ ಹೋತ್ರಾದಿ) ಕರ್ಮಗಳನ್ನು ಮಾಡುವವರಿಗಿಂತ; ಅಧಿಕಃ=ಶ್ರೇಷ್ಠನು; ತಸ್ಮಾತ್=ಆದ್ದರಿಂದ; ಯೋಗೀ=ಯೋಗಿ; ಭವ=ಆಗು.

**ತಾ||** ಓ ಅರ್ಜುನಾ! ಯೋಗಿಯಾದವನು, (ಕೃಚ್ಛ್ರಚಾಂದ್ರಾಯಣಾದಿ) ತಪಸ್ಸುಗಳನ್ನು ಮಾಡುವವರಿಗಿಂತ, ಶಾಸ್ತ್ರ ಜ್ಞಾನವನ್ನು ಹೊಂದಿದವರಿಗಿಂತ, (ಅಗ್ನಿ ಹೋತ್ರಾದಿ) ಕರ್ಮಗಳನ್ನು ಮಾಡುವವರಿಗಿಂತ ಶ್ರೇಷ್ಠನೆಂದು ಪ್ರಶಂಸಿಸಲ್ಪಡುತ್ತಾನೆ. ಆದ್ದರಿಂದ ನೀನು ಯೋಗಿಯಾಗು.

**ವ್ಯಾಖ್ಯೆ:** ಧ್ಯಾನಯೋಗಿಯ ವಿಶೇಷತೆ ಇಲ್ಲಿ ನಿರೂಪಿಸಲಾಗಿದೆ. ಆತನು ೧) ತಪಸ್ವಿಗಳಿಗಿಂತ ೨) ಶಾಸ್ತ್ರ ಜನ್ಯ (ಪರೋಕ್ಷ) ಜ್ಞಾನಿಗಳಿಗಿಂತ ೩) ಕರ್ಮನಿಷ್ಠರಿಗಿಂತ ಉತ್ತಮನೆಂದು ಹೇಳಲಾಗಿದೆ. ತಪಸ್ವಿಗಳೆಂದರೆ ಇಲ್ಲಿ ಕೃಚ್ಛ್ರಚಾಂದ್ರಾಯಣಾದಿ ತಪಸ್ಸುಗಳನ್ನು ಆಚರಿಸುವವರೆಂದೂ, ಜ್ಞಾನಿಗಳೆಂದರೆ ಶಾಸ್ತ್ರಜ್ಞಾನವನ್ನು ಮಾತ್ರ ಹೊಂದಿದವರೆಂದೂ, ಕರ್ಮನಿಷ್ಠರೆಂದರೆ ಅಗ್ನಿ ಹೋತ್ರಾದಿ (ಯಜ್ಞಯಾಗಾದಿ) ಕರ್ಮಗಳನ್ನು ಆಚರಿಸುವವರೆಂದರ್ಥ. 'ಜ್ಞಾನಾದ್ಧ್ಯಾನಂ ವಿಶಿಷ್ಯತೇ'- ಎಂದು ಮುಂದೆ ಈ ವಿಷಯವನ್ನೇ ಭಗವಂತನು ಮತ್ತೆ ಹೇಳುತ್ತಾನೆ. ಅಂದರೆ ಶಾಸ್ತ್ರ ಜನ್ಯ ಪರೋಕ್ಷ ಜ್ಞಾನಕ್ಕಿಂತ ಆತ್ಮಧ್ಯಾನವು ಶ್ರೇಷ್ಠವೆಂದರ್ಥ. ಯಾವುದು ಜೀವಿಯನ್ನು ಪರಮಾತ್ಮಪದವಿಯ ಸಮೀಪಕ್ಕೆ ತೆಗೆದುಕೊಂಡು ಹೋಗುವುದೋ, ಇಲ್ಲವೆ ಯಾವುದರ ಮೂಲಕ ಜೀವಿಯು ಆತ್ಮನಿಗೆ (ದೈವಕ್ಕೆ) ಅತಿ ಸನ್ನಿಹಿತವಾಗಿ ವರ್ತಿಸುವನೋ ಅದು ಬೇರೆ ಎಲ್ಲವುಗಳಿಗಿಂತ ಶ್ರೇಷ್ಠವಾದುದಾಗುವುದು. ಈ ಸೂತ್ರದ ದ್ವಾರ ಪ್ರಪಂಚದಲ್ಲಿಯ ಸಮಸ್ತ ಪದಾರ್ಥಗಳ ಮಟ್ಟವನ್ನು, ನ್ಯೂನಾಧಿಕ್ಯತೆಗಳನ್ನು ನಾವು ಗುರುತಿಸಿಕೊಳ್ಳಬೇಕು.

'ಯೋಗೀಭವ(ಯೋಗಿಯಾಗು)- ಎಂದು ಭಗವಂತನು ಅರ್ಜುನನಿಗೆ ಅಪ್ಪಣೆಯಿತ್ತನು. ಯೋಗದ ಶ್ರೇಷ್ಠತೆಯನ್ನು ಮೊದಲೇ ಹೇಳಿ ನಂತರ ಈ ರೀತಿ ಅಪ್ಪಣೆ ಕೊಟ್ಟಿರುವುದು ಇಲ್ಲಿ ಗಮನಾರ್ಹ. ಆದ್ದರಿಂದಲೇ 'ತಸ್ಮಾತ್' (ಆದ್ದರಿಂದ)- ಎನ್ನುವ ಪದವನ್ನು ಪ್ರಯೋಗಿಸಲಾಗಿದೆ. ಯಾವುದನ್ನಾದರೂ ಸಹೇತುವಾಗಿ ಹೇಳಿದಾಗಲೇ ಎದುರಿನವರಿಗೆ ವಿಶ್ವಾಸವುಂಟಾಗುವುದು. ಆದ್ದರಿಂದ ಶ್ರೀಕೃಷ್ಣನು ಇಲ್ಲಿ ಹಾಗೆಯೇ ಮಾಡಿರುವನು. ಧ್ಯಾನದ ಪದ್ಧತಿಯನ್ನು, ಮೌಲ್ಯವನ್ನು ವಿಸ್ತಾರವಾಗಿ ಹೇಳಿ ಕೊನೆಯಲ್ಲಿ 'ಈ ಕಾರಣಗಳಿಂದ ನೀನು ಯೋಗಿಯಾಗು' ಎಂದು ಕರುಣೆಯಿಂದ ಹೇಳಿರುವನು. ಆದ್ದರಿಂದ ಭಗವಂತನು ಅಪ್ಪಣೆ ಕೊಟ್ಟ ಹಾಗೆ ಪ್ರತಿಯೊಬ್ಬರೂ ಯೋಗಿಗಳಾಗಬೇಕೇ ಹೊರತು ಭೋಗಿಗಳಾಗಬಾರದು. 'ಯೋಗೀಭವ' ಎಂದು ಸರ್ವರಿಗೂ ಬೋಧಿಸಬೇಕೇ ಹೊರತು 'ಭೋಗೀಭವ' ಎಂದು ಹೇಳಬಾರದು. ಯೋಗವು ರೋಗವನ್ನು ನಿರ್ಮೂಲಿಸುವುದು ಅಂದರೆ ಭವರೋಗದ ನಿರ್ಮೂಲನೆಯನ್ನು ಮಾಡುವುದು. ಭಗವದೈಕ್ಯವನ್ನು ಪ್ರಸಾದಿಸುವ ಯೋಗವೇ ಸರ್ವಸಾಂಸಾರಿಕ ದುಃಖಗಳ ವಿಮುಕ್ತಿಗೆ ಸರ್ವೋತ್ತಮವಾದ ಉಪಾಯ. ಯೋಗಿಯಾಗೆಂದು ಭಗವಂತನು ಅರ್ಜುನನಿಗೆ ಬೋಧಿಸಿದ್ದರೂ, ಸರ್ವರಿಗೂ ಬೋಧಿಸಿದಂತೆ ತಿಳಿಯಬೇಕು. ಯೋಗಿಗಳೆಂದರೆ ಜಟಾಜೂಟಧಾರಿಗಳು, ಕಾಷಾಯಾಂಬರಗಳನ್ನು ಧರಿಸಿ ಸಾಧುವೃತ್ತಿಯನ್ನು ಸ್ವೀಕರಿಸುವವರು ಎಂದರ್ಥವಲ್ಲ. ಮನಸ್ಸನ್ನು ವಿಷಯಾದಿಗಳಿಂದ ಮರಳಿಸಿ ಅಂತರ್ಮುಖ ಮಾಡಿ ಆತ್ಮದಲ್ಲಿ ಸ್ಥಾಪಿಸಿರುವವನೇ ಯೋಗಿ. ಭಗವದ್ಧ್ಯಾನವನ್ನು ಮಾಡುವವನೇ ಯೋಗಿ. ಯೋಗಿಯಾದಾಗಲೇ ಭವಬಂಧ ವಿಮೋಚನೆ ಸಾಧ್ಯ. ಅಂದರೆ ಧ್ಯಾನದ ಮೂಲಕ ಸ್ವಸ್ವರೂಪ ಸಾಕ್ಷಾತ್ಕಾರ ಹೊಂದಿದಾಗ ಜೀವಿಯು ಮುಕ್ತಿಯನ್ನು ಹೊಂದುವನು. ಆದ್ದರಿಂದ ಅಂತಹ ಮಹೋನ್ನತ ಯೋಗ ಪದವಿಯನ್ನು ಹೊಂದಿ ಸರ್ವರೂ ಮುಕ್ತಿ ಹೊಂದಬೇಕು.

ಪ್ರ : ಯೋಗಿ ಎಂಥವನು?

ಉ: ಆತನು ೧) ತಪಸ್ವಿಗಳಿಗಿಂತ ೨) ಶಾಸ್ತ್ರಜ್ಞಾನಿಗಳಿಗಿಂತ ೩) ಕರ್ಮನಿಷ್ಠರಿಗಿಂತ ಉತ್ತಮವಾದವನು.

ಪ್ರ : ಆದ್ದರಿಂದ ಭಗವಂತನು ಅರ್ಜುನನಿಗೆ ಏನು ಬೋಧಿಸಿದನು?

ಉ : 'ನೀನು ಯೋಗಿಯಾಗು' ಎಂದು ಬೋಧಿಸಿದನು.

**ಅ||** ಯೋಗಿಗಳಲ್ಲೆಲ್ಲಾ ಯಾರು ಶ್ರೇಷ್ಠರೆನ್ನುವುದು ಪ್ರತಿಪಾದಿಸಲ್ಪಡುತ್ತಿದೆ-

**೪೭. ಯೋಗಿನಾಮಪಿ ಸರ್ವೇಷಾಮ್ ಮದ್ಗತೇನಾಂತರಾತ್ಮನಾ**
**ಶ್ರದ್ಧಾವಾನ್ ಭಜತೇ ಯೋ ಮಾಂ ಸ ಮೇ ಯುಕ್ತತಮೋ ಮತಃ**

**ಅರ್ಥ:** ಸರ್ವೇಷಾಂ ಯೋಗಿನಾಂ ಅಪಿ=ಯೋಗಿಗಳೆಲ್ಲರಲ್ಲಿ; ಯಃ=ಯಾವನು; ಮದ್ಗತೇನಾ=ನನ್ನಲ್ಲಿ ಸ್ಥಿತಿ ಹೊಂದಿದ; ಅಂತರಾತ್ಮನಾ=ಮನಸ್ಸಿನಿಂದ; ಶ್ರದ್ಧಾವಾನ್=ಶ್ರದ್ಧೆಯುಳ್ಳವನಾಗಿ; ಮಾಂ=ನನ್ನನ್ನು; ಭಜತೆ=ಸೇವಿಸುತ್ತಿದ್ದಾನೋ (ಧ್ಯಾನಿಸುತ್ತಿದ್ದಾನೋ); ಸಃ=ಆತನು; ಯುಕ್ತತಮಃ=ಬಹಳ ಶ್ರೇಷ್ಠನೆಂದು; ಮೇ ಮತಃ=ನನ್ನ ಅಭಿಪ್ರಾಯ.

**ತಾ||** ಯೋಗಿಗಳೆಲ್ಲರಲ್ಲಿ ಯಾವನು ನನ್ನಲ್ಲಿ ಮನಸ್ಸನ್ನು ನಿಲ್ಲಿಸಿ ಶ್ರದ್ಧೆಯಿಂದ ನನ್ನನ್ನೇ ಧ್ಯಾನಿಸುತ್ತಿದ್ದಾನೋ ಅಂತಹವನು ಸರ್ವಶ್ರೇಷ್ಠನೆಂದು ನನ್ನ ಅಭಿಪ್ರಾಯ.

ವ್ಯಾಖ್ಯೆ: ಪ್ರಪಂಚದಲ್ಲಿ ಎಲ್ಲರಿಗಿಂತ ಯೋಗಿಗಳು ಉತ್ತಮವಾದವರೆಂದು ಹಿಂದಿನ ಶ್ಲೋಕದಲ್ಲಿ ಹೇಳಲಾಗಿದೆ. ಆ ಯೋಗಿಗಳಲ್ಲಿ ಯಾರು ಸರ್ವಶ್ರೇಷ್ಠರು ಎನ್ನುವುದನ್ನು ಇಲ್ಲಿ ತಿಳಿಸಲಾಗಿದೆ. ಅತ್ಯಂತ ಶ್ರದ್ಧೆಯಿಂದ ಅಂತರಾತ್ಮದಲ್ಲಿಯೇ ಮನಸ್ಸನ್ನು ನಿಲ್ಲಿಸಿ ಆ ಪರಮಾತ್ಮನನ್ನೇ ಧ್ಯಾನಿಸುವವನು ಯೋಗಿಗಳಲ್ಲಿ ಸರ್ವೋತ್ತಮನೆಂದು ಶ್ರೀಕೃಷ್ಣಮೂರ್ತಿ ಹೇಳಿದನು. ಶ್ರೀಕೃಷ್ಣನು ಚರಾಚರ ಪ್ರಾಣಿಕೋಟಿಗಳ ಹೃದಯಾಂತರಾಳದಲ್ಲಿ ಬೆಳಗುವ ಸಾಕ್ಷಾತ್ ಪರಮಾತ್ಮನೇ ಆದುದರಿಂದ 'ನನ್ನಲ್ಲಿ ಮನಸ್ಸನ್ನು ನಿಲ್ಲಿಸು' ಎನ್ನುವ ವಾಕ್ಯದ ಅರ್ಥವು ಹೃದಯ ಸಾಕ್ಷಿಯಾದ ಅಂತರಾತ್ಮದಲ್ಲಿ ಚಿತ್ತವನ್ನು ಸಂಲಗ್ನಿಸು ಎಂದೇ ಆಗಿರುವುದು. ಇಲ್ಲದಿದ್ದರೆ ಶ್ರೀಕೃಷ್ಣಮೂರ್ತಿಯ ಸಗುಣ ರೂಪವನ್ನಾದರೂ ಭಕ್ತರು ಸೇವಿಸಬಹುದು. ಹೇಗೇ ಆಗಲಿ, ಮನಸ್ಸಿನಲ್ಲಿಯ ವಾಸನಾದೋಷಗಳು ತೊಲಗಿ ಧ್ಯೇಯ ವಸ್ತುವಾದ ಪರಮಾತ್ಮನಲ್ಲಿ ಲೀನವಾಗಿ, ಜೀವಿಯು ಆತ್ಮಮಾತ್ರನಾಗಿ ಶೇಷವಾಗುವುದೇ ಮುಖ್ಯ. ಅದೇ ಯೋಗ. ಅದನ್ನು ಆಚರಿಸುವವನೇ ಸರ್ವಶ್ರೇಷ್ಠನಾದ ಯೋಗಿ. 'ಯೋಗಿಗಳಲ್ಲೆಲ್ಲಾ' ಎಂದು ಹೇಳಿರುವುದರಿಂದ ಕರ್ಮಯೋಗ, ಧ್ಯಾನಯೋಗ ಅಥವಾ ಜ್ಞಾನಯೋಗಗಳಲ್ಲಿ ಯಾವುದನ್ನು ಅನುಸರಿಸಿದರೂ, ಆ ಮಾರ್ಗದ ಜೊತೆಗೆ ಭಕ್ತಿಯನ್ನು ಜೋಡಿಸಿದಾಗ ಮಾತ್ರ ಸತ್ಫಲಿತವು ಸಿಗುವುದು. ಈ ಭಾವವನ್ನೇ ಇಲ್ಲಿ ಹೇಳಲಾಗಿದೆ. ಬೀಜ ಯಾವುದೇ ಆಗಲಿ, ನೀರಿನಲ್ಲಿ ನೆನೆಸಿದಾಗ ಮಾತ್ರ ಮೊಳಕೆ ಬರುವುದು. ಹಾಗೆಯೇ ಯಾವ ಮಾರ್ಗವೇ ಆಗಲಿ ಭಕ್ತಿಯೆನ್ನುವ ಜಲದಿಂದ ಕೂಡಿದಾಗ ಮಾತ್ರ ಫಲವನ್ನು ಕೊಡುವುದು. ಭೀಷಣವಾದ 'ಮಾಯಾ' ಸಂಗ್ರಾಮದಲ್ಲಿ ಸಾಧಕನಿಗೆ ಭಗವದನುಗ್ರಹವಿಲ್ಲದೆ ವಿಜಯವು ದುಸ್ತರ. ಆದ್ದರಿಂದಲೇ ಮಹನೀಯರೆಲ್ಲರೂ ಯಾವ ಮಾರ್ಗವನ್ನನುಸರಿಸಿದರೂ ಭಕ್ತಿಯನ್ನು ಮಾತ್ರ ಆಶ್ರಯಿಸಿಯೇ ತೀರುವರು. ಗೀತೆಯಲ್ಲಿಯ ಪ್ರತಿ ಅಧ್ಯಾಯದಲ್ಲೂ ಎಲ್ಲೋ ಒಂದು ಕಡೆ ಈ ಭಕ್ತಿಯನ್ನು ಕುರಿತು ಭಗವಂತನು ಒತ್ತಿ ಹೇಳುತ್ತಲೇ ಇದ್ದಾನೆ.

'ಶ್ರದ್ಧಾವಾನ್'- ಎಂದು ಹೇಳುವುದರಿಂದ ಸಾಧಕನು ಅತ್ಯಂತ ಶ್ರದ್ಧೆಯಿಂದ ಭಗವಂತನನ್ನು ಸೇವಿಸಬೇಕೆಂದು ಸ್ಪಷ್ಟಪಡಿಸಲಾಗಿದೆ. ಈ ಶ್ರದ್ಧೆಯನ್ನು ಕುರಿತು ಗೀತಾಚಾರ್ಯನು ತನ್ನ ಪ್ರಸಂಗದಲ್ಲಿ ಅನೇಕ ಕಡೆ ಒತ್ತಿ ಹೇಳಿರುವುದು ಗಮನಾರ್ಹ. ಅಶ್ರದ್ಧೆಯಿಂದ ಮಾಡಿದ ಕಾರ್ಯವು ಮಾಡದೇ ಇರುವುದಕ್ಕೆ ಸಮಾನವೆಂದು ಮುಂದೆ ಹೇಳಲ್ಪಡುತ್ತದೆ. (೧೭-೨೮). ಶಮದಮಾದಿ ಸಾಧನೆಗಳಲ್ಲಿ ಶ್ರದ್ಧೆಯೂ ಕೂಡ ಸೇರಿಸಲ್ಪಟ್ಟಿದೆ. ಆದ್ದರಿಂದ ಸಾಧಕನು ಅತಿ ಶ್ರದ್ಧಾವಂತನಾಗಿ ಭಗವಂತನನ್ನು ಧ್ಯಾನಿಸಬೇಕು. 'ಮದ್ಗತೇನಾ' ಎನ್ನುವ ಶಬ್ದ ಪ್ರಯೋಗದಿಂದ ಮನಸ್ಸನ್ನು ಅನ್ಯತ್ರ ಹೋಗಗೊಡದೆ, ಆತ್ಮದಲ್ಲಿಯೇ ಸ್ಥಿರಗೊಳಿಸಬೇಕೆಂದು ಸೂಚಿಸಲಾಗಿದೆ. ಹಾಗೆ ಶ್ರದ್ಧೆಯಿಂದ ದೈವವನ್ನು ಧ್ಯಾನಿಸುವವನು ಮಹಾಶ್ರೇಷ್ಠನು(ಯುಕ್ತ ತಮಃ) ಎಂದು ಹೇಳಲ್ಪಟ್ಟಿರುವುದರಿಂದ (ಇಲ್ಲಿ 'ತಮ' ಪ್ರತ್ಯಯವನ್ನು ಸೇರಿಸಿರುವುದನ್ನು ಗಮನಿಸಬೇಕು) ಮತ್ತು 'ಇದು ನನ್ನ ನಿಶ್ಚಿತ ಅಭಿಪ್ರಾಯ' ಎಂದು ಭಗವಂತನು ತಿಳಿಸಿರುವುದರಿಂದ ಭಕ್ತಿಯಿಂದ ಕೂಡಿದ ಧ್ಯಾನಕ್ಕೆ ಎಷ್ಟು ಮಹತ್ವವಿದೆ ಎನ್ನುವುದು ಸ್ಪಷ್ಟವಾಗುತ್ತದೆ. ಪ್ರಾಪಂಚಿಕ ಜನರ ದೃಷ್ಟಿಯಲ್ಲಿ ದೊಡ್ಡವನು ಎಂದೆನಿಸಿಕೊಂಡರೆ ಸಾಲದು. ಭಗವಂತನ ದೃಷ್ಟಿಯಲ್ಲಿ 'ಇವನು ಉತ್ತಮನು'(ಯುಕ್ತತಮ) ಎಂದೆನಿಸಿಕೊಳ್ಳಬೇಕು. ಆ ಸ್ಥಿತಿಯಾದರೋ ಶ್ರದ್ಧೆಯಿಂದ ಕೂಡಿದ ಪರಮಾತ್ಮ ಜ್ಞಾನದಿಂದ ಕೈಗೂಡುವುದೆಂದು ಇಲ್ಲಿ ಸ್ಪಷ್ಟವಾಗಿದೆ. ಆದ್ದರಿಂದ ಅದನ್ನು ಮುಮುಕ್ಷುವು ತಪ್ಪದೆ ಆಶ್ರಯಿಸಿ ಭಗವತ್ ಕಟಾಕ್ಷಕ್ಕೆ ಪಾತ್ರನಾಗಿ ಮುಕ್ತಿ ಹೊಂದಬೇಕು.

ಪ್ರ : ಭಗವಂತನ ದೃಷ್ಟಿಯಲ್ಲಿ ಯೋಗಿಗಳಲ್ಲೆಲ್ಲಾ ಯಾವನು ಶ್ರೇಷ್ಠನು?

ಉ : ೧) ಅಮಿತ ಶ್ರದ್ಧೆಯುಳ್ಳವನು ೨) ಲಕ್ಷ್ಯವಾದ ಆತ್ಮದಲ್ಲಿ ಇಲ್ಲವೆ ಶ್ರೀ ಕೃಷ್ಣನಲ್ಲಿ ಮನಸ್ಸನ್ನು ಸಂಲಗ್ನ ಮಾಡುವವನು ೩) ಅಂತಹ ಪರಮಾತ್ಮನನ್ನೇ ನಿರಂತರ ಧ್ಯಾನಿಸುವವನು ಸರ್ವೋತ್ತಮ ಯೋಗಿಯೆನಿಸಿಕೊಳ್ಳುವನು.

**ಓಮ್**

ಇತಿ ಶ್ರೀಮದ್ಭಾಗವದ್ಗೀತಾಸೂಪನಿಷತ್ಸು ಬ್ರಹ್ಮವಿದ್ಯಾಯಾಂ ಯೋಗಶಾಸ್ತ್ರೇ
ಶ್ರೀಕೃಷ್ಣಾರ್ಜುನ ಸಂವಾದೇ ಆತ್ಮಸಂಯಮಯೋಗೋ ನಾಮ ಷಷ್ಠೋಽಧ್ಯಾಯಃ
ಇದು ಉಪನಿಷತ್ಪ್ರತಿಪಾದಕವೂ, ಬ್ರಹ್ಮವಿದ್ಯೆಯೂ, ಯೋಗಶಾಸ್ತ್ರವೂ,
ಶ್ರೀಕೃಷ್ಣಾರ್ಜುನ ಸಂವಾದವಾದ ಶ್ರೀಭಗವದ್ಗೀತೆಯಲ್ಲಿಯ ಆತ್ಮಸಂಯಮಯೋಗವೆನ್ನುವ

ಆರನೆಯ ಅಧ್ಯಾಯ

**ಓಮ್ ತತ್ ಸತ್**

# ಶ್ರೀ ಭಗವದ್ಗೀತೆ

## ಅಥ ಸಪ್ತಮೋಽಧ್ಯಾಯಃ

## ಏಳನೆಯ ಅಧ್ಯಾಯ

## ವಿಜ್ಞಾನಯೋಗಃ - ವಿಜ್ಞಾನಯೋಗ

**ಈ ಅಧ್ಯಾಯದ ಹೆಸರು:**

'ವಿಜ್ಞಾನಯೋಗ' ವಿಜ್ಞಾನವೆಂದರೆ ವಿಶೇಷ ಜ್ಞಾನ, ಇಲ್ಲವೆ ಅನುಭವಪೂರ್ವಕವಾದ ಜ್ಞಾನ, ಇಲ್ಲವೆ ಜ್ಞೇಯ(ಆತ್ಮ) ಸ್ವರೂಪ ಜ್ಞಾನ. ಜ್ಞಾನಮಾತ್ರದಿಂದ (ಪರೋಕ್ಷಜ್ಞಾನ) ತೃಪ್ತಿ ಹೊಂದದೆ, ವಿಜ್ಞಾನವನ್ನು ಕೂಡ ಸಂಪಾದಿಸಬೇಕೆನ್ನುವುದು ಭಗವಂತನ ಆಜ್ಞೆ. ಅಮಾನಿತ್ವಾದಿ ಜ್ಞಾನ ಗುಣಗಳನ್ನೇ ಅಲ್ಲದೆ ಜ್ಞೇಯತತ್ತ್ವರೂಪವಾದ ವಿಜ್ಞಾನದ ಪರಿಚಯವನ್ನು ಮುಮುಕ್ಷುವು ಹೊಂದಿರಬೇಕು. ಅಂತಹ ವಿಜ್ಞಾನವನ್ನು ಕುರಿತು ಅಂದರೆ ಸ್ವಾನುಭವಯುಕ್ತವಾದ ಪರಮಾರ್ಥ ಜ್ಞಾನವನ್ನು ಕುರಿತು ವಿಶೇಷವಾಗಿ ಹೇಳಲ್ಪಟ್ಟ ಅಧ್ಯಾಯವಾದುದರಿಂದ ಇದಕ್ಕೆ ವಿಜ್ಞಾನಯೋಗವೆನ್ನುವರು.

**ಈ ಅಧ್ಯಾಯದಲ್ಲಿಯ ಪ್ರಧಾನ ವಿಷಯಗಳು:**

೧) ವಿಜ್ಞಾನ ಸಹಿತವಾದ ಜ್ಞಾನದ ಪ್ರಸ್ತಾವನೆ
(೧ನೇ ಶ್ಲೋಕದಿಂದ ೩ನೆಯ ಶ್ಲೋಕದವರೆಗೆ)

೨) ಪರಾಪರ ಪ್ರಕೃತಿಗಳ ವರ್ಣನೆ
(೪ನೇ ಶ್ಲೋಕದಿಂದ ೭ನೆಯ ಶ್ಲೋಕದವರೆಗೆ)

೩) ಸಮಸ್ತ ಪದಾರ್ಥಗಳಲ್ಲಿ ಪರಮಾತ್ಮನ ಅಸ್ತಿತ್ವವನ್ನು ಪ್ರತಿಪಾದಿಸುವುದು
(೮ನೇ ಶ್ಲೋಕದಿಂದ ೧೨ನೆಯ ಶ್ಲೋಕದವರೆಗೆ)

೪) ಆಸುರಿಭಾವಯುಕ್ತರನ್ನು ಛೇಡಿಸಿರುವುದು, ದೈವೀಸ್ವಭಾವಯುಕ್ತರನ್ನು ಪ್ರಶಂಸಿರುವುದು, ಚತುರ್ವಿಧ ಭಕ್ತರ ವಿವರಣೆ
(೧೩ನೆಯ ಶ್ಲೋಕದಿಂದ ೧೯ನೆಯ ಶ್ಲೋಕದವರೆಗೆ)

೫) ಇತರ ದೇವತೆಗಳನ್ನು ಕುರಿತ ಉಪಾಸನಾ ವಿಚಾರ
(೨೦ನೆಯ ಶ್ಲೋಕದಿಂದ ೨೩ನೆಯ ಶ್ಲೋಕದವರೆಗೆ)

೬) ಭಗವಂತನ ಪ್ರಭಾವವನ್ನು ತಿಳಿಯದವರ ಸ್ವಭಾವ, ತಿಳಿದವರ ಮಹಿಮೆ
(೨೪ನೆಯ ಶ್ಲೋಕದಿಂದ ೩೦ನೆಯ ಶ್ಲೋಕದವರೆಗೆ)

**ಪೂರ್ವಾಧ್ಯಾಯದೊಡನೆ ಈ ಅಧ್ಯಾಯಕ್ಕೆ ಇರುವ ಸಂಬಂಧ:**

ಹಿಂದಿನ ಅಧ್ಯಾಯದ ಕೊನೆಯಲ್ಲಿ, ಯೋಗಿಗಳಲ್ಲೆಲ್ಲಾ, ಪರಮಾತ್ಮನಲ್ಲಿ ಸಂಲಗ್ನವಾದ ಚಿತ್ತವನ್ನು ಹೊಂದಿ, ಶ್ರದ್ಧೆಯಿಂದ ಭಜಿಸುವವನು ಸರ್ವಶ್ರೇಷ್ಠನೆಂದು ಶ್ರೀಕೃಷ್ಣಮೂರ್ತಿ ಅಪ್ಪಣೆ ಕೊಟ್ಟನು. ಆದರೆ ಪರಮಾತ್ಮನ ಸ್ವರೂಪ ಹಾಗು ಸ್ವಭಾವಗಳನ್ನು ಚೆನ್ನಾಗಿ ತಿಳಿದುಕೊಂಡರೆ ಮಾತ್ರ ಅಂತಹ ಧ್ಯಾನ, ಏಕಾಗ್ರಚಿಂತನೆ ಸಾಧ್ಯವಾಗಬಲ್ಲದು. ಆದ್ದರಿಂದ ಭಗವತ್ಸ್ವರೂಪವನ್ನು, ಅದರ ಮಹಿಮೆಯನ್ನು, ಅದರ ಅನುಭೂತಿಯನ್ನು ಆಳವಾಗಿ ತಿಳಿಸ ಲೋಸುಗ ಈ ಅಧ್ಯಾಯವು ಪ್ರಾರಂಭಿಸಲ್ಪಟ್ಟಿದೆ-

**ಶ್ರೀ ಭಗವಾನುವಾಚ**

**೧. ಮಯ್ಯಾಸಕ್ತಮನಾಃ ಪಾರ್ಥ ಯೋಗಂ ಯುಂಜನ್ಮದಾಶ್ರಯಃ**
**ಅಸಂಶಯಂ ಸಮಗ್ರಂ ಮಾಂ ಯಥಾ ಜ್ಞಾಸ್ಯಸಿ ತಚ್ಛೃಣು**

ಶ್ರೀ ಭಗವಾನುವಾಚ- ಶ್ರೀ ಭಗವಂತನು ಹೇಳಿದನು.

**ಅರ್ಥ:** ಪಾರ್ಥ=ಓ ಅರ್ಜುನಾ! ಮಯಿ=ನನ್ನಲ್ಲಿ; ಆಸಕ್ತಮನಾಃ= ಆಸಕ್ತಿಯುಳ್ಳ ಮನಸ್ಸುಳ್ಳವನು; ಮದಾಶ್ರಯಃ=ನನ್ನನ್ನೇ ಆಶ್ರಯಿಸಿದವನು (ಆಗಿ); ಯೋಗಂ=ಯೋಗವನ್ನು; ಯುಂಜನ್=ಆಚರಿಸುತ್ತ (ಅಭ್ಯಸಿಸುತ್ತ); ಮಾಂ=ನನ್ನನ್ನು; ಅಸಂಶಯಂ=ನಿಸ್ಸಂಶಯವಾಗಿ; ಸಮಗ್ರಂ=ಸಂಪೂರ್ಣ ವಾಗಿ; ಯಥಾ=ಯಾವ ಪ್ರಕಾರವಾಗಿ; ಜ್ಞಾಸ್ಯಸಿ=ತಿಳಿದುಕೊಳ್ಳಬಲ್ಲೆಯೋ; ತತ್=ಅದನ್ನು (ಆ ಪದ್ಧತಿಯನ್ನು); ಶ್ರುಣು=ಕೇಳು.

**ತಾ||** ಶ್ರೀ ಭಗವಂತನು ಹೇಳಿದನು- ಓ ಅರ್ಜುನಾ! ನನ್ನಲ್ಲಿ ಆಸಕ್ತಿಯುಳ್ಳ ಮನಸ್ಸನ್ನು ಹೊಂದಿ, ನನ್ನನ್ನೇ ಆಶ್ರಯಿಸಿ, ಯೋಗವನ್ನಾಚರಿಸುತ್ತಾ, ನಿಸ್ಸಂದೇಹವಾಗಿ ಹಾಗು ಸಂಪೂರ್ಣವಾಗಿ ನನ್ನನ್ನು ಹೇಗೆ ತಿಳಿದುಕೊಳ್ಳುವಿಯೋ ಅದನ್ನು (ಆ ಪದ್ಧತಿಯನ್ನು) ಹೇಳುವೆನು, ಕೇಳು.

**ವ್ಯಾಖ್ಯೆ:** ಭಗವಂತನನ್ನು ಕುರಿತು ತಿಳಿದುಕೊಂಡವರು ಜನರಲ್ಲಿ ಬಹಳ ವಿರಳ. ಯಾವ ವಿಧವಾದ ಸಂದೇಹವಿಲ್ಲದೆ ಸಂಪೂರ್ಣವಾಗಿ ತಿಳಿದು ಕೊಂಡವರು ಇನ್ನೂ ವಿರಳ. ಭಗವಂತನನ್ನು ತಿಳಿದುಕೊಳ್ಳಬೇಕೆಂದರೆ ಮೊಟ್ಟಮೊದಲಿಗೆ ಮೂರು ಅರ್ಹತೆಗಳಿರಬೇಕು. ಅವು ಯಾವುವೆಂದರೆ-

೧) ಭಗವಂತನಲ್ಲಿಯೇ ಮನಸ್ಸು ಆಸಕ್ತವಾಗಿರಬೇಕು.

೨) ಭಗವಂತನನ್ನೇ ಆಶ್ರಯಿಸಬೇಕು.

೩) ಭಗವತ್ಪ್ರಾಪ್ತಿಗಾಗಿ ಧ್ಯಾನಾದಿ ಯೋಗಗಳನ್ನು ಅಭ್ಯಸಿಸಬೇಕು.

ಮನಸ್ಸು ಒಂದು ಟಾರ್ಚ್ ಲೈಟಿನಂತಹದು. ಅದನ್ನು ದೃಶ್ಯದ ಕಡೆಗೆ ತಿರುಗಿಸಿದರೆ ದೃಶ್ಯ ಪದಾರ್ಥಗಳು ಗೋಚರಿಸುವುವು. ಅಂತರ್ಮುಖವಾಗಿ

ತಿರುಗಿಸಿದರೆ ಆತ್ಮವಸ್ತು (ಭಗವಂತನು) ಗೋಚರಿಸುವನು. ಯಾವುದರಲ್ಲಿ ಅದಕ್ಕೆ ತೀವ್ರ ಆಸಕ್ತಿ ಇದೆಯೋ ಅದನ್ನು ಕುರಿತೇ ಅದು ನಿರಂತರವೂ ಚಿಂತಿಸುತ್ತಿರುತ್ತದೆ. ಅಜ್ಞಾನಿಗಳ ಮನಸ್ಸು ಶಬ್ದಾದಿ ವಿಷಯಗಳಲ್ಲಿಯೇ ಆಸಕ್ತಿ ಹೊಂದಿರುವುದಾದ್ದರಿಂದ ಅದು ಅವುಗಳನ್ನು ಕುರಿತೇ ಚಿಂತಿಸುತ್ತ ಪರಮಾತ್ಮನನ್ನು ತಿಳಿಯದೇ ಉಳಿಯುವುದು. ವಿವೇಕಿಗಳು ತಮ್ಮ ಮನಸ್ಸನ್ನು ಭಗವದುನ್ಮುಖ ಮಾಡಿ ಭಗವತ್ತತ್ತ್ವವನ್ನು ಅನುಭೂತಿ ಮಾಡಿಕೊಂಡು ಪರಮಾನಂದವನ್ನು ಅನುಭವಿಸುವರು. ಆದ್ದರಿಂದ ಜ್ಞಾನಿಗಳಂತೆ ಶಾಶ್ವತ ಪರಮಾತ್ಮನನ್ನೇ ಆಶ್ರಯಿಸಬೇಕೇ ಹೊರತು ನಶ್ವರ ಪ್ರಾಪಂಚಿಕ ಪದಾರ್ಥಗಳನ್ನಲ್ಲ. ಕ್ಷಣಿಕ ದೃಶ್ಯ ಪದಾರ್ಥಗಳನ್ನು ನಂಬಿ ಅವುಗಳನ್ನಾಶ್ರಯಿಸಿದರೆ ಜೀವಿಯು ಜನ್ಮ ದುಃಖಾದಿ ಮಹಾ ಪ್ರಮಾದಗಳನ್ನು ಎದುರಿಸಬೇಕಾಗಿ ಬರುತ್ತದೆ. ಆದ್ದರಿಂದ 'ಮಯ್ಯಾಸಕ್ತಮನಾಃ' 'ಮದಾಶ್ರಯಃ' ಎನ್ನುವ ಪದಗಳ ಮೂಲಕ ಭಗವದಾಶ್ರಯವನ್ನೇ ಇಲ್ಲಿ ಪ್ರೋತ್ಸಾಹಿಸಲಾಗಿದೆ.

'ನನ್ನಲ್ಲಿ ಆಸಕ್ತಿಯುಳ್ಳ ಮನಸ್ಸನ್ನು ಹೊಂದಿ ನನ್ನನ್ನೇ ಆಶ್ರಯಿಸಿ (ಧ್ಯಾನ) ಯೋಗವನ್ನು ಅಭ್ಯಸಿಸಿದರೆ, ನನ್ನನ್ನು ತಿಳಿದುಕೊಳ್ಳುತ್ತೀಯೇ' ಎಂದು ಹೇಳಿರುವುದರಿಂದ, ಜ್ಞಾನಯೋಗಕ್ಕೆ ಭಕ್ತಿ ಹಾಗು ಧ್ಯಾನಯೋಗಗಳು ಸಹಾಯಭೂತಗಳಾಗಿರುವುವೆಂದು ತಿಳಿಯುತ್ತದೆ.

ಮತ್ತೆ, 'ನಮಗೆ ಭಗವತತ್ತ್ವವು ತಿಳಿಯುತ್ತಿಲ್ಲವಲ್ಲ' ಎಂದು ಕೆಲವರು ವ್ಯಥೆಪಡುತ್ತಿರುವರು. ಅದಕ್ಕೆ ಉತ್ತರ ಈ ಶ್ಲೋಕದಲ್ಲಿ ಹೇಳಲಾಗಿದೆ. ದೈವದಲ್ಲಿಯೇ ಆಸಕ್ತಿ ಹೊಂದಿದ ಚಿತ್ತವುಳ್ಳವನಾಗಿ, ದೈವವನ್ನೇ ಆಶ್ರಯಿಸಿ, ಧ್ಯಾನಾದಿ ಯೋಗಗಳನ್ನು ಅಭ್ಯಸಿಸಿ, ತಕ್ಕ ಯೋಗ್ಯತೆಗಳಿರುವವನಿಗೆ ದೈವವಿಜ್ಞಾನ, ದೈವಾನುಭೂತಿ ಉಂಟಾಗುವುದೆಂದು ಇಲ್ಲಿ ಸೂಚಿಸಲಾಗಿದೆ.

ಪ್ರ : ಭಗವಂತನನ್ನು ಸಂಪೂರ್ಣವಾಗಿ ನಿಸ್ಸಂಶಯವಾಗಿ ತಿಳಿದುಕೊಳ್ಳಬೇಕೆಂದರೆ ಬೇಕಾದ ಯೋಗ್ಯತೆಗಳೇನು?

ಉ: ೧) ಭಗವಂತನಲ್ಲಿಯೇ ಮನಸ್ಸು ಆಸಕ್ತಿ ಹೊಂದಿರುವುದು. ೨) ಭಗವಂತನನ್ನೇ ಆಶ್ರಯಿಸುವುದು. ೩) (ಧ್ಯಾನಾದಿ) ಯೋಗಾಭ್ಯಾಸವನ್ನು ಆಚರಿಸುವುದು.

**೨. ಜ್ಞಾನಂ ತೇಽಹಂ ಸವಿಜ್ಞಾನಮಿದಂ ವಕ್ಷ್ಯಾಮ್ಯಶೇಷತಃ**
**ಯಜ್ಞಾತ್ವಾ ನೇಹ ಭೂಯೋಽನ್ಯತ್ ಜ್ಞಾತವ್ಯಮವಶಿಷ್ಯತೇ**

**ಅರ್ಥ:** ಯತ್=ಯಾವುದನ್ನು; ಜ್ಞಾತ್ವಾ=ತಿಳಿದುಕೊಂಡ ನಂತರ; ಇಹ=ಈ ಪ್ರಪಂಚದಲ್ಲಿ; ಭೂಯಃ=ಮತ್ತೆ; ಜ್ಞಾತವ್ಯಂ=ತಿಳಿದುಕೊಳ್ಳಬೇಕಾದ್ದು; ಅನ್ಯತ್=ಮತ್ತೊಂದು; ನ ಅವಶಿಷ್ಯತೇ=ಉಳಿದಿರುವುದಿಲ್ಲವೋ; ಇದಂ= ಅಂತಹ (ಈ); ಸವಿಜ್ಞಾನಂ=ಅನುಭವ ಸಹಿತವಾದ; ಜ್ಞಾನಂ=ಜ್ಞಾನವನ್ನು; ಅಶೇಷತಃ=ಸಂಪೂರ್ಣವಾಗಿ; ತೇ=ನಿನಗೆ; ವಕ್ಷ್ಯಾಮಿ=ಹೇಳುವೆನು.

**ತಾತ್ಪರ್ಯ:** ಯಾವುದನ್ನು ತಿಳಿದುಕೊಂಡರೆ ಮತ್ತೆ ಈ ಪ್ರಪಂಚದಲ್ಲಿ ತಿಳಿದುಕೊಳ್ಳಬೇಕಾದದ್ದು ಮತ್ತೊಂದು ಇರುವುದಿಲ್ಲವೋ ಅಂತಹ ಅನುಭವ ಸಹಿತವಾದ ಜ್ಞಾನವನ್ನು ಸಂಪೂರ್ಣವಾಗಿ ನಿನಗೆ ಹೇಳುವೆನು.

**ವ್ಯಾಖ್ಯೆ:** ಭಕ್ತನ ಮೇಲೆ ಭಗವಂತನಿಗೆ ಎಷ್ಟು ಕರುಣೆಯಿದೆಯೋ ಈ ಶ್ಲೋಕದಿಂದ ತಿಳಿಯುತ್ತಿದೆ. ಭಕ್ತನಾದ ಅರ್ಜುನನಿಗೆ ಭಗವಂತನು ವಿಜ್ಞಾನ ಸಹಿತವಾದ ಜ್ಞಾನವನ್ನು ಉಪದೇಶಿಸುತ್ತಿದ್ದಾನೆ. ಪ್ರಪಂಚದಲ್ಲಿ ಅನೇಕ ವಿದ್ಯೆಗಳು, ಕಲೆಗಳು ಇವೆ. ಆದರೆ ಅವೆಲ್ಲವನ್ನು ತಿಳಿದುಕೊಂಡರೂ ವಿದ್ಯೆ ಸಂಪೂರ್ಣವಾಗಲಾರದು. ಇನ್ನೂ ಸ್ವಲ್ಪ ಶೇಷವಾಗಿಯೇ ಉಳಿಯುವುದು. ಆದರೆ ಭಗವಂತನನ್ನು ಕುರಿತ ಜ್ಞಾನವನ್ನು ಅನುಭವ ಪೂರ್ವಕವಾಗಿ ತಿಳಿದಿದ್ದೇ ಆದರೆ ಸಮಸ್ತವನ್ನೂ ತಿಳಿದುಕೊಂಡಂತೇ ಆಗುವುದು. ಅದನ್ನು ತಿಳಿದ ನಂತರ ಇನ್ನು ತಿಳಿಯಬೇಕಾದದ್ದು ಏನೂ ಉಳಿದಿರುವುದಿಲ್ಲ.

**'ಯಸ್ಮಿನ್ವಿಜ್ಞಾತೇ ಸರ್ವಮಿದಂ ವಿಜ್ಞಾತಂ ಭವತಿ'** ಎನ್ನುವ ಉಪನಿಷತ್ವಾಕ್ಯ ಈ ಅರ್ಥವನ್ನೇ ಸ್ಪಷ್ಟೀಕರಿಸುತ್ತದೆಯಾದ್ದರಿಂದ ಯಾವುದನ್ನು ತಿಳಿದುಕೊಂಡರೆ ಸಮಸ್ತವನ್ನು ತಿಳಿದುಕೊಂಡಂತಾಗುತ್ತದೆಯೋ, ಯಾವುದು ಸಮಸ್ತ ಶಾಸ್ತ್ರಗಳ ಸಾರವಾಗಿದೆಯೋ ಅಂತಹ ಆತ್ಮತತ್ತ್ವವನ್ನು (ಭಗವತ್ತತ್ತ್ವವನ್ನು) ಅನುಭೂತಿಗೊಳಿಸಿಕೊಂಡರೆ ಸಾಕು. ಗಿಡದ ಬುಡಕ್ಕೆ ನೀರು ಹಾಕಿದರೆ ಸಾಕು ಎಲೆಗಳಿಗೆ, ಕೊಂಬೆಗಳಿಗೆ ನೀರು ಹಾಕಿದ ಹಾಗೇ ಆಗುವುದು. ಅದೇ ರೀತಿ ಬ್ರಹ್ಮಾನುಭೂತಿಯನ್ನು ಹೊಂದುವುದರಿಂದ ಎಲ್ಲಾ ಅನುಭವಗಳನ್ನು ಪಡೆದಂತೆಯೇ ಆಗುವುದು. ಕುಮಾರ ಸ್ವಾಮಿ ಜಗತ್ತೆಲ್ಲವನ್ನೂ ಪ್ರದಕ್ಷಿಣೆ ಮಾಡಬಂದನು. ಆದರೆ ವಿಘ್ನೇಶ್ವರನು ತಂದೆಯಾದ ಶಿವನನ್ನು ಮಾತ್ರ ಪ್ರದಕ್ಷಿಣೆ ಮಾಡಿ ತದ್ವಾರ ಸಮಸ್ತ ಬ್ರಹ್ಮಾಂಡವನ್ನು ಪ್ರದಕ್ಷಿಸಿದ ಫಲವನ್ನು ಹೊಂದಿದನು. ಹಾಗೆಯೇ ಬ್ರಹ್ಮವಿದ್ಯೆಯನ್ನು ಅನುಭೂತಿಗೊಳಿಸಿಕೊಂಡರೆ ಸಮಸ್ತ ವಿದ್ಯೆಗಳನ್ನು ಕಲಿತಂತೇ ಆಗುವುದು. ಮತ್ತೆ, ಮನುಜನ ಆಯುಷ್ಯ ಕಾಲ ಬಹಳ ಕಡಿಮೆ. ಶಾಸ್ತ್ರಗಳಿಗೆ, ವಿದ್ಯೆಗಳಿಗೆ ಕೊನೆಯಿಲ್ಲ. ಆದ್ದರಿಂದ ಸಾರಾತಸಾರವಾದ ದೈವವನ್ನು ತಿಳಿಯುವುದೇ ಜೀವಿಯ ಕರ್ತವ್ಯ. ಹಾಗಿಲ್ಲದೆ ಜೀವನವೆಲ್ಲವನ್ನೂ ಇತರ ವಿದ್ಯೆಗಳ ಸಂಪಾದನೆಯಲ್ಲಿ ಮಾತ್ರ ಕಳೆದು ಬ್ರಹ್ಮವಿದ್ಯೆಯನ್ನು, ಭಗವದ್ವಿದ್ಯೆಯನ್ನು ತಿಳಿಯದಿದ್ದರೆ ಜನ್ಮ ನಿರರ್ಥಕವಾಗುವುದು. ಆದ್ದರಿಂದಲೇ ಶ್ರೀಕೃಷ್ಣಪರಮಾತ್ಮನು ಅರ್ಜುನನನ್ನು ಅನುಗ್ರಹಿಸಲಿಚ್ಛಿಸಿ ಬ್ರಹ್ಮವಿಜ್ಞಾನವನ್ನು ಉಪದೇಶಿಸಲು ತೊಡಗಿರುವನು.

ಇಲ್ಲಿ ಜ್ಞಾನ, ವಿಜ್ಞಾನಗಳೆರಡರ ಪ್ರಸ್ತಾಪವಿದೆ. ಜ್ಞಾನವೆಂದರೆ ಶಾಸ್ತ್ರ ಜನ್ಯಜ್ಞಾನ, ಶಬ್ದಬ್ರಹ್ಮ, ವಿಜ್ಞಾನವೆಂದರೆ ಅನುಭವ ಜ್ಞಾನ, ಪರಬ್ರಹ್ಮ. ದುಃಖರಾಹಿತ್ಯ, ಆನಂದಪ್ರಾಪ್ತಿ ಅನುಭವ ಜ್ಞಾನದಿಂದಲೇ ಅಂದರೆ ಭಗವತ್ತತ್ತ್ವಾನುಭೂತಿಯಿಂದಲೇ ಉಂಟಾಗುವುದಲ್ಲದೆ ವಾಚಾ ವಿದ್ಯೆಗಳಿಂದಲ್ಲ. ಆದ್ದರಿಂದ ಗೀತೆಯಲ್ಲಿ ಅನೇಕ ಕಡೆ ಜ್ಞಾನದ ಜೊತೆ, ವಿಜ್ಞಾನವನ್ನು ಸಂಪಾದಿಸಬೇಕೆಂದು ಭಗವಂತನು ಹೇಳಿರುತ್ತಾನೆ. 'ಅಶೇಷತಃ' ಎಂದು ಹೇಳಿರುವುದರಿಂದ, 'ಜ್ಞಾನ ವಿಜ್ಞಾನಗಳನ್ನು ಸಂಪೂರ್ಣವಾಗಿ, ಇನ್ನು ಅವುಗಳಲ್ಲಿ ಯಾವ ಕೊರತೆಯಿಲ್ಲದೆ' ತಿಳಿಸುತ್ತಿದ್ದಾನೆಂದರ್ಥ. ಇಲ್ಲಿ ಜ್ಞಾನವೆಂದರೆ ೧೩ನೆಯ ಅಧ್ಯಾಯದಲ್ಲಿ ಹೇಳಲ್ಪಟ್ಟ ಅಮಾನಿತ್ವಾದಿ ಗುಣಗಳೆಂದೂ, ವಿಜ್ಞಾನವೆಂದರೆ ಜ್ಞೇಯವೆನ್ನುವ ಪರಬ್ರಹ್ಮವೆಂದೂ ಕೂಡ ಹೇಳಬಹುದು.

ಪ್ರ : ಜೀವಿಯು ಮುಕ್ತಿ ಹೊಂದಬೇಕೆಂದರೆ ಯಾವುದನ್ನು ತಿಳಿದುಕೊಳ್ಳಬೇಕು?

ಉ: ಜ್ಞಾನವನ್ನು ಮತ್ತು ವಿಜ್ಞಾನವನ್ನು (ಅನುಭವ ಜ್ಞಾನವನ್ನು).

ಪ್ರ : ಆಧ್ಯಾತ್ಮ ವಿಜ್ಞಾನದ ಮಹಿಮೆ ಎಂತಹದು?

ಉ: ಅದನ್ನು ತಿಳಿದುಕೊಂಡರೆ ಸಮಸ್ತವನ್ನು ತಿಳಿದುಕೊಂಡಂತೇ ಆಗುವುದು.

ಪ್ರ : ಯಾವುದನ್ನು ತಿಳಿದುಕೊಂಡರೆ ಸಮಸ್ತವನ್ನು ತಿಳಿದಂತೇ ಆಗುವುದು?

ಉ: ಪರಬ್ರಹ್ಮವನ್ನು ಅನುಭವಪೂರ್ವಕವಾಗಿ ತಿಳಿದುಕೊಂಡಲ್ಲಿ ಸಮಸ್ತವನ್ನೂ ತಿಳಿದಂತೆಯೇ ಆಗುತ್ತದೆ.

**ಅ||** ಅಂತಹ ಪರಮಾತ್ಮನನ್ನು ಕುರಿತು ತಿಳಿದುಕೊಳ್ಳುವವರು ಲೋಕದಲ್ಲಿ ಬಹಳ ವಿರಳವೆಂದು ಹೇಳಲಾಗುತ್ತಿದೆ-

**೩. ಮನುಷ್ಯಾಣಾಂ ಸಹಸ್ರೇಷು ಕಶ್ಚಿದ್ಯತತಿ ಸಿದ್ಧಯೇ.**
**ಯತತಾಮಪಿ ಸಿದ್ಧಾನಾಮ್ ಕಶ್ಚಿನ್ಮಾಂ ವೇತ್ತಿ ತತ್ತ್ವತಃ**

**ಅರ್ಥ:** ಮನುಷ್ಯಾಣಾಂ=ಮನುಷ್ಯರಲ್ಲಿ; ಸಹಸ್ರೇಷು=ಅನೇಕ ಸಹಸ್ರ ಜನಗಳಲ್ಲಿ; ಕಶ್ಚಿತ್=ಯಾವನೋ ಒಬ್ಬನು; ಸಿದ್ಧಯೇ=ಮೋಕ್ಷಸಿದ್ಧಿಗಾಗಿ; ಯತತಿ=ಪ್ರಯತ್ನ ಮಾಡುತ್ತಿದ್ದಾನೆ; ಯತತಾಂ=(ಹಾಗೆ) ಯತ್ನಿಸುತ್ತಿರುವ; ಸಿದ್ಧಾನಾಂ ಅಪಿ=ಮುಮುಕ್ಷುಗಳಲ್ಲಿ; ಕಶ್ಚಿತ್=ಯಾವನೋ ಒಬ್ಬನು; ಮಾಂ=ನನ್ನನ್ನು; ತತ್ತ್ವತಃ=ವಾಸ್ತವವಾಗಿ; ವೇತ್ತಿ=ತಿಳಿದುಕೊಳ್ಳುತ್ತಾನೆ.

**ತಾ||** ಸಾವಿರಾರು ಮನುಷ್ಯರಲ್ಲಿ ಯಾವನೋ ಒಬ್ಬನು ಮೋಕ್ಷ ಸಿದ್ಧಿಗಾಗಿ ಯತ್ನಿಸುತ್ತಿದ್ದಾನೆ. ಹಾಗೆ ಯತ್ನಿಸುವ ಅನೇಕರಲ್ಲಿ ಯಾವನೋ ಒಬ್ಬನು ಮಾತ್ರವೇ ನನ್ನನ್ನು ವಾಸ್ತವವಾಗಿ ತಿಳಿದುಕೊಳ್ಳುತ್ತಿದ್ದಾನೆ.

**ವ್ಯಾಖ್ಯೆ:** ಪ್ರಪಂಚದಲ್ಲಿ ಕೋಟ್ಯಾನುಕೋಟಿ ಜನಗಳಿದ್ದಾಗ್ಯೂ, ಆಧ್ಯಾತ್ಮ ಮಾರ್ಗದಲ್ಲಿ ಪ್ರವೇಶಿಸುವವರು ವಿರಳ. ಪ್ರವೇಶಿಸಿ ಮೋಕ್ಷಸಿದ್ಧಿಗಾಗಿ ಯತ್ನಿಸುವವರು ಇನ್ನೂ ವಿರಳ. ಹಾಗೆ ಯತ್ನಿಸುವರಲ್ಲಿ ಲಕ್ಷ್ಯ ಸೇರುವವನು, ಭಗವದನುಭೂತಿಯನ್ನು ಪೂರ್ಣವಾಗಿ ಹೊಂದುವವನು ಯಾವನೋ ಒಬ್ಬನಾಗಿರುವವನು. ಓಡುವ ಸ್ಪರ್ಧೆಯಲ್ಲಿ, ಪ್ರಾರಂಭದಲ್ಲಿ ಅನೇಕ ಸ್ಪರ್ಧಿಗಳು ಇರುವರು. ಮಧ್ಯದಲ್ಲಿ ಕೆಲವರು ನಿಂತು ಹೋಗುವರು. ಕೊನೆಗೆ ಯಾರೋ ಕೆಲವರು ಮಾತ್ರ ಗುರಿ ಮುಟ್ಟುವರು. ಗಿಡಕ್ಕೆ ಅನೇಕ ಹೂಗಳಿರುವುವು. ಅವುಗಳಲ್ಲಿ ಬಹಳಷ್ಟು ಬಿದ್ದುಹೋಗಿ ಎಲ್ಲೋ ಕೆಲವು ಮಾತ್ರ ಕಾಯಿಗಳಾಗುವುವು. ಅವುಗಳಲ್ಲಿ ಕೆಲವು ಮಾತ್ರ ಹಣ್ಣಾಗುವುವು. ಮುಮುಕ್ಷುಗಳ ವಿಷಯವೂ ಕೂಡ ಹಾಗೆಯೇ. ಭಗವಂತನಲ್ಲಿ ಭಕ್ತಿಯುದಯಿಸಬೇಕೆಂದರೆ ಬಹುಜನ್ಮದ ಸುಕೃತವಿರಬೇಕು.* ಮಾಯಾ ಪ್ರವಾಹದಲ್ಲಿ ಅನೇಕರು ಕೊಚ್ಚಿಕೊಂಡು ಹೋಗುತ್ತಿರಲು ಪುಣ್ಯವಶವಾಗಿ ಯಾವನೋ ಒಬ್ಬ ಧೀರನು ಪರಮಾತ್ಮನನ್ನು ಕುರಿತು ಅನ್ವೇಷಿಸಿ ಅನವರತ ಪ್ರಯತ್ನದಿಂದ ಸಾಧನೆಯನ್ನು ಸಫಲಗೊಳಿಸಿಕೊಳ್ಳುತ್ತಿದ್ದಾನೆ. **(ಕಶ್ಚಿದ್ಧೀರಃ ಪ್ರತ್ಯಗಾತ್ಮಾನಮೈಕ್ಷತ್)**. ಪೂರ್ವ ಪುಣ್ಯದಿಂದ ಆಧ್ಯಾತ್ಮ ಮಾರ್ಗದಲ್ಲಿ ಕೆಲವರು ಕಾಲಿಟ್ಟರೂ, ಭಗವತ್ಸಾಕ್ಷಾತ್ಕಾರ ರೂಪ ಲಕ್ಷ್ಯವನ್ನು ಹೊಂದುವವರೆಗೆ ಯತ್ನಶೀಲರಾಗಿ ಮುಂದುವರಿಯುವವರು ಬಹಳ ವಿರಳ. ಈ ವಿಷಯವನ್ನೇ ಗೀತಾಚಾರ್ಯನು ಈ ಶ್ಲೋಕದಲ್ಲಿ ತಿಳಿಸಿರುವನು.

ಆತ್ಮಾನುಭೂತಿ ಕೇವಲ ಮಾತಿನಿಂದ ಸಿದ್ಧಿಸುವುದಲ್ಲ. ಅದಕ್ಕೆ ಎಷ್ಟೋ ಮಹತ್ತರ ಪುರುಷ ಪ್ರಯತ್ನ, ನಿಶ್ಚಯ, ತ್ಯಾಗ, ಇಂದ್ರಿಯ ನಿಗ್ರಹಣ, ಮನಸ್ಸಂಯಮ ಮುಂತಾದುವು ಅವಶ್ಯಕ. ಆದ್ದರಿಂದ ಸೋಮಾರಿಗಳು ಆ ಲಕ್ಷ್ಯವನ್ನು ಎಂದೂ ಸೇರುವುದಿಲ್ಲ. ಮುಕ್ತಿಧಾಮಕ್ಕೆ ಹೋಗುವ ದಾರಿಯಲ್ಲಿ ಅನೇಕ ಪರೀಕ್ಷೆಗಳು (Selections) ಇರುವುವು. ಅವುಗಳಲ್ಲಿ ಉತ್ತೀರ್ಣರಾದರೆ ಮಾತ್ರ ಮುಂದೆ ಹೋಗಲು ಸಾಧ್ಯ. ಜರಡಿ ಹಿಡಿದ ಹಾಗೆ, ಕಸಕಡ್ಡಿಗಳು ಅಲ್ಲಿಯೇ ನಿಂತುಹೋಗುವುವು.

'ತತ್ತ್ವತಃ' (ಯಥಾರ್ಥವಾಗಿ) ಎಂದು ಹೇಳಿರುವುದರಿಂದ ದೇವರನ್ನು ತಿಳಿದುಕೊಂಡವರು ಅನೇಕರಿದ್ದರೂ, ಯಥಾರ್ಥವಾಗಿ ತಿಳಿದುಕೊಂಡವನು (ಅಂದರೆ ಅನುಭವಕ್ಕೆ ತಂದುಕೊಂಡಿರುವನು) ಯಾವನೋ ಒಬ್ಬನು ಮಾತ್ರ ಎಂದು ತಿಳಿದುಬರುತ್ತದೆ. ಭಗವಂತನನ್ನು ಕುರಿತು ಅಲ್ಪ ಸ್ವಲ್ಪ ಜ್ಞಾನ ಹೊಂದಿದ್ದರೆ ಸಾಲದೆಂದೂ ಆತನನ್ನು ಪೂರ್ಣವಾಗಿ ಅನುಭೂತಿಗೊಳಿಸಿಕೊಳ್ಳಬೇಕೆಂದು ಸ್ಪಷ್ಟವಾಗುತ್ತದೆ. ಮೃಗವು ಮಾನವನಾಗಲು ಎಷ್ಟೋ ಜನ್ಮಗಳು ಹಿಡಿದಿದ್ದರೂ, ಮಾನವನು ಮಾಧವನಾಗಲು ಅಷ್ಟು ಕಾಲ ಬೇಕಾಗಿಲ್ಲ. ಆದ್ದರಿಂದ ಕಾಲವಿಳಂಬ ಮಾಡದೆ ಯತ್ನಶೀಲನಾಗಿ ಆತ್ಮಜ್ಞಾನವನ್ನು ಪಡೆದು ಜನ್ಮ ಸಾರ್ಥಕತೆಯನ್ನು ಹೊಂದಬೇಕು.

ಪ್ರ : ಜನರಲ್ಲಿ ಮೋಕ್ಷ ಸಿದ್ಧಿಗಾಗಿ ಎಷ್ಟು ಜನರು ಪ್ರಯತ್ನಿಸುವರು ?

ಉ : ನೂರಿಗೆ, ಕೋಟಿಗೆ ಯಾವನೋ ಒಬ್ಬನು ಪ್ರಯತ್ನಿಸುವನು.

ಪ್ರ.: ಹಾಗೆ ಪ್ರಯತ್ನಿಸುವವರಲ್ಲಿ ದೈವವನ್ನು ವಾಸ್ತವವಾಗಿ ತಿಳಿಯುವವರೆಷ್ಟು?

ಉ : ಯಾವನೋ ಒಬ್ಬನು.

**ಅ||** ಭಗವಂತನು ತನ್ನ ಪರಾಪರ ಪ್ರಕೃತಿಗಳನ್ನು ವರ್ಣಿಸುತ್ತಾ ಪ್ರಾರಂಭದಲ್ಲಿ ಅಪರಾಪ್ರಕೃತಿಯನ್ನು ತಿಳಿಸುತ್ತಿದ್ದಾನೆ-

**೪. ಭೂಮಿರಾಪೋಽನಲೋ ವಾಯುಃ ಖಂ ಮನೋ ಬುದ್ಧಿರೇವಚ**
**ಅಹಂಕಾರ ಇತೀಯಂ ಮೇ ಭಿನ್ನಾ ಪ್ರಕೃತಿರಷ್ಟಧಾ**

**ಅರ್ಥ:** ಭೂಮಿಃ=ಭೂಮಿ; ಆಪಃ=ಜಲ; ಅನಲಃ=ಅಗ್ನಿ; ವಾಯುಃ=ಗಾಳಿ; ಖಂ=ಆಕಾಶ; ಮನಃ=ಮನಸ್ಸು; ಬುದ್ಧಿಃ=ಬುದ್ಧಿ; ಅಹಂಕಾರ ಏವ ಚ= ಅಹಂಕಾರವನ್ನು; ಇತಿ=ಎಂದು; ಮೇ ಇಯಂ ಪ್ರಕೃತಿಃ=ನನ್ನ ಈ ಪ್ರಕೃತಿ; ಅಷ್ಟಧಾ=ಎಂಟು ವಿಧಗಳಾಗಿ; ಭಿನ್ನ=ವಿಭಜಿಸಲ್ಪಟ್ಟಿದೆ.

**ತಾ||** ಭೂಮಿ, ಜಲ, ಅಗ್ನಿ, ವಾಯು, ಆಕಾಶ, ಮನಸ್ಸು, ಬುದ್ಧಿ, ಅಹಂಕಾರ- ಎಂದು ಈ ಪ್ರಕಾರವಾಗಿ ಎಂಟು ವಿಧಗಳಾಗಿ ನನ್ನ ಈ ಪ್ರಕೃತಿ (ಮಾಯೆ)ಯನ್ನು ವಿಭಜಿಸಲಾಗಿದೆ.

**ವ್ಯಾಖ್ಯೆ:** ಪರಾಪರ ಪ್ರಕೃತಿಗಳನ್ನು ವಿವರಿಸಲು ಹೊರಟು ಮೊದಲು ಅಪರಾ ಪ್ರಕೃತಿಯನ್ನು ವರ್ಣಿಸುತ್ತಿದ್ದಾನೆ. ಪಂಚಭೂತಗಳು, ಮನಸ್ಸು, ಬುದ್ಧಿ, ಅಹಂಕಾರ ಎನ್ನುವ ಈ ಎಂಟೂ ಸೇರಿ ಅಪರಾಪ್ರಕೃತಿಯಾಗಿರುವುದು. ಪ್ರಕೃತಿ ಜಡವಾದುದು. ಪುರುಷನು (ಆತ್ಮ ಬ್ರಹ್ಮವು) ಒಬ್ಬನೇ ಚೈತನ್ಯರೂಪನು. ಪ್ರಕೃತಿಯು ದೃಶ್ಯ. ಪುರುಷನು ದೃಕ್ಕು. ಪ್ರಕೃತಿ ನಶಿಸುವುದು. ಪುರುಷನು (ಆತ್ಮ) ಶಾಶ್ವತ. ಈ ಶ್ಲೋಕದಲ್ಲಿ ಮನಸ್ಸು, ಬುದ್ಧಿ, ಅಹಂಕಾರಗಳನ್ನು ಪಂಚಭೂತಗಳನ್ನು ಸಮಾನವಾಗಿ ಭಾವಿಸಿ ಅವೆರಡನ್ನೂ ಒಂದೇ ತರಗತಿಗೆ ಸೇರಿದವೆಂದು ಪರಿಗಣಿಸಲಾಗಿದೆ. ಪಂಚಭೂತಗಳು ಜಡಗಳು. ಆದ್ದರಿಂದ ಮನೋಬುದ್ಧ್ಯಾದಿಗಳು ಕೂಡ ವಾಸ್ತವವಾಗಿ ಜಡಗಳೇ ಎಂದು ಇದರಿಂದ ಸ್ಪಷ್ಟವಾಗುತ್ತದೆ. ಸಾಮಾನ್ಯವಾಗಿ ಜನರು ಮನೋಬುದ್ಧ್ಯಹಂಕಾರಗಳನ್ನು ಚೈತನ್ಯಗಳೆಂದು ಭಾವಿಸುವರು. ಅದು ತಪ್ಪು. ಅವೂ ಜಡಗಳೇ. ಕಲ್ಲು, ಮಣ್ಣಿನಂತಹವೇ ಅವು. ಈ ಪ್ರಕಾರವಾಗಿ, ಮನಸ್ಸು ಜಡವೇ ಎಂದು ಯಾವಾಗ

* ಜನ್ಮಾಂತರ ಸಹಸ್ರೇಷು ತಪೋಧ್ಯಾನ ಸಮಾಧಿಭಿಃ। ನರಾಣಾಂ ಕ್ಷೀಣಪಾಪಾನಾಂ ಕೃಷ್ಣೇ ಭಕ್ತಿಃ ಪ್ರಜಾಯತೇ

ನಿರ್ಧಾರವಾಗುತ್ತದೆಯೋ ಆಗ ಅದರ ಬಲ ಶಕ್ತಿ ತಾನೇ ತಾನಾಗಿ ಉಡುಗಿ ಹೋಗುವುದು. ಯಾವುದೇ ಬೇರೆ ಪಾಂಚಭೌತಿಕ ಪದಾರ್ಥದಂತೆ ಅದು ಕ್ಷುಲ್ಲಕವಾಗುವುದು. ಜಡ ವಸ್ತುವು ಚೈತನ್ಯವಸ್ತು (ಆತ್ಮ)ವಿನ ಮೇಲೆ ಆಧಿಪತ್ಯ ಮಾಡಲು ಸಾಧ್ಯವಿಲ್ಲ. ಈ ರಹಸ್ಯವನ್ನು ತಿಳಿಯದ ಅಜ್ಞಾನಿಗಳನ್ನು ಅದು ಆಟವಾಡಿಸುವುದು. ಆದ್ದರಿಂದ ಮನಸ್ಸನ್ನು ನಿಗ್ರಹಿಸಲು ಈ ಪ್ರಕಾರವಾದ ಪ್ರಕೃತಿ ಪುರುಷ ಸ್ವರೂಪ ವಿಜ್ಞಾನವು ಅತ್ಯಾವಶ್ಯಕವಾದುದಾಗಿದೆ.

ಪ್ರ : ಭಗವಂತನ ಅಪರಾಪ್ರಕೃತಿಗಳು ಎಷ್ಟು ವಿಧ? ಅವು ಯಾವುವು?

ಉ: ಎಂಟು ವಿಧಗಳು. ಅವು ೧) ಭೂಮಿ ೨) ಜಲ ೩) ಅಗ್ನಿ ೪) ವಾಯು ೫) ಆಕಾಶ ೬) ಮನಸ್ಸು ೭) ಬುದ್ಧಿ ೮) ಅಹಂಕಾರ

**೫. ಅಪರೇಯಮಿತಸ್ತ್ವನ್ಯಾಂ ಪ್ರಕೃತಿಂ ವಿದ್ಧಿ ಮೇ ಪರಾಂ**
**ಜೀವಭೂತಾಂ ಮಹಾಬಾಹೋ ಯಯೇದಂ ಧಾರ್ಯತೇ ಜಗತ್**

**ಅರ್ಥ:** ಮಹಾಬಾಹೋ=ಉದ್ದ ಬಾಹುಗಳುಳ್ಳ ಓ ಅರ್ಜುನಾ! ಇಯಂ= ಈ ಪ್ರಕೃತಿಯು; ಅಪರಾ=ನಿಕೃಷ್ಟವಾದುದು; ಇತಃ ತು=ಇದಕ್ಕಿಂತ; ಅನ್ಯಂ= ಬೇರೆಯಾದುದ್ದಾಗಿದ್ದು; ಯಯಾ=ಯಾವುದರಿಂದ; ಇದಂ ಜಗತ್=ಈ ಪ್ರಪಂಚ; ಧಾರ್ಯತೇ=ಧರಿಸಲ್ಪಟ್ಟಿದೆಯೋ; (ತಾಂ=ಅಂತಹ); ಜೀವಭೂತಾಂ=ಜೀವ ರೂಪವಾದದ್ದು ಆಗಿ; ಮೇ=ನನ್ನ; ಪ್ರಕೃತಿಂ=(ಪರಾ) ಪ್ರಕೃತಿಯನ್ನು ಪರಾಂ=ಉತ್ಕೃಷ್ಟವಾದುದೆಂದು; ವಿದ್ಧಿ=ತಿಳಿಯುವುದು.

**ತಾ||** ಉದ್ದ ಬಾಹುಗಳುಳ್ಳ ಓ ಅರ್ಜುನಾ! ಈ (ಅಪರಾ) ಪ್ರಕೃತಿ ಬಹಳ ನಿಕೃಷ್ಟವಾದದ್ದು, ಇದಕ್ಕಿಂತ ಭಿನ್ನವಾದದ್ದು, ಈ ಜಗತ್ತೆಲ್ಲವನ್ನೂ ಧರಿಸಿರುವುದು, ಜೀವರೂಪವಾದದ್ದು ಆದ ಮತ್ತೊಂದು ಪ್ರಕೃತಿ (ಪರಾ ಪ್ರಕೃತಿ)ಯನ್ನು ಶ್ರೇಷ್ಠವಾದುದೆಂದು ತಿಳಿಯುವುದು.

**ವ್ಯಾಖ್ಯೆ:** ಇಲ್ಲಿ ಪರಾಪ್ರಕೃತಿ ವಿವರಿಸಲ್ಪಟ್ಟಿದೆ. ಯಾವುದು ಜೀವರೂಪ ವಾಗಿರುವುದೋ, ಯಾವುದರಿಂದ ಈ ಜಗತ್ತೆಲ್ಲವೂ ಧರಿಸಲ್ಪಟ್ಟಿದೆಯೋ ಅದನ್ನು ಪರಾಪಕೃತಿಯೆನ್ನುವರು. ಇದು ಕೂಡ ಅಪರಾಪ್ರಕೃತಿಯಂತೆ ಭಗವಂತನ (ಪುರುಷನ ಅಧೀನವಾಗಿದೆ). ಆದ್ದರಿಂದಲೇ ನನ್ನ ಪ್ರಕೃತಿಯೆಂದು ಹೇಳಲ್ಪಟ್ಟಿದೆ. ಇನ್ನು ಪರಾಪ್ರಕೃತಿಯೆಂದರೇನು? ಅಪರಾ ಪ್ರಕೃತಿ ಯೆಂದರೇನು? ದೃಷ್ಟಾಂತದ ಮೂಲಕ ತಿಳಿದುಕೊಳ್ಳೋಣ- ಒಂದು ಗಡಿಗೆಯಲ್ಲಿ (ಘಟದಲ್ಲಿ) ನೀರಿದೆ ಎಂದು ಭಾವಿಸಿ. ಆ ನೀರಿನಲ್ಲಿ ಸೂರ್ಯನ ಪ್ರತಿಬಿಂಬ ಕಾಣಿಸುತ್ತಿದೆಯೆಂದುಕೊಳ್ಳಿ. ಇಲ್ಲಿ ಘಟವು ದೇಹ; ಅದರಲ್ಲಿಯ ನೀರು ಮನಸ್ಸು; ಸೂರ್ಯನ ಪ್ರತಿಬಿಂಬವು (ಚಿದಾಭಾಸ ರೂಪಿ) ಜೀವಿ; ಸೂರ್ಯನು ಪರಮಾತ್ಮ, ಘಟ, ಜಲ ಅಪರಾಪ್ರಕೃತಿಗಳು. ಸೂರ್ಯನ ಪ್ರತಿಬಿಂಬ ಪರಾಪ್ರಕೃತಿ. ಆ ಎರಡಕ್ಕಿಂತ ವಿಲಕ್ಷಣವಾದ ಸೂರ್ಯನು ಪರಾಪರ ಪ್ರಕೃತಿಗಳಿಗೆ ಅತೀತನಾದ ಪುರುಷನು (ಭಗವಂತನು). ಶ್ರೀಶಂಕರಾ ಚಾರ್ಯರು ತಮ್ಮ ವಿವೇಕ ಚೂಡಾಮಣಿಯಲ್ಲಿ ಈ ವಿಷಯವನ್ನೇ ಸ್ಪಷ್ಟವಾಗಿ ನಿರೂಪಿಸಿರುವರು.*

ವಿಕಾರಗಳೆಲ್ಲವೂ ಘಟ, ಜಲ ಪ್ರತಿಬಿಂಬಗಳಿಗೆ ಮೀಸಲಾಗಲೀ ಸೂರ್ಯನಿಗಲ್ಲ. ಹಾಗೆಯೇ ಸಮಸ್ತ ಜಗತ್ ವಿಕಾರಗಳು ಪರಾಪರ ಪ್ರಕೃತಿಗಳಿಗೆ ಉಂಟಾಗುವಾಗಲಿ ಆತ್ಮಕ್ಕೆ ಅಲ್ಲ- ಅಪರಾಪ್ರಕೃತಿಗೆ ಸೇರಿದ ಪಂಚಭೂತಗಳು ಜಡವಾದವುಗಳು. ಪರಾಪ್ರಕೃತಿಯಾದ ಚಿದಾಭಾಸನು ಆಭಾಸ ಚೈತನ್ಯರೂಪಿ, ಜೀವರೂಪಿ. ಆದ್ದರಿಂದಲೇ ಜೀವಭೂತವಾದ ಈ ಪರಾಪ್ರಕೃತಿಯಿಂದ ಜಡವಾದ ಈ ಜಗತ್ತು ಧರಿಸಲ್ಪಟ್ಟಿದೆ (ಧಾರ್ಯತೇ). ಅದ್ವೈತ ವಿಚಾರಣೆಯಲ್ಲಿ ಈ ಎರಡೂ ಪ್ರಕೃತಿಗಳು ಮಿಥ್ಯೆಯೇ ಆಗಿವೆ. ಅವು ಆಭಾಸರೂಪಗಳಾಗಿದ್ದು, ತದ್ವಿಲಕ್ಷಣನಾದ ಪುರುಷ (ಆತ್ಮ)ನು ಒಬ್ಬನೇ ಸತ್ಯವಾಗಿರುವನು. ಆದ್ದರಿಂದ ಮುಮುಕ್ಷುವು ಪರಾಪರ ಪ್ರಕೃತಿಗಳನ್ನೆರಡನ್ನೂ ದಾಟಿ ಸಾಕ್ಷಿಯಾದ ಆತ್ಮನನ್ನು ಸೇರಬೇಕು. ಜೀವತ್ವ, ಜಡತ್ವಕ್ಕಿಂತ ಸ್ವಲ್ಪ ಉತ್ತಮವಾಗಿದ್ದರೂ ಅದು ಪ್ರಕೃತಿಯಲ್ಲಿಯೇ ಅಂತರ್ಗತವಾಗಿರುವುದರಿಂದ ಮಿಥ್ಯೆ ಎನಿಸಿಕೊಳ್ಳುವುದು. ಸ್ವಪ್ನದಲ್ಲಿಯ ಕಲ್ಲಿಗೆ, ಜೀವಿಗೆ ಇರುವ ವ್ಯತ್ಯಾಸವೇ ಪರಾಪರ ಪ್ರಕೃತಿಗಳಿಗೆ ಕೂಡ ಇದೆ. ಸ್ವಪ್ನದಲ್ಲಿಯ ಜೀವಿಯು ಸ್ವಪ್ನದಲ್ಲಿಯ ಕಲ್ಲಿಗಿಂತ ಸ್ವಲ್ಪ ಉತ್ತಮವಾಗಿದ್ದರೂ ಎರಡೂ ಸ್ವಪ್ನರೂಪಗಳೇ ಆದುದರಿಂದ ವಾಸ್ತವವಾಗಿ ಅವು ಇದ್ದೂ ಇಲ್ಲದಂತೆ ಇರುವುವು. ಎಚ್ಚೆತ್ತವನೊಬ್ಬನೇ ಸತ್ಯ. ಹಾಗೆಯೇ ಯಾರಲ್ಲಿ ಈ ಪರಾಪರ ಪ್ರಕೃತಿಗಳೆರಡು ಆಭಾಸರೂಪಗಳಾಗಿ ವರ್ತಿಸುತ್ತಿರುವುವೋ, ಆ ಸರ್ವಾಧಾರನಾದ ಅಧಿಷ್ಠಾನ ಪರಮಾತ್ಮನೇ ಸತ್ಯ. ಈ ವಿಷಯವನ್ನು ಮುಮುಕ್ಷುವು ಗುರುತಿಸಿ ಜೀವ ಜಗತ್ತುಗಳಿಗೆ ವಿಲಕ್ಷಣನಾದ ಸಾಕ್ಷಿಯಾದ ಆತ್ಮನನ್ನು ಸಾಕ್ಷಾತ್ಕರಿಸಿಕೊಂಡು ಬಂಧವಿಮುಕ್ತನಾಗಬೇಕು.

ಪ್ರ : ಪರಾಪ್ರಕೃತಿಯ ಸ್ವರೂಪವೆಂತಹದು?

ಉ : ೧) ಅದು ಜೀವರೂಪವಾದದ್ದು ೨) ಈ ಜಗತ್ತೆಲ್ಲವೂ ಅದರಿಂದಲೇ ಧರಿಸಲ್ಪಟ್ಟಿದೆ ೩) ಆದ್ದರಿಂದಲೇ ಉತ್ಕೃಷ್ಟವಾದುದು.

**ಅ||** ಪ್ರಕೃತಿಗೆ ಅತೀತನಾದ ತಾನೇ ಜಗತ್ತಿಗೆ ಪರಮ ಕಾರಣನೆಂದು ಭಗವಂತನು ಹೇಳುತ್ತಿದ್ದಾನೆ-

**೬. ಏತದ್ಯೋನೀನಿ ಭೂತಾನಿ ಸರ್ವಾಣೀತ್ಯುಪಧಾರಯ**
**ಅಹಂ ಕೃತ್ಸ್ನಸ್ಯ ಜಗತಃ ಪ್ರಭವಃ ಪ್ರಲಯಸ್ತಥಾ**

**ಅರ್ಥ:** ಸರ್ವಾಣಿ=ಸಮಸ್ತ; ಭೂತಾನಿ=ಪ್ರಾಣಿಗಳಿಗೆ; ಏತದ್ಯೋನೀನಿ= ಈ ಪರಾಪರಾ ಪ್ರಕೃತಿಗಳೇ ಕಾರಣವಾಗಿ; ಇತಿ=ಎಂದು; ಉಪಧಾರಯ= ತಿಳಿದುಕೊಳ್ಳುವುದು; ಅಹಂ=ನಾನು; ಕೃತ್ಸ್ನಸ್ಯ=ಸಮಸ್ತವಾದ; ಜಗತಃ=ಪ್ರಪಂಚಕ್ಕೆ(ಈ ಎರಡು ಪ್ರಕೃತಿಗಳ ಮೂಲಕ); ಪ್ರಭವಃ=ಉತ್ಪತ್ತಿಗೆ ಕಾರಣಭೂತನು; ತಥಾ=ಆ ಪ್ರಕಾರವಾಗಿ; ಪ್ರಲಯಃ=ನಾಶಕ್ಕೆ (ಪ್ರಳಯಕ್ಕೆ) ಕಾರಣಭೂತನು (ಆಗಿದ್ದೇನೆ).

**ತಾ||** (ಜಡ, ಚೇತನಗಳಾದ) ಸಮಸ್ತ ಭೂತಗಳು ಈ ಎರಡು ವಿಧಗಳಾದ (ಪರಾಪರ) ಪ್ರಕೃತಿಗಳಿಂದಲೇ ಉಂಟಾಗುವುವೆಂದು ತಿಳಿದುಕೊಳ್ಳುವುದು.

---

* **ಘಟಂ ಜಲಂ ತದ್ಗತಮರ್ಕಬಿಂಬಂ। ವಿಹಾಯ ಸರ್ವಂ ದಿವಿ ವೀಕ್ಷ್ಯತೇಽರ್ಕಃ।**
**ತಟಸ್ಥ ಏತ ತ್ರಿತಯಾವಭಾಸಕಃ। ಸ್ವಯಂಪ್ರಕಾಶೋ ವಿದುಷಾ ಯಥಾ ತಥಾ. (ವಿವೇಕ ಚೂಡಾಮಣಿ) (೨೨೧)**
ಗಡಿಗೆಯನ್ನು, ನೀರನ್ನು ಅದರಲ್ಲಿಯ ಸೂರ್ಯನ ಪ್ರತಿಬಿಂಬವನ್ನು ಬಿಟ್ಟು ಇವುಗಳಿಗೆ ಸಾಕ್ಷಿಯಾಗಿರುವ, ಎಲ್ಲವನ್ನೂ ಪ್ರಕಾಶಿಸುವ ಸ್ವಯಂ ಪ್ರಕಾಶ ಪರಮಾತ್ಮನೆನ್ನುವ ಸೂರ್ಯಬಿಂಬವನ್ನು ವಿಜ್ಞಗಳು ಆಶ್ರಯಿಸುವರು.

(ಈ ಎರಡು ಪ್ರಕೃತಿಗಳ ಮೂಲಕ) ನಾನೇ ಈ ಸಮಸ್ತ ಪ್ರಪಂಚದ ಉತ್ಪತ್ತಿಗೆ ಹಾಗು ವಿನಾಶಕ್ಕೆ ಕಾರಣಭೂತನಾಗಿದ್ದೇನೆ.

**ವ್ಯಾಖ್ಯೆ:** ಜಡ ಹಾಗು ಚೇತನ ಪ್ರಕೃತಿಗಳಿಂದ ಪ್ರಾಣಿಗಳು ಸಂಭವಿಸುತ್ತಿವೆ. ಆ ಎರಡಕ್ಕೆ ವಿಲಕ್ಷಣನಾದ ಪರಮಾತ್ಮ ಆ ಪ್ರಕೃತಿಗಳ ದ್ವಾರ ಜಗತ್ತಿನ ಸೃಷ್ಟಿಸ್ಥಿತಿಲಯಗಳಿಗೆ ಕಾರಣವಾಗಿದ್ದಾನೆ. ಆದ್ದರಿಂದ ಸಮಸ್ತ ಜಗತ್ತಿಗೆ ಕಾರಣಭೂತನು ವಾಸ್ತವವಾಗಿ ಆ ಸರ್ವಾಧಿಷ್ಠಾನ ಪರಮಾತ್ಮನೇ. ಪ್ರಕೃತಿಯೆನ್ನುವ ಉಪಕರಣದ ಮೂಲಕ ಆತನೇ ಸೂತ್ರಧಾರಿಯಾಗಿ ಈ ಜಗನ್ನಾಟಕವನ್ನು ಆಡಿಸುತ್ತಿದ್ದಾನೆ. ಅಧಿಷ್ಠಾನನಾದ ಪರಮಾತ್ಮನಲ್ಲಿ ಆರೋಪಿಸಲ್ಪಟ್ಟ ಜಗತ್ತಿನ ಸೃಷ್ಟಿಸ್ಥಿತಿಲಯಗಳಿಗೆ ಅಧಿಷ್ಠಾನವೇ ಹೇತುವಾಗುವುದಲ್ಲವೇ! (ಆದರೆ, ವಾಸ್ತವವಾಗಿ ಅದ್ವೈತ ದೃಷ್ಟಿಯಲ್ಲಿ ಪರಮಾತ್ಮನು ನಿರ್ವಿಕಾರನಾಗಿ ಏನೂ ಮಾಡದೆ ಮಾಡಿಸದೆ ಸಾಕ್ಷಿಯಾಗಿರುವವನೇ ಆಗಿದ್ದಾನೆ).

ಪ್ರ : ಸಮಸ್ತ ಪ್ರಾಣಿಕೋಟಿಗಳು ಹೇಗೆ ಏರ್ಪಟ್ಟಿವೆ?

ಉ: ಪರಾಪರ ಪ್ರಕೃತಿಗಳಿಂದ.

ಪ್ರ : ಈ ಸಮಸ್ತ ಜಗತ್ತಿನ ಸೃಷ್ಟಿಸ್ಥಿತಿಲಯಗಳಿಗೆ ಕಾರಣಭೂತನಾರು?

ಉ: ಪರಮಾತ್ಮನೇ (ಆ ಎರಡು ಪ್ರಕೃತಿಗಳ ದ್ವಾರ). ಈ ಜಗತ್ತಿನ ಸೃಷ್ಟ್ಯಾದಿಗಳನ್ನು ವೀಕ್ಷಿಸುತ್ತಿದ್ದಾನೆ.

**ಅ||** ಪರಮಾತ್ಮನೇ ಈ ಜಗತ್ತಿಗೆ ಹೇತುಭೂತವೂ, ಆಧಾರ ರೂಪಿಯೂ ಆಗಿರುವುದರಿಂದ ಆತನೇ ಎಲ್ಲೆಲ್ಲೂ ವ್ಯಾಪಿಸಿದ್ದಾನೆಂದು ಹೇಳಲ್ಪಡುತ್ತಿದೆ-

**೭. ಮತ್ತಃ ಪರತರಂ ನಾನ್ಯತ್ಕಿಂಚಿದಸ್ತಿ ಧನಂಜಯ**
**ಮಯಿ ಸರ್ವಮಿದಂ ಪ್ರೋತಂ ಸೂತ್ರೇ ಮಣಿಗಣಾ ಇವ**

**ಅರ್ಥ:** ಧನಂಜಯ=ಓ ಅರ್ಜುನಾ! ಮತ್ತಃ=ನನಗಿಂತ; ಪರತರಂ= ಬೇರೆಯಾಗಿ(ಇಲ್ಲವೆ, ಶ್ರೇಷ್ಠವಾದುದು); ಅನ್ಯತ್=ಬೇರೊಂದು; ಕಿಂಚಿತ್= ಯಾವುದೂ; ನಾಸ್ತಿ=ಇಲ್ಲ; ಸೂತ್ರೇ=ದಾರದಲ್ಲಿ; ಮಣಿಗಣಾ ಇವ= ಮಣಿಗಳ ಸಮೂಹದಂತೆ; ಮಯಿ=ನನ್ನಲ್ಲಿ; ಇದಂ ಸರ್ವಂ=ಈ ಸಮಸ್ತ ಪ್ರಪಂಚವು; ಪ್ರೋತಂ=ಪೋಣಿಸಲ್ಪಟ್ಟಿದೆ.

**ತಾ||** ಓ ಅರ್ಜುನಾ! ನನಗಿಂತ ಬೇರೆಯಾದ ಮತ್ತೊಂದು ಏನೂ ಇಲ್ಲವೇ ಇಲ್ಲ. ದಾರದಲ್ಲಿ ಮಣಿಗಳು ಪೋಣಿಸಲ್ಪಟ್ಟ ಹಾಗೆ ನನ್ನಲ್ಲಿ ಈ ಸಮಸ್ತ ಪ್ರಪಂಚವು ಪೋಣಿಸಲ್ಪಟ್ಟಿದೆ.

**ವ್ಯಾಖ್ಯೆ:** ದೇವರೆಲ್ಲಿದ್ದಾನೆ? ಯಾವ ವಿಧದಲ್ಲಿದ್ದಾನೆ? ಎನ್ನುವ ಪ್ರಶ್ನೆಗಳಿಗೆ ಈ ಶ್ಲೋಕದಲ್ಲಿ ಉತ್ತರ ಕೊಡಲಾಗಿದೆ. ಹಾಲಿನಲ್ಲಿರುವ ಬೆಣ್ಣೆಯಂತೆ, ಎಳ್ಳಿನಲ್ಲಿರುವ ಎಣ್ಣೆಯಂತೆ, ಮಣಿಗಳಲ್ಲಿಯ ದಾರದಂತೆ ಪರಮಾತ್ಮನು ಜಗತ್ತಿನಲ್ಲೆಲ್ಲೂ ವ್ಯಾಪಿಸಿರುವನು. ಅವನು ಇಲ್ಲದ ಸ್ಥಳವಿಲ್ಲ. ಆತನಿಗಿಂತ ಬೇರೆಯಾದ ಮತ್ತೊಂದು ವಸ್ತು ಯಾವುದೂ ಮೂರು ಲೋಕಗಳಲ್ಲಿಲ್ಲ. ಈ ಸತ್ಯವನ್ನೇ ಇಲ್ಲಿ ನಿರೂಪಿಸಲಾಗಿದೆ.

ಮಣಿರತ್ನ ಹಾರದಲ್ಲಿ ದಾರವಿಲ್ಲದಿದ್ದರೆ ಮಣಿಗಳು ನಿಲ್ಲುವುದಿಲ್ಲ. ಮಣಿಗಳಿಗೆ ಆಧಾರ ದಾರ. ಮಣಿಗಳಿಗೆ ಸ್ವತಃ ನಿಂತುಕೊಳ್ಳುವ ಶಕ್ತಿಯಿಲ್ಲ. ದಾರದಿಂದಲೇ ಅವು ನಿಂತುಕೊಂಡಿವೆ. ದಾರವಿಲ್ಲದಿದ್ದರೆ ಮಣಿಗಳು ಚದರಿ ಹೋಗುವುವು ಮತ್ತೆ ಮಣಿಗಳು ಅನೇಕವಿದ್ದರೂ ಬೇರೆ ಬೇರೆ ವಿಧಗಳಾಗಿದ್ದರೂ, ದಾರ ಮಾತ್ರ ಒಂದೇ ಆಗಿರುವುದು. ಜಗತ್ತಿನಲ್ಲಿ ಚರಾಚರ ಪ್ರಾಣಿಕೋಟಿಗಳೆಲ್ಲವೂ (ವಿವಿಧ ಜಾತಿಗಳು, ಮತಗಳು, ರೂಪಗಳು) ಮಣಿಗಳು. ಪರಮಾತ್ಮನಾದರೋ ದಾರ. ಪರಮಾತ್ಮನಿಲ್ಲದೆ ಹೋದರೆ ಆ ಪ್ರಾಣಿಕೋಟಿಗಳು ನಿಲ್ಲುವುದಕ್ಕೆ ಆಧಾರವೇ ಇರುವುದಿಲ್ಲ. ಪ್ರಾಣಿಗಳನ್ನೆಲ್ಲಾ ಒಂದು ಕಡೆ ನಿಲ್ಲಿಸಿರುವುದು ಅಂತರ್ಯಾಮಿಯಾದ ಆ ಪರಮಾತ್ಮನೇ. ಆತನ ಆಧಾರದಿಂದಲೇ ಅವೆಲ್ಲವೂ ನಡೆಯುತ್ತಿವೆ. ಮಣಿಹಾರದಲ್ಲಿ ಮಣಿಗಳು ಸ್ಥೂಲ ದೃಶ್ಯಕ್ಕೆ ಕಾಣಿಸುವುವೇ ಹೊರತು ದಾರವಲ್ಲ. ದಾರವು ಸೂಕ್ಷ್ಮದೃಷ್ಟಿಗೆ ಕಾಣಿಸುವುದು. ಹಾಗೆಯೇ ಭಗವಂತನು ಸ್ಥೂಲದೃಷ್ಟಿ ಹಾಗು ಚರ್ಮಚಕ್ಷುವಿಗೆ ಗೋಚರಿಸುವುದಿಲ್ಲ. ಜ್ಞಾನ ನೇತ್ರಕ್ಕೆ ಗೋಚರಿಸುವನು.

ಕೆಲವರು 'ನಮಗೆ ದೇವರು ಕಾಣಿಸುತ್ತಿಲ್ಲವಲ್ಲ? ಇದ್ದರೆ ನಮಗೇಕೆ ಕಾಣಿಸುವುದಿಲ್ಲ? ಆದ್ದರಿಂದ ಇಲ್ಲ' ಎಂದು ಅಜ್ಞಾನವಶರಾಗಿ ಹೇಳುತ್ತಿರುವರು. ಮಣಿಹಾರವನ್ನು ನೋಡಿ 'ದಾರವು ಕಣ್ಣಿಗೆ ಕಾಣಿಸುತ್ತಿಲ್ಲ; ಆದ್ದರಿಂದ ಅದರಲ್ಲಿ ದಾರವಿಲ್ಲ' ಎಂದು ಹೇಳಿದರೆ ಹೇಗಿರುವುದು? ಮಣಿಹಾರದಲ್ಲಿಯ ದಾರ, ಸ್ಥೂಲದೃಷ್ಟಿಗಲ್ಲದೆ ವಿವೇಕ ದೃಷ್ಟಿಗೆ ಮಾತ್ರ ಹೇಗೆ ಗೋಚರಿಸುವುದೋ ಹಾಗೆ ಜಗತ್ತಿನಲ್ಲಿ ಎಲ್ಲಾ ಕಡೆ ಪರಮಾತ್ಮನು ವ್ಯಾಪಿಸಿದ್ದರೂ ವಿವೇಕ ದೃಷ್ಟಿಗೆ, ಜ್ಞಾನನೇತ್ರಕ್ಕೆ ಮಾತ್ರ ಆತನು ಗೋಚರಿಸುವನು.* ಜಡದಲ್ಲಿ ಚೇತನವನ್ನು, ನಶ್ವರದಲ್ಲಿ ಶಾಶ್ವತವನ್ನು, ವಿಕಾರದಲ್ಲಿ ನಿರ್ವಿಕಾರವನ್ನು ನೋಡುವುದೇ ಜ್ಞಾನನೇತ್ರ. ಉಪಾಧಿಗಳೆಲ್ಲವೂ ಜಡಗಳೇ. ಅವುಗಳಲ್ಲಿ ಅನುಸ್ಯೂತವಾಗಿ ವ್ಯಾಪಿಸಿರುವ ಅಂತರಾತ್ಮವನ್ನು ವೀಕ್ಷಿಸುವುದೇ ಜ್ಞಾನ. ಅಜ್ಞಾನಿಗಳು ಬಾಹ್ಯವನ್ನು ಮಾತ್ರ ನೋಡುವರು. ಅವರ ದೃಷ್ಟಿ ಅಲ್ಲಿಯವರೆಗೇ ಸೀಮಿತ. ಎಂತಹ, ಮಹಾ ಪಂಡಿತನಾದರೂ ಬಾಹ್ಯವನ್ನು, ಉಪಾಧಿಯನ್ನು ಮಾತ್ರ ನೋಡುತ್ತ ಒಳಗಿರುವ ಪರಮಾತ್ಮನನ್ನು ನೋಡದಿದ್ದರೆ ಆತನು ಅಜ್ಞಾನಿಯೇ ಆಗುವನು. ಆದ್ದರಿಂದ `X' ಕಿರಣಗಳನ್ನು (X-Rays) ಬಿಟ್ಟಾಗ ವಸ್ತುವಿನ ಅಭ್ಯಂತರ ವಿಶೇಷಗಳು ಗೋಚರಿಸಿದ ಹಾಗೆ ವಿವೇಕವೆನ್ನುವ ಕಿರಣಗಳನ್ನು ಹಾಯಿಸಿ, ಪ್ರತಿಜೀವಿ ಹಾಗು ವಸ್ತುವಿನ ಒಳಗೆ ಬೆಳಗುತ್ತಿರುವ ಪರಮಾತ್ಮನನ್ನು ನೋಡುವಂತಾಗಬೇಕು. ಒಬ್ಬ ವ್ಯಕ್ತಿಯನ್ನು ನೋಡುತ್ತಲೇ ದೇಹವನ್ನು ಮಾತ್ರ ಪರೀಕ್ಷಿಸುವವನು ಅಧಮನು. ಮನಸ್ಸನ್ನು ನೋಡುವವನು ಮಧ್ಯಮನು. ಆತ್ಮವನ್ನು ನೋಡುವವನು ಉತ್ತಮನು. ದೇಹ, ಮನಸ್ಸು ಪ್ರಕೃತಿ ರೂಪಗಳು, ಜಡಗಳು, ಆತ್ಮನೊಬ್ಬನೇ ಪುರುಷನು; ಚೈತನ್ಯ. ಆದ್ದರಿಂದ ವಿಜ್ಞುಗಳು ಅದನ್ನೇ ಆಶ್ರಯಿಸಬೇಕು. ಇಂತಹ ಭಗವದ್ವಾಕ್ಯಗಳನ್ನು ಕೇಳಿದ ನಂತರ ಮನುಷ್ಯನು ಪ್ರಯತ್ನ ಪೂರ್ವಕವಾಗಿ ತನ್ನ ದೃಷ್ಟಿಯನ್ನು ಬದಲಾಯಿಸಿಕೊಂಡು ಸ್ಥೂಲವನ್ನು ಮಾತ್ರವಲ್ಲದೆ, ಅಂತರಂಗದಲ್ಲಿರುವ ಸೂಕ್ಷ್ಮವಾದ ಆತ್ಮವಸ್ತುವನ್ನು ಕೂಡ ಅವಲೋಕಿಸುವುದನ್ನು ಅಭ್ಯಸಿಸಬೇಕು.

---

ಸರ್ವಗಂ ಸಚ್ಚಿದಾನಂದಂ ಜ್ಞಾನಚಕ್ಷುರ್ನಿರೀಕ್ಷತೇ। ಅಜ್ಞಾನಚಕ್ಷುರ್ನೇಕ್ಷೇತ ಭಾಸ್ವಂತಂ ಭಾನುಮಂಧವತ್॥ (ಆತ್ಮಬೋಧೆ- ಶ್ರೀಶಂಕರಾಚಾರ್ಯರು)

ಸರ್ವವ್ಯಾಪಕನಾದ ಸಚ್ಚಿದಾನಂದ ಪರಮಾತ್ಮನನ್ನು ಜ್ಞಾನನೇತ್ರನೇ ನೋಡುವನು. ಪ್ರಕಾಶಮಾನವಾದ ಸೂರ್ಯನನ್ನು ಕುರುಡನು ನೋಡಲಾರದಂತೆ ಅಜ್ಞಾನಿ ಪರಮಾತ್ಮನನ್ನು ನೋಡಲಾರ.

ಭಗವಂತನ ಸ್ವರೂಪವನ್ನು, ಸ್ಥಾನವನ್ನು ವಿವರಿಸುತ್ತಿರುವ ಈ ಶ್ಲೋಕವು ಸಾಧನಪರರಿಗೆ, ಮುಮುಕ್ಷುಗಳಿಗೆ ಅತಿ ಮುಖ್ಯವಾಗಿದೆ. 'ಪರತರಂ'- ಎನ್ನುವ ಪದಕ್ಕೆ ಬಹಳ ಶ್ರೇಷ್ಠವಾದುದೆನ್ನುವ ಅರ್ಥವನ್ನು ಹೇಳಬಹುದು. ಈ ಶ್ಲೋಕದಲ್ಲಿ ಹೇಳಲ್ಪಟ್ಟ ಮಣಿಹಾರದ ಸಾದೃಶ್ಯದ ವಿವರಣೆಗಳು-

| ಮಣಿಹಾರ | ಜಗತ್ತು |
|---|---|
| ೧) ಮಣಿಗಳು | ೧) ದೃಶ್ಯ ಪದಾರ್ಥಗಳು |
| ೨) ದಾರ | ೨) ಪರಮಾತ್ಮ |
| ೩) ಮಣಿಗಳು ಅನೇಕವು (ಅನೇಕ ವಿಧಗಳು) ಆದರೆ ದಾರವು ಒಂದೇ | ೩) ಪದಾರ್ಥಗಳು ಅನೇಕ (ಅನೇಕ ವಿಧಗಳು) ಆದರೆ ಪರಮಾತ್ಮನು ಒಬ್ಬನೇ |
| ೪) ದಾರವಿಲ್ಲದಿದ್ದರೆ ಮಣಿಗಳು ನಿಲ್ಲುವುದಿಲ್ಲ | ೪) ಪರಮಾತ್ಮನಿಲ್ಲದಿದ್ದರೆ ಜಗತ್ಪದಾರ್ಥಗಳು ಇರಲು ಅವಕಾಶವಿಲ್ಲ. |
| ೫) ಸ್ಥೂಲದೃಷ್ಟಿಗೆ ದಾರ ಕಾಣಿಸದು | ೫) ಅಜ್ಞಾನ ದೃಷ್ಟಿಗೆ ಪರಮಾತ್ಮ ಗೋಚರಿಸುವುದಿಲ್ಲ. |
| ೬) ವಿವೇಕ ದೃಷ್ಟಿಗೆ ದಾರ ಕಾಣಿಸುವುದು | ೬) ಜ್ಞಾನದೃಷ್ಟಿಗೆ ಪರಮಾತ್ಮನು ಕಾಣಿಸುವನು. |

ಪ್ರ : ಜಗತ್ತಿನ ವಾಸ್ತವ ಸ್ವರೂಪ ಎಂತಹದು?

ಉ : ಪರಮಾತ್ಮನಿಗಿಂತ ಭಿನ್ನವಾದ ಯಾವ ಪದಾರ್ಥವೂ ಈ ಜಗತ್ತಿನಲ್ಲಿಲ್ಲ.

ಪ್ರ : ಜಗತ್ತಿನಲ್ಲಿ ಪರಮಾತ್ಮ ಯಾವ ಪ್ರಕಾರವಾಗಿ ವ್ಯಾಪಿಸಿದ್ದಾನೆ?

ಉ : ಮಣಿಗಳಲ್ಲಿಯ ದಾರದಂತೆ.

ಪ್ರ : ಆದ್ದರಿಂದ ಭಗವದ್ದರ್ಶನಕ್ಕಾಗಿ ಏನು ಮಾಡಬೇಕು?

ಉ : ವಿವೇಕ ದೃಷ್ಟಿಯನ್ನು (ಜ್ಞಾನದೃಷ್ಟಿ) ಸಂಪಾದಿಸಬೇಕು.

**ಅ||** ತನ್ನ ಆ ಸರ್ವವ್ಯಾಪಕತೆಯನ್ನು ಭಗವಂತನು ನಾಲ್ಕು ಶ್ಲೋಕಗಳ ಮೂಲಕ ತಿಳಿಸುತ್ತಿದ್ದಾನೆ-

**೮. ರಸೋಽಹಮಪ್ಸು ಕೌಂತೇಯ ಪ್ರಭಾಸ್ಮಿ ಶಶಿಸೂರ್ಯಯೋಃ**
**ಪ್ರಣವಃ ಸರ್ವವೇದೇಷು ಶಬ್ದಃ ಖೇ ಪೌರುಷಂ ನೃಷು**

**ಅರ್ಥ:** ಕೌಂತೇಯ=ಓ ಅರ್ಜುನಾ! ಅಹಂ=ನಾನು; ಅಪ್ಸು=ಉದಕದಲ್ಲಿ (ಜಲದಲ್ಲಿ), ರಸಃ=ರುಚಿಯು; ಶಶಿಸೂರ್ಯಯೋಃ=ಸೂರ್ಯಚಂದ್ರರಲ್ಲಿ; ಪ್ರಭಾ= ಕಾಂತಿ; ಸರ್ವವೇದೇಷು=ಸಮಸ್ತ ವೇದಗಳಲ್ಲಿ; ಪ್ರಣವಃ=ಓಂಕಾರವು; ಖೇ=ಆಕಾಶದಲ್ಲಿ; ಶಬ್ದಃ=ಶಬ್ದವು; ನೃಷು=ಮನುಷ್ಯರಲ್ಲಿಯ; ಪೌರುಷಂ= ಪರಾಕ್ರಮವು; ಅಸ್ಮಿ=ಆಗಿದ್ದೇನೆ.

**ತಾ||** ಅರ್ಜುನಾ! ನಾನು ಜಲದಲ್ಲಿ ರುಚಿಯು, ಚಂದ್ರ ಸೂರ್ಯರಲ್ಲಿ ಕಾಂತಿಯು, ಸಮಸ್ತ ವೇದಗಳಲ್ಲಿ ಓಂಕಾರವು, ಆಕಾಶದಲ್ಲಿ ಶಬ್ದವೂ, ಮನುಜರಲ್ಲಿ ಪರಾಕ್ರಮವೂ ಆಗಿದ್ದೇನೆ.

**ವ್ಯಾಖ್ಯೆ:** ಸಮಸ್ತ ಚರಾಚರ ಪ್ರಾಣಿಕೋಟಿಗಳಲ್ಲಿ ಮಣಿಗಳಲ್ಲಿಯ ದಾರದಂತೆ ತಾನು ವ್ಯಾಪಿಸಿರುವೆನೆಂದು ಭಗವಂತನು ಹಿಂದಿನ ಶ್ಲೋಕದಲ್ಲಿ ಪ್ರತಿಪಾದಿಸಿದನು. ಆ ಸತ್ಯವನ್ನು ಋಜು ಮಾಡಲು ಕೆಲವು ವಸ್ತುಗಳನ್ನು ತೆಗೆದುಕೊಂಡು ಅವುಗಳಲ್ಲಿ ತಾನು ಹೇಗೆ ವ್ಯಾಪಿಸಿರುವೆನೆಂದು ಇಲ್ಲಿ ತಿಳಿಸುತ್ತಿದ್ದಾನೆ. ನೀರಿನಲ್ಲಿ ತಾನು ರುಚಿರೂಪವಾಗಿಯೂ, ಚಂದ್ರ ಸೂರ್ಯರಲ್ಲಿ ಪ್ರಕಾಶರೂಪವಾಗಿಯೂ, ವೇದಗಳಲ್ಲಿ ಓಂಕಾರ ರೂಪವಾಗಿಯೂ, ಆಕಾಶದಲ್ಲಿ ಶಬ್ದರೂಪವಾಗಿಯೂ, ಮನುಷ್ಯರಲ್ಲಿ ಪರಾಕ್ರಮ ರೂಪದಲ್ಲಿಯೂ ಇರುವನೆಂದು ಭಗವಂತನು ಹೇಳಿದನು. ಇದರಿಂದ ಪರಮಾತ್ಮನು ಸಮಸ್ತ ವಸ್ತುಗಳಲ್ಲಿ ಓತಪ್ರೋತವಾಗಿ ಅಂತರ್ಯಾಮಿ ರೂಪದಲ್ಲಿ ವ್ಯಾಪಿಸಿರುವಂತೆ ಸ್ಪಷ್ಟವಾಗುತ್ತದೆ. ಜಲವಿಲ್ಲದ ಕಡೆ ರುಚಿಯಿರುವುದಿಲ್ಲ. ರುಚಿಗೆ ಜಲಕ್ಕೆ ಅವಿನಾವಭಾವ ಸಂಬಂಧವಿದೆ. ಜಲವೇ ರುಚಿ; ರುಚಿಯೇ ಜಲ. ಎರಡನ್ನು ಬೇರ್ಪಡಿಸಲು ಸಾಧ್ಯವಿಲ್ಲ. ಹಾಗೆ ಪ್ರಕಾಶವೇ ಸೂರ್ಯ, ಸೂರ್ಯನೇ ಪ್ರಕಾಶ, ಪ್ರಕಾಶವಿಲ್ಲದ ಸೂರ್ಯನನ್ನು ಯಾರೂ ಊಹಿಸಲಾರರು. ಈ ಪ್ರಕಾರವಾಗಿ ಸರ್ವವಸ್ತುಗಳನ್ನು ಕುರಿತು ಗ್ರಹಿಸಿಕೊಳ್ಳಬಹುದು. ಭಗವಂತನ ಸರ್ವವ್ಯಾಪಕತೆಯನ್ನು ಆದಿಯಲ್ಲೇ ತಿಳಿದುಕೊಳ್ಳುವುದು ಕಷ್ಟ ತರವಾದುದರಿಂದ ವಿಶ್ವವ್ಯಾಪಕಭಾವ ಸುಲಭವಾಗಿ, ಗ್ರಾಹ್ಯವಾಗಲು ಕೆಲವು ಉದಾಹರಣೆಗಳನ್ನು ಇಲ್ಲಿ ಕೊಡಲಾಗಿವೆ.

ವೇದಗಳಲ್ಲಿ ತಾನು ಓಂಕಾರ ರೂಪದಲ್ಲಿದ್ದೇನೆಂದು ಭಗವಂತನು ಹೇಳಿರುವುದರಿಂದ ವೇದಗಳಲ್ಲಿಯ ಸಾರವು ಓಂಕಾರವೇ ಎಂದು ಅರ್ಥವಾಗುತ್ತದೆ ಮತ್ತು 'ಸರ್ವವೇದೇಷು' ಎಂದು ಹೇಳಿರುವುದರಿಂದ ಸಮಸ್ತ ವೇದಗಳ ಸಾರಾಂಶ ಓಂಕಾರವೇ ಎಂದು ಸ್ಪಷ್ಟವಾಗುತ್ತಿದೆ. ಜನರ ಆಯುಷ್ಕಾಲವು ಬಹಳ ಸ್ವಲ್ಪವಾಗಿರುವುದರಿಂದ ವೇದಗಳು ಅನಂತವಾಗಿರುವುದರಿಂದ ಸಾರಭೂತವಾದ ವಿಷಯಗಳನ್ನು ತಿಳಿದು ಅನುಷ್ಠಾನ ಮಾಡಿದರೆ ಜನ್ಮ ಉದ್ಧಾರವಾಗಬಲ್ಲದು. ಅಂತಹ ಸಾರವೇ ಓಂಕಾರ. ಆದ್ದರಿಂದ ಪ್ರಣವವನ್ನು ಜಪಿಸುತ್ತ ಪ್ರಣವಾರ್ಥವನ್ನು ಚಿಂತಿಸುತ್ತ, ಪ್ರಣವ ವಾಚ್ಯನಾದ ಪರಮಾತ್ಮನನ್ನು ಧ್ಯಾನಿಸುತ್ತಿದ್ದರೆ ಪರಮ ಶ್ರೇಯವು ಲಭಿಸುವುದು.

ಮನುಷ್ಯರಲ್ಲಿ ಪರಾಕ್ರಮ (ಉತ್ಸಾಹ, ಧೈರ್ಯಗಳ) ರೂಪದಲ್ಲಿ ತಾನಿದ್ದೇನೆಂದು ಭಗವಂತನು ಹೇಳಿರುವುದರಿಂದ ಆ ಸುಗುಣವು ಮನುಜರಿಗೆ ಅತ್ಯಾವಶ್ಯಕವೆಂದು ಸ್ಪಷ್ಟವಾಗುತ್ತದೆ. ಧೈರ್ಯ, ಪರಾಕ್ರಮ, ಉತ್ಸಾಹವಿರುವ ಕಡೆ ಸಾಕ್ಷಾತ್ ಭಗವಂತನೇ ನಿವಸಿಸುವನು. ಭಯ, ದುಃಖ, ಅಂಜುಬುರುಕುತನ, ಜೋಲು ಮುಖ (Long faces) ಇರುವ ಕಡೆ ದೆವ್ವಗಳು ನಿವಸಿಸುವವು. ಆದ್ದರಿಂದ ದುರ್ಬಲತೆಯನ್ನು ಹೊರದೂಡಿ ಭಗವತ್ಸ್ವರೂಪಗಳೇ ಆದ ಧೈರ್ಯೋತ್ಸಾಹಾದಿ ಸುಗುಣಗಳನ್ನು ಸಂಪಾದಿಸಿ ಕೊಳ್ಳಬೇಕು, ಅಂತಹವನು ಧನ್ಯನು.

ಪ್ರ : ಭಗವಂತನು ಯಾವ ವಸ್ತುಗಳಲ್ಲಿ ಯಾವ ಯಾವ ರೂಪಗಳಲ್ಲಿರುವನೋ ಉದಾಹರಣೆ ಕೊಡಿ?

ಉ: ೧) ನೀರಿನಲ್ಲಿ ರುಚಿಯಾಗಿ ೨) ಸೂರ್ಯಚಂದ್ರರಲ್ಲಿ ಕಾಂತಿಯಾಗಿ ೩) ವೇದಗಳಲ್ಲಿ ಪ್ರಣವವಾಗಿ ೪) ಆಕಾಶದಲ್ಲಿ ಶಬ್ದವಾಗಿ ೫) ಮನುಷ್ಯನಲ್ಲಿ ಪರಾಕ್ರಮ ರೂಪವಾಗಿ ಭಗವಂತನಿದ್ದಾನೆ.

**೯. ಪುಣ್ಯೋ ಗಂಧಃ ಪೃಥಿವ್ಯಾಂ ಚ ತೇಜಶ್ಚಾಸ್ಮಿ ವಿಭಾವಸೌ**
**ಜೀವನಂ ಸರ್ವಭೂತೇಷು ತಪಶ್ಚಾಸ್ಮಿ ತಪಸ್ವಿಷು**

**ಅರ್ಥ:** (ಮತ್ತೆ ನಾನು) ಪೃಥಿವ್ಯಾಂ=ಭೂಮಿಯಲ್ಲಿ; ಪುಣ್ಯಃ ಗಂಧಃ ಚ= ಒಳ್ಳೆಯ ಸುವಾಸನೆಯೂ; ವಿಭಾವಸೌ=ಅಗ್ನಿಯಲ್ಲಿ; ತೇಜಃ ಚ=ಪ್ರಕಾಶವೂ; ಅಸ್ಮಿ=ಆಗಿದ್ದೇನೆ; ಸರ್ವಭೂತೇಷು=ಸಮಸ್ತ ಪ್ರಾಣಿಗಳಲ್ಲಿ; ಜೀವನಂ= ಪ್ರಾಣವೂ (ಆಯು); ತಪಸ್ವಿಷು=ತಪಸ್ಸು ಮಾಡುವವರಲ್ಲಿ; ತಪಃ ಚ=ತಪಸ್ಸು; ಅಸ್ಮಿ=ಆಗಿದ್ದೇನೆ.

**ತಾ||** (ಮತ್ತೆ ನಾನು) ಭೂಮಿಯಲ್ಲಿ ಸುಗಂಧವೂ, ಅಗ್ನಿಯಲ್ಲಿ ಪ್ರಕಾಶವೂ, ಸಮಸ್ತ ಪ್ರಾಣಿಗಳಲ್ಲಿ ಪ್ರಾಣವೂ (ಇಲ್ಲವೆ, ಆಯು), ತಪಸ್ವಿಗಳಲ್ಲಿ ತಪಸ್ಸೂ ಆಗಿದ್ದೇನೆ.

**ವ್ಯಾಖ್ಯೆ:** ಗಂಧವಿಲ್ಲದ ಭೂಮಿಯನ್ನು, ಪ್ರಕಾಶವಿಲ್ಲದ ಅಗ್ನಿಯನ್ನು, ಪ್ರಾಣವಿಲ್ಲದ ಪ್ರಾಣಿಯನ್ನು, ತಪಸ್ಸಿಲ್ಲದ ತಪಸ್ವಿಯನ್ನು ನಾವು ಊಹಿಸಲಾರೆವಲ್ಲವೇ! ಆಯಾ ವಸ್ತುಗಳ ಸಾರವೇ ಪರಮಾತ್ಮ. ಇದರಿಂದ ಆತನು ಸಮಸ್ತ ಪದಾರ್ಥಗಳಲ್ಲಿ ಪೂರ್ಣವಾಗಿ ವ್ಯಾಪಿಸಿದ್ದಾನೆಂದು ಸ್ಪಷ್ಟವಾಗುತ್ತದೆ.

**೧೦. ಬೀಜಂ ಮಾಂ ಸರ್ವಭೂತಾನಾಮ್ ವಿದ್ಧಿ ಪಾರ್ಥ ಸನಾತನಮ್**
**ಬುದ್ಧಿರ್ಬುದ್ಧಿಮತಾಮಸ್ಮಿ ತೇಜಸ್ತೇಜಸ್ವಿನಾಮಹಮ್**

**ಅರ್ಥ:** ಪಾರ್ಥ=ಓ ಅರ್ಜುನಾ! ಮಾಂ=ನನ್ನನ್ನು; ಸರ್ವಭೂತಾನಾಂ= ಸಮಸ್ತ ಪ್ರಾಣಿಗಳ; ಸನಾತನಂ=ಶಾಶ್ವತವಾದ; ಬೀಜಂ=ಬೀಜವೆಂದು, (ಕಾರಣವೆಂದು, ಮೂಲವೆಂದು); ವಿದ್ಧಿ=ತಿಳಿಯುವುದು (ಮತ್ತೆ ನಾನು); ಬುದ್ಧಿಮತಾಂ= ಬುದ್ಧಿವಂತರ; ಬುದ್ಧಿಃ=ಬುದ್ಧಿಯು (ವಿವೇಕವು) ತೇಜಸ್ವಿನಾಂ=ಧೀರರ; ತೇಜಃ=ಧೈರ್ಯವೂ; ಅಸ್ಮಿ=ಆಗಿದ್ದೇನೆ.

**ತಾ||** ಓ ಅರ್ಜುನಾ! ನನ್ನನ್ನು ಸಮಸ್ತ ಪ್ರಾಣಿಗಳ ಶಾಶ್ವತವಾದ ಮೂಲವೆಂದು ತಿಳಿದುಕೋ. ನಾನು ಬುದ್ಧಿವಂತರ ಬುದ್ಧಿಯೂ, ಧೀರರ ಧೈರ್ಯವೂ ಆಗಿದ್ದೇನೆ.

**ವ್ಯಾಖ್ಯೆ:** *'ಬೀಜಂ ಮಾಂ ಸರ್ವಭೂತಾನಾಂ'*- ಎನ್ನುವ ವಾಕ್ಯದ ಮೂಲಕ ಸಮಸ್ತ ಪ್ರಾಣಿಗಳ ಬೀಜ(ಮೂಲ) ಆ ಪರಮಾತ್ಮನೇ ಎಂದೂ, ಆತನಿಂದಲೇ ಸರ್ವರೂ ಉದ್ಭವಿಸಿರುವರೆನ್ನುವುದೂ ಸ್ಪಷ್ಟವಾಗುತ್ತದೆ. ಎಲ್ಲರಿಗೂ ಮೂಲ ಆತನೇ ಆದುದರಿಂದ ಒಬ್ಬನು ಹೆಚ್ಚು ಒಬ್ಬನು ಕಡಿಮೆ ಎನ್ನುವ ಭೇದಬುದ್ಧಿಗೆ ಅವಕಾಶವಿಲ್ಲ. ಆದ್ದರಿಂದ ಕಡಿಮೆ ಕುಲದಲ್ಲಿ ಜನಿಸಿದರೂ, ಪಾಪಾತ್ಮನಾದರೂ, ತನ್ನ ಮೂಲ, ತನ್ನ ತಂದೆ ಆ ಪರಮಾತ್ಮನೇ ಎಂದು ನಿಶ್ಚಯಿಸಿ ಮನುಜನು ಪುಣ್ಯಪಥದಲ್ಲಿ ಮುಂದುವರಿಯಬೇಕು. ತಾನು ಕಡಿಮೆಯೆಂದು ಯಾರೂ ದುಃಖ ಪಡಬೇಕಾಗಿಲ್ಲ, ಎಲ್ಲರಿಗೂ ಮೂಲ ಆ ಭಗವಂತನೇ ಆಗಿದ್ದಾನೆ. ಎಲ್ಲರದೂ 'ಪರಬ್ರಹ್ಮ' ಗೋತ್ರವೇ ಆಗಿದೆ. ಬೀಜದ ಸ್ವಭಾವವೇ ಗಿಡದಲ್ಲಿರುವುದು. ಆದ್ದರಿಂದ ಎಲ್ಲರೂ ವಾಸ್ತವವಾಗಿ ಸನಾತನ ಬ್ರಹ್ಮಸ್ವರೂಪಿಗಳೇ ಆಗಿದ್ದಾರೆ. ಅವಿದ್ಯಾವಶದಿಂದ ಮನುಜನು ತಾನು ಅಲ್ಪನೆಂದು, ಜೀವಿಯೆಂದು, ದೇಹವೆಂದು, ದೃಶ್ಯವೆಂದು ಭ್ರಮಿಸುತ್ತಿದ್ದಾನೆ. ಯಾವಾಗ ಧೈರ್ಯೋತ್ಪಾದಕಗಳಾದ ಈ ಭಗವದ್ವಾಕ್ಯಗಳಿಂದ ಆ ಅವಿದ್ಯೆ ತೊಲಗುವುದೋ ಆಗ ತಾನು ಸನಾತನ ಆತ್ಮಸ್ವರೂಪವೇ ಎಂದು ತನಗೆ ಮೂಲ ಹೇತುವು ಆ ಪರಮಾತ್ಮನೇ ಎಂದು ನಿಶ್ಚಯಿಸಿ ಪರಮಾನಂದಭರಿತನಾಗುವನು.

ನೀಚನಾದರೂ, ಚಂಡಾಲನಾದರೂ, ದರಿದ್ರನಾದರೂ, ದೀನಾದಿ ದೀನನಾದರೂ ತನಗೆ ಬೀಜ, ಮೂಲಕಾರಣ ಪರಮಾತ್ಮನೇ ಎಂದು ತಿಳಿದುಕೊಂಡಲ್ಲಿ ಧೈರ್ಯವಂತನಾಗುವನು. ತನ್ನ ನಿಜಸ್ವರೂಪವನ್ನು ತಿಳಿದಾಗ ಎಂತಹ ಅಲ್ಪನಿಗಾದರೂ ಮೇರುವಿನಂತಹ ಗಾಂಭೀರ್ಯವು ಉಂಟಾಗುವುದು. ಗೀತಾಚಾರ್ಯನು ಯಾರನ್ನೂ 'ನೀನು ಅಲ್ಪನು, ನೀಚನು, ನೀಚ ಜಾತಿಯವನು' ಎಂದು ಹೇಳಲಿಲ್ಲ. ಮೇಲಾಗಿ **'ನಿನ್ನ ಮೂಲವು ಸನಾತನ ಪರಮಾತ್ಮನೇ'** ಎಂದು ಘೋಷಿಸಿರುತ್ತಾನೆ. 'ಸರ್ವ ಭೂತಾನಾಂ' ಎಂದು ಹೇಳಿರುವುದರಿಂದ ಯಾವನೋ ಒಬ್ಬನ ಮೂಲವಲ್ಲವೆಂದೂ, ಸಮಸ್ತ ಪ್ರಾಣಿಕೋಟಿಗಳ ಮೂಲವೆಂದು ಸ್ಪಷ್ಟವಾಗುತ್ತದೆ. ಈ ಬೋಧೆ ಈಗ ಲೋಕಕ್ಕೆ ಬಹಳ ಅವಶ್ಯಕವಾಗಿದೆ. ಸಂಸಾರದಲ್ಲಿ ಮುಳುಗಿ ಹೋಗುವವರನ್ನು ಈ ಬೋಧೆಗಳು ಮೇಲೆತ್ತುತ್ತವೆ. ತೆರಂಗ ಚಿಕ್ಕದಾದರೇನು? ಅದರ ಹಿಂದೆ ಅದಕ್ಕೆ ಆಧಾರವಾಗಿ, ಕಾರಣವಾಗಿ, ಮೂಲವಾಗಿ ಅನಂತವಾದ ಸಮುದ್ರವಿದೆ. ಆದ್ದರಿಂದ ತರಂಗವು ತನ್ನ ಅಲ್ಪರೂಪಕ್ಕೆ ದುಃಖಿಸದೆ ತನ್ನ ಮೂಲವಾದ ಸಮುದ್ರವನ್ನು ನೋಡಿ ಧೈರ್ಯ ಹೊಂದಬೇಕು. ಹಾಗೆಯೇ ಮಾನವನು ತನ್ನ ಚಿಕ್ಕ ಉಪಾಧಿಯನ್ನು ಲೆಕ್ಕಿಸದೆ ತನ್ನ ಮೂಲವೂ, ತನ್ನ ನಿಜರೂಪವೂ, ತನ್ನ ಉಪಾಧಿಗೆ ಆಧಾರವೂ ಪರಮಾತ್ಮನೇ ಎಂದು ನಿಶ್ಚಯಿಸಿದಲ್ಲಿ ಅದೆಷ್ಟು ಧೈರ್ಯವುಂಟಾಗುವುದು! ತನ್ನ ಮೂಲ ತನ್ನ ತಂದೆಯಲ್ಲ, ತಾತನಲ್ಲ, ಮುತ್ತಾತನಲ್ಲ, ಸಾಕ್ಷಾತ್ ಪರಮಾತ್ಮನೇ ಎನ್ನುವ ನಂಬಿಕೆ ಸಂಪೂರ್ಣವಾಗಿರಬೇಕು. ಆದ್ದರಿಂದ ಬ್ರಾಹ್ಮಣರು ಸಂಧ್ಯಾವಂದನೆಯ ಕೊನೆಯಲ್ಲಿ ಪ್ರವರವನ್ನು ಹೇಳುವಾಗ, ತಮ್ಮ ಗೋತ್ರವನ್ನು ವಚಿಸುವ ಸಂಬಂಧದಲ್ಲಿ ಮಹರ್ಷಿಗಳನ್ನು ಸ್ಮರಿಸುವವರೇ ಆಗಲಿ, ತಮ್ಮ ಕುಲದಲ್ಲಿಯ ಅನ್ಯರನ್ನಲ್ಲ.

'ಬೀಜಂ ಮಾಂ ಸರ್ವಭೂತಾನಾಂ' ಎನ್ನುವ ವಾಕ್ಯದ ಮೂಲಕ ಭಗವಂತನು ಈ ಕೆಳಗಿನ ಬೋಧೆಯನ್ನು ಜನರಿಗೆ ಮಾಡುತ್ತಿದ್ದಾನೆ- 'ಓ ಜೀವಿಗಳಿರಾ! ನೀವು ಅಲ್ಪರೆಂದು, ದೀನರೆಂದು ಯಾವಗಲೂ ಭಾವಿಸಬಾರದು. ನಿಮ್ಮ ಎಲ್ಲರ ಕಾರಣವೂ, ಮೂಲವೂ ನಾನೇ. ಅದು ಸಾಮಾನ್ಯ ಬೀಜವಲ್ಲ, ಶಾಶ್ವತವಾದ (ಸನಾತನ) ಬೀಜ. ಆದ್ದರಿಂದ ನೀವೆಲ್ಲರೂ ನನ್ನ ಪರಂಪರೆಯಲ್ಲಿ ಜನಿಸಿದವರೇ. ನಿಮಗೆ ನಾನೇ ಮೂಲ ಪುರುಷ. ನೀವೆಲ್ಲರೂ ದೈವಾಂಶದಲ್ಲಿ ಜನಿಸಿದವರು. ಗಿಡ ಬೀಜಕ್ಕಿಂತ ಅನ್ಯವಾಗಿರುವುದಿಲ್ಲ. ನೀವೆಲ್ಲರೂ ವೃಕ್ಷರೂಪಿಗಳು. ಆ ವೃಕ್ಷಕ್ಕೆ ನಾನು ಬೀಜ. ನಾನು ಸನಾತನನಾದುದರಿಂದ ನೀವೂ ಸನಾತನರೇ (ಶಾಶ್ವತವಾದವರೇ) ಆಗುವಿರಿ. ಈ ವಾಕ್ಯದಲ್ಲಿ ನಂಬಿಕೆ ಇಟ್ಟು ಮುಕ್ತಿ ಹೊಂದಿರಿ. ದೇಹಭಾವ ಹೊಂದಿ ಅನವಶ್ಯಕವಾಗಿ ದುಃಖದ ಪಾಲಾಗಬೇಡಿ! ನಿಮ್ಮ ನಿಜ ರೂಪವನ್ನು ಕಂಡುಕೊಂಡು ಸಿಂಹ ಕಿಶೋರದಂತೆ ಮೇಲೇಳಿರಿ.

ಶ್ರೀಕೃಷ್ಣ ಭಗವಂತನ ಈ ದಿವ್ಯಬೋಧೆಯನ್ನು ಸ್ಮೃತಿಪಥದಲ್ಲಿಟ್ಟುಕೊಂಡು ಮುಕ್ತಿ ಹೊಂದುವುದು ಪ್ರತಿ ಜೀವಿಯ ವಿಧ್ಯುಕ್ತ ಧರ್ಮ.

ಪ್ರ : ಸಮಸ್ತ ಪ್ರಾಣಿಕೋಟಿಗಳಿಗೆ ಬೀಜಭೂತನಾರು?

ಉ : ಪರಮಾತ್ಮನೇ.

ಪ್ರ : ಅವನ ಸ್ವರೂಪ ಎಂತಹದು?

ಉ : ಶಾಶ್ವತ (ಸನಾತನ)ವಾದುದು.

**೧೧. ಬಲಂ ಬಲವತಾಂ ಚಾಹಂ ಕಾಮರಾಗವಿವರ್ಜಿತಂ**
**ಧರ್ಮಾವಿರುದ್ಧೋ ಭೂತೇಷು ಕಾಮೋಽಸ್ಮಿ ಭರತರ್ಷಭ**

**ಅರ್ಥ:** ಭರತರ್ಷಭ=ಭರತ ಕುಲಶ್ರೇಷ್ಠನಾದ ಓ ಅರ್ಜುನಾ! ಅಹಂ= ನಾನು; ಬಲವತಾಂ=ಬಲವಂತರ; ಕಾಮರಾಗವಿವರ್ಜಿತಂ=ಆಶೆ, ಅನುರಾಗವಿಲ್ಲದ; ಬಲಂ=ಬಲವೂ; ಭೂತೇಷು=ಪ್ರಾಣಿಗಳಲ್ಲಿ; ಧರ್ಮಾ ವಿರುದ್ಧಃ=ಧರ್ಮಕ್ಕೆ ವಿರುದ್ಧವಲ್ಲದ; ಕಾಮಃ=ಕೋರಿಕೆಯು; ಅಸ್ಮಿ= ಆಗಿದ್ದೇನೆ.

ತಾ॥ ಭರತಕುಲ ಶ್ರೇಷ್ಠನಾದ ಓ ಅರ್ಜುನಾ! ನಾನು ಬಲವಂತರ ಆಶೆ ಅನುರಾಗವಿಲ್ಲದ ಬಲವೂ, ಪ್ರಾಣಿಗಳಲ್ಲಿರುವ ಧರ್ಮಕ್ಕೆ ವ್ಯತಿರೇಕವಲ್ಲದ ಕೋರಿಕೆಯೂ ಆಗಿದ್ದೇನೆ.

ವ್ಯಾಖ್ಯೆ: ಬಲವಿರುವುದು ಒಳ್ಳೆಯದೇ. ಆದರೆ ಅದು ಕಾಮ, ರಾಗವಿಲ್ಲ ದ್ದಾಗಿರಬೇಕು. ಅಂದರೆ ಧರ್ಮವಿರುದ್ಧವಾದ ಕಾರ್ಯಗಳನ್ನು ಮಾಡು ವುದರಲ್ಲಿ, ವಿಷಯ ಸಂಬಂಧವಾದ ಕೋರಿಕೆಗಳನ್ನು ಸಂತೃಪ್ತಿಪಡಿಸು ವುದರಲ್ಲಿ, ದೃಶ್ಯ ವಸ್ತುಗಳಲ್ಲಿ ಅನುರಾಗ ಆಸಕ್ತಿ ತೋರಿಸುವುದರಲ್ಲಿ ವಿನಿಯೋಗಪಡದೆ ಇರುವುದಾಗಿರಬೇಕು. ಧರ್ಮಕಾರ್ಯಗಳಿಗೆ, ಪರೋಪಕಾರ ಕಾರ್ಯಗಳಿಗೆ, ದೈವ ಕಾರ್ಯಗಳಿಗೆ, ಪರಮಾರ್ಥ ಸಾಧನೆಗಳಿಗೆ ವಿನಿಯೋಗ ಪಡುವ ಬಲವು ಉತ್ತಮವಾದುದು. ಮಾನಸಿಕ ಬಲ ಅಥವ ಶಾರೀರಿಕ ಬಲ, ಕಾಮರಾಗಗಳಿಂದ ಕೂಡಿ, ವಿಷಯ ಭೋಗಕ್ಕೆ ವಿನಿಯೋಗಿಸಲ್ಪಡುವ ಬಲ ನಿಕೃಷ್ಟವಾದುದು. ಅದು ಪಶು ಬಲ, ಆಸುರೀ ಬಲ. ಭಗವನ್ನಿವಾಸಕ್ಕೆ ಅದು ಯೋಗ್ಯವಲ್ಲ. ಅದನ್ನು 'ವರ್ಜಿತಂ' ಎಂದು ಹೇಳದೆ 'ವಿವರ್ಜಿತಂ' ಎಂದು ಹೇಳಿರುವುದರಿಂದ ಬಲದಲ್ಲಿ ಕಾಮ, ರಾಗಗಳು ಎಳ್ಳಷ್ಟೂ ಸೇರಿರಬಾರದೆಂದು ಸ್ಪಷ್ಟವಾಗುತ್ತದೆ.

ಧರ್ಮಕ್ಕೆ, ಶಾಸ್ತ್ರಗಳ ಆದೇಶಕ್ಕೆ ವಿರುದ್ಧವಲ್ಲದ ಕೋರಿಕೆಯು ತಾನೇ ಎಂದು ಭಗವಂತನು ಅಪ್ಪಣೆ ಕೊಟ್ಟಿರುವನು. ಕೋರಿಕೆಯನ್ನು ದುರ್ವಿನಿಯೋಗ ಪಡಿಸಿಕೊಂಡಾಗ ಅದು ಆಸುರಿಯಾಗಿ ವರ್ತಿಸುವುದು. ಸದ್ವಿನಿಯೋಗಪಡಿಸಿ ಕೊಂಡಾಗ ದೈವೀಕವಾಗುವುದು. ದೇಹಧಾರಣೆ ನಿಮಿತ್ತಗಳಾದ ಅನ್ನ ಪಾನಾದಿಗಳನ್ನು ಕುರಿತು ಇಚ್ಛಾ ಮಾತ್ರ ರೂಪವಾದ, ಮೋಕ್ಷೇಚ್ಛೆ ಸಂಬಂಧವಾದ, ಗೃಹಸ್ಥರಿಗೆ ಸತ್ಸಂತಾನ ನಿಮಿತ್ತವಾದ ಕೋರಿಕೆಗಳು ಧರ್ಮವಾದ ಕೋರಿಕೆಗಳು. ಅವು ದೋಷರಹಿತವಾದವುಗಳಾದ್ದರಿಂದ ಆ ಕೋರಿಕೆಗಳು ತನ್ನ ರೂಪವೇ ಎಂದು ಭಗವಂತನು ಹೇಳಿರುವನು. ಆದರೆ ಈಗಾಗಲೇ ಅನೇಕ ಬಾರಿ ಕೋರಿಕೆಗಳೆಲ್ಲವನ್ನೂ ತ್ಯಜಿಸಬೇಕೆಂದು (ಪ್ರಜಾಹಾತಿ ಯದಾ ಕಾಮಾನ್ ಸರ್ವಾನ್) ಬೋಧಿಸಿ ಈಗ 'ಧರ್ಮಕ್ಕೆ ವಿರುದ್ಧವಲ್ಲದ ಕೋರಿಕೆ ನಾನು' ಎಂದು ಗೀತಾಚಾರ್ಯನು ಏಕೆ ಹೇಳಿದನು ಎಂದು ಕೆಲವರು ಪ್ರಶ್ನಿಸಬಹುದು. ಅದಕ್ಕೆ ಸಮಾಧಾನವೇನೆಂದರೆ- ಕೋರಿಕೆಗಳು ಮೂರು ವಿಧಗಳಾಗಿವೆ. ೧) ಕೆಟ್ಟ ಕೋರಿಕೆ ೨) ಒಳ್ಳೆಯ ಕೋರಿಕೆ ೩) ಕೋರಿಕೆಯಿಲ್ಲದಿರುವುದು. ಪ್ರಾರಂಭ ಸ್ಥಿತಿಯಲ್ಲಿ ಸಾಧಕನು ಕೆಟ್ಟ ಕೋರಿಕೆಗಳನ್ನು ಬಿಟ್ಟು ಒಳ್ಳೆಯ ಕೋರಿಕೆಗಳನ್ನು ಗ್ರಹಿಸಬೇಕು. ಧರ್ಮಕ್ಕೆ ವಿರುದ್ಧವಲ್ಲದ ಕೋರಿಕೆಗಳನ್ನು ಸ್ವೀಕರಿಸಬೇಕು. (ದುಸ್ಸಂಕಲ್ಪಗಳನ್ನು ಬಿಟ್ಟು ಸತ್ಸಂಕಲ್ಪಗಳನ್ನು ಗ್ರಹಿಸಬೇಕು.) ಅಂದರೆ ಪರೋಪಕಾರವನ್ನು ಕುರಿತ ಕೋರಿಕೆ, ಜನ್ಮೋದ್ಧಾರವಾಗಬೇಕೆಂಬ ಕೋರಿಕೆ, ಭಗವದ್ಧ್ಯಾನವನ್ನು ಮಾಡಬೇಕೆಂಬ ಕೋರಿಕೆ, ಗೃಹಸ್ಥನಾಗಿದ್ದರೆ ಸತ್ಸಂತಾನ ಪ್ರಾಪ್ತಿಗೆ ಹೇತುವಾದ ಕೋರಿಕೆ, ಪುಣ್ಯಕಾರ್ಯಗಳನ್ನು ಆಚರಿಸಬೇಕೆಂಬ ಕೋರಿಕೆ ಮುಂತಾದುವನ್ನು ಪ್ರಾರಂಭದಲ್ಲಿ ಅವಲಂಬಿಸಿ ಕ್ರಮವಾಗಿ ಸಾಧನೆಯ ಪರಿಪಕ್ವತೆಯಿಂದ ಪುರೋಗತಿಯನ್ನು ಹೊಂದಿ ನಿಸ್ಸಂಕಲ್ಪ ಸ್ಥಿತಿಯನ್ನು ಅಂದರೆ ಕೋರಿಕೆ ರಹಿತವಾದ, ಯಾವ ಸಂಕಲ್ಪವೂ ಇಲ್ಲದ ಆತ್ಮಸ್ಥಿತಿಯನ್ನು ಹೊಂದಬೇಕು. ಈ ಪ್ರಕಾರವಾಗಿ ಆತ್ಮಸ್ಥಿತಿಗೆ ಪ್ರಾಥಮಿಕ ಸಾಧನೆಯಾಗಿ ಧರ್ಮಾನುಕೂಲವಾದ ಕೋರಿಕೆಗಳನ್ನು ಇಲ್ಲಿ ಪ್ರೋತ್ಸಾಹಿಸಲ್ಪಟ್ಟು, ಧರ್ಮ ವಿರುದ್ಧವಾದ ಕೋರಿಕೆಗಳನ್ನು ಖಂಡಿಸಲ್ಪಟ್ಟಿದೆ ಎಂದು ತಿಳಿಯಬೇಕು. ಆದರೆ, ಕೋರಿಕೆಗಳನ್ನೆಲ್ಲಾ ಬಿಟ್ಟರೆ ಮಾತ್ರ ನಿರ್ವಿಷಯ ಆತ್ಮಲಭ್ಯವಾಗುವುದು ಎನ್ನುವುದನ್ನು ಸಾಧಕರು ಚೆನ್ನಾಗಿ ತಿಳಿದಿರಬೇಕು.

ಅ॥ ಜಗತ್ತಿಗೆ ಮೂಲಕಾರಣ ತಾನೇ ಎಂದು ಭಗವಂತನು ಹೇಳುತ್ತಿದ್ದಾನೆ-

**೧೨. ಯೇ ಚೈವ ಸಾತ್ತ್ವಿಕಾ ಭಾವಾಃ ರಾಜಸಾಸ್ತಾಮಸಾಶ್ಚಯೇ**
**ಮತ್ತ ಏವೇತಿ ತಾನ್ ವಿದ್ಧಿ ನ ತ್ವಹಂ ತೇಷು ತೇ ಮಯಿ**

ಅರ್ಥ: ಸಾತ್ತ್ವಿಕಾಃ=ಸತ್ತ್ವಗುಣಗಳಿಂದ ಕೂಡಿದ; ಭಾವಾಃ=ಪದಾರ್ಥಗಳು (ಸ್ವಭಾವಗಳು); ಏ=ಯಾವು(ಇರುವವೊ); ರಾಜಸಾಃ ಚ=ರಜೋಗುಣ ಗಳಿಂದ ಉಂಟಾದುವು; ತಾಮಸಾಃ ಚ=ತಮೋಗುಣಗಳಿಂದ ಕೂಡಿದವು; ಏ=ಯಾವು (ಇರುವವೋ); ತಾನ್=ಅವುಗಳು; ಮತ್ತಃ ಏವ ಇತಿ=ನನ್ನಿಂದ ಉಂಟಾಗಿವೆಯೆಂದು; ವಿದ್ಧಿ=ತಿಳಿಯುವುದು. ತು=ಆದರೆ; ತೇಷು=ಅವು ಗಳಲ್ಲಿ; ಅಹಂ=ನಾನು; ನ=ಇಲ್ಲ; ತೇ=ಅವು; ಮಯಿ=ನನ್ನಲ್ಲಿ(ಸಂತಿ= ಇರುವುವು).

ತಾ॥ ಸತ್ತ್ವರಜಸ್ತಮೋಗುಣಗಳಿಂದ ಉಂಟಾದ ಪದಾರ್ಥಗಳು (ಇಲ್ಲವೆ ಸ್ವಭಾವಗಳು) ಯಾವು ಇರುವವೋ ಅವೆಲ್ಲವೂ ನನ್ನಿಂದಲೇ ಉಂಟಾಗಿವೆ ಯೆಂದು ನೀನು ತಿಳಿಯುವುದು. ಆದರೆ ನಾನು ಅವುಗಳಲ್ಲಿಲ್ಲ. ಅವು ನನ್ನಲ್ಲಿವೆ. (ನಾನು ಅವುಗಳಿಗೆ ವಶನಾಗಿರುವುದಿಲ್ಲ. ಅವು ನನ್ನ ವಶವಾಗಿರುವುವು ಎಂದರ್ಥ).

ವ್ಯಾಖ್ಯೆ: ಆಧಾರವಿಲ್ಲದೆ ಆಧೇಯ ನಿಲ್ಲದು. ಈ ಸಮಸ್ತ ಪ್ರಪಂಚಕ್ಕೆ ಅದರಲ್ಲಿರುವ ಪದಾರ್ಥಗಳಿಗೆ ಆಧಾರ ಪರಮಾತ್ಮ. ಆತನ ಶಕ್ತಿಯಿಂದಲೇ ಅವುಗಳಿಗೆ ಶಕ್ತಿ ಬಂದಿದೆ. ಅಧಿಷ್ಠಾನವಾದ ಆತ್ಮನ ಬಾಹ್ಯ ವಿವರ್ತತೆಯೇ ಈ ಪ್ರಪಂಚ. ಭ್ರಮೆಯಿಂದ ರಜ್ಜುವಿನಲ್ಲಿ ಗೋಚರಿಸುವ ಸರ್ಪಕ್ಕೆ ಹೇಗೆ ರಜ್ಜುವು ಕಾರಣಭೂತವಾಗಿದೆಯೋ ಹಾಗೆ ಈ ಜಗತ್ತಿಗೆ ಪರಮಾತ್ಮನು ಕಾರಣಭೂತನಾಗಿದ್ದಾನೆ. ಆದ್ದರಿಂದಲೇ ಇಲ್ಲಿ ಸಾತ್ತ್ವಿಕಾದಿ ಗುಣಗಳಿಂದ ಉಂಟಾದ 'ಸಮಸ್ತ ಪದಾರ್ಥಗಳು ನನ್ನಿಂದಲೇ ಉಂಟಾಗಿವೆ' ಎಂದು ಭಗವಂತನು ಹೇಳಲು ಕಾರಣವಾಗಿದೆ. ಈ ಪ್ರಕಾರವಾಗಿ ಆ ಜಗದ್ರೂಪ ವಸ್ತುಗಳೆಲ್ಲವೂ ಪರಮಾತ್ಮನ ಮೇಲೆ ಆಧಾರಪಟ್ಟಿವೆ. ಆದರೆ ಪರಮಾತ್ಮ ಅವುಗಳ ಮೇಲೆ ಆಧಾರಪಡುತ್ತಿಲ್ಲ. ಸರ್ಪವು ರಜ್ಜುವಿನಲ್ಲಿದೆ. ರಜ್ಜು ಸರ್ಪದಲ್ಲಿಲ್ಲ. ಅಂದರೆ ಸರ್ಪವು ರಜ್ಜುವಿನ ಮೇಲೆ ಆಧಾರಪಟ್ಟಿದೆ. ಅಷ್ಟೇ ಅಲ್ಲದೆ ರಜ್ಜು ಸರ್ಪದ ಮೇಲಲ್ಲ. ತರಂಗಗಳು ಸಮುದ್ರದ ಮೇಲೆ ಆಧಾರಪಟ್ಟಿವೆ. ಸಮುದ್ರವು ತರಂಗಗಳ ಮೇಲಲ್ಲ. ಅವು ನನ್ನಲ್ಲಿವೆ ಆದರೆ ನಾನು ಅವುಗಳಲ್ಲಿಲ್ಲ ಎನ್ನುವ ಭಗವದ್ವಾಕ್ಯದ ಅರ್ಥವೂ ಇದೇ ಆಗಿದೆ.

*'ನ ತ್ವಹಂ ತೇಷು ತೇ ಮಯಿ'*- ಎನ್ನುವ ವಾಕ್ಯಕ್ಕೆ ಇನ್ನೊಂದು ವಿಧವಾಗಿ ಅರ್ಥ ಹೇಳಬಹುದು- (ಅಹಂ ತೇಷು ನ, ತೇಮಯಿ ನ) ನಾನು ಅವುಗಳಲ್ಲಾಗಲಿ, ಅವು ನನ್ನಲ್ಲಾಗಲಿ ಇಲ್ಲ. ಇದು ಪೂರ್ಣ ಅದ್ವೈತ ಸ್ಥಿತಿಯನ್ನು ಕುರಿತು ಹೇಳುವ ವಾಕ್ಯ. ಈ ದೃಶ್ಯ ಜಗತ್ತು ಸ್ವಪ್ನ ಪ್ರಾಯವಾಗಿದ್ದು ವಾಸ್ತವವಾಗಿ (ಪರಮಾರ್ಥ ದೃಷ್ಟಿ) ಇಲ್ಲದ್ದೇ ಆಗಿದೆ. ಆದ್ದರಿಂದ ಇಲ್ಲದ ವಸ್ತುವಿನಲ್ಲಿ ಪರಮಾತ್ಮ ಇರುವುದೆಂತು? ಪರಮಾತ್ಮನಲ್ಲಿ ಆ ಇಲ್ಲದ ವಸ್ತು ಇರುವುದೆಂತು?

ಈ ಶ್ಲೋಕದಲ್ಲಿಯ ಮೊದಲನೆಯ ಪಾದ ಹಾಗು ಎರಡನೆಯ ಪಾದದ ಪೂರ್ವಾರ್ಧ, ದ್ವೈತ ಹಾಗು ವಿಶಿಷ್ಟಾದ್ವೈತ ತತ್ತ್ವಗಳನ್ನೂ, ಎರಡನೆಯ

ಪಾದದ ಉತ್ತರಾರ್ಧವು ಅದ್ವೈತತತ್ತ್ವವನ್ನೂ ಸೂಚಿಸುತ್ತವೆ. ಗೀತೆಯಲ್ಲಿ ಪರಿಪೂರ್ಣ ಅದ್ವೈತಸ್ಥಿತಿ ಬೋಧಿಸಿರುವ ಕೆಲವು ಸಂದರ್ಭಗಳಲ್ಲಿ ಇದು ಒಂದು. (**ಭೂತಭೃತ್ ನ ಚ ಭೂತಸ್ಥಃ** (೯-೫) ಮುಂತಾದವು)

ಈ ಶ್ಲೋಕದಲ್ಲಿ ರಾಜಸ, ತಾಮಸ ಭಾವಗಳೂ ಕೂಡ ಪರಮಾತ್ಮನಿಂದಲೇ ಉಂಟಾಗಿವೆಯೆಂಬ ವಾಕ್ಯದಿಂದ ಆ ದುಷ್ಟಭಾವಗಳನ್ನು ಪ್ರೋತ್ಸಾಹಿಸಿದಂತಾಗಿದೆ ಎಂದು ಯಾರೂ ಭಾವಿಸಬಾರದು. ಅವೆಲ್ಲವುಗಳ ಅಧಿಷ್ಠಾನ ಪರಮಾತ್ಮನೇ ಎಂದು ತಿಳಿಸುವುದಕ್ಕಾಗಿ ಹಾಗೆ ಹೇಳಲಾಗಿದೆ.

ಪ್ರ : ಪರಮಾತ್ಮ ಎಂತಹವನು?

ಉ : ಸತ್ತ್ವರಜಸ್ತಮೋಗುಣ ಸಂಜನಿತಗಳಾದ ಸಮಸ್ತ ವಸ್ತುಗಳಿಗೆ ಆಧಾರ ಭೂತನು. ಅವು ಆತನಿಗೆ ವಶವಾಗಿವೆ. ಆತನು ಅವುಗಳ ವಶದಲ್ಲಿರುವುದಿಲ್ಲ.

**ಅ||** ಆ ಪರಮಾತ್ಮನನ್ನು ಏಕೆ ಅರ್ಥಮಾಡಿಕೊಳ್ಳುತ್ತಿಲ್ಲವೆನ್ನುವ ವಿಷಯ ಹೇಳಲ್ಪಡುತ್ತಿದೆ-

**೧೩. ತ್ರಿಭಿರ್ಗುಣಮಯೈರ್ಭಾವೈರೇಭಿಃ ಸರ್ವಮಿದಂ ಜಗತ್**
**ಮೋಹಿತಂ ನಾಭಿಜಾನಾತಿ ಮಾಮೇಭ್ಯಃ ಪರಮವ್ಯಯಮ್**

**ಅರ್ಥ:** ಏಭಿಃ=ಈ ಹೇಳಲ್ಪಟ್ಟ; ತ್ರಿಭಿಃ=ಮೂರು ವಿಧಗಳಾದ; ಗುಣಮಯೈಃ=(ಸತ್ತ್ವರಜಸ್ತಮೋ) ಗುಣಗಳ ವಿಕಾರಗಳಾದ; ಭಾವೈಃ= ಸ್ವಭಾವಗಳಿಂದ; ಸರ್ವಂ ಇದಂ ಜಗತ್=ಈ ಪ್ರಪಂಚವೆಲ್ಲವೂ; ಮೋಹಿತಂ (ಸತ್)=ಮೋಹವನ್ನು (ಭ್ರಾಂತಿ, ಅವಿವೇಕವನ್ನು) ಹೊಂದಿರುವುದಾಗಿ; ಏಭ್ಯಃ=ಈ ತ್ರಿಗುಣಗಳಿಗಿಂತ; ಪರಂ=ಬೇರೆಯಾದ (ಅತೀತನಾದ); ಅವ್ಯಯಂ=ನಾಶರಹಿತನಾದ; ಮಾಂ=ನನ್ನನ್ನು; ನ ಅಭಿಜಾನಾತಿ=ತಿಳಿದುಕೊಳ್ಳದಂತಾಗಿದೆ.

**ತಾ||** ಮೂರು ವಿಧಗಳಾದ ಸತ್ತ್ವರಜಸ್ತಮೋಗುಣ ವಿಕಾರಗಳ ಸ್ವಭಾವದಿಂದ ಈ ಪ್ರಪಂಚವೆಲ್ಲವೂ ಮೋಹವನ್ನು (ಅವಿವೇಕವನ್ನು) ಹೊಂದಿದ್ದು ಆ ಗುಣಗಳಿಗಿಂತ ಭಿನ್ನವಾದ (ಅತೀತನಾದ) ನಾಶರಹಿತನಾದಂತಹ ನನ್ನನ್ನು ಅರ್ಥಮಾಡಿಕೊಳ್ಳದೆ ಇರುವುದು.

**ವ್ಯಾಖ್ಯೆ:** ಆಕಾಶವು ಮೇಘಗಳಿಂದ ದಟ್ಟವಾಗಿ ಕವಿಯಲ್ಪಟ್ಟಾಗ ಮೇಘಗಳಿಗೆ ಆಚೆ ಇರುವ ಸೂರ್ಯನನ್ನು ಜನರು ಹೇಗೆ ನೋಡಲಾರರೋ, ಹಾಗೆಯೇ ತ್ರಿಗುಣಗಳಿಗೆ ಅತೀತನಾಗಿರುವ ಪರಮಾತ್ಮನನ್ನು ತ್ರಿಗುಣಗಳ ಸ್ವಭಾವಗಳಿಗೆ, ವಿಕಾರಗಳಿಗೆ ಒಳಪಟ್ಟ ಜನರು ತಿಳಿಯದವರಾಗಿದ್ದಾರೆ. ಮತ್ತೆ ಅಂಜೂರದ ಒಳಗೆ ಇರುವ ಹುಳುಗಳಂತೆ ತ್ರಿಗುಣಾತ್ಮಕವಾದ ಮಾಯಾಗೋಲದಲ್ಲಿ ಜೀವಿಗಳು ಪರಿಭ್ರಮಿಸುತ್ತಿದ್ದಾರೆ. ತತ್ತ್ವ ವಿಚಾರಣವೆನ್ನುವ ಬಿರುಗಾಳಿಯಿಂದ ಮನುಜನು ಯಾವಾಗ ತ್ರಿಗುಣಾತ್ಮಕವಾದ ಆ ಮಾಯಾ ಮೇಘವನ್ನು ತೊಲಗಿಸುವನೋ ಆಗ ಸ್ವಸ್ವರೂಪವಾದ ಆತ್ಮ ನಿರಾವರಣವಾಗಿ ಪ್ರಕಾಶಿಸುವುದು. ಆತ್ಮ ಸಾಕ್ಷಾತ್ಕಾರ ಉಂಟಾಗುವುದು. ಈ ಶ್ಲೋಕದಲ್ಲಿ ಜೀವಿಯು, ಯಾವ ಪ್ರಕಾರವಾಗಿ ತ್ರಿಗುಣಾತ್ಮಕವಾದ ಮಾಯೆಯಿಂದ ಬಂಧಿಸಲ್ಪಟ್ಟಿರುವನೆನ್ನುವುದನ್ನು ತಿಳಿಸಲಾಗಿದೆ. ಮುಂದೆ ಬರುವ ಶ್ಲೋಕಗಳಲ್ಲಿ ಆ ಬಂಧವನ್ನು ಹೇಗೆ ತೊಲಗಿಸಿಕೊಳ್ಳಬಹುದು ಎನ್ನುವುದನ್ನು ಹೇಳಲಾಗಿದೆ. ಪ್ರತಿ ಮನುಜನು ಮೊದಲು ತಾನು ಮಾಯಾರೂಪವಾದ ಬಂಧನದಲ್ಲಿ ಸಿಕ್ಕಿಕೊಂಡಿರುವನೆಂದು ತಿಳಿಯುವುದು ಬಹಳ ಅವಶ್ಯಕ. ಏಕೆಂದರೆ ತಾನು ಬಂಧಿಸಲ್ಪಟ್ಟಿದ್ದೇನೇ ಎಂದು ತಿಳಿದುಕೊಂಡವನು ಮಾತ್ರ ವಿಮುಕ್ತಿಗಾಗಿ ಪ್ರಯತ್ನಿಸುವನು. **'ಸರ್ವಮಿದಂ ಜಗತ್'** ಎಂದು ಈ ಶ್ಲೋಕದಲ್ಲಿ ಹೇಳಿದ ಹಾಗೆ ಪ್ರಪಂಚದಲ್ಲಿಯ ಸಮಸ್ತ ಜೀವಿಗಳು (ಜೀವನ್ಮುಕ್ತರನ್ನು ಬಿಟ್ಟು) ಧನವಂತರು, ಬಲವಂತರು, ಸೌಂದರ್ಯ ವಂತರು, ಲೌಕಿಕ ವಿದ್ಯಾವಂತರು ಎಲ್ಲರೂ ಬಂಧನದಲ್ಲೇ ಇದ್ದಾರೆ. ಆ ಸತ್ಯವನ್ನು ತಿಳಿದು ಪ್ರತಿಯೊಬ್ಬರೂ ಬಂಧವಿಮುಕ್ತಿಗೆ ತಪ್ಪದೆ ಪ್ರಯತ್ನಿಸಬೇಕು. 'ತಮಸಸ್ತು ಪಾರೇ' ಎಂದ ಹಾಗೆ ಪರಮಾತ್ಮನಸುತ್ತ ತಮಸ್ಸೆನ್ನುವ (ಅಜ್ಞಾನದ) ತೆರೆಯಿದೆ. ಅವನನ್ನು ದರ್ಶಿಸದೆ ಸಂಸಾರ ದುಃಖ ಶಮನ ಹೊಂದುವುದಿಲ್ಲ. ಆದರೆ ಭಗವದ್ದರ್ಶನವಾಗಬೇಕಾದರೆ ಜೀವಿಗೂ ದೇವರಿಗೂ ಮಧ್ಯೆ ಇರುವ ತ್ರಿಗುಣಾತ್ಮಕವಾದ ತೆರೆಯನ್ನು ಭೇದಿಸಬೇಕು. ಭಕ್ತಿ ವೈರಾಗ್ಯಗಳಿಂದಲೂ ನಿಷ್ಕಾಮ ಕರ್ಮಾಚರಣೆಯಿಂದಲೂ ಇನ್ನೂ ಅನೇಕ ಬೇರೆಯ ಸಾಧನೆಗಳಿಂದಲೂ ಕ್ರಮೇಣ ರಜೋ ತಮೋಗುಣಗಳನ್ನು ಹೋಗಲಾಡಿಸಿಕೊಂಡು ಕೊನೆಯಲ್ಲಿ ಸತ್ತ್ವಗುಣವನ್ನೂ ದಾಟಿ ಕೇವಲ ಆತ್ಮಸ್ಥಿತಿಯಲ್ಲಿ ಸ್ಥಿರಹೊಂದಬೇಕು. ಅದನ್ನೇ ಮೋಕ್ಷವೆನ್ನುವರು.

ನನಗೆ ಭಗವಂತನು ಏಕೆ ಕಾಣಿಸುತ್ತಿಲ್ಲ? ಎಂದು ಕೆಲವರು ಪ್ರಶ್ನಿಸುವರು. ಅವರಿಗೆ ಈ ಶ್ಲೋಕದಲ್ಲಿ ಸಮಾಧಾನವಿದೆ. ತ್ರಿಗುಣಗಳಿಂದ ಮೋಹಿತರಾಗಿದ್ದಷ್ಟು ಕಾಲ ಜನರು ಪರಮಾತ್ಮನನ್ನು ತಿಳಿಯಲು ಸಾಧ್ಯವಿಲ್ಲ ಮತ್ತೆ ದುಃಖ ಅಂತ್ಯವಾಗುವುದಿಲ್ಲ. ನೇತ್ರಗಳು ಪೊರೆಯಿಂದ ಆವೃತವಾಗಿದ್ದಾಗ 'ನನಗೆ ವಸ್ತುಗಳು ಕಾಣಿಸುತ್ತಿಲ್ಲವಲ್ಲ' ಎನ್ನುವ ಪ್ರಶ್ನೆಯಂತೆಯೇ ಈ ಪ್ರಶ್ನೆಯೂ ಇದೆ. 'ಆಪರೇಷನ್' (ಶಸ್ತ್ರಚಿಕಿತ್ಸೆ) ಮಾಡಿ ಆ ಪೊರೆ ತೆಗೆದುಹಾಕಬೇಕು. ಆಗ ಪದಾರ್ಥಗಳು ಸ್ಪಷ್ಟವಾಗಿ ಗೋಚರಿಸುವುವು. ಹಾಗೆಯೇ ಪ್ರಾಪಂಚಿಕ ಭೋಗಗಳಿಗಾಗಿ ಪರದಾಡದೆ ಮೊಟ್ಟಮೊದಲು ತನ್ನ ಹೃದಯದಲ್ಲಿಯ ರಜೋತಮೋಗುಣಗಳನ್ನೂ ಅವುಗಳ ವಿಕಾರಗಳನ್ನೂ ಪುರುಷ ಪ್ರಯತ್ನದಿಂದ, ಭಕ್ತ್ಯಾದಿ ಸಾಧನೆಗಳಿಂದ ತೊಲಗಿಸಿಕೊಳ್ಳಲು ಪ್ರಯತ್ನಿಸಬೇಕು. ಭಗವದ್ದರ್ಶನಕ್ಕೆ ಇದೊಂದೇ ಮಾರ್ಗ.

ಪ್ರ : ಪರಮಾತ್ಮ ಎಂತಹವನು?

ಉ :ಅವ್ಯಯನು ಹಾಗು ನಾಶರಹಿತನು.

ಪ್ರ : ಆತನು ಎಲ್ಲಿರುವನು?

ಉ: ತ್ರಿಗುಣಗಳ ಆಚೆಯಿರುವನು. (ತ್ರಿಗುಣಗಳೆಂದರೆ ಸತ್ತ್ವರಜಸ್ತಮೋ ಗುಣಗಳು).

ಪ್ರ : ಜೀವಿಗಳು ಏಕೆ ಆತನನ್ನು ಅರ್ಥಮಾಡಿಕೊಳ್ಳುತ್ತಿಲ್ಲ?

ಉ: ಅವರು ತ್ರಿಗುಣಗಳಿಂದಾವೃತರಾಗಿರುವುದರಿಂದ ಅವುಗಳಿಂದ ಮೋಹಿತರಾಗಿ ಪರಮಾತ್ಮನನ್ನು ತಿಳಿದುಕೊಳ್ಳಲು ಅಶಕ್ತರಾಗಿದ್ದಾರೆ.

ಪ್ರ : ಆದ್ದರಿಂದ ಭಗವಂತನನ್ನು ತಿಳಿದುಕೊಳ್ಳುವ ಉಪಾಯವೇನು?

ಉ: ನಿಷ್ಕಾಮಕರ್ಮ ಹಾಗು ಭಕ್ತ್ಯಾದಿ ಸಾಧನೆಗಳಿಂದ ಆ ತ್ರಿಗುಣಗಳನ್ನು ದಾಟಿ ಹೋಗಬೇಕು. ಅದೇ ಉಪಾಯ.

**ಅ||** ತ್ರಿಗುಣಾತ್ಮಕವಾದ ಆ ಮಾಯಾ ಬಂಧದ ಸ್ವಭಾವವನ್ನು ತಿಳಿಸಿ ಅದನ್ನು ತೊಲಗಿಸುವ ಉಪಾಯವನ್ನು ಹೇಳಲಾಗುತ್ತಿದೆ-

**೧೪. ದೈವೀ ಹ್ಯೇಷಾ ಗುಣಮಯೀ ಮಮ ಮಯಾ ದುರತ್ಯಯಾ**
**ಮಾಮೇವ ಯೇ ಪ್ರಪದ್ಯಂತೇ ಮಾಯಾಮೇತಾಮ್ ತರಂತಿ ತೇ**

**ಅರ್ಥ:** ಹಿ=ಏಕೆಂದರೆ; ದೈವೀ=ದೈವ ಸಂಬಂಧವಾದ (ಅಲೌಕಿಕ ಸಾಮರ್ಥ್ಯವುಳ್ಳದ್ದು); ಗುಣಮಯೀ=ತ್ರಿಗುಣಾತ್ಮಕವಾದದ್ದು; ಏಷಾ=ಈ (ಹೇಳಲ್ಪಟ್ಟ); ಮಮಾ=ನನ್ನ; ಮಾಯಾ=ಮಾಯೆ(ಪ್ರಕೃತಿ); ದುರತ್ಯಯಾ= ದಾಟಲು ಕಷ್ಟಸಾಧ್ಯವಾದದ್ದು; ಮಾಂ ಏವ=ನನ್ನನ್ನೇ; ಯೇ=ಯಾರು; ಪ್ರಪದ್ಯಂತೇ=ಶರಣು ಹೊಂದುತ್ತಾರೋ; ತೇ=ಅವರು; ಏತಾಂ ಮಾಯಾಮ್= ಈ ಮಾಯೆಯನ್ನು; ತರಂತಿ=ದಾಟುತ್ತಿದ್ದಾರೆ.

**ತಾ||** ಏಕೆಂದರೆ, ದೈವ ಸಂಬಂಧವಾದ (ಅಲೌಕಿಕ ಸಾಮರ್ಥ್ಯವುಳ್ಳ) ತ್ರಿಗುಣಾತ್ಮಕವಾದ ಈ ನನ್ನ ಮಾಯೆ (ಪ್ರಕೃತಿ)ಯನ್ನು ದಾಟುವುದು ಕಷ್ಟ. (ಆದರೂ) ಯಾರು ನನ್ನನ್ನೇ ಶರಣು ಹೊಂದುತ್ತಾರೊ ಅವರು ಈ ಮಾಯೆಯನ್ನು ದಾಟುವರು.

**ವ್ಯಾಖ್ಯೆ:** ಭಗವಂತನನ್ನು ತಿಳಿದುಕೊಳ್ಳಲು ಜನರು ಏಕೆ ಅಸಮರ್ಥ ರಾಗಿದ್ದಾರೆ ಎನ್ನುವುದನ್ನು ಹಿಂದಿನ ಶ್ಲೋಕದಲ್ಲಿ ತಿಳಿಸಲಾಯಿತು. ಈ ಶ್ಲೋಕದಲ್ಲಿ ಭಗವಂತನನ್ನು ಹೊಂದಲು ಹಾಗು ಮಾಯೆಯನ್ನು ದಾಟಲು ಅನುಸರಿಸಬೇಕಾದ ಉಪಾಯವನ್ನು ಹೇಳಲಾಗುತ್ತಿದೆ. ಆದ್ದರಿಂದ ಮುಮುಕ್ಷುಗಳಿಗೆ ಈ ಶ್ಲೋಕವು ಬಹಳ ಮುಖ್ಯವಾದುದು. ಇದನ್ನು ಬಾಯಿಪಾಠ ಮಾಡಿ ನಿರಂತರ ಮನನ ಮಾಡಿಕೊಳ್ಳುತ್ತಿರಬೇಕು.

ದೇವರ ದರ್ಶನಕ್ಕೆ ಅಡ್ಡವಾಗಿ ಒಂದು ದೊಡ್ಡ ಅಡ್ಡಗೋಡೆಯಿದೆ. ಇದರಿಂದ ಆ ಪರಮಾತ್ಮನ ದರ್ಶನ ಕಷ್ಟಸಾಧ್ಯವಾಗಿದೆ. ಇದನ್ನೇ 'ಮಾಯೆ' ಎನ್ನುವರು. 'ನದಿ ದಾಟಿದರೆ ನಂದಿ ಸೇವೆ' ಎಂದ ಹಾಗೆ ಆ ಮಾಯೆಯನ್ನು ದಾಟಿದರೆ ಮಾತ್ರ ಪರಮಾತ್ಮನ ದರ್ಶನವಾಗುವುದು. ಆದರೆ ಅದನ್ನು ದಾಟುವುದು ಹೇಗೆ? ಆ ಪದ್ಧತಿಯನ್ನು ಈ ಶ್ಲೋಕದಲ್ಲಿ ಚೆನ್ನಾಗಿ ವಿವರಿಸಲಾಗಿದೆ. ಮಾಯೆಯನ್ನು ವರ್ಣಿಸುತ್ತಾ ಭಗವಂತನು ನಾಲ್ಕು ವಿಶೇಷಣಗಳನ್ನು ಉಪಯೋಗಿಸಿರುತ್ತಾನೆ. ಅವು ಯಾವುವೆಂದರೆ ೧) ದೈವ ಸಂಬಂಧವಾದುದು ಅಂದರೆ ಅಲೌಕಿಕವಾದದ್ದು, ಅಭೂತಪೂರ್ವ ಸಾಮರ್ಥ್ಯವನ್ನು ಹೊಂದಿರುವುದು ೨) ತ್ರಿಗುಣಾತ್ಮಕವಾದದ್ದು ೩) ಭಗ ವಂತನಿಗೆ ಅಧೀನವಾದದ್ದು ೪) ದಾಟಲು ಕಷ್ಟಸಾಧ್ಯವಾದುದು. ಈ ಮಾಯಾ ಲಕ್ಷಣಗಳನ್ನು ಕುರಿತು ಸ್ವಲ್ಪ ವಿಚಾರಿಸೋಣ.

೧) ಮಾಯೆಯನ್ನು ದೈವೀ (ದೈವ ಸಂಬಂಧವಾದುದು) ಎಂದು ವರ್ಣಿಸಿರುವುದರಿಂದ ಅದು ಸಾಮಾನ್ಯವಾದುದಲ್ಲವೆಂದು, ಭಗವತ್ಸಂ ಬಂಧವಾದುದೆಂದು, ಮಹತ್ತರ ಶಕ್ತಿ ಸಾಮರ್ಥ್ಯಗಳನ್ನು ಹೊಂದಿದ್ದು ಅಲೌಕಿಕವಾದದ್ದೆಂದು ಸ್ಪಷ್ಟವಾಗುತ್ತಿದೆ. ಇದನ್ನೇ ವೈಷ್ಣವೀ ಮಾಯೆ ಎನ್ನುವರು. ಅದು ಮಹಾಶಕ್ತಿವಂತವಾದದ್ದರಿಂದ ಮೇಧಾ ಸಂಪನ್ನರನ್ನು, ಬಲವಂತರನ್ನು, ರಾಜಾಧಿರಾಜರನ್ನು, ಇಂದ್ರ ಚಂದ್ರರನ್ನು ಅಜ್ಞಾನದಲ್ಲಿ, ಜನನ ಮರಣ ಪ್ರವಾಹದಲ್ಲಿ ಕೆಡವುತ್ತಿದೆ. ಜನರ ಲೌಕಿಕ ಗುಣಗಳು ಅದರ ಮುಂದೆ ಯಾವ ಕೆಲಸಕ್ಕೂ ಬಾರವು. ಅದು ದೈವ ಸಂಬಂಧವಾದದ್ದರಿಂದ ದೈವಿಕ ಉಪಾಯಗಳಿಗೆ ಮಾತ್ರ ಬಗ್ಗುವುದು.

೨) 'ಗುಣಮಯೀ' ಎಂದು ಹೇಳಿರುವುದರಿಂದ ಈ ಮಾಯೆ ತ್ರಿಗುಣಾತ್ಮಕವಾದದ್ದೆಂದೂ, ಅಂದರೆ ಸತ್ವರಜಸ್ತಮೋಗುಣಗಳನ್ನೇ ಸ್ವರೂಪವಾಗಿ ಹೊಂದಿರುವುದೆಂದು ತಿಳಿದುಬರುತ್ತದೆ. ಮಾಯೆಗೆ (ಪ್ರಕೃತಿ) ಬೇರೆ ಆಕಾರವಿಲ್ಲ. ತ್ರಿಗುಣಗಳೇ ಅದರ ಆಕಾರ. ಆದ್ದರಿಂದಲೇ ಗುಣಮಯೀ ಎಂದು ಹೇಳಲ್ಪಟ್ಟಿದೆ. ಆ ತ್ರಿಗುಣಗಳಲ್ಲಿ ಒಂದೊಂದು ಗುಣವನ್ನು ಆರಿಸಿ ತೆಗೆದು ಹಾಕಿದರೆ ಇನ್ನು ಮಾಯೆ ಅಲ್ಲಿ ಉಳಿದಿರುವುದಿಲ್ಲ. ಈ ಗುಣಗಳಿಂದ ಮೋಹಿತನಾಗಿ (ಭ್ರಮಿಸಲ್ಪಟ್ಟು) ಮನುಜನು ತನ್ನನ್ನು ತಿಳಿದುಕೊಳ್ಳಲಾರದಂತವ ನಾಗಿದ್ದಾನೆ ಎಂದು ಹಿಂದಿನ ಶ್ಲೋಕದಲ್ಲಿ ಭಗವಂತನು ತಿಳಿಸಿರುವುದು ಗಮನಾರ್ಹ.

೩) 'ಮಮ'(ನನ್ನ) 'ಮಾಯಾ' ಎಂದು ಹೇಳಿರುವುದರಿಂದ ಈ ಮಾಯೆ ಭಗವಂತನ ಸ್ವಾಧೀನದಲ್ಲಿದೆಯೆಂದು ಸ್ಪಷ್ಟವಾಗುತ್ತದೆ. ಮನೆಯಲ್ಲಿ ಸಾಕಿದ ಮೃಗಗಳು ಯಜಮಾನನು ಹೇಳಿದಂತೆ ಕೇಳುವ ಹಾಗೆ ಮಾಯೆ ಪರಮಾತ್ಮನಿಗೆ ಒಳಗಾಗಿದೆ. **('ಮಾಯಿ ನಂತು ಮಹೇಶ್ವರಂ')**. ಈ ಮಾಯೆ ಸಾಮಾನ್ಯ ಜನರಿಗೆ ಅನೇಕ ಕಿರುಕುಳಗಳನ್ನು ಕೊಡುವುದಾದರೂ ದೇವರ ಬಳಿ ಅಣಗಿಕೊಂಡೇ ಇರುವುದು (ಯಜಮಾನನ ಮುಂದೆ ಇರುವ ಸೇವಕನಂತೆ). ಮಾಯೆಯ ಜಾಲಕ್ಕೆ ಸಿಕ್ಕಿದವರಿಗೆ ಅದನ್ನು ಕಂಡರೆ ಬಹಳ ಪ್ರೀತಿ. ಮಾಯೆಯನ್ನು ಸ್ವಾಧೀನಪಡಿಸಿಕೊಂಡ ಪರಮಾತ್ಮನಿಗಾಗಲಿ ಅದನ್ನು ಜಯಿಸಿದ ಜ್ಞಾನಿಗಳಿಗಾಗಲಿ ಅದು ಅಲ್ಪವಾಗಿ ತೋರುವುದು **'ಯಾ ಮಾ ಸಾಮಾಯಾ'** (ಯಾವುದು ಇಲ್ಲವೋ ಅದೇ ಮಾಯೆ) ಎಂದ ಹಾಗೆ ಅದರ ರಹಸ್ಯವನ್ನು ತಿಳಿದವರಿಗೆ ಅದು ಇಲ್ಲದಿರುವುದೇ ಆಗಿರುವುದು. ಭಯಂಕರವಾದ ಮಹಾಸಮುದ್ರ ಗರುಡನಿಗೆ ಗೋಷ್ಪದ ಜಲದಂತೆ ತೋಚುವುದು. ಚಿಕ್ಕ ಸೊಳ್ಳೆಗೆ ಗೋಷ್ಪದ ಜಲ ಮಹಾಸಾಗರವಾಗಿ ತೋರುವುದು. ಈ ಪ್ರಕಾರವಾಗಿ ಮಹಾಶಕ್ತಿವಂತವಾದ ಮಾಯೆ (ಪ್ರಕೃತಿ) ಜನರಿಗೆ ದಾಟಲಸಾಧ್ಯವಾದಂತೆ ಕಂಡರೂ, ಪರಮಾತ್ಮನಿಗೆ ಅದು ಸ್ವಾಧೀನವಾಗಿದ್ದು, ಆತನಿಗೆ ಒಂದು ಉಪಕರಣವಾಗಿ ವರ್ತಿಸುತ್ತದೆ. ಆದ್ದರಿಂದಲೇ 'ಮಮ ಮಾಯಾ'- ನನ್ನ ಒಂದು ಮಾಯೆ, 'ನನಗೆ ಒಳಗಾಗಿರುವ ಮಾಯೆ' ಎಂದು ಭಗವಂತನು ಹೇಳಲು ಕಾರಣವಾಗಿದೆ.

೪) 'ದುರತ್ಯಯಾ'- 'ದಾಟಲು ಕಷ್ಟಸಾಧ್ಯವಾದದ್ದು'. ಮಾಯೆಯನ್ನು ದಾಟುವುದು ಕಷ್ಟಸಾಧ್ಯವಾಗಲಿ ಅಸಾಧ್ಯವಲ್ಲ. ಮನಸ್ಸನ್ನು ಜಯಿಸದ ಇಂದ್ರಿಯದಾಸರು, ವಿಷಯಾಪೇಕ್ಷಿಗಳು ಮಾಯೆಯನ್ನು ದಾಟಲಾರರು. ಆತ್ಮಜ್ಞಾನ ಪರಾಯಣರು, ದೈವತತ್ಪರರು, ಭಕ್ತಿ ವೈರಾಗ್ಯಾದಿ ಸಾಧಕರು ದಾಟಬಲ್ಲರು. ಈ ವಿಷಯವನ್ನು ಎರಡನೆಯ ಪಾದದಲ್ಲಿ ಭಗವಂತನು ಹೇಳಿರುವನು.

ಈ ಪ್ರಕಾರವಾಗಿ ಮಾಯೆಯು ಭಯಂಕರ ಸ್ವರೂಪದ್ದೆಂದು ತಿಳಿದು, ಅಷ್ಟು ಮಾತ್ರದಿಂದ ಯಾರೂ ಹೆದರಬೇಕಾದ ಕೆಲಸವಿಲ್ಲ. ಸಮುದ್ರವು ಬಹಳ ವಿಶಾಲವಾದದ್ದಾದರೂ, ದುಸ್ತರವಾದದ್ದಾದರೂ, ಒಂದು ಚಿಕ್ಕ ದೋಣಿಯಿಂದ ಅದನ್ನು ಸುಲಭವಾಗಿ ದಾಟಬಹುದು. ಹಾಗೆಯೇ ಭಯಂಕರವಾದ ಈ ಮಾಯಾ ಸಮುದ್ರವನ್ನು ದಾಟಲು ಭಗವಂತನು ಈ ಶ್ಲೋಕದ ಎರಡನೆಯ ಪಾದದಲ್ಲಿ ಒಂದು ನಾವೆಯನ್ನು ಒದಗಿಸಿದ್ದಾನೆ. ಅದೇ ಭಕ್ತಿ, ಭಗವದಾಶ್ರಯ, ಭಗವತ್ ಶರಣಾಗತಿ ಹಾಗು ಆತ್ಮಚಿಂತನೆ. **'ನನ್ನನ್ನು ಶರಣು ಹೊಂದುವವರು ಈ ಭಯಂಕರವಾದ ಮಾಯೆಯನ್ನು ದಾಟಬಲ್ಲರು'** ಎಂದು ಪರಮಾತ್ಮನು ಕರುಣೆಯಿಂದ ಅಭಯವಿತ್ತನು.

ವಿಶ್ವೇಶ್ವರನ ಪಾದಾಂಭುಜಗಳೆನ್ನುವ ದೀರ್ಘ ನೌಕೆಯಿಂದ ಅಪಾರ ಸಂಸಾರ ಸಮುದ್ರವನ್ನು ದಾಟಬಹುದೆಂದು ಶ್ರೀ ಶಂಕರಾಚಾರ್ಯರು ತಿಳಿಸಿದ್ದಾರೆ.* ಅದಿಲ್ಲದಿದ್ದರೆ ಅದನ್ನು ದಾಟುವುದು ಅಸಾಧ್ಯವೇ ಆಗುವುದು. ಬೇರೆ ಯಾವ ಉಪಾಯಗಳು ಅಲ್ಲಿ ಕೆಲಸಕ್ಕೆ ಬರುವುದಿಲ್ಲ. ಭಗವತ್ ಶರಣಾಗತಿಯೇ ಏಕೈಕ ಮಾರ್ಗ.

ಮಾಯೆಯನ್ನು ಜಯಿಸಬೇಕೆಂದರೆ, ಇಲ್ಲವೆ ದಾಟಬೇಕೆಂದರೆ ಅದನ್ನು ಸ್ವಾಧೀನಪಡಿಸಿಕೊಂಡವನ ಪಾದಗಳನ್ನು ಆಶ್ರಯಿಸಬೇಕು. ಅದನ್ನು ವಶಪಡಿಸಿಕೊಂಡವನು ಸಾಕ್ಷಾತ್ ಪರಮಾತ್ಮನೇ. ಆದ್ದರಿಂದ ಅವನನ್ನೇ ಶರಣು ಹೊಂದಬೇಕು. ಕೆಲವು ಮನೆಗಳ ಮುಂದೆ ನಾಯಿಯನ್ನು ಸಾಕಿರುತ್ತಾರೆ. ಅದು ಯಾರನ್ನೂ ಒಳಗೆ ಹೋಗಬಿಡದು. ಆದರೆ ಯಜಮಾನನನ್ನು ಒಳಗೆ ಹಾಕಿಕೊಂಡರೆ ಮಾತ್ರ ಅದು ಬಗ್ಗುವುದು. ಹಾಗೆಯೇ ಆ ಮಾಯೆ ಭಗವಂತನನ್ನು ಆಶ್ರಯಿಸಿದವನಿಗೆ ದಾರಿ ಬಿಡುವುದು. ಜೀವನ್ಮುಕ್ತರಾದ ಮಹನೀಯರು ಸಹ ಭಗವದಾಶ್ರಯದಿಂದಲೇ ಮಾಯೆಯನ್ನು ದಾಟಿರುವುದರಿಂದ ಅವರ ಸೇವೆ ಮುಮುಕ್ಷುಗಳಿಗೆ ಉಪಯೋಗವಾಗುವುದು.

'ತರಂತಿತೇ' (ನನ್ನನ್ನು ಆಶ್ರಯಿಸಿದವರು ತಪ್ಪದೆ ಮಾಯೆಯನ್ನು ದಾಟಬಲ್ಲರು)- ಎಂದು ಭಗವಂತನು ಸ್ಪಷ್ಟವಾಗಿ ತಿಳಿಸಿರುವುದರಿಂದ ಇನ್ನು ಈ ವಿಷಯದಲ್ಲಿ ಸಂಕೋಚ ಕೆಲಸಕ್ಕೆ ಬರುವುದಿಲ್ಲ. ಪ್ರಾಪಂಚಿಕ ವಸ್ತುಗಳನ್ನು, ಪ್ರಾಪಂಚಿಕ ಮನುಜರನ್ನು ಶರಣು ಹೊಂದುವುದರಿಂದ ಪಾರಮಾರ್ಥ ಲಕ್ಷ್ಯ ಯಾವಾಗಲೂ ಸಿದ್ಧಿಸುವುದಿಲ್ಲ. ದೈವವನ್ನು, ದೈವಭಕ್ತರನ್ನು ಆಶ್ರಯಿಸಬೇಕು. 'ಮಾಮೇವ'(ನನ್ನನ್ನೇ) ಎನ್ನುವಲ್ಲಿ 'ಏವ' ಪದವನ್ನು ಪ್ರಯೋಗಿಸಿರುವುದರಿಂದ ಇತರ ಬೇರೆ ಯಾವುದನ್ನೂ ಆಶ್ರಯಿಸದೆ ಪರಮಾತ್ಮನೊಬ್ಬನನ್ನೇ ಆಶ್ರಯಿಸಬೇಕೆಂದು ತಿಳಿಯುತ್ತದೆ. ಆದ್ದರಿಂದ ಅವರವರ ಮುಕ್ತಿ ಅವರವರ ಕೈಯಲ್ಲಿದೆ, ದೈವವನ್ನಾಚರಿಸಿದರೆ ಮುಕ್ತಿ ಹೊಂದುವರು, ವಿಷಯವನ್ನು ಆಚರಿಸಿದರೆ ಪತನ ಹೊಂದುವರು. ಆದ್ದರಿಂದ ನಶ್ವರ ಪ್ರಾಪಂಚಿಕ ವಸ್ತುಗಳ ಮೇಲಿರುವ ದೃಷ್ಟಿಯನ್ನು ಅಲ್ಲಿಂದ ಮರಳಿಸಿ ಭಗವತ್ ಶರಣಾಗತಿಯ ಮೇಲೆ ಸಂಲಗ್ನಿಸಬೇಕು. ಅಂತಹವರ ಜನ್ಮ ಸಾರ್ಥಕವಾಗುವುದು.

(ಭಗವಂತನನ್ನು ಶರಣು ಹೊಂದುವುದೆಂದರೆ ಅವನ ಮೇಲೆ ಅನನ್ಯ ಭಕ್ತಿ ಹೊಂದಿರುವುದು, ಭಗವತ್ಕಾರ್ಯಗಳನ್ನು ಮಾಡುವುದು, ಆತ್ಮಚಿಂತನೆ, ಆತ್ಮಧ್ಯಾನ ಮುಂತಾದ ದೈವಿಕ ಗುಣಗಳು).

ಪ್ರ : ಮಾಯೆ ಎಂತಹದು?

ಉ: ೧) ದೈವಿಕವಾದುದು (ಅಲೌಕಿಕ ಸಾಮರ್ಥ್ಯವುಳ್ಳದ್ದು). ೨) ತ್ರಿಗುಣಾತ್ಮಕವಾದುದು ೩) ಭಗವಂತನ ಅಧೀನವಾಗಿರುವುದು ೪) ದಾಟಲು ಕಷ್ಟಸಾಧ್ಯವಾದುದು.

ಪ್ರ : ಆದರೆ ಇಂತಹ ಭಯಂಕರವಾದ ಮಾಯೆಯನ್ನು ದಾಟುವುದು ಹೇಗೆ?

ಉ: ಭಗವಂತನನ್ನು ಶರಣು ಹೊಂದಿದವರು, ಅವನನ್ನೇ ಆಶ್ರಯಿಸಿಕೊಂಡವರು, ಆ ಮಾಯಾ ಸಮುದ್ರವನ್ನು ಸುಲಭವಾಗಿ ದಾಟಬಲ್ಲರು. ಬೇರೆಯವರು ದಾಟಲಾರರು.

**ಅ||** ಆದರೂ ಕೆಲವರು ಭಗವಂತನನ್ನು ಏಕೆ ಶರಣು ಹೊಂದುತ್ತಿಲ್ಲ ವೆನ್ನುವುದಕ್ಕೆ ಕಾರಣವನ್ನು ಕೊಡಲಾಗುತ್ತಿದೆ-

**೧೫. ನ ಮಾಂ ದುಷ್ಕೃತಿನೋ ಮೂಢಾಃ ಪ್ರಪದ್ಯಂತೇ ನರಾಧಮಾಃ**
**ಮಾಯಯಾಽಪಹೃತಜ್ಞಾನಾ ಆಸುರಂ ಭಾವಮಾಶ್ರಿತಾಃ**

**ಅರ್ಥ:** ದುಷ್ಕೃತಿನಃ=ಪಾಪ ಮಾಡುವವರು; ಮೂಢಾಃ=ಬುದ್ಧಿಹೀನರು; ಮಾಯಯಾ=ದಯೆಯಿಂದ; ಅಪಹೃತಜ್ಞಾನಾಃ=ಅಪಹರಿಸಲ್ಪಟ್ಟ ಜ್ಞಾನವುಳ್ಳವರು; ಆಸುರಮ್=ರಾಕ್ಷಸ ಸಂಬಂಧವಾದ; ಭಾವಂ=ಸ್ವಭಾವವನ್ನು; ಆಶ್ರಿತಾಃ=ಆಶ್ರಯಿಸಿದವರು (ಆಗಿ); ನರಾಧಮಾಃ=ಮನುಜಾಧಮರು (ನೀಚ ಜನರು); ಮಾಂ=ನನ್ನನ್ನು; ನ ಪ್ರಪದ್ಯಂತೇ=ಹೊಂದುವುದಿಲ್ಲ (ಆಶ್ರಯಿಸುವುದಿಲ್ಲ).

**ತಾ||** ಪಾಪಗಳನ್ನು ಮಾಡುವವರು, ಮೂಢರು, ಮಾಯೆಯಿಂದ ಅಪಹರಿಸಲ್ಪಟ್ಟ ಜ್ಞಾನವುಳ್ಳವರು, ರಾಕ್ಷಸ ಸ್ವಭಾವವನ್ನು (ಅಸುರ ಗುಣಗಳನ್ನು) ಆಶ್ರಯಿಸುವ ಮನುಜಾಧಮರು ನನ್ನನ್ನು ಹೊಂದುವುದಿಲ್ಲ (ಆಶ್ರಯಿಸುವುದಿಲ್ಲ).

**ವ್ಯಾಖ್ಯೆ:** ಭಗವಂತನನ್ನು ಶರಣು ಹೊಂದಿದವರು ಮಾಯೆಯನ್ನು ದಾಟಬಲ್ಲರೆಂದು ಹಿಂದಿನ ಶ್ಲೋಕದಲ್ಲಿ ಹೇಳಲಾಯಿತು. ಆದರೆ ಎಲ್ಲರೂ ಭಗವಂತನನ್ನು ಶರಣು ಹೊಂದುವುದಿಲ್ಲ. ಪಾಪಿಗಳು, ಮೂಢರು, ಮಾಯೆಗೆ ಅಧೀನವಾಗಿರುವ ಅವಿವೇಕಿಗಳು, ಅಸುರ ಸ್ವಭಾವವನ್ನು ಆಶ್ರಯಿಸಿದ ಅಧಮರನ್ನು ಬಿಟ್ಟು ಬೇರೆಯವರು ಮಾತ್ರ ಆಶ್ರಯಿಸುವರು ಎಂದು ಇಲ್ಲಿ ಹೇಳಲಾಗಿದೆ. ಮೇಲೆ ತಿಳಿಸಿದ ಪಾಪಾದಿ ದೋಷಗಳುಳ್ಳವರು ಮಾಯೆಯನ್ನು ದಾಟಲಾಗದೆ ಸಂಸಾರ ಸಮುದ್ರದಲ್ಲೇ ಪರದಾಡುತ್ತಿದ್ದಾರೆ. ಅವರು ಭಗವಂತನನ್ನು ಹೊಂದುವುದಿಲ್ಲ. 'ಮಾಯೆ' ಇಲ್ಲವೆ ಅಜ್ಞಾನವೆನ್ನುವುದು ಒಬ್ಬ ದೊಡ್ಡ ಕಳ್ಳನಂತೆ. ಅದನ್ನು ಹೃದಯದಲ್ಲಿ ಪ್ರವೇಶಿಸಲು ಬಿಡಬಾರದು. ಒಂದು ವೇಳೆ ಬಿಟ್ಟರೆ, ಅದು ನಮ್ಮ ಸರ್ವಸ್ವವನ್ನು, ಜ್ಞಾನವನ್ನು, ಪ್ರಜ್ಞೆಯನ್ನು, ವಿವೇಕವನ್ನು ಹರಿಸಿಹಾಕುವುದು. ಆದ್ದರಿಂದಲೇ **'ಮಾಯಯಾಽಪಹೃತ ಜ್ಞಾನಾಃ'** ಎಂದು ಹೇಳಲ್ಪಟ್ಟಿದೆ. ಅದು ಒಳಗೆ ಪ್ರವೇಶಿಸಿದಲ್ಲಿ ನರನನ್ನು ನರಾಧಮನನ್ನಾಗಿ ಮಾಡುವುದು. ದೇವತೆಯನ್ನು ದಾನವನನ್ನಾಗಿ ಮಾಡುವುದು. ವಿಜ್ಞನನ್ನು 'ಮೂಢ'ನನ್ನಾಗಿ ಮಾಡುವುದು. 'ಮಾಯೆ' ಅಂದರೆ ಏನು? ಅನೇಕ ಪಾಪ ವಾಸನೆಗಳು, ಕಾಮಕ್ರೋಧಾದಿಗಳು, ರಾಗದ್ವೇಷಾದಿಗಳು, ವಿಷಯ ಸಂಸ್ಕಾರಗಳು ಮುಂತಾದುವು ಎಲ್ಲಾ ಸೇರಿ 'ಮಾಯೆ'ಯಾಗಿರುವುದು. ಆದ್ದರಿಂದ ವಿವೇಕ ವೈರಾಗ್ಯಗಳಿಂದ ಭಗವದ್ಭಕ್ತಿ, ಭಗವದಾಶ್ರಯಗಳ ಸಹಾಯದಿಂದ ಆ ಮಾಯೆಯೆನ್ನುವ ಕಳ್ಳನನ್ನು ಹೃದಯ ಗುಹೆಯಿಂದ ತೊಲಗಿಸಬೇಕು. ಹಾಗೆ ಮಾಡದಿದ್ದಲ್ಲಿ ಈ ಶ್ಲೋಕದಲ್ಲಿ ತಿಳಿಸಿದ ಹಾಗೆ ಮಾಯೆಯ ಪ್ರಭಾವದಿಂದ ಮನುಜನು ಮೂಢನಾಗಿ, ಪಾಪಿಯಾಗಿ, ನರಾಧಮನಾಗಿ, ಅಜ್ಞಾನಿಯಾಗಿ, ರಾಕ್ಷಸನಾಗಿ ಪರಿಣಮಿಸುವ ಪರಿಸ್ಥಿತಿ

---

* **ಅಪಾರ ಸಂಸಾರ ಸಮುದ್ರಮಧ್ಯೇ ಸಮ್ಮಜ್ಜತೋ ಮೇ ಶರಣಂ ಕಿಮಸ್ತಿ। ಗುರೋ ಕೃಪಾಳೋ ಕೃಪಯಾ ವದೈತ ದ್ವಿಶ್ವೇಶ ಪಾದಾಂಭುಜದೀರ್ಘನೌಕಾ (ಶ್ರೀಶಂಕರಾಚಾರ್ಯರು)**

**ಶಿಷ್ಯ:** ದಯಾಮಯಾ! ಅಪಾರವಾದ ಈ ಸಂಸಾರ ಸಮುದ್ರದಲ್ಲಿ ಮುಳುಗುತ್ತಿರುವ ನನಗೆ ಶರಣ್ಯವೇನೋ ತಿಳಿಸುವುದು?

**ಗುರು:** ಭಗವಂತನ ಪಾದಪದ್ಮಗಳೆನ್ನುವ ವಿಶಾಲವಾದ ನೌಕೆಯನ್ನು ಆಶ್ರಯಿಸು. ಮುಕ್ತಿ ಹೊಂದುವೆ.

ಏರ್ಪಾಡಾಗಬಲ್ಲದು.

ಪ್ರ : ಭಗವಂತನನ್ನು ಯಾರು ಆಶ್ರಯಿಸುವುದಿಲ್ಲ?

ಉ : ಪಾಪಿಗಳು ೨) ಮೂಢರು ೩) ನರಾಧಮರು ೪) ಮಾಯೆಯಿಂದ ಅಪಹರಿಸಲ್ಪಟ್ಟ ಅವಿವೇಕಿಗಳು ೫) ಅಸುರ ಸ್ವಭಾವವನ್ನು ಆಶ್ರಯಿಸುವವರು. (ತತ್ಫಲಿತವಾಗಿ ಅವರು ಸಂಸಾರ ದುಃಖ ಸಮುದ್ರದಲ್ಲಿ ಮುಳುಗುತ್ತಿದ್ದಾರೆ).

ಪ್ರ : ಮನುಜನ ಜ್ಞಾನ(ವಿವೇಕ)ವನ್ನು ಅಪಹರಿಸುವ ಕಳ್ಳನು ಯಾರು?

ಉ : ಮಾಯೆ.

**ಅ||** ಇನ್ನು ಎಂಥವರು ಭಗವಂತನನ್ನು ಭಜಿಸುವರೋ ತಿಳಿಸಲಾಗುತ್ತಿದೆ.

**೧೬. ಚತುರ್ವಿಧಾ ಭಜಂತೇ ಮಾಂ ಜನಾಸ್ಸುಕೃತಿನೋಽರ್ಜುನ**
**ಆರ್ತೋ ಜಿಜ್ಞಾಸುರರ್ಥಾರ್ಥೀ ಜ್ಞಾನೀ ಚ ಭರತರ್ಷಭ**

**ಅರ್ಥ:** ಭರತರ್ಷಭ=ಭರತವಂಶ ಶ್ರೇಷ್ಠನಾದ ಅರ್ಜುನಾ! ಆರ್ತಃ=ಆಪತ್ತಿನಲ್ಲಿರುವವರು; ಜಿಜ್ಞಾಸುಃ=(ಭಗವಂತನನ್ನು) ತಿಳಿಯಲು ಕಾತುರರಾಗಿರುವವರು; ಅರ್ಥಾರ್ಥಿ=ಧನ(ಸಂಪತ್ತನ್ನು)ವನ್ನು ಅಭಿಲಾಷಿಸುವರು; ಜ್ಞಾನೀ ಚ=(ಆತ್ಮ) ಜ್ಞಾನವುಳ್ಳವರು (ಆದ); ಚತುರ್ವಿಧಾಃ=ನಾಲ್ಕು ವಿಧಗಳಾದ; ಸುಕೃತಿನಃ=ಪುಣ್ಯಾತ್ಮರಾದ; ಜನಾಃ=ಜನರು; ಮಾಂ=ನನ್ನನ್ನು; ಭಜಂತೇ=ಸೇವಿಸುತ್ತಿದ್ದಾರೆ(ಭಜಿಸುತ್ತಿದ್ದಾರೆ).

**ತಾ||** ಭರತವಂಶ ಶ್ರೇಷ್ಠನಾದ ಓ ಅರ್ಜುನಾ! ಆಪತ್ತಿನಲ್ಲಿರುವವರು, (ಭಗವಂತನನ್ನು) ತಿಳಿದುಕೊಳ್ಳಲು ಕಾತುರರಾಗಿರುವವರು; ಧನವನ್ನು (ಸಂಪತ್ತನ್ನು) ಅಭಿಲಾಷಿಸುವವರು, (ಆತ್ಮ) ಜ್ಞಾನವುಳ್ಳವರು ಈ ನಾಲ್ಕು ವಿಧಗಳಾಗಿರುವ ಪುಣ್ಯಾತ್ಮರು ನನ್ನನ್ನು ಸೇವಿಸುತ್ತಾರೆ (ಭಜಿಸುತ್ತಾರೆ).

**ವ್ಯಾಖ್ಯೆ:** ಭಗವಂತನನ್ನು ಸೇವಿಸುವವರ ಬಗ್ಗೆ ಈಗಾಗಲೇ ಹೇಳಲಾಗಿದೆ. ಇಲ್ಲಿ ಅವನನ್ನು ಸೇವಿಸುವವರ ವಿವರಣೆಯಿದೆ. ೧) ಆರ್ತನು ೨) ಜಿಜ್ಞಾಸು ೩) ಧನಾರ್ಥಿ ೪) ಜ್ಞಾನಿ - ಈ ನಾಲ್ಕು ವಿಧಗಳ ಜನರು ಪರಮಾತ್ಮನನ್ನು ಆಶ್ರಯಿಸುವರು. ಇವರೆಲ್ಲರೂ ಯಾವುದೋ ಒಂದು ವಿಧದಲ್ಲಿ ಭಗವಂತನನ್ನು ಸ್ಮರಿಸುತ್ತಿದ್ದಾರೆ. ಎಲ್ಲರನ್ನೂ ಪುಣ್ಯಾತ್ಮರೇ ಎಂದು ಪ್ರಶಂಸಿಸಲಾಗಿದೆ. ಆದರೆ ಯಾವ ಕಾರಣದಿಂದ ಪ್ರೇರಿತರಾಗಿ ಅವರು ಪರಮಾತ್ಮನನ್ನು ಸೇವಿಸುತ್ತಿದ್ದಾರೋ ಆ ತಾರತಮ್ಯ ಮಾತ್ರ ಅವರಲ್ಲಿ ಭೇದವನ್ನು ಸೂಚಿಸುತ್ತದೆ.

ಅದರಲ್ಲಿ ಮೊದಲನೆಯವನು ಆರ್ತನು. ಏನಾದರೂ ಆಪತ್ತು ಬಂದಾಗ ಭಗವಂತನನ್ನು ಸ್ಮರಿಸುವವನು ಅಥವ ಪ್ರಾರ್ಥಿಸುವವನು. ಇವರಿಗೆ ರೋಗ ಬಾಧೆಗಳುಂಟಾದಾಗ, ಚೋರ ವ್ಯಾಘ್ರಾದಿಗಳಿಂದ ಅಹಿತ ಸಂಭವಿಸಿದಾಗ, ಬೇರೆ ಇತರ ಕಷ್ಟಗಳು ಸಂಭವಿಸಿದಾಗ ಸರ್ವೇಶ್ವರನ ಜ್ಞಾಪಕ ಬರುವುದು. ಅಂತಹ ಆಪತ್ಸಮಯದಲ್ಲಿ (ವೆಂಕಟೇಶ್ವರನನ್ನಾಗಲಿ, ಬೇರೆ ದೇವರನ್ನಾಗಲಿ) ಆತನು ಸ್ಮರಿಸುವನು. ಈ ತರಗತಿಗೆ ಸೇರಿದವರು ಬಹಳ ಮಂದಿಯಿದ್ದಾರೆ. ಕಷ್ಟ ಬಂದಾಗ ದೇವರಿಗೆ ಕೈ ಮುಗಿಯುವವರು, ಮುಡುಪು ಕಟ್ಟುವವರು ಮುಂತಾದವರು ಈ ತರಗತಿಗೆ ಸೇರಿದವರೇ. ಕಾರಣ ಏನೇ ಆಗಿರಲಿ ಭಗವಂತನನ್ನು ಸ್ಮರಿಸುತ್ತಾರಾದ್ದರಿಂದ ಅವರನ್ನು ಪುಣ್ಯಾತ್ಮರೆಂದೇ ಕರೆಯಲಾಗಿದೆ.

ಎರಡನೆಯವನು ಜಿಜ್ಞಾಸು. ಭಗವತ್ತತ್ವವೆಂತಹುದೋ ತಿಳಿದುಕೊಳ್ಳಬೇಕೆನ್ನುವವನು. ಪ್ರಪಂಚದಲ್ಲಿ ಕೋಟಿಗಟ್ಟಲೇ ಜನರು ಇದ್ದರೂ ಇಂತಹ ದೈವಜಿಜ್ಞಾಸೆ ಹೊಂದಿರುವವರು ಬಹಳ ವಿರಳ. ಕಣ್ಣಿಗೆ ಕಾಣಿಸುವ ದೃಶ್ಯ ಪದಾರ್ಥಗಳನ್ನು ನೋಡುವ, ಹೊಂದುವ ಜಿಜ್ಞಾಸೆಯನ್ನೇ ಹೆಚ್ಚು ಮಂದಿ ಹೊಂದಿದ್ದಾರೆ. ಮತ್ತೆ ಅವುಗಳನ್ನು ಕುರಿತ ಅನ್ವೇಷಣೆ (Research), ವಿಚಾರಣೆ, ಸಂಪಾದನೆಗಳಲ್ಲೇ ಕಾಲಕಳೆಯುತ್ತಿರುವರು. ದೇವರನ್ನು ಕುರಿತ ವಿಚಾರದಲ್ಲಿ ಅವರಿಗೆ ಅಲಕ್ಷ್ಯ. ದೇವರು ಎನ್ನುವವನೊಬ್ಬನಿದ್ದಾನೆ ಎನ್ನುವುದನ್ನೂ ಅವರು ನಂಬುವುದಿಲ್ಲ. ಆದ್ದರಿಂದ ದೈವ ಜಿಜ್ಞಾಸೆಯುಳ್ಳವರು ಪುಣ್ಯಾತ್ಮರೇ ಹೌದು. ಅವರು ಆಧ್ಯಾತ್ಮಕ್ಷೇತ್ರದಲ್ಲಿ ಪಾದಾರ್ಪಣೆ ಮಾಡಿದವರು. ಇನ್ನು ಕ್ರಮಕ್ರಮವಾಗಿ ಅವರು ಸಾಧನೆಗಳಿಂದ ಉನ್ನತಿ ಹೊಂದುವರು. **'ಜಿಜ್ಞಾಸುರಪಿ ಯೋಗಸ್ಯ ಶಬ್ದ ಬ್ರಹ್ಮಾತಿ ವರ್ತತೇ'**- ದೈವಜಿಜ್ಞಾಸೆಯುಳ್ಳವನು ಶಬ್ದ ಬ್ರಹ್ಮವನ್ನು ಅಂದರೆ ಶಾಸ್ತ್ರೋಕ್ತ ಕರ್ಮಾನುಷ್ಠಾನ ಫಲವನ್ನು ಅತಿಕ್ರಮಿಸಿ ಹೋಗುತ್ತಿದ್ದಾನೆ ಎಂದು ಗೀತಾಚಾರ್ಯನು ಈಗಾಗಲೇ ಹೇಳಿರುತ್ತಾನೆ. ಅಂತಹ ಜಿಜ್ಞಾಸೆ ಅನೇಕ ಜನ್ಮಗಳ ಸುಕೃತಿಯಿಂದ ಜೀವಿಯಲ್ಲಿ ಉದಯಿಸುತ್ತದೆ.

ಮೂರನೆಯವನು 'ಅರ್ಥಾರ್ಥಿ' ಅಂದರೆ ಧನಕ್ಕೆ, ಸಂಪತ್ತಿಗೆ, ಐಶ್ವರ್ಯಕ್ಕೆ ಮಾತ್ರ ಭಗವಂತನನ್ನು ಭಜಿಸುವವನು. ಆತನ ಉದ್ದೇಶ ದೈವಾನುಗ್ರಹದಿಂದ ಪ್ರಾಪಂಚಿಕ ಸೌಖ್ಯಗಳನ್ನು ಗಳಿಸಬೇಕೆನ್ನುವುದೇ ಆಗಿರುತ್ತದೆ. ಈತನೂ ಸಹ, ಕಾರಣ ಏನೇ ಆಗಿರಲಿ, ಭಗವಂತನನ್ನು ಸ್ಮರಿಸುತ್ತಾನಾದ್ದರಿಂದ ಪುಣ್ಯಾತ್ಮನೇ ಎನಿಸಿಕೊಳ್ಳುವನು.

ಇನ್ನು ನಾಲ್ಕನೆಯವನು ಜ್ಞಾನಿ, ಭಗವತ್ತತ್ವವನ್ನು ಸಂಪೂರ್ಣವಾಗಿ ತಿಳಿದವನು. ಅನುಭೂತಿಗೊಳಿಸಿಕೊಂಡವನು. ಆತ್ಮಾನಾತ್ಮ ವಿವೇಕಿ. ಸ್ವಸ್ವರೂಪಾನುಭವವನ್ನು ಹೊಂದಿದ ಮಹನೀಯನು. ಆತನು ನಿರಂತರವೂ ಸತ್ಯವಾದ ಆತ್ಮದಲ್ಲಿಯೇ ಸ್ಥಿತಿ ಹೊಂದಿ, ಆತ್ಮವನ್ನೇ ಸ್ಮರಿಸುತ್ತಾ ಧ್ಯಾನಿಸುತ್ತಿರುತ್ತಾನೆ. ಆರ್ತನಂತೆ, ಅರ್ಥಾರ್ಥಿಯಂತೆ ಯಾವುದೋ ಒಂದು ಕೋರಿಕೆಯಿಂದ ಭಗವಂತನನ್ನು ಸ್ಮರಿಸುವವನಲ್ಲ. ಆತನು ಯಾವ ವಿಧವಾದ ಕಾಮ್ಯಬುದ್ಧಿಯನ್ನೂ ಹೊಂದಿರುವುದಿಲ್ಲ. ಆದ್ದರಿಂದಲೇ ಬೇರೆಯವರಿಗಿಂತ ಈತನೇ ಉತ್ತಮನೆಂದು ಮುಂದೆ ಬರುವ ಶ್ಲೋಕದಲ್ಲಿ ಭಗವಂತನು ತಿಳಿಸುತ್ತಿದ್ದಾನೆ. ಈ ಪ್ರಕಾರವಾಗಿ ನಾಲ್ವರೂ ಪರಮಾತ್ಮನನ್ನು ಯಾವುದೋ ವಿಧದಲ್ಲಿ ಭಜಿಸುತ್ತಾರಾದ್ದರಿಂದ ಎಲ್ಲರೂ ಪುಣ್ಯಾತ್ಮರೇ ಎಂದು ತಿಳಿಸಲ್ಪಟ್ಟಿದೆ. ಆರ್ತ ಭಕ್ತರಲ್ಲಿ ಗಜೇಂದ್ರನು ಮುಂತಾದವರನ್ನು, ಜಿಜ್ಞಾಸು ಭಕ್ತರಲ್ಲಿ ಪರೀಕ್ಷಿತ್, ಉದ್ಧವ ಮುಂತಾದವರನ್ನು; ಅರ್ಥಾರ್ಥ ಭಕ್ತರಲ್ಲಿ ಸುಗ್ರೀವ, ಧ್ರುವರನ್ನು; ಜ್ಞಾನಿಭಕ್ತರಲ್ಲಿ ಸನಕ, ನಾರದ, ಭೀಷ್ಮ ಪ್ರಹ್ಲಾದರನ್ನು ಹೆಸರಿಸಬಹುದು.

ಪ್ರ : ಭಗವಂತನನ್ನು ಸೇವಿಸುವವರು ಎಷ್ಟು ವಿಧಗಳಾಗಿದ್ದಾರೆ?

ಉ: ನಾಲ್ಕು ವಿಧಗಳು ಅವರು ಕ್ರಮವಾಗಿ ೧) ಆರ್ತನು ೨) ಜಿಜ್ಞಾಸು ೩) ಅರ್ಥಾರ್ಥಿ ೪) ಜ್ಞಾನಿ.

**ಅ||** ಈ ನಾಲ್ವರಲ್ಲಿ ಜ್ಞಾನಿಯು ಶ್ರೇಷ್ಠನೆಂದು ಹೇಳಲಾಗುತ್ತಿದೆ-

**೧೭. ತೇಷಾಂ ಜ್ಞಾನೀ ನಿತ್ಯಯುಕ್ತ ಏಕಭಕ್ತಿರ್ವಿಶಿಷ್ಯತೇ**
**ಪ್ರಿಯೋ ಹಿ ಜ್ಞಾನಿನೋಽತ್ಯರ್ಥಮಹಂ ಸ ಚ ಮಮ ಪ್ರಿಯಃ**

**ಅರ್ಥ:** ತೇಷಾಂ=ಅವರ (ಆ ನಾಲ್ವರ)ಲ್ಲಿ; ನಿತ್ಯಯುಕ್ತಃ=ಯಾವಾಗಲೂ ಪರಮಾತ್ಮನಲ್ಲಿ ಸಂಲಗ್ನನಾಗಿರುವವನು; ಏಕಭಕ್ತಿಃ=ಪರಮಾತ್ಮನಲ್ಲೇ ಅಚಲ ಭಕ್ತಿಯುಳ್ಳವನು (ಆಗಿ); ಜ್ಞಾನೀ=(ಆತ್ಮ) ಜ್ಞಾನಿಗೆ; ವಿಶಿಷ್ಯತೇ=ಶ್ರೇಷ್ಠನಾಗಿರುವನು; ಜ್ಞಾನಿನಃ=(ಆತ್ಮ) ಜ್ಞಾನಿಗೆ; ಅಹಂ=ನಾನು; ಅತ್ಯರ್ಥಂ=ಹೆಚ್ಚಿನ; ಪ್ರಿಯಃ

ಹಿ=ಇಷ್ಟವಲ್ಲವೇ! ಸಃ ಚ=ಆತನು; ಮಮ=ನನಗೆ; ಪ್ರಿಯಃ=(ಹೆಚ್ಚಿಗೆ) ಇಷ್ಟ.

**ತಾ||** ಅವರ (ಆ ನಾಲ್ವರ)ಲ್ಲಿ ನಿತ್ಯವೂ ಪರಮಾತ್ಮನಲ್ಲಿ ಸಂಲಗ್ನವಾಗಿರುವವನು, ಪರಮಾತ್ಮನೊಬ್ಬನಲ್ಲೇ ಅಚಲ ಭಕ್ತಿಯುಳ್ಳ ಜ್ಞಾನಿಯು ಶ್ರೇಷ್ಠವಾದವನು. ಅಂತಹ ಜ್ಞಾನಿಗೆ ನಾನು ಬಹಳ ಇಷ್ಟವಾದವನು; ನನಗೂ ಆತನು ಬಹಳ ಇಷ್ಟ.

**ವ್ಯಾಖ್ಯೆ:** ಹಿಂದಿನ ಶ್ಲೋಕದಲ್ಲಿ ವಿವರಿಸಲ್ಪಟ್ಟ ನಾಲ್ಕು ಭಕ್ತರಲ್ಲಿ ಯಾರು ಶ್ರೇಷ್ಠರೋ ಇಲ್ಲಿ ವಿವರಿಸಲಾಗಿದೆ. ಅವರೆಲ್ಲರಲ್ಲಿ ಜ್ಞಾನಿಯೇ ಉತ್ತಮನೆಂದು ಹೇಳಲ್ಪಟ್ಟಿದೆ. ಏಕೆಂದರೆ ಆತನಲ್ಲಿ, ಬೇರೆ ಮೂವರಲ್ಲಿ ಕಾಣದಂತಹ ಎರಡು ವಿಶಿಷ್ಟಗುಣಗಳಿವೆ ಅವು ೧) ನಿತ್ಯಯುಕ್ತತ್ವ ೨) ಏಕಭಕ್ತಿ.

೧) ನಿತ್ಯಯುಕ್ತತ್ವವೆಂದರೆ ನಿರಂತರವಾಗಿ ಪರಮಾತ್ಮನಲ್ಲಿ (ದೈವದಲ್ಲಿ) ತಾದಾತ್ಮ್ಯ ಹೊಂದಿರುವುದು. ಅಂದರೆ ಜ್ಞಾನಿ ನಿರಂತರವಾಗಿ ಆತ್ಮಧ್ಯಾನ ಪರನಾಗಿ ಆತ್ಮದಲ್ಲಿ ಸ್ಥಿತಿ ಹೊಂದಿರುವನೆಂದು ಭಾವ. ಆದರೆ ಆರ್ತ, ಜಿಜ್ಞಾಸು ಹಾಗು ಅರ್ಥಾರ್ಥಿಗಳು ಆಗಾಗ ದೈವವನ್ನು ಸ್ಮರಿಸುತ್ತಿರುತ್ತಾರೆ. ಅವರು ಅನಿತ್ಯಯುಕ್ತರು (Part-time devotees). ಅವರು ಸ್ವಲ್ಪ ಕಾಲ ದೈವಚಿಂತನೆ ಮಾಡಿ ನಂತರ ಪ್ರಪಂಚ ಕಾರ್ಯಗಳಲ್ಲಿ ನಿರತರಾಗಿ ದೈವವನ್ನು ಮರೆಯುವರು. ಜ್ಞಾನಿಯಾದರೋ ಸರ್ವಕಾಲ, ಸರ್ವಾವಸ್ಥೆಗಳಲ್ಲಿ ಭಗವಂತನಲ್ಲೇ (ಆತ್ಮನಲ್ಲೇ) ಕೂಡಿರುವನು. ಅದನ್ನು ನಿತ್ಯಯುಕ್ತತ್ವವೆನ್ನುವರು. ನಿರಂತರ ಬೆಳಕಿನಲ್ಲಿ (ಜ್ಞಾನದಲ್ಲಿ)ರುವುದರಿಂದ ಅಂತಹವರ ಬಳಿ ಕತ್ತಲು (ಅಜ್ಞಾನ) ಇರದು. ಆದ್ದರಿಂದ ಅವರು ಮಾಯಾ ಮೋಹವನ್ನು ಜಯಿಸಿ ಸರ್ವೋತ್ಕೃಷ್ಟರಾಗಿ ಬೆಳಗುತ್ತಿದ್ದಾರೆ. ಬೇರೆಯವರು 'ನಿತ್ಯಯುಕ್ತರು' ಅಲ್ಲದಿರುವುದರಿಂದ, ಎಲ್ಲೋ ಸ್ವಲ್ಪ ಕಾಲ ಭಗವಂತನನ್ನು ಸ್ಮರಿಸುವುದರಿಂದ ಅವರಲ್ಲಿ ಅವಿದ್ಯೆ ಸೇರುವ ಅವಕಾಶವಿದೆ. ಸಾಧಕನಾಗುವವನು ಪ್ರಾರಂಭದಲ್ಲಿ ಭಗವದ್ಧ್ಯಾನವನ್ನು ಸ್ವಲ್ಪ ಕಾಲ ಮಾಡಿ ನಂತರ ಉಳಿದ ಕಾಲವನ್ನು ಬೇರೇ ಕೆಲಸಗಳಿಗೆ ಉಪಯೋಗಿಸಿದರೂ ಕ್ರಮಕ್ರಮವಾಗಿ ಆ ಧ್ಯಾನಕಾಲ, ದೈವನಿಷ್ಠಾಸಮಯವನ್ನು ಹೆಚ್ಚು ಮಾಡಿಕೊಳ್ಳುತ್ತಾ ಹೋಗಿ, ಕೊನೆಗೆ ನಿರಂತರ ದೈವನಿಷ್ಠತ್ವ ರೂಪವನ್ನು ಹೊಂದಬೇಕು. ಆಗಲೇ ಆತನು ದೈವಭಕ್ತರಲ್ಲಿ ಅಗ್ರಗಣ್ಯನಾಗುವನು. ಅಂತಹವನೇ ನಿತ್ಯಯುಕ್ತನಾದ ಜ್ಞಾನಿ. ಅಂತಹ ಜ್ಞಾನಿಗೆ ಬೇರೆ ಎಲ್ಲಾ ಭಕ್ತರಿಗಿಂತ ಉನ್ನತ ಸ್ಥಾನವನ್ನು ಭಗವಂತನಿತ್ತಿದ್ದಾನೆ.

ಇನ್ನು ಜ್ಞಾನಿಯ ಎರಡನೆಯ ಲಕ್ಷ್ಯ ಏಕಭಕ್ತಿ. ಅಂದರೆ ಜ್ಞಾನಿಗೆ ಎರಡು ಮೂರು ಭಕ್ತಿಗಳು ಇರುವುದಿಲ್ಲವೆಂದೂ, ಒಂದೇ ಭಕ್ತಿ ಅಚಲ ವಾಗಿರುವುದೆಂದು ಅರ್ಥ. ಆತನದು ಪಂಚಭಕ್ತಿ, ನವಭಕ್ತಿ, ಶತಭಕ್ತಿಯಲ್ಲ. ಏಕಭಕ್ತಿ ಅಂದರೆ ಪರಮಾತ್ಮನನ್ನು ಬಿಟ್ಟು ಬೇರೆ ಯಾವುದರಲ್ಲಿಯೂ ಭಕ್ತಿಯಿಲ್ಲದವನು. ಪ್ರಪಂಚದಲ್ಲಿರುವ ಜನರಲ್ಲಿ ಕೆಲವರಿಗೆ ಧನದಲ್ಲಿ ಭಕ್ತಿ, ಕೆಲವರಿಗೆ ಕೀರ್ತಿಯಲ್ಲಿ ಭಕ್ತಿ, ಕೆಲವರಿಗೆ ಪತ್ನಿಯ ಮೇಲೆ ಭಕ್ತಿ. ಕೆಲವರಿಗೆ ಅಧಿಕಾರದಲ್ಲಿ ಭಕ್ತಿ, ಮತ್ತೆ ಕೆಲವರಿಗೆ ವಿಷಯ ಭೋಗಗಳಲ್ಲಿ ಭಕ್ತಿಯಿರುವುದು. ಆದರೆ ಜ್ಞಾನಿಗೆ ಭಗವಂತನನ್ನು (ಆತ್ಮವನ್ನು) ಬಿಟ್ಟರೆ ಬೇರೆ ಯಾವುದರಲ್ಲಿಯೂ ಭಕ್ತಿಯಿರುವುದಿಲ್ಲ. ಬೇರೆಯವರಿಗೆ ಅನೇಕ ವಿಷಯಗಳಲ್ಲಿ ಪ್ರೀತಿಯಿರುವುದರಿಂದ, ಏಕಭಕ್ತಿಯಿಲ್ಲದೆ ಮನಸ್ಸು ಚಂಚಲವಾಗಿರುವುದು. ಒಂದೇ ವಸ್ತುವಿನಲ್ಲಿ ಏಕಾಗ್ರತೆ, ನಿಷ್ಠೆಯಿಲ್ಲದಾಗಿರುವುದು. ಧ್ಯಾನನಿಷ್ಠೆಯಲ್ಲಿ ಈ ಚಂಚಲತೆ ಉಪಯೋಗವಿಲ್ಲ. ಒಂದೇ ದೈವದಲ್ಲಿ, ಆತ್ಮದಲ್ಲಿ ದೃಷ್ಟಿಯನ್ನು ಏಕಾಗ್ರವಾಗಿ ನಿಲ್ಲಿಸಬೇಕು. ದೈವಕ್ಕೆ ವ್ಯತಿರಿಕ್ತವಾದ ವಸ್ತುಗಳ ಮೇಲೆ ದೃಷ್ಟಿಯನ್ನು ಹರಿಯಬಿಡಬಾರದು. ಇದನ್ನೇ ಏಕಭಕ್ತಿಯೆನ್ನುವರು. ಜ್ಞಾನಿಗೆ ಈ ಸದ್ಗುಣವಿರುವುದು. ಆದ್ದರಿಂದಲೇ ಭಗವದ್ದೃಷ್ಟಿಯಲ್ಲಿ ಆತನು ಸರ್ವೋತ್ತಮ ಭಕ್ತನ ಸ್ಥಾನವನ್ನು ಅಲಂಕರಿಸಲು ಸಾಧ್ಯವಾಗಿದೆ.

'ಅತ್ಯರ್ಥಂ' (ಹೆಚ್ಚಿನ) ಎಂದು ಹೇಳಿರುವುದರಿಂದ ಅಂತಹ ಜ್ಞಾನಿಗೆ ಭಗವಂತನಲ್ಲಿ ಅಮಿತವಾದ ಪ್ರೀತಿಯಿರುವುದೆಂದು ತಿಳಿಯುತ್ತದೆ. ಜ್ಞಾನಿಯ ದೃಷ್ಟಿಯಲ್ಲಿ ದೃಶ್ಯವಸ್ತುಗಳೆಲ್ಲವೂ ನಶಿಸುವುವಾದ್ದರಿಂದ ಅವುಗಳಲ್ಲಿ ಆತನು ಮೋಹಗೊಳ್ಳುವುದಿಲ್ಲ; ಶಾಶ್ವತ ಪರಮಾತ್ಮನಲ್ಲಿಯೇ ಪ್ರೀತಿ ಹೊಂದಿರುವನು. ಈ ಪ್ರಕಾರವಾಗಿ ಭಕ್ತನು ಯಾವಾಗ ಭಗವಂತನನ್ನು ಪ್ರೇಮಿಸುವನೋ ಆಗ ಭಗವಂತನೂ ಭಕ್ತನನ್ನು ಹಾಗೆಯೇ ಪ್ರೇಮಿಸುವನು. **'ಸಚಮಮಪ್ರಿಯಃ'** (ಆತನು ನನಗೆ ಅತ್ಯಂತ ಪ್ರಿಯನು) ಎನ್ನುವ ವಾಕ್ಯ ಈ ಅರ್ಥವನ್ನೇ ಸೂಚಿಸುತ್ತದೆ. ಪ್ರಾಪಂಚಿಕ ಜನಗಳ ಪ್ರೀತಿಯನ್ನು ಸಂಪಾದಿಸುವುದು ಒಳ್ಳೆಯದಾದರೂ ದೈವ ಪ್ರೀತಿಯನ್ನು ಸಂಪಾದಿಸುವುದು ಇನ್ನೂ ಒಳ್ಳೆಯದು. ಅದು ಜೀವಿಯ ಮಹಾಭಾಗ್ಯ. ಇಂತಹ ಸ್ಥಿತಿ ಕೈಗೂಡಿದರೆ ಇನ್ನು ಜನ್ಮ ಸಾರ್ಥಕವಾದಂತೆಯೇ. ಇತರರನ್ನು ಮೆಚ್ಚಿಸಿದರೆ ಏನೋ ಅಲ್ಪಸ್ವಲ್ಪ ಲಾಭವಾಗುವುದು ಆದರೆ ಭಗವಂತನನ್ನು ಮೆಚ್ಚಿಸಿದರೆ ಸಾಕ್ಷಾತ್ ಮೋಕ್ಷವೇ ಲಭಿಸುವುದು.

ಈ ಶ್ಲೋಕದಲ್ಲಿ ಜ್ಞಾನಿಗೆ 'ಏಕಭಕ್ತಿ'ಯಿರುವುದೆಂದು ಹೇಳಿರುವುದರಿಂದ ವಾಸ್ತವವಾಗಿ ಭಕ್ತಿ ಹಾಗು ಜ್ಞಾನಗಳಲ್ಲಿ ಭೇದವಿಲ್ಲವೆಂದು ಅರ್ಥವಾಗುತ್ತದೆ. ಜ್ಞಾನಿಗೆ ಭಕ್ತಿಯಿರುವುದು. ಭಕ್ತಿಯಲ್ಲಿ ಜ್ಞಾನವಿರುವುದು ಒಂದು ಹೆಚ್ಚು ಒಂದು ಕಡಿಮೆ ಎನ್ನುವ ಪ್ರಮೇಯವೇ ಇಲ್ಲ. ಅನುಭವದ ಹಿನ್ನೆಲೆಯಲ್ಲಿ ನೋಡಿದರೆ ಈ ಸತ್ಯಗಳೆಲ್ಲವೂ ಚೆನ್ನಾಗಿ ಮನದಟ್ಟಾಗುವುವು. ಪರಾಕಾಷ್ಠೆಯಲ್ಲಿ ಭಕ್ತಿ, ಜ್ಞಾನ, ಧ್ಯಾನ ಎಲ್ಲವೂ ಒಂದೇ ಆಗಿರುವುವು.

ಪ್ರ : ಮೇಲೆ ತಿಳಿಸಿದ ನಾಲ್ಕು ಭಕ್ತರಲ್ಲಿ ಯಾರು ಶ್ರೇಷ್ಠರು?

ಉ: ಜ್ಞಾನಿ.

ಪ್ರ : ಏಕೆ?

ಉ: ಆತನಿಗೆ (ಜ್ಞಾನಿಗೆ) ೧) ನಿತ್ಯಯುಕ್ತತ್ವ, (ನಿರಂತರ ದೈವ ಸಂಬಂಧ) ೨) ಏಕಭಕ್ತಿ- ಎನ್ನುವ ಎರಡು ವಿಶಿಷ್ಟ ಗುಣಗಳಿವೆ. ಅವು ಬೇರೆಯವರಿಗೆ ಇಲ್ಲ. ಆದ್ದರಿಂದ ಆತನು ಶ್ರೇಷ್ಠನು.

ಪ್ರ : ಜ್ಞಾನಿಗೆ ಈ ಪ್ರಪಂಚದಲ್ಲಿ ಎಲ್ಲರಿಗಿಂತ ಪ್ರಿಯನಾರು?

ಉ: ಭಗವಂತನು.

ಪ್ರ : ಭಗವಂತನಿಗೆ ಎಲ್ಲರಿಗಿಂತ ಹೆಚ್ಚಿಗೆ ಪ್ರಿಯನು ಯಾರು?

ಉ: ಜ್ಞಾನಿ.

ಪ್ರ : ಆದ್ದರಿಂದ ಜನರ ಕರ್ತವ್ಯವೇನು?

ಉ: 'ಏಕಭಕ್ತಿ' ರೂಪವಾದ ಜ್ಞಾನವನ್ನು ಸಂಪಾದಿಸಿ ಭಗವಂತನಿಗೆ ಅತಿ ಪ್ರಿಯನಾಗಲು ಯತ್ನಿಸಬೇಕು.

**ಅ||** ಆದರೆ ಬೇರೆ ಭಕ್ತರ ಮಾತೇನು ಎನ್ನುವ ಪ್ರಶ್ನೆಗೆ ಉತ್ತರ ಹೇಳಲಾಗುತ್ತಿದೆ-

೧೮. ಉದಾರಾಃ ಸರ್ವ ಏವೈತೇ ಜ್ಞಾನೀ ತ್ವಾತ್ಮೈವ ಮೇ ಮತಮ್
ಆಸ್ಥಿತಃ ಸ ಹಿ ಯುಕ್ತಾತ್ಮಾ ಮಾಮೇವಾನುತ್ತಮಾಂ ಗತಿಮ್

**ಅರ್ಥ:** ಏತೇ ಸರ್ವೇ=ಇವರೆಲ್ಲರೂ(ಮೇಲೆ ತಿಳಿಸಿದ ನಾಲ್ಕು ರೀತಿಯ ಭಕ್ತರು); ಉದಾರಾಃ ಏವ=ಒಳ್ಳೆಯವರೇ; ಜ್ಞಾನೀ ತು=ಜ್ಞಾನಿಯಾದರೋ; ಆತ್ಮ ಏವ=ನಾನೇ (ಇತಿ=ಎಂದು); ಮೇ=ನನ್ನ; ಮತಂ=ಅಭಿಪ್ರಾಯ; ಹಿ=ಏಕೆಂದರೆ; ಸಃ=ಆತನು; ಯುಕ್ತಾತ್ಮಾ(ಸನ್)=ನನ್ನಲ್ಲಿಯೇ ಮನಸ್ಸನ್ನು ಸ್ಥಿರವಾಗಿಟ್ಟಿರುವನು; ಮಾಂ ಏವ=ನನ್ನನ್ನೇ; ಅನುತ್ತಮಾಂ=ಸರ್ವೋತ್ತಮವಾದ; ಗತಿಂ=ಪ್ರಾಪ್ಯಸ್ಥಾನವಾಗಿ; ಆಸ್ಥಿತಃ=(ನಿಶ್ಚಯಿಸಿ) ಆಶ್ರಯಿಸಿದ್ದಾನೆ.

**ತಾ||** ಇವರೆಲ್ಲರೂ (ಮೇಲೆ ತಿಳಿಸಿದ ನಾಲ್ಕು ರೀತಿಯ ಭಕ್ತರು) ಒಳ್ಳೆಯವರೇ ಆಗಿದ್ದಾರೆ. ಆದರೆ ಅವರಲ್ಲಿ ಜ್ಞಾನಿಯು ಸಾಕ್ಷಾತ್ ನನ್ನ ಆತ್ಮನೇ ಎಂದು ನನ್ನ ಅಭಿಪ್ರಾಯ. ಏಕೆಂದರೆ ಆತನು ನನ್ನಲ್ಲಿಯೇ ಚಿತ್ತವನ್ನು ಸ್ಥಿರವಾಗಿ ನಿಲ್ಲಿಸಿ, ನನ್ನನ್ನೇ ಸರ್ವೋತ್ತಮವಾದ ಪ್ರಾಪ್ಯಸ್ಥಾನವಾಗಿ ನಿಶ್ಚಯಿಸಿ ಆಶ್ರಯಿಸಿಕೊಂಡಿದ್ದಾನೆ.

**ವ್ಯಾಖ್ಯೆ:** ಮೇಲೆ ತಿಳಿಸಿದ ನಾಲ್ವರು ಭಕ್ತರಲ್ಲಿ ಜ್ಞಾನಿ ಶ್ರೇಷ್ಠನೆಂದು ಹೇಳಿದ ಮಾತ್ರಕ್ಕೆ ಬೇರೆಯವರು ತೆಗೆದು ಬಿಸಾಡಲ್ಪಟ್ಟವರು ಎಂದರ್ಥವಲ್ಲ. ಅವರೂ ಒಳ್ಳೆಯವರೇ, ಭಕ್ತರೇ, ಸಾಮಾನ್ಯರಿಗಿಂತ ಎಷ್ಟೋ ಉತ್ತಮರು. ಏಕೆಂದರೆ ಅವರು ಶ್ರದ್ಧೆಯಿಂದ ಯಾವುದೋ ಒಂದು ವಿಧದಲ್ಲಿ ದೈವವನ್ನು ಆರಾಧಿಸುತ್ತಲೇ ಇದ್ದಾರೆ. ಆದ್ದರಿಂದ ಅವರೆಲ್ಲರನ್ನೂ 'ಉದಾರಿ'ಗಳು (ಒಳ್ಳೆಯವರು) ಎಂದು ಭಗವಂತನು ಇಲ್ಲಿ ಹೇಳಿದ್ದಾನೆ. ಆದರೆ ಅವರೆಲ್ಲರಲ್ಲಿ ಜ್ಞಾನಿಯ ಸ್ಥಾನ ಬಹಳ ಉನ್ನತವಾದದ್ದು. ಅದಕ್ಕೆ ಕಾರಣ, ನಿರಂತರ ಭಗವಚ್ಚಿಂತನೆಯಿಂದ ಆತನು ಸಾಕ್ಷಾತ್ ಭಗವತ್ಸ್ವರೂಪಿಯೇ ಆಗಿರುತ್ತಾನೆ. **'ಬ್ರಹ್ಮವಿದ್ಬ್ರಹ್ಮ ಬಹ್ಮೈವ ಭವತಿ'-** 'ಬ್ರಹ್ಮವೇತ್ತ ಸಾಕ್ಷಾತ್ ಬ್ರಹ್ಮನೇ ಆಗುತ್ತಿದ್ದಾನೆ ಎಂದು ಶ್ರುತಿಯು ಹೇಳುತ್ತಿದೆ. ಸಮುದ್ರದಲ್ಲಿ ಬಿದ್ದ ಆಲಿಕಲ್ಲು ಸಮುದ್ರ ರೂಪವೇ ಆದ ಹಾಗೆ, ಜ್ಞಾನಿಯ ಚಿತ್ತವು ಬ್ರಹ್ಮದಲ್ಲಿ ಲಯವಾಗಿ ಬ್ರಹ್ಮಾಕಾರವಾಗಿಯೇ ಪರಿಣಮಿಸುತ್ತದೆ. ಆದ್ದರಿಂದಲೇ ಜ್ಞಾನಿ ಹಾಗು ಭಗವಂತನ ಮಧ್ಯೆ ಭೇದವಿಲ್ಲವೆಂದು ಇಲ್ಲಿ ವಚಿಸಲಾಗಿದೆ. 'ಮೇ ಮತಂ'- (ಇದು ನನ್ನ ನಿಶ್ಚಯ ಅಭಿಪ್ರಾಯ) ಎಂದು ಭಗವಂತನು ಹೇಳಿರುವುದರಿಂದ ಈ ವಾಕ್ಯಗಳ ಪರಮ ಸತ್ಯತೆ ಹೊರಬಿದ್ದಿದೆ. ಉಳಿದ ಮೂರು ರೀತಿಯ ಭಕ್ತರು ದ್ವೈತ ಪ್ರಪಂಚದಲ್ಲಿ ತಿರುಗಾಡುತ್ತಿರುತ್ತಾರೆ. ಜ್ಞಾನಿ ಅದ್ವೈತದ ಬೀದಿಗಳಲ್ಲಿ ವಿಹರಿಸುತ್ತಿರುವನು. ಭಗವಂತನು ತನಗಿಂತ ಬೇರೆಯೆಂದು ತಿಳಿದು ಧ್ಯಾನಿಸುವುದು ಪ್ರಾರಂಭ ಸ್ಥಿತಿಯಲ್ಲಿ ನಡೆಯುತ್ತದೆ. ಆರೂಢ ಸ್ಥಿತಿಯಲ್ಲಿ ಭಗವಂತನು ತನಗಿಂತ ಭಿನ್ನವಾಗಿರುವುದಿಲ್ಲ. ಧ್ಯಾನಿಯು ಧ್ಯೇಯವಾಗುವನು, ಜೀವಿಯು ಶಿವನಾಗುವನು. ಇಂತಹ ಸ್ಥಿತಿ ನಿರಂತರ ಆತ್ಮಚಿಂತನೆಯಿಂದ, ಅಹಮ್ಮಿನ ನಿರ್ಮೂಲನದಿಂದ ವಾಸನಾಕ್ಷಯದಿಂದ ಉಂಟಾಗುತ್ತದೆ. ಆದ್ದರಿಂದಲೇ ಜ್ಞಾನಿಯನ್ನು 'ಯುಕ್ತಾತ್ಮಾ' ಎಂದು ಕರೆಯಲಾಗಿದೆ. ಜ್ಞಾನಿ ತನ್ನ ಆತ್ಮದಲ್ಲೇ ತನ್ನ ಚಿತ್ತವನ್ನು ನಿರಂತರವಾಗಿ ಸಂಲಗ್ನವಾಗಿರಿಸಿರುವನೆನ್ನುವುದು ಭಾವ.

ಆತ್ಮಪದವಿಯನ್ನು ಅಥವ ದೈವ ಪದವಿಯನ್ನು 'ಅನುತ್ತಮಾಂ ಗತಿಂ'- ಸರ್ವೋತ್ತಮವಾದ ಗತಿಯಾಗಿ, (ಪದವಿಯಾಗಿ) ವರ್ಣಿಸಿರುವುದರಿಂದ ಪ್ರಪಂಚದಲ್ಲಿಯ ಸಮಸ್ತ ಇತರ ಪದವಿಗಳು ಅದರ ಮುಂದೆ ಅಲ್ಪವಾದವು ಎಂದೇ ಅರ್ಥವಾಗುತ್ತದೆ. ಆದ್ದರಿಂದ ಸರ್ವರೂ ಪ್ರಯತ್ನ ಪೂರ್ವಕವಾಗಿ ಅಂತಹ ಸರ್ವೋತ್ತಮ ಬ್ರಹ್ಮಪದವಿಗೆ ಪ್ರಯತ್ನಿಸಿ ತಮ್ಮ ಜೀವನಗಳನ್ನು ಧನ್ಯಗೊಳಿಸಿಕೊಳ್ಳಬೇಕು.

ಗೀತೆಯಲ್ಲಿ ಈ ಶ್ಲೋಕದಲ್ಲಿ ಪೂರ್ಣ ಅದ್ವೈತ ಸ್ಥಿತಿಯನ್ನು ವರ್ಣಿಸಲಾಗಿದೆ. ಭಕ್ತನು ಸಾಕ್ಷಾತ್ ಭಗವಂತನು ಹೇಗೆ ಆಗುವನೆನ್ನುವುದನ್ನು ಇಲ್ಲಿ ತಿಳಿಸಲಾಗಿದೆ. ಜೀವಿತದ ಪರಮ ಲಕ್ಷ್ಯವೂ ಅದೇ ಆಗಿದೆ. ದ್ವೈತದಲ್ಲಿ ಭಗವಂತನು ಸ್ವಲ್ಪ ದೂರದಲ್ಲಿರುವನು. ವಿಶಿಷ್ಟಾದ್ವೈತದಲ್ಲಿ ಇನ್ನೂ ಹತ್ತಿರಕ್ಕೆ ಬರುವನು. ಅದ್ವೈತದಲ್ಲಿ ಇನ್ನೂ ಹತ್ತಿರಕ್ಕೆ ಬಂದು ತಾನೇ ಭಗವಂತನಾಗಿ ರೂಪುಗೊಳ್ಳುವನು. ಆದ್ದರಿಂದಲೇ ಜೀವನ್ಮುಕ್ತರಾದ ಮಹನೀಯರನ್ನು ಸಾಕ್ಷಾತ್ ದೈವರೂಪಿಗಳಂತೆ ಜನರು ಆರಾಧಿಸುತ್ತಾರೆ. **'ದ್ವಿಬಾಹುರಪರೋಹರಿಃ'-** ಎರಡು ಕೈಗಳಲ್ಲಿ ವಿರಾಜಿಸುವ ವಿಷ್ಣು- ಎನ್ನುವ ವಾಕ್ಯ ಅವರಿಗೇ ಸಲ್ಲುತ್ತದೆ. ಅವರಿಗೂ, ಭಗವಂತನಿಗೂ ಏನೂ ಭೇದವಿರುವುದಿಲ್ಲ. ಅಂತಹ ಅದ್ವೈತ ಜ್ಞಾನಸಿದ್ಧಿ ಉಂಟಾಗುವವರೆಗೆ ಮುಮುಕ್ಷುಗಳು ನಿರಂತರ ಆಧ್ಯಾತ್ಮಸಾಧನೆ ನಡೆಸುತ್ತಲೇ ಇರಬೇಕು. ಪ್ರತಿಯೊಬ್ಬರೂ ಅಂತಹ ಜ್ಞಾನ ಪರಾಕಾಷ್ಠೆ ಸ್ಥಿತಿಯನ್ನು ಇಂದಲ್ಲ ನಾಳೆ ಹೊಂದಲೇಬೇಕು. ಕರ್ಮ, ಭಕ್ತಿ, ಧ್ಯಾನಾದಿಗಳೆಲ್ಲವೂ ಕೊನೆಗೆ ಜ್ಞಾನ ಸ್ಥಿತಿಯನ್ನು ಉಂಟುಮಾಡಿ ಮುಕ್ತಿಗೆ ಕಾರಣಭೂತಗಳಾಗುವುವು. ಆದ್ದರಿಂದಲೇ ಭಗವಂತನು ಜ್ಞಾನಕ್ಕೆ ಹಾಗು ಜ್ಞಾನಿಗೆ ಇಂತಹ ಹಿರಿಮೆಯ ಸ್ಥಾನವನ್ನು ಕೊಟ್ಟಿರುವನು.

ಪ್ರ : ಮೇಲೆ ತಿಳಿಸಿದ ನಾಲ್ಕು ರೀತಿಯ ಭಕ್ತರು ಎಂತಹವರು?

ಉ: ಎಲ್ಲರೂ ಒಳ್ಳೆಯವರೇ.

ಪ್ರ : ಆದರೆ ಅವರಲ್ಲಿ ಜ್ಞಾನಿಗೆ ಪ್ರಾಮುಖ್ಯತೆ ಏಕಿದೆ?

ಉ: ಜ್ಞಾನಿಗೆ ಹಾಗು ಭಗವಂತನಿಗೆ ಭೇದವಿಲ್ಲ. ಜ್ಞಾನಿ ಸಾಕ್ಷಾತ್ ಭಗವಂತನೇ ಆಗುತ್ತಿದ್ದಾನೆ. ಆದ್ದರಿಂದ(ಜ್ಞಾನೀತ್ವಾತ್ಮೈವ ಮೇಮತಂ).

ಪ್ರ : ಯಾವ ಕಾರಣದಿಂದ ಜ್ಞಾನಿ ಅಂತಹ ಭಗವತ್ಸ್ವರೂಪವನ್ನು ಪಡೆಯುವನು?

ಉ: ಆತನು ತನ್ನ ಮನಸ್ಸನ್ನು ನಿಗ್ರಹಿಸಿ, ಆತ್ಮದಲ್ಲಿ ಸ್ಥಾಪಿಸಿ (ಯುಕ್ತಾತ್ಮಾ) ಆತ್ಮವನ್ನೇ ಪರಮಗತಿಯೆಂದು ತಿಳಿದು ಅದರಲ್ಲೇ ಸ್ಥಿತನಾಗಿರುವನಾದ್ದರಿಂದ.

**ಅ||** ಅಂತಹ ಜ್ಞಾನಿಗಳು ಲೋಕದಲ್ಲಿ ವಿರಳವೆಂದು ಹೇಳಲಾಗುತ್ತಿದೆ-

೧೯. ಬಹೂನಾಂ ಜನ್ಮನಾಮಂತೇ ಜ್ಞಾನವಾನ್ಮಾಮ್ ಪ್ರಪದ್ಯತೇ
ವಾಸುದೇವಸ್ಸರ್ವಮಿತಿ ಸ ಮಹಾತ್ಮಾ ಸುದುರ್ಲಭಃ

**ಅರ್ಥ:** ಬಹೂನಾಂ=ಅನೇಕ; ಜನ್ಮನಾಮ್=ಜನ್ಮಗಳ; ಅಂತೇ=ಕೊನೆಯಲ್ಲಿ; ಜ್ಞಾನವಾನ್(ಸನ್)=ಜ್ಞಾನವಂತನು(ಆಗಿ); ಸರ್ವಂ=ಸಮಸ್ತವನ್ನೂ; ವಾಸುದೇವಃ ಇತಿ=ವಾಸುದೇವನೇ (ಭಗವಂತನೇ) ಎಂದು (ತಿಳಿದುಕೊಂಡು); ಮಾಂ=ನನ್ನನ್ನು; ಪ್ರಪದ್ಯತೇ=ಹೊಂದುತ್ತಿದ್ದಾನೆ. ಸಃ ಮಹಾತ್ಮಾ= ಅಂತಹ ಮಹಾತ್ಮನು; ಸುದುರ್ಲಭಃ=(ಲೋಕದಲ್ಲಿ) ಬಹಳ ವಿರಳ.

**ತಾ||** ಅನೇಕ ಜನ್ಮಗಳ ಅಂತ್ಯದಲ್ಲಿ ಮನುಜನು ಜ್ಞಾನವಂತನಾಗಿ ಸಮಸ್ತವೂ ವಾಸುದೇವನೇ (ಭಗವಂತನೇ) ಎನ್ನುವ ಸದ್ಬುದ್ಧಿ ಹೊಂದಿ ನನ್ನನ್ನು ಸೇರುತ್ತಿದ್ದಾನೆ. ಅಂತಹ ಮಹಾತ್ಮನು ಈ ಲೋಕದಲ್ಲಿ ಬಹಳ ವಿರಳ.

**ವ್ಯಾಖ್ಯೆ:** ಜೀವಿಯು ಅನಾದಿ ಕಾಲದಿಂದ ಈ ಸಂಸಾರ ಚಕ್ರದಲ್ಲಿ ಪರಿಭ್ರಮಿಸುತ್ತಿದ್ದಾನೆ. ಅನೇಕ ಕ್ರಿಮಿಕೀಟಾದಿ ಜನ್ಮಗಳನ್ನೆತ್ತಿ ಸುಕೃತ ವಶದಿಂದ ಮಾನವನಾಗಿ ಜನ್ಮಿಸುತ್ತಾನೆ. ಹಾಗೆ ಜನ್ಮಿಸಿದ ಪ್ರತಿ ಮಾನವನೂ ಮುಕ್ತಿಗಾಗಿ ಪ್ರಯತ್ನಿಸುತ್ತಿಲ್ಲ. ಎಲ್ಲಿಯೋ ಕೆಲವು ಪುಣ್ಯಾತ್ಮರು ಮಾತ್ರ ಪ್ರಯತ್ನಿಸುತ್ತಿದ್ದಾರೆ. ಹಾಗೆ ಪ್ರಯತ್ನಿಸುವವರಲ್ಲಿ ಯಾವನೋ ಒಬ್ಬ ಧೀರನು ಮಾತ್ರ ಆತ್ಮಜ್ಞಾನವನ್ನು ಹೊಂದಿ ಮುಕ್ತಿ ಹೊಂದುತ್ತಿದ್ದಾನೆ.* ಪ್ರತಿ ಜನ್ಮದಲ್ಲಿಯೂ ಜೀವಿಯು ಸ್ವಲ್ಪ ಸ್ವಲ್ಪ ಪುಣ್ಯವನ್ನು ಸಂಪಾದಿಸುತ್ತಾ ಬಂದು ಕೊನೆಗೆ ಯಾವುದೋ ಒಂದು ಜನ್ಮದಲ್ಲಿ ತೀವ್ರತರವಾದ ಆಧ್ಯಾತ್ಮಿಕ ಸಾಧನೆಗಳಿಂದ ಹಾಗು ಪರಮೇಶ್ವರನ ಅನುಗ್ರಹದಿಂದ ಆತನಿಗೆ ಜ್ಞಾನ ಉದಯಿಸುವುದು. ಆಗ ಸಮಸ್ತವೂ ಭಗವನ್ಮಯವಾಗಿ, ಆತ್ಮಮಯವಾಗಿ 'ವಾಸುದೇವಮಯ'ವಾಗಿ ಕಾಣುವುದು. ಈ ರೀತಿಯ ಸರ್ವಾತ್ಮದೃಷ್ಟಿಯುಳ್ಳವನಾದ ಜ್ಞಾನಿ ಭಗವತ್ಸಾಕ್ಷಾತ್ಕಾರವನ್ನು ಹೊಂದುತ್ತಿದ್ದಾನೆ. ಎಷ್ಟೋ ಜನ್ಮಗಳ ಪುಣ್ಯಾಧಿಕ್ಯತೆಯಿಂದ, ಪುರುಷ ಪ್ರಯತ್ನದಿಂದ, ಸಾಧನಾತಿಶಯದಿಂದ ಜೀವಿಗೆ ಅಂತಹ ಮಹತ್ತರ ಪದವಿಯು ಕೈಗೂಡುವುದು. ಜ್ಞಾನವಂತನಾಗುವ ಭಾಗ್ಯ ಒದಗುವುದು. ಆದ್ದರಿಂದಲೇ ಜ್ಞಾನವಂತರಾದ ಮಹಾತ್ಮರು ಲೋಕದಲ್ಲಿ ಬಹಳ ವಿರಳ (ಸುದುರ್ಲಭ) ಎಂದು ಭಗವಂತನು ಹೇಳಿದನು. 'ದುರ್ಲಭಃ' ಎಂದು ಹೇಳದೆ 'ಸುದುರ್ಲಭಃ' ಎಂದು ಹೇಳಿರುವುದರಿಂದ ಅಂತಹವರು ನೂರಿಗೆ, ಕೋಟಿಗೆ ಎಲ್ಲೋ ಒಬ್ಬನಿರುವನೆಂದರ್ಥ.

ಆದರೆ ಜ್ಞಾನಿಯಾಗಲು ಇನ್ನೂ ಅನೇಕ ಜನ್ಮಗಳು ಹೇಗಿದ್ದರೂ ಬೇಕಲ್ಲವೇ ಎಂದು ತಿಳಿದು ಸೋಮಾರಿಯಾಗಬಾರದು. ಇಲ್ಲಿಯವರೆಗೆ ಆಗಿ ಹೋದ ಜನ್ಮಗಳೇ ಆ ಅನಂತಕೋಟಿ ಜನ್ಮಗಳೆಂದು ಭಾವಿಸಿ ಈ ಜನ್ಮದಲ್ಲೇ ಉದ್ಧಾರವಾಗಲು ತೀವ್ರಯತ್ನ ಮಾಡಬೇಕು. ಅಂತಹ ಜ್ಞಾನವನ್ನು ಮುಮುಕ್ಷುವು ಹೊಂದಿರುವನೋ ಇಲ್ಲವೋ ತಿಳಿಯುವುದಕ್ಕಾಗಿ ಭಗವಂತನು ಈ ಶ್ಲೋಕದಲ್ಲಿ ಪರೀಕ್ಷೆಯೊಂದನ್ನು (Test) ಏರ್ಪಡಿಸಿದ್ದಾನೆ- 'ಎಲ್ಲವೂ ವಾಸುದೇವಮಯವಾಗಿ (ಭಗವನ್ಮಯ, ಆತ್ಮಮಯವಾಗಿ) ತನಗೆ ಕಾಣಿಸುತ್ತಿದೆಯೇ?' ಎಂದು ಸಾಧಕನು ತನ್ನನ್ನು ತಾನೇ ಪರೀಕ್ಷಿಸಿಕೊಳ್ಳುತ್ತಿರಬೇಕು. ಒಂದು ವೇಳೆ ಆ ವಿಧವಾಗಿ ಅನಿಸದಿದ್ದರೆ, ನಾಮರೂಪಗಳೇ ಕಾಣಿಸುತ್ತಿದ್ದರೆ, ಸಾಧನೆ ಇನ್ನೂ ಪರಿಪಕ್ವವಾಗಿಲ್ಲವೆಂದು ತಿಳಿದು ಧ್ಯಾನ ವಿಚಾರಣಾಭ್ಯಾಸಗಳನ್ನು ತೀವ್ರವಾಗಿಸಬೇಕು. ಜ್ಞಾನಪ್ರಾಪ್ತಿಯಾಗಿರುವುದಕ್ಕೆ ಗುರುತು ಈ **'ಸರ್ವಂಖಲ್ವಿದಂ ಬ್ರಹ್ಮ'** (ಎಲ್ಲವೂ ಬ್ರಹ್ಮವೇ) ಎನ್ನುವ ಸಿದ್ಧಾಂತದ ಅನುಭೂತಿಯನ್ನು ಹೊಂದುವುದೇ ಆಗಿದೆ. ಪ್ರಾರಂಭ ಸ್ಥಿತಿಯಲ್ಲಿ ಮನುಜನು ದೇವರನ್ನು ಗುಡಿಯಲ್ಲೋ ವಿಗ್ರಹದಲ್ಲೋ ಅಥವ ತೀರ್ಥದಲ್ಲೋ ನೋಡುವನು. ಆರೂಢ ಸ್ಥಿತಿಯಲ್ಲಿ ಅದೇ ದೇವನನ್ನು ಸರ್ವತ್ರ ವೀಕ್ಷಿಸುವನು. **'ಜಗವೆಲ್ಲಾ ರಾಮಮಯ'** ಎನ್ನುವ ಸ್ಥಿತಿ ಕೈಗೂಡುವುದು.

ಈ ಶ್ಲೋಕದಲ್ಲಿ **"ಬಹೂನಾಂ ಜನ್ಮನಾಮಂತೇ ಜ್ಞಾನವಾನ್"** ಎಂದು ಹೇಳಿರುವುದರ ಅರ್ಥ ಜ್ಞಾನಿ ಅನೇಕ ಜನ್ಮಗಳ ನಂತರ ಮೋಕ್ಷ ಹೊಂದುವನೆಂದಲ್ಲ, ಅನೇಕ ಜನ್ಮಗಳ ನಂತರ ಜ್ಞಾನಪಡೆದು ಮೋಕ್ಷ ಹೊಂದುವನೆಂದೇ ಅರ್ಥ. ಯಾವ ಕ್ಷಣದಲ್ಲಿ ಜ್ಞಾನವನ್ನು ಹೊಂದುವನೋ ಆ ಕ್ಷಣದಲ್ಲಿಯೇ ಮೋಕ್ಷವನ್ನು ಪಡೆಯುವನು. ಎಲ್ಲವೂ ಭಗವನ್ಮಯವಾಗಿ ಕಾಣುವ ಜ್ಞಾನವಂತನಿಗೆ ಗೀತಾಚಾರ್ಯನು 'ಮಹಾತ್ಮ'ನೆನ್ನುವ ಬಿರುದನ್ನು ಕೊಟ್ಟನು. ಅಂತಹ ಬಿರುದನ್ನು ಸಂಪಾದಿಸಲು ಸರ್ವರೂ ಯತ್ನಿಸಬೇಕು. ಪರಿಚ್ಛಿನ್ನ ದೃಷ್ಟಿಹೊಂದಿದ 'ಸಾಮಾನ್ಯಾತ್ಮನು' ಆಗಬಾರದು. ವಿಶಾಲ ದೃಷ್ಟಿಯನ್ನು ಅವಲಂಬಿಸಿ 'ಮಹಾತ್ಮ'ನಾಗಿ ಬೆಳಗಬೇಕು. ಆಗಲೇ ಜನ್ಮ ಸಾರ್ಥಕವಾಗಬಲ್ಲದು.

ಪ್ರ : ಜೀವಿಯು ಮೋಕ್ಷವನ್ನು ಯಾವಾಗ ಹೊಂದಬಲ್ಲನು?

ಉ: ಜ್ಞಾನವಂತನಾದಾಗ.

ಪ್ರ : ಜ್ಞಾನವು ಯಾವಾಗ ಬರುವುದು?

ಉ: ಅನೇಕ ಜನ್ಮಗಳ ಶುಭಪ್ರಯತ್ನದಿಂದ ಕೊನೆಗೆ ಯಾವುದೋ ಒಂದು ಜನ್ಮದಲ್ಲಿ ಅದನ್ನು ಪಡೆಯುವನು.

ಪ್ರ : ಜ್ಞಾನಿಗೆ ಎಂತಹ ಭಾವವಿರುವುದು?

ಉ: ಎಲ್ಲವೂ ವಾಸುದೇವಮಯ (ಭಗವನ್ಮಯ, ಆತ್ಮಮಯ) ಎನ್ನುವ ಭಾವವುಳ್ಳವನಾಗಿರುವನು.

ಪ್ರ : ಲೋಕದಲ್ಲಿ ಯಾವನು ಮಹಾತ್ಮನೆಂದು ಕರೆಸಿಕೊಳ್ಳುವನು?

ಉ: ಜ್ಞಾನಿಯೇ.

ಪ್ರ : ಅಂತಹ ಜ್ಞಾನಿ ಲೋಕದಲ್ಲಿ ಅನೇಕರಿರುವರೇ?

ಉ: ಇಲ್ಲ. ಎಲ್ಲೋ ಒಬ್ಬನು ಇರುವನು. ಅವರು ಸಿಗುವುದು ಬಹಳ ದುರ್ಲಭ.

ಪ್ರ : ಒಬ್ಬನು ಜ್ಞಾನಿಯೇ ಅಲ್ಲವೇ ಎಂದು ತಿಳಿಯಲು ಇರುವ ಉಪಾಯವೇನು?

ಉ: ಆತನ ದೃಷ್ಟಿಯಲ್ಲಿ ಎಲ್ಲವೂ ವಾಸುದೇವಮಯವಾಗಿ ಇರುವುದೇ ಅಥವ ಇಲ್ಲವೇ ಎಂದು ತಿಳಿದುಕೊಂಡರೆ ಸಾಕು.

**ಅ||** ಇತರ ದೇವತೆಗಳನ್ನು ಕೋರಿಕೆಗಳಿಂದ ಆರಾಧಿಸುವವರನ್ನು ಕುರಿತು ಹೇಳಲಾಗುತ್ತಿದೆ-

೨೦. **ಕಾಮೈಸ್ತೈಸ್ತೈರ್ಹೃತಜ್ಞಾನಾಃ ಪ್ರಪದ್ಯಂತೇಽನ್ಯದೇವತಾಃ**
**ತಂ ತಂ ನಿಯಮಮಾಸ್ಥಾಯ ಪ್ರಕೃತ್ಯಾ ನಿಯತಾಃ ಸ್ವಯಾ**

**ಅರ್ಥ:** ಸ್ವಯಾ=ತಮ್ಮ; ಪ್ರಕೃತ್ಯಾ=ಪ್ರಕೃತಿಯಿಂದ (ಜನ್ಮಾಂತರ ಸಂಸ್ಕಾರದಿಂದ); ನಿಯತಾಃ=ಪ್ರೇರೇಪಿಸಲ್ಪಟ್ಟ ಜನರು; ತೈಃ ತೈಃ ಕಾಮೈಃ=ಆಯಾ (ವಿಷಯಗಳಲ್ಲಿಯ) ಕೋರಿಕೆಗಳಿಂದ; ಹೃತಜ್ಞಾನಾಃ=ಅಪಹರಿಸಲ್ಪಟ್ಟಿರುವ ವಿವೇಕ ಉಳ್ಳವರಾಗಿ; ತಂ ತಂ ನಿಯಮಂ=ಆಯಾ (ದೇವತಾರಾಧನೆ ಸಂಬಂಧವಾದ) ನಿಯಮಗಳನ್ನು; ಆಸ್ಥಾಯ=ಅವಲಂಬಿಸಿ; ಅನ್ಯ ದೇವತಾಃ=ಇತರ ದೇವತೆಗಳನ್ನು; ಪ್ರಪದ್ಯಂತೇ=ಭಜಿಸುತ್ತಿದ್ದಾರೆ.

**ತಾ||** (ಕೆಲವರು) ತಮ್ಮ ಪ್ರಕೃತಿಯಿಂದ (ಜನ್ಮಾಂತರ ಸಂಸ್ಕಾರದಿಂದ) ಪ್ರೇರೇಪಿಸಲ್ಪಟ್ಟವರಾಗಿ, ವಿಷಯಾದಿಗಳ ಕೋರಿಕೆಗಳಿಂದ ವಿವೇಕವನ್ನು

---

* ೧) ಯತತಾಮಪಿ ಸಿದ್ಧಾನಾಂ ಕಶ್ಚಿನ್ಮಾಂ ವೇತ್ತಿ ತತ್ತ್ವತಃ (೭-೩)

೨) ಅನೇಕಜನ್ಮ ಸಂಸಿದ್ಧಸ್ತತೋ ಯಾತಿ ಪರಾಂಗತಿಂ (೬-೪೫)

ಕಳೆದುಕೊಂಡು, ದೇವತಾರಾಧನೆ ಸಂಬಂಧವಾದ ನಿಯಮಗಳನ್ನು ಅವಲಂಬಿಸಿ ಇತರ ದೇವತೆಗಳನ್ನು ಭಜಿಸುತ್ತಿದ್ದಾರೆ.

**ವ್ಯಾಖ್ಯೆ:** ಕೆಲವರು ಪರಮಾತ್ಮನನ್ನು ಕುರಿತು ಧ್ಯಾನಿಸದೆ ವಿಷಯ ಸಂಬಂಧವಾದ ಕೋರಿಕೆಗಳನ್ನು ನೆರವೇರಿಸಿಕೊಳ್ಳಲು ಇತರ ದೇವತೆಗಳನ್ನು ಆರಾಧಿಸುತ್ತಾರೆ. ಅದಕ್ಕೆ ಕಾರಣ ಅವರು ತಮ್ಮ ವಿವೇಕವನ್ನು ಕಳೆದುಕೊಂಡಿರುವುದೇ ಎಂದು ಇಲ್ಲಿ ತಿಳಿಸಲಾಗಿದೆ. ಅವರ ವಿವೇಕ ಹೇಗೆ ಅಪಹೃತವಾಗಿದೆ? ಕೋರಿಕೆಗಳು ಎನ್ನುವ ಕಳ್ಳರು ಅವರ ಹೃದಯಗಳಲ್ಲಿ ಪ್ರವೇಶಿಸಿ ಅವರ ಜ್ಞಾನ(ವಿವೇಕ)ವನ್ನು ಅಪಹರಿಸಿಹಾಕಿವೆ (ಕಾಮೈಃ ಹೃತ ಜ್ಞಾನಾಃ). ತತ್ಫಲಿತವಾಗಿ ಅವರು ಆತ್ಮದ ಸರ್ವೋತ್ಕೃಷ್ಟತೆಯನ್ನು ತಿಳಿಯಲಾರದೆ, ಪರಮಾತ್ಮನನ್ನು ಸೇವಿಸುವುದನ್ನು ಬಿಟ್ಟು ಇತರ ದೇವತೆಗಳನ್ನು ಆರಾಧಿಸುತ್ತಿದ್ದಾರೆ. ಅವರ ಆರಾಧನೆಯ ಧ್ಯೇಯ ಕೋರಿಕೆಗಳನ್ನು ನೆರವೇರಿಸಿಕೊಳ್ಳುವುದೇ ಆಗಲಿ ಮೋಕ್ಷವಲ್ಲ. ಆದ್ದರಿಂದ ಮೋಕ್ಷವನ್ನು ಅಭಿಲಾಷಿಸುವ, ತೀವ್ರ ವೈರಾಗ್ಯ ಹೊಂದಿರುವ, ಸಾಧಕರು ಅವಲಂಬಿಸಬೇಕಾದ ಪದ್ಧತಿ ಇದಲ್ಲ. ಕೋರಿಕೆಗಳನ್ನು ಸಮಾಪ್ತಿಗೊಳಿಸಿಕೊಂಡು, ಇಂದ್ರಿಯಗಳನ್ನು ನಿರೋಧಿಸಿ ಹೃದಯಸ್ಥ ಪರಮಾತ್ಮನನ್ನು ನಿರಂತರ ಧ್ಯಾನಿಸುವುದೇ ಮುಕ್ತಿಗೆ ಮಾರ್ಗ.

'ಕಾಮೈಃ ಹೃತಜ್ಞಾನಾಃ' ಎಂದು ಹೇಳಿರುವುದರಿಂದ ವಿಷಯ ವಾಸನೆಗಳು ವಿಜ್ಞಾನವನ್ನು ನಾಶ ಮಾಡುತ್ತವೆ ಎಂದು ಸ್ಪಷ್ಟವಾಗುತ್ತದೆ. ಆದ್ದರಿಂದ ಭಗವನ್ಮಾರ್ಗದಲ್ಲಿ ಮಹಾಪ್ರಮಾದ ಜನಕಗಳಾದ ವಿಷಯ ಗಳನ್ನು ವಿಜ್ಞುಗಳು ತ್ಯಜಿಸಬೇಕು.

ಈ ಅಧ್ಯಾಯದ ೧೫ನೆಯ ಶ್ಲೋಕದಲ್ಲಿ ಹೇಳಲ್ಪಟ್ಟ **'ಮಾಯಯಾಽಪಹೃತಜ್ಞಾನಾಃ'**- ಮಾಯೆಯಿಂದ ಅಪಹರಿಸಲ್ಪಟ್ಟ ಜ್ಞಾನವುಳ್ಳ ಮೂಢರಿಗೂ, ಈ ಶ್ಲೋಕದಲ್ಲಿ ಹೇಳಲ್ಪಟ್ಟ **'ಕಾಮೈಃಹೃತಜ್ಞಾನಾಃ'**- ಕೋರಿಕೆಗಳಿಂದ ಅಪಹರಿಸಲ್ಪಟ್ಟ ಜ್ಞಾನವುಳ್ಳವರಿಗೂ ಬಹಳ ವ್ಯತ್ಯಾಸವಿದೆ. ಮೊದಲಿನವರು ತಮೋಗುಣ ಪ್ರೇರಿತರು. ಇವರು ಸತ್ತ್ವರಜೋಮಿಶ್ರಿತ ಗುಣವುಳ್ಳವರು. ಇವರಿಗೆ ದೈವದಲ್ಲಿ ವಿಶ್ವಾಸವಿದೆ. ಆದರೆ ಅವರಿಗೆ ಇರುವುದಿಲ್ಲ.

ಪ್ರ : ಜೀವಿಗೆ ಜ್ಞಾನ ಉಂಟಾಗದಂತೆ ಯಾವುವು ಮಾಡುವುವು?

ಉ: ಕೋರಿಕೆಗಳು, ವಿಷಯಗಳು.

ಪ್ರ : ಅವು ಹೇಗೆ ಉಂಟಾಗುತ್ತವೆ?

ಉ: ಜನ್ಮಾಂತರ ವಿಷಯ ಸಂಸ್ಕಾರಗಳಿಂದ.

ಪ್ರ : ತತ್ಫಲಿತವಾಗಿ ಮನುಜನು ಏನು ಮಾಡುತ್ತಿದ್ದಾನೆ?

ಉ: ಜ್ಞಾನವನ್ನು ಕಳೆದುಕೊಂಡು ಪರಮಾತ್ಮನನ್ನು ಬಿಟ್ಟು ಇತರ ದೇವತೆಗಳನ್ನು ಆರಾಧಿಸುತ್ತಿದ್ದಾನೆ.

**ಅ॥** ಆಯಾ ದೇವತಾರಾಧಕರಿಗೆ ಉಂಟಾಗುವ ಫಲವನ್ನು ಎರಡು ಶ್ಲೋಕಗಳ ದ್ವಾರ ಹೇಳಲಾಗುತ್ತಿದೆ-

**೨೧. ಯೋ ಯೋ ಯಾಂಯಾಂ ತನುಂ ಭಕ್ತಃ ಶ್ರದ್ಧಯಾರ್ಚಿತುಮಿಚ್ಛತಿ**
**ತಸ್ಯ ತಸ್ಯಾಚಲಾಂ ಶ್ರದ್ಧಾಂ ತಾಮೇವ ವಿದಧಾಮ್ಯಹಮ್**

**ಅರ್ಥ:** ಯಃ ಯಃ ಭಕ್ತಃ=ಯಾವ ಯಾವ ಭಕ್ತರು; ಯಾಂ ಯಾಂ ತನುಂ=ಯಾವ ಯಾವ (ದೇವತೆಗಳ) ರೂಪವನ್ನು; ಶ್ರದ್ಧಯಾ=ಶ್ರದ್ಧೆಯಿಂದ; ಅರ್ಚಿತುಂ=ಪೂಜಿಸಲು; ಇಚ್ಛತಿ=ಕೋರುವರೋ; ತಸ್ಯ ತಸ್ಯ=ಅವರವರಿಗೆ; ತಾಂ ಶ್ರದ್ಧಾಂ ಏವ=ಅದಕ್ಕೆ ಸರಿಯಾದ ಶ್ರದ್ಧೆಯನ್ನೇ; ಅಚಲಾಂ=ಸ್ಥಿರವಾದದ್ದಾಗಿ; ವಿದಧಾಮಿ=ಮಾಡುತ್ತಿದ್ದೇನೆ.

**ತಾ॥** ಯಾವ ಯಾವ ಭಕ್ತನು ಯಾವ ಯಾವ (ದೇವತೆಗಳ) ರೂಪವನ್ನು ಶ್ರದ್ಧೆಯಿಂದ ಪೂಜಿಸಲಿಚ್ಛಿಸುವನೋ, ಅವರವರಿಗೆ ಆ ರೂಪದಲ್ಲಿಯೇ ಶ್ರದ್ಧೆಯನ್ನು ಸ್ಥಿರವಾಗಿರುವಂತೆ ಮಾಡುತ್ತಿದ್ದೇನೆ.

**ವ್ಯಾಖ್ಯೆ:** ಮನುಜನು ಪರಮಾತ್ಮನನ್ನಲ್ಲದೇ ಇತರ ದೇವತೆಗಳನ್ನು ಆರಾಧಿಸಿದ ಮಾತ್ರಕ್ಕೆ ಅವರ ಮೇಲೆ ಪರಮಾತ್ಮನು ಮುನಿಸುವುದಿಲ್ಲ. ಮೇಲಾಗಿ ಆಯಾ ದೇವತೆಗಳ ಮೇಲಿರುವ ಆತನ ಭಕ್ತಿ ಹಾಗು ಶ್ರದ್ಧೆಯನ್ನು ದೃಢಪಡಿಸುವನು. **(ಅಚಲಾಂ ಶ್ರದ್ಧಾಂವಿದಧಾಮಿ)**. ಆಹಾ! ಪರಮೇಶ್ವರನ ದಯಾಳುತ್ವ ಎಷ್ಟು ಅದ್ಭುತವಾಗಿದೆ! ಆದರೆ ಭಕ್ತಿ ಶ್ರದ್ಧೆಗಳಿಂದ ದೇವತೆಗಳನ್ನು ಭಜಿಸುವವರಿಗೆ ಮಾತ್ರ ಇದು ಸಹಾಯವಾಗಬಲ್ಲದು. ಅವು ಇಲ್ಲದವರಿಗೆ ಅಲ್ಲ. ಆದ್ದರಿಂದಲೇ 'ಶ್ರದ್ಧಯಾ' ಎನ್ನುವ ಪದವನ್ನು ಇಲ್ಲಿ ಸೇರಿಸಲಾಗಿದೆ. ಅಂತಹ ಶ್ರದ್ಧೆಯಿರುವವರಿಗೆ ಅದನ್ನು ತಾನು ಇನ್ನೂ ಬಲಪಡಿಸುವನೆಂದು ಶ್ರೀಕೃಷ್ಣಪರಮಾತ್ಮ ಅಭಯವಿತ್ತನು.

ಇದು ಹಿಂದೂ ಮತದ ವಿಶಿಷ್ಟತೆ. ಪ್ರತಿಯೊಬ್ಬರೂ ಅವರವರ ಸಂಸ್ಕಾರವನ್ನನುಸರಿಸಿ, ತಕ್ಕ ಮಾರ್ಗವನ್ನು ಹುಡುಕಿಕೊಳ್ಳಲು, ತಕ್ಕ ದೇವತೆಯನ್ನು ಉಪಾಸಿಸಲು ಸಂಪೂರ್ಣ ಸ್ವೇಚ್ಛೆ ಇದರಲ್ಲಿದೆ. ಯಾವ ಮಾರ್ಗವನ್ನನುಸರಿಸಿದರೂ ಯಾರನ್ನು ಆಶ್ರಯಿಸಿಕೊಂಡು ಮುಂದೆ ಕ್ರಮಿಸಿದರೂ ಕೊನೆಗೆ ಎಲ್ಲರೂ ಗಮ್ಯವಾದ ಆತ್ಮವನ್ನೇ ಸೇರಬೇಕಾಗಿದೆ. ಅಂತಹ ಪರಮಾತ್ಮ ರೂಪಲಕ್ಷ್ಯವನ್ನು ಸೇರಲು ಅವರವರಿಗೆ ಅನುಕೂಲವಾದ ಉಪಾಯಗಳನ್ನು, ಇಷ್ಟ ದೇವತೆಗಳನ್ನು ಆರಿಸಿಕೊಳ್ಳಬಹುದು. ಆದರೆ ಭಕ್ತಿ ಶ್ರದ್ಧೆಯಿಂದ ಪುರೋಗಮಿಸುತ್ತಿರಬೇಕು. ಗಮ್ಯವನ್ನು ಕುರಿತು ಮೆಲ್ಲಗೆ ನಡೆದರೂ, ಜೋರಾಗಿ ನಡೆದರೂ ನಡೆಯುವುದನ್ನು ನಿಲ್ಲಿಸಬಾರದು. ಮತ್ತೆ ಲಕ್ಷ್ಯದ ಕಡೆಗೆ ನಡೆಯಬೇಕೇ ಹೊರತು ಹಿಂದಕ್ಕೆ ನಡೆಯಬಾರದು. ಈ ಎರಡು ನಿಯಮಗಳಿಂದ ಮನುಜನು ಯಾವಾಗಲೋ ಒಮ್ಮೆ ಆತ್ಮದೇವನನ್ನು ಸೇರಿಕೊಳ್ಳಬಲ್ಲನು. ಇತರ ದೇವತೆಗಳನ್ನು ಉಪಾಸಿಸುವರ ಭಕ್ತಿ ಶ್ರದ್ಧೆಗಳನ್ನು ಭಗವಂತನು ಸ್ಥಿರಪಡಿಸುತ್ತಿದ್ದಾನೆ. ಅಂದರೆ ಅವರು ಅಲ್ಲಿ ದೃಢತರ ಶ್ರದ್ಧೆಯಿಂದ ಇಂದಲ್ಲ ನಾಳೆ ದೇವ ದೇವನಾದ ಪರಮಾತ್ಮನನ್ನೂ ಹೊಂದುವರಾದ್ದರಿಂದ, ಅವರು ತಮ್ಮ ತಮ್ಮ ಮಾರ್ಗಗಳನ್ನು ಸ್ವೇಚ್ಛೆ, ಭಕ್ತಿ ಹಾಗು ದೃಢತೆಗಳಿಂದ ಅನುಸರಿಸಬೇಕೆಂದು ಭಗವಂತನು ಹೇಳುತ್ತಿದ್ದಾನೆ. ಇದರಿಂದ ಯಾರು ಆಧ್ಯಾತ್ಮ ಉನ್ನತಿಗಾಗಿ ಎಷ್ಟು ಪ್ರಯತ್ನ ಮಾಡುವರೋ ಅಷ್ಟೇ ಫಲವನ್ನು ಹೊಂದುವರು ಎಂದು ಸ್ಪಷ್ಟವಾಗುತ್ತದೆ. ಪ್ರಯತ್ನವೇ ಮಾಡದವನಿಗೆ ಯಾವ ಫಲವೂ ಇರುವುದಿಲ್ಲ. ಜೀವಿಯ ಪ್ರಯತ್ನವಿಲ್ಲದಿದ್ದರೆ ಭಗವಂತನು ತಾನೇ ಏನು ಮಾಡಬಲ್ಲನು? ಆದ್ದರಿಂದ ಮುಮುಕ್ಷುಗಳೆಲ್ಲರೂ ತೀವ್ರ ಪ್ರಯತ್ನ ಮಾಡಿ ಗಮ್ಯವನ್ನು ಶೀಘ್ರವಾಗಿ ಸೇರಿಕೊಳ್ಳಬೇಕು.

ಪ್ರ : ಭಗವಂತನನ್ನಾಗಲಿ, ಇತರ ದೇವತೆಯನ್ನಾಗಲಿ ಉಪಾಸಿಸುವಾಗ ಮುಖ್ಯವಾಗಿ ಇರಬೇಕಾದ ಗುಣಗಳಾವುವು?

ಉ: ಭಕ್ತಿ ಹಾಗು ಶ್ರದ್ಧೆ.

ಪ್ರ : ಅಂತಹ ಭಕ್ತಿ ಶ್ರದ್ಧೆಗಳಿಂದ ಆಯಾ ದೇವತೆಗಳನ್ನು ಉಪಾಸಿಸುವವರಿಗೆ ಭಗವಂತನು ಯಾವ ರೀತಿ ಸಹಾಯ ಮಾಡುವನು?

ಉ: ಅವರವರಿಗೆ ಆಯಾ ದೇವತೆಗಳಲ್ಲಿಯೇ ಶ್ರದ್ಧಾ ಭಕ್ತಿಗಳನ್ನು ಸ್ಥಿರಪಡಿಸುವನು.

**ಅ:** ಆ ದೇವತೆಗಳ ಮೂಲಕ ಭಗವಂತನೇ ಅವರಿಗೆ ತಕ್ಕ ಫಲಗಳನ್ನು ಕೊಡುವನೆಂದು ತಿಳಿಸಲಾಗುತ್ತಿದೆ-

**೨೨. ಸ ತಯಾ ಶ್ರದ್ಧಯಾ ಯುಕ್ತಸ್ತಸ್ಯಾರಾಧನ ಮೀಹತೇ**
**ಲಭತೇ ಚ ತತಃ ಕಾಮಾನ್ ಮಯ್ಯೆವ ವಿಹಿತಾನ್ ಹಿ ತಾನ್**

**ಅರ್ಥ:** ಸಃ=ಆತನು(ಮೇಲೆ ತಿಳಿಸಲ್ಪಟ್ಟ ಕಾಮ್ಯಭಕ್ತನು); ತಯಾ ಶ್ರದ್ಧಯಾ= ಅಂತಹ ಶ್ರದ್ಧೆಯಿಂದ; ಯುಕ್ತಃ=ಕೂಡಿಕೊಂಡವನಾಗಿ; ತಸ್ಯ=ಆ ದೇವತೆಯ; ಆರಾಧನಂ=ಪೂಜೆಯನ್ನು; ಈಹತೇ=ಮಾಡುತ್ತಿದ್ದಾನೆ; ಮಯಾ ಏವ=ನನ್ನ ಕೈಯಿಂದಲೇ; ವಿಹಿತಾನ್=ವಿಧಿಸಲ್ಪಟ್ಟ; ತಾನ್ ಕಾಮಾನ್ ಹಿ=ಆಯಾ ಕೋರಿಕೆಗಳನ್ನೇ (ಕೋರಿದ ವಸ್ತುಗಳನ್ನೇ); ತತಃ=ಆ ದೇವತೆಗಳಿಂದ; ಲಭತೇ=ಹೊಂದುತ್ತಿದ್ದಾನೆ.

**ತಾ।।** ಆತನು(ಮೇಲೆ ತಿಳಿಸಲ್ಪಟ್ಟ ಕಾಮ್ಯ ಭಕ್ತನು) ಅಂತಹ ಶ್ರದ್ಧೆಯಿಂದ ಕೂಡಿದಂಥವನಾಗಿ ಆಯಾ ದೇವತೆಗಳ ಆರಾಧನೆಯನ್ನು ಮಾಡುತ್ತಿದ್ದಾನೆ. ಮತ್ತೆ ನನ್ನಿಂದಲೇ ವಿಧಿಸಲ್ಪಟ್ಟ ಆಯಾ ಇಷ್ಟಫಲಗಳನ್ನು ಆಯಾ ದೇವತೆಗಳ ದ್ವಾರ ಹೊಂದುತ್ತಿದ್ದಾನೆ.

**ವ್ಯಾಖ್ಯೆ:** ಈ ಪ್ರಕಾರವಾಗಿ ಭಗವಂತನಿಂದ ಸ್ಥಿರಪಡಿಸಲ್ಪಟ್ಟ ಶ್ರದ್ಧೆಯಿಂದ ಕೂಡಿದಂಥವನಾಗಿ ಆ ಭಕ್ತನು ಆಯಾ ದೇವತೆಗಳನ್ನು ಆರಾಧಿಸುತ್ತ ತತ್ಫಲಿತವಾಗಿ ಅವರಿಂದ ತನ್ನ ಇಷ್ಟಫಲಗಳನ್ನು ಹೊಂದುತ್ತಿದ್ದಾನೆ. ಹಾಗೆ ಆ ದೇವತೆಗಳಿಂದ ಆತನು ತನ್ನ ಅಭೀಷ್ಟ ಫಲಗಳನ್ನು ಹೊಂದಿದಂತೆ ಕಂಡರೂ ವಾಸ್ತವವಾಗಿ ಅವು ಭಗವಂತನಿಂದ ನಿರ್ದೇಶಿಸಲ್ಪಟ್ಟಿರುವುವೇ ಆಗಿವೆ. ಆದ್ದರಿಂದ ಅವು ಆತನಿಗೆ ಭಗವಂತನಿಂದಲೇ ಲಭಿಸಿರುವುವಾಗಿವೆ. ಈ ಚರಾಚರ ಪ್ರಪಂಚವೆಲ್ಲವೂ ಒಂದು ಪ್ರಭುತ್ವ ಯಂತ್ರಾಂಗ (Universal Govt.). ಪರಮಾತ್ಮ ಅದರ ಅಧಿಪತಿ. ಇಂದ್ರಾದಿ ದೇವತೆಗಳೆಲ್ಲರೂ ಭಿನ್ನ ಭಿನ್ನ ಶಾಖೆಗಳನ್ನು ನಿರ್ವಹಿಸುವ ಉದ್ಯೋಗಿಗಳು. ಜಗತ್ಪರಿಪಾಲನಾ ನಿಯಮಗಳೆಲ್ಲವನ್ನು, ಶಾಸನಗಳೆಲ್ಲವನ್ನು ಜಗತ್ಪ್ರಭುವಾದ ಪರಾತ್ಪರನು ಮೊಟ್ಟಮೊದಲೇ ನಿರ್ಣಯಿಸಿರುವನು. ಅವುಗಳನ್ನನುಸರಿಸಿಯೇ ಆಯಾ ಶಾಖಾಧಿಪತಿಗಳು ಕಾರ್ಯಗಳನ್ನು ಅಮಲಿನಲ್ಲಿಡಬೇಕಾಗುತ್ತದೆ. ಆದ್ದರಿಂದ ಭಕ್ತರಿಗೆ ಅವರವರ ಅಪೇಕ್ಷೆಗಳನ್ನು ಆಯಾ ದೇವತೆಗಳ ದ್ವಾರ ಪ್ರಸಾದಿಸಲ್ಪಟ್ಟರೂ ದೇವ ದೇವನಾದ ಸರ್ವೇಶ್ವರನೇ ಅದನ್ನು ಕೊಟ್ಟಂತಾಗುವುದು. (ಸರ್ಕಾರದಲ್ಲಿ ಕೆಳ ದರ್ಜೆಯ ಉದ್ಯೋಗಿಯಿಂದ ಮಾಡಲ್ಪಟ್ಟ ಕೆಲಸ ವಾಸ್ತವವಾಗಿ ಸರ್ಕಾರದ ಶಾಸನವೇ ಆದುದರಿಂದ ಸರ್ಕಾರವೇ ಮಾಡಿದ ಹಾಗೆ).

ಭಗವಂತನು ಕಲ್ಪವೃಕ್ಷವಿದ್ದ ಹಾಗೆ. ಆತನನ್ನು ಆಶ್ರಯಿಸಿ ಶ್ರದ್ಧೆಯಿಂದ ಯಾರು ಏನು ಕೋರಿದರೂ ಅವನು ಅದನ್ನು ಕೊಡುವನು. ಆದ್ದರಿಂದ ಅಲ್ಪವಾದ ಪ್ರಾಪಂಚಿಕ ದೃಶ್ಯಪದಾರ್ಥಗಳನ್ನು ಕೋರುವುದಕ್ಕಿಂತ ಶಾಶ್ವತವಾದ ಮೋಕ್ಷವನ್ನು ಕೋರುವುದು ಶ್ರೇಯಸ್ಕರ.

ಈ ಶ್ಲೋಕದ ಕೊನೆಯಲ್ಲಿ 'ಹಿ, ತಾನ್' ಎನ್ನುವ ಎರಡು ಪದಗಳನ್ನು ಸೇರಿಸಿ ಕೆಲವರು 'ಹಿತಾನ್' ಎಂದು ಓದಿಕೊಂಡು 'ಹಿತಾನ್, ಕಾಮಾನ್'- ಇಷ್ಟವಾದ ಭೋಗ್ಯವಸ್ತುಗಳು ಎಂದು ಅರ್ಥ ಹೇಳುವರು. ಆದರೆ ಇಷ್ಟವಿಲ್ಲದ ಭೋಗ್ಯ ವಸ್ತುಗಳನ್ನು ಯಾರೂ ಕೋರುವುದಿಲ್ಲವಾದ್ದರಿಂದ ಆ ವಿಶೇಷಣವನ್ನು ಅದಕ್ಕೆ ಜೋಡಿಸುವುದು ಅನಾವಶ್ಯಕ ಎಂದು ತೋರುತ್ತದೆ.

ಪ್ರ : ದೇವತೆಗಳ ಮೇಲೆ ಶ್ರದ್ಧೆಯುಳ್ಳ ಭಕ್ತನು ಏನು ಮಾಡಬೇಕು?

ಉ : ಅವರು ಇನ್ನೂ ಅಧಿಕವಾದ ಶ್ರದ್ಧೆಯಿಂದ ಆರಾಧಿಸಬೇಕು.

ಪ್ರ : ತತ್ಫಲಿತವಾಗಿ ಆತನು ಏನು ಹೊಂದುವನು?

ಉ : ತನ್ನ ಅಭೀಷ್ಟ ಫಲವನ್ನು ಅವರಿಂದ ಹೊಂದುವನು.

ಪ್ರ : ಆ ಫಲಗಳನ್ನು ಯಾರು ನಿರ್ಣಯಿಸುವರು?

ಉ : ದೇವ ದೇವನಾದ ಪರಮಾತ್ಮನೇ. ಆದ್ದರಿಂದ ಆತನೇ ಆಯಾ ದೇವತೆಗಳ ದ್ವಾರ ಅವರವರ ಅಪೇಕ್ಷೆಗಳನ್ನು ತೀರಿಸಿದಂತಾಗುವುದು.

**ಅ।।** ಆಯಾ ದೇವತೆಗಳನ್ನು ಆರಾಧಿಸುವುದರಿಂದ ಲಭಿಸುವ ಫಲಗಳು ನಶ್ವರವಾದವುಗಳು. ಆದರೆ ತನ್ನನ್ನು ಆರಾಧಿಸುವುದರಿಂದ ಶಾಶ್ವತ ಮೋಕ್ಷವು ಲಭಿಸುವುದೆಂದು ಭಗವಂತನು ಹೇಳುತ್ತಿದ್ದಾನೆ-

**೨೩. ಅಂತವತ್ತು ಫಲಂ ತೇಷಾಂ ತದ್ಭವತ್ಯಲ್ಪಮೇಧಸಾಮ್**
**ದೇವಾನ್‌ದೇವಯಜೋ ಯಾಂತಿ ಮದ್ಭಕ್ತಾ ಯಾಂತಿ ಮಾಮಪಿ**

**ಅರ್ಥ:** ಅಲ್ಪಮೇಧಸಾಂ=ಅಲ್ಪ ಬುದ್ಧಿಯುಳ್ಳ; ತೇಷಾಂ=ಅವರ; ತತ್ಫಲಂ ತು=ಆ ಫಲವನ್ನು; ಅಂತವತ್=ಅಂತ್ಯವುಳ್ಳದ್ದಾಗಿ (ಅಶಾಶ್ವತವಾಗಿ); ಭವತಿ=ಇರುವುದು; ದೇವಯಜಃ=ದೇವರನ್ನು ಪೂಜಿಸುವವರು; ದೇವಾನ್=ದೇವತೆಗಳನ್ನು; ಯಾಂತಿ=ಹೊಂದುತ್ತಿದ್ದಾರೆ; ಮದ್ಭಕ್ತಾಃ=ನನ್ನ ಭಕ್ತರು; ಮಾಂ ಅಪಿ ಯಾಂತಿ=ನನ್ನನ್ನೇ ಹೊಂದುತ್ತಿದ್ದಾರೆ.

**ತಾ।।** ಅಲ್ಪ ಬುದ್ಧಿಯುಳ್ಳವರ ಆ ಫಲ ನಾಶವಾಗುವಂತಹದು. (ಏಕೆಂದರೆ) ದೇವತೆಗಳನ್ನು ಪೂಜಿಸುವವರು ದೇವತೆಗಳನ್ನೇ ಹೊಂದುವರು. ನನ್ನ ಭಕ್ತರು (ನನ್ನನ್ನು ಪೂಜಿಸುವವರು) ನನ್ನನ್ನೇ ಹೊಂದುತ್ತಿದ್ದಾರೆ.

**ವ್ಯಾಖ್ಯೆ:** ಪರಮಾತ್ಮನನ್ನು ಬಿಟ್ಟು ಇತರೆ ದೇವತೆಗಳನ್ನು ಆರಾಧಿಸುವವರು ಎಂತಹವರು, ಅವರು ಎಂತಹ ಫಲಗಳನ್ನು ಹೊಂದುವರು ಮತ್ತು ಭಗವದ್ಭಕ್ತರು ಎಂತಹ ಫಲಗಳನ್ನು ಹೊಂದುವರು ಎನ್ನುವುದನ್ನು ಈ ಶ್ಲೋಕದಲ್ಲಿ ವಿವರಿಸಲಾಗಿದೆ. ಸಾಕ್ಷಾತ್ ದೇವದೇವನಾದ ಪರಮಾತ್ಮನನ್ನು ಬಿಟ್ಟು ಇತರೆ ದೇವತೆಗಳನ್ನು ಭಜಿಸುವವನು ಅಲ್ಪ ಫಲಗಳನ್ನೇ ಹೊಂದುವನು. ಆದ್ದರಿಂದ ಅಂತಹ ನಶ್ವರ ಫಲಗಳಿಗೆ ಕೈಚಾಚುವವನನ್ನು ಅಲ್ಪ ಬುದ್ಧಿ (Small brain)ಉಳ್ಳವನೆಂದು ಹೇಳಲಾಗಿದೆ. ಏಕೆಂದರೆ, ಪೂರ್ಣಬುದ್ಧಿಯುಳ್ಳವನಾದರೆ ಶಾಶ್ವತ ಫಲವನ್ನು ಕೊಡುವಂತಹ, ಜನ್ಮರಾಹಿತ್ಯವನ್ನು ಕೊಡುವ ಪರಮಾತ್ಮನನ್ನೇ ಆಶ್ರಯಿಸುವನಲ್ಲವೇ? ಅಲ್ಪ ಬುದ್ಧಿಗಳು, ಈ ಅಲ್ಪ ಜೀವನದಲ್ಲಿ ದೇವತೆಗಳನ್ನು ನಂಬಿ ಶಾಶ್ವತ ಪರಮಾತ್ಮನನ್ನು ಮರೆಯುವರು. ಅವರು ಹೊಂದುವ ಫಲವೂ ಅಲ್ಪವಾಗಿಯೇ ಇರುವುದು (ಅಂತವತ್). ಗಂಗಾನದಿಯನ್ನು ಬಿಟ್ಟು ಪಕ್ಕದಲ್ಲಿರುವ ಚಿಕ್ಕ ಭಾವಿಯನ್ನು ಆಶ್ರಯಿಸುವವನು ಎಂತಹವನೋ, ಕಲ್ಪವೃಕ್ಷವನ್ನು ಬಿಟ್ಟು ಚಿಕ್ಕ

ಗಿಡದ ಆಶ್ರಯ ಪಡೆಯುವವನು ಎಂತಹವನೋ, ಪರಮಾತ್ಮನನ್ನು ಬಿಟ್ಟು ಅಲ್ಪ ಫಲದಾತರಾದ ದೇವತೆಗಳನ್ನು ಆಶ್ರಯಿಸುವವನು ಅಂತಹವನೇ ಆಗುವನು. ಅವರು ಕೊಡುವ ಅಲ್ಪಸುಖಗಳನ್ನು, ಭೋಗ್ಯ ಪದಾರ್ಥಗಳನ್ನು ಪಡೆದು ಆನಂದಿಸುತ್ತಿದ್ದಾನೆ.

ಪ್ರಪಂಚದಲ್ಲಿರುವ ಯಾವುದೇ ವಸ್ತುವಾಗಲಿ, ಯಾವ ವ್ಯಕ್ತಿಯೇ ಆಗಲಿ, ಆತನು ಇಂದ್ರನಾದರೂ ಸರಿಯೇ, ಚಂದ್ರನಾದರೂ ಸರಿಯೇ ದೃಶ್ಯವರ್ಗಕ್ಕೆ ಸೇರಿರುವುದರಿಂದ ಕಾಲಕ್ರಮೇಣ ನಶಿಸಿ ಹೋಗಲೇಬೇಕು. ದೃಗ್ವಸ್ತುವಾದ ಆತ್ಮವೊಂದೇ ಈ ಪ್ರಪಂಚದಲ್ಲಿ ಏಕೈಕ ಅವಿನಾಶಿ ವಸ್ತು. ಆದ್ದರಿಂದ ವಿಜ್ಞುಗಳು ಅದನ್ನೇ ಅನ್ವೇಷಿಸಿ ಆಶ್ರಯಿಸುವರು. ಅಲ್ಪ ಬುದ್ಧಿಯುಳ್ಳವರೇ ಪ್ರಾಪಂಚಿಕ ಸುಖಗಳನ್ನು ಕೊಡುವ ನಶ್ವರ ದೇವತಾ ಸಮೂಹವನ್ನು ಆಶ್ರಯಿಸುವರು. 'ದೇವತೆಗಳನ್ನು ಆರಾಧಿಸುವವನು ದೇವತೆಗಳನ್ನು, ನನ್ನನ್ನು ಆರಾಧಿಸುವವನು ನನ್ನನ್ನೇ ಹೊಂದುವನು' ಎಂದು ಭಗವಂತನು ಇಲ್ಲಿ ತಿಳಿಸಿರುವನು. ಆದ್ದರಿಂದ ನಿರತಿಶಯ ಸುಖವನ್ನು ಪ್ರಸಾದಿಸುವ ಪರಮಾತ್ಮನ ಭಕ್ತನಾಗುವುದು ಉತ್ತಮವೋ, ಅಲ್ಪ ಸುಖವನ್ನೀಯುವ ಆಯಾ ದೇವತೆಗಳ ಭಕ್ತರಾಗುವುದು ಉತ್ತಮವೋ ವಿವೇಕವುಳ್ಳವರು ಯೋಚಿಸಬೇಕು. ಹಾಗೆ ಯೋಚಿಸಿ ತಮ್ಮ ಯಾವಚ್ಛಕ್ತಿಯನ್ನು, ಅಮೂಲ್ಯವಾದ ಮಾನವ ಜೀವನವನ್ನು, ಪುನರಾವೃತ್ತಿರಹಿತ ಶಾಶ್ವತ ಮೋಕ್ಷ ಸುಖವನ್ನು ನೀಡುವ ಪರಮಾತ್ಮನ ಸಾಕ್ಷಾತ್ಕಾರದಲ್ಲೇ ವಿನಿಯೋಗಿಸಿ ಧನ್ಯರಾಗಬೇಕು. ಯಾರು ಏನನ್ನು ಆರಾಧಿಸಿದರೆ ಅವರು ಅದನ್ನೇ ಪಡೆಯುವರು. ರಾಕ್ಷಸರನ್ನು ಆರಾಧಿಸಿದರೆ ರಾಕ್ಷಸರನ್ನೇ ಹೊಂದುವರು. ದೇವತೆಗಳನ್ನಾರಾಧಿಸಿದರೆ ದೇವತೆಗಳನ್ನೇ ಹೊಂದುವರು. ಪರಮಾತ್ಮನನ್ನಾರಾಧಿಸಿದರೆ ಪರಮಾತ್ಮನನ್ನೇ ಹೊಂದುವರು. ಬಂಧವಾಗಲಿ, ಸ್ವರ್ಗವಾಗಲಿ, ಮೋಕ್ಷವಾಗಲಿ, ಅವರವರ ಕೈಯಲ್ಲಿದೆ. ಆದ್ದರಿಂದ ಬುದ್ಧಿಯನ್ನುಪಯೋಗಿಸಿ ಆಳವಾಗಿ ಆಲೋಚಿಸಿ ತಾನು ಯತ್ನಿಸುತ್ತಿರುವುದು ಎಂತಹ ಫಲವನ್ನು ಕೊಡುವುದು? ಅದು ಸಂಸಾರ ಬಂಧರಹಿತವನ್ನುಂಟು ಮಾಡುವುದೇ? ಇಲ್ಲ ಅದನ್ನು ಮತ್ತಷ್ಟು ದೃಢಪಡಿಸುವುದೇ? ಎನ್ನುವುದನ್ನು ಆಲೋಚನೆ ಮಾಡಿ ಸಾಧಕನು ಕಾರ್ಯರಂಗಕ್ಕೆ ಧುಮುಕಬೇಕು. ಆದ್ದರಿಂದ ಮಹಾತ್ಮರಾದ ಸದ್ಗುರುಗಳಿಂದ, ಇಂತಹ ಗೀತಾದಿ ಸದ್ಗ್ರಂಥಗಳಿಂದ ಪ್ರಪಂಚದಲ್ಲಿ ಸರ್ವೋತ್ತಮ ಲಕ್ಷ್ಯವಾವುದೋ ಚೆನ್ನಾಗಿ ಅರಿತು, ಅಂತಹ ಸರ್ವೇಶ್ವರನ (ಪರಮಾತ್ಮನ) ಪಾದಾರವಿಂದಗಳನ್ನೇ ಅನನ್ಯವಾಗಿ ಆಶ್ರಯಿಸಿ ಮುಕ್ತಿ ಹೊಂದಬೇಕು.

ಪ್ರ : ದೇವತೆಗಳನ್ನು ಆರಾಧಿಸುವವರು ಹೊಂದುವ ಫಲ ಯಾವುದು?

ಉ: ನಾಶವಂತವಾದುದು (ಅಂತ್ಯವುಳ್ಳದ್ದು).

ಪ್ರ : ಅಂತಹ ನಾಶವಂತವಾದುದಕ್ಕೆ ಪ್ರಯತ್ನಿಸುವವರು ಎಂತಹವರು?

ಉ: ಅಲ್ಪಬುದ್ಧಿಯುಳ್ಳವರು (ಅಲ್ಪಮೇಧಸಾಂ).

ಪ್ರ : ದೇವತಾರಾಧಕರು ಏನನ್ನು ಹೊಂದುವರು? ಪರಮಾತ್ಮನನ್ನು ಅರ್ಚಿಸುವವರು ಏನನ್ನು ಹೊಂದುವರು?

ಉ: ದೇವತಾರಾಧಕನು ಆಯಾ ದೇವತೆಗಳನ್ನು, ಭಗವದಾರಾಧಕನು ಭಗವಂತನ (ಆತ್ಮಸಾಕ್ಷಾತ್ಕಾರರೂಪ ಮೋಕ್ಷ)ವನ್ನು ಹೊಂದುವನು.

ಪ್ರ : ಆದ್ದರಿಂದ ವಿಜ್ಞನಾದವನು ಏನು ಮಾಡಬೇಕು?

ಉ: ಶಾಶ್ವತ ಮೋಕ್ಷ ಪದವನ್ನು ಕೊಡುವ ಪರಮಾತ್ಮನನ್ನೇ ಆಶ್ರಯಿಸಬೇಕು.

**ಅ॥** ಆದರೂ ಜನಗಳಲ್ಲಿ ಕೆಲವರು ತನ್ನನ್ನು ಏಕೆ ಆಶ್ರಯಿಸುವುದಿಲ್ಲ ಎನ್ನುವುದನ್ನು ವಿವರಿಸಲಾಗುತ್ತಿದೆ-

**೨೪. ಅವ್ಯಕ್ತಂ ವ್ಯಕ್ತಿಮಾಪನ್ನಂ ಮನ್ಯಂತೇ ಮಾಮಬುದ್ಧಯಃ**
**ಪರಂ ಭಾವಮಜಾನಂತೋ ಮಮಾವ್ಯಯಮನುತ್ತಮಮ್**

**ಅರ್ಥ:** ಅವ್ಯಯಂ=ನಾಶರಹಿತವಾದ; ಅನುತ್ತಮಮ್=ಸರ್ವೋತ್ತಮ ವಾದ; ಪರಂ=ಪ್ರಕೃತಿಪರವಾಗಿ (ವಿಲಕ್ಷಣವಾಗಿ)ರುವುದಾಗಿ; ಮಮ=ನನ್ನ; ಭಾವಂ=ಸ್ವರೂಪವನ್ನು; ಅಜಾನಂತಃ=ತಿಳಿಯದ; ಅಬುದ್ಧಯಃ= ಅವಿವೇಕಿಗಳು; ಅವ್ಯಕ್ತಂ=ಇದ್ರಿಯಾದಿಗಳಿಗೆ ಗೋಚರವಾಗದ (ಪ್ರಪಂಚಾತೀತನಾದ); ಮಾಂ=ನನ್ನನ್ನು; ವ್ಯಕ್ತಿಂ ಆಪನ್ನಂ=ಪಾಂಚಭೌತಿಕ ದೇಹವನ್ನು ಹೊಂದಿದವನಾಗಿ; ಮನ್ಯಂತೇ=ತಿಳಿಯುತ್ತಿದ್ದಾರೆ.

**ತಾ॥** ನಾಶರಹಿತವಾದ, ಸರ್ವೋತ್ತಮವಾದ, ಪ್ರಕೃತಿಗೆ ಪರವಾಗಿ ಬೆಳಗುವಂತಹ ನನ್ನ ಸ್ವರೂಪವನ್ನು ತಿಳಿಯದ ಅವಿವೇಕಿಗಳು ಅವ್ಯಕ್ತ ರೂಪನಾದ (ಪ್ರಪಂಚಾತೀತನಾದ) ನನ್ನನ್ನು ಪಂಚಭೂತ ದೇಹವನ್ನು ಹೊಂದಿದವನೆಂದು ಭಾವಿಸುತ್ತಿದ್ದಾರೆ.

**ವ್ಯಾಖ್ಯೆ:** ಭಗವಂತನು ವಾಸ್ತವವಾಗಿ ನಿರಾಕಾರಿ, ಸರ್ವವ್ಯಾಪಿ ಹಾಗು ಪ್ರಪಂಚಾತೀತನು. ಪ್ರಕೃತಿಗೆ ವಿಲಕ್ಷಣವಾದವನು, ಅನಂತನು, ನಾಶರಹಿತನು. ಲೋಕಕಲ್ಯಾಣಾರ್ಥವಾಗಿ ಆತನು ಆಗಾಗ ದೇಹವನ್ನು ಧರಿಸಿ ದುಷ್ಟಶಿಕ್ಷಣ, ಶಿಷ್ಟರಕ್ಷಣ, ಧರ್ಮ ಸಮುದ್ಧರಣಾದಿ ಕಾರ್ಯಗಳನ್ನು ನಿರ್ವಹಿಸಲು ಲೋಕದಲ್ಲಿ ಅವತರಿಸುತ್ತಿರುತ್ತಾನೆ. ಮಾಯೆಯನ್ನು ಸ್ವಾಧೀನ ಪಡಿಸಿಕೊಂಡವನಾದ್ದರಿಂದ ಅವನು ತನ್ನ ಇಷ್ಟ ಪ್ರಕಾರವಾಗಿ ದೇಹವನ್ನು ತ್ಯಜಿಸಲು ಅಥವ ಗ್ರಹಿಸಲು ಬೇಕಾದ ಶಕ್ತಿಯುಳ್ಳವನಾಗಿದ್ದಾನೆ.

**'ಪ್ರಕೃತಿಂ ಸ್ವಾಮಧಿಷ್ಠಾಯ ಸಂಭವಾಮ್ಯಾತ್ಮ ಮಾಯಯಾ (೪-೬)'** ಎಂದು ಭಗವಂತನೇ ಒಂದು ಕಡೆ ಹೇಳಿರುತ್ತಾನೆ. ಆದ್ದರಿಂದ ಆ ಪ್ರಕಾರವಾಗಿ ಅವತರಿಸಿದಾಗ, ಅಂದರೆ ದೇಹವನ್ನು ಸ್ವೀಕರಿಸಿದಾಗ, ಆತನ ಸಮಿಷ್ಟತ್ವಕ್ಕೆ ಯಾವ ರೀತಿಯ ಭಂಗವೂ ಉಂಟಾಗಲಾರದು. ಆ ದೇಹ ರೂಪವು ತಾತ್ಕಾಲಿಕವಾಗಿ ತಾನೇ ಕಲ್ಪಿಸಿಕೊಂಡಿರುವುದೇ ಆಗಿದೆ. ನಾಮರೂಪಾತ್ಮಕ ವಾದ ಆ ದೇಹ ಆತನ ಪರಿಪೂರ್ಣ ರೂಪವಲ್ಲ. ಭಕ್ತರನ್ನು ಅನುಗ್ರಹಿಸಲು ತಾತ್ಕಾಲಿಕವಾಗಿ ಗ್ರಹಿಸಿದುದೇ ಆಗಿದೆ.

ಆದರೂ ವಿವೇಕವಿಲ್ಲದವರು (ಮಂದ ಬುದ್ಧಿಗಳು) ಆ ಪುಟ್ಟ ದೇಹವೇ ಭಗವಂತನ ಯಥಾರ್ಥರೂಪವೆಂದು, ಭಗವಂತನು ಮನುಷ್ಯ ಮಾತ್ರನೇ ಎಂದು ತಿಳಿಯುತ್ತಿದ್ದಾರೆ. ದೇವಕೀ, ವಸುದೇವರಿಂದ ಜನ್ಮಿತನಾದ ಈ ದೃಶ್ಯಕ್ಕೆ ಬೀಳುವ ಶರೀರವೇ ಭಗವಂತನೆಂದು, ಇದಕ್ಕೆ ಮೀರಿ ಬೇರೊಂದು ರೂಪ ಆತನಿಗಿಲ್ಲ ಎಂದು ಅವರ ಅಭಿಪ್ರಾಯ. ಪ್ರಾರಂಭದಲ್ಲಿ ಭಕ್ತಿ ಶ್ರದ್ಧೆಗಳುಂಟಾಗಲು ಭಗವಂತನ ಸಾಕಾರ ರೂಪವನ್ನು ಒಪ್ಪಿಕೊಂಡರೂ ಅಷ್ಟು ಮಾತ್ರದಿಂದ ತೃಪ್ತಿ ಹೊಂದದೆ ಆತನ ನಿರಾಕಾರ ರೂಪವನ್ನೂ ಸಹ ಕ್ರಮೇಣ ತಿಳಿದುಕೊಳ್ಳಬೇಕು. ಪರಮಾತ್ಮನಿಗೆ ಪರಾಪರಾರೂಪಗಳೆರಡೂ ಇವೆ. ಭಕ್ತರನ್ನು ಅನುಗ್ರಹಿಸಲು ರಾಮಕೃಷ್ಣಾದಿ ಅವತಾರಗಳು ಅಪರಾ ರೂಪಗಳು. ಅವ್ಯಕ್ತ, ಅನಂತ, ಸದ್ಘನ, ಚಿದ್ಘನ ಸ್ವರೂಪ ಪರಾರೂಪ. ಆದ್ದರಿಂದಲೇ ಅದನ್ನು ಪರಂಭಾವ ಎಂದು ಹೇಳಲಾಗಿದೆ. ಅದು ಭಗವಂತನ ವಾಸ್ತವ ಸ್ವರೂಪ.

ಅದನ್ನು ನಂಬದೆ ಪಂಚಭೂತ ಶರೀರ ಮಾತ್ರವೇ ಭಗವಂತ ಎಂದು ತಿಳಿಯುವವರು ಅವಿವೇಕಿಗಳು, ಅಲ್ಪಬುದ್ಧಿಗಳು (ಅಬುದ್ಧಯಃ) ಎಂದು ಕರೆಯಲ್ಪಟ್ಟಿದ್ದಾರೆ. ಏಕೆಂದರೆ ಅವರು ದೃಶ್ಯಕ್ಕೆ ಪರವಾಗಿ, ಅವ್ಯಯವಾದ ಆ ಅಪರಿಚ್ಛಿನ್ನ ಸ್ವರೂಪವನ್ನು ತಿಳಿಯದೆ ಪರಿಚ್ಛಿನ್ನ ಸ್ವರೂಪವನ್ನು ಮಾತ್ರವೇ ಭಗವಂತನೆಂದು ನಂಬಿದ್ದಾರೆ. ಅದು ಬಹಳ ತಪ್ಪು. ಆದ್ದರಿಂದಲೇ ಅವರನ್ನು ಮಂದಬುದ್ಧಿಗಳೆಂದು ಕರೆಯಲಾಗಿದೆ.

ಭಗವಂತನನ್ನು ಇಲ್ಲಿ ನಾಲ್ಕು ವಿಶೇಷಣಗಳಿಂದ ಕರೆಯಲಾಗಿದೆ. ೧) ಅವ್ಯಕ್ತ ೨) ಪ್ರಪಂಚಾತೀತ ೩) ಅವ್ಯಯ ೪) ಸರ್ವೋತ್ತಮ. ಪರಮಾತ್ಮನು ವಾಸ್ತವವಾಗಿ ಅವ್ಯಕ್ತನು. ಅಂದರೆ ಸ್ಥೂಲನೇತ್ರಗಳಿಗೆ ಕಂಡುಬರುವುದಿಲ್ಲ. ಏಕೆಂದರೆ ವ್ಯಕ್ತವಾಗುವ ಪ್ರತಿ ವಸ್ತುವೂ ಯಾವುದೋ ಒಂದು ಸಮಯದಲ್ಲಿ ನಶಿಸಿ ಹೋಗುವುದು. ಪರಮಾತ್ಮನೂ ಸಹ ವ್ಯಕ್ತರೂಪ ಹೊಂದಿರುವವನೆಂದು ಭಾವಿಸಿದರೆ ಆತನೂ ಕೂಡ ನಶಿಸಿ ಹೋಗುವವನೆಂದು ಭಾವಿಸಬೇಕಾಗುತ್ತದೆ. ಆದರೆ ಅದು ಹಾಗಿಲ್ಲ; ಆತನು ಅವಿನಾಶಿ; ಆದ್ದರಿಂದ ಭೌತಿಕ ನೇತ್ರಗಳಿಗೆ ಕಾಣಿಸುವ ಸ್ಥೂಲವಿಗ್ರಹ ಮಾತ್ರವೇ, ಇಲ್ಲವೆ ಉಪಾಧಿ ಮಾತ್ರವೇ ದೇವರೆಂದು ತಿಳಿದರೆ ಅದು ಕೇವಲ ಭ್ರಮೆಯಾಗುವುದೆಂದು ಇಲ್ಲಿ ಸ್ಪಷ್ಟೀಕರಿಸಲಾಗಿದೆ. ಮತ್ತೆ ಭಗವಂತನು ಅತಿ ಸೂಕ್ಷ್ಮವಾದವನು. ಸ್ಥೂಲವಾದ ಆಕಾಶವೇ ಕಣ್ಣಿಗೆ ಕಾಣಿಸದಿದ್ದಾಗ ಇನ್ನು ಮನಸ್ಸಿಗಿಂತಲೂ ಸೂಕ್ಷ್ಮವಾದ ಚಿದಾಕಾಶರೂಪ ಪರಮಾತ್ಮನು ಕಣ್ಣಿಗೆ ಹೇಗೆ ಕಾಣುವನು? ಆದ್ದರಿಂದಲೇ ಅವನನ್ನು ಅವ್ಯಕ್ತರೂಪಿಯೆಂದು ಹೇಳಲಾಗಿದೆ (ಆದರೂ ಜನರಿಗೆ ಶುದ್ಧ ಬುದ್ಧಿಯಿಂದ ಅವರವರ ಹೃದಯದಲ್ಲಿ ಆತ್ಮರೂಪದಲ್ಲಿ ಸಾಕ್ಷಾತ್ಕಾರವಾಗುತ್ತಲೇ ಇದ್ದಾನೆ). ಮತ್ತೆ ದೃಶ್ಯಕ್ಕೆ ಪರನಾಗಿ ದೃಕ್ಸ್ವರೂಪನಾಗಿರುವುದರಿಂದ ಪ್ರಪಂಚಾತೀತನೆಂದು ಹೇಳಲ್ಪಟ್ಟಿದ್ದಾನೆ. ನಾಶವಿಲ್ಲದೇ ಇರುವುದರಿಂದ ಅವ್ಯಯನೆಂದು ಕರೆಯಲ್ಪಡುತ್ತಾನೆ. ದೇಶ ಹಾಗು ಕಾಲಕ್ಕೆ ಅತೀತನಾಗಿ ದೃಶ್ಯದೋಷರಹಿತನಾಗಿ, ನಾಶರಹಿತನಾಗಿರುವುದರಿಂದ ಸರ್ವೋತ್ತಮನೆಂದು ಹೇಳಲಾಗಿದೆ.

ಈ ಶ್ಲೋಕದ ದ್ವಾರ- ಸಗುಣಾರಾಧಕರು, ಸಾಕಾರೋಪಾಸಕರು, ವಿಗ್ರಹಾರಾಧನಾಪರರು, ಭಗವಂತನನ್ನು ಒಂದು ವ್ಯಕ್ತಿಯೆಂದು ಭಾವಿಸಿ ಸೇವಿಸುವವರು ಕ್ರಮವಾಗಿ ಏಕಾಗ್ರತೆ ಹಾಗು ಭಕ್ತಿಗಳು ಚೆನ್ನಾಗಿ ಸ್ಥಿರವಾದ ನಂತರ, ತಮ್ಮ ಭಕ್ತಿ ಹಾಗು ದೃಷ್ಟಿಯನ್ನು ವಿಶಾಲಗೊಳಿಸಿಕೊಂಡು ಮೇಲಿನ ಮೆಟ್ಟಿಲುಗಳನ್ನು ಆರೋಹಣ ಮಾಡಿ ಭಗವಂತನು ವಿಗ್ರಹದಲ್ಲಿ ಮಾತ್ರವಲ್ಲದೆ ಸಮಸ್ತ ಚರಾಚರಗಳಲ್ಲಿ, ಭೂತ, ಭವಿಷ್ಯತ್ವರ್ತಮಾನಗಳಲ್ಲಿ ವ್ಯಾಪಿಸಿದ್ದು ಪ್ರಪಂಚಾತೀತನಾಗಿ ವರ್ತಿಸುತ್ತಿದ್ದಾನೆಂದೂ, ಅದೇ ಆತನ ಯಥಾರ್ಥ ರೂಪವೆಂದೂ ತಿಳಿಯಬೇಕೆಂದು ಸೂಚಿಸಲಾಗಿದೆ.

ಪ್ರ : ಭಗವಂತನ ವಾಸ್ತವ ರೂಪ ಎಂತಹದು?

ಉ: ೧) ಅವ್ಯಕ್ತವಾದುದು ೨) ಪ್ರಪಂಚಾತೀತವಾದುದು ೩) ನಾಶರಹಿತ ವಾದುದು ೪) ಸರ್ವೋತ್ತಮವಾದುದು.

ಪ್ರ : ಭಗವಂತನು ಒಂದು ದೇಹ ಎಂದು ತಿಳಿಯುವರು ಎಂತಹವರು?

ಉ: ಅವಿವೇಕಿಗಳು.

**ಅ||** ಯಾವ ಕಾರಣದಿಂದ ಪರಮಾತ್ಮನನ್ನು ಜನರು ತಿಳಿದುಕೊಳ್ಳಲಾಗುತ್ತಿಲ್ಲವೋ, ಒಂದು ವೇಳೆ ತಿಳಿದುಕೊಂಡರೂ ಸಾಮಾನ್ಯ ಮಾನವನೆಂದು ಏಕೆ ನಂಬುವರೋ ಇಲ್ಲಿ ವಿಶದಪಡಿಸಲಾಗುತ್ತಿದೆ-

**೨೫. ನಾಹಂ ಪ್ರಕಾಶಃ ಸರ್ವಸ್ಯ ಯೋಗಮಾಯಾಸಮಾವೃತಃ**
**ಮೂಢೋಽಯಂ ನಾಭಿಜಾನಾತಿ ಲೋಕೋ ಮಾಮಜಮವ್ಯಯಮ್**

**ಅರ್ಥ:** ಯೋಗಮಾಯಾಸಮಾವೃತಃ=ಯೋಗ ಮಾಯೆಯಿಂದ ಚೆನ್ನಾಗಿ ಕವಿಯಲ್ಪಟ್ಟ; ಅಹಂ=ನಾನು; ಸರ್ವಸ್ಯ=ಎಲ್ಲರಿಗೂ; ಪ್ರಕಾಶಃ ನ=ಕಾಣಿಸುವವನಲ್ಲ; ಮೂಢಃ=ವಿವೇಕವಿಲ್ಲದ; ಅಯಂ ಲೋಕಃ=ಈ ಜನರು; ಮಾಂ=ನನ್ನನ್ನು; ಅಜಂ=ಹುಟ್ಟಿಲ್ಲದವನಾಗಿಯೂ; ಅವ್ಯಯಂ=ನಾಶರಹಿತ ವಾದವನಾಗಿಯೂ; ನಾಭಿಜಾನಾತಿ=ತಿಳಿಯುವುದಿಲ್ಲ.

**ತಾ||** ಯೋಗ ಮಾಯೆಯಿಂದ ಆವೃತನಾಗಿರುವುದರಿಂದ ನಾನು ಎಲ್ಲರಿಗೂ ಕಾಣಿಸುವುದಿಲ್ಲ. ಅವಿವೇಕಿಗಳಾದ ಈ ಜನರು ನನ್ನನ್ನು ಹುಟ್ಟಿಲ್ಲದವನೆಂದೂ, ನಾಶರಹಿತನೆಂದೂ ಅರಿಯರು!

**ವ್ಯಾಖ್ಯೆ:** ಭಗವಂತನು ಸರ್ವವ್ಯಾಪಿಯಾಗಿದ್ದಾನೆಂದಾಗ ಎಲ್ಲರಿಗೂ ಏಕೆ ಕಾಣಿಸುವುದಿಲ್ಲ? ಸರ್ವಜನರೂ ಏಕೆ ಆತನನ್ನು ತಿಳಿಯದವರಾಗಿದ್ದಾರೆ? ಎನ್ನುವ ಪ್ರಶ್ನೆಗಳಿಗೆ ಇಲ್ಲಿ ಸಮಾಧಾನ ಕೊಡಲಾಗಿದೆ- ಪರಮಾತ್ಮನು ಯೋಗ ಮಾಯೆಯಿಂದ ಕವಿಯಲ್ಪಟ್ಟು ಅದರಿಂದ ಮರೆಯಾಗಿದ್ದಾನೆ. ಆದ್ದರಿಂದ ಜನರಿಗೆ ಪ್ರತ್ಯಕ್ಷವಾಗದೇ ಉಳಿದಿದ್ದಾನೆ. ಯಾರು ಆ ಮಾಯೆಯನ್ನು ವಿವೇಕಾದಿಗಳಿಂದ ಭೇದಿಸಿ ಹಾಕುವರೋ ಅವರು ಭಗವಂತನನ್ನು ಪ್ರತ್ಯಕ್ಷವಾಗಿ ನೋಡಬಲ್ಲರು. ಭಗವಂತ ಹಾಗು ಜನರ ಮಧ್ಯೆ ಒಂದು ತೆರೆ (Curtain) ಇದೆ. ಅದು ತ್ರಿಗುಣಾತ್ಮಕವಾದುದು. ಅಂದರೆ ಸತ್ತ್ವರಜಸ್ತಮೋಗುಣಗಳೆಂಬ ಮೂರು ಪದರಗಳನ್ನು ಹೊಂದಿದೆ. ತಮೋಗುಣ ಕಪ್ಪನೆಯ ದಪ್ಪಪೊರೆ. ರಜೋಗುಣ ಕೆಂಪಾದ ಸಾಮಾನ್ಯ ಪೊರೆ. ಸತ್ತ್ವಗುಣ ಬೆಳ್ಳಗಿರುವ ತೆಳ್ಳನೆಯ ಪೊರೆ. ಮಾಯಾವರ್ಣವು ಮೂರು ಪೊರೆಗಳಿಂದ ಕೂಡಿದೆ. ಜೀವಿಯು ನಿಷ್ಕಾಮ ಕರ್ಮ, ಭಕ್ತಿ, ವೈರಾಗ್ಯ ವಿಚಾರಾದಿಗಳಿಂದ, ಸಾಧನಾತಿಯ ಶಯಗಳಿಂದ ಒಂದೊಂದು ಪೊರೆಯನ್ನೂ ಭೇದಿಸುತ್ತಾ ಹೋಗಿ ಆ ಮಾಯಾ ಪ್ರತಿಬಂಧಕವನ್ನು ಪೂರ್ತಿಯಾಗಿ ತೊಲಗಿಸಿಕೊಂಡರೆ ಆಗ ಅದರಾಚೆಯಿರುವ ಪರಮಾತ್ಮ ನಿರಾತಂಕವಾಗಿ ಪ್ರತ್ಯಕ್ಷವಾಗಬಲ್ಲನು. ಆಧ್ಯಾತ್ಮರಂಗದಲ್ಲಿ ತಿಳಿಸಲ್ಪಟ್ಟ ಸಮಸ್ತ ಸಾಧನೆಗಳೂ ಜೀವಿಗೆ ಹಾಗು ದೇವರಿಗೆ ಮಧ್ಯೆ ಇರುವ ಆ ಮಾಯೆಯೆನ್ನುವ ಅಡ್ಡಗೋಡೆಯನ್ನು ನಿರ್ಮೂಲಿಸಲು ಉಪಯೋಗ ಬೀಳುತ್ತವೆ. ಅಷ್ಟೇ ಅಲ್ಲದೆ ದೇವರನ್ನು ಹೊಸದಾಗಿ ಪಡೆಯುವುದಕ್ಕಲ್ಲ. ಪೊರೆಯ ನಿರ್ಮೂಲನದಿಂದ ತನ್ನಲ್ಲೇ ಬೆಳಗುತ್ತಿರುವ ದೇವರು ವ್ಯಕ್ತವಾಗುವನು.

ಆದರೆ ಮೂಢನ ಮಾಯಾ ಪೊರೆ ಭೇದಿಸಲ್ಪಡದೆ ಇರುವುದರಿಂದ ದೈವ ದರ್ಶನವಾಗುವುದಿಲ್ಲ. ಭಗವಂತನಿದ್ದಾನೆ- ಆದರೆ ಅಜ್ಞಾನಿಗಳಿಗೆ ಕಾಣಿಸುವುದಿಲ್ಲ. ಸೂರ್ಯನಿದ್ದಾನೆ- ಆದರೆ ಕುರುಡರಿಗೆ ಕಾಣಿಸುವುದಿಲ್ಲ; ದೀಪವಿದೆ- ಆದರೆ ಅದರ ಮೇಲೆ ಗಡಿಗೆ ಬೋರಲು ಬಿದ್ದಿದೆ- ಆದ್ದರಿಂದ ಆ ದೀಪ ಯಾರಿಗೂ ಗೋಚರವಾಗುತ್ತಿಲ್ಲ. ಆ ಗಡಿಗೆಯನ್ನು ತೆಗೆದವರಿಗೆ ಇಲ್ಲವೆ ಒಡೆದವರಿಗೆ ಮಾತ್ರ ಒಳಗಿರುವ ದೀಪ ಕಾಣುತ್ತದೆ. ಇದನ್ನೇ ಮಾಯಾಭಂಗವೆನ್ನುವರು. ಭಗವಂತನು ವಾಸ್ತವವಾಗಿ ಜನ್ಮರಹಿತನು. ನಾಶವಿಲ್ಲದವನು. ಆ ವಿಷಯವನ್ನು ಮಾಯೆಯನ್ನು ದಾಟಿದ ವಿವೇಕವಂತರು ಮಾತ್ರ ತಿಳಿದುಕೊಳ್ಳುತ್ತಿದ್ದಾರಾಗಲಿ, ಮಾಯೆಗೆ ಒಳಗಾದ ಮೂಢರಲ್ಲವೆಂದು ಗೀತಾಚಾರ್ಯನು ಇಲ್ಲಿ ಬೋಧಿಸುತ್ತಿದ್ದಾನೆ.

ಅವಿವೇಕಿಗಳು ಮಾಯೆಯನ್ನು ಪೋಷಿಸುತ್ತಿದ್ದಾರೆಯೇ ಹೊರತು ಅದು ಶುಷ್ಕವಾಗುವಂತೆ ಮಾಡುತ್ತಿಲ್ಲ. ಅನೇಕ ವಿಷಯ ವಾಸನೆಗಳು, ದುರ್ವ್ಯಸನಗಳು, ಭೋಗ, ಲಂಪಟತನ, ಕಾಮಕ್ರೋಧಾದಿಗಳು ಮುಂತಾದುವುಗಳಿಂದ ಅವರು ಆ ಮಾಯೆಯನ್ನು ಇನ್ನೂ ಬಲಗೊಳಿಸುತ್ತಿದ್ದಾರೆ. ಅದಕ್ಕೆ ಪುಷ್ಟಿಯಾದ ಆಹಾರವನ್ನು ಕೊಡುತ್ತಿದ್ದಾರೆ. ಆದ್ದರಿಂದ ಅದು ಇನ್ನೂ ಬಲವಾಗಿ, ದೃಢವಾಗಿ, ಬೇರುಬಿಟ್ಟು ಹೂತುಹೋಗಿ ಭಗವದ್ದರ್ಶನಕ್ಕೆ ಬಲವಾದ ಅಡ್ಡಗೋಡೆಯಾಗಿದೆ. ಜೀವಿಗೆ ಮೋಕ್ಷ ಮಾರ್ಗದಲ್ಲಿ ಅದು ಮಹಾ ಪ್ರತಿಬಂಧಕವಾಗಿ ವರ್ತಿಸುತ್ತಿದೆ. ಆದ್ದರಿಂದ ವಿಜ್ಞುವಾದವನು ಆ ಮಾಯಾರೂಪ ಆವರಣವನ್ನು ಭಕ್ತಿ, ಜ್ಞಾನ, ವೈರಾಗ್ಯಾದಿಗಳಿಂದ ವಿಚ್ಛಿನ್ನಗೊಳಿಸಿ ಭಗವಂತನನ್ನು ಸಾಕ್ಷಾತ್ಕರಿಸಿಕೊಳ್ಳಬೇಕು.

ಈ ಶ್ಲೋಕದಲ್ಲಿ 'ಸರ್ವಸ್ಯ' (ಯಾರಿಗೂ ಕಾಣಿಸುತ್ತಿಲ್ಲ) ಎಂದು ಹೇಳಿರುವುದರ ಅರ್ಥ ಅಜ್ಞಾನಿಗಳಿಗೆ ಕಾಣಿಸುತ್ತಿಲ್ಲ ಎಂದಾಗುವುದು. ಮತ್ತೆ ಭಗವಂತನು ಯೋಗ ಮಾಯೆಯಿಂದ ಕವಿಯಲ್ಪಟ್ಟಿದ್ದಾನೆ ಎನ್ನುವ ವಿಷಯ ದ್ವೈತ ದೃಷ್ಟಿಯಿಂದ ಹೇಳಿರುವುದೇ ಆಗಿದೆ. ಏಕೆಂದರೆ ವಾಸ್ತವವಾಗಿ ಪರಮಾತ್ಮನಿಗೆ ಯಾವ ಆವರಣವೂ ಇಲ್ಲ. ಆತನು ನಿರಾವರಣ ಶುದ್ಧ ಚಿನ್ಮಯ ಮೂರ್ತಿ. ಅಜ್ಞಾನಿಗಳ ಜೀವ ದೃಷ್ಟಿಯನ್ನು ಗಮನದಲ್ಲಿಟ್ಟುಕೊಂಡು ಹಾಗೆ ಹೇಳಲಾಗಿದೆ. ಸೂರ್ಯನಿಗೂ ಮೇಘಕ್ಕೂ ವಾಸ್ತವವಾಗಿ ಯಾವ ಸಂಬಂಧವೂ ಇಲ್ಲ. ಆದರೆ ಮೇಘದ ಕೆಳಗಿರುವವರನ್ನು ಗಮನದಲ್ಲಿಟ್ಟು ಕೊಂಡು ಸೂರ್ಯನು ಮೇಘಾವೃತನಾಗಿದ್ದಾನೆಂದು ಹೇಳುವರು. ಭಗವದ್ವಿಷಯವೂ ಕೂಡ ಹಾಗೆಯೇ ಎಂದು ತಿಳಿಯಬೇಕು.

ಕೆಲವರು 'ಯೋಗ ಮಾಯಾ ಸಮಾವೃತಃ' ಎನ್ನುವ ಪದವನ್ನು ಮೂಢನಿಗೆ ವಿಶೇಷಣವಾಗಿ ಜೋಡಿಸಿ ಯೋಗ ಮಾಯಾವೃತನಾದ ಮೂಢನು (ಅಜ್ಞಾನಿ) ದೇವರನ್ನು ತಿಳಿಯದೆ ಇದ್ದಾನೆಂದು ಹೇಳುವರು.

ಪ್ರ : ಭಗವಂತನು ಎಲ್ಲರಿಗೂ ಏಕೆ ಕಾಣಿಸುತ್ತಿಲ್ಲ?

ಉ : ಅವನು ಯೋಗ ಮಾಯೆಯಿಂದ ಕವಿಯಲ್ಪಟ್ಟಿರುವುದರಿಂದ.

ಪ್ರ : ಭಗವಂತನ ಸ್ವರೂಪವು ಎಂತಹದು?

ಉ : ೧) ಜನ್ಮರಹಿತವಾದದ್ದು ೨) ನಾಶವರ್ಜಿತವಾದದ್ದು

ಪ್ರ : ಭಗವತ್ಸ್ವರೂಪವನ್ನು ಯಾರು ತಿಳಿಯದವರಾಗಿದ್ದಾರೆ?

ಉ : ಅಜ್ಞಾನಿಗಳು.

ಪ್ರ : ಯಾವುದರಿಂದ? ಏಕೆ?

ಉ : ಭಗವಂತನ ಸುತ್ತ ಇರುವ ಮಾಯಾರೂಪದ ಆವರಣವನ್ನು ಭೇದಿಸಲು ಅವರಿಗೆ ಸಾಧ್ಯವಿಲ್ಲವಾದ್ದರಿಂದ.

ಪ್ರ : ಆದ್ದರಿಂದ ವಿಜ್ಞುವಾದವನು ಏನು ಮಾಡಬೇಕು?

ಉ : ತನ್ನ ಹಾಗು ಭಗವಂತನ ಮಧ್ಯೆ ಅಡ್ಡಗೋಡೆಯಾಗಿ ನಿಂತಿರುವ ಮಾಯಾರೂಪದ ಆವರಣವನ್ನು ಶೀಘ್ರವಾಗಿ (ಈ ಜನ್ಮದಲ್ಲೇ) ಪ್ರಯತ್ನ ಪೂರ್ವಕವಾಗಿ ಆಧ್ಯಾತ್ಮ ಸಾಧನೆಯಿಂದ ಭೇದಿಸಿ ಭಗವತ್ಸಾಕ್ಷಾತ್ಕಾರವನ್ನು ಹೊಂದಬೇಕು.

**ಅ॥** ಆ ಯೋಗ ಮಾಯೆ ಭಗವಂತನ ಸ್ವಾಧೀನದಲ್ಲೇ ಇರುವುದರಿಂದ ಆತನ ಸರ್ವಜ್ಞತ್ವಕ್ಕೆ ಅದು ಅಡ್ಡಿಯನ್ನುಂಟು ಮಾಡುವುದಿಲ್ಲ. ಅದು ಅವನಿಗೆ ಪ್ರತಿಬಂಧಕವಲ್ಲ. ಆದ್ದರಿಂದ ತಾನು ಭೂತ ಭವಿಷ್ಯತ್ ವರ್ತಮಾನ ಸ್ಥಿತಿಗತಿಗಳನ್ನೆಲ್ಲಾ ತಿಳಿದವನೆಂದು ಭಗವಂತನು ತಿಳಿಸುತ್ತಿದ್ದಾನೆ-

**೨೬. ವೇದಾಹಂ ಸಮತೀತಾನಿ ವರ್ತಮಾನಾನಿ ಚಾರ್ಜುನ**
**ಭವಿಷ್ಯಾಣಿ ಚ ಭೂತಾನಿ ಮಾಂ ತು ವೇದ ನ ಕಶ್ಚನ**

**ಅರ್ಥ:** ಅರ್ಜುನ=ಓ ಅರ್ಜುನಾ! ಅಹಂ=ನಾನು; ಸಮತೀತಾನಿ=ಗತಿಸಿ ಹೋದಂತಹ; ವರ್ತಮಾನಾನಿ ಚ=ಈಗಿರುವಂತಹ; ಭವಿಷ್ಯಾಣಿ ಚ=ಮುಂದೆ ಬರುವಂತಹ; ಭೂತಾನಿ=ಪ್ರಾಣಿಗಳನ್ನು; ವೇದ=ತಿಳಿದಿದ್ದೇನೆ; ಮಾಂ ತು=ನನ್ನನ್ನು ಮಾತ್ರ, ಕಶ್ಚನ=ಯಾರೂ; ನ ವೇದ=ತಿಳಿದಿಲ್ಲ.

**ತಾ॥** ಓ ಅರ್ಜುನಾ! ನಾನು ಭೂತ ಭವಿಷ್ಯತ್ ವರ್ತಮಾನ ಕಾಲಗಳ ಪ್ರಾಣಿಗಳನ್ನೆಲ್ಲಾ ತಿಳಿದಿದ್ದೇನೆ. ನನ್ನನ್ನು ಮಾತ್ರ ಯಾರೂ ತಿಳಿದಿಲ್ಲ.

**ವ್ಯಾಖ್ಯೆ:** ಭಗವಂತನ ಸರ್ವಶಕ್ತಿಯನ್ನು ಇಲ್ಲಿ ತಿಳಿಸಲಾಗಿದೆ. ಪ್ರಾಣಿಗಳೆಲ್ಲರೂ ಕಾಲಗರ್ಭದಲ್ಲಿ ಅಡಕವಾಗಿದ್ದಾರೆ. ಆ ಕಾಲವಾದರೋ ಭಗವಂತನ ಉದರದಲ್ಲಿದೆ (ಕಲ್ಪಿತವಾಗಿ). ಆದ್ದರಿಂದ ಸಮಸ್ತ ಚರಾಚರಗಳು ಸರ್ವೇಶ್ವರನಲ್ಲಿಯೇ ವರ್ತಿಸುತ್ತವೆಯಾದ್ದರಿಂದ ಅವನಿಗೆ ತಿಳಿಯದ ಪ್ರಾಣಿಯಾಗಲಿ, ತಿಳಿಯದ ವಿಷಯವಾಗಲಿ ಭೂತ ಭವಿಷ್ಯತ್ ವರ್ತಮಾನಗಳಲ್ಲಿ ಯಾವುದೂ ಇರುವುದಿಲ್ಲ. ಎಲ್ಲಾ ಪ್ರಾಣಿಗಳನ್ನು, ಎಲ್ಲಾ ಕಾಲದಲ್ಲಿಯೂ ಆತನು ಜಾಗ್ರತೆಯಿಂದ ವೀಕ್ಷಿಸುತ್ತಲೇ ಇರುವನು. ಈ ಸತ್ಯವನ್ನು ಅರ್ಥಮಾಡಿಕೊಂಡವನು ಇನ್ನು ಪಾಪಮಾಡಲು ಹೇಗೆ ಸಾಧ್ಯ? ಆತನು ಪಾಪಭೀತಿಯುಳ್ಳವನಾಗಿ ಧರ್ಮಮಾರ್ಗದಲ್ಲೇ ಪ್ರವೃತ್ತಿಯಾಗಿರುವನು.

ಈ ಶ್ಲೋಕವು ಜೀವಿಯ ಅಲ್ಪತೆಯನ್ನು ಎತ್ತಿ ತೋರಿಸುತ್ತಿದೆ. ಜೀವಿಯು ಕಾಲಾಧೀನನು, ಮೃತ್ಯುಗ್ರಸ್ತನು, ಕ್ಷಣಿಕ ಜೀವನವನ್ನು ಹೊಂದಿದವನು. ಭೂತ ಭವಿಷ್ಯತ್ತುಗಳನ್ನು ತಿಳಿಯದವನು. ಪರಮೇಶ್ವರನಾದರೋ ಕಾಲಾತೀತನು, ಅಮರನು ಹಾಗು ಸರ್ವಜ್ಞನು. ಅಂತಹವನ ಮುಂದೆ ಜೀವಿಯು ಯಾವ ಮೂಲೆಗೆ? ಆದರೂ ಆ ಅಲ್ಪಜೀವಿಯು ತನ್ನ ಧನವನ್ನು ನೋಡಿ, ಬಲವನ್ನು ನೋಡಿ, ವಿದ್ಯೆಯನ್ನು ನೋಡಿ, ಅಧಿಕಾರವನ್ನು ನೋಡಿ, ಸೌಂದರ್ಯವನ್ನು ನೋಡಿ ಗರ್ವಿತನಾಗುತ್ತಿದ್ದಾನೆ. ಧನಮದದಿಂದ, ಅಧಿಕಾರಮದದಿಂದ ಭಗವಂತನನ್ನೇ ಲೆಕ್ಕಕ್ಕೆ ತೆಗೆದುಕೊಳ್ಳುತ್ತಿ ಲ್ಲ. ಇದು ಕೇವಲ ಅಜ್ಞಾನದ ಪ್ರಭಾವ. ಸತ್ಯವನ್ನು ತಿಳಿದವನು ತನ್ನ ಅಲ್ಪತ್ವವನ್ನು ಗುರುತಿಸಿ ಭಗವಂತನ ಅನಂತ ಶಕ್ತಿಯನ್ನು ಸಾವಿರ ಬಾಯಿಗಳಿಂದ ಕೊಂಡಾಡುವನು. ಭಕ್ತಿ ಪೂರ್ವಕವಾಗಿ ಆತನಿಗೆ ನಮಿಸುವನು. ಪ್ರಪಂಚದಲ್ಲಿ ಎಲ್ಲೋ ಅಲ್ಪ ಸ್ವಲ್ಪ ಶಕ್ತಿ ಸಾಮರ್ಥ್ಯವಿರುವವನನ್ನು ಪ್ರಜೆಗಳು ಎಷ್ಟೋ ಆದರ ಗೌರವದಿಂದ ನೋಡುತ್ತಾರೆ. ಹಾಗಿರಬೇಕಾದರೆ ಅನಂತ ಶಕ್ತಿ ಸಂಪನ್ನನಾದ ಸರ್ವೇಶ್ವರನನ್ನು ಎಷ್ಟು ಅಧಿಕವಾಗಿ ಗೌರವಿಸಿ ಪೂಜಿಸಬೇಕು. ಆದ್ದರಿಂದ ಈ ಶ್ಲೋಕದ ಮೂಲಕ ಜೀವಿಯು ಪರಾತ್ಪರನ ತ್ರಿಕಾಲ ಜ್ಞಾನ, ಅನಂತ ಶಕ್ತಿ ಸಾಮರ್ಥ್ಯಗಳನ್ನು, ಅಮರತ್ವವನ್ನು ತಿಳಿದುಕೊಂಡು ಅಕುಂಠಿತ ಭಕ್ತಿಯಿಂದ ಆತನನ್ನು ಸೇವಿಸಿ ಕೃತಾರ್ಥನಾಗಬೇಕು, ಗರ್ವಾಹಂಕಾರಗಳನ್ನು ಬಿಟ್ಟು ಬಿಡಬೇಕು ಎನ್ನುವುದನ್ನು ತಿಳಿಯುವುದು.

ಈ ಶ್ಲೋಕದಲ್ಲಿ ನನ್ನನ್ನು ಯಾರೂ ತಿಳಿದುಕೊಳ್ಳುತ್ತಿಲ್ಲ. (ಮಾಂತು ವೇದ ನಕಶ್ಚನ) ಎನ್ನುವ ವಾಕ್ಯದ ಅರ್ಥವು 'ಶ್ರದ್ಧಾ ಭಕ್ತಿಗಳು ಇಲ್ಲದವನು, ಆತ್ಮಜ್ಞಾನವಿಲ್ಲದವನು ತಿಳಿಯುತ್ತಿಲ್ಲವೆಂದೇ' ಆಗುವುದು. ಭಗವಂತನನ್ನು ತಿಳಿದವರು ಬಹಳ ವಿರಳವಾಗಿದ್ದು, ತಿಳಿಯದವರು ಹೇರಳವಾಗಿರುವುದರಿಂದ ಈ ವಿಧವಾಗಿ ಹೇಳಲಾಗಿದೆ. ಅಂತಃಪುರದಲ್ಲಿ ಮೇಲಂತಸ್ತಿನ ಕಿಟಕಿಯಿಂದ ನೋಡುವ ರಾಣಿವಾಸ ಸ್ತ್ರೀ ಕೆಳಗಿನ ಬೀದಿಗಳಲ್ಲಿ ನಡೆಯುವ ಜನರನ್ನೆಲ್ಲಾ ವೀಕ್ಷಿಸಲು ಸಾಧ್ಯ. ಆದರೆ ದಾರಿಯಲ್ಲಿ ಹೋಗುವವರು ಆಕೆಯನ್ನು ನೋಡಲಾರರು. ಹಾಗೆ ಪರಮಾತ್ಮನು ಸರ್ವ ಜೀವಿಗಳನ್ನು ನೋಡಿದರೂ ಆತನನ್ನು ನೋಡುವವರು ಬಹಳ ವಿರಳ. ಆದ್ದರಿಂದ ಜೀವಿಯು ತಾನು ಕೃತಾರ್ಥನಾಗಬೇಕೆಂದರೆ, ಸಂಸಾರ ಸಾಗರದಿಂದ ವಿಮುಕ್ತಿ ಹೊಂದಬೇಕೆಂದರೆ, ತನ್ನ ಅಲ್ಪತ್ವವನ್ನು ಹಾಗು ಭಗವಂತನ ಸರ್ವಶಕ್ತಿಯನ್ನು ಗುರುತಿಸಿ, ಆತನಲ್ಲಿ ಭಕ್ತಿ ಪ್ರವೃತ್ತಿಗಳನ್ನಿಟ್ಟು ಮಳೆಯ ಹನಿಗಳು ಸಮುದ್ರದಲ್ಲಿ ವಿಲೀನವಾಗುವ ಹಾಗೆ ತನ್ನ ಚಿತ್ತವನ್ನು ಪರಮಾತ್ಮನಲ್ಲಿ ವಿಲೀನಗೊಳಿಸಿಕೊಳ್ಳಬೇಕು. ಭಗವಂತನು ಜೀವಿಯನ್ನು ತಿಳಿದುಕೊಂಡ ಹಾಗೆ ಜೀವಿಯೂ ಭಗವಂತನನ್ನು ತಿಳಿದುಕೊಂಡರೆ ಆ ಕ್ಷಣದಲ್ಲಿಯೇ ಆತನಿಗೆ ಮುಕ್ತಿ ಪ್ರಾಪ್ತಿಯಾಗುವುದು. ಅಲ್ಲಿಯವರೆಗೆ ಬಂಧನದಲ್ಲಿ ಸಿಕ್ಕಿಕೊಂಡೇ ಇರುವನು.

ಪ್ರ : ಭಗವಂತನ ಶಕ್ತಿ ಸಾಮರ್ಥ್ಯಗಳನ್ನು ವರ್ಣಿಸುವುದು?

ಉ : ಆತನು ತ್ರಿಕಾಲಜ್ಞನು, ಭೂತಭವಿಷ್ಯತ್ ವರ್ತಮಾನಗಳಲ್ಲಿಯ ಸಮಸ್ತ ಪ್ರಾಣಿಗಳನ್ನು, ಪದಾರ್ಥಗಳನ್ನು ತಿಳಿದವನು.

**ಅ||** ತನ್ನನ್ನು ಜನರು ಏಕೆ ತಿಳಿಯದವರಾಗಿದ್ದಾರೆ ಎನ್ನುವುದನ್ನು ಹೇಳಲಾಗುತ್ತಿದೆ-

**೨೭. ಇಚ್ಛಾದ್ವೇಷಸಮುತ್ಥೇನ ದ್ವಂದ್ವಮೋಹೇನ ಭಾರತ**
**ಸರ್ವಭೂತಾನಿ ಸಂಮೋಹಂ ಸರ್ಗೇ ಯಾಂತಿ ಪರಂತಪ**

**ಅರ್ಥ:** ಪರಂತಪ=ಶತ್ರುಗಳನ್ನು ತಪಿಸುವಂತೆ ಮಾಡುವಂತಹ; ಭಾರತ=ಓ ಅರ್ಜುನಾ! ಸರ್ಗೇ=ಹುಟ್ಟುತ್ತಲೇ (ಇಲ್ಲವೆ ಈ ಪ್ರಪಂಚದಲ್ಲಿ); ಇಚ್ಛಾದೋಷ ಸಮುತ್ಥೇನ=ರಾಗದ್ವೇಷಗಳಿಂದ (ಕಾಮಕ್ರೋಧಗಳಿಂದ) ಹುಟ್ಟಿದ; ದ್ವಂದ್ವ ಮೋಹೇನ=ಸುಖದುಃಖಾದಿ ದ್ವಂದ್ವರೂಪವಾದ ವ್ಯಾಮೋಹ (ಅವಿವೇಕದಿಂದ); ಸರ್ವಭೂತಾನಿ=ಸಮಸ್ತ ಪ್ರಾಣಿಗಳು; ಸಮ್ಮೋಹಂ=ಹೆಚ್ಚಿನ ಅಜ್ಞಾನವನ್ನು; ಯಾಂತಿ=ಹೊಂದುತ್ತಿದ್ದಾರೆ.

**ತಾ||** ಶತ್ರುಗಳನ್ನು ತಪಿಸುವಂತೆ ಮಾಡುವ ಓ ಅರ್ಜುನಾ! ಸಮಸ್ತ ಪ್ರಾಣಿಗಳು ಹುಟ್ಟುತ್ತಲೇ (ಅಥವ ಈ ಪ್ರಪಂಚದಲ್ಲಿ) ರಾಗ ದ್ವೇಷಜನಿತ ಸುಖದುಃಖ ದ್ವಂದ್ವರೂಪಗಳಾದ ವ್ಯಾಮೋಹದಿಂದ ಹೆಚ್ಚಿನ ಅಜ್ಞಾನವನ್ನು ಹೊಂದುತ್ತಿವೆ.

**ವ್ಯಾಖ್ಯೆ:** ಸಮಸ್ತ ಜೀವಿಗಳು ಹುಟ್ಟುತ್ತಲೇ ಬಲವಾದ ಅಜ್ಞಾನವನ್ನು ಹೊಂದುತ್ತಿದ್ದಾರೆ. ಮಹಾಮಾಯೆ ('ವೈಷ್ಣವೀ' ಮಾಯೆ) ಅವರನ್ನು ಆವರಿಸುತ್ತದೆ. ಆದ್ದರಿಂದಲೇ ಅವರು ಪರಮಾತ್ಮನನ್ನು ದರ್ಶಿಸಲಾರದೆ ಸಂಸಾರ ಬಂಧನದಲ್ಲಿ ಸಿಕ್ಕಿಬೀಳುತ್ತಾರೆ. ಮೋಕ್ಷವನ್ನು ಪಡೆಯಲಾರದೆ ಹೋಗುವರು. ಅದು ಸಾಮಾನ್ಯವಾದ ಅಜ್ಞಾನವಲ್ಲ, ದುರ್ಗಮವಾದದ್ದು. ಆದ್ದರಿಂದಲೇ ಅದನ್ನು 'ಮೋಹ' ಎಂದು ಹೇಳದೆ 'ಸಮ್ಮೋಹ' ಎಂದು ಹೇಳಲಾಗಿದೆ. ಈ ಅಜ್ಞಾನಕ್ಕೆ ಕಾರಣವೇನು? ಸುಖದುಃಖಾದಿ ದ್ವಂದ್ವ ರೂಪವಾದ ವ್ಯಾಮೋಹ. ಅದು ಇಚ್ಛಾದ್ವೇಷಗಳಿಂದ, ಕಾಮಕ್ರೋಧಗಳಿಂದ ಹುಟ್ಟುತ್ತದೆ. ಆದ್ದರಿಂದ ಮೋಕ್ಷಕ್ಕೆ ಪ್ರತಿಬಂಧಕವಾದ ಅಜ್ಞಾನವನ್ನು ಹೋಗಲಾಡಿಸಬೇಕೆಂದರೆ ಇಚ್ಛಾದ್ವೇಷಗಳೆರಡೂ ನಶಿಸಬೇಕು. (ಯಾವುದೇ ಒಂದು ವಿಷಯವನ್ನು ಅನುಭವಿಸಬೇಕೆನ್ನುವ, ಇಲ್ಲವೆ ಹೊಂದಬೇಕೆನ್ನುವ ಕೋರಿಕೆಯನ್ನೇ ಇಚ್ಛೆಯೆನ್ನುವರು. ಅದನ್ನು ಅನುಭವಿಸುವುದಕ್ಕೆ ಅಡ್ಡ ಬರುವವರ ಮೇಲೆ ಉಂಟಾಗುವ ಮುನಿಸುವಿಕೆಯೇ ದ್ವೇಷವಾಗುವುದು). ಇಚ್ಛೆ- ಯಾವುದೋ ಒಂದು ದೃಶ್ಯ ವಸ್ತುವಿನಲ್ಲಿ ಕೋರಿಕೆ ಅಥವ ಅಭಿಲಾಷೆ ಯಾವಾಗ ಜನಿಸುವುದೋ ಆಗ ಚಿತ್ತ ನಿರಂತರವಾಗಿ ಅದನ್ನು ಹೊಂದಬೇಕೆಂಬ ಸಂಕಲ್ಪದಿಂದ ತುಂಬಿ, ಅದನ್ನು ಕುರಿತೇ ಆಲೋಚಿಸುತ್ತ ಮಹಾಚಪಲವಾಗಿರುವುದು. ಏಕಾಗ್ರತೆಯಿಲ್ಲದೇ ಇರುವುದು. ಚಂಚಲ ಚಿತ್ತದಲ್ಲಿ ಆತ್ಮ ಚೆನ್ನಾಗಿ ಪ್ರತಿಬಿಂಬಿಸದು. ಆದ್ದರಿಂದ ಅಶಾಂತಿ ಹಾಗು ದುಃಖಗಳು ಉಂಟಾಗಲು ಕಾರಣವಾಗುತ್ತದೆ. ಒಂದು ವೇಳೆ ಆ ವಿಷಯವು ಲಭಿಸಿದರೂ ಅದರಿಂದ ತೃಪ್ತಿ ಹೊಂದದೆ ಅದರ ಮೇಲೆ ಆಸೆ ಇನ್ನೂ ಅಧಿಕವಾಗುವುದು. ಕೋರಿಕೆಗಳನ್ನು ಅನುಭವಿಸಿದಂತೆ ಅವು ಬೆಳೆಯುವುವೇ ಆಗಲಿ ಎಂದಿಗೂ ತೃಪ್ತಿ ಹೊಂದುವುದಿಲ್ಲ. ಆದ್ದರಿಂದ 'ಇಚ್ಛೆ' ಎನ್ನುವ ಪ್ರಬಲ ಶತ್ರುವನ್ನು ವಿವೇಕ ವೈರಾಗ್ಯಾದಿಗಳ ದ್ವಾರ ಹೃದಯದಿಂದ ಕಿತ್ತು ಹಾಕಬೇಕು.

'ದ್ವೇಷ'- ತನಗೆ ಇಷ್ಟವಿಲ್ಲದ ವಸ್ತುವಿನಲ್ಲಾಗಲಿ, ತನಗೆ ಇಷ್ಟವಾದ ವಸ್ತುವಿಗೆ ಅಡ್ಡ ಬರುವವರ ಮೇಲಾಗಲಿ ಮನುಜನಿಗೆ ಸಾಮಾನ್ಯವಾಗಿ ದ್ವೇಷವುಂಟಾಗುತ್ತದೆ. ಆ ದ್ವೇಷವೇ ಕ್ರೋಧವಾಗಿ ಪರಿಣಮಿಸುವುದು. ಕ್ರೋಧದಿಂದ ಸಂಮೋಹವು, ಸಂಮೋಹದಿಂದ ಸ್ಮೃತಿ ವಿಭ್ರಮೆ, ಅದರಿಂದ ಬುದ್ಧಿನಾಶ, ಹಾಗು ಬುದ್ಧಿನಾಶದಿಂದ ಸರ್ವವಿನಾಶ ಜೀವಿಗೆ ಸಂಭವಿಸುವುವು. ಆದ್ದರಿಂದ ಜೀವಿಯ ಅಧಃಪತನಗಳಿಗೆ ಕಾರಣಗಳಾದ ಈ ಇಚ್ಛಾದ್ವೇಷಗಳೆಂಬ ಪ್ರಬಲ ಶತ್ರುಗಳನ್ನು, ಸರ್ವವೂ 'ಭಗವತ್ಸ್ವರೂಪವೇ' ಎನ್ನುವ ವಿವೇಕದಿಂದ, ಇನ್ನೂ ಹೆಚ್ಚಿನ ಆಧ್ಯಾತ್ಮಿಕ ಯುಕ್ತಿಗಳಿಂದ ಹೊರದೂಡಿ, ಆ ದುಷ್ಟದ್ವಯಕ್ಕೆ ಶಾಶ್ವತವಾಗಿ ತರ್ಪಣ ನೀಡಿ ಪರಮ ಶಾಂತಿಯನ್ನನುಭವಿಸಬೇಕು.

'ಸರ್ಗೇ'- ಎಂದು ಹೇಳುವುದರಿಂದ ತಾಯಿ ಗರ್ಭದಿಂದ ಜನ್ಮಿಸುವ ಕಾಲದಲ್ಲಿಯೇ ಅಜ್ಞಾನವು ಬಂದು ಆವರಿಸುತ್ತಿದೆಯೆಂದು, ಯೌವನದಲ್ಲಾಗಲಿ, ವೃದ್ಧಾಪ್ಯದಲ್ಲಾಗಲಿ ಅಲ್ಲವೆಂದು ಸ್ಪಷ್ಟವಾಗುತ್ತಿದೆ. ಆದ್ದರಿಂದ ಬಾಲ್ಯಕಾಲದಲ್ಲಿಯೇ ಪರಮಾತ್ಮ ಯತ್ನಗಳನ್ನು ಮಾಡಿ ಅಜ್ಞಾನವನ್ನು ಹೊರದೂಡುವವರು ಧನ್ಯರು. ಕಳ್ಳನನ್ನು ಮನೆಯಿಂದ ಎಷ್ಟು ಬೇಗ ಹೊರಗೆ ಹಾಕಿದರೆ ಅಷ್ಟು ಒಳ್ಳೆಯದಲ್ಲವೇ. ಆದ್ದರಿಂದ ಯಾವ ಕ್ಷಣದಲ್ಲಿ ಜೀವಿಗೆ ಇಂತಹ ವಿವೇಕ ಉದಯಿಸುತ್ತದೋ ಆ ಕ್ಷಣದಲ್ಲಿಯೇ ಉತ್ತಮ ಸಾಧನೆಗಳ ದ್ವಾರ ಆ 'ಹೃದಯ ಚೋರ'ನನ್ನು ಓಡಿಸಿ ಆತ್ಮಾನಂದವನ್ನು ಪಡೆಯಬೇಕು.

ಇಲ್ಲಿ 'ಪರಂತಪ'- ಎನ್ನುವ ಸಂಬೋಧನೆಯಲ್ಲಿ ವಿಶೇಷವಿದೆ. 'ಓ ಅರ್ಜುನಾ! ನೀನು ಶತ್ರುಗಳನ್ನು ತಪಿಸುವಂತೆ ಮಾಡುವವನು, ಆದ್ದರಿಂದ ಅಂತಃಶತ್ರುಗಳಾದ ಇಚ್ಛಾದ್ವೇಷಗಳನ್ನೂ ಸಹ ತಪಿಸುವಂತೆ ಮಾಡುವುದು, ನಿರ್ಮೂಲಿಸುವುದು' ಎಂದು ಬೋಧಿಸಿದನು.

'ಸರ್ವಭೂತಾನಿ'- ಎನ್ನುವ ಪದಕ್ಕೆ ಶ್ರದ್ಧಾಭಕ್ತಿಗಳಿಂದ ಭಗವಂತನನ್ನು ಅರ್ಚಿಸುವ ಜ್ಞಾನವಂತರನ್ನು ಬಿಟ್ಟು ಬೇರೆ ಎಲ್ಲರೂ ಎಂದರ್ಥ. (ನೋಡುವುದು-ಶ್ಲೋಕ: ೨೮).

ಪ್ರ : ಸುಖದುಃಖಾದಿ ದ್ವಂದ್ವಗಳು ಯಾವುದರಿಂದ ಪ್ರಾದುರ್ಭವಿಸುವುವು?

ಉ : ಇಚ್ಛಾದ್ವೇಷಗಳಿಂದ.

ಪ್ರ : ಸಮಸ್ತ ಪ್ರಾಣಿಗಳು ಅಜ್ಞಾನವನ್ನು ಯಾವಾಗ ಹೊಂದುವುವು?

ಉ : ಹುಟ್ಟುತ್ತಲೇ.

**ಅ॥** (ಮೇಲೆ ತಿಳಿಸಿದ) ಅಜ್ಞಾನದಿಂದ ಯಾರು ವಿಮುಕ್ತರಾಗುವರೋ ತಿಳಿಸಲಾಗುತ್ತಿದೆ-

**೨೮. ಏಷಾಂ ತ್ವಂತಗತಂ ಪಾಪಂ ಜನಾನಾಂ ಪುಣ್ಯ ಕರ್ಮಣಾಮ್**
**ತೇ ದ್ವಂದ್ವಮೋಹನಿರ್ಮುಕ್ತಾ ಭಜಂತೇ ಮಾಂ ದೃಢವ್ರತಾಃ**

**ಅರ್ಥ:** ಪುಣ್ಯ ಕರ್ಮಣಾಂ=ಪುಣ್ಯ ಕರ್ಮಗಳನ್ನು ಮಾಡುವ; ಏಷಾಂ ಜನಾನಾಂ=ಯಾವ ಜನರ; ಪಾಪಂ ತು=ಪಾಪಗಳು; ಅಂತಗತಂ= ನಾಶವನ್ನು ಹೊಂದಿರುವುವೋ; ತೇ=ಅಂತಹವರು; ದ್ವಂದ್ವ ಮೋಹ ನಿರ್ಮುಕ್ತಾ=(ಸುಖ ದುಃಖಾದಿ) ದ್ವಂದ್ವರೂಪವಾದ ಅಜ್ಞಾನದಿಂದ ವಿಮುಕ್ತರಾದವರಾಗಿ; ದೃಢವ್ರತಾಃ=ಅಚಂಚಲ ನಿಯಮ ನಿಷ್ಠೆಯುಳ್ಳವರಾಗಿ; ಮಾಂ=ನನ್ನನ್ನು; ಭಜಂತೇ=ಸೇವಿಸುತ್ತಿದ್ದಾರೆ.

**ತಾ॥** ಪುಣ್ಯಕಾರ್ಯತತ್ಪರರಾದ ಯಾವ ಜನರ ಪಾಪಗಳು ನಾಶವಾಗಿ ಹೋಗಿರುವುವೋ ಅಂತಹವರು (ಸುಖದುಃಖಾದಿ) ದ್ವಂದ್ವರೂಪ ಅಜ್ಞಾನದಿಂದ ಬಿಡುಗಡೆ ಹೊಂದಿ, ದೃಢವ್ರತವುಳ್ಳವರಾಗಿ ನನ್ನನ್ನು ಸೇವಿಸುತ್ತಿದ್ದಾರೆ.

**ವ್ಯಾಖ್ಯೆ:** ಪರಮಾತ್ಮನನ್ನು ದೃಢವ್ರತವುಳ್ಳವರಾಗಿ ಸೇವಿಸಿದವರಿಗೆ ಬಂಧ ವಿಮುಕ್ತಿಯುಂಟಾಗುವುದು. ಆದ್ದರಿಂದ ಅನೇಕರು ದೈವಸಾಕ್ಷಾತ್ಕಾರಕ್ಕಾಗಿ ಹೆಚ್ಚಿನ ವ್ರತಗಳನ್ನು, ನಿಯಮಗಳನ್ನು ಆಚರಿಸುವರು. ಮೌನವ್ರತ, ಉಪವಾಸವ್ರತ, ಬ್ರಹ್ಮಚರ್ಯವ್ರತ, ಸ್ವಾಧ್ಯಾಯವ್ರತ ಮುಂತಾದುವನ್ನು ಆಚರಿಸುವರು. ಆದರೆ ಅವರಲ್ಲಿ ಬಹಳಷ್ಟು ಜನರಿಗೆ ದೃಢತೆ (ಸ್ಥಿರತೆ) ಏರ್ಪಡುತ್ತಿಲ್ಲ. ಅದಕ್ಕೆ ಕಾರಣವನ್ನು ಭಗವಂತನು ಇಲ್ಲಿ ಸ್ಪಷ್ಟವಾಗಿ ತಿಳಿಸಿದ್ದಾನೆ. ಅನೇಕ ಜನ್ಮಾರ್ಜಿತ ಪಾಪಗಳೇ ಅದಕ್ಕೆ ಕಾರಣ. ಪಾಪಗಳು ಹೃದಯದಲ್ಲಿರುವವರಿಗೆ ಪರಮಾತ್ಮ ಸಾಧನೆಗಳಿಗೆ ಅಡಚಣೆಗಳು ಬರುತ್ತಲೇ ಇರುವುವು. ಮಾಸಿದ ಬಟ್ಟೆಗೆ ಬಣ್ಣ ಹತ್ತದಂತೆ, ಬಂಜರು ಭೂಮಿಯಲ್ಲಿ ಬೀಜ ಮೊಳೆಯದಂತೆ, ಪಾಪ ಕಲ್ಮಷಯುಕ್ತವಾದ ಹೃದಯದಲ್ಲಿ 'ಪರಮಾತ್ಮ ಬೀಜ' ಅಂಕುರಿಸುವುದಿಲ್ಲ. ಅಂತಹವರು ಒಂದು ವೇಳೆ ವ್ರತವನ್ನು ಪ್ರಾರಂಭಿಸಿದರೂ ಸಾಂಗವಾಗಿ ಅದು ಮುಂದುವರಿಯುವುದಿಲ್ಲ. ಅವುಗಳಲ್ಲಿ ದೃಢತೆಯಿರುವುದಿಲ್ಲ. ರಜೋಗುಣ ಚಿತ್ತವುಳ್ಳವನು ಧ್ಯಾನ ನಿಷ್ಠೆಯಲ್ಲಿ ಕುಳಿತುಕೊಳ್ಳಲಾಗುವುದಿಲ್ಲ. ಅದು ಅವನನ್ನು ಬಡಿದೆಬ್ಬಿಸಿ ಬಹಿರ್ಮುಖ ವಾಗುವಂತೆ ಮಾಡುತ್ತದೆ. ಆದ್ದರಿಂದ ಭಗವಂತನನ್ನು ದೃಢ ಮನಸ್ಸಿನಿಂದ ಸೇವಿಸಬೇಕೆಂದರೆ ಒಳಗಿರುವ ಪಾಪವು ನಶಿಸಬೇಕು. ಅದು ಹೇಗೆ ನಶಿಸುವುದೋ ಆ ಪದ್ಧತಿಯನ್ನು ಶ್ರೀಕೃಷ್ಣ ಪರಮಾತ್ಮನು ಈ ಶ್ಲೋಕದಲ್ಲಿ ವಿಶದೀಕರಿಸಿದ್ದಾನೆ.

ಪುಣ್ಯಕರ್ಮಗಳಿಂದ, ಅನೇಕ ಸತ್ಕಾರ್ಯಗಳನ್ನು ಆಚರಿಸುವುದರಿಂದ ನಿಷ್ಕಾಮ ಕರ್ಮಯೋಗಾನುಷ್ಠಾನದಿಂದ ಜೀವಿಯ ಪಾಪವು ನಶಿಸಿ ಹೋಗುವುದು. ಆದುದರಿಂದ ಸಾಧಕನು ಮೊದಲು ಸತ್ಕಾರ್ಯಗಳನ್ನು, ದಾನಧರ್ಮಗಳನ್ನು, ಪರೋಪಕಾರ, ದಿವ್ಯಮಂತ್ರ ಜಪ- ಮುಂತಾದುವು ಗಳನ್ನು ವಿಶೇಷವಾಗಿ ಆಚರಿಸಬೇಕು. ಕೆಲವರು, ಶುಷ್ಕ ವೇದಾಂತಿಗಳು 'ಪುಣ್ಯ ಕಾರ್ಯಗಳೂ ಕೂಡ ಬಂಧನವನ್ನುಂಟುಮಾಡುತ್ತವೆಂದು, ಆದ್ದರಿಂದ ಅವುಗಳನ್ನು ಆಚರಿಸಬಾರದು' ಎಂದು ಹೇಳುವರು. ಅದು ಅವರ ಉನ್ಮತ್ತ ಪ್ರಲಾಪವೇ ಆಗಲಿ, ಅನ್ಯವಲ್ಲ. ಏಕೆಂದರೆ ಭಗವಂತನು ಗೀತೆಯಲ್ಲಿ ಪುಣ್ಯ ಕಾರ್ಯಗಳನ್ನು, ಸತ್ಕ್ರಿಯೆಗಳನ್ನು ಮಾಡಲೇಬೇಕೆಂದು ಅನೇಕ ಕಡೆ ಆದೇಶವಿತ್ತಿದ್ದಾನೆ. ಇಷ್ಟೇ ಅಲ್ಲ, ಅವುಗಳನ್ನು ಬಿಡದೆ ಪಾಲಿಸಬೇಕೆಂದು ಎಚ್ಚರಿಸಿದ್ದಾನೆ.* ಭಗವದ್ವಾಕ್ಯದಲ್ಲಿ ವಿಶ್ವಾಸವಿರುವವರು ಆ ಆದೇಶವನ್ನು ತಪ್ಪದೆ ಪಾಲಿಸಬೇಕು. ಪುಣ್ಯ ಕಾರ್ಯಗಳನ್ನು ಮಾಡುವವನಿಗೆ ಶುಭಾಚರಣಶೀಲನಿಗೆ ದುರ್ಗತಿ ಎಂದೆಂದಿಗೂ ಉಂಟಾಗುವುದಿಲ್ಲವೆಂದು ಈಗಾಗಲೇ ಭಗವಂತನು ಹೇಳಿರುವುದು ಗಮನಾರ್ಹ.@ ಕೇವಲ ಅತೀತ ಸ್ಥಿತಿಯಲ್ಲಿರುವವನಿಗೆ, ಇಂದ್ರಿಯ ಮನಸ್ಸುಗಳನ್ನು ದಾಟಿದವನಿಗೆ, ನಿಶ್ಚಲ ಸಮಾಧಿನಿಷ್ಠನಿಗೆ, ಪುಣ್ಯ ಹಾಗು ಪಾಪಗಳು ಇಲ್ಲ ಎಂದು ಹೇಳಿರುವ ವಾಕ್ಯ ಸಾಮಾನ್ಯ ಸಾಧಕರಿಗೆ ಅನ್ವಯಿಸುವುದಿಲ್ಲ. ಏಕೆಂದರೆ ಅದರಿಂದ ಆ ಸಾಧಕರನ್ನು ಕೆಡಿಸಿದಂತೆಯೇ ಆಗುವುದು. ಅವರಿಗೆ ಉಭಯ ಭ್ರಷ್ಟತೆಯನ್ನು ಉಂಟುಮಾಡಿ ದಂತಾಗುತ್ತದೆ. ತುರೀಯ ಸ್ಥಿತಿಯಲ್ಲಿರುವ ಜೀವನ್ಮುಕ್ತರೂ ಕೂಡ ವ್ಯುತ್ಥಾನ ದೆಸೆಯಲ್ಲಿ ಲೋಕಕಲ್ಯಾಣಕ್ಕಾಗಿ ಪುಣ್ಯಕಾರ್ಯಗಳನ್ನು, ಸತ್ಕಾರ್ಯಗಳನ್ನು ಮಾಡುತ್ತಲೇ ಇರುವರು.

ಈ ಪ್ರಕಾರವಾಗಿ ಪುಣ್ಯ ಕಾರ್ಯಗಳಿಂದ ಪಾಪಗಳನ್ನು ಹೋಗ ಲಾಡಿಸಿಕೊಂಡವರು, ಸುಖದುಃಖಾದಿ ದ್ವಂದ್ವರಹಿತರಾಗಿ ಪರಮಾತ್ಮನನ್ನು ದೃಢವ್ರತವುಳ್ಳವರಾಗಿ ಸೇವಿಸುವರು. ಅದರಿಂದ ಅವರಿಗೆ ಆತ್ಮಸಾಕ್ಷಾತ್ಕಾರ ಉಂಟಾಗಿ ಬಂಧವಿಮುಕ್ತಿ ಸಿದ್ಧಿಸುವುದು. ಈ ಶ್ಲೋಕದ ಮೂಲಕ ಶ್ರೀಕೃಷ್ಣ ಪರಮಾತ್ಮನು ಜನರಿಗೆ ಈ ರೀತಿ ಎಚ್ಚರಿಕೆ ಕೊಡುತ್ತಿದ್ದಾನೆ. 'ಓ ಜೀವಿಗಳಿರಾ! ಮೊದಲು ನಿಮ್ಮ ಚಿತ್ತಗಳಲ್ಲಿರುವ ಪಾಪಗಳನ್ನು, ಜನ್ಮಜನ್ಮಾಂತರಗಳ ದುಷ್ಕಾರ್ಯಗಳಿಂದ ಬಂದಿರುವ ಕಲ್ಮಷ ಬೀಜಗಳನ್ನು, ಸತ್ಕ್ರಿಯ ಹಾಗು ಪುಣ್ಯಕಾರ್ಯಾಚರಣೆಗಳಿಂದ ತೊಳೆದುಕೊಳ್ಳಿರಿ. ಆಗಲೇ ನಿಮಗೆ ಸುಖ ದುಃಖಾದಿ ದ್ವಂದ್ವವ್ಯಾಮೋಹ ಮಾಯವಾಗಿ ದೈವವ್ರತದಲ್ಲಿ ದೃಢತೆ ಏರ್ಪಡುತ್ತದೆ. ಅದರಿಂದ ಮೋಕ್ಷವು ಸನ್ನಿಹಿತವಾಗುವುದು'. ಆದ್ದರಿಂದ ಸಾಧಕರು ಭಗವದ್ವಾಕ್ಯದಲ್ಲಿ ವಿಶ್ವಾಸವಿಟ್ಟು ಪುಣ್ಯಾಚರಣಾತತ್ಪರರಾಗಿ ಮೆರೆಯಬೇಕು.

ಈ ಶ್ಲೋಕದಿಂದ ಇನ್ನೊಂದು ವಿಷಯ ಸ್ಪಷ್ಟವಾಗುತ್ತದೆ. ಅದು ಏನೆಂದರೆ ಪರಮಾರ್ಥ ರಂಗದಲ್ಲಿ ಸಾಧಕನು ಕೆಲವು ದೃಢ ನಿಯಮಗಳನ್ನು ಹಾಗು ವ್ರತಗಳನ್ನು ಏರ್ಪಡಿಸಿಕೊಳ್ಳಬೇಕು. ಇಲ್ಲದಿದ್ದರೆ ಮಾಯೆ ದಾರಿಬಿಡದು. ದುರ್ಬಲ ನಿಯಮಗಳಿಗೆ ಮಾಯೆ ಬಗ್ಗದು. ಮನಸ್ಸು ಸ್ವಾಧೀನಕ್ಕೆ ಬರುವುದಿಲ್ಲ. ಸಣ್ಣ ಕೊಡಲಿಯಿಂದ ಬಲವಾದ ವೃಕ್ಷವನ್ನು ಕಡಿಯಲಾಗುವುದಿಲ್ಲವಲ್ಲವೇ! 'ಈ ದಿನ ಇಷ್ಟು ಸಾವಿರ ಜಪ ಮಾಡದೆ ಭುಜಿಸುವುದಿಲ್ಲ, ಇಷ್ಟು ಅಧ್ಯಾಯಗಳನ್ನು, ಪಾರಾಯಣ ಮಾಡದೆ ಇನ್ನೊಂದು ಕೆಲಸ ಮುಟ್ಟುವುದಿಲ್ಲ'- ಈ ಪ್ರಕಾರವಾದ ದೃಢ ನಿಶ್ಚಯಗಳನ್ನು ಮಾಡಿಕೊಳ್ಳಬೇಕು.

ಈ ಶ್ಲೋಕದಿಂದ ಈ ಕೆಳಗಿನ ವಿಷಯಗಳು ಸ್ಪಷ್ಟವಾಗುತ್ತವೆ-

೧) ಮೋಕ್ಷವನ್ನು ಹೊಂದಬೇಕೆಂದರೆ ಸಾಧಕನು ದೃಢವ್ರತವನ್ನು ಆಚರಿಸಬೇಕು.

೨) ದೃಢವ್ರತ ಉಂಟಾಗಬೇಕೆಂದರೆ ಚಿತ್ತದಲ್ಲಿಯ ಪಾಪ ನಶಿಸಬೇಕು.

೩) ಪಾಪವು ನಶಿಸಬೇಕೆಂದರೆ ಪುಣ್ಯ ಕಾರ್ಯಗಳನ್ನು, ಸತ್ಕರ್ಮಗಳನ್ನು ಆಚರಿಸಬೇಕು.

ಪ್ರ : ಭಗವಂತನನ್ನು ದೃಢವ್ರತರಾಗಿ ಯಾರು ಸೇವಿಸಬಲ್ಲರು ?

ಉ : ಪಾಪವು ನಶಿಸಿದವರು.

ಪ್ರ : ಪಾಪವು ಹೇಗೆ ನಶಿಸುವುದು ?

ಉ : ಪುಣ್ಯಕಾರ್ಯಗಳಿಂದ.

ಪ್ರ : ಪಾಪವು ನಶಿಸಿದರೆ ಉಂಟಾಗುವ ಫಲಗಳೇನು ?

ಉ : ದ್ವಂದ್ವ ಮೋಹ ವಿನಾಶ, ಧ್ಯಾನ ದೃಢತೆ.

**ಅ||** ಶ್ರದ್ಧಾಭಕ್ತಿಗಳಿಂದ ಭಗವಂತನನ್ನಾಶ್ರಯಿಸಿ ಪ್ರಯತ್ನಿಸುವವರಿಗೆ ಉಂಟಾಗುವ ಫಲಗಳನ್ನು ವಿವರಿಸಲಾಗುತ್ತಿದೆ-

**೨೯. ಜರಾಮರಣ ಮೋಕ್ಷಾಯ ಮಾಮಾಶ್ರಿತ್ಯ ಯತಂತಿ ಯೇ**
**ತೇ ಬ್ರಹ್ಮ ತದ್ವಿದುಃ ಕೃತ್ಸ್ನಮಧ್ಯಾತ್ಮಂ ಕರ್ಮ ಚಾಖಿಲಮ್**

**ಅರ್ಥ:** ಏ=ಯಾರು; ಜರಾಮರಣ ಮೋಕ್ಷಾಯ=ವೃದ್ಧಾಪ್ಯ ಮರಣಗಳನ್ನು ಹೋಗಲಾಡಿಸಿಕೊಳ್ಳುವುದಕ್ಕೆ; ಮಾಂ=ನನ್ನನ್ನು; ಆಶ್ರಿತ್ಯ=ಆಶ್ರಯಿಸಿ; ಯತಂತಿ=ಪ್ರಯತ್ನ ಮಾಡುತ್ತಿರುವರೊ; ತೇ=ಅವರು; ಕೃತ್ಸ್ನಂ= ಸಮಸ್ತವಾದ; ಆಧ್ಯಾತ್ಮಂ=ಪ್ರತ್ಯಗಾತ್ಮ ಸ್ವರೂಪವನ್ನು; ಅಖಿಲಂ ಕರ್ಮ ಚ=ಸಕಲ ಕರ್ಮಗಳನ್ನು; ತದ್ಬ್ರಹ್ಮ=ಆ ಬ್ರಹ್ಮವೇ ಎಂದು; ವಿದುಃ=ತಿಳಿದುಕೊಳ್ಳುವರು.

**ತಾ||** ಯಾರು ವೃದ್ಧಾಪ್ಯವನ್ನು, ಮರಣವನ್ನು (ಸಂಸಾರ ದುಃಖವನ್ನು) ಹೋಗಲಾಡಿಸಿಕೊಳ್ಳಲು ನನ್ನನ್ನು ಆಶ್ರಯಿಸಿ ಪ್ರಯತ್ನಿಸುತ್ತಿದ್ದಾರೋ ಅವರು ಸಮಸ್ತ ಪ್ರತ್ಯಗಾತ್ಮ ಸ್ವರೂಪವೂ ಹಾಗು ಸಕಲ ಕರ್ಮಗಳೂ ಆ ಬ್ರಹ್ಮವೇ ಎಂದು ತಿಳಿದುಕೊಳ್ಳುವರು.

**ವ್ಯಾಖ್ಯೆ:** ಕೆಲವು ಜೀವಿಗಳು ಸಂಸಾರ ದುಃಖನಿವೃತ್ತಿಗೆ ಹಾಗು ಪರಮಾನಂದ ಪ್ರಾಪ್ತಿಗೆ ಭಗವಂತನನ್ನು ಆಶ್ರಯಿಸಿ ಆ ಲಕ್ಷ್ಯ ಸಾಧನೆಗಾಗಿ ಯತ್ನಿಸುತ್ತಾರೆ. ಜನನ ಮರಣಗಳು, ಜರಾವ್ಯಾಧಿಗಳು ಮುಂತಾದುವುಗಳಿಂದ ಕೂಡಿದ ಈ ಸಂಸಾರ ದುಃಖ ಅತಿ ಭಯಂಕರವಾದುದು. ಆದ್ದರಿಂದ ಅದರಿಂದ ಬಿಡುಗಡೆ ಹೊಂದಲೆಂದು ಸರ್ವೇಶ್ವರನನ್ನು ಜನರು ಆಶ್ರಯಿಸಿ ಪ್ರಯತ್ನ ಶೀಲರಾಗುತ್ತಿದ್ದಾರೆ. ಸಮಸ್ತ ಆಧ್ಯಾತ್ಮಿಕ ಸಾಧನೆಗಳು ಇದಕ್ಕಾಗಿಯೇ ಏರ್ಪಟ್ಟಿವೆ- ಅಂದರೆ ಜರಾಮರಣರೂಪ ಸಂಸಾರದುಃಖ ವಿನಾಶಕ್ಕಾಗಿ, ನಿರತಿಶಯಾತ್ಮಾನಂದ ಪ್ರಾಪ್ತಿಗಾಗಿ, ಸರ್ವೇಶ್ವರನನ್ನು ಆಶ್ರಯಿಸಿ ಧ್ಯಾನಾದಿ ಯತ್ನಗಳನ್ನು ಆಚರಿಸುವವರು (ಕ್ರಮಕ್ರಮವಾಗಿ ಅವರ ಯತ್ನಗಳು ಪರಿಪಕ್ವವಾಗಿ ಸಾಧನೆಯಲ್ಲಿ ಪಾರಂಗತರಾಗಿ ಆರೂಢ ಸ್ಥಿತಿಯನ್ನು ಹೊಂದಿದ ನಂತರ) ಸಮಸ್ತ ಕರ್ಮಗಳು, ಸಮಸ್ತ ಜೀವಿಗಳು, ಸಮಸ್ತ ಪ್ರತ್ಯಗಾತ್ಮ ಸ್ವರೂಪಗಳು ಅದ್ವೈತ ಪರಬ್ರಹ್ಮವೆಂದು ತಿಳಿದುಕೊಳ್ಳುವರೆಂದು ಇಲ್ಲಿ ಹೇಳಲಾಗಿದೆ. ಅಂದರೆ, ಅವರ ದೃಷ್ಟಿಯಲ್ಲಿ ಬ್ರಹ್ಮೇತರವಾದ ವಸ್ತುವು ಯಾವುದೂ ಈ ಜಗತ್ತಿನಲ್ಲಿ ಕಂಡುಬರುವುದಿಲ್ಲ. ಎಲ್ಲವೂ ಆತ್ಮಮಯ ಹಾಗು ಬ್ರಹ್ಮಮಯವಾಗಿಯೇ ಕಾಣುವುದು.

ಆದರೆ ಇಂತಹ ಬ್ರಹ್ಮಾನುಭೂತಿ ಎಲ್ಲರಿಗೂ ಉಂಟಾಗುವುದಿಲ್ಲ. ಯಾರು ಮೋಕ್ಷಕ್ಕಾಗಿ ತೀವ್ರ ಪ್ರಯತ್ನ ಮಾಡುವರೋ, ಯಾರು ಬಂಧ ವಿಮುಕ್ತಿಗಾಗಿ ಸರ್ವೇಶ್ವರನನ್ನು ಆಶ್ರಯಿಸಿ ಧ್ಯಾನಾದಿಗಳನ್ನು ಆಚರಿಸುವರೋ, ಅಂತಹವರಿಗೆ ಮಾತ್ರ ಇದು ಉಂಟಾಗುವುದು. ನಂತರ ತಾನೇ ಪರಬ್ರಹ್ಮನೆಂದು, ತನ್ನಲ್ಲೇ ಸಮಸ್ತ ಕರ್ಮ ಸಮೂಹ, ಸಮಸ್ತ ಜಗತ್ತು, ಸಮ್ಮಸ್ತ ಜೀವರಾಶಿಗಳು (ಕಲ್ಪಿತಗಳಾಗಿ) ಇರುವವೆಂದು, ಸರ್ವಜೀವಿಗಳ ಆತ್ಮ ತಾನೇ ಎಂದೂ ತಿಳಿಯುವನು. ಈ ಸ್ಥಿತಿಯೇ '**ಅಹಂ ಬ್ರಹ್ಮಾಸ್ಮಿ**' ಎನ್ನುವ ಮಹಾ ವಾಕ್ಯದ ಅನುಭವವಾಗಿದೆ.

ಈ ಶ್ಲೋಕದಲ್ಲಿ 'ಯತಂತಿ'- (ಪ್ರಯತ್ನಿಸುತ್ತಿದ್ದಾರೆ) ಎಂದು ಹೇಳಿರುವುದರಿಂದ ಬ್ರಹ್ಮಾನುಭೂತಿಯು ಮಾತುಗಳಿಂದ ಸಿದ್ಧಿಸುವುದಲ್ಲ ವೆಂದೂ, ತೀವ್ರವಾದ ಯತ್ನವನ್ನು ಮಾಡಬೇಕಾಗಿರುವುದೆಂದೂ ಸ್ಪಷ್ಟವಾಗುತ್ತದೆ. ಮತ್ತೆ 'ಆಶ್ರಿತ್ಯ', 'ಯತಂತಿ' ಎನ್ನುವ ಎರಡು ಪದಗಳನ್ನು ಉಪಯೋಗಿಸಿರುವುದರಿಂದ ಕೇವಲ ಭಗವಂತನನ್ನು ಆಶ್ರಯಿಸಿದರೆ ಸಾಲದೆಂದೂ, ಭಗವತ್ಸಾಕ್ಷಾತ್ಕಾರಕ್ಕಾಗಿ ಪ್ರಯತ್ನವನ್ನೂ ಕೂಡ ಮಾಡಬೇಕೆಂದೂ ತಿಳಿಯುತ್ತದೆ. ಭಗವದಾಶ್ರಯವನ್ನು ಹೊಂದಿರುವುದರಿಂದ ಭಗವಂತನು ಅನುಗ್ರಹಿಸಿ ದಾರಿ ತೋರಿಸುವನು. ಆ ದಾರಿಯನ್ನು ಹಿಡಿದು ತಾನೇ ನಡೆಯಬೇಕು. ಯತ್ನಶೀಲನಾಗಿ ತನ್ನ ಮನಸ್ಸನ್ನು ತಾನೇ ಪವಿತ್ರ ಮಾಡಿಕೊಂಡು ಬ್ರಹ್ಮಾನುಭೂತಿಯನ್ನು ಹೊಂದಬೇಕು.

ಪ್ರ : ಭಗವಂತನನ್ನು ಏಕೆ ಆಶ್ರಯಿಸಬೇಕು ?

ಉ: ಜನ್ಮಜರಾಮರಣ ರೂಪ ಸಂಸಾರ ಬಂಧ ವಿಮುಕ್ತಿಗಾಗಿ.

ಪ್ರ : ಭಗವತ್ಪ್ರಾಪ್ತಿ ಹೇಗೆ ಉಂಟಾಗುವುದು ?

ಉ: ಸ್ವಪ್ರಯತ್ನದಿಂದ, ತಾನು ಖುದ್ದಾಗಿ ಆಧ್ಯಾತ್ಮಿಕ ಸಾಧನೆಗಳನ್ನು ಅವಲಂಬಿಸುವುದರಿಂದ.

ಪ್ರ : ಇದರಿಂದ ಆತನಿಗೆ ಯಾವ ಫಲ ಲಭಿಸುವುದು ?

ಉ: ಭಗವದಾಶ್ರಯದಿಂದ, ಭಗವತ್ಸಾಕ್ಷಾತ್ಕಾರಕ್ಕೆ ಬೇಕಾದ ಯತ್ನದಿಂದ ಆತನು ಬ್ರಹ್ಮಪ್ರಾಪ್ತಿ ಹೊಂದಿ, ಸಮಸ್ತ ಜೀವಿಗಳು ಹಾಗು ಸಮಸ್ತ ಕರ್ಮಗಳೆಲ್ಲವೂ ಆ ಪರಬ್ರಹ್ಮವೇ ಎಂದು ತಿಳಿದುಕೊಳ್ಳುವನು.

**೩೦. ಸಾಧಿಭೂತಾಧಿದೈವಂ ಮಾಮ್ ಸಾಧಿಯಜ್ಞಂ ಚ ಯೇ ವಿದುಃ**
**ಪ್ರಯಾಣಕಾಲೇಽಪಿ ಚ ಮಾಮ್ ತೇ ವಿದುರ್ಯುಕ್ತಚೇತಸಃ**

**ಅರ್ಥ:** ಯೇ=ಯಾರು; ಸಾಧಿಭೂತಾಧಿದೈವಂ=ಅದಿಭೂತ, ಅಧಿದೈವ ಗಳಿಂದ ಕೂಡಿದ; ಸಾಧಿಯಜ್ಞಂ ಚ=ಅಧಿಯಜ್ಞದಿಂದ ಕೂಡಿದ; ಮಾಂ= ನನ್ನನ್ನು; ವಿದುಃ=ತಿಳಿದುಕೊಳ್ಳುವರೋ; ತೇ=ಅವರು; ಪ್ರಯಾಣ ಕಾಲೇ ಅಪಿ ಚ=ದೇಹ ವಿಯೋಗ ಕಾಲದಲ್ಲಿ; ಯುಕ್ತ ಚೇತಸಃ=(ದೈವದಲ್ಲಿ) ಸ್ಥಿರವಾಗಿರುವ ಮನಸ್ಸುಳ್ಳವರಾಗಿ; (ಇಲ್ಲವೆ ಮನೋನಿಗ್ರಹವುಳ್ಳವರಾಗಿ); ಮಾಂ=ನನ್ನನ್ನು; ವಿದುಃ=ತಿಳಿದುಕೊಳ್ಳುವರು.

**ತಾ||** ಅಧಿಭೂತ, ಅಧಿದೈವ, ಅಧಿಯಜ್ಞಗಳಿಂದ ಕೂಡಿದ ನನ್ನನ್ನು ಯಾರು ತಿಳಿದುಕೊಳ್ಳುವರೋ ಅವರು ದೇಹ ವಿಯೋಗ ಕಾಲದಲ್ಲಿ (ದೈವದಲ್ಲಿ)

---

* ಯಜ್ಞದಾನತಪಃಕರ್ಮಂ ನತ್ಯಾಜ್ಯಂ ಕಾರ್ಯಮೇವ ತತ್। ಯಜ್ಞೋ ದಾನಂ ತಪಃಶ್ಚೈವ ಪಾವನಾನಿ ಮನೀಷಿಣಾಮ್ (೧೮-೫)

@ ನ ಹಿ ಕಲ್ಯಾಣಕೃತ್‌ಕಶ್ಚಿತ್‌ದುರ್ಗತಿಂ ತಾತ ಗಚ್ಛತಿ (೬-೪೦)

ಸ್ಥಿರವಾಗಿರುವ ಮನಸ್ಸುಳ್ಳವರಾಗಿ (ಮನೋನಿಗ್ರಹವುಳ್ಳವರಾಗಿ) ನನ್ನನ್ನು ತಿಳಿಯುವರು.

**ವ್ಯಾಖ್ಯೆ:** ಯಾರು ತಮ್ಮ ತಮ್ಮ ಜೀವನ ಕಾಲದಲ್ಲೆಲ್ಲಾ ಆತ್ಮಚಿಂತನೆ ಹೊಂದಿರುವರೋ ಅವರು ಅಂತಿಮ ಕಾಲದಲ್ಲಿ (ದೇಹವಿಯೋಗ ಕಾಲದಲ್ಲಿ) ನಿಯಮಿತ ಚಿತ್ತರಾಗಿ ಅಂತಹ ದೈವಾನುಭವವನ್ನೇ ಹೊಂದಿರುವವರೆಂದು ಇಲ್ಲಿ ಹೇಳಲಾಗಿದೆ. ಅಧಿಭೂತ, ಅಧಿದೈವ, ಅದಿಯಜ್ಞ ರೂಪಗಳಾದ ಸಮಸ್ತ ಪದಾರ್ಥಗಳು ಪರಮಾತ್ಮಸ್ವರೂಪವೇ ಎನ್ನುವ ಆತ್ಮಾನುಭವವನ್ನು ತಮ್ಮ ಜೀವನ ಕಾಲದಲ್ಲಿಯೇ ಹೊಂದುವರು. ಅಂತಿಮ ಕಾಲದಲ್ಲಿಯೂ ಅಂತಹ ಬ್ರಹ್ಮಾನುಭವವನ್ನೇ ಹೊಂದಿರುವರು. 'ಸಮಸ್ತವೂ ಬ್ರಹ್ಮವೇ; ಆ ಬ್ರಹ್ಮವು ನಾನೇ' ಎನ್ನುವ ಈ ಬ್ರಹ್ಮಾನುಭವವನ್ನು ಜನರು ಎಲ್ಲಾ ಕಾಲದಲ್ಲಿಯೂ ಹೊಂದುವಂತಾಗಬೇಕು!

ಆ ಅನುಭವ ಹೇಗೆ ಬರುವುದು? ಅದಕ್ಕೆ ಉತ್ತರವನ್ನು ಇಲ್ಲಿ ಕೊಡಲಾಗಿದೆ- 'ಯುಕ್ತ ಚೇತಸಃ' ಮನೋನಿಗ್ರಹದಿಂದ (ಮನೋಜಯದಿಂದ) ಸಿದ್ಧಿಸುವುದು. ಇಂದ್ರಿಯ ಹಾಗು ಮನಸ್ಸುಗಳನ್ನು ಜಯಿಸಲಾರದವರಿಗೆ ಅಂತಹ ಸಾರ್ವಾತ್ಮಿಕ ಅನುಭವ ಉಂಟಾಗಲಾರದು. ಇಂದ್ರಿಯಗಳಿಗೆ ದಾಸರಾಗಿ ಇರುವವರಿಗೆ ಅಂತಹ ಬ್ರಹ್ಮಾನುಭವವು ಉಂಟಾಗುವುದಿಲ್ಲ. ಜೀವನವೆಲ್ಲವೂ ಇಂತಹ ನಿಯಮಿತ ಚಿತ್ತವುಳ್ಳವರಿಗೆ ಮಾತ್ರ ಬ್ರಹ್ಮಾನುಭವವು ಸಿದ್ಧಿಸುವುದು. ಆದರೆ ಕೇವಲ ಅಂತಿಮಕಾಲದಲ್ಲಿ ಇದ್ದರೆ ಸಾಕು ಎಂದು ಹೇಳಲಿಲ್ಲ. ಅಂತಿಮ ಕಾಲದಲ್ಲಿಯೂ ಸಹ (ಪ್ರಯಾಣಕಾಲೇಪಿ ಚ) ಎಂದೇ ಹೇಳಲಾಗಿದೆ. ಆದ್ದರಿಂದ ಆರೋಗ್ಯ ಚೆನ್ನಾಗಿರುವಾಗಲೇ, ಇಂದ್ರಿಯಗಳು ಶಿಥಿಲ ಹೊಂದುವುದಕ್ಕೆ ಮೊದಲೇ, ದೇಹಶಕ್ತಿ ಉಡುಗುವುದಕ್ಕಿಂತ ಮುಂಚೆಯೇ ಸಮಸ್ತ ಸಾಧನೆಗಳಿಂದ ಆತ್ಮಾನುಭವವನ್ನು ಹೊಂದಬೇಕೆಂದೂ, ಹಾಗೆ ಹೊಂದಿದರೆ ಮಾತ್ರ ಅಂತ್ಯಕಾಲದಲ್ಲಿ ದೈವ ಸ್ಮೃತಿ ಉಂಟಾಗುತ್ತದೆಂದು ಸ್ಪಷ್ಟವಾಗುತ್ತದೆ. ಪ್ರಯಾಣ ಮಾಡುವ ಮೊದಲೇ ಸಾಮಗ್ರಿಗಳೆಲ್ಲವನ್ನೂ ಹೇಗೆ ಜೋಡಿಸಿಕೊಳ್ಳುವರೋ, ದಾರಿ ಭತ್ಯವನ್ನು ಶೇಖರಿಸಿಕೊಂಡು ಹೇಗೆ ಸಿದ್ಧವಾಗುವರೋ ಹಾಗೆ ದೀರ್ಘಪ್ರಯಾಣ ಪ್ರಾರಂಭವಾಗುವ ಮುನ್ನ ಅಂದರೆ ದೇಹವಿಯೋಗಕ್ಕೆ ಮುಂಚೆಯೇ ದೈವಾನುಭವವನ್ನು ಪೂರ್ತಿಯಾಗಿ ಹೊಂದಿರಬೇಕು. ಬಾಲ್ಯ ಅಥವ ಯೌವನಗಳಲ್ಲಿಯೇ ಆ ರೀತಿ ಸಿದ್ಧಗೊಳ್ಳುವುದು ಉತ್ತಮ. ಆದರೆ ಸಾಮಾನ್ಯವಾಗಿ ಎಲ್ಲಾ ಶಕ್ತಿಗಳು ಉಡುಗಿ ಹೋದ ವೃದ್ಧಾಪ್ಯದಲ್ಲಿ ಜೀವಿಯು ಪರಮಾತ್ಮಯತ್ನಗಳನ್ನು ಮಾಡುವನು. ಈ ಶ್ಲೋಕದಲ್ಲಿ ಆತ್ಮಸಾಕ್ಷಾತ್ಕಾರ ರೂಪ ಲಕ್ಷ್ಯವನ್ನು ಜೀವನ ಕಾಲದಲ್ಲಿಯೇ ಅದರಲ್ಲೂ ವೃದ್ಧಾಪ್ಯಕ್ಕೆ ಮೊದಲೇ ಪಡೆಯಬೇಕೆಂದು ಸೂಚಿತಗೊಂಡಿದೆ.

'ಜೀವನ ಕಾಲದಲ್ಲಿಯೇ ಯಾರು ನನ್ನನ್ನು ತಿಳಿಯುವರೋ ಅವರು ಅಂತ್ಯಕಾಲದಲ್ಲಿಯೂ ನನ್ನನ್ನು ತಿಳಿಯಬಲ್ಲರು' ಎಂದು ಭಗವಂತನು ಇಲ್ಲಿ ಹೇಳಿರುವುದರಿಂದ ಅಂತ್ಯಕಾಲದಲ್ಲಿ ಮಾತ್ರ ಮಾಡುವೆನೆಂದು ನಿಶ್ಚಯಿಸಿ ಜೀವನವೆಲ್ಲವನ್ನೂ ಸೋಮಾರಿಯಾಗಿ ಕಳೆಯಬಾರದೆಂದು ಎಚ್ಚರಿಸಿದಂತಾಗಿದೆ. ಮತ್ತೆ ಅಂತ್ಯಕಾಲವು ಇಂಥಹ ನಿರ್ದಿಷ್ಟ ಸಮಯವೆಂದು ಯಾರಿಗೂ ತಿಳಿಯದು. ಆದ್ದರಿಂದ ಜೀವನವೆಲ್ಲವನ್ನು ಭಗವಚ್ಚಿಂತನೆಯಲ್ಲಿ ಕಳೆಯುತ್ತಿದ್ದರೆ ಇನ್ನು ಮೃತ್ಯು ಯಾವಾಗ ಬಂದರೂ ಭಯವಿಲ್ಲ. ಅಂತ್ಯ ಕಾಲದಲ್ಲಿ ಮಾತ್ರವೇ ಭಗವಚ್ಚಿಂತನೆ ಮಾಡಬೇಕೆನ್ನುವವರ ವಾದ ಈ ಶ್ಲೋಕದಿಂದ ಪೂರ್ತಿಯಾಗಿ ಖಂಡಿಸಲ್ಪಟ್ಟಿದೆ. ಗೀತಾಚಾರ್ಯನು ಆಧ್ಯಾತ್ಮರಂಗದಲ್ಲಿ ಸೋಮಾರಿತನವನ್ನು ಖಂಡಿಸಿ, ಪುರುಷ ಪ್ರಯತ್ನವನ್ನೇ ಒತ್ತಿ ಹೇಳಿರುವನು.

ಅಧಿಭೂತ, ಅಧಿದೈವ, ಅಧಿಯಜ್ಞಗಳೆಂದರೆ ಏನು ಎನ್ನುವುದನ್ನು ಮುಂದಿನ ಅಧ್ಯಾಯದಲ್ಲಿ ವಿವರವಾಗಿ ತಿಳಿಸಲ್ಪಟ್ಟಿದೆ.

ಪ್ರ : ದೇಹವಿಯೋಗದ ಸಮಯದಲ್ಲಿ ಯಾರು ನಿಯಮಿತ ಚಿತ್ತರಾಗಿ ಆತ್ಮಾನುಭವವನ್ನು ಹೊಂದಿರುವರು?

ಉ: ಯಾರು ಅನೇಕ ಸಾಧನೆಗಳ ಮೂಲಕ ಜೀವನದುದ್ದಕ್ಕೂ ಯತ್ನಿಸಿ ಪರಮಾತ್ಮಾನುಭವವನ್ನು ಸಂಪಾದಿಸಿಕೊಂಡಿರುವರೋ ಅವರು.

**ಓಮ್**

ಇತಿ ಶ್ರೀಮದ್ಭಗವದ್ಗೀತಾಸೂಪನಿಷತ್ಸು ಬ್ರಹ್ಮವಿದ್ಯಾಯಾಂ ಯೋಗಶಾಸ್ತ್ರೇ

ಶ್ರೀಕೃಷ್ಣಾರ್ಜುನ ಸಂವಾದೇ ವಿಜ್ಞಾನಯೋಗೋ ನಾಮ

ಸಪ್ತಮೋಽಧ್ಯಾಯಃ

ಇದು ಉಪನಿಷತ್ಪ್ರತಿಪಾದಕವೂ, ಬ್ರಹ್ಮವಿದ್ಯೆಯೂ, ಯೋಗಶಾಸ್ತ್ರವೂ,

ಶ್ರೀಕೃಷ್ಣಾರ್ಜುನ ಸಂವಾದವಾದ ಶ್ರೀಭಗವದ್ಗೀತೆಯಲ್ಲಿ ವಿಜ್ಞಾನಯೋಗವೆನ್ನುವ

ಏಳನೆಯ ಅಧ್ಯಾಯ

**ಓಮ್ ತತ್ ಸತ್**

# ಅಕ್ಷರಪರಬ್ರಹ್ಮಯೋಗ

# ಶ್ರೀ ಭಗವದ್ಗೀತೆ

## ಅಥ ಅಷ್ಟಮೋಽಧ್ಯಾಯಃ

## ಎಂಟನೆಯ ಅಧ್ಯಾಯ

## ಅಕ್ಷರ ಪರಬ್ರಹ್ಮಯೋಗಃ - ಅಕ್ಷರ ಪರಬ್ರಹ್ಮಯೋಗ

**ಈ ಅಧ್ಯಾಯದ ಹೆಸರು :**

**'ಅಕ್ಷರ ಪರಬ್ರಹ್ಮಯೋಗ'**- 'ಕ್ಷರ'ಅಂದರೆ ನಶಿಸುವುದು. ಅಕ್ಷರವೆಂದರೆ ನಾಶರಹಿತವಾದುದು. ನಾಶರಹಿತವಾದ ಪರಬ್ರಹ್ಮನನ್ನು ಕುರಿತು ಬೋಧಿಸುವ ಅಧ್ಯಾಯವಾದುದರಿಂದ ಇದಕ್ಕೆ ಅಕ್ಷರ ಪರಬ್ರಹ್ಮವೆನ್ನುವ ಹೆಸರು ಬಂದಿದೆ.

**ಈ ಅಧ್ಯಾಯದಲ್ಲಿಯ ಪ್ರಧಾನ ವಿಷಯಗಳು:**

೧) ಬ್ರಹ್ಮ-ಆಧ್ಯಾತ್ಮ-ಕರ್ಮ ಮುಂತಾದುವುಗಳನ್ನು ಕುರಿತ ಅರ್ಜುನನ ಪ್ರಶ್ನೆಗಳು, ಅವುಗಳಿಗೆ ಭಗವಂತನು ಕೊಟ್ಟ ಪ್ರತ್ಯುತ್ತರಗಳು.
(೧ನೇ ಶ್ಲೋಕದಿಂದ ೭ನೇ ಶ್ಲೋಕದವರೆಗೆ)

೨) ಪ್ರಣವೋಪಾಸನೆ, ಅದರ ಅದ್ಭುತ ಫಲ-
(೮ನೇ ಶ್ಲೋಕದಿಂದ ೧೬ನೇ ಶ್ಲೋಕದವರೆಗೆ)

೩) ಸೃಷ್ಟಿ, ಪ್ರಳಯಗಳನ್ನು ಕುರಿತ ವಿವರಣೆ-
(೧೭ನೇ ಶ್ಲೋಕದಿಂದ ೧೯ನೇ ಶ್ಲೋಕದವರೆಗೆ)

೪) ಭಗವಂತನ ಸನಾತನ ಸ್ವರೂಪ- ಭಕ್ತಿಯಿಂದ ಅದರ ಸಂಪ್ರಾಪ್ತಿ-
(೨೦ನೇ ಶ್ಲೋಕದಿಂದ ೨೨ನೇ ಶ್ಲೋಕದವರೆಗೆ)

೫) ಶುಕ್ಲ, ಕೃಷ್ಣ ಮಾರ್ಗಗಳ ವರ್ಣನೆ-
(೨೩ನೇ ಶ್ಲೋಕದಿಂದ ೨೬ನೇ ಶ್ಲೋಕದವರೆಗೆ)

೬) ಯೋಗಿಯ ಮಹಿಮೆ
(೨೭ನೇ ಶ್ಲೋಕದಿಂದ ೨೮ನೇ ಶ್ಲೋಕದವರೆಗೆ)

**ಪೂರ್ವಾಧ್ಯಾಯದೊಂದಿಗೆ ಈ ಅಧ್ಯಾಯಕ್ಕೆ ಇರುವ ಸಂಬಂಧ:**

ಹಿಂದಿನ ಅಧ್ಯಾಯದ ಕೊನೆಯಲ್ಲಿ ಶ್ರೀಕೃಷ್ಣಪರಮಾತ್ಮ ಜರಾಮರಣ ವಿಮುಕ್ತಿಗಾಗಿ ತನ್ನನ್ನು ಆಶ್ರಯಿಸಿ, ಪ್ರಯತ್ನಿಸುವವರು ಬ್ರಹ್ಮವನ್ನು ತಿಳಿಯುವರೆಂದು ಹೇಳಿ ಆ ಬ್ರಹ್ಮದ ಕೆಲವು ವಿಶೇಷಣಗಳನ್ನು ತಿಳಿಸಿದನು. ಬ್ರಹ್ಮವು ಆಧ್ಯಾತ್ಮರೂಪ, ಸಕಲ ಕರ್ಮಸ್ವರೂಪ, ಅಧಿಭೂತ, ಅಧಿ ದೈವ ಮತ್ತು ಅಧಿಯಜ್ಞ ಸಹಿತವಾದದ್ದೆಂದು ಹೇಳಲಾಯಿತು. ಹಾಗೆ ಹೇಳಿ ಬ್ರಹ್ಮನಿಗಾಗಿ ಯತ್ನಿಸುವವರು ನಿಯಮಿತ ಚಿತ್ತರಾಗಿದ್ದು ದೇಹವಿಯೋಗ ಸಮಯದಲ್ಲಿ (ಪ್ರಯಾಣ ಕಾಲದಲ್ಲಿ)ಯೂ ಸಹ ಆ ಪರಮಾತ್ಮನನು ಮರೆಯುವುದಿಲ್ಲವೆಂದು ಹೇಳಲಾಯಿತು. ಆ ವಾಕ್ಯಗಳನ್ನು ಕೇಳುತ್ತಲೇ ಅರ್ಜುನನಿಗೆ ಸಂದೇಹವುಂಟಾಗಿ ಭಗವಂತನು ಬೋಧಿಸಿದ ಏಳು ವಿಷಯಗಳನ್ನು ವಿವರವಾಗಿ ತಿಳಿದುಕೊಳ್ಳಲಿಚ್ಛಿಸಿ, ಈ (ಎಂಟನೆಯ) ಅಧ್ಯಾಯದ ಪ್ರಾರಂಭದಲ್ಲಿ ಆ ಏಳನ್ನು ಬೇರೆ ಬೇರೆಯಾಗಿ ಪ್ರಶ್ನಿಸಿದನು- 'ಬ್ರಹ್ಮವೆಂದರೇನು? ಅಧ್ಯಾತ್ಮವೆಂದರೇನು?' ಮುಂತಾದ ಅರ್ಜುನನ ಏಳು ಪ್ರಶ್ನೆಗಳಿಂದ ಈ ಅಧ್ಯಾಯ ಪ್ರಾರಂಭವಾಗುತ್ತಿದೆ.

**ಅರ್ಜುನ ಉವಾಚ:**

**೧. ಕಿಂ ತದ್ಬ್ರಹ್ಮ ಕಿಮಧ್ಯಾತ್ಮಂ ಕಿಂ ಕರ್ಮ ಪುರುಷೋತ್ತಮ**
**ಅಧಿಭೂತಂ ಚ ಕಿಂ ಪ್ರೋಕ್ತಮಧಿದೈವಂ ಕಿಮುಚ್ಯತೇ**

**೨. ಅಧಿಯಜ್ಞಃ ಕಥಂ ಕೋಽತ್ರ ದೇಹೇಽಸ್ಮಿನ್ಮಧುಸೂದನ**
**ಪ್ರಯಾಣಕಾಲೇ ಚ ಕಥಂ ಜ್ಞೇಯೋಽಸಿ ನಿಯತಾತ್ಮಭಿಃ**

ಅರ್ಜುನ ಉವಾಚ- ಅರ್ಜುನನು ಕೇಳಿದನು-

**ಅರ್ಥ:** ಪುರುಷೋತ್ತಮ=ಪುರುಷ ಶ್ರೇಷ್ಠನಾದ ಓ ಕೃಷ್ಣಾ! ತದ್ಬ್ರಹ್ಮ=ಆ ಬ್ರಹ್ಮವು; ಕಿಂ=ಯಾವುದು; ಅಧ್ಯಾತ್ಮಂ=ಅಧ್ಯಾತ್ಮವು; ಕಿಂ=ಯಾವುದು; ಕರ್ಮ=ಕರ್ಮ; ಕಿಂ=ಯಾವುದು; ಅಧಿಭೂತಂ ಚ=ಅಧಿಭೂತವನ್ನು; ಕಿಂ=ಎಂತಹುದೆಂದು; ಪ್ರೋಕ್ತಂ=ಹೇಳಲ್ಪಟ್ಟಿದೆ; ಅಧಿದೈವಂ=ಅಧಿದೈವವು; ಕಿಂ=ಏನೆಂದು; ಉಚ್ಯತೇ=ಹೇಳಲ್ಪಟ್ಟಿದೆ; ಮಧುಸೂದನ=ಓ ಕೃಷ್ಣಾ; ಅಸ್ಮಿನ್ ದೇಹೇ=ಈ ದೇಹದಲ್ಲಿ; ಅಧಿಯಜ್ಞಃ=ಅಧಿಯಜ್ಞನು; ಕಃ=ಯಾರು? ಅತ್ರ=ಈತನನ್ನು ಕುರಿತು; ಕಥಂ=ಹೇಗೆ (ತಿಳಿದುಕೊಳ್ಳಬೇಕು); ಪ್ರಯಾಣ ಕಾಲೇ ಚ=ಪ್ರಾಣ ಪ್ರಯಾಣ ಸಮಯದಲ್ಲಿ; ನಿಯತಾತ್ಮಭಿಃ=ಸಮಾಹಿತ ಮನಸ್ಸುಳ್ಳವರಿಂದ (ಮನೋನಿಗ್ರಹವುಳ್ಳಂತಹವನು) (ತ್ವಮ್-ನೀನು); ಕಥಮ್=ಹೇಗೆ; ಜ್ಞೇಯಂ= ತಿಳಿದಂಥವನು; ಅಸಿ=ಆಗುತ್ತೀಯೆ.

**ತಾ॥** ಅರ್ಜುನನು ಹೀಗೆ ಕೇಳಿದನು- ಪುರುಷ ಶ್ರೇಷ್ಠನಾದ ಓ ಕೃಷ್ಣಾ! ಆ ಬ್ರಹ್ಮ ಯಾವುದು? ಅಧ್ಯಾತ್ಮವು ಏನು? ಕರ್ಮವೆಂದರೆ ಏನು? ಅಧಿಭೂತವೆಂದು ಏನನ್ನು ಕರೆಯುತ್ತಾರೆ? ಅಧಿದೈವ ಎಂದು ಯಾವುದನ್ನು ಕರೆಯುವರು? ಈ ದೇಹದಲ್ಲಿ ಅಧಿಯಜ್ಞನು ಯಾರು? ಆತನನ್ನು ತಿಳಿಯುವುದು ಹೇಗೆ? ಪ್ರಾಣ ಪ್ರಯಾಣ ಸಮಯದಲ್ಲಿ ಸಮಾಹಿತ ಚಿತ್ತವೃತ್ತಿಯುಳ್ಳವರಿಂದ ನೀನು ಹೇಗೆ ತಿಳಿಯಲ್ಪಡುತ್ತಿದ್ದೀಯೆ?

**ವ್ಯಾಖ್ಯೆ:** ಹಿಂದಿನ ಅಧ್ಯಾಯದ ಕೊನೆಯ ಎರಡು ಶ್ಲೋಕಗಳಲ್ಲಿ ಶ್ರೀ ಕೃಷ್ಣಮೂರ್ತಿ ಬ್ರಹ್ಮ ಅಧ್ಯಾತ್ಮ ಮುಂತಾದುವುಗಳನ್ನು ಕುರಿತು ಸಂಕ್ಷೇಪವಾಗಿ ತಿಳಿಸಲು ಅರ್ಜುನನು ಕೂಡಲೇ ಅವುಗಳನ್ನೆಲ್ಲಾ ಸವಿಸ್ತಾರವಾಗಿ ಬೋಧಿಸಬೇಕೆಂದು ಭಗವಂತನನು ಪ್ರಾರ್ಥಿಸುತ್ತಾ ಏಳು ಪ್ರಶ್ನೆಗಳನ್ನು ಕೇಳಿದನು. ಅದಕ್ಕೆ ಭಗವಂತನು ಮೊದಲ ಆರು ಪ್ರಶ್ನೆಗಳಿಗೆ ಸಂಕ್ಷೇಪವಾಗಿ ಉತ್ತರಕೊಟ್ಟು, ಕಟ್ಟಕಡೆಯ ಪ್ರಶ್ನೆಯಾದ 'ಅಂತ್ಯದಲ್ಲಿ ಭಗವಚ್ಚಿಂತನೆ'ಯನ್ನು ಮಾಡುವ ವಿಷಯವನ್ನು ವಿಶದವಾಗಿ ವಿವರಿಸಿದನು. ಈ ಪ್ರಕಾರವಾಗಿ ಪೂರ್ವಾಧ್ಯಾಯದ ಕೊನೆಯಲ್ಲಿ ಸೂಚನಾಮಾತ್ರವಾಗಿ ತಿಳಿಯಪಡಿಸಿದ್ದನ್ನು, ಮತ್ತೆ ಇನ್ನೊಂದು ಅಧ್ಯಾಯದಲ್ಲಿ ವಿಪುಲವಾಗಿ ಬೋಧಿಸುವುದನ್ನು ಸಮಾಸ ವ್ಯಾಸ ಪದ್ಧತಿಯೆನ್ನುವರು. ಅರ್ಜುನನ ಪ್ರಶ್ನೆಗಳಿಂದ ಈ ಅಧ್ಯಾಯ ಪ್ರಾರಂಭವಾಗಿ ಭಗವಂತನ ಉತ್ತರದಿಂದ ಅಂತ್ಯವಾಗುತ್ತದೆ. ಅಂತ್ಯ ಕಾಲದಲ್ಲಿ ಎಂತಹ ಭಾವವನ್ನು ಹೊಂದಿದ್ದರೆ ಯೋಗನಿಷ್ಠಾಪರರು ಬ್ರಹ್ಮ ಸಾಯುಜ್ಯವನ್ನು ಹೊಂದುವರು ಎನ್ನುವ ವಿಷಯ ಬಹಳ ಮುಖ್ಯವಾಗಿರುವುದರಿಂದ, ಜೀವನವೆಲ್ಲವೂ ಧ್ಯಾನ ಹಾಗು ಅನುಷ್ಠಾನಗಳನ್ನು ಆಚರಿಸುವುದು ಅಂತಹ ಭಗವತ್‌ಸ್ಥಿತಿಯಲ್ಲಿ ಸ್ಥಿರತೆ ಹೊಂದುವುದೇ ಆಗಿರುವುದರಿಂದ, ಆ ಘಟ್ಟವನ್ನು ಗೀತಾಚಾರ್ಯನು ವಿಶದೀಕರಿಸಿ ಹೇಳಿರುವನು.

'ಪುರುಷೋತ್ತಮಾ' 'ಮಧುಸೂದನಾ' ಎನ್ನುವ ಪದಗಳ ಮೂಲಕ ಶ್ರೀ ಕೃಷ್ಣನನ್ನು ಸ್ತುತಿಸುವಲ್ಲಿ ಅರ್ಜುನನಿಗೆ ಇರುವ ಭಕ್ತಿಭಾವ ವ್ಯಕ್ತವಾಗುತ್ತಿದೆ.

ಹಿಂದಿನ ಅಧ್ಯಾಯದ ಕೊನೆಯಲ್ಲಿ ಭಗವಂತನು 'ಯುಕ್ತ ಚೇತಸಃ' (ನಿಯಮಿತ ಚಿತ್ತವುಳ್ಳವರಿಂದ) ಎಂದು ಹೇಳಿರುವುದು, ಹಾಗು ಈ ಅಧ್ಯಾಯದ ಪ್ರಾರಂಭದಲ್ಲಿ ಅರ್ಜುನನು 'ನಿಯತಾತ್ಮಭಿಃ' (ಮನೋ ನಿಯಮವುಂಟಾದವರಿಂದ) ಎಂದು ಹೇಳಿರುವುದನ್ನು ನೋಡಿದರೆ ನಿಯಮಿತ ಚಿತ್ತವುಳ್ಳವರಿಗೆ, ಮನಸ್ಸನ್ನು ಸ್ವಾಧೀನಪಡಿಸಿಕೊಂಡವರಿಗೆ ಮಾತ್ರ ಅಧ್ಯಾತ್ಮ ರಂಗದಲ್ಲಿ ಉತ್ತಮ ಫಲಗಳು ಕೈಗೂಡುವುವೆಂದು, ಅಂತಹ ಮನೋನಿಗ್ರಹವು ಮೋಕ್ಷಕ್ಕೆ ಅತ್ಯಾವಶ್ಯಕವೆಂದು ಸ್ಪಷ್ಟವಾಗುತ್ತಿದೆ.

**ಅ॥** ಅರ್ಜುನನು ಕೇಳಿದ ಏಳು ಪ್ರಶ್ನೆಗಳಿಗೆ ಭಗವಂತನು ಕ್ರಮವಾಗಿ ಸಮಾಧಾನವನ್ನೀಯುತ್ತಿದ್ದಾನೆ.

ಶ್ರೀ ಭಗವಾನುವಾಚ

೩. ಅಕ್ಷರಂ ಬ್ರಹ್ಮ ಪರಮಂ ಸ್ವಭಾವೋಽಧ್ಯಾತ್ಮಮುಚ್ಯತೇ
ಭೂತಭಾವೋದ್ಭವಕರೋ ವಿಸರ್ಗಃ ಕರ್ಮಸಂಜ್ಞಿತಃ

ಶ್ರೀ ಭಗವಾನುವಾಚ- ಶ್ರೀ ಭಗವಂತನು ಹೇಳುತ್ತಿದ್ದಾನೆ-

**ಅರ್ಥ:** ಪರಮಂ=ಸರ್ವೋತ್ತಮವಾದದ್ದು (ನಿರತಿಶಯವಾದದ್ದು); ಅಕ್ಷರಂ=ನಾಶರಹಿತವಾದದ್ದು; ಬ್ರಹ್ಮ=ಬ್ರಹ್ಮ(ಎಂದು ಕರೆಯಲ್ಪಡುತ್ತದೆ); ಸ್ವಭಾವಂ=ಪ್ರತ್ಯಗಾತ್ಮಭಾವವನ್ನು; ಅಧ್ಯಾತ್ಮಂ=ಅಧ್ಯಾತ್ಮವೆಂದು; ಉಚ್ಯತೇ= ಹೇಳಲ್ಪಡುತ್ತಿದೆ; ಭೂತಭಾವೋದ್ಭವಕರಃ=ಸಮಸ್ತ ಪ್ರಾಣಿ, ವಸ್ತುಗಳನ್ನು ಉತ್ಪತ್ತಿಯನ್ನುಂಟುಮಾಡುವ; ವಿಸರ್ಗಃ=ತ್ಯಾಗ ಪೂರ್ವಕವಾದ ಕ್ರಿಯೆಗೆ (ದೇವತೆಗಳನ್ನು ಉದ್ದೇಶಿಸಿ ಮಂತ್ರಪೂರ್ವಕವಾಗಿ ಅಗ್ನಿಯಲ್ಲಿ ಆಹುತಿಗಳನ್ನು ಸಮರ್ಪಿಸುವ ಯಜ್ಞಗಳು, ಮುಂತಾದುವುಗಳು); ಕರ್ಮಸಂಜ್ಞಿತಃ= ಕರ್ಮವೆನ್ನುವ ಹೆಸರಿದೆ.

**ತಾ॥** ಶ್ರೀ ಭಗವಂತನು ಹೇಳುತ್ತಿದ್ದಾನೆ- ಸರ್ವೋತ್ತಮವಾದದ್ದನ್ನು (ನಿರತಿಶಯವಾದದ್ದನ್ನು), ನಾಶರಹಿತವಾದದ್ದನ್ನು ಬ್ರಹ್ಮವೆನ್ನುವರು. ಪ್ರತ್ಯಗಾತ್ಮಭಾವವನ್ನು ಅಧ್ಯಾತ್ಮವೆಂದು ಹೇಳುವರು. ಪ್ರಾಣಿಕೋಟಿಗಳನ್ನು ಉತ್ಪತ್ತಿಯನ್ನುಂಟುಮಾಡುವ (ಯಜ್ಞಾದಿ ರೂಪಗಳಾದ) ತ್ಯಾಗಪೂರ್ವಕವಾದ ಕ್ರಿಯೆಗೆ ಕರ್ಮವೆನ್ನುವ ಹೆಸರಿದೆ.

**ವ್ಯಾಖ್ಯೆ:** ಅರ್ಜುನನು ಕೇಳಿದ ಏಳು ಪ್ರಶ್ನೆಗಳಿಗೆ ಕ್ರಮವಾಗಿ ಭಗವಂತನು ಇಲ್ಲಿ ಉತ್ತರವೀಯುತ್ತಿದ್ದಾನೆ. ಮೊದಲನೆಯ ಪ್ರಶ್ನೆಯಾದ ಬ್ರಹ್ಮವೆಂದರೆ ಏನು? ಎನ್ನುವುದಕ್ಕೆ, ಸರ್ವೋತ್ತಮವಾದ (ನಿರತಿಶಯವಾದ) ನಾಶರಹಿತ ವಸ್ತುವೇ ಬ್ರಹ್ಮವೆಂದು ಹೇಳಿದನು. ಪ್ರಪಂಚದಲ್ಲಿರುವ ಸಮಸ್ತ ದೃಶ್ಯಪದಾರ್ಥಗಳು ಕಾಲಕ್ರಮೇಣ ನಶಿಸಿಹೋಗುವುವು. ಅವು ಕ್ಷರಗಳು. ನಾಶಹೊಂದದ ವಸ್ತು ಒಂದೇ, ಅದು ದೃಗ್ರೂಪವಾದ ಪರಬ್ರಹ್ಮ. ಅದು ಅಕ್ಷರ, ನಾಶರಹಿತವಾದದ್ದು 'ಪರಮಂ' 'ಅಕ್ಷರಂ' ಎಂದು ಹೇಳಿರುವುದರಿಂದ ಅದು ನಿರತಿಶಯ ಅಕ್ಷರ ಸ್ವರೂಪವೆಂದು ಯಾವ ಕಾಲದಲ್ಲಿಯೂ ಅದು ನಶಿಸುವುದಿಲ್ಲವೆಂದು, ದೇಶಕಾಲಾದಿಗಳಿಂದ ಎಂದೆಂದಿಗೂ ಪರಿಚ್ಛಿನ್ನ ವಾಗದೆಂದು ಸ್ಪಷ್ಟವಾಗುತ್ತಿದೆ.

ಇನ್ನು ಎರಡನೆಯ ಪ್ರಶ್ನೆಯಾದ ಅಧ್ಯಾತ್ಮವೆಂದರೇನು ಎನ್ನುವ ಪ್ರಶ್ನೆಗೆ 'ಸ್ವಭಾವವೇ' ಅಧ್ಯಾತ್ಮ ಎಂದು ಹೇಳಲ್ಪಟ್ಟಿದೆ. ಸ್ವ+ಭಾವ=ಸ್ವಭಾವ. ತನ್ನ ಭಾವಕ್ಕೆ ಪ್ರತ್ಯಗಾತ್ಮರೂಪವಾದ ಅಧ್ಯಾತ್ಮವೆನ್ನುವ ಹೆಸರಿದೆ. ಸಾಮಾನ್ಯವಾಗಿ ಜನರು ಅಜ್ಞಾನವಶರಾಗಿ ತಾನು ದೇಹವೆಂದು, ಮನಸ್ಸೆಂದು ಭಾವಿಸುವರು. ಅದು ಅವರ ಸ್ವರೂಪ ಹಾಗು ಸ್ವಭಾವವೆಂದು ತಿಳಿಯುವರು. ಅದು ದೊಡ್ಡ ತಪ್ಪು ಎಂದು ಈ ಶ್ಲೋಕದ ಮೂಲಕ ತಿಳಿಯುತ್ತಿದೆ. ಜೀವಿಯ ವಾಸ್ತವ ಸ್ವರೂಪ ಅಧ್ಯಾತ್ಮ ಅಂದರೆ ಪ್ರತ್ಯಗಾತ್ಮ ಭಾವವೇ ಆಗಲಿ ದೇಹಾದಿ ಭಾವಗಳಲ್ಲ. ತಾನು ದೇಹವೆಂದು, ಮನಸ್ಸೆಂದು, ಪ್ರಪಂಚ ವಸ್ತುವೆಂದು ಎಲ್ಲಿಯವರೆಗೆ ತಿಳಿಯುತ್ತಾನೋ ಅಲ್ಲಿಯವರೆಗೆ ಶಾಂತಿ, ಸುಖಗಳು ಕೈಗೂಡಲು ಸಾಧ್ಯವಿಲ್ಲ. ಏಕೆಂದರೆ ಅವು ಕ್ಷರಗಳು. ಅಕ್ಷರ ವಸ್ತುವಿನಲ್ಲಿ ಮಾತ್ರ ಸುಖವಿದೆ. ಆದ್ದರಿಂದ ತನ್ನ ಸ್ವಭಾವ, ತನ್ನ ಸ್ವರೂಪ ಆತ್ಮವೇ ಆಗಲಿ ನಶ್ವರ ವಸ್ತು ಸಮುದಾಯವಲ್ಲವೆನ್ನುವ ದೃಢ ನಿಶ್ಚಯವನ್ನು ಹೊಂದಿರಬೇಕು.

ಇನ್ನು ಮೂರನೆಯ ಪ್ರಶ್ನೆ- ಕರ್ಮವೆಂದರೆ ಏನು? ಭೂತ ಕೋಟಿಗಳ ಉತ್ಪತ್ತಿಗೆ ಕಾರಣವಾದ ಯಜ್ಞಾದಿಗಳನ್ನು ಕರ್ಮವೆಂದು ಕರೆಯುವರು. ಏಕೆಂದರೆ ಯಜ್ಞದಿಂದ ಮಳೆ, ಮಳೆಯಿಂದ ಸಸ್ಯಗಳು, ಸಸ್ಯಗಳಿಂದ ಪ್ರಾಣಿಗಳ ಉತ್ಪತ್ತಿಯಾಗುತ್ತದೆ. ಇಲ್ಲಿ ವಿಸರ್ಗವೆಂದರೆ ಬಿಡುವುದು, ತ್ಯಾಗ. ಯಜ್ಞದಲ್ಲಿ ಹೋಮ ದ್ರವ್ಯಗಳನ್ನು ಬಿಡುವರು. ಹೋಮದಲ್ಲಿ ಆಜ್ಯಾದಿಗಳನ್ನು ಬಿಡುವರು. ಆದ್ದರಿಂದ 'ವಿಸರ್ಗಃ' ಎನ್ನುವ ಪದಕ್ಕೆ ಹೋಮಾದಿಗಳಿಂದ ಕೂಡಿದ ಯಜ್ಞಾದಿ ಕ್ರಿಯೆಗಳೆಂದು ಹೇಳಬಹುದು. ಇಲ್ಲವೆ, ವಿಸರ್ಗಃ ಎಂದರೆ ತ್ಯಾಗ, ತ್ಯಾಗದಿಂದ ಕೂಡಿದ ಕ್ರಿಯೆಯೆಂದೂ ಹೇಳಬಹುದು. (ದಾನದಲ್ಲಿ ಧನವನ್ನು ತ್ಯಜಿಸುವುದು ಮುಂತಾದುವು). "ವಿಸರ್ಗಃ ಕರ್ಮಸಂಜ್ಞಿತಃ" ಎಂದು ಹೇಳಲ್ಪಟ್ಟಿರುವುದರಿಂದ

ತ್ಯಾಗದಿಂದ ಕೂಡಿದ ಕ್ರಿಯೆಯೇ ನಿಜವಾದ ಕ್ರಿಯೆಯೆಂದು ಅರ್ಥವಾಗುತ್ತಿದೆ. ಅದು ಉತ್ತಮ ಜನ್ಮಕ್ಕೆ ಹಾಗು ಮೋಕ್ಷಕ್ಕೆ ಹೇತುವಾಗುವುದು.

ಪ್ರ : ಬ್ರಹ್ಮವೆಂದರೆ ಏನು?

ಉ : ಸರ್ವೋತ್ತಮವಾದ ಇಲ್ಲವೆ ನಿರತಿಶಯವಾದ ವಸ್ತುವೇ ಬ್ರಹ್ಮ.

ಪ್ರ : ಅಧ್ಯಾತ್ಮವೆಂದರೆ ಏನು?

ಉ : ತನ್ನ ಸ್ವಭಾವವಾದ ಪ್ರತ್ಯಗಾತ್ಮ ಭಾವವನ್ನು ಅಧ್ಯಾತ್ಮವೆನ್ನುವರು

ಪ್ರ : ಕರ್ಮವೆಂದರೆ ಏನು?

ಉ : ಪ್ರಾಣಿಕೋಟಿಗಳ ಉತ್ಪತ್ತಿಗೆ ಕಾರಣವಾದ (ಯಜ್ಞಾದಿ ರೂಪಗಳಾದ) ತ್ಯಾಗಪೂರ್ವಕವಾದ ಕ್ರಿಯೆಯನ್ನು ಕರ್ಮವೆನ್ನುವರು.

**೪. ಅಧಿಭೂತಂ ಕ್ಷರೋ ಭಾವಃ ಪುರುಷಶ್ಚಾಧಿದೈವತಮ್**
**ಅಧಿಯಜ್ಞೋಽಹಮೇವಾತ್ರ ದೇಹೇ ದೇಹಭೃತಾಂ ವರ**

**ಅರ್ಥ:** ದೇಹಭೃತಾಂ ವರ=ದೇಹಧಾರರಲ್ಲಿ ಶ್ರೇಷ್ಠನಾದ ಅರ್ಜುನಾ! ಕ್ಷರಃ=ನಶಿಸುವಂತಹ; ಭಾವಃ=ಪದಾರ್ಥ; ಅಧಿಭೂತಂ=ಅಧಿಭೂತ (ಎನ್ನುವರು); ಪುರುಷಃ ಚ=ವಿರಾಟ್ ಪುರುಷ ಇಲ್ಲವೆ ಹಿರಣ್ಯಗರ್ಭನೇ; ಅಧಿದೈವತಂ=ಅಧಿದೈವ(ಎನ್ನುವವನು); ಅತ್ರ ದೇಹೇ=ಈ ದೇಹದಲ್ಲಿ; ಅಹಮೇವಾ=ನಾನೇ(ಪರಮಾತ್ಮನೇ); ಅಧಿಯಜ್ಞಃ=ಅಧಿಯಜ್ಞನು (ಎಂದೆನ್ನುವರು).

**ತಾ||** ದೇಹಧಾರರಲ್ಲಿ ಶ್ರೇಷ್ಠನಾದ ಓ ಅರ್ಜುನಾ! ನಶಿಸುವ ಪದಾರ್ಥವನ್ನು ಅಧಿಭೂತವೆಂದು ಕರೆಯುವರು. ವಿರಾಟ್ ಪುರುಷ ಇಲ್ಲವೆ ಹಿರಣ್ಯ ಗರ್ಭನನ್ನು ಅಧಿದೈವವೆಂದು ಕರೆಯುವರು. ಈ ದೇಹದಲ್ಲಿ ನಾನೇ (ಅಂದರೆ ಪರಮಾತ್ಮನೇ) ಅಧಿಯಜ್ಞನೆಂದು ಕರೆಯಲ್ಪಡುತ್ತಿದ್ದೇನೆ.

**ವ್ಯಾಖ್ಯೆ:** 'ಈ ದೇಹದಲ್ಲಿ ಅಧಿಯಜ್ಞನೆನ್ನುವವನು ನಾನೇ', ಎಂದು ಭಗವಂತನು ಹೇಳಿರುವುದರಿಂದ ಸಮಸ್ತ ಶರೀರಗಳೆಲ್ಲವುಗಳಲ್ಲಿ ಅಧಿಯಜ್ಞ ರೂಪದಲ್ಲಿ ಸಾಕ್ಷಾತ್ ಪರಾತ್ಪರನೇ ನಿವಸಿಸುತ್ತಿದ್ದಾನೆಂದು ಸ್ಪಷ್ಟವಾಗುತ್ತಿದೆ. ಭಗವಂತನು ಎಲ್ಲೋ ದೂರ, ಆಕಾಶದಲ್ಲೋ, ಪಾತಾಳದಲ್ಲೋ ಇದ್ದಾನೆ ಎಂದು ಭಾವಿಸುವುದು ಮೂರ್ಖತನ. ಆತ ದೇಹದಲ್ಲೇ ಅತಿ ಸಮೀಪದಲ್ಲೇ ಇದ್ದಾನೆ. ಆದ್ದರಿಂದ ಆತ್ಮ ಪರಿಶೋಧನೆ ಮಾಡಿಕೊಂಡು ಪಂಚಕೋಶಗಳನ್ನು ಬೇರೆ ಮಾಡಿ, ನಂತರ ಆತನನ್ನು ಪಡೆದು ಪರಮಶಾಂತಿಯನ್ನು ಗಳಿಸಬೇಕು. ಭಗವಂತನು ಇಷ್ಟು ಸಮೀಪ ವಾಗಿರುವುದನ್ನು ಗುರುತಿಸಿ ಪಾಪಕೃತ್ಯಗಳನ್ನು ಎಂದೆಂದಿಗೂ ಮಾಡಬಾರದು. ಸಮಸ್ತ ದೇಹಗಳಲ್ಲೆಲ್ಲಾ ಅಧಿಯಜ್ಞನಾಗಿ ಪರಮಾತ್ಮ ಬೆಳಗುತ್ತಿರುವನಾದ್ದರಿಂದ ಜನರನ್ನು ಕೀಳು, ಮೇಲು ಎಂದು ಭಾವಿಸದೆ ಸರ್ವಪ್ರಾಣಿಗಳಲ್ಲಿ ಸಮಭಾವ ಹೊಂದಿ, ಆತ್ಮಗಾಂಭೀರ್ಯದಿಂದ ಬೆಳಗಬೇಕು.

'ದೇಹಭೃತಾಂವರ'- (ದೇಹಧಾರರಲ್ಲಿ ಶ್ರೇಷ್ಠನು), ಎನ್ನುವ ಪದದ ದ್ವಾರ ಮಾನವನು ದೇಹವನ್ನು ಧರಿಸಿದ್ದಾನೆಯೇ ಆಗಲಿ ವಾಸ್ತವವಾಗಿ ದೇಹವಲ್ಲ ಎಂದು ತಿಳಿಯುತ್ತದೆ.

ಪ್ರ : ಅಧಿಭೂತವೆಂದರೇನು?

ಉ : ನಶಿಸುವ ಪದಾರ್ಥವೇ (ಸಮಸ್ತ ದೃಶ್ಯ ಸಮುದಾಯವೇ) ಅಧಿಭೂತವಾಗುವುದು.

ಪ್ರ : ಅಧಿದೈವವೆಂದರೇನು?

ಉ : ವಿರಾಟ್‌ಪುರುಷನು, ಹಿರಣ್ಯಗರ್ಭನೇ ಅಧಿದೈವನು.

ಪ್ರ : ಅಧಿಯಜ್ಞನು ಯಾರು?

ಉ : ಈ ದೇಹದಲ್ಲಿಯ ಶ್ರೀಕೃಷ್ಣಮೂರ್ತಿಯೇ (ಸಾಕ್ಷಾತ್ ಪರಮಾತ್ಮನೇ ಅಧಿಯಜ್ಞನು).

**ಅ||** ಈ ಪ್ರಕಾರವಾಗಿ ಅರ್ಜುನನ ಮೊದಲ ಆರು ಪ್ರಶ್ನೆಗಳಿಗೆ ಸಂಕ್ಷೇಪವಾಗಿ ಸಮಾಧಾನ ಹೇಳಿ ಇನ್ನು ಕೊನೆಯ ಪ್ರಶ್ನೆಯಾದ ಅಂತ್ಯಕಾಲದಲ್ಲಿ ಭಗವಚ್ಚಿಂತನೆಯನ್ನು ಕುರಿತು ವಿಸ್ತಾರವಾಗಿ ತಿಳಿಸಲು ಪ್ರಾರಂಭಿಸುತ್ತಿದ್ದಾನೆ.

**೫. ಅಂತಕಾಲೇ ಚ ಮಾಮೇವ ಸ್ಮರನ್ಮುಕ್ತ್ವಾ ಕಲೇಬರಮ್**
**ಯಃ ಪ್ರಯಾತಿ ಸ ಮದ್ಭಾವಂ ಯಾತಿ ನಾಸ್ತ್ಯತ್ರ ಸಂಶಯಃ**

**ಅರ್ಥ:** ಯಃ=ಯಾರು; ಅಂತಕಾಲೇ ಚ=ಮರಣ ಕಾಲದಲ್ಲಿ ಕೂಡ; ಮಾಂ ಯೇವ=ನನ್ನನ್ನೇ; ಸ್ಮರನ್=ಸ್ಮರಿಸುತ್ತಾ; ಕಲೇಬರಮ್=ಶರೀರವನ್ನು; ಮುಕ್ತ್ವಾ=ಬಿಟ್ಟು; ಪ್ರಯಾತಿ=ಹೋಗುತ್ತಿದ್ದಾನೋ; ಸಃ=ಆತನು; ಮದ್ಭಾವಂ= ನನ್ನ ಸ್ವರೂಪವನ್ನೇ; ಯಾತಿ=ಹೊಂದುತ್ತಿದ್ದಾನೆ; ಅತ್ರ=ಈ ವಿಷಯದಲ್ಲಿ; ಸಂಶಯಃ=ಸಂದೇಹವು; ನಾಸ್ತಿ=ಇಲ್ಲ;

**ತಾ||** ಯಾರು ಮರಣ ಕಾಲದಲ್ಲಿಯೂ ಕೂಡ ನನ್ನನ್ನೇ ಸ್ಮರಿಸುತ್ತಾ ಶರೀರವನ್ನು ಬಿಟ್ಟುಹೋಗುತ್ತಿದ್ದಾರೋ ಅವರು ನನ್ನ ಸ್ವರೂಪವನ್ನು ಹೊಂದುತ್ತಿದ್ದಾರೆ. ಇದರಲ್ಲಿ ಸಂಶಯವೇನೂ ಇಲ್ಲ.

**ವ್ಯಾಖ್ಯೆ:** ಇನ್ನು ಕೊನೆಯದಾದ ಏಳನೆಯ ಪ್ರಶ್ನೆಗೆ ಭಗವಂತನು ಇಲ್ಲಿ ಉತ್ತರ ಕೊಡುತ್ತಿದ್ದಾನೆ. ಅಂತ್ಯಕಾಲದಲ್ಲಿ ನಿಯಮಿತಚಿತ್ತರಾಗಿ ಪರಮಾತ್ಮನನ್ನು ಹೇಗೆ ತಿಳಿದುಕೊಳ್ಳುವರು ಎನ್ನುವ ಪದ್ಧತಿಯನ್ನು ಇಲ್ಲಿ ವಿವರಿಸಲಾಗಿದೆ.

'ಅಂತಕಾಲೇಚ'- ಮರಣ ಸಮಯದಲ್ಲಿ ಕೂಡ ಯಾವನು ಪರಮಾತ್ಮನನ್ನೇ ಸಂಸ್ಮರಿಸುತ್ತಾ ಶರೀರವನ್ನು ಬಿಡುವನೋ ಆತನು ತಪ್ಪದೆ ಆ ಪರಮಾತ್ಮ ಸ್ವರೂಪವನ್ನು ಹೊಂದುವನೆಂದು ಹೇಳಲ್ಪಟ್ಟಿದೆ. ಇಲ್ಲಿ 'ಚ' ಎನ್ನುವ ಪದವನ್ನು ಚೆನ್ನಾಗಿ ಗ್ರಹಿಸಬೇಕು. ಸಂಸ್ಕೃತದಲ್ಲಿ 'ಚ' ಎಂದರೆ 'ಕೂಡ' ಎಂದರ್ಥ. ಅಂತ್ಯಕಾಲದಲ್ಲಿ ಕೂಡ ನನ್ನನ್ನೇ ಸ್ಮರಿಸುವವನು ಮುಕ್ತಿಯನ್ನು ಹೊಂದುವನೆಂದು ಶ್ರೀಕೃಷ್ಣಮೂರ್ತಿ ಹೇಳುವುದರಿಂದ, ಜೀವನ ಕಾಲದಲ್ಲಿಯೇ ಅಲ್ಲದೆ ಅಂತ್ಯಕಾಲದಲ್ಲಿಯೂ ಸಹ ದೈವಚಿಂತನೆ ಮಾಡಬೇಕಾಗಿರುವುದೆಂದು ಸ್ಪಷ್ಟವಾಗುತ್ತಿದೆ. ಹಾಗೆ ಇಲ್ಲದಿದ್ದರೆ 'ಕೂಡ' ಎನ್ನುವ ಪದಕ್ಕೆ ಅರ್ಥವೇ ಇರುವುದಿಲ್ಲ. ಭಗವಂತನು 'ಅಂತಕಾಲ ಏವ' (ಅಂತ್ಯಕಾಲದಲ್ಲೇ) ಎಂದು ಹೇಳಲಿಲ್ಲ. ಹಾಗೇನಾದರೂ ಹೇಳಿದ್ದಿದ್ದರೆ ಸೋಮಾರಿಗಳಿಗೆ ಒಳ್ಳೆಯ ಅವಕಾಶವಿರುತ್ತಿತ್ತು. ಆದರೆ ಮನುಷ್ಯರನ್ನು ಸೋಮಾರಿಗಳನ್ನಾಗಿ ತಯಾರು ಮಾಡುವುದು ಭಗವಂತನ ಅಭಿಮತವಲ್ಲ. **'ತಸ್ಮಾತ್ಸರ್ವೇಷು ಕಾಲೇಷು ಮಾಮನುಸ್ಮರ'** (ಆದ್ದರಿಂದ ಎಲ್ಲಾ ಕಾಲಗಳಲ್ಲಿ ನನ್ನನ್ನು ಸ್ಮರಿಸು) ಎಂದು ಮುಂದೆ ಗೀತಾಚಾರ್ಯನು ಈ ಶ್ಲೋಕದ ತಾತ್ಪರ್ಯವನ್ನೇ ಇನ್ನೂ ಹೆಚ್ಚಿಗೆ ವಿಶದಗೊಳಿಸಿದ್ದಾನೆ.

ಜೀವನವೆಲ್ಲವೂ ನಿರಂತರ ದೈವಚಿಂತನೆ ಮಾಡುವವರಿಗೆ ಅಂತ್ಯದಲ್ಲಿ ದೈವಸ್ಮರಣೆ ಉಂಟಾಗಬಲ್ಲದು. ಪೂರ್ವಜನ್ಮ ಪುಣ್ಯ ಸಂಸ್ಕಾರ ಬಲದಿಂದ ಯಾವನೋ ಒಬ್ಬಾನೊಬ್ಬ ಮಹನೀಯನಿಗಲ್ಲದೆ ಬೇರೆ ಯಾರಿಗೂ ಮರಣ

ಕಾಲದಲ್ಲಿ ಅಕಸ್ಮಾತ್ತಾಗಿ ದೈವಭಾವ ಉಂಟಾಗುವುದಿಲ್ಲ. ಅದಕ್ಕೆ ಪೂರ್ವದಲ್ಲಿ ಎಷ್ಟೋ ವಿಶೇಷ ಸಾಧನೆ (Preparation) ಇರಬೇಕು. ಒಂದು ನಾಟಕ ಹಾಕಬೇಕೆಂದರೆ, ಅದರಲ್ಲಿಯ ಪಾತ್ರಗಳ ಅಭಿನಯಗಳನ್ನು ಎಷ್ಟೋ ತಿಂಗಳುಗಳಿಂದ ಚೆನ್ನಾಗಿ ಅಭ್ಯಸಿಸುವರು. ಒಬ್ಬ ವಿದ್ಯಾರ್ಥಿ ಪರೀಕ್ಷೆ 'ಪಾಸು' ಆಗಬೇಕೆಂದರೆ ವರ್ಷವೆಲ್ಲವೂ ಕಷ್ಟಪಟ್ಟು ಓದಬೇಕಾಗಿರುವುದು. ಸರಿಯಾಗಿ ಪರೀಕ್ಷೆ ದಿನವೇ ಪುಸ್ತಕ ತೆಗೆದರೆ ಏನೂ ಉಪಯೋಗ ವಾಗಲಾರದು. ಹಾಗೆಯೇ ಮರಣ ಕಾಲದಲ್ಲಿ ಅನುಕೂಲವಾಗಲೆಂದು ಎಷ್ಟೋ ಮುಂದಿನಿಂದ ಮನುಜನು ತನ್ನ ಚಿತ್ತವನ್ನು ಭಗವನ್ಮಯವಾಗಿರಿಸಿ ಕೊಂಡಿರಬೇಕು. ಆಗ ಅಂತ್ಯದಲ್ಲಿ ಸುನಾಯಾಸವಾಗಿ ದೈವಸ್ಮರಣೆ ಮಾಡಲು ಅವಕಾಶವಿರುತ್ತದೆ. ಮತ್ತೆ ಹಗಲೆಲ್ಲಾ ಎಂತಹ ಭಾವಗಳಿಂದ ಕೂಡಿರುವನೋ ಅಂತಹ ಭಾವಗಳೇ ರಾತ್ರಿ ಸ್ವಪ್ನದಲ್ಲಿಯೂ ಬರುವುವು. ಈ ಪ್ರಕಾರ ಜೀವನಪರ್ಯಂತ ಎಂತಹ ಭಾವನೆಗಳು, ಸಂಕಲ್ಪಗಳು ಬೆಳೆದು ಬಂದಿರುತ್ತವೆಯೋ ಅಂತ್ಯ ಕಾಲದಲ್ಲಿಯೂ ಅವೇ ಜ್ಞಾಪಕಕ್ಕೆ ಬರುತ್ತವೆ. ಆದ್ದರಿಂದ ಅಂತ್ಯಕಾಲದಲ್ಲಿ ಭಗವತ್ಸ್ಮರಣೆ ಉಂಟಾಗಲು ಸಹಾಯ ಭೂತವಾಗಿರಲು ಜೀವನಪರ್ಯಂತ ಭಗವಚ್ಚಿಂತನೆ, ಧ್ಯಾನ, ವಿಚಾರಣಾದಿಗಳನ್ನು ಮಾಡಿರಬೇಕಾಗುತ್ತದೆ. ಮನಸ್ಸು ಉತ್ತಮ ದೈವ ಸಂಸ್ಕಾರದಿಂದ ತುಂಬಿರಬೇಕು. ಮರಣ ಕಾಲದಲ್ಲಿ ಒಮ್ಮೊಮ್ಮೆ ದೇಹವು ಕಫ, ವಾತ, ಪಿತ್ತಗಳಿಂದ ಆವೃತವಾಗಿ, ಇಲ್ಲವೆ ಸ್ಮೃತಿ ತಪ್ಪಿ, ದೈವಚಿಂತನೆ ಮಾಡುವುದು ಸಾಧ್ಯವಾಗದೇ ಹೋಗಬಹುದು. ಆದ್ದರಿಂದ ಅಂತ್ಯಕಾಲದಲ್ಲಿ ಭಗವಚ್ಚಿಂತನೆ ಮಾಡುವ ಸದವಕಾಶವನ್ನು ಪಡೆಯಲು ಜೀವನವೆಲ್ಲಾ ಚಿತ್ತವನ್ನು ಪರಮಾರ್ಥಮಯವಾಗಿರಿಸಿಕೊಳ್ಳಬೇಕು.

*'ಅಂತಕಾಲೇಚ'* ಎಂದು ಹೇಳುವುದಲ್ಲಿ ಇನ್ನೂ ಒಂದು ರಹಸ್ಯವಿದೆ. ಮಾಯೆ ಬಹಳ ಬಲವತ್ತರವಾದುದು. ಅದು ಜೀವಿಯನ್ನು ಮೋಸಮಾಡಲು ನಿರಂತರ ಹೊಂಚು ಹಾಕುತ್ತಿರುತ್ತದೆ. ಆದ್ದರಿಂದ ಮುಮುಕ್ಷುವು ದೈವ ವಿಚಾರಣೆಯಲ್ಲಿ ಅಂತಿಮ ಶ್ವಾಸ ಬಿಡುವವರೆಗೆ ಜಾಗ್ರತೆಯಿಂದಿರಬೇಕು. ಆದ್ದರಿಂದಲೇ ಗೀತಾಚಾರ್ಯನು ಅಂತ್ಯಕಾಲದಲ್ಲಿ ಕೂಡ ನನ್ನ ಸ್ಮರಣೆಯನ್ನು ಬಿಡಬಾರದೆಂದೂ, ಹಾಗೆ ಸ್ಮರಿಸುವವನೇ ಮುಕ್ತಿ ಹೊಂದುವನೆಂದು ಅಪ್ಪಣೆಯಿತ್ತಿರುವನು. ದೈವದ ಮರೆವು ಸ್ವಲ್ಪ ಬಂದರೂ ಮಾಯೆ ಅದನ್ನು ಉಪಯೋಗಿಸಿಕೊಂಡು ವಿಜೃಂಭಿಸಿ, ಜೀವಿಯನ್ನು ಸಂಸಾರ ಕೂಪದಲ್ಲಿ ಬೀಳಿಸುವುದು. ದೋಣಿಯ ಸಹಾಯದಿಂದ ಸಮುದ್ರವೆಲ್ಲವನ್ನೂ ಕಷ್ಟಪಟ್ಟು ದಾಟಿ ಸರಿಯಾಗಿ ತೀರಕ್ಕೆ ಹತ್ತು ಗಜ ದೂರದಲ್ಲಿ ಅಜಾಗರೂಕತೆ ಹೊಂದಿದರೆ ಮನುಷ್ಯನು ಹೇಗೆ ಮುಳುಗಿ ಹೋಗಬಲ್ಲನೋ, ಏಣಿ ಹತ್ತಿ, ಹತ್ತಿ ಕೊನೆಯಲ್ಲಿ ಅಜಾಗ್ರತೆ ವಹಿಸಿದರೆ ಹೇಗೆ ಬಿದ್ದು ಹೋಗುವನೋ ಹಾಗೆಯೇ ಜೀವನವೆಲ್ಲಾ ದೈವಕೃಷಿ ಮಾಡಿ ಕೊನೆಯ ದಿನಗಳಲ್ಲಿ ಅದನ್ನು ಬಿಟ್ಟರೆ ಮಾಯೆ ಪ್ರವೇಶಿಸಿ ವಿಮೋಹವನ್ನು ಉಂಟುಮಾಡಬಹುದಾದ್ದರಿಂದ ಮೇಲಿನ ಎಚ್ಚರಿಕೆಯನ್ನು ಕೊಡಲಾಗಿದೆ. ಈ ಸಂದರ್ಭದಲ್ಲಿ ಶ್ರೀ ವಸಿಷ್ಠಮಹರ್ಷಿ ಶ್ರೀರಾಮಚಂದ್ರನಿಗೆ ಮಾಡಿದ ಹಿತಬೋಧೆ ಇಲ್ಲಿ ಸ್ಮರಿಸಬೇಕಾಗಿದೆ.

**ತವ ನಾವಹಿತಂ ಚಿತ್ತಂ ಕಾಮಃ ಕವಲಯಿಷ್ಯತಿ**
**ಸಾವಧಾನಸ್ಯ ಬುದ್ಧಸ್ಯ ಪಿಶಾಚಃ ಕಿಂ ಕರಿಷ್ಯತಿ**
**(ಯೋಗವಾಸಿಷ್ಠ)**

ಓ ರಾಮಚಂದ್ರ! ಅಜಾಗರೂಕತೆಯಿಂದಿದ್ದರೆ ನಿನ್ನ ಚಿತ್ತವನ್ನು ಕಾಮವು ನುಂಗಿ ಹಾಕಬಲ್ಲದು. ಜಾಗ್ರತೆಯಾಗಿರುವವನ ಚಿತ್ತವನ್ನು (ಕಾಮ) ಪಿಶಾಚಿ ಏನು ಮಾಡಬಲ್ಲದು?

'ಮಾಮೇವ'- (ನನ್ನನ್ನೇ ಸ್ಮರಿಸುತ್ತಾ) 'ಏವ' ಎನ್ನುವ ಪದವನ್ನು ಉಪಯೋಗಿಸಲ್ಪಟ್ಟಿರುವುದರಿಂದ ಭಗವಂತನನ್ನು ಬಿಟ್ಟು ಬೇರೆ ಏನನ್ನೂ ಚಿಂತಿಸಬಾರದೆಂದು ಅರ್ಥಮಾಡಿಕೊಳ್ಳಬೇಕು. ಏಕೆಂದರೆ ದೈವದ ಜೊತೆ ದೃಶ್ಯವಸ್ತುಗಳನ್ನೂ ಸಹ ಚಿಂತಿಸುತ್ತಿದ್ದರೆ ಚಿತ್ತಕ್ಕೆ ವಿಕ್ಷೇಪ ಉಂಟಾಗಿ, ದೈವ ಧ್ಯಾನ ಸರಿಯಾಗಿ ನಡೆಯದೆ ಧ್ಯೇಯದಲ್ಲಿ ಮನಸ್ಸಿಗೆ ನಿಲುಕಡೆ ಉಂಟಾಗುವುದಿಲ್ಲ. ಮನಸ್ಸು ಏಕಾಗ್ರವಿದ್ದಾಗಲೇ ಅದರ ಬಲ ಹೆಚ್ಚುವುದು. ಆದ್ದರಿಂದ ದೈವದಲ್ಲಿ ಮಾತ್ರ ಚಿತ್ತವನ್ನು ಸಂಲಗ್ನಿಸಿರಬೇಕೆಂದು ಬೋಧಿಸಲಾಗಿದೆ.

ಇನ್ನು ಆ ಪ್ರಕಾರವಾಗಿ ಅಂತ್ಯಕಾಲದಲ್ಲಿಯೂ ಭಗವತ್ಸ್ಮರಣೆ ಮಾಡುವವನಿಗೆ ಉಂಟಾಗುವ ಫಲವೇನು? **'ಮದ್ಭಾವಂ ಯಾತಿ'**- ನನ್ನ ಸ್ವರೂಪವನ್ನೇ ಹೊಂದುವನು. ಫಲವೇನೆಂದು ತಿಳಿದಿದ್ದಲ್ಲಿ ಕಾರ್ಯಾ ಚರಣೆಯಲ್ಲಿ ವಿಶೇಷ ಆಸಕ್ತಿ ಇರುವುದು. ದೈವಸ್ಮರಣೆಯ ಫಲ ದೈವ ಸಾಕ್ಷಾತ್ಕಾರವೇ, ಸ್ವಸ್ವರೂಪಾತ್ಮಾನುಭವವೇ, ಮೋಕ್ಷವೇ. ಆದ್ದರಿಂದ ಹಾಗೆ ನಿರಂತರವಾಗಿ ಜೀವನದುದ್ದಕ್ಕೂ ಹಾಗು ಅಂತ್ಯಕಾಲದಲ್ಲಿಯೂ ಭಗವತ್ಸ್ಮರಣೆ ಮಾಡುವವನು ಘೋರ ಸಂಸಾರ ದುಃಖವನ್ನು ದಾಟಿ ಪುನರ್ಜನ್ಮರಹಿತವಾದ ಶಾಶ್ವತ ಬ್ರಹ್ಮಪದವಿಯನ್ನು ಹೊಂದಬಲ್ಲನೆಂದು ಇಲ್ಲಿ ಹೇಳಲಾಗಿದೆ. ಇಷ್ಟೇ ಅಲ್ಲ ಈ ವಿಷಯವಾಗಿ ಯಾರಿಗಾದರೂ ಸಂದೇಹವು ಉದಯಿಸಬಹುದೇನೋ ಎಂದು 'ನಾಸ್ತ್ಯತ್ರ ಸಂಶಯಃ'- "ಇದರಲ್ಲಿ ಎಳ್ಳಷ್ಟೂ ಸಂಶಯವಿಲ್ಲ; ನಿಷ್ಕರ್ಷೆಯಾಗಿ ಅವರು ಪರಮಾತ್ಮಪದವಿಯನ್ನು ಹೊಂದುವರು; ಇದು ಖಂಡಿತವಾಗಿಯೂ ನಿಶ್ಚಯ" ಎಂದು ಶ್ರೀಕೃಷ್ಣ ಪರಮಾತ್ಮ ಕರುಣೆಯಿಂದ ಉಪದೇಶಿಸಿದನು. ದಯಾರ್ದ್ರ ಹೃದಯಿಯಾದ ಭಗವಂತನು ಭಕ್ತರ ಮೇಲೆ ಅಪಾರ ಕರುಣೆಯನ್ನು ಈ ಪ್ರಕಾರವಾಗಿ ಮಳೆಗೆರೆದು ಜನರಿಗೆ ತನ್ನ ವಾಕ್ಯಗಳ ಮೇಲೆ ವಿಶ್ವಾಸವನ್ನುಂಟುಮಾಡುವ ಸರ್ವಪ್ರಯತ್ನಗಳನ್ನು ಮಾಡುತ್ತಿದ್ದಾನೆ. ಮುಮುಕ್ಷುಗಳು ಇನ್ನು ಸಂಕೋಚವನ್ನು ಬಿಟ್ಟು ಚಿಕ್ಕ ಚಿಕ್ಕ ಫಲಗಳನ್ನು ಆಶಿಸದೆ ಸಾಕ್ಷಾತ್ ಮೋಕ್ಷವನ್ನೇ ಫಲವನ್ನಾಗಿ ಸಂಕಲ್ಪಿಸಿಕೊಂಡು, ನಿರತಿಶಯಾನಂದವನ್ನೇ ಗಮ್ಯವಾಗಿರಿಸಿಕೊಂಡು ಈ ಮಹತ್ತರ ದೈವ ಸ್ಮರಣೆಯನ್ನು ಶ್ರದ್ಧಾ ಭಕ್ತಿಗಳಿಂದ ನಿರಂತರವಾಗಿ ಮುಂದುವರಿಸಬೇಕು.

ಪ್ರ : ಜೀವಿಯು ಅಂತ್ಯಕಾಲದಲ್ಲಿ ಎಂತಹ ಭಾವವನ್ನು ಹೊಂದಿರಬೇಕು?

ಉ : ದೈವವನ್ನೇ ಸ್ಮರಿಸುತ್ತಾ ಇತರೆ ಎಲ್ಲಾ ಭಾವನೆಗಳಿಂದ ಮುಕ್ತನಾಗಿರಬೇಕು.

ಪ್ರ : ಅದರ ಫಲವೇನು?

ಉ : ಅದರಿಂದ ಆತನು ಪರಮಾತ್ಮಸ್ವರೂಪವನ್ನೇ ಹೊಂದುವನು.

ಪ್ರ : ಆದ್ದರಿಂದ ಜೀವಿಗಳು ಹೇಗೆ ಪ್ರವರ್ತಿಸಬೇಕು?

ಉ : ಜೀವನದುದ್ದಾ ಮಾತ್ರವಲ್ಲದೆ ಅಂತ್ಯಕಾಲದಲ್ಲಿಯೂ ಕೂಡ ದೈವಚಿಂತನೆ ಹೊಂದಿರಬೇಕು.

**೬॥** ಜೀವಿಯು ಯಾವ ಭಾವದಿಂದ ಶರೀರವನ್ನು ಬಿಡುವನೋ ಆ ರೂಪವನ್ನೇ ಹೊಂದುವನು ಎಂದು ಹೇಳಲ್ಪಡುತ್ತಿದೆ.

೬. ಯಂ ಯಂ ವಾಪಿ ಸ್ಮರನ್ ಭಾವಂ ತ್ಯಜತ್ಯಂತೇ ಕಲೇಬರಮ್
ತಂ ತಮೇವೈತಿ ಕೌಂತೇಯ ಸದಾ ತದ್ಭಾವಭಾವಿತಃ

**ಅರ್ಥ:** ಕೌಂತೇಯ=ಓ ಅರ್ಜುನಾ!, (ಯಃ=ಯಾರು) ಅಂತೇ=ಮರಣ ಕಾಲದಲ್ಲಿ; ಯಂ ಯಂ ವಾಪಿ ಭಾವಂ=ಯಾವ ಯಾವ ಭಾವವನ್ನು (ಇಲ್ಲವೆ ಕಾಮರೂಪವನ್ನು); ಸ್ಮರನ್=ಸ್ಮರಿಸುತ್ತಿರುವವನಾಗಿ; ಕಲೇಬರಮ್= ಶರೀರವನ್ನು; ತ್ಯಜತಿ=ಬಿಡುತ್ತಿದ್ದಾನೋ; (ಸಃ=ಅವನು) ಸದಾ= ಯಾವಾಗಲೂ; ತದ್ಭಾವಭಾವಿತಃ(ಸನ್)=ಆಯಾ ಭಾವದ ಸ್ಮರಣದಿಂದ ಉಂಟಾದ ಸಂಸ್ಕಾರವುಳ್ಳವನಾಗಿ; ತಂ ತಂ ಏವ (ಭಾವಮ್)=ಆಯಾ ರೂಪವನ್ನೇ; ಏತಿ=ಹೊಂದುತ್ತಿದ್ದಾನೆ.

**ತಾ||** ಅರ್ಜುನಾ! ಮರಣಕಾಲದಲ್ಲಿ ಯಾವ ಯಾವ ಭಾವವನ್ನು (ರೂಪವನ್ನು) ಚಿಂತಿಸುತ್ತ ದೇಹವನ್ನು ತ್ಯಜಿಸುವನೋ ಅವನು ಅಂತಹ ಭಾವದ ಸ್ಮರಣೆಯಿಂದುಂಟಾದ ಸಂಸ್ಕಾರವನ್ನು ಹೊಂದುವುದರಿಂದ ಆಯಾ ರೂಪವನ್ನೇ ಹೊಂದುತ್ತಿದ್ದಾನೆ.

**ವ್ಯಾಖ್ಯೆ:** ಮನುಜನು ನಿರಂತರ ಯಾವುದನ್ನು ಕುರಿತು ಚಿಂತಿಸುತ್ತಿರುವನೋ ಅದನ್ನು ಕುರಿತ ಸಂಸ್ಕಾರವೇ ಆತನ ಚಿತ್ತದಲ್ಲಿ ಏರ್ಪಡುತ್ತದೆ. ಆದ್ದರಿಂದ ಅಂತ್ಯಕಾಲದಲ್ಲಿ ಚಿತ್ತದಲ್ಲಿ ಯಾವ ಸಂಸ್ಕಾರವಿರುವುದೋ ತದನುಗುಣವಾದ ಜನ್ಮವನ್ನೇ (ಶರೀರವನ್ನೇ) ಆತನು ಹೊಂದುವನೆಂದು ಇಲ್ಲಿ ಹೇಳಲಾಗಿದೆ. ಜಡಭರತನು ಅಂತ್ಯಕಾಲದಲ್ಲಿ ಜಿಂಕೆಯನ್ನು ಕುರಿತು ಚಿಂತಿಸುತ್ತ ಇನ್ನೊಂದು ಜನ್ಮದಲ್ಲಿ ಜಿಂಕೆಯಾಗಿ ಹುಟ್ಟಿದ ಕಥೆ ಭಾಗವತದಲ್ಲಿ ಇದೆ. **'ಯದ್ಭಾವಂ ತದ್ಭವತಿ'** ಎಂತಹ ಭಾವವನ್ನು ಹೊಂದಿರುವನೋ ಅಂತಹ ರೂಪವನ್ನೇ ಹೊಂದುವನು. ಆದರೆ ಆ ಅಂತ್ಯಕಾಲದ ಸಂಸ್ಕಾರವು ಜೀವಿತಕಾಲದ ನಿರಂತರ ಪ್ರಯತ್ನದ ಮೇಲೆ ಆಧಾರಪಟ್ಟಿರುತ್ತದೆ. (ಸದಾ ತದ್ಭಾವಭಾವಿತಃ). ಜೀವನವೆಲ್ಲವೂ ಯಾವುದನ್ನೂ ಚಿಂತಿಸುತ್ತಿರುವನೋ ಕೊನೆಯ ದಿನಗಳಲ್ಲಿ ಅದೇ ಆಲೋಚನೆ ಮನಸ್ಸಿಗೆ ಬರುವುದು. ಮರಣ ಕಾಲದಲ್ಲಿ ಆ ಸಂಸ್ಕಾರವೇ ಪ್ರಬಲವಾಗಿರುವುದು. ಆದ್ದರಿಂದ ಮರಣಾನಂತರ ಆಯಾ ರೂಪಗಳನ್ನೇ ಆತ ಹೊಂದುವನು. ಆದ್ದರಿಂದ ಜೀವನದುದ್ದಕ್ಕೂ ಕ್ಷಣಿಕವಾದ ದೃಶ್ಯ ವಸ್ತುಗಳನ್ನು ಕುರಿತ ವಿಚಾರಣೆಯಿಂದ ಕಾಲಹರಣ ಮಾಡದೆ ಪರಮಾತ್ಮಚಿಂತನೆ ಮಾಡಿದ್ದೇ ಆದರೆ ಅಂತಹ ದೈವಸಂಸ್ಕಾರವೇ ಮನಸ್ಸಿನಲ್ಲಿ ದೃಢವಾಗಿ, ಅಂತ್ಯಕಾಲದಲ್ಲಿ ಆತನಿಗೆ ದೈವಸ್ಮರಣೆಯೇ ಉಂಟಾಗುವುದು. ತತ್ಫಲಿತವಾಗಿ ಆತನು ಭಗವದೈಕ್ಯವನ್ನು, ಆತ್ಮಸಾಯುಜ್ಯರೂಪವಾದ ಮೋಕ್ಷವನ್ನು ಹೊಂದುವನು **(ಸ ಯಾತಿ ಪರಮಾಂ ಗತಿಂ)**. ಆದ್ದರಿಂದ ಅಂತ್ಯಕಾಲದಲ್ಲಿ ಸತ್ಸಂಸ್ಕಾರವನ್ನು ಹೊಂದುವುದಕ್ಕಾಗಿ ಜೀವನವಿಡೀ ಆ ಅಭ್ಯಾಸವನ್ನೇ ಮಾಡಬೇಕು. ದುಃಖರಹಿತವಾದ ನಿರತಿಶಯಾನಂದದಿಂದ ಕೂಡಿದ ಆತ್ಮಸಾಕ್ಷಾತ್ಕಾರವೇ (ಭಗವತ್ಸಾಯುಜ್ಯವೇ) ಸರ್ವೋತ್ತಮ ಪದವಿ ಆದ್ದರಿಂದ, ಆ ದೈವಸಂಸ್ಕಾರವು ಮನಸ್ಸಿನಲ್ಲಿ ದೃಢಪಡಲು ಜೀವನದುದ್ದಕ್ಕೂ ಭಗವಚ್ಚಿಂತನೆ, ಸ್ಮರಣೆ, ವಿಚಾರಣೆ, ಧ್ಯಾನಾದಿಗಳನ್ನು ಜರುಗಿಸಬೇಕು. ದೈವಸಂಸ್ಕಾರ ಒಂದು ಕ್ಷಣದಲ್ಲಿ ಸಂಭವಿಸುವುದಲ್ಲ. ಅದಕ್ಕೆ ಅನವರತ ಪ್ರಯತ್ನ ಅವಶ್ಯಕ. ಜೀವಿತವೆಲ್ಲವನ್ನು ವಿಷಯ ಸಮುಪಾರ್ಜನೆಯಲ್ಲಿ, ಭೋಗಜಾಲ ಸಂಗ್ರಹದಲ್ಲಿ ಕಳೆದರೆ ಅಂತ್ಯಕಾಲದಲ್ಲಿ ದೈವಸಂಸ್ಕಾರ, ದೈವಸ್ಮರಣೆ ಹೇಗೆ ಉಂಟಾಗುವುದು? ಆಗ ಪಶ್ಚಾತ್ತಾಪ ಪಡಬೇಕಾಗಿ ಬರುವುದು.

ಈ ಕಾರಣದಿಂದ ಬಾಲ್ಯ ಯೌವನಗಳಲ್ಲೇ, ಶರೀರ ಆರೋಗ್ಯ ವಿರುವಾಗಲೇ, ವೃದ್ಧಾಪ್ಯ ಬರುವುದಕ್ಕಿಂತ ಮುಂಚೆಯೇ, ಜೀವಿಯು ಪರಮಾರ್ಥ ಸಾಧನೆಯನ್ನು ಮಾಡಬೇಕು. ಉತ್ತಮ ದೈವ ಸಂಸ್ಕಾರವನ್ನು ಏರ್ಪಡಿಸಿಕೊಳ್ಳಬೇಕು. ಬಂಧಕ್ಕೆ ಇಲ್ಲ ಮೋಕ್ಷಕ್ಕೆ ತಾನೇ ಕರ್ತ. ಉತ್ತಮ ಜನ್ಮವಾಗಲಿ, ನಿಕೃಷ್ಟ ಜನ್ಮವಾಗಲಿ, ಜನ್ಮರಾಹಿತ್ಯವಾಗಲೀ ತನ್ನ ಕೈಯಲ್ಲೇ ಇದೆ. ಅವೆಲ್ಲವೂ ಜೀವಿಯ ಅಂತ್ಯಕಾಲದ ಸಂಸ್ಕಾರದ ಮೇಲೆ ಆಧಾರಪಟ್ಟಿರುವುದರಿಂದ, ಆ ಸಂಸ್ಕಾರ ಯಾವಜ್ಜೀವಿತ ಸಾಧನೆಯ ಮೇಲೆ ಆಧಾರಪಟ್ಟಿದೆಯಾದ್ದರಿಂದ, ಜೀವಿಯು ಮೊದಲಿ ನಿಂದಲೂ ಬಹು ಜಾಗರೂಕನಾಗಿ, ತನ್ನ ಚಿತ್ತವನ್ನು ದೈವಮಯವಾಗಿಸಿ ಕೊಳ್ಳಬೇಕು. 'ತಸ್ಮಾತ್ಸರ್ವೇಷು ಕಾಲೇಷು.........' ಎಂದು ಮುಂದೆ ಬರುವ ಶ್ಲೋಕದಲ್ಲಿ ಈ ವಿಷಯವನ್ನೇ ಭಗವಂತನು ವಿಶದವಾಗಿ ಬೋಧಿಸುತ್ತಿದ್ದಾನೆ. ಆದರೆ ಜೀವನವೆಲ್ಲಾ ಸತ್ಸಂಸ್ಕಾರಗಳನ್ನು ಹೊಂದಿದ್ದು, ಅಂತ್ಯಕಾಲದಲ್ಲಿ ಒಂದು ವೇಳೆ ಕಫ ವಾತ ಪಿತ್ತಗಳ ಪ್ರಕೋಪದಿಂದಾಗಲಿ, ಇಲ್ಲವೇ ಯಾವುದೇ ಬೇರೆ ಕಾರಣದಿಂದ ವಿಸ್ಮೃತಿ ಸಂಭವಿಸಿದರೂ, ಆತನ ಸದ್ಗತಿಗೆ ಏನೂ ಧಕ್ಕೆಯಿರುವುದಿಲ್ಲವೆಂದು ಗ್ರಹಿಸಬೇಕು.

ಪ್ರ : ಜೀವಿಯು ಮರಣಾನಂತರ ಯಾವ ರೂಪ ಹೊಂದುವನು?

ಉ : ಮರಣ ಕಾಲದಲ್ಲಿ ಯಾವ ಭಾವವನ್ನು ಸ್ಮರಿಸುವನೋ ಇಲ್ಲವೆ ಯಾವ ರೂಪವನ್ನು ಕುರಿತು ಆಲೋಚಿಸುವನೋ ಅಂತಹ ರೂಪವನ್ನೇ ಹೊಂದುವನು.

ಪ್ರ : ಅಂತ್ಯಕಾಲದಲ್ಲಿ ದೈವಸಂಸ್ಕಾರವು ಹೇಗೆ ಏರ್ಪಡುವುದು?

ಉ : ಜೀವಿತವೆಲ್ಲವೂ ದೈವಸ್ಮರಣೆ, ದೈವಚಿಂತನೆ ಮಾಡುವುದರಿಂದ (ಸದಾ ತದ್ಭಾವ ಭಾವಿತಃ)

**ಅ||** ಅಂತ್ಯಕಾಲದಲ್ಲಿ ದೈವ ಸಂಸ್ಕಾರವನ್ನು ಹೊಂದಲು ಜೀವನಪರ್ಯಂತ ದೈವ ಸಂಸ್ಮರಣೆಯನ್ನು ಪ್ರೋತ್ಸಾಹಿಸಲಾಗಿದೆ-

೭. ತಸ್ಮಾತ್ಸರ್ವೇಷು ಕಾಲೇಷು ಮಾಮನುಸ್ಮರ ಯುಧ್ಯಚ
ಮಯ್ಯರ್ಪಿತಮನೋಬುದ್ಧಿರ್ಮಾಮೇವೈಷ್ಯಸ್ಯಸಂಶಯಃ

**ಅರ್ಥ:** ತಸ್ಮಾತ್=ಆದ್ದರಿಂದ; ಸರ್ವೇಷು ಕಾಲೇಷು=ಯಾವಾಗಲೂ; ಮಾಮ್=ನನ್ನನ್ನು; ಅನುಸ್ಮರ=ಸ್ಮರಿಸುವುದು; ಯುಧ್ಯ ಚ=ಯುದ್ಧವನ್ನು (ಸ್ವಧರ್ಮವನ್ನು) ಮಾಡುವುದು; ಮಯಿ=ನನ್ನಲ್ಲಿ; ಅರ್ಪಿತ=ಸಮರ್ಪಿಸ ಲ್ಪಟ್ಟ; ಮನೋಬುದ್ಧಿಃ=ಮನಸ್ಸು, ಬುದ್ಧಿಯಿರುವವನಾಗಿ; ಮಾಂ ಏವ=ನನ್ನನ್ನೇ; ಏಷ್ಯಸಿ=ಹೊಂದಬಲ್ಲೆ; ಅಸಂಶಯಃ=(ಈ ವಿಷಯದಲ್ಲಿ) ಸಂದೇಹವಿಲ್ಲ.

**ತಾ||** ಆದ್ದರಿಂದ ಎಲ್ಲಾ ಕಾಲಗಳಲ್ಲಿಯೂ ನನ್ನನ್ನು ಸ್ಮರಿಸುತ್ತಾ (ನಿನ್ನ ಸ್ವಧರ್ಮವಾದ) ಯುದ್ಧವನ್ನು ಮಾಡುವುದು ಈ ಪ್ರಕಾರವಾಗಿ ನನ್ನಲ್ಲಿ ಸಮರ್ಪಿಸಲ್ಪಟ್ಟ ಮನೋಬುದ್ಧಿಗಳನ್ನು ಹೊಂದಿದ್ದಲ್ಲಿ ನೀನು ನನ್ನನ್ನೇ ಪಡೆಯುತ್ತೀಯೆ. ಇದರಲ್ಲಿ ಸಂಶಯವಿಲ್ಲ.

**ವ್ಯಾಖ್ಯೆ:** ಐದನೆಯ ಶ್ಲೋಕದಲ್ಲಿ ಅಂತ್ಯಕಾಲದಲ್ಲಿ (ಅಂತಕಾಲೇಚ) ಭಗವಚ್ಚಿಂತನೆ ಮಾಡುವವರಿಗೆ ಪರಮಾತ್ಮಪದವಿ ಪ್ರಾಪ್ತಿಯಾಗುವುದೆಂದು ತಾನು ವಚಿಸಿದ ವಾಕ್ಯವನ್ನು 'ಅಂತ್ಯಕಾಲದಲ್ಲಿಯೇ ದೈವ ಚಿಂತನೆ ಮಾಡಬೇಕು' ಎಂದು ಕೆಲವರು ಅರ್ಥಮಾಡಿಕೊಂಡು ಜೀವಿತ ಕಾಲವೆಲ್ಲವನ್ನೂ ಸೋಮಾರಿಗಳಾಗಿ, ವಿಷಯ ಚಿಂತನೆಗಳಲ್ಲಿ ಕಳೆದು, ದೈವಧ್ಯಾನವನ್ನು ವೃದ್ಧಾಪ್ಯದವರೆಗೆ ಮುಂದೆ

ಹಾಕಬಹುದೆಂದು ಊಹಿಸಿ, ಅವರಿಗೆ ಸರಿಯಾದ ಬುದ್ಧಿಪಾಠ ಕಲಿಸಲು, ಹಾಗು ಅವರನ್ನು ತೀವ್ರವಾಗಿ ಎಚ್ಚರಿಸಲು ಭಗವಂತನು ಈ ಶ್ಲೋಕವನ್ನು ಹೇಳಿರುವನು. 'ಅಂತಕಾಲೇಚ' ಎನ್ನುವ ಆ ಶ್ಲೋಕಕ್ಕೆ 'ತಸ್ಮಾತ್ಸರ್ವೇಷು ಕಾಲೇಷು' ಎನ್ನುವ ಈ ಶ್ಲೋಕ ಭಾಷ್ಯವಾಗಿದೆ. ಆದ್ದರಿಂದ (ತಸ್ಮಾತ್) 'ಎಲ್ಲಾ ಕಾಲದಲ್ಲಿಯೂ ನನ್ನನ್ನು ಸ್ಮರಿಸು'. 'ತಸ್ಮಾತ್' ಎನ್ನುವ ಪದವನ್ನು ಪ್ರಯೋಗಿಸಿರುವುದರಿಂದ ನಿರಂತರವಾಗಿ ದೈವ ಚಿಂತನೆ ಮಾಡುವುದರಿಂದ ಮಾತ್ರ ಮೇಲೆ ತಿಳಿಸಿದ ಅಂತ್ಯಕಾಲ ಸಂಸ್ಮರಣೆಯ ಭಾಗ್ಯ ಲಭಿಸುವುದು ಎನ್ನುವುದು ಸ್ಪಷ್ಟವಾಗುತ್ತಿದೆ. ಇದರಿಂದ, ಕೇವಲ ವೃದ್ಧಾಪ್ಯವೇ, ಇಲ್ಲವೆ ಮರಣ ಕಾಲವೇ ಭಗವತ್ಸ್ಮರಣೆಯ ಕಾಲವಲ್ಲವೆಂದೂ ಬಾಲ್ಯ ಯೌವನ ಗಳಲ್ಲಿಯೂ ದೈವ ಚಿಂತನೆ ಮಾಡಬೇಕೆಂದು ತಿಳಿಯುತ್ತದೆ.

ಪ್ರಕಾಶವು ಮರೆಯಾದ ಕೂಡಲೇ ಅಂಧಕಾರ ಆವರಿಸಿದಂತೆ, ಭಗವಚ್ಚಿಂತನೆಯನ್ನು ಮರೆತಲ್ಲಿ ಮಾಯೆ ತಕ್ಷಣವೇ ಬಂದು ಸೇರುವುದಕ್ಕೆ ಅವಕಾಶವಿರುವುದು. ಆದ್ದರಿಂದ ಸಪ್ತಾಹಾದಿ ಮಹೋತ್ಸವಗಳಲ್ಲಿ ಅಖಂಡ ದೀಪವನ್ನು ಬೆಳಗಿಸುವಂತೆ ಹೃದಯ ಗುಹೆಯಲ್ಲಿ ದೈವಸ್ಮೃತಿ ನಿತ್ಯವೂ ಬೆಳಗುವಂತೆ ನೋಡಿಕೊಳ್ಳಬೇಕು..

'ಅನುಸ್ಮರನ್'- 'ಸ್ಮರನ್' ಎಂದು ಹೇಳದೆ 'ಅನುಸ್ಮರನ್' ಎಂದು ಹೇಳಿರುವುದರಿಂದ ಪರಮಾತ್ಮನನ್ನು ಸದಾ ಪ್ರಾರ್ಥಿಸುತ್ತಿರಬೇಕೆಂದು ಬೋಧಿಸಲಾಗಿದೆ. ಶ್ರವಣ, ಮನನ, ನಿದಿಧ್ಯಾಸಗಳನ್ನು ಬಿಡದೆ ಆಚರಿಸುತ್ತಿರಬೇಕು. ಯಾವುದಾದರೂ ಒಂದು ಭಾವ ಹೃದಯದಲ್ಲಿ ಆಳವಾಗಿ ಬೇರೂರಬೇಕೆಂದರೆ, ಸ್ಮರಣೆ ಸಾಲದು. ಅನುಸ್ಮರಣೆ (ಸದಾ ಸ್ಮರಿಸುವುದು) ಇರಬೇಕು. ಮೊದಲೇ ಟಿಕೆಟ್ ಕೊಂಡು ಸಿದ್ಧವಾಗಿರುವವನಿಗೆ ರೈಲು ಯಾವಾಗ ಬಂದರೂ ಪರವಾಯಿಲ್ಲ ಎಂದಹಾಗೆ ಜೀವಿತ ಕಾಲವೆಲ್ಲವನ್ನು ಭಗವಚ್ಚಿಂತನೆಯಲ್ಲಿ ಕಳೆದವನಿಗೆ ಚಿತ್ತವು ಭಗವನ್ಮಯವಾಗಿ ದೈವಸಂಸ್ಕಾರ ಪೂರಿತವಾಗಿರುವುದರಿಂದ ಆತನಿಗೆ ಮೃತ್ಯು ಯಾವಾಗ ಸಂಭವಿಸಿದರೂ ಪರವಾಗಿಲ್ಲ, ಸದಾ ಸಿದ್ಧವಾಗಿಯೇ ಇರುವನು.

ಆದರೆ ಕೆಲವರು ಹೀಗೆ ಪ್ರಶ್ನಿಸುವರು. 'ಅಯ್ಯಾ, ನಿರಂತರ ದೈವವನ್ನು ಚಿಂತಿಸಬೇಕೆಂದು ಹೇಳುತ್ತಿದ್ದೀರಲ್ಲ, ಹಾಗೆ ಮಾಡುತ್ತಿದ್ದರೆ ನಮ್ಮ ಜೀವನ ಹೇಗೆ ನಡೆಯಬೇಕು? ಕುಟುಂಬವನ್ನು ಪೋಷಿಸುವುದು ಹೇಗೆ?'- ಅಂತಹವರಿಗೆ ಸರಿಯಾದ ಸಮಾಧಾನವನ್ನು ಭಗವಂತನು ಈ ಶ್ಲೋಕದಲ್ಲಿ ಹೇಳಿದ್ದಾನೆ. 'ಮಾ ಮನುಸ್ಮರ ಯುಧ್ಯ ಚ'- 'ನನ್ನನ್ನು ಸ್ಮರಿಸುತ್ತಾ ಯುದ್ಧವನ್ನೂ ಮಾಡು'- ಇದು ಆ ಉತ್ತರ. ಅರ್ಜುನನು ಕ್ಷತ್ರಿಯನಾದುದರಿಂದ ಆತನ ಸ್ವಧರ್ಮವಾದ ಯುದ್ಧವನ್ನು ಪ್ರಸ್ತಾಪಿಸಲಾಗಿದೆ. ಬೇರೆಯವರು ಅವರವರ ವರ್ಣೋಚಿತ, ಆಶ್ರಮೋಚಿತ ಕ್ರಿಯೆಗಳನ್ನು ಮಾಡುತ್ತಾ ಪರಮಾತ್ಮನನ್ನು ಸಂಸ್ಮರಿಸುತ್ತಿರಬೇಕೆಂದು ಅರ್ಥವಾಗುತ್ತದೆ. ಜನರು ಅವರವರ ದೈನಂದಿನ ಕಾರ್ಯಗಳನ್ನು- ಪೌರೋಹಿತ್ಯ, ವ್ಯಾಪಾರ, ವ್ಯವಸಾಯ, ಸೇವಾದಿ ಕೃತ್ಯಗಳನ್ನು ನಿರಾತಂಕವಾಗಿ ಮಾಡುತ್ತಾ ಭಗವತ್ಸ್ಮರಣೆಯನ್ನು ಎಡೆ ಬಿಡದೆ ಮುಂದುವರಿಸಬೇಕು. ಅರ್ಜುನನು ಶ್ರೀಕೃಷ್ಣನನ್ನು ಮುಂದಿಟ್ಟುಕೊಂಡು, ಅವನನ್ನೇ ನೋಡುತ್ತಾ, ಸ್ಮರಿಸುತ್ತಾ ಯುದ್ಧವೆನ್ನುವ ಭೀಕರ ಕಾರ್ಯವನ್ನೇ ನೆರವೇರಿಸಿದಾಗ, ಬೇರೆಯವರು ಭಗವಚ್ಚಿಂತನೆ ಮಾಡುತ್ತಾ ಅವರವರ ಸಂಸಾರ ಕಾರ್ಯಗಳನ್ನು ಏಕೆ ನಿರ್ವಹಿಸಬಾರದು?

'ಮಯ್ಯರ್ಪಿತ ಮನೋಬುದ್ಧಿ'- ಮನುಜನ ಮನಸ್ಸು, ಬುದ್ಧಿ ಯಾವಾಗ ಭಗವಂತನಲ್ಲಿ ಸ್ಥಿರಪಟ್ಟಿರುತ್ತದೋ ಆಗ ಆತನು ಭಗವತ್ಸಾಯುಜ್ಯವನ್ನು ತಪ್ಪದೆ ಹೊಂದುವನೆಂದು ಇಲ್ಲಿ ಹೇಳಲಾಗಿದೆ. ಇಲ್ಲಿ ಮನಸ್ಸಿನ ಜೊತೆ ಬುದ್ಧಿಯನ್ನೂ ಸೇರಿಸಿರುವುದರಲ್ಲಿ ಒಂದು ವಿಶೇಷವಿದೆ. ಮನಸ್ಸು ಸಂಕಲ್ಪಿಸುವುದು, ಬುದ್ಧಿ ನಿಶ್ಚಯಿಸುವುದು; ಮನಸ್ಸು ಸಂಕಲ್ಪಿಸಿದ್ದನ್ನು ಬುದ್ಧಿ ನಿಶ್ಚಯಿಸದೇ ಹೋದರೆ, ಆ ಪದಾರ್ಥದಲ್ಲಿ ಮನಸ್ಸು ನಿಶ್ಚಲವಾಗಿ ನಿಲ್ಲದು. ಆದ್ದರಿಂದ ಮನಸ್ಸಿನೊಂದಿಗೆ ಬುದ್ಧಿಯನ್ನು ಕೂಡ ಒಲಿಸಿಕೊಂಡು ಪರಮಾತ್ಮನಲ್ಲಿ ನಿಲ್ಲಿಸಬೇಕು.

'ಅಂಸಶಯಃ'- ಹಾಗೆ ಮಾಡಿದರೆ ನಿಸ್ಸಂಶಯವಾಗಿ ದೈವಸಾಕ್ಷಾತ್ಕಾರ ಉಂಟಾಗುವುದೆಂದು ಒತ್ತಿ ಹೇಳಲಾಗಿದೆ. ಎರಡು ಶ್ಲೋಕಗಳ ಹಿಂದೆಯೇ (೫ನೆಯ ಶ್ಲೋಕದಲ್ಲಿ) 'ನಾಸ್ತ್ಯತ್ರ ಸಂಶಯಃ'- (ಈ ವಿಷಯದಲ್ಲಿ ಸಂದೇಹವಿಲ್ಲ) ಎಂದು ಹೇಳಿ ಮತ್ತೆ ಕೂಡಲೇ 'ಅಸಂಶಯಃ' ಎಂದು ಹೇಳಿರುವುದರಿಂದ ಈ ವಾಕ್ಯಗಳು ಪರಮ ಸತ್ಯಗಳೆಂದು ಅವುಗಳ ಮೇಲೆ ವಿಶ್ವಾಸವಿಟ್ಟು ತಪ್ಪದೆ ಅನುಷ್ಠಾನ ಮಾಡಬೇಕೆಂದು ಬೋಧಿಸಿದಂತಾಗಿದೆ. ಜೀವಿಯು ತಾನು ಮಾಡುವದನ್ನು ಮಾಡಿದಲ್ಲಿ, ಈಶ್ವರನು ತಾನು ಕೊಡಬೇಕಾದದ್ದನ್ನು ತಪ್ಪದೆ ಕೊಡುವನು. ಜೀವಿಯು ತನ್ನ ಮನೋಬುದ್ಧಿಗಳನ್ನು ದೈವಕ್ಕೆ ಅರ್ಪಿಸಿದಲ್ಲಿ, ಬ್ರಹ್ಮಸಾಯುಜ್ಯವು ಅದಷ್ಟಕ್ಕದೇ ಪ್ರಾಪ್ತಿಯಾಗುವುದು. ಆದ್ದರಿಂದ ಜನರು ಮನೋಬುದ್ಧಿಗಳನ್ನು ದೃಶ್ಯ ವಿಷಯಗಳಿಂದ ಮರಳಿಸಿ ದೈವದಲ್ಲಿ ಸ್ಥಾಪಿಸಬೇಕು. ಆಗಲೇ ತಾವು ಅಪೇಕ್ಷಿಸುವ ಪರಮಾನಂದ ರೂಪ ಲಕ್ಷ್ಯವು ಒದಗುವುದು.

ಪ್ರ : ದೇವರನ್ನು ಯಾವಾಗ ಸ್ಮರಿಸಬೇಕು?

ಉ : ನಿಮನಿಮಿಷಕ್ಕೆ ಮಾತುಮಾತಿಗೆ ಸ್ಮರಿಸಬೇಕು.

ಪ್ರ : ಹಾಗೆ ನಿರಂತರ ದೈವಚಿಂತನೆ ಮಾಡಿರೆ, ಇನ್ನು ಆತನ ಜೀವನ ನಿರ್ವಹಣೆ ಹೇಗೆ ನಡೆಯುವುದು?

ಉ : ದೈವಸ್ಮರಣೆ ಮಾಡುತ್ತಾ ಅವರವರ ವೃತ್ತಿಗಳನ್ನು (ಕಾರ್ಯಗಳನ್ನು) ಧರ್ಮಪೂರ್ವಕವಾಗಿ ಮಾಡಿಕೊಳ್ಳಬಹುದು (ಮಾಮನುಸ್ಮರ ಯುಧ್ಯಚ)

ಪ್ರ : ಭಗವಂತನನ್ನು ಹೊಂದಲು ಉಪಾಯವೇನು?

ಉ : ಅವರವರ ಮನೋಬುದ್ಧಿಗಳನ್ನು ಭಗವಂತನಿಗೆ ಅರ್ಪಿಸುವುದೇ (ಅನವರತ ದೈವಚಿಂತನೆ ಹೊಂದಿರುವುದೇ) (ಮಯ್ಯರ್ಪಿತ ಮನೋ ಬುದ್ಧಿಃ).

**ಅ||** ಪರಮಾತ್ಮನನ್ನು ಹೊಂದಲು ಅವಲಂಬಿಸಬೇಕಾದ ಧ್ಯಾನ ಪದ್ಧತಿಯನ್ನು ವಿವರಿಸಲಾಗಿದೆ.

**೮. ಅಭ್ಯಾಸಯೋಗಯುಕ್ತೇನ ಚೇತಸಾ ನಾನ್ಯಗಾಮಿನಾ**
**ಪರಮಂ ಪುರುಷಂ ದಿವ್ಯಂ ಯಾತಿ ಪಾರ್ಥಾನುಚಿಂತಯನ್**

**ಅರ್ಥ:** ಪಾರ್ಥ=ಓ ಅರ್ಜುನಾ!, ಅಭ್ಯಾಸಯೋಗಯುಕ್ತೇನ=ಅಭ್ಯಾಸ ವೆನ್ನುವ ಯೋಗದಿಂದ ಕೂಡಿರುವುದು; ನ ಅನ್ಯಗಾಮಿನಾ=ಇತರ ವಿಷಯಗಳ ಮೇಲೆ ಹೋಗದಂತಹದು; ಚೇತಸಾ=ಮನಸ್ಸಿನಿಂದ; ದಿವ್ಯಂ= ಅಪ್ರಾಕೃತನಾದ; (ಇಲ್ಲವೆ ಸ್ವಯಂ ಪ್ರಕಾಶರೂಪನಾದ); ಪರಮಂ=ಸರ್ವೋತ್ತಮನಾದ; ಪುರುಷಂ=ಪರಮ ಪುರುಷನ; ಅನುಚಿಂತಯನ್=ಮಾತು ಮಾತಿಗೆ ಸ್ಮರಿಸುವಂತವನಾಗಿ; (ತಂ ಏವ=ಆ ಪರಬ್ರಹ್ಮವನ್ನೇ); ಯಾತಿ=ಹೊಂದುತ್ತಿದ್ದಾನೆ.

**ತಾ॥** ಓ ಅರ್ಜುನಾ! ಅಭ್ಯಾಸವೆನ್ನುವ ಯೋಗದಿಂದ ಕೂಡಿ, ಇತರ ವಿಷಯಗಳ ಕಡೆ ಹೋಗದ ಮನಸ್ಸುಳ್ಳವನಾಗಿ, ಅಪ್ರಾಕೃತನಾದ (ಸ್ವಯಂ ಪ್ರಕಾಶ ರೂಪನಾದ) ಸರ್ವೋತ್ತಮನಾದ ಪರಮ ಪುರುಷನನ್ನು ಮತ್ತೆ ಮತ್ತೆ ಸ್ಮರಿಸುವ ಮನುಜನು ಆತನನ್ನೇ ಹೊಂದುತ್ತಿದ್ದಾನೆ.

**ವ್ಯಾಖ್ಯೆ:** ಯಾವ ಪ್ರಕಾರವಾಗಿ ಆಚರಿಸಿದರೆ ಮನುಜನು ಆತ್ಮಸಾಕ್ಷಾತ್ಕಾರವನ್ನು ಪಡೆಯಬಲ್ಲನೋ ಆ ಪದ್ಧತಿಯನ್ನು ಇಲ್ಲಿ ಹೇಳಲಾಗಿದೆ. ಈ ಶ್ಲೋಕದಲ್ಲಿ ಆತ್ಮರೂಪ ಪರಮ ಪುರುಷನನ್ನು ಸೇರಲು ಮೂರು ಸದುಪದೇಶಗಳನ್ನು ಕೊಡಲಾಗಿದೆ.

೧) ಅಭ್ಯಾಸ ಯೋಗವನ್ನು ಆಚರಿಸಬೇಕು.

೨) ಚಿತ್ತವು (ಪರಮಾತ್ಮನನ್ನು ಬಿಟ್ಟು) ಬೇರೆ ಕಡೆ ಹೋಗಕೂಡದು.

೩) ಆತ್ಮನನ್ನು ಕುರಿತು ಮಾತ್ರ ಪದೇ ಪದೇ ಚಿಂತನೆ ಮಾಡಬೇಕು.

*'ಅಭ್ಯಾಸಯೋಗ'*- ಗೀತೆಯಲ್ಲಿ ಭಗವಂತನು ಮೋಕ್ಷಪ್ರಾಪ್ತಿಗಾಗಿ ಕರ್ಮ, ಭಕ್ತಿ, ಧ್ಯಾನ, ಜ್ಞಾನಾದಿ ವಿವಿಧ ಯೋಗಗಳನ್ನು ಕುರಿತು ತಿಳಿಸಿದ್ದಾನೆ. ಈಗ ಈ ಶ್ಲೋಕದಲ್ಲಿ ಮತ್ತೊಂದು ವಿಚಿತ್ರವಾದ ಯೋಗವನ್ನು ಕುರಿತು ಹೇಳುತ್ತಿದ್ದಾನೆ. ಅದೇ ಅಭ್ಯಾಸಯೋಗ. ಇದು ಪ್ರತ್ಯೇಕವಾಗಿ ಒಂದು ಯೋಗವಲ್ಲದಿದ್ದರೂ ಎಲ್ಲಾ ಯೋಗಗಳಲ್ಲಿ ಬೆರೆತೇ ಇರುವುದು. ಅಭ್ಯಾಸಕ್ಕೆ ಒಂದು ಯೋಗದ ಸ್ಥಾನವನ್ನು (Status) ಕೊಟ್ಟು ಭಗವಂತನು ಇದನ್ನು ವಿಶೇಷವಾಗಿ ಗೌರವಿಸಿದ್ದಾನೆ.

ಆದ್ದರಿಂದ ಮುಮುಕ್ಷುಗಳಿಗೆ ಇದು ಎಷ್ಟು ಪ್ರಧಾನವಾದುದೋ ಅರ್ಥವಾಗುವುದು. ಯಾವ ಯೋಗವೇ ಆಗಲಿ ಅಭ್ಯಾಸವಿಲ್ಲದಿದ್ದರೆ ಫಲಿಸುವುದಿಲ್ಲ. ಆದ್ದರಿಂದ ಎಲ್ಲಾ ಯೋಗಗಳಿಗೆ ಅಭ್ಯಾಸ ಅವಶ್ಯಕವೇ ಆಗಿದೆ. ಗೀತೆಯ ಆರನೆಯ ಅಧ್ಯಾಯದಲ್ಲಿ ಮನೋನಿಗ್ರಹಕ್ಕೆ ಅಭ್ಯಾಸ ಎಷ್ಟೋ ಅವಶ್ಯಕವೆಂದು ಭಗವಂತನು ಈಗಾಗಲೇ ತಿಳಿಸಿದ್ದಾನೆ.* 'ಅಭ್ಯಾಸ ವೈರಾಗ್ಯಾಭ್ಯಾಂ ತನ್ನಿರೋಧಃ'- ಎಂದು ಪತಂಜಲಿ ಮಹರ್ಷಿ ಆ ವಿಷಯವನ್ನೇ ಒತ್ತಿ ಹೇಳಿದ್ದಾರೆ. ಈ ಪ್ರಕಾರವಾಗಿ ಅಧ್ಯಾತ್ಮರಂಗದಲ್ಲಿ ಅಭ್ಯಾಸವು ಉನ್ನತ ಸ್ಥಾನವನ್ನು ಆಕ್ರಮಿಸಿದೆ. ಲೌಕಿಕ ಕ್ಷೇತ್ರದಲ್ಲಿ ಅದರ ಅವಶ್ಯಕತೆ ಎಷ್ಟು ಇದೆ ಎನ್ನುವುದು ಎಲ್ಲರಿಗೂ ತಿಳಿದೇ ಇದೆ. ದುರ್ವಾಸನೆಗಳು, ದುಸ್ಸಂಕಲ್ಪಗಳು, ಅಭ್ಯಾಸದಿಂದ ಹೇಗೆ ರೂಢಿಯಾಗುವುವೋ ಹಾಗೆಯೇ ಸದ್ವಾಸನೆಗಳು, ಸತ್ಸಂಕಲ್ಪಗಳು, ದೈವವಿಚಾರಣೆ ಅಭ್ಯಾಸದಿಂದಲೇ ಸ್ಥಿರಗೊಳ್ಳಬೇಕು. ಕೊಳೆ ಹೋಗಲು ಸಾಬೂನು, ಶೀಗೆಕಾಯಿ ಮುಂತಾದ ಅನೇಕ ವಸ್ತುಗಳಿದ್ದರೂ ನೀರಿನೊಂದಿಗೆ ಸೇರಿದಾಗ ಮಾತ್ರ ಅವು ಮಾಲಿನ್ಯವನ್ನು ಹೋಗಲಾಡಿಸಲು ಸಮರ್ಥವಾಗುವಂತೆ; ಯಾವ ಯೋಗವಾದರೂ ಅಭ್ಯಾಸದೊಡನೆ ಮಿಲನವಾದಾಗ ಮಾತ್ರ ಫಲಗಳನ್ನು ಕೊಡಬಲ್ಲದು.

*'ಚೇತಸಾ ನಾನ್ಯಗಾಮಿನಾ'*- ಇನ್ನು ಎರಡನೆಯ ವಿಷಯ, ಚಿತ್ತವನ್ನು ಅಲ್ಲಿ ಇಲ್ಲಿ ಓಡದಂತೆ ಕಟ್ಟಿಹಾಕುವುದು. ಅಂದರೆ ಅದು ಅವ್ಯಭಿಚಾರ ರೂಪದಿಂದ ವರ್ತಿಸುವಂತಾಗಬೇಕು. ಚಿತ್ತವು ದೃಶ್ಯ ವಿಷಯಗಳಲ್ಲಿ ವ್ಯಾಪಿಸದೆ ಧ್ಯೇಯ ವಸ್ತುವಾದ ಪರಮಾತ್ಮನಲ್ಲೇ ಸ್ಥಿರವಾಗಿರಬೇಕು. ದೃಶ್ಯ ಪದಾರ್ಥ ಜಾತಿಯೆಲ್ಲವೂ ನಶಿಸಿ ಹೋಗುವಂತಹುದೇ ಎಂದು ತಿಳಿದು ಮನಸ್ಸನ್ನು ವಿವೇಕದಿಂದ ಅಲ್ಲಿಂದ ಮರಳಿಸಿ ಆತ್ಮದಲ್ಲಿಯೇ ಸ್ಥಾಪಿಸಬೇಕು. ಚಿತ್ತವು ಸುಮ್ಮನಿರುವುದಿಲ್ಲವಾದ್ದರಿಂದ ಚಿಂತಿಸಲು ಅದಕ್ಕೆ ಯಾವುದಾದರೂ ವಸ್ತುವನ್ನು ಕೊಡಬೇಕು. ಆದ್ದರಿಂದ ಪ್ರಾಪಂಚಿಕ ವಸ್ತುಗಳ ಮೇಲೆ ಅದನ್ನು ಹೋಗಬಿಡದೆ ದೈವವಸ್ತುವಿನಲ್ಲಿಯೇ, ಕೇಂದ್ರೀಕರಿಸಬೇಕೆಂದು ಇಲ್ಲಿ ಹೇಳಲಾಗಿದೆ.

*'ಅನುಚಿಂತಯನ್'*- ಪರಮ ಪುರುಷನಾದ ಆತ್ಮನನ್ನು ಕುರಿತು ಮತ್ತೆ ಮತ್ತೆ ಚಿಂತಿಸಬೇಕೆಂದು ಬೋಧಿಸಲಾಗಿದೆ. 'ಚಿಂತಯನ್' ಎಂದು ಹೇಳದೆ 'ಅನುಚಿಂತಯನ್' ಎಂದು ಹೇಳಿರುವುದರಿಂದ ಮಾತು ಮಾತಿಗೆ ದೈವ ಚಿಂತನೆಯ ಪ್ರಯತ್ನವನ್ನು ಮಾಡುತ್ತಿರಬೇಕೆಂದು ಸೂಚಿಸಲಾಗಿದೆ. ಈ ಪ್ರಕಾರವಾಗಿ ಸಾಧನೆ ಮಾಡುತ್ತಾ ಬಂದಲ್ಲಿ ಮನುಜನು ತಪ್ಪದೆ ಆ ಪರಮಾತ್ಮ ಪದವಿಯನ್ನು ಸೇರಬಲ್ಲನೆಂದು 'ಯಾತಿ' ಎನ್ನುವ ಪದದಿಂದ ಗೀತಾಚಾರ್ಯನು ಸ್ಪಷ್ಟವಾಗಿ ನಿರೂಪಿರುವನು. ಆದ್ದರಿಂದ ಮುಮುಕ್ಷುಗಳು ಭಗವದ್ವಾಕ್ಯಗಳಲ್ಲಿ ಪೂರ್ಣ ವಿಶ್ವಾಸವಿಟ್ಟು ಆಯಾ ಸಾಧನೆಗಳನ್ನು ಮಾಡಿ ಕೃತಾರ್ಥರಾಗಬೇಕು.

ಪ್ರ : ಭಗವಂತನು ಎಂತಹವನು?

ಉ : ಅಪ್ರಾಕೃತ ಸ್ವರೂಪನು, ಸ್ವಯಂಪ್ರಕಾಶ ರೂಪನು, ಸರ್ವೋತ್ತಮನು.

ಪ್ರ : ಅವನನ್ನು ಹೊಂದಲು ಉಪಾಯವೇನು?

ಉ : ೧) ಚಿತ್ತವನ್ನು ದೃಶ್ಯ ವಿಷಯಗಳ ಕಡೆಗೆ ಹೋಗಬಿಡದೆ ೨) ಪರಮಾತ್ಮನನ್ನೇ ನಿರಂತರ ಚಿಂತನೆ ಮಾಡುವುದು- ಈ ಪ್ರಕಾರವಾಗಿ ಸತತವಾಗಿ ಸದಾಭ್ಯಾಸವನ್ನು ಆಚರಿಸುತ್ತಿರಬೇಕು. ಇದೇ ಮೋಕ್ಷೋಪಾಯ.

ಪ್ರ : ಭಗವದ್ಧ್ಯಾನ ಮಾಡುವವನ ಚಿತ್ತ ಹೇಗಿರಬೇಕು?

ಉ : ಧ್ಯೇಯವಾದ ಪರಮಾತ್ಮನನ್ನು ಬಿಟ್ಟು ಮತ್ತೆ ಯಾವುದರಲ್ಲಿಯೂ ಪ್ರವರ್ತಿಸಬಾರದು.

**ಅ॥** ಅಂತಹ ಪರಮಾತ್ಮನನ್ನು ವರ್ಣಿಸುವ ಧ್ಯಾನ ಪದ್ಧತಿಯನ್ನು, ಅದರ ಫಲವನ್ನು ಎರಡು ಶ್ಲೋಕಗಳ ಮೂಲಕ ತಿಳಿಸಲ್ಪಡಲಾಗುತ್ತಿದೆ-

**೯. ಕವಿಂ ಪುರಾಣಮನುಶಾಸಿತಾರಂ**
**ಅಣೋರಣೀಯಾಂಸಮನುಸ್ಮರೇದ್ಯಃ**
**ಸರ್ವಸ್ಯ ಧಾತಾರಮಚಿಂತ್ಯರೂಪಮ್**
**ಆದಿತ್ಯವರ್ಣಂ ತಮಸಃ ಪರಸ್ತಾತ್**

**೧೦. ಪ್ರಯಾಣಕಾಲೇ ಮನಸಾಽಚಲೇನ**
**ಭಕ್ತ್ಯಾ ಯುಕ್ತೋ ಯೋಗಬಲೇನ ಚೈವ**
**ಭ್ರುವೋರ್ಮಧ್ಯೇ ಪ್ರಾಣಮಾವೇಶ್ಯಸಂಯಕ್**
**ಸ ತಂ ಪರಂ ಪುರುಷಮುಪೈತಿ ದಿವ್ಯಮ್**

**ಅರ್ಥ:** ಯಃ=ಯಾರು; ಭಕ್ತ್ಯಾ=ಭಕ್ತಿಯಿಂದ; ಯುಕ್ತಃ=ಕೂಡಿದವನಾಗಿ; ಪ್ರಯಾಣಕಾಲೇ=ಅಂತ್ಯಕಾಲದಲ್ಲಿ; ಯೋಗಬಲೇನ=ಧ್ಯಾನಾಭ್ಯಾಸ ಸಂಸ್ಕಾರ ಬಲದಿಂದ; ಪ್ರಾಣಂ=ಪ್ರಾಣವಾಯುವನ್ನು; ಭ್ರುವೋಃ=ಎರಡು ಕಣ್ಣುಗಳ ಮಧ್ಯೆ (ಭ್ರೂಮಧ್ಯದಲ್ಲಿ); ಸಮ್ಯಕ್=ಚೆನ್ನಾಗಿ; ಆವೇಶ್ಯ=ನಿಲ್ಲಿಸಿ; ಚ=ನಂತರ;

* ಅಭ್ಯಾಸೇನತು ಕೌಂತೇಯ ವೈರಾಗ್ಯೇಣ ಚ ಗೃಹ್ಯತೇ (೬-೩೫)

ಕವಿಂ=ಸರ್ವಜ್ಞನು; ಪುರಾಣಂ=ಪುರಾತನನು; ಅನುಶಾಸಿತಾರಂ=ಸರ್ವಲೋಕ ನಿಯಾಮಕನು; ಅಣೋಃ=ಅಣುವಿಗಿಂತ; ಅಣೀಯಾಂಸಮ್=ಹೆಚ್ಚಿಗೆ ಸೂಕ್ಷ್ಮವಾದವನು; ಸರ್ವಸ್ಯ=ಸಮಸ್ತ ಪ್ರಪಂಚಕ್ಕೆ; ಧಾತಾರಂ= ಆಧಾರವಾದವನು(ಪೋಷಿಸಿ ರಕ್ಷಿಸುವವನು); ಅಚಿಂತ್ಯ ರೂಪಂ=ಚಿಂತಿಸಲು ಅಸಾಧ್ಯವಾದ ಸ್ವರೂಪವುಳ್ಳವನು; ಆದಿತ್ಯವರ್ಣಂ= ಸೂರ್ಯನ ಕಾಂತಿಯಂತಹ ಕಾಂತಿಯುಳ್ಳವನು (ಸ್ವಯಂಪ್ರಕಾಶ ರೂಪನು); ತಮಸಃ= ಅಜ್ಞಾನಾಂಧಕಾರದ; ಪರಸ್ತಾತ್=ಮತ್ತೊಂದು ಬದಿಗೆ ಇರುವವನು (ಆಗಿ) ಪುರುಷಂ=ಪರಮಾತ್ಮನು; ಅಚಲೇನ ಮನಸಾ=ನಿಶ್ಚಲ ಮನಸ್ಸಿನಿಂದ; ಅನುಸ್ಮರೇತ್=ಎಡೆಬಿಡದೆ ಚಿಂತಿಸುವವನೋ; ಸಃ=ಆತನು; ದಿವ್ಯಂ= ಪ್ರಕಾಶಸ್ವರೂಪಿಯಾದ; ಪರಂ=ಸರ್ವೋತ್ತಮನಾದ; ತಂ ಏವ=ಆ ಪರಮಾತ್ಮನನ್ನೇ; ಉಪೈತಿ=ಹೊಂದುತ್ತಿದ್ದಾನೆ.

**ತಾ||** ಯಾವನು ಭಕ್ತಿಯಿಂದ ಕೂಡಿದವನಾಗಿ, ಅಂತ್ಯಕಾಲದಲ್ಲಿ ಯೋಗ ಬಲದಿಂದ (ಧ್ಯಾನಾಭ್ಯಾಸ ಸಂಸ್ಕಾರ ಬಲದಿಂದ) ಪ್ರಾಣವಾಯುವನ್ನು ಭ್ರೂಮಧ್ಯದಲ್ಲಿ (ಕಣ್ಣು ಹುಬ್ಬುಗಳ ಮಧ್ಯೆ) ಸ್ಥಿರವಾಗಿ ನಿಲ್ಲಿಸಿ ನಂತರ ಸರ್ವಜ್ಞನು, ಪುರಾಣ ಪುರುಷನು, ಜಗನ್ನಿಯಾಮಕನು, ಅಣುವಿಗಿಂತ ಹೆಚ್ಚಿಗೆ ಸೂಕ್ಷ್ಮವುಳ್ಳವನು, ಸಕಲ ಪ್ರಪಂಚಕ್ಕೆ ಆಧಾರಭೂತನು (ಸಂರಕ್ಷಕನು), ಚಿಂತಿಸಲಸಾಧ್ಯವಾದ ಸ್ವರೂಪವುಳ್ಳವನು, ಸೂರ್ಯನ ಕಾಂತಿಗಿಂತ ಹೆಚ್ಚಿಗೆ ಕಾಂತಿಯುಳ್ಳವನು (ಸ್ವಯಂ ಪ್ರಕಾಶ ಸ್ವರೂಪನು) ಅಜ್ಞಾನಾಂಧಕಾರಕ್ಕೆ ಅಂಟದೆ ಇರುವವನಾದ ಪರಮಾತ್ಮನನ್ನು ನಿಶ್ಚಲಮನಸ್ಸಿನಿಂದ ಎಡೆಬಿಡದೆ ಚಿಂತಿಸುವನೋ ಆತನು ದಿವ್ಯಸ್ವರೂಪಿಯಾದ ಸರ್ವೋತ್ತಮನಾದ ಆ ಪರಮಾತ್ಮನನ್ನೇ ಹೊಂದುತ್ತಿದ್ದಾನೆ.

**ವ್ಯಾಖ್ಯೆ:** ಪರಮಾತ್ಮನು ಎಂತಹವನು ಎಂದು ತಿಳಿಸುತ್ತ ಆತನನ್ನು ಹೇಗೆ ಧ್ಯಾನಿಸಬೇಕು ಎನ್ನುವ ಪದ್ಧತಿಯನ್ನು ಹೇಳುತ್ತಿದ್ದಾನೆ. ಧ್ಯೇಯವಸ್ತುವಿನ ಮೇಲೆ ಪೂರ್ಣವಿಶ್ವಾಸವುಂಟಾಗಬೇಕಾದರೆ ಮೊದಲು ಆತನ ಸ್ವರೂಪ ಹಾಗು ಮಹಿಮೆಗಳನ್ನು ಚೆನ್ನಾಗಿ ತಿಳಿದುಕೊಳ್ಳಬೇಕು. ಒಂದು ವಸ್ತುವಿನ ಸ್ವರೂಪ ಮತ್ತು ಸ್ವಭಾವಗಳನ್ನು ಪೂರ್ತಿಯಾಗಿ ತಿಳಿದುಕೊಂಡ ನಂತರವೇ ಅದನ್ನು ಕುರಿತು ಚಿಂತಿಸಲು ಸಾಧ್ಯವಾಗುವುದು. ಆದ್ದರಿಂದ ಇಲ್ಲಿಯೂ ಸಹ ಧ್ಯಾನಪದ್ಧತಿಯನ್ನು ವಿವರಿಸುವ ಮೊದಲು ಧ್ಯೇಯ ಸ್ವರೂಪವಾದ ಪರಮಾತ್ಮನ ಸ್ವರೂಪವನ್ನು 'ಕವಿಂ ಪುರಾಣಂ' ಎನ್ನುವ ಶ್ಲೋಕದ ಮೂಲಕ ಎಂಟು ಲಕ್ಷಣಗಳಿಂದ ವಿವರಿಸಲಾಗಿದೆ.

೧) **'ಕವಿ'-** ಪರಮಾತ್ಮನು ಕವಿ. ಅಂದರೆ ಸರ್ವಜ್ಞನು. ಕವಿಗಳಿಗೆ ಕವಿ. ಆ ಪರಮ ಕವಿಯನ್ನು ತಿಳಿಯುವುದೇ ಒಂದು ಮುಖ್ಯವಾದ ಕವಿತೆ.

೨) **'ಪುರಾಣ ಪುರುಷ'-** ಆತನು ಸನಾತನನು, ಅನಾದಿ ಸ್ವರೂಪಿ. ಪ್ರಪಂಚದಲ್ಲಿಯ ಸಮಸ್ತ ದೃಶ್ಯ ಪದಾರ್ಥಗಳಿಗೆ ಆದಿ ಇದೆ. ಪರಮಾತ್ಮನಿಗೆ ಆದಿಯಿಲ್ಲ. ಆದಿ ಇರುವುದಕ್ಕೆ ಅಂತ್ಯವೂ ಇರುವುದು. ಆದುದರಿಂದ ದೃಶ್ಯ ವಸ್ತುಗಳು ನಶ್ವರಗಳು. ಪರಮಾತ್ಮನಾದರೋ ಶಾಶ್ವತನು.

೩) **'ಶಾಸಕನು'-** ಸರ್ವಜೀವಿಗಳನ್ನು, ಸರ್ವಲೋಕಗಳನ್ನು ಶಾಸಿಸುವವನು, ನಿಯಾಮಕನು ಹಾಗು ಪ್ರಭು. ಚಿಕ್ಕ ಚಿಕ್ಕ ರಾಜ್ಯಾಧಿಪತಿಗಳನ್ನೇ ಜನರು ಆರಾಧಿಸುತ್ತಿರಬೇಕಾದರೆ ಬ್ರಹ್ಮಾಂಡ ನಿಯಾಮಕನಾದ ಪರಮೇಶ್ವರನನ್ನು ಇನ್ನು ಎಷ್ಟು ಭಕ್ತಿಯಿಂದ ಆರಾಧಿಸಬೇಕು ?

೪) **'ಸೂಕ್ಷ್ಮರೂಪಿ'-** ಅಣುವಿಗಿಂತ ಸೂಕ್ಷ್ಮವಾದವನು. 'ಅಣೋರಣೀಯಾನ್ ಮಹತೋ ಮಹೀಯಾನ್'- ಅಣುವಿಗಿಂತ ಸೂಕ್ಷ್ಮತ್ರಮವಾದವನೆಂದು, ಮಹದ್ವಸ್ತುಗಳಿಗಿಂತ ಮಹತ್ತರವಾದವನೆಂದು ಭಗವಂತನನ್ನು ಕುರಿತು ಉಪನಿಷತ್ತುಗಳು ಘೋಷಿಸುತ್ತಿವೆ. ಆದ್ದರಿಂದ ಪ್ರತಿ ಅಣುವಿನಲ್ಲಿಯೂ ಸೂಕ್ಷ್ಮವಾಗಿ ವ್ಯಾಪಿಸಿರುವ ಆ ಪರಮಾತ್ಮನ ಸನ್ನಿಧಾನವನ್ನು ಸರ್ವತ್ರ ಅನುಭವಿಸುತ್ತ ಭಕ್ತಿ, ವಿನಯಗಳನ್ನು ಹೊಂದಿರಬೇಕು.

೫) **'ಸರ್ವಾಧಾರನು'-** ಸಮಸ್ತ ಪ್ರಪಂಚವನ್ನು ಧರಿಸುವವನು ಪೋಷಿಸುವವನು, ಸಂರಕ್ಷಿಸುವವನು ಮತ್ತು ಆಧಾರಭೂತನು. ದೃಶ್ಯ ಪದಾರ್ಥಗಳು ಜಡಗಳು. ಚೈತನ್ಯದ ಆಧಾರವಿಲ್ಲದೆ ಅವು ನಿಲ್ಲುವುದಿಲ್ಲ. ಆ ಚೈತನ್ಯಾಧಾರವೇ ಪರಮಾತ್ಮನು.

೬) **'ಅಚಿಂತ್ಯರೂಪ'-** ಇಂದ್ರಿಯಮನಗಳಿಗೆ ಅತೀತನು, ಆದ್ದರಿಂದ ಮನಸ್ಸಿನಿಂದ ಚಿಂತಿಸುವುದಕ್ಕೆ ಸಾಧ್ಯವಿಲ್ಲದವನು. ಆದರೂ ಶುದ್ಧ ಮನಸ್ಸು ನಿರಂತರ ಧ್ಯಾನದಿಂದ, ಸಮುದ್ರದಲ್ಲಿ ಸೇರುವ ನದಿಯಂತೆ ಆ ಪರಮಾತ್ಮನಲ್ಲಿ ಲಯವಾಗಿ ತದ್ರೂಪವೇ ಆಗಿ ಬೆಳಗಬಲ್ಲುದು. ಮಲಿನಚಿತ್ತಕ್ಕೆ ಪರಮಾತ್ಮ ಎಂದೆಂದಿಗೂ ವಿಷಯವಾಗಲಾರನು. ಚಿತ್ತಶುದ್ಧಿಯಿಂದ ಆತನನ್ನು ತಿಳಿದುಕೊಳ್ಳಬಹುದು. ಅನೂಭೂತಿಗೊಳಿಸಿಕೊಳ್ಳಬಹುದು. ಆದರೆ ಒಂದು ದೃಶ್ಯವಸ್ತುವನ್ನು ತಿಳಿದುಕೊಂಡ ಹಾಗಲ್ಲದೆ, ತತ್ಸ್ವರೂಪದಲ್ಲಿ ಲಯವಾಗಿ ತದಾಕಾರವಾಗಿ ವರ್ತಿಸುವ ಮೂಲಕ ಆತನ ಅನುಭೂತಿಯನ್ನು ಹೊಂದಬಹುದು. ಒಂದು ಪಕ್ಷ ಅನುಭೂತಿ ಅಸಾಧ್ಯವಾಗಿದ್ದಿದ್ದರೆ, 'ಬುದ್ಧಿ ಗ್ರಾಹ್ಯ' ಎಂದು ೬ನೆಯ ಅಧ್ಯಾಯದಲ್ಲಿ, ಅನುಸ್ಮರೇತ್ ಎಂದು ಈ ಅಧ್ಯಯದಲ್ಲಿ ಹೇಗೆ ಹೇಳಲು ಸಾಧ್ಯ ?

೭) **'ಆದಿತ್ಯವರ್ಣ'-** ಪ್ರಕಾಶ ಸ್ವರೂಪನೆಂದರ್ಥ. ಸೂರ್ಯನನ್ನೂ ಕೂಡ ಪ್ರಕಾಶಿಸುವ ಜ್ಞಾನಶೂರನು ಆತನು (ತಸ್ಯ ಭಾಸಾ ಸರ್ವಮಿದಂ ವಿಭಾತಿ).

೮) **'ತಮಸ್ಸಿಗೆ ಪರವಾದವನು'-** ಮಾಯೆಗೆ, ಅಜ್ಞಾನವೆನ್ನುವ ಕತ್ತಲಿಗೆ ವಿಲಕ್ಷಣನಾಗಿ, ಅವುಗಳಿಗೆ ಅತೀತನಾಗಿ ಇರುವವನು ಪರಮಾತ್ಮ.

ಈ ಪ್ರಕಾರವಾದ ಲಕ್ಷಣಗಳಿಂದ ಕೂಡಿದ ಪರಮಾತ್ಮನನ್ನು ಅಂತ್ಯಕಾಲದಲ್ಲಿ ಮನುಜನು ಏಕಾಗ್ರಚಿತ್ತನಾಗಿ, ಭಕ್ತಿ ಭಾವದಿಂದ ಸ್ಮರಿಸಬೇಕು. ಇಲ್ಲಿ ಅಂತ್ಯಕಾಲಕ್ಕೆ ಪ್ರಯಾಣ ಸಮಯವೆಂದು ಹೆಸರಿಟ್ಟರು. ಅಂದರೆ ಆಗ ಸಂಭವಿಸುವುದೂ ಒಂದು ರೀತಿಯ ಪ್ರಯಾಣವೇ, ಆದರೆ ಅದು ದೀರ್ಘ ಪ್ರಯಾಣ. ಈ ರೀತಿ ನಿರ್ಧರಿಸಿ ಹೇಗೆ ಪ್ರಯಾಣಕ್ಕೆ ಮೊದಲು ವಸ್ತುಗಳನ್ನು ಶೇಖರಿಸಿಕೊಂಡು ದಾರಿ ಭತ್ಯವನ್ನು ಜಾಗ್ರತೆಯಾಗಿ ತೆಗೆದುಕೊಂಡು ಹೋಗುವರೋ ಹಾಗೆ ಪರಲೋಕ ಪ್ರಯಾಣಕ್ಕೆ ಬೇಕಾದ ಪುಣ್ಯಸಂಪತ್ತನ್ನು ಮೊದಲೇ ಸಂಪಾದಿಸಿಟ್ಟುಕೊಳ್ಳಬೇಕು.

ಅಂತ್ಯಕಾಲದಲ್ಲಿ ಯಾವ ಪ್ರಕಾರ ಪರಮಾತ್ಮನನ್ನು ಧ್ಯಾನಿಸಬೇಕೆನ್ನುವುದನ್ನು ಇಲ್ಲಿ ಹೇಳಲಾಗಿದೆ ೧) ಭಕ್ತಿಯಿಂದ ಕೂಡಿರಬೇಕು. ೨) ಯೋಗ ಬಲದಿಂದ, ಪ್ರಾಣವಾಯು ಇಲ್ಲವೆ ದೃಷ್ಟಿಯನ್ನು ಭ್ರೂಮಧ್ಯದಲ್ಲಿ ನಿಲ್ಲಿಸಿ ನಿಶ್ಚಲ ಮನಸ್ಸಿನಿಂದ ಮೇಲೆ ತಿಳಿಸಲ್ಪಟ್ಟ ಲಕ್ಷ್ಯದಿಂದ ಕೂಡಿ ಪರಮಾತ್ಮನನ್ನು ಧ್ಯಾನಿಸಬೇಕು. ಇಲ್ಲಿ ಭಕ್ತಿ ಹಾಗು ಯೋಗ ಎರಡೂ ತಿಳಿಸಲ್ಪಟ್ಟಿವೆ. ಎರಡೂ ಧ್ಯಾನಯೋಗಕ್ಕೆ ಅತ್ಯವಸರಗಳೆಂದು ಸ್ಪಷ್ಟವಾಗುತ್ತಿದೆ. ಅಹಂಕಾರವನ್ನು ಹತಗೊಳಿಸಿ, ಭಗಮಂತನ ಅನುಗ್ರಹ ಸಂಪಾದಿಸಲು ಭಕ್ತಿಭಾವ ಬಹಳ ಅವಶ್ಯಕ. ಹಾಗೆಯೇ ಚಿತ್ತದ ಏಕಾಗ್ರತೆಗೆ ಇಂದ್ರಿಯ ಮನೋ ನಿಗ್ರಹಣ ಹಾಗೂ

ಯೋಗವೂ ಕೂಡ ಅವಶ್ಯಕ. ಆದ್ದರಿಂದಲೇ 'ಭಕ್ತ್ಯಾ' 'ಯೋಗಬಲೇನ' ಎನ್ನುವ ಪದಗಳ ದ್ವಾರ ಭಕ್ತಿಯನ್ನು, ಹಾಗು ಯೋಗವನ್ನು ಬೋಧಿಸಲಾಯಿತು. 'ಅನುಸ್ಮರನ್' ಎಂದು ಹೇಳಿರುವುದರಿಂದ ಭಗವಂತನನ್ನು ಎಡೆಬಿಡದೆ ಮನನ ಮಾಡುತ್ತಿರಬೇಕೆನ್ನುವ ಅರ್ಥ ಬರುತ್ತದೆ. **'ಅಚಲೇನ ಮನಸಾ'** ಎಂದು ಹೇಳಿರುವುದರಿಂದ ಮನಸ್ಸು ಬಹಳ ನಿಶ್ಚಲವಾಗಿರಬೇಕೆಂದೂ ಚಪಲಚಿತ್ತನು ಪರಮಾತ್ಮನನ್ನು ಗ್ರಹಿಸಲು ಸಾಧ್ಯವಿಲ್ಲವೆಂದೂ ನಿರೂಪಿಸಲಾಗಿದೆ.

ಈ ಪ್ರಕಾರವಾದ ಭಗವದ್ಧ್ಯಾನವನ್ನು ಅಂತ್ಯಕಾಲದಲ್ಲಿ ಮಾಡಬೇಕೆಂದು ಬೋಧಿಸಲ್ಪಟ್ಟಿದ್ದರೂ ಅಂತ್ಯದಲ್ಲಿ ಅಂತಹ ಉತ್ತಮ ಸಂಸ್ಕಾರ ಉಂಟಾಗಲು ಜೀವಿತ ಕಾಲವೆಲ್ಲವೂ ಆ ಅಭ್ಯಾಸವನ್ನು ಮಾಡಬೇಕೆನ್ನುವ ಭಾವ. ಇಲ್ಲದಿದ್ದರೆ ಇಲ್ಲಿ ತಿಳಿಸಲ್ಪಟ್ಟ 'ಯೋಗಬಲ' (ಯೋಗಬಲೇನ) ಮರಣ ಕಾಲದಲ್ಲಿ ಅಕಸ್ಮಾತ್ತಾಗಿ ಹೇಗೆ ಉಂಟಾಗುವುದು? ಆದ್ದರಿಂದ ಜೀವನದಲ್ಲಿ ಸರ್ವಕಾಲ, ಸರ್ವಾವಸ್ಥೆಗಳಲ್ಲಿ ಆ ಪರಾತ್ಪರನನ್ನು ನಿಶ್ಚಲ ಮನಸ್ಸಿನಿಂದ ಭಕ್ತಿ ಭಾವದಿಂದ ಎಡೆಬಿಡದೆ ಸ್ಮರಿಸುತ್ತಾ ಇದ್ದು ಅಂತ್ಯಕಾಲದಲ್ಲಿಯೂ ಆ ಪ್ರಕಾರವಾಗಿಯೇ ಮಾಡಬೇಕು. ಹಾಗೆ ಮಾಡುವುದರ ಫಲ ಸಾಕ್ಷಾತ್ ಮೋಕ್ಷವೇ. ಭಗವದೈಕ್ಯವೇ **(ಪುರುಷಮುಪೈತಿ ದಿವ್ಯಂ)**, ಆಹಾ! ಎಂತಹ ಅಪೂರ್ವ ಫಲ! ಚಿಕ್ಕ ಚಿಕ್ಕ ಪ್ರಾಪಂಚಿಕ ಫಲಗಳಿಗಾಗಿ ರಾತ್ರಿ, ಹಗಲು ಶ್ರಮಿಸುವವರು ಭಗವಂತನ ಈ ವಾಕ್ಯಗಳನ್ನು ಕೇಳಿ ನಿರತಿಶಯಾನಂದ ರೂಪವಾದ ಸರ್ವೋತ್ತಮ ಪರಮಾತ್ಮ ಪದವಿಗಾಗಿ ಯತ್ನಿಸುವುದು ಶ್ರೇಯಸ್ಕರ.

ಪ್ರ : ಪರಮಾತ್ಮ ಎಂತಹವನು?

ಉ : ೧) ಸರ್ವಜ್ಞನು ೨) ಅನಾದಿ ಸ್ವರೂಪನು ೩) ಜಗನ್ನಿಯಾಮಕನು ೪) ಅಣುವಿಗಿಂತ ಸೂಕ್ಷ್ಮ ರೂಪಿ ೫) ಸರ್ವಾಧಾರನು ೬) ಅಚಿಂತ್ಯ ರೂಪಿ ೭) ಆದಿತ್ಯವರ್ಣನು (ಸ್ವಯಂ ಪ್ರಕಾಶರೂಪಿ) ೮) ತಮಸ್ಸಿಗೆ (ಪ್ರಕೃತಿಗೆ) ಅತೀತನಾಗಿರುವವನು.

ಪ್ರ : ಅಂತ್ಯಕಾಲದಲ್ಲಿ ಯಾವ ಪ್ರಕಾರವಾಗಿ ಆತನನ್ನು ಧ್ಯಾನಿಸಬೇಕು?

ಉ : ೧) ನಿಶ್ಚಲ ಮನಸ್ಸಿನಿಂದ ೨) ಭಕ್ತಿ ಭಾವದಿಂದ ೩) ಯೋಗಬಲದಿಂದ ಪ್ರಾಣವಾಯು, ಇಲ್ಲವೆ ದೃಷ್ಟಿಯನ್ನು ಭ್ರೂಮಧ್ಯದಲ್ಲಿ ನಿಲ್ಲಿಸಿ, ಮೇಲಿನ ಲಕ್ಷಣಗಳುಳ್ಳ ಪರಮಾತ್ಮನನ್ನು ಬಿಡದೆ ಧ್ಯಾನಿಸಬೇಕು.

ಪ್ರ : ಹಾಗೆ ಮಾಡುವುದರಿಂದ ಉಂಟಾಗುವ ಫಲವೇನು?

ಉ : ಸಾಕ್ಷಾತ್ ಪರಮಾತ್ಮ ಪದವಿಯೇ ಆತನಿಗೆ ಲಭಿಸುವುದು.

ಪ್ರ : ಆದ್ದರಿಂದ ಭಗವತ್ಪ್ರಾಪ್ತಿಗೆ ಉಪಾಯವೇನು?

ಉ : ನಿಶ್ಚಲ ಚಿತ್ತದಿಂದ, ನಿರ್ಮಲ ಭಕ್ತಿಯಿಂದ ದೈವವನ್ನು ಸದಾ ಧ್ಯಾನಿಸುವುದೇ

**ಅ॥** ಆ ಪರಮಾತ್ಮ ಪದವು (ಬ್ರಹ್ಮಪದವು) ಎಂತಹ ಮಹಿಮೆಯನ್ನು ಹೊಂದಿದೆ ಎನ್ನುವುದನ್ನು ತಿಳಿಸಲಾಗಿದೆ-

**೧೧. ಯದಕ್ಷರಂ ವೇದವಿದೋ ವದಂತಿ**
**ವಿಶಂತಿ ಯದ್ಯತಯೋ ವೀತರಾಗಾಃ**
**ಯದಿಚ್ಛಂತೋ ಬ್ರಹ್ಮಚರ್ಯಂ ಚರಂತಿ**
**ತತ್ತೇ ಪದಂ ಸಂಗ್ರಹೇಣ ಪ್ರವಕ್ಷ್ಯೇ**

**ಅರ್ಥ:** ವೇದವಿದಃ=ವೇದಾರ್ಥವನ್ನು ತಿಳಿದವರು; ಯತ್=ಯಾವುದನ್ನು; ಅಕ್ಷರಂ=ನಾಶವಿಲ್ಲದ್ದೆಂದು; ವದಂತಿ=ಹೇಳುತ್ತಿದ್ದಾರೋ; ವೀತರಾಗಾಃ=ರಾಗ ರಹಿತರಾಗಿ (ನಶಿಸಿದ ಕೋರಿಕೆಗಳುಳ್ಳ ಇಲ್ಲವೇ ಕಾಮ ಕ್ರೋಧಾದಿಗಳನ್ನು ಜಯಿಸಿದ); ಯತಯಃ=ಯತ್ನಶೀಲರು (ಜಿತೇಂದ್ರಿಯರು); ಯತ್= ಯಾವುದನ್ನು; ವಿಶಂತಿ=ಪ್ರವೇಶಿಸುತ್ತಾರೋ; ಯತ್=ಯಾವುದನ್ನು; ಇಚ್ಛಂತಃ=ಕೋರುವವರಾಗಿ; ಬ್ರಹ್ಮಚರ್ಯಂ=ಬ್ರಹ್ಮಚರ್ಯವನ್ನು; ಚರಂತಿ=ಅನುಷ್ಠಾನ ಮಾಡುತ್ತಾರೋ; ತತ್ಪದಂ=ಆ ಸ್ಥಾನವನ್ನು; ತೇ= ನಿನಗೆ; ಸಂಗ್ರಹೇಣ=ಸಂಕ್ಷೇಪವಾಗಿ; ಪ್ರವಕ್ಷ್ಯೇ=ಹೇಳುವೆನು.

**ತಾ॥** ವೇದವೇತ್ತರು ಯಾವುದನ್ನು ನಾಶರಹಿತವಾದುದೆಂದು ಹೇಳು ತ್ತಿದ್ದಾರೋ, ರಾಗರಹಿತರಾದ (ಕೋರಿಕೆಗಳು ನಶಿಸಿದ) ಯತ್ನಶೀಲರು (ಜಿತೇಂದ್ರಿಯರು) ಯಾವುದರಲ್ಲಿ ಪ್ರವೇಶಿಸುತ್ತಾರೋ, ಯಾವುದನ್ನು ಅಭಿಲಾಷಿಸಿ ಜನರು ಬ್ರಹ್ಮಚರ್ಯವನ್ನು ಅನುಷ್ಠಾನ ಮಾಡುತ್ತಿದ್ದಾರೋ ಅಂತಹ (ಪರಮಾತ್ಮ) ಪದವಿಯನ್ನು ಕುರಿತು ಸಂಕ್ಷೇಪವಾಗಿ ಹೇಳುವೆನು.

**ವ್ಯಾಖ್ಯೆ:** ಪರಮಾತ್ಮ ಪದವಿಯನ್ನು (ಮೋಕ್ಷ ಸ್ಥಾನವನ್ನು) ಕುರಿತು ಸಂಗ್ರಹವಾಗಿ ಹೇಳುವೆನೆಂದು ಶ್ರೀಕೃಷ್ಣಮೂರ್ತಿ ಹೇಳಿದನು. ಅದು ಯುದ್ಧ ಸಮಯವಾದುದರಿಂದ ವಿಶೇಷವಾಗಿ ಹೇಳಲು ಅವಕಾಶವಿಲ್ಲವಾದ ಕಾರಣ ಬ್ರಹ್ಮಪದವಿಯನ್ನು ಎಷ್ಟು ವರ್ಣಿಸಿದರೂ ಅಂತ್ಯವಿರುವುದಿಲ್ಲವಾದ್ದರಿಂದ, ಸಂಕ್ಷೇಪವಾಗಿ ಹೇಳಬೇಕೆಂದು ಭಗವಂತನು ನಿಶ್ಚಯಿಸಿದನು. ಮುಮುಕ್ಷು ಗಳಿಗೆ ಇದು ಅತಿ ಮುಖ್ಯವಾದ ಬೋಧೆಯಾಗಿದೆ. ಏಕೆಂದರೆ, ವೇದಗಳ ಸಾರವೆಲ್ಲವನ್ನು ಹಿಂಡಿ ಸಂಗ್ರಹರೂಪವಾಗಿ ಸಾಕ್ಷಾತ್ ಭಗವಂತನೇ ಅದನ್ನು ಇಲ್ಲಿ ಹೇಳುತ್ತಿದ್ದಾನೆ. ಪ್ರಣವೋಪಾಸನೆ ಬೋಧಿಸುತ್ತಿದ್ದಾನೆ. ಆ ಬ್ರಹ್ಮಪದವಿ ಎಂತಹದೆಂದರೆ- ೧) ವೇದವೇತ್ತರು ಅದನ್ನು ನಾಶರಹಿತವಾದುದೆಂದು (ಅಕ್ಷರವೆಂದು) ಹೇಳುತ್ತಿದ್ದಾರೆ. ಪ್ರಪಂಚದಲ್ಲಿರುವ ಸಮಸ್ತ ಪದಾರ್ಥಗಳು ನಾಶವಾಗುವಂತಹವು, ಕ್ಷಣಿಕಗಳು, ಕ್ಷರಗಳು. ಬ್ರಹ್ಮ(ಆತ್ಮ)ವೊಂದೇ ನಾಶವಿಲ್ಲದ್ದು, ಅಕ್ಷರವಾದದ್ದು. ಪ್ರತಿಯೊಬ್ಬರೂ ಅವರವರ ಜೀವನದಲ್ಲಿ ಮುಖ್ಯವಾಗಿ ತಿಳಿದುಕೊಳ್ಳ ಬೇಕಾದುದ್ದು ಈ ಪರಬ್ರಹ್ಮವನ್ನೇ. ಬೇರೆಯವುಗಳನ್ನು ಎಷ್ಟು ತಿಳಿದುಕೊಂಡರೂ ಶಾಶ್ವತಸುಖವನ್ನು ಅವು ಕೊಡುವುದಿಲ್ಲ. ಆದ್ದರಿಂದಲೇ ಬಾಲ್ಯದಲ್ಲಿ ಹುಡುಗರಿಗೆ ಅಕ್ಷರಾಭ್ಯಾಸವೆನ್ನುವ ನಿಯಮವಿರುತ್ತದೆ. ಅಕ್ಷರವಾದ ಪರಮಾತ್ಮನನ್ನು ಬೋಧಿಸುವುದೇ ನಿಜವಾದ ಅಕ್ಷರಾಭ್ಯಾಸ. ಅಕ್ಷರಗಳನ್ನು ಕಲಿಯಬೇಕಾದರೆ ಪರಬ್ರಹ್ಮವಾಚಕವಾದ 'ಓಂ' ಕಾರವನ್ನು ಮೊಟ್ಟಮೊದಲಿಗೆ ಬರೆಸಲು ಇದೇ ಕಾರಣ. ಆದ್ದರಿಂದ ಇತರೆ ವಿದ್ಯೆಗಳನ್ನು ಎಷ್ಟು ತಿಳಿದರೂ ಪರ ವಿದ್ಯೆಯಾದ ಈ ಅಕ್ಷರ (ಬ್ರಹ್ಮ) ವಿದ್ಯೆಯನ್ನು ಮಾತ್ರ ತ್ಯಜಿಸಬಾರದು. ಮತ್ತೆ ವೇದಗಳನ್ನು ತಿಳಿಯುವುದೆಂದರೆ ವೇದಾರ್ಥವನ್ನು ಅನುಭೂತಿಗೊಳಿಸಿಕೊಳ್ಳುವುದು, ಆಚರಣೆಯಲ್ಲಿಡುವುದು ಎಂದರ್ಥ. 'ವಾಚಾ' ಜ್ಞಾನವೆಂದಲ್ಲ. ಆದ್ದರಿಂದಲೇ ವೇದವೇತ್ತರು ಪರಮಾತ್ಮನನ್ನು ಚೆನ್ನಾಗಿ ಅನುಭೂತಿಗೊಳಿಸಿಕೊಂಡು, ಸಾಕ್ಷಾತ್ಕರಿಸಿಕೊಂಡು ಆತನನ್ನು 'ಅಕ್ಷರ'ನನ್ನಾಗಿ ಕಂಡುಕೊಂಡರು **(ಅಕ್ಷರಂ ವೇದವಿದೋ ವದಂತಿ)**.

೨) ಅಂತಹ ಪರಮಾತ್ಮ ಪದವಿಯಲ್ಲಿ ಯಾರು ಪ್ರವೇಶಿಸಬಲ್ಲರು? ಎನ್ನುವ ಪ್ರಶ್ನೆಗೆ ಕೂಡ ಇಲ್ಲಿ ಉತ್ತರವನ್ನು ಕೊಡಲಾಗಿದೆ. ರಾಗದ್ವೇಷರಹಿತರೂ ಕಾಮಕ್ರೋಧಾದಿ ದುರ್ವಾಸನೆ ವರ್ಜಿತರು (ವೀತರಾಗಿಗಳು) ಮಾತ್ರವೇ ಮೋಕ್ಷ ಸೌಧವನ್ನು ಪ್ರವೇಶಿಸುವವರಾಗಲಿ, ಬೇರೆಯವರಲ್ಲ. ಮೋಕ್ಷ ಧಾಮ ಪ್ರವೇಶಕ್ಕೆ 'ರಾಗ ವಿವರ್ಜತೆ' ಒಂದು ಟಿಕೆಟ್ಟಿನಂತಹದು. ಟಿಕೆಟ್ ಇಲ್ಲದವರು, ಅನುಮತಿ ಪತ್ರ ಹೊಂದದೇ ಇರುವವರು ದೊಡ್ಡ ದೊಡ್ಡ

ರಾಜಭವನಗಳ ಒಳಗೆ ಹೋಗಲು ಹೇಗೆ ಸಾಧ್ಯವಿಲ್ಲವೋ ಹಾಗೆ ಕಾಮ ಇನ್ನೂ ನಶಿಸದೆ ಇರುವವರು, ಇನ್ನೂ ಕೋರಿಕೆಗಳನ್ನು ಹೊಂದಿರುವವರು, ರಾಗಗಳು ಇನ್ನೂ ಕ್ಷಯಿಸದೇ ಇರುವವರು, ಅಕ್ಷರ ಬ್ರಹ್ಮಪದದಲ್ಲಿ, ಅಂದರೆ ಮೋಕ್ಷ ಸೌಧದಲ್ಲಿ ಪ್ರವೇಶಿಸಲಾರರು. ಅವು ನಶಿಸಿದವರೇ ನಿರಾತಂಕವಾಗಿ, ನಿರ್ಭಯವಾಗಿ ಪ್ರವೇಶಿಸುವರು. ಆದ್ದರಿಂದ 'ನನಗಿನ್ನೂ ಮೋಕ್ಷವುಂಟಾಗ ಲಿಲ್ಲವಲ್ಲ' ಎಂದು ಯಾರೂ ವ್ಯಥೆ ಬೀಳದೆ ಭಗವಂತನು ತಿಳಿಸಿದ ಈ ರಾಗರಹಿತ್ವವನ್ನು ಅಭ್ಯಸಿಸಿದರೆ ಸಾಕು.

'ಯತಯಃ'- (ಪ್ರಯತ್ನಶೀಲರು) ಎಂದು ಹೇಳಿರುವುದರಿಂದ ದೈವ ವಿಷಯದಲ್ಲಿ ಚೆನ್ನಾಗಿ ಪ್ರಯತ್ನಿಸುವವರು, ಹೆಚ್ಚು ಕಷ್ಟಗಳನ್ನು ಎದುರಿಸಿ ತೀವ್ರವಾದ ಸಾಧನೆಗಳನ್ನು ನಡೆಸುವವರು, ಇಂದ್ರಿಯ ನಿಗ್ರಹಪರರು ಮಾತ್ರವೇ ಮೋಕ್ಷಮಾರ್ಗದಲ್ಲಿ ಸಾಫಲ್ಯತೆಗಳಿಸುವವರೇ ಆಗಲಿ ಬೇರೆ ತರಹ ಸೋಮಾರಿಗಳಲ್ಲವೆಂದು ಸ್ಪಷ್ಟವಾಗುತ್ತಿದೆ. ಒಂದು ಚಿಕ್ಕ ಪ್ರಾಪಂಚಿಕ ವಸ್ತುವನ್ನು ಸಂಪಾದಿಸಲು ಎಷ್ಟೋ ಯತ್ನ ಆವಶ್ಯಕವಿರಬೇಕಾದರೆ, ಅನೇಕ ಜನ್ಮಗಳಿಂದ ಬಂದಿರುವ ದುಷ್ಟವಾಸನೆಗಳನ್ನು, ದುಃಸಂಸ್ಕಾರಗಳನ್ನು ಹೋಗಲಾಡಿಸಿಕೊಂಡು ಪರಬ್ರಹ್ಮವೆನ್ನುವ ಮಹೋನ್ನತ ಪದವಿಯನ್ನು ಹೊಂದಲು ಇನ್ನೂ ಹೆಚ್ಚಿನ ಪ್ರಯತ್ನವು ಅವಶ್ಯಕವಲ್ಲವೇ?

೩) ಇನ್ನು ಮೂರನೆಯ ವಿಷಯ ಬ್ರಹ್ಮಚರ್ಯ, 'ಯಾವ ಪರಮಾತ್ಮ ಪದವಿಯನ್ನು ಅಭಿಲಾಷಿಸುತ್ತಾ ಜನರು ಬ್ರಹ್ಮಚರ್ಯವನ್ನು ಅನುಷ್ಠಾನ ಮಾಡುತ್ತಾರೋ!' ಎಂದು ಇಲ್ಲಿ ಹೇಳಲ್ಪಟ್ಟಿರುವುದರಿಂದ ದೈವಪ್ರಾಪ್ತಿಗೆ, ಮೋಕ್ಷಕ್ಕೆ ಬ್ರಹ್ಮಚರ್ಯವು ಅತ್ಯಾವಶ್ಯಕವೆಂದು ಅರ್ಥವಾಗುತ್ತಿದೆ. ಮೋಕ್ಷಕ್ಕಾಗಿ ಯತ್ನಿಸುವವರಿಗೆ ಈ ಬ್ರಹ್ಮಚರ್ಯವು ಬಹಳ ಸಹಾಯಕ ವಾಗುವುದೆಂದು ಈ ಭಗವದ್ವಾಕ್ಯದಿಂದ ಸ್ಪಷ್ಟವಾಗುತ್ತಿದೆ. ಆಧ್ಯಾತ್ಮಕ್ಷೇತ್ರದಲ್ಲಿ ಬ್ರಹ್ಮಚರ್ಯಕ್ಕೆ ಎಂತಹ ಪ್ರಾಮುಖ್ಯತೆಯನ್ನು ಭಗವಂತನು ಕೊಟ್ಟಿರುವನೋ ವಿಶದವಾಗುತ್ತಿದೆ. ಕಾಯಾ, ವಾಚಾ, ಮನಸಾ ವಿಷಯ ಸಂಪರ್ಕವಿಲ್ಲದೆ, ಬ್ರಹ್ಮದಲ್ಲಿ ಚಿತ್ತವನ್ನು ಲಗ್ನಗೊಳಿಸುವುದು ಬ್ರಹ್ಮಚರ್ಯವೆಂದು ತಿಳಿಯುವುದು.

'ಪ್ರವಕ್ಷ್ಯೇ'- (ಚೆನ್ನಾಗಿ ಹೇಳುವುದು)- 'ವಕ್ಷ್ಯೇ' ಎನ್ನದೆ 'ಪ್ರವಕ್ಷ್ಯೇ' ಎಂದು ಹೇಳಿರುವುದರಿಂದ ಭಗವಂತನು ಹೇಳುವ ಬ್ರಹ್ಮೋಪಾಸನೆ ವಿಷಯ ಬಹಳ ಮುಖ್ಯವಾದುದು ಹಾಗು ಅದರೆಡೆ ಮುಮುಕ್ಷುಗಳಿಗೆ ಬಹಳ ವಿಶ್ವಾಸವಿರಬೇಕೆನ್ನುವುದು ಬಟ್ಟ ಬಯಲಾಗುತ್ತಿದೆ. ಈ ಶ್ಲೋಕವನ್ನು ಹೋಲುವ ಶ್ಲೋಕವು ಕಠೋಪನಿಷತ್ತಿನಲ್ಲಿದೆ.*

ಪ್ರ : ಪರಮಾತ್ಮಪದ (ಮೋಕ್ಷ ಪದ) ಎಂತಹದು?

ಉ : ನಾಶರಹಿತವಾದದ್ದು (ಅಕ್ಷರ)

ಪ್ರ : ಈ ಸತ್ಯವನ್ನು ಯಾರು ತಿಳಿದುಕೊಳ್ಳುತ್ತಿದ್ದಾರೆ?

ಉ : ವೇದವೇತ್ತರಾದ ಮಹನೀಯರು.

ಪ್ರ : ಅಂತಹ ಪರಮಾತ್ಮಪದವಿಯನ್ನು ಯಾರು ಪ್ರವೇಶಿಸುತ್ತಾರೆ?

ಉ : ಕೋರಿಕೆಗಳು ಇಲದೆ (ವೀತರಾಗಿಗಳು) ಬ್ರಹ್ಮಚರ್ಯವನ್ನು ಪಾಲಿಸುವರು.

ಪ್ರ : ಇದರಿಂದ ಮೋಕ್ಷಪ್ರಾಪ್ತಿಗೆ ಉಪಾಯಗಳು ಯಾವುವು ಎಂದು ಸ್ಪಷ್ಟವಾಗುತ್ತಿದೆ?

ಉ : ೧) ಕೋರಿಕೆಗಳು ಇಲ್ಲದೆ ಇರುವುದು (ರಾಗಾದಿಗಳು ತೊಲಗುವುದು)
೨) ಬ್ರಹ್ಮಚರ್ಯವನ್ನು ಪಾಲಿಸುವವರು.

**ಅ||** ಪ್ರಣವೋಪಾಸನೆ ರೂಪವಾದ ಧ್ಯಾನಪದ್ಧತಿಯನ್ನು ಎರಡು ಶ್ಲೋಕಗಳ ದ್ವಾರ ವಿವರಿಸಲಾಗುತ್ತಿದೆ-

**೧೨. ಸರ್ವದ್ವಾರಾಣಿ ಸಂಯಮ್ಯ ಮನೋ ಹೃದಿ ನಿರುಧ್ಯಚ**
**ಮೂರ್ಧ್ನ್ಯಾಧಾಯಾತ್ಮನಃ ಪ್ರಾಣಮಾಸ್ಥಿತೋ ಯೋಗಧಾರಣಾಮ್**

**೧೩. ಓಮಿತ್ಯೇಕಾಕ್ಷರಂ ಬ್ರಹ್ಮ ವ್ಯಾಹರನ್ ಮಾಮನುಸ್ಮರನ್**
**ಯಃ ಪ್ರಯಾತಿ ತ್ಯಜಂದೇಹಂ ಸ ಯಾತಿ ಪರಮಾಂ ಗತಿಂ**

**ಅರ್ಥ:** ಯಃ=ಯಾರು; ಸರ್ವದ್ವಾರಾಣಿ=ಇಂದ್ರಿಯ ದ್ವಾರಗಳೆಲ್ಲವನ್ನೂ; ಸಂಯಮ್ಯ=ಚೆನ್ನಾಗಿ ನಿಗ್ರಹಿಸಿ; ಮನಃ=ಮನಸ್ಸನ್ನು; ಹೃದಿ=ಹೃದಯದಲ್ಲಿ (ಆತ್ಮದಲ್ಲಿ); ನಿರುಧ್ಯಚ=ಸ್ಥಿರವಾಗಿ ಸ್ಥಾಪಿಸಿ (ನಿಲ್ಲಿಸಿ); ಮೂರ್ಧ್ನಿ=ಶಿರಸ್ಸಿನಲ್ಲಿ (ಬ್ರಹ್ಮರಂಧ್ರದಲ್ಲಿ); ಪ್ರಾಣಂ=ಪ್ರಾಣವಾಯುವನ್ನು; ಆಧಾಯ=ಇರಿಸಿ; ಆತ್ಮನಃ ಯೋಗಧಾರಣಾಂ=ಆತ್ಮನನ್ನು ಕುರಿತ ಯೋಗಧಾರಣೆಯನ್ನು (ಏಕಾಗ್ರಚಿಂತನೆಯನ್ನು); ಆಸ್ಥಿತಃ=ಹೊಂದಿದಂತವನಾಗಿ (ದೃಢವಾಗಿ ಆಶ್ರಯಿಸಿದವನಾಗಿ); ಬ್ರಹ್ಮ=ಪರಬ್ರಹ್ಮಕ್ಕೆ ವಾಚಕವಾದ; ಓಮ್ ಇತಿ='ಓಮ್' ಎನ್ನುವ; ಏಕಾಕ್ಷರಂ=ಒಂದು ಅಕ್ಷರವನ್ನು; ವ್ಯಾಹರನ್= ಉಚ್ಚರಿಸುತ್ತ; ಮಾಂ=ನನ್ನನ್ನು; ಅನುಸ್ಮರನ್=ಎಡೆಬಿಡದೆ ಚಿಂತಿಸುತ್ತ; ದೇಹಂ=ಶರೀರವನ್ನು; ತ್ಯಜನ್=ಬಿಡುತ್ತಿರುವವನಾಗಿ; ಪ್ರಯಾತಿ=ಹೋಗು ತ್ತಿದ್ದಾನೋ; ಸಃ=ಆತನು; ಪರಮಾಂ ಗತಿಂ=ಸರ್ವೋತ್ತಮವಾದ ಸ್ಥಾನವನ್ನು (ಮೋಕ್ಷವನ್ನು); ಯಾತಿ=ಹೊಂದುತ್ತಿದ್ದಾನೆ.

**ತಾ||** ಯಾವನು ಇಂದ್ರಿಯ ದ್ವಾರಗಳನ್ನೆಲ್ಲಾ ಚೆನ್ನಾಗಿ ನಿಗ್ರಹಿಸಿ ಮನಸ್ಸನ್ನು ಹೃದಯದಲ್ಲಿ (ಆತ್ಮದಲ್ಲಿ) ಸ್ಥಾಪಿಸಿ, ಶಿರಸ್ಸಿನಲ್ಲಿ (ಬ್ರಹ್ಮರಂಧ್ರದಲ್ಲಿ) ಪ್ರಾಣವಾಯುವಿನಿಂದ ಆತ್ಮವನ್ನು ಕುರಿತ ಏಕಾಗ್ರಚಿಂತನೆ (ಯೋಗಧಾರಣೆ) ಯುಳ್ಳವನಾಗಿ ಪರಬ್ರಹ್ಮಕ್ಕೆ ವಾಚಕವಾದ 'ಓಂ' ಎನ್ನುವ ಒಂದು ಅಕ್ಷರವನ್ನು ಉಚ್ಚರಿಸುತ್ತ ನನ್ನನ್ನು ಎಡೆಬಿಡದೆ ಚಿಂತಿಸುತ್ತಾ ಶರೀರವನ್ನು ಬಿಡುವನೋ ಆತನು ಸರ್ವೋತ್ತಮಸ್ಥಾನವನ್ನು (ಮೋಕ್ಷವನ್ನು) ಹೊಂದುತ್ತಾನೆ.

**ವ್ಯಾಖ್ಯೆ:** ಪರಮಗತಿಯಾದ ಮೋಕ್ಷವನ್ನು ಹೊಂದುವ ವಿಧಾನವನ್ನು ಇಲ್ಲಿ ಹೇಳಲಾಗಿದೆ. ಈ ವಿಧಾನವನ್ನು ಅಂತ್ಯಕಾಲದಲ್ಲಿ ಮಾತ್ರವೇ ಅನುಸರಿಸ ಬೇಕೆಂದು ಅರ್ಥವಲ್ಲ. ಜೀವಿತ ಕಾಲವೆಲ್ಲಾ ಆ ಪ್ರಕಾರವಾಗಿ ಮಾಡುತ್ತಾ ಅಂತ್ಯಕಾಲದಲ್ಲಿಯೂ ಕೂಡ ಅಂತಹ ಸ್ಥಿತಿಯಲ್ಲಿ ಇರಬೇಕೆಂದು ಭಾವ. ಇಲ್ಲಿ ನಾಲ್ಕು ಸಾಧನೆಗಳು ಹೇಳಲ್ಪಟ್ಟಿವೆ ೧) ಇಂದ್ರಿಯ ದ್ವಾರಗಳನ್ನು ನಿಗ್ರಹಿಸುವುದು ೨) ಮನಸ್ಸನ್ನು ಹೃದಯದಲ್ಲಿ ಸ್ಥಾಪಿಸುವುದು ೩) ಪ್ರಾಣ ವಾಯುವನ್ನು ಶಿರಸ್ಸಿನಲ್ಲಿರಿಸಿ ಆತ್ಮಚಿಂತನಾರೂಪವಾದ ಯೋಗ ಧಾರಣೆಯನ್ನವಲಂಬಿಸುವುದು. ೪) ಓಂಕಾರವನ್ನು ಉಚ್ಚರಿಸುತ್ತ ಬ್ರಹ್ಮ

---

* ಸರ್ವೇವೇದಾ ಯತ್ಪದಮಾಮನಂತಿ ತಪಾಂಸಿ ಸರ್ವಾಣಿ ಚ ಯದ್ವದಂತಿ
ಯದಿಚ್ಛಂತೋ ಬ್ರಹ್ಮಚರ್ಯಂ ಚರಂತಿ ತತ್ತೇಪದಂ ಸಂಗ್ರಹೇಣ ಬ್ರವೀಮ್ಯೋಮಿತ್ಯೇತತ್ (ಕಠ. ೧-೨-೧೫)

ಭಾವವನ್ನು ಹೊಂದುವುದು. ಅವುಗಳನ್ನು ಕುರಿತು ಸಂಕ್ಷೇಪವಾಗಿ ವಿಚಾರಿಸೋಣ:

೧) ಇಂದ್ರಿಯ ದ್ವಾರಗಳೆಲ್ಲವನ್ನು ಸಂಯಮಗೊಳಿಸುವುದು ಧ್ಯಾನಕ್ಕೆ ಅತ್ಯಾವಶ್ಯಕ. ಅವುಗಳನ್ನು ತೆರೆದಿಟ್ಟರೆ ಮನಸ್ಸು ಆ ಇಂದ್ರಿಯಗಳ ಮೂಲಕ ಬಹಿರ್ಮುಖವಾಗಿ ಹೋಗುವುದರಿಂದ ಧ್ಯೇಯವಾದ ಆತ್ಮದಲ್ಲಿ ಏಕಾಗ್ರತೆ ಕುದುರುವುದಿಲ್ಲ. ಗಾಳಿ ಹೆಚ್ಚಿಗೆ ಬೀಸುತ್ತಿರುವಾಗ ಕಿಟಕಿಗಳನ್ನು ತೆರೆದಿಟ್ಟಿದ್ದರೆ ಮನೆಯೊಳಗಡೆಯ ಹಣತೆಯ ದೀಪ ಆರಿಹೋಗುವಂತೆ, ಇಂದ್ರಿಯ ದ್ವಾರಗಳನ್ನು ನಿಗ್ರಹಿಸದಿದ್ದರೆ ಜ್ಞಾನಜ್ಯೋತಿ ಆರಿಹೋಗುವುದು. ಆದ್ದರಿಂದ ಇಂದ್ರಿಯಗಳನ್ನು ಅವುಗಳ ವಿಷಯಗಳಾದ ಇಂದ್ರಿಯಾರ್ಥಗಳ ಮೇಲೆ ಹೋಗದೆ ನಿಗ್ರಹಿಸಬೇಕೆಂದು ಇಲ್ಲಿ ಹೇಳಲಾಗಿದೆ. 'ಸರ್ವೇಂದ್ರಿಯಾಣಿ' ಎಂದು ಹೇಳುವುದರಿಂದ ಕೆಲವು ಇಂದ್ರಿಯಗಳನ್ನು ನಿಗ್ರಹಿಸಿದರೆ ಸಾಲದೆಂದೂ ಎಲ್ಲವುಗಳನ್ನು ನಿಗ್ರಹಿಸಬೇಕೆಂದು ಬೋಧಿಸಲಾಗಿದೆ. ಒಂದು ಕಿಟಕಿ ತೆರೆದಿದ್ದರೂ ಸಾಕು ಗಾಳಿಗೆ ದೀಪವು ಆರಿಹೋಗುವುದಲ್ಲವೇ! ಮೋಕ್ಷ ಪ್ರಾಪ್ತಿಗೆ ಬೇಕಾದ ನಾಲ್ಕು ಸಾಧನೆಗಳಲ್ಲಿ ಇಲ್ಲಿ ಇಂದ್ರಿಯ ನಿರೋಧಕ್ಕೆ ಪ್ರಥಮ ಸ್ಥಾನ ಕೊಟ್ಟಿರುವುದರಲ್ಲಿ ಒಂದು ವಿಶೇಷವಿದೆ. ಅದು ಏನೆಂದರೆ- ಅವುಗಳನ್ನು ಹತೋಟಿಯಲ್ಲಿಡದಿದ್ದರೆ ಬೇರೆ ಯಾವ ಸಾಧನೆಗಳೂ ಸಾಧ್ಯವಿಲ್ಲ. ಆದ್ದರಿಂದಲೇ **'ತಸ್ಮಾತ್ತ್ವಮಿಂದ್ರಿಯಾಣ್ಯಾದೌ ನಿಯಮ್ಯ ಭರತರ್ಷಭ'** ಎಂದು ಭಗವಂತನು ಈಗಾಗಲೇ ಹೇಳಿದ್ದಾನೆ. 'ಆದೌ' ಪ್ರಪ್ರಥಮವಾಗಿ ಆ ಕೆಲಸ ಮಾಡಬೇಕೆಂದು ಆದೇಶಿಸಿದನು. ಆದ್ದರಿಂದ ಮೋಕ್ಷಾಪೇಕ್ಷಿಗಳೆಲ್ಲರೂ ತಮ್ಮ ಇಂದ್ರಿಯ ದ್ವಾರಗಳನ್ನು ಮುಚ್ಚಿ (ನಿಗ್ರಹಿಸಿ) ಹೊರಪ್ರಪಂಚದಲ್ಲಿ ಅವುಗಳನ್ನು ಲೀಲಾಜಾಲವಾಗಿ ವಿಹರಿಸಲು ಬಿಡದೆ ಆಮೆ ತನ್ನ ಅವಯವಗಳನ್ನು ಒಳಗೆಳೆದುಕೊಳ್ಳುವಂತೆ ಇಂದ್ರಿಯಗಳನ್ನು ಒಳಮುಖವಾಗಿರಿಸಿಕೊಳ್ಳಬೇಕು.

೨) ನಂತರ ಮನಸ್ಸನ್ನು ಹೃದಯದಲ್ಲಿ ಜೋಡಿಸಬೇಕು. ಹೃದಯವೆಂದರೆ ಪರಮಾತ್ಮನ ಸ್ಥಾನ. ಹೊರಗಡೆಗೆ ಬೇಕಾಬಿಟ್ಟಿ ಮನಸ್ಸನ್ನು ಹೋಗಲು ಬಿಡದೆ ಒಳಗೆಳೆದುಕೊಂಡು ಹೃದಯದಲ್ಲಿ (ಆತ್ಮದಲ್ಲಿ) ಸ್ಥಾಪಿಸಬೇಕು. ಮನಸ್ಸಿನ ಜನ್ಮಸ್ಥಾನ ಹೃದಯ. ಆದ್ದರಿಂದ ಅದನ್ನು ಅಲ್ಲೇ ಲಯಗೊಳಿಸಿಕೊಳ್ಳಬೇಕು. ಇಂದ್ರಿಯಗಳನ್ನು ಮೃತ್ಯುಗಳು (ಮನುಷ್ಯರು) ಯಾವಾಗ ನಿಗ್ರಹಿಸುವರೋ ಆಗ ಅವುಗಳ ನಾಯಕನಾದ ಮನಸ್ಸು ಶಕ್ತಿ ಹೀನವಾಗಿ ಸುಲಭವಾಗಿ ವಶವಾಗುವದು.

೩) ನಂತರ ಪ್ರಾಣವಾಯುವನ್ನು ಶಿರಸ್ಸಿನಲ್ಲಿ (ಬ್ರಹ್ಮರಂಧ್ರದಲ್ಲಿ) ನಿಲ್ಲಿಸಿ 'ಯೋಗಧಾರಣೆ'ಯನ್ನು ಅವಲಂಬಿಸಬೇಕು. ಮನಸ್ಸನ್ನು ಪರಮಾತ್ಮನಲ್ಲಿ ನಿಶ್ಚಲವಾಗಿ ನಿಲ್ಲಿಸಿ ಏಕಾಗ್ರತೆಯಿಂದ ಧ್ಯಾನಿಸುವುದೇ ಯೋಗಧಾರಣೆ.

೪) ಧ್ಯಾನಿಸಲು ಇಲ್ಲಿ ಒಂದು ಒಳ್ಳೆಯ ಮಂತ್ರವನ್ನು ಕೊಡಲಾಗಿದೆ. ಅದು ಪ್ರಣವ (ಓಂಕಾರ). ಅದು ಪರಬ್ರಹ್ಮನಿಗೆ ವಾಚಕ. ವೇದಗಳ ಸಾರ (ಪ್ರಣವಸ್ಸರ್ವವೇದೇಷು). ಮಂತ್ರಗಳಿಗೆಲ್ಲಾ ಒಡೆಯನಿದ್ದಹಾಗೆ. 'ವ್ಯಾಹರನ್' (ಉಚ್ಚರಿಸುತ್ತಾ), ಎಂದು ಹೇಳಿ ಕೂಡಲೇ 'ಮಾಮನುಸ್ಮರನ್' (ನನ್ನನ್ನು ಸದಾ ಚಿಂತನೆ ಮಾಡಬೇಕು) ಎಂದು ಹೇಳಿರುವುದರಿಂದ, ಅಂತಹ ಓಂಕಾರವನ್ನು ಕೇವಲ ಉಚ್ಚರಿಸಿದ ಮಾತ್ರಕ್ಕೆ ಸಾಲದೆಂದೂ ಅದರ ಅರ್ಥವನ್ನು ಚೆನ್ನಾಗಿ ಮನನ ಮಾಡಬೇಕೆಂದು ತಿಳಿಯುತ್ತದೆ. ಏಕೆಂದರೆ ಮಂತ್ರವನ್ನು ಮಾತ್ರ ಉಚ್ಚರಿಸಿ ಮಂತ್ರಾರ್ಥವನ್ನು ಭಾವಿಸದಿದ್ದರೆ ಆ ಮಂತ್ರದಿಂದ ಪೂರ್ಣಫಲವು ಒದಗುವುದಿಲ್ಲ. ಫಿರಂಗಿಯಲ್ಲಿ ಮದ್ದು ಇಟ್ಟು ಗುಂಡಿಲ್ಲದೆ ಹಾರಿಸಿದರೆ ಶಬ್ದ ಬರುವುದೇ ಆಗಲಿ ಲಕ್ಷ್ಯವನ್ನು ಅದು ಭೇದಿಸುವುದಿಲ್ಲ. ಹಾಗೆಯೇ ಪ್ರಣವ ಜಪವನ್ನು ಅರ್ಥಯುಕ್ತವಾಗಿ ಆಚರಿಸಿದಾಗ ಮಾತ್ರ ಬ್ರಹ್ಮವೆನ್ನುವ ಲಕ್ಷ್ಯವನ್ನು ಅದು ಸೇರಿಸಬಲ್ಲದು. 'ಅನುಸ್ಮರನ್' ಎಂದು ಹೇಳುವುದರಿಂದ ಮತ್ತೆ ಮತ್ತೆ, ಒಂದೇ ಸಮನಾಗಿ, ಅಡೆತಡೆಯಿಲ್ಲದೆ ಚಿಂತನೆ ಮಾಡಬೇಕೆಂದು ಬೋಧಿಸಿದಂತಾಗಿದೆ.

ಈ ಪ್ರಕಾರವಾಗಿ ಮೇಲಿನ ನಾಲ್ಕು ಸಾಧನೆಗಳನ್ನು ಅವಲಂಬಿಸು ವವನು ಪರಮಾತ್ಮಪದವಿಯನ್ನು ಶೀಘ್ರವಾಗಿ ಸೇರುವನೆಂದು ತಿಳಿಸಲಾಗಿದೆ. 'ಯಃ' (ಯಾರಾದರು) ಎನ್ನುವ ಶಬ್ದ ಪ್ರಯೋಗಿಸಲ್ಪಟ್ಟಿರುವುದರಿಂದ ಯಾವ ಜಾತಿಯವರಾದರೂ, ಮತದವರಾದರೂ, ಸ್ತ್ರೀಯಾದರೂ, ಪುರುಷನಾದರೂ ಮೇಲಿನ ಸಾಧನೆಗಳನ್ನು ಆಚರಿಸಿದರೆ, ಪ್ರಣವವನ್ನು ಜಪಿಸಿದರೆ, ಪರಮಗತಿಯನ್ನು ತಪ್ಪದೆ ಹೊಂದುವರೆಂದು ಅರ್ಥವಾಗುತ್ತದೆ. 'ಪರಮಾಂಗತಿಂ' ಎಂದು ಹೇಳಿರುವುದರಿಂದ ಬ್ರಹ್ಮಪದವಿ ಪ್ರಪಂಚದಲ್ಲಿಯ ಎಲ್ಲ ಪದವಿಗಳಿಗಿಂತ ಉತ್ಕೃಷ್ಟವಾದುದೆಂದು ಸ್ಪಷ್ಟಪಡಿಸಿದಂತಾಗಿದೆ. ಆದ್ದರಿಂದ ಚಿಕ್ಕ ಚಿಕ್ಕ ಪ್ರಾಪಂಚಿಕ ಪದವಿಗಳಿಗಾಗಿ ಶಕ್ತಿಯನ್ನು ಧಾರೆಯೆರೆಯುವುದಕ್ಕಿಂತ ನಿರತಿಶಯಾನಂದ ರೂಪ ಸರ್ವೋತ್ತಮ ಆತ್ಮಪದವಿಗಾಗಿಯೇ ಪ್ರಯತ್ನಿಸುವುದು ಲೇಸು.

ಈ ಶ್ಲೋಕದ ದ್ವಾರ ಕೆಳಗಿನ ವಿಷಯಗಳು ಸ್ಪಷ್ಟವಾಗುತ್ತಿವೆ.

೧) ಜಪ ಮಾತ್ರ ಸಾಲದು. ಧ್ಯಾನವೂ ಇರಬೇಕು. ಅಂದರೆ ಮಂತ್ರೋಚ್ಚಾರಣೆ ಯೊಂದಿಗೆ ಮಂತ್ರಾರ್ಥಚಿಂತನೆಯೂ ಇರಬೇಕು.

೨) ಎಲ್ಲಾ ಮಂತ್ರಗಳಲ್ಲಿ ಓಂಕಾರವೇ ಅಂದರೆ ಪ್ರಣವ ಮಂತ್ರವೇ ಶ್ರೇಷ್ಠವಾದುದು.

೩) ಭಗವಂತನನ್ನು ಯಾವಾಗಲೋ ಒಂದು ಸಾರಿ ಸ್ಮರಿಸಿದರೆ ಸಾಲದು. ನಿರಂತರವಾಗಿ ಮತ್ತೆ ಮತ್ತೆ ಸ್ಮರಿಸುತ್ತಿರಬೇಕು.

೪) ಇಂದ್ರಿಯಗಳಲ್ಲಿ ಯಾವ ಒಂದೆರಡನ್ನೋ ನಿಗ್ರಹಿಸಿದರೆ ಸಾಲದು; ಎಲ್ಲವನ್ನೂ ನಿಗ್ರಹಿಸಬೇಕು.

೫) ಮನಸ್ಸು ಲಯಿಸುವ ಸ್ಥಾನ ಹೃದಯ

೬) ದೈವದ ಮೇಲೆ ಭಕ್ತಿ ಶ್ರದ್ಧೆಗಳು ಉಂಟಾಗಿರುವ ಯಾವನೇ ಆಗಲಿ ಪ್ರಣವ ಮಂತ್ರಗಳನ್ನು ಜಪಿಸುತ್ತ, ಧ್ಯಾನಿಸುತ್ತ ಪರಮಾತ್ಮಪದವಿಯನ್ನು ಹೊಂದಬಹುದು. ಇಲ್ಲಿ ಜಾತಿ, ಮತ, ಕುಲ, ಲಿಂಗಗಳ ಭೇದವಿಲ್ಲ.

ಪ್ರ : ಈ ಪ್ರಪಂಚದಲ್ಲಿ ಸರ್ವೋತ್ತಮ ಸ್ಥಾನ ಯಾವುದು?

ಉ : ಪರಮಾತ್ಮಸ್ಥಾನ (ಬ್ರಹ್ಮಪದವಿ)

ಪ್ರ : ಅದನ್ನು ಯಾರು ಹೊಂದಬಲ್ಲರು?

ಉ : ಯಾವನು ೧) ಸಮಸ್ತ ಇಂದ್ರಿಯಗಳನ್ನು ನಿಗ್ರಹಿಸುವನೋ ೨) ಮನಸ್ಸನ್ನು ಹೃದಯದಲ್ಲಿ (ಆತ್ಮದಲ್ಲಿ) ಸ್ಥಾಪಿಸುವನೋ ೩) ಪ್ರಾಣ ವಾಯುವನ್ನು, ಇಲ್ಲವೆ ದೃಷ್ಟಿಯನ್ನು ಶಿರಸ್ಸಿನಲ್ಲಿ (ಬ್ರಹ್ಮರಂಧ್ರದಲ್ಲಿ) ನಿಲ್ಲಿಸಿ ಆತ್ಮ ಚಿಂತನಾರೂಪ

ಯೋಗಧಾರಣೆ ಅವಲಂಬಿಸುವನೋ ೪) 'ಓಮ್' ಎನ್ನುವ ಏಕಕ್ಷರ ಪ್ರಣವ ಮಂತ್ರವನ್ನು ಜಪಿಸುತ್ತ ಪ್ರಣವಾರ್ಥವಾದ ಪರಬ್ರಹ್ಮವನ್ನು ಚಿಂತಿಸುತ್ತಿರುವನೋ, ಅಂತಹವನು ಆ ಸರ್ವೋತ್ತಮ ದೈವ ಪದವಿಯನ್ನು ಹೊಂದಬಲ್ಲನು.

**ಅ||** ಸತತವಾಗಿ ಯತ್ನ ಮಾಡುವವನು ಪರಮಾತ್ಮನನ್ನು ಸುಲಭವಾಗಿ ಪಡೆಯಬಲ್ಲನೆಂದು ತಿಳಿಸಲಾಗುತ್ತಿದೆ-

**೧೪. ಅನನ್ಯಾಚೇತಾಸ್ಸತತಂ ಯೋ ಮಾಂ ಸ್ಮರತಿ ನಿತ್ಯಶಃ**
**ತಸ್ಯಾಹಂ ಸುಲಭಃ ಪಾರ್ಥ ನಿತ್ಯಯುಕ್ತಸ್ಯ ಯೋಗಿನಃ**

**ಅರ್ಥ:** ಪಾರ್ಥ=ಓ ಅರ್ಜುನಾ! ಯಃ=ಯಾರು; ಅನನ್ಯಚೇತಾಃ=ಬೇರೆ ವಿಷಯಗಳಲ್ಲಿ ಪ್ರವರ್ತಿಸದೆ ಇರುವ ಮನಸ್ಸುಳ್ಳವನಾಗಿ; ಮಾಂ=ನನ್ನನ್ನು; ನಿತ್ಯಶಃ=ಪ್ರತಿನಿತ್ಯ (ಪ್ರತಿದಿನ); ಸತತಂ=ಯಾವಾಗಲೂ; ಸ್ಮರತಿ= ಸ್ಮರಿಸುತ್ತಿದ್ದಾನೋ; ನಿತ್ಯ ಯುಕ್ತಸ್ಯ=ನಿರಂತರಧ್ಯಾನಪರನಾದ; ತಸ್ಯ=ಆತನಿಗೆ; ಅಹಂ=ನಾನು; ಸುಲಭಃ=ಸುಲಭವಾಗಿ ಹೊಂದಬಲ್ಲವನಾಗಿದ್ದೇನೆ.

**ತಾ||** ಓ ಅರ್ಜುನಾ! ಯಾವನು ಅನನ್ಯಚಿತ್ತನಾಗಿ ನನ್ನನ್ನು ಕುರಿತು ಪ್ರತಿದಿನ ನಿರಂತರವಾಗಿ ಸ್ಮರಿಸುತ್ತಿರುವನೋ ಅಂತಹ ನಿರಂತರ ಧ್ಯಾನಪರನಿಂದ ನಾನು ಸುಲಭವಾಗಿ ಹೊಂದಬಲ್ಲವನಾಗಿದ್ದೇನೆ.

**ವ್ಯಾಖ್ಯೆ:** ಭಗವಂತನನ್ನು ಯಾರು ಸುಲಭವಾಗಿ ಹೊಂದಬಲ್ಲರು ಎನ್ನುವುದನ್ನು ಇಲ್ಲಿ ಹೇಳಲಾಗಿದೆ. ಮೋಕ್ಷವನ್ನು ಪಡೆಯುವುದು ಹಾಗು ಭಗವಂತನ ಸಾಕ್ಷಾತ್ಕಾರ ಬಹಳ ಕಷ್ಟವೆಂದು ಜನರು ಭಾವಿಸುವರು. ಆದರೆ ಪದ್ಧತಿ ಪ್ರಕಾರ ಪ್ರಯತ್ನ ಮಾಡಿದರೆ ಬಹು ಸುಲಭವಾಗಿ ಪರಮಾತ್ಮನನ್ನು ಹೊಂದಬಹುದೆಂದು ಇಲ್ಲಿ ಹೇಳಲಾಗಿದೆ. ಯಾವನು ಅನನ್ಯಚಿತ್ತನಾಗಿ ಪ್ರತಿದಿನವೂ ನಿರಂತರವಾಗಿ ಭಗವಚ್ಚಿಂತನೆ ಮಾಡುತ್ತಿರುವನೋ ಆತನು ದೈವವನ್ನು ಸುಲಭವಾಗಿ ಹೊಂದಬಲ್ಲನು.

'ಅನನ್ಯ ಚೇತಾಃ'- ಚಿತ್ತದಲ್ಲಿ ಇತರ ಚಿಂತೆಗಳು ಯಾವುವೂ ಇಲ್ಲದೆ ಭಗವತ್ಸಂಬಂಧವಾದ ಭಾವನೆಗಳನ್ನೇ ಹೊಂದಿರುವುದು ಅನನ್ಯ ಚಿತ್ತನ ಲಕ್ಷಣ. ಮನಸ್ಸು ದೃಶ್ಯ ಪದಾರ್ಥಗಳ ಕಡೆಗೆ ಓಡದೆ ದೃಕ್ಸ್ವರೂಪವಾದ ಪರಮಾತ್ಮನಲ್ಲಿಯೇ ಲಗ್ನವಾಗಿರಬೇಕು. ಸಾಮಾನ್ಯವಾಗಿ ಜನಗಳ ಮನಸ್ಸು ಹೆಚ್ಚಾಗಿ ವಿಷಯಗಳ ಮೇಲೆ ಹರಿಯುತ್ತಿರುತ್ತದೆ. ಅಂತಹದು 'ಅನನ್ಯಚಿತ್ತ'ವಲ್ಲ, 'ಅನ್ಯಚಿತ್ತ'ವೇ.ಆಗುವುದು. ಮತ್ತೆ ಕೆಲವರ ಚಿತ್ತವು ಸ್ವಲ್ಪ ದೃಶ್ಯ ವಿಷಯಗಳ ಮೇಲೆ ಮತ್ತೆ ಸ್ವಲ್ಪ ದೈವದ ಕಡೆಗೆ ವ್ಯಾಪಿಸಿರುವುದು. ಇದೂ ಸಹ ಅನನ್ಯಚಿತ್ತವಲ್ಲ. ಈ ಅನನ್ಯತ್ವವನ್ನು ಸ್ಪಷ್ಟವಾಗಿ ವಿಶದಪಡಿಸಲು ಇಲ್ಲಿ 'ಸತತಂ' (ಯಾವಾಗಲೂ), 'ನಿತ್ಯಶಃ' (ಪ್ರತಿನಿತ್ಯ) ಎನ್ನುವ ಎರಡು ಸಮಾನಾರ್ಥಕ ಪದಗಳನ್ನು ಉಪಯೋಗಿಸಲಾಗಿದೆ. ಇದರಿಂದ ನಿರಂತರ ದೈವಸ್ಮರಣೆಯನ್ನು ಭಗವಂತನು ಎಷ್ಟು ಒತ್ತಿ ಹೇಳಿರುವನು ಎನ್ನುವುದು ಅರ್ಥವಾಗುತ್ತಿದೆ. ಕೆಲವರು ಯಾವುದೋ ಒಂದು ನಿರ್ದಿಷ್ಟವಾದ ದಿನ ಸತತವಾಗಿ ದೈವವನ್ನು ಸ್ಮರಿಸುತ್ತಾರೆ; ಮತ್ತೆ ಕೆಲವರು ಪ್ರತಿದಿನವೂ ಸ್ವಲ್ಪ ಹೊತ್ತು ದೈವವನ್ನು ಭಜಿಸುವರು. ಈ ಎರಡು ಪದ್ಧತಿಗಳೂ ಒಳ್ಳೆಯವೇ ಆಗಲಿ, ಅವು ಸಾಕಾಗುವುದಿಲ್ಲ. ಪ್ರತಿನಿತ್ಯ, ನಿರಂತರ ಎಡೆಬಿಡದೇ ದೈವ ಸಂಸ್ಮರಣೆ ಮಾಡುವುದನ್ನು ಚೆನ್ನಾಗಿ ಅಭ್ಯಸಿಸಬೇಕು. ಅದೇ ಅನನ್ಯಚಿತ್ತನ ಲಕ್ಷಣ. ಅಂತಹವನಿಗೆ ಭಗವಂತನು ಸುಲಭ ಸಾಧ್ಯವಾಗುವನು. ಆತನೇ ನಿತ್ಯಯುಕ್ತನು. ನಿರಂತರ ಧ್ಯಾನಪರನು, ಅಂತಹ ನಿರಂತರ ದೈವಚಿಂತನೆ ಪ್ರಾರಂಭದಲ್ಲಿ ದುರ್ಲಭವಾದರೂ ಸತತ ಅಭ್ಯಾಸದಿಂದ ಆ ಸ್ಥಿತಿಯನ್ನು ಪಡೆಯಲೇಬೇಕು.

ಏಕೆಂದರೆ, ಭಗವದ್ವಿಸ್ಮೃತಿ ಯಾವ ಕ್ಷಣದಲ್ಲಿ ಸಂಭವಿಸುವುದೋ ಆ ಕ್ಷಣದಲ್ಲಿಯೇ ಮಾಯೆ ಪ್ರವೇಶಿಸಿ ಚಿತ್ತವನ್ನು ವಶಪಡಿಸಿಕೊಂಡು ಮತ್ತೆ ವಿಷಯನ್ಮೊಖವಾಗಿ ಮಾಡಲು ಯತ್ನಿಸುವುದು. ಆದ್ದರಿಂದ ಈ ವಿಷಯದಲ್ಲಿ ಸಾಧಕನು ಬಹಳ ಜಾಗರೂಕನಾಗಿದ್ದು ದೈವವಿಸ್ಮೃತಿ ಯಾವ ಕಾಲದಲ್ಲಿಯೂ ಉಂಟಾಗದಂತೆ ನೋಡಿಕೊಳ್ಳಬೇಕು. **'ನಾಸ್ತಿ ಜಾಗರತೋ ಭಯಂ'** ಎಂದ ಹಾಗೆ ದೈವ ವಿಷಯದಲ್ಲಿ ಸದಾ ಎಚ್ಚರಿಕೆ ವಹಿಸಿರುವವನಿಗೆ ಇನ್ನು ಸಂಸಾರದ ಭಯವಿರುವುದಿಲ್ಲ. ಆದ್ದರಿಂದ ನಿರಂತರ ಭಗವತ್ಸ್ಮರಣೆಯ ದ್ವಾರ ಮಾಯೆಗೆ ಒಂದು ಸ್ವಲ್ಪವೂ ಚಿತ್ತದಲ್ಲಿ ಅವಕಾಶಕೊಡಬಾರದು. ಅಂತಹ ನಿರಂತರ ದೈವಸ್ಮರಣಶೀಲನೇ ಪರಮಾತ್ಮನನ್ನು ಹೊಂದುವನೆಂದು ಇಲ್ಲಿ ಹೇಳಲಾಗಿದೆ. (ಇದರಿಂದ ಅಂತಹ ಅನನ್ಯ ದೈವಚಿಂತನೆ, ನಿತ್ಯಯುಕ್ತತ್ವ ಇಲ್ಲದವರಿಗೆ ದೈವಪ್ರಾಪ್ತಿ ಸುಲಭವಲ್ಲವೆಂದು ಸೂಚಿತವಾಗುತ್ತಿದೆ.) ಆದ್ದರಿಂದ ದೈವ ಪ್ರಾಪ್ತಿಗೆ ಸುಲಭ ಮಾರ್ಗವನ್ನು ಅಭಿಲಾಷಿಸುವವರೆಲ್ಲ ಶ್ರೀಕೃಷ್ಣಪರಮಾತ್ಮನು ಕರುಣೆಯಿಂದ ಹೇಳಿದ ಈ ಉಪಾಯವನ್ನು ಅವಲಂಬಿಸಿ ಜನ್ಮಸಾರ್ಥಕಪಡಿಸಿಕೊಳ್ಳಬೇಕು.

ಪ್ರ : ಭಗವಂತನನ್ನು ಯಾರು ಸುಲಭವಾಗಿ ಹೊಂದುವರು?

ಉ : ೧) ಅನನ್ಯ ಚಿತ್ತರಾಗಿ ೨) ಪ್ರತಿನಿತ್ಯ ಎಡೆಬಿಡದೆ ನಿರಂತರವಾಗಿ ದೈವವನ್ನು ಕುರಿತು ಚಿಂತಿಸುವವರು (ಅಂದರೆ ನಿತ್ಯಯುಕ್ತರು) ಭಗವಂತನನ್ನು ಸುಲಭವಾಗಿ ಹೊಂದಬಲ್ಲರು.

ಪ್ರ : ಇದರಿಂದ ಭಗವತ್ಪ್ರಾಪ್ತಿಗೆ (ಮೋಕ್ಷ ಹೊಂದಲು) ಸುಲಭ ಉಪಾಯವೇನು?

ಉ : ೧) ಅನನ್ಯ ಚಿತ್ತತೆ (ಚಿತ್ತದಲ್ಲಿ ದೈವದ ಹೊರತು ಇತರೆ ದೃಶ್ಯ ಚಿಂತನೆಗಳು ಯಾವುವೂ ಇಲ್ಲದೆ ಇರುವುದು.) ೨) ನಿರಂತರ ದೈವಸ್ಮರಣೆ

**ಅ||** ಹಾಗೆ ಪರಮಾತ್ಮನನ್ನು ಹೊಂದಿದವರು ಮತ್ತೆ ದುಃಖಪೂರಿತವಾದ ಈ ಸಂಸಾರವನ್ನು ಹೊಂದುವುದಿಲ್ಲವೆಂದು ಹೇಳಲಾಗುತ್ತಿದೆ-

**೧೫. ಮಾಮುಪೇತ್ಯ ಪುನರ್ಜನ್ಮ ದುಃಖಾಲಯ ಮಶಾಶ್ವತಮ್**
**ನಾಪ್ನುವಂತಿ ಮಹಾತ್ಮಾನಸ್ಸಂಸಿದ್ಧಿಂ ಪರಮಾಂ ಗತಾಃ**

**ಅರ್ಥ:** ಪರಮಾಂ=ಸರ್ವೋತ್ತಮವಾದ; ಸಂಸಿದ್ಧಿಂ=ಮೋಕ್ಷವನ್ನು; ಗತಾಃ= ಹೊಂದಿದ; ಮಹಾತ್ಮಾನಃ=ಮಹಾತ್ಮರು; ಮಾಂ=ನನ್ನನ್ನು; ಉಪೇತ್ಯ= ಹೊಂದಿದವರಾಗಿ (ಬ್ರಹ್ಮತ್ವವನ್ನು ಹೊಂದಿದವರಾಗಿ); ಪುನಃ=ಮತ್ತೆ; ದುಃಖಾಲಯಂ=ದುಃಖಗಳಿಗೆ ನಿಲಯವಾದ; ಅಶಾಶ್ವತಂ=ಅನಿತ್ಯವಾದುದಾಗಿಯೂ(ಇರುವ); ಜನ್ಮ=ಜನ್ಮವನ್ನು; ನಾಪ್ನುವಂತಿ=ಹೊಂದುವುದಿಲ್ಲ.

**ತಾ||** ಸರ್ವೋತ್ತಮವಾದ ಮೋಕ್ಷವನ್ನು ಹೊಂದಿದ ಮಹಾತ್ಮರು ನನ್ನನ್ನು ಹೊಂದಿದವರಾಗಿ, ದುಃಖನಿಲಯವಾಗಿದ್ದು ಅನಿತ್ಯವಾದಂತಹ ಜನ್ಮವನ್ನು ಮತ್ತೆ ಎಂದೆಂದಿಗೂ ಪಡೆಯುವುದಿಲ್ಲ.

**ವ್ಯಾಖ್ಯೆ:** ಭಗವಂತನನ್ನು ಹೊಂದಿದವರು ಮತ್ತೆ ಈ ಸಂಸಾರ ಕೂಪದಲ್ಲಿ ಬೀಳುವುದಿಲ್ಲವೆಂದು ಇಲ್ಲಿ ಹೇಳಲಾಗಿದೆ. ದೈವವನ್ನು ಹೊಂದದ ಜೀವಿಯು ಹುಟ್ಟು ಸಾವು ಎನ್ನುವ ಈ ಜನನ ಮರಣ ಪ್ರವಾಹ ರೂಪವಾದ ಸಂಸಾರ ಚಕ್ರಕ್ಕೆ ಅಂಟಿಕೊಂಡು ನಾನಾಬಾಧೆಗಳನ್ನು ಅನುಭವಿಸುತ್ತಿದ್ದಾನೆ. ಪರಮಾತ್ಮನನ್ನು ಹೊಂದಿದ ನಂತರ ಮತ್ತೆ ಆತನಿಗೆ ಪುನರಾವೃತ್ತಿ ಇರುವುದಿಲ್ಲ ಅಂದರೆ ಈ ಸಂಸಾರದಲ್ಲಿ ಮತ್ತೆ ಹುಟ್ಟುವುದಾಗಲಿ, ದುಃಖ ಅನುಭವಿಸುವುದಾಗಲಿ

ಇರುವುದಿಲ್ಲ. ಇದರಿಂದ ಮೋಕ್ಷದ ಅವಶ್ಯಕತೆ ಚೆನ್ನಾಗಿ ಮನದಟ್ಟಾಗುವುದು. ಭಗವತ್ಪ್ರಾಪ್ತಿಯಾಗಲಿ, ಮೋಕ್ಷವಾಗಲಿ ಏಕೆ ಹೊಂದಬೇಕು ಎಂದು ಕೆಲವರು ಪ್ರಶ್ನಿಸುವರು. ಅಂತಹವರಿಗೆ ಈ ಶ್ಲೋಕ ಸಮಾಧಾನ ರೂಪವಾದುದಾಗಿದೆ. ಭಗವಂತನನ್ನು ಹೊಂದದಿದ್ದರೆ ಜನನ ಮರಣಾದಿಗಳಿಂದ ವಿಮುಕ್ತಿ ಸಂಭವಿಸುವುದಿಲ್ಲ ಮತ್ತು ದುಃಖವು ನಿವೃತ್ತಿಯಾಗುವುದಿಲ್ಲ. ದುಃಖರಾಹಿತ್ಯಕ್ಕೆ ದೈವವೇ ಶರಣು.

ಆದರೆ ಕೆಲವರು- 'ಈ ಜನ್ಮ ಅನೇಕ ವಿಷಯ ಭೋಗಗಳಿಂದ ಕೂಡಿ ಬಹಳ ಆನಂದಕರವಾಗಿದೆಯಲ್ಲ', ಎಂದು ಹೇಳಬಹುದು. ಇಂತಹ ವಿಪರೀತ ಬುದ್ಧಿಗಳಿಗೆ ಶ್ರೀಕೃಷ್ಣಪರಮಾತ್ಮ ಈ ಶ್ಲೋಕದಲ್ಲಿ ಉತ್ತರ ಹೇಳಿರುವನು. 'ಜನ್ಮ' ಎಂದರೆ ಏನು? ಅದರ ಸ್ವಭಾವವೇನು? ಎನ್ನುವುದನ್ನು ಸ್ಪಷ್ಟವಾಗಿ ತಿಳಿಸಲ್ಪಟ್ಟಿದೆ. ೧) ದುಃಖಾಲಯ ೨) ಅಶಾಶ್ವತ- ಎನ್ನುವ ಎರಡು ವಿಶೇಷಣಗಳಿಂದ ಭಗವಂತನು ಜನ್ಮವನ್ನು ವರ್ಣಿಸಿರುವನು. ಅಂದರೆ ಅದು ದುಃಖಕ್ಕೆ ನಿಲಯ ಹಾಗು ಅನಿತ್ಯವೆಂದರ್ಥ. ಈ ಎರಡು ದೋಷಗಳು ಜನ್ಮದಲ್ಲಿವೆ. ಆದ್ದರಿಂದ ಅದು ಸೌಖ್ಯಪ್ರದವಾಗಲು ಹೇಗೆ ಸಾಧ್ಯ? ಒಂದು ವೇಳೆ ಅಲ್ಪ ಸ್ವಲ್ಪ ಸುಖ ಕಾಣಿಸಿದರೂ, ಅದು ಆಭಾಸ ಸುಖ, ಪ್ರತಿಬಿಂಬ ಸುಖ, ದುಃಖಮಿಶ್ರಿತ ಸುಖವೇ ಆಗಲಿ, ಅವಿಚ್ಛಿನ್ನ ನಿರತಿಶಯ ಸುಖವಲ್ಲ. ಪ್ರಾಪಂಚಿಕ ಸುಖವು ದುಃಖವನ್ನು ಯಾವಾಗಲೂ ತನ್ನ ಹಿಂದೆ ಎಳೆದುಕೊಂಡು ಬರುತ್ತಿರುತ್ತದೆ. ಆದ್ದರಿಂದಲೇ ವಿಜ್ಞುಗಳ ದೃಷ್ಟಿಯಲ್ಲಿ ಇದು ಗಣನೀಯವಾದುದಲ್ಲ. ಈ ಕಾರಣದಿಂದ ಭಗವಂತನು ಜನ್ಮವನ್ನು 'ದುಃಖಾಲಯ'ವೆಂದು ಹೇಳಿದನು. ಆಲಯವೆಂದರೆ ನೆಲ ಅಥವ ಸ್ಥಾನ. ರಾಮಾಲಯ, ಕೃಷ್ಣಾಲಯ, ಶಿವಾಲಯ- ಎನ್ನುವುವು ಆಯಾ ದೇವತೆಗಳಿಗೆ, ಅವತಾರಗಳಿಗೆ ಸ್ಥಳಗಳಾಗಿ ಹೇಗಿರುವುವೋ ಹಾಗೆಯೇ ಜನ್ಮವು ದುಃಖಾಲಯವಾಗಿರುವುದರಿಂದ ದುಃಖಾಸುರನ ವಾಸಸ್ಥಳವಾಗಿದೆ ಯೆಂದರ್ಥ. ಅವಿವೇಕದಿಂದ ಜನರು ಇಲ್ಲಿ ಸುಖವಿದೆಯೆಂದು ಭ್ರಮಿಸುತ್ತಿರುವವರೇ ಆಗಲಿ ವಾಸ್ತವವಾಗಿ ಇಲ್ಲಿ ಇರುವುದು ದುಃಖವೇ ಎಂದು ಮೇಲಿನ ಭಗವದ್ವಾಕ್ಯ ಸ್ಪಷ್ಟಮಾಡುತ್ತಿದೆ. ತ್ರಿಕಾಲಜ್ಞನು, ಸರ್ವಜ್ಞನು ಆದ ಶ್ರೀಕೃಷ್ಣಪರಮಾತ್ಮನು ಜನರ ಅವಿವೇಕವನ್ನು ಗ್ರಹಿಸಿ ಪ್ರಪಂಚದ ಯಥಾರ್ಥ ಸ್ಥಿತಿಯನ್ನು, ಜನ್ಮದ ವಾಸ್ತವ ಸ್ವರೂಪವನ್ನು ಇಲ್ಲಿ ಬಹಿರ್ಗತ ಮಾಡಿದ್ದಾನೆ. 'ಓ ಜೀವಿಗಳಿರಾ!' ಪ್ರಪಂಚ ಸುಖಗಳನ್ನು ನೋಡಿ ಮೋಸ ಹೋಗಬೇಡಿ. ಅದರಲ್ಲಿ ಸುಖವಿದೆಯೆಂದು ಭ್ರಮಿಸಿ ಅವುಗಳ ಹಿಂದೆ ಓಡಿ ಜೀವನಗಳನ್ನು ನಾಶಮಾಡಿಕೊಳ್ಳಬೇಡಿ. ಅವು ದುಃಖಾಲಯಗಳೇ ಆಗಲಿ ಸುಖಾಲಯಗಳಲ್ಲ. ಕ್ಷಣಿಕಗಳೇ ಆಗಲಿ ಶಾಶ್ವತವಾದವುಗಳಲ್ಲ'- ಎಂದು ಪರಮಾತ್ಮನು ಜನರನ್ನು ಎಚ್ಚರಿಸುತ್ತಿದ್ದಾನೆ. ವಾಸ್ತವವಾಗಿ ವಿಚಾರಿಸಿದರೆ ಅವಿದ್ಯೆಯ ಪ್ರಭಾವದಿಂದ ಜನರು ಆ ದುಃಖಗಳನ್ನು ಸುಖಗಳೆಂದು ಭಾವಿಸುತ್ತಿದ್ದಾರೆ.*

ಆದ್ದರಿಂದ ದುಃಖಾಲಯವಾಗಿದ್ದು ಅಶಾಶ್ವತವಾದ ಈ ಜನ್ಮಕೂಪದಲ್ಲಿ ಮತ್ತೆ ಬೀಳದಂತೆ ನೋಡಿಕೊಳ್ಳಬೇಕು. ಆದರೆ ಅದಕ್ಕೆ ಉಪಾಯವೇನು? 'ಮಾಮುಪೇತ್ಯ'- ಎನ್ನುವುದೇ ಉಪಾಯ. ಅಂದರೆ ಭಗವಂತನನ್ನು ಹೊಂದುವುದೇ, ಆಶ್ರಯಿಸುವುದೇ. ಆದ್ದರಿಂದ ಭಕ್ತಿ ಜ್ಞಾನ ವೈರಾಗ್ಯ ಧ್ಯಾನಾದಿಗಳ ಮೂಲಕ ಪರಮಾತ್ಮನನ್ನು ಹೊಂದಲು ಜನರು ಈ ಜನ್ಮದಲ್ಲಿಯೇ ತೀವ್ರತರವಾದ ಪ್ರಯತ್ನ ಮಾಡಬೇಕು. ಭಗವತ್ಸಾಯುಜ್ಯವನ್ನು **'ಪರಮಾಂ ಸಂಸಿದ್ಧಿಂ'**- ಸರ್ವೋತ್ಕೃಷ್ಟವಾದ ಪದವಿ ಹಾಗು ಸಿದ್ಧಿಯೆಂದು ವರ್ಣಿಸಲ್ಪಟ್ಟಿರುವುದರಿಂದ ಬೇರೆ ಎಲ್ಲಾ ಪದವಿಗಳು ಅದಕ್ಕಿಂತ ಕೆಳದರ್ಜೆಯವು ಎಂದು ಸ್ಪಷ್ಟವಾಗುತ್ತಿದೆ. ಮತ್ತೆ ಎಷ್ಟೋ ಮಂದಿ ಮಹಾತ್ಮರು ಅಂತಹ ಸಂಸಿದ್ಧಿಯನ್ನು ಈಗಾಗಲೇ ಪಡೆದಿರುವರೆಂದು ಹೇಳಲ್ಪಟ್ಟಿರುವುದರಿಂದ, ಬೇರೆಯವರೂ ಸಹ ಪ್ರಯತ್ನಗಳಿಂದ ತಪ್ಪದೆ ಹೊಂದುವರೆಂದು ಅರ್ಥವಾಗುತ್ತಿದೆ. ಆದರೆ ಮಹಾತ್ಮನು ಆಗ ಬೇಕೇ ಹೊರತು ಅಲ್ಪಾತ್ಮನಲ್ಲ. ನಿರ್ಮಲಚಿತ್ತರಾಗಿ ಪರಮಾತ್ಮನನ್ನು ಆಶ್ರಯಿಸುವವರು ಮಹಾತ್ಮರು, ಮಲಿನ ಚಿತ್ತರಾಗಿ ದೃಶ್ಯಭೋಗಗಳ ಹಿಂದೆ ಓಡುವವರು ಅಲ್ಪಾತ್ಮರು. ಆದ್ದರಿಂದ ಮಹಾತ್ಮರಾಗಲು ಪ್ರಯತ್ನಿಸಬೇಕು. 'ಮಹಾತ್ಮ' ಎನ್ನುವುದು ಒಂದು ಬಿರುದು. ಅಸತ್ಯವನ್ನಾಶ್ರಯಿಸದೆ, ಸತ್ಯವನ್ನಾಚರಿಸುವವರಿಗೆಲ್ಲಾ ಆ ಬಿರುದು ತಪ್ಪದೆ ಲಭಿಸುವುದು. ಪರಮಾತ್ಮನನ್ನು ಆಶ್ರಯಿಸುವ ಅಂತಹ ಮಹನೀಯರು ಜನ್ಮರಾಹಿತ್ಯರೂಪ ಕೈವಲ್ಯವನ್ನು ಹೊಂದುವುದರಿಂದ ಮತ್ತೆ ದುಃಖ ನಿಲಯವಾದ ಈ ಸಂಸಾರಕ್ಕೆ ತಿರುಗಿ ಬರುವುದಿಲ್ಲ. ಅಂದರೆ ಮತ್ತೆ ಜನ್ಮವನ್ನು ಹೊಂದುವುದಿಲ್ಲವೆಂದು ಇಲ್ಲಿ ಹೇಳಲಾಗಿದೆ. ನದಿ ಸಮುದ್ರವನ್ನು ಸೇರಿದ ನಂತರ ಮತ್ತೆ ಹೇಗೆ ಹಿಂದಕ್ಕೆ ಬರುವುದಿಲ್ಲವೋ ಹಾಗೆಯೇ ಜೀವನ್ಮುಕ್ತರೂ ಸಹ ಸಂಸಾರಚಕ್ರಕ್ಕೆ ಮತ್ತೆ ಸಿಕ್ಕುವುದಿಲ್ಲ. ಯಾರಿಗೆ ದುಃಖವು ಬೇಡವೋ, ಸುಖ ಯಾರಿಗೆ ಬೇಕೋ ಅವರು ಮೇಲೆ ತಿಳಿಸಿದ ಈ ಭಗವದ್ವಾಕ್ಯಗಳಲ್ಲಿ ವಿಶ್ವಾಸವುಳ್ಳವರಾಗಿ; ಜನ್ಮವನ್ನು, ಸಂಸಾರವನ್ನು ದುಃಖಪ್ರದವೆಂದು ತಿಳಿದು; ಭಗವದಾಶ್ರಯವೆಂಬ ಏಕೈಕ ಉಪಾಯವನ್ನು ಅವಲಂಬಿಸಿ ಮುಕ್ತಿ ಹೊಂದಬೇಕು.

ಪ್ರ : ಈ ಪ್ರಪಂಚದ (ಈ ಜನ್ಮದ) ಸ್ವರೂಪ ಎಂತಹದು?

ಉ : ಇದು ೧) ದುಃಖನಿಲಯ ೨) ಅಶಾಶ್ವತ

ಪ್ರ : ಇಂತಹ ಸಂಸಾರವನ್ನು (ಜನ್ಮವನ್ನು) ಯಾರು ಹೊಂದುವುದಿಲ್ಲ?

ಉ : ಭಗವಂತನನ್ನು ಹೊಂದಿದ ಮಹನೀಯರು

ಪ್ರ : ಭಗವತ್ಸಾಯುಜ್ಯ ಎಂತಹ ಪದವಿ?

ಉ : ಸರ್ವೋತ್ತಮವಾದ ಪದವಿ (ಸಿದ್ಧಿ)ಯಾಗಿರುವುದು.

ಪ್ರ : ದುಃಖರಾಹಿತ್ಯಕ್ಕೆ ಉಪಾಯವೇನು?

ಉ : ಮತ್ತೆ ಜನ್ಮವಿಲ್ಲದಿರುವುದೇ.

ಪ್ರ : ಜನ್ಮವಿಲ್ಲದೇ ಇರಲು ಮಾರ್ಗವೇನು?

ಉ : ಭಗವಂತನನ್ನು ಹೊಂದುವುದೇ

**ಅ॥** ಪರಮಾತ್ಮ ಸ್ಥಾನವನ್ನು ಹೊಂದದೆ ಇನ್ನು ಯಾವ ಸ್ಥಾನಕ್ಕೆ (ಲೋಕಕ್ಕೆ) ಹೋದರೂ ಮತ್ತೆ ಜನ್ಮತಪ್ಪದು ಎಂದು ಇಲ್ಲಿ ತಿಳಿಸಲಾಗುತ್ತಿದೆ-

---

* **ಅನಿತ್ಯಾಶುಚಿದುಃಖಾನಾತ್ಮಸು ನಿತ್ಯಶುಚಿಸುಖಾತ್ಮಖ್ಯಾತಿರವಿದ್ಯಾ (ಪತಂಜಲಿ)**

ಅನಿತ್ಯವಾದುದನ್ನು ನಿತ್ಯವಾಗಿಯೂ, ಅಪವಿತ್ರವಾದದ್ದನ್ನು ಪವಿತ್ರವಾಗಿಯೂ, ದುಃಖವನ್ನು ಸುಖವನ್ನಾಗಿಯೂ, ಅನಾತ್ಮನನ್ನು ಆತ್ಮನನ್ನಾಗಿಯೂ ಭ್ರಮಿಸುವುದೇ ಅವಿದ್ಯೆ.

೧೬. ಆಬ್ರಹ್ಮಭುವನಾಲ್ಲೋಕಾಃ ಪುನರಾವರ್ತಿನೋಽರ್ಜುನ
ಮಾಮುಪೇತ್ಯ ತು ಕೌಂತೇಯ ಪುನರ್ಜನ್ಮ ನ ವಿದ್ಯತೇ

**ಅರ್ಥ:** ಅರ್ಜುನಾ=ಓ ಅರ್ಜುನಾ! ಆ ಬ್ರಹ್ಮಭುವನಾಲ್ಲೋಕಾಃ=ಬ್ರಹ್ಮ ಲೋಕದವರೆಗೆ ಇರುವ ಎಲ್ಲಾ ಲೋಕಗಳು; ಪುನರಾವರ್ತಿನಃ=ಹಿಂತಿರುಗಿ ಬರುವ ಸ್ವಭಾವವುಳ್ಳವುವು(ಪುನರ್ಜನ್ಮವನ್ನುಂಟು ಮಾಡುವಂತಹವು); ಕೌಂತೇಯ=ಓ ಅರ್ಜುನಾ! ಮಾಂ=ನನ್ನನ್ನು; ಉಪೇತ್ಯ ತು=ಹೊಂದಿ ದಂತವನಾದರೆ; ಪುನರ್ಜನ್ಮ=ಮರುಜನ್ಮ ನ ವಿದ್ಯತೇ=ಇರುವುದಿಲ್ಲ.

**ತಾ||** ಓ ಅರ್ಜುನಾ! ಬ್ರಹ್ಮಲೋಕ ಪರ್ಯಂತ ಎಲ್ಲಾ ಲೋಕಗಳು ತಿರುಗಿ ಬರುವ ಸ್ವಭಾವವುಳ್ಳವು (ಅಂದರೆ ಅವುಗಳನ್ನು ಹೊಂದಿದವರು ಮತ್ತೆ ಜನ್ಮ ಪಡೆದೇ ಪಡೆಯುವರು). ನನ್ನನ್ನು ಹೊಂದಿದವರಿಗೆ ಮತ್ತೆ ಜನ್ಮವೇ ಇರುವುದಿಲ್ಲ.

**ವ್ಯಾಖ್ಯೆ:** ಬ್ರಹ್ಮಾಂಡದಲ್ಲಿ ಎಷ್ಟೋ ಲೋಕಗಳಿವೆ- ಭೂಲೋಕ, ಸ್ವರ್ಗಲೋಕ, ಬ್ರಹ್ಮಲೋಕ ಮುಂತಾದುವು. ಆದರೆ ಅವೆಲ್ಲವೂ ಪುನರಾವೃತ್ತಿಗುಣವನ್ನು ಹೊಂದಿವೆ. ಅಂದರೆ ಅವುಗಳನ್ನು ಹೊಂದಿದವನು ಮತ್ತೆ ಜನ್ಮಿಸುವನು. ಆದರೆ ಪರಮಾತ್ಮನನ್ನು ಹೊಂದಿದವನು ಮತ್ತೆ ಎಂದಿಗೂ ಜನ್ಮವನ್ನು ಹೊಂದುವುದಿಲ್ಲ. ಇದೇ ದೈವ ಸಾಕ್ಷಾತ್ಕಾರದ ವಿಶೇಷ. ಇದಕ್ಕೆ ಕಾರಣಗಳಿವೆ. ಬ್ರಹ್ಮಲೋಕ ಪರ್ಯಂತವಾಗಿರುವ ಸಮಸ್ತ ಲೋಕಗಳೂ ದೃಶ್ಯದಲ್ಲಿ ಅಂತರ್ಗತವಾಗಿ ಇರುವುವು. ಆದ್ದರಿಂದ ಜನ್ಮಾದಿಗಳಿಗೆ ಕಾರಣಗಳಾಗಿವೆ. ಆತ್ಮ(ದೈವ) ಒಂದೇ ಈ ಪ್ರಪಂಚದಲ್ಲಿ ದೃಶ್ಯಕ್ಕೆ ಅತೀತವಾದ ವಸ್ತು. ಅದು ಆ ದೃಶ್ಯವನ್ನು ಸಾಕ್ಷಿಯಾಗಿ ನೋಡುವ ದೃಕ್-ವಸ್ತು. ಅದು ದೇಶ ಕಾಲ ಕ್ರಿಯೆಗಳಿಗೆ ವಶವಾಗದೆ ಪರಿಣಾಮ ರಹಿತವಾಗಿ, ನಾಶವರ್ಜಿತವಾಗಿ ಇರುವುದು. ಅಂತಹ ಪರಮಾತ್ಮಪದವಿಯನ್ನು ಪಡೆದವನಿಗೆ ಕರ್ಮ ಹಾಗು ಜನ್ಮಗಳಿಲ್ಲ.

ಆದ್ದರಿಂದ ಪುನರಾವೃತ್ತಿಯಿಂದ ಕೂಡಿದ ಸ್ವರ್ಗಾದಿ ಲೋಕಗಳನ್ನು ಪಡೆಯಲು ಯತ್ನಿಸುವುದಕ್ಕಿಂತ ಭಕ್ತಿ ವೈರಾಗ್ಯ ವಿಚಾರಣಾದಿ ಸಾಧನೆಗಳ ದ್ವಾರ ಆತ್ಮಲೋಕವನ್ನು ಸೇರುವುದೇ ಮೇಲು. ಅಂದರೆ ಭಗವತ್ಸಾಯುಜ್ಯ ವನ್ನು ಪಡೆಯುವುದೇ ಶ್ರೇಯಸ್ಕರ.

ಪ್ರ : ಮರು ಜನ್ಮವುಂಟಾಗದಿರಲು ಉಪಾಯವೇನು?

ಉ : ಪರಮಾತ್ಮನನ್ನು ಹೊಂದುವುದೇ.

ಪ್ರ : ಬ್ರಹ್ಮಲೋಕದವರೆಗೆ ಇರುವ ಸಮಸ್ತ ಲೋಕಗಳ ಗುಣವೇನು?

ಉ : ಪುನರಾವೃತ್ತಿ (ಅಲ್ಲಿಗೆ ಹೋದವರು ಮತ್ತೆ ಜನ್ಮಹೊಂದಬೇಕಾಗುವುದು)

**ಅ||** ಬ್ರಹ್ಮಾದಿ ಲೋಕಗಳ ನಶ್ವರ ಸ್ವಭಾವವನ್ನು, ಕಾಲಾಧೀನತೆಯನ್ನು ತಿಳಿಸಲಾಗುತ್ತಿದೆ-

೧೭. ಸಹಸ್ರಯುಗಪರ್ಯಂತಮ್ ಅಹರ್ಯದ್ಬ್ರಹ್ಮಣೋ ವಿದುಃ
ರಾತ್ರಿಂ ಯುಗಸಹಸ್ರಾಂತಾಮ್ ತೇಽಹೋರಾತ್ರವಿದೋ ಜನಾಃ

**ಅರ್ಥ:** (ಯೇ)ಜನಾಃ=ಯಾವ ಜನರು; ಬ್ರಹ್ಮಣಃ=ಬ್ರಹ್ಮದೇವನ; ಯತ್ ಅಹಂಃ=ಯಾವ ಹಗಲು(ಇರುವುದೋ, ಅದನ್ನು); ಸಹಸ್ರ ಯುಗ ಪರ್ಯಂತಂ=ಸಾವಿರ ಯುಗಗಳ ಪರಿಮಿತಿಯಿರುವ ಅದನ್ನು; ವಿದುಃ= ತಿಳಿಯುವರೋ; ತೇ=ಅಂತಹವರು; ಅಹೋರಾತ್ರವಿದಾಃ=ರಾತ್ರಿ ಹಗಲುಗಳ (ಕಾಲದ) ತತ್ತ್ವತಿಳಿದಂಥವರಾಗುತ್ತಾರೆ (ಕಾಲ ತತ್ವವನ್ನು ತಿಳಿದು ಕೊಂಡವರಾಗುವರು).

**ತಾ||** ಯಾವ ಜನರು ಬ್ರಹ್ಮದೇವನ ಹಗಲನ್ನು ಸಾವಿರ ಯುಗಗಳ ಪರಿಮಿತ ಉಳ್ಳದ್ದೆಂದು; ಹಾಗೆಯೇ ಸಾವಿರ ಯುಗಗಳ ಪರಿಮಿತ ಉಳ್ಳ ಅವನ ರಾತ್ರಿಯನ್ನು ತಿಳಿಯುವರೋ, ಅಂತಹವರು ರಾತ್ರಿ ಹಗಲುಗಳ ತತ್ತ್ವವನ್ನು ಚೆನ್ನಾಗಿ ತಿಳಿದುಕೊಂಡಂಥವರಾಗುವರು.

**ವ್ಯಾಖ್ಯೆ:** ಬ್ರಹ್ಮಲೋಕದವರೆಗೆ ಇರುವ ಸಮಸ್ತ ಲೋಕಗಳು ಕಾಲಕ್ಕೆ ಒಳಗಾಗಿವೆಯೆಂದು, ಕ್ಷಯಶೀಲಗಳೆಂದು, ಪರಿಣಾಮವಂತವುಗಳೆಂದು, ಜನ್ಮಕ್ಕೆ ಕಾರಣಗಳೆಂದು ಹಿಂದಿನ ಶ್ಲೋಕದಲ್ಲಿ ತಿಳಿಸಲ್ಪಟ್ಟಿದೆ. ಇಲ್ಲಿ ಬ್ರಹ್ಮದೇವನ ಕಾಲಪರಿಮಿತಿಯನ್ನು ಸೂಚಿಸಿ, ಬ್ರಹ್ಮಲೋಕವೂ ಸಹ ಕಾಲಕ್ಕೆ ಅಧೀನವಾಗಿಯೇ ಇರುವುದೆಂಬ ಭಾವವನ್ನು ಭಗವಂತನು ವ್ಯಕ್ತಗೊಳಿಸು ತ್ತಿದ್ದಾನೆ. ಬ್ರಹ್ಮದೇವನ ಹಗಲು ಸಾವಿರ ಮಹಾಯುಗಗಳ ಕಾಲ. ಹಾಗೆಯೇ ಆತನ ರಾತ್ರಿಯೂ ಸಾವಿರ ಮಹಾಯುಗಗಳು. ಈ ಪ್ರಕಾರವಾಗಿ ಬ್ರಹ್ಮ ದೇವನ ಒಂದು ದಿನ ಎರಡು ಸಾವಿರ ಮಹಾಯುಗಗಳ ಕಾಲ ಪರಿಮಿತಿಯನ್ನು ಹೊಂದಿದೆ. ಮಹಾಯುಗವೆಂದರೆ ೪೩ ಲಕ್ಷ ೨೦ ಸಾವಿರ ವರ್ಷಗಳು. ಹೇಗೆಂದರೆ-

| | | |
|---|---|---|
| ೧) ಕಲಿಯುಗ | ೪,೩೨,೦೦೦ ವರ್ಷಗಳು | |
| ೨) ದ್ವಾಪರಯುಗ | ೮,೬೪,೦೦೦ ವರ್ಷಗಳು | (ಕಲಿಯುಗದ ಎರಡರಷ್ಟು) |
| ೩) ತ್ರೇತಾಯುಗ | ೧೨,೯೬,೦೦೦ ವರ್ಷಗಳು | (ಕಲಿಯುಗದ ಮೂರರಷ್ಟು) |
| ೪) ಕೃತಯುಗ ಇಲ್ಲವೆ ಸತ್ಯಯುಗ | ೧೭,೨೮,೦೦೦ ವರ್ಷಗಳು | (ಕಲಿಯುಗದ ನಾಲ್ಕರಷ್ಟು) |
| ಒಟ್ಟು | ೪೩,೨೦,೦೦೦ ವರ್ಷಗಳು | |

ಈ ಒಟ್ಟು ೪೩,೨೦,೦೦೦=ಮಹಾಯುಗ.

ಇಂತಹ ಸಾವಿರ ಮಹಾಯುಗಗಳು ಬ್ರಹ್ಮದೇವನಿಗೆ ಒಂದು ಹಗಲು. ಮತ್ತೊಂದು ಸಾವಿರ ಒಂದು ರಾತ್ರಿ. ಅಂದರೆ ೪೩,೨೦೦೦೦X೧೦೦೦= ೪೩,೨೦೦೦೦೦೦೦ ವರ್ಷಗಳು ಹಾಗೆಯೇ ೪೩೨೦,೦೦೦೦೦೦X೨= ೮೬೪೦,೦೦೦೦೦೦ ವರ್ಷಗಳು ಬ್ರಹ್ಮದೇವನ ಒಂದು ದಿನ.

ಇಂತಹ ೩೬೦ ದಿನಗಳು ಸೇರಿದರೆ ಬ್ರಹ್ಮದೇವನ ಒಂದು ವರ್ಷವಾಗುವುದು. ಅಂತಹ ೧೦೦ ವರ್ಷಗಳು ಬ್ರಹ್ಮದೇವನ ಆಯುಸ್ಸು ಆಗಿರುವುದು. ಇದರಿಂದ ಬ್ರಹ್ಮಲೋಕವೂ ಕೂಡ ಕಾಲಗರ್ಭದಲ್ಲಿ ಮುಳುಗಿಯೇ ಇದೆಯೆಂದು, ಒಂದಾನೊಂದು ಸಮಯದಲ್ಲಿ ಅದೂ ನಶಿಸಿಯೇ ತೀರುವುದೆಂದು ಸ್ಪಷ್ಟವಾಗುತ್ತಿದೆ. ಆದ್ದರಿಂದ ಜ್ಞಾನಿಯು ಅಂತಹ ನಶ್ವರ ಲೋಕಗಳನ್ನಾಗಲಿ, ಆ ಲೋಕಗಳಲ್ಲಿ ಅಂತರ್ಗತವಾಗಿರುವ ಭೋಗಸಮುದಾಯವನ್ನಾಗಲಿ ಇಚ್ಛಿಸದೆ, ಕಾಲಾತೀತನಾದ ಪರಮಾತ್ಮನನ್ನೇ ಆಶ್ರಯಿಸಿ ಮುಕ್ತಿ ಹೊಂದುವನು. ಸಮಸ್ತ ಪದಾರ್ಥಗಳನ್ನು ಹಾಗು ಬ್ರಹ್ಮಾಂಡಗಳನ್ನು ಕಾಲವು ನುಂಗಿ ಹಾಕುವುದು. ಕಾಲವನ್ನು ಪರಮಾತ್ಮನು ನುಂಗಿ ಹಾಕುವನು. ಆದ್ದರಿಂದ ಯಾವ ಮಹನೀಯನಲ್ಲಿ ದೇಶಕಾಲಾದಿ ಗಳೆಲ್ಲವೂ ಕಲ್ಪಿತಗಳಾಗಿ ಬೆಳಗುತ್ತಿವೆಯೋ ಆ ಸತ್ಯಸ್ವರೂಪನಾದ ಪರಮಾತ್ಮನನ್ನು ಆಶ್ರಯಿಸಿ, ಕಾಲಕ್ಕೆ ಒಳಗಾಗಿರುವ ವಸ್ತುಗಳಲ್ಲಿ ವಿರಕ್ತಿ ಹೊಂದಿರುವುದೇ

ಕಾಲತತ್ತ್ವವನ್ನು ತಿಳಿದವನ ಲಕ್ಷಣ. ಈ ಪ್ರಕಾರವಾಗಿ ದೃಶ್ಯ ಪ್ರಪಂಚದ ನಶ್ವರತೆ (ಕಾಲಾಧೀನತೆ), ಆತ್ಮದ ಶಾಶ್ವತತೆಯನ್ನು ತಿಳಿದವನೇ ಕಾಲಜ್ಞಾನಿ. ಅಹೋ ರಾತ್ರಿಗಳನ್ನು ತಿಳಿದವನು.

ಪ್ರ : ಬ್ರಹ್ಮದೇವನ ಹಗಲು, ರಾತ್ರಿಗಳ ಕಾಲವೆಷ್ಟು?

ಉ : ಒಂದೊಂದು ಸಾವಿರ ಮಹಾಯುಗಗಳ ಕಾಲ.

ಪ್ರ : ಇದರಿಂದ ತಿಳಿಯುವ ಅಂಶವೇನು?

ಉ : ಬ್ರಹ್ಮಲೋಕವೂ ಕೂಡ ಕಾಲಕ್ಕೆ ಒಳಗಾಗಿರುವುದೇ ಎಂದು ತಿಳಿಯುತ್ತದೆ. ಕಾಲಕ್ಕೆ ಒಳಗಾಗದೆ ಇರುವವನು ಪರಮಾತ್ಮನೊಬ್ಬನೇ. ಆದ್ದರಿಂದ ಜನ್ಮರಾಹಿತ್ಯಕ್ಕಾಗಿ, ಮೋಕ್ಷಕ್ಕಾಗಿ ಆತನನ್ನೇ ಆಶ್ರಯಿಸಬೇಕೆನ್ನುವುದು ಭಾವ.

**ಅ॥** ಪ್ರಪಂಚದ ನಶ್ವರತೆಯನ್ನು ಅದರ ಪರಿಣಾಮವನ್ನು ತಿಳಿಸಲಾಗುತ್ತಿದೆ-

**೧೮. ಅವ್ಯಕ್ತಾದ್ವ್ಯಕ್ತಯಃ ಸರ್ವಾಃ ಪ್ರಭವಂತ್ಯಹರಾಗಮೇ**
**ರಾತ್ರ್ಯಾಗಮೇ ಪ್ರಲೀಯಂತೇ ತತ್ರೈವಾವ್ಯಕ್ತಸಂಜ್ಞಕೇ**

**ಅರ್ಥ:** ಅಹರಾಗಮೇ=ಹಗಲಿನ ಪ್ರಾರಂಭದಲ್ಲಿ; ಅವ್ಯಕ್ತಾತ್=ಅವ್ಯಕ್ತವು (ಪ್ರಕೃತಿಯಿಂದ); ಸರ್ವಾಃ=ಸಮಸ್ತಗಳಾದ; ವ್ಯಕ್ತಯಃ=ಚರಾಚರ ವಸ್ತುಗಳು; ಪ್ರಭವಂತಿ=ಹುಟ್ಟುತ್ತಿವೆ. ರಾತ್ರ್ಯಾಗಮೇ=ರಾತ್ರಿಯ ಪ್ರಾರಂಭದಲ್ಲಿ; ಅವ್ಯಕ್ತ ಸಂಜ್ಞಕೇ=ಅವ್ಯಕ್ತವೆನ್ನುವ ಹೆಸರುಳ್ಳ; ತತ್ರೈವ=ಅದರಲ್ಲಿಯೇ(ಆ ಪ್ರಕೃತಿಯಲ್ಲಿಯೇ); ಪ್ರಲೀಯಂತೇ=ಲೀನವಾಗುತ್ತಿವೆ.

**ತಾ॥** ಬ್ರಹ್ಮದೇವನ ಹಗಲಿನ ಪ್ರಾರಂಭದಲ್ಲಿ ಅವ್ಯಕ್ತದಿಂದ (ಪ್ರಕೃತಿಯಿಂದ) ಸಮಸ್ತ ಚರಾಚರ ವಸ್ತುಗಳು ಹುಟ್ಟುತ್ತಿವೆ. ಮತ್ತೆ ರಾತ್ರಿಯ ಪ್ರಾರಂಭದಲ್ಲಿ ಆ ಅವ್ಯಕ್ತದಲ್ಲಿಯೇ ಲೀನವಾಗುತ್ತಿವೆ.

**ವ್ಯಾಖ್ಯೆ:** ಪರಮಾತ್ಮನೊಬ್ಬನನ್ನು ಬಿಟ್ಟು ಬೇರೆ ವಸ್ತುಗಳೆಲ್ಲವೂ ಹುಟ್ಟು, ಸಾವುಗಳನ್ನು ಹೊಂದಿಯೇ ಇವೆ. ಆ ಪದಾರ್ಥಗಳೆಲ್ಲವೂ ಪರಮಾತ್ಮನಲ್ಲಿಯೇ ಕಲ್ಪಿತವಾಗಿರುವ ಮಾಯೆಯಲ್ಲಿ (ಅವ್ಯಕ್ತ, ಮೂಲಪ್ರಕೃತಿಯಲ್ಲಿ) ಉದ್ಭವಿಸಿ ಲಯಿಸುತ್ತಿವೆ. ನಿದ್ರೆಯಲ್ಲಿ ತಮಸ್ಸಿನಿಂದ ಸ್ವಪ್ನ ಪದಾರ್ಥಗಳೆಲ್ಲವೂ ಸೃಷ್ಟಿಸಲ್ಪಟ್ಟು ಮತ್ತೆ ಆ ತಮಸ್ಸಿನಲ್ಲಿಯೇ ವಿಲೀನಗೊಳ್ಳುವುವು. ಎಚ್ಚೆತ್ತವನಿಗೆ ಅವುಗಳೊಂದಿಗೆ ಯಾವ ಸಂಬಂಧವೂ ಇರುವುದಿಲ್ಲ. ಹಾಗೆಯೇ ಈ ಸಮಸ್ತ ಜಗತ್ತು ಪರಮಾತ್ಮನ ಆಭಾಸ ರೂಪವಾದ ಅವ್ಯಕ್ತದಲ್ಲಿ (ಪ್ರಕೃತಿಯಲ್ಲಿ) ಉದ್ಭವಿಸುತ್ತ ಮತ್ತೆ ಅದರಲ್ಲಿಯೇ ಲಯಗೊಳ್ಳುತ್ತಿದೆ. ಈ ಸೃಷ್ಟಿಪ್ರಳಯದೊಂದಿಗೆ ವಾಸ್ತವವಾಗಿ ಪರಮಾತ್ಮನಿಗೆ ಯಾವ ಸಂಬಂಧವೂ ಇಲ್ಲ. ಆದರೂ ಅವುಗಳೆಲ್ಲವುಗಳಿಗೆ ಆಧಾರಭೂತನಾಗಿ ಅಧಿಷ್ಠಾನರೂಪನಾಗಿ ಬೆಳಗುತ್ತಿದ್ದಾನೆ.

ಪ್ರ : ಈ ಸಮಸ್ತ ಜಗತ್ಪದಾರ್ಥಗಳು ಯಾವುದರಿಂದ ಹುಟ್ಟುತ್ತಿವೆ?

ಉ : ಅವ್ಯಕ್ತದಿಂದ (ಅವ್ಯಕ್ತ=ಮೂಲಪ್ರಕೃತಿ+ಮಾಯೆ).

ಪ್ರ : ಯಾವಾಗ ಹುಟ್ಟುತ್ತದೆ.?

ಉ : ಬ್ರಹ್ಮದೇವನ ಹಗಲು ಪ್ರಾರಂಭವಾದಾಗ.

ಪ್ರ : ಯಾವಾಗ ಲಯಗೊಳ್ಳುವುವು? ಎಲ್ಲಿ ಲಯಗೊಳ್ಳುವುವು?

ಉ : ಬ್ರಹ್ಮದೇವನ ರಾತ್ರಿ ಪ್ರಾರಂಭವಾಗುವಾಗ ಲಯಗೊಳ್ಳುವುವು. ಎಲ್ಲಿ ಹುಟ್ಟುತ್ತಿರುವವೋ, ಆ ಅವ್ಯಕ್ತದಲ್ಲಿಯೇ ಮತ್ತೆ ಲಯಗೊಳ್ಳುತ್ತಿವೆ.

**ಅ॥** ದೈವತತ್ತ್ವವನ್ನು ತಿಳಿಯದ ಜೀವಿಗಳು ಈ ಪ್ರಕಾರವಾಗಿ ಮತ್ತೆ ಮತ್ತೆ ಹುಟ್ಟಿ ಮರಣಿಸುತ್ತಿರುತ್ತಾರೆ ಎಂದು ಹೇಳಲಾಗುತ್ತಿದೆ-

**೧೯. ಭೂತಗ್ರಾಮಃ ಸ ಏವಾಯಮ್ ಭೂತ್ವಾ ಭೂತ್ವಾ ಪ್ರಲೀಯತೇ**
**ರಾತ್ರ್ಯಾಗಮೇಽವಶಃ ಪಾರ್ಥ! ಪ್ರಭವತ್ಯಹರಾಗಮೇ**

**ಅರ್ಥ:** ಪಾರ್ಥ=ಓ ಅರ್ಜುನಾ! ಸಏವ ಅಯಮ್ ಭೂತಗ್ರಾಮಃ=ಅಂತಹ ಈ ಪ್ರಾಣಿ ಸಮೂಹವೇ; ಅವಶಃ=ಕರ್ಮಪರಾಧೀನವಾಗಿ; ಭೂತ್ವಾ ಭೂತ್ವಾ=ಹುಟ್ಟಿ ಹುಟ್ಟಿ (ಅನೇಕ ಜನ್ಮಗಳನ್ನು ಪಡೆದು) ರಾತ್ರ್ಯಾಗಮೇ= (ಬ್ರಹ್ಮದೇವನ)ರಾತ್ರಿಯ ಪ್ರಾರಂಭದಲ್ಲಿ; ಪ್ರಲೀಯತೆ=ಲಯಗೊಳ್ಳುತ್ತಿರುವುದು(ಮತ್ತೆ); ಅಹರಾಗಮೇ(ಬ್ರಹ್ಮದೇವನ) ಹಗಲಿನ ಪ್ರಾರಂಭದಲ್ಲಿ; ಪ್ರಭವತಿ=ಹುಟ್ಟುತ್ತಿದೆ;

**ತಾ॥** ಓ ಅರ್ಜುನಾ! ಈ (ಪೂರ್ವಕಲ್ಪದ) ಪ್ರಾಣಿಸಮೂಹವೆಲ್ಲಾ ಕರ್ಮಪರಾಧೀನವಾಗಿ ಹುಟ್ಟಿ ಹುಟ್ಟಿ (ಬ್ರಹ್ಮದೇವನ) ರಾತ್ರಿಯ ಪ್ರಾರಂಭದಲ್ಲಿ (ಮತ್ತೆ) ವಿಲೀನಗೊಳ್ಳುತ್ತಿದೆ. ಮತ್ತೆ (ಬ್ರಹ್ಮದೇವನ) ಹಗಲಿನ ಪ್ರಾರಂಭದಲ್ಲಿ ಹುಟ್ಟುತ್ತಿದೆ.

**ವ್ಯಾಖ್ಯೆ:** ಪೂರ್ವಕಲ್ಪದಲ್ಲಿಯ ಆ ಪ್ರಾಣಿ ಸಮುದಾಯವೇ ಕರ್ಮಪರಾಧೀನವಾಗಿ ಮತ್ತೆ ಈ ಕಲ್ಪದಲ್ಲಿ ಹುಟ್ಟುತ್ತಿದೆ. ಮತ್ತೆ ಮರಣಿಸಿ, ಮತ್ತೆ ಹುಟ್ಟಿ- ಈ ಸಂಸಾರ ಮಹಾಚಕ್ರದಲ್ಲಿ ಸುತ್ತುತ್ತಿದೆ. 'ಭೂತ್ವಾ ಭೂತ್ವಾ' ಎಂದು ಹೇಳಿರುವುದರಿಂದ ಜೀವಿಗೆ ಇರುವುದು ಕೆಲವು ಜನ್ಮಗಳಲ್ಲವೆಂದೂ, (ಜ್ಞಾನ ಪ್ರಾಪ್ತಿಯಿಂದ) ಕರ್ಮಗಳು ಅಂತ್ಯವಾಗದೆ ಇರುವವರೆಗೆ ಎಷ್ಟೋ ಜನ್ಮಗಳನ್ನು ಎತ್ತುತ್ತಿರುತ್ತಾನೆಂದು ಸ್ಪಷ್ಟವಾಗುತ್ತಿದೆ. ಕರ್ಮಬದ್ಧನಾದುದರಿಂದ ಜೀವಿಯನ್ನು 'ಅವಶ'ನೆಂದು ಹೇಳಲಾಗಿದೆ. 'ಆಶಾಪಾಶಾ' ಎನ್ನುವ ಸಂಕೋಲೆಗಳಿಂದ ಬದ್ಧನಾಗಿರುವುದರಿಂದ ಆತನು ಅಸ್ವತಂತ್ರನಾಗಿದ್ದಾನೆ. ಆದ್ದರಿಂದ ಪ್ರಯತ್ನ ಪೂರ್ವಕವಾಗಿ ಆತ್ಮಜ್ಞಾನವನ್ನು ಸಂಪಾದಿಸಿಕೊಂಡು ತದ್ವಾರ ಕರ್ಮಬಂಧವನ್ನು ಛೇದಿಸಿ ಹಾಕಿ, ಈ ಜನನ ಮರಣ ರೂಪ ಸಂಸಾರ ಚಕ್ರ ಪರಿಭ್ರಮಣೆಯಿಂದ ಬಿಡುಗಡೆ ಹೊಂದಬೇಕು. ಈಗಾಗಲೇ ಎಷ್ಟೋ ಕೋಟಿ ಜನ್ಮಗಳನ್ನು ಜೀವಿಯು ಎತ್ತಿದ್ದಾನೆ. ಯಾವುದೋ ಸುಕೃತವಶದಿಂದ ಈ ಮಾನವ ಜನ್ಮ ಬಂದಿದೆ. ಎಷ್ಟೋ ಸೌಭಾಗ್ಯದಿಂದ ಲಭಿಸಿದ ಇಂತಹ ಈ ಮಾನವ ಜನ್ಮವನ್ನು ಸದುಪಯೋಗಪಡಿಸಿಕೊಂಡು ಪರಮಾರ್ಥ ವಿಜ್ಞಾನವನ್ನು ಪಡೆದು ಜನ್ಮಪರಂಪರೆಗೆ ಪೂರ್ಣವಿರಾಮ(Full stop) ವನ್ನು ಹಾಕಬೇಕು. ಇಲ್ಲಿಯವರೆಗೆ ಅವಿವೇಕದಿಂದ ಜನರು ಅಲ್ಪವಿರಾಮವನ್ನು (Comma) ಹಾಕುತ್ತಾ ಬಂದಿದ್ದಾರೆ. ಆದ್ದರಿಂದ ಈಗಲಾದರೂ ಭಗವಂತನನ್ನಾಶ್ರಯಿಸಿ, ಜನ್ಮಪರಂಪರೆಯನ್ನು ಅಂತ್ಯಗೊಳಿಸಿಕೊಳ್ಳುವುದು ಒಳಿತು.

ಪ್ರ : (ಕರ್ಮರಹಿತವಾಗದ) ಜೀವಿಗಳ ಗತಿ ಏನು?

ಉ : ಅವರು ಸೃಷ್ಟಿಯ ಆರಂಭದಲ್ಲಿ ಹುಟ್ಟುತ್ತಾ, ಪ್ರಳಯದಲ್ಲಿ ಲಯಿಸುತ್ತಿದ್ದಾರೆ.

ಪ್ರ : ಕರ್ಮಬಂಧ ಯಾವುದರಿಂದ ತೊಲಗುವುದು?

ಉ : ಆತ್ಮಜ್ಞಾನದಿಂದ, ಸ್ವಸ್ವರೂಪಾನುಭವದಿಂದ (ಜ್ಞಾನಾಗ್ನಿ ಸರ್ವಕರ್ಮಾಣಿ ಭಸ್ಮಸಾತ್ ಕುರುತೇ ತಥಾ'- (೪-೩೭)

**ಅ॥** ಈ ಅವ್ಯಕ್ತಕ್ಕಿಂತ (ಪ್ರಕೃತಿಗಿಂತ) ಪರಮಾತ್ಮನು ಅತೀತನೆಂದು, ನಾಶರಹಿತನೆಂದು ಹೇಳಲಾಗುತ್ತಿದೆ-

೨೦. ಪರಸ್ತಸ್ಮಾತ್ತು ಭಾವೋಽನ್ಯೋಽವ್ಯಕ್ತೋಽವ್ಯಕ್ತಾತ್ಸನಾತನಃ
ಯಃ ಸ ಸರ್ವೇಷು ಭೂತೇಷು ನಶ್ಯತ್ಸು ನ ವಿನಶ್ಯತಿ

**ಅರ್ಥ:** ಯಃ ಭಾವಃ=ಯಾವ ಪರಮಾತ್ಮ ವಸ್ತು (ಅಕ್ಷರ ಪರಬ್ರಹ್ಮ) ತಸ್ಮಾತ್ ಅವ್ಯಕ್ತಾತ್=ಆ ಅವ್ಯಕ್ತಕ್ಕಿಂತ (ಪ್ರಕೃತಿಗಿಂತ); ಅನ್ಯಃ=ಬೇರೆಯಾದುದು; ಪರಃ=ಉತ್ತಮವಾದುದು; ಅವ್ಯಕ್ತಃ=ಇಂದ್ರಿಯ ಗಳಿಗೆ ಗೋಚರಿಸದೇ ಇರುವುದು; ಸನಾತನಃ=ಪುರಾತನವು (ಅನಾದಿಯು) ಆಗಿದೆ. ಸಃ (ಭಾವಃ)=ಆ ಪರಮಾತ್ಮವಸ್ತು; ಸರ್ವೇಷು ಭೂತೇಷು=ಸಮಸ್ತ ಪ್ರಾಣಿಕೋಟಿ; ನಶ್ಯತ್ಸು= ನಶಿಸುತ್ತಿದ್ದರೂ; ನ ವಿನಶ್ಯತಿ= ನಶಿಸುವುದಿಲ್ಲ.

**ತಾ||** ಯಾವ ಪರಮಾತ್ಮ ವಸ್ತುವು, ಆ ಅವ್ಯಕ್ತಕ್ಕಿಂತ (ಪ್ರಕೃತಿಗಿಂತ) ಬೇರೆಯಾದುದೂ, ಉತ್ತಮವಾದುದೂ, ಇಂದ್ರಿಯಗಳಿಗೆ ವ್ಯಕ್ತವಾಗದೆ ಇರುವುದೂ, ಪುರಾತನವಾದುದೂ ಆಗಿದೆಯೋ ಅದು ಸಮಸ್ತ ಪ್ರಾಣಿ ಕೋಟಿಗಳು ನಶಿಸಿದರೂ ತಾನು ನಶಿಸುವುದಿಲ್ಲ.

**ವ್ಯಾಖ್ಯೆ:** ಹಿಂದಿನ ಶ್ಲೋಕದಲ್ಲಿ ಅವ್ಯಕ್ತವನ್ನು (ಮಾಯಾ ಪ್ರಕೃತಿಯನ್ನು) ಕುರಿತು ಚರ್ಚಿಸಲಾಯಿತು. ಈಗ ಅವ್ಯಕ್ತಕ್ಕಿಂತ ಪರವಾದ ಬೇರೊಂದು ವಸ್ತುವಿದೆಯೆಂದು, ಅದು ಶಾಶ್ವತ ಪರಬ್ರಹ್ಮವೆಂದು ತಿಳಿಸುತ್ತಿದ್ದಾನೆ. ಮಾಯಾಂತರ್ಗತವಾದ ಪ್ರಪಂಚದಲ್ಲಿರುವ ಸಮಸ್ತ ಪ್ರಾಣಿಕೋಟಿಗಳಿಗೂ, ಆ ಪರಮಾತ್ಮನಿಗೂ ಬಹಳ ವ್ಯತ್ಯಾಸವಿದೆ. ಅದು ಹೇಗೆಂದರೆ-

| ಪ್ರಾಣಿ ಕೋಟಿಗಳು | ಪರಮಾತ್ಮ |
|---|---|
| ೧) ಮಾಯೆಗೆ ಒಳಗಾದವರು | ಮಾಯಾತೀತನು, ಪ್ರಕೃತಿಯನ್ನು ವಶಗೊಳಿಸಿಕೊಂಡಿರುವವನು |
| ೨) ಅಲ್ಪರೂಪಿಗಳು | ಮಹತ್ತರ ಚಿದ್ರೂಪಿ |
| ೩) ಇಂದ್ರಿಯಗಳಿಗೆ ಗೋಚರಿಸುವರು | ಇಂದ್ರಿಯಗಳಿಗೆ ಅಗೋಚರನು (ಅವ್ಯಕ್ತರೂಪಿ) |
| ೪) ಆದಿಯುಳ್ಳವರು | ಅನಾದಿರೂಪಿ (ಸನಾತನನು) |
| ೫) ನಾಶ ಹೊಂದುವವರು | ಅವಿನಾಶಿ |

ಈ ಪ್ರಕಾರವಾಗಿ ಸಮಸ್ತ ಭೂತಕೋಟಿಗಳಿಗೂ ಪರಮಾತ್ಮನಿಗೂ ಇರುವ ಭೇದವನ್ನು ಈ ಶ್ಲೋಕದಲ್ಲಿ ನಿರೂಪಿಸಲಾಗಿದೆ. ಇದರಿಂದ ಜೀವಿಯು ಭಗವಂತನನ್ನು ಹೇಗೆ ಅರ್ಚಿಸಬೇಕೋ, ಪೂಜಿಸಬೇಕೋ, ಧ್ಯಾನಿಸಬೇಕೋ ಸ್ಪಷ್ಟವಾಗುತ್ತಿದೆ. ನಶಿಸುವ ವಸ್ತು, ನಶಿಸದ ವಸ್ತುವನ್ನು ಧ್ಯಾನಿಸಿಯೇ ತೀರಬೇಕು. ಆದ್ದರಿಂದ ಜೀವಿಗಳು ನಶ್ವರವಾದ ತಮ್ಮ ಉಪಾಧಿಯೊಡನೆ ತಾದಾತ್ಮ್ಯ ಹೊಂದದೆ, ನಶ್ವರ ಪ್ರಾಪಂಚಿಕ ಐಶ್ವರ್ಯ ನೋಡಿ ಗರ್ವಿಸದೆ, ತಮ್ಮಲ್ಲಿಯೇ ದೇದೀಪ್ಯಮಾನವಾಗಿ ಬೆಳಗುತ್ತಿರುವ ಪರಾತ್ಪರನನ್ನು, ಹೃದಯಾಂತರ್ಗತಿಯಾದ ಆ ಪರಮಾತ್ಮನನ್ನು ಧ್ಯಾನಿಸುತ್ತ, ಕ್ರಮವಾಗಿ ಅದರೊಡನೆ ಐಕ್ಯ ಹೊಂದಿ ಜನ್ಮಸಾಫಲ್ಯವನ್ನು ಪಡೆಯಬೇಕು.

ಪ್ರ : ಪರಮಾತ್ಮ ಎಂತಹವನು?

ಉ : ೧) ಅವ್ಯಕ್ತಕ್ಕಿಂತ (ಮಾಯೆಗಿಂತ) ಬೇರೆಯಾದವನು. ೨) ಸರ್ವ ಶ್ರೇಷ್ಠನು ೩) ಇಂದ್ರಿಯಗಳಿಗೆ ಗೋಚರಿಸದವನು. ೪) ಅನಾದಿ ಸ್ವರೂಪಿ (ಸನಾತನನು) ೫) ಸಮಸ್ತ ಭೂತಕೋಟಿಗಳು ನಶಿಸಿದರೂ, ತಾನು ನಶಿಸದೇ ಉಳಿಯುವನು.

**ಅ||** ಅಂತಹ ಪರಮಾತ್ಮನನ್ನು ಹೊಂದಿದವನಿಗೆ ಮತ್ತೆ ಜನ್ಮವಿಲ್ಲವೆಂದು ಹೇಳಲಾಗುತ್ತಿದೆ-

೨೧. ಅವ್ಯಕ್ತೋಽಕ್ಷರ ಇತ್ಯುಕ್ತಃ ತಮಾಹುಃ ಪರಮಾಂ ಗತಿಮ್
ಯಂ ಪ್ರಾಪ್ಯ ನ ನಿವರ್ತಂತೇ ತದ್ಧಾಮ ಪರಮಂ ಮಮ

**ಅರ್ಥ:** (ಯಃ=ಯಾವ ಪರಮಾತ್ಮ); ಅವ್ಯಕ್ತಃ=(ಇಂದ್ರಿಯಗಳಿಗೆ) ಅಗೋಚರನೆಂದು; ಅಕ್ಷರಃ ಇತಿ=ನಾಶರಹಿತನೆಂದು; ಉಕ್ತಃ= ಹೇಳಲ್ಪಟ್ಟಿದೆಯೋ; ತಂ=ಆತನನ್ನು; ಪರಮಾಂ=ಸರ್ವೋತ್ತಮವಾದ; ಗತಿಂ=ಪ್ರಾಪ್ಯಸ್ಥಾನವಾಗಿ; ಆಹುಃ=(ವೇದವೇತ್ತರು) ಹೇಳುತ್ತಿದ್ದಾರೆ; ಯಂ=ಯಾವುದನ್ನು; ಪ್ರಾಪ್ಯ=ಹೊಂದಿ; ಅನಿವರ್ತಂತೇ=ಮತ್ತೆ ಜನ್ಮಿಸುವುದಿಲ್ಲವೋ; ತತ್=ಅದು; ಮಮ=ನನ್ನ; ಪರಮಂ=ಶ್ರೇಷ್ಠವಾದ; ಧಾಮ=ಸ್ಥಾನವು (ಸ್ವರೂಪ)

**ತಾ||** ಯಾವ ಪರಮಾತ್ಮನು (ಇಂದ್ರಿಯಗಳಿಗೆ) ಅಗೋಚರನೆಂದು, ನಾಶ ರಹಿತನೆಂದು ಹೇಳಲ್ಪಟ್ಟಿರುವನೋ, ಅವನೇ ಸರ್ವೋತ್ತಮವಾದ ಪ್ರಾಪ್ಯ ಸ್ಥಾನವೆಂದು (ವೇದವೇತ್ತರು) ಹೇಳುತ್ತಿರುವರು. ಯಾವುದನ್ನು ಪಡೆದ ನಂತರ ಪುನಃ ಈ ಸಂಸಾರದಲ್ಲಿ ಜನ್ಮವಿರುವುದಿಲ್ಲವೋ ಅದೇ ನನ್ನ ಶ್ರೇಷ್ಠವಾದ ಸ್ಥಾನ (ಸ್ವರೂಪವಾಗಿದೆ).

**ವ್ಯಾಖ್ಯೆ:** ಪ್ರಪಂಚದಲ್ಲಿಯ ಎಲ್ಲಾ ಪದವಿ ಹಾಗೂ ಸ್ಥಾನಗಳಲ್ಲಿ ಸರ್ವಶ್ರೇಷ್ಠವಾದುದು ಯಾವುದು ಎನ್ನುವ ವಿಷಯವನ್ನೂ, ಯಾವುದನ್ನು ಹೊಂದಿದ ನಂತರ ಮತ್ತೆ ಜೀವಿಗೆ ಪುನರಾವೃತ್ತಿ (ಪುನರ್ಜನ್ಮ) ಉಂಟಾಗುವು ದಿಲ್ಲವೆನ್ನುವುದನ್ನೂ ಇಲ್ಲಿ ಹೇಳಲಾಗಿದೆ. ಅಗೋಚರನೂ ಹಾಗು ನಾಶರಹಿತನೂ ಆದ ಪರಮಾತ್ಮನೇ ಸರ್ವೋತ್ತಮ ಪರಮಸ್ಥಾನವೆಂದು ವೇದ ಶಾಸ್ತ್ರಗಳೆಲ್ಲವೂ ಸಾರುತ್ತಿವೆ. ಹೀಗಿರುವಾಗ ಕ್ಷರವನ್ನು(ನಶಿಸುವ ಗುಣವುಳ್ಳವುಗಳನ್ನು) ಆಶ್ರಯಿಸಿದರೆ ಏನು ಪ್ರಯೋಜನ?? ಅಕ್ಷರವಾದುದನ್ನೇ (ನಶಿಸದೆ ಇರುವುದನ್ನೇ) ಆಶ್ರಯಿಸಬೇಕು. ಪ್ರಪಂಚದಲ್ಲಿಯ ಸಮಸ್ತ ದೃಶ್ಯ ಪದಾರ್ಥಗಳು ನಾಶವಾಗುವಂತಹವು. ಆದ್ದರಿಂದ ಅವು ಜೀವಿಗಳ ಉತ್ತಮವಾದ ಪರಮ ಸ್ಥಾನಗಳು ಆಗಲಾರವು. ಶಾಶ್ವತವಾದ ಪರಮ ಗತಿಯನ್ನು ಅನ್ವೇಷಿಸಬೇಕೇ ಹೊರತು, ಅಲ್ಪಗತಿ ಅಲ್ಪಸ್ಥಾನಗಳನ್ನಲ್ಲ. ಆ ಪರಮಗತಿ, ಅಕ್ಷರ ಪರಬ್ರಹ್ಮನೇ ಎಂದು ಇಲ್ಲಿ ಹೇಳಲಾಗಿದೆ. ಆದ್ದರಿಂದ ವಿವೇಕವಂತರಾದವರು ಮಾಯಾ ಪ್ರಭಾವಕ್ಕೆ ಒಳಗಾಗದೆ, ಸರ್ವ ಶ್ರೇಷ್ಠವಾದ ಪರಮಾತ್ಮಸ್ಥಾನವನ್ನು ಅವಲಂಬಿಸುವರೇ ಹೊರತು ಅಲ್ಪ ಪ್ರಾಪಂಚಿಕ ಪದವಿಗಳನ್ನಲ್ಲ. (Aim at the lion and miss it rather than hunt a jackal & catch it) ಗುರಿತಪ್ಪಿದರೂ ಸಿಂಹವನ್ನು ಬೇಟೆಯಾಡಬೇಕೇ ಹೊರತು, ಕೈಗೆ ಸಿಕ್ಕರೂ ನರಿಯಿಂದೇನು ಪ್ರಯೋಜನ? (ಆಂಗ್ಲ ಗಾದೆ).

ಇನ್ನು ಅಂತಹ ಪರಮಾತ್ಮನನ್ನು ಹೊಂದಿದವನಿಗೆ ಉಂಟಾಗುವ ಪ್ರಯೋಜನವೇನು ಎನ್ನುವುದನ್ನು ತಿಳಿಸಲಾಗುತ್ತಿದೆ. ಅದೇ ಜನ್ಮರಾಹಿತ್ಯ. ಪ್ರಪಂಚದಲ್ಲಿ ಯಾವ ಲೋಕವನ್ನು ಹೊಂದಿದರೂ ಕೂಡ ಜೀವಿಯು ಮತ್ತೆ ಜನ್ಮಿಸಲೇಬೇಕು. ಆದರೆ ಪರಮಾತ್ಮನನ್ನು ಹೊಂದಿದವನಿಗೆ ಮತ್ತೆ ಜನ್ಮವಿಲ್ಲ. ಸಂಸಾರ ದುಃಖವಿಲ್ಲ. ಮಾಯೆಗೆ ಒಳಗಾಗಿರುವ ಯಾವ ಸ್ಥಾನವೇ ಆಗಲಿ ವಿಕಾರದಿಂದ, ಪರಿಣಾಮದಿಂದ, ಹುಟ್ಟು ಸಾವುಗಳಿಂದ ಕೂಡಿರುವುದು. ಮಾಯೆಗೆ ಒಳಗಾಗದ ಸ್ಥಾನ ಒಂದೇ ಒಂದು. ಅದೇ ದೈವ ಸ್ಥಾನ. ಅಂತಹ ಪರಂಧಾಮವನ್ನು ಹೊಂದಿದವನು ಜನನ ಮರಣಾದಿಗಳಿಂದ ವಿಮುಕ್ತಿ ಹೊಂದಿ

ಪುನರಾವೃತ್ತಿ ರಹಿತ ಶಾಶ್ವತ ಕೈವಲ್ಯವನ್ನೇ ಹೊಂದುತ್ತಿದ್ದಾನೆ. ಆದ್ದರಿಂದ ಆ ಮಹೋನ್ನತ ಸ್ಥಾನವನ್ನೇ ಅನ್ವೇಷಿಸಬೇಕು. ಜನ್ಮದುಃಖ, ಜರಾದುಃಖ, ಮರಣದುಃಖಗಳು ಮಹಾ ಭಯಂಕರವಾದವುಗಳು. ದಾರುಣ ಸಂಕೋಲೆಯಲ್ಲಿ ಮತ್ತೆ ಬೀಳಬಾರದೆಂದರೆ ಅಕ್ಷಯವಾದ ಪರಮಾತ್ಮ ಸ್ಥಾನವನ್ನೇ ಆಶ್ರಯಿಸಬೇಕು.

ಪ್ರ : ಪ್ರಪಂಚದಲ್ಲಿಯ ಎಲ್ಲಾ ಸ್ಥಾನಗಳಲ್ಲಿ ಶ್ರೇಷ್ಠವಾದುದು ಯಾವುದು?

ಉ : ಅವ್ಯಕ್ತವಾದ, ನಾಶರಹಿತವಾದ ಪರಮಾತ್ಮಸ್ಥಾನ.

ಪ್ರ : ಅದನ್ನು ಹೊಂದಿದವರಿಗೆ ಉಂಟಾಗುವ ಪ್ರಯೋಜನವೇನು?

ಉ : ಅವರು ಮತ್ತೆ ಜನನ ಮರಣಾದಿ ಸಂಸಾರ ದುಃಖದಲ್ಲಿ ಎಂದಿಗೂ ಬೀಳುವುದಿಲ್ಲ. ಅಂದರೆ ಮತ್ತೆ ಜನ್ಮಿಸುವುದಿಲ್ಲ.

ಪ್ರ : ಯಾವುದನ್ನು ಹೊಂದಿದ ನಂತರ ಪುನಃ ಜೀವಿಯು ಜನ್ಮಾದಿಗಳನ್ನು ಹೊಂದುವುದಿಲ್ಲ?

ಉ : ಪರಮಾತ್ಮ ಪದವಿಯನ್ನು

ಪ್ರ : ಪರಮಾತ್ಮ ಎಂತಹವನು?

ಉ : ಅವ್ಯಕ್ತನು (ಇಂದ್ರಿಯಗಳಿಗೆ ಅಗೋಚರನು, ನಾಶರಹಿತನು)

**ಅ||** ಇನ್ನು ಆ ಪರಮಾತ್ಮನನ್ನು ಹೊಂದುವ ಉಪಾಯವನ್ನು ತಿಳಿಸಲಾಗುತ್ತಿದೆ-

**೨೨. ಪುರುಷಃ ಸ ಪರಃ ಪಾರ್ಥ ಭಕ್ತ್ಯಾ ಲಭ್ಯಸ್ತ್ವನನ್ಯಯಾ**
**ಯಸ್ಯಾಂತಃಸ್ಥಾನಿ ಭೂತಾನಿ ಯೇನ ಸರ್ವಮಿದಂ ತತಮ್**

**ಅರ್ಥ:** ಪಾರ್ಥ=ಓ ಅರ್ಜುನಾ! ಭೂತಾನಿ=ಪ್ರಾಣಿಗಳು; ಯಸ್ಯ=ಯಾರ; ಅಂತಃಸ್ಥಾನಿ=ಒಳಗಿರುವನೋ; ಯೇನ=ಯಾರಿಂದ; ಇದಂ ಸರ್ವಂ=ಈ ಸಮಸ್ತ ಜಗತ್ತು; ತತಂ=ವ್ಯಾಪಿಸಲ್ಪಟ್ಟಿದೆಯೋ; ಸಃ ಪರಃ ಪುರುಷಃ=ಆ ಪರಮಪುರುಷನು; ಅನನ್ಯಯಾ=ಅನನ್ಯವಾದ (ಇತರೆ ವಿಷಯಗಳ ಅಂಟಿಲ್ಲದೆ, ಅಚಂಚಲವಾದ); ಭಕ್ತ್ಯಾತು=ಭಕ್ತಿಯಿಂದ; ಲಭ್ಯಃ= ಹೊಂದಬಲ್ಲವನಾಗಿದ್ದಾನೆ.

**ತಾ||** ಓ ಅರ್ಜುನಾ! ಯಾರಲ್ಲಿ ಈ ಪ್ರಾಣಿಕೋಟಿಗಳೆಲ್ಲಾ ನಿವಸಿಸುತ್ತಿವೆಯೋ, ಯಾರಿಂದ ಈ ಸಮಸ್ತ ಜಗತ್ತು ವ್ಯಾಪಿಸಲ್ಪಟ್ಟಿದೆಯೋ ಅಂತಹ ಪರಮ ಪುರುಷನು (ಪರಮಾತ್ಮ) ಅನನ್ಯವಾದ (ಅಚಂಚಲವಾದ) ಭಕ್ತಿಯಿಂದಲೇ ಹೊಂದಬಲ್ಲವನಾಗಿದ್ದಾನೆ.

**ವ್ಯಾಖ್ಯೆ:** ಪರಮಾತ್ಮನ ಸ್ವರೂಪ ಹಾಗು ಅವನನ್ನು ಹೊಂದುವ ಮಾರ್ಗ ಅಂದರೆ ಸಾಧ್ಯವಸ್ತು ಹಾಗು ಸಾಧನೆ, ಎರಡನ್ನೂ ಈ ಶ್ಲೋಕದಲ್ಲಿ ತಿಳಿಸಲಾಗಿದೆ. ಅನೇಕ ಪ್ರಾಣಿ ಕೋಟಿಗಳಿಂದ ತುಂಬಿರುವ ಈ ಪ್ರಪಂಚವೆಲ್ಲಾ ಯಾವುದರಲ್ಲಿ ಅಡಗಿದೆ? ಇದಕ್ಕೆ ಆಧಾರವೇನು? ಪರಮಾತ್ಮ ಎನ್ನುವ ಆಧಾರದ ಮೇಲೆ, ಅಧಿಷ್ಠಾನದ ಮೇಲೆ ಈ ಚರಾಚರ ಪ್ರಪಂಚವೆಲ್ಲವೂ ರಜ್ಜು (ಹಗ್ಗ) ವಿನಲ್ಲಿಯ ಸರ್ಪದಂತೆ ಕಲ್ಪಿತವಾಗಿದೆ. ಆರೋಪಿತ ವಸ್ತುವಿನ ಸ್ಥಾನ, ಅದಿಷ್ಠಾನ ವಸ್ತುವೇ ಎನ್ನುವುದು ಸರ್ವವಿದಿತ. ಜಗತ್ತೆಲ್ಲಾ ಸದ್ವಸ್ತುವಾದ ಪರಮಾತ್ಮನಲ್ಲಿ ಅಧ್ಯಸ್ತವಾಗಿ ಬೆಳಗುತ್ತಿದೆ. ಸ್ವಪ್ನಲೋಕವೆಲ್ಲವೂ ಎಚ್ಚೆತ್ತವನಲ್ಲಿರುವಂತೆ ಈ ಸಮಸ್ತ ಸ್ಥಾವರ ಜಂಗಮ ಪ್ರಾಣಿ ಕೋಟಿಯುಕ್ತ ಪ್ರಪಂಚವೆಲ್ಲವೂ ಆತ್ಮದಲ್ಲಿಯೇ ಇದೆ. ಆತ್ಮದಿಂದಲೇ ಅದು ಪರಿವ್ಯಾಪ್ತವಾಗಿದೆ. ಬೆಣ್ಣೆ ಹೇಗೆ ಹಾಲಿನಲ್ಲೆಲ್ಲಾ ವ್ಯಾಪಿಸಿದೆಯೋ, ಆ ಪ್ರಕಾರವೇ ಪರಮಾತ್ಮ ಜಗತ್ತಿನಲ್ಲೆಲ್ಲಾ ವ್ಯಾಪಿಸಿದ್ದಾನೆ. **(ಏನ ಸರ್ವಮಿದಂತತಂ).**

ಅಂತಹ ಸರ್ವವ್ಯಾಪಕ ಪರಮಾತ್ಮ ಜೀವಿಗಳಿಗೆ ಹೇಗೆ ಲಭ್ಯವಾಗುವನು? ಎನ್ನುವ ಪ್ರಶ್ನೆಗೆ ಇಲ್ಲಿ ಚುಟಿಯಾದ ಉತ್ತರ ಕೊಡಲಾಗಿದೆ. **'ಭಕ್ತ್ಯಾ ಲಭ್ಯಸ್ತ್ವನನ್ಯಯಾ'** ಅನನ್ಯ ಭಕ್ತಿಯಿಂದ ಆತನನ್ನು ಪಡೆಯಬಹುದು ಎಂದು ಹೇಳಲಾಗಿದೆ. 'ಅನನ್ಯ ಭಕ್ತಿ' ಎಂದು ಹೇಳಿರುವುದರಿಂದ ಮೋಕ್ಷ ಪ್ರಾಪ್ತಿಗೆ ಅಲ್ಪ ಸ್ವಲ್ಪ ಭಕ್ತಿ ಸಾಕಾಗದೆಂದೂ, ತೀವ್ರತರ ಭಕ್ತಿ ಅವಶ್ಯಕವೆಂದು ಸ್ಪಷ್ಟವಾಗುತ್ತಿದೆ. ಅನ್ಯವಲ್ಲದ್ದು 'ಅನನ್ಯ', ಅಂದರೆ ಭಗವಂತನ ಹೊರತು ಇತರೆ ಯಾವುದೇ ವಸ್ತುಗಳ ಮೇಲೆ ಆಸಕ್ತಿಯಿಲ್ಲದೇ ಇರುವುದೆಂದರ್ಥ. ನಶ್ವರಗಳಾದ ಪ್ರಾಪಂಚಿಕ ವಿಷಯಗಳ ಮೇಲೆ ಸ್ವಲ್ಪ ಪ್ರೀತಿ, ಭಗವಂತನ ಮೇಲೆ ಸ್ವಲ್ಪ ಪ್ರೀತಿಯಿದ್ದರೆ ಅದನ್ನು ಅನನ್ಯ ಪ್ರೇಮ ಅಥವ ಅನನ್ಯ ಭಕ್ತಿ ಎಂದು ಕರೆಯಲಾಗುವುದಿಲ್ಲ. ಭಕ್ತಿ ಮಾರ್ಗವು ಸುಲಭವಾದದ್ದು. ಆದ್ದರಿಂದ ಪ್ರತಿ ಅಧ್ಯಾಯದ ಕೊನೆಯಲ್ಲಿ ಅದನ್ನು ಹೇಳುತ್ತಾ ಬಂದಿರುತ್ತಾನೆ. ಯಾವ ಯೋಗವನ್ನೇ ಬೋಧಿಸಲಿ ಅದರ ಕೊನೆಯಲ್ಲಿ ಭಕ್ತಿಯನ್ನು ಪ್ರಶಂಸಿಸಲಾಗಿದೆ. ಏಕೆಂದರೆ ಅದು ಸುಲಭವಷ್ಟೇ ಅಲ್ಲದೆ ಅದರ ಸಂಯೋಗವೂ ಅವಶ್ಯಕವಾಗಿದೆ.

ಈ ಪ್ರಕಾರವಾಗಿ, ಅನನ್ಯ ಭಕ್ತಿಯಿಂದ ಆ ಪರಮ ಪುರುಷನನ್ನು (ಪರಮಾತ್ಮನನ್ನು) ತಪ್ಪದೆ ಹೊಂದಬಹುದೆಂದು ಭಗವಂತನು ಇಲ್ಲಿ ಸ್ಪಷ್ಟವಾಗಿ ತಿಳಿಸಿರುವುದರಿಂದ, ಈ ವಿಷಯದಲ್ಲಿ ಜನರು ಎಳ್ಳಷ್ಟೂ ಸಂಶಯ ಹೊಂದದೆ, ಸಾಧನೆಯನ್ನು ಕೂಡಲೇ ಆಚರಿಸಿ, ಮೋಕ್ಷ ಸಾಮ್ರಾಜ್ಯಾಧಿ ಪತಿಗಳಾಗಬೇಕು. ದೇವರನ್ನು ಹೊಂದಲು ಮಾರ್ಗವೇನು ಎಂದು ಅನೇಕರು ಪ್ರಶ್ನಿಸುತ್ತಿದ್ದಾರೆ. ಅಂತಹವರು ಈ ಶ್ಲೋಕವನ್ನು ಚೆನ್ನಾಗಿ ಗ್ರಹಿಸಿ, ಅನನ್ಯ ಭಕ್ತಿಯೇ ಅದಕ್ಕೆ ಮಾರ್ಗವೆಂದು ನಂಬಿ ಅಂತಹ ಪರಾಭಕ್ತಿಯನ್ನು ಪ್ರಯತ್ನ ಪೂರ್ವಕವಾಗಿ ಸಾಧಿಸಬೇಕು.

ಇಲ್ಲಿ ಭಗವಂತನನ್ನು 'ಪರಮ ಪುರುಷ'ನೆಂದು ವರ್ಣಿಸಲಾಗಿದೆ. ಬೇರೆಯವರೆಲ್ಲಾ ಸಾಮಾನ್ಯ ಪುರುಷರು. ಆತನೊಬ್ಬನೇ ಪರಮ ಪುರುಷ. 'ಪುರುಷ' (ಜೀವಿಯು) ಭಕ್ತ್ಯಾದಿ ಸಾಧನೆಗಳನ್ನಾಶ್ರಯಿಸಿ ಪರಮಾತ್ಮನಲ್ಲಿ ಐಕ್ಯವಾಗಿ ಪರಮ ಪುರುಷನಾಗಬೇಕು. ಅದು ಜೀವಿತ ಲಕ್ಷ್ಯವೆಂದು ಪ್ರತಿಯೊಬ್ಬರೂ ಗುರ್ತಿಸಬೇಕು.

ಪ್ರ : ಈ ಸಮಸ್ತ ಜಗತ್ತು ಯಾರಲ್ಲಿ ಸ್ಥಿತಗೊಂಡಿದೆ? ಯಾರಿಂದ ವ್ಯಾಪ್ತವಾಗಿದೆ?

ಉ : ಪರಮಾತ್ಮನಲ್ಲಿ ಸ್ಥಿತಗೊಂಡಿದೆ. ಆತನಿಂದಲೇ ವ್ಯಾಪ್ತವಾಗಿದೆ.

ಪ್ರ : ಆ ಪರಮಾತ್ಮ ಹೇಗೆ ಲಭ್ಯವಾಗುವನು?

ಉ : ಅನನ್ಯ ಭಕ್ತಿಯಿಂದ

**ಅ||** ಯಾವ ಮಾರ್ಗದಲ್ಲಿ ಹೋದರೆ ಜನರು ಮತ್ತೆ ಸಂಸಾರದಲ್ಲಿ ಜನ್ಮಿಸುವುದಿಲ್ಲವೋ, ಯಾವ ಮಾರ್ಗದಲ್ಲಿ ಹೋದರೆ ಮತ್ತೆ ಜನ್ಮಿಸುವರೋ, ಆ ಎರಡು ಮಾರ್ಗಗಳನ್ನು ಕುರಿತು ನಾಲ್ಕು ಶ್ಲೋಕಗಳಲ್ಲಿ ಹೇಳಲಾಗಿದೆ-

**೨೩. ಯತ್ರ ಕಾಲೇ ತ್ವನಾವೃತ್ತಿಮಾವೃತ್ತಿಂ ಚೈವ ಯೋಗಿನಃ**
**ಪ್ರಯಾತಾ ಯಾಂತಿ ತಂ ಕಾಲಂ ವಕ್ಷ್ಯಾಮಿ ಭರತರ್ಷಭ**

**ಅರ್ಥ:** ಭರತರ್ಷಭ=ಭರತವಂಶ ಶ್ರೇಷ್ಠನಾದ ಓ ಅರ್ಜುನಾ! ಯತ್ರಕಾಲೇ=ಯಾವ ಕಾಲದಲ್ಲಿ; ಪ್ರಯಾತಾಃ=(ಶರೀರವನ್ನು ಬಿಟ್ಟು) ಹೋದರೆ; ಯೋಗಿನಃ=ಯೋಗಿಗಳು; ಅನಾವೃತ್ತಿಂತು=ಪುನರ್ಜನ್ಮ ರಾಹಿತ್ಯವಾದ; ಆವೃತ್ತಿಂ ಚ ಏವ=(ಯಾವ ಕಾಲದಲ್ಲಿ ಹೋದ ಯೋಗಿಗಳು) ಪುನರಾವೃತ್ತಿಯನ್ನು (ಪುನರ್ಜನ್ಮವನ್ನು); ಯಾಂತಿ=ಹೊಂದುತ್ತಿದ್ದಾರೋ; ತಂ ಕಾಲಂ=ಆ ಕಾಲವನ್ನು; ವಕ್ಷ್ಯಾಮಿ= ಹೇಳುತ್ತಿದ್ದೇನೆ.

**ತಾ||** ಭರತ ಕುಲಶ್ರೇಷ್ಠನಾದ ಓ ಅರ್ಜುನಾ! ಯಾವ ಕಾಲದಲ್ಲಿ (ಇಲ್ಲವೆ ಯಾವ ಮಾರ್ಗದಲ್ಲಿ) (ಶರೀರವನ್ನು ಬಿಟ್ಟು) ಹೋದ ಯೋಗಿಗಳು ಪುನಃ ಬರುವುದಿಲ್ಲವೋ (ಜನ್ಮವನ್ನು ಹೊಂದುವುದಿಲ್ಲವೋ), ಯಾವ ಕಾಲದಲ್ಲಿ ಹೋದ ಯೋಗಿಗಳು ಪುನಃ ಬರುವರೋ (ಜನ್ಮಿಸುವರೋ), ಆಯಾ ಕಾಲ ವಿಶೇಷಗಳನ್ನು ಹೇಳುತ್ತಿದ್ದೇನೆ. (ಕೇಳು)-

**ಅ||** ಪುನರಾವೃತ್ತಿರಹಿತವಾದ 'ಅರ್ಚಿರಾದಿ' ಮಾರ್ಗಗಳನ್ನು ತಿಳಿಸಲಾಗುತ್ತಿದೆ-

**೨೪. ಅಗ್ನಿರ್ಜ್ಯೋತಿರಹಃ ಶುಕ್ಲಃ ಷಣ್ಮಾಸಾ ಉತ್ತರಾಯಣಮ್**
**ತತ್ರ ಪ್ರಯಾತಾ ಗಚ್ಛಂತಿ ಬ್ರಹ್ಮ ಬ್ರಹ್ಮವಿದೋ ಜನಾಃ**

**ಅರ್ಥ:** ಅಗ್ನಿಃ=ಅಗ್ನಿ; ಜ್ಯೋತಿಃ=ಪ್ರಕಾಶ; ಅಹಃ=ಹಗಲು; ಶುಕ್ಲಃ=ಶುಕ್ಲ ಪಕ್ಷ; ಷಣ್ಮಾಸಾಃ=ಆರು ತಿಂಗಳುಗಳ; ಉತ್ತರಾಯಣಮ್=ಉತ್ತರಾಯಣ; (ಯತ್ರ ಸಂತಿ=ಯಾವ ಮಾರ್ಗಗಳಿವೆಯೋ;) ತತ್ರ=ಆ ಮಾರ್ಗದಲ್ಲಿ; ಪ್ರಯಾತಾಃ= ಹೋದರೆ; ಬ್ರಹ್ಮವಿದಃ=ಬ್ರಹ್ಮವೇತ್ತರಾದ; ಜನಾಃ=ಜನರು; ಬ್ರಹ್ಮ= ಬ್ರಹ್ಮವನ್ನು; ಗಚ್ಛಂತಿ=ಹೊಂದುತ್ತಿದ್ದಾರೆ.

**ತಾ||** ಅಗ್ನಿ, ಪ್ರಕಾಶ, ಹಗಲು, ಶುಕ್ಲಪಕ್ಷ, ಆರು ತಿಂಗಳುಗಳ ಉತ್ತರಾಯಣಗಳು ಯಾವ ಮಾರ್ಗದಲ್ಲಿರುವುವೋ, ಆ ಮಾರ್ಗದಲ್ಲಿ ಹೋದ ಬ್ರಹ್ಮವೇತ್ತರಾದ ಜನರು ಬ್ರಹ್ಮವನ್ನೇ ಹೊಂದುತ್ತಿದ್ದಾರೆ.

**ವ್ಯಾಖ್ಯೆ:** ಜ್ಞಾನವು ಪ್ರಕಾಶ, ಅಜ್ಞಾನವು ಕತ್ತಲು. ಪ್ರಕಾಶರೂಪವಾದ ಬ್ರಹ್ಮಜ್ಞಾನ ಹೊಂದಿರುವವನು ಬ್ರಹ್ಮನನ್ನೇ ಹೊಂದುವನು. ದೇಹವನ್ನು ಬಿಡುವಾಗಷ್ಟೇ ಅಲ್ಲದೆ, ದೇಹದೊಡನೆ ಕೂಡಿದ್ದಾಗ ಸಹ ಆತ ಬ್ರಹ್ಮಸ್ವರೂಪಿಯಾಗಿಯೇ ಇರುವನು. 'ಬ್ರಹ್ಮವಿದ್ಬ್ರಹ್ಮೈವ ಭವತಿ'- ಬ್ರಹ್ಮವೇತ್ತನು ಬ್ರಹ್ಮವೇ ಆಗುತ್ತಾನೆಂದು ಶ್ರುತಿ ಹೇಳುತ್ತಿದೆ. ಈ ಶ್ಲೋಕದಲ್ಲಿ 'ಬ್ರಹ್ಮ ವಿದೋ ಜನಾಃ' ಎಂದು ಹೇಳಿರುವುದರಿಂದ ಬ್ರಹ್ಮವನ್ನು ತಿಳಿದವರೇ (ಅನುಭೂತಿಗೊಳಿಸಿಕೊಂಡವರೇ) ಆ ಮಹೋನ್ನತ ಸ್ಥಿತಿಯನ್ನು ಪಡೆಯುವರಾಗಲಿ ಬೇರೆಯವರಲ್ಲವೆಂದು ಸ್ಪಷ್ಟವಾಗುತ್ತಿದೆ. 'ಜನಾಃ' (ಜನರು) ಎನ್ನುವ ಸರ್ವೇಸಾಮಾನ್ಯ ಪದವನ್ನು ಉಪಯೋಗಿಸಲ್ಪಟ್ಟಿರು ವುದರಿಂದ ಜಾತಿ ಮತ ಕುಲ ಭೇದಗಳಿಲ್ಲದೆ ಸರ್ವರೂ ಬ್ರಹ್ಮಜ್ಞಾನಕ್ಕೆ ಅರ್ಹರು ಹಾಗು ನಿಸ್ಸಂಶಯವಾಗಿ ಬ್ರಹ್ಮಪದವಿಯನ್ನು ಹೊಂದ ಬಹುದೆಂದು ತಿಳಿಯುತ್ತದೆ.

ಬ್ರಹ್ಮ ಜ್ಞಾನವು ತೇಜೋವಂತವಾದುದಾಗಿರುವುದರಿಂದ ಪ್ರಕಾಶ ದ್ಯೋತಕಗಳಾದ ಕೆಲವು ವಸ್ತುಗಳನ್ನು ಇಲ್ಲಿ ಹೇಳಲಾಗಿದೆ- ೧) ಅಗ್ನಿ ೨) ಜ್ಯೋತಿ ೩) ಹಗಲು ೪) ಶುಕ್ಲಪಕ್ಷ ೫) ಉತ್ತರಾಯಣ. ಇದರಲ್ಲಿ ಮೊದಲ ನಾಲ್ಕು ಪ್ರಕಾಶವನ್ನು ಸೂಚಿಸುವುವು. ಐದನೆಯದಾದ ಉತ್ತರಾಯಣವು ಊರ್ಧ್ವಗತಿಯನ್ನು ನಿರೂಪಿಸುವುದು. ಪ್ರಕಾಶ ರೂಪವಾದ ಜ್ಞಾನವನ್ನು ಆಚರಿಸುವವನು ಬ್ರಹ್ಮವನ್ನು ತಪ್ಪದೆ ಹೊಂದುವನೆಂದು ಈ ಶ್ಲೋಕದ ಅಂತರಾರ್ಥ. ಜೀವಿಯು ಪರಮಾತ್ಮನನ್ನು ಹೊಂದಬೇಕೆಂದರೆ ಪ್ರಕಾಶದಲ್ಲಿಯೇ- ಅಂದರೆ ಜ್ಞಾನದಲ್ಲಿಯೇ, ಸ್ವಸ್ವರೂಪ ವಿಜ್ಞಾನದಲ್ಲಿ ಸ್ಥಿತಿಯುಳ್ಳವನಾಗಿರಬೇಕೇ ಹೊರತು ಅಂಧಕಾರ ರೂಪವಾದ ಅಜ್ಞಾನದಲ್ಲಲ್ಲ. ಊರ್ಧ್ವಮಾರ್ಗದಲ್ಲೇ, ಸತ್ಯಮಾರ್ಗದಲ್ಲೇ ಹೋಗಬೇಕೇ ಹೊರತು, ಅಧೋಮಾರ್ಗ ಅಸತ್ಯ ಮಾರ್ಗಗಳಲ್ಲಲ್ಲ. ಊರ್ಧ್ವದೃಷ್ಟಿ (ಆತ್ಮದೃಷ್ಟಿ) ಹೊಂದಿರಬೇಕೇ ಹೊರತು, ಅಧೋದೃಷ್ಟಿ (ಪ್ರಾಪಂಚಿಕ ವಿಷಯದೃಷ್ಟಿ, ಪಾಪದೃಷ್ಟಿ)ಯನ್ನಲ್ಲ. ಈ ಪ್ರಕಾರವಾದ ಊರ್ಧ್ವ ದೃಷ್ಟಿಯನ್ನು, ಪ್ರಕಾಶರೂಪ ಜ್ಞಾನದೃಷ್ಟಿಯನ್ನು ಉತ್ತರಾಯಣ, ಅಗ್ನಿ ಮುಂತಾದ ಪ್ರಕಾಶಕ ಪದಾರ್ಥಗಳು ಸೂಚಿಸುತ್ತವೆ.

ಪ್ರ : ಬ್ರಹ್ಮವೇತ್ತರು ಮರಣಾನಂತರ ಯಾವ ಮಾರ್ಗದಲ್ಲಿ ಹೋಗುವರು?

ಉ : ೧) ಅಗ್ನಿ ೨) ಪ್ರಕಾಶ ೩) ಹಗಲು ೪) ಶುಕ್ಲಪಕ್ಷ ೫) ಉತ್ತರಾಯಣ ಎನ್ನುವ ಈ ಐದನ್ನೂ ಹೊಂದಿರುವ ಮಾರ್ಗದ ಮೂಲಕ ಹೋಗುವರು.

ಪ್ರ : ಬ್ರಹ್ಮವೇತ್ತರು ಏನನ್ನು ಹೊಂದುವರು?

ಉ : ಬ್ರಹ್ಮವನ್ನೇ ಹೊಂದುವರು.

**ಅ||** ಇನ್ನು ಪುನರಾವೃತ್ತಿಗೊಳಗಾಗಿರುವವರ 'ಧೂಮಾದಿ' ಮಾರ್ಗಗಳನ್ನು ಹೇಳಲಾಗುತ್ತಿದೆ-

**೨೫. ಧೂಮೋ ರಾತ್ರಿಸ್ತಥಾ ಕೃಷ್ಣಃ ಷಣ್ಮಾಸಾ ದಕ್ಷಿಣಾಯನಮ್**
**ತತ್ರ ಚಾಂದ್ರಮಸಂ ಜ್ಯೋತಿರ್ಯೋಗೀ ಪ್ರಾಪ್ಯ ನಿವರ್ತತೇ**

**ಅರ್ಥ:** ಧೂಮಃ=ಹೊಗೆ; ರಾತ್ರಿಃ=ರಾತ್ರಿ; ತಥಾ=ಆ ಪ್ರಕಾರವೇ; ಕೃಷ್ಣಃ= ಕೃಷ್ಣಪಕ್ಷ; ಷಣ್ಮಾಸಾಃ=ಆರು ತಿಂಗಳುಗಳ; ದಕ್ಷಿಣಾಯನಂ=ದಕ್ಷಿಣಾಯನವು (ಯತ್ರಸಂತಿ=ಯಾವ ಮಾರ್ಗವನ್ನು ಹೊಂದಿರುವುವೋ); ತತ್ರ=ಆ ಮಾರ್ಗದಲ್ಲಿ (ಹೋದರೆ); ಯೋಗೀ= ಯೋಗಿ (ಸಕಾಮ ಕರ್ಮಯೋಗಿ); ಚಾಂದ್ರಮಸಂ=ಚಂದ್ರ ಸಂಬಂಧವಾದ; ಜ್ಯೋತಿಃ=ಪ್ರಕಾಶವನ್ನು; ಪ್ರಾಪ್ಯ= ಹೊಂದಿ; ನಿವರ್ತತೇ=ಮತ್ತೆ ಬರುತ್ತಿದ್ದಾನೆ (ಪುನಃ ಜನ್ಮಿಸುತ್ತಿದ್ದಾನೆ).

**ತಾ||** ಹೊಗೆ, ರಾತ್ರಿ, ಕೃಷ್ಣಪಕ್ಷ, ಆರು ತಿಂಗಳುಗಳ ದಕ್ಷಿಣಾಯನವು ಯಾವ ಮಾರ್ಗದಲ್ಲಿ ಇರುವುವೋ ಆ ಮಾರ್ಗದಲ್ಲಿ (ಹೋದ) ಸಕಾಮ ಕರ್ಮಯೋಗಿ ಚಂದ್ರಸಂಬಂಧವಾದ ಪ್ರಕಾಶವನ್ನು ಹೊಂದಿ ಮತ್ತೆ ಹಿಂದೆ ಬರುತ್ತಿದ್ದಾನೆ. (ಪುನಃ ಜನ್ಮಿಸುತ್ತಿದ್ದಾನೆ).

**ವ್ಯಾಖ್ಯೆ:** ಜ್ಞಾನವು ಪ್ರಕಾಶರೂಪವಾದದ್ದಾದರೆ ಅಜ್ಞಾನವು ಅಂಧಕಾರ ರೂಪದ್ದು. ಅಂತಹ ಅಂಧಕಾರ ಮಾರ್ಗದಲ್ಲಿ ಹೋಗುವವನು ಪುನಃ ಹುಟ್ಟಬೇಕಾಗುವುದು. ಮತ್ತೆ ಸಂಸಾರ ಚಕ್ರದಲ್ಲಿ ಸಿಕ್ಕಿ ಹಾಕಿಕೊಳ್ಳುವನು. ಇಲ್ಲಿ 'ಯೋಗಿ' ಎಂದರೆ ಫಲಾಪೇಕ್ಷೆಯಿಂದ ಕೂಡಿರುವ ಕರ್ಮಗಳನ್ನಾಚರಿಸುವವನು ಎಂದರ್ಥ. ಆತ್ಮಜ್ಞಾನವಾಗದೇ ಇರುವುದರಿಂದ ಆತನು ಮತ್ತೆ ಹುಟ್ಟುವನು. ಅಜ್ಞಾನಾಂಧಕಾರವನ್ನು ಇಲ್ಲಿ ಕೆಲವು ವಿಷಯಗಳಿಂದ ಸೂಚಿಸಲಾಗಿದೆ. ಅವು ಯಾವುವೆಂದರೆ- ೧) ಹೊಗೆ ೨) ರಾತ್ರಿ ೩) ಕೃಷ್ಣಪಕ್ಷ ೪) ದಕ್ಷಿಣಾಯನ. ಇವುಗಳಲ್ಲಿ ಮೊದಲ ಮೂರು ಅಂಧಕಾರ ಸೂಚಕಗಳಾಗಿವೆ. ನಾಲ್ಕನೆಯದು ಅಧೋಮಾರ್ಗವನ್ನು ಸೂಚಿಸುತ್ತದೆ. ಇಂತಹ ಅಂಧಕಾರ ಮಾರ್ಗದಲ್ಲಿ ಹೋಗುವವನು ಅಂದರೆ ಆತ್ಮಜ್ಞಾನವಿಲ್ಲದವನು ಆತನ ಕರ್ಮಕ್ಕನು ಗುಣವಾಗಿ ಚಂದ್ರಲೋಕ ಮುಂತಾದ ಅಧೋಲೋಕಗಳನ್ನು ಹೊಂದಿ ಮತ್ತೆ ಸ್ವಲ್ಪ ಕಾಲದ ನಂತರ ಭೂಲೋಕದಲ್ಲಿ ಜನ್ಮಿಸುವನು. **(ಕ್ಷೀಣೇ ಪುಣ್ಯೇ ಮರ್ತ್ಯ ಲೋಕಂ**

ವಿಶಂತಿ). ಮೇಲೆ ತಿಳಿಸಿದ ದಕ್ಷಿಣಾಯನ ಅವಿದ್ಯಾವಶದಿಂದ ಜೀವಿಗೆ ಉಂಟಾಗುವ ಅಧೋದೃಷ್ಟಿಯನ್ನು ಸೂಚಿಸುತ್ತದೆ.

'ಉತ್ತರಾಯಣ, ದಕ್ಷಿಣಾಯನ' ಪದಗಳ ಅಂತರಾರ್ಥವನ್ನು ತಿಳಿಯುವುದು ಉತ್ತಮ. ಏಕೆಂದರೆ ಮಹನೀಯರೆಷ್ಟೋ ಜನ ದಕ್ಷಿಣಾಯನದಲ್ಲಿ ಪ್ರಾಣ ಬಿಡುತ್ತಾರೆ. ಮೂರ್ಖರು, ಎಷ್ಟೋ ಮಂದಿ ಉತ್ತರಾಯಣದಲ್ಲಿ ದೇಹ ಬಿಡುತ್ತಾರೆ. ಬಾಹ್ಯಾರ್ಥವನ್ನು ಮಾತ್ರ ತೆಗೆದುಕೊಂಡಲ್ಲಿ ದಕ್ಷಿಣಾಯನದಲ್ಲಿ ದೇಹವನ್ನು ಬಿಡುವ ಜ್ಞಾನಿಗಳು ಮತ್ತೆ ಜನ್ಮಿಸುವರೆಂದು, ಉತ್ತರಾಯಣದಲ್ಲಿ ದೇಹ ಬಿಡುವ ಮೂಢರು ಜನ್ಮರಾಹಿತ್ಯ ಹೊಂದುವರೆಂದು ಹೇಳಬೇಕಾಗಿ ಬರುತ್ತದೆ. ಅದು ಸತ್ಯಕ್ಕೆ ದೂರವಾದುದು. ಆದ್ದರಿಂದ ಉತ್ತರಾಯಣ, ದಕ್ಷಿಣಾಯನಗಳಿಗೆ ಉತ್ತರ ಮಾರ್ಗ ಅಥವ ದಕ್ಷಿಣ ಮಾರ್ಗಗಳೆಂದಾಗಲಿ, ಜ್ಞಾನ ಅಜ್ಞಾನಗಳೆಂದಾಗಲಿ ಅರ್ಥ ಹೇಳುವುದು ಸಮಂಜಸ.

ಪ್ರ : ಸಕಾಮ ಕರ್ಮಯೋಗಿ (ಇಲ್ಲವೆ ಅಜ್ಞಾನಿ) ಯಾವ ಮಾರ್ಗದಲ್ಲಿ ಹೋಗುವನು?

ಉ : ಹೊಗೆ, ರಾತ್ರಿ, ಕೃಷ್ಣಪಕ್ಷ, ದಕ್ಷಿಣಾಯನ- ಎನ್ನುವ ಅಂಧಕಾರ ಮಾರ್ಗಗಳಲ್ಲಿ ಹೋಗುವನು.

ಪ್ರ : ಆತನಿಗೆ ಜನ್ಮರಾಹಿತ್ಯವೊದಗುವುದೇ?

ಉ : ಒದಗುವುದಿಲ್ಲ. ಆತನು ಮತ್ತೆ ಜನ್ಮಿಸಿಯೇ ತೀರುತ್ತಾನೆ.

ಪ್ರ : ಇದರಿಂದ ಮುಮುಕ್ಷು ಏನನ್ನು ತಿಳಿಯಬೇಕು?

ಉ : ಆತ್ಮಜ್ಞಾನವನ್ನು ಹೊಂದಿ ಊರ್ಧ್ವಮಾರ್ಗದಲ್ಲಿ ಹೋಗಿ ಪುನರಾವೃತ್ತಿ ರಹಿತ ಶಾಶ್ವತ ಪದವಿಯನ್ನು ಹೊಂದುವುದೇ ಯುಕ್ತ ಎನ್ನುವುದನ್ನು ತಿಳಿಯಬೇಕು.

**ಅ||** ಮೇಲಿನ ವಿಷಯಗಳನ್ನೇ ಇನ್ನೂ ಸ್ಪಷ್ಟೀಕರಿಸಲಾಗಿದೆ-

**೨೬. ಶುಕ್ಲಕೃಷ್ಣೇ ಗತಿ ಹ್ಯೇತೇ ಜಗತಃ ಶಾಶ್ವತೇ ಮತೇ**
**ಏಕಯಾ ಯಾತ್ಯನಾವೃತ್ತಿಮನ್ಯಯಾಽಽವರ್ತತೇ ಪುನಃ**

**ಅರ್ಥ:** ಶುಕ್ಲಕೃಷ್ಣೇ=ಶುಕ್ಲ, ಕೃಷ್ಣಗಳೆನ್ನುವ; ಏತೇ ಗತಿ ಹಿ=ಈ ಎರಡು ಪ್ರಸಿದ್ಧವಾದ ಮಾರ್ಗಗಳೂ; ಜಗತಃ=ಜಗತ್ತಿಗೆ; ಶಾಶ್ವತೇ ಮತೇ=ಶಾಶ್ವತ ಗಳೆಂದು ಒಪ್ಪಲಾಗಿದೆ. ಏಕಯಾ=ಅದರಲ್ಲಿ ಒಂದರಿಂದ; ಅನಾವೃತ್ತಿಂ= ಪುನರ್ಜನ್ಮರಾಹಿತ್ಯವನ್ನು;(ಮನುಜನು) ಯಾತಿ=ಹೊಂದುತ್ತಿದ್ದಾನೆ; ಅನ್ಯಯಾ=ಮತ್ತೊಂದರಿಂದ; ಪುನಃ=ಮತ್ತೆ; ಆವರ್ತತೇ=ಹುಟ್ಟುತ್ತಿದ್ದಾನೆ.

**ತಾ||** ಈ ಶುಕ್ಲಕೃಷ್ಣಮಾರ್ಗಗಳೆರಡೂ ಜಗತ್ತಿನಲ್ಲಿ ಶಾಶ್ವತವಾಗಿ ಇರುವವೆಂದು ಒಪ್ಪಲಾಗಿದೆ. ಅದರಲ್ಲಿ ಮೊದಲನೆಯದರಿಂದ ಜನ್ಮರಾಹಿತ್ಯ, ಎರಡನೆಯದ ರಿಂದ ಪುನರ್ಜನ್ಮವನ್ನು ಮನುಷ್ಯನು ಹೊಂದುತ್ತಿದ್ದಾನೆ.

**ವ್ಯಾಖ್ಯೆ:** ಲೋಕದಲ್ಲಿ ಎರಡೇ ಎರಡು ಮಾರ್ಗಗಳಿವೆಯೆಂದೂ, ಒಂದು ಮನುಜನನ್ನು ಊರ್ಧ್ವವಾಗಿ ತೆಗೆದುಕೊಂಡು ಹೋಗುವುದೆಂದೂ ಮತ್ತೊಂದು ಅಧಃಪತನವನ್ನುಂಟು ಮಾಡುವುದೆಂದೂ ಇಲ್ಲಿ ಹೇಳಲಾಗಿದೆ. ಪ್ರಕಾಶರೂಪವಾದ ಜ್ಞಾನಮಾರ್ಗವನ್ನನುಸರಿಸುವವನು ಜನ್ಮರಾಹಿತ್ಯ (ಮೋಕ್ಷ)ವನ್ನು ಹೊಂದುವನೆಂದು, ಅಂಧಕಾರ ರೂಪವಾದ ಅಜ್ಞಾನ ಮಾರ್ಗವನ್ನನುಸರಿಸುವವನು ಮತ್ತೆ ಜನ್ಮವನ್ನು ಪಡೆದು ಸಂಸಾರದಲ್ಲಿ ಬಿದ್ದು ಹುಟ್ಟುತ್ತಾ ಸಾಯುತ್ತಾ ಇರುವನೆಂದು ಹೇಳಲಾಗಿದೆ. ಈ ಪ್ರಕಾರವಾಗಿ ಒಂದು ಮುಕ್ತಿಯನ್ನೂ ಮತ್ತೊಂದು ಬಂಧವನ್ನೂ ಉಂಟುಮಾಡುವುವು. ಆದ್ದರಿಂದ ಜನರು ತಮ್ಮ ವಿಜ್ಞತೆಯನ್ನುಪಯೋಗಿಸಿ ಶ್ರೇಯೋದಾಯಕವಾದ ಮೊದಲಿನ ಮಾರ್ಗವನ್ನೇ ಅನುಸರಿಸಿ ಬಂಧಕರವಾದ ಎರಡನೆಯ ಮಾರ್ಗವನ್ನು ತ್ಯಜಿಸಬೇಕು.

ಪ್ರ : ಪ್ರಪಂಚದಲ್ಲಿ ಎಷ್ಟು ಮಾರ್ಗಗಳಿವೆ ಹಾಗು ಅವು ಯಾವುವು?

ಉ : ಎರಡು ಮಾರ್ಗಗಳಿವೆ ೧) ಪ್ರಕಾಶ ರೂಪವಾದ ಉತ್ತರಾಯಣ ಮಾರ್ಗ (ಜ್ಞಾನಮಾರ್ಗ) ೨) ಅಂಧಕಾರ ರೂಪವಾದ ದಕ್ಷಿಣಾಯನ ಮಾರ್ಗ (ಅಜ್ಞಾನಮಾರ್ಗ).

ಪ್ರ : ಆದ್ದರಿಂದ ವಿಜ್ಞುವಾದವನು ಏನು ಮಾಡಬೇಕು?

ಉ : ಮೊದಲನೆಯದಾದ ಪ್ರಕಾಶ ಮಾರ್ಗವನ್ನನುಸರಿಸಿ ಎರಡನೆಯದಾದ ಅಂಧಕಾರ ಮಾರ್ಗವನ್ನು ತ್ಯಜಿಸಬೇಕು.

**ಅ||** ಈ ಎರಡು ಮಾರ್ಗಗಳನ್ನು ತಿಳಿದವನನ್ನು ಸ್ತುತಿಸುತ್ತಾ, 'ಯೋಗಿಯಾಗು' ಎಂದು ಅರ್ಜುನನಿಗೆ ಹಿತಬೋಧಿಸುತ್ತಿದ್ದಾನೆ.

**೨೭. ನೈತೇ ಸೃತೀ ಪಾರ್ಥ ಜಾನನ್ ಯೋಗೀ ಮುಹ್ಯತಿ ಕಶ್ಚನ**
**ತಸ್ಮಾತ್ಸರ್ವೇಷು ಕಾಲೇಷು ಯೋಗಯುಕ್ತೋ ಭವಾರ್ಜುನ**

**ಅರ್ಥ:** ಪಾರ್ಥ=ಓ ಅರ್ಜುನಾ! ಏತೇಸೃತೀ=ಈ ಎರಡು ಮಾರ್ಗ ಗಳನ್ನು; ಜಾನನ್=ತಿಳಿಯುತ್ತಿರುವ; ಯೋಗೀಕಶ್ಚನ=ಯೋಗಿಯಾದವನು; ನಮುಹ್ಯತಿ=ಮೋಹವನ್ನು ಹೊಂದುವುದಿಲ್ಲ; ತಸ್ಮಾತ್=ಆದ್ದರಿಂದ; ಅರ್ಜುನ=ಓ ಅರ್ಜುನಾ! ಸರ್ವೇಷು ಕಾಲೇಷು=ಎಲ್ಲಾ ಕಾಲದಲ್ಲಿಯೂ; ಯೋಗಯುಕ್ತಃ=(ಜ್ಞಾನ) ಯೋಗಯುಕ್ತನಾಗು.

**ತಾ||** ಓ ಅರ್ಜುನಾ! ಈ ಎರಡು ಮಾರ್ಗಗಳನ್ನು ತಿಳಿದ ಯೋಗಿಗೆ ಇನು ಮೋಹವು ಇರುವುದಿಲ್ಲ. ಆದ್ದರಿಂದ ನೀನು ಸರ್ವಕಾಲದಲ್ಲಿಯೂ (ಜ್ಞಾನ) ಯೋಗಯುಕ್ತನಾಗು.

**ವ್ಯಾಖ್ಯೆ:** ಮೇಲೆ ತಿಳಿಸಿದ ಪ್ರಕಾಶರೂಪವಾದ ಊರ್ಧ್ವಮಾರ್ಗವನ್ನು ಹಾಗು ಅಂಧಕಾರ ರೂಪವಾದ ಅಧೋ ಮಾರ್ಗವನ್ನು ತಿಳಿದ ಯೋಗಿಗೆ ಇನ್ನು ಮೋಹವಿರುವುದಿಲ್ಲವೆಂದು ಹೇಳಲಾಗಿದೆ. ಅಂದರೆ ಅಂತಹವನು ಮತ್ತೆ ಎಂದೆಂದಿಗೂ ಅಂಧಕಾರರೂಪವಾದ ಅಜ್ಞಾನ ಮಾರ್ಗದ ದಾರಿ ತುಳಿಯುವುದಿಲ್ಲವೆಂದು, ಪ್ರಕಾಶರೂಪವಾದ ಜ್ಞಾನಮಾರ್ಗವನ್ನೇ ಅನುಸರಿಸುವನೆಂದು ಮತ್ತು ಭ್ರಮೆಯಲ್ಲಿ ಎಂದಿಗೂ ಬೀಳುವುದಿಲ್ಲವೆಂದರ್ಥ. 'ಇದು ಒಳ್ಳೆಯದು, ಇದು ಕೆಟ್ಟದ್ದು, ಎಂದು ತಿಳಿದ ವಿಜ್ಞುವು ಯಾವಾಗಲೂ ಕೆಟ್ಟದ್ದನ್ನು ಇಚ್ಛಿಸುವುದಿಲ್ಲ. ಒಳ್ಳೆಯದನ್ನೇ ಆಶ್ರಯಿಸುವನು.

**'ವಿಷಂದೃಷ್ಟ್ವಾಽಮೃತಂ ದೃಷ್ಟ್ವಾ ವಿಷಂ ತ್ಯಜತಿ ಬುದ್ಧಿಮಾನ್'**
ವಿಷವನ್ನು, ಅಮೃತವನ್ನು ನೋಡಿ ಬುದ್ಧಿವಂತನಾದವನು ವಿಷವನ್ನು ತ್ಯಜಿಸಿ ಅಮೃತವನ್ನೇ ಗ್ರಹಿಸುವನು. ಹಾಗೆ 'ಇದು ಆತ್ಮ ಇದು ಅನಾತ್ಮ ಇದು ಪ್ರಕಾಶ, ಇದು ಅಂಧಕಾರ, ಇದು ಮೋಕ್ಷ, ಇದು ಬಂಧ, ಇದು ಜ್ಞಾನ, ಇದು ಅಜ್ಞಾನ' ಎಂದು ತಿಳಿದವನು ಬಂಧರೂಪದ ವಸ್ತುಗಳನ್ನು ಆಶಿಸದೆ ಮುಕ್ತಿ ಪ್ರದವಾದ ಜ್ಞಾನವನ್ನೇ ಆಶ್ರಯಿಸುವನು. ಅಂತಹವನು ಇತರರ ಹಾಗೆ

ಭ್ರಮೆಯಲ್ಲಿ ಬೀಳುವುದಿಲ್ಲವೆಂದು ಇಲ್ಲಿ ಹೇಳಲಾಗಿದೆ. ಈ ಪ್ರಕಾರವಾಗಿ ವಿಚಾರಣಾರೂಪಜ್ಞಾನ ಜೀವಿಯನ್ನು ಮತ್ತೆ ಎಂದೆಂದಿಗೂ ಮೋಹದಲ್ಲಿ (ಅಜ್ಞಾನದಲ್ಲಿ) ಬೀಳದಂತೆ ಸಂರಕ್ಷಿಸುತ್ತದೆ. ಆದ್ದರಿಂದಲೇ 'ಓ ಅರ್ಜುನಾ! ನೀನು ಯಾವಾಗಲೂ (ಜ್ಞಾನ) ಯೋಗನಿಷ್ಠೆಯುಳ್ಳವನಾಗಿರು. ಪ್ರಕಾಶರೂಪ ಬ್ರಹ್ಮಚೈತನ್ಯಯುಕ್ತನಾಗಿರು', ಎಂದು ಶ್ರೀಕೃಷ್ಣ ಪರಮಾತ್ಮ ಅರ್ಜುನನನ್ನು ಎಚ್ಚರಿಸಲು ಕಾರಣವಾಗಿದೆ. ಇಲ್ಲಿ **'ಸರ್ವೇಷು ಕಾಲೇಷು'** ಎಂದು ಹೇಳಲ್ಪಟ್ಟಿರುವುದರಿಂದ, ಯಾವುದೋ ಒಂದು ನಿರ್ದಿಷ್ಟ ಸಮಯದಲ್ಲಲ್ಲದೆ ಎಲ್ಲಾ ವೇಳೆಯಲ್ಲೂ ದೈವಸಂಯೋಗಯುಕ್ತನಾಗಿರ ಬೇಕೆಂದು ಸ್ಪಷ್ಟಪಡಿಸಿದಂತಾಗಿದೆ. ಏಕೆಂದರೆ ಯಾವ ಕ್ಷಣದಲ್ಲಿ ಮನುಜನು ಭಗವಂತನನ್ನು ಮರೆಯುವನೋ, ತನ್ನ ಆತ್ಮಸ್ವರೂಪವನ್ನು ವಿಸ್ಮರಿಸುವನೋ, ಆ ಕ್ಷಣವೇ ಮಾಯೆ ಬಂದು ಪ್ರವೇಶಿಸಿ ಜೀವಿಗೆ ಬೃಹತ್ ಅಪಕಾರವನ್ನು ಮಾಡಬಲ್ಲದು. ಆದ್ದರಿಂದ ಹಾಗೆ ಮಾಡುವುದು ಮಹಾಪ್ರಮಾದದಿಂದ ಕೂಡಿದುದು ಎಂದು ತಿಳಿಯುವುದು.* ಪ್ರಕಾಶದ ಅಭಾವವೇ ಅಂಧಕಾರ. ದೈವ ವಿಸ್ಮೃತಿಯೇ ಮಾಯೆಯ ಶಕ್ತಿ. ಆದ್ದರಿಂದಲೇ 'ನೀನು ಎಲ್ಲಾ ಕಾಲದಲ್ಲಿಯೂ ದೈವಯೋಗ ಪರನಾಗಿರು' ಎಂದು ಭಗವಂತನು ಅರ್ಜುನನನ್ನು ಎಚ್ಚರಿಸಲು ಕಾರಣವಾಗಿದೆ. ಈ ರೀತಿ ಎಚ್ಚರದಿಂದಿದ್ದರೆ ಮಾಯೆ ಹಿಂದೆ ಬೀಳಲು, ಜೀವಿಯನ್ನು ಆಕ್ರಮಿಸಲು ಅವಕಾಶವೇ ಇಲ್ಲವಾಗುತ್ತದೆ.

'ಯೋಗಯುಕ್ತೋಭವ'- 'ಯೋಗ' ಅಂದರೆ ಐಕ್ಯ. ಮನಸ್ಸನ್ನು ಆತ್ಮದೊಡನೆ ಐಕ್ಯ ಮಾಡುವುದೇ ಯೋಗ. ಧ್ಯಾನದ ಮೂಲಕ, ಇಲ್ಲವೆ ಜ್ಞಾನದ ಮೂಲಕ, ಇಲ್ಲವೆ ಭಕ್ತಿಯ ದ್ವಾರ, ಇಲ್ಲವೆ ಬೇರೆ ಯಾವುದೇ ಮಾರ್ಗದಿಂದ ಮನಸ್ಸನ್ನು ಸಾಕ್ಷಿಯಾದ ಆತ್ಮಸ್ವರೂಪದಲ್ಲಿ ಲಯಗೊಳಿಸುವುದೇ ಯೋಗ. ಅಂತಹ ಯೋಗವೇ ನಿರಂತರವಾಗಿ ಮನುಜನಲ್ಲಿ ಉಂಟಾಗಿರಬೇಕೆಂದು ಇಲ್ಲಿ ಬೋಧಿಸಲಾಗಿದೆ.

ಪ್ರ : ಯಾವನು ಪ್ರಪಂಚದ ಮಾಯಾ ಭ್ರಮೆಯಲ್ಲಿ ಬೀಳದೇ ಇರುವನು?

ಉ : 'ಇದು ಪ್ರಕಾಶರೂಪವಾದ ಜ್ಞಾನಮಾರ್ಗ, ಇದು ಅಂಧಕಾರ ರೂಪವಾದ ಅಜ್ಞಾನಮಾರ್ಗ' ಎಂದು ಎರಡನ್ನೂ ಚೆನ್ನಾಗಿ ವಿಶ್ಲೇಷಿಸಿ ತಿಳಿದುಕೊಂಡವನು ಮಾಯಾ ಮೋಹದಲ್ಲಿ ಬೀಳುವುದಿಲ್ಲ.

ಪ್ರ : ಆದ್ದರಿಂದ ಮುಮುಕ್ಷು ಯಾವ ರೀತಿ ವರ್ತಿಸಬೇಕು?

ಉ : ಸರ್ವಕಾಲದಲ್ಲಿಯೂ ದೈವ ಚಿಂತನಾಮಗ್ನನಾಗಿ, (ದೈವ) ಯೋಗಯುಕ್ತನಾಗಿರಬೇಕು.

ಪ್ರ : ಸ್ವಲ್ಪ ದಿನ (ಕಾಲ) ಭಗವನ್ನಿಷ್ಠೆ ಹೊಂದಿದ್ದರೆ ಸಾಲದೇ?

ಉ : ಸಾಕಾಗುವುದಿಲ್ಲ, ಎಲ್ಲಾ ಕಾಲದಲ್ಲಿಯೂ (ಸರ್ವೇಷು ಕಾಲೇಷು) ಅಂತಹ ದೈವ ನಿಷ್ಠೆಯಿರಬೇಕು. ಏಕೆಂದರೆ ಮಾಯೆ ಬಹಳ ಪ್ರಮಾದಕರವಾದದ್ದು.

**ಅ॥** ಯೋಗಿಯ ಸರ್ವೋನ್ನತ ಸ್ಥಿತಿಯನ್ನು, ಯೋಗದ ಅಪಾರಫಲವನ್ನು ತಿಳಿಸಲಾಗುತ್ತಿದೆ.

**೨೮. ವೇದೇಷು ಯಜ್ಞೇಷು ತಪಃಸು ಚೈವ**
**ದಾನೇಷು ಯತ್ಪುಣ್ಯಫಲಂ ಪ್ರದಿಷ್ಟಂ**
**ಅತ್ಯೇತಿ ತತ್ಸರ್ವಮಿದಂ ವಿದಿತ್ವಾ**
**ಯೋಗೀ ಪರಂ ಸ್ಥಾನಮುಪೈತಿ ಚಾದ್ಯಮ್**

**ಅರ್ಥ:** ಯೋಗೀ=ಯೋಗಿಯಾದವನು; ಇದಂ ವಿದಿತ್ವಾ=ಇದನ್ನು (ಈ ಅಧ್ಯಾಯದಲ್ಲಿ ಹೇಳಲ್ಪಟ್ಟ ಅಕ್ಷರ ಪರಬ್ರಹ್ಮ ತತ್ತ್ವ ಮುಂತಾದುವುಗಳನ್ನು) ತಿಳಿದು; ವೇದೇಷು=ವೇದಗಳಲ್ಲಿ; ಯಜ್ಞೇಷು=ಯಜ್ಞಗಳಲ್ಲಿ; ದಾನೇಷು= ದಾನಗಳಲ್ಲಿ, ತಪಃಸು ಚ=ತಪಸ್ಸುಗಳಲ್ಲಿಯೂ; ಯತ್=ಯಾವ; ಪುಣ್ಯಫಲಂ= ಪುಣ್ಯಫಲವು; ಪ್ರದಿಷ್ಟಂ=ಹೇಳಲ್ಪಟ್ಟಿದೆಯೋ; ತತ್ಸರ್ವಂ=ಅದೆಲ್ಲವೂ; ಅತ್ಯೇತಿ=ಅತಿಕ್ರಮಿಸುತ್ತಿದ್ದಾನೆ (ಅದನ್ನು ಮೀರಿದ ಪುಣ್ಯಫಲವನ್ನು ಹೊಂದುತ್ತಿದ್ದಾನೆ); ಚ=ಮತ್ತೆ; ಆದ್ಯಂ=ಅನಾದಿಯು (ಇಲ್ಲವೆ ಸಮಸ್ತಕ್ಕೆ ಆದಿಕಾರಣವಾದುದು); ಪರಂಸ್ಥಾನಂ=ಸರ್ವೋತ್ಕೃಷ್ಟವಾದ ಸ್ಥಾನವನ್ನು (ಬ್ರಹ್ಮವನ್ನು); ಉಪೈತಿ=ಹೊಂದುತ್ತಿದ್ದಾನೆ.

**ತಾ॥** ಯೋಗಿಯಾದವನು ಇದನ್ನು (ಈ ಅಧ್ಯಾಯದಲ್ಲಿ ಹೇಳಲ್ಪಟ್ಟ ಅಕ್ಷರ ಪರಬ್ರಹ್ಮ ತತ್ತ್ವ ಮುಂತಾದುವನ್ನು) ತಿಳಿದು ವೇದಗಳಲ್ಲಿಯೂ, ಯಜ್ಞಗಳಲ್ಲಿಯೂ, ದಾನಗಳಲ್ಲಿಯೂ, ತಪಸ್ಸುಗಳಲ್ಲಿಯೂ ಯಾವ ಪುಣ್ಯಫಲ ಹೇಳಲ್ಪಟ್ಟಿದೆಯೋ, ಅದನ್ನೆಲ್ಲವನ್ನೂ ಅತಿಕ್ರಮಿಸುತ್ತಿದ್ದಾನೆ. (ಅದನ್ನು ಮೀರಿದ ಪುಣ್ಯಫಲವನ್ನು ಹೊಂದುತ್ತಿದ್ದಾನೆ). ಮತ್ತೆ ಅನಾದಿಯಾದ ಸರ್ವೋತ್ತಮ (ಬ್ರಹ್ಮ) ಸ್ಥಾನವನ್ನು ಹೊಂದುತ್ತಿದ್ದಾನೆ.

**ವ್ಯಾಖ್ಯೆ:** ಈ ಅಧ್ಯಾಯದಲ್ಲಿ ಹೇಳಲ್ಪಟ್ಟ ಅಕ್ಷರ ಪರಬ್ರಹ್ಮತತ್ತ್ವವನ್ನು ತಿಳಿದವನು ಎಂತಹ ಮಹತ್ತರವಾದ ಪುಣ್ಯಫಲಗಳನ್ನು ಹೊಂದಬಲ್ಲನು, ಹಾಗೂ ಎಂತಹ ಸರ್ವೋನ್ನತವಾದ ಸ್ಥಾನವನ್ನು ಅಲಂಕರಿಸಬಲ್ಲನು ಎನ್ನುವುದನ್ನು ಇಲ್ಲಿ ಹೇಳಲಾಗಿದೆ. ೧) ವೇದಾಧ್ಯಯನದಿಂದ ೨) ಯಜ್ಞಾಚರಣೆಯಿಂದ ೩) ತಪಃ ಕ್ರಿಯೆಗಳಿಂದ ೪) ದಾನಗಳನ್ನು ಮಾಡುವುದರಿಂದ ಜೀವಿಗೆ ಎಷ್ಟು ಪುಣ್ಯ ಸಂಭವಿಸುವುದೋ ಅದಕ್ಕಿಂತ ಹೆಚ್ಚಾದ ಪುಣ್ಯವನ್ನು ಪರಬ್ರಹ್ಮತತ್ತ್ವವನ್ನು ತಿಳಿದ ಯೋಗಿ ಹೊಂದುತ್ತಾನೆಂದು ಇಲ್ಲಿ ಸ್ಪಷ್ಟವಾಗಿ ಹೇಳಲಾಗಿದೆ. ಇದರಿಂದ ಎಲ್ಲಾ ಪುಣ್ಯಗಳಲ್ಲಿ ಅತ್ಯಧಿಕವಾದದ್ದು ಯಾವುದೋ, ಏನನ್ನು ಆಶ್ರಯಿಸಿದರೆ ಎಲ್ಲಾ ಪುಣ್ಯಗಳ ಪರಾಕಾಷ್ಠತೆಯನ್ನು ಜೀವಿಯು ಹೊಂದಬಲ್ಲನೋ ಇಲ್ಲಿ ತಿಳಿಸಲಾಗಿದೆ. ಪ್ರಪಂಚದಲ್ಲಿ ಪರಬ್ರಹ್ಮವಸ್ತುವೊಂದೇ ಸತ್ಯ. ಬೇರೆ ಎಲ್ಲವೂ ಮಿಥ್ಯಾಭೂತಗಳು. ಆದ್ದರಿಂದ ಸತ್ಯ ವಸ್ತುಗಳನ್ನಾಶ್ರಯಿಸಿದವರಿಗೆ ಮಾತ್ರ ಪರಿಪೂರ್ಣವಾದ ಪುಣ್ಯಫಲ ಲಭಿಸಬಲ್ಲದು.

ವೇದಗಳಿಂದ, ಯಜ್ಞಗಳಿಂದ, ತಪಸ್ಸುಗಳಿಂದ, ದಾನಗಳಿಂದ ಅಲ್ಪ ಸ್ವಲ್ಪ ಪುಣ್ಯ, ಜೀವಿಗೆ ಲಭಿಸುತ್ತಲೇ ಇರುವುದು. ಆದರೆ ಪರಮಾತ್ಮನನ್ನು ಧ್ಯಾನಿಸುವ ಯೋಗಿ, ಇಲ್ಲವೇ ಆತ್ಮ(ಬ್ರಹ್ಮ) ಜ್ಞಾನ ಹೊಂದಿರುವ ಯೋಗಿ ಅವುಗಳನ್ನೆಲ್ಲಾ ದಾಟಿ ಹೋಗುತ್ತಿದ್ದಾನೆ. ಆತ್ಮಪ್ರಾಪ್ತಿಯಿಂದ ಆತನು ಅನಂತ ಪುಣ್ಯವನ್ನು ಸಂಪಾದಿಸುತ್ತಿದ್ದಾನೆ. ಸಮುದ್ರದಲ್ಲಿ ಬಿಂದು ಅಂತರ್ಭೂತ ವಾಗಿಯೇ ಇರುವುದು. **'ಶತೇ ಪಂಚಾಶತ್'** ಎಂದಹಾಗೆ ನೂರರಲ್ಲಿ ಐವತ್ತು ಸೇರಿಕೊಂಡೇ ಇದೆ. ಹಾಗೆ ಬ್ರಹ್ಮಜ್ಞಾನಜನಿತ ಮಹಾ ಪುಣ್ಯದಲ್ಲಿ ಬೇರೆ ಪುಣ್ಯಗಳೆಲ್ಲವೂ ಅಂತರ್ಭೂತವಾಗಿರುತ್ತವೆ. ಮೇಲಾಗಿ ಆ ಚಿಕ್ಕ ಚಿಕ್ಕ ಪುಣ್ಯಗಳೆಲ್ಲವೂ ಪುಣ್ಯಫಲಾನುಭವದ ನಂತರ ಕಾಲಕ್ರಮೇಣ ನಶಿಸಿ

---

* **ಯನ್ಮುಹೂರ್ತಂ ಕ್ಷಣಮಪಿ ವಾಸುದೇವೋ ನಚಿಂತ್ಯತೇ ಸಾಹಾನಿಸ್ತನ್ಮಹಚ್ಛಿದ್ರಂ ಸಾ ಭ್ರಾಂತಿಸ್ಸಾಚ ವಿಕ್ರಿಯಾ**

ಯಾವ ಕ್ಷಣದಲ್ಲಿ ವಾಸುದೇವನನ್ನು ಕುರಿತ ಚಿಂತನೆ ನಡೆಯುವುದಿಲ್ಲವೋ ಆ ಕ್ಷಣವೇ ದೊಡ್ಡ ಹಾನಿ, ಮಹಾದೋಷ, ಭ್ರಾಂತಿ, ವಿಕಾರವುಂಟಾಗುವುದು.

ಹೋಗುವುವು. ಆದರೆ ಬ್ರಹ್ಮಾನುಭೂತಿಯಿಂದ ಉಂಟಾಗುವ ಪುಣ್ಯ ಅನಂತವಾದದ್ದು; ಯಾವ ಕಾಲದಲ್ಲಿಯೂ ಕ್ಷೀಣಿಸುವುದಿಲ್ಲ; ನಿರತಿಶಯ ವಾದದ್ದು. ಬೇರೆ ಪುಣ್ಯಗಳು ಶ್ರೇಷ್ಠವಾದವುಗಳೇ, ಆದರೆ ಇದು ಶ್ರೇಷ್ಠತಮ ವಾದದ್ದು. ಆದ್ದರಿಂದ ವಿಜ್ಞರು ಅದಕ್ಕಾಗಿ ಪ್ರಯತ್ನಿಸಬೇಕು.

ಲೋಕದಲ್ಲಿ ಕೆಲವರು ಓದು ಬರಹ ಇಲ್ಲದೇ ಇರುವವರು ವೇದಗಳನ್ನು ಅಧ್ಯಯನ ಮಾಡಲಾರದೇ ಹೋಗಬಹುದು. ಅರ್ಥ ಬಲವಿಲ್ಲದ್ದರಿಂದ ಯಜ್ಞಾದಿಗಳನ್ನು ಆಚರಿಸದೇ ಹೋಗಬಹುದು. ಶರೀರದಾರ್ಢ್ಯವಿಲ್ಲದಿರು ವುದರಿಂದ ಕಠಿಣ ತಪಸ್ಸುಗಳನ್ನು ಮಾಡಲಾರದೇ ಹೋಗಬಹುದು. ಬಡವರಾದ್ದರಿಂದ ದಾನಗಳನ್ನು ಕೊಡದೇ ಹೋಗಬಹುದು. ಇನ್ನು ಅವರಿಗೆ ಪುಣ್ಯ ಪ್ರಾಪ್ತಿಗಾಗಿ ಬೇರೆ ಮಾರ್ಗವಿಲ್ಲವೇ? ಬೇರೆ ಇದೆ; ಅವುಗಳನ್ನು ಮೀರಿದ ಪುಣ್ಯವನ್ನು ಸಂಪಾದಿಸುವ ಉಪಾಯವನ್ನು ಭಗವಂತನು ಇಲ್ಲಿ ಕರುಣೆಯಿಂದ ಬೋಧಿಸಿರುವನು. ಅದೇ ಪರಮಾತ್ಮಧ್ಯಾನ. ಬ್ರಹ್ಮವಿಜ್ಞಾನ. ಅಂತಹುದಕ್ಕೆ ಓದಿನಿಂದಾಗಲಿ, ತಪಸ್ಸಿನಿಂದಾಗಲಿ, ಯಜ್ಞಗಳಿಂದಾಗಲಿ, ದಾನಗಳಿಂದಾಗಲಿ ಕೆಲಸವಿಲ್ಲ. ಮನಶ್ಶುದ್ಧಿ, ಹೃದಯ ಪವಿತ್ರತೆ, ನಿರ್ಮಲಭಕ್ತಿ ಇದ್ದರೆ ಸಾಕು. ಅದು ಉಳ್ಳವರು ಆತ್ಮ (ಬ್ರಹ್ಮ) ಜ್ಞಾನ ಪ್ರಾಪ್ತಿಯ ದ್ವಾರ ಬೇರೆ ಎಲ್ಲಾ ಪುಣ್ಯಫಲಗಳನ್ನು ಅತಿಕ್ರಮಿಸುವರು. ಮೇಲೆ ತಿಳಿಸಿದ ದಾನಾದಿಗಳನ್ನು, ವೇದಪಠಣಗಳನ್ನು ಉಪೇಕ್ಷಿಸಬೇಕೆಂದರ್ಥವಲ್ಲ. ಅವುಗಳನ್ನು ನಿಷ್ಕಾಮವಾಗಿ ಆಚರಿಸಿದರೆ ಕ್ರಮವಾಗಿ ಚಿತ್ತ ಶುದ್ಧಿಯನ್ನು ಪಡೆದು ತದ್ವಾರ ಆತ್ಮಾನುಭೂತಿಯಿಂದ ಮಹಾಪುಣ್ಯವನ್ನು ಹೊಂದುವರು.

ಇಷ್ಟೇ ಅಲ್ಲ, ಅಂತಹ ಬ್ರಹ್ಮತತ್ತ್ವವನ್ನು ತಿಳಿದ ಯೋಗಿ ಆದ್ಯವಾದ, ಸರ್ವೋತ್ತಮ ಸ್ಥಾನವಾದ ಸಾಕ್ಷಾತ್ ಬ್ರಹ್ಮವನ್ನೇ ಹೊಂದುತ್ತಿದ್ದಾನೆಂದು ಇಲ್ಲಿ ಹೇಳಲಾಗುತ್ತಿದೆ. ಬ್ರಹ್ಮವೇತ್ತ ಬ್ರಹ್ಮಸ್ವರೂಪನೇ ಆಗುವನೆಂದು ಶೃತಿ ಭಗವತಿಯು ನುಡಿಯುತ್ತಿದೆ. **'ಪರಂ ಸ್ಥಾನಂ'** ಎಂದು ಹೇಳುವುದರಿಂದ ಪ್ರಪಂಚದಲ್ಲಿಯ ಎಲ್ಲಾ ಪದವಿಗಳಿಗಿಂತ ಸ್ಥಾನಗಳಿಗಿಂತ ಬ್ರಹ್ಮಪದವಿ ಸರ್ವೋತ್ಕೃಷ್ಟವಾದುದೆಂದು ಅರ್ಥವಾಗುತ್ತಿದೆ. ಬೇರೆ ಪದವಿ, ಸ್ಥಾನಗಳು, ಸಂಪದಗಳು, ಕ್ಷಯಿಸುವಂತಹವು, ದೇಶ ಕಾಲಾಧೀನವಾದುವುಗಳು. ದೇಹ ವಿಯೋಗವಾದಾಗ ವಿಯೋಗವನ್ನು ಹೊಂದುವುವು. ಆದರೆ ಬ್ರಹ್ಮ ಪದವಿ, ಆತ್ಮಸ್ಥಾನ ಅಂತಹುದಲ್ಲ. ಅದು ಶಾಶ್ವತವಾದುದು. ಆದ್ದರಿಂದಲೇ 'ಪರಂ ಸ್ಥಾನಂ' ಎಂದು ಭಗವಂತನು ಅದನ್ನು ಕುರಿತು ವರ್ಣಿಸಿದನು. ಆದ್ದರಿಂದ ಮುಮುಕ್ಷುಗಳಾಗುವವರು ಚಿಕ್ಕ ಚಿಕ್ಕ ಪುಣ್ಯಗಳಿಂದ ಸಂತೃಪ್ತಿ ಹೊಂದದೆ ಪುಣ್ಯನಿಧಿ (Fountain of virtue) ಯಾದ ಮಹತ್ತರ ಸ್ಥಾನವಾಗಿ ಮೆರೆಯುತ್ತಿರುವ ಬ್ರಹ್ಮಪದವಿ, ಆತ್ಮಸ್ಥಾನವನ್ನು, ಭಗವಂತನನ್ನು ಗೀತೆಯಲ್ಲಿ ತಿಳಿಸಿದ ಅಭ್ಯಾಸಗಳ ಮೂಲಕ ಪಡೆದು ಮಾನವ ಜೀವನವನ್ನು ಸಾರ್ಥಕಗೊಳಿಸಿಕೊಳ್ಳಬೇಕು.

'ಯೋಗೀ'- ಯೋಗವೆಂದರೆ ಜೀವಿಯನ್ನು ಭಗವಂತನಲ್ಲಿ ಸೇರಿಸುವ ಮಾರ್ಗ. ಅದು ನಿಷ್ಕಾಮಕರ್ಮ, ಭಕ್ತಿ, ಧ್ಯಾನ, ಜ್ಞಾನ ಯಾವುದಾದರೂ ಸರಿಯೇ, ಅದನ್ನು ಅನುಸರಿಸಿದರೆ ಆತನು ಯೋಗಿಯೇ ಆಗುವನು.

ಈ ಶ್ಲೋಕದ ಮೂಲಕ ವೇದಗಳು, ಯಜ್ಞಗಳು, ತಪಸ್ಸುಗಳು, ದಾನಗಳೆಲ್ಲವುಗಳಿಗಿಂತ ಬ್ರಹ್ಮಜ್ಞಾನ, ಆತ್ಮಾನುಭವ ಶ್ರೇಷ್ಠವಾದದ್ದೆಂದು ಮತ್ತು ಸರ್ವೋತ್ತಮವೆಂದು ಸ್ಪಷ್ಟವಾಗುತ್ತಿದೆ. ಆದ್ದರಿಂದ ಪ್ರಾರಂಭ ಸ್ಥಿತಿಯಲ್ಲಿ ತಪೋದಾನಾದಿಗಳನ್ನಾಶ್ರಯಿಸಿದರೂ ಅವುಗಳಿಂದ ತೃಪ್ತಿ ಹೊಂದದೆ ಇನ್ನೂ ಮುಂದುವರಿದು ಕ್ರಮವಾಗಿ ಚಿತ್ತಶುದ್ಧಿಯ ದ್ವಾರ ಆತ್ಮಜ್ಞಾನವನ್ನು, ಬ್ರಹ್ಮಾನುಭೂತಿಯನ್ನು ಪಡೆಯಬೇಕು.

ಪ್ರ : (ಅಕ್ಷರ) ಪರಬ್ರಹ್ಮವನ್ನು ತಿಳಿಯುವವನಿಗೆ ಎಂತಹ ಪುಣ್ಯ ಒದಗುವುದು?

ಉ : ೧) ವೇದ ಶಾಸ್ತ್ರಗಳನ್ನು ಅಧ್ಯಯನ ಮಾಡುವುದರಿಂದ ೨) ಯಜ್ಞಾದಿ ಗಳನ್ನು ಆಚರಿಸುವುದರಿಂದ ೩) ತಪಸ್ಸುಗಳನ್ನು ಮಾಡುವುದರಿಂದ ೪) ದಾನಗಳನ್ನು ಕೊಡುವುದರಿಂದ- ಯಾವ ಯಾವ ಪುಣ್ಯ ಫಲಗಳು ಜೀವಿಗೆ ಲಭಿಸುವುವೋ, ಬ್ರಹ್ಮವೇತ್ತನಿಗೆ ಅವುಗಳನ್ನೆಲ್ಲಾ ಮೀರಿದ ಪುಣ್ಯಫಲ ದೊರಕುವುದು.

ಪ್ರ : ಪರಬ್ರಹ್ಮ ಎಂತಹದು?

ಉ : ೧) ಆದ್ಯಸ್ವರೂಪ (ಸಮಸ್ತಕ್ಕೆ ಮೂಲಕಾರಣ) ೨) ಸರ್ವೋನ್ನತ ಸ್ಥಾನ (ಎಲ್ಲಾ ಸ್ಥಾನಗಳಿಗಿಂತಲೂ ಶ್ರೇಷ್ಠವಾದುದು).

ಪ್ರ : ಪ್ರಪಂಚದಲ್ಲಿರುವ ಎಲ್ಲ ಸ್ಥಾನಗಳಲ್ಲಿ, ಪದವಿಗಳಲ್ಲಿ ದೊಡ್ಡದು ಯಾವುದು?

ಉ : ಪರಮಾತ್ಮಸ್ಥಾನ (ಪರಬ್ರಹ್ಮಪದವಿ)

ಪ್ರ : ಎಲ್ಲವುಗಳಿಗಿಂತ ಹಿರಿದಾದ ಪುಣ್ಯವನ್ನು ಆಶಿಸುವವನು ಏನು ಮಾಡಬೇಕು?

ಉ : ಚಿತ್ತಶುದ್ಧಿ ಮಾಡಿಕೊಂಡು ಪುಣ್ಯನಿಧಿಯಾದ ಪರಮಾತ್ಮನನ್ನು ಆಶ್ರಯಿಸಬೇಕು. ಅದರಿಂದ ವೃಕ್ಷದ ಮೂಲವನ್ನು ಪೋಷಿಸಿದರೆ ಶಾಖಾಪತ್ರಾದಿಗಳೆಲ್ಲವೂ ಪುಷ್ಟಿ ಹೊಂದುವಂತೆ ಸಮಸ್ತ ದೇವತೆ ಗಳನ್ನು, ಸಮಸ್ತ ಪುಣ್ಯಗಳನ್ನು ಆಶ್ರಯಿಸಿದಂತೇ ಆಗುವುದು.

**ಓಮ್**

ಇತಿ ಶ್ರೀಮದ್ಭಗವದ್ಗೀತಾಸೂಪನಿಷತ್ಸು ಬ್ರಹ್ಮವಿದ್ಯಾಯಾಂ ಯೋಗಶಾಸ್ತ್ರೇ

ಶ್ರೀಕೃಷ್ಣಾರ್ಜುನ ಸಂವಾದೇ ಅಕ್ಷರಪರಬ್ರಹ್ಮಯೋಗೋ ನಾಮ

**ಅಷ್ಟಮೋಽಧ್ಯಾಯಃ**

ಇದು ಉಪನಿಷತ್ಪ್ರತಿಪಾದಕವೂ, ಬ್ರಹ್ಮವಿದ್ಯೆಯೂ, ಯೋಗಶಾಸ್ತ್ರವೂ

ಶ್ರೀಕೃಷ್ಣಾರ್ಜುನ ಸಂವಾದವಾದ ಶ್ರೀಭಗವದ್ಗೀತೆಯಲ್ಲಿಯ ಅಕ್ಷರಪರಬ್ರಹ್ಮಯೋಗವೆನ್ನುವ

ಎಂಟನೆಯ ಅಧ್ಯಾಯ

**ಓಮ್ ತತ್ ಸತ್**

# ರಾಜವಿದ್ಯಾರಾಜಗುಹ್ಯಯೋಗ

## ಶ್ರೀ ಭಗವದ್ಗೀತೆ

### ಅಥ ನವಮೋಽಧ್ಯಾಯಃ
### ಒಂಭತ್ತನೆಯ ಅಧ್ಯಾಯ
### ರಾಜವಿದ್ಯಾರಾಜಗುಹ್ಯಯೋಗಃ - ರಾಜಾವಿದ್ಯಾರಾಜಗುಹ್ಯಯೋಗ

**ಈ ಅಧ್ಯಾಯದ ಹೆಸರು :**

'ರಾಜವಿದ್ಯಾರಾಜಗುಹ್ಯಯೋಗ'- ರಾಜ ಪದವಿಯು ಶ್ರೇಷ್ಠತೆಯನ್ನು ಸೂಚಿಸುತ್ತದೆ. ರಾಜವಿದ್ಯೆಯೆಂದರೆ ವಿದ್ಯೆಯ ಲೋಕದಲ್ಲಿ ಶ್ರೇಷ್ಠವಾದುದೆಂದೂ, ರಾಜಗುಹ್ಯವೆಂದರೆ ರಹಸ್ಯ ಲೋಕದಲ್ಲಿ ಪರಮ ರಹಸ್ಯವಾದುದೆಂದು ಅರ್ಥ. ಇಲ್ಲವೆ ರಾಜವಿದ್ಯೆಯೆಂದರೆ ಪೂರ್ವದಲ್ಲಿ ರಾಜರು ಅನುಷ್ಠಾನ ಮಾಡುತ್ತಾ ಬಂದಿರುವ ಹಿರಿಮೆಯ ವಿದ್ಯೆಯೆಂದೂ ಹೇಳಬಹುದು. ಈ ಅಧ್ಯಾಯದಲ್ಲಿ ಹೇಳಲ್ಪಟ್ಟ ಅಮೂಲ್ಯವಾದ ಆಧ್ಯಾತ್ಮಬೋಧೆ ಎಲ್ಲಾ ವಿದ್ಯೆಗಳಲ್ಲಿ ಸರ್ವೋತ್ಕೃಷ್ಟ ವಾದುದು ಹಾಗು ರಹಸ್ಯ ಗಳಲ್ಲೆಲ್ಲಾ ಪರಮರಹಸ್ಯವಾದುದಾಗಿರುವುದರಿಂದ ಈ ಅಧ್ಯಾಯಕ್ಕೆ ರಾಜವಿದ್ಯಾರಾಜಗುಹ್ಯಯೋಗವೆಂದು ಹೇಳಿದ್ದಾರೆ.

**ಈ ಅಧ್ಯಾಯದಲ್ಲಿಯ ಪ್ರಧಾನ ವಿಷಯಗಳು:**

೧) ಆಧ್ಯಾತ್ಮವಿದ್ಯಾ ಪ್ರಭಾವ
(೧ನೇ ಶ್ಲೋಕದಿಂದ ೩ನೇ ಶ್ಲೋಕದವರೆಗೆ)

೨) ಭಗವತ್ಸ್ವರೂಪ ವರ್ಣನೆ
(೪ನೇ ಶ್ಲೋಕದಿಂದ ೭ನೇ ಶ್ಲೋಕದವರೆಗೆ)

೩) ಜಗದುತ್ಪತ್ತಿ (೭ನೇ ಶ್ಲೋಕದಿಂದ ೧೦ನೇ ಶ್ಲೋಕದವರೆಗೆ)

೪) ಆಸುರೀಪ್ರಕೃತಿ, ದೈವೀಪ್ರಕೃತಿಗಳನ್ನು ಹೊಂದಿರುವವರ ಲಕ್ಷಣಗಳು
(೧೧ನೇ ಶ್ಲೋಕದಿಂದ ೧೫ನೇ ಶ್ಲೋಕದವರೆಗೆ)

೫) ಭಗವಂತನ ಸರ್ವಾತ್ಮಸ್ವರೂಪ
(೧೬ನೇ ಶ್ಲೋಕದಿಂದ ೧೯ನೇ ಶ್ಲೋಕದವರೆಗೆ)

೬) ಸ್ವರ್ಗಾದಿ ಕಾಮನಾರೂಪವಾದ ಸಕಾಮೋಪಾಸನೆಯ ಫಲ, ನಿಷ್ಕಾಮೋಪಾಸನೆಯ ಫಲ
(೨೦ನೇ ಶ್ಲೋಕದಿಂದ ೨೫ನೇ ಶ್ಲೋಕದವರೆಗೆ)

೭) ಭಗವದ್ಭಕ್ತಿಯಿಂದ ಕೂಡಿದ ನಿಷ್ಕಾಮಕರ್ಮಾಚರಣೆಯ ಅಖಂಡ ಮಹಿಮೆ
(೨೬ನೇ ಶ್ಲೋಕದಿಂದ ೩೪ನೇ ಶ್ಲೋಕದವರೆಗೆ)

**ಪೂರ್ವಾಧ್ಯಾಯದೊಂದಿಗೆ ಈ ಅಧ್ಯಾಯಕ್ಕೆ ಇರುವ ಸಂಬಂಧ:**

ಏಳನೆಯ ಅಧ್ಯಾಯವಾದ ವಿಜ್ಞಾನಯೋಗದಲ್ಲಿ ಭಗವಂತನು ಸಗುಣ, ನಿರ್ಗುಣ ಪರಬ್ರಹ್ಮ ಸ್ವರೂಪಗಳನ್ನು ವರ್ಣಿಸಿ ಹೇಳುತ್ತಾ ಕಟ್ಟಕಡೆಗೆ ಅಧಿಭೂತ, ಅಧಿದೈವಾದಿ ಸಹಿತಗಳೊಂದಿಗೆ ಬ್ರಹ್ಮವನ್ನು ಸಾಕ್ಷಾತ್ಕರಿಸಿಕೊಳ್ಳುವ ವಿಷಯವನ್ನು ಹೇಳಿದನು. ಅಂತ್ಯಕಾಲದಲ್ಲಿ ಚಿತ್ತವನ್ನು ಪರಮಾತ್ಮನಲ್ಲಿ ಸ್ಥಿರಗೊಳಿಸುವ ವಿಚಾರವನ್ನು ಕುರಿತು ಸೂಚನಾಮಾತ್ರವಾಗಿ ತಿಳಿಸಿದ್ದರಿಂದ ಕೂಡಲೇ ಅರ್ಜುನನು ಅದರ ವಿವರಗಳನ್ನು ತಿಳಿಯಲು ಅಪೇಕ್ಷಿಸಿ ಏಳು ಪ್ರಶ್ನೆಗಳನ್ನು ಹಾಕಿದನು. ಆ ಪ್ರಶ್ನೆಗಳನ್ನು ಪುರಸ್ಕರಿಸಿಕೊಂಡು ಸಮಾಧಾನ ಕೊಡುತ್ತಾ ಭಗವಂತನು ಎಂಟನೆಯ ಅಧ್ಯಾಯದಲ್ಲೆಲ್ಲಾ ಅದರ ಬಗ್ಗೆ ವಿವರಿಸಿದನು. ಈಗ ಹಿಂದೆ ಏಳನೆಯ ಅಧ್ಯಾಯದಲ್ಲಿ ತಾನು ಹೇಳುತ್ತಿದ್ದ ವಿಜ್ಞಾನದ ವಿಷಯವನ್ನು ಮುಂದುವರಿಸುತ್ತಾ ಶ್ರೀಕೃಷ್ಣಪರಮಾತ್ಮನು, ಈ ಒಂಭತ್ತನೆಯ ಅಧ್ಯಾಯವನ್ನು ಪ್ರಾರಂಭಿಸುತ್ತಿದ್ದಾನೆ. ಹಿಂದೆ ತಾನು ತಿಳಿಸಿರುವ ಜ್ಞಾನ, ವಿಜ್ಞಾನ ವಿಷಯಗಳನ್ನು ಮತ್ತೆ ಈ ಅಧ್ಯಾಯದ ಪ್ರಾರಂಭದಲ್ಲಿ ಪ್ರಸ್ತಾಪಿಸುತ್ತ, ಅವುಗಳನ್ನು ಕುರಿತು ವಿಪುಲವಾಗಿ ಬೋಧಿಸಿದನು. ಅದೇ ರಾಜವಿದ್ಯಾರಾಜಗುಹ್ಯಯೋಗವೆನ್ನುವ ಈ ೯ನೆಯ ಅಧ್ಯಾಯ. ಅತಿ ರಹಸ್ಯವಾದ ಮೋಕ್ಷಪ್ರದವಾದಂತಹ ಅಧ್ಯಾತ್ಮಜ್ಞಾನವನ್ನು ವಿಜ್ಞಾನಸಹಿತವಾಗಿ ತಾನು ಈಗ ಹೇಳಹೊರಟಿದ್ದೇನೆಂದು ಭಗವಂತನು ತಿಳಿಸುತ್ತಿದ್ದಾನೆ-

ಶ್ರೀ ಭಗವಾನುವಾಚ:

೧. ಇದಂ ತು ತೇ ಗುಹ್ಯತಮಂ ಪ್ರವಕ್ಷ್ಯಾಮ್ಯನಸೂಯವೇ
ಜ್ಞಾನಂ ವಿಜ್ಞಾನಸಹಿತಂ ಯಜ್ಜ್ಞಾತ್ವಾ ಮೋಕ್ಷ್ಯಸೇಽಶುಭಾತ್

ಶ್ರೀ ಭಗವಾನುವಾಚ- ಶ್ರೀ ಭಗವಂತನು ಹೇಳಿದನು.

**ಅರ್ಥ:** ಯತ್=ಯಾವುದನ್ನು; ಜ್ಞಾತ್ವಾ=ತಿಳಿದುಕೊಂಡು; ಅಶುಭಾತ್= ಅಶುಭರೂಪವಾದ ಸಂಸಾರಬಂಧನದಿಂದ; ಮೋಕ್ಷ್ಯಸೇ=ವಿಮುಕ್ತನಾಗ ಬಲ್ಲೆಯೋ; (ತತ್=ಅಂತಹ); ಗುಹ್ಯತಮಂ=ಅತಿ ರಹಸ್ಯವಾದುದು; ವಿಜ್ಞಾನಸಹಿತಂ=ಅನುಭವ ಜ್ಞಾನದಿಂದ ಕೂಡಿದುದೂ; ಇದಂ ಜ್ಞಾನಂ ತು=ಈ ಬ್ರಹ್ಮಜ್ಞಾನವನ್ನಾದರೋ; ಅನಸೂಯವೇ=ಅಸೂಯೆಯಿಲ್ಲದವನಾದ; ತೇ=ನಿನಗೆ; ಪ್ರವಕ್ಷ್ಯಾಮಿ=ವಿಶದವಾಗಿ ಹೇಳುತ್ತಿದ್ದೇನೆ.

**ತಾ||** ಶ್ರೀ ಭಗವಂತನು ಹೇಳಿದನು- ಓ ಅರ್ಜುನಾ! ಯಾವುದನ್ನು ತಿಳಿದುಕೊಂಡರೆ ಅಶುಭರೂಪವಾದ ಈ ಸಂಸಾರ ಬಂಧನದಿಂದ ನೀನು ಬಿಡುಗಡೆ ಹೊಂದುವೆಯೋ, ಅಂತಹ ರಹಸ್ಯವಾದ, ಅನುಭವ ಜ್ಞಾನಸಹಿತವಾದ ಈ ಬ್ರಹ್ಮಜ್ಞಾನವನ್ನು ಅಸೂಯೆಯಿಲ್ಲದವನಾದ ನಿನಗೆ ವಿವರವಾಗಿ ಹೇಳುತ್ತಿದ್ದೇನೆ(ಕೇಳು).

**ವ್ಯಾಖ್ಯೆ:** ವಿದ್ಯೆಗಳಲ್ಲೆಲ್ಲಾ ಶ್ರೇಷ್ಠವಾದ ಅತಿ ರಹಸ್ಯವಾದ ಹಾಗು ಅನುಭವ ಪೂರ್ವಕವಾದ ಬ್ರಹ್ಮವಿದ್ಯೆಯನ್ನು ಭಗವಂತನು ಈಗ ಬೋಧಿಸುತ್ತಿದ್ದಾನೆ. **'ಗುಹ್ಯತಮಂ'** ಎಂದು ಹೇಳಿರುವುದರಿಂದ ಈ ಬೋಧೆ ರಹಸ್ಯದ ಪರಾಕಾಷ್ಠೆಯನ್ನು ಸೂಚಿಸುತ್ತದೆ. ಬ್ರಹ್ಮೋಪದೇಶವು ಸಾಮಾನ್ಯವಾಗಿ ಅಧಿಕಾರಿಯಾದವನಿಗೆ ಮಾತ್ರ ಹೇಳಲ್ಪಡುತ್ತದೆ. ಅದನ್ನು ಕೇಳಲು ಸಹ ಯೋಗ್ಯತೆ ಅವಶ್ಯಕ. ಈ ಯೋಗ್ಯತೆ ಯಾವುದು? ಅಸೂಯಾದಿ ದುರ್ಗುಣಾದಿಗಳು ಇಲ್ಲದೇ ಇರುವುದೇ. ಚಿತ್ತಶುದ್ಧಿ ಉಂಟಾಗಿರುವುದೇ. ಈ ಯೋಗ್ಯತೆ ಸಾಧನ ಚತುಷ್ಟಯ ಸಂಪತ್ತಿನಿಂದ ಕೈಗೂಡುವುದು. ಆದರೆ ಇಲ್ಲಿ ಬ್ರಹ್ಮಜ್ಞಾನವನ್ನು ಬೋಧಿಸಲ್ಪಡುತ್ತಿರುವ ಅರ್ಜುನನಿಗೆ ಅಂತಹ ಯೋಗ್ಯತೆಯಿದೆಯೇ ಎಂದು ಕೇಳಬಹುದು? ಇದೆಯೆಂದೆಯೇ ಹೇಳ ಬೇಕಾಗುವುದು. ಏಕೆಂದರೆ, ಈ ಅಧ್ಯಾಯದ ಪ್ರಾರಂಭದಲ್ಲೇ ಶ್ರೀಕೃಷ್ಣಮೂರ್ತಿ ಅರ್ಜುನನನ್ನು ಅಸೂಯೆಯಿಲ್ಲದವನು ('ಅನಸೂಯವೇ') ಎಂದು ವರ್ಣಿಸಿದನು. ಅಸೂಯಾದಿ ದುರ್ಗುಣಗಳಿಲ್ಲದವನು ಎಂದು ಶ್ರೀಕೃಷ್ಣಪರ ಮಾತ್ಮನಿಗೆ ಚೆನ್ನಾಗಿ ತಿಳಿದಿದ್ದರಿಂದಲೇ ಅವನಿಗೆ ಗೀತೋಪದೇಶವನ್ನು ಮಾಡಿದನು. ಆದ್ದರಿಂದ ಇನ್ನೂ ಬರುವುದೇ ತಡ ಬ್ರಹ್ಮಜ್ಞಾನವನ್ನು ಬೋಧಿಸಬೇಕೆಂದು ಗುರುಗಳನ್ನು ಪೀಡಿಸುವ ಶಿಷ್ಯರು ತಮಗೆ ಅಂತಹ ಅಸೂಯಾದಿ ದುರ್ಗುಣಗಳು ತೊಲಗಿವೆಯೇ ಇಲ್ಲವೇ ಎಂದು ಪ್ರಶ್ನಿಸಿ ಕೊಳ್ಳಬೇಕು. ವಸ್ತ್ರವು ನಿರ್ಮಲವಾಗಿದ್ದಾಗಲೇ ಅದಕ್ಕೆ ಬಣ್ಣ ಅಂಟುವ ಹಾಗೆ ಶುದ್ಧಚಿತ್ತದಲ್ಲಿ ಮಾತ್ರ ಬ್ರಹ್ಮಜ್ಞಾನ ಪ್ರವೇಶಿಸುವುದು. ಮಲಿನಚಿತ್ತ ಇರುವವನಲ್ಲಲ್ಲ.

ಈ ಪ್ರಕಾರವಾಗಿ 'ಅನಸೂಯವೇ' ಎನ್ನುವ ಪದದ ಮೂಲಕ ಭಗವಂತನು ಬ್ರಹ್ಮವಿದ್ಯೆಗೆ ಬೇಕಾದ ಯೋಗ್ಯತೆಯನ್ನು ನಿರೂಪಿಸಿದನು. ಆದ್ದರಿಂದ ಸಾಧಕರು ಈ ವಿಷಯದಲ್ಲಿ ಕಡು ಜಾಗರೂಕರಾಗಿ ಬ್ರಹ್ಮಜ್ಞಾನ ಪಡೆಯುವ ಮೊದಲು ಅಸೂಯಾರಾಹಿತ್ಯ ತಮಗೆ ಉಂಟಾಗಿದೆಯೇ ಎಂದು ನೋಡಿಕೊಂಡು, ಇಲ್ಲದಿದ್ದರೆ, ಅದನ್ನು ಮೊದಲು ಸಿದ್ಧಿಸಿಕೊಳ್ಳ ಬೇಕು. ಡಂಭದರ್ಪಾದಿ ದುರ್ಗುಣಗಳಿಗೆಲ್ಲಾ 'ಅಸೂಯೆ' ರಾಜನಿದ್ದ ಹಾಗೆ. ಆದ್ದರಿಂದಲೇ ಅದನ್ನು ಇಲ್ಲಿ ಉಲ್ಲೇಖಿಸಲಾಗಿದೆ. ಅದು ಬೇರು ಹುಳುವಿನಂತಹದು. ಬೇರು ಹುಳ ಗಿಡವೆಲ್ಲವನ್ನೂ ನಿಧಾನವಾಗಿ ಬೋಡು ಮಾಡಿ ಹಾಕುವ ಹಾಗೆ, ಅಸೂಯೆ ಜೀವಿಯಲ್ಲಿ ಪ್ರವೇಶಿಸಿದರೆ ಆತನು ಅಲ್ಲಿಯವರೆಗೆ ಮಾಡಿದ ಸಾಧನೆಯೆಲ್ಲವನ್ನೂ ಒಂದೇ ಸಾರಿಗೆ ಅದು ಕೆಲಸಕ್ಕೆ ಬರದಂತೆ ಮಾಡುವುದು. ಆದ್ದರಿಂದಲೇ ಪರಮಾರ್ಥ ರಂಗದಲ್ಲಿ ಎಷ್ಟೋ ಸಾಧನೆ ಮಾಡಿದವರು ಕೂಡ ಒಮ್ಮೊಮ್ಮೆ ಈ ಅಸೂಯಾರಾಕ್ಷಸಿಗೆ ಬಲಿಯಾಗಿ ತಮ್ಮ ಸಾಧನ ಸರ್ವಸ್ವವನ್ನು ಕಳೆದುಕೊಂಡು ಪತನ ಹೊಂದುತ್ತಿದ್ದಾರೆ. ಈ ಕಾರಣದಿಂದಲೇ ಭಗವಂತನು ಲೋಕಿಗಳನ್ನು ಈ 'ಅನುಸೂಯವೇ' ಎನ್ನುವ ಪದ ಮುಖೇಣ ಜಾಗರೂಕರಾಗಿರಿ ಎಂದು ಎಚ್ಚರಿಸಿದ್ದಾನೆ. ಅಸೂಯೆಯನ್ನು ಹೊರದೂಡಿ ಅರ್ಜುನನಂತೆ ಬ್ರಹ್ಮವಿದ್ಯೆಗೆ ಅಧಿಕಾರಿಗಳಾಗಬೇಕೆಂದು ಬೋಧಿಸಿದನು. ಅಂತಹ ಅರ್ಹತೆಯನ್ನು ಹೊಂದಿದವರಿಗೆ ಸದ್ಗುರುಗಳು ಅತಿ ರಹಸ್ಯವಾದ ಅಂಶಗಳೆಲ್ಲವನ್ನೂ ಬಹಿರ್ಗತ ಮಾಡುವರು. ಈ ಕಾರಣದಿಂದಲೇ 'ವಕ್ಷ್ಯಾಮಿ' ಎಂದು ಹೇಳದೆ 'ಪ್ರವಕ್ಷ್ಯಾಮಿ' ಎಂದು ಭಗವಂತನು ಹೇಳಿದನು. ಅಂದರೆ 'ವಿಶದವಾಗಿ ಹೇಳುತ್ತಿದ್ದೇನೆ ಕೇಳು' ಎನ್ನುವುದು ಇದರ ಭಾವ. ಅರ್ಜುನನ ಮೇಲೆ ಇಷ್ಟು ಪ್ರೀತಿ, ಗುರುವಾದ ಶ್ರೀಕೃಷ್ಣನಿಗೆ ಹೇಗೆ ಉಂಟಾಯಿತು? ಅರ್ಜುನನಲ್ಲಿ ಅಸೂಯೆಯಿಲ್ಲವಾದ್ದರಿಂದ. ಸಾಮಾನ್ಯವಾಗಿ ಜನರು ರಹಸ್ಯಗಳನ್ನು ಎಲ್ಲರಿಗೂ ಹೇಳುವುದಿಲ್ಲ. ಬಹಳ ನಂಬಿಕೆಯುಳ್ಳವರಿಗೆ ಮಾತ್ರ ಹೇಳುವರು. ಈಗ ಭಗವಂತನು ಹೇಳ ಹೊರಟಿರುವುದು 'ಗುಹ್ಯತಮ'ವಾದ ವಿದ್ಯೆ, ಅಂದರೆ ಅತಿ ರಹಸ್ಯವಾದ ವಿದ್ಯೆ. ಅದನ್ನು ಹೇಳಬೇಕೆಂದರೆ, ಬೋಧಿತನು ಎಷ್ಟೋ ವಿಶ್ವಾಸಪಾತ್ರನಾಗಿರ ಬೇಕು. ಶಿಷ್ಯನ ಹೃದಯನೈರ್ಮಲ್ಯವನ್ನು ನೋಡಿ ಗುರುವಿಗೆ ಆ ವಿಶ್ವಾಸ ಉಂಟಾಗುತ್ತದೆ.

ಮತ್ತೆ 'ವಿಜ್ಞಾನ ಸಹಿತವಾಗಿ ನಿನಗೆ ಜ್ಞಾನವನ್ನು ಬೋಧಿಸುತ್ತಿದ್ದೇನೆ' ಎಂದು ಶ್ರೀಕೃಷ್ಣಮೂರ್ತಿ ಹೇಳಿರುವುದರಲ್ಲಿ ಒಂದು ವಿಶೇಷವಿದೆ. ಶಾಸ್ತ್ರದಲ್ಲಿ ಜ್ಞಾನ ಹಾಗು ವಿಜ್ಞಾನಗಳೆರಡೂ ಇವೆ. ಜ್ಞಾನವೆಂದರೆ ಶಾಸ್ತ್ರಜನ್ಯ ಪರೋಕ್ಷ ಜ್ಞಾನ. ವಿಜ್ಞಾನವೆಂದರೆ ಅನುಭವಯುಕ್ತ ಅಪರೋಕ್ಷ ಜ್ಞಾನ. ಬೋಧೆಯನ್ನು ಅನುಷ್ಠಾನಗೊಳಿಸಿದಾಗ ಮಾತ್ರ ಪೂರ್ಣ ಫಲವನ್ನು ಕೊಡುವುದು. ಆದ್ದರಿಂದಲೇ ಗೀತೆಯಲ್ಲಿ ಜ್ಞಾನ ಬೋಧೆಯಿಂದ ತೃಪ್ತಿ ಹೊಂದದೆ ಶ್ರೀಕೃಷ್ಣಮೂರ್ತಿ ವಿಜ್ಞಾನವನ್ನೂ ಕೂಡ ವಿವರವಾಗಿ ಬೋಧಿಸಿದನು.

ಇನ್ನು ಅಂತಹ ವಿಜ್ಞಾನಸಹಿತ ಜ್ಞಾನವನ್ನು ತಿಳಿದುಕೊಳ್ಳುವುದರಿಂದ ಉಂಟಾಗುವ ಪ್ರಯೋಜನವೇನು? ಆ ಪ್ರಯೋಜನ ಏನು ಎನ್ನುವುದನ್ನು ಭಗವಂತನೇ ಅಪ್ಪಣೆ ಕೊಟ್ಟಿರುತ್ತಾನೆ. ಅದರ ಪ್ರಯೋಜನ ಜನನ ಮರಣ ರೂಪವಾದ ಅಶುಭದಿಂದ ಬಿಡುಗಡೆಯಾಗುವುದೇ ಆಗಿದೆ. ಹುಟ್ಟು, ಸಾವು, ದುಃಖ, ರೋಗ, ವೃದ್ಧಾಪ್ಯ ಮೊದಲಾದ ಅಶುಭಗಳಿಂದ ಕೂಡಿರುವ ಈ ಭಯಂಕರ ಸಂಸಾರದಿಂದ ಅದು ಜನರನ್ನು ವಿಮುಕ್ತಿಗೊಳಿಸುವುದು. ಆದ್ದರಿಂದ ದುಃಖವನ್ನು ಹೋಗಲಾಡಿಸಿಕೊಳ್ಳುವ ಅಪೇಕ್ಷೆಯಿರುವವನು ಈ ಬ್ರಹ್ಮ ಜ್ಞಾನವನ್ನು ತಪ್ಪದೆ ಸಂಪಾದಿಸಿಕೊಳ್ಳಬೇಕು. ಈ ವಿಷಯವನ್ನು ಭಗವಂತನು ಇಲ್ಲಿ ಸ್ಪಷ್ಟಪಡಿಸಿರುವನು. ಈ ಸಂಸಾರವನ್ನು ನೋಡಿ ಜನರು ಏನೋ ಇದು ಬಹಳ ದೊಡ್ಡದೆಂದು, ಭಾಗ್ಯವೆಂದೂ ಭಾವಿಸುತ್ತಿದ್ದಾರೆ. ಆದರೆ ಶ್ರೀಕೃಷ್ಣಮೂರ್ತಿ ಇದನ್ನು ಅಶುಭವೆಂದು ವರ್ಣಿಸಿದನು. ಏಕೆಂದರೆ ಇದೆಲ್ಲವೂ ಅಸತ್ಯ, ದೃಶ್ಯರೂಪ, ಆತ್ಮೇತರ, ಕ್ಷಣಿಕ ಹಾಗು ನಶ್ವರವಾಗಿದೆ. ಅಶುಭವನ್ನು ಆಶ್ರಯಿಸಿದವನು ಅಶುಭವನ್ನೇ ಹೊಂದುವನು. ಶುಭವನ್ನು ಆಶ್ರಯಿಸಿದವನು ಶುಭವನ್ನೇ ಹೊಂದುವನು. ಈ ಪ್ರಪಂಚದಲ್ಲಿ ಆತ್ಮವೊಂದೇ ದೈವ ಅದು ಒಂದೇ ಶುಭ. ಆದ್ದರಿಂದ ಅದನ್ನೇ ಆಶ್ರಯಿಸಬೇಕು. ಆಗ ಮಾತ್ರ ಅಶುಭದಿಂದ ಆತನು ವಿಮುಕ್ತಿ ಹೊಂದಬಲ್ಲನು. ಈ ಪ್ರಕಾರವಾಗಿ ಜ್ಞಾನವಿಜ್ಞಾನವನ್ನಾ ಶ್ರಯಿಸುವವರಿಗೆ ಉಂಟಾಗುವ ಪ್ರತ್ಯಕ್ಷ ಫಲ ಸಂಸಾರ ದುಃಖರಾಹಿತ್ಯ ಹಾಗು ನಿರತಿಶಯ ಆತ್ಮಾನಂದ ಪ್ರಾಪ್ತಿ. ಆದ್ದರಿಂದ ವಿಜ್ಞಗಳು ಭಗವಂತನು ಬೋಧಿಸಲಿರುವ ಈ ಅನುಭವಪೂರ್ವಕ ಬ್ರಹ್ಮತತ್ತ್ವವನ್ನು ತಿಳಿದು ಕೃತಾರ್ಥರಾಗಬೇಕು.

ಪ್ರ : ಬ್ರಹ್ಮವಿದ್ಯೆ ಎಂತಹದು?

ಉ : ವಿದ್ಯೆಗಳಲ್ಲೆಲ್ಲಾ ಶ್ರೇಷ್ಠವಾದುದು, ಅತಿರಹಸ್ಯವಾದುದು.

ಪ್ರ : ಅದು ಯಾರಿಗೆ ಬೋಧಿಸಲ್ಪಡುವುದು?

ಉ : ಅಸೂಯಾದಿ ದುರ್ಗುಣಗಳಿಲ್ಲದವನಿಗೆ.

ಪ್ರ : ಬ್ರಹ್ಮವಿದ್ಯೆಗೆ ಅರ್ಹತೆ ಏನು?

ಉ : ಹೃದಯ ಶುದ್ಧಿ, ಅಸೂಯಾದಿ ದುರ್ಗುಣರಾಹಿತ್ಯ.

ಪ್ರ : ಮನುಜನು ಉದ್ಧಾರವಾಗಬೇಕೆಂದರೆ ಏನನ್ನು ತಿಳಿದುಕೊಳ್ಳಬೇಕು?

ಉ : ಜ್ಞಾನ ಹಾಗು ವಿಜ್ಞಾನ (ಅನುಭವಜ್ಞಾನ)ವನ್ನು.

ಪ್ರ : ಅದನ್ನು ತಿಳಿದುಕೊಳ್ಳುವುದರಿಂದ ಉಂಟಾಗುವ ಪ್ರಯೋಜನವೇನು?

ಉ : ಜೀವಿಯು ಜನನ ಮರಣಾದಿ ಅಶುಭಗಳಿಂದ ವಿಮುಕ್ತನಾಗುವನು.

ಪ್ರ : ಈ ಸಂಸಾರ ಎಂತಹದು?

ಉ : ಅಶುಭ ರೂಪವಾದದ್ದು.

ಪ್ರ : ಅದರಿಂದ ವಿಮುಕ್ತಿ ಹೇಗೆ?

ಉ : ಅನುಭವಪೂರ್ವಕವಾದ ಬ್ರಹ್ಮಜ್ಞಾನವನ್ನು ಹೊಂದುವುದರಿಂದ

**ಅ॥** ಅಂತಹ ಬ್ರಹ್ಮಜ್ಞಾನವನ್ನು ಸ್ತುತಿಸಲಾಗುತ್ತಿದೆ-

**೨. ರಾಜವಿದ್ಯಾ ರಾಜಗುಹ್ಯಂ ಪವಿತ್ರಮಿದಮುತ್ತಮಮ್**
**ಪ್ರತ್ಯಕ್ಷಾವಗಮಂ ಧರ್ಮ್ಯಂ ಸುಸುಖಂ ಕರ್ತುಮವ್ಯಯಮ್**

**ಅರ್ಥ:** ಇದಂ=ಈ ಬ್ರಹ್ಮಜ್ಞಾನವನ್ನು; ರಾಜವಿದ್ಯಾ=ಎಲ್ಲಾ ವಿದ್ಯೆಗಳಲ್ಲಿ ಶ್ರೇಷ್ಠವಾದುದು; ರಾಜಗುಹ್ಯಂ=ರಹಸ್ಯಗಳಲ್ಲೆಲ್ಲಾ ಅತಿ ರಹಸ್ಯವಾದುದು; ಉತ್ತಮಂ=ಸರ್ವೋತ್ಕೃಷ್ಟವಾದುದು; ಪವಿತ್ರಂ=ಪವಿತ್ರವಾದುದು; ಪ್ರತ್ಯಕ್ಷಾವಗಮಂ=ಪ್ರತ್ಯಕ್ಷವಾಗಿ ತಿಳಿಯಬಹುದಾದುದು; ಧರ್ಮ್ಯಂ= ಧರ್ಮಯುಕ್ತವಾದದ್ದು; ಕರ್ತುಂ=ಅನುಷ್ಠಿಸಲು; ಸುಸುಖಂ=ಹೆಚ್ಚಿಗೆ ಸುಲಭವಾದದ್ದು; ಅವ್ಯಯಂ=ನಾಶವಿಲ್ಲದಿರುವುದು ಆಗಿದೆ.

**ತಾ॥** ಈ ಬ್ರಹ್ಮಜ್ಞಾನವು ವಿದ್ಯೆಗಳಲ್ಲೆಲ್ಲಾ ಶ್ರೇಷ್ಠವಾದುದು. ರಹಸ್ಯಗಳಲ್ಲಿ ಅತಿರಹಸ್ಯವಾದುದು, ಸರ್ವೋತ್ಕೃಷ್ಟವಾದುದು, ಪವಿತ್ರವಾದುದು, ಪ್ರತ್ಯಕ್ಷವಾಗಿ ತಿಳಿಯಬಹುದಾದಂತಹದು, ಅನುಷ್ಠಿಸಲು ಬಹಳ ಸುಲಭವಾದುದು ಮತ್ತು ನಾಶರಹಿತವಾದುದಾಗಿದೆ.

**ವ್ಯಾಖ್ಯೆ:** ಈ ಅಧ್ಯಾಯದಲ್ಲಿ ಹೇಳಲ್ಪಡುವ ಬ್ರಹ್ಮಜ್ಞಾನ ಎಂತಹುದೋ ಅದರ ಮಹಿಮೆ ಏನೋ ಈ ಶ್ಲೋಕದಲ್ಲಿ ವಿವರಿಸಲಾಗಿದೆ. ಪ್ರಪಂಚದಲ್ಲಿ ಅನೇಕ ವಿದ್ಯೆಗಳಿವೆ. ಆದರೆ ಅವು ಯಾವುವೂ ಜೀವಿಯನ್ನು ಜನನ ಮರಣಗಳಿಂದ ವಿಮುಕ್ತಿಗೊಳಿಸಲಾರವು. ಬ್ರಹ್ಮವಿದ್ಯೆ ಮಾತ್ರ ಅಂತಹ ಕೆಲಸವನ್ನು ಮಾಡಬಲ್ಲದು. ಮತ್ತೆ ದೃಶ್ಯವಸ್ತುಗಳೆಲ್ಲವೂ ನಶ್ವರವಾದವುಗಳು. ಆದ್ದರಿಂದ ಅವುಗಳನ್ನು ಕುರಿತ ಯಾವ ವಿದ್ಯೆಯೂ ಮನುಜನಿಗೆ ಪೂರ್ಣ ಶಾಂತಿಯನ್ನೀಯುವುದಿಲ್ಲ, ಶಾಶ್ವತವಾದ ಬ್ರಹ್ಮ(ಆತ್ಮ)ವನ್ನು ಕುರಿತ ವಿದ್ಯೆಯೇ ಶಾಂತಿಯನ್ನು ಕೊಡಬಲ್ಲದು. ಆದ್ದರಿಂದಲೇ ಬ್ರಹ್ಮವಿದ್ಯೆ ವಿದ್ಯೆಗಳಲ್ಲೆಲ್ಲಾ ಶ್ರೇಷ್ಠವಾದುದು. ಇದು ರಾಜವಿದ್ಯೆಯೆಂದೂ ಕರೆಯಲ್ಪಟ್ಟಿದೆ. ಪವಿತ್ರವಾದ ಪರಮಾತ್ಮ ವಸ್ತುವನ್ನು ಪ್ರತಿಪಾದಿಸುವು ದಾದ್ದರಿಂದ ಇದು ಅತಿ ಪವಿತ್ರವಾದುದಾಗಿದೆ.

'ಪ್ರತ್ಯಕ್ಷಾವಗಮಂ'- ಈ ಬ್ರಹ್ಮವಿದ್ಯೆಯನ್ನು ಪ್ರತ್ಯಕ್ಷವಾಗಿ ತಿಳಿದುಕೊಂಡು ಅನುಭೂತಿಗೊಳಿಸಿಕೊಳ್ಳಬಹುದು. ಇದು ಪ್ರತ್ಯಕ್ಷ ಫಲವನ್ನುಂಟುಮಾಡುವುದೇ ಹೊರತು ಪರೋಕ್ಷಫಲವನ್ನಲ್ಲ. ಏಕೆಂದರೆ, ಯಾವ ಕ್ಷಣದಲ್ಲಿ ಸಾಧಕನು ಈ ಬ್ರಹ್ಮವಿದ್ಯೆಯನ್ನು ಅನುಭೂತಿಗೊಳಿಸಿಕೊಳ್ಳುವನೋ ಆ ಕ್ಷಣದಲ್ಲಿಯೇ ಆತನು ಸಾಕ್ಷಾತ್ ಬ್ರಹ್ಮವೇ ಆಗುವನು. ಆದ್ದರಿಂದ ಇದು ಫಲವನ್ನು ಕೊಡುವುದೋ ಅಥವ ಇಲ್ಲವೋ ಎನ್ನುವ ಸಂದೇಹಕ್ಕೆ ಆಸ್ಪದವಿಲ್ಲ.

'ಸುಸುಖಂ'- ಈ ಬ್ರಹ್ಮವಿದ್ಯೆಯನ್ನು ಆಚರಿಸುವುದು ಬಹಳ ಸುಲಭವೆಂದು ಹೇಳಲಾಗಿದೆ. ಮನಸ್ಸಿನಲ್ಲಿರುವ ದುಃಖ ಸಂಸ್ಕಾರಗಳನ್ನು, ವಾಸನಾ ಜಾಲವನ್ನು ಪ್ರಯತ್ನಪೂರ್ವಕವಾಗಿ ಹೋಗಲಾಡಿಸಿಕೊಂಡರೆ, ಇನ್ನು ಸ್ವಸ್ವರೂಪ ಸಾಕ್ಷಾತ್ಕಾರದಲ್ಲಿ ಎಂತಹ ಶ್ರಮವೂ ಇಲ್ಲ. ಆದ್ದರಿಂದಲೇ ಶಾಸ್ತ್ರಗಳಲ್ಲಿ ಈ ಆತ್ಮಾನುಭೂತಿ, ಪುಷ್ಪಗಳನ್ನು ಹಿಸುಕುವುದಕ್ಕಿಂತ, ಶ್ವಾಸವನ್ನು ತೆಗೆದುಕೊಳ್ಳುವುದಕ್ಕಿಂತ ಸುಲಭವೆಂದು ಹೇಳಲಾಗಿದೆ. ಬ್ರಹ್ಮಾನುಭವವು ಅತಿ ಸುಲಭವಾದುದೆಂದು ಹೇಳಿ ಭಗವಂತನು ಸಾಧಕರಿಗೆ ಧೈರ್ಯವನ್ನು ಕೊಡುತ್ತಿದ್ದಾನೆ. ಅಷ್ಟೇ ಅಲ್ಲದೆ ಈ ವಿದ್ಯೆ ಧರ್ಮಗಳಿಗೆ ಮೂಲವೆಂದು, ಸನಾತನವೆಂದು ಮತ್ತು ಅವ್ಯಯವೆಂದು ಇಲ್ಲಿ ಹೇಳಲಾಗಿದೆ.

ಈ ಪ್ರಕಾರವಾಗಿ ಶ್ರೀಕೃಷ್ಣಪರಮಾತ್ಮ ತಾನು ಬೋಧಿಸಬೇಕೆಂದಿರುವ ಬ್ರಹ್ಮಜ್ಞಾನದ ಮಹಿಮೆಯನ್ನು ಪ್ರಾರಂಭದಲ್ಲೇ ತಿಳಿಸಿರುವನು. ಇದರಿಂದ ಮುಮುಕ್ಷುಗಳಿಗೆ ಅದರಲ್ಲಿ ಅಧಿಕ ಪ್ರೀತಿ, ವಿಶ್ವಾಸ ಹುಟ್ಟುತ್ತದೆ.

ಪ್ರ : ಬ್ರಹ್ಮಜ್ಞಾನ ಎಂತಹದು?

ಉ : ೧) ವಿದ್ಯೆಗಳಲ್ಲೆಲ್ಲಾ ಶ್ರೇಷ್ಠವಾದುದು ೨) ಅತಿ ರಹಸ್ಯವಾದುದು ೩) ಪವಿತ್ರವಾದುದು ೪) ಉತ್ತಮವಾದುದು ೫) ಪ್ರತ್ಯಕ್ಷವಾಗಿ ತಿಳಿದುಕೊಳ್ಳ ಬಹುದಂತಹದು ೬) ಧರ್ಮಯುಕ್ತವಾದುದು ೭) ಸುಲಭವಾಗಿ ಆಚರಿಸ ಬಹುದಾದುದು ೮) ನಾಶರಹಿತವಾದುದು.

**ಅ॥** ಶ್ರದ್ಧೆಯಿಲ್ಲದವರು ದೈವವನ್ನು ಹೊಂದಲಾರರೆಂದು, ಸಂಸಾರ ಕೂಪದಲ್ಲಿಯೇ ಬಿದ್ದು ನರಳುವರೆಂದು ತಿಳಿಸಲಾಗುತ್ತಿದೆ-

**೩. ಅಶ್ರದ್ದಧಾನಾಃ ಪುರುಷಾ ಧರ್ಮಸ್ಯಾಸ್ಯ ಪರಂತಪ**
**ಅಪ್ರಾಪ್ಯ ಮಾಂ ನಿವರ್ತಂತೇ ಮೃತ್ಯುಸಂಸಾರವರ್ತ್ಮನಿ**

**ಅರ್ಥ:** ಪರಂತಪ=ಶತ್ರುಗಳನ್ನು ತಪಿಸಬಲ್ಲ ಓ ಅರ್ಜುನಾ!; ಅಸ್ಯ=ಈ; ಧರ್ಮಸ್ಯ=(ಆತ್ಮಜ್ಞಾನವೆನ್ನುವ) ಧರ್ಮದಲ್ಲಿ, ಅಶ್ರದ್ದಧಾನಾಃ=ಶ್ರದ್ಧೆಯಿಲ್ಲದಂತ; ಪುರುಷಾಃ=ಮನುಷ್ಯರು; ಮಾಂ=ನನ್ನನ್ನು; ಅಪ್ರಾಪ್ಯ= ಹೊಂದದೆ; ಮೃತ್ಯುಸಂಸಾರವರ್ತ್ಮನಿ=ಮೃತ್ಯುರೂಪವಾದ ಸಂಸಾರ ಮಾರ್ಗದಲ್ಲಿ; ನಿವರ್ತಂತೇ=ನರಳುತ್ತಾರೆ (ಮತ್ತೆ ಮತ್ತೆ ಹುಟ್ಟುತ್ತಿದ್ದಾರೆ ಇಲ್ಲವೆ ಸಂಸಾರದಲ್ಲಿಯೇ ನಿಂತು ನಾರುವರು).

**ತಾ॥** ಓ ಅರ್ಜುನಾ! ಈ (ಆತ್ಮಜ್ಞಾನವೆನ್ನುವ) ಧರ್ಮದಲ್ಲಿ ಶ್ರದ್ಧೆಯಿಲ್ಲದ ಮಾನವರು ನನ್ನನ್ನು ಹೊಂದದೆ ಮೃತ್ಯುರೂಪವಾದ ಸಂಸಾರ ಮಾರ್ಗದಲ್ಲಿಯೇ ನರಳುವರು (ಸಂಸಾರ ಪರಿಭ್ರಮಣೆ ಮಾಡುವರು ಇಲ್ಲವೆ ಭದ್ರವಾಗಿ ಅಲ್ಲಿಯೇ ಬೇರೂರಿರುವರು).

**ವ್ಯಾಖ್ಯೆ:** ಲೌಕಿಕ ರಂಗದಲ್ಲಾಗಲಿ, ಪಾರಮಾರ್ಥ ರಂಗದಲ್ಲಾಗಲಿ, ಇಲ್ಲವೆ ಯಾವ ಕಾರ್ಯದಲ್ಲಿಯೇ ಆಗಲಿ ಶ್ರದ್ಧೆ ಬಹಳ ಅವಶ್ಯಕ. ಒಬ್ಬನಿಗೆ ಒಂದು ವಸ್ತುವಿನಲ್ಲಾಗಲಿ ಅಥವ ಕಾರ್ಯದಲ್ಲಾಗಲಿ ಎಷ್ಟು ಶ್ರದ್ಧೆಯಿರುವುದೋ ಅಷ್ಟು

ಬೇಗ ಆ ವಸ್ತು ಲಭಿಸುತ್ತದೆ ಅಥವ ಆ ಕಾರ್ಯವು ನೆರವೇರುತ್ತದೆ. ಆದ್ದರಿಂದಲೇ ಭಗವಂತನು ಈ ಶ್ಲೋಕದಲ್ಲಿ ತಾನು ಹೇಳುವ ಬ್ರಹ್ಮಜ್ಞಾನದಲ್ಲಿ ಯಾವನಿಗೆ ಶ್ರದ್ಧೆಯಿರುವುದೋ, ಆತನು ಶ್ರದ್ಧಾಪೂರ್ವಕವಾಗಿ ಅದನ್ನು ಅನುಷ್ಠಾನಮಾಡಿ ತನ್ನನ್ನು ಸೇರಬಲ್ಲನೆಂದೂ, ಶ್ರದ್ಧೆಯಿಲ್ಲದವನು ತನ್ನನ್ನು ಹೊಂದದೆ ಮೃತ್ಯುರೂಪವಾದ ಸಂಸಾರದಲ್ಲೇ ಕೊಳೆಯುವನೆಂದೂ ಸ್ಪಷ್ಟವಾಗಿ ಹೇಳಿರುವನು. ಆದ್ದರಿಂದ ವಿಜ್ಞಗಳಾದವರು ಚೆನ್ನಾಗಿ ಆಲೋಚಿಸಿ, ದುಃಖಪ್ರದವಾದ ಸಂಸಾರ ಮಾರ್ಗದಲ್ಲಿ ಬೀಳದೆ, ಆನಂದಪ್ರದವಾದ ದೈವಸಾಕ್ಷಾತ್ಕಾರವನ್ನು ಪಡೆಯಲು ಶ್ರದ್ಧೆಯೆನ್ನುವ ಸುಗುಣದ ಮೊರೆ ಹೊಕ್ಕು ಬ್ರಹ್ಮವಿದ್ಯೆಯನ್ನು ಚೆನ್ನಾಗಿ ಅನುಷ್ಠಿಸಿ ಮುಕ್ತಿ ಹೊಂದಬೇಕು. ಲೋಕದಲ್ಲಿ ಸಾಮಾನ್ಯ ಕಾರ್ಯಗಳಾದ ಅಡಿಗೆ, ವ್ಯವಸಾಯ ಮುಂತಾದುವುಗಳನ್ನು ಮಾಡಲು ಎಷ್ಟೋ ಶ್ರದ್ಧೆ ಅವಶ್ಯಕವಿರಬೇಕಾದರೆ ಇನ್ನು ಬ್ರಹ್ಮವಿದ್ಯಾ ಸಾಧನೆಯ ಬಗ್ಗೆ ಬೇರೆ ಹೇಳಬೇಕೇ? ಆದ್ದರಿಂದಲೇ ಗೀತಾಚಾರ್ಯನು ತನ್ನ ಬೋಧೆಯಲ್ಲಿ ಆಗಾಗ ಈ ಶ್ರದ್ಧೆಯನ್ನು ಒತ್ತಿ ಒತ್ತಿ ಹೇಳುವನು.

ಇನ್ನು ಈ ಸಂಸಾರಮಾರ್ಗವೆಂತಹುದೋ ಈ ಶ್ಲೋಕದಲ್ಲಿ ವಿಶದೀಕರಿಸಲಾಗಿದೆ. ಸಾಮಾನ್ಯವಾಗಿ ಕೆಲವು ಜನರು ಭೋಗವಿಲಾಸಗಳಿಗೆ ಜೋತುಬಿದ್ದು ಈ ಸಂಸಾರವನ್ನು ಸ್ವರ್ಗವೆಂದು ಭಾವಿಸುವರು. ಅಮೃತ ಪ್ರಾಯವಾದುದೆಂದು ವರ್ಣಿಸುವರು. ಆದರೆ ಸರ್ವಜ್ಞನಾದ ಪರಮಾತ್ಮನು ಅದನ್ನು ಮೃತ್ಯುರೂಪವಾಗಿ ವರ್ಣಿಸಿದನು (ಮೃತ್ಯುಸಂಸಾರವರ್ತ್ಮನಿ). ಅದೇ ಅದರ ನಿಜರೂಪ. ಮಾಯಾ ಪ್ರಭಾವದಿಂದ ಈ ಸಂಸಾರವು ಮೇಲೆ 'ಆಡಂಭರ'ವಾಗಿ ಕಾಣಿಸಿದರೂ ಒಳಗೆ ಮೃತ್ಯುರೂಪವೇ ಆಗಿದೆ. ಈ ರಹಸ್ಯವನ್ನು ಭಗವಂತನು ಈ ಶ್ಲೋಕದಲ್ಲಿ ಬಹಿರ್ಗತಗೊಳಿಸಿದನು. ಚೆನ್ನಾಗಿ ಅಲಂಕರಿಸಲ್ಪಟ್ಟ ಶವವು ಯಾವ ಪ್ರಕಾರ ಹೊರಗೆ ಅಂದವಾಗಿ ಕಂಡರೂ ಒಳಗೆ ದುರ್ಗಂಧದಿಂದ ಕೂಡಿರುವುದೋ ಹಾಗೆಯೇ ಈ ಸಂಸಾರ ಸ್ಥಿತಿಯೂ ಕೂಡ. ಆದ್ದರಿಂದ ವಿಜ್ಞಗಳು ಅದರಿಂದ ಮೋಸ ಹೋಗದೆ ಅಮೃತರೂಪನಾದ ಪರಮಾತ್ಮನನ್ನೇ ಆಶ್ರಯಿಸಿ ಧನ್ಯರಾಗಬೇಕು. ನಿವರ್ತಂತೇ ಎನ್ನುವ ಪದಕ್ಕೆ 'ನಿತರಾಂ ವರ್ತಂತೇ'- ಅತಿಯಾಗಿ ವರ್ತಿಸುತ್ತಿದ್ದಾರೆ- ಎಂದೂ ಹೇಳಬಹುದು.

ಪ್ರ : ಪರಮಾತ್ಮನನ್ನು ಯಾರು ಹೊಂದಬಲ್ಲರು?

ಉ : ಬ್ರಹ್ಮಜ್ಞಾನದಲ್ಲಿ ಶ್ರದ್ಧೆಯುಳ್ಳವರು.

ಪ್ರ : ಅಂತಹ ಶ್ರದ್ಧೆಯಿಲ್ಲದವರ ಗತಿಯೇನು?

ಉ : ಅವರು ಪರಮಾತ್ಮನನ್ನು ಹೊಂದದೆ ಮೃತ್ಯುರೂಪವಾದ ಸಂಸಾರದಲ್ಲೇ ಹೊರಳಾಡುವರು.

ಪ್ರ : ಈ ಸಂಸಾರದ ಸ್ವರೂಪ ಎಂತಹದು?

ಉ : ಅದು ಮೃತ್ಯುರೂಪವಾದುದು. ಅಂದರೆ ಜನನ ಮರಣರೂಪವಾಗಿ ದುಃಖಭೂಯಿಷ್ಠವಾಗಿರುವುದೆಂದು ಭಾವ.

**ಅ॥** ಪರಮಾತ್ಮನ ಸ್ವರೂಪವನ್ನು ಏಳು ಶ್ಲೋಕಗಳ ಮೂಲಕ ವರ್ಣಿಸಲಾಗಿದೆ-

**೪. ಮಯಾ ತತಮಿದಂ ಸರ್ವಂ ಜಗದವ್ಯಕ್ತಮೂರ್ತಿನಾ**
**ಮತ್ ಸ್ಥಾನಿ ಸರ್ವಭೂತಾನಿ ನ ಚಾಹಂ ತೇಷ್ವವಸ್ಥಿತಃ**

**ಅರ್ಥ:** ಇದಂ=ಈ; ಸರ್ವಂ=ಸಮಸ್ತವಾದ; ಜಗತ್=ಪ್ರಪಂಚ; ಅವ್ಯಕ್ತ ಮೂರ್ತಿನಾ=ಇಂದ್ರಿಯ ಗೋಚರವಲ್ಲದ ಸ್ವರೂಪವುಳ್ಳ; ಮಯಾ= ನನ್ನಿಂದ; ತತಂ=ವ್ಯಾಪಿಸಲ್ಪಟ್ಟಿದೆ; ಸರ್ವಭೂತಾನಿ=ಸಮಸ್ತ ಪ್ರಾಣಿ ಕೋಟಿಗಳು; ಮತ್‌ಸ್ಥಾನಿ=ನನ್ನಲ್ಲಿವೆ; ತೇಷು=ಅವುಗಳಲ್ಲಿ; ಅಹಂ=ನಾನು; ನ ಚ ಅವಸ್ಥಿತಃ=ಇಲ್ಲ (ನನಗೆ ಅವು ಆಧಾರಗಳಲ್ಲ).

**ತಾ॥** ಈ ಸಮಸ್ತ ಪ್ರಪಂಚವು ಅವ್ಯಕ್ತರೂಪನಾದ ನನ್ನಿಂದ ವ್ಯಾಪಿಸಲ್ಪಟ್ಟಿದೆ. ಸಮಸ್ತ ಪ್ರಾಣಿಕೋಟಿಗಳು ನನ್ನಲ್ಲಿವೆ. ನಾನು ಅವುಗಳಲ್ಲಿಲ್ಲ (ನನಗೆ ಅವು ಆಧಾರಗಳಲ್ಲ)..

**ವ್ಯಾಖ್ಯೆ:** 'ಅವ್ಯಕ್ತಮೂರ್ತಿನಾ'- ಇಂದ್ರಿಯಗಳಿಗೆ ಗೋಚರವಲ್ಲದ ಅತಿ ಸೂಕ್ಷ್ಮವಸ್ತುವೇ ಪರಮಾತ್ಮ. ಸಾಮಾನ್ಯವಾದ ಭೂತಾಕಾಶವೇ ನೇತ್ರಗಳಿಗೆ ಕಾಣಿಸದಿರುವಾಗ, ಇನ್ನು ಸೂಕ್ಷ್ಮಾತಿ ಸೂಕ್ಷ್ಮವಾದ ಚಿದಾಕಾಶವು (ಆತ್ಮ) ನೇತ್ರಾದಿಗಳಿಗೆ ಹೇಗೆ ಗೋಚರಿಸಲು ಸಾಧ್ಯ? ಆದ್ದರಿಂದಲೇ ಪರಮಾತ್ಮನನ್ನು ಅವ್ಯಕ್ತ ರೂಪಿಯೆಂದು ಇಲ್ಲಿ ಹೇಳಲಾಗಿದೆ. ಸ್ಥೂಲಾಕಾಶದಿಂದ ಯಾವ ಪ್ರಕಾರವಾಗಿ ಜಗತ್ತೆಲ್ಲವೂ ಪರಿವ್ಯಾಪ್ತಿಯಾಗಿರುವುದೋ ಹಾಗೆಯೇ ಚಿದಾಕಾಶವು (ಪರಮಾತ್ಮ) ಈ ಸ್ಥೂಲ, ಸೂಕ್ಷ್ಮ ಜಗತ್ತಿನಲ್ಲೆಲ್ಲಾ, ಪ್ರಾಣಿ ಕೋಟಿಗಳಲ್ಲೆಲ್ಲಾ ವ್ಯಾಪಿಸಿದೆ. ಆದ್ದರಿಂದ ಅವೆಲ್ಲವೂ ಪರಮಾತ್ಮನಲ್ಲಿಯೇ ಇರುವುವು.

*'ನ ಚಾಹಂ ತೇಷ್ವವಸ್ಥಿತಃ'*- ಅವೆಲ್ಲವೂ 'ನನ್ನಲ್ಲಿ ಇದ್ದರೂ ನಾನು ಅವುಗಳಲ್ಲಿಲ್ಲ' ಎಂದು ಭಗವಂತನು ಏಕೆ ಹೇಳಿದನು? ವಾಸ್ತವ ದೃಷ್ಟಿಯಲ್ಲಿ ಪರೀಕ್ಷಿಸಿ ನೋಡಿದರೆ ಈ ನಾಮರೂಪಾತ್ಮಕವಾದ ದೃಶ್ಯ ಜಗತ್ತೆಲ್ಲವೂ ಸ್ವಪ್ನದಂತೆ ಮಿಥ್ಯೆಯೇ ಆಗಿದೆ. ಆತ್ಮವೊಂದೇ ಸತ್ಯ. ಆ ಆತ್ಮದಲ್ಲಿಯೇ ದೃಶ್ಯಜಾತವೆಲ್ಲವೂ, ರಜ್ಜುವಿನಲ್ಲಿ (ಹಗ್ಗದಲ್ಲಿ) ಸರ್ಪವು ಆರೋಪಗೊಂಡಂತೆ ಆರೋಪಗೊಂಡಿವೆ. ಆದ್ದರಿಂದ ಮಿಥ್ಯಾರೂಪವಾದ ದೃಶ್ಯವಸ್ತುವಿನಲ್ಲಿ ಸತ್ಯವಸ್ತುವಾದ ಪರಮಾತ್ಮನು ಹೇಗಿರಬಲ್ಲನು? ಆದ್ದರಿಂದಲೇ ಭಗವಂತನು ಇಲ್ಲಿ 'ನನ್ನಲ್ಲಿ ಭೂತಗಳೆಲ್ಲವೂ ಇವೆ ಆದರೆ ನಾನು ಅವುಗಳಲ್ಲಿಲ್ಲ' ಎಂದು ಹೇಳಲು ಕಾರಣವಾಗಿದೆ.

ಸ್ಥೂಲ ಹಾಗು ಸೂಕ್ಷ್ಮವಾದ ಚರಾಚರ ಪ್ರಪಂಚದಲ್ಲಿ ಎಲ್ಲೆಲ್ಲೂ ಪರಮಾತ್ಮನು ವ್ಯಾಪಿಸಿರುವನಾದ್ದರಿಂದ, ಆತನು ಇಲ್ಲದ ಸ್ಥಳವೇ ಇಲ್ಲ. ಆದ್ದರಿಂದ ಸಾಧಕನು ಆತನ ಸ್ಥಿತಿಯನ್ನು ಸರ್ವತ್ರ ಅನುಭೂತಿಗೊಳಿಸಿ ಕೊಂಡು ಪಾಪಕೃತ್ಯಗಳನ್ನು ಮಾಡದೆ, ಪ್ರಾಣಿಕೋಟಿಗಳ ಬಗ್ಗೆ ದಯೆ ಹೊಂದಿ, ಭಕ್ತಿ ಭಾವಸಮನ್ವಿತನಾಗಿ ಇರಬೇಕು.

ಪ್ರ : ಪರಮಾತ್ಮನು ಎಂತಹ ರೂಪವನ್ನು ಹೊಂದಿರುವನು?

ಉ : ಇಂದ್ರಿಯಗಳಿಗೆ ಗೋಚರವಾಗದ ಅತಿ ಸೂಕ್ಷ್ಮರೂಪ.

ಪ್ರ : ಆತನು ಎಲ್ಲಿದ್ದಾನೆ?

ಉ : ಸ್ಥೂಲ ಹಾಗು ಸೂಕ್ಷ್ಮವಾದ ಸಮಸ್ತ ಪ್ರಪಂಚದಲ್ಲಿ ವ್ಯಾಪಿಸಿದ್ದಾನೆ.

ಪ್ರ : ಪ್ರಾಣಿಕೋಟಿಗಳೆಲ್ಲಾ ಎಲ್ಲಿ ಇವೆ?

ಉ : ಪರಮಾತ್ಮನಲ್ಲಿ ಸ್ಥಿತಗೊಂಡಿವೆ.

**೫. ನ ಚ ಮತ್‌ಸ್ಥಾನಿ ಭೂತಾನಿ ಪಶ್ಯ ಮೇ ಯೋಗಮೈಶ್ವರಮ್**
**ಭೂತಭೃನ್ನ ಚ ಭೂತಸ್ಥೋ ಮಮಾತ್ಮಾ ಭೂತಭಾವನಃ**

**ಅರ್ಥ:** ಭೂತಾನಿ=ಪ್ರಾಣಿಗಳು; ಮತ್‌ಸ್ಥಾನಿನ ಚ=ನನ್ನಲ್ಲಿ ಇರುವುದಿಲ್ಲ; ಮೇ=ನನ್ನ; ಐಶ್ವರಂ=ಈಶ್ವರ ಸಂಬಂಧವಾದ; ಯೋಗಂ=ಯೋಗ

ಮಹಿಮೆಯನ್ನು; ಪಶ್ಯ=ನೋಡು; ಮಮ=ನನ್ನ; ಆತ್ಮಾ=ಆತ್ಮ(ಸ್ವರೂಪವು); ಭೂತಭೃತ್=ಪ್ರಾಣಿಕೋಟಿಗಳನ್ನು ಹೊರುವುದು; ಭೂತಭಾವನಃ ಅಪಿ=ಪ್ರಾಣಿಕೋಟಿಗಳನ್ನು ಉತ್ಪತ್ತಿಸುವಂತಹದೂ (ಇಲ್ಲವೆ ರಕ್ಷಿಸುವುದೂ) ಆದರೂ; ಭೂತಸ್ಥಃ=ಪ್ರಾಣಿಕೋಟಿಗಳಲ್ಲಿರುವುದು (ಅವುಗಳನ್ನು ಆಧಾರ ಮಾಡಿಕೊಂಡಿರುವುದು); ನ ಚ=ಅಲ್ಲ.

**ತಾ||** ಪ್ರಾಣಿಕೋಟಿಗಳು ನನ್ನಲ್ಲಿರುವುದಿಲ್ಲ. ಈಶ್ವರ ಸಂಬಂಧವಾದ ನನ್ನ ಈ ಯೋಗ ಮಹಿಮೆಯನ್ನು ವೀಕ್ಷಿಸು. ನನ್ನ ಆತ್ಮ(ಸ್ವರೂಪವು) ಪ್ರಾಣಿ ಕೋಟಿಗಳನ್ನು ಉತ್ಪತ್ತಿಸಿ ಹೊತ್ತರೂ ಆ ಪ್ರಾಣಿಗಳಲ್ಲಿರುವುದಿಲ್ಲ, (ಅವುಗಳನ್ನು ಆಧಾರ ಮಾಡಿಕೊಂಡಿರುವುದಿಲ್ಲ).

**ವ್ಯಾಖ್ಯೆ:** ಹಿಂದಿನ ಶ್ಲೋಕದಲ್ಲಿ 'ನನ್ನಲ್ಲಿ ಸಮಸ್ತ ಪ್ರಾಣಿಗಳು ಇವೆ' ಎಂದು ಹೇಳಿ ಈ ಶ್ಲೋಕದಲ್ಲಿ 'ನನ್ನಲ್ಲಿ ಯಾವ ಪ್ರಾಣಿಗಳೂ ಇಲ್ಲ' ಎಂದು ಹೇಳುವುದು ವಿಪರೀತವಲ್ಲವೇ ಎಂದು ಪ್ರಶ್ನಿಸಬಹುದು. ಸಾಮಾನ್ಯರ ದೃಷ್ಟಿಯಲ್ಲಿ ದೃಶ್ಯವೆನ್ನುವುದು ಒಂದಿದೆಯಾದ್ದರಿಂದ ಅದು ಭಗವಂತನಲ್ಲಿ ಸ್ಥಿತಿ ಹೊಂದಿದೆಯೆಂದೂ, ಅದಕ್ಕೆ ಆಧಾರ ಆ ಭಗವಂತನೇ ಎಂದು ವಚಿಸಲಾಗಿದೆ. ಪರಮಾರ್ಥ ದೃಷ್ಟಿಯಲ್ಲಿ ದ್ವೈತವೆನ್ನುವುದೇ ಇಲ್ಲ. ಆದ್ದರಿಂದ ಇನ್ನು ಪ್ರಪಂಚವಾಗಲೀ, ಪ್ರಾಣಿಕೋಟಿಗಳಾಗಲಿ ಅಲ್ಲಿ ಇರುವುದಿಲ್ಲ. ಒಂದೇ ಚಿದ್ಘನ ಪರಮಾತ್ಮನು ಶೇಷವಾಗಿ ಉಳಿಯುವನು. ಆದ್ದರಿಂದ ಅಂತಹ ಅದ್ವೈತ ದೃಷ್ಟಿಯಲ್ಲಿ 'ನನ್ನಲ್ಲಿ ಈ ಭೂತಗಳು ಇವೆ' ಎನ್ನುವ ವಾಕ್ಯವು ಹೇಗೆ ಸರಿಯಾಗುವುದು? ಆದ್ದರಿಂದ 'ನನ್ನಲ್ಲಿ ಯಾವ ಭೂತಗಳೂ ಇಲ್ಲ, ದೃಶ್ಯವು ನನ್ನಲ್ಲಿ ಇಲ್ಲವೇ ಇಲ್ಲ. ನಾನು ದೃಶ್ಯದಲ್ಲಿಲ್ಲ', ಎನ್ನುವ ಸರ್ವೋನ್ನತ ಅದ್ವೈತ ದೃಷ್ಟಿಯಿಂದ ಭಗವಂತನು ಈ ವಾಕ್ಯವನ್ನು ಹೇಳಿರುವನು. ಹೇಗೆಂದರೆ, ಎಚ್ಚೆತ್ತ ನಂತರ ಮನುಜನು 'ಸ್ವಪ್ನಲೋಕ ನನ್ನಲ್ಲಿಲ್ಲ, ನಾನು ಸ್ವಪ್ನ ಲೋಕದಲ್ಲಿಲ್ಲ' ಎಂದು ಹೇಗೆ ತಿಳಿಯುವನೋ ಹಾಗೆಯೇ ಸರ್ಪಭ್ರಮೆ ತೊಲಗಿದ ನಂತರ ರಜ್ಜುವಿನಲ್ಲಿ ಸರ್ಪವಾಗಲೀ, ಸರ್ಪದಲ್ಲಿ ರಜ್ಜುವಾಗಲೀ ಇಲ್ಲವೆಂದು ಹೇಗೆ ತಿಳಿಯುವನೋ, ಹಾಗೆಯೇ ಮೇಲಿನ ವಾಕ್ಯಗಳನ್ನು ಭಗವಂತನು ದೃಶ್ಯರಹಿತ ಪರಿಪೂರ್ಣಾದ್ವೈತ ದೃಷ್ಟಿಯಲ್ಲಿ ಹೇಳಿರುವನು. ಅಂತಹ ಪೂರ್ಣಸ್ಥಿತಿಯಲ್ಲಿ ಬ್ರಹ್ಮವೊಂದನ್ನು (ಆತ್ಮವನ್ನು) ಬಿಟ್ಟು ಅನ್ಯವಾದ ಯಾವ ವಸ್ತುವೂ ಇರುವುದಿಲ್ಲ. ಆದ್ದರಿಂದ ದ್ವೈತ ದೃಷ್ಟಿಯಲ್ಲಿ ತನ್ನ ಸ್ವರೂಪವು ಪ್ರಾಣಿಗಳನ್ನು ಭರಿಸುತ್ತಿದ್ದರೂ, ರಕ್ಷಿಸುತ್ತಿದ್ದರೂ, ಪರಮಾರ್ಥ ದೃಷ್ಟಿಯಲ್ಲಿ ಪ್ರಾಣಿಗಳೊಂದಿಗೆ ಅಥವ ಜಗತ್ತಿನೊಂದಿಗೆ ಯಾವ ಮಾತ್ರ ಸಂಬಂಧವೂ ಇಲ್ಲದೆ ಪರಮಾತ್ಮನು ಬೆಳಗುತ್ತಿದ್ದಾನೆ. ಈ ಸತ್ಯವನ್ನೇ ಗೀತಾಚಾರ್ಯನು ಈ ಶ್ಲೋಕದಲ್ಲಿ ತಿಳಿಸಿ ಜಗತ್ತಿನೊಂದಿಗೆ ಇರುವ ತನ್ನ ಅಸಂಗತ್ವವನ್ನು, ನಿರ್ಲಿಪ್ತತೆಯನ್ನು ವ್ಯಕ್ತಪಡಿಸಿ, ಆ ತನ್ನ ಯೋಗಮಹಿಮೆಯನ್ನು ದರ್ಶಿಸಬೇಕೆಂದು ಅರ್ಜುನನಿಗೆ ಆದೇಶಿಸಿದನು. ಇದು ಈಶ್ವರ ಸಂಬಂಧವಾದ, ಅಭೂತಪೂರ್ವವಾದ ಯೋಗಮಹಿಮೆ.

ಪರಮಾರ್ಥ ದೃಷ್ಟಿಯಲ್ಲಿ ಜಗತ್ತು ಬ್ರಹ್ಮರೂಪದಲ್ಲಿ ಶೇಷವಾಗಿ ಉಳಿಯುತ್ತದೆ. ಜಗತ್ತೆನ್ನುವ ಪದಾರ್ಥವೊಂದು ಬೇರೆಯಿರುವುದಿಲ್ಲ.

ಪ್ರ : ಈಶ್ವರೀಯ ಯೋಗಮಹಿಮೆ ಎಂತಹುದೋ ನಿರೂಪಿಸಿ?

ಉ : ಪರಮಾತ್ಮನು ಪ್ರಾಣಿಗಳನ್ನು ಭರಿಸುತ್ತಿದ್ದರೂ, ರಕ್ಷಿಸುತ್ತಿದ್ದರೂ ಅವು ಯಾವುವೂ ವಾಸ್ತವವಾಗಿ ಆತನಲ್ಲಿ ಇಲ್ಲದೆ ಆತನು ಅವುಗಳಲ್ಲಿಯೂ ಇಲ್ಲದೆ ಇರುವನು. ಇದು ಈಶ್ವರ ಮಹಿಮೆ.

ಪ್ರ : ಪೂರ್ಣಾದ್ವೈತ ದೃಷ್ಟಿಯಲ್ಲಿ ಜಗತ್ತಿನ ಸ್ಥಾನ ಹೇಗಿರುವುದು?

ಉ: ಅಂತಹ ಸ್ಥಿತಿಯಲ್ಲಿ ಜಗತ್ತು ಎನ್ನುವುದೇ ಇರುವುದಿಲ್ಲ. ಎಲ್ಲವೂ ಒಂದೇ ಬ್ರಹ್ಮಸ್ವರೂಪವಾಗಿರುವುದು.

**ಅ||** ಇನ್ನು ದ್ವೈತ ದೃಷ್ಟಿಯಲ್ಲಿ ಜಗತ್ತಿನ ಸ್ಥಾನವನ್ನು ವಿವರಿಸುತ್ತಿದ್ದಾನೆ-

**೬. ಯಥಾಽಽಕಾಶಸ್ಥಿತೋ ನಿತ್ಯಂ ವಾಯುಸ್ಸರ್ವತ್ರಗೋ ಮಹಾನ್**
**ತಥಾ ಸರ್ವಾಣಿ ಭೂತಾನಿ ಮತ್‌ಸ್ಥಾನೀತ್ಯುಪಧಾರಯ**

**ಅರ್ಥ:** ಯಥಾ=ಯಾವ ಪ್ರಕಾರವಾಗಿ; ಸರ್ವತ್ರಗಃ=ಎಲ್ಲೆಲ್ಲೂ ವ್ಯಾಪಿಸಿರುವಂತಹದು; ಮಹಾನ್=ಹಿರಿಮೆಯದು; ವಾಯುಂ=ವಾಯುವು; ನಿತ್ಯಂ=ಯಾವಾಗಲೂ; ಆಕಾಶಸ್ಥಿತಃ=ಆಕಾಶದಲ್ಲಿದೆಯೋ (ಇದ್ದೂ ಆಕಾಶಕ್ಕೆ ಅಂಟದೆ ಇರುವುದೋ); ತಥಾ=ಆ ಪ್ರಕಾರವಾಗಿಯೇ; ಸರ್ವಾಣಿ=ಸಮಸ್ತ; ಭೂತಾನಿ=ಪ್ರಾಣಿಗಳು; ಮತ್‌ಸ್ಥಾನಿ ಇತಿ=ನನ್ನಲ್ಲಿರುವವೆಂದು; ಉಪಧಾರಯ=ತಿಳಿದುಕೊಳ್ಳುವುದು.

**ತಾ||** ಯಾವ ಪ್ರಕಾರವಾಗಿ ಎಲ್ಲೆಲ್ಲೂ ವ್ಯಾಪಿಸಿರುವ ಹಾಗೂ ಹಿರಿಮೆಯುಳ್ಳದ್ದೂ ಆದ ವಾಯುವು ಯಾವಾಗಲೂ ಆಕಾಶದಲ್ಲಿರುವುದೋ ಆ ಪ್ರಕಾರವೇ ಸಮಸ್ತ ಪ್ರಾಣಿಕೋಟಿಗಳು ನನ್ನಲ್ಲಿವೆಯೆಂದು ತಿಳಿದುಕೊಳ್ಳುವುದು.

**ವ್ಯಾಖ್ಯೆ:** ಸಮಸ್ತ ಪ್ರಾಣಿಕೋಟಿಗಳು ಪರಮಾತ್ಮನಲ್ಲಿ ಯಾವ ಪ್ರಕಾರವಾಗಿ ಸ್ಥಿತಿ ಹೊಂದಿರುವುವೋ ಇಲ್ಲಿ ಒಂದು ದೃಷ್ಟಾಂತದ ಮೂಲಕ ತಿಳಿಸಲಾಗಿದೆ. ವಾಯುವು ಬಹಳ ವಿಶಾಲವಾದುದು. ಎಲ್ಲಾ ಕಡೆ ಸಂಚರಿಸುವುದು, ವಿಶಿಷ್ಟವಾದುದು ಆದರೂ ಅದು ಸದಾ ಆಕಾಶದ ಒಂದು ಮೂಲೆಯಲ್ಲಿ ಅಡಗಿಕೊಂಡೇ ಇರುವುದು. ಹಾಗೆಯೇ ಜಗತ್ತು ವಿಶಾಲವಾದುದು. ಅನೇಕ ಪ್ರಾಣಿಕೋಟಿಗಳಿಂದ ಕೂಡಿದೆ ಆದರೂ ಪರಮಾತ್ಮನ ಯಾವುದೋ ಮೂಲೆಯಲ್ಲಿ ಮಾತ್ರ ಇರುವುದು. ಆಕಾಶ ತನ್ನಲ್ಲೇ ಸ್ಥಿತವಾಗಿರುವ ವಾಯುವಿನೊಡನೆ ಅತ್ಯಂತ ಸಾಮಿಪ್ಯವನ್ನು ಹೊಂದಿದ್ದರೂ, ಅದರೊಡನೆ ಯಾವ ರೀತಿಯ ಸಂಬಂಧವನ್ನೂ ಹೊಂದದೆ ನಿರ್ಲೇಪವಾಗಿ ಹೇಗಿರುವುದೋ, ಹಾಗೆ ಪರಮಾತ್ಮನಲ್ಲಿ ಜಗತ್ತೆಲ್ಲವೂ (ಕಲ್ಪಿತವಾಗಿ) ಇದ್ದರೂ ಆತನು ಅದರೊಡನೆ ಯಾವ ಸಂಬಂಧವನ್ನೂ ಹೊಂದಿರುವುದಿಲ್ಲ. ವಾಯುವಿನ ಗುಣದೋಷಗಳು, ಆಕಾಶಕ್ಕೆ ಅಂಟದ ಹಾಗೆ ಪ್ರಾಣಿಗಳ ಗುಣದೋಷಗಳು ಅಥವ ಕರ್ಮಾದಿಗಳು ಪರಮಾತ್ಮನನ್ನು ಅಂಟುವುದಿಲ್ಲ. ಆಕಾಶ ಕಣ್ಣಿಗೆ ಕಂಡುಬರುವುದಿಲ್ಲ. ಹಾಗೆಯೇ ಪರಮಾತ್ಮನು ಅವ್ಯಕ್ತರೂಪಿ. ಆಕಾಶ ಸೂಕ್ಷ್ಮವಾದುದು, ಸರ್ವವ್ಯಾಪಕವಾದುದು. ಹಾಗೆಯೇ ಪರಮಾತ್ಮನು ಅತಿಸೂಕ್ಷ್ಮರೂಪಿ, ಸರ್ವವ್ಯಾಪಿ. ಈ ಪ್ರಕಾರವಾಗಿ ಆಕಾಶ ಹಾಗು ಪರಮಾತ್ಮನಿಗೆ ಕೆಲವು ಸಮಾನ ಗುಣಗಳಿರುವುದರಿಂದ ಪರಮಾತ್ಮನನ್ನು ವರ್ಣಿಸುವಾಗ, ಸ್ಥೂಲದೃಷ್ಟಿಯುಳ್ಳವನಿಗೆ ಅರ್ಥವಾಗಲೆಂದು ಆಕಾಶದ ದೃಷ್ಟಾಂತವನ್ನು ಕೊಡಲಾಗಿದೆ. ವಾಸ್ತವವಾಗಿ ಪರಮಾತ್ಮನು ಆಕಾಶವಲ್ಲ. ಏಕೆಂದರೆ, ಆಕಾಶ ಜಡವಾದುದು. ಪರಮಾತ್ಮನಾದರೋ ಚೈತನ್ಯಸ್ವರೂಪಿ.

ಆಕಾಶದಂತೆ ಪರಮಾತ್ಮನು ಸರ್ವತ್ರ ವ್ಯಾಪಿಸಿರುವನೆಂದು ತಿಳಿದು ಆತನ ಅಸ್ತಿತ್ವ ಸರ್ವತ್ರ ವ್ಯಾಪಿಸಿದೆಯೆನ್ನುವುದನ್ನು ಅನುಭೂತಿಗೊಳಿಸಿ ಕೊಳ್ಳಬೇಕು. ದೇವರು ಎಲ್ಲಿದ್ದಾನೆ? ಎನ್ನುವ ಪ್ರಶ್ನೆಗೆ ಈ ಶ್ಲೋಕವು ಎಲ್ಲೆಲ್ಲಿಯೂ

ಇದ್ದಾನೆ ಎಂದು ಹೇಳುತ್ತಿದೆ. ಅಣು ಅಣುವಿನಲ್ಲಿಯೂ ಆತನಿದ್ದಾನೆ. ಈ ಸತ್ಯವನ್ನು ತಿಳಿದುಕೊಂಡರೆ ಇನ್ನು ಜನರು ಪಾಪಕೃತ್ಯಗಳನ್ನು ಹೇಗೆ ಮಾಡಬಲ್ಲರು? ಇಲ್ಲ, ಮಾಡಲಾರರು. ಏಕೆಂದರೆ, ಸರ್ವತ್ರ ಪರಮಾತ್ಮನ ಇರುವಿಕೆಯನ್ನು ಗಮನಿಸುತ್ತಲೇ ಇರುವವರು ಪಾಪಭೀತಿಯಿಂದ ಸುಗುಣ ಸಂಪನ್ನರಾಗಿ ಬೆಳಗುವರು. ಸಮಸ್ತ ಜೀವರಾಶಿಗಳನ್ನು ತನ್ನಲ್ಲಿ ಹೊಂದಿದ್ದೇನೆ ಎಂದು ಹೇಳಿರುವುದರಿಂದ ಜೀವಿಗಳಿಗಿಂತ ಈಶ್ವರನು ಉನ್ನತೋತ್ತಮನು ಎನ್ನುವುದು ವಿಶದವಾಗುತ್ತದೆ. ಆದ್ದರಿಂದ ಜನರು ತಮ್ಮ ಅಲ್ಪಬಲ, ಸೌಂದರ್ಯ, ಧನ, ಅಧಿಕಾರಾದಿಗಳನ್ನು ನಂಬಿ ಗರ್ವಿಸದೆ, ತಾನು ದೊಡ್ಡವನು ಎನ್ನುವ ದರ್ಪವನ್ನು ಬಿಟ್ಟು ಸರ್ವೇಶ್ವರನಲ್ಲಿ ಭಕ್ತಿಯುಳ್ಳವರಾಗಿ ಆತನನ್ನು ಸೇವಿಸಬೇಕೆನ್ನುವುದು ಸ್ಪಷ್ಟವಾಗುತ್ತದೆ.

ಪ್ರ : ಸಮಸ್ತ ಪ್ರಾಣಿಕೋಟಿಗಳು ಎಲ್ಲಿ ಸ್ಥಿತಿಗೊಂಡಿವೆ?

ಉ : ಪರಮಾತ್ಮನಲ್ಲಿ.

ಪ್ರ : ಯಾವ ಪ್ರಕಾರವಾಗಿ?

ಉ : ಆಕಾಶದಲ್ಲಿರುವ ವಾಯುವಿನಂತೆ

**ಅ||** ಜಗತ್ತಿನ ಸೃಷ್ಟಿ ಸ್ಥಿತಿ ಲಯಗಳಿಗೆ ತಾನೇ ಕಾರಣವೆಂದು ಭಗವಂತನು ಅಪ್ಪಣೆ ಕೊಡುತ್ತಿದ್ದಾನೆ-

**೭. ಸರ್ವಭೂತಾನಿ ಕೌಂತೇಯ ಪ್ರಕೃತಿಂ ಯಾಂತಿ ಮಾಮಿಕಾಮ್**
**ಕಲ್ಪಕ್ಷಯೇ ಪುನಸ್ತಾನಿ ಕಲ್ಪಾದೌ ವಿಸೃಜಾಮ್ಯಹಮ್**

**ಅರ್ಥ:** ಕೌಂತೇಯ=ಓ ಅರ್ಜುನಾ! ಸರ್ವಭೂತಾನಿ=ಸಮಸ್ತ ಪ್ರಾಣಿ ಕೋಟಿಗಳು; ಕಲ್ಪಕ್ಷಯೇ=ಪ್ರಳಯಕಾಲದಲ್ಲಿ; ಮಾಮಿಕಾಂ=ನನ್ನದಾದ (ನನಗೆ ಸ್ವಾಧೀನವಾದ); ಪ್ರಕೃತಿಂ=ಪ್ರಕೃತಿಯನ್ನು (ಮಾಯೆಯನ್ನು); ಯಾಂತಿ= ಹೊಂದುತ್ತಿವೆ; ಕಲ್ಪಾದೌ=ಸೃಷ್ಟಿಕಾಲದಲ್ಲಿ; ತಾನಿ=ಅವುಗಳನ್ನು; ಪುನಃ=ಮತ್ತೆ; ಅಹಂ=ನಾನು; ವಿಸೃಜಾಮಿ=ಸೃಷ್ಟಿಸುತ್ತಿದ್ದೇನೆ.

**ತಾ||** ಅರ್ಜುನಾ! ಸಮಸ್ತ ಪ್ರಾಣಿಕೋಟಿಗಳು ಪ್ರಳಯ ಕಾಲದಲ್ಲಿ ನನ್ನ ಪ್ರಕೃತಿಯನ್ನು (ಮಾಯೆಯನ್ನು) ಸೇರಿ ಅಲ್ಲಿ ಸುಪ್ತವಾಗಿರುತ್ತವೆ. ಮತ್ತೆ ಸೃಷ್ಟಿಕಾಲದಲ್ಲಿ ಅವುಗಳನ್ನು ನಾನು ಸೃಷ್ಟಿಸುವೆನು.

**ವ್ಯಾಖ್ಯೆ:** ಜೀವಿಗಳು ಪ್ರಕೃತಿಗೆ (ಮಾಯೆಗೆ) ಅಧೀನರಾಗಿದ್ದಾರೆ. ಪ್ರಕೃತಿ ಪರಮಾತ್ಮನಿಗೆ ಅಧೀನವಾಗಿದೆ. ಆದ್ದರಿಂದಲೇ 'ಮಾಮಿಕಾಂ'-ನನ್ನ ಸಂಬಂಧವಾದ ಪ್ರಕೃತಿ, ಇಲ್ಲವೆ ನನ್ನ ಸ್ವಾಧೀನದಲ್ಲಿರುವ ಪ್ರಕೃತಿಯೆಂದು ಶ್ರೀಕೃಷ್ಣಮೂರ್ತಿ ಹೇಳಿರುವನು.

**"ಮಾಯಾಂ ತು ಪ್ರಕೃತಿಂ ವಿದ್ಧಿ ಮಾಯಿನಂ ತು ಮಹೇಶ್ವರಂ"**

ಎನ್ನುವ ಶ್ರುತಿ ವಾಕ್ಯವು ಈ ಅರ್ಥವನ್ನೇ ಬೋಧಿಸುತ್ತದೆ. ಪ್ರಕೃತಿಯೇ ಮಾಯೆ. ಆ ಪ್ರಕೃತಿಯನ್ನು, ಮಾಯೆಯನ್ನು ಸ್ವಾಧೀನಪಡಿಸಿಕೊಂಡವನೇ ಮಹೇಶ್ವರನು. ಇದರಿಂದ ಪ್ರಕೃತಿಯನ್ನು ಜಯಿಸಲು, ಮಾಯೆಯನ್ನು ಸ್ವಾಧೀನಪಡಿಸಿಕೊಳ್ಳಲು ಸರ್ವೇಶ್ವರನ ಸಹಾಯ, ಅನುಗ್ರಹ ಬಹಳ ಅವಶ್ಯಕವೆಂದು ಸ್ಪಷ್ಟವಾಗುತ್ತದೆ. ಆದ್ದರಿಂದ ಪರಮಾರ್ಥ ರಂಗದಲ್ಲಿ ಸಾಧಕನು ಪುರೋಭಿವೃದ್ಧಿ ಹೊಂದಬೇಕೆಂದರೆ ಮಾಯೆಯನ್ನು ಜಯಿಸಬೇಕೆಂದರೆ ಸರ್ವೇಶ್ವರನ ಆ ಮಾಯೆಯನ್ನು ಜಯಿಸಿದ ಜೀವನ್ಮುಕ್ತರ ಅನುಗ್ರಹವನ್ನು ಸಂಪಾದಿಸಿಕೊಳ್ಳಬೇಕು, ಆಗ ಮುಮುಕ್ಷುವು ಸುಲಭವಾಗಿ ಗುರಿಮುಟ್ಟಬಲ್ಲನು. ಪ್ರಕೃತಿಗೆ ಅಧೀನವಾಗಿರುವವರೆಲ್ಲಾ ಈ ಶ್ಲೋಕದಲ್ಲಿ ಹೇಳಿದಂತೆ ಸೃಷ್ಟಿಕಾಲದಲ್ಲಿ ಹುಟ್ಟುತ್ತ, ಪ್ರಳಯ ಕಾಲದಲ್ಲಿ ಲಯಿಸುತ್ತ ಬಂದು ಹೋಗುತ್ತಿರುವರು. ಆ ಸಂಕೋಲೆಯಿಂದ ತಪ್ಪಿಸಿಕೊಳ್ಳಬೇಕೆಂದರೆ ಮಾಯಾಧೀಶನಾದ ಪರಮಾತ್ಮನನ್ನು ಜೀವಿಯು ಆಶ್ರಯಿಸಲೇಬೇಕು.

ಪ್ರ : ಪ್ರಕೃತಿ(ಮಾಯೆ) ಯಾರ ಸ್ವಾಧೀನದಲ್ಲಿದೆ?

ಉ : ಪರಮಾತ್ಮನ ಸ್ವಾಧೀನದಲ್ಲಿದೆ.

ಪ್ರ : ಪ್ರಕೃತಿಗೆ ಒಳಪಟ್ಟಿರುವವರ ಗತಿ ಹೇಗಿರುವುದು?

ಉ : ಅವರು ಸೃಷ್ಟಿ ಕಾಲದಲ್ಲಿ ಹುಟ್ಟುತ್ತ ಪ್ರಳಯ ಕಾಲದಲ್ಲಿ ಲಯ ಗೊಳ್ಳುವರು.

**೮. ಪ್ರಕೃತಿಂ ಸ್ವಾಮವಷ್ಟಭ್ಯ ವಿಸೃಜಾಮಿ ಪುನಃ ಪುನಃ**
**ಭೂತಗ್ರಾಮಮಿಮಂ ಕೃತ್ಸ್ನಮವಶಂ ಪ್ರಕೃತೇರ್ವಶಾತ್**

**ಅರ್ಥ:** ಪ್ರಕೃತೇಃ=ಪ್ರಕೃತಿಗೆ (ಮಾಯೆಗೆ ಇಲ್ಲವೆ ಸ್ವಕೀಯ ಕರ್ಮಕ್ಕೆ); ವಶಾತ್= ಅಧೀನವಾಗಿರುವುದರಿಂದ (ವಶವಾಗಿರುವುದರಿಂದ); ಅವಶಂ=ಅಸ್ವತಂತ್ರ ವಾದ; ಇಮಂ=ಈ; ಕೃತ್ಸ್ನಂ=ಸಮಸ್ತವಾದ; ಭೂತಗ್ರಾಮಂ=ಪ್ರಾಣಿ ಸಮುದಾಯವನ್ನು; (ಅಹಂ=ನಾನು); ಸ್ವಾಂ=ಸ್ವಕೀಯವಾದ; ಪ್ರಕೃತಿಂ= ಪ್ರಕೃತಿಯನ್ನು (ಮಾಯೆಯನ್ನು); ಅವಷ್ಟಭ್ಯ=ಅವಲಂಬಿಸಿ (ಸ್ವೀಕರಿಸಿ); ಪುನಃ ಪುನಃ=ಮತ್ತೆ ಮತ್ತೆ; ವಿಸೃಜಾಮಿ=ಸೃಷ್ಟಿಸುತ್ತಿದ್ದೇನೆ.

**ತಾ||** ಪ್ರಕೃತಿಗೆ (ಮಾಯೆಗೆ ಇಲ್ಲವೆ ಸ್ವಕೀಯ ಕರ್ಮಕ್ಕೆ) ಅಧೀನವಾಗಿರುವುದರಿಂದ ಅಸ್ವತಂತ್ರವಾದ ಈ ಸಮಸ್ತ ಪ್ರಾಣಿ ಸಮುದಾಯವನ್ನು ನಾನು ನನ್ನ ಸ್ವಕೀಯ ಪ್ರಕೃತಿಯನ್ನು ಅವಲಂಬಿಸಿಕೊಂಡು ಮತ್ತೆ ಮತ್ತೆ ಸೃಷ್ಟಿಸುತ್ತಿದ್ದೇನೆ.

**ವ್ಯಾಖ್ಯೆ:** ಈ ಶ್ಲೋಕದಲ್ಲಿ ಜೀವೇಶ್ವರರ ಭೇದವನ್ನು ಚೆನ್ನಾಗಿ ವಿವರಿಸಲಾಗಿದೆ. ಜೀವಿಯು ಪ್ರಕೃತಿಗೆ ವಶನು. ಈಶ್ವರನು ಪ್ರಕೃತಿಯನ್ನು ಸ್ವಾಧೀನಪಡಿಸಿ ಕೊಂಡವನು. ಜೀವಿಗಳು ಅವರವರ ಕರ್ಮಗಳಿಗೆ ಒಳಗಾಗಿ ಅವರವರ ಮನಃ ಪ್ರಕೃತಿಗಳಿಗೆ ವಶರಾಗಿ ಅಸ್ವತಂತ್ರರಾಗಿದ್ದಾರೆ. 'ಕೃತ್ಸ್ನಂ' ಎಂದು ಹೇಳಿರುವುದರಿಂದ ಒಬ್ಬಿಬ್ಬರು ಅಲ್ಲವೆಂದೂ ಸಮಸ್ತ ಪ್ರಾಣಿ ಕೋಟಿಗಳು (ಪ್ರಕೃತಿಯನ್ನು ಜಯಿಸಿದ ಜೀವನ್ಮುಕ್ತರನ್ನು ಬಿಟ್ಟು) ಈ ಪ್ರಕಾರವಾಗಿ ಪ್ರಕೃತಿಗೆ ಅಧೀನವಾಗಿವೆಯೆಂದು ಸ್ಪಷ್ಟವಾಗಿ ತಿಳಿಸಲ್ಪಟ್ಟಿದೆ. ಎಲ್ಲಿಯವರೆಗೆ ಕರ್ಮ ಹಾಗು ವಾಸನೆಗಳಿರುವುವೋ ಅಲ್ಲಿಯವರೆಗೆ ಜನ್ಮ ತಪ್ಪದು. ಆದ್ದರಿಂದಲೇ ಅಜ್ಞಾನಿಗಳಾದ ಜೀವಿಗಳನ್ನು ಮತ್ತೆ ಮತ್ತೆ ಸೃಷ್ಟಿಸುತ್ತೇನೆಂದು ಭಗವಂತನು ನುಡಿದನು.

ಆದ್ದರಿಂದ ಈ ಜನನ ಮರಣ ರೂಪ ಸಂಸಾರ ಬಂಧವನ್ನು ತೊಲಗಿಸಿಕೊಳ್ಳಲಿಚ್ಛಿಸುವವರು ಪರಮಾತ್ಮನನ್ನು ಆಶ್ರಯಿಸಿ ಅವರವರ ಪ್ರಕೃತಿಯನ್ನು, ಮನಸ್ಸನ್ನು ಜಯಿಸಿಕೊಳ್ಳಬೇಕು. ಬಂಧ ಮುಕ್ತಿಗೆ ಇದೇ ಉಪಾಯ. ಅಜ್ಞಾನಿಗಳಾದ ಜನರು ತಮಗೆ ಎಷ್ಟು ಭೌತಿಕ ಸಂಪತ್ತಿದ್ದರೂ ಪ್ರಕೃತಿಗೆ ಅಧೀನರಾಗಿರುವುದರಿಂದ, ತಮ್ಮ ಇಂದ್ರಿಯಗಳಿಗೆ ದಾಸರಾಗಿರುವುದರಿಂದ ಅಸ್ವತಂತ್ರರೇ ಆಗುವರು. ಅವರು ಬಲಾತ್ಕಾರವಾಗಿ ಜನ್ಮ ಕರ್ಮಗಳನ್ನು ಹೊಂದುತ್ತಲೇ ಇರುವರು. ಆದ್ದರಿಂದ ಅಧ್ಯಾತ್ಮಜ್ಞಾನವನ್ನು ಸಂಪಾದಿಸಿ, ಪರಮಾತ್ಮನ ಅನುಗ್ರಹವನ್ನು ಸಂಪಾದಿಸಿ ಪ್ರಕೃತಿಯನ್ನು ಜಯಿಸುವ

ಮೂಲಕ ಜನರು ಸಂಸಾರಬಂಧ ವಿಮುಕ್ತಿಯನ್ನು ಪಡೆಯಬೇಕಾಗಿರುವುದು. ಭಾರಿ ತಿರುಗುರಾಟದಲ್ಲಿ ಹತ್ತಿದ ಮನುಷ್ಯರು ಅವಶರಾಗಿ ತಿರುಗುವಂತೆ ಮಾಯಾಚಕ್ರವನ್ನು ಹತ್ತಿದ ಜೀವಿಗಳು ಅವರವರ ಪ್ರಕೃತಿಗೆ ವಶರಾಗಿ ಅಸ್ವತಂತ್ರರಾಗಿ ಸಂಸಾರದಲ್ಲಿ ತಿರುಗುತ್ತಿದ್ದಾರೆ. ಆ ಚಕ್ರವನ್ನು ನಿಲ್ಲಿಸಬೇಕೆಂದರೆ ಅದನ್ನು ತಿರುಗಿಸುವವನನ್ನು ಹೇಗೆ ಆಶ್ರಯಿಸಬೇಕಾಗುತ್ತದೋ ಹಾಗೆ ಮಾಯಾ ಚಕ್ರವನ್ನು ತಿರುಗಿಸುವ ಪರಮಾತ್ಮನನ್ನು ಮುಕ್ತಿಗಾಗಿ ಜೀವಿಗಳು ಆಶ್ರಯಿಸಬೇಕು.

ಪ್ರ : ಜೀವಿಗಳು ಯಾವುದರ ವಶವಾಗಿದ್ದಾರೆ?

ಉ : ಅವರವರ ಪ್ರಕೃತಿಗೆ (ಕರ್ಮಕ್ಕೆ).

ಪ್ರ : ಆದ್ದರಿಂದ ಆತ್ಮಸ್ವಾತಂತ್ರ್ಯಕ್ಕಾಗಿ ಜೀವಿಗಳು ಏನು ಮಾಡಬೇಕು?

ಉ : ಮಾಯಾಧೀಶನಾದ ಪರಮಾತ್ಮನಲ್ಲಿ ಅನನ್ಯ ಭಕ್ತಿಯಿಟ್ಟು ತಮ್ಮ ಪ್ರಕೃತಿಯನ್ನು (ಮನಸ್ಸು, ಇಂದ್ರಿಯ, ಕರ್ಮಗಳನ್ನು) ಜಯಿಸಬೇಕು.

**ಅ॥** ಈ ಪ್ರಕಾರವಾಗಿ ಜೀವಿಗಳನ್ನು ಮತ್ತೆ ಮತ್ತೆ ಸೃಷ್ಟಿಸುತ್ತಿದ್ದರೂ ಅವರ ಕರ್ಮಗಳಿಗೂ ತನಗೂ ಯಾವ ಸಂಬಂಧವೂ ಇಲ್ಲವೆಂದು ಭಗವಂತನು ನುಡಿಯುತ್ತಿದ್ದಾನೆ-

**೯. ನ ಚ ಮಾಂ ತಾನಿ ಕರ್ಮಾಣಿ ನಿಬಧ್ನಂತಿ ಧನಂಜಯ**
**ಉದಾಸೀನವದಾಸೀನ ಮಸಕ್ತಂ ತೇಷು ಕರ್ಮಸು**

**ಅರ್ಥ:** ಧನಂಜಯ=ಓ ಅರ್ಜುನಾ! ತೇಷು ಕರ್ಮಸು=ಆ ಕರ್ಮಗಳಲ್ಲಿ; ಅಸಕ್ತಂ=ಅಂಟಿಕೊಳ್ಳದವನಾಗಿ (ಆಸಕ್ತಿಯಿಲ್ಲದವನಾಗಿ); ಉದಾಸೀನವತ್= ತಟಸ್ಥನಂತೆ; ಆಸೀನಂ=ಇರುವ; ಮಾಂ=ನನ್ನನ್ನು; ತಾನಿ ಕರ್ಮಾಣಿ=ಆ ಕರ್ಮಗಳು; ನ ನಿಬಧ್ನಂತಿ=ಬಂಧಿಸುವುದಿಲ್ಲ.

**ತಾ॥** ಓ ಅರ್ಜುನಾ! (ಆ ಪ್ರಕಾರವಾಗಿ ಜೀವಿಗಳನ್ನು ಸೃಷ್ಟಿಸುತ್ತಿದ್ದರೂ) ಆ ಸೃಷ್ಟ್ಯಾದಿ ಕರ್ಮಗಳಲ್ಲಿ ಅಸಕ್ತನಾದಂತಹ ಹಾಗು ಸಾಕ್ಷೀ ಭೂತವಾಗಿರುವ ನನ್ನನ್ನು ಆ ಕರ್ಮಗಳು ಬಂಧಿಸಲಾರವು.

**ವ್ಯಾಖ್ಯೆ:** ಈ ಪ್ರಕಾರವಾಗಿ ಜೀವಿಗಳನ್ನು ಮತ್ತೆ ಮತ್ತೆ ಸೃಷ್ಟಿಸುತ್ತಿದ್ದರೂ, ಆ ಕರ್ಮಗಳಿಗೂ ಭಗವಂತನಿಗೂ ಯಾವ ರೀತಿಯ ಸಂಬಂಧವೂ ಇಲ್ಲ. ಆತನು ತಟಸ್ಥನು, ಸಾಕ್ಷೀಭೂತನು. ಸೂರ್ಯನ ಸನ್ನಿಧಾನದಿಂದ ಮಾತ್ರ ಜನರು ಅವರವರ ಕರ್ಮಗಳನ್ನಾಚರಿಸಿದರೂ ಆ ಕರ್ಮಗಳಿಂದ ಸೂರ್ಯನಿಗೆ ಯಾವ ರೀತಿಯ ಸಂಬಂಧವೂ ಹೇಗೆ ಇಲ್ಲವೋ ಹಾಗೆ ಭಗವತ್ಸಾನ್ನಿಧ್ಯದಿಂದ ಜರುಗುವ ಪ್ರಕೃತಿಯ ಚರ್ಯೆಗಳಿಗೆ, ಸೃಷ್ಟ್ಯಾದಿ ಕರ್ಮಗಳಿಗೆ ಹಾಗು ಆ ಭಗವಂತನಿಗೆ ವಾಸ್ತವವಾಗಿ ಯಾವ ಸಂಬಂಧವೂ ಇರುವುದಿಲ್ಲ. ಅವುಗಳಲ್ಲಿ ಆತನು ಅಸಕ್ತನಾಗಿರುವುದರಿಂದ ಆತನು ಅವುಗಳಿಂದ ಬಂಧಿತಗೊಳ್ಳುವುದಿಲ್ಲವೆಂದು ಇಲ್ಲಿ ಹೇಳಲಾಗಿದೆ. ಇದರಿಂದ ಪರಮಾತ್ಮನೊಡನೆ ಐಕ್ಯ ಹೊಂದಿದ ಜೀವಿಗಳಿಗೆ ಕರ್ಮಬಂಧವೇನೂ ಇರುವುದಿಲ್ಲವೆಂದು ಸ್ಪಷ್ಟವಾಗುತ್ತದೆ.

**ಅ॥** ಭಗವತ್ಸಾನ್ನಿಧ್ಯದಿಂದ ಪ್ರಕೃತಿಯು ಚರಾಚರ ಸೃಷ್ಟಿಯೆಲ್ಲವನ್ನೂ ಸೃಷ್ಟಿಸುತ್ತಿದೆಯೆಂದು ಹೇಳಲ್ಪಡುತ್ತಿದೆ-

**೧೦. ಮಯಾಽಧ್ಯಕ್ಷೇಣ ಪ್ರಕೃತಿಃ ಸೂಯತೇ ಸ ಚರಾಚರಮ್**
**ಹೇತುನಾಽನೇನ ಕೌಂತೇಯ ಜಗದ್ವಿಪರಿವರ್ತತೇ**

**ಅರ್ಥ:** ಕೌಂತೇಯ=ಓ ಅರ್ಜುನಾ! ಅಧ್ಯಕ್ಷೇಣ=ಅಧ್ಯಕ್ಷನಾಗಿರುವ (ಸಾಕ್ಷೀಭೂತನಾಗಿರುವ); ಮಯಾ=ನನ್ನಿಂದ; ಪ್ರಕೃತಿಃ=ಪ್ರಕೃತಿ (ಮಾಯೆ); ಸಚರಾಚರಂ=ಚರಾಚರ ಪ್ರಪಂಚವೆಲ್ಲವನ್ನೂ; ಸೂಯತೇ=ಸೃಷ್ಟಿಸುತ್ತಿದೆ; ಅನೇನ ಹೇತುನಾ=ಈ ಕಾರಣದಿಂದ; ಜಗತ್=ಜಗತ್ತು; ವಿಪರಿವರ್ತತೇ=ನಡೆಯುತ್ತಿದೆ.

**ತಾ॥** ಓ ಅರ್ಜುನಾ, ಅಧ್ಯಕ್ಷನಾಗಿ (ಸಾಕ್ಷಿಮಾತ್ರನಾಗಿ)ರುವ ನನ್ನಿಂದ ಪ್ರಕೃತಿಯು ಚರಾಚರ ಪ್ರಪಂಚವನ್ನೆಲ್ಲಾ ಸೃಷ್ಟಿಸುತ್ತಿದೆ. ಈ ಕಾರಣದಿಂದಲೇ ಜಗತ್ತು ನಡೆಯುತ್ತಿದೆ.

**ವ್ಯಾಖ್ಯೆ:** ಪ್ರಕೃತಿ ಜಡವಾದುದು. ಪರಮಾತ್ಮ ಚೈತನ್ಯರೂಪಿ. ಪರಮಾತ್ಮನ ಸಾನ್ನಿಧ್ಯದಿಂದಲೇ ಪ್ರಕೃತಿಗೆ ಚರಾಚರ ಪ್ರಾಣಿಕೋಟಿಗಳನ್ನು ಸೃಷ್ಟಿಸಲು ಸಾಧ್ಯ ವಾಗುತ್ತದೆ. ಅಯಸ್ಕಾಂತದ ಸನ್ನಿಧಾನದಿಂದ ಕಬ್ಬಿಣದ ತುಂಡು ಕದಲುತ್ತಿದ್ದರೂ, ಅಯಸ್ಕಾಂತಕ್ಕೆ ಯಾವ ಕರ್ತೃತ್ವವೂ ಇರುವುದಿಲ್ಲ. ಅದು ಸಾಕ್ಷಿ ಮಾತ್ರವೇ ಆಗಿರುವುದು. ಹಾಗೆಯೇ ಪರಮಾತ್ಮನು ಜಗದ್ವ್ಯವ ಹಾರದಲ್ಲಿ ಸಾಕ್ಷಿಯಾಗಿ ಮಾತ್ರ ಇರುವನು. ಆತನ ಸನ್ನಿಧಾನದ ದಯೆಯಿಂದ ಪ್ರಕೃತಿಯು ಎಲ್ಲಾ ಜಗತ್ಕಾರ್ಯಗಳನ್ನು ನಿರ್ವಹಿಸುತ್ತದೆ. ಪರಮಾತ್ಮನ ಈ ತಾಟಸ್ಥ್ಯವನ್ನು, ಚೈತನ್ಯ ಶಕ್ತಿಯನ್ನು ವರ್ಣಿಸುವುದಕ್ಕಾಗಿ ಈ ಶ್ಲೋಕದಲ್ಲಿ 'ಅಧ್ಯಕ್ಷೇಣ' ಎನ್ನುವ ಪದವನ್ನು ಪ್ರಯೋಗಿಸಲಾಗಿದೆ. ಒಂದು ಸಭೆಯಲ್ಲಿ ಎಷ್ಟು ಜನ ಸಭ್ಯರು ಬಂದು ಸೇರಿದ್ದರೂ ಸಭೆಗೆ ಚೈತನ್ಯ ಬರುವುದಿಲ್ಲ. ಅಧ್ಯಕ್ಷನು ಬಂದು ಕೂರುತ್ತಲೇ ಸಭೆಗೆ ಚೈತನ್ಯ ಬರುವುದು. ಹಾಗೆಯೇ ಕೋರ್ಟಿನಲ್ಲಿ ಬೇರೆಯವರು ಎಷ್ಟು ಜನರಿದ್ದರೂ 'ನ್ಯಾಯಧೀಶ' ಬಂದು ಕುಳಿತುಕೊಳ್ಳದಿದ್ದರೆ ಕಾರ್ಯಕ್ರಮ ಜರುಗುವುದಿಲ್ಲ. ಆತನು ಬಂದ ನಂತರ ಆತನ ಸಾನ್ನಿಧ್ಯದಲ್ಲಿಯೇ ಕೋರ್ಟಿನ ವ್ಯವಹಾರವೆಲ್ಲವೂ ನಡೆಯುವುದು. ಹಾಗೆಯೇ ಪ್ರಕೃತಿ ಈಶ್ವರ ಸಾನ್ನಿಧ್ಯವಿಲ್ಲದಿದ್ದರೆ ಜಡವಾಗಿ, ಸೃಜನಶಕ್ತಿರಹಿತವಾಗಿರುವುದು. ಚಿದ್ಘನನಾದ ಪರಮಾತ್ಮನಿಂದ ಪ್ರಕೃತಿಗೆ ಸೃಷ್ಟಿರೂಪ ಶಕ್ತಿ ಏರ್ಪಡುತ್ತದೆ. ಈ ಹೇತುವಿನಿಂದ ಜಗತ್ತೆಲ್ಲವೂ ಪರಿವರ್ತನೆ ಹೊಂದುತ್ತಿರುವುದು. ಇಲ್ಲದಿದ್ದರೆ ಇಂಜಿನ್ ಇಲ್ಲದ ರೈಲಿನಂತೆ ಪ್ರಪಂಚ ನಿರ್ವೀರ್ಯವಾಗಿ, ನಿಶ್ಚೇಷ್ಟವಾಗಿಬಿಡುವುದು.

ಸಾಮಾನ್ಯವಾಗಿ ಜನರ ದೃಷ್ಟಿ ಸ್ಥೂಲಪ್ರಪಂಚಕ್ಕೆ ಸೀಮಿತವಾಗಿರು ವುದರಿಂದ ಅದನ್ನೇ ಸತ್ಯವೆಂದು ನಂಬಿ ಅದರ ಹಿಂದೆಯೇ ಓಡುತ್ತಿದ್ದಾರೆ. ಆದರೆ ಈ ಶ್ಲೋಕದ ಮೂಲಕ ಅವರು ತಪ್ಪು ಮಾಡುತ್ತಿದ್ದಾರೆಂದು ವಿದಿತವಾಗುವುದು. ಸ್ಥೂಲ ಪ್ರಪಂಚ ಜಡವಾದುದು. ಅದನ್ನು ತಿರುಗಿಸುವಂತಹದು, ಅದಕ್ಕೆ ಚೈತನ್ಯ ಶಕ್ತಿಯನ್ನು ಪ್ರಸಾದಿಸು ವಂತಹದೂ ಆದ ಅತಿಸೂಕ್ಷ್ಮವಾದ (ಆತ್ಮ) ವಸ್ತು ಅದರ ಹಿಂದೆ ಇದೆ. ಸ್ಥೂಲದೃಷ್ಟಿಗೆ ಅದು ಗೋಚರಿಸದು. ವಿಜ್ಞಾನ ನೇತ್ರದಿಂದ ಅದನ್ನು ತಿಳಿಯಬೇಕು. ಅದೇ ಪರಮಾತ್ಮ. ಪ್ರಪಂಚವೆಲ್ಲವೂ ಆ ಪರಮಾತ್ಮನಲ್ಲಿ ಆರೋಪಗೊಂಡಿದೆ. ಆರೋಪಿತ ವಸ್ತುವಿಗೆ ಸ್ವತಃ ಯಾವ ಬಲವೂ, ವ್ಯಕ್ತಿತ್ವವೂ ಇರುವುದಿಲ್ಲ. ಅದು ತನ್ನ ಶಕ್ತಿಯನ್ನು ಅಧಿಷ್ಠಾನ ವಸ್ತುವಿನಿಂದಲೇ ಪರಿಗ್ರಹಿಸುವುದು. ಹಾಗೆಯೇ ಆರೋಪಿತ ಜಗತ್ತಿನ ಶಕ್ತಿಯೆಲ್ಲವೂ ಅಧಿಷ್ಠಾನನಾದ ಪರಮಾತ್ಮನಿಂದಲೇ ಉಂಟಾಗುತ್ತದೆ. (ಆದರೂ ಪರಮಾತ್ಮನು ಕರ್ತೃತ್ವ ರಹಿತನಾಗಿ, ಸಾಕ್ಷಿ ಮಾತ್ರನಾಗಿ ಆಯಾ ಜಗತ್ಕ್ರಿಯೆಗಳಲ್ಲಿ ನಿರ್ಲಿಪ್ತವಾಗಿರು ವನು). ಇದರಿಂದ ಭೌತಿಕ ಶಕ್ತಿಯಾಗಲಿ ಅಥವ ಮಾನಸಿಕ ಶಕ್ತಿಯಾಗಲಿ ಎಷ್ಟು ದೊಡ್ಡದಾದರೂ ಆಧ್ಯಾತ್ಮಿಕಶಕ್ತಿಯ ಎದುರು ಕೆಲಸಕ್ಕೆ ಬರುವುದಿಲ್ಲ. ಆತ್ಮ ಶಕ್ತಿಯೇ ಪ್ರಧಾನವಾದುದು, ಚೈತನ್ಯವಂತವಾದುದು. ಬೇರೆಯ ಶಕ್ತಿಗಳೆಲ್ಲವೂ ಪ್ರಕೃತಿಗೆ ಅಧೀನವಾದವುಗಳಾಗಿ ಅಪ್ರಧಾನವಾದವುಗಳಾಗಿವೆ.

ಆದ್ದರಿಂದ ವಿಜ್ಞುಗಳು ಸ್ವಲ್ಪ ಸ್ವಲ್ಪ ಭೌತಿಕ ಶಕ್ತಿಗಳ ಸಂಪಾದನೆಯಲ್ಲೇ ಜೀವನವನ್ನು ಸವೆಸದೆ; ಅವುಗಳನ್ನು ನೋಡಿ ಉನ್ಮತ್ತರಾಗದೆ, ದೈವಶಕ್ತಿಯನ್ನು ಸಂಪಾದಿಸಿಕೊಳ್ಳಬೇಕು. ಚಿಕ್ಕ ಚಿಕ್ಕ ಅಧ್ಯಕ್ಷ ಪದವಿಗಳಿಗೆ ಕೈಚಾಚದೆ ಜಗದಧ್ಯಕ್ಷನಾದ ಪರಮಾತ್ಮನ ಸಾನ್ನಿಧ್ಯಕ್ಕಾಗಿ, ಐಕ್ಯಕ್ಕಾಗಿ ಯತ್ನಿಸಬೇಕು. ಯಾವುದರಿಂದ ಈ ಚರಾಚರ ಜಗತ್ತೆಲ್ಲವೂ ಸಮರ್ಥವಾಗಿ ನಡೆಯುತ್ತಿದೆಯೋ ಅಂತಹ ಅಧಿಷ್ಠಾನ ಚೈತನ್ಯ ಪರಮಾತ್ಮನ ಸಾಕ್ಷಾತ್ಕಾರಕ್ಕೆ ಯತ್ನಿಸಬೇಕೇ ಹೊರತು ಜಡರೂಪಗಳಾದ ದೃಶ್ಯವಸ್ತುಗಳಿಂದ ಸಂತೃಪ್ತಿ ಹೊಂದಬಾರದು.

ಪ್ರ : ಈ ಜಗತ್ತಿಗೆ ಅಧ್ಯಕ್ಷನಾರು?

ಉ : ಪರಮಾತ್ಮ ಆತನ ಸಾನ್ನಿಧ್ಯದಿಂದಲೇ ಈ ಚರಾಚರ ಜಗತ್ತೆಲ್ಲವೂ ನಡೆಯುತ್ತಿದೆ.

ಅ॥ ಭಗವಂತನ ಮಹಿಮೆಯನ್ನು ತಿಳಿಯದ ಆಸುರೀಪ್ರಕೃತಿಗಳಾದ ಮೂಢರ ಪ್ರವರ್ತನೆಯನ್ನು ಎರಡು ಶ್ಲೋಕಗಳ ಮೂಲಕ ವಿವರಿಸಲ್ಪಟ್ಟಿದೆ-

**೧೧. ಅವಜಾನಂತಿ ಮಾಂ ಮೂಢಾ ಮಾನುಷೀಂ ತನುಮಾಶ್ರಿತಮ್**
**ಪರಂ ಭಾವಮಜಾನಂತೋ ಮಮ ಭೂತಮಹೇಶ್ವರಮ್**

**ಅರ್ಥ:** ಮಮ=ನನ್ನ; ಪರಂ ಭಾವಂ=ಪರಮ ತತ್ತ್ವವನ್ನು(ಸರ್ವೋತ್ತಮ ಸ್ವರೂಪವನ್ನು); ಅಜಾನಂತಃ=ತಿಳಿಯದ; ಮೂಢಾಃ=ಅವಿವೇಕಿಗಳು; ಭೂತಮಹೇಶ್ವರಮ್=ಸಮಸ್ತ ಪ್ರಾಣಿಗಳಿಗೆ ನಿಯಾಮಕನು; ಮಾನುಷೀಂ ತನುಂ=(ಲೋಕಸಂರಕ್ಷಣಾರ್ಥವಾಗಿ) ಮನುಷ್ಯ ದೇಹದಲ್ಲಿ; ಆಶ್ರಿತಂ=ಆಶ್ರಯಿಸಿದವನಾಗಿರುವ; ಮಾಂ=ನನ್ನನ್ನು; ಅವಜಾನಂತಿ= ಅವಮಾನಿಸುತ್ತಿದ್ದಾರೆ. (ಅಲಕ್ಷ್ಯ ಮಾಡುತ್ತಿದ್ದಾರೆ).

**ತಾ॥** ನನ್ನ ಪರಮ ತತ್ತ್ವವನ್ನು ತಿಳಿಯದ ಅವಿವೇಕಿಗಳು ಸರ್ವಭೂತ ಮಹೇಶ್ವರನು ಹಾಗು (ಲೋಕ ಸಂಗ್ರಹಾರ್ಥವಾಗಿ) ಮನುಷ್ಯ ದೇಹವನ್ನು ಆಶ್ರಯಿಸಿದ ನನ್ನನ್ನು ಅವಮಾನಿಸುತ್ತಿದ್ದಾರೆ (ಅಲಕ್ಷ್ಯಮಾಡುತ್ತಿದ್ದಾರೆ).

**ವ್ಯಾಖ್ಯೆ:** ಪರಮಾತ್ಮನು ಸಮಸ್ತ ಭೂತಕೋಟಿಗಳಿಗೆ ನಿಯಾಮಕನು, ಪ್ರಭುವು. ಈಶ್ವರನು ಧರ್ಮೋದ್ಧಾರಕ್ಕಾಗಿ, ಲೋಕಸಂರಕ್ಷಣೆಗಾಗಿ ಆಗಾಗ ಲೋಕದಲ್ಲಿ ಅವತರಿಸುತ್ತಿರುತ್ತಾನೆ. ಹಾಗೆ ಮನುಷ್ಯ ದೇಹವನ್ನು ಗ್ರಹಿಸಿ ಲೋಕದಲ್ಲಿ ಅವತರಿಸಿದ ಭಗವಂತನನ್ನು ಮೂಢರು ತಿಳಿದುಕೊಳ್ಳಲಾರದೆ ಯಾರೋ ಸಾಮಾನ್ಯನೆಂದು ತಿಳಿದು ಆತನನ್ನು ಅವಮಾನಿಸುತ್ತಿದ್ದಾರೆ. ನಿರ್ಲಕ್ಷ್ಯ ಮಾಡುತ್ತಿದ್ದಾರೆ. ಆತನ ಪರತತ್ತ್ವವನ್ನು ಗ್ರಹಿಸಲು ಅಸಮರ್ಥರಾಗಿದ್ದಾರೆ. ಅಂತಹವರನ್ನು ಶ್ರೀಕೃಷ್ಣಮೂರ್ತಿ ಮೂಢರು ಎಂದು ಸಂಬೋಧಿಸಿದ್ದಾನೆ. ಏಕೆಂದರೆ ಸ್ವಲ್ಪ ವಿವೇಕವುಳ್ಳವರೂ ಸಹ ಹಾಗೆ ಪರಮಾತ್ಮನನ್ನು ದ್ವೇಷಿಸುವುದಿಲ್ಲ. ಕೆಲವು ಜನರು ಅಹಂಭಾವಪೂರಿತರಾಗಿ ತಮ್ಮ ಧನ ಸಂಪದಾದಿಗಳನ್ನು ಹಾಗು ಅಧಿಕಾರಗಳನ್ನು ನಂಬಿ ಗರ್ವಿತರಾಗಿ ಕಣ್ಣು ನೆತ್ತಿಗೇರಿ ಮಹಾತ್ಮರನ್ನು ಹಾಗು ಸಾಧುಪುಂಗವರನ್ನು ದೂಷಿಸುವರು, ಹೇಳನಮಾಡುವರು. ಇವರು ಶಿಶುಪಾಲ, ದುರ್ಯೋಧನಾದಿಗಳ ಗುಂಪಿಗೆ ಸೇರಿದವರು. ಆದ್ದರಿಂದಲೇ ಅವರು ದುಷ್ಫಲಿತವನ್ನು ಅನುಭವಿಸುವರು.

ಆಧ್ಯಾತ್ಮಿಕ ಸಾಧನೆ ಮಾಡುವವರಿಗೆ ತಮ್ಮ ಜೀವನದಲ್ಲಿ ನಿಂದೆ, ಅಸ್ತುತಿಗಳಿಗೆ ಬಲಿಯಾಗುವ ಸಂದರ್ಭಗಳು ಒದಗಿಬರಬಹುದು. ಅಂತಹ ಸಂದರ್ಭಗಳಲ್ಲಿ ಎಷ್ಟೋ ಸಹನೆಯನ್ನು ಹೊಂದಿ ತಮ್ಮಲ್ಲಿ ಯಾವುದಾದರೂ ದೋಷಗಳಿದ್ದರೆ ಅವುಗಳನ್ನು ತ್ಯಜಿಸಿ, ಯಾವ ದೋಷಗಳೂ ಇಲ್ಲದಾಗ ಗಂಭೀರಚಿತ್ತರಾಗಿ ನಿಂದೆಗಳಿಗೆ ಕಿವಿಗೊಡದೆ ಇರಬೇಕು. ಲೋಕದಲ್ಲಿ ಕೆಲವರ ಸ್ವಭಾವವು ಈ ಪ್ರಕಾರವಾಗಿ ಪರನಿಂದಾತ್ಮಕವಾಗಿರುವುದನ್ನು ಗಮನಿಸಿ ಮಹಾಸ್ಮಿಮಿತವನ್ನು ಹೊಂದಿರಬೇಕು. ಸಾಕ್ಷಾತ್ ಶ್ರೀಕೃಷ್ಣ ಪರಮಾತ್ಮನೇ ಅವಿವೇಕಿಗಳ ನಿಂದೆಗಳಿಗೆ ಗುರಿಯಾದಾಗ ಇನ್ನು ಸಾಮಾನ್ಯರಾದವರ ವಿಷಯವನ್ನು ಬೇರೆ ಹೇಳಬೇಕಾಗಿಲ್ಲವಲ್ಲವೇ! ಈ ರೀತಿ ಆಲೋಚಿಸಿ, ಧೈರ್ಯ ತಂದುಕೊಂಡು ಸಹನಶೀಲರಾಗಿರಬೇಕು. ಮಾಯೆಯ ಸ್ವಭಾವವೇ ಹೀಗೆ ಎಂದು ಅರ್ಥಮಾಡಿಕೊಂಡು, ನಿಶ್ಚಲ ಚಿತ್ತರಾಗಿರಬೇಕು. ಯಾರನ್ನೂ ದ್ವೇಷಿಸಬಾರದು. ಯಾರಾದರೂ ಅವಿವೇಕಿಗಳು ಭಗವಂತನ ಬಗ್ಗೆ ನಿಂದಾರೋಪ ಮಾಡಿದರೆ ಆ ವಾಕ್ಯಗಳಿಗೆ ಮುಮುಕ್ಷುಗಳು ಲಕ್ಷ್ಯಕೊಡದೆ ಅಂತಹ ನಾಸ್ತಿಕರ ಮಾತುಗಳಿಗೆ ಏನೂ ಬೆಲೆ ಕೊಡದೆ ಭಗವದ್ಭಕ್ತಿಯನ್ನು ಅಭಿವೃದ್ಧಿಪಡಿಸಿಕೊಳ್ಳುತ್ತ, ಅದರ ಮೂಲಕ ಅವರಿಗೆ ಬುದ್ಧಿ ಬರುವಂತೆ ಮಾಡಬೇಕು.

ಪ್ರ : ಪರಮಾತ್ಮ ಎಂತಹವನು?

ಉ : ೧) ಸಮಸ್ತ ಪ್ರಾಣಿಕೋಟಿಗಳ ನಿಯಾಮಕನು ೨) ಲೋಕೋಪಕಾರಾರ್ಥವಾಗಿ ಆತನು ಆಗಾಗ ಮನುಷ್ಯ ಜನ್ಮವನ್ನು ಗ್ರಹಿಸುವನು.

ಪ್ರ : ಈಶ್ವರನ ಪರತತ್ತ್ವವನ್ನು ತಿಳಿಯದ ಅವಿವೇಕಿಗಳು ಹೇಗೆ ಪ್ರವರ್ತಿಸುತ್ತಾರೆ?

ಉ : ಲೋಕಸಂರಕ್ಷಣಾರ್ಥವಾಗಿ ಮಾನವ ದೇಹವನ್ನು ಧರಿಸಿದ ಪರಮಾತ್ಮನನ್ನು ಸಾಮಾನ್ಯನೆಂದು ಭಾವಿಸಿ ಅವಮಾನಿಸುವರು.

ಪ್ರ : ಇದರಿಂದ ತಿಳಿಯಬೇಕಾದ ಅಂಶಗಳಾವುವು?

ಉ : ೧) ಮೂಢತ್ವವನ್ನು ಹೋಗಲಾಡಿಸಿಕೊಳ್ಳಬೇಕು ೨) ಪರರನ್ನು ನಿಂದಿಸಬಾರದು ೩) ಭಗವಂತನ ನಿಜತತ್ತ್ವ ತಿಳಿದು ಆತನ ಬಗ್ಗೆ ಭಕ್ತಿ ಭಾವಗಳನ್ನು ಹೊಂದಿರಬೇಕು.

**೧೨. ಮೋಘಾಶಾ ಮೋಘಕರ್ಮಾಣೋ ಮೋಘಜ್ಞಾನಾ ವಿಚೇತಸಃ**
**ರಾಕ್ಷಸೀಮಾಸುರೀಂ ಚೈವ ಪ್ರಕೃತಿಂ ಮೋಹಿನೀಂ ಶ್ರಿತಾಃ**

**ಅರ್ಥ:** (ತೇ=ಅವರು) ಮೋಘಾಶಾಃ=ವ್ಯರ್ಥವಾದ ಆಶೆಯುಳ್ಳವರು; ವಿಚೇತಸಃ=ಬುದ್ಧಿಹೀನರಾದವರು (ಆಗಿ); ಮೋಹಿನೀಂ=ಮೋಹವನ್ನು ಉಂಟುಮಾಡುವುದು; ರಾಕ್ಷಸೀಂ=ರಾಕ್ಷಸ ಸಂಬಂಧವಾದುದು; ಆಸೂರೀಂ ಚ=ಅಸುರ ಸಂಬಂಧವಾದ; ಪ್ರಕೃತಿಂ ಏವ=ಸ್ವಭಾವವನ್ನೇ; ಶ್ರಿತಾಃ= ಆಶ್ರಯಿಸಿದವರು (ಆಗುತ್ತಿದ್ದಾರೆ).

**ತಾ॥** (ಅಂತಹವರು) ವ್ಯರ್ಥವಾದ ಆಶೆ, ಕರ್ಮ ಹಾಗು ಜ್ಞಾನವುಳ್ಳ ಬುದ್ಧಿಹೀನರು(ಆಗಿ) ರಾಕ್ಷಸ ಸಂಬಂಧವಾದ, ಅಸುರ ಸಂಬಂಧವಾದ ಸ್ವಭಾವವನ್ನೇ ಆಶ್ರಯಿಸುತ್ತಿದ್ದಾರೆ.

**ವ್ಯಾಖ್ಯೆ:** ಜನರ ಪ್ರಕೃತಿ (ಸ್ವಭಾವ) ಸಾಮಾನ್ಯವಾಗಿ ಎರಡು ವಿಧಗಳಾಗಿರುತ್ತದೆ. ೧) ದೈವೀಪ್ರಕೃತಿ ೨) ಆಸುರೀಪ್ರಕೃತಿ ಎಂದು. ಅದರಲ್ಲಿ ಆಸುರೀ ಪ್ರಕೃತಿಯುಳ್ಳವರ ಬಗ್ಗೆ ಹಿಂದಿನ ಶ್ಲೋಕದಲ್ಲಷ್ಟೇ ಅಲ್ಲದೆ ಈ ಶ್ಲೋಕದಲ್ಲಿಯೂ ತಿಳಿಸಲಾಗಿದೆ. ದೈವೀಪ್ರಕೃತಿಯಿರುವವರ ಬಗ್ಗೆ ಮುಂದಿನ ಎರಡು ಶ್ಲೋಕಗಳಲ್ಲಿ

ಉಲ್ಲೇಖವಿದೆ. ಆಸುರೀ ಪ್ರವೃತ್ತಿಯುಳ್ಳವರು ವ್ಯರ್ಥವಾದ ಆಶೆ ಹಾಗು ಕರ್ಮಗಳನ್ನು ಹೊಂದಿರುವರು. ಅವರಿಗಿರುವ ಸ್ವಲ್ಪ ಜ್ಞಾನ ನಶ್ವರವಾದ ದೃಶ್ಯ ವಸ್ತುಗಳನ್ನು ಕುರಿತೇ ಆದುದಾಗಿರುವುದರಿಂದ ಅದು ಪರಮಾರ್ಥ ದೃಷ್ಟಿಯಲ್ಲಿ ನಿಷ್ಫಲವಾದುದೇ ಆಗುವುದು. ಅವರ ಚಿತ್ತದಲ್ಲಿ ಸತ್ಯ ವಸ್ತುವನ್ನು (ಆತ್ಮವನ್ನು) ಕುರಿತ ಪರಿಜ್ಞಾನವಾಗಲೀ ವಿವೇಕವಾಗಲೀ ಸ್ವಲ್ಪವೂ ಇರುವುದಿಲ್ಲ. ಆದ್ದರಿಂದಲೇ ಅವರನ್ನು 'ವಿಚೇತಸಃ' (Brain less people), ಚಿತ್ತ ಭ್ರಮೆ ಹೊಂದಿರುವವರೆಂದು ಇಲ್ಲವೆ ಬುದ್ಧಿಹೀನರೆಂದು ವರ್ಣಿಸಲಾಗಿದೆ. ಅಲ್ಲದೆ ಅವರು ರಾಕ್ಷಸ ಸಂಬಂಧ ವಾದ, ಮೋಹ ಉಂಟುಮಾಡುವ, ಅಜ್ಞಾನವನ್ನು ವೃದ್ಧಿಮಾಡುವ ಸ್ವಭಾವವನ್ನೇ ಆಶ್ರಯಿಸುವರು. ಇಲ್ಲಿ 'ರಾಕ್ಷಸೀಂ' 'ಆಸುರೀಂ' ಎನ್ನುವ ಎರಡು ಪದಗಳನ್ನು ಒಂದೇ ಕಡೆ ಪ್ರಯೋಗಿಸಿರುವುದರಿಂದ ಅವರ ಕ್ರೂರ ಸ್ವಭಾವ ಹಾಗು ರಾಜಸ, ತಾಮಸ ಸ್ವಭಾವಗಳಿಗೆ ಒತ್ತುಕೊಟ್ಟಂತಾಗಿದೆ. ಅವರು ಪರಮಾತ್ಮ ದೃಷ್ಟಿಯಲ್ಲಿ ಯಾವುದಕ್ಕೂ ಕೆಲಸಕ್ಕೆ ಬರುವುದಿಲ್ಲ. ಆದ್ದರಿಂದಲೇ ಅವರ ಜೀವನವನ್ನು ಮೋಘ ಜೀವನ (ವ್ಯರ್ಥಜೀವನ)ವೆಂದು ಭಗವಂತನು ಇಲ್ಲಿ ಸ್ಪಷ್ಟವಾಗಿ ಹೇಳಿರುತ್ತಾನೆ. ಆದ್ದರಿಂದಲೇ 'ಮೋಘ' ಎನ್ನುವ ಪದವನ್ನು ಈ ಶ್ಲೋಕದಲ್ಲಿ ಮೂರು ಬಾರಿ ಉಪಯೋಗಿಸಲಾಗಿದೆ. ಮಿಥ್ಯಾರೂಪಗಳಾದ ದೃಶ್ಯವಸ್ತುಗಳನ್ನು ಮಾತ್ರ ಹಿಂಬಾಲಿಸುತ್ತ ಸತ್ಯವಾದ ಪರಮಾತ್ಮನನ್ನು ಮರೆತಿರುವ ಜೀವನ ನಿಜವಾಗಿ ವ್ಯರ್ಥವೇ ಆಗುವುದು.

ಆದ್ದರಿಂದ ಜನರು ರಾಕ್ಷಸಪ್ರವೃತ್ತಿಯನ್ನು, ಅಸುರ ಸ್ವಭಾವವನ್ನು, ಕಾಮಾದಿ ದುರ್ಗುಣಗಳನ್ನು, ರಾಜಸ ತಾಮಸ ಪ್ರವೃತ್ತಿಗಳನ್ನು ತ್ಯಜಿಸಿ ದೈವೀ ಸಂಪತ್ತನ್ನು ಆಶ್ರಯಿಸಿ ಸತ್ಯವಸ್ತುವಾದ ಪರಮಾತ್ಮನನ್ನು ನಂಬಿ ತಮ್ಮ ತಮ್ಮ ಜೀವನಗಳನ್ನು ಸಾರ್ಥಕಪಡಿಸಿಕೊಳ್ಳಬೇಕು. ಈ ಶ್ಲೋಕದಲ್ಲಿ ಅಜ್ಞಾನಿಗಳು ವ್ಯರ್ಥವಾದ ಆಶೆ, ಕರ್ಮ ಹಾಗು ಜ್ಞಾನಗಳನ್ನು ಹೊಂದಿರುವವರೆಂದು ಹೇಳಲಾಗಿದೆ. ಆದ್ದರಿಂದ ವಿಜ್ಞಗಳಾದವರು ಇದಕ್ಕೆ ವಿರುದ್ಧವಾದ ಆಚರಣೆಯನ್ನು ಅವಲಂಬಿಸಿ ಅಂದರೆ ದೈವವನ್ನು ಕುರಿತ ಆಶೆ, ಕರ್ಮ, ಜ್ಞಾನವನ್ನೇ ಹೊಂದಿ ವಿಗತ ಚಿತ್ತರಾಗದೆ 'ವಿಶೇಷ ಚಿತ್ತ'ರಾಗಿ, ದೈವ ಚಿತ್ತರಾಗಿ ಬೆಳಗಬೇಕು.

ಪ್ರ : ಅಸುರ ಪ್ರಕೃತಿ ಎಂತಹದು?

ಉ : ಜನರನ್ನು ಮೋಹಗೊಳಿಸಿ, ಅಜ್ಞಾನದಲ್ಲಿ ದೂಡುವುದು.

ಪ್ರ : ಅಸುರ ಪ್ರಕೃತಿಯುಳ್ಳವರ ಗುಣಗಳೇನು?

ಉ : ೧) ವ್ಯರ್ಥವಾದ ಆಶೆಗಳು ೨) ವ್ಯರ್ಥ ಚೇಷ್ಟೆಗಳು ೩) ವ್ಯರ್ಥ ಜ್ಞಾನವನ್ನು ಹೊಂದಿರುವವರು.

ಪ್ರ : ಆದ್ದರಿಂದ ಜೀವಿಗಳು ಹೇಗೆ ಪ್ರವರ್ತಿಸಬೇಕು?

ಉ : ಆಸುರೀ ಪ್ರಕೃತಿಯನ್ನು ಬಿಟ್ಟು ದೈವೀ ಪ್ರಕೃತಿಯನ್ನೇ ಆಶ್ರಯಿಸಿ ದೈವವನ್ನು ಕುರಿತ ಇಚ್ಛೆ, ದೈವವನ್ನು ಕುರಿತ ಕರ್ಮ ಹಾಗು ಜ್ಞಾನಗಳನ್ನು ಹೊಂದಿರಬೇಕು.

**ಅ॥** ದೈವೀ ಪ್ರಕೃತಿಯುಳ್ಳವರ ಲಕ್ಷಣಗಳನ್ನು ಎರಡು ಶ್ಲೋಕಗಳ ಮೂಲಕ ಹೇಳಲಾಗಿದೆ-

**೧೩. ಮಹಾತ್ಮಾನಸ್ತು ಮಾಂ ಪಾರ್ಥ ದೈವೀಂ ಪ್ರಕೃತಿಮಾಶ್ರಿತಾಃ**
**ಭಜಂತ್ಯನನ್ಯಮನಸೋ ಜ್ಞಾತ್ವಾ ಭೂತಾದಿಮವ್ಯಯಮ್**

**ಅರ್ಥ:** ಪಾರ್ಥ=ಓ ಅರ್ಜುನಾ! ಮಹಾತ್ಮನಃ ತು=ಮಹಾತ್ಮರಾದರೋ; ದೈವೀಂ=ದೈವ ಸಂಬಂಧವಾದ; ಪ್ರಕೃತಿಂ=ಸ್ವಭಾವವನ್ನು; ಆಶ್ರಿತಾಃ(ಸನ್ತಃ)= ಆಶ್ರಯಿಸಿದವರಾಗಿ; ಮಾಮ್=ನನ್ನನ್ನು; ಭೂತಾದಿಮ್=ಸಮಸ್ತ ಪ್ರಾಣಿಗಳಿಗೆ ಕಾರಣಭೂತವಾದವನಾಗಿ; ಅವ್ಯಯಂ=ನಾಶವಿಲ್ಲದವನಾಗಿ; ಜ್ಞಾತ್ವಾ=ತಿಳಿದು ಕೊಂಡು; ಅನನ್ಯಮನಸಃ=ಬೇರೆ ಚಿಂತೆಯಿಲ್ಲದವರಾಗಿ; ಭಜಂತಿ= ಸೇವಿಸುತ್ತಿದ್ದಾರೆ (ಭಜಿಸುತ್ತಿದ್ದಾರೆ).

**ತಾ॥** ಓ ಅರ್ಜುನಾ! ಮಹಾತ್ಮರು ದೈವೀ ಪ್ರಕೃತಿಯನ್ನು (ದೈವ ಸಂಬಂಧವಾದ ಸ್ವಭಾವವನ್ನು) ಆಶ್ರಯಿಸಿದವರಾಗಿ, ನನ್ನನ್ನು ಸಮಸ್ತ ಪ್ರಾಣಿಗಳಿಗೆ ಅಧಿಕಾರಿಯೆಂದು, ನಾಶರಹಿತನೆಂದು ತಿಳಿದು ಅನನ್ಯಮನಸ್ಕರಾಗಿ ಭಜಿಸುತ್ತಾರೆ.

**ವ್ಯಾಖ್ಯೆ:** ಹಿಂದಿನ ಎರಡು ಶ್ಲೋಕಗಳಲ್ಲಿ ಆಸುರೀ ಪ್ರಕೃತಿಯನ್ನು ಆಶ್ರಯಿಸಿದವರ ಸ್ವಭಾವ ಎಂತಹದು ಎಂದು ತಿಳಿಸಲಾಯಿತು. ಈ ಶ್ಲೋಕದಲ್ಲಿ ಹಾಗು ಮುಂದಿನ ಶ್ಲೋಕದಲ್ಲಿ ದೈವೀಪ್ರಕೃತಿಯನ್ನು ಅವಲಂಬಿಸಿರುವವರ ಲಕ್ಷಣ ಗಳನ್ನು ವಿವರಿಸಲಾಗಿದೆ. ದೈವೀ ಪ್ರಕೃತಿಯನ್ನು*, ಸತ್ವಗುಣವನ್ನು ಆಶ್ರಯಿಸಿದ ಮಹಾತ್ಮರು ಪರಮಾತ್ಮನನ್ನು ಅನನ್ಯಚಿತ್ತದಿಂದ ಸೇವಿಸುತ್ತಿದ್ದಾರೆ. ಏಕೆ ಸೇವಿಸುತ್ತಿದ್ದಾರೆ? ಅವರು ಪರಮಾತ್ಮನಲ್ಲಿ ಎರಡು ವಿಶಿಷ್ಟ ಗುಣಗಳನ್ನು ಕಂಡುಕೊಂಡಿರುವರು. ಅವು ಯಾವುವೆಂದರೆ ೧) ಆದಿಕಾರಣತ್ವ ೨) ಅವ್ಯಯತ್ವ. ಭಗವಂತನು ಸಮಸ್ತ ಚರಾಚರ ಪ್ರಪಂಚಕ್ಕೆ ಆದಿಕಾರಣನೆಂದು, ನಾಶರಹಿತನೆಂದು ಅವರು ತಿಳಿದಿರುವರು. ಇಂತಹ ಮಹತ್ತರವಾದ ಗುಣಗಳು ಯಾವ ಬೇರೆ ಪದಾರ್ಥದಲ್ಲಾಗಲಿ, ವ್ಯಕ್ತಿಯಲ್ಲಾಗಲಿ ಇಲ್ಲ. ಪರಮಾತ್ಮನು ಸನಾತನನು. ಅನಾದಿ ಸ್ವರೂಪಿ. ಬೇರೆಯ ಪದಾರ್ಥಗಳಿಗೆ ಆದಿ, ಅಂತ್ಯಗಳಿವೆ. ಆದ್ದರಿಂದ ಅವು ಅಲ್ಪಗಳು. ಪರಮಾತ್ಮನು ಅವ್ಯಯನು, ನಾಶವಿಲ್ಲದವನು. ಬೇರೆಯೆಲ್ಲವೂ ನಾಶವಾಗುವಂತಹವೇ. ಕ್ಷಯವಾಗು ವಂತಹವು. ಹುಟ್ಟು ಸಾವುಗಳನ್ನು ಹೊಂದಿರುವಂತಹವು. ಈ ಪ್ರಕಾರವಾಗಿ ಮಹನೀಯರು ದೃಗ್ದೃಶ್ಯ ಪದಾರ್ಥ ಶೋಧನೆ ಮಾಡಿದವರಾಗಿ ಯಾವುದರ ಸ್ವಭಾವ ಹೇಗಿದೆಯೋ ಚೆನ್ನಾಗಿ ವಿಚಾರಿಸಿ, ದೃಶ್ಯವನ್ನು ನಶ್ವರವೆಂದು, ಪರಮಾತ್ಮನನ್ನು ಶಾಶ್ವತವೆಂದು ತಿಳಿದು, ಚರಾಚರ ಜಗತ್ತಿನಲ್ಲಿ ಆತನನ್ನೇ ಪರಮೋತ್ಕೃಷ್ಟವೆಂದು ನಿಶ್ಚಯಿಸಿ ಅನನ್ಯಚಿತ್ತದಿಂದ ಆತನನ್ನೇ ಸೇವಿಸುತ್ತಾರೆ.

'ಅನನ್ಯಮನಸಃ'- ಮನಸ್ಸು ಬೇರೆ ಯಾವುದರಲ್ಲಿಯೂ ಸಂಲಗ್ನವಾಗದೆ ಇತರ ಕಡೆ ವ್ಯಾಪಿಸದೆ ಒಂದೇ ಧ್ಯೇಯದಲ್ಲಿ ಸ್ಥಿರವಾಗಿದ್ದರೆ ಅದನ್ನು ಅನನ್ಯ ಮನಸ್ಸೆನ್ನುವರು. ಅಂತಹ ಅನನ್ಯ ಮನಸ್ಸಿನಿಂದ ಪರಮಾತ್ಮನನ್ನು ಧ್ಯಾನಿಸಬೇಕೆಂದರೆ, ಇತರ ವಸ್ತುಗಳ ನಶ್ವರತ್ವಾದಿ ದೋಷಗಳು, ಪರಮಾತ್ಮನಲ್ಲಿಯ ಶಾಶ್ವತತತ್ವಾದಿ ಸುಗುಣಗಳನ್ನು ಚೆನ್ನಾಗಿ ಗ್ರಹಿಸಿರಬೇಕು. ಆದ್ದರಿಂದಲೇ ಇಲ್ಲಿ 'ಜ್ಞಾತ್ವಾ' ಎಂದು ಹೇಳಲ್ಪಟ್ಟಿದೆ. ಧ್ಯೇಯ ವಸ್ತುವಿನ ಪರಿಜ್ಞಾನ ಉಂಟಾದಾಗ ಮಾತ್ರ ಅದರ ಮೇಲೆ ವಿಶ್ವಾಸವೇರ್ಪಡುವುದು. ಆಗ ಮಾತ್ರ ಅದರಲ್ಲಿ ಅನನ್ಯ ಮನಸ್ಸು ಸಂಭವಿಸುವುದು. ಹಾಗೆಯೇ ದೃಶ್ಯವಸ್ತುಗಳ ದೋಷಗಳನ್ನು ವಿಚಾರಿಸಿ ಅವುಗಳ ಕಡೆ ವಿರಕ್ತಿ ಹೊಂದಿದ್ದರೆ ಇನ್ನು ಮನಸ್ಸು ಹೊರಗಡೆ ಹೋಗದೆ ಅಂತರ್ಮುಖವಾಗಿ ಪರಮಾತ್ಮನಲ್ಲಿಯೇ

* ದೈವೀಪ್ರಕೃತಿ ಹಾಗು ಆಸುರೀಪ್ರಕೃತಿಯಿರುವವರನ್ನು ಕುರಿತು ೧೬ನೆಯ ಅಧ್ಯಾಯದಲ್ಲಿ ವಿಸ್ತಾರವಾಗಿ ತಿಳಿಸಲಾಗಿದೆ.

ಸ್ಥಿರಗೊಂಡಿರುವುದು. ಚಿತ್ತದಲ್ಲಿ ಅನನ್ಯತೆ ಏರ್ಪಡುವುದು.

'ಮಹಾತ್ಮಾನಃ'- ಮಹಾತ್ಮನೆಂದರೆ ಎಂತಹವನೋ ಈ ಶ್ಲೋಕದಲ್ಲಿ ವಿಶದೀಕರಿಸಲಾಗಿದೆ. 'ಮಹಾತ್ಮ' ಎನ್ನುವುದು ಒಂದು ಬಿರುದು. ಅದು ಪ್ರಯತ್ನದಿಂದ ಪ್ರತಿಯೊಬ್ಬರಿಗೆ ಲಭ್ಯವಾಗಬಲ್ಲದು. ಯಾರು ೧) ದೈವೀ ಪ್ರಕೃತಿಯನ್ನಾಶ್ರಯಿಸಿ ೨) ಭಗವಂತನನ್ನು ನಾಶರಹಿತ ಹಾಗು ಆದಿಕಾರಣನೆಂದು ತಿಳಿದು ೩) ಅನನ್ಯಮನಸ್ಕರಾಗಿ ಆತನನ್ನು ಧ್ಯಾನಿಸುವರೋ ಅಂತಹವರು ಮಹಾತ್ಮರು ಆಗಬಲ್ಲರು. ಆದ್ದರಿಂದ ಮಹಾತತ್ತ್ವಕ್ಕೆ ಜಾತಿಮತ ಕುಲ ಗೋತ್ರಾದಿಗಳೊಂದಿಗೆ ಯಾವ ಸಂಬಂಧವೂ ಇಲ್ಲ. ಯಾರಾದರೂ ಸರಿಯೇ ಮೇಲೆ ತಿಳಿಸಿದ ಒಳ್ಳೆಯ ಲಕ್ಷಣಗಳನ್ನು ಹೊಂದಿದ್ದಲ್ಲಿ ಅವರು ಮಹಾತ್ಮರೇ ಆಗುವರು. ಅಸುರ ಪ್ರಕೃತಿಯನ್ನು ಆಶ್ರಯಿಸುವವರು, ಕಾಮಕ್ರೋಧಾದಿಗಳುಳ್ಳವರು ಭಗವಂತನನ್ನು ಏಕಾಗ್ರಚಿತ್ತದಿಂದ ಭಜಿಸದವರು ಮಹಾತ್ಮರು ಎಂದೆಂದಿಗೂ ಆಗಲಾರರು. ಅವರು ಅಲ್ಪಾತ್ಮರು, ದುರಾತ್ಮರೇ ಆಗುವರು.

ಲೋಕದಲ್ಲಿ ಭಗವಂತನನ್ನು ಕುರಿತು ಧ್ಯಾನಿಸುವವರು ಬಹಳ ಮಂದಿ ಇರಬಹುದು. ಆದರೆ ಅನನ್ಯ ಮನಸ್ಸಿನಿಂದ ಧ್ಯಾನಿಸುವವರು ಬಹಳ ವಿರಳ. ಬಹಳಷ್ಟು ಜನರ ಮನಸ್ಸು ಸ್ವಲ್ಪ ಭಾಗ ದೃಶ್ಯದ ಮೇಲೆಯೂ, ಸ್ವಲ್ಪ ದೈವದ ಮೇಲೆಯೂ ವ್ಯಾಪಿಸಿರುವುದು. ಅಂತಹವರು ಭಗವತತ್ತ್ವವನ್ನು ಇನ್ನೂ ಚೆನ್ನಾಗಿ ತಿಳಿದುಕೊಂಡು, ಆತನ ಮಹಿಮೆಯನ್ನು ತಿಳಿದು ಕ್ರಮವಾಗಿ ದೃಶ್ಯಚಿಂತನೆಯನ್ನು ತ್ಯಜಿಸಿ ಅನನ್ಯಚಿತ್ತದಿಂದ ದೈವವನ್ನು ಸೇವಿಸುವುದನ್ನು ಅಭ್ಯಾಸ ಮಾಡಬೇಕು. ಮನಸ್ಸಿನಲ್ಲಿ 100% (ನೂರಿಗೆ ನೂರುಪಾಲು) ದೈವತ್ವವಿರುವ ಹಾಗೆ ಪ್ರಯತ್ನಿಸಬೇಕು. ಅಂತಹ ಮನಸ್ಸು ಮನಸ್ಸಾಗಿ ಉಳಿಯದೆ ಚಿದ್ರೂಪವಾಗಿ, ದೈವಸ್ವರೂಪವಾಗಿ, ಸತ್ವವಾಗಿ ಬದಲಾಗಿ ಹೋಗುವುದು. (ಜ್ಞ ಚಿತ್ತಂಸತ್ವಮುಚ್ಯತೇ) ಅಂತಹ ಸ್ಥಿತಿಯೇ ಮೋಕ್ಷ.

ಪ್ರ : ದೈವೀ ಪ್ರಕೃತಿಯನ್ನು ಆಶ್ರಯಿಸಿದ ಮಹಾತ್ಮರು ಹೇಗೆ ಪ್ರವರ್ತಿಸುವರು?

ಉ : ಪರಮಾತ್ಮನನ್ನು ಸಮಸ್ತ ಭೂತಕೋಟಿಗಳಿಗೆ ಆದಿಕಾರಣನೆಂದು ಹಾಗು ಅವ್ಯಯನೆಂದು ತಿಳಿದು ಅನನ್ಯ ಮನಸ್ಸಿನಿಂದ ಆತನನ್ನು ಸೇವಿಸುವರು.

ಪ್ರ : ಪರಮಾತ್ಮನ ಲಕ್ಷಣಗಳೇನು?

ಉ : ೧) ಸಮಸ್ತ ಪ್ರಾಣಿ ಕೋಟಿಗಳಿಗೆ ಆದಿಕಾರಣನು ೨) ನಾಶರಹಿತನು.

ಪ್ರ : ಮಹಾತ್ಮರೆಂದು ಯಾರು ಕರೆಯಲ್ಪಡುವರು?

ಉ : ೧) ದೈವೀ ಪ್ರಕೃತಿಯನ್ನು ಆಶ್ರಯಿಸಿದವರು ೨) ಭಗವತತ್ತ್ವವನ್ನು ತಿಳಿದವರು ೩) ಹಾಗೆ ತಿಳಿದು ಭಗವಂತನನ್ನು ಅನನ್ಯಚಿತ್ತದಿಂದ ಸೇವಿಸುವವರು.

ಪ್ರ : ಭಗವಂತನಲ್ಲಿ ಅನನ್ಯಮನಸ್ಸು ಹೇಗೆ ಉಂಟಾಗುವುದು?

ಉ : ಆತನ ಸ್ವಸ್ವರೂಪ ಸ್ವಭಾವವನ್ನು ಚೆನ್ನಾಗಿ ತಿಳಿದುಕೊಳ್ಳುವುದರಿಂದ, ಅಂದರೆ ಆತನು ನಾಶರಹಿತನು ಆದಿ ಕಾರಣನೆಂದು ತಿಳಿದರೆ ಅಂತಹ ಭಗವತ್ಪರಿಜ್ಞಾನದಿಂದ ಆತನ ಮೇಲೆ ಪೂರ್ಣ ಭಕ್ತಿ ಹಾಗು ವಿಶ್ವಾಸವುಂಟಾಗಿ ಮನಸ್ಸು ಅನ್ಯತ್ರ ಹೋಗದೆ ಆತನಲ್ಲಿಯೇ ಸ್ಥಿರವಾಗುವುದು. ಅದೇ ಅನನ್ಯ ಮನಸ್ಸು. ಅನನ್ಯಮನಸ್ಸು ಉಂಟಾಗಲು ಇದು ಒಂದೇ ಉಪಾಯ.

ಅ॥ ದೈವೀಪ್ರಕೃತಿಯನ್ನು ಹೊಂದಿರುವವರ ಲಕ್ಷಣಗಳನ್ನು ಮುಂದುವರಿಸಲಾಗುತ್ತಿದೆ.

**೧೪. ಸತತಂ ಕೀರ್ತಯಂತೋ ಮಾಂ ಯತಂತಶ್ಚ ದೃಢವ್ರತಾಃ**
**ನಮಸ್ಯಂತಶ್ಚ ಮಾಂ ಭಕ್ತ್ಯಾ ನಿತ್ಯಯುಕ್ತಾ ಉಪಾಸತೇ**

**ಅರ್ಥ:** ತೇ=ಅವರು; ಸತತಂ=ಯಾವಾಗಲೂ; ಮಾಂ=ನನ್ನನ್ನು; ಕೀರ್ತಿಯಂತಃ=ಕೀರ್ತಿಸುತ್ತ; ದೃಢವ್ರತಾಃ=ಅಚಂಚಲ ವ್ರತವುಳ್ಳವರಾಗಿ; ಯತಂತಃ ಚ=ಪ್ರಯತ್ನಿಸುತ್ತ; ಭಕ್ತ್ಯಾ=ಭಕ್ತಿಯಿಂದ; ನಮಸ್ಯಂತಃ ಚ=ನಮಸ್ಕರಿಸುತ್ತ; ನಿತ್ಯಯುಕ್ತಾಃ=ಸದಾ ನನ್ನಲ್ಲಿ ಚಿತ್ತವುಳ್ಳವರಾಗಿ (ಏಕಾಗ್ರಚಿತ್ತರಾಗಿ); ಮಾಂ=ನನ್ನನ್ನು; ಉಪಾಸತೇ=ಸೇವಿಸುತ್ತಿದ್ದಾರೆ.

**ತಾ॥** ಅವರು (ಮೇಲೆ ತಿಳಿಸಿದ ದೈವೀ ಪ್ರಕೃತಿಯುಳ್ಳವರು) ಯಾವಾಗಲೂ ನನ್ನನ್ನು ಕೀರ್ತಿಸುತ್ತ, ದೃಢವ್ರತನಿಷ್ಠರಾಗಿ ಪ್ರಯತ್ನಿಸುತ್ತ, ಭಕ್ತಿಯಿಂದ ನಮಸ್ಕರಿಸುತ್ತ, ಸದಾ ನನ್ನಲ್ಲಿ ಚಿತ್ತವುಳ್ಳವರಾಗಿ ನನ್ನನ್ನು ಸೇವಿಸುತ್ತಿದ್ದಾರೆ.

**ವ್ಯಾಖ್ಯೆ:** ಮಹಾತ್ಮರಾದವರು ಪರಮಾತ್ಮನನ್ನು ಅನನ್ಯ ಮನಸ್ಸಿನಿಂದ ಸೇವಿಸುವರೆಂದು ಹಿಂದಿನ ಶ್ಲೋಕದಲ್ಲಿ ಹೇಳಲಾಗಿದೆ. ಅವರು ಹೇಗೆ ಸೇವಿಸುವರು ಎನ್ನುವುದನ್ನು ಇಲ್ಲಿ ತಿಳಿಸಲಾಗಿದೆ. ಸರ್ವಕಾಲ ಸರ್ವಾವಸ್ಥೆಗಳಲ್ಲಿ ಅವರು ಭಗವಂತನನ್ನು ಸ್ಮರಿಸುತ್ತಾರೆ. 'ಸತತಂ' ಎಂದು ಹೇಳಿರುವುದರಿಂದ ಯಾವುದೋ ಒಂದು ನಿರ್ದಿಷ್ಟ ಸಮಯದಲ್ಲಿ ಕೀರ್ತಿಸುವುದಲ್ಲವೆಂದೂ, ನಿರಂತರವೂ ಕೀರ್ತಿಸಬೇಕೆಂದು ಅರ್ಥವಾಗುತ್ತದೆ. ಸಾಕಾರ ಭಕ್ತರು ಭಗವಂತನ ನಾಮಸ್ಮರಣೆಗಳನ್ನು ಮಾಡುವರು. ನಿರಾಕಾರ ಭಕ್ತರು ಆ ಪರಮಾತ್ಮನನ್ನು ಕುರಿತು ಮನನ ನಿದಿ ಧ್ಯಾಸಗಳನ್ನು ಮಾಡುವರು.

ಅವರು ಭಗವತ್ಪ್ರಾಪ್ತಿಗಾಗಿ ಸದಾ ಯತ್ನಶೀಲರಾಗಿರುವರು. ಇಂದ್ರಿಯ ನಿಗ್ರಹಾದಿಗಳನ್ನು (ಶಮದಮಾದಿಗಳನ್ನು) ಅಭ್ಯಸಿಸುವರು. ಸೋಮಾರಿಗಳಾಗಿರುವುದಿಲ್ಲ. ಪ್ರಯತ್ನಶೀಲರಿಗೆ ಮಾತ್ರ ದೈವಬಲವು ಲಭ್ಯವಾಗುವುದಾಗಲಿ ಬೇರೆಯವರಿಗಲ್ಲ ಎಂದು ಈ 'ಯತಂತಶ್ಚ' ಎನ್ನುವ ಪದದಿಂದ ಸ್ಪಷ್ಟವಾಗುತ್ತದೆ. ಪ್ರಯತ್ನವಿಲ್ಲದ ಕಡೆ ಪ್ರಾಪಂಚಿಕ ವಸ್ತುಗಳೇ ಸಿದ್ಧಿಸದಿರುವಾಗ ಇನ್ನು ದೈವ ವಸ್ತುವನ್ನು ಕುರಿತು ಬೇರೆ ಹೇಳಬೇಕೇ? ಅವರು ಮಾಡುವುದು ಸಾಮಾನ್ಯ ಪ್ರಯತ್ನವಲ್ಲ. 'ದೃಢ ವ್ರತಗಳ'ನ್ನವಲಂಬಿಸಿ ಅನನ್ಯ ಚಿತ್ತದಿಂದ ಪರಮಾತ್ಮ ಸಾಧನೆಯನ್ನು ಮಾಡುವರು.

**'ತೇ ದ್ವಂದ್ವಮೋಹನಿರ್ಮುಕ್ತಾ ಭಜಂತೇ ಮಾಂ ದೃಢವ್ರತಾಃ' (೭-೨೮)**

ಎಂದು ಅವರ ಈ ದೃಢವ್ರತಶೀಲತೆಯನ್ನು ಕುರಿತು ಈ ಹಿಂದೆ ಗೀತಾಚಾರ್ಯನು ಹೇಳಿದ್ದಾನೆ. ಈಗ ಮತ್ತೆ ಅದರ ಪ್ರಸ್ತಾಪ ಬಂದಿರುವುದರಿಂದ ಅದರ ಪ್ರಾಮುಖ್ಯತೆ ಮತ್ತು ಅತ್ಯಾವಶ್ಯಕತೆ ನಿರೂಪಿತವಾಗುತ್ತಿದೆ. ಬಹುಜನ್ಮಾರ್ಜಿತ ಪಾಪ ವಾಸನೆಗಳಿಂದ, ಮಲಿನ ಸಂಸ್ಕಾರಗಳಿಂದ ಕೊಬ್ಬಿರುವ ಮನಸ್ಸನ್ನು ಹತೋಟಿಯಲ್ಲಿ ಇಟ್ಟುಕೊಳ್ಳಬೇಕೆಂದರೆ ಸಾಧಕನು ಕೆಲವು ವ್ರತಗಳನ್ನು ತಪ್ಪದೆ ಆಚರಿಸಬೇಕು. (ಉಪವಾಸ ವ್ರತ, ಮೌನವ್ರತ, ಜಪವ್ರತ, ಧ್ಯಾನವ್ರತ, ಬ್ರಹ್ಮಚರ್ಯವ್ರತ ಮುಂತಾದುವು), ಆದರೆ ದೃಢವ್ರತನಾಗಿರಬೇಕೇ ಹೊರತು ದುರ್ಬಲವ್ರತನಾಗಿರಬಾರದು. ಅಂದರೆ ಅವುಗಳನ್ನು ಮಧ್ಯೆ

ಭಂಗಗೊಳಿಸಬಾರದು. ವ್ರತಗಳಲ್ಲಿ, ನಿಯಮಗಳಲ್ಲಿ, ಪರಮಾರ್ಥ ನಿಷ್ಠೆಯಲ್ಲಿ ಇಂತಹ ದೃಢತ್ವವಿಲ್ಲದಿರುವುದರಿಂದಲೇ ಅನೇಕರು ಈ ಮಾರ್ಗದಲ್ಲಿ ಪ್ರವೇಶಿಸಿಯೂ, ಮಾಯೆಯಿಂದ ಪರಾಜಿತರಾಗಿ ನಪಾಸಾಗುತ್ತಾರೆ. ಮಾಯೆ ಭಯಂಕರವಾದ ಶತ್ರು. ಅದು ಸಾಮಾನ್ಯಾಯುಧಗಳಿಗೆ ಜಗ್ಗದು. ಆದ್ದರಿಂದ ದೃಢ ವ್ರತಗಳೆಂಬ ದಿವ್ಯಾಸ್ತ್ರಗಳಿಂದ ಅದನ್ನು ಪಲಾಯನಗೊಳಿಸಬೇಕು.

'ನಿತ್ಯಯುಕ್ತಾಃ'- ಎಂದು ಹೇಳಿರುವುದರಿಂದ ಅವರು ನಿರಂತರವಾಗಿ ಏಕಾಗ್ರತೆಯಿಂದ ಭಗವಂತನಲ್ಲಿ ಚಿತ್ತವನ್ನು ನೆಲೆಗೊಳಿಸುವರೆಂದು ಸ್ಪಷ್ಟವಾಗುತ್ತದೆ. ಆದರೆ 'ಭಕ್ತ್ಯಾ' ಎನ್ನುವ ಪದವನ್ನು ಇಲ್ಲಿ ಸೇರಿಸುವುದರಿಂದ ಅವರು ಮಾಡುವ ವಂದನೆ, ಧ್ಯಾನಗಳು ನಿರ್ಮಲ ಭಕ್ತಿಯಿಂದ ಕೂಡಿರುವುವೇ ಆಗಿರುವುವು ಎಂದು ತಿಳಿಯುತ್ತದೆ. ಭಗವಂತನನ್ನು ಧ್ಯಾನಿಸು ವವರು ಅನೇಕರು ಇರಬಹುದಾದರೂ ಭಕ್ತಿಯಿಂದ ಧ್ಯಾನಿಸುವವರು ಬಹಳ ವಿರಳ.

**'ಸ ತು ದೀರ್ಘಕಾಲನೈರಂತರ್ಯ ಸತ್ಕಾರಸೇವಿತೋ ದೃಢಭೂಮಿಃ'** ಎಂದು ಪತಂಜಲಿ ಮಹರ್ಷಿಯು ಪ್ರೀತಿಯಿಂದ ಕೂಡಿದ ಧ್ಯಾನಾದಿ ನಿರಂತರ ಯತ್ನಗಳಿಗೆ ಹೆಚ್ಚು ಪ್ರಾಧಾನ್ಯವನ್ನು ಕೊಟ್ಟಿರುವನು. ಈ ಪ್ರಕಾರವಾಗಿ ನಿರಂತರ ದೈವಸ್ಮರಣೆ, ದೃಢವ್ರತತೆ, ಭಕ್ತಿಯಿಂದ ಕೂಡಿದ ನಿರಂತರವಾದ ಧ್ಯಾನವು ಭಗವತ್ಸಾಕ್ಷಾತ್ಕಾರಕ್ಕೆ ಮಾರ್ಗಗಳೆಂದು ಈ ಶ್ಲೋಕದ ಮೂಲಕ ತಿಳಿಸಲಾಗಿದೆ. ಆದ್ದರಿಂದ ಮುಮುಕ್ಷುಗಳು ಅಂತಹ ಆಚರಣೆಯನ್ನು ಪಾಲಿಸಿ ದೈವೀ ಪ್ರಕೃತಿಯುಳ್ಳವರಾಗಿ ಯತ್ನಿಸಿದ್ದಲ್ಲಿ ಬ್ರಹ್ಮಸಾಯುಜ್ಯವನ್ನು ಶೀಘ್ರವಾಗಿ ಹೊಂದುವರು.

ಪ್ರ : ಮಹಾತ್ಮರಾದವರು ಭಗವಂತನನ್ನು ಯಾವ ಪ್ರಕಾರವಾಗಿ ಸೇವಿಸುವರು?

ಉ : ೧) ಯಾವಾಗಲೂ ಕೀರ್ತಿಸುವರು ೨) ದೃಢ ವ್ರತಗಳನ್ನವಲಂಬಿಸಿ ದೈವ ಪ್ರಾಪ್ತಿಗೆ ಯತ್ನಿಸುವರು ೩) ಭಗವಂತನನ್ನು ಭಕ್ತಿಯಿಂದ ನಮಸ್ಕರಿಸುವರು ೪) ಚಿತ್ತವನ್ನು ಬೇರೆಕಡೆ ಹೋಗಬಿಡದೆ ಪರಮಾತ್ಮನಲ್ಲೇ ಸದಾ ನೆಲೆಗೊಂಡಿರುವಂತೆ ಎಚ್ಚರಿಕೆ ವಹಿಸುವರು.

ಪ್ರ : ಇದರಿಂದ ಭಗವತ್ಪ್ರಾಪ್ತಿಗೆ ಉಪಾಯಗಳೇನು ಎಂದು ತಿಳಿಯುವುದು?

ಉ : ೧) ನಿರಂತರ ಸ್ಮರಣೆ ೨) ದೃಢವ್ರತ ಸಂಯುಕ್ತ ಯತ್ನ ೩) ಭಕ್ತಿಯಿಂದ ಕೂಡಿದ ವಂದನೆ, ಧ್ಯಾನ ೪) ಏಕಾಗ್ರತೆಯಿಂದ ಕೂಡಿದ ನಿರಂತರ ದೈವ ಚಿಂತನೆ (ನಿತ್ಯಯುಕ್ತತ್ವ)ಗಳು ಭಗವತ್ಪ್ರಾಪ್ತಿಗೆ ಉಪಾಯಗಳು.

ಪ್ರ : ಭಗವಂತನನ್ನು ಯಾವಾಗ ಸ್ಮರಿಸಬೇಕು ಹಾಗು ಕೀರ್ತಿಸಬೇಕು?

ಉ : ನಿರಂತರವಾಗಿ

ಪ್ರ : ಎಂತಹ ವ್ರತಗಳನ್ನು ಮಾಡಿ ಯತ್ನಿಸಬೇಕು?

ಉ : ದೃಢ ವ್ರತಗಳನ್ನು ಮಾಡಿ

ಪ್ರ : ಭಗವಚ್ಚಿಂತನೆ ಹೇಗೆ ಮಾಡಬೇಕು?

ಉ : ಭಕ್ತಿಯಿಂದ

**ಅ॥** ಜನರು ಅನೇಕ ವಿಧಗಳಿಂದ ತನ್ನನ್ನು ಉಪಾಸಿಸುವರೆಂದು (ಸೇವಿಸುವರೆಂದು) ಭಗವಂತನು ತಿಳಿಸುತ್ತಿದ್ದಾನೆ.

**೧೫. ಜ್ಞಾನಯಜ್ಞೇನ ಚಾಪ್ಯನ್ಯೇ ಯಜಂತೋ ಮಾಮುಪಸಾತೇ**
**ಏಕತ್ವೇನ ಪೃಥಕ್ತ್ವೇನ ಬಹುಧಾ ವಿಶ್ವತೋಮುಖಮ್**

**ಅರ್ಥ:** ಅನ್ಯೇ ಅಪಿ=ಮತ್ತೆ ಕೆಲವರು; ಜ್ಞಾನಯಜ್ಞೇನ ಚ=ಜ್ಞಾನಯಜ್ಞದಿಂದ; ಯಜಂತಃ=ಪೂಜಿಸುತ್ತಿರುವವರಾಗಿ; ಏಕತ್ವೇನ=(ತಾನೇ ಬ್ರಹ್ಮವೆಂದು) ಅದ್ವೈತ ಭಾವದಿಂದ; (ಕೇಚಿತ್=ಮತ್ತೆ ಕೆಲವರು; ಪೃಥಕ್ತ್ವೇನ= ಬ್ರಹ್ಮವೇ ವಿವಿಧ ದೇವತಾದಿ ರೂಪಗಳಲ್ಲಿದೆಯೆಂದು) ದ್ವೈತ ಭಾವದಿಂದ; ಬಹುಧಾ=ಹೀಗೆ ಅನೇಕ ವಿಧಗಳಾಗಿ(ವಿವಿಧ ರೂಪಗಳ); ವಿಶ್ವತೋಮುಖಂ=ವಿಶ್ವರೂಪನಾದ (ಸರ್ವಾತ್ಮಕನಾದ); ಮಾಂ=ನನ್ನನ್ನು; ಉಪಾಸತೇ=ಉಪಾಸಿಸುತ್ತಿರುವರು.

**ತಾ॥** ಮತ್ತೆ ಕೆಲವರು ಜ್ಞಾನಯಜ್ಞದಿಂದ (ತಾನೇ ಬ್ರಹ್ಮವೆನ್ನುವ) ಅದ್ವೈತ ಭಾವದಿಂದ, ಮತ್ತೆ ಕೆಲವರು (ಬ್ರಹ್ಮವೇ ವಿವಿಧ ದೇವತಾದಿ ರೂಪಗಳಲ್ಲಿದೆ ಆ ದೇವತೆಗಳಲ್ಲಿ ನಾನು ಒಂದನ್ನು ಸೇವಿಸುತ್ತಿದ್ದೇನೆ ಎನ್ನುವ) ದ್ವೈತಭಾವದಿಂದ, ಪೂಜಿಸುತ್ತಿರುವರು. ಹೀಗೆ ಅನೇಕ ವಿಧಗಳಿಂದ (ಇಲ್ಲವೆ ವಿವಿಧ ರೂಪಗಳಿಂದ) ನನ್ನನ್ನು ಉಪಾಸಿಸುತ್ತಿದ್ದಾರೆ.

**ವ್ಯಾಖ್ಯೆ:** ಮಹಾತ್ಮರಾದವರು ಸದಾ ಪರಮಾತ್ಮನನ್ನು ಭಜಿಸುತ್ತಿರುತ್ತಾರೆಂದು ಇಲ್ಲಿಯವರೆಗೆ ಹೇಳಲಾಯಿತು. ಅವರಲ್ಲಿ ಕೆಲವರು ಅದ್ವೈತ ಭಾವದಿಂದ ಮತ್ತೆ ಕೆಲವರು ದ್ವೈತಭಾವದಿಂದ, ಇನ್ನೂ ಕೆಲವರು ಬೇರೆ ಬೇರೆ ವಿಧವಾಗಿ ಅವರವರ ಸಂಸ್ಕಾರವನ್ನನುಸರಿಸಿ ಭಗವಂತನನ್ನು ಸೇವಿಸುತ್ತಾರೆಂದು ಇಲ್ಲಿ ಹೇಳಲ್ಪಡುತ್ತಿದೆ. ನೇರವಾಗಿಯಾಗಲಿ ಅಥವ ಸುತ್ತುಕೊಂಡಾಗಲಿ ಹೇಗೆ ಹರಿದರೂ ನದಿಗಳು ಕಟ್ಟಕಡೆಗೆ ಸಮುದ್ರವನ್ನು ಸೇರಿಯೇ ಸೇರುತ್ತವೆ. ಹಾಗೆ ಅಧ್ಯಾತ್ಮ ಮಾರ್ಗದಲ್ಲಿ ಯತ್ನಶೀಲರಾದವರು, ಭಿನ್ನ ಭಿನ್ನ ರೀತಿಗಳಲ್ಲಿ ಭಗವಂತನನ್ನು ಸೇವಿಸಿದರೂ ಪ್ರಯತ್ನವನ್ನು ಬಿಡದಿದ್ದರೆ ಕೊನೆಗೆ ಎಲ್ಲರೂ ಭಗವದ್ರೂಪ ಲಕ್ಷ್ಯವನ್ನೇ ಸೇರುವರು ಆದರೆ ಲಕ್ಷ್ಯದಲ್ಲಿ ಏಕಾಗ್ರತೆ (ಭಕ್ತಿ) ಎಲ್ಲರಿಗೂ ಇರಬೇಕು.

'ಜ್ಞಾನಯಜ್ಞೇನ'- ಜ್ಞಾನಯಜ್ಞವೆಂದರೇನು? **"ಬ್ರಹ್ಮಸತ್ಯಂ ಜಗನ್ಮಿಥ್ಯಾ ಜೀವೋ ಬ್ರಹ್ಮೈವ ನಾಪರಃ"**- ಬ್ರಹ್ಮವೊಂದೇ ಸತ್ಯ, ದೃಶ್ಯ ಜಗತ್ತೆಲ್ಲವೂ ಮಿಥ್ಯ. ಜೀವಿಯು, ತಾನು ವಾಸ್ತವವಾಗಿ ಬ್ರಹ್ಮವೇ ಆಗಲಿ ಬೇರೆಯಲ್ಲ ಎನ್ನುವ ನಿಶ್ಚಯವನ್ನು ಹೊಂದಿದ್ದಲ್ಲಿ ಜ್ಞಾನಯಜ್ಞವನ್ನು ಆಚರಿಸಿದಂತಾಗುವುದು. ಇದು ಅದ್ವೈತ ಬ್ರಹ್ಮ ಭಾವನೆಯಾದ 'ತತ್ವಮಸಿ' ಎನ್ನುವ ಮಹಾವಾಕ್ಯದ ಚಿಂತನೆ ಹಾಗು 'ಸೋಹಂ' ಭಾವ. ಇಂತಹ ಜ್ಞಾನಯಜ್ಞವನ್ನು ಆಚರಿಸುವವನಿಗೆ ಅದ್ವೈತ ಭಾವವುಂಟಾಗಿ ತಾನೇ ಬ್ರಹ್ಮವೆನ್ನುವ ಚಿಂತನೆಯನ್ನು ಹೊಂದಿರುವನು. ಈ ಜ್ಞಾನಯಜ್ಞದ ಶ್ರೇಷ್ಠತೆಯನ್ನು ಕುರಿತು, ಅವಶ್ಯಕತೆಯನ್ನು ಕುರಿತು ಶ್ರೀಕೃಷ್ಣಮೂರ್ತಿ ಗೀತೆಯಲ್ಲಿ ಅಲ್ಲಲ್ಲಿ ಹೇಳುತ್ತಲೇ ಬಂದಿದ್ದಾನೆ. ಕೊನೆಯಲ್ಲಿ ಗೀತೆಯನ್ನು ಸಮಾಪ್ತಿ ಮಾಡುತ್ತ **"ಜ್ಞಾನಯಜ್ಞೇನ ತೇನಾಹಮಿಷ್ಟಃ ಸ್ಯಾಮಿತಿಮೇಮತಿಃ"**- ಗೀತಾಧ್ಯಯನ ಮಾಡುವವನಿಂದ ನಾನು ಜ್ಞಾನಯಜ್ಞದಿಂದ ಆರಾಧಿಸಲ್ಪಟ್ಟವನಾಗುತ್ತೇನೆ ಎಂದು ಹೇಳಿ ಜ್ಞಾನಯಜ್ಞದ ಮಹಾತ್ಮೆಯನ್ನು ಸಾರಿದನು. ಸರ್ವವೂ ಒಂದೇ ಭಗವತ್ಸ್ವರೂಪ ಹಾಗು ಆ ಸ್ವರೂಪ ತನ್ನ ಆತ್ಮಕ್ಕಿಂತ ಬೇರೆಯಲ್ಲವೆನ್ನುವ ವಿಷಯವನ್ನು ಪ್ರತಿಯೊಬ್ಬರೂ ಯಾವುದೋ ಒಂದು ಕಾಲದಲ್ಲಿ ತಿಳಿದು ಮುಕ್ತಿ ಹೊಂದುವರು. ಇದು ಜ್ಞಾನಯಜ್ಞ.

'ವಿಶ್ವತೋಮುಖಮ್'- ಪ್ರಪಂಚವೆಲ್ಲಾ ಮುಖವಾಗಿರುವವನು

ಸರ್ವಾತ್ಮ ಸ್ವರೂಪಿ- ಎಂದು ಭಗವಂತನನ್ನು ಇಲ್ಲಿ ವರ್ಣಿಸಲಾಗಿದೆ. ಈ ಸತ್ಯವನ್ನು ತಿಳಿದರೆ ಇನ್ನು ಯಾರೂ ಯಾವ ಪಾಪವನ್ನೂ ಮಾಡುವುದಿಲ್ಲ, ಏಕೆಂದರೆ ಎಲ್ಲಾ ಕಡೆ ಭಗವಂತನ ಮುಖ, ದೃಷ್ಟಿ, ಅಸ್ತಿತ್ವವಿದೆ. ಆತನು ಸರ್ವವನ್ನು ವೀಕ್ಷಿಸುತ್ತಲೇ ಇದ್ದಾನೆ ಎಂದು ತಿಳಿದವನು ಪಾಪವನ್ನು ಮಾಡಲು ಹೇಗೆ ಸಾಧ್ಯ? ಆದ್ದರಿಂದ ವಿಶ್ವತೋಮುಖಂ ಎನ್ನುವ ಈ ಪದವನ್ನು ಜನರು ಮತ್ತೆ ಮತ್ತೆ ಜ್ಞಾಪಿಸಿಕೊಳ್ಳುತ್ತ, ದುಷ್ಕೃತ್ಯಗಳಿಂದ ದೂರವಿರಬೇಕು.

ಪ್ರ : ಜನರು ಭಗವಂತನನ್ನು ಯಾವ ಪ್ರಕಾರವಾಗಿ ಸೇವಿಸುವರು?

ಉ : ಕೆಲವರು ಜ್ಞಾನಯಜ್ಞದ ಮೂಲಕ ಅದ್ವೈತ ಭಾವದಿಂದಲೂ ಮತ್ತೆ ಕೆಲವರು ದ್ವೈತ ಭಾವದಿಂದಲೂ ಅವರವರ ರುಚಿಗಳಿಗನುಸಾರವಾಗಿ ಅನೇಕ ವಿಧಗಳಿಂದ ಅರ್ಚಿಸುತ್ತಿದ್ದಾರೆ.

**ಅ॥** ಈ ಪ್ರಪಂಚದಲ್ಲಿ ಸಮಸ್ತವೂ ಪರಮಾತ್ಮನೇ ಎಂದು ನಾಲ್ಕು ಶ್ಲೋಕಗಳ ಮೂಲಕ ಹೇಳಲಾಗಿದೆ-

**೧೬. ಅಹಂ ಕ್ರತುರಹಂ ಯಜ್ಞಃ ಸ್ವಧಾಹಮಹಮೌಷಧಮ್**
**ಮಂತ್ರೋಽಹಮಹಮೇ ವಾಜ್ಯಮಹಮಗ್ನಿರಹಂ ಹುತಮ್**

**ಅರ್ಥ:** ಅಹಂ=ನಾನು; ಕ್ರತುಃ=ಕ್ರತು(ವೇದೋಕ್ತವಾದ ಅಗ್ನಿಷ್ಟೋಮಾದಿಗಳನ್ನು); ಅಹಂ=ನಾನು; ಯಜ್ಞಃ=ಯಜ್ಞವನ್ನು; ಅಹಂ=ನಾನು; ಮಂತ್ರಃ=ಮಂತ್ರವನ್ನು; ಅಹಂ=ನಾನು; ಆಜ್ಯಂ=ಹೋಮದ್ರವ್ಯವನ್ನು (ಹವಿಸ್ಸು); ಅಹಂ=ನಾನು; ಅಗ್ನಿಃ=ಅಗ್ನಿಹೋತ್ರವನ್ನು; ಅಹಮೇವ=ನಾನೇ; ಹುತಂ(ಅಸ್ಮಿ)=ಹೋಮ ಕರ್ಮಗಳು (ಆಗಿದ್ದೇನೆ).

**ತಾ॥** (ಅಗ್ನಿಷ್ಟೋಮಾದಿರೂಪನಾದ) ಕ್ರತುವೂ ನಾನೇ, ಯಜ್ಞವೂ ನಾನೇ, ಪಿತೃದೇವರಿಗೆ ನೀಡುವ ಅನ್ನವೂ ನಾನೇ, ಔಷಧವೂ ನಾನೇ, ಮಂತ್ರವೂ ನಾನೇ, ಹವಿಸ್ಸೂ ನಾನೇ, ಅಗ್ನಿಯೂ ನಾನೇ ಮತ್ತು ಹೋಮಕರ್ಮಗಳೂ ಸಹ ನಾನೇ, ಆಗಿದ್ದೇನೆ.

**ವ್ಯಾಖ್ಯೆ:** ಪರಮಾತ್ಮನು ಸರ್ವವ್ಯಾಪಕನಾಗಿ, ವಿಶ್ವತೋಮುಖವಾಗಿ ಸಮಸ್ತ ಪದಾರ್ಥಗಳಲ್ಲಿ ಬೆಳಗುತ್ತಿದ್ದಾನೆ ಎನ್ನುವ ವಾಕ್ಯವನ್ನು ಋಜು ಮಾಡಲು ದೃಷ್ಟಾಂತ ರೂಪವಾಗಿ ಯಜ್ಞಕ್ರಿಯೆಯನ್ನು ತೆಗೆದುಕೊಂಡು ಅದರಲ್ಲಿ ಉಪಯೋಗಿಸಲ್ಪಡುವ ಸಮಸ್ತವೂ ಭಗವತ್ಸ್ವರೂಪವೇ ಎಂದು ಹೇಳಲಾಗಿದೆ. ಅದೇ ವಿಧವಾಗಿ ಪ್ರಪಂಚದಲ್ಲಿಯ ಸಮಸ್ತ ಪದಾರ್ಥಗಳು ಭಗವದ್ರೂಪಗಳೇ ಎಂದು ಇದರಿಂದ ತಿಳಿದುಕೊಳ್ಳಬೇಕು. ಹಾಗೆ ತಿಳಿದುಕೊಂಡು ಭಕ್ತಿ ಭಾವ ಸಂಯುತರಾಗಿ, ಕ್ರಮವಾಗಿ ಅಂತಹ ಸರ್ವಾತ್ಮ ಭಾವವನ್ನು ಅನುಭೂತಿಗೊಳಿಸಿಕೊಳ್ಳಬೇಕು.

**೧೭. ಪಿತಾಽಮಹಸ್ಯ ಜಗತೋ ಮಾತಾ ಧಾತಾ ಪಿತಾಮಹಃ**
**ವೇದ್ಯಂ ಪವಿತ್ರಮೋಂಕಾರ ಋಕ್ಸಾಮಯಜುರೇವ ಚ**

**ಅರ್ಥ:** ಅಸ್ಯ ಜಗತಃ=ಈ ಜಗತ್ತಿಗೆ; ಅಹಂ ಏವ=ನಾನೇ; ಪಿತಾ=ತಂದೆ; ಮಾತಾ=ತಾಯಿ; ಧಾತಾ=ರಕ್ಷಕನು(ಇಲ್ಲವೆ, ಕರ್ಮಫಲಪ್ರದಾತನು); ಪಿತಾಮಹಾಃ=ತಾತನು; ವೇದ್ಯಂ=ತಿಳಿದುಕೊಳ್ಳಬೇಕಾದ ವಸ್ತು; ಪವಿತ್ರಂ=ಪಾವನ ಪದಾರ್ಥ; ಓಂಕಾರಃ=ಓಂಕಾರವು (ಪ್ರಣವ ಸ್ವರೂಪಿಯು); ಋಕ್ಸಾಮಯಜುಃ ಚ=ಋಗ್ವೇದ, ಸಾಮವೇದ, ಯಜುರ್ವೇದ(ಆಗಿದ್ದೇನೆ).

**ತಾ॥** ಈ ಜಗತ್ತಿಗೆ ನಾನೇ ತಂದೆ, ತಾಯಿ, ಸಂರಕ್ಷಕನು (ಇಲ್ಲವೆ ಕರ್ಮಫಲ ಪ್ರದಾತನು), ತಾತನು; ಮತ್ತೆ ನಾನು ತಿಳಿದುಕೊಳ್ಳಬೇಕಾದಂತಹ ವಸ್ತು, ಪಾವನ ಪದಾರ್ಥವು, ಓಂಕಾರವು, ಋಗ್ವೇದ, ಸಾಮವೇದ, ಯಜುರ್ವೇದಗಳೂ ಆಗಿದ್ದೇನೆ.

**ವ್ಯಾಖ್ಯೆ:** ಲೌಕಿಕ ಬಂಧುಗಳೊಂದಿಗಿರುವ ಜೀವಿಯ ಸಂಬಂಧವು ತಾತ್ಕಾಲಿಕವಾದದ್ದು. ಸ್ಥೂಲದೇಹವಿರುವವರೆಗೆ ಮಾತ್ರ ಅವರೊಡನೆ ಸಂಬಂಧವಿರುವುದು. ಅದರ ಪತನದಿಂದ ಸಂಬಂಧ ತಕ್ಷಣ ಕಡಿದು ಹೋಗುವುದು. ತಾಯಿಯಾಗಲಿ, ತಂದೆಯಾಗಲಿ, ತಾತನಾಗಲಿ, ಸೋದರನಾಗಲಿ ಯಾರೇ ಆಗಲಿ ಅಷ್ಟೆ. ಆದರೆ ಭಗವತ್ಸಂಬಂಧ ಅಂತಹದಲ್ಲ, ಭಗವಂತನೆಂಬ ತಂದೆ, ತಾಯಿ, ತಾತ- ಎಲ್ಲಾ ಕಾಲಗಳಲ್ಲಿಯೂ ನಮ್ಮ ಜೊತೆ ಇರುವನು. ದೈವದ ಸಂಬಂಧ ಸ್ಥೂಲದೇಹಕ್ಕೆ ಮಾತ್ರ ಪರಿಮಿತವಲ್ಲ. ಅದು ಶಾಶ್ವತವಾದುದು. ಭಗವಂತನು ನಿತ್ಯನಾದುದರಿಂದ ಅಂತಹ ನಿತ್ಯಬಂಧುವನ್ನು ಅಧಿಕವಾಗಿ ಜೀವಿಯು ಆಶ್ರಯಿಸಬೇಕು. ಪರಮಾತ್ಮನನ್ನು ತಂದೆ, ತಾಯಿ, ಹಾಗು ಸಂರಕ್ಷಕನನ್ನಾಗಿ ಹೊಂದಿರುವವನು ನಿರ್ಭಯನಾಗಿ ಮತ್ತು ಆನಂದಮಯನಾಗಿರುವನು. ಏಕೆಂದರೆ ಶಾಶ್ವತ ಶಾಂತಿಯನ್ನು ಬಂಧವಿಮುಕ್ತಿಯನ್ನು ಭಕ್ತನಾದ ಆತನಿಗೆ ಭಗವಂತನು ಪ್ರಸಾದಿಸುವನು. ಅಂತಹ ಲೋಕೈಕ ಬಂಧುವನ್ನು ಆಶ್ರಯಿಸಿದವನಿಗೆ, ಶರಣು ಹೊಂದಿದವನಿಗೆ ಅವನು ಕೈವಲ್ಯವನ್ನು ಪ್ರಸಾದಿಸಿ, ಮಹೋಪಕಾರವನ್ನು ಮಾಡಬಲ್ಲನು. ಆದ್ದರಿಂದ ಮಾತೃಭಕ್ತಿ, ಪಿತೃಭಕ್ತಿಗಳ ಜೊತೆ ಭಗವದ್ಭಕ್ತಿಯನ್ನು ವಿಶೇಷವಾಗಿ ಅಳವಡಿಸಿಕೊಳ್ಳಬೇಕು.

'ವೇದ್ಯಂ'- ಎಂದು ಹೇಳಿರುವುದರಿಂದ ಈ ಪ್ರಪಂಚದಲ್ಲಿ ಅನೇಕ ವಸ್ತುಗಳಿದ್ದಾಗ್ಯೂ ಮುಖ್ಯವಾಗಿ ತಿಳಿದುಕೊಳ್ಳಬೇಕಾಗಿರುವ ವಸ್ತು ಆ ಪರಮಾತ್ಮನೇ ಎನ್ನುವುದು ಸ್ಪಷ್ಟವಾಗುತ್ತದೆ. ಯಾವುದನ್ನು ತಿಳಿದುಕೊಂಡರೆ ಜೀವಿಗೆ ಆತ್ಯಂತಿಕ ಶಾಂತಿ, ಜನ್ಮರಾಹಿತ್ಯ ಒದಗುವುದೋ ಅಂತಹುದನ್ನೇ ತಿಳಿದುಕೊಳ್ಳಬೇಕು. ಅದು ಪರಮಾತ್ಮವಸ್ತು. ಎಲ್ಲವನ್ನೂ ತಿಳಿದುಕೊಂಡು ಆ ಪರಮಾತ್ಮನನ್ನು ತಿಳಿದುಕೊಳ್ಳದಿದ್ದರೆ ಮನುಜನು ಯಾವುದನ್ನೂ ತಿಳಿಯದಂಥವನೇ ಆಗುವನು. ಆತನನ್ನು ತಿಳಿದುಕೊಂಡರೆ ದೃಶ್ಯವಸ್ತುಗಳನ್ನು ತಿಳಿದುಕೊಳ್ಳದಿದ್ದರೂ ಸಮಸ್ತವನ್ನೂ ತಿಳಿದಂಥವನೇ ಆಗುವನು.

'ಓಂಕಾರಃ'- ಓಂಕಾರವು (ಪ್ರಣವ) ಭಗವಂತನ ನಾಮವಾದುದರಿಂದ ಅದನ್ನು ಉಚ್ಚರಿಸಿ ಅದರ ಅರ್ಥವನ್ನು ಮನನ ಮಾಡಿಕೊಂಡರೆ ಅದ್ಭುತ ಫಲಗಳು ಬಂದೊದಗುವುವು. ಮಂತ್ರಗಳೆಲ್ಲವುಗಳಲ್ಲಿ ಪ್ರಣವಮಂತ್ರವು ಶ್ರೇಷ್ಠವಾದುದಾಗಿದೆ.

ಈ ಪ್ರಕಾರವಾಗಿ ಜಗತ್ತಿನಲ್ಲಿ ಸಮಸ್ತವು ಭಗವತ್ಸ್ವರೂಪವೇ ಎಂದು ತಿಳಿದು ಭಕ್ತಿಭಾವವನ್ನು ಹೊಂದಿರಬೇಕು.

ಪ್ರ : ಈ ಪ್ರಪಂಚದಲ್ಲಿ ಸರ್ವರಿಗೆ ತಂದೆ, ತಾಯಿ, ತಾತ, ಸಂರಕ್ಷಕನಾರು?

ಉ : ಪರಮಾತ್ಮನೇ.

ಪ್ರ : ಈ ಪ್ರಪಂಚದಲ್ಲಿ ತಿಳಿದುಕೊಳ್ಳಲೇಬೇಕಾದದ್ದು ಏನು?

ಉ : ಪರಮಾತ್ಮ

ಪ್ರ : ಎಲ್ಲಕ್ಕಿಂತ ಪವಿತ್ರವಾದುದೇನು?

ಉ : ಪರಮಾತ್ಮ

ಪ್ರ : ಇನ್ನೂ ವಿಶೇಷವಾಗಿ ಯಾವ ರೀತಿಯಲ್ಲಿ ಪರಮಾತ್ಮನು ಬೆಳಗುತ್ತಿದ್ದಾನೆ?

ಉ : ಪ್ರಣವ (ಓಂಕಾರ)ರೂಪದಲ್ಲಿ, ವೇದಗಳ ರೂಪದಲ್ಲಿ ಬೆಳಗುತ್ತಿದ್ದಾನೆ.

**೧೮. ಗತಿರ್ಭರ್ತಾ ಪ್ರಭುಸ್ಸಾಕ್ಷೀ ನಿವಾಸಶ್ಶರಣಂ ಸುಹೃತ್**
**ಪ್ರಭವಃ ಪ್ರಲಯಃ ಸ್ಥಾನಂ ನಿಧಾನಂ ಬೀಜಮವ್ಯಯಮ್**

**ಅರ್ಥ:** ಗತಿಃ=ಪರಮಲಕ್ಷ್ಯವು; ಭರ್ತ=ಧರಿಸುವವನು; ಪ್ರಭುಃ=ಪ್ರಭು (ನಿಯಾಮಕನು); ಸಾಕ್ಷೀ=ಸಾಕ್ಷಿಯು; ನಿವಾಸಃ=ಪ್ರಾಣಿಗಳ ನಿವಾಸ; ಶರಣಂ=ದುಃಖ ದೂರಮಾಡುವವನು; ಸುಹೃತ್=ಪ್ರತಿಫಲವನ್ನು ಕೋರದೆ ಹಿತವನ್ನು ಮಾಡುವವನು; ಪ್ರಭವಃ ಸ್ಥಾನಂ ಪ್ರಲಯಃ=ಸೃಷ್ಟಿ ಸ್ಥಿತಿ ಲಯಗಳಿಗೆ ಕಾರಣವಾದವನು; ನಿಧಾನಂ=ನಿಕ್ಷೇಪವಾಗಿ; ಅವ್ಯಯಂ= ನಾಶರಹಿತವಾದ; ಬೀಜಂ=ಬೀಜ (ಮೂಲಾಕಾರ) (ನಾನೇ ಆಗಿದ್ದೇನೆ).

**ತಾ||** ಪರಮ ಲಕ್ಷ್ಯವು, ಧರಿಸುವವನು, ಪ್ರಭು, ಸಾಕ್ಷಿ, ಪ್ರಾಣಿಗಳ ನಿವಾಸವು, ಶರಣು ನೀಡುವವನು; ಹಿತವನ್ನು ಬಯಸುವವನು, ಸೃಷ್ಟಿ ಸ್ಥಿತಿ ಲಯಕರ್ತನು; ನಿಕ್ಷೇಪವು (ಇರತಕ್ಕ ಸ್ಥಳ); ನಾಶರಹಿತವಾದ ಬೀಜ(ಮೂಲ ಕಾರಣ)ವು ನಾನೇ ಆಗಿದ್ದೇನೆ.

**ವ್ಯಾಖ್ಯೆ:** 'ಗತಿಃ'- ಜೀವಿಗಳಿಗೆ ಪರಮಗತಿ ಹಾಗು ಪರಮ ಪ್ರಾಪ್ಯಸ್ಥಾನ ಪರಮಾತ್ಮನೇ. ಆತ್ಮೇತರವಾದುದೆಲ್ಲವೂ ನಶ್ವರವಾದುದರಿಂದ ಸದ್ವಸ್ತುವಾದ ಶಾಶ್ವತ ಆತ್ಮವೇ ಸಮಸ್ತ ಜೀವಿಗಳಿಗೆ ಪರಮಗತಿಯಾಗಿದೆ.

'ಭರ್ತಾ'- ಸರ್ವರನ್ನು ಧರಿಸುವವನು, ಪೋಷಿಸುವವನು ಪರಮಾತ್ಮನೇ. ಆದ್ದರಿಂದ ಆತನು ಜಗದ್ಭರ್ತಾ. ಸ್ತ್ರೀಯರಿಗೆ, ಪುರುಷರಿಗೆ, ಸರ್ವರಿಗೆ 'ಭಗವಂತ'ನು ಭರ್ತ (ಧರಿಸುವವನು) ಆಗಿದ್ದಾನೆ. ಸ್ತ್ರೀಯರು ತಮ್ಮ ಪತಿ ಸೇವೆ ಮಾಡುತ್ತಿದ್ದರೂ ಜಗತ್ಪತಿಯಲ್ಲಿಯೂ ಅನನ್ಯ ಭಕ್ತಿಯನ್ನು ಹೊಂದಿರಬೇಕು. ವೈಧವ್ಯವನ್ನು ಹೊಂದಿದ ಸ್ತ್ರೀಯರು ದುಃಖದಲ್ಲಿ ಕಾಲಕಳೆಯದೆ ಧೈರ್ಯವಹಿಸಿ ಪರಮಾತ್ಮನನ್ನೇ ತಮ್ಮ ಪತಿಯೆಂದು ಭಾವಿಸಿ, ಧ್ಯಾನಿಸಿ ಸೇವಿಸಬೇಕು.

'ಪ್ರಭುಃ'- ಪರಮಾತ್ಮನು ಲೋಕೈಕ ಪ್ರಭು. ಮಹಾಚಕ್ರವರ್ತಿ,ವಿಶ್ವ ಸಾಮ್ರಾಟ್, ಬ್ರಹ್ಮಾಂಡ ನಾಯಕನು. ಆದ್ದರಿಂದ ಚಿಕ್ಕ ಚಿಕ್ಕ ರಾಜ್ಯಗಳಿಗೆ, ಗ್ರಾಮಗಳಿಗೆ, ಪ್ರಾಂತಗಳಿಗೆ ಅಷ್ಟೇಕೆ ಭೂಲೋಕಕ್ಕೆಲ್ಲಾ ಪ್ರಭುವಾಗಿದ್ದರೂ ಗರ್ವಿಸದೆ ಆ ಮಹಾಪ್ರಭುವಲ್ಲಿ ಭಕ್ತಿಯನ್ನು ಹೊಂದಿರುವುದು ಶ್ರೇಯಸ್ಕರ.

'ಸಾಕ್ಷಿ'- ಭಗವಂತನು ಸರ್ವಜಗತ್ಸಾಕ್ಷಿ - ಜನರು ಮಾಡುವ ಪುಣ್ಯ ಪಾಪಗಳನ್ನು ಸಾಕ್ಷಿಯಾಗಿ ಗಮನಿಸುತ್ತಿದ್ದಾನೆ. ಆದ್ದರಿಂದ ಆಚರಣೆಯಲ್ಲಿ ಜನರು ಬಹಳ ಜಾಗರೂಕರಾಗಿದ್ದು ಧರ್ಮ ಮಾರ್ಗವನ್ನೇ ಪಾಲಿಸಬೇಕು.

'ನಿವಾಸಃ'- ಸರ್ವ ಜೀವಿಗಳಿಗೆ ಭಗವಂತನೇ ನಿವಾಸ ಏಕೆಂದರೆ ಬ್ರಹ್ಮಾಂಡಗಳೆಲ್ಲವೂ ಆತನ ಉದರದಲ್ಲಿಯೇ ಇವೆ. ಜನರು ತಮ್ಮ ನಿವಾಸವೇನು ಎಂದರೆ ಮನೆ, ಬಾಗಿಲು, ಊರು ಎಂದು ಹೇಳಿಕೊಳ್ಳುವರು. ಆದರೆ ವಾಸ್ತವವಾಗಿ ಈ ಸಮಸ್ತವೂ ಯಾವುದರಿಂದ ನಡೆಯುತ್ತಿದೆಯೋ ನಿಂತಿದೆಯೋ, ಆ ಪರಮಾತ್ಮನೇ ಅವರ ನಿವಾಸ.

'ಶರಣಂ'- ಭಗವಂತನೇ ಪರಮ ಶರಣ್ಯ. ನಶ್ವರ ಪ್ರಾಪಂಚಿಕ ವಸ್ತುಗಳನ್ನು ಶರಣು ಹೊಂದಿದರೆ ಏನು ಪ್ರಯೋಜನ? ಶಾಶ್ವತ ಮೋಕ್ಷ ಫಲವನ್ನು ಕೊಡುವ ಸರ್ವೇಶ್ವರನನ್ನೇ ಶರಣು ಹೊಂದಬೇಕು.

'ಸುಹೃತ್'- ಪರಮಾತ್ಮ ಸರ್ವರಿಗೂ ಪ್ರಾಣಮಿತ್ರನು. ಪ್ರತಿಫಲವನ್ನು ಕೋರದೆ ಒಳ್ಳೆಯದು ಮಾಡುವವನು. ಪ್ರಾಪಂಚಿಕ ಮಿತ್ರರ ಸಂಬಂಧ ಈ ದೇಹದಿಂದ ಮುಗಿದು ಹೋಗುವುದು. ಆದರೆ ಶಾಶ್ವತ ಮಿತ್ರನಾದ ಭಗವಂತನ ಸಂಬಂಧ ಎಲ್ಲಾ ಕಾಲಗಳಲ್ಲಿಯೂ ಇರುವುದು. ಆದ್ದರಿಂದ ಆತನ ಮೈತ್ರಿಯನ್ನು ಸಂಪಾದಿಸುವುದು ಅತ್ಯುತ್ತಮ.

'ಪ್ರಭವಃ ಪ್ರಲಯಃ ಸ್ಥಾನಂ.'- ಜಗತ್ತಿನ ಸೃಷ್ಟಿ ಸ್ಥಿತಿ ಲಯಕಾರಕನು ಆ ಪರಮಾತ್ಮನೇ. ಏಕೆಂದರೆ ಆತನ ಸನ್ನಿಧಾನದಿಂದ ಈ ಸಮಸ್ತ ಪ್ರಪಂಚವು ಅಯಸ್ಕಾಂತದಿಂದ ಆಕರ್ಷಿತಗೊಂಡ ಸೂಜಿಯಂತೆ ಕ್ರಿಯಾವಂತವಾಗುವುದು.

'ನಿಧಾನಂ'- ಭಗವಂತನು ಸರ್ವಜೀವಿಗಳ ನಿಕ್ಷೇಪ (Store house). ಏಕೆಂದರೆ ಪ್ರಳಯ ಕಾಲದಲ್ಲಿ ಸಮಸ್ತವೂ ಆತನಲ್ಲಿಯೇ ಸುಪ್ತವಾಗುವುದು.

'ಬೀಜಮವ್ಯಯಮ್'- ಸಮಸ್ತ ಜಗತ್ತಿಗೆ ಸರ್ವ ಪ್ರಾಣಿಗಳಿಗೆ ಬೀಜ ಸ್ವರೂಪನು ಹಾಗು ಕಾರಣಭೂತನು ಪರಮಾತ್ಮನೇ ಆದ್ದರಿಂದ ಪ್ರತಿಜೀವಿಯು ತಾನು ಯಾವ ಕುಲದಲ್ಲಿ ಹುಟ್ಟಿದ್ದರೂ, ಯಾವ ಜಾತಿಯಲ್ಲಿ ಜನಿಸಿದ್ದರೂ, ಸ್ತ್ರೀಯಾದರೂ, ಪುರುಷನಾದರೂ, ತನ್ನ ಜನ್ಮಸ್ಥಾನ, ಗೋತ್ರ, ತವರು ಆ ಪರಮಾತ್ಮನೇ ಎನ್ನುವ ವಿಶ್ವಾಸಹೊಂದಿ ಧೈರ್ಯದಿಂದಿರಬೇಕು. ತಾನು ಅಲ್ಪನೆಂದು, ಶಕ್ತಿ ಹೀನನೆಂದು ದುರ್ಬಲನೆಂದು ಯಾವಾಗಲೂ ತಿಳಿಯ ಬಾರದು. ಮತ್ತೆ ವೃಕ್ಷ ಬೀಜಕ್ಕಿಂತ ಬೇರೆಯಲ್ಲ. ಹಾಗೆಯೇ ಜೀವಿಯು ತನ್ನ ಬೀಜವಾದ (ಕಾರಣವಾದ) ಪರಮಾತ್ಮನಿಗಿಂತ ಬೇರೆಯಲ್ಲ. ಆದ್ದರಿಂದ ಜೀವಿಯು ತನ್ನ ಉಪಾಧಿ ಎಷ್ಟು ಅಲ್ಪವಾಗಿದ್ದರೂ ತನ್ನ ಮೂಲ (ಬೀಜ) ವಾದ ಪರಮಾತ್ಮನನ್ನು ಸ್ಮರಿಸುತ್ತಾ ಮಹಾ ಧೈರ್ಯವಂತನಾಗಿರಬೇಕು. **'ಅವ್ಯಯಂ ಬೀಜಂ'** ಎಂದು ಹೇಳಿರುವುದರಿಂದ ಆ ಪರಮ ಕಾರಣ ನಾಶರಹಿತವಾದುದೆಂದು ಸ್ಪಷ್ಟವಾಗುತ್ತದೆ.

ಪ್ರ : ಜೀವಿಗಳಿಗೆ ಪರಮಗತಿ ಯಾವುದು? ಸರ್ವರಿಗೂ ಭರ್ತ ಯಾರು? ನಿವಾಸ ಯಾವುದು? ಸಾಕ್ಷಿ ಯಾರು? ಶರಣ ಹಾಗು ಮಿತ್ರನು ಯಾರು? ಸೃಷ್ಟಿ ಸ್ಥಿತಿ ಲಯಕರ್ತನಾರು? ಸಮಸ್ತಕ್ಕೆ ನಿಕ್ಷೇಪವೇನು? ಬೀಜವೇನು?

ಉ : ಪರಮಾತ್ಮನೇ.

**೧೯. ತಪಾಮ್ಯಹಮಹಂ ವರ್ಷಂ ನಿಗೃಹ್ಣಾಮ್ಯುತ್ಸೃಜಾಮಿ ಚ**
**ಅಮೃತಂ ಚೈವ ಮೃತ್ಯುಶ್ಚ ಸದಸಚ್ಚಾಹಮರ್ಜುನ**

**ಅರ್ಥ:** ಅರ್ಜುನ=ಓ ಅರ್ಜುನಾ! ಅಹಂ=ನಾನು; ತಪಾಮಿ=(ಸೂರ್ಯ ಕಿರಣಗಳಿಂದ) ಬಿಸಿಲುಂಟುಮಾಡುತ್ತಿದ್ದೇನೆ; ಅಹಂ=ನಾನು; ವರ್ಷಂ= ಮಳೆಯನ್ನು; ಉತ್ಸೃಜಾಮಿ=ಸುರಿಸುತ್ತಿದ್ದೇನೆ; ನಿಗೃಹ್ಣಾಮಿ ಚ=(ಮಳೆಯನ್ನು) ನಿಲ್ಲಿಸು ತ್ತಿದ್ದೇನೆ; ಅಮೃತಂ ಚ=ಮರಣ ರಾಹಿತ್ಯವು; ಮೃತ್ಯುಃ ಚ=ಮರಣವು; ಸತ್=ಸದ್ವಸ್ತುವು; ಅಸತ್ ಚ= ಅಸದ್ವಸ್ತುವು; ಅಹಂ ಏವ (ಅಸ್ಮಿ)=ನಾನೇ (ಆಗಿದ್ದೇನೆ).

**ತಾ||** ಓ ಅರ್ಜುನಾ! ನಾನು (ಸೂರ್ಯಕಿರಣಗಳಿಂದ) ಬಿಸಿಲುಂಟುಮಾಡು ತ್ತಿದ್ದೇನೆ. ಮಳೆಗರೆಯುತ್ತಿದ್ದೇನೆ. ಮಳೆಯನ್ನು ನಿಲ್ಲಿಸುತ್ತಿದ್ದೇನೆ. ಮರಣ

ರಾಹಿತ್ಯವು (ಮೋಕ್ಷವು) ಹಾಗು ಮರಣವೂ ನಾನೇ ಆಗಿದ್ದೇನೆ. ಹಾಗೆಯೇ ಸದ್ವಸ್ತುವು, ಅಸದ್ವಸ್ತುವೂ ನಾನೇ (ಆಗಿದ್ದೇನೆ).

**ವ್ಯಾಖ್ಯೆ:** ಸಮಸ್ತ ಜಗತ್ತಿಗೆ, ಸಮಸ್ತ ಜಗತ್ಕ್ರಿಯೆಗಳಿಗೆ ಆಧಾರಭೂತನು ಪರಮಾತ್ಮನೇ ಆದುದರಿಂದ ಸರ್ವವೂ ಆತನಿಂದಲೇ ನಡೆಯುತ್ತಿದೆಯೆಂದು ಇಲ್ಲಿ ಹೇಳಲಾಗಿದೆ. ದೃಷ್ಟಾಂತಕ್ಕೆ ಇಲ್ಲಿ ಮೂರು ಕ್ರಿಯೆಗಳನ್ನು ಉದಾಹರಿಸಲಾಗಿದೆ. ೧ ಬಿಸಿಲಿನ ತಾಪ ೨) ಮಳೆ ಬೀಳುವ ಕ್ರಿಯೆ ೩) ಮಳೆ ನಿಲ್ಲುವ ಕ್ರಿಯೆಗಳಿಗೆ ಆತನೇ ಕಾರಣ. ಆದ್ದರಿಂದ ಅತಿವೃಷ್ಟಿಯಾಗಲಿ, ಕ್ಷಾಮವಾಗಲಿ ಇನ್ನೂ ಬೇರೆ ಯಾವುದೇ ಆಪತ್ತು ಸಂಭವಿಸಿದಾಗ ಅವುಗಳ ನಿವಾರಣೆಗೆ ಸರ್ವೇಶ್ವರನನನ್ನು ಬಿಟ್ಟರೆ ಜೀವಿಗಳಿಗೆ ಬೇರೆ ಶರಣ್ಯವಿಲ್ಲವೆಂದು ಸ್ಪಷ್ಟವಾಗುತ್ತದೆ. ಹಗ್ಗ ಹಾಗು ಸರ್ಪಗಳ ಭ್ರಾಂತಿಯ ದೃಷ್ಟಾಂತದಲ್ಲಿ ಸರ್ಪವು ಹಗ್ಗಕ್ಕಿಂತ ಹೇಗೆ ಭಿನ್ನವಲ್ಲವೋ ಹಾಗೆ ಆಭಾಸ ರೂಪವಾಗಿರುವ ಈ ಜಗತ್ತು ಅಧಿಷ್ಠಾನನಾದ ಪರಮಾತ್ಮನಿಗಿಂತ ಬೇರೆಯಲ್ಲ. ಆದ್ದರಿಂದಲೇ ಪರಮಾರ್ಥ ದೃಷ್ಟಿಯಲ್ಲಿ ಅಮೃತ, ಮೃತ್ಯು, ಸತ್ತು ಅಸತ್ತುಗಳೆಲ್ಲವನ್ನೂ ಒಂದೇ ದೈವ ಸ್ವರೂಪವೆಂದು ಇಲ್ಲಿ ವರ್ಣಿಸಲಾಗಿದೆ. ವಾಸ್ತವವಾಗಿ ಭಗವಂತನು ಸದ್ವಸ್ತುವೇ ಆಗಲಿ ಅಸದ್ವಸ್ತುವಲ್ಲವೆಂದೂ ಅಮೃತ ಸ್ವರೂಪನೇ ಆಗಲಿ ಮೃತ ಸ್ವರೂಪನಲ್ಲವೆಂದು ಗ್ರಹಿಸಬೇಕು.

ಪ್ರ : ಗ್ರೀಷ್ಮ, ಮಳೆ ಹಾಗು ಕ್ಷಾಮ ಯಾರಿಂದ ಉಂಟಾಗುತ್ತವೆ?

ಉ : ಪರಮಾತ್ಮನಿಂದ.

ಅ: ಕಾಮ್ಯ ಭಾವನೆಯಿಂದ ಸ್ವರ್ಗಾದಿ ಭೋಗಗಳಿಗಾಗಿ ಯಜ್ಞಾದಿಗಳನ್ನು ಮಾಡುವುದು ಉತ್ತಮವಲ್ಲವೆಂದೂ, ಅಂತಹವರು ಜನನ ಮರಣಗಳಿಂದ ತಪ್ಪಿಸಿಕೊಳ್ಳಲಾರರೆಂದು ಎರಡು ಶ್ಲೋಕಗಳ ಮೂಲಕ ತಿಳಿಸಲಾಗಿದೆ.

**೨೦. ತ್ರೈವಿದ್ಯಾ ಮಾಂ ಸೋಮಪಾಃ ಪೂತಪಾಪಾ**
**ಯಜ್ಞೈರಿಷ್ಟ್ವಾ ಸ್ವರ್ಗತಿಂ ಪ್ರಾರ್ಥಯಂತೇ**
**ತೇ ಪುಣ್ಯಮಾಸಾದ್ಯ ಸುರೇಂದ್ರಲೋಕ**
**ಮಶ್ನಂತಿ ದಿವ್ಯಾನ್ದಿವಿ ದೇವಭೋಗಾನ್**

**ಅರ್ಥ:** ತ್ರೈವಿದ್ಯಾಃ=ಮೂರು ವೇದಗಳನ್ನು ಅಧ್ಯಯನ ಮಾಡಿದವರು; ಸೋಮಪಾಃ=ಸೋಮಪಾನ ಮಾಡಿದವರು; ಪೂತ ಪಾಪಾಃ= ಪಾಪಕಲ್ಮಷಗಳು ತೊಲಗಿದವರು; ಯಜ್ಞೈ ಹಿ=ಯಜ್ಞಗಳಿಂದ; ಮಾಂ=ನನ್ನನ್ನು; ಇಷ್ಟ್ವಾ= ಪೂಜಿಸಿ; ಸ್ವರ್ಗತಿಂ=ಸ್ವರ್ಗ ಪ್ರಾಪ್ತಿಯನ್ನು; ಪ್ರಾರ್ಥಯಂತೇ= ಬೇಡಿಕೊಳ್ಳುತ್ತಿದ್ದಾರೆ; ತೇ=ಅವರು; ಪುಣ್ಯಂ=ಪುಣ್ಯಫಲವಾದ (ಇಲ್ಲವೆ) ಪವಿತ್ರವಾದ; ಸುರೇಂದ್ರ ಲೋಕಂ=ದೇವೇಂದ್ರ ಲೋಕವನ್ನು; ಆಸಾದ್ಯ= ಹೊಂದಿ; ದಿವಿ=ಆ ಸ್ವರ್ಗದಲ್ಲಿ; ದಿವ್ಯಾನ್=ದಿವ್ಯಗಳಾದ; ದೇವಭೋಗಾನ್= ದೇವ ಭೋಗಗಳನ್ನು; ಅಶ್ನಂತಿ=ಅನುಭವಿಸುತ್ತಾರೆ.

**ತಾ||** ಮೂರು ವೇದಗಳನ್ನು ಅಧ್ಯಯನ ಮಾಡಿದವರು, ಕರ್ಮಕಾಂಡವನ್ನು ಸಕಾಮ ಭಾವದಿಂದ ಆಚರಿಸುವವರು, ಸೋಮಪಾನ ಮಾಡುವವರಾಗಿದ್ದು ಪಾಪಕಲ್ಮಷಗಳು ಇಲ್ಲದ ಮನುಜರು, ಯಜ್ಞಗಳಿಂದ ನನ್ನನ್ನು ಪೂಜಿಸಿ ಸ್ವರ್ಗಕ್ಕಾಗಿ ಪ್ರಾರ್ಥಿಸುತ್ತಿದ್ದಾರೆ. ಅವರು (ಮರಣಾನಂತರ) ಪುಣ್ಯಫಲವಾದ ದೇವೇಂದ್ರ ಲೋಕವನ್ನು ಹೊಂದಿ ಅಂತಹ ಸ್ವರ್ಗದಲ್ಲಿ ದಿವ್ಯ ದೇವಭೋಗಗಳನ್ನು ಅನುಭವಿಸುತ್ತಾರೆ.

**ವ್ಯಾಖ್ಯೆ:** ವೇದಗಳನ್ನು ಅಭ್ಯಸಿಸಿದರೂ ಕೆಲವರು ಅದರಲ್ಲಿ ಹೇಳಲ್ಪಟ್ಟ ಸಕಾಮಕರ್ಮಗಳನ್ನೇ (ಪೂರ್ವಭಾಗಗಳನ್ನೇ) ಅವಲಂಬಿಸಿ ಯಜ್ಞಯಾಗಾದಿಗಳ ದ್ವಾರ ಭಗವಂತನನ್ನು ಅರ್ಚಿಸಿ ತತ್ಫಲಿತವಾಗಿ ಸ್ವರ್ಗಾದಿ ಪುಣ್ಯ ಲೋಕಗಳನ್ನು ಹೊಂದುತ್ತಿದ್ದಾರೆ. ಅಲ್ಲಿ ಪುಣ್ಯ ಫಲವನ್ನು ಅನುಭವಿಸಿದ ನಂತರ ಮತ್ತೆ ಭೂಲೋಕದಲ್ಲಿ ಜನ್ಮಿಸುತ್ತಿದ್ದಾರೆ. ಅಂತಹ ಸಕಾಮ ಭಕ್ತರ ಬಗ್ಗೆ ಇಲ್ಲಿ ಹೇಳಲಾಗಿದೆ. ಇವರು ಮೋಕ್ಷಕ್ಕೆ ಪ್ರಯತ್ನಿಸದೆ ಸ್ವರ್ಗಾದಿ ಭೋಗಗಳಿಗೆ ಮಾತ್ರ ಪ್ರಯತ್ನಿಸುವರು. ಆದ್ದರಿಂದ ಪರಮಾರ್ಥ ದೃಷ್ಟಿಯಲ್ಲಿ ಇವರು ಪೂರ್ಣವಿಕಾಸವನ್ನು ಹೊಂದಿದವರಲ್ಲ. ಏಕೆಂದರೆ, ಅದು ಸ್ವರ್ಗವಾದರೂ, ಇಲ್ಲವೆ ಬೇರೆ ಪುಣ್ಯ ಲೋಕವಾದರೂ ಪುನರಾವೃತ್ತಿ ಉಳ್ಳದ್ದೇ ಎಂದು ಈಗಾಗಲೇ ಭಗವಂತನು ಹೇಳಿದ್ದಾನೆ.

**ಆಬ್ರಹ್ಮಭುವನಾಲ್ಲೋಕಾಃ ಪುನರಾವರ್ತಿನೋಽರ್ಜುನ**

ಆದ್ದರಿಂದ ಅಂತಹವರು ಜನನ ಮರಣ ಸಂಸಾರ ಚಕ್ರದಿಂದ ತಪ್ಪಿಸಿಕೊಂಡಂತಾಗುವುದಿಲ್ಲ. ಚಿನ್ನದ ಸಂಕೋಲೆಗಳಿಂದ ಬಂಧಿಸಲ್ಪಟ್ಟಂತವರು ಎಂದು ಹೇಳಬಹುದು. ಏಕೆಂದರೆ ಅವರು ಸಂಸಾರ ಕಾರಾಗೃಹದಲ್ಲಿ ಬಿದ್ದವರೇ ಆಗಿರುವರು. ಯಾವುದು ಜನನ ಮರಣಗಳಿಂದ ತಪ್ಪಿಸಬಲ್ಲದೋ ಅದು ಮಾತ್ರ ಸರ್ವರಿಗೂ ಉತ್ತಮವಾದುದು ಮುಮುಕ್ಷುಗಳಿಗೆ ಆಚರಣೀಯವಾದುದು. ಅದು ಆತ್ಮಪದ, ಬ್ರಹ್ಮಪದ.

**ಮಾಮುಪೇತ್ಯತು ಕೌಂತೇಯ ಪುನರ್ಜನ್ಮ ನ ವಿದ್ಯತೇ**

ಅಂತಹ ಬ್ರಹ್ಮಪದವಿಯನ್ನು ಹೊಂದಿದವರಿಗೆ ಇನ್ನು ಜನ್ಮವಿಲ್ಲ; ಸಂಸ್ಕೃತಿಯಿಲ್ಲ (ಹಿಂದಿನ ಗೀಳು ಇಲ್ಲ). ಆದ್ದರಿಂದ ಪುನರಾವೃತ್ತಿರಹಿತವಾದ ಅಂತಹ ಪರಮಾತ್ಮ ಪದವಿಯನ್ನು ಹೊಂದಲು ಯತ್ನಿಸಬೇಕೇ ಹೊರತು ಕ್ಷಯಶೀಲವಾದ ಪುನರಾವೃತ್ತಿ ಸಹಿತವಾದ ಸ್ವರ್ಗಾದಿ ಲೋಕಗಳನ್ನಲ್ಲ. ವೇದಗಳಲ್ಲಿ ಸಕಾಮ, ನಿಷ್ಕಾಮ ಕರ್ಮಗಳೆರಡನ್ನು ಕುರಿತು ಹೇಳಲ್ಪಟ್ಟಿದ್ದರೂ, ಅವರೆಲ್ಲರೂ ಸಕಾಮಕರ್ಮಗಳನ್ನೇ ಅವಲಂಬಿಸಿ ಸಂಸಾರದುಃಖವನ್ನು ಕೊಂಡು ತಂದುಕೊಳ್ಳುತ್ತಿದ್ದಾರೆ. ಯಜ್ಞಾದಿ ಪುಣ್ಯ ಕಾರ್ಯಗಳಿಂದ ಅವರ ಪಾಪವು ಸ್ವಲ್ಪ ಕ್ಷಯಿಸುವುದು. ಆದರೆ ಆ ಪಾಪಕ್ಷಯವನ್ನು ಚಿತ್ತಶುದ್ಧಿಯ ದ್ವಾರ ಮೋಕ್ಷಾನ್ವೇಷಣೆಗೆ ಉಪಯೋಗಿಸಿದರೆ ಅವರು ಎಷ್ಟೋ ಮಹತ್ತರವಾದ ಶ್ರೇಯವನ್ನು ಹೊಂದಬಲ್ಲರು. ಆದರೆ ಅವರು ಹಾಗೆ ಮಾಡದೆ ಮತ್ತೆ ನಶ್ವರವಾದ ಸ್ವರ್ಗಾದಿ ಭೋಗಗಳನ್ನೇ ಇಚ್ಛಿಸುವರು. ಅಂತಹ ಸಕಾಮ ದೃಷ್ಟಿಯುಳ್ಳವರ ವಿಧಾನವನ್ನು ಗೀತಾಚಾರ್ಯನು ಎರಡನೆಯ ಅಧ್ಯಾಯದಲ್ಲಿ ಖಂಡಿಸಿರುವನು.*

ಸ್ವರ್ಗ ಭೋಗಗಳು ಭೂಲೋಕ ಭೋಗಗಳಿಗಿಂತ ಸ್ವಲ್ಪ ಉನ್ನತವಾಗಿದ್ದರೂ, ಅವುಗಳಿಂದ ಸಂಸಾರ ಬಂಧ ನಿವಾರಣೆಯಾಗುವುದಿಲ್ಲವಾದ್ದರಿಂದ, ಮೋಕ್ಷಕ್ಕೆ ಪ್ರತಿ ಬಂಧಕವಾಗಿರುವುದರಿಂದ ವಿಜ್ಞುಗಳಿಗೆ ಅವು ಅಪೇಕ್ಷಿತವಲ್ಲ,

'ಪ್ರಾರ್ಥಯಂತೇ'- ಎಂದು ಹೇಳಿರುವುದರಿಂದ ಅವರು ಸ್ವರ್ಗಪದವಿಗೆ

---

*** ಕಾಮಾತ್ಮಾನಃ ಸ್ವರ್ಗಪರಾ ...........................................**
**........................... ಸಮಾಧೌ ನ ವಿಧೀಯತೆ----- (೨-೪೩ & ೪೪)**

ಎಷ್ಟೋ ಆಸಕ್ತಿಯಿಂದ ಪ್ರಾರ್ಥಿಸುತ್ತಿದ್ದಾರೆಂದು, ಅಭಿಲಾಷಿಸುತ್ತಿದ್ದಾರೆಂದು ತಿಳಿದುಬರುತ್ತದೆ. ಅಂತಹ ಪ್ರಾರ್ಥನೆಯನ್ನು ಭೋಗಗಳಿಗಾಗಿ ಅಲ್ಲದೆ ಯೋಗಕ್ಕಾಗಿ ಏನಾದರೂ ಮಾಡಿದ್ದರೆ ಮಾನವನು ಯಾವಾಗಲೋ ಮೋಕ್ಷವನ್ನು ಹೊಂದಿರುತ್ತಿದ್ದನು. ಆದ್ದರಿಂದ ಪ್ರಾರ್ಥನೆ ಮಾಡಬೇಕೆಂದುಕೊಂಡರೆ ಮೋಕ್ಷಕ್ಕಾಗಿ ಪ್ರಾರ್ಥಿಸಬೇಕೇ ಹೊರತು ಭೋಗಗಳಿಗಲ್ಲ. ಈ ಯಜ್ಞಯಾಗಾದಿಗಳನ್ನು, ಜನರನ್ನು ಆಧ್ಯಾತ್ಮಮಾರ್ಗದಲ್ಲಿ ನಡೆಸಲು ಹಾಗು ಅವರ ಪಾಪಾಚರಣೆಗಳನ್ನು ನಿವಾರಿಸಲು, ವೇದಗಳಲ್ಲಿ ಹೇಳಲಾಗಿದೆ. ಪುಣ್ಯದಲ್ಲಿ ಆಸಕ್ತಿಯುಂಟುಮಾಡಲು ಇವು ಸಹಕಾರಿಯಾಗುವುವು, ಆದರೆ ಇವು ಸಾಕಾಗುವುದಿಲ್ಲ. ಪುಣ್ಯ ಸಂಪಾದನೆಯಾಗುತ್ತಿದ್ದರೂ ಗಮ್ಯಸ್ಥಾನವಾದ ಪರಮಾತ್ಮನನ್ನು ಸೇರುವುದಕ್ಕೆ ಸಾಧನೆಗಳನ್ನು ಅಭಿವೃದ್ಧಿಗೊಳಿಸಿಕೊಳ್ಳುತ್ತಲೇ ಹೋಗಬೇಕು. ಆದ್ದರಿಂದ ಸಕಾಮಕರ್ಮವನ್ನು ದಾಟಿ ನಿಷ್ಕಾಮಕರ್ಮವನ್ನು ಇಂದಲ್ಲ ನಾಳೆ ಮನುಜನು ಕೈಹಿಡಿಯಲೇ ಬೇಕು. ಆ ಕೆಲಸ ಎಷ್ಟು ಶೀಘ್ರವಾಗಿ ನಡೆದರೆ ಅಷ್ಟು ಒಳ್ಳೆಯದು. ಆದ್ದರಿಂದಲೇ ಸಕಾಮಕರ್ಮಗಳನ್ನು, ಸ್ವರ್ಗಭೋಗಾದಿಗಳನ್ನು ಭಗವಂತನು ಗೀತೆಯಲ್ಲಿ ವಿಶದವಾಗಿ ವಿಮರ್ಶಿಸಿ ನಿಷ್ಕಾಮಕರ್ಮಾದಿಗಳನ್ನೇ ಪ್ರೋತ್ಸಾಹಿಸಿದನು.

ಪ್ರ : ಸಕಾಮಕರ್ಮರೂಪಗಳಾದ ಯಜ್ಞಯಾಗಾದಿಗಳನ್ನು ಆಚರಿಸುವುದರಿಂದ ಉಂಟಾಗುವ ಫಲಗಳೇನು?

ಉ : ಸ್ವರ್ಗಲೋಕ ಪ್ರಾಪ್ತಿ.

**೨೧ ತೇ ತಂ ಭುಕ್ತ್ವಾ ಸ್ವರ್ಗಲೋಕಂ ವಿಶಾಲಂ**
**ಕ್ಷೀಣೇ ಪುಣ್ಯೇಮರ್ತ್ಯಲೋಕಂ ವಿಶಂತಿ**
**ಏವಂ ತ್ರಯೀಧರ್ಮಮನುಪ್ರಪನ್ನಾಃ**
**ಗತಾಗತಂ ಕಾಮಕಾಮಾ ಲಭಂತೇ**

**ಅರ್ಥ:** ತೇ=ಅವರು; ತಂ=ಆ; ವಿಶಾಲಂ= ವಿಶಾಲವಾದ; ಸ್ವರ್ಗ-ಲೋಕಂ=ಸ್ವರ್ಗಲೋಕವನ್ನು; ಭುಕ್ತ್ವಾ=ಅನುಭವಿಸಿ; ಪುಣ್ಯೇ= ಪುಣ್ಯವು; ಕ್ಷೀಣೇ (ಸತಿ)= ನಶಿಸಿಹೋಗಲು; ಮರ್ತ್ಯಲೋಕಂ= (ಈ) ಮನುಷ್ಯ ಲೋಕವನ್ನು; ವಿಶಂತಿ= ಪ್ರವೇಶಿಸುತ್ತಿದ್ದಾರೆ; ಏವಂ=ಈ ಪ್ರಕಾರವಾಗಿ; ತ್ರಯೀಧರ್ಮಂ= ವೇದೋಕ್ತ ಧರ್ಮವನ್ನು (ಕರ್ಮವನ್ನು); ಅನುಪ್ರಪನ್ನಾಃ=(ಫಲಾಪೇಕ್ಷೆಯಿಂದ) ಅನುಷ್ಠಾನ ಮಾಡುವ; ಕಾಮಕಾಮಾಃ=ಕಾಮಾಭಿಲಾಷಿಗಳು (ವಿಷಯೇಚ್ಛೆ ಯುಳ್ಳವರು); ಗತಾಗತಂ=ಬಂದು ಹೋಗುವಂತಹ (ಜನನ ಮರಣಗಳನ್ನು); ಲಭಂತೇ=ಹೊಂದುತ್ತಿದ್ದಾರೆ;

**ತಾ॥** ಅವರು (ಸ್ವರ್ಗಾಭಿಲಾಷಿಗಳು) ವಿಶಾಲವಾದ ಸ್ವರ್ಗಲೋಕ ವನ್ನನುಭವಿಸಿ ಪುಣ್ಯವು ಕ್ಷಯಿಸಲು ಮತ್ತೆ ಮನುಷ್ಯ ಲೋಕದಲ್ಲಿ ಜನಿಸುತ್ತಿದ್ದಾರೆ. ಈ ಪ್ರಕಾರವಾಗಿ (ಸಕಾಮವಾಗಿ) ವೇದೋಕ್ತ ಕರ್ಮಗಳನ್ನು ಅನುಷ್ಠಿಸುವ ಆ ಭೋಗಾಭಿಲಾಷಿಗಳು ಗಮನಾಗಮನಗಳನ್ನು (ಜನನ ಮರಣಗಳನ್ನು) ಹೊಂದುತ್ತಾರೆ.

**ವ್ಯಾಖ್ಯೆ:** ಹಾಗೆ ಸಕಾಮವಾದ ವೇದೋಕ್ತವಾದ ಯಜ್ಞಯಾಗಾದಿಗಳನ್ನು ಆಚರಿಸುವವರು ಸ್ವರ್ಗಲೋಕವನ್ನು ಹೊಂದಿ ಅಲ್ಲಿಯ ದೈವಭೋಗಗಳನ್ನು ಅನುಭವಿಸಿ, ಪುಣ್ಯ ಕ್ಷಯಿಸಿದ ನಂತರ ಮತ್ತೆ ಭೂಲೋಕದಲ್ಲಿ ಹುಟ್ಟುತ್ತಿದ್ದಾರೆ. ಈ ರೀತಿ ಸಕಾರವಾಗಿ ಸಕಾಮಕರ್ಮಗಳನ್ನು ಶರಣು ಹೊಂದಿದ ಭೋಗಾಭಿಲಾಷಿಗಳು ಮತ್ತೆ ಮತ್ತೆ ಹುಟ್ಟಿ ಮರಣಿಸುವರೆಂದು ಹೇಳಲಾಗಿದೆ. ಪುಣ್ಯವಾಗಲಿ ಅಥವ ಪಾಪವಾಗಲಿ ಅನುಭವಿಸಿದಂತೆ ಕ್ಷೀಣಿಸುತ್ತಾ ಹೋಗುವುದು. ಇದರಿಂದ ಆ ಸ್ವರ್ಗಾದಿ ಲೋಕಗಳಲ್ಲಿ ಜೀವಿಗೆ ಶಾಶ್ವತ ಸ್ಥಾನವಿರಲು ಸಾಧ್ಯವಿಲ್ಲವೆಂದು ತಿಳಿಯುತ್ತದೆ. 'ವಿಶಾಲ'ವೆಂದು ಹೇಳಿರುವುದರಿಂದ ಆ ಸ್ವರ್ಗಲೋಕ ಭೂಲೋಕಕ್ಕಿಂತ ಸ್ವಲ್ಪ ದೊಡ್ಡದಾಗಿ ವಿಶೇಷವಾಗಿ ಇದ್ದರೂ ಅಷ್ಟುಮಾತ್ರದಿಂದ ಬರುವ ಲಾಭವೇನು? ಅಲ್ಲಿ ಮೋಕ್ಷ ಪ್ರಯತ್ನಕ್ಕೆ ಅವಕಾಶವಿಲ್ಲವಲ್ಲ. ಮೇಲಾಗಿ ಅಂತಹ ಭೋಗಾದಿಗಳು ಮೋಕ್ಷ ಪ್ರಾಪ್ತಿಗೆ ವಿರುದ್ಧ. ಸ್ವರ್ಗಾದಿಗಳೆಲ್ಲವೂ ಕರ್ಮಾನುಭವ ಲೋಕಗಳು. ಮೋಕ್ಷ ಪ್ರಯತ್ನ ಭೂಲೋಕದಲ್ಲಿ ಮಾತ್ರ ಸಾಧ್ಯವೆಂದೂ, ಮಾನವನಿಗೆ ಮಾತ್ರ ಅಂತಹ ಭಾಗ್ಯವೊದಗಿ ಬಂದಿದೆ ಎಂದೂ ಶಾಸ್ತ್ರಗಳು ಹೇಳುತ್ತವೆ. ಆದ್ದರಿಂದ ಈ ಅಮೂಲ್ಯ ಮಾನವ ಜೀವನವನ್ನು (ಜನನ ಮರಣ) ದುಃಖಗಳಿಂದ ಕೂಡಿದ ಸಂಸಾರಕ್ಕಲ್ಲದೆ ಮೋಕ್ಷಕ್ಕೆ ವಿನಿಯೋಗಿಸುವವನು ಧನ್ಯನು. ಇಲ್ಲದಿದ್ದರೆ ಮತ್ತೆ ಯಾವ ಲೋಕದಲ್ಲಿಯೂ ಆತನಿಗೆ ಇಂತಹ ಸದವಕಾಶ ಸಿಗಲಾರದು.

ವೇದೋಕ್ತ ಕರ್ಮವನ್ನು ಆಚರಿಸುವುದು ಒಳ್ಳೆಯದೇ ಆಗಲಿ ಸಕಾಮವಾಗಿ (ಫಲಾಪೇಕ್ಷೆಯಿಂದ) ಆಚರಿಸುವುದು ಉತ್ತಮವಲ್ಲ. ಆ ವೇದಧರ್ಮಗಳಲ್ಲಿ ಯಜ್ಞಯಾಗಾದಿ ಕರ್ಮಕಾಂಡ, ಉಪಾಸನಾಕಾಂಡ ಹಾಗು ಜ್ಞಾನಕಾಂಡಗಳು ಕ್ರಮವಾಗಿ, ಒಂದಕ್ಕಿಂತ ಮತ್ತೊಂದು ಉತ್ತಮವಾಗಿರುವುವು. ಸಕಾಮಯುಕ್ತವಾಗಿ ಭೋಗಾನುಭವಗಳಿಗಾಗಿ, ಆಚರಿಸುವ ಕರ್ಮಗಳಿಂದ ಜೀವಿಗೆ ಬಂಧ ವಿಮುಕ್ತಿಯಾಗಲೀ, ಪರಮೋನ್ನತಿಯಾಗಲೀ ಲಭ್ಯವಾಗುವುದಿಲ್ಲ. ಆದ್ದರಿಂದ ನಿಷ್ಕಾಮವಾಗಿ ದೈವಪ್ರಾಪ್ತಿಗಾಗಿ ಮಾತ್ರ ಕರ್ಮಗಳನ್ನು ಆಚರಿಸಬೇಕು.

*'ಗತಾಗತಂ ಕಾಮಕಾಮಾ ಲಭಂತೇ'* ಎಂದು ಹೇಳಿರುವುದರಿಂದ ಕೋರಿಕೆಗಳುಳ್ಳವರು ಕಾಮಕ್ಕೆ (ಭೋಗಕ್ಕೆ ದಾಸರಾದವರು ಜನನ ಮರಣಗಳನ್ನು ಹೊಂದುತ್ತಾ ಇದ್ದು ಈ ಸಂಸಾರ ಚಕ್ರದಿಂದ ತಪ್ಪಿಸಿಕೊಳ್ಳಲಾರರು ಎಂದು ಸ್ಪಷ್ಟವಾಗುತ್ತದೆ. ಈ ವಾಕ್ಯವನ್ನು ಮುಮುಕ್ಷುಗಳು ಸದಾ ಜ್ಞಾಪಕವಿಟ್ಟುಕೊಂಡು ಕೋರಿಕೆಗಳನ್ನು ಪೂರ್ತಿಯಾಗಿ ತ್ಯಜಿಸಬೇಕು. ಸಕಾಮ ಬುದ್ಧಿಯನ್ನು ತ್ಯಜಿಸಬೇಕು. ಈ ಪ್ರಪಂಚದಲ್ಲಿ ದುಃಖ ಕೋರುವವರು ಯಾರೂ ಇಲ್ಲ. ಜನನ ಮರಣಗಳನ್ನೂ ಇಚ್ಛಿಸುವುದಿಲ್ಲ. ಆದರೂ ಜನನ ಮರಣಗಳನ್ನುಂಟು ಮಾಡುವ ಕೆಲಸಗಳನ್ನೇ ಮಾಡುತ್ತಿರುವರು. ಆದ್ದರಿಂದ ಈ ಗಮನಾಗಮನಗಳಿಗೆ ಕಾರಣವೇನು? ವಿಷಯಲೋಲುಪತೆ, ಕಾಮ ಹಾಗು ಭೋಗಾಭಿಲಾಷೆಗಳು. 'ಕಾಮಕಾಮಿ'ಯು ಸಂಸಾರ ಚಕ್ರಕ್ಕೆ ಸಿಕ್ಕಿಕೊಂಡು ಗಮನಾಗಮನಗಳಿಗೆ ಆಹುತಿಯಾಗುವನು ಎಂದು ಭಗವಂತನು ನಿಸ್ಸಂದೇಹವಾದ ಹೇಳಿಕೆಯನ್ನಿತ್ತನು. ಆದ್ದರಿಂದ ಹುಟ್ಟು ಸಾವುಗಳಿಂದ ತಪ್ಪಿಸಿಕೊಳ್ಳಬೇಕು ಎನ್ನುವವರು ಈ ಕಾಮ, ಸ್ವರ್ಗಾದಿ ಭೋಗಾನುಭವಗಳು, ಹಾಗು ಕೋರಿಕೆಗಳಿಂದ ಬಹಳ ದೂರವಿರಬೇಕು. ಕಾಮವು ಮುಮುಕ್ಷುವಿನ ಘೋರ ಶತ್ರುವೆಂದು ಶ್ರೀಕೃಷ್ಣಮೂರ್ತಿ ಈಗಾಗಲೆ ಅನೇಕಬಾರಿ ಹೇಳಿದ್ದಾನೆ. ಆ ವಿಷಯವನ್ನೇ ಮತ್ತೆ ಸ್ಪಷ್ಟಪಡಿಸಲಾಗಿದೆ.

ಪ್ರ: ಯಜ್ಞಾದಿಗಳನ್ನು ಸಕಾಮವಾಗಿ ಆಚರಿಸುವವರು ಸ್ವರ್ಗವನ್ನು ಹೊಂದಿ ಅಲ್ಲಿ ಎಷ್ಟು ಕಾಲವಿರುವರು?

ಉ: ಪುಣ್ಯ ಕ್ಷಯಿಸುವವರೆಗೆ

ಪ್ರ: ನಂತರ (ಪುಣ್ಯಕ್ಷಯಿಸಿದ ನಂತರ) ಏನಾಗುವುದು?

ಉ: ಭೂಲೋಕದಲ್ಲಿ ಜನಿಸುವರು.

ಪ್ರ: ಕೋರಿಕೆಗಳನ್ನು ಹೊಂದಿರುವವರಿಗೆ ಹಾಗು ಭೋಗಾಭಿಲಾಷಿಗಳಿಗೆ ಉಂಟಾಗುವ ಫಲಗಳಾವುವು.

ಉ: ಜನನ ಮರಣಗಳು (ಗತಾಗತಂ)

ಪ್ರ: ಆದ್ದರಿಂದ ಜನನಮರಣಗಳಿಂದ ತಪ್ಪಿಸಿಕೊಳ್ಳಲು ಉಪಾಯವೇನು?

ಉ: ಕೋರಿಕೆಗಳನ್ನು ತ್ಯಜಿಸುವುದು, ಕಾಮವಿವರ್ಜನೆ, ವಿಷಯಾಪೇಕ್ಷೆ ಯಿಲ್ಲದಿರುವುದು.

ಪ್ರ: ಸ್ವರ್ಗಲೋಕ ಎಂತಹದು?

ಉ: ೧) ವಿಶಾಲವಾದದ್ದು ೨) ಭೋಗಾನುಭವದಿಂದ ಕೂಡಿರುವುದು. ೩) ಪುಣ್ಯಕ್ಷಯವಾಗುವವರೆಗೆ ಇರುವಂತಹದು.

**ಅ||** ನಿರ್ಮಲ ಭಕ್ತಿಯ ಫಲವನ್ನು ಹೇಳಲಾಗುತ್ತಿದೆ-

**೨೨ ಅನನ್ಯಾಶ್ಚಿಂತಯಂತೋ ಮಾಂ ಯೇ ಜನಾಃ ಪರ್ಯುಪಾಸತೇ**
**ತೇಷಾಂ ನಿತ್ಯಾಭಿಯುಕ್ತಾನಾಂ ಯೋಗಕ್ಷೇಮಂ ವಹಾಮ್ಯಹಮ್**

**ಅರ್ಥ:** ಯೇಜನಾಃ=ಯಾವ ಜನರು; ಅನನ್ಯಾಃ=ಇತರ ಭಾವಗಳಿಲ್ಲದ ವರಾಗಿ; ಮಾಂ=ನನ್ನನ್ನು; ಚಿಂತಯಂತಃ=ಚಿಂತಿಸುತ್ತ; ಪರ್ಯುಪಾಸತೇ=ಎಡೆಬಿಡದೆ ಧ್ಯಾನಿಸುತ್ತಿದ್ದಾರೋ; ತೇಷಾಂ=ಅಂತಹ; ನಿತ್ಯಾಭಿ ಯುಕ್ತಾನಾಮ್=ಸದಾ ನನ್ನಲ್ಲೇ ನಿಷ್ಠೆಯಿರುವವರ; ಯೋಗಕ್ಷೇಮಂ=ಯೋಗಕ್ಷೇಮಗಳನ್ನು; ಅಹಂ=ನಾನು; ವಹಾಮಿ=ವಹಿಸುತ್ತಿದ್ದೇನೆ.

**ತಾ||** ಯಾರು ಇತರೆ ಭಾವಗಳಿಲ್ಲದೆ ನನ್ನನ್ನೇ ಸದಾ ಚಿಂತಿಸುತ್ತಾ ಎಡೆಬಿಡದೆ ಧ್ಯಾನಿಸುತ್ತಿದ್ದಾರೋ, ಯಾವಾಗಲೂ ನನ್ನಲ್ಲೇ ನಿಷ್ಠೆಯಿಟ್ಟಿರುವ ಅಂತಹವರ ಯೋಗಕ್ಷೇಮದ ಬಾಧ್ಯತೆಯನ್ನು ನಾನೇ ವಹಿಸುತ್ತೇನೆ.

**ವ್ಯಾಖ್ಯೆ:** ಇದು ಗೀತೆಯಲ್ಲಿ ಅತಿ ಮುಖ್ಯವಾದ ಶ್ಲೋಕ. ಸುಮಾರು ಗೀತೆಯ ಮಧ್ಯಭಾಗದಲ್ಲಿರುವುದರಿಂದ ಇದು ಗೀತಾಕುಸುಮದಂತಿದೆ. ರತ್ನಮಾಲೆಯ ಮಧ್ಯಮಣಿಯಂತೆ ಇದು ಹೃದಯ ಸ್ಥಾನವನ್ನು ಅಲಂಕರಿಸುತ್ತದೆ. ಭಕ್ತರಿಗೆ ಈ ಶ್ಲೋಕದ ಮೂಲಕ ಭಗವಂತನು ಅಭಯವಿತ್ತಿದ್ದಾನೆ. ನಿರಂತರವಾಗಿ ತಾವು ಪರಮಾತ್ಮನ ಚಿಂತನೆ ಮಾಡುತಿದ್ದರೆ ತಮ್ಮ ಅವಶ್ಯಕತೆಗಳನ್ನು ಯಾರು ತೀರಿಸುವರು ಎನ್ನುವ ಶಂಕೆ ಭಕ್ತರಿಗೆ ಬರಬಹುದೆಂದು ಭಾವಿಸಿ 'ಆ ಕೆಲಸವನ್ನು ನಾನೇ ವಹಿಸುವೆನು' ಎಂದು ಭಗವಂತನು ಇಲ್ಲಿ ಮಾತು ಕೊಟ್ಟಿರುವನು. 'ಯೋಗಂ' ಎಂದರೆ ಬೇಕಾದ ಪದಾರ್ಥವನ್ನು ಒದಗಿಸುವುದು. 'ಕ್ಷೇಮ' ಎಂದರೆ ಇರುವುದನ್ನು ಸಂರಕ್ಷಿಸುವುದು. ಈ ಪ್ರಕಾರವಾಗಿ ಭಕ್ತನ ಯೋಗಕ್ಷೇಮ ತನ್ನ ಬಾಧ್ಯತೆಯೆಂದು ಭಗವಂತನು ಹೇಳಿರುವನು. ಆ ಭಕ್ತನ ಕರ್ತವ್ಯವೇನು ಎನ್ನುವುದನ್ನೂ ಹೇಳಲಾಗಿದೆ. ಅನನ್ಯಚಿತ್ತನಾಗಿ ಪರಮಾತ್ಮನನ್ನು ನಿತ್ಯವೂ ಧ್ಯಾನಮಾಡುತ್ತಿರ ಬೇಕು. ಈ ಪ್ರಕಾರವಾಗಿ ಸರ್ವಕಾಲದಲ್ಲಿಯೂ ಅವನ ಸಾಂಗತ್ಯ ಹೊಂದಿರಬೇಕು.

'ಅನನ್ಯಾಃ'- ಅನ್ಯವಿಲ್ಲದ್ದು ಅನನ್ಯ. ಅಂದರೆ ಭಗವಂತನನ್ನು ಬಿಟ್ಟು ಬೇರೆ ಯಾವುದೂ ಇಲ್ಲವೆಂದರ್ಥ. ಇಲ್ಲವೆ ಭಗವಂತನನ್ನು ಬಿಟ್ಟು ಬೇರೆ ಯಾವ ಕಡೆಯೂ ಮನಸ್ಸನ್ನು ಹರಿಯಗೊಡದಿರುವುದೇ ಅನನ್ಯ ಭಾವ. ಈಗಾಗಲೇ ಮೇಲಿನ ಶ್ಲೋಕದಲ್ಲಿ ಸ್ವರ್ಗಭೋಗಪರಾಯಣರ ಬಗ್ಗೆ ಹೇಳಲಾಗಿದೆ. ಅತಹವರಿಗೆ ಹಾಗೂ ಈ 'ಅನನ್ಯ ಭಕ್ತ'ರಿಗೆ ಎಷ್ಟೋ ಭೇದವಿದೆ. ಮೊದಲಿನವರು ದೃಶ್ಯದಲ್ಲಿ ಮನಸ್ಸನ್ನು ನಿಲ್ಲಿಸಿ ಪ್ರಾಪಂಚಿಕ ವಿಷಯಗಳಲ್ಲಿ ಮಾತ್ರ ಆಸಕ್ತರಾಗಿರುವವರು, ಎರಡನೆಯವರು ಭಗವಂತನನ್ನು ಬಿಟ್ಟು ಬೇರೆ ಯಾವುದರಲ್ಲಿಯೂ ಕೋರಿಕೆಯಿಲ್ಲದವರು. ಅವರ ದೃಷ್ಟಿಗೆ ದೃಶ್ಯಪದಾರ್ಥ ಗಳೆಲ್ಲವೂ ತುಚ್ಛವಾಗಿ ತೋರುವುವು. ಇಲ್ಲವೆ ಆತ್ಮೇತರವಾದವುಗಳೆಲ್ಲವನ್ನೂ ಮಿಥ್ಯೆಯೆಂದು ನಂಬಿ ಅವುಗಳ ಮೇಲಿನ ಕೋರಿಕೆಗಳನ್ನೆಲ್ಲಾ ತ್ಯಜಿಸಿ ತಮ್ಮ ದೃಷ್ಟಿಯೆಲ್ಲವನ್ನು ಆತ್ಮದಲ್ಲೇ ಕೇಂದ್ರೀಕರಿಸುವರು. ಆದ್ದರಿಂದ ಅವರನ್ನು 'ಅನನ್ಯ ಚಿತ್ತ'ರೆಂದು ಕರೆಯಲಾಗಿದೆ. ಪ್ರಪಂಚದಲ್ಲಿಯ ಜನರು ಮೂರು ವಿಧಗಳಾಗಿದ್ದಾರೆ. ಭಗವಂತನನ್ನು ಯಾವಾಗಲೂ ಚಿಂತಿಸದೆ ಪ್ರಪಂಚ ದೃಷ್ಟಿಯನ್ನೇ ಹೊಂದಿರುವವರು. ದೈವವನ್ನು ಸ್ವಲ್ಪಕಾಲ ಧ್ಯಾನಿಸಿ ಬೇರೆ ವೇಳೆಯಲ್ಲಿ ಮತ್ತೆ ಪ್ರಾಪಂಚಿಕ ದೃಷ್ಟಿಯನ್ನು ಹೊಂದಿರುವವರು. ಇನ್ನು ಮೂರನೆಯ ತರಗತಿಯವರು ಪ್ರಪಂಚದ ದೃಷ್ಟಿಯೇ ಇಲ್ಲದೆ ನಿರಂತರ ದೈವ ಚಿಂತನೆ, ಸ್ಮರಣೆ, ಧ್ಯಾನಾದಿಗಳನ್ನೇ ಮಾಡುತ್ತಿರುವವರು. ಈ ಮೂರನೆಯವರು ಅನನ್ಯಚಿತ್ತರು.

ಅಂತಹ ನಿರಂತರ ದೈವಚಿತ್ತರಾಗಿರುವ ಭಕ್ತರ ಯೋಗಕ್ಷೇಮಗಳ ಬಾಧ್ಯತೆಯನ್ನು ತಾನೇ ವಹಿಸುವೆನೆಂದು ಭಗವಂತನು ಪ್ರತಿಜ್ಞೆ ಮಾಡಿ ಹೇಳಿದ್ದಾನೆ. ಆಹಾ! ಭಕ್ತರ ಮೇಲೆ ಎಷ್ಟು ಪ್ರೀತಿ, ಕರುಣೆ ಹಾಗು ಅನುಗ್ರಹ! ಮಹಾಭಕ್ತನಾದ ಅರ್ಜುನನಿಗೆ ಶ್ರೀಕೃಷ್ಣನು ಸಾರಥ್ಯವನ್ನು ವಹಿಸಿರುವುದೇ ಇದಕ್ಕೆ ನಿದರ್ಶನ. ಅರ್ಜುನನ ರಥದ ಸಾರಥ್ಯವನ್ನು ಶ್ರೀ ಕೃಷ್ಣನಿಗೆ ಒಪ್ಪಿಸಿದನು. ಇನ್ನು ಆತನ ರಥಕ್ಕೆ ಏನು ಕಡಿಮೆ? ಹಾಗೆಯೇ ಯಾರು ತಮ್ಮ 'ಜೀವನ'ದ ಸಾರಥ್ಯವನ್ನು ಭಗವಂತನಿಗೆ ಒಪ್ಪಿಸುವರೋ, ಅವರು ಇನ್ನು ನಿಶ್ಚಿಂತೆಯಾಗಿರ ಬಹುದು. ಯಾರು ತಮ್ಮ ಸಮಸ್ತವನ್ನು ಭಗಮಂತನಿಗೆ ಅರ್ಪಿಸಿ ಅನನ್ಯಚಿತ್ತರಾಗಿ ಆತನನ್ನು ಶರಣು ಹೊಂದುವರೋ ಅವರ ಜೀವನ ರಥವನ್ನು ಆತನು ನಿರಾತಂಕವಾಗಿ ನಡೆಸಬಲ್ಲನು. **'ಯೋಗಕ್ಷೇಮಂ ವಹಾಮ್ಯಹಂ'** ಎನ್ನುವುದರ ಅರ್ಥ ಇದೇ ಆಗಿದೆ. ಭಕ್ತನಿಗೆ ಯಾವುದು ಅವಶ್ಯಕವೋ ಅದನ್ನು (ಅದು ಪ್ರಪಂಚ ವಸ್ತುವಾಗಲಿ ಅಥವ ಆತ್ಮ ಜ್ಞಾನವಾಗಲಿ) ಕೊಡುವುದು ಮತ್ತು ಹಾಗೆ ಪ್ರಸಾದಿಸಿದ್ದನ್ನು ಸಂರಕ್ಷಿಸುವುದು, ಈ ಎರಡನ್ನೂ ಭಗವಂತನು ಭಕ್ತನಿಗೆ ದಯಪಾಲಿಸುವನು. ಆದರೆ ಆ ಭಕ್ತನು ಅನನ್ಯ ಚಿಂತನೆಯಿಂದ ಭಗವಂತನನ್ನು ಧ್ಯಾನಿಸುತ್ತಿರಬೇಕು. ಸ್ವಲ್ಪ ಭಕ್ತಿ ದೃಶ್ಯ ವಿಷಯಗಳಲ್ಲಿ ಹಾಗು ಸ್ವಲ್ಪ ಭಕ್ತಿ ದೇವರಲ್ಲಿ ಇಟ್ಟಿರುವುದು ಅನನ್ಯಭಕ್ತಿಯೆನಿಸಿಕೊಳ್ಳಲಾರದು.

ಭಗವಂತನ ಈ 'ಅಭಯ' ವಾಕ್ಯದಿಂದ ಭಕ್ತರ ಬಾಧ್ಯತೆ ತೀರಿಹೋದಂತೇ ಆಗಿದೆ. ಏಕೆಂದರೆ ಕೆಲವರು "ನಾವು ನಿರಂತರವಾಗಿ ಭಗವಂತನನ್ನು ಧ್ಯಾನಿಸುತ್ತಿದ್ದರೆ ಇನ್ನು ನಮ್ಮ ಸಂಸಾರದ ಗತಿಯೇನು? ಅವರಿಗೆ ಸಂಪಾದಿಸಿ ಹಾಕುವವರು ಯಾರು?" ಎಂದು ಪ್ರಶ್ನಿಸುತ್ತಾರೆ. ಅಂತಹವರನ್ನು ಭಗವಂತನು ಈ ಶ್ಲೋಕದ ಮೂಲಕ ಸಂತೃಪ್ತಿ ಪಡಿಸಿರುವನು.

'ಅನನ್ಯ ಭಕ್ತ'ನಾಗಿರುವುದಷ್ಟೇ ಭಕ್ತನ ಕೆಲಸ. ಮುಂದಿನ ಆಗು ಹೋಗುಗಳನ್ನು ನಾನೇ ನೋಡಿಕೊಳ್ಳುತ್ತೇನೆ' ಎಂದು ಶ್ರೀಕೃಷ್ಣನು ಅಭಯ ವಿತ್ತಿದ್ದಾನೆ. ಅಂತಹವನು ಯಾವ ಗುಹೆಗುಹ್ವರದಲ್ಲಿದ್ದರೂ, ಅರಣ್ಯದಲ್ಲಿದ್ದರೂ ಅವನನ್ನು ಭಗವಂತನು ಯಾವಾಗಲೂ ಹಿಂಬಾಲಿಸಿ ಆತನ ಯೋಗಕ್ಷೇಮಗಳನ್ನು ನೋಡಿಕೊಳ್ಳುವನು. ಆದ್ದರಿಂದ ತೀವ್ರ ಮುಮುಕ್ಷುಗಳಿಗೆ ಇನ್ನು ಯಾವ

ಭಯವೂ ಇಲ್ಲ. ಸಮಸ್ತವನ್ನೂ ಭಗವಂತನಿಗೆ ಅರ್ಪಿಸಿ ಆತನನ್ನೇ ಎಲ್ಲಾ ವೇಳೆಯಲ್ಲಿ ಭಜಿಸಿ, ಧ್ಯಾನಿಸುತ್ತಿರ ಬಹುದು. ಮಹಾಭಕ್ತರ ಜೀವನಗಳನ್ನು ಒಂದು ಸಾರಿ ಪರಿವೀಕ್ಷಿಸಿದರೆ ಈ ಸತ್ಯ ಮನದಟ್ಟಾಗುವುದು. ಅವರು ಎಲ್ಲಿ ಹೋದರೂ ಸರ್ವೇಶ್ವರನು ಅವರ ಮೇಲೆ ಒಂದು ನಿಗಾ ಇಟ್ಟೇ ಇರುವನು.

ಇಲ್ಲಿ 'ಯೇಜನಾಃ' 'ಯಾವಜನರು' ಎಂದು ಹೇಳಿರುವುದರಿಂದ, ಯಾರಾದರೂ ಸರಿಯೇ ಜಾತಿ ಮತ ಕುಲಗಳಭೇದವಿಲ್ಲದೆ ಭಗವತ್ಕೃಪೆಗೆ ಪಾತ್ರರಾಗುವರೆಂದು ಸ್ಪಷ್ಟವಾಗುತ್ತದೆ. ಆದರೆ ಅದಕ್ಕೆ ಅರ್ಹತೆಯಿರಬೇಕು. ಅನನ್ಯಭಕ್ತಿಯೇ ಆ ಅರ್ಹತೆ. ಆಂಜನೇಯನು ಮೃಗ ಜಾತಿಯಲ್ಲಿ ಜನ್ಮಿಸಿಯೂ ಭಗವದ್ಭಕ್ತಿಯಿಂದ ಆ ದೇವನ ಅನುಗ್ರಹಕ್ಕೆ ಪಾತ್ರನಾದನೆಂದರೆ ಇನ್ನು ಮಾನವನ ವಿಷಯವನ್ನು ಬೇರೆ ಹೇಳಬೇಕಾಗಿಲ್ಲ. ಅನನ್ಯ ಭಕ್ತಿ ಎನ್ನುವ ಮೂಲ್ಯವನ್ನು ಅರ್ಪಿಸುವುದರಿಂದ ಭಗವತ್ಕೃಪೆಯ ದ್ವಾರ ಯೋಗಕ್ಷೇಮ ಪ್ರಾಪ್ತಿಯಾಗುವುದು. ಈ ಶ್ಲೋಕದಲ್ಲಿ ಸಲ್ಲಿಸಬೇಕಾದ ಮೂಲ್ಯ ಹಾಗು ಅದರಿಂದ ಲಭ್ಯವಾಗುವ ವಸ್ತು ಎರಡನ್ನೂ ತಿಳಿಸಲಾಗಿದೆ. ಮೂಲ್ಯವನ್ನು ಕೊಡದೆ ಇದ್ದರೆ ಸಾಮಾನ್ಯವಾದ ಪ್ರಾಪಂಚಿಕ ವಸ್ತುವೇ ಲಭಿಸದಿರುವಾಗ, ಇನ್ನು ಪರಮಾತ್ಮ ವಸ್ತುವು ಹೇಗೆ ಲಭಿಸಲು ಸಾಧ್ಯ? ಆದ್ದರಿಂದ ಭಗವದನುಗ್ರಹವನ್ನು ಈ ಜೀವನದಲ್ಲಿಯೇ ಹೊಂದಿ ಮುಕ್ತಿಯನ್ನು ಪಡೆಯಲು ಪ್ರತಿಯೊಬ್ಬರೂ ಅನನ್ಯ ದೈವ ಚಿಂತನೆಯನ್ನು ಭಕ್ತಿಯಿಂದ ಅಭ್ಯಸಿಸಬೇಕು.

'ಪರ್ಯುಪಾಸತೆ' - 'ಉಪಾಸತೆ' ಎಂದು ಹೇಳದೆ 'ಪರ್ಯುಪಾಸತೆ' ಎಂದು ಹೇಳಿರುವುದರಿಂದ ಭಗವಂತನನ್ನು ಎಡೆಬಿಡದೆ ಧ್ಯಾನಿಸಬೇಕೆಂದು ಹೇಳಿದಂತಾಗಿದೆ.

'ಯೋಗಕ್ಷೇಮಂ'- ಎನ್ನುವಲ್ಲಿ 'ಯೋಗ' ಶಬ್ದ ಪ್ರಯೋಗ ವಾಗಿರುವುದರಿಂದ ಭಕ್ತರಿಗೆ ಜೀವನಕ್ಕೆ ಬೇಕಾಗುವ ವಸ್ತುಗಳನ್ನೇ ಅಲ್ಲದೆ ಆತ್ಮಜ್ಞಾನವನ್ನೂ ಕೊಡುವನು ಎಂದರ್ಥವಾಗುವುದು. ನಿರಂತರ ಭಗವಚ್ಚಿಂತನೆಯಿಂದ ಸರ್ವೇಶ್ವರನು ಸಂತೃಪ್ತನಾಗಿ ಆತ್ಮಜ್ಞಾನವನ್ನುಂಟುಮಾಡಿ ಅದು ಕಳಚಿ ಹೋಗದಂತೆ ಸಂರಕ್ಷಿಸುವನು. 'ದದಾಮಿ ಬುದ್ಧಿಯೋಗಂ'.

'ನಿತ್ಯಾಭಿಯುಕ್ತಾನಾಮ್'- ಎಂದು ಹೇಳಿರುವುದರಿಂದ ಎಲ್ಲೋ ಸ್ವಲ್ಪ ಹೊತ್ತು ಧ್ಯಾನಿಸುವವರು ಈ ಗುಂಪಿಗೆ ಸೇರುವುದಿಲ್ಲವೆಂದೂ, ನಿರಂತರ ಧ್ಯಾನಶೀಲರಾಗಿರಬೇಕೆಂದರ್ಥ.

ಪ್ರ : ಭಗವಂತನನ್ನು ಯಾವ ಪ್ರಕಾರವಾಗಿ ಚಿಂತನೆ ಮಾಡಬೇಕು?

ಉ: ಅನನ್ಯ ಚಿತ್ತದಿಂದ- ಪರಮಾತ್ಮನಲ್ಲದೆ ಬೇರೆ ಯಾವುದೂ ಮನಸ್ಸಿನಲ್ಲಿ ಹಾಯಕೂಡದು. ಮತ್ತೆ ಬೇರೆ ಯಾವುದರಲ್ಲಿಯೂ ಕೋರಿಕೆಯಿರಬಾರದು.

ಪ್ರ : ಹೀಗೆ ಅನನ್ಯ ಚಿತ್ತರಾಗಿ ಧ್ಯಾನಿಸುವುದರ ಫಲಗಳೇನು?

ಉ : ಭಗವತ್ಕೃಪೆ. ಅಂತಹವರ ಯೋಗಕ್ಷೇಮವನ್ನು ಭಗವಂತನು ವಹಿಸುವನು.

ಪ್ರ : ಭಗವತ್ಕೃಪೆ ಲಭಿಸಲು ಜೀವಿಯು ಏನು ಮಾಡಬೇಕು?

ಉ : ಅನನ್ಯಚಿತ್ತದಿಂದ ಪರಮಾತ್ಮನನ್ನು ಧ್ಯಾನಿಸುತ್ತಿರಬೇಕು.

**ಅ॥** ಶ್ರದ್ಧೆಯಿಂದ ಇತರೆ ದೇವತೆಗಳನ್ನು ಅರ್ಚಿಸುವವನು, (ಕ್ರಮವನ್ನು ತಪ್ಪಿ) ತನ್ನನ್ನೇ ಅರ್ಚಿಸುತ್ತಿರುವವನೆಂದು ಹೇಳಲಾಗುತ್ತಿದೆ-

**೨೩ ಯೇಽಪ್ಯನ್ಯದೇವತಾಭಕ್ತಾ ಯಜಂತೇ ಶ್ರದ್ಧಯಾನ್ವಿತಾಃ**
**ತೇಽಪಿ ಮಾಮೇವ ಕೌಂತೇಯ ಯಜಂತ್ಯವಿಧಿಪೂರ್ವಕಮ್**

**ಅರ್ಥ:** ಕೌಂತೇಯ ಓ ಅರ್ಜುನಾ! ಯೇ ಅಪಿ=ಯಾರಾದರೆ; ಅನ್ಯ ದೇವತಾ ಭಕ್ತಾ=ಇತರ ದೇವತೆಗಳಲ್ಲಿ ಭಕ್ತಿಯುಳ್ಳವರಾಗಿ; ಶ್ರದ್ಧಾನ್ವಿತಾಃ= ಶ್ರದ್ಧೆಯಿಂದ ಕೂಡಿದವರಾಗಿ; ಯಜಂತೇ=(ಆ ದೇವತೆಗಳನ್ನು) ಆರಾಧಿಸುತ್ತಿರುವರೋ; ತೇ ಅಪಿ=ಅವರು ಕೂಡ; ಮಾಂ ಏವ=ನನ್ನನ್ನೇ; ಅವಿಧಿ ಪೂರ್ವಕಂ=ವಿಧಿ ತಪ್ಪಿ (ಕ್ರಮ ತಪ್ಪಿ); ಯಜಂತೇ=ಆರಾಧಿಸುತ್ತಿದ್ದಾರೆ.

**ತಾ॥** ಓ ಅರ್ಜುನಾ! ಯಾರು ಇತರ ದೇವತೆಗಳ ಮೇಲೆ ಭಕ್ತಿಯುಳ್ಳವರಾಗಿ ಶ್ರದ್ಧೆಯಿಂದ ಅವರನ್ನು ಆರಾಧಿಸುತ್ತಿದ್ದಾರೋ, ಅವರು ವಿಧಿತಪ್ಪಿ (ಕ್ರಮತಪ್ಪಿ) ನನ್ನನ್ನೇ ಆರಾಧಿಸಿದಂತವರಾಗುತ್ತಾರೆ.

**ವ್ಯಾಖ್ಯೆ:** ಕೆಲವರು ನಿರಾಕಾರ ನಿರ್ಗುಣ ಪರಮಾತ್ಮನನ್ನಲ್ಲದೆ ನಾಮರೂಪ ಸಹಿತರಾದ ಇತರ ದೇವತೆಗಳನ್ನು ಆರಾಧಿಸುವರು. ಅವರು ಶ್ರದ್ಧೆಯಿಂದ ಆ ಆರಾಧನೆಯನ್ನು ಮಾಡಿದರೆ ಒಂದು ದೃಷ್ಟಿಯಿಂದ ಅವರು ಆಯಾ ದೇವತೆಗಳಿಗೆ ಅಧಿಷ್ಠಾನರೂಪವಾದ ಪರಮಾತ್ಮನನ್ನು ಪ್ರಾರ್ಥಿಸಿದವರೇ ಆಗುವರು. ಆದರೆ ಇದು ಸಕ್ರಮವಾದ ಭಗವದರ್ಚನೆಯಲ್ಲ, ವಿಧಿ ಪೂರ್ವಕ ಪರಮಾತ್ಮನ ಸೇವೆಯಲ್ಲ. ಕ್ರಮ ಪದ್ಧತಿ ತಪ್ಪಿದ ಭಗವದಾರಾಧನೆಯೇ ಅನಿಸಿಕೊಳ್ಳುವುದು. ಏಕೆಂದರೆ ಅವರು ಸರ್ವವ್ಯಾಪಕ ಪರಮಾತ್ಮನನ್ನು ಸಾಕ್ಷಾತ್ತಾಗಿ ಸೇವಿಸುತ್ತಿಲ್ಲ. ಆದ್ದರಿಂದ ಪುಣ್ಯಫಲಗಳಲ್ಲಿ ವ್ಯತ್ಯಾಸವಿರುವುದು. ಬೇರೆ ದೇವತೆಗಳನ್ನು ಅರ್ಚಿಸಿದರೆ ಸ್ವಲ್ಪ ಪುಣ್ಯವೇನೋ ಲಭ್ಯವಾಗುವುದು. ಸರ್ವವ್ಯಾಪಕ, ಸರ್ವಾಧಿಷ್ಠಾನ ಪರಮಾತ್ಮನನ್ನು ಸೇವಿಸಿದರೆ ಸಾಕ್ಷಾತ್ ಮೋಕ್ಷವೇ ಲಭಿಸುವುದು. ಆದರೆ ಯಾವ ದೇವತೆಯನ್ನು ಆರಾಧಿಸಿದರೂ ಅಥವ ಕೇವಲ ಪರಮಾತ್ಮನನ್ನು ಆರಾಧಿಸಿದರೂ ಶ್ರದ್ಧೆ ಮಾತ್ರ ತಪ್ಪದೆ ಇರಬೇಕು ಮತ್ತೆ ಇತರ ದೇವತೆಗಳನ್ನು ಆರಾಧಿಸಿ ಅಲ್ಪ ಫಲಗಳನ್ನು ಹೊಂದುವುದಕ್ಕಿಂತ ಸಾಕ್ಷಾತ್ ಪರಮಾತ್ಮನನ್ನೇ ಸೇವಿಸಿ ಮೋಕ್ಷರೂಪವಾದ ಮಹೋನ್ನತ ಫಲವನ್ನು ಪಡೆಯುವುದು ಶ್ರೇಯಸ್ಕರ.

ಪ್ರ : ಭಗವದಾರಾಧನೆ ಹೇಗೆ ಮಾಡಬೇಕು?

ಉ : ಇತರ ದೇವತೆಗಳ ಭಕ್ತರು ಮೋಕ್ಷಪದ (ದೈವಸಾಕ್ಷತ್ಕಾರ)ವನ್ನು ಏಕೆ ಹೊಂದುತ್ತಿಲ್ಲವೆನ್ನುವುದನ್ನು ತಿಳಿಸಲಾಗುತ್ತದೆ.

**೨೪ ಅಹಂ ಹಿ ಸರ್ವಯಜ್ಞಾನಾಂ ಭೋಕ್ತಾ ಚ ಪ್ರಭುರೇವ ಚ**
**ನ ತು ಮಾಭಿಜಾನಂತಿ ತತ್ತ್ವೇನಾತಶ್ಚ್ಯವಂತಿ ತೇ**

**ಅರ್ಥ:** ಹಿ=ಏಕೆಂದರೆ; ಸರ್ವಯಜ್ಞಾನಾಂ=ಸಮಸ್ತ ಯಜ್ಞಗಳಿಗೆ; ಭೋಕ್ತಾ ಚ=ಭೋಕ್ತ; ಪ್ರಭುಃ ಏವ ಚ=ಪ್ರಭು (ಯಜಮಾನ): ಅಹಂ ಏವ=ನಾನೇ (ಆಗಿದ್ದೇನೆ); ಮಾಂ=(ಅಂತಹ)ನನ್ನನ್ನು; ತೇ=ಅವರು; ತತ್ತ್ವೇನ= ಯಥಾರ್ಥವಾಗಿ; ನ ಅಭಿಜಾನಂತಿ=ತಿಳಿದುಕೊಳ್ಳುತ್ತಿಲ್ಲ; ಅತಃ= ಇದರಿಂದ; ಚ್ಯವಂತಿ=ಚ್ಯುತರಾಗುತ್ತಿದ್ದಾರೆ (ಪುನರ್ಜನ್ಮ ಹೊಂದುತ್ತಿದ್ದಾರೆ)

**ತಾ॥** ಏಕೆಂದರೆ, ಸಮಸ್ತಯಜ್ಞಗಳ ಭೋಕ್ತನೂ, ಪ್ರಭುವೂ (ಯಜಮಾನನೂ) ನಾನೇ ಆಗಿದ್ದೇನೆ. ಅಂತಹ ನನ್ನನ್ನು ಅವರು ಯಥಾರ್ಥವಾಗಿ ತಿಳಿದುಕೊಳ್ಳುತ್ತಿಲ್ಲ. ಆದ್ದರಿಂದ ಅವರು ಚ್ಯುತರಾಗುತ್ತಿದ್ದಾರೆ (ಪುನರ್ಜನ್ಮ ಹೊಂದುತ್ತಿದ್ದಾರೆ).

**ವ್ಯಾಖ್ಯೆ:** ಸಮಸ್ತ ಯಜ್ಞಗಳಿಗೆ ಪರಮಾತ್ಮನೇ ಭೋಕ್ತನು ಹಾಗು ಪ್ರಭು ಇಂತಹ ಯಥಾರ್ಥ ಜ್ಞಾನವಿಲ್ಲದ ಜನರು ಸಂಕುಚಿತ ದೃಷ್ಟಿಯುಳ್ಳವರಾಗಿ ಆಯಾ ದೇವತೆಗಳನ್ನು ಉದ್ದೇಶಿಸಿ ಕ್ರಿಯೆಗಳನ್ನು ನಡೆಸುತ್ತ ಅಂದರೆ ಉನ್ನತ ಸ್ಥಾನದಿಂದ ಚ್ಯುತಿಗೊಂಡು ಸಂಸಾರ ಕೂಪದಲ್ಲಿ ಅಂದರೆ ಜನನ ಮರಣ ಪ್ರವಾಹದಲ್ಲಿ ಬೀಳುತ್ತಿದ್ದಾರೆ. ಪರಮಾತ್ಮನನ್ನು ಧ್ಯಾನಿಸಿ ಅವನನ್ನು ಸೇರುವವರನ್ನು ಬಿಟ್ಟರೆ ಬೇರೆಯವರೆಲ್ಲಾ ಪುನರಾವೃತ್ತಿ ಹೊಂದೇ ತೀರುವರು. ಪರಮಾತ್ಮನನ್ನು ಕುರಿತ ಯಥಾರ್ಥ ಜ್ಞಾನವಿಲ್ಲದವರೆಲ್ಲರೂ ಈ ಪ್ರಕಾರವಾಗಿ ಜನನ ಮರಣಗಳಿಗೆ ಗುರಿಯಾಗುತ್ತಲೇ ಇರುವರು. ಇದೇ ಚ್ಯುತಿ; ಸಂಸಾರವೆಂಬ ಸಾಗರದಲ್ಲಿ ಜಾರಿ ಬೀಳುವುದು. ಆದ್ದರಿಂದ ಪರಮಾತ್ಮನನ್ನು ಕುರಿತು ಆಳವಾಗಿ ತಿಳಿದುಕೊಳ್ಳಬೇಕು. 'ತತ್ತ್ವೇನ' ಎಂದು ಹೇಳಿರುವುದರಿಂದ ಸಾಮಾನ್ಯ ಜ್ಞಾನ ಸಾಲದೆಂದೂ, ಯಥಾರ್ಥವಾಗಿ, ಪ್ರತ್ಯಕ್ಷವಾಗಿ ತಿಳಿದುಕೊಳ್ಳಬೇಕೆನ್ನುವುದು ಇದರ ಭಾವ. ಅಂದರೆ ಭಗವಂತನು ಸರ್ವಾಂತರ್ಯಾಮಿಯಾಗಿ ಸಮಸ್ತ ಚರಾಚರಗಳಿಗೆ ಅಧಿಷ್ಠಾನವಾಗಿ ಜೀವಿಗಳ ನಿಜರೂಪವಾಗಿ ಬೆಳಗುತ್ತಿರುವುದನ್ನು ಅನುಭವ ಪೂರ್ವಕವಾಗಿ ತಿಳಿದುಕೊಳ್ಳಬೇಕು. ಅಂತಹವರು ಇನ್ನು ಚ್ಯುತಿಹೊಂದುವುದಿಲ್ಲ. ಅವರು ಪರಮಾತ್ಮನ ಯಥಾರ್ಥ ಜ್ಞಾನವನ್ನು ಹೊಂದಿ ಜಾಗರೂಕರಾಗಿ, ಸ್ವಸ್ವರೂಪಾತ್ಮದಲ್ಲಿ ನಿಷ್ಠೆಯುಳ್ಳವರಾಗಿ ಮಿಥ್ಯೆಯಾದ ದೃಶ್ಯವನ್ನು ತಿರಸ್ಕರಿಸುವರು.

ಪ್ರ : ಸಮಸ್ತ ಯಜ್ಞಗಳಿಗೆ ಭೋಕ್ತನಾರು ? ಪ್ರಭುಯಾರು ?

ಉ : ಪರಮಾತ್ಮನೇ.

ಪ್ರ : ಜನರು ಸಂಸಾರವೆನ್ನುವ ಕೂಪದಲ್ಲಿ ಏಕೆ ಬೀಳುತ್ತಾರೆ ?

ಉ : ಭಗವಂತನನ್ನು ಕುರಿತ ಯಥಾರ್ಥ ಜ್ಞಾನವಿಲ್ಲದ್ದರಿಂದ

ಪ್ರ : 'ಸಂಸಾರ ಚ್ಯುತಿ'ಯಿಂದ ತಪ್ಪಿಸಿಕೊಳ್ಳಲು ಉಪಾಯವೇನು ?

ಉ : ಪರಮಾತ್ಮನನ್ನು ಕುರಿತ ಯಥಾರ್ಥಜ್ಞಾನವನ್ನು ಹೊಂದುವುದರಿಂದ (ಅಂದರೆ ಪರಮಾತ್ಮನೇ ಸಮಸ್ತ ದೇವತೆಗಳಿಗೆ ಸಮಸ್ತ ಚರಾಚರ ಪ್ರಾಣಿಗಳಿಗೆ ಅಧಿಷ್ಠಾನ ರೂಪನೆಂದೂ, ತ್ರಿಕಾಲಾಬಾಧ್ಯನೆಂದು, ಸತ್ಯ ಸ್ವರೂಪನೆಂದೂ ತಿಳಿಯುವುದು)

**ಅ॥** ಯಾವ ಯಾವ ದೇವತೆಗಳನ್ನು ಆರಾಧಿಸುವರೋ ಆಯಾ ದೇವತೆಗಳನ್ನೇ ಹೊಂದುವರೆಂದೂ, ತನ್ನನ್ನು ಆರಾಧಿಸುವರು ಮಾತ್ರ ತನ್ನನ್ನೇ ಹೊಂದುವರೆಂದೂ ತಿಳಿಸಲಾಗುತ್ತಿದೆ-

**೨೫ ಯಾಂತಿ ದೇವವ್ರತಾ ದೇವಾನ್ ಪಿತೃನ್ ಯಾಂತಿ ಪಿತೃವ್ರತಾಃ**
**ಭೂತಾನಿ ಯಾಂತಿ ಭೂತೇಜ್ಯಾ ಯಾಂತಿ ಮದ್ಯಾಜಿನೋಽಪಿ ಮಾಮ್**

**ಅರ್ಥ:** ದೇವವ್ರತಾಃ=ದೇವತೆಗಳನ್ನು ಆರಾಧಿಸುವವರು; ದೇವಾನ್=ದೇವತೆಗಳನ್ನು; ಯಾಂತಿ=ಹೊಂದುತ್ತಿದ್ದಾರೆ; ಭೂತೇಜ್ಯಾ=ಭೂತಗಳನ್ನು ಪೂಜಿಸುವವರು; ಭೂತಾನಿ=ಭೂತಗಳನ್ನು; ಯಾಂತಿ=ಹೊಂದುತ್ತಿದ್ದಾರೆ; ಮದ್ಯಾಜಿನಃಅಪಿ=ನನ್ನನ್ನು ಪೂಜಿಸುವವರಾದರೋ (ಧ್ಯಾನಿಸುವವರು); ಮಾಂ=ನನ್ನನ್ನೇ; ಯಾಂತಿ=ಹೊಂದುತ್ತಿದ್ದಾರೆ.

**ತಾ॥** ದೇವತೆಗಳನ್ನು ಆರಾಧಿಸುವವರು ದೇವತೆಗಳನ್ನೂ, ಪಿತೃದೇವತೆಗಳನ್ನು ಆರಾಧಿಸುವವರು ಪಿತೃಗಳನ್ನೂ, ಭೂತಗಳನ್ನು ಆರಾಧಿಸುವವರು ಭೂತಗಳನ್ನೂ; ನನ್ನನ್ನು ಆರಾಧಿಸುವವರು ನನ್ನನ್ನು ಹೊಂದುತ್ತಿದ್ದಾರೆ.

**ವ್ಯಾಖ್ಯೆ:** ಮನಸ್ಸು ಎಂತಹ ಭಾವನೆಗಳಿಂದ ಕೂಡಿರುವುದೋ ಅಂತಹ ರೂಪಗಳನ್ನೇ ಪಡೆಯುತ್ತದೆ. ಆದ್ದರಿಂದ ಜನರು ಯಾವ ದೇವತೆಗಳನ್ನು ಅರ್ಚಿಸುವರೋ ಅವರನ್ನೇ ಹೊಂದುವರು. ಅಶಾಶ್ವತ ದೇವತೆಗಳನ್ನು ಪೂಜಿಸುವವರು ಅವರನ್ನೇ ಹೊಂದುವರು. ಶಾಶ್ವತ ಪರಮಾತ್ಮನನ್ನು ಧ್ಯಾನಿಸುವವರು ಅಂತಹ ಶಾಶ್ವತ ಸ್ವರೂಪವನ್ನೇ ಸೇರುವರು. ಆದ್ದರಿಂದ ಅವರವರು ಧ್ಯಾನಿಸುವ, ಪೂಜಿಸುವ ಲಕ್ಷ್ಯ ಶಾಶ್ವತವೇ ಅಶಾಶ್ವತವೇ ಎಂದು ವಿಜ್ಞರು ಮೊದಲು ಯೋಚನೆ ಮಾಡಬೇಕು. ಪರಮಾತ್ಮನನ್ನು ಬಿಟ್ಟು ಬೇರೆ ಯಾವ ವ್ಯಕ್ತಿಯೇ ಆಗಲಿ ಲೋಕಗಳೇ ಆಗಲಿ, ಯಾವುದೋ ಒಂದು ಕಾಲದಲ್ಲಿ ನಶಿಸಿಹೋಗುವಂತಹುವೇ. ದೇವತೆಗಳಾಗಲಿ, ಭೂತಗಳಾಗಲಿ ಸರ್ವರೂ ಉಪಾಧಿಯನ್ನು ಧರಿಸಿದವರೇ. ಆದ್ದರಿಂದ ಆ ಉಪಾಧಿ ಯಾವೊತ್ತಿಗಾದರೂ ಕ್ಷಯ ಹೊಂದುವುದಾದ್ದರಿಂದ ಶಾಶ್ವತವಾದ ಸ್ಥಿತಿಯನ್ನು ಅವರು ಹೊಂದಿರುವುದಿಲ್ಲ. ಪರಮಾತ್ಮನ ವಿಷಯ ಹಾಗಲ್ಲ. ಆತನು ಅವಿನಾಶಿ, ಅವ್ಯಯ ಹಾಗು ಸನಾತನ; ದೇಶಕಾಲಗಳಿಗೆ ವಶವಾಗದವನು. ಅಂತಹವನನ್ನು ಅರ್ಚಿಸುವವರು, ಧ್ಯಾನಿಸುವವರು ನಾಶರಹಿತವಾದ ಪರಮಾತ್ಮಪದವಿಯನ್ನೇ ಹೊಂದುವರು. ಆದ್ದರಿಂದ ಇದು ಸರ್ವಶ್ರೇಷ್ಠವಾದ ಲಕ್ಷ್ಯ ಹಾಗು ಗಮ್ಯ. ವಿಜ್ಞರಾದವರು ಅಶಾಶ್ವತ ವಸ್ತುವನ್ನು ಇಚ್ಛಿಸುವುದಿಲ್ಲ. ಶಾಶ್ವತವಾದದ್ದನ್ನೇ ಕೋರುವರು. ಆದ್ದರಿಂದ ಪುನರಾವೃತ್ತಿ ರಹಿತ ಶಾಶ್ವತ ಪದವಿ ಕೊಡುವ ಪರಮಾತ್ಮನನ್ನೇ ಜನರು ಆಶ್ರಯಿಸಬೇಕು. ಆತನನ್ನೇ ಧ್ಯಾನಿಸಬೇಕು. ಯಾವ ಶ್ರದ್ಧೆಯನ್ನು, ವ್ರತವನ್ನು, ನಿಯಮಗಳನ್ನು ಹಾಗು ನಿಷ್ಠೆಗಳನ್ನು ಇತರೆ ದೇವತೆಗಳನ್ನು ಆರಾಧಿಸುವಾಗ ಪಾಲಿಸುವರೋ ಅವುಗಳನ್ನು ಪರಮಾತ್ಮನನ್ನು ಸೇವಿಸುವಲ್ಲಿ ಉಪಯೋಗಿಸಬೇಕು. 'ದೇವತಾ ವ್ರತಗಳನ್ನು' ಆತ್ಮವ್ರತಗಳನ್ನಾಗಿ ಬದಲಾಯಿಸಿಕೊಳ್ಳಬೇಕು.

ಪ್ರ : ದೇವತೆಗಳನ್ನಾಗಲಿ, ಪಿತೃದೇವತೆಗಳನ್ನಾಗಲಿ, ಭೂತಗಳನ್ನಾಗಲಿ ಆರಾಧಿಸುವವರು ಯಾರನ್ನು ಹೊಂದುವರು ?

ಉ : ಅವರು ಉಪಾಸಿಸುವವರನ್ನೇ ಹೊಂದುವರು.

ಪ್ರ : ಪರಮಾತ್ಮನನ್ನು ಆರಾಧಿಸುವವರು ಯಾರನ್ನು ಹೊಂದುವರು ?

ಉ : ಪರಮಾತ್ಮನನ್ನೇ ಹೊಂದುವರು.

**ಅ॥** ಭಕ್ತಿಯಿಂದ ಸ್ವಲ್ಪ ವಸ್ತುವನ್ನು ಕೊಟ್ಟರೂ ತಾನು ಸಂತುಷ್ಟಿ ಹೊಂದುವೆನೆಂದು ಭಗವಂತನು ಹೇಳುತ್ತಿದ್ದಾನೆ-

**೨೬ ಪತ್ರಂ ಪುಷ್ಪಂ ಫಲಂ ತೋಯಂ ಯೋ ಮೇ ಭಕ್ತ್ಯಾ ಪ್ರಯಚ್ಛತಿ**
**ತದಹಂ ಭಕ್ತ್ಯುಪಹೃತಮಶ್ನಾಮಿ ಪ್ರಯತಾತ್ಮನಃ**

**ಅರ್ಥ:** ಯಃ=ಯಾವನು; ಮೇ=ನನಗೆ; ಭಕ್ತ್ಯಾ=ಭಕ್ತಿಯಿಂದ; ಪತ್ರಂ=ಎಲೆ (ದಳವನ್ನಾಗಲಿ); ಪುಷ್ಪಂ=ಹೂವನ್ನಾಗಲಿ; ಫಲಂ=ಹಣ್ಣನ್ನಾಗಲಿ; ತೋಯಂ=ಜಲವನ್ನಾಗಲಿ; ಪ್ರಯಚ್ಛತಿ=ಕೊಡುವನೋ; ಪ್ರಯತಾತ್ಮನಃ=(ಅಂತಹ) ಪರಿಶುದ್ಧಾಂತಃಕರಣೆಯಾದ (ಇಲ್ಲವೆ, ಪರಮಾರ್ಥ ಯತ್ನಶೀಲನ); ಭಕ್ತ್ಯುಪಹೃತಂ=ಭಕ್ತಿಪೂರ್ವಕವಾಗಿ ಸಮರ್ಪಿಸಲ್ಪಟ್ಟ; ತತ್=ಆ ಪತ್ರ ಪುಷ್ಪಾದಿಗಳನ್ನು; ಅಹಂ=ನಾನು; ಅಶ್ನಾಮಿ=(ಪ್ರೀತಿಯಿಂದ) ಸ್ವೀಕರಿಸುತ್ತಿದ್ದೇನೆ (ಅನುಭವಿಸುತ್ತಿದ್ದೇನೆ).

**ತಾ॥** ಯಾವನು ನನಗೆ ಭಕ್ತಿಯಿಂದ ಎಲೆಯನ್ನಾಗಲಿ, ಪುಷ್ಪವನ್ನಾಗಲಿ, ಹಣ್ಣನ್ನಾಗಲಿ, ಜಲವನ್ನಾಗಲಿ ಸಮರ್ಪಿಸುತ್ತಿದ್ದಾನೋ ಅಂತಹ ಪರಿಶುದ್ಧಾಂತಃಕರಣೆ

ಯಿಂದ (ಇಲ್ಲವೆ ಪರಮಾರ್ಥಯತ್ನಶೀಲನಿಂದ) ಭಕ್ತಿ ಪೂರ್ವಕವಾಗಿ ಅರ್ಪಿಸಲ್ಪಟ್ಟ ಆ ಪತ್ರ ಪುಷ್ಪಾದಿಗಳನ್ನು ನಾನು (ಪ್ರೀತಿಯಿಂದ) ಸ್ವೀಕರಿಸುತ್ತಿದ್ದೇನೆ (ಅನುಭವಿಸುತ್ತಿದ್ದೇನೆ).

**ವ್ಯಾಖ್ಯೆ:** ಮೇಲೆ ತಿಳಿಸಿದ ಪತ್ರ ಪುಷ್ಪಾದಿಗಳು ಬಡವರಿಗೆ, ಧನವಂತರಿಗೆ, ಪಂಡಿತರಿಗೆ, ಪಾಮರರಿಗೆ ಸರ್ವರಿಗೂ ಸುಲಭವಾಗಿ ಸಿಗುವಂತಹವು. ಭಗವತ್ಪ್ರೀತಿಯನ್ನು ಪಡೆಯಲು ಸಾಮಾನ್ಯ ವಸ್ತುವನ್ನಾದರೂ ಪ್ರೀತಿಯಿಂದ, ಭಕ್ತಿಯಿಂದ ಸಮರ್ಪಿಸಿದರೆ ಸಾಕೆಂದು ಈ ಶ್ಲೋಕದ ಮೂಲಕ ತಿಳಿಸಲಾಗಿದೆ. ಶಕ್ತಿಯಿಲ್ಲದವರು ನಾವು ದೊಡ್ಡ ದೊಡ್ಡ ನೈವೇದ್ಯಗಳನ್ನು ದೇವರಿಗೆ ಸಮರ್ಪಿಸಲಿಲ್ಲವಲ್ಲ ಎಂದು ವ್ಯಥೆಗೊಳಗಾಗಬಾರದು. ಏಕೆಂದರೆ ಭಗವಂತನು ಭಕ್ತಿಯನ್ನು, ಹೃದಯ ಶುದ್ಧಿಯನ್ನು ಪ್ರಧಾನವಾಗಿ ನೋಡುವವನೇ ಹೊರತು ವಸ್ತುವನ್ನಲ್ಲ. ವಾಸ್ತವವಾಗಿ ನೋಡಿದರೆ ದೇವರಿಗೆ ಯಾವ ವಸ್ತುವಿನ ಅವಶ್ಯಕತೆಯೂ ಇಲ್ಲ. ಬ್ರಹ್ಮಾಂಡವೆಲ್ಲವೂ ಆತನ ಉದರದಲ್ಲಿರುವಾಗ ಆತನಿಗಿನ್ನೇನು ಕೊರತೆ. ಆದರೂ ನಿರ್ಮಲ ಮನಸ್ಕರಾದ ಭಕ್ತರು ಕೊಡುವುದನ್ನು ಆತನು ಸ್ವೀಕರಿಸುವನು. ಆದರೆ ಆ ವಸ್ತುಗಳನ್ನು ಪರಿಗ್ರಹಿಸಲು ಭಗವಂತನು ಎರಡು ಷರತ್ತುಗಳನ್ನು ಹಾಕಿರುವನು. ಅವು ಯಾವುವೆಂದರೆ- ೧) ಕೊಡುವವನು ಪರಿಶುದ್ಧನಾಗಿರಬೇಕು. ೨) ಕೊಡುವುದನ್ನು ಪರಮಭಕ್ತಿಯಿಂದ ಕೊಡಬೇಕು.

ಮಲಿನ ಚಿತ್ತವುಳ್ಳವನು ಏನು ಮಾಡಿದರೂ ಕೊನೆಗೆ ರಾಜ್ಯಾದಿಗಳನ್ನು, ಮೇರು ಪರ್ವತದಷ್ಟು ಚಿನ್ನಕೊಟ್ಟರೂ ಆತನು ಸ್ವೀಕರಿಸುವುದಿಲ್ಲ. ಶುದ್ಧ ಚಿತ್ತವುಳ್ಳ ನಿರ್ಮಲಾಂತಃಕರಣಿಯು ಕೇವಲ ಒಂದು ಎಲೆ ಕೊಟ್ಟರೂ, ಪುಷ್ಪವನ್ನು ಸಮರ್ಪಿಸಿದರೂ, ಸ್ವಲ್ಪ ನೀರು ಕೊಟ್ಟರೂ ಮಹಾ ಸಂತುಷ್ಟಿಯಿಂದ ಸ್ವೀಕರಿಸುವನು. ಭಕ್ತಿಯಿಲ್ಲದೆ ರತ್ನರಾಶಿಗಳನ್ನು ಕೊಟ್ಟರೂ ಸ್ವೀಕರಿಸುವುದಿಲ್ಲ. ಭಕ್ತಿಯಿಂದ ಒಂದು ಕವಡೆಯನ್ನು ಕೊಟ್ಟರೂ ಸ್ವೀಕರಿಸುವನು. ಪ್ರೇಮವಾಗಲಿ, ಭಕ್ತಿಯಾಗಲಿ ಇಲ್ಲದಿರುವ ದುರ್ಯೋಧನನ ಆತಿಥ್ಯವನ್ನು ನಿರಾಕರಿಸಿ, ದಯೆ ಪ್ರೇಮದಿಂದ ತುಂಬಿರುವ ವಿದುರನ ಆತಿಥ್ಯವನ್ನು ಸ್ವೀಕರಿಸಿದ್ದು ಸರ್ವರಿಗೂ ವಿದಿತವಲ್ಲವೇ! ಮತ್ತೇ ಕುಚೇಲನ ಅವಲಕ್ಕಿಯನ್ನು ಪರಮಪ್ರೀತಿಯಿಂದ ಆತನು ಸ್ವೀಕರಿಸಿದ ಸಂಗತಿ ಎಲ್ಲರಿಗೂ ತಿಳಿದಿರುವ ವಿಷಯವೇ ಅಲ್ಲವೇ. ಇದರಿಂದ ಭಗವಂತನ ಅನುಗ್ರಹ ಮನುಜನು ಅರ್ಪಿಸುವ ವಸ್ತುವಿನ ಪ್ರಾಮುಖ್ಯತೆಯ ಮೇಲಾಗಲಿ, ಬೆಲೆಯ ಮೇಲಾಗಲಿ ಆಧಾರ ಪಟ್ಟಿರುವುದಿಲ್ಲವೆಂದೂ, ಆತನ ಮನಸ್ಸಿನ ಮೇಲೆ ಆಧಾರವಾಗಿರುತ್ತದೆಂದು ಸ್ಪಷ್ಟವಾಗುತ್ತದೆ. ಆತನ ನಿರ್ಮಲ ಭಕ್ತಿ, ನಿರ್ಮಲ ಹೃದಯ - ಇವುಗಳ ಮೇಲೆಯೇ ಸರ್ವೇಶ್ವರನ ಕೃಪೆ ಆಧಾರಗೊಂಡಿರುವುದು. ಆದ್ದರಿಂದಲೇ ಕೋಟೀಶ್ವರರು, ರಾಜಾಧಿರಾಜರು, ಪಂಡಿತರು ಭಗವಂತನ ಅನುಗ್ರಹವನ್ನು ಹೊಂದುವಲ್ಲಿ, ಅವನ ದಯೆಗೆ ಪಾತ್ರರಾಗುವಲ್ಲಿ ವಿಫಲರಾಗುವರು. ಚಿಕ್ಕ ಕವಡೆಯೂ ಇಲ್ಲದ ಕೌಪೀನಧಾರಿಗಳು ಪರಮಾತ್ಮನ ಅಪಾರ ಕೃಪೆಗೆ ಪಾತ್ರರಾಗುವುದು ಚರಿತ್ರೆಯಲ್ಲಿ ಕಂಡುಬರುತ್ತಿದೆ. ಭಕ್ತಿ, ಚಿತ್ತ ಶುದ್ಧಿ-ಎನ್ನುವ ಈ ಎರಡೇ ಭಗವದ್ದೃಷ್ಟಿಯಲ್ಲಿ ಪ್ರಧಾನವಾದವುಗಳೇ ಆಗಲಿ ಬೇರೆಯವಲ್ಲ. 'ಅಶ್ನಾಮಿ' ಎಂದು ಹೇಳುವುದರಿಂದ ಅಂತಹ ಭಕ್ತಿಯಿಂದ ಅರ್ಪಿಸಿದ್ದನ್ನು ಪರಮಾತ್ಮನು ಗ್ರಹಿಸುವುದಷ್ಟೇ ಅಲ್ಲದೆ ಅನುಭವಿಸುವವನೆಂದು, ಭುಜಿಸುವವನೆಂದು ಸ್ಪಷ್ಟವಾಗುತ್ತದೆ. ಆಹಾ! ಭಕ್ತರ ಮೇಲೆ ಭಗವಂತನಿಗೆ ಎಷ್ಟು ಕರುಣೆಯಿದೆಯೋ ನೋಡಿ!

'ಯಂ' ಎನ್ನುವ ಪದವನ್ನು ಪ್ರಯೋಗಿಸಿರುವುದರಿಂದ ಯಾರಾದರೂ ಸರಿಯೇ - ಜಾತಿ ಮತ ಕುಲಗಳ ವಿಚಕ್ಷಣೆಯಿಲ್ಲದೆ ಧನಿಕ ದರಿದ್ರರ ತಾರತಮ್ಯವಿಲ್ಲದೆ, ಸ್ತ್ರೀ ಪುರುಷರೆನ್ನುವ ಭೇದವಿಲ್ಲದೆ- (ಭಕ್ತಿಯಿಂದ ಕೂಡಿ ನಿರ್ಮಲ ಚಿತ್ತನಾಗಿದ್ದರೆ ಸಾಕು) ಅವರು ಕೊಟ್ಟಿದ್ದನ್ನು ಸರ್ವೇಶ್ವರನು ಸ್ವೀಕರಿಸುವನೆಂದು ಅರ್ಥವಾಗುತ್ತದೆ.

ಭಕ್ತಿ ಹಾಗು, ಹೃದಯಶುದ್ಧಿಗಳು ಮೋಕ್ಷ ಪ್ರಯಾಣದ ಟಿಕೆಟ್‌ನಂತಹವು. ಟಿಕೆಟ್ ಕೈಯಲ್ಲಿದ್ದರೆ ಎಷ್ಟು ಬಡವರಾದರೂ, ಅಲ್ಪ ಕುಲಸ್ಥರಾದರೂ ರೈಲುಗಾಡಿಯಲ್ಲಿ ನಿಶ್ಚಿಂತೆಯಿಂದ, ನಿರ್ಭಯವಾಗಿ ಪ್ರಯಾಣಮಾಡಿ ಗಮ್ಯಸ್ಥಾನವನ್ನು ಸೇರಬಲ್ಲರು. ಒಂದು ಪಕ್ಷ ಟಿಕೆಟ್ ಇಲ್ಲದಿದ್ದರೆ ಎಷ್ಟೇ ಧನವಂತರು, ಅಧಿಕಾರಸ್ಥರು, ಪಂಡಿತರು ಅಥವ ಸೌಂದರ್ಯವಂತರಾದರು ಅವರನ್ನು ರೈಲಿನಿಂದ ಇಳಿಸಿಬಿಡುವರು. ಅವರು ಗಮ್ಯ ಸ್ಥಾನವನ್ನು ಸೇರಲಾಗುವುದಿಲ್ಲ. ಮೋಕ್ಷ ಪ್ರಯಾಣವೂ ಇಂತಹುದೇ. ಆದ್ದರಿಂದ ಭಗವತ್ಕೃಪೆಗೆ ಮೋಕ್ಷಪ್ರಾಪ್ತಿಗೆ ಭಕ್ತಿ ಹಾಗು ಚಿತ್ತ ನೈರ್ಮಲ್ಯಗಳು ಅತಿ ಪ್ರಧಾನವಾದವುಗಳಾಗಿವೆ. ಈ ವಿಷಯವನ್ನು ಭಗವಂತನು ಈ ಶ್ಲೋಕದ ಮೂಲಕ ಸ್ಪಷ್ಟಗೊಳಿಸಿದ್ದಾನೆ. ಮುಕ್ತಿಗೆ ಅರ್ಹತೆ, ಯೋಗ್ಯತೆ (Merit) ಪ್ರಧಾನವೇ ಆಗಲಿ ಬೇರೆಯ ವಿಷಯಗಳು ಅಲ್ಲವೆಂದು ಇಲ್ಲಿ ಸ್ಪಷ್ಟಪಡಿಸಲಾಗಿದೆ. ಇಂತಹ ಬೋಧೆಗಳಿಂದ ಪ್ರಪಂಚದಲ್ಲಿ ಪ್ರತಿಯೊಬ್ಬರೂ ದೈವಮಾರ್ಗದಲ್ಲಿ ಪ್ರೇರೇಪಿತರಾಗುವ ಅವಕಾಶವೇರ್ಪಡುತ್ತದೆ. ದೇವರ ಮಕ್ಕಳೆಂದು ಮುದ್ರೆ ಹಾಕಿಸಿಕೊಂಡವರು ಎಲ್ಲೂ ಇರುವುದಿಲ್ಲ. ಅನನ್ಯಭಕ್ತಿಯುಳ್ಳವರೇ, ನಿರ್ಮಲ ಚಿತ್ತವುಳ್ಳವರೇ ದೇವರ ಮಕ್ಕಳು. ಅಂತಹವರನ್ನೇ ಆತನು ಕರುಣಿಸುವನು. ಅವರಿಗೆ ಆತ್ಮ ಜ್ಞಾನವನ್ನು ಪ್ರಸಾದಿಸುವನು.

**'ಯಮೇವೈಷವೃಣುತೇ ತೇನ ಲಭ್ಯ**
**ಸ್ತಸ್ಯೈಷ ಆತ್ಮಾ ವಿವೃಣುತೇ ತನೂಂ ಸ್ವಾಮ್'**

ಎನ್ನುವ ಉಪನಿಷತ್ ವಾಕ್ಯ ಈ ಸತ್ಯವನ್ನೇ ತಿಳಿಸುತ್ತದೆ.

| | | |
|---|---|---|
| ಭಗವಂತನಿಗೆ | ಪತ್ರ - ವಿದುರ, ದ್ರೌಪದಿ | ಭಕ್ತಿಯಿಂದ ಅರ್ಪಿಸಿ ಕೃತಾರ್ಥರಾದರು |
| | ಪುಷ್ಪ - ಗಜೇಂದ್ರನು | |
| | ಫಲ - ಶಬರಿ | |
| | ತೋಯ - ರಂತೀದೇವನು | |

ಪ್ರ : ಭಗವಂತನು ಏನನ್ನು ಸ್ವೀಕರಿಸುವನು?

ಉ : ಭಕ್ತಿಯಿಂದ ನಿರ್ಮಲಚಿತ್ತದಿಂದ ಕೂಡಿದ ಯಾವ ಚಿಕ್ಕ ವಸ್ತುವನ್ನಾಗಲಿ (ಪತ್ರ, ಪುಷ್ಪ, ಜಲ) ನೀಡಿದರೆ ಪ್ರೀತಿಯಿಂದ ಸ್ವೀಕರಿಸುವನು.

ಪ್ರ : ಆದ್ದರಿಂದ ಭಗವತ್ಕೃಪೆಯನ್ನು ಸಂಪಾದಿಸಬೇಕೆಂದರೆ ಏನು ಆವಶ್ಯಕ?

ಉ : ೧) ಭಕ್ತಿ ೨) ಚಿತ್ತಶುದ್ಧಿ-ಎನ್ನುವ ಎರಡೂ ಆವಶ್ಯಕ.

**ಅ||** ಯಾವ ಕರ್ಮವನ್ನು ಮಾಡಿದರೂ ಭಗವದರ್ಪಣ ಭಾವದಿಂದ ಮಾಡಬೇಕೆಂದು ಉದ್ಘೋಷಿಸಲಾಗಿದೆ

**೨೭ ಯತ್ಕರೋಷಿ ಯದಶ್ನಾಸಿ ಯಜ್ಜುಹೋಷಿ ದದಾಸಿ ಯತ್**
**ಯತ್ತಪಸ್ಯಸಿ ಕೌಂತೇಯ ತತ್ಕುರುಷ್ವ ಮದರ್ಪಣಮ್**

**ಅರ್ಥ:** ಕೌಂತೇಯ=ಓ ಅರ್ಜುನಾ! ಯತ್=ಯಾವುದನ್ನು; ಕರೋಷಿ= ಮಾಡುತ್ತಿದ್ದೀಯೊ; ಯತ್=ಯಾವುದನ್ನು; ಅಶ್ನಾಸಿ= ತಿನ್ನುತ್ತಿದ್ದೀಯೊ; ಯತ್=ಯಾವುದನ್ನು; ದದಾಸಿ=ದಾನ ಮಾಡುತ್ತಿರುವೆಯೋ; ಯತ್ ತಪಸ್ಯಸಿ=ಯಾವ ತಪಸ್ಸನ್ನು ಮಾಡುತ್ತಿದ್ದೀಯೊ; ತತ್=ಅದನ್ನು; ಮದರ್ಪಣಮ್=ನನಗೆ ಅರ್ಪಣೆ; ಕುರುಷ್ವ=ಮಾಡು;

**ತಾ||** ಓ ಅರ್ಜುನಾ! ನೀನು ಏನು ಮಾಡಿರೂ, ಭುಜಿಸಿದರೂ, ಹೋಮ ಮಾಡಿದರೂ, ದಾನ ಮಾಡಿದರೂ, ತಪಸ್ಸು ಮಾಡಿದರೂ, ಅದನ್ನು ನನಗೆ ಅರ್ಪಿಸು.

**ವ್ಯಾಖ್ಯೆ:** ಮನುಜರು ತಾವು ಮಾಡುವ ಸಮಸ್ತ ಕಾರ್ಯಗಳನ್ನು ಈಶ್ವರಾರ್ಪಣ ಬುದ್ಧಿಯಿಂದ ಮಾಡಬೇಕು. ಫಲವನ್ನು ಕೋರದೆ ಕಾರ್ಯವನ್ನು ಭಗವದರ್ಪಣೆ ಮಾಡಬೇಕು. ಹಾಗೆ ಮಾಡುವುದರಿಂದ ಉಂಟಾಗುವ ಫಲವನ್ನು ಮುಂದಿನ ಶ್ಲೋಕದಲ್ಲಿ ವಿವರಿಸಲಾಗಿದೆ. ಅಂತಹವನು ಆಯಾ ಕರ್ಮ ಬಂಧಗಳಿಂದ ಬಿಡುಗಡೆ ಹೊಂದಿ ಪರಮಾತ್ಮನನ್ನೇ ಹೊಂದುವನು. ಆತನ ಹೃದಯ ಮಾಲಿನ್ಯರಹಿತವಾಗಿ ಆತನು ಪರಬ್ರಹ್ಮವನ್ನು ಸಾಕ್ಷಾತ್ಕರಿಸಿಕೊಳ್ಳುವನು. ಆದ್ದರಿಂದ ಈ ಪ್ರಕಾರವಾಗಿ ಸಮಸ್ತ ಕರ್ಮಗಳನ್ನು ಭಗವದರ್ಪಣೆ ಮಾಡುವುದು ಮೋಕ್ಷ ಪ್ರಾಪ್ತಿಗೆ, ಆತ್ಮಸಾಕ್ಷಾತ್ಕರಕ್ಕೆ ಸುಲಭೋಪಾಯವಾಗಿದೆ. 'ಏನು ಮಾಡಿದರೂ' ಎಂದು ಹೇಳಿರುವುದು, 'ಪಾಪಕಾರ್ಯವನ್ನು ಮಾಡಿದರೂ' ಎಂದು ಅರ್ಥವಲ್ಲ. ಏಕೆಂದರೆ, ಪಾಪಕಾರ್ಯಗಳನ್ನು ಭಗವಂತನಿಗೆ ಯಾರೂ ಸಮರ್ಪಿಸುವುದಿಲ್ಲವಲ್ಲ! ಹಾಗೆಯೇ 'ಏನು ತಿಂದರೂ' ಅಂದ ಕಡೆ ನಿಷಿದ್ಧಾಹಾರವನ್ನು ಕೂಡ ಎಂದು ಅನ್ವಯಿಸಿಕೊಳ್ಳಬಾರದು.

ಕರ್ಮಮಾಡದೆ ಯಾವ ಜೀವಿಯೂ ಒಂದು ಕ್ಷಣವೂ ಇರಲಾರನು. ಮುಂಜಾನೆ ಎದ್ದು ರಾತ್ರಿ ಮಲಗುವವರೆಗೆ ಎಷ್ಟೋ ಕಾರ್ಯಗಳನ್ನು ಜೀವಿಯು ಮಾಡಬೇಕಾಗುವುದು. ಆದರೆ ಅವುಗಳನ್ನು 'ಕೃಷ್ಣಾರ್ಪಣಮಸ್ತು' 'ಬ್ರಹ್ಮಾರ್ಪಣಮಸ್ತು' ಎಂದು ಏಕೆ ಮಾಡಬಾರದು? ಹಾಗೆ ಮಾಡುವುದರಿಂದ ಭಗವದನುಗ್ರಹ ಸಿದ್ಧಿಸುವುದೇ ಅಲ್ಲದೆ ಕರ್ಮ ಬಂಧನವೂ ನಾಶವಾಗುವುದು. ಆದ್ದರಿಂದ ಮೋಕ್ಷಕ್ಕೆ ಇದು ಸುಲಭೋಪಾಯವಾದ ಉಪಾಯ. ಮುಖ್ಯವಾಗಿ ಕಾರ್ಯಗಳಲ್ಲಿ ಸದಾ ನಿರತನಾಗಿರುವ ಗೃಹಸ್ಥನಿಗೆ ಇದು ಎಷ್ಟೋ ಉಪಯೋಗವಾಗುವುದು.

**'ಯದ್ಯತ್ಕರ್ಮಕರೋಮಿ ತತ್ದಖಿಲಂ ಶಂಭೋ ತವಾರಾಧನಮ್'-** ಓ ಪರಮ ಶಿವ! ನಾನು (ನಡೆದರೂ, ಕುಳಿತರೂ, ತಿನ್ನುತ್ತಿದ್ದರೂ) ಏನು ಮಾಡಿದರೂ ಅದೆಲ್ಲಾ ನಿನ್ನ ಆರಾಧನೆಯೇ' ಎಂದು ಒಬ್ಬ ಭಕ್ತನು ಭಗವಂತನನ್ನು ಕುರಿತು ಹೇಳಿರುವುದು ಈ ಸಂದರ್ಭದಲ್ಲಿ ಸ್ಮರಣೆಸುವುದು ಒಳಿತು.

ಪ್ರ : ಜೀವಿಯು ಯಾವ ರೀತಿಯ ಕರ್ಮಗಳನ್ನು ಆಚರಿಸಬೇಕು?

ಉ: ತಾನು ಏನು ಮಾಡಿದರೂ, ಭುಜಿಸಿದರೂ, ಹೋಮಮಾಡಿದರೂ, ದಾನ ಮಾಡಿದರೂ, ತಪಸ್ಸು ಮಾಡಿದರೂ ಎಲ್ಲವನ್ನೂ ಭಗವದರ್ಪಣಾ ಭಾವನೆಯಿಂದ ಮಾಡಬೇಕು. ಈಶ್ವರಾರ್ಪಣ ಬುದ್ಧಿಯಿಂದ ಕರ್ಮಗಳ ನ್ನಾಚರಿಸಬೇಕು ಎನ್ನುವುದು ಭಾವ.

ಪ್ರ : ಹಾಗೆ ಮಾಡುವುದರಿಂದ ಉಂಟಾಗುವ ಫಲವೇನು?

ಉ: ಕರ್ಮಬಂಧ ವಿಮುಕ್ತಿ, ಭಗವತ್ಪ್ರಾಪ್ತಿ

**ಅ||** ಹಾಗೆ ಸಮಸ್ತ ಕರ್ಮಗಳನ್ನು ಭಗವದರ್ಪಣೆ ಮಾಡುವುದರಿಂದ ಉಂಟಾಗುವ ಫಲಗಳನ್ನು ಹೇಳಲಾಗುತ್ತಿದೆ-

**೨೮ ಶುಭಾಶುಭಫಲೈರೇವಂ ಮೋಕ್ಷ್ಯಸೇ ಕರ್ಮಬಂಧನೈಃ**
**ಸಂನ್ಯಾಸಯೋಗಯುಕ್ತಾತ್ಮಾ ವಿಮುಕ್ತೋ ಮಾಮುಪೈಷ್ಯಸಿ**

**ಅರ್ಥ:** ಏವಂ=ಈ ಪ್ರಕಾರವಾಗಿ; ಸಂನ್ಯಾಸಯೋಗಯುಕ್ತಾತ್ಮಾ= 'ಕರ್ಮಸಮರ್ಪಣೆ' ಯೋಗದಿಂದ ಕೂಡಿದವನಾಗಿ; ಶುಭಾಶುಭ ಫಲೈಃ= ಇಷ್ಟಾನಿಷ್ಟಗಳ (ಇಲ್ಲವೆ ಪುಣ್ಯಾಪಾಪಗಳ) ಫಲಗಳ; ಕರ್ಮಬಂಧನೈಃ= ಕರ್ಮಬಂಧನಗಳಿಂದ; ಮೋಕ್ಷ್ಯಸೇ=ಬಿಡಿಸಿಕೊಂಡಂತವನಾಗಿ; ವಿಮುಕ್ತಃ= (ಹಾಗೆ) ಮುಕ್ತನಾದಂತವನಾಗಿ; ಮಾಂ=ನನ್ನನ್ನು; ಉಪೈಷ್ಯಸಿ=ಹೊಂದುತ್ತೀಯೆ.

**ತಾ||** ಈ ಪ್ರಕಾರವಾಗಿ 'ಕರ್ಮಸಮರ್ಪಣೆ' ಯೋಗದಿಂದ ಕೂಡಿದವನಾಗಿ ಶುಭಾಶುಭ ಫಲಗಳುಳ್ಳ ಕರ್ಮಗಳ ಬಂಧನದಿಂದ ನೀನು ವಿಮುಕ್ತನಾಗುವೆ. ಹಾಗೆ ಬಿಡುಗಡೆಯಾದನಂತರ ನನ್ನನ್ನು ಹೊಂದುವೆ.

**ವ್ಯಾಖ್ಯೆ:** ಹಿಂದಿನ ಶ್ಲೋಕದಲ್ಲಿ ಹೇಳಲ್ಪಟ್ಟ ಸರ್ವ ಕರ್ಮಫಲತ್ಯಾಗದ ಹಾಗು ಭಗವದರ್ಪಿತ ಕರ್ಮದ ಫಲವನ್ನು ಇಲ್ಲಿ ಹೇಳಲಾಗುತ್ತಿದೆ. 'ಸಂನ್ಯಾಸ' ವೆಂದರೆ ಕರ್ಮಫಲ ಸಂನ್ಯಾಸವೆಂದೇ ಅರ್ಥ. 'ಕರ್ಮಗಳನ್ನು ಮಾಡಿ ಅವುಗಳನ್ನು ನನಗೆ ಅರ್ಪಿಸು' ಎಂದು ಭಗವಂತನು ಹೇಳಿರುವುದರಿಂದ ಸಂನ್ಯಾಸಕ್ಕೆ ಇಲ್ಲಿ ಫಲತ್ಯಾಗವೆಂದೇ ಅರ್ಥವಾಗುವುದಲ್ಲದೆ ಕರ್ಮತ್ಯಾಗವೆಂದಲ್ಲ. ಈ ಪ್ರಕಾರವಾಗಿ ಸಮಸ್ತ ಕರ್ಮಫಲಗಳನ್ನು ಭಗವದರ್ಪಣೆ ಮಾಡುವುದರಿಂದ ಜೀವಿಯು ಶುಭಾಶುಭ ಫಲಗಳುಳ್ಳ ಕರ್ಮಗಳ ಬಂಧನದಿಂದ ವಿಮುಕ್ತನಾಗಿ ಪರಮಾತ್ಮನನ್ನು ಹೊಂದುವನೆಂದು ಇಲ್ಲಿ ಹೇಳಲಾಗಿದೆ. 'ಮುಕ್ತನಾಗಿ' ಎಂದು ಹೇಳದೆ 'ವಿಮುಕ್ತನಾಗಿ' ಎಂದು ಹೇಳಿರುವುದರಿಂದ ಅಂತಹವನು ಕರ್ಮಬಂಧನದಿಂದ ಪೂರ್ತಿಯಾಗಿ ವಿಮುಕ್ತಿಗೊಳ್ಳುವನೆಂದು ಅರ್ಥವಾಗುತ್ತದೆ.

ಸಾಮಾನ್ಯವಾಗಿ ಜನರು 'ಮೋಕ್ಷ' 'ಮೋಕ್ಷ' ಎಂದು ಹಂಬಲಿಸುತ್ತಿರುವರು. ಆ ಮೋಕ್ಷಕ್ಕೆ ಅರ್ಥವೇನು? ಬಂಧ-ವಿಮೋಚನೆಯೇ ಮೋಕ್ಷ. ಯಾವ ಬಂಧ? ಕರ್ಮಬಂಧ; ಯಾವ ಕರ್ಮಗಳು? ಶುಭಾಶುಭ ಫಲವನ್ನುಂಟುಮಾಡುವ ಕರ್ಮಗಳು. ಅಂತಹ ಕರ್ಮರೂಪ ಬಂಧನ ದಿಂದ ಬಿಡುಗಡೆ ಹೊಂದುವುದೇ ಮೋಕ್ಷ. ಆಗ ಮೋಕ್ಷವು 'ಸಂನ್ಯಾಸ' ಯೋಗದಿಂದ ಲಭ್ಯವಾಯಿತು ಎಂದು ಹೇಳುವುದಕ್ಕಿಂತ, ಕರ್ಮಫಲವನ್ನು ಈಶ್ವರಾರ್ಪಣಭಾವದಿಂದ ತ್ಯಜಿಸುವುದರಿಂದಲೇ ಲಭ್ಯವಾಯಿತು ಎಂದು ಹೇಳಬೇಕಾಗುವುದು. ಇದನ್ನೇ ನಿಷ್ಕಾಮ ಕರ್ಮಯೋಗವೆನ್ನುವರು. ಆದ್ದರಿಂದ ಶುಭಾಶುಭಫಲಗಳೆರಡನ್ನೂ ಇಲ್ಲಿ ಬಂಧನಗಳನ್ನಾಗಿ ವರ್ಣಿಸಲ್ಪಟ್ಟಿರುವುದು ಗಮನಾರ್ಹ. ಅಶುಭ ಕರ್ಮ, ಅಶುಭ ಫಲಗಳು, ಬಂಧಕರವಾದವುಗಳೆಂದು ಎಲ್ಲರಿಗೂ ತಿಳಿದ ವಿಷಯವೇ. ಆದರೆ ಅತೀತ ಪರಮಾತ್ಮ ದೃಷ್ಟಿಯಲ್ಲಿ ದೃಶ್ಯವಾಗಲೀ ತದಂತರ್ಗತವಾಗಿರುವ ಯಾವ ಕರ್ಮವೇ ಆಗಲಿ, ಯಾವ ಫಲವೇ ಆಗಲಿ ಮಿಥ್ಯವೇ ಆಗಿರುವುದರಿಂದ ಶುಭಕರ್ಮವು ಹಾಗೂ ಶುಭಫಲವೂ ಅದರಲ್ಲಿಯೇ ಅಂತರ್ಗತವಾಗಿ ಅವೂ ಬಂಧಕರ ಎಂದು ಹೇಳಲಾಗಿದೆ. ಆದ್ದರಿಂದ ಅದನ್ನೂ ಕೂಡ ದಾಟಿ ಸತ್ಯವಸ್ತುವಾದ ಪರಮಾತ್ಮನನ್ನು ಸೇರಬೇಕೆನ್ನುವುದು ತಾತ್ಪರ್ಯ (ಆದರೆ ಶುಭಕರ್ಮರೂಪವಾದ ಬಂಧ ಮುಮುಕ್ಷುವಿಗೆ ಪ್ರಮಾದಕರವಾದುದಲ್ಲ. ಮೊದಮೊದಲು ಅದನ್ನು ಆಶ್ರಯಿಸಿ, ಕ್ರಮವಾಗಿ ಅದನ್ನೂ ದಾಟಿ ನಿರ್ವಿಕಲ್ಪ ಸ್ಥಿತಿಗೆ ಹೋಗಬಹುದು. ಈ ಪ್ರಕಾರವಾಗಿ ಕರ್ಮಗಳನ್ನು, ತತ್ಫಲಗಳನ್ನು ಈಶ್ವರಾರ್ಪಣೆ

ಮಾಡುವುದರಿಂದ ಆ ಕರ್ಮಸಂಬಂಧವಾದ ಬಂಧನಗಳಿಂದ ಜೀವಿಯು ವಿಮುಕ್ತನಾಗಿ ಪರಮಾತ್ಮನನ್ನು ಸೇರುತ್ತಿದ್ದಾನೆ. ಫಲಾಭಿಸಂಧಿರಹಿತವಾಗಿ ಕರ್ಮಗಳನ್ನು ಆಚರಿಸುವುದರಿಂದ, ಇಲ್ಲವೆ ಕರ್ಮಗಳನ್ನು ಭಗವದರ್ಪಣೆ ಮಾಡುವುದರಿಂದ ಆ ಕರ್ಮಗಳಲ್ಲಿಯ ದೋಷಗಳು ನಿವೃತ್ತಿಯಾಗುತ್ತವೆ. ಆದರಿಂದ ಜೀವಿಯು ಕರ್ಮಬಂಧವಿಮುಕ್ತನಾಗಿ ಭಗವತ್ಸಾಯುಜ್ಯವನ್ನು ಹೊಂದುತ್ತಿದ್ದಾನೆ.

ಪ್ರ : ಕರ್ಮ ಬಂಧನವು ಎಂತಹದು.

ಉ : ಶುಭಾಶುಭ ಫಲರೂಪವಾದುದು.

ಪ್ರ : ಅಂತಹ ಕರ್ಮಬಂಧನದಿಂದ ಜೀವಿಯು ಹೇಗೆ ವಿಮುಕ್ತನಾಗುವನು?

ಉ : ತಾನು ಆಚರಿಸುವ ಸರ್ವ ಕರ್ಮಗಳನ್ನು ಈಶ್ವರಾರ್ಪಣೆ ಮಾಡುವುದರಿಂದ. ಆದರಿಂದ ಕರ್ಮಬಂಧ ವಿಮುಕ್ತಿ, ಪರಮಾತ್ಮ ಪದಪ್ರಾಪ್ತಿ- ಎನ್ನುವ ಎರಡು ಸತ್ಫಲಿತಗಳು ಆತನಿಗೆ ಲಭಿಸುವುವು.

**ಅ||** ಸರ್ವಜೀವಿಗಳಲ್ಲಿಯೂ ತನಗೆ ಸಮಭಾವವಿದೆಯೆಂದೂ ಅವರವರ ಭಕ್ತಿಯ ಮೇರೆಗೆ ಅವರವರು ಮುಕ್ತಿ ಹೊಂದುವರೆಂದು ಭಗವಂತನು ಹೇಳುತ್ತಿದ್ದಾನೆ.

**೨೯ ಸಮೋಽಹಂ ಸರ್ವಭೂತೇಷು ನ ಮೇ ದ್ವೇಷ್ಯೋಽಸ್ತಿ ನ ಪ್ರಿಯಃ**
**ಯೇ ಭಜಂತಿ ತು ಮಾಂ ಭಕ್ತ್ಯಾ ಮಯಿ ತೇ ತೇಷು ಚಾಪ್ಯಹಮ್**

**ಅರ್ಥ:** ಅಹಂ=ನಾನು, ಸರ್ವಭೂತೇಷು=ಸಮಸ್ತ ಪ್ರಾಣಿಗಳಲ್ಲಿ; ಸಮಃ= ಸಮವಾಗಿರುವೆನು; ಮೇ=ನನಗೆ; ದ್ವೇಷ್ಯಃ=ದ್ವೇಷಿಸಬಹುದಾದವನು; ನ ಅಸ್ತಿ=ಇಲ್ಲ; ಪ್ರಿಯಂ=ಇಷ್ಟವಾದವನು; ನ=ಇಲ್ಲ; ಯೇತು=ಯಾರಾದರೆ; ಮಾಂ=ನನ್ನನ್ನು; ಭಕ್ತ್ಯಾ=ಭಕ್ತಿಯಿಂದ; ಭಜಂತಿ=ಸೇವಿಸುತ್ತಾರೋ; ತೇ= ಅವರು; ಮಯಿ=ನನ್ನಲ್ಲಿ (ವರ್ತಂತೇ=ಇದ್ದಾರೆ); ತೇಷು ಚ=ಅವರಲ್ಲಿ; ಅಹಂ ಅಪಿ=ನಾನು (ವರ್ತೇ=ಇದ್ದೇನೆ).

**ತಾ||** ನಾನು ಸಮಸ್ತ ಪ್ರಾಣಿಗಳಲ್ಲಿ ಸಮನಾಗಿರುತ್ತೇನೆ. ನನಗೆ ಶತ್ರುವೂ ಇಲ್ಲ, ಮಿತ್ರನೂ ಇಲ್ಲ. ಯಾರು ನನ್ನನ್ನು ಭಕ್ತಿಯಿಂದ ಸೇವಿಸುವರೋ ಅವರು ನನ್ನಲ್ಲಿ ಮತ್ತು ನಾನು ಅವರಲ್ಲಿ ಇರುವೆನು.

**ವ್ಯಾಖ್ಯೆ:** ಸಮಸ್ತ ಚರಾಚರ ಪ್ರಾಣಿಕೋಟಿಗಳಲ್ಲಿ ಭಗವಂತನು ಸಮನಾಗಿ ಇರುವನು. ಆತನ ದೃಷ್ಟಿಯಲ್ಲಿ ಎಲ್ಲರೂ ಸಮವೇ. ಆತನಿಗೆ ಒಬ್ಬನು ಪ್ರಿಯನು, ಮತ್ತೊಬ್ಬನು ಅಪ್ರಿಯನು ಇರುವುದಿಲ್ಲ. ಎಲ್ಲರೂ ಅವನ ಮಕ್ಕಳೇ; ಎಲ್ಲರಲ್ಲಿಯೂ ಆತನಿಗೆ ಸಮಾನ ವಾತ್ಸಲ್ಯವಿರುವುದು. ಆದರೆ ಲೋಕದಲ್ಲಿ ಕೆಲವರು ಸುಖಿಗಳಾಗಿ, ಮತ್ತೆ ಕೆಲವರು ದುಃಖಿಗಳಾಗಿ ಇರಲು ಕಾರಣವೇನು? ಭಗವಂತನಿಗೆ ಈ ಪಕ್ಷಪಾತವು ಸರಿಯೇ? ಭಗವಂತನಿಗೆ ಯಾರ ಮೇಲೂ ಪಕ್ಷಪಾತವಿಲ್ಲ. ಆದ್ದರಿಂದ ಜೀವಿಗಳು ಅವರವರು ಮಾಡಿದ ಕರ್ಮಗಳನ್ನನುಸರಿಸಿ ಆಯಾ ಸುಖದುಃಖಾದಿ ಫಲಗಳನ್ನು ಅನುಭವಿಸುತ್ತಿದ್ದಾರೆ. ದೇವರು ಎಲ್ಲರಲ್ಲಿಯೂ ಸಮನಾಗಿರುವನು. ಆದರೆ ದೇವರಲ್ಲಿ ಎಲ್ಲರೂ ಸಮನಾಗಿಲ್ಲ. ಕೆಲವರು ಪುಣ್ಯವನ್ನು, ಮತ್ತೆ ಕೆಲವರು ಪಾಪವನ್ನು ಆಚರಿಸುವುದರಿಂದ, ತತ್ಫಲಿತವಾಗಿ, ಸುಖದುಃಖಗಳನ್ನು ಅನುಭವಿಸುತ್ತಿದ್ದಾರೆ. ಒಬ್ಬರಿಗೆ ಒಳ್ಳೆಯದನ್ನು ಮಾಡುವವರು, ಭಗವಂತನನ್ನು ಭಕ್ತಿಯಿಂದ ಆರಾಧಿಸುವವರು, ಚಿತ್ತಶುದ್ಧಿಗಾಗಿ ಪ್ರಯತ್ನಮಾಡುವವರು ಸುಖವನ್ನು ಹೊಂದುವರು. ಪರರಿಗೆ ಕೇಡು ಬಯಸುವವರು, ದೇವರನ್ನು ಭಜಿಸದವರು, ಮಲಿನಚಿತ್ತರು ದುಃಖವನ್ನು ಹೊಂದುವರು. ಇದು ಪ್ರಕೃತಿಯಲ್ಲಿ ಅನುಲ್ಲಂಘನೀಯವಾದ ನಿಯಮ. ಇದರಿಂದ ಜೀವಿಗಳ ಸುಖದುಃಖಗಳಲ್ಲಿ ಭಗವಂತನಿಗೆ ಯಾವ ಬಾಧ್ಯತೆಯೂ ಇಲ್ಲವೆಂದು ಸ್ಪಷ್ಟವಾಗುತ್ತದೆ. ಸೂರ್ಯಪ್ರಕಾಶವು ಎಲ್ಲೆಲ್ಲೂ ಸಮನಾಗಿದ್ದರೂ ಮಣ್ಣಿನ ಮೇಲೆ ಪ್ರಕಾಶಿಸದೆ ಕನ್ನಡಿಯಲ್ಲಿ ಚೆನ್ನಾಗಿ ಪ್ರಕಾಶಿಸುವುದಲ್ಲವೇ! ಹಾಗೆಯೇ ಭಗವತ್ಕರುಣೆ, ಸರ್ವತ್ರ ಬೆಳಗುತ್ತಿದ್ದರೂ, ಯಾರ ಭಕ್ತಿಯಿಂದ ಭಗವಂತನನ್ನು ಸೇವಿಸುವರೋ ಅವರೇ ಅದನ್ನು ಸ್ವೀಕರಿಸಬಲ್ಲರು. ಸಮುದ್ರದ ಮೇಲೆ ಗಾಳಿ ಎಷ್ಟು ಬೀಸುತ್ತಿದ್ದರೂ ಯಾರ (Sails) ಹಾಯಪಟ ವಿಸ್ತರಿಸಲ್ಪಟ್ಟಿದೆಯೋ ಅವರ ದೋಣಿಯೇ ಕದಲುವುದು! ಆದ್ದರಿಂದ ಭಗವತ್ಕರುಣೆ ಎನ್ನುವ ಗಾಳಿ ಸರ್ವತ್ರ ಬೀಸುತ್ತಿದ್ದರೂ ಅವರವರ ಹೃದಯದ (Sails) ಹಾಯಪಟ ಬಿಚ್ಚಿಕೊಂಡು ಭಗವನ್ಮುಖವಾಗಿ ನಿಂತಿರುವರು ಮಾತ್ರ ಮೋಕ್ಷವೆನ್ನುವ ಗಮ್ಯಸ್ಥಾನವನ್ನು ಶೀಘ್ರವಾಗಿ ಸೇರಬಲ್ಲರು. ಎಲ್ಲ ಸುಖಗಳಿಗಿಂತ ಉತ್ತಮವಾದ ಸುಖ ಭಗವತ್ಪ್ರಾಪ್ತಿಯೇ ಆಗಿದೆ. ಯಾರು ನಿರಂತರವಾಗಿ ಪರಮಾತ್ಮನನ್ನು ಸೇವಿಸುವರೋ, ಆರಾಧಿಸುವರೋ ಅವರು ಅದನ್ನು ಹೊಂದುವರು. ಆ ವಿಷಯವನ್ನು ಈ ಶ್ಲೋಕದಲ್ಲಿ ಸ್ಪಷ್ಟವಾಗಿ ನಿರೂಪಿಸಲಾಗಿದೆ. 'ಯಾರು ಭಕ್ತಿಯಿಂದ ನನ್ನನ್ನು ಆರಾಧಿಸುವರೋ ಅವರು ನನ್ನಲ್ಲಿ, ನಾನು ಅವರಲ್ಲಿ ಇರುವೆನು' ಎಂದು ಭಗವಂತನು ಇಲ್ಲಿ ಘೋಷಿಸಿರುವನು. ಆಹಾ! ಭಕ್ತಿಯ ಮಹಿಮೆ ಎಂತಹದು? ಅದರ ಫಲವು ಎಷ್ಟು ಅಪಾರವಾಗಿದೆ! ಸಾಕ್ಷಾತ್ ಭಗವತ್ಪ್ರಾಪ್ತಿ ಎನ್ನುವ ಮಹೋನ್ನತ ಫಲ ಭಕ್ತಿಪೂರ್ವಕವಾದ ಭಗವತ್ಸೇವೆಯೆನ್ನುವ ಕ್ರಿಯೆಯಿಂದ ಲಭಿಸುವುದು. ಆದ್ದರಿಂದ ಪ್ರತಿ ಮಾನವನು ಅಂತಹ ಪರಮ ಭಕ್ತಿಯನ್ನು ಅವಲಂಬಿಸಿ ಪರಮಾತ್ಮನನ್ನು ಸೇವಿಸಬೇಕು. 'ಭಜಂತಿ' ಎನ್ನುವ ಪದಕ್ಕೆ 'ಭಕ್ತ್ಯಾ' ಎನ್ನುವ ಪದವನ್ನು ಸೇರಿಸಿರುವುದರಿಂದ ಸಾಮಾನ್ಯವಾದ ಆರಾಧನೆ, ಸೇವೆ ಸಾಲದೆಂದೂ, ಭಕ್ತಿಯಿಂದ ಕೂಡಿದ ಸೇವೆ ಅವಶ್ಯಕವೆಂದು ಸ್ಪಷ್ಟವಾಗುತ್ತದೆ. ಮತ್ತೆ **'ಮಯಿ ತೇ ತೇಷುಚಾಪ್ಯಹಮ್'** ಎಂದು ಹೇಳುವುದರಿಂದ ಅಂತಹ ಭಕ್ತರು ಭಗವಂತನಲ್ಲಿ, ಭಗವಂತನು ಅಂತಹ ಭಕ್ತರಲ್ಲಿ ಜೀವಿಸುವರು ಎಂದು ತಿಳಿಯುವುದು. ದೇವರೇ ಬಂದು ಜೀವಿಸುವುದೆಂದರೆ ಅವರ ಶರೀರ ಒಂದು ದೇವಮಂದಿರವಾಗುವುದು. ಅವರು ದೇವರಾಗಿ ಹೋಗುವರು. ಆಗಲೇ ಜೀವಿಯು ಶಿವನಾಗುವನು. ದೇಹವು ದೇವಾಲಯವಾಗುವುದು. ಯಾರು ದೇವರಲ್ಲಿ ನಿವಸಿಸುವರೋ ಅವರಲ್ಲಿ ದೇವರು ನಿವಸಿಸುವನು. ಆದ್ದರಿಂದ 'ನನಗೆ ದುಃಖವುಂಟಾಗುತ್ತಿದೆ' ಎಂದು ಹೇಳುವುದು ಅಪ್ರಸ್ತುತ.

ದುಃಖಕ್ಕೆ ನಿವಾರಣೋಪಾಯವು ಒಂದೇ. ದೇವರನ್ನು ತನ್ನ ಹೃದಯ ಮಂದಿರಕ್ಕೆ ಆಹ್ವಾನಿಸಬೇಕು. ಎಲ್ಲಿ ಪರಮಾತ್ಮನಿರುವನೋ ಅಲ್ಲಿ ಸುಖವು, ಐಶ್ವರ್ಯವು, ವಿಜಯವೂ ತಪ್ಪದೆ ಇರುವುದು.* ಆದ್ದರಿಂದ ಸುಖವನ್ನು ಅಪೇಕ್ಷಿಸುವವನು ಅನನ್ಯ ಭಕ್ತಿಯನ್ನು ತಪ್ಪದೆ ಆಶ್ರಯಿಸಬೇಕಾಗಿರುವುದು.

ಪ್ರ : ಸರ್ವಜೀವಿಗಳ ಕಡೆಗೆ ಭಗವಂತನ ದೃಷ್ಟಿ ಹೇಗಿರುವುದು?

ಉ : ಸಮನಾಗಿರುವುದು.

---

* ಯತ್ರ ಯೋಗೇಶ್ವರಃ ಕೃಷ್ಣೋ ಯತ್ರ ಪಾರ್ಥೋ ಧನುರ್ಧರಃ|| ತತ್ರ ಶ್ರೀರ್ವಿಜಯೋ ಭೂತಿರ್ಧ್ರುವಾ ನೀತಿರ್ಮತಿರ್ಮಮಾ (೧೮-೭೮)

ಪ್ರ : ಆದರೆ ಜೀವಿಗಳಲ್ಲಿ ಕೆಲವರಿಗೆ ಸುಖ, ಕೆಲವರಿಗೆ ದುಃಖ ಏಕೆ ಉಂಟಾಗುತ್ತದೆ?

ಉ : ಅವರವರು ಮಾಡುವ ಕರ್ಮಗಳಿಂದ ಹಾಗಾಗುತ್ತದೆ. ಯಾರು ಭಗವಂತನಲ್ಲಿರುವರೋ (ದೇವರನ್ನು ಸೇವಿಸುವರೋ) ಅವರಲ್ಲಿ ಭಗವಂತನಿರುವನು. ಆದ್ದರಿಂದ ಅಂತಹವರಿಗೆ ಮಾತ್ರ ಸುಖವುಂಟಾಗುವುದು. ಬೇರೆಯವರಿಗಲ್ಲ.

ಪ್ರ : ಭಗವಂತನನ್ನು ಯಾವ ಪ್ರಕಾರವಾಗಿ ಸೇವಿಸಬೇಕು?

ಉ : ಭಕ್ತಿಯಿಂದ

ಪ್ರ : ಭಗವಂತನು ಯಾರಲ್ಲಿ ವಿಶೇಷವಾಗಿ ನಿವಸಿಸುವನು?

ಉ : ಅನನ್ಯ ಭಕ್ತಿಯಿಂದ ಆತನನ್ನು ಸೇವಿಸುವವರಲ್ಲಿ. (ಸಾಮಾನ್ಯವಾಗಿ ಎಲ್ಲರಲ್ಲಿಯೂ) 'ಸತ್ತಾ ಸಾಮಾನ್ಯ' ರೂಪದಲ್ಲಿ ಪರಮಾತ್ಮ ವ್ಯಾಪಿಸಿದ್ದರೂ ತನ್ನನ್ನು ಸೇವಿಸುವವರಲ್ಲಿ ವಿಶೇಷವಾಗಿ ಅಭಿವ್ಯಕ್ತಿ ಹೊಂದಿ ಅವರಿಗೆ ಮೋಕ್ಷ ಸುಖವನ್ನು ಕೊಡುವನು ಎಂದು ಭಾವ.

**೮॥** ಪಾಪಿಯಾದರೂ ತನ್ನನ್ನು ಭಕ್ತಿಯಿಂದ ಸೇವಿಸಿದರೆ ಆತನು ಪುಣ್ಯಾತ್ಮನೇ ಆಗುವನು ಎಂದು ಹೇಳಲಾಗುತ್ತಿದೆ-

**೩೦ ಅಪಿ ಚೇತ್ಸುದುರಾಚಾರೋ ಭಜತೇ ಮಾಮನನ್ಯಭಾಕ್**
**ಸಾಧುರೇವ ಸ ಮಂತವ್ಯಃ ಸಮ್ಯಕ್ ವ್ಯವಸಿತೋ ಹಿ ಸಃ**

**ಅರ್ಥ:** ಸುದುರಾಚರಃ ಅಪಿ=ಅನೇಕ ದುರಾಚರಗಳನ್ನು ಹೊಂದಿರುವ ವನಾಗಿದ್ದರೂ; ಅನನ್ಯಭಾಕ್=ಅನನ್ಯ ಭಕ್ತಿಯಿಂದ (ಇತರೆ ಯಾವುದರ ಮೇಲೆಯೂ ಭಕ್ತಿಯನ್ನಿಡದೆ, ಆಶ್ರಯಿಸದೆ); ಮಾಂ=ನನ್ನನ್ನು; ಭಜತೇ ಚೇತ್= ಭಜಿಸಿದರೆ; ಸಃ=ಆತನು; ಸಾಧುಃ ಯೇವ=ಸತ್ಪುರುಷನೆಂದೇ (ಇಲ್ಲವೇ, ಶ್ರೇಷ್ಠನೆಂದೇ); ಮಂತವ್ಯಃ=ತಿಳಿಯಲ್ಪಡಬೇಕಾದದ್ದು; ಹಿ=ಏಕೆಂದರೆ; ಸಃ=ಆತನು: ಸಂಯಕ್=ಸ್ಥಿರವಾದ (ಇಲ್ಲವೆ ಉತ್ತಮ); ವ್ಯವಸಿತಃ= ಮನೋನಿಶ್ಚಯವನ್ನು ಹೊಂದಿರುವನು.

**ತಾ॥** ಅತ್ಯಂತ ದುರಾಚಾರಿಯಾಗಿದ್ದರೂ, ಅನನ್ಯಭಕ್ತಿಯುಳ್ಳವನಾಗಿ, (ಇತರ ಯಾವುದರ ಮೇಲೆಯೂ ಭಕ್ತಿಯನ್ನಿಡದೆ, ಆಶ್ರಯಿಸದೆ) ನನ್ನನ್ನೇ ಭಜಿಸುವವನನ್ನು ಸತ್ಪುರುಷನೆಂದೇ (ಶ್ರೇಷ್ಟನೆಂದೇ) ತಿಳಿಯತಕ್ಕದ್ದು. ಏಕೆಂದರೆ ಆತನು ಸ್ಥಿರವಾದ (ಉತ್ತಮ) ಮನೋನಿಶ್ಚಯವುಳ್ಳವನಾಗಿರುತ್ತಾನೆ.

**ವ್ಯಾಖ್ಯೆ:** ಅತ್ಯಂತ ದುರಾಚಾರಿಯಾದರೂ, ಮನಸ್ಸಿನಲ್ಲಿ ಬದಲಾವಣೆ ತಂದುಕೊಂಡು ದೈವಮಾರ್ಗದಲ್ಲಿ ನಡೆದು ಪರಮಾತ್ಮನೇ ಪರಮಗತಿಯೆಂದು ನಂಬಿ ಇತರ ಯಾವುದನ್ನೂ ಚಿಂತಿಸದೆ ಆ ಪರಮಾತ್ಮನನ್ನೇ ಸದಾ ಬಯಸಿದರೆ ಆತನನ್ನು ಉತ್ತಮನೇ ಎಂದು ಹೇಳಲಾಗುತ್ತದೆ. ಆತನು ಮೊದಲು ದುರಾಚಾರಿಯಾಗಿದ್ದರೂ ಈಗ ಸಾಧುವೇ ಆಗುವನು. 'ದುರಾಚಾರಿ' ಎಂದು ಹೇಳದೆ 'ಸುದುರಾಚಾರಿ' ಎಂದು ಹೇಳುವುದರಿಂದ ಮಹಾಪಾಪಿಯಾದಾಗ್ಯೂ ಮನಸ್ಸನ್ನು ಪರಿವರ್ತಿಸಿಕೊಂಡು ಭಗವಂತನನ್ನು ಆಶ್ರಯಿಸಿದಲ್ಲಿ ಆತನು ಮಹಾಪುಣ್ಯಾತ್ಮನೇ ಆಗುವನು ಎಂದು ಭಾವ. ಏಕೆಂದರೆ, ಆತನು ಸತ್ಯವನ್ನು ಗಮನಿಸಿ, ಸರಿಯಾದ ಮಾರ್ಗವನ್ನು ಅವಲಂಬಿಸಿರುವನು. ಉತ್ತಮ ನಿಶ್ಚಯಕ್ಕೆ ಬಂದಿರುವನು. "ಪ್ರಪಂಚದಲ್ಲಿ ಪರಮಾತ್ಮನೊಬ್ಬನೇ ಸತ್ಯ, ಬೇರೆಯೆಲ್ಲವೂ ಅಸತ್ಯ, ಮಿಥ್ಯೆ ಹಾಗು ನಶ್ವರ. ಆದ್ದರಿಂದ ಅಸತ್ಯವಾದ ಕ್ಷಣಿಕವಾದ ಆತ್ಮೇತರ ವಸ್ತುಗಳನ್ನು ಅಂದರೆ ದೃಶ್ಯ ಪದಾರ್ಥಗಳನ್ನು ಬಿಟ್ಟು ಸತ್ಯವಾದ ಶಾಶ್ವತವಾದ ಪರಮಾತ್ಮನನ್ನೇ ಆಶ್ರಯಿಸಬೇಕು," ಎನ್ನುವುದು ಉತ್ತಮ ನಿಶ್ಚಯ. (ಸಮ್ಯಕ್-ವ್ಯವಸಿತಃ) ಆಗುವುದು.

'ಅನನ್ಯಭಾಕ್'- ಪರಮಾತ್ಮನನ್ನು ಬಿಟ್ಟು ಬೇರೆ ಯಾವುದನ್ನೂ ಆಶ್ರಯಿಸದವನು. ನಿರಂತರವೂ ದೈವವನ್ನು ಮಾತ್ರ ಚಿಂತಿಸುವವನು. ಅಂತಹ ಅನನ್ಯಭಕ್ತನ ಪಾಪವೆಲ್ಲವೂ ಪರಮಾತ್ಮ ಸೇವನೆಯಿಂದ ಒಂದು ಏಟಿಗೆ ಭಸ್ಮವಾಗಿ ಹೋಗಿ, ಇನ್ನು ನಿರ್ಮಲ ಹೃದಯಿಯಾಗುವನು. ಅನೇಕ ಸಾವಿರ ವರ್ಷಗಳಿಂದ ರಾಶಿ ರಾಶಿಯಾಗಿ ಬಿದ್ದ ಕೊರಡುಗಳು ಯಾವ ಪ್ರಕಾರವಾಗಿ ಒಂದು ಕಿಡಿಯಿಂದ ಭಸ್ಮೀಭೂತವಾಗುವುವೋ ಹಾಗೆಯೇ ಪರಮಭಕ್ತನ ಹಿಂದಿನ ಪಾಪಗಳೆಲ್ಲವೂ ಕ್ಷಣದಲ್ಲಿಯೇ ನಾಶವಾಗಿ ಆತನು ಪುಣ್ಯಾತ್ಮನಾಗುವನು. ವಾಲ್ಮೀಕಿಯೇ ಇದಕ್ಕೆ ದೃಷ್ಟಾಂತ. ಒಂದು ಗುಹೆಯಲ್ಲಿ ಎಷ್ಟು ಕಾಲದಿಂದ ಕತ್ತಲಿದ್ದರೂ ಒಂದು ಬೆಂಕಿಕಡ್ಡಿಯನ್ನು ಹತ್ತಿಸುವುದರಿಂದ ಅದೆಲ್ಲವೂ ಕ್ಷಣದಲ್ಲಿ ಮಾಯವಾಗಿ ಹೋದಂತೆ, ಅಜ್ಞಾನವಶವಾಗಿ ಪೂರ್ವದಲ್ಲಿ ತಾನು ಮಾಡಿದ ಪಾಪವೆಲ್ಲವೂ ಈಗಿನ ಭಗವದ್ಭಕ್ತಿಯಿಂದ ನಶಿಸಿಹೋಗಿ ಪಾಪಿಯು ಸಾಧುವಾಗುತ್ತಿದ್ದಾನೆ. ಸುದುರಾಚಾರಿ, ಪರಮ ಸದಾಚಾರಿಯಾಗುತ್ತಿದ್ದಾನೆ. ರಾಕ್ಷಸನು ದೇವನಾಗುತ್ತಿದ್ದಾನೆ. ಇಂತಹ ಮಹತ್ತರ ಪರಿಣಾಮವನ್ನು ತಂದಿರುವುದು ಏನು? ಭಗವದ್ಭಕ್ತಿ, ಸಮ್ಯಕ್-ಜ್ಞಾನ. ಈ ಭಾವವನ್ನೇ ಹಿಂದೆ-

**ಅಪಿ ಚೇದಸಿ ಪಾಪೇಭ್ಯಃ ಸರ್ವೇಭ್ಯಃ ಪಾಪಕೃತ್ತಮಃ**
**ಸರ್ವ ಜ್ಞಾನಪ್ಲವೇನೈವ ವೃಜಿನಂ ಸಂತರಿಷ್ಯಸಿ** (೪-೩೬)

ಎನ್ನುವ ಶ್ಲೋಕದಲ್ಲಿ ಗೀತಾಚಾರ್ಯನು ಹೇಳಿದ್ದಾನೆ. ಇದರಿಂದ ಮನುಜನು ಎಲ್ಲಾ ಕಾಲಗಳಲ್ಲಿಯೂ ಒಂದೇ ಸ್ಥಿತಿಯಲ್ಲಿ ಇರುವನೆಂದು ಹೇಳಲು ಸಾಧ್ಯವಿಲ್ಲ, ಹಾಗಿರಬೇಕೆಂದು ಇಚ್ಛಿಸುವುದೂ ಸಾಧುವಲ್ಲ. ಸತ್ಪ್ರಯತ್ನದಿಂದ ಸರ್ವರೂ ಉನ್ನತಪಥವನ್ನು ಕೈಹಿಡಿಯಬೇಕು. ಹಾಗೆ ಕೈಹಿಡಿಯಬೇಕೆನ್ನುವ ಬೋಧೆ ಪ್ರಚಲಿತವಾಗ ಬೇಕೆನ್ನುವುದು ಸ್ಪಷ್ಟವಾಗುತ್ತದೆ. ಪಾಪಿಯನ್ನು 'ನೀನು ಎಲ್ಲಾ ಕಾಲದಲ್ಲಿಯೂ ಪಾಪಿಯೇ' ಎನ್ನುವುದು ಘೋರಪಾತಕವೆಂದು ಇದರಿಂದ ಅರ್ಥವಾಗುತ್ತದೆ.

ಮತ್ತೆ ಪಾಪಿಯೂ ಕೂಡ ಭಗವದ್ಭಕ್ತಿಯಿಂದ ಪುಣ್ಯಾತ್ಮನಾಗುವನು ಎನ್ನುವುದಕ್ಕೆ ವಿಪರೀತ ಅರ್ಥವನ್ನು ಕಲ್ಪಿಸಿಕೊಂಡು, ಪಾಪವನ್ನು ಮಾಡಿ ನಂತರ ಭಕ್ತಿಯಿಂದ ನಿರ್ಮೂಲನ ಮಾಡಿಕೊಳ್ಳಬಹುದಲ್ಲ ಎಂದು ಎಂದೆಂದಿಗೂ ತಿಳಿಯಬಾರದು.

ಇಲ್ಲಿಯವರೆಗೆ ತಿಳಿಯದೆ ಮಾಡಿದ ಪಾಪವು ಈಗಿನ ಸನ್ಮಾರ್ಗಾವ ಲಂಬನದಿಂದ, ಅನನ್ಯಭಕ್ತಿಯಿಂದ, ನಿರ್ಮಲಜ್ಞಾನದಿಂದ ಭಸ್ಮೀ ಭೂತವಾಗಿ ಹೋಗವುದು ಹಾಗು ಮನುಜನು ಶುದ್ಧಾತ್ಮನಾಗುವನು ಎಂದು ಹೇಳುವ ಪ್ರಯತ್ನ ಇದು ಅಷ್ಟೇ. ಇಂತಹ ಅಭಯವಾಕ್ಯದಿಂದ ಸಾಮಾನ್ಯ ಜನಗಳಿಗೆ ಹುರುಪು ಹಾಗು ಧೈರ್ಯ ಉಂಟಾಗಬಲ್ಲದು. ಎಲ್ಲರಿಗೂ ಉನ್ನತಿ ಹೊಂದುವ ಅವಕಾಶಗಳು ಏರ್ಪಾಡಾಗುವುವು.

ದೈವಮಾರ್ಗವನ್ನು 'ಸಮ್ಯಕ್ ಮಾರ್ಗವೆಂದು' (ಉತ್ತಮ ಮಾರ್ಗವೆಂದು) ಹೇಳುವುದರಿಂದ, ಅದನ್ನು ಅನುಸರಿಸುವವನನ್ನು 'ಸಾಧು'

ಎಂದು ಹೇಳುವುದರಿಂದ ಪ್ರಾಪಂಚಿಕ ಮಾರ್ಗಗಳಿಗಿಂತ ಅದು ಎಷ್ಟೋ ಅಧಿಕ ಶ್ರೇಯೋದಾಯಕವೆಂದೂ, ಅನುಸರಣೀಯವೆಂದೂ ಬೋಧಿಸಿದಂತಾಗಿದೆ. ಆದ್ದರಿಂದ ಅಸಮ್ಯಕ್-ಮಾರ್ಗಗಳನ್ನು (ದೃಶ್ಯವೇ ಸತ್ಯವೆಂದು ನಂಬಿ ಅನುಸರಿಸುವ ಮಾರ್ಗವನ್ನು) ತ್ಯಜಿಸಿ, ಸಮ್ಯಕ್-ಮಾರ್ಗ (ಭಗವನ್ಮಾರ್ಗ)ವನ್ನೇ ಕೈಹಿಡಿಯಬೇಕು.

ಇಲ್ಲಿ 'ಸಾಧು' ಅಂದರೆ ಜಟಾಜೂಟ, ಕಾಷಾಯ ವಸ್ತ್ರಗಳನ್ನು ಧರಿಸಿದವನು ಎನ್ನುವ ಅರ್ಥವಲ್ಲ. 'ಸಾಧು' ಪದಕ್ಕೆ ಉತ್ತಮವೆಂದರ್ಥ. ಅಂದರೆ ಸನ್ಮಾರ್ಗಿಯೆಂದು ಭಾವ.

ಪ್ರ : ದುರ್ಮಾರ್ಗಿಯು ಸನ್ಮಾರ್ಗಿಯಾಗುವುದು ಹೇಗೆ?

ಉ : ಪರಮಾತ್ಮನನ್ನು ಅನನ್ಯ ಭಕ್ತಿಯಿಂದ ಸೇವಿಸುವುದರಿಂದ

ಪ್ರ : ಪ್ರಪಂಚದಲ್ಲಿ ಉತ್ತಮ ನಿಶ್ಚಯವು ಯಾವುದು?

ಉ : ಭಗವಂತನನ್ನು ಸತ್ಯವೆಂದು ನಂಬಿ ಆತನನ್ನು ಆಶ್ರಯಿಸುವುದು

**ಅ॥** ದೈವ ಭಕ್ತನು ಎಂದೆಂದಿಗೂ ಕೆಡುವುದಿಲ್ಲವೆಂದು (ಹೀನಗತಿಯನ್ನು ಹೊಂದವುದಿಲ್ಲವೆಂದು) ಹೇಳಲಾಗುತ್ತಿದೆ-

**೩೧ ಕ್ಷಿಪ್ರಂ ಭವತಿ ಧರ್ಮಾತ್ಮಾ ಶಶ್ವಚ್ಛಾಂತಿಂ ನಿಗಚ್ಛತಿ**
**ಕೌಂತೇಯ ಪ್ರತಿಜಾನೀಹಿ ನ ಮೇ ಭಕ್ತಃ ಪ್ರಣಶ್ಯತಿ.**

**ಅರ್ಥ:** (ಸಃ=ಆತನು); ಕ್ಷಿಪ್ರಂ=ಶೀಘ್ರವಾಗಿ; ಧರ್ಮಾತ್ಮಾ=ಧರ್ಮ ಬುದ್ಧಿಯುಳ್ಳವನು; ಭವತಿ=ಆಗುತ್ತಿದ್ದಾನೆ. ಶಶ್ವತ್=ಶಾಶ್ವತವಾದ; ಶಾಂತಿಂ=ಶಾಂತಿಯನ್ನು; ನಿಗಚ್ಛತಿ=ಹೊಂದುತ್ತಿದ್ದಾನೆ; ಕೌಂತೇಯ=ಓ ಅರ್ಜುನಾ! ಮೇ=ನನ್ನ; ಭಕ್ತಃ=ಭಕ್ತನು; ನ ಪ್ರಣಶ್ಯತಿ (ಇತಿ)=ಕೆಟ್ಟು ಹೋಗುವುದಿಲ್ಲ (ಹೀನಗತಿ ಹೊಂದುವುದಿಲ್ಲ) (ಎಂದು); ಪ್ರತಿ ಜಾನೀಹಿ= ಪ್ರತಿಜ್ಞಾಪೂರ್ವಕವಾಗಿ ತಿಳಿದುಕೋ.

**ತಾ॥** ಆತನು (ನನ್ನನ್ನು ಆಶ್ರಯಿಸಿದ ಪಾಪಾತ್ಮನು) ಶೀಘ್ರವಾಗಿ ಧರ್ಮಬುದ್ಧಿಯುಳ್ಳವನಾಗುತ್ತಿದ್ದಾನೆ. ಮತ್ತೆ ಶಾಶ್ವತವಾದ ಶಾಂತಿಯನ್ನು ಹೊಂದುತ್ತಿದ್ದಾನೆ. ಓ ಅರ್ಜುನಾ! 'ನನ್ನ ಭಕ್ತನು ಎಂದೆಂದೂ ಕೆಡುವುದಿಲ್ಲ, ಎಂದು ತಿಳಿದುಕೋ.

**ವ್ಯಾಖ್ಯೆ:** ಮೇಲೆ ತಿಳಿಸಿದ ಪ್ರಕಾರವಾಗಿ ಪಾಪಾತ್ಮನಾದರೂ ಭಗವಂತನನ್ನು ಪರಮ ಶರಣ್ಯವೆಂದು ನಂಬಿ ಭಜಿಸಿದಲ್ಲಿ ಶೀಘ್ರವಾಗಿ ಧರ್ಮಾತ್ಮನು ಹಾಗು ಪುಣ್ಯಾತ್ಮನಾಗುತ್ತಿದ್ದಾನೆ. ಮತ್ತೆ ಶಾಶ್ವತ ಶಾಂತಿಯನ್ನೂ ಪಡೆಯುತ್ತಿದ್ದಾನೆ. 'ಕ್ಷಿಪ್ರಂ'-ಶೀಘ್ರವಾಗಿ ಎಂದು ತಿಳಿಸಿರುವುದರಿಂದ ಅಂತಹ ಶಾಂತಿಯನ್ನು ಯಾವುದೋ ಕಾಲದಲ್ಲಿ ಮುಂದೆ ಹೊಂದುವನು ಎನ್ನುವ ಅರ್ಥವಲ್ಲವೆಂದು, ಭಕ್ತಿಯನ್ನು ಆಶ್ರಯಿಸಿದರೆ ತಕ್ಷಣ ಅದು ಲಭಿಸುವುದು ಎನ್ನುವುದು ಸ್ಪಷ್ಟವಾಗುತ್ತದೆ. ದೀಪ ಬೆಳಗಿಸಿದ ಮರುಕ್ಷಣವೇ ಕತ್ತಲು ಮಾಯವಾಗುವುದಲ್ಲವೇ! ದೈವ ಮಾರ್ಗದಲ್ಲಿ ಕೆಲವು ಜನರು 'ನಮಗೆ ಮೋಕ್ಷವು ಯಾವಾಗ ಲಭಿಸುವುದೋ' ಎಂದು ಸಂಶಯಗ್ರಸ್ತರಾಗಿರುವರು. ಅಂತಹ ಸಂಶಯಕ್ಕೆ ಭಗವಂತನು ಇಲ್ಲಿ ಆಸ್ಪದವಿಲ್ಲದೇ ಮಾಡಿರುತ್ತಾನೆ. 'ಅನನ್ಯ ಭಕ್ತಿಯಿಂದ ನೀವು ನನ್ನನ್ನು ಭಜಿಸಿದರೆ ಶೀಘ್ರವಾಗಿ ನಿಮಗೆ ಮೋಕ್ಷರೂಪ ಪರಮಶಾಂತಿ ಲಭಿಸುವುದು' ಎಂದು ಪರಮಾತ್ಮನು ಭಕ್ತರಿಗೆ ಇಲ್ಲಿ ಅಭಯವಿತ್ತಿದ್ದಾನೆ.

ಭಗವತ್ಸೇವನೆಯಿಂದ ಮನುಜನಿಗೆ ಎರಡು ಉತ್ಕೃಷ್ಟ ಫಲಗಳು ಒದಗುವುವು ಎಂದು ಇಲ್ಲಿ ಹೇಳಲಾಗಿದೆ- ೧) ಆತನು ಧರ್ಮಾತ್ಮನಾಗುವನು ೨) ಶಾಶ್ವತವಾದ ಶಾಂತಿಯನ್ನು ಪಡೆಯುವನು. ಆತನು ಧರ್ಮವಂತನಾಗಿ ಸದಾಚಾರಿಯಾಗಿರುವನು. ಅವನ ಒಂದು ಚಿಕ್ಕ ಕೋಶದಲ್ಲಿಯೂ ಅಧರ್ಮವು ವರ್ತಿಸದೆ ಆತನು ಪರಮಶಾಂತಿಯನ್ನು ಹೊಂದುವನು.

**ತೇಷಾಂ ಶಾಂತಿಶ್ಶಾಶ್ವತೀ ನೇತರೇಷಾಮ್**

ಎನ್ನುವ ಉಪನಿಷತ್ತಿನ ವಾಕ್ಯ ಈ ಸತ್ಯವನ್ನೇ ಸಾರುತ್ತದೆ. ದೃಶ್ಯವಸ್ತುವಿನ ಬಾಲ ಕಚ್ಚಿದರೆ ಶಾಂತಿ ಪಲಾಯನವಾಗುವುದು. ದೈವದ ಶರಣು ಹೊಂದಿದರೆ ಶಾಂತಿಯು ಸಿದ್ಧಿಸುವುದು.

ಇನ್ನು ಈ ಶ್ಲೋಕದ ಎರಡನೆಯ ಪಾದದಲ್ಲಿ 'ನ ಮೇ ಭಕ್ತಃ ಪ್ರಣಶ್ಯತಿ' (ನನ್ನ ಭಕ್ತನು ಎಂದೆಂದಿಗೂ ದುರ್ಗತಿ ಹೊಂದುವುದಿಲ್ಲ) ಎನ್ನುವ ಗಂಭೀರಸತ್ಯವನ್ನು ಭಗವಂತನು ಉಚ್ಚರಿಸಿದನು. ಈ ಅಷ್ಟಾಕ್ಷರಿ ಮಹಾ ಮಂತ್ರವನ್ನು ಮುಮುಕ್ಷುಗಳು ನಿರಂತರ ಸ್ಮೃತಿಪಥದಲ್ಲಿರಿಸಿಕೊಳ್ಳಬೇಕು. ಅಧೈರ್ಯ, ನಿರುತ್ಸಾಹ ಉಂಟಾದಾಗ ಇದನ್ನು ಸ್ಮರಿಸುತ್ತಿರಬೇಕು. ಪರಮಾರ್ಥ ರಂಗದಲ್ಲಿ ಪ್ರವೇಶಿಸುವ ಮೊದಲು ಕೆಲವರಿಗೆ ಕೆಲವು ಸಂಶಯಗಳು ಉಂಟಾಗುತ್ತಿರುತ್ತವೆ. ಭಕ್ತಿಯಿದ್ದಲ್ಲಿ ಪ್ರಯೋಜನ ವಿರುವುದೋ ಇಲ್ಲವೋ, ಅದರಿಂದ ಸದ್ಗತಿ ಉಂಟಾಗುವುದೋ ಇಲ್ಲವೋ ಎನ್ನುವ ಸಂಶಯ. ಅಂತಹವರ ಎಲ್ಲಾ ಸಂದೇಹಗಳನ್ನು ಗೀತಾಚಾರ್ಯನು ಈ ಶ್ಲೋಕದಲ್ಲಿ ದೂರಮಾಡಿದನು. 'ದೈವವನ್ನು ಆಶ್ರಯಿಸಿದವನು ಎಂದೆಂದಿಗೂ ಕೆಡುವುದಿಲ್ಲ, ಆತನು ಉತ್ತಮ ಸ್ಥಿತಿಯನ್ನೇ ಹೊಂದುವನು', ಎಂದು ಅಸಂದಿಗ್ಧವಾಗಿ ಹೇಳಿರುತ್ತಾನೆ. ಕಲ್ಪವೃಕ್ಷವನ್ನು ಆಶ್ರಯಿಸಿದವನಿಗೆ ದುಃಸ್ಥಿತಿ ಹೇಗೆ ಉಂಟಾಗುವುದು? ಗಂಗಾನದಿಯನ್ನು ಆಶ್ರಯಿಸಿದವನಿಗೆ ದಾಹವೆಲ್ಲಿರುವುದು?

'ಪ್ರತಿಜಾನೀಹಿ' (ನೀನು ಪ್ರತಿಜ್ಞೆ ಮಾಡು) (ನೀನು ದೃಢವಾಗಿ ನಿಶ್ಚಯಿಸು) ಎಂದು ಅರ್ಜುನನನ್ನು ಆಜ್ಞಾಪಿಸುವುದರಿಂದ ತನ್ನ ಭಕ್ತನು ಕೆಡುವುದಿಲ್ಲವೆನ್ನುವ ವಾಕ್ಯ ಎಷ್ಟು ಸತ್ಯವೋ ತಿಳಿಯುತ್ತದೆ. ಇದು ಸತ್ಯವೆಂದು ಭಗವಂತನು ಪ್ರತಿಜ್ಞಾದೇಶದಿಂದ ಹೇಳುವುದರಿಂದ ಆ ವಾಕ್ಯದ ಯಥಾರ್ಥವು ಬಲವಾಗಿ ಮನದಟ್ಟಾಗುತ್ತದೆ. ಭಕ್ತರ ಸದ್ಗತಿಗಳ ಬಗ್ಗೆ ಭಗವಂತನು ಜನರಿಗೆ ಎಂತಹ ವಿಶ್ವಾಸವನ್ನು ಉಂಟುಮಾಡುತ್ತಿದ್ದಾನೋ ನೋಡಿ! ಆದ್ದರಿಂದ ಇನ್ನು ಜನರೆಲ್ಲರೂ ಪ್ರತಿಜ್ಞಾಪೂರ್ವಕವಾದ ಈ ಭಗವದ್ವಾಕ್ಯದ ಮೇಲೆ ಪೂರ್ಣ ವಿಶ್ವಾಸವಿಟ್ಟು ತಮ್ಮ ಹೃದಯದಲ್ಲಿಯ ಸಂಶಯಗಳನ್ನು ಹೊರದೂಡಿ ಸರ್ವೇಶ್ವರನನ್ನು ಅತ್ಯಧಿಕವಾಗಿ ಸೇವಿಸಿ ಕೃತಾರ್ಥರಾಗಬೇಕು!

ಪ್ರ : ದೈವವನ್ನು ಆಶ್ರಯಿಸಿದ ಪಾಪಿ ಏನಾಗುವನು?

ಉ : ಧರ್ಮಾತ್ಮನಾಗುವನು

ಪ್ರ : ಎಷ್ಟು ಕಾಲದಲ್ಲಿ?

ಉ : ಶೀಘ್ರವಾಗಿ

ಪ್ರ : ಅಂತಹ ಭಗವದಾರಾಧನೆಯಿಂದ ಉಂಟಾಗುವ ಫಲವೇನು?

ಉ : ಶಾಶ್ವತವಾದ ಶಾಂತಿ.

ಪ್ರ : ಆದ್ದರಿಂದ ಶಾಶ್ವತ ಶಾಂತಿ ಲಭಿಸುವ ಉಪಾಯವೇನು?

ಉ : ಅನನ್ಯ ಭಕ್ತಿಯಿಂದ ಭಗವತ್ ಸೇವನೆ ಮಾಡುವುದು.

ಪ್ರ : ಭಗವದ್ಭಕ್ತನಿಗೆ ದುರ್ಗತಿ ಉಂಟಾಗುವುದೇ?

ಉ: ಯಾವಾಗಲೂ ಉಂಟಾಗುವುದಿಲ್ಲ, ಈ ಸತ್ಯವನ್ನು ಪ್ರತಿಜ್ಞೆಮಾಡಿ ಹೇಳಬಹುದು.

**ಅ||** ಭಗವದಾಶ್ರಯದಿಂದ ಉಚ್ಚ, ನೀಚ ಭೇದಗಳಿಲ್ಲದೆ ಸರ್ವರೂ ಮುಕ್ತಿ ಹೊಂದುವರು ಎಂದು ಹೇಳಲಾಗುತ್ತಿದೆ-

**೩೨ ಮಾಂ ಹಿ ಪಾರ್ಥ ವ್ಯಪಾಶ್ರಿತ್ಯ ಯೇಽಪಿ ಸ್ಯುಃ ಪಾಪಯೋನಯಃ**
**ಸ್ತ್ರಿಯೋ ವೈಶ್ಯಾಸ್ತಥಾ ಶೂದ್ರಾಸ್ತೇಽಪಿ ಯಾಂತಿ ಪರಾಂಗತಿಮ್.**

**ಅರ್ಥ:** ಪಾರ್ಥ=ಓ ಅರ್ಜುನಾ! ಯೇ=ಯಾರು; ಪಾಪಯೋನಯಃ ಅಪಿ= ಪಾಪಜನ್ಮ ಹೊಂದಿದವರು; ಸ್ಯುಃ=ಆಗುವರು; ತೇ ಅಪಿ=ಅವರು; ಸ್ತ್ರಿಯಃ= ಸ್ತ್ರಿಯರು; ವೈಶ್ಯಾಃ=ವೈಶ್ಯರು; ತಥಾ=ಹಾಗೆಯೇ; ಶೂದ್ರಾಃ=ಶೂದ್ರರು; ಮಾಂ=ನನ್ನನ್ನು; ವ್ಯಪಾಶ್ರಿತ್ಯ=ಆಶ್ರಯಿಸಿ; ಪರಾಂ ಗತಿಮ್=ಸರ್ವೋತ್ತಮ ಪದವನ್ನು (ಮೋಕ್ಷವನ್ನು); ಯಾಂತಿಹಿ=ನಿಶ್ಚಯವಾಗಿ ಹೊಂದುತ್ತಿದ್ದಾರೆ.

**ತಾ||** ಓ ಅರ್ಜುನಾ! ಪಾಪಜನ್ಮ ಹೊಂದಿರುವವರೂ, ಸ್ತ್ರೀಯರೂ, ವೈಶ್ಯರೂ, ಹಾಗೆಯೇ ಶೂದ್ರರೂ ನನ್ನನ್ನು ಆಶ್ರಯಿಸಿ ಸರ್ವೋತ್ತಮ ಪದವಿಯನ್ನು (ಮೋಕ್ಷವನ್ನು) ನಿಶ್ಚಯವಾಗಿ ಹೊಂದುತ್ತಿದ್ದಾರೆ.

**ವ್ಯಾಖ್ಯೆ:** ಪಾಪಜನ್ಮಗಳಲ್ಲಿ ಹುಟ್ಟಿದ್ದರೂ, ಇಲ್ಲವೆ ಸ್ತ್ರೀ, ವೈಶ್ಯ, ಶೂದ್ರಾದಿಗಳು ಆಗಿದ್ದರೂ ಭಗವಂತನನ್ನು ಆಶ್ರಯಿಸಿ ಧ್ಯಾನಾದಿಗಳನ್ನು ಸಮರ್ಪಿಸುವುದರಿಂದ ಅವರೂ ಸಹ ಪರಮಗತಿಯಾದ ಮೋಕ್ಷವನ್ನು ಹೊಂದುವರೆಂದು ಇಲ್ಲಿ ಹೇಳಲಾಗಿದೆ. ಅಂತಹವರೇ ಭಕ್ತಿಯಿಂದ ಮೋಕ್ಷವನ್ನು ಹೊಂದುತ್ತಿರಬೇಕಾದರೆ ಇನ್ನು ಬೇರೆಯವರ ವಿಷಯ ಹೇಳಬೇಕಾಗಿಲ್ಲ ಎಂದು ಅರ್ಥ. ಇಲ್ಲಿ 'ಪಾಪಯೋನಯಃ' ಎನ್ನುವ ಪದವನ್ನು 'ಸ್ತ್ರೀ ವೈಶ್ಯಶೂದ್ರಾದಿ'ಗಳಿಗೆ ಅನ್ವಯಿಸಿ ಅರ್ಥ ಹೇಳುವುದು ಯುಕ್ತವಲ್ಲ. ಆ ಪದವನ್ನು ಬೇರೆ ಮಾಡಿ ಪಾಪಜನ್ಮಿಗಳು, ಮತ್ತೆ ಸ್ತ್ರೀವೈಶ್ಯಶೂದ್ರರು ಭಗವದಾಶ್ರಯದಿಂದ ಮುಕ್ತಿ ಹೊಂದುವರೆಂದು ಹೇಳುವುದೇ ಸಮುಚಿತವಾಗಿದೆ. ಶ್ರೀಧರ ಹಾಗೂ ಶಂಕರಾನಂದಗಿರಿಯವರು ಹಾಗೆಯೇ ಅರ್ಥ ಹೇಳಿರುವರು. ಏಕೆಂದರೆ ಸ್ತ್ರೀಯರನ್ನು ಪಾಪಜನ್ಮಿಗಳೆಂದರೆ ಅವರಿಂದ ಹುಟ್ಟುವ ಸಂತಾನವನ್ನು ಪಾಪಜನ್ಮಿಗಳೇ ಎಂದು ಹೇಳಬೇಕಾಗುವುದು. ಹಾಗಾದರೆ ಪ್ರಪಂಚದ ಜನರೆಲ್ಲರೂ (ಎಲ್ಲಾ ವರ್ಣದವರು ಹಾಗು ಪುಣ್ಯಾತ್ಮರ ಸಹಿತ) ಪಾಪಿಗಳು ಆಗಬೇಕಾಗುತ್ತದೆ. ಅದು ಅಸಂಗತ. ಆದ್ದರಿಂದ ಈ ಅರ್ಥವು ಸಮಂಜಸ ವಾಗಿಲ್ಲ, ಪುರುಷರಂತೆ ಸ್ತ್ರೀಯರಿಗೂ ಕೂಡ ಬ್ರಹ್ಮವಿದ್ಯಾಧಿಕಾರ ಇದೆಯೆಂದೂ ಅವರೂ ಸಹ ಪರಮಾರ್ಥ ಸಾಧನೆಗಳನ್ನು ಅವಲಂಬಿಸಿ ಮುಕ್ತಿ ಹೊಂದ ಬಹುದೆಂದು ಈ ಶ್ಲೋಕದ ದ್ವಾರ ಸ್ಪಷ್ಟವಾಗಿ ನಿರೂಪಿಸಲಾಗಿದೆ. ಔಷಧಿಯನ್ನು ಸೇವಿಸಲು ರೋಗಿಗಳೆಲ್ಲರೂ ಅರ್ಹರೇ! ಅವರು ಪುರುಷರಾಗಲಿ, ಸ್ತ್ರೀಯರಾಗಲಿ, ಯಾವ ಜಾತಿಯವರಾಗಲಿ, ಮತದವರಾಗಲಿ! ಹಾಗೆಯೇ ಭವರೋಗಭೇಷಜವಾದ ಈ ಬ್ರಹ್ಮವಿದ್ಯೆಯನ್ನೂ ಗ್ರಹಿಸಬೇಕು. ಅದ್ದರಿಂದಲೇ ಭಗವಂತನು ಈ ಶ್ಲೋಕದಲ್ಲಿ ವೈಶ್ಯ ಶೂದ್ರರನ್ನು ಹೆಸರಿಸಿ ಜಾತಿ ಭೇದವನ್ನೂ, ಸ್ತ್ರೀಯರನ್ನು ಹೆಸರಿಸಿ ಲಿಂಗಭೇದವನ್ನೂ, ಪಾಪಾತ್ಮರನ್ನು ಹೆಸರಿಸಿ ಗುಣಭೇದವನ್ನೂ, ಆಧ್ಯಾತ್ಮ ಪಥದಿಂದ ದೂರಗೊಳಿಸಿರುವನು. ಎಂತಹವನಾದರೂ ಸರಿಯೇ ಭಗವದಾಶ್ರಯದಿಂದ ಮುಕ್ತಿಗೊಳ್ಳಬಹುದೆಂದು ತಿಳಿಸಿದನು. ಇಂತಹ ವಿಶಾಲಭಾವವನ್ನು ಪ್ರಕಟಿಸುವುದರಲ್ಲೇ ಗೀತೆಯ ವಿಶೇಷತೆ ಇದೆ. ಸಂಕುಚಿತ ಭಾವಗಳಿಗೆ ಅತೀತವಾಗಿ ಗೀತೆ ಇದೆ. ಇಲ್ಲಿ ಯೋಗ್ಯತೆಗೆ ಪ್ರಾಧಾನ್ಯವಿದೆ.

ಯಾರು ಕನ್ನಡಿಯನ್ನು ಒರೆಸುವರೋ ಅವರ ಮುಖ ಅದರಲ್ಲಿ ಚೆನ್ನಾಗಿ ಕಾಣಿಸುವುದು. ಅದನ್ನು ಯಾರಾದರೂ ಒರೆಸಬಹುದು. ಉತ್ತಮ ಕುಲದಲ್ಲಿ ಜನ್ಮಿಸಿದ್ದರೂ ಕನ್ನಡಿಯನ್ನು ಒರೆಸದಿದ್ದರೆ ಅವರ ಮುಖ ಸರಿಯಾಗಿ ಕಾಣಿಸದು. ಅಲ್ಪಕುಲಸ್ಥನಾದರೂ ಅದನ್ನು ಒರೆಸಿದರೆ ಮುಖವು ಚೆನ್ನಾಗಿಯೇ ಗೋಚರಿಸುವುದು; ಭಗವದಾಶ್ರಯದಿಂದ ಮುಕ್ತಿ ಹೊಂದಿದವರಲ್ಲಿ ನೀಚ ಜಾತಿಯವನಾದ ಗುಹನನ್ನು, ಸ್ತ್ರೀಯರಲ್ಲಿ ಶಬರೀ ಗೋಪಿಕೆಯರನ್ನು, ವೈಶ್ಯರಲ್ಲಿ ಸಮಾಧಿ* ಮುಂತಾದವರನ್ನು, ಶೂದ್ರರಲ್ಲಿ ಸಂಜಯ ಮುಂತಾದವರನ್ನು ಸ್ಮರಿಸಬಹುದು.

*ಪರಾಂಗತಿಂ*- ಸರ್ವೋತ್ತಮ ಪದವಿಯೆಂದು ದೈವಪದವನ್ನು ವರ್ಣಿಸಿರುವುದರಿಂದ ಪ್ರಪಂಚದಲ್ಲಿ ಸಮಸ್ತ ಪದವಿಗಳಿಗಿಂತ, ಸಮಸ್ತ ಗತಿಗಳಿಗಿಂತ, ಪರಮಾತ್ಮ ಪದವಿ ಅತ್ಯಂತ ಶ್ರೇಷ್ಠವಾದುದೆಂದು ನಿಶ್ಚಿತವಾಗುತ್ತದೆ. ಆದ್ದರಿಂದ ಕ್ಷುದ್ರವಾದ ಕ್ಷಣಿಕ ಪ್ರಾಪಂಚಿಕ ಪದವಿಗಳಿಗಾಗಿ ಸಮಯವನ್ನು ವ್ಯರ್ಥಮಾಡದೆ ಭಕ್ತ್ಯಾದಿಗಳನ್ನು ಅವಲಂಬಿಸಿ ಶಾಶ್ವತ ದೈವಪದ ಪ್ರಾಪ್ತಿಗಾಗಿ ಸರ್ವರೂ ಯತ್ನಿಸಬೇಕಾಗಿದೆ.

ಪ್ರ : ದೈವಪದ ಎಂತಹದು?

ಉ: ಪ್ರಪಂಚದಲ್ಲಿಯ ಸಮಸ್ತಪದವಿಗಳಿಗಿಂತ, ಸ್ಥಾನಗಳಿಗಿಂತ ಸರ್ವೋತ್ತಮವಾದುದು.

ಪ್ರ : ಅದನ್ನು ಯಾರು ಹೊಂದಬಲ್ಲರು?

ಉ : ಭಗವಂತನನ್ನು ಆಶ್ರಯಿಸಿ ನಿರ್ಮಲಭಕ್ತಿಯಿಂದ ಧ್ಯಾನಗಳನ್ನು ಸಮರ್ಪಿಸುವವರೆಲ್ಲಾ ಹೊಂದಬಲ್ಲರು.

ಪ್ರ : ಈ ಮೋಕ್ಷ ಮಾರ್ಗದಲ್ಲಿ ಜಾತಿ ಮತ ಕುಲಲಿಂಗಗಳ ವಿಚಕ್ಷಣಾವಿದೆಯೇ?

ಉ : ಇಲ್ಲ. ಪಾಪಜನ್ಮಿಗಳು (ನೀಚಕುಲಸ್ಥರು) ಮತ್ತೆ ಸ್ತ್ರೀಯರು, ವೈಶ್ಯರು, ಶೂದ್ರರು ಎಲ್ಲರೂ ಭಗವತ್ಸಮಾಶ್ರಯದಿಂದ ಮುಕ್ತಿ ಹೊಂದಬಲ್ಲರು.

**ಅ||** ಈ ಪ್ರಪಂಚ ಅನಿತ್ಯವೆಂದು ದುಃಖಭೂಯಿಷ್ಠವೆಂದು ತಿಳಿಸುತ್ತಾ ವಿಮುಕ್ತಿಗಾಗಿ ತನ್ನನ್ನು ಭಜಿಸಬೇಕೆಂದು ಬೋಧಿಸಲಾಗಿದೆ.

**೩೩ ಕಿಂ ಪುನರ್ಬ್ರಾಹ್ಮಣಾಃ ಪುಣ್ಯಾ ಭಕ್ತಾ ರಾಜರ್ಷಯಸ್ತಥಾ**
**ಅನಿತ್ಯಮಸುಖಂ ಲೋಕಮಿಮಂ ಪ್ರಾಪ್ಯ ಭಜಸ್ವಮಾಮ್**

**ಅರ್ಥ:** ಪುಣ್ಯಾಃ=ಪುಣ್ಯಾತ್ಮರಾದ; ಬ್ರಾಹ್ಮಣಾಃ=ಬ್ರಾಹ್ಮಣರು; ತಥಾ= ಹಾಗೆಯೇ; ಭಕ್ತಾಃ=ಭಕ್ತರಾದ; ರಾಜರ್ಷಯಃ=ರಾಜರ್ಷಿಗಳು; ಪುನಃ ಕಿಮ್ (ವಕ್ತವ್ಯಮ್)=(ಭಗವದಾಶ್ರಯದಿಂದ ಉತ್ತಮಗತಿಯನ್ನು ಹೊಂದುವರೆಂದು) ಮತ್ತೆ ಹೇಳಬೇಕೇ?; ಅನಿತ್ಯಂ=ನಿತ್ಯವಲ್ಲದ (ಕ್ಷಣಭಂಗುರವಾದ); ಅಸುಖಂ= ಸುಖವಿಲ್ಲದ್ದು ಆದ; ಇಮಂ=ಈ; ಲೋಕಂ=ಲೋಕವನ್ನು (ಇಲ್ಲವೆ, ಶರೀರವನ್ನು); ಪ್ರಾಪ್ಯ=ಹೊಂದಿ; ಮಾಂ=ನನ್ನ ನ್ನು; ಭಜಸ್ವ= ಭಜಿಸುವುದು (ಸೇವಿಸುವುದು)

* 'ಸಮಾಧಿ' ಎನ್ನುವ ವೈಶ್ಯ ಭಕ್ತನ ಬಗ್ಗೆ ಮಾರ್ಕಂಡೇಯ ಪುರಾಣ (೮೧-೯೩)ದಲ್ಲಿಯ ಬ್ರಹ್ಮವೈವರ್ತ ಪುರಾಣ (೬೨-೬೩)ದಲ್ಲಿದೆ.

**ತಾ॥** ಇನ್ನು ಪುಣ್ಯಾತ್ಮರಾದ ಬ್ರಾಹ್ಮಣರ ವಿಷಯದಲ್ಲಿ ಭಕ್ತರಾದ ರಾಜರ್ಷಿಗಳ ವಿಷಯದಲ್ಲಿ ಬೇರೆ ಹೇಳಬೇಕೇ? (ಭಗವಾದಾಶ್ರಯದಿಂದ ಅವರು ತಪ್ಪದೆ ಮುಕ್ತಿಹೊಂದುವರೆಂದು ಭಾವ). ಆದ್ದರಿಂದ ಅಶಾಶ್ವತವಾದ ಸುಖರಹಿತವಾದ ಈ ಲೋಕವನ್ನು ಪಡೆದಿರುವ ನೀನು ನನ್ನನ್ನು ಭಜಿಸು,

**ವ್ಯಾಖ್ಯೆ:** ಪಾಪಾತ್ಮರೇ ಪರಮಾತ್ಮನನ್ನು ಸೇವಿಸಿ ಮುಕ್ತಿ ಹೊಂದುತ್ತಿರುವಾಗ ಇನ್ನು ಪುಣ್ಯಾತ್ಮರ ವಿಷಯದಲ್ಲಿ, ಭಕ್ತರ ವಿಷಯದಲ್ಲಿ ಬೇರೆ ಹೇಳಬೇಕೆ? ಎಂದು ಹೇಳಲಾಗುತ್ತಿದೆ. ಮತ್ತೆ ಸ್ತ್ರೀಯರು, ವೈಶ್ಯರು, ಶೂದ್ರರೂ ಕೂಡ ಭಗವಂತನನ್ನಾಶ್ರಯಿಸಿ ಪರಮಗತಿಯನ್ನು ಹೊಂದುತ್ತಿರಲು ಇನ್ನು ಬ್ರಾಹ್ಮಣ, ಕ್ಷತ್ರಿಯರ ವಿಷಯದಲ್ಲಿ ಮಾತೇ ಇಲ್ಲ; ಎಂದು ಇಲ್ಲಿ ಹೇಳಲಾಗಿದೆ. ಆದರೆ ಅವರು ಯಾರೇ ಆಗಲಿ ಪುಣ್ಯವನ್ನು, ಭಕ್ತಿಯನ್ನು ಸಂಪಾದಿಸಿದ ನಂತರವೇ ಅಂತಹ ಸದ್ಗತಿ ಪಡೆಯುವರೆಂದು 'ಪುಣ್ಯಾಃ' 'ಭಕ್ತಾಃ' ಎನ್ನುವ ಎರಡು ಪದಗಳ ಮೂಲಕ ವ್ಯಕ್ತವಾಗುತ್ತದೆ. ಅವು ಇಲ್ಲದವರು ಉತ್ತಮ ಕುಲದವರಾದರೂ ಮುಕ್ತಿಯನ್ನು ಹೊಂದುವುದಿಲ್ಲವೆಂದು ಅರ್ಥ. ಆದ್ದರಿಂದ ಮೋಕ್ಷಕಾಂಕ್ಷಿಗಳೆಲ್ಲರೂ ೧) ಪುಣ್ಯ ೨) ಭಕ್ತಿ ಎನ್ನುವ ಎರಡು ಪದಾರ್ಥಗಳನ್ನು ತಪ್ಪದೆ ಸಂಪಾದಿಸಬೇಕಾಗಿದೆ.

*'ರಾಜರ್ಷಯಃ'*- ಋಷಿತ್ವವನ್ನು (ಇಂದ್ರಿಯ ನಿಗ್ರಹಣಾದಿಗಳನ್ನು) ಹೊಂದಿದ ರಾಜರೆಂದು ಅರ್ಥ. ರಾಜ್ಯಪಾಲನೆಯಿಂದ ಅನೇಕ ಕಾರ್ಯಕಲಾಪಗಳಲ್ಲಿ ಲೋಕವ್ಯವಹಾರಗಳಲ್ಲಿ ಮುಳುಗಿದ್ದ ರಾಜರೇ ಋಷಿತ್ವವನ್ನು, ಭಕ್ತ್ಯಾದಿ ಸದ್ಗುಣಗಳನ್ನು ಪೂರ್ವದಲ್ಲಿ ಸಂಪಾದಿಸಿರಬೇಕಾದರೆ ಇನ್ನು ಸಾಮಾನ್ಯ ಕುಟುಂಬ ವ್ಯವಹಾರಗಳ ವ್ಯಕ್ತಿ ಋಷಿತ್ವವನ್ನು ಏಕೆ ಸಂಪಾದಿಸಲಾರನು? ಪ್ರಯತ್ನದಿಂದ ತಪ್ಪದೆ ಸಂಪಾದಿಸಬಹುದು.

*'ಅನಿತ್ಯಮಸುಖಂ ಲೋಕಂ'*- ಈ ಪ್ರಪಂಚವನ್ನು (ಈ ಜನ್ಮವನ್ನು ಇಲ್ಲವೆ ಈ ಶರೀರವನ್ನು) ಭಗವಂತನು ಅನಿತ್ಯವಾದದ್ದಾಗಿಯೂ, ಸುಖರಹಿತವಾದುದಾಗಿಯೂ ವರ್ಣಿಸಿದನು. ಈ ವಾಕ್ಯವನ್ನು ಸರ್ವರೂ ಚೆನ್ನಾಗಿ ಜ್ಞಾಪಕದಲ್ಲಿಟ್ಟುಕೊಳ್ಳಬೇಕು. ಜೀವನ ಕ್ಷಣಿಕ. ಶರೀರಗಳು ಯಾವಾಗಲಾದರೂ ಬಿದ್ದು ಹೋಗಲು ಸಿದ್ಧವಾಗಿವೆ. ಘಟವು ಯಾವೊತ್ತೇ ಆಗಲಿ ಮಣ್ಣಿನಲ್ಲಿ ಬೆರೆತು ಹೋಗುವುದು. ಹಾಗೆಯೇ ಈ ಪ್ರಪಂಚವಾಗಲಿ ದೇಹವಾಗಲಿ, ಅವುಗಳ ಕಾರಣವಾದ ಪಂಚಭೂತಗಳು ಕಾಲಕ್ರಮೇಣ ವಿಲೀನವಾಗುವುವು. ಆದ್ದರಿಂದಲೇ ಈ ಜಗತ್ತನ್ನು ಅನಿತ್ಯವೆಂದು ವರ್ಣಿಸಲಾಗಿದೆ. ದೇಹಾದಿಗಳು ಅನಿತ್ಯಗಳಾದುದರಿಂದ ಅವುಗಳಿಂದ ಮಾಡಬೇಕಾದ ಪರಮಾರ್ಥಕಾರ್ಯಗಳನ್ನು ಅತಿ ಶೀಘ್ರವಾಗಿ ಮಾಡಬೇಕು. ದೋಣಿ ದೃಢವಾಗಿರುವಾಗಲೇ ಅದರಿಂದ ಸಮುದ್ರವನ್ನು ದಾಟಬೇಕು. ಪ್ರಪಂಚ ಹಾಗು ದೇಹ ಶಾಶ್ವತವೆಂದು ತಿಳಿದು ಬೀಗುತ್ತಿರುವವರಿಗೆ ಕಣ್ಣು ತೆರೆಯುವಂತೆ ಮಾಡಲು ಭಗವಂತನು 'ಇದೆಲ್ಲವೂ ಅನಿತ್ಯ'ವಾದುದೆಂದು ಎಚ್ಚರಿಸಿದ್ದಾನೆ. (ಸಾವಾಗಲಿ, ವಿನಾಶವಾಗಲಿ ಜ್ಞಾಪಕಕ್ಕೆ ಬಂದಾಗ ಸಾಮಾನ್ಯವಾಗಿ ಮನುಜನು ಅವುಗಳಿಂದ ದೂರವಿರುವ ಮಾರ್ಗವನ್ನು ಯೋಚಿಸುತ್ತಾನೆ).

**ನಾಲ್ಪೇ ಸುಖಮಸ್ತಿ ಭೂಮಾ ವೈ ತತ್ಸುಖಮ್**

ಎನ್ನುವ ಉಪನಿಷತ್ತಿನ ವಾಕ್ಯದ ಅರ್ಥದಂತೆ ಅಲ್ಪವಾದ ದೃಶ್ಯವಸ್ತುವಿನಲ್ಲಿ ವಾಸ್ತವವಾಗಿ ಸುಖವಿಲ್ಲ. ಅನಂತವಾದ ಆತ್ಮದಲ್ಲೇ ಇದೆ. ಕ್ಷಣಿಕ ಪದಾರ್ಥದಲ್ಲಿ, ನಶ್ವರ ವಸ್ತುವಿನಲ್ಲಿ ಸುಖವೆನಿರುವುದು? ಸಾಮಾನ್ಯವಾಗಿ ಭೋಗವಿಲಾಸ ಮಗ್ನರಾದ ಜನರು ಈ ಪ್ರಪಂಚವನ್ನು ವರ್ಣಿಸಿದಾಗ 'ಇದು ಬಹಳ ಆನಂದಕರವಾದದ್ದು' ಎಂದು ಹೇಳುವರು. ಆದರೆ ಭಗವಂತನು ಹಾಗೆ ಹೇಳಲಿಲ್ಲ. ತದ್ವಿರುದ್ಧವಾದ ಭಾವವನ್ನೇ ಸೂಚಿಸಿದನು. ಇದನ್ನು ಸುಖವರ್ಜಿತವೆಂದು ವರ್ಣಿಸಿದನು. ಆತ್ಮವಸ್ತುವೊಂದೇ ಸುಖಸ್ವರೂಪ. ಅನಾತ್ಮರೂಪವಾದ ದೃಶ್ಯವೆಲ್ಲವೂ ಸುಖರಹಿತವಾದುದು.

ಈ ಪ್ರಕಾರವಾಗಿ ಪ್ರಪಂಚವು 'ಅನಿತ್ಯ' ಎಂದೂ, ಅಸುಖ ಎಂದೂ ವರ್ಣಿಸಿರುವುದು ಸರಿಯೇ ಆಗಿದೆ. ಸಹಜವಾಗಿ ಅದರಿಂದ ತಪ್ಪಿಸಿಕೊಳ್ಳುವುದು ಹೇಗೆ ಎನ್ನುವ ಪ್ರಶ್ನೆ ಉದಯಿಸುವುದು. ಅದಕ್ಕೆ ಸಮಾಧಾನವನ್ನು ಭಗವಂತನೇ ಇಲ್ಲಿ ಹೇಳಿರುವನು. 'ಭಜಸ್ವಮಾಮ್' (ನನ್ನನ್ನು ಭಜಿಸು) ಎಂದು. ಭವರೋಗಕ್ಕೆ, ದುಃಖವಿಮುಕ್ತಿಗೆ ಇದು ಪರಮೌಷಧ. ಭಗವತ್ಸೇವನೆ, ಪರಮಾತ್ಮನನ್ನು ಸೇವಿಸುವುದು ಹಾಗು ಧ್ಯಾನಿಸುವುದೇ ಆಗಿದೆ. 'ಅನಿತ್ಯ'ವಾದುದರಿಂದ ತಪ್ಪಿಸಿಕೊಳ್ಳಲು ನಿತ್ಯವನ್ನೇ ಆಶ್ರಯಿಸಬೇಕು. ಹಾಗೆಯೇ 'ಅಸುಖ' (ದುಃಖ)ವನ್ನು ದೂರ ಮಾಡಿಕೊಳ್ಳಲು ಸುಖವನ್ನೇ ಆಶ್ರಯಿಸಬೇಕು. ಅಂತಹ ನಿತ್ಯ ಸುಖ ವಸ್ತುವೇ ಆತ್ಮ, ಪರಬ್ರಹ್ಮ, ದೈವ. ಆದ್ದರಿಂದ ಆತನನ್ನೇ ಭಜಿಸಿ ಕೃತಾರ್ಥರಾಗಬೇಕು (ಭಜಸ್ವಮಾಂ). ಆಪಾತರಮಣೀಯವಾದ ಈ ದೃಶ್ಯ ಪ್ರಪಂಚದ ಥಳಕು ಬೆಳಕುಗಳಿಗೆ ಮೋಸ ಹೋಗದೆ, ಸತ್ಯಶಿವ ಸುಂದರವಾದ ಪರಮಾತ್ಮನನ್ನೇ ಆಶ್ರಯಿಸಿ ಮುಕ್ತಿ ಹೊಂದಬೇಕು. ಈ ಪ್ರಕಾರವಾಗಿ ರೋಗವನ್ನು ಔಷಧವನ್ನು-ಎರಡನ್ನೂ ಈ ಶ್ಲೋಕದಲ್ಲಿ ಕೊಡಲಾಗಿದೆ.

ಪ್ರ : ಭಗವತ್ಪ್ರಾಪ್ತಿಗೆ ಅವಶ್ಯಕವಾದ ವಸ್ತುಗಳು ಯಾವುವು?

ಉ : ೧) ಪುಣ್ಯ ೨) ಭಕ್ತಿ

ಪ್ರ : ಈ ಪ್ರಪಂಚ ಎಂತಹದು?

ಉ : ೧) ಅನಿತ್ಯವಾದುದು ೨) ಸುಖವರ್ಜಿತವಾದುದು

ಪ್ರ : ಈ ಜನನ ಮರಣರೂಪ ಸಂಸಾರ ಬಂಧನದಿಂದ ತಪ್ಪಿಸಿಕೊಳ್ಳುವ ಉಪಾಯವೇನು?

ಉ : ಭಗವಂತನನ್ನು ಭಜಿಸುವುದು

**ಅ॥** ಭಗವತ್ಪ್ರಾಪ್ತಿಗೆ ಮಾರ್ಗವನ್ನು ತೋರಿಸುತ್ತಿದ್ದಾನೆ.

**೩೪ ಮನ್ಮನಾ ಭವ ಮದ್ಭಕ್ತೋ ಮದ್ಯಾಜೀ ಮಾಂ ನಮಸ್ಕುರು**
**ಮಾಮೇವೈಷ್ಯಸಿ ಯುಕ್ತ್ವೈವಮಾತ್ಮಾನಂ ಮತ್ಪರಾಯಣಃ**

**ಅರ್ಥ:** ಮನ್ಮನಾಃ=ನನ್ನಲ್ಲೇ ಮನಸ್ಸುಳ್ಳವನಾಗಿ; ಮದ್ಭಕ್ತಃ=ನನ್ನ ಭಕ್ತನಾಗಿ; ಮದ್ಯಾಜೀ=ನನ್ನನ್ನೇ ಪೂಜಿಸುವವನಾಗಿ; ಭವ=ಆಗು; ಮಾಂ=ನನ್ನನ್ನೇ; ನಮಸ್ಕುರು=ನಮಸ್ಕರಿಸು; ಏವಂ=ಈ ರೀತಿಯಾಗಿ; ಆತ್ಮಾನಂ=ಮನಸ್ಸನ್ನು; ಯುಕ್ತ್ವಾ=ನನ್ನಲ್ಲೇ ನಿಲ್ಲಿಸಿ; ಮತ್ಪರಾಯಣಃ=ನನ್ನನ್ನೇ ಪರಮಗತಿಯಾಗಿ ತಿಳಿದು ಕೊಂಡವನಾಗಿ; ಮಾಂ ಏವ=ನನ್ನನ್ನೇ; ಯೇಷ್ಯಸಿ=ಹೊಂದುತ್ತೀಯೆ.

**ತಾ॥** ನನ್ನಲ್ಲೇ ಮನಸ್ಸುಳ್ಳವನಾಗಿ, ನನ್ನ ಭಕ್ತನಾಗಿ, ನನ್ನನ್ನೇ ಪೂಜಿಸುವವನಾಗಿ, ನನ್ನನ್ನು ನಮಸ್ಕರಿಸು. ಈ ಪ್ರಕಾರವಾಗಿ ಚಿತ್ತವನ್ನು ನನ್ನಲ್ಲೇ ನಿಲ್ಲಿಸಿ ನನ್ನನ್ನೇ ಪರಮಗತಿಯೆಂದು ತಿಳಿದುಕೊಂಡು ಕೊನೆಗೆ ನನ್ನನ್ನೇ ಹೊಂದುತ್ತೀಯೆ.

**ವ್ಯಾಖ್ಯೆ:** ಸಾಧನೆ ಮಾಡದಿದ್ದರೆ ಸಾಧ್ಯವಸ್ತುವು ಲಭಿಸದು. ಈ ಶ್ಲೋಕದಲ್ಲಿ ಬ್ರಹ್ಮಾಭ್ಯಾಸವನ್ನು ಚೆನ್ನಾಗಿ ವಿವರಿಸಲಾಗಿದೆ. ಬ್ರಹ್ಮವನ್ನು, ದೈವವನ್ನು ಹೊಂದುವುದಕ್ಕೆ ಮಾರ್ಗವನ್ನು ತೋರಿಸಲಾಗಿದೆ. *'ತಚ್ಚಿಂತನಂತತ್ಕಥ*

***ನಮಸ್ಯೋನ್ಯಂ ತತ್ಪ್ರಭಾಷಣಂ'*** ಎಂದ ಹಾಗೆ ಲಕ್ಷ್ಯವಾದ ದೈವವನ್ನು ಕುರಿತೇ ಚಿಂತಿಸುವುದು, ಹೇಳುವುದು, ಪರಸ್ಪರ ಸಂಭಾಷಿಸಿಕೊಳ್ಳುವುದು, ಧ್ಯಾನಿಸುವುದು ಮುಂತಾದ ಕ್ರಿಯೆಗಳ ದ್ವಾರ ಮನುಜನು ಆ ಪರಮಾತ್ಮನನ್ನು ಅಚಿರಕಾಲದಲ್ಲಿಯೇ ಸೇರಿಕೊಳ್ಳುವನು. ಇಂತಹ ಅಭ್ಯಾಸವನ್ನೇ ಈ ಶ್ಲೋಕದಲ್ಲಿ ತಿಳಿಸಲಾಗಿದೆ. ನಿರಂತರ ಭಗವತ್ಪರಾಯಣನಾಗಿ ಶರೀರ, ವಾಕ್ಕು, ಮನಸ್ಸು ಎನ್ನುವ ತ್ರಿಕರಣಗಳನ್ನು ಅವನಲ್ಲಿಯೇ ಸಂಲಗ್ನಿಸಿ ತದೇಕನಿಷ್ಠನಾಗಿರುವವನು ಲಕ್ಷ್ಯವನ್ನು ಸುಲಭವಾಗಿ ಸೇರಬಲ್ಲನು. ಸಾಮಾನ್ಯವಾಗಿ ಜನರ ಮನಸ್ಸು ದೃಶ್ಯವಸ್ತುಗಳಲ್ಲೇ ಹೆಚ್ಚು ರಮಿಸುವುದು. ಅದನ್ನು ಅಲ್ಲಿಂದ ಮರಳಿಸಿ ಪರಮಾತ್ಮನಲ್ಲಿ ಸ್ಥಾಪಿಸಬೇಕು. ಹಾಗೆ ಸ್ಥಾಪಿಸಲು ಭಕ್ತಿ ಎಷ್ಟೋ ಆವಶ್ಯಕವಾಗಿದೆ. ಒಂದು ವಸ್ತುವಿನಲ್ಲಿ ಪ್ರೀತಿ, ವಿಶ್ವಾಸ, ಭಕ್ತ ಹುಟ್ಟಿದಾಗಲೇ ಆ ವಸ್ತುವಿನ ಮೇಲೆ ಮನಸ್ಸು ನಿಲ್ಲುವುದು. ಆದ್ದರಿಂದ ಭಗವಂತನ ಶಾಶ್ವತೆ, ಸುಖರೂಪಗಳನ್ನು ಚೆನ್ನಾಗಿ ತಿಳಿದು ಅವನ ಮೇಲೆ ಭಕ್ತಿವಿಶ್ವಾಸಗಳನ್ನು ಅಭಿವೃದ್ಧಿಪಡಿಸಿಕೊಳ್ಳಬೇಕು. ಆಗ ಸಹಜವಾಗಿ ಮನಸ್ಸು ಪರಮಾತ್ಮನೆಡೆಗೆ ಒಲಿಯುತ್ತದೆ. ಆತನನ್ನು ಆರಾಧಿಸುತ್ತಾ ಆತನನ್ನೇ ನಮಸ್ಕರಿಸಬೇಕು. ***ಯದ್ಭಾವಮ ತದ್ಭವತಿ*** ಎಂದ ಹಾಗೆ ಮನಸ್ಸು ಯಾವುದನ್ನು ಕುರಿತು ನಿರಂತರ ಚಿಂತನೆ ಮಾಡುತ್ತಿರುವುದೋ ಆ ರೂಪವಾಗಿ ಬದಲಾಗುವುದು. ಆದ್ದರಿಂದ ಮನಸ್ಸು ಅನವರತ ಪರಮಾತ್ಮನನ್ನು ಕುರಿತ ವಿಚಾರಣೆ ಧ್ಯಾನಾದಿಗಳನ್ನು ಮಾಡುತ್ತಿದ್ದರೆ ಆ ಪರಮಾತ್ಮನಲ್ಲೇ ಲಯವಾಗಿ ತದ್ರೂಪವಾಗಿ ಬದಲಾಗುವುದು. ಅದು ಜೀವ ಬ್ರಹ್ಮೈಕ್ಯಸ್ಥಿತಿ. **'ಮಾಮೆವೈಷ್ಯಸಿ'** ಎನ್ನುವುದರ ಅರ್ಥ ಇದೆ. ಇಂತಹ ಸ್ಥಿತಿ ಮೇಲೆ ತಿಳಿಸಿದ ಅಭ್ಯಾಸದಿಂದ ಸಿದ್ಧಿಸುವುದು.

ಇದರಿಂದ ಭಗವತ್ಪ್ರಾಪ್ತಿಗೆ ನಿರಂತರ ಭಗವಚ್ಚಿಂತನೆ, ಭಗವತ್ಪರಾಯಣತೆ ಬಿಟ್ಟು ಬೇರೆ ಯಾವ ಮಾರ್ಗವೂ ಇಲ್ಲವೆಂದು ಸ್ಪಷ್ಟವಾಗುತ್ತದೆ. ಆದ್ದರಿಂದ ದುಃಖಭೂಯಿಷ್ಠವಾದ, ಅನಿತ್ಯವಾದ ಈ ಸಂಸಾರ ಸ್ಥಿತಿಯಿಂದ ತಪ್ಪಿಸಿಕೊಂಡು ನಿರತಿಶಯಾನಂದ ರೂಪ ಕೈವಲ್ಯವನ್ನು ಪಡೆಯುವುದಕ್ಕಾಗಿ ಜೀವಿಯು ತನ್ನ ಮನಸ್ಸನ್ನು ದೃಶ್ಯ ವಿಷಯಗಳಿಂದ ಮರಳಿಸಿ, ದೈವೋನ್ಮುಖವಾಗಿ, ಆತ್ಮೋನ್ಮುಖವಾಗಿ ತಿರುಗಿಸಿಕೊಳ್ಳಬೇಕು. ಹಾಗೆ ಮಾಡದೆ ಸೋಮಾರಿಯಾಗಿ ದೃಶ್ಯವಾಸನೆ, ವಿಷಯ ಭೋಗಗಳಿಂದ ಕೂಡಿದ್ದರೆ ಆತ್ಮ ಪ್ರಾಪ್ತಿ ಕುರಿತ ವಾರ್ತೆ ಕೂಡ ಆತನಿಗೆ ಲಭಿಸದು. ಆದ್ದರಿಂದ ಯಾರಾದರೂ ನಾನು 'ಭಗವಂತನನ್ನು ಹೇಗೆ ಹೊಂದಬಲ್ಲೆನು?' ಎಂದು ಪ್ರಶ್ನಿಸಿದರೆ ಆತನನ್ನು ಹೀಗೆ ಕೇಳಬೇಕು- '೧) ನಿನ್ನ ಮನಸ್ಸು ಯಾವುದರ ಮೇಲೆ ಸಂಲಗ್ನವಾಗುತ್ತಿದೆ? ದೃಶ್ಯ ವಸ್ತುಗಳಲ್ಲಿಯೇ ಪರಮಾತ್ಮನಲ್ಲಿಯೇ? ೨) ನೀನು ಯಾವುದರಲ್ಲಿ ಭಕ್ತಿ ಹೊಂದಿದ್ದೀಯೇ? ದೃಶ್ಯದ ಮೇಲೆಯೇ, ದೇವರ ಮೇಲೆಯೇ? ೩) ಯಾವುದನ್ನು ಆರಾಧಿಸುತ್ತಿದ್ದೀಯಾ? ನಶ್ವರವಿಷಯಗಳನ್ನೇ, ಶಾಶ್ವತ ದೈವವನ್ನೇ? ೪) ಯಾರನ್ನು ನಮಸ್ಕರಿಸುತ್ತೀಯೆ? ನಾಮ ರೂಪಗಳನ್ನೇ ಇಲ್ಲವೆ ಪರಮಾತ್ಮನನ್ನೇ? ೫) ಯಾರಲ್ಲಿ ಪರಾಯಣನಾಗಿರುವೆ? ಶಬ್ದಾದಿ ವಿಷಯಗಳಲ್ಲಿಯೇ ಇಲ್ಲವೆ ಹೃದಯಸ್ಥ ಆತ್ಮದಲ್ಲಿಯೇ?' - ಹೀಗೆ ಪ್ರಶ್ನಿಸಿ ಆತನು ಏನು ಉತ್ತರ ಕೊಡುವನೋ ನೋಡಬೇಕು. ದೃಶ್ಯದಲ್ಲಿಯೇ ಮನಸ್ಸು ಆಸಕ್ತಿ ಹೊಂದುತ್ತಿದೆ ಎಂದು ತಿಳಿದರೆ ಅಲ್ಲಿಂದ ಮರಳಿಸಿ ಶ್ರೀ ಕೃಷ್ಣ ಭಗವಂತನು ಈ ಶ್ಲೋಕದಲ್ಲಿ ತಿಳಿಸಿದ ರೀತಿ ದೈವ ಪರಾಯಣ ಮಾಡಬೇಕೆಂದು, ಅದೇ ದೈವ ಪ್ರಾಪ್ತಿಗೆ, ಮೋಕ್ಷಕ್ಕೆ ಮಾರ್ಗವೆಂದು ಹೇಳಬೇಕು.

ಪ್ರ : ಜೀವಿಯು ಭಗವಂತನನ್ನು ಹೇಗೆ ಹೊಂದುವನು? ಭಗವತ್ಪ್ರಾಪ್ತಿಗೆ ಸಾಧನೆಗಳು ಯಾವುವು?

ಉ: ೧) ಮನಸ್ಸನ್ನು ಪರಮಾತ್ಮನಲ್ಲಿ ಮಗ್ನಗೊಳಿಸಿ ೨) ಪರಮಾತ್ಮನಲ್ಲಿ ಭಕ್ತಿಯಿರಬೇಕು ೩) ಪರಮಾತ್ಮನನ್ನೇ ಆರಾಧಿಸಬೇಕು. ೪) ಪರಮಾತ್ಮನನ್ನೇ ನಮಸ್ಕರಿಸಬೇಕು. ಈ ಪ್ರಕಾರವಾಗಿ ನಿರಂತರ ದೈವ ಪರಾಯಣನಾಗಿ ವರ್ತಿಸಬೇಕು.

**ಓಮ್**

ಇತಿ ಶ್ರೀಮದ್ಭಗವದ್ಗೀತಾಸೂಪನಿಷತ್ಸು ಬ್ರಹ್ಮವಿದ್ಯಾಯಾಂ ಯೋಗಶಾಸ್ತ್ರೇ
ಶ್ರೀಕೃಷ್ಣಾರ್ಜುನ ಸಂವಾದೇ ರಾಜವಿದ್ಯಾರಾಜಗುಹ್ಯಯೋಗೋ ನಾಮ

**ನವಮೋಽಧ್ಯಾಯಃ**

ಇದು ಉಪನಿಷತ್ಪ್ರತಿಪಾದಕವೂ, ಬ್ರಹ್ಮವಿದ್ಯೆಯೂ, ಯೋಗ ಶಾಸ್ತ್ರವೂ,
ಶ್ರೀ ಕೃಷ್ಣಾರ್ಜುನ ಸಂವಾದವೂ ಆದ
ಶ್ರೀ ಭಗವದ್ಗೀತೆಯಲ್ಲಿ ರಾಜವಿದ್ಯಾರಾಜಗುಹ್ಯಯೋಗವೆನ್ನುವ ಒಂಬತ್ತನೆಯ ಅಧ್ಯಾಯ

**ಓಮ್ ತತ್ ಸತ್**

# ವಿಭೂತಿಯೋಗ

# ಶ್ರೀ ಭಗವದ್ಗೀತೆ

## ಅಥ ದಶಮೋಽಧ್ಯಾಯಃ

## ಹತ್ತನೆಯ ಅಧ್ಯಾಯ

## ವಿಭೂತಿಯೋಗಃ - ವಿಭೂತಿಯೋಗ

**ಈ ಅಧ್ಯಾಯದ ಹೆಸರು :**

'ವಿಭೂತಿ ಯೋಗ'- ವಿಭೂತಿಯೆಂದರೆ ಐಶ್ವರ್ಯ. ಮಹಿಮಾತಿಶಯ. ಈ ಚರಾಚರಪ್ರಪಂಚವೆಲ್ಲವೂ ಭಗವಂತನ ವ್ಯಕ್ತರೂಪ. ಆದ್ದರಿಂದ ಇದು ಆತನ ವಿಭೂತಿಯೇ ಆಗಿದೆ. ಇದೆಲ್ಲವೂ ಅವನ ಮಹಿಮಾವಿಸ್ತಾರ, ಚಿದ್ವಿಲಾಸವೇ ಆಗಿದೆ. ಭಗವದ್ವಿಭೂತಿಯಾದ ಈ ಪ್ರಪಂಚದಲ್ಲಿ ಭಗವಂತನು ವಿಶೇಷವಾಗಿ ಅಭಿವ್ಯಕ್ತಿಯಾದ ಪದಾರ್ಥಗಳನ್ನು ಕುರಿತು, ವ್ಯಕ್ತಿಗಳನ್ನು ಕುರಿತು ವರ್ಣಿಸಲ್ಪಟ್ಟಿರುವ ಅಧ್ಯಾಯವಾದುದರಿಂದ ಇದಕ್ಕೆ ವಿಭೂತಿಯೋಗ ಎನ್ನುವ ಹೆಸರು ಬಂದಿದೆ.

**ಈ ಅಧ್ಯಾಯದಲ್ಲಿಯ ಪ್ರಧಾನ ವಿಷಯಗಳು:**

೧) ಭಗವಂತನ ವಿಭೂತಿಯ, ಯೋಗಶಕ್ತಿಗಳ ವರ್ಣನೆ-ಅವುಗಳನ್ನು ತಿಳಿಯುವುದರಿಂದ ಉಂಟಾಗುವ ಫಲಿತಗಳು
(೧ನೆಯ ಶ್ಲೋಕದಿಂದ ೭ನೆಯ ಶ್ಲೋಕದವರೆಗೆ)

೨) ಫಲ, ಪ್ರಭಾವಸಹಿತವಾಗಿ ಭಕ್ತಿಯೋಗದ ನಿರೂಪಣೆ
(೮ನೆಯ ಶ್ಲೋಕದಿಂದ ೧೧ನೆಯ ಶ್ಲೋಕದವರೆಗೆ)

೩) ಅರ್ಜುನನು ಭಗವಂತನನ್ನು ಸ್ತುತಿಸುವುದು, ಸ್ವಕೀಯ ವಿಭೂತಿಯನ್ನು, ಯೋಗಶಕ್ತಿಯನ್ನು ವರ್ಣಿಸಿ ಹೇಳಬೇಕೆಂದು ಪ್ರಾರ್ಥಿಸುವುದು.
(೧೨ನೆಯ ಶ್ಲೋಕದಿಂದ ೧೮ನೆಯ ಶ್ಲೋಕದವರೆಗೆ)

೪) ಭಗವಂತನಿಂದ ಹೇಳಲ್ಪಟ್ಟ ವಿಭೂತಿವರ್ಣನೆ
(೧೯ನೆಯ ಶ್ಲೋಕದಿಂದ ೪೨ನೆಯ ಶ್ಲೋಕದವರೆಗೆ)

**ಪೂರ್ವಾಧ್ಯಾಯದೊಂದಿಗೆ ಈ ಅಧ್ಯಾಯಕ್ಕೆ ಇರುವ ಸಂಬಂಧ:**

೭, ೮ ಮತ್ತು ೯ನೆಯ ಅಧ್ಯಾಯಗಳಲ್ಲಿ ಅಲ್ಲಲ್ಲಿ ಸಂಕ್ಷೇಪವಾಗಿ ಭಗವಂತನು ತನ್ನ ವಿಭೂತಿಗಳನ್ನು ಕುರಿತು ಹೇಳಿದನು. ಭಕ್ತರ ಉಪಾಸನಾ ಸೌಕರ್ಯಾರ್ಥವಾಗಿ ತನ್ನ ವಿಭೂತಿಗಳನ್ನು ವಿಶದವಾಗಿ ವರ್ಣಿಸಲಿಚ್ಛಿಸಿ ಭಗವಂತನು ಈ ಅಧ್ಯಾಯವನ್ನು ಪ್ರಾರಂಭಿಸುತ್ತಿದ್ದಾನೆ. ಇಂತಹ ಭಗವದ್ವಿಭೂತಿಗಳ ಜ್ಞಾನದಿಂದ ಸರ್ವತ್ರ ಈಶ್ವರ ದೃಷ್ಟಿಯುಂಟಾಗುವುದು. ಆಗ ಭಕ್ತಿ ಚೆನ್ನಾಗಿ ಅಭಿವೃದ್ಧಿ ಹೊಂದಿ ಹಿಂದಿನ ಅಧ್ಯಾಯದ ಕೊನೆಯಲ್ಲಿ ಹೇಳಲ್ಪಟ್ಟ "ಮನ್ಮನಾಭವ ಮದ್ಭಕ್ತೋ"-ಎನ್ನುವ ಬ್ರಹ್ಮಾಭ್ಯಾಸ ಅನುಭೂತಿ ಯಾಗಬಲ್ಲದು. ಅಂತಹ ನಿರಂತರ ಆತ್ಮದೃಷ್ಟಿಗಾಗಿ ಭಗವದ್ವಿಭೂತಿ ಕುರಿತ ವಿಜ್ಞಾನ ಸಹಾಯಕಾರಿಯಾಗಬಲ್ಲುದು. ಆದ್ದರಿಂದಲೇ ಈ ವಿಭೂತಿಯೋಗ ಹೇಳಲ್ಪಟ್ಟಿದೆ. ಪೂರ್ವದಲ್ಲಿ ತಾನು ಹೇಳಿದ ವಿಭೂತಿ ಸಂಬಂಧಗಳಾದ ವಚನಗಳನ್ನೇ ಮತ್ತೆ ಈಗ ವಿಸ್ತಾರವಾಗಿ ತಿಳಿಸುತ್ತಿದ್ದೇನೆಂದು ಭಗವಂತನು ನುಡಿಯುತ್ತಿದ್ದಾನೆ.

**ಶ್ರೀ ಭಗವಾನುವಾಚ:**

**೧ ಭೂಯ ಏವ ಮಹಾಬಾಹೋ ಶೃಣು ಮೇ ಪರಮಂ ವಚಃ**
**ಯತ್ತೇಽಹಂ ಪ್ರೀಯಮಾಣಾಯ ವಕ್ಷ್ಯಾಮಿ ಹಿತಕಾಮ್ಯಯಾ**

ಶ್ರೀ ಭಗವಾನುವಾಚ-ಶ್ರೀ ಭಗವಂತನು ಹೇಳಿದನು.

**ಅರ್ಥ:** ಮಹಾಬಾಹೋ=ಉದ್ದ ಬಾಹುಗಳುಳ್ಳ ಅರ್ಜುನ! ಪ್ರಿಯಮಾಣಾಯ=(ನನ್ನ ಮಾತುಗಳಿಂದ) ಸಂತೋಷಿಸುತಿರುವ; ತೇ=ನಿನಗೆ; ಹಿತಕಾಮ್ಯಯಾ=ಹಿತವನ್ನುಂಟುಮಾಡುವ ಉದ್ದೇಶದಿಂದ; ಭೂಯಃ ಏವ= ಮತ್ತೆ; ಯತ್=ಯಾವ; ಪರಮಂ=ಶ್ರೇಷ್ಠವಾದ; ವಚಃ=ವಾಕ್ಯವನ್ನು; ಅಹಂ=ನಾನು; ವಕ್ಷ್ಯಾಮಿ=ಹೇಳಹೋಗುತ್ತಿದ್ದೇನೋ; ಮೇ=ನನ್ನ (ತತ್‌ವಚಃ= ಆ ವಾಕ್ಯವನ್ನು); ಶೃಣು=ಕೇಳು

**ತಾ||** ಶ್ರೀಭಗವಂತನು ಹೇಳಿದನು- ಉದ್ದ ಬಾಹುಗಳುಳ್ಳ ಓ ಅರ್ಜುನಾ! (ನನ್ನ ಮಾತುಗಳನ್ನು ಕೇಳಿ) ಸಂತೋಷಿಸುತ್ತಿರುವ ನಿನಗೆ ಹಿತವನ್ನುಂಟುಮಾಡುವ ಉದ್ದೇಶದಿಂದ ಮತ್ತೆ ಶ್ರೇಷ್ಠವಾದ ವಾಕ್ಯವನ್ನು ಹೇಳುತ್ತೇನೆ, ಕೇಳುವಂಥವನಾಗು.

**ವ್ಯಾಖ್ಯೆ:** ಗುರುವಿನ ವಾಕ್ಯಗಳನ್ನು ಶಿಷ್ಯನು ಆಸಕ್ತಿಯಿಂದ ಶ್ರವಣ ಮಾಡುತ್ತ, ಕಲಿಯಬೇಕೆನ್ನುವ ತೀವ್ರವಾದ ಆಕಾಂಕ್ಷೆ ತೋರಿಸಿದಾಗ ಗುರುವಿಗೆ ಉತ್ಸಾಹ ಹುಟ್ಟಿ ಕರುಣೆಯಿಂದ ಇನ್ನೂ ಹೆಚ್ಚು ಬೋಧೆ ಮಾಡುವನು. ಆದ್ದರಿಂದಲೇ

ಶ್ರದ್ಧೆ ಬಹಳ ಅವಶ್ಯಕ. ಅಶ್ರದ್ಧೆಯಿಂದ ಕೇಳಿದರೂ ಅದು ಕೇಳದೆ ಇರುವುದಕ್ಕೆ ಸಮಾನ, ಕೊಟ್ಟರೂ ಕೊಡದೆ ಇರುವುದಕ್ಕೆ ಸಮಾನ* ಅರ್ಜುನನು ಭಗವಂತನ ವಾಕ್ಯಗಳನ್ನು ಅತ್ಯಂತ ಶ್ರದ್ಧೆಯಿಂದ ಕೇಳಿ ಅಮೃತಪಾನ ಮಾಡಿದಂತವನಂತೆ ಗೀತೋಪದೇಶ ಶ್ರವಣದಲ್ಲಿ ಪರಮ ಶ್ರದ್ಧೆಯನ್ನು ತೋರಿಸಿದನು. ಆದ್ದರಿಂದಲೇ 'ಪ್ರೀಯಮಾಣಾಯ' (ಪ್ರೀತಿಯನ್ನು, ಶ್ರದ್ಧೆಯನ್ನು ಹೊಂದಿರುವ) ಎಂದು ಹೇಳಲ್ಪಟ್ಟಿದೆ. ಶ್ರೀ ಕೃಷ್ಣನ ಬೋಧೆ ಅರ್ಜುನನ ಬಾಧೆಯನ್ನು ಹೋಗಲಾಡಿಸುತ್ತಿದೆ. ಆದ್ದರಿಂದ ಅರ್ಜುನನಿಗೆ ಭಗವದ್ವಾಕ್ಯದಲ್ಲಿ ಪ್ರೀತಿ ಉಂಟಾಗಿದೆ. ಇದೆಲ್ಲವನ್ನೂ ಗ್ರಹಿಸಿ ಶ್ರೀ ಕೃಷ್ಣಮೂರ್ತಿ ಉತ್ಸಾಹಭರಿತನಾಗಿ ಇಂತಹ ಶ್ರದ್ಧೆಯಿರುವ ಶಿಷ್ಯನಿಗೆ ಭಗವದ್ ತತ್ವದ ಬಗ್ಗೆ ಇನ್ನೂ ಬೋಧಿಸಿದರೆ ಚೆನ್ನಾಗಿರುವುದೆಂದು ತಿಳಿದು ಮತ್ತೆ ಬೋಧೆಯನ್ನು ಉಪಕ್ರಮಿಸುತ್ತಿದ್ದಾನೆ. ಆದ್ದರಿಂದ 'ಭೂಯಃ' (ಮತ್ತೆ) ಎಂದು ಹೇಳಲಾಗಿದೆ. ಪರಮಾರ್ಥ ವಿದ್ಯೆಯನ್ನು ಮತ್ತೆ ಮತ್ತೆ ಶ್ರವಣ ಮಾಡುತ್ತ, ಶ್ರವಣ ಮಾಡಿದ್ದನ್ನು ಮನನ ಮಾಡುತ್ತ ನಿದಿಧ್ಯಾಸಗಳನ್ನು ಮಾಡುತ್ತಿದ್ದರೆ ಅದು ಚೆನ್ನಾಗಿ ಬೇರೂರುವುದು. ಈಗಾಗಲೇ ಹೇಳಿದ್ದನ್ನು ಮತ್ತೆ ಇನ್ನೊಮ್ಮೆ ಪ್ರಾರಂಭಿಸಲು ಇದೂ ಒಂದು ಕಾರಣವಾಗಿದೆ. ಅರ್ಜುನನ ಈ ಪುಣ್ಯ ವಿಚಾರಣೆಗಳಿಂದ, ಅತಿಶಯ ಶ್ರವಣಾದಿಗಳಿಂದ ದೈವತತ್ತ್ವವು ಬಲವಾಗಿ ಹೃದಯಸ್ಥವಾಗುವುದು ಎನ್ನುವ ನಂಬಿಕೆಯಿಂದ ಹೀಗೆ ಹೇಳಿದ್ದನ್ನೇ ಮತ್ತೆ ಹೇಳುವುದು ನಡೆದಿದೆ.

'ಹಿತಕಾಮ್ಯಯಾ'- ಶ್ರದ್ಧಾಯುತನಾದ ಶಿಷ್ಯನಿಗೆ ಗುರುವು ಹಿತವನ್ನು ಬೋಧಿಸಲು ಇಚ್ಛಿಸುವನು. ಎಲ್ಲದಕ್ಕಿಂತ ಉನ್ನತವಾದ ಹಿತ ಬಂಧ ವಿಮುಕ್ತಿ. ಅದು ಪ್ರಾಪಂಚಿಕ ಪದಾರ್ಥಗಳಿಂದ ಎಂದೆಂದಿಗೂ ಸಿಗದು. ಆಧ್ಯಾತ್ಮ ಜ್ಞಾನದಿಂದ ಮಾತ್ರ ಒದಗುವುದು. ಆದ್ದರಿಂದ ಅರ್ಜುನನಿಗೆ ಆತ್ಯಂತಿಕ ಹಿತವನ್ನು ಕೊಡಲು ಇಚ್ಛಿಸಿ ಭಗವಂತನು ತತ್ವಬೋಧೆ ಮಾಡಲು ಉಪಕ್ರಮಿಸಿದನು,

'ಪರಮಂ ವಚಃ'-ಎಂದು ಹೇಳುವುದರಿಂದ ಶ್ರೀ ಕೃಷ್ಣಮೂರ್ತಿ ಹೇಳುವ ವಾಕ್ಯಗಳು ಸಾಮಾನ್ಯವಾದವುಗಳಲ್ಲವೆಂದೂ, ಜೀವಿಯಲ್ಲಿ ಹೃದಯಸ್ಥವಾಗಿರುವ ಅಜ್ಞಾನಾಂಧಕಾರವನ್ನು ತೊಲಗಿಸುವ ಶಕ್ತಿಯನ್ನು ಹೊಂದಿವೆಯೆಂದು ಸ್ಪಷ್ಟವಾಗುತ್ತದೆ. ಆದ್ದರಿಂದ ವಿಜ್ಞುವು ತನ್ನ ಜೀವನವನ್ನು ವ್ಯರ್ಥವಾದ ಪ್ರಾಪಂಚಿಕ ಮಾತುಗಳನ್ನು ಕೇಳುವುದರಲ್ಲಿ ವ್ಯರ್ಥಮಾಡದೆ ಸಂಸಾರ ದಾಟುವ ಉಪಾಯವನ್ನು ತಿಳಿಸುವ ಈ ಪರಮವಾಕ್ಯಗಳನ್ನು ಪರಮಾರ್ಥಜ್ಞಾನವನ್ನು ಆಲಿಸಬೇಕು.

ಪ್ರ : ಶ್ರೀ ಕೃಷ್ಣಮೂರ್ತಿ ಹೇಳುವ ವಾಕ್ಯಗಳು ಎಂತಹವು?

ಉ : ಸರ್ವಶ್ರೇಷ್ಠವಾದ ವಾಕ್ಯಗಳು

ಪ್ರ : ಶ್ರೀ ಕೃಷ್ಣನು ಅರ್ಜುನನಿಗೆ ಪರಮಾರ್ಥಜ್ಞಾನವನ್ನು ಮತ್ತೆ ಏಕೆ ಬೋಧಿಸಲು ಇಚ್ಛಿಸಿದನು?

ಉ: ಭಗವದ್ವಾಕ್ಯಗಳಲ್ಲಿ ಅರ್ಜುನನು ಪರಮಾಸಕ್ತಿಯನ್ನು ತೋರಿಸಿದ್ದರಿಂದ, ಆತನ ಹಿತವನ್ನು ಕೋರಿ ಹಾಗೆ ಹೇಳಲಿಚ್ಛಿಸಿದನು.

ಪ್ರ : ಪ್ರಪಂಚದಲ್ಲಿ ಎಲ್ಲದಕ್ಕಿಂತ ಹೆಚ್ಚು ಹಿತಕಾರಿ ಯಾವುದು?

ಉ : ಪರಮಾರ್ಥ ವಿದ್ಯಾಬೋಧೆ.

ಅ|| ತನ್ನ ಯೋಗಶಕ್ತಿಯನ್ನು ಹಾಗು ಅಧ್ಯಾತ್ಮಮಹಿಮಾತಿಶಯವನ್ನು ಐದು ಶ್ಲೋಕಗಳ ದ್ವಾರ ಭಗವಂತನು ತಿಳಿಸುತ್ತಿದ್ದಾನೆ-

**೨. ನ ಮೇ ವಿದುಃ ಸುರಗಣಾಃ ಪ್ರಭವಂ ನ ಮಹರ್ಷಯಃ**
**ಅಹಮಾದಿರ್ಹಿ ದೇವಾನಾಂ ಮಹರ್ಷೀಣಾಂ ಚ ಸರ್ವಶಃ**

**ಅರ್ಥ:** ಮೇ=ನನ್ನ; ಪ್ರಭವಂ=ಉತ್ಪತ್ತಿಯನ್ನು (ಅವತಾರ ರಹಸ್ಯ, ಇಲ್ಲವೆ ಪ್ರಭಾವವನ್ನು): ಸುರಗಣಾಃ=ದೇವತೆಗಳ ಸಮೂಹ; ನ ವಿದುಃ= ತಿಳಿದಿಲ್ಲ; ಮಹರ್ಷಯಃ=ಮಹರ್ಷಿಗಳು; ನ (ವಿದುಃ)=ತಿಳಿಯರು; ಅಹಂ=ನಾನು; ದೇವಾನಾಂ=ದೇವತೆಗಳಿಗೆ; ಮಹರ್ಷೀಣಾಂ ಚ=ಮಹರ್ಷಿಗಳಿಗೆ; ಸರ್ವಶಃ=ಎಲ್ಲಾ ವಿಧಗಳಿಂದ, ಆದಿಃ ಹಿ=ಮೊದಲಿನವನು (ಕಾರಣನಾದವನು) ಅಲ್ಲವೇ!

**ತಾ||** ನನ್ನ ಉತ್ಪತ್ತಿಯನ್ನು (ಅವತಾರ ರಹಸ್ಯ ಇಲ್ಲವೆ ಪ್ರಭಾವವನ್ನು) ದೇವಗಣಗಳು ತಿಳಿಯರು. ಮಹರ್ಷಿಗಳಿಗೂ ಇದು ತಿಳಿದಿಲ್ಲ. (ಏಕೆಂದರೆ) ನಾನೇ ಆ ದೇವತೆಗಳಿಗೆ ಹಾಗು ಮಹರ್ಷಿಗಳಿಗೆ ಸರ್ವವಿಧದಲ್ಲಿ ಮೊದಲಿನವನೇ (ಕಾರಣಭೂತನು) ಆಗಿದ್ದೇನೆ.

**ವ್ಯಾಖ್ಯೆ:** ಪರಮಾತ್ಮನು ಸನಾತನನು. ಸರ್ವರಿಗೂ ಆದಿಕಾರಣನು. ದೇವತೆಗಳಿಗೆ, ಮಹರ್ಷಿಗಳಿಗೆ ಅಷ್ಟೇಕೆ ಸಮಸ್ತ ಭೂತಕೋಟಿಗಳಿಗೆ ಮೂಲ ಪುರುಷನು. ಅನಾದಿಯಾದವನು. ಆತನಿಂದ ದೇವತಾಗಣ, ಮಹರ್ಷಿಗಳೆಲ್ಲಾ ಜನಿಸಿದವರಾಗಿದ್ದಾರೆ. ಆದ್ದರಿಂದ ಆ ಪರಮಾತ್ಮನ ಹುಟ್ಟನ್ನು ಇಲ್ಲವೆ ಮಹಾತ್ಮ್ಯೆಯನ್ನು ಅವರೂ ಸಹ ಪೂರ್ಣವಾಗಿ ಅರ್ಥಮಾಡಿಕೊಳ್ಳಲು ಅಸಕ್ತರಾಗಿದ್ದಾರೆ. ಸಮಸ್ತ ಭೂತ ಕೋಟಿಗಳಿಗೆ ಪ್ರಾತಿನಿಧ್ಯ ತೋರಿಸಲು, ಅದರಲ್ಲಿ ಉತ್ತಮವಾದ ಇಬ್ಬರನ್ನು ೧) ದೇವತಾಗಣವನ್ನು ೨) ಮಹರ್ಷಿಗಳನ್ನು ಭಗವಂತನು ಇಲ್ಲಿ ಆರಿಸಿಕೊಂಡಿರುವನು. ಅಂತಹವರಿಗೇ ಭಗವನ್ಮಹಾತ್ಮ್ಯೆ ಇಲ್ಲವೆ ಆತನ ಉತ್ಪತ್ತಿ ಊಹಿಸಲಸಾಧ್ಯವಾಗಿರುವಾಗ ಇನ್ನು ಸಾಧಾರಣ ಮಾನವರ ವಿಷಯ ಲೆಕ್ಕಕ್ಕೇ ಇಲ್ಲ ಎಂದು ಅರ್ಥ. ಪರಿಚ್ಛಿನ್ನವಾದ ಈ ಮಾನವ ಬುದ್ಧಿಯಿಂದ ಅಪರಿಚ್ಛಿನ್ನವಾದ ಪರಮಾತ್ಮನ ಮಹಿಮೆಯನ್ನು, ಉತ್ಪತ್ತ್ಯಾದಿ ವಿಶೇಷಗಳನ್ನು ಯಾರೂ ತಿಳಿಯಲಾರರು. ಮಹರ್ಷಿಗಳಿಗೇ ಅರ್ಥವಾಗುವುದು ಕಷ್ಟವೆಂದಾಗ ಬೇರೆಯವರು ತಿಳಿದುಕೊಳ್ಳುವುದು ಎಷ್ಟು ಕಷ್ಟ ಎಂದು ಊಹಿಸಬಹುದು. ಆದ್ದರಿಂದ ಅಂತಹ ಪರಮಾತ್ಮನಲ್ಲಿ, ಧ್ಯಾನಾದಿಗಳ ಮೂಲಕ ತನ್ನ ಮನಸ್ಸನ್ನು ಅವನಲ್ಲಿ ವಿಲೀನಗೊಳಿಸುವುದು ಜೀವಿಯ ಆದ್ಯ ಕರ್ತವ್ಯ.

ಪ್ರ : ಭಗವಂತನು ಎಂತಹವನು?

ಉ : ಆದಿಪುರುಷನು, ದೇವತೆಗಳಿಗೆ, ಮಹರ್ಷಿಗಳಿಗೆ ಅಷ್ಟೇಕೆ ಎಲ್ಲಾ ಭೂತ ಕೋಟಿಗಳಿಗೆ ಆದಿಭೂತನಾಗಿ ಬೆಳಗುತ್ತಿದ್ದಾನೆ.

ಪ್ರ : ಮತ್ತೆ ಜೀವಿಗಳು ಮಾಡಬೇಕಾದ ಕೆಲಸವೇನು?

ಉ : ಭಕ್ತಿಯಿಂದ ಆ ಭಗವಂತನಲ್ಲಿ ಚಿತ್ತವನ್ನು ಸಂಲಗ್ನಿಸಿ ನಂತರ ಆತನಲ್ಲಿ ವಿಲೀನಗೊಳ್ಳಬೇಕು.

ಅ|| ಭಗವಂತನನ್ನು ಅನಾದಿ ಎಂದು ತಿಳಿದು ಆತನನ್ನು ಭಕ್ತಿಯಿಂದ ಆರಾಧಿಸುವವನು ಸರ್ವಪಾಪಗಳಿಂದ ವಿಮುಕ್ತನಾಗುವನೆಂದು ಹೇಳಲ್ಪಡುತ್ತಿದೆ.

---

* ಅಶ್ರದ್ಧಯಾ ಹುತಂ ದತ್ತಂ ತಪಸ್ತಪ್ತಂ ಕೃತಂ ಚ ಯತ್ ಅಸದಿತ್ಯುಚ್ಯತೇ ಪಾರ್ಥ ನ ಚ ತತ್ಪ್ರೇತ್ಯ ನೋ ಇಹ(೧೭-೨೮)

೩ **ಯೋ ಮಾಮಜಮನಾದಿಂ ಚ ವೇತ್ತಿ ಲೋಕಮಹೇಶ್ವರಮ್**
**ಅಸಂಮೂಢಸ್ಸ ಮರ್ತ್ಯೇಷು ಸರ್ವಪಾಪೈಃ ಪ್ರಮುಚ್ಯತೇ**

**ಅರ್ಥ:** ಯಃ=ಯಾವನು; ಮಾಂ=ನನ್ನನ್ನು; ಅಜಂ=ಹುಟ್ಟಿಲ್ಲದವನಾಗಿ, ಅನಾದಿಂ ಚ=ಅದಿಯಿಲ್ಲದವನಾಗಿ;ಲೋಕಮಹೇಶ್ವರಂ=ಸರ್ವಲೋಕಗಳ ನಿಯಾಮಕನೆಂದು; ವೇತ್ತಿ=ತಿಳಿದುಕೊಳ್ಳುತ್ತಾನೋ; ಸಃ=ಆತನು; ಮರ್ತ್ಯೇಷು=ಮನುಷ್ಯರಲ್ಲಿ; ಅಸಂಮೂಢಃ=ಅಜ್ಞಾನವಿಲ್ಲದವನಾಗಿ; ಸರ್ವಪಾಪೈ=ಸಮಸ್ತ ಪಾಪಗಳಿಂದ; ಪ್ರಮುಚ್ಯತೇ=ಪೂರ್ತಿಯಾಗಿ ವಿಮುಕ್ತಿಗೊಳ್ಳುವನು.

**ತಾ॥** ಯಾವನು ನನ್ನನ್ನು ಹುಟ್ಟಿಲ್ಲದವನೆಂದೂ, ಅನಾದಿರೂಪಿಯೆಂದೂ, ಸಮಸ್ತಲೋಕಗಳ ನಿಯಾಮಕನೆಂತಲೂ ತಿಳಿದುಕೊಳ್ಳುತ್ತಿದ್ದಾನೋ ಆತನು ಮನುಷ್ಯರಲ್ಲಿ ಅಜ್ಞಾನವಿಲ್ಲದವನಾಗಿ, ಸರ್ವಪಾಪಗಳಿಂದ ಪೂರ್ತಿಯಾಗಿ ಮುಕ್ತಿ ಹೊಂದುತ್ತಾನೆ.

**ವ್ಯಾಖ್ಯೆ:** ಸಮಸ್ತ ಪ್ರಾಣಿಕೋಟಿಗಳಲ್ಲಿ ಮಾನವನು ಶ್ರೇಷ್ಠನು. ಆ ಮಾನವರಲ್ಲಿ ಅಜ್ಞಾನವಿಲ್ಲದವನು ಮತ್ತೂ ಶ್ರೇಷ್ಠನು. ಭಗವತ್‌ತತ್ತ್ವವನ್ನು ಚೆನ್ನಾಗಿ ತಿಳಿದವನು ಇನ್ನೂ ಶ್ರೇಷ್ಠನು. ಅಂತಹ ಭಗವತ್‌ತತ್ತ್ವ ವಿಜ್ಞಾನದಿಂದ ಆತನ ಪಾಪಗಳೆಲ್ಲವೂ ನಾಶವಾಗಿ ಹೋಗುತ್ತವೆ- ಎಂದು ಇಲ್ಲಿ ಹೇಳಲಾಗಿದೆ. ಪ್ರಪಂಚದಲ್ಲಿ ಸಮಸ್ತ ಪದಾರ್ಥಗಳಿಗೆ ಹುಟ್ಟು ಎನ್ನುವುದೊಂದಿದೆ. ಅವು ಆದಿಯನ್ನು ಹೊಂದಿವೆ; ಆದ್ದರಿಂದ, ನಶ್ವರಗಳು. ಭಗವಂತನಾದರೋ ಜನ್ಮವಿಲ್ಲದವನು (ಅಜನು) ಹಾಗು ಅನಾದಿ ಸ್ವರೂಪಿ. ಆದುದರಿಂದ ಜೀವಿಯು ಯಾವುದನ್ನು ಆಶ್ರಯಿಸಬೇಕು? ನಶಿಸುವ ವಸ್ತುವನ್ನೇ? ಆದ್ಯಂತ ರಹಿತವಾದ ಶಾಶ್ವತ ಪದಾರ್ಥವನ್ನೇ? ಪ್ರಪಂಚದಲ್ಲಿ ಪರಮಾತ್ಮನನ್ನು ಬಿಟ್ಟು ಬೇರೆ ಯಾವುದೂ ಶಾಶ್ವತ ಅಲ್ಲ. ಆತನು ದೇಶಕಾಲಾತೀತನು. ಸರ್ವಲೋಕ ಮಹೇಶ್ವರನು. ಜಗನ್ನಿಯಾಮಕನು. ಮಾಯೆಯನ್ನು ಆಡಿಸುವವನು. ಬೇರೆಯವರು ಮಾಯಾಧೀನರು. ಈ ವಿಧವಾಗಿ ಭಗವತ್ತತ್ತ್ವವನ್ನು ಕುರಿತ ವಿವೇಕದಿಂದ ಆತನೆಡೆ ನಿಧಾನವಾಗಿ ಭಕ್ತಿ ಉದಯಿಬೇಕು. ತದ್ವಾರ ಜೀವಿಯು ಆತನನ್ನೇ ಆಶ್ರಯಿಸಿ ಅನವರತ ಧ್ಯಾನಾದಿಗಳಿಂದ ಭಗವತ್ಸಾಕ್ಷಾತ್ಕಾರ, ಬಂಧ ವಿಮುಕ್ತಿ ಹಾಗು ಸರ್ವಪಾಪ ವಿಮುಕ್ತಿಯನ್ನು ಹೊಂದುತ್ತಿದ್ದಾನೆ. ಆದ್ದರಿಂದ ಭಗವಂತನ ಯಥಾರ್ಥ ಸ್ವರೂಪವನ್ನು ತಿಳಿಯುವುದು ಬಹಳ ಅವಶ್ಯಕ.

ಹೀಗೆ ದೈವವನ್ನು ತಿಳಿಯುವವನು ಆಸಕ್ತಿಯನ್ನು ಬಿಟ್ಟು (ದೃಶ್ಯಗಳ ಮೇಲೆ ವಿರಕ್ತಿ ಹುಟ್ಟಿ) ಸತ್ಯವನ್ನು ಆಶ್ರಯಿಸುವುದರಿಂದ ಅಂಧಕಾರವನ್ನು ಬಿಟ್ಟು ಪ್ರಕಾಶದ ಕೈ ಹಿಡಿಯುವನು. ಆದ್ದರಿಂದ ಮನುಷ್ಯರಲ್ಲೆಲ್ಲಾ ಆತನೇ ಅಜ್ಞಾನವಿಲ್ಲದಂತವನಾಗಿ ಸರ್ವಶ್ರೇಷ್ಠನಾಗಿ ಬೆಳಗುವನು. ಮನುಜನು ಎಷ್ಟು ಬಲವಂತನಾದರೂ, ಧನವಂತನಾದರೂ, ಮಾನವರಲ್ಲಿ ಶ್ರೇಷ್ಠನೆಂದೆನಿಸಿ ಕೊಳ್ಳುವುದಿಲ್ಲ. ಏಕೆಂದರೆ ಆತನು ಇನ್ನೂ ಮಾಯೆಯ ಅಧೀನದಲ್ಲಿಯೇ ಇರುವನು. ಮಾಯೆಗೆ ಅಧೀನನಾಗಿರುವವನು ಎಷ್ಟು ದೊಡ್ಡವನಾದರೂ ಅಲ್ಪನೇ; ಮೂಢನೇ. ಭಗವತ್‌ತತ್ತ್ವವನ್ನು ತಿಳಿದು ಆ ಮೂಢತ್ವವನ್ನು ಹೋಗಲಾಡಿಸಿಕೊಳ್ಳುವವನೇ ಮಾನವರಲ್ಲಿ ಶ್ರೇಷ್ಠನು- ಎಂದು ಭಗವಂತನು **'ಅಸಂಮೂಢಾಃ ಸ ಮರ್ತ್ಯೇಷು'** ಎನ್ನುವ ವಾಕ್ಯದ ಮೂಲಕ ಸ್ಪಷ್ಟಪಡಿಸಿದನು. ಇಲ್ಲಿ ಭಗವಂತನ ದೃಷ್ಟಿಯಲ್ಲಿ ಯಾರು ಶ್ರೇಷ್ಠರು ಎನ್ನುವುದು ಅರ್ಥವಾಗುತ್ತದೆ. ಪರಮಾತ್ಮನ ನಿಜಸ್ವರೂಪವನ್ನು ಅಂದರೆ ಆತನು ಜನ್ಮ ರಹಿತನೆಂದು, ಅನಾದಿ ಸ್ವರೂಪಿಯೆಂದೂ ತಿಳಿಯುವವನೇ ಮನುಜರಲ್ಲಿ ಶ್ರೇಷ್ಠನು ಎಂದು ಗೀತಾಚಾರ್ಯನು ಇಲ್ಲಿ ಹೇಳಿದ್ದಾನೆ. ಆದ್ದರಿಂದ ಪ್ರಾಪಂಚಿಕ ಯೋಗ್ಯತೆಗಳು ಬೇರೆ ಎಷ್ಟಿದ್ದರೂ ಅಥವ ಇಲ್ಲದಿದ್ದರೂ, ದೈವತತ್ತ್ವ ವಿಜ್ಞಾನವು ಮಾತ್ರ ತಪ್ಪದೆ ಇರಬೇಕೆಂದು ಸ್ಪಷ್ಟವಾಗುತ್ತದೆ.

ಮತ್ತೆ ಜೀವಿಗಳು ಅನೇಕ ಜನ್ಮಗಳಿಂದ ಬಂದಿರುವ ಪಾಪ ಸಂಚಯದಿಂದ ಕೂಡಿರುವರು. ಅವರ ಆ ಪಾಪಗಳೆಲ್ಲವೂ ಹೇಗೆ ನಶಿಸುವುವು? ಯಾವ ಉಪಾಯದಿಂದ ಅವು ತೊಲಗುವುವು? ಆ ಉಪಾಯವನ್ನು ಈ ಶ್ಲೋಕದಲ್ಲಿ ಭಗವಂತನು ಹೇಳಿದ್ದಾನೆ. ಎಷ್ಟು ದೊಡ್ಡ ಕೊರಡುಗಳಾದರೂ ಒಂದು ಕಿಡಿ ಅಗ್ನಿಯಿಂದ ಭಸ್ಮೀಭೂತವಾಗುವ ಹಾಗೆ, ಎಂತಹ ಪಾಪ ಸಂಚಯವಾದರೂ ಜ್ಞಾನಾಗ್ನಿಯಿಂದ, ಭಗವತ್ತತ್ತ್ವ ವಿವೇಕವಹ್ನಿಯಿಂದ ದಗ್ಧವಾಗುವುದು. (ಸರ್ವಪಾಪೈಃ ಪ್ರಮುಚ್ಯತೇ). ಆದ್ದರಿಂದ ದೈವತತ್ತ್ವವನ್ನು ತಪ್ಪದೆ ತಿಳಿದುಕೊಳ್ಳಬೇಕು. ದೇವರು ಅನಾದಿಯೆಂದೂ, ಜನ್ಮರಹಿತನೆಂದೂ ತಿಳಿಯಬೇಕು. ಅದರಿಂದ ಭಕ್ತಿ ಏರ್ಪಡುವುದು. ಭಕ್ತಿಯಿಂದ (ದೃಶ್ಯದಲ್ಲಿ ವಿರಕ್ತಿಯುಂಟಾಗಿ) ದೈವವನ್ನು ಧ್ಯಾನಿಸುವನು. ಅದರಿಂದ ಪಾಪ ವಿಮುಕ್ತಿಯಾಗಿ, ಬಂಧರಾಹಿತ್ಯ, ಮೋಕ್ಷ ಪ್ರಾಪ್ತಿ ಸಿದ್ಧಿಸುವುದು. ಈ ಪ್ರಕಾರವಾಗಿ ದೈವ ವಿಜ್ಞಾನ ಮೋಕ್ಷಕ್ಕೆ ದಾರಿ ತೋರುವುದು.

ಪ್ರ : ಮನುಜರಲ್ಲೆಲ್ಲಾ ಯಾವನು ವಿವೇಕವಂತನು? ಶ್ರೇಷ್ಠನು?

ಉ : ಭಗವಂತನನ್ನು ೧) ಜನ್ಮರಹಿತನೆಂದು ೨) ಅನಾದಿರೂಪಿಯೆಂದು ೩) ಸರ್ವಲೋಕ ಮಹೇಶ್ವರನೆಂದು ತಿಳಿಯುವವನು.

ಪ್ರ : ಆದ್ದರಿಂದ ಮನುಜರಲ್ಲಿ ಶ್ರೇಷ್ಠತ್ವವನ್ನು ಪಡೆಯಬೇಕೆಂದರೆ ಅನುಸರಿಸಬೇಕಾದ ಪದ್ಧತಿಯೇನು?

ಉ : ಭಗವಂತನ ಸ್ವರೂಪವನ್ನು ಯಥಾರ್ಥವಾಗಿ ತಿಳಿದುಕೊಳ್ಳಬೇಕು.

ಪ್ರ : ಸಮಸ್ತ ಪಾಪಗಳಿಂದ ಬಿಡುಗಡೆ ಹೊಂದುವ ಉಪಾಯವೇನು?

ಉ : ಭಗವತ್‌ತತ್ತ್ವವನ್ನು ತಿಳಿಯುವುದರಿಂದ (ಆತನು ಅನಾದಿಯೆಂದು, ಜನ್ಮರಹಿತನೆಂದು - ತಿಳಿಯುವುದು. ಅದರಿಂದ ಭಕ್ತಿ, ಭಕ್ತಿಯಿಂದ ಧ್ಯಾನ, ಧ್ಯಾನದಿಂದ ಭಗವತ್ಸಾಕ್ಷಾತ್ಕಾರ, ಅದರಿಂದ ಸರ್ವಪಾಪ ರಾಹಿತ್ಯ, ಬಂಧವಿಮುಕ್ತಿ ಸಿದ್ಧಿಸುತ್ತವೆ).

೪ **ಬುದ್ಧಿರ್ಜ್ಞಾನಮಸಂಮೋಹಃ ಕ್ಷಮಾ ಸತ್ಯಂ ದಮಃ ಶಮಃ**
**ಸುಖಂ ದುಃಖಂ ಭವೋಽಭಾವೋ ಭಯಂ ಚಾಭಯಮೇವ ಚ**
೫ **ಅಹಿಂಸಾ ಸಮತಾ ತುಷ್ಟಿಸ್ತಪೋ ದಾನಂ ಯಶೋಽಯಶಃ**
**ಭವಂತಿ ಭಾವಾ ಭೂತಾನಾಂ ಮತ್ತಏವ ಪೃಥಗ್ವಿಧಾಃ**

**ಅರ್ಥ:** ಬುದ್ಧಿಃ=ಬುದ್ಧಿ (ಸೂಕ್ಷ್ಮವಿಷಯ ಗ್ರಹಣ ಸಾಮರ್ಥ್ಯ); ಜ್ಞಾನಂ=ಜ್ಞಾನ; ಅಸಂಮೋಹಃ=ಮೋಹರಾಹಿತ್ಯ; ಕ್ಷಮಾ=ಸಹನೆ; ಸತ್ಯಂ=ಸತ್ಯ; ದಮಃ=ಬಾಹ್ಯೇಂದ್ರಿಯ ನಿಗ್ರಹ; ಶಮಃ=ಅಂತರೇಂದ್ರಿಯ ನಿಗ್ರಹ; ಸುಖಂ=ಸುಖವು; ದುಃಖಂ=ದುಃಖವು; ಭವಃ=ಹುಟ್ಟುವಿಕೆ; ಅಭಾವಃ=ನಾಶ; ಭಯಂ ಚ=ಭಯವು; ಅಭಯಂ ಏವ ಚ= ಭಯವಿಲ್ಲದೇ ಇರುವುದು; ಅಹಿಂಸಾ=ಅಹಿಂಸೆ; ಸಮತಾ=ಸಮತ್ವ; ತುಷ್ಟಿಃ=ಸಂತುಷ್ಟಿ; ತಪಃ=ತಪಸ್ಸು; ದಾನಂ=ದಾನ; ಯಶಃ=ಕೀರ್ತಿ; ಅಯಶಃ=ಅಪಕೀರ್ತಿ; ಭೂತಾನಾಂ= ಪ್ರಾಣಿಗಳ; ಪೃಥಗ್ವಿಧಾಃ= ನಾನಾವಿಧಗಳಾದ; ಭಾವಾಃ=(ಈ ಮೊದಲಾದ) ಗುಣಗಳು; ಮತ್ತಃ ಏವ=ನನ್ನಿಂದಲೇ; ಭವಂತಿ=ಹುಟ್ಟುತ್ತಿವೆ.

**ತಾ॥** ಬುದ್ಧಿ, ಜ್ಞಾನ, ಮೋಹರಾಹಿತ್ಯ, ಸಹನೆ, ಸತ್ಯ, ಬಾಹ್ಯೇಂದ್ರಿಯ ನಿಗ್ರಹ, ಅಂತರೇಂದ್ರಿಯ ನಿಗ್ರಹ, ಸುಖ, ದುಃಖ, ಹುಟ್ಟುವಿಕೆ (ಉತ್ಪತ್ತಿ) ನಾಶ, ಭಯ, ಭಯವಿಲ್ಲದೇ ಇರುವುದು. ಅಹಿಂಸೆ, ಸಮತ್ವ, ಸಂತುಷ್ಟಿ, ತಪಸ್ಸು, ದಾನ, ಕೀರ್ತಿ, ಅಪಕೀರ್ತಿ, ಪ್ರಾಣಿಗಳ ಈ ಪ್ರಕಾರವಾದ ನಾನಾವಿಧಗಳಾದ ಗುಣಗಳು ನನ್ನಿಂದಲೇ ಉಂಟಾಗುತ್ತಿವೆ.

**ವ್ಯಾಖ್ಯೆ:** ಈ ಎರಡು ಶ್ಲೋಕಗಳಲ್ಲಿ ಬುದ್ಧಿ, ಜ್ಞಾನ ಮುಂತಾದ ಹದಿನಾರು ಅನುಕೂಲ ಗುಣಗಳನ್ನೂ; ದುಃಖ, ನಾಶ, ಭಯ, ಅಪಕೀರ್ತಿಯೆನ್ನುವ ನಾಲ್ಕು ಪ್ರತಿಕೂಲ ಗುಣಗಳನ್ನೂ ಹೇಳಲಾಗಿದೆ. ಇವೆಲ್ಲವೂ ಭಗವಂತನಿಂದಲೇ ಉಂಟಾಗುತ್ತವೆಯೆಂದು ಹೇಳಲಾಗಿದೆ. ಇದರ ಭಾವವೇನು? ಭಗವಂತನು ವಾಸ್ತವವಾಗಿ ಅನುಕೂಲ, ಪ್ರತಿಕೂಲ ಭಾವಗಳನ್ನು ಜೀವಿಗಳಿಗೆ ಉಂಟುಮಾಡುತ್ತಿಲ್ಲ. ಜೀವಿಗಳ ಆಯಾ ಕರ್ಮಗಳಿಗೆ ಈಶ್ವರನು ಫಲವನ್ನು ಕೊಡುವನು. ಈಶ್ವರನು ಕರ್ಮಫಲಪ್ರದಾತ. ಜೀವಿಗಳು ಕರ್ಮಕರ್ತರು. ಕೆಲವರಿಗೆ ಕೀರ್ತಿ, ಮತ್ತೆ ಕೆಲವರಿಗೆ ಅಪಕೀರ್ತಿ. ಕೆಲವರಿಗೆ ಸುಖ. ಕೆಲವರಿಗೆ ದುಃಖ ಅವರವರ ಪೂರ್ವಕೃತ ಕರ್ಮಗಳಿಂದಲೇ ಉಂಟಾಗುತ್ತವೆ. ಯಾವ ಬೀಜವನ್ನು ಅವರು ನಾಟುವರೋ ಅಂತಹ ಫಲವೇ ಅವರಿಗೆ ಒದಗುವುದು. ಈಶ್ವರನು ನಿಮಿತ್ತ ಮಾತ್ರನು. ದುಷ್ಕರ್ಮಗಳನ್ನು ಮಾಡಿದವನಿಗೆ ದುಃಖ, ಸತ್ಕರ್ಮಿಗಳಿಗೆ ಸುಖ ಭಗವನ್ನಿಯಮದಿಂದ ಉಂಟಾಗುವವು. ಈ ದೃಷ್ಟಿಯಿಂದ ಆ ಸುಖದುಃಖಾದಿಗಳೆಲ್ಲವೂ ಭಗವಂತನಿಂದ ಉಂಟಾಗುತ್ತವೆಯೆಂದು ಹೇಳಲಾಗಿದೆ.

ಮತ್ತೆ ಈಗ ಹೇಳಿದ ವಿಕಾರಗಳು ಮನಸ್ಸಿನಲ್ಲಿ ಉದ್ಭವವಾಗುತ್ತಿರುತ್ತವೆ. ಮನಸ್ಸು ಸ್ವತಃ ಜಡವಾದುದು. ಅದಕ್ಕೆ ಆಧಾರವಾಗಿ ಚೈತನ್ಯವಾದ ಆತ್ಮವಸ್ತುವು ಒಂದಿದೆ. ಅಯಸ್ಕಾಂತದ ಸಾಮೀಪ್ಯದಲ್ಲಿ ಸೂಜಿ ಕದಲಿದಂತೆ, ಚೈತನ್ಯಾತ್ಮನ ಸನ್ನಿಧಾನದಲ್ಲಿ ಮನಸ್ಸು ಕ್ರಿಯಾತ್ಮಕವಾಗುತ್ತದೆ. ಈ ಪ್ರಕಾರವಾಗಿ ಮನಸ್ಸಿಗೆ ಹಾಗು ಬೇರೆಯ ವಿಕಾರಗಳಿಗೆ ಪರಮಾತ್ಮನೇ ಆಧಾರವಾದುದರಿಂದ, ಕೇವಲ ಇಂತಹ ದೃಷ್ಟಿಯಿಂದಲೇ, ಅವೆಲ್ಲವೂ ಪರಮಾತ್ಮನಿಂದಲೇ ಉಂಟಾಗಿವೆ ಎಂದು ಇಲ್ಲಿ ಹೇಳಲಾಗಿದೆ. ಅಷ್ಟೇ ಅಲ್ಲದೆ, ಅವುಗಳ ಸಂಬಂಧವಾದ ಕರ್ತೃತ್ವವಾಗಲಿ, ಪ್ರೇರಕತೆಯಾಗಲೀ ಆತ್ಮಕ್ಕೆ (ಭಗವಂತನಿಗೆ) ಇಲ್ಲ. (ರಂಗಮಂಟಪದ ದೀಪಕ್ಕೆ ನಾಟಕದಲ್ಲಿ ಕರ್ತೃತ್ವವಿಲ್ಲದಂತೆ). ಸೂರ್ಯನಿಗೆ ಜಗತ್ಕ್ರಿಯೆಗಳಲ್ಲಿ ಕರ್ತೃತ್ವವಿರುವುದಿಲ್ಲ.

೬. **ಮಹರ್ಷಯಸ್ಸಪ್ತ ಪೂರ್ವೇ ಚತ್ವಾರೋ ಮನವಸ್ತಥಾ**
**ಮದ್ಭಾವಾ ಮಾನಸಾ ಜಾತಾ ಏಷಾಂ ಲೋಕ ಇಮಾಃ ಪ್ರಜಾಃ**

**ಅರ್ಥ:** ಲೋಕೇ=ಲೋಕದಲ್ಲಿ; ಇಮಾಃ ಪ್ರಜಾಃ=ಈ ಪ್ರಜೆಗಳು; ಏಷಾಂ= ಯಾರ (ಸಂತತಿಯಾಗಿರುವರೋ ಅಂತಹ); ಪೂರ್ವೇ=ಪೂರ್ವಿಕರಾದ; ಮಹರ್ಷಯಃ=ಮಹರ್ಷಿಗಳು; ಸಪ್ತ=ಏಳು; ತಥಾ=ಹಾಗೆಯೇ; ಚತ್ವಾರಃ=ಸನಕಾದಿಗಳಾದ ನಾಲ್ಕು ದೇವರ್ಷಿಗಳು; ಮನವಃ=ಮನುಗಳೂ (ಹದಿನಾಲ್ಕು) ಕೂಡ; ಮದ್ಭಾವಾಃ=ನನ್ನ ಭಾವ(ದೈವ ಭಾವ) ಉಳ್ಳವರಾಗಿ (ನನ್ನನ್ನು ಕುರಿತ ಧ್ಯಾನ, ಭಕ್ತಿಯುಳ್ಳವರಾಗಿ); ಮಾನಸಾ ಜಾತಾಃ=ನನ್ನ ಮನಸ್ಸಂಕಲ್ಪದಿಂದಲೇ ಜನ್ಮಿಸಿದರು.

**ತಾ॥** ಲೋಕದಲ್ಲಿಯ ಈ ಪ್ರಜೆಗಳು ಯಾರ ಸಂತತಿಯಾಗಿರುವರೋ, ಅಂತಹ ಪೂರ್ವಿಕರಾದ ಮಹರ್ಷಿಗಳು, ಸನಕಾದಿಗಳಾದ ನಾಲ್ಕು ದೇವರ್ಷಿಗಳು, ಮನುಗಳೂ (ಹದಿನಾಲ್ಕು ಮಂದಿ) ನನ್ನ ಭಾವವನ್ನು (ದೈವಭಾವವನ್ನು) ಉಳ್ಳವರಾಗಿ ನನ್ನ ಮನಸ್ಸಂಕಲ್ಪದಿಂದಲೇ ಉತ್ಪತ್ತಿಯಾಗಿರುತ್ತಾರೆ.

**ವ್ಯಾಖ್ಯೆ:** ಸಪ್ತರ್ಷಿಗಳು - ೭ ಜನ
ಸನಕಾದಿಗಳು - ೪ ಜನ
ಮನುವುಗಳು - ೧೪ ಜನ

ಇವರೆಲ್ಲರೂ ಬಹಳ ಪೂರ್ವಿಕರು, ಇವರು ಭಗವಂತನ ಸಂಕಲ್ಪದಿಂದ ಉದ್ಭವಿಸಿದವರು. ಇವರಿಂದಲೇ ಪ್ರಪಂಚದ ಎಲ್ಲಾ ಜನರು ಹುಟ್ಟಿದರು. ಅಂದರೆ ಇವರು ಮೂಲಪುರುಷರು. ಇವರೆಲ್ಲರೂ ಭಗವದ್ಭಾವವನ್ನು ಉಳ್ಳವರೇ ಆಗಿದ್ದರು. ಅಂದರೆ ಭಗವದ್ಭಕ್ತಿ, ಆತ್ಮಜ್ಞಾನವನ್ನು ಹೊಂದಿದ್ದರೆಂದು ಅರ್ಥ. ಈ ಶ್ಲೋಕದ ಮೂಲಕ ಈ ಕೆಳಗಿನ ರಹಸ್ಯಗಳನ್ನು ಬೋಧಿಸಲಾಗಿದೆ.

೧) ಭಗವಂತನು ಅಪಾರಶಕ್ತಿ ಸಂಪನ್ನನೆಂದು, ಸಂಕಲ್ಪ ಮಾತ್ರದಿಂದಲೇ ಆತನು ಜನರನ್ನಾಗಲಿ, ಲೋಕವನ್ನಾಗಲಿ ಸೃಷ್ಟಿಸಬಲ್ಲನೆಂದು 'ಮಾನಸಾ ಜಾತಾಃ' ಎನ್ನುವ ವಾಕ್ಯದಿಂದ ತಿಳಿಯುತ್ತದೆ. ಹೀಗೆ ಹೇಳಲ್ಪಟ್ಟ ಸಪ್ತ ಮಹರ್ಷಿಗಳು ಮುಂತಾದವರೆಲ್ಲಾ ಭಗವಂತನ ಸಂಕಲ್ಪಮಾತ್ರದಿಂದ ಸೃಷ್ಟಿಸಲ್ಪಟ್ಟವರು. ಅಂತಹ ಸರ್ವಶಕ್ತಿವಂತನಿಗೆ ಕೈಜೋಡಿಸಿ ಅವನೆಡೆ ಭಕ್ತಿ ಭಾವ ಬೆಳೆಸಿಕೊಳ್ಳುವುದೇ ಜೀವಿಯ ಕರ್ತವ್ಯ.

೨) ಮೇಲೆ ತಿಳಿಸಿದ ಮಹರ್ಷಿಗಳು ಮುಂತಾದವರೆಲ್ಲಾ ಸಾಮಾನ್ಯರಲ್ಲ. ಭಗವದ್ಭಾವಮಯಿಗಳು. ನಿರ್ಮಲ ಭಕ್ತಿ ಸಂಪನ್ನರು. ಆದ್ದರಿಂದ ಅವರನ್ನು ಕುರಿತು 'ಮದ್ಭಾವಾಃ' ಎಂದು ಹೇಳಲಾಗಿದೆ. ಅಂದರೆ ನಿರಂತರ ದೈವಭಾವದಿಂದ ಕೂಡಿರುವವರು. ಆತ್ಮಜ್ಞಾನ ಸಂಪನ್ನರೂ, ಅಪರೋಕ್ಷಾನುಭೂತಿ ಹೊಂದಿದವರು ಎಂದರ್ಥ. ಅಂತಹ ಮಹಾ ಮಹಿಮರಿಂದ ಈ ಜನರೆಲ್ಲಾ ಹುಟ್ಟಿದರೆಂದು ಹೇಳಲಾಗಿದೆ. ಹಾಗಿದ್ದಲ್ಲಿ ಅವರಿಂದ ಜನ್ಮಿಸಿದ ಇವರು ಭಗವದ್ಭಾವರಹಿತರಾಗಿ ಇರುವುದು ಆಶ್ಚರ್ಯವಲ್ಲವೇ! ಇವರೂ ಸಹ ಅವರ ಹಾಗೆ (ಪಿತರರಂತೆ) ಭಗವದ್ಭಾವಯುಕ್ತರಾದಾಗ ಮಾತ್ರ ಶೋಭಿಸುವುದು. ಇಲ್ಲದಿದ್ದರೆ ಅಂತಹವರಿಂದ ಜನ್ಮಿಸಿ ಅಜ್ಞಾನದಲ್ಲಿರುವುದು ಹಾಸ್ಯಾಸ್ಪದವಾಗುವುದು. ಯಾರು ನಿರಂತರವಾಗಿ ದೈವಭಾವಸಂಯುತರಾಗಿ ಒಂದು ಕ್ಷಣವಾದರೂ ಭಗವತ್ಸ್ಮೃತಿಯನ್ನು ಬಿಡದೆ ಪಾಲಿಸುತ್ತಿದ್ದರೋ, ಅಂತಹವರ ಸಂತಾನವಾಗಿದ್ದು ಅಹರ್ನಿಶ ದೃಶ್ಯವ್ಯಾಮೋಹದಲ್ಲಿ ತೊಳಲುತ್ತ ನಶ್ವರ ಪ್ರಾಪಂಚಿಕ ಭೋಗ್ಯವಸ್ತು ಜಾಲಗಳ ಹಿಂದೆ ಬಿದ್ದು ಭಗವಂತನನ್ನು ಒಂದು ನಿಮಿಷವಾದರೂ ಸ್ಮರಿಸದೆ ಇರುವುದು ಎಷ್ಟು ಶೋಚನೀಯ! ಆದ್ದರಿಂದ ಜನರೆಲ್ಲಾ ತಮ್ಮ ಪೂರ್ವಿಕರಾದ ಮಹರ್ಷಿಗಳನ್ನು ಸ್ಮರಿಸಿ ದೈವಸಂಬಂಧವಾದ ಉತ್ತೇಜನವನ್ನು ಹೊಂದುವಂತಾಗಬೇಕು. ದ್ವಿಜರು ಸಂಧ್ಯಾವಂದನೆ ಮಾಡುವಾಗ ಕೊನೆಯಲ್ಲಿ ಪ್ರವರ ಹೇಳುವಾಗ ತಮ್ಮ ಗೋತ್ರ ಮೂಲಪುರುಷಾದಿಗಳನ್ನು ಸ್ಮರಿಸುವುದು ವಿಧಿಯಾಗಿದೆ. ಇದರ ಭಾವ ತಮ್ಮ ವಂಶದ ಅಂತಹ ಮಹರ್ಷಿಗಳನ್ನು ಸ್ಮರಿಸಿ, ಅವರ ಹಾಗೆ ತಾವೂ ಜ್ಞಾನಹೊಂದಿ ಮುಕ್ತಿ ಹೊಂದಬೇಕೆನ್ನುವುದೇ ಆಗಿದೆ. ಮತ್ತೆ ಎಷ್ಟೋ ಭೌತಿಕ ಶಕ್ತಿ ಸಮನ್ವಿತರು, ಉದ್ಯೋಗಿಗಳು, ಅಧಿಕಾರಿಗಳು, ವಿದ್ವಾಂಸರು ಇದ್ದಾಗ್ಯೂ ಆ ಋಷಿಗಳನ್ನೇ ಸ್ಮರಿಸುವುದರಿಂದ ಜ್ಞಾನಧನ ಮಾತ್ರ ಜೀವಿಯನ್ನು ಮುಕ್ತಿಗೊಳಿಸುವುದೇ ಆಗಲಿ ಬೇರೆ ಲೌಕಿಕ ಸಂಪದಗಳು ಅಲ್ಲವೆಂದು ಸ್ಪಷ್ಟವಾಗುತ್ತದೆ.

೩) ಇನ್ನು ಮೂರನೆಯ ವಿಷಯ - ಈ ಸಮಸ್ತ ಪ್ರಜೆಗಳು ಮೇಲೆ ತಿಳಿಸಿದ ಮಹರ್ಷಿಗಳಿಂದ ಉದ್ಭವಿಸಿದರೆಂದು ಹೇಳಿರುವುದರಿಂದ ಇವರ ಮೂಲಪುರುಷರು ಅವರೇ ಎಂದು ಸ್ಪಷ್ಟವಾಗಿದೆ. ಆದ್ದರಿಂದ ಇನ್ನು ಯಾರೂ ತಾವು ಅಲ್ಪರೆಂದು, ಅಲ್ಪಜಾತಿಗೆ ಸೇರಿದವರೆಂದು ದಿಗಿಲು ಬೀಳಬೇಕಾಗಿಲ್ಲ. ಯಾವ ಜಾತಿ, ಮತ ಹಾಗು ವರ್ಣಗಳಿಗೆ ಸೇರಿದ್ದರೂ ಎಲ್ಲರೂ ಮಹರ್ಷಿಗಳ ಸಂತಾನವೆಂದು ತಿಳಿದು ದೈವೋತ್ತೇಜನವನ್ನು ಹೊಂದಬೇಕು. ಆ ಮಹರ್ಷಿಗಳ ಪವಿತ್ರರಕ್ತವು ಎಲ್ಲರಲ್ಲಿಯೂ ಪ್ರವಹಿಸುತ್ತಿದೆ. ಇಂತಹ ಸತ್ಯವನ್ನು ತಿಳಿದು ಜನರು ಧೈರ್ಯೋಪೇತರಾಗಿ ತಮ್ಮ ಪೂರ್ವಜರ ಜ್ಞಾನ ಧನವನ್ನು, ದೈವ ಪರಂಪರೆಯ ಭಾವವನ್ನು ಅನುಭವಿಸಬೇಕು. ಅದು ಯಾರೊಬ್ಬರ ಸ್ವತ್ತಲ್ಲ. ಅದರ ಮೇಲೆ ಸರ್ವರಿಗೂ ಹಕ್ಕಿದೆ. ಚಂಡಾಲನೂ ಯತ್ನ ಮಾಡಿದರೆ ಆ ಸ್ವತ್ತನ್ನು ಅನುಭವಿಸಬಲ್ಲನು. ಈ ಸತ್ಯವನ್ನು ಬೋಧಿಸಲು ಶ್ರೀ ಕೃಷ್ಣಪರಮಾತ್ಮನು ಜನರ ವಂಶಪಾರಂಪರ್ಯದ ವೃಕ್ಷವನ್ನು ಇಲ್ಲಿ ಕೊಟ್ಟಿರುವನು. ಸರ್ವಜೀವಿಗಳೂ ಮಹರ್ಷಿಗಳ ದೈವಸಂಪತ್ತಿಗೆ ಸಮಾನ ಭಾಗಿಗಳೆಂದು ಹೇಳಿರುವನು. ಆದ್ದರಿಂದ ಯಾರಾದರೂ 'ನಿಮ್ಮ ಪೂರ್ವೀಕರಾರು' ಎಂದು ಕೇಳಿದರೆ, ಸಾಮಾನ್ಯ ವಕ್ತಿಗಳಾದ ಪೂರ್ವಜರ ಹೆಸರುಗಳನ್ನು ತೆಗೆದುಕೊಳ್ಳದೆ, ಸಪ್ತರ್ಷಿಗಳು, ಸನಕಾದಿಗಳು. ಮನುಗಳು ಎಂದು ಘಂಟಾಘೋಷವಾಗಿ ಹೇಳಬೇಕು. ತಾನು ಅಲ್ಪನೆಂದು ತಿಳಿಯುವವನು ಅಲ್ಪನೇ ಆಗುವನು. ತಾನು ಪವಿತ್ರನೆಂದು, ಋಷಿವಂಶಜನೆಂದು ತಿಳಿಯುವವನು ಶುದ್ಧನೇ ಆಗುವನು. ಆದ್ದರಿಂದ ಜನರೆಲ್ಲರೂ ಮೂಲಪುರುಷರಾದ ಆ ಮಹನೀಯರನ್ನು ಪ್ರತಿದಿನ ಸ್ಮರಿಸಿ ಅವರಿಂದ ಭಗವದ್ಭಾವಯುತರಾಗಿ ಸಂಸಾರಬಂಧನದಿಂದ ಬಿಡಿಸಿಕೊಂಡು ಪರಮ ಶಾಂತಿಯನ್ನು ಅನುಭವಿಸುವಂತಾಗಬೇಕು!

ಇಲ್ಲಿ ಹೇಳಲ್ಪಟ್ಟ ಪೂರ್ವಜರಲ್ಲಿ ಸನಕಾದಿಗಳು ಜನರಿಗೆ ನಿವೃತ್ತಿ ಮಾರ್ಗಗಳನ್ನು, ಮನ್ವಾದಿಗಳು (ಧರ್ಮಪೂರಕ) ಪ್ರವೃತ್ತಿ ಮಾರ್ಗವನ್ನು ಲೋಕಕ್ಕೆ ಬೋಧಿಸಿದರು. ಇದರಲ್ಲಿ ಮೊದಲಿನವರು ಗುರುಪರಂಪರೆಗೆ, ಎರಡನೆಯವರು ವಂಶಪರಂಪರೆಗೆ ಮೂಲಪುರುಷರು. ಈ ಮೂಲ ಪುರುಷರೆಲ್ಲರೂ ಭಗವಂತನ ಮಾನಸ ಪುತ್ರರೇ ಆದ್ದರಿಂದ ಸರ್ವಜನರೂ ಭಗವಂತನ ಮಕ್ಕಳೇ ಎಂದು ನಿರೂಪಿಸಲಾಗಿದೆ. ಇಲ್ಲಿ ಸನಕಾದಿಗಳು ನಾಲ್ಕು ಜನ ನೈಷ್ಠಿಕ ಬ್ರಹ್ಮಚಾರಿಗಳಾದುದರಿಂದ 'ಅವರಿಂದ ಹುಟ್ಟಿದರು' ಎನ್ನುವ ವಾಕ್ಯಕ್ಕೆ 'ಅವರಿಗೆ ಶಿಷ್ಯರಾದರು' ಎನ್ನುವ ಅರ್ಥ ಕೊಡಬೇಕಾಗುತ್ತದೆ.

ಪ್ರ.: ಈ ಪ್ರಪಂಚದ ಜನರು ಯಾರಿಂದ ಹುಟ್ಟಿದರು?

ಉ : ೧)ಸಪ್ತಮಹರ್ಷಿಗಳು ೨) ಸನಕಾದಿಗಳು ೩) ಮನುಗಳು - ಇವರಿಂದ ಹುಟ್ಟಿದರು.

ಪ್ರ : ಆ ಮಹನೀಯರು ಎಂತಹವರು!

ಉ : ನಿರಂತರ ಭಗವದ್ಭಾವಸಂಯುತರು.

ಪ್ರ : ಆ ಮೂಲಪುರುಷರು ಹೇಗೆ ಜನಿಸಿದರು?

ಉ : ಭಗವಂತನ ಸಂಕಲ್ಪದಿಂದ

**ಅ॥** ಈ ಪ್ರಕಾರವಾಗಿ ಭಗವದ್ವಿಭೂತಿ ತಿಳಿದವನಿಗೆ ಉಂಟಾಗುವ ಮಹತ್ತರ ಫಲಗಳನ್ನು ತಿಳಿಸಲಾಗಿದೆ-

**೭ ಏತಾಂ ವಿಭೂತಿಂ ಯೋಗಂ ಚ ಮಮ ಯೋ ವೇತ್ತಿ ತತ್ತ್ವತಃ**
**ಸೋಽವಿಕಂಪೇನ ಯೋಗೇನ ಯುಜ್ಯತೇ ನಾತ್ರ ಸಂಶಯಃ**

**ಅರ್ಥ:** ಮಮ=ನನ್ನ; ಏತಾಂ=ಈ; ವಿಭೂತಿಮ್=ಐಶ್ವರ್ಯವನ್ನು ವಿಸ್ತಾರವನ್ನು, ಸೃಷ್ಟಿಮಹಿಮೆಯನ್ನು; ಯೋಗಂಚ= ಯೋಗವನ್ನು (ಅಲೌಕಿಕ ಶಕ್ತಿಯನ್ನು); ತತ್ತ್ವತಃ=ಯಥಾರ್ಥವಾಗಿ; ಯಃ=ಯಾವನು; ವೇತ್ತಿ= ತಿಳಿಯುತ್ತಿದ್ದಾನೊ; ಸಃ=ಆತನು; ಅವಿಕಂಪೇನ=ಚಂಚಲವಲ್ಲದ; ಯೋಗೇನ= ಯೋಗದಿಂದ; ಯುಜ್ಯತೇ=ಕೂಡಿರುತ್ತಾನೆ. ಅತ್ರ=ಈ ವಿಷಯದಲ್ಲಿ; ಸಂಶಯಃ=ಸಂದೇಹವು; ನ=ಇಲ್ಲ.

**ತಾ॥** ನನ್ನ ವಿಭೂತಿಯನ್ನು (ಐಶ್ವರ್ಯ, ವಿಸ್ತಾರವನ್ನು), ಯೋಗವನ್ನು (ಅಲೌಕಿಕ ಶಕ್ತಿಯನ್ನು), ಯಾವನು ಯಥಾರ್ಥವಾಗಿ ತಿಳಿದುಕೊಳ್ಳುತ್ತಿದ್ದಾನೋ ಆತನು ನಿಶ್ಚಲವಾದ ಯೋಗದಿಂದ ಕೂಡಿರುವವನಾಗಿರುವನು. ಈ ವಿಷಯದಲ್ಲಿ ಸಂದೇಹವಿಲ್ಲ.

**ವ್ಯಾಖ್ಯೆ:** ಈ ಪ್ರಕಾರವಾಗಿ ಭಗವದ್ ವಿಭೂತಿಯನ್ನು (ಸೃಷ್ಟಿ ಮಹಿಮೆಯನ್ನು) ಯಥಾರ್ಥವಾಗಿ ಯಾವನು ತಿಳಿಯುವನೋ, ಸಮಸ್ತ ಜಗತ್ತು ಭಗವಂತನಿಂದ ಆವಿರ್ಭವಿಸಿದೆಯೆಂದು ಯಾವನು ಚೆನ್ನಾಗಿ ತಿಳಿದುಕೊಂಡಿರುವನೋ, ಅವನು ನಿಶ್ಚಲವಾದ ಯೋಗದಿಂದ (ಭಗವದ್ಧ್ಯಾನ, ದೈವನಿಷ್ಠೆಯಿಂದ) ಕೂಡಿರುವ ನಾಗಿರುವನೆಂದು ಇಲ್ಲಿ ಹೇಳಲಾಗಿದೆ 'ತತ್ತ್ವತಃ' (ಯಥಾರ್ಥವಾಗಿ) ಎಂದು ತಿಳಿಸಲ್ಪಟ್ಟಿರುವುದರಿಂದ ಭಗವದ್ವಿಭೂತಿಯನ್ನು, ಯೋಗವನ್ನು ಯಥಾರ್ಥವಾಗಿ ತಿಳಿಯಬೇಕೇ ಹೊರತು ಅನ್ಯವಿಧದಲ್ಲಲ್ಲ. ಅಂದರೆ ಭಗಂವತನೊಬ್ಬನೇ ಸತ್ಯ, ಅವನಿಂದಲೇ ಜಗದಾದಿಗಳೆಲ್ಲವೂ ಪ್ರಭವಿಸಿವೆ ಯೆಂದು ತಿಳಿಯುವುದೇ ವಾಸ್ತವ ಜ್ಞಾನ. ಹಾಗೆ ತಿಳಿದವನು ಅವ್ಯಯನಾದ ಆ ಪರಮಾತ್ಮನನ್ನೇ ಹೊಂದಲು ಕೃತನಿಶ್ಚಯದಿಂದ, ನಿಶ್ಚಲ ಧ್ಯಾನಯೋಗದಿಂದ, ದೃಢಪ್ರಯತ್ನದಿಂದ ಕೂಡಿರುವನು. 'ಅವಿಕಂಪೇನ' (ನಿಶ್ಚಲವಾದ) ಎಂದು ಹೇಳಲ್ಪಟ್ಟಿರುವುದರಿಂದ ಆತನು ಅನುಸರಿಸುವ ಧ್ಯಾನನಿಷ್ಠೆ, ಯೋಗ, ದೈವವಿಶ್ವಾಸ ಯಾವ ಮಾತ್ರವೂ ಅಚಂಚಲವಾಗಿರುವುದಿಲ್ಲ, ಚಂಚಲವಾಗಿ ದೃಶ್ಯದ ಹಾಗು ದೈವಗಳ ಮಧ್ಯೆ ಲೋಲಕದಂತೆ ಚಲಿಸುವುದಿಲ್ಲವೆಂದು ಸ್ಪಷ್ಟವಾಗುತ್ತದೆ. 'ನ ಸಂಶಯಃ' (ಸಂದೇಹವಿಲ್ಲ) ಎಂದು ಹೇಳುವುದರಿಂದ, ಮೇಲೆ ತಿಳಿಸಿದ ವಾಕ್ಯದ ಸತ್ಯತೆಯನ್ನು ಚೆನ್ನಾಗಿ ನಿರೂಪಿಸಿದಂತಾಗಿದೆ. ಆದ್ದರಿದ ಮುಮುಕ್ಷು ಭಗವದ್ವಿಭೂತಿಯನ್ನು ಅರ್ಥಮಾಡಿಕೊಂಡು, ನಿಶ್ಚಲವಾದ ಧ್ಯಾನನಿಷ್ಠೆಯನ್ನವಲಂಬಿಸಿ, ಭಗವತ್ಪ್ರಾಪ್ತಿಗೆ ಯತ್ನಿಸಬೇಕು. 'ಯಃ=ಯಾರು' ಎನ್ನುವ ಶಬ್ದವನ್ನು ಪ್ರಯೋಗ ಮಾಡಿರುವುದರಿಂದ (ಜಾತಿ ಮತ ಭೇದವಿಲ್ಲದೆ) ಯಾರಾದರೂ ಸರಿಯೇ, ಭಗವದ್ವಿಭೂತಿಯನ್ನು ಕುರಿತು ಆಳವಾಗಿ ತಿಳಿದರೆ ನಿಶ್ಚಲಯೋಗವನ್ನು ಪಡೆಯುತ್ತಾರೆಂದು ಸ್ಪಷ್ಟವಾಗುತ್ತದೆ.

ಪ್ರ : ದೈವ ಸಂಬಂಧವಾದ ನಿಶ್ಚಲಯೋಗ ಯಾರಿಗೆ ಸಿದ್ಧಿಸುವುದು?

ಉ : ಭಗವದ್ವಿಭೂತಿಯನ್ನು ಯಥಾರ್ಥವಾಗಿ ತಿಳಿದವನಿಗೆ.

**ಅ॥** ಈ ಪ್ರಕಾರವಾಗಿ ಭಗವದ್ವಿಭೂತಿಯನ್ನು, ಭಗವತ್ತತ್ತ್ವವನ್ನು ಚೆನ್ನಾಗಿ ತಿಳಿದುಕೊಂಡ ಭಕ್ತರು ನಿರ್ಮಲ ಭಕ್ತಿಯಿಂದ ಆತನನ್ನು ಸೇವಿಸುವರೆಂದು ಎರಡು ಶ್ಲೋಕಗಳ ಮೂಲಕ ಹೇಳಲಾಗಿದೆ-

**೮ ಅಹಂ ಸರ್ವಸ್ಯ ಪ್ರಭವೋ ಮತ್ತಃ ಸರ್ವಂ ಪ್ರವರ್ತತೇ**
**ಇತಿ ಮತ್ವಾ ಭಜಂತೇ ಮಾಂ ಬುಧಾ ಭಾವಸಮನ್ವಿತಾಃ**

**ಅರ್ಥ:** ಅಹಂ=ನಾನು; ಸರ್ವಸ್ಯ=ಸಮಸ್ತಕ್ಕೆ; ಪ್ರಭವಃ=ಉತ್ಪತ್ತಿಗೆ ಕಾರಣ ವಾದವನು; ಮತ್ತಃ=ನನ್ನಿಂದ; ಸರ್ವಂ=ಸಮಸ್ತವೂ; ಪ್ರವರ್ತತೇ=

ಪ್ರವರ್ತಿಸುತ್ತಿದೆ (ನಡೆಯುತ್ತಿದೆ); ಇತಿ=ಎಂದು; ಮತ್ವಾ= ತಿಳಿದುಕೊಂಡು; ಬುಧಾಃ=ತಿಳುವಳಿಕೆಯುಳ್ಳವರು (ವಿಜ್ಞುಗಳು); ಭಾವಸಮನ್ವಿತಾಃ= ಪರಿಪೂರ್ಣ ಭಕ್ತಿ ಭಾವದಿಂದ ಕೂಡಿದವರಾಗಿ; ಮಾಂ=ನನ್ನನ್ನು; ಭಜಂತೇ=ಭಜಿಸುತ್ತಿದ್ದಾರೆ (ಉಪಾಸಿಸುತ್ತಿದ್ದಾರೆ).

**ತಾ||** 'ನಾನು ಸಮಸ್ತ ಜಗತ್ತಿನ ಉತ್ಪತ್ತಿಗೆ ಕಾರಣನು, ನನ್ನಿಂದಲೇ ಈ ಸಮಸ್ತವೂ ನಡೆಯುತ್ತಿದೆ' ಎಂದು ವಿವೇಕವಂತರು ತಿಳಿದುಕೊಂಡು ಪರಿಪೂರ್ಣ ಭಕ್ತಿಭಾವದಿಂದ ಕೂಡಿದವರಾಗಿ ನನ್ನನ್ನು ಭಜಿಸುತ್ತಿದ್ದಾರೆ.

**ವ್ಯಾಖ್ಯೆ:** ಭಗವಂತನನ್ನು ಧ್ಯಾನಿಸುವವರು, ಸೇವಿಸುವವರು ಆತನ ನಾಮವನ್ನು ಜಪಿಸುವವರು ಬಹಳ ಜನರಿದ್ದಾರೆ. ಆದರೆ 'ಭಾವ'ದಿಂದ ಕೂಡಿ ಅಂದರೆ ನಿರ್ಮಲ ಭಕ್ತಿಯಿಂದ, ಶ್ರದ್ಧೆಯಿಂದ ಕಾರ್ಯವನ್ನು ಮಾಡುವವರು ವಿರಳ. ಆದರೆ ಅಂತಹ ಭಕ್ತಿ, ಶ್ರದ್ಧೆ ಭಗವಂತನ ಮೇಲೆ ಹೇಗೆ ಉಂಟಾಗುವುದು? ಅವನ ಸೃಷ್ಟಿಮಹಿಮೆಯನ್ನು ಹಾಗು ವಿಭೂತಿ ರಹಸ್ಯವನ್ನು ತಿಳಿದಾಗ. ಒಂದು ವಸ್ತುವಿನ ಬೆಲೆಯನ್ನು ಚೆನ್ನಾಗಿ ತಿಳಿದಾಗಲೇ ಅದರ ಮೇಲೆ ಮನುಜನಿಗೆ ಶ್ರದ್ಧೆ ಉದಯಿಸುವುದು. ಹಾಗೆಯೇ ಭಗವಂತನು ಸಮಸ್ತ ಜಗತ್ತಿಗೆ ಮೂಲಾಧಾರನು. ಅವನಿಂದಲೇ ಈ ಸಮಸ್ತವು ನಡೆಯುತ್ತಿದೆ. (ಮತ್ತಃ ಸರ್ವಂ ಪ್ರವರ್ತತೇ)- ಎಂದು ಯಾರು ತಿಳಿದುಕೊಳ್ಳುವರೋ ಅವರಿಗೆ ಸರ್ವೇಶ್ವರನ ಮೇಲೆ ಅಚಂಚಲವಾದ ವಿಶ್ವಾಸ ಉಂಟಾಗುತ್ತದೆ. ಆಗ ಅವರು ಪರಮಭಕ್ತಿಯಿಂದ ಆತನನ್ನು ಸೇವಿಸುವರು. 'ಭಾವಸಮನ್ವಿತಾಃ' ಎನ್ನುವುದರ ಅರ್ಥವಿದೇ ಆಗಿದೆ. ಭಗವದ್ವಿಭೂತಿಯನ್ನು ಭಗವತ್ತತ್ವವನ್ನು ಚೆನ್ನಾಗಿ ತಿಳಿದುಕೊಂಡವರಿಗೆ ಭಗವಂತನ ಮೇಲೆ ಅಪಾರ ಶ್ರದ್ಧೆ ಹಾಗು ಭಕ್ತಿ ಬೆಳೆಯುತ್ತದೆ. ಆದ್ದರಿಂದಲೇ ಅವರು ಭಾವಸಮನ್ವಿತರಾಗಿ, ಶ್ರದ್ಧಾಭಕ್ತಿ ಯುತರಾಗಿ ಭಗವಂತನನ್ನು ಧ್ಯಾನಿಸಿ, ಅಚಿರಕಾಲದಲ್ಲಿಯೇ ಭಗವತ್ಪ್ರಾಪ್ತಿಯನ್ನು ಹೊಂದುವರು.

ಈ ಶ್ಲೋಕದಲ್ಲಿ ತಿಳಿಸಿದ 'ಭಾವ' ಎನ್ನುವುದು ಲಕ್ಷ್ಯಪ್ರಾಪ್ತಿಗೆ ಅತ್ಯವಶ್ಯಕವಾಗಿದೆ. ಅದು ತುಪಾಕಿಯಲ್ಲಿಯ ಗುಂಡಿನಂತಹದು. ಗುಂಡಿಲ್ಲದೆ ತುಪಾಕಿಯನ್ನು ಹತ್ತಿಸಿದರೆ ಶಬ್ದ ಬರುವುದೇ ಆಗಲಿ ಲಕ್ಷ್ಯವನ್ನು ಭೇದಿಸುವುದಿಲ್ಲ. ಹಾಗೆಯೇ ಜಪವಾಗಲಿ, ಧ್ಯಾನವಾಗಲಿ, ಮಂತ್ರದೊಡನೆ ಮಂತ್ರಾರ್ಥಚಿಂತನೆ ಯಿರಬೇಕು. ಅದೂ ಸಹ ಶ್ರದ್ಧೆಯಿಂದ ಕೂಡಿರಬೇಕು. ಆದ್ದರಿಂದ ಇಲ್ಲಿ ತಿಳಿಸಲ್ಪಟ್ಟ 'ಭಾವಸಮನ್ವಿತಾಃ' ಎನ್ನುವ ಪದವನ್ನು ಮುಮುಕ್ಷು ಅತಿ ಜಾಗ್ರತೆಯಿಂದ ಗಮನಿಸಬೇಕು. ಮಂತ್ರಾರ್ಥಚಿಂತನೆ ಹಾಗು ಶ್ರದ್ಧೆ ಇಲ್ಲದಿರುವುದರಿಂದ, ಅನೇಕರ ಧ್ಯಾನಗಳು ಸತ್ಫಲಿತಗಳನ್ನುಂಟುಮಾಡದೆ ಅರ್ಧದಲ್ಲಿಯೇ ನಿಂತುಹೋಗುತ್ತವೆ. ಧ್ಯಾನವು ಕುಂಠಿತವಾಗಬಾರದೆಂದರೆ 'ಭಾವಸಮನ್ವಿತ'ರಾಗಿ ಇರಬೇಕು. ಭಾವವು ಉಂಟಾಗಬೇಕೆಂದರೆ ಭಕ್ತಿಯಿರಬೇಕು. ಭಕ್ತಿ ಉದಯಿಸಬೇಕೆಂದರೆ, ದೈವತತ್ವ ಹಾಗು, ದೈವಮಹಿಮೆಗಳು ಏನು ಎನ್ನುವುದು ಸ್ಪಷ್ಟವಾಗಬೇಕು. ಈ ರಹಸ್ಯಗಳೆಲ್ಲವೂ ಈ ಶ್ಲೋಕದಲ್ಲಿ ಚೆನ್ನಾಗಿ ವಿಶದೀಕರಿಸಲ್ಪಟ್ಟಿವೆ.

ಪ್ರ : ಈ ಸಮಸ್ತ ಜಗತ್ತಿನ ಉತ್ಪತ್ತಿಗೆ ಕಾರಣವೇನು? ಯಾರಿಂದ ಈ ಸಮಸ್ತವೂ ನಡೆಯುತ್ತಿದೆ?

ಉ : ಪರಮಾತ್ಮನೇ-ಅವನಿಂದಲೇ ಈ ಜಗತ್ತೆಲ್ಲವೂ ನಡೆಯುತ್ತಿದೆ.

ಪ್ರ : ಭಗವಂತನನ್ನು ಯಾವ ಪ್ರಕಾರವಾಗಿ ಧ್ಯಾನಿಸಿ, ಸೇವಿಸಬೇಕು?

ಉ: ಭಕ್ತಿಭಾವದಿಂದ ಕೂಡಿದ ಶ್ರದ್ಧೆಯಿಂದ.

ಪ್ರ : ಅಂತಹ ಶ್ರದ್ಧಾಭಕ್ತಿಗಳು ಜೀವಿಗೆ ಹೇಗೆ ಉಂಟಾಗುವುವು?

ಉ : ಭಗವತ್ತತ್ತ್ವ, ಭಗವದ್ವಿಭೂತಿ ಚೆನ್ನಾಗಿ ತಿಳಿದುಕೊಂಡಾಗ ಅಂದರೆ ಪರಮಾತ್ಮನೇ ಈ ಸಮಸ್ತಕ್ಕೆ ಕಾರಣಭೂತನು, ಆತನಿಂದಲೇ ಈ ಜಗತ್ತೆಲ್ಲವೂ ನಡೆಯುತ್ತಿದೆ ಎಂದು ತಿಳಿದುಕೊಂಡಾಗ.

**ಅ||** ಅಂತಹ ಭಕ್ತರು ಯಾವ ಪ್ರಕಾರವಾಗಿ ದೈವಚಿಂತನೆಯಲ್ಲಿ ಕಾಲ ಕಳೆಯುತ್ತಾರೆ ಎನ್ನುವುದನ್ನು ಹೇಳಲಾಗಿದೆ-

೯ **ಮಚ್ಚಿತ್ತಾ ಮದ್ಗತಪ್ರಾಣಾ ಬೋಧಯಂತಃ ಪರಸ್ಪರಮ್**
**ಕಥಯಂತಶ್ಚ ಮಾಂ ನಿತ್ಯಂ ತುಷ್ಯಂತಿ ಚ ರಮಂತಿ ಚ.**

**ಅರ್ಥ:** (ತೇ=ಅವರು); ಮಚ್ಚಿತ್ತಾ=ನನ್ನಲ್ಲಿ ಮನಸ್ಸುಳ್ಳವರು; ಮದ್ಗತಪ್ರಾಣಾಃ= ನನ್ನನ್ನು ಹೊಂದಿದ ಪ್ರಾಣಗಳನ್ನು (ಇಂದ್ರಿಯಗಳು) ಉಳ್ಳವರು (ಇಲ್ಲವೆ ನನ್ನಲ್ಲೇ ಪ್ರಾಣವನ್ನರ್ಪಿಸಿದವರಾಗಿ); ಮಾಂ=ನನ್ನನ್ನು ಕುರಿತು; ಪರಸ್ಪರಂ= ಒಬ್ಬರಿಗೊಬ್ಬರು; ಬೋಧಯಂತಃ=ಬೋಧಿಸಿಕೊಳ್ಳುತ್ತ; ಕಥಯಂತಃ ಚ= ಹೇಳಿಕೊಳ್ಳುತ್ತ; ನಿತ್ಯಂ=ಯಾವಾಗಲೂ; ತುಷ್ಯಂತಿ ಚ=ಸಂತೃಪ್ತಿ ಹೊಂದುತ್ತಿದ್ದಾರೆ; ರಮಂತಿ ಚ=ಆನಂದಿಸುತ್ತಿದ್ದಾರೆ.

**ತಾ||** (ಅವರು) ನನ್ನಲ್ಲಿ ಮನಸ್ಸುಳ್ಳವರಾಗಿ, ನನ್ನನ್ನು ಹೊಂದಿದ ಪ್ರಾಣಗಳನ್ನು (ಇಂದ್ರಿಯಗಳು) ಉಳ್ಳವರಾಗಿ, (ಇಲ್ಲವೆ ನನ್ನಲ್ಲಿ ಪ್ರಾಣವನ್ನರ್ಪಿಸಿದವರಾಗಿ) ನನ್ನನ್ನು ಕುರಿತು ಪರಸ್ಪರ ಬೋಧಿಸುತ್ತ, ಮಾತನಾಡಿಕೊಳ್ಳುತ್ತ ಯಾವಾಗಲೂ ಸಂತೃಪ್ತಿಯನ್ನು ಹಾಗು ಆನಂದವನ್ನು ಹೊಂದುತ್ತಿದ್ದಾರೆ.

**ವ್ಯಾಖ್ಯೆ:** ಭಗವದ್ಭಕ್ತಿಯುಳ್ಳವರು ಹೇಗೆ ಪ್ರವರ್ತಿಸುವರು ಎನ್ನುವುದನ್ನು ಈ ಶ್ಲೋಕದಲ್ಲಿ ತಿಳಿಸಲಾಗಿದೆ. ಸಾಮಾನ್ಯ ಜನರ ಮನಸ್ಸು, ಚಿತ್ತ, ಪ್ರಾಣ, ಇಂದ್ರಿಯಗಳು ಪ್ರಾಪಂಚಿಕ ವಿಷಯಗಳಲ್ಲೇ ಮನೆಮಾಡಿಕೊಂಡಿರುವುವು. ಆದರೆ ಭಗವನ್ಮಹಿಮೆಯನ್ನು ತಿಳಿದ ಮಹನೀಯರಲ್ಲಿ ಮೇಲೆ ತಿಳಿಸಿದ ಕರಣಗಳೆಲ್ಲಾ ಭಗವಂತನಲ್ಲೇ ಸಂಲಗ್ನವಾಗಿರುವುವು. ಯಾವುದೇ ಲಕ್ಷ್ಯವನ್ನು ಹೊಂದಬೇಕೆಂದರೆ ಮನಸ್ಸು ತದೇಕ ನಿಷ್ಠೆಯಿಂದ ಅದನ್ನು ಕುರಿತೇ ಚಿಂತಿಸುತ್ತಿರಬೇಕು (ಅದು ಪ್ರಾಪಂಚಿಕ ಲಕ್ಷ್ಯವಾಗಲಿ, ದೈವಲಕ್ಷ್ಯವಾಗಲಿ). ಅಜ್ಞಾನಿಗಳು ನಶ್ವರವಾದ ಭೌತಿಕ ಪದಾರ್ಥಗಳಲ್ಲಿ, ಜ್ಞಾನಿಗಳು ಶಾಶ್ವತವಾದ ದೈವವಸ್ತುವಿನಲ್ಲಿ ತಮ್ಮ ದೃಷ್ಟಿಯನ್ನು ಕೇಂದ್ರೀಕರಿಸುವರು. ಭಕ್ತರು, ಜ್ಞಾನಿಗಳು, ಪರಮ ಭಾಗವತೋತ್ತಮರು ಭಗವಂತನ ಅವ್ಯಯತ್ವವನ್ನು, ಮಹಿಮೆಯನ್ನು ತಿಳಿದಂಥವರಾಗಿ ಯಾವಾಗಲೂ ಆ ಪರಮಾತ್ಮನನ್ನು ಕುರಿತೇ ಒಬ್ಬರಿಗೊಬ್ಬರು ಬೋಧಿಸಿಕೊಳ್ಳುತ್ತ ಆನಂದಿಸುತ್ತಿದ್ದಾರೆ. ಇದನ್ನೇ ಬ್ರಹ್ಮಾಭ್ಯಾಸವೆಂದು ಹೇಳುವರು. ಅವರು ಏನು ಮಾತನಾಡಿದರೂ ಅದು ದೈವಸಂಬಂಧವಾದ ವಿಷಯವೇ ಆಗಿರುವುದು. ಅನ್ಯವಾದ ಬೇರೆ ಯಾವುದನ್ನೂ ಅವರು ಪ್ರಸಂಗಿಸುವುದಿಲ್ಲ. ಯಾವುದರಲ್ಲಿ ಜನರಿಗೆ ಹೆಚ್ಚಿನ ಪ್ರೀತಿಯಿದೆಯೋ ಅದನ್ನು ಕುರಿತೇ ಅವರು ದಿನವೆಲ್ಲಾ ಪ್ರಸಂಗಿಸಿಕೊಳ್ಳುವುದು ಲೋಕದ ಪದ್ಧತಿ. ಸಾಮಾನ್ಯರಿಗೆ ಕ್ಷುದ್ರವಾದ ಪ್ರಾಪಂಚಿಕ ವಸ್ತುಗಳಲ್ಲೇ ಹೆಚ್ಚು ಪ್ರೀತಿಯಿರುವುದರಿಂದ ಅವರು ಬಾಯಿ ತೆರೆದರೆ ತತ್ಸಂಬಂಧವಾದ ವಾಕ್ಯಗಳೇ ಹೊರಬೀಳುವವು. ಆದರೆ ಭಕ್ತರ ಪ್ರವರ್ತನೆ ಹಾಗಿರದು. ಅವರ ತ್ರಿಕರಣಗಳು ದೈವಕ್ಕೇ ಅರ್ಪಿತವಾಗಿರುವುವು. ಆದ್ದರಿಂದ ಅವರು ಏನು ಮಾಡಿದರೂ ಅಥವ ಮಾತನಾಡಿದರೂ ಎಲ್ಲವೂ ದೈವಸಂಬಂಧವಾದವುಗಳೇ ಆಗಿರುವುವು.

ಮಾಗಿದ ಹಣ್ಣನ್ನು ಎಲ್ಲಿ ಕಡಿದರೂ ಸಿಹಿಯಾಗೇ ಇರುವಂತೆ, ಕುಸುಮ ತನ್ನ ಸುತ್ತ ಪರಿಮಳವನ್ನು ಹೊರಸೂಸುವಂತೆ ಅವರ ಉಪಾಧಿಯಿಂದ ಎಲ್ಲೆಲ್ಲೂ ದೈವಗಂಧವೇ ಬಹಿರ್ಗತವಾಗುತ್ತಿರುತ್ತದೆ.

*'ಬೋಧಯಂತಃ ಪರಸ್ಪರಮ್'*- ಒಬ್ಬರಿಗೊಬ್ಬರು ಬೋಧಿಸಿ ಕೊಳ್ಳುವುದರಿಂದ ತತ್ತ್ವವು ದೃಢವಾಗುವುದು. ಆಗ ಸಂಭಾಷಣೆಯಲ್ಲಿ ಅನೇಕ ಪ್ರಶ್ನೆಗಳು ಉದಯಿಸುವುವು; ಅನೇಕ ದೃಷ್ಟಿ ಕೋನಗಳಿಂದ ವಿಚಾರಿಸುವುದು ಸಂಭವಿಸುವುದು. ಆದ್ದರಿಂದ ಮುಮುಕ್ಷುಗಳಿಗೆ ಸತ್ಸಂಗ ಅತ್ಯಾವಶ್ಯಕ (ನಾಸ್ತಿಕರೊಂದಿಗೆ ಅವರು ಎಂದೂ ಸೇರಬಾರದು)

*'ನಿತ್ಯಂ ತುಷ್ಯಂತಿ ರಮಂತಿ'* ಎಂದು ಹೇಳಿರುವುದರಿಂದ ಅಂತಹ ಭಾಗವತರಲ್ಲಿ ಪರಮತೃಪ್ತಿ, ಪರಮಾನಂದವು ಯಾವಾಗಲೂ ತಾಂಡವ ವಾಡುತ್ತಿರುತ್ತದೆ ಎಂದು ವಿಶದವಾಗುತ್ತದೆ. ದೈವಾಯುತ ಚಿತ್ತನಿಗೆ ಅತೃಪ್ತಿಯಾಗಲೀ, ದುಃಖವಾಗಲೀ ಹೇಗೆ ಉಂಟಾಗುವುದು? ಶಾಶ್ವತ ಪದಾರ್ಥ (ಆತ್ಮ ದೈವ)ವನ್ನು ಆಶ್ರಯಿಸಿದವನಿಗೆ ಅಸಂತೃಪ್ತಿ ಅಥವ ದುಃಖ ಲವಲೇಶವೂ ಉಂಟಾಗುವುದಿಲ್ಲ.

*'ಮದ್ಗತ ಪ್ರಾಣಾಃ'*- ಭಗವದ್ವಿಭೂತಿ ತಿಳಿದ ಮಹನೀಯರು ತಮ್ಮ ಜೀವನವನ್ನು ಪರಮಾತ್ಮನಿಗೇ ಅಂಕಿತ ಮಾಡುವರು. ದೈವಪ್ರಾಪ್ತಿಗೆ ತಮ್ಮ ಪ್ರಾಣವನ್ನೊಡ್ಡುವರು. ದೈವರೂಪ ಲಕ್ಷ್ಯ ಹೊಂದುವುದಕ್ಕಾಗಿ ತಮ್ಮ ಪ್ರಾಣವನ್ನು ಬಲಿದಾನ ಮಾಡಲೂ ಸಿದ್ಧರಾಗುವರು. ಅಂತಹ ತೀವ್ರ ನಿಶ್ಚಯ, ತೀವ್ರತ್ಯಾಗ ಉಂಟಾದಾಗಲೇ ಲಕ್ಷ್ಯ ಸುಲಭವಾಗಿ ಕೈಗೂಡುವುದು. ಅದೃಢ ನಿಶ್ಚಯಗಳಿಂದ, ಅಲ್ಪತ್ಯಾಗಗಳಿಂದ, ಅಸ್ಥಿರಭಾವದಿಂದ, ಆತ್ಮ (ದೈವ) ಲಭಿಸುವುದು ಬಹಳ ಕಷ್ಟ. (ತ್ಯಾಗೇನೈಕೆ ಅಮೃತತ್ವ ಮಾನಶುಃ) ಲಕ್ಷ್ಯಸಾಧನೆಯಲ್ಲಿ ಪ್ರಾಣವನ್ನು ಅರ್ಪಿಸುವಂತಹ ದೃಢವಾದ ನಿರ್ಧಾರದಿಂದ ಮಾತ್ರ ದೈವವು ಸಾಕ್ಷಾತ್ಕಾರ ವಾಗುವುದು. ಲೋಕದಲ್ಲಿ ಅನೇಕರು ರಾಜ್ಯಕ್ಕೆ, ಸಂಪದಕ್ಕೆ, ತಮ್ಮ ಪ್ರಾಣಗಳನ್ನೂ ಸಹ ಲೆಕ್ಕಿವಿಡದೆ ದುಡಿಯುತ್ತಿದ್ದಾರೆ. ಆದರೆ ಪರಮಾತ್ಮಪದವು ಅವೆಲ್ಲವುಗಳಿಂತ ಮಹೋನ್ನತವಾದುದು. ಇದರಿಂದ ಅನಂತ ಸುಖವು ಲಭ್ಯವಾಗುವುದು. ಆದ್ದರಿಂದಲೇ ಮಹನೀಯರು ತಮ್ಮ ಮನ, ಪ್ರಾಣೇಂದ್ರಿಯಗಳೆಲ್ಲವನ್ನೂ ದೈವ ಪ್ರಾಪ್ತಿಯಲ್ಲಿಯೇ ವಿನಿಯೋಗಿಸುವರು.

ಈ ಶ್ಲೋಕದಲ್ಲಿ ಪರಮಾರ್ಥಸಾಧಕರು ಹೇಗೆ ಪ್ರವರ್ತಿಸಬೇಕು, ಅವರು ತಮ್ಮ ದಿನಚರಿಗಳನ್ನು ಹೇಗೆ ನಡೆಸಬೇಕು, ಏನು ಮಾತಾಡಬೇಕು, ಹಾಗು ಏನು ಮಾಡಬೇಕು ಎನ್ನುವುದನ್ನೆಲ್ಲಾ ತಿಳಿಸಲಾಗಿದೆ. ಆದ್ದರಿಂದ ಮುಮುಕ್ಷುಗಳು ಆ ಪ್ರಕಾರ ನಡೆದು ಬ್ರಹ್ಮಾನುಭೂತಿಯನ್ನು ಪಡೆಯಬೇಕು.

ಪ್ರ: ಭಗವದ್ವಿಭೂತಿಯನ್ನು ತಿಳಿದ ಮಹನೀಯರು ಹೇಗೆ ಪ್ರವರ್ತಿಸುವರು?

ಉ: ೧) ದೈವದಲ್ಲೇ ಸಂಲಗ್ನವಾದ ಚಿತ್ತ, ಪ್ರಾಣ ಹಾಗು ಇಂದ್ರಿಯಗಳನ್ನು ಹೊಂದಿರುವರು.

೨) ಪರಸ್ಪರ ದೈವವನ್ನು ಕುರಿತೇ ಸದಾ ಬೋಧಿಸಿಕೊಳ್ಳುತ್ತಾ, ಪ್ರಸಂಗಿಸಿ ಕೊಳ್ಳುತ್ತಿರುವರು.

೩.) ಹಾಗೆ ದೈವ ವಿಚಾರಣೆ ಮಾಡುತ್ತ ಪರಮತೃಪ್ತಿ ಹಾಗು ಆನಂದವನ್ನು ಹೊಂದುವರು

ಪ್ರ : ಇದರಿಂದ ಸಾಧಕನಾದವನು ಮೋಕ್ಷ ಪ್ರಾಪ್ತಿಗಾಗಿ ಯಾವ ರೀತಿಯ ಆಚರಣೆ ಮಾಡಬೇಕು?

ಉ : ಮೇಲೆ ತಿಳಿಸಿದ ಪ್ರಕಾರ ನಿರಂತರ ಆಧ್ಯಾತ್ಮಿಕ ಚಿಂತನೆಯಲ್ಲಿ ಕಾಲ ಕಳೆಯಬೇಕೆಂದು ನಿಶ್ಚಿತವಾಗುತ್ತದೆ.

ಪ್ರ : ಪೂರ್ಣಸಂತುಷ್ಟಿ, ಆನಂದ ಯಾವುದರಲ್ಲಿದೆ?

ಉ : ಪರಮಾತ್ಮಪ್ರಾಪ್ತಿಯಲ್ಲಿ

ಪ್ರ : ಮುಮುಕ್ಷು ಯಾವದನ್ನು ಕುರಿತು ಮಾತನಾಡುತ್ತಿರಬೇಕು?

ಉ : ಭಗವತ್ತತ್ತ್ವವನ್ನು ಕುರಿತು.

ಪ್ರ : ಸಾಧಕನು ತನ್ನ ಪ್ರಾಣ, ಚಿತ್ತ, ಇಂದ್ರಿಯಗಳನ್ನು ಎಲ್ಲಿ ಇಟ್ಟಿರಬೇಕು?

ಉ : ಪರಮಾತ್ಮನಲ್ಲಿಯೇ.

**ಅ॥** ನಿರಂತರ ಭಕ್ತಿಯಿಂದ ತನ್ನನ್ನು ಭಜಿಸುವವರಿಗೆ ಜ್ಞಾನಯೋಗವೆನ್ನುವ ಬಹುಮಾನವನ್ನು ಕೊಡುವೆನೆಂದು ಭಗವಂತನು ಎರಡು ಶ್ಲೋಕಗಳ ಮೂಲಕ ಅಭಯವಿತ್ತಿದ್ದಾನೆ.

**೧೦ ತೇಷಾಂ ಸತತಯುಕ್ತಾನಾಂ ಭಜತಾಂ ಪ್ರೀತಿ ಪೂರ್ವಕಮ್**
**ದದಾಮಿ ಬುದ್ಧಿಯೋಗಂ ತಂ ಏನ ಮಾಮುಪಯಾಂತಿ ತೇ**

**ಅರ್ಥ:** ಸತತ ಯುಕ್ತಾನಾಂ=ಯಾವಾಗಲೂ ನನ್ನಲ್ಲೇ ಮನಸ್ಸುಳ್ಳವರಾಗಿ; ಪ್ರೀತಿ ಪೂರ್ವಕಂ=ಪ್ರೀತಿಯಿಂದ; ಭಜತಾಂ=(ನನ್ನನ್ನು) ಭಜಿಸುವ; ತೇಷಾಂ=ಅವರಿಗೆ; ಯೇನ=ಯಾವುದರಿಂದ; ತೇ=ಅವರು; ಮಾಂ=ನನ್ನನ್ನು; ಉಪಯಾಂತಿ=ಹೊಂದಬಲ್ಲರೋ; ತಮ್=ಅಂತಹ; ಬುದ್ಧಿಯೋಗಂ= ಜ್ಞಾನಯೋಗವನ್ನು (ಆತ್ಮಾನಾತ್ಮ ವಿವೇಚನಾಶಕ್ತಿಯನ್ನು) ದದಾಮಿ= ಕೊಡುತ್ತಿದ್ದೇನೆ.

**ತಾ॥** ಯಾವಾಗಲೂ ನನ್ನಲ್ಲೇ ಮನಸ್ಸುಳ್ಳವರಾಗಿ, ಪ್ರೀತಿಯಿಂದ ನನ್ನನ್ನು ಭಜಿಸುವವರಿಗೆ, ಯಾವುದರಿಂದ ಅವರು ನನ್ನನ್ನು ಹೊಂದಬಲ್ಲರೋ ಅಂತಹ ಜ್ಞಾನಯೋಗವನ್ನು (ಆತ್ಮಾನಾತ್ಮ ವಿವೇಚನಾಶಕ್ತಿಯನ್ನು) ಪ್ರಸಾದಿಸುತ್ತಿದ್ದೇನೆ.

**ವ್ಯಾಖ್ಯೆ:** ಭಗವಂತನನ್ನು ಪ್ರೀತಿಯಿಂದ ನಿರಂತರ ಸೇವಿಸುವವನಿಗೆ ಉಂಟಾಗುವ ಮಹತ್ತರ ಫಲಗಳನ್ನು ಇಲ್ಲಿ ಕೊಡಲಾಗಿದೆ. ಅಂತಹ ಪರಮಭಕ್ತರಿಗೆ ಉನ್ನತವಾದ ಜ್ಞಾನಯೋಗವನ್ನು ತಾನು ಪ್ರಸಾದಿಸುವೆನೆಂದು ಭಗವಂತನು ನುಡಿಯುತ್ತಿದ್ದಾನೆ. ಆ ಯೋಗವು ಜೀವಿಯನ್ನು ಪರಮಾತ್ಮನಲ್ಲಿ ಸೇರಿಸುವಲ್ಲಿ ಅಸಾಧಾರಣವಾದ ಸಾಮರ್ಥ್ಯವನ್ನು ಹೊಂದಿರುವುದು. ಆದರೆ ಇಂತಹ ಮಹೋನ್ನತ ಫಲ ಕೈಗೂಡಬೇಕೆಂದರೆ ಅದಕ್ಕೆ ಬೇಕಾದ ಯೋಗ್ಯತೆ ಹಾಗು ಅರ್ಹತೆಗಳು ಇರಬೇಕು. ಆ ಯೋಗ್ಯತೆಯನ್ನು ನಿರೂಪಿಸಲು ಇಲ್ಲಿ ಎರಡು ಕ್ರಿಯೆಗಳನ್ನು ಪ್ರಸ್ತಾಪಿಸಲಾಗಿದೆ.

೧) ನಿರಂತರ ಪರಮಾತ್ಮನಲ್ಲಿ ಚಿತ್ತವನ್ನು ಸಂಲಗ್ನಿಸುವುದು'

೨) ಪ್ರೀತಿ ಪೂರ್ವಕವಾಗಿ ಭಗವಂತನನ್ನು ಭಜಿಸುವುದು

ಈ ಎರಡರಲ್ಲಿ ಮೊದಲನೆಯದು 'ನಿರಂತರ' (ಸತತಯುಕ್ತಾನಾಂ) ಎಂದು ಹೇಳುತ್ತಿರುವುದರಿಂದ, ಸ್ವಲ್ಪ ಹೊತ್ತು ಯಾವಾಗಲೋ ದೈವವನ್ನು ಚಿಂತಿಸಿದರೆ ಸಾಲದೆಂದೂ, ಎಲ್ಲ ಕಾಲದಲ್ಲಿಯೂ ಚಿಂತಿಸಬೇಕೆಂದು ಹೇಳಿದಂತಾಗಿದೆ. ಅಂತಹ ಸ್ಥಿತಿಯನ್ನು ಕ್ರಮವಾಗಿ ಪಡೆಯಬೇಕು. ಲೋಕದಲ್ಲಿ ಹೆಚ್ಚಿನವರು ದೃಶ್ಯ ಪದಾರ್ಥಗಳಲ್ಲಿ ತಮ್ಮ ಚಿತ್ತವನ್ನು ಮಗ್ನಗೊಳಿಸುತ್ತಿದ್ದಾರೆ

ಆಗಲಿ ಭಗವಂತನಲ್ಲಲ್ಲ. ಒಂದು ವೇಳೆ ಕೆಲವರು ದೈವದಲ್ಲಿ ಮನಸ್ಸನ್ನು ನಿಲ್ಲಿಸಿದರೂ, ಎಲ್ಲಾ ಕಾಲದಲ್ಲಿಯೂ ಹಾಗೆಯೇ ನಿಲ್ಲಿಸಿರುವವರು ಬಹಳ ವಿರಳ. ಅದರಲ್ಲೂ ಪ್ರೀತಿ ಪೂರ್ವಕವಾಗಿ ಹಾಗು ಭಕ್ತಿ ಪೂರ್ವಕವಾಗಿ ನಿಲ್ಲಿಸುವವರು ಇನ್ನೂ ವಿರಳ. ಭಗವಂತನನ್ನು ನಿರಂತರ ಧ್ಯಾನಿಸಿದರೂ, ಶ್ರದ್ಧೆ, ಪ್ರೀತಿ, ಭಕ್ತಿ ಅದರಲ್ಲಿ ಇಲ್ಲದಿದ್ದರೆ ಆ ಧ್ಯಾನವು ಹೆಚ್ಚಿನ ಫಲವನ್ನು ಕೊಡುವುದಿಲ್ಲವಾದ್ದರಿಂದ 'ಪ್ರೀತಿ ಪೂರ್ವಕವಾಗಿ' ಸೇವಿಸಬೇಕೆಂದು ಎರಡನೆಯದರಲ್ಲಿ ಹೇಳಲಾಗಿದೆ. ಪಾಠಶಾಲೆಯಲ್ಲಿ ಪ್ರಥಮ ಶ್ರೇಣಿಯಲ್ಲಿ ಉತ್ತೀರ್ಣನಾದ ವಿದ್ಯಾರ್ಥಿಗೆ ಅಧಿಕಾರಿಗಳು ಬಹುಮಾನವನ್ನು ಹೇಗೆ ಕೊಡುವರೋ, ಹಾಗೆಯೇ ಈ ಪ್ರಕಾರವಾಗಿ ನಿರಂತರವೂ ತನ್ನನ್ನು ಸೇವಿಸಿ ಧ್ಯಾನಿಸುವವನಿಗೆ ಭಗವಂತನು ತನ್ನ ಕರಕಮಲಗಳಿಂದ ಬುದ್ಧಿಯೋಗ (ಆತ್ಮಾನಾತ್ಮ ವಿಚಾರಣಾ ಶಕ್ತಿ) ಎನ್ನುವ ದೊಡ್ಡ ಪುರಸ್ಕಾರವನ್ನೀಯುತ್ತಿದ್ದಾನೆ. ಓಹೋ! ಎಷ್ಟು ಗೌರವ! ಆ ಭಕ್ತನ ಅದೃಷ್ಟವೆಂತಹದು! ಅನೇಕ ಜನ್ಮಾರ್ಜಿತ ಪುಣ್ಯಪುಂಜ ಫಲಿಸಿ ಇಂತಹ ಭಾಗ್ಯವಾಗಿ ಪರಿಣಾಮಗೊಳ್ಳುತ್ತದೆ.

ಭಗವಂತನು ಭಕ್ತನಿಗೆ ತಿಳಿಸುವ ಆ ಬುದ್ಧಿಯೋಗ ಸಾಮಾನ್ಯವಾದುದಲ್ಲ. ಜೀವಿಯನ್ನು ಶಿವನಾಗಿ ಮಾಡುವುದು. ನರನನ್ನು ನಾರಾಯಣನನ್ನಾಗಿ ಮಾಡುವುದು. ಆದ್ದರಿಂದಲೇ 'ಮಾ ಉಪಯಾಂತಿ' (ಅದರ ದ್ವಾರ ಅವರು ನನ್ನನ್ನು ಸೇರುತ್ತಿದ್ದಾರೆ) ಎಂದು ಹೇಳಲ್ಪಟ್ಟಿದೆ. ಆ ಬುದ್ಧಿಯೋಗದ ದ್ವಾರ ಜನಗಳು ತನ್ನನ್ನು ತಪ್ಪದೆ ಸೇರುವರೆಂದು ಭಗವಂತನು ಆಶ್ವಾಸನೆ ಕೊಟ್ಟನು. 'ಬುದ್ಧಿಯೋಗ' ಎಂದರೇನು? ಬುದ್ಧಿ (Brain)ಗೆ ಸಂಬಂಧಪಟ್ಟ ಅಂದರೆ ಅದರ ವಿಚಾರಣಾ ಸಂಬಂಧವಾದ ಯೋಗ (The yoga of discrimination) ಎಂದರ್ಥ. ಇದನ್ನೇ ಜ್ಞಾನಯೋಗವೆನ್ನುವರು. 'ಇದು ಆತ್ಮ, ಇದು ಅನಾತ್ಮ; ಇದು ನಿತ್ಯ, ಇದು ಅನಿತ್ಯ; ಇದು ದೃಕ್ಕು, ಇದು ದೃಶ್ಯ; -ಎಂದು ವಿವೇಚಿಸಿ ನೋಡುವುದೇ ಈ ಯೋಗ. ಶರೀರವನ್ನು, ಉಪಾಧಿಯನ್ನು ಆತ್ಮದಿಂದ ಬೇರೆ ಮಾಡುವುದೇ ಯೋಗ. ಇದನ್ನು ಅರಿತವನು ಇನ್ನು ಪ್ರಪಂಚದಲ್ಲಿ ಪ್ರತಿವಸ್ತುವನ್ನು ಬೇರ್ಪಡಿಸಿ 'ಅಸ್ತಿ, ಭಾತಿ, ಪ್ರಿಯ'ಗಳನ್ನು (ಸತ್, ಚಿತ್, ಆನಂದ)ಗಳನ್ನು ಗ್ರಹಿಸಿ 'ನಾಮ, ರೂಪ'ಗಳನ್ನು ತ್ಯಜಿಸಬಲ್ಲನು.

ಇಂತಹ ಬುದ್ಧಿಯೋಗ, ಜ್ಞಾನಯೋಗ ಯಾರಿಗೆ ಲಭಿಸುವುದು? ಪ್ರಪಂಚದಲ್ಲಿ ಅನೇಕ ಕೋಟಿಗಟ್ಟಲೆ ಜನಗಳಿದ್ದಾಗ್ಯೂ ಯಾವನು ಭಕ್ತಿಯಿಂದ ಪ್ರೀತಿ ಪೂರ್ವಕವಾಗಿ ನಿರಂತರ ಭಗವಂತನನ್ನು ಆರಾಧಿಸುತ್ತಾನೋ ಆತನಿಗೆ ಮಾತ್ರ ಲಭಿಸುವುದು. ಭಕ್ತಿಯೇ ಜ್ಞಾನವಾಗಿ ಪರಿಣಮಿಸುತ್ತದೆ. ಭಕ್ತಿ ಎನ್ನುವ ಪುಷ್ಪ ವಿಕಸಿಸಿ ಜ್ಞಾನಫಲೋತ್ಪತ್ತಿಗೆ ದಾರಿ ಮಾಡಿಕೊಡುತ್ತದೆ. ಕೆಲವರು ಹೀಗೆ ಪ್ರಶ್ನಿಸುತ್ತಾರೆ- "ಆತ್ಮ ಪಂಚಕೋಶದಲ್ಲಿ ಇರುವನೆಂದು ಹೇಳುವರಲ್ಲ! ನಾವು ಯಾವಾಗಲೂ ಹೊರಗಡೆ ಇರುವ ದೇವನನ್ನೇ ಅಂದರೆ ಯಾವುದೋ ವಿಗ್ರಹವನ್ನೋ, ಮೂರ್ತಿಯನ್ನೋ ಪೂಜಿಸುತ್ತಿದ್ದೇವಲ್ಲ. ನಮಗೆ ಆ ಅಂತರ್ದೃಷ್ಟಿ ಯಾವಾಗ ಉಂಟಾಗುವುದು? ವಿಗ್ರಹಾರಾಧನೆ ಮೊದಲಾದವುಗಳಿಂದ ಬಾಹ್ಯ ಪೂಜೆ ಜರುಗಿಸುವ ನಮ್ಮ ದೃಷ್ಟಿ ಅಂತರಂಗದ ಆತ್ಮಕ್ಕೆ ಯಾವಾಗ ಮರಳುವುದು? ಸಾಕಾರ ನಿರಾಕಾರವಾಗಿ ಯಾವಾಗ ಪರಿಣಮಿಸುವುದು? ಬಾಹ್ಯ ಸಾಕಾರದೃಷ್ಟಿ ಅಂತರಂಗ ನಿರಾಕಾರ ದೃಷ್ಟಿಯಾಗಿ ಯಾವಾಗ ಬದಲಾಗುವದು? ಅಂತರಂಗದ ಪರಮಾತ್ಮನನ್ನು ಹೇಗೆ ಹೊಂದಬಲ್ಲೆವು?"- ಈ ಪ್ರಶ್ನೆಗಳಿಗೆ ಈ ಶ್ಲೋಕದಲ್ಲಿ ಸರಿಯಾದ ಉತ್ತರವನ್ನು ಕೊಡಲಾಗಿದೆ. 'ಜೀವಿಯೇ! ಆ ಪ್ರಕಾರವೇ ಸ್ವಲ್ಪ ಕಾಲ ಸಾಕಾರವನ್ನು ಅರ್ಚಿಸು, ಸೇವಿಸು. ಆದರೆ ಪ್ರೀತಿಯಿಂದ ಸೇವಿಸು. ಶ್ರದ್ಧೆಯಿಂದ, ಭಕ್ತಿಯಿಂದ ಸೇವಿಸು. ನಿರಂತರ ಸೇವಿಸು. ಅದರಿಂದ ನಾನು ಸಂತುಷ್ಟನಾಗಿ ಅಂತಹ ಸಗುಣೋಪಾಸನೆಯಿಂದ ಪ್ರೀತಿ ಹೊಂದಿದವನಾಗಿ ನಿರ್ಗುಣ ಉಪಾಸನೆಗೆ ಬೇಕಾದ ಬುದ್ಧಿಬಲವನ್ನು, ಜ್ಞಾನಯೋಗಕ್ಕೆ ಬೇಕಾದ ಧೀಃಶಕ್ತಿಯನ್ನು, ಆತ್ಮಾನಾತ್ಮ ವಿಚಾರಣೆಗೆ ಬೇಕಾದ ಪ್ರಜ್ಞಾಪಾಠವನ್ನು ನಿನಗೆ ತಿಳಿಸುವೆನು. ಅದರ ಮೂಲಕ ನೀನು ತಪ್ಪದೆ ನನ್ನನ್ನು ಪಡೆಯುವೆ; ಎಂದು ಭಗವಂತನು ಆಶ್ವಾಸನೆಯಿತ್ತನು. ಇದರಿಂದ ಮೇಲೆ ಕೇಳಿದ ಪ್ರಶ್ನೆಗಳಿಗೆಲ್ಲಾ ಉತ್ತರ ಸಿಕ್ಕ ಹಾಗಾಯಿತು.

ಮತ್ತೆ ಆ ಪ್ರಕಾರವಾಗಿ ಜೀವಿಗೆ ಯಾವ ಕ್ಷಣದಲ್ಲಿ ಭಗವತ್ಕರುಣೆ ಯಿಂದ ಬುದ್ಧಿಯೋಗ ಲಭಿಸುವುದೋ ಆ ಕ್ಷಣದಿಂದ ಆತನು ನಿರಾಕಾರ ಪರಮಾತ್ಮನ ಕಡೆಗೆ ಮನಸ್ಸನ್ನು ಹರಿಯಬಿಟ್ಟು ಆತ್ಮದ ಅನ್ವೇಷಣೆಯಲ್ಲಿ, ವಿಚಾರಣೆಯಲ್ಲಿ ಆಸಕ್ತನಾಗುವನು, ಇದೇ ಭಕ್ತಿ, ಜ್ಞಾನವಾಗಿ ಬದಲಾಗುವಂತಹ ಸುಮೂಹರ್ತ. 'ನಮ್ಮ ಭಕ್ತಿಯೋಗವು ಶ್ರೇಷ್ಠ; ನಮ್ಮ ಜ್ಞಾನಯೋಗವು ಶ್ರೇಷ್ಠ' ಎಂದು ಬಡಿದಾಡಿಕೊಳ್ಳುವವರಿಗೆ, 'ಭಕ್ತಿಗಿಂತ ಜ್ಞಾನದೊಡ್ಡದು, ಜ್ಞಾನಕ್ಕಿಂತ ಭಕ್ತಿದೊಡ್ಡದು' - ಎಂದು ತರ್ಕಿಸುವವರಿಗೆ ಭಗವಂತನು ಈ ಶ್ಲೋಕದಲ್ಲಿ ಗುಣಪಾಠ ಹೇಳಿದ್ದಾನೆ. ಎರಡೂ ಅವಶ್ಯಕಗಳೇ. ಮೋಕ್ಷಕ್ಕೆ ಎರಡೂ ಸಹಾಯಕಗಳೇ. ಎರಡಕ್ಕೂ ಅವಿನಾಭಾವ ಸಂಬಂಧವಿದೆ. ವಾಸ್ತವವಾಗಿ ಎರಡೂ ಒಂದೇ ವಸ್ತುವಾಗಿವೆ; ಭೇದವಿಲ್ಲ. ಮೊದಲನೆಯದಾದ ಭಕ್ತಿ ಕಾಲಕ್ರಮೇಣ ಎರಡನೆಯದಾದ ಜ್ಞಾನವಾಗಿ ಬದಲಾಗಬಲ್ಲದು. ಯಾವ ಲಗ್ನ, ಮುಹೂರ್ತದಲ್ಲಿ ಈ ಬದಲಾವಣೆ ಸಂಭವಿಸುತ್ತದೆ ಎನ್ನುವುದನ್ನು ಈ ಶ್ಲೋಕದಲ್ಲಿ ತಿಳಿಸಲಾಗಿದೆ. ಭಕ್ತಿ ಪರಿಪಕ್ವವಾದ ಸಮಯವೇ ಆ ಸುಮೂಹರ್ತ. 'ದಾಸೋಽಹಂ' ಎನ್ನುವುದೇ ಕಾಲಾಂತರದಲ್ಲಿ 'ಸೋಽಹಂ' ಆಗುವುದು. **'ದದಾಮಿ ಬುದ್ಧಿಯೋಗಂ'** (ನಾನು ಬುದ್ಧಿಯೋಗವನ್ನು ಪ್ರಸಾದಿಸುವೆ) ಎಂದು ಅಸಂದಿಗ್ಧವಾಗಿ ಹೇಳಿರುವುದರಿಂದ ಈ ಬದಲಾವಣೆಗೆ ಭಗವಂತನೇ ಕಾರಣವೆಂದು ಸ್ಪಷ್ಟವಾಗುತ್ತದೆ. ಸಮಸ್ತ ಚರಾಚರಪ್ರಾಣಿಕೋಟಿಗಳ ಸೂಕ್ಷ್ಮತರ ಸಂಕಲ್ಪಗಳನ್ನು ಸಹ ಬಹು ಜಾಗರೂಕತೆಯಿಂದ ಪರಿಶೀಲಿಸುವ ಪರಮಾತ್ಮನು, ಭಕ್ತನ ಹೃದಯಕ್ಷೇತ್ರವು ನಿರ್ಮಲ ಭಕ್ತಿಯಿಂದ ಪಾವನವಾಗಿರುವುದನ್ನು ನೋಡಿ ಅಂತಹ ಸುಕ್ಷೇತ್ರದಲ್ಲಿ 'ಬುದ್ಧಿಯೋಗ' ಎನ್ನುವ (ಜ್ಞಾನ ಯೋಗವೆನ್ನುವ) ಬೀಜವನ್ನು ನಾಟುವನು (ಬಿತ್ತುವನು). ಅದು ಮೋಕ್ಷ ವೃಕ್ಷವಾಗಿ ಬೆಳೆಯಬಲ್ಲದು. ಅಂದರೆ ಆ ಜ್ಞಾನಯೋಗ ಜೀವಿಯನ್ನು ಮೋಕ್ಷ ಸೌಧಕ್ಕೆ ತೆಗೆದುಕೊಂಡು ಹೋಗುವುದು. 'ದದಾಮಿ' (ತಪ್ಪದೆ ಕೊಡುವೆನು) ಎಂದು ಒತ್ತಿ ಹೇಳಿರುವುದನ್ನು ನೋಡಿದರೆ ಭಕ್ತರ ಮೇಲೆ ಭಗವಂತನಿಗೆ ಇರುವ ಅಪಾರ ಕರುಣೆ ವ್ಯಕ್ತವಾಗುತ್ತದೆ. 'ನಿರ್ಮಲ ಭಕ್ತಿಯೆನ್ನುವ ಮೌಲ್ಯವನ್ನು ಸಲ್ಲಿಸಿದರೂ ಸಾಕು. ಬುದ್ಧಿಯೋಗ (ಜ್ಞಾನಯೋಗ) ಎನ್ನುವ ಅಲೌಕಿಕ ಮೋಕ್ಷಪ್ರದ ಪಥವನ್ನು ನಿನಗೆ ಪ್ರಸಾದಿಸುವೆನು ಎಂದು ಭಗವಂತನು ಅಭಯವೀಯುತ್ತಿದ್ದಾನೆ. ಸಾಧ್ಯ ವಸ್ತುವನ್ನು ಅಪೇಕ್ಷಿಸುವವನು ಸಾಧನೆಯನ್ನು ತಪ್ಪದೆ ಮಾಡಬೇಕಾಗಿರುವುದರಿಂದ ಸಾಧ್ಯವಾದ ಮೋಕ್ಷವನ್ನು, ಭಗವತ್ಸಾಯುಜ್ಯವನ್ನು ಕಾಂಕ್ಷಿಸುವವನು ಬುದ್ಧಿಯೋಗ (ಜ್ಞಾನಯೋಗ)ವನ್ನು, ಅದಕ್ಕೆ ಕಾರಣಭೂತವಾದ ನಿರ್ಮಲ ಭಕ್ತಿಯನ್ನು ತಪ್ಪದೆ ಸಂಪಾದಿಸಬೇಕೆಂದು ಈ ಶ್ಲೋಕದ ದ್ವಾರ ತಿಳಿಯುತ್ತದೆ. ಭಕ್ತಿ ಸುಲಭ ಸಾಧ್ಯವಾದುದಾದ್ದರಿಂದ ಪ್ರಥಮವಾಗಿ ಎಲ್ಲರೂ ಅದನ್ನೇ ಆಶ್ರಯಿಸಿ ತದ್ವಾರ ಆ ಭಗವತ್ಕರುಣೆಯಿಂದ ಜ್ಞಾನವನ್ನು ಹೊಂದಿ ಮೋಕ್ಷಕ್ಕೆ ಭಾಗಿಗಳಾಗಬೇಕು.

ಪ್ರ : ಮೋಕ್ಷ (ಭಗವತ್ಸಾಯುಜ್ಯ) ಹೇಗೆ ಲಭಿಸುವುದು ?

ಉ : ಬುದ್ಧಿಯೋಗದಿಂದ (ಆತ್ಮಾನಾತ್ಮವಿಚಾರಣಾರೂಪಜ್ಞಾನ ಯೋಗದಿಂದ)

ಪ್ರ : ಅಂತಹ ಬುದ್ಧಿಯೋಗ ಹೇಗೆ ಸಂಪ್ರಾಪ್ತವಾಗುವುದು ?

ಉ : ಪ್ರೀತಿಪೂರ್ವಕವಾಗಿ ಭಕ್ತಿಯಿಂದ ನಿರಂತರ ಭಜಿಸುವವನಿಗೆ ಆ ಭಗವಂತನೇ ಅದನ್ನು ಕೊಡುವನು.

ಪ್ರ : ಬುದ್ಧಿಯೋಗ (ಜ್ಞಾನಯೋಗ)ವನ್ನು ಪಡೆಯಲು ಬೇಕಾದ ಯೋಗ್ಯತೆಗಳೇನು ?

ಉ : ೧) ನಿರಂತರ ಭಗವತ್ಸೇವೆ ೨) ಪ್ರೀತಿಪೂರ್ವಕವಾದ ಭಗವತ್ಸೇವೆ.

**೧೧ ತೇಷಾಮೇವಾನುಕಂಪಾರ್ಥಮ್ ಅಹಮಜ್ಞಾನಜಂ ತಮಃ**
**ನಾಶಯಾಮ್ಯಾತ್ಮಭಾವಸ್ಥೋ ಜ್ಞಾನದೀಪೇನ ಭಾಸ್ವತಾ**

**ಅರ್ಥ:** ತೇಷಾಂ=ಅವರಿಗೆ; ಅನುಕಂಪಾರ್ಥಮ್=ದಯೆತೋರಿಸಲು; ಅಹಂ ಏವ=ನಾನೇ; ಆತ್ಮಭಾವಸ್ಥಃ=ಅವರ ಅಂತಃಕರಣದಲ್ಲಿ ನಿಂತವನಾಗಿ; ಭಾಸ್ವತಾ=ಪ್ರಕಾಶಿಸುತ್ತಿರುವ; ಜ್ಞಾನದೀಪೇನ-ಜ್ಞಾನದೀಪದಿಂದ; ಅಜ್ಞಾನಜಂ= ಅಜ್ಞಾನದಿಂದ ಉಂಟಾದ; ತಮಃ=ಕತ್ತಲನ್ನು (ಮೋಹಾಂಧಕಾರವನ್ನು); ನಾಶಯಾಮಿ=ನಾಶಮಾಡುತ್ತಿದ್ದೇನೆ.

**ತಾ||** ಅವರಿಗೆ (ಅಂತಹ ಭಕ್ತರಿಗೆ) ದಯೆ ತೋರಿಸುವ ಕಾರಣದಿಂದ ನಾನೇ ಅವರ ಅಂತಃಕರಣದಲ್ಲಿ ನಿಂತು ಪ್ರಕಾಶಮಾನವಾದ ಜ್ಞಾನದೀಪದಿಂದ ಅಜ್ಞಾನ ಜನ್ಯವಾದ ಅಂಧಕಾರವನ್ನು ನಾಶಗೊಳಿಸುತ್ತಿದ್ದೇನೆ.

**ವ್ಯಾಖ್ಯೆ:** ಪ್ರೀತಿ ಪೂರ್ವಕವಾಗಿ ಅವನನ್ನು ನಿರಂತರ ಸೇವಿಸುವವರಿಗೆ ಬುದ್ಧಿ ಯೋಗವನ್ನು, ಜ್ಞಾನವನ್ನು ಪ್ರಸಾದಿಸುವೆನೆಂದು ಹಿಂದಿನ ಶ್ಲೋಕದಲ್ಲಿ ಭಗವಂತನು ತಿಳಿಸಿದನು. ಅಂತಹ ಬುದ್ಧಿಯೋಗವನ್ನು ಏಕೆ ಪ್ರಸಾದಿಸುವನು ಎನ್ನುವುದನ್ನು ಇಲ್ಲಿ ತಿಳಿಸಲಾಗಿದೆ. ಸದಾ ಆತನನ್ನು ಕುರಿತು ಚಿಂತಿಸುತ್ತಿರುವವರನ್ನು ನೋಡಿ ಭಗವಂತನಿಗೆ ಕನಿಕರವೇರ್ಪಡುವುದು. ತತ್ಫಲಿತವಾಗಿ ಅವರಿಗೆ ಉಪಕಾರ ಮಾಡಬೇಕೆಂದುಕೊಂಡು, ಅವರನ್ನು ಅನುಗ್ರಹಿಸಲಿಚ್ಛಿಸಿ ಪ್ರಪಂಚದಲ್ಲಿ ಎಲ್ಲದಕ್ಕಿಂತ ಅಮೂಲ್ಯವಾದ ಹಾಗು ಜೀವಿಗೆ ಭಗವತ್ಸಾಕ್ಷಾತ್ಕಾರ, ನಿರತಿಶಯಾನಂದ ರೂಪ ಕೈವಲ್ಯವನ್ನು ಸಂಪ್ರಾಪ್ತಿಸುವ ತತ್ತ್ವವಿಚಾರಣೆ, ಜ್ಞಾನ (ಬುದ್ಧಿಯೋಗ)ಗಳನ್ನು ಅವರಿಗೆ ಪ್ರಸಾದಿಸುತ್ತಿದ್ದಾನೆ. ಆ ಜ್ಞಾನ ಎಂತಹದು? ಎಂತಹ ಪ್ರಭಾವವನ್ನು ಹೊಂದಿದೆ? ಅದು ದೀಪದಂತಹದು. ಪ್ರಕಾಶಮಾನವಾದ ಜ್ಯೋತಿ. ಅಜ್ಞಾನಾಂಧಕಾರವನ್ನು ಹೋಗಲಾಡಿಸುವುದು. ಅನೇಕ ಜನ್ಮಾರ್ಜಿತ ತಮಃ ಪಟಲಗಳನ್ನು, ಮೋಹಾಂಧಕಾರವನ್ನು, ಅವಿದ್ಯೆಯೆಂಬ ಕತ್ತಲೆಯನ್ನು ಜೀವಿಯ ಹೃದಯದಿಂದ ಹೊರದೂಡುವುದು. ಆದರೆ ಪ್ರಪಂಚದ ಬೇರೆ ದೀಪಗಳಿಗೂ, ಜ್ಞಾನ ದೀಪಕ್ಕೂ ವ್ಯತ್ಯಾಸವಿದೆ. ಅವು ಅಲ್ಪ ಪ್ರಕಾಶಗಳು. ಮೇಲಾಗಿ ಸ್ವಲ್ಪ ಕಾಲಕ್ಕೆ ಆರಿಹೋಗುವುವು. ಈ ಜ್ಞಾನದೀಪ ಅಂತಹುದಲ್ಲ. ಮಹಾಪ್ರಕಾಶಮಾನ ವಾದುದು. ಆದ್ದರಿಂದಲೇ 'ಭಾಸ್ವತಾ' ಎಂದು ಹೇಳಲ್ಪಟ್ಟಿದೆ. ಸಾಮಾನ್ಯದೀಪ ಬಾಹ್ಯಾಂಧಕಾರವನ್ನು ಹೋಗಲಾಡಿಸಿದರೆ ಈ ಜ್ಞಾನದೀಪವಾದರೋ ಅಂತಃಕರಣದ ಮೋಹರೂಪ ತಮಸ್ಸನ್ನು ನಶಿಸುವುದು. 'ಅಜ್ಞಾನಜಂ' ಎಂದು ಹೇಳಲ್ಪಟ್ಟಿರುವುದರಿಂದ ಆ ತಮಸ್ಸು ಅಜ್ಞಾನದಿಂದಲೇ ಪ್ರಭವಿಸುವುದೆಂದು ತಿಳಿಯುವುದು. ಅದು ಅಹಂಕಾರ ಮಮಕಾರಾದಿ ರೂಪಗಳಲ್ಲಿದ್ದು ಜೀವಿಯ ಸಂಸಾರ ದುಃಖಕ್ಕೆ ಹೇತುವಾಗಿ, ಅಸತ್ಯವನ್ನು ಸತ್ಯವಾಗಿ, ಸತ್ಯವನ್ನು ಅಸತ್ಯವಾಗಿ ಮಾಡುತ್ತದೆ. ಹೃದಯಸ್ಥವಾದ ಅಂತಹ ಅವಿದ್ಯಾಂಧಕಾರವನ್ನು ಈ ಜ್ಞಾನದೀಪವು ನಶಿಸುವಂತೆ ಮಾಡುತ್ತದೆ.

ಆದರೆ ಆ ಜ್ಞಾನದೀಪವು ಹೇಗೆ ಲಭಿಸುವುದು? ಅದನ್ನು ಭಗವಂತನೇ ಜೀವಿಗಳಿಗೆ ನೀಡುವನು. ಎಲ್ಲರಿಗೂ ಲಭಿಸುವುದೇ? ಇಲ್ಲ. ಯಾರು ತನ್ನನ್ನು ಪ್ರೀತಿ ಪೂರ್ವಕವಾಗಿ ನಿರಂತರ ಭಜಿಸುವರೋ ಅವರಿಗೆ ಮಾತ್ರವೇ ನೀಡುವನು. ಅಂತಹ ಪರಮಭಕ್ತರ ಮೇಲೆ ದಯೆಯುಂಟಾಗಿ, ಕನಿಕರಿಸಿ ಜ್ಞಾನದೀಪವನ್ನು ಪ್ರಸಾದಿಸುವನು. ಈ ರಹಸ್ಯಗಳೆಲ್ಲಾ ಈ ಶ್ಲೋಕದಲ್ಲಿ ತಿಳಿಸಲ್ಪಟ್ಟಿವೆ.

- ಭಗವಂತನನ್ನು ಭಜಿಸದಿದ್ದರೆ ಆತನ ಅನುಗ್ರಹ ಉಂಟಾಗುವುದಿಲ್ಲ.
- ಆತನ ಅನುಗ್ರಹವಿಲ್ಲದಿದ್ದರೆ ಜ್ಞಾನದೀಪ ಸಿಗುವುದಿಲ್ಲ.
- ಜ್ಞಾನದೀಪವಿಲ್ಲದಿದ್ದರೆ ಅಜ್ಞಾನಾಂಧಕಾರ ನಶಿಸುವುದಿಲ್ಲ.
- ಅಜ್ಞಾನಾಂಧಕಾರ ತೊಲಗದಿದ್ದರೆ ದುಃಖವು ಮಾಯವಾಗದು.

ಆದ್ದರಿಂದ ದುಃಖನಿವಾರಣೆಗೆ ಪ್ರತಿ ಜೀವಿಯು ನಿರ್ಮಲ ಹೃದಯ ದಿಂದ ಅಚಂಚಲ ಭಕ್ತಿಯಿಂದ ಮೊದಲು ಭಗವದಾರಾಧನೆಯನ್ನು ಮಾಡಬೇಕು. ಮೋಕ್ಷದ ಗುಟ್ಟು ಈ ಭಗವತ್ಸೇವನೆಯಲ್ಲೇ ಅಡಗಿದೆಯೆಂದು ಈ ಶ್ಲೋಕದಿಂದ ತಿಳಿಯುತ್ತದೆ.

ಆ ಪ್ರಕಾರವಾಗಿ ಭಕ್ತಿ ಸಂಯುತರಾಗಿ ಭಗವಂತನನ್ನು ಧ್ಯಾನಿಸುವವರ ಹೃದಯವನ್ನು ಸರ್ವೇಶ್ವರನು ಹೇಗೆ ತಿಳಿದುಕೊಳ್ಳುವನು? ಆತ ಎಲ್ಲೋ ದೂರದಲ್ಲಿಲ್ಲ. 'ಆತ್ಮ ಭಾವಸ್ಥಃ'- ಪ್ರತಿ ಜೀವಿಯ ಹೃದಯದಲ್ಲಿ ವಿರಾಜಿಸುತ್ತ ಸಾಕ್ಷೀಭೂತನಾಗಿ ಅವರು ಮಾಡುವ ಸರ್ವಕಾರ್ಯಗಳನ್ನು ಗಮನಿಸುತ್ತಿದ್ದಾನೆ. ಆತನು ಮಾಡುವ ಪ್ರತಿ ಸಂಕಲ್ಪವನ್ನು ಭಗವಂತನು ಪರಿಶೀಲಿಸುತ್ತಿರುವಾಗ ಆತನ ದೃಷ್ಟಿಯಿಂದ ತಪ್ಪಿಸಿಕೊಳ್ಳುವುದು ಅಸಾಧ್ಯವೇ ಸರಿ. ಆದ್ದರಿಂದ ಯಾರೂ ಪಾಪಕಾರ್ಯಗಳನ್ನು ಮಾಡಬಾರದು. ಮನಸ್ಸಿನಲ್ಲಿ ದುಷ್ಟ ಸಂಕಲ್ಪಗಳನ್ನು ಮಾಡಬಾರದು. ದೈವಕಾರ್ಯ, ಧರ್ಮಕಾರ್ಯಗಳಲ್ಲಿ ನಿರತನಾಗಿರಬೇಕು. ಏಕೆಂದರೆ ಪ್ರತಿ ಜೀವಿಯ ಹೃದಯದಲ್ಲೇ ಮನೆಮಾಡಿಕೊಂಡಿರುವ ಭಗವಂತನು ಎಲ್ಲವನ್ನೂ ವೀಕ್ಷಿಸುತ್ತಿರುವನು (ಆತ್ಮಭಾವಸ್ಥಃ).

'ನಾಶಯಾಮಿ' 'ತನ್ನನ್ನು ಭಜಿಸುವವರ ಹೃದಯದಲ್ಲಿರುವ ಮೋಹಾಂಧಕಾರವನ್ನು ನಾನು ನಾಶಮಾಡುತ್ತೇನೆಂದು ಭಗವಂತನು ಅಸಂದಿಗ್ಧವಾಗಿ ಹೇಳಿರುವುದರಿಂದ ಜೀವಿಯು ತನ್ನ ಕರ್ತವ್ಯವಾದ ಭಗವದಾರಾಧನೆಯನ್ನು ನೆರವೇರಿಸಿದಲ್ಲಿ ಪರಮಾತ್ಮನು ತನ್ನ ಕೆಲಸವಾದ ಮೋಹನಾಶವನ್ನು ತಪ್ಪದೆ ಮಾಡುವನೆಂದು ಸ್ಪಷ್ಟವಾಗುತ್ತದೆ. 'ನಾನು ಅಂತಹ ಜೀವಿಗಳ ಮೋಹವನ್ನು ನಾಶಗೊಳಿಸುತ್ತೇನೆ, ಎಂದು ಪ್ರತಿಜ್ಞಾಪೂರ್ವಕವಾಗಿ ಭಗವಂತನು ಹೇಳಿರುವುದರಿಂದ ಇನ್ನು ಭಕ್ತರಿಗೆ ತಮ್ಮ ಬಂಧವಿಮುಕ್ತಿಯ ಬಗ್ಗೆ ಸಂಕೋಚಕ್ಕೆ ಎಡೆಯೇ ಇಲ್ಲ. ಅವರು ಮಾಡಬೇಕಾದ ಕೆಲಸ ಅಂದರೆ ನಿರಂತರ ಪ್ರೀತಿಪೂರ್ವಕದಿಂದೊಡಗೂಡಿದ ಭಜನೆ ಹಾಗು ಧ್ಯಾನ. ಗಿಡಕ್ಕೆ ನೀರು ಹಾಕುತ್ತಿದ್ದರೆ, ಇನ್ನು ಫಲದ ವಿಷಯವಾಗಿ ಸಂದೇಹಕ್ಕೆ ಆಸ್ಪದವಿಲ್ಲ. ಅದು ಬಂದೇ ತೀರುತ್ತದೆ. ಹಾಗೆಯೇ ಭಕ್ತಿಯೆಂಬ ಜಲವನ್ನು ಪರಮಾತ್ಮ

ವೃಕ್ಷಕ್ಕೆ ಹಾಕುತ್ತಿದ್ದರೆ. ಮುಕ್ತಿಯೆನ್ನುವ ಫಲ ಕೋರದೆಯೇ ಸಿಗುವುದು. ಅದನ್ನು ಭಗವಂತನೇ ತಂದು ಆತನ ಕೈಯಲ್ಲಿ ಇಡುವನು. ಆದ್ದರಿಂದಲೇ 'ನಾನು ಜ್ಞಾನದೀಪವನ್ನು ಪ್ರಸಾದಿಸಿ ಆತನ ಹೃದಯದಲ್ಲಿಯ ಕತ್ತಲೆಯನ್ನು (ಅಜ್ಞಾನವನ್ನು) ನಾಶಮಾಡುತ್ತಿದ್ದೇನೆ ಎಂದು ಶ್ರೀಕೃಷ್ಣ ಮೂರ್ತಿ ತಿಳಿಸಿದನು. ಆ ಅಂಧಕಾರವನ್ನು ಜೀವಿಯು ತಾನೇ ಹೋಗಲಾಡಿಸಿಕೊಳ್ಳಲಾರನು. ಅದಕ್ಕೆ ಭಗವತ್ಸಹಾಯ ಅವಶ್ಯಕ. ಆದ್ದರಿಂದ ಅವನ ಅನುಗ್ರಹಕ್ಕಾಗಿ ಭಗವದ್ಭಜನೆ, ಸೇವೆ, ಪೂಜೆ, ಆರಾಧನೆ, ಧ್ಯಾನಾದಿಗಳ ದ್ವಾರ ಅತಿಶಯ ಪ್ರಯತ್ನಗಳನ್ನಾಚರಿಸ ಬೇಕಾಗಿದೆ.

ಪ್ರ : ಜೀವಿಗೆ ಮೋಕ್ಷ ಯಾವಾಗ ಲಭಿಸುವುದು ?

ಉ: ಅಜ್ಞಾನವೆನ್ನುವ ಅಂಧಕಾರ ತೊಲಗಿದಾಗ

ಪ್ರ : ಅದು ಹೇಗೆ ತೊಲಗುವುದು ?

ಉ : ಜ್ಞಾನವೆನ್ನುವ ಪ್ರಕಾಶಮಾನವಾದ ದೀಪದಿಂದ

ಪ್ರ : ಆ ಜ್ಞಾನದೀಪ ಹೇಗೆ ಲಭಿಸುವುದು ?

ಉ : ಅದು ಭಗವಂತನಿಂದ ಕೊಡಲ್ಪಡುವುದು.

ಪ್ರ : ಯಾರಿಗೆ ?

ಉ : ಆತನಿಗೆ ಯಾರ ಮೇಲೆ ಕನಿಕರವುಂಟಾಗುವುದೋ ಅವರಿಗೆ

ಪ್ರ : ಭಗವಂತನಿಗೆ ಯಾರ ಮೇಲೆ ಕನಿಕರವುಂಟಾಗುವುದು ?

ಉ : ನಿರಂತರ ಪ್ರೀತಿಯಿಂದ ಭಜಿಸುವವರ ಮೇಲೆ,

ಪ್ರ : ಜೀವಿಯು ಮಾಡುವ ಪುಣ್ಯಗಳನ್ನು ಭಗವಂತನು ಹೇಗೆ ತಿಳಿದುಕೊಳ್ಳುವನು ?

ಉ : ಸಮಸ್ತ ಜೀವಿಗಳ ಹೃದಯದಲ್ಲೇ ಆತನು ನಿವಸಿಸುತ್ತಿದ್ದಾನೆ. ಆದ್ದರಿಂದ ಅವರ ಸಂಕಲ್ಪಗಳನ್ನು ಸುಲಭವಾಗಿ ಗ್ರಹಿಸಬಲ್ಲನು.

ಪ್ರ : ಸಂಸಾರಮೋಹರೂಪತಮಸ್ಸು (ಕತ್ತಲು) ಯಾವುದರಿಂದ ಹುಟ್ಟುವುದು ?

ಉ : ಅಜ್ಞಾನದಿಂದ

ಪ್ರ : ಜ್ಞಾನದೀಪವೆಂತಹದು ?

ಉ: ಮಹಾ ಪ್ರಕಾಶವಾದದ್ದು. ಜೀವಿಯನ್ನು ಮೋಕ್ಷದ ಕಡೆಗೆ ಕೊಂಡೊಯ್ಯುವುದು.

**ಅ॥** ಮೇಲೆ ತಿಳಿಸಿದ ಭಕ್ತಿ ಏರ್ಪಡಲು, ಅಭಿವೃದ್ಧಿ ಹೊಂದಲು ಭಗವದ್ವಿಭೂತಿಯನ್ನು, ಭಗವನ್ಮಹಿಮೆಯನ್ನು ತಿಳಿಯುವುದು ಅವಶ್ಯಕವೆಂದು ತಿಳಿದು (ಭಗವಂತನ ದ್ವಾರ ಅವುಗಳನ್ನು ತಿಳಿಯಲ್ಪಟ್ಟವನಾಗಿ) ಅರ್ಜುನನು ಮೊಟ್ಟಮೊದಲು ಏಳು ಶ್ಲೋಕಗಳ ಮೂಲಕ ಅವುಗಳನ್ನು ಸ್ತುತಿಸಿ, ಕೊನೆಗೆ 'ನಿನ್ನ ವಿಭೂತಿಯನ್ನು, ವೈಭವವನ್ನು ಪ್ರಸಾದಿಸು' ಎಂದು ಪ್ರಾರ್ಥಿಸುತ್ತಿದ್ದಾನೆ. ಭಗವಂತನ ಬೋಧೆಗಳನ್ನು ಕೇಳಿ ಅತಿಯಾದ ಸಂತೋಷದಿಂದ ಈ ಪ್ರಕಾರವಾಗಿ ಸ್ತುತಿಸುತ್ತಿದ್ದಾನೆ.

**ಅರ್ಜುನ ಉವಾಚ:**

**೧೨ ಪರಂ ಬ್ರಹ್ಮ ಪರಂ ಧಾಮ ಪವಿತ್ರಂ ಪರಮಂ ಭವಾನ್**
**ಪುರುಷಂ ಶಾಶ್ವತಂ ದಿವ್ಯಮಾದಿದೇವಮಜಂ ವಿಭುಮ್**

**೧೩ ಆಹುಸ್ತ್ವಾಂ ಋಷಯಸ್ಸರ್ವೇ ದೇವರ್ಷಿರ್ನಾರದಸ್ತಥಾ**
**ಅಸಿತೋ ದೇವಲೋ ವ್ಯಾಸಃ ಸ್ವಯಂ ಚೈವ ಬ್ರವೀಷಿ ಮೇ**

ಅರ್ಜುನ ಉವಾಚ=ಅರ್ಜುನನು ಹೇಳಿದನು.

**ಅರ್ಥ:** ಭವಾನ್=ನೀನು; ಪರಂಬ್ರಹ್ಮಾ=ಪರಬ್ರಹ್ಮವು; ಪರಂಧಾಮ= ಪರಂಧಾಮ (ಪರಮಪದನಾದ ಇಲ್ಲವೆ ತೇಜಸ್ಸ್ವರೂಪಿಯಾದ); ಪರಮಂ ಪವಿತ್ರಂ=ಪರಮ ಪಾವನನಾದ; ತ್ವಾಂ=ನಿನ್ನನ್ನು; ಶಾಶ್ವತಂ= ನಿತ್ಯನನ್ನಾಗಿ; ದಿವ್ಯಂ=ಪ್ರಕಾಶಸ್ವರೂಪಿಯಾಗಿ; ಪುರುಷಂ= ಪರಮ ಪುರುಷನಾಗಿ; ಆದಿದೇವಂ=ದೇವತಾದಿಗಳಿಗೆ ಆದಿಯಾದವನೆಂದು; ಅಜಂ= ಜನ್ಮರಹಿತ ನೆಂದು; ವಿಭುಂ=ಸರ್ವವ್ಯಾಪಕನೆಂದು; ಸರ್ವಋಷಯಃ=ಋಷಿಗಳೆಲ್ಲರೂ; ದೇವರ್ಷಿನಾರದಃ=ದೇವರ್ಷಿಯಾದ ನಾರದನು; ಅಸಿತಃ=ಅಸಿತನು; ದೇವಲಃ=ದೇವಲನು; ವ್ಯಾಸಃ=ವೇದವ್ಯಾಸ ಮಹರ್ಷಿ; ಆಹುಃ=ಹೇಳುತ್ತಿದ್ದಾರೆ. ಸ್ವಯಂ ಚ=ನೀನು; ತಥಾ ಏವ=ಆ ಪ್ರಕಾರವಾಗಿಯೇ; ಮೇ=ನನಗೆ; ಬ್ರವೀಷಿ=ಹೇಳುತ್ತಿದ್ದೀಯೆ.

**ತಾ॥** ಅರ್ಜುನನು ಹೇಳಿದನು-ನೀನು ಬ್ರಹ್ಮಸ್ವರೂಪಿ, ಪರಂಧಾಮನು (ಪರಮಪದ ಸ್ವರೂಪಿ ಇಲ್ಲವೆ ತೇಜಸ್ವರೂಪಿ), ಪರಮ ಪಾವನ ರೂಪಿ. ನಿನ್ನನ್ನು ನಿತ್ಯನೆಂದು, ಪ್ರಕಾಶ ಸ್ವರೂಪಿಯೆಂದು, ಪರಮಪುರುಷನೆಂದು, ಆದಿ ದೇವನೆಂದು, ಜನ್ಮರಹಿತನೆಂದು, ಸರ್ವವ್ಯಾಪಕನೆಂದು, ಋಷಿಗಳೆಲ್ಲರೂ, ದೇವರ್ಷಿಯಾದ ನಾರದನು, ಅಸಿತನು, ದೇವಲನು, ವೇದವ್ಯಾಸ ಮಹರ್ಷಿ ಮುಂತಾದವರು ಕೊಂಡಾಡುತ್ತಿದ್ದಾರೆ. ಸ್ವಯಂ ನೀನೂ ಕೂಡ ಈ ಪ್ರಕಾರವಾಗಿಯೇ (ನಿನ್ನನ್ನು ಕುರಿತು) ನನಗೆ ಹೇಳುತ್ತಿರುವೆ.

**ವ್ಯಾಖ್ಯೆ:** ಭಕ್ತರ ಮೇಲೆ ಭಗವಂತನು ಅಗಾಧವಾದ ಬೋಧೆಯೆಂಬ ಕರುಣಾವರ್ಷ ಸುರಿಸುತ್ತಾ ಇರಲು, ಈ ಅಖಂಡವಾದ ಬೋಧೆಯನ್ನು ಕೇಳಿ ಅರ್ಜುನನು ಪ್ರಫುಲ್ಲನಾಗಿ, ಅತಃಕರಣವುಳ್ಳವನಾಗಿ ತನ್ನ ಆನಂದಾತಿ ರೇಕವನ್ನು ತಡೆಯಲಾರದೆ ಭಗವಂತನನ್ನು ಈ ಪ್ರಕಾರವಾಗಿ ಸ್ತೋತ್ರ ಮಾಡತೊಡಗಿದನು. ಗುರುವಿನೆಡೆ ಇಂತಹ ಅನನ್ಯ ಭಕ್ತಿಯಿದ್ದಾಗಲೇ ಗುರುವಾಕ್ಯ ಶಿಷ್ಯನಿಗೆ ಚೆನ್ನಾಗಿ ಹೃದಯಂಗಮವಾಗುವುದು.

ಪ್ರ : ಶ್ರೀಕೃಷ್ಣ ಪರಮಾತ್ಮ ಎಂತಹವನು ?

ಉ : ೧) ಪರಬ್ರಹ್ಮಸ್ವರೂಪಿ ೨) ಪರಂಧಾಮನು ೩) ಪರಮಪಾವನನು ೪) ಶಾಶ್ವತನು ೫) ಆದಿದೇವನು ೬) ಜನನ ಮರಣ ವರ್ಜಿತನು ೭) ಸರ್ವವ್ಯಾಪಕನು.

ಪ್ರ : ಶ್ರೀಕೃಷ್ಣನು ಇಂತಹವನೆಂದು ಹೇಳಿದವರಾರು ?

ಉ: ೧) ಸಮಸ್ತ ಋಷಿಗಳು ೨) ನಾರದನು ೩) ಅಸಿತನು ೪) ದೇವಲನು ೫) ವೇದವ್ಯಾಸನು ೬) ಶ್ರೀ ಕೃಷ್ಣಮೂರ್ತಿ (ಸ್ವಯಂ ಹೀಗೆ ಹೇಳಿರುವನು).

**೧೪ ಸರ್ವಮೇತದೃತಂ ಮನ್ಯೇ ಯನ್ಮಾಂ ವದಸಿ ಕೇಶವ**
**ನ ಹಿ ತೇ ಭಗವನ್ ವ್ಯಕ್ತಿಂ ವಿದುರ್ದೇವಾ ನ ದಾನವಾಃ**

**ಅರ್ಥ:** ಕೇಶವ=ಓ ಕೃಷ್ಣಾ! ಯತ್=ಯಾವುದನ್ನು; ಮಾಂ=ನನಗೆ ವದಸಿ=ಹೇಳುತ್ತಿದ್ದೀಯೋ; ಏತತ್ ಸರ್ವಂ=ಇದೆಲ್ಲವೂ; ಋತಂ=ಸತ್ಯವೆಂದು; ಮನ್ಯೇ=ತಿಳಿಯುತ್ತಿದ್ದೇನೆ; ಭಗವನ್=ಓ ಭಗವಂತನೇ; ತೇ=ನಿನ್ನ; ವ್ಯಕ್ತಿಂ=ನಿಜಸ್ವರೂಪವನ್ನು; ದೇವಾಃ=ದೇವತೆಗಳು; ನ ವಿದುಃ=ತಿಳಿಯರು; ದಾನವಾಃ (ಚ)=ಅಸುರರೂ (ರಾಕ್ಷಸರೂ); ನಹಿ (ವಿದುಃ)= ತಿಳಿಯಲಾರರು.

**ತಾ॥** ಓ ಕೃಷ್ಣಾ! ಯಾವುದನ್ನು ನೀನು ನನಗೆ ಹೇಳುತ್ತಿದ್ದೀಯೋ ಅದೆಲ್ಲವೂ

ಸತ್ಯವೆಂದು ನಾನು ತಿಳಿಯುತ್ತಿದ್ದೇನೆ. ಓ ಭಗವಂತನೇ ನಿನ್ನ (ನಿಜ) ಸ್ವರೂಪವನ್ನು ದೇವತೆಗಳಾಗಲಿ, ಅಸುರರಾಗಲಿ ತಿಳಿಯಲಾರರು.

**ವ್ಯಾಖ್ಯೆ:** "ನೀನು ಹೇಳಿರುವುದೆಲ್ಲಾ ಸತ್ಯವೆಂದು ತಿಳಿದಿದ್ದೇನೆ"- ಈ ಪ್ರಕಾರವಾಗಿ ಗುರುವಾಕ್ಯದಲ್ಲಿ ಶಿಷ್ಯನು ಪೂರ್ಣ ವಿಶ್ವಾಸವನ್ನು ಪ್ರಕಟಿಸುತ್ತಿದ್ದಾನೆ. ಇಂತಹ ವಿಶ್ವಾಸ ಪ್ರಕಟಣೆಯಿಂದ ಗುರುವಿಗೆ ಶಿಷ್ಯನ ಮೇಲೆ ಪ್ರೀತಿ ಹಾಗು ವಾತ್ಸಲ್ಯ ಅಧಿಕವಾಗುತ್ತದೆ.

೧೫ **ಸ್ವಯಮೇವಾತ್ಮನಾತ್ಮಾನಂ ವೇತ್ಥ ತ್ವಂ ಪುರುಷೋತ್ತಮ**
**ಭೂತಭಾವನ ಭೂತೇಶ ದೇವದೇವ ಜಗತ್ಪತೇ**

**ಅರ್ಥ:** ಪುರುಷೋತ್ತಮ=ಓ ಪುರುಷ ಶ್ರೇಷ್ಠನೇ! ಭೂತಭಾವನ=ಸಮಸ್ತ ಪ್ರಾಣಿಗಳ ಸೃಷ್ಟಿಕರ್ತ; ಭೂತೇಶ=ಸಕಲ ಜೀವಿಗಳಿಗೆ ನಿಯಾಮಕನಾದವನು; ದೇವ ದೇವಾ=ದೇವತೆಗಳಿಗೆ ದೇವನಾದವನು; ಜಗತ್ಪತೇ=ಜಗನ್ನಾಥನೇ (ಜಗತ್ತನ್ನು ಪಾಲಿಸುವವನೇ); ತ್ವಂ=ನೀನು; ಆತ್ಮಾನಂ=ನಿನ್ನನ್ನು (ಸ್ವಸ್ವರೂಪವನ್ನು); ಆತ್ಮನಾ=ನಿನ್ನಿಂದ; ಸ್ವಯಂ ಏವ=ಸ್ವಯಂ ಆಗಿ; ವೇತ್ಥ= ತಿಳಿಯುತ್ತೀಯೆ.

**ತಾ||** ಓ ಪುರುಷಶ್ರೇಷ್ಠಾ, ಸಮಸ್ತ ಪ್ರಾಣಿಗಳ ಸೃಷ್ಟಿಕರ್ತ, ಸಕಲ ಜೀವ ನಿಯಾಮಕ, ದೇವದೇವಾ, ಜಗನ್ನಾಥಾ, ನಿನ್ನನ್ನು ನಿನ್ನಿಂದ ನೀನೊಬ್ಬನೇ ತಿಳಿಯುತ್ತಿರುವೆ. (ನಿನ್ನ ಸ್ವರೂಪವು ಇತರರಿಗೆ ದುರ್ಗ್ರಾಹ್ಯವೆಂದು ಭಾವ)

೧೬ **ವಕ್ತುಮರ್ಹಸ್ಯಶೇಷೇಣ ದಿವ್ಯಾಹ್ಯಾತ್ಮ ವಿಭೂತಯಃ**
**ಯಾಭಿರ್ವಿಭೂತಿಭಿರ್ಲೋಕಾನಿಮಾಂಸ್ತ್ವಂ ವ್ಯಾಪ್ಯ ತಿಷ್ಠಸಿ**

**ಅರ್ಥ:** ಹಿ=ಆದ್ದರಿಂದ; ಯಾಭಿಃ ವಿಭೂತಿಭಿಃ=ಯಾವವಿಭೂತಿಗಳಿಂದ (ಐಶ್ವರ್ಯ, ಮಹಾತ್ಮ್ಯ ವಿಸ್ತಾರಗಳಿಂದ); ತ್ವಂ=ನೀನು; ಇಮಾನ್ ಲೋಕಾನ್=ಈ ಲೋಕಗಳನ್ನು; ವ್ಯಾಪ್ಯ=ವ್ಯಾಪಿಸಿ; ತಿಷ್ಠಸಿ= ಇದ್ದೀಯೊ (ಅಂತಹ); ದಿವ್ಯಾಃ=ದಿವ್ಯಗಳಾದ; ಆತ್ಮ ವಿಭೂತಯಃ =ನಿನ್ನ ವಿಭೂತಿಗಳನ್ನು; ಅಶೇಷೇಣ=ಸಂಪೂರ್ಣವಾಗಿ; ವಕ್ತುಂ=ಹೇಳುವುದಕ್ಕೆ (ನೀನೇ); ಅರ್ಹಸಿ=ತಕ್ಕವನು.

**ತಾ||** ಆದ್ದರಿಂದ ಯಾವ ವಿಭೂತಿಗಳಿಂದ (ಮಹಾತ್ಮ್ಯ ವಿಸ್ತಾರಗಳಿಂದ) ನೀನು ಈ ಲೋಕಗಳೆಲ್ಲವನ್ನೂ ವ್ಯಾಪಿಸಿದ್ದೀಯೋ, ಅಂತಹ ದಿವ್ಯವಾದ ನಿನ್ನ ವಿಭೂತಿಗಳನ್ನು ಸಂಪೂರ್ಣವಾಗಿ ಹೇಳಲು ನೀನೇ ಸರಿಯಾದವನು.

೧೭ **ಕಥಂ ವಿದ್ಯಾಮಹಂ ಯೋಗಿಂಸ್ತ್ವಾಂ ಸದಾ ಪರಿಚಿಂತಯನ್**
**ಕೇಷುಕೇಷು ಚ ಭಾವೇಷು ಚಿಂತ್ಯೋಽಸಿ ಭಗವನ್ಮಯಾ**

**ಅರ್ಥ:** ಯೋಗಿನ್=ಯೋಗೇಶ್ವರ! ಅಹಂ=ನಾನು; ಸದಾ= ಯಾವಾಗಲೂ; ಕಥಂ=ಯಾವ ಪ್ರಕಾರವಾಗಿ; ಪರಿಚಿಂತಯನ್=ಧ್ಯಾನಮಾಡುತ್ತಾ; ತ್ವಾಂ=ನಿನ್ನನ್ನು; ವಿದ್ಯಾಂ=ತಿಳಿದುಕೊಳ್ಳಬಲ್ಲೆನು ? ಭಗವನ್=ಭಗವಂತನೇ; ಕೇಷು ಕೇಷು ಭಾವೇಷು ಚ=ಯಾವ ಯಾವ ವಸ್ತುಗಳಲ್ಲಿ (ಯಾವ ಯಾವ ರೀತಿ); ಚಿಂತ್ಯಃ=ಧ್ಯಾನಿಸಲು ತಕ್ಕವನು; ಅಸಿ=ಆಗಿರುವೆ.

**ತಾ||** ಯೋಗೇಶ್ವರಾ! ನಾನು ಯಾವಾಗಲೂ ಯಾವ ಪ್ರಕಾರವಾಗಿ ಧ್ಯಾನಿಸುತ್ತಾ ನಿನ್ನನ್ನು ತಿಳಿದುಕೊಳ್ಳಬಲ್ಲೆನು? ಭಗವಂತನೇ! ನೀನು ಯಾವ ಯಾವ ವಸ್ತುಗಳಲ್ಲಿ ಯಾವ ಯಾವ ರೀತಿ ಧ್ಯಾನಿಸಲು ಯೋಗ್ಯನಾಗಿರುವೆ?

**ವ್ಯಾಖ್ಯೆ:** ಅತಿ ಸೂಕ್ಷ್ಮವಾದ ದೈವತತ್ವವು ಸಾಮಾನ್ಯವಾಗಿ ಜನರಿಗೆ ಕೂಡಲೇ ಅನುಭೂತಿಯಾಗುವುದಿಲ್ಲವಾದ್ದರಿಂದ ತನ್ನ ಮನಸ್ಸನ್ನು ಭಗವತ್ಸಂಬಂಧವಾದ ಪವಿತ್ರ ವಸ್ತುವಿನಲ್ಲಿ ಇಲ್ಲವೆ ಮೂರ್ತಿಯಲ್ಲಿ ಕೇಂದ್ರೀಕರಿಸಿ ಸ್ವಲ್ಪ ಕಾಲ ಧ್ಯಾನವನ್ನು ಅಭ್ಯಸಿಸಬೇಕು. ಕ್ರಮವಾಗಿ ಚಿತ್ತೈಕಾಗ್ರತೆಯನ್ನು ಸಂಪಾದಿಸಿದ ನಂತರ ನಿರಾಕಾರ ನಿರ್ಗುಣ ತತ್ವವನ್ನು ಕುರಿತು ವಿಚಾರಿಸಬಹುದು. ಆದ್ದರಿಂದಲೇ ಅರ್ಜುನನು ಧ್ಯಾನಿಸಲು ಕೆಲವು ಸಾಕಾರ ವಿಭೂತಿಗಳನ್ನು, ದಿವ್ಯ ಪದಾರ್ಥ ಗಳನ್ನು ತಿಳಿಸಬೇಕೆಂದು ಭಗವಂತನನ್ನು ಬೇಡಿಕೊಳ್ಳುತ್ತಿದ್ದಾನೆ. ಸಮಸ್ತ ಜಗತ್ತು ಭಗವಂತನ ಸ್ವರೂಪವೇ ಆದರೂ ಧ್ಯಾನಾನುಕೂಲಕ್ಕೆ ಯಾವ ಯಾವ ರೂಪಗಳು ಪ್ರಧಾನವಾದವುಗಳೋ, ಅಂತಹವುಗಳನ್ನು ಅಪ್ಪಣೆ ಕೊಡಿಸಬೇಕೆಂದು ಅರ್ಜುನನು ಪ್ರಾರ್ಥಿಸುತ್ತಿದ್ದಾನೆ.

೧೮ **ವಿಸ್ತರೇಣಾತ್ಮನೋ ಯೋಗಂ ವಿಭೂತಿಂ ಚ ಜನಾರ್ದನ**
**ಭೂಯಃ ಕಥಯ ತೃಪ್ತಿರ್ಹಿ ಶೃಣ್ವತೋ ನಾಸ್ತಿ ಮೇಽಮೃತಮ್**

**ಅರ್ಥ:** ಜನಾರ್ದನ=ಓ ಕೃಷ್ಣ! ಆತ್ಮನಃ=ನಿನ್ನ; ಯೋಗಂ=ಯೋಗಮಹಿಮೆ ಯನ್ನು (ಸಾಮರ್ಥ್ಯ ವಿಶೇಷವನ್ನು); ವಿಭೂತಿಂ ಚ=ಜಗಲ್ಲೀಲಾ ವಿಭೂತಿಗಳನ್ನು (ಧ್ಯೇಯ ವಸ್ತುಗಳನ್ನು); ವಿಸ್ತರೇಣ=ಸವಿಸ್ತಾರವಾಗಿ; ಭೂಯಃ=ಮತ್ತೆ; ಕಥಯ=ಹೇಳುವುದು; ಹಿ=ಏಕೆಂದರೆ; ಅಮೃತಂ= ಅಮೃತವಾಕ್ಕು; ಶೃಣ್ವತಃ=ಕೇಳುತ್ತಿದ್ದರೆ; ಮೇ=ನನಗೆ; ತೃಪ್ತಿಃ=ಸಂತೃಪ್ತಿ; ನಾಸ್ತಿ=ಇಲ್ಲ (ಉಂಟಾಗುತ್ತಿಲ್ಲ).

**ತಾ||** ಓ ಕೃಷ್ಣಾ! ನಿನ್ನ ಯೋಗ ಮಹಿಮೆಯನ್ನು, ಜಗಲ್ಲೀಲಾ ವಿಭೂತಿಗಳನ್ನು (ಧ್ಯಾನಿಸಬೇಕಾದ ವಸ್ತುಗಳನ್ನು) ಸವಿಸ್ತಾರವಾಗಿ ಮತ್ತೆ ತಿಳಿಸು. ಏಕೆಂದರೆ ನಿನ್ನ ಅಮೃತ ವಾಕ್ಯಗಳನ್ನು ಕೇಳುತ್ತಿರುವ ನನಗೆ ಸಂತೃಪ್ತಿಯಾಗುತ್ತಿಲ್ಲ (ಇನ್ನೂ ಕೇಳಬೇಕೆಂಬ ಕುತೂಹಲವಿದೆ).

**ವ್ಯಾಖ್ಯೆ:** ಶಿಷ್ಯನಿಗೆ ಗುರುವಾಕ್ಯ ಶ್ರವಣದಲ್ಲಿ ಇಂತಹ ಉತ್ಕಟ ಪ್ರೇಮ ಉಂಟಾಗಬೇಕು.

**ಅ||** ಅರ್ಜುನನ ಆ ವಾಕ್ಯಗಳನ್ನು ಕೇಳಿ ಭಗವಂತನು ತನ್ನ ವಿಭೂತಿಗಳನ್ನು ವರ್ಣಿಸಲು ಪ್ರಾರಂಭಿಸಿ ಪ್ರಧಾನವಾದವುಗಳನ್ನು ಮಾತ್ರ ಹೇಳುವೆನೆನ್ನುತ್ತಾನೆ-

**ಶ್ರೀ ಭಗವಾನುವಾಚ.**

೧೯ **ಹಂತ ತೇ ಕಥಯಿಷ್ಯಾಮಿ ದಿವ್ಯಾ ಹ್ಯಾತ್ಮವಿಭೂತಯಃ**
**ಪ್ರಾಧಾನ್ಯತಃ ಕುರುಶ್ರೇಷ್ಠ ನಾಸ್ತ್ಯಂತೋ ವಿಸ್ತರಸ್ಯ ಮೇ**

ಶ್ರೀ ಭಗವಾನುವಾಚ-ಶ್ರೀ ಭಗವಂತನು ಹೇಳಿದನು.

**ಅರ್ಥ:** ಕುರುಶ್ರೇಷ್ಠ=ಕುರುವಂಶೀಕರಲ್ಲಿ ಶ್ರೇಷ್ಠನಾದ ಅರ್ಜುನಾ! ಹಂತ=ಈಗ; ದಿವ್ಯಾಃ=ದಿವ್ಯಗಳಾದ (ಅಲೌಕಿಕಗಳಾದ); ಆತ್ಮ ವಿಭೂತಯಃ=ನನ್ನ ವಿಭೂತಿಗಳನ್ನು; ಪ್ರಾಧಾನ್ಯತಃ=ಪ್ರಾಧಾನ್ಯತೆ ಅನುಸರಿಸಿ; ತೇ=ನಿನಗೆ; ಕಥಯಿಷ್ಯಾಮಿ=ಹೇಳುವೆನು; ಹಿ=ಏಕೆಂದರೆ; ಮೇ=ನನ್ನ; ವಿಸ್ತರಸ್ಯ=ವಿಭೂತಿ ವಿಸ್ತಾರಕ್ಕೆ; ಅತಃ ಅಂತವು; ನಾಸ್ತಿ=ಇಲ್ಲ.

**ತಾ||** ಶ್ರೀ ಭಗವಂತನು ಹೇಳಿದನು- ಕುರುವಂಶಶ್ರೇಷ್ಠನಾದ ಅರ್ಜುನಾ! ಈಗ ದಿವ್ಯಗಳಾದ ನನ್ನ ವಿಭೂತಿಗಳನ್ನು ಪ್ರಾಧಾನ್ಯತೆ ಅನುಸರಿಸಿ (ಮುಖ್ಯವಾದವುಗಳನ್ನು) ನಿನಗೆ ಹೇಳುವೆನು. ಏಕೆಂದರೆ- ನನ್ನ ವಿಭೂತಿ ವಿಸ್ತಾರಕ್ಕೆ ಅಂತ್ಯವಿಲ್ಲ.

**ವ್ಯಾಖ್ಯೆ:** ಭಗವಂತನು ಅನಂತ. ಆದ್ದರಿಂದ ಆತನ ವಿಭೂತಿ ಅನಂತವಾದುದೇ ಆಗಿದೆ. ಮುಖ್ಯವಾದ ವಿಭೂತಿಗಳನ್ನು ಮಾತ್ರ ವರ್ಣಿಸಿ ಹೇಳಲು ಭಗವಂತನು ಸಿದ್ಧನಾಗುತ್ತಿದ್ದಾನೆ.

**ಅ॥** ಇಲ್ಲಿಂದ (೨೦ನೆಯ ಶ್ಲೋಕದಿಂದ) ೩೯ನೆಯ ಶ್ಲೋಕದವರೆಗೆ ಭಗವಂತನು ತನ್ನ ವಿವಿಧ ವಿಭೂತಿಗಳನ್ನು ವರ್ಣಿಸುತ್ತಿದ್ದಾನೆ-

೨೦ ಅಹಮಾತ್ಮಾ ಗುಡಾಕೇಶ ಸರ್ವಭೂತಾಶಯಸ್ಥಿತಃ
ಅಹಮಾದಿಶ್ಚ ಮಧ್ಯಂ ಚ ಭೂತಾನಾಮಂತ ಏವ ಚ

**ಅರ್ಥ:** ಗುಡಾಕೇಶ=ಓ ಅರ್ಜುನಾ! ಸರ್ವಭೂತಾಶಯ ಸ್ಥಿತಃ=ಸಮಸ್ತ ಪ್ರಾಣಿಗಳ ಹೃದಯದಲ್ಲಿರುವ; ಆತ್ಮ=ಪ್ರತ್ಯಗಾತ್ಮ ಅಹಂ ಏವ (ಅಸ್ಮಿ) =ನಾನೇ ಆಗಿದ್ದೇನೆ; ಭೂತಾನಾಂ=ಪ್ರಾಣಿಗಳ, ಆದಿಃ ಚ=ಆದಿಯೂ (ಸೃಷ್ಟಿಯೂ); ಮಧ್ಯಂಚ=ಮಧ್ಯ (ಸ್ಥಿತಿ); ಅಂತಃ ಚ=ಅಂತವೂ (ಲಯವು); ಅಹಂ (ಏವ ಅಸ್ಮಿ)=ನಾನೇ (ಆಗಿದ್ದೇನೆ).

**ತಾ॥** ಓ ಅರ್ಜುನಾ! ಸಮಸ್ತ ಪ್ರಾಣಿಗಳ ಹೃದಯದಲ್ಲಿರುವ ಪ್ರತ್ಯಗಾತ್ಮನು ನಾನೇ ಆಗಿದ್ದೇನೆ- ಮತ್ತೆ ಪ್ರಾಣಿಗಳ ಆದಿಮಧ್ಯಾಂತಗಳು (ಸೃಷ್ಟಿ ಸ್ಥಿತಿ ಲಯಗಳು) ನಾನೇ ಆಗಿದ್ದೇನೆ.

**ವ್ಯಾಖ್ಯೆ:** ಹೇಳಬೇಕಾದದ್ದೆಲ್ಲವನ್ನು ಒಂದೇ ವಾಕ್ಯದಲ್ಲೇ ಭಗವಂತನು ಹೇಳಿಬಿಟ್ಟನು ('ಅಹಮಾತ್ಮಾ...... ಸ್ಥಿತಃ' - ಎಂದು). 'ಸಮಸ್ತ ಪ್ರಾಣಿ ಕೋಟಿಗಳಲ್ಲಿ ಬೆಳಗುತ್ತಿರುವ ಪ್ರತ್ಯಗಾತ್ಮನು ನಾನೇ' ಎಂದು ಶ್ರೀಕೃಷ್ಣಮೂರ್ತಿ ಇಲ್ಲಿ ಹೇಳಿದನು. ಪ್ರತಿ ಜೀವಿಯಲ್ಲೂ ದೇಹೇಂದ್ರಿಯ ಮನೋಬುದ್ಧಿಗಳಿಗೆ ಸಾಕ್ಷಿಯಾಗಿ ಪ್ರತ್ಯಗಾತ್ಮ ವರ್ತಿಸುತ್ತಿದ್ದಾನೆ. ಆತನನ್ನೇ ಜೀವಾತ್ಮನೆಂದೂ ಕರೆಯುವರು. ಆತನು ಪರಮಾತ್ಮನಿಗಿಂತ ಬೇರೆಯಲ್ಲವೆಂದು ಇಲ್ಲಿ ಹೇಳಲಾಗಿದೆ. ಅಂದರೆ ಜೀವಾತ್ಮನೇ ಪರಮಾತ್ಮನೆನ್ನುವ ಅಖಂಡವಾದ ಮಹಾಬೋಧೆಯನ್ನು ಇಲ್ಲಿ ಮಾಡಲಾಗಿದೆ. ಇದು ಅದ್ವೈತ ಬೋಧೆ. ಆದ್ದರಿಂದ ಜೀವಿಯು ಪರಮಾತ್ಮನ ಸ್ಥಾನವನ್ನು ಹೊಂದಬೇಕೆಂದರೆ ಜೀವಾತ್ಮ ಸ್ಥಾನವನ್ನು ಸೇರಿದರೆ ಸಾಕು. ಅಂದರೆ ಪಂಚಕೋಶಗಳಿಂದ ತನ್ನನ್ನು ಬೇರ್ಪಡಿಸಿಕೊಂಡು ದೇಹೇಂದ್ರಿಯ ಮನೋಬುದ್ಧಿಗಳಿಗೆ ಸಾಕ್ಷಿಯಾಗಿರುವ ಪ್ರತ್ಯಗಾತ್ಮನನ್ನು ಸಾಕ್ಷಾತ್ಕರಿಸಿಕೊಳ್ಳಬೇಕು. ಆ ಪ್ರತ್ಯಗಾತ್ಮನೇ ಪರಮಾತ್ಮ. ಉಪನಿಷತ್ತುಗಳೆಲ್ಲವೂ ಈ ಸತ್ಯವನ್ನೇ ಬೋಧಿಸುತ್ತವೆ.

ಮತ್ತೆ ಪ್ರತಿ ಜೀವಿಯಲ್ಲಿ ಭಗವಂತನು (ಪ್ರತ್ಯಗಾತ್ಮರೂಪದಲ್ಲಿ) ವಾಸಿಸುತ್ತಿರುವನೆಂದು ಸ್ಪಷ್ಟವಾಗಿ ತಿಳಿಸಲ್ಪಟ್ಟಿರುವುದರಿಂದ ಇನ್ನು ಯಾವ ಜೀವಿಯನ್ನೂ ಅಲ್ಪವೆನ್ನಲು ಸಾಧ್ಯವಿಲ್ಲ. ತನ್ನಲ್ಲಿಯ ಪ್ರತ್ಯಗಾತ್ಮನನ್ನು (ದೇಹೇಂದ್ರಿಯಾದಿಗಳಿಗೆ ಸಾಕ್ಷಿಯಾದ ನಿಜರೂಪವನ್ನು), ಸ್ಮರಣೆಗೆ ತಂದುಕೊಂಡು ಪ್ರತಿ ಮಾನವನು ತಾನು ಅಲ್ಪನಾದ, ನಶ್ವರವಾದ ಉಪಾಧಿಯಲ್ಲವೆಂದೂ ಮಹತ್ತರ ಶಾಶ್ವತ ಪರಬ್ರಹ್ಮಸ್ವರೂಪಿಯೇ ಎಂದು ನಿಶ್ಚಯಿಸಿಕೊಳ್ಳಬೇಕು. ಮತ್ತೆ ಪ್ರತಿ ಪ್ರಾಣಿಯಲ್ಲಿ ಭಗವಂತನು ನಿವಸಿಸುತ್ತಿದ್ದಾನೆಂಬ ವಿಶ್ವಾಸವನ್ನು ದೃಢಪಡಿಸಿಕೊಂಡು ಯಾವ ಜೀವಿಗೂ ಹಿಂಸೆ ಕೊಡದೆ ಪರೋಪಕಾರಿಯಾಗಿ ವರ್ತಿಸಬೇಕು. ಅಂತಹ ಪರಪ್ರಾಣಿ ಸೇವೆಯನ್ನು ಮಾಧವ ಸೇವೆ ಎಂದು ಭಾವಿಸಬೇಕು. ಈ ಪ್ರಕಾರವಾಗಿ ಸರ್ವತ್ರ ಭಗವತ್ಸನ್ನಿಧಾನವನ್ನು ಸಂಪರ್ಕಿಸಿ ಪಾಪಕಾರ್ಯವನ್ನು ಮಾಡದಿರಬೇಕು. ಏಕೆಂದರೆ ಪರಮಾತ್ಮ ಅವರವರ ಹೃದಯದಲ್ಲಿಯೇ ನಿವಸಿಸಿ, ಅತಿ ಸಮೀಪದಿಂದ, ಅವರವರು ಮಾಡುವ ಪಾಪ ಪುಣ್ಯಗಳನ್ನು ಬಹು ಜಾಗರೂಕತೆಯಿಂದ ಗಮನಿಸುತ್ತಿರುವನು.

ಜಗತ್ತೆಲ್ಲವೂ ಅಧಿಷ್ಠಾನವಾದ ಪರಮಾತ್ಮನಲ್ಲಿ ಅಧ್ಯಸ್ಥವಾಗಿರುವುದರಿಂದ, ವಾಸ್ತವವಾಗಿ ಅಧಿಷ್ಠಾನಕ್ಕಿಂತ ಬೇರೆಯಲ್ಲವಾದ್ದರಿಂದ, ಸಮಸ್ತ ಪ್ರಾಣಿಗಳ ಆದಿ ಮಧ್ಯಾಂತಗಳು ತಾನೇ ಆಗಿದ್ದೇನೆಂದು ಭಗವಂತನು ಹೇಳಲು ಕಾರಣವಾಗಿದೆ. ಮತ್ತೆ 'ಸರ್ವಭೂತಾಶಯಸ್ಥಿತಃ' ಎನ್ನುವ ವಾಕ್ಯದಲ್ಲಿ 'ಸರ್ವ' ಎನ್ನುವ ಪದ ಪ್ರಯೋಗದಿಂದ ಯಾವ ಪ್ರಾಣಿಯಲ್ಲೇ ಆಗಲಿ ತಾನು ಇಲ್ಲದೆ ಇರಲು ಸಾಧ್ಯವಿಲ್ಲವೆಂದೂ, ಸಮಸ್ತ ಭೂತಗಳಲ್ಲಿ ತಪ್ಪದೆ ನಿವಸಿಸುತ್ತಿದ್ದಾನೆಂದು ಸ್ಪಷ್ಟವಾಗುತ್ತದೆ. ಆದ್ದರಿಂದ ಇನ್ನು ಯಾವ ಮನುಜನೂ ನಿರುತ್ಸಾಹ ಹೊಂದದೆ. ತಾನು ಅಲ್ಪನೆಂದು ಭಾವಿಸದೆ, ತನ್ನಲ್ಲೇ ಸುಪ್ತವಾಗಿರುವ ಆ ಅಕ್ಷಯ ಪರಮಾತ್ಮನನ್ನು ಸಾಕ್ಷಾತ್ಕರಿಸಿಕೊಳ್ಳಲು ಯತ್ನಿಸಬೇಕು. ಭಯ, ದುಃಖ ಮುಂತಾದುವು ಜೀವಿಗೆ ತನ್ನ ವಾಸ್ತವ ಸ್ವರೂಪದ ವಿಸ್ಮರಣೆಯಿಂದಲೇ ಉಂಟಾಗುತ್ತವೆಂದು ಗ್ರಹಿಸಬೇಕು. ಆದ್ದರಿಂದ ತನ್ನ ಯಥಾರ್ಥ ಸ್ವರೂಪವನ್ನು (ಆತ್ಮವನ್ನು) ಪುನಃ ಸ್ಮರಿಸಿ ಮಹಾ ಧೈರ್ಯವನ್ನು, ಆನಂದವನ್ನು ಹೊಂದಿ, ದುಃಖರಾಹಿತ್ಯವನ್ನು ಬಂಧವಿಮುಕ್ತಿಯನ್ನು, ಶಾಶ್ವತ ಕೈವಲ್ಯವನ್ನು ಹೊಂದಬೇಕು.

ಗುಡಾಕೇಶ- ಗುಡಾಕ್+ಈಶ-ನಿದ್ರೆಯನ್ನು ಜಯಿಸಿದವನು ಅರ್ಜುನ. ಆಹಾರ, ನಿದ್ರೆ-ಎನ್ನುವ ಇಬ್ಬರು ಕಳ್ಳರು ಮನುಜನ ಜೀವನವನ್ನು ಹಾಳುಮಾಡುತ್ತಾರೆ. ಆದ್ದರಿಂದ ಮುಮುಕ್ಷು ಆ ಎರಡನ್ನು ಹತೋಟಿಯಲ್ಲಿಟ್ಟುಕೊಂಡು ಸಂಯಮಶೀಲನಾಗಿ ಪ್ರವರ್ತಿಸಬೇಕು. ಮಿತನಿದ್ರೆ, ಮಿತಾಹಾರಗಳನ್ನು ಅಭ್ಯಾಸ ಮಾಡಬೇಕು.

ಪ್ರ : ಸಮಸ್ತ ಪ್ರಾಣಿ ಕೋಟಿಗಳ ಹೃದಯಾಂತರಾಳಗಳಲ್ಲಿ ನಿವಸಿಸುವ ಪ್ರತ್ಯಗಾತ್ಮ ಯಾರು?

ಉ : ಸಾಕ್ಷಾತ್ ಪರಮಾತ್ಮನೇ

ಪ್ರ : ಆ ಪರಮಾತ್ಮ ಎಂತಹವನು?

ಉ : ಪ್ರಾಣಿಗಳ ಆದಿ ಮಧ್ಯಾಂತವಾಗಿದ್ದಾನೆ.

೨೧ ಆದಿತ್ಯಾನಮಹಂ ವಿಷ್ಣುರ್ಜ್ಯೋತಿಷಾಂ ರವಿರಂಶುಮಾನ್
ಮರೀಚಿರ್ಮರುತಾಮಸ್ಮಿ ನಕ್ಷತ್ರಾಣಾಮಹಂ ಶಶೀ

**ಅರ್ಥ:** ಅಹಂ=ನಾನು; ಆದಿತ್ಯಾನಾಂ=ಆದಿತ್ಯರಲ್ಲಿ; ವಿಷ್ಣುಃ=ವಿಷ್ಣುವೆನ್ನುವ ಆದಿತ್ಯನು; ಜ್ಯೋತಿಷಾಂ= ಪ್ರಕಾಶಕರಲ್ಲಿ; ಅಂಶುಮಾನ್=ಕಿರಣಗಳುಳ್ಳ; ರವಿಃ=ಸೂರ್ಯನು; ಮರುತಾಃ=ಮರುತ್ತುಗಳೆನ್ನುವ ದೇವತೆಗಳಲ್ಲಿ; ಮರೀಚಿಃ=ಮರೀಚಿಯು; ಅಹಂ=ನಾನು; ನಕ್ಷತ್ರಾಣಾಮ್=ನಕ್ಷತ್ರಗಳಲ್ಲಿ; ಶಶೀ=ಚಂದ್ರನು; ಅಸ್ಮಿ=ಆಗಿದ್ದೇನೆ.

**ತಾ॥** ನಾನು ಆದಿತ್ಯರಲ್ಲಿ ವಿಷ್ಣುವು, ಪ್ರಕಾಶಕರಲ್ಲಿ ಕಿರಣಗಳುಳ್ಳ ಸೂರ್ಯನು. ಮರುತ್ತುಗಳೆನ್ನುವ ದೇವತೆಗಳಲ್ಲಿ ಮರೀಚಿಯು; ನಕ್ಷತ್ರಗಳಲ್ಲಿ ಚಂದ್ರನೂ ಆಗಿದ್ದೇನೆ.

**ವ್ಯಾಖ್ಯೆ:** 'ಆದಿತ್ಯರು'- ಅದಿತಿ ಸುತರು ಹನ್ನೆರಡು ಮಂದಿ ಇವರನ್ನೇ ದ್ವಾದಶಾದಿತ್ಯರೆನ್ನುವರು. ಅವರು ೧) ಧಾತಾ ೨) ಮಿತ್ರ ೩) ಆರ್ಯಮಾ ೪) ಇಂದ್ರ ೫) ವರುಣ ೬) ಅಂಶ ೭) ಭಗ ೮) ವಿವಸ್ವಾನ್ ೯) ಪೂಷಾ ೧೦) ಸವಿತಾ ೧೧) ತ್ವಷ್ಟಾ ೧೨) ವಿಷ್ಣು-ಎನ್ನುವ ಹೆಸರುಗಳಿವೆ.*

* ೧ ಧಾತಾ ಮಿತ್ರೋಽರ್ಯಮಾ ಶಕ್ರೋ ವರುಣಸ್ತ್ವಂಶ ಏವ ಚ। ಭಗೋ ವಿವಸ್ವಾನ್ ಪೂಷಾ ಚ ಸವಿತಾ ದಶಮಸ್ತಥಾ.
೨ ಏಕಾದಶಸ್ತಥಾ ತ್ವಷ್ಟಾ ದ್ವಾದಶೋ ವಿಷ್ಣುರುಚ್ಯತೇ
ಜಘನ್ಯಜಸ್ತು ಸರ್ವೇಷಾಮಾದಿತ್ಯಾನಾಂ ಗುಣಾಧಿಕಃ॥
(ಮಹಾಭಾರತ-ಆದಿಪರ್ವ)

'ಮರುತ್ತುಗಳು' - ಏಳು ಜನ. ಅವರಿಗೆ ಕ್ರಮವಾಗಿ ೧) ಆವಹ ೨) ಪ್ರವಹ ೩) ನಿವಹ ೪) ಪರಾವಹ ೫) ಉದ್ವಹ ೬) ಸಂವಹ ೭) ಪರಿವಹ (ಮರೀಚಿ) - ಎನ್ನುವ ಹೆಸರುಗಳಿವೆ.*

'ಆದಿತ್ಯರಲ್ಲಿ ನಾನು ವಿಷ್ಣು'- ಎನ್ನುವ ವಾಕ್ಯದ ಅರ್ಥವು 'ಆದಿತ್ಯರಲ್ಲಿ ವಿಷ್ಣುವೆನ್ನುವ ಆದಿತ್ಯನಲ್ಲಿ ವಿಶೇಷವಾಗಿ ಅಭಿವ್ಯಕ್ತವಾಗುತ್ತಿರುವನು'- ಎಂದಾಗಿದೆ. ಹಾಗೆಯೇ ಬೇರೆ ವಾಕ್ಯಗಳ ಅರ್ಥವನ್ನು ಕೂಡ ಊಹಿಸಿಕೊಳ್ಳಬಹುದು.

**೨೨ ವೇದಾನಾಂ ಸಾಮವೇದೋಽಸ್ಮಿ ದೇವಾನಾಮಸ್ಮಿ ವಾಸವಃ**
**ಇಂದ್ರಿಯಾಣಾಂ ಮನಶ್ಚಾಸ್ಮಿ ಭೂತಾನಾಮಸ್ಮಿ ಚೇತನಾ**

**ಅರ್ಥ:** ವೇದಾನಾಂ=ವೇದಗಳಲ್ಲಿ; ಸಾಮವೇದಃ=ಸಾಮವೇದವು; ಅಸ್ಮಿ=(ನಾನು) ಆಗಿದ್ದೇನೆ; ದೇವಾನಾಂ=ದೇವತೆಗಳಲ್ಲಿ; ವಾಸವಃ= ಇಂದ್ರನು; ಅಸ್ಮಿ=ಆಗಿದ್ದೇನೆ. ಇಂದ್ರಿಯಾಣಾಂ=ಇಂದ್ರಿಯಗಳಲ್ಲಿ; ಮನಃ ಚ=ಮನಸ್ಸು; ಅಸ್ಮಿ=ಆಗಿದ್ದೇನೆ; ಭೂತಾನಾಂ=ಪ್ರಾಣಿಗಳಲ್ಲಿ; ಚೇತನಾ=ಚೈತನ್ಯ (ತಿಳಿವು); ಅಸ್ಮಿ=ಆಗಿದ್ದೇನೆ.

**ತಾ||** ನಾನು ವೇದಗಳಲ್ಲಿ ಸಾಮವೇದ; ದೇವತೆಗಳಲ್ಲಿ ಇಂದ್ರ; ಇಂದ್ರಿಯಗಳಲ್ಲಿ ಮನಸ್ಸು, ಪ್ರಾಣಿಗಳಲ್ಲಿ ಚೈತನ್ಯ (ತಿಳಿವು) ಆಗಿದ್ದೇನೆ.

**೨೩ ರುದ್ರಾಣಾಂ ಶಂಕರಶ್ಚಾಸ್ಮಿ ವಿತ್ತೇಶೋ ಯಕ್ಷರಕ್ಷಸಾಮ್**
**ವಸೂನಾಂ ಪಾವಕಶ್ಚಾಸ್ಮಿ ಮೇರುಃ ಶಿಖರಿಣಾಮಹಮ್**

**ಅರ್ಥ:** ರುದ್ರಾಣಾಂ=ರುದ್ರರಲ್ಲಿ; ಶಂಕರಃ=ಶಂಕರನು; ಅಸ್ಮಿ=ಆಗಿದ್ದೇನೆ; ಯಕ್ಷರಕ್ಷಸಾಂ=ಯಕ್ಷರಲ್ಲಿ, ರಾಕ್ಷಸರಲ್ಲಿ; ವಿತ್ತೇಶಃ=ಕುಬೇರನು; ವಸೂನಾಂ =ವಸುಗಳಲ್ಲಿ; ಪಾವಕಃ ಚ=ಅಗ್ನಿಯು; ಶಿಖರಿಣಾಂ=ಶಿಖರಗಳುಳ್ಳ ಪರ್ವತಗಳಲ್ಲಿ; ಮೇರುಃ=ಮೇರು ಪರ್ವತವು; ಅಸ್ಮಿ=(ನಾನು) ಆಗಿದ್ದೇನೆ.

**ತಾ||** ರುದ್ರರಲ್ಲಿ ಶಂಕರನು, ಯಕ್ಷರಾಕ್ಷಸರಲ್ಲಿ ಕುಬೇರನು, ವಸುಗಳಲ್ಲಿ ಅಗ್ನಿಯು, ಪರ್ವತಗಳಲ್ಲಿ ಮೇರು ಪರ್ವತ ಆಗಿದ್ದೇನೆ.

**ವ್ಯಾಖ್ಯೆ:** 'ರುದ್ರರು' - ಹನ್ನೊಂದು ಮಂದಿ ಇವರನ್ನು ಏಕಾದಶರುದ್ರರೆನ್ನುವರು. ೧) ಹರ ೨) ಬಹುರೂಪ ೩) ತ್ರ್ಯಂಬಕ ೪) ಅಪರಾಜಿತ ೫) ವೃಷಾಕಪಿ (ಕೃಪಾಕರ) ೬) ಶಂಭು ೭) ಕಪರ್ದಿ ೮) ರೈವತ ೯) ಮೃಗವ್ಯಾಧ ೧೦) ಶರ್ವ ೧೧) ಕಪಾಲಿ ಎನ್ನುವ ಹೆಸರುಗಳಿವೆ.*

'ವಸುಗಳು'- ಎಂಟು ಮಂದಿ (ಅಷ್ಟ ವಸುಗಳು)- ಅವರು ೧) ಧರ ೨) ಧ್ರುವ ೩) ಸೋಮ ೪) ಅಹ ೫) ಅನಿಲ ೬) ಅನಲ ೭) ಪ್ರತ್ಯೂಷ ೮) ಪ್ರಭಾಸ.@

**೨೪ ಪುರೋಧಸಾಂ ಚ ಮುಖ್ಯಂ ಮಾಂ ವಿದ್ಧಿ ಪಾರ್ಥ ಬೃಹಸ್ಪತಿಮ್**
**ಸೇನಾನೀನಾಮಹಂ ಸ್ಕಂದಸ್ಸರಸಾಮಸ್ಮಿ ಸಾಗರಃ**

**ಅರ್ಥ:** ಪಾರ್ಥ=ಓ ಅರ್ಜುನಾ! ಪುರೋಧಸಾಂ=ಪುರೋಹಿತರಲ್ಲಿ; ಮುಖ್ಯಂ=ಶ್ರೇಷ್ಠನಾದ; ಬೃಹಸ್ಪತಿಂ ಚ=ಬೃಹಸ್ಪತಿಯೆಂದು; ಮಾಂ=ನನ್ನನ್ನು; ವಿದ್ಧಿ=ತಿಳಿದುಕೊಳ್ಳುವುದು; ಅಹಂ=ನಾನು; ಸೇನಾನೀನಾಮ್=ಸೇನಾ ನಾಯಕರಲ್ಲಿ; ಸ್ಕಂದಃ=ಕುಮಾರಸ್ವಾಮಿ; ಸರಸಾಂ=ಸರೋವರಗಳಲ್ಲಿ; ಸಾಗರಃ=ಸಮುದ್ರ; ಅಸ್ಮಿ=ಆಗಿದ್ದೇನೆ.

**ತಾ||** ಓ ಅರ್ಜುನಾ! ನನ್ನನ್ನು ಪುರೋಹಿತರಲ್ಲಿ ಶ್ರೇಷ್ಠನಾದ ಬೃಹಸ್ಪತಿಯೆಂದು ತಿಳಿ. ಮತ್ತೆ ನಾನು ಸೇನಾನಾಯಕರಲ್ಲಿ ಕುಮಾರಸ್ವಾಮಿ, ಸರೋವರಗಳಲ್ಲಿ ಸಮುದ್ರವೂ ಆಗಿದ್ದೇನೆ.

**ವ್ಯಾಖ್ಯೆ:** 'ಮುಖ್ಯಂ'- ಎಂದು ಹೇಳುವುದರಿಂದ ಶ್ರೇಷ್ಠತ್ವವೇ, ಪವಿತ್ರತ್ವವೇ ದೈವತ್ವಕ್ಕೆ ಚಿಹ್ನವೆಂದು ಸ್ಫುರಿಸುತ್ತದೆ.

**೨೫ ಮಹರ್ಷೀಣಾಂ ಭೃಗುರಹಂ ಗಿರಾಮಸ್ಮ್ಯೇಕಮಕ್ಷರಮ್**
**ಯಜ್ಞಾನಾಂ ಜಪಯಜ್ಞೋಽಸ್ಮಿ ಸ್ಥಾವರಾಣಾಂ ಹಿಮಾಲಯಃ**

**ಅರ್ಥ:** ಅಹಂ=ನಾನು; ಮಹರ್ಷೀಣಾಂ=ಮಹರ್ಷಿಗಳಲ್ಲಿ; ಭೃಗುಃ= ಭೃಗುಮಹರ್ಷಿ; ಗಿರಾಂ=ವಾಕ್ಕುವಿನಲ್ಲಿ; ಏಕಂ ಅಕ್ಷರಂ=ಒಂದಕ್ಷರವಾದ ಪ್ರಣವ (ಓಂಕಾರವು); ಅಸ್ಮಿ=ಆಗಿದ್ದೇನೆ; ಯಜ್ಞಾನಾಂ=ಯಜ್ಞಗಳಲ್ಲಿ; ಜಪಯಜ್ಞಃ= ಜಪಯಜ್ಞವು; ಸ್ಥಾವರಾಣಾಮ್=ಸ್ಥಿರ ಪದಾರ್ಥಗಳಲ್ಲಿ; ಹಿಮಾಲಯಃ= ಹಿಮಾಲಯ ಪರ್ವತವು; ಅಸ್ಮಿ=(ನಾನು) ಆಗಿದ್ದೇನೆ.

**ತಾ||** ನಾನು ಮಹರ್ಷಿಗಳಲ್ಲಿ ಭೃಗು ಮಹರ್ಷಿ. ವಾಣಿಗಳಲ್ಲಿ ಏಕಾಕ್ಷರವಾದ ಪ್ರಣವ (ಓಂಕಾರ), ಯಜ್ಞಗಳಲ್ಲಿ ಜಪಯಜ್ಞ ಸ್ಥಿರಪದಾರ್ಥಗಳಲ್ಲಿ ಹಿಮಾಲಯ ಪರ್ವತ ಆಗಿದ್ದೇನೆ.

**ವ್ಯಾಖ್ಯೆ:** 'ಗಿರಾಮಸ್ಮ್ಯೇಕಮಕ್ಷರಂ' - ವಾಣಿಗಳು ಎಷ್ಟೇ ಇದ್ದರೂ ಏಕಾಕ್ಷರವಾದ ಪ್ರಣವವೇ (ಓಂಕಾರವೇ) ತಾನೆಂದು ಭಗವಂತನು ಹೇಳಿರುವುದರಿಂದ ಅದಕ್ಕೆ ಎಷ್ಟು ಪ್ರಾಮುಖ್ಯತೆ ಇದೆಯೆಂದು ಊಹಿಸಬಹುದು. ನೂರು ವಾಕ್ಯಗಳನ್ನು ಉಚ್ಚರಿಸುವುದಕ್ಕಿಂತ ಸಾರವಂತವಾದ ಒಂದು ವಾಕ್ಯವನ್ನು ಉಚ್ಚರಿಸುವುದು ಉತ್ತಮ ಹಾಗೂ ಪುಣ್ಯಪ್ರದ. ಆ ಸಾರವಾದ ವಾಕ್ಯವೇ ಪ್ರಣವ. ಸಮಸ್ತ ಮಂತ್ರಗಳಿಗೆ ಅದು ಪ್ರಾಣ. ಸಮಸ್ತ ವೇದಗಳಿಗೆ ಅದು ಸಾರ. ಅದು ಪರಬ್ರಹ್ಮನಿಗೆ ವಾಚಕ. ಆದ್ದರಿಂದ ಅದು ಜಪಿಸುವವನ ಪಾಪಗಳನ್ನು ಹೋಗ ಲಾಡಿಸುವುದು. ಅರ್ಥ ಮನನದಿಂದ ಮೋಕ್ಷಕ್ಕೆ ಕೊಂಡೊಯ್ಯುವುದು. ಆದ್ದರಿಂದಲೇ ಸಮಸ್ತ ವೇದಗಳು ಶಾಸ್ತ್ರಗಳು ಈ ಪ್ರಣವವನ್ನು ಕುರಿತು ವಿಶೇಷವಾಗಿ ಉಲ್ಲೇಖಿಸಿವೆ. ಈ ಪ್ರಕಾರವಾಗಿ ವಾಣಿಗಳಲ್ಲೆಲ್ಲಾ ಅದು ಸಾರಭೂತವಾಗಿರುವುದರಿಂದ, ವ್ಯರ್ಥವಾದ ಪ್ರಾಪಂಚಿಕ ವಾಕ್ಕುಗಳಲ್ಲಿ

---

* ೧) ಹರಶ್ಚ ಬಹುರೂಪಶ್ಚ ತ್ರ್ಯಂಬಕಶ್ಚಾಪರಾಜಿತಃ
ವೃಷಾಕಪಿಶ್ಚ ಶಂಭುಶ್ಚ ಕಪರ್ದೀ ರೈವತಸ್ತಥಾ
೨) ಮೃಗವ್ಯಾಧಶ್ಚ ಸರ್ವಶ್ಚ ಕಪಾಲೀ ಚ ವಿಶಾಂಪತೇ
ಏಕಾದಶೈತೇ ಕಥಿತಾ ರುದ್ರಾಸ್ತ್ರಿ ಭುವನೇಶ್ವರಾಃ (ಹರಿವಂಶ)

@ ಧರೋ ಧ್ರುವಶ್ಚ ಸೋಮಶ್ಚ ಅಹಶ್ಚೈವಾನಿಲೋಽನಲಃ
ಪ್ರತ್ಯೂಷಶ್ಚ ಪ್ರಭಾಸಶ್ಚ ವಸವೋಽಷ್ಟೌ ಪ್ರಕೀರ್ತಿತಾಃ
(ಮಹಾಭಾರತ - ಆದಿಪರ್ವ)

ಕಾಲಹರಣೆ ಮಾಡದೆ ದಿವ್ಯರೂಪವಾದ, ಸಾಕ್ಷಾತ್ ಭಗವತ್ಸ್ವರೂಪವಾಗಿ ಬೆಳಗುತ್ತಿರುವ ಈ ಏಕಾಕ್ಷರವನ್ನು (ಪ್ರಣವವನ್ನು ಉಚ್ಚರಿಸುವುದು), ಮನನ ಮಾಡುವುದು ಶ್ರೇಯಸ್ಕರ.

'ಯಜ್ಞಾನಾಂ ಜಪಯಜ್ಞೋಽಸ್ಮಿ'- ಯಜ್ಞಗಳಲ್ಲಿ ತಾನು ಜಪಯಜ್ಞವೆಂದು ಶ್ರೀ ಕೃಷ್ಣಪರಮಾತ್ಮ ನುಡಿದನು. ಇದರಿಂದ ಜಪಕ್ಕೆ ಎಂತಹ ಮಹಾತ್ಮ್ಯೆಯಿದೆಯೋ ವಿದಿತವಾಗುತ್ತದೆ. ಜಪವನ್ನು ಒಂದು ಯಜ್ಞವೆಂದು ಹೇಳಿರುವುದರಿಂದ ಅದು ಮಹಾ ಪವಿತ್ರವಾದ, ಚಿತ್ತಶುದ್ಧಿಕರವಾದ ದೊಡ್ಡ ಕ್ರತುವೆಂದು ಸ್ಪಷ್ಟವಾಗುತ್ತದೆ. ಶಾಸ್ತ್ರಗಳಲ್ಲಿ ಅನೇಕ ಯಜ್ಞಗಳು ಹೇಳಲ್ಪಟ್ಟಿದ್ದರೂ ಅವೆಲ್ಲವೂ ಪ್ರಯಾಸಕರವಾಗಿವೆ. ಆದ್ದರಿಂದ ಅತಿ ಸುಲಭವಾದ, ಸರ್ವರಿಗೂ ಸಾಧ್ಯವಾದ, ಆಚರಣೆ ಯೋಗ್ಯವಾದ, ಯಾವ ವಿಧವಾದ ಪ್ರಯಾಸವೂ ಇಲ್ಲದಂತಹ ಈ ಜಪಯಜ್ಞ ಎಲ್ಲಾ ಯಜ್ಞಗಳಿಗಿಂತ ಉತ್ತಮವಾದುದಾಗಿದೆ. ಆದ್ದರಿಂದಲೇ ಭಗವಂತನು ಅದನ್ನೇ ತನ್ನ ರೂಪವಾಗಿ ವರ್ಣಿಸಿರುವನು. ಇದು ಖರ್ಚಿಲ್ಲದ ಯಜ್ಞ, ಮೇಲಾಗಿ ಅಪರಿಮಿತ ಫಲವನ್ನು ಕೊಡುವಂತಹದು. ಇದು ಚಿತ್ತವನ್ನು ಶುದ್ಧಪಡಿಸಿ ಅನೇಕ ಜನ್ಮಾರ್ಜಿತ ಪಾಪಗಳನ್ನು ನಿರ್ಮೂಲ ಮಾಡಿ ಬ್ರಹ್ಮಜ್ಞಾನ ಪ್ರಾಪ್ತಿಗೆ ಸಹಾಯಕವಾಗುವುದು. ಆದ್ದರಿಂದ ಇದು ಮೋಕ್ಷಪ್ರಾಪ್ತಿಗೆ ಅತ್ಯಂತ ಅನುಕೂಲವಾದುದು. ಅಷ್ಟೇಕೆ ಇದು ಸಾಕ್ಷಾತ್ ಭಗವತ್ಸ್ವರೂಪವೇ ಎಂದು ಹೇಳಲ್ಪಟ್ಟಿರುವುದರಿಂದ ಜನರಿಗೆಲ್ಲಾ ಇದು ಪಾಲನಾಯೋಗ್ಯವಾಗಿದೆ.

**೨೬ ಅಶ್ವತ್ಥಃ ಸರ್ವವೃಕ್ಷಾಣಾಂ ದೇವರ್ಷೀಣಾಂ ಚ ನಾರದಃ**
**ಗಂಧರ್ವಾಣಾಂ ಚಿತ್ರರಥಃ ಸಿದ್ಧಾನಾಂ ಕಪಿಲೋ ಮುನಿಃ**

**ಅರ್ಥ:** (ಅಹಂ=ನಾನು): ಸರ್ವ ವೃಕ್ಷಾಣಾಂ=ಎಲ್ಲ ವೃಕ್ಷಗಳಲ್ಲಿ; ಅಶ್ವತ್ಥಃ=ಅರಳಿ ಮರ; ದೇವರ್ಷೀಣಾಂ=ದೇವರ್ಷಿಗಳಲ್ಲಿ; ನಾರದಃ ಚ=ನಾರದನು; ಗಂಧರ್ವಾಣಾಂ=ಗಂಧರ್ವರಲ್ಲಿ; ಚಿತ್ರರಥಃ=ಚಿತ್ರರಥನು; ಸಿದ್ಧಾನಾಂ= ಸಿದ್ಧರಲ್ಲಿ; ಕಪಿಲಃ ಮುನಿಃ=ಕಪಿಲನೆನ್ನುವ ಮುನಿ (ಅಸ್ಮಿ=ಆಗಿದ್ದೇನೆ)

**ತಾ||** ನಾನು ವೃಕ್ಷಗಳಲ್ಲಿ ಅರಳಿ ಮರವು, ದೇವರ್ಷಿಗಳಲ್ಲಿ ನಾರದನು, ಗಂಧರ್ವರಲ್ಲಿ ಚಿತ್ರರಥನು; ಸಿದ್ಧರಲ್ಲಿ ಕಪಿಲ ಮುನಿಯು ಆಗಿದ್ದೇನೆ.

**ವ್ಯಾಖ್ಯೆ:** *'ಅಶ್ವತ್ಥಃ ಸರ್ವ ವೃಕ್ಷಾಣಾಂ'*- ವೃಕ್ಷಗಳಲ್ಲೆಲ್ಲಾ ಅಶ್ವತ್ಥ ವೃಕ್ಷ (ಅರಳಿಮರ) ಬಹಳ ಶ್ರೇಷ್ಠವಾಗಿದ್ದು ಪವಿತ್ರವಾಗಿದೆ. ಪುರಾಣಗಳಲ್ಲಿ ಇದರ ಮಹಿಮೆಯ ಬಗ್ಗೆ ವಿಶೇಷವಾಗಿ ಹೇಳಲಾಗಿದೆ.* ವೃಕ್ಷಗಳಲ್ಲಿ ಅಶ್ವತ್ಥವೃಕ್ಷವು ತಾನೆಂದು ಶ್ರೀಕೃಷ್ಣಪರಮಾತ್ಮನು ಹೇಳಿರುವುದರಿಂದ ಆ ವೃಕ್ಷವು ಸಾಕ್ಷಾತ್ ಭಗವಂತನ ನಿಲಯವೇ ಎಂದು ಸ್ಪಷ್ಟವಾಗುತ್ತದೆ. ಆದ್ದರಿಂದಲೇ ಜನರು ಅದಕ್ಕೆ ಪ್ರದಕ್ಷಿಣೆ ಪೂಜಾದಿಗಳನ್ನು ಮಾಡುತ್ತಾರೆ. ಔಷಧದ ದೃಷ್ಟಿಯಲ್ಲೂ ಅರಳಿ ಮರಕ್ಕೆ ದೊಡ್ಡ ಪ್ರಾಮುಖ್ಯತೆ ಇದೆ.

**೨೭ ಉಚ್ಚೈಃಶ್ರವಸಮಶ್ವಾನಾಂ ವಿದ್ಧಿ ಮಾಮಮೃತೋದ್ಭವಮ್**
**ಐರಾವತಂ ಗಜೇಂದ್ರಾಣಾಂ ನರಾಣಾಂ ಚ ನರಾಧಿಪಮ್**

**ಅರ್ಥ:** ಅಶ್ವಾನಾಂ=ಕುದುರೆಗಳಲ್ಲಿ; ಅಮೃತೋದ್ಭವಂ=(ಕ್ಷೀರಸಾಗರ ಮಥನದಲ್ಲಿ) ಅಮೃತದೊಡನೆ ಹುಟ್ಟಿದ; ಉಚ್ಚೈಃಶ್ರವಸಂ=ಉಚ್ಚೈಃಶ್ರವವೆನ್ನುವ ಕುದುರೆಯೆಂದು; ಗಜೇಂದ್ರಾಣಾಂ=ಬೃಹತ್ ಆನೆಗಳಲ್ಲಿ; ಐರಾವತಂ= ಐರಾವತವೆನ್ನುವ ಆನೆಯೆಂದು; ನರಾಣಾಂ=ಮನುಜರಲ್ಲಿ; ನರಾಧಿಪಂ= ರಾಜನೆಂದು; ಮಾಂ=ನನ್ನನ್ನು; ವಿದ್ಧಿ=ತಿಳಿದುಕೊ.

**ತಾ||** ನನ್ನನ್ನು ಕುದುರೆಗಳಲ್ಲಿ ಅಮೃತದೊಡನೆ ಹುಟ್ಟಿದ ಉಚ್ಚೈಃಶ್ರವವೆನ್ನುವ ಅಶ್ವವೆಂದು, ದೊಡ್ಡ ಆನೆಗಳಲ್ಲಿ ಐರಾವತವೆಂಬ ಆನೆಯೆಂದು, ಮನುಷ್ಯರಲ್ಲಿ ಶ್ರೇಷ್ಠನಾದ ರಾಜನೆಂದು ತಿಳಿದುಕೊ.

**ವ್ಯಾಖ್ಯೆ:** ಉಚ್ಚೈಃಶ್ರವವೆನ್ನುವ ಅಶ್ವ, ಐರಾವತವೆಂಬ ಆನೆ ಪೂರ್ವದಲ್ಲಿ ಕ್ಷೀರಸಾಗರ ಮಥನಕಾಲದಲ್ಲಿ ಉದ್ಭವಿಸಿದವು.

**೨೮ ಆಯುಧಾನಾಮಹಂ ವಜ್ರಂ ಧೇನೂನಾಮಸ್ಮಿ ಕಾಮಧುಕ್**
**ಪ್ರಜನಶ್ಚಾಸ್ಮಿ ಕಂದರ್ಪಃ ಸರ್ಪಾಣಾಮಸ್ಮಿ ವಾಸುಕಿಃ**

**ಅರ್ಥ:** ಅಹಂ=ನಾನು; ಆಯುಧಾನಾಂ=ಆಯುಧಗಳಲ್ಲಿ; ವಜ್ರಂ= ವಜ್ರಾಯುಧ; ಧೇನೂನಾಂ=ಹಾಲುಕೊಡುವ ಹಸುಗಳಲ್ಲಿ; ಕಾಮಧುಕ್= ಕಾಮಧೇನು; ಅಸ್ಮಿ=ಆಗಿದ್ದೇನೆ; ಪ್ರಜನಃ=ಪ್ರಜೆಗಳ ಉತ್ಪತ್ತಿಗೆ ಕಾರಣ ಭೂತನಾದ; ಕಂದರ್ಪಃ ಚ=ಮನ್ಮಥನು; ಅಸ್ಮಿ=ಆಗಿದ್ದೇನೆ; ಸರ್ಪಾಣಾಂ= ಸರ್ಪಗಳಲ್ಲಿ; ವಾಸುಕಿಃ=ವಾಸುಕಿಯೆನ್ನುವ ಸರ್ಪ; ಅಸ್ಮಿ=ಆಗಿದ್ದೇನೆ.

**ತಾ||** ನಾನು ಶಸ್ತ್ರಗಳಲ್ಲಿ ವಜ್ರಾಯುಧ. ಹಾಲುಕೊಡುವ ಹಸುಗಳಲ್ಲಿ ಕಾಮಧೇನು, ಪ್ರಜೆಗಳ (ಧರ್ಮಬದ್ಧವಾದ) ಉತ್ಪತ್ತಿಗೆ ಕಾರಣಭೂತನಾದ ಮನ್ಮಥ, ಸರ್ಪಗಳಲ್ಲಿ ವಾಸುಕಿ ಆಗಿದ್ದೇನೆ.

**ವ್ಯಾಖ್ಯೆ:** *'ಪ್ರಜನಶ್ಚಾಸ್ಮಿ ಕಂದರ್ಪಃ'*- 'ಪ್ರಜನಃ' ಎನ್ನುವ ವಿಶೇಷಣವನ್ನು ಮನ್ಮಥನಿಗೆ ಸೇರಿಸುವುದರಿಂದ ಧರ್ಮಬದ್ಧವಾದ ಸತ್ಸಂತಾನೋತ್ಪತ್ತಿಗೆ ಹೇತುಭೂತವಾದ ಕಾಮವನ್ನೇ ಇಲ್ಲಿ ಹೇಳಲಾಗಿದೆ ಎಂದು ತಿಳಿಯಬೇಕು. **'ಧರ್ಮಾವಿರುದ್ಧೋ ಭೂತೇಷು ಕಾಮೋಽಸ್ಮಿ ಭರತರ್ಷಭ (೭-೧೧)-'** ಎನ್ನುವ ವಾಕ್ಯದ ಮೂಲಕ ಪೂರ್ವದಲ್ಲಿ ಈ ವಿಷಯವನ್ನೇ ಭಗವಂತನು ತಿಳಿಸಿದ್ದಾನೆ.

---

* ೧) ಮೂಲೇ ವಿಷ್ಣುಃ ಸ್ಥಿತೋ ನಿತ್ಯಂ ಸ್ಕಂದೇ ಕೇಶವ ಏವ ಚ
ನಾರಾಯಣಸ್ತು ಶಾಖಾಸು ಪತ್ರೇಷು ಭಗವಾನ್ಹರಿಃ
೨) ಫಲೇಽಚ್ಯುತೋ ನ ಸಂದೇಹಃ ಸರ್ವದೇವೈಃ ಸಮನ್ವಿತಃ
೩) ಸ ಏವ ವಿಷ್ಣುರ್ದ್ರುಮ ಏವ ಮೂರ್ತೋ
ಮಹಾತ್ಮಭಿಃ ಸೇವಿತಪುಣ್ಯಮೂಲಃ
ಯಸ್ಯಾಶ್ರಯಃ ಪಾಪಸಹಸ್ರಹಂತಾ
ಭವೇನ್ನೃಣಾಂ ಕಾಮದುಘೋ ಗುಣಾಢ್ಯಃ||

(ಸ್ಕಾಂದ ಪುರಾಣ -ನಾಗರಖಂಡ ೨೪೭-೪೧, ೪೨-೪೪)

ತಾ|| ಅರಳಿಮರದ ಮೂಲದಲ್ಲಿ ವಿಷ್ಣುವು, ಬುಡದಲ್ಲಿ ಕೇಶವ, ಕೊಂಬೆಗಳಲ್ಲಿ ನಾರಾಯಣನು, ಎಲೆಗಳಲ್ಲಿ ಶ್ರೀಹರಿ, ಫಲದಲ್ಲಿ ಅಚ್ಯುತನು, ಸಮಸ್ತ ದೇವತೆಗಳಿಂದ ಕೂಡಿ ಬೆಳಗುತ್ತಿದೆ. ಈ ವಿಷಯದಲ್ಲಿ ಸಂದೇಹವಿಲ್ಲ, ಇದು ಸಾಕ್ಷಾತ್ ಆಕಾರವನ್ನು ಧರಿಸಿ ಬಂದ ವಿಷ್ಣುವೇ ಆಗಿದೆ. ಇದರ ಮೂಲವನ್ನು ಮಹನೀಯರು ಸೇವಿಸುತ್ತಿದ್ದಾರೆ. ಇದನ್ನು ಆಶ್ರಯಿಸುವವರ ಪಾಪಜಾಲಗಳೆಲ್ಲಾ ನಶಿಸಿ ಹೋಗುವುವು. ಇದು ಮನುಜರ ಕೋರಿಕೆಗಳನ್ನು ನೆರವೇರಿಸುವುದು, ಸದ್ಗುಣಗಳನ್ನು, ಪುಣ್ಯವನ್ನು ಕೊಡುವುದು.

೨೯ ಅನಂತಶ್ಚಾಸ್ಮಿ ನಾಗಾನಾಂ ವರುಣೋ ಯಾದಸಾಮಹಮ್
ಪಿತೄಣಾಮರ್ಯಮಾ ಚಾಸ್ಮಿ ಯಮಸ್ಸಂಯಮತಾಮಹಮ್

**ಅರ್ಥ:** ಅಹಂ=ನಾನು; ನಾಗಾನಾಂ=ನಾಗಗಳಲ್ಲಿ; ಅನಂತಃ ಚ= (ನಾಗರಾಜನಾದ) ಅನಂತನು; ಅಸ್ಮಿ=ಆಗಿದ್ದೇನೆ; ಯಾದಸಾಂ=ಜಲದೇವತೆಗಳಲ್ಲಿ; ವರುಣಃ=ವರುಣನು; ಪಿತೄಣಾಂ=ಪಿತೃದೇವತೆಗಳಲ್ಲಿ; ಅರ್ಯಮಾಚ= ಅರ್ಯಮನೆಂಬ ಹೆಸರುಳ್ಳ ಪಿತೃವು (ಅಸ್ಮಿ=ಆಗಿದ್ದೇನೆ); ಅಹಂ=ನಾನು; ಸಂಯಮತಾಂ=ನಿಯಮಿಸುವವರಲ್ಲಿ; (ಇಲ್ಲ ಶಿಕ್ಷಿಸುವವರಲ್ಲಿ); ಯಮಃ= ಯಮನು (ಅಸ್ಮಿ=ಆಗಿದ್ದೇನೆ)

**ತಾ||** ನಾನು ನಾಗಗಳಲ್ಲಿ ಅನಂತನು (ಶೇಷನು), ಜಲದೇವತೆಗಳಲ್ಲಿ ವರುಣನು ಪಿತೃದೇವತೆಗಳಲ್ಲಿ ಆರ್ಯಮನು, ನಿಯಾಮಕರಲ್ಲಿ ಯಮನು ಆಗಿದ್ದೇನೆ.

**ವ್ಯಾಖ್ಯೆ:** 'ನಾಗಾನಾಂ'- ನಾಗಗಳೆನ್ನುವ ಸರ್ಪಗಳಿಗೆ ಅನೇಕ ಶಿರಸ್ಸುಗಳಿವೆ, ಆದರೆ ವಿಷವಿರುವುದಿಲ್ಲ. ಸರ್ಪಗಳಿಗೆ ಒಂದು ತಲೆ ಇರುತ್ತದೆ. ಆದರೆ ವಿಷವಿರುವುದು. ನಾಗ ಹಾಗು ಸರ್ಪಗಳಿಗೆ ಇದು ಭೇದ.

೩೦ ಪ್ರಹ್ಲಾದಶ್ಚಾಸ್ಮಿ ದೈತ್ಯಾನಾಂ ಕಾಲಃ ಕಲಯತಾಮಹಮ್
ಮೃಗಾಣಾಂ ಚ ಮೃಗೇಂದ್ರೋಽಹಂ ವೈನತೇಯಶ್ಚ ಪಕ್ಷಿಣಾಮ್

**ಅರ್ಥ:** ಅಹಂ=ನಾನು; ದೈತ್ಯಾನಾಂ=ಅಸುರರಲ್ಲಿ; ಪ್ರಹ್ಲಾದಃ ಚ=ಪ್ರಹ್ಲಾದನು; ಕಲಯತಾಂ=ಗಣಿಕರಲ್ಲಿ; ಕಾಲಃ=ಕಾಲವು; ಮೃಗಾಣಾಂ ಚ=ಮೃಗಗಳಲ್ಲಿ; ಮೃಗೇಂದ್ರಃ=ಮೃಗರಾಜನಾದ ಸಿಂಹ; ಪಕ್ಷಿಣಾಂ= ಪಕ್ಷಿಗಳಲ್ಲಿ; ವೈನತೇಯಃ ಚ=ಗರುಡಪಕ್ಷಿ; ಅಸ್ಮಿ=ಆಗಿದ್ದೇನೆ.

**ತ್ಬಾ||** ನಾನು ಅಸುರರಲ್ಲಿ ಪ್ರಹ್ಲಾದನು, ಲೆಕ್ಕಹಿಡಿಯುವವರಲ್ಲಿ (ಗಣಿಕರಲ್ಲಿ) ಕಾಲವು(ಸಮಯವು), ಮೃಗಗಳಲ್ಲಿ ಮೃಗರಾಜನಾದ ಸಿಂಹ, ಪಕ್ಷಿಗಳಲ್ಲಿ ಗರುಡಪಕ್ಷಿಯಾಗಿದ್ದೇನೆ.

**ವ್ಯಾಖ್ಯೆ:** ಪ್ರಹ್ಲಾದನು ಅಸುರನು. ಅಸುರಕುಲದಲ್ಲಿ ಜನಿಸಿದವನು. ಆದರೂ ಪರಮಭಕ್ತಾಗ್ರೇಸರನಾದುದರಿಂದ ಸಾಕ್ಷಾತ್ ಭಗವಂತನ ಪದವಿ ಹೊಂದಿದನು. ಹೀಗೆ ಶ್ರೀ ಕೃಷ್ಣಪರಮಾತ್ಮನು 'ಪ್ರಹ್ಲಾದನು ನಾನೇ' ಎಂದು ಹೇಳುವುದರಿಂದ ಭಕ್ತಿಯ ಪರಾಕಾಷ್ಠೆ ಸ್ಥಿತಿಯಲ್ಲಿ ಭಕ್ತನು ಹಾಗು ಭಗವಂತನು ಒಂದೇ ಆಗುವರೆಂಬ ಪರಮಸತ್ಯ ಹೊರಬೀಳುತ್ತದೆ. ಅವರವರ ಪುರುಷ ಪ್ರಯತ್ನದಿಂದ ಜೀವಿಯು ಶಿವನಾಗುವನೆಂದು ಸ್ಪಷ್ಟವಾಗುತ್ತದೆ. ಕ್ರೂರ ಸ್ವಭಾವದ ಅಸುರ ಜಾತಿಯಲ್ಲಿ ಹುಟ್ಟಿದ ಪ್ರಹ್ಲಾದನು ಪ್ರಯತ್ನ ಪೂರ್ವಕವಾಗಿ ಗಳಿಸಿದ ತನ್ನ ದೈವೀಸಂಪದನೆ ಯಿಂದ ಮಹೋನ್ನತ ಪರಮಾರ್ಥ ಸ್ಥಿತಿಯನ್ನು ಗಳಿಸಿ ಶಾಸ್ತ್ರಾದಿಗಳಲ್ಲಿ ಕೀರ್ತಿ ಹೊಂದಿದವನಾಗಿ, ಭಕ್ತ ಶಿರೋಮಣಿಯಾಗಿ ಬೆಳಗಿ ಸಾಕ್ಷಾತ್ ಭಗವದ್ರೂಪಿಯೇ ಆದನು. ಆದ್ದರಿಂದ ಕುಲಕ್ಕಿಂತ ಗುಣವೇ ಪ್ರಧಾನವೆಂದು ಅರ್ಥವಾಗುತ್ತದೆ. ಇದರಿಂದ ಎಂತಹ ನೀಚಕುಲದಲ್ಲಿ ಜನ್ಮಿಸಿದರೂ ತಮ್ಮ ಪ್ರಯತ್ನದಿಂದ ಜನರು ಮಹತ್ತರ ದೈವ ಸ್ಥಿತಿಯನ್ನು ಪಡೆಯಬಲ್ಲರೆಂದು ತಿಳಿಯುತ್ತದೆ. ಅಸುರರೇ ಮುಕ್ತಿ ಹೊಂದಿದಾಗ ಇನ್ನು ಬೇರೆಯವರ ಮಾತು ಹೇಳಬೇಕೇ? ಆದ್ದರಿಂದ ಜಾತಿಮತ ಕುಲಲಿಂಗಗಳ ವಿಚಕ್ಷಣವಿಲ್ಲದೆ ಸರ್ವರೂ ಆಧ್ಯಾತ್ಮಸಾಧನೆಗಳನ್ನು ಮಾಡಿ ಭಗವತ್ಪದವಿಯನ್ನು ಅಲಂಕರಿಸುವಂತಾಗಬೇಕು.

'ಕಾಲ'- ತಾನೇ ಎಂದು ಭಗವಂತನು ಹೇಳಿರುವವನಾದ್ದರಿಂದ ಅದು ಪವಿತ್ರವಾದುದು. ಅದನ್ನು ವ್ಯರ್ಥಮಾಡದೆ, ದುರ್ವಿನಿಯೋಗಪಡಿಸದೆ, ನಶ್ವರ ವಸ್ತು ಸಂಪಾದನೆಯಲ್ಲೇ ಕಳೆಯದೆ ಶಾಶ್ವತ ದೈವ ಪದಾರ್ಥದ ಅನ್ವೇಷಣೆಯಲ್ಲಿ ಮಾತ್ರವೇ ವಿನಿಯೋಗಿಸಬೇಕು.

'ವೈನತೇಯಶ್ಚ ಪಕ್ಷಿಣಾಂ' - ಗರುಡನು ಒಂದು ಪಕ್ಷಿ. ಹನುಮಂತನು ವಾನರ, ಗಜೇಂದ್ರನು ಆನೆ ಆದರೂ ಇವರೆಲ್ಲರೂ ತಮ್ಮ ತಮ್ಮ ಭಕ್ತ್ಯಾತಿಶಯಗಳಿಂದ, ನಿರಂತರ ದೈವಸ್ಮರಣೆಯಿಂದ ಸಾಕ್ಷಾತ್ ಭಗವದ್ರೂಪ ಹೊಂದಿದರು. ಈ ವಿಧವಾಗಿ ಪಶುಪಕ್ಷ್ಯಾದಿಗಳೇ ಮುಕ್ತಿಹೊಂದಿರಲು ಇನ್ನು ಮಾನವರು ಏಕೆ ಮುಕ್ತಿಗಾಗಿ ಪ್ರಯತ್ನಿಸಬಾರದು? ಆದ್ದರಿಂದ ಸೋಮಾರಿತನವನ್ನು ಬಿಟ್ಟು ಮೇಲೆ ತಿಳಿಸಿದ ಮಹನೀಯರಿಂದ ಪಾಠ ಕಲಿತು, ಪ್ರಯತ್ನಪೂರ್ವಕವಾಗಿ ದೈವಸಾಕ್ಷಾತ್ಕಾರವನ್ನು ಹೊಂದಿ ಮಾನವನು ತನ್ನ ಮಾನವತ್ವವನ್ನು ಸಾರ್ಥಕಗೊಳಿಸಿಕೊಳ್ಳಬೇಕು.

೩೧ ಪವನಃ ಪವತಾಮಸ್ಮಿ ರಾಮಶ್ಶಸ್ತ್ರ ಭೃತಾಮಹಮ್
ಝುಷಾಣಾಂ ಮಕರಶ್ಚಾಸ್ಮಿ ಸ್ರೋತಸಾಮಸ್ಮಿ ಜಾಹ್ನವೀ

**ಅರ್ಥ:** ಅಹಂ=ನಾನು; ಪವತಾಮ್=ಪವಿತ್ರಗೊಳಿಸುವವರಲ್ಲಿ (ಇಲ್ಲವೆ ವೇಗವಂತರಲ್ಲಿ); ಪವನಃ=ವಾಯು; ಅಸ್ಮಿ=ಆಗಿದ್ದೇನೆ; ಶಸ್ತ್ರಭೃತಾಂ= ಆಯುಧಗಳನ್ನು ಧರಿಸಿದವರಲ್ಲಿ; ರಾಮಃ=ಶ್ರೀರಾಮಚಂದ್ರನು; ಝುಷಾಣಾಂ=ಮೀನುಗಳಲ್ಲಿ; ಮಕರಂಚ=ಮೊಸಳೆಯು; ಅಸ್ಮಿ=ಆಗಿದ್ದೇನೆ; ಸ್ರೋತಸಾಂ=ನದಿಗಳಲ್ಲಿ; ಜಾಹ್ನವಿ=ಗಂಗಾನದಿಯು; ಅಸ್ಮಿ=ಆಗಿದ್ದೇನೆ.

**ತಾ||** ನಾನು ಪವಿತ್ರಗೊಳಿಸುವವರಲ್ಲಿ (ವೇಗವಂತರಲ್ಲಿ) ವಾಯು, ಆಯುಧವನ್ನು ಧರಿಸಿದವರಲ್ಲಿ ಶ್ರೀ ರಾಮಚಂದ್ರನು, ಮೀನುಗಳಲ್ಲಿ ಮೊಸಳೆ, ನದಿಗಳಲ್ಲಿ ಗಂಗಾನದಿ ಆಗಿದ್ದೇನೆ.

**ವ್ಯಾಖ್ಯೆ:** ಈ ಶ್ಲೋಕದಲ್ಲಿ ತಿಳಿಸಿದ ಹಾಗೆ ಗಂಗಾನದಿ ಸಾಕ್ಷಾತ್ ಭಗವತ್ಸ್ವರೂಪವೇ. ಆದ್ದರಿಂದ ಅದು ಮಹಾಪವಿತ್ರವಾಗಿ, ಪಾಪಹಾರಕವಾಗಿದೆ. ಶ್ರೀಕೃಷ್ಣನು ತಾನು ರಾಮನೇ ಎಂದು ಹೇಳಿರುವುದರಿಂದ ರಾಮಕೃಷ್ಣರಿಬ್ಬರೂ ಒಂದೇ ಭಗವತ್ಸ್ವರೂಪವೆಂದು ಸ್ಪಷ್ಟವಾಗುತ್ತದೆ.

೩೨ ಸರ್ಗಾಣಾಮಾದಿರಂತಶ್ಚ ಮಧ್ಯಂ ಚೈವಾಹಮರ್ಜುನ
ಆಧ್ಯಾತ್ಮವಿದ್ಯಾ ವಿದ್ಯಾನಾಂ ವಾದಃ ಪ್ರವದತಾಮಹಮ್

**ಅರ್ಥ:** ಅರ್ಜುನಾ=ಓ ಅರ್ಜುನಾ! ಸರ್ಗಾಣಾಂ=ಸೃಷ್ಟಿಯ; ಆದಿಃ= ಆದಿಯು (ಮೊದಲು, ಇಲ್ಲವೆ ಉತ್ಪತ್ತಿ); ಅಂತಃ ಚ=ಅಂತವು (ಲಯವು); ಮಧ್ಯಂ ಚ=ಮಧ್ಯವು (ಸ್ಥಿತಿ); ಅಹಂ ಏವ (ಅಸ್ಮಿ)=ನಾನೇ ಆಗಿದ್ದೇನೆ; ವಿದ್ಯಾನಾಂ=ವಿದ್ಯೆಗಳಲ್ಲಿ; ಆಧ್ಯಾತ್ಮವಿದ್ಯಾ=ಆಧ್ಯಾತ್ಮ ವಿದ್ಯೆಯನ್ನು; ಪ್ರವದತಾಂ= ವಿವಾದಿಸುವವರಲ್ಲಿ ವಾದಃ=(ರಾಗ ದ್ವೇಷರಹಿತವಾಗಿ, ತತ್ತ್ವ ನಿಶ್ಚಯಕ್ಕಾಗಿ ಮಾಡುವ)ವಾದವು; ಅಹಂ (ಅಸ್ಮಿ)=ನಾನೇ ಅಗಿದ್ದೇನೆ.

**ತಾ||** ಓ ಅರ್ಜುನಾ! ಸೃಷ್ಟಿಯ ಆದಿ, ಮಧ್ಯ ಮತ್ತು ಅಂತಗಳು (ಉತ್ಪತ್ತಿ, ಸ್ಥಿತಿ, ಲಯಗಳು) ನಾನೇ ಆಗಿದ್ದೇನೆ. ವಿದ್ಯೆಗಳಲ್ಲಿ ಆಧ್ಯಾತ್ಮ ವಿದ್ಯೆ, ವಿವಾದಿಸುವವರಲ್ಲಿ (ರಾಗ ದ್ವೇಷರಹಿತವಾಗಿ, ತತ್ತ್ವ ನಿಶ್ಚಯಕ್ಕಾಗಿ ಮಾಡುವ) ವಾದವು ನಾನೇ ಆಗಿದ್ದೇನೆ.

**ವ್ಯಾಖ್ಯೆ:** 'ಆಧ್ಯಾತ್ಮ ವಿದ್ಯಾ ವಿದ್ಯಾನಾಂ' ಪ್ರಪಂಚದಲ್ಲಿ ಅನೇಕ ವಿದ್ಯೆಗಳಿದ್ದಾಗ್ಯೂ ಅಧ್ಯಾತ್ಮವಿದ್ಯೆಯೇ ತಾನೆಂದು ಭಗವಂತನು ಹೇಳಿರುವುದರಿಂದ ಆ ವಿದ್ಯೆಯ ಶ್ರೇಷ್ಠತೆ ಗೊತ್ತಾಗುತ್ತದೆ. ಯಾವ ವಿದ್ಯೆಯಿಂದ ಮನುಜನಿಗೆ ದುಃಖರಾಹಿತ್ಯ, ಆನಂದಪ್ರಾಪ್ತಿ, ಪರಮಶಾಂತಿ ಒದಗುವುದೋ ಅದೇ ಎಲ್ಲವುಗಳಿಗಿಂತ

ವಿಶೇಷವಾದುದು. ಅಂತಹ ಶಕ್ತಿ ಬ್ರಹ್ಮವಿದ್ಯೆ ಅಥವ ಅಧ್ಯಾತ್ಮವಿದ್ಯೆಗೆ ಮಾತ್ರ ಇದೆ. ಆದ್ದರಿಂದಲೇ ಅಂತಹ ಲೋಕೋತ್ತರ ವಿದ್ಯೆ ತಾನೆಂದು ಶ್ರೀಕೃಷ್ಣಮೂರ್ತಿ ಹೇಳಿದನು. ಮನುಜನು ಯಾವ ವಿದ್ಯೆಯನ್ನು ಗಳಿಸಬೇಕು? ಎನ್ನುವ ಪ್ರಶ್ನೆಗೆ ಸರಿಯಾದ ಉತ್ತರ ಇಲ್ಲಿ ಸಿಗುವುದು. ಅಧ್ಯಾತ್ಮವಿದ್ಯೆಯ ಮೊರೆ ಹೊಕ್ಕು ಜನನ ಮರಣರೂಪ ಸಂಸಾರಬಂಧನದಿಂದ ವಿಮುಕ್ತಿಹೊಂದು ಎಂದು ಪರಮಾತ್ಮನು ಕರುಣೆಯಿಂದ ಬೋಧಿಸುತ್ತಿದ್ದಾನೆ. ಲೌಕಿಕ ವಿದ್ಯೆಗಳು ಯಾವುವು ಗೊತ್ತಿಲ್ಲದಿದ್ದರೂ ಅಕ್ಷರವಾದ ಪರಮಾತ್ಮನನ್ನು ಕುರಿತ ವಿದ್ಯೆ ತಿಳಿದಿದ್ದಾನೆಂದರೆ ಪೂರ್ತಿಯಾದ ಅಕ್ಷರಜ್ಞಾನವನ್ನು ಹೊಂದಿದವನೇ ಆಗುವನು. ಅದು ಇಲ್ಲದವನು ಮಹಾಪಂಡಿತನಾದರೂ ನಿರಕ್ಷರಕುಕ್ಷಿಯೇ ಹೌದು.*

'ವಾದಃ ಪ್ರವದತಾಂ'- ವಾದ, ಜಲ್ಪ, ವಿತಂಡ,- ಎಂದು ವಿವಾದವು ಮೂರು ವಿಧವಾಗಿದೆ. ೧) ರಾಗದ್ವೇಷವಿಲ್ಲದೆ ಕೇವಲ ತತ್ತ್ವವನ್ನು ತಿಳಿದುಕೊಳ್ಳುವ ಅಭಿಲಾಷೆಯಿಂದ ಮಾಡುವ ಪ್ರಶ್ನೋತ್ತರಗಳು ವಾದಗಳು. ೨) ಪರಮತಗಳನ್ನು ಖಂಡಿಸಿ ತಮ್ಮ ಮತವನ್ನು ಸ್ಥಾಪಿಸಿಕೊಂಡು ಇತರರನ್ನು ಜಯಿಸುವ ನಿಮಿತ್ತ ಮಾಡುವ ಪ್ರಸಂಗವನ್ನು ಜಲ್ಪವೆನ್ನುವರು. ೩) ಕೇವಲ ಪರಮತವನ್ನು ದೂಷಿಸುವ ಉದ್ದೇಶದಿಂದ ಮಾಡುವ ವಾದ ವಿತಂಡ.

ಇವುಗಳಲ್ಲಿ ವಾದವು ತಾನೆಂದು ಭಗವಂತನು ಹೇಳಿರುವುದರಿಂದ ತತ್ತ್ವ ನಿಶ್ಚಯಕ್ಕಾಗಿ ಮಾಡುವ ರಾಗದ್ವೇಷರಹಿತವಾದ ವಿಚಾರಣೆಯೇ ಉತ್ತಮವೆಂದು ಸ್ಪಷ್ಟವಾಗುತ್ತದೆ. ಆದ್ದರಿಂದ ವಿಜ್ಞಗಳು ಅದನ್ನೇ ಆಶ್ರಯಿಸ ಬೇಕು.

**೩೩ ಅಕ್ಷರಾಣಾಮಕಾರೋಽಸ್ಮಿ ದ್ವಂದ್ವಃ ಸಾಮಾಸಿಕಸ್ಯ ಚ**
**ಅಹಮೇವಾಕ್ಷಯಃ ಕಾಲೋ ಧಾತಾಹಂ ವಿಶ್ವತೋಮುಖಃ**

**ಅರ್ಥ:** ಅಕ್ಷರಾಣಾಮ್=ಅಕ್ಷರಗಳಲ್ಲಿ; ಅಕಾರಃ='ಅ' ಕಾರವು; ಅಸ್ಮಿ=ಆಗಿದ್ದೇನೆ; ಸಾಮಾಸಿಕಸ್ಯ=ಸಮಾಸಗಳಲ್ಲಿ; ದ್ವಂದ್ವಃ ಚ='ದ್ವಂದ್ವ' ಸಮಾಸವು (ಅಸ್ಮಿ=ಆಗಿದ್ದೇನೆ); ಅಕ್ಷಯಃ=ನಾಶವಿಲ್ಲದ; ಕಾಲಃ=ಕಾಲವು (ಇಲ್ಲವೆ ಕಾಲಕ್ಕೆಕಾಲನಾದ ಪರಮೇಶ್ವರನು); ಅಹಂ ಏವ=ನಾನೇ ಆಗಿದ್ದೇನೆ; ವಿಶ್ವತೋಮುಖಃ=ಸರ್ವತ್ರ ಮುಖಗಳುಳ್ಳ ವಿರಾಟರೂಪಿಯಾದ; ಧಾತಾ= ಬ್ರಹ್ಮದೇವನು (ಇಲ್ಲವೆ ಕರ್ಮಫಲ ಪ್ರದಾತನು); ಅಹಂ=ನಾನೇ (ಅಸ್ಮಿ=ಆಗಿದ್ದೇನೆ).

**ತಾ||** ನಾನು ಅಕ್ಷರಗಳಲ್ಲಿ 'ಅ'ಕಾರವೂ ಸಮಾಸಗಳಲ್ಲಿ 'ದ್ವಂದ್ವ ಸಮಾಸವೂ ಆಗಿದ್ದೇನೆ. ಮತ್ತೆ ನಾಶವಿಲ್ಲದ ಕಾಲವು (ಕಾಲಕ್ಕೆ ಕಾಲನಾದ ಪರಮೇಶ್ವರನು), ಸರ್ವತ್ರ ಮುಖಗಳುಳ್ಳ ಕರ್ಮಫಲ ಪ್ರದಾತನೂ (ಇಲ್ಲವೆ ವಿರಾಟ ಸ್ವರೂಪನಾದ ಬ್ರಹ್ಮದೇವನು) ನಾನೇ ಆಗಿದ್ದೇನೆ.

**ವ್ಯಾಖ್ಯೆ:** 'ವಿಶ್ವತೋಮುಖಃ'- ಭಗವಂತನನ್ನು ಸರ್ವತೋಮುಖನೆಂದು ವರ್ಣಿಸುವುದರಿಂದ ಆತನ ಅಸ್ತಿತ್ವ, ದೃಷ್ಟಿ, ನೋಟ ಸರ್ವತ್ರ ಬೆಳಗುತ್ತಿದೆ ಎಂದು ಅರ್ಥವಾಗುತ್ತದೆ. ಈ ರಹಸ್ಯವನ್ನು ತಿಳಿದಿದ್ದೇ ಆದರೆ ಇನ್ನು ಯಾರೂ ಯಾವ ಪಾಪವನ್ನೂ ಮನಸ್ಸಿನಲ್ಲಿಯೂ ಮಾಡಲಾರರು.

**೩೪ ಮೃತ್ಯುಸ್ಸರ್ವಹರಶ್ಚಾಹಮುದ್ಭವಶ್ಚ ಭವಿಷ್ಯತಾಮ್**
**ಕೀರ್ತಿಶ್ಶ್ರೀರ್ವಾಕ್ಚ ನಾರೀಣಾಂ ಸ್ಮೃತಿರ್ಮೇಧಾ ಧೃತಿಃ ಕ್ಷಮಾ**

**ಅರ್ಥ:** ಸರ್ವಹರಃ=ಸಮಸ್ತವನ್ನು ಸಂಹರಿಸುವಂತಹ; ಮೃತ್ಯುಃ ಚ=ಮೃತ್ಯುವು; ಭವಿಷ್ಯತಾಮ್=ಇನ್ನು ಮುಂದೆ ಉತ್ಪತ್ತಿಯಾಗುವ ಸಮಸ್ತದ; ಉದ್ಭವಃಚ=ಹುಟ್ಟೂ; ಅಹಂ=ನಾನೇ; (ಅಸ್ಮಿ=ಆಗಿದ್ದೇನೆ) ನಾರೀಣಾಂ=ಸ್ತ್ರೀಯರ (ಇಲ್ಲವೆ ಸ್ತ್ರೀಯರಲ್ಲಿರುವ) ಕೀರ್ತಿಃ=ಕೀರ್ತಿ; ಶ್ರೀಃ=ಸಂಪದ (ಲಕ್ಷ್ಮಿ) ; ವಾಕ್ಚ=ವಾಕ್ಕು (ಸರಸ್ವತಿ); ಸ್ಮೃತಿಃ=ಜ್ಞಾನ; ಮೇಧಾ=ಧಾರಣಾಶಕ್ತಿಯುಳ್ಳ ಬುದ್ಧಿ; ಧೃತಿಃ=ಧೈರ್ಯ; ಕ್ಷಮಾ ಚ= ಸಹನೆಯೂ (ಅಹಮೇವಾ=ನಾನೇ; ಅಸ್ಮಿ=ಆಗಿದ್ದೇನೆ).

**ತಾ||** ಸಮಸ್ತವನ್ನು ಸಂಹರಿಸುವಂತಹ ಮೃತ್ಯುವೂ, ಇನ್ನು ಮುಂದೆ ಉತ್ಪತ್ತಿಯಾಗುವ ಸಮಸ್ತದ ಉದ್ಭವವೂ ನಾನೇ ಆಗಿದ್ದೇನೆ. ಮತ್ತೆ ಸ್ತ್ರೀಯರಲ್ಲಿರುವ ಕೀರ್ತಿ, ಸಂಪದ, ವಾಣಿ, ಸ್ಮೃತಿಜ್ಞಾನ, ಧಾರಣಾ ಶಕ್ತಿಯುಳ್ಳ ಬುದ್ಧಿ, ಧೈರ್ಯ, ಸಹನೆ, ಎನ್ನುವ ಈ ಏಳುಗುಣಗಳೂ ನಾನೇ ಆಗಿದ್ದೇನೆ.

**ವ್ಯಾಖ್ಯೆ:** ಸ್ತ್ರೀಯರನ್ನು ಕುರಿತು ಏಳು ಸದ್ಗುಣಗಳೂ ನಾನೇ ಎಂದು ಭಗವಂತನು ಹೇಳಿದ್ದಾನೆ. ಈ ಏಳು ಗುಣಗಳು ಪುರುಷರಲ್ಲಿದ್ದರೂ ಪುರುಷರೊಂದಿಗೆ ಸ್ತ್ರೀಯರನ್ನು ಕೂಡ ಉದ್ಧರಿಸಬೇಕೆಂದು ಕಂಕಣತೊಟ್ಟು ಭಗವಂತನು ಈ ರೀತಿ ತಿಳಿಸಿರುವನು. ಸ್ತ್ರೀಲೋಕದ ಮೇಲೆ ಆತನಿಗೆ ಎಷ್ಟು ಕರುಣೆಯಿದೆಯೋ ಈ ವಾಕ್ಯದಿಂದ ತಿಳಿಯುತ್ತದೆ. ಇದರಿಂದ ಸ್ತ್ರೀಯರು ಅಬಲೆಯರು ಹಾಗೂ ಶಕ್ತಿಹೀನರಲ್ಲವೆಂದೂ, ಅವರು ಕೂಡ ಪುರುಷರಂತೆ ಮೇಧಾಶಕ್ತಿ, ಧೈರ್ಯ, ವಿದ್ಯೆ (ವಾಣಿ) ಮೊದಲಾದುವುಗಳನ್ನು ಸಂಪಾದಿಸಬಹುದೆಂದು ಸ್ಪಷ್ಟಪಡಿಸಿ ದಂತಾಗಿದೆ. ಪ್ರಯತ್ನದಿಂದ, ಅಭ್ಯಾಸದಿಂದ, ಶ್ರದ್ಧೆಯಿಂದ ಯಾರಾದರೂ ಅಂತಹ ಸುಗುಣಗಳನ್ನು ಸಂಪಾದಿಸಿಕೊಳ್ಳಬಹುದು. ಧೈರ್ಯ, ಮೇಧಾಶಕ್ತಿ, ಸಹನೆ ಮೊದಲಾದ ಸದ್ಗುಣಗಳು ತಾನೇ ಎಂದು ಭಗವಂತನು ತಿಳಿಸಿರುವುದ ರಿಂದ ಅವುಗಳನ್ನು ಸರ್ವರೂ ಅಭ್ಯಾಸದಿಂದ ಪಡೆದು ತಮ್ಮ ಹೃದಯಗಳನ್ನು ಭಗವಂತನ ನಿಲಯಗಳನ್ನಾಗಿ ಪರಿವರ್ತಿಸಗೊಳಿಸಿಕೊಳ್ಳಬೇಕು. ಎಲ್ಲಿ ಇಂತಹ ಸುಗುಣಗಳಿರುವುವೋ ಅಲ್ಲಿ ಭಗವಂತನು ಸಾಕ್ಷಾತ್ತಾಗಿ ಇರುವನು.

ಈ ಶ್ಲೋಕದ ಎರಡನೆಯ ಪಾದಕ್ಕೆ ಇನ್ನೊಂದು ಅರ್ಥವನ್ನೂ ಕೊಡಬಹುದು-ಸ್ವಾಯಂಭೂ ಮನುವಿನ ಕುಮಾರಿಯಾದ ಪ್ರಸೂತಿ ದಕ್ಷ ಪ್ರಜಾಪತಿಯನ್ನು ವಿವಾಹವಾಗಲು ಅವರಿಬ್ಬರಿಗೆ ೨೪ ಮಂದಿ ಕುಮಾರಿಯರು ಜನಿಸ್ಸಿದರು. ಅವರಲ್ಲಿ ಕೀರ್ತಿದೇವಿ, ಮೇಧಾದೇವಿ, ಧೃತಿದೇವಿ, ಸ್ಮೃತಿದೇವಿ, ಕ್ಷಮಾದೇವಿಗಳು ಇರುವರು. ಶ್ರೀದೇವಿ ಭೃಗುವಿನ ಕುಮಾರಿ. ವಾಗ್ದೇವಿ ಬ್ರಹ್ಮದೇವನಿಂದ ಉದ್ಭವಿಸಿರುವಳು. ಈ ಏಳು ಮಂದಿ ಆಯಾ ಸದ್ಗುಣಗಳಿಗೆ ಅಧಿಷ್ಠಾನ ದೇವತೆಗಳು. ಆದ್ದರಿಂದ "ಸ್ತ್ರೀಯರಲ್ಲಿ ಮುಖ್ಯರಾದ ಕೀರ್ತಿದೇವಿ, ಐಶ್ವರ್ಯ ದೇವಿ, ವಾಗ್ದೇವಿ, ಸ್ಮೃತಿ ದೇವಿ, ಮೇಧಾದೇವಿ, ಧೈರ್ಯ ದೇವಿ, ಕ್ಷಮಾ ದೇವಿಯರು, ನಾನೇ ಆಗಿದ್ದೇನೆ"- ಎಂದು ಭಗವಂತನು ಹೇಳಿದನು. ಹೇಗೆ ಹೇಳಿದರೂ ಆ ಸದ್ಗುಣಗಳು ಭಗವತ್ಸ್ವರೂಪಗಳೆಂದೂ, ಅವುಗಳನ್ನು ಜೀವಿಗಳು ತಪ್ಪದೆ ಅವಲಂಬಿಸಬೇಕೆಂದೂ ತಿಳಿಸುವ ವಿಷಯ ಮಾತ್ರ ಸ್ಪಷ್ಟವಾಗಿದೆ.

ಈ ಶ್ಲೋಕದ ಮೂಲಕ ಮುಖ್ಯವಾಗಿ ಸ್ತ್ರೀಯರಿಗೆ ಧರ್ಮ ಮಾರ್ಗಾವಲಂಬನದಲ್ಲಿ, ಪರಮಾರ್ಥ ಪಥ ಗಮನದಲ್ಲಿ ವಿಶೇಷ ಪ್ರೋತ್ಸಾಹ

---

* ನಿರಕ್ಷರಸ್ಯಾಪಿತು ಯಸ್ಯಕುಕ್ಷೌ! ಬ್ರಹ್ಮೈವ ಚಾಭಾತಿ ಸ ಯೇವ ಸಾಕ್ಷರಃ
ಸರ್ವಾಕ್ಷರಸ್ಯಾಪಿತು ಯಸ್ಯಚಿತ್ತೇ ಬ್ರಹ್ಮೈವ ನಾಭಾತಿ ಸವ್ವೈ ನಿರಕ್ಷರಃ

ಲಭಿಸುತ್ತದೆ. ಇನ್ನು ಅವರು ತಮ್ಮ ವಿದ್ಯಾ ವಿಷಯದಲ್ಲಾಗಲಿ, ಧೀಃಶಕ್ತಿ ವಿಷಯದಲ್ಲಾಗಲಿ ನಿರುತ್ಸಾಹ ಪಡಬೇಕಾಗಿಲ್ಲ. ಹಿಂದೇಟು ಹಾಕುವ ಕೆಲಸವಿಲ್ಲ. ಪುರುಷರೊಂದಿಗೆ ಅವರೂ ಕೂಡ ಈ ಸುಗುಣರಾಶಿಯನ್ನು ತಮ್ಮ ಪ್ರಯತ್ನಾತಿಶಯದಿಂದ ಸಾಧಿಸಿಕೊಳ್ಳಬಹುದು. ಏಕೆಂದರೆ ಅವು ಇರುವ ಸ್ಥಳವೇ ಭಗವಂತನ ನಿಲಯ.

**೩೫ ಬೃಹತ್ಸಾಮ ತಥಾ ಸಾಮ್ನಾಂ ಗಾಯತ್ರಿ ಛಂದಸಾಮಹಮ್**
**ಮಾಸಾನಾಂ ಮಾರ್ಗಶೀರ್ಷೋಽಹಂ ಋತೂನಾಂ ಕುಸುಮಾಕರಃ**

**ಅರ್ಥ:** ತಥಾ=ಆ ಪ್ರಕಾರ; ಅಹಂ=ನಾನು; ಸಾಮ್ನಾಂ=ಸಾಮ ವೇದಗಾನಗಳಲ್ಲಿ; ಬೃಹತ್ಸಾಮ=ಬೃಹತ್ಸಾಮವು; ಛಂದಸಾಂ=ಛಂದಸ್ಸುಗಳಲ್ಲಿ (ಛಂದಸ್ಸಿನಿಂದ ಕೂಡಿದ ಮಂತ್ರಗಳಲ್ಲಿ); ಗಾಯತ್ರೀ=ಗಾಯತ್ರಿ ಎನ್ನುವ ಛಂದಸ್ಸು (ಅಂತಹ ಛಂದಸ್ಸಿನಿಂದ ಕೂಡಿದ ಮಂತ್ರವು); ಮಾಸಾನಾಂ= ಮಾಸಗಳಲ್ಲಿ ; ಮಾರ್ಗಶೀರ್ಷಃ=ಮಾರ್ಗಶೀರ್ಷ ಮಾಸ; ಋತೂನಾಂ=ಋತುಗಳಲ್ಲಿ; ಕುಸುಮಾಕರಃ=ವಸಂತ ಋತು; ಅಹಮ್ (ಅಸ್ಮಿ)=ನಾನೇ ಆಗಿದ್ದೇನೆ.

**ತಾ||** ಸಾಮವೇದ ಗಾನಗಳಲ್ಲಿ ಬೃಹತ್ಸಾಮಸ್ವರೂಪನು, ಛಂದಸ್ಸುಗಳಲ್ಲಿ ಗಾಯತ್ರಿ ಛಂದಸ್ಸು, ಮಾಸಗಳಲ್ಲಿ ಮಾರ್ಗಶಿರ ಮಾಸ, ಋತುಗಳಲ್ಲಿ ವಸಂತ ಋತು ನಾನೇ ಆಗಿದ್ದೇನೆ.

**ವ್ಯಾಖ್ಯೆ:** *'ಮಾಸಾನಾಂ ಮಾರ್ಗಶೀರ್ಷೋಽಸ್ಮಿ'*- ಈ ಕೆಳಗಿನ ಕಾರಣಗಳು ಮಾರ್ಗಶೀರ್ಷ ಮಾಸದ ಶ್ರೇಷ್ಠತೆಯನ್ನು ತೋರಿಸುತ್ತವೆ-

೧) ಪೂರ್ವದಲ್ಲಿ, ಮಹಾಭಾರತ ಕಾಲದಲ್ಲಿ ಸಂವತ್ಸರವು ಮಾರ್ಗಶಿರ ಮಾಸದೊಡನೆ ಪ್ರಾರಂಭವಾಗುತ್ತಿತ್ತು (ಮಹಾಭಾರತ ಅನುಶಾಸನ ಪರ್ವ- ೧೦೬, ೧೦೯ ಅಧ್ಯಾಯ). ಅದು ಮಾಸಗಳಲ್ಲಿ ಪ್ರಥಮಸ್ಥಾನ ಪಡೆದದ್ದರಿಂದ ಶ್ರೇಷ್ಠಮಾಸವೆನಿಸಿಕೊಳ್ಳುವುದು.

೨) ಧನುರ್ಮಾಸದ ಕಾಲವಾದ ಈ ಸಮಯ ಮಹಾಪವಿತ್ರವಾದುದು. ಆ ಸಮಯದಲ್ಲಿ ವ್ರತೋಪವಾಸಾದಿಗಳನ್ನು ಸಲ್ಲಿಸುವವರಿಗೆ ವಿಶೇಷ ಫಲಿತಗಳು ಒದಗುವುವು ಎಂದು ಶಾಸ್ತ್ರಗಳಲ್ಲಿ ಹೇಳಲಾಗಿದೆ.

೩) ಜನರಿಗೆ ಈ ಮಾಸದಲ್ಲಿ ಹೊಸ ಬೆಳೆ ಕೈಗೆ ಬರುವುದು. ಎಲ್ಲರ ಬಳಿ ಧಾನ್ಯ ಪುಷ್ಕಳವಾಗಿರುವುದು.

೪) ವಾಲ್ಮೀಕಿ ರಾಮಾಯಣದಲ್ಲಿ ಮರ್ಗಶೀರ್ಷಮಾಸವು ಸಂವತ್ಸರಕ್ಕೆ ಭೂಷಣವೆಂದು ವರ್ಣಿಸಲಾಗಿದೆ

೫) ಭಗವದ್ಗೀತೆ ಮಾರ್ಗಶಿರ ಮಾಸದಲ್ಲೇ ಆವಿರ್ಭವಿಸಿದೆ. (ಮಾರ್ಗಶಿರ ಶುದ್ಧ ಏಕಾದಶಿ)

೬) ಅವತಾರ ಪುರುಷರಾದ ದತ್ತಾತ್ರೇಯ ಋಷಿಗಳು ಈ ತಿಂಗಳಿನಲ್ಲಿ ಜನಿಸಿದರು (ಮಾರ್ಗಶಿರ ಶುದ್ಧ ಪೌರ್ಣಮಿ)

೭) ವಾತಾವರಣ ತಂಪಾಗಿರುವುದರಿಂದ ಜನರ ಹೃದಯ ಕೂಡ ಉಲ್ಲಾಸವಾಗಿ, ಧ್ಯಾನಾದಿಗಳಿಗೆ ಅದು ಅನುಕೂಲಸಮಯ.

*'ಋತೂನಾಂ ಕುಸುಮಾಕರಃ'*- ವಸಂತ ಋತುವಿನಲ್ಲಿ ಗಿಡಗಳೆಲ್ಲಾ ಚಿಗುರಿ ಶೋಭಾಯಮಾನವಾಗಿರುವುವು. ಆಗ ವಾತಾವರಣವು ಕೂಡ ಸಮಶೀತೋಷ್ಣವಾಗಿರುವುದು. ಆದ್ದರಿಂದ ಋತುಗಳಲ್ಲಿ ಅತಿ ಶ್ರೇಷ್ಠ ವಾದುದೆಂದು ವರ್ಣಿಸಲಾಗಿದೆ. ಶ್ರೀ ರಾಮಚಂದ್ರನು ಈ ಪವಿತ್ರ ಋತುವಿನಲ್ಲಿಯೇ ಜನ್ಮಿಸಿದನು.

**೩೬ ದ್ಯೂತಂ ಛಲಯತಾಮಸ್ಮಿ ತೇಜಸ್ತೇಜಸ್ವಿನಾಮಹಮ್**
**ಜಯೋಽಸ್ಮಿ ವ್ಯವಸಾಯೋಽಸ್ಮಿ ಸತ್ತ್ವಂ ಸತ್ತ್ವವತಾಮಹಂ**

**ಅರ್ಥ:** (ಅಹಂ=ನಾನು) ಛಲಯತಾಂ=ವಂಚಕ ವ್ಯಾಪಾರಗಳಲ್ಲಿ ದ್ಯೂತಂ= ಜೂಜು; ಅಸ್ಮಿ=ಆಗಿದ್ದೇನೆ; ತೇಜಸ್ವಿನಾಂ=ತೇಜೋವಂತರ; ತೇಜಃ=ತೇಜಸ್ಸು (ಪ್ರಭಾವ); ಅಸ್ಮಿ=ಆಗಿದ್ದೇನೆ; ಜಯಃ=ಜಯವು; ಅಸ್ಮಿ=ಆಗಿದ್ದೇನೆ; ವ್ಯವಸಾಯಃ=ಪ್ರಯತ್ನವೂ; ಅಸ್ಮಿ=ಆಗಿದ್ದೇನೆ. ಸತ್ವವತಾಂ=ಸಾತ್ವಿಕರ; ಸತ್ತ್ವಂ=ಸತ್ತ್ವಗುಣವು; ಅಹಂ=ನಾನು; ಆಗಿದ್ದೇನೆ.

**ತಾ||** ವಂಚಕ ವ್ಯಾಪಾರಗಳಲ್ಲಿ ನಾನು ಜೂಜು ಆಗಿದ್ದೇನೆ. ಮತ್ತೆ ನಾನು ತೇಜೋವಂತರ ತೇಜಸ್ಸು (ಪ್ರಭಾವ), (ಜಯಿಸುವವರ) ಜಯವೂ, (ಪ್ರಯತ್ನ ಶೀಲರ) ಪ್ರಯತ್ನವೂ, (ಸಾತ್ವಿಕರ) ಸತ್ವಗುಣವೂ ಆಗಿದ್ದೇನೆ.

**ವ್ಯಾಖ್ಯೆ:** ಪ್ರಪಂಚಗಳಲ್ಲಿಯ ಸಮಸ್ತ ಪದಾರ್ಥಗಳಲ್ಲಿ, ಒಳ್ಳೆಯವುಗಳಲ್ಲಾಗಲಿ, ಕೆಟ್ಟವುಗಳಲ್ಲಾಗಲಿ ಭಗವಂತನ ಅಸ್ತಿತ್ವ ಇದೆ. ಆತನ ಸಾನ್ನಿಧ್ಯವೇ ಪ್ರಪಂಚದಲ್ಲಿಯ ಸಮಸ್ತ ಪದಾರ್ಥಗಳಿಗೆ ಕ್ರಿಯೆಗಳಿಗೆ ಶಕ್ತಿಯನ್ನು ಪ್ರಸಾದಿಸುತ್ತದೆ. ಈ ಸತ್ಯವನ್ನು ನಿರೂಪಿಸಲು ಭಗವಂತನು ಈ ವಿಭೂತಿಯೋಗದಲ್ಲಿ ಕೆಲವರು ದೇವತೆಗಳನ್ನು, ದಾನವರನ್ನು, ಪ್ರಾಣಿಗಳನ್ನು, ಜಡ ಪದಾರ್ಥಗಳನ್ನು ಕೆಲವು ಕ್ರಿಯೆಗಳನ್ನು ಉದಾಹರಿಸಿದನು. ಸಂಕ್ಷೇಪವಾಗಿ ಹೇಳಬೇಕಾಗಿದ್ದರಿಂದ ಒಂದೊಂದು ಗುಂಪಿನಲ್ಲಿ ಒಂದೊಂದು ವಸ್ತುವನ್ನು ಉದಾಹರಿಸಿ ಹೇಳಿದನು. ಯಾವ ವಸ್ತುವನ್ನು ನೋಡಿದರೂ, ಯಾವ ಕ್ರಿಯೆಯನ್ನು ಅವಲೋಕಿಸಿದರೂ ಅಲ್ಲಿ ಸಾಕ್ಷಾತ್ ಭಗವಂತನ ಭಾವನೆಯನ್ನು ಸ್ಥಿರಗೊಳಿಸಬೇಕು. ಆ ಉದ್ದೇಶದಿಂದಲೇ ದ್ಯೂತ ವಿಷಯ ಇಲ್ಲಿ ಪ್ರಸ್ತಾಪಿಸಲ್ಪಟ್ಟಿದೆಯೇ ಆಗಲಿ, ಅದನ್ನು ಪ್ರೋತ್ಸಾಹಿಸಬೇಕೆಂದಾಗಲೀ, ಅನುಸರಿಸಬೇಕೆಂದಾಗಲೀ, ಅದು ಧ್ಯೇಯವೆಂದಾಗಲೀ ಅಭಿಪ್ರಾಯವಲ್ಲ. 'ನಾನು ಮೃಗಗಳಲ್ಲಿ ಸಿಂಹ ಎಂದು ಹೇಳಿದ ಮಾತ್ರಕ್ಕೆ ಸಿಂಹದೊಡನೆ ಆಟವಾಡಿಕೊಳ್ಳಬಹುದೆಂದು ಅರ್ಥವಲ್ಲ ಹಾಗೆಯೇ ಈ ದ್ಯೂತ ವಿಷಯವೂ ಕೂಡ ಎಂದು ಗ್ರಹಿಸಬೇಕು.

'ವ್ಯವಸಾಯ'ಅಂದರೆ ಪ್ರಯತ್ನ; ಅದು ತಾನೇ ಎಂದು ಭಗವಂತನೇ ಹೇಳಿರುವುದರಿಂದ ಮೋಕ್ಷದ ವಿಷಯದಲ್ಲಿ ಪ್ರಯತ್ನರಹಿತನಾಗಿ ಸೋಮಾರಿ ಯಾಗಿರದೆ ಸತ್ಪ್ರಯತ್ನ ಮಾಡುವುದು ಶ್ರೇಯಸ್ಕರವೆಂದು ಅರ್ಥವಾಗುತ್ತದೆ. ಎಲ್ಲಿ ತೇಜಸ್ಸು (ಉತ್ಸಾಹ, ಧೈರ್ಯ ಮುಂತಾದುವು) ಇರುವುದೋ, ಎಲ್ಲಿ ಜಯವಿರುವುದೋ, ಎಲ್ಲಿ ಸತ್ಪ್ರಯತ್ನ ಇರುವುದೋ, ಎಲ್ಲಿ ಸತ್ವಗುಣ ವಿರುವುದೋ ಅಲ್ಲಿ ತಾನು ಇರುವೆನೆಂದು ಭಗವಂತನು ಹೇಳಿದನು. ಆದ್ದರಿಂದ ಆಯಾ ಸದ್ಗುಣಗಳನ್ನು ಚೆನ್ನಾಗಿ ಅಳವಡಿಸಿಕೊಳ್ಳಬೇಕು.

**೩೭ ವೃಷ್ಣೀನಾಂ ವಾಸುದೇವೋಽಸ್ಮಿ ಪಾಂಡವಾನಾಂ ಧನಂಜಯಃ**
**ಮುನೀನಾಮಪ್ಯಹಂ ವ್ಯಾಸಃ ಕವೀನಾಮುಶನಾ ಕವಿಃ**

**ಅರ್ಥ:** ಅಹಂ=ನಾನು; ವೃಷ್ಣೀನಾಂ=ವೃಷ್ಣೀವಂಶದವರಾದ (ಯಾದವರಲ್ಲಿ); ವಾಸುದೇವಃ=ವಸುದೇವನ ಕುಮಾರನಾದ ಶ್ರೀಕೃಷ್ಣ; ಅಸ್ಮಿ=ಆಗಿದ್ದೇನೆ; ಪಾಂಡವಾನಾಂ=ಪಂಚಪಾಂಡವರಲ್ಲಿ; ಧನಂಜಯಃ= ಅರ್ಜುನನು; ಮುನೀನಾಂ ಅಪಿ=ಮುನಿಗಳಲ್ಲಿ; ವ್ಯಾಸ= ವೇದವ್ಯಾಸಮುನೀಂದ್ರನು; ಕವೀನಾಂ=ಕವಿಗಳಲ್ಲಿ; ಉಶನಾಕವಿಃ= ಶುಕ್ರಾಚಾರ್ಯನು; (ಅಸ್ಮಿ=ಆಗಿದ್ದೇನೆ).

**ತಾ||** ನಾನು ವೃಷ್ಣೀ ವಂಶೀಕರಲ್ಲಿ ವಸುದೇವನ ಪುತ್ರನಾದ ವಾಸುದೇವನು

(ಶ್ರೀಕೃಷ್ಣನು), ಪಾಂಡವರಲ್ಲಿ ಅರ್ಜುನನು, ಮುನಿಗಳಲ್ಲಿ ವೇದವ್ಯಾಸ ಮುನಿಯು, ಕವಿಗಳಲ್ಲಿ ಶುಕ್ರಾಚಾರ್ಯನು ಆಗಿದ್ದೇನೆ.

**ವ್ಯಾಖ್ಯೆ:** ಪಾಂಡವರಲ್ಲಿ ಅರ್ಜುನನು, ಮುನಿಗಳಲ್ಲಿ ವ್ಯಾಸನು ತಾನೇ ಎಂದು ಭಗವಂತನು ಹೇಳಿರುವುದರಿಂದ ಗೀತೆಯನ್ನು ಕೇಳಿದ ಅರ್ಜುನನು, ಬರೆದಂತಹ ವ್ಯಾಸನು ಇಬ್ಬರೂ ಸಾಕ್ಷಾತ್ ಭಗವತ್ಸ್ವರೂಪರೇ ಎಂದು ಸ್ಪಷ್ಟವಾಗುತ್ತದೆ. ಆದ್ದರಿಂದಲೇ ಗೀತಾ ಗ್ರಂಥಕ್ಕೆ ಇಂತಹ ಮಹತ್ವ ಬಂದಿದೆ.

'ಕವೀನಾ ಮುಶನಾ ಕವಿಃ'- ಕವಿಯೆಂದರೆ ದೊಡ್ಡ ವಿಜ್ಞಾನ ವುಳ್ಳವನೆಂದರ್ಥ. ಉಶನಾಕವಿಯೆಂದರೆ ಭೃಗುಮಹಾಮುನಿ ಕುಮಾರನಾದ ಶುಕ್ರಾಚಾರ್ಯ.

**೩೮ ದಂಡೋ ದಮಯತಾಮಸ್ಮಿ ನೀತಿರಸ್ಮಿ ಜಿಗೀಷತಾಮ್**
**ಮೌನಂ ಚೈವಾಸ್ಮಿ ಗುಹ್ಯಾನಾಂ ಜ್ಞಾನಂ ಜ್ಞಾನವತಾಮಹಮ್**

**ಅರ್ಥ:** ಅಹಂ (ಏವ)=ನಾನೇ; ದಮಯತಾಂ=ದಂಡಿಸುವವರ (ಶಿಕ್ಷಿಸುವವರ); ದಂಡಃ=ಶಿಕ್ಷೆಯು (ದಂಡನೀತಿಯು); ಅಸ್ಮಿ=ಆಗಿದ್ದೇನೆ; ಜಿಗೀಷತಾಂ= ಜಯಿಸುವ ಇಚ್ಛೆಯುಳ್ಳವರ; ನೀತಿಃ= (ಜಯೋಪಾಯವಾದ) ನೀತಿ (ಸಾಮದಾನ ಭೇದ ದಂಡಗಳೆನ್ನುವ ಉಪಾಯಗಳು); ಅಸ್ಮಿ=ಆಗಿದ್ದೇನೆ; ಗುಹ್ಯಾನಾಂ=ರಹಸ್ಯಗಳಲ್ಲಿ; ಮೌನಂ=ಮೌನ; ಅಸ್ಮಿ=ಆಗಿದ್ದೇನೆ; ಜ್ಞಾನವತಾಂ=ಜ್ಞಾನವಂತರ; ಜ್ಞಾನಂ ಚ= ಜ್ಞಾನವೂ ಸಹ; (ಅಸ್ಮಿ=ಆಗಿದ್ದೇನೆ).

**ತಾ||** ನಾನು ದಂಡಿಸುವವರ ದಂಡವೂ (ಶಿಕ್ಷೆಯೂ), ಜಯಿಸಲು ಇಚ್ಛಿಸುವವರ (ಜಯೋಪಾಯವಾದ) ನೀತಿಯೂ ಆಗಿದ್ದೇನೆ ಮತ್ತೆ ರಹಸ್ಯಗಳಲ್ಲಿ ಮೌನವೂ, ಜ್ಞಾನವಂತರಲ್ಲಿ ಜ್ಞಾನವು ನಾನೇ ಆಗಿದ್ದೇನೆ.

**ವ್ಯಾಖ್ಯೆ:** 'ನೀತಿರಸ್ಮಿ ಜಿಗೀಷತಾಮ್'- ನೀತಿಯಿಂದ ಕೂಡಿದ ಜಯವೇ ಜಯವಾಗಲಿ ಅವನೀತಿಯಿಂದ ಕೂಡಿದ ಜಯವು ಜಯವೆನಿಸಿಕೊಳ್ಳು ವುದಿಲ್ಲ; ಅದು ಅಪಜಯವೇ, ಆದ್ದರಿಂದ ಜಯವು ದೊಡ್ಡದಲ್ಲ. ನೀತಿಯಿಂದ ಕೂಡಿದ ಜಯವೇ ಉತ್ತಮವೆಂದು ಭಗವದ್ವಾಕ್ಯದಿಂದ ಸ್ಫುರಿಸುತ್ತದೆ.

'ಮೌನಂ ಚೈವಾಸ್ಮಿ ಗುಹ್ಯಾನಾಂ', ಮೌನವು ಭಗವತ್ಸ್ವರೂಪ. ಆದ್ದರಿಂದ ವಾಕ್ಮೌನ ಹಾಗು ಮಾನಸಿಕ ಮೌನ ಎರಡನ್ನೂ ಸಾಧಕರು ಅಭ್ಯಸಿಸಬೇಕು.

'ಜ್ಞಾನಂ ಜ್ಞಾನವತಾಮಹಮ್'- ಜ್ಞಾನವು ಸಾಕ್ಷಾತ್ ಭಗವತ್ಸ್ವರೂಪ ವಾದುದರಿಂದ ಸರ್ವೋತ್ಕೃಷ್ಟವಾದುದಾಗಿದೆ. ಆದ್ದರಿಂದ ಅದನ್ನು ತಪ್ಪದೆ ಕೈಹಿಡಿಯಬೇಕು.

**೩೯ ಯಚ್ಚಾಪಿ ಸರ್ವಭೂತಾನಾಂ ಬೀಜಂ ತದಹಮರ್ಜುನ**
**ನ ತದಸ್ತಿ ವಿನಾ ಯತ್ಸ್ಯಾನ್ಮಯಾ ಭೂತಂ ಚರಾಚರಮ್**

**ಅರ್ಥ:** ಅರ್ಜುನ=ಓ ಅರ್ಜುನಾ! ಸರ್ವಭೂತಾನಾಂ=ಸಮಸ್ತ ಪ್ರಾಣಿಕೋಟಿ ಗಳಿಗೆ; ಯತ್=ಯಾವುದು; ಬೀಜಂ=ಮೂಲ ಕಾರಣವಾಗಿರುವುದೋ (ಉತ್ಪತ್ತಿಗೆ ಹೇತುವಾಗಿರುವುದೋ); ತತ್ ಅಪಿ ಚ=ಅದೂ; ಅಹಂ (ಅಸ್ಮಿ)=ನಾನೇ ಆಗಿದ್ದೇನೆ; (ಕಿಂ ಬಹುನಾ=ಅಷ್ಟೇಕೆ); ಚರಾಚರಂ=ಸ್ಥಾವರ ಜಂಗಮಾತ್ಮಕವಾದ; ಭೂತಂ=ವಸ್ತು; ಯತ್ಸ್ಯಾತ್=ಯಾವುದಿದೆಯೋ; ತತ್=ಅದು; ಮಯಾ ವಿನಾ=ನಾನು ಅಲ್ಲದೆ; ನಾಸ್ತಿ=ಇಲ್ಲ.

**ತಾ||** ಓ ಅರ್ಜುನಾ! ಸಮಸ್ತ ಪ್ರಾಣಿಕೋಟಿಗಳಿಗೆ ಯಾವುದು ಮೂಲಕಾರಣ ವಾಗಿದೆಯೋ ಅದು ನಾನೇ ಆಗಿದ್ದೇನೆ. (ಅಷ್ಟೇಕೆ) ಸ್ಥಾವರ ಜಂಗಮಾತ್ಮಕವಾದ ಯಾವ ವಸ್ತುವೂ ನನಗಿಂತ ಬೇರೆಯಾಗಿ (ಭಿನ್ನವಾಗಿ) ಇಲ್ಲವೇ ಇಲ್ಲ.

**ವ್ಯಾಖ್ಯೆ:** ಇಲ್ಲಿಯವರೆಗೆ ತನ್ನ ಕೆಲವು ವಿಭೂತಿಗಳನ್ನು ಹೇಳಿ ಕೊನೆಯಲ್ಲಿ ಸಮಸ್ತವೂ ಭಗವತ್ಸ್ವರೂಪವೇ ಎಂದು ಕೃಷ್ಣಮೂರ್ತಿ ಹೇಳುತ್ತಿದ್ದಾನೆ. ಸಮಸ್ತ ಚರಾಚರ ಪ್ರಾಣಿಕೋಟಿಗಳ ಬೀಜ (ಉತ್ಪತ್ತಿಕಾರಣ) ತಾನೇ ಎಂದು ಭಗವಂತನು ನುಡಿದನು. ಬೀಜವು ಪರಮಾತ್ಮನಾದಾಗ ಮೊಳಕೆ ಬೇರೊಂದು ಆಗಲು ಸಾಧ್ಯವೇ? ಇಲ್ಲ. ಅದೂ ಪರಮಾತ್ಮನೇ ಆಗುವುದು. ಈ ದೃಷ್ಟಿಯಿಂದ ನೋಡಿದರೂ ಸಮಸ್ತ ಜೀವ ಜಾತಿಗಳು ವಾಸ್ತವವಾಗಿ ಭಗವತ್ಸ್ವರೂಪಿಗಳೇ ಹೊರತು ಬೇರೆಯವರಲ್ಲವೆಂದು ಸ್ಪಷ್ಟವಾಗುತ್ತದೆ. ಆದ್ದರಿಂದ ಅವರು ಅಲ್ಪರಲ್ಲ, ಪಾಪಿಗಳಲ್ಲ

'ಪ್ರತಿ ಪ್ರಾಣಿಯೂ ಘನೀಭೂತವಾದ ಆತ್ಮರೂಪವೇ ಹೌದು'- ಅಲ್ಪತ್ವ, ನೀಚತ್ವಾದಿಗಳೆಲ್ಲವೂ ಜೀವಿಯ ಕಲ್ಪನೆಗಳೇ ಹೊರತು ವಾಸ್ತವಗಳಲ್ಲ. ಜೀವಿಯ ಯಥಾರ್ಥ ರೂಪ ಪರಬ್ರಹ್ಮವೇ ಆಗಿದೆ. ಈ ಸತ್ಯವನ್ನು ನಿರೂಪಿಸಲು ಸಮಸ್ತ ಚರಾಚರ ಪ್ರಾಣಿಗಳ ಬೀಜವು ತಾನೆಂದು ಭಗವಂತನು ಇಲ್ಲಿ ಹೇಳಿರುವನು. ದೈವವಿಲ್ಲದ ಯಾವ ಪ್ರಾಣಿಯೂ ಇಲ್ಲವೆಂದು ಇಲ್ಲಿ ಸ್ಪಷ್ಟವಾಗಿ ತಿಳಿಸಿರುವುದರಿಂದ ಜೀವಿಗಳು ಅಲ್ಪರು, ಕೀಳುಜಾತಿಯವರು ಎನ್ನುವ ವಾದ ನಿರಾಧಾರವಾದುದಲ್ಲದೆ ಬೇರೇನು? ಆದ್ದರಿಂದ ಪ್ರತಿಜೀವಿಯು, ತನ್ನ ಬೀಜ, ತನ್ನ ಮೂಲ, ಸಾಕ್ಷಾತ್ ಪರಮಾತ್ಮನೇ ಎಂದು ನಂಬಿ ಉಪಾಧಿ ಭಾವವನ್ನು ಬಿಟ್ಟು ತಾನು ವಾಸ್ತವವಾಗಿ ಭಗವದ್ರೂಪನೇ ಎನ್ನುವ ಭಾವದಿಂದ ಧೈರ್ಯೋಪೇತನಾಗಿ ಸ್ವಸ್ವರೂಪಾನುಸಂಧಾನಪರನಾಗಿರಬೇಕು.

**೪೦ ನಾಂತೋಽಸ್ತಿ ಮಮ ದಿವ್ಯಾನಾಂ ವಿಭೂತೀನಾಂ ಪರಂತಪ**
**ಏಷ ತೂದ್ದೇಶತಃ ಪ್ರೋಕ್ತೋ ವಿಭೂತೇರ್ವಿಸ್ತರೋ ಮಯಾಃ**

**ಅರ್ಥ:** ಪರಂತಪ=ಓ ಅರ್ಜುನಾ! ಮಮ=ನನ್ನ; ದಿವ್ಯಾನಾಂ= ದಿವ್ಯಗಳಾದ (ಅದ್ಭುತಗಳಾದ); ವಿಭೂತೀನಾ=ವಿಭೂತಿಗಳಿಗೆ (ಸ್ವರೂಪವಿಸ್ತಾರಗಳಿಗೆ); ಚ ಅಂತಃ=ಅಂತ್ಯವು; ನ ಅಸ್ತಿ=ಇಲ್ಲ; ತು=ಆದರೂ; ಏಷಃ=ಈ; ವಿಭೂತೇಃ= ವಿಭೂತಿಯ; ವಿಸ್ತರಃ=ವಿವರಣೆ; ಉದ್ದೇಶತಃ=ಸಂಕ್ಷೇಪವಾಗಿ; ಮಯಾ= ನನ್ನಿಂದ; ಪ್ರೋಕ್ತ=ಹೇಳಲ್ಪಟ್ಟಿದೆ.

**ತಾ||** ಓ ಅರ್ಜುನಾ! ದಿವ್ಯಗಳಾದ ನನ್ನ ವಿಭೂತಿಗಳಿಗೆ ಅಂತ್ಯವಿಲ್ಲ. ಆದರೂ ಕೆಲವುಗಳನ್ನು ಸಂಕ್ಷೇಪವಾಗಿ ನಾನು ಈಗ ವಿವರಿಸಿ ಹೇಳಿದ್ದೇನೆ.

**ವ್ಯಾಖ್ಯೆ:** ಭಗವಂತನು ಅನಂತನಾದುದರಿಂದ ಆತನ ವಿಭೂತಿಗಳಿಗೆ ಅಂತ್ಯವಿಲ್ಲ. ಆದ್ದರಿಂದ ಸಂಕ್ಷೇಪವಾಗಿ ಇಲ್ಲಿ ವಿವರಿಸಿ ಹೇಳಿದನು.

**೪೧ ಯದ್ಯದ್ವಿಭೂತಿಮತ್ಸತ್ವಂ ಶ್ರೀಮದೂರ್ಜಿತಮೇವ ವಾ**
**ತತ್ತದೇವಾವಗಚ್ಛ ತ್ವಂ ಮಮ ತೇಜೋಂಽಶ ಸಂಭವಮ್**

**ಅರ್ಥ:** ವಿಭೂತಿಮತ್=ಐಶ್ವರ್ಯಯುಕ್ತವಾದ; ಶ್ರೀಮತ್= ಕಾಂತಿ ಯುಕ್ತವಾದ (ನಿರ್ಮಲವಾದ); ಊರ್ಜಿತಂ ಏವ ವಾ=ಉತ್ಸಾಹದಿಂದ ಕೂಡಿದ (ಶಕ್ತಿವಂತವಾದ); ಸತ್ವಂ=ವಸ್ತುವು (ಇಲ್ಲವೆ ಪ್ರಾಣಿ); ಯತ್ ಯತ್=ಯಾವ ಯಾವುದು (ಇದೆಯೋ); ತತ್ ತತ್=ಆಯಾ ವಸ್ತು ಇಲ್ಲವೆ ಪ್ರಾಣಿ; ಮಮ=ನನ್ನ; ತೇಜೋಽಂಶ ಸಂಭವಂ ಏವ=ತೇಜಸ್ಸಿನ (ಶಕ್ತಿಯ) ಅಂಶದಿಂದ ಉಂಟಾಗಿದೆಯೆಂದೇ, ತ್ವಂ=ನೀನು; ಅವಗಚ್ಛ=ತಿಳಿದುಕೊಳ್ಳು ವಂಥವನಾಗು.

**ತಾ||** (ಈ ಪ್ರಪಂಚದಲ್ಲಿ) ಐಶ್ವರ್ಯಯುಕ್ತವಾದುದು, ಕಾಂತಿಯುಕ್ತವಾದುದು

(ನಿರ್ಮಲವಾದುದು), ಉತ್ಸಾಹದಿಂದ ಕೂಡಿರುವುದು (ಶಕ್ತಿವಂತವಾದುದು) ಆದ ವಸ್ತುಗಳು (ಇಲ್ಲವೆ ಪ್ರಾಣಿಗಳು) ಯಾವುಯಾವು ಇರುವುವೋ ಅವು ನನ್ನ ತೇಜಸ್ಸಿನ ಅಂಶದಿಂದ ಉಂಟಾಗಿವೆಯೆಂದು ನೀನು ತಿಳಿಯುವದು.

**ವ್ಯಾಖ್ಯೆ:** ಜ್ಞಾನೈಶ್ವರ್ಯವು, ಮನೋನಿರ್ಮಲತೆ (ಬಾಹ್ಯಾಭ್ಯಂತರ ಶುದ್ಧಿ) ಧರ್ಮ ಹಾಗು ಮೋಕ್ಷಗಳಲ್ಲಿ ಉತ್ಸಾಹ, ಎಲ್ಲಿದೆಯೋ ಅಲ್ಲಿ ಸಾಕ್ಷಾತ್ ಪರಮಾತ್ಮನು ಬೆಳಗುತ್ತಿದ್ದಾನೆಂದು ಗ್ರಹಿಸಬೇಕು. ಭಗವತ್ತೇಜದ ಅಂಶದಿಂದ ಅಂತಹ ಪವಿತ್ರಗುಣ ಸಂಭವಿಸುವುದೆಂದು ಹೇಳುವುದರಿಂದ ಭಗವತ್ತೇಜಸ್ಸು, ಈಶ್ವರೀಯ ಶಕ್ತಿ ಅನಂತವೆಂದು, ಅದರ ಯಾವುದೋ ಒಂದು ಅಂಶದಿಂದ ಮಾತ್ರ ಇಂತಹ ಉತ್ತಮ ವಿಭೂತಿ, ಉತ್ಸಾಹಾದಿ ಸದ್ಗುಣಗಳು ಸಂಭವಿಸುವುವೆಂದು ತಿಳಿಯುತ್ತದೆ. ಆದ್ದರಿಂದ ಜನರು ಅಂತಹ ಸದ್ಗುಣಗಳಿಗೆ ಹೃದಯದಲ್ಲಿ ಸ್ಥಾನ ಕೊಟ್ಟು ತದ್ವಾರ ಭಗವತ್ಸಾನ್ನಿಧ್ಯವನ್ನು ಅನುಭೂತಿಗೊಳಿಸಿಕೊಳ್ಳಬೇಕು. ಮತ್ತೆ ಆ ಪ್ರಕಾರವಾದ ಸುಗುಣಗಳನ್ನು ಹೊಂದಿದವನು, ಆತನು ಯಾವ ಜಾತಿಯವನಾದರೂ, ಭಗವಂತನಿಂದ ವಂದ್ಯನೇ ಆಗುವನು.

**೪೨ ಅಥವಾ ಬಹುನೈತೇನ ಕಿಂ ಜ್ಞಾತೇನ ತವಾರ್ಜುನ**
**ವಿಷ್ಟಭ್ಯಾಹಮಿದಂ ಕೃತ್ಸ್ನ ಮೇಕಾಂಶೇನ ಸ್ಥಿತೋಜಗತ್**

**ಅರ್ಥ:** ಅರ್ಜುನಾ=ಓ ಅರ್ಜುನಾ! ಅಥವಾ=ಇಲ್ಲವೇ; ಬಹುನಾ= ವಿಸ್ತಾರವಾದ; ಏತೇನ=ಈ; ಜ್ಞಾತೇನ=ಗ್ರಹಿಸಲ್ಪಟ್ಟ (ವಿಭೂತಿ) ಜ್ಞಾನದಿಂದ; ತವ=ನಿನಗೆ; ಕಿಂ=ಏನು ಪ್ರಯೋಜನ? ಅಹಂ=ನಾನು; ಇದಂ=ಈ; ಕೃತ್ಸ್ನಂ=ಸಮಸ್ತವಾದ; ಜಗತ್=ಜಗತ್ತನ್ನು; ಏಕಾಂಶೇನ=ಒಂದು ಅಂಶದಿಂದ (ಏಕಭಾಗದಿಂದ); ವಿಷ್ಟಭ್ಯ=ವ್ಯಾಪಿಸಿ, ಸ್ಥಿತಃ=ಇದ್ದೇನೆ.

**ತಾ||** ಅರ್ಜುನಾ! ವಿಸ್ತಾರವಾದ ಈ (ವಿಭೂತಿ) ಜ್ಞಾನದಿಂದ ನಿನಗೇನು ಪ್ರಯೋಜನ? ನಾನು ಈ ಜಗತ್ತೆಲ್ಲವನ್ನೂ ನನ್ನ ಒಂದು ಅಂಶದಿಂದ ವ್ಯಾಪಿಸಿದ್ದೇನೆಂದು ಕೊನೆಯದಾಗಿ ತಿಳಿದುಕೊ.

**ವ್ಯಾಖ್ಯೆ:** ಈ ಪ್ರಕಾರವಾಗಿ ಭಗವದ್ವಿಭೂತಿಯನ್ನು ಎಷ್ಟು ತಿಳಿದುಕೊಂಡರೂ, ಇನ್ನೂ ತಿಳಿಯಬೇಕಾದದ್ದು ಉಳಿದೇ ಇರುವುದು ಆದ್ದರಿಂದ ಅಂತ್ಯವಿಲ್ಲದ ಈ ವರ್ಣನೆಗಳಿಂದ ನಿನಗೇನು ಪ್ರಯೋಜನವೆಂದು ಭಗವಂತನು ಅರ್ಜುನನಿಗೆ ಹಿತಬೋಧೆ ಮಾಡುತ್ತಿದ್ದಾನೆ. ಅವೆಲ್ಲವೂ ಯಾವ ಪರಮಾತ್ಮ ಚೈತನ್ಯದಿಂದ ವ್ಯಾಪಿಸಲ್ಪಟ್ಟಿವೆಯೋ ಧರಿಸ್ಪಟ್ಟಿವೆಯೋ ಆ ಒಂದನ್ನು ತಿಳಿದುಕೊಂಡರೆ ಸಾಕೆಂದು ಹೇಳಿದ ಹಾಗಾಯಿತು. ಈ ಜಗತ್ತೆಲ್ಲವೂ ಪರಮಾತ್ಮನ ಒಂದು ಅಂಶದಿಂದ ವ್ಯಾಪಿಸಲ್ಪಟ್ಟಿದೆಯೆಂದು ಹೇಳಲ್ಪಟ್ಟಿರುವುದರಿಂದ ಭಗವಂತನ ಅನಂತ ಶಕ್ತಿ, ವಿಶ್ವವ್ಯಾಪಕತೆ ಅರ್ಥವಾಗುತ್ತದೆ. ಈ ಅನಂತ ಕೋಟಿ ಬ್ರಹ್ಮಾಂಡಗಳೆಲ್ಲವೂ ಎಷ್ಟೋ ವಿಶಾಲವಾದವು, ಆದರೂ ಭಗವಂತನ ಒಂದು ಅಂಶದಿಂದ ಅವು ಎಲ್ಲವೂ ವ್ಯಾಪಿಸಲ್ಪಟ್ಟಿವೆ. ಇನ್ನೂ ಅನೇಕ ಅಂಶಗಳು ಉಳಿದಿವೆ ಎನ್ನುವುದನ್ನು ಊಹಿಸಿಕೊಳ್ಳಬಹುದು.

"ಪಾದೋಽಸ್ಯ ವಿಶ್ವಭೂತಾನಿ ತ್ರಿಪಾದಸ್ಯಾಮೃತಮ್ ದಿವಿ" ಎನ್ನುವ ಪುರುಷಸೂಕ್ತ ವಚನವು ಈ ಅರ್ಥವನ್ನೇ ಸ್ಪಷ್ಟಗೊಳಿಸುತ್ತದೆ. ಇದರಿಂದ ಭಗವಂತನ ಅನಂತ ಮಹಿಮೆಯ ಎದುರು ಈ ವಿಶ್ವವು ಎಷ್ಟು ಅಲ್ಪವೋ ದ್ಯೋತಕವಾಗುತ್ತದೆ. ಮತ್ತೆ ಯಾವ ಮಹನೀಯನ ಒಂದು ಅಂಶದಿಂದ ಈ ಜಗತ್ತೆಲ್ಲವೂ ಪರಿವ್ಯಾಪ್ತವಾಗಿರುವುದೋ ಅಂತಹ ಪರಮಾತ್ಮನ ಅಖಂಡ ಶಕ್ತಿಗೆ ಮನುಜನು ನಮನಗಳನ್ನು ಸಮರ್ಪಿಸಬೇಕಾಗಿದೆ. ಅಂತಹ ಸರ್ವೇಶ್ವರನನ್ನು ವಿನಮ್ರ ಚಿತ್ತನಾಗಿ, ಅನನ್ಯ ಭಕ್ತಿಯಿಂದ ಸೇವಿಸಬೇಕಾಗಿದೆ. ಆತನ ಅನಂತ ಶಕ್ತಿ, ವಿಶ್ವವ್ಯಾಪಕತೆಯನ್ನು, ವಿರಾಟ್ರೂಪವನ್ನು ತಿಳಿದು (ಭಾವಿಸಿ) ಅಲ್ಪನಾದ ಜೀವಿಯು ತನ್ನ ಗರ್ವ, ಅಹಂಕಾರವನ್ನು ಹೊರದೂಡಬೇಕು. ಆತನ ಧನವಾಗಲಿ, ಅಧಿಕಾರವಾಗಲಿ, ಬಲವಾಗಲಿ, ಶಕ್ತಿಯಾಗಲಿ, ಸರ್ವೇಶ್ವರನ ಅನಂತ ತೇಜದ ಮುಂದೆ ಯಾವ ಲೆಕ್ಕ? ಇಷ್ಟೇ ಅಲ್ಲ, ಇನ್ನೂ ಗಾಢವಾಗಿ ವಿಚಾರಿಸಿದರೆ ಈ ದೃಶ್ಯ ಜಾತವೆಲ್ಲವೂ ಮಿಥ್ಯೆಯೆಂದು ಕಲ್ಪಿತವೆಂದು ತಿಳಿಯುತ್ತದೆ. ಪರಮಾತ್ಮನು ಮಾತ್ರ ಸತ್ಯವಸ್ತು. ಅಸತ್ಯ ವಸ್ತು ಎಷ್ಟು ದೊಡ್ಡದಾದರೂ, ವಿಶೇಷವಾದುದಾದರೂ ಅದಕ್ಕೆ ಸ್ವಲ್ಪವೂ ಬೆಲೆಯಿಲ್ಲ. ಸ್ವಪ್ನ ಪ್ರಪಂಚವು ಎಷ್ಟು ದೊಡ್ಡದಾದರೂ ಜಾಗೃತಿಯ ಮುಂದೆ ಕೆಲಸಕ್ಕೆ ಬಾರದಲ್ಲವೇ? ಆದ್ದರಿಂದ ಈ ರಹಸ್ಯಗಳನ್ನೆಲ್ಲಾ ತಿಳಿದುಕೊಂಡು ಜೀವಿಯು ತನ್ನ ಅಹಂಭಾವವನ್ನು, ದರ್ಪವನ್ನು ಬಿಟ್ಟು ಪರಮಾತ್ಮನನ್ನು ಶರಣು ಹೊಂದಿ ಕೃತಾರ್ಥನಾಗಬೇಕು. ಈ ವಿಭೂತಿಯೋಗದಿಂದ ಕಲಿಯಬೇಕಾದ ಪಾಠವಿದೇ.

ಪ್ರ : ಈ ಜಗತ್ತೆಲ್ಲವೂ ಯಾವುದರಿಂದ ವ್ಯಾಪ್ತವಾಗಿದೆ?

ಉ : ಪರಮಾತ್ಮನ ಒಂದು ಅಂಶದಿಂದ ವ್ಯಾಪ್ತವಾಗಿದೆ. (ಭಗವತ್ಸ್ವರೂಪದಲ್ಲಿ ಈ ವಿಶ್ವವೆಲ್ಲವೂ ಪರಿಗಣಿಸಲ್ಪಡದಷ್ಟು ಅಲ್ಪವೆಂದು ಭಾವ).

**ಓಮ್**

ಇತಿ ಶ್ರೀಮದ್ಭಗವದ್ಗೀತಾಸೂಪನಿಷತ್ಸು ಬ್ರಹ್ಮವಿದ್ಯಾಯಂ ಯೋಗಶಾಸ್ತ್ರೇ ಶ್ರೀ ಕೃಷ್ಣಾರ್ಜುನ ಸಂವಾದೇ ವಿಭೂತಿಯೋಗೋ ನಾಮ

**ದಶಮೋಽಧ್ಯಾಯಃ**

ಇದು ಉಪನಿಷತ್ಪ್ರತಿಪಾದಕವೂ, ಬ್ರಹ್ಮವಿದ್ಯೆಯೂ, ಯೋಗಶಾಸ್ತ್ರವೂ, ಶ್ರೀಕೃಷ್ಣಾರ್ಜುನರ ಸಂವಾದವಾದ

ಶ್ರೀ ಭಗವದ್ಗೀತೆಯಲ್ಲಿ ವಿಭೂತಿಯೋಗವೆನ್ನುವ ಹತ್ತನೆಯ ಅಧ್ಯಾಯ

**ಓಮ್ ತತ್ ಸತ್**

# ವಿಶ್ವರೂಪಸಂದರ್ಶನಯೋಗ

# ಶ್ರೀ ಭಗವದ್ಗೀತೆ

### ಅಥ ಏಕಾದಶೋऽಧ್ಯಾಯಃ

### ಹನ್ನೊಂದನೆಯ ಅಧ್ಯಾಯ

### ವಿಶ್ವರೂಪಸಂದರ್ಶನಯೋಗಃ - ವಿಶ್ವರೂಪಸಂದರ್ಶನಯೋಗ

**ಈ ಅಧ್ಯಾಯದ ಹೆಸರು**

**'ವಿಶ್ವರೂಪ ಸಂದರ್ಶನ ಯೋಗ'**- ಅರ್ಜುನನ ಪ್ರಾರ್ಥನೆಯನ್ನು ಮನ್ನಿಸಿ ಭಗವಂತನು ತನ್ನ ವಿಶ್ವರೂಪವನ್ನು ಆತನಿಗೆ ತೋರಿಸಿದನು. ಈ ಅಧ್ಯಾಯದಲ್ಲಿ ಹೆಚ್ಚಿನ ಭಾಗ ಆ ವಿಶ್ವರೂಪದ ವರ್ಣನೆ ಹಾಗು ಅಂತಹ ವಿಶ್ವರೂಪಿಯಾದ ಭಗವಂತನಿಗೆ ಅರ್ಜುನನು ಮಾಡಿದ ಸ್ತೋತ್ರವು ಇರುವುದರಿಂದಲೂ, ಸಾಕ್ಷಾತ್ ಭಗವಂತನ ವಿಶ್ವರೂಪ ಸಂದರ್ಶನವು ಅರ್ಜುನನಿಗೆ ಲಭಿಸಿದ ಅಧ್ಯಾಯವಾದುದರಿಂದಲೂ, ಇದಕ್ಕೆ 'ವಿಶ್ವರೂಪಸಂದರ್ಶನ ಯೋಗ' ಎನ್ನುವ ಹೆಸರು ಬಂದಿದೆ.

**ಈ ಅಧ್ಯಾಯದಲ್ಲಿಯ ಪ್ರಧಾನ ವಿಷಯಗಳು**

೧) ವಿಶ್ವರೂಪವನ್ನು ತೋರಿಸಬೇಕೆಂದು ಅರ್ಜುನನು ಭಗವಂತನನ್ನು ಪ್ರಾರ್ಥಿಸುವುದು- (೧ನೆಯ ಶ್ಲೋಕದಿಂದ ೪ನೆಯ ಶ್ಲೋಕದವರೆಗೆ)

೨) ಭಗವಂತನು ತನ್ನ ವಿಶ್ವರೂಪವನ್ನು ವರ್ಣಿಸುವುದು-
(೫ನೆಯ ಶ್ಲೋಕದಿಂದ ೮ನೆಯ ಶ್ಲೋಕದವರೆಗೆ)

೩) ಸಂಜಯನು ಧೃತರಾಷ್ಟ್ರನಿಗೆ ವಿಶ್ವರೂಪವನ್ನು ವರ್ಣಿಸಿ ಹೇಳುವುದು-
(೯ನೆಯ ಶ್ಲೋಕದಿಂದ ೧೪ನೆಯ ಶ್ಲೋಕದವರೆಗೆ)

೪) ಅರ್ಜುನನು ಭಗವಂತನ ವಿಶ್ವರೂಪವನ್ನು ದರ್ಶಿಸುವುದು, ಸ್ತುತಿಸುವುದು-
(೧೫ನೆಯ ಶ್ಲೋಕದಿಂದ ೩೧ನೆಯ ಶ್ಲೋಕದವರೆಗೆ)

೫) ಭಗವಂತನು ತನ್ನ ಶಕ್ತಿಯನ್ನು ವರ್ಣಿಸುತ್ತ ಯುದ್ಧಮಾಡಲು ಅರ್ಜುನನನ್ನು ಪ್ರೋತ್ಸಾಹಿಸುವುದು
(೩೨ನೆಯ ಶ್ಲೋಕದಿಂದ ೩೪ನೆಯ ಶ್ಲೋಕದವರೆಗೆ)

೬) ವಿಶ್ವರೂಪವನ್ನು ನೋಡಿ ಭೀತಿಗೊಂಡ ಅರ್ಜುನನು ಭಗವಂತನನ್ನು ಸ್ತುತಿಸುವುದು, ಚತುರ್ಭುಜ ರೂಪವನ್ನು ಪುನಃ ಗ್ರಹಿಸುವಂತೆ ಪ್ರಾರ್ಥಿಸುವುದು-
(೩೫ನೆಯ ಶ್ಲೋಕದಿಂದ ೪೬ನೆಯ ಶ್ಲೋಕದವರೆಗೆ)

೭) ಭಗವಂತನು ವಿಶ್ವರೂಪಸಂದರ್ಶನದ ಮಹಿಮೆಯನ್ನು ಹೇಳುವುದು, ಮತ್ತೆ ಸೌಮ್ಯರೂಪವನ್ನು ಗ್ರಹಿಸುವುದು.
(೪೭ನೆಯ ಶ್ಲೋಕದಿಂದ ೫೦ನೆಯ ಶ್ಲೋಕದವರೆಗೆ)

೮) ಅನನ್ಯ ಭಕ್ತಿಯಿಂದ ವಿಶ್ವರೂಪ ಸಂದರ್ಶನ ಸಾಧ್ಯವೆಂದು ಹೇಳುವುದು, ಫಲಸಹಿತವಾಗಿ ಅನನ್ಯ ಭಕ್ತಿಯನ್ನು ಕುರಿತು ಹೇಳುವುದು-
(೫೧ನೆಯ ಶ್ಲೋಕದಿಂದ ೫೫ನೆಯ ಶ್ಲೋಕದವರೆಗೆ)

**ಪೂರ್ವಾಧ್ಯಾಯದೊಂದಿಗೆ ಈ ಅಧ್ಯಾಯದ ಸಂಬಂಧ**

ಹಿಂದಿನ ಅಧ್ಯಾಯ (ವಿಭೂತಿಯೋಗ)ದ ಕೊನೆಯಲ್ಲಿ ತಾನು ಈ ಜಗತ್ತೆಲ್ಲವನ್ನು ತನ್ನ ಒಂದು ಅಂಶ (Fraction) ದಿಂದ ವ್ಯಾಪಿಸಿದ್ದೇನೆಂದು ಭಗವಂತನು ಹೇಳಲು, ಕೂಡಲೇ ಅರ್ಜುನನಿಗೆ ಭಗವಂತನ ಅನಂತ ವಿಶ್ವರೂಪವನ್ನು ನೋಡಬೇಕೆಂಬ ತೀವ್ರವಾದ ಉತ್ಸುಕತೆ ಉಂಟಾಗಿ ಅದನ್ನು ತೋರಿಸಬೇಕೆಂದು ಭಗವಂತನನ್ನು ಪ್ರಾರ್ಥಿಸಿದನು. ಅರ್ಜುನನ ಆ ಪ್ರಾರ್ಥನೆಯಿಂದ ಈ ೧೧ನೆಯ ಅಧ್ಯಾಯವು ಪ್ರಾರಂಭವಾಗುತ್ತದೆ. ಮತ್ತೆ ಹಿಂದಿನ ಅಧ್ಯಾಯದಲ್ಲಿ ಭಗವಂತನು ತನ್ನ ವಿಭೂತಿಗಳನ್ನು ಕುರಿತು ಸ್ವಲ್ಪಮಟ್ಟಿಗೆ ತಿಳಿಸಿದ್ದಾನಾದ್ದರಿಂದ ಅವುಗಳೆಲ್ಲವನ್ನು ಪ್ರತ್ಯಕ್ಷವಾಗಿ ನೋಡಬೇಕೆಂಬ ಹಂಬಲ ಅರ್ಜುನನಿಗೆ ಉಂಟಾಯಿತು. ಸರ್ವೇಶ್ವರನ ಅನಂತ ಮಹಾ ವಿಭೂತಿಯನ್ನು ಒಂದು ಸಾರಿ ಕಣ್ಣಾರೆ ನೋಡಬೇಕೆಂಬ ತೀವ್ರ ಇಚ್ಛೆಯಿಂದ ವಿಶ್ವರೂಪ ಸಂದರ್ಶನಕ್ಕಾಗಿ ಭಗವಂತನನ್ನು ಈ ವಿಧವಾಗಿ (ನಾಲ್ಕು ಶ್ಲೋಕಗಳ ಮೂಲಕ) ಅರ್ಜುನನು ಪ್ರಾರ್ಥಿಸಿದನು-

**ಅರ್ಜುನ ಉವಾಚ:**

**೧) ಮದನುಗ್ರಹಾಯ ಪರಮಂ ಗುಹ್ಯಮಧ್ಯಾತ್ಮ ಸಂಜ್ಞಿತಮ್**
**ಯತ್ತ್ವಯೋಕ್ತಂ ವಚಸ್ತೇನ ಮೋಹೋಽಯಂ ವಿಗತೋ ಮಮ**

ಅರ್ಜುನ ಉವಾಚ- ಅರ್ಜುನನು ಹೇಳಿದನು.

**ಅರ್ಥ:** ಮದನುಗ್ರಹಾಯ=ನನ್ನನ್ನು ಅನುಗ್ರಹಿಸಲು; ಪರಮಂ=ಸರ್ವೋತ್ತಮವಾದುದು; ಗುಹ್ಯಂ=ರಹಸ್ಯವಾದುದು; ಅಧ್ಯಾತ್ಮಸಂಜ್ಞಿತಂ=ಅಧ್ಯಾತ್ಮವೆನ್ನುವ

ಹೆಸರುಳ್ಳದ್ದು (ಆಗಿರುವ); ಯತ್ ವಚಃ=ಯಾವ ವಾಕ್ಯವು; ತ್ವಯಾ=ನಿನ್ನಿಂದ; ಉಕ್ತಂ=ಹೇಳಲ್ಪಟ್ಟಿದೆಯೋ; ತೇನ=ಅದರಿಂದ; ಮಮ=ನನ್ನ; ಅಯಂ ಮೋಹಃ=ಈ ಅಜ್ಞಾನವು; ವಿಗತಃ=ಪೂರ್ತಿಯಾಗಿ ತೊಲಗಿ ಹೋಗಿದೆ.

**ತಾ||** ಅರ್ಜುನನು ಹೇಳಿದನು- (ಶ್ರೀ ಕೃಷ್ಣಮೂರ್ತಿ!) ನನ್ನನ್ನು ಅನುಗ್ರಹಿಸಲು ಸರ್ವೋತ್ತಮವಾದ, ರಹಸ್ಯವಾದ, ಆಧ್ಯಾತ್ಮವೆನ್ನುವ ಹೆಸರುಳ್ಳ ಯಾವ ವಾಕ್ಯವನ್ನು (ಬೋಧೆಯನ್ನು) ನೀನು ಹೇಳಿದೆಯೋ, ಅದರಿಂದ ನನ್ನ ಅಜ್ಞಾನವು ಪೂರ್ತಿಯಾಗಿ ತೊಲಗಿ ಹೋಗಿದೆ.

**ವ್ಯಾಖ್ಯೆ:** ಶ್ರೀಕೃಷ್ಣ ಭಗವಂತನು ಇಲ್ಲಿಯವರೆಗೆ ಅರ್ಜುನನಿಗೆ ಮಾಡಿದ ಆಧ್ಯಾತ್ಮಿಕ ಹಿತಬೋಧೆಯಿಂದ ಅರ್ಜುನನ ಮೋಹ (ಅಜ್ಞಾನ) ತೊಲಗಿ ಹೋಗಿದೆ. ಯಾವ ಅವಿವೇಕದಿಂದ ಮೊಟ್ಟಮೊದಲು ಈ ದೃಶ್ಯ ಜಗತ್ತು ನಿತ್ಯವೆಂದು, 'ಈ ಬಂಧುಗಳು ನನ್ನವರು' 'ಈ ದೇಹವು ನಾನೇ' ಎಂದು ಅರ್ಜುನನು ಭಾವಿಸಿ ತತ್ಫಲಿತವಾಗಿ ದುಃಖವನ್ನು ಅನುಭವಿಸುತ್ತಿದ್ದನೋ; ಆ ಅವಿವೇಕ ಈಗ ಭಗವಂತನ ಅಧ್ಯಾತ್ಮಪ್ರಸಂಗದಿಂದ ತೊಲಗಿ ಹೋಗಿದೆ. ಗೀತಾಬೋಧೆ ಇನ್ನೂ ಪೂರ್ತಿಯಾಗಲಿಲ್ಲ. ಹತ್ತು ಅಧ್ಯಾಯಗಳು ಮಾತ್ರ ಮುಗಿದಿವೆ. ಇನ್ನೂ ಎಂಟು ಅಧ್ಯಾಯಗಳು ಉಳಿದಿವೆ. ಆದರೂ ಇಷ್ಟು ಮಾತ್ರ ಬೋಧೆಯಿಂದಲೇ ಅರ್ಜುನನಿಗೆ ಚಿತ್ತೋಪರತಿ, ಜ್ಞಾನಪ್ರಾಪ್ತಿ, ತತ್ಫಲಿತವಾಗಿ ಮೋಹೋಪಶಮನ ಸಂಭವಿಸಿದೆ. ಈ ವಿಷಯವನ್ನು ಅರ್ಜುನನು **'ಮೋಹೋಽಯಂ ವಿಗತೋಮಮ'** (ನನ್ನ ಅಜ್ಞಾನ ನಶಿಸಿದೆ)- ಎನ್ನುವ ವಾಕ್ಯದ ಮೂಲಕ ಸ್ಪಷ್ಟವಾಗಿ ಹೇಳಿರುವನು.

ಅರ್ಜುನನು ಭವರೋಗ ಪೀಡಿತನು. ಶ್ರೀಕೃಷ್ಣಪರಮಾತ್ಮನೆನ್ನುವ ವೈದ್ಯನು ಗೀತಾಮೃತವೆಂಬ ಔಷಧವನ್ನು ಕೊಟ್ಟನು. ಅದನ್ನು ಸ್ವಲ್ಪ ಮಾತ್ರ ಅರ್ಜುನನು ಸೇವಿಸಿದನು, ಪೂರ್ತಿಯಲ್ಲ. ಆದರೂ ಆ ಸ್ವಲ್ಪ ಔಷಧಿಯಿಂದ ಅರ್ಜುನನ ರೋಗ (ಮೋಹವೆನ್ನುವ ವ್ಯಾಧಿ) ಪೂರ್ತಿಯಾಗಿ ಗುಣವಾಗಿದೆ. ಇದರಿಂದ ಆ ವೈದ್ಯನು ಎಷ್ಟು ನಿಪುಣನೋ ಆತನು ಕೊಟ್ಟ ಔಷಧಿ ಎಷ್ಟು ಉತ್ತಮವಾದುದೋ ಸ್ಪಷ್ಟವಾಗುತ್ತದೆ. ಔಷಧಿಯ ಶ್ರೇಷ್ಠತೆ ವ್ಯಾಧಿಯ ನಿವಾರಣೆಯ ಮೇಲೆ ಆಧಾರಪಟ್ಟಿರುತ್ತದೆ. ವ್ಯಾಧಿ ತೊಲಗದಿದ್ದರೆ ಆ ಔಷಧಿ ಶ್ರೇಷ್ಠವಾದುದಲ್ಲವೆಂದರ್ಥ. ಇಲ್ಲಿ ಗೀತಾಮೃತ ಭೇಷಜವನ್ನು ಸುಮಾರು ಅರ್ಧ ಸೇವಿಸುವುದರಲ್ಲಿಯೇ ಅರ್ಜುನನಿಗೆ ಅದರ ಫಲಿತವು ಕಂಡುಬಂದಿದೆ. ಆತನ ಅಜ್ಞಾನ ರೋಗ (ಭವರೋಗ) ಮಾಯವಾಗಿ ಹೋಗಿದೆ. ಶ್ರೀಕೃಷ್ಣಪರಮಾತ್ಮನು ಸಾಮಾನ್ಯನಲ್ಲ. ಯೋಗ್ವಿರಾಟನಾದ ಯೋಗೀಶ್ವರನು. ಆತನು ಬೋಧಿಸಿದ ಅಧ್ಯಾತ್ಮ ಬೋಧೆ ಸಾಮಾನ್ಯವಾದುದಲ್ಲ ೧) ಅದು ಮಹಾ ಶ್ರೇಷ್ಠವಾದುದು (ಪರಮಂ) ೨) ಅತಿರಹಸ್ಯವಾದುದು (ಗುಹ್ಯಂ)- ಎಂದು ಅರ್ಜುನನು ಇಲ್ಲಿ ಅದನ್ನು ಕುರಿತು ಹೇಳಿದನು. ಏಕೆಂದರೆ ಅದರ ಪ್ರಭಾವದಿಂದ ಆತನ ಹೃದಯಲ್ಲಿ ಪ್ರತ್ಯಕ್ಷ ಫಲ ಕಾಣಿಸಿದೆ. ಅಂಧಕಾರವು ತೊಲಗಿದೆ. ಪ್ರಕಾಶವು ಆವಿರ್ಭವಿಸಿದೆ.

ಪ್ರಪಂಚದಲ್ಲಿ ಎಷ್ಟೋ ವಿದ್ಯೆಗಳಿವೆ. ಬೋಧೆಗಳು ಇವೆ. ಆದರೆ ಅವೆಲ್ಲವೂ ಹೃದಯಾಂಧಕಾರದ ವಿನಾಶದಲ್ಲಿ ಸಮರ್ಥವಾದವುಗಳಲ್ಲ. ಭವರೋಗ ನಿವಾರಣೆಯಲ್ಲಿ ಶಕ್ತಿವಂತವಾದವುಗಳಲ್ಲ. ಆದರೆ ಈ ಅಧ್ಯಾತ್ಮ ಬೋಧೆ ಅಂತಹುದಲ್ಲ. ಇದು ಜನನ ಮರಣ ದುಃಖ ಪ್ರವಾಹದಿಂದ ಜೀವಿಯನ್ನು ಉದ್ಧರಿಸಿ ದಡ ಸೇರಿಸುವುದು. ಆದ್ದರಿಂದಲೇ ಅರ್ಜುನನು ಇದನ್ನು 'ಪರಮಂ' (ಅತಿ ಶ್ರೇಷ್ಠವಾದದ್ದು) ಎಂದು, 'ಗುಹ್ಯಂ' (ಅತಿ ರಹಸ್ಯ)ವಾದುದು ಎಂದು ಹೇಳಿದನು. ಆದರೆ ಇಂತಹ ಮಹತ್ತರವಾದ ವಿದ್ಯೆಯನ್ನು ಗುರುಗಳು ಎಲ್ಲರಿಗೂ ಹೇಳುವುದಿಲ್ಲ. ಯಾರು ಅಧಿಕಾರಿಗಳೋ, ಯಾರ ಮೇಲೆ ಅವರಿಗೆ ಅನುಗ್ರಹವುಂಟಾಗುವುದೋ ('ಮದನುಗ್ರಹಾಯ') ಯಾರು ನಿರ್ಮಲ ಭಕ್ತಿಯಿಂದ ಕೂಡಿರುವರೋ ಅಂತಹವರಿಗೆ ಮಾತ್ರ ಅವರು ಬೋಧಿಸುವರು. ಇಲ್ಲಿ ಅರ್ಜುನನು ಅಂತಹ ಯೋಗ್ಯತೆಯನ್ನು ಹೊಂದಿರುವನು. ಆದ್ದರಿಂದ ಆತನ ಮೇಲೆ ಭಗವಂತನಿಗೆ ಅನುಗ್ರಹವುಂಟಾಗಿ ಆತನಿಗೆ ಈ ಪರಮಪಾವನವಾದ ಅಧ್ಯಾತ್ಮ ವಿದ್ಯೆಯನ್ನು ಉಪದೇಶಿಸಿದನು. 'ಮದನುಗ್ರಹಾಯ' ಎನ್ನುವ ಪದದಿಂದ ಅಧ್ಯಾತ್ಮ ವಿದ್ಯಾಪರಿಗ್ರಹಣದಲ್ಲಿ ಗುರುವಿನ ಅನುಗ್ರಹ ಶಿಷ್ಯನಿಗೆ ಅತ್ಯಾವಶ್ಯಕವೆಂದು ತಿಳಿಯುತ್ತದೆ.

ಭುಜಿಸುವವನಿಗೆ ತೇಗು ಬಂದರೆ ಹೊಟ್ಟೆ ತುಂಬಿದೆ ಎಂದು ತಿಳಿಯಬಹುದು. ಅಂದರೆ ಆತನಿಗೆ ತೃಪ್ತಿಯಾಗಿದೆ ಎಂದರ್ಥ. ಅದು ಅದಕ್ಕೆ ಗುರುತು. ಅರ್ಜುನನು ಗೀತಾಮೃತವನ್ನು ಮನಸಾರೆ ಪಾನ ಮಾಡುತ್ತಿರುವನು. ಹತ್ತು ಅಧ್ಯಾಯಗಳನ್ನು ಕೇಳಿದ ನಂತರ ಆತನಿಗೆ ತೇಗು ಬಂದಿದೆ. **"ಮೋಹೋಽಯಂ ವಿಗತೋಮಮ"** (ನನ್ನ ಅಜ್ಞಾನವು ಶಮನ ಹೊಂದಿದೆ) ಎನ್ನುವ ವಾಕ್ಯವೇ ಆ ತೇಗು. ಮತ್ತೆ ೧೮ನೆಯ ಅಧ್ಯಾಯದಲ್ಲಿ **'ನಷ್ಟೋ ಮೋಹಃಸ್ಮೃತಿರ್ಲಬ್ಧಾ'** ಎನ್ನುವ ವಾಕ್ಯವನ್ನು ಹೇಳುವುದರ ಮೂಲಕ ತನ್ನ ಪರಿಪೂರ್ಣ ಸಂತೃಪ್ತಿಯನ್ನು ಇನ್ನೊಮ್ಮೆ ಪ್ರದರ್ಶಿಸುವನು.

ಪ್ರ : ಅಧ್ಯಾತ್ಮ ವಿದ್ಯೆ ಎಂತಹದು ?

ಉ: ೧) ಸರ್ವೋತ್ಕೃಷ್ಟವಾದುದು ೨) ಅತಿರಹಸ್ಯವಾದುದು.

ಪ್ರ : ಅದರ ಪ್ರಭಾವವೆಂತಹದು ?

ಉ: ಅದು ಜೀವಿಗಳ ಅಜ್ಞಾನವನ್ನು ಸಂಸಾರ ವ್ಯಾಮೋಹವನ್ನು ನಶಿಸುವುದು

ಪ್ರ : ಶ್ರೀ ಕೃಷ್ಣಮೂರ್ತಿ ಅದನ್ನು ಅರ್ಜುನನಿಗೆ ಏಕೆ ಬೋಧಿಸಿದನು ?

ಉ : ಆತನು ಸರ್ವ ವಿಧಗಳಿಂದ ಅದನ್ನು ಕೇಳಲು (ಭಕ್ತ್ಯಾದಿಗಳಿಂದ) ಬೇಕಾದ ಯೋಗ್ಯತೆಯನ್ನು ಪಡೆದಿರುವನು. ಆದ್ದರಿಂದ ಆತನ ಮೇಲೆ ಅನುಗ್ರಹವುಂಟಾಗಿ ಅದನ್ನು ಬೋಧಿಸಿದನು.

ಪ್ರ : ಆ ಬೋಧೆ ಅರ್ಜುನನಿಗೆ ಫಲವನ್ನೀಯಿತು ಎನ್ನಲು ಗುರುತೇನು ?

ಉ : ಅದನ್ನು ಕೇಳಿದ ತಕ್ಷಣ 'ನನ್ನ ಅಜ್ಞಾನವು ಶಮನಹೊಂದಿದೆ' ಎಂದು ಆತನು ಹೇಳಿದನು.

**೨. ಭವಾಪ್ಯಯೌ ಹಿ ಭೂತಾನಾಂ ಶ್ರುತೌ ವಿಸ್ತರಶೋ ಮಯಾ**
**ತ್ವತ್ತಃ ಕಮಲಪತ್ರಾಕ್ಷ ಮಹಾತ್ಮ್ಯಮಪಿ ಚಾವ್ಯಯಮ್**

**ಅರ್ಥ:** ಹಿ=ಏಕೆಂದರೆ; ಕಮಲಪತ್ರಾಕ್ಷ =ಕಮಲನೇತ್ರನಾದ ಓ ಕೃಷ್ಣಾ! ತ್ವತ್ತಃ=ನಿನ್ನಿಂದ; ಭೂತಾನಾಂ=ಪ್ರಾಣಿಗಳ; ಭಾವಪ್ಯಯೌ=ಉತ್ಪತ್ತಿನಾಶಗಳು; ವಿಸ್ತರಶಃ=ಸವಿಸ್ತಾರವಾಗಿ; ಮಯಾ=ನನ್ನಿಂದ; ಶ್ರುತೌ=ಕೇಳಲ್ಪಟ್ಟಿವೆ; ಅವ್ಯಯಂ=ನಾಶವಿಲ್ಲದ; (ತೇ=ನಿನ್ನ); ಮಹಾತ್ಮ್ಯಂ ಅಪಿ ಚ=ಮಹಿಮೆಯನ್ನು; ಶ್ರುತಂ=(ನನ್ನಿಂದ) ಕೇಳಲ್ಪಟ್ಟಿದೆ.

**ತಾ||** ಏಕೆಂದರೆ ಕಮಲ ನೇತ್ರನಾದ ಓ ಕೃಷ್ಣಾ! ನಿನ್ನಿಂದ ಪ್ರಾಣಿಗಳ ಉತ್ಪತ್ತಿ ವಿನಾಶಗಳನ್ನು ಕುರಿತು, ನಿನ್ನ ಮಹಾತ್ಮ್ಯೆಯನ್ನು (ಮಹಿಮೆ) ಕುರಿತು ಸವಿಸ್ತಾರವಾಗಿ ಕೇಳಿದೆನು.

೩. ಏವಮೇತದ್ಯಥಾತ್ಥ ತ್ವಮಾತ್ಮಾನಂ ಪರಮೇಶ್ವರ
ದ್ರಷ್ಟುಮಿಚ್ಛಾಮಿ ತೇ ರೂಪಮೈಶ್ವರಂ ಪುರುಷೋತ್ತಮ

**ಅರ್ಥ:** ಪರಮೇಶ್ವರ=ಓ ಪರಮೇಶ್ವರಾ!, ತ್ವಂ=ನೀನು; ಆತ್ಮಾನಾಂ=ನಿನ್ನನ್ನು ಕುರಿತು: ಯಥಾ=ಯಾವ ಪ್ರಕಾರವಾಗಿ; ಆತ್ಥ=ಹೇಳಿದೆಯೋ; ಏವಂ ಏತತ್=ಅದು ಹಾಗೆಯೇ(ಎಂದು ನಾನು ನಂಬುತ್ತೇನೆ); ಪುರುಷೋತ್ತಮ= ಪುರುಷೋತ್ತಮನಾದ ಓ ಕೃಷ್ಣಾ; ತೇ=ನಿನ್ನ; ಐಶ್ವರಂ=ಈಶ್ವರ ಸಂಬಂಧವಾದ (ಜ್ಞಾನೈಶ್ವರ್ಯ ಶಕ್ತಿ, ಬಲವೀರ್ಯಾದಿಸಂಪನ್ನ); ರೂಪಂ= (ವಿಶ್ವ) ರೂಪವನ್ನು; ದ್ರಷ್ಟುಂ=ನೋಡಲು; ಇಚ್ಛಾಮಿ=ಕೋರುತ್ತಿದ್ದೇನೆ.

**ತಾ||** ಓ ಪರಮೇಶ್ವರಾ! ನಿನ್ನನ್ನು ಕುರಿತು ನೀನು ಹೇಳಿದುದೆಲ್ಲಾ ಸರಿಯೇ ಎಂದು ನಾನು ನಂಬುತ್ತೇನೆ. ಓ ಪುರುಷೋತ್ತಮ! ನಿನ್ನ ಈಶ್ವರ ಸಂಬಂಧವಾದ ವಿಶ್ವರೂಪವನ್ನು ನಾನು ಈಗ ನೋಡಲಿಚ್ಛಿಸುತ್ತೇನೆ.

೪ ಮನ್ಯಸೇ ಯದಿ ತಚ್ಛಕ್ಯಂ ಮಾಯಾ ದ್ರಷ್ಟುಮಿತಿ ಪ್ರಭೋ
ಯೋಗೇಶ್ವರ ತತೋ ಮೇ ತ್ವಂ ದರ್ಶಯಾತ್ಮಾನಮವ್ಯಯಮ್

**ಅರ್ಥ:** ಪ್ರಭೋ=ಪ್ರಭುವೇ! ತತ್=ಆ ನಿನ್ನ ಸ್ವರೂಪ, ಮಯಾ=ನನ್ನಿಂದ; ದ್ರಷ್ಟುಂ=ನೋಡಲು; ಶಕ್ಯಂ ಇತಿ=ಸಾಧ್ಯವೆಂದು; ಮನ್ಯಸೇ ಯದಿ=ತಿಳಿದಿದ್ದೇ ಆದರೆ; ತತಃ=ಆ ಮೇಲೆ; ಯೋಗೇಶ್ವರ=ಓ ಯೋಗೇಶ್ವರ! ತ್ವಂ=ನೀನು; ಅವ್ಯಯಂ=ನಾಶರಹಿತವಾದ; ಆತ್ಮಾನಾಂ=ನಿನ್ನ ಸ್ವರೂಪವನ್ನು; ಮೇ=ನನಗೆ; ದರ್ಶಯ=ತೋರಿಸು.

**ತಾ||** ಪ್ರಭು! ಆ ನಿನ್ನ ಸ್ವರೂಪವನ್ನು ನಾನು ನೋಡಲು ಸಾಧ್ಯವೆಂದು (ಯೋಗ್ಯನೆಂದು) ನೀನು ತಿಳಿದಿದ್ದೇ ಆದರೆ, ಓ ಯೋಗೇಶ್ವರ! ನಾಶರಹಿತವಾದ ಆ (ವಿಶ್ವ)ರೂಪವನ್ನು ಇನ್ನು ನನಗೆ ತೋರಿಸುವುದು.

**ವ್ಯಾಖ್ಯೆ:** ವಿನಯ ವಿಧೇಯತೆ ಭಕ್ತಿ ಪ್ರಪತ್ತುಗಳನ್ನು ಹೊಂದಿರುವ ಶಿಷ್ಯನ ಲಕ್ಷಣ ಈ ಶ್ಲೋಕದ ಮೂಲಕ ಹೊರಬೀಳುತ್ತಿದೆ. ಅರ್ಜುನನಿಗೆ ಭಗವಂತನ ವಿಶ್ವರೂಪ ನೋಡುವ ಆಕಾಂಕ್ಷೆ ಹುಟ್ಟಿದೆ. ಆದರೆ 'ಅದನ್ನು ನನಗೆ ತೋರಿಸು' ಎಂದು ನೇರವಾಗಿ ಕೇಳದೆ, ಅಂತಹ ರೂಪವನ್ನು ನೋಡಲು ನಾನು ಅರ್ಹನು ಎಂದು ನೀನು ತಿಳಿದರೆ ತೋರಿಸು ಎಂದು ವಿನಯವಾಗಿ ಕೇಳಿದನು. ಗುರುವಿನ ಬಳಿ ಶಿಷ್ಯರು ಇಂತಹ ವಿನಯವನ್ನು ಹೊಂದಿರಬೇಕು.

**ಅ||** ತನ್ನ ಪ್ರಿಯಭಕ್ತನಾದ ಅರ್ಜುನನ ಈ ಪ್ರಾರ್ಥನೆಯನ್ನು ಮನ್ನಿಸಿ ಶ್ರೀ ಕೃಷ್ಣಮೂರ್ತಿ ಮೂರು ಶ್ಲೋಕಗಳ ಮೂಲಕ ತನ್ನ ವಿಶ್ವರೂಪವನ್ನು ವರ್ಣಿಸಿ ಹೇಳುತ್ತ, ಅದನ್ನು ಅವಲೋಕಿಸೆಂದು ಅರ್ಜುನನಿಗೆ ಹೇಳುತ್ತಿರುವನು-

**ಶ್ರೀ ಭಗವಾನುವಾಚ-**

೫. ಪಶ್ಯ ಮೇ ಪಾರ್ಥ ರೂಪಾಣಿ ಶತಶೋಽಥ ಸಹಸ್ರಶಃ
ನಾನಾವಿಧಾನಿ ದಿವ್ಯಾನಿ ನಾನಾವರ್ಣಾಕೃತೀನಿ ಚ

ಶ್ರೀ ಭಗವಾನುವಾಚ-ಭಗವಂತನು ಹೇಳಿದನು-

**ಅರ್ಥ:** ಪಾರ್ಥ=ಓ ಅರ್ಜುನಾ! ನಾನಾ ವಿಧಾನಿ=ಅನೇಕ ವಿಧ ಗಳಾದುವೂ; ದಿವ್ಯಾನಿ=ಅಲೌಕಿಕವಾದುವೂ; ನಾನಾವರ್ಣಾಕೃತೀನಿ ಚ=ಅನೇಕ ಬಣ್ಣಗಳು ಆಕಾರಗಳೂ ಇರುವುವು. ಶತಶಃ ಅಥ ಸಹಸ್ರಶಃ=ನೂರಾರು ಮತ್ತು ಸಾವಿರಾದಿ ಗಳೂ (ಅಸಂಖ್ಯಾಕಗಳಾದುವು) ಆದ; ಮೇ=ನನ್ನ; ರೂಪಾಣಿ=ರೂಪಗಳನ್ನು; ಪಶ್ಯ=ನೋಡುವುದು.

**ತಾ||** ಶ್ರೀ ಭಗವಂತನು ಹೇಳುತ್ತಿರುವನು- ಓ ಅರ್ಜುನಾ! ಅನೇಕ ವಿಧಗಳಿಂದ ಕೂಡಿದ, ಅಲೌಕಿಕವಾದ, ವಿವಿಧ ವರ್ಣ ಹಾಗು ಆಕಾರಗಳಿಂದ ಅಸಂಖ್ಯಾತವಾಗಿ ವರ್ತಿಸುತ್ತಿರುವ ನನ್ನ ರೂಪಗಳನ್ನು ನೋಡು.

೬. ಪಶ್ಯಾದಿತ್ಯಾನ್ ವಸೂನ್ ರುದ್ರಾನಶ್ವಿನೌ ಮರುತಸ್ತಥಾ
ಬಹೂನ್ಯದೃಷ್ಟಪೂರ್ವಾಣಿ ಪಶ್ಯಾಶ್ಚರ್ಯಾಣಿ ಭಾರತ

**ಅರ್ಥ:** ಭಾರತ=ಓ ಅರ್ಜುನಾ! ಆದಿತ್ಯಾನ್=ಸೂರ್ಯರನ್ನು; ವಸೂನ್= ವಸುಗಳನ್ನು; ರುದ್ರಾನ್=ರುದ್ರರನ್ನು; ಅಶ್ವಿನೌ=ಅಶ್ವಿನೀ ದೇವತೆಗಳನ್ನು; ಮರುತಃ=ಮರುದ್ಗಣಗಳನ್ನು; ಪಶ್ಯ=ನೋಡು; ತಥಾ=ಆ ಪ್ರಕಾರವೇ; ಅದೃಷ್ಟಪೂರ್ವಾಣಿ=ಹಿಂದೆ ಯಾವಾಗಲೂ ನೋಡಿರದಂತಹ; ಬಹೂನಿ= ಅನೇಕ; ಆಶ್ಚರ್ಯಾಣಿ=ಆಶ್ಚರ್ಯಗಳನ್ನು; ಪಶ್ಯ=ನೋಡು.

**ತಾ||** ಓ ಅರ್ಜುನಾ! ಸೂರ್ಯರನ್ನು, ವಸುಗಳನ್ನು, ರುದ್ರರನ್ನು, ಅಶ್ವಿನೀ ದೇವತೆಗಳನ್ನು, ಮರುದ್ಗಣಗಳನ್ನು ನನ್ನಲ್ಲಿ ನೋಡುವುದು. ಹಾಗೆಯೇ ಇದುವರೆಗೆ ನೀನು ಎಂದೆಂದಿಗೂ ನೋಡದಿರುವಂತಹ ಆಶ್ಚರ್ಯಗಳನ್ನು ಕಾಣುವುದು.

**ವ್ಯಾಖ್ಯೆ:** ೧) ಸೂರ್ಯರು (ಹನ್ನೆರಡು ಮಂದಿ) ೨) ವಸುಗಳು (ಎಂಟು ಮಂದಿ) ೩) ರುದ್ರರು (ಹನ್ನೊಂದು ಮಂದಿ) ೪) ಅಶ್ವಿನೀ ದೇವತೆಗಳು (ಇಬ್ಬರು) ೫) ಮರುದ್ಗಣರು (ನಲವತ್ತೊಂಭತ್ತು ಮಂದಿ)

೭. ಇಹೈಕಸ್ಥಂ ಜಗತ್ಕೃತ್ಸ್ನಂ ಪಶ್ಯಾದ್ಯ ಸಚರಾಚರಮ್
ಮಮ ದೇಹೇ ಗುಡಾಕೇಶ ಯಚ್ಚಾನ್ಯದ್ದ್ರಷ್ಟುಮಿಚ್ಛಸಿ

**ಅರ್ಥ:** ಗುಡಾಕೇಶ=ಓ ಅರ್ಜುನಾ! ಸ ಚರಾಚರಂ=ಚರಚರಾತ್ಮಕವಾದ (ಸ್ಥಾವರ ಜಂಗಮಾತ್ಮಕವಾದ); ಕೃತ್ಸ್ನಂ=ಸಮಸ್ತವಾದ; ಜಗತ್=ಪ್ರಪಂಚವನ್ನು; ಅನ್ಯತ್‌ಯತ್=ಇನ್ನು ಬೇರೆ ಯಾವುದನ್ನೇ ಆಗಲಿ; ದ್ರಷ್ಟುಂ ಇಚ್ಛಸಿ= ನೋಡಲು ಅಪೇಕ್ಷಿಸುತ್ತಿದ್ದೇಯೋ; (ತತ್) ಚ=ಅದನ್ನು ಕೂಡ; ಮಮ=ನನ್ನ; ಇಹ=ಈ (ಇನ್ನು ನಿನಗೆ ತೋರಿಸಲ್ಪಡುವ); ದೇಹೇ=ಶರೀರದಲ್ಲಿ; ಏಕಸ್ಥಂ= ಅವಯವವಾಗಿ (ಒಂದು ಸ್ಥಳದಲ್ಲಿ ಸ್ಥಿತವಾಗಿರುವುದಾಗಿ); ಅದ್ಯ=ಈಗ; ಪಶ್ಯ=ನೋಡು.

**ತಾ||** ಓ ಅರ್ಜುನಾ! ಈ ಸಮಸ್ತ ಚರಾಚರ ಪ್ರಪಂಚವನ್ನಲ್ಲದೆ ಇನ್ನೂ ಯಾವ ಯಾವುದನ್ನು ನೋಡಬಯಸುತ್ತೀಯೋ ಅವೆಲ್ಲವನ್ನೂ ಈ ನನ್ನ ಶರೀರದಲ್ಲಿ (ಅವಯವಗಳ ಹಾಗೆ) ಒಂದೇ ಸ್ಥಳದಲ್ಲಿ ಸ್ಥಿತವಾಗಿರುವುದನ್ನು ಈಗ ನೋಡು.

**ವ್ಯಾಖ್ಯೆ: 'ವಿಷ್ಟಭ್ಯಾಹಮಿದಂ ಕೃತ್ಸ್ನ ಮೇಕಾಂಶೇನ ಸ್ಥಿತೋ ಜಗತ್'** ಎಂದು ಭಗವಂತನು ಈಗಾಗಲೇ ವಿಭೂತಿಯೋಗದ ಕೊನೆಯಲ್ಲಿ ಹೇಳಿದಂತೆ, ಈ ಸಮಸ್ತ ಬ್ರಹ್ಮಾಂಡದಿಂದ ಕೂಡಿದ ಚರಾಚರ ಜಗತ್ತೆಲ್ಲವೂ ಪರಮಾತ್ಮನ ಒಂದೇ ಒಂದು ಅಂಶದಲ್ಲಿ ಅಡಕವಾಗಿದೆ. ಆದ್ದರಿಂದಲೇ ತನ್ನ ಅನಂತ ದೇಹದಲ್ಲಿ (ಸ್ವರೂಪದಲ್ಲಿ) ಈ ವಿಶ್ವವೆಲ್ಲವನ್ನೂ ಒಂದೇ ಕಡೆ (ಅವಯವದಂತೆ) ಇರುವ ಹಾಗೆ ವೀಕ್ಷಿಸಬೇಕಾಗಿರುವುದೆಂದು ಶ್ರೀ ಕೃಷ್ಣಪರಮಾತ್ಮನು ಅರ್ಜುನನಿಗೆ ಅಪ್ಪಣೆ ಕೊಡುವ ಸನ್ನಿವೇಶ ಇಲ್ಲಿದೆ. ಇದರಿಂದ ಪರಮಾತ್ಮನ ಸ್ವರೂಪ ಎಷ್ಟು ವಿಶಾಲವಾದುದೋ, ಅನಂತವಾದುದೋ ಊಹಿಸಿಕೊಳ್ಳಬಹುದು. ಭೂತಾಕಾಶವು ಎಷ್ಟೋ ವಿಸ್ತಾರವಾದುದು, ಸೂಕ್ಷ್ಮವಾದುದು. ಅದಕ್ಕಿಂತ ಇನ್ನೂ ವಿಸ್ತಾರವಾಗಿ, ಸೂಕ್ಷ್ಮವಾಗಿರುವುದು ಚಿತ್ತಾಕಾಶ. ಚಿದಾಕಾಶನಾದ ಆತ್ಮ ಇನ್ನೂ ವಿಶಾಲವಾಗಿ, ಸೂಕ್ಷ್ಮತಮವಾಗಿ ಬೆಳಗುತ್ತಿದ್ದಾನೆ. ಆದ್ದರಿಂದ ಅಂತಹ

ಚಿದಾಕಾಶದಲ್ಲಿ ಈ ಭೂತಾಕಾಶಾವಾಗಲಿ, ಅದರಲ್ಲಿ ಎಲ್ಲೋ ಒಂದು ಕಡೆ ಅಣಗಿಕೊಂಡಿರುವ ಈ ಚರಾಚರ ಜಗತ್ತು ಯಾವ ಮೂಲೆಗೆ. ಆದ್ದರಿಂದಲೇ ಆ ಚಿದಾಕಾಶದಲ್ಲಿ (ಆತ್ಮದಲ್ಲಿ) ಈ ಸಮಸ್ತ ಪ್ರಪಂಚ ಯಾವುದೋ ಒಂದು ಮೂಲೆಯಲ್ಲಿ ಕಲ್ಪಿತವಾಗಿ ಅಣಗಿ ಕೊಂಡಿರುವುದೆಂದು ಭಗವಂತನು ಇಲ್ಲಿ ನುಡಿದನು. ಇಂತಹ ಅನಂತರೂಪಿ, ಸರ್ವವ್ಯಾಪಿ, ಸರ್ವಶಕ್ತಿವಂತನಾದ ಪರಮಾತ್ಮನನ್ನು; ಅಲ್ಪನು, ಪರಿಚ್ಛಿನ್ನನು, ದೇಶಕಾಲಗಳಿಗೆ ವಶನಾದ ಈ ಜೀವಿಯು ಭಕ್ತಿ ಪ್ರಪತ್ತುಗಳಿಂದ ವಿನಯ ವಿಧೇಯತೆಗಳಿಂದ ಸೇವಿಸುವುದು ಶ್ರೇಯಸ್ಕರ. ಈ ಪ್ರಕಾರವಾಗಿ ಆ ಸಮಷ್ಟಿ ರೂಪ ಪರಮಾತ್ಮನನ್ನು ಸೇವಿಸುವುದರಿಂದ, ಆತನ ಅನುಗ್ರಹದಿಂದ, ಜ್ಞಾನವನ್ನು ಪಡೆದು ಆತನಲ್ಲಿ ಐಕ್ಯವಾಗಿ ಮುಕ್ತಿ ಹೊಂದುವ ಅವಕಾಶವಿದೆ. ಇಲ್ಲದೇ ಇದ್ದರೆ ಈ ಜನನ ಮರಣ ಪ್ರವಾಹಕ್ಕೆ ಸಿಕ್ಕಿ ಜೀವಿಯು ಇನ್ನೂ ಅನೇಕ ದುಃಖಗಳನ್ನು ಅನುಭವಿಸಬೇಕಾಗುತ್ತದೆ.

ಮನುಜನಿಗೆ ಯಾವಾಗಲಾದರೂ ತನ್ನ ಧನ, ಜನ, ಕ್ಷೇತ್ರ, ಅಧಿಕಾರಾದಿಗಳನ್ನು ಕುರಿತು ಅಹಂಕಾರ ಗರ್ವಗಳುಂಟಾದರೆ ಆಗ ಈ ಶ್ಲೋಕವನ್ನು ಚೆನ್ನಾಗಿ ಮನನ ಮಾಡಿಕೊಂಡಿದ್ದೇ ಆದರೆ, ಆಗರ್ವಗಳೆಲ್ಲವೂ ಉಡುಗಿ ಹೋಗುವುವು. ಏಕೆಂದರೆ, 'ಈ ವಿಶಾಲ ಜಗತ್ತೆಲ್ಲವೂ ಯಾವುದರ ಒಂದು ಮೂಲೆಯಲ್ಲಿ ಕಲ್ಪಿತವಾಗಿರುವುದು ಎಂದು ಭಾಸವಾಗುತ್ತಿದೆಯೋ ಅಂತಹ ಪರಮಾತ್ಮನ ಅನಂತ ರೂಪದಲ್ಲಿ ಈ ನನ್ನ ಧನವಾಗಲಿ, ಬಲವಾಗಲಿ, ಪರಿಜನರಾಗಲಿ, ಅಧಿಕಾರಗಳಾಗಲಿ ಯಾವ ಮೂಲೆಗೆ? ಆದ್ದರಿಂದ ಅವುಗಳನ್ನು ನೋಡಿ ಏಕೆ ಗರ್ವಿಸಬೇಕು? ಎನ್ನುವ ಭಾವ ಆತನಿಗೆ ಉಂಟಾದರೆ ಭಗವಂತನೆಡೆ ಭಕ್ತಿ ಭಾವಗಳು ಉಂಟಾಗುವುವು. ಮತ್ತೆ ಅಲ್ಪಗಳಾದ ಈ ದೃಶ್ಯ ಪದಾರ್ಥಗಳ ಕಡೆಗೆ ವಿರಾಗವು ಹುಟ್ಟುವುದು.

**ಅ||** ಭೌತಿಕ ನೇತ್ರದಿಂದ ವಿಶ್ವರೂಪವನ್ನು ಯಾರೂ ನೋಡಲಾರರು. ಆದ್ದರಿಂದ ಅರ್ಜುನನಿಗೆ ಭಗವಂತನು ದಿವ್ಯ ದೃಷ್ಟಿಯನ್ನು ಪ್ರಸಾದಿಸುತ್ತಿದ್ದಾನೆ.

**೮. ನ ತು ಮಾಂ ಶಕ್ಯಸೇ ದ್ರಷ್ಟುಮನೇನೈವ ಸ್ವಚಕ್ಷುಷಾ**
**ದಿವ್ಯಂ ದದಾಮಿ ತೇ ಚಕ್ಷುಃ ಪಶ್ಯ ಮೇ ಯೋಗಮೈಶ್ವರಮ್**

**ಅರ್ಥ:** ಅನೇನ=ಈ; ಸ್ವಚಕ್ಷುಷಾ ಏವತು=ನಿನ್ನ ಮಾಂಸಮಯ ನೇತ್ರಗಳಿಂದ; ಮಾಂ=ನನ್ನನ್ನು; ದ್ರಷ್ಟುಂ=ನೋಡಲು; ನ ಶಕ್ಯಸೇ=ಸಾಧ್ಯವಿಲ್ಲ; ದಿವ್ಯಂ ಚಕ್ಷುಃ=ದಿವ್ಯದೃಷ್ಟಿಯನ್ನು (ಜ್ಞಾನನೇತ್ರವನ್ನು) ತೇ=ನಿನಗೆ; ದದಾಮಿ= ಕೊಡುತ್ತಿದ್ದೇನೆ; ಐಶ್ವರಂ=ಈಶ್ವರ ಸಂಬಂಧವಾದ; ಮೇ=ನನ್ನ; ಯೋಗಂ= ಯೋಗವನ್ನು (ಯೋಗ ಮಹಿಮೆಯನ್ನು, ಅಲೌಕಿಕ ಸಾಮರ್ಥ್ಯವನ್ನು); ಪಶ್ಯ=ನೋಡು.

**ತಾ||** ಈ ನಿನ್ನ ಮಾಂಸಮಯ ನೇತ್ರಗಳಿಂದ ನನ್ನ ವಿಶ್ವರೂಪವನ್ನು ನೋಡಲಾರೆ; ಆದ್ದರಿಂದ ದಿವ್ಯದೃಷ್ಟಿಯನ್ನು (ಜ್ಞಾನ ನೇತ್ರವನ್ನು) ನಿನಗೆ ಪ್ರಸಾದಿಸುತ್ತಿದ್ದೇನೆ; ಅದರಿಂದ ಈಶ್ವರ ಸಂಬಂಧವಾದ ನನ್ನ ಯೋಗಮಹಿಮೆಯನ್ನು ನೋಡು.

**ವ್ಯಾಖ್ಯೆ:** ಭಗವಂತನು ಏಕೆ ಕಾಣಿಸುವುದಿಲ್ಲವೆಂಬ ಪ್ರಶ್ನೆಗೆ ಇಲ್ಲಿ ಉತ್ತರ ಕೊಡಲಾಗಿದೆ. ಈ ಚರ್ಮ ಚಕ್ಷುಗಳಿಂದ (ಸ್ಥೂಲ ನೇತ್ರಗಳಿಂದ) ಮನುಜನು ಅತಿಸೂಕ್ಷ್ಮವಾದ ಪರಮಾತ್ಮನನ್ನು ನೋಡಲಾರನು. ಸಾಮಾನ್ಯಾಕಾಶವನ್ನೇ ಈ ನೇತ್ರಗಳಿಂದ ನೋಡಲು ಸಾಧ್ಯವಿಲ್ಲವೆಂದರೆ ಇನ್ನು ಸೂಕ್ಷ್ಮಾತಿ ಸೂಕ್ಷ್ಮವಾದ ಚಿದಾಕಾಶವನ್ನು (ಪರಮಾತ್ಮನನ್ನು) ಹೇಗೆ ನೋಡಬಲ್ಲನು? ಪಂಚಭೂತಾತ್ಮಕವಾದ ನೇತ್ರ ಪಾಂಚಭೌತಿಕ ಪದಾರ್ಥಗಳನ್ನು ನೋಡಬಲ್ಲದಾಗಲಿ, ಚಿನ್ಮಯ ಆತ್ಮ ವಸ್ತುವನ್ನಲ್ಲ. ಆದ್ದರಿಂದ ಪರಮಾತ್ಮನನ್ನು ದರ್ಶಿಸಬೇಕೆಂದರೆ ಜ್ಞಾನನೇತ್ರ(ದಿವ್ಯದೃಷ್ಟಿ) ಅವಶ್ಯಕವಾಗಿದೆ.

**'ದೃಶ್ಯತೇ ತ್ವಗ್ರ್ಯಯಾ ಬುದ್ಧ್ಯಾ ಸೂಕ್ಷ್ಮಯಾ ಸೂಕ್ಷ್ಮದರ್ಶಿಭಿಃ'** "ಸೂಕ್ಷ್ಮವಾದ ಏಕಾಗ್ರ ಬುದ್ಧಿಯಿರುವ ತತ್ತ್ವವೇತ್ತರಿಂದ ಪರಮಾತ್ಮನು ಕಾಣಲ್ಪಡುತ್ತಾನೆ (ಅನುಭೂತಿಗೊಳ್ಳುತ್ತಿದ್ದಾನೆ) ಎನ್ನುವ ಶೃತಿವಾಕ್ಯ ಈ ಸತ್ಯವನ್ನೇ ಹೊರಗೆಡಹುತ್ತಿದೆ. ಭಗವಂತನು ಸರ್ವತ್ರ ವ್ಯಾಪಿಸಿ ಪ್ರತ್ಯಕ್ಷವಾಗಿಯೇ ಇದ್ದಾನಾದರೂ ಜನರ ಕಣ್ಣಿಗೆ ಪೊರೆ (ಅಜ್ಞಾನ) ಕವಿದಿರುವುದರಿಂದ ಅವರು ಆತನನ್ನು ನೋಡಲಾಗುತ್ತಿಲ್ಲ. ಅದು ಮಾಯೆ, ಅದು ಅಜ್ಞಾನ, ಅದನ್ನು ಜ್ಞಾನಾಂಜನದಿಂದ ಒರೆಸಿಹಾಕಿದರೆ ಪರಮಾತ್ಮನ ದರ್ಶನವಾಗುವುದು.

**ಸರ್ವಗಂ ಸಚ್ಚಿದಾತ್ಮಾನಂ ಜ್ಞಾನಚಕ್ಷುರ್ನಿರೀಕ್ಷತೇ**
**ಅಜ್ಞಾನಚಕ್ಷುರ್ನೇಕ್ಷೇತ ಭಾಸ್ವಂತಂ ಭಾನುಮಂದವತ್||**

(ಶ್ರೀ ಶಂಕರಾಚಾರ್ಯರ-ಆತ್ಮಬೋಧೆ)

'ಸರ್ವವ್ಯಾಪಕವಾದ ಸಚ್ಚಿದಾನಂದ ಪರಬ್ರಹ್ಮವನ್ನು ಜ್ಞಾನ ನೇತ್ರದಿಂದಲೇ ಮನುಜನು ನೋಡಬಲ್ಲನು. ಪ್ರಕಾಶಿಸುತ್ತಿರುವ ಸೂರ್ಯನನ್ನು ಕುರುಡನು ನೋಡಲಾಗದಂತೆ ಅಜ್ಞಾನ ನೇತ್ರನು ಆತನನ್ನು ನೋಡಲಾರನು.'

'ದೇವರು ನಮ್ಮ ಕಣ್ಣಿಗೆ ಕಾಣಿಸುತ್ತಿಲ್ಲವಲ್ಲ, ಆದ್ದರಿಂದ ಆತ ಇಲ್ಲ,' ಎಂದು ವಾದಿಸುವುದು ಕುರುಡರು ಸೂರ್ಯನಿಲ್ಲವೆಂದು ವಾದಿಸಿದ ಹಾಗೆ ಇರುವುದು. ಆದ್ದರಿಂದ ಭಗವದ್ದರ್ಶನಕ್ಕೆ ದೈವಾನುಭೂತಿಗೆ ಜ್ಞಾನನೇತ್ರವನ್ನು, ದಿವ್ಯದೃಷ್ಟಿಯನ್ನು ಸಂಪಾದಿಸಿಕೊಳ್ಳಬೇಕು. ಆದರೆ ಅದು ಹೇಗೆ ಲಬಿಸುವುದು? ಭಗವತ್ಕರುಣೆಯಿಂದ. 'ದದಾಮಿ ತೇ ಚಕ್ಷುಃ'- ಎಂದು ಭಗವಂತನು ಹೇಳಿರುವುದರಿಂದ ಅದು ಆತನಿಂದ ಬರಬೇಕಾದದ್ದೇ. ಆದರೆ, ಎಲ್ಲರಿಗೂ ಅದನ್ನು ಕೊಡುವವನೇ? ಇಲ್ಲ. ಯಾರು ಅನನ್ಯಭಕ್ತಿಯಿಂದ ಆತನನ್ನು ಧ್ಯಾನಿಸಿ, ಸೇವಿಸುವರೋ ಅವರಿಗೆ ಮಾತ್ರ ಕೊಡುವನು. ಅರ್ಜುನನು ಅಂತಹ ಅರ್ಹತೆಯನ್ನು ಸಂಪಾದಿಸಿಕೊಂಡಿರುವುದರಿಂದ ಆತನಿಗೆ ಲಭಿಸಿದೆ. ಯಾರಾದರೂ ಸರಿಯೇ ಅಂತಹ ಭಕ್ತಿ ಭಾವದಿಂದ ಭಗವಂತನನ್ನು ಪ್ರೀತಿಯಿಂದ ಸೇವಿಸಿದರೆ, ಧ್ಯಾನಿಸಿದರೆ ಅವರಿಗೂ ಸಹ ಅದು ತಪ್ಪದೆ ಲಭಿಸುವುದು- **"ತೇಷಾಂ ಸತತಯುಕ್ತಾನಾಂ.... ದದಾಮಿ ಬುದ್ಧಿಯೋಗಂ.."** (೧೦-೧೦) ಎನ್ನುವ ವಿಭೂತಿ ಯೋಗದ ಶ್ಲೋಕ ಈ ತತ್ತ್ವವನ್ನೇ ಪ್ರತಿಪಾದಿಸುತ್ತದೆ. ಭೂತ ಕನ್ನಡಿಯುಳ್ಳ ಕನ್ನಡಕವನ್ನು ಧರಿಸಿದರೆ ಜಲದಲ್ಲಿ, ಸ್ಥಳದಲ್ಲಿ, ಆಕಾಶದಲ್ಲಿರುವ ಸೂಕ್ಷ್ಮವಸ್ತುಗಳು ಕಾಣುವುವು. ಸಾಮಾನ್ಯ ಕಣ್ಣುಗಳಿಗೆ ಅವು ಕಂಡು ಬರುವುದಿಲ್ಲ. ಆ ಕನ್ನಡಕವನ್ನು ಬಡವ, ಚಂಡಾಲ ಯಾರು ಧರಿಸಿದರೂ ಆ ಸೂಕ್ಷ್ಮವಸ್ತುಗಳು ಗೋಚರಿಸುವುವು. ಅದನ್ನು ಧರಿಸಿದೆ ಇದ್ದವನು ಎಂತಹ ಧನವಂತ, ಉನ್ನತ ಕುಲ ಸಂಜಾತ, ಪುರುಷ, ಮಹಾ ಪಂಡಿತನಾದರೂ ಆ ವಸ್ತುಗಳು ಕಾಣಿಸುವುದಿಲ್ಲ. ಹಾಗೆಯೇ ಜ್ಞಾನನೇತ್ರ ಎನ್ನುವ ಕನ್ನಡಕ ಧರಿಸಿದವನಿಗೇ ಪರಮಾತ್ಮನು ಪ್ರತ್ಯಕ್ಷನಾಗುವನು. ಆತನು ಎಂತಹ ಜಾತಿ ಅಥವ ಅಂತಸ್ತಿನವನಾದರೂ ಸರಿಯೇ ಭಗವದ್ದರ್ಶನಕ್ಕೆ ಅನುಕೂಲವಾಗುವ ಕನ್ನಡಕಗಳನ್ನು ಆ ಸರ್ವೇಶ್ವರನೇ ಪ್ರಸಾದಿಸುವನು (ಭಕ್ತ್ಯಾದಿಗಳು ಇದ್ದಲ್ಲಿ). ಆದ್ದರಿಂದ ಆ ವಸ್ತುವನ್ನು ಸಂಪಾದಿಸಿಕೊಳ್ಳದಿದ್ದರೆ, ಅದು ಯಾರ ದೋಷ? ಅವರವರ ದೋಷವೇ ಆಗುವುದು. ದೇವರು ಕಾಣಬರದೆ ಇರುವುದಕ್ಕೆ

ಜೀವಿಗಳ ಪ್ರಯತ್ನರಾಹಿತ್ಯವೇ ಕಾರಣ. ಆದ್ದರಿಂದ ಸರ್ವರೂ ಗೀತೆಯಲ್ಲಿ ತಿಳಿಸಿದ ಭಕ್ತ್ಯಾದಿ, ಅಮಾನಿತ್ವಾದಿ ಅದ್ವೇಷ್ಟೃತ್ವಾದಿ, ಅಭಯಾದಿ ಸುಗುಣಗಳನ್ನು ಪ್ರಯತ್ನಪೂರ್ವಕವಾಗಿ ಸಂಪಾದಿಸಿಕೊಂಡು ಭಗವತ್ಕಟಾಕ್ಷವನ್ನು, ತನ್ಮೂಲಕ ಜ್ಞಾನನೇತ್ರವನ್ನು, ತದ್ವಾರ ಬ್ರಹ್ಮಸಾಯುಜ್ಯವನ್ನು ಹೊಂದಬೇಕು.

'ದಿವ್ಯಂ'- ದೈವಸಂಬಂಧವಾದ- 'ದೈವ ಸಂಪತ್ತಿ'ನ ಮೂಲಕ ಲಭಿಸುವುದು.

ಪ್ರ : ಭಗವಂತನನ್ನು ಸ್ಥೂಲನೇತ್ರಗಳಿಂದ ನೋಡಲು ಸಾಧ್ಯವೇ?

ಉ : ಇಲ್ಲ.

ಪ್ರ : ಮತ್ತೆ ಯಾವುದರಿಂದ ನೋಡಬಹುದು?

ಉ : ದಿವ್ಯನೇತ್ರಗಳಿಂದ (ಜ್ಞಾನ ಚಕ್ಷುಗಳಿಂದ)

ಪ್ರ : ಆ ದಿವ್ಯನೇತ್ರ ಯಾರಿಂದ ಲಭಿಸುವುದು?

ಉ : ಭಗವಂತನಿಂದ

ಪ್ರ : ಅದನ್ನು ಆತನು ಯಾರಿಗೆ ಕೊಡುವನು?

ಉ : ಅನನ್ಯ ಭಕ್ತಿಯಿಂದ ತನ್ನನ್ನು ಸೇವಿಸುವವರಿಗೆ, ಧ್ಯಾನಿಸುವವರಿಗೆ, ದೈವಗುಣವಿರುವವರಿಗೆ ಕೊಡುವನು.

**ಅ॥** (ಅರ್ಜುನನಿಗೆ ದಿವ್ಯದೃಷ್ಟಿ ಕೊಟ್ಟನಂತರ) ಸಂಜಯನು ಭಗವಂತನ ವಿಶ್ವರೂಪ ವಿಶೇಷವನ್ನು ಐದು ಶ್ಲೋಕಗಳ ಮೂಲಕ ಧೃತರಾಷ್ಟ್ರನಿಗೆ ವರ್ಣಿಸುತ್ತಿದ್ದಾನೆ-

**ಸಂಜಯ ಉವಾಚ-**

**೯ ಏವಮುಕ್ತ್ವಾ ತತೋ ರಾಜನ್ ಮಹಾಯೋಗೇಶ್ವರೋ ಹರಿಃ**
**ದರ್ಶಯಾಮಾಸ ಪಾರ್ಥಾಯ ಪರಮಂ ರೂಪಮೈಶ್ವರಮ್**

ಸಂಜಯ ಉವಾಚ-ಸಂಜಯನು ಹೇಳಿದನು.

**ಅರ್ಥ:** ರಾಜನ್=ಧೃತರಾಷ್ಟ್ರ ಮಹಾರಾಜಾ! ಮಹಾಯೋಗೇಶ್ವರಃ=ಮಹಾಯೋಗೇಶ್ವರನಾದ; ಹರಿಃ=ಶ್ರೀಕೃಷ್ಣಮೂರ್ತಿ; ಏವಂ=ಈ ಪ್ರಕಾರವಾಗಿ; ಉಕ್ತ್ವಾ=ಹೇಳಿ; ಪಾರ್ಥಾಯ=ಅರ್ಜುನನಿಗೆ; ಪರಮಂ=ಸರ್ವೋತ್ತಮವಾದ; ಐಶ್ವರಂ=ಈಶ್ವರ ಸಂಬಂಧವಾದ; ರೂಪಂ=(ವಿಶ್ವ) ರೂಪವನ್ನು; ದರ್ಶಯಾಮಾಸ=ತೋರಿಸಿದನು.

**ತಾ॥** ಸಂಜಯನು ಹೇಳಿದನು- ಓ ಧೃತರಾಷ್ಟ್ರ ಮಹಾರಾಜಾ! ಮಹಾಯೋಗೇಶ್ವರನಾದ ಶ್ರೀಕೃಷ್ಣಪರಮಾತ್ಮನು ಈ ಪ್ರಕಾರವಾಗಿ ಹೇಳಿ ನಂತರ ಸರ್ವೋತ್ತಮವಾದ, ಈಶ್ವರೀಯವಾದ (ವಿಶ್ವ)ರೂಪವನ್ನು ಅರ್ಜುನನಿಗೆ ತೋರಿಸಿದನು.

**ವ್ಯಾಖ್ಯೆ:** ಶ್ರೀ ವೇದವ್ಯಾಸರ ಅನುಗ್ರಹದಿಂದ ಸಂಜಯನು ಯುದ್ಧರಂಗದಲ್ಲಿ ನಡೆಯುತ್ತಿರುವ ವೃತ್ತಾಂತಗಳನ್ನು ತಿಳಿದುಕೊಳ್ಳಲು ಶಕ್ಯನಾದುದರಿಂದ ಭಗವಂತನ ವಿಶ್ವರೂಪವನ್ನೂ ಕೂಡ ಸಂದರ್ಶಿಸುವ ಭಾಗ್ಯವುಳ್ಳವನಾಗಿ, ಆ ವಿಶೇಷಗಳೆಲ್ಲವನ್ನೂ ಧೃತರಾಷ್ಟ್ರನಿಗೆ ತಿಳಿಸುತ್ತಿದ್ದಾನೆ.

**೧೦ ಅನೇಕವಕ್ತ್ರನಯನ ಮನೇಕಾದ್ಭುತದರ್ಶನಮ್**
**ಅನೇಕದಿವ್ಯಾಭರಣಂ ದಿವ್ಯಾನೇಕೋದ್ಯತಾಯುಧಮ್**

**೧೧ ದಿವ್ಯ ಮಾಲ್ಯಾಂಬರಧರಂ ದಿವ್ಯಗಂಧಾನುಲೇಪನಮ್**
**ಸರ್ವಾಶ್ಚರ್ಯಮಯಂ ದೇವಮನಂತಂ ವಿಶ್ವತೋಮುಖಮ್**

**ಅರ್ಥ:** ಅನೇಕ ವಕ್ತ್ರನಯನಂ=ಅನೇಕ ಮುಖಗಳು, ನೇತ್ರಗಳು ಉಳ್ಳ; ಅನೇಕಾದ್ಭುತದರ್ಶನಂ=ಅನೇಕ ಅದ್ಭುತ ಆಶ್ಚರ್ಯಗಳಿಂದ ಕೂಡಿದವನು; ಅನೇಕ ದಿವ್ಯಾಭರಣಂ=ಅನೇಕ ದಿವ್ಯ ಆಭರಣಗಳನ್ನು ಧರಿಸಿದವನು; ದಿವ್ಯಾನೇಕೋದ್ಯತಾಯುಧಂ=ಗುರಿಯಿಟ್ಟ ಅನೇಕ ದಿವ್ಯಾಯುಧಗಳಿಂದ ಕೂಡಿದ; ದಿವ್ಯಮಾಲ್ಯಾಂಬರಧರಂ=ದಿವ್ಯವಾದ ಪುಷ್ಪಮಾಲೆಗಳನ್ನು, ವಸ್ತ್ರಗಳನ್ನು ಧರಿಸಿರುವ; ದಿವ್ಯಗಂಧಾನುಲೇಪನಮ್=ದಿವ್ಯವಾದ ಗಂಧದಿಂದ ಲೇಪಿತಗೊಂಡ; ಸರ್ವಾಶ್ಚರ್ಯಮಯಂ=ಅನೇಕ ಆಶ್ಚರ್ಯಗಳಿಂದ ಕೂಡಿದ; ದೇವಂ=ಪ್ರಕಾಶಿಸುತ್ತಿರುವ; ಅನಂತಂ=ಅಂತ್ಯವಿಲ್ಲದ: ವಿಶ್ವತೋಮುಖಂ= ಸರ್ವತ್ರವೂ ಮುಖವುಳ್ಳ (ವಿಶ್ವರೂಪವನ್ನು); ದರ್ಶಯಾಮಾಸ=ತೋರಿಸಿದನು.

**ತಾ॥** (ಅಲ್ಲಿ) ಅನೇಕ ಮುಖಗಳು ನೇತ್ರಗಳು ಇರುವ, ಅನೇಕ ಅದ್ಭುತ ರೂಪಗಳಿರುವ, ದಿವ್ಯವಾದ ಅನೇಕ ಆಭರಣಗಳಿಂದ ಅಲಂಕೃತವಾದ, ಗುರಿಯೇರಿಸಿದ ದಿವ್ಯಾಯುಧಗಳಿಂದ ಕೂಡಿದ, ದಿವ್ಯವಾದ ಪುಷ್ಪಮಾಲೆಗಳನ್ನು ವಸ್ತ್ರಗಳನ್ನು ಧರಿಸಿರುವ, ದಿವ್ಯವಾದ ಗಂಧದಿಂದ ಲೇಪಿತನಾದ, ಅನೇಕ ಆಶ್ಚರ್ಯಗಳಿಂದ ತುಂಬಿರುವ, ಪ್ರಕಾಶಮಾನವಾದ, ಅಂತ್ಯವಿಲ್ಲದಿರುವ ಎಲ್ಲೆಲ್ಲೂ ಮುಖವನ್ನು ಹೊಂದಿರುವ ತನ್ನ ವಿಶ್ವರೂಪವನ್ನು ಭಗವಂತನು ಅರ್ಜುನನಿಗೆ ತೋರಿಸಿದನು.

**೧೨ ದಿವಿ ಸೂರ್ಯಸಹಸ್ರಸ್ಯ ಭವೇದ್ಯುಗಪದುತ್ಥಿತಾ**
**ಯದಿ ಭಾಃಸದೃಶೀ ಸಾ ಸ್ಯಾದ್ಭಾಸಸ್ತಸ್ಯ ಮಹಾತ್ಮನಃ**

**ಅರ್ಥ:** ದಿವಿ=ಆಕಾಶದಲ್ಲಿ; ಸೂರ್ಯಸಹಸ್ರಸ್ಯ=ಸಾವಿರಾರು ಸೂರ್ಯರು; ಭಾಃ=ಕಾಂತಿ; ಯುಗಪತ್=ಒಂದು ಬಾರಿ; ಉತ್ಥಿತಾ ಭವತ್ ಯದಿ=ಉದಯವಾದರೆ; ಸಾ=ಅದು (ಆ ಕಾಂತಿ); ತಸ್ಯ ಮಹಾತ್ಮನಃ=ಆ ಮಹಾತ್ಮನ; ಭಾಸಃ=ಕಾಂತಿಗೆ; ಸಾದೃಶೀ=ಹೋಲುವುದು; ಸ್ಯಾತ್=ಆಗಿದೆ.

**ತಾ:** ಆಕಾಶದಲ್ಲಿ ಸಾವಿರಾರು ಸೂರ್ಯರ ಪ್ರಭೆ ಒಂದೇ ಬಾರಿಗೆ ಉಂಟಾದರೆ ಎಷ್ಟು ಕಾಂತಿಯಿರುವುದೋ ಅಷ್ಟು ದೀಪ್ತಿ ಆ ಮಹಾತ್ಮನ ಕಾಂತಿಗೆ ಸಮಾನವಾಗುವುದೋ ಇಲ್ಲವೋ!

**೧೩ ತತ್ರೈ ಕಸ್ಥಂ ಜಗತ್ಕೃತ್ಸ್ನಂ ಪ್ರವಿಭಕ್ತ ಮನೇಕಧಾ**
**ಅಪಶ್ಯದ್ದೇವದೇವಸ್ಯ ಶರೀರೇ ಪಾಂಡವಸ್ತದಾ**

**ಅರ್ಥ:** ತದಾ=ಆಗ; ಪಾಂಡವಃ=ಅರ್ಜುನನು; ಅನೇಕಧಾ=ನಾನಾ ವಿಧಗಳಾಗಿ; ಪ್ರವಿಭಕ್ತಂ=ವಿಭಜಿಸಲ್ಪಟ್ಟ; ಕೃತ್ಸ್ನಂ ಜಗತ್=ಸಮಸ್ತ ಜಗತ್ತನ್ನು; ದೇವ ದೇವಸ್ಯ=ದೇವದೇವನಾದ ಶ್ರೀಕೃಷ್ಣ ಭಗವಂತನ; ಶರೀರೇ= ಶರೀರದಲ್ಲಿ; ಏಕಸ್ಥಂ=ಅವಯವದಂತೆ (ಒಂದು ಸ್ಥಾನದಲ್ಲಿ ಇರುವುದನ್ನು); ಅಪಶ್ಯತ್=ನೋಡಿದನು.

**ತಾ॥** ಆಗ ಅರ್ಜುನನು ನಾನಾವಿಧಗಳಾಗಿ ವಿಭಜಿಸಲ್ಪಟ್ಟ ಸಮಸ್ತ ಜಗತ್ತನ್ನು ದೇವ ದೇವನಾದ ಶ್ರೀಕೃಷ್ಣ ಭಗವಂತನ ಶರೀರದಲ್ಲಿ (ಅವಯವದ ಹಾಗೆ ಒಂದು ಸ್ಥಾನದಲ್ಲಿ ಇರುವುದನ್ನು) ನೋಡಿದನು.

**ವ್ಯಾಖ್ಯೆ:** ಈ ಸಮಸ್ತ ಪ್ರಪಂಚವು ಪರಮಾತ್ಮನ ಯಾವುದೋ ಒಂದು ಮೂಲೆಯಲ್ಲಿ ಅಡಗಿಕೊಂಡಿದೆ. 'ಇಹೈಕಸ್ಥಂ ಜಗತ್ಕೃತ್ಸ್ನಂ'- ಎನ್ನುವುದನ್ನು

ಈ ಮೊದಲೇ ೭ನೆಯ ಶ್ಲೋಕದಲ್ಲಿ ಭಗವಂತನು ಸ್ಪಷ್ಟೀಕರಿಸಿದ್ದಾನೆ. ಅದನ್ನೇ ಮತ್ತೆ ಸಂಜಯನು ಹೇಳುತ್ತಿದ್ದಾನೆ. ಭಗವಂತನ ಅನಂತ ಚಿನ್ಮಯ ಸ್ವರೂಪದಲ್ಲಿ ಈ ಜಗತ್ತೆಲ್ಲವೂ (ಅವಯವರೂಪದಲ್ಲಿ) ಯಾವುದೋ ಒಂದು ಮೂಲೆಯಲ್ಲಿ (ಕಲ್ಪಿತವಾಗಿ) ಸ್ಥಿತಗೊಂಡಿರುವುದು.

'ಪ್ರವಿಭಕ್ತಂ'- ಪರಮಾತ್ಮನು ಅವಿಭಕ್ತನು. ಜಗತ್ತು ಪ್ರವಿಭಕ್ತವಾದುದು (ಭಿನ್ನ ಭಿನ್ನ ರೂಪಗಳಾಗಿ ಅನೇಕ ನಾಮರೂಪಗಳಾಗಿ ವಿಂಗಡಿಸಲ್ಪಟ್ಟಿದೆ).

**ಅ॥** ಆ ಅದ್ಭುತ ರೂಪವನ್ನು ಸಂದರ್ಶಿಸಿ ಅರ್ಜುನನು ಆಶ್ಚರ್ಯಚಕಿತನಾಗಿ ಭಗವಂತನನ್ನು ಈ ರೀತಿ ಸ್ತುತಿಸಲು ಪ್ರಾರಂಭಿಸಿದನೆಂದು ಸಂಜಯನು ಹೇಳುತ್ತಿದ್ದಾನೆ-

**೧೪ ತತಃ ಸ ವಿಸ್ಮಯಾವಿಷ್ಟೋ ಹೃಷ್ಟರೋಮಾ ಧನಂಜಯಃ**
**ಪ್ರಣಮ್ಯ ಶಿರಸಾ ದೇವಂ ಕೃತಾಂಜಲಿರಭಾಷತ**

**ಅರ್ಥ:** ತತಃ=ನಂತರ; ಸಃ ಧನಂಜಯಃ=ಆ ಅರ್ಜುನನು; ವಿಸ್ಮಯಾವಿಷ್ಟಃ= ಆಶ್ಚರ್ಯದಿಂದ ಕೂಡಿದವನಾಗಿ; ಹೃಷ್ಟರೋಮಾ= ರೋಮಪುಲಕಿತನಾಗಿ; ದೇವಂ=ವಿಶ್ವರೂಪವನ್ನು ಧರಿಸಿದ ಆ ಭಗವಂತನನ್ನು; ಶಿರಸಾ=ಶಿರಸ್ಸಿನಿಂದ; ಪ್ರಣಮ್ಯ=ನಮಸ್ಕರಿಸಿ; ಕೃತಾಂಜಲಿಃ= ಕೈ ಜೋಡಿಸಿ; ಅಭಾಷತ=(ಈ ಪ್ರಕಾರವಾಗಿ) ನುಡಿದನು.

**ತಾ॥** ನಂತರ ಅರ್ಜುನನು ಆಶ್ಚರ್ಯದಿಂದ ಕೂಡಿ, ರೋಮ ಪುಲಕಿತನಾಗಿ, ವಿಶ್ವರೂಪವನ್ನು ಧರಿಸಿದ ಭಗವಂತನಿಗೆ ಶಿರಸ್ಸಿನಿಂದ ನಮಸ್ಕರಿಸಿ, ಕೈಗಳನ್ನು ಜೋಡಿಸಿ (ಈ ಪ್ರಕಾರವಾಗಿ) ನುಡಿದನು.

**ವ್ಯಾಖ್ಯೆ:** ಶಿರಸ್ಸಿನಿಂದ ನಮಸ್ಕರಿಸುವುದು, ಕೈಗಳನ್ನು ಜೋಡಿಸುವುದು ವಿನಯವನ್ನು ಭಕ್ತಿಯನ್ನು ತೋರಿಸುವುವು.

**ಅರ್ಜುನ ಉವಾಚ:**

**೧೫ ಪಶ್ಯಾಮಿ ದೇವಾಂಸ್ತವ ದೇವ ದೇಹೇ**
**ಸರ್ವಾಂಸ್ತಥಾ ಭೂತವಿಶೇಷಸಂಘಾನ್**
**ಬ್ರಹ್ಮಾಣಮೀಶಂ ಕಮಲಾಸನಸ್ಥಮ್**
**ಋಷೀಂಶ್ಚ ಸರ್ವಾನುರಗಾಂಶ್ಚ ದಿವ್ಯಾನ್**

ಅರ್ಜುನ ಉವಾಚ-ಅರ್ಜುನನು ಹೇಳಿದನು.

**ಅರ್ಥ:** ದೇವ=ದೇವಾ! ತವ ದೇಹೇ=ನಿನ್ನ ಶರೀರದಲ್ಲಿ; ಸರ್ವಾನ್ ದೇವಾನ್=ಸಮಸ್ತ ದೇವತೆಗಳನ್ನು; ತಥಾ=ಹಾಗೆಯೇ; ಭೂತವಿಶೇಷ ಸಂಘಾನ್=ಜಂಗಮವಾದ ಪ್ರಾಣಿ ಕೋಟಿ ಸಮೂಹವನ್ನು; ಕಮಲಾಸನಸ್ಥಂ= ಕಮಲನಾಭಿಯಾದ; ಈಶಂ ಬ್ರಹ್ಮಾಣಂ= ಸೃಷ್ಟಿಕರ್ತನಾದ ಬ್ರಹ್ಮದೇವನನ್ನು; ಸರ್ವಾನ್ ಋಷೀಂಶ್ಚ=ಸಮಸ್ತ ಋಷಿಗಳು, ದಿವ್ಯಾನ್ ಉರಗಾನ್ ಚ= ದಿವ್ಯಗಳಾದ (ದೇವಲೋಕ ಸಂಬಂಧವಾದ) ಸರ್ಪಗಳನ್ನು; ಪಶ್ಯಾಮಿ= ನೋಡುತ್ತಿದ್ದೇನೆ. (ಕಮಲಾಸನಸ್ಥಂ ಬ್ರಹ್ಮಾಣಂ=ಕಮಲಾಸನನಾದ ಬ್ರಹ್ಮ ದೇವನನ್ನು (ಮತ್ತೆ) ಈಶಂ=ಶಿವನನ್ನು ಎಂದೂ ಹೇಳಬಹುದು)

**ತಾ॥** ಅರ್ಜುನನು ಹೇಳಿದನು-ದೇವಾ! ನಿನ್ನ ಶರೀರದಲ್ಲಿ ಸಮಸ್ತ ದೇವತೆಗಳನ್ನು, ಹಾಗೆಯೇ ಚರಾಚರ ಪ್ರಾಣಿಕೋಟಿಗಳ ಸಮೂಹಗಳನ್ನು, ಕಮಲಾಸನನಾದ ಸೃಷ್ಟಿಕರ್ತನಾದ ಬ್ರಹ್ಮ ದೇವನನ್ನು, ಸಮಸ್ತ ಋಷಿಗಳನ್ನು, ದಿವ್ಯವಾದ ಸರ್ಪಗಳನ್ನು ನೋಡುತ್ತಿದ್ದೇನೆ.

**೧೬ ಅನೇಕ ಬಾಹೂದರವಕ್ತ್ರನೇತ್ರಂ**
**ಪಶ್ಯಾಮಿ ತ್ವಾಂ ಸರ್ವತೋಽನಂತರೂಪಮ್**
**ನಾಂತಂ ನ ಮಧ್ಯಂ ನ ಪುನಸ್ತವಾದಿಂ**
**ಪಶ್ಯಾಮಿ ವಿಶ್ವೇಶ್ವರ ವಿಶ್ವರೂಪ.**

**ಅರ್ಥ:** ವಿಶ್ವೇಶ್ವರ=ಪ್ರಪಂಚಕ್ಕೆ ಅಧಿಪತಿಯಾದ!; ವಿಶ್ವರೂಪ= ಜಗದ್ರೂಪನೇ!; ಅನೇಕ ಬಾಹೂದರ ವಕ್ತ್ರ ನೇತ್ರಂ=ಅನೇಕ ಹಸ್ತಗಳು, ಉದರಗಳು, ಮುಖಗಳು, ನೇತ್ರಗಳು ಉಳ್ಳವನೂ; ಅನಂತರೂಪಂ=ಅಂತ್ಯವಿಲ್ಲದ ರೂಪವುಳ್ಳವ ನಾಗಿಯೂ (ಇಲ್ಲವೆ ಅನೇಕ ರೂಪಗಳನ್ನು ಹೊಂದಿರುವವನೂ); ತ್ವಾಂ=ನಿನ್ನನ್ನು; ಸರ್ವತಃ=ಎಲ್ಲೆಲ್ಲೂ; ಪಶ್ಯಾಮಿ=ನೋಡುತ್ತಿದ್ದೇನೆ; ಪುನಂ=ಮತ್ತೆ; ತವ=ನಿನ್ನ; ಆದಿಂ=ಆದಿಯನ್ನು; ನ ಪಶ್ಯಾಮಿ=ನೋಡಲು ಅಶಕ್ತನಾಗಿದ್ದೇನೆ; ಮಧ್ಯಂ= ಮಧ್ಯವನ್ನು; ನ (ಪಶ್ಯಾಮಿ) ನೋಡಲಾರದವನಾಗಿದ್ದೇನೆ; ಅಂತಂ= ಕೊನೆಯನ್ನು; ನ (ಪಶ್ಯಾಮಿ) ಕಾಣಲಾರೆನು.

**ತಾ॥** ಪ್ರಪಂಚಾಧಿಪತೀ! ಜಗದ್ರೂಪಾ! ನಿನ್ನನ್ನು ಸರ್ವತ್ರ ಅನೇಕ ಹಸ್ತಗಳು, ಉದರಗಳು, ಮುಖಗಳು, ನೇತ್ರಗಳನ್ನು ಹೊಂದಿರುವವನ ಹಾಗೆಯೂ, ಅನಂತ ರೂಪಿಯಾಗಿಯೂ ನಾನು ನೋಡುತ್ತಿದ್ದೇನೆ. ಮತ್ತೆ ನಿನ್ನ ಆದಿ, ಮಧ್ಯ, ಅಂತ್ಯಗಳನ್ನು ನಾನು ಕಾಣಲಾರದವನಾಗಿದ್ದೇನೆ.

**೧೭ ಕಿರೀಟಿನಂ ಗದಿನಂ ಚಕ್ರಿಣಂ ಚ**
**ತೇಜೋರಾಶಿಂ ಸರ್ವತೋದೀಪ್ತಿಮಂತಮ್**
**ಪಶ್ಯಾಮಿ ತ್ವಾಂ ದುರ್ನಿರೀಕ್ಷ್ಯಂ ಸಮಂತಾತ್**
**ದೀಪ್ತಾನಲಾರ್ಕದ್ಯುತಿ ಮಪ್ರಮೇಯಮ್**

**ಅರ್ಥ:** ತ್ವಾಂ=ನಿನ್ನನ್ನು; ಸಮಂತಾತ್=ಎಲ್ಲವನ್ನು; ಕಿರೀಟಿನಂ=ಕಿರೀಟವನ್ನು ಹೊಂದಿದವನಾಗಿಯೂ; ಗದಿನಂ=ಗದೆಯನ್ನು ಹಿಡಿದವನಂತೆಯೂ; ಚಕ್ರಿಣಂ ಚ=ಚಕ್ರವನ್ನು ಧರಿಸಿದವನಂತೆಯೂ; ತೇಜೋರಾಶಿಮ್=ಕಾಂತಿಪುಂಜವಾದ; ಸರ್ವತಃ=ಎಲ್ಲವನ್ನೂ; ದೀಪ್ತಿಮಂತಮ್=ಪ್ರಕಾಶಮಾನವಾದಂತವನೆಂದು; ದೀಪ್ತಾನಲಾರ್ಕದ್ಯುತಿಂ=ಜ್ವಲಿಸುವ ಅಗ್ನಿಯಂತಹ, ಸೂರ್ಯನಂತಹ ಕಾಂತಿಯುಳ್ಳವನೆಂತಲೂ; ಅಪ್ರಮೇಯಂ=ಅಪರಿಚ್ಛಿನ್ನನೆಂತಲೂ; ಪಶ್ಯಾಮಿ= ನೋಡುತ್ತಿದ್ದೇನೆ.

**ತಾ:** ನಾನು ನಿನ್ನನ್ನು ಕಿರೀಟವನ್ನು ಧರಿಸಿದವನಂತೆಯೂ, ಗದೆಯನ್ನು ಹಿಡಿದವನಂತೆಯೂ, ಚಕ್ರವನ್ನು ಧರಿಸಿರುವವನಂತೆಯೂ, ತೇಜಃಪುಂಜವಾದ ಜ್ವಲಿಸುವ ಅಗ್ನಿ ಹಾಗು ಸೂರ್ಯನಂತಹ ಕಾಂತಿಯುಳ್ಳವನೆಂತಲೂ, ಅಪರಿಚ್ಛಿನ್ನವಾದ (ಪರಿಮಿತ ಇಲ್ಲದ) ಅಪ್ರಮೇಯನೆಂತಲೂ ನೋಡುತ್ತಿದ್ದೇನೆ.

**೧೮ ತ್ವಮಕ್ಷರಂ ಪರಮಂ ವೇದಿತವ್ಯಂ**
**ತ್ವಮಸ್ಯ ವಿಶ್ವಸ್ಯ ಪರಂ ನಿಧಾನಂ**
**ತ್ವಮವ್ಯಯಃ ಶಾಶ್ವತಧರ್ಮಗೋಪ್ತಾ**
**ಸನಾತನಸ್ತ್ವಂ ಪುರುಷೋ ಮತೋ ಮೇ**

**ಅರ್ಥ:** ತ್ವಂ=ನೀನು; ವೇದಿತವ್ಯಂ=ತಿಳಿಯಲು ಯೋಗ್ಯವಾದ; ಪರಮಂ ಅಕ್ಷರಂ=ಸರ್ವೋತ್ತಮವಾದ ಅಕ್ಷರ (ನಾಶರಹಿತ) ಪರಬ್ರಹ್ಮ; ತ್ವಂ=ನೀನು; ಅಶ್ಯ ವಿಶ್ವಸ್ಯ=ಈ ಜಗತ್ತಿಗೆ; ಪರಂ ನಿಧಾನಂ=ಶ್ರೇಷ್ಠನಾದ ಆಧಾರವು (ಆಶ್ರಯ ಸ್ವರೂಪನು);ತ್ವಂ=ನೀನು; ಅವ್ಯಯಂ=ನಾಶರಹಿತನು; ಶಾಶ್ವತ ಧರ್ಮಗೋಪ್ತಾ= ಶಾಶ್ವತವಾದ ಧರ್ಮಗಳನ್ನು ಕಾಪಾಡುವವನು, ತ್ವಂ=ನೀನು; ಸನಾತನಃ ಪುರುಷಃ=ಪುರಾಣ ಪುರುಷನು; ಇತಿ=(ಎಂದು) ಮೇ ಮತಃ=ನನ್ನ ಅಭಿಪ್ರಾಯ.

**ತಾ||** ನೀನು (ಮುಮುಕ್ಷುಗಳು) ತಿಳಿಯಬೇಕಾದ ಸರ್ವೋತ್ತಮ ಅಕ್ಷರ ಪರಬ್ರಹ್ಮ ಸ್ವರೂಪಿ. ನೀನು ಈ ಜಗತ್ತಿಗೆಲ್ಲಾ ಆಧಾರಭೂತನು. ನೀನು ನಾಶರಹಿತನು. ಶಾಶ್ವತವಾದ ಧರ್ಮಗಳನ್ನು ಕಾಪಾಡುವವನು. ನೀನು ಪುರಾಣ ಪುರುಷ, ಎಂದು ನನ್ನ ಅಭಿಪ್ರಾಯ.

**ವ್ಯಾಖ್ಯೆ:** 'ಶಾಶ್ವತ ಧರ್ಮಗೋಪ್ತಾ'- ಎನ್ನುವ ಪದವನ್ನು ಚೆನ್ನಾಗಿ ಗಮನಿಸಬೇಕು. ಧರ್ಮವು ಶಾಶ್ವತವಾದುದು. ಅದು ಯಾವ ಕಾಲದಲ್ಲಿಯೂ ನಶಿಸುವುದಿಲ್ಲ. ದೇಶ ಕಾಲ ಪರಿಸ್ಥಿತಿಗಳಿಂದ ಲೋಕದಲ್ಲಿ ಅದರ ಪ್ರಚಾರ ಯಾವಾಗಲಾದರೂ ಕಡಿಮೆಯಾದರೂ ಆಗಬಹುದಾಗಲಿ ಧರ್ಮವು ಯಾವಾಗಲೂ ನಶಿಸುವುದಿಲ್ಲ. ಅದು ಕಡಿಮೆಯಾದಾಗ ಸಾಕ್ಷಾತ್ ಭಗವಂತನು, ಮಹನೀಯರು ಅವತರಿಸಿ ಅದನ್ನು ಸಮುದ್ಧರಿಸುವರು. 'ಧರ್ಮಗೋಪ್ತಾ' ಎನ್ನುವುದರಿಂದ ಭಗವಂತನು ಧರ್ಮವನ್ನು ಸಂರಕ್ಷಿಸುವನೆಂದು ಸ್ಪಷ್ಟವಾಗುವುದು. ಆದ್ದರಿಂದ ಭಗವಂತನಿಗೆ ವಿಶೇಷವಾಗಿ ಪ್ರೀತಿಕರವಾದ ವಸ್ತುವನ್ನು ಅಂದರೆ ಧರ್ಮವನ್ನು ಜನರು ಅವಲಂಬಿಸಿದರೆ ಅವರು ಭಗವತ್ಕೃಪೆಗೆ ತಪ್ಪದೆ ಪಾತ್ರರಾಗುವರೆನ್ನುವುದು ನಿರ್ವಿವಾದವಾದುದು.

೧೯ **ಅನಾದಿಮಧ್ಯಾಂತಮನಂತವೀರ್ಯಮ್**
**ಅನಂತಬಾಹುಂ ಶಶಿಸೂರ್ಯನೇತ್ರಮ್**
**ಪಶ್ಯಾಮಿ ತ್ವಾಂ ದೀಪ್ತಹುತಾಶವಕ್ತ್ರಮ್**
**ಸ್ವತೇಜಸಾ ವಿಶ್ವಮಿದಂ ತಪಂತಮ್**

**ಅರ್ಥ:** ಅನಾದಿಮಧ್ಯಾಂತಮ್=ಆದಿ, ಮಧ್ಯ, ಅಂತ್ಯಗಳು ಇಲ್ಲದವನಾಗಿದ್ದು; ಅನಂತವೀರ್ಯಂ=ಅಪರಿಮಿತ ಸಾಮರ್ಥ್ಯವುಳ್ಳವನಾಗಿ; ಅನಂತಬಾಹುಂ= ಅನೇಕ ಹಸ್ತಗಳುಳ್ಳವನು; ಶಶಿಸೂರ್ಯನೇತ್ರಂ=ಚಂದ್ರ ಹಾಗು ಸೂರ್ಯ ರನ್ನು ಕಣ್ಣುಗಳಾಗಿ ಹೊಂದಿರುವ; ದೀಪ್ತಹುತಾಶವಕ್ತ್ರಂ=ಪ್ರಜ್ವಲಿಸುವ ಅಗ್ನಿಯಂತಹ ಮುಖವುಳ್ಳವನಾಗಿ: ಸ್ವತೇಜಸಾ=ಸ್ವಯಂ ತೇಜಸ್ಸಿನಿಂದ (ಕಾಂತಿಯಿಂದ); ಇದಂ ವಿಶ್ವಂ=ಈ ಸಮಸ್ತ ಪ್ರಪಂಚವನ್ನು; ತಪಂತಂ= ತಪಿಸುವವನೂ (ಆದ); ತ್ವಾಂ=ನಿನ್ನನ್ನು; ಪಶ್ಯಾಮಿ=ನೋಡುತ್ತಿದ್ದೇನೆ.

**ತಾ||** ಆದಿಮಧ್ಯಾಂತರಹಿತನು, ಅಪರಿಮಿತ ಸಾಮರ್ಥ್ಯವುಳ್ಳವನು ಅನೇಕ ಹಸ್ತಗಳುಳ್ಳವನು, ಚಂದ್ರ ಸೂರ್ಯರನ್ನು ನೇತ್ರಗಳಾಗಿ ಉಳ್ಳವನು ಪ್ರಜ್ವಲಿಸುತ್ತಿರುವ ಅಗ್ನಿಯಂತಹ ಮುಖ ಹೊಂದಿರುವವನು, ಸ್ವಯಂ ತೇಜಸ್ಸಿನಿಂದ ಈ ಪ್ರಪಂಚವನ್ನೆಲ್ಲಾ ತಪಿಸುತ್ತಿರುವವನೂ ಆದ ನಿನ್ನನ್ನು ನೋಡುತ್ತಿದ್ದೇನೆ.

೨೦ **ದ್ಯಾವಾಪೃಥಿವ್ಯೋರಿದಮಂತರಂ ಹಿ**
**ವ್ಯಾಪ್ತಂ ತ್ವಯೈಕೇನ ದಿಶಶ್ಚ ಸರ್ವಾಃ**
**ದೃಷ್ಟ್ವಾಽದ್ಭುತಂ ರೂಪಮುಗ್ರಂ ತವೇದಂ**
**ಲೋಕತ್ರಯಂ ಪ್ರವ್ಯಥಿತಂ ಮಹಾತ್ಮನ್**

**ಅರ್ಥ:** ಮಹಾತ್ಮನ್=ಓ ಮಹಾತ್ಮಾ! ದ್ಯಾವಾಪೃಥಿವ್ಯೋಃ=ಸ್ವರ್ಗ ಮತ್ತು ಭೂಲೋಕಗಳ; ಇದಂ ಅನಂತರಂ=ಈ ಮಧ್ಯ ಪ್ರದೇಶ (ಅಂತರಿಕ್ಷ) ವೆಲ್ಲವೂ, ಸರ್ವಾಃ ದಿಶಃ ಚ=ದಿಕ್ಕುಗಳೆಲ್ಲವೂ; ತ್ವಯಾ ಏಕೇನ= ನಿನ್ನೊಬ್ಬನಿಂದಲೇ; ವ್ಯಾಪ್ತಂ ಹಿ=ವ್ಯಾಪಿಸಿರುವುವು; ಉಗ್ರಂ=ಭಯಂಕರವಾದುದು; ಅದ್ಭುತಂ= ಆಶ್ಚರ್ಯಕರವಾದುದೂ (ಆಗಿ); ತವ=ನಿನ್ನ; ಇದಂ ರೂಪಂ=ಈ (ವಿಶ್ವ) ರೂಪವನ್ನು; ದೃಷ್ಟ್ವಾ=ನೋಡಿ; ಲೋಕತ್ರಯಂ=ಮೂರು ಲೋಕಗಳು; ಪ್ರವ್ಯಥಿತಂ=ವಿಪರೀತ ಭಯಗೊಂಡು ನಡುಗುತ್ತಿವೆ.

**ತಾ||** ಓ ಮಹಾತ್ಮಾ! ಸ್ವರ್ಗ ಮತ್ತು ಭೂಲೋಕಗಳ ಈ ಮಧ್ಯದ ಪ್ರದೇಶವೆಲ್ಲವೂ, ದಿಕ್ಕುಗಳೆಲ್ಲವೂ ನಿನ್ನೊಬ್ಬನಿಂದಲೇ ವ್ಯಾಪಿಸಿರುವುವು. ಭಯಂಕರವಾದ, ಆಶ್ಚರ್ಯಕರವಾದ ನಿನ್ನ ಈ ರೂಪವನ್ನು ನೋಡಿ ಮೂರು ಲೋಕಗಳು ಭಯದಿಂದ ತಲ್ಲಣಿಸಿವೆ.

೨೧ **ಅಮೀ ಹಿ ತ್ವಾಂ ಸುರಸಂಘಾ ವಿಶಂತಿ**
**ಕೇಚಿದ್ಭೀತಾಃ ಪ್ರಾಂಜಲಯೋ ಗೃಣಂತಿ**
**ಸ್ವಸ್ತೀ ತ್ಯುಕ್ತ್ವಾ ಮಹರ್ಷಿ ಸಿದ್ಧಸಂಘಾಃ**
**ಸ್ತುವಂತಿ ತ್ವಾಂ ಸ್ತುತಿಭಿಃ ಪುಷ್ಕಲಾಭಿಃ**

**ಅರ್ಥ:** ಅಮೀ=ಈ; ಸುರಸಂಘಾಃ=ದೇವತಾಸಮೂಹಗಳು; ತ್ವಾಂ=ನಿನ್ನನ್ನು (ನಿನ್ನ ವಿಶ್ವರೂಪ); ವಿಶಂತಿಹಿ=ಪ್ರವೇಶಿಸುತ್ತಿರುವುವು; ಕೇಚಿತ್=(ಮತ್ತೆ) ಕೆಲವರು; ಭೀತಾಃ=ಭಯಪಟ್ಟವರಾಗಿ; ಪ್ರಾಂಜಲಯಃ=ಕೈ ಜೋಡಿಸಿ ದವರಾಗಿ; ಗೃಣಂತಿ=ಸ್ತುತಿಸುತ್ತಿದ್ದಾರೆ; ಮಹರ್ಷಿ ಸಿದ್ಧಸಂಘಾಃ= ಮಹರ್ಷಿಗಳ, ಸಿದ್ಧಿಗಳ ಸಮೂಹ; ಸ್ವಸ್ತಿ ಇತಿ ಉಕ್ತ್ವಾ=(ಲೋಕಕ್ಕೆ) ಕ್ಷೇಮವಾಗಲಿ! ಎಂದು ಹೇಳಿ; ಪುಷ್ಕಲಾಭಿಃ ಸ್ತುತಿಭಿಃ=ಸಂಪೂರ್ಣವಾದ ಸ್ತೋತ್ರಗಳಿಂದ; ತ್ವಾಂ=ನಿನ್ನನ್ನು; ಸ್ತುವಂತಿ=ಸ್ತುತಿಸುತ್ತಿದ್ದಾರೆ.

**ತಾ||** ಈ ದೇವತಾ ಸಮೂಹ ನಿನ್ನಲ್ಲಿ ಪ್ರವೇಶಿಸುತ್ತಿದೆ. (ಮತ್ತೆ) ಕೆಲವರು ಭೀತಿಯಿಂದ ಕೈ ಜೋಡಿಸಿಕೊಂಡು (ನಿನ್ನನ್ನು) ಸ್ತುತಿಸುತ್ತಿದ್ದಾರೆ. ಮಹರ್ಷಿಗಳ, ಸಿದ್ಧಿಗಳ ಸಮೂಹಗಳು (ಲೋಕಕ್ಕೆ) ಕ್ಷೇಮವಾಗಲಿ! ಎಂದು ನುಡಿದು ಉತ್ತಮವಾದ ಸ್ತೋತ್ರಗಳಿಂದ ನಿನ್ನನ್ನು ಸ್ತುತಿಸುತ್ತಿದ್ದಾರೆ.

**ವ್ಯಾಖ್ಯೆ:** 'ಸ್ವಸ್ತೀತ್ಯುಕ್ತ್ವಾ ಮಹರ್ಷಿಸಿದ್ಧಸಂಘಾಃ'- ಮಹನೀಯರು ಯಾವಾಗಲೂ ಲೋಕದ ಕ್ಷೇಮವನ್ನೇ ಕೋರುವರು. 'ಸ್ವಸ್ತಿ ಪ್ರಜಾಭ್ಯಃ' ಎಂದೇ ಅವರು ಹೇಳುವರು.

**'ಸ್ತುವಂತಿ'**- ಮಹರ್ಷಿಗಳೇ ಭಗವಂತನ ಸ್ತೋತ್ರವನ್ನು ಮಾಡುತ್ತಿರಬೇಕಾದರೆ ಇನ್ನು ಸಾಮಾನ್ಯರೂ ಕೂಡ ತಪ್ಪದೆ ಭಕ್ತಿಯನ್ನು ಆಶ್ರಯಿಸಿ ಸರ್ವೇಶ್ವರನನ್ನು ಸ್ತುತಿಸುವುದು ಧರ್ಮ.

೨೨ **ರುದ್ರಾದಿತ್ಯ ವಸವೋ ಯೇ ಚ ಸಾಧ್ಯಾ**
**ವಿಶ್ವೇಽಶ್ವಿನೌ ಮರುತಶ್ಚೋಷ್ಮಪಾಶ್ಚ**
**ಗಂಧರ್ವಯಕ್ಷಾಸುರಸಿದ್ಧಸಂಘಾಃ**
**ವೀಕ್ಷಂತೇತ್ವಾಮ್ ವಿಸ್ಮಿತಾಶ್ಚೈವ ಸರ್ವೇ**

**ಅರ್ಥ:** ರುದ್ರಾದಿತ್ಯಾಃ=ರುದ್ರರೂ, ಸೂರ್ಯರೂ; ವಸವಃ=ವಸುಗಳು; ಯೇ ಚ ಸಾಧ್ಯಾಃ=ಸಾಧ್ಯಗಣ; ವಿಶ್ವೇ=ವಿಶ್ವ ದೇವತೆಗಳು; ಅಶ್ವಿನೌ=ಅಶ್ವಿನೀ ದೇವತೆಗಳು; ಮರುತಶ್ಚೋಶ್ಮ=ಮರುತ್ತುಗಳು ಪಿತೃದೇವತೆಗಳು; ಗಂಧರ್ವ ಯಕ್ಷಾಸುರ ಸಿದ್ಧ ಸಂಘಾಃ=ಗಂಧರ್ವ, ಯಕ್ಷ, ಅಸುರ ಹಾಗು ಸಿದ್ಧ ಸಮೂಹವೆಲ್ಲಾ; ಸರ್ವೇ ಚ ಏವ=ಇವರೆಲ್ಲರೂ; ವಿಸ್ಮಿತಾಃ=ಆಶ್ಚರ್ಯವನ್ನು ಹೊಂದಿದವರಾಗಿ; ತ್ವಾಂ=ನಿನ್ನನ್ನು; ವೀಕ್ಷಂತೇ= ನೋಡುತ್ತಿದ್ದಾರೆ.

**ತಾ||** ರುದ್ರರು, ಸೂರ್ಯರು, ವಸುಗಳು, ಸಾಧ್ಯಗಣ ವಿಶ್ವದೇವತೆಗಳು, ಅಶ್ವಿನೀ ದೇವತೆಗಳು, ಗಂಧರ್ವ, ಯಕ್ಷ, ರಾಕ್ಷಸ ಮತ್ತು ಸಿದ್ಧ ಸಮೂಹವೆಲ್ಲಾ ಆಶ್ಚರ್ಯ ಚಕಿತರಾಗಿ ನಿನ್ನನ್ನೇ ನೋಡುತ್ತಿದ್ದಾರೆ.

೨೩. **ರೂಪಂ ಮಹತ್ತೇ ಬಹುವಕ್ತ್ರನೇತ್ರಂ**
**ಮಹಾಬಾಹೋ ಬಹುಬಾಹೂರುಪಾದಮ್**
**ಬಹೂದರಂ ಬಹುದಂಷ್ಟ್ರಾಕರಾಲಂ**
**ದೃಷ್ಟ್ವಾ ಲೋಕಾಃ ಪ್ರವ್ಯಥಿತಾ ಸ್ತಥಾಽಹಮ್**

**ಅರ್ಥ:** ಮಹಾಬಾಹೋ=ಮಹಾಬಾಹುವಾದ ಓ ಕೃಷ್ಣಾ! ಬಹು ವಕ್ತ್ರನೇತ್ರಂ=ಅನೇಕ ಮುಖ ಹಾಗು ನೇತ್ರಗಳನ್ನು ಹೊಂದಿದವನು; ಬಹುಬಾಹೂರೂಪಾದಂ=ಅನೇಕ ಹಸ್ತಗಳೂ, ತೊಡೆಗಳೂ, ಪಾದಗಳನ್ನೂ ಹೊಂದಿರುವ; ಬಹೂದರಂ=ಅನೇಕ ಉದರಗಳನ್ನುಳ್ಳ; ಬಹುದಂಷ್ಟ್ರಾಕರಾಲಂ=ಅನೇಕ ಕೋರೆಹಲ್ಲುಗಳಿಂದ ಭಯಂಕರವಾದ; ತೇ=ನಿನ್ನ; ಮಹದ್ರೂಪಂ=ಮಹಾರೂಪವನ್ನು; ದೃಷ್ಟ್ವಾ=ನೋಡಿ; ಲೋಕಾಃ=ಜನರು; ಪ್ರವ್ಯಥಿತಾಃ=ವಿಪರೀತವಾಗಿ ಭಯಪಡುತ್ತಿರುವರು; ತಥಾ=ಹಾಗೆಯೇ; ಅಹಂ (ಚ)=ನಾನೂ (ಪ್ರವ್ಯಥಿತಃ-ಭಯಪಡುತ್ತಿದ್ದೇನೆ).

**ತಾ||** ದೊಡ್ಡ ಬಾಹುಗಳುಳ್ಳ ಓ ಕೃಷ್ಣಾ! ಅನೇಕ ಮುಖಗಳು ನೇತ್ರಗಳನ್ನು ಹೊಂದಿ, ಅನೇಕ ಪಸ್ತಗಳು, ತೊಡೆಗಳು, ಪಾದಗಳು ಹಾಗು ಉದರಗಳನ್ನು ಹೊಂದಿ, ಅನೇಕ ಕೋರೆಹಲ್ಲುಗಳಿಂದ ಕರಾಳವಾದ ನಿನ್ನ ವಿಶೇಷ ರೂಪವನ್ನು ನೋಡಿ ಜನರೆಲ್ಲರೂ ಭಯಗೊಂಡಿರುವರು. ನಾನೂ ಕೂಡ ಹಾಗೆಯೇ ಭಯಗೊಂಡಿದ್ದೇನೆ.

**೨೪ ನಭಃಸ್ಪೃಶಂ ದೀಪ್ತಮನೇಕವರ್ಣಮ್**
**ವ್ಯಾತ್ತಾನನಂ ದೀಪ್ತವಿಶಾಲನೇತ್ರಮ್**
**ದೃಷ್ಟ್ವಾ ಹಿ ತ್ವಾಂ ಪ್ರವ್ಯಥಿತಾಂತರಾತ್ಮಾ**
**ಧೃತಿಂ ನ ವಿಂದಾಮಿ ಶಮಂ ಚ ವಿಷ್ಣೋ**

**ಅರ್ಥ:** ವಿಷ್ಣೋ=ಓ ವಿಷ್ಣುಮೂರ್ತಿ! ನಭಃ ಸ್ಪೃಶಂ=ಆಕಾಶವನ್ನು ಮುಟ್ಟುತ್ತಿರುವ; ದೀಪ್ತಂ=ಪ್ರಕಾಶಿಸುತ್ತಿರುವ; ಅನೇಕ ವರ್ಣಂ=ಅನೇಕ ಬಣ್ಣಗಳುಳ್ಳ; ವ್ಯಾತ್ತಾನನಂ=ತೆರೆಯಲ್ಪಟ್ಟ ಬಾಯಿಗಳುಳ್ಳವನು; ದೀಪ್ತ ವಿಶಾಲನೇತ್ರಂ=ಜ್ವಲಿಸುತ್ತಿರುವ ವಿಶಾಲವಾದ ನೇತ್ರಗಳುಳ್ಳವನು; ತ್ವಾಂ=ನಿನ್ನನ್ನು; ದೃಷ್ಟ್ವಾ=ನೋಡಿ; ಪ್ರವ್ಯಥಿತಾಂತ್ಮರಾತ್ಮಾ=ಹೆಚ್ಚಿಗೆ ಭಯಬಿದ್ದು ವ್ಯಾಕುಲಚಿತ್ತವುಳ್ಳವನಾಗಿ (ಅಹಂ=ನಾನು); ಧೃತಿಂ=ಧೈರ್ಯವನ್ನು; ಶಮಂ ಚ=ಶಾಂತಿಯನ್ನು; ನ ವಿಂದಾಮಿ ಹಿ=ಹೊಂದದೆ ಇರುವವನಾಗಿದ್ದೇನೆ.

**ತಾ||** ಓ ಕೃಷ್ಣಮೂರ್ತಿ! ಆಕಾಶವನ್ನು ಮುಟ್ಟುತ್ತಿರುವ, ಪ್ರಕಾಶಿಸುತ್ತಿರುವ, ಅನೇಕ ವರ್ಣಗಳಿರುವ, ತೆರೆಯಲ್ಪಟ್ಟ ಬಾಯಿಗಳುಳ್ಳ, ಉಜ್ವಲ ಹಾಗು ವಿಶಾಲವಾದ ನೇತ್ರಗಳುಳ್ಳ ನಿನ್ನನ್ನು ನೋಡಿ ವ್ಯಾಕುಲ ಚಿತ್ತವುಳ್ಳವನಾಗಿ, ಧೈರ್ಯವನ್ನೂ ಶಾಂತಿಯನ್ನೂ ನಾನು ಹೊಂದದೆ ಇದ್ದೇನೆ.

**೨೫ ದಂಷ್ಟ್ರಾಕರಾಲಾನಿ ಚ ತೇ ಮುಖಾನಿ**
**ದೃಷ್ಟ್ವೈವ ಕಾಲಾನಲ ಸನ್ನಿಭಾನಿ**
**ದಿಶೋ ನ ಜಾನೇ ನ ಲಭೇ ಚ ಶರ್ಮ**
**ಪ್ರಸೀದ ದೇವೇಶ ಜಗನ್ನಿವಾಸ**

**ಅರ್ಥ:** ದ್ರಂಷ್ಟ್ರಾಕರಾಲಾನಿ=ಕೋರೆ ಹಲ್ಲುಗಳಿಂದ ಭಯಂಕರವಾಗಿರುವ; ಕಾಲಾನಲಸನ್ನಿಭಾನಿ ಚ=ಮತ್ತೆ ಪ್ರಳಯಾಗ್ನಿಯನ್ನು ಹೋಲುತ್ತಿರುವ; ತೇ=ನಿನ್ನ; ಮುಖಾನಿ=ಮುಖಗಳನ್ನು; ದೃಷ್ಟ್ವಾ=ನೋಡಿ; ದಿಶಃ= ದಿಕ್ಕುಗಳನ್ನು; ನ ಜಾನೇ= ತಿಳಿಯದವನಾಗಿದ್ದೇನೆ (ದಿಗ್ಭ್ರಮೆ ಹೊಂದಿದ್ದೇನೆ); ಶರ್ಮ ಚ=ಸುಖವನ್ನೂ ಕೂಡ; ನ ಏವ ಲಭೇ=ಹೊಂದದಯೇ ಇದ್ದೇನೆ; ದೇವೇಶ=ಓ ದೇವ ದೇವಾ! ಜಗನ್ನಿವಾಸ=ಜಗದಾಶ್ರಯ! ಪ್ರಸೀದ= ಪ್ರಸನ್ನನಾಗು.

**ತಾ||** ಕೋರೆಹಲ್ಲುಗಳಿಂದ ಭಯಂಕರವಾದ, ಪ್ರಳಯಾಗ್ನಿಯನ್ನು ಹೋಲುವ ನಿನ್ನ ಮುಖಗಳನ್ನು ನೋಡಿ ನಾನು ದಿಗ್ಭ್ರಮೆ ಹೊಂದಿದ್ದೇನೆ. ಸುಖವನ್ನು ಹೊಂದದಯೇ ಇದ್ದೇನೆ. ಆದ್ದರಿಂದ ಓ ದೇವ ದೇವಾ! ಜಗದಾಶ್ರಯಾ! ಪ್ರಸನ್ನನಾಗು (ಅನುಗ್ರಹಿಸು).

**೨೬ ಅಮೀ ಚ ತ್ವಾಂ ಧೃತರಾಷ್ಟ್ರಸ್ಯ ಪುತ್ರಾಃ**
**ಸರ್ವೇ ಸಹೈವಾವನಿಪಾಲಸಂಘೈಃ**
**ಭೀಷ್ಮೋದ್ರೋಣಸ್ಸೂತಪುತ್ರ ಸ್ತಥಾಽಸೌ**
**ಸಹಾಸ್ಮದೀಯೈರಪಿ ಯೋಧಮುಖ್ಯೈಃ**

**೨೭ ವಕ್ತ್ರಾಣಿ ತೇ ತ್ವರಮಾಣಾ ವಿಶಂತಿ**
**ದಂಷ್ಟ್ರಾಕರಾಲಾನಿ ಭಯಾನಕಾನಿ**
**ಕೇಚದ್ವಿಲಗ್ನಾ ದಶಾನಾಂತರೇಷು**
**ಸಂದೃಶ್ಯಂತೇ ಚೂರ್ಣಿತೈರುತ್ತಮಾಂಗೈಃ**

**ಅರ್ಥ:** ಅಮೀ-=ಈ; ಧೃತರಾಷ್ಟ್ರಸ್ಯಪುತ್ರಾಃ=ಧೃತರಾಷ್ಟ್ರನಮಕ್ಕಳು; ಸರ್ವೇ=ಎಲ್ಲರೂ; ಭೀಷ್ಮಃ=ಭೀಷ್ಮಾಚಾರ್ಯರು; ದ್ರೋಣಃ= ದ್ರೋಣಾಚಾರ್ಯರು; ಅಸೌಸೂತಪುತ್ರಃ=ಸೂತನ ಮಗನಾದ ಕರ್ಣನು; ಅವನಿಪಾಲ ಸಂಘೈಃ ಸಃ ಏವ=(ಇತರೆ) ರಾಜಸಮೂಹಗಳಿಂದ ಕೂಡಿ; ತಥಾ=ಆ ಪ್ರಕಾರವಾಗಿ; ಅಸ್ಮದೀಯೈಃ=ನಮ್ಮವರಾದ; ಯೋಧಮುಖ್ಯೈಃ ಅಪಿಸಹ=ಸೈನಿಕ ಪ್ರಮುಖರಿಂದ ಕೂಡಿ; ತ್ವಾಂ=ನಿನ್ನನ್ನು; ತ್ವರಮಾಣಾಃ= ತೀವ್ರವಾದ ವೇಗದಿಂದ (ತ್ವರಿತವಾಗಿ ನಿನ್ನನ್ನು ಸೇರುತ್ತಾ); ದಂಷ್ಟ್ರಾಕರಾಲಾನಿ= ಕೋರೆಗಳಿಂದ ಭೀಷಣವಾಗಿರುವ; ಭಯಾನಕಾನಿ=ಭಯಂಕರವಾದ; ತೇ= ನಿನ್ನ; ವಕ್ತ್ರಾಣಿ=ಮುಖಗಳಲ್ಲಿ (ಬಾಯಿಗಳಲ್ಲಿ); ವಿಶಂತಿ=ಪ್ರವೇಶಿಸುತ್ತಿದ್ದಾರೆ; ಕೇಚಿತ್=(ಅವರಲ್ಲಿ) ಕೆಲವರು; ದಶನಾಂತರೇಷು=ಹಲ್ಲುಗಳ ಸಂದಿನಲ್ಲಿ; ವಿಲಗ್ನಾಃ=ಸಿಕ್ಕಿಕೊಂಡವರಾಗಿ; ಚೂರ್ಣಿತೈಃ=ಪುಡಿ ಮಾಡಲ್ಪಟ್ಟ; ಉತ್ತಮಾಂಗೈಃ=ಶಿರಸ್ಸುಗಳಿಂದ; ಸಂದೃಶ್ಯಂತೇ=ಕಂಡುಬರುತ್ತಿದ್ದಾರೆ.

**ತಾ||** ಈ ಧೃತರಾಷ್ಟ್ರನ ಕುಮಾರರು, ಭೀಷ್ಮ, ದ್ರೋಣ, ಕರ್ಣ ಮತ್ತು ಅವರ ಸೇವೆಯಲ್ಲಿರುವ ಸಮಸ್ತ ರಾಜ ಸಮೂಹವು, ಹಾಗೆಯೇ ನಮ್ಮ ಸೈನ್ಯದ ಪ್ರಮುಖರು ನಿನ್ನನ್ನು ತ್ವರೆಯಿಂದ ಸೇರುತ್ತಿರುವವರಾಗಿ ಕೋರೆಹಲ್ಲುಗಳಿಂದ ಭಯಂಕರವಾಗಿರುವ ನಿನ್ನ ಬಾಯಿಗಳಲ್ಲಿ ಪ್ರವೇಶಿಸುತ್ತಿರುವರು. (ಅವರಲ್ಲಿ) ಕೆಲವರ ಶಿರಸ್ಸುಗಳು ನಿನ್ನ ಹಲ್ಲಿನ ಸಂದುಗಳಲ್ಲಿ ಸಿಕ್ಕಿಕೊಂಡು ಪುಡಿಯಾಗಿರುವುದು ಕಂಡುಬರುತ್ತಿದೆ.

**ವ್ಯಾಖ್ಯೆ:** ಪರಮಾತ್ಮನಿಗೆ ಭೂತ, ಭವಿಷ್ಯತ್, ವರ್ತಮಾನ ಕಾಲಗಳ ಭೇದವಿಲ್ಲ. ಕಾಲಾತೀತನಾದ ಭಗವಂತನಿಗೆ ಕಾಲಕ್ಕೆ ಸಂಬಂಧಿಸಿದ ವಿಭೇದಗಳಾಗಲಿ, ವಿಭಜನೆಗಳಾಗಲಿ ಇರುವುದಿಲ್ಲ, ಆದ್ದರಿಂದಲೇ ಭವಿಷ್ಯತ್‌ನಲ್ಲಿ ನಡೆಯಬಹುದಾದ್ದೆಲ್ಲವನ್ನೂ ವರ್ತಮಾನದಲ್ಲೇ ವಿಶ್ವರೂಪದಲ್ಲಿ ಅರ್ಜುನನಿಗೆ ತೋರಿಸಲು ಶಕ್ಯವಾಗಿದೆ. ಭೀಷ್ಮ ದ್ರೋಣಕರ್ಣಾದಿ ಕೌರವ ಪಕ್ಷದ ವೀರರು ಮತ್ತೆ ಪಾಂಡವ ಪಕ್ಷದವರು ಭವಿಷ್ಯತ್ಕಾಲದಲ್ಲಿ ಮೃತಿ ಹೊಂದಿ ಕಾಲಗರ್ಭದಲ್ಲಿ ಪ್ರವೇಶಿಸುವುದನ್ನು ಅರ್ಜುನನು ವಿಶ್ವರೂಪದಲ್ಲಿ ಸ್ಪಷ್ಟವಾಗಿ ನೋಡಿದನು. ಇದರ ಭಾವವೇನು? ಭೂತ ಭವಿಷ್ಯತ್ ವರ್ತಮಾನಗಳೆಲ್ಲವೂ ಪರಮಾತ್ಮನಿಗೆ ಒಂದೇ. ಕಳೆದುಹೋದ ಅನೇಕ ಯುಗಗಳ ಕಾಲ, ಮುಂದೆ ಬರುವ ಅನೇಕ ಯುಗಗಳ ಕಾಲವು ಪರಮಾತ್ಮನಿಗೆ ವರ್ತಮಾನ ಕಾಲವೇ ಆಗಿರುವುದು. ಆತನು ಕಾಲಾತೀತನು. ಕಾಲಕ್ಕೆ ಕಾಲನು. ಕಾಲವು ಆತನಲ್ಲಿ ಕಲ್ಪಿತವಾಗಿರುವುದು.

ಈ ಶ್ಲೋಕದಲ್ಲಿ ವ್ಯಕ್ತಪಡಿಸಲ್ಪಟ್ಟ ಭಾವಗಳನ್ನು ಚೆನ್ನಾಗಿ ವಿಚಾರಿಸಿ ನೋಡಿದಲ್ಲಿ ಜೀವಿಗೆ ವೈರಾಗ್ಯವು ಉದಯಿಸುವುದು. ಏಕೆಂದರೆ, ಪ್ರತ್ಯಕ್ಷವಾಗಿ ಕಾಣಿಸುವ ಭೀಷ್ಮದ್ರೋಣಾದಿ ವೀರರು ಆ ಕ್ಷಣದಲ್ಲಿಯೇ ಭಯಂಕರವಾದ ಕಾಲದ ಕರಾಳ ಮುಖದಲ್ಲಿ ತ್ವರಿತವಾಗಿ ಪ್ರವೇಶಿಸುವುದನ್ನು ಅರ್ಜುನನು ಹೇಗೆ ನೋಡಿದನೋ ಆ ಪ್ರಕಾರವಾಗಿಯೇ ಪ್ರತ್ಯಕ್ಷವಾಗಿ ಕಾಣಿಸುವ ಈ ಬಂಧುಮಿತ್ರದಾರಾಸುತಾದಿಯರು, ಧನಧಾನ್ಯಾದಿಗಳು, ಭವನಗಳು,

ಕ್ಷೇತ್ರಗಳು, ಸಂಪದಗಳು ಮುಂತಾದುವುಗಳೆಲ್ಲಾ ಒಂದು ದಿನ ಕಾಲಗರ್ಭದಲ್ಲಿ ವಿಲೀನವಾಗಿ ಹೋಗುವುವು ಎಂದು, ನಶ್ವರಗಳು ಎಂದು, ಜೀವಿಯು ಭಾವಿಸಿಕೊಳ್ಳಬೇಕು. ಈ ಸತ್ಯವನ್ನು ಚೆನ್ನಾಗಿ ಮನನಮಾಡಿಕೊಂಡಲ್ಲಿ ದೃಶ್ಯಪದಾರ್ಥಗಳಲ್ಲಿ ವೈರಾಗ್ಯ ಭಾವವು ತಾನೇ ತಾನಾಗಿ ಏರ್ಪಾಡಾಗಬಲ್ಲದು.

ಭವಿಷ್ಯತ್ತನ್ನು ವರ್ತಮಾನದಲ್ಲಿ ನೋಡಬಲ್ಲ ಶಕ್ತಿಯೇ ಜ್ಞಾನದೃಷ್ಟಿ. ಮುಂದೆ ಬರುವ ಮೃತ್ಯುವನ್ನು ಈಗ ಊಹಿಸುವುದೇ ಜೀವಿಯ ತಿಳುವಳಿಕೆ ಆಗಿದೆ. ಅಂತಹ ಭವಿಷ್ಯತ್ಭಾವನೆಯಿಂದ, ಮೃತ್ಯುಚಿಂತನೆಯಿಂದ ಜೀವಿಯು ವೈರಾಗ್ಯೋಪೇತನಾಗಿ ಜೀವನವನ್ನು ಜಾಗ್ರತೆಯಾಗಿ ನಡೆಸಬಲ್ಲನು. ಆಗ ಭೋಗಾದಿಗಳಲ್ಲಿ ಆತನಿಗೆ ವಿರಕ್ತಿಯೂ, ಭಗವಂತನಲ್ಲಿ ಭಕ್ತಿಯೂ ಉದಯಿಸುವುದು. ಮರಣ ಸಂಭವಿಸುವುದಕ್ಕೆ ಮುಂಚೆ ಲಕ್ಷ್ಯಪ್ರಾಪ್ತಿಯನ್ನು ಹೊಂದಬೇಕೆಂಬ ದೃಢನಿಶ್ಚಯವನ್ನು ಮಾಡಿ, ಅದಕ್ಕಾಗಿ ತೀವ್ರವಾಗಿ ಪ್ರಯತ್ನಿಸುವನು.

ಆದ್ದರಿಂದ ವಿಶ್ವರೂಪದಲ್ಲಿ ಅರ್ಜುನನು ಕಂಡ ಭವಿಷ್ಯತ್ ಕಾಲಚಿತ್ರವನ್ನು ಪ್ರತಿಮುಮುಕ್ಷುವು ತನ್ನ ಹೃದಯ ಕ್ಷೇತ್ರದಲ್ಲಿ ಚಿತ್ರಿಸಿಕೊಂಡು ವೈರಾಗ್ಯಯುಕ್ತನಾಗಿ ಲಕ್ಷ್ಯವಾದ ಪರಮಾತ್ಮಪ್ರಾಪ್ತಿಗಾಗಿ ಅನವರತ ಯತ್ನ ಮಾಡುತ್ತಿರಬೇಕು.

**೨೮ ಯಥಾ ನದೀನಾಂ ಬಹವೋಽಂಬುವೇಗಾ**
**ಸ್ಸಮುದ್ರಮೇವಾಭಿಮುಖಾ ದ್ರವಂತಿ**
**ತಥಾ ತವಾಮಿ ನರಲೋಕವೀರಾಃ**
**ವಿಶಂತಿ ವಕ್ತ್ರಾಣ್ಯಭಿವಿಜ್ವಲಂತಿ**

**ಅರ್ಥ:** ಯಥಾ=ಯಾವ ಪ್ರಕಾರವಾಗಿ; ನದೀನಾಂ=ನದಿಗಳ; ಬಹವಃ= ಅನೇಕ; ಅಂಬುವೇಗಾಃ=ಜಲಪ್ರವಾಹಗಳು; ಸಮುದ್ರಂ ಏವ= ಸಮುದ್ರವನ್ನು ಸೇರಲು; ಅಭಿಮುಖಾಃ=ಅಭಿಮುಖವಾಗಿ; ದ್ರವಂತಿ=ಪ್ರವಹಿಸುತ್ತಿರುವುವೋ (ಹರಿಯುತ್ತಿರುವುವೋ); ತಥಾ=ಆ ಪ್ರಕಾರವಾಗಿ; ಅಮೀ=ಈ; ನರಲೋಕವೀರಾಃ=ಮನುಷ್ಯಲೋಕದಲ್ಲಿಯ ವೀರರು (ರಾಜರು); ಅಭಿ ವಿಜ್ವಲಂತಿ=ಪ್ರಕಾಶವಾಗಿ ಪ್ರಜ್ವಲಿಸುತ್ತಿರುವ; ತವ=ನಿನ್ನ; ವಕ್ತ್ರಾಣಿ=ಬಾಯಿ ಗಳಲ್ಲಿ; ವಿಶಂತಿ=ಪ್ರವೇಶಿಸುತ್ತಿದ್ದಾರೆ.

**ತಾ||** ಯಾವ ಪ್ರಕಾರ ಅನೇಕ ನದೀ ಪ್ರವಾಹಗಳು ಸಮುದ್ರಾಭಿಮುಖವಾಗಿ ಪ್ರವಹಿಸುತ್ತ ಅದರಲ್ಲಿ ಸೇರುತ್ತಿರುವುವೋ ಆ ಪ್ರಕಾರವಾಗಿಯೇ ಈ ಮನುಷ್ಯಲೋಕದಲ್ಲಿಯ ವೀರರು (ರಾಜರು) ಪ್ರಜ್ವಲಿಸುತ್ತಿರುವ ನಿನ್ನ ಬಾಯಿಗಳಲ್ಲಿ ಪ್ರವೇಶಿಸುತ್ತಿದ್ದಾರೆ.

**೨೯ ಯಥಾ ಪ್ರದೀಪ್ತಂ ಜ್ವಲನಂ ಪತಂಗಾಃ**
**ವಿಶಂತಿ ನಾಶಾಯ ಸಮೃದ್ಧವೇಗಾಃ**
**ತಥೈವ ನಾಶಾಯ ವಿಶಂತಿ ಲೋಕಾ**
**ಸ್ತವಾಪಿ ವಕ್ತ್ರಾಣಿ ಸಮೃದ್ಧವೇಗಾಃ**

**ಅರ್ಥ:** ಯಥಾ=ಯಾವ ಪ್ರಕಾರವಾಗಿ; ಪತಂಗಾಃ=ಪತಂಗಗಳು; ನಾಶಾಯ= ವಿನಾಶಕ್ಕಾಗಿ, ಸಮೃದ್ಧವೇಗಾಃ=ಅತಿ ವೇಗವಾಗಿ; ಪ್ರದೀಪ್ತಂ= ಬೆಳಗುತ್ತಿರುವ; ಜ್ವಲನಂ=ಅಗ್ನಿಯನ್ನು; ವಿಶಂತಿ= ಪ್ರವೇಶಿಸುತ್ತಿರುವುವೋ; ತಥಾ ಏವ=ಆ ಪ್ರಕಾರವಾಗಿ; ಲೋಕಾಃ ಅಪಿ=ಜನರು ಕೂಡ; ಸಮೃದ್ಧ ವೇಗಾಃ=ಅತಿ ವೇಗದಿಂದ ಕೂಡಿದವರಾಗಿ; ನಾಶಾಯ=ನಾಶಕ್ಕಾಗಿ; ತವ=ನಿನ್ನ; ವಕ್ತ್ರಾಣಿ= ಬಾಯಿ(ಗಳಲ್ಲಿ); ವಿಶಂತಿ=ಪ್ರವೇಶಿಸುತ್ತಿದ್ದಾರೆ.

**ತಾ||** ಯಾವ ಪ್ರಕಾರವಾಗಿ ಪತಂಗಗಳು ವಿನಾಶಕ್ಕಾಗಿ ಅತಿವೇಗದಿಂದ ಉರಿಯುತ್ತಿರುವ ಅಗ್ನಿಯಲ್ಲಿ ಪ್ರವೇಶಿಸುತ್ತವೆಯೋ, ಆ ಪ್ರಕಾರವಾಗಿ ಜನರು (ದೇಹಗಳು) ಕೂಡ ಅತಿ ವೇಗದಿಂದ ನಾಶಕ್ಕಾಗಿ ನಿನ್ನ ಬಾಯಿಗಳಲ್ಲಿ ಪ್ರವೇಶಿಸುತ್ತಿದ್ದಾರೆ.

**೩೦ ಲೇಲಿಹ್ಯಸೇ ಗ್ರಸಮಾನಸ್ಸಮಂತಾತ್**
**ಲ್ಲೋಕಾನ್ ಸಮಗ್ರಾನ್ ವದನೈರ್ಜ್ವಲದ್ಭಿಃ**
**ತೇಜೋಭಿರಾಪೂರ್ಯ ಜಗತ್ಸಮಗ್ರಂ**
**ಭಾಸಸ್ತವೋಗ್ರಾಃ ಪ್ರತಪಂತಿ ವಿಷ್ಣೋ**

**ಅರ್ಥ:** ವಿಷ್ಣೋ=ಓ ವಿಷ್ಣುಮೂರ್ತಿ! ಜ್ವಲದ್ಭಿಃ=ಉರಿಯುತ್ತಿರುವ; ವದನೈಃ=ಮುಖಗಳಿಂದ (ಬಾಯಿಗಳಿಂದ); ಸಮಗ್ರ ಲೋಕಾನ್=ಸಮಸ್ತ ಜನರನ್ನು; ಸಮಂತಾತ್=ಎಲ್ಲವನ್ನೂ (ನಾಲ್ಕೂ ಕಡೆ); ಗ್ರಸಮಾನಃ= ನುಂಗುತ್ತಿರುವವನಾಗಿ; ಲೇಲಿಹ್ಯಸೇ=ಆಸ್ವಾದಿಸುತ್ತಿದ್ದೀಯೆ; ತವ=ನಿನ್ನ; ಉಗ್ರಾಃ=ಭಯಂಕರಗಳಾದ; ಭಾಸಃ=ಕಾಂತಿಗಳು; ತೇಜೋಭಿಃ=ತಮ್ಮ ತೇಜಸ್ಸುಗಳಿಂದ; ಸಮಗ್ರಂ=ಸಮಸ್ತವಾದ; ಜಗತ್=ಜಗತ್ತನ್ನು; ಆಪೂರ್ಯ= ವ್ಯಾಪಿಸಿ; ಪ್ರತಪಂತಿ=ತಪಿಸುತ್ತಿವೆ.

**ತಾ||** ಓ ವಿಷ್ಣುಮೂರ್ತಿ! ಉರಿಯುತ್ತಿರುವ ನಿನ್ನ ಈ ಬಾಯಿಗಳಿಂದ ಜನರೆಲ್ಲಾ ನುಂಗಲ್ಪಟ್ಟವರಾಗಿ ಆಸ್ವಾದಿಸಲ್ಪಡುತ್ತಿದ್ದಾರೆ. ನಿನ್ನ ಈ ಉಗ್ರವಾದ ಪ್ರಕಾಶವು ತೇಜಸ್ಸಿನಿಂದ ಜಗತ್ತೆಲ್ಲವನ್ನೂ ವ್ಯಾಪಿಸಿ ತೀವ್ರವಾಗಿ ತಪಿಸುತ್ತಿದೆ.

**೩೧ ಆಖ್ಯಾಹಿ ಮೇ ಕೋ ಭವಾನುಗ್ರರೂಪೋ**
**ನಮೋಽಸ್ತು ತೇ ದೇವವರ ಪ್ರಸೀದ**
**ವಿಜ್ಞಾತುಮಿಚ್ಛಾಮಿ ಭವಂತಮಾದ್ಯಂ**
**ನ ಹಿ ಪ್ರಜಾನಾಮಿ ತವ ಪ್ರವೃತ್ತಿಮ್**

**ಅರ್ಥ:** ದೇವವರ=ದೇವಶ್ರೇಷ್ಠಾ! ಉಗ್ರರೂಪಃ=ಭಯಂಕರ ಆಕಾರವುಳ್ಳ; ಭವಾನ್=ನೀನು; ಕಃ=ಯಾರೋ; ಮೇ=ನನಗೆ; ಆಖ್ಯಾಹಿ=ಹೇಳು; ಹಿ=ಏಕೆಂದರೆ; ತವ ಪ್ರವೃತ್ತಿಂ=ನಿನ್ನ ಪ್ರವೃತ್ತಿಯನ್ನು; ನ ಪ್ರಜಾನಾಮಿ= ತಿಳಿಯಲಾರದವನಾಗಿದ್ದೇನೆಯಾದ್ದರಿಂದ; ಆದ್ಯಂ=ಆದಿಪುರುಷನಾದ; ಭ ವಂತಂ=ನಿನ್ನನ್ನು, ವಿಜ್ಞಾತುಂ=ತಿಳಿದುಕೊಳ್ಳಲು; ಇಚ್ಛಾಮಿ=ಕೋರುತ್ತಿದ್ದೇನೆ; ತೇ=ನಿನಗೆ; ನಮಃ=ನಮಸ್ಕಾರ; ಅಸ್ತು=ಇರಲಿ! ಪ್ರಸೀದ=ಅನುಗ್ರಹಿಸು (ಪಸನ್ನನಾಗು)

**ತಾ||** ದೇವೋತ್ತಮಾ! ಭಯಂಕರಾಕಾರವುಳ್ಳ ನೀನು ಯಾರೋ ನನಗೆ ಹೇಳುವುದು. ಏಕೆಂದರೆ, ನಿನ್ನ ಪ್ರವೃತ್ತಿಯನ್ನು ನಾನು ತಿಳಿಯದವನಾಗಿದ್ದೇನೆ. ಆದ್ದರಿಂದ ಆದಿಪುರುಷನಾದ ನಿನ್ನನ್ನು ಕುರಿತು ತಿಳಿಯಲು ಇಚ್ಛಿಸುತ್ತೇನೆ. ನಿನಗೆ ನಮಸ್ಕಾರ. ನನ್ನನ್ನು ಅನುಗ್ರಹಿಸು.

**ವ್ಯಾಖ್ಯೆ:** ಭಗವಂತನನ್ನು ಕುರಿತು ತಿಳಿಯಲು ಬಯಸುವವರು ಅರ್ಜುನನ ಹಾಗೆ ವಿನಯಾನ್ವಿತರಾಗಿ, ಭಕ್ತಿಭಾವ ಸಮನ್ವಿತರಾಗಿರಬೇಕು.

**ಅ||** ಅರ್ಜುನನ ಪ್ರಶ್ನೆಗಳಿಗೆ ಭಗವಂತನು ಉತ್ತರವೀಯುತ್ತಿದ್ದಾನೆ-

ಶ್ರೀ ಭಗವಾನುವಾಚ

**೩೨ ಕಾಲೋಽಸ್ಮಿ ಲೋಕಕ್ಷಯಕೃತ್ಪ್ರವೃದ್ಧೋ**
**ಲೋಕಾನ್ ಸಮಾಹರ್ತುಮಿಹ ಪ್ರವೃತ್ತಃ**

**ಋತೇಽಪಿ ತ್ವಾ ನ ಭವಿಷ್ಯಂತಿ ಸರ್ವೇ**
**ಯೇಽವಸ್ಥಿತಾಃ ಪ್ರತ್ಯನೀಕೇಷು ಯೋಧಾಃ**

ಶ್ರೀ ಭಗವಾನುವಾಚ-ಶ್ರೀ ಭಗವಂತನು ಹೇಳಿದನು-

**ಅರ್ಥ:** (ಅಹಂ=ನಾನು) ಲೋಕಕ್ಷಯಕೃತ್=ಲೋಕ ಸಂಹಾರಕನಾಗಿ; ಪ್ರವೃದ್ಧಃ= ವಿಜೃಂಭಿಸಿದ; ಕಾಲಃ=ಕಾಲನು; ಅಸ್ಮಿ=ಆಗಿದ್ದೇನೆ; ಲೋಕಾನ್=ಪ್ರಾಣಿಗಳನ್ನು; ಸಮಾಹರ್ತುಂ= ಸಂಹರಿಸಲು; ಇಹ=ಈ ಪ್ರಪಂಚದಲ್ಲಿ; ಪ್ರವೃತ್ತಃ= ಪ್ರವರ್ತಿಸಿದವನು; ಪ್ರತ್ಯನೀಕೇಷು=ಪ್ರತಿಪಕ್ಷ ಸೈನ್ಯದಲ್ಲಿ (ಶತ್ರು ಸೇನೆಯಲ್ಲಿ); ಯೇ ಯೋಧಾಃ=ಯಾವ ವೀರರು; ಅವಸ್ಥಿತಾಃ=ಇದ್ದಾರೋ; (ತೇ) ಸರ್ವೇ=ಅವರೆಲ್ಲರೂ; ತ್ವಾ ಋತೇಽಪಿ=ನೀನು ಇಲ್ಲದೇ ಇದ್ದರೂ (ನೀನು ಯುದ್ಧವನ್ನು ಮಾಡದೇ ಇದ್ದರೂ); ನಭವಿಷ್ಯಂತಿ= ಜೀವಿಸಿರುವುದಿಲ್ಲ (ಮೃತಿ ಹೊಂದದೆ ತಪ್ಪದು).

**ತಾ||** ಶ್ರೀ ಭಗವಂತನು ಹೇಳಿದನು- (ನಾನು) ಲೋಕಸಂಹಾರಕನಾಗಿ ವಿಜೃಂಭಿಸಿದ ಕಾಲನಾಗಿದ್ದೇನೆ. ಪ್ರಾಣಿಗಳನ್ನು ಸಂಹರಿಸುವ ನಿಮಿತ್ತ ಈ ಪ್ರಪಂಚದಲ್ಲಿ ಪ್ರವರ್ತಿಸುತ್ತಿದ್ದೇನೆ. ಪ್ರತಿ ಪಕ್ಷ ಸೈನ್ಯದಲ್ಲಿಯ ವೀರರು, ನೀನು ಇಲ್ಲದೇ ಹೋದರೂ (ಯುದ್ಧ ಮಾಡದೇ ಇದ್ದರೂ) ಜೀವಿಸಲಾರರು (ಮೃತಿ ಹೊಂದದೆ ತಪ್ಪದು).

**३३ ತಸ್ಮಾತ್ತ್ವಮುತ್ತಿಷ್ಠ ಯಶೋ ಲಭಸ್ವ**
**ಜಿತ್ವಾ ಶತ್ರೂನ್ ಭುಂಕ್ಷ್ವ ರಾಜ್ಯಂಸಮೃದ್ಧಂ**
**ಮಯೈವೇತೇ ನಿಹತಾಃ ಪೂರ್ವಮೇವ**
**ನಿಮಿತ್ತಮಾತ್ರಂ ಭವ ಸವ್ಯಸಾಚಿನ್**

**ಅರ್ಥ:** ತಸ್ಮಾತ್=ಆದ್ದರಿಂದ; ತ್ವಂ=ನೀನು; ಉತ್ತಿಷ್ಠ=ಏಳು; ಶತ್ರೂನ್= ಶತ್ರುಗಳನ್ನು; ಜಿತ್ವಾ=ಜಯಿಸಿ, ಯಶಃ=ಕೀರ್ತಿಯನ್ನು; ಲಭಸ್ವ=ಹೊಂದು; ಸಮೃದ್ಧಂ=ಪರಿಪೂರ್ಣವಾದ (ನಿಷ್ಕಂಟಕವಾದ); ರಾಜ್ಯಂ=ರಾಜ್ಯವನ್ನು; ಭುಂಕ್ಷ್ವ ಅನುಭವಿಸುವುದು; ಏತೇ=ಇವರು; ಮಯಾ ಏವ=ನನ್ನ ಕೈಯಿಂದಲೇ; ಪೂರ್ವ ಏವ=ಈಗಾಗಲೇ; ನಿಹತಾಃ=ಹತರಾಗಿರುವರು; ಸವ್ಯಸಾಚಿನ್= ಓ ಅರ್ಜುನಾ! ನಿಮಿತ್ತ ಮಾತ್ರಂ ಭವ=(ನೀನು) ನಿಮಿತ್ತಮಾತ್ರನಾಗಿರು.

**ತಾ||** ಆದ್ದರಿಂದ ನೀನು ಏಳು, ಶತ್ರುಗಳನ್ನು ಜಯಿಸಿ ಕೀರ್ತಿಯನ್ನು ಪಡೆ. ಪರಿಪೂರ್ಣವಾದ (ನಿಷ್ಕಂಟಕವಾದ) ರಾಜ್ಯವನ್ನು ಅನುಭವಿಸು. ಇವರೆಲ್ಲರೂ ಈಗಾಗಲೇ ನನ್ನಿಂದಲೇ ಕೊಲ್ಲಲ್ಪಟ್ಟಿರುವರು. ಆದ್ದರಿಂದ ಓ ಅರ್ಜುನಾ! ನೀನು ನಿಮಿತ್ತ ಮಾತ್ರನಾಗು.

**ವ್ಯಾಖ್ಯೆ:** 'ನಿಮಿತ್ತ ಮಾತ್ರಂ ಭವ'- ಪ್ರಪಂಚದಲ್ಲಿಯ ಸಮಸ್ತ ಕಾರ್ಯಗಳು ಭಗವಂತನಿಂದ ಮಾಡಲ್ಪಡುತ್ತಿವೆ. ಜೀವಿಗಳು ನಿಮಿತ್ತ ಮಾತ್ರಗಳೇ ಆಗಿರುವರು. ಆದರೆ ಅಜ್ಞಾನಿಗಳಾದ ಜನರು 'ನಾನು ಮಾಡಿದ್ದೇನೆ' ಎನ್ನುವ ಕರ್ತೃತ್ವವನ್ನು ಹೊಂದಿ ತತ್ಫಲಿತವಾಗಿ ಬದ್ಧರಾಗಿ ದುಃಖಕ್ಕೆ ಒಳಗಾಗುತ್ತಿದ್ದಾರೆ. ಓ ಅರ್ಜುನಾ! ನಿನ್ನ ಶತ್ರುಗಳು ಈಗಾಗಲೇ ನನ್ನಿಂದ ಹತರಾಗಿದ್ದಾರೆ. ನೀನು ಈಗ ನಿಮಿತ್ತ ಮಾತ್ರವಾಗಿ ಯುದ್ಧಮಾಡಿ ವಿಜಯವನ್ನು ಹೊಂದು ಎಂದು ಭಗವಂತನು ಅರ್ಜುನನಿಗೆ ಬೋಧಿಸಿದನು. ಇದರಿಂದ ಈ ಜಗತ್ತಿನಲ್ಲಿಯ ಸಮಸ್ತವೂ ಭಗವಂತನಿಂದ ನಿರ್ಣಯಿಸಲ್ಪಟ್ಟಿದೆಯೆಂದು ತಿಳಿದುಬರುವುದು. ಜೀವಿಗಳು ಭ್ರಾಂತಿಯಲ್ಲಿ ಬಿದ್ದು ಅಹಂಭಾವದಿಂದ ವ್ಯರ್ಥವಾಗಿ ತಮ್ಮ ಮೇಲೆ ಕರ್ತೃತ್ವವನ್ನು ಹಾಕಿಕೊಳ್ಳುತ್ತಿದ್ದಾರೆಂದು ಸ್ಪಷ್ಟವಾಗುತ್ತದೆ. ಆದ್ದರಿಂದ ಮುಮುಕ್ಷು ಅಂತಹ ಕರ್ತೃತ್ವವನ್ನು ತ್ಯಜಿಸಿ ಎಲ್ಲವನ್ನೂ ಭಗವಂತನೇ ಮಾಡುತ್ತಿದ್ದಾನೆಂದು ಭಾವಿಸಿ, ತಾನು ಲೋಕವ್ಯವಹಾರದಲ್ಲಿ ನಿಮಿತ್ತ ಮಾತ್ರನಾಗಿರಬೇಕು. ಆದರಿಂದ ನಿರಹಂಭಾವ, ತತ್ಫಲಿತವಾಗಿ ನಿರ್ಮಲಭಾವ, ಭಗವದನುಗ್ರಹ ಆತನಿಗೆ ಲಭಿಸುವುದು.

'ಸವ್ಯಸಾಚಿನ್'- ಅರ್ಜುನನು ಎರಡು ಕೈಗಳಿಂದಲೂ ಸಹ ಬಾಣಗಳನ್ನು ಪ್ರಯೋಗಿಸುವ ಸಾಮರ್ಥ್ಯವುಳ್ಳವನೆಂದು ಅರ್ಥ.

**३४ ದ್ರೋಣಂ ಚ ಭೀಷ್ಮಂ ಚ ಜಯದ್ರಥಂ ಚ**
**ಕರ್ಣಂ ತಥಾಽನ್ಯಾನಪಿ ಯೋಧವೀರಾನ್**
**ಮಯಾ ಹತಾಂಸ್ತ್ವಂ ಜಹಿ ಮಾ ವ್ಯಥಿಷ್ಠಾ**
**ಯುಧ್ಯಸ್ವ ಜೇತಾಸಿ ರಣೇ ಸಪತ್ನಾನ್**

**ಅರ್ಥ:** ಮಯಾ=ನನ್ನಿಂದ.; ಹತಾನ್=(ಈಗಾಗಲೇ) ಕೊಲ್ಲಲ್ಪಟ್ಟ; ದ್ರೋಣಂ ಚ=ದ್ರೋಣಾಚಾರ್ಯ; ಭೀಷ್ಮಂ ಚ=ಭೀಷ್ಮಾಚಾರ್ಯ; ಜಯದ್ರಥಂ ಚ= ಜಯದ್ರಥನು; ಕರ್ಣಂ=ಕರ್ಣನು; ತಥಾ=ಹಾಗೆಯೇ; ಅನ್ಯಾನ್ಯೋಧವೀರಾನ್ ಅಪಿ=ಇತರೆ ಯುದ್ಧ ವೀರರು ಕೂಡ; ತ್ವಂ=ನೀನು; ಜಹಿ=ವಧಿಸು; ಮಾ ವ್ಯಥಿಷ್ಠಾ=ಭಯಪಡಬೇಡ; ಯುಧ್ಯಸ್ವ= ಯುದ್ಧಮಾಡು; ರಣೇ=ಯುದ್ಧದಲ್ಲಿ; ಸಪತ್ನಾನ್=ಶತ್ರುಗಳನ್ನು; ಜೇತಾಸಿ=ಗೆಲ್ಲಬಲ್ಲೆ.

**ತಾ||** ನನ್ನಿಂದ (ಈಗಾಗಲೇ) ಹತರಾದ ದ್ರೋಣಾಚಾರ್ಯ ಭೀಷ್ಮಾಚಾರ್ಯ, ಜಯದ್ರಥ, ಕರ್ಣ ಹಾಗೆಯೇ ಇತರ ಯುದ್ಧ ವೀರರನ್ನೂ ನೀನು ವಧಿಸು. ಭಯಪಡಬೇಡ. ಯುದ್ಧ ಮಾಡು. ಶತ್ರುಗಳನ್ನು ಗೆಲ್ಲಬಲ್ಲೆ.

**ವ್ಯಾಖ್ಯೆ:** 'ಮಾ ವ್ಯಥಿಷ್ಠಾ'- ಭಯಪಡಬೇಡ. ಇದು ಸರ್ವರಿಗೂ ಒಳ್ಳೆಯ ಉಪದೇಶ. ಸರ್ವೇಶ್ವರನ ಶರಣು ಹೊಂದಿ ತನ್ನ ಕರ್ತವ್ಯವನ್ನು ಧರ್ಮಪೂರಕವಾಗಿ ಆಚರಿಸುವವನು ಇನ್ನು ಭಯಪಡುವುದೇಕೇ? ಆದ್ದರಿಂದಲೇ ಭಗವಂತನು ತನ್ನ ಕರ್ತವ್ಯವನ್ನು ತನ್ನ ವಿಧ್ಯುಕ್ತ ಧರ್ಮವನ್ನು, ಧೈರ್ಯದಿಂದ ನಿರ್ಭಯದಿಂದ ಆಚರಿಸಬೇಕೆಂದು ಅರ್ಜುನನಿಗೆ ಬೋಧಿಸುತ್ತಿದ್ದಾನೆ. **'ಮಾ ವ್ಯಥಿಷ್ಠಾ'-** ಎನ್ನುವ ಈ ಭಗವದ್ವಾಕ್ಯವನ್ನು ಸರ್ವರೂ ತಮ್ಮ ನಿತ್ಯ ವ್ಯವಹಾರಗಳಲ್ಲಿ ಅಳವಡಿಸಿಕೊಳ್ಳಬೇಕು. ಜೀವನರಂಗದಲ್ಲಿ ಮನುಜನು ಅನೇಕ ಕಡೆ ಎಷ್ಟೋ ಕ್ಲೇಶಗಳನ್ನು, ಪ್ರತಿಬಂಧಗಳನ್ನು ಎದುರಿಸಬೇಕಾಗುತ್ತದೆ. ಆಗ ಈ ಮೇಲಿನ ವಾಕ್ಯವನ್ನು ಸ್ಮರಿಸಿ ಧೈರ್ಯವನ್ನು ತಂದುಕೊಳ್ಳಬೇಕು. ಅರ್ಜುನನ ಹಾಗೆ ಸಮಸ್ತವನ್ನೂ ಭಗವದರ್ಪಣ ಮಾಡಿ ಭಗವಂತನನ್ನು ನಿರ್ಮಲ ಚಿತ್ತದಿಂದ ಆಶ್ರಯಿಸಿ ತನ್ನ ಕರ್ತವ್ಯವನ್ನು ಕರ್ಮವನ್ನು ನೆರವೇರಿಸಿದರೆ ಜೀವಿಯು ಇನ್ನು ವ್ಯಥೆ ಹೊಂದಬೇಕಾಗಿಲ್ಲ. ಇಲ್ಲಿ 'ಯುಧ್ಯಸ್ವ' (ಯುದ್ಧ ಮಾಡು) ಎನ್ನುವ ಪದ ಅವರವರ ಕರ್ತವ್ಯ ನಿರ್ವಹಣೆಯನ್ನು ಸೂಚಿಸುತ್ತದೆ. 'ಜೇತಾಸೀ' (ಜಯಿಸುವೆ) ಎನ್ನುವ ಪದ ಫಲವನ್ನು ಹೇಳುತ್ತದೆ. ಅಂದರೆ, ಈ ಪ್ರಕಾರವಾಗಿ ಸರ್ವೇಶ್ವರನನ್ನು ಆಶ್ರಯಿಸಿ ತನ್ನ ಕರ್ತವ್ಯವನ್ನು ಮಾಡುವವನು ಉತ್ತಮ ಫಲವನ್ನು ತಪ್ಪದೆ ಹೊಂದುವನೆಂದು, ವಿಜಯವನ್ನು ತಪ್ಪದೆ ಸಾಧಿಸುವನೆಂದು ಭಾವ. ಕಾರ್ಯವಿಜಯಕ್ಕೆ ಇದು ಒಳ್ಳೆಯ ಉಪಾಯ ಎಲ್ಲಿ ಶ್ರೀಕೃಷ್ಣನು, ಅಂದರೆ ಭಗವದ್ಭಾವ ಇರುವುದೋ ಅಲ್ಲಿ ವಿಜಯವು ನಿಶ್ಚಿತ.

ಶ್ರೀ ಕೃಷ್ಣನು ಗೀತೆಯನ್ನು ಬೋಧಿಸುವ ವೇಳೆಯಲ್ಲಿ ಭೀಷ್ಮ, ದ್ರೋಣ, ಕರ್ಣ ಮುಂತಾದವರು ಜೀವಿಸುತ್ತಿದ್ದರು. ಆದರೆ ಅವರು ಮರಣಿಸಿದ ಹಾಗೆ ಭಗವಂತನು ಅರ್ಜುನನಿಗೆ ಇಲ್ಲಿ ತಿಳಿಸಿದನು. ಇದು ಏನು ಆಶ್ಚರ್ಯ!

ಇದಕ್ಕೆ ಕಾರಣವಿದೆ. ಈ ವಿಷಯವನ್ನು ಈಗಾಗಲೇ ೨೭ ನೆಯ ಶ್ಲೋಕದ ವ್ಯಾಖ್ಯೆಯಲ್ಲಿ ತಿಳಿಸಲಾಗಿದೆ. ಭಗವಂತನು ಕಾಲಾತೀತನು. ಆತನಿಗೆ ಭೂತ ಭವಿಷ್ಯತ್ ವರ್ತಮಾನಗಳೆಂಬ ಕಾಲಭೇದಗಳಿಲ್ಲ. ಆದ್ದರಿಂದಲೇ ಆತನಿಗೆ ಭವಿಷ್ಯತ್ ವೃತ್ತಾಂತವನ್ನು (ಭೀಷ್ಮಾದಿಗಳ ಮೃತ್ಯುವನ್ನು) ವರ್ತಮಾನ ಕಾಲದಲ್ಲಿ ತೋರಿಸಲು ಸಾಧ್ಯವಾಯಿತು. ಇದರಿಂದ ಮನುಜರು ಸದ್ಭಾವವನ್ನು ಕಲಿಯಬೇಕು. 'ಈ ಕಾಣಿಸುವ ಬಂಧು ಮಿತ್ರಾದಿಗಳು. ಸಿರಿಸಂಪದಗಳು ಮುಂತಾದುವು ಎಲ್ಲವೂ ಭವಿಷ್ಯತ್ಕಾಲದಲ್ಲಿ ವಿನಾಶವನ್ನು ಹೊಂದುವುವೇ ಆಗಿವೆ', ಎಂದು ಸ್ಪಷ್ಟವಾಗಿ ತಿಳಿಯುತ್ತದೆ. ಆ ಭವಿಷ್ಯದ ಚಿತ್ರವನ್ನು ಮುಮುಕ್ಷುಗಳು ಈಗಲೇ ತಮ್ಮ ಹೃದಯದಲ್ಲಿ ಚಿತ್ರಿಸಿಕೊಂಡು ವೈರಾಗ್ಯಾದಿಗಳನ್ನು ಅಭ್ಯಸಿಸಬೇಕು. ಬುದ್ಧನು ಆ ಪ್ರಕಾರವೇ 'ಮರಣ'ದ ಬಗ್ಗೆ, ದೇಹಾದಿಗಳ ಅಶಾಶ್ವತೆಯನ್ನು ಕುರಿತು ಮೊದಲೇ ಚಿಂತಿಸಿ ಆ ಭಾವನೆಯಿಂದ ಮಹೋಂತಸ್ತನ್ನು ಹೊಂದಿದನು.

**ಅ॥** ಭಗವಂತನ ಆ ವಾಕ್ಯಗಳನ್ನು ಕೇಳಿ ಅರ್ಜುನನು ಏನು ಮಾಡಿದನೆನ್ನುವುದನ್ನು ಸಂಜಯನು ಹೇಳುತ್ತಿದ್ದಾನೆ.

**ಸಂಜಯ ಉವಾಚ**

**೩೫ ಏತಚ್ಛ್ರುತ್ವಾ ವಚನಂ ಕೇಶವಸ್ಯ**
**ಕೃತಾಂಜಲಿರ್ವೇಪಮಾನಃ ಕಿರೀಟೀ**
**ನಮಸ್ಕೃತ್ವಾ ಭೂಯ ಏವಾಹ ಕೃಷ್ಣಮ್**
**ಸಗದ್ಗದಂ ಭೀತಭೀತಃ ಪ್ರಣಮ್ಯ**

ಸಂಜಯಉವಾಚ - ಸಂಜಯನು ಹೇಳಿದನು.

**ಅರ್ಥ:** ಕಿರೀಟಿ=ಅರ್ಜುನನು; ಕೇಶವಸ್ಯ=ಶ್ರೀ ಕೃಷ್ಣನ; ಏತತ್=ಈ; ವಚನಂ=ವಾಕ್ಯವನ್ನು; ಶೃತ್ವಾ=ಕೇಳಿ; ವೇಪಮಾನಃ=ನಡುಗುತ್ತಿರುವವನಾಗಿ; ಕೃತಾಂಜಲಿಃ=ಕೈ ಜೋಡಿಸಿದಂತವನಾಗಿ; ಕೃಷ್ಣಂ=ಶ್ರೀಕೃಷ್ಣನಿಗೆ ನಮಸ್ಕೃತ್ವಾ= ನಮಸ್ಕರಿಸಿ, ಭೀತಭೀತಃ=ಅತ್ಯಂತ ಭಯವುಳ್ಳವನಾಗಿ; ಪ್ರಣಮ್ಯ=ವಿನಮ್ರನಾಗಿ (ಬಾಗಿ); ಸಗದ್ಗದಮ್=ಗದ್ಗದದಸ್ವರದಿಂದ; ಭೂಯ ಏವ=ಮತ್ತೆ; ಅಹ=(ಹೀಗೆ) ನುಡಿದನು.

**ತಾ॥** ಸಂಜಯನು ಹೇಳಿದನು-ಅರ್ಜುನನು ಶ್ರೀ ಕೃಷ್ಣಮೂರ್ತಿಯ ಈ ವಾಕ್ಯಗಳನ್ನು ಕೇಳಿ ನಡುಗುತ್ತಾ, ಕೈ ಜೋಡಿಸಿ ಶ್ರೀ ಕೃಷ್ಣನಿಗೆ ನಮಸ್ಕರಿಸಿ ಅತ್ಯಂತ ಭೀತಿಯುಳ್ಳವನಾಗಿ, ವಿನಮ್ರನಾಗಿ ಗದ್ಗದ ಸ್ವರದಿಂದ ಹೀಗೆ ಹೇಳಿದನು.

**ವ್ಯಾಖ್ಯೆ:** ೧) ಕೈ ಜೋಡಿಸುವುದು ೨) ನಮಸ್ಕರಿಸುವುದು ೩) ವಿನಮ್ರನಾಗಿ (ತಲೆಬಾಗಿ) ಮಾತನಾಡುವುದು-ಮುಂತಾದ ಕ್ರಿಯೆಗಳು ಅರ್ಜುನನ ಪರಿಪೂರ್ಣ ಭಕ್ತಿಭಾವವನ್ನು, ನಮ್ರತೆಯನ್ನು ಸೂಚಿಸುತ್ತವೆ.

**ಅ॥** ಅರ್ಜುನನು ಭಗವಂತನನ್ನು ಯಾವ ಪ್ರಕಾರವಾಗಿ ಸ್ತುತಿಸಿದನೆನ್ನುವುದನ್ನು (೧೧ ಶ್ಲೋಕಗಳ ದ್ವಾರ) ತಿಳಿಸಲಾಗಿದೆ-

**ಅರ್ಜುನ ಉವಾಚ:**

**೩೬ ಸ್ಥಾನೇ ಹೃಷೀಕೇಶ ತವ ಪ್ರಕೀರ್‍ತ್ಯಾ**
**ಜಗತ್ಪ್ರಹೃಷ್ಯತ್ಯನುರಜ್ಯತೇ ಚ**
**ರಕ್ಷಾಂಸಿ ಭೀತಾನಿ ದಿಶೋ ದ್ರವಂತಿ**
**ಸರ್ವೇ ನಮಸ್ಯಂತಿ ಚ ಸಿದ್ಧಸಂಘಾಃ**

ಅರ್ಜುನ ಉವಾಚ-ಅರ್ಜುನನು ಹೇಳಿದನು-

**ಅರ್ಥ:** ಹೃಷೀಕೇಶ=ಓ ಕೃಷ್ಣಾ! ತವ=ನಿನ್ನ; ಪ್ರಕೀರ್‍ತ್ಯಾ=ನಾಮವನ್ನು ಚ್ಚರಿಸಿರುವುದರಿಂದ (ಮಹಾತ್ಮ್ಯೆಯನ್ನು ಕೊಂಡಾಡುವುದರಿಂದ); ಜಗತ್= ಲೋಕವು; ಪ್ರಹೃಷ್ಯತಿ=ಅಪರಿಮಿತವಾದ ಸಂತೋಷದಿಂದಿದೆ; ಅನುರಜ್ಯತೇ ಚ=ಹೆಚ್ಚಿನ ಪ್ರೀತಿಯನ್ನು ಹೊಂದುತ್ತಿದೆ; ರಕ್ಷಾಂಸಿ=ರಾಕ್ಷಸರು; ಭೀತಾನಿ= ಭಯಗ್ರಸ್ತರಾಗಿ; ದಿಶಃ=ದಿಕ್ಕುಗಳಿಗೆ; ದ್ರವಂತಿ=ಓಡುತ್ತಿದ್ದಾರೆ; ಸರ್ವೇ ಸಿದ್ಧ ಸಂಘಾಃ=ಸಿದ್ಧರ ಸಮೂಹಗಳೆಲ್ಲವೂ; ನಮಸ್ಯಂತಿ ಚ=ನಮಸ್ಕರಿಸುತ್ತಿರುವರು; (ಏತಾನಿ=ಇವೆಲ್ಲವೂ); ಸ್ಥಾನೇ=ನಿನ್ನ ಮಹಿಮೆಗೆ ತಕ್ಕದ್ದಾಗಿವೆ (ಯೋಗ್ಯವಾಗಿವೆ)

**ತಾ॥** ಅರ್ಜುನನು ಹೇಳಿದನು- ಓ ಕೃಷ್ಣಾ! ನಿನ್ನ ನಾಮವನ್ನು ಉಚ್ಛರಿಸುವುದರಿಂದ, ಮಹಾತ್ಮ್ಯೆಯನ್ನು ಕೊಂಡಾಡುವುದರಿಂದ ಲೋಕವು ಅಪರಿಮಿತವಾದ ಸಂತೋಷ ಹೊಂದುತ್ತಲಿದೆ, ಹೆಚ್ಚಿನ ಅನುರಾಗವನ್ನು ಪಡೆದುಕೊಳ್ಳುತ್ತಿದೆ. (ನಿನ್ನನ್ನು ನೋಡಿ) ರಾಕ್ಷಸರು ಭಯಪಟ್ಟವರಾಗಿ ದಿಗಂತಗಳಿಗೆ ಓಡುತ್ತಿದ್ದಾರೆ. ಸಿದ್ಧರ ಸಮೂಹಗಳೆಲ್ಲಾ ನಿನಗೆ ನಮಸ್ಕರಿಸುತ್ತಿವೆ. ಇವೆಲ್ಲವೂ ನಿನ್ನ ಮಹಿಮೆಗೆ ತಕ್ಕ ಗೌರವಗಳು.

**ವ್ಯಾಖ್ಯೆ:** *'ತವ ಪ್ರಕೀರ್‍ತ್ಯಾ ಜಗತ್ಪ್ರಹೃಷ್ಯತಿ'*- ಭಗವನ್ನಾಮ ಸಂಕೀರ್ತನೆಯಿಂದ ಭಗವನ್ಮಹಿಮೆಯ ಕಥೆಗಳಿಂದ ಜನರು ಅತ್ಯಂತ ಸಂತೋಷವನ್ನು ಹೊಂದುತ್ತಿದ್ದಾರೆಂದು ಅರ್ಜುನನು ಹೇಳಿದನು. 'ಹೃಷ್ಯತಿ' ಎಂದು ಹೇಳದೆ 'ಪ್ರಹೃಷ್ಯತಿ' ಎಂದು ಹೇಳಿರುವುದರಿಂದ ಅಂತಹವರು ಅಪಾರವಾದ ಆನಂದವನ್ನು ಪಡೆಯುತ್ತಿದ್ದಾರೆಂದರ್ಥ. ಇದರಿಂದ ಅತಿ ಹರ್ಷಕ್ಕೆ, ದುಃಖರಾಹಿತ್ಯಕ್ಕೆ; ಭಗವನ್ನಾಮೋಚ್ಛಾರಣೆ, ಭಗವದ್ವಿಚಾರಣೆಯೇ ಮಾರ್ಗವೆಂದು ಸ್ಪಷ್ಟವಾಗುತ್ತದೆ.

*'ರಕ್ಷಾಂಸಿ ಭೀತಾನಿ ದಿಶೋದ್ರವಂತಿ'*- ಭಗವದ್ದರ್ಶನದಿಂದ ರಾಕ್ಷಸರು ಪಲಾಯನಗೊಳ್ಳುತ್ತಿದ್ದಾರೆಂದು ಹೇಳಲಾಗಿದೆ. ಅಂದರೆ ಎಲ್ಲಿ ಪರಮಾತ್ಮನಿರುವನೋ, ಎಲ್ಲಿ ಪವಿತ್ರತೆಯಿರುವುದೋ, ಎಲ್ಲಿ ಸದ್ಗುಣಗಳು ವಿರಾಜಿಸುವುವೋ, ಅಲ್ಲಿ ಭೂತಪ್ರೇತ ಪಿಶಾಚಿ ರಾಕ್ಷಸಾದಿಗಳು ಇಲ್ಲವೆ ಕಾಮಾದಿ ದುಷ್ಟ ಪ್ರವೃತ್ತಿಗಳು ಇರುವುದಿಲ್ಲವೆಂದು ಭಾವ. ಆದ್ದರಿಂದ ಜೀವಿಯು ತನ್ನ ಹೃದಯ ಸೀಮೆಯಲ್ಲಿ ದೇವದೇವನಾದ ಪರಮಾತ್ಮನನ್ನು ಭಕ್ತ್ಯಾದಿಗಳಿಂದ ಪ್ರತಿಷ್ಠೆಗೊಳಿಸಿಕೊಂಡರೆ ಇನ್ನು ಅಜ್ಞಾನಾದಿಗಳು, ಡಂಭದರ್ಪಾದಿಗಳು, ರಾಗದ್ವೇಷಾದಿಗಳು, ಕಾಮಕ್ರೋಧಾದಿಗಳು ಅಲ್ಲಿ ನಿಲ್ಲಲಾರದೆ ಓಡುವುವು. ರಾಕ್ಷಸರು ಹೊರಗೇ ಅಲ್ಲ, ಹೃದಯದಲ್ಲೂ ಇರುವರು. ಅವರೇ ಮೇಲೆ ತಿಳಿಸಿದ ಅಸುರ ಗುಣಗಳು. ಭಗವದ್ಧ್ಯಾನದಿಂದ, ಭಗವಂತ್ಸಂಕೀರ್ತನೆಯಿಂದ ಪರಮಾತ್ಮನನ್ನು ಯಾವಾಗ ಜೀವಿಯು ತನ್ನೊಳಗೆ ಆಹ್ವಾನಿಸಿಕೊಳ್ಳುವನೋ ಆಗ ಆ ಆಸುರೀಸಂಪದ ಕೂಡಲೇ ಕಾಲು ಕೀಳುವುದು. ಈ ಸತ್ಯವನ್ನು ನಿರೂಪಿಸಲು ಅರ್ಜುನನು ಮೇಲೆ ಹೇಳಿದ ರೀತಿ ಭಗವಂತನನ್ನು ಸ್ತುತಿಸಿದನು.

ಈ ಶ್ಲೋಕದಲ್ಲಿ ಬೀಜಾಕ್ಷರಗಳು ಅನೇಕವು ಇವೆಯೆಂದೂ, ಇದನ್ನು ಜಪಿಸಿದವರಿಗೆ ಭೂತಪ್ರೇತ ಪಿಶಾಚಾದಿಗಳ ಬಾಧೆಯಿರುವುದಿಲ್ಲವೆಂದೂ, ಭೂತ ಪ್ರೇತಾದಿಗಳ ಬಾಧೆಯಿಂದ ಪೀಡಿತರಾದವರು ಈ ಶ್ಲೋಕವನ್ನು ಭಕ್ತಿಯಿಂದ, ಭಾವದಿಂದ ಜಪಿಸಿದರೆ ಅದರಿಂದ ವಿಮುಕ್ತರಾಗುವರೆಂದೂ ಹೇಳುವರು.

೩೭ ಕಸ್ಮಾಚ ತೇ ನ ನಮೇರನ್ಮಹಾತ್ಮನ್
ಗರೀಯಸೇ ಬ್ರಹ್ಮಣೋಽಪ್ಯಾದಿಕರ್ತ್ರೇ
ಅನಂತ ದೇವೇಶ ಜಗನ್ನಿವಾಸ
ತ್ವಮಕ್ಷರಂ ಸದಸತ್ತತ್ಪರಂ ಯತ್

**ಅರ್ಥ:** ಮಹಾತ್ಮಾನ್=ಓ ಮಹಾತ್ಮಾ! ಅನಂತ=ಅನಂತರೂಪ (ಇಲ್ಲವೆ ನಾಶರಹಿತನೇ); ದೇವೇಶ=ದೇವದೇವ! ಜಗನ್ನಿವಾಸ= ಜಗದಾಶ್ರಯ! ಸತ್=ಸತ್ವದಾರ್ಥ (ಸ್ಥೂಲ ಜಗತ್ತು) ಅಸತ್ ಚ=ಅಸತ್ ಪದಾರ್ಥ (ಸೂಕ್ಷ್ಮ ಜಗತ್ತು); ಯತ್=ಯಾವುದು ಇದೆಯೋ; ತತ್ಪರಂ=ಆ ಎರಡಕ್ಕೆ ಭಿನ್ನವಾದ; ಅಕ್ಷರಂ=ನಾಶರಹಿತವಾದ ಪರಬ್ರಹ್ಮ ತ್ವಂ(ಅಸಿ)=ನೀನೇ (ಆಗಿದ್ದೀಯೆ); ಬ್ರಹ್ಮಣಃ ಅಪಿ=ಬ್ರಹ್ಮನಿಗೆ; ಆದಿಕರ್ತ್ರೇ=ಆದಿಕಾರಣನಾದವನು (ಆದ್ದರಿಂದಲೇ); ಗರೀಯಸೇ=ಸರ್ವೋತ್ಕೃಷ್ಟವಾದವನು (ಆಗಿ); ತೇ=ನಿನಗೆ; ಕಸ್ಮಾತ್=ಹೇಗೆ; ನ ನಮೇರನ್=ನಮಸ್ಕರಿಸದೆ ಇರುವರು.

**ತಾ||** ಮಹಾತ್ಮಾ! ಅನಂತರೂಪ! ದೇವ ದೇವ! ಜಗದಾಶ್ರಯ! ಸತ್, ಅಸತ್ತುಗಳಿಗೆ (ಸ್ಥೂಲ, ಸೂಕ್ಷ್ಮ ಜಗತ್ತುಗಳೆರಡಕ್ಕೂ) ಪರವಾದ ಅಕ್ಷರ (ನಾಶರಹಿತ), ಪರಬ್ರಹ್ಮಸ್ವರೂಪಿಯು ನೀನೇ ಆಗಿದ್ದೀಯೆ. ಬ್ರಹ್ಮದೇವನಿಗೂ ಕೂಡ ಆದಿಕಾರಣನು, ಆದ್ದರಿಂದಲೇ ಸರ್ವೋತ್ಕೃಷ್ಟವಾದ ನಿನಗೆ ನಮಸ್ಕರಿಸದೆ ಇರಲು ಹೇಗೆ ಸಾಧ್ಯ? (ಅವರ ನಮಸ್ಕಾರಗಳಿಗೆ ನೀನು ಯೋಗ್ಯನು ಎನ್ನುವುದು ಭಾವ).

**ವ್ಯಾಖ್ಯೆ:** 'ಸದಸತ್ತತ್ಪರಂ- ಪರಮಾತ್ಮನು ಸತ್, ಅಸತ್‌ಗಳಿಗೆ ಪರವಾದವನು. ಸತ್ ಅಂದರೆ- ಸ್ಥೂಲ ಪ್ರಪಂಚ (ಸ್ಥೂಲಜಗತ್ತು) ಅಸತ್ ಅಂದರೆ ಸೂಕ್ಷ್ಮ ಪದಾರ್ಥ (ಸೂಕ್ಷ್ಮ ಜಗತ್ತು). ಆ ಎರಡಕ್ಕೂ ಪರಮಾತ್ಮನು ವಿಲಕ್ಷಣನಾಗಿ, ಪರವಾಗಿ ಇರುವನೆನ್ನುವುದು ಭಾವ. ಇಲ್ಲವೆ 'ಸತ್' ಅಂದರೆ ಮನಸ್ಸೆಂದೂ 'ಅಸತ್'ಎಂದರೆ ದೇಹವು ಎಂದೂ ಹೇಳಬಹುದು. ಆಗಲೂ ಅರ್ಥವು ಇದೇ ಆಗುವುದು. ಸ್ಥೂಲವಾದ ಭೌತಿಕ ಪ್ರಪಂಚವಾದರೂ, ಸೂಕ್ಷ್ಮವಾದ ಮನಃ ಪ್ರಪಂಚವಾದರೂ, ಎರಡೂ ಪರಮಾತ್ಮನ ದೃಷ್ಟಿಯಲ್ಲಿ ಮಿಥ್ಯಾರೂಪಗಳೇ. ಪರಮಾತ್ಮನೊಬ್ಬನೇ ಸತ್ಯವಸ್ತು. ಆದ್ದರಿಂದ ಮಿಥ್ಯಾ ರೂಪಗಳಾದ ದೃಶ್ಯಜಗತ್ತಿಗಿಂತ ಆತನು ಭಿನ್ನವಾದವನೆಂದು ಇಲ್ಲಿ ಹೇಳಲಾಗಿದೆ.

ಪ್ರ : ಪರಮಾತ್ಮನು ಎಂತಹವನು?

ಉ : ೧) ಸರ್ವಶ್ರೇಷ್ಠನು ೨) ಬ್ರಹ್ಮದೇವನಿಗೂ ಆದಿಕಾರಣನು. ೩) ಅನಂತನು ೪) ದೇವತೆಗಳಿಗೂ ಪ್ರಭು ೫) ಜಗದಾಶ್ರಯನು ೬) ನಾಶರಹಿತನು ೭) ಸದಸತ್ತುಗಳಿಗೆ ಪರವಾದವನು.

೩೮ ತ್ವಮಾದಿದೇವಃ ಪುರುಷಃ ಪುರಾಣ
ಸ್ತ್ವಮಸ್ಯ ವಿಶ್ವಸ್ಯ ಪರಂ ನಿಧಾನಮ್
ವೇತ್ತಾಽಸಿ ವೇದ್ಯಂ ಚ ಪರಂ ಚ ಧಾಮ
ತ್ವಯಾ ತತಂ ವಿಶ್ವಮನಂತರೂಪ

**ಅರ್ಥ:** ಅನಂತರೂಪ=ಅಂತ್ಯವಿಲ್ಲದ ಸ್ವರೂಪಿಯಾದ (ಇಲ್ಲವೆ ಅನೇಕ ರೂಪಗಳುಳ್ಳ) ಓ ಕೃಷ್ಣಾ!; ತ್ವಂ=ನೀನು; ಆದಿದೇವಃ=ಪ್ರಥಮ ದೇವನೂ; ಪುರಾಣ ಪುರುಷಃ=ಪ್ರಾಚೀನ (ಸನಾತನ) ಪುರುಷನೂ; ಅಸ್ಯ ವಿಶ್ವಸ್ಯ=ಈ ಪ್ರಪಂಚಕ್ಕೆ; ಪರಂ=ಶ್ರೇಷ್ಠವಾದ; ನಿಧಾನಂ=ಆಧಾರವೂ (ಆಶ್ರಯವೂ); ವೇತ್ತಾ=ಸಮಸ್ತವನ್ನು ತಿಳಿದುಕೊಂಡವನು; ವೇದ್ಯಂ ಚ=ತಿಳಿಯಲ್ಪಡ ಬೇಕಾದವನು; ಪರಂಧಾಮ ಚ=ಸರ್ವೋತ್ತಮವಾದ ಸ್ಥಾನವು; ತ್ವಂ-ನೀನು; ಅಸಿ=ಆಗಿದ್ದೀಯೆ; ತ್ವಯಾ=ನಿನ್ನಿಂದ; ವಿಶ್ವಂ=ಈ ಪ್ರಪಂಚವೆಲ್ಲವೂ; ತತಂ=ವ್ಯಾಪಿಸಲ್ಪಟ್ಟಿದೆ.

**ತಾ||** ಅನಂತರೂಪಿಯಾದ ಓ ಕೃಷ್ಣಾ! ನೀನು ಆದಿದೇವನೂ, ಸನಾತನ ಪುರುಷನೂ, ಈ ಪ್ರಪಂಚಕ್ಕೆ ಶ್ರೇಷ್ಠವಾದ ಆಧಾರವೂ, ಸಮಸ್ತವನ್ನು ತಿಳಿದುಕೊಂಡವನೂ, ತಿಳಿಯಲ್ಪಡಬೇಕಾದವನೂ, ಸರ್ವೋತ್ತಮವಾದ ಸ್ಥಾನವೂ ಆಗಿದ್ದೀಯೆ. ನಿನ್ನಿಂದಲೇ ಈ ಪ್ರಪಂಚವೆಲ್ಲವೂ ವ್ಯಾಪಿಸಲ್ಪಟ್ಟಿದೆ.

ಪ್ರ : ಪರಮಾತ್ಮನ ಇನ್ನೂ ಕೆಲವು ಲಕ್ಷಣಗಳಾವುವು?

ಉ : ೧) ಆದಿದೇವನು ೨) ಪ್ರಾಚೀನ ಪುರುಷನು ೩) ಪ್ರಪಂಚಕ್ಕೆ ಆಧಾರ ಭೂತನು ೪) ಸಮಸ್ತವನ್ನೂ ತಿಳಿದವನು. ೫) ತಿಳಿಯಲ್ಪಡ ಬೇಕಾದವನು. ೬) ಸರ್ವೋತ್ತಮ ಸ್ಥಾನವು ೭) ಪ್ರಪಂಚದಲ್ಲಿ ಎಲ್ಲೆಲ್ಲೂ ವ್ಯಾಪಿಸಿರುವವನು ೮) ಅನಂತನು.

೩೯ ವಾಯುರ್ಯಮೋಽಗ್ನಿರ್ವರುಣಶ್ಶಶಾಂಕಃ
ಪ್ರಜಾಪತಿಸ್ತ್ವಂ ಪ್ರಪಿತಾಮಹಶ್ಚ
ನಮೋ ನಮಸ್ತೇಽಸ್ತು ಸಹಸ್ರಕೃತ್ವಃ
ಪುನಃಶ್ಚ ಭೂಯೋಽಪಿ ನಮೋ ನಮಸ್ತೇ

**ಅರ್ಥ:** ವಾಯುಃ=ವಾಯು; ಯಮಃ=ಯಮನು; ಅಗ್ನಿಃ=ಅಗ್ನಿಯು; ವರುಣಃ=ವರುಣನು; ಶಶಾಂಕಃ=ಚಂದ್ರನು; ಪ್ರಜಾಪತಿಃ=ಬ್ರಹ್ಮದೇವನು; ಪ್ರಪಿತಾಮಹಃ ಚ=ಬ್ರಹ್ಮದೇವನ ಪಿತನು; ತ್ವಂ (ಅಸಿ)=ನೀನೇ ಆಗಿದ್ದೀಯೆ; ತೇ=ನಿನಗೆ; ಸಹಸ್ರಕೃತ್ವಃ=ಸಾವಿರ ಸಾರಿ; ನಮೋ ನಮಃ=ನಮಸ್ಕಾರ, ನಮಸ್ಕಾರಗಳು; ಅಸ್ತು=ಇರಲಿ; ತೇ=ನಿನಗೆ; ಪುನಃ ಚ=ಮತ್ತೆ; ನಮಃ= ನಮಸ್ಕಾರಗಳು; ಭೂಯಃ ಅಪಿ=ಮತ್ತೆ; ನಮಃ=ನಮಸ್ಕಾರಗಳು.

**ತಾ||** ವಾಯುವು, ಯಮನು, ಅಗ್ನಿಯು, ವರುಣನು, ಚಂದ್ರನು, ಬ್ರಹ್ಮದೇವನು, ಬ್ರಹ್ಮದೇವನಿಗೆ ಪಿತನೂ ನೀನೇ ಆಗಿದ್ದೀಯೆ. ನಿನಗೆ ಅನೇಕ ಸಾವಿರ ಸಾರಿ ನಮಸ್ಕಾರಗಳು. ಮತ್ತೆ ಮತ್ತೆ ನಿನಗೆ ನಮಸ್ಕಾರಗಳು.

**ವ್ಯಾಖ್ಯೆ:** ಅರ್ಜುನನಿಗೆ ಭಗವಂತನಲ್ಲಿ ಉಂಟಾದಂತಹ ಅಪರಿಮಿತ ಭಕ್ತಿ ಸಾಧಕನಿಗೆ ಬಹಳ ಅತ್ಯಾವಶ್ಯಕವಾಗಿದೆ.

೪೦ ನಮಃ ಪುರಸ್ತಾದಥ ಪೃಷ್ಠತಸ್ತೇ
ನಮೋಽಸ್ತು ತೇ ಸರ್ವತ ಏವ ಸರ್ವ
ಅನಂತವೀರ್ಯಾಮಿತವಿಕ್ರಮಸ್ತ್ವಂ
ಸರ್ವಂ ಸಮಾಪ್ನೋಷಿ ತತೋಽಸಿ ಸರ್ವಃ

**ಅರ್ಥ:** ಸರ್ವ=ಸರ್ವರೂಪಿಯಾದ ಓ ಕೃಷ್ಣಾ! ಪುರಸ್ತಾತ್=ಎದುರಿಗೆ; ಪೃಷ್ಠತಃ=ಹಿಂದೆಯೂ; ತೇ=ನಿನಗೆ; ನಮಃ=ನಮಸ್ಕಾರ; ಅಥ=ಇನ್ನೂ; ಸರ್ವತ ಏವ=ಎಲ್ಲ ಕಡೆಗಳಿಂದಲೂ; ತೇ=ನಿನಗೆ; ನಮಃ=ನಮಸ್ಕಾರ; ಅಸ್ತು=ಇರಲಿ! ಅನಂತವೀರ್ಯೋಮಿತವಿಕ್ರಮಃ=ಅಪರಿಮಿತ ಸಾಮರ್ಥ್ಯವುಳ್ಳವನೂ, ಪರಾಕ್ರಮಿಯೂ ಆದ; ತ್ವಂ=ನೀನು; ಸರ್ವಂ=ಸಮಸ್ತವನ್ನು; ಸಮಾಪ್ನೋಷಿ= ಎಲ್ಲೆಲ್ಲೂ ವ್ಯಾಪಿಸಿದ್ದೀಯೇ; ತತಃ=ಆದ್ದರಿಂದ; ಸರ್ವಃ=ಸರ್ವಸ್ವರೂಪಿ ಯಾದವನು; ಅಸಿ=ಆಗಿದ್ದೀಯೆ.

**ತಾ||** ಸರ್ವರೂಪಿಯಾದ ಓ ಕೃಷ್ಣಾ! ಮುಂದಿನಿಂದ ಹಾಗೂ ಹಿಂದಿನಿಂದ ನಿನಗೆ ನಮಸ್ಕಾರ. ಮತ್ತೆ ಎಲ್ಲಾ ಕಡೆಗಳಿಂದಲೂ ನಿನಗೆ ನಮಸ್ಕಾರವಿರಲಿ. ಅಪರಿಮಿತ ಸಾಮರ್ಥ್ಯ, ಪರಾಕ್ರಮಿಯಾದ ನೀನು ಸಮಸ್ತವನ್ನೂ ಎಲ್ಲೆಲ್ಲೂ ವ್ಯಾಪಿಸಿದ್ದೀಯೆ. ಆದ್ದರಿಂದಲೇ ಸರ್ವಸ್ವರೂಪಿಯಾಗಿರುವೆ.

**ವ್ಯಾಖ್ಯೆ:** ಅರ್ಜುನನು ತನ್ನ ಹೃದಯಲ್ಲಿ ತುಂಬಿ ಹರಿಯುತ್ತಿರುವ ಭಕ್ತಿ ಭಾವಾತಿಶಯಗಳನ್ನು ವ್ಯಕ್ತಗೊಳಿಸುತ್ತಿದ್ದಾನೆ.

'ಅನಂತವೀರ್ಯಾಮಿತವಿಕ್ರಮಃ'- ಭಗವಂತನು ಅಪರಿಮಿತ ಶಕ್ತಿ ಸಾಮರ್ಥ್ಯಗಳನ್ನು ಹೊಂದಿದವನು. ಒಂದು ಚಿಕ್ಕ ಬೀಸಣಿಗೆ ಬೀಸಿದರೆ ಗಾಳಿ ಬರುವುದು. ಹಾಗೆಯೇ ಚಂಡಮಾರುತ ಬೀಸುವುದರಿಂದ ಅಪರಿಮಿತವಾದ ಗಾಳಿ ಉದ್ಭವಿಸುವುದು. ಮೊದಲನೆಯದು ಮನುಷ್ಯ ಶಕ್ತಿ ಎರಡನೆಯದು ದೈವಶಕ್ತಿ. ಒಂದು ದೀಪವನ್ನು ಬೆಳಗಿಸಿದರೆ ಸ್ವಲ್ಪ ಬೆಳಕು ಬರುವುದು; ಸೂರ್ಯನು ಉದಯಿಸಿದರೆ ಲೋಕವೆಲ್ಲಾ ದೇದೀಪ್ಯಮಾನವಾಗಿ ಬೆಳಗುವುದು. ಮೊದಲನೆಯದು ಮನುಷ್ಯ ಶಕ್ತಿ ಹಾಗು ಎರಡನೆಯದು ದೈವ ಶಕ್ತಿ. ಬಿಂದಿಗೆಗಳಿಂದ, ಏತಗಳಿಂದ, ಇಂಜಿನ್ನುಗಳಿಂದ (ಯಂತ್ರಗಳಿಂದ) ನೀರನ್ನು ಹೊರತೆಗೆದರೆ ಸ್ವಲ್ಪ ನೀರು ಹರಿಯುವುದು, ಆದರೆ ಅಹೋರಾತ್ರಿ ಭಾರೀ ಮಳೆಗರೆದರೆ ಪ್ರವಾಹಗಳುಂಟಾಗುವುವು. ಸಾವಿರಾರು ವರ್ಷಗಳು ಬಂಜರಾಗಿದ್ದ ಭೂಮಿಯೂ ಸಹ ಒಂದೇ ಸಾರಿ ನೆನೆಯುವುದು. ಮೊದಲನೆಯದು ಮನುಷ್ಯ ಶಕ್ತಿ, ಎರಡನೆಯದು ದೈವ ಶಕ್ತಿ. ಮನುಜನ ಹಾಗೂ ಭಗವಂತನ ಶಕ್ತಿಗೆ ಇರುವ ವ್ಯತ್ಯಾಸ ಇದೇ ಆಗಿದೆ. ಆದ್ದರಿಂದಲೇ ಅರ್ಜುನನು ಭಗವಂತನನ್ನು **'ಅನಂತವೀರ್ಯಾಮಿತವಿಕ್ರಮ'** ಎಂದು ಸಂಬೋಧಿಸಿದನು. ಆದ್ದರಿಂದ ಮನುಜನು ತನ್ನ ಅಲ್ಪಶಕ್ತಿಯನ್ನು ನೋಡಿಕೊಂಡು ಗರ್ವಿಸದೆ, ಸರ್ವಶಕ್ತಿ ಸಂಪನ್ನನಾದ ಭಗವಂತನಲ್ಲಿ ಅಕುಂಠಿತ ಭಕ್ತಿಭಾವಗಳನ್ನು ಹೊಂದಿರಬೇಕು.

ಪ್ರ : ಪರಮಾತ್ಮ ಇನ್ನೂ ಎಂತಹವನು?

ಉ : ೧) ಅನಂತ ಶಕ್ತಿಯುಳ್ಳವನು ೨) ಅಪರಿಮಿತ ಪರಾಕ್ರಮಶಾಲಿ
೩) ಸರ್ವತ್ರ ವ್ಯಾಪಿಸಿರುವನು ೪) ಸರ್ವರೂಪಿ

**೪೧ ಸಖೇತಿ ಮತ್ವಾ ಪ್ರಸಭಂ ಯದುಕ್ತಂ**
**ಹೇ ಕೃಷ್ಣಾ ಹೇ ಯಾದವ ಹೇ ಸಖೇತಿ**
**ಅಜಾನತಾ ಮಹಿಮಾನಂ ತವೇದಂ**
**ಮಯಾ ಪ್ರಮಾದಾತ್ಪ್ರಣಯೇನ ವಾಪಿ**
**೪೨ ಯಚ್ಚಾವಹಾಸಾರ್ಥಮಸತ್ಕೃತೋಽಸಿ**
**ವಿಹಾರಶಯ್ಯಾಸನಭೋಜನೇಷು**
**ಏಕೋಽಥವಾಪ್ಯಚ್ಯುತ ತತ್ಸಮಕ್ಷಮ್**
**ತತ್ಕ್ಷಾಮಯೇ ತ್ವಾಮಹಮಪ್ರಮೇಯಮ್**

**ಅರ್ಥ:** ಅಚ್ಯುತ=ನಾಶರಹಿತನಾದ ಓ ಕೃಷ್ಣಾ! ತವ=ನಿನ್ನ; ಇದಂ=ಈ; ಮಹಿಮಾನಂ=ಮಹಿಮೆಯನ್ನು; ಅಜಾನತ=ತಿಳಿಯದ; ಮಯಾ=ನನ್ನಿಂದ; ಪ್ರಮಾದಾತ್=ಅಜ್ಞಾನದಿಂದ; ಪ್ರಣಯೇನ ವಾ ಅಪಿ=ಸ್ನೇಹದಿಂದ; (ಸಲಿಗೆಯಿಂದ) ಸಖಾ ಇತಿ=ಸಖನೆಂದೂ; ಮತ್ವಾ=ತಿಳಿದು; ಹೇ ಕೃಷ್ಣಾ=ಓ ಕೃಷ್ಣಾ! ಹೇ ಯಾದವಾ=ಓ ಯಾದವಾ; ಹೇ ಸಖಾ=ಓ ಸಖನೇ! ಇತಿ=ಎಂದು; ಪ್ರಸಭಂ=ಅಲಕ್ಷ್ಯವಾಗಿ (ಹಟದಿಂದ); ಯತ್=ಯಾವುದು; ಉಕ್ತಂ=ಹೇಳಲ್ಪಟ್ಟಿದೆಯೋ; ವಿಹಾರಶಯ್ಯಾಸನಭೋಜನೇಷು=ವಿಹಾರ ಹೊಂದುವಾಗ, ಮಲಗುವಾಗ, ಕುಳಿತುಕೊಂಡಾಗ ಊಟಮಾಡುವಾಗ; ಏಕಂ=ಏಕಾಂತವಾಗಿರುವಾಗ; ಅಥವಾ=ಇಲ್ಲವೆ; ತತ್ಸಮಕ್ಷಂ ಅಪಿ= ಬೇರೆಯವರ ಎದುರಿನಲ್ಲಾಗಲಿ; ಅವಹಾಸಾರ್ಥಂ=ಪರಿಹಾಸ್ಯಕ್ಕಾಗಿ; ಅಸತ್ಕೃತಃ ಅಸಿ (ಇತಿ) ಯತ್ ಚ=ಅವಮಾನಿಸಲ್ಪಟ್ಟದ್ದು ಏನು ಇದೆಯೋ; ತತ್=ಅದನ್ನು (ಅಂತಹ ಅಪರಾಧಗಳೆಲ್ಲವನ್ನೂ); ಅಪ್ರಮೇಯ=ಪ್ರಮಾಣಗಳಿಂದ ತಿಳಿಯಲ್ಪಡದವನಾಗಿರುವ; ತ್ವಾಂ=ನಿನ್ನನ್ನು; ಅಹಂ=ನಾನು; ಕ್ಷಾಮಯೇ= ಕ್ಷಮಿಸಬೇಕೆಂದು ಬೇಡುತ್ತಿದ್ದೇನೆ.

**ತಾ||** ನಾಶರಹಿತವಾದ ಓ ಕೃಷ್ಣಾ! ನಿನ್ನ ಈ ಮಹಿಮೆಯನ್ನು ತಿಳಿಯದೆ ಅಜ್ಞಾನದಿಂದ (ಮೋಹದಿಂದ) ಸಲಿಗೆಯಿಂದ, ಸಖನೆಂದು ತಿಳಿದು 'ಓ ಕೃಷ್ಣಾ, ಓ ಯಾದವಾ, ಓ ಸಖಾ' ಎಂದು ಅಲಕ್ಷ್ಯವಾಗಿ ನಿನ್ನನ್ನು ಕುರಿತು ನಾನು ಏನು ಹೇಳಿದೆನೋ, ಮತ್ತೆ ವಿಹರಿಸುವಾಗ, ಮಲಗುವಾಗ, ಕುಳಿತುಕೊಂಡಾಗ, ಊಟ ಮಾಡುವಾಗ, ಒಬ್ಬನೇ ಇದ್ದಾಗ ಇಲ್ಲವೇ ಇತರರ ಮುಂದೆ ಪರಿಹಾಸ್ಯಮಾಡಿ ಏನು ಅವಮಾನವನ್ನುಂಟುಮಾಡಿದೆನೋ-ಆ ಅಪರಾಧಗಳೆಲ್ಲವನ್ನೂ ಅಪ್ರಮೇಯನಾದ ನೀನು ಕ್ಷಮಿಸಬೇಕೆಂದು ಬೇಡಿಕೊಳ್ಳುತ್ತೇನೆ.

**ವ್ಯಾಖ್ಯೆ:** ಮಾಡಿದ ತಪ್ಪುಗಳಿಗೆ ಪಶ್ಚಾತ್ತಾಪ ಹೊಂದಿ ಮತ್ತೆ ಅವುಗಳನ್ನು ಮಾಡದೆ ಇರುವುದು ವಿಜ್ಞಗಳ ಲಕ್ಷಣ.

**೪೩ ಪಿತಾಽಸಿ ಲೋಕಸ್ಯ ಚರಾಚರಸ್ಯ**
**ತ್ವಮಸ್ಯ ಪೂಜ್ಯಶ್ಚ ಗುರುರ್ಗರೀಯಾನ್**
**ನ ತ್ವತ್ಸಮೋಽಸ್ತ್ಯಭ್ಯಧಿಕಃ ಕುತೋಽನ್ಯೋ**
**ಲೋಕತ್ರಯೇಽಪ್ಯಪ್ರತಿಮ ಪ್ರಭಾವ**

**ಅರ್ಥ:** ಅಪ್ರತಿಮ ಪ್ರಭಾವ=ಅಸಮಾನ ಪ್ರಭಾವವುಳ್ಳವನು! ತ್ವಂ=ನೀನು; ಚರಾಚರಸ್ಯ=ಸ್ಥಾವರ ಜಂಗಮಾತ್ಮಕವಾದ; ಅಸ್ಯ ಲೋಕಸ್ಯ=ಈ ಪ್ರಪಂಚಕ್ಕೆ; ಪಿತಾ=ತಂದೆಯು; ಅಸಿ=ಆಗಿದ್ದೀಯೆ; ಚ=ಮತ್ತೆ; ಪೂಜ್ಯಂ= ಪೂಜಿಸಲ್ಪಡುವವನೂ; ಗರಿಯಾನ್ ಗುರುಃ=ಸರ್ವ ಶ್ರೇಷ್ಠನಾದ ಗುರುವೂ (ಅಸಿ=ಆಗಿದ್ದೀಯೆ); ಲೋಕತ್ರಯೇ ಅಪಿ=ಮೂರು ಲೋಕಗಳಲ್ಲಿಯೂ: ತ್ವತ್ಸಮಃ=ನಿನಗೆ ಸಮಾನನಾದವನು; ನ ಅಸ್ತಿ=ಇಲ್ಲ; ಅಭ್ಯಧಿಕಂ=(ಇನ್ನು) ನಿನ್ನನ್ನು ಮೀರಿದವನು; ಅನ್ಯಃ=ಬೇರೊಬ್ಬನು; ಕುತಃ=ಎಲ್ಲಿ (ಹೇಗಿರಬಲ್ಲನು)?

**ತಾ||** ಅಸಮಾನ ಪ್ರಭಾವವುಳ್ಳ ಓ ಕೃಷ್ಣಮೂರ್ತಿ! ನೀನು ಚರಾಚರ ಪ್ರಪಂಚಕ್ಕೆಲ್ಲಾ ತಂದೆಯಾಗಿದ್ದೀಯೆ. ಮತ್ತೆ ನೀನು ಪೂಜ್ಯನೂ ಸರ್ವಶ್ರೇಷ್ಠನಾದ ಗುರುವೂ ಆಗಿದ್ದೀಯೆ. ಮೂರು ಲೋಕಗಳಲ್ಲಿ ನಿನಗೆ ಸಮಾನರಾದವರಿಲ್ಲ. ಇನ್ನು ನಿನ್ನನ್ನು ಮೀರಿದವರು ಇರಲು ಹೇಗೆ ಸಾಧ್ಯ?

**ವ್ಯಾಖ್ಯೆ:** ಚರಾಚರ ಪ್ರಪಂಚಕ್ಕೆ, ಪ್ರಾಣಿಕೋಟಿಗೆ ಭಗವಂತನೇ ತಂದೆ. ಆತನೇ ತಾಯಿ, ಆತನೇ ಗುರು, ಗುರುಗಳಲ್ಲೆಲ್ಲಾ ಸರ್ವೋತ್ತಮನಾದ ಗುರು. ಆದ್ದರಿಂದಲೇ 'ಗುರುರ್ಗರೀಯಾನ್' ಎಂದು ಹೇಳಲಾಗಿದೆ. ಅವನು ಒಬ್ಬನೇ ಸದ್ವಸ್ತುವೆಂದೂ ಬೇರೆ ದೃಶ್ಯ ಪ್ರಪಂಚವೆಲ್ಲಾ ಅಸದ್ವಸ್ತುವೆಂದೂ, ಅವನಿಗೆ ಸಮಾನನಾಗಲೀ, ದೊಡ್ಡವರಾಗಲೀ ಇಲ್ಲವೇ ಇಲ್ಲ ಎಂದು ಸ್ಪಷ್ಟವಾಗುತ್ತದೆ. ಆದ್ದರಿಂದ ಸರ್ವರೂ ಆತನನ್ನೇ ಆಶ್ರಯಿಸಬೇಕು.

'ಗರೀಯಾನ್' ಎನ್ನುವ ಈ ಪದವನ್ನು 'ಗುರು'ವಿಗೆ ವಿಶೇಷಣವಲ್ಲದೆ ಬೇರೆಯಾಗಿ ಕೂಡ ಹೇಳಬಹುದು. (ಗರೀಯಾನ್ - ಅಂದರೆ ಶ್ರೇಷ್ಠನೆಂದು)

ಪ್ರ : ಪರಮಾತ್ಮನ ಇನ್ನೂ ಕೆಲ ಲಕ್ಷಣಗಳು ಯಾವುವು?

ಉ : ೧) ಚರಾಚರ ಪ್ರಪಂಚಕ್ಕೆ ತಂದೆ ೨) ಪರಮಪೂಜ್ಯ ೩) ಉತ್ತಮ ಗುರು ೪) ಮೂರು ಲೋಕಗಳಲ್ಲಿ ಅಸಮಾನ ಪ್ರಭಾವವುಳ್ಳವನು ೫) ಆತನಿಗೆ ಸಮಾನರಾಗಲಿ, ಆತನಿಗಿಂತ ಅಧಿಕರಾದವರಾಗಲಿ ಇಲ್ಲವೇ ಇಲ್ಲ.

**ಅ||** ಈ ಪ್ರಕಾರವಾಗಿ ಭಗವಂತನನ್ನು ಪ್ರಾರ್ಥಿಸಿ, ನಂತರ ಅರ್ಜುನನು ಸಾಷ್ಟಾಂಗ ನಮಸ್ಕಾರ ಮಾಡಿ ತನ್ನ ಅಪರಾಧವನ್ನು ಕ್ಷಮಿಸಬೇಕೆಂದು ಬೇಡಿಕೊಳ್ಳುತ್ತಿದ್ದಾನೆ.

೪೪ ತಸ್ಮಾತ್ಪ್ರಣಮ್ಯ ಪ್ರಣಿಧಾಯ ಕಾಯಂ
ಪ್ರಸಾದಯೇ ತ್ವಾಮಹಮೀಶ ಮೀಢ್ಯಂ
ಪಿತೇವ ಪುತ್ರಸ್ಯ ಸಖೇವ ಸಖ್ಯುಃ
ಪ್ರಿಯಃ ಪ್ರಿಯಾಯಾರ್ಹಸಿ ದೇವ ಸೋಢುಮ್

**ಅರ್ಥ:** ತಸ್ಮಾತ್=ಆದ್ದರಿಂದ; ಕಾಯಂ=ಶರೀರವನ್ನು; ಪ್ರಣಿಧಾಯ=(ಭೂಮಿಯ ಮೇಲೆ) ಸಾಷ್ಟಾಂಗವಾಗಿ ಬೀಳಿಸಿ; ಪ್ರಣಮ್ಯ=ನಮಸ್ಕರಿಸಿ; ಈಶಂ=ಈಶ್ವರನಾದ (ನಿಯಾಮಕನಾದ); ಈಢ್ಯಂ=ಸ್ತುತಿಸಲರ್ಹವಾದ; ತ್ವಾಂ=ನಿನ್ನನ್ನು; ಪ್ರಸಾದಯೇ=ಅನುಗ್ರಹಿಸಬೇಕೆಂದು ಬೇಡುತ್ತಿದ್ದೇನೆ; ದೇವ=ಓ ದೇವಾ! ಪುತ್ರಸ್ಯ=ಮಗನ (ಅಪರಾಧವನ್ನು); ಪಿತಾ ಇವ=ತಂದೆಯಿಂದ; ಸಖ್ಯುಃ=ಸಖನ (ತಪ್ಪನ್ನು); ಸಖಾ ಇವ=ಸಖನಂತೆ ಪ್ರಿಯಾಯಾಃ=ಪ್ರಿಯಳ (ತಪ್ಪನ್ನು); ಪ್ರಿಯಃ ಇವ=ಪ್ರಿಯನಿಂದ (ಮೇ=ನನ್ನ, ಅಪರಾಧಂ=ಅಪರಾಧವನ್ನು); ಸೋಢುಂ=ಸಹಿಸಲು (ಕ್ಷಮಿಸಲು); ಅರ್ಹಸಿ=ತಕ್ಕವನು.

**ತಾ||** ಆದ್ದರಿಂದ ಶರೀರವನ್ನು ಭೂಮಿಯ ಮೇಲೆ ಸಾಷ್ಟಾಂಗವಾಗಿ ಎರಗಿಸಿ, ನಮಸ್ಕರಿಸಿ, ಈಶ್ವರನೂ, ಸ್ತುತಿಸಲು ತಕ್ಕವನೂ ಆದ ನಿನ್ನನ್ನು ಅನುಗ್ರಹಿಸಬೇಕೆಂದು ಬೇಡುತ್ತಿದ್ದೇನೆ. ದೇವಾ! ತಂದೆಯು ಮಗನ, ಸಖನು ಸಖನ, ಪ್ರಿಯನು ಪ್ರಿಯಳ, ಅಪರಾಧಗಳನ್ನು ಕ್ಷಮಿಸುವಂತೆ ನೀನೂ ಸಹ ನನ್ನ ಅಪರಾಧಗಳನ್ನು ಕ್ಷಮಿಸುವುದು.

**ವ್ಯಾಖ್ಯೆ:** *'ಪ್ರಣಿಧಾಯ ಕಾಯಂ'*- ಹಿರಿಯರಿಗೆ ಹೇಗೆ ನಮಸ್ಕರಿಸಬೇಕೋ ಆ ಪದ್ಧತಿಯನ್ನು ಇಲ್ಲಿ ತಿಳಿಸಲಾಗಿದೆ. ಶರೀರವನ್ನು ಭೂಮಿಯ ಮೇಲೆ ಪೂರ್ತಿಯಾಗಿ ಎರಗಿಸಿ ಹಿರಿಯರಿಗೆ ಸಾಷ್ಟಾಂಗ ನಮಸ್ಕಾರ ಮಾಡಬೇಕೆಂದು ಅರ್ಜುನನ ನೆಪದಲ್ಲಿ ಲೋಕಕ್ಕೆ ತಿಳಿಸಲಾಗಿದೆ. ಅಂತಹ ಕ್ರಿಯೆಯಿಂದ ಅಹಂಕಾರ, ಗರ್ವ, ದರ್ಪಗಳು ನಶಿಸುವುವು. ಆದ್ದರಿಂದ ಹಿಂದೂ ಮತ ಧರ್ಮದಲ್ಲಿ ಸಾಷ್ಟಾಂಗ ನಮಸ್ಕಾರ ಪದ್ಧತಿಯಿದೆ. ಅದರಿಂದ ಹಿರಿಯರ ಅನುಗ್ರಹಕ್ಕೆ ಪಾತ್ರನಾಗುವನು. ಅರ್ಜುನನು ಆ ಪ್ರಕಾರವಾಗಿಯೇ ಭಗವಂತನ ಅನುಗ್ರಹವನ್ನು ಹೊಂದಿದನು. ವಿಶ್ವಾಮಿತ್ರನು ಆ ಪ್ರಕಾರವಾಗಿಯೇ ವಶಿಷ್ಠರಿಂದ ಬ್ರಹ್ಮರ್ಷಿ ಎಂದು ಕರೆಸಿಕೊಂಡನು. ಆದರೆ ಶರೀರದೊಂದಿಗೆ ಮನಸ್ಸಿನಲ್ಲಿಯೂ ಮಾತಿನಲ್ಲಿಯೂ ಕೂಡ ವಿನಯವು ಕಾಣಿಸಬೇಕು. ಆಗ ತ್ರಿಕರಣಗಳಿಂದ ದೈವವನ್ನು, ಹಿರಿಯರನ್ನು ಸೇವಿಸಿದಂತಾಗುವುದು.

ತನ್ನ ತಪ್ಪುಗಳನ್ನು ಕ್ಷಮಿಸಬೇಕೆಂದು ಅರ್ಜುನನು ಭಗವಂತನನ್ನು ವಿನಯಾತಿವಿನಯಗಳಿಂದ ಪ್ರಾರ್ಥಿಸಿದನು. ನಿರ್ಮಲಭಕ್ತಿಯಿಂದ ಮಾಡುವ ಪ್ರಾರ್ಥನೆಗಳನ್ನು ಭಗವಂತನು ತಪ್ಪದೆ ಮನ್ನಿಸುವನು.

ಪ್ರ ; ಪರಮಾತ್ಮನು ಎಂತಹವನು?

ಉ : ೧) ಸರ್ವಲೋಕಕ್ಕೆ ಈಶನು, ಪ್ರಭು ೨) ಸರ್ವರಿಂದಲೂ ಸ್ತುತಿಸಲ್ಪಡಲು ಯೋಗ್ಯನಾದವನು

ಪ್ರ : ಭಗವಂತನಿಗೆ, ಹಿರಿಯರಿಗೆ ಹೇಗೆ ನಮಸ್ಕರಿಸಬೇಕು?

ಉ : ನಿರ್ಮಲ ಭಕ್ತಿಯಿಂದ ಅವರ ಪಾದಗಳಿಗೆ ಸಾಷ್ಟಾಂಗ ವಂದನೆಗಳನ್ನು ಸಲ್ಲಿಸಬೇಕು.

**ಅ||** ವಿಶ್ವರೂಪವನ್ನು ನೋಡಿ ಭಯಕಂಪಿತನಾದ ಅರ್ಜುನನು ಮತ್ತೆ ಸೌಮ್ಯರೂಪದ ದರ್ಶನ ಕೊಡು ಎಂದು ಭಗವಂತನನ್ನು ಪ್ರಾರ್ಥಿಸುತ್ತಿದ್ದಾನೆ.

೪೫ ಅದೃಷ್ಟಪೂರ್ವಂ ಹೃಷಿತೋಽಸ್ಮಿ ದೃಷ್ಟ್ವಾ
ಭಯೇನ ಚ ಪ್ರವ್ಯಥಿತಂ ಮನೋ ಮೇ
ತದೇವ ಮೇ ದರ್ಶಯ ದೇವ ರೂಪಂ
ಪ್ರಸೀದ ದೇವೇಶ ಜಗನ್ನಿವಾಸ

**ಅರ್ಥ:** ಅದೃಷ್ಟಪೂರ್ವಂ=ಈವರೆಗೆ ಎಂದೆಂದೂ ನೋಡದಂತಹ ಈ ವಿಶ್ವರೂಪವನ್ನು; ದೃಷ್ಟ್ವಾ=ನೋಡಿ, ಹೃಷಿತಃ=ಆನಂದಿಸಿದವನು; ಅಸ್ಮಿ=ಆಗಿದ್ದೇನೆ; ಚ=ಮತ್ತೆ; ಮೇ=ನನ್ನ; ಮನಃ=ಮನಸ್ಸು; ಭಯೇನ=ಭಯದಿಂದ; ಪ್ರವ್ಯಥಿತಂ=ಅತಿಯಾಗಿ ವ್ಯಾಕುಲಗೊಂಡಿದೆ; ದೇವ=ಓ ದೇವಾ! ತತ್ರೂಪಂ ಯೇವ=ಮೊದಲಿನ ಶಾಂತರೂಪವನ್ನೇ; ಮೇ=ನನಗೆ; ದರ್ಶಯ=ತೋರಿಸು; ದೇವೇಶ=ದೇವದೇವಾ! ಜಗನ್ನಿವಾಸ=ಜಗದ ಆಧಾರ; ಪ್ರಸೀದ=ಅನುಗ್ರಹಿಸು (ಪ್ರಸನ್ನನಾಗು).

**ವ್ಯಾಖ್ಯೆ:** ಇಲ್ಲಿಯವರೆಗೆ ಹಿಂದೆಂದೂ ನೋಡದ ಈ ವಿಶ್ವರೂಪವನ್ನು ನೋಡಿ ಆನಂದವನ್ನೇನೋ ಹೊಂದಿದ್ದೇನೆ. ಆದರೆ ಭಯದಿಂದ ನನ್ನ ಮನಸ್ಸು ಅತೀವ ವ್ಯಾಕುಲಕ್ಕೊಳಗಾಗಿದೆ. ಆದ್ದರಿಂದ ದೇವ! ಆ ಮೊದಲಿನ ಸೌಮ್ಯ ರೂಪವನ್ನೇ ಮತ್ತೆ ಪ್ರಸಾದಿಸು. ದೇವ-ದೇವಾ! ಜಗನ್ನಿವಾಸ! ಅನುಗ್ರಹಿಸು.

**ವ್ಯಾಖ್ಯೆ:** ಅರ್ಜುನನಿಗೆ ಅಪೂರ್ವವಾದ ವಿಶ್ವರೂಪವನ್ನು ನೋಡುವುದರಿಂದ ಹರ್ಷವು, ಅದರಲ್ಲಿಯ ಭಯಂಕರವಾದ ದೃಶ್ಯಗಳನ್ನು ವೀಕ್ಷಿಸುವುದರಿಂದ ಭಯವೂ, ಭೀತಿಯೂ ಉಂಟಾದುವು. ಆ ಭಯವನ್ನು ಹೋಗಲಾಡಿಸಿಕೊಳ್ಳಲು ಸೌಮ್ಯ ರೂಪವನ್ನು ತೋರಿಸಬೇಕೆಂದು ಭಗವಂತನನ್ನು ಯಾಚಿಸುತ್ತಿದ್ದಾನೆ.

*'ಪ್ರಸೀದ ದೇವೇಶ ಜಗನ್ನಿವಾಸ'*- ಇದೇ ವಾಕ್ಯವನ್ನು ಈ ಅಧ್ಯಾಯದ ೨೫ನೆಯ ಶ್ಲೋಕದಲ್ಲಿ ಅರ್ಜುನನು ಉಪಯೋಗಿಸಿದ್ದಾನೆ. 'ದೇವದೇವ! ಜಗನ್ನಿವಾಸ, ಕರುಣಿಸು! ಅನುಗ್ರಹಿಸು!' ಎಂದು ಅದರ ಭಾವ.

'ದೇವ' 'ರೂಪಮ್', ಎನ್ನುವ ಎರಡು ಪದಗಳೂ ಸೇರಿ 'ದೇವ ರೂಪ'=ಚತುರ್ಭುಜಾಕಾರವಾದ ವಿಷ್ಣುವಿನ ದೇವರೂಪವನ್ನು ಸೂಚಿಸುವುದು-ಎಂದು ಕೆಲವರು ಅರ್ಥ ಮಾಡಿದ್ದಾರೆ.

**ಅ||** ತಾನು ನೋಡಬೇಕೆಂದಿರುವ ಸೌಮ್ಯರೂಪವನ್ನು ಅರ್ಜುನನು ವರ್ಣಿಸುತ್ತಿದ್ದಾನೆ.

೪೬ ಕಿರೀಟನಂ ಗದಿನಂ ಚಕ್ರಹಸ್ತ
ಮಿಚ್ಛಾಮಿ ತ್ವಾಂ ದ್ರಷ್ಟುಮಹಂ ತಥೈವ
ತೇನೈವ ರೂಪೇಣ ಚತುರ್ಭುಜೇನ
ಸಹಸ್ರಬಾಹೋ ಭವ ವಿಶ್ವಮೂರ್ತೇ

**ಅರ್ಥ:** ಅಹಂ=ನಾನು; ತ್ವಾಂ=ನಿನ್ನನ್ನು; ತಥಾ ಏವ=ಮೊದಲಿನಂತೆ; ಕಿರೀಟಿನಂ=ಕಿರೀಟವನ್ನು ಧರಿಸಿದವನಾಗಿ; ಗದಿನಂ=ಗದೆಯನ್ನು ಹಿಡಿದವನಾಗಿ; ಚಕ್ರಹಸ್ತಂ=ಕೈಯಲ್ಲಿ ಚಕ್ರವುಳ್ಳವನಾಗಿ; ದ್ರಷ್ಟುಂ=ನೋಡಲು; ಇಚ್ಛಾಮಿ=ಕೋರುತ್ತಿದ್ದೇನೆ; ಸಹಸ್ರಬಾಹೋ=ಅನೇಕ ಸಹಸ್ರ ಬಾಹುಗಳುಳ್ಳವನಾಗಿ; ವಿಶ್ವಮೂರ್ತೇ=ಸಮಸ್ತ ಪ್ರಪಂಚವನ್ನು ಸ್ವರೂಪವಾಗಿ ಹೊಂದಿರುವ; ಚತುರ್ಭುಜೇನ=ನಾಲ್ಕು ಕೈಗಳನ್ನು ಹೊಂದಿರುವ; ತೇನ

ರೂಪೇಣ ಏವ=ಆ ರೂಪದಿಂದಲೇ; ಭವ=(ಮತ್ತೆ) ಆಗುವುದು, (ಆ ರೂಪವನ್ನೇ ಮತ್ತೆ ಧರಿಸು ಎಂದು ಭಾವ).

**ತಾ।।** (ಓ ಕೃಷ್ಣಮೂರ್ತಿ) ನಾನು ನಿನ್ನನ್ನು ಮೊದಲಿನ ಹಾಗೆಯೇ ಕಿರೀಟ, ಗದೆ, ಚಕ್ರಗಳನ್ನು ಧರಿಸಿದವನನ್ನಾಗಿ ನೋಡಲು ಇಚ್ಛಿಸುತ್ತೇನೆ. ಅನೇಕ ಹಸ್ತಗಳುಳ್ಳ ದೇವ! ಜಗದ್ರೂಪ! ನಾಲ್ಕು ಭುಜಗಳುಳ್ಳ ಆ ಪೂರ್ವ ರೂಪವನ್ನೇ ಮತ್ತೆ ಧರಿಸು.

**ವ್ಯಾಖ್ಯೆ:** ಈ ಶ್ಲೋಕದಲ್ಲಿ ಒಂದು ಪ್ರಶ್ನೆ ಉದಯಿಸುತ್ತದೆ. 'ತೇನೈವ=ಆ ಮೊದಲಿನ ಚತುರ್ಭುಜದೊಡನೆ ಪ್ರತ್ಯಕ್ಷವಾಗು'- ಎಂದು ಕೇಳುವುದರಿಂದ ಅರ್ಜುನನು ಭಗವಂತನ ಚತುರ್ಭುಜಾಕಾರವನ್ನು, ಮೊದಲು ನೋಡಿದ್ದನೆಂದು ಸ್ಪಷ್ಟವಾಗುತ್ತದೆ. ಆದರೆ ಹಾಗೆ ಯಾವಾಗ ನೋಡಿದನು? ಈ ಅಧ್ಯಾಯ ದಲ್ಲಿಯ ೪೧, ೪೨ನೆಯ ಶ್ಲೋಕಗಳಲ್ಲಿ ಅರ್ಜುನನು ಭಗವಂತನನ್ನು 'ನಿನ್ನನ್ನು ಸಾಮಾನ್ಯನೆಂದು ಭಾವಿಸಿ ಪರಿಹಾಸ್ಯ ಪೂರ್ವಕವಾಗಿ ಹೇಳಿದ ವಾಕ್ಯಗಳನ್ನು ಕ್ಷಮಿಸು', ಎಂದು ಬೇಡುವುದನ್ನು ನೋಡಿದರೆ, ಭಗವಂತನು ಚತುರ್ಭುಜಾ ಕಾರವಾಗಿ ಯಾವಾಗಾದರೂ ಕಂಡು ಬಂದಿದ್ದರೆ ಆ ಪ್ರಕಾರವಾಗಿ ಸಾಮಾನ್ಯ ಸಖನಂತೆ ಆತನನ್ನು ಭಾವಿಸುತ್ತಿರಲಿಲ್ಲವಲ್ಲ, ಆದ್ದರಿಂದ ಆ ಆಕಾರದೊಡನೆ ಆತನಿಗೆ ಪರಿಚಯವಿಲ್ಲವೆಂದೇ ಭಾಸವಾಗುತ್ತದೆ. ಈ ಪ್ರಕಾರವಾಗಿ ವಿರುದ್ಧವಾಗಿ ಕಾಣುವ ಈ ಭಾವಗಳನ್ನು ಹೇಗೆ ಸಮನ್ವಯಗೊಳಿಸಿ ಕೊಳ್ಳಬೇಕು? ಇದಕ್ಕೆ ಉತ್ತರ ಈ ಕೆಳಕಂಡಂತೆ ಕೊಡಬಹುದು.

೧) ವಿಶ್ವರೂಪವನ್ನು ತೋರಿಸುವುದಕ್ಕೆ ಮುಂಚೆ ಪ್ರಾರಂಭದಲ್ಲಿ ಭಗವಂತನು ಸಂತೋಷದಿಂದ ಅರ್ಜುನನಿಗೆ ಚತುರ್ಭುಜಾಕಾರವನ್ನು ತೋರಿಸಿದ್ದಿರ ಬಹುದು. ೫೦ನೆಯ ಶ್ಲೋಕದಲ್ಲಿ 'ಭೂಯಃ ಸ್ವಕಂ ರೂಪಂ ದರ್ಶಯಾಮಾಸ' (ಪುನಃ ತನ್ನ ರೂಪವನ್ನು ತೋರಿಸಿದನು) ಎಂದು ಹೇಳಿ ತಕ್ಷಣವೇ 'ಪುನಸ್ಸೌಮ್ಯವಪುರ್ಮಹಾತ್ಮಾ' (ಮತ್ತೆ ಶಾಂತರೂಪವನ್ನು ಧರಿಸಿದನು) ಎಂದು ಹೇಳುವುದರಿಂದ ಮೊದಲು ಚತುರ್ಭುಜಾ ಕಾರವನ್ನು ತೋರಿಸಿ, ನಂತರ ಶಾಂತವಾದ ಮಾನವರೂಪವನ್ನು ಧರಿಸಿದ್ದಿರಬಹುದು.

೨) ದೇವಕೀದೇವಿಯ ಗರ್ಭದಲ್ಲಿ ಭಗವಂತನು ಜನ್ಮಿಸಿದಾಗ ಶಂಖ ಚಕ್ರಾದಿ ಚಿಹ್ನೆಗಳು ಇದ್ದವೆಂದು, ಅದು ಪ್ರಸನ್ನವಾದ ರೂಪವಾಗಿತ್ತೆಂದು ಅರ್ಜುನನು ಕೇಳಿದ್ದಿರಬಹುದು.

೩) ವಿಶ್ವರೂಪದರ್ಶನದಿಂದ ಶ್ರೀಕೃಷ್ಣನು ಸಾಮಾನ್ಯನಲ್ಲವೆಂದು, ಸಾಕ್ಷಾತ್ ವಿಷ್ಣುವೇ ಎಂದು ತಿಳಿದುಕೊಳ್ಳುವುದರಿಂದ ವೈಕುಂಠ ಚಿಹ್ನೆಗಳಿಂದಲೇ ಸದಾ ಪ್ರಸನ್ನ ರೂಪಿಯಾಗಿ ಬೆಳಗುತ್ತಾನೆಂದು ತಿಳಿದು ಅರ್ಜುನನು ಹೀಗೆ ಪ್ರಶ್ನಿಸಿರಬಹುದು.

**ಅ।।** ಅರ್ಜುನನ ಆ ಪ್ರಾರ್ಥನೆಯನ್ನು ಕೇಳಿ ಭಗವಂತನು ತನ್ನ ಸೌಮ್ಯರೂಪದಿಂದ ಮತ್ತೆ ಪ್ರತ್ಯಕ್ಷನಾಗುವ ಮೊದಲು ವಿಶ್ವರೂಪದ ಮಹಿಮೆಯನ್ನು ಬಣ್ಣಿಸುತ್ತಿದ್ದಾನೆ-

ಶ್ರೀ ಭಗವಾನುವಾಚ

೪೭ ಮಯಾ ಪ್ರಸನ್ನೇನ ತವಾರ್ಜುನೇದಂ
ರೂಪಂ ಪರಂ ದರ್ಶಿತ ಮಾತ್ಮಯೋಗಾತ್
ತೇಜೋಮಯಂ ವಿಶ್ವಮನಂತ ಮಾದ್ಯಮ್
ಯನ್ಮೇ ತ್ವದನ್ಯೇನ ನ ದೃಷ್ಟಪೂರ್ವಮ್

ಶ್ರೀ ಭಗವಾನುವಾಚ-ಶ್ರೀ ಭಗವಂತನು ಹೇಳುತ್ತಿದ್ದಾನೆ-

**ಅರ್ಥ:** ಅರ್ಜುನ=ಓ ಅರ್ಜುನಾ! ತೇಜೋಮಯಂ=ಪ್ರಕಾಶದಿಂದ ಪರಿಪೂರ್ಣವಾದುದು; ವಿಶ್ವಂ=ಪ್ರಪಂಚ ಸ್ವರೂಪವಾದದ್ದು; ಅನಂತಂ= ಅಂತ್ಯವಿಲ್ಲದುದೂ; ಆದ್ಯಂ=ಮೊದಲಿನದೂ; ತ್ವದನ್ಯೇನ=ನಿನ್ನನ್ನು ಬಿಟ್ಟು ಬೇರೊಬ್ಬರಿಂದ; ನ ದೃಷ್ಟಪೂರ್ವಂ=ಈವರೆಗೆ ಯಾವಾಗಲೂ ನೋಡದಂತಹ; ಮೇ=ನನ್ನ; ಯತ್ ಇದಂ ಪರಂ ರೂಪಮ್=ಯಾವ ಈ ಸರ್ವೋತ್ತಮವಾದ ವಿಶ್ವರೂಪವನ್ನು (ಅದ್ರಾಕ್ಷೀಃ=ನೋಡಿದೆಯೋ); ತತ್=ಆ ರೂಪವನ್ನು; ಪ್ರಸನ್ನೇನ ಮಯಾ=ಪ್ರಸನ್ನನಾದ ನನ್ನಿಂದ; ತವ=ನಿನಗೆ; ಆತ್ಮಯೋಗಾತ್=ನನ್ನ ಯೋಗಶಕ್ತಿಯಿಂದ; ದರ್ಶಿತಂ=ತೋರಿಸಲ್ಪಟ್ಟಿತು.

**ತಾ।।** ಶ್ರೀ ಭಗವಂತನು ಹೇಳುತ್ತಿದ್ದಾನೆ- ಅರ್ಜುನಾ! ಪ್ರಕಾಶದಿಂದ ಪರಿಪೂರ್ಣವಾದುದೂ, ಜಗದ್ರೂಪವಾದುದೂ, ಅಂತ್ಯವಿಲ್ಲದ್ದೂ, ಆದಿಯಾದದ್ದೂ, ನಿನ್ನನ್ನು ಬಿಟ್ಟು ಬೇರೆಯಾರಿಂದ ಈವರೆಗೆ ನೋಡಲ್ಪಡದೇ ಇರುವ ಈ ಸರ್ವೋತ್ತಮವಾದ ವಿಶ್ವರೂಪವನ್ನು, ಪ್ರಸನ್ನನಾದ ನಾನು ನನ್ನ ಸ್ವಕೀಯಯೋಗಶಕ್ತಿಯಿಂದ ನಿನಗೆ ತೋರಿಸಿದ್ದೇನೆ.

**ವ್ಯಾಖ್ಯೆ:** 'ಮಯಾ ಪ್ರಸನ್ನೇನ' ಎಂದು ಹೇಳಿರುವುದರಿಂದ, ಅನನ್ಯ ಭಕ್ತಿಯಿರುವವರ ಮೇಲೆ ಭಗವಂತನು ತನ್ನ ಅನುಗ್ರಹವನ್ನು ತೋರಿಸುವನೆಂದು ಸ್ಪಷ್ಟವಾಗುತ್ತದೆ.

ಪ್ರ : ಭಗವಂತನು ಎಂತಹವನು?

ಉ : ೧) ತೇಜೋಮಯನು ೨) ವಿಶ್ವವ್ಯಾಪಕನು ೩) ಅನಂತರೂಪಿ
೪) ಆದ್ಯ ಸ್ವರೂಪಿ

೪೮ ನ ವೇದಯಜ್ಞಾಧ್ಯಯನೈರ್ನ ದಾನೈ
ರ್ನ ಚ ಕ್ರಿಯಾಭಿರ್ನ ತಪೋಭಿರುಗ್ರೈಃ
ಏವಂ ರೂಪಶ್ಶಕ್ಯ ಅಹಂ ನೃಲೋಕೇ
ದ್ರಷ್ಟುಂ ತ್ವದನ್ಯೇನ ಕುರು ಪ್ರವೀರ

**ಅರ್ಥ:** ಕುರುಪ್ರವೀರ=ಕುರುವಂಶ ಶ್ರೇಷ್ಠನಾದ ಓ ಅರ್ಜುನಾ!; ಏವಂ ರೂಪಃ=ಇಂತಹ ರೂಪವನ್ನುಳ್ಳ; ಅಹಂ=ನಾನು; ನೃಲೋಕೇ= ಮನುಷ್ಯ ಲೋಕದಲ್ಲಿ; ತ್ವದನ್ಯೇನ=ನಿನನ್ನು ಬಿಟ್ಟು ಬೇರೆಯವರಿಂದ; ವೇದ ಯಜ್ಞಾಧ್ಯಯನೈಃ=ವೇದಾಧ್ಯಯನ, ಯಜ್ಞಾಧ್ಯಯನಗಳಿಂದ; ದ್ರಷ್ಟುಂ= ನೋಡಲು; ನಶಕ್ಯಃ= ಸಾಧ್ಯವಿಲ್ಲ; ದಾನೈಃ=ದಾನಗಳಿಂದ; ನಃ=ನೋಡಲು ಸಾಧ್ಯವಿಲ್ಲ; ಕ್ರಿಯಾಭಿಃ=(ಅಗ್ನಿ ಹೋತ್ರಾದಿ, ಶ್ರೌತಸ್ಮಾರ್ತಾದಿ) ಕ್ರಿಯೆಗಳಿಂದ; ನ=ನೋಡಲು ಸಾಧ್ಯವಿಲ್ಲ; ಉಗ್ರೈಃ ತಪೋಭಿಃ ಚ=ಘೋರ ತಪಸ್ಸುಗಳಿಂದ; ನ=ನೋಡಲು ಸಾಧ್ಯವಿಲ್ಲ.

**ತಾ।।** ಕುರುವಂಶ ಶ್ರೇಷ್ಠನಾದ ಓ ಅರ್ಜುನಾ! ಈ ನನ್ನ ವಿಶ್ವರೂಪವನ್ನು ನಿನ್ನನ್ನು ಬಿಟ್ಟು ಬೇರೆ ಯಾರೂ ಈ ಲೋಕದಲ್ಲಿ ನೋಡಲಾರರು (ನನ್ನ ಅನುಗ್ರಹ ಮಾತ್ರದಿಂದ ನೀನು ನೋಡಿದೆ), ಮತ್ತೆ ವೇದಾಧ್ಯಯನ, ಯಜ್ಞಾ ಧ್ಯಯನಗಳಿಂದ, ದಾನಗಳಿಂದ, (ಅಗ್ನಿ ಹೋತ್ರಾದಿ, ಶ್ರೌತ ಸ್ಮಾರ್ತಾದಿ) ಕರ್ಮಗಳಿಂದ ಘೋರ ತಪಸ್ಸುಗಳಿಂದ, ಇಂತಹ(ವಿಶ್ವರೂಪಿಯಾದ) ನನ್ನನ್ನು ನೋಡಲು ಸಾಧ್ಯವಿಲ್ಲ.

**ವ್ಯಾಖ್ಯೆ:** ಇಲ್ಲಿ ತಿಳಿಸಿದ ವೇದಾಧ್ಯಯನ, ಯಜ್ಞಾದಿಗಳಿಂದ ಭಗವಂತನ ವಿಶ್ವರೂಪವನ್ನು ನೋಡಲು ಸಾಧ್ಯವಿಲ್ಲವೆಂದು ಹೇಳಿದ ಮಾತ್ರಕ್ಕೆ ಅವೆಲ್ಲವೂ ನಿರುಪಯೋಗವಾದವುಗಳೆಂದು ಅರ್ಥ ಮಾಡಬಾರದು. ಆ ಕ್ರಿಯೆಗಳಲ್ಲೆಲ್ಲಾ ಭಕ್ತಿಯ ಭಾವ ಉಂಟಾದಲ್ಲಿ ಮಾತ್ರ ಅವು ವಿಶೇಷ ಫಲಗಳನ್ನು ಕೊಡುವುವು ಎಂದು ತಿಳಿಸಲು ಹೀಗೆ ಹೇಳಲಾಗಿದೆ. ಎಷ್ಟು ಕಷ್ಟ ಬಿದ್ದರೂ ಜಲವಿಲ್ಲದಿದ್ದರೆ ಸಸ್ಯಗಳು ಬೆಳೆಯುವುದಿಲ್ಲವಲ್ಲವೇ! ಹಾಗೆಯೇ ಈ ಕ್ರಿಯೆಗಳೂ ಸಹ.

**೪೯ ಮಾತೇ ವ್ಯಥಾ ಮಾಂ ಚ ವಿಮೂಢಭಾವೋ**
**ದೃಷ್ಟ್ವಾ ರೂಪಂ ಘೋರಮೀದೃಙ್ಮಮೇದಮ್**
**ವ್ಯಪೇತಭೀಃ ಪ್ರೀತಮನಾಃ ಪುನಸ್ತ್ವಮ್**
**ತದೇವ ಮೇ ರೂಪಮಿದಂ ಪ್ರಪಶ್ಯ**

**ಅರ್ಥ:** ಈ ದೃಕ್=ಇಂತಹ; ಘೋರಂ=ಭಯಂಕರವಾದ; ಮಮ=ನನ್ನ; ಇದಂ ರೂಪಂ=ಈ (ವಿಶ್ವ) ರೂಪವನ್ನು; ದೃಷ್ಟ್ವಾ=ನೋಡಿ; ತೇ=ನಿನಗೆ; ವ್ಯಥಾ=ಭಯ (ಬಾಧೆ); ಮಾಂ=ಅಗತ್ಯವಿಲ್ಲ; ವಿಮೂಢಭಾವಃ ಚ= ಚಿತ್ತವೈಕಲ್ಯವು; ಮಾ=ಇರುವುದು; ತ್ವಂ=ನೀನು; ವ್ಯಪೇತ ಭೀಃ= ಭಯರಹಿತನಾಗಿ; ಪ್ರೀತಮನಾಃ=ಪಸನ್ನಚಿತ್ತನಾಗಿ; ಮೇ=ನನ್ನ; ತತ್ ಇದಂ ರೂಪಂ ಏವ=(ನೀನು ಕೋರಿದ) ಆ ಪೂರ್ವರೂಪವನ್ನೇ; ಪುನಃ=ಮತ್ತೆ; ಪ್ರಪಶ್ಯ=ಚೆನ್ನಾಗಿ ನೋಡು.

**ತಾ||** ಈ ರೀತಿಯ ನನ್ನ ಘೋರವಾದ (ವಿಶ್ವ)ರೂಪವನ್ನು ನೋಡಿ, ನೀನು ಭಯವಾಗಲಿ, ಚಿತ್ತ ವೈಕಲ್ಯವನ್ನಾಗಲಿ ಹೊಂದುವ ಅಗತ್ಯವಿಲ್ಲ. ನೀನು ನಿರ್ಭಯನಾಗಿ, ಪ್ರಸನ್ನಚಿತ್ತನಾಗಿ ನನ್ನ ಆ ಪೂರ್ವರೂಪವನ್ನೇ ಮತ್ತೆ ಚೆನ್ನಾಗಿ ನೋಡು.

**ಅ||** ಹೀಗೆ ಹೇಳಿ ನಂತರ ಶ್ರೀ ಕೃಷ್ಣನು ಏನು ಮಾಡಿದನೆನ್ನುವುದನ್ನು ಸಂಜಯನು ಹೇಳುತ್ತಿದ್ದಾನೆ-

**ಸಂಜಯ ಉವಾಚ:**

**೫೦ ಇತ್ಯರ್ಜುನಂ ವಾಸುದೇವಸ್ತಥೋಕ್ತ್ವಾ**
**ಸ್ವಕಂ ರೂಪಂ ದರ್ಶಯಾಮಾಸ ಭೂಯಃ**
**ಆಶ್ವಾಸಯಾಮಾಸ ಚ ಭೀತಮೇನಂ**
**ಭೂತ್ವಾ ಪುನಸ್ಸೌಮ್ಯವಪುರ್ಮಹಾತ್ಮಾ**

ಸಂಜಯ ಉವಾಚ-ಸಂಜಯನು ಹೇಳಿದನು.

**ಅರ್ಥ:** ಇತಿ=ಈ ಪ್ರಕಾರವಾಗಿ; ವಾಸುದೇವಃ=ಶ್ರೀಕೃಷ್ಣನು; ಅರ್ಜುನಂ= ಅರ್ಜುನನನ್ನು ಕುರಿತು; ಉಕ್ತ್ವಾ=ಹೇಳಿ; ತಥಾ=ಆ ಪ್ರಕಾರವಾಗಿ; ಸ್ವಕಂ ರೂಪಂ=ತನ್ನ ಪೂರ್ವರೂಪವನ್ನು; ಭೂಯಃ=ಮತ್ತೆ; ದರ್ಶಯಾಮಾಸ= ತೋರಿಸಿದನು; ಮಹಾತ್ಮಾ=ಮಹಾತ್ಮನಾದ ಆ ಶ್ರೀ ಕೃಷ್ಣಮೂರ್ತಿ; ಪುನಃ ಚ=ಮತ್ತೆ; ಸೌಮ್ಯವಪುಃ=ಶಾಂತರೂಪವುಳ್ಳವನು; ಭೂತ್ವಾ=ಆಗಿ; ಭೀತಂ=ಭಯಪಟ್ಟ; ಏನಂ=ಅರ್ಜುನನನ್ನು; ಆಶ್ವಾಸಯಾಮಾಸ= ಸಮಾಧಾನಪಡಿಸಿದನು.

**ತಾ||** ಸಂಜಯನು ಹೇಳಿದನು- (ಓ ಧೃತರಾಷ್ಟ್ರ ಮಹಾರಾಜಾ!) ಈ ಪ್ರಕಾರವಾಗಿ ಶ್ರೀ ಕೃಷ್ಣನು ಅರ್ಜುನನಿಗೆ ಹೇಳಿ, ತನ್ನ ಪೂರ್ವರೂಪವನ್ನು ಮತ್ತೆ ತೋರಿಸಿದನು. ಮಹಾತ್ಮನಾದ ಶ್ರೀ ಕೃಷ್ಣಮೂರ್ತಿ ಮತ್ತೆ ತನ್ನ ಸೌಮ್ಯರೂಪವನ್ನು ಧರಿಸಿ ಭಯಪಟ್ಟಿದ್ದ ಅರ್ಜುನನನ್ನು ಸಮಾಧಾನ ಪಡಿಸಿದನು.

**ವ್ಯಾಖ್ಯೆ:** ಇಲ್ಲಿ ಎರಡು ಸಾರಿ 'ಮತ್ತೆ ತನ್ನ ರೂಪವನ್ನು ತೋರಿಸಿದನು' ಎಂದು ಹೇಳುವುದರಿಂದ ಮೊದಲು ಅರ್ಜುನನ ಕೋರಿಕೆಯನ್ನು ಮನ್ನಿಸಿ ಚತುರ್ಭುಜಾಕಾರದಲ್ಲಿ ಪ್ರತ್ಯಕ್ಷವಾಗಿ ನಂತರ ತನ್ನ ಸೌಮ್ಯ ಮಾನವ ರೂಪವನ್ನು ತೋರಿಸಿದ್ದಿರಬಹುದುದೆಂದು ಅರ್ಥವಾಗುತ್ತದೆ.

**ಅ||** ಭಗವಂತನ ಆ ವಿಧವಾದ ಶಾಂತರೂಪವನ್ನು ನೋಡಿ ನಂತರ ಅರ್ಜುನನು ಹೇಳಿದ ಮಾತುಗಳನ್ನು ವಿವರಿಸಲಾಗಿದೆ-

**ಅರ್ಜುನ ಉವಾಚ :**

**೫೧ ದೃಷ್ಟ್ವೇದಂ ಮಾನುಷಂ ರೂಪಂ ತವ ಸೌಮ್ಯಂ ಜನಾರ್ದನ**
**ಇದಾನೀಮಸ್ಮಿ ಸಂವೃತ್ತಸ್ಸಚೇತಾಃ ಪ್ರಕೃತಿಂ ಗತಃ**

ಅರ್ಜುನ ಉವಾಚ=ಅರ್ಜುನನು ಹೇಳಿದನು.

**ಅರ್ಥ:** ಜನಾರ್ದನ=ಓ ಕೃಷ್ಣಾ! ತವ=ನಿನ್ನ; ಸೌಮ್ಯಂ=ಪ್ರಸನ್ನವಾದ (ಶಾಂತವಾದ); ಇದಂ ಮಾನುಷಂ ರೂಪಂ=ಈ ಮನುಷ್ಯರೂಪವನ್ನು; ದೃಷ್ಟ್ವಾ=ನೋಡಿ; ಇದಾನೀಂ=ಈಗ; ಸಚೇತಾಃ=ತಿಳಿಯಾದ ಮನಸ್ಸುಳ್ಳವನಾಗಿ; ಸಂವೃತ್ತಃ=ಆದೆ; (ಮತ್ತೆ) ಪ್ರಕೃತಿಂ=ಸ್ವಾಸ್ಥ್ಯವನ್ನು; ಗತಃ ಅಸ್ಮಿ=ಹೊಂದಿದವನಾದೆ.

**ತಾ||** ಅರ್ಜುನನು ಹೇಳಿದನು-ಓ ಕೃಷ್ಣಾ! ನಿನ್ನ ಪ್ರಶಾಂತವಾದ ಮನುಷ್ಯರೂಪವನ್ನು ನೋಡಿ ನನ್ನ ಮನಸ್ಸು ಹಾಯಾಗಿ ತಿಳಿಯಾಗಿದೆ. ಮತ್ತೆ ನಾನು ಸ್ವಾಸ್ಥ್ಯವನ್ನು ಪಡೆದಿರುತ್ತೇನೆ.

**ಅ||** ಅರ್ಜುನನ ಈ ವಾಕ್ಯಗಳನ್ನು ಕೇಳಿ ಭಗವಂತನು ತಾನು ತೋರಿಸಿದ ರೂಪದ ಮಹಿಮಾತಿಶಯವನ್ನು ಎರಡು ಶ್ಲೋಕಗಳಲ್ಲಿ ವರ್ಣಿಸುತ್ತಿದ್ದಾನೆ-

**ಶ್ರೀ ಭಗವಾನುವಾಚಃ-**

**೫೨ ಸುದುರ್ದರ್ಶಮಿದಂ ರೂಪಂ ದೃಷ್ಟವಾನಸಿ ಯನ್ಮಮ**
**ದೇವಾ ಅಪ್ಯಸ್ಯ ರೂಪಸ್ಯ ನಿತ್ಯಂ ದರ್ಶನ ಕಾಂಕ್ಷಿಣಃ**

ಶ್ರೀ ಭಗವಾನುವಾಚ- ಶ್ರೀ ಭಗವಂತನು ಹೇಳಿದನು.

**ಅರ್ಥ:** ಮಮ=ನನ್ನ; ಯತ್=ಯಾವ ರೂಪವನ್ನು; ದೃಷ್ಟವಾನ್ ಅಸಿ=ನೋಡಿದಂತವನಾದೆಯೋ; (ತತ್) ಇದಂ ರೂಪಂ=ಆ ಈ (ವಿಶ್ವ)ರೂಪವು; ಸುದುರ್ದರ್ಶಂ=ನೋಡಲು ಅತ್ಯಂತ ದುರ್ಲಭವಾದುದು; ದೇವಾಃ ಅಪಿ=ದೇವತೆಗಳೂ ಕೂಡ; ನಿತ್ಯಂ=ಯಾವಾಗಲೂ; ಅಸ್ಯರೂಪಸ್ಯ=ಈ (ವಿಶ್ವ)ರೂಪದ; ದರ್ಶನ ಕಾಂಕ್ಷಿಣಃ (ಭವಂತಿ)=ದರ್ಶನವನ್ನು ಅಭಿಲಾಷಿಸಿದವರು (ಆಗಿದ್ದಾರೆ).

**ತಾ||** ಶ್ರೀ ಭಗವಂತನು ಹೇಳಿದನು- ನನ್ನ ಯಾವ ರೂಪವನ್ನು ಈಗ ನೀನು ನೋಡಿದೆಯೋ ಅದು ಮಹಾ ದುರ್ಲಭವಾದುದು. ದೇವತೆಗಳು ಕೂಡ ನಿತ್ಯವು ಅದನ್ನು ದರ್ಶನಮಾಡಬೇಕೆಂದು ಬಯಸುತ್ತಿರುವರು.

**ವ್ಯಾಖ್ಯೆ:** ಭಗವಂತನ ಸ್ವರೂಪವನ್ನು ಸಾಮಾನ್ಯರು ಯಾರೂ ದರ್ಶಿಸಲಾರರು. ಎಷ್ಟೋ ಹೃದಯ ನಿರ್ಮಲತೆ (ಚಿತ್ತ ಶುದ್ಧಿ) ಅನನ್ಯ ಭಕ್ತಿಯಿರುವವರು ಮಾತ್ರವೇ ಅದನ್ನು ದರ್ಶಿಸಬಲ್ಲರು. ಆದ್ದರಿಂದಲೇ 'ದುರ್ದರ್ಶಂ' ಎನ್ನದೆ 'ಸುದುರ್ದರ್ಶಂ' ಎಂದು ಹೇಳಲ್ಪಟ್ಟಿದೆ. ಭಗವದ್ದರ್ಶನ ಮಹಾ ದುರ್ಲಭ ವಾದುದು.

**೫೩ ನಾಹಂ ವೇದೈರ್ನ ತಪಸಾ ನ ದಾನೇನ ನ ಚೇಜ್ಯಯಾ**
**ಶಕ್ಯ ಏವಂವಿಧೋ ದ್ರಷ್ಟುಂ ದೃಷ್ಟವಾನಸಿ ಮಾಂ ಯಥಾ**

**ಅರ್ಥ:** ಮಾಂ=ನನ್ನನ್ನು; ಯಥಾ=ಯಾವ ರೀತಿಯಾಗಿ; ದೃಷ್ಟವಾನ್ ಅಸಿ=ನೋಡಿದವನಾದೆಯೋ; ಏವಮ ವಿಧಃ=ಇಂತಹ (ಸ್ವರೂಪವುಳ್ಳ) ಅದು; ಅಹಂ=ನಾನು; ವೇದೈಃ=ವೇದಗಳಿಂದ (ವೇದಾಧ್ಯಯನಪರರಿಂದ); ದ್ರಷ್ಟುಂ=ನೋಡಲು; ನ ಶಕ್ಯಃ=ಶಕ್ಯನಲ್ಲ; ತಪಸಾ=ತಪಸ್ಸಿನಿಂದ; ನ= (ನೋಡುವುದಕ್ಕೆ) ಶಕ್ಯನಲ್ಲ; ದಾನೇನ=ದಾನದಿಂದ; ನ=(ನೋಡುವುದಕ್ಕೆ) ಶಕ್ಯನಲ್ಲ; ಇಜ್ಯಯಾ=ಯಜ್ಞದಿಂದ; ನ ಚ=(ನೋಡುವುದಕ್ಕೆ) ಶಕ್ಯನು ಅಲ್ಲ.

**ತಾ||** ನನ್ನನ್ನು ಯಾವ ರೀತಿಯಾಗಿ ನೀನು ನೋಡಿದೆಯೋ, ಅಂತಹ ರೂಪವುಳ್ಳ ನಾನು ವೇದಗಳಿಂದ, ವೇದಾಧ್ಯಯನಪರರಿಂದ, ತಪಸ್ಸಿನಿಂದ ದಾನದಿಂದ ಅಥವ ಯಜ್ಞದಿಂದ ನೋಡಲು ಸಾಧ್ಯವಿಲ್ಲ.

**ವ್ಯಾಖ್ಯೆ:** ೪೮ ನೆಯ ಶ್ಲೋಕದಲ್ಲಿ ತಿಳಿಸಿದ ಭಾವನಗಳನ್ನೇ ಮತ್ತೆ ತಿಳಿಸುತ್ತಿದ್ದಾನೆ. ವೇದಾಧ್ಯಯನ, ತಪಸ್ಸು, ಧ್ಯಾನ ಯಜ್ಞಾದಿ ಕ್ರಿಯೆಗಳು ಪವಿತ್ರವಾದುವು ಗಳಾದರೂ ನಿರ್ಮಲ ಭಕ್ತಿ, ಅಚಂಚಲ ದೈವ ವಿಶ್ವಾಸ ಅವುಗಳೊಂದಿಗೆ ಜೋಡಿಸಿದಾಗ ಮಾತ್ರ ಅವು ಸತ್ಫಲವನ್ನು ಕೊಡುವುವು. (ನೋ. ವ್ಯಾಖ್ಯೆ- ೪೮ನೆಯ ಶ್ಲೋಕ) (ಈ ವಿಷಯವನ್ನು ಮುಂದಿನ ಶ್ಲೋಕದಲ್ಲಿ ಮತ್ತೆ ತಿಳಿಸಲಾಗುವುದು).

**ಅ||** ಅಂತಹ ಭಗವತ್ಸ್ವರೂಪದರ್ಶನ ಯಾವುದರಿಂದ ಲಭಿಸುವುದೋ ತಿಳಿಸುತ್ತಿದ್ದಾನೆ-

**೫೪ ಭಕ್ತ್ಯಾ ತ್ವನನ್ಯಯಾ ಶಕ್ಯ ಅಹಮೇವಂವಿಧೋಽರ್ಜುನ**
**ಜ್ಞಾತುಂ ದ್ರಷ್ಟುಂ ಚ ತತ್ತ್ವೇನ ಪ್ರವೇಷ್ಟುಂ ಚ ಪರಂತಪ**

**ಅರ್ಥ:** ಪರಂತಪ=ಶತ್ರುಗಳನ್ನು ತಪಿಸುವಂತೆ ಮಾಡುವವನು; ಅರ್ಜುನ=ಓ ಅರ್ಜುನಾ! ಏವಮ ವಿಧಃ ಅಹಂ=ಈ ವಿಧವಾದ ರೂಪಗಳಳ್ಳ ನಾನು, ಅನನ್ಯಯಾ ಭಕ್ತ್ಯಾತು=ಅನನ್ಯ ಭಕ್ತಿಯಿಂದ ಮಾತ್ರವೇ; ತತ್ವೇನ=ಯಥಾರ್ಥವಾಗಿ; ಜ್ಞಾತುಂ=ತಿಳಿದುಕೊಳ್ಳಲು; ದ್ರಷ್ಟುಂ ಚ=ನೋಡಲು; ಪ್ರವೇಷ್ಟುಂ ಚ=ಪ್ರವೇಶಿಸಲು (ಐಕ್ಯ ಹೊಂದಲು); ಶಕ್ಯಃ (ಅಸ್ಮಿ)=ಶಕ್ಯನು (ಆಗುತ್ತಿದ್ದೇನೆ).

**ತಾ||** ಶತ್ರುಗಳನ್ನು ತಪಿಸುವಂತೆ ಮಾಡುವ ಓ ಅರ್ಜುನಾ! ಈ ವಿಧವಾದ ರೂಪಗಳುಳ್ಳ ನಾನು ಅನನ್ಯ ಭಕ್ತಿಯಿಂದ ಮಾತ್ರ ಯಥಾರ್ಥವಾಗಿ ತಿಳಿದುಕೊಳ್ಳಲು, ನೋಡಲು, ಪ್ರವೇಶಿಸಲು ಸಾಧ್ಯ.

**ವ್ಯಾಖ್ಯೆ:** ಹಿಂದಿನ ಶ್ಲೋಕದಲ್ಲಿ ವೇದಯಜ್ಞಗಳಿಂದ ಭಗವದ್ದರ್ಶನ ಸಾಧ್ಯವಿಲ್ಲವೆಂದು ಹೇಳಲಾಗಿದೆ. ಮತ್ತೆ ಭಗವದ್ದರ್ಶನ ಯಾವುದರಿಂದ ಸಾಧ್ಯವೆನ್ನುವುದನ್ನು ಈ ಶ್ಲೋಕದಲ್ಲಿ ವಿಪುಲವಾಗಿ ತಿಳಿಸಲಾಗಿದೆ. ಭಗವದ್ದರ್ಶನದ ಉಪಾಯ ತೋರುವ ಶ್ಲೋಕವಾದದ್ದರಿಂದ ಇದು ಬಹಳ ಮುಖ್ಯವಾದದ್ದು. ಮುಮುಕ್ಷುಗಳು ಇದನ್ನ ಚೆನ್ನಾಗಿ ಮನನ ಮಾಡಿ ಅದರ ಭಾವಗಳನ್ನು ಕಾರ್ಯಾನ್ವಿತಗೊಳಿಸಿಕೊಳ್ಳಬೇಕು.

ಅನನ್ಯ ಭಕ್ತಿಯಿಂದಲೇ ಮನುಜನು ಪರಮಾತ್ಮನನ್ನು ಸಂದರ್ಶಿಸ ಬಲ್ಲನೆಂದು ಇಲ್ಲಿ ಹೇಳಲಾಗಿದೆ. ಭಕ್ತಿಯೆನ್ನುವ ಪದಕ್ಕೆ 'ಅನನ್ಯ' ಎನ್ನುವ ವಿಶೇಷಣವನ್ನು ಸೇರಿಸಿರುವುದರಿಂದ ಇತರೆ ಪ್ರಾಪಂಚಿಕ ಪದಾರ್ಥಗಳ ಮೇಲೆ ಆಸಕ್ತಿಯಿಡದೆ ಕೇವಲ ಪರಮಾತ್ಮನಲ್ಲೇ ಅನನ್ಯವಾದ ಪ್ರೇಮ, ಅನುರಾಗ, ಆಸಕ್ತಿ ಹೊಂದಿರಬೇಕೆಂದು ಸ್ಪಷ್ಟವಾಗುತ್ತದೆ. ವಿತರಣೆಯಿಲ್ಲದ ಭಕ್ತಿ, ಮತ್ತೊಂದು ವಸ್ತುವಿನಲ್ಲಿ ಚದುರಿಹೋಗದಿರುವ ಭಕ್ತಿ, ಪರಮಾತ್ಮನನ್ನು ಬಿಟ್ಟು ಯಾವ ವಸ್ತುವನ್ನೂ ಅಭಿಲಾಷಿಸದ ಭಕ್ತಿಯನ್ನು ಅನನ್ಯ ಭಕ್ತಿಯೆನ್ನುವರು. ಸಾಮಾನ್ಯವಾಗಿ ಜನರ ಭಕ್ತಿ ಸ್ವಲ್ಪ, ಗೃಹಾರಾಮಾದಿಗಳಲ್ಲಿ, ದಾರಾಪುತ್ರರಲ್ಲಿ, ಸಂಪದದಲ್ಲಿ ಕೀರ್ತಿ ಪ್ರತಿಷ್ಠೆಗಳಲ್ಲಿ ವಿಭಜಿಸಲ್ಪಟ್ಟಿರುವುದರಿಂದ ಭಗವಂತನ ಮೇಲೆ ಕೊನೆಗೆ ಎಲ್ಲೋ ಸ್ವಲ್ಪ ಉಳಿಯುತ್ತದೆ. ಇದು ಅನನ್ಯ ಭಕ್ತಿಯಲ್ಲ. ದೃಶ್ಯ ಪದಾರ್ಥಗಳ ಮೇಲೆ ವಿತರಣೆಯಿಲ್ಲದ ಭಕ್ತಿಯೇ ಅನನ್ಯ ಭಕ್ತಿ. ಅದು ಭಗವತ್ಸಂದರ್ಶನಕ್ಕೆ ಏಕೈಕ ಉಪಾಯವೆಂದು ಇಲ್ಲಿ ತಿಳಿಸಲಾಗಿದೆ.

ಅಂತಹ ಅನನ್ಯ ಭಕ್ತಿಯಿಂದ ಭಗವಂತನನ್ನು ೧) ತಿಳಿಯುವುದಕ್ಕೂ (ಜ್ಞಾತುಂ) ೨) ನೋಡುವುದಕ್ಕೂ (ದ್ರಷ್ಟುಂ) ೩) ಪ್ರವೇಶಿಸುವುದಕ್ಕೂ (ಪ್ರವೇಷ್ಟುಂ) ಸಾಧ್ಯವೆಂದು ಹೇಳಲಾಗಿದೆ. ಅದರ ಭಾವವೇನು? ಇಲ್ಲಿ ತಿಳಿದುಕೊಳ್ಳವುದು, ನೋಡುವುದು, ಪ್ರವೇಶಿಸುವುದು ಎನ್ನುವ ಮೂರು ಕ್ರಿಯೆಗಳನ್ನು ಉಲ್ಲೇಖಿಸಲಾಗಿದೆ. ಪ್ರಾರಂಭದಲ್ಲಿ ಮನುಜನಿಗೆ 'ಪರಮಾತ್ಮನು ಇಂತಹವನು ಎನ್ನುವ ಪರಿಜ್ಞಾನ ಉಂಟಾಗುತ್ತದೆ' 'ಜ್ಞಾತುಂ' ಇದು ಮೊದಲನೆಯ ಅಂತಸ್ತು. ಈ ಸ್ಥಿತಿಯಲ್ಲಿ ಭಕ್ತನಿಗೆ ಭಗವಂತನು ಸ್ವಲ್ಪ ದೂರವಾಗಿಯೇ ಇರುವನು. ಇದು ದ್ವೈತ ಸ್ಥಿತಿ. ನಂತರ ಅಭ್ಯಾಸದಿಂದ ಆ ಭಕ್ತನು ಭಗವಂತನಿಗೆ ಇನ್ನೂ ಸಮೀಪನಾಗಿ ಪ್ರತ್ಯಕ್ಷವಾಗಿ (face to face) ದರ್ಶಿಸಬಲ್ಲನು (ದ್ರಷ್ಟುಂ). ಇನ್ನು ಭಗವದ್ವಿಷಯವಾಗಿ ಆತನಿಗೆ ಯಾವ ರೀತಿಯ ಸಂದೇಹವೂ ಇರುವುದಿಲ್ಲ. ಇದು ಎರಡನೆಯ ಅಂತಸ್ತು ಇದು ಮೊದಲನೆಯದಕ್ಕಿಂತ ಉನ್ನತ ಸ್ಥಿತಿ, ಈ ಸ್ಥಿತಿಯಲ್ಲಿ ಭಕ್ತನು ಭಗವಂತನ ಬಹು ಹತ್ತಿರಕ್ಕೆ ಬಂದು ಸೇರುವನು. ಅಲ್ಲಿ ಕರತಲದಲ್ಲಿಯ ಬಿಲ್ವಫಲವನ್ನು ಮನುಜನು ಪ್ರತ್ಯಕ್ಷವಾಗಿ ನೋಡಿದ ಹಾಗೆ, ಆತನು ಭಗವಂತನನ್ನು ಸ್ಪಷ್ಟವಾಗಿ ನೋಡುವನು. ಇದು ವಿಶಿಷ್ಟಾದ್ವೈತ ಸ್ಥಿತಿಗೆ ಸಮಾನ.

ನಂತರ ಅಭ್ಯಾಸ ಪ್ರಾಬಲ್ಯದಿಂದ ಆ ಭಕ್ತನು ಭಗವಂತನಿಗೆ ಇನ್ನೂ ಸಮೀಪಕ್ಕೆ ಹೋಗಿ ಕ್ರಮವಾಗಿ ಆತನಲ್ಲಿ ಐಕ್ಯವಾಗಿ ಹೋಗುವನು (ಪ್ರವೇಷ್ಟುಂ). ಉಪ್ಪು ಹರಳು ಸಮುದ್ರದಲ್ಲಿ ಕರಗಿ ಹೋದಂತೆ, ಮಳೆಯ ಹನಿ ನದೀ ಜಲದಲ್ಲಿ ಮಿಶ್ರವಾಗಿ ಹೋದ ಹಾಗೆ, ನೀರು ಹಾಲಿನಲ್ಲಿ ಕಲೆತು ಹೋದ ಹಾಗೆ ಅಲ್ಲಿ ಭಕ್ತನು ಪರಮಾತ್ಮನಲ್ಲಿ ವಿಲೀನವಾಗಿ ಹೋಗುವನು. ಆಗ ಭಕ್ತನು, ಭಗವಂತನು ಎನ್ನುವ ಎರಡು ವಸ್ತುಗಳು ಇರುವುದಿಲ್ಲ. ಒಂದೇ ಭಗವದ್ವಸ್ತು ಉಳಿದಿರುತ್ತದೆ. ಇದು ಮೊದಲ ಎರಡು ಸ್ಥಿತಿಗಳಿಗಿಂತ ಉತ್ತಮವಾದದ್ದು. ಇದು ಪೂರ್ಣ ಅದ್ವೈತ ಸ್ಥಿತಿ. ಪ್ರತಿಯೊಬ್ಬನೂ ಮೊದಲ ಎರಡು ಸ್ಥಿತಿಗಳ ಅನುಭವವನ್ನು ಹೊಂದಿ, ಅಷ್ಟರಲ್ಲಿ ತೃಪ್ತಿ ಹೊಂದದೆ ಸಾಧನಾಭ್ಯಾಸವನ್ನು ಕೊನೆಸಾಗಿಸುತ್ತಾ ಮೂರನೆಯದಾದ ಭಗವತ್ಸಾಯುಜ್ಯವನ್ನು ಪಡೆಯಬೇಕು. ಮೇಲೆ ತಿಳಿಸಿದ ಮೂರು ಸ್ಥಿತಿಗಳಲ್ಲಿ ಮೊದಲನೆಯದು ಸಾಮೀಪ್ಯ, ಎರಡನೆಯದು ಸಾರೂಪ್ಯ, ಮೂರನೆಯದು ಸಾಯುಜ್ಯ. ಸಾಮಾನ್ಯವಾಗಿ ಕೆಲವರು ಭಗವಂತನನ್ನು ಕುರಿತು ಶಾಸ್ತ್ರಾದಿಗಳಿಂದ ಸ್ವಲ್ಪ ತಿಳಿದುಕೊಂಡು ಎಲ್ಲವನ್ನೂ ತಿಳಿದಿದ್ದೇವೆಂದು ತಿಳಿದು ಸಾಧನೆಯನ್ನು ನಿಲ್ಲಿಸುವರು. ಅದು ಸರಿಯಲ್ಲ, ಅಂತಹವನು ಪೂರ್ಣತೆಯನ್ನು ಹೊಂದಲಾರನು. ಆತನು ಇನ್ನೂ ಮುಂದೆ ಹೋಗಿ ಭಗವಂತನನ್ನು ಪ್ರತ್ಯಕ್ಷವಾಗಿ ದರ್ಶಿಸಲು, ಆತನಲ್ಲಿ ಐಕ್ಯಗೊಳ್ಳಲು ಯತ್ನಿಸಬೇಕು. ಆದ್ದರಿಂದಲೇ ಶ್ರೀ ಕೃಷ್ಣಮೂರ್ತಿ ಜ್ಞಾತುಂ ಎಂದು ಹೇಳಿ ಸುಮ್ಮನಿರದೆ, 'ದ್ರಷ್ಟುಂ' 'ಪ್ರವೇಷ್ಟುಂ' ಎಂದೂ ಹೇಳಿದನು.

ಒಂದು ಒಳ್ಳೆಯ ಹಣ್ಣು ಬಜಾರಿನಲ್ಲಿದೆಯೆಂದು, ಅದರ ವರ್ಣ, ರುಚಿ, ಬೆಲೆ ಇಂತಹುದೆಂದು ಒಬ್ಬನು ಮನೆಯಲ್ಲಿ ಕುಳಿತುಕೊಂಡು ಇನ್ನೊಬ್ಬನಿಂದ ತಿಳಿದುಕೊಂಡನು- ನಂತರ ಬಜಾರಿಗೆ ಹೋಗಿ ಅದನ್ನು ನೋಡಿದನು-ನೋಡಿದ ನಂತರ ಆಸಕ್ತಿ ಕೆರಳಿ ಅದನ್ನು ಕೊಂಡು ತಿಂದನು. ಇಲ್ಲಿ ಮೊದಲಸ್ಥಿತಿ 'ಜ್ಞಾತುಂ' ಸ್ಥಿತಿಗೆ ಸರಿಹೋಗುವುದು. (ಭಗವಂತನ ಬಗ್ಗೆ ಗುರುಗಳಿಂದ, ಶಾಸ್ತ್ರಗಳಿಂದ ತಿಳಿಯುವುದು). ಎರಡನೆಯ ಸ್ಥಿತಿ 'ದ್ರಷ್ಟುಂ' ಎನ್ನುವುದು ಪರಮಾತ್ಮನನ್ನು ಸಾಧನೆಗಳಿಂದ ಪ್ರತ್ಯಕ್ಷವಾಗಿ ಕಾಣುವುದಕ್ಕೆ ಸಮಾನವಾದುದು. ಮೂರನೆಯ ಸ್ಥಿತಿ 'ಪ್ರವೇಷ್ಟುಂ' ಎನ್ನುವುದು ಸಾಧನ ಪರಿಪಕ್ವತೆಯಿಂದ ಭಕ್ತನು ಭಗವಂತನಲ್ಲಿ ಐಕ್ಯವಾಗುವುದು. ಇದು ಜೀವನ್ಮುಕ್ತ ದೆಶೆ, ಮೋಕ್ಷ ಸ್ಥಿತಿ. ಒಂದು ಮನೆಯಬಗ್ಗೆ ತಿಳಿದು ಕೊಳ್ಳುವುದು. ನಂತರ ಅದನ್ನು ಸಮೀಪಿಸುವುದು, ಆಮೇಲೆ ಮನೆಯಲ್ಲಿ ಪ್ರವೇಶಿಸುವುದು ಹೇಗೋ, ಹಾಗೆಯೇ ಭಗವಂತನನ್ನು ಕುರಿತು ತಿಳಿಯಬೇಕು. ಪ್ರತಿಯೊಬ್ಬರೂ ಅನನ್ಯ ಭಕ್ತಿಯ ಆಶ್ರಯದಿಂದ ಭಗವದೈಕ್ಯ ರೂಪವಾದ ಅದ್ವೈತ ಪರಾಕಾಷ್ಠ ಸ್ಥಿತಿಯನ್ನು ಜೀವನದಲ್ಲಿ ತಪ್ಪದೆ ಹೊಂದಬೇಕು. ಆಗಲೇ ಸಂಸಾರ ದುಃಖ ಅಂತ್ಯವಾಗುವುದು.

**'ಯದಾ ಹ್ಯೇವೈಷ ಏತಸ್ಮಿನ್ನುದರಮಂತರಂ ಕುರುತೇ ಅಥ ತಸ್ಯ ಭಯಂ ಭವತಿ'** ಎನ್ನುವ ಉಪನಿಷತ್ ವಾಕ್ಯದಂತೆ ಭಗವಂತನಿಗೂ ತನಗೂ ಸ್ವಲ್ಪ ಅಂತರವಿದ್ದರೂ ಭಯವು ಜನಿಸುವುದು. ಭಯದ ಸ್ಥಿತಿ ಪೂರ್ಣ ಸ್ಥಿತಿ ಎಂದೆಂದಿಗೂ ಆಗುವುದಿಲ್ಲ. ಆದ್ದರಿಂದ 'ಪ್ರವೇಷ್ಟುಮ್' ಎನ್ನುವ ಮೂರನೆಯ ಸ್ಥಿತಿಯನ್ನು ಪ್ರತಿ ಜೀವಿಯೂ ಅನನ್ಯ ಭಕ್ತಿಯ ಸಹಾಯದಿಂದ ಹೊಂದಿ ಕೃತಾರ್ಥನಾಗಬೇಕು.

ಕೇವಲ ವೇದಪಠಣಾದಿಗಳಿಂದ ಮುಕ್ತಿ ಲಭಿಸುತ್ತದೆ ಎಂದು ಹೇಳಿದರೆ ಓದು ಬರಹವಿಲ್ಲದವರು ಆ ಕೆಲಸವನ್ನು ಮಾಡಲು ಸಾಧ್ಯವಿಲ್ಲ. ಆದ್ದರಿಂದ ಅವರಿಗೆ ಮುಕ್ತಿ ಇಲ್ಲದೇ ಹೋಗುವುದು. ಕೇವಲ ತಪಸ್ಸಿನಿಂದ, ಯಜ್ಞಗಳಿಂದ ಮುಕ್ತಿ ಸಿಗುತ್ತದೆ ಎಂದರೆ ಅವೂ ಸಹ ಸರ್ವರಿಗೂ ಸಾಧ್ಯವಿಲ್ಲವಾದ್ದರಿಂದ ಅಲ್ಲಿಯೂ ಕೆಲವರು ಮುಕ್ತಿಯಿಂದ ವಂಚಿತರಾಗುತ್ತಾರೆ. ಕೇವಲ ದಾನದಿಂದ ಮೋಕ್ಷವು ಸಿದ್ಧಿಸುತ್ತದೆಯೆಂದರೆ ಬಡವರು ಅದನ್ನು ಮಾಡಲು ಸಾಧ್ಯವಿಲ್ಲ ವಾದ್ದರಿಂದ ಅವರಿಗೂ ಮುಕ್ತಿ ಸಿಗುವ ಸಂಭವವಿರುವುದಿಲ್ಲ. ಭಕ್ತಿಯಿಂದಲೇ ಭಗವದ್ದರ್ಶನ, ಭಗವದೈಕ್ಯತೆ ಕೈಗೂಡುವುದೆಂದು ಇಲ್ಲಿ ಹೇಳಿರುವುದರಿಂದ, ಅದು ಸುಲಭವಾಗಿರುವುದರಿಂದ, ಸರ್ವರಿಗೂ ಸಾಧ್ಯವಾಗುವುದರಿಂದ ಎಲ್ಲರಿಗೂ ಅವಲಂಬನೀಯವಾಗಿ ಒಪ್ಪುತ್ತಿದೆ. ಆದ್ದರಿಂದ ಜೀವರಾಶಿಗಳಲ್ಲಿ ಕರುಣೆ ತೋರಿಸಿ ಈ ರೀತಿಯ ಸರ್ವರಿಗೂ ಸಾಧ್ಯವಾದ ಸಾಧನೆಯನ್ನು ಭಗವಂತನು ಇಲ್ಲಿ ತಿಳಿಸಿದನು.

ಪ್ರ : ಭಗವದ್ದರ್ಶನಕ್ಕೆ ಉಪಾಯವೇನು ?

ಉ : ಅನನ್ಯ ಭಕ್ತಿ

ಪ್ರ : ಅದರಿಂದ ಜೀವಿಗೆ ಯಾವ ಪ್ರಯೋಜನಗಳು ಸಿದ್ಧಿಸುವುವು ?

ಉ : ಭಗವಂತನನ್ನು ಕುರಿತು ತಿಳಿಯುವನು. ಆತನನ್ನು ನೋಡುವನು. ಆತನಲ್ಲಿ ಪ್ರವೇಶಿಸುವನು.

**ಅ॥** ದೇವರನ್ನು ಯಾರು ಹೊಂದಬಲ್ಲರು ಎನ್ನುವುದನ್ನು ಹೇಳಲಾಗುತ್ತಿದೆ-

**೫೫ ಮತ್ಕರ್ಮಕೃನ್ಮತ್ಪರಮೋ ಮದ್ಭಕ್ತಸ್ಸಂಗವರ್ಜಿತಃ**
**ನಿರ್ವೈರಸ್ಸರ್ವಭೂತೇಷು ಯಸ್ಸ ಮಾಮೇತಿ ಪಾಂಡವ**

**ಅರ್ಥ:** ಪಾಂಡವ=ಓ ಅರ್ಜುನಾ! ಮತ್ಕರ್ಮಕೃತ್=ನನಗೆ (ಈಶ್ವರಾರ್ಪಣ ಬುದ್ಧಿಯಿಂದ ಇಲ್ಲವೆ ಭಗವತ್ಪ್ರೀತ್ಯರ್ಥವಾಗಿ) ಕರ್ಮಗಳನ್ನು ಮಾಡುವವನು (ಇಲ್ಲವೆ ಭಗವತ್ಸಂಬಂಧವಾದ, ಭಗವತ್ಪ್ರೀಕರವಾದ ಕಾರ್ಯಗಳನ್ನು ಮಾಡುವವನು); ಮತ್ಪರಃ=ನನ್ನನ್ನೇ ಪರಮ ಪ್ರಾಪ್ಯವನ್ನಾಗಿ, ಪರಮ ಪುರುಷಾರ್ಥವಾಗಿ ನಂಬಿದವನು; ಮದ್ಭಕ್ತಃ=ನನ್ನಲ್ಲೇ ಭಕ್ತಿಯುಳ್ಳವನಾಗಿ; ಸಂಗವರ್ಜಿತಃ=ಸಮಸ್ತ ದೃಶ್ಯ ಪದಾರ್ಥಗಳಲ್ಲಿ ಸಂಗವನ್ನು (ಆಸಕ್ತಿಯನ್ನು, ಮಮತ್ವವನ್ನು) ಬಿಟ್ಟವನು; ಸರ್ವಭೂತೇಷು=ಸಮಸ್ತ ಪ್ರಾಣಿಗಳಲ್ಲಿ; ನಿರ್ವೈರಃ=ದ್ವೇಷವಿಲ್ಲದವನಾಗಿ; ಯಃ=ಯಾರು; ಸಃ=ಆತನು; ಮಾಂ=ನನ್ನನ್ನು; ಯೇತಿ=ಹೊಂದುತ್ತಿದ್ದಾನೆ.

**ತಾ॥** ಅರ್ಜುನಾ! ಯಾವನು ನನಗಾಗಿಯೇ ಕರ್ಮಗಳನ್ನು ಮಾಡುವನೋ (ಇಲ್ಲವೆ ನನ್ನ ಸಂಬಂಧವಾದ (ದೈವ ಸಂಬಂಧವಾದ) ಕಾರ್ಯಗಳನ್ನೇ ಮಾಡುವನೋ), ನನ್ನನ್ನೇ ಪರಮ ಗತಿಯೆಂದು ನಂಬಿರುವನೋ, ನನ್ನಲ್ಲೇ ಭಕ್ತಿಯುಳ್ಳವನಾಗಿರುವನೋ, ಸಮಸ್ತ ದೃಶ್ಯ ಪದಾರ್ಥಗಳಲ್ಲಿ ಸಂಗವನ್ನು (ಆಸಕ್ತಿ, ಮಮಕಾರಗಳನ್ನು) ಬಿಟ್ಟಿರುವನೋ, ಸಮಸ್ತ ಪ್ರಾಣಿಗಳಲ್ಲಿ ದ್ವೇಷವಿಲ್ಲದೇ ಇರುವನೋ, ಅಂತಹವನು ನನ್ನನ್ನೇ ಸೇರುತ್ತಾನೆ.

**ವ್ಯಾಖ್ಯೆ:** ಭಗವಂತನನ್ನು ಯಾರು ಹೊಂದಬಲ್ಲರೋ ಇಲ್ಲಿ ಚೆನ್ನಾಗಿ ವಿವರಿಸಲಾಗಿದೆ. ಐದು ಸದ್ಗುಣಗಳ ಉಲ್ಲೇಖ ಮಾಡಿ ಅವುಗಳನ್ನು ಯಾವನು ಹೊಂದಿರುವನೋ ಆತನು ತಪ್ಪದೆ ಭಗವತ್ಸಾಯುಜ್ಯವನ್ನು ಪಡೆಯುವನೆಂದು ಶ್ರೀ ಕೃಷ್ಣ ಪರಮಾತ್ಮನು ಹೇಳಿರುವನು. 'ಯಃ' ಎಂದು ಹೇಳಿರುವುದರಿಂದ, ಯಾರಾದರೂ ಸರಿಯೇ ಇಂತಹ ಮಹೋನ್ನತ ಗುಣಗಳನ್ನು ಹೊಂದಿದ್ದೇ ಆದರೆ ಮೋಕ್ಷಕ್ಕೆ ಪಾತ್ರರಾಗುವರೆಂದು ಸ್ಪಷ್ಟವಾಗಿ ತಿಳಿಸಿದ್ದಾನೆ. ಇಲ್ಲಿ ಜಾತಿ ಮತ, ಕುಲ ವಿಚಕ್ಷಣೆಗಳು ಯಾವುವೂ ಇಲ್ಲ. ಯೋಗ್ಯತೆಯೇ ಪ್ರಧಾನ. ಔಷಧವನ್ನು ಯಾರು ಕುಡಿದರೂ ರೋಗ ಗುಣವಾಗುವುದಲ್ಲವೇ! ಹಣತೆ, ತೈಲ, ಬತ್ತಿ, ಬೆಂಕಿಪೊಟ್ಟಣ ತಂದರೆ ದೀಪವನ್ನು ಯಾರಾದರೂ ಬೆಳಗಿಸ ಬಹುದಲ್ಲವೇ? ಗೀತೆಯಲ್ಲಿ ಇಂತಹ ವಿಶಾಲಭಾವಗಳು ಅನೇಕ ಕಡೆ ವ್ಯಕ್ತಗೊಂಡಿವೆ. ಗೀತೆಯ ಔನ್ನತ್ಯಕ್ಕೆ ಇಂತಹ ಸಾರ್ವಜನಿಕ ಭಾವಗಳೇ ಕಾರಣ.

'ಮತ್ಕರ್ಮಕೃತ್'- ದೈವ ಸಂಬಂಧವಾದ ಪೂಜೆ, ಧ್ಯಾನ, ಜಪಾದಿಗಳನ್ನು ಮಾಡುವವನು ಇಲ್ಲವೆ ಯಾವ ಬೇರೆ ಕಾರ್ಯವನ್ನು ಮಾಡಿದರೂ ಅದನ್ನು ಭಗವದರ್ಪಿತ ಮಾಡುವವನು (ಪಾಪಕಾರ್ಯಗಳನ್ನು ಮಾಡದೆ, ಸತ್ಕರ್ಮ ಗಳನ್ನು ಈಶ್ವರಾರ್ಪಣೆ ಬುದ್ಧಿಯಿಂದ ಮಾಡುವವನೆಂದರ್ಥ). ಚಿತ್ತಶುದ್ಧಿಯನ್ನು ಪಡೆದು ಭಗವತ್ಕೃಪೆಗೆ ಪಾತ್ರನಾಗಿ ಆತ್ಮವಿಜ್ಞಾನವನ್ನು ಪಡೆದು ಮೋಕ್ಷ ಹೊಂದುವನು. ಜೀವನದಲ್ಲಿ ಮನುಜನು ಎಷ್ಟೋ ದೈನಂದಿನ ಕಾರ್ಯಗಳನ್ನು ಆಚರಿಸುವನು. ಆದರೆ ಅವುಗಳನ್ನೆಲ್ಲಾ ಭಗವದರ್ಪಿತ ಬುದ್ಧಿಯಿಂದ ಮಾಡಿದರೆ ಅದು ದೈವಪೂಜೆಯಾಗಿ ಪರಿಣಾಮಗೊಳ್ಳುವುದು (work trasforms into worship); ಅಲ್ಲಿ ಅವು ಸಾಮಾನ್ಯ ಕಾರ್ಯಗಳಾಗಿ ಉಳಿಯದೆ ಮೋಕ್ಷಹೇತು ಗಳಾಗಿ ರೂಪುಗೊಳ್ಳುವುವು. ಆದ್ದರಿಂದಲೇ ಭಗವಂತನನ್ನು ಹೊಂದುವಲ್ಲಿ 'ಮತ್ಕರ್ಮಕೃತ್' (ನನಗಾಗಿ ಅಥವ ನನ್ನ ಸಂಬಂಧವಾದ ಕಲಸಗಳನ್ನು ಮಾಡುವವರು) ಎನ್ನುವುದನ್ನು ಸೇರಿಸಲಾಗಿದೆ.

'ಮತ್ಪರಮಃ'- ಭಗವಂತನನ್ನೇ ಪರಮ ಪ್ರಾಪ್ಯವಾಗಿ ಪರಮಲಕ್ಷ್ಯವಾಗಿ ತಿಳಿದು ತತ್ಪರನಾಗಿರುವವನು. ಸಾಮಾನ್ಯವಾಗಿ ಬಹುತೇಕ ಜನರು ಪ್ರಾಪಂಚಿಕ ವಿಷಯಗಳನ್ನೇ ಪರಮಗಮ್ಯವೆಂದು ತಿಳಿದು ಅವುಗಳಿಗಾಗಿಯೇ ಅಹೋ

ರಾತ್ರಿಗಳು ಕಷ್ಟ ಬೀಳುತ್ತಿರುವರು. ಆದರೆ ದೃಶ್ಯ ಪದಾರ್ಥಗಳೆಲ್ಲಾ ಅಸದ್ವಸ್ತುಗಳು, ನಶ್ವರಗಳು. ಆದ್ದರಿಂದ ಅವು ಬಂಧವಿಮುಕ್ತಿಯನ್ನು ಮಾಡಲಾರವು. ಪರಮಾತ್ಮನೊಬ್ಬನೇ ಈ ಪ್ರಪಂಚದಲ್ಲಿಯ ಸದ್ವಸ್ತುವಾದ್ದರಿಂದ ಆತನನ್ನೇ ತನ್ನ ಲಕ್ಷ್ಯವಾಗಿ ಗಮ್ಯವಾಗಿ ಜೀವಿಯು ಭಾವಿಸಿ ಅಂತಹ ಲಕ್ಷ್ಯ ಪ್ರಾಪ್ತಿಗಾಗಿ ಯತ್ನಿಸಬೇಕು. ಅಂತಹವನು ಭಗವಂತನನ್ನು ತಪ್ಪದೆ ಹೊಂದುವನು.

*'ಮದ್ಭಕ್ತಃ'*- ಪರಮಾನಂದ ಭರಿತನಾದ ಭಗವಂತನಲ್ಲಿ ಭಕ್ತಿಯನ್ನು ಹೊಂದಿರಬೇಕೇ ಹೊರತು ಬೇರೆ ಪದಾರ್ಥಗಳ ಮೇಲಲ್ಲ. ಜನನ ಮರಣಗಳಿಂದ ತಪ್ಪಿಸಲಾರದ ಭಕ್ತಿ (ಪ್ರೀತಿ)ಗಳಿಂದ ಏನು ಪ್ರಯೋಜನ? ಭಗವದ್ಭಕ್ತಿಯಿಂದ ಅಚಿರ ಕಾಲದಲ್ಲೇ ಜೀವಿಯು ಪರಮಾತ್ಮ ಪದವಿಯನ್ನು ಹೊಂದುವನೆನ್ನುವ ಸತ್ಯ ಇಲ್ಲಿ ಹೇಳಲಾಗಿದೆ.

*'ಸಂಗವರ್ಜಿತಃ'*- ಸಂಗವೆಂದರೆ ಆಸಕ್ತಿ, ದೇಹಾದಿ ದೃಶ್ಯಪದಾರ್ಥ ಗಳಲ್ಲಿ ಮಮತೆ ಇರುವುದು. ಅದನ್ನು ತ್ಯಜಿಸಬೇಕು. ಅಸಂಗತ್ವವನ್ನು ಅಭ್ಯಸಿಸಬೇಕು. ಅಸಂಗವೆನ್ನುವ ಹದವಾದ ಕತ್ತಿಯಿಂದ ಸಂಸಾರ (ದುಃಖ) ವೃಕ್ಷವನ್ನು ಸಮೂಲವಾಗಿ ಛೇದಿಸಬೇಕೆಂದು ಭಗವಂತನು (ಗೀತೆಯ ೧೫ನೆಯ ಅಧ್ಯಾಯದಲ್ಲಿ) ಅಪ್ಪಣೆಕೊಟ್ಟಿದ್ದಾನೆ (ಅಸಂಗ ಶಸ್ತ್ರೇಣ ದೃಢೇನ ಛಿತ್ವಾ). ನೀರು ತಾವರೆ ಎಲೆಗೆ ಹೇಗೆ ಅಂಟುವುದಿಲ್ಲವೋ ಹಾಗೆ ದೃಶ್ಯ ಪದಾರ್ಥಗಳಲ್ಲಿಗೆ ಮುಳುಗಿ ಏಳುತ್ತಿದ್ದರೂ ವಿಚಾರಣಾ ಬಲದಿಂದ ಅವುಗಳಿಗೆ ಅಂಟದೆ ಅಸಂಗವಾಗಿ ಉಳಿಯಬೇಕು. ಅಂತಹ ಸಂಗರಾಹಿತ್ಯದಿಂದ ಮುಕ್ತಿಯನ್ನು ಪಡೆಯಬಲ್ಲನೆಂದು ಇಲ್ಲಿ ಹೇಳಲಾಗಿದೆ.

*'ನಿರ್ವೈರಃ ಸರ್ವಭೂತೇಷು'*- ಇನ್ನು ಐದನೆಯದು ಸಮಸ್ತ ಪ್ರಾಣಿ ಕೋಟಿಗಳ ಮೇಲೆ ಪ್ರೇಮ, ದಯೆ, ದ್ವೇಷ ರಾಹಿತ್ಯ ಹೊಂದಿರುವುದು. 'ಸರ್ವಭೂತೇಷು' ಎಂದು ಹೇಳಿರುವುದರಿಂದ ಒಂದೆರಡು ಪ್ರಾಣಿಗಳ ಮೇಲೆ ದಯೆ ಹೊಂದಿದ್ದರೆ ಸಾಲದೆಂದೂ ಸಮಸ್ತ ಭೂತ ಕೋಟಿಯ ಮೇಲೆ ಕರುಣೆ, ದಯೆಯಿರ ಬೇಕೆಂದು ಅರ್ಥವಾಗುತ್ತದೆ. ಸಮಸ್ತ ಪ್ರಾಣಿಗಳು ಭಗವತ್ಸ್ವರೂಪಿಗಳೇ, ನಾರಾಯಣ ಸ್ವರೂಪಿಗಳೇ, ಆದ್ದರಿಂದ ಯಾವ ಪ್ರಾಣಿಗಾದರೂ ಅಪಕಾರ ಮಾಡಿದರೆ ದೇವರಿಗೇ ಅಪಕಾರ ಮಾಡಿದಂತೆ. ಆದ್ದರಿಂದ ನಿರ್ವೈರತ್ವವನ್ನು ಆಚರಿಸಬೇಕು. ಈ ಸತ್ಯವನ್ನೇ **'ಅದ್ವೇಷ್ಟಾ ಸರ್ವಭೂತಾನಾಂ'** ಮೊದಲಾದ ವಾಕ್ಯಗಳಿಂದ ಗೀತೆಯಲ್ಲಿ ಅನೇಕ ಕಡೆ ಭಗವಂತನು ತಿಳಿಸಿದ್ದಾನೆ. ಒಂದು ಕಡೆ ಉಪನಿಷತ್ವಾಕ್ಯಗಳನ್ನು ಬಾಯಿಪಾಠ ಮಾಡುತ್ತ ದೇವರಿಗೆ ಪೂಜಾದಿಗಳನ್ನು ಮಾಡುತ್ತಾ, ಇನ್ನೊಂದು ಕಡೆ ಪ್ರಾಣಿ ಕೋಟಿಗಳನ್ನು ದೂಷಿಸುತ್ತ, ದ್ವೇಷಿಸುತ್ತಾ, ಹಿಂಸಿಸುತ್ತಿದ್ದರೆ ಆ ಪೂಜಾದಿಗಳಿಂದ ಏನು ಪ್ರಯೋಜನ? ಅದು ಆಚರಣ ವೇದಾಂತವಲ್ಲ. ಔಷಧಿ ತಿನ್ನುವವನು ಪಥ್ಯವನ್ನು ಕೂಡ ಆಚರಿಸಬೇಕು. ಮೇಲೆ ತಿಳಿಸಿದ ನಾಲ್ಕು ಸುಗುಣಗಳು (ಮತ್ಕರ್ಮಕೃತ್-ಇತ್ಯಾದಿಗಳು) ಔಷಧದಂತಹವು. ಈ ಐದನೆಯ ಸುಗುಣವಾದ 'ಸರ್ವಭೂತದಯೆ', ಪಥ್ಯದಂತಹದು. ಆದ್ದರಿಂದ ಅವುಗಳೊಡನೆ ಇದನ್ನೂ ಕೂಡ ತಪ್ಪದೆ ಅವಲಂಬಿಸಬೇಕು. ಆ ನಾಲ್ಕು ಸುಗುಣಗಳೂ ಈ ಐದನೆಯ ಗುಣದಿಂದ ಬಲಗೊಳ್ಳಬೇಕು. ಈ ಪ್ರಕಾರವಾಗಿ ಭಗವದ್ಭಕ್ತಿ, ಸರ್ವಭೂತದಯೆಯಿರುವವನು ತಪ್ಪದೆ ಭಗವಂತನನ್ನು ಸೇರುವನೆಂದು ('ಮಾಮೇತಿ') ಈ ಶ್ಲೋಕದಲ್ಲಿ ಅಸಂದಿಗ್ಧವಾಗಿ ಹೇಳಲಾಗಿದೆ.

ಗೀತೆಯಲ್ಲಿ ಈ ಶ್ಲೋಕವು ಬಹಳ ಮುಖ್ಯವಾದುದು. ಶ್ರೀ ಶಂಕರಾಚಾರ್ಯರೂ ಕೂಡ ಗೀತೆಯ ಎಲ್ಲಾ ಶ್ಲೋಕಗಳಲ್ಲಿ ಈ ಶ್ಲೋಕವು ಸರ್ವೋತ್ಕೃಷ್ಟವಾಗಿ, ಸಾರಭೂತವಾಗಿದೆಯೆಂದು ತಿಳಿಸಿದ್ದಾರೆ. ಏಕೆಂದರೆ, ಇದರಲ್ಲಿ ಎಲ್ಲಾ ಯೋಗಗಳು ಸಂಕ್ಷೇಪವಾಗಿ ಬೋಧಿಸಲ್ಪಟ್ಟಿವೆ. ಮತ್ತೆ ಆ ಎಲ್ಲಾ ಯೋಗಗಳಿಗೆ ಆವಶ್ಯಕವಾದ ಸರ್ವಭೂತದಯೆಯನ್ನು ಹೇಳಲಾಗಿದೆ. ಹೇಗೆಂದರೆ-

೧. ನನ್ನ ಕರ್ಮಗಳನ್ನು ಮಾಡು-(ಮತ್ಕರ್ಮಕೃತ್)- ಕರ್ಮಯೋಗ
೨. ನನ್ನಲ್ಲಿ ತತ್ಪರನಾಗಿರು- (ಮತ್ಪರಮಃ)- ಧ್ಯಾನಯೋಗ
೩. ನನ್ನಲ್ಲಿ ಭಕ್ತಿ ಹೊಂದಿರುವವನಾಗು- (ಮದ್ಭಕ್ತಃ)- ಭಕ್ತಿಯೋಗ
೪. ದೃಶ್ಯ ಪದಾರ್ಥಗಳಲ್ಲಿ ಅಸಂಗತ್ವ-(ಸಂಗವರ್ಜಿತಃ)- ಜ್ಞಾನಯೋಗ
} ಔಷಧ

೫. ಸಮಸ್ತ ಪ್ರಾಣಿಗಳಲ್ಲಿ ದಯೆಯಿಂದಿರುವುದು- (ನಿರ್ವೈರಃ ಸರ್ವಭೂತೇಷು)-ಭೂತದಯೆ } ಪಥ್ಯ

ಆದ್ದರಿಂದ ಸಾಧಕರು ಈ ಶ್ಲೋಕದ ತಾತ್ಪರ್ಯವನ್ನು ಪದೆ ಪದೇ ಚಿಂತನೆ ಮಾಡುತ್ತ, ಭಕ್ತ್ಯಾದಿ ಸುಗುಣಗಳನ್ನು ಹೊಂದಿ ಪರಮಾತ್ಮ ಸಾಯುಜ್ಯವನ್ನು ಈ ಜನ್ಮದಲ್ಲಿಯೇ ಹೊಂದಲು ಯತ್ನಿಸಬೇಕು.

ಪ್ರ : ಭಗವಂತನನ್ನು ಯಾರು ಹೊಂದಬಲ್ಲರು?

ಉ : ೧) ದೈವಕಾರ್ಯವನ್ನು ಆಚರಿಸುವವನು ೨) ದೈವವನ್ನೇ ಪರಮ ಪ್ರಾಪ್ಯವೆಂದು ತಿಳಿಯುವವನು, ದೈವ ತತ್ಪರನಾಗಿರುವವನು ೩) ದೈವಭಕ್ತನು ೪) ಸಂಗರಹಿತನು ೫) ಸರ್ವಭೂತ ದಯೆಯುಳ್ಳವನು-ಇಂತಹವನು ಭಗವಂತನನ್ನು ಹೊಂದುವನು.

ಪ್ರ : ಭಗವತ್ಪ್ರಾಪ್ತಿಗೆ ಉಪಾಯಗಳೇನು?

ಉ: ೧) ದೈವಕಾರ್ಯವನ್ನಾಚರಿಸುವುದು ೨) ದೈವವನ್ನೇ ಪರಮ ಪ್ರಾಪ್ಯವೆಂದು ನಂಬುವುದು, ದೈವ ತತ್ಪರನಾಗಿರುವುದು ೩) ದೈವಭಕ್ತಿ ಹೊಂದಿರುವುದು ೪) ಸಂಗರಾಹಿತ್ಯವನ್ನವಲಂಬಿಸುವುದು ೫) ಸರ್ವ ಪ್ರಾಣಿಗಳ ಮೇಲೆ ದಯೆ, ವೈರಗಳಿಲ್ಲದೆ ಇರುವುದು.

**ಓಮ್**

ಇತಿ ಶ್ರೀಮದ್ಭಗವದ್ಗೀತಾಸೂಪನಿಷತ್ಸು ಬ್ರಹ್ಮವಿದ್ಯಾಯಾಂ ಯೋಗಶಾಸ್ತ್ರೇ ಶ್ರೀ ಕೃಷ್ಣಾರ್ಜುನ ಸಂವಾದೇ ವಿಶ್ವರೂಪಸಂದರ್ಶನಯೋಗೋ ನಾಮ

**ಏಕಾದಶೋಽಧ್ಯಾಯಃ**

ಇದು ಉಪನಿಷತ್ಪ್ರತಿಪಾದಕವೂ, ಬ್ರಹ್ಮವಿದ್ಯೆಯೂ, ಯೋಗಶಾಸ್ತ್ರವೂ, ಶ್ರೀ ಕೃಷ್ಣಾರ್ಜುನರ ಸಂವಾದವೂ ಆದ ಶ್ರೀ ಭಗವದ್ಗೀತೆಯಲ್ಲಿಯ ವಿಶ್ವರೂಪಸಂದರ್ಶನ ಯೋಗವೆನ್ನುವ

**ಹನ್ನೊಂದನೆಯ ಅಧ್ಯಾಯ**

**ಓಮ್ ತತ್ ಸತ್**

# ಭಕ್ತಿಯೋಗ

# ಶ್ರೀ ಭಗವದ್ಗೀತೆ

### ಅಥ ದ್ವಾದಶೋऽಧ್ಯಾಯಃ
### ಹನ್ನೆರಡನೆಯ ಅಧ್ಯಾಯ
### ಭಕ್ತಿಯೋಗಃ - ಭಕ್ತಿಯೋಗ

**ಈ ಅಧ್ಯಾಯದ ಹೆಸರು :**

**'ಭಕ್ತಿಯೋಗ'**- ಭಕ್ತಿಯನ್ನು ಕುರಿತು ಪ್ರತಿಪಾದಿಸಲ್ಪಟ್ಟ ಅಧ್ಯಾಯ ವಾದುದರಿಂದ ಇದಕ್ಕೆ ಈ ಹೆಸರು ಬಂದಿದೆ. ಭಕ್ತಿಯ ಸ್ವರೂಪ, ಲಕ್ಷಣಗಳು, ವಿವಿಧ ಅಧ್ಯಾತ್ಮಿಕ ಸಾಧನೆಗಳನ್ನು ಈ ಅಧ್ಯಾಯದಲ್ಲಿ ವಿವರಿಸಲಾಗಿದೆ. ಈ ಅಧ್ಯಾಯ ಭಕ್ತಿಯಿಂದ ಪ್ರಾರಂಭವಾಗಿ ಭಕ್ತಿಯಲ್ಲಿ ಅಂತ್ಯಗೊಂಡಿದೆ. ಈ ಪ್ರಕಾರವಾಗಿ ಭಕ್ತಿಯನ್ನು, ಭಕ್ತನನ್ನು ಕುರಿತು ವಿಶೇಷವಾಗಿ ಚರ್ಚಿಸಲ್ಪಟ್ಟಿರು ವುದರಿಂದ, ಈ ಅಧ್ಯಾಯವನ್ನು 'ಭಕ್ತಿಯೋಗ' ಎಂದು ಕರೆಯಲಾಗಿದೆ.

**ಈ ಅಧ್ಯಾಯದಲ್ಲಿಯ ಪ್ರಧಾನ ವಿಷಯಗಳು :**

೧) ಸಾಕಾರ, ನಿರಾಕರ ಉಪಾಸಕರನ್ನು ಕುರಿತ ವಿಷಯಗಳು-
(೧ನೆಯ ಶ್ಲೋಕದಿಂದ ೫ನೆಯ ಶ್ಲೋಕದವರೆಗೆ)

೨) ಭಕ್ತಿಯ ಮಹತ್ತರ ಫಲ-
(೬ನೆಯ ಶ್ಲೋಕದಿಂದ ೮ನೆಯ ಶ್ಲೋಕದವರೆಗೆ)

೩) ವಿವಿಧ ಅಧ್ಯಾತ್ಮಿಕ ಸಾಧನೆಗಳು-
(೯ನೆಯ ಶ್ಲೋಕದಿಂದ ೧೨ನೆಯ ಶ್ಲೋಕದವರೆಗೆ)

೪) ಭಕ್ತನ ಲಕ್ಷಣಗಳು-
(೧೩ನೆಯ ಶ್ಲೋಕದಿಂದ ೨೦ನೆಯ ಶ್ಲೋಕದವರೆಗೆ)

**ಪೂರ್ವಾಧ್ಯಾಯದೊಡನೆ ಈ ಅಧ್ಯಾಯಕ್ಕೆ ಇರುವ ಸಂಬಂಧ:**

ಎರಡನೆಯ ಅಧ್ಯಾಯದಿಂದ ಹನ್ನೊಂದನೆಯ ಅಧ್ಯಾಯದವರೆಗೆ ಭಗವಂತನು ಕೆಲವು ಕಡೆ ನಿರ್ಗುಣ ಬ್ರಹ್ಮೋಪಾಸನೆ, ಅಕ್ಷರ ಪರಬ್ರಹ್ಮತತ್ತ್ವ, ಜ್ಞಾನ ನಿಷ್ಠೆಗಳನ್ನು ಬೋಧಿಸಿದನು. ಇನ್ನು ಕೆಲವು ಕಡೆ (ವಿಭೂತಿ, ವಿಶ್ವರೂಪ ಸಂದರ್ಶನಾದಿಯೋಗಗಳಲ್ಲಿ) ಸಗುಣ ಬ್ರಹ್ಮೋಪಾಸನೆ, ಸಾಕಾರಾರ್ಚನೆಯನ್ನು ತಿಳಿಸುತ್ತಾ ಬಂದನು. ಕೊನೆಯಲ್ಲಿ ವಿಶ್ವರೂಪವನ್ನು ತೋರಿಸಿದನು. ವಿಶ್ವರೂಪವನ್ನು ಉಪಸಂಹರಿಸಿದ ನಂತರ ಹೇಳಿದ 'ಮತ್ಕರ್ಮಕೃತ್,' 'ಮತ್ಪರಮಃ', 'ಮದ್ಭಕ್ತಃ' ಮುಂತಾದ ವಚನಗಳು ಸಗುಣೋಪಾಸನೆಯನ್ನು ಬಲಪಡಿಸುತ್ತವೆ. ಈ ಹಿಂದೆ ಭಗವಂತನು ತಿಳಿಸಿದ ಅಕ್ಷರ, ನಿರಾಕಾರ, ಆತ್ಮೋಪಾಸನೆಗೆ ಸಂಬಂಧಿಸಿದ ವಿಷಯಗಳು ಅರ್ಜುನನ ಮನಸ್ಸಿನಲ್ಲಿ ಚೆನ್ನಾಗಿ ನಾಟಿಕೊಂಡಿದ್ದವಾದ್ದರಿಂದ, ಈಗ ಮತ್ತೆ ಸಾಕಾರೋಪಾಸನೆ ವಾಕ್ಯಗಳನ್ನು ಕೇಳುವುದರಿಂದ ಕೂಡಲೇ ಅರ್ಜುನನಿಗೆ ಸಂಶಯ ಹುಟ್ಟಿ 'ಸಾಕಾರ ಹಾಗು ನಿರಾಕಾರೋಪಾಸಿ'ಗಳಲ್ಲಿ ಯಾರು ಶ್ರೇಷ್ಠರು? ಎಂದು ಈ ಅಧ್ಯಾಯದ ಪ್ರಾರಂಭದಲ್ಲಿ ಭಗವಂತನನ್ನು ಪ್ರಶ್ನಿಸುತ್ತಿದ್ದಾನೆ. ಅರ್ಜುನನ ಈ ಪ್ರಶ್ನೆಯಿಂದ ಈ ಅಧ್ಯಾಯ ಪ್ರಾರಂಭವಾಗುತ್ತಿದೆ.

**ಅರ್ಜುನ ಉವಾಚ:**

೧. **ಏವಂ ಸತತಯುಕ್ತಾ ಯೇ ಭಕ್ತಾಸ್ತ್ವಾಂ ಪರ್ಯುಪಾಸತೇ**
**ಯೇ ಚಾಪ್ಯಕ್ಷರಮವ್ಯಕ್ತಂ ತೇಷಾಂ ಕೇ ಯೋಗವಿತ್ತಮಾಃ**

ಅರ್ಜುನ ಉವಾಚ - ಅರ್ಜುನನು ಹೇಳಿದನು.

**ಅರ್ಥ:** ಏವಂ=ಈ ಪ್ರಕಾರವಾಗಿ (೧೧ನೆಯ ಅಧ್ಯಾಯದ ಅಂತ್ಯದಲ್ಲಿ ಹೇಳಿದ ಹಾಗೆ); ಸತತಯುಕ್ತಾಃ=ಯಾವಾಗಲೂ ನಿನ್ನಲ್ಲೇ ಮನಸ್ಸನ್ನು ನಿಲ್ಲಿಸಿದವನಾಗಿ; ಯೇ ಭಕ್ತಾಃ=ಯಾವ ಭಕ್ತರು (ಸಗುಣೋಪಾಸಕರು); ತ್ವಾಂ=ನಿನ್ನನ್ನು; ಪರ್ಯುಪಾಸತೇ=ಉಪಾಸಿಸುತ್ತಿದ್ದಾರೋ; ಯೇ ಚ ಅಪಿ=ಯಾರಾದರೆ; ಅವ್ಯಕ್ತಂ=ಇಂದ್ರಿಯಗಳಿಗೆ ಗೋಚರವಾಗದ; ಅಕ್ಷರಂ=ನಾಶರಹಿತ ಪರಬ್ರಹ್ಮವನ್ನು; ಪರ್ಯುಪಾಸತೇ=ಧ್ಯಾನಿಸುತ್ತಾರೋ; ತೇಷಾಂ=ಆ ಎರಡು ವರ್ಗಗಳಲ್ಲಿ; ಕೇ=ಯಾರು; ಯೋಗವಿತ್ತಮಾಃ=ಯೋಗವನ್ನು ಚೆನ್ನಾಗಿ ತಿಳಿದವರು.

**ತಾ||** ಅರ್ಜುನನು ಹೇಳಿದನು- ಈ ಪ್ರಕಾರವಾಗಿ ನಿನ್ನಲ್ಲೇ ಯಾವಾಗಲೂ ಮನಸ್ಸಿಟ್ಟವರಾಗಿ ಯಾವ ಭಕ್ತರು ನಿನ್ನನ್ನು ಉಪಾಸಿಸುತ್ತಿದ್ದಾರೋ, ಮತ್ತೆ ಯಾರು ಇಂದ್ರಿಯಗಳಿಗೆ ಅಗೋಚರವಾದ ಅಕ್ಷರಪರಬ್ರಹ್ಮವನ್ನು ಧ್ಯಾನಿಸುತ್ತಿದ್ದಾರೋ, ಆ ಎರಡು ವರ್ಗಗಳಲ್ಲಿ ಯೋಗವನ್ನು ಚೆನ್ನಾಗಿ ತಿಳಿದವರು ಯಾರು?

**ವ್ಯಾಖ್ಯೆ:** 'ಏವಂ' ಎನ್ನುವ ಪದವು ಹಿಂದಿನ ಅಧ್ಯಾಯದ ೫೫ನೆಯ ಶ್ಲೋಕ ದಲ್ಲಿಯ 'ಮತ್ಕರ್ಮಕೃತ್' ಎನ್ನುವ ಶ್ಲೋಕದ ಭಾವವನ್ನು ವ್ಯಕ್ತಪಡಿಸುತ್ತದೆ.

ಭಗವಂತನ ವಿಶ್ವರೂಪವನ್ನಾಗಲಿ ಅಥವ ದೈವ ಸಂಬಂಧವಾದ ಬೇರೆ ಯಾವ ಮೂರ್ತಿಯನ್ನೇ ಆಗಲಿ, ಸಾಕಾರ ಸ್ವರೂಪವನ್ನಾಗಲಿ, ಅನವರತ ಭಕ್ತಿಯಿಂದ ಉಪಾಸಿಸುವವರು (ಸಗುಣೋಪಾಸಕರು) ಉತ್ತಮವೇ, ಇಲ್ಲವೆ ಇಂದ್ರಿಯಗಳಿಗೆ ಗೋಚರವಾಗದ, ನಿರಾಕಾರ, ಸರ್ವವ್ಯಾಪಕವಾದ ಅಕ್ಷರಪರಮಾತ್ಮನನ್ನು ಧ್ಯಾನಿಸುವವರು ಉತ್ತಮವೇ? ಎನ್ನುವುದು ಅರ್ಜುನನ ಪ್ರಶ್ನೆ. ಈವರೆಗೆ ಅನೇಕ ಸಾರಿ ಭಗವಂತನು (೨ನೆಯ ಮತ್ತು ೮ನೆಯ ಅಧ್ಯಾಯ ಹಾಗು ಮುಂತಾದುವುಗಳಲ್ಲಿ) ನಿರ್ಗುಣ ಪರಮಾತ್ಮನ ತತ್ತ್ವವನ್ನೂ ಜ್ಞಾನವನ್ನೂ ಕುರಿತು ತಿಳಿಸಿದ್ದಾನೆ. ಈಗ ವಿಶ್ವರೂಪವನ್ನು ತೋರಿಸಿ ಸಗುಣೋಪಾಸನೆಯನ್ನು ಬಲಪಡಿಸಿರುವನು. ಆದ್ದರಿಂದ ಎರಡರಲ್ಲಿ ಯಾವುದು ಶ್ರೇಷ್ಠ ಎನ್ನುವ ಸಂದಿಗ್ಧ ಅರ್ಜುನನಿಗೆ ಸಹಜವಾಗಿಯೇ ಬಂದಿದೆ.

**ಅ||** ಅರ್ಜುನನ ಸಂಶಯವನ್ನು ಭಗವಂತನು ನಿವಾರಿಸುತ್ತಿದ್ದಾನೆ-

**ಶ್ರೀ ಭಗವಾನುವಾಚ:**

೩ **ಮಯ್ಯಾವೇಶ್ಯ ಮನೋ ಯೇ ಮಾಂ ನಿತ್ಯಯುಕ್ತಾ ಉಪಾಸತೇ**
**ಶ್ರದ್ಧಯಾ ಪರಯೋಪೇತಾಸ್ತೇ ಮೇ ಯುಕ್ತತಮಾ ಮತಾಃ**

**ಅರ್ಥ:** ಮಯಿ=ನನ್ನಲ್ಲಿ; ಮನಃ=ಮನಸ್ಸನ್ನು; ಆವೇಶ್ಯ=ನಿಲ್ಲಿಸಿ; ನಿತ್ಯಯುಕ್ತಾಃ=ನಿರಂತರ ದೈವ ಚಿಂತನಾಪರರಾಗಿ (ತದೇಕ ಚಿತ್ತವುಳ್ಳವರಾಗಿ); ಪರಯಾ=ಹೆಚ್ಚಿನ; ಶ್ರದ್ಧಯಾ=ಶ್ರದ್ಧೆಯಿಂದ; ಉಪೇತಾಃ=ಉಳ್ಳವರಾಗಿ; ಯೇ=ಯಾರು; ಮಾಃ=ನನ್ನನ್ನು; ಉಪಾಸತೇ=ಉಪಾಸಿಸುತ್ತಿದ್ದಾರೋ; ತೇ=ಅವರು; ಯುಕ್ತತಮಾಃ=ಉತ್ತಮಯೋಗಿಗಳೆಂದು; ಮೇ ಮತಾಃ=ನನ್ನ ಅಭಿಪ್ರಾಯ

**ತಾ||** ಶ್ರೀ ಭಗವಂತನು ಹೇಳಿದನು- ಯಾರು ನನ್ನಲ್ಲಿ ಮನಸ್ಸನ್ನು ನಿಲ್ಲಿಸಿ ನಿರಂತರ ದೈವ ಚಿಂತನಾಪರರಾಗಿ (ತದೇಕ ನಿಷ್ಠೆಯಿಂದ) ಹೆಚ್ಚಿನ ಶ್ರದ್ಧೆಯುಳ್ಳವರಾಗಿ ನನ್ನನ್ನು ಉಪಾಸನೆ ಮಾಡುತ್ತಾರೆಯೋ ಅವರೇ ಉತ್ತಮ ಯೋಗಿಗಳೆಂದು ನನ್ನ ಅಭಿಪ್ರಾಯ.

**ವ್ಯಾಖ್ಯೆ:** ಅರ್ಜುನನ ಪ್ರಶ್ನೆಗೆ ಭಗವಂತನು ಸರಿಯಾದ ಸಮಾಧಾನವನ್ನಿತ್ತಿದ್ದಾನೆ. ಸಗುಣೋಪಾಸಕರು ಶ್ರೇಷ್ಠರೇ ಇಲ್ಲವೆ ನಿರ್ಗುಣೋಪಾಸಕರು ಶ್ರೇಷ್ಠರೇ ಎನ್ನುವ ಪ್ರಶ್ನೆಗೆ, ಯಾರಾದರೂ ಸರಿಯೇ, ಯಾರು ಅಗಾಧವಾದ ಶ್ರದ್ಧೆಯುಳ್ಳವರಾಗಿ ನಿರಂತರ ದೈವದಲ್ಲಿ ಮಗ್ನರಾಗಿರುವರೋ ಅವರೇ ಶ್ರೇಷ್ಠರೆಂದು ಶ್ರೀ ಕೃಷ್ಣನು ಪ್ರತ್ಯುತ್ತರವಿತ್ತನು. ಇಲ್ಲಿ ಮೂರು ಸಾಧನಗಳನ್ನು ಕೊಡಲಾಗಿದೆ.

೧) ಮನಸ್ಸನ್ನು ಪರಮಾತ್ಮನಲ್ಲಿ ನಿಲ್ಲಿಸುವುದು.

೨) ನಿರಂತರ ದೈವ ಚಿಂತನಾಪರರಾಗಿರುವುದು.

೩) ಅಗಾಧ ಶ್ರದ್ಧೆಯನ್ನು ಹೊಂದಿರುವುದು.

ಈ ಮೂರನ್ನೂ ಅನುಷ್ಠಾನ ಮಾಡುವವನು ಮಾತ್ರ ಸರ್ವಶ್ರೇಷ್ಠನಾದ ಯೋಗಿ. ಅವನು ಸಗುಣೋಪಾಸಕನೇ, ನಿರ್ಗುಣೋ ಪಾಸಕನೇ, ಸನ್ಯಾಸಿಯೇ, ಗೃಹಸ್ಥನೇ, ದ್ವಿಜನೇ, ನೀಚಕುಲದವನೇ ಎನ್ನುವ ಪ್ರಶ್ನೆಯೇ ಇಲ್ಲಿ ಹುಟ್ಟುವುದಿಲ್ಲ. ಆಹಾ! ಭಗವಂತನು ಎಂತಹ ವಿಶಾಲ ಭಾವವನ್ನು ಪ್ರದರ್ಶಿಸಿರುವನು. ಭಕ್ತಿಗೆ, ಶ್ರದ್ಧೆಗೆ ಏಕಾಗ್ರತೆಗೆ ಪ್ರಾಧಾನ್ಯವನ್ನು ಕೊಟ್ಟಿರುವನೇ ಹೊರತು ಯಾವುದೋ ಒಂದು ನಿರ್ದಿಷ್ಟ ಮಾರ್ಗಕ್ಕೆ ಅಥವ ಸಂಪ್ರದಾಯಕ್ಕೆ ಅಲ್ಲ.

**ಅ||** ನಿರ್ಗುಣೋಪಾಸಕರ ಬಗ್ಗೆ ಉಲ್ಲೇಖಿಸಲಾಗಿದೆ-

೩ **ಯೇ ತ್ವಕ್ಷರಮನಿರ್ದೇಶಮವ್ಯಕ್ತಂ ಪರ್ಯುಪಾಸತೇ**
**ಸರ್ವತ್ರಗಮಚಿಂತ್ಯಂ ಚ ಕೂಟಸ್ಥಮಚಲಂ ಧ್ರುವಮ್**
೪ **ಸಂನಿಯಮ್ಯೇಂದ್ರಿಯಗ್ರಾಮಂ ಸರ್ವತ್ರ ಸಮಬುದ್ಧಯಃ**
**ತೇ ಪ್ರಾಪ್ನುವಂತಿ ಮಾಮೇವ ಸರ್ವಭೂತಹಿತೇ ರತಾಃ**

**ಅರ್ಥ:** ಯೇ ತು=ಯಾರಾದರೇ; ಇಂದ್ರಿಯಗ್ರಾಮಂ=ಇಂದ್ರಿಯಗಳ ಸಮೂಹವನ್ನು; ಸಂನಿಯಮ್ಯ=ಚೆನ್ನಾಗಿ ಹತೋಟಿಯಲ್ಲಿಟ್ಟುಕೊಂಡು; ಸರ್ವತ್ರ=ಎಲ್ಲವನ್ನೂ; ಸಮಬದ್ಧಯಃ=ಸಮಾನಭಾವವುಳ್ಳವರಾಗಿ; ಸರ್ವಭೂತ ಹಿತೇರತಾಃ=ಸಮಸ್ತ ಪ್ರಾಣಿಗಳ ಹಿತವನ್ನು ಅಪೇಕ್ಷಿಸಿ; ಅನಿರ್ದೇಶ್ಯಂ= ಇಂತಹುದೆಂದು ಸೂಚಿಸಲು ಅಸಾಧ್ಯವೆಂದು; ಅವ್ಯಕ್ತಂ=ಇಂದ್ರಿಯಗಳಿಗೆ ಅಗೋಚರವಾದುದು (ಯಾವ ಪ್ರಮಾಣದಿಂದಲೂ ಅಳೆಯಲಾರದಂತಹುದು, ತಿಳಿಯಲು ಸಾಧ್ಯವಿಲ್ಲದಂತಹುದು); ಅಚಿಂತ್ಯಂ=ಚಿಂತಿಸಲು ಸಾಧ್ಯವಿಲ್ಲದ್ದು (ಊಹಿಸಲು ಅಸಾಧ್ಯವಾದದ್ದು); ಕೂಟಸ್ಥಂ=ನಿರ್ವಿಕಾರವಾದದ್ದು (ಪ್ರಪಂಚಕ್ಕೆ ಅಧಿಷ್ಠಾನವಾದದ್ದು); ಅಚಲಂ=ಚಲಿಸದೆ ಇರುವುದು; ಧ್ರುವಂ=ನಿತ್ಯವಾದದ್ದು; ಸರ್ವತ್ರಗಂ ಚ=ಎಲ್ಲೆಲ್ಲೂ ವ್ಯಾಪಿಸಿರುವುದು ಆಗಿ; ಅಕ್ಷರಂ=ನಾಶರಹಿತವಾದ (ನಿರ್ಗುಣ) ಪರಬ್ರಹ್ಮವನ್ನು; ಪರ್ಯುಪಾಸತೇ=ಧ್ಯಾನಿಸುತ್ತಿದ್ದಾರೋ; ತೇ= ಅವರು; ಮಾಂ ಏವ=ನನ್ನನ್ನೇ; ಪ್ರಾಪ್ನುವಂತಿ=ಹೊಂದುತ್ತಿದ್ದಾರೆ.

**ತಾ||** ಯಾರು ಇಂದ್ರಿಯಗಳೆಲ್ಲವನ್ನೂ ಚೆನ್ನಾಗಿ ನಿಗ್ರಹಿಸಿಕೊಂಡು (ಸ್ವಾಧೀನ ಪಡಿಸಿಕೊಂಡು) ಎಲ್ಲ ಕಾಲದಲ್ಲಿಯೂ ಸಮಬುದ್ಧಿಯುಳ್ಳವರಾಗಿ ಸಮಸ್ತ ಪ್ರಾಣಿಗಳಿಗೆ ಹಿತವನ್ನುಂಟುಮಾಡಲು ಆಸಕ್ತಿಯುಳ್ಳವರಾಗಿ, ಇಂತಹದು ಎಂದು ನಿರ್ದೇಶಿಸಲು ಅಸಾಧ್ಯವಾದದ್ದೂ, ಇಂದ್ರಿಯಗಳಿಗೆ ಅಗೋಚರ ವಾದುದೂ, ಚಿಂತಿಸಲು ಅಸಾಧ್ಯವಾದುದೂ, ನಿರ್ವಿಕಾರವಾದದ್ದೂ, ಚಲಿಸದೆ ಇರುವುದೂ, ನಿತ್ಯವಾದುದೂ ಹಾಗು ಎಲ್ಲೆಲ್ಲೂ ವ್ಯಾಪಿಸಿರುವ ಅಕ್ಷರ ಪರಬ್ರಹ್ಮವನ್ನು ಧ್ಯಾನಿಸುತ್ತಿದ್ದಾರೋ ಅವರು ನನ್ನನ್ನೇ ಹೊಂದುತ್ತಿದ್ದಾರೆ.

**ವ್ಯಾಖ್ಯೆ:** ಒಬ್ಬನೇ ಪರಮಾತ್ಮನನ್ನು ಸಾಕಾರ ಹಾಗು ನಿರಾಕಾರ ರೂಪಗಳಾಗಿ ನೋಡಲ್ಪಡುವುದರಿಂದ ಸಗುಣ ಹಾಗೂ ನಿರ್ಗುಣ ಧ್ಯಾನಗಳಿಗೆ ಲಕ್ಷ್ಯವು ಒಂದೇ ಆಗಿದೆ. ಶ್ರದ್ಧೆಯಿಂದ ನಿರ್ಮಲ ಭಕ್ತಿಯಿಂದ ಯಾವ ಪ್ರಕಾರವಾಗಿ ಧ್ಯಾನಿಸಿದರೂ ಭಕ್ತರು ಪರಮಾತ್ಮನನ್ನೇ ಸೇರುವರು. ಈ ಎರಡು ಶ್ಲೋಕಗಳಲ್ಲಿ ನಿರ್ಗುಣ ಪರಬ್ರಹ್ಮನನ್ನು ಧ್ಯಾನಿಸುವವರ ಬಗ್ಗೆ ಚರ್ಚಿಸಲಾಗಿದೆ. ಇದರಲ್ಲಿ ಮೊದಲನೆಯ ಶ್ಲೋಕದಲ್ಲಿ ಬ್ರಹ್ಮವನ್ನು ಕುರಿತ ವಿಶೇಷಗಳನ್ನು, ಎರಡನೆಯ ಶ್ಲೋಕದಲ್ಲಿ ಬ್ರಹ್ಮಪ್ರಾಪ್ತಿಗೆ ಬೇಕಾದ ಶೀಲ ಸಂಪತ್ತನ್ನು ತಿಳಿಸಲಾಗಿದೆ. ಸಾಧಕನು ಸಾಧ್ಯವಸ್ತುವಾದ ಪರಮಾತ್ಮನನ್ನು ಧ್ಯಾನಿಸುತ್ತಿದ್ದಾಗ್ಯೂ ಹೃದಯಸಿದ್ಧಿಯಿಲ್ಲದೆ, ಇಂದ್ರಿಯನಿಗ್ರಹಣವಿಲ್ಲದೇ ಇದ್ದರೆ, ಪ್ರಾಣಿಕೋಟಿಗಳಲ್ಲಿ ದಯೆಯಿಲ್ಲದೆ ಹೋದರೆ ಆ ಧ್ಯಾನವು ನಿರ್ದಿಷ್ಟ ಫಲವನ್ನು ಕೊಡಲಾರದು. ಅಂತಹವನಿಗೆ ಬ್ರಹ್ಮಾನುಭೂತಿ ಲಭ್ಯವಾಗುವುದು ದುಸ್ತರ. ಆತನ ಉಪಾಸನೆ ಶುದ್ಧವಿಲ್ಲದ ಪಾತ್ರೆಯಲ್ಲಿ ಅಡಿಗೆ ಮಾಡಿದಂತಾಗು ವುದು. ಅಡಿಗೆ ವಸ್ತುಗಳೆಲ್ಲಾ ಉತ್ತಮವಾಗಿದ್ದರೂ ಪಾತ್ರೆ ಶುದ್ಧವಾಗಿರದೇ ಇದ್ದಲ್ಲಿ ಹುಳಿ ಮುಂತಾದ ಪದಾರ್ಥಗಳು ಹೇಗೆ ಕೆಟ್ಟು ಹೋಗುವುವೋ, ಹಾಗೆಯೇ ಹೃದಯಶುದ್ಧಿ, ಇಂದ್ರಿಯ ನಿಗ್ರಹ, ಭೂತದಯೆ ಮುಂತಾದ ಪವಿತ್ರ ಗುಣಗಳಿಲ್ಲದೆ ಭಗವಂತನನ್ನು ಭಜಿಸಿದರೆ, ಅದು ನಿರಾಕಾರ ಧ್ಯಾನವಾಗಲಿ ಅಥವ ಸಾಕಾರ ಧ್ಯಾನವಾಗಲಿ, ಅದರಿಂದ ಉಪಯೋಗವೇನೂ ಇರುವುದಿಲ್ಲ. ಆದ್ದರಿಂದ

ಗೀತಾಚಾರ್ಯನು ಧ್ಯಾನಶೀಲರನ್ನು ಎಚ್ಚರಿಸಲು, ಧ್ಯಾನಿಗೆ ಬೇಕಾದ ಮೂರು ಸುಗುಣಗಳನ್ನು ಇಲ್ಲಿ ನಿರ್ಗುಣ ಬ್ರಹ್ಮೋಪಾಸನೆಯ ಸಂದರ್ಭದಲ್ಲಿ ಹೇಳಿರುವನು. ಅವು ಯಾವುವೆಂದರೆ-

೧) ಇಂದ್ರಿಯ ಸಮೂಹವನ್ನು ಪರಿಪೂರ್ಣವಾಗಿ ನಿಗ್ರಹಿಸುವುದು (ಸಂನಿಯಮ್ಯೇಂದ್ರಿಯಗ್ರಾಮಂ)

೨) ಎಲ್ಲೆಲ್ಲೂ ಸಮಭಾವನೆ ಹೊಂದಿರುವುದು (ಸರ್ವತ್ರ ಸಮಬುದ್ಧಯಃ)

೩) ಸಮಸ್ತ ಪ್ರಾಣಿಗಳ ಹಿತಕೋರುವುದು (ಸರ್ವಭೂತ ಹಿತೇ ರತಾಃ)

ಆದ್ದರಿಂದ ಮುಮುಕ್ಷುಗಳು ಧ್ಯಾನಾದಿಗಳನ್ನು ಮಾಡುವುದೇ ಅಲ್ಲದೆ, ಈ ಮೂರು ಸದ್ಗುಣಗಳನ್ನೂ ಅಳವಡಿಸಿಕೊಳ್ಳಬೇಕು. ಇಲ್ಲಿ 'ನಿಯಮ್ಯ' ಎಂದು ಹೇಳದೆ 'ಸಂನಿಯಮ್ಯ' ಎಂದು ಹೇಳಿರುವುದರಿಂದ ಇಂದ್ರಿಯಗಳನ್ನು ಸ್ವಲ್ಪ ನಿಗ್ರಹಿಸಿದರೆ ಸಾಲದೆಂದೂ ಪರಿಪೂರ್ಣವಾಗಿ ನಿಗ್ರಹಿಸಬೇಕೆಂದೂ; 'ಸರ್ವತ್ರ' ಎಂದುಹೇಳಿರುವುದರಿಂದ ಸಮಸ್ತ ಪ್ರಾಣಿಗಳಲ್ಲಿಯೂ ಇಲ್ಲವೆ ಎಲ್ಲಾ ಕಾಲದಲ್ಲಿಯೂ ಸಮಭಾವವನ್ನು ಹೊಂದಿರಬೇಕೆಂದೂ; **'ಸರ್ವಭೂತ ಹಿತೇರತಾಃ'** ಎಂದು ಹೇಳಿರುವುದರಿಂದ ಯಾವುದೋ ಒಂದು ಪ್ರಾಣಿಯಲ್ಲಿ ದಯೆ ತೋರಿಸಿದರೆ ಸಾಲದೆಂದೂ, ಸಮಸ್ತ ಪ್ರಾಣಿ ಕೋಟಿಯಲ್ಲಿ ಪ್ರೇಮ, ದಯೆ, ಉಪಕಾರ ಬುದ್ಧಿ ಇರಬೇಕೆಂದು ಸ್ಪಷ್ಟವಾಗುತ್ತದೆ. ಈ ಪ್ರಕಾರದ ಸುಗುಣಗಳನ್ನು ಹೊಂದಿ ಪರಮಾತ್ಮನನ್ನು ಧ್ಯಾನಿಸುವವರು ತಪ್ಪದೆ ಆ ಪರಮಾತ್ಮನನ್ನು ಸೇರುವರೆಂದು **'ತೇ ಪ್ರಾಪ್ನುವಂತಿ'** ಎನ್ನುವ ವಾಕ್ಯದ ಮೂಲಕ ಭಗವಂತನು ನಿಶ್ಚಯಪೂರ್ವಕವಾಗಿ ತಿಳಿಸಿ ಸರ್ವರಿಗೂ ಅಭಯವನ್ನು ಕೊಟ್ಟಿರುವನು. ಆದ್ದರಿಂದ ಭಗವದ್ಧ್ಯಾನಪರನು ಮೇಲಿನ ಮೂರು ಸುಗುಣಗಳು ತನ್ನಲ್ಲಿ ಇವೆಯೇ ಇಲ್ಲವೇ ಎನ್ನುವುದನ್ನು ಮೊದಲು ಪರೀಕ್ಷಿಸಿಕೊಳ್ಳಬೇಕು.

**ಅ॥** ಸಗುಣ ನಿರ್ಗುಣೋಪಾಸನೆಗಳಲ್ಲಿ, ನಿರ್ಗುಣೋಪಾಸನೆ (ಸಾಮಾನ್ಯರಿಗೆ) ಕಷ್ಟವೆಂದೂ, ದೇಹಭಾವವಿರುವವರಿಗೆ ಅದು ಬಹು ಪ್ರಯಾಸಕರವೆಂದೂ ಹೇಳುತ್ತಿರುವನು-

**೫ ಕ್ಲೇಶೋಽಧಿಕತರಸ್ತೇಷಾಮ್ ಅವ್ಯಕ್ತಾ ಸಕ್ತ ಚೇತಸಾಮ್**
**ಅವ್ಯಕ್ತಾ ಹಿ ಗತಿರ್ದುಃಖಮ್ ದೇಹವದ್ಭಿರವಾಪ್ಯತೇ**

**ಅರ್ಥ:** ಅವ್ಯಕ್ತಾಸಕ್ತ ಚೇತಸಾಮ್ ತೇಷಾಂ=ಇಂದ್ರಿಯ ಗೋಚರವಲ್ಲದ ಪರಮಾತ್ಮನಲ್ಲಿ (ನಿರ್ಗುಣ ಬ್ರಹ್ಮನಲ್ಲಿ) ಆಸಕ್ತಿಯುಳ್ಳ ಮನಸ್ಸಿರುವವರಿಗೆ; ಕ್ಲೇಶ=ಕಷ್ಟವು; ಅಧಿಕತರಃ=ಅಧಿಕವಾಗಿ ಇರುವುದು; ಹಿ=ಏಕೆಂದರೆ; ಅವ್ಯಕ್ತಾ=ನಿರ್ಗುಣವಿಷಯವಾದ; ಗತಿಃ=ಮಾರ್ಗವು; ದೇಹವದ್ಭಿಃ= ದೇಹಾಭಿಮಾನವುಳ್ಳವರಿಂದ; ದುಃಖಃ=ಅತಿ ಪ್ರಯಾಸದಿಂದ; ಅವಾಪ್ಯತೇ= ಹೊಂದಲ್ಪಡುತ್ತದೆ.

**ತಾ॥** ಅವ್ಯಕ್ತ (ನಿರ್ಗುಣ) ಪರಬ್ರಹ್ಮನಲ್ಲಿ ಆಸಕ್ತಿಯುಳ್ಳವರಿಗೆ (ಬ್ರಹ್ಮನಲ್ಲಿ ನಿಷ್ಠೆಹೊಂದಲು) ಸಗುಣೋಪಾಸಕರಿಗಿಂತ ಪ್ರಯಾಸವು ಅಧಿಕವಾಗಿರುವುದು. ಏಕೆಂದರೆ ನಿರ್ಗುಣೋಪಾಸಕ ಮಾರ್ಗವು ದೇಹಾಭಿಮಾನವುಳ್ಳ ಸಾಮಾನ್ಯ ಜನರಿಗೆ ದುರ್ಲಭವಾಗಿರುತ್ತದೆ.

**ವ್ಯಾಖ್ಯೆ:** ನಿರ್ಗುಣೋಪಾಸನೆ ಮಾರ್ಗ ದೇಹಾಭಿಮಾನವುಳ್ಳವರಿಗೆ ಪ್ರಯಾಸಕರವಾದುದೆಂದು ಇಲ್ಲಿ ತಿಳಿಸಲಾಗಿದೆ. ಅದು ಇಲ್ಲದವರಿಗೆ ಸುಲಭವೇ ಸರಿ. ಅಂದರೆ ದೇಹದ ಅಹಂಭಾವವನ್ನು ತೊರೆದಿದ್ದು, ಇಂದ್ರಿಯ ನಿಗ್ರಹಣ ವುಂಟಾಗಿದ್ದು ನಿಷ್ಕಾಮಕರ್ಮಾನುಷ್ಠಾನದಿಂದ ಈಶ್ವರೋಪಾಸನೆಯಿಂದ ಚಿತ್ತಶುದ್ಧಿ ಪಡೆದಿದ್ದರೆ ನಿರ್ಗುಣೋಪಾಸನೆಯಲ್ಲಿ ಕಷ್ಟವೇನೂ ಆಗುವುದಿಲ್ಲ. ಈ ಶ್ಲೋಕದ ಮೊದಲನೆಯ ಪಾದದಲ್ಲಿ ನಿರ್ಗುಣೋಪಾಸನೆ ಅಧಿಕವಾದ ಕ್ಲೇಶದಿಂದ ಕೂಡಿದೆ ಎಂದು ಹೇಳಿರುವುದು ದೇಹಾಭಿಮಾನವುಳ್ಳವರನ್ನು, ಇಂದ್ರಿಯನಿಗ್ರಹಣವಿಲ್ಲದವರನ್ನು ಹಾಗು ಸಗುಣೋಪಾಸನೆಯಿಂದ ಚಿತ್ತಶುದ್ಧಿಯನ್ನು ಪಡೆಯದವರನ್ನು ಕುರಿತು ಹೇಳಿದ್ದು ಎಂದು ಗ್ರಹಿಸಬೇಕು. ದೇಹಾಭಿಮಾನವಿಲ್ಲದೆ,ಇಂದ್ರಿಯನಿಗ್ರಹಣ ಹೊಂದಿದವರಿಗೆ ನಿರ್ಗುಣ ಮಾರ್ಗವು ಅತಿ ಸುಲಭವಾದದ್ದು ಹಾಗು ಜೀವಿಯನ್ನು ಪರಮಾತ್ಮನ ಸಾನ್ನಿಧ್ಯಕ್ಕೆ ತಪ್ಪದೆ ಒಯ್ಯುವುದೆಂದು ಹಿಂದಿನ ಶ್ಲೋಕಗಳಲ್ಲಿ ಭಗವಂತನು ಹೇಳಿರುವ ವಿಷಯವನ್ನು ಈ ಸಂದರ್ಭದಲ್ಲಿ ಜ್ಞಾಪಿಸಿಕೊಳ್ಳುವುದು ಉಚಿತ.

ಆದ್ದರಿಂದ ಸಾಧಕರು ಪ್ರಾರಂಭದಲ್ಲೇ ಅವ್ಯಕ್ತ (ನಿರಾಕಾರ, ನಿರ್ಗುಣ) ಮಾರ್ಗಕ್ಕಾಗಿ ಹಾತೊರೆಯದೆ, ದೇಹಾಭಿಮಾನವೆಂಬ ದೋಷವನ್ನು ಭಗವದುಪಾಸನೆ, ನಿಷ್ಕಾಮ ಕರ್ಮಾಧ್ಯಯನದಿಂದ ತೊಲಗಿಸಿಕೊಂಡು, ಇಂದ್ರಿಯ ನಿಗ್ರಹವನ್ನು ಅಭ್ಯಾಸ ಮಾಡಿ ಕ್ರಮವಾಗಿ ನಿರ್ಗುಣ ಪರಬ್ರಹ್ಮನಲ್ಲಿ ಚಿತ್ತವನ್ನು ಪ್ರವೇಶಿಸಲ್ಪಟ್ಟರೆ ಆಗ ಅಲ್ಲಿ ಯಾವ ಪ್ರಯಾಸವಿಲ್ಲದೆ ದೈವಪ್ರಾಪ್ತಿರೂಪ ಲಕ್ಷ್ಯವು ಸಿದ್ಧಿಸುವುದು. ಪರಮಾರ್ಥರಂಗದಲ್ಲಿ ಪ್ರವೇಶಿಸಿ ಸಾಧಕರೇನಕರು ಬ್ರಹ್ಮನನ್ನು ಕುರಿತು ಉಪಾಸನಾದಿಗಳನ್ನು ಮಾಡುತ್ತಿದ್ದರೂ ಉತ್ತಮ ಫಲವನ್ನು ಹೊಂದದೆ ಇರಲು ಕಾರಣವನ್ನು ಈ ಶ್ಲೋಕದಲ್ಲಿ ತಿಳಿಸ ಲಾಗಿದೆ. ಹೊಲವನ್ನು ಉಳದೆ ಬೀಜ ಬಿತ್ತಿದರೆ ಏನು ಉಪಯೋಗ? ಬುನಾದಿಗಟ್ಟಿಯಿಲ್ಲದೆ ಮಹಡಿ ಕಟ್ಟಿದರೆ ನಿಲ್ಲುವುದೇ? ಹಾಗೆಯೇ ಹೃದಯದಲ್ಲಿರುವ ದೇಹಾಭಿಮಾನ ತೊಲಗದಿದ್ದರೆ ಬ್ರಹ್ಮದಲ್ಲಿ ಮನಸ್ಸು ನಿಲ್ಲುವುದಿಲ್ಲ. ಸಾಧಕರು ಈ ವಿಚಾರವನ್ನು ಚೆನ್ನಾಗಿ ತಿಳಿದಿರಬೇಕು. ವಾಸ್ತವವಾಗಿ ಜ್ಞಾನವಾಗಲೀ, ಉಪಾಸನೆಯಾಗಲೀ ಆನಂದಕರ ಸ್ಥಿತಿಯಾಗಲೀ ಸಚ್ಚಿದಾನಂದ ಸಾಗರಕ್ಕೆ ಸಂಬಂಧಪಟ್ಟ ವಿಷಯಗಳಾದುದರಿಂದ ಅವುಗಳಲ್ಲಿ ಕಷ್ಟವಿರುವ ಸಾಧ್ಯತೆಗಳಿಲ್ಲ. ಅವು ಪ್ರಯಾಸವನ್ನು ತೆಗೆದುಹಾಕುವುವೇ ಹೊರತು ಉಂಟುಮಾಡುವುದಿಲ್ಲ. ಆದರೆ ಜನರಿಗೆ ಅದನ್ನು ಆಚರಿಸುವ ಪದ್ಧತಿ ತಿಳಿಯದೆ ದೇಹಾಭಿಮಾನದಿಂದ ಕಷ್ಟವನ್ನನುಭವಿಸುತ್ತಿದ್ದಾರೆ. ಆದ್ದರಿಂದ ಸಗುಣೋಪಾಸನೆಯಿಂದ ಶುದ್ಧಿ ಹೊಂದಿ, ದೇಹಾಭಿಮಾನವನ್ನು ತ್ಯಜಿಸಿ ನಂತರ ನಿರ್ಗುಣೋಪಾಸನೆಯನ್ನು ಅವಲಂಬಿಸುವುದು ಸರ್ವೋತ್ತಮ.

**ಅ॥** ಅನನ್ಯ ಭಾವದಿಂದ ತನ್ನನ್ನು ಕುರಿತು ಧ್ಯಾನಿಸುವವರನ್ನು ಸಂಸಾರಸಾಗರದಿಂದ ಉದ್ಧರಿಸುವೆನೆಂದು ಎರಡು ಶ್ಲೋಕಗಳ ಮೂಲಕ ಆಶ್ವಾಸನವೀಯುತ್ತಿದ್ದಾನೆ.

**೬ ಯೇ ತು ಸರ್ವಾಣಿ ಕರ್ಮಾಣಿ ಮಯಿ ಸಂನ್ಯಸ್ಯ ಮತ್ಪರಾಃ**
**ಅನನ್ಯೇನೈವ ಯೋಗೇನ ಮಾಂ ಧ್ಯಾಯಂತ ಉಪಾಸತೇ**
**೭ ತೇಷಾಮಹಂ ಸಮುದ್ಧರ್ತಾ ಮೃತ್ಯು ಸಂಸಾರ ಸಾಗರಾತ್**
**ಭವಾಮಿ ನ ಚಿರಾತ್ಪಾರ್ಥ ಮಯ್ಯಾವೇಶಿತಚೇತಸಾಮ್**

**ಅರ್ಥ:** ಪಾರ್ಥ=ಓ ಅರ್ಜುನಾ! ಯೇತು=ಯಾರಾದರೆ; ಸರ್ವಾಣಿ=

ಸಮಸ್ತಗಳಾದ; ಕರ್ಮಾಣಿ=ಕರ್ಮಗಳನ್ನು; ಮಯಿ=ನನ್ನಲ್ಲಿ; ಸನ್ನ್ಯಸ್ಯ=ಸಮರ್ಪಿಸಿ, ಮತ್ಪರಾಃ=ನನ್ನನ್ನೇ ಪರಮಗತಿಯೆಂದು ತಿಳಿದಂತವರಾಗಿ (ನನ್ನಲ್ಲೇ ಚಿತ್ತವುಳ್ಳವರಾಗಿ); ಅನನ್ಯೇನ ಯೋಗೇನ=ಪರಮಾತ್ಮನನ್ನು ಬಿಟ್ಟು ಬೇರೆ ಏನನ್ನು ಯೋಚಿಸದ ಯೋಗದಿಂದ (ಅಂದರೆ ಬೇರೆ ಯಾವ ಚಿಂತೆಗಳೂ ಇಲ್ಲದೆ); ಮಾಂ ಏವ=ನನನ್ನೇ; ಧ್ಯಾಯಂತಃ=ಚಿಂತಿಸುತ್ತಿರುವವರಾಗಿ; ಉಪಾಸತೇ=ಉಪಾಸಿಸುತ್ತಿದ್ದಾರೋ; ಮಯಿ=ನನ್ನಲ್ಲಿ; ಆವೇಶಿತ ಚೇತಸಾಂ=ನಿಷ್ಠೆಯುಳ್ಳ ಚಿತ್ತವನ್ನು ಹೊಂದಿ; ತೇಷಾಂ=ಅಂತಹವರಿಗೆ (ಅಂತಹವರನ್ನು); ಅಹಂ=ನಾನು; ಮೃತ್ಯು ಸಂಸಾರ ಸಾಗರಾತ್=ಮೃತ್ಯು ಲೋಕವಾದ (ಮರಣಾದಿ ಅನರ್ಥಗಳನ್ನುಂಟು ಮಾಡುವ ಸಂಸಾರವೆನ್ನುವ ಸಮುದ್ರದಿಂದ); ನ ಚಿರಾತ್=ಶೀಘ್ರವಾಗಿ; ಸಮುದ್ಧರ್ತಾ=ಉದ್ಧರಿಸುವವನು; ಭವಾಮಿ=ಆಗುತ್ತಿದ್ದೇನೆ.

**ತಾ||** ಓ ಅರ್ಜುನಾ! ಯಾರು ಸಮಸ್ತ ಕರ್ಮಗಳನ್ನು ನನ್ನಲ್ಲಿ ಸಮರ್ಪಿಸಿ, ನನ್ನನ್ನೇ ಪರಮಗತಿಯೆಂದು ನಂಬಿ ಅನನ್ಯ ಚಿತ್ತದಿಂದ ನನ್ನನ್ನೇ ಧ್ಯಾನಿಸುತ್ತ ಉಪಾಸಿಸುತ್ತಿದ್ದಾರೋ ಹಾಗು ನನ್ನಲ್ಲೇ ಚಿತ್ತವನ್ನಿಟ್ಟಿರುವರೋ ಅವರನ್ನು ಮೃತ್ಯುರೂಪವಾದ ಈ ಸಂಸಾರ ಸಮುದ್ರದಿಂದ ನಾನು ಶೀಘ್ರವಾಗಿ ಉದ್ಧರಿಸುತ್ತೇನೆ.

**ವ್ಯಾಖ್ಯೆ:** ಇಲ್ಲಿ ಮೊದಲನೆಯ ಶ್ಲೋಕದಲ್ಲಿ ಸಾಧಕನು ಅನುಸರಿಸಬೇಕಾದ ಪದ್ಧತಿಗಳನ್ನು, ಎರಡನೆಯ ಶ್ಲೋಕದಲ್ಲಿ ಅದರ ಅಖಂಡ ಫಲವನ್ನು ಭಗವಂತನು ತಿಳಿಸಿರುವನು. ಆ ಪದ್ಧತಿಗಳು ಯಾವುವೆಂದರೆ ೧) ಸಮಸ್ತ ಕರ್ಮಗಳನ್ನು ಭಗವಂತನಿಗೆ ಸಮರ್ಪಿಸುವುದು ೨) ಆತನನ್ನೇ ಪರಮಗತಿಯೆಂದು ಭಾವಿಸಿ ಆತನಲ್ಲಿ ಚಿತ್ತವನ್ನು ನಿಲ್ಲಿಸುವುದು. ೩) ಅನನ್ಯ ಭಾವದಿಂದ (ಏಕಾಂತ ಭಕ್ತಿಯಿಂದ) ಅಂತಹ ಪರಮಾತ್ಮನನ್ನು ಧ್ಯಾನಿಸುವುದು ಈ ಪ್ರಕಾರವಾಗಿ ಭಕ್ತಿಯಿಂದ ತನ್ನನ್ನು ಉಪಾಸನೆ ಮಾಡುವವರನ್ನು ಸರ್ವೇಶ್ವರನು ಜನನ ಮರಣ ರೂಪವಾದ ಈ ಸಂಸಾರ ಸಾಗರದಿಂದ ಉದ್ಧಾರ ಮಾಡುವನು ಎಂದು ಹೇಳಲಾಗಿದೆ. ಓಹೋ! ಎಂತಹ ಮಹತ್ತರವಾದ ಫಲ ಭಗವದುಪಾಸಕರಿಗೆ ಲಭ್ಯವಾಗುವುದು! ಭಯಂಕರವಾದ, ಮರಣರೂಪವಾದ ಈ ಸಂಸಾರ ಸಾಗರದಲ್ಲಿ ಮುಳುಗಿ ಏಳುತ್ತ ನಾನಾಯಾತನೆಗಳನ್ನು ಅನುಭವಿಸುತ್ತಿರುವ ಈ ಜನಕೋಟಿಗೆ ಈ ವಾಕ್ಯಗಳು ಆಶ್ವಾಸನೆಯನ್ನುಂಟುಮಾಡುತ್ತವೆ. ಅನಾದಿಕಾಲದಿಂದ ಸಂಸಾರ ರೂಪವಾದ ಈ ಘೋರ ವಿಪತ್ತಿಗೆ ಬದ್ಧವಾಗಿ 'ಪುನರಪಿ ಜನನಂ, ಪುನರಪಿ ಮರಣಂ' ಎಂದ ಹಾಗೆ ಕಾಲ ಚಕ್ರದಲ್ಲಿ ಪರಿಭ್ರಮಿಸುತ್ತ ತಲ್ಲಣಿಸಿ ಹೋಗುತ್ತಿರುವ ಜೀವಿಗೆ ಭಗವತ್ಪ್ರೋಕ್ತಗಳಾದ ಈ ವಾಕ್ಯಗಳು ಸಂಜೀವಿನಿಯಂತೆ ಇವೆ. ಮುಳುಗುತ್ತಿರುವವನಿಗೆ ದೋಣಿ ಹೇಗೆ ಸಹಾಯ ಮಾಡುವುದೋ ಹಾಗೆ ಸಂಸಾರ ಪೀಡಿತ ಮನುಜನಿಗೆ ಪರಮಾತ್ಮನು ಸಹಾಯಮಾಡುವನು. ಎಂತಹ ವಿಶಾಲ ಸಮುದ್ರವನ್ನಾದರೂ ಒಂದು ಚಿಕ್ಕ ದೋಣಿಯಿಂದ ಹೇಗೆ ದಾಟಬಹುದೋ ಹಾಗೆ ಭಕ್ತಿ ಎನ್ನುವ ತೆಪ್ಪದಿಂದ ಸಂಸಾರ ಸಮುದ್ರವನ್ನು ದಾಟಬಹುದು. 'ನಿಮ್ಮನ್ನು ತಪ್ಪದೆ ಉದ್ಧರಿಸುವೆನು' (ಸಮುದ್ಧರ್ತಾ) ಎಂದು ಭಗವಂತನು ಕರುಣೆಯಿಂದ ಹೇಳಿರುವನು. ಆದರೆ ಯಾರು ಹಸ್ತವನ್ನು ಮೇಲಕ್ಕೆತ್ತಿ ಆತನ ಅನುಗ್ರಹವನ್ನು ಯಾಚಿಸುವರೋ, ಅಂತಹವರನ್ನು ಉದ್ಧಾರ ಮಾಡುವನಾಗಲಿ ಬೇರೆಯವರನ್ನಲ್ಲ. ಯಾರು ಆತನನ್ನು ಧ್ಯಾನಿಸುವುದಿಲ್ಲವೋ, ಅಂತಹವರ ಉದ್ಧಾರದ ಗೋಜಿಗೆ ಆತನು ಹೋಗುವುದಿಲ್ಲ. ಅವರು ದುಃಖ ಸಾಗರದಲ್ಲಿ ಇನ್ನೂ ಎಷ್ಟೋಕಾಲ ಈಜುತ್ತಿರಬೇಕು. ಜೀವಿಯು ತಾನು ಮಾಡಬೇಕಾದದ್ದನ್ನು ಮಾಡಿದಲ್ಲಿ ಭಗವಂತನು ತನ್ನ ಭಾಗದ ಸಮುದ್ಧರಣೆಯನ್ನು ತಪ್ಪದೆ ಮಾಡುವನು. ಆದ್ದರಿಂದ ವಿಜ್ಞನಾದವನು ತಾನು ಅನುಭವಿಸುತ್ತಿರುವ ಸಂಸಾರ ಸಾಗರವೆನ್ನುವ ಘೋರ ವಿಪತ್ತನ್ನು ಅರ್ಥಮಾಡಿಕೊಂಡು ಮರಣಾದಿ ಬಾಧೆಗಳನ್ನು ಸಂಪೂರ್ಣವಾಗಿ ತೊಲಗಿಸಿಕೊಳ್ಳಲು ಭಗವಂತನನ್ನು ಭಕ್ತಿಪೂರ್ವಕವಾಗಿ ಸೇವಿಸಬೇಕು. ಭವರೋಗ ನಿವಾರಣೆಗೆ ಇದು ಸಮುಚಿತವಾದ ಸಿದ್ಧೌಷಧ.

*'ಯೇತು'*- ಎಂದು ಹೇಳಿರುವುದರಿಂದ ಯಾರಾದರೂ ಸರಿಯೇ (ಜಾತಿ, ಮತ, ಕುಲ ಭೇದಗಳಿಲ್ಲದೆ) ಭಗವಂತನನ್ನು ಆಶ್ರಯಿಸಿ ಉದ್ಧಾರವಾಗ ಬಹುದೆಂದು ಸ್ಪಷ್ಟವಾಗುತ್ತದೆ.

*'ಸರ್ವಾಣಿ ಕರ್ಮಾಣಿ'* ಎನ್ನುವುದರಿಂದ ಯಾವೋ ಕೆಲವು ಕರ್ಮಗಳನ್ನು ಸಮರ್ಪಿಸಿದರೆ ಸಾಲದೆಂದೂ, ತಾನು ಮಾಡುವ ಸಮಸ್ತ ಕರ್ಮಗಳನ್ನು ಈಶ್ವರಾರ್ಪಣೆ ಮಾಡಬೇಕೆಂದು ಅರ್ಥವಾಗುತ್ತದೆ.

*'ಅನನ್ಯೇನೈವ ಯೋಗೇನ'*- ಇಲ್ಲಿಯುವರಿಗೆ ಕರ್ಮಯೋಗ, ಜ್ಞಾನಯೋಗ, ಭಕ್ತಿಯೋಗ ಮುಂತಾದ ಅನೇಕ ಯೋಗಗಳನ್ನು ಹೇಳಿ ಈಗ ಒಂದು ಹೊಸ ಯೋಗವನ್ನು ಭಗವಂತನು ಆರಂಭಿಸಿರುವನು. ಅದು ಅನನ್ಯಯೋಗ. ಇದು ಪ್ರತ್ಯೇಕವಾಗಿ ಒಂದು ಯೋಗವಲ್ಲದಿದ್ದರೂ, ಬೇರೆ ಯೋಗಗಳಲ್ಲಿ ಇದು ಸೇರಿದಾಗ ಮಾತ್ರ ಅವು ಶೋಭಿಸುವುವು. ಯಾವ ಯೋಗವನ್ನಾದರೂ ಅನನ್ಯ ಚಿತ್ತದಿಂದ ಆಶ್ರಯಿಸಿದಾಗ ಮಾತ್ರ ಅದು ಫಲವನ್ನೀಯುವುದು. ಇತರೆ ಪ್ರಾಪಂಚಿಕ ಚಿಂತನೆಗಳು, ದೃಶ್ಯ ಸಂಕಲ್ಪಗಳು ಮನಸ್ಸಿಗೆ ಬಾರದೆ ಕೇವಲ ಪರಮಾತ್ಮ ವಸ್ತು ಒಂದನ್ನೇ ಚಿಂತಿಸುತ್ತಿರ ಬೇಕೆನ್ನುವುದು ಭಾವ.

*'ಮಾಂ ಧ್ಯಾಯಂತ ಉಪಾಸತೇ'*- *'ಮಾಮುಪಾಸತೇ'* ಎಂದು ಹೇಳದೆ 'ಧ್ಯಾಯಂತಃ' ಎನ್ನುವ ಶಬ್ದವನ್ನು ಅದಕ್ಕೆ ಸೇರಿಸುವುದರಿಂದ ಸಾಮಾನ್ಯ ಉಪಾಸನೆಗಿಂತ ಅರ್ಥ ಭಾವನೆಯಿಂದ ಆಚರಿಸಲ್ಪಡುವ ಉಪಾಸನೆಯೇ ಶ್ರೇಷ್ಠತಮವೆಂದೂ, ಅವಲಂಬನೀಯವೆಂದೂ ಬೋಧಿಸಿದಂತಾಗಿದೆ. ಮಂತ್ರ ಜಪ ಮಾಡುವಾಗ ಮಂತ್ರೋಚ್ಚಾರಣೆಯೊಡನೆ, ಮಂತ್ರಾರ್ಥವನ್ನೂ ಕೂಡ ಹೇಗೆ ಮನನಮಾಡಬೇಕೋ ಹಾಗೆಯೇ ಭಗವಂತನನ್ನು ಉಪಾಸಿಸು ವಾಗ ಆತನ ಸ್ವರೂಪ ಸ್ವಭಾವಾದಿಗಳನ್ನು ಚೆನ್ನಾಗಿ ಮನನ ಮಾಡಬೇಕು. **'ತತ್ರ ಪ್ರತ್ಯಯೈಕತಾನತಾ ಧ್ಯಾನಂ'**- ಎನ್ನುವ ಪತಂಜಲಿ ಯೋಗ ಸೂತ್ರ ಈ ಭಾವವನ್ನೇ ಸೂಚಿಸುತ್ತದೆ.

*'ಸಮುದ್ಧರ್ತಾ'*-'ಉದ್ಧರ್ತಾ' ಎಂದು ಹೇಳದೆ 'ಸಮುದ್ಧರ್ತಾ' ಎಂದು ಹೇಳಿರುವುದರಿಂದ ಅಂತಹ ಭಗವದುಪಾಸಕರನ್ನು ತಾನು ಏನೂ ಕೊರತೆಯಿಲ್ಲದೆ ಉದ್ಧರಿಸುವೆನು ಎಂದು ಹೇಳಿದಂತಾಗಿದೆ.

*'ಮೃತ್ಯು ಸಂಸಾರ ಸಾಗರಾತ್'*- ಸಂಸಾರವನ್ನು ಸಮುದ್ರಕ್ಕೆ ಹೋಲಿಸಲಾಗಿದೆ. ಸಂಸಾರವು ಸಮುದ್ರದ ಹಾಗೆ ಭಯಂಕರವಾಗಿ ಕಾಮಾದಿ ದುಷ್ಟ ಜಲ ಜಂತುಗಳಿಂದ ಕೂಡಿರುವುದೇ ಅಲ್ಲದೆ ಅಪಾರವಾಗಿರುವುದರಿಂದ ಅದನ್ನು ಸಾಗರಕ್ಕೆ ಹೋಲಿಸಲಾಗಿದೆ. ಆದರೆ ಸಂಸಾರ ಸುಖವು ಮಹಾ ಆನಂದಕರವೆಂದು, ಅದು ಅಭಿಲಾಷಿಸಲು ಸರಿಯಾದದ್ದೇ ಎಂದು ಕೆಲವರ

ಅಭಿಪ್ರಾಯ. ಅಜ್ಞಾನದಿಂದ ಮಾತ್ರ ಅವರು ಹಾಗೆ ಹೇಳುವರು. ಸಂಸಾರ ಸ್ಥಿತಿಯ ವಾಸ್ತವಸ್ವರೂಪ ಅವರಿಗಿನ್ನೂ ಅರ್ಥವಾಗಿಲ್ಲವೆಂದು ತಿಳಿಯಬೇಕು. ಅದರ ಯಥಾರ್ಥರೂಪವನ್ನು ಭಗವಂತನು ಹೊರಗೆಡಹಿದ್ದಾನೆ. ಅದನ್ನು 'ಮೃತ್ಯು'ಸಂಸಾರವೆಂದು ಆತನು ವರ್ಣಿಸಿದನು. ಅಂದರೆ ಮರಣ ರೂಪವಾದದ್ದು, ಹುಟ್ಟು ಸಾವುಗಳಿಂದ ಕೂಡಿದ್ದು ಎಂದರ್ಥ. ಆದ್ದರಿಂದ ಈ ಮೃತ್ಯು ಸಂಸಾರಕ್ಕೆ ಅಂಟಿಕೊಂಡಿರುವ ಜೀವಿಯು ಅಮರತ್ವ ಸಿದ್ಧಿಗಾಗಿ ಅಮೃತ ಸ್ವರೂಪನಾದ ಭಗವಂತನನ್ನು (ಸಚ್ಚಿದಾನಂದ ಪ್ರಭುವನ್ನು) ತಪ್ಪದೆ ಆಶ್ರಯಿಸಬೇಕು.

'ನ ಚಿರಾತ್'- ಎಂದು ಹೇಳಿರುವುದರಿಂದ ಭಗವದಾಶ್ರಯದಿಂದ ಜೀವಿಯು ಶೀಘ್ರವಾಗಿ ವಿಮುಕ್ತಿ ಹೊಂದುವನೆಂದು ಹೇಳಲಾಗಿದೆ (ದೃಷ್ಟಾಂತ-ಗಜೇಂದ್ರ, ಪ್ರಹ್ಲಾದ, ಅಂಬರೀಶ, ದ್ರೌಪದಿ)

ಪ್ರ : ಈ ಸಂಸಾರ ಸ್ಥಿತಿ ಎಂತಹುದು?

ಉ : ಅದು ೧) ಸಮುದ್ರದ ಹಾಗೆ ಭಯಂಕರವಾಗಿ, ಅಪಾರವಾದುದು ೨) ಮೃತ್ಯುರೂಪವಾದುದು (ಜನನ ಮರಣಗಳಿಂದ ಕೂಡಿರುವುದು)

ಪ್ರ : ಅದರಿಂದ ಹೇಗೆ ತಪ್ಪಿಸಿಕೊಳ್ಳಲು ಸಾಧ್ಯ?

ಉ : ಭಗವಂತನನ್ನು ಆಶ್ರಯಿಸುವುದರಿಂದ ಆತನೇ ಜೀವಿಯನ್ನು ಸಂಸಾರಸಾಗರದಿಂದ ಉದ್ಧರಿಸುವನು.

ಪ್ರ : ಭಗವಂತನನ್ನು ಹೇಗೆ ಆಶ್ರಯಿಸಬೇಕು?

ಉ : ೧) ಸಮಸ್ತ ಕರ್ಮಗಳನ್ನು ಅವನಿಗೆ (ಭಗವಂತನಿಗೆ) ಅರ್ಪಿಸಿ ೨) ಆತನನ್ನೇ ಪರಮಗತಿಯೆಂದು ಭಾವಿಸಿ ೩) ಚಿತ್ತವನ್ನು ಆತನಲ್ಲಿಯೇ ನಿಲ್ಲಿಸಿ ೪) ಆತನನ್ನೇ ಚಿಂತಿಸುತ್ತ (ಧ್ಯಾನಿಸುತ್ತ) ಉಪಾಸಿಸಬೇಕು.

ಪ್ರ : ಹಾಗೆ ಧ್ಯಾನಿಸುವವರನ್ನು ಯಾವಾಗ ಆತನು ಉದ್ಧರಿಸುವನು?

ಉ : ಕೂಡಲೇ (ನಚಿರಾತ್)

**ಅ||** ಭಗವತ್ಪ್ರಾಪ್ತಿಗಾಗಿ ಕೆಲವು ಸಾಧನಕ್ರಮಗಳನ್ನು ನಾಲ್ಕು ಶ್ಲೋಕಗಳ ಮೂಲಕ ತಿಳಿಯಪಡಿಸುತ್ತಾ ಮೊಟ್ಟ ಮೊದಲಿಗೆ ಮನಸ್ಸನ್ನು ತನ್ನಲ್ಲಿ ನಿಲ್ಲಿಸಬೇಕೆಂದು ಬೋಧಿಸುತ್ತಾನೆ-

**೮ ಮಯ್ಯೇವ ಮನ ಆಧತ್ಸ್ವ ಮಯಿ ಬುದ್ಧಿಂ ನಿವೇಶಯ**
**ನಿವಸಿಷ್ಯಸಿ ಮಯ್ಯೇವ ಅತ ಊರ್ಧ್ವಂ ನ ಸಂಶಯಃ**

**ಅರ್ಥ:** ಮಯಿ ಏವ=ನನ್ನಲ್ಲಿ; ಮನಃ=ಮನಸ್ಸನ್ನು; ಆದತ್ಸ್ವ=ಸ್ಥಿರವಾಗಿ ನಿಲ್ಲಿಸು; ಮಯಿ=ನನ್ನಲ್ಲಿ; ಬುದ್ಧಿಂ=ಬುದ್ಧಿಯನ್ನು; ನಿವೇಶಯ=ಪ್ರವೇಶಿಸುವಂತೆ ಮಾಡು; ಅತಃ ಊರ್ಧ್ವಂ=ಆ ನಂತರ; ಮಯಿ ಏವ=ನನ್ನಲ್ಲೇ; ನಿವಸಿಷ್ಯಸಿ= ನಿವಸಿಸುತ್ತೀಯೇ; ಸಂಶಯಃ=(ಈ ವಿಷಯದಲ್ಲಿ) ಸಂದೇಹವು; ನ=ಇಲ್ಲ.

**ತಾ||** ನನ್ನಲ್ಲೇ ಮನಸ್ಸನ್ನು ಸ್ಥಿರವಾಗಿ ನಿಲ್ಲಿಸು. ನನ್ನಲ್ಲಿಯೇ ಬುದ್ಧಿಯನ್ನು ಪ್ರವೇಶಿಸುವಂತೆ ಮಾಡು. ನಂತರ ನನ್ನಲ್ಲಿಯೇ ನಿವಾಸ ಮಾಡುವೆ, ಇದರಲ್ಲಿ ಸಂದೇಹವಿಲ್ಲ.

**ವ್ಯಾಖ್ಯೆ:** ವಿದ್ಯಾರ್ಥಿಗೆ ಉಪಾಧ್ಯಾಯನು ಹೇಗೆ ಪಾಠವನ್ನು ಬೋಧಿ ಸುವನೋ, ಆ ಪ್ರಕಾರವಾಗಿ ಭಗವಂತನು ಅರ್ಜುನನಿಗೆ ಒಂದಾದ ಮೇಲೊಂದರಂತೆ ಅನೇಕ ಸಾಧನೆಗಳನ್ನು ತಿಳಿಸುತ್ತಿದ್ದಾನೆ. ಪ್ರಪ್ರಥಮವಾಗಿ ಮನಸ್ಸನ್ನು, ಬುದ್ಧಿಯನ್ನು ಭಗವಂತನಲ್ಲಿ ಸ್ಥಿರವಾಗಿ ನಿಲ್ಲಿಸುವಂತೆ ಅಪ್ಪಣೆ ಕೊಟ್ಟನು. ಇದು ಮೊದಲ ಪಾಠ. ಮನಸ್ಸು ಒಂದನ್ನು ನಿಲ್ಲಿಸಿದರೆ ಸಾಲದೆ! ಬುದ್ಧಿಯನ್ನೂ ಅದರೊಂದಿಗೆ ಏಕೆ ಜೋಡಿಸಬೇಕು? ಎಂದು ಪ್ರಶ್ನಿಸಿದರೆ ಬುದ್ಧಿ ನಿಶ್ಚಯವನ್ನುಂಟುಮಾಡುವುದರಿಂದ ಅದು ಇಲ್ಲದಿದ್ದರೆ ಮನಸ್ಸು ಸಂಕಲ್ಪವಿಕಲ್ಪಗಳಿಂದ ಕೂಡಿದುದಾಗಿ ಚಂಚಲವಾಗಿರುವುದು. ಮನಸ್ಸು ಸಂಕಲ್ಪಿಸುವುದು. ಬುದ್ಧಿ ನಿಶ್ಚಯಿಸುವುದು. ಆದ್ದರಿಂದ ಭಗವದ್ವಿಷಯದಲ್ಲಿ ದೃಢವಾದ ನಿಶ್ಚಯ ಮಾಡುವುದು ಬುದ್ಧಿಯೇ ಆದುದರಿಂದ ಅದನ್ನೂ ಕೂಡ ಮನಸ್ಸಿನೊಂದಿಗೆ ಸೇರಿಸಿ ಹೇಳಲಾಗಿದೆ. ಹಾಗೆ ಮನೋ ಬುದ್ಧಿಗಳೆರಡನ್ನು ಇತರ ವಿಷಯವಸ್ತುಗಳ ಮೇಲೆ ಪ್ರವೇಶಿಸ ಬಿಡದೆ, ಭಗವಂತನಲ್ಲಿಯೇ ಸಂಲಗ್ನವಾಗಿರುವಂತೆ ಪ್ರಯತ್ನಿಸಬೇಕು. ಹಾಗೆ ಮಾಡಿದಲ್ಲಿ ಇನ್ನು ಮನುಷ್ಯನು ಧ್ಯೇಯವಸ್ತುವಾದ ಆ ಪರಮಾತ್ಮನಲ್ಲಿಯೇ ಸದಾ ನಿವಸಿಸುವನು. ಆಹಾ! ಎಂತಹ ವಿಶೇಷ ಸ್ಥಾನದಲ್ಲಿ ಆತ ತನ್ನ ನಿವಾಸವನ್ನು ಪಡೆಯುವನು! ಉಪ್ಪು ಕಲ್ಲು ಸಮುದ್ರದಲ್ಲಿ ಕರಗಿ ಹೋದಂತೆ ಮನಸ್ಸು ನಿರಂತರವಾಗಿ ಯಾವುದನ್ನು ಕುರಿತು ಧ್ಯಾನಿಸುವುದೋ, ಯಾವುದರಲ್ಲಿ ಸಂಲಗ್ನವಾಗಿರುವುದೋ ಅದರಲ್ಲಿಯೇ ಲಯಹೊಂದಿ ಆ ಆಕಾರವಾಗಿಯೇ ರೂಪುಗೊಳ್ಳುತ್ತದೆ. ಆದ್ದರಿಂದ ಅನವರತವಾಗಿ ಬ್ರಹ್ಮದಲ್ಲಿರುವ ಮನಸ್ಸು ಕ್ರಮವಾಗಿ ಆ ದೈವಾಕಾರವನ್ನು ಹೊಂದುವುದು. ಅದು ಮೋಕ್ಷ. ದೇವರಲ್ಲಿ ನಿವಾಸ ಮಾಡುವುದೆಂದರೂ ಇದೇ. ಈ ವಿಷಯದಲ್ಲಿ ಯಾವ ಸಂದೇಹವೂ ಇಲ್ಲವೆಂದು, ಇದು ಪರಮಸತ್ಯವೆಂದು ಭಗವಂತನು ನುಡಿದಿರುವನು. ಆದ್ದರಿಂದ ಸಾಧಕರು ತಮ್ಮ ಮನಸ್ಸನ್ನು ಅನ್ಯತ್ರ ಹೋಗಬಿಡದೆ ಧ್ಯಾನಾದಿಗಳ ದ್ವಾರ ಪ್ರಯತ್ನ ಪೂರ್ವಕವಾಗಿ ಭಗವಂತನಲ್ಲಿ ನಿಲ್ಲಿಸಿದರೆ ಇನ್ನು ತನ್ನ ಮೋಕ್ಷದ ವಿಷಯದಲ್ಲಿ ಸಂಶಯಕ್ಕೆ ಅವಕಾಶವಿಲ್ಲವೆಂದು ಸ್ಪಷ್ಟವಾಗುತ್ತದೆ.

'ನ ಸಂಶಯಃ' - 'ಈ ವಿಷಯದಲ್ಲಿ ಸಂಶಯವಿಲ್ಲ' ಎಂದು ಸಾಕ್ಷಾತ್ ಭಗವಂತನೇ ಹೇಳಿರುವುದರಿಂದ ಇನ್ನು ಸಾಧಕರಿಗೆ ಈ ವಾಕ್ಯಗಳ ಮೇಲೆ ಎಷ್ಟು ವಿಶ್ವಾಸವಿರಬೇಕೆನ್ನುವುದನ್ನು ಊಹಿಸಿಕೊಳ್ಳಬಹುದು.

'ಮಯಿ ಏವ'- (ನನ್ನಲ್ಲೇ), ಇಲ್ಲಿ 'ಏವ' ಪದಪ್ರಯೋಗ ಮಾಡಿರುವುದರಿಂದ, ದೈವವನ್ನು ಬಿಟ್ಟು ಬೇರೆ ಯಾವುದರ ಮೇಲೆಯೂ ದೃಷ್ಟಿಯನ್ನು ಹಾಯಬಿಡಬಾರದು (ಮನಸ್ಸನ್ನು ನಿಲ್ಲಿಸಬಾರದು)ಎಂದು ಭಾವ.

ಪ್ರ : ಮನಸ್ಸು, ಬುದ್ಧಿಯನ್ನು ಎಲ್ಲಿಡಬೇಕು?

ಉ : ಭಗವಂತನಲ್ಲಿ

ಪ್ರ : ಹಾಗಿಡುವುದರಿಂದ ಪ್ರಯೋಜನವೇನು?

ಉ : ಆಗ ಭಗವಂತನಲ್ಲಿಯೇ ಆತನು ನಿವಾಸ ಹೊಂದುವನು (ಇದರಲ್ಲಿ ಯಾವ ಸಂಶಯವೂ ಇಲ್ಲ)

**ಅ||** ಒಂದು ವೇಳೆ ಮನಸ್ಸು ದೈವದಲ್ಲಿ ಸ್ಥಿರವಾಗಿ ನಿಲ್ಲದಿದ್ದರೆ ಆಗ ಏನು ಮಾಡಬೇಕೆನ್ನುವುದನ್ನು ಹೇಳುತ್ತಿದ್ದಾನೆ.

**೯ ಅಥ ಚಿತ್ತಂ ಸಮಾಧಾತುಂ ನ ಶಕ್ನೋಷಿ ಮಯಿ ಸ್ಥಿರಂ**
**ಅಭ್ಯಾಸ ಯೋಗೇನ ತತೋ ಮಾಮಿಚ್ಛಾಪ್ತುಂ ಧನಂಜಯ**

**ಅರ್ಥ:** ಧನಂಜಯ=ಓ ಅರ್ಜುನಾ! ಅಥ=ಇನ್ನೂ (ಒಂದು ವೇಳೆ);

ಚಿತ್ತಂ=ಮನಸ್ಸನ್ನು; ಮಯಿ=ನನ್ನಲ್ಲಿ; ಸ್ಥಿರಂ=ಸ್ಥಿರವಾಗಿ; ಸಮಾಧಾತುಂ= ನಿಲ್ಲಿಸಲು; ನ ಶಕ್ನೋಷಿ=ಸಾಧ್ಯವಾಗದೇ ಇದ್ದರೆ; ತತಃ=ಆ ನಂತರ; ಅಭ್ಯಾಸಯೋಗೇನ=ಅಭ್ಯಾಸವೆನ್ನುವ ಯೋಗದಿಂದ; ಮಾಂ=ನನ್ನನ್ನು; ಆಪ್ತುಂ=ಹೊಂದಲು; ಇಚ್ಛ=ಕೋರುವುದು (ಪ್ರಯತ್ನಿಸುವುದು).

**ತಾ॥** ಓ ಅರ್ಜುನಾ! ಒಂದು ವೇಳೆ ಆ ಪ್ರಕಾರವಾಗಿ ಮನಸ್ಸನ್ನು ನನ್ನಲ್ಲಿ ಸ್ಥಿರವಾಗಿ ನಿಲ್ಲಿಸಲು ನಿನಗೆ ಸಾಧ್ಯವಾಗದಿದ್ದರೆ, ಆಗ ಅಭ್ಯಾಸಯೋಗದಿಂದ ನನ್ನನ್ನು ಹೊಂದಲು ಪ್ರಯತ್ನಿಸು (ಅಭ್ಯಾಸದಿಂದ ಆ ಸ್ಥಿತಿಯನ್ನು ಹೇಗಾದರೂ ಸಾಧಿಸಬೇಕೆಂದು ಭಾವ).

**ವ್ಯಾಖ್ಯೆ:** ಮೊದಲು ತಿಳಿಸಿದ ಸಾಧನೆಯನ್ನು ಮಾಡಲಾರದವರಿಗೆ ಭಗವಂತನು ಮತ್ತೆ ಕೆಲವು ಪರ್ಯಾಯ (ಪ್ರತ್ಯಾಮ್ನಾಯ) ಪದ್ಧತಿಗಳನ್ನು ಬೋಧಿಸುತ್ತಿದ್ದಾನೆ. ಆಹಾ! ಭಕ್ತರ ಹಾಗು ಸಾಧಕರ ಮೇಲೆ ಸರ್ವೇಶ್ವರನಿಗೆ ಎಷ್ಟು ಕರುಣೆ! ಮನಸ್ಸಿನಿಂದಲೇ ಬಂಧ, ಮನಸ್ಸಿನಿಂದಲೇ ಮೋಕ್ಷ* ಜೀವಿಗೆ ಉಂಟಾಗುತ್ತದೆ. ಆದ್ದರಿಂದ ಮೋಕ್ಷ ಹೊಂದಲು ಆ ಮನಸ್ಸನ್ನು ಯಾವುದೋ ಒಂದು ವಿಧದಿಂದ ಅಧಿಷ್ಠಾನವಾದ ಪರಮಾತ್ಮನಲ್ಲಿ (ದೈವದಲ್ಲಿ) ಲೀನವಾಗುವಂತೆ ಮಾಡಬೇಕು. ಈ ಕಾರಣದಿಂದಲೇ ಗೀತಾಚಾರ್ಯನು ಮನಸ್ಸು ಒಂದು ವೇಳೆ ಸುಲಭವಾಗಿ ದೈವದಲ್ಲಿ ಸ್ಥಿರ ಹೊಂದದೆ ಇದ್ದರೆ ಅಭ್ಯಾಸದಿಂದ ಹೇಗಾದರೂ ಮಾಡಿ ಅದನ್ನು ಸ್ಥಿರಗೊಳಿಸಲು ಪ್ರಯತ್ನ ಮಾಡಬೇಕೆಂದು (ಅದು ಬಿಟ್ಟರೆ ಮೋಕ್ಷಕ್ಕೆ ಬೇರದಾರಿಯಿಲ್ಲವೆಂದು) ತಿಳಿಸುತ್ತಿದ್ದಾನೆ. ಪ್ರತಿಯೊಬ್ಬರೂ ಯಾವುದೋ ರೀತಿಯಲ್ಲಿ ತಮ್ಮ ಮನಸ್ಸನ್ನು ಬಹಿರ್ಮುಖವಾಗಿ ಬಿಡದೆ, ದೃಶ್ಯ ವಿಷಯಗಳ ಮೇಲೆ ಹೊರಳದಂತೆ ನೋಡಿ, ಆತ್ಮದಲ್ಲಿ (ದೈವದಲ್ಲಿ) ಸ್ಥಾಪಿಸಬೇಕು. ಒಂದು ವೇಳೆ ಪ್ರಾರಂಭ ಸ್ಥಿತಿಯಲ್ಲಿ ಮನಸ್ಸನ್ನು ಧ್ಯೇಯದಲ್ಲಿ ಸ್ಥಿರವಾಗಿ ನಿಲ್ಲಿಸಲು ಸಾಧ್ಯವಾಗದೇ ಹೋದರೆ, ಅಭ್ಯಾಸದಿಂದ ಮೆಲ್ಲ ಮೆಲ್ಲಗೆ ಹೇಗಾದರೂ ಆ ಸ್ಥಿತಿಯನ್ನು ಸಾಧಿಸಲೇ ಬೇಕು. ಮನಸ್ಸು ಆತ್ಮದಲ್ಲಿ ಲಯಿಸಿ ಆತ್ಮರೂಪದಲ್ಲಿ ಸ್ಥಿರವಾಗುವುದೇ ಮೋಕ್ಷವಾಗಿರುವುದರಿಂದ ಆ ಸ್ಥಿತಿಯನ್ನು ಪ್ರತಿಯೊಬ್ಬರೂ ಅಭ್ಯಾಸದಿಂದ ಸಾಧಿಸಬೇಕು. 'ಯತೋ ಯತೋ ನಿಶ್ಚರತಿ..... (೬-೨೬)' ಎಂದು ಆರನೆಯ ಅಧ್ಯಾಯದಲ್ಲಿ ಭಗವಂತನು ತಿಳಿಸಿದ ರೀತಿಯಲ್ಲಿ ಚಪಲ ಮನಸ್ಸನ್ನು ನಿಧಾನವಾಗಿ ಒಲಿಸಿಕೊಂಡು ಆತ್ಮದಲ್ಲಿ (ದೈವದಲ್ಲಿ) ಸ್ಥಾಪಿಸಬೇಕು. ಇಂತಹ ಅಭ್ಯಾಸವನ್ನು ಕುರಿತೇ ಈ ಶ್ಲೋಕದಲ್ಲಿ ಹೇಳಲಾಗಿದೆ.

'ಅಭ್ಯಾಸ ಯೋಗೇನ'- ಈ ಅಭ್ಯಾಸವೆನ್ನುವ ಯೋಗವು ಕರ್ಮಯೋಗ, ಜ್ಞಾನಯೋಗ, ಭಕ್ತಿಯೋಗ, ಧ್ಯಾನಯೋಗಾದಿಗಳೆಲ್ಲವುಗಳಲ್ಲಿ ಕೂಡಿರಬೇಕು. ೬ನೆಯ ಶ್ಲೋಕದಲ್ಲಿ ತಿಳಿಸಲ್ಪಟ್ಟ ಅನನ್ಯ ಯೋಗವೂ, ಈ ಶ್ಲೋಕದಲ್ಲಿ ತಿಳಿಸಲ್ಪಟ್ಟ ಈ ಅಭ್ಯಾಸಯೋಗವು ಎಲ್ಲಾ ಯೋಗಗಳಿಗೂ ಆವಶ್ಯಕವಾಗಿವೆ. ಇವು ಸೇರಿದಾಗ ಮಾತ್ರ ಬೇರೆಯ ಯೋಗಗಳೆಲ್ಲವೂ ಅಭಿವೃದ್ಧಿ ಹಾಗೂ ವಿಕಾಸವನ್ನು ಹೊಂದಬಲ್ಲವು.

ಕೆಲವು ಸಾಧಕರು ಗುರುಗಳ ಬಳಿಗೆ ಹೋಗಿ 'ಅಯ್ಯಾ' ಧ್ಯಾನಕಾಲದಲ್ಲಿ ನನ್ನ ಮನಸ್ಸು ದೈವದಲ್ಲಿ ಸ್ಥಿರವಾಗಿ ನಿಲ್ಲುವುದಿಲ್ಲವಲ್ಲಾ? ಏನು ಮಾಡಬೇಕು'? ಎಂದು ಕೇಳುವರು. ಅದಕ್ಕೆ ಪ್ರತ್ಯುತ್ತರವಾಗಿ ಭಗವಂತನು ಈ ಶ್ಲೋಕದಲ್ಲಿ ತಿಳಿಸಿರುವುದನ್ನೇ ಗುರುಗಳು ಹೇಳುವರು. 'ಮಕ್ಕಳೇ ಮನಸ್ಸು ನಿಲ್ಲದಿದ್ದರೆ ಅಭ್ಯಾಸದಿಂದ ಹೇಗಾದರೂ ನಿಲ್ಲುವಂತೆ ಮಾಡಿಕೊಳ್ಳಿ, ಬೇರೆ ದಾರಿಯಿಲ್ಲ' ಎಂದು ಬೋಧಿಸುವರು. ಮನೋ ನಿಗ್ರಹವನ್ನು ಕುರಿತು ೬ನೆಯ ಅಧ್ಯಾಯದಲ್ಲಿ **'ಅಭ್ಯಾಸೇನತು ಕೌಂತೇಯ ವೈರಾಗ್ಯೇಣ ಚ ಗೃಹ್ಯತೇ'** ಎನ್ನುವ ವಾಕ್ಯದ ಮೂಲಕ ಭಗವಂತನು ಈ ಅಭ್ಯಾಸವನ್ನೇ ಒತ್ತಿ ಹೇಳಿರುವನು. ಆದ್ದರಿಂದ ಪ್ರತಿಯೊಬ್ಬರೂ, ಒಂದು ಪಕ್ಷ ಧ್ಯಾನಕಾಲದಲ್ಲಿ ಮನಸ್ಸು ಸ್ಥಿರವಾಗಿ ನಿಲ್ಲದಿದ್ದರೆ ನಿರುತ್ಸಾಹ ಪಡದೆ ಭಗವಂತನು ಬೋಧಿಸಿದ ರೀತಿಯಲ್ಲಿ ಅಭ್ಯಾಸದಿಂದ ಹೇಗಾದರೂ ಅದನ್ನು ಸ್ಥಿರವಾಗುವಂತೆ ಮಾಡಬೇಕು. ಮೋಕ್ಷಕ್ಕೆ ಬೇರೆ ಮಾರ್ಗವಿಲ್ಲ.

ಪ್ರ : ಮನಸ್ಸನ್ನು ದೈವದಲ್ಲಿ ಸ್ಥಿರವಾಗಿ ನಿಲ್ಲಿಸಬೇಕೆಂದು ಹೇಳಿರುವುದು ಸರಿಯೇ ಆದರೆ ಮನಸ್ಸು ಹಾಗೆ ನಿಲ್ಲದಿದ್ದರೆ ಏನು ಮಾಡುವುದು?

ಉ : ಅಭ್ಯಾಸದಿಂದ ಆ ಸ್ಥಿತಿಯನ್ನು ಹೇಗಾದರೂ ಸಾಧಿಸಬೇಕು.

**ಅ॥** ಒಂದು ವೇಳೆ ಅಂತಹ ಅಭ್ಯಾಸವೂ ಕೂಡ ಸಾಧ್ಯವಾಗದಿದ್ದರೆ ಏನು ಮಾಡಬೇಕೆನ್ನುವುದನ್ನು ಹೇಳುತ್ತಿದ್ದಾನೆ.

**೧೦ ಅಭ್ಯಾಸೇಽಪ್ಯಸಮರ್ಥೋಽಸಿ ಮತ್ಕರ್ಮಪರಮೋ ಭವ**
**ಮದರ್ಥಮಪಿ ಕರ್ಮಾಣಿ ಕುರ್ವನ್ ಸಿದ್ಧಿಮವಾಪ್ಸ್ಯಸಿ**

**ಅರ್ಥ:** ಅಭ್ಯಾಸೇ ಅಪಿ=ಅಭ್ಯಾಸ ಮಾಡುವುದರಲ್ಲಿ; ಅಸಮರ್ಥಃ ಅಪಿ =ಸಮರ್ಥನಾಗದೆ ಹೋದರೆ; ಮತ್ಕರ್ಮಪರಮಃ=ನನ್ನ ಸಂಬಂಧವಾದ ಕರ್ಮಗಳನ್ನಾಚರಿಸುವುದರಲ್ಲಿ ಆಸಕ್ತಿಯುಳ್ಳವನು; ಭವ=ಆಗುವುದು; ಮದರ್ಥಂ=ನನಗಾಗಿ; ಕರ್ಮಾಣಿ=ಕರ್ಮಗಳನ್ನು; ಕುರ್ವನ್ ಅಪಿ= ಮಾಡುತ್ತಿದ್ದರೂ ಕೂಡ; ಸಿದ್ಧಿಂ=(ಮೋಕ್ಷ)ಸಿದ್ಧಿಯನ್ನು; ಅವಾಪ್ಸ್ಯಸಿ= ಹೊಂದಬಲ್ಲೆ

**ತಾ॥** ಒಂದು ವೇಳೆ ಅಭ್ಯಾಸದಲ್ಲಿಯೂ ನೀನು ಅಸಮರ್ಥನಾದರೆ, ನನ್ನ ಸಂಬಂಧವಾದ ಕರ್ಮಗಳನ್ನು ಮಾಡುವುದರಲ್ಲಿ ಆಸಕ್ತಿಯನ್ನು ತೋರಿಸು, ಹಾಗೆ ನನಗಾಗಿ ಕರ್ಮಗಳನ್ನು ಮಾಡಿದರೂ ಸಹ ನೀನು ಮೋಕ್ಷಸಿದ್ಧಿಯನ್ನು ಹೊಂದಬಲ್ಲೆ.

**ವ್ಯಾಖ್ಯೆ:** ಒಂದು ವೇಳೆ ಮೇಲೆ ತಿಳಿಸಿದ ಚಿತ್ತೈಕಾಗ್ರತಾಭ್ಯಾಸವನ್ನೂ ಕೂಡ ಕೆಲವರು ಮಾಡಲು ಅಸಮರ್ಥರಾದರೆ ಅಂತಹವರು ಮುಕ್ತಿ ಹೊಂದಲು ಮತ್ತೊಂದು ಪ್ರತ್ಯಾಮ್ನಾಯ ಪದ್ಧತಿಯನ್ನು ಭಗವಂತನು ಕರುಣೆಯಿಂದ ಸೂಚಿಸುತ್ತಿದ್ದಾನೆ. ಮನೋನಿಶ್ಚಲತೆಯನ್ನು ಸಾಧಿಸಲು ಶಕ್ಯವಿಲ್ಲದವನು ಕ್ರಮವಾಗಿ ದೈವ ಕಾರ್ಯಗಳಲ್ಲಿ, ಧರ್ಮಕಾರ್ಯಗಳಲ್ಲಿ ಪರೋಪಕಾರ ಕ್ರಿಯೆಗಳಲ್ಲಿ, ಪರಪ್ರಾಣಿಗಳಿಗೆ ಹಿತವನ್ನುಂಟುಮಾಡುವ ಕಾರ್ಯಗಳಲ್ಲಿ ಆಸಕ್ತಿ ಹೊಂದಿ, ಅವುಗಳನ್ನು ನಿಷ್ಕಾಮವಾಗಿ ಆಚರಿಸುತ್ತಾ ಬರಬೇಕು. ಜಪ, ಪ್ರಾರ್ಥನೆ, ಕೀರ್ತನೆ, ಭಜನೆ, ಪೂಜೆ, ವ್ರತ ಮುಂತಾದುವುಗಳನ್ನು ಭಗವತ್ಪ್ರೀತ್ಯರ್ಥವಾಗಿ ಮಾಡುತ್ತಿರಬೇಕು. **'ಮತ್ಕರ್ಮಪರಮೋಭವ'** ಎನ್ನುವುದರ ಅರ್ಥ ಇದೇ ಆಗಿದೆ. ಅದರಿಂದ ಚಿತ್ತವು ಶುದ್ಧವಾಗಿ ಕ್ರಮವಾಗಿ ಜ್ಞಾನವು ಅಂಕುರಿಸಿ ಅದರಿಂದ ಮನುಜನು ಮೋಕ್ಷ ಸಿದ್ಧಿಯನ್ನು ಪಡೆಯಬಲ್ಲನು. ಈ ಪ್ರಕಾರವಾದ ಕರ್ಮಾಚರಣೆಯು ಯಾರಿಗೆ ಮುಕ್ತಿಯನ್ನು ಪ್ರಸಾದಿಸುವುದು? ಅತಿ ಸೂಕ್ಷ್ಮವಾದ ಮನಸ್ಸನ್ನು ಅದರ ಸಂಕಲ್ಪವನ್ನು ಹತೋಟಿಯಲ್ಲಿಡಲು ಸಾಧ್ಯವಾಗದಿದ್ದವರಿಗೆ, ಈ ಕರ್ಮಮಾರ್ಗವು ಎಷ್ಟೋ ಸುಲಭವಾಗಿರುವುದು. ಆದರೆ 'ಮದರ್ಥಂ' ಎಂದು ಭಗವಂತನು ಹೇಳಿದನೇ

* ಮನ ಏವ ಮನುಷ್ಯಾಣಾಂ ಕಾರಣಂ ಬಂಧಮೋಕ್ಷಯೋಃ (ಅಮೃತಬಿಂದು ಉಪ-೧೦)

ಹೊರತು 'ತ್ವದರ್ಥಂ' ಎಂದು ಹೇಳಲಿಲ್ಲ. ಆದ್ದರಿಂದ ಆಯಾ ಕ್ರಿಯೆಗಳನ್ನು ದೈವ ಪ್ರೀತ್ಯರ್ಥವಾಗಿ ಮಾಡಬೇಕೇ ಹೊರತು ಸ್ವಾರ್ಥಕ್ಕಲ್ಲ. ನಿಷ್ಕಾಮವಾಗಿ ಆಚರಿಸಬೇಕೇ ಹೊರತು, ಸಕಾಮವಾಗಲ್ಲ.

'ಕುರ್ವನ್ ಸಿದ್ಧಿ ಮವಾಪ್ಸ್ಯಸಿ'- ಎನ್ನುವ ವಾಕ್ಯದಿಂದ ಕರ್ಮ ಯೋಗವೂ ಸಹ ಮೋಕ್ಷಸಿದ್ಧಿಗೆ ಹೇತುವಾಗುವುದೆಂದು ಸ್ಪಷ್ಟವಾಗುತ್ತದೆ. ಹೇಗೆಂದರೆ ಆ ಕರ್ಮಗಳನ್ನು ನಿಷ್ಕಾಮವಾಗಿ (ದೈವ ಪ್ರೀತ್ಯರ್ಥವಾಗಿ) ಆಚರಿಸಲ್ಪಟ್ಟಿದ್ದೇ ಆದರೆ ಚಿತ್ತಶುದ್ಧಿಯನ್ನೂ ತದ್ವಾರ ಜ್ಞಾನವನ್ನೂ, ನಂತರ ಮೋಕ್ಷಸಿದ್ಧಿಯನ್ನೂ ಅವು ಉಂಟುಮಾಡಬಲ್ಲವು. ಆದರೆ ನಿಷ್ಕಾಮಾಚರಣೆಗೆ ಮಾತ್ರವೇ ಇಂತಹ ಶಕ್ತಿಯಿರುವುದೆಂದು, ಸಕಾಮಕರ್ಮಾಚರಣೆಗೆ ಅಲ್ಲವೆಂದು ತಿಳಿಯಬೇಕು.

ಪ್ರ : ಮನಸ್ಸನ್ನು ಪರಮಾತ್ಮನಲ್ಲಿ ನಿಲ್ಲಿಸುವುದಕ್ಕೆ ಬೇಕಾದ ಅಭ್ಯಾಸವನ್ನು ಕೂಡ ಕೆಲವರಿಗೆ ಮಾಡಲು ಸಾಧ್ಯವಾಗದಿದ್ದರೆ ಅಂತಹವರು ಮುಕ್ತಿ ಹೊಂದುವ ಮಾರ್ಗವೇನು?

ಉ : ಅವರು ದೈವ, ಧರ್ಮ, ಪರಹಿತ ಕಾರ್ಯಗಳನ್ನು, ನಿಷ್ಕಾಮ ಬುದ್ಧಿಯಿಂದ ಆಚರಿಸುತ್ತ ಬಂದರೆ ಕ್ರಮವಾಗಿ ಮೋಕ್ಷವು ಸಿದ್ಧಿಸುವುದು.

**ಅ॥** ಹಾಗೆ ದೈವ ಸಂಬಂಧವಾದ ಕರ್ಮಾಚರಣೆಯನ್ನೂ ಮಾಡಲು ಸಾಧ್ಯವಾಗದಿದ್ದರೆ ಆಗ ಮುಕ್ತಿ ಹೊಂದುವ ಉಪಾಯವೇನು ಎನ್ನುವುದನ್ನು ತಿಳಿಸುತ್ತಿದ್ದಾನೆ-

೧೧ **ಅಥೈತದಪ್ಯಶಕ್ತೋಽಸಿ ಕರ್ತುಂ ಮದ್ಯೋಗಮಾಶ್ರಿತಃ**
**ಸರ್ವಕರ್ಮಫಲತ್ಯಾಗಂ ತತಃ ಕುರು ಯತಾತ್ಮವಾನ್**

**ಅರ್ಥ:** ಅಥ=ಇನ್ನೂ; ಮದ್ಯೋಗಂ=ನನ್ನನ್ನು ಕುರಿತ ಯೋಗವನ್ನು; ಆಶ್ರಿತಃ=ಆಶ್ರಯಿಸಿದವನಾಗಿ; ಏತತ್ ಅಪಿ=ಇದನ್ನೂ ಸಹ; ಕರ್ತುಂ= ಆಚರಿಸಲು; ಅಶಕ್ತಃ ಅಸಿ (ಚೇತ್)=ಸಮರ್ಥನಾಗದಿದ್ದರೆ; ತತಃ=ನಂತರ; ಯತಾತ್ಮವಾನ್=ನಿಯಮಿತ ಮನಸ್ಸುಳ್ಳವನಾಗಿ (ಮನಸ್ಸನ್ನು ಸ್ವಾಧೀನಪಡಿಸಿಕೊಂಡವನಾಗಿ); ಸರ್ವಕರ್ಮಫಲತ್ಯಾಗಂ=ಸಮಸ್ತ ಕರ್ಮಗಳ ಫಲವನ್ನು ತ್ಯಜಿಸುವುದು, ಕುರು=ಮಾಡು.

**ತಾ॥** ಇದನ್ನೂ ಸಹ ಮಾಡಲು ಅಶಕ್ತನಾದ ಪಕ್ಷದಲ್ಲಿ, ನಿಯಮಿತ ಮನಸ್ಸುಳ್ಳವನಾಗಿ, ನನ್ನ ಯೋಗವನ್ನವಲಂಬಿಸಿದವನಾಗಿ ಸಮಸ್ತ ಕರ್ಮಗಳ ಫಲವನ್ನು ತ್ಯಾಗಮಾಡು.

**ವ್ಯಾಖ್ಯೆ:** ಮೇಲೆ ತಿಳಿಸಿದ ಮೂರು ಸಾಧನೆಗಳನ್ನು ಮಾಡಲು ಸಾಧ್ಯವಾಗದವರಿಗೆ ಸುಲಭವಾದ ಮತ್ತೊಂದು ಪದ್ಧತಿಯನ್ನು ಭಗವಂತನು ಇಲ್ಲಿ ಸೂಚಿಸಿದ್ದಾನೆ. ಮುಂಜಾನೆ ಎದ್ದು ರಾತ್ರಿ ಮಲಗುವವರೆಗೆ ಮನುಜನು ಅನೇಕ ಕಾರ್ಯಗಳನ್ನು ಮಾಡುವನು, ಯಾವುದೇ ಕಾರ್ಯವನ್ನು ಮಾಡಬೇಕಾದಾಗ ದೈವಭಾವದಿಂದ ತಾನು ನಿಮಿತ್ತಮಾತ್ರನೆಂದು ಭಾವಿಸಿಕೊಂಡು, ಸಮಸ್ತ ಜಗತ್ಕ್ರಿಯೆಗಳನ್ನು ಆ ಸರ್ವೇಶ್ವರನೇ ನಡೆಸುತ್ತಿದ್ದಾನೆಂದು ನಂಬಿ ತಾನು ಮಾಡುವ ಆ ಸಮಸ್ತಕಾರ್ಯಗಳ ಫಲಗಳನ್ನು ಆ ಸರ್ವೇಶ್ವರನಿಗೇ ಅರ್ಪಿಸಬೇಕು, ಅಂದರೆ ಫಲಾಪೇಕ್ಷೆಯನ್ನು ಬಿಟ್ಟು ಈಶ್ವರಾರ್ಪಣ ಬುದ್ಧಿಯಿಂದ ಆಯಾ ಕರ್ಮಗಳನ್ನು ಮಾಡಬೇಕು. ಸಮಸ್ತ ಕಾರ್ಯಗಳೆಂದು ಹೇಳಿರುವುದರಿಂದ ಅಸತ್ ಕಾರ್ಯಗಳು, ಪಾಪಕಾರ್ಯಗಳು ಕೂಡ ಎಂದು ಯಾರೂ ಭಾವಿಸಬಾರದು. ಏಕೆಂದರೆ ಅವು ಶಾಸ್ತ್ರಗಳಿಂದ ಮೊದಲೇ ನಿಷಿದ್ಧವಾಗಿವೆ. ಆದ್ದರಿಂದ ಅವುಗಳನ್ನು ಯಾರೂ ಆಚರಿಸಬಾರದು. ದಾನಧರ್ಮಗಳು, ವ್ರತಪೂಜಾದಿಗಳು. ನಿತ್ಯನೈಮಿತ್ತಿಕ ಕರ್ಮಗಳನ್ನು ಮತ್ತು ತನ್ನ ದಿನಚರಿಯ ವಿವಿಧ ಕ್ರಿಯೆಗಳನ್ನು ಆಚರಿಸುವಾಗ ದೈವಭಾವವುಂಟಾಗಿ ಆಯಾ ಕರ್ಮಗಳ ಫಲಗಳನ್ನು, ಈಶ್ವರಾರ್ಪಣ (ಇಲ್ಲವೆ ಕೃಷ್ಣಾರ್ಪಣ, ರಾಮಾರ್ಪಣ) ಮಾಡಬೇಕು. ಮೇಲೆ ತಿಳಿಸುತ್ತಾ ಬಂದಿರುವ ಪದ್ಧತಿಗಳಲ್ಲಿ ಒಂದಕ್ಕಿಂತ ಮತ್ತೊಂದು ಉತ್ತರೋತ್ತರ ಸುಲಭವಾಗಿರುವುದರಿಂದ ಸಾಧಕರಲ್ಲಿ ಯಾರಿಗೆ ಯಾವ ಸಾಧನೆ ಅನುಕೂಲವೋ ಅವುಗಳನ್ನು ಅವರವರ ಮನಸ್ಸಿನ ತತ್ವವನ್ನು ಹಿಡಿದು, ಬೇಕಾದದ್ದನ್ನು ಆರಿಸಿಕೊಂಡು, ಸಾಧಿಸಬಹುದು. ಕೊನೆಯಲ್ಲಿ ಹೇಳಲ್ಪಟ್ಟ ಈ ಸಾಧನೆ ಅಂದರೆ ತಾನು ಮಾಡುವ ಸಮಸ್ತ ಕಾರ್ಯಗಳ ಫಲಗಳನ್ನು ಭಗವದರ್ಪಣೆ ಮಾಡುವುದು ಎನ್ನುವುದನ್ನು ಸಾಮಾನ್ಯರೂ ಸಹ ಆಚರಿಸಿ ಮುಕ್ತಿ ಹೊಂದಬಹುದು. ತಾನು ನಡೆಯುವಾಗ ಅದು ಭಗವಂತನ ಪ್ರದಕ್ಷಿಣೆ ಎಂದು ಭಾವಿಸಬೇಕು. ಮಾತನಾಡುತ್ತಿರುವಾಗ ಅದು ದೈವಸಂಕೀರ್ತನೆ ಎಂದು ಭಾವಿಸಬೇಕು. ಈ ಪ್ರಕಾರವಾಗಿ ಯಾವ ಕೆಲಸ ಮಾಡುತ್ತಿದ್ದರೂ ಭಗವತ್‌ಸ್ಮೃತಿಯಿಂದ **'ಮಾಮನುಸ್ಮರ ಯುಧ್ಯಚ'** ಎಂದು ಗೀತಾಚಾರ್ಯನು ತಿಳಿಸಿದ ರೀತಿಯಲ್ಲಿ ಅಂತಹ ದೈವ ಸಂಸ್ಕಾರದಿಂದ, ತಾನು ಆಚರಿಸುವ ಆಯಾ ಕಾರ್ಯಗಳ ಫಲಗಳನ್ನು ಈಶ್ವರಾರ್ಪಣೆ ಮಾಡುವುದರಿಂದ, ಕ್ರಮವಾಗಿ ಪಾಪವು ನಶಿಸಿ, ಚಿತ್ತ ಶುದ್ಧಿಯುಂಟಾಗಿ ಜ್ಞಾನೋದಯವಾಗಿ ಮೋಕ್ಷವು ಲಭಿಸಬಲ್ಲದು.

ಆದರೆ ಈ ಸ್ಥಿತಿ ಉಂಟಾಗಲು ಅಂದರೆ ಸರ್ವಕರ್ಮಫಲತ್ಯಾಗ ಮಾಡಲು ಮನೋನಿಗ್ರಹ, ಮನೋನಿಯಮ ಶಕ್ತಿ, ಪ್ರಯತ್ನ ಅವಶ್ಯಕವಾಗಿದೆ. ಆದ್ದರಿಂದಲೇ 'ಯತಾತ್ಮವಾನ್' ಎಂದು ಹೇಳಲ್ಪಟ್ಟಿದೆ. ಹಿಡಿದ ಧ್ಯೇಯ ಬಿಡದೆ ಪ್ರಯತ್ನಪೂರ್ವಕವಾಗಿ ಮನಸ್ಸನ್ನು ನಿಗ್ರಹಿಸಿ (ಸ್ವಾಧೀನಪಡಿಸಿಕೊಂಡು) ಸರ್ವಕರ್ಮಫಲ ತ್ಯಾಗವೆನ್ನುವ ಆ ಸುಲಭತರವಾದ ಪರಮಾತ್ಮ ಸಾಧನೆಯನ್ನು ಜೀವಿಗಳು ಅಮಲುಗೊಳಿಸಿಕೊಳ್ಳಬೇಕು.

ಪ್ರ : ಹಿಂದಿನ ಶ್ಲೋಕದಲ್ಲಿ ತಿಳಿಸಿದ ಹಾಗೆ ದೈವಕಾರ್ಯಗಳನ್ನು ಆಚರಿಸಲು ಶಕ್ತಿಯಿಲ್ಲದವರಿಗೆ ಮುಕ್ತಿ ಹೊಂದಲು ಬೇರೆ ಯಾವುದಾದರೂ ಉಪಾಯವಿದೆಯೇ, ಇದ್ದರೆ ಅದು ಏನು?

ಉ : ಇದೆ, ನಿಯಮಿತ ಚಿತ್ತನಾಗಿ, ತಾನು ಮಾಡುವ ಸಮಸ್ತ ಕಾರ್ಯಗಳ ಫಲಗಳನ್ನು ಈಶ್ವರಾರ್ಪಣ ಮಾಡುತ್ತಿರಬೇಕು. ಅದು ಸರಿಯಾದ ಉಪಾಯ.

**ಅ॥** ಕರ್ಮಫಲತ್ಯಾಗದ ವಿಶಿಷ್ಟತೆಯನ್ನು ನಿರೂಪಿಸುತ್ತಿದ್ದಾನೆ-

೧೨ **ಶ್ರೇಯೋ ಹಿ ಜ್ಞಾನಮಭ್ಯಾಸಾತ್ ಜ್ಞಾನಾದ್ಧ್ಯಾನಂ ವಿಶಿಷ್ಯತೇ**
**ಧ್ಯಾನಾತ್ಕರ್ಮಫಲತ್ಯಾಗಸ್ತ್ಯಾಗಾಚ್ಛಾಂತಿರ ನಂತರಮ್**

**ಅರ್ಥ:** ಅಭ್ಯಾಸಾತ್=(ವಿವೇಕವಿಲ್ಲದ) ಅಭ್ಯಾಸಕ್ಕಿಂತ; ಜ್ಞಾನಂ=(ಶಾಸ್ತ್ರಜನ್ಯ) ಜ್ಞಾನ; ಶ್ರೇಯಃ ಹಿ=ಶ್ರೇಷ್ಠವಾದುದಲ್ಲವೇ! ಜ್ಞಾನಾತ್=(ಶಾಸ್ತ್ರಜನ್ಯ) ಜ್ಞಾನಕ್ಕಿಂತ; ಧ್ಯಾನಂ=ಧ್ಯಾನವು; ವಿಶಿಷ್ಯತೇ=ಶ್ರೇಷ್ಠವಾದುದಾಗಿದೆ; ಧ್ಯಾನಾತ್=ಧ್ಯಾನ (ಧ್ಯಾನಕಾಲದಲ್ಲಿ ಮಾತ್ರ ನಿರ್ವಿಷಯವಾಗಿರುವ ಮನಃಸ್ಥಿತಿ)ಕ್ಕಿಂತ; ಕರ್ಮಫಲತ್ಯಾಗಃ=ಕರ್ಮಫಲವನ್ನು ಬಿಡುವುದು (ಪ್ರವೃತ್ತಿಯಲ್ಲಿ ಮನಸ್ಸು ವಿಷಯ ದೋಷವಿಲ್ಲದೇ ಇರುವುದು); (ವಿಶಿಷ್ಯತೇ=ಶ್ರೇಷ್ಠವಾದುದಾಗಿದೆ); ತ್ಯಾಗಾತ್ ಅನಂತರಂ=(ಅಂತಹ ಕರ್ಮಫಲ) ತ್ಯಾಗ ಮಾಡಿದ ನಂತರ; ಶಾಂತಿಃ=ಶಾಂತಿಯು; ಭವತಿ=ಉಂಟಾಗುತ್ತದೆ.

**ತಾ॥** (ವಿವೇಕವಿಲ್ಲದ) ಅಭ್ಯಾಸಕ್ಕಿಂತ (ಶಾಸ್ತ್ರಜನ್ಯ) ಜ್ಞಾನವು ಶ್ರೇಷ್ಠವಾದುದಲ್ಲವೇ! (ಶಾಸ್ತ್ರಜನ್ಯ) ಜ್ಞಾನಕ್ಕಿಂತ ಧ್ಯಾನವು ಶ್ರೇಷ್ಠವಾದುದಾಗಿದೆ. ಧ್ಯಾನ (ಧ್ಯಾನಕಾಲದಲ್ಲಿ ಮಾತ್ರ ನಿರ್ವಿಷಯವಾಗಿರುವ ಮನಃ ಸ್ಥಿತಿ)ಕ್ಕಿಂತ ಕರ್ಮಫಲ ತ್ಯಾಗ (ಪ್ರವೃತ್ತಿಯಲ್ಲಿ ವಿಷಯ ದೋಷವಿಲ್ಲದಿರುವುದು) ಶ್ರೇಷ್ಠವಾದುದು. ಅಂತಹ ಕರ್ಮಫಲ ತ್ಯಾಗದಿಂದ ಶೀಘ್ರವಾಗಿ (ಚಿತ್ತ) ಶಾಂತಿ ಲಭಿಸುವುದು.

**ವ್ಯಾಖ್ಯೆ:** ಇಲ್ಲಿ ಅಭ್ಯಾಸವೆಂದು ಹೇಳಿರುವ ಕಡೆ ವಿವೇಕವಿಲ್ಲದ ಅಭ್ಯಾಸವೆಂದೂ, ಜ್ಞಾನವೆಂದು ಹೇಳಿರುವಲ್ಲಿ ಶಾಸ್ತ್ರ ಜನ್ಯ ಜ್ಞಾನವೆಂದೂ, ಧ್ಯಾನವೆಂದು ಹೇಳಿದಲ್ಲಿ ಅಸಂಪೂರ್ಣವಾದ ಧ್ಯಾನವೆಂದೂ ಅಂದರೆ ಧ್ಯಾನಕಾಲದಲ್ಲಿ ಮಾತ್ರ ವಿಷಯದೋಷವಿಲ್ಲದ ಧ್ಯಾನಾಭ್ಯಾಸ ಸ್ಥಿತಿಯೆಂದು ಗ್ರಹಿಸಬೇಕು.

'ಜ್ಞಾನಾದ್ಧ್ಯಾನಂ ವಿಶಿಷ್ಯತೇ'- 'ವಾಚಾ' ಜ್ಞಾನಕ್ಕಿಂತ ಅನುಭವಪೂರ್ವಕ ವಾದ ಜ್ಞಾನ ಉತ್ತಮವಾದುದು. ಜ್ಞಾನವಿಷಯಗಳನ್ನು ತದೇಕ ದೃಷ್ಟಿಯಿಂದ ಚಿಂತನೆ ಮಾಡುವುದೇ, ಅನುಭೂತಿ ಗೊಳಿಸಿಕೊಳ್ಳುವುದೇ ಧ್ಯಾನ. ಆದ್ದರಿಂದ 'ವಾಚಾ' ಜ್ಞಾನಕ್ಕಿಂತ, ಶಾಸ್ತ್ರಜನ್ಯ ಜ್ಞಾನಕ್ಕಿಂತ ಧ್ಯಾನವು ವಿಶೇಷವಾದುದೆಂದು ತಿಳಿಸಲಾಗಿದೆ,.

'ಧ್ಯಾನಾತ್ಕರ್ಮಫಲ ತ್ಯಾಗಃ'- ಕರ್ಮಫಲಗಳನ್ನು ತ್ಯಜಿಸುವವನ ಮನಸ್ಸು ಅಸಂಗವಾಗಿ ವಿಷಯ ದೋಷವಿಲ್ಲದೇ ಇರುವುದು, ಧ್ಯಾನಾಭ್ಯಾಸಿಗೆ ಧ್ಯಾನ ಕಾಲದಲ್ಲಿ ಮಾತ್ರ ಚಿತ್ತವು ನಿರ್ವಿಷಯವಾಗಿರುವುದು. ತ್ಯಾಗಿಗೆ ಯಾವಾಗಲೂ ಅಸಂಗವಾಗಿಯೇ ಇರುವುದು. ಆದ್ದರಿಂದಲೇ ಧ್ಯಾನಕ್ಕಿಂತ ಕರ್ಮಫಲತ್ಯಾಗವು ಶ್ರೇಷ್ಠವೆಂದು ಹೇಳಲಾಗಿದೆ. ಇದರಿಂದ ನಿಷ್ಕಾಮಕರ್ಮಯೋಗ ಎಷ್ಟು ಮಹಿಮೆಯುಳ್ಳದ್ದೋ ಸ್ಪಷ್ಟವಾಗುತ್ತದೆ. ಜನರಲ್ಲಿ ಅಧಿಕವಾಗಿ ನಿವೃತ್ತಿಗಿಂತ ಪ್ರವೃತ್ತಿ ಸಂಸ್ಕಾರವೇ ಹೆಚ್ಚಿಗೆ ಇರುವುದು. ಆದ್ದರಿಂದ ಅಂತಹವರು ಕರ್ಮಗಳನ್ನು ಆಚರಿಸುತ್ತ, ಕರ್ಮ ಫಲತ್ಯಾಗವನ್ನು ಅಭ್ಯಾಸ ಮಾಡಿಕೊಂಡಲ್ಲಿ ಅವರು ಧ್ಯಾನ ಹಾಗು ಜ್ಞಾನಾಭ್ಯಾಸಿಗಳಿಗಿಂತ ಉತ್ತಮ ಸ್ಥಾನವನ್ನು ಹೊಂದುವರು. ಮತ್ತೆ ಭಕ್ತಿ, ಧ್ಯಾನ, ಜ್ಞಾನಗಳಿಗೆ ಚಿತ್ತ ಶುದ್ಧಿಯು ಬಹಳ ಅವಶ್ಯಕ. ನಿಷ್ಕಾಮಕರ್ಮ ಯೋಗದಿಂದ, ಕರ್ಮಫಲತ್ಯಾಗದಿಂದ ಅದು ಲಭಿಸುತ್ತದೆ. ಆದ್ದರಿಂದ ಅದನ್ನು ಚೆನ್ನಾಗಿ ಅನುಷ್ಠಾನ ಮಾಡಿದಲ್ಲಿ ಮಾತ್ರವೇ, ಬುನಾದಿ ಗಟ್ಟಿಯಾಗಿದ್ದಲ್ಲಿ ಮಾತ್ರ ಮೇಲಿನ ಅಂತಸ್ತು ಸುಸ್ಥಿರವಾಗಿರುವ ಹಾಗೆ ಧ್ಯಾನ, ಜ್ಞಾನಾದಿಗಳೆಲ್ಲವೂ ಚೆನ್ನಾಗಿ ಅಭಿವೃದ್ಧಿ ಹೊಂದಬಲ್ಲವು. ಆದ್ದರಿಂದಲೇ ಭಗವಂತನು ಈ ಶ್ಲೋಕದಲ್ಲಿ ನಿಷ್ಕಾಮಕರ್ಮಯೋಗ (ಕರ್ಮಫಲತ್ಯಾಗ)ದ ಪ್ರಾಶಸ್ತ್ಯವನ್ನು ಹೊಗಳಿರುವನು.

'ತ್ಯಾಗಚ್ಛಾಂತಿರನನಂತರಂ'- ಕರ್ಮಫಲತ್ಯಾಗದಿಂದ, ಈಶ್ವರಾರ್ಪಣ ಬುದ್ಧಿಯಿಂದ ಚಿತ್ತಶುದ್ಧಿಯಾಗುವುದರಿಂದ, ಕೂಡಲೇ ಶಾಂತಿ ಉದಯಿಸುವುದು. ಕರ್ತೃತ್ವ ತ್ಯಾಗದಿಂದಲೇ, ಅಹಂಭಾವ ತ್ಯಾಗದಿಂದಲೇ, ದೋಷತ್ಯಾಗದಿಂದಲೇ, ಪ್ರಾಪಂಚಿಕ ವಿಷಯ ಸುಖತ್ಯಾಗದಿಂದಲೇ ಶಾಂತಿ ಲಭಿಸಬಲ್ಲದು. ಚಿತ್ತದಲ್ಲಿಯ ದೋಷ ತೊಲಗುವುದೇ ಶಾಂತಿಗೆ ಮಾರ್ಗ **(ತೇಷಾಂ ಶಾಂತಿಶ್ಶಾಶ್ವತೀ ನೇತರೇಷಾಂ)**; ಏಕೆಂದರೆ ನಿರ್ಮಲಚಿತ್ತದಲ್ಲಿ ಆತ್ಮ ಪ್ರತ್ಯಕ್ಷವಾಗುವುದು. ದುಃಖ ಭೂಯಿಷ್ಠವಾದ ಈ ಸಂಸಾರದಲ್ಲಿ ಪ್ರತಿಯೊಬ್ಬನೂ ಶಾಂತಿಯನ್ನು ಅಭಿಲಾಷಿಸುತ್ತಿದ್ದಾನೆ. ಆದರೆ ಆ ಶಾಂತಿ ಹೇಗೆ ಲಭ್ಯವಾಗುವುದೋ ತಿಳಿಯದವನಾಗಿದ್ದಾನೆ. 'ತ್ಯಾಗಾಚ್ಛಾಂತಿಃ'- ತ್ಯಾಗದಿಂದಲೇ ಶಾಂತಿ ಕೈಗೂಡುವುದೆಂದು ಭಗವಂತನು ಇಲ್ಲಿ ಸ್ಪಷ್ಟಪಡಿಸಿರುವನು. ಆದ್ದರಿಂದ ವಿಷಯ ಸುಖಗಳನ್ನು, ಕರ್ಮಫಲಗಳನ್ನು, ಮಮಕಾರವನ್ನು, ಅಹಂಭಾವವನ್ನು, ಕರ್ತೃತ್ವವನ್ನು ತ್ಯಾಗ ಮಾಡಿ ಪರಮಶಾಂತಿಯನ್ನು ಜೀವಿಯು ಅನುಭವಿಸವಂತಾಗಬೇಕು.

ಪ್ರ : ಕರ್ಮಫಲತ್ಯಾಗದ ಮಹಿಮೆ ಎಂತಹುದೋ ತಿಳಿಸುವುದು?

ಉ : ಅದು ವಿವೇಕದಿಂದ ಕೂಡಿದ ಅಭ್ಯಾಸಕ್ಕಿಂತ, (ಶಾಸ್ತ್ರಜನ್ಯ) ಜ್ಞಾನಕ್ಕಿಂತ, (ಧ್ಯಾನಕಾಲದಲ್ಲಿ ಮಾತ್ರ ನಿರ್ವಿಷಯ ಸ್ಥಿತಿ ಹೊಂದಿರುವ) ಧ್ಯಾನಕ್ಕಿಂತಲೂ ಶ್ರೇಷ್ಠವಾದುದು.

ಪ್ರ : ಶಾಂತಿ ಹೇಗೆ ಲಭಿಸುವುದು?

ಉ : (ಕರ್ಮಫಲ) ತ್ಯಾಗದಿಂದ

**ಆ॥** ಇಲ್ಲಿಯವರೆಗೆ ಭಕ್ತಿಯ ಅಂಗಗಳಾದ ವಿವಿಧ ಸಾಧನೆಗಳನ್ನು ಹೇಳಿ ಇನ್ನು ಏಳು ಶ್ಲೋಕಗಳ ಮೂಲಕ ಉತ್ತಮ ಭಕ್ತನ ಲಕ್ಷಣಗಳನ್ನು ಹೇಳುತ್ತಿದ್ದಾನೆ-

೧೩ **ಅದ್ವೇಷ್ಟಾ ಸರ್ವಭೂತಾನಾಂ ಮೈತ್ರಃ ಕರುಣ ಏವಚ**
**ನಿರ್ಮಮೋ ನಿರಹಂಕಾರಃ ಸಮದುಃಖಸುಖಃ ಕ್ಷಮೀ**
೧೪ **ಸಂತುಷ್ಟಸ್ಸತತಂ ಯೋಗೀ ಯತಾತ್ಮಾ ದೃಢನಿಶ್ಚಯಃ**
**ಮಯ್ಯರ್ಪಿತಮನೋಬುದ್ಧಿರ್ಯೋ ಮದ್ಭಕ್ತಸ್ಸ ಮೇ ಪ್ರಿಯಃ**

**ಅರ್ಥ:** ಸರ್ವಭೂತಾನಾಂ=ಸರ್ವಪ್ರಾಣಿಗಳಲ್ಲಿ; ಅದ್ವೇಷ್ಟಾ= ದ್ವೇಷವಿಲ್ಲದವನು; ಮೈತ್ರಃ=ಮಿತ್ರಭಾವವಿರುವವನು; ಕರುಣಃ ಏವ ಚ=ದಯೆಯುಳ್ಳವನು; ನಿರ್ಮಮಃ=ಮಮಕಾರವಿಲ್ಲದವನು; ನಿರಹಂಕಾರಃ=ಅಹಂಕಾರವಿಲ್ಲದವನು; ಸಮದುಃಖ ಸುಖಃ=ಸುಖದುಃಖಗಳಲ್ಲಿ ಸಮಭಾವವುಳ್ಳವನು; ಕ್ಷಮೀ= ಸಹನೆಯುಳ್ಳವನು; ಸತತಂ=ಯಾವಾಗಲೂ; ಸಂತುಷ್ಟಃ=ಸಂತೃಪ್ತಿಯಿಂದ ಕೂಡಿರುವವನು; ಯೋಗೀ=ಯೋಗಯುಕ್ತನಾದವನು (ದೈವದಲ್ಲಿ ಚಿತ್ತವನ್ನಿರಿಸಿ ರುವವನು); ಯತಾತ್ಮಾ=ನಿಯಮಿಸಲ್ಪಟ್ಟ ಮನಸ್ಸುಳ್ಳವನು (ಮನಸ್ಸನ್ನು ಸ್ವಾಧೀನ ಪಡಿಸಿಕೊಂಡವನು); ದೃಢನಿಶ್ಚಯಃ=ದೃಢನಿಶ್ಚಯವುಳ್ಳವನು; ಮಯಿ=ನನ್ನಲ್ಲಿ; ಅರ್ಪಿತ=ಸಮರ್ಪಿಸಲ್ಪಟ್ಟ; ಮನಃಬುದ್ಧಿ=ಮನಸ್ಸು, ಬುದ್ಧಿಯುಳ್ಳವನು; ಮದ್ಭಕ್ತಃ=ನನ್ನಲ್ಲಿ ಭಕ್ತಿಯಿರುವವನು; ಯಃ=ಯಾವನು (ಇರುವನೋ); ಸಃ=ಆತನು; ಮೇ=ನನಗೆ; ಪ್ರಿಯಃ=ಇಷ್ಟನು.

**ತಾ॥** ಸಮಸ್ತ ಪ್ರಾಣಿಗಳಲ್ಲಿ ದ್ವೇಷವಿಲ್ಲದವನು, ಮೈತ್ರಿ ಕರುಣೆಯುಳ್ಳವನು, ಅಹಂಕಾರ ಮಮಕಾರಗಳಿಲ್ಲದವನು, ಸುಖ ದುಃಖಗಳಲ್ಲಿ ಸಮಭಾವ ವಿರುವವನು, ಸಹನೆಯುಳ್ಳವನು, ಯಾವಾಗಲೂ ಸಂತೃಪ್ತಿಯಿಂದಿರುವವನು, ಯೋಗಯುಕ್ತನು, ಮನಸ್ಸನ್ನು ಸ್ವಾಧೀನಪಡಿಸಿಕೊಂಡವನು, ದೃಢವಾದ ನಿಶ್ಚಯವುಳ್ಳವನು, ನನ್ನಲ್ಲಿ ಸಮರ್ಪಿಸಲ್ಪಟ್ಟ ಮನೋಬುದ್ಧಿಗಳನ್ನು ಹೊಂದಿರು ವವನು, ನನ್ನಲ್ಲಿ ಭಕ್ತಿಯಿರುವವನು ಯಾವನೋ ಆತನು ನನಗೆ ಪ್ರಿಯನು.

**ವ್ಯಾಖ್ಯೆ:** ಎಂತಹವನು ತನಗೆ ಪ್ರಿಯನೋ ಭಗವಂತನು ಏಳು ಶ್ಲೋಕಗಳ ದ್ವಾರ ಹೇಳುತ್ತಿದ್ದಾನೆ. ೩೫ ಸುಗುಣಗಳನ್ನು ಹೇಳಿ 'ಇವು ಇರುವವನೇ ನನಗೆ ಪ್ರಿಯನು' ಎಂದು ಶ್ರೀ ಕೃಷ್ಣಪರಮಾತ್ಮನು ತಿಳಿಸುತ್ತಿದ್ದಾನೆ. ಈ ಗುಣಗಳೆಲ್ಲವೂ 'ಅದ್ವೇಷ್ಟಾ' ಎನ್ನುವ ಪದದಿಂದ ಪ್ರಾರಂಭವಾಗಿರುವುದರಿಂದ

ಇವು 'ಅದ್ವೇಷ್ಟೃತ್ವಾದಿ' ಗುಣಗಳು ಎಂದೇ ಪ್ರಸಿದ್ಧಿಯಾಗಿವೆ. ಈ ಮೂವತ್ತೈದೂ ಸಹ ಮೂವತ್ತೈದು ಪಾಠಗಳು ಇಲ್ಲವೆ ಪಾಠ್ಯವಿಷಯಗಳು (Subjects) ಆಗಿವೆ. ವಿದ್ಯಾರ್ಥಿ ಪರೀಕ್ಷೆಯಲ್ಲಿ ಎಲ್ಲಾ ಪಾಠ್ಯವಿಷಯಗಳಲ್ಲಿ ಉತ್ತೀರ್ಣವಾದಾಗ ಮಾತ್ರ ಮುಂದಿನ ತರಗತಿಗೆ ಹೋಗುವ ಅರ್ಹತೆ ಹೊಂದಿದ ಹಾಗೆ ಈ ಮೂವತ್ತೈದು ಸುಗುಣಗಳನ್ನು ಪೂರ್ಣವಾಗಿ ಹೊಂದಿರುವವನು ಮಾತ್ರ ಭಗವಂತನಿಗೆ ಪ್ರೀತಿ ಪಾತ್ರನಾಗುವನು. ಇವು ಇಲ್ಲದೆ ಇರುವವನು ಭಗವತ್ಕೃಪೆಗೆ ಪಾತ್ರನಾಗದೇ ಉಳಿಯುವುದರಿಂದ ಆತನು ಈ ಜನನ ಮರಣ ಸಂಸಾರ ಪ್ರವಾಹದಲ್ಲಿ ಸಿಕ್ಕಿ ಹೊರಳಾಡುತ್ತಲೇ ಇರುವನು. ದುಃಖದಿಂದ ಮುಕ್ತನಾಗಬೇಕೆಂದರೆ, ಭಗವದನುಗ್ರಹವನ್ನು ಸಂಪಾದಿಸಬೇಕು. ಆತನ ಅನುಗ್ರಹ ಈ ಸಲ್ಲಕ್ಷಣಗಳನ್ನು, ಸದ್ಗುಣಗಳನ್ನು ಯಾವನು ಹೊಂದಿರುವನೋ ಅವನ ಮೇಲೆಯೇ ಇರುವುದು.

**ಸಮೋಽಹಂ ಸರ್ವಭೂತೇಷು ನ ಮೇ ದ್ವೇಷ್ಯೋಽಸ್ತಿ ನ ಪ್ರಿಯಃ**
**ಯೇ ಭಜಂತಿ ತು ಮಾಂ ಭಕ್ತ್ಯಾ ಮಯಿ ತೇ ತೇಷು ಚಾಪ್ಯಹಮ್(೯-೨೯)**

ಎಂದು ಭಗವಂತನು ಹೇಳಿದ ಹಾಗೆ ವಾಸ್ತವವಾಗಿ ಅವನಿಗೆ ಯಾರೊಬ್ಬರ ಮೇಲೆ ಪ್ರತ್ಯೇಕವಾಗಿ ಪ್ರೀತಿಯಾಗಲೀ, ದ್ವೇಷವಾಗಲೀ ಇಲ್ಲದೇ ಇದ್ದರೂ ಯಾರು ಆತನನ್ನು ಭಕ್ತಿಯಿಂದ ಸೇವಿಸುವರೋ ಅವರ ಮೇಲೆ ಆತನು ತನ್ನ ಅನುಗ್ರಹವನ್ನು ತೋರಿಸುವನು. ಅಂತಹ ಭಗವದನುಗ್ರಹದ ಮಹಿಮೆಯಿಂದ ಆತ್ಮಜ್ಞಾನವನ್ನು ತದ್ವಾರ ಮುಕ್ತಿಯನ್ನು ಆತನು ಹೊಂದೇ ತೀರುತ್ತಾನೆ. ಆದ್ದರಿಂದ ಮೋಕ್ಷವನ್ನು ಅಪೇಕ್ಷಿಸುವವರು, ಸಂಸಾರ ದುಃಖವನ್ನು ಅಂತ್ಯಗೊಳಿಸಿಕೊಳ್ಳಬೇಕೆನ್ನುವವರು, ಭಗವದನುಗ್ರಹವನ್ನು ಕೋರುವವರು ಈ ಅಧ್ಯಾಯದಲ್ಲಿ ತಿಳಿಸಲ್ಪಟ್ಟ ಈ ಭಕ್ತನ ಲಕ್ಷಣಗಳೆಲ್ಲವನ್ನೂ ಆಚರಿಸಬೇಕು.

ಅನೇಕರಿಗೆ ಭಗವಂತನ ಮೇಲೆ ಪ್ರೀತಿಯಿರುವುದು. ಆದರೆ ಅದು ಸಾಕಾಗುವುದಿಲ್ಲ. ಭಗವಂತನಿಗೆ ತನ್ನ ಮೇಲೆ ಪ್ರೀತಿಯುಂಟಾಗಿದೆಯೇ ಇಲ್ಲವೇ ಎಂದು ಪರೀಕ್ಷಿಸಿಕೊಳ್ಳುತ್ತಿರಬೇಕು. ದೇವರು ಜೀವಿಗೆ ಪ್ರಿಯನಾದರೂ, ದೇವರಿಗೆ ಜೀವಿಯು ಪ್ರಿಯನಾಗಿರುವನೇ ಎನ್ನುವುದನ್ನು ನೋಡುತ್ತಿರಬೇಕು ಅಂತಹ ಸ್ಥಿತಿ ಬಂದರೆ ಇನ್ನು ಜೀವಿಯು ಮುಕ್ತಿ ಹೊಂದಿದಂತೆಯೇ. ಆದರೆ ಭಗವಂತನು ತಾನು ಹೇಳಿದ ಈ ಸುಗುಣಗಳನ್ನು ಹೊಂದಿದವನನ್ನೇ ತನ್ನ ಪ್ರಿಯನನ್ನಾಗಿ ತೆಗೆದುಕೊಳ್ಳುವನೆಂದು **'ಯೋ ಮದ್ಭಕ್ತಃ ಸ ಮೇ ಪ್ರಿಯಃ'** ಮುಂತಾದ ವಾಕ್ಯಗಳಿಂದ ಇಲ್ಲಿ ತಿಳಿಸಿರುವನು. ಆದ್ದರಿಂದ ಜೀವಿಯು ಅವುಗಳನ್ನು ತಪ್ಪದೆ ಸಾಧಿಸಬೇಕು.

ಸಾಧ್ಯವಸ್ತುವಾದ ಪರಮಾತ್ಮನನ್ನು ಸೇರಬೇಕೆಂದರೆ ಸಾಧನೆಯಲ್ಲಿ ಚೆನ್ನಾಗಿ ಪರಿಣಿತರಾಗಿರಬೇಕು. ಗೀತಾಗ್ರಂಥವು ಸಾಧ್ಯ ವಸ್ತುವನ್ನು ಕುರಿತು ಸ್ವಲ್ಪ ಹೇಳಿ, ಸಾಧನೆಯನ್ನು ಕುರಿತು ವಿಶೇಷವಾಗಿ ಹೇಳುತ್ತಾ ಹೋಗಿದೆ. ಆದ್ದರಿಂದ ಇದನ್ನು ಅನುಷ್ಠಾನ ವೇದಾಂತ ಗ್ರಂಥವೆಂದು ಹೇಳುವರು. ಮೊಟ್ಟಮೊದಲು ಸ್ಥಿತಪ್ರಜ್ಞನ ಲಕ್ಷಣಗಳು, ನಂತರ ಅದ್ವೇಷ್ಟೃತ್ವಾದಿ ಭಕ್ತನ ಲಕ್ಷಣಗಳು, ನಂತರ ಅಮಾನಿತ್ವಾದಿ ಜ್ಞಾನಗುಣಗಳು, ಆಮೇಲೆ 'ಅಭಯಂ' ಇತ್ಯಾದಿ ದೈವೀಸಂಪತ್ತು ಲಕ್ಷಣಗಳು - ಈ ಪ್ರಕಾರವಾಗಿ ಅನುಷ್ಠಾನ ವೇದಾಂತವನ್ನು ಗೀತಾಚಾರ್ಯನು ಜನರಿಗೆ ಉಪದೇಶಿಸಿದನು.

ಆದ್ದರಿಂದ ಮುಮುಕ್ಷುಗಳು. ಅವುಗಳೆಲ್ಲವನ್ನೂ ತಪ್ಪದೆ ಆಚರಿಸಿ ಭಗವಂತನಿಗೆ ಪ್ರೀತಿ ಪಾತ್ರರಾಗಿ ಜನ್ಮ ಸಾರ್ಥಕತೆಯನ್ನು ಹೊಂದಬೇಕು.

'ಸರ್ವಭೂತಾನಾಂ' ಎಂದು ಹೇಳಿರುವುದರಿಂದ ಕೆಲವರ ಮೇಲೆ ದ್ವೇಷವಿಲ್ಲದೆ ಇದ್ದರೆ ಸಾಕಾಗುವುದಿಲ್ಲವೆಂದೂ, ಸಮಸ್ತ ಪ್ರಾಣಿಕೋಟಿಗಳ ಮೇಲೆ ದ್ವೇಷ ರಾಹಿತ್ಯವನ್ನು ಹೊಂದಿರಬೇಕೆಂದು ಬೋಧಿಸಿದಂತಾಗಿದೆ.

*'ಸಂತುಷ್ಟಃ ಸತತಂ'*- ಯಾವುದೋ ಸ್ವಲ್ಪ ಹೊತ್ತು ತೃಪ್ತಿ ಹೊಂದಿ ಮತ್ತೆ ವಿಷಯಾಸಕ್ತಿಯಿಂದ ಕೂಡಿರುವುದು ಸರಿಯಲ್ಲ. ಸದಾ ಸಂತೃಪ್ತನಾಗಿರಬೇಕು.

*'ದೃಢನಿಶ್ಚಯಃ'*- ದೈವ ವಿಷಯದಲ್ಲಾಗಲಿ, ಪ್ರಪಂಚ ವಿಷಯದಲ್ಲಾಗಲಿ ಸ್ಥಿರವಾದ ನಿರ್ಣಯಗಳನ್ನು ಮಾಡಿ ಸಾಧನೆಯಲ್ಲಿ ನಿಶ್ಚಯದಿಂದ ಹಾಗು ದೃಢವ್ರತಗಳಿಂದ ಕೂಡಿರಬೇಕು. ಶಾಸ್ತ್ರ ಮತ್ತು ಗುರುವಾಕ್ಯಗಳಲ್ಲಿ ದೃಢ ವಿಶ್ವಾಸವಿರಬೇಕು. ಇದು 'ಹೌದೋ, ಅಲ್ಲವೋ' ಎನ್ನುವ ಪರದಾಟ ಕೆಲಸಕ್ಕೆ ಬರುವುದಿಲ್ಲ 'ದೇವರಿದ್ದಾನೆ, ಆತನನ್ನು ನಾನು ಹೊಂದೇ ತೀರುತ್ತೇನೆ' ಎನ್ನುವ ದೃಢನಿಶ್ಚಯವನ್ನು ಹೊಂದಿರಬೇಕು. ಇಲ್ಲದೆ ಇದ್ದರೆ 'ಮಾಯೆ' ಚಪಲಮನಸ್ಕನನ್ನು ನಿರ್ವಿಣ್ಣನನ್ನಾಗಿ ಮಾಡುವುದು.

*'ಮಯ್ಯರ್ಪಿತ ಮನೋಬುದ್ಧಿಃ'*- ಮನಸ್ಸಿನೊಡನೆ ಬುದ್ಧಿಯನ್ನೂ ತನಗೆ ಅರ್ಪಿಸಬೇಕೆಂದು ಗೀತೆಯಲ್ಲಿ ಅಲ್ಲಲ್ಲಿ ಎಚ್ಚರಿಕೆಯನ್ನು ಕೊಡಲಾಗಿದೆ. ಏಕೆಂದರೆ ಮನಸ್ಸು ವಿಕಲಾತ್ಮಕವಾದದ್ದಾದರಿಂದ, ನಿಶ್ಚಯಾತ್ಮಕವಾದ ಬುದ್ಧಿ ಅದರೊಡನೆ ಸೇರದಿದ್ದರೆ ಆ ಮನಸ್ಸು ಚಂಚಲವಾಗಿಯೇ ಉಳಿದು ಲಕ್ಷ್ಯವನ್ನು ಸೇರಲು ಸಾಧ್ಯವಿಲ್ಲ.

**೧೫ ಯಸ್ಮಾನ್ನೋದ್ವಿಜತೇ ಲೋಕೋ ಲೋಕಾನ್ನೋದ್ವಿಜತೇ ಚ ಯಃ**
**ಹರ್ಷಾಮರ್ಷಭಯೋದ್ವೇಗೈರ್ಮುಕ್ತೋ ಯಸ್ಸ ಚ ಮೇ ಪ್ರಿಯಃ**

**ಅರ್ಥ:** ಯಸ್ಮಾತ್=ಯಾರಿಂದ; ಲೋಕಃ=ಪ್ರಪಂಚವು (ಜನರು); ನ ಉದ್ವಿಜತೇ= ಭಯವನ್ನು ಹೊಂದುವುದಿಲ್ಲವೋ ಲೋಕಾತ್ ಚ= ಲೋಕದಿಂದ ಕೂಡ; ಯಃ=ಯಾರು; ನ ಉದ್ವಿಜತೇ=ಭಯವನ್ನು ಹೊಂದುವುದಿಲ್ಲವೋ; ಯಃ=ಯಾರು; ಹರ್ಷ, ಅಮರ್ಷ, ಭಯ, ಉದ್ವೇಗೈಃ= ಸಂತೋಷ, ಕ್ರೋಧ, ಭಯ, ಮನೋವ್ಯಾಕುಲತೆ- ಎನ್ನುವುಗಳಿಂದ; ಮುಕ್ತಃ=ಬಿಡುಗಡೆ ಹೊಂದಿರುವನೋ; ಸಃ ಚ=ಆತನೇ; ಮೇ=ನನಗೆ; ಪ್ರಿಯಃ=ಇಷ್ಟವಾದವನು (ಪ್ರಿಯನು).

**ತಾ॥** ಯಾವನಿಂದ ಪ್ರಪಂಚವು (ಜನಗಳು) ಭಯವನ್ನು ಹೊಂದುವುದಿಲ್ಲವೋ, ಯಾವನು ಜನರಿಂದ (ಲೋಕದಿಂದ) ಭಯ ಬೀಳುವುದಿಲ್ಲವೋ, ಯಾವನು ಸಂತೋಷ ಕ್ರೋಧ, ಭಯ, ಮನೋವ್ಯಾಕುಲತೆ ಮುಂತಾದುವುಗಳಿಂದ ಬಿಡುಗಡೆ ಹೊಂದಿರುವನೋ ಅಂತಹವನು ನನಗೆ ಪ್ರಿಯನು.

**ವ್ಯಾಖ್ಯೆ:** *'ಲೋಕಾನ್ನೋದ್ವಿಜತೆ'*- ಸತ್ಯಮಾರ್ಗದಲ್ಲಿ ಚಲಿಸುವವನು ಪ್ರಪಂಚದ ನಿಂದಾಸ್ತುತಿಗಳಿಗೆ ಯಾವ ಮಾತ್ರವೂ ಬಗ್ಗಬಾರದು. ನಿರ್ಭಯವಾಗಿ ಸಾಗಿ ಹೋಗಬೇಕು (Be fearless); 'ವಿಗತಭೀಃ' ಎಂದು ಒಂದು ಸಾರಿ ಭಗವಂತನು ಅಪ್ಪಣೆ ಕೊಟ್ಟ ವಿಷಯವನ್ನು ಮತ್ತೆ ಮತ್ತೆ ಜ್ಞಾಪಿಸಿಕೊಳ್ಳಬೇಕು.

*'ಹರ್ಷಾಮರ್ಷ ಭಯೋದ್ವೇಗೈ'*- ಹರ್ಷವು (ಸಂತೋಷವು) ಒಳ್ಳೆಯದೇ ಆದರೂ ಆವೇಶಕ್ಕೆ ಒಳಗಾಗಿ ಹೊಗಳಿಕೆಗಳಿಗೆ ಉಬ್ಬಿಹೋಗುವುದು, ನಿಂದೆಗಳಿಗೆ ಕುಗ್ಗಿ ಹೋಗುವುದು ಸಲ್ಲದೆಂದೂ, ಆ ಪ್ರಕಾರವಾದ ದ್ವಂದ್ವಗಳಿಗೆ

ಒಳಗಾಗದೆ ನಿರ್ವಿಕಾರನಾಗಿ ಸಮಭಾವ ಹೊಂದಿರಬೇಕೆಂದು ತಿಳಿಸುವುದೇ ಆಗಿದೆ.

**೧೬. ಅನಪೇಕ್ಷ ಶ್ಶುಚಿರ್ದಕ್ಷ ಉದಾಸೀನೋ ಗತವ್ಯಥಃ**
**ಸರ್ವಾರಂಭ ಪರಿತ್ಯಾಗಿ ಯೋ ಮದ್ಭಕ್ತಸ್ಸ ಮೇ ಪ್ರಿಯಃ**

**ಅರ್ಥ:** ಅನಪೇಕ್ಷಃ=ಕೋರಿಕೆಗಳಿಲ್ಲದವನಾಗಿ; ಶುಚಿಃ=ಬಾಹ್ಯಾಭ್ಯಂತರ ಶುದ್ಧಿ ಉಳ್ಳವನು; ದಕ್ಷಃ=ಕಾರ್ಯಸಮರ್ಥನು (ಸಮಯ ಸ್ಫೂರ್ತಿಯಿರುವವನು): ಉದಾಸೀನಃ=ತಟಸ್ಥನು (ಯಾವುದರಲ್ಲಿಯೂ ಅಪೇಕ್ಷೆಯಿಲ್ಲದೆ ಇರುವವನು); ಗತವ್ಯಥಃ=ವ್ಯಥೆ (ದುಃಖ) ಇಲ್ಲದವನು; ಸರ್ವಾರಂಭ ಪರಿತ್ಯಾಗೀ=ಸಮಸ್ತ ಕಾರ್ಯಗಳಲ್ಲಿ ಕರ್ತೃತ್ವವಿಲ್ಲದವನು (ಇಲ್ಲವೆ ಸಮಸ್ತ ಕಾಮ್ಯ ಕರ್ಮಗಳನ್ನು, ಶಾಸ್ತ್ರ ನಿಷಿದ್ಧ ಕರ್ಮಗಳನ್ನು ತ್ಯಜಿಸಿದವನು) ಮದ್ಭಕ್ತಃ=ನನ್ನಲ್ಲಿ ಭಕ್ತಿಯಿರುವವನು; ಯಃ=ಯಾರು (ಆಗಿರುವನೋ); ಸಃ=ಆತನು; ಮೇ=ನನಗೆ; ಪ್ರಿಯಃ=ಪ್ರಿಯನು.

**ತಾ||** ಕೋರಿಕೆಯಿಲ್ಲದವನು, ಬಾಹ್ಯಭಂತರ ಶುದ್ಧಿಯುಳ್ಳವನು, ಕಾರ್ಯ ಸಮರ್ಥನು, (ಸಮಯ ಸ್ಫೂರ್ತಿಯಿರುವವನು), ತಟಸ್ಥನು ವ್ಯಥೆ(ದುಃಖ) ಇಲ್ಲದವನು, ಸಮಸ್ತ ಕಾರ್ಯಗಳಲ್ಲಿ ಕರ್ತೃತ್ವವನ್ನು ಬಿಟ್ಟವನು (ಇಲ್ಲವೆ ಸಮಸ್ತ ಕಾಮ್ಯಕರ್ಮಗಳನ್ನು, ಶಾಸ್ತ್ರ ನಿಷಿದ್ಧ ಕರ್ಮಗಳನ್ನು ತ್ಯಜಿಸಿದವನು) ನನ್ನಲ್ಲಿ ಭಕ್ತಿಯಿರುವವನು ಯಾವನಿರುವನೋ ಆತನು ನನಗೆ ಪ್ರಿಯನು.

**ವ್ಯಾಖ್ಯೆ:** *'ಶುಚಿರ್ದಕ್ಷಃ'*- ಗೀತಾಚಾರ್ಯನು ಶುಚಿತ್ವವನ್ನು ಇಲ್ಲಿ ಒತ್ತಿ ಹೇಳುತ್ತಿದ್ದಾನೆ. ಬಾಹ್ಯಾಭಂತರಗಳಲ್ಲಿ ಶುದ್ಧತೆಯನ್ನು ಕಾಪಾಡಿಕೊಳ್ಳಬೇಕು. ತನ್ನ ಶರೀರ, ವಸ್ತ್ರಗಳು, ಪರಿಸರ, ಮನಸ್ಸು-ಎಲ್ಲವೂ ನಿರ್ಮಲವಾಗಿರಬೇಕು. ಕೊಳೆಯಲ್ಲಿರುವವರಿಗೆ ಅಂತಹ ಭಾವನೆಗಳೇ ಉಂಟಾಗುತ್ತವೆ. ಆದ್ದರಿಂದ ದೇಹ ಹಾಗು ಮನೋ ನಿರ್ಮಲತೆ ಎರಡನ್ನೂ ಕಾಪಾಡಿಕೊಳ್ಳಬೇಕು.

*'ದಕ್ಷಃ'*- ಬಹು ಸಮರ್ಥನಾಗಿ, ಸಮಯ ಸ್ಫೂರ್ತಿಯಿಂದ ಕಾರ್ಯಗಳನ್ನು, ಆಧ್ಯಾತ್ಮಿಕ ಸಾಧನೆಗಳನ್ನು ನಿರ್ವಹಿಸುತ್ತ ಹೋಗಬೇಕು- ಅಜಾಗ್ರತೆಯಿಂದಿದ್ದರೆ ಮಾಯೆ ಬೀಳಿಸಿ ಬಿಡುವುದು.

*'ಗತವ್ಯಥಃ'*- ಭಕ್ತನಾದವನು ಎಲ್ಲದಕ್ಕೂ ಮೂಲಾಧಾರವಾದ ಭಗವಂತನನ್ನು ಆಶ್ರಯಿಸುತ್ತಿದ್ದಾನಾದ್ದರಿಂದ, ಇನ್ನು ಆತನು ವ್ಯಥೆಪಡಬೇಕಾದ ವಿಷಯ ಈ ಪ್ರಪಂಚದಲ್ಲಿ ಏನೂ ಇಲ್ಲ. ಆದ್ದರಿಂದ ವ್ಯಥೆಯನ್ನು, ದುಃಖವನ್ನು ಹತ್ತಿರ ಸೇರಿಸಬಾರದು.

*'ಸರ್ವಾರಂಭ ಪರಿತ್ಯಾಗಿ'*- ಕಾರ್ಯಗಳೆಲ್ಲವನ್ನೂ ಸಂಪೂರ್ಣವಾಗಿ ಪರಿತ್ಯಜಿಸುವವನು ಅಕರ್ಮಣಿ ಎಂದು ಅರ್ಥವಲ್ಲ. ದೈವೇತರಗಳಾದ ಸಮಸ್ತ ಕಾರ್ಯಗಳನ್ನು ತ್ಯಜಿಸಿದವನೆಂದೂ ಇಲ್ಲವೆ ಸಮಸ್ತ ಕಾರ್ಯಗಳಲ್ಲಿ ಕರ್ತೃತ್ವ ಬುದ್ಧಿ(doership)ಯನ್ನು ಬಿಟ್ಟವನು ಎಂದರ್ಥ. ಇಲ್ಲವೆ ಕಾಮ್ಯಕರ್ಮ ಗಳೆಲ್ಲವನ್ನೂ ತ್ಯಜಿಸಿದವನೆಂದೂ, ಅಥವ ಶಾಸ್ತ್ರ ನಿಷಿದ್ಧಗಳಾದ ಸಮಸ್ತ ಕರ್ಮಗಳನ್ನು ಬಿಟ್ಟವನು ಎಂದೂ ಹೇಳಬಹುದು. ಕಾರ್ಯದಲ್ಲಿ ಕರ್ತೃತ್ವವನ್ನು, ಸಂಗವನ್ನು ಬಿಟ್ಟವನು ಕಾರ್ಯವನ್ನು ಮಾಡಿದರೂ ಮಾಡದೆ ಇದ್ದಂತೆಯೇ. ಆದ್ದರಿಂದ ಅಂತಹವನು ಸರ್ವಕಾರ್ಯ ಪರಿತ್ಯಾಗಿಯೇ ಹೌದು.

**೧೭. ಯೋ ನ ಹೃಷ್ಯತಿ ನ ದ್ವೇಷ್ಟಿ ನ ಶೋಚತಿ ನ ಕಾಂಕ್ಷತಿ**
**ಶುಭಾಶುಭ ಪರಿತ್ಯಾಗೀ ಭಕ್ತಿಮಾನ್ ಯಃ ಸ ಮೇ ಪ್ರಿಯಃ**

**ಅರ್ಥ:** ಯಃ=ಯಾರು; ನ ಹೃಷ್ಯತಿ=ಸಂತೋಷಿಸುವುದಿಲ್ಲವೋ (ಉಬ್ಬಿ ಹೋಗುವುದಿಲ್ಲವೋ); ನ ದ್ವೇಷ್ಟಿ=ದ್ವೇಷಿಸುವುದಿಲ್ಲವೋ; ನ ಶೋಚತಿ= ಶೋಕವನ್ನು ಹೊಂದುವುದಿಲ್ಲವೋ; ನ ಕಾಂಕ್ಷತಿ= ಅಪೇಕ್ಷಿಸುವುದಿಲ್ಲವೋ; ಯಃ=ಯಾರು; ಶುಭಾಶುಭ ಪರಿತ್ಯಾಗಿ=ಶುಭಾಶುಭಗಳನ್ನು ತ್ಯಜಿಸಿರುವನೋ; ಸಃ ಭಕ್ತಿಮಾನ್=ಅಂತಹ ಭಕ್ತನು; ಮೇ=ನನಗೆ; ಪ್ರಿಯಃ=ಪ್ರಿಯನು.

**ತಾ||** ಯಾವನು (ಒಳ್ಳೆಯದಕ್ಕೆ) ಸಂತೋಷಪಡುವುದಿಲ್ಲವೋ, ದ್ವೇಷಿಸುವು ದಿಲ್ಲವೋ, ಶೋಕಿಸುವುದಿಲ್ಲವೋ, ಶುಭಾಶುಭಗಳನ್ನು ತ್ಯಜಿಸಿರುವನೋ ಅಂತಹ ಭಕ್ತನು ನನಗೆ ಪ್ರಿಯನು

**ವ್ಯಾಖ್ಯೆ:** *'ನಹೃಷ್ಯತಿ'*;- ಇಲ್ಲಿ ಸಂತೋಷಿಸುವುದಿಲ್ಲವೆಂದರೆ ಉಬ್ಬಿ ಹೋಗುವು ದಿಲ್ಲವೆಂದರ್ಥ. ಹರ್ಷ (ಸಂತೋಷ) ಒಳ್ಳೆಯದೇ ಆದರೂ ಅದು ಹರ್ಷಶೋಕ ಗಳೆನ್ನುವ ದ್ವಂದ್ವಗಳಲ್ಲಿ ಸೇರಿದೆಯಾದ್ದರಿಂದ, ಮನೋಧರ್ಮವಾಗಿರು ವುದರಿಂದ, ಪೂರ್ಣ ಮನೋಲಯಕ್ಕೆ, ನಿರಂತರಾತ್ಮಸ್ಥಿತಿಗೆ ಅದು ಒಂದು ಅಡಚಣೆಯೇ. ಆದ್ದರಿಂದ ಈ ಪ್ರಕಾರವಾಗಿ ಹೇಳಲಾಗಿದೆ.

*'ಶುಭಾಶುಭ ಪರಿತ್ಯಾಗೀ'*- ಇಲ್ಲಿ ಪಾಠಕರಿಗೆ ಒಂದು ಸಂದೇಹವು ಉದಯಿಸಬಹುದು. ಲೋಕದಲ್ಲಿ ಅಶುಭವನ್ನು ಬಿಡುವುದು ಧರ್ಮ, ಆದರೆ ಇಲ್ಲಿ ಅಶುಭಗಳ ಜೊತೆ ಶುಭಗಳನ್ನೂ ಕೂಡ ಪರಿತ್ಯಜಿಸುವವನು- ಎಂದು ಏಕೆ ಹೇಳಲಾಗಿದೆ? ಗೀತಾವಾಕ್ಯಗಳನ್ನು ಬಹಳ ಜಾಗ್ರತೆಯಾಗಿ ಅರ್ಥಮಾಡಿಕೊಳ್ಳಬೇಕಾಗಿದೆ. ಪೂರ್ವಾಪರಗಳನ್ನು ಸಮನ್ವಯಗೊಳಿಸಿ ಕೊಂಡು ಯಾವ ಸಂದರ್ಭದಲ್ಲಿ ಯಾವ ಭಾವದಿಂದ ಹೇಳಲ್ಪಟ್ಟಿದೆಯೋ ಗಮನಿಸಿ ಅರ್ಥವನ್ನು ಗ್ರಹಿಸಬೇಕು. ಇಲ್ಲಿ ಭಕ್ತಿಯ ಪರಾಕಾಷ್ಠ ಸ್ಥಿತಿಯನ್ನು ವರ್ಣಿಸಲಾಗಿದೆ. ಭಕ್ತಿಯ ಚರಮ ಸ್ಥಿತಿ, ಜ್ಞಾನ ಸ್ಥಿತಿ ಎರಡೂ ಒಂದೇ ಪರಿಪೂರ್ಣ ಭಕ್ತಿಯುಳ್ಳ ಮನುಜನು, ಜ್ಞಾನಿಯೂ ಒಂದೇ ದೈವಸ್ಥಿತಿಯಲ್ಲಿ, ಆತ್ಮಸ್ಥಿತಿಯಲ್ಲಿ ಸ್ಥಿತರಾಗಿರುವರು. ಅದು ಮನಸ್ಸನ್ನು, ಮನೋವಿಕಾರಗಳನ್ನು ದಾಟಿದ ಜೀವನ್ಮುಕ್ತ ಸ್ಥಿತಿ. ಅಂತಹ ಸ್ಥಿತಿಯಲ್ಲಿ ಶೀತೋಷ್ಣ ಸುಖ ದುಃಖ, ಹರ್ಷ ಶೋಕ, ಶುಭಾಶುಭಾದಿ ದ್ವಂದ್ವಗಳು ಇರುವುದಿಲ್ಲ. ಕೇವಲ ದೈವ ಭಾವ, ಆತ್ಮ ಭಾವ ಮಾತ್ರ ಇರುವುದು. ಆದ್ದರಿಂದಲೇ ಪರಿಪೂರ್ಣ ಭಕ್ತನನ್ನು ಶುಭಾಶುಭ ಪರಿತ್ಯಾಗಿ ಎಂದು ಕರೆದಿರುವನು. ಸಾಧಕನು ಮೊದಲು ಶುಭವನ್ನು (ಶುಭ ಕಾರ್ಯ, ಶುಭ ಸಂಕಲ್ಪಗಳನ್ನು) ಗ್ರಹಿಸಿ ತದ್ವಾರ ಅಶುಭವನ್ನು (ಅಶುಭ ಕಾರ್ಯ, ಅಶುಭ ಸಂಕಲ್ಪಗಳನ್ನು) ತ್ಯಜಿಸಿ ಹಾಕಬೇಕು. ನಂತರ ನಿಸ್ಸಂಕಲ್ಪಾತ್ಮಸ್ಥಿತಿಯಲ್ಲಿ, ಕೇವಲ ದೈವಸ್ಥಿತಿಯಲ್ಲಿ ಆ ಶುಭಸಂಕಲ್ಪಾದಿಗಳೂ ಕೂಡ ಅವಷ್ಯಕ್ಕೆ ಅವೇ ಕಳಚಿಕೊಂಡು ಹೋಗಿ ದೈವವಸ್ತು ಮಾತ್ರ ಉಳಿಯುವುದು. ಶುಭಾಶುಭ ಪರಿತ್ಯಾಗವೆನ್ನುವ ಪದದ ಭಾವವು ಇದೇ ಆಗಿದೆ. ಅಷ್ಟೇ ಅಲ್ಲದೆ, ಶುಭ ಹಾಗು ಪುಣ್ಯ ಕಾರ್ಯಗಳನ್ನು ತ್ಯಜಿಸಬೇಕೆಂದಲ್ಲ, ಸಾಧಕರು ಈ ವಿಷಯವನ್ನು ಜಾಗ್ರತೆಯಿಂದ ಗಮನಿಸಬೇಕು.

**೧೮ ಸಮಶ್ಶತ್ರೌ ಚ ಮಿತ್ರೇ ಚ ತಥಾ ಮಾನಾವಮಾನಯೋಃ**
**ಶೀತೋಷ್ಣ ಸುಖದುಃಖೇಷು ಸಮಸ್ಸಂಗವಿವರ್ಜಿತಃ**
**೧೯ ತುಲ್ಯನಿಂದಾಸ್ತುತಿರ್ಮೌನೀ ಸಂತುಷ್ಟೋ ಯೇನಕೇನಚಿತ್**
**ಅನಿಕೇತಃ ಸ್ಥಿರಮತಿರ್ಭಕ್ತಿಮಾನ್ಮೇ ಪ್ರಿಯೋ ನರಃ**

**ಅರ್ಥ:** ಶತ್ರೌ ಚ=ಶತ್ರುವಿನಲ್ಲಿಯೂ; ಮಿತ್ರೇ ಚ=ಮಿತ್ರನಲ್ಲಿಯೂ; ತಥಾ=ಹಾಗೆಯೇ; ಮಾನಾವಮಾನಯೋಃ=ಮಾನಾಪಮಾನಗಳಲ್ಲಿ; ಸಮಃ=ಸಮನಾಗಿರುವವನು; ಶೀತೋಷ್ಣ ಸುಖದುಃಖೇಷು= ಶೀತ, ಉಷ್ಣ,

ಸುಖದುಃಖ-ಇವುಗಳಲ್ಲಿ; ಸಮಃ=ಸಮನಾಗಿರುವವನು; ಸಂಗವಿವರ್ಜಿತಃ= ಯಾವುದರಲ್ಲಿಯೂ ಸಂಗ (ಆಸಕ್ತಿ, ಮನಸ್ಸಂಬಂಧ) ಇಲ್ಲದಿರುವವನು; ತುಲ್ಯನಿಂದಾಸ್ತುತಿಃ=ನಿಂದಾಸ್ತುತಿಗಳಲ್ಲಿ ಸಮನಾಗಿರುವವನು; ಮೌನಿ= ಮೌನದಿಂದ ಇರುವವನು (ಇಲ್ಲವೆ ಮನನಶೀಲನು); ಏನಕೇನ ಚಿತ್= ಇದ್ದದ್ದರಲ್ಲಿ (ಸಿಕ್ಕಿದ್ದರಿಂದ); ಸಂತುಷ್ಟಃ=ತೃಪ್ತಿ ಹೊಂದುವವನು; ಅನಿಕೇತಃ= ನಿರ್ದಿಷ್ಟವಾದ ನಿವಾಸ ಸ್ಥಾನವಿಲ್ಲದವನು (ಗೃಹಾದಿಗಳಲ್ಲಿ ಆಸಕ್ತಿಯಿಲ್ಲದವನು); ಸ್ಥಿರಮತಿಃ=ನಿಶ್ಚಯ ಬುದ್ಧಿಯುಳ್ಳವನು; ಭಕ್ತಿಮಾನ್=ಭಕ್ತಿಯುಳ್ಳವನು (ಆದ); ನರಃ=ಮನುಷ್ಯನು; ಮೇ=ನನಗೆ; ಪ್ರಿಯಃ=ಪ್ರಿಯನು.

**ತಾ||** ಶತ್ರು ಮಿತ್ರರಲ್ಲಿ, ಮಾನಾಪಮಾನಗಳಲ್ಲಿ, ಶೀತೋಷ್ಣ ಸುಖದುಃಖಗಳಲ್ಲಿ ಸಮನಾಗಿರುವವನು, ಯಾವುದರಲ್ಲಿಯೂ ಸಂಗ (ಆಸಕ್ತಿ, ಮನಸ್ಸಂಬಂಧ) ಇಲ್ಲದವನು; ನಿಂದಾಸ್ತುತಿಗಳಲ್ಲಿ ಸಮನಾಗಿರುವವನು, ಮೌನದಿಂದಿರುವವನು (ಮನನಶೀಲನು), ಇದ್ದದ್ದರಲ್ಲಿ (ಪ್ರಾಪ್ತವಾದದ್ದರಿಂದ) ತೃಪ್ತಿ ಹೊಂದುವವನು, ನಿರ್ದಿಷ್ಟವಾದ ನಿವಾಸ ಸ್ಥಾನವಿಲ್ಲದವನು (ಇಲ್ಲವೆ ಗೃಹಾದಿಗಳಲ್ಲಿ ಆಸಕ್ತಿಯಿಲ್ಲದವನು), ನಿಶ್ಚಯವಾದ ಬುದ್ಧಿಯುಳ್ಳವನು ಹಾಗು ಭಕ್ತಿಯಿಂದ ಕೂಡಿರುವ ಮನುಜನು ನನಗೆ ಪ್ರಿಯನು.

**ವ್ಯಾಖ್ಯೆ:** ಈ ಎರಡು ಶ್ಲೋಕಗಳಲ್ಲಿ ಐದು ವಿಧಗಳಾದ ದ್ವಂದ್ವಗಳನ್ನು ಹೇಳಲಾಗಿದೆ. ೧) ಶತ್ರು ಮಿತ್ರರು ೨) ಮಾನಾಪಮಾನಗಳು ೩) ಶೀತೋಷ್ಣಗಳು ೪)ಸುಖದುಃಖಾದಿಗಳು ೫) ನಿಂದಾಸ್ತುತಿಗಳು (ಅವು ಬಂದೊದಗಿದಾಗ ಯಾವ ವಿಧವಾದ ಮನೋವಿಕಾರಗಳನ್ನು ಹೊಂದದೆ ಸಮಸ್ಥಿತಿಯಲ್ಲಿ ಇರುವವನು ಎಂದರ್ಥ.)

'ಮೌನೀ'- ಮೌನವು ವಾಣಿಗೇ ಅಲ್ಲ, ಮನಸ್ಸಿಗೆ ಕೂಡ ಇರಬೇಕು. ಭಕ್ತನು ನಿರಂತರವಾಗಿ ದೈವದಲ್ಲೇ ಲಗ್ನವಾದ ಚಿತ್ತವನ್ನು ಹೊಂದಿರುವನಾದ್ದರಿಂದ ಯಾರೊಂದಿಗೂ ಅಧಿಕವಾಗಿ ಮಾತುಗಳನ್ನು ಆಡುವುದಿಲ್ಲ; ಇಲ್ಲವೆ ಮೌನಿ ಶಬ್ದಕ್ಕೆ ಮನನಶೀಲನೆಂದು ಅಂದರೆ ದೈವವನ್ನು ಕುರಿತು ಸದಾ ಮನನ ಮಾಡುತ್ತಿರುವವನೆಂದೂ ಹೇಳಬಹುದು.

'ಅನಿಕೇತಃ'- ನಿಕೇತ (ನಿವಾಸ ಸ್ಥಾನ)ವು ಇಲ್ಲದವನು ಅನೀಕೇತನು. ಅಂದರೆ ಯಾವ ಸಮಯದಲ್ಲಿ ಯಾವ ನಿವಾಸವು ಸಿಗುವುದೋ ಅದರಲ್ಲಿ ಸಂತುಷ್ಟಿ ಹೊಂದುವವನು, ಇಲ್ಲವೆ ಒಂದೇ ಸ್ಥಳದಲ್ಲಿದ್ದರೆ ತಾನು ನಿವಾಸ ಮಾಡುವ ಗೃಹ, ಮಠಗಳಲ್ಲಿ ಮಮತೆ, ಆಸಕ್ತಿ ಉಂಟಾಗಬಹುದು. ಈ ಸಂಗಗಳು ಇಲ್ಲದವನೆಂದು ಭಾವ. ಇಲ್ಲವೆ 'ನಿಕೇತ' ಅಂದರೆ ದೇಹವೆಂದೂ ಹೇಳಬಹುದು. ಅನಿಕೇತನೆಂದರೆ ದೇಹದ ಅಭಿಮಾನವಿಲ್ಲದೇ ಇರುವವನು ಎಂದರ್ಥ ಮಾಡಬಹುದು

'ಸ್ಥಿರಮತೀ'-ಅಧ್ಯಾತ್ಮ(ದೈವ) ವಿಷಯದಲ್ಲಿ, ಪ್ರಪಂಚದ ವಿಷಯದಲ್ಲಿ ಸ್ಥಿರವಾದ ನಿಶ್ಚಯವುಳ್ಳವನು ಎಂದರ್ಥ.

'ಭಕ್ತಿಮಾನ್'- ಭಕ್ತನು ಎಂತಹ ಲಕ್ಷಣಗಳನ್ನು ಹೊಂದಿರಬೇಕೋ ಇಲ್ಲಿಯವರೆಗೆ ಹೇಳಲಾಯಿತು. ಈ ಮೂವತ್ತೈದು ಸದ್ಗುಣಗಳಿಂದ ಬೆಳಗುವವನೇ ಭಕ್ತನೆಂದು ಹೇಳಿರುವುದರಿಂದ ಇವೆಲ್ಲವೂ ಜ್ಞಾನಿಯ ಲಕ್ಷಣಗಳೂ ಆಗಿರುವುದರಿಂದ ವಾಸ್ತವವಾಗಿ ಪರಾಭಕ್ತಿಗೆ ಹಾಗು ಜ್ಞಾನಕ್ಕೆ ಭೇದವೇ ಇಲ್ಲವೆಂದು ಅರ್ಥವಾಗುತ್ತದೆ. ಭಕ್ತಿಯಿರುವವನು ಪ್ರಾರಂಭ ಸ್ಥಿತಿಯಲ್ಲಿ ದೇವರನ್ನು ಪತ್ರ ಪುಷ್ಪಾದಿಗಳಿಂದ ಪೂಜಿಸುವನು. ಆದರೆ ಚಿತ್ತವು ವಿಕಾಸ ಹೊಂದಿದಂತೆ ಕ್ರಮವಾಗಿ ಸರ್ವಾಂತರ್ಯಾಮಿಯಾದ ಆ ಆತ್ಮದೇವನನ್ನು ತನ್ನ ಮನಃಪುಷ್ಪಗಳಿಂದ ಪೂಜಿಸುವನು.

'ಸಮರ್ಪ್ಯೈಕಶ್ಚೇತ ಸ್ಸರಸಿಜ ಮುಮಾನಾಥ ಭವತೇ
ಸುಖೇನಾವಸ್ಥಾತುಂ ಜನ ಇಹ ನ ಜನಾತಿ ಕಿಮಹೋ'

'ಉಮಾಪತಿಯಾದ ಓ ಪರಮೇಶ್ವರಾ! ಚಿತ್ತವೆನ್ನುವ ಕಮಲ ಪುಷ್ಪವನ್ನು ನಿನಗೆ ಅರ್ಪಿಸಿ ಸುಖವಾಗಿ ಇರುವುದನ್ನು ಜನರು ತಿಳಿದುಕೊಳ್ಳದೆ ಇದ್ದಾರಲ್ಲಾ! ಎಂದು ಶ್ರೀ ಶಂಕರ ಭಗವತ್ಪಾದರು ಶಿವಾನಂದ ಲಹರಿಯಲ್ಲಿ ತಿಳಿಸಿದ ಹಾಗೆ ಆ ಮನಃ ಕುಸುಮಗಳಿಂದ ಭಕ್ತನು ಭಗವಂತನನ್ನು ಆರಾಧಿಸುವನು. ಆ ಪುಷ್ಪಗಳು ಯಾವುವು? ಈ ಅಧ್ಯಾಯದಲ್ಲಿ ತಿಳಿಸಲ್ಪಟ್ಟ ಆ ೩೫ ಸುಗುಣಗಳೇ ಆ ಪುಷ್ಪಗಳು. ಮತ್ತೆ-

ಅಹಿಂಸಾ ಪ್ರಥಮಂ ಪುಷ್ಪಂ ಪುಷ್ಪಮಿಂದ್ರಿಯನಿಗ್ರಹಃ
ಸರ್ವಭೂತ ದಯಾಪುಷ್ಪಂ ಕ್ಷಮಾಪುಷ್ಪಂ ವಿಶೇಷತಃ
ಶಾಂತಿಪುಷ್ಪಂ ತಪಃ ಪುಷ್ಪಂ ಧ್ಯಾನಪುಷ್ಪಂ ತಥೈವಚ
ಸತ್ಯಮಷ್ಟವಿದಂ ಪುಷ್ಪಂ ವಿಷ್ಣೋಃ ಪ್ರೀತಿಕರಂ ಭವೇತ್

ಎಂದು ಹೇಳಿದ ಹಾಗೆ ಅಹಿಂಸೆ, ಇಂದ್ರಿಯನಿಗ್ರಹಣೆ, ಸರ್ವಭೂತ ದಯೆ, ಕ್ಷಮೆ , ಶಾಂತಿ, ತಪಸ್ಸು, ಧ್ಯಾನ, ಸತ್ಯ ಎನ್ನುವ ಎಂಟು ಪುಷ್ಪಗಳು ವಿಷ್ಣು ಭಗವಂತನಿಗೆ ಬಹು ಪ್ರೀತಿಕರವಾದುವು. ಆದ್ದರಿಂದ ಬಾಹ್ಯ ಪುಷ್ಪಾದಿಗಳೊಡನೆ ಈ ಸದ್ಗುಣರೂಪವಾದ ಮನಃಪುಷ್ಪಗಳಿಂದ ಭಗವಂತನನ್ನು ಆರಾಧಿಸುವುದು ಶ್ರೇಯೋದಾಯಕ. ಆದ್ದರಿಂದ ಈ ಅಧ್ಯಾಯದಲ್ಲಿ ತಿಳಿಸಲ್ಪಟ್ಟ ಸದ್ಗುಣಗಳೆಲ್ಲವನ್ನೂ ಮುಮುಕ್ಷು ಅಭ್ಯಾಸಮಾಡಿ, ಭಗವಂತನಿಗೆ ಪ್ರೀತಿ ಪಾತ್ರನಾಗಬೇಕು.

ಈ ಪ್ರಪಂಚದಲ್ಲಿ ಮನುಜನು ಸಂಪಾದಿಸಬಹುದಾದ ಸಮಸ್ತ ಪದಾರ್ಥಗಳಲ್ಲಿ ಸರ್ವೋತ್ತಮವಾದುದು, ಅತ್ಯಂತ ಮೂಲ್ಯವಾದದ್ದು ಈ ಭಗವತ್ಪ್ರೀತಿಯೇ ಆಗಿದೆ. ಆದ್ದರಿಂದ ಅದನ್ನು ತಪ್ಪದೆ ಸಂಪಾದಿಸಬೇಕು. ಆದರೆ ಅದು ಹೇಗೆ ಲಭಿಸಬಲ್ಲದು? ಈ ಅಧ್ಯಾಯದಲ್ಲಿ ಅಥವ ಗೀತೆಯ ಬೇರೆ ಅಧ್ಯಾಯಗಳಲ್ಲಿ ತಿಳಿಸಲ್ಪಟ್ಟ ಸದ್ಗುಣರಾಶಿಯನ್ನು ಅವಲಂಬಿಸಿದರೆ ಭಗವಂತನು ಪ್ರೀತಿ ಹೊಂದುವನು. '**ಭಕ್ತಿಮಾನ್ಮೇ ಪ್ರಿಯೋ ನರಃ**' (ಅಂತಹ ಸುಗುಣಗಳನ್ನು ಹೊಂದಿರುವ ಭಕ್ತನು ನನಗೆ ಪ್ರಿಯ ಎಂದು ಭಗವಂತನು ಹೇಳೇ ಇದ್ದಾನೆ. ಒಬ್ಬನಿಗೆ ಭಗವಂತನ ಮೇಲೆ ಪ್ರೀತಿಯಿರಬಹುದಾಗಲಿ, ಭಗವಂತನಿಗೆ ಆತನ ಮೇಲೆ ಪ್ರೀತಿಯುಂಟಾಗುವುದು ಮುಖ್ಯ. ಅದು ಇದೆಯೇ ಎಂದು ಮೊದಲು ನೋಡಬೇಕು. ಭಗವದ್ವಾಕ್ಯಗಳಿಗೆ, ಶಾಸ್ತ್ರ ವಾಕ್ಯಗಳಿಗೆ ವ್ಯತಿರಿಕ್ತವಾಗಿ ನಡೆದರೆ ಮನುಜನು ಯಾವ ಕಾಲಕ್ಕೂ ಭಗವತ್ಪ್ರೀತಿಯನ್ನು, ಅನುಗ್ರಹವನ್ನು ಸಂಪಾದಿಸಲು ಸಾಧ್ಯವಿಲ್ಲ. ಆದ್ದರಿಂದ ಭಗವತ್ಪ್ರೋಕ್ತಗಳಾದ ಈ ೩೫ ಸುಗುಣಗಳನ್ನು ಜನರು ಅವಲಂಬಿಸಿ ದೈವಾನುಗ್ರಹಕ್ಕೆ ಪಾತ್ರರಾಗಬೇಕು.

'ನರಃ'- ಎಂದು ಹೇಳಿರುವುದರಿಂದ ಯಾವ ಮಾನವನಾದರೂ ಅಂತಹ ಸ್ಥಿತಿಯನ್ನು ಅಂದರೆ ಭಗವದನುಗ್ರಹವನ್ನು ಪಡೆಯಬಹುದೆಂದು ತಿಳಿಸಿದಂತಾಗಿದೆ.

ಪ್ರ : ಈ ಅಧ್ಯಾಯದಲ್ಲಿ ಭಕ್ತನ ಲಕ್ಷಣಗಳು ಎಷ್ಟಿವೆ? ಯಾವುವು?

ಉ : ಒಟ್ಟು ೩೫ನ್ನು ಕೊಡಲಾಗಿದೆ. ಅವು ಕ್ರಮವಾಗಿ ೧) ಯಾವ ಪ್ರಾಣಿಯನ್ನೂ ದ್ವೇಷಿಸದಿರುವುದು ೨) ಮೈತ್ರಿ ೩) ಕರುಣೆ ೪) ಮಮತೆಯಿಲ್ಲದಿರುವುದು ೫) ಅಹಂಕಾರವಿಲ್ಲದಿರುವುದು ೬) ಸುಖದುಃಖಗಳಲ್ಲಿ ಸಮತೆ ೭) ಸಹನೆ ೮) ನಿತ್ಯ ಸಂತುಷ್ಟಿ ೯) ಮನೋನಿಗ್ರಹ ೧೦) ದೃಢ ನಿಶ್ಚಯ ೧೧) ಮನೋಬುದ್ಧಿಗಳನ್ನು ಭಗಂವತನಿಗೆ ಸಮರ್ಪಿಸುವುದು ೧೨) ಲೋಕದಿಂದ ತಾನಾಗಲಿ, ತನ್ನಿಂದ ಲೋಕವಾಗಲಿ ಭಯಪಡದೆ ಇರುವುದು ೧೩) ಹರ್ಷ ಕ್ರೋಧ, ಭಯವಿಲ್ಲದೇ ಇರುವುದು ೧೪) ಅಪೇಕ್ಷೆಯಿಲ್ಲದಿರುವುದು ೧೫) ಶುಚಿತ್ವವನ್ನು ಹೊಂದಿರುವುದು ೧೬) ಕಾರ್ಯಸಾಮರ್ಥ್ಯತೆ. ೧೭) ತಟಸ್ಥತೆ ೧೮) ಮನೋವ್ಯಾಕುಲತೆ ಇಲ್ಲದೇ ಇರುವುದು ೧೯) ಸರ್ವ ಕರ್ಮ (ಫಲ) ಪರಿತ್ಯಾಗ ೨೦) ಹರ್ಷವಿಲ್ಲದೇ ಇರುವುದು ೨೧) ದ್ವೇಷವಿಲ್ಲದೇ ಇರುವುದು ೨೨) ಶೋಕವು ಇಲ್ಲದಿರುವುದು ೨೩) ಕೋರಿಕೆಯಿಲ್ಲದೆ ಇರುವುದು ೨೪) ಶುಭಾಶುಭ ಪರಿತ್ಯಾಗ ೨೫) ಶತ್ರು ಮಿತ್ರರಲ್ಲಿ ಸಮತ್ವ. ೨೬) ಮಾನಾಪಮಾನಗಳಲ್ಲಿ ಸಮತ್ವ ೨೭) ಶೀತೋಷ್ಣಗಳಲ್ಲಿ ಸಮತ್ವ ೨೮) ಸುಖದುಃಖಗಳಲ್ಲಿ ಸಮಭಾವ ೨೯) ಸಂಗವರ್ಜಿತತ್ವ ೩೦) ನಿಂದಾಸ್ತುತಿಗಳಲ್ಲಿ ಸಮತ್ವ ೩೧) ಮೌನ ೩೨) ಇದ್ದದ್ದರಲ್ಲಿ ತೃಪ್ತಿ ೩೩) ನಿವಾಸದಲ್ಲಿ ಅಭಿಮಾನವಿಲ್ಲದೇ ಇರುವುದು ೩೪) ಸ್ಥಿರಬುದ್ಧಿ ೩೫) ಭಗವಂತನಲ್ಲಿ ಭಕ್ತಿ.

ಪ್ರ : ಭಗವಂತನಿಗೆ ಪ್ರೀತಿ ಪಾತ್ರನು ಯಾರು?

ಉ : ಮೇಲೆ ತಿಳಿಸಿದ ಈ ಸುಗುಣಗಳನ್ನು ಹೊಂದಿದವನು.

ಪ್ರ : ಆದ್ದರಿಂದ ಭಗವದನುಗ್ರಹ-ಸಂಪಾದಿಸಲು ಉಪಾಯವೇನು?

ಉ : ಈ ಗುಣಗಳನ್ನು ಹೊಂದುವುದು.

**ಅ॥** ಅಧ್ಯಾಯಾಂತದಲ್ಲಿ ಫಲಶೃತಿಯನ್ನು ಹೇಳಲಾಗಿದೆ-

**೨೦ ಯೇ ತು ಧರ್ಮ್ಯಾಮೃತಮಿದಂ ಯಥೋಕ್ತಂ ಪರ್ಯುಪಾಸತೇ**
**ಶ್ರದ್ದಧಾನಾ ಮತ್ಪರಮಾ ಭಕ್ತಾಸ್ತೇಽತೀವ ಮೇ ಪ್ರಿಯಾಃ**

**ಅರ್ಥ:** ಯೇ ತು=ಯಾರಾದರೆ; ಶ್ರದ್ದಧಾನಾಃ=ಶ್ರದ್ಧಾವಂತರಾಗಿ; ಮತ್ಪರಮಾಃ= ನನ್ನನ್ನೇ ಪರಮಗತಿಯೆಂದು ನಂಬಿದವರಾಗಿ (ನನ್ನಲ್ಲಿ ಆಸಕ್ತಿಯುಳ್ಳವರಾಗಿ); ಇದಂ=ಈ ; ಧರ್ಮ್ಯಾಮೃತಂ=ಅಮೃತರೂಪವಾದ (ಮೋಕ್ಷಸಾಧನೆಯಾದ) ಧರ್ಮವನ್ನು; ಯಥೋಕ್ತಂ=ಈ (ಮೇಲೆ) ಹೇಳಿದ ಪ್ರಕಾರ; ಪರ್ಯುಪಾಸತೇ= ಅನುಷ್ಠಾನ ಮಾಡುತ್ತರೋ; ತೇ ಭಕ್ತಾಃ=ಅಂತಹ ಭಕ್ತರು; ಮೇ=ನನಗೆ; ಅತೀವ=ಹೆಚ್ಚು; ಪ್ರಿಯಾಃ=ಪ್ರಿಯರು

**ತಾ॥** ಯಾರು ಶ್ರದ್ಧಾವಂತರಾಗಿ ನನ್ನನ್ನೇ ಪರಮಗತಿಯೆಂದು ನಂಬಿ (ನನ್ನಲ್ಲಿ ಆಸಕ್ತಿಯುಳ್ಳವರಾಗಿ) ಅಮೃತರೂಪವಾದ (ಮೋಕ್ಷಸಾಧನೆಯಾದ) ಧರ್ಮವನ್ನು (ಈಗ) ಹೇಳಲ್ಪಟ್ಟ ಪ್ರಕಾರ ಅನುಷ್ಠಾನ ಮಾಡುವರೋ ಅಂತಹ ಭಕ್ತರು ನನಗೆ ಅತ್ಯಂತ ಪ್ರಿಯರು.

**ವಾಖ್ಯೆ:** ಮೇಲೆ ತಿಳಿಸಿದ ಧರ್ಮಗಳನ್ನು ಶ್ರದ್ಧಾ ಭಕ್ತಿಗಳೊಂದಿಗೆ ಅನುಷ್ಠಾನ ಮಾಡಿದವರಿಗೆ ಉಂಟಾಗುವ ಫಲಗಳನ್ನು ಹೇಳುತ್ತಿದ್ದಾನೆ. ಯಾವುದೇ ಧರ್ಮವನ್ನು ಬೋಧಿಸಿದಾಗ ಅದರ ಫಲವನ್ನೂ ಕೂಡ ಅದರ ಜೊತೆ ಹೇಳಿದರೆ ಆಚರಿಸುವವರಿಗೆ ಅದರ ಮೇಲೆ ಪರಮ ವಿಶ್ವಾಸವು ಹುಟ್ಟುತ್ತದೆ. ಆದ್ದರಿಂದ ಭಗವಂತನು ಭಕ್ತನ ಲಕ್ಷಣಗಳನ್ನು ಹೇಳಿ ಕೊನೆಗೆ ಅವುಗಳನ್ನು ಪಾಲಿಸುವುದರಿಂದ ಉಂಟಾಗುವ ಫಲಗಳನ್ನು ಹೇಳಿದನು. ಆ ಫಲಗಳೇನು? **'ತೇ ಅತೀವ ಮೇ ಪ್ರಿಯಾಃ'**- ಭಗವಂತನಿಗೆ ಪರಮ ಪ್ರೀತಿ ಪಾತ್ರವಾಗು ವುದೇ. ಇದಕ್ಕಿಂತ ಹೆಚ್ಚಿನ ಫಲ ಜೀವಿಗಳಿಗೆ ಮತ್ತೇನಿದೆ? ಅದು ಇದ್ದರೆ ಎಲ್ಲವೂ ಲಭಿಸಿದಂತೆಯೇ. ಅದು ಇಲ್ಲದಿದ್ದರೆ ಬೇರೆಯವು ಎಷ್ಟು ಇದ್ದರೂ ನಿರಪಯೋಗಗಳೇ - ಭಗವತ್ಕೃಪೆಗೆ ಮೀರಿದ ವಸ್ತು ಮೂರು ಲೋಕಗಳಲ್ಲಿ ಇನ್ನೇನೂ ಇಲ್ಲ. ಏಕೆಂದರೆ, ಅಂತಹ ಕೃಪೆಯೇ ಮೋಕ್ಷಕ್ಕೆ ದಾರಿ. ಹೇಗೆಂದರೆ ಭಗವದನುಗ್ರಹವುಳ್ಳವರಿಗೆ ಬುದ್ಧಿಯೋಗ, **(ತತ್ವವಿಚಾರಣಾ ಶಕ್ತಿ)** ಸಂಪ್ರಾಪ್ತಿಯಾಗುವುದು. **(ದದಾಮಿ ಬುದ್ಧಿಯೋಗಂ)** ಅದರಿಂದ ಮೋಕ್ಷವು ಸನ್ನಿಹಿತವಾಗುವುದು.

'ಧರ್ಮ್ಯಾಮೃತಂ'- ಮೇಲೆ ತಿಳಿಸಿದ ಧರ್ಮವು ಅಮೃತರೂಪವೆಂದು ವರ್ಣಿಸಲ್ಪಟ್ಟಿದೆ. ಏಕೆಂದರೆ ಜನನ ಮರಣಗಳಿಂದ ತಪ್ಪಿಸಬಲ್ಲ ಸಾಮರ್ಥ್ಯ ಅದರಲ್ಲಿದೆ. ಜೀವಿಯನ್ನು ಅಮರನನ್ನಾಗಿ ಮಾಡಬಲ್ಲ ಶಕ್ತಿ ಅದಕ್ಕಿದೆ. ಭಗವಂತನು ಕರುಣೆಯಿಂದ ಅಮೃತವರ್ಷಗರೆದನು. ಅವರವರ ಬುದ್ಧಿಯೆನ್ನುವ ಪಾತ್ರೆಯ ತುಂಬ ಅದನ್ನು ಹಿಡಿದು ಸಂತೃಪ್ತವಾಗಿ ಕುಡಿಯುವುದು ಜೀವಿಯ ಧರ್ಮ. ಯಾರು ಹಾಗೆ ಮಾಡುವುದಿಲ್ಲವೋ ಅವರು ಅಮೃತವನ್ನು ಕುಡಿಯುವ ಸೌಭಾಗ್ಯವನ್ನು ಕೈಯಾರೆ ಕಳೆದುಕೊಂಡು ಸಂಸಾರದಾಹ ಪೀಡಿತರಾಗಿ ದುರ್ಭರ ಯಾತನೆಗಳನ್ನು ಅನುಭವಿಸಬೇಕಾಗಿ ಬರುವುದು. ಆದರೆ ಆ ಧರ್ಮಗಳನ್ನು ಯಾವ ಪ್ರಕಾರವಾಗಿ ಪಾಲಿಸಬೇಕು?

'ಶ್ರದ್ದಧಾನಾಃ'- ಶ್ರದ್ಧೆಯಿಂದ ಅನುಷ್ಠಾನಮಾಡಬೇಕೆಂದು ಹೇಳಲಾಗಿದೆ. ಒಂದೆರಡು ಸಾರಿಯಲ್ಲ, ಭಗವಂತನು ಅನೇಕ ಸಾರಿ ಈ ಶ್ರದ್ಧೆಯ ಆವಶ್ಯಕತೆಯನ್ನು ಗೀತೆಯಲ್ಲಿ ಹೇಳಿರುವುದು ಗಮನಾರ್ಹ. ಮತ್ತೆ 'ಮತ್ಪರಮಾಃ' ಪರಾತ್ಪರನೇ ಪರಮಗತಿಯೆಂದು ನಂಬಿ ಆತನನ್ನು ಧ್ಯಾನಿಸುತ್ತ ಆಯಾ ಸುಗುಣಗಳನ್ನು, ಧರ್ಮಗಳನ್ನು ಅನುಷ್ಠಾನಮಾಡಬೇಕು. **'ಅತೀವ ಮೇ ಪ್ರಿಯಾಃ'**- ಎಂದು ಹೇಳುವುದರಿಂದ, ಆ ಪ್ರಕಾರ ಆಚರಿಸುವವರು ತನಗೆ ಬಹಳ ಪ್ರಿಯರೆನ್ನುವುದು ಗೀತಾಚಾರ್ಯನ ಭಾವ. ಪಾಠಶಾಲೆಯಲ್ಲಿ ಉಪಾಧ್ಯಾಯನಿಗೆ ಪ್ರೀತಿಪಾತ್ರನಾದ ವಿದ್ಯಾರ್ಥಿಯ ಭವಿಷ್ಯದ ಬಗ್ಗೆ ಯಾವ ರೀತಿಯ ಸಂಶಯವಿರುವುದಿಲ್ಲವೋ, ತಂದೆಯ ಅಭಯ ಹಸ್ತದ ಕೆಳಗಿರುವ ಮಗನ ಯೋಗಕ್ಷೇಮದ ವಿಚಾರದಲ್ಲಿ ಯಾವ ಸಂದೇಹವು ಹೇಗಿರುವುದಿಲ್ಲವೋ ಹಾಗೆಯೇ ಭಗವಂತನಿಗೆ ಪ್ರೀತಿ ಪಾತ್ರನಾದ ಜೀವಿಯ ಮೋಕ್ಷದ ವಿಷಯದ ಬಗ್ಗೆ ಯಾವ ಸಂದೇಹವೂ ಇರುವುದಿಲ್ಲ. ಆತನು ಮುಕ್ತಿಯನ್ನು ಹೊಂದಿದಂತೆಯೇ. ಆದ್ದರಿಂದ ಮುಮುಕ್ಷುಗಳು ತ್ವರೆಯಾಗಿ ಭಗವತ್ಪ್ರೋಕ್ತವಾದ ಈ ಧರ್ಮ್ಯಾಮೃತವನ್ನು ಮನಸಾರೆ ಕುಡಿದು ಕೃತಾರ್ಥರಾಗಲು ಯತ್ನಿಸಬೇಕು. 'ಯೇತು'- ಎನ್ನುವಲ್ಲಿ 'ಯಚ್ಛಬ್ದ'ವನ್ನು ಪ್ರಯೋಗ ಮಾಡಿರುವುದರಿಂದ ಯಾರಾದರೂ ಸರಿಯೇ, ಶ್ರದ್ಧೆಯಿಂದ ಅನುಸರಿಸಿದರೆ ಮೋಕ್ಷಕ್ಕೆ ಭಾಗಿಗಳಾಗುವರೆಂದರ್ಥ.

ಪ್ರ : ಶ್ರೀ ಕೃಷ್ಣಮೂರ್ತಿ ಭೋಧಿಸಿದ ಧರ್ಮಗಳೆಂತಹವು?

ಉ : ಅಮೃತರೂಪವಾದುವು. ಜನನ ಮರಣದಿಂದ ವಿಮುಕ್ತಗೊಳಿಸುವಂತಹವು

ಪ್ರ : ಈ ಧರ್ಮವನ್ನು ಯಾವ ಪ್ರಕಾರವಾಗಿ ಆಚರಿಸಬೇಕು ?

ಉ : ಶ್ರದ್ಧೆಯಿಂದ, ಭಗವಂತನೆಡೆ ಅಪಾರ ಭಕ್ತಿಯನ್ನಿಟ್ಟು

ಪ್ರ : ಹಾಗೆ ಆಚರಿಸುವುದರಿಂದ ಉಂಟಾಗುವ ಫಲವೇನು ?

ಉ : ಭಗವಂತನಿಗೆ ಅತ್ಯಂತ ಪ್ರೀತಿ ಪಾತ್ರನಾಗುವನು.

**ಓಮ್**

ಇತಿ ಶ್ರೀ ಭಗವದ್ಗೀತಾಸೂಪನಿಷತ್ಸು ಬ್ರಹ್ಮವಿದ್ಯಾಯಾಂ ಯೋಗಶಾಸ್ತ್ರೇ
ಶ್ರೀ ಕೃಷ್ಣಾರ್ಜುನ ಸಂವಾದೇ ಭಕ್ತಿಯೋಗೋ ನಾಮ

**ದ್ವಾದಶೋಽಧ್ಯಾಯಃ**

ಇದು ಉಪನಿಷತ್ಪ್ರತಿಪಾದಕವೂ, ಬ್ರಹ್ಮವಿದ್ಯೆಯೂ, ಯೋಗಶಾಸ್ತ್ರವೂ
ಶ್ರೀ ಕೃಷ್ಣಾರ್ಜುನ ಸಂವಾದವೂ ಆದ ಶ್ರೀ ಭಗವದ್ಗೀತೆಯಲ್ಲಿಯ ಭಕ್ತಿಯೋಗವೆನ್ನುವ
ಹನ್ನೆರಡನೆಯ ಅಧ್ಯಾಯ

**ಓಮ್ ತತ್ ಸತ್**

# ಶ್ರೀ ಭಗವದ್ಗೀತೆ

## ಅಥ ತ್ರಯೋದಶೋಽಧ್ಯಾಯಃ
## ಹದಿಮೂರನೆಯ ಅಧ್ಯಾಯ
## ಕ್ಷೇತ್ರಕ್ಷೇತ್ರಜ್ಞವಿಭಾಗಯೋಗಃ - ಕ್ಷೇತ್ರಕ್ಷೇತ್ರಜ್ಞವಿಭಾಗಯೋಗ

**ಈ ಅಧ್ಯಾಯದ ಹೆಸರು :**

**'ಕ್ಷೇತ್ರಕ್ಷೇತ್ರಜ್ಞವಿಭಾಗಯೋಗ'**- ಕ್ಷೇತ್ರವೆಂದರೆ ಶರೀರ. ಕ್ಷೇತ್ರಜ್ಞನೆಂದರೆ ಆತ್ಮ. ಜೀವಿಯು ವಾಸ್ತವವಾಗಿ ಕ್ಷೇತ್ರಜ್ಞನೇ ಹೊರತು ಕ್ಷೇತ್ರವಲ್ಲ. ಆದರೆ ಅಜ್ಞಾನವಶಾತ್ ತಾನು ಕ್ಷೇತ್ರವೆಂದು ತಿಳಿದು ದುಃಖವನ್ನು ಅನುಭವಿಸುತ್ತಿದ್ದಾನೆ. ಕ್ಷೇತ್ರವು ಪಂಚಭೂತಾತ್ಮಕವಾಗಿದ್ದು, ನಶ್ವರವಾದುದು, ವಿಕಾರವಾದದ್ದು. ಕ್ಷೇತ್ರಜ್ಞನು (ಆ ಕ್ಷೇತ್ರವನ್ನು ತಿಳಿದ ಪ್ರತ್ಯಗಾತ್ಮನು) ಚಿನ್ಮಯ ಸ್ವರೂಪಿ, ಶಾಶ್ವತನು ಹಾಗೂ ವಿಕಾರರಹಿತನು. ಆ ಎರಡರ ಸ್ವಭಾವಗಳು ವಿವರಿಸಲ್ಪಟ್ಟಿರುವುದರಿಂದ, ಕಲೆತಿರುವ ಅವುಗಳ ವಿಭಜನೆಯನ್ನು (ವಿಭಾಗವನ್ನು) ಕುರಿತು ತಿಳಿಸಲ್ಪಟ್ಟ ಅಧ್ಯಾಯ ವಾಗಿರುವುದರಿಂದ ಇದನ್ನು ಕ್ಷೇತ್ರಕ್ಷೇತ್ರಜ್ಞವಿಭಾಗಯೋಗವೆಂದು ಕರೆಯುವರು.

**ಈ ಅಧ್ಯಾಯದಲ್ಲಿಯ ಪ್ರಧಾನ ವಿಷಯಗಳು:**

೧) ಕ್ಷೇತ್ರ ಕ್ಷೇತ್ರಜ್ಞರ ಸ್ವರೂಪ ವಿವರಣೆ-
(೧ನೆಯ ಶ್ಲೋಕದಿಂದ ೭ನೆಯ ಶ್ಲೋಕದವರೆಗೆ)

೨) ಅಮಾನಿತ್ವಾದಿ ಜ್ಞಾನ ಗುಣಗಳು-
(೮ನೆಯ ಶ್ಲೋಕದಿಂದ ೧೨ನೆಯ ಶ್ಲೋಕದವರೆಗೆ)

೩) ಜ್ಞೇಯ ವಸ್ತುವಿನ ಪ್ರತಿಪಾದನೆ-
(೧೩ನೆಯ ಶ್ಲೋಕದಿಂದ ೧೮ನೆಯ ಶ್ಲೋಕದವರೆಗೆ)

೪) ಪ್ರಕೃತಿ, ಪುರುಷರ ವರ್ಣನೆ-
(೧೯ನೆಯ ಶ್ಲೋಕದಿಂದ ೩೫ನೆಯ ಶ್ಲೋಕದವರೆಗೆ)

**ಪೂರ್ವಾಧ್ಯಾಯದೊಡನೆ ಈ ಅಧ್ಯಾಯಕ್ಕೆ ಇರುವ ಸಂಬಂಧ :**

ಹಿಂದಿನ ಅಧ್ಯಾಯದಲ್ಲಿ ಶ್ರೀಕೃಷ್ಣ ಪರಮಾತ್ಮನು ಸಗುಣಬ್ರಹ್ಮನ ಉಪಾಸನೆಯನ್ನು ಕುರಿತು, ಭಕ್ತನ ಲಕ್ಷಣಗಳನ್ನು ಕುರಿತು ಅರ್ಜುನನಿಗೆ ಬೋಧಿಸಿದನು. ಆದರೆ ನಿರ್ಗುಣ ಬ್ರಹ್ಮತತ್ತ್ವದ ಬಗ್ಗೆಯಾಗಲಿ ಅಥವ ಜ್ಞಾನಸಂಬಂಧವಾದ ವಿಚಾರಣೆಯನ್ನು ಕುರಿತಾಗಲಿ ಅಲ್ಲಿ ಹೆಚ್ಚಿಗೆ ಪ್ರಸ್ತಾಪ ಮಾಡಲಿಲ್ಲ. ಆದ್ದರಿಂದ ಸಗುಣಬ್ರಹ್ಮನ ವಿಷಯ ಹಾಗು ವಾಸ್ತವ ಭಕ್ತಿಯ ಸ್ವರೂಪವನ್ನು ತಿಳಿದ ಕೂಡಲೇ ಅರ್ಜುನನಿಗೆ ನಿರ್ಗುಣ ಪರಮಾತ್ಮನ ತತ್ತ್ವವನ್ನು, ಜ್ಞಾನಸಂಬಂಧವಾದ ವಿಚಾರಣೆಯನ್ನು ವಿಶದವಾಗಿ ತಿಳಿಯುವ ಕುತೂಹಲವುಂಟಾಗಿ, ಅವುಗಳನ್ನು ಕುರಿತು ಭಗವಂತನನ್ನು ಪ್ರಶ್ನಿಸಲು ಅದಕ್ಕೆ ಆತನು ನಿರ್ಗುಣ ಪರಮಾತ್ಮತತ್ತ್ವವನ್ನು, ಅಂತಹ ಪರಮಾತ್ಮನನ್ನು ಜೀವಿಯು ಹೊಂದುವುದಕ್ಕೆ ಬೇಕಾದ ಉಪಾಯಗಳನ್ನು ವಿವರವಾಗಿ ಹೇಳಿದನು. ತತ್ವಜ್ಞಾನವನ್ನು ಕುರಿತ ಜಿಜ್ಞಾಸೆಯಿಂದ ಅರ್ಜುನನು ಕೇಳಿದ ಪ್ರಶ್ನೆಯಿಂದ ಈ ಅಧ್ಯಾಯವು ಪ್ರಾರಂಭವಾಗುತ್ತದೆ.

**ಅರ್ಜುನ ಉವಾಚ :**

**೧. ಪ್ರಕೃತಿಂ ಪುರುಷಂ ಚೈವ ಕ್ಷೇತ್ರಂ ಕ್ಷೇತ್ರಜ್ಞ ಮೇವ ಚ**
**ಏತದ್ವೇದಿತುಮಿಚ್ಛಾಮಿ ಜ್ಞಾನಂ ಜ್ಞೇಯಂ ಚ ಕೇಶವ**

ಅರ್ಜುನ ಉವಾಚ-ಅರ್ಜುನನು ಹೇಳಿದನು.

**ಅರ್ಥ:** ಕೇಶವಃ=ಓ ಕೃಷ್ಣಾ! ಪ್ರಕೃತಿಂ=ಪ್ರಕೃತಿಯನ್ನು; ಪುರುಷಂ ಚ ಏವ=ಪುರುಷನನ್ನೂ; ಕ್ಷೇತ್ರಂ=ಕ್ಷೇತ್ರವನ್ನು; ಕ್ಷೇತ್ರಜ್ಞಂ ಏವ ಚ=ಕ್ಷೇತ್ರಜ್ಞನನ್ನೂ; ಜ್ಞಾನಂ=ಜ್ಞಾನವನ್ನು; ಜ್ಞೇಯಂ ಚ=ಜ್ಞೇಯವನ್ನೂ (ತಿಳಿಯಬೇಕಾದ ಪರಮಾತ್ಮನನ್ನು) ಏತತ್=ಇವುಗಳೆಲ್ಲವನ್ನೂ; ವೇದಿತುಂ=ತಿಳಿದುಕೊಳ್ಳಲು; ಇಚ್ಛಾಮಿ= ಇಷ್ಟಪಡುತ್ತಿದ್ದೇನೆ.

**ತಾ॥** ಅರ್ಜುನನು ಹೇಳಿದನು - ಓ ಕೃಷ್ಣಾ! ಪ್ರಕೃತಿಯನ್ನು, ಪುರುಷನನ್ನು, ಕ್ಷೇತ್ರವನ್ನು, ಕ್ಷೇತ್ರಜ್ಞವನ್ನು, ಜ್ಞಾನವನ್ನು, ಜ್ಞೇಯವನ್ನು - ಇವುಗಳೆಲ್ಲವನ್ನೂ ಕುರಿತು ನಾನು ತಿಳಿಯಬಯಸುತ್ತೇನೆ.

**ವ್ಯಾಖ್ಯೆ:** ಸಗುಣ ಬ್ರಹ್ಮನನ್ನು ಕುರಿತು ಇಲ್ಲಿಯವರೆಗೂ ಚೆನ್ನಾಗಿ ಕೇಳಿದ ಅರ್ಜುನನಿಗೆ ನಿರ್ಗುಣ ಬ್ರಹ್ಮತತ್ತ್ವವನ್ನು ತಿಳಿದುಕೊಳ್ಳಬೇಕೆಂಬ ಕುತುಹಲವುಂಟಾಗಲು, ಅದನ್ನು ಕುರಿತು ಭಗವಂತನನ್ನು ಪ್ರಶ್ನಿಸುತ್ತಿದ್ದಾನೆ. ಗೀತೆಯಲ್ಲಿ ಮೊದಲ ಆರು ಅಧ್ಯಾಯಗಳನ್ನು ಕರ್ಮಷಟ್ಕವೆಂದು; ಎರಡನೆಯ ಆರು ಅಧ್ಯಾಯಗಳನ್ನು ಭಕ್ತಿಷಟ್ಕವೆಂದೂ, ಮೂರನೆಯ ಆರು ಅಧ್ಯಾಯಗಳನ್ನು

ಅಂದರೆ ೧೩ನೆಯ ಅಧ್ಯಾಯದಿಂದ ೧೮ನೆಯ ಅಧ್ಯಾಯದವರೆಗೆ ಜ್ಞಾನಷಟ್ಕವೆಂದು ಕರೆಯುವರು. ಆದ್ದರಿಂದ ಈಗ ಜ್ಞಾನ ಸಂಬಂಧವಾದ ವಿಚಾರಣೆಯನ್ನು ಮಾಡಲಾಗುತ್ತಿದೆ. ಜ್ಞಾನ ಮಾರ್ಗಾವಲಂಬಿಗಳಿಗೆ ಈ ಅಧ್ಯಾಯವು (೧೩ನೆಯ ಅಧ್ಯಾಯ) ಅತಿ ಮುಖ್ಯವಾದುದು.

ಪ್ರ : ಅರ್ಜುನನು ಏನನ್ನು ಕುರಿತು ಭಗವಂತನನ್ನು ಕೇಳಿದನು?

ಉ : ೧) ಪ್ರಕೃತಿ ೨) ಪುರುಷ ೩) ಕ್ಷೇತ್ರ ೪) ಕ್ಷೇತ್ರಜ್ಞ ೫) ಜ್ಞಾನ ೬) ಜ್ಞೇಯ ಎನ್ನುವ ಈ ಆರು ವಿಷಯಗಳನ್ನು ಕುರಿತು ಕೇಳಲಿಚ್ಛಿಸಿದನು.

**ಅ||** ಅರ್ಜುನನ ಪ್ರಶ್ನೆಗಳನ್ನು ಪುರಸ್ಕರಿಸುತ್ತ ಭಗವಂತನು ಆತನು ಕೇಳಿದ ಆರು ಪ್ರಶ್ನೆಗಳಿಗೆ ವಿಪುಲವಾದ ಉತ್ತರವನ್ನು ಕೊಡುತ್ತಿದ್ದಾನೆ-

**ಶ್ರೀ ಭಗವಾನುವಾಚ :**

**೨. ಇದಂ ಶರೀರಂ ಕೌಂತೇಯ ಕ್ಷೇತ್ರಮಿತ್ಯಭಿಧೀಯತೇ**
**ಏತದ್ಯೋ ವೇತ್ತಿ ತಂ ಪ್ರಾಹುಃ ಕ್ಷೇತ್ರಜ್ಞ ಇತಿ ತದ್ವಿದಃ**

ಶ್ರೀ ಭಗವಾನುವಾಚ - ಶ್ರೀಭಗವಂತನು ಹೇಳಿದನು.

**ಅರ್ಥ:** ಕೌಂತೇಯ=ಕುಂತೀಪುತ್ರನಾದ ಓ ಅರ್ಜುನಾ! ಇದಂ ಶರೀರಂ=ಈ ಶರೀರವು; ಕ್ಷೇತ್ರಂ ಇತಿ=ಕ್ಷೇತ್ರವೆಂದು; ಅಭಿಧೀಯತೇ=ಹೇಳಲ್ಪಡುತ್ತಿದೆ. ಏತತ್=ಇದನ್ನು; ಯಃ=ಯಾವನು; ವೇತ್ತಿ=ತಿಳಿದುಕೊಳ್ಳುತ್ತಾನೊ; ತಂ=ಅವನನ್ನು; ಕ್ಷೇತ್ರಜ್ಞ ಇತಿ=ಕ್ಷೇತ್ರಜ್ಞನೆಂದು; ತದ್ವಿದಃ=ಆತನನ್ನು ಕುರಿತು ತಿಳಿದವರು; ಪ್ರಾಹುಃ=ಹೇಳುವರು.

**ತಾ||** ಶ್ರೀ ಭಗವಂತನು ಹೇಳಿದನು - ಕುಂತೀಪುತ್ರನಾದ ಓ ಅರ್ಜುನಾ! ಈ ಶರೀರವನ್ನು ಕ್ಷೇತ್ರವೆನ್ನುವರು. ಅದನ್ನು ತಿಳಿದುಕೊಂಡವನನ್ನು ಕ್ಷೇತ್ರಜ್ಞನೆಂದು, ಕ್ಷೇತ್ರಕ್ಷೇತ್ರಜ್ಞರನ್ನು ತಿಳಿದವರು ಹೇಳುವರು.

**ವ್ಯಾಖ್ಯೆ:** ಕ್ಷೇತ್ರವೆಂದರೆ ಹೊಲ, ಭೂಮಿ. ಸಸ್ಯವು ಅಭಿವೃದ್ಧಿ ಹೊಂದಲು, ಫಲಿಸಲು ಭೂಮಿ ಹೇಗೆ ಆಧಾರಭೂತವಾಗಿರುವುದೋ ಹಾಗೆಯೇ ಜೀವಿಯ ಹೃದಯಾಂತರಾಳದಲ್ಲಿ ಜ್ಞಾನಬೀಜವು ಅಭಿವೃದ್ಧಿ ಹೊಂದಿ ಕಾಲಾಂತರದಲ್ಲಿ ಮೋಕ್ಷ ಫಲವನ್ನು ಪಡೆಯಲು ಈ ಶರೀರವು ಆಧಾರ ಭೂತವಾಗಿರುವುದು. ಏಕೆಂದರೆ, ಅನೇಕ ಸಾಧನಾನುಷ್ಠಾನಗಳನ್ನು ಈ ಶರೀರದಿಂದಲೇ ಮಾಡಬೇಕಾಗಿರುವುದು. ಇದು ಧರ್ಮ ಹಾಗು ಜ್ಞಾನ ಬೀಜಗಳಿಗೆ ಕ್ಷೇತ್ರದಂತೆ ವರ್ತಿಸುವುದು, ಆದ್ದರಿಂದಲೇ ಇದನ್ನು ಕ್ಷೇತ್ರವೆಂದು ಕರೆಯುವರು.

ಈ ಜಡವಾದ ಶರೀರವನ್ನು ಚೈತನ್ಯವಂತವಾದ ಒಂದು ಶಕ್ತಿ ಅರ್ಥಮಾಡಿಕೊಳ್ಳುತ್ತಿದೆ (ಏತದ್ಯೋ ವೇತ್ತಿ). ಆ ಪ್ರಜ್ಞಾರೂಪವಾದ ವಸ್ತುವನ್ನೇ ಕ್ಷೇತ್ರಜ್ಞನೆನ್ನುವರು. ಕ್ಷೇತ್ರವಾದ ಶರೀರವನ್ನು ತಿಳಿದುಕೊಂಡವನು ಕ್ಷೇತ್ರಜ್ಞನು. ಆತನೇ ಪ್ರತ್ಯಗಾತ್ಮನು. ದೇಹೇಂದ್ರಿಯಾದಿ ಸಂಘಾತಕ್ಕೆಲ್ಲಾ ಆತನು ಸಾಕ್ಷಿ, ನಿರ್ವಿಕಾರಿ, ಚಿದ್ರೂಪಿ, ಅವಿನಾಶಿ, ಪಂಚಕೋಶ ವಿಲಕ್ಷಣನು. ಜಡವಾದದ್ದನ್ನು ಜಡವಾದುದು ತಿಳಿದುಕೊಳ್ಳಲು ಸಾಧ್ಯವಿಲ್ಲ. ಪ್ರಜ್ಞೆಯೇ ಅದನ್ನು ತಿಳಿದುಕೊಳ್ಳ ಬಲ್ಲದು. ಆ ಪ್ರಜ್ಞೆಯೇ ಕ್ಷೇತ್ರಜ್ಞ, 'ವೇತ್ತಿ' (ತಿಳಿಯುತ್ತಿದ್ದಾನೆ) ಎಂದು ಹೇಳುವುದರಿಂದ ಕ್ಷೇತ್ರಜ್ಞನು ಪ್ರಜ್ಞಾವಂತನೆಂದು, ಜಡಸ್ವರೂಪಿಯಲ್ಲವೆಂದು ಸ್ಪಷ್ಟವಾಗುತ್ತದೆ.

ಹೊಲವನ್ನು ನೋಡುವವನು ಹೊಲಕ್ಕಿಂತ ಭಿನ್ನವಾಗಿರುವನು. ಹಾಗೆಯೇ ಶರೀರವನ್ನು (ಉಪಾಧಿ) ನೋಡುವವನು (ಕ್ಷೇತ್ರಜ್ಞನು) ಶರೀರಕ್ಕಿಂತ ಭಿನ್ನವಾಗಿಯೇ ಇರುವನು. ಆ ಪ್ರತ್ಯಗಾತ್ಮ ದೇಹದಲ್ಲಿದ್ದರೂ ದೇಹಕ್ಕೆ ಸಾಕ್ಷಿಯಾಗಿ ಜಾಗ್ರತ್ಸ್ವಪ್ನ ಸುಷುಪ್ತಿಗಳಲ್ಲಿ ಎಚ್ಚರದಿಂದಿದ್ದು ಎಲ್ಲವನ್ನೂ ವೀಕ್ಷಿಸುತ್ತದೆ.

ಪ್ರ : ಕ್ಷೇತ್ರವೆಂದರೆ ಏನು?

ಉ : ಈ ಶರೀರವೇ (ಉಪಾಧಿಯೇ) ಕ್ಷೇತ್ರ.

ಪ್ರ : ಕ್ಷೇತ್ರಜ್ಞನು ಯಾರು?

ಉ : ಈ ಶರೀರವನ್ನು (ಉಪಾಧಿಯನ್ನು) ತಿಳಿದುಕೊಂಡವನೇ ಕ್ಷೇತ್ರಜ್ಞನು (ಚಿದ್ರೂಪನಾದ ಪ್ರತ್ಯಗಾತ್ಮ).

**ಅ||** ಸಮಸ್ತ ಪ್ರಾಣಿಗಳಲ್ಲಿರುವ ಕ್ಷೇತ್ರಜ್ಞನು ತಾನೇ ಎಂದು ಭಗವಂತನು ನುಡಿಯುತ್ತಿದ್ದಾನೆ-

**೩. ಕ್ಷೇತ್ರಜ್ಞಂ ಚಾಪಿ ಮಾಂ ವಿದ್ಧಿ ಸರ್ವಕ್ಷೇತ್ರೇಷು ಭಾರತ**
**ಕ್ಷೇತ್ರಕ್ಷೇತ್ರಜ್ಞಯೋರ್ಜ್ಞಾನಂ ಯತ್ತಜ್ಞಾನಂ ಮತಂ ಮಮ**

**ಅರ್ಥ:** ಭಾರತ=ಓ ಅರ್ಜುನಾ! ಸರ್ವಕ್ಷೇತ್ರೇಷು=ಸಮಸ್ತ ಕ್ಷೇತ್ರಗಳಲ್ಲಿ (ಶರೀರಗಳಲ್ಲಿ); ಮಾಂ=ನನ್ನನ್ನು; ಕ್ಷೇತ್ರಜ್ಞಂ ಚ ಅಪಿ=ಕ್ಷೇತ್ರಜ್ಞನೆಂದು; ವಿದ್ಧಿ=ತಿಳಿಯುವುದು; ಕ್ಷೇತ್ರ ಕ್ಷೇತ್ರಜ್ಞಯೋಃ=ಕ್ಷೇತ್ರ ಕ್ಷೇತ್ರಜ್ಞರ; ಜ್ಞಾನಂ=ಜ್ಞಾನವು; ಯತ್=ಯಾವುದಿದೆಯೋ; ತತ್=ಅದು; ಜ್ಞಾನಂ= ಜ್ಞಾನವೆಂದು; ಮಮ=ನನ್ನ; ಮತಂ=ಅಭಿಪ್ರಾಯ.

**ತಾ||** ಅರ್ಜುನಾ! ಸಮಸ್ತ ಕ್ಷೇತ್ರಗಳಲ್ಲಿ (ಶರೀರಗಳಲ್ಲಿ) ನನ್ನನ್ನು ಕ್ಷೇತ್ರಜ್ಞನೆಂದು ತಿಳಿ. ಕ್ಷೇತ್ರ ಕ್ಷೇತ್ರಜ್ಞರನ್ನು ಕುರಿತ ಜ್ಞಾನವು ಯಾವುದೋ ಅದೇ ವಾಸ್ತವವಾದ ಜ್ಞಾನವೆಂದು ನನ್ನ ಅಭಿಪ್ರಾಯ.

**ವ್ಯಾಖ್ಯೆ:** ಈ ಶ್ಲೋಕದಲ್ಲಿ 'ತತ್ವಮಸಿ' ಮಹಾವಾಕ್ಯೋಪದೇಶವನ್ನು ಮಾಡಲಾಗಿದೆ. ಈಗಾಗಲೇ ಎರಡನೆಯ ಅಧ್ಯಾಯದಲ್ಲಿ '**ನ ತ್ವೇವಾಹಂ ಜಾತು ನಾಸಂ......**' (೨-೧೨) ಎನ್ನುವ ಶ್ಲೋಕದಲ್ಲಿ ಇದೇ ಪ್ರಕಾರವಾಗಿ 'ತತ್ವಮಸಿ' ಮಹಾವಾಕ್ಯೋಪದೇಶವನ್ನು ಮಾಡಲಾಗಿದೆ. ಜೀವಿಯು ಸಾಕ್ಷಾತ್ ಶಿವನು ಎನ್ನುವ ಪರಮ ರಹಸ್ಯವನ್ನು ಭಗವಂತನು ಇಲ್ಲಿ ತಿಳಿಸುತ್ತಿದ್ದಾನೆ. ಕ್ಷೇತ್ರದಲ್ಲಿ ಅಂದರೆ ದೇಹೇಂದ್ರಿಯಾದಿ ಸಂಘಾತಗಳಲ್ಲಿ (ಉಪಾಧಿ ಹಾಗು ಪಂಚಕೋಶಗಳಲ್ಲಿ) ಸಾಕ್ಷಿ ರೂಪದಲ್ಲಿ ಬೆಳಗುತ್ತಿರುವ ಯಾವ ಪ್ರತ್ಯಗಾತ್ಮ (ಜೀವಾತ್ಮ)ವು ಇರುವುದೋ ಅದು ಪರಮಾತ್ಮನಿಗಿಂತ ಬೇರೆಯಲ್ಲವೆಂದೂ, ಎರಡೂ ಒಂದೇ ಎಂದು ಇಲ್ಲಿ ಸ್ಪ ಷ್ಟಪಡಿಸಲಾಗಿದೆ. ಕ್ಷೇತ್ರವನ್ನು (ಉಪಾಧಿಯನ್ನು) ತಿಳಿದುಕೊಳ್ಳುವ ಪ್ರಜ್ಞಾರೂಪವಾದ ಚೈತನ್ಯವು ಅಂದರೆ ಕ್ಷೇತ್ರಜ್ಞನು ಯಾವನೋ ಆತನನ್ನು 'ಮಾಂವಿದ್ಧಿ'- ನಾನೇ ಎಂದು ತಿಳಿದುಕೋ ಎಂದು ಭಗವಂತನು ಕರುಣೆಯಿಂದ ಬೋಧಿಸಿರುವನು. ಇದರಿಂದ ಸಾಕ್ಷಾತ್ ಪರಮಾತ್ಮನು ಎಲ್ಲೋ ದೂರವಿರದೆ, ಅತಿ ಸಮೀಪದಲ್ಲಿ, ಅವರವರ ಹೃದಯ ಕ್ಷೇತ್ರದಲ್ಲಿ ನಿವಾಸಿಸುತ್ತಿದ್ದಾನೆಂದು ತಿಳಿಯುತ್ತದೆ. ಇನ್ನು ಜೀವಿಗಳು ದುಃಖ ಪಡುವುದೇತಕ್ಕೆ? ಸಂಸಾರ ಪರಿತಾಪವೇಕೆ? ಅವರವರ ಹೃದಯ ಸ್ಥಾನವನ್ನು ಅಲಂಕರಿಸುವ ಆ ದೇವದೇವನನ್ನು-ದೃಗ್ದೃಶ್ಯ ವಿವೇಕದಿಂದ ತಿಳಿದುಕೊಂಡರೆ ಸಾಕು. ಆ ಪ್ರತ್ಯಗಾತ್ಮನನ್ನು ತಿಳಿದಿದ್ದೇ ಆದರೆ ಆ ಪರಮಾತ್ಮನನ್ನು ತಿಳಿದ ಹಾಗೆಯೇ.

ಈ ಸತ್ಯವನ್ನು ತಿಳಿದರೆ, ಅಂದರೆ ತನ್ನ ದೇಹದಲ್ಲಿ ಸಾಕ್ಷಿಯಾಗಿರುವ ಪ್ರಜ್ಞೆ ಪರಮಾತ್ಮನೇ (ಪ್ರಜ್ಞಾನಂ ಬ್ರಹ್ಮ) ಎಂದು ತಿಳಿದರೆ ಇನ್ನು ಜೀವಿಗೆ

ಅಪರಿಮಿತವಾದ ಧೈರ್ಯವೂ, ಆನಂದವೂ ಉಂಟಾಗುವುದು. ಪ್ರಪಂಚದಲ್ಲಿ ಬೇರೆ ಯಾವ ವಿದ್ಯೆಯಿಂದಾಗಲಿ, ಜ್ಞಾನದಿಂದಾಗಲಿ ಇಂತಹ ಧೈರ್ಯ ಜೀವಿಗೆ ಉಂಟಾಗುವುದಿಲ್ಲ. ಆದ್ದರಿಂದಲೇ ಅನೇಕ ಜ್ಞಾನಗಳು- ಸಂಗೀತ, ಶಿಲ್ಪ, ರಾಜಕೀಯ ಜ್ಞಾನಗಳು ಮುಂತಾದುವು ಲೋಕದಲ್ಲಿ ಇದ್ದರೂ ಈ ಎಲ್ಲಾ ಜ್ಞಾನಗಳಿಗಿಂತ ಕ್ಷೇತ್ರಕ್ಷೇತ್ರಜ್ಞ ವಿಭಾಗ ಸಂಬಂಧವಾದ ಜ್ಞಾನವೇ ನಿಜವಾದ ಜ್ಞಾನವೆಂದು ಭಗವಂತನು ಇಲ್ಲಿ ತಿಳಿಸಿದ್ದಾನೆ. ಇಷ್ಟೇ ಅಲ್ಲದೆ 'ಮಮ ಮತಂ' - ಇದು ನನ್ನ ನಿಶ್ಚಿತ ಅಭಿಪ್ರಾಯ-ಎಂದು ಹೇಳುವುದರಿಂದ ಈ ವಾಕ್ಯದ ಪರಮ ಸತ್ಯತೆಯನ್ನು ವ್ಯಕ್ತಪಡಿಸಿದಂತಾಗಿದೆ. ಆದ್ದರಿಂದ ಸಾಧಕಲೋಕವು ಇಂತಹ ಭಗವನ್ಮುಖಾರವಿಂದ ಸಂಜನಿತ ಪ್ರತಿಜ್ಞಾಪೂರ್ವಕ ವಚನಗಳಲ್ಲಿ ಅಪರಿಮಿತವಾದ ವಿಶ್ವಾಸವಿಟ್ಟು ಅಂತಹ ಕ್ಷೇತ್ರಕ್ಷೇತ್ರಜ್ಞವಿಭಾಗ ಜ್ಞಾನವನ್ನು ದೃಗ್ದೃಶ್ಯ ವಿವೇಕವನ್ನು ಬೇರೆ ವಿದ್ಯೆಗಳಿಗಿಂತಲೂ ಮೊದಲೇ ತಪ್ಪದೆ ಸಾಧಿಸಿಕೊಂಡು ತನ್ನಲ್ಲಿಯೇ ಸರ್ವಲೋಕಾಧೀಶ್ವರನನ್ನು ಅನುಭೂತಿ ಗೊಳಿಸಿಕೊಂಡು ಜನ್ಮವನ್ನು ಸಾರ್ಥಕಗೊಳಿಸಿಕೊಳ್ಳಬೇಕು.

ಮತ್ತೆ ಸಮಸ್ತ ಕ್ಷೇತ್ರಗಳಲ್ಲಿ ತಾನೇ ಕ್ಷೇತ್ರಜ್ಞನೆಂದು ಹೇಳಿರುವುದರಿಂದ, ಶ್ರೀ ಕೃಷ್ಣಮೂರ್ತಿ ಕೇವಲ ಮಾನವ ಮಾತ್ರನಲ್ಲವೆಂದು, ಸರ್ವಭೂತಗಳಲ್ಲಿ ಅಧಿಷ್ಠಾನ ರೂಪದಲ್ಲಿ ಬೆಳಗುತ್ತಿರುವ ಪರಮಾತ್ಮನೇ ಎಂದು ಸ್ಪಷ್ಟವಾಗುತ್ತದೆ. ಇನ್ನು 'ಸರ್ವಕ್ಷೇತ್ರೇಷು' ಎಂದು ಹೇಳುವುದರಿಂದ, ಯಾವುದೋ ಒಂದು ಪ್ರಾಣಿಯಲ್ಲಿ, ಜಾತಿಯಲ್ಲಿ, ವರ್ಣದಲ್ಲಿ ಅಲ್ಲದೆ ಸಮಸ್ತ ಪ್ರಾಣಿ ಕೋಟಿಗಳಲ್ಲಿ ಅಂದರೆ ಬ್ರಾಹ್ಮಣ, ಚಂಡಾಲ, ಕ್ರಿಮಿಕೀಟಾದಿಗಳಲ್ಲಿ ಸರ್ವತ್ರ ಸತ್ತಾಸಾಮಾನ್ಯರೂಪದಲ್ಲಿ ಪರಮಾತ್ಮನು ವಾಸಿಸುತ್ತಿದ್ದಾನೆಂದು ತಿಳಿಯುತ್ತದೆ. 'ಕ್ಷೇತ್ರಜ್ಞಂ' ಎಂದು ಹೇಳುವುದರಿಂದ ಪರಮಾತ್ಮನು ಪ್ರಜ್ಞಾರೂಪನೇ ಆಗಲಿ ಜಡ ಅಥವ ಶೂನ್ಯ ರೂಪನಲ್ಲವೆಂದು ಅರ್ಥವಾಗುತ್ತದೆ.

ಪ್ರ : ಸಮಸ್ತ ಪ್ರಾಣಿಗಳಲ್ಲಿ ಕ್ಷೇತ್ರಜ್ಞ ರೂಪದಲ್ಲಿ (ಉಪಾಧಿಯನ್ನು ತಿಳಿದು) ವರ್ತಿಸುವವನು ಯಾರು?

ಉ : ಸಾಕ್ಷಾತ್ ಪರಮಾತ್ಮನೇ.

ಪ್ರ : ಆದ್ದರಿಂದ ಪರಮಾತ್ಮನು ಎಲ್ಲಿದ್ದಾನೆ ಎಂದು ತಿಳಿಯುತ್ತದೆ?

ಉ : ಸಮಸ್ತ ಪ್ರಾಣಿಗಳ ಹೃದಯದಲ್ಲಿ ಸಾಕ್ಷೀ ರೂಪದಲ್ಲಿ ಬೆಳಗುತ್ತಿದ್ದಾನೆಂದು ತಿಳಿಯುತ್ತದೆ.

ಪ್ರ : ಯಾವುದೋ ಕೆಲವು ಪ್ರಾಣಿಗಳಲ್ಲಿ ಆತನು ನಿವಸಿಸುವನೇ?

ಉ : ಇಲ್ಲ - 'ಸರ್ವ' ಪ್ರಾಣಿಗಳಲ್ಲಿ.

ಪ್ರ : ಭಗವಂತನು ಜಡ ರೂಪನೇ ಅಥವ ಶೂನ್ಯ ರೂಪನೇ?

ಉ : ಚಿನ್ಮಯ ರೂಪನು, ಪ್ರಜ್ಞಾಸ್ವರೂಪನು, ಆದ್ದರಿಂದಲೇ ಆತನನ್ನು 'ಕ್ಷೇತ್ರಜ್ಞ' ಎಂದು ಕರೆಯುವರು.

ಪ್ರ : ಪ್ರಪಂಚದಲ್ಲಿ ವಾಸ್ತವವಾದ ಜ್ಞಾನವು ಯಾವುದು?

ಉ : "ಕ್ಷೇತ್ರ ಕ್ಷೇತ್ರಜ್ಞರನ್ನು ವಿಭಜಿಸಿ ತಿಳಿಸುವ ಜ್ಞಾನವು ಅಂದರೆ ದೃಗ್ದೃಶ್ಯ ವಿವೇಕವೇ ವಾಸ್ತವವಾದ ಜ್ಞಾನ - ಇದು ನನ್ನ ನಿಶ್ಚಯ" ಎಂದು ಭಗವಂತನು ಹೇಳಿರುವನು (ಮತಂ ಮಮ).

**ಅ||** ಈ ಪ್ರಕಾರವಾಗಿ ಕ್ಷೇತ್ರ ಕ್ಷೇತ್ರಜ್ಞರನ್ನು ಕುರಿತು ಮೊದಲು ಸಂಕ್ಷೇಪವಾಗಿ ಹೇಳಿ ಇನ್ನು ಅವುಗಳನ್ನು ಕುರಿತು ವಿವರವಾಗಿ ಹೇಳುತ್ತಿದ್ದಾನೆ-

**೪. ತತ್ಕ್ಷೇತ್ರಂ ಯಚ್ಚ ಯಾದೃಕ್ಚ ಯದ್ವಿಕಾರಿ ಯತಶ್ಚ ಯತ್**
**ಸ ಚ ಯೋ ಯತ್ಪ್ರಭಾವಶ್ಚ ತತ್ಸಮಾಸೇನ ಮೇ ಶೃಣು**

**ಅರ್ಥ:** ತತ್ಕ್ಷೇತ್ರಂ=ಆ ಕ್ಷೇತ್ರವು; ಯತ್ ಚ=ಯಾವುದೋ; ಯಾದೃಕ್ಚ= ಎಂತಹದೋ; ಯತ್ ವಿಕಾರಿ=ಎಂತಹ ವಿಕಾರಗಳನ್ನು ಹೊಂದಿದೆಯೋ; ಯತಃ ಚ ಯತ್=ಯಾವುದರಿಂದ ಯಾವ ರೀತಿಯಾಗಿ ಉತ್ಪನ್ನವಾಗಿದೆಯೋ; ಸಃ ಚ=ಆ ಕ್ಷೇತ್ರಜ್ಞನು; ಯಃ=ಯಾವನೋ; ಯತ್ಪ್ರಭಾವಃ ಚ=ಎಂತಹ ಪ್ರಭಾವವುಳ್ಳವನೋ; ತತ್=ಅದನ್ನು (ಆ ವಿಷಯಗಳನ್ನೆಲ್ಲಾ); ಸಮಾಸೇನ= ಸಂಕ್ಷೇಪವಾಗಿ; ಮೇ=ನನ್ನಿಂದ; ಶೃಣು=ಕೇಳು.

**ತಾ||** ಆ ಕ್ಷೇತ್ರವು ಯಾವುದೋ ಎಂತಹುದೋ, ಎಂತಹ ವಿಕಾರಗಳನ್ನು ಹೊಂದಿದೆಯೋ, ಯಾವುದರಿಂದ ಯಾವ ಪ್ರಕಾರವಾಗಿ ಉತ್ಪನ್ನವಾಗಿದೆಯೋ, ಆ ಕ್ಷೇತ್ರಜ್ಞನು ಯಾರೋ, ಎಂತಹ ಪ್ರಭಾವವನ್ನು ಉಳ್ಳವನೋ, ಆ ವಿಷಯಗಳನ್ನೆಲ್ಲಾ ಸಂಕ್ಷೇಪವಾಗಿ ನನ್ನಿಂದ ಕೇಳು.

**ವ್ಯಾಖ್ಯೆ:** ಭಗವಂತನು ತಾನು ಹೇಳುವ ವಾಕ್ಯಗಳ ಸಾರವನ್ನು ಪ್ರಾರಂಭದಲ್ಲಿ ಸೂಚಿಸಿರುವನು. ಹೇಗೆಂದರೆ - ಕ್ಷೇತ್ರವನ್ನು ವಿಕಾರವಾದದ್ದೆಂದು (ಯದ್ವಿಕಾರಿ) ಕ್ಷೇತ್ರಜ್ಞನನ್ನು ಪ್ರಭಾವಶಾಲಿಯೆಂದು (ಯತ್ಪ್ರಭಾವಶ್ಚ) ವರ್ಣಿಸಿದನು. ವಾಸ್ತವವಾಗಿ ದೇಹಾದಿರೂಪವಾದ ಉಪಾಧಿ ಹೆಚ್ಚು ವಿಕಾರದಿಂದ ಕೂಡಿ ನಶ್ವರವಾದದ್ದಾಗಿದೆ. ಆತ್ಮ ಶಾಶ್ವತವಾದುದಾಗಿದ್ದು ಅಮಿತ ಪ್ರಭಾವವುಳ್ಳದ್ದಾಗಿಯೂ ಇದೆ.

'ಸಮಾಸೇನ ಮೇಶೃಣು' - ಈ ವಿಚಾರಣೆಯೆಲ್ಲವನ್ನು ಸಂಕ್ಷೇಪವಾಗಿ ತಿಳಿಸುವೆನೆಂದು ಭಗವಂತನು ಹೇಳಿದನು. ಏಕೆಂದರೆ, ಈ ದೃಗ್ದೃಶ್ಯ ಪದಾರ್ಥ ವಿಚಾರಣೆಯೆಲ್ಲವೂ ಒಂದು ದೊಡ್ಡ ಗ್ರಂಥ. ಯುದ್ಧ ಸಮಯವಾದುದರಿಂದ ಅದೆಲ್ಲವನ್ನೂ ಹೇಳಲು ಬಹುಶಃ ಅನುಕೂಲವಿಲ್ಲದಿದ್ದರಿಂದ ಸಂಕ್ಷೇಪವಾಗಿ ಹೇಳಬೇಕೆಂದುಕೊಂಡಿರಬಹುದು.

**ಅ||** ಕ್ಷೇತ್ರ ಕ್ಷೇತ್ರಜ್ಞ ಸಂಬಂಧ ಜ್ಞಾನವನ್ನು ಪ್ರಶಂಸಿಸುತ್ತಿದ್ದಾನೆ-

**೫. ಋಷಿಭಿರ್ಬಹುಧಾ ಗೀತಂ ಛಂದೋಭಿರ್ವಿವಿಧೈಃ ಪೃಥಕ್**
**ಬ್ರಹ್ಮ ಸೂತ್ರಪದೈಶ್ಚೈವ ಹೇತುಮದ್ಭಿರ್ವಿನಿಶ್ಚಿತೈಃ**

**ಅರ್ಥ:** (ಆ ಜ್ಞಾನವು) ಋಷಿಭಿಃ=ಋಷಿಗಳಿಂದ; ಬಹುಧಾಃ=ಅನೇಕ ಪ್ರಕಾರಗಳಾಗಿ; ಪೃಥಕ್=ಬೇರೆಬೇರೆಯಾಗಿ; ವಿವಿಧೈಃ=ಅನೇಕ ವಿಧಗಳಾದ; ಛಂದೋಭಿಃ=ವೇದಗಳಿಂದ; ಗೀತಂ=ಪ್ರತಿಪಾದಿಸಲ್ಪಟ್ಟ; (ಮತ್ತೆ) ಹೇತುಮದ್ಭಿಃ=ಹೇತುಗಳಿಂದ (ಯುಕ್ತಗಳಿಂದ) ಕೂಡಿದ್ದು; ವಿನಿಶ್ಚಿತೈಃ= ವಿಶೇಷವಾಗಿ ನಿಶ್ಚಯಿಸಲ್ಪಟ್ಟ; ಬ್ರಹ್ಮಸೂತ್ರ ಪದೈಃ ಚ ಏವ='ಬ್ರಹ್ಮಸೂತ್ರ' ವಾಕ್ಯಗಳಿಂದ; (ಗೀತಂ=ಹೇಳಲ್ಪಟ್ಟಿದೆ).

**ತಾ||** (ಈ ಕ್ಷೇತ್ರ ಕ್ಷೇತ್ರಜ್ಞ ಜ್ಞಾನವು) ಋಷಿಗಳಿಂದ ಅನೇಕ ಪ್ರಕಾರಗಳಾಗಿ ಹೇಳಲ್ಪಟ್ಟಿದೆ. ನಾನಾ ವಿಧಗಳಾಗಿ ವೇದಗಳಲ್ಲಿ ಬೇರೆ ಬೇರೆ ರೀತಿಗಳಲ್ಲಿ ಪ್ರತಿಪಾದಿಸಲ್ಪಟ್ಟಿದೆ. ಮತ್ತೆ ಹೇತು (ಯುಕ್ತ)ಗಳಿಂದ ಕೂಡಿದ್ದು ವಿಶೇಷವಾಗಿ ನಿಶ್ಚಯಿಸಲ್ಪಟ್ಟ ಬ್ರಹ್ಮಸೂತ್ರ ವಾಕ್ಯಗಳಿಂದ ಅದು ಹೇಳಲ್ಪಟ್ಟಿದೆ.

**ವ್ಯಾಖ್ಯೆ:** ತಾನು ಹೇಳಬೇಕೆಂದು ಕೊಂಡಿರುವ ಕ್ಷೇತ್ರ ಕ್ಷೇತ್ರಜ್ಞ ಜ್ಞಾನದ ಮಹಿಮೆಯನ್ನು ತಿಳಿಸಲು ಭಗವಂತನು ಅನುಭವಜ್ಞರಾದ ಪರಮ ಋಷಿಗಳ ವಾಕ್ಯಗಳನ್ನು ನಿದರ್ಶನಾರೂಪವಾಗಿ ತೋರಿಸುತ್ತಿದ್ದಾನೆ-

'ಋಷಿಭಿರ್ಬಹುಧಾ ಗೀತಂ'- ಋಷಿಗಳೆಂದರೆ ಇಂದ್ರಿಯಗಳನ್ನು ಜಯಿಸಿದವರು ಆತ್ಮ ಸಾಕ್ಷಾತ್ಕಾರವನ್ನು ಹೊಂದಿರುವ ಮಹನೀಯರು. ಅವರು ಏನನ್ನಾದರೂ ಹೇಳಿದರೆ ಅದರಲ್ಲಿ ಬಹಳಷ್ಟು ಸಾರವು, ಮಹಿಮೆ, ವಿಶೇಷತೆ ತಪ್ಪದೆ ಇರುವುದು. ಅಂತಹ ಋಷಿಗಳು ಒಮ್ಮೆಯಲ್ಲ, ಅನೇಕ ಸಾರಿ - 'ಬಹುಧಾ' ಅನೇಕ ವಿಧಗಳಿಂದ ಆ ಜ್ಞಾನವನ್ನು ಕುರಿತು ತಿಳಿಸಿರುವರೆಂದು ಹೇಳಿರುವುದರಿಂದ ಅದಕ್ಕೆ ಬಹಳ ಪ್ರಾಮುಖ್ಯತೆ ಇದೆಯೆಂದು ತಿಳಿಯುತ್ತದೆ.

'ಹೇತುಮದ್ಭಿರ್ವಿನಿಶ್ಚಿತೈಃ'- ಆ ವ್ಯಾಸಾದಿ ಮಹರ್ಷಿಗಳು ಹೇಳಿದ ಬ್ರಹ್ಮ ಸೂತ್ರಾದಿ, ಬ್ರಹ್ಮ ಪ್ರತಿಪಾದಕ ವಾಕ್ಯಗಳು ಸಾಮಾನ್ಯವಾದವುಗಳಲ್ಲ. ಹೇತುವಾದದ (Logic Science) ಪರೀಕ್ಷೆಗೆ ಬದ್ಧವಾಗಿರುವುವು, ಸಹೇತುಕವಾದುವು. ಸ್ವಾನುಭವದಿಂದ ಚೆನ್ನಾಗಿ ನಿಶ್ಚಯಿಸಲ್ಪಟ್ಟವಾದವುಗಳಾದ್ದರಿಂದ 'ನಿಶ್ಚಿತೈಃ' ಎಂದು ಹೇಳದೆ 'ವಿನಿಶ್ಚಿತೈಃ' (ಚೆನ್ನಾಗಿ ನಿಶ್ಚಯಿಸಲ್ಪಟ್ಟವು) ಎಂದು ಹೇಳಲಾಗಿದೆ. ಇವು ಪರಮ ಸತ್ಯಗಳೆಂದರ್ಥ. ಆದ್ದರಿಂದ ಶ್ರೀ ಕೃಷ್ಣ ಪರಮಾತ್ಮನು ಹೇಳಲಿರುವ ಈ ಕ್ಷೇತ್ರ ಕ್ಷೇತ್ರಜ್ಞ ವಿಭಾಗ ಜ್ಞಾನ ಎಷ್ಟು ವಿಶೇಷವಾದುದೋ, ಅದರ ಮೇಲೆ ಜನರಿಗೆ ಎಷ್ಟು ವಿಶ್ವಾಸವಿರಬೇಕೋ ಈ ಮೇಲಿನ ಭಗವದ್ವಾಕ್ಯಗಳಿಂದ ಸ್ಪಷ್ಟವಾಗುತ್ತದೆ.

**ಅ||** ಇನ್ನು ಕ್ಷೇತ್ರದ ಸ್ವರೂಪವನ್ನು ವಿವರಿಸಿ ಹೇಳುತ್ತಿದ್ದಾನೆ-

**೬. ಮಹಾಭೂತಾನ್ಯಹಂಕಾರೋ ಬುದ್ಧಿರವ್ಯಕ್ತಮೇವ ಚ**
**ಇಂದ್ರಿಯಾಣಿ ದಶೈಕಂ ಚ ಪಂಚ ಚೇಂದ್ರಿಯಗೋಚರಾಃ**
**೭. ಇಚ್ಛಾದ್ವೇಷಸ್ಸುಖಂ ದುಃಖಂ ಸಂಘಾತಃ ಚೇತನಾ ಧೃತಿಃ**
**ಏತತ್ಕ್ಷೇತ್ರಂ ಸಮಾಸೇನ ಸವಿಕಾರ ಮುದಾಹೃತಮ್**

**ಅರ್ಥ:** ಮಹಾಭೂತಾನಿ=ಪಂಚಮಹಾಭೂತಗಳು; ಅಹಂಕಾರಃ= ಅಹಂಕಾರವು; ಬುದ್ಧಿಃ=ಬುದ್ಧಿ; ಅವ್ಯಕ್ತಂ ಏವ ಚ=ಮೂಲ ಪ್ರಕೃತಿಯು; ದಶ ಏಕಂ ಚ ಇಂದ್ರಿಯಾಣಿ=ಪಂಚ ಜ್ಞಾನೇಂದ್ರಿಯಗಳು, ಪಂಚ ಕರ್ಮೇಂದ್ರಿಯಗಳು ಹಾಗು ಒಂದು ಮನಸ್ಸು - ಒಟ್ಟು ಹನ್ನೊಂದು ಇಂದ್ರಿಯಗಳು; ಇಂದ್ರಿಯ ಗೋಚರಾಃ ಪಂಚ ಚ=(ಶಬ್ದ ಸ್ಪರ್ಶಾದಿ) ಇಂದ್ರಿಯ ವಿಷಯಗಳು ಐದು; ಇಚ್ಛಾ=ಕೋರಿಕೆ; ದ್ವೇಷಃ=ದ್ವೇಷವು; ಸುಖಂ=(ದೃಶ್ಯ) ಸುಖವು; ದುಃಖಂ=ದುಃಖ; ಸಂಘಾತಃ=ದೇಹೇಂದ್ರಿ ಯಾದಿಗಳ ಸಮುದಾಯವು; ಚೇತನಾ=ಅರಿವು (ವೃತ್ತಿ ಜ್ಞಾನ); ಧೃತಿಃ=ಧೃತಿ (ಎನ್ನುವ); ಏತತ್=ಈ; ಸವಿಕಾರಂ=ವಿಕಾರಗಳಿಂದ ಕೂಡಿದ; ಕ್ಷೇತ್ರಂ=ಕ್ಷೇತ್ರವು; ಸಮಾಸೇನ= ಸಂಕ್ಷೇಪವಾಗಿ; ಉದಾಹೃತಂ=ಹೇಳಲ್ಪಟ್ಟಿದೆ.

**ತಾ||** ಪಂಚಮಹಾಭೂತಗಳು, ಅಹಂಕಾರ, ಬುದ್ಧಿ, ಮೂಲಪ್ರಕೃತಿ, ಹನ್ನೊಂದು ಇಂದ್ರಿಯಗಳು (ದಶೇಂದ್ರಿಯಗಳು+ಮನಸ್ಸು), ಐದು ಇಂದ್ರಿಯ ವಿಷಯಗಳು (ಶಬ್ದ ಸ್ಪರ್ಶಾದಿಗಳು), ಇಚ್ಛೆ (ಕೋರಿಕೆ), ದ್ವೇಷ, ಸುಖ, ದುಃಖ, ದೇಹೇಂದ್ರಿಯಾದಿಗಳ ಸಮುದಾಯ, ಅರಿವು (ಚೇತನ) (ವೃತ್ತಿ ಜ್ಞಾನ), ಧೃತಿ ಎನ್ನುವ ಈ ಎಲ್ಲವುಗಳ ಸಮುದಾಯವಾದ ವಿಕಾರಯುತವಾದ ಕ್ಷೇತ್ರವು ಸಂಕ್ಷೇಪವಾಗಿ ನನ್ನಿಂದ ಹೇಳಲ್ಪಟ್ಟಿದೆ.

**ವ್ಯಾಖ್ಯೆ:** ಕ್ಷೇತ್ರವೆಂದರೆ ಸ್ಥೂಲದೇಹವೊಂದೇ ಅಲ್ಲ. ಸಮಸ್ತ ದೃಶ್ಯವೆಲ್ಲವೂ ಕ್ಷೇತ್ರವೇ. ಸ್ಥೂಲ, ಸೂಕ್ಷ್ಮ ಪಂಚಮಹಾಭೂತಗಳು, ಮನಸ್ಸು, ಬುದ್ಧಿ, ಅತಿ ಸೂಕ್ಷ್ಮವಾದ ಅವ್ಯಕ್ತವೂ (ಮೂಲ ಪ್ರಕೃತಿಯೂ) ಕೂಡ ಕ್ಷೇತ್ರದ ಲೆಕ್ಕಕ್ಕೇ ಬರುವುದು. ಮನಸ್ಸು, ಬುದ್ಧಿಗಳೂ ಕೂಡ ಕ್ಷೇತ್ರಕ್ಕೆ ಸೇರಿರುವಾದ್ದರಿಂದ ಅವುಗಳ ವೃತ್ತಿಗಳಾದ ದ್ವೇಷಾದಿ ದುರ್ವೃತ್ತಿಗಳು, ಧೃತ್ಯಾದಿ ಸದ್ವೃತ್ತಿಗಳೂ ಕೂಡ ಕ್ಷೇತ್ರದ ಕೆಳಗೇ ಬರುವುವು. ದೃಶ್ಯರಹಿತ, ನಿಃಸಂಕಲ್ಪಾತ್ಮ ಸ್ಥಿತಿಯಲ್ಲಿ ಧೈರ್ಯಾದಿ ಸದ್ವೃತ್ತಿಗಳನ್ನೂ ಸಹ ದಾಟಿಹೋಗಬೇಕಾಗಿರುವುದು.

'ಸವಿಕಾರಂ' ಎಂದು ಹೇಳಿರುವುದರಿಂದ ಈ ದೃಶ್ಯವೆಲ್ಲವೂ (ಕ್ಷೇತ್ರವು) ವಿಕಾರಗಳಿಗೆ ಒಳಗಾಗಿರುವುದೆಂದೂ, ದೃಗ್ಸ್ವರೂಪನಾದ ಕ್ಷೇತ್ರಜ್ಞನು ಒಬ್ಬನೇ ನಿರ್ವಿಕಾರಿಯೆನ್ನುವುದು ತಾತ್ಪರ್ಯ. ಈ ಕ್ಷೇತ್ರದಲ್ಲಿ 'ಸುಖಂ' ಎನ್ನುವುದನ್ನೂ ಕೂಡ ಸೇರಿಸಿರುವುದರಿಂದ ಅಂತಹ ದೃಶ್ಯ ಸೌಖ್ಯಕ್ಕಾಗಿ ಕೈಚಾಚದೆ ನಿರ್ವಿಕಾರ ಆತ್ಮಸುಖಕ್ಕಾಗಿ ಯತ್ನಿಸಬೇಕು ಎಂದು ಹೇಳಿದಂತಾಗಿದೆ.

'ದೃಶ್ಯ' ಕ್ಷೇತ್ರವೆಂದರೆ ಸಾಮಾನ್ಯವಾಗಿ ಈ ದೇಹ, ಈ ಕಾಣಿಸುವ ಪ್ರಪಂಚವೆಂದು ಜನರು ತಿಳಿಯುವರು. ಆದರೆ ವಾಸ್ತವವಾಗಿ ಸೂಕ್ಷ್ಮ ಪಂಚಭೂತಗಳು, ಮನಸ್ಸು, ಬುದ್ಧಿ, ಮೂಲ ಪ್ರಕೃತಿಯೂ ಕೂಡ 'ದೃಶ್ಯವೇ' (ಕ್ಷೇತ್ರ) ಎಂದು ಇಲ್ಲಿ ಸ್ಪಷ್ಟವಾಗಿ ಹೇಳಲಾಗಿದೆ. ಆದ್ದರಿಂದ ಜಿಜ್ಞಾಸು ತಾನು ದೃಕ್-ವಸ್ತುವಾದ ಆತ್ಮವೇ ಎಂದು ಭಾವಿಸಿ ಈ ದೇಹಾದಿ ದೃಶ್ಯವನ್ನು, ಮನಸ್ಸನ್ನು, ಬುದ್ಧಿಯನ್ನು, ಕಾಮಾದಿ ಬುದ್ಧಿ ವೃತ್ತಿಗಳನ್ನು ತನಗಿಂತ ಬೇರೆಯೆಂದು ನೋಡುತ್ತಾ ಅವುಗಳೊಂದಿಗೆ ತಾದಾತ್ಮ್ಯವನ್ನು ಹೊಂದದೆ ಕ್ರಮವಾಗಿ ಅವುಗಳನ್ನು ಜಯಿಸಿ ಆತ್ಮಸ್ವರೂಪದಲ್ಲಿ ಸ್ಥಿರತೆಯನ್ನು ಸಂಪಾದಿಸಬೇಕು.

ಭಗವಂತನು ಮಾಡಿದ ಕ್ಷೇತ್ರದ ಈ ವಿವರಣೆ ಆತ್ಮಾನಾತ್ಮ ವಿಚಾರಣಾ ಪರನಿಗೆ ಬಹಳ ಉಪಯೋಗವಾಗುವುದು. ಏಕೆಂದರೆ, ಸಾಧಕನಿಗೆ ತನ್ನಿಂದ ಯಾವುದನ್ನು ಬೇರ್ಪಡಿಸಬೇಕೆನ್ನುವುದನ್ನು ಇದರಲ್ಲಿ ಸ್ಪಷ್ಟವಾಗಿ ತಿಳಿಸಲಾಗಿದೆ. ಪ್ರಪಂಚವನ್ನೇ ಅಲ್ಲದೆ, ದೇಹವನ್ನೇ ಅಲ್ಲದೆ, ಮನಸ್ಸನ್ನು ಕೂಡ ತನ್ನಿಂದ ಬೇರೆ ಮಾಡುವ (ಇಲ್ಲವೆ, ಬೇರೆಯಾಗಿ ಕಾಣುವ) ಮಹೋನ್ನತವಾದ ಅಭ್ಯಾಸವು ಇದರಿಂದ ಸಿದ್ಧಿಸುವುದು.

ಪ್ರ : ಕ್ಷೇತ್ರವೆಂದರೆ ಏನು?

ಉ: ೧) ಪಂಚಮಹಾಭೂತಗಳು ೨) ಅಹಂಕಾರ ೩) ಬುದ್ಧಿ ೪) ಮೂಲ ಪ್ರಕೃತಿ ೫) ಹನ್ನೊಂದು ಇಂದ್ರಿಯಗಳು ೬) ಐದು ಇಂದ್ರಿಯ ವಿಷಯಗಳು ೭) ಕೋರಿಕೆ (ಇಚ್ಛೆ) ೮) ದ್ವೇಷ ೯) (ದೃಶ್ಯ) ಸುಖ ೧೦) ದುಃಖ ೧೧) ಸಂಘಾತ (ದೇಹೇಂದ್ರಿಯಾದಿಗಳ ಸಮುದಾಯ) ೧೨) ಚೇತನ (ವೃತ್ತಿ ಜ್ಞಾನ) ೧೩) ಧೃತಿ.

ಪ್ರ : ಕ್ಷೇತ್ರವು ಎಂತಹದು?

ಉ : ವಿಕಾರಮಯವಾದುದು.

**ಅ||** ಇನ್ನು ಜ್ಞಾನವೆಂದರೆ ಏನು ಎನ್ನುವುದನ್ನು ಐದು ಶ್ಲೋಕಗಳ ಮೂಲಕ ಹೇಳಲಾಗಿದೆ-

**೮. ಅಮಾನಿತ್ವಮದಂಭಿತ್ವಮಹಿಂಸಾ ಕ್ಷಾಂತಿರಾರ್ಜವಮ್**
**ಆಚಾರ್ಯೋಪಾಸನಂ ಶೌಚಂ ಸ್ಥೈರ್ಯಮಾತ್ಮವಿನಿಗ್ರಹಃ**
**೯. ಇಂದ್ರಿಯಾರ್ಥೇಷು ವೈರಾಗ್ಯಮನಹಂಕಾರ ಏವ ಚ**
**ಜನ್ಮಮೃತ್ಯುಜರಾವ್ಯಾಧಿದುಃಖದೋಷಾನುದರ್ಶನಮ್**
**೧೦. ಅಸಕ್ತಿರನಭಿಷ್ವಂಗಃ ಪುತ್ರದಾರ ಗೃಹಾದಿಷು**
**ನಿತ್ಯಂ ಚ ಸಮಚಿತ್ತತ್ವಮಿಷ್ಟಾನಿಷ್ಟೋಪಪತ್ತಿಷು**
**೧೧. ಮಯಿ ಚಾನನ್ಯಯೋಗೇನ ಭಕ್ತಿರವ್ಯಭಿಚಾರಿಣೀ**
**ವಿವಿಕ್ತ ದೇಶ ಸೇವಿತ್ವಮರತಿರ್ಜನಸಂಸದಿ**

೧೨. ಆಧ್ಯಾತ್ಮಜ್ಞಾನನಿತ್ಯತ್ವಂ ತತ್ವಜ್ಞಾನಾರ್ಥದರ್ಶನಮ್
ಏತಜ್ಞಾನಮಿತಿ ಪ್ರೋಕ್ತಮಜ್ಞಾನಂ ಯದತೋಽನ್ಯಥಾ

**ಅರ್ಥ:** ಅಮಾನಿತ್ವಂ=ತನನ್ನು ತಾನು ಹೊಗಳಿಕೊಳ್ಳದೆ ಇರುವುದು; ಅದಂಭಿತ್ವಂ=ಡಂಭವಿಲ್ಲದೆ ಇರುವುದು; ಅಹಿಂಸಾ=(ಮನೋ ವಾಣಿಗಳಿಂದ) ಪರಪ್ರಾಣಿಗಳನ್ನು ಪೀಡಿಸದೇ ಇರುವುದು; ಕ್ಷಾಂತಿಃ= ಸಹನೆಯಿಂದಿರುವುದು; ಆರ್ಜವಮ್=ಋಜುತ್ವ (ಕುಟಿಲತೆ ಇಲ್ಲದೆ ಇರುವುದು); ಆಚಾರ್ಯೋಪಾಸನಂ=ಗುರುಸೇವೆ ತತ್ಪರನಾಗಿರುವುದು; ಶೌಚಂ=ಬಾಹ್ಯಾಭ್ಯಂತರ ಶುಚಿತ್ವ (ಶುದ್ಧಿ) ಹೊಂದಿರುವುದು; ಸ್ಥೈರ್ಯಂ=ಸನ್ಮಾರ್ಗದಲ್ಲಿ, ಮೋಕ್ಷ ಪ್ರಯತ್ನದಲ್ಲಿ ಸ್ಥಿರವಾಗಿರುವುದು; ಆತ್ಮ ವಿನಿಗ್ರಹಃ=ಮನಸ್ಸನ್ನು ಪರಿಪೂರ್ಣವಾಗಿ ನಿಗ್ರಹಿಸುವುದು; ಇಂದ್ರಿಯಾರ್ಥೇಷು=ಇಂದ್ರಿಯ ವಿಷಯಗಳಾದ ಶಬ್ದ ಸ್ಪರ್ಶಾದಿಗಳಲ್ಲಿ; ವೈರಾಗ್ಯಂ=ವಿರಕ್ತಿಯನ್ನು ಹೊಂದಿರುವುದು; ಅನಹಂಕಾರಃ ಏವ ಚ=ಅಹಂಕಾರವಿಲ್ಲದೆ ಇರುವುದು; ಜನ್ಮ ಮೃತ್ಯು, ಜರಾ, ವ್ಯಾಧಿ, ದುಃಖ ದೋಷಾನುದರ್ಶನಮ್=ಜನನ, ಮರಣ, ವೃದ್ಧಾಪ್ಯ, ರೋಗ- ಎನ್ನುವಗಳಿಂದ ಉಂಟಾಗುವ ದುಃಖ, ದೋಷವನ್ನು ಮಾತು ಮಾತಿಗೆ ಸ್ಮರಿಸುವುದು; ಪುತ್ರದಾರ ಗೃಹಾದಿಷು=ಪುತ್ರ (ಸಂತಾನ), ಪತ್ನಿ, ಮನೆ ಮುಂತಾದುವುಗಳಲ್ಲಿ; ಅಸಕ್ತಿಃ ನ=(ಮತ್ತೆ) ಆಸಕ್ತಿಯಿಲ್ಲದೆ ಇರುವುದು; ಅನಭಿಷ್ವಂಗಃ=ಸ್ಪರ್ಶವಿಲ್ಲದೆ ಇರುವುದು (ಅವರಿಗೆ ಉಂಟಾಗುವ ಸುಖದುಃಖಗಳು ತನಗೇ ಉಂಟಾಗಿವೆಯೆನ್ನುವ ಭಾವ ಇಲ್ಲದೆ ಇರುವುದು). ಇಷ್ಟ, ಅನಿಷ್ಟ ಉಪಪತ್ತಿಷು=ಇಷ್ಟಾನಿಷ್ಟಗಳು, ಶುಭಾಶುಭಗಳು ಸಂಪ್ರಾಪ್ತವಾದಾಗ; ನಿತ್ಯಂ=ಯಾವಾಗಲೂ; ಸಮಚಿತ್ತತ್ವಂ ಚ= ಸಮಬುದ್ಧಿಯಿಂದಿರುವುದು; ಮಯಿ=ನನ್ನಲ್ಲಿ; ಅನನ್ಯಯೋಗೇನ= ಏಕಾಗ್ರಬುದ್ಧಿಯಿಂದ (ಇತರೆ ಯಾವುದರಲ್ಲಿಯೂ ಮನಸ್ಸನ್ನು ಹರಿಯಬಿಡದೆ); ಅವ್ಯಭಿಚಾರಿಣಿ=ಚಲಿಸದೆ ಇರುವ; ಭಕ್ತಿಃ=ಭಕ್ತಿಯನ್ನು ಹೊಂದಿರುವುದು; ವಿವಕ್ತ ದೇಶ ಸೇವಿತ್ವಂ=ಏಕಾಂತ ಪ್ರದೇಶ (ಪ್ರತಿಬಂಧವಿಲ್ಲದ ಸ್ಥಳ)ವನ್ನು ಆಶ್ರಯಿಸುವುದು; ಜನಸಂಸದಿ=ಜನ ಸಮೂಹದಲ್ಲಿ; ಅರತಿಃ=ಪ್ರೀತಿಯಿಲ್ಲದೆ ಇರುವುದು; ಆಧ್ಯಾತ್ಮ ಜ್ಞಾನ ನಿತ್ಯತ್ವಂ=ಆಧ್ಯಾತ್ಮ ಜ್ಞಾನ (ಆತ್ಮನಿಷ್ಠೆ)ದಲ್ಲಿ ಯಾವಾಗಲೂ ಜಾಗೃತವಾಗಿರುವುದು; ತತ್ವಜ್ಞಾನಾರ್ಥದರ್ಶನಂ=ತತ್ವಜ್ಞಾನದ ಪ್ರಯೋಜನವನ್ನು ತಿಳಿದವನು (ಆಗಿ); ಏತತ್=ಇದು (ಈ ಎಲ್ಲವೂ); ಜ್ಞಾನಂ ಇತಿ='ಜ್ಞಾನ'ವೆಂದು; ಪ್ರೋಕ್ತಮ್=ಹೇಳಲ್ಪಟ್ಟಿದೆ; ಯತ್= ಯಾವುದು; ಅತಃ ಅನ್ಯಥಾ=ಇದಕ್ಕಿಂತ ಭಿನ್ನವಾಗಿದೆಯೋ; (ತತ್=ಅದು); ಅಜ್ಞಾನಂ=ಅಜ್ಞಾನವು (ಎಂದು ತಿಳಿಯಬೇಕು).

**ತಾ||** ತನ್ನನ್ನು ತಾನು ಹೊಗಳಿಕೊಳ್ಳದೆ ಇರುವುದು, ಡಂಭಾಚಾರವಿಲ್ಲದೆ ಇರುವುದು, (ಮನೋವಾಣಿಗಳಿಂದ). ಪರಪ್ರಾಣಿಗಳನ್ನು ಪೀಡಿಸದೇ ಇರುವುದು, ಸಹನೆಯಿಂದಿರುವುದು, ಋಜುತ್ವ (ಶುದ್ಧಿ)ವನ್ನು ಹೊಂದಿರುವುದು, (ಸನ್ಮಾರ್ಗ, ಮೋಕ್ಷಮಾರ್ಗದಲ್ಲಿ) ಸ್ಥಿರವಾಗಿರುವುದು, ಮನಸ್ಸನ್ನು ಚೆನ್ನಾಗಿ ನಿಗ್ರಹಿಸುವುದು, ಇಂದ್ರಿಯ ವಿಷಯಗಳೆಂಬ ಶಬ್ದ, ಸ್ಪರ್ಶಾದಿಗಳಲ್ಲಿ ವಿರಕ್ತಿ ಹೊಂದಿರುವುದು, ಅಹಂಕಾರವಿಲ್ಲದೇ ಇರುವುದು. ಜನನ, ಮರಣ, ವೃದ್ಧಾಪ್ಯ, ರೋಗ- ಎನ್ನುವುಗಳಿಂದ ಉಂಟಾಗುವ ದುಃಖ ದೋಷಗಳನ್ನು ಮಾತುಮಾತಿಗೆ ಸ್ಮರಿಸುವುದು, ಮಕ್ಕಳು, ಪತ್ನಿ, ಮನೆ ಮುಂತಾದುವುಗಳಲ್ಲಿ ಆಸಕ್ತಿಯಿಲ್ಲದೇ ಇರುವುದು, ಮತ್ತೆ ಅವುಗಳಲ್ಲಿ ಮೋಹವು ಇಲ್ಲದೆ ಇರುವುದು (ಅವರಿಗೆ ಉಂಟಾಗುವ ಸುಖ ದುಃಖಗಳು ತನಗೇ ಆಗಿವೆ ಎನ್ನುವ ಅಭಿಮಾನಕ್ಕೆ ಒಳಗಾಗದೆ ಇರುವುದು), ಇಷ್ಟಾನಿಷ್ಟಗಳು (ಶುಭಾಶುಭಗಳು) ಸಂಪ್ರಾಪ್ತಿಯಾದಾಗಲೆಲ್ಲಾ ಸಮಬುದ್ಧಿ ಹೊಂದಿರುವುದು, ನನ್ನಲ್ಲಿ (ಭಗವಂತನಲ್ಲಿ) ಅನನ್ಯವಾದ (ನಿಶ್ಚಲ) ಭಕ್ತಿಯನ್ನು ಹೊಂದಿರುವುದು, ಏಕಾಂತ ಪ್ರದೇಶದ (ಪ್ರತಿಬಂಧವಿಲ್ಲದ ಪ್ರದೇಶದ) ಆಶ್ರಯ ಹೊಂದಿರುವುದು, ಜನಸಮೂಹದಲ್ಲಿ ಪ್ರೀತಿಯಿಲ್ಲದೇ ಇರುವುದು, ಅಧ್ಯಾತ್ಮ ಜ್ಞಾನ, ಆತ್ಮನಿಷ್ಠೆಯನ್ನು ನಿರಂತರ ಹೊಂದಿರುವುದು, ತತ್ವಜ್ಞಾನದ ಪ್ರಯೋಜನವನ್ನು ಮನನ ಮಾಡಿಕೊಳ್ಳುತ್ತಿರುವುದು, ಈ ಎಲ್ಲವನ್ನೂ ಜ್ಞಾನವೆಂದು ಹೇಳಲಾಗುತ್ತದೆ. ಇದಕ್ಕೆ ವ್ಯತಿರೇಕವಾದದು ಅಜ್ಞಾನ(ಎಂದು ತಿಳಿಯ ಬೇಕಾಗಿದೆ).

**ವ್ಯಾಖ್ಯೆ:** ಈ ಅಧ್ಯಾಯದಲ್ಲಿ ಜ್ಞಾನ, ಜ್ಞೇಯ ಎರಡನ್ನೂ ಹೇಳಲಾಗಿದೆ. ಜ್ಞಾನ (ಸಾಧನೆ), ಜ್ಞೇಯ (ಸಾಧ್ಯ), ಪರಮಾತ್ಮನೆನ್ನುವ ಲಕ್ಷ್ಯವನ್ನು ಸೇರಲು ಬೇಕಾಗಿರುವ ನೈತಿಕ ಹಾಗು ಆಧ್ಯಾತ್ಮಿಕ ಸಂಪತ್ತೇ ಜ್ಞಾನವೆಂದು ಇಲ್ಲಿ ಹೇಳಲಾಗಿದೆ. ಅಂತಹ ಜ್ಞಾನವು ಕರತಲಾಮಲಕವಾಗದಿದ್ದರೆ ಜ್ಞೇಯ ವಸ್ತುವಾದ ಪರಮಾತ್ಮನನ್ನು ಯಾರೂ ಹೊಂದಲು ಸಾಧ್ಯವಿಲ್ಲ. ಕನ್ನಡಿಯು ಶುಭ್ರವಾಗಿದ್ದಾಗ ಮಾತ್ರ ವಸ್ತುವು ಚೆನ್ನಾಗಿ ಅದರಲ್ಲಿ ಪ್ರತಿಬಿಂಬಿಸುವುದು. ಮಾಲಿನ್ಯದಿಂದ ಕೂಡಿದ್ದರೆ ಅಲ್ಲ. ಹಾಗೆಯೇ ಸುಗುಣಗಳಿಂದ ವಿರಾಜಿಸುವ ಚಿತ್ತವು ನಿರ್ಮಲವಾಗಿದ್ದು ಅದರಲ್ಲಿ ಅಧಿಷ್ಠಾನವಾದ ಆತ್ಮ ಚೆನ್ನಾಗಿ ವ್ಯಕ್ತವಾಗುವುದು. ಆದ್ದರಿಂದ ಸಾಧಕನು ಮುಖ್ಯವಾಗಿ ಈ ಜ್ಞಾನಗುಣಗಳನ್ನು ಅಭ್ಯಾಸ ಮಾಡುವುದರಲ್ಲೇ ತನ್ನ ದೃಷ್ಟಿಯನ್ನು ಕೇಂದ್ರೀಕರಿಸಬೇಕು ಜ್ಞಾನದ ಸಹಾಯದಿಂದ ಜ್ಞೇಯವು ತನ್ನಷ್ಟಕ್ಕೆ ತಾನೇ ಪ್ರಾಪ್ತಿಯಾಗುವುದು. ಆದ್ದರಿಂದಲೇ ಗೀತೆಯಲ್ಲಿ ಅನೇಕ ಕಡೆ ಭಗವಂತನು ಈ ಜ್ಞಾನ ಗುಣಗಳನ್ನು (Morality) ಹೆಚ್ಚಿಗೆ ಪ್ರೋತ್ಸಾಹಿಸಿರುತ್ತಾನೆ. ಇಲ್ಲಿ ಇಪ್ಪತ್ತು ಸುಗುಣಗಳನ್ನು ಹೇಳಲಾಗಿದೆ. ಸಾಧಕನು ಒಂದೊಂದನ್ನೂ ಚೆನ್ನಾಗಿ ಅಭ್ಯಾಸಮಾಡಿ ಕ್ರಮವಾಗಿ ಅವುಗಳನ್ನೆಲ್ಲಾ ತನ್ನ ಸ್ವರೂಪದಲ್ಲಿ ಅಳವಡಿಸಿಕೊಳ್ಳಬೇಕು.

'*ಆಚಾರ್ಯೋಪಾಸನಂ*'- ಗುರುಸೇವೆ ತಪ್ಪದೆ ಮಾಡಬೇಕೆಂದು ಭಗವಂತನು ನುಡಿಯುತ್ತಿದ್ದಾನೆ. ಏಕೆಂದರೆ ದೈವಾನುಗ್ರಹ, ಗುರು ಅನುಗ್ರಹ ಎರಡೂ ಇಲ್ಲದೆ ಇದ್ದರೆ ಮೋಕ್ಷಮಾರ್ಗದಲ್ಲಿ ಮುಂದುವರಿಯುವುದು ಬಹಳ ಕಷ್ಟ. ಅವರ ಅನುಗ್ರಹ ಸಾಧಕನ ಪುರೋಭಿವೃದ್ಧಿಗೆ ಬಹಳ ಅವಶ್ಯಕವಾಗಿರುವುದು.

'*ಶೌಚಂ*'- ಶುಚಿತ್ವಕ್ಕೆ ಗೀತಾಚಾರ್ಯನು ಹೆಚ್ಚು ಪ್ರಾಮುಖ್ಯತೆಯನ್ನು ಕೊಟ್ಟಿರುವನು [ಅನಪೇಕ್ಷಃ ಶುಚಿರ್ದಕ್ಷಃ (೧೨-೧೬)] ಬಾಹ್ಯಾಭ್ಯಂತರ ಶೌಚ ಮುಮುಕ್ಷುಗಳಿಗೆ ಅತ್ಯಾವಶ್ಯಕ. ಹೊರಗಿರುವ ಕೊಳೆ, ಒಳಗಿರುವ ಚಿತ್ತಮಾಲಿನ್ಯ ಎರಡನ್ನೂ ತೊಳೆದು ಹಾಕಬೇಕು.

'*ಸ್ಥೈರ್ಯಂ*'- ಭಗವನ್ಮಾರ್ಗದಲ್ಲಿ ಚಂಚಲತೆ ಕೆಲಸಕ್ಕೆ ಬರುವುದಿಲ್ಲ. ಸ್ಥಿರವಾದ ನಿರ್ಣಯಗಳನ್ನು ತೆಗೆದುಕೊಂಡು ಅವುಗಳನ್ನು ಸರಿಯಾಗಿ ಕಾರ್ಯಾನ್ವಿತಗೊಳಿಸಬೇಕು. ಪ್ರಪಂಚ ದೃಷ್ಟಿಯಿರುವವರ ಮಾತುಗಳನ್ನು ಕೇಳಿ, ದೈವದಲ್ಲಿ, ಧರ್ಮದಲ್ಲಿ, ಪರಮಾತ್ಮನಲ್ಲಿ ವಿಶ್ವಾಸವನ್ನು ಸಡಿಲಿಸಬಾರದು.

'*ಆತ್ಮವಿನಿಗ್ರಹಃ*'- ಇಲ್ಲಿ ಆತ್ಮ ಎಂದರೆ ಮನಸ್ಸು, ಇಂದ್ರಿಯಗಳೆಂದು ಅರ್ಥ. ಮನೋನಿಗ್ರಹ, ಇಂದ್ರಿಯ ನಿಗ್ರಹಗಳನ್ನು ತಪ್ಪದೆ ಸಂಪಾದಿಸಬೇಕು. 'ನಿಗ್ರಹ' ಎಂದು ಹೇಳದೆ 'ವಿನಿಗ್ರಹ' ಎಂದು ಹೇಳಿರುವುದರಿಂದ ಇಂದ್ರಿಯ

ಮನಸ್ಸುಗಳನ್ನು ಪರಿಪೂರ್ಣವಾಗಿ ನಿಗ್ರಹಿಸಬೇಕೆಂದು ಭಾವ. ಏಕೆಂದರೆ ಅಲ್ಪ ಸ್ವಲ್ಪ ನಿಗ್ರಹಾದಿಗಳನ್ನು ಬಲವತ್ತರವಾದ ಮಾಯೆ ಯಾವ ಕ್ಷಣದಲ್ಲಾದರೂ ಸೋಲಿಸುವುದು.

*'ಇಂದ್ರಿಯಾರ್ಥೇಷು ವೈರಾಗ್ಯಂ'*- ಆತ್ಮಸಾಕ್ಷಾತ್ಕಾರಕ್ಕೆ ವೈರಾಗ್ಯ ಬಹಳ ಅವಶ್ಯಕ. ಮನಸ್ಸು ಶಬ್ದಾದಿ ವಿಷಯಗಳ ಕಡೆಗೆ ಓಡುತ್ತಿದ್ದರೆ ಧ್ಯಾನದಲ್ಲಿ ಏಕಾಗ್ರತೆ ಉಂಟಾಗುವುದಿಲ್ಲ. ಆದ್ದರಿಂದ ದೃಶ್ಯ ವಿಷಯಗಳಿಂದ ಮನಸ್ಸನ್ನು ಅಂತರ್ಮುಖಿಗೊಳಿಸಲು ಸಾಧಕನು ವೈರಾಗ್ಯವನ್ನು ತಪ್ಪದೆ ಆಶ್ರಯಿಸಬೇಕು.

*'ಜನ್ಮ ಮೃತ್ಯು ಜರಾವ್ಯಾಧಿ ದುಃಖ ದೋಷಾನುದರ್ಶನಮ್'*- ಸಾಮಾನ್ಯವಾಗಿ ಜನರು ವೃದ್ಧಾಪ್ಯ ಹಾಗು ಮರಣಗಳಲ್ಲಿ, ದುಃಖ ಹಾಗೂ ದೋಷವನ್ನು ಕಾಣುವರು. ಆದರೆ ಜನ್ಮದಲ್ಲಲ್ಲ. ಮಗು ಹುಟ್ಟಿದಾಗ ಸಂಭ್ರಮ ಗೊಳ್ಳುವರೇ ವಿನಃ ದುಃಖಿಸುವುದಿಲ್ಲ. ಆದರೆ ಭಗವಂತನು ಜನ್ಮದಲ್ಲಿಯೂ ದೋಷವನ್ನು, ಅನರ್ಥವನ್ನು ನೋಡಬೇಕೆಂದು ಹೇಳಿದ್ದಾನೆ. ಏಕೆಂದರೆ ಜನ್ಮದಿಂದಲೇ ಮುಂದಿನ ಜರಾವ್ಯಾಧಿಗಳು ಉಂಟಾಗುತ್ತವೆ. ಆದ್ದರಿಂದ ಜನನ ಮರಣ ಹಾಗು ವೃದ್ಧಾಪ್ಯಗಳಲ್ಲಿಯ ದೋಷಗಳನ್ನು ಮಾತುಮಾತಿಗೆ ಜ್ಞಾಪಕಕ್ಕೆ ತಂದುಕೊಳ್ಳುವುದು ಮುಮುಕ್ಷುಗಳ ಪರಮ ಧರ್ಮ. ಹಾಗೆ ಚಿಂತನೆ ಮಾಡಿ ಅವುಗಳಿಂದ ತಪ್ಪಿಸಿಕೊಳ್ಳಲು ಹಾಗು ಆತ್ಮಜ್ಞಾನವನ್ನು ಪಡೆಯಲು ಪ್ರಯತ್ನಿಸಬೇಕು. 'ದರ್ಶನಂ' ಎಂದು ಹೇಳದೆ 'ಅನುದರ್ಶನಂ' ಎಂದು ಹೇಳಿರುವುದರಿಂದ ಆಯಾ ದೋಷಗಳನ್ನು ಮತ್ತೆ ಮತ್ತೆ ವಿಚಾರಿಸುತ್ತಿರ ಬೇಕೆಂದೂ, ಅದರಿಂದ ವೈರಾಗ್ಯ ಹಾಗು ಮುಮುಕ್ಷತ್ವಗಳು ತೀವ್ರವಾಗಲು ಸಾಧ್ಯವಾಗುವುದೆಂದು ಅರ್ಥವಾಗುತ್ತದೆ. ಆದ್ದರಿಂದ ಈ ಸಾಧನೆ ಮುಮುಕ್ಷುಗಳಿಗೆ ಅತ್ಯಂತ ಅವಶ್ಯಕ.

*'ಅಸಕ್ತಿರನಭಿಷ್ವಂಗಃ ಪುತ್ರದಾರಗೃಹಾದಿಷು"*- 'ಆದಿಷು' ಎನ್ನುವ ಪದದಲ್ಲಿ ಧನ, ಕ್ಷೇತ್ರ ಮುಂತಾದುವು ಸೇರಿವೆ. ಗೃಹಸ್ಥಾಶ್ರಮದಲ್ಲಿರುವವರು ಈ ವಾಕ್ಯವನ್ನು ಚೆನ್ನಾಗಿ ಗಮನಿಸಬೇಕು. ಕುಟುಂಬ, ಬಂಧು, ಧನ ಮುಂತಾದುವು ಇರುವುದರಲ್ಲಿ ತಪ್ಪಿಲ್ಲ. ಆದರೆ ಅವುಗಳಲ್ಲಿ ಮೋಹ-ಆಸಕ್ತಿ (attachment) ಇಲ್ಲದೆ ಇರಬೇಕು.

*'ನಿತ್ಯಂ ಚ ಸಮಚಿತ್ತತ್ವಂ'*- ಇಷ್ಟಾನಿಷ್ಟಗಳಲ್ಲಿ ಸಮಚಿತ್ತತೆ ಯಾವಾಗಲೋ ಒಮ್ಮೆ ಇದ್ದರೆ ಸಾಲದು ಯಾವಾಗಲೂ ಇರಬೇಕೆನ್ನುವುದನ್ನು 'ನಿತ್ಯಂ' ಶಬ್ದ ಸೂಚಿಸುತ್ತದೆ. 'ಅನನ್ಯ ಯೋಗೇನ'- ದೈವವನ್ನು ಬಿಟ್ಟು ಬೇರೆ ದೃಶ್ಯವಸ್ತುಗಳ ಬಗ್ಗೆ ಚಿಕ್ಕ ಸಂಕಲ್ಪವೂ ಮನಸ್ಸಿನಲ್ಲಿ ಬರದೆ ಇರುವುದೇ ಅನನ್ಯಯೋಗ. ಭಕ್ತಿಯೋಗವಾಗಲಿ, ಧ್ಯಾನಯೋಗವಾಗಲಿ ಅಥವ ಬೇರೆ ಯಾವುದೇ ಯೋಗವಾಗಲಿ, ಈ ಅನನ್ಯ ಯೋಗದೊಂದಿಗೆ ಸಮ್ಮಿಲನವಾದಾಗ ಮಾತ್ರ ಅದು ಪ್ರಭಾವಶಾಲಿಯಾಗುವುದು.

*'ಭಕ್ತಿರವ್ಯಭಿಚಾರಿಣೀ'*- ಭಕ್ತಿ ಚಂಚಲವಾಗಿರಬಾರದು. ಅಚಂಚಲವಾದ ಭಕ್ತಿಯನ್ನೇ ಆಶ್ರಯಿಸಬೇಕು. ಪ್ರಾರಂಭ ಸ್ಥಿತಿಯಲ್ಲಿ ಅಂತಹ ನಿಶ್ಚಲಭಕ್ತಿ ಅಂದರೆ ನಿರಂತರವಾಗಿ ದೈವದಲ್ಲಿ ಮನಸ್ಸನ್ನು ನಿಲ್ಲಿಸುವುದು- ಸಾಧ್ಯವಾಗದೇ ಇದ್ದರೂ ಪ್ರಯತ್ನದಿಂದ ಅಂತಹ ಸ್ಥಿತಿಯನ್ನು (ಏಕಾಂತ ಭಕ್ತಿಯನ್ನು) ಎಂದಾದರೂ ಒಮ್ಮೆ ಸಂಪಾದಿಸಿಯೇ ತೀರಬೇಕು.

*'ವಿವಿಕ್ತ ದೇಶಸೇವಿತ್ವಂ'*- ಪ್ರಾರಂಭ ದೆಸೆಯಲ್ಲಿ ಪ್ರಾಪಂಚಿಕ ಮನಸ್ಸಿನ ಜನಗಳಿಂದ ವಿಕ್ಷೇಪವುಂಟಾಗದೆ ಇರಲೆಂದು ಸಾಧನೆಯನ್ನು ಏಕಾಂತ ಸ್ಥಳದಲ್ಲಿ ನಡೆಸುವುದು ಉತ್ತಮ. ಅಂತಹ ಏಕಾಂತ ಸ್ಥಳವನ್ನು ಅವರ ಗೃಹಗಳಲ್ಲಿಯೂ ಏರ್ಪಾಟುಮಾಡಿಕೊಳ್ಳಬಹುದು. ಒಂದು ಪ್ರತ್ಯೇಕವಾದ ಕೊಠಡಿಯನ್ನು ಧ್ಯಾನಾದಿಗಳಿಗೆ ವಿನಿಯೋಗಿಸಿಕೊಳ್ಳಬಹುದು.

*'ಅರತಿರ್ಜನ ಸಂಸದಿ'*- ಮೊದಲು ದುರ್ಜನ ಸಾಂಗತ್ಯವನ್ನು ಬಿಟ್ಟು, ಸತ್ಪುರುಷರ ಸಹವಾಸವನ್ನು ಆಶ್ರಯಿಸಿ, ಸದ್ಬೋಧೆಯನ್ನು ಪಡೆದು ಆ ಬೋಧೆಗಳನ್ನು ಹೃದಯಂಗಮಮಾಡಿಕೊಳ್ಳಲು ಹಾಗು ಪೂರ್ಣವಾಗಿ ಅನುಷ್ಠಾನದಲ್ಲಿ ತರಲು ಜನಸಂಪರ್ಕವಿಲ್ಲದ ಏಕಾಂತ ಸ್ಥಳದಲ್ಲಿ ಸಾಧನೆ ಮಾಡಬೇಕೆಂದು ಹೇಳಿರುವವರೇ ಹೊರತು ಸತ್ಸಹವಾಸ ಮಾಡಬಾರದೆಂದಲ್ಲ.

*'ಅಧ್ಯಾತ್ಮ ಜ್ಞಾನ ನಿತ್ಯತ್ವಂ'*- ಅಧ್ಯಾತ್ಮ ಜ್ಞಾನ, ದೈವಸಂಬಂಧವಾದ ಸ್ಮೃತಿ ಯಾವಾಗಲೋ ಒಮ್ಮೆ ಇದ್ದರೆ ಸಾಲದೆಂದೂ ನಿರಂತರವಾಗಿ ಆ ಜ್ಞಾನ ಹೃದಯದಲ್ಲಿ ಬೆಳಗುತ್ತಿರಬೇಕೆಂದು ಬೋಧಿಸಲಾಗಿದೆ. ರಾತ್ರಿ ವೇಳೆ, ಯಾವ ಕ್ಷಣದಲ್ಲಿ ದೀಪ ಆರಿ ಹೋಗುವುದೋ ಆ ಕ್ಷಣ ಕತ್ತಲಾವರಿಸುವುದು. ಹಾಗೆಯೇ ಜ್ಞಾನದೀಪವನ್ನು ಜಾರಿಬಿಟ್ಟರೆ ಕೂಡಲೇ ಅಜ್ಞಾನವು ಪ್ರವೇಶಿಸಿ ಜೀವಿಯನ್ನು ಅಧೋಗತಿಗೆ ತಳ್ಳಿಹಾಕುವುದು. ಆದ್ದರಿಂದ ಸಾಧಕರು ಜಾಗರೂಕರಾಗಿದ್ದು 'ಅಧ್ಯಾತ್ಮಜ್ಞಾನನಿತ್ಯತ್ವಂ' ಎನ್ನುವ ಭಗವದ್ವಾಕ್ಯವನ್ನು ಮತ್ತೆ ಮತ್ತೆ ಸ್ಮರಿಸುತ್ತಾ ಮಾಯೆಯನ್ನು ಹತ್ತಿರ ಬರದಂತೆ ನೋಡಿಕೊಳ್ಳಬೇಕು.

*'ತತ್ವ ಜ್ಞಾನಾರ್ಥದರ್ಶನಂ'*- ತತ್ವ ಜ್ಞಾನವನ್ನು ಮಾತಿನಿಂದ ಹೇಳಿದರೆ ಸಾಲದೆಂದು, ಪ್ರತ್ಯಕ್ಷವಾಗಿದರ್ಶಿಸಬೇಕೆಂದು, ಅನುಭೂತಿಗೊಳಿಸಿ ಕೊಳ್ಳಬೇಕೆಂದು ಆದೇಶಿಸಲಾಗಿದೆ.

*'ಅಜ್ಞಾನಂ ಯತತೋಽನ್ಯಥಾ'*- ಈ ಅಮಾನಿತ್ವಾದಿಗುಣಗಳಿಗೆ ವಿರುದ್ಧವಾದ ಗುಣಗಳಾದ ಡಂಭದರ್ಪಾದಿಗಳೆಲ್ಲವೂ ಅಜ್ಞಾನಗಳೇ ಎಂದರ್ಥ.

ಪ್ರ : ಜ್ಞಾನಗುಣಗಳೆಷ್ಟು? ಅವು ಯಾವುವು?

ಉ: ಜ್ಞಾನಗುಣಗಳು ಇಪ್ಪತ್ತು. ಅವು ಕ್ರಮವಾಗಿ- ೧) ತನ್ನನ್ನು ತಾನು ಹೊಗಳಿಕೊಳ್ಳದೇ ಇರುವುದು ೨) ಡಂಭವಿಲ್ಲದಿರುವುದು ೩) ಪರ ಪ್ರಾಣಿಗಳನ್ನು ಹಿಂಸಿಸದೇ ಇರುವುದು ೪) ಸಹನೆ ೫) ಋಜುತ್ವವನ್ನು (ಸರಳತೆಯನ್ನು) ಹೊಂದಿರುವುದು ೬) ಗುರುಸೇವೆ ೭)ಬಾಹ್ಯಾಭ್ಯಂತರ ಶುದ್ಧಿ ೮) ಸನ್ಮಾರ್ಗದಲ್ಲಿ ನಡೆಯುವುದು ೯) ಮನಸ್ಸನ್ನು ನಿಗ್ರಹಿಸುವುದು. ೧೦) ಇಂದ್ರಿಯ ವಿಷಯಗಳಲ್ಲಿ ವಿರಕ್ತಿ ೧೧) ಅಹಂಕಾರವಿಲ್ಲದೇ ಇರುವುದು ೧೨) ಜನನ, ಮರಣ, ವೃದ್ಧಾಪ್ಯ, ರೋಗ- ಇವುಗಳಿಂದ ಉಂಟಾಗುವ ದುಃಖ ದೋಷಗಳನ್ನು ಸದಾ ಸ್ಮರಿಸುವುದು ೧೩) ಪುತ್ರ (ಸಂತಾನ) ಪತ್ನಿ, ಮನೆ- ಮುಂತಾದುವುಗಳಲ್ಲಿ ಆಸಕ್ತಿಯಿಲ್ಲದಿರು ವುದು ೧೪) ಮೋಹ (ಅಂದರೆ ಪತ್ನೀಸುತರ ದುಃಖಾದಿಗಳನ್ನು ತನ್ನವೇ ಎಂದು ಭಾವಿಸುವ ಗುಣ) ಇಲ್ಲದೆ ಇರುವುದು ೧೫) ಇಷ್ಟಾನಿಷ್ಟಗಳಲ್ಲಿ ಸಮಬುದ್ಧಿ ಹೊಂದಿರುವುದು ೧೬) ಭಗವಂತನಲ್ಲಿ ಅನನ್ಯ ಭಕ್ತಿ ಹೊಂದಿ ರುವುದು ೧೭) ಏಕಾಂತ ಪ್ರದೇಶವನ್ನು ಆಶ್ರಯಿಸುವುದು ೧೮) ಜನ ಸಮುದಾಯದಲ್ಲಿ ಪ್ರೀತಿಯಿಲ್ಲದೇ ಇರುವುದು ೧೯) ನಿರಂತರ ಅಧ್ಯಾತ್ಮ

ಜ್ಞಾನ ೨೦) ತತ್ವಜ್ಞಾನದ ಪ್ರಯೋಜನವನ್ನು ತಿಳಿದುಕೊಳ್ಳುವುದು- ಆಗಿವೆ.

ಪ್ರ : ಅಜ್ಞಾನವೆಂದರೆ ಏನು?

ಉ : ಮೇಲೆ ಹೇಳಿದವುಗಳಿಗೆ ವಿರುದ್ಧವಾದುದೆಲ್ಲಾ ಅಜ್ಞಾನವೇ.

**ಅ||** ಇಲ್ಲಿಯವರೆಗೆ ಜ್ಞಾನದ ಬಗ್ಗೆ ಹೇಳಿ, ಇನ್ನು ಜ್ಞೇಯವೆನ್ನುವುದು ಏನು ಎನ್ನುವುದನ್ನು ಆರು ಶ್ಲೋಕಗಳ ಮೂಲಕ ತಿಳಿಯಪಡಿಸುತ್ತಿದ್ದಾನೆ-

**೧೩. ಜ್ಞೇಯಂ ಯತ್ತತ್ಪ್ರವಕ್ಷ್ಯಾಮಿ ಯಜ್ಞಾತ್ವಾಽಮೃತಮಶ್ನುತೇ**
**ಅನಾದಿಮತ್ಪರಂ ಬ್ರಹ್ಮ ನ ಸತ್ತನ್ನಾಸದುಚ್ಯತೇ**

**ಅರ್ಥ:** ಯತ್=ಯಾವುದು; ಜ್ಞೇಯಂ=ತಿಳಿಯಬೇಕಾದ ಬ್ರಹ್ಮಸ್ವರೂಪವೋ; ಯತ್=ಯಾವುದನ್ನು; ಜ್ಞಾತ್ವಾ=ತಿಳಿದುಕೊಂಡು (ಮನುಜನು); ಅಮೃತಂ=ಮೋಕ್ಷವನ್ನು (ಅಮರತ್ವವನ್ನು); ಅಶ್ನುತೇ= ಹೊಂದುತ್ತಿದ್ದಾನೋ; ತತ್=ಅದನ್ನು; ಪ್ರವಕ್ಷ್ಯಾಮಿ=ಚೆನ್ನಾಗಿ ಹೇಳುತ್ತೇನೆ; ಅನಾದಿಮತ್= ಆದಿಯಿಲ್ಲದ; ಪರಂಬ್ರಹ್ಮ=ಪರಬ್ರಹ್ಮವೆನ್ನುವ; ತತ್=ಅದನ್ನು; ಸತ್=ಸತ್ತೆಂದು (ಇರುವುದೆಂದು); ನ ಉಚ್ಯತೇ=ಹೇಳಲಾಗುವುದಿಲ್ಲ; ಅಸತ್ ನ (ಉಚ್ಯತೆ)=ಅಸತ್ತೆಂದೂ (ಇಲ್ಲವೆಂದು) ಹೇಳಲಾಗುವುದಿಲ್ಲ.

**ತಾ||** ಯಾವುದು ತಿಳಿಯಬೇಕಾದ ಬ್ರಹ್ಮಸ್ವರೂಪವೋ, ಯಾವುದನ್ನು ತಿಳಿದುಕೊಂಡು ಮನುಷ್ಯನು ಅಮೃತಸ್ವರೂಪವಾದ ಮೋಕ್ಷವನ್ನು ಹೊಂದುತ್ತಿದ್ದಾನೋ, ಅಂತಹದನ್ನು ವಿಶೇಷವಾಗಿ ಹೇಳುತ್ತೇನೆ. ಆದಿಯಿಲ್ಲದ ಪರಬ್ರಹ್ಮವೆನ್ನುವ ಅದು ಸತ್ತೆಂದಾಗಲಿ ಅಸತ್ತೆಂದಾಗಲಿ (ಇಲ್ಲವೆಂದಾಗಲಿ) ಹೇಳಲಾಗುವುದಿಲ್ಲ.

**ವ್ಯಾಖ್ಯೆ:** ಇಲ್ಲಿಂದ ಮುಂದೆ ಬರುವ ಆರು ಶ್ಲೋಕಗಳು ಜ್ಞೇಯವೆನ್ನುವ ಪರಮಾತ್ಮನನ್ನು ವರ್ಣಿಸುತ್ತವೆ. ಜ್ಞಾನದಿಂದಷ್ಟೇ ಸಂತೃಪ್ತಿ ಹೊಂದದೆ ಜ್ಞೇಯವನ್ನೂ ಸಹ ಪ್ರತಿಯೊಬ್ಬರೂ ತಪ್ಪದೆ ಹೊಂದಲೇ ಬೇಕು. ಮೊದಲು ದುರ್ಗುಣಗಳನ್ನು ಹೊರದೂಡಿ, ಸದ್ಗುಣಗಳನ್ನು ಅಭ್ಯಾಸ ಮಾಡಿಕೊಳ್ಳಬೇಕು. ನಂತರ ಆ ಸದ್ಗುಣಗಳನ್ನೂ ದಾಟಿ ನಿರ್ಗುಣ ಪರಮಾತ್ಮನ ಸನ್ನಿಧಿಯನ್ನು ಸೇರಬೇಕು. ಅದು ಪೂರ್ಣಸ್ಥಿತಿ. ಬೇರೆಯವು ಅಪೂರ್ಣ ಸ್ಥಿತಿಗಳೇ. ಇಂತಹ ಜ್ಞೇಯತತ್ವಗಳನ್ನು ಬೋಧಿಸುವ ಮತಗಳು ಲೋಕದಲ್ಲಿ ವಿರಳ. ಏಕೆಂದರೆ ಮತಗಳಲ್ಲಿ ಅನೇಕವು ಸದ್ಗುಣಗಳನ್ನು (Ethics) ಮಾತ್ರವೇ ಬೋಧಿಸುತ್ತವೆ. ಅದು ಒಳ್ಳೆಯದೇ ಆಗಲಿ ಸಾಕಾಗುವುದಿಲ್ಲ. ಸಾಧಕನು ಸದ್ಗುಣ ಪ್ರಭಾವಗಳಿಂದ ವಿಶುದ್ಧಾಂತರಂಗವುಳ್ಳವನಾಗಿ ಅಲ್ಲಿಯೂ ತೃಪ್ತಿಹೊಂದದೆ ಇನ್ನೂ ಮುಂದೆ ಹೋಗಿ ಕೇವಲ ಜ್ಞೇಯವಸ್ತುವಾದ ಪರಮಾತ್ಮನಲ್ಲಿ ತಾದಾತ್ಮ್ಯ ಹೊಂದಬೇಕು. ಅದು ಜೀವಿಯ ಚರಮಸ್ಥಿತಿ. ಅಂತಹ ಸ್ಥಿತಿಯನ್ನು ಮುಟ್ಟುವವರೆಗೆ ಸಾಧನೆಯನ್ನು ಯಾರೂ ಬಿಡಬಾರದು. ಆದ್ದರಿಂದ ಗೀತೆಯಲ್ಲಿ ಭಗವಂತನು ಜ್ಞಾನ ಗುಣಗಳಿಂದ ಮಾತ್ರ ತೃಪ್ತಿ ಹೊಂದದೆ, ಜ್ಞೇಯವನ್ನೂ ಸಹ ಹೇಳಿ ಜೀವಿಯನ್ನು ಅದ್ವೈತ ಪರಾಕಾಷ್ಠೆಗೆ ತೆಗೆದುಕೊಂಡು ಹೋದನು. ಈ ವಿಧವಾಗಿ ಗೀತೆ, ದ್ವೈತ, ವಿಶಿಷ್ಟಾದ್ವೈತ, ಅದ್ವೈತ ತತ್ವಗಳೆಲ್ಲವನ್ನೂ ಬೋಧಿಸಿರುವುದರಿಂದ ಇದನ್ನು ಪರಿಪೂರ್ಣ ಶಾಸ್ತ್ರವೆಂದು ಹೇಳುವರು.

*'ಪ್ರವಕ್ಷ್ಯಾಮಿ'*- ಸಂಪೂರ್ಣವಾಗಿ ಹೇಳುತ್ತಿದ್ದೇನೆ. ಅಧ್ಯಾತ್ಮ ಬೋಧೆಯಲ್ಲಿ ಶ್ರೀ ಕೃಷ್ಣ ಪರಮಾತ್ಮನ ಅಪರಿಮಿತ ಉತ್ಸಾಹ ಈ ಪದದಿಂದ ದ್ಯೋತಕವಾಗುತ್ತದೆ.

*'ಯಜ್ಞಾತ್ವಾಽಮೃತಮಶ್ನುತೇ'*- ಜ್ಞೇಯವಸ್ತುವಾದ ಪರಮಾತ್ಮನನ್ನು ತಿಳಿಯುವುದರಿಂದ ಉಂಟಾಗುವ ಅಗಾಧ ಫಲಗಳನ್ನು ಮೊದಲೇ ತಿಳಿದಿದ್ದರೆ ಆದರೆ ಅದನ್ನು ಹೊಂದಲು ಸಾಧಕನು ಆನಂದದಿಂದ ಉತ್ಸಾಹದಿಂದ ಮುಂದಕ್ಕೆ ಹೋಗುವನು. ಆದ್ದರಿಂದಲೇ ಭಗವಂತನು ಇಲ್ಲಿ ಜ್ಞೇಯ ಸ್ವರೂಪವನ್ನು ವರ್ಣಿಸುತ್ತ ಮೊದಲಿನಲ್ಲಿಯೇ ಅದರ ಫಲವನ್ನು ಹೇಳಿದನು. ಅಮೃತತ್ವ (ಮೋಕ್ಷವೇ) ಅದರ ಫಲ. ಆಹಾ! ಎಂತಹ ಮಹತ್ತರವಾದ ಫಲ! ಚಿಕ್ಕ ಚಿಕ್ಕ ಪ್ರಾಪಂಚಿಕ ವಸ್ತುಗಳ ಮೇಲೆ ಬಿದ್ದು ಹೊರಳಾಡುವುದಕ್ಕಿಂತ ಮಹೋನ್ನತವಾದ ಈ ಜ್ಞೇಯ ವಸ್ತುವನ್ನು ಪಡೆಯಲು ಜೀವಿಯು ಏಕೆ ಕಷ್ಟಬೀಳಬಾರದು?

*'ನ ಸತ್ತನ್ನಾಸದುಚ್ಯತೇ'*- ಅದು ಸತ್ತಲ್ಲವೆಂದು ಹೇಳುವುದರ ಭಾವ, ದೃಶ್ಯ ವಸ್ತುವಿನ ಹಾಗೆ ಗೋಚರವಾಗುವುದಲ್ಲ ಎಂದು ತಿಳಿಸುವುದೇ ಆಗಿದೆ. ಅಷ್ಟೇ ಆಗಲಿ ಅದು ಇಲ್ಲವೇ ಇಲ್ಲ ಎನ್ನುವ ಭಾವವಲ್ಲ.

**೧೪. ಸರ್ವತಃ ಪಾಣಿಪಾದಂ ತತ್ಸರ್ವತೋಽಕ್ಷಿ ಶಿರೋಮುಖಂ**
**ಸರ್ವತಃ ಶ್ರುತಿಮಲ್ಲೋಕೇ ಸರ್ವಮಾವೃತ್ಯ ತಿಷ್ಠತಿ**

**ಅರ್ಥ:** ತತ್=ಅದು (ಆ ಬ್ರಹ್ಮ ಆತ್ಮ); ಸರ್ವತಃ=ಎಲ್ಲೆಲ್ಲಿಯೂ; ಪಾಣಿಪಾದಂ=ಕೈ, ಕಾಲುಗಳುಳ್ಳದ್ದು; ಸರ್ವತಃ=ಎಲ್ಲೆಲ್ಲಿಯೂ; ಅಕ್ಷಿ ಶಿರೋ ಮುಖಂ=ಕಣ್ಣು, ತಲೆ, ಮುಖಗಳುಳ್ಳದ್ದು; ಸರ್ವತಃ=ಎಲ್ಲೆಲ್ಲಿಯೂ; ಶೃತಿಮತ್=ಕಿವಿಗಳುಳ್ಳದ್ದು ಆಗಿ; ಲೋಕೇ=ಪ್ರಪಂಚದಲ್ಲಿ; ಸರ್ವಂ= ಸಮಸ್ತವನ್ನು; ಆವೃತ್ಯ=ಆವರಿಸಿ (ವ್ಯಾಪಿಸಿಕೊಂಡು); ತಿಷ್ಠತಿ=ಇದೆ.

**ತಾ||** ಅದು ಆ ಬ್ರಹ್ಮ (ಆತ್ಮ) ಎಲ್ಲೆಲ್ಲಿಯೂ ಕೈಕಾಲುಗಳನ್ನು, ಎಲ್ಲೆಲ್ಲಿಯೂ ಕಣ್ಣು, ತಲೆ ಮುಖಗಳನ್ನು ಎಲ್ಲಾ ಕಡೆ ಕಿವಿಗಳನ್ನು ಹೊಂದಿದ್ದು, ಪ್ರಪಂಚದಲ್ಲಿ ಸಮಸ್ತವನ್ನೂ ವ್ಯಾಪಿಸಿದೆ.

**ವ್ಯಾಖ್ಯೆ:** ಆ ಪರಬ್ರಹ್ಮ (ಪರಮಾತ್ಮ) ಸರ್ವತ್ರ ನೇತ್ರ, ಕಿವಿ, ತಲೆ, ಕೈಕಾಲುಗಳನ್ನು ಹೊಂದಿರುವುದೆಂದು ಹೇಳುವುದರಿಂದ, ಜೀವಿಯು ಮಾಡುವ ಪುಣ್ಯ ಪಾಪ ಕಾರ್ಯಗಳನ್ನು ಆತ ಸದಾ ಗಮನಿಸುತ್ತಿರುತ್ತಾನೆಂದು ಸ್ಪಷ್ಟವಾಗುತ್ತದೆ. ಈ ಸತ್ಯವನ್ನು ತಿಳಿದುಕೊಂಡರೆ ಇನ್ನು ಪಾಪಕೃತ್ಯಗಳನ್ನು ಮನುಜನು ಹೇಗೆ ಮಾಡಬಲ್ಲನು? ಮನಸ್ಸಿನಲ್ಲಿ ಆ ಪರಮಾತ್ಮವ್ಯಾಪಿಸಿರುವನಾದ್ದರಿಂದ ಜೀವಿಯು ಮಾಡುವ ಪ್ರತಿ ಸಂಕಲ್ಪವೂ ಆತನ ದೃಷ್ಟಿಗೆ ಬೀಳುತ್ತದೆಂದು ಭಾವ. ಇದರಿಂದ ಜೀವಿಯ ಯಾವ ಕಾರ್ಯವಾಗಲಿ, ಸಂಕಲ್ಪವಾಗಲಿ, ಅದು ಎಷ್ಟು ರಹಸ್ಯವಾದದ್ದು ಆಗಿದ್ದರೂ ಸರ್ವಾಂತ ರ್ಯಾಮಿಯಾದ ಭಗವಂತನಿಗೆ ತಿಳಿಯದೆ ಇರಲು ಸಾಧ್ಯವಿಲ್ಲ. ಆದ್ದರಿಂದ ಜೀವಿಗಳು ತಮ್ಮ ಆಚರಣೆಯ ವಿಷಯದಲ್ಲಿ ಬಹಳ ಜಾಗರೂಕರಾಗಿದ್ದು, ಪಾಪಕಾರ್ಯ, ಪಾಪಸಂಕಲ್ಪಗಳನ್ನು ತ್ಯಜಿಸಿ ಸನ್ಮಾರ್ಗದ ಕೈಯನ್ನೇ ಹಿಡಿಯಬೇಕು.

ದೇವರು ಎಲ್ಲಿದ್ದಾನೆ? ಎನ್ನುವ ಪ್ರಶ್ನೆಗೆ ಸರ್ವತ್ರ ವ್ಯಾಪಿಸಿದ್ದಾನೆ ಎಂದು ಇಲ್ಲಿ ಉತ್ತರ ಕೊಡಲಾಗಿದೆ.

*'ಸರ್ವಮಾವೃತ್ಯ ತಿಷ್ಠತಿ'*- ಸಮಸ್ತ ದೃಶ್ಯವನ್ನು ಆವರಿಸಿದೆಯೆಂದು ಹೇಳುವುದರಿಂದ, ಆತ್ಮ ದೃಶ್ಯಕ್ಕಿಂತ ಅತೀತವಾದುದೆಂದು ತಿಳಿಯುತ್ತದೆ. ಆವರಿಸುವ ವಸ್ತು ಆವರಿಸಲ್ಪಟ್ಟ ವಸ್ತುವಿಗಿಂತ ಅತೀತವಾಗಿರಬೇಕಲ್ಲವೇ! ದೃಗ್ವಸ್ತುವಾದ ಆತ್ಮ (ಬ್ರಹ್ಮ) ದೃಶ್ಯವೆಲ್ಲವನ್ನೂ ಆವರಿಸಿ ತನ್ನಲ್ಲಿಟ್ಟುಕೊಂಡಿದೆ.

ತನ್ನ ಮುಷ್ಠಿಯಲ್ಲಿಟ್ಟುಕೊಂಡಿದೆ. ಆದ್ದರಿಂದ ಅಲ್ಪವಾದ ದೃಶ್ಯವನ್ನು ಆಶ್ರಯಿಸದೆ, ಮಹತ್ತರವಾದ ದೃಗ್ವಸ್ತುವನ್ನೇ (ಪರಮಾತ್ಮನನ್ನೇ) ಆಶ್ರಯಿಸಬೇಕು.

೧೫. ಸರ್ವೇಂದ್ರಿಯಗುಣಾಭಾಸಂ ಸರ್ವೇಂದ್ರಿಯ ವಿವರ್ಜಿತಂ
ಅಸಕ್ತಂ ಸರ್ವಭೃಚ್ಚೈವ ನಿರ್ಗುಣಂ ಗುಣಭೋಕ್ತೃ ಚ
೧೬. ಬಹಿರಂತಶ್ಚ ಭೂತಾನಾಮಚರಂ ಚರಮೇವ ಚ
ಸೂಕ್ಷ್ಮತ್ವಾತ್ತದವಿಜ್ಞೇಯಂ ದೂರಸ್ಥಂ ಚಾಂತಿಕೇ ಚ ತತ್
೧೭. ಅವಿಭಕ್ತಂ ಚ ಭೂತೇಷು ವಿಭಕ್ತಮಿವ ಚ ಸ್ಥಿತಂ
ಭೂತಭರ್ತೃ ಚ ತಜ್ಜ್ಞೇಯಂ ಗ್ರಸಿಷ್ಣು ಪ್ರಭವಿಷ್ಣು ಚ
೧೮ ಜ್ಯೋತಿಷಾಮಪಿ ತಜ್ಜ್ಯೋತಿಸ್ತಮಸಃ ಪರಮುಚ್ಯತೇ
ಜ್ಞಾನಂ ಜ್ಞೇಯಂ ಜ್ಞಾನಗಮ್ಯಂ ಹೃದಿ ಸರ್ವಸ್ಯ ವಿಷ್ಠಿತಮ್

**ಅರ್ಥ:** ತತ್=ಆ ಬ್ರಹ್ಮವು; ಸರ್ವೇಂದ್ರಿಯಗುಣ ಭಾಸಂ=ಸಮಸ್ತ ಇಂದ್ರಿಯಗಳ ಗುಣಗಳನ್ನು ಪ್ರಕಾಶಮಾಡುವುದೂ; ಸರ್ವೇಂದ್ರಿಯ ವಿವರ್ಜಿತಂ=ಸಮಸ್ತೇಂದ್ರಿಯಗಳು ಇಲ್ಲದಿರುವುದು; ಅಸಕ್ತಂ=ಯಾವುದಕ್ಕೂ ಅಂಟದಿರುವುದು; ಸರ್ವಭೃಚ್ಚ ಏವ=ಸಮಸ್ತವನ್ನು ಹೊರುವುದೂ (ಭರಿಸುವುದು); ನಿರ್ಗುಣಂ=(ಸತ್ವರಜಸ್ತಮ) ಗುಣರಹಿತವಾದದ್ದು; ಗುಣಭೋಕ್ತೃ ಚ=ಗುಣಗಳನ್ನು ಅನುಭವಿಸುವುದು; ಭೂತಾನಾಂ=ಪ್ರಾಣಿಗಳ; ಬಹಿಃ=ಹೊರಗು; ಅಂತಃ ಚ=ಒಳಗೆ (ಸ್ಥಿತಂ=ಇರುವುದೂ); ಅಚರಂ=ಕದಲದೆ ಇರುವುದು; ಚರಂ ಏವ ಚ=ಕದಲುವುದೂ; ಸೂಕ್ಷ್ಮತ್ವಾತ್=ಅತಿಸೂಕ್ಷ್ಮವಾಗಿರುವುದರಿಂದ; ಅವಿಜ್ಞೇಯಂ=(ಅಜ್ಞಾನಿಗಳಿಗೆ) ತಿಳಿಯದೆ ಇರುವುದು; ತತ್=ಆ ಬ್ರಹ್ಮ ದೂರಸ್ಥಂ=ದೂರವಾಗಿರುವುದೂ; ಅಂತಿಕೇ ಚ=ಹತ್ತಿರವೂ ಇರುವುದು; ಭೂತೇಷು=ಪ್ರಾಣಿಗಳಲ್ಲಿ; ತತ್=ಆ ಬ್ರಹ್ಮವು; ಅವಿಭಕ್ತಂ ಚ=ವಿಭಜನೆ ಇಲ್ಲದೆ ಇರುವುದು; ವಿಭಕ್ತಂ ಇವ ಚ=ವಿಭಾಗವಾಗಿರುವ ಹಾಗೆ; ಸ್ಥಿತಂ=ಇರುವುದು; ಭೂತಭರ್ತೃ ಚ=ಪ್ರಾಣಿಗಳನ್ನು ಭರಿಸುವುದು (ಪೋಷಿಸುವುದು) ಆಗಿಯೂ; ಗ್ರಸಿಷ್ಣು=ಲಯವನ್ನುಂಟುಮಾಡುವುದು; ಪ್ರಭವಿಷ್ಣು ಚ= ಸೃಷ್ಟಿಸುವುದೂ ಆಗಿ; ಜ್ಞೇಯಂ=ತಿಳಿದುಕೊಳ್ಳಬೇಕಾದದ್ದು (ಮತ್ತೆ); ತತ್=ಆ ಬ್ರಹ್ಮ ಜ್ಯೋತಿಷಾಂ ಅಪಿ=ಪ್ರಕಾಶ ವಸ್ತುಗಳಲ್ಲಿ ಸೂರ್ಯಚಂದ್ರ ಪದಾರ್ಥಗಳಿಗೂ ಕೂಡ; ಜ್ಯೋತಿಃ=ಪ್ರಕಾಶವನ್ನು ಕೊಡುವುದು; ತಮಸಃ ಪರಮ್=ತಮಸ್ಸಿಗೆ (ಅಜ್ಞಾನಕ್ಕೆ) ಅತೀತವಾದುದೂ; ಜ್ಞಾನಂ=ಜ್ಞಾನ ಸ್ವರೂಪವಾದುದೂ (ಚಿನ್ಮಯ ರೂಪ); ಜ್ಞೇಯಂ=ತಿಳಿಯಬೇಕಾದದ್ದೂ; ಜ್ಞಾನ ಗಮ್ಯಂ=(ಅಮಾನಿತ್ವಾದಿ) ಜ್ಞಾನಗುಣಗಳಿಂದ ಹೊಂದಬಹುದಾದದ್ದು; ಸರ್ವಸ್ಯ=ಸಮಸ್ತ ಪ್ರಾಣಿಗಳ; ಹೃದಿ=ಹೃದಯದಲ್ಲಿ; ವಿಷ್ಠಿತಂ=ನೆಲೆಸಿರುವುದು; (ಇತಿ=ಎಂದು); ಉಚ್ಯತೇ= ಹೇಳಲ್ಪಡುತ್ತದೆ.

**ತಾ||** (ಜ್ಞೇಯ ಸ್ವರೂಪವಾದ) ಆ ಬ್ರಹ್ಮವು ಸಮಸ್ತ ಇಂದ್ರಿಯಗಳನ್ನು ಪ್ರಕಾಶಗೊಳಿಸುವುದು, ಸರ್ವೇಂದ್ರಿಯರಹಿತವಾದದ್ದು, ಅಸಕ್ತವಾಗಿರುವುದು ಆದರೆ ಸಮಸ್ತವನ್ನು ಹೊರುವುದು. (ಸತ್ತ್ವರಜಸ್ತಮೋ) ಗುಣರಹಿತವಾದುದು ಆದರೆ ಗುಣಗಳನ್ನು ಅನುಭವಿಸುವುದು; ಪ್ರಾಣಿಗಳ ಹೊರಗೂ ಒಳಗೂ ಇರುವುದು, ಚರಾಚರ ಸ್ವರೂಪವಾಗಿ ಇರುವುದು, ಅತಿ ಸೂಕ್ಷ್ಮವಾಗಿರುವುದರಿಂದ (ಅಜ್ಞಾನಿಗಳಿಗೆ) ತಿಳಿಯಲಸಾಧ್ಯವಾಗಿರುವುದು, ದೂರದಲ್ಲಿಯೂ ಮತ್ತು ಹತ್ತಿರದಲ್ಲೂ ಇರುವುದು. ವಿಭಾಗವಿಲ್ಲದೆ ಇದ್ದರೂ ಪ್ರಾಣಿಗಳಲ್ಲಿ ವಿಭಜಿಸಲ್ಪಟ್ಟಂತೆ ಕಾಣುವುದು. ಆ ಜ್ಞೇಯವು ಪ್ರಾಣಿಗಳನ್ನು ಸೃಷ್ಟಿಸುವುದು, ಪೋಷಿಸುವುದು ಹಾಗು ಲಯಗೊಳಿಸುವುದು ಎಂದು ತಿಳಿದುಕೊಳ್ಳಬೇಕು. ಮತ್ತೆ ಅದು ಪ್ರಕಾಶಮಾನವಾಗಿರುವ ಸೂರ್ಯ ಚಂದ್ರಾದಿಗಳಿಗೆ ಪ್ರಕಾಶವನ್ನು ಕೊಡುವುದೂ, ತಮಸ್ಸಿನ (ಅಜ್ಞಾನದ) ಆಚೆ ಇರುವುದು (ಇಲ್ಲವೆ ಅತೀತವಾದುದು), ಜ್ಞಾನ ಸ್ವರೂಪ (ಚಿನ್ಮಯ ಸ್ವರೂಪ)ವಾದುದು, ತಿಳಿಯಬೇಕಾದದ್ದು, (ಅಮಾನಿತ್ವಾದಿ) ಜ್ಞಾನಗುಣಗಳಿಂದ ಹೊಂದಬಹುದಾದದ್ದು, ಸಮಸ್ತ ಪ್ರಾಣಿಗಳ ಹೃದಯದಲ್ಲಿ ನೆಲೆಸಿರುವುದೆಂದು ಹೇಳಲಾಗುತ್ತದೆ.

**ವ್ಯಾಖ್ಯೆ:** ಈ ಶ್ಲೋಕಗಳಲ್ಲಿ ಜ್ಞೇಯವಾದ ಪರಬ್ರಹ್ಮವೆಂತಹುದೋ ವಿವರವಾಗಿ ತಿಳಿಸಲಾಗಿದೆ- 'ಜ್ಞಾನಗಮ್ಯಂ' ಎಂದು ಹೇಳುವುದರಿಂದ ಆ ಜ್ಞೇಯ ಸ್ವರೂಪವು ಮೇಲೆ ತಿಳಿಸಿದ ಜ್ಞಾನಗುಣಗಳು ಉಂಟಾದಾಗ ಮಾತ್ರ ಲಭ್ಯವಾಗುವುದೆಂದು ಸ್ಪಷ್ಟವಾಗುತ್ತದೆ. ಕರ್ಮ, ಭಕ್ತಿ, ಧ್ಯಾನ, ಜ್ಞಾನ, ಯಾವ ಮಾರ್ಗವನ್ನು ಅನುಸರಿಸಿದರೂ, ಕೊನೆಗೆ ಎಲ್ಲರೂ ಈ ಜ್ಞೇಯ ಸ್ವರೂಪವಾದ ಪರಮಾತ್ಮನನ್ನು ತಿಳಿದೇ ಮುಕ್ತಿ ಹೊಂದಬೇಕಾಗುವುದು. ಆದ್ದರಿಂದ ಮುಮುಕ್ಷುವು ಜ್ಞಾನಗುಣಗಳ ಸಮುದಾಯದ ಜೊತೆಗೆ ಈ ಜ್ಞೇಯ ಸ್ವರೂಪದ ಮನನವನ್ನು ಕೂಡ ಮಾಡುತ್ತಿರಬೇಕು.

ವಾಸನಾಕ್ಷಯದೊಡನೆ ತತ್ವಜ್ಞಾನವನ್ನೂ ಹೊಂದಿರಬೇಕೆಂದು ಅರ್ಥ. ಸಾಧ್ಯವಸ್ತುವನ್ನು ಕುರಿತ ಪರಿಜ್ಞಾನ, ಸಾಧನೆ ಎರಡೂ ಇರಬೇಕೆನ್ನುವುದು ಭಾವ. ಗೀತೆಯ ಸಾರ, ಧ್ಯೇಯ ಹಾಗು ಲಕ್ಷ್ಯ ಈ ಜ್ಞೇಯ (ಪರಬ್ರಹ್ಮ) ತತ್ವವೇ ಆದುದರಿಂದ ಸಾಧಕರು ಈ ಶ್ಲೋಕಗಳ ಅರ್ಥವನ್ನು ಆಳವಾಗಿ ಮನನ ಮಾಡಿ ತಾವೂ ಸಹ ಅಂತಹ ಪರಬ್ರಹ್ಮ ಸ್ವರೂಪಗಳೇ ಎಂದು ಭಾವಿಸಿ ತಮ್ಮ ಚಿತ್ತಗಳನ್ನು ಆ ಜ್ಞೇಯ ಬ್ರಹ್ಮನಲ್ಲಿ ಲೀನವಾಗಿಸಿ, ಬ್ರಹ್ಮ ಸ್ವರೂಪಿಗಳಾಗಿ ಪ್ರಕಾಶಿಸಲು ಪ್ರಯತ್ನಿಸಬೇಕು. ಅದು ಜೀವನದ ಪರಮಾವಧಿಯೆಂದು ತಿಳಿಯಬೇಕು.

ಅಸಕ್ತಂ=ದೃಕ್-ಸ್ವರೂಪವಾದ ಆತ್ಮ, ದೃಶ್ಯವನ್ನು ಯಾವ ಮಾತ್ರವೂ ಸ್ಪರ್ಶಿಸದೇ ಇರುವುದು.

*'ಬಹಿರಂತಶ್ಚಭೂತಾನಾಂ'*- ಭಗವಂತನು ಎಲ್ಲಿದ್ದಾನೆ? ಎನ್ನುವ ಪ್ರಶ್ನೆಗೆ ಇಲ್ಲಿ ಉತ್ತರವಿದೆ. ಸಮಸ್ತ ಚರಾಚರ ಪ್ರಾಣಿ ಕೋಟಿಗಳ ಹೊರಗೆ ಹಾಗು ಒಳಗೆ ಪರಮಾತ್ಮನು ಇದ್ದಾನೆ ಎನ್ನುವುದನ್ನು ಇಲ್ಲಿ ಸ್ಪಷ್ಟೀಕರಿಸಲಾಗಿದೆ. ಆದ್ದರಿಂದ ತಾವು ಮಾಡುವ ಪಾಪ ಪುಣ್ಯಗಳನ್ನು ಭಗವಂತನು ಅತಿ ಸಮೀಪದಲ್ಲಿದ್ದು ನೋಡುತ್ತಿದ್ದಾನೆಂದು ತಿಳಿದು ಪಾಪಕಾರ್ಯಗಳನ್ನು ಮಾಡಬಾರದು.

*'ಅಚರಂ ಚರಮೇವ ಚ'*- ಒಂದೇ ವಸ್ತು ಚಲಿಸುತ್ತ ಹಾಗೂ ಚಲಿಸದೆ ಹೇಗೆ ಇರಬಲ್ಲದು? ಸ್ವಪ್ನದಲ್ಲಿ ಮನುಜನು ಸ್ವಪ್ನ ಲೋಕದ ದೃಷ್ಟಿಯಲ್ಲಿ ಚಲಿಸುತ್ತಿದ್ದರೂ, ವಾಸ್ತವವಾಗಿ ತನ್ನ ಹಾಸಿಗೆಯಲ್ಲಿ ಚಲಿಸದೆ ಮಲಗಿರುವ ನಲ್ಲವೇ! ಹಾಗೆಯೇ ಸ್ವಪ್ನರೂಪವಾದ ಈ ಜಗತ್ತಿನಲ್ಲಿ ಪ್ರಾಣಿ ಕೋಟಿಗಳು ಚಲಿಸುತ್ತಿದ್ದರೂ, ವಾಸ್ತವವಾಗಿ ಬ್ರಹ್ಮರೂಪದಲ್ಲಿ ಪರಮಾತ್ಮನು ನಿಶ್ಚಲವಾಗಿರುವನು. ಇಲ್ಲವೆ, ಪ್ರಾಣಿಕೋಟಿಯಲ್ಲಿ ಚರವಾದ ಮನುಷ್ಯ, ಪಶು ಪಕ್ಷಿರೂಪಗಳಲ್ಲಿ ಹಾಗು ಅಚಲವಾದ ಶಿಲೆ ಹಾಗು ಪರ್ವತರೂಪಗಳಲ್ಲಿಯೂ ಬೆಳಗುತ್ತಿದ್ದಾನೆಂದು ಹೇಳಬಹುದು.

*'ಸೂಕ್ಷ್ಮತ್ವಾತ್ತದ ವಿಜ್ಞೇಯಂ'*- ಸ್ಥೂಲಾಕಾಶ, ಚಿತ್ತಾಕಾಶ, ಚಿದಾಕಾಶ ಎಂದು ಮೂರು ಇವೆ. ಇವು ಒಂದಕ್ಕಿಂತ ಮತ್ತೊಂದು ಸೂಕ್ಷ್ಮವಾಗಿವೆ.

ಇವುಗಳಲ್ಲಿ ಮೂರನೆಯದಾದ ಚಿದಾಕಾಶವೇ ಜ್ಞೇಯವಾದ ಪರಬ್ರಹ್ಮ. ಆದ್ದರಿಂದ ಅದು ಅತ್ಯಂತ ಸೂಕ್ಷ್ಮವಾದುದು. ಸ್ಥೂಲದೃಷ್ಟಿಗೆ, ಪ್ರಾಪಂಚಿಕ ದೃಷ್ಟಿಗೆ, ಅಜ್ಞಾನ ದೃಷ್ಟಿಗೆ ಅದು ಗೋಚರಿಸುವುದಿಲ್ಲ. ಜ್ಞಾನ ನೇತ್ರದಿಂದ ಮಾತ್ರ ಅದನ್ನು ತಿಳಿದುಕೊಳ್ಳಬಹುದು.

*'ಅಂತಿಕೇ ಚ ತತ್'*- ಪರಮಾತ್ಮನು ಜನರಿಗೆ ಅತಿಸಮೀಪದಲ್ಲಿರುವನೆಂದು ಇಲ್ಲಿ ತಿಳಿಸಲಾಗಿದೆ. ಆದ್ದರಿಂದ ಶಿಕ್ಷಿಸುವ ನ್ಯಾಯಾಧೀಶನು ಜೊತೆಯಲ್ಲಿಯೇ ಇದ್ದಾನೆ ಎಂದು ಭಾವಿಸಿ ಪಾಪಕೃತ್ಯಗಳನ್ನು ಮಾಡಬಾರದು.

*'ಅವಿಭಕ್ತಂ ಚ ಭೂತೇಷು ವಿಭಕ್ತಮಿವ ಚ ಸ್ಥಿತಂ'*- ವಾಸ್ತವವಾಗಿ ಪರಮಾತ್ಮನು ಪ್ರಾಣಿಕೋಟಿಗಳಲ್ಲಿ ಭಿನ್ನ ಭಿನ್ನವಾಗಿಲ್ಲ. ಆತನು ಯಾವಾಗಲೂ ವಿಭಜನೆಗೊಂಡಿರುವುದಿಲ್ಲ ಅವಿದ್ಯೆಯಿಂದ ಆತನು ವಿಭಜನೆಗೊಂಡಂತೆ ತೋರುತ್ತಾನೆ. ಆದ್ದರಿಂದಲೇ 'ಇವ' ಎನ್ನುವ ಪದದ ಪ್ರಯೋಗವಾಗಿದೆ. ಕಲಶದ ಜಲದಲ್ಲಿ, ನದಿ ಜಲದಲ್ಲಿ, ಸಮುದ್ರ ಜಲದಲ್ಲಿ ಸೂರ್ಯನು ಭಿನ್ನ ಭಿನ್ನವಾಗಿ ಕಂಡರೂ ಬಿಂಬರೂಪವಾಗಿ ಆತನು ಅವಿಭಕ್ತವಾಗಿಯೇ ಇರುವನಲ್ಲವೇ! ಹಾಗೆಯೇ ಪರಮಾತ್ಮನು ಎಂದು ತಿಳಿಯಬೇಕು. ಪುಷ್ಪ ಮಾಲೆಯ ದಾರದಂತೆ ಸಮಸ್ತ ಭೂತಕೋಟಿಯಲ್ಲಿ ಅವಿಭಕ್ತನಾಗಿ ಬೆಳಗುತ್ತಿರುವ ಆ ಪರಮಾತ್ಮನನ್ನು ತಿಳಿದು ಜನ್ಮ ಸಾರ್ಥಕತೆಯನ್ನು ಹೊಂದಬೇಕು.

*'ಭೂತಭರ್ತೃ ಚ, ಗ್ರಸಿಷ್ಣು ಪ್ರಭವಿಷ್ಣು ಚ'*- ಜನ್ಮ ಕೊಡುವವನು, ಪೋಷಿಸುವವನು, ಲಯಗೊಳಿಸುವವನು ಆ ಪರಮಾತ್ಮನೇ. ಸೃಷ್ಟಿ ಸ್ಥಿತಿ ಲಯಕಾರಕನು ಆತನೇ. ಬ್ರಹ್ಮ ವಿಷ್ಣು, ಶಿವರೂಪಗಳು ಆತನವೇ. 'ತಮಸಃ ಪರಮುಚ್ಯತೇ'- ಈ ಬ್ರಹ್ಮಾಂಡವೆಲ್ಲವೂ, ಮನಸ್ಸು, ಬುದ್ಧಿ ಮುಂತಾದುವೆಲ್ಲವೂ, ತಮಸ್ಸಿನಲ್ಲಿ - ಅಂದರೆ ಮಾಯೆಯಲ್ಲಿ, ಅವಿದ್ಯೆಯಲ್ಲಿ ಇವೆ. ಪರಮಾತ್ಮ ತಮಸ್ಸಿಗೆ ಭಿನ್ನವಾಗಿದ್ದಾನೆ. ಆದ್ದರಿಂದ ಮಾಯಾ ಮಾಲಿನ್ಯಗಳು ಆತನನ್ನು ತಾಕುವುದಿಲ್ಲ. ಮುಮುಕ್ಷುವು ಈ ಪ್ರಕಾರವಾಗಿ ತನ್ನ ಯಥಾರ್ಥ ಸ್ವರೂಪವು ಇಂತಹ ದೋಷರಹಿತ ಪರಬ್ರಹ್ಮವೆಂದು ಭಾವಿಸಿ ಮಾಯಾ ದೋಷಗಳು ಹತ್ತಿರ ಬರದಂತೆ ನೋಡಿಕೊಳ್ಳಬೇಕು.

*'ಜ್ಞಾನಂ ಜ್ಞೇಯಂ ಜ್ಞಾನಗಮ್ಯಂ'*- ಮೊದಲು ಪ್ರಯೋಗಿಸಲ್ಪಟ್ಟಿರುವ 'ಜ್ಞಾನ' ಶಬ್ದಕ್ಕೆ ಶುದ್ಧ ಚೈತನ್ಯವೆಂದೂ ನಂತರ ಪ್ರಯೋಗಿಸಲ್ಪಟ್ಟಿರುವ 'ಜ್ಞಾನ'ಕ್ಕೆ ಅಮಾನಿತ್ವಾದಿಗಳು ಎಂದು ಅರ್ಥ. ಪರಮಾತ್ಮನನ್ನು ಜ್ಞೇಯವೆಂದು ಈ ಅಧ್ಯಾಯದಲ್ಲಿ ಕರೆಯಲಾಗಿದೆ. ಅಂದರೆ ತಿಳಿದುಕೊಳ್ಳಬೇಕಾದದ್ದು ಎಂದರ್ಥ. ಪ್ರಪಂಚದಲ್ಲಿ ಇತರೆ ವಸ್ತುಗಳನ್ನೆಲ್ಲಾ ತಿಳಿದುಕೊಂಡರೂ, ತಿಳಿದುಕೊಳ್ಳಲೇಬೇಕಾದ ಬ್ರಹ್ಮವನ್ನು ತಿಳಿದುಕೊಳ್ಳದಿದ್ದರೆ ಅವೆಲ್ಲವೂ ನಿರುಪಯೋಗಗಳೇ ಹೌದು. ಏಕೆಂದರೆ, ಪ್ರಪಂಚದ ವಸ್ತು ಜ್ಞಾನದಿಂದ ಜನರು ಜನನ ಮರಣ ಪ್ರವಾಹದಿಂದ ತಪ್ಪಿಸಿಕೊಳ್ಳುವ ಶಕ್ತಿಯನ್ನು ಪಡೆಯಲಾರರು.

ಭಗವಂತನನ್ನು ಹೇಗೆ ಹೊಂದಬಹುದು ಎನ್ನುವ ಪ್ರಶ್ನೆಗೆ 'ಜ್ಞಾನಗಮ್ಯಂ' ಎಂದು ಉತ್ತರವೀಯಲಾಗಿದೆ. ಅಮಾನಿತ್ವಾದಿ ಜ್ಞಾನಗುಣಗಳಿಂದ ಆತನನ್ನು ಹೊಂದಬಹುದೆಂದು ಅರ್ಥ. ಆದ್ದರಿಂದ ಯಾರಾದರೂ ಸರಿಯೇ ಭಗವಂತನು ತಿಳಿಸಿದ ಈ ಅಮಾನಿತ್ವಾದಿ ಸದ್ಗುಣ ಸಂಪತ್ತನ್ನು ಹೊಂದಿದ್ದೇ ಆದರೆ ಆತನು ಜ್ಞೇಯವನ್ನು ತಪ್ಪದೆ ಹೊಂದೇ ತೀರುತ್ತಾನೆ.

*'ಹೃದಿ ಸರ್ವಸ್ಯ ವಿಷ್ಠಿತಂ'*- ಎಲ್ಲರ ಹೃದಯದಲ್ಲಿ ಭಗವಂತನು ಇದ್ದಾನೆಂದು ಹೇಳಲಾಗಿದೆ. ಸರ್ವಸ್ಯ ಎಂದು ಹೇಳಿರುವುದರಿಂದ ಪಿಪೀಲಿಕಾದಿ ಬ್ರಹ್ಮ ಪರ್ಯಂತ ಪ್ರಾಣಿಕೋಟಿಗಳ ಹೃದಯದಲ್ಲಿ, ಸ್ಥಾವರಾದಿಗಳಲ್ಲಿ ಭಗವಂತನು ನಿವಸಿಸುತ್ತಿದ್ದಾನೆಂದು ಅರ್ಥ. ಆದ್ದರಿಂದ ತನ್ನ ಹೃದಯದಲ್ಲೇ ಇರುವ ಪರಮಾತ್ಮನನ್ನು ಹೊಂದಲು ಪಾಪಿಗೂ ಹಾಗು ಚಂಡಾಲನಿಗೂ ಕೂಡ ಹಕ್ಕಿದೆ. ಆತ್ಮ ಎಲ್ಲರ ಜನ್ಮಸಿದ್ಧ ಹಕ್ಕು. ಆದ್ದರಿಂದ ಜಾತಿ ಮತಗಳೆಂಬ ಭೇದಭಾವವಿಲ್ಲದೆ ಸರ್ವರೂ ನಿರಾತಂಕವಾಗಿ ಆತನನ್ನು ಹೊಂದಲು ಯತ್ನಿಸಬಹುದು.

ಹೃದಯದಲ್ಲಿರುವನೆಂದು ಹೇಳುವುದರಿಂದ ಭಗವಂತನು ಜನರ ಶರೀರದಲ್ಲಿ ಅತಿ ಸಮೀಪದಿಂದ ವರ್ತಿಸುತ್ತಿದ್ದಾನೆಂದು ತಿಳಿದು ಪಾಪಕಾರ್ಯಗಳನ್ನು ಮಾಡದೆ ಭಗವತ್ಪ್ರಾಪ್ತಿಗಾಗಿ ನಿರಂತರ ಯತ್ನಿಸಬೇಕು.

ಪ್ರ : ಜ್ಞೇಯವಾದ ಪರಬ್ರಹ್ಮನ ಸ್ವರೂಪವೇನು?

ಉ: ೧) ಆ ಜ್ಞೇಯವಾದ ಪರಬ್ರಹ್ಮ ಎಲ್ಲೆಲ್ಲಿಯೂ, ಕಾಲು, ಕೈಗಳು, ಕಣ್ಣು ಕಿವಿ, ಶಿರಸ್ಸುಗಳು, ಮುಖಗಳು ಉಳ್ಳದ್ದಾಗಿಯೂ ೨) ಎಲ್ಲೆಲ್ಲೂ ಆವರಿಸಿರುವುದೂ ೩) ಸಮಸ್ತೇಂದ್ರಿಯಗುಣಗಳಿಗೆ ಜ್ಯೋತಿ ೪) ಸರ್ವೇಂದ್ರಿಯ ರಹಿತವಾದುದು ೫) ಯಾವುದನ್ನೂ ಸ್ಪರ್ಶಿಸದೆ ಇರುವುದೂ ೬) ಸಮಸ್ತವನ್ನು ಭರಿಸುವುದು ೭) ಸತ್ವರಜಸ್ತಮೋಗುಣ ರಹಿತವಾದುದು ೮) ಗುಣಗಳನ್ನು ಅನುಭವಿಸುವುದು ೯) ಪ್ರಾಣಿಗಳ ಒಳಗೆ, ಹೊರಗೆ ಇರುವುದು ೧೦) ಚಲಿಸದೆ ಇರುವುದು ೧೧) ಚಲಿಸುವುದು ೧೨) ಅತಿಸೂಕ್ಷ್ಮವಾಗಿರುವುದರಿಂದ (ಅಜ್ಞಾನಿಗಳಿಗೆ) ಗೋಚರವಾಗದೇ ಇರುವುದು ೧೩) ದೂರದಲ್ಲಿರುವುದು ೧೪) ಹತ್ತಿರ ಕೂಡ ಇರುವುದು. ೧೫) ವಿಭಜಿಸಲ್ಪಡಲು ಸಾಧ್ಯವಾಗದೇ ಇದ್ದರೂ ಪ್ರಾಣಿಗಳಲ್ಲಿ ವಿಭಜನೆಯಾದಂತೆ ಕಾಣುವುದು ೧೬) ಪ್ರಾಣಿಗಳನ್ನು ಸೃಷ್ಟಿಸಿ, ಪೋಷಿಸಿ, ಲಯಗೊಳಿಸುವುದು ೧೭) ಸೂರ್ಯಾದಿ ಪ್ರಕಾಶಕ ಪದಾರ್ಥಗಳಿಗೆ ಕೂಡ ಪ್ರಕಾಶ ನೀಡುವುದು. ೧೮) ತಮಸ್ಸಿಗಿಂತ (ಅಜ್ಞಾನಕ್ಕಿಂತ) ಭಿನ್ನವಾದುದು (ಇಲ್ಲವೆ ಅತೀತವಾದುದು) ೧೯) ಚಿನ್ಮಯರೂಪಿ ೨೦) ತಿಳಿಯಬೇಕಾದದ್ದು ೨೧) ಅಮಾನಿತ್ವಾದಿ ಜ್ಞಾನಗುಣಗಳಿಂದ ಹೊಂದಬಹುದಾದದ್ದು ೨೨) ಸಮಸ್ತ ಪ್ರಾಣಿಗಳ ಹೃದಯಗಳಲ್ಲಿ ಸ್ಥಿತವಾಗಿರುವುದೆಂದು ಹೇಳಲ್ಪಡುತ್ತದೆ.

**ಅ॥** ಈ ವಿಧವಾಗಿ ಕ್ಷೇತ್ರ ಕ್ಷೇತ್ರಜ್ಞಗಳೆರಡನ್ನೂ ವರ್ಣಿಸಿ, ಅವುಗಳ ಜ್ಞಾನದಿಂದ ಉಂಟಾಗುವ ಫಲವನ್ನು ಹೇಳಲಾಗುತ್ತಿದೆ-

**೧೯. ಇತಿ ಕ್ಷೇತ್ರಂ ತಥಾ ಜ್ಞಾನಂ ಜ್ಞೇಯಂ ಚೋಕ್ತಂ ಸಮಾಸತಃ**
**ಮದ್ಭಕ್ತ ಏತದ್ವಿಜ್ಞಾಯ ಮದ್ಭಾವಾಯೋಪಪದ್ಯತೇ**

**ಅರ್ಥ:** ಇತಿ=ಈ ಪ್ರಕಾರವಾಗಿ; ಕ್ಷೇತ್ರಂ=ಕ್ಷೇತ್ರವು; ತಥಾ=ಹಾಗೆಯೇ; ಜ್ಞಾನಂ=ಜ್ಞಾನವು; ಜ್ಞೇಯಂ ಚ=ಜ್ಞೇಯವೂ ಸಹ; ಸಮಾಸತಃ=ಸಂಕ್ಷೇಪವಾಗಿ; ಉಕ್ತಂ=ಹೇಳಲ್ಪಟ್ಟಿತು; ಮದ್ಭಕ್ತಃ=ನನ್ನಲ್ಲಿ ಭಕ್ತಿಯಿರುವವನು; ಏತತ್=ಇದನ್ನು; ವಿಜ್ಞಾಯ=ತಿಳಿದುಕೊಂಡು; ಮದ್ಭಾವಾಯ=ನನ್ನ ಸ್ವರೂಪವನ್ನು ಹೊಂದಲು (ಮೋಕ್ಷವನ್ನು ಹೊಂದಲು); ಉಪಪದ್ಯತೇ= ತಕ್ಕವನಾಗುತ್ತಾನೆ.

**ತಾ||** ಈ ಪ್ರಕಾರವಾಗಿ ಕ್ಷೇತ್ರ, ಜ್ಞಾನ, ಜ್ಞೇಯವನ್ನು ಸಂಕ್ಷೇಪವಾಗಿ ಹೇಳಲಾಯಿತು. ನನ್ನ ಭಕ್ತನು (ನನ್ನಲ್ಲಿ ಭಕ್ತಿಯುಳ್ಳವನು) ಇವುಗಳನ್ನು ತಿಳಿದು, ನನ್ನ ಸ್ವರೂಪವನ್ನು (ಮೋಕ್ಷ, ಭಗವದೈಕ್ಯವನ್ನು) ಹೊಂದಲು ಅರ್ಹನಾಗುತ್ತಾನೆ

**ವ್ಯಾಖ್ಯೆ: 'ಮದ್ಭಕ್ತ ಏತದ್ವಿಜ್ಞಾಯ'**– 'ನನ್ನ ಭಕ್ತನು ಇದನ್ನು ತಿಳಿದುಕೊಂಡು' ಎಂದು ಹೇಳಿರುವುದರಿಂದ, ಭಕ್ತನಲ್ಲದವನು ಆ ಜ್ಞಾನಾದಿಗಳನ್ನು ತಿಳಿದುಕೊಳ್ಳಲು ಸಾಧ್ಯವಿಲ್ಲವೆಂದೂ, ಮೇಲೆ ತಿಳಿಸಿದ ಜ್ಞಾನ ಜ್ಞೇಯಾದಿಗಳನ್ನು ತಿಳಿಯುವುದಕ್ಕಿಂತ ಮುಂಚೆ ಪ್ರತಿಯೊಬ್ಬನೂ ಭಕ್ತನಾಗುವುದು ಅತ್ಯಂತ ಅವಶ್ಯಕವೆಂದು ಸ್ಪಷ್ಟವಾಗುತ್ತದೆ. ಭಕ್ತಿ ಎನ್ನುವ ಪುಷ್ಪದಿಂದ ಜ್ಞಾನವೆಂಬ ಫಲ ಆವಿರ್ಭವಿಸುವುದು. ಆದ್ದರಿಂದ ಪ್ರಪ್ರಥಮವಾಗಿ ಸರ್ವೇಶ್ವರನ ಮೇಲೆ ಸದ್ಗುರುವಿನ ಮೇಲೆ, ಅಚಂಚಲ ಭಕ್ತಿಯುಂಟಾಗಿ ಜಪ, ತಪ, ಪೂಜೆ ಸಂಕೀರ್ತನಾದಿಗಳನ್ನು ಮಾಡಿ ಆರಾಧಿಸುವವನಿಗೆ ಆತನು ಕರುಣಿಸಿ ಜ್ಞಾನ ಹಾಗು ಜ್ಞೇಯಗಳನ್ನು ತಿಳಿಸುವ 'ಬುದ್ಧಿಯೋಗ'ವನ್ನು ಪ್ರಸಾದಿಸುವನು. ತದ್ವಾರಾ ಆ ಭಕ್ತರು ಜ್ಞಾನಿಗಳಾಗಿ ಭಗವತ್ಸಾಯುಜ್ಯಕ್ಕೆ ಅರ್ಹರಾಗುತ್ತಿದ್ದಾರೆ. ಭಗವದ್ಭಕ್ತಿಯಿಲ್ಲದಿದ್ದರೆ ಅವರು ಎಷ್ಟು ದೊಡ್ಡ ಪಂಡಿತರಾದರೂ, ಭೌತಿಕ ವಿಜ್ಞಾನ ಕುಶಲತೆಯನ್ನು ಹೊಂದಿದ್ದರೂ, ಈಶ್ವರೀಯ ವಿಜ್ಞಾನ, ಹಾಗು ಜ್ಞೇಯ ತತ್ವಾನುಭವವು ಅವರಿಗೆ ಉಂಟಾಗುವುದಿಲ್ಲವೆಂದು ಈ ಶ್ಲೋಕದ ದ್ವಾರ ತಿಳಿಯುತ್ತದೆ. ಮತ್ತೆ ಜನರು ಸಾಮಾನ್ಯ ಭಕ್ತಿಯಿಂದ ತೃಪ್ತಿಪಡದೆ ಸಾಧನಾತಿಶಯದಿಂದ ಜ್ಞಾನ, ಜ್ಞೇಯಗಳನ್ನು ತಿಳಿದು, ಮೋಕ್ಷಾರ್ಹರಾಗ ಬೇಕಾಗಿದೆಯೆಂದು ವಿದಿತವಾಗುತ್ತದೆ.

ಮೋಕ್ಷವನ್ನು ಯಾರು ಹೊಂದಬಲ್ಲರು? ಎನ್ನುವ ಪ್ರಶ್ನೆಗೆ ಭಗವಂತನು ಇಲ್ಲಿ ಸಮಂಜಸವಾದ ಉತ್ತರವನ್ನು ಕೊಟ್ಟಿರುತ್ತಾನೆ. ಈ ಜ್ಞಾನ ಜ್ಞೇಯ ತತ್ವಗಳನ್ನು ಚೆನ್ನಾಗಿ ತಿಳಿದುಕೊಂಡವರೇ ಮೋಕ್ಷಾರ್ಹರು. ಆ ಜ್ಞಾನಾದಿಗಳಾದರೋ ಭಗವದ್ಭಕ್ತಿಯಿರುವವನಿಗೆ ಮಾತ್ರ ಲಭ್ಯವೆಂದು ತಿಳಿಸಿದ್ದಾನೆ.

ಪ್ರ : ಭಗವತ್ಸಾಯುಜ್ಯ (ಮೋಕ್ಷ) ವನ್ನು ಯಾರು ಹೊಂದುವರು?

ಉ : ಜ್ಞಾನ ಹಾಗು ಜ್ಞೇಯ ಸ್ವರೂಪವನ್ನು ಚೆನ್ನಾಗಿ ತಿಳಿದುಕೊಂಡವರು.

ಪ್ರ : ಜ್ಞಾನ, ಜ್ಞೇಯಗಳನ್ನು ಯಾರು ತಿಳಿದುಕೊಳ್ಳಬಲ್ಲರು?

ಉ : ಭಗವದ್ಭಕ್ತಿಯುಳ್ಳವರು ಮಾತ್ರವೇ.

**ಅ||** ಇಲ್ಲಿಯವರೆಗೆ ಜ್ಞಾನ ಜ್ಞೇಯಗಳನ್ನು ಕುರಿತು ತಿಳಿಸಿ ಇನ್ನು ಪ್ರಕೃತಿ, ಪುರುಷರನ್ನು ವರ್ಣಿಸುತ್ತಿದ್ದಾನೆ-

**೨೦. ಪ್ರಕೃತಿಂ ಪುರುಷಂ ಚೈವ ವಿದ್ಧ್ಯನಾದಿ ಉಭಾವಪಿ**
**ವಿಕಾರಾಂಶ್ಚ ಗುಣಾಂಶ್ಚೈವ ವಿದ್ಧಿ ಪ್ರಕೃತಿ ಸಂಭವಾನ್**

**ಅರ್ಥ:** ಪ್ರಕೃತಿಂ=ಪ್ರಕೃತಿಯನ್ನು; ಪುರುಷಂ ಚ ಏವ=ಪುರುಷನನ್ನು; ಉಭೌ ಅಪಿ=ಎರಡನ್ನೂ; ಅನಾದೀ=ಆದಿಯಿಲ್ಲದವನೆಂದು; ವಿದ್ಧಿ=ತಿಳಿದುಕೊ; ವಿಕಾರಾಂಶ್ಚ=(ಮನೋ ಬುದ್ಧೀಂದ್ರಿಯಾದಿಗಳ) ವಿಕಾರವನ್ನು; ಗುಣಾಂಶ್ಚ ಏವ=(ಸತ್ವರಜಸ್ತಮೋ) ಗುಣಗಳನ್ನು; ಪ್ರಕೃತಿ ಸಂಭವಾನ್=ಪ್ರಕೃತಿಯಿಂದ ಉಂಟಾದುವುವೆಂದು ತಿಳಿಯುವುದು.

**ತಾ||** (ಓ ಅರ್ಜುನಾ!) ಪ್ರಕೃತಿ, ಪುರುಷ ಎರಡನ್ನೂ ಅನಾದಿಗಳೆಂದು ತಿಳಿಯುವುದು. (ಮನೋ ಬುದ್ಧೀಂದ್ರಿಯಾದಿಗಳ) ವಿಕಾರಗಳು, (ಸತ್ವರಜಸ್ತಮೋ) ಗುಣಗಳು ಪ್ರಕೃತಿಯಿಂದ ಉಂಟಾದುವು ಎಂದು ತಿಳಿಯುವುದು.

**ವ್ಯಾಖ್ಯೆ:** ಮಾಯೆ, ಸಂಸಾರ, ಬಂಧ ಯಾವಾಗ ಮೊದಲಾದವು? ಎಂದು ಬಹಳ ಮಂದಿ ಪ್ರಶ್ನಿಸುತ್ತಾರೆ. ರಾತ್ರಿ ನಿದ್ರಿಸುವಾಗ ಸ್ವಪ್ನ ಯಾವಾಗ ಪ್ರಾರಂಭವಾಯಿತು ಎನ್ನುವುದನ್ನು, ಇಂತಹ ಸಮಯದಲ್ಲಿ ಎಂದು ನಿರ್ದಿಷ್ಟವಾಗಿ ಹೇಗೆ ಉತ್ತರ ಹೇಳಲು ಸಾಧ್ಯವಿಲ್ಲವೋ ಹಾಗೆಯೇ ಈ ಜಗತ್ಪ್ರಪಂಚವನ್ನು ಕುರಿತೂ ತಿಳಿಯಬೇಕು. ಆದ್ದರಿಂದಲೇ ಈ ಮಾಯೆಯನ್ನು, ಪ್ರಕೃತಿಯನ್ನು ಅನಾದಿಯಾದವುಗಳೆಂದು ಹೇಳಿದನು. ಅನಾದಿಯೆಂದು ಹೇಳಿದನೇ ಹೊರತು ಅನಂತವೆಂದು ಹೇಳಲಿಲ್ಲ. ಏಕೆಂದರೆ ಯಾವ ಕ್ಷಣದಲ್ಲಿ ಮನುಜನಿಗೆ ಜ್ಞಾನೋದಯವಾಗುವುದೋ ಆ ಕ್ಷಣದಲ್ಲಿಯೇ 'ಮಾಯೆ', 'ಪ್ರಕೃತಿ', 'ಬಂಧನ' ಅಂತ್ಯವಾಗುವುವು. ಆದ್ದರಿಂದ ಪ್ರಕೃತಿ ಹಾಗು ಬಂಧನಗಳು ಅನಾದಿಯಾದವುವೆಂದು ಯಾರೂ ಭಯಪಡಬೇಕಾಗಿಲ್ಲ. ಜ್ಞಾನಪ್ರಾಪ್ತಿಗೆ ಯತ್ನಿಸಿದರೆ ಸಾಕು. ಸ್ವಪ್ನಲೋಕದಲ್ಲಿ ಸ್ವಪ್ನವು ಅನಾದಿಯಾಗಿ ಕಂಡರೂ ಎಚ್ಚೆತ್ತ ಮೇಲೆ ಅಂತ್ಯವಾಗುವುದಲ್ಲವೇ! ಪ್ರಕೃತಿ ಅನಾದಿ ಆದರೆ ಅಂತ್ಯವುಳ್ಳದೆಂದೂ; ಪುರುಷನು ಅನಾದಿ ಆದರೆ ಅನಂತವೆಂದು ತಿಳಿಯಬೇಕು.

*'ವಿಕಾರಾಂಶ್ಚ ಗುಣಾಂಶ್ಚೈವ ವಿದ್ಧಿ ಪ್ರಕೃತಿ ಸಂಭವಾನ್'*- ಪ್ರಕೃತಿ, ಪುರುಷರಿಬ್ಬರಲ್ಲಿ, ಪುರುಷನು (ಆತ್ಮ) ನಿತ್ಯಶುದ್ಧನು. ಆತನಲ್ಲಿ ಯಾವ ವಿಕಾರವೂ ಇರುವುದಿಲ್ಲ. ಕಾಮಕ್ರೋಧ, ಸುಖ, ದುಃಖ, ಮೋಹಾದಿ ವಿಕಾರಗಳೆಲ್ಲವೂ ಪ್ರಕೃತಿಯಿಂದಲೇ ಜನಿಸಿವೆ. ಆದ್ದರಿಂದ ಜೀವಿಗೆ ಈ ಕಾಮಕ್ರೋಧಾದಿ ವಿಕಾರಗಳು ಇರುವವರೆಗೆ ತಾನು ಇನ್ನೂ ಪ್ರಕೃತಿಯಲ್ಲಿರುವವನೇ ಎಂದೂ, ಬಂಧಯುತನೇ ಎಂದೂ, ಪುರುಷನಾದ ನಿರ್ವಿಕಾರ ಪರಮಾತ್ಮನನ್ನು ಇನ್ನೂ ಸೇರಲಿಲ್ಲವೆಂದು ತಿಳಿಯಬೇಕು. ಜೀವಿಯು ಯಾವಾಗ ಪ್ರಯತ್ನ ಪೂರ್ವಕ ವಾಗಿ ಆ ವಿಕಾರವನ್ನು ಹೊರದೋಡಿಸಿ ಚಿತ್ತವನ್ನು ವಾಸನಾಶೂನ್ಯವಾಗಿ ಮಾಡಿಕೊಳ್ಳುವನೋ ಆಗ ಮಾತ್ರ ಬಂಧವಿಮುಕ್ತಿಯನ್ನು ಹೊಂದಿ ಪುರುಷನಾದ ಭಗವಂತನಲ್ಲಿ ಸ್ಥಿತಿಗೊಳ್ಳುವನು. ಮತ್ತೆ ದುಃಖ, ಮನೋವಿಕಾರಗಳು ಉಂಟಾದಾಗ 'ಇವು ಪ್ರಕೃತಿಗೆ ಸೇರಿದುವುವೇ ಹೊರತು ನನ್ನವಲ್ಲ, ಇವು ನನ್ನ ಸ್ವರೂಪಗಳಲ್ಲ, ನಾನು ಇವುಗಳಿಗೆ ಸಾಕ್ಷಿ, ನಿರ್ವಿಕಾರನು ಮಾತ್ರ' ಎಂದು ದೃಢಮಾಡಿಕೊಂಡು ದುಃಖರಹಿತನಾಗಿ, ಮೇರುಪರ್ವತ ದಂತಹ ಸ್ಥಿರಚಿತ್ತವನ್ನು ಹೊಂದಿ, ಆಯಾ ವಿಕಾರಗಳನ್ನು ಹೊರದೂಡಬೇಕು.

**ಅ||** ಪ್ರಕೃತಿ ಪುರುಷರನ್ನು ಕುರಿತು ಮತ್ತೂ ವಿವರಿಸುತ್ತಿದ್ದಾನೆ-

**೨೧. ಕಾರ್ಯಕಾರಣಕರ್ತೃತ್ವೇ ಹೇತುಃ ಪ್ರಕೃತಿರುಚ್ಯತೇ**
**ಪುರುಷಸ್ಸುಖದುಃಖಾನಾಂ ಭೋಕ್ತೃತ್ವೇ ಹೇತುರುಚ್ಯತೇ**

**ಅರ್ಥ:** ಕಾರ್ಯಕಾರಣಕರ್ತೃತ್ವೇ=ಕಾರ್ಯ ಕಾರಣಗಳನ್ನುಂಟು ಮಾಡುವಲ್ಲಿ; ಪ್ರಕೃತಿಃ=ಪ್ರಕೃತಿ (ಮಾಯೆ); ಹೇತುಃ=ಹೇತುವೆಂದು; ಉಚ್ಯತೇ= ಹೇಳಲಾಗುತ್ತದೆ; ಸುಖದುಃಖಾನಾಂ=ಸುಖದುಃಖಗಳನ್ನು; ಭೋಕ್ತೃತ್ವೇ= ಅನುಭವಿಸುವಲ್ಲಿ; ಪುರುಷಃ=ಪುರುಷನು; ಹೇತುಃ=ಕಾರಣವೆಂದು; ಉಚ್ಯತೇ=ಹೇಳಲ್ಪಡುತ್ತದೆ.

**ತಾ||** ಕಾರ್ಯಕಾರಣಗಳಿಗೆ ಪ್ರಕೃತಿ ಹೇತುವೆಂದೂ, ಸುಖ ದುಃಖಗಳನ್ನು ಅನುಭವಿಸುವಲ್ಲಿ ಪುರುಷನೇ ಹೇತುವೆಂದು ಹೇಳಲ್ಪಡುತ್ತದೆ.

**ವ್ಯಾಖ್ಯೆ:** ಕಾರ್ಯವೆಂದರೆ ಶರೀರ, ಕಾರಣವೆಂದರೆ ಇಂದ್ರಿಯ ಮನೋ ಬುದ್ಧಿ ಅಹಂಕಾರಗಳು, ಪಂಚಭೂತಗಳು, ಶಬ್ದಾದಿ ವಿಷಯಗಳು - ಇವುಗಳೆಲ್ಲವೂ ಪ್ರಕೃತಿಯಿಂದ ಉಂಟಾಗಿವೆ. ಪ್ರಕೃತಿ ಜಡವಾದುದು. ಆದುದರಿಂದ ಸುಖದುಃಖಗಳನ್ನು ಅದು ಅನುಭವಿಸುವುದಿಲ್ಲ. ಪುರುಷನು ಚಿದ್ರೂಪಿ, ಅಸಂಗನಾದುದರಿಂದ ಆತನಿಗೆ ಸುಖದುಃಖಗಳ ಭೋಕ್ತೃತ್ವವಿರುವುದಿಲ್ಲ. ಆದರೂ ಪ್ರಕೃತಿಯ ಸಂಯೋಗದಿಂದ ಆಯಾ ಸುಖ ದುಃಖಾದಿಗಳನ್ನು ಪುರುಷನು ಅನುಭವಿಸುತ್ತಿರುವಂತೆ ಕಾಣುತ್ತದೆ. ಅಷ್ಟೇ ಅಲ್ಲದೆ ವಾಸ್ತವವಾಗಿ ಆತನಿಗೆ ಕರ್ತೃತ್ವಭೋಕ್ತೃತ್ವಾದಿಗಳೇನೂ ಇಲ್ಲ.

**ಅ||** ಪ್ರಕೃತಿಯ ಗುಣಗಳಲ್ಲಿ ಮಿಲನಗೊಳ್ಳುವುದೇ ಜೀವಿಯ ಜನ್ಮಕ್ಕೆ ಹೇತುವೆಂದು ಹೇಳುತ್ತಿದ್ದಾನೆ-

**೨೨ ಪುರುಷಃ ಪ್ರಕೃತಿಸ್ಥೋ ಹಿ ಭುಂಕ್ತೇ ಪ್ರಕೃತಿಜಾನ್ ಗುಣಾನ್**
**ಕಾರಣಂ ಗುಣಸಂಗೋಽಸ್ಯ ಸದಸದ್ಯೋನಿಜನ್ಮಸು**

**ಅರ್ಥ:** ಪ್ರಕೃತಿಸ್ಥಃ=ಪ್ರಕೃತಿಯಲ್ಲಿರುವವನಾಗಿ; ಪುರುಷಃ=ಪುರುಷನು (ಜೀವಿಯು); ಪ್ರಕೃತಿಜಾನ್=ಪ್ರಕೃತಿಯಿಂದ ಹುಟ್ಟಿದ; ಗುಣಾನ್=(ಸುಖದುಃಖಾದಿ) ಗುಣಗಳನ್ನು; ಭುಂಕ್ತೇಹಿ=ಅನುಭವಿಸುತ್ತಿದ್ದಾನಲ್ಲ! ಗುಣಸಂಗಃ=ಆಯಾಗುಣಗಳ ಸಂಪರ್ಕವೇ; ಅಸ್ಯ=ಈ ಜೀವಿಗೆ; ಸದಸದ್ಯೋನಿಜನ್ಮಸು=ಒಳ್ಳೆಯ ಕೆಟ್ಟ (ನೀಚ) ಜನ್ಮಗಳನ್ನು ಹೊಂದುವುದರಲ್ಲಿ; ಕಾರಣಂ=ಕಾರಣ (ಆಗಿದೆ).

**ತಾ||** ಪ್ರಕೃತಿಯಲ್ಲಿದ್ದವನಾಗಿ ಪುರುಷನು (ಜೀವಿಯು) ಪ್ರಕೃತಿಯಿಂದ ಹುಟ್ಟಿದ (ಸುಖ ದುಃಖಾದಿ) ಗುಣಗಳನ್ನು ಅನುಭವಿಸುತ್ತಿದ್ದಾನೆ. ಆಯಾ ಗುಣಗಳ ಜೊತೆಗೆ ಸಮ್ಮಿಲನವಾಗುವುದೇ ಈ ಜೀವಿಗೆ ಉತ್ತಮ ನಿಕೃಷ್ಟ ಜನ್ಮಗಳನ್ನು ಹೊಂದುವುದಕ್ಕೆ ಹೇತುವಾಗಿದೆ.

**ವ್ಯಾಖ್ಯೆ:** ಜೀವಿಯು ಈ ಸಂಸಾರ ಬಂಧನಕ್ಕೆ ಸಿಲುಕಲು ಹಾಗು ಉತ್ತಮಾಧಮ ಜನ್ಮಗಳನ್ನು ಹೊಂದಲು ಕಾರಣವೇನೆಂದು ಈ ಶ್ಲೋಕದಲ್ಲಿ ತಿಳಿಸಲಾಗಿದೆ. ಪ್ರಕೃತಿಯ ಸತ್ವರಜಸ್ತಮಗುಣಗಳೊಂದಿಗೆ, ಆಯಾ ಗುಣಗಳಿಂದ ಹುಟ್ಟಿದ ಪ್ರಾಪಂಚಿಕ ಪದಾರ್ಥಗಳೊಡನೆ ಉಂಟಾಗುವ ಸಂಯೋಗವೇ ಜೀವಿಗೆ ಬಂಧನವನ್ನೇರ್ಪಡಿಸುತ್ತದೆ. ಪುರುಷನು ವಾಸ್ತವವಾಗಿ ನಿರ್ವಿಕಾರಿಯಾಗಿ ಜನ್ಮವರ್ಜಿತನಾಗಿ ದೃಗ್ರೂಪನಾಗಿದ್ದರೂ ದೃಶ್ಯವಾದ ದೇಹೇಂದ್ರಿಯಾದಿಗಳು ಹಾಗು ಪ್ರಾಪಂಚಿಕ ಪದಾರ್ಥಗಳಲ್ಲಿ ಅಹಂಕಾರ, ಮಮಕಾರಗಳನ್ನು ಹೊಂದಿ, ಅಂತಹ ದೃಶ್ಯ ಉಪಾಧಿಗಳಲ್ಲಿಯೂ ಅವುಗಳ ಗುಣಗಳೊಡನೆಯೂ ಸಂಯೋಗ ಹೊಂದುವುದರಿಂದ ವಿಕಾರವಂತನಾಗಿ, ಜನನ ಮರಣಗಳನ್ನು ಹೊಂದಿ ಸಂಸಾರವನ್ನು ಮತ್ತೆ ಮತ್ತೆ ಪಡೆಯುತ್ತಿದ್ದಾನೆ. ಆದ್ದರಿಂದ ವಿಚಾರ ಶೀಲನು ಜನ್ಮಾದಿ ದುಃಖಗಳಿಗೆ ಕಾರಣ ಈ ಗುಣಸಂಗವೇ ಎಂದು ತಿಳಿದು, ತನ್ನ ಉಪಾಧಿಯೊಡನೆ ಉಪಾಧಿ ಗುಣಗಳೊಡನೆ, ಸಂಗ, ಆಸಕ್ತಿ, ಮಮಕಾರ, ಅಹಂಕಾರಗಳನ್ನು ತ್ಯಜಿಸಿ, ಅಸಂಗ ನಿರ್ಗುಣ ಚಿದ್ರೂಪವೇ ತಾನೆಂದು ಭಾವಿಸಿ, ತದ್ರೂಪನಾಗಿ ಬೆಳಗುತ್ತಿದ್ದರೆ ಇನ್ನು ಜನ್ಮಾದಿ ದುಃಖಗಳು ಹೇಗೆ ಬಾಧಿಸುವವು? ದುಃಖ ಭೂಯಿಷ್ಠವಾದ ಈ ಜನನಮರಣಾದಿ ಚಕ್ರದಿಂದ ತಪ್ಪಿಸಿಕೊಳ್ಳಲು ಇದೊಂದೇ ಉಪಾಯ. ಆಸಕ್ತಿಯೇ ಬಂಧ. ಅಸಕ್ತಿಯೇ ಮುಕ್ತಿ. ಒಂದು ದೊಡ್ಡ ಕಾರ್ಖಾನೆಯಲ್ಲಿ ಅನೇಕ ಯಂತ್ರಗಳು. ಚಕ್ರಗಳು ಕೆಲಸ ಮಾಡುತ್ತಿದ್ದರೂ, ಮೂಲಸ್ಥಾನದಲ್ಲಿರುವ ಚಕ್ರ (fly wheel)ಕ್ಕೆ ತಗುಲಿಸಿರುವ ಬೆಲ್ಟ್ ಹರಿದರೆ ಸಾವಿರಾರು ಯಂತ್ರಗಳೆಲ್ಲವೂ ಒಂದೇ ಸಾರಿ ಹೇಗೆ ನಿಂತು ಹೋಗುವುವೋ ಹಾಗೆಯೇ ಈ ಜನನಮರಣ ರೂಪ ಸಂಸಾರ ಯಂತ್ರಾಂಗವೆಲ್ಲಾ, ಜೀವಿಯು ಗುಣಗಳಿಂದ ಉಪಾಧಿಗಳಿಂದ ಪ್ರಕೃತಿಯಿಂದ ಬೇರ್ಪಟ್ಟಿದ್ದೇ ಆದರೆ, ಆ ಕ್ಷಣವೇ ನಿಂತು ಹೋಗುವುದು. ಇನ್ನು ಜೀವಿಗೆ ಮೋಕ್ಷವು ಕರತಲಾಮಲಕವಾದಂತೆಯೇ.

ಪ್ರ : ಜೀವಿಯು ಉತ್ತಮ ಹಾಗೂ ನೀಚ ಜನ್ಮಗಳನ್ನು ಹೊಂದಲು ಕಾರಣವೇನು?

ಉ : ಗುಣಗಳೊಡನೆ, ಪ್ರಕೃತಿಯೊಡನೆ, ಉಪಾಧಿಗಳೊಡನೆ ಆತನ ಮಿಲನವೇ ಜನ್ಮಾದಿ ದುಃಖಗಳಿಗೆ ಕಾರಣ.

ಪ್ರ : ಆದ್ದರಿಂದ ಜನ್ಮರಾಹಿತ್ಯಕ್ಕೆ ಉಪಾಯವೇನು?

ಉ : ವಿವೇಕದಿಂದ ಪ್ರಕೃತಿ, ಗುಣ, ಉಪಾಧಿ ಹಾಗು ದೃಶ್ಯ ವಿಷಯಗಳಿಂದ ಸಂಗವನ್ನು (ಆಸಕ್ತಿ) ತ್ಯಜಿಸುವುದು.

**ಅ||** ಈ ದೇಹದಲ್ಲಿರುವ ಪುರುಷನು ಸಾಕ್ಷಾತ್ ಪರಮಾತ್ಮನೇ ಎಂದು ವಚಿಸುತ್ತಿದ್ದಾನೆ-

**೨೩. ಉಪದ್ರಷ್ಟಾನುಮಂತಾ ಚ ಭರ್ತಾ ಭೋಕ್ತಾ ಮಹೇಶ್ವರಃ**
**ಪರಮಾತ್ಮೇತಿ ಚಾಪ್ಯುಕ್ತೋ ದೇಹೇಽಸ್ಮಿನ್ ಪುರುಷಃ ಪರಃ**

**ಅರ್ಥ:** ಪುರುಷಃ=ಪುರುಷನು (ಆತ್ಮ); ಅಸ್ಮಿನ್ ದೇಹೇ (ಸತಿ) ಅಪಿ=ಈ ಶರೀರದಲ್ಲಿದ್ದಾಗಲೂ; ಪರಃ=ಶರೀರಕ್ಕಿಂತ ಬೇರೆಯಾದವನು; ಉಪದ್ರಷ್ಟಾ=ಸಾಕ್ಷಿಯಾಗಿರುವವನು; ಅನುಮಂತಾ ಚ= ಅನುಮತಿಸುವವನು; ಭರ್ತಾ=ಭರಿಸುವವನು; ಭೋಕ್ತಾ= ಅನುಭವಿಸುವವನು; ಮಹೇಶ್ವರಃ=ಮಹೇಶ್ವರನು (ಪ್ರಭು ಹಾಗು ನಿಯಾಮಕನು); ಪರಮಾತ್ಮಾ ಇತಿ ಚ=ಪರಮಾತ್ಮನೂ ಎಂದು; ಉಕ್ತಃ=ಹೇಳಲ್ಪಡುತ್ತಿದ್ದಾನೆ.

**ವ್ಯಾಖ್ಯೆ:** 'ಉಪದ್ರಷ್ಟಾ'- ಯಜ್ಞದಲ್ಲಿ 'ಉಪದ್ರಷ್ಟಾ' ಎನ್ನುವವನು ಸಾಕ್ಷಿಯಾಗಿರುವವನು. ಹಾಗೆಯೇ ಆತ್ಮ ಶರೀರದಲ್ಲಿದ್ದರೂ 'ಪರಃ'- ಶರೀರಕ್ಕಿಂತ ಬೇರೆಯಾಗಿ ಪರವಾಗಿದ್ದು ದೇಹೇಂದ್ರಿಯಾದಿಗಳಿಗೆ ಸಾಕ್ಷಿಯಾಗಿರುವುದು. ಆದ್ದರಿಂದ ಜೀವಿಯು ವಾಸ್ತವವಾಗಿ ತಾನು ಅಂತಹ ವಾಸ್ತವ ಸ್ವರೂಪಿಯೇ ಆಗಲಿ ದೇಹೇಂದ್ರಿಯಾದಿಗಳಲ್ಲವೆಂದು ಭಾವಿಸಬೇಕು.

'ಮಹೇಶ್ವರಃ ಪರಮಾತ್ಮಾ ದೇಹೇಽಸ್ಮಿನ್'- ಎಂದು ಹೇಳಲ್ಪಟ್ಟಿರುವುದರಿಂದ ಜಗನ್ನಾಥನಾದ ಪರಮೇಶ್ವರನು, ಪರಮಾತ್ಮನು ಈ ದೇಹದಲ್ಲಿದ್ದು ವರ್ತಿಸುತ್ತಿದ್ದಾನೆಂದು ಸ್ಪಷ್ಟವಾಗುತ್ತದೆ. ಈ ಪ್ರಕಾರವಾಗಿ ಜೀವಿಗೆ ಪರಮಾತ್ಮನು ಅತಿ ಸಮೀಪವಾಗಿರುವುದರಿಂದ ಪ್ರಯತ್ನವಿದ್ದಲ್ಲಿ ಸುಲಭವಾಗಿ ಸಿಗುವನು. ಅವನಿಗಾಗಿ ದೂರದೂರ ಎಲ್ಲೋ ಪ್ರಯಾಸಬಿದ್ದು ಹುಡುಕುವ ಅವಶ್ಯಕತೆಯಿಲ್ಲ. ಮತ್ತೆ ಶಿಕ್ಷಿಸುವವನು, ಅನುಶಾಸಿಸುವವನು ಈಶ್ವರನೇ. ಅವನು ಜೊತೆಯಲ್ಲೇ ಇರುವುದರಿಂದ ಪಾಪಿಗಳು ಈ ವಿಷಯವನ್ನು ಗಮನಿಸಿ ಪಾಪಕೃತ್ಯಗಳನ್ನು ಮಾಡಬಾರದು.

'ಪರಃ'- ಎಂದು ಹೇಳುವುದರಿಂದ ಆತ್ಮ ದೇಹದೊಂದಿಗೆ, ಉಪಾಧಿಯೊಂದಿಗೆ ಸಂಬಂಧವಿಲ್ಲದೆ ಅವುಗಳಿಗೆ ಪರವಾಗಿ, ಬೇರೆಯಾಗಿ ಅತೀತವಾಗಿದೆಯೆಂದು ತಿಳಿಯುತ್ತದೆ. 'ಪರಃ ಪುರುಷಃ'- ಎನ್ನುವುದಕ್ಕೆ ಪರಮಪುರುಷರು, ಪರಮಾತ್ಮರು ಎಂದೂ ಅರ್ಥ ಹೇಳಬಹುದು.

ಪ್ರ : ಪರಮಾತ್ಮ ಎಂತಹವನು?

ಉ : ೧) ಶರೀರದಲ್ಲಿದ್ದರೂ ಶರೀರಕ್ಕಿಂತ ಬೇರೆಯಾದವನು ೨) ಸಾಕ್ಷೀ ಭೂತನು ೩) ಅನುಮತಿಸುವವನು ೪) ಭರಿಸುವವನು ೫) ಅನುಭವಿಸುವವನು ೬) ಮಹಾನಿಯಾಮಕನು (ಪರಮೇಶ್ವರನು) ಆಗಿದ್ದಾನೆ.

**ಅ||** ಈ ಪ್ರಕಾರವಾಗಿ ಪ್ರಕೃತಿ ಹಾಗು ಪುರುಷರನ್ನು ಕುರಿತು ತಿಳಿಯುವುದರಿಂದ ಉಂಟಾಗುವ ಫಲಗಳನ್ನು ಹೇಳಲಾಗುತ್ತಿದೆ-

**೨೪. ಯ ಏವಂ ವೇತ್ತಿ ಪುರುಷಂ ಪ್ರಕೃತಿಃ ಚ ಗುಣ್ಯೈಃ ಸಹ**
**ಸರ್ವಥಾ ವರ್ತಮಾನೋಽಪಿ ನ ಸ ಭೂಯೋಽಭಿಜಾಯತೇ**

**ಅರ್ಥ:** ಯಃ=ಯಾವನು; ಏವಂ=ಈ ಪ್ರಕಾರವಾಗಿ; ಪುರುಷಂ= ಪುರುಷನನ್ನು; ಗುಣ್ಯೈಃ ಸಹ=ಗುಣಗಳಿಂದ ಕೂಡಿದ (ತ್ರಿಗುಣಾತ್ಮಕವಾದ); ಪ್ರಕೃತಿಂ ಚ=ಪ್ರಕೃತಿಯನ್ನು; ವೇತ್ತಿ=ತಿಳಿದುಕೊಳ್ಳುತ್ತಿದ್ದಾನೋ; ಸಃ=ಆತನು; ಸರ್ವಥಾ ವರ್ತಮಾನೋಽಪಿ=ಹೇಗಿದ್ದಾಗ್ಯೂ; ಭೂಯಃ=ಮತ್ತೆ; ನ ಅಭಿಜಾಯತೇ= ಹುಟ್ಟುವುದಿಲ್ಲ.

**ತಾ||** ಯಾವನು ಈ ಪ್ರಕಾರವಾಗಿ ಪುರುಷನನ್ನು (ಆತ್ಮನನ್ನು), ಗುಣಗಳೊಂದಿಗೆ ಕೂಡಿದ ಪ್ರಕೃತಿಯನ್ನು ತಿಳಿದುಕೊಳ್ಳುತ್ತಿದ್ದಾನೋ, ಆತನು ಯಾವ ವಿಧವಾಗಿದ್ದರೂ ಮತ್ತೆ ಹುಟ್ಟುವುದಿಲ್ಲ.

**ವ್ಯಾಖ್ಯೆ:** ಮತ್ತೆ ಜನ್ಮ ಹೊಂದದಿರುವುದಕ್ಕೆ (ಮೋಕ್ಷ ಪ್ರಾಪ್ತಿಗೆ) ಉಪಾಯವನ್ನು ಕೊಡಲಾಗಿದೆ. ಪುರುಷನು (ಆತ್ಮ) ಎಂತಹವನು? ಪ್ರಕೃತಿ ಎಂತಹದು? ಎನ್ನುವ ಆತ್ಮಾನಾತ್ಮ ವಿಚಾರಣಾ ಸಮರ್ಥನಾದ ಮನುಷ್ಯನು ದೃಕ್, ದೃಶ್ಯಗಳನ್ನು ವಿವೇಚಿಸಿ ನೋಡಬಲ್ಲನು. ಆದ್ದರಿಂದ ಅಂತಹ ವಿಚಾರಣಾಶೀಲನು ತ್ರಿಗುಣಾತ್ಮಕವಾದ, ಬಂಧಜನಕವಾದ, ದುಃಖಪ್ರದವಾದ ಪ್ರಕೃತಿಯನ್ನು ಆಶ್ರಯಿಸದೆ ಗುಣರಹಿತವಾದ, ಬಂಧ ವಿಮುಕ್ತಗೊಳಿಸುವ ಪರಮಾನಂದವಾದ ಪುರುಷನನ್ನೇ (ಆತ್ಮನನ್ನೇ) ಆಶ್ರಯಿಸುವನು. ಆದ್ದರಿಂದ ಆತ ಮತ್ತೆ ಜನ್ಮಿಸದೆ ಮುಕ್ತನೇ ಆಗುವನು. ಏಕೆಂದರೆ ಪ್ರಕೃತಿ, ಪುರುಷರ ಜ್ಞಾನವುಳ್ಳವರು, ಅನಾತ್ಮವನ್ನು ಅಂದರೆ ದೃಶ್ಯವನ್ನು, ಪ್ರಕೃತಿಯನ್ನು ತಮಗಿಂತ (ಪುರುಷನಿಗಿಂತ) ಭಿನ್ನವಾಗಿ ನೋಡಿ ಅದರೊಡನೆ ಸಂಗವಿಲ್ಲದೆ ಇರುವರು. ಆದ್ದರಿಂದಲೇ ಅವರು ಮುಕ್ತರಾಗಿ ಮತ್ತೆ ಜನ್ಮಿಸುವುದಿಲ್ಲವೆಂದು ಹೇಳಲಾಗಿದೆ.

'ಸರ್ವಥಾ ವರ್ತಮಾನೋಽಪಿ'- 'ಅಂತಹವನು ಹೇಗಿದ್ದರೂ'- ಎಂದು ಹೇಳುವುದರಿಂದ ಸಮಾಧಿ ನಿಷ್ಠೆಯುಳ್ಳವನಾಗಿದ್ದರೂ ಇಲ್ಲವೆ ಲೋಕದಲ್ಲಿ (ಪ್ರಜೋಪಕಾರ) ಕಾರ್ಯ ಮಾಡುತ್ತಿದ್ದರೂ, ಬ್ರಹ್ಮಚರ್ಯಾದಿ ರೂಪದ ಯಾವ ಆಶ್ರಮದಲ್ಲಿದ್ದರೂ ಮತ್ತೆ ಜನ್ಮಿಸುವುದಿಲ್ಲವೆಂದು ಭಾವ. ಆತನು ಹೇಗೆ ವರ್ತಿಸಿದರೂ ಸರ್ವಥಾ ಮುಕ್ತನೇ ಆಗುವನು. ಆದರೆ 'ಹೇಗೆ ವರ್ತಿಸಿದರೂ' ಎನ್ನುವುದಕ್ಕೆ ಅರ್ಥ 'ನಿಷಿದ್ಧಾಚರಣೆ'ಯಿಂದ ಇದ್ದಾಗಲೂ ಎಂದು ಭಾವಿಸಬಾರದು. ಏಕೆಂದರೆ ಅಂತಹ ಆಚರಣೆ ಮಾಡುವವನು ಆತ್ಮಾನಾತ್ಮ ವಿವೇಕಿ ಎಂದೆಂದಿಗೂ ಆಗಲಾರನು. ವಿವೇಕಿಯಾದವನು ನಿಷಿದ್ಧ ಕೃತ್ಯವನ್ನು ಎಂದಿಗೂ ಮಾಡುವುದಿಲ್ಲ. ಆದ್ದರಿಂದ ಇಂತಹ ವಾಕ್ಯಗಳ ಅರ್ಥಗಳನ್ನು ಗ್ರಹಿಸುವಾಗ ಜಾಗರೂಕರಾಗಿರಬೇಕು.

ಪ್ರ : ಪ್ರಕೃತಿ ಪುರುಷರ ಜ್ಞಾನವನ್ನು ಹೊಂದುವುದರಿಂದ ಉಂಟಾಗುವ ಫಲವೇನು?

ಉ : ಅಂತಹ ಜ್ಞಾನವುಳ್ಳವನು ಯಾವ ರೀತಿ ವರ್ತಿಸಿದರೂ ಜನ್ಮ ರಾಹಿತ್ಯವನ್ನು ಹೊಂದುವನು. ಆತನಿಗೆ ಪುನರ್ಜನ್ಮವಿರುವುದಿಲ್ಲ;

**ಅ||** ಅವರವರ ಸಂಸ್ಕಾರವನ್ನನುಸರಿಸಿ ಜನಗಳು ಅನೇಕ ದ್ವಾರಗಳಿಂದ ಪರಮಾತ್ಮನನ್ನು ಸಾಕ್ಷಾತ್ಕರಿಸಿಕೊಂಡು ಮುಕ್ತರಾಗುತ್ತಿದ್ದಾರೆಂದು ಎರಡು ಶ್ಲೋಕಗಳ ಮೂಲಕ ತಿಳಿಸಲಾಗುತ್ತಿದೆ-

**೨೫. ಧ್ಯಾನೇನಾತ್ಮನಿ ಪಶ್ಯಂತಿ ಕೇಚಿದಾತ್ಮಾನಮಾತ್ಮನಾ**
**ಅನ್ಯೇ ಸಾಂಖ್ಯೇನ ಯೋಗೇನ ಕರ್ಮಯೋಗೇನ ಚಾಪರೇ**

**ಅರ್ಥ:** ಆತ್ಮಾನಾಂ=ಆತ್ಮನನ್ನು (ಪ್ರತ್ಯಗಾತ್ಮ ಇಲ್ಲವೆ ಪರಮಾತ್ಮನನ್ನು); ಕೇಚಿತ್=ಕೆಲವರು; ಆತ್ಮನಾ=ಶುದ್ಧವಾದ ಮನಸ್ಸಿನಿಂದ; ಧ್ಯಾನೇನ= ಧ್ಯಾನ ಯೋಗದ ದ್ವಾರ; ಆತ್ಮನಿ=ತನ್ನಲ್ಲಿ; ಪಶ್ಯಂತಿ=ನೋಡುತ್ತಿದ್ದಾರೆ (ಸಾಕ್ಷಾತ್ಕರಿಸಿಕೊಳ್ಳುತ್ತಿದ್ದಾರೆ); ಅನ್ಯೇ=ಮತ್ತೆ ಕೆಲವರು; ಸಾಂಖ್ಯೇನ ಯೋಗೇನ= ಸಾಂಖ್ಯಯೋಗದಿಂದ; ಪರೇ=ಮತ್ತೆ ಕೆಲವರು; ಕರ್ಮ=ಯೋಗೇನ ಚ=ಕರ್ಮಯೋಗದಿಂದ; (ಪಶ್ಯಂತಿ= ನೋಡುತ್ತಿದ್ದಾರೆ).

**ತಾ||** ಆತ್ಮನನ್ನು (ಪ್ರತ್ಯಗಾತ್ಮ ಇಲ್ಲವೆ ಪರಮಾತ್ಮನನ್ನು) ಕೆಲವರು ಶುದ್ಧವಾದ ಮನಸ್ಸಿನಿಂದ ಧ್ಯಾನಯೋಗದ ಮೂಲಕ ತಮ್ಮಲ್ಲೇ ಕಾಣುತ್ತಿದ್ದಾರೆ (ಸಾಕ್ಷಾತ್ಕರಿಸಿ ಕೊಳ್ಳುತ್ತಿದ್ದಾರೆ). ಹಾಗೆಯೇ ಮತ್ತೆ ಕೆಲವರು ಸಾಂಖ್ಯಯೋಗದಿಂದ, ಮತ್ತೆ ಕೆಲವರು ಕರ್ಮಯೋಗದಿಂದ ಅನುಭೂತಿಗೊಳಿಸಿಕೊಳ್ಳುತ್ತಿದ್ದಾರೆ.

**ವ್ಯಾಖ್ಯೆ:** ಜನರು ಅವರವರ ಅಂತಃಕರಣವನ್ನನುಸರಿಸಿ ಭಿನ್ನಭಿನ್ನ ಸಂಸ್ಕಾರಗಳನ್ನು ಹೊಂದಿರುವರು. ಅಂತಹ ಸಂಸ್ಕಾರವನ್ನು ಹೊಂದಿರುವುದರಿಂದ ಅವರು ಭಗವಂತನನ್ನು ಕುರಿತು ಪ್ರಯತ್ನಿಸುತ್ತಿರುವರು. ಕೆಲವರು ಧ್ಯಾನದಲ್ಲಿ, ಕೆಲವರು ಭಕ್ತಿಯಲ್ಲಿ, ಕೆಲವರು ಜ್ಞಾನದಲ್ಲಿ, ಕೆಲವರು ಕರ್ಮದಲ್ಲಿ ಇಷ್ಟವುಳ್ಳವ ರಾಗಿರುವರು. ಯಾವ ಮಾರ್ಗವನ್ನನುಸರಿಸಿದರೂ ಚಿತ್ತಶುದ್ಧಿಯಿಂದ ಕೂಡಿ ಪ್ರಯತ್ನಿಸಿದರೆ ಭಗವಂತನ ಸಾಕ್ಷಾತ್ಕಾರವಾಗುವುದೆಂದು ಇಲ್ಲಿ ಹೇಳಲಾಗಿದೆ. ಎಲ್ಲಾ ಒಂದೇ ಲಕ್ಷ್ಯವನ್ನು ಸೇರಿಸುವುವಾದ್ದರಿಂದ ಆ ಎಲ್ಲಾ ಮಾರ್ಗಗಳು ಸಮಾನವಾಗಿಯೇ ಇರುವುವು. ಅವರವರ ಮನಸ್ತತ್ತ್ವಗಳ ಪ್ರಕಾರ ಆಯಾ ಮಾರ್ಗಗಳನ್ನು ಅನುಸರಿಸಲು ಸರ್ವರೂ ಸ್ವತಂತ್ರರಾಗಿರುವರೆಂದು, ಯಾವ ಮಾರ್ಗವನ್ನನುಸರಿಸಿದರೂ ಎಲ್ಲರೂ ಒಂದೇ ಪರಮಾತ್ಮರೂಪ ಲಕ್ಷ್ಯವನ್ನು ಹೊಂದ ಬಲ್ಲರೆಂದು ಈ ಶ್ಲೋಕದ ಮೂಲಕ ಮತ್ತು ಮುಂದೆ ಬರುವ ಶ್ಲೋಕದ ದ್ವಾರವೂ ಸ್ಪಷ್ಟ ಮಾಡಲಾಗಿದೆ.

ಇಲ್ಲಿ ಧ್ಯಾನ, ಸಾಂಖ್ಯ (ಜ್ಞಾನ), ಕರ್ಮಯೋಗಗಳೆಂಬ ಮೂರು ಯೋಗಗಳನ್ನು ಹೇಳಲಾಗಿದೆ. ಭಕ್ತಿಯೋಗ ಧ್ಯಾನಯೋಗದಲ್ಲಿ ಅಂತರ್ಭೂತವಾಗಿರುವುದರಿಂದ ಇಲ್ಲಿ ಪ್ರತ್ಯೇಕವಾಗಿ ಹೇಳಲಾಗಿಲ್ಲ.

'ಪಶ್ಯಂತಿ'- ನೋಡುತ್ತಿದ್ದಾರೆ ಎಂದು ಹೇಳುವುದರಿಂದ ಭಗವಂತನು ಒಂದು ಪರೋಕ್ಷ ವಸ್ತುವಲ್ಲವೆಂದೂ, ಪ್ರತ್ಯಕ್ಷವಾಗಿ ಜನರು ಆತನನ್ನು ನೋಡಬಹುದೆಂದು, ಅನುಭೂತಿಗೊಳಿಸಿಕೊಳ್ಳಬಹುದೆಂದು ವಿದಿತವಾಗುತ್ತದೆ. ಆದ್ದರಿಂದ ಇನ್ನು ದೈವಪ್ರಾಪ್ತಿ ವಿಷಯವಾಗಿ ಜನರು ಸಂದೇಹಪಡುವ ಅಗತ್ಯವಿಲ್ಲ. ಮತ್ತೆ ದೇವರಿದ್ದಾನೆಯೇ ಅಥವ ಇಲ್ಲವೇ ಎನ್ನುವ ಸಂಶಯಕ್ಕೆ ಇನ್ನು ಎಡೆಯಿಲ್ಲ. ಏಕೆಂದರೆ 'ನೀನು ದೇವರನ್ನು ನೋಡಬಲ್ಲೆ; ಮಹಾತ್ಮರು ಧ್ಯಾನಾದಿಗಳಿಂದ ಆ ಪ್ರಕಾರವಾಗಿ ನೋಡುತ್ತಿದ್ದಾರೆ' ಎಂದು ಶ್ರೀ ಕೃಷ್ಣಮೂರ್ತಿ ಅಸಂದಿಗ್ಧವಾಗಿ ಹೇಳಿದನು.

'ಆತ್ಮನಿ'- 'ತನ್ನಲ್ಲೇ' ಎಂದು ಹೇಳುವುದರಿಂದ ಪರಮಾತ್ಮ ಎಲ್ಲಿಯೋ ಬೇರೆ ಕಡೆಯಲ್ಲಲ್ಲದೆ, ತನ್ನಲ್ಲೇ ಹೊಂದಬಲ್ಲವನೆಂದು ತಿಳಿಯುತ್ತದೆ. ಇದರಿಂದ ಭಗವಂತನ ಅತಿಸಮೀಪತೆಯನ್ನು ಕುರಿತು ತಿಳಿಯಲು ಸಾಧ್ಯವಾಗುತ್ತದೆ. ತನ್ನ ಹೃದಯದಲ್ಲೇ ಪರಮಾತ್ಮನು ಇರುವನು ಎಂದು ಹೇಳುವುದರಿಂದ ಆತನಿಗಾಗಿ ಬೇರೆ ಕಡೆ ಹುಡುಕುವ ಪ್ರಯತ್ನವನ್ನು ಕ್ರಮವಾಗಿ ಕಡಿಮೆಮಾಡಿ ಕೊಂಡು ಮನುಜನು ತನ್ನ ಹೃದಯ ಸಂಶೋಧನೆಯಲ್ಲಿ ತೊಡಗಬೇಕು. ಮತ್ತೆ, 'ಆತ್ಮನಾ' ಎಂದು ಹೇಳುವುದರಿಂದ ಯಾವ ಮಾರ್ಗವನ್ನನುಸರಿಸಿದರೂ ಆತ್ಮವನ್ನು ಪಡೆಯಲು ತನ್ನಲ್ಲಿರುವ ಶುದ್ಧ ಚಿತ್ತವೊಂದೇ ಏಕೈಕ ಸಾಧನವೆಂದು ಗ್ರಹಿಸಬೇಕು. ಅದು ಒಂದೇ ಮೋಕ್ಷದ್ವಾರವನ್ನು ತೆರೆಯುವ ಬೀಗದಕೈಯಾಗಿದೆ. ಆದ್ದರಿಂದ ಮೋಕ್ಷಸಾಧನೆಯು ಅವರವರ ಕೈಯಲ್ಲಿಯೇ ಇದೆ. ತಮ್ಮ ಮನಸ್ಸನ್ನು ತಾವು ಶುದ್ಧ ಮಾಡಿಕೊಂಡು ಸಂಸ್ಕರಿಸಿಕೊಂಡು ಪರಮಾತ್ಮ ಪ್ರಾಪ್ತಿಗೆ ಕಂಕಣಬದ್ಧರಾಗುವುದೇ ಮುಕ್ತಿಗೆ ಸಾಧನೆ.

ಕೆಲವರು ಕರ್ಮಯೋಗವು ಕೆಳದರ್ಜೆಯದೆಂದೂ, ಜ್ಞಾನಯೋಗವು ಉತ್ತಮವಾದುದೆಂದು ಹೇಳಿಕೊಳ್ಳುವರು. ಆದರೆ ಭಗವಂತನು ಇಲ್ಲಿ ಕರ್ಮ, ಜ್ಞಾನ, ಧ್ಯಾನಯೋಗಗಳಿಗೆ ಸರಿಸಮವಾದ ಸ್ಥಾನವನ್ನಿತ್ತು ಗೌರವಿಸಿರುವನು. ಏಕೆಂದರೆ ನಿಷ್ಕಾಮಕರ್ಮಯೋಗ ಚಿತ್ತಶುದ್ಧಿಯ ದ್ವಾರ ಜ್ಞಾನಾವಿರ್ಭಾವಕ್ಕೆ ಹೇತುಭೂತವಾಗಿ ಜ್ಞಾನಯೋಗದ ಫಲವಾದ ಭಗವತ್ಸಾಕ್ಷಾತ್ಕಾರವನ್ನುಂಟು ಮಾಡುತ್ತದೆ.

ಪ್ರ : ಜನರು ಪರಮಾತ್ಮನನ್ನು ಎಲ್ಲಿ ಸಾಕ್ಷಾತ್ಕರಿಸಿಕೊಳ್ಳುವರು?

ಉ : ತಮ್ಮ ಹೃದಯದಲ್ಲಿಯೇ.

ಪ್ರ : ಯಾವುದರ ಮೂಲಕ?

ಉ : ಶುದ್ಧ ಮನಸ್ಸಿನ ಮೂಲಕ.

ಪ್ರ : ಯಾವ ಪ್ರಕಾರವಾಗಿ?

ಉ : ಧ್ಯಾನ, ಸಾಂಖ್ಯ (ಜ್ಞಾನ), ಕರ್ಮಯೋಗಗಳನ್ನನುಸರಿಸಿ ಪರಮಾತ್ಮನನ್ನು ಸಾಕ್ಷಾತ್ಕರಿಸಿಕೊಳ್ಳುವರು.

**೨೬. ಅನ್ಯೇ ತ್ವೇವ ಮಜಾನಂತಃ ಶ್ರುತ್ವಾಽನ್ಯೇಭ್ಯ ಉಪಾಸತೇ**
**ತೇಽಪಿ ಚಾತಿತರಂತ್ಯೇವ ಮೃತ್ಯುಂ ಶ್ರುತಿಪರಾಯಣಾಃ**

**ಅರ್ಥ:** ಅನ್ಯೇತು=ಮತ್ತೆ ಕೆಲವರು; ಏವಂ=ಈ ಪ್ರಕಾರವಾಗಿ (ಧ್ಯಾನ, ಸಾಂಖ್ಯ, ಕರ್ಮಯೋಗಗಳಿಂದ); ಅಜಾನಂತಃ=ತಿಳಿದುಕೊಳ್ಳಲಾರದವರಾಗಿ; ಅನ್ಯೇಭ್ಯಃ=ಬೇರೆಯವರಿಂದ; ಶ್ರುತ್ವಾ=(ಆ ಪರಮಾತ್ಮನನ್ನು ಕುರಿತು) ಕೇಳಿ (ಉಪದೇಶಿಸಲ್ಪಟ್ಟು); ಉಪಾಸತೇ=ಉಪಾಸಿಸುತ್ತಿದ್ದಾರೆ (ಅನುಷ್ಠಾನ ಮಾಡುತ್ತಿದ್ದಾರೆ); ಶೃತಿ ಪರಾಯಣಾಃ=ಶ್ರವಣದಲ್ಲಿ ಆಸಕ್ತಿ, ನಿಷ್ಠೆಯುಳ್ಳವರಾಗಿ; ತೇ ಅಪಿ ಚ=ಅವರೂ ಕೂಡ; ಮೃತ್ಯುಂ=ಮರಣವನ್ನು (ಮರಣರೂಪವಾದ ಈ ಸಂಸಾರ ಬಂಧವನ್ನು); ಅತಿ ತರಂತಿ ಏವ=ತಪ್ಪದೆ ದಾಟುವರು.

**ತಾ||** ಮತ್ತೆ ಕೆಲವರು ಈ ಪ್ರಕಾರವಾಗಿ (ಧ್ಯಾನ, ಸಾಂಖ್ಯ, ಕರ್ಮ ಯೋಗಗಳಿಂದ) ತಿಳಿದುಕೊಳ್ಳಲು ಸಾಧ್ಯವಾಗದೆ ಇತರರಿಂದ (ಆ ಪರಮಾತ್ಮನನ್ನು ಕುರಿತು) ಕೇಳಿ ಅನುಷ್ಠಾನ ಮಾಡುತ್ತಿದ್ದಾರೆ (ಉಪಾಸನೆ ಮಾಡುತ್ತಿದ್ದಾರೆ). ಶ್ರವಣ ತತ್ಪರರಾದವರೂ ಕೂಡ ಮೃತ್ಯುವನ್ನು (ಮೃತ್ಯು ರೂಪವಾದ ಈ ಸಂಸಾರವನ್ನು) ತಪ್ಪದೆ ದಾಟುವರು.

**ವ್ಯಾಖ್ಯೆ:** ಧ್ಯಾನ ಜ್ಞಾನಾದಿ ಯೋಗಗಳನ್ನು ಕುರಿತ ತತ್ತ್ವವನ್ನು ತಿಳಿದುಕೊಳ್ಳಲು ಅಶಕ್ತರಾದವರು, ಶ್ರದ್ಧೆಯಿಂದ ಅನುಭವಜ್ಞರಾದ ಇತರರ ಉಪದೇಶವನ್ನು ಕೇಳಿ ಆ ರೀತಿ ಅನುಷ್ಠಾನ ಮಾಡುವುದರಿಂದ ಅವರೂ ಕೂಡ ಮೇಲಿನವರಂತೆ ಮೃತ್ಯು ರೂಪ ಸಂಸಾರವನ್ನು ದಾಟುವರೆಂದು ಇಲ್ಲಿ ಹೇಳಲಾಗಿದೆ. 'ಅಜಾನಂತಃ' ಎಂದು ಹೇಳುವುದರಿಂದ ಯೋಗ ಪರಿಜ್ಞಾನ, ವಿದ್ಯೆ, ಪಾಂಡಿತ್ಯ, ಇಲ್ಲದಿದ್ದರೂ ಶ್ರದ್ಧೆ, ಭಕ್ತಿ, ಅನುಷ್ಠಾನದಿಂದ ಸಂಸಾರ ಸಮುದ್ರವನ್ನು ದಾಟಬಹುದೆಂದು ಸ್ಪಷ್ಟವಾಗುತ್ತದೆ. ವೈದ್ಯ ಶಾಸ್ತ್ರ ಪರಿಜ್ಞಾನವಿಲ್ಲದಿದ್ದರೂ ವೈದ್ಯನು ಕೊಟ್ಟ ಔಷಧವನ್ನು ಶ್ರದ್ಧೆ ವಿಶ್ವಾಸಗಳಿಂದ ಸೇವಿಸಿದರೆ ರೋಗವು ಗುಣವಾಗುವುದಲ್ಲವೇ! ವೈದ್ಯನಾದರೂ ತನಗೆ ರೋಗ ಬಂದರೆ ಆ ಪ್ರಕಾರ ಔಷಧ ಸೇವಿಸಿದರೆ ಮಾತ್ರ ರೋಗವು ಉಪಶಮನ ಹೊಂದುವುದು. ಆದ್ದರಿಂದ ಯಾರೇ ಆಗಲಿ ಅನುಷ್ಠಾನ ಬಹಳ ಮುಖ್ಯ. ಆದ್ದರಿಂದಲೇ 'ಉಪಾಸತೇ' ಎನ್ನುವ ಪದವನ್ನು ಇಲ್ಲಿ ಸೇರಿಸಲಾಗಿದೆ. ಕೇವಲ ವಿದ್ಯೆ ಹಾಗೂ ಶ್ರವಣ ಸಾಕಾಗುವುದಿಲ್ಲ. ಆ ಎರಡರ ಜೊತೆ ಅನುಷ್ಠಾನವೂ ಇರಬೇಕು. ಆದರೆ ತತ್ತ್ವ ಪರಿಜ್ಞಾನ ವಿದ್ಯೆ ಇಲ್ಲದೆ ಇರುವುದಕ್ಕಿಂತ ಅದನ್ನು ಹೊಂದಿರುವುದೇ ಶ್ರೇಷ್ಠ. ಒಂದು ವೇಳೆ ಯಾವುದೇ ಕಾರಣದಿಂದ ಅಂತಹ ವಿದ್ಯೆಯಿಲ್ಲದಿದ್ದರೆ, ಇತರರಿಂದ ದೈವ ಧರ್ಮಗಳನ್ನು, ಪರಮಾತ್ಮ ಸತ್ಯಗಳನ್ನು ಕೇಳಿಕೊಂಡು ಅವುಗಳನ್ನು ಅನುಷ್ಠಾನಮಾಡಿ ಮುಕ್ತಿ ಹೊಂದಬಹುದೆಂದು ಇಲ್ಲಿ ತಿಳಿಸಲಾಗಿದೆ. ಆದ್ದರಿಂದ ಶಾಸ್ತ್ರಜ್ಞಾನವಿಲ್ಲದವರು, ವಿದ್ಯೆ ಇಲ್ಲದವರು, ಅಂಜದೆ ಮಹನೀಯರಿಂದ ಆಧ್ಯಾತ್ಮಿಕ ರಹಸ್ಯಗಳನ್ನು ಶ್ರವಣ ಮಾಡಿ ಅವುಗಳನ್ನು ಸರಿಯಾಗಿ ಆಚರಣೆಯಲ್ಲಿಟ್ಟುಕೊಂಡು ಮುಕ್ತಿ ಹೊಂದಬಹುದು. ಬೇರೆಯವರಂತೆ ಇವರು ಕೂಡ ಸಂಸಾರ ದುಃಖವನ್ನು ದಾಟಬಲ್ಲರು. 'ಅತಿ ತರಂತ್ಯೇವ' ಎಂದು ಹೇಳಿರುವುದರಿಂದ ತಪ್ಪದೆ ದಾಟಬಲ್ಲರು ಎನ್ನುವುದು ಸ್ಪಷ್ಟವಾಗುತ್ತದೆ.

'ಮೃತ್ಯುಮ್'- 'ಸಂಸಾರ ಬಂಧವನ್ನು' ದಾಟುವರು ಎಂದು ಹೇಳದೆ 'ಮೃತ್ಯುವನ್ನು' ದಾಟುವರು ಎಂದು ಇಲ್ಲಿ ಹೇಳಲಾಗಿದೆ. ಇದರಿಂದ ಸಂಸಾರ ಸ್ಥಿತಿ ಕೇವಲ ಮೃತ್ಯುರೂಪ ಹಾಗು ಮೃತ್ಯುಮಯವಾಗಿದೆಯೆಂದು ಅರ್ಥವಾಗುತ್ತದೆ. 'ಮೃತ್ಯುವನ್ನು, ಸಂಸಾರ ಸ್ಥಿತಿಯನ್ನು' ಭಗವಂತನು ಏಕಾರ್ಥವಾಚಕಗಳಾಗಿ (Synonyms) ಉಪಯೋಗಿಸಿರುವನು. ಈ ವಿಷಯವನ್ನು ಸಾಧಕರು ತಿಳಿದು ಮೃತ್ಯುರೂಪವಾದ ಪ್ರಾಪಂಚಿಕ (ಸಾಂಸಾರಿಕ) ಸುಖಗಳನ್ನು ನೋಡಿ ಉಬ್ಬಿ ಹೋಗದೆ ಮರಣರಹಿತ ಪರಮಾತ್ಮನೊಡನೆ ಐಕ್ಯವಾಗಲು ಯತ್ನಿಸಬೇಕು.

ಪ್ರ : ಶಾಸ್ತ್ರ ಪರಿಜ್ಞಾನವಿಲ್ಲದವರು, ಧ್ಯಾನಾದಿ ಯೋಗಗಳನ್ನು ತಿಳಿಯದವರು ಹೇಗೆ ಮುಕ್ತಿಯನ್ನು ಹೊಂದಬಲ್ಲರು?

ಉ : ಇತರರಿಂದ ತತ್ತ್ವವನ್ನು ಶ್ರವಣ ಮಾಡಿ, ಅನುಸರಿಸಿ ಮುಕ್ತಿ ಹೊಂದಬೇಕು.

ಪ್ರ : ಈ ಸಂಸಾರ ಸ್ಥಿತಿ ಎಂತಹದು?

ಉ : ಮೃತ್ಯುರೂಪವಾದದ್ದು.

ಪ್ರ : ಮೃತ್ಯುವನ್ನು ಮನುಜನು ಹೇಗೆ ದಾಟಬಲ್ಲನು?

ಉ : ದೈವತತ್ತ್ವವನ್ನು ಹಿರಿಯರಿಂದ ಕೇಳಿ ಆ ಪ್ರಕಾರವಾಗಿ ಆಚರಿಸುವುದರಿಂದ ದಾಟಬಲ್ಲನು.

ಅ॥ ಸಮಸ್ತ ಪದಾರ್ಥಗಳು ಕ್ಷೇತ್ರ ಕ್ಷೇತ್ರಜ್ಞರ ಸಂಯೋಗದಿಂದಲೇ ಉಂಟಾಗುತ್ತವೆಯೆಂದು ಹೇಳಲಾಗಿದೆ-

**೨೭. ಯಾವತ್ಸಂಜಾಯತೇ ಕಿಂಚಿತ್ಸತ್ವಂ ಸ್ಥಾವರಜಂಗಮಮ್**
**ಕ್ಷೇತ್ರ ಕ್ಷೇತ್ರಜ್ಞಸಂಯೋಗಾತ್ತದ್ವಿದ್ಧಿ ಭರತರ್ಷಭ**

**ಅರ್ಥ:** ಭರತರ್ಷಭ=ಭರತವಂಶ ಶ್ರೇಷ್ಠನಾದ ಓ ಅರ್ಜುನ! ಸ್ಥಾವರ ಜಂಗಮಂ=ಚರಾಚರಾತ್ಮಕವಾದ; ಸತ್ವಂ=ವಸ್ತು; ಯಾವತ್ಕಿಂಚಿತ್=ಯಾವುದು; ಸಂಜಾಯತೇ=ಹುಟ್ಟುತ್ತಿರುವುದೋ; ತತ್=ಅದು; ಕ್ಷೇತ್ರ ಕ್ಷೇತ್ರಜ್ಞ ಸಂಯೋಗಾತ್=ಕ್ಷೇತ್ರಕ್ಷೇತ್ರಜ್ಞರ ಮಿಲನದಿಂದ; ವಿದ್ಧಿ=(ಉಂಟಾಗುತ್ತವೆಂದು) ತಿಳಿಯುವುದು.

**ತಾ॥** ಭರತವಂಶ ಶ್ರೇಷ್ಠನಾದ ಓ ಅರ್ಜುನಾ! ಈ ಪ್ರಪಂಚದಲ್ಲಿ ಸ್ಥಾವರ ಜಂಗಮಾತ್ಮಕವಾದ ಪದಾರ್ಥವು ಯಾವುದು ಹುಟ್ಟುತ್ತದೋ ಅದು ಕ್ಷೇತ್ರಕ್ಷೇತ್ರಜ್ಞರ ಮಿಲನದಿಂದಲೇ ಉಂಟಾಗುತ್ತದೆಂದು ತಿಳಿಯುವುದು.

**ವ್ಯಾಖ್ಯೆ:** ಪ್ರಪಂಚದಲ್ಲಿ ಯಾವ ವಸ್ತುವಾದರೂ ಯಾವ ವ್ಯಕ್ತಿಯಾದರೂ ಕ್ಷೇತ್ರಜ್ಞನಾದ ಪರಮಾತ್ಮನ ಸಂಯೋಗವಿಲ್ಲದೆ, ಉದ್ಭವಿಸದು ಎಂದು ತಿಳಿಸಲ್ಪಟ್ಟಿರುವುದರಿಂದ ಚರಾಚರವಾದ ಸಮಸ್ತ ಪ್ರಾಣಿ ಕೋಟಿಗಳಲ್ಲಿ ಭಗವಂತನ ಅಸ್ತಿತ್ವವು ಇದೆ ಎಂದು ನಿಶ್ಚಯಿಸಿ ಸರ್ವಭೂತದಯೆಯಿಂದ ವರ್ತಿಸಬೇಕು. ಭಗವಂತನು ಕಲ್ಲಿನಲ್ಲಿದ್ದಾನೆಯೇ? ಎನ್ನುವ ಪ್ರಶ್ನೆಗೆ, ಭಗವಂತನ ಸಂಯೋಗವಿಲ್ಲದೆ ಕಲ್ಲು ಉದ್ಭವಿಸುವುದೇ ಇಲ್ಲ ಎಂದು ಗೀತೆ ಹೇಳುತ್ತದೆ. ಸ್ಥಾವರವಾದ ಕಲ್ಲಿನ ವಿಷಯವೇ ಹೀಗಿರಲು ಇನ್ನು ಜಂಗಮವಾದ ಮನುಷ್ಯಾದಿ ಪ್ರಾಣಿಕೋಟಿಗಳ ವಿಷಯ ಬೇರೆ ಹೇಳ ಬೇಕಾಗಿಲ್ಲ! ಆದ್ದರಿಂದ ಗಿಡ, ಹುತ್ತ, ಕಲ್ಲು, ಇರುವೆ, ಪಕ್ಷಿ, ಪ್ರಾಣಿ, ಮನುಷ್ಯ, ಚಂಡಾಲ, ಬ್ರಾಹ್ಮಣ, ರಾಕ್ಷಸ, ದೇವತೆಗಳಲ್ಲಿ ಪರಮಾತ್ಮ ನಿವಸಿಸುತ್ತಿದ್ದಾನೆಂಬ ವಿಶ್ವಾಸವನ್ನು ಹೊಂದಿರಬೇಕು.

ಪ್ರ : ಈ ಸ್ಥಾವರ ಜಂಗಮ ಪದಾರ್ಥಗಳೆಲ್ಲಾ ಹೇಗೆ ಆವಿರ್ಭವಿಸುವುವು?

ಉ : ಕ್ಷೇತ್ರದ, ಕ್ಷೇತ್ರಜ್ಞನ ಸಂಯೋಗದಿಂದ (ಕೂಡುವಿಕೆ) ಆವಿರ್ಭವಿಸುವುವು.

ಅ॥ ಸರ್ವಭೂತಗಳಲ್ಲಿ ಸಮವಾಗಿ ವ್ಯಾಪಿಸಿರುವ ಪರಮಾತ್ಮನನ್ನು ತಿಳಿದುಕೊಳ್ಳುವನೇ ನಿಜವಾದ ಬುದ್ಧಿವಂತನೆಂದು ಹೇಳುತ್ತಿದ್ದಾನೆ-

**೨೮. ಸಮಂ ಸರ್ವೇಷು ಭೂತೇಷು ತಿಷ್ಠಂತಂ ಪರಮೇಶ್ವರಮ್**
**ವಿನಶ್ಯತ್ಸ್ವವಿನಶ್ಯಂತಂ ಯಃ ಪಶ್ಯತಿ ಸ ಪಶ್ಯತಿ**

**ಅರ್ಥ:** ಸರ್ವೇಷು ಭೂತೇಷು=ಸಮಸ್ತ ಪ್ರಾಣಿಗಳಲ್ಲಿ; ಸಮಂ=ಸಮವಾಗಿ; ತಿಷ್ಠಂತಂ=ಇರುವಂತಹ; ಪರಮೇಶ್ವರಂ=ಪರಮಾತ್ಮನು; ವಿನಶ್ಯತ್ಸು=(ಆಯಾಪ್ರಾಣಿಗಳ ದೇಹಾದಿಗಳು)ನಶಿಸಿದರೂ; ಅವಿನಶ್ಯಂತಂ=ನಶಿಸದೇ ಇರುವುದಾಗಿ; ಯಃ=ಯಾವನು; ಪಶ್ಯತಿ=ನೋಡುತ್ತಿದ್ದಾನೋ (ತಿಳಿದು ಕೊಳ್ಳುತ್ತಿದ್ದಾನೋ); ಸಃ=ಆತನು; ಪಶ್ಯತಿ=(ನಿಜವಾಗಿ) ನೋಡುತ್ತಿದ್ದಾನೆ. ಆತನೇ ಯಥಾರ್ಥವನ್ನು ತಿಳಿದುಕೊಂಡವನೆಂದರ್ಥ.

**ತಾ॥** ಸಮಸ್ತ ಪ್ರಾಣಿಗಳಲ್ಲಿ ಸಮವಾಗಿರುವಂತಹ ಪರಮಾತ್ಮನನ್ನು ಆಯಾ ಪ್ರಾಣಿಗಳ ದೇಹಾದಿಗಳು ನಶಿಸಿದರೂ ನಶಿಸದೆ ಇರುತ್ತಾನೆಂದು ಯಾವನು ನೋಡುತ್ತಿದ್ದಾನೋ (ತಿಳಿದುಕೊಳ್ಳುತ್ತಿದ್ದಾನೋ), ಆತನೇ ನಿಜವಾಗಿ ನೋಡುವಂತಹವನು. (ವಿಜ್ಞನೆಂದು ಭಾವ).

**ವ್ಯಾಖ್ಯೆ:** ಭಗವಂತನು ಕೆಲವರಲ್ಲಿ ಹೆಚ್ಚಿಗೆ ಕೆಲವರಲ್ಲಿ ಕಡಿಮೆಯಿರುವುದಿಲ್ಲ. ಪುಷ್ಪಗಳಲ್ಲಿಯ ದಾರದಂತೆ ಸಮಸ್ತ ಪ್ರಾಣಿಕೋಟಿಯಲ್ಲಿ ಸಮವಾಗಿ ವ್ಯಾಪಿಸಿದ್ದಾನೆ (ಸಮಂ). ಮತ್ತೆ 'ಸರ್ವೇಷು' ಎನ್ನುವ ಪದದಿಂದ ಯಾವುದೋ ಒಂದು ಪ್ರಾಣಿಯಲ್ಲಿಲ್ಲವೆಂದೂ, ವಿಶ್ವದಲ್ಲಿಯ ಸಮಸ್ತ ಭೂತಕೋಟಿಗಳಲ್ಲಿ ಭಗವಂತನು ವಾಸಿಸುತ್ತಿದ್ದಾನೆಂದು ಸ್ಪಷ್ಟವಾಗುತ್ತದೆ.

'ವಿನಶ್ಯತ್ಸ್ವ ವಿನಶ್ಯಂತಂ'-ದೇಹಾದಿ ಉಪಾಧಿಗಳು ನಶಿಸಿದರೂ, ಅದರಲ್ಲಿರುವ ಆತ್ಮ, ಪರಮೇಶ್ವರನು ನಶಿಸುವುದಿಲ್ಲ - ಎಂದು ಹೇಳಲಾಗಿದೆ. ಇದರಿಂದ ದೇಹಾದಿ ದೃಶ್ಯ ಪ್ರಪಂಚವೆಲ್ಲಾ ನಾಶವಾಗುವಂತಹುದೂ ಆದರೆ ನಶಿಸದ ವಸ್ತು ಆತ್ಮವು ಒಂದೇ ಎಂದು ಸ್ಥಿರವಾಗುತ್ತದೆ. ಆದ್ದರಿಂದ ಅಂತಹ ನಶ್ವರ ದೇಹಾದಿ ಪದಾರ್ಥಗಳಲ್ಲಿ ಮಮತ್ವವಿಲ್ಲದೆ ಶಾಶ್ವತ ಆತ್ಮವಸ್ತುವನ್ನು ಅನ್ವೇಷಿಸಬೇಕು.

*'ಯಃ ಪಶ್ಯತಿ ಸ ಪಶ್ಯತಿ'*- ದೇಹಾದಿ ಉಪಾಧಿಗಳು ನಶಿಸಿದರೂ ಆತ್ಮ ನಶಿಸುವುದಿಲ್ಲವೆಂದು ನೋಡಬಲ್ಲವರೇ ನಿಜವಾಗಿ ನೋಡುವಂತಹವರು ಎಂದು ಇಲ್ಲಿ ಹೇಳಲಾಗಿದೆ. ಆದ್ದರಿಂದ ಈ ಸತ್ಯವನ್ನು ತಿಳಿಯದವರು ನೇತ್ರಗಳಿದ್ದರೂ ವಾಸ್ತವವಾಗಿ ನೇತ್ರವಿಹೀನರೇ ಎಂದು ಮೇಲಿನ ಭಗವದ್ವಾಕ್ಯಗಳಿಂದ ಸ್ಪಷ್ಟವಾಗುತ್ತದೆ. ಸ್ಥೂಲನೇತ್ರಗಳಿದ್ದರೂ, ಮೇಲೆ ತಿಳಿಸಿದ ದೃಶ್ಯ ವಿನಾಶತ್ವ, ಬ್ರಹ್ಮ (ಆತ್ಮ) ಸತ್ಯತ್ವಗಳ ಪರಿಜ್ಞಾನವಿಲ್ಲದವನು ಅಂದರೆ ಜ್ಞಾನನೇತ್ರವಿಲ್ಲದವನು- ಆತನು ಎಷ್ಟು ಲೌಕಿಕ ವಿದ್ಯಾವೇತ್ತನಾಗಿದ್ದರೂ ಧನಿಕನು, ಸುಂದರನು, ಬಲವಂತನು, ಅಧಿಕಾರವಂತನು ಹಾಗು ರಾಜಾಧಿರಾಜ ನಾಗಿದ್ದರೂ- ಭಗವಂತನ ದೃಷ್ಟಿಯಲ್ಲಿ ಕುರುಡನೇ ಎಂದು ಅರ್ಥವಾಗುತ್ತದೆ. ಆದ್ದರಿಂದ ಭಗವತ್ಪತಿಪಾದಕವಾದ ಈ ಸೂತ್ರದ ಪ್ರಕಾರ ಪ್ರತಿಯೊಬ್ಬರೂ ತಾವು ವಾಸ್ತವ ನೇತ್ರಗಳುಳ್ಳವರೇ ಅಥವ ಇಲ್ಲವೇ ಎನ್ನುವುದನ್ನು ಪರೀಕ್ಷಿಸಿಕೊಂಡು ಅಜ್ಞಾನಾಂಧತ್ವವನ್ನು ತೊಲಗಿಸಿಕೊಳ್ಳಲು ಪ್ರಯತ್ನಿಸಬೇಕು. ಭೌತಿಕ ನೇತ್ರಗಳೊಡನೆ ಜ್ಞಾನನೇತ್ರಗಳನ್ನೂ ಕೂಡ ಸಂಪಾದಿಸಿಕೊಳ್ಳಬೇಕು. ದೇಹಾದಿ ದೃಶ್ಯ ಪದಾರ್ಥಗಳನ್ನು ನಾಶವಂತವುಗಳೆಂದು, ಆತ್ಮವನ್ನು ಶಾಶ್ವತವೆಂದು ತಿಳಿಯುವುದೇ ಜ್ಞಾನನೇತ್ರ ಸಂಪಾದನೆ ಎಂದು ತಿಳಿಯಬೇಕು.

ಪ್ರ : ಪರಮಾತ್ಮ ಎಲ್ಲಿ ನಿವಸಿಸುತ್ತಿರುವನು?

ಉ : ಸಮಸ್ತ ಪ್ರಾಣಿಗಳಲ್ಲಿ ವಾಸಿಸುತ್ತಿರುವನು.

ಪ್ರ : ಯಾವ ಪ್ರಕಾರವಾಗಿ?

ಉ : ಸರ್ವಪ್ರಾಣಿಗಳಲ್ಲೆಲ್ಲಾ ಸಮವಾಗಿ.

ಪ್ರ : ದೇಹಾದಿಗಳು ಎಂಥವು?

ಉ : ಅವು ನಾಶವಾಗುವಂತಹವು.

ಪ್ರ : ಆತ್ಮದ ಸ್ವಭಾವವೇನು?

ಉ : ಆತ್ಮ ನಾಶರಹಿತವಾದುದು. ದೇಹಾದಿ ಉಪಾಧಿಗಳು ನಶಿಸಿದರೂ ಅದು ನಶಿಸುವುದಿಲ್ಲ.

ಪ್ರ : ಲೋಕದಲ್ಲಿ ನೇತ್ರವಿರುವವನು ಯಾರು?

ಉ: ದೇಹಾದಿ ದೃಶ್ಯ ಪದಾರ್ಥಗಳು ನಶಿಸಿದರೂ ಆತ್ಮ ನಶಿಸುವುದಿಲ್ಲವೆಂಬ ವಿವೇಕ, ಜ್ಞಾನ ದೃಷ್ಟಿಯುಳ್ಳವನೇ ವಾಸ್ತವವಾಗಿ ನೇತ್ರಗಳುಳ್ಳವನು.

**ಅ||** ಪರಮಾತ್ಮನು ಸರ್ವತ್ರ ಸಮರೂಪದಲ್ಲಿ ಬೆಳಗುತ್ತಿದ್ದಾನೆಂದು ತಿಳಿಯುವವನು ಮುಕ್ತ ನಾಗಬಲ್ಲನೆಂದು ಹೇಳಲಾಗುತ್ತಿದೆ-

**೨೮. ಸಮಂ ಪಶ್ಯನ್‌ಹಿ ಸರ್ವತ್ರ ಸಮವಸ್ಥಿತ ಮೀಶ್ವರಮ್**
**ನ ಹಿನಸ್ತ್ಯಾತ್ಮನಾಽಽತ್ಮಾನಂ ತತೋ ಯಾತಿ ಪರಾಂ ಗತಿಮ್**

**ಅರ್ಥ:** ಹಿ=ಏಕೆಂದರೆ; ಸರ್ವತ್ರ=ಸಮಸ್ತ ಪ್ರಾಣಿಗಳಲ್ಲಿ; ಸಮವಸ್ಥಿತಂ= ಸಮನಾಗಿ ಇರುವಂತಹ; ಈಶ್ವರಂ=ಪರಮೇಶ್ವರನನ್ನು (ಪರಮಾತ್ಮನನ್ನು); ಸಮಂ=ಸಮವಾಗಿ; ಪಶ್ಯನ್=ನೋಡುತ್ತಾ (ತಿಳಿದು ಕೊಳ್ಳುತ್ತಾ); ಆತ್ಮನಾ= ತನ್ನಿಂದ; ಆತ್ಮಾನಾಂ=ಆತ್ಮವನ್ನು (ತನ್ನನ್ನು); ನ ಹಿನಸ್ತಿ=ಹಿಂಸಿಸಿಕೊಳ್ಳುವುದಿಲ್ಲ; ತತಃ=ಆದ್ದರಿಂದ; ಪರಾಂಗತಿಂ=ಸರ್ವೋತ್ತಮಗತಿಯನ್ನು (ಮೋಕ್ಷನನ್ನು); ಯಾತಿ=ಹೊಂದುತ್ತಿದ್ದಾನೆ.

**ತಾ||** ಏಕೆಂದರೆ ಸಮಸ್ತ ಪ್ರಾಣಿಗಳಲ್ಲಿ ಸಮನಾಗಿ ಬೆಳಗುತ್ತಿರುವ ಪರಮಾತ್ಮನನ್ನು ನೋಡುಹಾಗ ಮನುಜನು ತನ್ನ ಆತ್ಮವನ್ನು ತಾನು ಹಿಂಸಿಸಿಕೊಳ್ಳುವುದಿಲ್ಲ, ಆದ್ದರಿಂದ ಅವನು ಸರ್ವೋತ್ತಮ ಗತಿಯನ್ನು (ಮೋಕ್ಷವನ್ನು) ಹೊಂದುತ್ತಾನೆ.

**ವ್ಯಾಖ್ಯೆ:** ಸಮಂ, ಸರ್ವತ್ರ, ಸಮವಸ್ಥಿತಂ- ಎನ್ನುವ ಮೂರು ಪದಗಳನ್ನು ಇಲ್ಲಿ ಪ್ರಯೋಗಿಸಿರುವುದರಿಂದ ಭಗವಂತನು ೧) ಸಮಾನವಾಗಿ ವರ್ತಿಸುತ್ತಿದ್ದಾನೆಂದು ೨) ಸರ್ವತ್ರ ವರ್ತಿಸುತ್ತಿದ್ದಾನೆಂದು ೩) ಪೂರ್ಣವಾಗಿ ವರ್ತಿಸುತ್ತಿದ್ದಾನೆಂದು ತಿಳಿಯುತ್ತದೆ. ಈ ಪ್ರಕಾರವಾಗಿ ಪರಮಾತ್ಮನು ಸಮಸ್ತ ಪ್ರಾಣಿಗಳಲ್ಲಿ ಸಮನಾಗಿರುವನೆಂದು ತಿಳಿದು ವೀಕ್ಷಿಸುವವನು ಆ ಪರಮಾತ್ಮನನ್ನು ಪ್ರಯತ್ನಪೂರ್ವಕವಾಗಿ ಹೇಗಾದರೂ ಮಾಡಿ ತಿಳಿದು ಕೊಳ್ಳುತ್ತಾನಾದ್ದರಿಂದ ತನ್ನ ಆತ್ಮವನ್ನು ತಾನು ನಾಶಮಾಡಿಕೊಳ್ಳುವುದಿಲ್ಲ ಎಂದು ತಿಳಿಯುತ್ತದೆ. ಆತ್ಮವನ್ನು ತಿಳಿದುಕೊಳ್ಳದೇ ಇರುವ ಸ್ಥಿತಿಯೇ ಆತ್ಮ ಹಿಂಸೆ, ಅದು ಆತ್ಮ ಹತ್ಯೆ. ಮತ್ತೆ ಆತ್ಮನನ್ನು ತಿಳಿಯದೇ ಇರುವವನು ಜನನ ಮರಣ ರೂಪದ ಸಂಸಾರದಲ್ಲಿ ಬಿದ್ದು ಕೊಚ್ಚಿಕೊಂಡು ಹೋಗಿ ನಾನಾ ಯಾತನೆಗಳನ್ನು ಅನುಭವಿಸುವುದರಿಂದ ತನ್ನ ಆತ್ಮವನ್ನು ತಾನು ಹಿಂಸಿಸಿಕೊಳ್ಳುವವನೇ ಆಗುವನು. ಆದ್ದರಿಂದ ಅವರವರ ಸಂಸಾರ ಬಾಧೆಗಳಿಗೆ ಅವರೇ ಕಾರಕರೆಂದು ಸ್ಪಷ್ಟವಾಗುತ್ತದೆ. ಆತ್ಮವನ್ನು ತಿಳಿದುಕೊಳ್ಳುವುದರಿಂದ ಮುಕ್ತನಾಗಿ ಆ ಬಾಧೆಗಳು ಯಾವುವೂ ಇರುವುದಿಲ್ಲ. ಆದ್ದರಿಂದ ವಿಜ್ಞುವು ತನ್ನ ಆತ್ಮವನ್ನು ಹಿಂಸಿಸಿಕೊಳ್ಳದೆ, ಆತ್ಮಹತ್ಯೆಗೆ ಪ್ರಯತ್ನಿಸದೆ, ಸರ್ವತ್ರ ಸಮವಾಗಿ ವ್ಯಾಪಿಸಿರುವ ಪರಮಾತ್ಮನನ್ನು ತಿಳಿದು ತತ್ಫಲಿತವಾಗಿ ಸರ್ವೋತ್ತಮವಾದ ಮೋಕ್ಷಗತಿ ಹೊಂದಬೇಕು. ಮೋಕ್ಷವನ್ನು 'ಪರಾಂಗತಿಂ' (ಉತ್ತಮ ಗತಿ) ಎಂದು ಹೇಳಿರುವುದರಿಂದ ಪ್ರಪಂಚದ ಎಲ್ಲಾ ಪದವಿಗಳಲ್ಲಿ ಆತ್ಮಸಾಕ್ಷಾತ್ಕಾರ ಸ್ಥಿತಿಯೇ ಸರ್ವೋತ್ತಮವೆಂದು ತಿಳಿಯುತ್ತದೆ.

ಪ್ರ : ಪರಮಾತ್ಮ ಎಲ್ಲರಲ್ಲಿಯೂ ಯಾವ ಪ್ರಕಾರವಾಗಿ ವ್ಯಾಪಿಸಿದ್ದಾನೆ?

ಉ : ಸಮಾನವಾಗಿ

ಪ್ರ : ಪ್ರಪಂಚದಲ್ಲಿ ಜೀವಿಗಳ ಸಂಸಾರಬಾಧೆಗೆ ಕಾರಣವೇನು?

ಉ : ಸರ್ವತ್ರ ಸಮವಾಗಿ ವ್ಯಾಪಿಸಿರುವ ಪರಮಾತ್ಮನನ್ನು ದರ್ಶಿಸದೆ ಇರುವುದೇ ಆಗಿದೆ.

ಪ್ರ : ಆ ಬಾಧೆಗೆ ಯಾರು ಬಾಧ್ಯರು?

ಉ : ತಾನೇ, ತನ್ನ ಆತ್ಮವನ್ನು ತಾನು ತಿಳಿದುಕೊಳ್ಳದೆ ಈ ರೂಪದಲ್ಲಿ ಆತ್ಮಹತ್ಯೆ ಮಾಡಿಕೊಳ್ಳುತ್ತಾ ಆಯಾಬಾಧೆಗಳಿಗೆ ಗುರಿಯಾಗುತ್ತಿದ್ದಾನೆ.

ಪ್ರ : ಜೀವಿಗಳ ಈ ಸಂಸಾರಬಾಧೆಗೆ ನಿವಾರಣೋಪಾಯವೇನು?

ಉ : ಸರ್ವತ್ರ ಸಮವಾಗಿ ವ್ಯಾಪಿಸಿರುವ ಪರಮಾತ್ಮನನ್ನು ತಿಳಿದುಕೊಳ್ಳುವುದೇ.

ಪ್ರ : ಪ್ರಪಂಚದ ಸಮಸ್ತ ಪದವಿಗಳಲ್ಲಿ ಹಾಗು ಗತಿಗಳಲ್ಲಿ ಶ್ರೇಷ್ಠವಾದುದು ಯಾವುದು?

ಉ : ಆತ್ಮ ಸಾಕ್ಷಾತ್ಕಾರ, ಮೋಕ್ಷ.

ಪ್ರ : ಮೋಕ್ಷಪ್ರಾಪ್ತಿಗೆ ಉಪಾಯವೇನು?

ಉ : ಪರಮಾತ್ಮನು ಸರ್ವತ್ರ ಸಮವಾಗಿ ವ್ಯಾಪಿಸಿದ್ದಾನೆನ್ನುವುದನ್ನು ತಿಳಿದುಕೊಂಡು ನಂತರ ಅವನನ್ನು ತನ್ನ ಹೃದಯದಲ್ಲಿ ಸಾಕ್ಷಾತ್ಕರಿಸಿ ಕೊಳ್ಳುವುದೇ.

**ಅ||** ಪ್ರಕೃತಿಯೇ ಸಮಸ್ತ ಕಾರ್ಯಗಳನ್ನು ನೆರವೇರಿಸುವುದೆಂದೂ, ಆತ್ಮ ಅಕರ್ತನೆಂದು ತಿಳಿಸುತ್ತಿದ್ದಾನೆ-

**೩೦ ಪ್ರಕೃತ್ಯೈವ ಚ ಕರ್ಮಾಣಿ ಕ್ರಿಯಮಾಣಾನಿ ಸರ್ವಶಃ**
**ಯಃ ಪಶ್ಯತಿ ತಥಾಽಽತ್ಮಾನಮಕರ್ತಾರಂ ಸ ಪಶ್ಯತಿ**

**ಅರ್ಥ:** ಯಃ=ಯಾರು; ಕರ್ಮಾಣಿ=ಕರ್ಮಗಳನ್ನು; ಪ್ರಕೃತ್ಯಾ ಏವ= ಪ್ರಕೃತಿಯಿಂದ; ಸರ್ವಶಃ=ಸರ್ವವಿಧಗಳ; ಕ್ರಿಯಮಾಣಾನಿ= ಮಾಡಲ್ಪಟ್ಟಂತೆ; ತಥಾ=ಹಾಗೆಯೇ (ಮತ್ತೆ); ಆತ್ಮಾನಂ=ಆತ್ಮವನ್ನು; ಅಕರ್ತಾರಾಂಶ್ಚ= ಕರ್ತನಲ್ಲವೆಂದು; ಪಶ್ಯತಿ=ನೋಡುತ್ತಿದ್ದಾನೋ; (ತಿಳಿಯುತ್ತಿದ್ದಾನೋ); ಸಂಃ=ಆತನು; ಪಶ್ಯತಿ=(ನಿಜವಾಗಿ) ನೋಡುತ್ತಿರುವವನಾಗಿದ್ದಾನೆ.

**ತಾ||** ಯಾವನು ಕರ್ಮಗಳು ಪ್ರಕೃತಿಯಿಂದ ಸರ್ವವಿಧಗಳಿಂದ ಮಾಡಲ್ಪಡುವವೆಂದೂ ಹಾಗೆಯೇ ಆತ್ಮನನ್ನು ಅಕರ್ತನೆಂದು ನೋಡುತ್ತಿದ್ದಾನೋ (ತಿಳಿದುಕೊಳ್ಳುತ್ತಿದ್ದಾನೋ) ಆತನೇ ನಿಜವಾಗಿ ನೋಡುವವನು.

**ವ್ಯಾಖ್ಯೆ:** ಲೋಕದಲ್ಲಿ ಸರ್ವತ್ರ ಸಮಸ್ತ ಕರ್ಮಗಳನ್ನು ಪ್ರಕೃತಿಯೇ ನಡೆಸುತ್ತಿದೆ. ಆತ್ಮ ತಟಸ್ಥವಾಗಿ, ಸಾಕ್ಷೀಭೂತವಾಗಿದೆ. ವಾಸ್ತವವಾಗಿ ಆತನು ಕರ್ತನಲ್ಲ. ಆತನ ಸಾನ್ನಿಧ್ಯಮಾತ್ರದಿಂದ ಪ್ರಕೃತಿಯೇ ಕ್ರಿಯೆಗಳನ್ನೆಲ್ಲಾ ಸರ್ವವಿಧದಿಂದ ನೆರವೇರಿಸುತ್ತದೆ. ಈ ಸತ್ಯವನ್ನು ತಿಳಿಯುವವನೇ ವಾಸ್ತವ ದೃಷ್ಟಿಯುಳ್ಳವನು. ಆತನೇ ನಿಜವಾಗಿ ನೋಡುವವನು. ಬೇರೆಯವರು ನೇತ್ರಗಳಿದ್ದರೂ ಸತ್ಯವನ್ನು ನೋಡಲಾರದವರು ಎಂದರ್ಥ. ಪ್ರಪಂಚದಲ್ಲಿ ಬಹಳ ಜನ ಕರ್ತೃತ್ವಾದಿಗಳನ್ನು ಆತ್ಮದಲ್ಲಿ ಆರೋಪಿಸಿ 'ನಾನು ಮಾಡುತ್ತಿದ್ದೇನೆ, ನಾನು ದುಃಖಿಸುತ್ತಿದ್ದೇನೆ'- ಇತ್ಯಾದಿ ವಾಕ್ಯಗಳನ್ನು ಹೇಳುತ್ತಿದ್ದಾರೆ. ಅವರು ಯಥಾರ್ಥವನ್ನು ನೋಡುವವರಲ್ಲ. ನೇತ್ರಗಳು ಇದ್ದರೂ ಅವರು ಸತ್ಯವನ್ನು ನೋಡಲು ಅಶಕ್ಯರಾದವರು. ಆದ್ದರಿಂದ ಜ್ಞಾನನೇತ್ರವನ್ನು ಸಂಪಾದಿಸಿಕೊಳ್ಳಬೇಕು. ಇಲ್ಲದಿದ್ದರೆ ಅವರು ಭಗವದ್ದೃಷ್ಟಿಯಲ್ಲಿ ನೇತ್ರ ಹೀನರೇ, ಅವರು ಅಂಧಕಾರದಲ್ಲಿ (ಅವಿದ್ಯೆಯಲ್ಲಿ) ಜೀವಿಸುವವರೇ ಆಗಿರುವರು.

ಪ್ರ : ಪ್ರಪಂಚದಲ್ಲಿ ಸಮಸ್ತ ಕರ್ಮಗಳು ಯಾವುದರಿಂದ ಮಾಡಲ್ಪಡುತ್ತಿವೆ?

ಉ : ಪ್ರಕೃತಿಯಿಂದ.

ಪ್ರ : ಮತ್ತೆ ಆತ್ಮ ಏನು ಮಾಡುತ್ತದೆ?

ಉ : ಅದು ಏನೂ ಮಾಡುತ್ತಿಲ್ಲ. ಅದು ಅಕರ್ತ. ಅದರ ಸಾನ್ನಿಧ್ಯದಿಂದ ಪ್ರಕೃತಿ ಸಮಸ್ತವನ್ನು ನಡೆಸುತ್ತದೆ (ಮಯಾಧ್ಯಕ್ಷೇಣ ಪ್ರಕೃತಿಃ ಸೂಯತೇ ಸ ಚರಾಚರಮ್).

ಪ್ರ : ಈ ಪ್ರಪಂಚದಲ್ಲಿ ಯಥಾರ್ಥವಾಗಿ ನೇತ್ರಗಳನ್ನು ಉಳ್ಳವನು ಯಾರು?

ಉ : 'ಪ್ರಕೃತಿಯಿಂದಲೇ ಸಮಸ್ತ ಕಾರ್ಯಗಳು ಮಾಡಲ್ಪಡುತ್ತಿವೆ. ಆತ್ಮ ಅಕರ್ತ' ಎನ್ನುವ ಜ್ಞಾನವುಳ್ಳವನು ಪ್ರಪಂಚದಲ್ಲಿ ವಾಸ್ತವವಾಗಿ ನೇತ್ರಗಳುಳ್ಳವನು ಬೇರೆಯವರು ಕಣ್ಣುಗಳಿದ್ದರೂ ಇಲ್ಲದಂತವರೇ ಆಗಿರುವರು (ಜ್ಞಾನನೇತ್ರ ವಿಹೀನರೆಂದು ಭಾವ).

ಅ॥ ಜೀವಿಯು ಬ್ರಹ್ಮವನ್ನು ಯಾವಾಗ ಹೊಂದುವನು ಎನ್ನುವುದನ್ನು ಹೇಳುತ್ತಿದ್ದಾನೆ-

**೩೧. ಯದಾ ಭೂತಪೃಥಗ್ಭಾವಮೇಕಸ್ಥಮನುಪಶ್ಯತಿ**
**ತತ ಏವ ಚ ವಿಸ್ತಾರಂ ಬ್ರಹ್ಮ ಸಂಪದ್ಯತೇ ತದಾ**

**ಅರ್ಥ:** ಯದಾ=ಯಾವಾಗಲೂ; ಭೂತಪೃಥಗ್ಭಾವಂ=ಪ್ರಾಣಿಕೋಟಿಗಳು ಬೇರೆಬೇರೆಯಾಗಿರುವ (ಅನೇಕ ವಿಧಗಳಿಂದ ಕೂಡಿದ ಪ್ರಪಂಚವು); ಏಕಸ್ಥಂ=ಒಂದರಲ್ಲಿ (ಆತ್ಮದಲ್ಲಿ) ಇರುವುದಾಗಿ; ಚ=ಮತ್ತೆ; ತತಃ ಏವ=ಅದರಿಂದಲೇ; ವಿಸ್ತಾರಂ=ವಿಸ್ತರಿಸಲ್ಪಟ್ಟದ್ದಾಗಿ; ಅನುಪಶ್ಯತಿ= ನೋಡುತ್ತಿದ್ದಾನೋ; ತದಾ=ಆಗ; (ಸಃ=ಅವನು); ಬ್ರಹ್ಮ=ಬ್ರಹ್ಮವನ್ನು; ಸಂಪದ್ಯತೇ=ಹೊಂದುತ್ತಿದ್ದಾನೆ (ಇಲ್ಲವೆ ಬ್ರಹ್ಮವೇ ಆಗುತ್ತಿದ್ದಾನೆ).

**ತಾ॥** ಯಾವಾಗ ಭಿನ್ನ ಭಿನ್ನವಾಗಿರುವ ಈ ಭೂತ ಪ್ರಪಂಚವನ್ನೆಲ್ಲಾ ಒಂದರಲ್ಲಿ (ಪರಮಾತ್ಮನಲ್ಲಿ) ಇದ್ದಂತೆ, ಮತ್ತೆ ಅದರಿಂದಲೇ ವಿಸ್ತಾರವಾಗಿರುವಂತೆ ವೀಕ್ಷಿಸುವನೋ, ಆಗ (ಮನುಜನು) ಬ್ರಹ್ಮವನ್ನು ಹೊಂದುತ್ತಿದ್ದಾನೆ (ಇಲ್ಲವೆ ಬ್ರಹ್ಮವೇ ಆಗುತ್ತಿದ್ದಾನೆ).

**ವ್ಯಾಖ್ಯೆ:** ಅನೇಕ ಪ್ರಾಣಿಕೋಟಿಗಳಿಂದ ಕೂಡಿ ಬೇರೆ ಬೇರೆಯಾಗಿ ಕಾಣಿಸುವ ಈ ಜಗತ್ತು ವಾಸ್ತವವಾಗಿ ಒಂದೇ ಸ್ವರೂಪದ್ದಾಗಿದೆ. ಒಂದೇ ಪರಮಾತ್ಮನಲ್ಲಿ ಅದು ಬೇರೆಬೇರೆಯಾಗಿ ಕಲ್ಪಿತಗೊಂಡಿದೆ. ಆದ್ದರಿಂದ ಈ ಬೇರೆ ಬೇರೆ ರೂಪಗಳು ಸತ್ಯಗಳಲ್ಲ. ಅವು ಯಾವುದರಲ್ಲಿ ಕಲ್ಪಿತಗೊಂಡಿವೆಯೋ ಅಂತಹ ಆತ್ಮವೇ ಸತ್ಯವಾದುದು. ಈ ರಹಸ್ಯವನ್ನು ಯಾವಾಗ ತಿಳಿಯುವನೋ ಆಗ ಮನುಜನು ಬ್ರಹ್ಮವನ್ನೇ ಹೊಂದುತ್ತಿದ್ದಾನೆ ಇಲ್ಲವೆ ಬ್ರಹ್ಮವೇ ಆಗುತ್ತಿದ್ದಾನೆ.

*'ಅನುಪಶ್ಯತಿ'*- *'ಪಶ್ಯತಿ'* ಎಂದು ಹೇಳದೆ *'ಅನುಪಶ್ಯತಿ'* ಎಂದು ಹೇಳಿರುವುದರಿಂದ ಅಂತಹ ಏಕತೆಯನ್ನು ಮಾತುಮಾತಿಗೆ ಅಭ್ಯಾಸದ ಮೂಲಕ ಚೆನ್ನಾಗಿ ಅನುಭೂತಿಗೊಳಿಸಿಕೊಳ್ಳಬೇಕೆನ್ನುವುದು ಭಾವ.

*'ಬ್ರಹ್ಮ ಸಂಪದ್ಯತೇ ತದಾ'*- ಮನುಜನು ಮೋಕ್ಷವನ್ನು ಹೊಂದುವ ಸುಮೂಹರ್ತವನ್ನು ಇಲ್ಲಿ ತಿಳಿಸಲಾಗಿದೆ. ಅದು ಒಂದು ನಿರ್ದಿಷ್ಟ ಸಮಯವಲ್ಲ. ಯಾವ ಸುಮೂಹರ್ತದಲ್ಲಿ ಆತನು ಭಿನ್ನಭಿನ್ನ ರೂಪಗಳಿಂದ ಕೂಡಿದ ಈ ಜಗತ್ತು ಏಕವಾದ ಪರಮಾತ್ಮನಲ್ಲಿ ಕಲ್ಪಿತವಾಗಿದೆಯೆಂದೂ ಹಾಗು ಅದರಿಂದಲೇ ವಿಸ್ತರಿಸಲ್ಪಟ್ಟಿರುವುದೆಂದು ತಿಳಿದುಕೊಳ್ಳುವನೋ ಆ ಮುಹೂರ್ತದಲ್ಲಿಯೇ ಆತನು ಅಂತಹ ಬ್ರಹ್ಮಜ್ಞಾನವನ್ನು ಹೊಂದಿ ಬ್ರಹ್ಮವನ್ನೇ ಹೊಂದುತ್ತಿದ್ದಾನೆ (ಬ್ರಹ್ಮನಲ್ಲಿ ಲಯವಾಗಿ ಬ್ರಹ್ಮರೂಪವಾಗಿ ಶೇಷಗೊಳ್ಳುತ್ತಿದ್ದಾನೆ, ಅದು ಮೋಕ್ಷ)

ಇದರಿಂದ ಈ ಪ್ರಪಂಚದಲ್ಲಿ ಅನೇಕತ್ವವನ್ನು ನೋಡುವುದು ಬಂಧಲಕ್ಷಣವೆಂದು ಏಕತ್ವವನ್ನು ನೋಡುವುದು ಮೋಕ್ಷಲಕ್ಷಣವೆಂದು ಅರ್ಥವಾಗುತ್ತದೆ. ಆದ್ದರಿಂದ ವಿಜ್ಞುವಾದವನು ನಾಮರೂಪವನ್ನು ತ್ಯಜಿಸಿ ಸಚ್ಚಿದಾನಂದವನ್ನು ಭಜಿಸುವ ಮೂಲಕ ಅನೇಕತ್ವದಲ್ಲಿ ಏಕತ್ವವನ್ನು ವೀಕ್ಷಿಸುವುದನ್ನು ಅಭ್ಯಾಸಿಸಬೇಕು.

ಪ್ರ : ಮನುಜನು ಬ್ರಹ್ಮವನ್ನು ಯಾವಾಗ ಹೊಂದಬಲ್ಲನು?

ಉ : ಯಾವಾಗ ಈ ಭಿನ್ನ ಭಿನ್ನ ರೂಪಗಳಿಂದ ಕೂಡಿದ ಸಮಸ್ತ ಪ್ರಪಂಚವು ಪರಮಾತ್ಮನಲ್ಲಿರುವುದೆಂದೂ, ಅದರಿಂದಲೇ ವಿಸ್ತಾರಗೊಂಡಿದೆಯೆಂದು ತಿಳಿಯುವನೋ (ಅಂತಹ ಬ್ರಹ್ಮ ಜ್ಞಾನದಿಂದ) ಆಗಲೇ ಬ್ರಹ್ಮವನ್ನು ಹೊಂದುವನು.

ಅ॥ ಇನ್ನು ಮೂರು ಶ್ಲೋಕಗಳ ಮೂಲಕ ಆತ್ಮದ ಮಹಿಮಾ ವಿಶೇಷವನ್ನು, ಸ್ವಭಾವವನ್ನು ವರ್ಣಿಸುತ್ತಿದ್ದಾನೆ-

**೩೨. ಅನಾದಿತ್ವಾನ್ನಿರ್ಗುಣತ್ವಾತ್ಪರಮಾತ್ಮಾಯ ಮವ್ಯಯಃ**
**ಶರೀರಸ್ಥೋಽಪಿ ಕೌಂತೇಯ ನ ಕರೋತಿ ನ ಲಿಪ್ಯತೇ**

**ಅರ್ಥ:** ಕೌಂತೇಯ=ಓ ಅರ್ಜುನಾ! ಅನಾದಿತ್ವಾತ್=ಆದಿಯಿಲ್ಲದವನು (ಕಾರಣರಹಿತನು) ಆಗಿರುವುದರಿಂದ; ನಿರ್ಗುಣತ್ವಾತ್=(ತ್ರಿ) ಗುಣರಹಿತನಾಗಿರುವುದರಿಂದ; ಅವ್ಯಯಃ=ನಾಶರಹಿತನಾಗಿರುವುದರಿಂದ; ಅಯಂ ಪರಮಾತ್ಮಾ=ಈ ಪರಮಾತ್ಮ; ಶರೀರಸ್ಥಃ ಅಪಿ=ಶರೀರದಲ್ಲಿರುವವನಾಗಿ; ನ ಕರೋತಿ=ಏನೂ ಮಾಡುತ್ತಿಲ್ಲ; ನ ಲಿಪ್ಯತೇ=ಯಾವುದರಿಂದಲೂ ಸಕ್ತನಾಗುವುದಿಲ್ಲ.

**ತಾ॥** ಓ ಅರ್ಜುನಾ! ಆದಿಯಿಲ್ಲದವನು (ಕಾರಣರಹಿತನು) ಆಗಿರುವುದರಿಂದ, (ತ್ರಿ)ಗುಣರಹಿತನಾಗಿರುವುದರಿಂದ, ಈ ಪರಮಾತ್ಮನು ಶರೀರದಲ್ಲಿದ್ದರೂ ಏನೂ ಮಾಡದೆ, ಯಾವುದಕ್ಕೂ ಸಕ್ತನಾಗದೆ ಉಳಿಯುವನು.

**ವ್ಯಾಖ್ಯೆ:** ಪ್ರಪಂಚದಲ್ಲಿರುವ ಸಮಸ್ತ ಪದಾರ್ಥಗಳಿಗೆ ಆದಿ ಅಂತ್ಯಗಳಿವೆ. ಪರಮಾತ್ಮನಿಗೆ ಈ ಆದಿ ಅಂತ್ಯಗಳಿಲ್ಲ. ಮತ್ತೆ ಆತನು (ತ್ರಿ) ಗುಣಗಳಾಗಲಿ, ಅದರಿಂದ ಹುಟ್ಟುವ ವಿಕಾರಗಳಾಗಲಿ ಇಲ್ಲದವನಾಗಿ, (ನಾಶರಹಿತನು, ಅವ್ಯಯನು ಆಗಿ) ವಾಸ್ತವವಾಗಿ ಆತ ಏನನ್ನೂ ಮಾಡುತ್ತಿಲ್ಲ. ಸರ್ವವೂ ತಾನೇ ಆಗಿರುವುದರಿಂದ ಇನ್ನು ಬರುವ ಹಾಗು ಹೋಗುವ ಪ್ರಶ್ನೆಯೇ ಇಲ್ಲ. ಆತನು ಅಸಂಗ. ಯಾವುದಕ್ಕೂ ಸಕ್ತನಾಗುವುದಿಲ್ಲ. ಎಚ್ಚೆತ್ತವನು ಸ್ವಪ್ನ ಪದಾರ್ಥಗಳಲ್ಲಿ ಹೇಗೆ ಆಸಕ್ತಿಗೊಳ್ಳುವನು? ಆದ್ದರಿಂದ ಶರೀರ, ಮನಸ್ಸು, ಬುದ್ಧಿ ಎನ್ನುವುವು ಅನೇಕ ಕ್ರಿಯೆಗಳನ್ನು ಮಾಡುತ್ತಿದ್ದರೂ ಆತ್ಮವು ಮಾತ್ರ ಸಾಕ್ಷಿಯಾಗಿ, ನಿಷ್ಕ್ರಿಯವಾಗಿ, ಅಸಂಗವಾಗಿ ಸಹಜ ಆನಂದ ಸ್ಥಿತಿಯಲ್ಲಿ ಬೆಳಗುತ್ತಿದೆ.

*'ಶರೀರಸ್ಥೋಽಪಿ'*- ಎಂದು ಹೇಳಿರುವುದರಿಂದ ಪರಮಾತ್ಮ ಎಲ್ಲೋ ದೂರದಲ್ಲಿಲ್ಲ. ಅತಿ ಸಮೀಪದಲ್ಲಿ ಅವರವರ ಶರೀರದಲ್ಲೇ ಇದ್ದಾನೆಂದು ಸ್ಪಷ್ಟವಾಗುತ್ತದೆ. ಆದ್ದರಿಂದ ಸಮೀಪದಲ್ಲೇ ಹೃದಯಗುಹೆಯಲ್ಲಿ ಬಚ್ಚಿಟ್ಟುಕೊಂಡಿರುವ ಆ ದೇವ ದೇವನನ್ನು ತಿಳಿದು ಧನ್ಯರಾಗಲು ಸರ್ವರೂ ಪ್ರಯತ್ನಿಸಬೇಕು. ಶರೀರ ಒಂದು ದೇವಾಲಯವೆಂದೂ ಆತ್ಮ ಮೂಲ ವಿರಾಟನೆಂದೂ ಭಾವಿಸಿ ಪವಿತ್ರ ಭಾವಗಳನ್ನೇ ಹೊಂದಿದ್ದು ಪಾಪಸ್ಪರ್ಶವಿಲ್ಲದೆ ಇರುವ ಹಾಗೆ ನೋಡಿಕೊಳ್ಳಬೇಕು.

**೩೩. ಯಥಾ ಸರ್ವಗತಂ ಸೌಕ್ಷ್ಮ್ಯಾದಾಕಾಶಂ ನೋಪಲಿಪ್ಯತೇ**
**ಸರ್ವತ್ರಾವಸ್ಥಿತೋ ದೇಹೇ ತಥಾಽಽತ್ಮಾ ನೋಪಲಿಪ್ಯತೇ**

**ಅರ್ಥ:** ಸರ್ವಗತಂ=ಸರ್ವತ್ರ ವ್ಯಾಪಿಸಿರುವ; ಆಕಾಶಂ=ಆಕಾಶವನ್ನು; ಸೌಕ್ಷ್ಮ್ಯಾತ್=ಸೂಕ್ಷ್ಮವಾಗಿರುವುದರಿಂದ; ಯಥಾ=ಯಾವ ಪ್ರಕಾರವಾಗಿ; ನ ಉಪಲಿಪ್ಯತೇ=(ದೂಳು ಮುಂತಾದುವುಗಳಿಂದ) ಸ್ಪರ್ಶ ಹೊಂದದೆ ಇರುವುದೋ; ತಥಾ=ಆ ಪ್ರಕಾರವಾಗಿ; ಸರ್ವತ್ರ ದೇಹೇ=ಶರೀರವೆಲ್ಲವೂ (ಇಲ್ಲವೆ ಸಕಲ ಶರೀರದಲ್ಲಿ); ಅವಸ್ಥಿತಃ=ಇರುವ (ವ್ಯಾಪಿಸಿರುವ); ಆತ್ಮಾ=ಪರಮಾತ್ಮನು; ನ ಉಪಲಿಪ್ಯತೇ=(ಶರೀರ ಗುಣ ದೋಷಗಳಿಂದ) ಸ್ಪರ್ಶಗೊಳ್ಳುವುದಿಲ್ಲ.

**ತಾ||** ಸರ್ವತ್ರ ವ್ಯಾಪಿಸಿರುವ ಆಕಾಶವು ಸೂಕ್ಷ್ಮವಾಗಿರುವುದರಿಂದ ಯಾವ ಪ್ರಕಾರವಾಗಿ (ಧೂಳು ಮುಂತಾದುವುಗಳಿಂದ) ಸ್ಪರ್ಶಗೊಳ್ಳುವುದಿಲ್ಲವೋ ಆ ಪ್ರಕಾರವಾಗಿ ಶರೀರದಲ್ಲೆಲ್ಲಾ (ಇಲ್ಲವೆ, ಸಕಲ ಶರೀರಗಳಲ್ಲಿ) ಬೆಳಗುತ್ತಿರುವ ಪರಮಾತ್ಮನು (ಶರೀರ ಗುಣದೋಷಗಳಿಂದ) ಸ್ಪರ್ಶಕ್ಕೆ ಒಳಗಾಗದೆ ಇರುವನು.

**ವ್ಯಾಖ್ಯೆ:** ದೃಶ್ಯ ಪ್ರಪಂಚದಲ್ಲಿ ಅತಿ ಸೂಕ್ಷ್ಮವಾದ ವಸ್ತು ಆಕಾಶ. ಆದ್ದರಿಂದ ಅದನ್ನು ದೃಷ್ಟಾಂತವಾಗಿ ತೆಗೆದುಕೊಂಡು ಆತ್ಮದ ನಿರ್ಲೇಪತೆ, ಸರ್ವವ್ಯಾಪಕತೆ, ಸೂಕ್ಷ್ಮತ್ವೆ, ನಿರ್ಮಲತೆಗಳನ್ನು ಬೋಧಿಸಲಾಗಿದೆ. ಚಿಕ್ಕ ಚಿಕ್ಕ ಉಪಮಾನಗಳ ದ್ವಾರ ಮಹಾನ್ ಬೋಧೆಗಳನ್ನು ತಿಳಿಸುವುದು ಒಂದು ವಿಶಿಷ್ಟತೆ. ಆಕಾಶವೆಂದು ಹೇಳಿರುವುದರಿಂದ ಆತ್ಮವನ್ನು ಆಕಾಶವೆಂದು ಯಾರೂ ಭಾವಿಸಬಾರದು. ಆಕಾಶದಂತೆ ಅತಿ ಸೂಕ್ಷ್ಮವಾದುದೆಂದು ತಿಳಿಯಬೇಕು. ಆಕಾಶವು ಧೂಳು ಮೊದಲಾದವುಗಳಿಂದ ವ್ಯಾಪಿಸಿದ್ದರೂ ಅವುಗಳ ಗುಣದೋಷಗಳಿಂದ ಹೇಗೆ ಸ್ಪರ್ಶಗೊಳ್ಳುವುದಿಲ್ಲವೋ ಹಾಗೆ ಆತ್ಮ ದೇಹದಲ್ಲಿ ಎಲ್ಲಾ ಕಡೆ ವ್ಯಾಪಿಸಿದ್ದರೂ ಅದರ ಸುಖ ದುಃಖ ಹಾಗು ಜನನ ಮರಣಗಳಿಗೆ ಎಳ್ಳಷ್ಟೂ ಅಂಟಿಕೊಂಡಿರುವುದಿಲ್ಲ. ಮತ್ತೆ ಮೇಘದಲ್ಲಿ ಎಷ್ಟು ಸಿಡಿಲು, ಮಿಂಚು, ನೀರು, ಆಲಿಕಲ್ಲು, ಕಪ್ಪು ಬಣ್ಣ, ಶೀತಲತೆ ಮೊದಲಾದವು ಇದ್ದರೂ, ಆಕಾಶಕ್ಕೆ ಹೇಗೆ ಆ ಗುಣಗಳು ಸಂಬಂಧವಿರುವುದಿಲ್ಲವೋ ಹಾಗೆಯೇ ಆತ್ಮಕ್ಕೆ ಶರೀರ, ಮನಸ್ಸಂಬಂಧ ಸುಖದುಃಖಗಳು ಯಾವ ಮಾತ್ರವೂ ಸಂಬಂಧವಿರುವುದಿಲ್ಲವೆಂದು ಭಾವಿಸಿಕೊಂಡು ಗಂಭೀರಾತ್ಮ ಸ್ವರೂಪನಾಗಿ ಸಾಧಕನು ಸ್ಥಿತವಾಗಿರಬೇಕು. ತಾನು ವಾಸ್ತವವಾಗಿ ಆತ್ಮ ಸ್ವರೂಪಿಯೇ ಆದುದರಿಂದ ತಾನು ತನ್ನನ್ನು ದೇಹಕ್ಕೆ ಸಾಕ್ಷಿಯೆಂದು, ದೇಹಾತೀತನೆಂದು ಚಿಂತನೆ ಮಾಡುತ್ತ, ದೇಹ ಸಂಬಂಧ ಸುಖ ದುಃಖಾದಿಗಳು ತನ್ನವಲ್ಲವೆಂದು ತಿಳಿದು, ನಿರ್ಭಯವಾಗಿ ಆನಂದವಾಗಿರಬೇಕು.

'ಸರ್ವತ್ರಾವಸ್ಥಿತೋ ದೇಹೇ'- ಎಂದು ಹೇಳಿರುವುದರಿಂದ (ಹಿಂದಿನ ಶ್ಲೋಕದಲ್ಲಿ ತಿಳಿಸಿದ ರೀತಿ) ಭಗವಂತನು ಅತಿ ಸಮೀಪದಲ್ಲಿ, ತನ್ನ ಶರೀರದಲ್ಲಿಯೇ ವರ್ತಿಸುತ್ತಿದ್ದಾನಾದ್ದರಿಂದ ಪವಿತ್ರಾಚರಣೆಯಿಂದ ಆತನನ್ನು ಹೃದಯದಲ್ಲಿಯೇ ಸಾಕ್ಷಾತ್ಕರಿಸಿಕೊಳ್ಳಬೇಕು. ಶರೀರವು ದೇಗುಲ, ದೇವಸನ್ನಿಧಿ ಎಂದು ಭಾವಿಸಿ ದುಷ್ಕೃತ್ಯಗಳನ್ನು ಪಾಪಕಾರ್ಯಗಳನ್ನು, ಪಾಪಸಂಕಲ್ಪಗಳನ್ನು ಹತ್ತಿರಕ್ಕೆ ಸೇರಿಸಬಾರದು. ಮತ್ತೆ ಯಾವ ಜಾತಿಯವರಾದರೂ, ಮತದವರಾದರೂ, ಸ್ತ್ರೀಯಾದರೂ, ಪುರುಷನಾದರೂ, ಅವರವರ ಶರೀರದಲ್ಲಿ ಆತನನ್ನು ದೇವ ದೇವನಾದ ಜಗನ್ನಾಥನೇ ನಿವಸಿಸುತ್ತಿದ್ದಾನೆಂದು ತಿಳಿದು ಧೈರ್ಯೋಪೇತರಾಗಿ ಆತನನ್ನು ಸಾಕ್ಷಾತ್ಕರಿಸಿಕೊಳ್ಳಲು ಶೀಘ್ರವಾಗಿ ಯತ್ನಿಸಬೇಕು. ಆತನು ದೇಹದಲ್ಲಿ ಎಲ್ಲಿದ್ದಾನೆಂದು ಪಂಚಕೋಶಗಳನ್ನು ಹುಡುಕಿ ಹುಡುಕಿ, ಮನಸ್ಸನ್ನು ಶೋಧಿಸಿ ಕೊನೆಗೆ ಆತನನ್ನು ತಿಳಿದುಕೊಳ್ಳುವಲ್ಲಿ ವಿಜಯವಂತರಾಗಬೇಕು. ಪ್ರಯತ್ನಶೀಲನಿಗೆ ಆತನು ಸಿಕ್ಕೇ ಸಿಗುವನು.

ಪ್ರ : ಪರಮಾತ್ಮನ ಸ್ವಭಾವವೇನು?

ಉ : ಆತನು ಶರೀರದಲ್ಲಿದ್ದರೂ ಆಕಾಶದ ಹಾಗೆ ನಿರ್ಲೇಪನಾಗಿ ದೇಹ ಸಂಬಂಧ ಸುಖದುಃಖಾದಿಗಳಿಗೆ ಎಳ್ಳಷ್ಟೂ ಅಂಟದೆ ಇರುವನು.

**೩೪. ಯಥಾಪ್ರಕಾಶಯತ್ಯೇಕಃ ಕೃತ್ಸ್ನಂ ಲೋಕಮಿಮಂ ರವಿಃ**
**ಕ್ಷೇತ್ರಂ ಕ್ಷೇತ್ರೀ ತಥಾ ಕೃತ್ಸ್ನಂ ಪ್ರಕಾಶಯತಿ ಭಾರತ**

**ಅರ್ಥ:** ಭಾರತ=ಓ ಅರ್ಜುನಾ! ಏಕಃ=ಒಬ್ಬನಾದ; ರವಿಃ=ಸೂರ್ಯನು; ಇಮಂ=ಈ; ಕೃತ್ಸ್ನಂ=ಸಮಸ್ತವಾದ; ಲೋಕಂ=ಲೋಕವನ್ನು; ಯಥಾ=ಹೇಗೆ; ಪ್ರಕಾಶಯತಿ=ಪ್ರಕಾಶಿಸುತ್ತಿದ್ದಾನೋ; ತಥಾ=ಹಾಗೆಯೇ; ಕ್ಷೇತ್ರೀ=ಕ್ಷೇತ್ರಜ್ಞನು (ಪರಮಾತ್ಮ); ಕೃತ್ಸ್ನಂ=ಸಮಸ್ತವಾದ; ಕ್ಷೇತ್ರಂ=ಕ್ಷೇತ್ರವನ್ನು; ಪ್ರಕಾಶಯತಿ= ಪ್ರಕಾಶಿಸುತ್ತಿದ್ದಾನೆ.

**ತಾ||** ಓ ಅರ್ಜುನಾ! ಸೂರ್ಯನೊಬ್ಬನೇ ಸಮಸ್ತ ಲೋಕವನ್ನು ಹೇಗೆ ಪ್ರಕಾಶಿಸುತ್ತಿದ್ದಾನೋ ಹಾಗೆ ಕ್ಷೇತ್ರಜ್ಞನಾದ ಪರಮಾತ್ಮನು ಈ ಸಮಸ್ತ ಕ್ಷೇತ್ರವನ್ನು ಪ್ರಕಾಶಿಸುತ್ತಿದ್ದಾನೆ.

**ವ್ಯಾಖ್ಯೆ:** ಆತ್ಮದ ನಿರ್ಲೇಪತೆಯನ್ನು ಆಕಾಶದ ದೃಷ್ಟಾಂತದ ಮೂಲಕ ಹೇಳಿ ಈಗ ಪ್ರಕಾಶತೆಯನ್ನು ಸೂರ್ಯನ ದೃಷ್ಟಾಂತದ ದ್ವಾರ ಹೇಳುತ್ತಿದ್ದಾನೆ - ಸೂರ್ಯನು ಲೋಕಕ್ಕೆಲ್ಲಾ ಸಾಕ್ಷಿಯಾಗಿದ್ದು, ಈ ಲೋಕವನ್ನು ಹೇಗೆ ಪ್ರಕಾಶಿಸುತ್ತಿದ್ದಾನೋ ಆ ಪ್ರಕಾರವಾಗಿ ಕ್ಷೇತ್ರಜ್ಞನಾದ ಪರಮಾತ್ಮನು ದೇಹೇಂದ್ರಿಯ ಮನೋಬುದ್ಧ್ಯಾದಿ ದೃಶ್ಯ ಜಗದ್ರೂಪ ಕ್ಷೇತ್ರವನ್ನೆಲ್ಲಾ ಪ್ರಕಾಶ ಮಾಡುತ್ತಾ ಸರ್ವಸಾಕ್ಷಿಯಾಗಿ ಬೆಳಗುತ್ತಿದ್ದಾನೆ. ಸೂರ್ಯನಿಲ್ಲದಿದ್ದರೆ ಜಗತ್ತು ನಿರ್ವೀರ್ಯವಾದ ಹಾಗೆ ಆತ್ಮ ತೇಜವಿಲ್ಲದಿದ್ದರೆ ದೇಹೇಂದ್ರಿಯ ಮನೋ ಬುದ್ಧ್ಯಾದಿಗಳೆಲ್ಲವೂ ಶಕ್ತಿವಿಹೀನವಾಗಿ ಹೋಗುವುವು.

'ಕೃತ್ಸ್ನಂ'- ಎಂದು ಹೇಳಿರುವುದರಿಂದ ಕೇವಲ ಜಾಗ್ರತ್ಪದಾರ್ಥಗಳನ್ನೇ ಅಲ್ಲದೆ ಸ್ವಪ್ನ ಸುಷುಪ್ತ್ಯಾದಿಗಳಲ್ಲಿರುವ ಪದಾರ್ಥಗಳನ್ನು ಹಾಗೆಯೇ ಭೂತ ಭವಿಷ್ಯತ್ಪದಾರ್ಥಗಳನ್ನೂ ಸಹ ಪರಮಾತ್ಮನು ಪ್ರಕಾಶಗೊಳಿಸುತ್ತಿದ್ದಾನೆಂದು ಭಾವ.

ಆತ್ಮದ ಈ ನಿರ್ಲೇಪತೆ, ಪ್ರಕಾಶತೆ, ಸರ್ವಸಾಕ್ಷಿ ಇತ್ಯಾದಿ ಸ್ವಭಾವಗಳನ್ನು ಭಗವಂತನು ತಿಳಿಸಿದ ವಿವಿಧ ದೃಷ್ಟಾಂತಗಳನ್ನು ಸ್ಮರಿಸುವುದರಿಂದ ಸಾಧಕನು ಚೆನ್ನಾಗಿ ಅನುಭೂತಿಗೊಳಿಸಿಕೊಂಡು ತಾನು ವಾಸ್ತವವಾಗಿ ಅಂತಹ ಅಸಂಗ ಚಿದ್ರೂಪನೇ ಆಗಲಿ, ದೇಹೇಂದ್ರಿಯಾದಿ ಜಡ ಪದಾರ್ಥಗಳಲ್ಲವೆನ್ನುವ ದೃಢವಾದ ನಿಶ್ಚಯಕ್ಕೆ ಬರಬೇಕು.

ಪ್ರ : ಪರಮಾತ್ಮನು ಈ ಲೋಕವನ್ನೆಲ್ಲಾ ಯಾವ ರೀತಿ ಪ್ರಕಾಶಿಸುತ್ತಾನೆ?

ಉ : ಸೂರ್ಯನು ಸಮಸ್ತಲೋಕವನ್ನು ಪ್ರಕಾಶಿಸಿದ ಹಾಗೆ.

**ಅ||** ಕ್ಷೇತ್ರ ಕ್ಷೇತ್ರಜ್ಞರನ್ನು ಕುರಿತ ಜ್ಞಾನವುಳ್ಳವರಿಗೆ ಉಂಟಾಗುವ ಫಲವನ್ನು ಹೇಳಿ ಈ ಅಧ್ಯಾಯವನ್ನು ಸಮಾಪ್ತಿಗೊಳಿಸುತ್ತಿದ್ದಾನೆ-

**೩೫ ಕ್ಷೇತ್ರ ಕ್ಷೇತ್ರಜ್ಞಯೋರೇವಮಂತರಂ ಜ್ಞಾನಚಕ್ಷುಷಾ**
**ಭೂತಪ್ರಕೃತಿಮೋಕ್ಷಂ ಚ ಯೇ ವಿದುರ್ಯಾಂತಿ ತೇ ಪರಂ**

**ಅರ್ಥ:** ಯೇ=ಯಾರು; ಜ್ಞಾನ ಚಕ್ಷುಷಾ=ಜ್ಞಾನ ದೃಷ್ಟಿಯಿಂದ; ಏವಂ=ಈ ಪ್ರಕಾರವಾಗಿ; ಕ್ಷೇತ್ರ ಕ್ಷೇತ್ರಜ್ಞಯೋಃ=ಕ್ಷೇತ್ರ ಕ್ಷೇತ್ರಜ್ಞರ; ಅಂತರಂ= ಭೇದವನ್ನು; ಭೂತ ಪ್ರಕೃತಿ ಮೋಕ್ಷಂ ಚ=ಭೂತಗಳಿಗೆ ಸಂಬಂಧಿಸಿರುವ (ಇಲ್ಲವೆ ಕಾರಣವಾದ) ಪ್ರಕೃತಿ (ಅವಿದ್ಯೆ)ಯಿಂದ ವಿಮುಕ್ತಿ ಹೊಂದುವ ಉಪಾಯ;

ವಿದುಃ=ತಿಳಿಯುತ್ತಿದ್ದಾರೋ; ತೇ=ಅವರು; ಪರಂ=ಪರಮಾತ್ಮ ಪದವಿಯನ್ನು (ಮೋಕ್ಷವನ್ನು); ಯಾಂತಿ=ಹೊಂದುತ್ತಿದ್ದಾರೆ.

**ತಾ||** ಯಾರು ಜ್ಞಾನದೃಷ್ಟಿಯಿಂದ ಈ ಪ್ರಕಾರವಾಗಿ ಕ್ಷೇತ್ರ ಕ್ಷೇತ್ರಜ್ಞರ ಭೇದವನ್ನು, ಭೂತಗಳಿಗೆ ಸಂಬಂಧಿಸಿದ (ಇಲ್ಲವೆ ಕಾರಣವಾದ) ಪ್ರಕೃತಿ (ಅವಿದ್ಯೆ)ಯಿಂದ ವಿಮುಕ್ತಿಯನ್ನುಂಟು ಮಾಡುವ ಉಪಾಯವನ್ನು ತಿಳಿದುಕೊಳ್ಳುವರೋ ಅವರು ಪರಮಾತ್ಮ ಪದವಿಯನ್ನು (ಮೋಕ್ಷವನ್ನು) ಹೊಂದುವರು.

**ವ್ಯಾಖ್ಯೆ:** *'ಏವಂ'*-(ಈ ಪ್ರಕಾರವಾಗಿ)-ಎಂದು ಹೇಳುವುದರಿಂದ ಈ ಅಧ್ಯಾಯದಲ್ಲಿ ತಿಳಿಸಲ್ಪಟ್ಟ ದೃಗ್ದೃಶ್ಯ ವಿವೇಕವೇ ಕ್ಷೇತ್ರ ಕ್ಷೇತ್ರಜ್ಞರನ್ನು ಕುರಿತ ಜ್ಞಾನವೇ, ಕೈವಲ್ಯಪ್ರಾಪ್ತಿಗೆ ಹೇತುವೆಂದು ನಿರೂಪಿಸಲಾಗಿದೆ. ಆದ್ದರಿಂದ ಇದು ಸಾಮಾನ್ಯವಾದುದಲ್ಲವೆಂದು ಮೋಕ್ಷಕ್ಕೆ ಸೋಪಾನವೆಂದು ಮುಮುಕ್ಷುಗಳು ತಿಳಿದು ಭಗವದ್ವಾಕ್ಯಗಳ ಮೇಲೆ ವಿಶ್ವಾಸವಿಟ್ಟು, ಅದನ್ನು ಸಾಧಿಸಿ ಮುಕ್ತಿ ಹೊಂದಬೇಕು.

*'ಅಂತರಂ'*- (ಭೇದ)- ಸಾಮಾನ್ಯರೆಲ್ಲರೂ ದೃಗ್ದೃಶ್ಯವನ್ನು, ಕ್ಷೇತ್ರ ಕ್ಷೇತ್ರಜ್ಞರನ್ನು ಕಲೆಸಿಹಾಕುತ್ತಿದ್ದಾರೆ. ನಾನೇ ದೇಹ, ಮನಸ್ಸು, ಸುಂದರ, ಉತ್ತಮ ಜಾತಿಯವನೆಂದು ಜೀವಿಯು ಕ್ಷೇತ್ರದೊಡನೆ ಐಕ್ಯ ಹೊಂದುತ್ತಿದ್ದಾನೆ. ಅದು ದುಃಖಕ್ಕೆ ಕಾರಣ. ಬಂಧಕ್ಕೆ, ಕಾರಣವು ಅದೇ ಆಗಿದೆ. ವಾಸ್ತವವಾಗಿ ಜೀವಿಯು ಕ್ಷೇತ್ರಜ್ಞನಾದ ಆತ್ಮನೇ ಆಗಲಿ ಕ್ಷೇತ್ರವಲ್ಲ. ತಾನು ಕ್ಷೇತ್ರಕ್ಕೆ (ದೇಹಾದಿಗಳಿಗೆ) ಸಾಕ್ಷಿಯಾದ ಕ್ಷೇತ್ರಜ್ಞನೇ ಎಂದು, ಕ್ಷೇತ್ರವು ತನಗಿಂತ ಬೇರೆಯೆಂದು, ದುಃಖಾದಿಗಳನ್ನು ಹೊಂದುವುದು ಕ್ಷೇತ್ರವೇ ಆಗಲಿ ತಾನಲ್ಲವೆಂದು, ತಾನು ಅದಕ್ಕೆ ಬೇರೆಯಾಗಿ, ಸಾಕ್ಷಿಯಾಗಿ ಇರುವವನೆಂದು ವಿಚಾರಣೆಯಿಂದ ತಿಳಿದುಕೊಂಡು ಆ ಎರಡನ್ನೂ (ಕ್ಷೇತ್ರ ಕ್ಷೇತ್ರಜ್ಞರನ್ನು) ವಿಭಜಿಸಿ ನೋಡುವುದೇ ಈ ಅಧ್ಯಾಯದಲ್ಲಿ ತಿಳಿಸಲ್ಪಟ್ಟ ಬೋಧೆ.

*'ಭೂತ ಪ್ರಕೃತಿ ಮೋಕ್ಷಂ ಚ'*- ಜೀವಿಯು ಅನಾದಿ ಕಾಲದಿಂದ ಪ್ರಕೃತಿ (ಮಾಯೆ)ಯಿಂದ ಬದ್ಧನಾಗಿದ್ದಾನೆ. ಈಗ ಜ್ಞಾನಾದಿ ಸಾಧನೆಗಳಿಂದ ಅದರಿಂದ ಬಿಡುಗಡೆ ಹೊಂದಲು ಯತ್ನಿಸುತ್ತಿದ್ದಾನೆ. ಪ್ರಕೃತಿ ವಿಮೋಚನೆಯೇ ಪ್ರತಿ ಜೀವಿಯ ಪರಮ ಕರ್ತವ್ಯ. ಪ್ರಕೃತಿಯಿಂದ ಆ ಪ್ರಕಾರವಾಗಿ ಬಿಡುಗಡೆ ಹೊಂದುವುದೇ ಮೋಕ್ಷ. ಮೋಕ್ಷವೆನ್ನುವುದು ಎಲ್ಲೋ ಆಕಾಶದಲ್ಲಿ, ಪಾತಾಳದಲ್ಲಿ ಇಲ್ಲವೆ ಬೇರೆ ಯಾವುದೇ ಸ್ಥಳದಲ್ಲಾಗಲಿ ಇರುವ ವಸ್ತುವಲ್ಲ. ಅಜ್ಞಾನ ವಶದಿಂದ ಇಷ್ಟು ಕಾಲ ಪ್ರಕೃತಿಯಿಂದ ಕೂಡಿದ ತಾನು, ಜ್ಞಾನ ದೃಷ್ಟಿಯನ್ನು ಸಂಪಾದಿಸಿ ಅದರಿಂದ (ಪ್ರಕೃತಿಯಿಂದ) ವಿಮುಕ್ತಿ ಹೊಂದುವುದೇ ಮೋಕ್ಷ. ಇದರಿಂದಲೇ 'ಜ್ಞಾನ ಚಕ್ಷುಷಾ' ಎಂದು ಹೇಳಲಾಗಿದೆ. ಆದ್ದರಿಂದ ಪ್ರತಿಯೊಬ್ಬರೂ ಬಂಧವಿಮುಕ್ತಿಗೆ ಜ್ಞಾನ ನೇತ್ರವನ್ನು, ವಿಚಾರಣಾ ಸಾಮರ್ಥ್ಯವನ್ನು, ಕ್ಷೇತ್ರ ಕ್ಷೇತ್ರಜ್ಞ ವಿಭೇದ ಪರಿಜ್ಞಾನವನ್ನು ತಪ್ಪದೆ ಹೊಂದಬೇಕು. ಬೇರೆ ದಾರಿಯಿಲ್ಲ. 'ನಮಗೇಕೆ ಮೋಕ್ಷ ಉಂಟಾಗಲಿಲ್ಲ' ಎಂದು ಪ್ರಶ್ನಿಸುವವರು ಮೊದಲು ತಮಗೆ ಜ್ಞಾನನೇತ್ರ ಲಭಿಸಿದೆಯೇ ಎಂದು ನೋಡಿಕೊಳ್ಳಬೇಕು. ಅಂತಹ ಜ್ಞಾನ ಚಿರಕಾಲ ಭಗವಂತನನ್ನು ಭಕ್ತಿಯಿಂದ ಸೇವಿಸಿ ಆರಾಧಿಸುವುದರಿಂದ ಸಂಪ್ರಾಪ್ತಿಯಾಗುವುದು- **(ತೇಷಾಂ ಸತತಯುಕ್ತಾನಾಂ.... ದದಾಮಿ ಬುದ್ಧಿಯೋಗಂ).** ಆದ್ದರಿಂದ ಭಕ್ತಿ, ಉಪಾಸನೆ, ಪರೋಪಕಾರಾದಿ ಪುಣ್ಯಕಾರ್ಯಗಳಿಂದ ಭಗವಂತನನ್ನು ಪ್ರೀತಿಯಿಂದ ಸೇವಿಸಿ ಭಗವತ್ಕೃಪೆಯಿಂದ ಜ್ಞಾನನೇತ್ರವನ್ನು (ಬುದ್ಧಿ ಯೋಗವನ್ನು) ಪಡೆದು ತದ್ವಾರ ಕ್ಷೇತ್ರ ಕ್ಷೇತ್ರಜ್ಞರ ಮಧ್ಯೆ ಇರುವ ಭೇದವನ್ನು ತಿಳಿದುಕೊಂಡು ತಾನು ಕ್ಷೇತ್ರಜ್ಞನೇ ಹೊರತು ಕ್ಷೇತ್ರವಲ್ಲವೆಂದು ಭಾವಿಸಿ ಜೀವಿಯು ಮೋಕ್ಷವನ್ನು ಹೊಂದಬೇಕಾಗಿದೆ. ದುಃಖರಾಹಿತ್ಯ, ಪರಮಾನಂದ ಪ್ರಾಪ್ತಿಗೆ ಜೀವಿಯು ಅವಲಂಬಿಸಬೇಕಾದ ಪದ್ಧತಿಯು ಇದೇ ಎಂದು ಭಗವಂತನು ಅಸಂದಿಗ್ಧವಾಗಿ ಇಲ್ಲಿ ಹೇಳಿದ್ದಾನೆ.

*'ಯೇ ವಿದುರ್ಯಾಂತಿ ತೇ ಪರಂ'*-ಎನ್ನುವಲ್ಲಿ 'ಯಚ್ಛಬ್ದ' ಪ್ರಯೋಗ ಮಾಡುವುದರಿಂದ, ಯಾರಾದರೂ ಸರಿಯೇ, ಯಾವ ಮತದವರು, ಆಶ್ರಮದವರು, ಕುಲದವರಾದರೂ ಜ್ಞಾನನೇತ್ರವನ್ನು ಹೊಂದಿದರೆ ಅವರು ತಪ್ಪದೆ ಮುಕ್ತರಾಗುವರೆಂದು ಸ್ಪಷ್ಟಪಡಿಸಲಾಗಿದೆ. 'ಯಾಂತಿ' ಎನ್ನುವ ಪದದಿಂದ ಅವರು ಅಂತಹ ಮೋಕ್ಷ ಸ್ಥಿತಿಯನ್ನು ನಿಸ್ಸಂದೇಹವಾಗಿ ಪಡೆಯುವರೆಂದು ನಿರೂಪಿಸಲಾಗಿದೆ. ಆದ್ದರಿಂದ ಮುಮುಕ್ಷುಗಳು ತಮ್ಮ ಬಂಧವಿಮೋಚನೆಯಲ್ಲಿ ಯಾವ ರೀತಿಯ ಸಂಶಯವಿಟ್ಟುಕೊಳ್ಳದೆ ಭಗವದ್ವಾಕ್ಯಗಳ ಮೇಲೆ ಸಂಪೂರ್ಣ ವಿಶ್ವಾಸವಿಟ್ಟು ಪ್ರಯತ್ನ ಪೂರ್ವಕವಾಗಿ ಜ್ಞಾನದೃಷ್ಟಿಯನ್ನು ಪಡೆದು ಬ್ರಹ್ಮಸಾಯುಜ್ಯವನ್ನು ಹೊಂದಬೇಕು.

ಪ್ರ : ಮೋಕ್ಷವೆಂದರೇನು?

ಉ : ಪ್ರಕೃತಿ (ಮಾಯೆ, ಅವಿದ್ಯೆ)ಯಿಂದ ಬಿಡುಗಡೆಯಾಗುವುದೇ.

ಪ್ರ : ಅಂತಹ ಮೋಕ್ಷವನ್ನು ಯಾರು ಹೊಂದುವರು?

ಉ : ಕ್ಷೇತ್ರ ಕ್ಷೇತ್ರಜ್ಞರ ವಿಭೇದವನ್ನು ತಿಳಿದವರು.

ಪ್ರ : ಅಂತಹ ಭೇದವನ್ನು ಯಾವುದರಿಂದ ತಿಳಿಯುವರು?

ಉ : ಜ್ಞಾನದೃಷ್ಟಿ, ವಿವೇಕದಿಂದ.

ಪ್ರ : ಆದ್ದರಿಂದ ಮೋಕ್ಷ ಹೊಂದಲು ಉಪಾಯವೇನು?

ಉ : ಜ್ಞಾನದೃಷ್ಟಿಯನ್ನು ಪಡೆದು ಕ್ಷೇತ್ರಕ್ಷೇತ್ರಜ್ಞರ ಭೇದವನ್ನು ತಿಳಿಯುವುದೇ

**ಓಮ್**

ಇತಿ ಶ್ರೀಮದ್ಭಗವದ್ಗೀತಾಸೂಪನಿಷತ್ಸು ಬ್ರಹ್ಮವಿದ್ಯಾಯಾಂ ಯೋಗ ಶಾಸ್ತ್ರೇ
ಶ್ರೀ ಕೃಷ್ಣಾರ್ಜುನ ಸಂವಾದೇ ಕ್ಷೇತ್ರ ಕ್ಷೇತ್ರಜ್ಞ ವಿಭಾಗ ಯೋಗೋ ನಾಮ

**ತ್ರಯೋದಶೋಽಧ್ಯಾಯಃ**

ಇದು ಉಪನಿಷತ್ಪ್ರತಿಪಾದಕವೂ, ಬ್ರಹ್ಮವಿದ್ಯೆಯೂ, ಯೋಗಶಾಸ್ತ್ರವೂ, ಶ್ರೀ ಕೃಷ್ಣಾರ್ಜುನ ಸಂವಾದವಾದ
ಶ್ರೀ ಭಗವದ್ಗೀತೆಯ ಕ್ಷೇತ್ರ ಕ್ಷೇತ್ರಜ್ಞ ವಿಭಾಗ ಯೋಗವೆನ್ನುವ

ಹದಿಮೂರನೆಯ ಅಧ್ಯಾಯ

**ಓಮ್ ತತ್ ಸತ್**

# ಗುಣತ್ರಯವಿಭಾಗಯೋಗ

## ಶ್ರೀ ಭಗವದ್ಗೀತೆ

### ಅಥ ಚತುರ್ದಶೋಽಧ್ಯಾಯಃ
### ಹದಿನಾಲ್ಕನೆಯ ಅಧ್ಯಾಯ
### ಗುಣತ್ರಯವಿಭಾಗಯೋಗಃ - ಗುಣತ್ರಯವಿಭಾಗಯೋಗ

**ಈ ಅಧ್ಯಾಯದ ಹೆಸರು :**

**'ಗುಣತ್ರಯ ವಿಭಾಗ ಯೋಗ'**- ಸತ್ವರಜಸ್ತಮಸ್ಸುಗಳೆಂಬ ಮೂರು ಗುಣಗಳು, ಅವುಗಳ ಸ್ವಭಾವಗಳು, ಅವು ಜೀವಿಯನ್ನು ಯಾವ ಪ್ರಕಾರವಾಗಿ ಬಂಧಿಸುವುವು, ಜೀವಿಯಲ್ಲಿ ಅವು ಒಂದೊಂದು ಅಧಿಕವಾಗಿದ್ದಾಗ ಯಾವ ಯಾವ ಲಕ್ಷಣಗಳನ್ನು ಆತನು ಹೊಂದಿರುವನು, ಆಯಾ ಗುಣಗಳನ್ನು ಆಶ್ರಯಿಸುವುದರಿಂದ ಜೀವಿಗೆ ಯಾವ ಯಾವ ಫಲಗಳು ಉಂಟಾಗುವುವು ಹಾಗೂ ಆ ಗುಣಗಳನ್ನು ದಾಟಿರುವ ಗುಣಾತೀತನಾದ ಜೀವನ್ಮುಕ್ತನು ಯಾವ ಪ್ರಕಾರವಾಗಿರುವನು, ಇವೇ ಮುಂತಾದ ವಿಷಯಗಳನ್ನು ವಿಶದವಾಗಿ ನಿರೂಪಿಸಲ್ಪಟ್ಟ ಅಧ್ಯಾಯವಾಗಿರುವುದರಿಂದ ಇದಕ್ಕೆ ಗುಣತ್ರಯವಿಭಾಗ ಯೋಗ ಎನ್ನುವ ಹೆಸರು ಬಂದಿದೆ.

**ಈ ಅಧ್ಯಾಯದಲ್ಲಿಯ ಪ್ರಧಾನ ವಿಷಯಗಳು:**

೧) ಜ್ಞಾನಮಹಿಮೆ, ಪ್ರಕೃತಿ ಪುರುಷರಿಂದ ಜಗದುತ್ಪತ್ತಿ-
(೧ನೆಯ ಶ್ಲೋಕದಿಂದ ೪ನೆಯ ಶ್ಲೋಕದವರಿಗೆ)

೨) ಸತ್ವರಜಸ್ತಮೋಗುಣಗಳ ಸ್ವರೂಪ, ಸ್ವಭಾವಗಳು-
(೫ನೆಯ ಶ್ಲೋಕದಿಂದ ೧೩ನೆಯ ಶ್ಲೋಕದವರೆಗೆ)

೩) ಆಯಾಗುಣಗಳ ಫಲಗಳು-
(೧೪ನೆಯ ಶ್ಲೋಕದಿಂದ ೧೮ನೆಯ ಶ್ಲೋಕದವರೆಗೆ)

೪) ಭಗವತ್ಪ್ರಾಪ್ತಿಗೆ ಉಪಾಯ-
(೧೯ನೆಯ ಶ್ಲೋಕದಿಂದ ೨೦ನೆಯ ಶ್ಲೋಕದವರೆಗೆ)

೫) ಗುಣಾತೀತನ ಲಕ್ಷಣಗಳು-
(೨೧ನೆಯ ಶ್ಲೋಕದಿಂದ ೨೭ನೆಯ ಶ್ಲೋಕದವರೆಗೆ)

**ಪೂರ್ವಾಧ್ಯಾಯದೊಡನೆ ಈ ಅಧ್ಯಾಯಕ್ಕೆ ಇರುವ ಸಂಬಂಧ:**

ಹಿಂದಿನ ಅಧ್ಯಾಯದಲ್ಲಿ ಭಗವಂತನು ಕ್ಷೇತ್ರ ಕ್ಷೇತ್ರಜ್ಞರನ್ನು, ಪ್ರಕೃತಿ ಪುರುಷರನ್ನು ಕುರಿತು ಹೇಳುತ್ತ ೨೦ನೆಯ ಶ್ಲೋಕದಲ್ಲಿ 'ಪ್ರಕೃತಿ ಸಂಭವ'ಗಳಾದ ತ್ರಿಗುಣಗಳನ್ನು ಕುರಿತು ಪ್ರಸ್ತಾಪಿಸಿದನು. ಆನಂತರ ಮುಂದಿನ ಮೂರು ಶ್ಲೋಕಗಳಲ್ಲಿ ಆ ಗುಣಗಳ ಚರ್ಚೆಯು ಮುಂದುವರಿಯಿತು. ಪ್ರಕೃತಿ ಜನ್ಯಗಳಾದ ಆ ಸತ್ತ್ವರಜಸ್ತಮೋಗುಣಗಳೇ ಜೀವಿಯ ಉಚ್ಚ ನೀಚ ಜನ್ಮಗಳಿಗೆ ಕಾರಣಗಳೆಂದು ೨೨ನೆಯ ಶ್ಲೋಕದಲ್ಲಿ ಹೇಳಲಾಯಿತು. ಈ ಸಂದರ್ಭದಲ್ಲಿ ಸಹಜವಾಗಿ ಶ್ರೋತೃವಿಗೆ ಆ ಗುಣಗಳನ್ನು ಕುರಿತ ವಿವರಗಳನ್ನು, ಅವು ಜೀವಿಯನ್ನು ಹೇಗೆ ಬಂಧಿಸುವುವು ಹಾಗು ಅವುಗಳಿಂದ ಮುಕ್ತಿ ಹೊಂದುವ ಉಪಾಯಗಳನ್ನು ತಿಳಿಯಬೇಕೆಂಬ ಅಭಿಲಾಷೆ ಹುಟ್ಟುತ್ತದೆ. ಈ ಕಾರಣದಿಂದ ಭಗವಂತನು ಅರ್ಜುನನು ಪ್ರಶ್ನಿಸುವುದಕ್ಕಿಂತ ಮುಂಚೆಯೇ ತಾನೇ ಆ ಗುಣಗಳನ್ನು ಕುರಿತು ವಿವರವಾಗಿ ಹೇಳಬೇಕೆಂದು ನಿಶ್ಚಯಿಸಿ, ಹಿಂದಿನ ಅಧ್ಯಾಯದಲ್ಲಿ ಹೇಳಲ್ಪಟ್ಟ ಅಖಂಡ ಪರಮಾತ್ಮ ಜ್ಞಾನವನ್ನು ಮತ್ತೂ ವಿಪುಲವಾಗಿ ಬೋಧಿಸಿ, ಅಂತಹ ಜ್ಞಾನದ ಮಹಿಮೆಯನ್ನು ಪ್ರಾರಂಭದಲ್ಲಿಯೇ ಹೇಳುತ್ತ ಈ ಅಧ್ಯಾಯವನ್ನು ಪ್ರಾರಂಭಿಸುತ್ತಿದ್ದಾನೆ.

**ಶ್ರೀ ಭಗವಾನುವಾಚ:**

**೧. ಪರಂ ಭೂಯಃ ಪ್ರವಕ್ಷ್ಯಾಮಿ ಜ್ಞಾನಾನಾಂ ಜ್ಞಾನಮುತ್ತಮಮ್**
**ಯಜ್ಜ್ಞಾತ್ವಾ ಮುನಯಃ ಸರ್ವೇ ಪರಾಂ ಸಿದ್ಧಿಮಿತೋ ಗತಾಃ**

ಶ್ರೀ ಭಗವಾನುವಾಚ-ಶ್ರೀಭಗವಂತನು ಹೇಳಿದನು.

**ಅರ್ಥ:** ಯತ್=ಯಾವುದನ್ನು; ಜ್ಞಾತ್ವಾ=ತಿಳಿದುಕೊಂಡು; ಸರ್ವೇ ಮುನಯಃ=ಮುನಿಗಳೆಲ್ಲರೂ; ಇತಃ=ಈ ಸಂಸಾರ ಬಂಧನದಿಂದ (ಬಿಡುಗಡೆ ಹೊಂದಿ); ಪರಾಂ ಸಿದ್ಧಿಂ=ಸರ್ವೋತ್ತಮವಾದ ಮೋಕ್ಷ ಸಿದ್ಧಿಯನ್ನು; ಗತಾಃ= ಹೊಂದಿದರೋ; (ತತ್=ಅಂತಹ); ಪರಂ=ಪರಮಾತ್ಮಸಂಬಂಧವಾದ (ಇಲ್ಲವೆ ಶ್ರೇಷ್ಠವಾದ); ಜ್ಞಾನಾನಾಂ=ಜ್ಞಾನಗಳಲ್ಲೆಲ್ಲಾ; ಉತ್ತಮಂ= ಉತ್ತಮವಾದುದು (ಆದ) ಜ್ಞಾನಂ=ಜ್ಞಾನವನ್ನು; ಭೂಯಃ=ಮತ್ತೆ; ಪ್ರವಕ್ಷ್ಯಾಮಿ=ಹೇಳುತ್ತಿದ್ದೇನೆ.

**ತಾ॥** ಶ್ರೀ ಭಗವಂತನು ಹೇಳಿದನು- (ಓ ಅರ್ಜುನಾ!) ಯಾವುದನ್ನು ತಿಳಿದುಕೊಂಡು ಮುನಿಗಳೆಲ್ಲರೂ ಈ ಸಂಸಾರ ಬಂಧನದಿಂದ ಬಿಡುಗಡೆ

ಹೊಂದಿ ಸರ್ವೋತ್ತಮವಾದ ಮೋಕ್ಷ ಸಿದ್ಧಿಯನ್ನು ಪಡೆದರೋ ಅಂತಹ ಪರಮಾತ್ಮ ವಿಷಯವನ್ನು, ಜ್ಞಾನಗಳಲ್ಲೆಲ್ಲಾ ಉತ್ತಮವಾದ ಜ್ಞಾನವನ್ನು ಮತ್ತೆ ಹೇಳುತ್ತಿದ್ದೇನೆ.

**ವ್ಯಾಖ್ಯೆ:** *'ಭೂಯಃ'*- (ಮತ್ತೆ) 'ಹಿಂದಿನ ಅಧ್ಯಾಯದಲ್ಲಿ ಹೇಳಲ್ಪಟ್ಟ ಅಖಂಡ ಜ್ಞಾನವನ್ನು ಮತ್ತೆ ಹೇಳುತ್ತಿದ್ದೇನೆ ಕೇಳು'- ಎಂದು ಹೇಳುವುದರಿಂದ ಭಗವಂತನಿಗೆ ಭಕ್ತರ ಮೇಲೆ ಎಷ್ಟು ಕರುಣೆಯಿದೆಯೋ, ಅವರನ್ನು ಮುಕ್ತಿಗೊಳಿಸಬೇಕೆನ್ನುವ ಆಸಕ್ತಿ ಎಷ್ಟು ಆಳವಾಗಿದೆಯೋ ಗೊತ್ತಾಗುತ್ತಿದೆ. ಉತ್ತಮಗುರು, ವಿಶ್ವಾಸ ಪಾತ್ರನಾದ ಶಿಷ್ಯನಿಗೆ ಅವನ ಮನಸ್ಸಿನ ಮೇಲೆ ಅದರ ಪ್ರಭಾವವುಂಟಾಗಲೆಂದು ಒಂದೇ ಬೋಧೆಯನ್ನು ಮತ್ತೆ ಮತ್ತೆ ಹೇಳುವನು. 'ವಕ್ಷ್ಯಾಮಿ'- ಎಂದು ಹೇಳದೆ 'ಪ್ರವಕ್ಷ್ಯಾಮಿ'- (ಚೆನ್ನಾಗಿ ಹೇಳುತ್ತಿದ್ದೇನೆ) ಎಂದು ಹೇಳುವುದರಿಂದ ಈ ಅಧ್ಯಾಯದಲ್ಲಿ ತಿಳಿಸಲ್ಪಟ್ಟ ವಿಷಯಗಳು ಭಗವಂತನ ದೃಷ್ಟಿಯಲ್ಲಿ ಎಷ್ಟು ಮುಖ್ಯವಾದವುಗಳೆನ್ನುವುದನ್ನು ಊಹಿಸಿಕೊಳ್ಳಬಹುದು.

*'ಜ್ಞಾನಾನಾಂ ಜ್ಞಾನಮುತ್ತಮಮ್'* - ಪ್ರಪಂಚದಲ್ಲಿ ಅನೇಕ ಜ್ಞಾನಗಳು (ಭೌತಿಕ, ಸಂಗೀತ, ಶಿಲ್ಪ, ಗಣಿತ ಮುಂತಾದ ಜ್ಞಾನಗಳು) ಇದ್ದರೂ ಅವುಗಳಲ್ಲೆಲ್ಲಾ ಭಗವಂತನ ದೃಷ್ಟಿಯಲ್ಲಿ ಅಧ್ಯಾತ್ಮಿಕ ಜ್ಞಾನ ಸರ್ವಶ್ರೇಷ್ಠವಾದುದೆಂದು ಈ ವಾಕ್ಯದ ದ್ವಾರ ಮತ್ತು 'ಪರಂ' ಎನ್ನುವ ಪದದ ಮೂಲಕ ಸ್ಪಷ್ಟವಾಗುತ್ತದೆ.

*'ಯಜ್ಞಾತ್ವಾ ಮುನಯಃ ಸರ್ವೇ'*- ಈ ಜ್ಞಾನವನ್ನು ತಿಳಿದುಕೊಂಡು ಪೂರ್ವದಲ್ಲಿ ಮುನಿಗಳೆಲ್ಲರೂ ಬಂಧ ವಿಮುಕ್ತರಾದರೆಂದು ತಿಳಿಸಲಾಗಿದೆ. ಔಷಧದ ಶ್ರೇಷ್ಠತೆ ರೋಗಿಗಳ ಮೇಲೆ ಅದು ಉಂಟುಮಾಡುವ ಪರಿಣಾಮದಮೇಲೆ ಆಧಾರ ಪಟ್ಟಿರುತ್ತದೆ. ಯಾವುದರ ಸೇವನೆಯಿಂದ ರೋಗ ಶಮನಹೊಂದುವುದೋ ಆ ಔಷಧಿ ಉತ್ತಮವಾದುದೆಂದು ಅರ್ಥ. ಮುನಿಗಳೆಲ್ಲರೂ ಈ ಜ್ಞಾನವನ್ನು ಸೇವಿಸುವುದರಿಂದ ಬಂಧರಹಿತರಾಗಿ ಶಾಶ್ವತ ಮೋಕ್ಷ ಪದವಿಯನ್ನು ಹೊಂದಿದರೆಂದು ತಿಳಿಸುವುದರಿಂದ ಆ ಜ್ಞಾನದ ಮಹಿಮೆ ಬಹಿರಂಗಗೊಂಡಂತಾಗಿದೆ. ಪ್ರತ್ಯಕ್ಷ ಫಲ ದರ್ಶನವನ್ನು ಮಾಡಿಸುವುದರಿಂದ ಭಗವಂತನು ಜನಗಳಿಗೆ ಜ್ಞಾನದ ಮೇಲೆ ಪರಮ ವಿಶ್ವಾಸವನ್ನು ಉಂಟುಮಾಡುತ್ತಿದ್ದಾನೆ. 'ಸರ್ವೇ' ಎಂದು ಹೇಳುವುದರಿಂದ ಈ ಜ್ಞಾನವನ್ನು ತಿಳಿದವರಲ್ಲಿ ಒಬ್ಬರೂ ಕೂಡ ಮುಕ್ತಿಯಿಂದ ವಂಚಿತ ರಾಗಲಿಲ್ಲವೆಂದೂ, ಎಲ್ಲರೂ ಮುಕ್ತಿ ಹೊಂದಿದರೆಂದು ತಿಳಿಯುತ್ತದೆ. ಆದರೆ 'ಮುನಯಃ'=(ಮನನಶೀಲರು) ಎಂದು ಹೇಳುವುದರಿಂದ ಅವರೆಲ್ಲರೂ ತತ್ತ್ವವನ್ನು ಚೆನ್ನಾಗಿ ಮನನ ಮಾಡಿ ನಂತರ ಮುಕ್ತಿ ಹೊಂದಿದರೆಂದು ವಾಚಾ ಜ್ಞಾನದಿಂದಲ್ಲವೆಂದು ಸ್ಪಷ್ಟವಾಗುತ್ತದೆ.

*'ಪರಾಂ ಸಿದ್ಧಿಂ'*- ಮೋಕ್ಷ ಸ್ಥಿತಿ - ಎಲ್ಲದಕ್ಕಿಂತ ಉನ್ನತ ಸ್ಥಿತಿ-ಎಂದು ಹೇಳಲ್ಪಟ್ಟಿರುವುದರಿಂದ, ಚಿಕ್ಕ ಚಿಕ್ಕ ಪ್ರಾಪಂಚಿಕ ಪದವಿಗಳನ್ನು, ಗತಿಗಳನ್ನು ದೊಡ್ಡವೆಂದು ತಿಳಿದು ಗರ್ವಿತರಾಗದೆ ಅವುಗಳಿಗಿಂತ ಎಷ್ಟೋ ಪಾಲು ಆನಂದಕರವಾದ ಪರಮಾತ್ಮ ಪದವಿಯನ್ನು ಜ್ಞಾನಸಂಪಾದನೆಯಿಂದ ಹೊಂದಿ ಧನ್ಯರಾಗಬೇಕು.

ಪ್ರ : ಭಗವಂತನು ಹೇಳುವ ಜ್ಞಾನವೆಂತಹದು?

ಉ : ೧) ಜ್ಞಾನವು ಎಲ್ಲದಕ್ಕಿಂತ ಉತ್ತಮವಾದುದು ೨) ಅದನ್ನು ತಿಳಿಯುವುದರಿಂದ ಮುನಿಗಳು ಮೋಕ್ಷ ಹೊಂದಿದರು.

ಪ್ರ : ಮೋಕ್ಷ ಸ್ಥಿತಿ ಎಂತಹದು?

ಉ : ಪ್ರಪಂಚದಲ್ಲಿಯ ಎಲ್ಲಾ ಪದವಿಗಳಲ್ಲಿ ಸರ್ವೋತ್ತಮವಾದುದು.,

**ಅ॥** ಜ್ಞಾನದ ಮಹಿಮೆಯನ್ನು ಇನ್ನೂ ಮುಂದುವರಿಸಲಾಗುತ್ತಿದೆ.

**೨ ಇದಂ ಜ್ಞಾನಮುಪಾಶ್ರಿತ್ಯ ಮಮ ಸಾಧರ್ಮ್ಯ ಮಾಗತಾಃ**
**ಸರ್ಗೇಽಪಿ ನೋಪಜಾಯಂತೇ ಪ್ರಲಯೇ ನ ವ್ಯಥಂತಿ ಚ**

**ಅರ್ಥ:** ಇದಂ=ಈ; ಜ್ಞಾನಂ=ಜ್ಞಾನವನ್ನು; ಉಪಾಶ್ರಿತ್ಯ=ಆಶ್ರಯಿಸಿ; ಮಮ=ನನ್ನ; ಸಾಧರ್ಮ್ಯಂ=ಸ್ವರೂಪವನ್ನು (ನನ್ನಲ್ಲಿ ಸಮಾನ ಧರ್ಮವನ್ನು, ಐಕ್ಯವನ್ನು); ಆಗತಾಃ=ಹೊಂದಿದವರಾಗಿ; ಸರ್ಗೇ ಅಪಿ=ಸೃಷ್ಟಿಕಾಲದಲ್ಲಿ; ನ ಉಪಜಾಯಂತೇ=ಜನ್ಮಿಸುವುದಿಲ್ಲ; ಪ್ರಲಯೇ=ಪ್ರಳಯ ಕಾಲದಲ್ಲಿ; ನ ವ್ಯಥಂತಿ ಚ=ವ್ಯಥೆಗೊಳಗಾಗುವುದಿಲ್ಲ (ನಾಶವಾಗುವುದಿಲ್ಲ).

**ತಾ॥** ಈ ಜ್ಞಾನವನ್ನು ಆಶ್ರಯಿಸಿ ಜನರು ನನ್ನಲ್ಲಿ ಐಕ್ಯ ಹೊಂದಿದವರಾಗಿ (ನನ್ನ ಸ್ವರೂಪವನ್ನು ಪಡೆದು) ಸೃಷ್ಟಿಕಾಲದಲ್ಲಿ ಜನ್ಮಿಸುವುದಿಲ್ಲ ಹಾಗು ಪ್ರಳಯ ಕಾಲದಲ್ಲಿ ನಶಿಸುವುದಿಲ್ಲ. (ಜನನ ಮರಣ ರಹಿತವಾದ ಪುನರಾವೃತ್ತಿಯಿಲ್ಲದ ಸ್ಥಿತಿಯನ್ನು ಹೊಂದುವರೆನ್ನುವುದು ಭಾವ).

**ವ್ಯಾಖ್ಯೆ:** *'ಮಮ ಸಾಧರ್ಮ್ಯ ಮಾಗತಾಃ'*- ಜ್ಞಾನದ ಅಖಂಡ ಮಹಿಮೆಯನ್ನು ತಿಳಿಸಲಾಗುತ್ತಿದೆ. ಈ ಜ್ಞಾನವನ್ನು ತಿಳಿದುಕೊಂಡವರು ಸಾಕ್ಷಾತ್ ಭಗವಂತನಲ್ಲಿ ಐಕ್ಯ ಹೊಂದಿ ಭಗವದ್ರೂಪಿಗಳೇ ಆಗುತ್ತಿದ್ದಾರೆ (ಜ್ಞಾನೀತ್ವಾತ್ಮೈವ ಮೇ ಮತಂ ೭-೧೮) ಎಂದು ಹಿಂದಿನ ಅಧ್ಯಾಯದಲ್ಲಿ ಇದೇ ಭಾವವನ್ನು ವ್ಯಕ್ತಪಡಿಸಲಾಗಿದೆ. ಈ ಜ್ಞಾನದಿಂದ ಜೀವಿಯು ಶಿವನಾಗುತ್ತಾನೆ. ಭಕ್ತನು ಭಗವಂತನಾಗುತ್ತಾನೆ. 'ಸಾಧರ್ಮ್ಯಂ- ಎಂದು ಹೇಳುವುದರಿಂದ ಜ್ಞಾನಿ ಭಗವಂತನಿಗೆ ಸರಿಸಮಾನವಾದ ರೂಪ ಹಾಗು ಧರ್ಮಗಳನ್ನು ಹೊಂದುವನೆಂದು ಸ್ಪಷ್ಟವಾಗುತ್ತದೆ. ಅಂತಹ ಸ್ಥಿತಿ ಐಕ್ಯದಿಂದ ಮಾತ್ರ ಸಿದ್ಧಿಸುವುದು. ಏಕೆಂದರೆ ಸಮಾನ ಧರ್ಮಗಳುಳ್ಳ ಅಂದರೆ ಸದ್ರೂಪಗಳುಳ್ಳ ಎರಡು ವಸ್ತುಗಳು ಬೇರೆ ಬೇರೆ ಇರಲಾರವು. ಸದ್ವಸ್ತುವು ಲೋಕದಲ್ಲಿ ಮಾತ್ರ ಒಂದು ಇರಬಲ್ಲದು. ಆದ್ದರಿಂದ ಜೀವಿಯು ಜ್ಞಾನೋಪಾರ್ಜನೆ ಯಿಂದ ಪರಮಾತ್ಮನಲ್ಲಿ ತಪ್ಪದೆ ಲೀನವಾಗುತ್ತಾನೆಂದು ತಿಳಿಯುತ್ತದೆ. ಆಹಾ! ಎಷ್ಟು ಉನ್ನತ ಪದವಿ! ಸಾಕ್ಷಾತ್ ಭಗವಂತನೇ ತಾನಾಗುವುದರಿಂದ ಎಷ್ಟು ಘನತೆ! ಆದ್ದರಿಂದ ಆ ಮಹೋನ್ನತ ಸ್ಥಿತಿಗಾಗಿ ಈ ಜೀವನದಲ್ಲಿಯೇ ಯತ್ನಿಸುವವನು ಧನ್ಯಾತಿ ಧನ್ಯನು.

ಆದರೆ ಅಂತಹ ಭಗವತ್ಸಾಯುಜ್ಯ, ಸಾಧರ್ಮ್ಯವನ್ನು ಹೊಂದುವುದರಿಂದ ಉಂಟಾಗುವ ಫಲವೇನೆಂದರೆ, ಅವರು ಜನನ ಮರಣ ರಹಿತರಾಗಿ ಪುನರಾವೃತ್ತಿ ಇಲ್ಲದಿರುವರು. ಅವರು ಸೃಷ್ಟಿಕಾಲದಲ್ಲಿ ಜನ್ಮಿಸುವುದಾಗಲಿ, ಪ್ರಳಯದಲ್ಲಿ ನಶಿಸುವುದಾಗಲಿ ಇಲ್ಲದವರಾಗಿ-**'ಪುನರಪಿ ಜನನಂ ಪುನರಪಿ ಮರಣಂ'** - ಎನ್ನುವುದನ್ನು ತಪ್ಪಿಸಿಕೊಂಡು, ಈ ಸಂಸಾರ ಚಕ್ರ ಪರಿಭ್ರಮಣ ದಿಂದ ಬಿಡುಗಡೆ ಹೊಂದಿ ಪರಮಾನಂದವನ್ನು ಅನುಭವಿಸುವರು. ಅಷ್ಟೇಕೆ! ಆನಂದ ರೂಪಿಗಳೇ ಆಗುವರು (**ಸರ್ಗೇಽಪಿ ನೋಪಜಾಯಂತೆ ಪ್ರಲಯೇ ನ ವ್ಯಥಂತಿ ಚ**). ಆದ್ದರಿಂದ ಸಂಸಾರ ಬಾಧೆಗಳಿಂದ ತಪ್ಪಿಸಿಕೊಳ್ಳಬೇಕೆಂದರೆ, ಈ ಆತ್ಮಜ್ಞಾನನೇ ಜನರಿಗೆ ಶರಣ್ಯವೆಂದು ತಿಳಿಯುತ್ತದೆ.

ಪ್ರ : ಈ ಜ್ಞಾನವನ್ನು ಹೊಂದುವುದರಿಂದ ಉಂಟಾಗುವ ಫಲವೇನು?

ಉ : ಇದರಿಂದ ಜನರು ೧) ಭಗವಂತನೊಡನೆ ಐಕ್ಯವಾಗಿ ಭಗವತ್ಸ್ವರೂಪಿಗಳೇ ಆಗುವರು ೨) ಸೃಷ್ಟಿ ಕಾಲದಲ್ಲಿ ಜನ್ಮ ಪ್ರಳಯಕಾಲದಲ್ಲಿ ನಾಶಗಳಿಂದ ಬಾಧಿತರಾಗದೆ (ಜನನ ಮರಣ ರಹಿತರಾಗಿ) ಉಳಿಯುವರು.

ಪ್ರ : (ಇದರಿಂದ) ಭಗವತ್ಸಾಯುಜ್ಯ, ಮೋಕ್ಷವನ್ನು ಹೊಂದುವ ಉಪಾಯವೇನು?

ಉ : ಪರಮಾರ್ಥ ಜ್ಞಾನವನ್ನು ಹೊಂದುವುದರಿಂದ

**ಅ||** ಪ್ರಕೃತಿ ಪುರುಷರಿಂದ ಈ ಜಗತ್ತೆಲ್ಲವೂ ಆವಿರ್ಭವಿಸಿರುವುದೆಂದು ಎರಡು ಶ್ಲೋಕಗಳಲ್ಲಿ ವಿವರಿಸಲಾಗಿದೆ-

**೩. ಮಮ ಯೋನಿರ್ಮಹದ್ಬ್ರಹ್ಮ ತಸ್ಮಿನ್ ಗರ್ಭಂ ದಧಾಮ್ಯಹಮ್**
**ಸಂಭವಃ ಸರ್ವಭೂತಾನಾಂ ತತೋ ಭವತಿ ಭಾರತ**

**ಅರ್ಥ:** ಭಾರತ=ಓ ಅರ್ಜುನಾ! ಮಹದ್ಬ್ರಹ್ಮ=ವಿಶೇಷವಾದ ಮೂಲ ಪ್ರಕೃತಿ (ಮಾಯೆ); ಮಮ=ನನ್ನ; ಯೋನಿಃ=ಸರ್ವಭೂತೋತ್ಪತ್ತಿ ಸ್ಥಾನ(ಉತ್ಪತ್ತಿ ಕ್ಷೇತ್ರ); ತಸ್ಮಿನ್=ಅದರಲ್ಲಿ; ಅಹಂ=ನಾನು; ಗರ್ಭಂ=ಗರ್ಭಕಾರಣವಾದ ಚೈತನ್ಯರೂಪವಾದ ಬೀಜವನ್ನು; ದಧಾಮಿ=ಇಡುತ್ತಿದ್ದೇನೆ; ತತಃ=ಆದ್ದರಿಂದ; ಸರ್ವಭೂತಾನಾಂ=ಸಮಸ್ತ ಪ್ರಾಣಿಕೋಟಿಯ; ಸಂಭವಃ=ಉತ್ಪತ್ತಿ; ಭವತಿ=ಉಂಟಾಗುತ್ತದೆ.

**ತಾ||** ಅರ್ಜುನಾ! ವಿಶೇಷವಾದ ಮೂಲ ಪ್ರಕೃತಿ (ಮಾಯೆ) ನನ್ನ ಸರ್ವ ಭೂತೋತ್ಪತ್ತಿ ಸ್ಥಾನ. ಅದರಲ್ಲಿ ನಾನು ಗರ್ಭಕಾರಣವಾದ ಚೈತನ್ಯ ರೂಪವಾದ ಬೀಜವನ್ನು ಇಡುತ್ತಿದ್ದೇನೆ. ಅದರಿಂದ ಸಮಸ್ತ ಪ್ರಾಣಿಗಳ ಉತ್ಪತ್ತಿ ಸಂಭವಿಸುತ್ತದೆ.

**ವ್ಯಾಖ್ಯೆ:** ಈ ಚರಾಚರ ಜಗತ್ತು, ಪ್ರಾಣಿ ಕೋಟಿ ಹೇಗೆ ಉತ್ಪತ್ತಿಯಾಗುತ್ತಿದೆ? ಕೇವಲ ಪ್ರಕೃತಿಯಿಂದಲ್ಲ. ಏಕೆಂದರೆ ಅದು ಜಡವಾದುದು, ಪ್ರಕೃತಿ ಪುರುಷರ ಸಂಯೋಗದಿಂದಲೇ ಅಂದರೆ ಜಡವಾದ ಪ್ರಕೃತಿಯೊಡನೆ ಚೈತನ್ಯರೂಪನಾದ ಪರಮಾತ್ಮನ ಕೂಡುವಿಕೆಯಿಂದ ಸೃಷ್ಟಿ ಏರ್ಪಡುತ್ತಿದೆ. ಆದ್ದರಿಂದ ಪರಮಾತ್ಮನೇ ಸರ್ವಜೀವಿಗಳ ಪಿತ. ಪ್ರತಿ ಜೀವಿಯ ಬೀಜವು ಆತನೇ. ಈ ರಹಸ್ಯವನ್ನೇ ಈ ಶ್ಲೋಕದಲ್ಲಿ ಸ್ಪಷ್ಟ ಮಾಡಲಾಗಿದೆ. ಆದ್ದರಿಂದ ಯಾವ ಪ್ರಾಣಿಯಾಗಲಿ ಜೀವಿಯಾಗಲಿ ಅಥವ ಅಲ್ಪ ಜಾತಿಯವರಾಗಲಿ ಕಿಂಚಿತ್ತೂ ಅಂಜದೆ ತನ್ನ ಮೂಲ ಸಾಕ್ಷಾತ್ ಪರಮಾತ್ಮನೇ ಎಂದು ತಿಳಿದು ಆತನನ್ನು ಸೇರಲು, ಆತನಲ್ಲಿ ಲೀನಗೊಳ್ಳಲು (ಜ್ಞಾನಾದಿಗಳಿಂದ) ಸರ್ವಯತ್ನಗಳನ್ನು ಮಾಡಬೇಕು. ಮತ್ತೆ ಸರ್ವ ಪ್ರಾಣಿಗಳ ಬೀಜ ಆ ಪರಾತ್ಪರನೇ ಆದುದರಿಂದ, ಯಾವ ಪ್ರಾಣಿಯನ್ನು ನೋಡಿದರೂ ಭಗವದ್ಭಾವ ಉಂಟಾಗಿ ಜೀವಕಾರುಣ್ಯ, ಪರೋಪಕಾರ ಗುಣ ಹೊರಹೊಮ್ಮಬೇಕು.

ಪ್ರ : ಸಮಸ್ತ ಪ್ರಾಣಿಗಳು ಯಾವ ಪ್ರಕಾರ ಆವಿರ್ಭವಿಸುವುವು ?

ಉ : ಪ್ರಕೃತಿ ಪುರುಷರ ಸಂಯೋಗದಿಂದ

**೪. ಸರ್ವಯೋನಿಷು ಕೌಂತೇಯ ಮೂರ್ತಯಸ್ಸಂಭವಂತಿ ಯಾಃ**
**ತಾಸಾಂ ಬ್ರಹ್ಮ ಮಹದ್ಯೋನಿರಹಂ ಬೀಜಪ್ರದಃ ಪಿತಾ**

**ಅರ್ಥ:** ಕೌಂತೇಯ = ಓ ಅರ್ಜುನಾ! ಸರ್ವಯೋನಿಷು (ದೇವ ಮನುಷ್ಯಾದಿ) ಸಮಸ್ತ ಜಾತಿಗಳಲ್ಲಿ; ಯಾಃ ಮೂರ್ತಯಃ=ಯಾವ ಶರೀರಗಳು; ಸಂಭವಂತಿ=ಹುಟ್ಟುತ್ತಿರುವುವೋ; ತಾಸಾಂ=ಅವುಗಳಿಗೆ; ಮಹದ್ಬ್ರಹ್ಮ= ಮೂಲಪ್ರಕೃತಿ (ಮಾಯೆ); ಯೋನಿಃ=ಕಾರಣವು; ಮಾತೃಸ್ಥಾನ (ತಾಯಿ); ಅಹಂ=ನಾನು; ಬೀಜಪ್ರದಃ ಪಿತಾ=(ಚಿದ್ರೂಪ) ಬೀಜವನ್ನು ಪ್ರಸಾದಿಸಿದ ತಂದೆ.

**ತಾ||** ಅರ್ಜುನಾ! (ದೇವಮನುಷ್ಯಾದಿ) ಸಮಸ್ತಜಾತಿಗಳೆಲ್ಲಾ ಯಾವ ಶರೀರದಲ್ಲಿ ಉದ್ಭವಿಸುತ್ತಿರುವುವೋ ಅವುಗಳಿಗೆ ಮೂಲ ಪ್ರಕೃತಿ (ಮಾಯೆ) ಯೇ ಮಾತೃಸ್ಥಾನ (ತಾಯಿ). ನಾನು ಬೀಜ ಪ್ರಸಾದಿಸಿದಂತಹ ತಂದೆ.

**ವ್ಯಾಖ್ಯೆ:** ಹಿಂದಿನ ಶ್ಲೋಕದಂತೆ ಈ ಶ್ಲೋಕದಲ್ಲಿಯೂ ಪ್ರಪಂಚದಲ್ಲಿರುವ ಸಮಸ್ತ ಪ್ರಾಣಿಗಳು ಭಗವತ್ಸ್ವರೂಪಿಗಳೇ ಎಂದು ಸ್ಪಷ್ಟೀಕರಿಸಲಾಗಿದೆ. ಅವರಿಗೆ ಪ್ರಕೃತಿಯೇ ತಾಯಿ. ಪರಮಾತ್ಮನೇ ತಂದೆ.

**ಅ||** ಪ್ರಕೃತಿಯಿಂದಲೇ (ಸತ್ವರಜಸ್ತಮಸ್ಸುಗಳೆಂಬ) ಗುಣಗಳು ಆವಿರ್ಭವಿಸಿರುವುವೆಂದು, ಜೀವಿಯ ಬಂಧನಕ್ಕೆ ಅವು ಕಾರಣವೆಂದು ಹೇಳಲಾಗುತ್ತಿದೆ-

**೫. ಸತ್ವಂ ರಜಸ್ತಮ ಇತಿ ಗುಣಾಃ ಪ್ರಕೃತಿಸಂಭವಾಃ**
**ನಿಬಧ್ನಂತಿ ಮಹಾಬಾಹೋ ದೇಹೇ ದೇಹಿನಮವ್ಯಯಂ**

**ಅರ್ಥ:** ಮಹಾಬಾಹೋ=ಉದ್ದ ಬಾಹುಗಳುಳ್ಳ ಅರ್ಜುನಾ! ಪ್ರಕೃತಿ ಸಂಭವಾಃ=ಪ್ರಕೃತಿಯಿಂದ ಹುಟ್ಟಿದ; ಸತ್ವಂರಜಸ್ತಮ ಇತಿ=ಸತ್ವ, ರಜಸ್ಸು ತಮಸ್ಸು ಎನ್ನುವ; ಗುಣಾಃ=ಗುಣಗಳು; ಅವ್ಯಯಂ=ನಾಶರಹಿತವಾದ; ದೇಹಿನಂ=ಆತ್ಮವನ್ನು; ದೇಹೇ=ದೇಹದಲ್ಲಿ (ಇಲ್ಲವೆ ದೇಹಕ್ಕೆ); ನಿಬಧ್ನಂತಿ= ಬಂಧಿಸುತ್ತಿವೆ.

**ತಾ||** ಉದ್ದ ಬಾಹುಗಳುಳ್ಳ ಅರ್ಜುನಾ! ಪ್ರಕೃತಿಯಿಂದ ಹುಟ್ಟಿದ ಸತ್ವ ರಜಸ್ತಮೋ ಗುಣಗಳು ನಾಶರಹಿತನಾದ ಆತನನ್ನು (ಆತ್ಮವನ್ನು) ದೇಹದಲ್ಲಿ (ಇಲ್ಲವೆ ದೇಹಕ್ಕೆ) ಬಂಧಿಸಿ ಹಾಕುತ್ತಿವೆ.

**ವ್ಯಾಖ್ಯೆ:** ಸತ್ವಾರಜಸ್ತಮೋಗುಣಗಳು ಮೂರೂ ಪ್ರಕೃತಿಯಿಂದ ಉಂಟಾಗಿವೆ. ಅವು ಆತ್ಮಕ್ಕಿಲ್ಲ. ಆತ್ಮನು ನಿರ್ಗುಣನು, ಗುಣಾತೀತನು. ಆದರೂ ಜೀವಿಯು ತನ್ನ ಯಥಾರ್ಥ ಸ್ವರೂಪವಾದ ಆತ್ಮನನ್ನು ಮರೆತು, ತಾನು ಸತ್ವಾದಿ ಗುಣಯುತ ನೆಂದು ಭಾವಿಸಿ ಆ ಗುಣಗಳೊಂದಿಗೆ ತಾದಾತ್ಮ್ಯ ಹೊಂದಿ ದೇಹದಲ್ಲಿ, ಸಂಸಾರದಲ್ಲಿ ಬಂಧಿಯಾಗುತ್ತಿದ್ದಾನೆ. ಆ ಮೂರು ಗುಣಗಳಲ್ಲಿ ಯಾವ ಒಂದು ಗುಣವಿದ್ದಾಗ್ಯೂ ಜೀವಿಯು ಇನ್ನೂ ಪ್ರಕೃತಿಯಲ್ಲಿಯೇ ಇರುವನೆಂದು, ಮಾಯಾತೀತನಾದ ಆತ್ಮನನ್ನು ಇನ್ನೂ ಸೇರಲಿಲ್ಲವೆಂದು ತಿಳಿದುಕೊಳ್ಳ ಬೇಕಾಗಿದೆ. ಜೀವಿಯನ್ನು ಬಂಧಿಸುತ್ತಿರುವುದು ಈ ಮೂರು ಗುಣಗಳೇ ಎಂದು ಇಲ್ಲಿ ಸ್ಪಷ್ಟಪಡಿಸಿರುವುದರಿಂದ ಅವುಗಳಿಂದ ತ್ವರೆಯಾಗಿ ಬಿಡುಗಡೆ ಹೊಂದಲು ಆತನು ಅಹರ್ನಿಶ ಪ್ರಯತ್ನಮಾಡಬೇಕಾಗಿದೆ. ಇಲ್ಲಿ ರಜಸ್ತಮಸ್ಸುಗಳೊಡನೆ ಸತ್ವಗುಣವೂ ಕೂಡ ಜೀವಿಯನ್ನು ಬಂಧಿಸುತ್ತದೆಂದು ಏಕೆ ಹೇಳಲಾಗಿದೆಯೆಂದರೆ, ಪೂರ್ಣ ನಿಸ್ಸಂಕಲ್ಪ ಸ್ಥಿತಿಯಲ್ಲಿ ಇಲ್ಲವೆ ನಿರ್ವಿಕಲ್ಪಾವಸ್ಥೆಯಲ್ಲಿ ಯಾವಗುಣವೂ ಇರುವುದಿಲ್ಲವಾದ್ದರಿಂದ, ಅದು ಸತ್ವಗುಣವನ್ನೂ ದಾಟಿದ ನಿರ್ವಿಕಾರ ಅವಸ್ಥೆ ಆಗಿರುವುದು. ಸತ್ವಗುಣ ವಾದರೋ ಒಂದು ಬಂಧವಾಗಿಯೇ ಇದೆ. ಆದರೆ ಪ್ರಾರಂಭದಲ್ಲಿ ರಜಸ್ತಮಸ್ಸುಗಳನ್ನು ದಾಟಿ ಸತ್ವಗುಣಾವಸ್ಥೆಯನ್ನು ಹೊಂದಿ ನಂತರ ಅದನ್ನೂ ಕೂಡ ದಾಟಿ ಪೂರ್ಣ ನಿರ್ವಿಕಲ್ಪ ಸ್ಥಿತಿಯನ್ನು ಸೇರಬೇಕಾಗಿದೆ. ಅದು ಮೋಕ್ಷ.

'ಮಹಾಬಾಹೋ'- ಓ ಅರ್ಜುನಾ! ನಿನ್ನ ಭುಜ ಪರಾಕ್ರಮದಿಂದ ಬಾಹ್ಯ ಶತ್ರುಗಳನ್ನು ಹೇಗೆ ಸೋಲಿಸುತ್ತಿದ್ದೀಯೋ ಹಾಗೆ ನಿನ್ನನ್ನು ಬಂಧಿಸಿರುವ ನಿನ್ನ ಅಂತಃಶತ್ರುಗಳಾದ ತ್ರಿಗುಣಗಳನ್ನು ಭೇದಿಸಿ ಬಂಧ ವಿಮುಕ್ತನಾಗಿ ಆತ್ಮ ಸಾಮ್ರಾಜ್ಯಾಧಿಪತ್ಯವನ್ನೇ ಹೊಂದು ಎಂದು 'ಮಹಾಬಾಹೋ'- ಎನ್ನುವ ಸಂಬೋಧನೆಯಿಂದ ಅರ್ಜುನನಿಗೆ ತಿಳಿಸಿದಂತಾಗಿದೆ.

'ದೇಹೇ ದೇಹಿನಮವ್ಯಯಂ'- 'ದೇಹದಲ್ಲಿ' ಎಂದು ಹೇಳಿರುವುದರಿಂದ ಆತ್ಮ ಭಗವಂತನು, ನಾಶರಹಿತನಾದ ಪರಂಜ್ಯೋತಿಯು, ನಮಗೆಲ್ಲಾ ಅತಿ ಸಮೀಪವಾಗಿರುವ ದೇಹದಲ್ಲಿ ವಾಸಿಸುತ್ತಿದ್ದಾನೆಂದು ಸ್ಪಷ್ಟವಾಗುತ್ತದೆ. ಆದ್ದರಿಂದ, ತೀವ್ರ ಪರಿಶೋಧನೆಯಿಂದ, ವಿಚಾರಣೆಯಿಂದ ಆತನನ್ನು ಈ ದೇಹವಿರುವಾಗಲೇ ತಿಳಿದುಕೊಂಡು ಮುಕ್ತಿ ಹೊಂದಬಹುದು. ಮತ್ತೆ 'ಅವ್ಯಯಂ' ಎನ್ನುವುದರಿಂದ ದೇಹಾದಿಗಳು ನಶಿಸುತ್ತಿದ್ದರೂ ಆತ್ಮ ನಶಿಸುವುದಿಲ್ಲವೆಂದು ಅರ್ಥವಾಗುತ್ತದೆ. ಪ್ರಪಂಚದಲ್ಲಿ ಸಮಸ್ತ ದೃಶ್ಯ ಪದಾರ್ಥಗಳು 'ವ್ಯಯಗಳು'- ನಶ್ವರಗಳು. ಆತ್ಮವೊಂದೇ ಅವ್ಯಯವಾದುದು (ಶಾಶ್ವತವಾದುದು). ಆದ್ದರಿಂದ ಪ್ರತಿಯೊಬ್ಬರೂ ಅವರವರ ಸ್ಥಿತಿಯನ್ನು ವಿಚಾರಿಸಿಕೊಂಡು ಅಂದರೆ ತಾನು ತನ್ನನ್ನು ದೇಹವೆಂದು ಭಾವಿಸಿರುವನೋ ಅಥವ ದೇಹಿಯೆಂದು ತಿಳಿದಿರುವನೋ ಪ್ರಶ್ನಿಸಿಕೊಂಡು, ದೇಹವೆಂದು ತಿಳಿದಿದ್ದಲ್ಲಿ ತ್ರಿಗುಣಗಳನ್ನು ಕ್ರಮ ಕ್ರಮವಾಗಿ ದೂರಮಾಡಿಕೊಂಡು ಕೊನೆಗೆ ದೇಹಿಯಾದ ಪರಮಾತ್ಮನಲ್ಲಿ ಸೇರಬೇಕು. ಅದು ಜನ್ಮ ಸಾರ್ಥಕತೆ.

ಪ್ರ : ಆತ್ಮ ಎಂತಹದು?

ಉ : ನಾಶರಹಿತವಾದದ್ದು (ಅವ್ಯಯವಾದದ್ದು)

ಪ್ರ : ತಾನು ವಾಸ್ತವವಾಗಿ ಅಂತಹ ನಾಶರಹಿತವಾದ ಆತ್ಮವಾದಾಗ್ಯೂ ಅಜ್ಞಾನದಿಂದ ಜೀವಿಯು ಯಾವುದರಿಂದ ಬಂಧಿಸಲ್ಪಡುತ್ತಿದ್ದಾನೆ?

ಉ : ಸತ್ತ್ವರಜಸ್ತಮೋಗುಣಗಳಿಂದ.

ಪ್ರ : ಆ ಗುಣಗಳು ಯಾವುದರಿಂದ ಜನಿಸಿವೆ?

ಉ : ಪ್ರಕೃತಿಯಿಂದ (ಪ್ರಕೃತಿ ಸಂಭವಾಃ)

ಪ್ರ : ಜೀವಿಯು ಹೇಗೆ ಬಂಧರಹಿತನಾಗಬಲ್ಲನು?

ಉ : ತ್ರಿಗುಣಗಳನ್ನು ದಾಟಿ ಪರಮಾತ್ಮನನ್ನು ಸೇರುವುದರಿಂದ

ಅ॥ ಸತ್ತ್ವಾದಿಗುಣಗಳ ಒಂದೊಂದರ ಸ್ವರೂಪ ಸ್ವಭಾವಗಳನ್ನು ಕ್ರಮವಾಗಿ ಮೂರು ಶ್ಲೋಕಗಳಲ್ಲಿ ತಿಳಿಸಲಾಗುತ್ತಿದೆ. ಮೊದಲಿಗೆ ಸತ್ತ್ವಗುಣದ ಉಲ್ಲೇಖವಿದೆ-

**೬. ತತ್ರ ಸತ್ತ್ವಂ ನಿರ್ಮಲತ್ವಾತ್ ಪ್ರಕಾಶಕಮನಾಮಯಮ್**
**ಸುಖಸಂಗೇನ ಬಧ್ನಾತಿ ಜ್ಞಾನಸಂಗೇನ ಚಾನಘ**

**ಅರ್ಥ:** ಅನಘ=ಪಾಪರಹಿತನಾದ ಅರ್ಜುನಾ! ತತ್ರ=ಆ ಸತ್ತ್ವಾದಿ ಗುಣಗಳಲ್ಲಿ; ಸತ್ತ್ವಂ=ಸತ್ತ್ವಗುಣ; ನಿರ್ಮಲತ್ವಾತ್= ಸ್ವಚ್ಛವಾದುದಾಗಿರು ವುದರಿಂದ; ಪ್ರಕಾಶಂ=ಪ್ರಕಾಶವನ್ನು ಉಂಟುಮಾಡುವುದಾಗಿ; ಅನಾಮಯಂ=ಉಪದ್ರವ ಗಳಿಲ್ಲದೆ (ಇರುವುದು); ಸುಖಸಂಗೇನ=(ಇಂದ್ರಿಯ) ಸುಖಗಳಲ್ಲಿ ಆಸಕ್ತಿಯಿಂದ; ಜ್ಞಾನಸಂಗೇನ ಚ=(ವೃತ್ತಿ) ಜ್ಞಾನದಲ್ಲಿ ಆಸಕ್ತಿಯಿಂದ; ಬಧ್ನಾತಿ=(ಜೀವಿಯನ್ನು) ಬಂಧಿಸುತ್ತದೆ.

**ತಾ॥** ಪಾಪರಹಿತನಾದ ಓ ಅರ್ಜುನಾ! ಆ ಸತ್ತ್ವಾದಿಗುಣಗಳಲ್ಲಿ ಸತ್ತ್ವಗುಣ ನಿರ್ಮಲವಾದುದಾಗಿರುವುದರಿಂದ ಪ್ರಕಾಶವನ್ನುಂಟುಮಾಡುವುದೂ, ಉಪದ್ರವವಿಲ್ಲದ್ದೂ (ಆಗಿ), (ಇಂದ್ರಿಯ) ಸುಖಗಳ ಮೇಲಿನ ಆಸಕ್ತಿಯಿಂದ (ವೃತ್ತಿ) ಜ್ಞಾನದಲ್ಲಿ ಉಂಟಾಗುವ ಆಸಕ್ತಿಯಿಂದ ಜೀವಿಯನ್ನು ಬಂಧಿಸುತ್ತದೆ.

**ವ್ಯಾಖ್ಯೆ:** ಮೂರು ಗುಣಗಳೂ ಪ್ರಕೃತಿ (ಮಾಯೆ) ಜನ್ಯವಾದವುಗಳಾದ್ದರಿಂದ, ಸತ್ತ್ವಗುಣವೂ ಕೂಡ ಅದರಲ್ಲಿ ಸೇರಿರುವುದರಿಂದ ಅದೂ ಮಾಯೆಯ ಒಂದು ಭಾಗವೇ ಆಗಿದೆ. ಆದರೆ ಅದು ಅದರ ಶುದ್ಧ ಭಾಗವು. ಅದು ನಿರ್ಮಲವಾಗಿರುವುದರಿಂದ ಬೇರೆಯ ಎರಡಕ್ಕಿಂತ ಶ್ರೇಷ್ಠವಾದುದು. ಆದರೆ ಅದೂ ಕೂಡ ಆಕಾಂಕ್ಷೆಯನ್ನು ಹೊಂದಿರುವುದೇ ಆಗಿದೆ. ಆದ್ದರಿಂದ ಪೂರ್ಣ ಆತ್ಮಸ್ಥಿತಿಗೆ ಅದು ಒಂದು ಅಡಚಣೆಯೇ ಆಗಿದೆ. ದೀಪಕ್ಕೆ ಗಾಜಿನ ಕಪ್ಪು ಚಿಮಣಿಯನ್ನಿಟ್ಟರೆ ಹೇಗಿರುವುದೋ, ಕೆಂಪು ಇಟ್ಟರೆ ಹೇಗಿರುವುದೋ, ಬಣ್ಣವಿಲ್ಲದ್ದು ಇಟ್ಟರೆ ಹೇಗಿರುವುದೋ, ಹಾಗೆಯೇ ಈ ಗುಣಗಳಿಂದ ಆವೃತವಾದ ಆತ್ಮವು ಎಂದು ತಿಳಿದುಕೊಳ್ಳಬಹುದು. ಚಿಮಣಿ ನಿರ್ಮಲ ವಾಗಿದ್ದರೂ ಅದು ಒಂದು ಆವರಣವೇ ಆಗಿದೆ. ಹಾಗೆಯೇ ಸತ್ತ್ವಗುಣವು ಸುಖಾಸಕ್ತಿಯಿಂದ, ಜ್ಞಾನಾಸಕ್ತಿಯಿಂದ ಆತ್ಮವನ್ನು ಬಂಧಿಸುತ್ತದೆಂದು ತಿಳಿಸಲಾಗಿದೆ. 'ನಾನು ಸುಖವಂತನು' ಎನ್ನುವ ದೇಹೇಂದ್ರಿಯಾದಿ ಕ್ಷೇತ್ರ ಧರ್ಮ ಸುಖವನ್ನು ಆತ್ಮದಲ್ಲಿ ಆರೋಪಿಸಿಕೊಳ್ಳುವುದರಿಂದ, ಸುಖ ಸಂಪತ್ತಿನಿಂದ, ಪ್ರಪಂಚ ವಿಷಯಗಳಿಂದ, ಪಾಂಡಿತ್ಯ ವಿಷಯವಾದ ವೃತ್ತಿರೂಪ ಅಂತಃಕರಣ ಧರ್ಮವನ್ನು ಆತ್ಮದ ಮೇಲೆ ಆರೋಪಿಸಿಕೊಳ್ಳುವುದರಿಂದ ಉಂಟಾಗುವ ಜ್ಞಾನ ಸಂಸಕ್ತಿಯಿಂದ ಆ ಸತ್ತ್ವಗುಣವು ಆತ್ಮವನ್ನು ಬಂಧಿಸುತ್ತದೆ. ಆದ್ದರಿಂದ ಅದನ್ನು ದಾಟಿ, ಬಂಧವನ್ನು ಬಿಡಿಸಿಕೊಂಡು ಕೇವಲಾತ್ಮಸ್ಥಿತಿಯನ್ನು ಪಡೆಯಬೇಕೆಂದು ಅರ್ಜುನನಿಗೆ ಭಗವಂತನು ಬೋಧಿಸುತ್ತಿದ್ದಾನೆ.

'ಅನಘ'-'ಅಘ' (ಪಾಪ) ಇಲ್ಲದಿರುವವನು ಅನಘ. ಪಾಪರಾಹಿತ್ಯ, ನಿರ್ಮಲಚಿತ್ತತೆ ಬ್ರಹ್ಮವಿದ್ಯೋಪದೇಶಕ್ಕೆ ಬೇಕಾದ ಅರ್ಹತೆಗಳು. ಅಂತಹ ಅರ್ಹತೆಯನ್ನು ಅರ್ಜುನನು ಹೊಂದಿರುವನೆಂದು ಈ 'ಅನಘ' ಎನ್ನುವ ಸಂಬೋಧನೆಯಿಂದ ವ್ಯಕ್ತವಾಗುತ್ತದೆ.

ಪ್ರ : ಸತ್ತ್ವಗುಣ ಎಂತಹದು?

ಉ : ೧) ನಿರ್ಮಲವಾದುದು ೨) ಪ್ರಕಾಶಿತಗೊಳಿಸುವುದು ೩) ಉಪದ್ರವವಿಲ್ಲದೇ ಇರುವುದು.

ಪ್ರ : ಆದರೆ ಅದು ಯಾವ ಪ್ರಕಾರವಾಗಿ ಜೀವಿಯನ್ನು ಬಂಧಿಸುವುದು?

ಉ : (ಇಂದ್ರಿಯ) ಸುಖಾಸಕ್ತಿಯಿಂದ (ವೃತ್ತಿ) ಜ್ಞಾನಾಸಕ್ತಿಯಿಂದ ಬಂಧಿಸುತ್ತದೆ.

ಪ್ರ : ಫಲಿತಾಂಶವೇನು?

ಉ : ಜೀವಿಯು ಪ್ರಯತ್ನಪೂರ್ವಕವಾಗಿ ಆ ಸತ್ತ್ವ ಗುಣವನ್ನು ದಾಟಿ ಕೇವಲ ಆತ್ಮಸ್ಥಿತಿಯನ್ನು ಪಡೆಯಬೇಕು. ಅದು ಮೋಕ್ಷ

ಅ॥ ರಜೋಗುಣದ ವಿವರವನ್ನು ಕೊಡಲಾಗುತ್ತಿದೆ-

**೭. ರಜೋ ರಾಗಾತ್ಮಕಂ ವಿದ್ಧಿ ತೃಷ್ಣಾ ಸಂಗಸಮುದ್ಭವಂ**
**ತನ್ನಿಬಧ್ನಾತಿ ಕೌಂತೇಯ ಕರ್ಮಸಂಗೇನ ದೇಹಿನಮ್**

**ಅರ್ಥ:** ಕೌಂತೇಯ=ಓ ಅರ್ಜುನಾ! ರಜಃ=ರಜೋಗುಣ; ರಾಗಾತ್ಮಕಂ= ದೃಶ್ಯವಿಷಯಗಳಲ್ಲಿ ಪ್ರೀತಿ ಉಂಟುಮಾಡುವುದು; ತೃಷ್ಣಾ ಸಂಗ ಸಮುದ್ಭವಂ=

ತೃಷ್ಣೆ (ಕೋರಿಕೆ)ಯನ್ನು, ಆಸಕ್ತಿಯನ್ನು ಉಂಟು ಮಾಡುವುದು (ಆಗಿ); ವಿದ್ಧಿ=ತಿಳಿ; ತತ್=ಆ ರಜೋಗುಣ; ಕರ್ಮಸಂಗೇನ=ಕರ್ಮಗಳಲ್ಲಿ ಆಸಕ್ತಿಯಿರುವುದರಿಂದ (ಕರ್ಮ ಸಂಬಂಧದಿಂದ); ದೇಹಿನಂ=ಆತ್ಮವನ್ನು (ಜೀವಿಯನ್ನು); ನಿಬಧ್ನಾತಿ=ಬಲವಾಗಿ ಬಂಧಿಸುವುದು.

**ತಾ||** ಓ ಅರ್ಜುನಾ! ರಜೋಗುಣವು ದೃಶ್ಯ ವಿಷಯಗಳಲ್ಲಿ ಪ್ರೀತಿಯನ್ನು, ತೃಷ್ಣೆ (ಕೋರಿಕೆ)ಯನ್ನು ಹಾಗು ಆಸಕ್ತಿಯನ್ನುಂಟು ಮಾಡುವುದು (ಆಗಿದೆ) ಎಂದು ತಿಳಿ. ಅದು ಕರ್ಮಗಳ ಮೇಲಿನ ಆಸಕ್ತಿಯಿಂದ (ಕರ್ಮ ಸಂಬಂಧದಿಂದ) ಆತ್ಮವನ್ನು (ಜೀವಿಯನ್ನು)ಬಂಧಿಸಿ ಹಾಕುತ್ತಿದೆ.

**ವ್ಯಾಖ್ಯೆ:** ಲಭಿಸದಿರುವ ವಸ್ತುವಿನ ಮೇಲೆ ಇರುವ ಅಭಿಲಾಷೆಯೇ ತೃಷ್ಣೆ. ಲಭಿಸಿದ ವಸ್ತುವಿನ ಮೇಲಿನ ಅಭಿಮಾನವೇ ಸಂಗ. ಈ ತೃಷ್ಣಾ ಸಂಗಗಳೆರಡನ್ನೂ ರಜೋಗುಣ ಉಂಟು ಮಾಡುತ್ತದೆ. ಮತ್ತೆ ಅನೇಕ ಬಾಹ್ಯಾಡಂಬರ ಕರ್ಮಗಳಿಂದ, ವಿಷಯಾಸಕ್ತತೆಯಿಂದ, ಖ್ಯಾತಿಯನ್ನು ಸಂಪಾದಿಸಬೇಕೆಂಬ ಉತ್ಸುಕತೆಯಿಂದ, ಇನ್ನೂ ಅನೇಕ ದೃಶ್ಯ ಸಂಬಂಧವಾದ ವಿವಿಧ ಕ್ರಿಯಾ ಕಲಾಪಗಳಿಂದ ರಜೋಗುಣ ಜೀವಿಯನ್ನು ಬಂಧಿಸಿ ಹಾಕುತ್ತದೆ. 'ನಿಬಧ್ನಾತಿ'- ಸತ್ತ್ವಗುಣದ ಬಗ್ಗೆ ಹೇಳಿದಾಗ 'ಬಧ್ನಾತಿ' ಎಂದು ಹೇಳಿ ರಜೋಗುಣ, ತಮೋ ಗುಣಗಳನ್ನು ವರ್ಣಿಸುವಾಗ 'ನಿಬಧ್ನಾತಿ' ಎಂದು ಹೇಳಿರುವುದು ಗಮನಾರ್ಹ. ರಜೋತಮೋಗುಣಗಳು ಜೀವಿಯನ್ನು ಬಲವಾದ ಬಂಧನಕ್ಕೆ ಒಳಪಡಿಸುವುವೆಂದು ಭಾವ.

ಪ್ರ : ರಜೋಗುಣ ಎಂತಹದು?

ಉ : ೧) ದೃಶ್ಯ ವಿಷಯಗಳ ಮೇಲೆ ಪ್ರೀತಿಯನ್ನುಂಟು ಮಾಡುವುದು ೨) ತೃಷ್ಣೆ (ಕೋರಿಕೆ) ಆಸಕ್ತಿಯನ್ನು ಉಂಟು ಮಾಡುವುದು.

ಪ್ರ : ಅದು ಯಾವ ಪ್ರಕಾರ ಜೀವಿಯನ್ನು ಬಂಧಿಸುವುದು?

ಉ : ೧) ವಿಷಯಾಸಕ್ತಿಯಿಂದ ೨) ಕರ್ಮಸಂಬಂಧದಿಂದ ಬಂಧಿಸುತ್ತದೆ.

ಪ್ರ : ಆದ್ದರಿಂದ ಏನು ಮಾಡಬೇಕು?

ಉ : ಬಂಧಕರವಾದ ಅಂತಹ ರಜೋಗುಣವನ್ನು ಪ್ರಯತ್ನ ಪೂರ್ವಕವಾಗಿ ತೊಲಗಿಸಿಕೊಳ್ಳಬೇಕು.

**೮. ತಮಸ್ತ್ವಜ್ಞಾನಜಂ ವಿದ್ಧಿ ಮೋಹನಂ ಸರ್ವದೇಹಿನಾಮ್**
**ಪ್ರಮಾದಾಲಸ್ಯ ನಿದ್ರಾಭಿಸ್ತನ್ನಿಬಧ್ನಾತಿ ಭಾರತ**

**ಅರ್ಥ:** ಭಾರತ=ಓ ಅರ್ಜುನಾ! ತಮಃ ತು=ತಮೋಗುಣವು; ಅಜ್ಞಾನಜಮ್ ಚ=ಅಜ್ಞಾನದಿಂದ ಉಂಟಾಗುವುದು; ಸರ್ವದೇಹಿನಾಂ=ಸಮಸ್ತ ಪ್ರಾಣಿಗಳಿಗೆ; ಮೋಹನಂ (ಇತಿ)=ಮೋಹವನ್ನು (ಅವಿವೇಕವನ್ನು) ಉಂಟುಮಾಡುವುದು (ಆಗಿ); ವಿದ್ಧಿ=ತಿಳಿಯುವುದು; ತತ್=ಅದು; ಪ್ರಮಾದಾಲಸ್ಯ, ನಿದ್ರಾಭಿಃ= ಮರೆವು( ಇಲ್ಲವೆ ಪರಧ್ಯಾನ) ಸೋಮಾರಿತನ, ನಿದ್ರೆ ಮೊದಲಾದವುಗಳಿಂದ; ನಿಬಧ್ನಾತಿ=ಗಾಢವಾಗಿ ಬಂಧಿಸುತ್ತದೆ.

**ತಾ||** ಓ ಅರ್ಜುನಾ! ತಮೋಗುಣವು ಅಜ್ಞಾನದಿಂದ ಉಂಟಾಗುವುದು. ಅದು ಸಮಸ್ತ ಪ್ರಾಣಿಗಳಲ್ಲಿ ಮೋಹವನ್ನು (ಅವಿವೇಕವನ್ನು) ಉಂಟುಮಾಡುವುದು ಎಂದು ತಿಳಿಯುವುದು. ಅದು ಮರೆವು (ಪರಧ್ಯಾನ) ಸೋಮಾರಿತನ, ನಿದ್ರೆ, ಮೊದಲಾದುವುಗಳಿಂದ ಜೀವಿಯನ್ನು ಬಂಧಿಸಿ ಹಾಕುತ್ತದೆ.

**ವ್ಯಾಖ್ಯೆ:** ತಮೋ ಗುಣವು ಅಜ್ಞಾನ ಜನಿತವಾದದ್ದು. ಅದು ಜೀವಿಯನ್ನು ಮೋಹಗೊಳಿಸಿ ಆತನಿಗೆ ಅವಿವೇಕ ಉಂಟು ಮಾಡಿ ಸಂಸಾರ ಕೂಪದಲ್ಲಿ ಬೀಳಿಸಿ ಬಂಧಿಸುತ್ತದೆ. ದಟ್ಟವಾದ ಮೇಘ ಸೂರ್ಯನನ್ನು ಕವಿದ ಹಾಗೆ ಮತ್ತು ಕಪ್ಪು ಚಿಮಣಿ ದೀಪವನ್ನು ಮುಚ್ಚಿದ ಹಾಗೆ ತಮೋಗುಣವು ಜೀವಿಯನ್ನು ಆವರಿಸುತ್ತಿದೆ. 'ಸರ್ವದೇಹಿನಾಮ್' ಎಂದು ಹೇಳುವುದರಿಂದ ವಿವೇಕ ವಂತರು ಹಾಗು ಆತ್ಮಜ್ಞಾನಿಗಳನ್ನು ಬಿಟ್ಟು ಬೇರೆಯವರನ್ನೆಲ್ಲಾ ಅದು ಆವರಿಸುತ್ತಲೇ ಇರುತ್ತದೆಂದು ಗ್ರಹಿಸಬೇಕು. ಮುಮುಕ್ಷುಗಳಿಂದ ಅವರವರ ಪ್ರಯತ್ನಗಳ ತೀವ್ರತೆಯನ್ನು ಹಿಡಿದು ಅದು ಕ್ರಮವಾಗಿ ತೊಲಗಿ ಹೋಗುವುದು. ಆದರೆ ಒಬ್ಬನಿಗೆ ತಮೋಗುಣವಿದೆಯೇ ಇಲ್ಲವೆ ಎಂದು ತಿಳಿದುಕೊಳ್ಳುವುದು ಹೇಗೆ? ಸೋಮಾರಿತನ, ಅತಿ ನಿದ್ರೆ, ಅಜಾಗ್ರತೆ ಮುಂತಾದುವು ಯಾರಿಗಿರುವುವೋ ಆತನಲ್ಲಿ ತಮೋಗುಣವು ಪೂರ್ತಿಯಾಗಿರು ವುದೆಂದೇ ಭಾವಿಸಬೇಕು. ಅಂತಹ ಲಕ್ಷಣಗಳನ್ನು ಮೊದಲೇ ತಿಳಿದುಕೊಂಡು ಅವುಗಳನ್ನು ನಿವಾರಿಸಿಕೊಳ್ಳುವುದರ ಮೂಲಕ ಅಂಧಕಾರ ಸದೃಶವಾದ ತಮೋ ಗುಣವನ್ನು ಹೃದಯದಿಂದ ದೂರ ಓಡಿಸಬೇಕು. ಏಕೆಂದರೆ, ಈ ತಮ ರಜೋಗುಣಗಳು ಜೀವಿಯನ್ನು ಗಟ್ಟಿಯಾಗಿ ಬಂಧಿಸಿ ಸಂಸಾರ ಕೂಪದಲ್ಲಿ ಬೀಳಿಸಿ ಆತನನ್ನು ದೈವದಿಂದ ದೂರವಾಗಿರಿಸುವುವು (ನಿಬಧ್ನಾತಿ). ಆದ್ದರಿಂದ ಮುಮುಕ್ಷುಗಳು ಅವುಗಳ ವಿಚಾರದಲ್ಲಿ ಕಡು ಜಾಗರೂಕರಾಗಿರಬೇಕು.

'ಭಾರತ'- (ಭರತವಂಶದಲ್ಲಿ ಜನ್ಮಿಸಿದ ಓ ಅರ್ಜುನಾ!) ಎನ್ನುವ ಈ ಸಂಬೋಧನೆ ಈ ಅಧ್ಯಾಯದಲ್ಲಿ ಅನೇಕ ಸಾರಿ ಬಂದಿರುವುದು ಗಮನಾರ್ಹ ಹೇಗೆಂದರೆ-

೧. ಸಂಭವಃ ಸರ್ವಭೂತಾನಾಂ ತತೋ ಭವತಿ ಭಾರತ (೧೪-೩)

೨. ಪ್ರಮಾದಾಲಸ್ಯ ನಿದ್ರಾಭಿಸ್ತನ್ನಿಬಧ್ನಾತಿ ಭಾರತ (೧೪-೮)

೩. ಸತ್ತ್ವಂ ಸುಖೇ ಸಂಜಯತಿ ರಜಃ ಕರ್ಮಣಿ ಭಾರತ (೧೪-೯)

೪. ರಜಸ್ತಮಶ್ಚಾಭಿಭೂಯ ಸತ್ತ್ವಂ ಭವತಿ ಭಾರತ (೧೪-೧೦)

೫. ರಜಸ್ಯೇತಾನಿ ಜಾಯಂತೇ ವಿವೃದ್ಧೇ ಭರತರ್ಷಭ (೧೪-೧೨)

ಈ ಪ್ರಕಾರವಾಗಿ ಒಂದೇ ಅಧ್ಯಾಯದಲ್ಲಿ ಒಂದೇ ಸಂದರ್ಭದಲ್ಲಿ 'ಭಾರತ' ಎನ್ನುವ ಪದವನ್ನು ಇಷ್ಟು ಸಾರಿ ಪ್ರಯೋಗಿಸುವುದರಲ್ಲಿ ಏನಾದರೂ ವಿಶೇಷವಿರಲೇಬೇಕು. ಅದು ಏನೆಂದರೆ 'ಭಾ' ಎಂದರೆ ಪ್ರಕಾಶ (ಜ್ಞಾನ); ಅದರಲ್ಲಿ 'ರತಃ' ಆಸಕ್ತಿಹೊಂದು-ಎನ್ನುವ ಅರ್ಥವನ್ನು ಈ ಪದದ ದ್ವಾರ ಅರ್ಜುನನಿಗೆ ಸೂಚಿಸಲಾಗಿದೆ. 'ಓ ಅರ್ಜುನಾ! ಪ್ರಕಾಶ ಸ್ವರೂಪಿಯಾಗಿ, ತ್ರಿಗುಣಮಾಲಿನ್ಯ ವರ್ಜಿತನಾಗಿ, ಅತಿ ನಿರ್ಮಲವಾದ ನಿನ್ನ ಸ್ವರೂಪವನ್ನು ಜ್ಞಾಪಕಕ್ಕೆ ತಂದುಕೋ. ನೀನು ಅಂಧಕಾರರೂಪವಾದ ಈ ತ್ರಿಗುಣಗಳಿಗೆ ಭಿನ್ನವಾದವನು. ಅವು ಮಾಯಾ (ಪ್ರಕೃತಿ) ಜನ್ಯಗಳು. ನೀನು ತದ್ವಿಲಕ್ಷಣನು. ಜ್ಞಾನ ಪ್ರಕಾಶ ಸಚ್ಚಿದಾನಂದ ಸ್ವರೂಪಿಯಾದ್ದರಿಂದ ಅಂತಹ ಪ್ರಕಾಶರೂಪ ನಿಜಾತ್ಮತತ್ತ್ವದಲ್ಲಿ ಸ್ಥಿತನಾಗಿ ತ್ರಿಗುಣಾತೀತನಾಗಿ ಬೆಳಗು; ಎಂದು ಎಚ್ಚರಿಸಲು 'ಭಾರತ' ಎನ್ನುವ ಪದವನ್ನು ಬಹುಶಃ ಭಗವಂತನು ಇಷ್ಟು ಸಾರಿ ಪ್ರಯೋಗಿಸಿದನು.

ಪ್ರ : ತಮೋಗುಣ ಯಾವುದರಿಂದ ಹುಟ್ಟಿದೆ?

ಉ : ಅಜ್ಞಾನದಿಂದ

ಪ್ರ : ಅದರ ಸ್ವಭಾವವೇನು?

ಉ : ಅದು ಸಮಸ್ತ ಜೀವಿಗಳಲ್ಲಿ ಮೋಹ (ಅವಿವೇಕವನ್ನು) ಉಂಟುಮಾಡುವುದು.

ಪ್ರ : ಅದು ಯಾವ ರೂಪದಲ್ಲಿ ಜೀವಿಗಳನ್ನು ಬಂಧಿಸುವುದು?

ಉ : ಮರೆವು (ಪರಧ್ಯಾನ) ಸೋಮಾರಿತನ, ಆಲಸ್ಯ, ಅತಿ ನಿದ್ರೆ ಮುಂತಾದುವುಗಳಿಂದ ಬಂಧಿಸುವುದು.

**ಅ||** ಈ ಪ್ರಕಾರವಾಗಿ ಮೂರು ಗುಣಗಳು ಜೀವಿಯನ್ನು ಹೇಗೆ ಬಂಧಿಸುವುವೋ ತಿಳಿಸಿ ಇನ್ನು ಆ ಗುಣಗಳ ಲಕ್ಷಣಗಳನ್ನು ಹೇಳಲಾಗುತ್ತಿದೆ-

**೯. ಸತ್ತ್ವಂ ಸುಖೇ ಸಂಜಯತಿ ರಜಃ ಕರ್ಮಣಿ ಭಾರತ**
**ಜ್ಞಾನಮಾವೃತ್ಯ ತು ತಮಃ ಪ್ರಮಾದೇ ಸಂಜಯತ್ಯುತ**

**ಅರ್ಥ:** ಭಾರತ=ಓ ಅರ್ಜುನಾ! ಸತ್ತ್ವ=ಸತ್ತ್ವಗುಣ; ಸುಖೇ=ಸುಖದಲ್ಲಿ; ಸಂಜಯತಿ=ಸೇರಿಸುತ್ತದೆ; ರಜಃ=ರಜೋ ಗುಣವು; ಕರ್ಮಣಿ=ಕರ್ಮದಲ್ಲಿ (ಸಂಜಯತಿ=ಸೇರಿಸುತ್ತದೆ); ತಮಃ ತು=ತಮೋಗುಣವಾದರೋ; ಜ್ಞಾನಂ= ಜ್ಞಾನ(ವಿವೇಕ)ವನ್ನು; ಆವೃತ್ಯ=ಆವರಿಸಿ; ಪ್ರಮಾದೇ=ಪ್ರಮಾದದಲ್ಲಿ; ಸಂಜಯತಿ=ಸೇರಿಸುತ್ತದೆ; ಉತ=ಆಶ್ಚರ್ಯ!

**ತಾ||** ಓ ಅರ್ಜುನಾ! ಸತ್ತ್ವಗುಣವು ಸುಖದಲ್ಲಿಯೂ, ರಜೋಗುಣವು ಕರ್ಮದಲ್ಲಿಯೂ, ತಮೋಗುಣವು ಜ್ಞಾನ(ವಿವೇಕ)ವನ್ನು ಆವರಿಸಿ ಜೀವಿಯನ್ನು ಪ್ರಮಾದಕ್ಕೆ ಗುರಿಮಾಡುತ್ತವೆ. ಆಶ್ಚರ್ಯ!

**ವ್ಯಾಖ್ಯೆ:** ಇಲ್ಲಿಯವರೆಗೆ ಹೇಳಿದ ಭಾವಗಳನ್ನೇ ಬೋಧೆಯ ಉದ್ದೇಶದಿಂದ ಮತ್ತೆ ಹೇಳಲಾಗಿದೆ. ಸತ್ತ್ವಗುಣ ಪ್ರಾಪಂಚಿಕ ಸುಖದಲ್ಲಿ, ರಜೋಗುಣವು ಪ್ರಾಪಂಚಿಕ ಕರ್ಮದಲ್ಲಿ, ತಮೋಗುಣವು ನಿದ್ರಾ ಪ್ರಮಾದದಲ್ಲಿ ಜೀವಿಯನ್ನು ತಳ್ಳುತ್ತಿವೆ.

ಜೀವಿಯನ್ನು ಸತ್ತ್ವಗುಣ ಆವರಿಸಿದಾಗ ದೀಪದ ಮೇಲೆ ಗಾಜಿನ ಚಿಮಣಿಯನ್ನು ಬೋರಲು ಹಾಕಿದಹಾಗೆ ಜೀವಿಯನ್ನು ರಜೋಗುಣ ಆವರಿಸಿದಾಗ ದೀಪದ ಮೇಲೆ ಸಾರಿಸದ ಕುಕ್ಕೆಯನ್ನು ಬೋರಲು ಹಾಕಿದ ಹಾಗೆ, ಜೀವಿಯನ್ನು ತಮೋಗುಣ ಆವರಿಸಿದಾಗ ದೀಪದ ಮೇಲೆ ಮಡಿಕೆಯನ್ನು ಬೋರಲು ಹಾಕಿದ ಹಾಗೆ ಎಂದು ಶ್ರೀರಾಮಕೃಷ್ಣರು ಹೇಳಿದ್ದಾರೆ. ಆದ್ದರಿಂದ ಮೇಲಿನ ಮೂರು, ಜ್ಞಾನ ದೀಪವನ್ನು ಯಾವುದೋ ವಿಧದಲ್ಲಿ ಮುಚ್ಚಿರುವುವೇ ಆಗಿರುವುದರಿಂದ ಅವುಗಳನ್ನು ದಾಟಿ ಆತ್ಮಸ್ಥಾನವನ್ನು ಜೀವಿಯು ಸೇರಬೇಕಾಗಿದೆ. ಈ ತ್ರಿಗುಣಗಳ ವ್ಯವಹಾರವನ್ನು ಕಂಡೂ ಕೂಡ ನಿತ್ಯ ನಿರ್ಮಲವಾದ ಜೀವಿಯು ಅವುಗಳಿಗೆ ವಶನಾಗಿ ಪ್ರವರ್ತಿಸುವುದನ್ನು ನೋಡಿ ಭಗವಂತನು 'ಉತ' ಆಶ್ಚರ್ಯ ವ್ಯಕ್ತಪಡಿಸುತ್ತಿದ್ದಾನೆಂದು ಅರ್ಥವಾಗುತ್ತದೆ.

**ಅ||** ಆ ಗುಣಗಳ ವಿವರವನ್ನು ಮುಂದುವರಿಸಲಾಗಿದೆ-

**೧೦ ರಜಸ್ತಮಶ್ಚಾಭಿಭೂಯ ಸತ್ತ್ವಂ ಭವತಿ ಬಾರತ**
**ರಜಸ್ಸತ್ತ್ವಂ ತಮಶ್ಚೈವ ತಮಸ್ಸತ್ತ್ವಂ ರಜಸ್ತಥಾ**

**ಅರ್ಥ:** ಭಾರತ=ಓ ಅರ್ಜುನಾ! ಸತ್ತ್ವಂ=ಸತ್ತ್ವಗುಣವು; ರಜಃ= ರಜೋಗುಣವನ್ನು; ತಮಃ ಚ=ತಮೋಗುಣವನ್ನು; ಅಭಿಭೂಯ=ಅದುಮಿ; (ಕೆಳಕ್ಕೆ ತಳ್ಳಿ); ಭವತಿ=ಉಂಟಾಗುತ್ತಿದೆ; ರಜಃ=ರಜೋಗುಣವು; ಸತ್ತ್ವಂ=ಸತ್ತ್ವಗುಣವನ್ನು; ತಮಃ ಚ=ತಮೋಗುಣವನ್ನು (ಅಭಿಭೂಯ=ಅದುಮಿ), ಭವತಿ= ಉಂಟಾಗುತ್ತಿದೆ. ತಥಾ=ಹಾಗೆಯೇ; ತಮಃ=ತಮೋಗುಣವು; ಸತ್ತ್ವ= ಸತ್ತ್ವಗುಣವನ್ನು; ರಜಃ ಚ ಏವ=ರಜೋ ಗುಣವನ್ನು (ಅಭಿಭೂಯ= ಅದುಮಿ) (ಭವತಿ=ಉಂಟಾಗುತ್ತಿದೆ).

**ತಾ||** ಓ ಅರ್ಜುನಾ! ಸತ್ತ್ವಗುಣವು (ಬಲಹೊಂದಿದಾಗ) ರಜೋತಮೋ ಗುಣಗಳನ್ನು ಮೀರಿ ಪ್ರವರ್ತಿಸುವುದು. ಹಾಗೆಯೇ ರಜೋಗುಣ ಸತ್ತ್ವ ತಮೋಗುಣಗಳನ್ನು; ತಮೋಗುಣ ರಜೋ ಹಾಗೂ ಸತ್ತ್ವಗುಣಗಳನ್ನು ಮೀರಿ ಪ್ರಬಲವಾಗಿ ಪ್ರವರ್ತಿಸುವುದು.

**ವ್ಯಾಖ್ಯೆ:** (ಸತ್ತ್ವಾದಿ) ತ್ರಿಗುಣಗಳಲ್ಲಿ ಯಾವುದು ಜೀವಿಯಲ್ಲಿ ಅಧಿಕವಾಗಿದೆಯೋ ಅದು ಬೇರೆಯವುಗಳನ್ನು ನಿಶ್ಶೇಷಗೊಳಿಸಿ (ದಬಾಯಿಸಿ) ತಾನೇ ಪ್ರವರ್ತಿಸುವುದು. ಆದ್ದರಿಂದ ಸಾಧಕನು ಮೊದಲು ಸತ್ತ್ವಗುಣವನ್ನು ಚೆನ್ನಾಗಿ ಅಭ್ಯಸಿಸಿ ಅದರಿಂದ ರಜೋ, ತಮೋಗುಣಗಳನ್ನು ನಿಶ್ಶೇಷಗೊಳಿಸಿ ಅನಂತರ ಆ ಸತ್ತ್ವ ಗುಣವನ್ನೂ ದಾಟಿ ನಿರ್ಗುಣ ಪರಮಾತ್ಮಸ್ಥಾನವನ್ನು ಸೇರಬೇಕು.

**ಅ||** ಯಾವಗುಣವು ಯಾವ ಜೀವಿಯಲ್ಲಿ ಅಧಿಕವಾಗಿದೆಯೆಂದು ತಿಳಿಯಲು ಬೇಕಾದ ಗುರುತುಗಳನ್ನು (ಚಿಹ್ನೆಗಳನ್ನು) ಮೂರು ಶ್ಲೋಕಗಳಲ್ಲಿ ತಿಳಿಸಲಾಗಿದೆ. ಮೊದಲಿಗೆ ಸತ್ತ್ವಗುಣದ ಉಲ್ಲೇಖವಿದೆ-

**೧೧ ಸರ್ವದ್ವಾರೇಷು ದೇಹೇಽಸ್ಮಿನ್ ಪ್ರಕಾಶ ಉಪಜಾಯತೇ**
**ಜ್ಞಾನಂ ಯದಾ ತದಾ ವಿದ್ಯಾದ್ವಿವೃದ್ಧಂ ಸತ್ತ್ವಮಿತ್ಯುತ**

**ಅರ್ಥ:** ಯದಾ=ಯಾವಾಗಲು; ಅಸ್ಮಿನ್ ದೇಹೇ=ಈ ಶರೀರದ; ಸರ್ವದ್ವಾರೇಷು=ಶ್ರೋತ್ರಾದಿ ಇಂದ್ರಿಯಗಳ ಸಮಸ್ತ ದ್ವಾರಗಳು; ಪ್ರಕಾಶಃ= ಪ್ರಕಾಶರೂಪವಾದ (ಬುದ್ಧಿ ವೃತ್ತಿರೂಪವಾದ); ಜ್ಞಾನಂ=ಜ್ಞಾನವು; ಉಪಜಾಯತೇ=ಉಂಟಾಗುತ್ತದೆಯೋ; ತದಾ=ಆಗ; ಸತ್ತ್ವಂ=ಸತ್ತ್ವಗುಣವು; ವಿವೃದ್ಧಂ=ವೃದ್ಧಿ ಹೊಂದಿರುವುದೆಂದು; ವಿದ್ಯಾತ್=ತಿಳಿದುಕೊಳ್ಳಬೇಕು.

**ತಾ||** ಯಾವಾಗ ಈ ಶರೀರದಲ್ಲಿ ಶ್ರೋತ್ರಾದಿ ಇಂದ್ರಿಯದ್ವಾರಗಳಲ್ಲಿ ಈ ಪ್ರಕಾಶರೂಪವಾದ (ಬುದ್ಧಿ ವೃತ್ತಿ ರೂಪವಾದ) ಜ್ಞಾನವುಂಟಾಗುತ್ತದೋ, ಆಗ ಸತ್ತ್ವಗುಣವು ವೃದ್ಧಿ ಹೊಂದಿದೆ ಎಂದು ತಿಳಿಯಬೇಕು.

**ವ್ಯಾಖ್ಯೆ:** ಯಾವ ಗುಣ ಅಧಿಕವಾಗಿದೆಯೋ ಅದಕ್ಕೆ ಅನುಗುಣವಾಗಿಯೇ ಜೀವಿಯು ಮಾಡುವ ಕರ್ಮಗಳು ಇರುವುವು. ಆತನು ಭುಜಿಸುವ ಆಹಾರ, ಮಾತಾಡುವ ಪದ್ಧತಿ ನಡತೆ ಸಮಸ್ತವೂ ಆ ಗುಣವನ್ನನುಸರಿಸಿಯೇ ಇರುವುದು ಅಂದರೆ ಸತ್ತ್ವವು ಅಧಿಕವಾಗಿರುವಾಗ ಜೀವಿಯ ಚರ್ಯೆಗಳು ಸಾತ್ತ್ವಕವಾಗಿ, ಪ್ರಕಾಶಯುತವಾಗಿ, ಜ್ಞಾನವಂತವಾಗಿರುವುವು. ಒಂದು ಹಣ್ಣು ಚೆನ್ನಾಗಿ ಪಕ್ವವಾದಾಗ ಅದರ ಯಾವ ಭಾಗವನ್ನು ಕಡಿದರೂ ಸಿಹಿಯಾಗಿರುವುದಲ್ಲವೇ! ಸತ್ತ್ವ ಗುಣಿ ಮಾತನಾಡುವಾಗ ಪ್ರಶಾಂತವಾಗಿ ಮಾತನಾಡುವನು. ಭುಜಿಸುವಾಗ ಸಾತ್ತ್ವಕ ಆಹಾರವನ್ನೇ ಭುಜಿಸುವನು. ಓದುವಾಗ ಉತ್ತಮ ಗ್ರಂಥಗಳನ್ನೇ ಓದುವನು. ಆಲೋಚಿಸುವಾಗ ಆತನಿಗೆ ಒಳ್ಳೆಯ ಭಾವಗಳೇ ಬರುವುವು. ಈ ಸತ್ಯವನ್ನೇ ಈ ಶ್ಲೋಕದಲ್ಲಿ ಹೇಳಲಾಗಿದೆ. ಈ ಪ್ರಕಾರವಾದ ಪ್ರಶಾಂತತೆ ಜ್ಞಾನ ಪ್ರಕಾಶ ಸಮಸ್ತೇಂದ್ರಿಯಗಳಿಂದ ಯಾವಾಗ ಹೊರಸೂಸುವುದೋ, ಆಗ ಆ ವ್ಯಕ್ತಿಯಲ್ಲಿ ಸತ್ತ್ವಗುಣವು ಪ್ರಧಾನವಾಗಿದೆಯೆಂದು ಗ್ರಹಿಸಬಹುದು. ಇದರಿಂದ ಸಾಧನೆಯಲ್ಲಿ ಅಭಿವೃದ್ಧಿ ಹೊಂದಿರುವುದೂ ಇಲ್ಲದ್ದೂ ಸ್ಪಷ್ಟವಾಗಿ ತಿಳಿದುಕೊಳ್ಳಬಹುದು. ಆತನ ಆಚರಣೆ ನೋಡಿದರೆ ಸಾಕು. ಆತನ ಇಂದ್ರಿಯ ಪ್ರವೃತ್ತಿಗಳನ್ನು ನೋಡಿದರೆ ಸಾಕು. ಭಗವಂತನು ಈ ಶ್ಲೋಕದಲ್ಲಿ ಹಾಗು ಮುಂದಿನ ಎರಡು ಶ್ಲೋಕಗಳಲ್ಲಿ

ಜೀವಿಯ ಚರಿತ್ರ ಶುದ್ಧಿ ಹಾಗು ಅಂತಸ್ತನ್ನು ಕಂಡು ಹಿಡಿಯಲು ಬೇಕಾದ ಒಳ್ಳೆಯ ಅಳತೆಮಾಪನವನ್ನು ಪ್ರಸಾದಿಸಿರುವನು. ಅವರವರ ಆಚರಣೆಯೇ ಆ ಸಾಧನೆ. ಆದ್ದರಿಂದ ಪ್ರತಿಯೊಬ್ಬರೂ ಅವರವರ ದೈನಿಕ ಆಚರಣೆಯನ್ನು ಪರೀಕ್ಷಿಸಿಕೊಂಡು ತಮ್ಮಲ್ಲಿ ಯಾವ ಗುಣ ಪ್ರವೃದ್ಧವಾಗಿರುವುದೋ ಚೆನ್ನಾಗಿ ಗ್ರಹಿಸಿ ಸಾಧನಾತಿಶಯದಿಂದ ತಮಸ್ಸಿನಿಂದ ರಜಸ್ಸಿಗೆ, ರಜಸ್ಸಿನಿಂದ ಸತ್ತ್ವಕ್ಕೆ ಸತ್ವದಿಂದ ವಿಶುದ್ಧ ಸತ್ತ್ವಕ್ಕೆ ಅಥವ ಗುಣಾತೀತ ಸ್ಥಿತಿಗೆ ತೇರ್ಗಡೆಯಾಗಲು ಪ್ರಯತ್ನಿಸಬೇಕು. ಸತ್ತ್ವಗುಣಕ್ಕೆ ವಿಭೀಷಣನ ದೃಷ್ಟಾಂತವನ್ನು ಕೊಡಬಹುದು.

ಪ್ರ : ಸತ್ತ್ವಗುಣ ಅಧಿಕವಾದಾಗ ಜೀವಿಯು ಹೇಗಿರುವನು?

ಉ : ಆತನ ಸಮಸ್ತ ಇಂದ್ರಿಯ ದ್ವಾರಗಳಿಂದ ಪ್ರಕಾಶರೂಪವಾದ ಜ್ಞಾನ ಸಾತ್ತ್ವಕತೆ ಬೆಳಗುತ್ತಿರುತ್ತದೆ. ಅಂತಹ ಸ್ಥಿತಿ ಕಂಡುಬಂದಲ್ಲಿ ಅವನಲ್ಲಿ ಸತ್ತ್ವಗುಣ ಪ್ರಧಾನವಾಗಿದೆ ಎಂದು ತಿಳಿಯುವುದು.

**ಅ॥** ರಜೋಗುಣ ಅಧಿಕವಾಗಿದ್ದಾಗ ಜೀವಿಯು ಹೇಗಿರುವನೆಂದು ತಿಳಿಸುತ್ತಿದ್ದಾನೆ-

**೧೨. ಲೋಭಃ ಪ್ರವೃತ್ತಿರಾರಂಭಃ ಕರ್ಮಣಾಮಶಮಃ ಸ್ಪೃಹಾ**
**ರಜಸ್ಯೇತಾನಿ ಜಾಯಂತೇ ವಿವೃದ್ಧೇ ಭರತರ್ಷಭ**

**ಅರ್ಥ:** ಭರತರ್ಷಭ=ಭರತಕುಲದಲ್ಲಿ ಶ್ರೇಷ್ಠನಾದ ಓ ಅರ್ಜುನಾ! ರಜಸಿ= ರಜೋಗುಣವು; ವಿವೃದ್ಧೇ (ಸತಿ)=ವೃದ್ಧಿ ಹೊಂದಿದಾಗ; ಲೋಭಃ= ಲೋಭತ್ವವು; ಪ್ರವೃತ್ತಿ=ಕಾರ್ಯದಲ್ಲಿ ಆಸಕ್ತಿ; ಕರ್ಮಣಾಂ=(ಕಾಮ್ಯ, ನಿಷಿದ್ಧ) ಕರ್ಮಗಳ; ಆರಂಭಃ=ಪ್ರಾರಂಭಿಸುವುದು; ಅಶಮಃ=ಮನಶ್ಶಾಂತಿ ಇಲ್ಲದೆ ಇರುವುದು (ಇಂದ್ರಿಯ ನಿಗ್ರಹಣವಿಲ್ಲದೇ ಇರುವುದು); ಸ್ಪೃಹಾ=ಆಶೆ (ಎನ್ನುವ); ಏತಾನಿ=ಈ ಲಕ್ಷಣಗಳು; ಜಾಯಂತೇ=ಹುಟ್ಟುತ್ತವೆ.

**ತಾ॥** ಭರತಕುಲ ಶ್ರೇಷ್ಠನಾದ ಓ ಅರ್ಜುನಾ! ರಜೋ ಗುಣವು ಅಭಿವೃದ್ಧಿ ಹೊಂದಿದಾಗ ಮನುಜನಲ್ಲಿ ಲೋಭತ್ವ, ಕಾರ್ಯಗಳಲ್ಲಿ ಆಸಕ್ತಿ, (ಕಾಮ್ಯ, ನಿಷಿದ್ಧ) ಕರ್ಮಗಳನ್ನು ಪ್ರಾರಂಭಿಸುವುದು, ಮನಶ್ಶಾಂತಿ ಇಲ್ಲದಿರುವುದು (ಇಂದ್ರಿಯ ನಿಗ್ರಹಣವಿಲ್ಲದಿರುವುದು), ಆಶೆ ಎನ್ನುವ ಲಕ್ಷಣಗಳು ಹುಟ್ಟುತ್ತವೆ.

**ವ್ಯಾಖ್ಯೆ:** ರಜೋಗುಣ ಅಭಿವೃದ್ಧಿ ಹೊಂದಿದಾಗ ಮನುಜನು ಇಲ್ಲದ ಯಾವುಯಾವೋ ಕರ್ಮಗಳನ್ನು, ವ್ಯವಹಾರಗಳನ್ನು ಮೈಮೇಲೆ ಹಾಕಿಕೊಳ್ಳುತ್ತಿರುತ್ತಾನೆ. ತತ್ಫಲಿತವಾಗಿ ಶಾಂತಿಯಿರದು. ಪ್ರವೃತ್ತಿಯಲ್ಲಿಯೇ ಆಸಕ್ತಿ ಹೊಂದಿರುವನೇ ಆಗಲಿ, ನಿವೃತ್ತಿಯಲ್ಲಲ್ಲ. ಆತನು ತಿನ್ನುವ ಆಹಾರ ನಡತೆ, ಮಾತು ಎಲ್ಲವೂ ರಾಜಸ ಪ್ರವೃತ್ತಿಯೇ ಆಗಿರುವುವು. ಆತನ ಹೃದಯದಲ್ಲಿ ಅನೇಕ ವಿಷಯಾಸೆಗಳು ಮನೆ ಮಾಡಿಕೊಂಡಿರುವುವು. ಇಂದ್ರಿಯ ನಿಗ್ರಹ ಆತನಿಗೆ ಏನೇನೂ ಇರುವುದಿಲ್ಲ. ಮಾವಿನಕಾಯಿ ಹಣ್ಣಾಗುವುದಕ್ಕಿಂತ ಮುಂಚೆ ಇರುವ ಹುಳಿಯ ಸ್ಥಿತಿಗೆ ರಜೋಗುಣವನ್ನು ಹೋಲಿಸಬಹುದು. ರಜೋಗುಣಕ್ಕೆ ರಾವಣಾಸುರನ ದೃಷ್ಟಾಂತವನ್ನು ಕೊಡಬಹುದು. ಈ ಶ್ಲೋಕದಲ್ಲಿ ರಜೋಗುಣ ಉಳ್ಳವರಿಗೆ ಶಾಂತಿಯಿರುವುದಿಲ್ಲ ಎಂದು ತಿಳಿಸಿರುವುದರಿಂದ, ಶಾಂತಿ ಹೊಂದಲು ಇರುವ ಮಾರ್ಗ ರಜೋಗುಣವನ್ನು ಹೃದಯದಿಂದ ತೊಲಗಿಸುವುದೇ ಎಂದು ಸ್ಪಷ್ಟವಾಗುತ್ತದೆ.

ಪ್ರ : ರಜೋಗುಣ ಅಭಿವೃದ್ಧಿ ಹೊಂದಿರುವಾಗ ಜೀವಿಯು ಹೇಗಿರುವನು?

ಉ : ಆಗ ಆತನು ೧) ಲೋಭತ್ವ ೨) ಕಾರ್ಯದಲ್ಲಿ ಆಸಕ್ತಿ ೩) (ಕಾಮ್ಯ, ಕಾಮ, ನಿಷಿದ್ಧ) ಕರ್ಮಗಳನ್ನು ಪ್ರಾರಂಭಿಸುವುದು ೪) ಮನಶ್ಶಾಂತಿಯಿಲ್ಲದೇ ಇರುವುದು ೫) ವಿಷಯಾಸೆಗಳನ್ನು ಹೊಂದಿರುವನು. ಆದ್ದರಿಂದ ಈ ಲಕ್ಷಣಗಳು ಯಾರಲ್ಲಿವೆಯೋ ಆತನಲ್ಲಿ ರಜೋಗುಣವು ಪ್ರಧಾನವಾಗಿದೆ ಎಂದು ಹೇಳಬಹುದು.

ಪ್ರ : ಶಾಂತಿ ಯಾರಿಗೆ ಲಭಿಸುವುದು?

ಉ : ರಜೋ, ತಮೋಗುಣಗಳು ತೊಲಗಿದವರಿಗೆ

**ಅ॥** ಇನ್ನು ತಮೋಭಿವೃದ್ಧಿಯಲ್ಲಿ ಜೀವಿಯು ಹೇಗಿರುವನೆಂದು ಹೇಳಲಾಗುತ್ತಿದೆ-

**೧೩. ಅಪ್ರಕಾಶೋಽಪ್ರವೃತ್ತಿಶ್ಚ ಪ್ರಮಾದೋ ಮೋಹ ಏವ ಚ**
**ತಮ ಸ್ಯೇತಾನಿ ಜಾಯಂತೇ ವಿವೃದ್ಧೇ ಕುರುನಂದನ**

**ಅರ್ಥ:** ಕುರುನಂದನ=ಕುರುವಂಶದ ಅರ್ಜುನಾ! ತಮಸಿ=ತಮೋಗುಣ; ವಿವೃದ್ಧೇ (ಸತಿ)=ಅಭಿವೃದ್ಧಿಹೊಂದಿದ್ದರೆ; ಅಪ್ರಕಾಶಃ=ಅವಿವೇಕ (ಬುದ್ಧಿ ಮಾಂದ್ಯ); ಅಪ್ರವೃತ್ತಿ ಚ=ಸೋಮಾರಿತನ; ಪ್ರಮಾದಃ=ಅಜಾಗ್ರತೆ; ಮೋಹಃ ಏವ ಚ=ಅಜ್ಞಾನವು (ಮೂಢತ್ವ ಅಥವ ವಿಪರೀತ ಜ್ಞಾನ); ಏತಾನಿ=(ಈ) ವಿಧವಾದವು; ಜಾಯಂತೇ=ಉಂಟಾಗುತ್ತವೆ.

**ತಾ॥** ಕುರುವಂಶದ ಓ ಅರ್ಜುನಾ! ತಮೋಗುಣವು ಅಭಿವೃದ್ಧಿ ಹೊಂದಿದ್ದಲ್ಲಿ ಮನುಜನಿಗೆ ಅವಿವೇಕ (ಬುದ್ಧಿ ಮಾಂದ್ಯ), ಸೋಮಾರಿತನ, ಅಜಾಗ್ರತೆ, ಅಜ್ಞಾನ (ಮೂಢತ್ವ ಅಥವ ವಿಪರೀತ ಜ್ಞಾನ)ಗಳು ಉಂಟಾಗುತ್ತವೆ.

**ವ್ಯಾಖ್ಯೆ:** ತಮೋಗುಣ ಅಭಿವೃದ್ಧಿ ಹೊಂದಿರುವಾಗ ಜೀವಿಯಲ್ಲಿ ಸೋಮಾರಿತನ, ಅಜಾಗ್ರತೆ, ಬುದ್ಧಿ ಮಾಂದ್ಯ ಮುಂತಾದ ಲಕ್ಷಣಗಳು ಗೋಚರಿಸುತ್ತವೆ. ಆತನ ಆಹಾರ ಪಾನೀಯಗಳಲ್ಲಿ, ಮಾತುಗಳಲ್ಲಿ ಈ ತಮೋಗುಣ ಲಕ್ಷಣಗಳೇ ವ್ಯಕ್ತವಾಗುವುವು. ಒಗರಾಗಿರುವ ಮಾವಿನ ಕಾಯಿಗೆ ಈ ತಮೋ ಗುಣ ಸ್ಥಿತಿಯನ್ನು ಹೋಲಿಸಬಹುದು. ಕುಂಭಕರ್ಣನನ್ನು ಈ ಗುಣಕ್ಕೆ ದೃಷ್ಟಾಂತವಾಗಿ ತೆಗೆದುಕೊಳ್ಳಬಹುದು. ಪ್ರತಿಯೊಬ್ಬರೂ ತಮ್ಮತಮ್ಮ ಹೃದಯಗಳನ್ನು ಪರಿಶೋಧಿಸಿಕೊಂಡು ತಮ್ಮಲ್ಲಿ ಯಾವ ಗುಣಗಳ ಲಕ್ಷಣಗಳಿವೆಯೋ ಪರೀಕ್ಷಿಸಿಕೊಂಡು ಸಾಧನಾತಿಶಯದಿಂದ ಕ್ರಮವಾಗಿ ಊರ್ಧ್ವಸ್ಥಿತಿಯನ್ನು ಪಡೆಯಲು ಯತ್ನಿಸಬೇಕು. ಗಿಡಕ್ಕೆ ನೀರನ್ನು ಹಾಕುತ್ತಿದ್ದರೆ ಕಾಯಿಯ ಒಗರು ನಿಧಾನವಾಗಿ ಹುಳಿಯಾಗಿ ನಂತರ ಸಿಹಿಯಾಗಿ ಪರಿಣಮಿಸಿ, ಫಲ ಪಕ್ವವಾಗಿ ಕೊನೆಗೆ ಬಿದ್ದು ಹೋಗುವುದು. ಅದು ಜೀವನ್ಮುಕ್ತ ದೆಸೆ. ಆಗ ಜೀವಿಗೆ ಸಂಸಾರ ಬಂಧನದಿಂದ ವಿಮುಕ್ತಿ ಒದಗುವುದು. ಆದರೆ ಫಲದ ಪಕ್ವದ ಸ್ಥಿತಿ, ಬಿದ್ದು ಹೋಗುವ ಸ್ಥಿತಿ ಗಿಡಕ್ಕೆ ನೀರು ಹಾಕುವುದರಿಂದ ಸಿದ್ಧಿಸಿದ ಹಾಗೆ ಭಗವದ್ಧ್ಯಾನ, ನಿರಂತರ ಪರಮಾತ್ಮ ಸಾಧನೆಗಳ ಮೂಲಕವೇ ಜೀವಿಯು ಕ್ರಮವಾಗಿ ಊರ್ಧ್ವಾಭಿಮುಖವಾಗಿ ನಡೆಯುತ್ತ ರಜಸ್ತಮಗಳಿಂದ ಸಮತ್ತ್ವಕ್ಕೆ ಮುಂದುವರಿದು ಅಲ್ಲಿಂದ ಗುಣಾತೀತ ಪದವಿಯನ್ನು ಸೇರುವನು.

ಪ್ರ : ತಮೋಗುಣ ಅಭಿವೃದ್ಧಿ ಹೊಂದಿದ ಜೀವಿಯು ಹೇಗಿರುವನು?

ಉ : ೧) ಅವಿವೇಕ ೨) ಸೋಮಾರಿತನ ೩) ಅಜಾಗ್ರತೆ ೪) ಅಜ್ಞಾನ ಮುಂತಾದ ಲಕ್ಷಣಗಳು ಆತನಲ್ಲಿ ಕಾಣುವುವು. ಈ ಗುರುತುಗಳು ಕಂಡು ಬಂದಲ್ಲಿ ಆತನನಲ್ಲಿ ತಮೋಗುಣ ಅಧಿಕವಾಗಿದೆಯೆಂದು ತಿಳಿಯಬಹುದು.

**ಅ॥** ದೇಹ ವಿಯೋಗ ಸಮಯದಲ್ಲಿ ಯಾವ ಗುಣ ಅಭಿವೃದ್ಧಿಯಾಗಿದ್ದರೆ ಯಾವ ಫಲವನ್ನು ಜೀವಿಯು ಹೊಂದುವನು ಎನ್ನುವುದನ್ನು ಎರಡು ಶ್ಲೋಕಗಳಲ್ಲಿ ತಿಳಿಸಲಾಗಿದೆ- ಮೊದಲು ಸತ್ತ್ವಗುಣದ ವಿವರಣೆಯಿದೆ.

**೧೪. ಯದಾ ಸತ್ತ್ವೇ ಪ್ರವೃದ್ಧೇ ತು ಪ್ರಲಯಂ ಯಾತಿ ದೇಹಭೃತ್**
**ತದೋತ್ತಮವಿದಾಂ ಲೋಕಾನಮಲಾನ್ ಪ್ರತಿಪದ್ಯತೇ**

**ಅರ್ಥ:** ಯದಾ ತು=ಯಾವಾಗ;ಸತ್ತ್ವೇ=ಸತ್ತ್ವಗುಣವು; ಪ್ರವೃದ್ಧೇ (ಸತಿ)=ಅಭಿವೃದ್ಧಿ ಹೊಂದಿರುವುದೋ; ದೇಹಭೃತ್=ಜೀವಿಯು; ಪ್ರಲಯಂ=ಮರಣವನ್ನು; ಯಾತಿ=ಹೊಂದಿದರೆ; ತದಾ=ಆಗ; ಉತ್ತಮವಿದಾಮ್=ಉತ್ತಮ ಜ್ಞಾನವುಳ್ಳವರ, ಅಮಲಾನ್=ಪರಿಶುದ್ಧವಾದ; ಲೋಕಾನ್=ಲೋಕಗಳನ್ನು; ಪ್ರತಿಪದ್ಯತೇ=ಹೊಂದುತ್ತಿದ್ದಾನೆ.

**ತಾ||** ಜೀವಿಯು ಸತ್ತ್ವಗುಣ ಅಭಿವೃದ್ಧಿಯಲ್ಲಿರುವಾಗ ಮರಣಿಸಿದರೆ ಆಗ ಆತನು ಉತ್ತಮ ಜ್ಞಾನವುಳ್ಳ, ಪರಿಶುದ್ಧವಾದ ಲೋಕಗಳನ್ನೇ ಹೊಂದುವನು.

**ವ್ಯಾಖ್ಯೆ:** ಅಂತ್ಯಕಾಲದಲ್ಲಿ ಚಿತ್ತದಲ್ಲಿ ಸತ್ತ್ವ, ರಜಸ್ತಮೋ ಗುಣಗಳಲ್ಲಿ ಯಾವ ಯಾವ ಗುಣವು ಪ್ರವೃದ್ಧಿಯಾಗಿರುವುದೋ ಅದಕ್ಕೆ ಅನುಗುಣವಾದ ಲೋಕವೇ (ಜನ್ಮವೇ) ಜೀವಿಗೆ ಉಂಟಾಗುತ್ತದೆಂದು ಇಲ್ಲಿ ಹೇಳಲಾಗಿದೆ. ಅಂತ್ಯಕಾಲದಲ್ಲಿ ಸತ್ತ್ವಗುಣ ಅಧಿಕವಾಗಿದ್ದರೆ, ಉತ್ತಮ ಜ್ಞಾನವಂತರ ಲೋಕಗಳನ್ನು ಜೀವಿಯು ಹೊಂದಬಲ್ಲನು. ಆದರೆ ಸತ್ತ್ವಗುಣವೆನ್ನುವುದು ಒಂದು ಕ್ಷಣದಲ್ಲಿ ಏರ್ಪಾಡಾಗುವುದಲ್ಲ. ಚಿತ್ತದಲ್ಲಿಯ ತಮೋ, ರಜೋಗುಣ ಸಂಸ್ಕಾರಗಳು, ವೃತ್ತಿಗಳು ತೊಲಗಿ, ಸತ್ತ್ವಗುಣ ಸಂಸ್ಕಾರ ಏರ್ಪಡಲು ಎಷ್ಟೋ ಸಾಧನೆ, ಪ್ರಯತ್ನಗಳು ಅವಶ್ಯಕ. ಜೀವನ ಕಾಲವೆಲ್ಲವೂ ಅಂತಹ ಸತ್ಪ್ರಯತ್ನವನ್ನು ಆಚರಿಸಿದ್ದರೆ ಮಾತ್ರ ಪುಣ್ಯಕಾರ್ಯ, ಪರೋಪಕಾರ ಭಾವಗಳು ಉಂಟಾಗಿ ಅಂತ್ಯಕಾಲದಲ್ಲಿ ಚಿತ್ತವು ಸತ್ತ್ವಗುಣಮಯವಾಗುವುದು. ಅಷ್ಟೇ ಅಲ್ಲದೆ ಒಂದೇ ಒಂದು ಕ್ಷಣದಲ್ಲಿ, ಯಾವುದೋ ಒಂದು ಸಂಕಲ್ಪದಿಂದ, ಯಾವುದೋ ಒಂದು ವಾಕ್ಯದಿಂದ ತಕ್ಷಣ ಅಂತಹ ಸತ್ತ್ವಗುಣ ಉಂಟಾಗುವುದು ಕಷ್ಟ. ಮತ್ತೆ ಬಹು ಪ್ರಯತ್ನದಿಂದ ಲಭ್ಯವಾದ ಅಂತಹ ಅಂತ್ಯಕಾಲಗುಣದ ಮೇಲೆಯೇ ಭಾವೀ ಜನ್ಮ, ಭಾವೀ ಲೋಕಗಳು ನಿರ್ಧರಿಸಲ್ಪಡುತ್ತವೆ. ಆದ್ದರಿಂದ ಜೀವಿಯು ಶ್ರದ್ಧೆಯಿಂದ ತನ್ನ ಜೀವನವನ್ನೆಲ್ಲಾ ಸತ್ತ್ವಗುಣ ತದ್ವಾರ ವಿಶುದ್ಧ ಸತ್ತ್ವಗುಣ (ಗುಣಾತೀತ ಸ್ಥಿತಿಯನ್ನು) ಸಂಪಾದಿಸಲು ಮುಡುಪಾಗಿಡಬೇಕು. ಜೀವನದಲ್ಲಿ ಪಾಪಕಾರ್ಯಗಳನ್ನು ಮಾಡಿದರೆ ಅಂತ್ಯಕಾಲದಲ್ಲಿ ತಮೋ ಗುಣದ ಪ್ರಾಬಲ್ಯದಿಂದ ಮನುಜನು ನೀಚಲೋಕವನ್ನು ಹೊಂದುವನು. ಈ ವಿಷಯವನ್ನು ಮುಂದೆ ಬರುವ ಶ್ಲೋಕಗಳಲ್ಲಿ ಭಗವಂತನು ಹೇಳುವನು.

'ದೇಹಭೃತ್'- (ದೇಹವನ್ನು ಧರಿಸುವವನು) ಎನ್ನುವ ಪದದಿಂದ ವಾಸ್ತವವಾಗಿ ಜೀವಿಯು ದೇಹಕ್ಕಿಂತ ಬೇರೆ ಎನ್ನುವುದು ಅರ್ಥವಾಗುತ್ತದೆ. ಧರಿಸಿದ್ದು ಧರಿಸಿದವನಿಗಿಂತ ಸದಾ ಬೇರೆಯಾಗಿಯೇ ಇರುವುದಲ್ಲವೇ! 'ಕಿರೀಟವನ್ನು ಧರಿಸಿದ್ದೇನೆ, ವಸ್ತ್ರವನ್ನು ಧರಿಸಿದ್ದೇನೆ' ಎನ್ನುವ ವಾಕ್ಯಗಳಲ್ಲಿ ಆಯಾ ಕಿರೀಟ ವಸ್ತ್ರಾದಿಗಳು ಧರಿಸಿರುವವನಿಗಿಂತ ಹೇಗೆ ಭಿನ್ನವಾಗಿರುವುವೋ ಹಾಗೆ ದೇಹವನ್ನು ಧರಿಸಿದ ಜೀವಿಯು ದೇಹದಿಂದ ಭಿನ್ನವಾಗಿಯೇ ಇರುವನು. ಈ ಸತ್ಯವನ್ನು ತಿಳಿದುಕೊಂಡು ಮನುಜನು ದೇಹಭಾವವನ್ನು ಬಿಟ್ಟು, ದೈವಸಾಕ್ಷಿಯಾದ ಆತ್ಮಭಾವನೆಯನ್ನೇ ಹೊಂದಿರಬೇಕು.

'ಉತ್ತಮವಿದಾಂ ಅಮಲಾನ್'- ಎಂದು ಹೇಳುವುದರಿಂದ ಅಂತಹ ಸತ್ತ್ವಗುಣವೇತ್ತನು, ಜ್ಞಾನವಂತರಿರುವ ನಿರ್ಮಲ ಲೋಕವನ್ನೇ ಪಡೆಯುವನೆಂದು ಸ್ಪಷ್ಟವಾಗುತ್ತದೆ. ಅಂತಹ ನಿರ್ಮಲವಾದ ವಾತಾವರಣ ಆತನ ಪುರೋಭಿವೃದ್ಧಿಗೆ, ಶಾಶ್ವತ ಬಂಧ ವಿಮುಕ್ತಿಗೆ ಸಹಾಯ ಕರವಾಗುವುದು.

ಪ್ರ : ಸತ್ತ್ವಗುಣ ಪ್ರಾಧಾನ್ಯವಿರುವವನಿಗೆ ಮರಣಾನಂತರ ಯಾವ ಲೋಕದ ಪ್ರಾಪ್ತಿಯಾಗುವುದು?

ಉ : ಉತ್ತಮ ಜ್ಞಾನವಂತರಿರುವ ಪರಿಶುದ್ಧಲೋಕವನ್ನು ಆತನು ಪಡೆಯುವನು.

**ಅ||** ರಜೋಗುಣ ತಮೋಗುಣಗಳನ್ನು ಪ್ರಾಧಾನ್ಯವಾಗಿ ಹೊಂದಿ ರುವವರು ಮರಣಾನಂತರ ಹೊಂದುವ ಗತಿಗಳನ್ನು ವಿವರಿಸಲಾಗುತ್ತಿದೆ-

**೧೫ ರಜಸಿ ಪ್ರಲಯಂ ಗತ್ವಾ ಕರ್ಮಸಂಗಿಷು ಜಾಯತೇ**
**ತಥಾ ಪ್ರಲೀನಸ್ತಮಸಿ ಮೂಢಯೋನಿಷು ಜಾಯತೇ**

**ಅರ್ಥ:** ರಜಸಿ=ರಜೋಗುಣವು, (ಪ್ರವೃದ್ಧೇ ಸತಿ=ಅಭಿವೃದ್ಧಿ ಹೊಂದಿ ಇರುವವನು); ಪ್ರಲಯವ್=ಮರಣವನ್ನು, ಗತ್ವಾ=ಹೊಂದಿ (ಹೊಂದಿದವನಾಗಿ); ಕರ್ಮ ಸಂಗಿಷು=ಕರ್ಮಾಸಕ್ತರಾದವರಲ್ಲಿ, ಜಾಯತೇ= ಹುಟ್ಟುತ್ತಿದ್ದಾನೆ; ತಥಾ=ಹಾಗೆಯೇ; ತಮಸಿ=ತಮೋಗುಣವನ್ನು (ಪ್ರವೃದ್ಧೇ ಸತಿ=ಅಭಿವೃದ್ಧಿ ಹೊಂದಿ ಇರುವವನು); ಪ್ರಲೀನಃ=ಮರಣ ಹೊಂದಿದನಂತರ; ಮೂಢಯೋನಿಷು=ಪಾಮರರ (ಮೂರ್ಖರ, ಅವಿವೇಕಿಗಳ) ಗರ್ಭಗಳಲ್ಲಿ, ಇಲ್ಲವೇ ಪಶು ಪಕ್ಷ್ಯಾದಿಗಳಲ್ಲಿ, ಜಾಯತೇ=ಹುಟ್ಟುವರು.

**ತಾ||** ರಜೋಗುಣವು ಅಭಿವೃದ್ಧಿ ಹೊಂದಿದ ಸ್ಥಿತಿಯಲ್ಲಿರುವವನು ಮರಣಿಸಿದಾಗ ಕರ್ಮಾಸಕ್ತರಾದವರಲ್ಲಿ ಜನಿಸುವನು, ಹಾಗೆಯೇ ತಮೋಗುಣವು ಅಭಿವೃದ್ಧಿ ಹೊಂದಿದ ಸ್ಥಿತಿಯಲ್ಲಿರುವವನು ಮರಣಿಸಿದರೆ ಆತನು ಪಾಮರರ ಗರ್ಭಗಳಲ್ಲಿ, ಇಲ್ಲವೆ ಪಶುಪಕ್ಷ್ಯಾದಿ ಹೀನ ಜಾತಿಗಳಲ್ಲಿ ಹುಟ್ಟುವನು. .

**ವ್ಯಾಖ್ಯೆ:** ರಜೋಗುಣಾಧಿಕ್ಯತೆ ಹೊಂದಿದ್ದು ಮರಣಿಸಿದವನು ತನ್ನ ಸಂಸ್ಕಾರದ ಅನುಗುಣವಾಗಿಯೇ ಮತ್ತೆ ಕರ್ಮಾಸಕ್ತರಾದವರಲ್ಲಿ ಜನಿಸುವನು. ಹಾಗೆ ಜನ್ಮಿಸಿ ಮತ್ತೆ ಅನೇಕ ಬಹಿರ್ಮುಖ ಕಾರ್ಯಗಳಲ್ಲಿ, ವಿಷಯಾದಿಗಳಲ್ಲಿ ಪ್ರವರ್ತಿಸಿ ಮತ್ತೆ ಮರಣಿಸುವನು. ಈ ಪ್ರಕಾರವಾಗಿ ಸಂಸಾರ ಬಂಧನದಿಂದ ಬಿಡುಗಡೆ ಹೊಂದಲಾಗದೆ, ಅನೇಕ ಯಾತನೆಗಳನ್ನು ಅನುಭವಿಸುತ್ತ ಅಶಾಂತಿಗೆ ಒಳಗಾಗುವನು. ಇನ್ನು ತಮೋ ಗುಣಾಧಿಕ್ಯತೆಯಲ್ಲಿ ಮರಣಿಸಿದವನು ಹೀನ ಚಾರಿತ್ರ್ಯ ಹೊಂದಿರುವ ಮೂಢ ಜನಗಳಲ್ಲಿ, ಇಲ್ಲವೆ ಪಶು ಪಕ್ಷ್ಯಾದಿಗಳಲ್ಲಿ ಜನಿಸುವನು. ಅಲ್ಲಿ ಅವರು ಎಷ್ಟು ದುರ್ಭರ, ದಾರುಣ ದುಃಖಗಳನ್ನು ಅನುಭವಿಸಬೇಕಾಗಿದೆಯೋ! ಆದ್ದರಿಂದ ಅಂತಹ ಭಯಂಕರ ಪರಿಣಾಮಗಳು, ಭೀಷಣ ದುಃಖ ಜನಕ ಪರಿಸ್ಥಿತಿಗಳು ತನಗೆ ಒದಗದೆ ಇರಬೇಕೆಂದರೆ ಜೀವಿಯು ಅತಿ ಜಾಗರೂಕನಾಗಿ ತನ್ನ ಜೀವನ ಕಾಲದಲ್ಲಿ, ಮರಣವು ಇನ್ನೂ ದೂರವಿರುವಾಗಲೇ ಪ್ರಯತ್ನಪೂರ್ವಕವಾಗಿ ಆ ರಜೋಗುಣ, ತಮೋ ಗುಣರೂಪ ಘೋರಪಿಶಾಚಿಗಳನ್ನು ತನ್ನ ಹೃದಯಸೌಧದಿಂದ ಹೊರತಳ್ಳಿ, ಭಗವದ್ಭಕ್ತಿ, ವೈರಾಗ್ಯ, ಆತ್ಮಜ್ಞಾನ ಇತ್ಯಾದಿ ಸದ್ಗುಣರಾಶಿಯನ್ನು ಅವಲಂಬಿಸಿ ಮುಕ್ತನಾಗಿ ಜನ್ಮ ಸಾರ್ಥಕಪಡಿಸಿಕೊಳ್ಳಬೇಕು.

ಪ್ರ : ರಜೋಗುಣಾಧಿಕ್ಯತೆ ಉಳ್ಳವನು ಮರಣಿಸಿದನಂತರ ಎಲ್ಲಿ ಜನ್ಮಿಸುವನು?

ಉ :ಕರ್ಮಾಸಕ್ತಿಯುಳ್ಳ ಜನರಲ್ಲಿ

ಪ್ರ : ತಮೋಗುಣಾಧಿಕ್ಯತೆ ಉಳ್ಳವನು ಮರಣಿಸಿದನಂತರ ಎಲ್ಲಿ ಜನ್ಮಿಸುವನು?

ಉ: ಪಾಮರರ (ಮೂಢಜನರ) ಗರ್ಭಗಳಲ್ಲಿ, ಇಲ್ಲವೆ ಪಶುಪಕ್ಷ್ಯಾದಿ ನೀಚ ಜಾತಿಗಳಲ್ಲಿ.

**ಅ||** ಸಾತ್ತ್ವಿಕ, ರಾಜಸಿಕ, ತಾಮಸಿಕ ಕರ್ಮಗಳ ಫಲಗಳನ್ನು ಹೇಳಲಾಗಿದೆ-

**೧೬ ಕರ್ಮಣಸ್ಸುಕೃತಸ್ಯಾಹುಸ್ಸಾತ್ತ್ವಿಕಂ ನಿರ್ಮಲಂ ಫಲಮ್**
**ರಜಸಸ್ತು ಫಲಂ ದುಃಖಮಜ್ಞಾನಂ ತಮಸಃ ಫಲಮ್**

**ಅರ್ಥ:** ಸುಕೃತಸ್ಯ ಕರ್ಮಣಃ=ಸಾತ್ತ್ವಿಕವಾದ ಕರ್ಮಕ್ಕೆ (ಇಲ್ಲವೆ ಪುಣ್ಯ ಕಾರ್ಯಕ್ಕೆ); ಸಾತ್ತ್ವಿಕಮ್=ಸತ್ತ್ವಗುಣ ಸಂಬಂಧವಾದ; ನಿರ್ಮಲಮ್= ಪರಿಶುದ್ಧವಾದ ಸುಖ; ಫಲಮ್=ಫಲವು; ರಜಸಸ್ತು=ರಜೋಗುಣ ಸಂಬಂಧವಾದ ಕರ್ಮಕ್ಕೆ; ದುಃಖಮ್=ದುಃಖ; ಫಲಮ್=ಫಲವು; ತಮಸಃ=ತಮೋಗುಣ ಸಂಬಂಧವಾದ ಕರ್ಮಕ್ಕೆ; ಅಜ್ಞಾನಂ=ಅಜ್ಞಾನ (ಅವಿವೇಕ); ಫಲಮ್=ಫಲವು ಎಂದು; ಆಹುಃ=(ಹಿರಿಯರು) ಹೇಳುವರು.

**ತಾ||** ಸಾತ್ತ್ವಿಕವಾದ ಕರ್ಮಕ್ಕೆ (ಇಲ್ಲವೆ ಪುಣ್ಯ ಕಾರ್ಯಗಳಿಗೆ) ಸತ್ತ್ವಗುಣ ಸಂಬಂಧವಾದ ನಿರ್ಮಲ ಸುಖವು ಫಲವೆಂದು, ರಜೋಗುಣ ಸಂಬಂಧವಾದ ಕರ್ಮಕ್ಕೆ ದುಃಖವು ಫಲವೆಂದು, ತಮೋಗುಣ ಸಂಬಂಧವಾದ ಕರ್ಮಕ್ಕೆ ಅಜ್ಞಾನವು ಫಲವೆಂದು (ಹಿರಿಯರು) ಹೇಳುವರು.

**ವ್ಯಾಖ್ಯೆ:** ಪ್ರತಿ ಜೀವಿಯು ಸುಖವನ್ನೇ ಕೋರುವವನಾಗಲಿ ದುಃಖವನ್ನಲ್ಲ. ಆದರೆ ಆ ಸುಖವು ಯಾವುದರಿಂದ ಉಂಟಾಗುವುದೋ ಆ ಕಾರ್ಯಗಳನ್ನೇ ಮಾಡಬೇಕೇ ಹೊರತು ದುಃಖ ಜನಕ ಕಾರ್ಯಗಳನ್ನಲ್ಲ. ನಿರ್ಮಲವಾದ, ಅಂದರೆ ರಜಸ್ತಮಸಂಪರ್ಕವಿಲ್ಲದ ಸುಖವು ಯಾವುದರಿಂದ ಉಂಟಾಗುವುದು? ಸಾತ್ತ್ವಿಕ ಕರ್ಮದಿಂದ. ದುಃಖವು, ಅಜ್ಞಾನವು ಯಾವುದ ರಿಂದ ಉಂಟಾಗುವುದು? ರಾಜಸಿಕ, ತಾಮಸಿಕ ಕರ್ಮಗಳಿಂದ-ಎಂದು ಭಗವಂತನು ನುಡಿದನು. ಆದ್ದರಿಂದ ವಿಜ್ಞನಾದವನು ಸಾತ್ತ್ವಿಕ ಕರ್ಮಗಳನ್ನೇ ಅನುಸರಿಸುತ್ತ ರಾಜಸಿಕ, ತಾಮಸಿಕ ಕರ್ಮಗಳನ್ನು ತ್ಯಜಿಸಬೇಕು. ಕೆಂಡದಲ್ಲಿ ಕೈ ಇಟ್ಟರೆ ಸುಡುವುದೆಂದು ತಿಳಿದವನು ಮತ್ತೆ ಅದರ ಗೋಜಿಗೆ ಹೋಗುವನೇ? ಹಾಗೆಯೇ ರಾಜಸ, ತಾಮಸ ಕರ್ಮಗಳಿಗೆ ದುಃಖ, ಅಜ್ಞಾನಗಳು ಫಲಗಳೆಂದು ಭಗವಂತನು ತಿಳಿಸಿರುವುದರಿಂದ ಆತನ ವಾಕ್ಯಗಳಲ್ಲಿ ಪೂರ್ಣ ವಿಶ್ವಾಸವಿಟ್ಟು, ಅಂತಹ ಕರ್ಮಗಳನ್ನು ತ್ಯಜಿಸಿ ಸುಖ ಪ್ರದಗಳಾದ, ಸಾತ್ತ್ವಿಕ ಕರ್ಮಗಳನ್ನೇ ಆಶ್ರಯಿಸಬೇಕು. ಹೀಗೆ ಮಾಡಿ ಕ್ರಮವಾಗಿ ಸಾಧನೆಯ ಪರಿಪಕ್ವತೆಯಿಂದ ಆ ಸತ್ತ್ವಗುಣವನ್ನೂ ಕೂಡ ದಾಟಿ ಗುಣಾತೀತ ಪರಮಾತ್ಮ ಸ್ಥಿತಿಯನ್ನು ಸೇರಬೇಕಾಗಿದೆ. ಆ ಸ್ಥಿತಿಯಲ್ಲಿ ಸಾತ್ತ್ವಿಕ ಸುಖವನ್ನೂ ಕೂಡ ದಾಟಿ ಗುಣ ಸಂಪರ್ಕವಿಲ್ಲದ ಕೇವಲಾನಂದವನ್ನೇ ಅನುಭವಿಸುವನು.

'ರಜಸಸ್ತು ಫಲಂ ದುಃಖಂ'- ರಜೋಗುಣ ರೂಪಗಳಾದ ತೃಷ್ಣೆ, ಕಾಮ ಕ್ರೋಧಾದಿಗಳ ಫಲ ದುಃಖವೆಂದು ಹೇಳುವುದರಿಂದ ಸಾಧಕರು, ಮುಮುಕ್ಷುಗಳು ಅವುಗಳ ವಿಷಯವಾಗಿ ಅತಿಜಾಗರೂಕರಾಗಿದ್ದು ಅವುಗಳನ್ನು ತ್ಯಜಿಸಬೇಕು. ಯಾರಿಗಾದರೂ ದುಃಖ, ಅಜ್ಞಾನವುಂಟಾದಲ್ಲಿ ಅವು ರಜೋಗುಣ, ತಮೋಗುಣಗಳ ಪ್ರಭಾವದಿಂದಲೇ ಉಂಟಾಗಿವೆಯೆಂದು (ಈ ಭಗವದ್ವಾಕ್ಯಗಳಿಂದ) ನಿಶ್ಚಯಿಸಿ ಆ ದುರ್ಗುಣಗಳನ್ನು ಬಿಡಬೇಕು. ದುಃಖನಿವಾರಣೆಗೆ ಸುಖ ಪ್ರಾಪ್ತಿಗೆ ಇದನ್ನು ಬಿಟ್ಟರೆ ಬೇರೆ ದಾರಿಯೇ ಇಲ್ಲ.

'ಅಜ್ಞಾನಂ ತಮಸಃ ಫಲಂ'-ಎಲ್ಲಾ ದುರ್ಗುಣಗಳು ಅಜ್ಞಾನದಲ್ಲಿ ಅಂತರ್ಭೂತವಾಗಿಯೇ ಇರುವುವಾದ್ದರಿಂದ ರಜೋಗುಣದ ಫಲವಾದ ದುಃಖವು ಈ ಅಜ್ಞಾನದಲ್ಲಿ ಬೆರೆತೇ ಇದೆಯೆಂದು ಗ್ರಹಿಸಬೇಕು. ಆದ್ದರಿಂದ ಇದು ಅತ್ಯಂತ ಪ್ರಮಾದಕರವಾದುದು. ಮುಮುಕ್ಷುಗಳು ಯಾರೂ ಇದನ್ನು ಹತ್ತಿರ ಸೇರಿಸಬಾರದು.

ಪ್ರ : ಸಾತ್ತ್ವಿಕ ಕರ್ಮದ ಫಲವೇನು?

ಉ : ನಿರ್ಮಲ ಸುಖ.

ಪ್ರ : ರಾಜಸ ಕರ್ಮದ ಫಲವೇನು?

ಉ : ದುಃಖ

ಪ್ರ : ತಾಮಸ ಕರ್ಮದ ಫಲವೇನು?

ಉ : ಅಜ್ಞಾನ

ಪ್ರ : ಆದ್ದರಿಂದ ದುಃಖ ತೊಲಗಿ ಸುಖ ಸಂಪ್ರಾಪ್ತಿಯಾಗುವ ಉಪಾಯವೇನು?

ಉ : ರಾಜಸಿಕ, ತಾಮಸಿಕ ಕಾರ್ಯಗಳನ್ನು ತ್ಯಜಿಸಿ ಸಾತ್ತ್ವಿಕ ಕಾರ್ಯಗಳನ್ನೇ ಆಚರಿಸಬೇಕು.

**ಅ||** ಆಯಾ ಗುಣಗಳಿಂದ ಒದಗುವ ಫಲಗಳನ್ನು ಹೇಳಲಾಗಿದೆ-

**೧೭ ಸತ್ತ್ವಾತ್ಸಂಜಾಯತೇ ಜ್ಞಾನಂ ರಜಸೋ ಲೋಭ ಏವ ಚ**
**ಪ್ರಮಾದಮೋಹೌ ತಮಸೋ ಭವತೋಽಜ್ಞಾನಮೇವ ಚ**

**ಅರ್ಥ:** ಸತ್ತ್ವಾತ್=ಸತ್ತ್ವಗುಣದಿಂದ, ಜ್ಞಾನಂ=ಜ್ಞಾನವು, ಸಂಜಾಯತೇ= ಉಂಟಾಗುತ್ತದೆ; ರಜಸಃ=ರಜೋಗುಣದಿಂದ; ಲೋಭಃ ಏವ ಚ= ಲೋಭವೇ; (ಸಂಜಾಯತೇ=ಉಂಟಾಗುತ್ತದೆ); ತಮಸಃ=ತಮೋ ಗುಣದಿಂದ; ಪ್ರಮಾದ ಮೋಹೌ=ಅಜಾಗ್ರತೆ (ಮರೆವು) ವಿಪರೀತ ಜ್ಞಾನ (ಭ್ರಮೆ); ಭವತಃ=ಉಂಟಾಗುತ್ತವೆ; ಚ= ಮತ್ತೆ; ಅಜ್ಞಾನಂ ಏವ=ಅಜ್ಞಾನವೇ; (ತಸ್ಮಾತ್ ಭವತಿ=ಅದರಿಂದ ಜನಿಸುತ್ತದೆ)

**ತಾ||** ಸತ್ತ್ವಗುಣದಿಂದ ಜ್ಞಾನವು, ರಜೋಗುಣದಿಂದ ಲೋಭವು ತಮೋಗುಣದಿಂದ ಅಜಾಗ್ರತೆ (ಮರೆವು), ಭ್ರಮೆ, ಅಜ್ಞಾನಗಳು ಉಂಟಾಗುತ್ತವೆ.

**ವ್ಯಾಖ್ಯೆ:** ತತ್ತ್ವವನ್ನು ಚೆನ್ನಾಗಿ ಅರ್ಥಮಾಡಿಸಬೇಕೆಂದು ಹೇಗೆ ಉಪಾಧ್ಯಾಯನು ವಿದ್ಯಾರ್ಥಿಗೆ ಬೋಧಿಸುವನೋ ಹಾಗೆಯೇ ಭಗವಂತನು ಅರ್ಜುನನಿಗೆ ಹೇಳಿದ ವಿಷಯವನ್ನೇ ವಿವಿಧ ರೀತಿಗಳಲ್ಲಿ ಮತ್ತೆ ಮತ್ತೆ ಹೇಳುತ್ತಿದ್ದಾನೆ. ಲೋಭ, ಅಜ್ಞಾನ ಮುಂತಾದುವು ದುಃಖಪ್ರದಗಳಾಗಿರುವುದರಿಂದ ಸಾಧುವಾದವುಗಳಲ್ಲ. ಆದ್ದರಿಂದ ಅವು ಯಾವುದರಿಂದ ಉಂಟಾಗುವುವೋ ಅಂತಹ ರಜೋ, ತಮೋ ಗುಣಗಳನ್ನು ತಿರಸ್ಕರಿಸಿ ಜ್ಞಾನದಾಯಕವಾದ ಸತ್ತ್ವಗುಣವನ್ನೇ ವಿಜ್ಞವು ಆಶ್ರಯಿಸಬೇಕು.

ಪ್ರ : ಸತ್ತ್ವಗುಣದಿಂದ ಏನು ಉಂಟಾಗುವುದು?

ಉ : ಜ್ಞಾನ

ಪ್ರ : ರಜೋಗುಣದಿಂದ ಏನು ಉಂಟಾಗುವುದು?

ಉ : ಲೋಭ

ಪ್ರ : ತಮೋಗುಣದಿಂದ ಏನು ಉಂಟಾಗುವುದು?

ಉ : ಅಜಾಗ್ರತೆ (ಮರೆವು), ಭ್ರಮೆ, ಅಜ್ಞಾನಗಳು.

**ಅ||** ಆಯಾಗುಣಗಳನ್ನು ಹೊಂದಿದವರು ಮರಣಾನಂತರ ಯಾವ ಯಾವ ಲೋಕಗಳನ್ನು ಹೊಂದುವರೆಂದು ಹೇಳಲಾಗಿದೆ-

**೧೮ ಊರ್ಧ್ವಂ ಗಚ್ಛಂತಿ ಸತ್ತ್ವಸ್ಥಾ ಮಧ್ಯೇ ತಿಷ್ಠಂತಿ ರಾಜಸಾಃ**
**ಜಘನ್ಯಗುಣವೃತ್ತಿಸ್ಥಾ ಅಧೋ ಗಚ್ಛಂತಿ ತಾಮಸಾಃ**

**ಅರ್ಥ:** ಸತ್ತ್ವಸ್ಥಾಃ=ಸತ್ತ್ವಗುಣದಲ್ಲಿರುವವರು; ಊರ್ಧ್ವಂ=ಊರ್ಧ್ವ ಲೋಕಗಳಿಗೆ; ಗಚ್ಛಂತಿ=ಹೋಗುತ್ತಿದ್ದಾರೆ; ರಾಜಸಾಃ=ರಜೋಗುಣ ಉಳ್ಳವರು; ಮಧ್ಯೆ=ಮಧ್ಯದ ಮನುಷ್ಯ ಲೋಕದಲ್ಲಿ; ತಿಷ್ಠಂತಿ=ಇರುವರು (ಜನ್ಮಿಸುವರು); ಜಘನ್ಯಗುಣವೃತ್ತಿಸ್ಥಾಃ=ನೀಚಗುಣ ಆಚರಣೆಯಲ್ಲಿರುವವರು; ತಾಮಸಾಃ=ತಮೋಗುಣವನ್ನು ಹೊಂದಿರುವವರು; ಅಧಃ=ಕೆಳಗಿನ ಲೋಕಕ್ಕೆ (ಇಲ್ಲವೆ ನೀಚವಾದ ಪಶ್ವಾದಿ ಜನ್ಮಗಳಿಗೆ); ಗಚ್ಛಂತಿ=ಹೋಗುತ್ತಿದ್ದಾರೆ.

**ತಾ||** ಸತ್ತ್ವಗುಣ ಇರುವವರು ಮರಣಾನಂತರ ಊರ್ಧ್ವ ಲೋಕಕ್ಕೆ ಹೋಗುತ್ತಿದ್ದಾರೆ. ರಜೋಗುಣ ಹೊಂದಿದವರು ಮಧ್ಯಮವಾದ ಮನುಷ್ಯಲೋಕದಲ್ಲಿ ಜನ್ಮಿಸುತ್ತಿರುವರು. ನೀಚ ಗುಣ ಪ್ರವೃತ್ತಿಯುಳ್ಳ ತಮೋಗುಣಿಗಳು (ಪಾತಾಳಾದಿ) ಅಧೋಲೋಕಗಳಿಗೆ (ಇಲ್ಲವೆ ಅಲ್ಪವಾದ ಪಶ್ವಾದಿ ಜನ್ಮಗಳಿಗೆ); ಹೋಗುತ್ತಿದ್ದಾರೆ.

**ವ್ಯಾಖ್ಯೆ:** ಸತ್ತ್ವಗುಣವಿರುವವರು ಊರ್ಧ್ವಲೋಕಕ್ಕೆ ಹೋಗುವರು ಎಂದು ಹೇಳಿರುವದರಿಂದ ಆ ಗುಣವು ಅವಲಂಬನೀಯವಾದುದೆಂದು, ರಜೋಗುಣ ತಮೋಗುಣಗಳುಳ್ಳವರು ಮಧ್ಯ ಹಾಗು, ಅಧೋಲೋಕಗಳನ್ನು ಹೊಂದುವರು ಎಂದು ಹೇಳಿರುವುದರಿಂದ ಆ ಗುಣಗಳು ಅಪೇಕ್ಷಿತವಾದವುಗಳಲ್ಲವೆಂದು ಸ್ಪಷ್ಟವಾಗುತ್ತದೆ. ಇದರಿಂದ ಊರ್ಧ್ವಗತಿಯಾಗಲೀ, ಅಧೋಗತಿಯಾಗಲೀ ಅವರವರ ಅಧೀನದಲ್ಲಿಯೇ ಇದೆಯೆಂದು ಅರ್ಥವಾಗುತ್ತದೆ ಆದ್ದರಿಂದ ಪ್ರಯತ್ನ ಪೂರ್ವಕವಾಗಿ ಸತ್ತ್ವಗುಣ ಸಮಾಶ್ರಯದ ಮೂಲಕ ಊರ್ಧ್ವಗತಿಯನ್ನೇ ಹೊಂದಲು ಸರ್ವರೂ ಯತ್ನಿಸಬೇಕು.

ಪ್ರ : ಸತ್ತ್ವಗುಣವಿರುವವರು ಮರಣಾನಂತರ ಯಾವ ಲೋಕಕ್ಕೆ ಹೋಗುವರು?

ಉ : ಊರ್ಧ್ವ ಲೋಕಕ್ಕೆ (ಊರ್ಧ್ವಗತಿಗೆ)

ಪ್ರ : ರಜೋಗುಣ ಹೊಂದಿದವರು?

ಉ : ಮಧ್ಯಮವಾದ ಮನುಷ್ಯ ಲೋಕಕ್ಕೆ (ಇಲ್ಲವೆ ಮಧ್ಯಮಗತಿಗೆ)

ಪ್ರ : ತಮೋಗುಣ ಹೊಂದಿದವರು?

ಉ : ಅಧೋಲೋಕಕ್ಕೆ (ಇಲ್ಲವೆ ಅಧೋಗತಿಗೆ)

**ಅ||** ಮೋಕ್ಷವನ್ನು ಹೊಂದುವ ಉಪಾಯವನ್ನು ಕೊಡಲಾಗುತ್ತಿದೆ-

**೧೯ ನಾನ್ಯಂ ಗುಣೇಭ್ಯಃ ಕರ್ತಾರಂ ಯದಾ ದ್ರಷ್ಟಾಽನುಪಶ್ಯತಿ**
**ಗುಣೇಭ್ಯಶ್ಚ ಪರಂ ವೇತ್ತಿ ಮದ್ಭಾವಂ ಸೋಽಧಿಗಚ್ಛತಿ**

**ಅರ್ಥ:** ಯದಾ=ಯಾವಾಗ (ಮನುಜನು); ದ್ರಷ್ಟಾ (ಭೂತ್ವಾ)=ವಿವೇಕ ವಂತನಾಗಿ (ತಾನು ದ್ರಷ್ಟನೆಂದು ಗ್ರಹಿಸಿ); ಗುಣೇಭ್ಯಃ=(ಸತ್ತ್ವಾದಿ) ಗುಣಗಳಿಗಿಂತ; ಅನ್ಯಂ=ಬೇರೆಯಾದ; ಕರ್ತಾರಂ=ಕರ್ತನನ್ನು; ನ ಅನುಪಶ್ಯತಿ=ನೋಡುವುದಿಲ್ಲವೋ; (ಆತ್ಮಾನಂ=ತನ್ನನ್ನು) ಗುಣೇಭ್ಯಃ ಚ=(ಆ) ಗುಣಗಳಿಗಿಂತ; ಪರಂ=ಅನ್ಯನಾಗಿ(ಸಾಕ್ಷಿಯಾಗಿ); ವೇತ್ತಿ= ತಿಳಿದು ಕೊಳ್ಳುತ್ತಿದ್ದಾನೋ; ಸಃ=ಅವನು; ಮದ್ಭಾವಂ=ನನ್ನ ಸ್ವರೂಪವನ್ನು; ಅಧಿಗಚ್ಛತಿ=ಹೊಂದುತ್ತಿದ್ದಾನೆ.

**ತಾ||** ಯಾವಾಗ ವಿವೇಕವಂತನು (ಸತ್ತ್ವಾದಿ) ಗುಣಗಳನ್ನು ಬಿಟ್ಟು ಬೇರೆ ಕರ್ತೃವನ್ನು ನೋಡುವುದಿಲ್ಲವೋ ಮತ್ತು ತನ್ನನ್ನು ಗುಣಗಳಿಗಿಂತ ಭಿನ್ನವಾದವನೆಂದು ತಿಳಿದುಕೊಳ್ಳುತ್ತಾನೋ ಆಗ ಆತನು ನನ್ನ ಸ್ವರೂಪವನ್ನು (ಮೋಕ್ಷವನ್ನು) ಹೊಂದುತ್ತಿದ್ದಾನೆ.

**ವ್ಯಾಖ್ಯೆ:** ಈ ಶ್ಲೋಕವು ಹಾಗು ಮುಂದಿನ ಶ್ಲೋಕವು ಬಹಳ ಮುಖ್ಯವಾದುವು. ವಿಚಾರಣಾಪರರಾದ ಸಾಧಕರು ಈ ಭಾವಗಳನ್ನು ಮತ್ತೆ ಮತ್ತೆ ಜ್ಞಾಪಕಕ್ಕೆ ತಂದುಕೊಳ್ಳಬೇಕು. ಏಕೆಂದರೆ ಸಂಸಾರಬಂಧ ವಿಮುಕ್ತಿಗೆ, ಪರಮಾತ್ಮಸ್ವರೂಪ ಪ್ರಾಪ್ತಿಗೆ (ಮೋಕ್ಷಕ್ಕೆ) ಹೆದ್ದಾರಿಯನ್ನು ಇಲ್ಲಿ ತೋರಿಸಲಾಗಿದೆ. ಜೀವಿಯು ಮಾಡುವ ಸಮಸ್ತ ಕರ್ಮಗಳಿಗೆ ತ್ರಿಗುಣಗಳೇ ಕರ್ತ. ಅಂದರೆ ತ್ರಿಗುಣಾತ್ಮಕವಾದ ಮನಸ್ಸೇ ಕರ್ತ. ಆ ತ್ರಿಗುಣಗಳೇ, ಆ ಮನಸ್ಸೇ ದೇಹೇಂದ್ರಿಯಾದಿಗಳಿಂದ ಕರ್ಮಗಳನ್ನು ಮಾಡಿಸುತ್ತಿದೆ. ಬಂಧವನ್ನು ಹೊಂದುವುದು ಆ ಮನಸ್ಸೇ; ಮೋಕ್ಷವನ್ನು ಹೊಂದುವುದೂ ಅದೇ. ಕರ್ತಾ, ಭೋಕ್ತ ಅದಕ್ಕಿಂತ ಬೇರೆಯಾದುದು ಯಾವುದೂ ಇಲ್ಲ. ಆತ್ಮಮಾತ್ರ ಸಾಕ್ಷ್ಯಿಯಾಗಿ ವರ್ತಿಸುತ್ತದೆ.

ಆದ್ದರಿಂದ ಜೀವಿಯು ವಿವೇಕವನ್ನುಪಯೋಗಿಸಿ ತಾನು ವಾಸ್ತವವಾಗಿ ಗುಣಗಳಿಗಿಂತ ಬೇರೆಯಾದವನೆಂದು, ಗುಣಗಳಿಗೆ, ದೇಹೇಂದ್ರಿಯಾದಿಗಳಿಗೆ ಸಾಕ್ಷಿಯಾದ ಆತ್ಮನೇ ತಾನೆಂದು, ಆದ್ದರಿಂದ ಆಯಾ ಕರ್ಮಗಳಿಗೆ ತಾನು ಕರ್ತನಲ್ಲವೆಂದು ಯಾವಾಗ ತಿಳಿದುಕೊಳ್ಳುವನೋ ಆಗಲೇ ಆತನು ದ್ರಷ್ಟನಾಗಿ (ದೃಗ್ರೂಪಿಯಾಗಿ) ಪರಮಾತ್ಮ ರೂಪವನ್ನೇ ಹೊಂದುತ್ತಾನೆಂದು ಇಲ್ಲಿ ಹೇಳಲಾಗಿದೆ. ಆದ್ದರಿಂದಲೇ ಮೊದಲು 'ದ್ರಷ್ಟ'ನು ಆಗಬೇಕೆಂದು ಉದ್ಬೋಧಿಸಲು ಕಾರಣವಾಗಿದೆ. ಓ ಜೀವಿಯೇ! ನೀನು ದೃಶ್ಯರೂಪಗಳಾದ ತ್ರಿಗುಣಗಳೊಡನೆ ಮನಸ್ಸಿನೊಡನೆ ದೇಹೇಂದ್ರಿಯಗಳೊಡನೆ ಐಕ್ಯವಾಗಬಾರದು. ಅವುಗಳಿಗೆ ಸಾಕ್ಷಿಯಾದ 'ದ್ರಷ್ಟ'ನಾಗು, ಎಂದು ಭಗವಂತನು ಕರುಣೆಯಿಂದ ಬೋಧಿಸುತ್ತಿದ್ದಾನೆ.

ಈ ಜಗನ್ನಾಟಕದಲ್ಲಿ ಮನಸ್ಸೇ, ತ್ರಿಗುಣಗಳೇ ಕರ್ತ. ತಾನು ನಾಟಕದಲ್ಲಿಯ ದೀಪದಂತೆ ಅವುಗಳನ್ನು ದ್ರಷ್ಟನಂತೆ, ಸಾಕ್ಷಿಯಾಗಿ ನೋಡುತ್ತಿದ್ದಾನೆ ಅಷ್ಟೆ. ತಾನು ಗುಣಗಳಿಗೆ ಅತೀತವಾಗಿ ಬೆಳಗುತ್ತಿದ್ದಾನೆ. 'ಸಿನಿಮಾ'ದಲ್ಲಿ ಅಧಿಷ್ಠಾನವಾದ ತೆರೆಯಂತೆ ಎಲ್ಲಕ್ಕೂ ಆಧಾರಭೂತನಾಗಿ, ಸುಖ ದುಃಖಗಳಿಗೆ ಪರವಾಗಿ ನಿರ್ಲೇಪವಾಗಿರುವನು. ಇದು ಪರಮಸತ್ಯ. ಪ್ರಪಂಚದಲ್ಲಿಯ ಸಮಸ್ತ ದುಃಖಗಳಿಗೆ ಕಾರಣ ಈ ಗುಣ ತಾದಾತ್ಮ್ಯವೇ. ಅಂದರೆ ಜೀವಿಯು ಗುಣಗಳೊಂದಿಗೆ ಮನಸ್ಸೊಂದಿಗೆ, ದೇಹದೊಡನೆ ಐಕ್ಯವಾಗಿ 'ನಾನು ಮಾಡುತ್ತಿದ್ದೇನೆ, ನಾನು ಹುಟ್ಟುತ್ತಿದ್ದೇನೆ, ನಾನು ಸಾಯುತ್ತಿದ್ದೇನೆ' ಇತ್ಯಾದಿ ರೂಪಗಳಲ್ಲಿ ಕರ್ತೃತ್ವವನ್ನು ಹೊಂದಿರುವನು. ಬಂಧನಕ್ಕೆ ಕಾರಣ ಈ ಕರ್ತೃತ್ವವೇ ಆಗಿದೆ. ಅದನ್ನು ಹೊಡೆದೋಡಿಸಿದ ಮರುಕ್ಷಣವೇ ಜೀವಿಯು ಭಗವತ್-ಸ್ವರೂಪವನ್ನು ಹೊಂದುವನೆಂದು ಶ್ರೀ ಕೃಷ್ಣ ಪರಮಾತ್ಮನು ಹೇಳುತ್ತಿದ್ದಾನೆ.

'*ಮದ್ಭಾವಂ ಸೋಽಧಿಗಚ್ಛತಿ*'- ಎಂದು ತಿಳಿಸಿರುವುದರಿಂದ ಯಾವ ಜೀವಿಯು ಕ್ರಿಯೆಗಳಿಗೆಲ್ಲಾ ಗುಣಗಳೇ ಕಾರಣವೆಂದು, ತಾನು ವಾಸ್ತವವಾಗಿ ಆ ಗುಣಗಳಿಗಿಂತ ಬೇರೆಯೆಂದೂ ತಿಳಿದವನು ಯಾರೇ ಆಗಲಿ ಯಾವ ಜಾತಿಗೇ ಸೇರಿರಲಿ, ಸ್ತ್ರೀಯಾಗಲಿ, ಪುರುಷನಾಗಲಿ, ಆ ಕ್ಷಣದಲ್ಲೇ ಭಗವಂತನ ಸ್ವರೂಪವನ್ನು ತಪ್ಪದೆ ಪಡೆಯುವನು. ಆದ್ದರಿಂದ ಜೀವಿಯು ಶಿವನಾಗಲು, ನರನು ನಾರಾಯಣನಾಗಲು, ಜನರು ಜನಾರ್ದನನಾಗಲು ಇದು ಒಳ್ಳೆಯ ಉಪಾಯ. ಮೋಕ್ಷಕ್ಕೆ ಇದು ಸಿದ್ಧೌಷಧ. ಇನ್ನು ಜೀವಿಯು ತಾನು ಅಲ್ಪನೆಂದು ದುರ್ಬಲನೆಂದು ತಿಳಿಯದೆ ವಾಸ್ತವವಾಗಿ ತಾನು ನಿರಂಜನನೆಂದು, ಮನಸ್ಸಾಕ್ಷಿಯೆಂದು ಗುಣಾತೀತನೆಂದು ಸಾಕ್ಷಾತ್ ಭಗವತ್ಸ್ವರೂಪನೇ ಎಂದು

ನಿಶ್ಚಯಿಸಿ ಧೈರ್ಯೋಪೇತನಾಗಿ ಅಂತಹ ವಿವೇಕವನ್ನು ಪಡೆಯಲು ಯತ್ನಿಸಬೇಕು.

'ಅಧಿಗಚ್ಛತಿ'- ಎನ್ನುವ ಪದದಿಂದ ಬ್ರಹ್ಮೈಕ್ಯವನ್ನು ಅಂತಹವನು ತಪ್ಪದೆ ಹೊಂದುವನೆಂದು ಭಗವಂತನು ಒತ್ತಿ ಹೇಳಿದಂತಾಗಿದೆ. ಆದ್ದರಿಂದ ಮುಮುಕ್ಷುಗಳು ಭಗವದ್ವಾಕ್ಯದ ಮೇಲೆ ವಿಶ್ವಾಸವನ್ನಿಟ್ಟು, ಭಯವನ್ನು ಹೊರದೂಡಿ, ತ್ರಿಗುಣಗಳನ್ನು ಭೇದಿಸಿ, ಗುಣಾತೀತ ಪರಮಾತ್ಮರೂಪಿಗಳಾಗಿ ಬೆಳಗಬೇಕು.

'ಪಶ್ಯತಿ'- ಎಂದು ಹೇಳದೆ 'ಅನುಪಶ್ಯತಿ' ಎಂದು ಹೇಳಿರುವುದರಿಂದ- 'ತಾನು ಕರ್ತನಲ್ಲವೆಂಬ' ಭಾವವನ್ನು ಮತ್ತೆ ಮತ್ತೆ ಚಿಂತನೆಮಾಡಿ ದೃಢಪಡಿಸಿಕೊಳ್ಳಬೇಕೆಂಬುದು ಭಾವ.

ಆದರೆ ಭಗವಂತನು ಹೇಳಿದ ಈ ಸತ್ಯಗಳನ್ನು ಎಚ್ಚರಿಕೆಯಿಂದ ಅರ್ಥಮಾಡಿಕೊಳ್ಳಬೇಕು. ಏಕೆಂದರೆ ಕೆಲವರು ಅವಿವೇಕಿಗಳು ಇಂದ್ರಿಯಗಳು ಏನು ಮಾಡಿದರೂ ನನಗೇನು ಸಂಬಂಧವಿಲ್ಲವೆಂದು ವಿಪರೀತವಾಗಿ ಅರ್ಥಮಾಡಿಕೊಂಡು ನಿಷಿದ್ಧ ಕಾರ್ಯಗಳನ್ನು ಮಾಡಿ ದುಃಖರೂಪ ಸಂಸಾರದಲ್ಲಿ ಬೀಳುವರು. ಅಂತಹ ಶುಷ್ಕ ವೇದಾಂತಿಗಳ ವಚನಗಳನ್ನು ಯಾರೂ ಕೇಳಬಾರದು. ತಮೋ, ರಜೋ ಗುಣಗಳನ್ನು ದಾಟಿದವನು ಇಲ್ಲವೆ ತನ್ನನ್ನು ಅವುಗಳಿಗಿಂತ ಭಿನ್ನವೆಂದು ತಿಳಿಯುವವನು ನೀಚಕಾರ್ಯಗಳಲ್ಲಿ ಎಂದೆಂದಿಗೂ ಪ್ರವೃತ್ತ ನಾಗುವುದಿಲ್ಲವೆಂದು ಖಂಡಿತವಾಗಿ ತಿಳಿಯಬೇಕು.

ಪ್ರ : ತಾನು ಮಾಡುವ ಸಮಸ್ತ ಕರ್ಮಗಳಿಗೆ ಕರ್ತನು ಯಾರು?

ಉ : ತ್ರಿಗುಣಗಳು (ತ್ರಿಗುಣಾತ್ಮಕವಾದ ಮನಸ್ಸು)

ಪ್ರ : ಮನುಜನು ವಾಸ್ತವವಾಗಿ ಎಂತಹವನು?

ಉ : ಅಕರ್ತ, ಸರ್ವಸಾಕ್ಷಿ, ನಿರ್ಗುಣಿ

ಪ್ರ : ಈ ಪ್ರಕಾರವಾಗಿ ತಿಳಿಯುವುದರಿಂದ ಉಂಟಾಗುವ ಫಲವೇನು?

ಉ : ಯಾವಾಗ ಜೀವಿಯು ತಾನು ಗುಣಗಳಿಗಿಂತ ಭಿನ್ನವೆಂದು, ಅಕರ್ತನೆಂದು ತಿಳಿಯುವನೋ ಆ ಕ್ಷಣದಲ್ಲೇ ಆತನು ಭಗವತ್ಸ್ವರೂಪವನ್ನು (ಮದ್ಭಾವಂ) ಪಡೆಯುತ್ತಾನೆ, ಮುಕ್ತಿಯನ್ನು ಹೊಂದುತ್ತಿದ್ದಾನೆ.

ಪ್ರ : ಇದರಿಂದ ಮೋಕ್ಷಕ್ಕೆ ಉಪಾಯವೇನು ಎಂದು ತಿಳಿಯುತ್ತದೆ?

ಉ : 'ತ್ರಿಗುಣಗಳೇ ಕರ್ತ, ತಾನು ಅಕರ್ತ' ಎಂದು ಭಾವಿಸಿ, ಜೀವಿಯು ಗುಣಗಳಿಗಿಂತ ಬೇರೆ ಎಂದು ತಿಳಿಯುವುದೇ ಮೋಕ್ಷೋಪಾಯ.

**ಅ||** ಈ ಪ್ರಕಾರವಾಗಿ ಗುಣಗಳನ್ನು ದಾಟಿದವನು ಜನನ ಮರಣಾದಿ ದುಃಖಗಳಿಂದ ಬಿಡುಗಡೆ ಹೊಂದಿ ಮೋಕ್ಷವನ್ನು ಪಡೆಯುವನೆಂದು ಹೇಳಲಾಗಿದೆ.

**೨೦. ಗುಣಾನೇತಾನತೀತ್ಯ ತ್ರೀನ್ ದೇಹೀ ದೇಹಸಮುದ್ಭವಾನ್**
**ಜನ್ಮಮೃತ್ಯುಜರಾದುಃಖೈರ್ವಿಮುಕ್ತೋಽಮೃತಮಶ್ನುತೇ**

**ಅರ್ಥ:** ದೇಹೀ=ಜೀವಿಯು; ದೇಹ ಸಮುದ್ಭವಾನ್=ದೇಹೋತ್ಪತ್ತಿಗಳಿಗೆ ಕಾರಣಭೂತವಾದ; ಏತಾಂ=ಈ; ತ್ರೀನ್‌ಗುಣಾನ್ ಮೂರುಗುಣಗಳನ್ನು; ಅತೀತ್ಯ=ದಾಟಿ (ಹೋಗಲಾಡಿಸಿಕೊಂಡರೆ); ಜನ್ಮಮೃತ್ಯು ಜರಾದುಃಖೈಃ= ಹುಟ್ಟು, ಸಾವು, ವೃದ್ಧಾಪ್ಯ, ದುಃಖ-ಎನ್ನುವವುಗಳಿಂದ; ವಿಮುಕ್ತಃ=ಮುಕ್ತಿ ಹೊಂದಿದವನಾಗಿ; ಅಮೃತಂ=ಮೋಕ್ಷವನ್ನು (ಮರಣ ರಹಿತ ಆತ್ಮಸ್ಥಿತಿಯನ್ನು); ಅಶ್ನುತೇ=ಹೊಂದುತ್ತಿದ್ದಾನೆ.

**ತಾ||** ಜೀವಿಯು ದೇಹೋತ್ಪತ್ತಿಗೆ ಕಾರಣಭೂತಗಳಾದ ಈ ಮೂರು ಗುಣಗಳನ್ನು ದಾಟಿ (ದಾಟಿದಲ್ಲಿ) ಜನನ, ಮರಣ, ವೃದ್ಧಾಪ್ಯ, ದುಃಖಗಳು- ಎನ್ನುವವುಗಳಿಂದ ಬಿಡುಗಡೆ ಹೊಂದಿದವನಾಗಿ ಮೋಕ್ಷವನ್ನು (ಮರಣ ರಹಿತ ಆತ್ಮಸ್ಥಿತಿಯನ್ನು) ಹೊಂದುತ್ತಿದ್ದಾನೆ.

**ವ್ಯಾಖ್ಯೆ:** *'ತ್ರೀನ್ ಗುಣಾನ್'* ಎಂದು ಹೇಳಿರುವುದರಿಂದ ರಜಸ್ತಮಗಳೊಡನೆ ಸಾತ್ವಿಕ ಗುಣವನ್ನೂ ದಾಟಿ ನಿರ್ಗುಣ ಪರಮಾತ್ಮನನ್ನು ಸೇರಬೇಕೆಂಬುದು ಭಾವ. ಆದರೆ ಮೊದಲು ತಮೋರಜೋಗುಣಗಳನ್ನು ಹೊಡೆದೋಡಿಸಿ, ಸತ್ತ್ವಗುಣವನ್ನು ಹೊಂದಬೇಕು. ನಂತರ ನಿಸ್ಸಂಕಲ್ಪಾತ್ಮ ಸ್ಥಿತಿಯಲ್ಲಿ ಆ ಸತ್ತ್ವಗುಣವು ತನ್ನಷ್ಟಕ್ಕೆ ತಾನೇ ಕರಗಿ ಹೋಗುವುದು.

ಗುಣಗಳಿಂದ ಉಂಟಾಗುವ ಭಯಂಕರವಾದ ಅಪಕಾರವನ್ನು ಹಾಗು ಅವುಗಳ ತೊಲಗುವಿಕೆಯಿಂದ ಉಂಟಾಗುವ ಉಪಕಾರವನ್ನು ಈ ಶ್ಲೋಕ ತಿಳಿಸುತ್ತದೆ. **'ದೇಹ ಸಮುದ್ಭವಾನ್'**- ದೇಹಗಳ ಸೃಷ್ಟಿಯಿಂದಲೇ ದಾರುಣವಾದ ಅಪಕಾರವಾಗುತ್ತಿದೆ. ಅವುಗಳಿಂದ ಜೀವಿಯು ಜನನ ಮರಣರೂಪವಾದ ಸಂಸಾರಜಾಲದಿಂದ ತಪ್ಪಿಸಿಕೊಳ್ಳಲಾರದವನಾಗಿದ್ದಾನೆ. ಒಂದು ದೇಹ ಹೋದರೆ ಇನ್ನೊಂದು ದೇಹ ಸಿದ್ಧವಾಗಿಯೇ ಇರುವುದು. ಈಗಾಗಲೇ ಎಷ್ಟೋ ಕೋಟಿ ಜನ್ಮಗಳು, ಶರೀರಗಳು ಆ ತ್ರಿಗುಣರೂಪ ಬೀಜದಿಂದ, ಮೂಲದಿಂದ ಉದ್ಭವಿಸಿವೆ. ಆ ಮೂಲವು ವಿಚ್ಛಿನ್ನವಾಗದಿದ್ದಲ್ಲಿ, ಇನ್ನೂ 'ಎಷ್ಟೋ ಅಗಣಿತ ಜನ್ಮಗಳು' ಬರಬಲ್ಲವು.

ಜನ್ಮ ಬರುವುದರಿಂದ ಉಂಟಾಗುವ ನಷ್ಟವೇನು? ಎಂದು ಪ್ರಶ್ನಿಸ ಬಹುದು. ಆ ನಷ್ಟವನ್ನು ಭಗವಂತನು ಈ ಶ್ಲೋಕದಲ್ಲಿ ತಿಳಿಸಿರುವನು. ವೃದ್ಧಾಪ್ಯ, ರೋಗ, ಮರಣ, ದುಃಖ ಮೊದಲಾದ ಆಪತ್ತುಗಳೆಲ್ಲಾ ಶರೀರದಿಂದಲೇ ಜೀವಿಗೆ ಉಂಟಾಗುತ್ತವೆ. ಆದ್ದರಿಂದ ಶರೀರವೇ ಇಲ್ಲದಂತೆ ಅಂದರೆ ಜನ್ಮವಿಲ್ಲದೆ ಇರುವಂತೆ ಮಾಡಿಕೊಳ್ಳುವುದೇ ಉತ್ತಮ. ಅಂತಹ ಜನ್ಮರಾಹಿತ್ಯವು ಗುಣಗಳನ್ನು ದಾಟಿದಾಗ ಉಂಟಾಗುವುದೆಂದು ಇಲ್ಲಿ ಸ್ಪಷ್ಟಮಾಡಲಾಗಿದೆ. ಆದ್ದರಿಂದ ಮುಮುಕ್ಷುವು ತನ್ನ ಸತ್ಪ್ರಯತ್ನಗಳಿಂದ ತಮೋ, ರಜೋಗುಣಗಳನ್ನು ಹೊಡೆದೋಡಿಸಿ ಸತ್ತ್ವಗುಣವನ್ನು ದಾಟಿ ಶಾಶ್ವತ ಕೈವಲ್ಯ ಪದವಿಯನ್ನು ಹೊಂದಬೇಕು. ಅದು ಮರಣರಹಿತ ಸ್ಥಿತಿಯಾದ್ದರಿಂದ ಅದನ್ನು 'ಅಮೃತ'ವೆಂದು ಕರೆದಿರುವನು.

'ಮುಕ್ತಃ' ಎಂದು ಹೇಳದೆ 'ವಿಮುಕ್ತಃ' ಎಂದು ಹೇಳಿರುವುದರಿಂದ ತ್ರಿಗುಣಗಳನ್ನು ದಾಟಿದವನು ಜನನ ಮರಣಗಳಿಂದ ವಿಮುಕ್ತ ನಾಗುವವನೆಂದರ್ಥ.

ಪ್ರ : ಈ ದೇಹಗಳು ಯಾವುದರಿಂದ ಉಂಟಾಗುತ್ತವೆ?

ಉ : ತ್ರಿಗುಣಗಳಿಂದ

ಪ್ರ : ಮರಣರಹಿತ ಕೈವಲ್ಯ (ಮೋಕ್ಷ) ಹೇಗೆ ಪ್ರಾಪ್ತಿ ಯಾಗುವುದು?

ಉ : ಈ ತ್ರಿಗುಣಗಳನ್ನು ದಾಟುವುದರಿಂದ.

ಪ್ರ : ದೇಹವು (ಜನ್ಮ) ಬಂದರೆ ನಷ್ಟವೇನು?

ಉ : ವೃದ್ಧಾಪ್ಯ, ರೋಗ, ಸಾವು, ವಿಯೋಗ, ದುಃಖ ಮುಂತಾದುವೆಲ್ಲಾ ಆ ದೇಹದಿಂದಲೇ ಉಂಟಾಗುವುದರಿಂದ ಅದು ಮಹಾ ಅನರ್ಥಕಾರಿ ಯಾದುದು. ಆದ್ದರಿಂದ ದೇಹರಹಿತ (ಜನನ ಮರಣ ರಹಿತ) ಆತ್ಮಸ್ಥಿತಿಯನ್ನು ಜೀವಿಯು ಹೊಂದಬೇಕು.

ಪ್ರ : ಮೋಕ್ಷ ಸ್ಥಿತಿ ಎಂತಹದು?

ಉ : ಅದು ಜನನ ಮರಣ ರಹಿತ ಸ್ಥಿತಿ (ಅಮೃತ)

**ಅ॥** ತ್ರಿಗುಣಗಳನ್ನು ದಾಟಿದವನು ಮೋಕ್ಷವನ್ನು ಹೊಂದುವನೆಂದು ಶ್ರೀ ಕೃಷ್ಣ ಪರಮಾತ್ಮನು ಹೇಳಲು, ಹಾಗೆ ದಾಟಿದವನು ಯಾವ ಯಾವ ಲಕ್ಷಣಗಳಿಂದ ಕೂಡಿರುವನೆಂದು ಅರ್ಜುನನಿಗೆ ಕುತೂಹಲವುಂಟಾಗಿ, ಆ ವಿಷಯವನ್ನು ಕುರಿತು ಭಗವಂತನನ್ನು ಪ್ರಶ್ನಿಸುತ್ತಿದ್ದಾನೆ-

**ಅರ್ಜುನ ಉವಾಚ :**

**೨೧ ಕೈರ್ಲಿಂಗೈಸ್ತ್ರೀನ್ಗುಣಾನೇತಾನತೀತೋ ಭವತಿ ಪ್ರಭೋ**
**ಕಿಮಾಚಾರಃ ಕಥಂ ಚೈತಾಂತ್ರೀನ್ಗುಣಾನತಿವರ್ತತೇ**

ಅರ್ಜುನ ಉವಾಚ-ಅರ್ಜುನನು ಕೇಳಿದನು.

**ಅರ್ಥ:** ಪ್ರಭೋ=ಪ್ರಭುವಾದ ಓ ಕೃಷ್ಣಾ! ಏತಾನ್=ಈ; ತ್ರೀನ್ ಗುಣಾನ್= ಮೂರುಗುಣಗಳನ್ನು; ಅತೀತಃ=ಅತಿಕ್ರಮಿಸಿದವನು (ದಾಟಿದವನು); ಕೈರ್ಲಿಂಗೈಃ=ಯಾವ ಲಕ್ಷಣಗಳಿಂದ (ಉಪಲಕ್ಷಿತಃ=ಕೂಡಿದವನಾಗಿ); ಭವತಿ= ಆಗಿರುತ್ತಾನೆ; ಕಿಮಾಚಾರಃ (ಭವತಿ)=ಎಂತಹ ವರ್ತನೆಯುಳ್ಳವನಾಗಿರುವನು; ಏತಾತ್ ತ್ರೀನ್ ಗುಣಾನ್=ಈ ಮೂರು ಗುಣಗಳನ್ನು; ಕಥಂ ಚ= ಹೇಗೆ (ಯಾವ ಉಪಾಯಗಳಿಂದ); ಅತಿವರ್ತತೇ=ಅತಿಕ್ರಮಿಸುತ್ತಿದ್ದಾನೆ? (ದಾಟುತ್ತಿದ್ದಾನೆ?)

**ತಾ॥** ಅರ್ಜುನನು ಕೇಳಿದನು-ಪ್ರಭುವಾದ ಕೃಷ್ಣಾ! ಈ ಮೂರುಗುಣಗಳನ್ನು ದಾಟಿದವನ ಲಕ್ಷಣಗಳೇನು? ಅವನು ಎಂತಹ ಆಚರಣೆಗಳನ್ನು ಹೊಂದಿರುವನು. ಮತ್ತೆ ಈ ಮೂರು ಗುಣಗಳನ್ನು ಆತನು ಹೇಗೆ ಅತಿಕ್ರಮಿಸಿರುವನು?

**ವ್ಯಾಖ್ಯೆ:** ಮೂರುಗುಣಗಳನ್ನು ದಾಟಿದವನು ಜನ್ಮಮೃತ್ಯು ಜರಾದುಃಖಗಳಿಂದ ಬಿಡುಗಡೆ ಹೊಂದಿ ಅಮೃತತ್ವ (ಮೋಕ್ಷ)ವನ್ನು ಹೊಂದುವನೆಂಬ ಭಗವದ್ವಾಕ್ಯವನ್ನು ಕೇಳಿದ ತಕ್ಷಣ ಅರ್ಜುನನಿಗೆ ಆ ಗುಣಗಳನ್ನು ಹೇಗೆ ದಾಟಬೇಕು? ಹಾಗೆ ದಾಟಿದವನು ಹೇಗೆ ಪ್ರವರ್ತಿಸುವನು? ಯಾವ ಲಕ್ಷಣಗಳನ್ನು ಹೊಂದಿರುವನು ಎನ್ನುವುದನ್ನು ತಿಳಿಯಲು ಅಪೇಕ್ಷಿಸಿ ಕೂಡಲೇ ಆ ವಿಷಯವನ್ನು ಕುರಿತು ಭಗವಂತನನ್ನು ಪ್ರಶ್ನಿಸಿದನು.

*'ಕೈರ್ಲಿಂಗೈಃ'* - 'ಯಾವ ಲಕ್ಷಣದಿಂದ, ಯಾವ ಗುರುತುಗಳಿಂದ ಗುಣಾತೀತನನ್ನು ಅರಿಯಬಹುದು?' ಎಂದು ಅರ್ಜುನನು ಕೇಳಿರುವುದು ಬಹಳ ಸಮಂಜಸವಾಗಿದೆ. ಏಕೆಂದರೆ ಕೆಲವರು ತಾವು ಇನ್ನೂ ಕೆಳ ಮಟ್ಟದಲ್ಲಿದ್ದರೂ, ದೃಶ್ಯವಾಸನೆಗಳು ಇನ್ನೂ ನಶಿಸದೇ ಇದ್ದರೂ ತಾವು ಸಿದ್ಧ ಪುರುಷರೆಂದೂ, ಗುಣಾತೀತರೆಂದು, ಜೀವನ್ಮುಕ್ತರೆಂದು ಹೇಳಿಕೊಂಡು ತಿರುಗುತ್ತಾ ಪ್ರಜೆಗಳನ್ನು ಮೋಸಗೊಳಿಸಬಹುದು. ಗುಣಾತೀತನ ಯಥಾರ್ಥವಾದ ಲಕ್ಷಣ ಹಾಗು ಚಿಹ್ನೆಗಳನ್ನು ತಿಳಿದುಕೊಂಡಲ್ಲಿ ಇನ್ನು ಅದಕ್ಕೆ ಅವಕಾಶವಿಲ್ಲ, ಮೇಲಾಗಿ ಅಂತಹ ಲಕ್ಷಣಗಳನ್ನು ತಿಳಿದಿದ್ದಲ್ಲಿ ಮನುಜನು ತಾನು ಕೂಡ ಪ್ರಯತ್ನಾತಿಶಯದಿಂದ ಅವುಗಳನ್ನು ಸಾಧಿಸಬಹುದು. ಇವುಗಳನ್ನು ಯೋಚಿಸಿ ಅರ್ಜುನನು ಸಮಯೋಚಿತ ವಾದ ಪ್ರಶ್ನೆಯನ್ನು ಕೇಳಿರುವನು. ಮೊದಲು ಅಂದರೆ ಗೀತೆಯ ಪ್ರಾರಂಭದಲ್ಲಿ, ಎರಡನೆಯ ಅಧ್ಯಾಯದಲ್ಲಿ 'ಸ್ಥಿತ ಪ್ರಜ್ಞಸ್ಯ ಕಾಭಾಷಾ' ಎನ್ನುವುದನ್ನೂ ಸಹ ಈ ಪ್ರಕಾರವಾಗಿಯೇ ಅರ್ಜುನನು ಕೇಳಿದ್ದನ್ನು ಗಮನಿಸಬಹುದು. ಸ್ಥಿತಪ್ರಜ್ಞನ ಲಕ್ಷಣಗಳಾಗಲಿ, ಗುಣಾತೀತನ ಲಕ್ಷಣಗಳಾಗಲಿ, ಅದ್ವೇಷ್ಟೃತ್ವಾದಿ ಭಕ್ತನ ಲಕ್ಷಣಗಳಾಗಲಿ, ಅಮಾನಿತ್ವಾದಿ ಜ್ಞಾನ ಗುಣಗಳಾಗಲಿ ಒಂದು ಬ್ಯಾರೋ ಮೀಟರ್ (Barometer) ನಂತಹವು. ಬ್ಯಾರೋಮೀಟರ್‌ನಿಂದ ಶೀತೋಷ್ಣಗಳನ್ನು ಹೇಗೆ ಅಳೆಯುವರೋ ಹಾಗೆ ಮನುಜನ ಆಧ್ಯಾತ್ಮಿಕ ಔನ್ನತ್ಯಗಳನ್ನು ಈ ಲಕ್ಷಣಗಳಿಂದ ಅಳೆಯಬಹುದು. ಈ ಲಕ್ಷಣಗಳನ್ನು ಪರೀಕ್ಷಿಸಿ ನೋಡಿದಾಗ ಜನಗಳಲ್ಲಿ ಆಧ್ಯಾತ್ಮಿಕ ಶಕ್ತಿ ಉಳ್ಳವರು ಯಾರೋ, ವೇಷಧಾರಿಗಳು ಯಾರೋ ಸುಲಭವಾಗಿ ಅರ್ಥವಾಗುವುದು. ಶುಷ್ಕವೇದಾಂತವನ್ನು ಅಂತ್ಯಗೊಳಿಸಲು ಪರಮಾರ್ಥಕ್ಷೇತ್ರದಲ್ಲಿ ಸೋಮಾರಿಗಳಿಂದ ಕಲ್ಪಿಸಲ್ಪಟ್ಟ ಕೃತ್ರಿಮ ವಾತಾವರಣವನ್ನು ವಿಚ್ಛಿನ್ನಗೊಳಿಸಲು, ಇಂತಹ ಪ್ರಯೋಗಗಳು ಎಷ್ಟೋ ಅವಶ್ಯಕವಾಗಿವೆ.

*'ಕಿಮಾಚರಃ'*- ಗುಣಾತೀತನ ಆಚರಣೆ, ಅನುಷ್ಠಾನ ಎಂತಹುದೋ ಅರ್ಜುನನು ತಿಳಿಯಬಯಸಿದನು. 'ಕಿಮಾಸೀತ ವ್ರಜೇತ ಕಿಂ'- ಎನ್ನುವ ಮುಂತಾದ ವಾಕ್ಯಗಳಿಂದ ಇಂತಹ ಆಚರಣೆಯನ್ನು ಕುರಿತು ಈಗಾಗಲೇ ಅರ್ಜುನನು ಪ್ರಶ್ನಿಸಿರುವನು. ಆಧ್ಯಾತ್ಮ ಕ್ಷೇತ್ರದಲ್ಲಿ ಅನುಷ್ಠಾನಕ್ಕೆ ವಿಶೇಷ ಸ್ಥಾನವಿದೆ. 'ಸಾಧ್ಯ' ವಸ್ತುವನ್ನು ಕುರಿತು, ಲಕ್ಷ್ಯವನ್ನು ಕುರಿತು ತಿಳಿಯುವುದು ಅವಶ್ಯಕವಾಗಿದ್ದರೂ ಆ ಲಕ್ಷ್ಯವನ್ನು ಯಾವ ಸಾಧನೆಯಿಂದ ಹೊಂದಬಹುದು ಎಂದು ತಿಳಿಯುವುದು ಮತ್ತೂ ಅವಶ್ಯಕ. ಏಕೆಂದರೆ ಸಾಧನೆಯನ್ನು ಅವಲಂಬಿಸಿದರೆ 'ಸಾಧ್ಯವು' ಅದಷ್ಟಕ್ಕದೇ ಕೈಗೂಡುವುದು. ಆದ್ದರಿಂದ ಅರ್ಜುನನು ಗುಣಾತೀತನ ಆಚರಣೆ ಎಂತಹುದೋ ತಿಳಿಯ ಬಯಸಿದನು. ಅರ್ಜುನನ ಈ ಪ್ರಶ್ನೆ, ಅದಕ್ಕೆ ಭಗವಂತನು ಕೊಟ್ಟ ಉತ್ತರ ಬಹಳ ಮುಖ್ಯವಾದವು. ಗೀತೆಯಲ್ಲಿಯ ಪ್ರಮುಖ ಘಟ್ಟಗಳಲ್ಲಿ ಇದೂ ಒಂದಾಗಿರು ವುದರಿಂದ, ಮುಮುಕ್ಷುಗಳು ಗುಣಾತೀತನ ಲಕ್ಷಣಗಳನ್ನು ಮನನಮಾಡಿ ಕೊಳ್ಳುತ್ತಾ ಕಾರ್ಯಾನ್ವಿತರಾಗಬೇಕು.

ಪ್ರ : ಅರ್ಜುನನು ಭಗವಂತನಿಂದ ಯಾವ ವಿಷಯಗಳನ್ನು ತಿಳಿಯಲು ಅಪೇಕ್ಷಿಸಿದನು?

ಉ : ೧) ಗುಣಾತೀತನ ಲಕ್ಷಣಗಳು ಯಾವುವು? ೨) ಆತನ ಪ್ರವರ್ತನೆ ಎಂತಹದು?- ಎನ್ನುವ ವಿಷಯಗಳನ್ನು ತಿಳಿಯಬಯಸಿದನು.

**ಅ॥** ಅರ್ಜುನನ ಆ ಪ್ರಶ್ನೆಯನ್ನು ಕೇಳಿ ಭಗವಂತನು ಗುಣಾತೀತನ ಲಕ್ಷಣಗಳನ್ನು ವಿವರವಾಗಿ ತಿಳಿಸುತ್ತಿದ್ದಾನೆ-

**ಶ್ರೀ ಭಗವಾನುವಾಚ**

**೨೨. ಪ್ರಕಾಶಂ ಚ ಪ್ರವೃತ್ತಿಂ ಚ ಮೋಹಮೇವ ಚ ಪಾಂಡವ**
**ನ ದ್ವೇಷ್ಟಿ ಸಂಪ್ರವೃತ್ತಾನಿ ನ ನಿವೃತ್ತಾನಿ ಕಾಂಕ್ಷತಿ**
**೨೩. ಉದಾಸೀನ ವದಾಸೀನೋ ಗುಣೈರ್ಯೋ ನ ವಿಚಾಲ್ಯತೇ**
**ಗುಣಾ ವರ್ತಂತ ಇತ್ಯೇವ ಯೋಽವತಿಷ್ಠತಿ ನೇಂಗತೇ**
**೨೪. ಸಮದುಃಖಸುಃಖಃಸ್ವಸ್ಥಸ್ಸಮಲೋಷ್ಟಾಶ್ಮಕಾಂಚನಃ**
**ತುಲ್ಯಪ್ರಿಯಾಪ್ರಿಯೋ ಧೀರಸ್ತುಲ್ಯನಿಂದಾತ್ಮಸಂಸ್ತುತಿಃ**

**೨೫ ಮಾನಪಮಾನಯೋಸ್ತುಲ್ಯಸ್ತುಲ್ಯೋ ಮಿತ್ರಾರಿಪಕ್ಷಯೋಃ**
**ಸರ್ವಾರಂಭಪರಿತ್ಯಾಗೀ ಗುಣಾತೀತಃ ಸ ಉಚ್ಯತೇ**

ಶ್ರೀ ಭಗವಾನುವಾಚ-ಶ್ರೀ ಭಗವಂತನು ಹೇಳಿದನು.

**ಅರ್ಥ:** ಪಾಂಡವ=ಓ ಅರ್ಜುನಾ! ಯಃ=ಯಾರು; ಸಂಪ್ರ ವೃತ್ತಾನಿ-ಸಂಪ್ರಾಪ್ತಗಳಾದ; ಪ್ರಕಾಶಂ ಚ=ಸತ್ತ್ವಗುಣಸಂಬಂಧವಾದ ಪ್ರಕಾಶವನ್ನು (ಸುಖವನ್ನು); ಪ್ರವೃತ್ತಿಂ ಚ=ರಜೋಗುಣಸಂಬಂಧವಾದ ಕಾರ್ಯಪ್ರವೃತ್ತಿಯನ್ನು; ಮೋಹಂ ಏವ ಚ=ತಮೋಗುಣ ಸಂಬಂಧವಾದ ಮೋಹವನ್ನು (ನಿದ್ರಾಲಸ್ಯಗಳನ್ನು); ನ ದ್ವೇಷ್ಟಿ=ದ್ವೇಷಿಸುವುದಿಲ್ಲವೋ; ನಿವೃತ್ತಾನಿ=ಬಿಟ್ಟು ಹೋದ ಆ ಗುಣ ಸಂಬಂಧಕಾರ್ಯಗಳನ್ನು; ನಕಾಂಕ್ಷತಿ=ಕೋರುವುದಿಲ್ಲವೋ; ಉದಾಸೀನ ವತ್=ತಟಸ್ಥವಾಗಿ; ಆಸೀನಃ=ಉಳ್ಳವನಾಗಿ; ಗುಣೈ=ಗುಣಗಳಿಂದ (ಗುಣ ಕಾರ್ಯಗಳಾದ ಸುಖಗಳಿಂದ); ನ ವಿಚಾಲ್ಯತೇ=ಚಲಿಸದೆ ಇರುವನೋ, ಗುಣಾಃ=ಗುಣಗಳು; ವರ್ತಂತೆ=ಪ್ರವರ್ತಿಸುತ್ತವೆ; ಇತಿ ಏವ=ಎಂದು; ಯಃ= ಯಾವನು; ಅವತಿಷ್ಠತಿ=(ತಿಳಿದುಕೊಂಡು) ಇದ್ದಾನೋ; ನ ಇಂಗತೇ=(ಯಾವ ಪರಿಸ್ಥಿತಿಯಲ್ಲೂ) ಚಲಿಸುವುದಿಲ್ಲವೋ; ಸಮದುಃಖಸುಖಃ=ದುಃಖ ಸುಖಗಳಲ್ಲಿ ಸಮಭಾವ ಹೊಂದಿರುವವನು; ಸ್ವಸ್ಥಃ=ಆತ್ಮದಲ್ಲಿಯೇ ಸ್ಥಿರವಾಗಿರುವವನು; ಸಮಲೋಷ್ಟಾಶ್ಮಕಾಂಚನಃ-ಮಣ್ಣು, ಕಲ್ಲು, ಬಂಗಾರ- ಇವುಗಳಲ್ಲಿ ಸಮಬುದ್ಧಿಯುಳ್ಳವನು; ತುಲ್ಯಪ್ರಿಯಾ ಪ್ರಿಯಃ=ಇಷ್ಟಾನಿಷ್ಟಗಳಲ್ಲಿ ಸಮಭಾವ ಹೊಂದಿರುವವನು; ಧೀರಃ=ಧೈರ್ಯವಂತನು (ಇಲ್ಲವೆ, ಆತ್ಮಾನಾತ್ಮ ವಿವೇಕವುಳ್ಳವನು); ತುಲ್ಯ ನಿಂದಾತ್ಮ ಸಂಸ್ತುತಿಃ=ತನ್ನನ್ನು ಇತರರು ದೂಷಿಸಿದರೂ, ಹೊಗಳಿದರೂ ಸಮಬುದ್ಧಿಯುಳ್ಳವನು; ಮಾನಪಮಾನಯೋಃ=ಸನ್ಮಾನ, ಅವಮಾನದಲ್ಲಿ; ತುಲ್ಯಃ= ಸಮಬುದ್ಧಿ ಯುಳ್ಳವನು; ಮಿತ್ರಾರಿ ಪಕ್ಷಯೋಃ= ಶತ್ರು ಮಿತ್ರರಲ್ಲಿ; ತುಲ್ಯಃ=ಸಮಭಾವವುಳ್ಳವನು; ಸರ್ವಾರಂಭ ಪರಿತ್ಯಾಗಿ=ಸಮಸ್ತ ಕಾರ್ಯಗಳಲ್ಲಿ ಕರ್ತೃತ್ವ ಬುದ್ಧಿ ಇಲ್ಲದೆ ಇರುವವನು (ಇಲ್ಲವೆ ಕಾಮ್ಯ ಕರ್ಮಗಳನ್ನೆಲ್ಲಾ ಬಿಟ್ಟಿರುವವನು, ಇಲ್ಲವೆ ಸಮಸ್ತ ಕರ್ಮಗಳನ್ನು ತ್ಯಜಿಸಿ ನಿರಂತರ ಬ್ರಹ್ಮನಿಷ್ಠೆಯಲ್ಲಿರುವವನು) (ಆಗಿರುವನೋ); ಸಃ=ಆತನು; ಗುಣಾತೀತಃ=ಗುಣಾತೀತನೆಂದು (ಗುಣಗಳನ್ನು ದಾಟಿದವನೆಂದು); ಉಚ್ಯತೇ= ಹೇಳಲಾಗುತ್ತದೆ.

**ತಾ||** ಶ್ರೀಭಗವಂತನು ಹೇಳಿದನು- ಓ ಅರ್ಜುನಾ! ಯಾವನು ತನಗೆ ಸಂಪ್ರಾಪ್ತವಾದ ಸತ್ತ್ವಗುಣ ಸಂಬಂಧವಾದ ಪ್ರಕಾಶವನ್ನು (ಸುಖವನ್ನು) ಆಗಲಿ, ರಜೋಗುಣ ಸಂಬಂಧವಾದ ಕಾರ್ಯಪ್ರವೃತ್ತಿಯನ್ನಾಗಲಿ, ತಮೋ ಗುಣ ಸಂಬಂಧವಾದ (ನಿದ್ರಾಲಸ್ಯಗಳನ್ನು) ಗುಣಗಳನ್ನು ದ್ವೇಷಿಸುವುದಿಲ್ಲವೋ, ಅವು ತೊಲಗಿ ಹೋದನಂತರ ಅವುಗಳನ್ನು ಅಪೇಕ್ಷಿಸುವುದಿಲ್ಲವೋ, ತಟಸ್ಥವಾಗಿದ್ದು ಗುಣಗಳಿಂದ (ಗುಣಕಾರ್ಯಗಳಾದ ಸುಖಾದಿಗಳಿಂದ) ವಿಚಲಿತವಾಗುವುದಿಲ್ಲವೋ, ಗುಣಗಳು ಪ್ರವರ್ತಿಸುತ್ತಿವೆ (ತಾನಲ್ಲ) ಎಂದು ತಿಳಿದಿರುವನೋ, (ಎಂತಹ ಪರಿಸ್ಥಿತಿ ಬಂದರೂ ವಿಚಲಿತನಾಗದೆ ನಿಶ್ಚಲವಾಗಿರುವನೋ) ಮತ್ತೆ ಯಾವನು ಸುಖದುಃಖಗಳಲ್ಲಿ ಸಮಭಾವ ಹೊಂದಿರುವನೋ, ಆತ್ಮದಲ್ಲೇ ಸ್ಥಿರವಾಗಿದ್ದು, ಮಣ್ಣು, ಕಲ್ಲು, ಬಂಗಾರಗಳಲ್ಲಿ ಸಮಬುದ್ಧಿ ಹೊಂದಿರುವನೋ, ಇಷ್ಟಾನಿಷ್ಟಗಳಲ್ಲಿ ಸಮಭಾವ ಹೊಂದಿರುವನೋ, ಧೈರ್ಯವಂತನಾಗಿದ್ದು ಸಮಸ್ತ ಕಾರ್ಯಗಳಲ್ಲಿ ಕರ್ತೃತ್ವಬುದ್ಧಿಯನ್ನು ಬಿಟ್ಟಿರುವನೋ, ಇಲ್ಲವೆ ಕಾಮ್ಯಕರ್ಮಗಳನ್ನೆಲ್ಲಾ ಬಿಟ್ಟಿರುವನೋ, ಇಲ್ಲವೆ ಸಮಸ್ತ ಕರ್ಮಗಳನ್ನು ತ್ಯಜಿಸಿ ನಿರಂತರ ಬ್ರಹ್ಮನಿಷ್ಠೆಯಲ್ಲಿರುವನೋ ಅಂತಹವನನ್ನು ಗುಣಾತೀತನೆನ್ನುವರು.

**ವ್ಯಾಖ್ಯೆ:** ಗುಣಾತೀತನ ಲಕ್ಷಣಗಳನ್ನು ಇಲ್ಲಿ ಉಲ್ಲೇಖಿಸಲಾಗಿದೆ. ಈ ಲಕ್ಷಣಗಳಿಂದ ಮನುಜನು ತ್ರಿಗುಣಗಳನ್ನು ದಾಟಿರುವವನೇ ಇಲ್ಲವೇ ಎನ್ನುವುದನ್ನು ತಿಳಿಯಬಹುದು. ಗುಣಾತೀತನು ಸದಾ ತಟಸ್ಥನಾಗಿದ್ದು ಒಂದು ವೇಳೆ ಯಾವುದೇ ಕಾರಣದಿಂದ ಸತ್ತ್ವಗುಣ ಸಂಬಂಧವಾದ ಸುಖವನ್ನಾಗಲಿ, ರಜೋಗುಣ ಸಂಬಂಧವಾದ ಕಾರ್ಯ ಪ್ರವೃತ್ತಿಯನ್ನಾಗಲಿ, ತಮೋಗುಣ ಸಂಬಂಧವಾದ ಮೋಹ, ನಿದ್ರಾಲಸ್ಯಗಳನ್ನು ಹೊಂದಿದ್ದೇ ಆದರೆ ಅವುಗಳೆಡೆಗೆ ದ್ವೇಷವಾಗಲಿ, ಅವು ನಿವಾರಣೆಯಾದಲ್ಲಿ ಮತ್ತೆ ಅವುಗಳನ್ನು ಅಪೇಕ್ಷಿಸುವುದಾಗಲೀ ಇರುವುದಿಲ್ಲ. ಗುಣಾತೀತನ ತಾಟಸ್ಥ್ಯ ಹಾಗು ಔದಾಸೀನತೆಯನ್ನು ತಿಳಿಸಲು ಈ ವಿಷಯ ಹೇಳಲ್ಪಟ್ಟಿದೆಯೇ ಆಗಲಿ, ಮೋಹಾದಿಗುಣಗಳು ಒಳ್ಳೆಯವು ಎನ್ನುವ ಅರ್ಥದಲ್ಲಲ್ಲ. ಮತ್ತೆ, ಇಲ್ಲಿ ಮೋಹವೆಂದರೆ ಅಜ್ಞಾನವೆಂದಲ್ಲ. ಏಕೆಂದರೆ ಗುಣಾತೀತನು ಅಜ್ಞಾನದಿಂದ ಯಾವಾಗಲೋ ವಿಮುಕ್ತಿ ಹೊಂದಿರುವನು. ಭಗವಂತನು ತಿಳಿಸಿದ ಈ ಗುಣಾತೀತನ ಲಕ್ಷಣಗಳಲ್ಲಿ 'ನಿಶ್ಚಲತ್ವ', 'ಸಮತ್ವ' ಎನ್ನುವುವು ಪ್ರಧಾನವಾಗಿವೆ.

೧) 'ನಿಶ್ಚಲತ್ವ'- ಚಿಕ್ಕ ಚಿಕ್ಕ ವಿಷಯಗಳಿಗೂ ಅಜ್ಞಾನಿ ಹೆದರಿ ಹೋಗುವನು. ತನ್ನ ಸಮತ್ವವನ್ನು ಕಳೆದುಕೊಳ್ಳುವನು. ಆದರೆ ಗುಣಾತೀತನು ಗಾಂಭೀರ್ಯದಿಂದಿದ್ದು ಎಂತಹ ಪರಿಸ್ಥಿತಿ ಬಂದರೂ ವಿಚಲಿತನಾಗುವುದಿಲ್ಲ (ನ ವಿಚಾಲ್ಯತೇ ನೇಂಗತೇ). ನಿಶ್ವಾಸವಾಯು ಅಥವ ಸಮುದ್ರದ ಚಿಕ್ಕ ಅಲೆ ಪರ್ವತವನ್ನು ಹೇಗೆ ಮಿಸುಗಾಡಿಸಲು ಸಾಧ್ಯವಿಲ್ಲವೋ, ಮೇಘಗಳ ಆಚೆ ಇರುವ ಸೂರ್ಯನನ್ನು ಮೇಘಗಳಿಂದ ಹುಟ್ಟಿದ ಮಿಂಚು, ಸಿಡಿಲುಗಳು, ಮಳೆ ತಾಕಲು ಹೇಗೆ ಅಸಾಧ್ಯವೋ, ತ್ರಿಗುಣಗಳನ್ನು ದಾಟಿ ಆಚೆ ಇರುವ ಆತ್ಮನಲ್ಲಿ ಸ್ಥಿರವಾಗಿರುವ ಯೋಗಿಪುಂಗವನನ್ನು ಪ್ರಪಂಚದ ಯಾವುದೇ ಆಗುಹೋಗಾಗಲಿ, ಆಪತ್ತಾಗಲಿ ವಿಚಲಿತಗೊಳಿಸಲು ಸಾಧ್ಯವಿಲ್ಲ. ಆತನು ಸದಾ ಆತ್ಮನಲ್ಲಿಯೇ ಸ್ಥಿರವಾಗಿರುವನು. ಸಂಕಟ ಪರಿಸ್ಥಿತಿಗಳೆಲ್ಲಾ ಮನಸ್ಸಿಗೆ ಸೇರಿದವುಗಳಾಗಿವೆ. ಗುಣಗಳಿಗೆ ಸಂಬಂಧಿಸಿದವುಗಳು. ಉಪಾಧಿಗೆ ಸೇರಿದವುಗಳು. 'ನಾನು ಗುಣಗಳಿಗಿಂತ ಬೇರೆಯಾಗಿದ್ದೇನೆ, ಮನಸ್ಸಿಗೆ ಅತೀತನಾಗಿದ್ದೇನೆ' ಎಂದು ನಿರ್ಣಯಿಸಿ ಗುಣಾತೀತನು ಮಹಾ ಧೈರ್ಯವಂತನಾಗಿರುವನು.

೨) 'ಸಮತ್ವ'- ಮಾನಾಪಮಾನಗಳಲ್ಲಿ, ನಿಂದಾಸ್ತುತಿಗಳಲ್ಲಿ, ಸುಖದುಃಖಗಳಲ್ಲಿ, ಇಷ್ಟಾನಿಷ್ಟಗಳಲ್ಲಿ, ಶತ್ರು ಮಿತ್ರಾದಿಗಳಲ್ಲಿ, ಶಿಲಾ ಕಾಂಚನಗಳಲ್ಲಿ ಗುಣಾತೀತನಾದ ಮಹನೀಯನು ಸಮಬುದ್ಧಿ ಹೊಂದಿರುವನು. ಗುಣಾತೀತನಾದ ಶುಕ ಮುನಿಯು ಜನಕನ ಆಸ್ಥಾನಕ್ಕೆ ಬಂದಾಗ ಜನಕನು ಏರ್ಪಡಿಸಿದ ಪರೀಕ್ಷೆಯಲ್ಲಿ ಆತನು ಎಂತಹ ಸಮಬುದ್ಧಿ ತೋರಿಸಿದನು ಎನ್ನುವುದನ್ನು ಜ್ಞಾಪಿಸಿಕೊಳ್ಳುವುದು ಉಚಿತ. ಅಂತಹ ಮಹನೀಯರು ನಿರಂತರವಾಗಿ ಆತ್ಮ ಸ್ಥಿತಿಯಲ್ಲೇ (ಧ್ಯೇಯಾಕಾರದಲ್ಲಿಯೇ, ಸತ್ಯವಸ್ತುವಿನಲ್ಲಿಯೇ) ಸ್ಥಿತಿ ಹೊಂದಿರುವರು. ಆದ್ದರಿಂದ ಮಿಥ್ಯಾರೂಪ ಪ್ರಪಂಚದ ಇಂತಹ ದ್ವಂದ್ವಗಳು ಅವರನ್ನು ಏನೂ ಮಾಡಲಾರವು. ಮತ್ತೆ ನಿಂದಾಸ್ತುತಿಗಳು, ಸುಖದುಃಖಗಳು ಮೊದಲಾದುವು ಮನೋಧರ್ಮಗಳೇ ಆದ್ದರಿಂದ ಮನಸ್ಸಾಕ್ಷಿಯಾದ ಆತ್ಮನಲ್ಲಿ ಸದಾ ಸುಸ್ಥಿತಿಯಾಗಿರುವ ಗುಣಾತೀತರನ್ನು ಜ್ಞಾನಿಗಳನ್ನು ಅವು ವಿಚಲಿತಗೊಳಿಸಲಾರವು. ಮತ್ತೆ ಯಾವನೋ ಒಬ್ಬನಿಗೆ ಉಂಟಾಗುವ ಸುಖದುಃಖಗಳು ಇನ್ನೊಬ್ಬನನ್ನು ಹೇಗೆ ಬಾಧಿಸಲಾರವೋ, ಹಾಗೆಯೇ ಉಪಾಧಿ ತನಗಿಂತ ಬೇರೆ ಅಂದುಕೊಂಡ ಜ್ಞಾನಿಯನ್ನು, ಗುಣಾತೀತನನ್ನು ಆ ದ್ವಂದ್ವಗಳು ಬಾಧಿಸುವುದಿಲ್ಲ.

*'ಸರ್ವಾರಂಭ ಪರಿತ್ಯಾಗಿ'*- ಈ ಪದಕ್ಕೆ 'ಸಮಸ್ತ ಕಾರ್ಯಗಳಲ್ಲಿ ಕರ್ತೃತ್ವವನ್ನು ಬಿಟ್ಟವನು' ಎನ್ನುವ ಅರ್ಥವೇ ಸಮಂಜಸವಾಗಿದೆ. ಇಲ್ಲವೆ ಕಾಮ್ಯ ಕರ್ಮಗಳನ್ನೆಲ್ಲಾ ಬಿಟ್ಟವನೆಂದೂ ಹೇಳಬಹುದು. ಇಲ್ಲವೆ ಬೇರೆ ಎಲ್ಲಾ ಕಾರ್ಯಗಳನ್ನು ತ್ಯಜಿಸಿ ನಿರಂತರ ಬ್ರಹ್ಮ ನಿಷ್ಠೆಯಲ್ಲಿರುವವನು ಎಂದೂ ಹೇಳಬಹುದು.

ಇಂತಹವನು 'ಯಃ'-ಯಾವನೋ 'ಸಃ'-ಆತನು 'ಗುಣಾತೀತಃ ಉಚ್ಯತೇ'- ಗುಣಾತೀತನೆಂದು ಹೇಳಲ್ಪಡುವನು-ಎಂದು ತಿಳಿಸಿ ರುವುದರಿಂದ- 'ಯ'ಚ್ಛಬ್ದ ಪ್ರಯೋಗ ಮಾಡಿರುವುದರಿಂದ ಯಾರಾದರೂ ಸರಿ ಆ ಸ್ಥಿತಿಯನ್ನು ಪಡೆಯಬಹುದೆಂದೂ, ಹಾಗೆ ಪ್ರಯತ್ನ ಪೂರ್ವಕವಾಗಿ ಕಷ್ಟಬಿದ್ದು ಆ ರೀತಿ ಬದಲಾದವನೇ ಗುಣಾತೀತನಾಗುವವನಾಗಲಿ, ಬೇರೆಯವರು ಆಗುವುದಿಲ್ಲ ಎನ್ನುವುದು ಸ್ಪಷ್ಟವಾಗುತ್ತದೆ. ಆದ್ದರಿಂದ ಸರ್ವರೂ ಅಂತಹ ಮಹೋನ್ನತ ಸ್ಥಿತಿಹೊಂದಲು ಪ್ರಯತ್ನಿಸಿ ಕೃತಾರ್ಥರಾಗಬೇಕು.

ಪ್ರ : ಗುಣಾತೀತನ ಲಕ್ಷಣಗಳನೇನು?

ಉ : ಯಾವನು ತನಗೆ ಸಂಪ್ರಾಪ್ತವಾದ ಸತ್ತ್ವಗುಣ ಸಂಬಂಧವಾದ ಪ್ರಕಾಶ (ಸುಖ)ವನ್ನಾಗಲಿ, ರಜೋಗುಣ ಸಂಬಂಧವಾದ ಕಾರ್ಯ ಪ್ರವೃತ್ತಿಯನ್ನಾಗಲಿ, ತಮೋಗುಣ ಸಂಬಂಧವಾದ ಮೋಹ (ನಿದ್ರಾಲಸ್ಯ)ಗಳನ್ನಗಾಲಿ ದ್ವೇಷಿಸುವುದಿಲ್ಲವೋ; ಅವುಗಳಿಂದ ಬಿಡುಗಡೆ ಹೊಂದಿದನಂತರ ಮತ್ತೆ ಅಪೇಕ್ಷಿಸುವುದಿಲ್ಲವೋ; ತಟಸ್ಥನಾಗಿದ್ದು ಆಯಾ ಗುಣಕಾರ್ಯಗಳಿಂದ ಎಳ್ಳಷ್ಟು ಪ್ರಭಾವಿತ ನಾಗುವುದಿಲ್ಲವೋ; ಗುಣಗಳು ಮಾತ್ರ ಪ್ರವರ್ತಿಸುತ್ತವೆ, ಎಂದು ತಿಳಿದಿರುವನೋ;ಯಾವ ಪರಿಸ್ಥಿತಿಯಲ್ಲೂ ವಿಚಲಿತ ನಾಗುವುದಿಲ್ಲವೋ; ಮತ್ತೆ ಯಾವನು ಆತ್ಮದಲ್ಲಿಯೇ ಸ್ಥಿರವಾಗಿರುವನೋ; ಮಣ್ಣು, ಕಲ್ಲು, ಬಂಗಾರದಲ್ಲಿ ಸಮ ಬುದ್ಧಿ ಹೊಂದಿರುವನೋ; ಸುಖದುಃಖ, ಇಷ್ಟಾ ನಿಷ್ಟಗಳಲ್ಲಿ ನಿಂದಾಸ್ತುತಿಗಳಲ್ಲಿ, ಮಾನಪಮಾನಗಳಲ್ಲಿ, ಶತ್ರು ಮಿತ್ರರಲ್ಲಿ ಸಮಭಾವ ಹೊಂದಿರುವನೋ; ಧೀರನಾಗಿ ವರ್ತಿಸುವನೋ; ಸಮಸ್ತ ಕಾರ್ಯಗಳಲ್ಲಿ ಕರ್ತೃತ್ವವನ್ನು ಬಿಟ್ಟಿರುವನೋ; (ಇಲ್ಲವೆ ಕಾಮ್ಯ ಕರ್ಮಗಳನ್ನೆಲ್ಲಾ ತ್ಯಜಿಸಿರುವನೋ, ಇಲ್ಲವೆ ಸಮಸ್ತ ಕರ್ಮಗಳನ್ನು ತ್ಯಜಿಸಿ ನಿರಂತರ ಬ್ರಹ್ಮನಿಷ್ಠೆಯಲ್ಲಿರುವನೋ) ಅಂತಹವನು ಗುಣಾತೀತ ಎಂದು ಕರೆಯಲ್ಪಡುತ್ತಾನೆ. ಆದ್ದರಿಂದ ಈ ಸದ್ಗುಣಗಳು ಗುಣಾತೀತನ ಲಕ್ಷಣಗಳು.

**ಅ||** ಅಚಂಚಲ ಭಕ್ತಿಯಿಂದ ತನ್ನನ್ನು ಸೇವಿಸುವವನು ತ್ರಿಗುಣಗಳನ್ನು ದಾಟಿ ಬ್ರಹ್ಮಸಾಕ್ಷಾತ್ಕಾರವನ್ನು ಪಡೆಯಬಲ್ಲನೆಂದು ಹೇಳಲಾಗುತ್ತಿದೆ-

**೨೬ ಮಾಂ ಚ ಯೋಽವ್ಯಭಿಚಾರೇಣ ಭಕ್ತಿಯೋಗೇನ ಸೇವತೇ**
**ಸ ಗುಣಾನ್ ಸಮತೀತ್ಯೈತಾನ್ ಬ್ರಹ್ಮಭೂಯಾಯ ಕಲ್ಪತೇ**

**ಅರ್ಥ:** ಯಃ=ಯಾವನು; ಮಾಂ ಚ=ನನ್ನನ್ನೇ; ಅವ್ಯಭಿಚಾರೇಣ= ಅಚಂಚಲವಾದ (ಇತರರನ್ನು ಆಶ್ರಯಿಸದೆ); ಭಕ್ತಿಯೋಗೇನ=ಭಕ್ತಿಯೋಗ ದಿಂದ; ಸೇವತೇ=ಸೇವಿಸುತ್ತಿದ್ದಾನೊ; ಸಃ=ಆತನು; ಏತಾನ್=ಈ; ಗುಣಾನ್= ಗುಣಗಳನ್ನು; ಸಮತೀತ್ಯಾ=ದಾಟಿ, ಬ್ರಹ್ಮ ಭೂಯಾಯ=ಬ್ರಹ್ಮನಾಗಲು (ಜೀವನ್ಮುಕ್ತನಾಗಲು); ಕಲ್ಪತೇ=ಸಮರ್ಥನಾಗುತ್ತಿದ್ದಾನೆ,

**ತಾ||** ಯಾವನು ನನ್ನನ್ನೇ ಅಚಂಚಲವಾದ ಭಕ್ತಿಯೋಗದಿಂದ ಸೇವಿಸುತ್ತಿದ್ದಾನೋ, ಆತನು ಈ ಗುಣಗಳನ್ನೆಲ್ಲಾ ದಾಟಿ ಬ್ರಹ್ಮನಾಗಲು (ಜೀವನ್ಮುಕ್ತನಾಗಲು) ಸಮರ್ಥನಾಗುತ್ತಿದ್ದಾನೆ.

**ವ್ಯಾಖ್ಯೆ:** ತ್ರಿಗುಣಗಳಾಚೆಯಲ್ಲಿ-ಪರಮಾತ್ಮನು ಇದ್ದಾನೆ. ತ್ರಿಗುಣಗಳನ್ನು ದಾಟಿದರೆ ಭಗವತ್ಪ್ರಾಪ್ತಿ ಸಿದ್ಧಿಸುವುದು. ಆದರೆ ಅವುಗಳನ್ನು ದಾಟುವುದು ಹೇಗೆ? ಎಷ್ಟೋ ವಿಚಾರಣೆ, ಮನೋನಿಗ್ರಹಣೆ, ಸಂಯಮ ಅದಕ್ಕೆ ಅವಶ್ಯಕ. ಭಕ್ತಿಯ ಸಹಾಯದಿಂದ ಈ ಜ್ಞಾನ ಸ್ಥಿತಿ ಸುಲಭವಾಗಿ ಲಭಿಸಬಲ್ಲದು. ಆದ್ದರಿಂದಲೇ ಗೀತಾಚಾರ್ಯನು ಎಲ್ಲಾ ಅಧ್ಯಾಯಗಳಲ್ಲಿ ಹಾಗು ಎಲ್ಲಾ ಯೋಗಗಳಲ್ಲಿ ಇದರ ಬಗ್ಗೆ ಸ್ವಲ್ಪ ಸ್ವಲ್ಪ ಉಲ್ಲೇಖಮಾಡಿರುವನು. ಈ ಹದಿನಾಲ್ಕನೆಯ ಅಧ್ಯಾಯದಲ್ಲಿ ಅಖಂಡವಾದ ಜ್ಞಾನೋಪದೇಶವನ್ನು ಹೇಳುವ ಸಂದರ್ಭದಲ್ಲಿಯೂ ಕೊನೆಯಲ್ಲಿ ಭಕ್ತಿಯೋಗದ ಅವಶ್ಯಕತೆಯನ್ನು ಹೇಳಿರುವನು. ಆದರೆ ಸಾಮಾನ್ಯ ಭಕ್ತಿ ಸಾಕಾಗದೆಂದೂ, ಅಚಂಚಲ ಭಕ್ತಿ, 'ಅವ್ಯಭಿಚಾರಿಣಿ ಭಕ್ತಿ', ಅನನ್ಯ ಭಕ್ತಿ ಇರಬೇಕೆಂದು ಬೋಧಿಸಲಾಗಿದೆ. ಅಂದರೆ ದೃಶ್ಯ ವಿಷಯಗಳಲ್ಲಿ ಹಾಯದೇ ಇರುವ ಏಕಾಂತ ಭಕ್ತಿ ಅವಶ್ಯಕ ಎಂದು ಅರ್ಥ. ಭಕ್ತಿಮಾರ್ಗ ಸರ್ವರಿಗೂ ಬಹಳ ಸುಲಭವಾದುದಾಗಿರುವುದರಿಂದ, ಅಂತಹ ಉತ್ತಮ ಭಕ್ತಿಯನ್ನು ಪ್ರತಿಯೊಬ್ಬರೂ ಸಂಪಾದಿಸಿದರೆ ತದ್ವಾರ ಭಗವತ್ಕೃಪೆಯನ್ನು, ಬ್ರಹ್ಮ ಜ್ಞಾನ ಪ್ರಾಪ್ತಿಯನ್ನು, ಅದರಿಂದ ಬ್ರಹ್ಮಾನು ಭೂತಿಯನ್ನು ಪಡೆಯಲು ಅನುಕೂಲವಾಗುತ್ತದೆ. ಆ ವಿಷಯವನ್ನೇ ಇಲ್ಲಿ ತಿಳಿಸಲಾಗಿದೆ.

ಬ್ರಹ್ಮತ್ವವನ್ನು ಯಾವನು ಹೊಂದಬಲ್ಲನು? ಮೋಕ್ಷ ಸ್ಥಿತಿ ಹೇಗೆ ಉಂಟಾಗುತ್ತದೆನ್ನುವುದನ್ನು ಇಲ್ಲಿ ತಿಳಿಸಲಾಗಿದೆ. ಅಚಂಚಲ ಭಕ್ತಿಯುಳ್ಳವನೇ ಮೋಕ್ಷಕ್ಕೆ, ಆತ್ಮಾನುಭೂತಿಗೆ ಅರ್ಹತೆಯನ್ನು ಸಂಪಾದಿಸುವನೆಂದು ಸ್ಪಷ್ಟವಾಗಿ ಇಲ್ಲಿ ಹೇಳಲಾಗಿದೆ. ಆದ್ದರಿಂದ ಇಲ್ಲಿ ಯೋಗ್ಯತೆಯೇ ಪ್ರಧಾನವಾಗಲಿ, ಜಾತಿ ಮತ ಕುಲ ವರ್ಣಾಶ್ರಮಗಳಲ್ಲ.

*'ಅತೀತ್ಯ'*- ಎಂದು ಹೇಳದೆ *'ಸಮತೀತ್ಯ'* ಎಂದು ಹೇಳಿರುವುದರಿಂದ ನಿರ್ಮಲ ಭಕ್ತಿಯಿರುವವನು ತ್ರಿಗುಣಗಳನ್ನು ದಾಟಬಲ್ಲನು ಎಂದು ತಿಳಿಯುತ್ತದೆ.

*'ಕಥಂ ಚೈತಾಂ ತ್ರೀನ್ಗುಣಾನ್ ಅತಿವರ್ತತೇ'*- 'ಈ ಗುಣಗಳನ್ನು ಹೇಗೆ ದಾಟಬಹುದು? ಎನ್ನುವ ಅರ್ಜುನನ ಪ್ರಶ್ನೆಗೆ ಈ ಶ್ಲೋಕವು ಉತ್ತರವಾಗಿದೆ. ಅಚಂಚಲ ಭಕ್ತಿಯಿಂದ (ಜ್ಞಾನ ಪ್ರಾಪ್ತಿ ಪಡೆದು, ತದ್ವಾರ) ಮೂರು ಗುಣಗಳನ್ನು ದಾಟಿ ಮನುಜನು ಬ್ರಹ್ಮೈಕ್ಯವನ್ನು ಹೊಂದುತ್ತಾನೆಂದು ಇಲ್ಲಿ ಹೇಳಲಾಗಿದೆ., ಆದ್ದರಿಂದ ಸುಲಭವಾದ ಈ ಭಕ್ತಿಯೋಗದ ಸಹಾಯದಿಂದ ಸಾಧಕನು ಆತ್ಮ ಜ್ಞಾನವನ್ನು ಹೊಂದಿ ತ್ರಿಗುಣಗಳನ್ನು ದಾಟಿ ಮುಕ್ತಿಯನ್ನು ಶೀಘ್ರವಾಗಿ ಪಡೆಯಬಹುದು.

**ಅ||** ತಾನು ಸಾಕ್ಷಾತ್ ಪರಬ್ರಹ್ಮನೆಂದು ಶ್ರೀ ಕೃಷ್ಣಮೂರ್ತಿ ತಿಳಿಸುತ್ತಿದ್ದಾನೆ.

**೨೭ ಬ್ರಹ್ಮಣೋ ಹಿ ಪ್ರತಿಷ್ಠಾಽಹಮಮೃತಸ್ಯಾವ್ಯಯಸ್ಯ ಚ**
**ಶಾಶ್ವತಸ್ಯ ಚ ಧರ್ಮಸ್ಯ ಸುಖಸ್ಯೈಕಾಂತಿಕಸ್ಯ ಚ**

**ಅರ್ಥ:** ಹಿ=ಹೇಗೆಂದರೆ; ಅಹಂ=ನಾನು; ಅಮೃತಸ್ಯ=ನಾಶರಹಿತನು; ಅವ್ಯಯಸ್ಯ ಚ=ನಿರ್ವಿಕಾರನೂ; ಶಾಶ್ವತಸ್ಯ ಧರ್ಮಸ್ಯ ಚ=ಶಾಶ್ವತ ಧರ್ಮ ಸ್ವರೂಪವು;

ಏಕಾಂತಿಕಸ್ಯ ಸುಖಸ್ಯ ಚ=(ದುಃಖಮಿಶ್ರಿತವಲ್ಲದ) ನಿರತಿಶಯ (ಅಚಂಚಲ) ಆನಂದ ಸ್ವರೂಪವಾದ; ಬ್ರಹ್ಮಣಃ=ಬ್ರಹ್ಮನಿಗೆ; ಪ್ರತಿಷ್ಠಾ=ಆಶ್ರಯವು (ಅಂದರೆ ಬ್ರಹ್ಮದ ಸ್ವರೂಪವು) ಆಗಿದ್ದೇನೆ.

**ತಾ||** ಏಕೆಂದರೆ, ನಾನು ನಾಶರಹಿತನು, ನಿರ್ವಿಕಾರನು, ಶಾಶ್ವತ ಧರ್ಮ ಸ್ವರೂಪಿಯು (ದುಃಖ ಮಿಶ್ರಿತವಲ್ಲದ) ನಿರತಿಶಯ (ಅಚಂಚಲ) ಆನಂದ ಸ್ವರೂಪನಾದ ಬ್ರಹ್ಮನಿಗೆ ಆಧಾರವು (ಅಂದರೆ ಬ್ರಹ್ಮದ ಸ್ವರೂಪವು) ಆಗಿದ್ದೇನೆ.

**ವ್ಯಾಖ್ಯೆ:** 'ಅಚಂಚಲ ಭಕ್ತಿಯಿಂದ ನನ್ನನ್ನು ಸೇವಿಸುವವನು ತ್ರಿಗುಣಗಳನ್ನು ದಾಟಿ ಬ್ರಹ್ಮವನ್ನು ಹೊಂದುವನು', ಎಂದು ಹಿಂದಿನ ಶ್ಲೋಕದಲ್ಲಿ ಶ್ರೀ ಕೃಷ್ಣ ಮೂರ್ತಿ ತಿಳಿಸಿ, ತಾನು ವಾಸ್ತವವಾಗಿ ಯಾರು, ತನ್ನ ಯಥಾರ್ಥ ಸ್ವರೂಪವು ಎಂತಹದು ಎನ್ನುವುದನ್ನು ಈ ಶ್ಲೋಕದಲ್ಲಿ ವಿಶದೀಕರಿಸುತ್ತಿದ್ದಾನೆ. ಶ್ರೀಕೃಷ್ಣನು ಸಾಮಾನ್ಯ ಮಾನವನಲ್ಲ. ಸಾಕ್ಷಾತ್ ಪರಮಾತ್ಮನೇ, ಪರಬ್ರಹ್ಮನೇ. ಆ ಸತ್ಯವನ್ನೇ ಇಲ್ಲಿ ಹೇಳಲಾಗಿದೆ. ಆತನು ಯಶೋದಾತನಯನು ಮಾತ್ರವಲ್ಲ; ನಾಶರಹಿತವಾದ, ಶಾಶ್ವತ ಧರ್ಮಸ್ವರೂಪವಾದ ನಿರತಿಶಯ ಆನಂದ ರೂಪವಾದ ಬ್ರಹ್ಮವೆಂದು ಶ್ರೀ ಕೃಷ್ಣಮೂರ್ತಿ ತಿಳಿಸಿದನು ಈ ಕಾರಣದಿಂದ ಆತನನ್ನು ಅಚಂಚಲ ಭಕ್ತಿಯಿಂದ ಧ್ಯಾನಿಸುವವರು, ಭ್ರಮರ ಕೀಟ ನ್ಯಾಯದಂತೆ ಬ್ರಹ್ಮದಲ್ಲೇ ಲಯಹೊಂದಿ ಬ್ರಹ್ಮ ಸ್ವರೂಪಿಗಳೇ ಆಗುವರು. ಧ್ಯಾತ, ಧ್ಯೇಯಾಕಾರವಾಗಿ ಪರಿಣಮಿಸುವನು. ಆ ಪರಬ್ರಹ್ಮನ ಸ್ವರೂಪವನ್ನು ಇಲ್ಲಿ ವಿಶದವಾಗಿ ತಿಳಿಸಲಾಗಿದೆ. ಅದು ೧) ಅಮೃತ, ಅವ್ಯಯ- ಅಂದರೆ ಮರಣರಹಿತವಾದುದು, ವಿಕಾರ ವರ್ಜಿತವಾದದ್ದು- ಈ ಪದಗಳ ದ್ವಾರ ಬ್ರಹ್ಮದ 'ಸತ್' ಅಂಶವು ನಿರೂಪಿತವಾಗುತ್ತದೆ. ಮತ್ತೆ ಅದು ೨) ಶಾಶ್ವತ ಧರ್ಮ ಸ್ವರೂಪ ಈ ಪದದಿಂದ ಬ್ರಹ್ಮದ 'ಚಿತ್' ಅಂಶವು ನಿರೂಪಿಸಲ್ಪಟ್ಟಿದೆ. ೩) ನಿರತಿಶಯಾನಂದ ರೂಪ- ಈ ಪದದಿಂದ 'ಆನಂದ'ದ ಅಂಶವು ನಿರೂಪಿತವಾಗಿದೆ. ಈ ಪ್ರಕಾರವಾಗಿ ಸತ್, ಚಿತ್, ಆನಂದವಾದ ಪರಬ್ರಹ್ಮನೇ ತಾನೆಂದು ಶ್ರೀ ಕೃಷ್ಣಪರಮಾತ್ಮನು ತಿಳಿಸಿದನು. ಉಪಾಸನಾ ಸೌಲಭ್ಯಕ್ಕಾಗಿ ಪ್ರಾರಂಭದಲ್ಲಿ ಶ್ರೀ ಕೃಷ್ಣನನ್ನು ಯಶೋದಾತನಯನ ರೂಪದಲ್ಲಿ, ಶ್ರೀರಾಮನನ್ನು ಕೌಸಲ್ಯಾತನಯನ ರೂಪದಲ್ಲಿ ಧ್ಯಾನಿಸಿದರೂ, ವಾಸ್ತವವಾಗಿ ಅವರಿಬ್ಬರೂ ನಿರ್ಗುಣ, ನಿರಾಕಾರ, ಸಚ್ಚಿದಾನಂದ ಪರಬ್ರಹ್ಮ ರೂಪಿಗಳೇ ಎಂದು ತಿಳಿದುಕೊಳ್ಳಲೇಬೇಕು. ಈ ಶ್ಲೋಕದಿಂದ ದ್ವೈತ, ವಿಶಿಷ್ಟಾದ್ವೈತ, ಅದ್ವೈತಗಳ ಲಕ್ಷಣವು ಕೊನೆಗೆ ಒಂದೇ ಆಗುವುದೆಂದು ಸ್ಪಷ್ಟವಾಗುತ್ತದೆ. ಏಕೆಂದರೆ ದ್ವೈತ, ವಿಶಿಷ್ಟಾದ್ವೈತ ಪ್ರತಿಪಾದಕರು ಯಾವ ಭಗವದ್ರೂಪವನ್ನು ಅರ್ಚಿಸುತ್ತಿದ್ದಾರೋ ಆ ರೂಪವು ವಾಸ್ತವವಾಗಿ ಸಚ್ಚಿದಾನಂದವೇ ಆಗಿದೆಯೆಂದು ಇಲ್ಲಿ ತಿಳಿಯುತ್ತದೆ. ಭಕ್ತಿಯೋಗ ಹಾಗು ಜ್ಞಾನ ಯೋಗಗಳು ಈ ಶ್ಲೋಕಗಳಲ್ಲಿ ಪರಸ್ಪರ ಆಲಿಂಗನಮಾಡಿಕೊಳ್ಳುತ್ತಿವೆ. ಆದ್ದರಿಂದ ಬೇರೆ ಬೇರೆ ಸಂಪ್ರದಾಯದವರು ಪರಸ್ಪರ ವಿಮರ್ಶಿಸಿಕೊಳ್ಳದೆ ಎಲ್ಲರು ಧ್ಯಾನಿಸುವುದು ಒಂದೇ ಪರಬ್ರಹ್ಮ ಎಂದು ತಿಳಿದು, ಅವರವರ ಸಂಸ್ಕಾರಕ್ಕೆ ಅನುಗುಣವಾದ ಉಪಾಸನಾಪದ್ಧತಿಯನ್ನು, ಧ್ಯೇಯಾಕಾರವನ್ನು, ಏರ್ಪಾಡು ಮಾಡಿಕೊಂಡು ನಡೆದರೆ ಕೊನೆಗೆ ಆ ಪರಬ್ರಹ್ಮವನ್ನೇ ಸೇರುವರು.

ಪ್ರ : ಶ್ರೀ ಕೃಷ್ಣಮೂರ್ತಿ ವಾಸ್ತವವಾಗಿ ಎಂತಹವನು?

ಉ : ಪರಬ್ರಹ್ಮಸ್ವರೂಪಿ

ಪ್ರ : ಪರಬ್ರಹ್ಮವು ಎಂತಹದು?

ಉ : ೧) ನಾಶರಹಿತವಾದುದು. ನಿರ್ವಿಕಾರವಾದುದು (ಸತ್)
೨) ಶಾಶ್ವತ ಧರ್ಮ ಸ್ವರೂಪವಾದುದು (ಚಿತ್)
೩) ನಿರತಿಶಯ ಆನಂದರೂಪಿಯಾದುದು (ಆನಂದ)

**ಓಮ್**

ಇತಿ ಶ್ರೀಮದ್ಭಗವದ್ಗೀತಾಸೂಪನಿಷತ್ಸು ಬ್ರಹ್ಮವಿದ್ಯಾಯಾಂ ಯೋಗಶಾಸ್ತ್ರೇ
ಶ್ರೀ ಕೃಷ್ಣಾರ್ಜುನ ಸಂವಾದೇ ಗುಣತ್ರಯವಿಭಾಗ ಯೋಗೋ ನಾಮ

**ಚತುರ್ದಶೋಽಧ್ಯಾಯಃ**

ಇದು ಉಪನಿಷತ್ಪ್ರತಿಪಾದಕವು, ಬ್ರಹ್ಮವಿದ್ಯೆಯೂ, ಯೋಗಶಾಸ್ತ್ರವೂ
ಶ್ರೀ ಕೃಷ್ಣಾರ್ಜುನ ಸಂವಾದವಾದ ಶ್ರೀಭಗವದ್ಗೀತೆಯಲ್ಲಿ ಗುಣತ್ರಯವಿಭಾಗ ಯೋಗವೆನ್ನುವ

**ಹದಿನಾಲ್ಕನೆಯ ಅಧ್ಯಾಯ**

**ಓಮ್ ತತ್ ಸತ್**

# ಪುರುಷೋತ್ತಮಪ್ರಾಪ್ತಿಯೋಗ

## ಶ್ರೀ ಭಗವದ್ಗೀತೆ

### ಅಥ ಪಂಚಾದಶೋಽಧ್ಯಾಯಃ
### ಹದಿನೈದನೆಯ ಅಧ್ಯಾಯ
### ಪುರುಷೋತ್ತಮಪ್ರಾಪ್ತಿಯೋಗಃ - ಪುರುಷೋತ್ತಮಪ್ರಾಪ್ತಿಯೋಗ

**ಈ ಅಧ್ಯಾಯದ ಹೆಸರು :**

'ಪುರುಷೋತ್ತಮ ಪ್ರಾಪ್ತಿ ಯೋಗ'- 'ಪುರುಷೋತ್ತಮ' ಎಂದರೆ ಪರಮಾತ್ಮ ಉಪಾಧಿ (ಕ್ಷೇತ್ರ) ತಾನೆಂಬ ಕ್ಷರಪುರುಷನಿಗಿಂತ, ಜೀವಿ (ಮನಸ್ಸೇ ತಾನು ಎನ್ನುವ) ಅಕ್ಷರ ಪುರುಷನಿಗಿಂತ* ಭಿನ್ನವಾಗಿ ಅವರಿಬ್ಬರಿಗಿಂತ ಉತ್ತಮನಾಗಿರುವುದರಿಂದ ಪರಮಾತ್ಮನನ್ನು ಪುರುಷೋತ್ತಮನೆಂದು ಕರೆಯುವರು. ಅಂತಹ ಪುರುಷೋತ್ತಮನಾದ ಪರಮಾತ್ಮನ ಸ್ವರೂಪವೇನು? ಅವನು ಎಂತಹವನು? ಅವನನ್ನು ಹೊಂದುವ ಮಾರ್ಗವೇನು? ಹಾಗೆ ಅವನನ್ನು ಹೊಂದುವುದರಿಂದ ಉಂಟಾಗುವ ಫಲವೇನು?- ಮುಂತಾದ ವಿಷಯಗಳನ್ನೆಲ್ಲಾ ತಿಳಿಸಲ್ಪಟ್ಟ ಅಧ್ಯಾಯವಾದುದರಿಂದ ಇದಕ್ಕೆ 'ಪುರುಷೋತ್ತಮ ಪ್ರಾಪ್ತಿಯೋಗ' ಎನ್ನುವ ಹೆಸರು ಬಂದಿದೆ.

**ಈ ಅಧ್ಯಾಯದಲ್ಲಿಯ ಪ್ರಧಾನ ವಿಷಯಗಳು:**

೧) ಸಂಸಾರ ವೃಕ್ಷ ವರ್ಣನೆ, ಭಗವತ್ಪ್ರಾಪ್ತಿಗೆ ಉಪಾಯ- (೧ನೆಯ ಶ್ಲೋಕದಿಂದ ೬ನೆಯ ಶ್ಲೋಕದವರೆಗೆ)

೨) ಜೀವಾತ್ಮವನ್ನು ಕುರಿತ ವಿಚಾರಣೆ- (೭ನೆಯ ಶ್ಲೋಕದಿಂದ ೧೧ನೆಯ ಶ್ಲೋಕದವರೆಗೆ)

೩) ಸರ್ವತ್ರ ಭಗವಂತನ ಅಸ್ತಿತ್ವವನ್ನು ತಿಳಿಸುವುದು, ಭಗವತ್ಪ್ರಭಾವವನ್ನು ವರ್ಣಿಸುವುದು- (೧೨ನೆಯ ಶ್ಲೋಕದಿಂದ ೧೫ನೆಯ ಶ್ಲೋಕದವರೆಗೆ)

೪) ಕ್ಷರಾಕ್ಷರ ಪುರುಷರನ್ನು ಹಾಗು ಪುರುಷೋತ್ತಮನನ್ನು ಕುರಿತ ವಿವರಣೆ - (೧೬ನೆಯ ಶ್ಲೋಕದಿಂದ ೨೦ನೆಯ ಶ್ಲೋಕದವರೆಗೆ)

**ಪೂರ್ವಾಧ್ಯಾಯದೊಡನೆ ಈ ಅಧ್ಯಾಯಕ್ಕೆ ಇರುವ ಸಂಬಂಧ :**

ಹಿಂದಿನ ಅಧ್ಯಾಯದಲ್ಲಿ ತ್ರಿಗುಣಗಳನ್ನು ಕುರಿತು ವಿವರವಾಗಿ ತಿಳಿಸಿ, ಕೊನೆಯಲ್ಲಿ ಅವುಗಳನ್ನು ದಾಟುವ ಉಪಾಯಗಳನ್ನು ತಿಳಿಸುತ್ತಾ ಅಚಂಚಲವಾದ ಭಕ್ತಿ ಆ ಕಾರ್ಯವನ್ನು ಚೆನ್ನಾಗಿ ಸಾಧಿಸಬಲ್ಲದೆಂದೂ, ಅಂತಹ ಭಕ್ತಿಯಿಂದ ಮನುಜನು ಮೂರು ಗುಣಗಳನ್ನು ದಾಟಿ ಬ್ರಹ್ಮಸಾಕ್ಷಾತ್ಕಾರ ಹೊಂದಬಲ್ಲನೆಂದು ೨೬ನೆಯ ಶ್ಲೋಕದಲ್ಲಿ ಭಗವಂತನು ಹೇಳಿದನು. ಅಂತಹ ಅನನ್ಯ, ಅವ್ಯಭಿಚಾರ ಭಕ್ತಿಯನ್ನು ಪ್ರೋತ್ಸಾಹಿಸುವ ನಿಮಿತ್ತವಾಗಿ, ಹಾಗು ಅಂತಹ ಭಕ್ತಿ, ಜೀವಿಗಳಲ್ಲಿ ಉದ್ಭವಿಸುವುದಕ್ಕೆ ಅನುಕೂಲ ವಾಗಲೆಂದು ಪುರುಷೋತ್ತಮನಾದ ಪರಮಾತ್ಮನ ಸ್ವರೂಪವನ್ನೂ, ಆತನನ್ನು ಹೊಂದುವ ಮಾರ್ಗ ಹಾಗು ಹೊಂದುವುದರಿಂದ ಉಂಟಾಗುವ ಪ್ರಯೋಜನವನ್ನೂ ತಿಳಿಸುವಂತಹ ಈ ಅಧ್ಯಾಯವನ್ನು ಪ್ರಾರಂಭಿಸಲಾಗಿದೆ. ಮತ್ತೆ ಭಗವದ್ಭಕ್ತಿ ಅಭಿವೃದ್ಧಿ ಹೊಂದಲು ವಿಷಯ ವಿರಕ್ತಿ ಅತ್ಯಾವಶ್ಯಕ ವಾದುದರಿಂದ ಅಂತಹ ವಿರಾಗವನ್ನು ಬೋಧಿಸುವ ನಿಮಿತ್ತ ಮೊದಲು ಈ ದೃಶ್ಯರೂಪಸಂಸಾರವನ್ನು ಒಂದು ಅಶ್ವತ್ಥ ವೃಕ್ಷಕ್ಕೆ ಹೋಲಿಸಿ ಅದನ್ನು ಅಸಂಗವೆನ್ನುವ ಖಡ್ಗದಿಂದ ಛೇದಿಸಿಹಾಕಬೇಕೆಂದು ತಿಳಿಸಿರುವನು. ಅಂತಹ ಸಂಸಾರವೃಕ್ಷದ ವರ್ಣನೆಯೊಡನೆ ಈ ಅಧ್ಯಾಯ ಮೊದಲಾಗುತ್ತದೆ-

**ಶ್ರೀ ಭಗವಾನುವಾಚ :**

**೧. ಊರ್ಧ್ವಮೂಲ ಮಧಃಶಾಖ ಮಶ್ವತ್ಥಂ ಪ್ರಾಹುರವ್ಯಯಮ್**
**ಛಂದಾಂಸಿ ಯಸ್ಯ ಪರ್ಣಾನಿ ಯಸ್ತಂ ವೇದ ಸ ವೇದವಿತ್**

ಶ್ರೀ ಭಗವಾನುವಾಚ-ಶ್ರೀ ಭಗವಂತನು ಹೇಳಿದನು.

**ಅರ್ಥ:** ಯಸ್ಯ=ಯಾವುದಕ್ಕೆ; ಛಂದಾಂಸಿ=ವೇದಗಳು; ಪರ್ಣಾನಿ= ಎಲೆಗಳಾಗಿ ವೆಯೋ (ಅಂತಹ); ಅಶ್ವತ್ಥಮ್=ಸಂಸಾರವೆನ್ನುವ ಅಶ್ವತ್ಥ ವೃಕ್ಷದ; ಊರ್ಧ್ವಮೂಲಂ=ಬೇರುಗಳು ಮೇಲಿದ್ದು; ಅಧಃಶಾಖಂ=ಕೆಳಗೆ ಕೊಂಬೆಗಳಿರುವುವು; ಅವ್ಯಯಂ=(ಜ್ಞಾನ ಪ್ರಾಪ್ತಿಯಾಗುವವರೆಗೂ) ನಾಶವಾಗದೇ ಇರುವುದು; ಪ್ರಾಹುಃ=(ಹಿರಿಯರು) ಹೇಳುವರು (ಇಲ್ಲವೆ, ವೇದಗಳು ಹೇಳುತ್ತಿವೆ); ತತ್=ಅದನ್ನು; ಯಃ=ಯಾವನು; ವೇದ=ತಿಳಿದು

---

* ಇಲ್ಲಿ ಅಕ್ಷರ ಪುರುಷನೆಂದರೆ ಅಕ್ಷರ ಪರಬ್ರಹ್ಮವೆಂದು ಅರ್ಥವಲ್ಲ. ಭೌತಿಕ ದೇಹ ನಶಿಸಿದರೂ ನಶಿಸದೇ ಇರುವ ಜೀವಿಯು ಎಂದು ಅರ್ಥ.

ಕೊಳ್ಳುತ್ತಿದ್ದಾನೋ; ಸಃ= ಆತನು; ವೇದವಿತ್=ವೇದಾರ್ಥವನ್ನು ತಿಳಿದವನು (ಆಗುತ್ತಿದ್ದಾನೆ).

**ತಾ॥** ಶ್ರೀ ಭಗವಂತನು ಹೇಳಿದನು- ಯಾವುದಕ್ಕೆ ವೇದಗಳು ಎಲೆಗಳಾಗಿವೆಯೋ ಅಂತಹ ಸಂಸಾರವೆನ್ನುವ ಅಶ್ವತ್ಥ ವೃಕ್ಷದ ಬೇರುಗಳು ಮೇಲಿದ್ದು, ಕೆಳಗೆ ಕೊಂಬೆಗಳಿರುವುವು. ಅದು (ಜ್ಞಾನ ಪ್ರಾಪ್ತಿಯಾಗುವವರೆಗೆ) ನಾಶವಾಗದೇ ಇರುವುದೆಂದು ಹಿರಿಯರು ಹೇಳುವರು. ಅದನ್ನು ಯಾವನು ತಿಳಿದುಕೊಳ್ಳುತ್ತಿದ್ದಾನೋ ಆತನು ವೇದಾರ್ಥವನ್ನು ತಿಳಿದವನಾಗುತ್ತಾನೆ.

**ವ್ಯಾಖ್ಯೆ:** ಈ ಸಂಸಾರವನ್ನು ವೃಕ್ಷಕ್ಕೆ ಹೋಲಿಸಲಾಗಿದೆ. ಆದರೆ ಎಲ್ಲ ವೃಕ್ಷಗಳಂತೆ ಅದಕ್ಕೆ ಬೇರು ಕೆಳಗೆ, ಕೊಂಬೆಗಳು ಮೇಲಿರುವುದಿಲ್ಲ. ವಿರುದ್ಧವಾಗಿ ಬೇರುಗಳು ಮೇಲೆ, ಕೊಂಬೆಗಳು ಕೆಳಗೆ ಇವೆ. ಇಂತಹ ವೈಪರೀತ್ಯಕ್ಕೆ ಈ ಕೆಳಗಿನ ಕಾರಣಗಳನ್ನು ಕೊಡಬಹುದು.

೧) ಪರಮಾತ್ಮನಿಂದಲೇ ಅವ್ಯಕ್ತ ಮಹದಹಂಕಾರಾದಿಗಳು, ಸಮಸ್ತ ಜಗತ್ತು ಆವಿರ್ಭವಿಸಿರುವುದರಿಂದ ಊರ್ಧ್ವವಾಗಿ ಬೆಳಗುತ್ತಿರುವ ಪರಮಾತ್ಮನೇ ಕೆಳಗಿನ ಜಗತ್ತಿಗೆ ಕಾರಣಭೂತನೆಂದು ನಿರೂಪಿಸಲೆಂದು ಮೇಲೆ ಮೂಲವಿದ್ದು ಕೆಳಗೆ ಕೊಂಬೆಗಳು ಇರುವ ಈ ಬ್ರಹ್ಮಾಂಡ ವೃಕ್ಷವನ್ನು ಚಿತ್ರಿಸಿದ್ದಿರಬಹುದು.

೨) ಇಲ್ಲವೆ, ಮಾಯಾಕಾರ್ಯವೆಲ್ಲಾ ತಲೆಕೆಳಗಿನ ವ್ಯವಹಾರ ವಾಗಿರುವುದರಿಂದ* ಈ ಸಂಸಾರ ವೃಕ್ಷವೂ ಕೂಡ ತಲೆಕೆಳಗಾಗಿದೆ. ಒಳ್ಳೆಯದನ್ನು ಕೆಟ್ಟದ್ದೆಂದು, ಕೆಟ್ಟದ್ದನ್ನು ಒಳ್ಳೆಯದೆಂದು; ಇಲ್ಲದೆ ಇರುವುದನ್ನು ಇರುವುದೆಂದೂ, ಇದ್ದದ್ದನ್ನು ಇಲ್ಲದೇ ಇರುವುದೆಂದೂ; ಭ್ರಮೆಯನ್ನುಂಟುಮಾಡುವುದಾದ್ದರಿಂದ ನೀರಿನಲ್ಲಿ ಪ್ರತಿಬಿಂಬಿತವಾದ ವೃಕ್ಷದಂತೆ ಈ ಸಂಸಾರ ವೃಕ್ಷವನ್ನು ತಲೆಕೆಳಗಾಗಿ ವರ್ಣಿಸಲಾಗಿದೆ.

೩) ವೃಕ್ಷವು ಮಾರ್ಗದ ಪಕ್ಕದಲ್ಲಿದ್ದರೆ ಅದರಿಂದ ಯಾತ್ರಿಕರಿಗೆ ತೊಂದರೆಯಿರುವುದಿಲ್ಲ. ಆದರೆ ಗಾಳಿಗೆ ತಲೆಕೆಳಗಾಗಿ ದಾರಿಗೆ ಅಡ್ಡ ಬಿದ್ದರೆ ಆಗ ಕೊಂಬೆಗಳು ಕೆಳಗೆ, ಬೇರುಗಳು ಮೇಲೆ ಇರುವುವು. ಆಗ ಆ ವೃಕ್ಷದಿಂದ ಯಾತ್ರಿಕರಿಗೆ ಅವರೋಧವುಂಟಾಗುವುದು. ಆ ವಿಧವಾಗಿಯೇ ಈ ಸಂಸಾರ ವೃಕ್ಷ ಬ್ರಹ್ಮ ಮಾರ್ಗದಲ್ಲಿ ಪಯಣ ಮಾಡುವವರಿಗೆ ಪ್ರಬಲವಾದ ಅವರೋಧಗಳನ್ನು ಕಲ್ಪಿಸುತ್ತದೆ ಯಾದ್ದರಿಂದ ಅದನ್ನು ತಲೆಕೆಳಗಾಗಿರುವುದೆಂದು ವರ್ಣಿಸಿದ್ದಿರಬಹುದು.

'ಅಶ್ವತ್ಥಂ'- 'ಶ್ವಃ' ಎಂದರೆ ನಾಳೆ, 'ನಸ್ಥಃ'- ಇರದೇ ಇರುವುದು- 'ಅಶ್ವತ್ಥಃ'- ಅಶ್ವತ್ಥವು ಅಂದರೆ ನಾಳೆ ಇರುವುದೋ ಇಲ್ಲವೋ ಎಂಬ ಸಂದೇಹದಿಂದ ಕೂಡಿರುವುದೇ ಈ ಸಂಸಾರ ವೃಕ್ಷ. ನಶ್ವರವಾದುದೆಂದು ಭಾವ. ಕ್ಷಣಿಕಗಳಾದ ದೇಹಗಳು ಹಾಗು ಪದಾರ್ಥಗಳು ಇಂದು ಇದ್ದು ನಾಳೆ ನಾಶವಾಗಿ, ವಿಕಾರವಾಗುವಂತಹುಗಳಾಗಿರುವುದರಿಂದ 'ಅಶ್ವತ್ಥಂ' ಎನ್ನುವ ಹೆಸರು ಇದಕ್ಕೆ ಅನ್ವರ್ಥವಾಗಿದೆ. ಆದರೆ 'ಅವ್ಯಯಂ'- ನಾಶರಹಿತ ವಾದುದು - ಎಂದು ಇಲ್ಲಿ ಹೇಳಿರುವುದರ ಅರ್ಥ ಪ್ರವಾಹ ರೂಪದಲ್ಲಿ ನಿತ್ಯವಾಗಿರುವುದಾಗಿ ಕಾಣುವುದಾಗಲಿ ಶಾಶ್ವತವಾದುದಲ್ಲ. ಮತ್ತೆ ಆತ್ಮಜ್ಞಾನವನ್ನು ಹೊಂದದೇ ಇರುವವರೆಗೆ ಈ ಜನನ ಮರಣಗಳು ಜೀವಿಯನ್ನು ಜೊತೆಯಲ್ಲೇ ಇಟ್ಟುಕೊಳ್ಳುವುದರಿಂದ, ಜ್ಞಾನ ಪ್ರಾಪ್ತಿಯಾಗು ವವರೆಗೆ ಸ್ಥಿರವಾಗಿರುವುದರಿಂದ, ಅಜ್ಞಾನಿಗಳಿಗೆ ಚಿರಕಾಲ ಜನ್ಮ ಜರಾದಿ ದುಃಖಗಳನ್ನುಂಟುಮಾಡುವುದರಿಂದ, ಈ ಸಂಸಾರವೃಕ್ಷವನ್ನು ಶಾಶ್ವತವೆಂದು ಹೇಳಲಾಗಿದೆಯಾಗಲಿ, ಆತ್ಯಂತಿಕ ನಿತ್ಯತ್ವ ಅದಕ್ಕಿಲ್ಲ. ಹಾಗಿರುವುದರಿಂದಲೇ ಮುಂದಿನ ಶ್ಲೋಕದಲ್ಲೇ 'ಅಸಂಗ' ಶಸ್ತ್ರದಿಂದ ಛೇದಿಸಿ ಹಾಕಬೇಕೆಂದು ಭಗವಂತನು ಹೇಳಿರುವನು.

'ಯಸ್ತಂ ವೇದ ಸ ವೇದವಿತ್' - ಈ ಸಂಸಾರ ಸ್ಥಿತಿಯ ರಹಸ್ಯವನ್ನು ತಿಳಿದಿದ್ದೇ ಆದರೆ ವೇದಗಳ ಸಾರವನ್ನು ತಿಳಿದಂತೆ ಎಂದು ಹೇಳಲ್ಪಟ್ಟಿದೆ. ಪ್ರತಿಬಿಂಬರೂಪವಾದ ಈ ಜಗತ್ತಿನ ಮೂಲ, ಬಿಂಬ ರೂಪವಾದ ಪರಮಾತ್ಮನೇ ಎಂದು ವೇದಗಳು ಉದ್ಘೋಷಿಸುತ್ತಿವೆ. ಆದ್ದರಿಂದ ಪರಮಾತ್ಮನಿಂದಲೇ ಈ ಜಗತ್ತು ವಿಸ್ತರಿಸಲ್ಪಟ್ಟಿದೆಯೆಂದು ತಿಳಿದವನು, ಅಂತಹ ಬ್ರಹ್ಮ ಬೀಜದಿಂದ ಜಗದ್ವೃಕ್ಷ ಆವಿರ್ಭವಿಸಿದೆಯೆಂದು ತಿಳಿದವನು, ವೇದಾರ್ಥವನ್ನು ಚೆನ್ನಾಗಿ ತಿಳಿದವನೇ ಆಗುವನು.

ಪ್ರ : ಸಂಸಾರ ವೃಕ್ಷ ಎಂತಹದು?

ಉ : ಅದು ೧) ಮೇಲೆ ಬೇರು, ಕೆಳಗೆ ಕೊಂಬೆಗಳನ್ನು ಹೊಂದಿದೆ
೨) ಜ್ಞಾನಪ್ರಾಪ್ತಿಯಾಗುವವರೆಗೆ ನಾಶವಾಗದೆ ಇರುವುದು
೩) ವೇದಗಳನ್ನು ಎಲೆಗಳಾಗಿ ಹೊಂದಿರುವುದು.

ಪ್ರ : ವೇದಾರ್ಥವನ್ನು ತಿಳಿದವನು ಯಾರು?

ಉ : ಈ ಪ್ರಕಾರವಾಗಿ ಸಂಸಾರ ವೃಕ್ಷವನ್ನು ಕುರಿತು ಅರಿತವನು ಅಂದರೆ ಬ್ರಹ್ಮದಿಂದ ಜಗತ್ತು ಆವಿರ್ಭವಿಸಿದೆಯೆಂದು ತಿಳಿದವನು, ಈ ಜಗತ್ತಿಗೆ ಆಧಾರ ಪರಮಾತ್ಮನೇ ಎಂದು ನಂಬಿದವನು ವೇದಾರ್ಥ ವನ್ನು ತಿಳಿದವನಾಗುವನು.

**ಅ॥** ಆ ಸಂಸಾರ ವೃಕ್ಷದ ವರ್ಣನೆ ಮುಂದುವರಿಯುತ್ತಿದೆ-

೨. **ಅಧಶ್ಚೋರ್ಧ್ವಂ ಪ್ರಸೃತಾಸ್ತಸ್ಯ ಶಾಖಾಃ**
**ಗುಣಪ್ರವೃದ್ಧಾ ವಿಷಯ ಪ್ರವಾಲಾಃ**
**ಅಧಶ್ಚ ಮೂಲಾನ್ಯನುಸಂತತಾನಿ**
**ಕರ್ಮಾನುಬಂಧೀನಿ ಮನುಷ್ಯಲೋಕೇ**

**ಅರ್ಥ:** ತಸ್ಯ=ಆ (ಸಂಸಾರ) ವೃಕ್ಷದ; ಶಾಖಾಃ=ಕೊಂಬೆಗಳು; ಗುಣ ಪ್ರವೃದ್ಧಾಃ=(ಸತ್ವರಜಸ್ತಮ) ಗುಣಗಳಿಂದ ವೃದ್ಧಿಹೊಂದಿದ್ದು; ವಿಷಯ ಪ್ರವಾಲಾಃ=(ಶಬ್ದಾದಿ) ವಿಷಯಗಳೆಂಬ ಚಿಗುರಿರುವುದು; ಅಧಃ ಚ=ಕೆಳಗೆ (ಸ್ಥಾವರದಿಂದ); ಊರ್ಧ್ವಂ ಚ=ಮೇಲೆ (ಬ್ರಹ್ಮ ಲೋಕದವರೆಗೆ); ಪ್ರಸೃತಾಃ=ವ್ಯಾಪಿಸಿವೆ; ಮನುಷ್ಯಲೋಕೇ=ಮನುಷ್ಯ ಲೋಕದಲ್ಲಿ; ಕರ್ಮಾನು ಬಂಧೀನಿ=ಕರ್ಮಸಂಬಂಧವನ್ನುಂಟುಮಾಡುವ; ಮೂಲಾನಿ=ಅದರ ಬೇರುಗಳು; ಅಧಃ ಚ (ಊರ್ಧ್ವಂ ಚ)=ಕೆಳಗೆ (ಮೇಲೆ ಕೂಡ); ಅನುಸಂತತಾನಿ=ಚೆನ್ನಾಗಿ ವಿಸ್ತರಿಸಿದ್ದು (ದೃಢವಾಗಿ ನಾಟಿಕೊಂಡಿವೆ).

---

* ಅನಿತ್ಯ, ಅಶುಚಿ, ದುಃಖ, ಅನಾತ್ಮಸು, ನಿತ್ಯ, ಶುಚಿ, ಸುಖಾತ್ಮ ಖ್ಯಾತಿರವಿದ್ಯಾ - (ಪತಂಜಲಿ ಯೋಗ ಸೂತ್ರ); ಅನಿತ್ಯವಾದುದನ್ನು ನಿತ್ಯವಾದದ್ದಾಗಿಯೂ, ಅಪವಿತ್ರವಾದದ್ದನ್ನು ಪವಿತ್ರವಾದದ್ದಾಗಿಯೂ, ದುಃಖವನ್ನು ಸುಖವನ್ನಾಗಿಯೂ, ಅನಾತ್ಮವನ್ನು ಆತ್ಮವನ್ನಾಗಿಯೂ ಭ್ರಮಿಸುವಂತೆ ಮಾಡುವುದೇ ಅವಿದ್ಯೆ (ಮಾಯೆ).

**ತಾ॥** ಆ (ಸಂಸಾರ) ವೃಕ್ಷದ ಕೊಂಬೆಗಳು (ಸತ್ತ್ವ ರಜಸ್ತಮ) ಗುಣಗಳಿಂದ ವೃದ್ಧಿ ಹೊಂದಿದ್ದು (ಶಬ್ದಾದಿ) ವಿಷಯಗಳೆನ್ನುವ ಚಿಗುರುಗಳನ್ನು ಹೊಂದಿ, ಕೆಳಗೆ (ಸ್ಥಾವರದಿಂದ) ಮೇಲೆ (ಬ್ರಹ್ಮಲೋಕದವರೆಗೆ) ವ್ಯಾಪಿಸಿವೆ. ಮನುಷ್ಯಲೋಕದಲ್ಲಿ ಕರ್ಮಸಂಬಂಧ (ಕರ್ಮವಾಸನೆ)ವನ್ನು ಉಂಟು ಮಾಡುತ್ತಿರುವ ಅದರ ಬೇರುಗಳು ಕೆಳಗೆ (ಮೇಲೆ) ಚೆನ್ನಾಗಿ ವಿಸ್ತರಿಸಿ (ದೃಢವಾಗಿ ನಾಟಿಕೊಂಡು) ಇರುವುವು.

**ವ್ಯಾಖ್ಯೆ:** ಈ ಸಂಸಾರ ವೃಕ್ಷ ಚಿಕ್ಕದಲ್ಲ, ಅತಿ ವಿಶಾಲವಾದದು. ಅನಾದಿ ಕಾಲದಿಂದ ಕೋಟಿಗಟ್ಟಲೆ ಜನಗಳಿಂದ ಚೆನ್ನಾಗಿ ದೃಢಗೊಂಡು ಅದರ ಬೇರುಗಳು ಶಾಖೋಪಶಾಖೆಯಾಗಿ ಆಳವಾಗಿ ವಿಸ್ತರಿಸಿವೆ. ಕರ್ಮ ವಾಸನೆಗಳೇ ಇದರ ಬೇರುಗಳು. ಸತ್ವರಜಸ್ತಮೋಗುಣಗಳಿಂದ ಇದರ ಶಾಖೆಗಳು ಬಲಗೊಂಡಿವೆ. ಶಬ್ದಾದಿ ವಿಷಯ ಶ್ರವಣಗಳಿಂದ ಇದರ ಚಿಗುರುಗಳು ವೃದ್ಧಿಯಾಗುತ್ತಿವೆ. ಇದರಿಂದ ತ್ರಿಗುಣರಾಹಿತ್ಯದಿಂದ ಶಾಖೆಗಳನ್ನು, ವಿಷಯ ವಿರಕ್ತಿಯಿಂದ ಚಿಗುರುಗಳನ್ನು, ವಾಸನಾ ರಾಹಿತ್ಯದಿಂದ ಬೇರುಗಳನ್ನು ಈ ಸಂಸಾರ ರೂಪ ವೃಕ್ಷದಿಂದ ನಿರ್ಮೂಲನಗೊಳಿಸ ಬಹುದೆಂದು ಅರ್ಥವಾಗುತ್ತದೆ. ಗಿಡಕ್ಕೆ ಮುಖ್ಯ ಆಧಾರ ಮೂಲವೇ ಇದ್ದ ಹಾಗೆ ಈ ಸಂಸಾರ ವೃಕ್ಷಕ್ಕೆ ಕರ್ಮವಾಸನೆಗಳೇ ಮೂಲವಾಗಿದೆ. ಆದ್ದರಿಂದ ವಿಜ್ಞುಗಳು ವೈರಾಗ್ಯ ವಿಚಾರಾದಿಗಳಿಂದ ಪ್ರಯತ್ನ ಪೂರ್ವಕವಾಗಿ ಆ ವಾಸನೆಗಳನ್ನು ತೊಲಗಿಸಿಕೊಂಡು, ಸಂಸಾರ ಬಂಧನದಿಂದ ವಿಮುಕ್ತ ರಾಗಬೇಕು. ಹಾಗಿಲ್ಲದೆ ರಾಗ ದ್ವೇಷಾದಿಗಳಿಂದ ಆ ವಾಸನೆಗಳನ್ನು ಬಲಪಡಿಸುತ್ತಾ ಹೋದರೆ ಸಂಸಾರ ವೃಕ್ಷ ಜೀವಿಯನ್ನು ಎಂದೆಂದಿಗೂ ಬಿಡದು.

ಪ್ರ : ಸಂಸಾರ ವೃಕ್ಷವನ್ನು ಇನ್ನೂ ವರ್ಣಿಸುವುದು ?

ಉ : ೧) ಅದರ ಕೊಂಬೆಗಳು (ಸತ್ತ್ವರಜಸ್ತಮ) ಗುಣಗಳಿಂದ ವೃದ್ಧಿ ಹೊಂದಿ (ಶಬ್ದಾದಿ) ವಿಷಯಗಳೆಂಬ ಚಿಗುರುಗಳನ್ನು ಹೊಂದಿ ಮೇಲೆ ಕೆಳಗೆ ಹಾಗು ಎಲ್ಲೆಲ್ಲೂ ವ್ಯಾಪಿಸಿದೆ. ೨) ಮನುಷ್ಯ ಲೋಕದಲ್ಲಿ ಕರ್ಮಸಂಬಂಧವನ್ನುಂಟು ಮಾಡುವ ಅದರ ಬೇರುಗಳು ಮೇಲೆ ಕೆಳಗೆ ವ್ಯಾಪಿಸಿ ದೃಢವಾಗಿವೆ.

**ಅ॥** ಅಂತಹ ಸಂಸಾರ ವೃಕ್ಷವನ್ನು 'ಅಸಂಗ'ವೆನ್ನುವ ಶಸ್ತ್ರದಿಂದ ಛೇದಿಸಿ ಹಾಕಿ ಪರಮಾತ್ಮ ಪದವಿಯನ್ನು ಅನ್ವೇಷಿಸಬೇಕೆಂದು ಬೋಧಿಸಲಾಗುತ್ತಿದೆ-

೩. **ನ ರೂಪಮಸ್ಯೇಹ ತಥೋಪಲಭ್ಯತೇ**
**ನಾಂತೋ ನ ಚಾದಿರ್ನ ಚ ಸಂಪ್ರತಿಷ್ಠಾ**
**ಅಶ್ವತ್ಥಮೇನಂ ಸುವಿರೂಢಮೂಲಮ್**
**ಅಸಂಗ ಶಸ್ತ್ರೇಣ ದೃಢೇನ ಛಿತ್ವಾ**

೪. **ತತಃ ಪದಂ ತತ್ಪರಿಮಾರ್ಗಿತವ್ಯಂ**
**ಯಸ್ಮಿನ್ ಗತಾ ನ ನಿವರ್ತಂತಿ ಭೂಯಃ**
**ತಮೇವ ಚಾದ್ಯಂ ಪುರುಷಂ ಪ್ರಪದ್ಯೇ**
**ಯತಃ ಪ್ರವೃತ್ತಿಃ ಪ್ರಸೃತಾ ಪುರಾಣೀ**

**ಅರ್ಥ:** ಅಸ್ಯ=ಈ ಸಂಸಾರ ವೃಕ್ಷದ; ರೂಪಂ=ಸ್ವರೂಪವು; ತಥಾ=ಹಾಗೆಯೇ; (ಈಗ ವರ್ಣಿಸಿದ ರೀತಿಯಲ್ಲಿ); ಇಹ=ಈ ಲೋಕದಲ್ಲಿ (ಸಂಸಾರಾಸಕ್ತಿ ಇರುವವರಿಂದ); ನ ಉಪಲಬ್ಧತೇ=ತಿಳಿಯಲಸಾಧ್ಯವಾದುದಾಗಿದೆ; ಅಂತಃ=(ಅದರ) ಅಂತ್ಯವು; ನ=ಕಾಣದಾಗಿದೆ; ಆದಿಃ ಚ ನ=ಆದಿಯೂ ಕಾಣದಾಗಿದೆ; ಸಂಪ್ರತಿಷ್ಠಾ ಚ ನ= ಸ್ಥಿತಿಯು (ಮಧ್ಯಮವು) ಕಾಣಿಸದೆ ಇದೆ; ಸುವಿರೂಢ ಮೂಲಂ=ಗಟ್ಟಿಯಾಗಿ ನಾಟಿಕೊಂಡಿರುವ ಬೇರುಗಳುಳ್ಳ; ಏನಂ=ಈ; ಅಶ್ವತ್ಥಂ=ಸಂಸಾರವೆನ್ನುವ ಅಶ್ವತ್ಥ ವೃಕ್ಷವನ್ನು; ದೃಢೇನ= ಬಲವಾದ; ಅಸಂಗಶಸ್ತ್ರೇಣ=(ಅಂಸಗವೂ) ಪ್ರಾಪಂಚಿಕ ಪದಾರ್ಥಗಳ ಮೇಲಿನ ಆಸಕ್ತಿಯನ್ನು ತ್ಯಜಿಸುವುದರಿಂದ ಒದಗುವ (ಬಲವೆನ್ನುವ) ಆಯುಧದಿಂದ; ಛಿತ್ವಾ=ಕಡಿದು; ತತಃ=ನಂತರ; ಯಸ್ಮಿನ್=ಯಾವ ಸ್ಥಾನದಲ್ಲಿ; ಗತಾಃ= ಪ್ರವೇಶಿಸುತ್ತಾರೋ; ಭೂಯಃ=ತಿರುಗಿ; ನ ನಿವರ್ತಂತಿ=(ಸಂಸಾರಕ್ಕೆ) ಮರಳುವುದಿಲ್ಲವೋ; ಯತಃ ಯಾರಿಂದ; ಪುರಾಣೀ=ಅನಾದಿಯಾದ; ಪ್ರವೃತ್ತಿಃ=ಈ ಸಂಸಾರ ವೃಕ್ಷದ ಸ್ವಭಾವ; ಪ್ರಸೃತಾ=ವ್ಯಾಪಿಸಿರುವುದೋ; ತಂ ಏವ ಚ ಆದ್ಯಂ ಪುರುಷಂ=ಆ ಆದಿ ಪುರುಷನಾದ ಪರಮಾತ್ಮನನ್ನೇ; ಪ್ರಪದ್ಯೇ=ಶರಣು ಹೊಂದುತ್ತಿದ್ದೇನೆ; (ಇತಿ= ಎನ್ನುವ ಈ ಭಾವವನ್ನು ಹೊಂದಿ); ತತ್ಪದಂ=ಆ (ಪರಮಾತ್ಮ) ಸ್ಥಾನವನ್ನು; ಪರಿಮಾರ್ಗಿತವ್ಯಂ= ಹುಡುಕಬೇಕಾದದ್ದು (ಅದನ್ನು ಅನ್ವೇಷಿಸಬೇಕು).

**ತಾ॥** ಆ ಸಂಸಾರ ವೃಕ್ಷದ ಸ್ವರೂಪ ಹಾಗಿರಲು (ಈಗ ವರ್ಣಿಸಿದ ರೀತಿಯಲ್ಲಿ) ಈ ಪ್ರಪಂಚ (ಸಂಸಾರಾಸಕ್ತಿ) ಅರ್ಥವಾಗದೆ ಉಳಿದಿದೆ. ಅದರ ಆದಿಯಾಗಲಿ, ಅಂತ್ಯವಾಗಲಿ, ಮಧ್ಯವು (ಸ್ಥಿತಿ) ಕಾಣಿಸದೆ ಇದೆ. ಗಟ್ಟಿಯಾಗಿ ಬೇರೂರಿರುವ ಈ ಸಂಸಾರವೆಂಬ ಅಶ್ವತ್ಥವೃಕ್ಷವನ್ನು ಅಸಂಗವೆಂಬ ಬಲವಾದ ಆಯುಧದಿಂದ ಕತ್ತರಿಸಿ ನಂತರ ಯಾವ ಸ್ಥಾನವನ್ನು ಪ್ರವೇಶಿಸಿದವರು ಅಲ್ಲಿಂದ ಮತ್ತೆ ಹಿಂದಕ್ಕೆ (ಸಂಸಾರಕ್ಕೆ) ಬರುವುದಿಲ್ಲವೋ, ಯಾರಿಂದ ಅನಾದಿಯಾದ ಈ ಸಂಸಾರ ವೃಕ್ಷದ ಪ್ರವೃತ್ತಿ ವ್ಯಾಪಿಸಿರುವುದೋ, (ಅಂತಹ) ಆದಿ ಪುರುಷನಾದ ಆ ಪರಮಾತ್ಮನನ್ನೇ ಶರಣು ಹೊಂದುತ್ತಿದ್ದೇನೆ - ಎನ್ನುವ (ಭಕ್ತಿ) ಭಾವದಿಂದ ಆ ಪರಮಾತ್ಮ ಪದವಿಯನ್ನು ಹುಡುಕಬೇಕು.

**ವ್ಯಾಖ್ಯೆ:** ಹಿಂದಿನ ಶ್ಲೋಕಗಳಲ್ಲಿ ವರ್ಣಿಸಲ್ಪಟ್ಟ ಹಾಗೆ ('ಊರ್ಧ್ವ ಮೂಲವಾಗಿ ಅದಃ ಶಾಖೆಯಾಗಿ'- ಇತ್ಯಾದಿರೂಪದಿಂದ) ಈ ಸಂಸಾರ ವೃಕ್ಷ ಏಕೆ ಕಾಣಿಸುತ್ತಿಲ್ಲ? ಸಂಸಾರಾಸಕ್ತಿಯುಳ್ಳ ಅಜ್ಞಾನಿಗಳಿಗೆ ಅದರ ರೂಪ ತಿಳಿಯದು. ಅದರ ಆದಿ, ಅಂತ್ಯ, ಮಧ್ಯಮಗಳು ಅವರಿಗೆ ತಿಳಿಯವು. ಏಕೆಂದರೆ ಅವರು ಅದರಲ್ಲಿ ಮುಳುಗಿ ಹೋಗಿದ್ದು ಸತ್ಯವನ್ನು ಅರ್ಥಮಾಡಿಕೊಳ್ಳುವ ಸ್ಥಿತಿಯಲ್ಲಿಲ್ಲ. (ಕತ್ತಲಿನಲ್ಲಿರುವವರಿಗೆ ವಸ್ತುಗಳು ಕಾಣದ ಹಾಗೆ). ಪ್ರಕಾಶದಲ್ಲಿ ವಸ್ತುಗಳು ತಿಳಿದ ಹಾಗೆ, ವೈರಾಗ್ಯ, ಮುಮುಕ್ಷತೆ, ಆತ್ಮಜ್ಞಾನವುಳ್ಳವರಿಗೆ ಮಾತ್ರ ಅದರ ಸ್ವರೂಪವು ಗೋಚರಿಸಬಲ್ಲದು.

ಈ ಸಂಸಾರ ವೃಕ್ಷ ಅನಾದಿ ಕಾಲದಿಂದ ಉದ್ಗಮಿಸಿದ್ದು, ಅತಿ ವಿಶಾಲವಾಗಿ, ಶಾಖೋಪಶಾಖೆಯಾಗಿ ವ್ಯಾಪಿಸಿ ಚೆನ್ನಾಗಿ ಬೇರು ಬಿಟ್ಟುಕೊಂಡಿದೆ. ಆದ್ದರಿಂದಲೇ ಅದರ ಬೇರುಗಳನ್ನು ವರ್ಣಿಸುವಾಗ ಭಗವಂತನು 'ರೂಢ ಮೂಲಂ' ಎಂದಾಗಲಿ 'ವಿರೂಢ ಮೂಲಂ' ಎಂದಾಗಲಿ ಹೇಳದೆ 'ಸುವಿರೂಢಮೂಲಂ' ಎಂದು ಹೇಳಿರುವನು. ಅಂದರೆ ಅದರ ಬೇರುಗಳು ಗಟ್ಟಿಯಾಗಿ ಬೇರೂರಿವೆ ಎಂದರ್ಥ. ಆದರೆ ಅಷ್ಟು ಮಾತ್ರದಿಂದ ಭಯ ಬೀಳಬೇಕಾಗಿಲ್ಲ. ಗಿಡ ಎಷ್ಟು ದೊಡ್ಡದಾದರೂ ಬಲವಾದ ಆಯುಧದಿಂದ ನೆಲಸಮವಾಗಬಲ್ಲದು. ಹಾಗೆಯೇ ಈ ಸಂಸಾರ ವೃಕ್ಷವನ್ನು ಛೇದಿಸಲು ಭಗವಂತನು ಆಯುಧವನ್ನು ಸೂಚಿಸಿರುವನು. ಅದು ಅಸಂಗ. ಪ್ರಾಪಂಚಿಕ ಪದಾರ್ಥಗಳಲ್ಲಿ ಅಭಿಮಾನ, ಆಸಕ್ತಿ ಹೊಂದಿರುವುದೇ ಸಂಗ. ಅದು ಇಲ್ಲದಿರುವುದೇ ಅಸಂಗ, ವೈರಾಗ್ಯವೆಂದು ಭಾವ. ಆದರೆ ಮಂದ ವೈರಾಗ್ಯಭಾವಗಳಿಂದ ಈ ಮಹಾ ಸಂಸಾರವೃಕ್ಷದ ಛೇದನೆ ಸಾಧ್ಯವಾಗದು. ತೀವ್ರತರ ವಿರಕ್ತಿ, ಪರಿಪೂರ್ಣ ಅಸಂಗಗಳು ಆವಶ್ಯಕವಾಗಿವೆ. ಆದ್ದರಿಂದಲೇ 'ದೃಢೇನ' ಎನ್ನುವ ಪದವನ್ನು ಭಗವಂತನು ಪ್ರಯೋಗಿಸಿದನು. ಒಂದು

ದೊಡ್ಡ ಕಾರ್ಖಾನೆಯಲ್ಲಿ ಮೂಲ ಚಕ್ರಕ್ಕಿರುವ 'ಬೆಲ್ಟ್' ಹರಿದರೆ ಎಲ್ಲಾ ಯಂತ್ರಗಳು ಹೇಗೆ ನಿಂತು ಹೋಗುವುವೋ ಹಾಗೆ ಈ ಸಂಸಾರರೂಪ ಬೃಹದ್ಯಂತ್ರಾಂಗವೆಲ್ಲಾ ಸಂಗರಾಹಿತ್ಯದಿಂದ (ಅಸಂಗ) ಸ್ಥಬ್ಧವಾಗುವುದು. ಮಹನೀಯರು ಈ ಪ್ರಪಂಚದಲ್ಲಿದ್ದರೂ ಇಂತಹ ಅಸಂಗ ಭಾವನೆ ಹೊಂದಿರುವರಾದ್ದರಿಂದ ಸಂಸಾರ ಬಾಧೆಗಳು ಇಲ್ಲದೆ ಇರುವರು. ಆದರೆ ಈ ಅಸಂಗವು ಬಾಹ್ಯದಲ್ಲಿಯೇ ಅಲ್ಲದೆ ಅಭ್ಯಂತರ ಸಂಕಲ್ಪಗಳಲ್ಲಿಯೂ ಇರಬೇಕು. ಆಗಲೇ ಈ ಅಸಂಗವು ಪರಿಪೂರ್ಣವಾಗಬಲ್ಲದು.

ಇಷ್ಟರಿಂದ ಕೆಲಸ ಪೂರ್ತಿಯಾಗಲಿಲ್ಲ. ಸಂಸಾರ ವೃಕ್ಷ ಛೇದನೆಯಾದ ನಂತರ ಅಂದರೆ ದೃಶ್ಯ ತ್ಯಾಗದ ನಂತರ ದೃಕ್-ಸ್ವರೂಪವನ್ನು ಆಶ್ರಯಿಸುವ ಇನ್ನೊಂದು ಮುಖ್ಯವಾದ ಕೆಲಸ ಬಾಕಿ ಇದೆ. ಸಾಲ ತೀರಬೇಕು. ಸ್ವಂತವಾಗಿ ಸ್ವಲ್ಪ ಹಣವನ್ನು ಸಂಪಾದಿಸಬೇಕು. ಆಗ ಮನುಜನು ಸುಖವಾಗಿರಬಲ್ಲನು. ದೃಶ್ಯಭಾವ ತ್ಯಾಗವು ಸಾಲ ತೀರುವಂತಹುದು. ಅದು ಸಾಕಾಗುವುದಿಲ್ಲ. ಏಕೆಂದರೆ ಸಾಲ ತೀರಿದರೂ, ಪೋಷಣೆ ನಿಮಿತ್ತವಾಗಿ ಸ್ವಲ್ಪ ದ್ರವ್ಯವಿಲ್ಲದಿದ್ದರೆ ತೃಪ್ತಿಯಿರುವುದಿಲ್ಲ. ಹಾಗೆ ದೃಶ್ಯ ವಿರಕ್ತಿ, ಆತ್ಮಪದಪ್ರಾಪ್ತಿ ಎರಡೂ ಇದ್ದಾಗ ಜೀವಿಗೆ ಪರಿಪೂರ್ಣ ಸುಖ ಏರ್ಪಡುವುದು. ಆದ್ದರಿಂದ ಭಗವಂತನು ಸಂಸಾರ ವೃಕ್ಷ ಛೇದನೆಯನ್ನು ಕುರಿತು ತಿಳಿಸಿ, 'ತತಃ'- ನಂತರ 'ಪರಿಮಾರ್ಗಿತವ್ಯಂ'- 'ಪರಮಾತ್ಮ ಪದಾನ್ವೇಷಣೆಯನ್ನು ಅನುಸರಿಸಬೇಕು' ಎಂದು ಬೋಧಿಸಲು ಕಾರಣವಾಗಿದೆ.

ಪ್ರಪಂಚದಲ್ಲಿ ಅನೇಕ ಪದವಿಗಳಿದ್ದಾಗ್ಯೂ, ಆ ಎಲ್ಲವುಗಳಿಗಿಂತ ಶ್ರೇಷ್ಠವಾದುದು ಪರಮಾತ್ಮ ಪದವಿಯಾದ್ದರಿಂದ ಅದನ್ನೇ ಅಪೇಕ್ಷಿಸಿ, ಅನ್ವೇಷಿಸಬೇಕೆಂದು ಇಲ್ಲಿ ಬೋಧಿಸಲಾಗಿದೆ. ಏಕೆಂದರೆ ಆ ಮಹೋನ್ನತ ಪದವಿಯನ್ನು ಹೊಂದಿದವನು ಮತ್ತೆ ಈ ದುಃಖ ಭೂಯಿಷ್ಠವಾದ ಸಂಸಾರ ಸ್ಥಿತಿಗೆ ಇಳಿದು ಬರುವುದಿಲ್ಲ. (ಯಸ್ಮಿನ್‌ಗತಾ ನ ನಿವರ್ತಂತಿ ಭೂಯಃ). ಬ್ರಹ್ಮಾಂಡದಲ್ಲಿ ಯಾವ ಲೋಕಕ್ಕೆ ಹೋದರೂ ತಿರುಗಿ ಬರಬೇಕಾದದ್ದೇ, ಮತ್ತೆ ಹುಟ್ಟಬೇಕಾದದ್ದೇ- ಆದರೆ ಭಗವಂತನನ್ನು ಹೊಂದಿದವರು, ಆತ್ಮ ಪದವಿಯನ್ನೇರಿದವರು ಮತ್ತೆ ಜನ್ಮಿಸುವುದಿಲ್ಲ. ಅದು ಶಾಶ್ವತ ಪದ. ಪೂರ್ಣ ದುಃಖರಾಹಿತ್ಯ ಅದರಿಂದಲೇ ಉಂಟಾಗುವುದು. ಆದ್ದರಿಂದಲೇ ಎಲ್ಲಾ ಪದವಿಗಳಲ್ಲಿ ಅದು ಸರ್ವೋತ್ಕೃಷ್ಟವಾದುದು. ಆದ್ದರಿಂದ ವಿಜ್ಞುಗಳು ಅದನ್ನೇ ಅನುಸರಿಸಿ ಮುಕ್ತಿ ಹೊಂದುವಂತಾಗಬೇಕು.

ಆದರೆ 'ಆ ಪರಮ ಪುರುಷನನ್ನೇ ಶರಣು ಹೊಂದುತ್ತಿರುವೆನು' (ತಮೇವ ಪುರುಷಂ ಪ್ರಪದ್ಯೇ) ಎನ್ನುವ ಭಕ್ತಿಭಾವದಿಂದ, ನಿರಹಂಕಾರ ಭಾವದಿಂದ ಆ ಆತ್ಮಪದವನ್ನು ಅನ್ವೇಷಿಸಬೇಕಾಗಿದೆ. ನಿರ್ಮಲ ಭಕ್ತಿಯುಳ್ಳವನಿಗೆ ಆತ್ಮಜ್ಞಾನವು ಶೀಘ್ರದಲ್ಲೇ ಲಭಿಸಬಲ್ಲದು.

ಪ್ರ : ಸಂಸಾರ ವೃಕ್ಷ ಹೇಗಿದೆ?

ಉ : ಚೆನ್ನಾಗಿ ಬೇರೂರಿಕೊಂಡಿದೆ.

ಪ್ರ : ಅದನ್ನು ಛೇದಿಸುವುದು ಹೇಗೆ?

ಉ : ಅಸಂಗ (ಪ್ರಾಪಂಚಿಕ ಪದಾರ್ಥಗಳ ಮೇಲೆ ಆಸಕ್ತಿ, ಅಭಿಮಾನ ವಿಲ್ಲದೇ ಇರುವುದು) ವೆನ್ನುವ ಬಲವಾದ ಖಡ್ಗದಿಂದ ಅದನ್ನು ಛೇದಿಸಬಹುದು.

ಪ್ರ : ಹಾಗೆ ಸಂಸಾರ ವೃಕ್ಷವನ್ನು ಛೇದಿಸಿದ ನಂತರ ಏನು ಮಾಡಬೇಕು?

ಉ : ಪರಮಾತ್ಮಪದವನ್ನು ಅನ್ವೇಷಿಸಬೇಕು.

ಪ್ರ : ಆ ಪರಮಾತ್ಮ ಎಂತಹವನು?

ಉ : ೧) ಆತನನ್ನು ಹೊಂದಿದವರು ಮತ್ತೆ ಹಿಂದಕ್ಕೆ ಬರುವುದಿಲ್ಲ (ಮತ್ತೆ ಸಂಸಾರದಲ್ಲಿ ಜನ್ಮಿಸುವುದಿಲ್ಲ) ೨) ಆತನಿಂದಲೇ ಈ ಜಗತ್ತೆಲ್ಲವೂ ಆವಿರ್ಭವಿಸಿದೆ ೩) ಆತನು ಆದಿ ಪುರುಷನು.

**ಅ||** ನಾಶರಹಿತವಾದ ಆ ಪರಮಾತ್ಮ ಪದವಿಯನ್ನು ಯಾರು ಹೊಂದ ಬಲ್ಲರೆನ್ನುವುದನ್ನು ತಿಳಿಸಲಾಗಿದೆ-

**೫. ನಿರ್ಮಾನಮೋಹಾ ಜಿತಸಂಗದೋಷಾ**
**ಅಧ್ಯಾತ್ಮನಿತ್ಯಾ ವಿನಿವೃತ್ತಕಾಮಾಃ**
**ದ್ವಂದ್ವೈರ್ವಿಮುಕ್ತಾಃ ಸುಖದುಃಖಸಂಜ್ಞೈಃ**
**ರ್ಗಚ್ಛಂತ್ಯಮೂಢಾಃ ಪದಮವ್ಯಯಮ್ ತತ್**

**ಅರ್ಥ:** ನಿರ್ಮಾನಮೋಹಾ=ಅಭಿಮಾನ(ಅಹಂಕಾರ), ಅವಿವೇಕವಿಲ್ಲದವರು; ಜಿತಸಂಗದೋಷಾಃ=ಸಂಗವು (ದೃಶ್ಯ ಪದಾರ್ಥಗಳಲ್ಲಿ ಆಸಕ್ತಿ) ಎನ್ನುವ ದೋಷವನ್ನು ಜಯಿಸಿದವರು; ಅಧ್ಯಾತ್ಮನಿತ್ಯಾಃ=ನಿರಂತರ ಆತ್ಮಜ್ಞಾನವನ್ನು (ಬ್ರಹ್ಮನಿಷ್ಠೆಯನ್ನು) ಹೊಂದಿದವರು; ವಿನಿವೃತ್ತ ಕಾಮಾಃ= ಕೋರಿಕೆಗಳನ್ನು ಪೂರ್ತಿಯಾಗಿ (ವಾಸನಾಸಹಿತವಾಗಿ) ತೊಲಗಿಸಿಕೊಂಡವರು; ಸುಖದುಃಖ ಸಂಜ್ಞೈಃ=ಸುಖದುಃಖಗಳೆನ್ನುವ; ದ್ವಂದ್ವೈಃ=ದ್ವಂದ್ವಗಳಿಂದ; ವಿಮುಕ್ತಾಃ= ಬಿಡಗಡೆಹೊಂದಿದವರು (ಆಗಿ); ಅಮೂಢಾಃ=ಅಜ್ಞಾನರಹಿತರು (ಜ್ಞಾನಿಗಳು); ತತ್=ಆ (ಹಿಂದೆ ಹೇಳಲ್ಪಟ್ಟ); ಅವ್ಯಯಂ= ನಾಶವಿಲ್ಲದ; ಪದಂ=ಸ್ಥಾನವನ್ನು (ಮೋಕ್ಷ ಪದವನ್ನು) ಗಚ್ಛಂತಿ= ಹೊಂದುತ್ತಿದ್ದಾರೆ.

**ತಾ||** ಅಭಿಮಾನ (ಅಹಂಕಾರ) ಅವಿವೇಕವಿಲ್ಲದವರು, ಸಂಗ (ದೃಶ್ಯ ಪದಾರ್ಥಗಳಲ್ಲಿ ಆಸಕ್ತಿ) ದೋಷವನ್ನು ಜಯಿಸಿದವರು, ನಿರಂತರ ಆತ್ಮಜ್ಞಾನ (ಬ್ರಹ್ಮನಿಷ್ಠೆ)ವನ್ನು ಹೊಂದಿರುವವರು, ಕೋರಿಕೆಗಳನ್ನು ಪೂರ್ತಿಯಾಗಿ (ವಾಸನಾಸಹಿತವಾಗಿ) ತೊಲಗಿಸಿಕೊಂಡವರು, ಸುಖದುಃಖಗಳೆನ್ನುವ ದ್ವಂದ್ವಗಳಿಂದ ಬಿಡುಗಡೆ ಹೊಂದಲ್ಪಟ್ಟ ಜ್ಞಾನಿಗಳು ಅಂತಹ ಅವ್ಯಯವಾದ ಬ್ರಹ್ಮಪದ (ಮೋಕ್ಷ)ವನ್ನು ಹೊಂದುತ್ತಿದ್ದಾರೆ.

**ವ್ಯಾಖ್ಯೆ:** ಪುನರಾವೃತ್ತಿಯಿಲ್ಲದ ಶಾಶ್ವತ ಬ್ರಹ್ಮಪದವಿಯನ್ನು ಮೋಕ್ಷವನ್ನು ಯಾರು ಹೊಂದಬಲ್ಲರೆನ್ನುವುದನ್ನು ಈ ಶ್ಲೋಕದಲ್ಲಿ ತಿಳಿಸಲಾಗಿದೆ. ಆರು ಉತ್ತಮ ಲಕ್ಷಣಗಳನ್ನು ಹೊಂದಿರುವವರು ಅಂತಹ ಮಹೋನ್ನತ ಪದವಿಯನ್ನು ಹೊಂದುವರು ಅವು ಯಾವುವೆಂದರೆ-

೧) ಅಭಿಮಾನ, ಅವಿವೇಕರಾಹಿತ್ಯ

೨) ಸಂಗವೆನ್ನುವ ದೋಷವನ್ನು ಜಯಿಸುವುದು- (ಸಂಗವೆಂದರೆ ದೃಶ್ಯ ಪದಾರ್ಥಗಳಲ್ಲಿ ಆಸಕ್ತಿ, ಅಸಂಗವೆಂದರೆ ಅದು ಇಲ್ಲದೇ ಇರುವುದು)-

೩) ನಿರಂತರವಾಗಿ ಆತ್ಮದಲ್ಲಿಯೇ ನಿಷ್ಠೆ ಹೊಂದಿರುವುದು. ಇಲ್ಲಿ ನಿರಂತರ (ನಿತ್ಯಾಃ) ಎನ್ನುವ ಪದ ಗಮನಿಸತಕ್ಕದ್ದು. ಯಾವಾಗಲೋ ಒಮ್ಮೆ ದೈವ ಚಿಂತನೆ ಮಾಡುವುದು ಒಳ್ಳೆಯದೇ ಇರಬಹುದು, ಆದರೆ ಅದು ಸಾಕಾಗುವುದಿಲ್ಲ. ಕ್ರಮಕ್ರಮವಾಗಿ ಆ ದೈವ ನಿಷ್ಠಾಸಮಯವನ್ನು ಹೆಚ್ಚಿಸುತ್ತಾ ಹೋಗಿ 'ನಿರಂತರ ದೈವ ನಿಷ್ಠೆ' ಎನ್ನುವ ಸ್ಥಿತಿಯನ್ನು ಹೊಂದಲು ಪ್ರಯತ್ನಿಸಬೇಕು. ಏಕೆಂದರೆ ದೈವ ಭಾವವೆನ್ನುವ ಪ್ರಕಾಶವಿಲ್ಲದಿದ್ದರೆ ಮಾಯೆಯೆನ್ನುವ ಅಂಧಕಾರ ಕೂಡಲೇ ಬಂದು

ಆವರಿಸುವುದು ಆಗ ಮಹಾಪ್ರಮಾದವುಂಟಾಗುವುದು. ಆದ್ದರಿಂದ ನಿರಂತರ ಅಧ್ಯಾತ್ಮ ನಿಷ್ಠೆಯ ದ್ವಾರ ಮಾಯೆಗೆ ಸ್ವಲ್ಪವೂ ಅವಕಾಶ ಕೊಡಬಾರದು. ಪ್ರಪಂಚದಲ್ಲಿ ಮೂರು ರೀತಿಯ ಜನಗಳಿರುವರು. ಕೆಲವರು ಅಹರ್ನಿಶ ಆತ್ಮ ಸ್ಥಿತಿಯನ್ನು ದೈವ ಭಾವವನ್ನು ಹೊಂದಿರುವರು. ಇವರು ಉತ್ತಮರು ಮತ್ತೆ ಕೆಲವರು ಸ್ವಲ್ಪ ವೇಳೆ ದೈವ ಚಿಂತನೆ ಹೊಂದಿ ನಂತರ ಪ್ರಾಪಂಚಿಕ ಕಾರ್ಯಕಲಾಪಗಳಲ್ಲಿ ನಿಮಗ್ನರಾಗುವರು. ಇವರು ಮಧ್ಯಮರು. ಸಾಧನೆಯಿಂದ ಇವರು ಮೊದಲನೆಯ ತರಗತಿಯನ್ನು ಸೇರಿಕೊಳ್ಳಬಲ್ಲರು. ಇನ್ನು ನಿರಂತರವಾಗಿ ದೃಶ್ಯ ಪದಾರ್ಥ ವ್ಯಾಮೋಹಗಳಲ್ಲಿ ಬಿದ್ದು ಹೊರಳಾಡುತ್ತ ದೈವಸ್ಮರಣೆ ಸ್ವಲ್ಪವೂ ಇಲ್ಲದೆ ಇರುವವರು ಕನಿಷ್ಠವಾದವರು. ಇದು ನಿಂದ್ಯ ಸ್ಥಿತಿ. ಆದ್ದರಿಂದ ವಿವೇಕವಂತರು ಅದನ್ನು ತ್ಯಜಿಸಬೇಕು.

೪) ಮೋಕ್ಷಪದಪ್ರಾಪ್ತಿಗೆ ಆವಶ್ಯಕವಾದ ನಾಲ್ಕನೆಯ ಗುಣ, ಕೋರಿಕೆಗಳನ್ನು ಸಂಪೂರ್ಣವಾಗಿ, ವಾಸನಾಸಹಿತವಾಗಿ ತೊಲಗಿಸುವುದಾಗಿದೆ (ವಿನಿವೃತ್ತ ಕಾಮಾಃ). 'ನಿವೃತ್ತ' ಎಂದು ಹೇಳದೆ 'ವಿನಿವೃತ್ತ' ಎಂದು ಹೇಳುವುದರಿಂದ ಕೋರಿಕೆಗಳು ನಿಶ್ಶೇಷವಾಗಿ, ಸಮೂಲವಾಗಿ (ವಾಸನಾರಹಿತವಾಗಿ) ತೊಲಗಿಹೋಗಬೇಕೆಂದು ಅರ್ಥವಾಗುತ್ತದೆ. **'ಆಧ್ಯಾತ್ಮ ನಿತ್ಯಾ ವಿನಿವೃತ್ತ ಕಾಮಾಃ'** ಎನ್ನುವ ಈ ಶ್ಲೋಕದ ಪಾದವನ್ನು ಮುಮುಕ್ಷುಗಳು ಸದಾ ಸ್ಮರಿಸುವುದು ಒಳ್ಳೆಯದು. ಏಕೆಂದರೆ ಆಧ್ಯಾತ್ಮಿಕ ಸಾಧನ ಸರ್ವಸ್ವವೆಲ್ಲವೂ ಈ ಎರಡು ಪದಗಳಲ್ಲಿಯೇ ಅಡಕವಾಗಿದೆ. ಮೊದಲನೆಯದು ತತ್ತ್ವಜ್ಞಾನ (ಅಧ್ಯಾತ್ಮನಿತ್ಯಾಃ), ಎರಡನೆಯದು ವಾಸನಾಕ್ಷಯ (ವಿನಿವೃತ್ತ ಕಾಮಾಃ). ಮೊದಲನೆಯದು ದೃಕ್ ಸ್ವರೂಪ ಸ್ಥಿತಿ. ಎರಡನೆಯದು ದೃಶ್ಯರಾಹಿತ್ಯ. ಈ ಎರಡನ್ನೂ ಸಾಧಕನು ಏಕಕಾಲದಲ್ಲಿ ಅಭ್ಯಸಿಸುತ್ತಾ ಬರಬೇಕೆಂದು ಶಾಸ್ತ್ರಗಳು ಘೋಷಿಸುತ್ತವೆ.

೫) ಇನ್ನು ಐದನೆಯ ಸಾಧನೆ; ಸುಖದುಃಖಾದಿ ದ್ವಂದ್ವರಾಹಿತ್ಯ.

೬) ಆರನೆಯದು ಅಮೂಢತ್ವ. ಅಂದರೆ ಅಜ್ಞಾನವಿಲ್ಲದೆ ಇರುವುದು. ಅಜ್ಞಾನವು, ಅವಿದ್ಯೆಗಳನ್ನು ಹತ್ತಿರಕ್ಕೆ ಸೇರಿಸದೆ ಜ್ಞಾನದಲ್ಲೇ ಸದಾ ಸ್ಥಿರವಾಗಿರುವುದು. ಈ ಪ್ರಕಾರವಾಗಿ ಭಗವಂತನು ತಿಳಿಸಿದ ಆರು ಸಾಧನೆಗಳನ್ನು ಅವಲಂಬಿಸುವವರು ಹೊಂದುವ ಮಹತ್ತರ ಫಲವೇನು? ಅವ್ಯಯವಾದ ಮೋಕ್ಷವೇ (ಗಚ್ಛಂತಿ ಪದಮವ್ಯಯಮ್). ಪ್ರಪಂಚದಲ್ಲಿಯ ಪದವಿಗಳೆಲ್ಲವೂ ವ್ಯಯವಾಗುವಂತಹವು, ನಾಶವಾಗುವುವು, ಕ್ಷಯಿಸುವುವು ಪರಮಾತ್ಮ ಪದವಿಯೊಂದೇ ಅವ್ಯಯವಾದದ್ದು. ಶಾಶ್ವತವಾದದ್ದು. ಖರ್ಚಾಗದೆ ಇರುವುದು. ಆದ್ದರಿಂದ ವಿಜ್ಞಗಳು ಅದನ್ನೇ ಅನ್ವೇಷಿಸಬೇಕು.

ಪ್ರ : ಪರಮಾತ್ಮಪದವಿ ಎಂತಹದು?

ಉ : ಅವ್ಯಯವಾದುದು, ನಾಶರಹಿತವಾದುದು.

ಪ್ರ : ಅದನ್ನು ಯಾರು ಹೊಂದಬಲ್ಲರು?

ಉ : ೧) ಅಭಿಮಾನ, ಅವಿವೇಕವಿಲ್ಲದಿರುವರು ೨) ಸಂಗ (ದೃಶ್ಯ ವಸ್ತುಗಳ ಮೇಲೆ ಆಸಕ್ತಿ) ಎನ್ನುವ ದೋಷವನ್ನು ಜಯಿಸಿದವರು ೩) ನಿರಂತರ ಆತ್ಮ ಸ್ಥಿತಿಯಲ್ಲಿರುವವರು ೪) ಕೋರಿಕೆಗಳನ್ನು ಪರಿಪೂರ್ಣವಾಗಿ (ವಾಸನಾಸಹಿತವಾಗಿ) ತ್ಯಜಿಸಿದವರು ೫) ಸುಖದುಃಖಾದಿ ದ್ವಂದ್ವಗಳಿಂದ ಬಿಡುಗಡೆ ಹೊಂದಿದವರು ೬) ಮೂಢತ್ವ (ಅಜ್ಞಾನ) ವಿಲ್ಲದವರು- ಈ ಪ್ರಕಾರವಾದ ಆರು ಸುಲಕ್ಷಣಗಳನ್ನು ಹೊಂದಿದವರು ಪರಮಾತ್ಮ ಪದವಿಯನ್ನು (ಮೋಕ್ಷ ಪದವಿಯನ್ನು) ಹೊಂದಬಲ್ಲರು.

**ಅ॥** ಪರಮಾತ್ಮ ಪದವಿಯನ್ನು ಹೊಂದಿದವರು ಹಿಂತಿರುಗಿ ಬರುವುದಿಲ್ಲ ವೆಂದು ಅಂದರೆ ಮತ್ತೆ ಜನ್ಮ ಬಂಧಕ್ಕೆ ಅಂಟಿಕೊಳ್ಳುವುದಿಲ್ಲವೆಂದು ಹೇಳಲಾಗುತ್ತಿದೆ.

**೬. ನ ತದ್ಭಾಸಯತೇ ಸೂರ್ಯೋ ನ ಶಶಾಂಕೋ ನ ಪಾವಕಂ**
**ಯದ್ಗತ್ವಾ ನ ನಿವರ್ತಂತೇ ತದ್ಧಾಮ ಪರಮಂ ಮಮ**

**ಅರ್ಥ:** ತತ್=ಆ (ಪರಮಾತ್ಮ) ಸ್ಥಾನವನ್ನು; ಸೂರ್ಯ=ಸೂರ್ಯನು; ನ ಭಾಸಯತೇ=ಪ್ರಕಾಶಿಸಲಾರನು; ಶಶಾಂಕಂ=ಚಂದ್ರನು; ನ (ಭಾಸಯತೇ)= ಪ್ರಕಾಶಿಸಲಾರನು; ಪಾವಕಂ=ಅಗ್ನಿ; ನ (ಭಾಸಯತೇ) =ಪ್ರಕಾಶಿಸಲಾರದು; ಯತ್=ಯಾವುದನ್ನು; ಗತ್ವಾ=ಹೊಂದಿ; ನ ನಿವರ್ತಂತೇ=ಹಿಂತಿರುಗಿ ಬರುವುದಿಲ್ಲವೋ; (ಮತ್ತೆ ಜನಿಸುವುದಿಲ್ಲವೋ); ತತ್=ಅದು; ಮಮ=ನನ್ನ; ಪರಮಂ=ಶ್ರೇಷ್ಠವಾದ; ಧಾಮ=ಸ್ಥಾನ.

**ತಾ॥** ಆ (ಪರಮಾತ್ಮ) ಸ್ಥಾನವನ್ನು ಸೂರ್ಯನಾಗಲೀ, ಚಂದ್ರನಾಗಲೀ, ಅಗ್ನಿಯಾಗಲೀ ಪ್ರಕಾಶಿಸಲು ಸಾಧ್ಯವಿಲ್ಲ. ಯಾವುದನ್ನು ಹೊಂದಿದ ನಂತರ (ಜನರು) ಮತ್ತೆ (ಈ ಸಂಸಾರಕ್ಕೆ) ಹಿಂತಿರುಗಿ ಬರುವುದಿಲ್ಲವೋ ಅದೇ ನನ್ನ ಶ್ರೇಷ್ಠವಾದ ಸ್ಥಾನ (ಆಗಿದೆ).

**ವ್ಯಾಖ್ಯೆ:** ಸೂರ್ಯಚಂದ್ರಾಗ್ನಿಗಳು ದೃಶ್ಯವಸ್ತುಗಳನ್ನು ಪ್ರಕಾಶಿಸುತ್ತವೆ. ನೇತ್ರವು ಆ ಸೂರ್ಯಾದಿಗಳನ್ನು ಪ್ರಕಾಶಗೊಳಿಸುತ್ತದೆ. ಬುದ್ಧಿ ಆ ನೇತ್ರವನ್ನು ಪ್ರಕಾಶಿಸುತ್ತದೆ. ಆತ್ಮ ಆ ಬುದ್ಧಿಯನ್ನು ಪ್ರಕಾಶಿಸುತ್ತದೆ. ಆದ್ದರಿಂದ ಸೂರ್ಯಾದಿಗಳು ಆತ್ಮನನ್ನು ಹೇಗೆ ಪ್ರಕಾಶಿಸಬಲ್ಲವು? ಮುಂಡ ಕೋಪನಿಷತ್ತಿನಲ್ಲಿ ಈ ವಿಷಯವನ್ನು ಚೆನ್ನಾಗಿ ನಿರೂಪಿಸಲಾಗಿದೆ. **(ನ ತತ್ರ ಸೂರ್ಯೋ ಭಾತಿ....).**

*'ಯದ್ಗತ್ವಾ ನ ನಿವರ್ತಂತೇ'*- ಆತ್ಮ ಸ್ಥಾನವನ್ನು ಹೊಂದಿದವರು ಮತ್ತೆ ಜನ್ಮ ಪರಂಪರೆಗಳಲ್ಲಿ, ಸಂಸಾರ ದುಃಖ ಕೂಪದಲ್ಲಿ ಬೀಳುವುದಿಲ್ಲ. ಬ್ರಹ್ಮಾಂಡದಲ್ಲಿ ಯಾವ ಲೋಕಕ್ಕೆ ಹೋದರೂ ಮತ್ತೆ ವಾಪಸು ಬರಬೇಕಾದದ್ದೇ. ಮತ್ತೆ ಜನಿಸಬೇಕಾದದ್ದೇ. ದುಃಖವನ್ನು ಅಂತ್ಯಮಾಡುವ ಶಕ್ತಿ ಅವುಗಳಿಗೆ ಇಲ್ಲ. ಆದರೆ ಪರಮಾತ್ಮ ಸ್ಥಾನಕ್ಕೆ ಮಾತ್ರ ಅಂತಹ ಶಕ್ತಿಯಿದೆ. ಅದನ್ನು ಹೊಂದಿದವರು ಹಿಂತಿರುಗಿ ಬರುವುದಿಲ್ಲ. ಮತ್ತೆ ದುಃಖ ಪ್ರಾಯವಾದ ಈ ಸಂಸಾರದಲ್ಲಿ ಜನಿಸುವುದಿಲ್ಲ. ಪುನರಾವೃತ್ತಿರಹಿತ ಶಾಶ್ವತ ಕೈವಲ್ಯ ಪದವಿಯೇ ಅದು. ಈ ವಿಷಯವನ್ನೇ ನಾಲ್ಕನೆಯ ಶ್ಲೋಕದಲ್ಲಿ **'ಯಸ್ಮಿನ್ಗತಾ ನ ನಿವರ್ತಂತಿ ಭೂಯಃ'** ಎಂದು ತಿಳಿಸಲಾಗಿದೆ.

ತನ್ನ ಸ್ಥಾನವನ್ನು ವರ್ಣಿಸುತ್ತ ಭಗವಂತನು 'ಪರಮಂ' (ಶ್ರೇಷ್ಠವಾದದ್ದು) ಎಂದು ಹೇಳಿರುವುದರಿಂದ ಭಗವಂತನ ದೃಷ್ಟಿಯಲ್ಲಿ ಎಲ್ಲಾ ಪದವಿಗಳಿಗಿಂತ ಆ ಆತ್ಮ ಪದವೇ, ಬ್ರಹ್ಮರೂಪ ನಿಜಪದವೇ ಸರ್ವಶ್ರೇಷ್ಠವೆನ್ನುವ ಅಭಿಪ್ರಾಯವನ್ನು ಕೊಟ್ಟ ಹಾಗಾಗಿದೆ. ಆದ್ದರಿಂದ ದೇವರ ದೃಷ್ಟಿಯಲ್ಲಿ ಯಾವುದು ಹಿರಿಮೆಯದೋ ಅದನ್ನೇ ಪ್ರಾಜ್ಞನು ಅನುಸರಿಸಬೇಕೇ ಹೊರತು ಪ್ರಾಪಂಚಿಕ ಜನರ ದೃಷ್ಟಿಯಲ್ಲಿ ದೊಡ್ಡದಾದ ವಸ್ತುವನ್ನಲ್ಲ.

**ಅ॥** ಜೀವಿಯು ವಾಸ್ತವವಾಗಿ ತನ್ನ ಅಂಶವೇ ಎಂದು ಭಗವಂತನು ತಿಳಿಸುತ್ತಿದ್ದಾನೆ-

೭. **ಮಮೈವಾಂಶೋ ಜೀವಲೋಕೇ ಜೀವಭೂತಃ ಸನಾತನಃ**
**ಮನಃಷಷ್ಠಾನೀಂದ್ರಿಯಾಣಿ ಪ್ರಕೃತಿ ಸ್ಥಾನಿ ಕರ್ಷತಿ**

**ಅರ್ಥ:** ಮಮ ಏವ=ನನ್ನ ಒಂದೇ; ಸನಾತನಂ=ಅನಾದಿಯಾದ (ನಿತ್ಯವಾದ); ಅಂಶಃ=ಭಾಗ (ಅಂಶ); ಜೀವಲೋಕೇ=ಜೀವಲೋಕದಲ್ಲಿ; ಜೀವಭೂತಃ= ಜೀವಿಯಾಗಿ; ಪ್ರಕೃತಿಸ್ಥಾನಿ=ಪ್ರಕೃತಿಯಲ್ಲಿರುವ,; ಮನಃಷಷ್ಠಾನಿ=ಮನಸ್ಸನ್ನು ಆರನೆಯದಾಗಿ ಹೊಂದಿರುವ (ತ್ವಕ್, ಚಕ್ಷು, ಶ್ರೋತ್ರ, ಜಿಹ್ವಾ, ಘ್ರಾಣ, ಮನಸ್ಸುಗಳು); ಇಂದ್ರಿಯಾಣಿ= ಇಂದ್ರಿಯಗಳನ್ನು; ಕರ್ಷತಿ=ಆಕರ್ಷಿಸುತ್ತದೆ.

**ತಾ॥** ನನ್ನ ಈ ಅನಾದಿಯಾದ (ನಿತ್ಯವಾದ) ಅಂಶವು ಜೀವಲೋಕದಲ್ಲಿ ಜೀವಿಯಾಗಿ ಪ್ರಕೃತಿಯಲ್ಲಿರುವ ತ್ವಕ್, ಚಕ್ಷು, ಶ್ರೋತ್ರ, ಜಿಹ್ವಾ, ಘ್ರಾಣ, ಮನಸ್ಸುಗಳೆನ್ನುವ ಆರು ಇಂದ್ರಿಯಗಳನ್ನು ಆಕರ್ಷಿಸುತ್ತದೆ.

**ವ್ಯಾಖ್ಯೆ:** 'ಮಮೈವಾಂಶಃ'- ಜೀವಿಯು (ಜೀವಾತ್ಮ), ದೇವರು ವಾಸ್ತವವಾಗಿ ಬೇರೆ ಬೇರೆ ಅಲ್ಲ. ದೇವರ ಅಂಶವೇ ಜೀವಿ. ಜೀವಿಯು ಸಾಕ್ಷಾತ್ ದೇವರೇ. ಇಬ್ಬರೂ ಸನಾತನ ಸ್ವರೂಪಿಗಳೇ. ನಿತ್ಯರು. ಆದರೆ ಅಜ್ಞಾನವಶದಿಂದ, ಉಪಾಧಿ ಸಂಬಂಧದಿಂದ ಜೀವಿಯು ಆ ಉಪಾಧಿಯನ್ನು, ಉಪಾಧಿಗುಣಗಳನ್ನು ತನ್ನ ಮೇಲೆ ಆರೋಪಿಸಿಕೊಂಡು ಆ ಉಪಾಧಿಯ ಇಂದ್ರಿಯಾದಿಗಳಿಂದ ತಾನು ಇರುವೆನೆಂದು ಭಾವಿಸಿಕೊಳ್ಳುತ್ತಿದ್ದಾನೆ. ಘಟಾಕಾಶ, ವಿಶಾಲಾಕಾಶದ ಅಂಶಮಾತ್ರವೇ ಆಗಿದೆ. ವಿಶಾಲಾಕಾಶದ ಲಕ್ಷಣಗಳೆಲ್ಲವೂ ಘಟಾಕಾಶದಲ್ಲಿ ಇದ್ದೇ ಇವೆ. ಹಾಗೆಯೇ ಪರಮಾತ್ಮನು ಸನಾತನತ್ವ ಜೀವಿಯಲ್ಲಿ (ಜೀವಾತ್ಮನಲ್ಲಿ) ಅಡಕವಾಗಿಯೇ ಇರುವನು. ಯಾವಾಗ ಜೀವಿಯು ತನ್ನ ಉಪಾಧಿ ಭಾವವನ್ನು ಬಿಟ್ಟು ನಿಜರೂಪವನ್ನು ಸ್ಮರಿಸುವನೋ ಆಗ ಆತನು ಸಾಕ್ಷಾತ್ ಪರಮಾತ್ಮನೇ ಆಗುತ್ತಿದ್ದಾನೆ.

'ಮಮೈವಾಂಶಃ' ಎಂದು ಜೀವಿಯನ್ನು ಕುರಿತು ಹೇಳಿರುವುದರಿಂದ ಭಗವಂತನ ಅಂಶವೇ ಜೀವಿಯಾಗಿರುವುದರಿಂದ ಇನ್ನು ಅಂತಹ ಭಗವಂದಶದಲ್ಲಿ ಹೆಚ್ಚು ಏನು, ಕಡಿಮೆ ಏನು? ಆದ್ದರಿಂದ ಸರ್ವಜೀವಿಗಳೂ ಸಮಾನವೇ. ಸರ್ವರೂ ಭಗವದಂಶ ಸ್ವರೂಪಿಗಳೇ ಎಂದು ವಿಜ್ಞು ಭಾವಿಸಿ ಸರ್ವರಲ್ಲಿ ಪ್ರೇಮ, ದಯೆ, ಸಮಬುದ್ಧಿ ಹೊಂದಿರಬೇಕು, ಭಗವಂತನ ಈ ವಾಕ್ಯದಿಂದ ಜೀವಿಗಳಿಗೆ ಪರಮ ಧೈರ್ಯವುಂಟಾಗುತ್ತದೆ. ಏಕೆಂದರೆ ಇಲ್ಲಿಯವರೆಗೆ ಅಜ್ಞಾನದಿಂದ ತಾನು ಬದ್ಧನೆಂದು, ಅಲ್ಪನೆಂದು, ದುಃಖಿಯೆಂದು ತಿಳಿದವನು, ಈ ವಾಕ್ಯಗಳಿಂದ ಆಶ್ವಾಸನೆಯನ್ನು ಪಡೆಯುತ್ತಿದ್ದಾನೆ. ತಾನು ವಾಸ್ತವವಾಗಿ ಅಲ್ಪನಲ್ಲ, ಜೀವಿಯಲ್ಲ, ನಶ್ವರನಲ್ಲ, ತಾನು ಸನಾತನನು. ತಾನು ಸಾಕ್ಷಾತ್ ಪರಮಾತ್ಮನೇ, ಮಾಯಾವಶದಿಂದ ಪ್ರಕೃತಿಗೆ ಒಳಗಾಗಿ ಭಗಮಂತನನ್ನು ಮರೆತು ಪ್ರಕೃತಿ ಜನ್ಯಗಳಾದ ಇಂದ್ರಿಯಾದಿಗಳೊಡನೆ ಕೂಡಿಕೊಂಡು ಕಾಲಕ್ಷೇಪ ಮಾಡುತ್ತಿದ್ದಾನೆ. ಅವುಗಳಿಂದ ಆಕರ್ಷಿತನಾಗಿದ್ದಾನೆ (ಕರ್ಷತಿ). ಅಯ್ಯೋ! (ಅಜ್ಞಾನದಿಂದ) ಎಷ್ಟು ದೊಡ್ಡ ತಪ್ಪನ್ನು ಮಾಡುತ್ತಿರುವನು. ಈಗ ಈ ಭಗವದ್ವಾಕ್ಯ ಸ್ಮರಣೆಯಿಂದ ಜ್ಞಾನವುಂಟಾದರೆ ಅಂತಹ ತಪ್ಪಿಗೆ ಮತ್ತೆ ಸ್ಥಾನವಿಲ್ಲ. ತನ್ನ ಅಮರ, ಆನಂದ, ಆತ್ಮರೂಪವನ್ನು ಕುರಿತು ಚಿಂತಿಸಿ ಜೀವಿಯು ಅದರೊಡನೆ ಐಕ್ಯವಾಗಬೇಕು. ಅದೇ ಮೋಕ್ಷ.

ಜೀವಿಯು ತನ್ನ ಸ್ವಸ್ಥಾನವು ಈ ಜೀವಲೋಕವಲ್ಲವೆಂದೂ, ಆತ್ಮಲೋಕವೇ ಎಂದು ತಿಳಿಯಬೇಕು. ಇದು ತನ್ನ ಸ್ವಸ್ಥಳವಲ್ಲವೆಂದು ಪರಸ್ಥಳವೆಂದು ಭಾವಿಸಬೇಕು. ಇದನ್ನು ಆಶ್ರಯಿಸಿದ್ದೇ ಆದರೆ, ಈ ಇಂದ್ರಿಯಗಳನ್ನೇ, ಪ್ರಕೃತಿಯನ್ನೇ ನಂಬಿಕೊಂಡಿದ್ದೇ ಆದರೆ ಜನ್ಮಪರಂಪರೆ ತಪ್ಪದು, ಸಂಸಾರ ಬಾಧೆಗಳು ತಪ್ಪುವುದಿಲ್ಲ, ಎಂದು ಅರ್ಥಮಾಡಿಕೊಂಡು ಜೀವಿಯು ತನ್ನ ನಿಜರೂಪವಾದ, ನಿಜಸ್ಥಾನವಾದ ಪರಮಾತ್ಮನನ್ನು ಸಂಸ್ಮರಿಸಿ ತದ್ರೂಪ ಹೊಂದಿ ಧನ್ಯನಾಗಬೇಕೆಂಬುದು ಈ ಶ್ಲೋಕದ ತಾತ್ಪರ್ಯ.

ಪ್ರ : ಜೀವಿಯು ವಾಸ್ತವವಾಗಿ ಎಂತಹವನು?

ಉ : ಭಗವದಂಶ ಸ್ವರೂಪಿಯು, ಸನಾತನನು (ನಿತ್ಯನು).

ಪ್ರ : ಆದರೆ ಅಜ್ಞಾನವಶದಿಂದ ಏನು ಮಾಡುತ್ತಿದ್ದಾನೆ?

ಉ : ತಾನು ಉಪಾಧಿಯೆಂದು ತಿಳಿದು, ಇಂದ್ರಿಯಾದಿಗಳಿಂದ ಮನಸ್ಸಿನಿಂದ ಕೂಡಿ ಕಾಲಕ್ಷೇಪ ಮಾಡುತ್ತಿದ್ದಾನೆ.

ಪ್ರ : ಆದ್ದರಿಂದ ಜೀವಿಯು ಏನು ಮಾಡಬೇಕು?

ಉ : (ದೃಶ್ಯ ವಸ್ತುಗಳಲ್ಲಿ ವಿರಕ್ತಿ ಹೊಂದಿ) ತನ್ನ ನಿಜರೂಪವಾದ ಪರಮಾತ್ಮನನ್ನು ಸಂಸ್ಮರಿಸಿ ತದ್ರೂಪಹೊಂದಿ ಅವನಲ್ಲಿ ವಿಲೀನವಾಗಬೇಕು. ಅದೇ ಮೋಕ್ಷ.

**ಅ॥** ಜೀವಿಯು ದೇಹವನ್ನು ಬಿಟ್ಟು ಮೃತ್ಯು ಹೊಂದುವಾಗ ನೂತನ ಶರೀರವನ್ನು ಪಡೆಯುವಾಗ ಈ ಇಂದ್ರಿಯಾದಿಗಳನ್ನು (ಸಂಸ್ಕಾರಗಳನ್ನು) ತನ್ನ ಹಿಂದೆ ತೆಗೆದುಕೊಂಡು ಹೋಗುವನೆಂದು ಹೇಳಲಾಗುತ್ತಿದೆ-

೮. **ಶರೀರಂ ಯದವಾಪ್ನೋತಿ ಯಚ್ಚಾಪ್ಯುತ್ಕ್ರಾಮತೀಶ್ವರಃ**
**ಗೃಹೀತ್ವೈತಾನಿ ಸಂಯಾತಿ ವಾಯುರ್ಗಂಧಾನಿವಾಶಯಾತ್.**

**ಅರ್ಥ:** ಈಶ್ವರಃ=ದೇಹೇಂದ್ರಿಯಾದಿ ಸಂಘಾತಿಗಳಿಗೆ ಪ್ರಭುವಾದ ಈಶ್ವರ; ಯತ್ ಚ ಅಪಿ=ಯಾವಾಗ; ಉತ್ಕ್ರಾಮತೀ=(ಶರೀರವನ್ನು ಬಿಟ್ಟು ಹೋಗುತ್ತಿದ್ದಾನೋ); ಯತ್=ಯಾವಾಗ; ಶರೀರಂ=(ಮತ್ತೊಂದು) ಶರೀರವನ್ನು; ಅವಾಪ್ನೋತಿ=ಹೊಂದುತ್ತಿದ್ದಾನೋ (ತದಾ=ಆಗ); ಆಶಯಾತ್=ಪುಷ್ಪಾದಿಗಳಿಂದ; ವಾಯುಃ=ಗಾಳಿ; ಗಂಧಾನ್ ಇವ= ವಾಸನೆಗಳ ಹಾಗೆ; ಏತಾನ್=ಈ (ಆರು ಇಂದ್ರಿಯಗಳನ್ನು); ಗೃಹೀತ್ವಾ= ಗ್ರಹಿಸಿ; ಸಂಯಾತಿ=ಪ್ರಯಾಣ ಮಾಡುತ್ತಿದ್ದಾನೆ.

**ತಾ॥** ದೇಹೇಂದ್ರಿಯ ಸಂಘಾತಗಳಿಗೆ, ಪ್ರಭುವಾದ ಜೀವಿಯು ದೇಹವನ್ನು ಬಿಟ್ಟು ನೂತನ ಶರೀರವನ್ನು ಹೊಂದುವಾಗ ಪುಷ್ಪಾದಿಗಳಿಂದ ಗಾಳಿಯು ಪರಿಮಳವನ್ನು ಗ್ರಹಿಸಿ ಒಯ್ದ ಹಾಗೆ-ಪಂಚೇಂದ್ರಿಯಗಳು, ಮನಸ್ಸು ಎನ್ನುವ ಆರನ್ನೂ ಗ್ರಹಿಸಿ ಹೋಗುತ್ತಿದ್ದಾನೆ.

**ವ್ಯಾಖ್ಯೆ:** 'ಜೀವಿಯು ಈ ಶರೀರವನ್ನು ಬಿಟ್ಟು ನೂತನ ಶರೀರವನ್ನು ಗ್ರಹಿಸಿದಾಗ'- ಎನ್ನುವ ವಾಕ್ಯದಿಂದ ಜೀವಿಯು ಶರೀರವಲ್ಲವೆಂದು, ಶರೀರಕ್ಕಿಂತ ಭಿನ್ನವೆಂದು, ವಸ್ತ್ರದ ಹಾಗೆ ಶರೀರವನ್ನು ತ್ಯಜಿಸುತ್ತ, ಧರಿಸುತ್ತ ಇರುವನೆಂದು ಸ್ಪಷ್ಟವಾಗುತ್ತದೆ. ಆದ್ದರಿಂದ ದೇಹಾಭಿಮಾನವನ್ನು ತ್ಯಜಿಸಿ ಹಾಕಬೇಕು. (ತಾನು ಆತ್ಮನೇ ಎನ್ನುವ ಭಾವವನ್ನು ಹೊಂದಿರಬೇಕು).

ಮತ್ತೆ 'ಈಶ್ವರಃ' (ಪ್ರಭು)- ಎನ್ನುವ ಪದದಿಂದ ಜೀವಿಯು ವಾಸ್ತವವಾಗಿ ದೇಹಕ್ಕೆ, ಇಂದ್ರಿಯಗಳಿಗೆ, ಮನಸ್ಸಿಗೆ, ದೇಹಸ್ಥವಾದ ಬೇರೆ ವಿಷಯಗಳಿಗೆ, ಅಷ್ಟೇಕೆ ಸಮಸ್ತ ಸಂಘಾತಕ್ಕೆ ಪ್ರಭುವೆಂದು, ಸೇವಕನಲ್ಲವೆಂದು ಋಜು

ವಾಗುತ್ತದೆ. ಆದರೆ ಅಜ್ಞಾನಿ ಇಂತಹ ಈಶ್ವರಸ್ಥಿತಿ, ಪ್ರಭುಸ್ಥಿತಿಯಲ್ಲಿರದೆ, ಸೇವಕಾವೃತ್ತಿಯನ್ನು ಅವಲಂಬಿಸಿ ಇಂದ್ರಿಯಗಳಿಗೆ ದಾಸನಾಗಿ ದೀನನಾಗಿ ವರ್ತಿಸುತ್ತಿದ್ದಾನೆ. ಅವು ಹೇಗೆ ಹೇಳಿದರೆ ಹಾಗೆ ಕುಣಿಯುತ್ತಿದ್ದಾನೆ. ಭಗವಂತನು ತಿಳಿಸಿದ ಈಶ್ವರತ್ವವೆಲ್ಲಿ? ಈ ಕ್ಷುದ್ರವಾದ ಪರಾಧೀನವೆಲ್ಲಿ? ಆದ್ದರಿಂದ ಈ 'ಈಶ್ವರ' ಪದವನ್ನು ಲಕ್ಷ್ಯದಲ್ಲಿಟ್ಟುಕೊಂಡು, ದೇಹೇಂದ್ರಿಯಾದಿಗಳಿಗೆ ವಶವಾಗದೆ ಇರಬೇಕು. ಮತ್ತೆ ತಾನು ವಾಸ್ತವವಾಗಿ ಜೀವಿಯಲ್ಲ, ಸಾಕ್ಷಾತ್ ಈಶ್ವರನೇ ಎನ್ನುವ ಭಾವವನ್ನು ಹೊಂದಿರಬೇಕು.

*'ಗೃಹೀತ್ವೈತಾನಿ ಸಂಯಾತಿ'*- ಜೀವಿಯು ಶರೀರವನ್ನು ಬಿಟ್ಟು ಹೋಗುವಾಗ, ಮತ್ತೆ ಶರೀರವನ್ನು ಗ್ರಹಿಸುವಾಗ ಇಂದ್ರಿಯ ಮನಸ್ಸುಗಳನ್ನು ಜೊತೆಯಲ್ಲಿ ತೆಗೆದುಕೊಂಡು ಹೋಗುತ್ತಿದ್ದಾನೆಂದು ಹೇಳಲಾಗಿದೆ. ಜೀವಿಯು ತನ್ನ ಜೀವನವೆಲ್ಲಾ ಪ್ರಾಪಂಚಿಕ ಪದಾರ್ಥಗಳನ್ನು ಶೇಖರಿಸುವುದರಲ್ಲಿ, ಅನುಭವಿಸುವುದರಲ್ಲಿ ಕಾಲಹರಣ ಮಾಡುತ್ತಿದ್ದಾನೆ. ಆದರೆ ಕೊನೆಗೆ ಅವುಗಳಲ್ಲಿ ಒಂದನ್ನಾದರೂ ತೆಗೆದುಕೊಂಡು ಹೋಗುವ ಹಕ್ಕು ತನಗಿಲ್ಲವೆಂದು ಭಗವಂತನು ಇಲ್ಲಿ ಹೇಳುತ್ತಿದ್ದಾನೆ. ಆದರೆ ತನ್ನ ಹಿಂದೆ ಈ ಆರನ್ನು ಮಾತ್ರ ತೆಗೆದುಕೊಂಡು ಹೋಗಬಹುದು. ಅವು ಪಂಚೇಂದ್ರಿಯಗಳು, ಮನಸ್ಸು. ಆದ್ದರಿಂದ ಆ ಆರು ವಸ್ತುಗಳನ್ನು ಶುದ್ಧವಾಗಿ, ಪವಿತ್ರವಾಗಿ, ದೈವಸಂಸ್ಕಾರಯುತವಾಗಿ ಮಾಡಿಕೊಳ್ಳಬೇಕು. ಹಾಗೆ ಮಾಡುವುದಕ್ಕಾಗಿ ಜೀವನ ಕಾಲದಲ್ಲಿ ಎಷ್ಟೋ ಪಾರಮಾರ್ಥಿಕ ಯತ್ನಗಳು ಅಗತ್ಯ. ಏಕೆಂದರೆ ಜೀವಿಯ ಜೊತೆ ಅವು ಮಾತ್ರ ಬಂದು ನೂತನ ಜನ್ಮವನ್ನು ಏರ್ಪಡಿಸುವುವು. ಇಂದ್ರಿಯ ಮನಸ್ಸುಗಳು ಶುದ್ಧವಾಗಿದ್ದಲ್ಲಿ ಶುದ್ಧ ಜನ್ಮ ಮಲಿನವಾಗಿದ್ದರೆ ಕ್ರಿಮಿಕೀಟಾದಿ ಕ್ಷುದ್ರ ಜನ್ಮ ಒದಗುವುದು. ಆದ್ದರಿಂದ ಭಾವೀ ಜನ್ಮ ಕಾಲಸ್ಥಿತಿಗಳು ನಮ್ಮ ಕೈಯಲ್ಲಿಯೇ ಇವೆ. ಈಗಲೇ ಈ ಇಂದ್ರಿಯ ಮನಗಳನ್ನು ಆಧ್ಯಾತ್ಮಿಕ ಚಿಂತನೆಯಿಂದ ಪವಿತ್ರ ಗೊಳಿಸಿಕೊಂಡು ಪತನದಿಂದ ತಪ್ಪಿಸಿಕೊಳ್ಳಬೇಕು.

ಆ ಇಂದ್ರಿಯ ಮನಗಳೆಂಬ ಆರು ಪದಾರ್ಥಗಳೇ ಮರಣಾನಂತರ ಜೀವಿಗಿರುವ ದಾರಿ ಭತ್ಯೆ. ಅವುಗಳನ್ನು ಬಿಟ್ಟು ಬೇರೆ ಒಂದು ತೃಣವೂ ತನ್ನ ಜೊತೆ ಬರುವುದಿಲ್ಲ. ಅಂತ್ಯಕಾಲದಲ್ಲಿ ಯಾರನ್ನು ಕರೆದರೂ ಹತ್ತಿರಕ್ಕೆ ಬರುವುದಿಲ್ಲ. ಯಾರೂ ಮಾತನಾಡುವುದಿಲ್ಲ ಯಾರೂ ಅವಸರಕ್ಕೆ ಬರುವುದಿಲ್ಲ. ಪತ್ನಿ ಪುತ್ರ ಬಂಧು ಧನ ಪಶು ಕ್ಷೇತ್ರಾದಿಗಳು ಯಾವುವೂ ಆ ಜೀವಿಗೆ ಸಹಾಯ ಮಾಡಲಾರವು. ಹಿಂದೆ ಬರುವುದಿಲ್ಲ. ಬರಬೇಕೆಂದರೂ ಬರಲು ಹಕ್ಕಿಲ್ಲ. ಶುದ್ಧಗೊಳಿಸಲ್ಪಟ್ಟ (ದೈವಮಯ ಮಾಡಲ್ಪಟ್ಟ) ಮನಸ್ಸು ಇಂದ್ರಿಯಗಳೇ ಆತನಿಗೆ ಆಗ ಸಹಾಯ ಮಾಡಬಲ್ಲವು. ಅವುಗಳಿಗೆ ಮಾತ್ರ ಆತನ ಜೊತೆಯಲ್ಲಿ ಹೋಗಲು, ಸಹಾಯ ಮಾಡಲು ಅನುಮತಿಯಿದೆ. ಅವು ಆತನನ್ನು ಸಂರಕ್ಷಿಸುವ ಭಟರು (Body guards). ಆದ್ದರಿಂದ ಜೀವನದ ಕಾಲದಲ್ಲಿ ಮಾನವನು ಜಾಗರೂಕನಾಗಿ ಆ ಇಂದ್ರಿಯ ಮನಸ್ಸುಗಳನ್ನು ಪ್ರಯತ್ನ ಪೂರ್ವಕವಾಗಿ ಶುದ್ಧಗೊಳಿಸಿಕೊಳ್ಳಬೇಕು. ನಮ್ಮ ಭವಿಷ್ಯವನ್ನು ನಾವೇ ರೂಪಿಸಿಕೊಳ್ಳಬೇಕು. ನೀಚ ಜನ್ಮವಾಗಲಿ, ಶುದ್ಧ ಜನ್ಮವಾಗಲಿ, ಜನ್ಮರಾಹಿತ್ಯವಾಗಲಿ ಎಲ್ಲವೂ ನಮ್ಮ ಕೈಯಲ್ಲಿಯೇ ಇವೆ. ಆದ್ದರಿಂದ ಜನ್ಮ ರಾಹಿತ್ಯಕ್ಕೆ ಪ್ರಯತ್ನ ಮಾಡುತ್ತಿರುವ ವಿಜ್ಞು ಕಷ್ಟಪಟ್ಟು ಅದಕ್ಕೆ ಅನುಗುಣವಾದ ಪವಿತ್ರ ವಾತಾವರಣವನ್ನು ಸೃಷ್ಟಿಸಿಕೊಳ್ಳಬೇಕು.

*'ವಾಯುರ್ಗಂಧಾನಿವಾಶಯಾತ್'*- ಶ್ರೀ ಕೃಷ್ಣಪರಮಾತ್ಮ ತಾನು ಬೋಧಿಸಿದ ವಿಷಯ ಚೆನ್ನಾಗಿ ಅರ್ಥವಾಗಲೆಂದು ಇಲ್ಲಿ ಒಂದು ಉಪಮಾನವನ್ನು ಕೊಟ್ಟಿರುವನು. ಸುಗಂಧವನ್ನಾಗಲಿ, ದುರ್ಗಂಧವನ್ನಾಗಲಿ ವಾಯು ಆಯಾ ವಸ್ತುಗಳಿಂದ ಗ್ರಹಿಸಿ ಬೇರೊಂದು ಸ್ಥಾನಕ್ಕೆ ತೆಗೆದುಕೊಂಡು ಹೋಗುತ್ತದೆ. ಅವುಗಳಿಗೆ ಸಂಬಂಧವಾದ ಸೂಕ್ಷ್ಮವಾದ ಅಣುಗಳನ್ನು ತೆಗೆದುಕೊಂಡು ಅದು ಹೋಗುವುದು. ಎಷ್ಟೋ ದೂರದಲ್ಲಿರುವ ಪುಷ್ಪ ಧೂಪಾದಿಗಳ ಸುಗಂಧ; ಸಗಣಿ, ಕೊಳೆತ ವಸ್ತುಗಳ ದುರ್ಗಂಧ ಮನುಷ್ಯನಿಗೆ ಅನುಭೂತಿಯಾಗಲು ಕಾರಣ ಇದೇ ಆಗಿದೆ. ಆಯಾ ಸುಗಂಧ, ದುರ್ಗಂಧ ಅಣುಗಳನ್ನು ವಾಯು ತನ್ನ ಹಿಂದೆ ತೆಗೆದುಕೊಂಡು ಈ ಕಡೆ ಆ ಕಡೆ ಚಲಿಸುತ್ತದೆ. ಈ ಕಾರ್ಯದಲ್ಲಿ ವಾಯುವಿಗೆ ಯಾವ ಪಕ್ಷಪಾತವೂ ಇಲ್ಲ. ವಾರ್ತಾವಾಹಕದಂತೆ ಅದು ಪ್ರವರ್ತಿಸುವುದು. ಹಾಗೆಯೇ ಜೀವಿಯು ಮರಣಾನಂತರ ಇಂದ್ರಿಯ ಮನಗಳನ್ನು ತೆಗೆದುಕೊಂಡು ಹೋಗಿ ನೂತನ ಶರೀರವನ್ನು ಪ್ರವೇಶಿಸುವುದು. ಇಂದ್ರಿಯಗಳು, ಮನಸ್ಸು ಅಪವಿತ್ರವಾಗಿದ್ದರೆ, ಜೀವಿಯು ಮರಣಾನಂತರ ಆ ಪಾಪಯುಕ್ತವಾದ ಇಂದ್ರಿಯ ಮನಸ್ಸುಗಳನ್ನು ತೆಗೆದೊಯ್ದು ಅವುಗಳೊಡನೆ ನೂತನವಾದ ಕ್ಷುದ್ರಶರೀರವನ್ನು ಪ್ರವೇಶಿಸುವನು. ಇಂದ್ರಿಯ ಮನಸ್ಸುಗಳು ಪವಿತ್ರವಾಗಿದ್ದಲ್ಲಿ ಮರಣಾನಂತರ ಶುದ್ಧವಾಸ ನಾಯುಕ್ತವಾದ ಶರೀರವನ್ನೇ ಪ್ರವೇಶಿಸುವುದು. ಆದ್ದರಿಂದ ಇಲ್ಲಿ ಭಗವಂತನಿಗಾಗಲಿ, ಬೇರೆ ಕರ್ಮದೇವತೆಗಳಿಗಾಗಲಿ ಯಾವ ವಿಧವಾದ ಪಕ್ಷಪಾತವಿಲ್ಲ. ಆಶಯ (ಚಿತ್ತ)ಕ್ಕೆ ಯಾವ ಸಂಸ್ಕಾರವಿದೆಯೋ ಅದರ ಹಾಗೆ ಜನ್ಮ ಏರ್ಪಡುವುದು. ಆಶಯ (ಚಿತ್ತ) ವಾಸನಾರಹಿತವಾಗಿ ನಿಸ್ಸಂಕಲ್ಪ ಸ್ಥಿತಿಯನ್ನು ಪಡೆದದ್ದೇ ಆದರೆ ಇನ್ನು ಜನ್ಮವೇ ಇಲ್ಲದೆ ಮೋಕ್ಷ ಒದಗುವುದು. ಜೀವ ಬ್ರಹ್ಮೈಕ್ಯವು ಇಲ್ಲೇ ಸಿದ್ಧಿಸುವುದು. ಆದ್ದರಿಂದ ಪ್ರಯತ್ನ ಪೂರ್ವಕವಾಗಿ ಅವರವರ ಭವಿಷ್ಯವನ್ನು ಅವರೇ ತಿದ್ದಿಕೊಳ್ಳಬೇಕು. ಜೀವಿತದ ಪ್ರತಿ ನಿಮಿಷವನ್ನು ಆ ಇಂದ್ರಿಯ ಮನಗಳನ್ನು ಶುದ್ಧಗೊಳಿಸುವುದರಲ್ಲಿ, ನಿಗ್ರಹಿಸುವುದರಲ್ಲಿ ವಿನಿಯೋಗಿಸಿದಲ್ಲಿ ಅವು ಜೀವಿಯನ್ನು ಸದ್ಗತಿಗೆ ಕೊಂಡೊಯ್ಯುವುವು ಹಾಗು ಜನ್ಮರಾಹಿತ್ಯವನ್ನು ಕೂಡ ಉಂಟುಮಾಡುವುವು.

ಪ್ರ : ಶರೀರವನ್ನು ಬಿಡುವಾಗ ಹೊಸ ಶರೀರವನ್ನು ಗ್ರಹಿಸುವಾಗ ಜೀವಿಯು ತನ್ನ ಜೊತೆ ಯಾವ ಯಾವ ವಸ್ತುಗಳನ್ನು ಕೊಂಡೊಯ್ಯುವನು?

ಉ : ಮನಸ್ಸು, ಇಂದ್ರಿಯಗಳ ಸಂಸ್ಕಾರಗಳನ್ನು ಕೊಂಡೊಯ್ಯುವನು, ಬೇರೆ ಯಾವ ವಸ್ತುಗಳನ್ನೂ ಕೊಂಡೊಯ್ಯುವುದಿಲ್ಲ.

ಪ್ರ : ಯಾವ ಪ್ರಕಾರವಾಗಿ?

ಉ : ಸುಗಂಧ, ದುರ್ಗಂಧ ವಸ್ತುಗಳಿಂದ ವಾಯುವು ಆಯಾ ಗಂಧವನ್ನು ತೆಗೆದುಕೊಂಡು ಹೋದಹಾಗೆ.

**ಅ॥** ಜೀವಿಯು ಯಾವ ಯಾವ ಇಂದ್ರಿಯಗಳನ್ನು ಆಶ್ರಯಿಸಿ ವಿಷಯಗಳನ್ನು ಅನುಭವಿಸುತ್ತಾನೆ ಎನ್ನುವುದನ್ನು ವಿವರಿಸಲಾಗಿದೆ-

**೯ ಶ್ರೋತ್ರಂ ಚಕ್ಷುಃ ಸ್ಪರ್ಶನಂ ಚ ರಸನಂ ಘ್ರಾಣಮೇವ ಚ**
**ಅಧಿಷ್ಠಾಯ ಮನಶ್ಚಾಯಂ ವಿಷಯಾನುಪಸೇವತೇ**

**ಅರ್ಥ:** ಅಯಂ=ಈ ಜೀವಿಯು; ಶ್ರೋತ್ರಂ=ಕಿವಿಯನ್ನು; ಚಕ್ಷುಃ=ಕಣ್ಣನ್ನು; ಸ್ಪರ್ಶನಂ ಚ=ಚರ್ಮವನ್ನು; ರಸನಂ=ನಾಲಿಗೆಯನ್ನು; ಘ್ರಾಣಂ ಏವ ಚ=ಮೂಗನ್ನು; ಮನಃ ಚ=ಮನಸ್ಸನ್ನು; ಅಧಿಷ್ಠಾಯ=ಉಪಯೋಗಿಸಿ; ವಿಷಯಾನ್=ಶಬ್ದಾದಿ ವಿಷಯಗಳನ್ನು; ಉಪಸೇವತೆ= ಅನುಭವಿಸುತ್ತಿದ್ದಾನೆ.

**ತಾ॥** ಈ ಜೀವಿಯು (ಜೀವಾತ್ಮ) ಕಿವಿ, ಕಣ್ಣು, ಚರ್ಮ, ನಾಲಿಗೆ, ಮೂಗು, ಮನಸ್ಸನ್ನು ಆಶ್ರಯಿಸಿ (ಶಬ್ದಾದಿ) ವಿಷಯಗಳನ್ನು ಅನುಭವಿಸುತ್ತಿದ್ದಾನೆ.

**ವ್ಯಾಖ್ಯೆ:** 'ಅಧಿಷ್ಠಾಯ ಮನಶ್ಚಾಯಂ'- ಮನಸ್ಸನ್ನು, ಇಂದ್ರಿಯಗಳನ್ನು ಆಶ್ರಯಿಸಿ-ಎಂದು ಹೇಳುವುದರಿಂದ ಜೀವಿಯು (ಜೀವಾತ್ಮನು) ವಾಸ್ತವವಾಗಿ ಮನಸ್ಸು, ಇಂದ್ರಿಯಗಳಿಗಿಂತ ಬೇರೆಯೆಂದು, ಇಂದ್ರಿಯ ಮನಸ್ಸುಗಳು ಉಪಾಧಿರೂಪಗಳೇ ಎಂದು, (ಅಜ್ಞಾನ ವಶದಿಂದ) ಆ ಉಪಾಧಿಗಳನ್ನಾಶ್ರಯಿಸಿ ಆತನು ಸುಖದುಃಖಗಳನ್ನು ಅನುಭವಿಸುತ್ತಿದ್ದಾನೆಂದು ಸ್ಪಷ್ಟವಾಗುತ್ತದೆ. ಆದ್ದರಿಂದ ಮನೋವಿಕಾರಗಳಾಗಲಿ, ಇಂದ್ರಿಯ ವಿಕಾರ ಗಳಾಗಲಿ ಆತ್ಮಕ್ಕೆ ಸಂಬಂಧಪಟ್ಟವಲ್ಲ ತನಗಿಂತ ಬೇರೆಯಾದ ಇಂದ್ರಿಯ, ಮನಸ್ಸುಗಳನ್ನು ಉಪಾಧಿರೂಪವೇಷವಾಗಿ ಧರಿಸಿ ಆತ್ಮ (ಜೀವಿಯು) ವಿಷಯಾದಿಗಳನ್ನು, ಸುಖದುಃಖಗಳನ್ನು ಅನುಭವಿಸುತ್ತಿದ್ದಾನೆ. ಆದ್ದರಿಂದ ವಾಸ್ತವವಾಗಿ ಆ ಉಪಾಧಿಯೊಡನೆಯಾಗಲಿ, ಉಪಾಧಿ ಜನಿತ ವಿಕಾರ ಗಳೊಡನೆಯಾಗಲಿ ಆ ಆತ್ಮಕ್ಕೆ ಯಾವ ರೀತಿಯ ಸಂಬಂಧವಿಲ್ಲ.

ಪ್ರ : ಜೀವಿಯು (ಜೀವಾತ್ಮ) ಯಾವ ಯಾವ ಇಂದ್ರಿಯಗಳನ್ನು ಆಶ್ರಯಿಸಿ ವಿಷಯಗಳನ್ನು ಅನುಭವಿಸುತ್ತಿದ್ದಾನೆ.

ಉ : ೧) ಕಿವಿ ೨) ಕಣ್ಣು ೩) ಚರ್ಮ ೪) ನಾಲಿಗೆ ೫) ಮೂಗು ಎನ್ನುವ ಪಂಚಜ್ಞಾನೇಂದ್ರಿಯಗಳನ್ನು ಮತ್ತು ೬) ಮನಸ್ಸನ್ನು ಆಶ್ರಯಿಸಿ ವಿಷಯಗಳನ್ನು ಅನುಭವಿಸುತ್ತಿದ್ದಾನೆ.

**ಅ||** ಈ ಆತ್ಮವನ್ನು ಯಾರು ತಿಳಿದುಕೊಳ್ಳಬಲ್ಲರು ಹಾಗು ಯಾರು ತಿಳಿದುಕೊಳ್ಳಲಾರರು ಎನ್ನುವುದನ್ನು ಹೇಳಲಾಗುತ್ತದೆ-

**೧೦ ಉತ್ಕ್ರಾಮಂತಂ ಸ್ಥಿತಂ ವಾಪಿ ಭುಂಜಾನಂ ವಾ ಗುಣಾನ್ವಿತಮ್**
**ವಿಮೂಢಾ ನಾನುಪಶ್ಯಂತಿ ಪಶ್ಯಂತಿ ಜ್ಞಾನಚಕ್ಷುಷಃ**

**ಅರ್ಥ:** ಉತ್ಕ್ರಾಮಂತಂ=(ಒಂದು ಶರೀರದಿಂದ ಇನ್ನೊಂದು ಶರೀರಕ್ಕೆ) ಪ್ರಯಾಣಮಾಡುತ್ತಿರುವವನು; ವಾ=ಇಲ್ಲವೇ; ಸ್ಥಿತಂ=ಶರೀರದಲ್ಲಿರುವವನು; ವಾ=ಇಲ್ಲವೇ; ಭುಜಾನಂ=ವಿಷಯಗಳನ್ನನುಭವಿಸುತ್ತಿರುವವನು; ಗುಣಾನ್ವಿತಂ ಅಪಿ=(ಸತ್ವಾದಿ) ಗುಣಗಳಿಂದ ಕೂಡಿದವನು' (ಏನಂ=ಈ ಜೀವಾತ್ಮ); ವಿಮೂಢಾಃ=ಅಜ್ಞಾನಿಗಳು; ನ ಅನುಪಶ್ಯಂತಿ=ನೋಡಲಾರರು (ತಿಳಿದು ಕೊಳ್ಳಲಾರರು); ಜ್ಞಾನಚಕ್ಷುಷಃ=ಜ್ಞಾನದೃಷ್ಟಿಯುಳ್ಳವರು; ಪಶ್ಯಂತಿ= ನೋಡುತ್ತಿದ್ದಾರೆ (ತಿಳಿದುಕೊಳ್ಳುತ್ತಿದ್ದಾರೆ).

**ತಾ||** (ಒಂದು ಶರೀರದಿಂದ ಮತ್ತೊಂದು ಶರೀರಕ್ಕೆ) ಪ್ರಯಾಣ ಮಾಡುತ್ತಿರುವ, ಇಲ್ಲವೆ ಶರೀರದಲ್ಲಿರುವ, ಇಲ್ಲವೇ ವಿಷಯಗಳನ್ನು ಅನುಭವಿಸುತ್ತಿರುವ ಅಥವ (ಸತ್ವಾದಿ) ಗುಣಗಳಿಂದ ಕೂಡಿದ ಅಜ್ಞಾನಿಗಳು ಈ ಜೀವಾತ್ಮನನ್ನು ನೋಡಲಾರರು (ತಿಳಿದುಕೊಳ್ಳಲಾರರು). ಜ್ಞಾನ ದೃಷ್ಟಿಯುಳ್ಳವರು ಮಾತ್ರ ನೋಡುತ್ತಾರೆ (ತಿಳಿದುಕೊಳ್ಳುತ್ತಾರೆ). (ಅಂದರೆ ಆಯಾಕ್ರಿಯೆಗಳು ನಡೆಯುತ್ತಿರುವಾಗ ಆತನನ್ನು ಅಜ್ಞರು ತಿಳಿಯಲಾರರೆಂದು ಜ್ಞಾನಿಗಳು ಮಾತ್ರ ತಿಳಿಯುವರು ಎಂದರ್ಥ).

**ವ್ಯಾಖ್ಯೆ:** ಭಗವಂತನು ನಮಗೇಕೆ ಕಾಣುಸುತ್ತಿಲ್ಲವೆಂದು ಅನೇಕರು ಪ್ರಶ್ನಿಸುತ್ತಿದ್ದಾರೆ. ಅದಕ್ಕೆ ಉತ್ತರ ಶ್ರೀ ಕೃಷ್ಣಮೂರ್ತಿ ಈ ಶ್ಲೋಕದಲ್ಲಿ ಕೊಟ್ಟಿರುವನು. ನೀನು ಜ್ಞಾನನೇತ್ರವನ್ನು (ಆತ್ಮಾನಾತ್ಮ ವಿವೇಕ)ವನ್ನು ಸಂಪಾದಿಸಿದರೆ ಇಲ್ಲಿಯೇ ಈ ಶರೀರದಲ್ಲಿಯೇ ಪರಮಾತ್ಮನನ್ನು ದರ್ಶಿಸುವೆ ಎಂದು ಭಗವಂತನು ನುಡಿಯುತ್ತಿದ್ದಾನೆ. ಆತನಿಗಾಗಿ ದೂರ ಎಲ್ಲೋ ಹುಡುಕುವ ಅಗತ್ಯವಿಲ್ಲ, ಜೀವಿಯು ಈ ಶರೀರದಲ್ಲಿಯೇ ಆತನನ್ನು ಕಂಡುಕೊಳ್ಳಬಹುದು. ತಿನ್ನುತ್ತಾ, ಕುಡಿಯುತ್ತ ಎಲ್ಲವನ್ನು ಅನುಭವಿಸುತ್ತಿರುವ ಆ ವ್ಯಕ್ತಿಯನ್ನು ವಿವೇಚನೆ, ಸೂಕ್ಷ್ಮದೃಷ್ಟಿ, ಜ್ಞಾನನೇತ್ರದಿಂದ ಮನುಜನು ಕಂಡುಕೊಳ್ಳಬಹುದು (ಪಶ್ಯಂತಿ ಜ್ಞಾನಚಕ್ಷುಷಃ). ಪ್ರಾಪಂಚಿಕ ದೃಶ್ಯವಾಸನಾ ಪ್ರಾಬಲ್ಯಗಳಿಂದ ಅಜ್ಞಾನಿಗಳು ಆತನನ್ನು ಕಂಡುಕೊಳ್ಳಲಾಗುತ್ತಿಲ್ಲ. ಕನ್ನಡಿಯನ್ನು ಪ್ರಪಂಚದ ಕಡೆ ತಿರುಗಿಸಿ ಹಿಡಿದುಕೊಂಡಿರುವುದರಿಂದ ಅದರಲ್ಲಿ ಮುಖವು ಕಾಣಿಸುತ್ತಿಲ್ಲ. ತನ್ನ ಕಡೆ ತಿರುಗಿಸಿಕೊಂಡರೆ ಮಾತ್ರ ಕಾಣುವುದು. ಹಾಗೆಯೇ ಮನಸ್ಸನ್ನು ಬಹಿರ್ಮುಖ ವಾಗಿ, ಚಪಲವಾಗಿ, ವಾಸನಾಯುಕ್ತವಾಗಿ ಮಾಡಿಕೊಂಡಿರುವಾಗ ಆತ್ಮವಸ್ತುವು ಅದರಲ್ಲಿ ಕಾಣಬರುವುದಿಲ್ಲ. ಅಂತರ್ಮುಖವಾಗಿ, ನಿಶ್ಚಲವಾಗಿ, ವಾಸನಾರಹಿತ ವಾಗಿದ್ದಾಗ ಮಾತ್ರ ಅದು ಕಾಣುವುದು. ನಿಶ್ಚಲಮನಸ್ಸು, ಆತ್ಮಾನಾತ್ಮ ವಿವೇಕ ವುಳ್ಳವನಿಗೆ, ಆತ್ಮದರ್ಶನ ಇಲ್ಲವೆ ಭಗವದ್ದರ್ಶನವಾಗುತ್ತಿರುತ್ತದೆ. (ಇಲ್ಲಿ ಭಗವದ್ದರ್ಶನವೆಂದರೆ ಭಗವದನುಭೂತಿ ಎಂದರ್ಥ).

'ಉತ್ಕ್ರಾಮಂತಂ.....' ಎಂದು ಹೇಳುವುದರಿಂದ ಆತ್ಮ ಜೀವರೂಪದಲ್ಲಿ ಈ ಶರೀರದಲ್ಲೇ ತಿನ್ನುತ್ತ, ಕುಡಿಯುತ್ತ, ಮತ್ತೊಂದು ಶರೀರವನ್ನು ಹೊಂದುತ್ತಿದೆಯೆಂದು ಅರ್ಥವಾಗುತ್ತದೆ. ಆದ್ದರಿಂದ ಮುಮುಕ್ಷುಗಳು ಭಗವದ್ದರ್ಶನಕ್ಕಾಗಿ ದೂರ ಎಲ್ಲಿಗೋ ಹೋಗುವಂತಿಲ್ಲ.

ಜ್ಞಾನನೇತ್ರದಿಂದ ಮಹನೀಯರು ಆ ಆತ್ಮವನ್ನು ತಪ್ಪದೆ ನೋಡಬಲ್ಲರು ಎಂದು ಇಲ್ಲಿ ಹೇಳಿರುವುದರಿಂದ ಜೀವನದಲ್ಲಿ ಪ್ರತಿ ಮಾನವನ ಪ್ರಥಮ ಕರ್ತವ್ಯ (ಅವಿವೇಕವನ್ನು ಹೋಗಲಾಡಿಸಿಕೊಂಡು ವಿಷಯ ವಿರಕ್ತಿ ಹೊಂದಿ ಮನಸ್ಸನ್ನು ಹೊರಗೆ ಹೋಗದಂತೆ ತಡೆದು ಜ್ಞಾನ ವಿಚಾರ, ಹೃದಯ ಪರಿಶೋಧನೆಯ ದ್ವಾರ ಒಳಗಿರುವ) ಆತ್ಮನನ್ನು ತಿಳಿಯುವುದೇ ಆಗಿದೆ. **'ಪಶ್ಯಂತಿ ಜ್ಞಾನ ಚಕ್ಷುಷಃ'** ಎಂದು ಅಸಂದಿಗ್ಧವಾಗಿ ಹೇಳಲ್ಪಟ್ಟಿರುವುದರಿಂದ ಜ್ಞಾನನೇತ್ರವನ್ನು ಸಂಪಾದಿಸುವುದೇ ತಡ ಭಗವದ್ದರ್ಶನವು ಜೀವಿಗೆ ಲಭಿಸಿಯೇ ತೀರುವುದೆಂದು ಸ್ಪಷ್ಟವಾಗುತ್ತದೆ. ಅಂತಹ ಜ್ಞಾನ ನೇತ್ರವು ಲಭಿಸದಿದ್ದರೆ ಜೀವನವು ನಿರರ್ಥಕವಾಗುವುದು.

ಪ್ರ : ಆತ್ಮವನ್ನು ಯಾರು ನೋಡಬಲ್ಲರು? ಯಾರು ನೋಡಲಾರರು?

ಉ : ಜ್ಞಾನನೇತ್ರವುಳ್ಳವರು ನೋಡಬಲ್ಲರು. ಅದು ಇಲ್ಲದವರು (ಅಜ್ಞಾನಿಗಳು) ನೋಡಲಾರರು. (ಜ್ಞಾನನೇತ್ರ=ಆತ್ಮಾನಾತ್ಮ ವಿವೇಕ)

**ಅ||** ಚಿತ್ತ ಶುದ್ಧಿಯಿಲ್ಲದವರು ಎಷ್ಟು ಪ್ರಯತ್ನ ಮಾಡಿದರೂ ಆತ್ಮವನ್ನು ನೋಡಲಾರರೆಂದು ಹೇಳಲಾಗುತ್ತಿದೆ-

**೧೧ ಯತಂತೋ ಯೋಗಿನಶ್ಚೈನಂ ಪಶ್ಯಂತ್ಯಾತ್ಮನ್ಯವಸ್ಥಿತಂ**
**ಯತಂತೋಽಪ್ಯಕೃತಾತ್ಮಾನೋ ನೈನಂ ಪಶ್ಯಂತ್ಯಚೇತಸಃ**

**ಅರ್ಥ:** ಯತಂತಃ=(ಆತ್ಮ ಸಾಕ್ಷಾತ್ಕಾರಕ್ಕಾಗಿ) ಪ್ರಯತ್ನ ಮಾಡುತ್ತಿರುವ; ಯೋಗಿನಃ=ಯೋಗಿಗಳು; ಆತ್ಮನಿ=ತಮ್ಮಲ್ಲಿ; ಅವಸ್ಥಿತಂ=ಇರುವಂತಹ; ಏನಂ=ಈ ಆತ್ಮವನ್ನು; ಪಶ್ಯಂತಿ= ನೋಡುತ್ತಿದ್ದಾರೆ (ಅನುಭೂತಿಗೊಳಿಸಿ ಕೊಳ್ಳುತ್ತಿದ್ದಾರೆ); ಯತಂತಃ ಅಪಿ ಚ=(ಹಾಗೆ) ಪ್ರಯತ್ನ ಮಾಡುತ್ತಿರುವ ವರಾಗಿದ್ದು; ಅಕೃತಾತ್ಮಾನಃ=ಚಿತ್ತಶುದ್ಧಿಯಿಲ್ಲದ; ಅಚೇತಸಃ=ಅವಿವೇಕಿಗಳು; ಏನಂ=ಈ ಆತ್ಮವನ್ನು; ನ ಪಶ್ಯಂತಿ=ನೋಡಲಾರದವರಾಗಿದ್ದಾರೆ.

**ತಾ||** (ಆತ್ಮ ಸಾಕ್ಷಾತ್ಕಾರಕ್ಕಾಗಿ) ಪ್ರಯತ್ನ ಮಾಡುತ್ತಿರುವ ಯೋಗಿಗಳು ತಮ್ಮಲ್ಲಿರುವಂತಹ ಈ ಆತ್ಮವನ್ನು ನೋಡುತ್ತಿದ್ದಾರೆ (ಅನುಭೂತಿಗೊಳಿಸಿ ಕೊಳ್ಳುತ್ತಿದ್ದಾರೆ). ಹಾಗೆ ಪ್ರಯತ್ನ ಮಾಡುತ್ತಿದ್ದರೂ ಚಿತ್ತ ಶುದ್ಧಿಯಿಲ್ಲದ ಅವಿವೇಕಿಗಳು ಈ ಆತ್ಮವನ್ನು ನೋಡಲಾರದವರಾಗಿದ್ದಾರೆ.

ವ್ಯಾಖ್ಯೆ: ಅನೇಕರು ಭಗವತ್ಪ್ರಾಪ್ತಿಗಾಗಿ ಯತ್ನಿಸುತ್ತಿದ್ದರೂ ಅದರಲ್ಲಿ ಕೆಲವರು ಸಫಲರಾಗಿ, ಕೆಲವರು ವಿಫಲರಾಗಲು ಕಾರಣವೇನೆನ್ನುವುದನ್ನು ಇಲ್ಲಿ ಹೇಳಲಾಗಿದೆ. ಚಿತ್ತ ಶುದ್ಧಿಯುಂಟಾಗಿ ಯತ್ನಿಸುವವರು ತಪ್ಪದೆ ಸಾಫಲ್ಯವನ್ನು ಹೊಂದುವರು. ಅಂದರೆ ಪರಮಾತ್ಮನನ್ನು ತಮ್ಮಲ್ಲಿ ಸಾಕ್ಷಾತ್ಕರಿಸಿಕೊಳ್ಳುತ್ತಾರೆ. ಆದರೆ ಅದೇ ಪ್ರಯತ್ನ, ಅವೇ ಧ್ಯಾನಾದಿಗಳನ್ನು ಮಾಡುತ್ತಿದ್ದಾಗ್ಯೂ ಮಲಿನ ಚಿತ್ತರು, ಸಂಸ್ಕಾರವಿಲ್ಲದ ಮನಸ್ಸುಳ್ಳವರು ಪರಮಾತ್ಮನನ್ನು ಸಾಕ್ಷಾತ್ಕರಿಸಿಕೊಳ್ಳಲಾಗುವುದಿಲ್ಲ. ಕೆಲವರು ಶಾಸ್ತ್ರ ಪಾಂಡಿತ್ಯ ಮೊದಲಾದವುಗಳನ್ನು ಹೊಂದಿ ಹೃದಯ ಪವಿತ್ರತೆ ಇಲ್ಲದೆ, ಆತ್ಮಾನ್ವೇಷಣೆಗೆ ಉಪಕ್ರಮಿಸುವರು. ಮತ್ತೆ ಕೆಲವರು ಕೇವಲ ವೇಷಧಾರಿಗಳಾಗಿ ಧ್ಯಾನಾದಿಗಳನ್ನು ಮಾಡುತ್ತಿರುವಂತೆ ಗೋಚರಿಸು ವರು. ಅಂತಹವರು ಇಂದ್ರಿಯ ನಿಗ್ರಹಣವಿಲ್ಲದ್ದರಿಂದ, ಚಿತ್ತಶುದ್ಧಿಯಿಲ್ಲದೇ ಇರುವುದರಿಂದ ಆತ್ಮವನ್ನು ತಮ್ಮಲ್ಲಿ ನೋಡಲಾರರೆಂದು ಈ ಶ್ಲೋಕದಲ್ಲಿ ಘಂಟಾಘೋಷವಾಗಿ ಹೇಳಲಾಗಿದೆ. ಕ್ಷೇತ್ರವನ್ನು ಚೆನ್ನಾಗಿ ಉತ್ತು, ಕಳೆ ತೆಗೆದು, ಶುದ್ಧಮಾಡಿ, ಗೊಬ್ಬರ ಚೆಲ್ಲಿದನಂತರ ಬೀಜ ಬಿತ್ತಿದರೆ ಮಾತ್ರ ಒಳ್ಳೆಯ ಪೈರು ಬರುವುದು. ಹಾಗಿಲ್ಲದೆ ಉಳದೆ, ಕಳೆ ತೆಗೆಯದೆ ಇರುವ ಹೊಲದಲ್ಲಿ ಅಥವ ಬಂಜರು ಭೂಮಿಯಲ್ಲಿ ಬೀಜ ಹಾಕಿದರೆ ಅದು ಮೊಳೆಯುವುದಿಲ್ಲ. ಒಂದು ವೇಳೆ ಮೊಳೆತರೂ ಬೆಳೆಯುವುದಿಲ್ಲ, ಬೆಳೆದರೂ ಫಲವನ್ನೀಯುವುದಿಲ್ಲ. ಹಾಗೆಯೇ ಸಾಧನ ಚತುಷ್ಟಯ ಸಂಪತ್ತು ಮುಂತಾದುವುಗಳಿಂದ ಚಿತ್ತವನ್ನು ಶುದ್ಧ ಮಾಡಿಕೊಂಡು ಮುಂದುವರಿದಲ್ಲಿ ಆತ್ಮ ವಿಚಾರಣಾ ಧ್ಯಾನಾದಿಗಳಿಂದ ಅತಿ ಸುಲಭವಾಗಿ ಆತ್ಮ ಅನುಭೂತಿಯಾಗುವುದು. ಅವು ಇಲ್ಲದವರು ಎಷ್ಟು ಪ್ರಯತ್ನಿಸಿದರೂ ಆತ್ಮನನ್ನು ನೋಡಲಾರರು. ಭಗವದ್ದರ್ಶನಕ್ಕಾಗಿ ಎರಡು ವಿಷಯಗಳು ಪ್ರತಿಯೊಬ್ಬರಿಗೂ ಅತ್ಯಾವಶ್ಯಕಗಳೆಂದು ಇಲ್ಲಿ ಹೇಳಲಾಗಿದೆ. ಅವು ಯಾವುವೆಂದರೆ ೧) ಪ್ರಯತ್ನ ೨) ಚಿತ್ತಶುದ್ಧಿ - ಈ ಎರಡನ್ನೂ ಹೊಂದಿದವನಿಗೆ ಪರಮಾತ್ಮನು ತಪ್ಪದೆ ಅನುಭೂತಿಗೊಳ್ಳುವನು. ಎರಡೂ ಅವಶ್ಯಕಗಳೇ. 'ಯತಂತಃ' ಎಂದು ಹೇಳಿರುವುದರಿಂದ ಪರಮಾತ್ಮಮಾರ್ಗದಲ್ಲಿ ಪ್ರಯತ್ನ ಅತ್ಯಾವಶ್ಯಕವಾದುದೆಂದು ಅರ್ಥವಾಗುತ್ತದೆ. ಆದರೆ ಆ ಪ್ರಯತ್ನಕ್ಕೆ ಚಿತ್ತ ಶುದ್ಧಿ ಜೊತೆಯಾದರೆ ಅದು ಮತ್ತೂ ಪ್ರಕಾಶಿಸುವುದು. ಇಲ್ಲಿ 'ಅಚೇತಸಃ' ಎಂದು ಹೇಳಿರುವುದರ ಅರ್ಥ ಕೇವಲ ಮೂಢರು, ಅಜ್ಞಾನಿಗಳು, ನಾಸ್ತಿಕರೆಂದಲ್ಲ. ಏಕೆಂದರೆ ಅವರಿಗೆ ದೈವವನ್ನು ಹೊಂದಬೇಕೆನ್ನುವ ಅಭಿಲಾಷೆ, ಮುಮುಕ್ಷತೆ ಇರುವುದಿಲ್ಲ. ಅವರು ಭಗವತ್ಪ್ರಾಪ್ತಿಗಾಗಿ ಪ್ರಯತ್ನವನ್ನೇ ಮಾಡುವುದಿಲ್ಲವಲ್ಲ! ಆದರೆ ಪ್ರಯತ್ನ ಮಾಡುತ್ತಿರುವ ಕೆಲವರು ವಕ್ರ ಮಾರ್ಗದಲ್ಲಿ, ಸಾಧುವಲ್ಲದ ಮಾರ್ಗದಲ್ಲಿ ನಡೆಯುತ್ತಿದ್ದಾರೆ. ಅಂತಹವರು ಅನುಭವಜ್ಞರಾದ ಹಿರಿಯರ ಸಾಂಗತ್ಯವನ್ನು ಮಾಡಿದರೆ ಸತ್ಯ ಮಾರ್ಗವನ್ನು ತಿಳಿದು ಮುಕ್ತಿಹೊಂದಬಲ್ಲರು. ದೈವ ಪ್ರಯತ್ನವು ಒಳ್ಳೆಯದೇ ಆಗಲಿ, ಅದರ ಜೊತೆಗೆ ಚಿತ್ತಶುದ್ಧಿ ಇದ್ದಲ್ಲಿ ಮಾತ್ರ ಚೆನ್ನಾಗಿ ವೃದ್ಧಿ ಹೊಂದುವರು. ಒರಟು ಸಾಧನೆಯಿಂದ ಉತ್ತಮ ಪ್ರಯೋಜನಗಳು ಬರಲಾರವು; ಸಾಧನೆಯ ಪದ್ಧತಿ, ರಹಸ್ಯಗಳನ್ನು, ಭಗವತ್ಪ್ರೋಕ್ತಗಳಾದ ಇಂತಹ ವಚನಗಳಿಂದ, ಸದ್ಗ್ರಂಥಗಳಿಂದ ಮಹಾತ್ಮರ ಸಾಂಗತ್ಯದಿಂದ ತಿಳಿದುಕೊಂಡು ಮುಮುಕ್ಷುಗಳು ಕ್ರಮಪದ್ಧತಿಯನ್ನನುಸರಿಸಿ ಮುಕ್ತಿ ಹೊಂದಬೇಕು.

ಪ್ರ : ಪರಮಾತ್ಮನು ಎಲ್ಲಿ ಇದ್ದಾನೆ?

ಉ : ತನ್ನಲ್ಲಿಯೇ

ಪ್ರ : ಆತನನ್ನು ಯಾರು ನೋಡಬಲ್ಲರು?

ಉ : ಚಿತ್ತಶುದ್ಧಿ ಹೊಂದಿ ಜ್ಞಾನಾದಿ ಪ್ರಯತ್ನಗಳನ್ನು ಮಾಡುವವರು

ಪ್ರ : ಯಾರು ನೋಡಲಾರರು?

ಉ : ಚಿತ್ತ ಶುದ್ಧಿಯಿಲ್ಲದೆ ಪ್ರಯತ್ನ ಮಾಡುವವರು.

ಪ್ರ : ಆದ್ದರಿಂದ ಭಗವದ್ದರ್ಶನಕ್ಕೆ ಯಾವುವು ಅವಶ್ಯಕ?

ಉ : ೧) ಚಿತ್ತ ಶುದ್ಧಿ ೨) ಪ್ರಯತ್ನ

**ಅ॥** ಆ ಪರಮಾತ್ಮನ ಮಹಿಮೆಯನ್ನು ನಾಲ್ಕು ಶ್ಲೋಕಗಳಲ್ಲಿ ವರ್ಣಿಸಲಾಗುತ್ತಿದೆ-

**೧೨ ಯದಾದಿತ್ಯಗತಂ ತೇಜೋ ಜಗದ್ಭಾಸಯತೇಽಖಿಲಂ**
**ಯಚ್ಚಂದ್ರಮಸಿ ಯಚ್ಚಾಗ್ನೌ ತತ್ತೇಜೋ ವಿದ್ಧಿ ಮಾಮಕಮ್**

**ಅರ್ಥ:** ಆದಿತ್ಯಗತಂ=ಸೂರ್ಯನಲ್ಲಿರುವ; ಯತ್ ತೇಜಃ=ಯಾವ ತೇಜಸ್ಸು (ಪ್ರಕಾಶ, ಚೈತನ್ಯ); ಅಖಿಲಂ=ಸಮಸ್ತವಾದ; ಜಗತ್=ಪ್ರಪಂಚವನ್ನು; ಭಾಸಯತೇ=ಪ್ರಕಾಶಿಸುತ್ತಿದೆಯೋ; ಚಂದ್ರಮಸಿ=ಚಂದ್ರನಲ್ಲಿ; ಯತ್ (ತೇಜಃ+ಅಸ್ತಿ)=ಯಾವ ತೇಜಸ್ಸಿದೆಯೋ; ಅಗ್ನೌ+ಚ=ಅಗ್ನಿಯಲ್ಲಿ; ಯತ್(ತೇಜಃ+ಅಸ್ತಿ)=ಯಾವ ತೇಜಸ್ಸಿದೆಯೋ; ತತ್=ಆ; ತೇಜಃ= (ಸಮಸ್ತ) ತೇಜಸ್ಸನ್ನು; ಮಾಮಕಂ=ನನ್ನದೆಂದು; ವಿದ್ಧಿ=ತಿಳಿದುಕೊಳ್ಳುವುದು.

**ತಾ॥** ಸೂರ್ಯನ ಯಾವ ತೇಜಸ್ಸು (ಪ್ರಕಾಶ, ಚೈತನ್ಯ) ಪ್ರಪಂಚವನ್ನೆಲ್ಲಾ ಪ್ರಕಾಶಿಸುತ್ತಿದೆಯೋ, ಹಾಗೆಯೇ ಚಂದ್ರನಲ್ಲಿ ಹಾಗು ಅಗ್ನಿಯಲ್ಲಿ ಯಾವ ತೇಜಸ್ಸು ಇದೆಯೋ, ಅದೆಲ್ಲವೂ ನಾನೇ ಎಂದು ತಿಳಿಯುವುದು.

ವ್ಯಾಖ್ಯೆ: ಸೂರ್ಯಾದಿ ಪ್ರಕಾಶಕ ಪದಾರ್ಥಗಳಲ್ಲಿಯ ತೇಜಸ್ಸು ತನ್ನದೇ ಎಂದು ಭಗವಂತನು ತಿಳಿಸಿರುವದರಿಂದ ಅಂತಹ ವಸ್ತುಗಳನ್ನು ದರ್ಶಿಸಿದಾಗ ಅವು ಭಗವದ್ವಿಭೂತಿಗಳೇ ಎನ್ನುವ ಭಾವನೆ ಬರಬೇಕು. ಪ್ರಪಂಚದಲ್ಲಿ ಅನೇಕ ಪದಾರ್ಥಗಳಿದ್ದರೂ ಅವುಗಳಿಗೆ ಮತ್ತೊಂದು ವಸ್ತುವನ್ನು ಪ್ರಕಾಶಿಸುವ ಸಾಮರ್ಥ್ಯವಿಲ್ಲ. ಸೂರ್ಯ ಚಂದ್ರಾಗ್ನಿಗಳಿಗೆ ಮಾತ್ರ ಈ ಸಾಮರ್ಥ್ಯ ವಿದೆ. ಅವು ತಾವು ಪ್ರಕಾಶಮಾನವಾಗಿರುವುದೇ ಅಲ್ಲದೆ ಇತರರನ್ನು ಕೂಡ ಪ್ರಕಾಶಿಸಬಲ್ಲವು. ಅವುಗಳಲ್ಲಿಯ ಆ ಪ್ರಕಾಶಕ ಶಕ್ತಿ, ತೇಜಸ್ಸು ಭಗವಂತನ ವಿಭೂತಿಯೇ ಎಂದು ಈ ಶ್ಲೋಕದಿಂದ ತಿಳಿಯುತ್ತದೆ. ಆದರೆ ಸೂರ್ಯಾದಿಗಳು ಪರಮಾತ್ಮನನ್ನು ಪ್ರಕಾಶಿಸಲು ಸಾಧ್ಯವಿಲ್ಲವೆಂದು, ಪರಮಾತ್ಮನು ಸೂರ್ಯಾದಿಗಳನ್ನು ಪ್ರಕಾಶಿಸುವನೆಂದು ಈ ಸಂದರ್ಭದಲ್ಲಿ ಜ್ಞಾಪಕದಲ್ಲಿಟ್ಟುಕೊಳ್ಳಬೇಕು.

ಪ್ರ : ಸೂರ್ಯ ಚಂದ್ರಾಗ್ನಿಗಳಲ್ಲಿಯ ತೇಜಸ್ಸು ಎಂತಹದು?

ಉ : ಪರಮಾತ್ಮಸಂಬಂಧವಾದದ್ದು; ದೈವಕ್ಕೆ ಸೇರಿದುದು.

**ಅ॥** ಭೂಮಿಯಲ್ಲಿ ಪ್ರವೇಶಿಸಿ ಸಸ್ಯಾದಿಗಳನ್ನು ಅಭಿವೃದ್ಧಿ ಪಡಿಸುವುದು ತಾನೇ ಎಂದು ಭಗವಂತನು ನುಡಿಯುತ್ತಿದ್ದಾನೆ-

**೧೩ ಗಾಮಾವಿಶ್ಯ ಚ ಭೂತಾನಿ ಧಾರಾಯಾಮ್ಯಹ ಮೋಜಸಾ**
**ಪುಷ್ಣಾಮಿ ಚೌಷಧೀಸ್ಸರ್ವಾಸ್ಸೋಮೋ ಭೂತ್ವಾ ರಸಾತ್ಮಕಃ**

**ಅರ್ಥ:** ಚ=ಮತ್ತೆ; ಅಹಂ=ನಾನು; ಗಾಂ=ಭೂಮಿಯನ್ನು ಆವಿಶ್ಯ= ಪ್ರವೇಶಿಸಿ, ಓಜಸಾ=ಬಲ (ಶಕ್ತಿ)ಯಿಂದ; ಭೂತಾನಿ=(ಚರಾಚರಗಳಾದ ಸಮಸ್ತ) ಪ್ರಾಣಿಕೋಟಿಗಳನ್ನು ಧಾರಯಾಮಿ=ಧರಿಸುತ್ತಿದ್ದೇನೆ; ರಸಾತ್ಮಕಃ= ರಸಸ್ವರೂಪನಾದ; ಸೋಮಃ=ಚಂದ್ರನು; ಭೂತ್ವಾ=ಆಗಿ; ಸರ್ವಾಃ=ಸಮಸ್ತ; ಓಷಧೀಃ=ಸಸ್ಯಗಳನ್ನು (ಧಾನ್ಯಾದಿಗಳನ್ನು); ಪುಷ್ಣಾಮಿ=ಪೋಷಿಸುತ್ತಿದ್ದೇನೆ.

**ತಾ||** ಮತ್ತೆ ನಾನು ಭೂಮಿಯನ್ನು ಪ್ರವೇಶಿಸಿ(ನನ್ನ) ಶಕ್ತಿಯಿಂದ ಸಮಸ್ತ ಪ್ರಾಣಿಕೋಟಿಗಳನ್ನು ಧರಿಸುತ್ತಿದ್ದೇನೆ (ಆಧಾರವಾಗಿದ್ದೇನೆ) ರಸಸ್ವರೂಪಿ ಚಂದ್ರನಾಗಿ ಸಸ್ಯಗಳನ್ನು ಪೋಷಿಸುತ್ತಿದ್ದೇನೆ.

**ವ್ಯಾಖ್ಯೆ:** 'ಧಾರಯಾಮಿ ಓಜಸಾ'- ಎಂದು ಹೇಳಿರುವುದರಿಂದ ಜಗತ್ತಿನಲ್ಲಿಯ ಸಮಸ್ತ ಪದಾರ್ಥಗಳಿಗೆ, ಪ್ರಾಣಿಕೋಟಿಗೆ ಶಕ್ತಿ, ಸಾಮರ್ಥ್ಯ ಹಾಗು ಬಲವನ್ನು ಕೊಡುವುದು ಆ ಪರಾತ್ಪರನೇ ಎಂದು ತಿಳಿಯುತ್ತದೆ. ಮೇಲಿನ ವಾಕ್ಯದಿಂದ ಶ್ರೀ ಕೃಷ್ಣಮೂರ್ತಿ ವಸುದೇವನಿಂದ ಜನ್ಮಿಸಿದ ಒಂದು ಚಿಕ್ಕ ಮಾನವ ಉಪಾಧಿಯಲ್ಲವೆಂದು, ವಿಶ್ವವ್ಯಾಪಿ ಜಗದ್ಭರ್ತ ಎಂದು ಸ್ಪಷ್ಟವಾಗುತ್ತದೆ ಮತ್ತೆ ಸಸ್ಯ ರಾಶಿಯನ್ನು ಅಭಿವೃದ್ಧಿ ಪಡಿಸುವುದು ಕೂಡ ತಾನೇ ಎಂದು ಹೇಳಿರುವುದರಿಂದ ಜೀವಿಗಳು ಭುಜಿಸುವ ಆಹಾರ ಸಾಕ್ಷಾತ್ ಪರಮಾತ್ಮನಿಂದ ಸಂಭವಿಸುತ್ತದೆಂದು ತಿಳಿಯುತ್ತದೆ. ಆದ್ದರಿಂದ, ಆಹಾರವನ್ನು ಭುಜಿಸುವಾಗ ಈ ಅನ್ನ ಯಾರಿಂದ ನಮಗೆ ಬಂದಿದೆ? ಎಂದು ಆಲೋಚಿಸಿ ಅನ್ನವನ್ನು ಸೃಷ್ಟಿಸಿದ ಹಾಗು ಅನ್ನದಾತನಾದ ಆ ಸರ್ವೇಶ್ವರನಿಗೆ ಸರ್ವರೂ ಕೃತಜ್ಞರಾಗಿರಬೇಕು. ಮನುಜನು ತಾನು ಆಹಾರವನ್ನು ಸೇವಿಸುವ ಮುನ್ನ ಆ ದೇವದೇವನಿಗೆ ಅದನ್ನು ಸಮರ್ಪಿಸಿ ನಂತರ ದೈವಭಾವದಿಂದ ಅದನ್ನು ಭುಜಿಸಬೇಕು. ಸಸ್ಯಗಳನ್ನು ಭಗವಂತನು ಪೋಷಿಸದೇ ಇದ್ದರೆ ಜನರಿಗೆ ಅನ್ನವು ಸಿಗುವುದಿಲ್ಲ; ಸೂರ್ಯ ಚಂದ್ರಾಗ್ನಿಗಳು ಪ್ರಕಾಶ ಕೊಡದೇ ಇದ್ದರೆ ಲೋಕ ಅಂಧಕಾರಾವೃತವಾಗುವುದು. ಆದ್ದರಿಂದ ಈ ಎಲ್ಲಾ ಅನುಕೂಲಗಳನ್ನು ಒದಗಿಸಿ ಪ್ರಾಣಿಗಳನ್ನು ಭರಿಸುತ್ತಿರುವ ಆ ಜಗದ್ಧಾತ್ರಿಗೆ ಮನುಜರು ಸದಾ ಕೃತಜ್ಞರಾಗಿ ವರ್ತಿಸಬೇಕು. ಸರ್ವಕಾಲಗಳಲ್ಲಿ ಆತನನ್ನು ಸ್ಮರಿಸುತ್ತ, ಕೀರ್ತಿಸುತ್ತಿರಬೇಕು.

ಪ್ರ : ಭಗವಂತನು ಯಾವ ಪ್ರಕಾರವಾಗಿ ಪ್ರಜೆಗಳಿಗೆ ಮೇಲು ಮಾಡುತ್ತಿದ್ದಾನೆ?

ಉ : ೧) ಭೂಮಿಯಲ್ಲಿ ಪ್ರವೇಶಿಸಿ ತನ್ನ ಶಕ್ತಿಯಿಂದ ಸಮಸ್ತ ಪ್ರಾಣಿಗಳಿಗೆ ಆಧಾರವಾಗಿದ್ದಾನೆ. ೨) ಚಂದ್ರನ ರೂಪದಲ್ಲಿ ಸಸ್ಯಗಳನ್ನೆಲ್ಲಾ ಪೋಷಿಸುತ್ತಿದ್ದಾನೆ.

ಪ್ರ : ಆದ್ದರಿಂದ ಜೀವಿಗಳು ಏನು ಮಾಡಬೇಕು?

ಉ : ಆತನಿಗೆ ಕೃತಜ್ಞರಾಗಿದ್ದು, ಸಂಕೀರ್ತನೆ, ಜಪಪೂಜಾದಿಗಳಿಂದ ನಿರಂತರ ಆತನನ್ನು ಸ್ಮರಿಸುತ್ತಿರಬೇಕು

**ಅ||** ಜೀವಿಗಳು ಭುಜಿಸುವ ಆಹಾರವನ್ನು ತಾನೇ ಜೀರ್ಣ ಮಾಡುತ್ತಿರುವೆನೆಂದು ಭಗವಂತನು ಹೇಳುತ್ತಿದ್ದಾನೆ-

**೧೪. ಅಹಂ ವೈಶ್ವಾನರೋ ಭೂತ್ವಾ ಪ್ರಾಣಿನಾಂ ದೇಹಮಾಶ್ರಿತಃ**
**ಪ್ರಾಣಾಪಾನಸಮಾಯುಕ್ತಃ ಪಚಾಮ್ಯನ್ನಂ ಚತುರ್ವಿಧಮ್**

**ಅರ್ಥ:** ಅಹಂ=ನಾನು; ವೈಶ್ವಾನರಃ='ವೈಶ್ವಾನರನು' ಜಠರಾಗ್ನಿ; ಭೂತ್ವಾ=ಆಗಿ; ಪ್ರಾಣಿನಾಂ=ಪ್ರಾಣಿಗಳ; ದೇಹಂ=ಶರೀರವನ್ನು; ಆಶ್ರಿತಃ=ಆಶ್ರಯಿಸಿದವನಾಗಿ; ಪ್ರಾಣಾಪಾನ ಸಮಾಯುಕ್ತಃ=ಪ್ರಾಣ, ಅಪಾನ ವಾಯುಗಳಿಂದ ಕೂಡಿ; ಚತುರ್ವಿಧಂ=ನಾಲ್ಕು ವಿಧಗಳಾದ; ಅನ್ನಂ=ಅನ್ನವನ್ನು; ಪಚಾಮಿ=ಜೀರ್ಣಿಸುತ್ತಿದ್ದೇನೆ.

**ತಾ||** ನಾನು 'ವೈಶ್ವಾನರನಾಗಿ' ಜಠರಾಗ್ನಿಯಾಗಿ ಪ್ರಾಣಿಗಳ ಶರೀರವನ್ನು ಆಶ್ರಯಿಸಿ, ಪ್ರಾಣ ಪಾನ ವಾಯುಗಳಿಂದ ನಾಲ್ಕು ವಿಧಗಳಾದ ಅನ್ನವನ್ನು ಪಚನ ಮಾಡುತ್ತಿದ್ದೇನೆ.

**ವ್ಯಾಖ್ಯೆ:** ಹಿಂದಿನ ಶ್ಲೋಕದಲ್ಲಿ ಭಗವಂತನು ತಾನು ಸಸ್ಯಗಳನ್ನು ಪೋಷಿಸುವುದರ ಮೂಲಕ ಜೀವಿಗಳು ತಿನ್ನುವ ಅನ್ನವನ್ನು ಸೃಷ್ಟಿಸುತ್ತಿದ್ದಾನೆಂದು ಹೇಳಿ, ಈಗ ಆ ಅನ್ನವನ್ನು ತಾನೇ ಜೀವಿಗಳ ಶರೀರದಲ್ಲಿ ಪಚನ ಮಾಡುತ್ತಿದ್ದೇನೆಂದು ಹೇಳುತ್ತಿದ್ದಾನೆ. ಶರೀರವು ಆಹಾರದಿಂದ ಏರ್ಪಟ್ಟಿದೆ. ಆ ಆಹಾರ ಜಠರಾಗ್ನಿಯಿಂದ ಪಚನವಾಗದಿದ್ದರೆ, ರಕ್ತಾದಿಗಳ ದ್ವಾರ ಶರೀರವೆಲ್ಲಾ ವ್ಯಾಪಿಸಲಾರದು. ಆದ್ದರಿಂದ ಜಠರಾಗ್ನಿ ಶರೀರದಲ್ಲಿ ಬಹು ಪ್ರಾಮುಖ್ಯ ಸ್ಥಾನವನ್ನು ಆಕ್ರಮಿಸಿದೆ. ಭಗವಂತನು ತಾನೇ ಜಠರಾಗ್ನಿ ರೂಪದಲ್ಲಿ ಇರುವೆನೆಂದು ಹೇಳುವುದರಿಂದ, ದೇಹ ನಿರ್ಮಾತ ಹಾಗು ದೇಹ ಪೋಷಣ ಕರ್ತ ಆತನೇ ಎಂದು ಸ್ಪಷ್ಟವಾಗುತ್ತದೆ. ಈ ಪ್ರಕಾರವಾಗಿ ಆಹಾರವನ್ನು ಧಾನ್ಯಾದಿಗಳ ದ್ವಾರ ಸೃಷ್ಟಿಸಿ ಮತ್ತೆ ಅದನ್ನು ಪಚನ ಮಾಡಿ ಶರೀರಕ್ಕೆ ಪುಷ್ಟಿಯನ್ನು ನೀಡಿ ಜೀವಿಗಳಿಗೆ ಮಹೋಪಕಾರವನ್ನು ಮಾಡುತ್ತಿರುವ ಆ ಪರಮಾತ್ಮನಿಗೆ ಕೃತಜ್ಞತೆ ಸಲ್ಲಿಸದೆ ಆ ಅನ್ನವನ್ನು ಆತನಿಗೆ ನಿವೇದಿಸದೆ ಭುಜಿಸುವವನು ಎಷ್ಟು ಕೃತಘ್ನ? ಅಂತಹವನು ಕಳ್ಳನೇ ಎಂದು ಈ ಹಿಂದೆ ಶ್ರೀ ಕೃಷ್ಣ ಮೂರ್ತಿ ಹೇಳಿರುವುದು ಗಮನಾರ್ಹ (ಯೋ ಭುಂಕ್ತೆ ಸ್ತೇನ ಏವ ಸಃ ೩-೧೨) ಆದ್ದರಿಂದಲೇ ಆಹಾರವನ್ನು ಭುಜಿಸುವ ಮುನ್ನ ದೇವರಿಗೆ ನೈವೇದ್ಯ ಸಮರ್ಪಿಸುವ ಆಚಾರ ಲೋಕದಲ್ಲಿ ಏರ್ಪಟ್ಟಿದೆ. ಹಾಗೆ ದೇವರಿಗೆ ನಿವೇದಿಸದೆ, ದೈವ ಭಾವವಿಲ್ಲದೆ ಭುಜಿಸುವುದು ಅಪವಿತ್ರವೇ ಸರಿ. ಆದ್ದರಿಂದ ಪ್ರತಿಯೊಬ್ಬರೂ ತಾವು ಊಟ ಮಾಡುವುದಕ್ಕಿಂತ ಮುಂಚೆ ತಮ್ಮ ಆಹಾರವನ್ನು ದೈವಕ್ಕೆ ಸಮರ್ಪಿಸಿ, ಇಲ್ಲವೆ ಅದರ ಸ್ವಲ್ಪ ಭಾಗವನ್ನು ದೈವ ಸ್ವರೂಪಿಗಳೇ ಆದ ಭೂತಕೋಟಿಗಳಿಗೆ ಇಟ್ಟು ಭಗವದ್ಭಾವನೆಯಿಂದ ಭುಜಿಸಬೇಕು. ಆಗ ಆ ಭೋಜನಕ್ರಿಯೆ, ಯಜ್ಞವಾಗಿ ಪರಿಣಮಿಸಿ ಭುಜಿಸುವ ಪದಾರ್ಥ ಅಮೃತವಾಗುವುದು.

*'ಪ್ರಾಣಿನಾಂ ದೇಹಮಾಶ್ರಿತಃ'*- ಎಂದು ಹೇಳುವುದರಿಂದ ಭಗವಂತನು ಅತಿ ಸಮೀಪದಲ್ಲಿ ಅಂದರೆ ದೇಹದಲ್ಲಿಯೇ ಇದ್ದಾನೆಂದು ನಿಶ್ಚಿತವಾಗುತ್ತದೆ. ಆದ್ದರಿಂದ ತಮ್ಮ ಶರೀರದಲ್ಲಿಯೇ ದೈವ ಸನ್ನಿಧಾನವನ್ನು ಅನುಭವಿಸುತ್ತಾ, ಭಗವದ್ಭಕ್ತಿ ಬೆಳೆಸಿಕೊಂಡು ಪಾಪಾಚರಣೆಯಿಲ್ಲದೆ ಜನರು ಪವಿತ್ರ ಮಾರ್ಗದ ಕೈಹಿಡಿಯಬೇಕು.

*'ಪಚಾಮ್ಯನ್ನಂ ಚತುರ್ವಿಧಂ'*- ಪರಮಾತ್ಮನು ಜೀವಿಗಳ ಶರೀರಗಳಲ್ಲಿ ಜಠರಾಗ್ನಿ ರೂಪದಲ್ಲಿದ್ದು ಅವರು ಭುಜಿಸುವ ನಾಲ್ಕು ವಿಧಗಳಾದ ಆಹಾರಗಳನ್ನು ಜೀರ್ಣಮಾಡುತ್ತಿದ್ದಾನೆಂದು ತಿಳಿಸಲಾಗಿದೆ.

ನಾಲ್ಕು ವಿಧವಾದ ಆಹಾರ- ೧) ಭಕ್ಷ್ಯ ೨) ಭೋಜ್ಯ ೩) ಲೇಹ್ಯ ೪) ಚೋಷ್ಯ

೧) ಭಕ್ಷ್ಯ=ದಂತಗಳಿಂದ ಅಗಿದು ತಿನ್ನುವಂತಹ ಗಟ್ಟಿಯಾದ ಪದಾರ್ಥಗಳು, ತರಕಾರಿ ಮುಂತಾದುವು. ೨) ಭೋಜ್ಯ=ನಾಲಿಗೆಯಿಂದ ಚಪ್ಪರಿಸಿ ನುಂಗಬಲ್ಲ ಮೃದುವಾದ ಅನ್ನ ಮುಂತಾದುವುಗಳು. ೩) ಲೇಹ್ಯ=ನಾಲಿಗೆಯಿಂದ ನಂಚಿಕೊಂಡು ರುಚಿನೋಡಲ್ಪಡುವ ಉಪ್ಪಿನಕಾಯಿ ಮುಂತಾದುವು. ೪) ಚೋಷ್ಯ=ಕುಡಿಯಬಹುದುದಾದ ಪಾಯಸ, ಹಾಲು, ಮಜ್ಜಿಗೆ ಮುಂತಾದುವು.

ಇಂತಹ ಆಹಾರವನ್ನು ಭಗವಂತನೇ ಜೀರ್ಣಮಾಡುವುದರಿಂದ ಇನ್ನು ಆಹಾರದ ವಿಷಯದಲ್ಲಿ ಮನುಜನು ಎಷ್ಟು ಜಾಗರೂಕನಾಗಿರಬೇಕೆಂದು

ಯೋಚಿಸಬೇಕು. ಆಹಾರ ಸಂಬಂಧವಾದ ಈ ಕೆಳಗಿನ ಜಾಗ್ರತೆಗಳನ್ನು ಪಾಲಿಸುವುದು ಉತ್ತಮ ೧) ಯಥೇಚ್ಛವಾಗಿ ಭುಜಿಸಿ ಜೀರ್ಣಕರ್ತನಾದ ಭಗವಂತನಿಗೆ ತೊಂದರೆ ಕೊಡಬಾರದು ೨) ಸಾತ್ವಿಕ ಆಹಾರವನ್ನು ಭುಜಿಸಬೇಕು. ರಾಜಸ, ತಾಮಸ ಆಹಾರಗಳನ್ನು ವರ್ಜಿಸಬೇಕು.* ೩) ಭುಜಿಸುವ ಆಹಾರವನ್ನು ಭಗವಂತನಿಗೆ ಭಕ್ತಿಯಿಂದ ನಿವೇದಿಸಬೇಕು ೪) ಆ ಆಹಾರ ನ್ಯಾಯಾರ್ಜಿತ ಹಣದಿಂದ ಬಂದದ್ದಾಗಿರಬೇಕು. ಅಧರ್ಮ ಮಾರ್ಗದಿಂದ ಸಂಪಾದಿಸಿದ ಧನದಿಂದ ಕೊಂಡು ತಂದ ಪಂಚಭಕ್ಷ್ಯ ಪರಮಾನ್ನಗಳನ್ನು ಭುಜಿಸುವದಕ್ಕಿಂತ ನ್ಯಾಯಾರ್ಜಿತ ಸ್ವತ್ತಿನಿಂದ ಅಂಬಲಿ ಕುಡಿದು ಬದುಕುವುದು ಒಳ್ಳೆಯದು. ಭಗವಂತನು ಪ್ರತಿಯೊಬ್ಬರ ಉದರದಲ್ಲಿದ್ದು ಎಲ್ಲವನ್ನೂ ಗಮನಿಸುತ್ತಿದ್ದಾನೆ. ಆದ್ದರಿಂದ ಆಹಾರಾದಿ ವಿಷಯಗಳಲ್ಲಿ ಜನರು ಬಹಳ ಜಾಗರೂಕರಾಗಿರಬೇಕು.

ಈ ಪ್ರಕಾರವಾಗಿ ಈ ಅಧ್ಯಾಯದಲ್ಲಿ ಆಹಾರ ವಿಷಯದ ಪ್ರಸ್ತಾವನೆ ವಿಶೇಷವಾಗಿ ಬಂದಿರುವುದರಿಂದ ಭೋಜನ ಸಮಯದಲ್ಲಿ ಈ ಅಧ್ಯಾಯವನ್ನು ಪಠಿಸುವ ಆಚಾರ ಲೋಕದಲ್ಲಿ ಏರ್ಪಟ್ಟಿದೆ. ಅನೇಕ ಆಶ್ರಮ, ಮಠ, ಗೃಹಗಳಲ್ಲಿ ಈ ಅಧ್ಯಾಯವನ್ನು ಸಮಿಷ್ಠಿಯಾಗಿ, ವ್ಯಷ್ಠಿಯಾಗಿ ಭೋಜನ ಕಾಲದಲ್ಲಿ ಪಠಿಸಿ ನಂತರ ಆಹಾರವನ್ನು ಸೇವಿಸುವರು. ಈ ಪ್ರಕಾರವಾಗಿ ಭಗವದ್ಭಾವನೆಯಿಂದ ಭುಜಿಸುವವನಿಗೆ ಇಡುವ ಅನ್ನ ಸಾಕ್ಷಾತ್ ಭಗವಂತನಿಗೆ ನೀಡಿದಂತೇ ಆಗುವುದು. ಅಂತಹ ಪುಣ್ಯ ಆತನಿಗೆ ತಪ್ಪದೆ ಲಭಿಸುವುದು. ಮತ್ತೆ ದೈವಧ್ಯಾನದಿಂದ ಭುಜಿಸುವುದರಿಂದ ಮನುಜನ ಶರೀರದ ಅಣು ಅಣುವು ದೈವಶಕ್ತಿಯಿಂದ ಕೂಡಿರುವುದು.

ಭೋಜನಕ್ಕಿಂತ ಮುಂಚೆ ೧೫ನೆಯ ಅಧ್ಯಾಯವನ್ನೆಲ್ಲಾ ಹೇಳಿ, ಕೊನೆಗೆ ಕೈಯಲ್ಲಿ ತೀರ್ಥ ಗ್ರಹಿಸಿ "ಬ್ರಹ್ಮಾರ್ಪಣಂ ಬ್ರಹ್ಮಹವಿಃ.." ಎನ್ನುವ ಗೀತೆಯ ನಾಲ್ಕನೆಯ ಅಧ್ಯಾಯದ ೨೪ನೆಯ ಶ್ಲೋಕವನ್ನು ಭಕ್ತಿಯಿಂದ ಪಠಿಸಿ ನಂತರ ಈ ನೀರನ್ನು ಅನ್ನದ ಮೇಲೆ ಪ್ರೋಕ್ಷಿಸಿ ಭುಜಿಸುವುದು ಉತ್ತಮ.

ಪ್ರ : ಪರಮಾತ್ಮನು ಜೀವಿಯ ಶರೀರದಲ್ಲಿ ಯಾವ ರೂಪದಲ್ಲಿ ಇರುವನು?

ಉ : (ವೈಶ್ವಾನರ) ಜಠರಾಗ್ನಿ ರೂಪದಲ್ಲಿ

ಪ್ರ : ಹಾಗಿದ್ದು ಆತನು ಏನು ಮಾಡುತ್ತಿರುವನು?

ಉ : ಪ್ರಾಣಾಪಾನ ವಾಯುಗಳಿಂದ ಜೀವಿಯು ಭುಜಿಸುವ ಆಹಾರವನ್ನು ಪಚನಗೊಳಿಸುತ್ತಿದ್ದಾನೆ.

ಪ್ರ : ಆದ್ದರಿಂದ ಜನರು ಏನು ಮಾಡಬೇಕು?

ಉ : ಶರೀರದಲ್ಲೇ ಬೆಳಗುತ್ತಿರುವ ಆ ಪರಮಾತ್ಮನನ್ನು ಭಕ್ತಿಯಿಂದ ಧ್ಯಾನಿಸಿ, ತಾವು ಭುಜಿಸುವ ಮುನ್ನ ಆತನಿಗೆ ಅದನ್ನು ಅರ್ಪಿಸಿ, ದೈವ ಭಾವದಿಂದ ಭುಜಿಸಬೇಕು.

**ಅ||** ಸಕಲ ಜೀವಿಗಳ ಹೃದಯದಲ್ಲಿ ತಾನು ಬೆಳಗುತ್ತಿದ್ದೇನೆಂದು, ಎಲ್ಲದಕ್ಕೂ ತಾನೇ ಆಧಾರ ಭೂತನೆಂದು ಭಗವಂತನು ಹೇಳುತ್ತಿದ್ದಾನೆ.

**೧೫ ಸರ್ವಸ್ಯ ಚಾಹಂ ಹೃದಿ ಸನ್ನಿವಿಷ್ಟೋ**
**ಮತ್ತಃ ಸ್ಮೃತಿಜ್ಞಾನಮಪೋಹನಂ ಚ**
**ವೇದೈಶ್ಚ ಸರ್ವೈರಹಮೇವ ವೇದ್ಯೋ**
**ವೇದಾಂತಕೃದ್ವೇದವಿದೇವ ಚಾಹಂ**

**ಅರ್ಥ:** ಅಹಂ=ನಾನು; ಸರ್ವಸ್ಯ ಚ=ಸಮಸ್ತ ಪ್ರಾಣಿಗಳ; ಹೃದಿ= ಹೃದಯದಲ್ಲಿ; ಸನ್ನಿವಿಷ್ಟಃ=ಇದ್ದವನಾಗಿ; ಮತ್ತಃ=ನನ್ನಿಂದ; ಸ್ಮೃತಿಃ=ಜ್ಞಾಪಕ ಶಕ್ತಿ; ಜ್ಞಾನಂ=ಜ್ಞಾನ (ತಿಳಿವು); ಅಪೋಹನಂ ಚ=ಮರೆವು (ಭವಂತಿ=ಉಂಟಾಗುತ್ತವೆ); ಸರ್ವೈಃ=ಸಮಸ್ತಗಳಾದ; ವೇದೈಃ ಚ=ವೇದಗಳಿಂದ; ವೇದ್ಯಃ= ತಿಳಿಯಬಲ್ಲವನು; ಅಹಂ ಏವ=ನಾನೇ; ವೇದಾಂತಕೃತ್=ವೇದಾಂತವನ್ನು ನಿರ್ಮಿಸಿದವನು; ವೇದವಿತ್ ಏವ ಚ=ವೇದವನ್ನು ತಿಳಿದವನೂ ಕೂಡ; ಅಹಂ ಏವ=ನಾನೇ (ಆಗಿದ್ದೇನೆ)

**ತಾ||** ನಾನು ಸಮಸ್ತ ಪ್ರಾಣಿಗಳ ಹೃದಯದಲ್ಲಿರುವವನು; ನನ್ನಿಂದಲೇ (ಜೀವಿಗಳಿಗೆ) ಜ್ಞಾಪಕ ಶಕ್ತಿ, ಜ್ಞಾನ (ತಿಳಿವು) ಮರೆವು ಉಂಟಾಗುತ್ತವೆ. ವೇದಗಳೆಲ್ಲವುಗಳಿಂದ ತಿಳಿಯಲ್ಪಡತಕ್ಕವನು ನಾನೇ ಆಗಿದ್ದೇನೆ ಮತ್ತೆ ವೇದವನ್ನು ಸೃಷ್ಟಿಸಿದವನೂ, ತಿಳಿದವನೂ ನಾನೇ ಆಗಿದ್ದೇನೆ.

**ವ್ಯಾಖ್ಯೆ:** 'ಸರ್ವಸ್ಯ'- ಜಾತಿ ಮತ ಕುಲಗಳೆಂಬ ತಾರತಮ್ಯಗಳೇನೂ ಇಲ್ಲದೆ ಚರಾಚರ ಪ್ರಾಣಿ ಕೋಟಿಗಳಲ್ಲಿ ಭಗವಂತನು ನಿವಸಿಸುತ್ತಿದ್ದಾನೆಂದು ಹೇಳಲ್ಪಟ್ಟಿರುವುದರಿಂದ ಇನ್ನು ಯಾರೂ ಅಧೈರ್ಯ ಪಡಬೇಕಾಗಿಲ್ಲ. ಮಹಾಪಾಪಿಯಾದರೂ, ಚಂಡಾಲನಾದರೂ ತನ್ನಲ್ಲಿರುವ ದೈವವನ್ನು ಸ್ಮರಿಸುವುದರಿಂದ, ಪವಿತ್ರಾಚರಣೆಯಿಂದ ಆತನನ್ನು ತಿಳಿದುಕೊಳ್ಳಬಹುದು. ಅಂತಹ ಪಾಪಿಯು ತನಗೆ ಕಾರಣಭೂತವಾಗಿರುವ ಆಧಾರವಾಗಿರುವ ಅಖಂಡ ಚೈತನ್ಯವನ್ನು ಸ್ಮೃತಿಯಲ್ಲಿಟ್ಟುಕೊಂಡು ತನ್ನ ನಿಜರೂಪವನ್ನು ಚಿಂತಿಸಿದಲ್ಲಿ ಪುಣ್ಯಾತ್ಮನಾಗಿ ಮುಕ್ತಿಹೊಂದುವನು.

ಇಂತಹ ಅವಕಾಶವನ್ನು ಶ್ರೀಕೃಷ್ಣ ಪರಮಾತ್ಮನು ಗೀತೆಯಲ್ಲಿ ಸರ್ವರಿಗೂ ಕಲ್ಪಿಸಿದ್ದಾನೆ. ಎಂತಹವರಿಗಾದರೂ ಮುಕ್ತಿ ಹೊಂದುವ ಅವಕಾಶವನ್ನು ಕೊಟ್ಟಿದ್ದಾನೆ. ತರಂಗ ಚಿಕ್ಕದಾದರೂ, ದೊಡ್ಡದಾದರೂ ಅದರ ಹಿಂದೆ ಸಮುದ್ರವು ಇದ್ದೇ ಇರುವುದು. ಆದ್ದರಿಂದ ಚಿಕ್ಕ ತರಂಗದಂತೆ ಇರುವ ಪ್ರಾಣಿಗಳು ಅಧೈರ್ಯಗೊಳ್ಳುವ ಅವಶ್ಯಕತೆಯಿಲ್ಲ. ತನ್ನಲ್ಲಿರುವ ಅಂತರ್ಯಾಮಿಯಾದ ಪರಮಾತ್ಮನನ್ನು ತಿಳಿದುಕೊಂಡರೆ ಸಾಕು. ಆ ಪರಮಾತ್ಮ ಎಲ್ಲರ 'ಜನ್ಮ ಹಕ್ಕು' ಎಂದು ಗೀತಾಚಾರ್ಯನು 'ಸರ್ವಸ್ಯ' ಎನ್ನುವ ಪದದ ಮೂಲಕ ಘೋಷಿಸಿದ್ದಾನೆ.

'ಹೃದಿ'-(ಹೃದಯದಲ್ಲಿ) - ಎಂದು ಹೇಳಿರುವುದರಿಂದ ಭಗವಂತನು ಪ್ರತಿಯೊಬ್ಬರ ಅತಿ ಸಮೀಪದಲ್ಲಿ ಅಂದರೆ ಅವರ ಹೃದಯದಲ್ಲಿಯೇ ಇರುತ್ತಾನೆಂದು ಭಾವ. ಆದ್ದರಿಂದ ಶಿಕ್ಷಕನು ತನ್ನ ಹಿಂದೆಯೇ ಇದ್ದಾನೆಂದು ಗ್ರಹಿಸಿ, ಪಾಪಕೃತ್ಯಗಳನ್ನು ಮಾಡದೆ ಭಗವತ್ಪ್ರೀತಿಕರವಾದ ಧರ್ಮ ಕಾರ್ಯಗಳನ್ನೇ ಮಾಡಬೇಕು.

'ಮತ್ತಃ ಸ್ಮೃತಿ ಜ್ಞಾನ ಮಪೋಹನಂ ಚ'- ಸ್ಮೃತಿ, ಜ್ಞಾನ, ಮರೆವು- ಇವೆಲ್ಲವೂ ಮನಸ್ಸಿನ ಬೇರೆ ಬೇರೆ ರೂಪಗಳು. ಪರಮಾತ್ಮನಾದರೋ ಮನಸ್ಸಿಗೆ

* ಸಾತ್ವಿಕ, ರಾಜಸ, ತಾಮಸ ಆಹಾರಗಳ ವಿವರಗಳಿಗೆ ೧೭ನೆಯ ಅಧ್ಯಾಯದ ೮,೯,೧೦ನೆಯ ಶ್ಲೋಕಗಳನ್ನು ನೋಡುವುದು.

ಅಧಿಷ್ಠಾನವಾಗಿ ಆಧಾರಭೂತವಾಗಿದ್ದಾನೆ. ಆದ್ದರಿಂದ ಆತನಿಂದಲೇ ಅವು ಉಂಟಾಗುತ್ತಿವೆಯೆಂದು ಹೇಳಲಾಗಿದೆ. ಇದರಿಂದ ಕೇವಲ ಸ್ಥೂಲವಸ್ತುಗಳನ್ನೇ ಅಲ್ಲದೆ ಅತಿ ಸೂಕ್ಷ್ಮವಾದ ಜೀವಿಯ ಮಾನಸಿಕ ಪ್ರವೃತ್ತಿಗಳನ್ನು ಸಹ ಭಗವಂತನು ಗಮನಿಸುತ್ತಾನೆಂದು, ಅವನಿಗೆ ತಿಳಿಯದೆ ಯಾವ ಭಾವವೂ ಮನಸ್ಸಿನಲ್ಲಿ ಉಂಟಾಗುವುದಿಲ್ಲವೆಂದು ತಿಳಿಯುತ್ತದೆ. ಆದ್ದರಿಂದ ಪ್ರತಿಯೊಬ್ಬರೂ ಮನಸ್ಸಿನಲ್ಲಿ ಯಾವುದೇ ಅಪವಿತ್ರ, ಮಾಲಿನ್ಯ, ದುಃಸಂಕಲ್ಪಗಳು, ವಿಷಯವಾಸನೆಗಳು ಬರದ ಹಾಗೆ ಎಚ್ಚರಿಕೆಯಿಂದ ನೋಡಿಕೊಳ್ಳಬೇಕು.

'ವೇದೈಶ್ಚ ಸರ್ವೈರಹ ಮೇವ ವೇದ್ಯಃ'- ವೇದದಲ್ಲಿ ಶಾಸ್ತ್ರದಲ್ಲಿ ಅನೇಕ ದೇವರುಗಳ ಹಾಗು ದೇವತೆಗಳ ಉಲ್ಲೇಖವಿದ್ದಾಗ್ಯೂ ತಿಳಿಯ ತಕ್ಕವನು ಆ ಪರಮಾತ್ಮನೊಬ್ಬನೇ. ಬ್ರಹ್ಮ ವಿಷ್ಣು ಮಹೇಶ್ವರಾದಿ ವಿವಿಧ ದೇವರುಗಳೆಲ್ಲರೂ ಪರಮಾತ್ಮನ ವಿವಿಧ ರೂಪಗಳಾಗಿದ್ದಾರೆ. ಪ್ರಪಂಚದಲ್ಲಿರುವ ಒಂದೇ ಚರಮಲಕ್ಷ್ಯ, ಧ್ಯೇಯ, ಜ್ಞೇಯ ಆ ಸಚ್ಚಿದಾನಂದ ಪರಬ್ರಹ್ಮ(ಪರಮಾತ್ಮ)ನೇ ಹೌದು.

'ವೇದಾಂತಕೃತ್'- ವೇದಗಳನ್ನು ಸೃಷ್ಟಿಸಿರುವುದು ಸಾಕ್ಷಾತ್ ಪರಮಾತ್ಮನೇ ಆಗಲಿ ಮಾನವ ಮಾತ್ರರಲ್ಲ ಎಂದು ಸ್ಪಷ್ಟವಾಗಿ ಹೇಳಲ್ಪಟ್ಟಿರುವುದರಿಂದ ಆ ವೇದಾದಿಗಳಲ್ಲಿ ತಿಳಿಸಲ್ಪಟ್ಟ ಸತ್ಯಗಳನ್ನು, ಇವು ಭಗವತ್ಪ್ರೋಕ್ತಗಳೇ ಎಂದು ನಂಬಿ ಅವುಗಳ ಪ್ರಕಾರ ನಡೆಯಬೇಕು. ಅವು ದೈವ ನಿರ್ಮಿತವಾದವುಗಳಾದ್ದರಿಂದ ಅವುಗಳಲ್ಲಿ ಅಖಂಡ ವಿಶ್ವಾಸವಿಡಬೇಕು. ಲೋಕದಲ್ಲಿ ಗುರುಪರಂಪರೆ ಜಪಿಸುವಾಗ 'ಓಂ ನಾರಾಯಣಂ ಪದ್ಮ ಭುವಂ...' ಎಂದು ಮೊದಲು ಆ ಪರಮಾತ್ಮನನ್ನೇ, ಶ್ರೀ ಮನ್ನಾರಾಯಣನನ್ನೇ ಜಪಿಸುವರು.

ಪ್ರ : ಭಗವಂತನು ಎಲ್ಲಿದ್ದಾನೆ?

ಉ : ಎಲ್ಲರ ಹೃದಯದಲ್ಲಿದ್ದಾನೆ.

ಉ : ಸ್ಮೃತಿ, ಜ್ಞಾನ, ಮರೆವು ಯಾರಿಂದ ಉಂಟಾಗುತ್ತವೆ?

ಉ : ಆ ಪರಮಾತ್ಮನಿಂದಲೇ

ಪ್ರ : ವೇದಗಳಿಂದ ತಿಳಿದುಕೊಳ್ಳಬಲ್ಲವನಾರು? ವೇದಾಂತವನ್ನು ಸೃಷ್ಟಿಸಿದವನು ಯಾರು? ಇದನ್ನು ಚೆನ್ನಾಗಿ ತಿಳಿದವನು ಯಾರು?

ಉ : ಪರಮಾತ್ಮನೇ.

**ಅ॥** ಕ್ಷರ, ಅಕ್ಷರ ಪುರುಷರ ಸ್ವರೂಪದ ವರ್ಣನೆ -

**೧೬. ದ್ವಾವಿಮೌ ಪುರುಷೌ ಲೋಕೇ ಕ್ಷರಶ್ಚಾಕ್ಷರ ಏವ ಚ**
**ಕ್ಷರಸ್ಸರ್ವಾಣಿ ಭೂತಾನಿ ಕೂಟಸ್ಥೋಽಕ್ಷರ ಉಚ್ಯತೇ**

**ಅರ್ಥ:** ಲೋಕೇ=ಪ್ರಪಂಚದಲ್ಲಿ; ಕ್ಷರಃ ಚ=ಕ್ಷರನು (ನಶಿಸುವವನು) ಎಂದು: ಅಕ್ಷರಃ ಏವ ಚ=ಅಕ್ಷರನೆಂದೂ; ದ್ವೌ ಇಮೌ ಪುರುಷೌ (ಸ್ಥಃ)=ಈ ಇಬ್ಬರು ಪುರುಷರಿರುವರು; ಸರ್ವಾಣಿ ಭೂತಾನಿ=ಸಮಸ್ತ ಪ್ರಾಣಿಗಳ ದೇಹಾಭಿಮಾನಿ; ಕ್ಷರಃ=ಕ್ಷರನೆಂದು (ಉಚ್ಯತೇ=ಹೇಳಲ್ಪಡುತ್ತದೆ); ಕೂಟಸ್ಥಃ=ಕೂಟಸ್ಥನಾದ (ಮೋಕ್ಷ ಪರ್ಯಂತ ನಶಿಸದೆ ಇರುವ) ಜೀವಿಯು (ಮನಸ್ಸಿನ ಅಭಿಮಾನಿ); ಅಕ್ಷರಃ=ಅಕ್ಷರನೆಂದು; ಉಚ್ಯತೇ= ಹೇಳಲ್ಪಡುತ್ತಿದ್ದಾನೆ.

**ತಾ॥** ಪ್ರಪಂಚದಲ್ಲಿ ಕ್ಷರ, ಅಕ್ಷರ ಎಂದು ಇಬ್ಬರು ಪುರುಷರಿರುವರು. ಅದರಲ್ಲಿ ಸಮಸ್ತ ಪ್ರಾಣಿಗಳಲ್ಲಿ ದೇಹವೇ ತಾನೆಂದು ಭಾವಿಸುವವನು ಕ್ಷರನೆಂದು, ಕೂಟಸ್ಥನಾದ ಜೀವಿಯೇ (ಮನಸ್ಸಿನ ಅಭಿಮಾನಿ) ತಾನೆಂದು ಭಾವಿಸುವವನನ್ನು ಅಕ್ಷರನೆಂದು ಕರೆಯುವರು.

**ವ್ಯಾಖ್ಯೆ:** ಕ್ಷರ, ಅಕ್ಷರ, ಪುರುಷೋತ್ತಮ-ಎನ್ನುವ ಮೂರು ಪುರುಷರ ಬಗ್ಗೆ ವ್ಯಾಖ್ಯಿಸುತ್ತ ಮೊದಲು ಕ್ಷರಾಕ್ಷರಗಳನ್ನು ಕುರಿತು ಭಗವಂತನು ಈ ಶ್ಲೋಕದಲ್ಲಿ ತಿಳಿಸುತ್ತಿದ್ದಾನೆ. ನಶಿಸುವಂತಹ ದೇಹಾದಿ ದೃಶ್ಯ ಪದಾರ್ಥಗಳನ್ನು, ಚರಾಚರ ಜೀವಿಗಳ ಉಪಾಧಿಗಳನ್ನು ತಾವು ಎಂದು ತಿಳಿಯುವವರು ಕ್ಷರ ಪುರುಷರೆಂದು ಆತ್ಮ ಚೈತನ್ಯದ ಪ್ರತಿಬಿಂಬ ರೂಪವೆಂದು ತಿಳಿಯುವ ಜೀವಿಗಳನ್ನು (ಮನಸ್ಸು ತಾವು ಎಂದು ನಂಬಿದವರನ್ನು) ಅಕ್ಷರ ಪುರುಷರೆಂದು ಇಲ್ಲಿ ಹೇಳಲಾಗಿದೆ. ಕ್ಷರವಾದ ದೇಹಗಳೊಂದಿಗೆ ಹೋಲಿಸಿ ನೋಡಿದಾಗ, ಮೋಕ್ಷ ಪ್ರಾಪ್ತಿಯಾಗುವವರೆಗೆ, ಅನೇಕ ಜನ್ಮಗಳವರೆಗೆ ನಶಿಸದೆ ಇರುವ ಚೈತನ್ಯ ಪ್ರತಿಬಿಂಬರೂಪ ಜೀವಿಯನ್ನು ಅಕ್ಷರನೆಂದು, ಕೂಟಸ್ಥನೆಂದು ಇಲ್ಲಿ ಹೇಳಲಾಗಿದೆ. ಆದರೆ ಈ ಅಕ್ಷರನು ಎನೆಯ ಅಧ್ಯಾಯದಲ್ಲಿ ತಿಳಿಸಲ್ಪಟ್ಟ ಅಕ್ಷರ ಪರಬ್ರಹ್ಮವೆಂದಾಗಲಿ, ಕೂಟಸ್ಥನೆಂದರೆ ಕೂಟಸ್ಥ ಚಿದಾತ್ಮವೆಂದಾಗಲಿ, ಯಾರೂ ಭಾವಿಸಬಾರದು. ಏಕೆಂದರೆ ಅವರಿಬ್ಬರಿಗೆ 'ಆಕಾಶ, ಪಾತಾಳ'ಗಳ ಭೇದವಿದೆ. ಒಂದು ಬಿಂಬವಾದರೆ ಮತ್ತೊಂದು ಪ್ರತಿಬಿಂಬ. ಈ ಅಧ್ಯಾಯದಲ್ಲಿ ತಿಳಿಸಲ್ಪಟ್ಟ ಅಕ್ಷರನು ಪ್ರತಿಬಿಂಬ ಜೀವಿ. ಈ ಕ್ಷರಾಕ್ಷರರಿಗಿಂತ ಬೇರೆಯಾದ, ಅಂದರೆ ಉಪಾಧಿ ಹಾಗು ಚಿತ್ಪ್ರತಿಬಿಂಬ ಜೀವಿಗಿಂತ ಭಿನ್ನವಾಗಿರುವ ಉತ್ತಮ ಪುರುಷನ ಉಲ್ಲೇಖ ಮುಂದಿನ ಶ್ಲೋಕದಲ್ಲಿದೆ. ಆತನೇ ಪರಮಾತ್ಮ

ಪ್ರ : ಈ ಪ್ರಪಂಚದಲ್ಲಿ ಪುರುಷರು ಎಷ್ಟಿದ್ದಾರೆ? ಅವರು ಯಾರು?

ಉ : ಇಬ್ಬರಿದ್ದಾರೆ ೧) ಕ್ಷರ ೨) ಅಕ್ಷರ

ಪ್ರ : ಅದರಲ್ಲಿ ಕ್ಷರ ಪುರುಷನಾರು?

ಉ : ಸಮಸ್ತ ಪ್ರಾಣಿಗಳ ದೇಹಾದಿ ಉಪಾಧಿಗಳು ತಾನೆಂದು ತಿಳಿದವನು

ಪ್ರ : ಅಕ್ಷರ ಪುರುಷನಾರು?

ಉ : ಕೂಟಸ್ಥನಾದ ಜೀವಿ (ಮನಸ್ಸು ತಾನೆಂದು ತಿಳಿದವನು)

**ಅ॥** ಅವರಿಬ್ಬರಿಗಿಂತ ಭಿನ್ನವಾದ ಉತ್ತಮ ಪುರುಷನನ್ನು ಕುರಿತು ಹೇಳಲಾಗಿದೆ-

**೧೭. ಉತ್ತಮಃ ಪುರುಷಸ್ತ್ವನ್ಯಃ ಪರಮಾತ್ಮೇತ್ಯುದಾಹೃತಃ**
**ಯೋ ಲೋಕತ್ರಯಮಾವಿಶ್ಯ ಬಿಭರ್ತ್ಯವ್ಯಯ ಈಶ್ವರಃ**

**ಅರ್ಥ:** ಯಃ=ಯಾರು; ಲೋಕತ್ರಯಂ=ಮೂರು ಲೋಕಗಳನ್ನು; ಆವಿಶ್ಯ= ಪ್ರವೇಶಿಸಿ; ಬಿಭರ್ತಿ=ಧರಿಸುತ್ತಿದ್ದಾನೋ (ಅಂತಹ); ಅವ್ಯಯಃ= ನಾಶರಹಿತನಾದ; ಈಶ್ವರಃ=ಜಗನ್ನಿಯಾಮಕನಾದ; ಅನ್ಯಃ (ಮೇಲೆ ತಿಳಿಸಿದ ಕ್ಷರಾಕ್ಷರರಿಬ್ಬರಿಗಿಂತ) ಭಿನ್ನವಾದವನು(ಆಗಿ); ಉತ್ತಮಃ ಪುರುಷಃ=ಉತ್ತಮ ಪುರುಷನು (ಪುರುಷೋತ್ತಮನು); ಪರಮಾತ್ಮೇತಿ= ಪರಮಾತ್ಮನೆಂದು; ಉದಾಹೃತಃ=ಹೇಳಲ್ಪಡುತ್ತಾನೆ.

**ತಾ॥** ಯಾರು ಮೂರು ಲೋಕಗಳನ್ನು ಪ್ರವೇಶಿಸಿ ಅವುಗಳನ್ನು ಧರಿಸಿದ್ದಾನೋ ಅಂತಹ ನಾಶರಹಿತನು, ಜಗನ್ನಿಯಾಮಕನು (ಮೇಲೆ ತಿಳಿಸಿದ ಕ್ಷರಾಕ್ಷರರಿಬ್ಬರಿಗಿಂತ) ವಿಲಕ್ಷಣನಾದ ಉತ್ತಮ ಪುರುಷನು ಪರಮಾತ್ಮನೆಂದು ಹೇಳಲ್ಪಡುತ್ತಾನೆ.

**ವ್ಯಾಖ್ಯೆ:** ಮೇಲೆ ತಿಳಿಸಿದ ನಶ್ವರ ದೇಹಾಭಿಮಾನಿಗಿಂತ, ಚಿತ್-ಪ್ರತಿ

ಬಿಂಬರೂಪಿಯಾದ ಜೀವಿ (ಮನಸ್ಸಿನ ಅಭಿಮಾನಿ)ಗಿಂತ ಬೇರೆಯಾದ ಆತ್ಮವಿದೆ. ಆತ್ಮನನ್ನೇ ಉತ್ತಮ ಪುರುಷನೆಂದು ಇಲ್ಲಿ ಹೇಳಲಾಗಿದೆ. ಏಕೆಂದರೆ ಕ್ಷಣಿಕ ದೇಹದ ಅಭಿಮಾನಿಗಿಂತ, ಬದ್ಧನಾದ ಜೀವಿ (ಮನಸ್ಸಿನ ಅಭಿಮಾನಿ) ಗಿಂತ, ಮುಕ್ತನಾದ ಆತ್ಮನು ಶ್ರೇಷ್ಠನಲ್ಲವೇ! ಜೀವಿಯು ತ್ರಿಗುಣ ಸಹಿತನು. ಪರಮಾತ್ಮನು ತ್ರಿಗುಣರಹಿತ, ಗುಣಾತೀತನು. ಈ ಕಾರಣದಿಂದ ಆತನು ಕ್ಷರಾಕ್ಷರ ಪುರುಷರಿಗಿಂತ ಉತ್ತಮವೆಂದು ಪರಿಗಣಿಸಲ್ಪಟ್ಟು ಉತ್ತಮ ಪುರುಷನೆಂದು ಇಲ್ಲವೆ ಪುರುಷೋತ್ತಮನೆಂದು ಕರೆಯಲ್ಪಡುತ್ತಾನೆ. ಪ್ರಪಂಚದಲ್ಲಿ ಕೆಲವರು 'ದೇಹಸ್ಥಿತಿ'ಯಲ್ಲಿದ್ದರೆ ಮತ್ತೆ ಕೆಲವರು 'ಜೀವಸ್ಥಿತಿ'ಯಲ್ಲಿರುವರು. ಅವರಿಬ್ಬರೂ ಸಾಮಾನ್ಯ ಪುರುಷರು. ಆತ್ಮಸ್ಥಿತಿಯಲ್ಲಿರುವವನೇ ಉತ್ತಮ ಪುರುಷನು. ಅಂತಹ ಉತ್ತಮ ಪುರುಷತ್ವವನ್ನು, ಇಲ್ಲವೆ ಪುರುಷೋತ್ತಮತ್ವವನ್ನು ಸರ್ವರೂ ಕಷ್ಟಬಿದ್ದು ಸಂಪಾದಿಸಿಕೊಳ್ಳಬೇಕು. ಎಷ್ಟು ಕಾಲ ಗತಿಸಿದರೂ 'ಪುರುಷ' (ಜೀವ) ಸ್ಥಿತಿಯಲ್ಲೇ ಅಂದರೆ ಬದ್ಧ ಜೀವನದಲ್ಲೇ ಇರುವುದು ವಿಜ್ಞುಗಳಿಗೆ ಸಾಧುವಲ್ಲ. ಕ್ರಮವಾಗಿ ದೇಹ ಹಾಗು ಜೀವಸ್ಥಿತಿಗಳನ್ನು (ಮನಃ ಪುರುಷ ಸ್ಥಿತಿ) ದಾಟಿ ಸಾಕ್ಷಿಯಾದ ಆತ್ಮಸ್ಥಿತಿಗೆ, ಅಂದರೆ ಪುರುಷೋತ್ತಮ ಸ್ಥಿತಿಗೆ ಬಂದವನೇ ಧನ್ಯನು, ಸರ್ವಶ್ರೇಷ್ಠನು. ಅಂತಹ ಸ್ಥಿತಿಯೇ ಜೀವನದ ಪರಮಾವಧಿ, ಪರಮಲಕ್ಷ್ಯ. ಅದರಿಂದ ಜನ್ಮ ಸಾರ್ಥಕವಾಗುವುದು. ಬೇರೆಯ ಯಾವ ಕ್ರಿಯೆಗಳಿಂದಲೂ ಈ ಮಾನವ ಜನ್ಮ ಸಾರ್ಥಕತೆಯನ್ನು ಹೊಂದುವುದಿಲ್ಲ.

'ಅನ್ಯಃ'- ಎಂದು ಹೇಳುವುದರಿಂದ ಪರಮಾತ್ಮನು ದೇಹದ ಭಾವಕ್ಕಿಂತ, ಜೀವಿಗಿಂತ (ಮನಸ್ಸಿನ ಭಾವಕ್ಕಿಂತ) ಬೇರೆಯಾಗಿದ್ದಾನೆಂದು, ಅವುಗಳಿಗೆ ಸಾಕ್ಷಿಯಾಗಿ ಬೆಳಗುತ್ತಿದ್ದಾನೆಂದು ತಿಳಿಯುತ್ತದೆ. ಆದ್ದರಿಂದ ಜೀವಿಯು ಈ ದೇಹ ಹಾಗು ಜೀವ ಸಂಬಂಧದ (ಮನಸ್ಸಂಬಂಧ) ವಿಕಾರಗಳು ತನಗೆ ವಾಸ್ತವವಾಗಿ ಇಲ್ಲವೆಂದು ತಾನು ನಿರ್ವಿಕಾರ, ಅವ್ಯಯ ಆತ್ಮವೆಂದು ನಿಶ್ಚಯಿಸಿಕೊಂಡು ಅಂತಹ ಆತ್ಮ ಸ್ಥಿತಿಯಲ್ಲೇ ಸದಾ ಸ್ಥಿರವಾಗಿರುವಂತೆ ಅಭ್ಯಸಿಸಬೇಕು. ಆ ಪರಮಾತ್ಮ ಎಂತಹವನೋ ತಿಳಿದುಕೊಂಡರೆ, ಆತನ ಮಹಿಮೆಯನ್ನು ತಿಳಿದರೆ ಆತನ ಮೇಲೆ ವಿಶ್ವಾಸವು ಚೆನ್ನಾಗಿ ಉಂಟಾಗುತ್ತದೆ. ಇಲ್ಲಿ ಪರಮಾತ್ಮನಿಗೆ ಎರಡು ವಿಶೇಷಣಗಳನ್ನು ಕೊಡಲಾಗಿದೆ-ಆತನು ೧) ಸರ್ವಲೋಕಧಾರಕನೆಂದು ೨) ಅವ್ಯಯನೆಂದು. ಮೂರು ಲೋಕಗಳನ್ನು ಪ್ರವೇಶಿಸಿ ಅಂತರ್ಯಾಮಿಯಾಗಿ ಅವುಗಳನ್ನು ಭರಿಸಿ, ಈಶ್ವರನಾಗಿ ಆತನು ಬೆಳಗುತ್ತಿದ್ದಾನೆ. ಮೂರೂ ಲೋಕಗಳಲ್ಲಿ ಎಲ್ಲೆಲ್ಲೂ ಆತನು ತುಂಬಿದ್ದಾನೆ. ಮತ್ತೆ ಆತನು ಅವ್ಯಯ ಹಾಗು ನಾಶವಿಲ್ಲದವನು. ದೇಹಾದಿ ದೃಶ್ಯ ಪದಾರ್ಥಗಳೆಲ್ಲವೂ, ಇವೇ ಅಲ್ಲದೆ ಕೊನೆಗೆ ಚಿತ್-ಪ್ರತಿಬಿಂಬ ರೂಪನಾದ ಜೀವಿಯೂ ಕೂಡ ಒಂದಾನೊಂದು ಕಾಲಕ್ಕೆ ಮಾಯವಾಗುವನು (ಮೋಕ್ಷ ಪ್ರಾಪ್ತಿಸಮಯದಲ್ಲಿ ಜೀವತ್ವ ತೊಲಗುವುದಾದ್ದರಿಂದ). ಪರಮಾತ್ಮನು ಯಾವಕಾಲಕ್ಕೂ ನಶಿಸುವುದಿಲ್ಲ. ಆದ್ದರಿಂದ ಅಂತಹ ಅವ್ಯಯ ಆತ್ಮಪದಕ್ಕೆ, ಪುರುಷೋತ್ತಮ ಸ್ಥಿತಿಗೆ ಸರ್ವರೂ ಪ್ರಯತ್ನಿಸಬೇಕು. ಕ್ಷಣಿಕಗಳಾದ ಅಲ್ಪ ಪ್ರಾಪಂಚಿಕ ವಸ್ತುಗಳು ಹಾಗು ಬಿರುದುಗಳಿಗಾಗಿ ಪರದಾಡುವುದು ಉತ್ತಮವಲ್ಲ.

ಪ್ರ : ಈ ಕ್ಷರಾಕ್ಷರಗಳಿಗಿಂತ ಬೇರೆಯಾದವನು ಇರುವವನೇ?

ಉ : ಇದ್ದಾನೆ. ಆತನೇ ಉತ್ತಮಪುರುಷನು (ಪುರುಷೋತ್ತಮ)

ಪ್ರ : ಆತನು ಎಂತಹವನು ?

ಉ : ೧) ಮೂರು ಲೋಕಗಳನ್ನು ಪ್ರವೇಶಿಸಿ ಅವುಗಳನ್ನು ಧರಿಸಿರುವ ಜಗನ್ನಿಯಾಮಕನು ೨) ನಾಶರಹಿತನು

ಪ್ರ : ಆದ್ದರಿಂದ ಫಲಿತಾಂಶವೇನು?

ಉ : ಕ್ಷರ (ದೇಹ) ಅಕ್ಷರ (ಜೀವ) ಭಾವಗಳನ್ನು ದಾಟಿ ಪುರುಷೋತ್ತಮ ಭಾವ ಇಲ್ಲವೆ ಪರಮಾತ್ಮ ಭಾವವನ್ನು ಅವಲಂಬಿಸಬೇಕು.

**ಅ||** ಪರಮಾತ್ಮನನ್ನು ಪುರುಷೋತ್ತಮನೆಂದು ಏಕೆ ಕರೆಯುವರು ಎನ್ನುವುದರ ವಿವರ ಕೊಡಲಾಗುತ್ತಿದೆ-

**೧೮ ಯಸ್ಮಾತ್ಕ್ಷರ ಮತೀತೋಽಹಮಕ್ಷರಾದಪಿ ಚೋತ್ತಮಃ**
**ಅತೋಽಸ್ಮಿ ಲೋಕೇ ವೇದೇ ಚ ಪ್ರಥಿತಃ ಪುರುಷೋತ್ತಮಃ**

**ಅರ್ಥ:** ಯಸ್ಮಾತ್=ಯಾವ ಕಾರಣದಿಂದ; ಅಹಂ=ನಾನು; ಕ್ಷರಂ=ಕ್ಷರಸ್ವರೂಪವನ್ನು; ಅತೀತಃ=ಅತಿಕ್ರಮಿಸಿದವನಾಗಿ; ಅಕ್ಷರಾತ್ ಅಪಿ=ಅಕ್ಷರ ಸ್ವರೂಪಿ (ಜೀವಿಗಿಂತ); ಉತ್ತಮಃ ಚ=ಶ್ರೇಷ್ಠನಾಗಿರುವೆನು; ಅತಃ=ಆ ಕಾರಣದಿಂದ; ಲೋಕೇ=ಪ್ರಪಂಚದಲ್ಲಿ; ವೇದೇ ಚ=ವೇದದಲ್ಲಿ; ಪುರುಷೋತ್ತಮಃ=ಪುರುಷೋತ್ತಮನಾಗಿ; ಪ್ರಥಿತಃ=ಪ್ರಸಿದ್ಧನಾಗಿ; ಅಸ್ಮಿ=ಇದ್ದೇನೆ.

**ತಾ||** ನಾನು ಕ್ಷರಸ್ವರೂಪಿಗಿಂತ ಉತ್ತಮನಾಗಿದ್ದು, ಅಕ್ಷರ ಸ್ವರೂಪಿ (ಜೀವಿಗಿಂತ) ಶ್ರೇಷ್ಠನಾಗಿರುವುದರಿಂದ ಪ್ರಪಂಚದಲ್ಲಿಯೂ ವೇದದಲ್ಲಿಯೂ ನಾನು 'ಪುರುಷೋತ್ತಮನೆಂದು' ಪ್ರಸಿದ್ಧಿಗೊಂಡಿದ್ದೇನೆ.

**ವ್ಯಾಖ್ಯೆ:** ಕ್ಷರ, ಅಕ್ಷರ ಪುರುಷರಿಗಿಂತ ಅತೀತನಾಗಿರುವುದರಿಂದ ಪರಮಾತ್ಮನನ್ನು ಪುರುಷೋತ್ತಮನೆಂದು ಕರೆಯಲಾಗಿದೆ. ಜೀವಿಯು ತನ್ನ ಪುರುಷತ್ವ (ಜೀವತ್ವ) ದೊಡನೆ ತೃಪ್ತಿ ಪಡದೆ ಪುರುಷೋತ್ತಮತ್ವಕ್ಕೆ ಅಂದರೆ ಆತ್ಮ ಸ್ಥಿತಿಗೆ ಯತ್ನಶೀಲನಾಗಬೇಕು. ಆಗಲೇ ಆತನು ಕೃತಾರ್ಥನಾಗಿ, ಭವಬಂಧ ವಿಮುಕ್ತನಾಗಿ ಸಾಕ್ಷಾತ್ ಭಗವಂತನ ಹಾಗೆ ಲೋಕದಲ್ಲಿ ಕೀರ್ತಿ ಪಡೆಯುವನು.

ಪ್ರ : ಭಗವಂತನು ಪುರುಷೋತ್ತಮನೆಂದು ಹೇಗೆ ಪ್ರಸಿದ್ಧಿಗೊಂಡನು?

ಉ : ಆತನು ಕ್ಷರ, ಅಕ್ಷರ ಪುರುಷರಿಬ್ಬರಿಗಿಂತ ಅತೀತನಾಗಿರುವುದರಿಂದ.

**ಅ||** ಆ ಪ್ರಕಾರವಾಗಿ ಪುರುಷೋತ್ತಮನೆಂದು ಪರಮಾತ್ಮನನ್ನು ತಿಳಿಯುವವನು, ಆತನನ್ನು ನಿರ್ಮಲ ಭಕ್ತಿಯಿಂದ ಸೇವಿಸುವನೆಂದು ತಿಳಿಸಲಾಗುತ್ತಿದೆ.

**೧೯ ಯೋ ಮಾಮೇವ ಮಸಂಮೂಢೋ ಜಾನಾತಿ ಪುರುಷೋತ್ತಮಮ್**
**ಸ ಸರ್ವವಿದ್ಭಜತಿ ಮಾಂ ಸರ್ವಭಾವೇನ ಭಾರತ**

**ಅರ್ಥ:** ಭಾರತ=ಓ ಅರ್ಜುನಾ! ಯಃ=ಯಾರು; ಅಸಂಮೂಢಃ=ಅಜ್ಞಾನವಿಲ್ಲದವನಾಗಿ; ಏವಂ=ಈ ಪ್ರಕಾರವಾಗಿ ಮಾಮ್=ನನ್ನನ್ನು; ಪುರುಷೋತ್ತಮಮ್=ಪುರುಷೋತ್ತಮನಾಗಿ; ಜಾನಾತಿ= ತಿಳಿಯು ತ್ತಿದ್ದಾನೋ; ಸಃ=ಆತನು; ಸರ್ವವಿತ್=ಸಮಸ್ತವನ್ನು ತಿಳಿದವನಾಗಿ; ಸರ್ವ ಭಾವೇನ=ಪೂರ್ತಿ ಮನಸ್ಸಿನಿಂದ (ಇಲ್ಲವೆ, ಸರ್ವ ವಿಧಗಳಲ್ಲಿ); ಮಾಂ=ನನ್ನನ್ನು ಭಜತಿ=ಭಜಿಸುತ್ತಿದ್ದಾನೆ (ಧ್ಯಾನಿಸುತ್ತಿದ್ದಾನೆ).

**ತಾ||** ಓ ಅರ್ಜುನಾ! ಯಾವನು ಅಜ್ಞಾನವಿಲ್ಲದವನಾಗಿ, ಈ ಪ್ರಕಾರವಾಗಿ ನನ್ನನ್ನು ಪುರುಷೋತ್ತಮನೆಂದು ತಿಳಿಯುತ್ತಾನೋ, ಆತನು ಸಮಸ್ತವನ್ನು ತಿಳಿದವನಾಗಿ ಸಂಪೂರ್ಣ ಮನಸ್ಸಿನಿಂದ (ಸರ್ವವಿಧಗಳಲ್ಲಿ) ನನ್ನನ್ನು ಭಜಿಸುತ್ತಿದ್ದಾನೆ.

**ವ್ಯಾಖ್ಯೆ:** ಭಗವಂತನ ಮೇಲೆ ಭಕ್ತಿ ಸ್ಥಿರವಾಗಬೇಕೆಂದರೆ ಆತನು ಎಂತಹವನೋ ಮೊದಲು ತಿಳಿದುಕೊಳ್ಳಬೇಕು. ಒಂದು ವಸ್ತುವಿನ ಮಹಿಮೆ ತಿಳಿಯದಿದ್ದರೆ ಅದರ ಮೇಲೆ ಯಾರಿಗೂ ಪ್ರೀತಿ ಉಂಟಾಗುವುದಿಲ್ಲ. ಒಂದು ವೇಳೆ ಉಂಟಾದರೂ ಅಪೂರ್ಣವಾದ ಪ್ರೀತಿಯೇ ಉಂಟಾಗುವುದು. ಆದ್ದರಿಂದ ಭಗವಂತನ ಮೇಲೆ ಅಕುಂಠಿತ ಭಕ್ತಿ ಏರ್ಪಡಬೇಕೆಂದರೆ, 'ಅವನು ಶಾಶ್ವತನೆಂದು, ಆನಂದ ಸ್ವರೂಪಿಯೆಂದು, ಕ್ಷರಾಕ್ಷರಗಳಿಗೆ ಅತೀತನೆಂದು ಚೆನ್ನಾಗಿ ಗ್ರಹಿಸಿರಬೇಕು. ಆ ವಿಷಯವೇ ಈ ಶ್ಲೋಕದಲ್ಲಿ ಹೇಳಲ್ಪಟ್ಟಿದೆ. 'ಯಾವನು ಅಜ್ಞಾನವನ್ನು ಹೊರದಬ್ಬಿ ನನ್ನನ್ನು ಪುರುಷೋತ್ತಮನೆಂದು, ಕ್ಷರಾಕ್ಷರಾತೀತನೆಂದು ತಿಳಿಯುವನೋ ಆತನು ಪೂರ್ಣಭಾವದಿಂದ ನನ್ನನ್ನು ಭಜಿಸುವನು' ಎಂದು ಭಗವಂತನು ಇಲ್ಲಿ ತಿಳಿಸಿದನು.

'ಅಸಂಮೂಢ'ನೆಂದರೆ ದೃಶ್ಯ ವಸ್ತುಗಳು ಶಾಶ್ವತಗಳೆಂಬ ಮೂಢತ್ವವನ್ನು (ಅಜ್ಞಾನವನ್ನು) ಹೊಂದಿರದೆ ಆತ್ಮವನ್ನೇ ಶಾಶ್ವತವೆಂದು ತಿಳಿದವನೆಂದರ್ಥ.

'ಸ ಸರ್ವವಿತ್'- ಪ್ರಪಂಚದಲ್ಲಿ ಎಷ್ಟು ಭೌತಿಕ ವಿದ್ಯೆಗಳನ್ನು ಸಂಪಾದಿಸಿದರೂ, ಎಂತಹ ಪಾಂಡಿತ್ಯವನ್ನು ಪಡೆದರೂ, ಎಷ್ಟು ಕಲೆಗಳನ್ನು ಸಂಪಾದಿಸಿದರೂ ಮನುಜನು 'ಸರ್ವವೇತ್ತ', 'ಸರ್ವಜ್ಞನು' ಆಗಲಾರನು.

'ಯಸ್ಮಿನ್ ವಿಜ್ಞಾತೇ ಸರ್ವಮಿದಂ ವಿಜ್ಞಾತಂ ಭವತಿ'- ಎಂದ ಹಾಗೆ ಯಾವುದನ್ನು ತಿಳಿದುಕೊಂಡರೆ ಸಮಸ್ತವು ತಿಳಿದಂತಾಗುತ್ತದೋ ಅಂತಹ ಪರಮಾತ್ಮನನ್ನು ತಿಳಿಯುವವನು ಪ್ರಪಂಚದಲ್ಲಿ ಸರ್ವವೇತ್ತನು, ಸರ್ವಜ್ಞನು ಆಗಬಲ್ಲನು. ಸಮಸ್ತ ಬ್ರಹ್ಮಾಂಡಗಳು. ಸಮಸ್ತ ವಿದ್ಯೆಗಳು, ಸಮಸ್ತ ಶಾಸ್ತ್ರಗಳು, ಕಲೆಗಳು ಭಗವಂತನ ಉದರದಲ್ಲಿಯೇ ಇರುವುವಾದ್ದರಿಂದ ಆತನನ್ನು ತಿಳಿದರೆ ಅವುಗಳೆಲ್ಲವನ್ನೂ ತಿಳಿದಂತೆಯೇ ಸರಿ. ಆದ್ದರಿಂದ ಅಂತಹವನನ್ನು 'ಸ ಸರ್ವವಿತ್' 'ಸರ್ವವೇತ್ತ', 'ಸರ್ವಜ್ಞ' ಎಂದು ಇಲ್ಲಿ ಹೇಳಲಾಗಿದೆ.

'ಸರ್ವಭಾವೇನ'- ಆ ಪ್ರಕಾರ ಭಗವಂತನನ್ನು ಯಥಾರ್ಥ ಸ್ವರೂಪವಾಗಿ ತಿಳಿದವನು ಆತನ ಮೇಲೆ ಅಚಂಚಲ ಭಕ್ತಿ ಭಾವವುಳ್ಳವನಾಗಿ ಸರ್ವವಿಧಗಳಲ್ಲಿ ಆತನನ್ನೇ ಭಜಿಸಿ, ಸೇವಿಸುವನು. ದೃಶ್ಯ ವಸ್ತುಗಳೆಲ್ಲವೂ ನಶ್ವರವೆಂದು ತಿಳಿದುಕೊಂಡವನು ಸಹಜವಾಗಿಯೇ ಶಾಶ್ವತವಾದ ದೃಗ್ವಸ್ತುವಾದ ಆತ್ಮವೊಂದನ್ನೇ ಸೇವಿಸುವನು. 'ಸರ್ವಭಾವೇನ' ಎಂದು ಹೇಳಿರುವುದರಿಂದ ಅಂತಹವನು ಪರಿಪೂರ್ಣ ಮನಸ್ಸಿನಿಂದ ಆತನನ್ನು ಭಜಿಸುವನು ಎಂದು ಭಾವ. ಅಂತಹ ಪರಿಪೂರ್ಣಭಾವ 'ದೈವದ ಯಥಾರ್ಥ ತತ್ತ್ವ'ವನ್ನು ತಿಳಿಯದೇ ಉಂಟಾಗುವುದಿಲ್ಲ. ಆದ್ದರಿಂದ ಮೊದಲು ಪರಮಾತ್ಮನ ವಿಭವ, ವಾಸ್ತವ ಸ್ವರೂಪಗಳನ್ನು ಚೆನ್ನಾಗಿ ತಿಳಿದುಕೊಳ್ಳಬೇಕು. ಮತ್ತೆ ಈ 'ಸರ್ವಭಾವೇನ' ಎನ್ನುವ ಪದದಿಂದ ಲೋಕದಲ್ಲಿ ಸಾಧಕರು ಭಗವಂತನನ್ನು ಯಾವ ರೀತಿ ಭಜಿಸಬೇಕೋ ಆ ಪದ್ಧತಿ ತಿಳಿಸಿದಂತಾಗಿದೆ. ಪೂರ್ಣ ಭಕ್ತಿಯಿಂದ ಅಚಂಚಲ ವಿಶ್ವಾಸದಿಂದ ಸೇವಿಸಬೇಕು. ಭಕ್ತಿಯನ್ನು, ಭಾವವನ್ನು ವಿಭಜಿಸಬಾರದು. ಪ್ರಪಂಚ ವಸ್ತುಗಳ ಮೇಲೆ ಸ್ವಲ್ಪ, ದೇವರ ಮೇಲೆ ಸ್ವಲ್ಪ ಭಕ್ತಿಯನ್ನು ಇಟ್ಟಿದ್ದರೆ ಅದು 'ಸರ್ವಭಾವ'ದೊಂದಿಗೆ ಸೇವೆ ಮಾಡಿದಂತಾಗುವುದಿಲ್ಲ. ಆದರೆ ಮೊದಲು ಅಂತಹ 'ಸರ್ವಭಾವ'ದೊಂದಿಗೆ ಕೂಡಿದ ಭಜನೆ ಸಾಧ್ಯವಾಗದೆ ಹೋದರೂ ಅಭ್ಯಾಸಬಲದಿಂದ ಅಂತಹ ಪೂರ್ಣಭಕ್ತಿಯನ್ನು (೧೦೦% ಭಕ್ತಿ), (ಭಗವಂತನು ತಿಳಿಸಿದ) 'ಸರ್ವಭಾವ'ವನ್ನು ಎಲ್ಲರೂ ಹೊಂದಲೇಬೇಕು.

ಪ್ರ : ಭಗವಂತನನ್ನು ಪೂರ್ಣಮನಸ್ಸಿನಿಂದ ಯಾರು ಸೇವಿಸುವರು?

ಉ: ಯಾವನು ಅಜ್ಞಾನರಹಿತನಾಗಿ (ಮೇಲೆ ತಿಳಿಸಿದ ರೀತಿ) ಭಗವಂತನನ್ನು ಕ್ಷರಾಕ್ಷರ ಪುರುಷರಿಗಿಂತ ಅತೀತನಾದ ಪುರುಷೋತ್ತಮನೆಂದು ತಿಳಿಯುವನೋ ಅಂತಹವನು ಪೂರ್ಣ ಮನಸ್ಸಿನಿಂದ ಆತನನ್ನು ಸೇವಿಸಿ, ಧ್ಯಾನಿಸುವನು.

ಪ್ರ : ಭಗವಂತನನ್ನು ಯಾವ ಪ್ರಕಾರ ಭಜಿಸಬೇಕು?

ಉ: ಅಚಂಚಲ ಭಕ್ತಿ, ಪರಿಪೂರ್ಣ ಮನಸ್ಸಿನಿಂದ ಭಜಿಸಬೇಕು (ಸರ್ವಭಾವೇನ).

**ಅ||** ಅಧ್ಯಾಯದ ಫಲವನ್ನು ಹೇಳಲಾಗುತ್ತಿದೆ-

**೨೦ ಇತಿ ಗುಹ್ಯತಮಂ ಶಾಸ್ತ್ರಮಿದಮುಕ್ತಂ ಮಯಾನಘ**
**ಏತದ್ಬುದ್ಧ್ವಾ ಬುದ್ಧಿಮಾನ್ ಸ್ಯಾತ್ಕೃತಕೃತ್ಯಶ್ಚ ಭಾರತ**

**ಅರ್ಥ:** ಅನಘ=ಪಾಪರಹಿತನಾದ ಓ ಅರ್ಜುನಾ! ಇತಿ=ಈ ಪ್ರಕಾರವಾಗಿ; ಗುಹ್ಯತಮಂ=ಅತಿ ರಹಸ್ಯವಾದ; ಇದಂ=ಈ; ಶಾಸ್ತ್ರಂ=ಶಾಸ್ತ್ರವನ್ನು; ಮಯಾ=ನನ್ನಿಂದ; ಉಕ್ತಂ=ಹೇಳಲ್ಪಟ್ಟಿದೆ: ಭಾರತ=ಓ ಅರ್ಜುನಾ! ಏತತ್=ಇದನ್ನು; ಬುದ್ಧ್ವಾ=ತಿಳಿದುಕೊಂಡು (ಮನುಜನು); ಬುದ್ಧಿಮಾನ್= ಜ್ಞಾನವಂತನು; ಕೃತಕೃತ್ಯಃ ಚ=ಕೃತಕೃತ್ಯನು; ಸ್ಯಾತ್=ಆಗುವನು.

**ತಾ||** ಪಾಪರಹಿತನಾದ ಓ ಅರ್ಜುನಾ! ಈ ಪ್ರಕಾರವಾಗಿ ಅತಿ ರಹಸ್ಯವಾದ ಈ ಶಾಸ್ತ್ರವನ್ನು ನಾನು ನಿನಗೆ ಹೇಳಿದೆನು. ಇದನ್ನು ಚೆನ್ನಾಗಿ ತಿಳಿದುಕೊಂಡವನು ಜ್ಞಾನವಂತನು, ಕೃತಕೃತ್ಯನು ಆಗಬಲ್ಲನು.

**ವ್ಯಾಖ್ಯೆ:** ಇಲ್ಲಿಯವರೆಗೆ ಹೇಳಲ್ಪಟ್ಟ ಈ ಗೀತಾಶಾಸ್ತ್ರವೆಲ್ಲವನ್ನೂ ಚೆನ್ನಾಗಿ ತಿಳಿದುಕೊಂಡವನಿಗೆ ಉಂಟಾಗುವ ಫಲವನ್ನು ಇಲ್ಲಿ ಹೇಳಲಾಗಿದೆ. ತಾನು ಮಾಡಿದ ಈ ಬೋಧೆಯೆಲ್ಲವೂ ಅತಿರಹಸ್ಯವಾದುದೆಂದು ('ಗುಹ್ಯತಮಂ') ಮೊಟ್ಟಮೊದಲು ಭಗವಂತನು ಹೇಳಿದನು. ಆದ್ದರಿಂದಲೇ 'ಗುಹ್ಯಂ' ಎಂದಾಗಲಿ 'ಗುಹ್ಯತರಂ' ಎಂದಾಗಲಿ ಹೇಳದೆ 'ಗುಹ್ಯತಮಂ'-ಎಂದು 'ತಮ' ಪ್ರತ್ಯಯಪದವನ್ನು ಪ್ರಯೋಗಿಸಿ ಬೋಧೆಯ ಅತಿ ಗೋಪ್ಯತೆ ಹಾಗು ಪರಮರಹಸ್ಯವನ್ನು ತಿಳಿಹೇಳಿದನು. ಸಾಮಾನ್ಯವಾಗಿ ಅತಿರಹಸ್ಯವಾದ ವಿಷಯವನ್ನು ಮಹನೀಯರು ಎಲ್ಲರಿಗೂ ಹೇಳುವುದಿಲ್ಲ. ಯೋಗ್ಯತೆ ಉಳ್ಳವನಿಗೆ, ಅಧಿಕಾರಿಗೇ ಹೇಳುವರು. "ಮತ್ತೆ ಅರ್ಜುನನಿಗೆ ಅಂತಹ ಯೋಗ್ಯತೆಯಿದೆಯೇ? ಆತನಿಗೆ ಚಿತ್ತಶುದ್ಧಿಯಿದೆಯೇ"? ಎಂದು ಜನರು ಪ್ರಶ್ನಿಸುವರೇನೋ ಎಂದು ಬಹುಶಃ ತಿಳಿದು ಭಗವಂತನು ಕೂಡಲೇ 'ಅನಘ' (ಪಾಪರಹಿತನು) ಎಂದು ಅರ್ಜುನನನ್ನು ಸಂಬೋಧಿಸಿ ಆ ಸಂಶಯವನ್ನು ನಿವಾರಿಸಿದನು. ಅರ್ಜುನನು ಪಾಪರಹಿತನು, ನಿರ್ಮಲಚಿತ್ತನು. ಆಧ್ಯಾತ್ಮಿಕ ವಿಜ್ಞಾನ ಶ್ರವಣಕ್ಕೆ ಅಧಿಕಾರಿ. ಅರ್ಜುನನ ಹಾಗೆ ಯಾರಾದರೂ ಸರಿಯೇ ತಮ್ಮ ಚಿತ್ತದಲ್ಲಿಯ ದೋಷ ಹಾಗು ಪಾಪಗಳನ್ನು ತ್ಯಜಿಸಿ ಹಾಕಿದರೆ ಅವರಿಗೆ ಸರ್ವೇಶ್ವರನು ಯಾವುದೋ ಮಹನೀಯನಾದ ಗುರುಮುಖೇಣ ಇಲ್ಲವೆ ಯಾವುದೋ ನಿಮಿತ್ತದಿಂದ ಬ್ರಹ್ಮತತ್ತ್ವವನ್ನು ಉಪದೇಶಿಸುವನು. ಇಲ್ಲವೆ ಸ್ವಯವಾಗಿ ಅಂತಹ ಆಧ್ಯಾತ್ಮಿಕ ಜ್ಞಾನವನ್ನು ಗ್ರಹಿಸುವ ಧೀಃಶಕ್ತಿಯನ್ನು ಉಂಟುಮಾಡುವನು (ದದಾಮಿ ಬುದ್ಧಿಯೋಗಂ ತಂ)

ಭಗವದುತ್ತಮವಾದ ಈ ಬೋಧೆಯನ್ನು ತಿಳಿಯುವುದರಿಂದ ಉಂಟಾಗುವ ಫಲವೇನು? ಅದರಿಂದ ಮನುಜನು (೧) ಜ್ಞಾನವಂತನು

(ಸ್ವಸ್ವರೂಪಾನುಭವವುಳ್ಳವನು) (೨) ಕೃತಕೃತ್ಯನು ಆಗುವನು. ಇಂತಹ ಬೋಧೆಯನ್ನು ತಿಳಿದುಕೊಳ್ಳುವುದರಿಂದ ಮನುಜನು ಭಗವಂತನ ಮೇಲೆ ಅನನ್ಯ ಭಕ್ತಿ ಹೊಂದಿ ತದ್ವಾರ ಬುದ್ಧಿಯೋಗವನ್ನು ಅಂದರೆ ಜ್ಞಾನಾನುಭವವನ್ನು (ಸ್ವಸ್ವರೂಪಾನುಭವವನ್ನು) ಪಡೆಯಬಲ್ಲನು. ಅದರಿಂದ ಆತನು ಕೃತಕೃತ್ಯನಾಗುವನು. ಅಂತಹ ಕೃತಕೃತ್ಯದಿಂದ ಕೃತಾರ್ಥನಾಗುವನು. ಪ್ರಪಂಚದಲ್ಲಿ ಯಾವ ಇತರೆ ಕಾರ್ಯದಿಂದಲೇ ಆಗಲಿ ಮನುಜನು ಕೃತಕೃತ್ಯನಾಗಲಾರನು. ಬ್ರಹ್ಮವಿದ್ಯೆ, ಅಧ್ಯಾತ್ಮಜ್ಞಾನದಿಂದ ಮಾತ್ರ ಕೃತಕೃತ್ಯನಾಗಬಲ್ಲನು- ಎಂದು ಭಗವಂತನು ಇಲ್ಲಿ 'ಏತದ್ಬುದ್ಧ್ವಾ ಬುದ್ಧಿಮಾನ್ ಸ್ಯಾತ್ಕೃತ ಕೃತ್ಯಶ್ಚ'- ಎನ್ನುವ ವಾಕ್ಯದಿಂದ ಸ್ಪಷ್ಟವಾಗಿ ಹೇಳಿರುವನು. ಆದ್ದರಿಂದ ಧನ್ಯರು, ಕೃತಕೃತ್ಯರಾಗ ಬೇಕೆನ್ನುವರು, ಜನ್ಮ ಸಾರ್ಥಕತೆ ಹೊಂದಬೇಕೆನ್ನುವರು ಭಗವಂತನ ಈ ವಾಕ್ಯದ ಮೇಲೆ ವಿಶ್ವಾಸವಿಟ್ಟು ಗೀತೆಯಲ್ಲಿ ತಿಳಿಸಲ್ಪಟ್ಟ ಪರಮಾರ್ಥ ರಹಸ್ಯವನ್ನೆಲ್ಲಾ ಅಭ್ಯಸಿಸಬೇಕು. ಹಾಗೆ ಕೃತಕೃತ್ಯನಾಗದೆ ಮರಣಿಸಿದರೆ ಪ್ರಮಾದವಾಗುವುದು. ಜನ್ಮಪರಂಪರೆ ಅವರನ್ನು ಬಿಡದು. ದುಃಖಜಾಲವು ಹಿಂದೆ ಬಿದ್ದೇ ಇರುವುದು.

ಪ್ರ : ಭಗವಂತನು ಬೋಧಿಸಿದ ಈ ಅಧ್ಯಾತ್ಮಶಾಸ್ತ್ರ ಎಂತಹದು?

ಉ : ಅತಿ ರಹಸ್ಯವಾದುದು (ಗುಹ್ಯತಮಂ)

ಪ್ರ : ಅದನ್ನು ಅರ್ಜುನನಿಗೇ ಏಕೆ ಬೋಧಿಸಿದನು?

ಉ : ಆತನು ಪಾಪರಹಿತನು (ಅನಘ) ಆಗಿರುವುದರಿಂದ

ಪ್ರ : ಈ ಬೋಧೆಯಿಂದ ಉಂಟಾಗುವ ಫಲವೇನು?

ಉ : ಅದನ್ನು ತಿಳಿಯುವುದರಿಂದ ಮನುಜನು

೧) ಜ್ಞಾನವಂತನು ೨) ಕೃತಕೃತ್ಯನಾಗುವನು.

ಪ್ರ : ಆದ್ದರಿಂದ ಜ್ಞಾನವಂತನಾಗಲು, ಕೃತಕೃತ್ಯತೆ ಪಡೆಯಲು ಉಪಾಯವೇನು?

ಉ : ಭಗವಂತನು ಬೋಧಿಸಿದ ಈ ಪರಮಾತ್ಮರಹಸ್ಯವನ್ನು ಚೆನ್ನಾಗಿ ಆಚರಿಸುವುದೇ ಉಪಾಯ.

**ಓಮ್**

ಇತಿ ಶ್ರೀ ಮದ್ಭಗವದ್ಗೀತಾಸೂಪನಿಷತ್ಸು ಬ್ರಹ್ಮವಿದ್ಯಾಯಾಂ ಯೋಗಶಾಸ್ತ್ರೇ
ಶ್ರೀ ಕೃಷ್ಣಾರ್ಜುನ ಸಂವಾದೇ ಪುರುಷೋತ್ತಮ ಪ್ರಾಪ್ತಿಯೋಗೋ ನಾಮ

**ಪಂಚಾದಶೋಽಧ್ಯಾಯಃ**

ಇದು ಉಪನಿಷತ್ಪ್ರತಿಪಾದಕವೂ, ಬ್ರಹ್ಮವಿದ್ಯೆಯೂ, ಯೋಗಶಾಸ್ತ್ರವೂ ಶ್ರೀ ಕೃಷ್ಣಾರ್ಜುನ ಸಂವಾದವಾದ
ಶ್ರೀ ಭಗವದ್ಗೀತೆಯಲ್ಲಿ ಪುರುಷೋತ್ತಮ ಪ್ರಾಪ್ತಿಯೋಗವೆನ್ನುವ
ಹದಿನೈದನೆಯ ಅಧ್ಯಾಯ

**ಓಮ್ ತತ್ ಸತ್**

# ದೈವಾಸುರಸಂಪದ್ವಿಭಾಗಯೋಗ

## ಶ್ರೀ ಭಗವದ್ಗೀತೆ

### ಅಥ ಷೋಡಶೋಽಧ್ಯಾಯಃ

### ಹದಿನಾರನೆಯ ಅಧ್ಯಾಯ

### ದೈವಾಸುರಸಂಪದ್ವಿಭಾಗಯೋಗಃ - ದೈವಾಸುರಸಂಪದ್ವಿಭಾಗಯೋಗ

**ಈ ಅಧ್ಯಾಯದ ಹೆಸರು :**

**'ದೈವಾಸುರ ಸಂಪದ್ವಿಭಾಗ ಯೋಗ'**- ಸಂಪದಿ ಎಂದರೆ ಐಶ್ವರ್ಯ; ದೈವ ಸಂಪದಿಯೆಂದರೆ ದೈವಿಕವಾದ ಸದ್ಗುಣಗಳ ಸಂಪತ್ತಿ, ದೈವ ಸಂಬಂಧವಾದ ಗುಣರಾಶಿ, ಜೀವಿಯನ್ನು ಭಗವಂತನ ಸಮೀಪಕ್ಕೆ ಸೇರಿಸುವಂತಹ ಶೀಲ ಸಂಪದ. ಅಸುರ ಸಂಪದಿಯೆಂದರೆ ರಾಕ್ಷಸ ಗುಣಗಳು, ದುರ್ಗುಣ ರಾಶಿ; ಭಗವಂತನನ್ನು ದೂರ ಮಾಡುವಂತಹ ದುಶ್ಶೀಲಗಳು. ಈ ಅಧ್ಯಾಯದಲ್ಲಿ ಶ್ರೀ ಕೃಷ್ಣಪರಮಾತ್ಮನು ದೈವ, ಅಸುರ ಗುಣಗಳೆರಡನ್ನು ಕುರಿತು ವಿಪುಲವಾಗಿ ತಿಳಿಸಿರುವನು. ಏಕೆಂದರೆ ಆ ಎರಡನ್ನು ತಿಳಿದುಕೊಂಡರೆ ಸಾಧಕನು ತನ್ನ ಹೃದಯವನ್ನು ಚೆನ್ನಾಗಿ ಪರಿಶೋಧಿಸಿ ಕೊಂಡು ಒಂದು ಪಕ್ಷ ದೈವಗುಣಗಳಿಲ್ಲದಿದ್ದರೆ ಅವುಗಳನ್ನು ಸಂಪಾದಿಸಿ ಕೊಳ್ಳಲು, ಇದ್ದಲ್ಲಿ ಇನ್ನೂ ಅಭಿವೃದ್ಧಿಪಡಿಸಿಕೊಳ್ಳಲು, ಅಸುರಗುಣಗಳಿದ್ದರೆ ಹೊರದೂಡಲು ಅವಕಾಶವಿರುವುದು. ಆದ್ದರಿಂದ ಎರಡನ್ನೂ ತಿಳಿದು ಕೊಂಡಿರಬೇಕು. ಈ ಪ್ರಕಾರವಾಗಿ ಅಧ್ಯಾತ್ಮ ಕ್ಷೇತ್ರದಲ್ಲಿ ಸರ್ವರಿಗೆ ಉಪಯೋಗವಾಗಲೆಂದು ಭಗವಂತನು ಆ ಸದ್ಗುಣ, ದುರ್ಗುಣಗಳೆರಡನ್ನೂ (ದೈವ, ಅಸುರ ಸಂಪದ್ಗಳೆರಡನ್ನೂ) ಚೆನ್ನಾಗಿ ವಿಭಜಿಸಿ ತಿಳಿಸಿರುವ ಅಧ್ಯಾಯ ವಾಗಿರುವುದರಿಂದ ಇದಕ್ಕೆ ದೈವಾಸುರ ಸಂಪದ್ವಿಭಾಗಯೋಗವೆನ್ನುವ ಹೆಸರು ಬಂದಿದೆ.

**ಈ ಅಧ್ಯಾಯದಲ್ಲಿಯ ಪ್ರಧಾನ ವಿಷಯಗಳು:**

೧) ದೈವ ಸಂಪದ (ದೈವಿಕ ಗುಣ ಸಮುದಾಯ)- (೧ನೆಯ ಶ್ಲೋಕದಿಂದ ೩ನೆಯ ಶ್ಲೋಕದವರೆಗೆ)

೨) ಅಸುರ ಸಂಪದ (ಅಸುರ ಗುಣ ಸಮುದಾಯ)- (೪ನೆಯ ಶ್ಲೋಕ)

೩) ಆ ಎರಡರ ಫಲ.... (೫ನೆಯ ಶ್ಲೋಕ)

೪) ಅಸುರ ಸಂಪದವುಳ್ಳವರ ಲಕ್ಷಣಗಳು, ಅವರಿಗುಂಟಾಗುವ ಅಧೋಗತಿ- (೬ನೆಯ ಶ್ಲೋಕದಿಂದ ೨೦ನೆಯ ಶ್ಲೋಕದವರೆಗೆ)

೫) ನರಕ ದ್ವಾರಗಳು (೨೧ನೆಯ ಶ್ಲೋಕ)

೬) ಶಾಸ್ತ್ರವಿರುದ್ಧವಾದ ಆಚರಣೆಯನ್ನು ತ್ಯಜಿಸಿ ಶಾಸ್ತ್ರಾನುಸಾರವಾದ ಆಚರಣೆಯನ್ನು ಅನುಸರಿಸುವುದರ ಬಗ್ಗೆಯ ಬೋಧನೆ- (೨೨ನೆಯ ಶ್ಲೋಕದಿಂದ ೨೪ನೆಯ ಶ್ಲೋಕದವರೆಗೆ)

**ಪೂರ್ವಾಧ್ಯಾಯದೊಡನೆ ಈ ಅಧ್ಯಾಯಕ್ಕೆ ಇರುವ ಸಂಬಂಧ-**

ಈಗಾಗಲೇ ೭ನೆಯ ಅಧ್ಯಾಯದ ೧೫ನೆಯ ಶ್ಲೋಕದಲ್ಲಿ 'ನ ಮಾಂ ದುಷ್ಕೃತಿನೋ ಮೂಢಾಃ'- ಎನ್ನುವುದರಲ್ಲಿ, ೯ನೆಯ ಅಧ್ಯಾಯದ ೧೧ನೆಯ ಹಾಗು ೧೨ನೆಯ ಶ್ಲೋಕಗಳಾದ 'ಅವಜಾನಂತಿ ಮಾಂ ಮೂಢಾ'...., 'ಮೋಘಾಶಾ ಮೋಘಕರ್ಮಾಣೋ...' ಎನ್ನುವುಗಳಲ್ಲಿ ಭಗವಂತನು ತನ್ನನ್ನು ಕುರಿತು ಚಿಂತಿಸದೇ ಇರುವವರ ಹಾಗು ಅಸುರ ಗುಣಗಳುಳ್ಳವರ ಬಗ್ಗೆ ಹೇಳಿದ್ದನು. ಮತ್ತೆ ತತ್‌ಕ್ಷಣವೇ ೯ನೆಯ ಅಧ್ಯಾಯದ ೧೩, ೧೪ನೆಯ ಶ್ಲೋಕಗಳಲ್ಲಿ "ಮಹಾತ್ಮಾನಸ್ತು ಮಾಂ ಪಾರ್ಥ....." "ಸತತಂ ಕೀರ್ತಯಂತೋ ಮಾಂ...." ಎನ್ನುವವುಗಳಲ್ಲಿ ತನ್ನನ್ನು ಭಜಿಸುವ ಸತ್ಪುರುಷರನ್ನು ಕುರಿತು ಹೇಳಿರುವನು. ಇವೆಲ್ಲವನ್ನೂ ಕೇಳಿದವನಿಗೆ ಸಹಜವಾಗಿಯೇ ದೈವಿಕ, ಆಸುರಿಕ ಲಕ್ಷಣಗಳನ್ನು ಕುರಿತು ವಿಪುಲವಾಗಿ ತಿಳಿದುಕೊಳ್ಳಬೇಕೆಂಬ ಕುತೂಹಲ ಉಂಟಾಗುವುದು. ಆದ್ದರಿಂದ ಅವುಗಳನ್ನು ವಿವರವಾಗಿ ತಿಳಿಸುವ ನಿಮಿತ್ತವಾಗಿ ಭಗವಂತನು ಈ ಅಧ್ಯಾಯವನ್ನು ಪ್ರಾರಂಭಿಸುತ್ತಿದ್ದಾನೆ. ಮತ್ತೆ ಹಿಂದಿನ ಅಧ್ಯಾಯದಲ್ಲಿ ತಿಳಿಸಲ್ಪಟ್ಟ ಪುರುಷೋತ್ತಮಪ್ರಾಪ್ತಿಗೆ ಸದ್ಗುಣಾವಲಂಬನೆ, ದುರ್ಗುಣ ತ್ಯಾಗಗಳು ಅವಸರವಾಗಿವೆ. ಈ ಕಾರಣದಿಂದ ಅಂತಹ ಭಗವತ್ಪ್ರಾಪ್ತಿಗೆ ಯಾವ ಸದ್ಗುಣಗಳನ್ನು ಸ್ವೀಕರಿಸಿ, ಯಾವ ದುರ್ಗುಣಗಳನ್ನು ತ್ಯಜಿಸಬೇಕೆಂದು ಮುಮುಕ್ಷುವಿಗೆ ತಿಳಿದಿರಬೇಕು. ಆದ್ದರಿಂದ ಅಂತಹ ಶೀಲ ಸಂಬಂಧ ವಿಜ್ಞಾನವನ್ನು ಆತನಿಗೆ ಒದಗಿಸುವ ಉದ್ದೇಶದಿಂದ ಆ ಪ್ರಕಾರವಾದ ಬೋಧೆಗಳಿಂದ ಕೂಡಿದ ಈ ಅಧ್ಯಾಯವನ್ನು ಪ್ರಾರಂಭಿಸಲಾಗಿದೆಯೆಂದು ಹೇಳಬಹುದು. ಗ್ರಹಿಸಬೇಕಾದ ದೈವಗುಣಗಳನ್ನು, ತ್ಯಾಜ್ಯಮಾಡಬೇಕಾದ ಅಸುರಗುಣಗಳನ್ನು ಕುರಿತು ಹೇಳುವಂಥವನಾಗಿ ಶ್ರೀ ಕೃಷ್ಣಮೂರ್ತಿ ಪ್ರಾರಂಭದಲ್ಲಿ ದೈವಗುಣಗಳನ್ನು ಹೇಳುತ್ತಿದ್ದಾನೆ-

ಶ್ರೀ ಭಗವಾನುವಾಚ:

೧. ಅಭಯಂ ಸತ್ತ್ವಸಂಶುದ್ಧಿರ್ಜ್ಞಾನಯೋಗವ್ಯವಸ್ಥಿತಿಃ
ದಾನಂ ದಮಶ್ಚ ಯಜ್ಞಶ್ಚ ಸ್ವಾಧ್ಯಾಯಸ್ತಪ ಆರ್ಜವಮ್

೨. ಅಹಿಂಸಾ ಸತ್ಯಮಕ್ರೋಧಸ್ತ್ಯಾಗಶ್ಶಾಂತಿರಪೈಶುನಮ್
ದಯಾ ಭೂತೇಷ್ವಲೋಲತ್ವಂ* ಮಾರ್ದವಂ ಹ್ರೀರಚಾಪಲಂ

೩. ತೇಜಃ ಕ್ಷಮಾ ಧೃತಿಃ ಶೌಚಮದ್ರೋಹೋ ನಾತಿಮಾನಿತಾ
ಭವಂತಿ ಸಂಪದಂ ದೈವೀಮಭಿಜಾತಸ್ಯ ಭಾರತ

ಶ್ರೀಭಗವಾನುವಾಚ-ಶ್ರೀ ಭಗವಂತನು ಹೇಳುತ್ತಿದ್ದಾನೆ.

**ಅರ್ಥ** : ಭಾರತ=ಓ ಅರ್ಜುನಾ! ಅಭಯಂ=ಭಯವಿಲ್ಲದಿರುವುದು; ಸತ್ತ್ವ ಸಂಶುದ್ಧಿಃ=ಅಂತಃಕರಣ ಶುದ್ಧಿ; ಜ್ಞಾನಯೋಗವ್ಯವಸ್ಥಿತಿಃ=ಜ್ಞಾನಯೋಗ ದಲ್ಲಿರುವುದು; ದಾನಂ=ದಾನ; ದಮಃ ಚ=ಬಾಹ್ಯೇಂದ್ರಿಯ ನಿಗ್ರಹ; ಯಜ್ಞಃ ಚ=(ಜ್ಞಾನ)ಯಜ್ಞ; ಸ್ವಾಧ್ಯಾಯಃ=(ವೇದಾಶಾಸ್ತ್ರಾದಿಗಳ) ಅಧ್ಯಯನ; ತಪಃ= ತಪಸ್ಸು; ಆರ್ಜವಮ್=ಋಜುತ್ವ (ಕಪಟವಿಲ್ಲದೇ ಇರುವುದು); ಅಹಿಂಸಾ= ಯಾವ ಪ್ರಾಣಿಗೂ ತೊಂದರೆಯುಂಟುಮಾಡದೇ ಇರುವುದು; ಸತ್ಯಂ= ಸದ್ವಸ್ತುವಾದ ಪರಮಾತ್ಮನನ್ನು ಆಶ್ರಯಿಸುವುದು ಇಲ್ಲವೆ, ನಿಜವನ್ನು ಹೇಳುವುದು; ಅಕ್ರೋಧಃ=ಕ್ರೋಧವಿಲ್ಲದಿರುವುದು; ತ್ಯಾಗಃ=ತ್ಯಾಗ ಬುದ್ಧಿಯಿರುವುದು; ಶಾಂತಿಃ=ಶಾಂತಿ ಸ್ವಭಾವ; ಅಪೈಶುನಃ=ಚಾಡಿ ಹೇಳದಿರುವುದು; ಭೂತೇಷು=ಪ್ರಾಣಿಗಳಲ್ಲಿ ದಯೆ, ಕರುಣೆ ಹೊಂದಿರುವುದು; ಅಲೋಲತ್ವಂ=ವಿಷಯ ಲೋಲುಪತೆ ಇಲ್ಲದಿರುವುದು; ತೇಜಃ=ಪ್ರತಿಭೆ (ಇಲ್ಲವೆ ಬ್ರಹ್ಮತೇಜಸ್ಸು); ಕ್ಷಮಾ=ಸಹನೆ (ಕಷ್ಟ ಸಹಿಷ್ಣುತೆ) ಧೃತಿಃ=ಧೈರ್ಯ; ಶೌಚಂ=ಶೌಚ (ಬಾಹ್ಯಾಂತರ ಶುಚಿತ್ವ); ಅದ್ರೋಹಃ=ಯಾರಿಗೂ ದ್ರೋಹ ಮಾಡದಿರುವುದು (ದ್ರೋಹ ಚಿಂತನೆಯಿಲ್ಲದಿರುವುದು); ನಾತಿಮಾನಿತಾ= ಸ್ವಾತಿಶಯವಿಲ್ಲದೇ ಇರುವುದು (ತಾನು ಪೂಜ್ಯನೆಂಬ ದುರಭಿಮಾನ, ಗರ್ವವಿಲ್ಲದೇ ಇರುವುದು) (ಎನ್ನುವ ಸುಗುಣಗಳು); ದೈವೀಂ=ದೈವ ಸಂಬಂಧವಾದ; ಸಂಪದಂ=ಸಂಪದಿಯಿಂದ (ಸಂಪತಿಯನ್ನು ಹೊಂದಿ); ಅಭಿಜಾತಸ್ಯ=ಹುಟ್ಟಿದವನಿಗೆ; ಭವಂತಿ=ಉಂಟಾಗುತ್ತವೆ.

**ತಾ|| ಶ್ರೀ ಭಗವಂತನು ಹೇಳಿದನು-** ಓ ಅರ್ಜುನಾ! ೧) ಭಯವಿಲ್ಲದಿರುವುದು ೨) ಅಂತಃಕರಣಶುದ್ಧಿ ೩) ಜ್ಞಾನ ಯೋಗದಲ್ಲಿರುವುದು ೪) ದಾನ ೫) ಬಾಹ್ಯೇಂದ್ರಿಯ ನಿಗ್ರಹ ೬) (ಜ್ಞಾನ) ಯಜ್ಞ ೭) (ವೇದ ಶಾಸ್ತ್ರಾದಿಗಳ) ಅಧ್ಯಯನ ೮) ತಪಸ್ಸು ೯) ಋಜುತ್ವ (ಕಪಟವಿಲ್ಲದೆ ಇರುವುದು) ೧೦) ಯಾವ ಪ್ರಾಣಿಗೂ ಹಿಂಸೆಯುಂಟುಮಾಡದೇ ಇರುವುದು (ಅಹಿಂಸೆ) ೧೧) ಸದ್ವಸ್ತುವಾದ ಪರಮಾತ್ಮನನ್ನು ಆಶ್ರಯಿಸುವುದು, ಇಲ್ಲವೆ, ನಿಜವನ್ನು ಹೇಳುವುದು (ಸತ್ಯ) ೧೨) ಕೋಪವಿಲ್ಲದೆ ಇರುವುದು ೧೩) ತ್ಯಾಗಬುದ್ಧಿಯನ್ನು ಹೊಂದಿರುವುದು ೧೪) ಶಾಂತಿ ಸ್ವಭಾವ ೧೫) ಚಾಡಿಯನ್ನು ಹೇಳದಿರುವುದು ೧೬) ಪ್ರಾಣಿಗಳಲ್ಲಿ ದಯೆ ೧೭) ವಿಷಯ ಲೋಲುಪತೆ ಇಲ್ಲದಿರುವುದು ಅಂದರೆ ವಿಷಯಗಳಲ್ಲಿ ಆಸಕ್ತಿಯಿಲ್ಲದಿರುವುದು, ಅವುಗಳಿಂದ ವಿಚಲಿತನಾಗದವನು. ೧೮) ಮೃದುತ್ವ (ಕ್ರೌರ್ಯವಿಲ್ಲದೆ ಇರುವುದು) ೧೯) (ಧರ್ಮವಿರುದ್ಧ ಕಾರ್ಯಗಳಲ್ಲಿ) ನಾಚಿಕೆ ೨೦) ಚಂಚಲ ಸ್ವಭಾವವಿಲ್ಲದಿರುವುದು ೨೧) ಪ್ರತಿಭೆ (ಇಲ್ಲವೆ ಬ್ರಹ್ಮತೇಜಸ್ಸು) ೨೨) ಸಹನೆ (ಕಷ್ಟ ಸಹಿಷ್ಣುತೆ) ೨೩) ಧೈರ್ಯ ೨೪) ಬಾಹ್ಯಾಭ್ಯಂತರ ಶುಚಿತ್ವ ೨೫) ಯಾರಿಗೂ ದ್ರೋಹ ಮಾಡದಿರುವುದು, ದ್ರೋಹ ಚಿಂತನೆಯಿಲ್ಲದಿರುವುದು ೨೬) ಸ್ವಾತಿಶಯ ವಿಲ್ಲದಿರುವುದು (ತಾನು ಪೂಜ್ಯನೆಂಬ ಅಭಿಮಾನ, ಗರ್ವವಿಲ್ಲದೇ ಇರುವುದು)- ಎನ್ನುವ ಈ ಸುಗುಣಗಳು ದೈವ ಸಂಪತ್ತಿನಲ್ಲಿ ಹುಟ್ಟಿದವನಿಗೆ ಉಂಟಾಗುತ್ತದೆ. (ಅಂದರೆ ದೈವ ಸಂಪತ್ತಿಯನ್ನು ಹೊಂದಿ ಹುಟ್ಟಿದವನಿಗೆ ಲಭ್ಯವಾಗುತ್ತವೆ ಎಂದು ಭಾವ)

**ವ್ಯಾಖ್ಯೆ:** ಗೀತಾ ಗ್ರಂಥದಲ್ಲಿ 'ಸಾಧನೆ'ಗೆ ವಿಶೇಷ ಪ್ರಾಮುಖ್ಯತೆಯನ್ನು ಕೊಡಲಾಗಿದೆ. ಚಿತ್ತವು ನಿರ್ಮಲವಾಗಿದ್ದಲ್ಲಿ ಪಾರಮಾರ್ಥಿಕ ಲಕ್ಷ್ಯವು ಅದರಲ್ಲಿ ಸೇರಿಯೇ ಇರುತ್ತದೆ. ಆದ್ದರಿಂದ ಅಂತಹ ಚಿತ್ತಶುದ್ಧಿ ಪರಿಕರಗಳೇನಕ ಗಳನ್ನು ಗೀತೆಯಲ್ಲಿ ತಿಳಿಸಲಾಗಿದೆ. ಈ ಅಧ್ಯಾಯದ ಪ್ರಾರಂಭದಲ್ಲಿರುವ ದೈವೀಸಂಪದ್ವಿವರಣೆಯು ಆ ಪರಿಕರಗಳ ಗುಂಪಿಗೆ ಸೇರಿದುದೇ ಆಗಿದೆ. ೨೬ ಸುಗುಣಗಳನ್ನು ಭಗವಂತನು ಇಲ್ಲಿ ತಿಳಿಸಿರುವನು. ಅವುಗಳೆಲ್ಲವನ್ನೂ ಮುಮುಕ್ಷುವು-ವಿದ್ಯಾರ್ಥಿ ಪಾಠಗಳನ್ನು ಕಲಿಯುವ ಹಾಗೆ ತೀವ್ರವಾಗಿ ಅಭ್ಯಸಿಸಿ ಹೃದಯವನ್ನು ಪರಿಶುದ್ಧಿಗೊಳಿಸಿಕೊಂಡರೆ ಇನ್ನು ಮೋಕ್ಷವೆನ್ನುವ ಲಕ್ಷ್ಯವು ಸನ್ನಿಹಿತವಾದಂತೇ ಆಗುವುದು. ಆದ್ದರಿಂದ ಸಾಧಕರು ಈ ಸದ್ಗುಣ ರಾಶಿಯನ್ನು ಪ್ರಯತ್ನ ಪೂರ್ವಕವಾಗಿ ಅವಲಂಬಿಸಿ, ಕಡುಜಾಗರೂಕತೆಯಿಂದ ಅವುಗಳನ್ನು ಕಾಪಾಡಿಕೊಳ್ಳಬೇಕು.

ಸಂಪದಿ ಎಂದರೆ ಧನ ಅಥವ ಐಶ್ವರ್ಯ. ದೈವಸಂಪದಿಯೆಂದರೆ ದೈವ ಧನ. ಶ್ರೀ ಕೃಷ್ಣ ಪರಮಾತ್ಮನು ದೈವಧನವನ್ನು ಈ ಲೋಕದ ಜನಗಳ ಮುಂದೆ ಇಟ್ಟು 'ಓ' ಜೀವಿಗಳಿರಾ! ನಶ್ವರ ಪ್ರಾಪಂಚಿಕ ಧನಗಳಿಂದ ಕ್ರೀಡಿಸುತ್ತ, ಅವುಗಳಲ್ಲಿಯೇ ಅಮೂಲ್ಯ ಕಾಲವನ್ನು ವಿನಿಯೋಗಿಸುತ್ತ, ದುಃಖ ಪರಂಪರೆಗಳನ್ನು ಜನ್ಮ ಪರಂಪರೆಗಳನ್ನು ಹೊಂದುತ್ತಿರುವ ಮಾನವನೇ ಇದೋ! ತೆಗೆದುಕೋ, ದೈವ ಸಂಪದ್ರಾಶಿಗಳನ್ನು, ಪಾರಮಾರ್ಥಿಕ ರತ್ನ ರಾಶಿಯನ್ನು' ಎಂದು ಹೇಳುತ್ತಿದ್ದಾನೆ. ಈ ದೈವಧನದ ಮುಂದೆ ಪ್ರಾಪಂಚಿಕ ಸಂಪದಿಗಳಿಗೆ, ವಜ್ರ ವೈಢೂರ್ಯಾದಿಗಳಿಗೆ ಯಾವ ಬೆಲೆಯೂ ಇಲ್ಲ. ಆದ್ದರಿಂದ ವಿವೇಕವಂತರು ಈ ದೈವ ಸಂಪದನೆಯನ್ನು ಶೀಘ್ರವಾಗಿ ಹಸ್ತಗತ ಮಾಡಿಕೊಂಡು ಜ್ಞಾನಧನಹೊಂದಿದವರಾಗಿ ಬ್ರಹ್ಮ ಸಾಯುಜ್ಯವನ್ನು ಹೊಂದುವಂತಾಗಬೇಕು!

'ಅಭಯಂ'- ಶ್ರೀ ಕೃಷ್ಣ ಪರಮಾತ್ಮನು ಅರ್ಜುನನಿಗೆ ಸುಗುಣಗಳನ್ನು ಹೇಳಬೇಕೆಂದು ಪ್ರಾರಂಭಿಸಿ ಮೊಟ್ಟಮೊದಲಿಗೆ 'ಸುಗುಣರಾಟ್' ಎನ್ನುವ 'ಸುಗುಣಸಿಂಹ' ಎಂದು ಕರೆಯಲ್ಪಟ್ಟ 'ಅಭಯ'ವನ್ನು ಹೇಳಿದನು. ಇದು ಗಮನಾರ್ಹವಾದ ವಿಷಯವಾಗಿದೆ. ಏಕೆಂದರೆ, ಎಷ್ಟೋ ಇತರ ಸುಗುಣ ಗಳಿದ್ದರೂ ಈ 'ಭಯರಾಹಿತ್ಯ'ವನ್ನೇ ಮೊದಲು ಹೇಳಿದ್ದೇಕೆ? ಇದಕ್ಕೆ ಕಾರಣಗಳಿವೆ ೧) ಎಲ್ಲಾ ದುರ್ಗುಣಗಳಿಗೂ ಭಯವೇ ಬುನಾದಿ. ಭಯದಿಂದಲೇ ಬೇರೆಯ ಅವಗುಣಗಳೆಲ್ಲವೂ ಉಂಟಾಗುವುವು. ಆದ್ದರಿಂದ ವಿಜ್ಞುಗಳು ಅದನ್ನು ಮೊಟ್ಟಮೊದಲು ದೂರ ಮಾಡಿಕೊಂಡರೆ ಅಂದರೆ ನಿರ್ಭಯತೆಯನ್ನು ಅವಲಂಬಿಸಿದ್ದೇ ಆದರೆ ಇನ್ನು ಬೇರೆ ಸುಗುಣಗಳೆಲ್ಲವೂ ಅವಲೀಲವಾಗಿ ಬಂದು ಸೇರುವುವು. ಆದ್ದರಿಂದಲೇ ಅದು ಬಹುಶಃ ಮೊಟ್ಟ

---

* 'ಭೂತೇಷ್ವ ಲೋಲುಪ್ತ್ವಂ'... ಪಾಠಾಂತರ

ಮೊದಲು ಇಲ್ಲಿ ಉಲ್ಲೇಖಗೊಂಡಿರಬಹುದು. ೨) ಹಗ್ಗ ಜಗ್ಗುವ ಪಂದ್ಯದಲ್ಲಿ (Tug of war) ಮೊದಲಿನವನು ಹಾಗೂ ಕೊನೆಯವನು ಮಹಾ ಬಲವಾಗಿರಬೇಕು. ಹಾಗೆಯೇ ಈ ಅಸುರ ದೈವಗುಣಗಳ ಪಂದ್ಯದಲ್ಲಿ, ದೈವ ಗುಣಗಳ ಪಕ್ಷದಲ್ಲಿ 'ಅಭಯಂ'- ಎನ್ನುವ ಸುಗುಣವನ್ನು ಆರಿಸಿ ಭಗವಂತನು ಅದನ್ನು ನಾಯಕನನ್ನಾಗಿ (captain) ಮಾಡಿ ರಣರಂಗದಲ್ಲಿ ನಿಲ್ಲಿಸಿದನು. ಇದರಿಂದ ಅದು ಎಂತಹ ಮಹತ್ತರ ಸುಗುಣವೆನ್ನುವುದು ವ್ಯಕ್ತವಾಗುತ್ತದೆ. ೩) **'ಅಭಯಂ ವೈ ಜನಕ ಪ್ರಾಪ್ತೋಽಸಿ'** ಎನ್ನುವ ಉಪನಿಷತ್ತು ವಾಕ್ಯ 'ಅಭಯ' ಸಾಕ್ಷಾತ್ ಬ್ರಹ್ಮಪದವಿಗೆ ಸಮಾನವೆಂದು ವರ್ಣಿಸಿದೆ. ಆದ್ದರಿಂದ ಗೀತೆಯಲ್ಲಿ ಭಗವಂತನು ಪ್ರಮುಖವೆಂದು ನಿರ್ಧರಿಸಿರುವ ಈ ನಿರ್ಭಯವೆಂಬ ಸುಗುಣವನ್ನು ಸರ್ವರೂ ಅಭ್ಯಸಿಸಿ ದೈವಸಂಪತ್ತನ್ನು ಸಂಪಾದಿಸಬೇಕು.

*'ಸತ್ತ್ವ ಸಂಶುದ್ಧಿಃ'*- 'ಶುದ್ಧಿಃ' ಎಂದು ಹೇಳದೆ 'ಸಂಶುದ್ಧಿಃ' ಎಂದು ಹೇಳಿರುವುದರಿಂದ ಚಿತ್ತವು ಅತ್ಯಂತ ನಿರ್ಮಲವಾಗಿರಬೇಕೆನ್ನುವುದು ಭಾವ. ಮನಸ್ಸಿನಲ್ಲಿ ಯಾವ ವಿಧವಾದ ಪ್ರಾಪಂಚಿಕ ಸಂಕಲ್ಪಗಳಿಗೆ, ಮಲಿನ ಸಂಸ್ಕಾರಗಳಿಗೆ ಪಾಪಗಳಿಗೆ ಅವಕಾಶಕೊಡಬಾರದು. ನಿರ್ಮಲ ದರ್ಪಣದಲ್ಲೇ ಪ್ರತಿಬಿಂಬವು ಸ್ಪಷ್ಟವಾಗಿ ಗೋಚರಿಸುವ ಹಾಗೆ ನಿರ್ಮಲ ಚಿತ್ತದಲ್ಲಿ ಆತ್ಮ ಚೆನ್ನಾಗಿ ಸ್ಫುರಿಸಬಲ್ಲದು.

*'ಜ್ಞಾನಯೋಗ ವ್ಯವಸ್ಥಿತಿಃ'*- ಭಗವಂತನು ಗೀತೆಯಲ್ಲಿ ಅನೇಕ ಯೋಗಗಳನ್ನು ಕುರಿತು ಬೋಧಿಸಿದ್ದರೂ, ಅಲ್ಲಲ್ಲಿ ಜ್ಞಾನಯೋಗಾಧಿಕ್ಯತೆಯನ್ನು ಹೇಳುತ್ತಲೇ ಬಂದಿದ್ದಾನೆ (ಆತ್ಮಜ್ಞಾನಾನುಭೂತಿಯೇ ಎಲ್ಲದರ ಪರಮಾವಧಿಯಾದ್ದರಿಂದ), ದೈವ ಸಂಪದದ ಗುಣರಾಶಿಯ ಪ್ರಾರಂಭ ದಲ್ಲಿಯೇ ಅದನ್ನು ಕುರಿತು ಪ್ರಸ್ತಾಪ ಮಾಡಿದನು. **'ಸರ್ವಂ ಕರ್ಮಾಖಿಲಂ ಪಾರ್ಥ ಜ್ಞಾನೇ ಪರಿಸಮಾಪ್ಯತೇ'** ಎಂದ ಹಾಗೆ ಎಲ್ಲಾ ಕರ್ಮಗಳು, ಯೋಗಗಳು ಕೊನೆಗೆ ಜ್ಞಾನದಲ್ಲಿಯೇ ಪರಿಸಮಾಪ್ತಿಗೊಳ್ಳುತ್ತವೆ. ಆದ್ದರಿಂದ ಅಂತಹ ಜ್ಞಾನಯೋಗದಲ್ಲಿ ದೃಢಸ್ಥಿತಿಯನ್ನು ಸಂಪಾದಿಸಬೇಕೆಂದು ಭಗವಂತನು ಇಲ್ಲಿ ಆದೇಶಿಸುತ್ತಿದ್ದಾನೆ.

*'ದಾನಂ'*- ಭೂಮಿ, ಧನ, ಅನ್ನ, ಜಲ, ಶ್ರಮ, ವಿದ್ಯೆ, ಜ್ಞಾನದಾನಗಳು- ವಿವಿಧ ದಾನಗಳು

*'ದಮಶ್ಚ'*- 'ಶಮ' ಎನ್ನುವ ಅಂತರೇಂದ್ರಿಯ ನಿಗ್ರಹವನ್ನು 'ಸತ್ತ್ವ ಸಂಶುದ್ಧಿಃ' ಎನ್ನುವ ಪದದ ಮೂಲಕ ಈಗಾಗಲೇ ಹೇಳಲ್ಪಟ್ಟಿರುವುದರಿಂದ ಇಲ್ಲಿ 'ದಮ' ಎನ್ನುವ ಬಾಹ್ಯೇಂದ್ರಿಯ ನಿಗ್ರಹವನ್ನು ಮಾತ್ರ ಹೇಳಲಾಗಿದೆ. ಇಂದ್ರಿಯ ನಿಗ್ರಹವಿಲ್ಲದಿದ್ದರೆ ಪರಮಾರ್ಥ ರಂಗದಲ್ಲಿ ಯಾರೂ ಮುಂದೆ ಹೋಗಲಾರರು ಎಂದು ಘಂಟಾಘೋಷವಾಗಿ ಹೇಳಬಹುದು. ಆದ್ದರಿಂದಲೇ ಗೀತೆಯಲ್ಲಿ ಶಮ, ದಮಗಳಿಗೆ ಸಮುಚಿತ ಸ್ಥಾನವನ್ನೀಯಲಾಗಿದೆ

*'ಯಜ್ಞಶ್ಚ'* ಇಲ್ಲಿ ಯಜ್ಞವೆಂದರೆ ತಪ, ಯೋಗ, ಸ್ವಾಧ್ಯಾಯ, ಜ್ಞಾನ ಯಜ್ಞ ಮುಂತಾದುವುಗಳು ಎಂದು ಗ್ರಹಿಸಬೇಕು.

*'ಸ್ವಾಧ್ಯಾಯಃ'*- ಗೀತೆ, ಉಪನಿಷತ್ತು, ಬ್ರಹ್ಮ ಸೂತ್ರಗಳು, ಯೋಗವಾಸಿಷ್ಠ, ಭಾರತ, ಭಾಗವತ, ರಾಮಾಯಣಗಳು- ಇತ್ಯಾದಿ ಆಧ್ಯಾತ್ಮಿಕ ಉದ್ಗ್ರಂಥಗಳನ್ನು ಪಠಿಸಿ ಅದರ ಸಾರವನ್ನು ಮನನ ಮಾಡುವುದು ಸ್ವಾಧ್ಯಾಯವೆನಿಸುವುದು

*'ತಪಃ'*- ತಪಸ್ಸೆಂದರೆ ತಲೆ ಕೆಳಗು ಮಾಡಿ, ಕಾಲು ಮೇಲು ಮಾಡಿ ನಿಲ್ಲುವುದಲ್ಲ. ಗೀತೆಯ ೧೭ನೆಯ ಅಧ್ಯಾಯದಲ್ಲಿ ಹೇಳಲ್ಪಟ್ಟ ಶಾರೀರಕ, ವಾಚಕ, ಮಾನಸಿಕ ತಪಸ್ಸುಗಳೆಂದು ಭಾವ.

*'ಆರ್ಜವಂ'*- ಶರೀರ, ವಾಕ್ಕು, ಮನಸ್ಸು ಎನ್ನುವ ಮೂರರಲ್ಲಿ ಏಕ ರೀತಿ ವರ್ತಿಸುವುದು. ಅಂದರೆ ತ್ರಿಕರಣ ಶುದ್ಧಿ ಹೊಂದಿರುವುದೆಂದರ್ಥ. ವಿಷ ಜಂತುಗಳಾದ ಸರ್ಪಾದಿಗಳು ವಕ್ರಗತಿ ಹೊಂದಿರುವುವು. ಆದ್ದರಿಂದ ವಕ್ರ ಸ್ವಭಾವವುಳ್ಳ ಮಾನವರು ವಿಷಜಂತುಗಳಿದ್ದ ಹಾಗೆ.

*'ಅಹಿಂಸೆ'*- ಶರೀರ, ವಾಕ್ಕು, ಮನಸ್ಸುಗಳಿಂದ ಯಾವ ಪ್ರಾಣಿಗೂ ಹಿಂಸೆ ಮಾಡದೆ ಇರುವುದು, ಯಾವ ಪ್ರಾಣಿಯನ್ನೂ, ಬಾಧಿಸದೆ ಇರುವುದು.

*'ಸತ್ಯಂ'*- ೧) ಶರೀರವಾಕ್ಕು ಮನಗಳಿಂದ ಅಸತ್ಯವಾಡದೇ ಇರುವುದು ೨) ಸತ್ಯವಸ್ತುವಾದ ಪರಮಾತ್ಮನಲ್ಲಿ ಸ್ಥಿರತೆ ಹೊಂದಿರುವುದು

*'ಅಕ್ರೋಧಃ'*-ಕ್ರೋಧವು ಬಹಳ ಕೆಟ್ಟ ಗುಣ. ಪರಮಾರ್ಥ ಸಾಧಕನಿಗೇ ಅಲ್ಲ, ಪ್ರತಿಮಾನವನಿಗೆ ಅದು ಎಷ್ಟೋ ಕೇಳನ್ನುಂಟು ಮಾಡುವುದು. ಅದು ಬಂದಾಗ ಮನುಜನು ಹೆಂಡ ಕುಡಿದವನ ಹಾಗಿರುವನು. ಆ 'ಮತ್ತಿ'ನಲ್ಲಿ ಯುಕ್ತಾಯುಕ್ತವನ್ನು ವಿಮರ್ಶಿಸದೆ ಅಧಃ ಪತನವನ್ನು ಹೊಂದುವನು. ಆದ್ದರಿಂದಲೇ **'ಕ್ರೋಧಾದ್ಭವತಿ ಸಂಮೋಹಃ..... ಪ್ರಣಶ್ಯತಿ'** - ಎಂದು ಇದರ ದುಷ್ಟ ಪ್ರಭಾವವನ್ನು ಕುರಿತು ಭಗವಂತನು ಈಗಾಗಲೇ ವಿಫುಲವಾಗಿ ತಿಳಿಸಿದ್ದಾನೆ. ಕ್ರೋಧವು ರಜೋಗುಣ ಸಂಬಂಧವಾದ ದುರ್ಗುಣವಾದ್ದರಿಂದ ಅದು ಮನುಜನನ್ನು ಸೇರಿದಾಗ ಆತನ ಕಣ್ಣುಗಳು ಕೆಂಪಾಗಿ, ದೇಹವೆಲ್ಲಾ ಬೆವರಿ, ಕೊನೆಗೆ ವಿಕೃತರೂಪವಾಗಿ ರಾಕ್ಷಸನಹಾಗೆ ಆಗುವನು. ಆದ್ದರಿಂದ ಪರಮಾರ್ಥೋನ್ನತಿಗೆ ಕ್ರೋಧರಾಹಿತ್ಯ (ಅಕ್ರೋಧ) ಒಂದು ದೊಡ್ಡ ಅವಶ್ಯಕತೆಯಾಗಿದೆ. ಆದ್ದರಿಂದಲೇ ಅದನ್ನು ದೈವಸಂಪದಿಯೆಂದು ಕರೆದಿರುವರು.

*'ತ್ಯಾಗಃ'* - **'ತ್ಯಾಗೇನೈಕೇ ಅಮೃತತ್ವ ಮಾನಶುಃ'** ತ್ಯಾಗದಿಂದಲೇ ಮೋಕ್ಷವು ಸಿದ್ಧಿಸುವುದು ಎಂದು ಉಪನಿಷತ್ತುಗಳು ಉದ್ಘೋಷಿಸುತ್ತಿವೆ. ದೃಕ್- ಸ್ವರೂಪವಾದ ಆತ್ಮವನ್ನು, ಭಗವಂತನನ್ನು ಅವಲಂಬಿಸಿ ದೃಶ್ಯವಸ್ತುಗಳಾದ ವಿಷಯ ಸಮೂಹಗಳಲ್ಲಿ ಆಸಕ್ತಿಯನ್ನು ತ್ಯಜಿಸುವುದೇ ತ್ಯಾಗ. ದುರ್ಗುಣಗಳು. ದುಃಸಂಸ್ಕಾರಗಳು, ದುಷ್ಟ ಸಂಕಲ್ಪಗಳು ವಿಷಯ ವ್ಯಾಮೋಹ, ಕರ್ಮಫಲವನ್ನು ತ್ಯಜಿಸುವುದೇ ವಾಸ್ತವವಾದ ತ್ಯಾಗ. ಇದು ಅಂತಸ್ತ್ಯಾಗ. ಬಾಹ್ಯ ತ್ಯಾಗಕ್ಕಿಂತ ಅಂತಸ್ತ್ಯಾಗವು ಶ್ರೇಷ್ಠವಾದುದು.

*'ಶಾಂತಿಃ'*- ಚಿತ್ತವು ಶಾಂತಿಯುತವಾಗಿರಬೇಕು, ಅಲ್ಲೋಲ ಕಲ್ಲೋಲವಾಗಿರಬಾರದು. ಸಂಕಲ್ಪಗಳಿಂದ ತುಂಬಿರಬಾರದು. ಪೂರ್ಣಶಾಂತಿ, ಚಿತ್ತವು ಪರಮಾತ್ಮನಲ್ಲಿ ಲಯ ಹೊಂದಿದಾಗ ಮಾತ್ರ ಸಂಭವಿಸುವುದು. ಶಾಂತಿ ಇಲ್ಲದವನಿಗೆ ಸುಖವಿರುವುದಿಲ್ಲ (ಅಶಾಂತಸ್ಯ ಕುತಸ್ಸುಖಮ್). ಭಗವದಾಶ್ರಯ, ದೃಶ್ಯ ವಿಷಯ ಸಂಕಲ್ಪ ವಿವರ್ಜನೆಗಳು ಶಾಂತಿಗೆ ಉಪಾಯಗಳು.

*'ಅಪೈಶುನಂ'*- ಇತರರ ದೋಷಗಳನ್ನು ಲೆಕ್ಕಿಸದೆ ಇರುವುದು, ಚಾಡಿಗಳನ್ನು ಹೇಳದಿರುವುದು. ಪರರ ಗುಣಗಳಿಂದ ನಮಗೆ ಸಹಾಯ ವಾಗಬಹುದೇ ಹೊರತು ಅವರ ದೋಷಗಳಿಂದಲ್ಲ. ಜನರು ತಮ್ಮ ತಮ್ಮ

ಹೃದಯಗಳಲ್ಲಿ ಅವಿತಿರುವ ಕೋಟಿಗಟ್ಟಲೆ ದೋಷಗಳನ್ನು ಮೊದಲು ನಿರ್ಮೂಲಿಸಿಕೊಂಡರೆ ಸಾಕು, ಬೇರೆಯವರ ದೋಷಗಳನ್ನು ಲೆಕ್ಕ ಹಾಕುವ ಕೆಲಸವಿಲ್ಲ.

'ದಯಾ ಭೂತೇಷು'- 'ಸಮಸ್ತ ಪ್ರಾಣಿ ಕೋಟಿಗಳಲ್ಲಿ ದಯೆ ಹೊಂದಿರುವುದು, ಸಾಧಕನಿಗೆ ಅತ್ಯವಸರವಾದ ಸುಗುಣವಾಗಿರುವುದರಿಂದ ಅದನ್ನು ಕುರಿತು ಗೀತೆಯಲ್ಲಿ ಅನೇಕ ಕಡೆ ಪ್ರಸ್ತಾಪಿಸಲಾಗಿದೆ. ಬ್ರಹ್ಮಜ್ಞಾನ ಎನ್ನುವ ಔಷಧಿಗೆ ಭೂತದಯೆ ಎನ್ನುವ ಪಥ್ಯ ಇರಲೇಬೇಕು. ಆಗಲೇ ಆ ಔಷಧಿ ಸರಿಯಾಗಿ ಕೆಲಸ ಮಾಡುವುದು. ಆದ್ದರಿಂದ ಭಕ್ತಿ, ಜ್ಞಾನ, ವೈರಾಗ್ಯಾದಿಗಳೊಡನೆ ಭೂತದೆಯೆಯನ್ನೂ ಹೊಂದಿರಬೇಕು. ಸಾಧಕರು ಇದನ್ನು ಚೆನ್ನಾಗಿ ಅಭ್ಯಸಿಸಬೇಕು.

'ಅಲೋಲತೆ'- ಇಂದ್ರಿಯಲೋಲತೆ ಇಲ್ಲದಿರುವುದು, ವಿಷಯ ಚಾಪಲ್ಯ ಬಿಡುವುದು'; ಇಂದ್ರಿಯಗಳ ಶಕ್ತಿಯೆಲ್ಲವೂ ವಿಷಯ ಭೋಗಗಳಲ್ಲಿ ವ್ಯರ್ಥವಾಗಿ ಹೋದಲ್ಲಿ ಆತ್ಮಚಿಂತನಾದಿಗಳಲ್ಲಿ ಅದು ಸಮರ್ಥವಾಗಿರ ಲಾರದು. ಆದ್ದರಿಂದ ಪ್ರತ್ಯಾಹಾರದಿಂದ ಆಯಾ ಇಂದ್ರಿಯಗಳನ್ನು ವಿಷಯಗಳಿಂದ ಮರಳಿಸಿ ಆತ್ಮದಲ್ಲಿ ನಿಲ್ಲಿಸಬೇಕು. ಮನಸ್ಸು ಚಪಲತೆಯನ್ನು ಹೊಂದಿರಬಾರದು.

'ಮಾರ್ದವಂ'- ಮಾತಿನಲ್ಲಿ, ಚೇಷ್ಟೆಯಲ್ಲಿ ಕಾಠಿಣ್ಯವನ್ನು ತೋರಿಸದೆ ಮೃದುತ್ವವನ್ನು ಹೊಂದಿರಬೇಕು. ಪೌರುಷತ್ವವನ್ನು ಬಿಡಬೇಕು. ಇದು ಸಾತ್ವಿಕ ಗುಣ ಸಂಪನ್ನನ ಲಕ್ಷಣ.

'ಹ್ರೀಃ'-(ನಾಚಿಕೆ)-೧) ಪಾಪಕಾರ್ಯಮಾಡುವುದರಲ್ಲಿ ನಾಚಿಕೆಯಿರ ಬೇಕು (ಅಂದರೆ ಅವುಗಳನ್ನು ಮಾಡಬಾರದು) ೨) 'ನಾನಿಲ್ಲಿಯವರೆಗೆ ಪರಮಾರ್ಥ ಕ್ಷೇತ್ರದಲ್ಲಿ ಎಷ್ಟು ಉನ್ನತಿ ಹೊಂದಿದ್ದೇನೆ?' ಎಂದು ಪ್ರಶ್ನಿಸಿಕೊಂಡು ಉನ್ನತಿ ಹೊಂದಿಲ್ಲದೆ ಇದ್ದ ಪಕ್ಷದಲ್ಲಿ ನಾಚಿಕೆ ಪಡಬೇಕು. ೩) ಮಹನೀಯರನ್ನು, ಅನುಭವಿಗಳನ್ನು ಸಾಧು ಮಹಾತ್ಮರನ್ನು, ಭಕ್ತರನ್ನು ನೋಡಿ ತನ್ನ ಸಾಂಸಾರಿಕ ಅವನತಿಯನ್ನು, ಅವರೊಂದಿಗೆ ಹೋಲಿಸಿ ನೋಡಿಕೊಂಡು ನಾಚಿಕೆ ಬೀಳಬೇಕು ಮತ್ತೆ ಅವರೊಡನೆ ಉನ್ನತ ಪಾರಮಾರ್ಥಿಕ ಶಿಖರವನ್ನು ಆರೋಹಿಸಲು ಪ್ರಯತ್ನ ಪಡಬೇಕು.

'ಅಚಾಪಲಂ'- ಚಂಚಲತೆ ರಜೋಗುಣ ಸ್ವಬಾವವುಳ್ಳದ್ದು. ಅಂತಹದು ಇಲ್ಲದಂತೆ ನೋಡಿಕೊಳ್ಳಬೇಕು. ಮನಸ್ಸನ್ನು ಆತ್ಮದಿಂದ (ದೈವದಿಂದ) ವಿಚಲಿತಗೊಳಿಸಬಾರದು.

'ತೇಜಃ'- ಬ್ರಹ್ಮತೇಜಸ್ಸನ್ನು ಹೊಂದಿರಬೇಕು.

'ಕ್ಷಮಾ'- ಸಹನೆ, ನಿಗ್ರಹಣೆ ; ದ್ವಂದ್ವಗಳಲ್ಲಿ ನಿರ್ವಿಕಾರನಾಗಿ ಭೂಮಿಯಂತೆ, ಫಲವೃಕ್ಷದಂತೆ ಕ್ಷಮಾಶೀಲನಾಗಿರಬೇಕು. ಶುಕ, ಏಸುಕ್ರಿಸ್ತ ಮುಂತಾದವರ ಕ್ಷಮಾಶೀಲತೆಯನ್ನು, ಸಹನೆಯನ್ನು ಆಗಾಗ ಜ್ಞಾಪಿಸಿ ಕೊಳ್ಳಬೇಕು.

'ಧೃತಿಃ'- ಧೈರ್ಯವನ್ನು ಹೊಂದಿರಬೇಕು. ನಿಜರೂಪವಾದ ಆತ್ಮವನ್ನು ಕುರಿತು ಚಿಂತಿಸುತ್ತಿದ್ದರೆ, ಮತ್ತೆ ಪ್ರಪಂಚದ ಮಿಥ್ಯಾತ್ವವನ್ನು ಕುರಿತು ಮನನ ಮಾಡುತ್ತಿದ್ದರೆ, ಮನುಜನಿಗೆ ಧೈರ್ಯವು ಒದಗುವುದು. ಎಷ್ಟು ವಿಪತ್ತುಗಳು ಸಂಭವಿಸಿದರೂ ಮೇರುಪರ್ವತದಂತೆ ಗಂಭೀರವಾಗಿರಬೇಕು.

'ಶೌಚಂ'- ೧) ಬಾಹ್ಯ ಶೌಚ (ಶರೀರ, ಗೃಹಾದಿಗಳ ಶುದ್ಧಿ) ೨) ಅಭ್ಯಂತರ ಶೌಚ (ಇಂದ್ರಿಯ ಮನಸ್ಸುಗಳ ಶುದ್ಧಿ, ಅಪವಿತ್ರ ಸಂಕಲ್ಪಗಳಿಲ್ಲದೆ ಇರುವುದು)

'ಅದ್ರೋಹ'- ಯಾರಿಗೂ ದ್ರೋಹ, ತೊಂದರೆ ಮಾಡದೆ ಇರುವುದು, ಮನಸ್ಸಿನಲ್ಲಿ ದ್ರೋಹ ಚಿಂತನೆಯಿಲ್ಲದಿರುವುದು.

'ನಾತಿಮಾನಿತಾ'- ತಾನು ದೊಡ್ಡ ಪೂಜ್ಯನೆಂದು ಎಂದೂ ಗರ್ವಪಡಬಾರದು. ತನ್ನನ್ನು ಪರರು ಗೌರವಿಸಬೇಕೆಂಬ ಅಭಿಮಾನವನ್ನು ಹೊಂದಿರಬಾರದು. ಇದು ಸಾಧಕರಿಗೆ ಅವಶ್ಯಕವಾದ ಸುಗುಣ. ಇದು ಇಲ್ಲದಿದ್ದರೆ ಅನೇಕರು ದಂಭ, ಅಭಿಮಾನಾದಿಗಳಿಂದ ಪತನ ಹೊಂದುವರು.

ಆಂಜನೇಯನಿಗೆ ಇದ್ದಂತಹ ವಿನಯ, ವಿಧೇಯತೆ, ನಿರಭಿಮಾನ, ದೈವ ಭಕ್ತಿ ಇರುವವನೇ ಪಾರಮಾರ್ಥಮಾರ್ಗದಲ್ಲಿ ಉತ್ತೀರ್ಣನಾಗಬಲ್ಲನು.

ಈ ೨೬ ಸುಗುಣಗಳು ದೈವ ಸಂಪತ್ತಿಯಲ್ಲಿ ಜನ್ಮಿಸಿದವರಿಗೆ ಉಂಟಾಗುತ್ತವೆ. ಇವು ಇಲ್ಲದೆ ಇರುವವರು ಅಂತಹ ದೈವ ಸಂಪದಿಗೆ ಯತ್ನಿಸಿ ಅದನ್ನು ಪಡೆಯಬೇಕು. ಮೋಕ್ಷಕ್ಕೆ ಈ ಸದ್ಗುಣಗಳೆಲ್ಲವೂ ಅವಶ್ಯಕ.

ಪ್ರ : ಶ್ರೀ ಕೃಷ್ಣ ಭಗವಂತನಿಂದ ದೈವಗುಣಗಳು ಎಷ್ಟು ಎಂದು ಹೇಳಲ್ಪಟ್ಟಿವೆ? ಅವು ಯಾವುವು?

ಉ : ಇಪ್ಪತ್ತಾರು. ಅವು ಕ್ರಮವಾಗಿ ೧) ಭಯರಾಹಿತ್ಯ ೨) ಚಿತ್ತಶುದ್ಧಿ ೩) ಜ್ಞಾನಯೋಗ ಸ್ಥಿತಿ ೪) ದಾನ ೫) ಬಾಹ್ಯೇಂದ್ರಿಯ ನಿಗ್ರಹ ೬) (ಜ್ಞಾನ) ಯಜ್ಞ ೭) ಶಾಸ್ತ್ರಾಧ್ಯಯನ ೮) (ಜ್ಞಾನ) ತಪಸ್ಸು ೯) ಋಜುತ್ವ ೧೦) ಅಹಿಂಸೆ ೧೧) ಸತ್ಯ ೧೨) ಕ್ರೋಧ ರಾಹಿತ್ಯ ೧೩) ತ್ಯಾಗ ೧೪) ಶಾಂತಿ ೧೫) ಚಾಡಿ ಹೇಳದಿರುವುದು ೧೬) ಭೂತದಯೆ ೧೭) ವಿಷಯ ಲೋಲುಪತೆಯಿಲ್ಲ ದಿರುವುದು ೧೮) ಮೃದುತ್ವ ೧೯) ನಾಚಿಕೆ ೨೦) ಚಪಲತೆಯಿಲ್ಲದಿರುವುದು ೨೧) ಪ್ರತಿಭೆ (ಬ್ರಹ್ಮತೇಜಸ್ಸು) ೨೨) ನಿಗ್ರಹಣೆ ೨೩) ಧೈರ್ಯ ೨೪) ಶುಚಿತ್ವ ೨೫) ದ್ರೋಹ ಬುದ್ಧಿಯಿಲ್ಲದೇ ಇರುವುದು ೨೬) ಅಭಿಮಾನರಾಹಿತ್ಯ - ಈ ಸದ್ಗುಣಗಳೇ ದೈವೀಸಂಪದಿಗಳೆಂದು ಕರೆಯಲ್ಪಡುವುವು.

**ಅ।।** ಇನ್ನು ಅಸುರ ಸಂಪದ (ಅಸುರ ಗುಣ)ಗಳನ್ನು ಹೇಳಲಾಗುತ್ತಿದೆ-

೪ **ದಂಭೋ ದರ್ಪೋಽಭಿಮಾನಶ್ಚ ಕ್ರೋಧಃ ಪಾರುಷ್ಯ ಮೇವ ಚ**
**ಅಜ್ಞಾನಂ ಚಾಭಿಜಾತಸ್ಯ ಪಾರ್ಥ ಸಂಪದಮಾಸುರೀಮ್**

**ಅರ್ಥ:** ಪಾರ್ಥ=ಓ ಅರ್ಜುನಾ! ದಂಭಃ=ದಂಭವು (ಕಪಟವೇಷ) ದರ್ಪಃ=ಗರ್ವವು; ಅಭಿಮಾನ ಚ=ಅಭಿಮಾನವು (ತಾನೇ ದೊಡ್ಡವನೆಂಬ ದುರಹಂಕಾರ); ಕ್ರೋಧಃ=ಕೋಪ; ಪಾರುಷ್ಯಂ ಏವ ಚ=(ವಾಕ್ಕು ಮೊದಲಾದ) ಕಠಿಣತ್ವಗಳು; ಅಜ್ಞಾನಂ ಚ=ಅವಿವೇಕಗಳು; ಆಸುರೀಂ=ಅಸುರ ಸಂಬಂಧವಾದ; ಸಂಪದಂ=ಸಂಪತ್ತಿಯಿಂದ (ಅಸುರಸಂಪತ್ತಿಯನ್ನು ಹೊಂದಿ); ಅಭಿಜಾತಸ್ಯ=ಹುಟ್ಟಿದವನಿಗೆ (ಭವಂತಿ=ಉಂಟಾಗುತ್ತವೆ).

**ತಾ।।** ಓ ಅರ್ಜುನಾ! ದಂಭ, ಗರ್ವ, ಅಭಿಮಾನ (ದುರಹಂಕಾರ), ಕೋಪ, (ವಾಕ್ಕು ಮುಂತಾದವುಗಳಲ್ಲಿ)ಕಾಠಿಣ್ಯ, ಅವಿವೇಕವೆನ್ನುವ ಈ ದುರ್ಗುಣಗಳು ಅಸುರ ಸಂಪತ್ತಿಯಲ್ಲಿ ಹುಟ್ಟಿದವನಿಗೆ ಉಂಟಾಗುತ್ತವೆ (ಅಂದರೆ ಅಸುರ ಸಂಪತ್ತಿಯನ್ನು ಪಡೆದು ಜನ್ಮಿಸಿದವನಿಗೆ ಉಂಟಾಗುತ್ತವೆಂದು ಅರ್ಥ).

**ವ್ಯಾಖ್ಯೆ:** ಈಗಾಗಲೇ ತಿಳಿಸಲ್ಪಟ್ಟ ಸುಗುಣಗಳ ಸಂಪಾದನೆಯನ್ನು ದೈವ ನಿಷ್ಠರು, ಭಕ್ತರು ಹೇಗೆ ದೊಡ್ಡ ಧನವಾಗಿ ಭಾವಿಸುತ್ತಾರೆಯೋ ಹಾಗೆ ಈ ಶ್ಲೋಕದಲ್ಲಿ ತಿಳಿಸುವ ದುರ್ಗುಣಗಳನ್ನು ಅಸುರರು, ದುರ್ಮಾರ್ಗಿಗಳು ದೊಡ್ಡ ಸಂಪಾದನೆಯೆಂದು ತಿಳಿದು ಹಿಗ್ಗಿ ಅವುಗಳನ್ನೇ ಪ್ರೀತಿಯಿಂದ ಸೇವಿಸುತ್ತಿದ್ದಾರೆ. ಆದ್ದರಿಂದಲೇ ಅವುಗಳಿಗೆ ಅಸುರಸಂಪದ ಎನ್ನುವ ಹೆಸರು ಬಂದಿದೆ. ಅಷ್ಟೇ ಅಲ್ಲದೆ ವಾಸ್ತವವಾಗಿ ಅವು ಸಂಪಾದನೆಗಳಲ್ಲ, ದಾರಿದ್ರ್ಯಗಳೇ ಹೌದು. ಪೂರ್ವದಲ್ಲಿ ೨೬ ಸುಗುಣಗಳನ್ನು ಹೇಳಿ ಈಗ ಆರು ದುರ್ಗುಣಗಳನ್ನು ಮಾತ್ರ ಹೇಳಲಾಗಿದೆ. ಈ ಆರು ದುರ್ಗುಣಗಳನ್ನೇ ವಿವರಿಸಿ ಭಗವಂತನು ವಿಸ್ತಾರವಾಗಿ ಹೇಳುವನು. ಸಾಧಕನು ಮಾಯೆ, ಪ್ರಕೃತಿ, ಅವಿದ್ಯೆಯಿಂದ ಉಂಟಾಗುವ ಸಂಗ್ರಾಮದಲ್ಲಿ ಸ್ವಪಕ್ಷ, ಪ್ರತಿಪಕ್ಷ ವೀರರನ್ನು ಕುರಿತು ಚೆನ್ನಾಗಿ ತಿಳಿದುಕೊಂಡಿರಬೇಕು. ಆಗಲೇ ಸ್ವಪಕ್ಷ ಸೈನಿಕರನ್ನು ಬಲಪಡಿಸಿಕೊಳ್ಳಲು, ಪರಪಕ್ಷ ಸೈನಿಕರನ್ನು ಹತಗೊಳಿಸಲು ಸಹಾಯವಾಗುವುದು. ಆದ್ದರಿಂದಲೇ ಭಗವಂತನು ಇಲ್ಲಿ ದೈವ ಸಂಬಂಧವಾದ ಪವಿತ್ರ ಗುಣಗಳನ್ನು ಹೇಳಿ ಅಲ್ಲಿಗೆ ಸುಮ್ಮನಿರದೆ ಅಸುರ ಸಂಬಂಧವಾದ ಅಪವಿತ್ರ ಗುಣಗಳನ್ನೂ ಹೇಳುತ್ತಿದ್ದಾನೆ. ಒಂದು ಮನೆ ಶುಭ್ರವಾಗಿರಬೇಕೆಂದರೆ, ಅದರಲ್ಲಿ ಮೊದಲಿದ್ದ ಧೂಳು, ಬೂಜು, ಕಸ ಮುಂತಾದುವನ್ನು ಶುಚಿಗೊಳಿಸಬೇಕು. ಮತ್ತೆ ಧೂಪ, ಅಗರಬತ್ತಿ ಮುಂತಾದುವುಗಳಿಂದ ಮನೆಯನ್ನು ಪರಿಮಳವಾಗಿಸಿ, ಕುಡಿಯಲು ಹೊರಗಿನಿಂದ ಶುದ್ಧವಾದ ನೀರು ಮುಂತಾದುವುಗಳನ್ನು ತೆಗೆದುಕೊಂಡು ಬರಬೇಕು. ಶರೀರವು ಆರೋಗ್ಯವಾಗಿ, ಪುಷ್ಟಿಯಾಗಿರಬೇಕೆಂದರೆ ಒಳಗಿರುವ ಮಲಮೂತ್ರಗಳು ಹೊರಗೆ ಹೋಗಬೇಕು. ಪುಷ್ಟಿಕರವಾದ ಆಹಾರ, ಪಾನೀಯಗಳು ಒಳಹೋಗಬೇಕು. ಆ ಪ್ರಕಾರವಾಗಿಯೇ ಮನಸ್ಸಿನ ಪರಿಶುದ್ಧತೆಯಿಂದ ಆ ಮನಸ್ಸಿನಲ್ಲಿ ಅನಾದಿಯಿಂದಿರುವ ದುಷ್ಟ ಪ್ರವೃತ್ತಿಗಳು, ದುರ್ವಾಸನೆ, ದುರ್ಗುಣಗಳನ್ನು ಹೊರಗೆ ದೂಡಿ, ಅಂದರೆ ಆಸುರೀ ಸಂಪದಕ್ಕೆ ವಿದಾಯ ಹೇಳಿ, ಸದ್ಗುಣ (ಸಶ್ಶೀಲ)ಗಳನ್ನು ಅಂದರೆ ದೈವ ಸಂಪಾದನೆಯನ್ನು ಆಹ್ವಾನಿಸಿ, ಅವಲಂಬಿಸಬೇಕು.

ದುರ್ಗುಣಗಳಲ್ಲಿ ಮೊದಲು ದಂಭದ ಉಲ್ಲೇಖವಿದೆ. ಪರಮಾರ್ಥ ರಂಗದಲ್ಲಾಗಲೀ ಅಥವ ಬೇರೆ ಯಾವ ರಂಗದಲ್ಲಿಯೇ ಆಗಲಿ ಕಪಟ, ವೇಷ, ಮೋಸ ಕೆಲಸಕ್ಕೆ ಬರುವುದಿಲ್ಲ. ತಾನು ದೊಡ್ಡವನೆಂದು ನಟಿಸಿದ ಮಾತ್ರದಲ್ಲಿ ಒಂದು ವೇಳೆ ಆತನು ಲೋಕವನ್ನು ಮೋಸಗೊಳಿಸ ಬಲ್ಲನೇ ಹೊರತು ಭಗವಂತನನ್ನು ಮೋಸಗೊಳಿಸಲಾರನು. ಅವನ ಹೃದಯ ಗುಹೆಯಲ್ಲಿ ಅವಿತು, ಅವನ ಸಂಕಲ್ಪಗಳನ್ನೆಲ್ಲಾ ಸರ್ವೇಶ್ವರನು ನೋಡುತ್ತಲೇ ಇದ್ದಾನೆ. ಆದ್ದರಿಂದ ದಂಭವೆನ್ನುವ ದುರ್ಗುಣವನ್ನು ಮೊದಲು ಛೇದಿಸಬೇಕು. ಗರ್ವವನ್ನು ಹೊರದೂಡಬೇಕು. ತನಗೇನಾದರೂ ದೊಡ್ಡ ವಿದ್ಯೆಯಾಗಲಿ, ಅಧಿಕಾರವಾಗಲಿ ಲಭಿಸಿದರೆ ಗರ್ವ ಪಡದೆ ಅದೆಲ್ಲವೂ ಸರ್ವೇಶ್ವರನ ಅನುಗ್ರಹದಿಂದಲೇ ಉಂಟಾಗಿದೆಯೆಂದು ಭಾವಿಸಿ ವಿನಯ ವಂತನಾಗಿರಬೇಕು. ಹಾಗೆಯೇ ಕ್ರೋಧದ ತ್ಯಾಗಮಾಡಬೇಕು. ದೈವಗುಣಗಳಲ್ಲಿ 'ಅಕ್ರೋಧ'ವನ್ನು, ಅಸುರ ಗುಣಗಳಲ್ಲಿ 'ಕ್ರೋಧ'ವನ್ನು ಹೇಳಿರುವುದು ಗಮನಾರ್ಹ. ಅಕ್ರೋಧವನ್ನು ಗ್ರಹಿಸಬೇಕೆಂದು ಹೇಳಿದರೂ, ಕ್ರೋಧವನ್ನು ತ್ಯಜಿಸಬೇಕೆಂದು ಹೇಳಿದರೂ ಎರಡೂ ಒಂದೇ. ದೈವ, ಅಸುರ ಸಂಪತ್ತಿಗಳೆರಡರಲ್ಲೂ ಕ್ರೋಧವನ್ನು ಕುರಿತ ಪ್ರಸ್ತಾಪ ಬಂದಿರುವುದರಿಂದ ಕ್ರೋಧರಾಹಿತ್ಯ, ಅಧ್ಯಾತ್ಮಕೇತ್ರದಲ್ಲಿ ಎಷ್ಟು ಅವಶ್ಯಕವೋ ಅರ್ಥವಾಗುತ್ತದೆ. ಮತ್ತೆ ಸಾಧಕನು ಕಠಿಣವಾಗಿ ಮಾತನಾಡಬಾರದು. ವಾಕ್ಕು ಮುಂತಾದುವುಗಳಲ್ಲಿ ಕಾಠಿಣ್ಯತೆ ತೋರಿಸಬಾರದು. ದೈವಗುಣಗಳಲ್ಲಿ ತಿಳಿಸಲ್ಪಟ್ಟ 'ಮೃದುತ್ವ'ವನ್ನೇ ಸ್ವೀಕರಿಸಬೇಕು.

ಪ್ರ : ಅಸುರಗುಣಗಳು ಎಷ್ಟು, ಅವು ಯಾವುವು?

ಉ : ಆರು. ಅವು ಕ್ರಮವಾಗಿ ೧) ದಂಭ ೨) ಗರ್ವ ೩) ಅಭಿಮಾನ ೪) ಕೋಪ ೫) ಕಾಠಿಣ್ಯ ೬) ಅವಿವೇಕ

ಪ್ರ : ಈ ದುರ್ಗುಣಗಳನ್ನು ಏನು ಮಾಡಬೇಕು?

ಉ : ಪೂರ್ತಿಯಾಗಿ ಪರಿತ್ಯಜಿಸಬೇಕು.

**ಅ॥** ದೈವೀಸಂಪದ ಮೋಕ್ಷವನ್ನೂ, ಆಸುರೀ ಸಂಪದ ಬಂಧವನ್ನುಂಟು ಮಾಡುವುವು ಎಂದು ಹೇಳಲಾಗುತ್ತಿದೆ-

**೫ ದೈವೀಸಂಪದ್ವಿಮೋಕ್ಷಾಯ ನಿಬಂಧಾಯಾಸುರೀ ಮತಾ**
**ಮಾ ಶುಚಃ ಸಂಪದಂ ದೈವೀಮಭಿಜಾತೋಽಸಿ ಪಾಂಡವ**

**ಅರ್ಥ:** ದೈವೀ=ದೈವ ಸಂಬಂಧವಾದ ಸಂಪದ; ವಿಮೋಕ್ಷಾಯ=ಪರಿಪೂರ್ಣ (ಸಂಸಾರ) ಬಂಧ ನಿವೃತಿಗೋಸ್ಕರ; ಆಸುರೀ (ಸಂಪದ)= ಅಸುರ ಸಂಬಂಧವಾದ ಸಂಪದ; ನಿಬಂಧಾಯ=(ಸಂಸಾರ) ಬಂಧಕ್ಕಾಗಿ; ಮತ= (ಕಾರಣಗಳೆಂದು) ನಿಶ್ಚಯಿಸಲಾಗಿದೆ; ಪಾಂಡವ=ಓ ಅರ್ಜುನಾ! (ತ್ವಂ=ನೀನು); ದೈವೀಂ=ದೈವ ಸಂಬಂಧವಾದ; ಸಂಪದಂ=ಸಂಪತ್ತನ್ನು ಹೊಂದಿ; ಅಭಿಜಾತಃ=ಜನ್ಮಿಸಿದವನು; ಅಸಿ=ಆಗಿದ್ದೀಯೆ; ಮಾ ಶುಚಃ= (ಆದ್ದರಿಂದ) ದುಃಖಿಸಬೇಡ.

**ತಾ॥** ಓ ಅರ್ಜುನಾ! ದೈವೀ ಸಂಪದ ಪರಿಪೂರ್ಣ (ಸಂಸಾರ) ಬಂಧ ನಿವೃತ್ತಿಯನ್ನೂ, ಆಸುರೀ ಸಂಪದ ಭಯಂಕರವಾದ (ಸಂಸಾರ) ಬಂಧವನ್ನುಂಟು ಮಾಡುವುದೆಂದೂ ನಿಶ್ಚಯಿಸಲಾಗಿದೆ. ನೀನು ದೈವೀ ಸಂಪದದಲ್ಲಿ (ಅದನ್ನು ಹೊಂದಿ) ಜನ್ಮಿಸಿರುವೆಯಾದ್ದರಿಂದ ಶೋಕಿಸುವ ಅಗತ್ಯವಿಲ್ಲ.

**ವ್ಯಾಖ್ಯೆ:** ಇಲ್ಲಿಯವರೆಗೆ ದೈವಾಸುರ ಸಂಪದಗಳನ್ನು ವಿವರಿಸಿ ಈಗ ಅವುಗಳ ಫಲಗಳನ್ನು ಹೇಳುತ್ತಿದ್ದಾನೆ. ಏಕೆಂದರೆ ಫಲಗಳನ್ನು ತಿಳಿದಿದ್ದಲ್ಲಿ ಅವುಗಳನ್ನು ಗ್ರಹಿಸುವುದಕ್ಕಾಗಲಿ. ತ್ಯಜಿಸುವುದಕ್ಕಾಗಲಿ ಮನಸ್ಸುಂಟಾಗುವುದು. ದೈವ ಸಂಪದ ಮೋಕ್ಷವನ್ನು ಅಂದರೆ ಬಂಧ ವಿಮುಕ್ತಿಯನ್ನು, ಅಸುರ ಸಂಪದ ಬಂಧವನ್ನು ಉಂಟುಮಾಡುವುದೆಂದು ಇಲ್ಲಿ ಸ್ಪಷ್ಟವಾಗಿ ಹೇಳಲಾಗಿದೆ. ಒಂದು ಬಿಡುಗಡೆಗೊಳಿಸುವುದು, ಮತ್ತೊಂದು ಬಂಧಿಸುವುದು. ಆದ್ದರಿಂದ ಇವುಗಳಲ್ಲಿ ಯಾವುದು ಶ್ರೇಷ್ಠವೋ, ಅವಲಂಬನೀಯವೋ ವಿಜ್ಞುಗಳೇ ಯೋಚಿಸಬಹುದು. ಕಷ್ಟ ದುಃಖಗಳನ್ನು ಯಾರಾದರೂ ಕೋರುವರೇ? ಕೈಯಾರೆ ಸಂಕೋಲೆಗಳನ್ನು ಯಾರಾದರೂ ಹಾಕಿಸಿಕೊಳ್ಳುವರೇ? ಆದ್ದರಿಂದ ಫಲಿತಗಳಲ್ಲಿ ಒಂದು ಮೋಕ್ಷ, ಇನ್ನೊಂದು ಬಂಧವನ್ನುಂಟು ಮಾಡುತ್ತದೆ ಎಂದು ಹೇಳಿದಾಗ; ವಿವೇಕವುಳ್ಳವರು ಮೋಕ್ಷ ಪ್ರದವಾದ ದೈವ ಸಂಪದನೆಯನ್ನು ಸ್ವೀಕರಿಸಿ, ಬಂಧ ಜನಕವಾದ ಅಸುರ ಸಂಪದನೆಯನ್ನು ಹೊರದೂಡುವರು. ಈಗಾಗಲೇ ಎಷ್ಟೋ ಕೋಟಿ ಜನ್ಮಗಳಿಂದ ಬಂಧದಲ್ಲಿ, ದಾಸ್ಯಶೃಂಖಲೆಗಳಲ್ಲಿ ಬಿದ್ದು ಹೊರಳಾಡಿದ ಜೀವಿ ಈಗಲಾದರೂ ಬಿಡುಗಡೆ ಹೊಂದಲು ಅಭಿಲಾಷಿಸುವುದು ಶ್ರೇಯಸ್ಕರ. ಆದ್ದರಿಂದ ಶ್ರೇಯೋಕಾಂಕ್ಷಿಗಳು, ಪ್ರತಿಯೊಬ್ಬರೂ, ಪ್ರಯತ್ನ ಪೂರ್ವಕವಾಗಿ ಭಗವತ್ಪ್ರೋಕ್ತಗಳಾದ ದೈವಗುಣಗಳನ್ನು ಅಭ್ಯಸಿಸಿ ಅಸುರ ಗುಣಗಳನ್ನು ಹೊರದೂಡಬೇಕು.

ಈ ಮೇಲಿನ ನಾಲ್ಕು ಶ್ಲೋಕಗಳಲ್ಲಿ ಆಯಾ ಸಂಪದಗಳಲ್ಲಿ ಜನ್ಮಿಸಿದವರಿಗೆ ಆಯಾ ಗುಣಗಳು ಉಂಟಾಗುತ್ತವೆಯೆನ್ನುವುದರ ಅರ್ಥ, ಆಯ್ಯಾ ಸಂಪದಗಳನ್ನು ಅವರು ಭವಿಷ್ಯತ್ತಿನಲ್ಲಿ ಹೊಂದಬೇಕಾಗಿರುವುದರಿಂದ ಹಾಗೆ ಹುಟ್ಟಿ, ಪಡೆಯುವರೆಂದರ್ಥ. ಆಯಾ ಸಂಪದಗಳು ಅವರವರ ವಂಶ ಕುಲದ ಮೇಲೆ ಆಧಾರ ಪಟ್ಟಿರುವುದಿಲ್ಲ. ಅರ್ಜುನನು 'ದೈವೀ ಸಂಪದ'ದಲ್ಲಿ ಜನ್ಮಿಸಿದವನೆಂದು ಭಗವಂತನು ಹೇಳುವುದರಿಂದ ಆಧ್ಯಾತ್ಮ ವಿಜ್ಞಾನ ಶ್ರವಣಕ್ಕೆ ಆತನು ಅರ್ಹನೆಂದು, ಸದ್ಗುಣಶೀಲನೆಂದು ಸ್ಪಷ್ಟವಾಗುತ್ತದೆ. ಅಂತಹ ಸಚ್ಛೀಲಯುತನಾಗಿರುವುದರಿಂದ ಸಾಕ್ಷಾತ್ ಭಗವಂತನ ಮುಖಾರವಿಂದದಿಂದ ಬೋಧಾಮೃತವನ್ನು ಕೇಳುವ ಭಾಗ್ಯವನ್ನು ಹೊಂದಿದನು.

'ಮಾ ಶುಚಃ'-ಎನ್ನುವ ಈ ವಾಕ್ಯ ಗೀತೆಯ ಸಂದೇಶ. ಅದು ಗೀತೆಯ ಆದೇಶವೂ ಹೌದು. 'ದುಃಖಿಸಬೇಡ'- 'ಓ ಅರ್ಜುನಾ! ನೀನು ದೈವ ಸಂಪದದಲ್ಲಿ ಜನ್ಮಿಸಿದ್ದೀಯಾದ್ದರಿಂದ ಇನ್ನು ದುಃಖಿಸುವ ಅಗತ್ಯವಿಲ್ಲ' ಎಂದು ಶ್ರೀಕೃಷ್ಣ ಭಗವಂತನು ಹೇಳಿರುವುದನ್ನು ನೋಡಿದರೆ ದುಃಖ ರಾಹಿತ್ಯಕ್ಕೆ ದೈವ ಸಂಪದ, ಸಚ್ಛೀಲತೆ, ಹೃದಯ ನೈರ್ಮಲ್ಯಗಳು ಕಾರಣಗಳೆಂದು ಅರ್ಥವಾಗುತ್ತದೆ. ಇಷ್ಟೇ ಅಲ್ಲದೆ, ಅಸುರ ಸಂಪದ ದುಃಖಕ್ಕೆ ಕಾರಣವೆಂದೂ ಅದನ್ನು ಹೊಂದಿರುವವರು ನಿರಂತರ ಶೋಕಿಸಬೇಕಾಗುವುದೆಂದು ಈ ವಾಕ್ಯದಲ್ಲಿ ಧ್ವನಿಗೊಂಡಿದೆ. ಆದ್ದರಿಂದ ದುಃಖರಾಹಿತ್ಯ, ಆನಂದ ಪ್ರಾಪ್ತಿಯನ್ನು ಅಪೇಕ್ಷಿಸುವವರೆಲ್ಲಾ ಭಗವತ್ಪ್ರೋಕ್ತವಾದ ದೈವ ಸಂಪದವನ್ನು ತಪ್ಪದೆ ಸ್ವೀಕರಿಸಿ, ಅಸುರ ಸಂಪದವನ್ನು ನಿರ್ಮೂಲಗೊಳಿಸಬೇಕು.

ಇಲ್ಲಿ 'ಮೋಕ್ಷಾಯ' ಎಂದು ಹೇಳದೆ, 'ವಿಮೋಕ್ಷಾಯ' ಎಂದು ಹೇಳುವುದು, 'ಬಂಧಾಯ' ಎಂದು ಹೇಳದೆ 'ನಿಬಂಧಾಯ' ಎಂದು ಹೇಳಿರುವುದು ಗಮನಾರ್ಹ. ಅಂದರೆ ದೈವ ಸಂಪದವಿರುವವನು ಪೂರ್ತಿಯಾಗಿ ವಿಮುಕ್ತನಾಗುವನೆಂದೂ, ಅಸುರ ಸಂಪದವಿರುವವನು ಪೂರ್ಣವಾಗಿ ಬದ್ಧನಾಗುವನೆಂದೂ ಅರ್ಥ

ಪ್ರ : ದೈವ ಸಂಪದದ ಫಲವೇನು?

ಉ : ಮೋಕ್ಷ, ಬಂಧ ನಿವೃತ್ತಿ

ಪ್ರ : ಅಸುರ ಸಂಪದದ ಫಲವೇನು?

ಉ : ಬಂಧ.

ಪ್ರ : ಇದರಿಂದ ಮೋಕ್ಷಕ್ಕೆ ಮಾರ್ಗವೇನು?

ಉ : ದೈವ ಸಂಪದನೆಯನ್ನು (ಮೇಲ್ಕಂಡ ದೈವಗುಣಗಳನ್ನು) ಅಭ್ಯಸಿಸಿ ಅವುಗಳನ್ನು ಪಡೆಯುವುದೇ ಮುಕ್ತಿಗೆ ಮಾರ್ಗ.

ಪ್ರ : ಬಂಧ (ದುಃಖ) ಯಾವುದರಿಂದ ಉಂಟಾಗುತ್ತದೆ?

ಉ : ಅಸುರ ಗುಣಗಳನ್ನು ಹೊಂದಿರುವುದರಿಂದ.

ಪ್ರ : ಅರ್ಜುನನು ಎಂತಹ ಸಂಪದದಲ್ಲಿ ಜನ್ಮಿಸಿರುವನು?

ಉ : ದೈವ ಸಂಪದದಲ್ಲಿ

ಪ್ರ : ಪ್ರಪಂಚದಲ್ಲಿ ಯಾರಿಗೆ ದುಃಖಹರಣವಾಗುವುದು?

ಉ : ದೈವ ಸಂಪದ(ದೈವಗುಣ)ವಿರುವವನಿಗೆ.

**ಅ||** ಪ್ರಾಣಿಗಳನ್ನು ದೈವ, ಅಸುರ ಗುಣಗಳಿರುವವರು ಎಂದು ಎರಡು ವಿಧಗಳಾಗಿ ವಿಭಜಿಸಲಾಗಿದೆ ಎಂದು ಹೇಳಲಾಗಿದೆ-

**೬ ದ್ವೌ ಭೂತಸರ್ಗೌ ಲೋಕೇಽಸ್ಮಿನ್ ದೈವ ಆಸುರ ಏವ ಚ**
**ದೈವೋ ವಿಸ್ತರಶಃ ಪ್ರೋಕ್ತ ಆಸುರಂ ಪಾರ್ಥ ಮೇ ಶೃಣು**

**ಅರ್ಥ:** ಪಾರ್ಥ=ಓ ಅರ್ಜುನಾ! ಅಸ್ಮಿನ್ ಲೋಕೇ=ಈ ಪ್ರಪಂಚದಲ್ಲಿ; ದೈವಃ=ದೈವಸಂಬಂಧವಾದ ಗುಣಗಳನ್ನು ಹೊಂದಿರುವ; ಆಸುರಃ ಏವಚ =ಅಸುರ ಸಂಬಂಧವಾದ ಗುಣಗಳನ್ನು ಹೊಂದಿರುವ; ದ್ವೌ=ಎರಡು ವಿಧಗಳಾದ; ಭೂತಸರ್ಗೌ=ಪ್ರಾಣಿಗಳ ಸೃಷ್ಟಿಯು (ಸ್ತಃ=ಇವೆ); (ಅದರಲ್ಲಿ), ದೈವಃ=ದೈವ ಸಂಬಂಧವಾದದ್ದು; ವಿಸ್ತರಶಃ=ವಿಸ್ತಾರವಾಗಿ; ಪ್ರೋಕ್ತಃ= (ನಿನಗೆ) ಹೇಳಲ್ಪಟ್ಟಿದೆ; (ಇನ್ನು) ಆಸುರಂ=ಅಸುರ ಸಂಬಂಧವಾದದ್ದನ್ನು; ಮೇ=ನನ್ನಿಂದ; ಶೃಣು=ಕೇಳು.

**ತಾ||** ಓ ಅರ್ಜುನಾ! ಈ ಪ್ರಪಂಚದಲ್ಲಿ ದೈವ ಸಂಬಂಧವಾದ ಗುಣಗಳನ್ನು ಹೊಂದಿರುವ, ಅಸುರ ಸಂಬಂಧವಾದ ಗುಣಗಳನ್ನು ಹೊಂದಿರುವ ಎರಡು ವಿಧವಾದ ಪ್ರಾಣಿಗಳು ಸೃಷ್ಟಿಸಲ್ಪಟ್ಟಿವೆ. ಅದರಲ್ಲಿ ದೈವ ಸಂಬಂಧವಾದದ್ದನ್ನು ಕುರಿತು ನಿನಗೆ ಸವಿಸ್ತಾರವಾಗಿ ತಿಳಿಸಿದೆನು. ಇನ್ನು ಅಸುರ ಸಂಬಂಧವಾದದ್ದನ್ನು ಕುರಿತು ನನ್ನಿಂದ ಕೇಳು.

**ವ್ಯಾಖ್ಯೆ:** ವಾಸ್ತವವಾಗಿ ಪ್ರಪಂಚದಲ್ಲಿರುವುದು ಎರಡೇ ಜಾತಿಗಳು ಎಂದು ಈ ಶ್ಲೋಕದಿಂದ ತಿಳಿಯುತ್ತದೆ. (೧) ದೈವ ಜಾತಿ (೨) ಅಸುರ ಜಾತಿ ಎಂದು. ಅಂದರೆ ಒಂದು ಆರ್ಯ ಜಾತಿ ಮತ್ತೊಂದು ಅನಾರ್ಯಜಾತಿ. ಬೇರೆಯ ಎಲ್ಲಾ ಜಾತಿಗಳು ನಂತರ ಏರ್ಪಟಾಗಿವೆ. ಆದ್ದರಿಂದ ಪ್ರತಿಯೊಬ್ಬರೂ, ತಾವು ಯಾವ ಜಾತಿಗೆ ಸೇರಿದವರೆನ್ನುವುದನ್ನು ಚೆನ್ನಾಗಿ ಪರೀಕ್ಷಿಸಿಕೊಂಡು ತಮ್ಮಲ್ಲಿ ಒಂದು ಪಕ್ಷ ಅಸುರ ಗುಣಗಳಿದ್ದಲ್ಲಿ ಅವುಗಳಿಗೆ ತಿಲಾಂಜಲಿ ಅರ್ಪಿಸಿ, ದೈವಗುಣಗಳನ್ನು ಅಭಿವೃದ್ಧಿಪಡಿಸಿಕೊಂಡು 'ದೈವ ಜಾತಿ'ಯಲ್ಲಿ ಸೇರಿ, ಪರಮಶ್ರೇಯ (ಮೋಕ್ಷ)ವನ್ನು ಹೊಂದಬೇಕು.

**ಅ||** ಇನ್ನು ಅಸುರ ಸ್ವಭಾವವುಳ್ಳವರನ್ನು ಕುರಿತು ೧೨ ಶ್ಲೋಕಗಳ ಮೂಲಕ ವಿವರವಾಗಿ ಬೋಧಿಸುತ್ತಿದ್ದಾನೆ-

**೭. ಪ್ರವೃತ್ತಿಂ ಚ ನಿವೃತ್ತಿಂ ಚ ಜನಾ ನ ವಿದುರಾಸುರಾಃ**
**ನ ಶೌಚಂ ನಾಪಿ ಚಾಚಾರೋ ನ ಸತ್ಯಂ ತೇಷು ವಿದ್ಯತೇ**

**ಅರ್ಥ:** ಅಸುರಾಃ=ಅಸುರ ಸ್ವಭಾವವುಳ್ಳ; ಜನಾಃ=ಜನರು; ಪ್ರವೃತ್ತಿಂ ಚ=ಧರ್ಮ ಪ್ರವೃತ್ತಿಯನ್ನಾಗಲಿ; ನಿವೃತ್ತಿಂ ಚ=ಅಧರ್ಮ ನಿವೃತ್ತಿಯನ್ನಾಗಲಿ; ನ ವಿದುಃ=ತಿಳಿಯದವರಾಗಿದ್ದಾರೆ; ತೇಷುಃ=ಅವರಲ್ಲಿ; ಶೌಚಂ=ಶುಚಿತ್ವ; ನ ವಿದ್ಯತೇ=ಇರುವುದಿಲ್ಲ ಆಚಾರಃ ಚ=ಆಚಾರವು (ಸತ್ಕರ್ಮಾನುಷ್ಠಾನ); ನ=ಇರುವುದಿಲ್ಲ; ಸತ್ಯಂ ಅಪಿ=ಸತ್ಯವು; ನ=ಇರುವುದಿಲ್ಲ.

**ತಾ||** ಅಸುರ ಸ್ವಭಾವವುಳ್ಳ ಜನರು ಧರ್ಮ ಪ್ರವೃತ್ತಿಯನ್ನಾಗಲಿ, ಅಧರ್ಮ ನಿವೃತ್ತಿಯನ್ನಾಗಲಿ ತಿಳಿದಿರುವುದಿಲ್ಲ. ಅವರಲ್ಲಿ ಶುಚಿತ್ವವಾಗಲಿ, ಆಚಾರವಾಗಲಿ (ಸತ್ಕರ್ಮಾನುಷ್ಠಾನ), ಸತ್ಯವಾಗಲೀ ಇರುವುದಿಲ್ಲ.

**ವ್ಯಾಖ್ಯೆ:** ಅಸುರಸ್ವಭಾವಯುತರು ಧರ್ಮಕಾರ್ಯಗಳನ್ನು ಮಾಡುವುದಾಗಲಿ, ಅಧರ್ಮ ಕಾರ್ಯಗಳಿಂದ ವಿಮುಖವಾಗುವುದನ್ನಾಗಲಿ ತಿಳಿದಿರುವುದಿಲ್ಲ. ಒಬ್ಬರು ಹೇಳಿದರೂ ಕೇಳುವುದಿಲ್ಲ. ಇವರು ಅಧಮರು. ತಮ್ಮ ತಪ್ಪನ್ನು ಕುರಿತು ಬೇರೊಬ್ಬರು ಹೇಳಿದಾಗ ಅದನ್ನು ಸರಿಪಡಿಸಿಕೊಳ್ಳುವರು ಮಧ್ಯಮರು.

ತಪ್ಪನ್ನೇ ಮಾಡದವರು ಉತ್ತಮರು. ಈ ಶ್ಲೋಕದಲ್ಲಿ ಅಧಮರನ್ನು ಕುರಿತೇ ಹೇಳಲಾಗಿದೆ. ಮತ್ತೆ ಪ್ರವೃತ್ತಿ, ನಿವೃತ್ತಿಗಳೆರಡನ್ನೂ ಹೇಳಲಾಗಿದೆ. ಇಲ್ಲಿ 'ಪ್ರವೃತ್ತಿ' ಎಂದರೆ ಮಾಡಬೇಕಾದುದು ಎಂದು, ನಿವೃತ್ತಿಯೆಂದರೆ ಬಿಡಬೇಕಾದದ್ದು ಎಂದು ಅರ್ಥ. ಎರಡನ್ನೂ ವಿಜ್ಞು ತಿಳಿದಿರಬೇಕು. ಅಂದರೆ ದೈವ ಸಂಬಂಧ ಕಾರ್ಯಗಳು, ದೈವ ಗುಣಗಳು, ಮುಂತಾದ ಗ್ರಾಹ್ಯವಸ್ತುಗಳನ್ನು ಕುರಿತು; ಹಾಗು ವಿಷಯ ಸೇವನೆ, ಅಧರ್ಮ ಕಾರ್ಯಗಳು, ಅಸುರಗುಣಗಳು ಮುಂತಾದ ತ್ಯಾಜ್ಯ ವಸ್ತುಗಳನ್ನು ಕುರಿತು ಕೂಡ ತಿಳಿದಿರಬೇಕು. ಅಸುರ ಸ್ವಬಾವಿಗಳು ಅವುಗಳನ್ನು ತಿಳಿದಿರುವುದಿಲ್ಲ ಎಂದು ಇಲ್ಲಿ ಹೇಳಲಾಗಿದೆ.

ಪ್ರ : ಅಸುರ ಸ್ವಭಾವಿಗಳ ಕೆಲವು ಲಕ್ಷಣಗಳನ್ನು ಹೇಳುವುದು?

ಉ : ಅವರು ೧) ಧರ್ಮಪ್ರವೃತ್ತಿಯನ್ನಾಗಲಿ, ಪಾಪನಿವೃತ್ತಿಯನ್ನಾಗಲೀ ತಿಳಿಯದವರಾಗಿದ್ದಾರೆ. ೨) ಶುಚಿತ್ವ, ಆಚಾರ, ಸತ್ಯ ಅವರಲ್ಲಿರುವುದಿಲ್ಲ.

**೮. ಅಸತ್ಯಮಪ್ರತಿಷ್ಠಂ ತೇ ಜಗದಾಹುರನೀಶ್ವರಂ**
**ಅಪರಸ್ಪರಸಂಭೂತಂ ಕಿಮನ್ಯತ್ಕಾಮಹೈತುಕಮ್**

**ಅರ್ಥ:** ತೇ=ಅವರು; ಜಗತ್=ಜಗತ್ತು; ಅಸತ್ಯಂ=ಅಸತ್ಯವೆಂದು (ವೇದಾದಿ ಪ್ರಮಾಣ ರಹಿತವೆಂದು) ಅಪ್ರತಿಷ್ಠಂ= ಪ್ರತಿಷ್ಠ (ಧರ್ಮಾಧರ್ಮ ವ್ಯವಸ್ಥೆಗಳು ಇಲ್ಲವೆಂದು); ಅನೀಶ್ವರಂ=ಕರ್ತನಾದ ಈಶ್ವರನು ಇಲ್ಲವೆಂದು; ಕಾಮಹೈತುಕಂ=ಕಾಮವೇ ಕಾರಣವಾಗಿದ್ದು; ಅಪರಸ್ಪರ ಸಂಭೂತಂ=ಸ್ತ್ರೀ ಪುರುಷರ ಪರಸ್ಪರ ಸಂಬಂಧದಿಂದ ಉಂಟಾಗಿದೆಯಾದ್ದರಿಂದ; ಅನ್ಯತ್= ಮತ್ತೊಂದು; ಕಿಂ=ಯಾವುದು (ಇಲ್ಲವೆಂದು); ಆಹುಃ=ಹೇಳುವರು.

**ತಾ||** ಅವರು ಜಗತ್ತು ಅಸತ್ಯವೆಂದೂ (ವೇದಾದಿ ಪ್ರಮಾಣ ರಹಿತವೆಂದು), ಧರ್ಮಾಧರ್ಮ ವ್ಯವಸ್ಥೆಗಳು ಇಲ್ಲವೆಂದೂ, (ಕರ್ತನಾದ) ಈಶ್ವರನು ಇಲ್ಲದೆ, ಕಾಮವೇ ಹೇತುವಾಗಿ ಸ್ತ್ರೀಪುರುಷರ ಪರಸ್ಪರ ಸಂಬಂಧದಿಂದಲೇ ಉಂಟಾಗಿದೆಯೆಂದು, ಅದಲ್ಲದೆ ಈ ಜಗತ್ತಿಗೆ ಬೇರೆ ಕಾರಣವು ಏನೂ ಇಲ್ಲವೆಂದು ಹೇಳುವರು.

**ವ್ಯಾಖ್ಯೆ:** ಅಸುರ ತತ್ತ್ವವುಳ್ಳವರು ಈ ಜಗತ್ತು ವೇದ ಪ್ರಮಾಣ ಸಹಿತವಾಗಿ ಧರ್ಮಾಧರ್ಮ ವ್ಯವಸ್ಥೆಗಳಿಂದ ಕೂಡಿ ಭಗವಂತನಿಂದ ಸೃಷ್ಟಿಸಲ್ಪಟ್ಟಂತೆ ಅಂಗೀಕರಿಸದೆ, ಜಗತ್ತು ತನ್ನಷ್ಟಕ್ಕೆ ತಾನೇ ನಡೆಯುತ್ತಿದೆಯೆಂದೂ, ಸ್ತ್ರೀ ಪುರುಷ ಸಂಯೋಗವೇ ಜಗತ್ತಿಗೆ ಕಾರಣವೆಂದು ಹೇಳುವರು. ಅವರದು ಸ್ಥೂಲದೃಷ್ಟಿಯೇ ಆದುದರಿಂದ ಅವರಿಗೆ ಅಷ್ಟು ಮಾತ್ರವೇ ಅರ್ಥವಾಗಿದೆ. ಕಣ್ಣಿಗೆ ಪೊರೆ ಕವಿಯಲ್ಪಟ್ಟಿರುವವನು ಎದುರಿಗಿರುವ ವಸ್ತುಗಳನ್ನು ಸರಿಯಾಗಿ ನೋಡಲಾಗದಂತೆ, ಅಜ್ಞಾನದಿಂದ ಮುಚ್ಚಿ ಹೋದ ಜೀವಿಯು ಸತ್ಯ ಸ್ಥಿತಿಯನ್ನು ನೋಡಲಾರನು.

ಪ್ರ : ಅಸುರ ಸ್ವಭಾವಿಗಳ ಲಕ್ಷಣಗಳನ್ನು ಮುಂದುವರಿಸುವುದು?

ಉ : ಅವರು ೧) ಈ ಜಗತ್ತು ವೇದಾದಿ ಪ್ರಮಾಣ ರಹಿತವಾದುದೆಂದು, ಧರ್ಮಾಧರ್ಮವ್ಯವಸ್ಥೆಗಳಿಲ್ಲದ್ದೆಂದು, ಕರ್ತನಾದ ಈಶ್ವರನು ಇಲ್ಲವೇ ಇಲ್ಲವೆಂದು ಹೇಳುವರು. ೨) ಕೇವಲ ಕಾಮವೇ ಹೇತುವಾಗಿದ್ದು, ಸ್ತ್ರೀ ಪುರುಷರ ಅನ್ಯೋನ್ಯ ಸಂಬಂಧದಿಂದ ಈ ಜಗತ್ತು ಏರ್ಪಟ್ಟಿದೆಯೇ ಹೊರತು ಬೇರೆ ವಿಧದಲ್ಲಿ ಅಲ್ಲವೆಂದು ಅವರು ಹೇಳುವರು.

**೯ ಏತಾಂ ದೃಷ್ಟಿಮವಷ್ಟಭ್ಯ ನಷ್ಟಾತ್ಮಾನೋಽಲ್ಪಬುದ್ಧಯಃ**
**ಪ್ರಭವಂತ್ಯುಗ್ರಕರ್ಮಾಣಃ ಕ್ಷಯಾಯ ಜಗತೋಽಹಿತಾಃ**

**ಅರ್ಥ:** (ತೇ=ಆ ಅಸುರ ಸಂಪದವುಳ್ಳವರು); ಏತಾಂ ದೃಷ್ಟಿಂ=ಈ (ನಾಸ್ತಿಕ) ದೃಷ್ಟಿಯನ್ನು; ಅವಷ್ಟಭ್ಯ=ಅವಲಂಬಿಸಿ, ನಷ್ಟಾತ್ಮಾನಃ= ದುಷ್ಟಮನಸ್ಸುಳ್ಳವರು, ಅಲ್ಪಬುದ್ಧಿಯುಳ್ಳವರು; ಉಗ್ರ ಕರ್ಮಾಣಃ=ಕ್ರೂರಕಾರ್ಯಗಳನ್ನು (ಪರರನ್ನು ಹಿಂಸಿಸುವ ಕಾರ್ಯಗಳನ್ನು) ಮಾಡುವವರು; ಅಹಿತಾಃ=(ಲೋಕಕ್ಕೆ) ಶತ್ರುಗಳು (ಆಗಿ); ಜಗತಃ=ಪ್ರಪಂಚದ; ಕ್ಷಯಾಯ=ನಾಶಕ್ಕಾಗಿ; ಪ್ರಭವಂತಿ= ಹುಟ್ಟುತ್ತಿದ್ದಾರೆ.

**ತಾ||** (ಅವರು) ಇಂತಹ ನಾಸ್ತಿಕ ದೃಷ್ಟಿಯನ್ನು ಅವಲಂಬಿಸಿ, ದುಷ್ಟ ಮನಸ್ಸುಳ್ಳವರು, ಅಲ್ಪಬುದ್ಧಿಯುಳ್ಳವರು, ಕ್ರೂರಕಾರ್ಯವನ್ನು ಮಾಡುವವರು, (ಜಗತ್ತಿಗೆ) ಶತ್ರುಗಳು (ಲೋಕ ಕಂಟಕರು) ಆಗಿ ಪ್ರಪಂಚದ ವಿನಾಶಕ್ಕಾಗಿ ಹುಟ್ಟುತ್ತಿದ್ದಾರೆ.

**ವ್ಯಾಖ್ಯೆ:** *'ನಷ್ಟಾತ್ಮಾನಃ'*- ಎನ್ನುವ ಈ ಪದದಿಂದ ನಾಸ್ತಿಕ ದೃಷ್ಟಿ, ಕಾಮ ಸ್ವಭಾವವುಳ್ಳವರ ಮನಸ್ಸು ತಪ್ಪದೆ ಕೆಟ್ಟು ಹೋಗುವುದೆಂದು ಸ್ಪಷ್ಟವಾಗುತ್ತದೆ. ಮತ್ತೆ ಅಂತಹವರ ಬುದ್ಧಿ ಅಲ್ಪವಾಗಿಯೇ ಇರುವುದಾಗಲೀ, ವಿಶಾಲವಾಗಿ ಇರುವುದಿಲ್ಲವೆಂದು ತಿಳಿಯುತ್ತದೆ. ಅವರದು ಹ್ರಸ್ವದೃಷ್ಟಿ. ವಿಶಾಲದೃಕ್ಪಥ, ವಿಶಾಲದೃಷ್ಟಿ ಅವರಿಗೆ ಇರುವುದಿಲ್ಲ. ಈ ವಿಧವಾಗಿ ನಾಸ್ತಿಕತೆ, ಕಾಮದೃಷ್ಟಿ, ಚಿತ್ತವಿನಾಶಕಾರಿಗಳಾಗಿರುವುದರಿಂದ, ಅವು ತ್ಯಾಜ್ಯಗಳೆಂದು ಮೇಲಿನ ಭಗವದ್ವಾಕ್ಯಗಳಿಂದ ಋಜುವಾಗುತ್ತಿದೆ. ಮತ್ತೆ ನಾಸ್ತಿಕರು, ಕಾಮವೇ ಸರ್ವಸ್ವವೆಂದು, ಸೃಷ್ಟಿಗೆ ಮೂಲವೆಂದು ತಿಳಿಯುವ ಅವಿವೇಕಿಗಳು ತಾವು ಏನೋ ಬುದ್ಧಿವಂತರೆಂದು ಅಂದು ಕೊಂಡಿದ್ದರೂ ಭಗವದ್ದೃಷ್ಟಿಯಲ್ಲಿ ಅವರು 'ಅಲ್ಪ ಬುದ್ಧಿಗಳೇ', ಎಂದು ತಿಳಿಯುತ್ತದೆ.

*'ಕ್ಷಯಾಯ ಜಗತಃ'*- ಜಗತ್ತಿನ ನಾಶಕ್ಕಾಗಿ ಅವರು ಹುಟ್ಟಿರುವವರಾಗಲೀ ಅದರ ಉದ್ಧಾರಕ್ಕಾಗಿ ಅಲ್ಲ. ಪರಪ್ರಾಣಿಗಳನ್ನು ಹಿಂಸಿಸುವುದೇ ಅವರ ಕೆಲಸವಾಗಲೀ ಅವರಿಗೆ ಉಪಕಾರ ಮಾಡುವುದಲ್ಲ. ಅವರು ಲೋಕಕಂಟಕರೇ ಆಗಲಿ ಲೋಕ ಹಿತರಲ್ಲ. ಅವರು 'ಬದ್ಧರೇ' ಹೊರತು ಲೋಕ ಬಂಧುಗಳಲ್ಲ. ಅಷ್ಟೇಕೆ ಅಂತಹವರು ಭೂಮಿಗೆ ಭಾರವೇ.

ಪ್ರ : ಅಸುರ ಸ್ವಭಾವಿಗಳ ಲಕ್ಷಣಗಳನ್ನು ಮುಂದುವರಿಸು?

ಉ : ೧) ಅವರು (ಇಂತಹ) ನಾಸ್ತಿಕ ದೃಷ್ಟಿಯನ್ನು ಅವಲಂಬಿಸಿ ಮನಸ್ಸನ್ನು ಕೆಡಿಸಿಕೊಳ್ಳುವರು ೨) ಅಲ್ಪಬುದ್ಧಿ ಹೊಂದಿರುವರು. ೩) ಕ್ರೂರಕರ್ಮಗಳನ್ನು ಮಾಡುವರು ೪) ಲೋಕ ಕಂಟಕರಾಗಿರುವರು. ೫) ಜಗತ್ತಿನ ಕ್ಷಯಕ್ಕಾಗಿಯೇ ಜನಿಸ್ಸಿರುವರು.

**೧೦. ಕಾಮಮಾಶ್ರಿತ್ಯ ದುಷ್ಪೂರಂ ದಂಭಮಾನಮದಾನ್ವಿತಾಃ**
**ಮೋಹಾದ್ಗೃಹೀತ್ವಾಽಸದ್ಗ್ರಾಹಾನ್ ಪ್ರವರ್ತಂತೇಽಶುಚಿವ್ರತಾಃ**

**ಅರ್ಥ:** ದಷ್ಪೂರಂ=ತುಂಬಲಾರದಂತಹ (ತೃಪ್ತಿಯಾಗದಂತಹ) ಕಾಮಂ= ಕಾಮವನ್ನು; ಆಶ್ರಿತ್ಯ=ಆಶ್ರಯಿಸಿ; ದಂಭಮಾನಮದಾನ್ವಿತಾಃ=ದಂಭ, ಅಭಿಮಾನ, ಮದ-ಇವುಗಳಿಂದ ಕೂಡಿದವರಾಗಿ; ಮೋಹಾತ್= ಅವಿವೇಕದಿಂದ; ಅಸದ್ಗ್ರಾಹಾನ್=ಸತ್ಪುರುಷರು ಆಗದೆ ಇರುವದರಿಂದ ಗ್ರಹಿಸಲು ಸಾಧ್ಯವಾಗದ ವಿಷಯಗಳನ್ನು (ಇಲ್ಲವೆ ಕೆಟ್ಟ ನಿರ್ಣಯಗಳನ್ನು);

ಗೃಹೀತ್ವಾ=ಅವಲಂಬಿಸಿ; ಅಶುಚಿವ್ರತಾಃ=ಅಪವಿತ್ರ ವ್ರತಗಳನ್ನು (ನೀಚ ವೃತ್ತಿಗಳನ್ನು) ಹೊಂದಿದವರಾಗಿ; ಪ್ರವರ್ತಂತೇ= ಪ್ರವರ್ತಿಸುತ್ತಿದ್ದಾರೆ.

**ತಾ||** ಅವರು ತೃಪ್ತಿಯಾಗದಂತಹ ಕಾಮವನ್ನಾಶ್ರಯಿಸಿ, ದಂಭ, ಅಭಿಮಾನ, ಮದವುಳ್ಳವರಾಗಿ, ಅವಿವೇಕದಿಂದ ಕೆಟ್ಟ ನಿರ್ಣಯಗಳನ್ನು ಆಶ್ರಯಿಸಿ, ಅಪವಿತ್ರಗಳಾದ ವ್ರತಗಳನ್ನು (ನೀಚವೃತ್ತಿಗಳನ್ನು) ಆಚರಿಸುತ್ತಿದ್ದಾರೆ.

**ವ್ಯಾಖ್ಯೆ:** *'ದುಷ್ಪೂರಂ'*- ಎಷ್ಟು ಅನುಭವಿಸಿದರೂ ತೃಪ್ತಿ ಹೊಂದದೆ ಇರುವುದಾದ್ದರಿಂದ ಕಾಮವನ್ನು ದುಷ್ಪೂರವೆಂದು ಹೇಳಲಾಗಿದೆ. ಅಂದರೆ ತುಂಬಿಸಲು ಸಾಧ್ಯವಿಲ್ಲದ್ದು. 'ದೂಷ್ಪೂರೇಣಾ ನಲೇನ ಚ' ಎಂದು ಈಗಾಗಲೇ ೩ನೆಯ ಅಧ್ಯಾಯದಲ್ಲಿ ಇದರ ಪ್ರಸ್ತಾಪ ಬಂದಿದೆ. ಇಂತಹ ದುಷ್ಪೂರವಾದ ಕಾಮವನ್ನು ಆಶ್ರಯಿಸಿರುವುದರಿಂದ ಅವರು ಅಸಫಲ ಮನೋರಥಿಗಳಾಗಿ, ತತ್ಫಲಿತವಾಗಿ ಅಶಾಂತಿಗೆ ಒಳಗಾಗಿಯೇ ಇರುವರು.

*'ದಂಭಮಾನಮದಾನ್ವಿತಾಃ'*- ದಂಭ, ಅಭಿಮಾನ, ಮದಗಳಲ್ಲಿ ಯಾವುದೇ ಒಂದು ಇದ್ದರೂ ಜೀವಿಗೆ ವಿನಾಶವೇ ನಿಶ್ಚಯವಾಗಿರಲು ಇನ್ನು ಮೂರೂ ಇದ್ದರೇ ಅದರ ವಿಷಯ ಬೇರೆ ಹೇಳಬೇಕೆ? ಅವರೇಕೆ ಈ ಪ್ರಕಾರವಾಗಿ ದುಷ್ಟಾಚರಣಶೀಲರಾಗಿರುವರು? 'ಮೋಹಾತ್'- ಅವಿವೇಕ ದಿಂದ, ಅಜ್ಞಾನವೆನ್ನುವ 'ಮತ್ತಿ'ನಲ್ಲಿ ಅವರು ಮಾಡಬಾರದ ಕೆಲಸಗಳನ್ನು ಮಾಡುವರೆಂದೂ, ಗ್ರಹಿಸಬಾರದ ವಿಷಯಗಳನ್ನು ಗ್ರಹಿಸುವರು ಎಂದು ಭಾವ.

*'ಅಶುಚಿವ್ರತಾಃ'*- ಅವರು ನಿಂದ್ಯರಾಗಿ, ಅಪವಿತ್ರವಾದ ಮದ್ಯಸೇವನೆ, ಮಾಂಸ ಭಕ್ಷ್ಯಾದಿ ವ್ರತಗಳನ್ನು ಹೊಂದಿರುವರು. ವ್ರತಗಳನ್ನು ಮಾಡಲೇಬೇಕೆಂಬ ನಿರ್ಣಯಗಳು ಒಳ್ಳೆಯವೇ ಆದರೂ, ಅವು ಪವಿತ್ರ ಕಾರ್ಯಗಳಿಗೆ ಸಂಬಂಧಿಸಿದವುಗಳಾಗಿದ್ದರೆ ಸತ್ಫಲಗಳನ್ನು ಕೊಡುವುವು. ಅಪವಿತ್ರವ್ರತಗಳನ್ನು ಆಚರಿಸದೆ ಅವುಗಳ ಮಾರ್ಗಗಳನ್ನು ಮರಳಿಸಬೇಕು. ಶುಚಿವ್ರತಗಳನ್ನೇ ಆಚರಿಸಬೇಕಾಗಲಿ ಅಶುಚಿ ವ್ರತಗಳನ್ನಲ್ಲ. ಸದ್ಗ್ರಹಣವೇ ಇರಬೇಕಾಗಲಿ ಅಸದ್ಗ್ರಹಣವಲ್ಲ.

ಪ್ರ : ಕಾಮವು ಎಂತಹದು?

ಉ : ಸಂತೃಪ್ತಿಗೊಳಿಸಲು ಸಾಧ್ಯವಿಲ್ಲದ್ದು (ದುಷ್ಪೂರಂ)

ಪ್ರ : ಆಸುರೀ ಸಂಪದವುಳ್ಳವರ ಇನ್ನೂ ಬೇರೆ ಲಕ್ಷಣಗಳೇನು?

ಉ : ಅವರು ೧) ಅಂತ್ಯವಿಲ್ಲದ ಕಾಮವನ್ನು ಆಶ್ರಯಿಸುವರು ೨) ದಂಭ, ಅಭಿಮಾನ, ಮದಗಳನ್ನು ಹೊಂದಿರುವರು ೩) ಅವಿವೇಕ ೪) ನೀಚ ಪ್ರವೃತ್ತಿಗಳನ್ನು, ಅಪವಿತ್ರ ವ್ರತಗಳನ್ನು ಆಚರಿಸುವುದು.

**೧೧ ಚಿಂತಾಮಪರಿಮೇಯಾಂ ಚ ಪ್ರಲಯಾಂತಾಮುಪಾಶ್ರಿತಾಃ**
**ಕಾಮೋಪಭೋಗಪರಮಾ ಏತಾವದಿತಿ ನಿಶ್ಚಿತಾಃ**
**೧೨ ಆಶಾಪಾಶಶತೈರ್ಬದ್ಧಾಃ ಕಾಮಕ್ರೋಧಪರಾಯಣಾಃ**
**ಈಹಂತೇ ಕಾಮಭೋಗಾರ್ಥಮನ್ಯಾಯೇನಾರ್ಥಸಂಚಯಾನ್**

**ಅರ್ಥ:** ಚ=ಮತ್ತೆ; ಅಪರಿಮೇಯಾಂ=ಅಪರಿಮಿತವಾದದ್ದು; ಪ್ರಲಯಾಂತಾಂ=ಮರಣದವರೆಗೆ (ಪ್ರಳಯಕಾಲದವರೆಗೆ) ಬಿಡದೆ ಇರುವಂತಹದು; ಚಿಂತಾಂ=ವಿಷಯಚಿಂತೆ (ಕೋರಿಕೆ); ಉಪಾಶ್ರಿತಾಃ=ಆಶ್ರಯಿಸಿದವರು; ಕಾಮೋಪಭೋಗಪರಮಾಃ=ಕಾಮಗಳನ್ನು ಅನುಭವಿಸುವುದೇ ಪರಮ ಪ್ರಯೋಜನವೆಂದು ತಿಳಿದು; ಏತಾವತ್ ಇತಿ=ಕಾಮೋಪ ಭೋಗವೇ ಪರಮ ಪುರುಷಾರ್ಥ, ಅದಕ್ಕೆ ಮಿಕ್ಕಿದ್ದು ಬೇರೆಯದು ಇಲ್ಲವೆಂದು ನಿಶ್ಚಯಿಸಿ; ಆಶಾಪಾಶಶತೈರ್ಬದ್ಧಾಃ=ಅನೇಕ ಆಶೆಗಳಿಂದ ಬಂಧಿತರಾಗಿದ್ದು; ಕಾಮಕ್ರೋಧ ಪರಾಯಣಾಃ=ಕಾಮ ಕ್ರೋಧಗಳನ್ನೇ ಮುಖ್ಯವೆಂದು ಆಶ್ರಯಿಸಿದವರು (ಆಗಿ); ಕಾಮಭೋಗಾರ್ಥಂ=ಕಾಮಗಳನ್ನು ಅನುಭವಿಸಲು (ಅನ್ಯಾಯೇನ= ಅನ್ಯಾಯ ಮಾರ್ಗಗಳಿಂದ); ಅರ್ಥ ಸಂಚಯಾನ್=ಧನ ಸಂಚಯಗಳನ್ನು; ಈಹಂತೆ=ಕೋರುತ್ತಿದ್ದಾರೆ.

**ತಾ||** ಮತ್ತೆ ಅವರು ಅಪರಿಮಿತವಾದದ್ದು, ಮರಣದವರೆಗೆ (ಇಲ್ಲವೆ), ಪ್ರಳಯ ಕಾಲದವರೆಗೆ ಬಿಡಲಾರದಂತಹ ವಿಷಯ ಚಿಂತೆಯನ್ನು (ಕೋರಿಕೆಯನ್ನು) ಆಶ್ರಯಿಸಿ ಕಾಮೋಪಭೋಗವೇ ಪರಮ ಪುರುಷಾರ್ಥವೆಂದು ತಿಳಿದು, ಇದಕ್ಕೆ ಮಿಕ್ಕಿದ್ದು ಬೇರೆ ಇಲ್ಲವೆಂದು ನಿಶ್ಚಯಿಸಿದವರಾಗಿ, ಅನೇಕ ಆಶಾಪಾಶಗಳಿಂದ ಬಂಧಿಸಲ್ಪಟ್ಟವರು ಹಾಗು ಕಾಮಕ್ರೋಧಗಳನ್ನೇ ಮುಖ್ಯವಾಗಿ ಆಶ್ರಯಿಸಿದವರಾಗಿ, ಕಾಮಗಳನ್ನು ಅನುಭವಿಸಲು ಅನ್ಯಾಯ ಮಾರ್ಗಗಳಿಂದ ಧನವನ್ನು ಕೋರುತ್ತಿದ್ದಾರೆ.

**ವ್ಯಾಖ್ಯೆ:** ಅಂತಹ ಪ್ರಾಪಂಚಿಕ ಮನುಜರ ಚಿಂತೆಗಳಿಗೆ, ಕೋರಿಕೆಗಳಿಗೆ, ಮನೋರಥಗಳಿಗೆ ಅಂತ್ಯವಿರುವುದಿಲ್ಲ. ಅವರ ಆ ಚಿಂತೆಗಳನ್ನು ಸಾವು ಅಥವ ಮಹಾಪ್ರಳಯ ನಿಲ್ಲಿಸಬಹುದೇ ಹೊರತು, ಅವರು ಸ್ವಯಂ ಆಗಿ ಅದನ್ನು ನಿಲ್ಲಿಸುವುದಿಲ್ಲ ಭಕ್ತರು (ಮುಮುಕ್ಷುಗಳು) ದೈವವನ್ನೇ ಪರಮ ಪುರುಷಾರ್ಥವನ್ನಾಗಿ, ಗಮ್ಯವನ್ನಾಗಿ, ಜೀವಿತ ಲಕ್ಷ್ಯವನ್ನಾಗಿ ಹೇಗೆ ತಿಳಿಯುವರೋ ಹಾಗೆ ಈ ಅಸುರಪ್ರವೃತ್ತಿ ಉಳ್ಳವರು ಕಾಮೋಪಭೋಗವನ್ನೇ ಪರಮಾರ್ಥವೆಂದು ತಿಳಿದು ಅದಕ್ಕಿಂತ ಹೆಚ್ಚಿನದು ಈ ಪ್ರಪಂಚದಲ್ಲಿ ಮತ್ತಾವ ಸುಖಸಾಧನವಿಲ್ಲವೆಂದು ಹೇಳುವರು. ಮತ್ತೆ ಲೋಕದಲ್ಲಿ ಒಂದು ಹಗ್ಗದಿಂದ ಕಟ್ಟಲ್ಪಟ್ಟವರೇ ಎಷ್ಟೋ ನೋವನ್ನು ಅನುಭವಿಸುತ್ತಿರುವಾಗ, ನೂರಾರು ಆಶೆಗಳೆನ್ನುವ ಹಗ್ಗಗಳಿಂದ ಬಂಧಿಸಲ್ಪಟ್ಟಿರುವ **(ಆಶಾಪಾಶಶತೈರ್ಬದ್ಧಾಃ)** ಇವರ ಬಾಧೆ, ಅಶಾಂತಿ ವರ್ಣನಾತೀತವೆಂದು ಊಹಿಸಿಕೊಳ್ಳಬಹುದು. ಅಂತಹವರು ಕಾಮಕ್ರೋಧಗಳನ್ನು ಬಿಡಲಾರದೆ ಯಾವಾಗಲೂ ಅವುಗಳ ಧ್ಯಾನದಲ್ಲಿರುವರು. ಮತ್ತೆ ತಮ್ಮ ಕಾಮೋಪ ಭೋಗಕ್ಕೆ ಅನ್ಯಾಯ ಮಾರ್ಗದಿಂದ ಹಣವನ್ನು ಅಭಿಲಾಷಿಸುವರು. **'ಅರ್ಥಸಂಚಯಾನ್'** ಎಂದು ಹೇಳಿರುವುದರಿಂದ ಎಷ್ಟೋ ಅಷ್ಟು ಧನದಿಂದ ತೃಪ್ತಿ ಪಡುವವರಲ್ಲವೆಂದೂ, ಧನರಾಶಿಯನ್ನೇ ಕೋರುವರೆಂದೂ, ಹಾಗು ಅದನ್ನು ಸತ್ಕಾರ್ಯಗಳಿಗಲ್ಲದೆ, ಕೇವಲ ವಿಷಯ ಭೋಗಗಳಿಗೆ ಉಪಯೋಗಿಸುವರೆಂದು ತಿಳಿದುಕೊಳ್ಳಬೇಕಾಗಿದೆ. ಇದರಿಂದ ಇವರು ಎರಡು ಘೋರ ಪ್ರಮಾದಗಳನ್ನು ಆಚರಿಸುತ್ತಿದ್ದಾರೆಂದು ವಿದಿತವಾಗುತ್ತದೆ-

೧) ಕಾಮಾಶ್ರಯ ೨) ಅನ್ಯಾಯಾರ್ಜನೆ - ಆದ್ದರಿಂದ ಸಾಧಕರು ಮುಮುಕ್ಷುಗಳು ಇಂತಹ ಅಲ್ಪಚಾರಿತ್ರ್ಯರ ಸಾಂಗತ್ಯ ಮಾಡದೆ ಜಾಗರೂಕರಾಗಿರಬೇಕು.

ಪ್ರ : ಆಸುರೀಸಂಪದವುಳ್ಳವರು ಹೇಗೆ ಇರುವರು?

ಉ : ೧) ಅಂತ್ಯವಿಲ್ಲದ ಆಶೆ, ಚಿಂತೆ ಹೊಂದಿರುವರು.

೨) ಕಾಮೋಪಭೋಗವೇ ದೊಡ್ಡದೆಂದು ಭಾವಿಸುವರು.

೩) ಅದಕ್ಕೆ ಮೀರಿದುದು ಮತ್ತೊಂದಿಲ್ಲವೆಂದು ಭಾವಿಸುವರು.

೪) ಹೆಚ್ಚು ಆಶಾಪಾಶಗಳಿಂದ ಬಂಧಿತರಾಗಿರುವರು.

೫) ಕಾಮಕ್ರೋಧ ತತ್ಪರರಾಗಿರುವರು.

೬) ವಿಷಯ ಭೋಗಗಳನ್ನು ಅತಿಯಾಗಿ ಅನುಭವಿಸಿ ಅವುಗಳಿಗಾಗಿ ಅಧಿಕ ಧನವನ್ನು ಅಪೇಕ್ಷಿಸಿ, ಅನ್ಯಾಯಮಾರ್ಗದ ದ್ವಾರ (ಮೋಸ ಪದ್ಧತಿಗಳಿಂದ) ಅದನ್ನು ಸಂಪಾದಿಸಲು ಬಯಸುವರು.

**೧೩ ಇದಮದ್ಯ ಮಯಾ ಲಬ್ಧಮಿಮಂ ಪ್ರಾಪ್ಸ್ಯೇ ಮನೋರಥಮ್**
**ಇದಮಸ್ತೀದಮಪಿ ಮೇ ಭವಿಷ್ಯತಿ ಪುನರ್ಧನಮ್**
**೧೪ ಅಸೌ ಮಯಾ ಹತಶ್ಶತ್ರುರ್ಹನಿಷ್ಯೇ ಚಾಪರಾನಪಿ**
**ಈಶ್ವರೋಽಹಮಹಂ ಭೋಗೀ ಸಿದ್ಧೋಽಹಂ ಬಲವಾನ್ ಸುಖೀ**
**೧೫ ಆಢ್ಯೋಽಭಿಜನವಾನಸ್ಮಿ ಕೋಽನ್ಯೋಽಸ್ತಿ ಸದೃಶೋ ಮಯಾ**
**ಯಕ್ಷ್ಯೇ ದಾಸ್ಯಾಮಿ ಮೋದಿಷ್ಯ ಇತ್ಯಜ್ಞಾನವಿಮೋಹಿತಾಃ**
**೧೬ ಅನೇಕಚಿತ್ತವಿಭ್ರಾಂತಾ ಮೋಹಜಾಲಸಮಾವೃತಾಃ**
**ಪ್ರಸಕ್ತಾಃ ಕಾಮಭೋಗೇಷು ಪತಂತಿ ನರಕೇಽಶುಚೌ**

**ಅರ್ಥ:** ಇದಂ=ಇದು (ಈ ಅಭೀಷ್ಟ); ಅದ್ಯ=ಈಗ; ಮಯಾ=ನನ್ನಿಂದ; ಲಬ್ಧಂ=ಹೊಂದಲ್ಪಟ್ಟಿದೆ; ಇದಂ ಮನೋರಥಂ=ಈ ಕೋರಿಕೆಯನ್ನು; ಪ್ರಾಪ್ಸ್ಯೇ=ಹೊಂದಬಲ್ಲೆ; ಇದಂ=ಈ (ಧನ); ಅಸ್ತಿ=ಉಂಟಾಗುವುದು; ಇಮಂ ಧನಂ ಅಪಿ=ಈ ಧನವೂ ಸಹ; ಮೇ=ನನಗೆ; ಪುನಃ= ಮತ್ತೆ; ಭವಿಷ್ಯತಿ=ಒದಗಬಲ್ಲದು; ಅಸೌಶತ್ರುಃ=ಈ ಶತ್ರು; ಮಯಾ=ನನ್ನಿಂದ; ಹತಃ=ವಧಿಸಲ್ಪಟ್ಟನು; ಅಪರಾಂ ಅಪಿ ಚ=ಇತರ ಶತ್ರುಗಳನ್ನೂ ಸಹ; ಹನಿಷ್ಯೇ=ವಧಿಸಬಲ್ಲೆನು; ಅಹಂ=ನಾನು; ಈಶ್ವರಃ=ಪ್ರಭು; ಅಹಂ=ನಾನು; ಭೋಗೀ=ಸಮಸ್ತ ಭೋಗಗಳನ್ನು ಅನುಭವಿಸುವವನು; ಅಹಂ=ನಾನು; ಸಿದ್ಧಃ=ಅಂದುಕೊಂಡ ಕಾರ್ಯಗಳನ್ನು ನೆರವೇರಿಸುವ ಶಕ್ತಿಯುಳ್ಳವನು; ಬಲವಾನ್=ಬಲವಂತನು; ಸುಖೀ=ಸುಖವಂತನು; ಆಢ್ಯಃ=ಧನವಂತನು; ಅಭಿಜನವಾನ್=ಹೆಸರುವಾಸಿವಂಶದಲ್ಲಿ ಹುಟ್ಟಿದವನು; ಅಸ್ಮಿ=ಆಗಿದ್ದೇನೆ; ಮಯಾ=ನನಗೆ; ಸದೃಶಃ=ಸಮಾನನು; ಅನ್ಯಃ=ಬೇರೆಯವನು; ಕಃ=ಯಾವನು; ಅಸ್ತಿ=ಇರುವನು? ಯಕ್ಷ್ಯೇ=ಯಾಗವನ್ನು ಮಾಡುವೆನು; ದಾಸ್ಯಾಮಿ= ದಾನಗಳನ್ನು ಕೊಡುವೆನು; ಮೋದಿಷ್ಯೇ=ಆನಂದವನ್ನು ಅನುಭವಿಸುವೆನು; ಇತಿ=ಈ ಪ್ರಕಾರವಾಗಿ; ಅಜ್ಞಾನ ವಿಮೋಹಿತಾಃ=ಅಜ್ಞಾನದಿಂದ ಮೋಹವನ್ನು (ಭ್ರಮೆ) ಹೊಂದಿದವರಾಗಿ; ಅನೇಕ ಚಿತ್ತವಿಭ್ರಾಂತಾಃ= ಅನೇಕ ವಿಧವಾದ ಚಿತ್ತ ಚಾಂಚಲ್ಯಗಳಿಂದ ಕೂಡಿ; ಮೋಹಜಾಲ ಸಮಾವೃತಾಃ=ಮೋಹ (ಪತ್ನಿ ಪುತ್ರಕ್ಷೇತ್ರಾದಿಗಳಲ್ಲಿ ಅಭಿಮಾನ)ವೆಂಬ ಬಲೆಯಿಂದ ಬಲವಾಗಿ ಆವೃತ ಗೊಂಡು; ಕಾಮಭೋಗೇಷು=ಕಾಮಗಳ (ವಿಷಯಗಳ)ನ್ನು ಅನುಭವಿಸುವು ದರಲ್ಲಿ; ಪ್ರಸಕ್ತಾಃ=ಹೆಚ್ಚು ಆಸಕ್ತಿಯುಳ್ಳವರು; (ಸಂತಃ=ಆಗಿ); ಅಶುಚೌ= ಅಪವಿತ್ರವಾದ; ನರಕೇ=ನರಕದಲ್ಲಿ; ಪತಂತಿ=ಬೀಳುತ್ತಿದ್ದಾರೆ.

**ತಾ||** "ಈ ಕೋರಿಕೆ ಈಗ ಸಿದ್ಧಿಸಿತು, ಇನ್ನು ಆ ಕೋರಿಕೆಯನ್ನೂ ಸಾಧಿಸುವೆನು; ನಾನು ಇಷ್ಟು ಧನವನ್ನು ಸಂಪಾದಿಸಿದ್ದೇನೆ, ಇನ್ನೂ ಎಷ್ಟೋ ಧನವನ್ನು ಸಂಪಾದಿಸಬಲ್ಲೆ; ಈ ಶತ್ರುವನ್ನು ನಾನು ಈಗ ವಧಿಸಿದೆ, ಬೇರೆ ಶತ್ರುಗಳನ್ನು ಕೂಡ ವಧಿಸಬಲ್ಲೆ; ನಾನು ಪ್ರಭು; ಸಮಸ್ತ ಭೋಗಗಳನ್ನು ಅನುಭವಿಸುವವನು; ಅಂದುಕೊಂಡ ಕಾರ್ಯವನ್ನು ನೆರವೇರಿಸುವ ಶಕ್ತಿಯನ್ನು ಹೊಂದಿರುವೆ; ಬಲವಂತನು; ಸುಖವಂತನು; ಧನವಂತನು; ಉಚ್ಚ ವಂಶದಲ್ಲಿ ಜನ್ಮಿಸಿದವನು; ನನಗೆ ಸಮಾನವಾದವನು ಯಾರೂ ಇಲ್ಲ, ನಾನು ಯಜ್ಞಗಳನ್ನು ಮಾಡುವೆನು; ದಾನಗಳನ್ನೂ ಕೊಡುವೆನು; ಆನಂದವನ್ನು ಅನುಭವಿಸುವೆನು"- ಎಂದು ಈ ಪ್ರಕಾರವಾಗಿ ಅಜ್ಞಾನದಿಂದ ಮೋಹವನ್ನು (ಭ್ರಮೆ) ಹೊಂದಿದವರು, ಅನೇಕ ವಿಧಗಳಾದ ಚಿತ್ತ ಚಾಂಚಲ್ಯದಿಂದ ಕೂಡಿದವರು, ಮೋಹ (ಪತ್ನಿ ಪುತ್ರಕ್ಷೇತ್ರಾದಿಗಳಲ್ಲಿ ಅಭಿಮಾನ)ದಿಂದ ಚೆನ್ನಾಗಿ ಆವರಿಸಲ್ಪಟ್ಟವರಾಗಿ ಕಾಮಗಳನ್ನು ಅನುಭವಿಸುವುದರಲ್ಲಿ ವಿಶೇಷ ಆಸಕ್ತಿ ಹೊಂದಿರುವವರಾಗಿ ಅವರು (ಅಸುರ ಪ್ರಕೃತಿಯುಳ್ಳವರಾಗಿ) ಅಪವಿತ್ರವಾದ ನರಕವನ್ನು ಪಡೆಯುತ್ತಿದ್ದಾರೆ.

**ವ್ಯಾಖ್ಯೆ:** ಅಸುರ ಸಂಪದವನ್ನು ಆಶ್ರಯಿಸುವವರ ಸ್ವಭಾವವು, ಚಿತ್ತ ವೃತ್ತಿಯು ಹೇಗಿರುವುದು ಎನ್ನುವುದನ್ನು ಈ ಶ್ಲೋಕದಲ್ಲಿ ಶ್ರೀಕೃಷ್ಣಪರಮಾತ್ಮನು ವಿಶದವಾಗಿ ವರ್ಣಿಸಿರುವನು. ಅಸುರಗುಣಿಗಳು ಈ ದೃಶ್ಯ ಪ್ರಪಂಚವನ್ನು ಶಾಶ್ವತವೆಂದು ನಂಬಿ, ಈ ಕ್ಷಣಿಕ ಪದಾರ್ಥಗಳಲ್ಲಿ ದುರಾಶೆ ಹೊಂದಿದವರಾಗಿ, ಆಯಾ ವಸ್ತು ಸಂಪಾದನೆಯನ್ನು ವಿಶೇಷವೆಂದು ಭ್ರಮಿಸಿ ಗರ್ವದಿಂದ ಹೇಳುವ ವಾಕ್ಯಗಳನ್ನು ಇಲ್ಲಿ ಉದಾಹರಿಸಲಾಗಿದೆ. ಈ ವಾಕ್ಯಗಳಲ್ಲಿ ಆ ಅಸುರ ಸ್ವಭಾವಿಗಳ ಅಹಂಭಾವ, ದರ್ಪ, ಗರ್ವ, ಸ್ಫುಟವಾಗಿ ಕಾಣಿಸುತ್ತಿವೆ.

ಕೋರಿಕೆಗಳನ್ನು ಅನುಭವಿಸಿದಂತೆ ಅವು ಇನ್ನೂ ಬೆಳೆಯುವುವೇ ಹೊರತು ಸಂತೃಪ್ತಿ ಹೊಂದುವುದಿಲ್ಲ. ಆದ್ದರಿಂದ ಅವರು ಒಂದೊಂದು ಕೋರಿಕೆಯನ್ನು ಅನುಭವಿಸುತ್ತ ಇನ್ನೂ ಎಷ್ಟೋ ಕೋರಿಕೆಗಳನ್ನು ಅನುಭವಿಸ ಬೇಕೆಂಬ ಕುತೂಹಲವನ್ನು ಹೊಂದಿರುವವರೆಂದು ಹೇಳಲಾಗಿದೆ. ಮತ್ತೆ 'ನಾನು ದೊಡ್ಡವನು ನನಗೆ ಸಮಾನರಾದವರ್ಯಾರು?' ಎಂದು ಬೀಗುತ್ತಾ ಗರ್ವದಿಂದ ಹಾಗು ಚಿತ್ತವಿಕಾರಗಳಿಂದ ಅವರು ಅಶಾಂತಿಗೆ ಒಳಗಾಗಿ, ಕೊನೆಗೆ ಘೋರನರಕವನ್ನೇ ಹೊಂದುವರೆಂದು ಇಲ್ಲಿ ಹೇಳಿರುವುದರಿಂದ ಆ ದುರ್ಗುಣಗಳನ್ನು ವಿವೇಕವಂತನು ತ್ಯಜಿಸಬೇಕೆನ್ನುವುದು ಸ್ಪಷ್ಟವಾಗುತ್ತದೆ. ಈ ಶ್ಲೋಕದಲ್ಲಿ ಅವರು ಅನುಸರಿಸುವ ದೋಷಗಳನ್ನು ಹಾಗು ಆ ದೋಷಗಳ ದುಷ್ಪರಿಣಾಮಗಳೆರಡನ್ನೂ ಹೇಳಲಾಗಿದೆ. ನರಕ ಪ್ರಾಪ್ತಿಯೇ ಆ ದುಷ್ಫಲಿತ. ಅಜ್ಞಾನಿಯು ಈ ಪ್ರಪಂಚದಲ್ಲಿ ಏನೋ ಸುಖವನ್ನು ಅನುಭವಿಸುತ್ತಿರುವಂತೆ ಮೇಲೆ ಮೇಲೆ ಕಾಣಿಸಿದರೂ, ಒಳಗೆ ಅನೇಕ ಮನೋ ವ್ಯಥೆಗಳನ್ನು, ಚಿತ್ತ ಚಾಂಚಲ್ಯವನ್ನು, ಅನುಭವಿಸುತ್ತ ಕೊನೆಗೆ ಅಪವಿತ್ರವಾದ ನರಕವನ್ನೇ ಹೊಂದುವರು. ಅವರು ಅನುಭವಿಸುವ ವಿಷಯ ಸುಖಗಳು ರಾಜಸ ಸುಖಗಳೇ ಆಗಲಿ ಸಾತ್ವಿಕ ಸುಖಗಳಲ್ಲ. ರಾಜಸಿಕ ಸುಖಗಳು ಕೊನೆಗೆ ದುಃಖದಲ್ಲಿ ಪರ್ಯಾವಸನಗೊಳ್ಳುವವು. 'ಯಜ್ಞಗಳನ್ನು ಮಾಡುವೆನು, ದಾನಗಳನ್ನು ಕೊಡುವೆನು' ಎಂದು ಅವರು ಹೇಳುವುದು ಡಂಭದಿಂದಲೇ ಆಗಲಿ ವಾಸ್ತವವಾಗಿಲ್ಲ. ಒಂದು ವೇಳೆ ಅವರು ಆ ಯಜ್ಞಾದಿಗಳನ್ನು ಮಾಡಿದರೂ ಪರರ ಹೊಗಳಿಕೆಯನ್ನು ಸಂಪಾದಿಸಲೇ ಹೊರತು ಸದುದ್ದೇಶದಿಂದಲ್ಲ. ಅವರು ಮಾಡುವ ಯಜ್ಞಾದಿಗಳು ಹೆಸರಿಗೆ ಮಾತ್ರವೇ ಎಂದು ೧೭ನೆಯ ಶ್ಲೋಕದಲ್ಲಿ ಭಗವಂತನು ಹೇಳುವನು (ನಾಮಯಜ್ಞೈಸ್ತೇ). ಇಲ್ಲಿ 'ಸಕ್ತಾಃ' ಎಂದು ಹೇಳದೆ 'ಪ್ರಸಕ್ತಾಃ' ಎಂದು ಹೇಳಿರುವುದರಿಂದ, ಅವರು ವಿಷಯ ಭೋಗಗಳಲ್ಲಿ ಸಂಪೂರ್ಣ ಆಸಕ್ತಿ ಹೊಂದಿರುತ್ತಾರೆ ಎಂದು ತಿಳಿಯುತ್ತದೆ. ಮತ್ತೆ 'ಪತಂತಿ' ಎಂದು ಹೇಳಿರುವುದರಿಂದ ಅವರು ಪತನವನ್ನು ಹೊಂದುವರೇ ಹೊರತು ಅಭಿವೃದ್ಧಿಯನ್ನಲ್ಲ ಎಂದು ಅರ್ಥವಾಗುತ್ತದೆ. ಈ ಶ್ಲೋಕದಿಂದ ಪ್ರಪಂಚದಲ್ಲಿ ಜನರು ಎಷ್ಟು ಬಲ, ಎಷ್ಟು ಧನ, ಕೀರ್ತಿ, ಐಶ್ವರ್ಯಗಳನ್ನು ಹೊಂದಿದ್ದರೂ ಚಿತ್ತ ಶುದ್ಧಿಯಿಲ್ಲದಿದ್ದಲ್ಲಿ ಅಹಂಕಾರ, ಗರ್ವಗಳು ತೊಲಗದೆ ಉಳಿದಿದ್ದರೆ ಕೊನೆಗೆ ಪತನವನ್ನೇ ಹೊಂದುವರೆಂದು ವಿದಿತವಾಗುತ್ತದೆ.

ಪ್ರ : ಅಸುರ ಸಂಪದಿಯವರು ಇನ್ನೂ ಹೇಗೆ ಪ್ರವರ್ತಿಸುವರು?

ಉ : ಅವರು "ಈ ಕೋರಿಕೆ ಈಗ ನೆರವೇರಿದೆ. ಆ ಕೋರಿಕೆ ಇಷ್ಟರಲ್ಲೇ ನೆರವೇರುವುದು; ಈ ಧನ ಈಗ ಇದೆ. ಆ ಧನವು ಇಷ್ಟರಲ್ಲೇ ಬರುವುದು; ನಾನು ಈ ಶತ್ರುವನ್ನು ವಧಿಸಿದೆ. ಉಳಿದ ಶತ್ರುಗಳನ್ನೂ ಕೂಡ ವಧಿಸುವೆನು. ನಾನು ಪ್ರಭು, ನಾನು ಭೋಗಿ. ನಾನು ಕಾರ್ಯಸಿದ್ಧಿ ಹೊಂದಿರುವವನು, ಬಲವಂತನು; ನಾನು ಸುಖವಂತನು; ಧನವಂತನು; ನಾನು ಉಚ್ಚ ವಂಶದಲ್ಲಿ ಜನಿಸಿದವನು; ನನಗೆ ಯಾರು ಸಮಾನರು? ನಾನು ಯಾಗಗಳನ್ನು ಮಾಡುವೆ; ದಾನಗಳನ್ನು ಮಾಡುವೆ, ಆನಂದವನ್ನನುಭವಿಸುವೆ" ಎಂದು ಗರ್ವದಿಂದ ಜಂಭ ಕೊಚ್ಚಿಕೊಳ್ಳುವರು. ಅವರು ಅನೇಕ ಚಿತ್ತ ವಿಕಾರಗಳನ್ನು ಭ್ರಾಂತಿಯನ್ನು ಹೊಂದಿರುವವರು. ಮತ್ತೆ ಮೋಹ, (ಅಜ್ಞಾನಾಭಿಮಾನ)ದಿಂದ ಕವಿಯಲ್ಪಟ್ಟಿರುತ್ತಾರೆ.

ಪ್ರ : ಇಂತಹ ಲಕ್ಷಣವಿರುವವರಿಗೆ ಯಾವ ಗತಿ ಲಭಿಸುವುದು?

ಉ : ಅವರು ಅಪವಿತ್ರವಾದ ನರಕದಲ್ಲಿ ಬೀಳುವರು.

**೧೭. ಆತ್ಮಸಂಭಾವಿತಾಃ ಸ್ತಬ್ಧಾ ಧನಮಾನಮದಾನ್ವಿತಾಃ**
**ಯಜಂತೇ ನಾಮಯಜ್ಞೈಸ್ತೇ ದಂಭೇನಾವಿಧಿಪೂರ್ವಕಮ್**
**೧೮. ಅಹಂಕಾರಂ ಬಲಂ ದರ್ಪಂ ಕಾಮಂ ಕ್ರೋಧಂ ಚ ಸಂಶ್ರಿತಾಃ**
**ಮಾಮಾತ್ಮಪರದೇಹೇಷು ಪ್ರದ್ವಿಷನ್ತೋಽಭ್ಯಸೂಯಕಾಃ**

**ಅರ್ಥ:** ಆತ್ಮ ಸಂಭಾವಿತಾಃ=ತಮ್ಮನ್ನು ತಾವೇ ಉತ್ತಮರೆಂದು ತಿಳಿದುಕೊಳ್ಳುವವರು; ಸ್ತಬ್ಧಾ=ವಿನಯವಿಲ್ಲದವರು, ಹಿರಿಯರಿಗೆ ಮರ್ಯಾದೆ ಕೊಡದವರು; ಧನಮಾನಮದಾನ್ವಿತಾಃ=ಧನವಿದೆಯೆಂಬ ದುರಭಿಮಾನ ದಿಂದಕೂಡಿದವರು; ಅಹಂಕಾರಂ=ಅಹಂಕಾರವನ್ನು; ಬಲಂ=(ಪರರನ್ನು ಪೀಡಿಸುವ) ಬಲವನ್ನು ಇಲ್ಲವೆ, ಪಶುಬಲವನ್ನು, ದರ್ಪಂ=ಗರ್ವವನ್ನು; ಕಾಮಂ=ಕಾಮವನ್ನು; ಕ್ರೋಧಂ ಚ=ಕ್ರೋಧವನ್ನು ಸಹ; ಸಂಶ್ರಿತಾಃ=ಚೆನ್ನಾಗಿ ಆಶ್ರಯಿಸಿದವರು; ಆತ್ಮಪರದೇಹೇಷು=ತಮ್ಮ ಶರೀರಗಳಲ್ಲಿ ಹಾಗು ಬೇರೆ ಯವರ ಶರೀರಗಳಲ್ಲಿ (ಸಾಕ್ಷಿಯಾಗಿರುವ); ಮಾಮ್=ನನ್ನನ್ನು; ಪ್ರದ್ವಿ ಷಂತಃ=ಹೆಚ್ಚು ದ್ವೇಷಿಸುವವರು; ಅಭ್ಯಸೂಯಕಾಃ=ಅಸೂಯಾಪರ ರಾಗಿರುವವರು; ತೇ= (ಅಸುರ ಸಂಪದಿಯುಳ್ಳ) ಅವರು; ದಂಭೇನ=ದಂಭ ದಿಂದ; ಅವಿಧಿಪೂರ್ವಕಮ್=ಶಾಸ್ತ್ರ ವಿರುದ್ಧವಾಗಿ;ನಾಮಯಜ್ಞೈ=ನಾಮ ಮಾತ್ರ ಯಜ್ಞಗಳಿಂದ; ಯಜಂತೇ=ಯಾಗ ಮಾಡುತ್ತಿದ್ದಾರೆ (ಪೂಜಿಸುತ್ತಿದ್ದಾರೆ).

**ತಾ||** ತಮ್ಮನ್ನು ತಾವು ಉತ್ತಮರೆಂದು ತಿಳಿಯುವವರು, ವಿನಯ (ಮರ್ಯಾದೆ) ಇಲ್ಲದವರು, ಧನವಿರುವುದೆಂಬ ದುರಭಿಮಾನದಿಂದ ಮದದಿಂದ ಕೂಡಿರುವವರು, ಅಹಂಕಾರವನ್ನು (ಪರರನ್ನು ಪೀಡಿಸುವಂತಹ) ಬಲವನ್ನು, ಗರ್ವವನ್ನು, ಕಾಮವನ್ನು, ಕ್ರೋಧವನ್ನು ಆಶ್ರಯಿಸಿದವರು, ತಮ್ಮ ಶರೀರಗಳಲ್ಲಿ ಹಾಗು ಇತರರ ಶರೀರಗಳಲ್ಲಿ (ಸಾಕ್ಷಿಯಾಗಿ)ರುವ ನನ್ನನ್ನು ದ್ವೇಷಿಸುವವರು, ಅಸೂಯಾ ಪರರಾಗಿರುವವರು, (ಅಸುರ ಸಂಪದ) ದಂಭದಿಂದ ಶಾಸ್ತ್ರ ವಿರುದ್ಧವಾದ ನಾಮ ಮಾತ್ರ ಯಜ್ಞಗಳಿಂದ ಯಾಗಗಳನ್ನು ಮಾಡುವರು.

**ವ್ಯಾಖ್ಯೆ:** *'ಆತ್ಮ ಸಂಭಾವಿತಾಃ', 'ಪ್ರದ್ವಿಷಂತಃ'* ಎನ್ನುವ ಎರಡು ಪದಗಳಿಂದ ಆತ್ಮಸ್ತುತಿ, ಪರನಿಂದೆ ಎನ್ನುವ ಎರಡು ದೋಷಗಳನ್ನು ಇಲ್ಲಿ ತಿಳಿಸಲಾಗಿದೆ. ಅಜ್ಞರು ತಮ್ಮನ್ನು ತಾವು ಉತ್ತಮರೆಂದು ತಿಳಿದುಕೊಳ್ಳುವರು. 'ಪಂಡಿತಂ ಮನ್ಯಮಾನಾಃ' ಎಂದ ಹಾಗೆ ತಮ್ಮನ್ನು ತಾವೇ ಮಹಾ ಪಂಡಿತರೆಂದು ಭಾವಿಸುವರು. ಇಷ್ಟೇ ಅಲ್ಲದೆ ಬೇರೆಯವರನ್ನು ಕ್ಷುಲ್ಲಕವಾಗಿ ನೋಡಿ ದ್ವೇಷಿಸುತ್ತಿರುವರು. ಸಮಸ್ತ ಪ್ರಾಣಿ ಕೋಟಿಗಳ ಶರೀರದಲ್ಲಿ ಸಾಕ್ಷಿ ರೂಪವಾಗಿ ಬೆಳಗುತ್ತಿರುವ ಪರಮಾತ್ಮನನ್ನು ಕೂಡ ಅವರು ದ್ವೇಷಿಸುವರು. ಆತನ ಆಜ್ಞೆಯನ್ನು ಉಲ್ಲಂಘಿಸುವರು. ಆತನ ವಾಕ್ಕಾದ ವೇದಗಳನ್ನು, ಶಾಸ್ತ್ರಗಳನ್ನು ಧಿಕ್ಕರಿಸಿ ಪ್ರವರ್ತಿಸುವರು. ಧನಮದದಿಂದ ಕಣ್ಣುಗಳನ್ನು ತಲೆಯ ಮೇಲೆ ಇಟ್ಟುಕೊಂಡು ನಡೆಯುವರು. ಹೆಸರಿಗೆ ಮಾತ್ರ ಯಜ್ಞಗಳನ್ನು ಮಾಡುವರು. ಆ ಕ್ರಿಯೆಗಳನ್ನು ಭಕ್ತಿಯಿಂದ ಭಗವತ್ಪ್ರೀತ್ಯರ್ಥವಾಗಿ ಮಾಡುವುದಿಲ್ಲ. ಹೆಸರು, ಪ್ರಾಮುಖ್ಯತೆಗಳಿಗೆ ಮಾಡುವರು.

*'ಮಾಮಾತ್ಮ ಪರದೇಹೇಷು'*- 'ತಮ್ಮ ದೇಹದಲ್ಲಿ ಮತ್ತು ಇತರರ ದೇಹಗಳಲ್ಲಿರುವ ನನ್ನನ್ನು ದ್ವೇಷಿಸುವವರು ಎಂದು ಹೇಳುವುದರಿಂದ, ಭಗವಂತನು ಸಮಸ್ತ ಪ್ರಾಣಿ ಕೋಟಿಗಳ ಶರೀರದಲ್ಲಿ ನಿವಸಿಸುತ್ತಿದ್ದಾನೆಂದು ಸ್ಪಷ್ಟವಾಗುತ್ತದೆ. ಭಗವಂತನು ಎಲ್ಲಿದ್ದಾನೆ ಎಂದು ಪ್ರಶ್ನಿಸುವವರಿಗೆ ಇಲ್ಲಿ ಉತ್ತರ ಕೊಡಲಾಗಿದೆ. ಸಮಸ್ತ ಚರಾಚರ ಪ್ರಾಣಿಗಳ ಶರೀರದಲ್ಲಿ ಸಾಕ್ಷಿ ಮಾತ್ರನಾಗಿ ಆತನು ಬೆಳಗುತ್ತಿದ್ದಾನೆಂದು ಈ ವಾಕ್ಯದಿಂದ ತಿಳಿಯುತ್ತದೆ. ಅಂತಹ ಸರ್ವವ್ಯಾಪಕ, ಸರ್ವ ಶರೀರರಸ್ಥ ಪರಮಾತ್ಮನನ್ನು ತಿಳಿದುಕೊಳ್ಳ ಲಾರದೆ ಒಂದು ಪ್ರಾಣಿಯು ಇನ್ನೊಂದು ಪ್ರಾಣಿಯನ್ನು ದ್ವೇಷಿಸುತ್ತದೆ. ಹಾಗೆ ದ್ವೇಷಿಸುವವನು ಎದುರಿಗಿರುವವನ ಅಂತರಂಗದಲ್ಲಿ ವಿರಾಜ ಮಾನನಾಗಿರುವ ಸಾಕ್ಷಾತ್ ಪರಮಾತ್ಮನನ್ನೇ ದ್ವೇಷಿಸಿದಂತಾಗುತ್ತದೆ. ಅದೇ ವಿಧದಲ್ಲಿ ಒಬ್ಬರಿಗೆ ಉಪಕಾರ ಮಾಡಿದರೆ, ಅವನ ಅಂತರಂಗದಲ್ಲಿರುವ ಪರಮಾತ್ಮನನ್ನು ಪೂಜಿಸಿದವನೇ ಆಗುವನು. ಆದ್ದರಿಂದ ಇಲ್ಲಿ 'ಪ್ರದ್ವಿಷಂತಃ' ಎನ್ನುವ ಪದದಿಂದ ಆತನು' ಪರರನ್ನು ದೂಷಿಸುವುದು ಭಗವಂತನನ್ನು ದೂಷಿಸಿದಂತೆಯೇ ಎಂದು ತಿಳಿಯಬಹುದು.

*'ಶ್ರಿತಾಃ'* ಎಂದು ಹೇಳದೆ *'ಸಂಶ್ರಿತಾಃ'*- ಎಂದು ಹೇಳಿರುವುದರಿಂದ ಅವರು ಕಾಮಾದಿದುರ್ಗುಣಗಳನ್ನು ವಿಶೇಷವಾಗಿ ಆಚರಿಸುವರೆಂದು, 'ದ್ವಿಷಂತಃ' ಎಂದು ಹೇಳದೆ 'ಪ್ರದ್ವಿಷಂತಃ' - ಎಂದು ಹೇಳಿರುವುದರಿಂದ ಭಗವಂತನನ್ನು ಬಲವಾಗಿ ದ್ವೇಷಿಸುವವರೆಂದು ಅರ್ಥವಾಗುತ್ತದೆ. ಅವರ ಪರಮ ನೀಚ ಪ್ರವೃತ್ತಿ ಈ ಪದಗಳಿಂದ ಸ್ಪಷ್ಟವಾಗುತ್ತದೆ.

ಪ್ರ : ಅಸುರ ಸಂಪದಿಯವರ ಇನ್ನೂ ಕೆಲವು ಲಕ್ಷಣಗಳು ಯಾವುವು?

ಉ : ಅವರು ೧) ತಮ್ಮನ್ನು ತಾವು ಗೌರವಿಸಿಕೊಳ್ಳುವರು ೨) ಹಿರಿಯರೆಡೆಗೆ ವಿನಯಾದಿಗಳನ್ನು ಹೊಂದಿರುವುದಿಲ್ಲ. ೩) ಧನಮದ, ಧನಾಭಿಮಾನವನ್ನು ಹೊಂದಿರುವರು ೪) ಡಂಬಕ್ಕೆ, ಹೆಸರು ಪ್ರಖ್ಯಾತಿಗಳಿಗೆ ಶಾಸ್ತ್ರ ವಿರುದ್ಧವಾದ ಯಜ್ಞಾದಿಗಳನ್ನು ಆಚರಿಸುವರು ೫) ಅಹಂಕಾರ, (ಪಶು) ಬಲ, ದರ್ಪ, ಕಾಮ, ಕ್ರೋಧಗಳನ್ನು ವಿಶೇಷವಾಗಿ ಆಶ್ರಯಿಸುವರು ೬) ತಮ್ಮ ಶರೀರದಲ್ಲಿ ಹಾಗು ಇತರರ ಶರೀರಗಳಲ್ಲಿರುವ ಭಗವಂತನನ್ನು ದ್ವೇಷಿಸುವರು ೭) ಅಸೂಯೆ ಹೊಂದಿರುವರು (ಇನ್ನೊಬ್ಬರು ಪುರೋಗಮನವನ್ನು ಸಹಿಸರು)

ಪ್ರ : ಭಗವಂತನು ಎಲ್ಲಿದ್ದಾನೆ?

ಉ : ಸಮಸ್ತ ಪ್ರಾಣಿ ಕೋಟಿಗಳ ಶರೀರದಲ್ಲಿ ಅಸುರ ಸಂಪದವಿರುವ ಲಕ್ಷಣಗಳನ್ನು ಹತ್ತು ಶ್ಲೋಕಗಳಿಂದ ಹೇಳಿ, ಕೊನೆಗೆ ಅಂತಹವರು ನರಕದಲ್ಲಿ ಬೀಳುವರು (ಪತಂತಿ ನರಕೇಽಶುಚೌ) - ಎನ್ನುವ ಫಲಶ್ರುತಿಯನ್ನು ಹೇಳಿ- ಅಷ್ಟರಲ್ಲಿ ಮುಗಿಸದೆ ಮತ್ತೆ ಎರಡು ಶ್ಲೋಕಗಳಲ್ಲಿ ಅವರ ದುಶ್ಚೇಷ್ಟೆ ದುಸ್ವಭಾವಗಳನ್ನು ವರ್ಣಿಸಿರುವುದರಿಂದ, ಅಸುರ ಗುಣಗಳಿಗೆ ಜನರು

ಕಿಂಚಿತ್ತೂ ಸ್ಥಾನವೀಯದೆ ಪರಿಪೂರ್ಣವಾಗಿ ಅವುಗಳನ್ನು ತ್ಯಜಿಸಬೇಕೆನ್ನುವುದು ಭಗವದಾಶಯವಿದ್ದ ಹಾಗೆ ಎದ್ದು ಕಾಣುತ್ತದೆ.

ಈ ಶ್ಲೋಕದಿಂದ ಅಸುರ ಸಂಪದ ಹೊಂದಿರುವವರ ಲಕ್ಷಣಗಳು ಸಮಾಪ್ತಿಯಾಗುತ್ತಿವೆ. ಹನ್ನೆರಡು ಶ್ಲೋಕಗಳಲ್ಲಿ ಏಕಧಾಟಿಯಿಂದ ಭಗವಂತನು ಅಸುರ ದುರ್ಗುಣಗಳನ್ನು ಎತ್ತಿ ತೋರಿಸಿದನು. ಈ ದುಷ್ಟಗುಣಗಳು ಯಾರಲ್ಲಿದ್ದರೂ ಅವರು ಎಷ್ಟು ವಿದ್ಯಾವಂತರು, ಧನವಂತರು, ಕುಲವಂತರು, ಅಧಿಕಾರವಂತರು, ಸೌಂದರ್ಯವಂತರು, ಬಲವಾನರು ಆಗಿದ್ದರೂ ರಾಕ್ಷಸರೇ ಅನಿಸಿಕೊಳ್ಳುವರು. ಅವರು ಮಾನವರಾದರೂ ದಾನವರೆಂದೇ ಹೇಳಬಹುದು. ಸುರಲೋಕ ವಾಸಿಗಳಾದರೂ ಅಸುರಲೋಕವಾಸಿಗಳಾದರೂ ಅಸುರರೇ. ಸಾಮಾನ್ಯವಾಗಿ ರಾಕ್ಷಸರು ಪಾತಾಳ ಲೋಕದಲ್ಲಿರುವರೆಂದು ಪ್ರತೀತಿ. ಆದರೆ ಜನರ ಹೃದಯಗಳಲ್ಲಿಯೂ ಅವರು ಇರುವರು. ಕಾಮಾದಿ ದುಷ್ಟಗುಣಗಳೇ ಆ ರಾಕ್ಷಸರು. ಮನುಜನು ತನ್ನ ಹೃದಯವನ್ನು ಪರಿಶೋಧಿಸಿಕೊಂಡು ತನ್ನಲ್ಲಿ ಯಾವ ಅಸರರು ಸಂಸಾರ ಮಾಡುತ್ತಿರುವರೋ ಪರೀಕ್ಷಿಸಿ, ಪ್ರಯತ್ನ ಪೂರ್ವಕವಾಗಿ ಅವರೆಲ್ಲರನ್ನೂ ಹೊರಗೆ ಸಾಗ ಹಾಕಬೇಕು. ಭಗವಂತನು ಈ ಅಧ್ಯಾಯದಲ್ಲಿ ಇಲ್ಲಿಯವರೆಗೆ ಎಷ್ಟೋ ಅಸುರ ಗುಣಗಳನ್ನು ಹೇಳಿದನು. ಅವುಗಳಲ್ಲಿ ಎಲ್ಲವಾಗಲಿ ಇಲ್ಲವೆ ಕೆಲವಾಗಲಿ ಇಲ್ಲವೆ ಕೊನೆಯಲ್ಲಿ ಒಂದಾಗಲಿ ಹೃದಯ ಗವಿಯಲ್ಲಿ ಬಚ್ಚಿಟ್ಟು ಕೊಂಡಿದ್ದರೂ-ಮಂತ್ರೋಚ್ಚಾಟನೆಯಿಂದ ಭೂತವನ್ನು ಹೊರಗಟ್ಟುವಂತೆ-ಅವುಗಳನ್ನೆಲ್ಲವನ್ನೂ ತೊಲಗಿಸಿಹಾಕಬೇಕು. ಹಾಗೆ ಅವುಗಳನ್ನು ತೊಲಗಿಸಿಕೊಂಡು ಭಗವಂತನು ಹೇಳಿದ ಹಾಗೆ 'ಅಭಯ' ಮುಂತಾದ ದೈವಗುಣಗಳನ್ನು, ದೈವೀ ಸಂಪತ್ತನ್ನು ಪರಿಗ್ರಹಿಸಬೇಕು.

'ಆಗಮಾರ್ಥಂ ತು ದೇವಾನಾಮ್ ಗಮನಾರ್ಥಂ ತು ರಕ್ಷಸಾಂ'

**"ಓ ದೇವತೆಗಳಿರಾ! ಬನ್ನಿ! ಓ ರಾಕ್ಷಸಿರಾ! ಹೋಗಿ!"** ಎನ್ನುವ ಈ ಆಗಮವಾಕ್ಯವನ್ನನುಸರಿಸಿ ಪ್ರತಿಯೊಬ್ಬರೂ ತಮ್ಮ ಚಿತ್ತದಲ್ಲಿ ಈ ದುಷ್ಟಗ್ರಹೋಚ್ಚಾಟನೆಯನ್ನು, ಪವಿತ್ರ ದೇವತಾಹ್ವಾನವನ್ನು ಮಾಡಿ, ಹೃದಯವನ್ನು ದೇವನಿಲಯವನ್ನಾಗಿ ಭಾವಿಸಿಕೊಂಡು ಪರಬ್ರಹ್ಮಾನು ಭೂತಿಯನ್ನು ಪಡೆಯಬೇಕು.

**ಅ॥** ಇಲ್ಲಿಯವರೆಗೆ ಅಸುರ ಸ್ವಭಾವವುಳ್ಳವರ ಲಕ್ಷಣಗಳನ್ನು ಹೇಳಿ ಇನ್ನು ಎರಡು ಶ್ಲೋಕಗಳಲ್ಲಿ ಅವರು ಹೊಂದುವ ಘೋರ ದುರ್ಗತಿಯನ್ನು ವಿವರಿಸುತ್ತಿರುವನು.

**೧೯ ತಾನಹಂ ದ್ವಿಷತಃ ಕ್ರೂರಾನ್ ಸಂಸಾರೇಷು ನರಾಧಮಾನ್**
**ಕ್ಷಿಪಾಮ್ಯಜಸ್ರ ಮಶುಭಾ ನಾಸುರೀಷ್ವೇವ ಯೋನಿಷು**

**ಅರ್ಥ:** ದ್ವಿಷತಃ=(ಹಾಗೆ ಸಮಸ್ತ ಪ್ರಾಣಿಗಳಲ್ಲಿ ಉಳ್ಳ ಆತ್ಮನಾದ) ನನ್ನನ್ನು ದ್ವೇಷಿಸುವವರು: ಕ್ರೂರಾನ್=ಕ್ರೂರಿಗಳು (ಕಠಿಣ ಚಿತ್ತರು); ಅಶುಭಾನ್=(ಅಶುಭ) ಪಾಪಕಾರ್ಯಗಳನ್ನು ಮಾಡುವವರು, ಇಲ್ಲವೆ (ಅಶುಭ) ಪಾಪ ಸಂಕಲ್ಪಗಳನ್ನು ಹೊಂದಿದವರು (ಬಾಹ್ಯಾಭ್ಯಾಂತರ ಶುಚಿತ್ವವಿಲ್ಲದವರು) (ಆಗಿ); ತಾನ್ ನರಾಧಮಾನ್=ಆ ಮನುಜಾಧಮರನ್ನು; ಅಹಂ=ನಾನು; ಸಂಸಾರೇಷು=ಜನನ ಮರಣರೂಪಗಳಾದ ಈ ಸಂಸಾರ ಮಾರ್ಗಗಳಲ್ಲಿ; ಆಸುರೀಷು ಯೋನಿಷು ಏವ=ಅಸುರ ಸಂಬಂಧವಾದ (ನೀಚ) ಜನ್ಮಗಳಲ್ಲಿಯೇ; ಅಜಸ್ರಮ್=ಯಾವಾಗಲೂ; ಕ್ಷಿಪಾಮಿ=ಬಿಸಾಡಿ ಹಾಕುವೆನು.

**ತಾ॥** (ಈ ಪ್ರಕಾರವಾಗಿ ಸಮಸ್ತ ಪ್ರಾಣಿಗಳಲ್ಲಿರುವ ಆತ್ಮನಾದ) ನನ್ನನ್ನು ದ್ವೇಷಿಸುವವರನ್ನು, ಕ್ರೂರರಾಗಿದ್ದು ಅಶುಭಕಾರ್ಯಗಳನ್ನು ಮಾಡುವ ಮನುಜಾಧಮರನ್ನು, ನಾನು ಜನನ ಮರಣರೂಪವಾದ ಈ ಸಂಸಾರದಲ್ಲಿ ಅಸುರಸಂಬಂಧವಾದ ನೀಚ ಜನ್ಮಗಳಲ್ಲಿಯೇ ಸದಾ ಬಿಸಾಡಿ ಹಾಕುತ್ತಿರುತ್ತೇನೆ.

**ವ್ಯಾಖ್ಯೆ:** *'ದ್ವಿಷತಃ'*- ಇತರರನ್ನು ದ್ವೇಷಿಸಿದಾಗ ಆತನ ಹೃದಯದಲ್ಲಿ ಭಗವಂತನು ಇರುವನಾದ್ದರಿಂದ ಭಗವಂತನನ್ನೇ ದ್ವೇಷಿಸಿದ ಹಾಗೆ ಆಗುವುದು.

ಮೇಲೆ ತಿಳಿಸಿದ ಪ್ರಕಾರ ಅಸುರಗುಣಗಳನ್ನು ಹೊಂದಿದ್ದು ಭಗವಂತನನ್ನು ದ್ವೇಷಿಸುತ್ತ ನೀಚ ಕಾರ್ಯಗಳನ್ನು ಮಾಡುವಂತಹ ಜನರಿಗೆ ಎಂತಹ ಭಯಂಕರ ಪರಿಣಾಮ ಒದಗುವುದೋ ಇಲ್ಲಿ ತಿಳಿಸುತ್ತಿದ್ದಾನೆ. ಪ್ರಪಂಚದಲ್ಲಿ ಸತ್ಕಾರ್ಯಗಳನ್ನು ಮಾಡುವವರಿಗೆ ಸದ್ಗತಿ, ದುಷ್ಕಾರ್ಯಗಳನ್ನು ಮಾಡುವವರಿಗೆ ದುರ್ಗತಿ ಸೃಷ್ಟಿಯ ಏರ್ಪಾಟು. ಅದು ಈಶ್ವರ ನಿಯಮ. ಅದನ್ನು ಯಾರೂ ಉಲ್ಲಂಘಿಸಬಾರದು. ಒಂದು ಪಕ್ಷ ಉಲ್ಲಂಘಿಸಿದರೆ, ಅದರ ದುಷ್ಪರಿಣಾಮ ಗಳಿಗೆ ಅವರೇ ಬಾಧ್ಯರು. ಆದ್ದರಿಂದಲೇ ಭಗವಂತನು ಮೊದಲು ದೈವಗುಣಗಳನ್ನು ಹೇಳಿ, ಅವುಗಳನ್ನು ಉಲ್ಲಂಘಿಸುವವರು ಅಂದರೆ ಅಸುರ ಗುಣಗಳನ್ನು ಆಶ್ರಯಿಸುವವರು ತತ್ಫಲಿತವಾಗಿ ನೀಚ ಜನ್ಮವನ್ನು, ದುಃಖ ಪರಂಪರೆಯನ್ನು ತಪ್ಪದೆ ಹೊಂದುವರೆಂದು ಇಲ್ಲಿ ಹೇಳಲಾಗಿದೆ. ಅವರು ಜನನ ಮರಣ ಪ್ರವಾಹ ರೂಪದ ಈ ಸಂಸಾರದಲ್ಲಿ ಬಿದ್ದು, ಹುಟ್ಟುತ್ತ, ಸಾಯುತ್ತ ಅನೇಕ ವಿಧಗಳಾದ ಯಾತನೆಗಳನ್ನು ಅನುಭವಿಸುವರು. ಆದ್ದರಿಂದ ಅಸುರಗುಣಗಳನ್ನು ಯಾರೂ ಅವಲಂಬಿಸಬಾರದು. ದೈವ ಸಂಪದನೆಯನ್ನೇ ಆಶ್ರಯಿಸಿ ಮುಕ್ತಿಯನ್ನು ಪಡೆಯಬೇಕು.

*'ತಾನಹಂ'*- 'ನಾನೇ ಅವರನ್ನು ಕರ್ಮಫಲಾನುಸಾರವಾಗಿ ಕ್ರಿಮಿ ಕೀಟಕಾದಿ ರಾಕ್ಷಸಾದಿ ನೀಚ ಜನ್ಮಗಳಲ್ಲಿ ತಳ್ಳಿ ಹಾಕುವೆ, ಎಂದು ಶ್ರೀ ಕೃಷ್ಣಮೂರ್ತಿ ಹೇಳುವುದರಿಂದ ಸರ್ವಜಗನ್ನಿಯಾಮಕ, ಸರ್ವಶಾಸಕ, ಕರ್ಮ ಫಲಪ್ರದಾತ, ಸರ್ವಜೀವಗತಿನಿರ್ಣೇತ ಆ ಪರಮಾತ್ಮನೇ ಎಂದು ಸ್ಪಷ್ಟವಾಗುತ್ತದೆ.

*'ನರಾಧಮಾನ್'*- *'ಮನುಜಾಧಮರು'* ಎನ್ನುವ ಕಠಿಣ ಪದಪ್ರಯೋಗ ಇಲ್ಲಿ ಮಾಡಿರುವುದರಿಂದ ಭಗವಂತನು ಪಾಪಿಗಳ ಮೇಲೆ, ದೈವ ದ್ವೇಷಿಗಳ ಮೇಲೆ, ಅಸುರ ಗುಣಗಳ ಮೇಲೆ ಎಷ್ಟು ರೌದ್ರವನ್ನು ಹೊಂದಿರುವನೋ ತಿಳಿಯುತ್ತದೆ. *'ವಿನಾಶಯ ಚ ದುಷ್ಕೃತಾಂ'*- ಎಂದು ಈಗಾಗಲೇ, ಪಾಪಾತ್ಮರನ್ನು ಶಿಕ್ಷಿಸಲು, (ಪುಣ್ಯಾತ್ಮರನ್ನು ರಕ್ಷಿಸಲು) ತಾನು ಅವತರಿಸುತ್ತೇನೆ ಎಂದು ಹೇಳಿದ ವಾಕ್ಯಗಳನ್ನು ಈ ಸಂದರ್ಭದಲ್ಲಿ ಜ್ಞಾಪಕಕ್ಕೆ ತಂದು ಕೊಳ್ಳಬೇಕು. ಮನುಜನು ನರಾಧಮನಾಗಿರದೆ ನರೋತ್ತಮನಾಗಿರಬೇಕು. ಪುರುಷಾಧಮನಾಗಿ ವರ್ತಿಸದೆ ಪುರುಷೋತ್ತಮನಾಗಲು ಯತ್ನಿಸಬೇಕು. ಒಂದು ವೇಳೆ ಪಾಪಕಾರ್ಯಗಳನ್ನು ಮಾಡಿ ನರಾಧಮನಾಗಿದ್ದರೆ ಅದಕ್ಕೆ ತಕ್ಕ ಶಾಸ್ತಿ ಆಗಿಯೇ ತೀರುವುದೆಂದು ಇಲ್ಲಿ ಹೇಳಲಾಗಿದೆ. ಆದ್ದರಿಂದ ಮನುಜರು ಭಯ, ಭಕ್ತಿಯುಳ್ಳವರಾಗಿ, ಜಾಗರೂಕರಾಗಿ ತಮ್ಮ ಜಾಣ್ಮೆಯನ್ನು ಉಪಯೋಗಿಸಿ, ತಮ್ಮ ಜೀವನದಲ್ಲಿ ಅಸುರಗುಣಗಳನ್ನು ಕಿಂಚಿತ್ತೂ ಆಶ್ರಯಿಸದೆ ದೈವೀ ಸಂಪದನೆಯನ್ನೇ ಅಭ್ಯಸಿಸಬೇಕು.

*'ಸಂಸಾರೇಷು'*- *'ಆಸುರ್ವೀಷೇವ ಯೋನಿಷು'*- ಎಂದು ಬಹುವಚನ ಉಪಯೋಗಿಸಿರುವುದರಿಂದ ಅವರು ಯಾವ ಒಂದೆರಡು ಜನ್ಮಗಳಲ್ಲಲ್ಲದೆ ಕ್ರಿಮಿಕೀಟಾದಿ ರಾಕ್ಷಸಾದಿ ಅನೇಕ ಜನ್ಮಗಳನ್ನು ಹೊಂದುವರೆಂದು ಸ್ಪಷ್ಟವಾಗುತ್ತದೆ. ಸಂಸಾರದಲ್ಲಿಯೇ, ಜನ್ಮ ಪರಂಪರೆಯಲ್ಲೇ ಬಿದ್ದು ಅವರು

ತಮ್ಮ ದುಷ್ಕರ್ಮ ಪ್ರಭಾವಗಳಿಂದ ತಪ್ಪಿಸಿಕೊಳ್ಳಲಾರದೆ ನಾನಾ ಬಾಧೆಗಳನ್ನು ಅನುಭವಿಸುವರು. ಓಡಿ ಹೋಗುತ್ತಿರುವ ಕುರಿಯನ್ನು ಕಟುಕನು ಮತ್ತೆ ಹಿಡಿದು ತಂದು ವಧಿಸಿದ ಹಾಗೆ ಅಂತಹ ನೀಚರು ದುಃಖದಿಂದ ಸಂಸಾರ ಬಂಧನದಿಂದ ತಪ್ಪಿಸಿಕೊಳ್ಳಬೇಕೆಂದರೂ, ದುಷ್ಕರ್ಮ ಫಲವಿರುವವರೆಗೆ ಭಗವದಾಜ್ಞೆಯಿಂದ ಮತ್ತೆ ಅದರಲ್ಲಿಯೇ ಬೀಳುವರು. ಗರುಡ ಪುರಾಣವನ್ನು ಓದಿದರೆ ಯಾವ ಯಾವ ಪಾಪವನ್ನು ಮಾಡಿದವರು ನರಕದಲ್ಲಿ ಯಾವ ದುಃಖವನ್ನು ಅನುಭವಿಸುವರೋ ಚೆನ್ನಾಗಿ ತಿಳಿಯುವುದು. ಅಂತಹ ದಾರುಣ ನರಕದ ದುಃಖದಿಂದ ಕ್ರಿಮಿಕೀಟಾದಿ ನೀಚಜನ್ಮ ದುಃಖಾದಿಗಳಿಂದ ತಪ್ಪಿಸಿಕೊಳ್ಳಬೇಕೆನ್ನುವ ಪ್ರತಿ ಮಾನವನು ತನ್ನ ಚಾರಿತ್ರ್ಯದ ವಿಷಯದಲ್ಲಿ ಜಾಗರೂಕನಾಗಿ ಭಗವಂತನು ಮೇಲೆ ತಿಳಿಸಿದ ದುಷ್ಟ ಪ್ರವೃತ್ತಿಗಳು (ಅಸುರ ಸಂಪದ) ಇಲ್ಲದೆ ಇರುವಂತೆ ನೋಡಿಕೊಂಡು ಸದಾಚಾರಪರನಾಗಿ ಕೈವಲ್ಯ ಪದವಿಯನ್ನು ಅಲಂಕರಿಸಬೇಕು.

'ಕ್ಷಿಪಾಮಿ'- 'ಬಿಸಾಡಿ ಹಾಕುವೆನು'- ಪಾಪಾತ್ಮರನ್ನು. ಅಸುರ ಗುಣಾವಲಂಬಿಗಳನ್ನು 'ನೀಚ ಜನ್ಮದಲ್ಲಿ ಸೇರಿಸುವೆನು' ಎಂದು ಹೇಳದೆ 'ನೀಚ ಜನ್ಮದಲ್ಲಿ ಬಿಸಾಡಿ ಹಾಕುವೆನು' ಎಂದು ಭಗವಂತನು ಹೇಳಿರುವುದರಿಂದ ಅಂತಹ ದುರ್ಮಾರ್ಗಿಗಳ ಬಗ್ಗೆ ಭಗವಂತನು ಎಂತಹ ಕಟುವಾದ ನಿರ್ಣಯಗಳನ್ನು ತೆಗೆದುಕೊಳ್ಳುವನೆಂದು ಅರ್ಥವಾಗುವುದು. ಕಲ್ಲನ್ನಾಗಲಿ, ಚೆಂಡನ್ನಾಗಲಿ ತೆಗೆದು ದೂರ ಬಿಸಾಡಿದ ಹಾಗೆ ಪಾಪಿಗಳನ್ನು ನರಕಾದಿ ನೀಚ ಜನ್ಮಗಳಲ್ಲಿ ಬಿಸಾಡಿ ಹಾಕುವೆನೆಂದು ಶ್ರೀ ಕೃಷ್ಣಪರಮಾತ್ಮನು ಇಲ್ಲಿ ಹೇಳಿದನು. ಆದ್ದರಿಂದ ಭಗವದಾಶಯವನ್ನು, ಜಗನ್ನಿಯಮವನ್ನು ತಿಳಿದು ಸತ್ಪಥವನ್ನೇ ಕೈಹಿಡಿಯುವುದು ಮುಮುಕ್ಷುಗಳ ಕರ್ತವ್ಯ.

'ಅಜಸ್ರಮ್'-(ಯಾವಾಗಲೂ)- ಜನರ ದುಷ್ಟ ಪ್ರವೃತ್ತಿಗಳು ಎಷ್ಟು ಕಾಲವಿರುವುವೋ ಅಷ್ಟುಕಾಲ ದುಃಖವು ಅವರ ಬೆನ್ನು ಹತ್ತಿಯೇ ಇರುವುದು. ನೆರಳಿನಂತೆ ದುಃಖವು ಅವರ ಹಿಂದೆಯೇ ಇರುವುದೆಂದು 'ಅಜಸ್ರಮ್' ಎನ್ನುವ ಪದದಿಂದ ತಿಳಿಯುತ್ತದೆ. ಕೆಲವರು ಹೀಗೆ ಪ್ರಶ್ನಿಸುತ್ತಾರೆ- 'ಅಯ್ಯಾ! ಈ ಸಂಸಾರ ಬಾಧೆಗಳು ನಮಗೆ ಇನ್ನೂ ಎಷ್ಟು ದಿನವಿರುವುವು?- ಅವರ ಪ್ರಶ್ನೆಗೆ ಇಲ್ಲಿ ಉತ್ತರವಿದೆ. ಜನಗಳಲ್ಲಿ ಪಾಪ, ದುರ್ಮಾರ್ಗ, ದುಶ್ಚಾರಿತ್ರ್ಯ, ಭಗವತ್ ವಿಸ್ಮೃತಿ, ಅಜ್ಞಾನ ಮುಂತಾದುವುಗಳು ಎಲ್ಲಿಯವರೆಗೆ ಇರುವುವೋ ಅಲ್ಲಿಯವರೆಗೆ ಈ ದುಃಖವು ಅವರನ್ನು ಬಿಡುವುದೇ ಇಲ್ಲ. ದುರ್ಗುಣಗಳು ಸದಾ ಇದ್ದರೆ, ಈ ತಾಪಗಳೂ ಸಹ ಯಾವಾಗಲೂ ಇದ್ದೇ ಇರುವುವು. ಅವು ಹೋದರೆ ಇವೂ ಮಾಯವಾಗುವುವು. 'ಅಜಸ್ರಮ್' ಎನ್ನುವ ಪದದಿಂದ - 'ಪಾಪಾತ್ಮರಿಗೆ ಶಿಕ್ಷೆ ಲಭಿಸುವುದು' ಎನ್ನುವ ಶಾಸನ ಈ ಪ್ರಪಂಚದಲ್ಲಿ ಯಾವಾಗಲೂ ಅಮಲಿನಲ್ಲಿರುವುದು- ಎನ್ನುವ ಭಾವ ವ್ಯಕ್ತವಾಗುತ್ತದೆ.

ಪ್ರ : ಅಸುರಗುಣವಿರುವವರಿಗೆ ಎಂತಹ ಫಲ ಒದಗುವುದು?

ಉ : ಅವರು ದೈವ ನಿಯಮದಂತೆ ಅಸುರ ಸಂಬಂಧವಾದ ನೀಚ ಜನ್ಮಗಳಲ್ಲಿಯೇ ಹುಟ್ಟುತ್ತಿರುವರು, ಅಂದರೆ ಕ್ರಿಮಿಕೀಟಕಾದಿ ರಾಕ್ಷಸಾದಿ ಹೀನಜಾತಿಗಳಲ್ಲೇ ಅವರು (ದುಷ್ಕರ್ಮ ನಿವೃತ್ತಿಯಾಗುವವರೆಗೆ) ಜನ್ಮಿಸಿ ನಾನಾಯಾತನೆಗಳನ್ನು ಅನುಭವಿಸುವರು. ಭಗವಂತನೇ ಅವರನ್ನು ಆ ನೀಚ ಯೋನಿಗಳಲ್ಲಿ ಬಿಸಾಡಿ ಹಾಕುವನು.

ಪ್ರ : ದೈವಶಾಸನೆ ಎಷ್ಟು ಕಾಲವಿರುವುದು?

ಉ : ಯಾವಾಗಲೂ ಇರುವುದು (ಅಜಸ್ರಮ್)

**ಅ||** ಅಂತಹ ನೀಚಜನ್ಮಗಳನ್ನು ಪಡೆದು ದೈವಪ್ರಾಪ್ತಿಯಿಲ್ಲದೆ ಕೊನೆಗೆ ಅಧಃಪತನವನ್ನು ಹೊಂದುವರೆಂದು ಹೇಳಲಾಗುತ್ತದೆ.

**೨೦ ಆಸುರೀಂ ಯೋನಿಮಾಪನ್ನಾ ಮೂಢಾ ಜನ್ಮನಿ ಜನ್ಮನಿ**
**ಮಾಮಪ್ರಾಪ್ಯೈವ ಕೌಂತೇಯ ತತೋ ಯಾಂತ್ಯಧಮಾಂ ಗತಿಮ್**

**ಅರ್ಥ:** ಕೌಂತೇಯ=ಓ ಅರ್ಜುನಾ! ಆಸುರೀಂ=ಅಸುರ ಸಂಬಂಧವಾದ; ಯೋನಿಂ=ಜನ್ಮವನ್ನು; ಆಪನ್ನಾಃ=ಹೊಂದಿದವರಾದ; ಮೂಢಾಃ= ಅವಿವೇಕಿಗಳು; ಜನ್ಮನಿ ಜನ್ಮನಿ=ಪ್ರತಿ ಜನ್ಮದಲ್ಲಿಯೂ; ಮಾಂ=ನನ್ನನ್ನು; ಅಪ್ರಾಪ್ಯ ಏವ=ಹೊಂದದೆಯೇ; ತತಃ=ಅದಕ್ಕಿಂತ; ಅಧಮಾಂ=ನೀಚವಾದ; ಗತಿಂ=ಜನ್ಮವನ್ನು; ಯಾಂತಿ=ಹೊಂದುತ್ತಿದ್ದಾರೆ.

**ತಾ||** ಓ ಅರ್ಜುನಾ! ಅಸುರ ಸಂಬಂಧವಾದ (ನೀಚ) ಜನ್ಮಗಳನ್ನು ಹೊಂದಿದ್ದ ಮೂಢರು ಪ್ರತಿ ಜನ್ಮದಲ್ಲಿಯೂ ನನ್ನನ್ನೂ ಸಾಕ್ಷಾತ್ಕರಿಸಿಕೊಳ್ಳದೆ, ಅದಕ್ಕಿಂತ (ತಾವು ಹೊಂದಿದ ಜನ್ಮಕ್ಕಿಂತ) ನೀಚತರವಾದ ಜನ್ಮವನ್ನು ಹೊಂದುತ್ತಿದ್ದಾರೆ.

**ವ್ಯಾಖ್ಯೆ:** ಪಾಪಾತ್ಮರನ್ನು, ಅಸುರ ಗುಣವುಳ್ಳವರನ್ನು ನೀಚ ಜನ್ಮಗಳಲ್ಲಿ ಬಿಸಾಡಿ ಹಾಕುವೆನೆಂದು ಭಗವಂತನು ಹಿಂದಿನ ಶ್ಲೋಕದಲ್ಲಿ ಹೇಳಿದನು. ನಂತರ ಅವರ ಸ್ಥಿತಿ ಏನಾಗುವುದು ಎನ್ನುವುದನ್ನು ಇಲ್ಲಿ ತಿಳಿಸುತ್ತಿದ್ದಾನೆ. ಅವರು ತಮ್ಮ ದುಷ್ಕರ್ಮ ಪ್ರಭಾವದಿಂದ ಭಗವಂತನನ್ನು ಹೊಂದುವ ಸೌಭಾಗ್ಯದಿಂದ ವಂಚಿತರಾಗಿ, ಆನಂದದ ಸವಿ ಅನುಭವಿಸಲಾಗದೆ, ಅವರು ಆವರೆಗೆ ಹೊಂದಿದ್ದ ಜನ್ಮಕ್ಕಿಂತ ಮತ್ತೂ ಹೀನವಾದ ಜನ್ಮವನ್ನು ಹೊಂದುವರೆಂದು ಇಲ್ಲಿ ತಿಳಿಸಲಾಗಿದೆ. ಮೇಲಿನ ಮೆಟ್ಟಲುಗಳಿಂದ ಕೆಳಗೆ ಜಾರಿದ ಚೆಂಡು ಒಂದೊಂದು ಮೆಟ್ಟಲನ್ನು ಜಾರುತ್ತಾ ಹೇಗೆ ಕೆಳಗೆ ಬೀಳುವುದೋ, ಆ ಪ್ರಕಾರವಾಗಿಯೇ ಅವರು ಅಧೋಗತಿಯನ್ನು ಹೊಂದುವರು. ಓಹೋ! ಪಾಪಫಲ ಎಷ್ಟು ದಾರುಣವಾದುದು! ಆದ್ದರಿಂದ ಇಂತಹ ಭಗವದ್ವಾಕ್ಯಗಳನ್ನು ಕೇಳಿದ ನಂತರವಾದರೂ ದುರಾಚಾರಪರರು ತಮ್ಮ ದುರ್ವೃತ್ತಿಗಳಿಗೆ ತಿಲಾಂಜಲಿ ಅರ್ಪಿಸಿ, ಸತ್ಪವರ್ತಕರಾಗಿ ವರ್ತಿಸುವುದು ಶ್ರೇಯೋದಾಯಕ.

'ಮಾಮಪ್ರಾಪ್ಯೈವ'- (ನನ್ನನ್ನು ಹೊಂದದೆ)-ಎಂದು ಹೇಳುವುದರಿಂದ ಅವರಿಗೆ ದೈವ ಪ್ರಾಪ್ತಿಯಾಗದೆ ಇನ್ನೂ ಹೀನವಾದ ಜನ್ಮಗಳು ಒದಗುತ್ತವೆಯೆನ್ನುವುದು ಭಾವ. ಆದ್ದರಿಂದ ೧) ಮನುಜನು ಹೀನ ಜನ್ಮವನ್ನು ಹೊಂದದೆ ಇರಬೇಕೆಂದರೆ ೨) ದೈವವನ್ನು ಹೊಂದುವ ಪ್ರಯತ್ನವನ್ನು ಮಾಡಬೇಕು. ಇಂತಹ ಸ್ಥಿತಿ ಜೀವಿಯ ಸದಾಚಾರದ ಮೇಲೆಯೇ ಆಧಾರವಾಗಿರುತ್ತದೆ. ಈ ವಿಷಯವನ್ನು ಮುಂದಿನ ಶ್ಲೋಕದಲ್ಲಿ ಹೇಳಲಾಗಿದೆ.

ಪ್ರ : ಅಸುರ ಜನ್ಮವನ್ನು ಹೊಂದಿದ ಮೂಢರ ಪರಿಸ್ಥಿತಿಯೇನು?

ಉ : ಅವರು ಪರಮಾತ್ಮನನ್ನು ಹೊಂದದೆ, ತಾವು ಈವರೆಗೆ ಹೊಂದಿದ್ದ ನೀಚ ಜನ್ಮಕ್ಕಿಂತ ಇನ್ನೂ ನೀಚವಾದ ಜನ್ಮವನ್ನು ಹೊಂದುವರು.

ಪ್ರ : ಆದ್ದರಿಂದ ಜೀವಿಯು ಉದ್ಧಾರವಾಗುವ ಮಾರ್ಗವೇನು?

ಉ : 'ಅಸುರ ಸಂಪದನೆಯನ್ನು' (ದುರ್ಗುಣ, ದುರಾಚಾರಗಳನ್ನು) ಬಿಟ್ಟು 'ದೈವೀ ಸಂಪದನೆ'ಯನ್ನು (ಸದ್ಗುಣ, ಸದಾಚಾರಗಳನ್ನು) ಪರಿಗ್ರಹಿಸಬೇಕು.

**ಅ||** ನರಕಬಾಧೆಯಿಂದ ತಪ್ಪಿಸಿಕೊಳ್ಳುವ ಉಪಾಯವನ್ನು ಹೇಳಲಾಗುತ್ತಿದೆ-

೨೧ ತ್ರಿವಿಧಂ ನರಕಸ್ಯೇದಂ ದ್ವಾರಂ ನಾಶನಮಾತ್ಮನಃ
ಕಾಮಕ್ರೋಧಸ್ತಥಾ ಲೋಭಃ ತಸ್ಮಾದೇತತ್ತ್ರಯಂ ತ್ಯಜೇತ್

**ಅರ್ಥ:** ಕಾಮಃ=ಕಾಮವು (ಆಶೆ); ಕ್ರೋಧಃ=ಕೋಪವು; ತಥಾ=ಹಾಗೆಯೇ (ಮತ್ತೆ), ಲೋಭಃ=ಲೋಭವು (ಇತಿ=ಎನ್ನುವ) ಇದಂ=ಇದು, ತ್ರಿವಿಧಮ್=ಮೂರು ವಿಧಗಳಾಗಿ; ನರಕಸ್ಯದ್ವಾರಂ=ನರಕ ದ್ವಾರ, (ಮತ್ತೆ), ಆತ್ಮನಃ=ತನಗೆ (ಜೀವಿಗೆ) ನಾಶನಂ=ನಾಶವುಂಟುಮಾಡುವುದು, (ಆದ); ತಸ್ಮಾತ್=ಆ ಕಾರಣದಿಂದ; ಏತತ್ರಯಂ=ಈ ಮೂರನ್ನು; ತ್ಯಜೇತ್= ಬಿಡಬೇಕು.

**ತಾ||** ಕಾಮ ಕ್ರೋಧ, ಲೋಭವೆನ್ನುವ ಈ ಮೂರು, ಮೂರು ವಿಧಗಳಾದ ನರಕ ದ್ವಾರಗಳು. ಇವು ಅವನಿಗೆ (ಜೀವಿಗೆ) ನಾಶವನ್ನು ತಂದೊಡ್ಡುವುವು-ಆದ್ದರಿಂದ ಈ ಮೂರನ್ನೂ ಬಿಡಬೇಕು. (ಇಲ್ಲವೆ, ಕಾಮ, ಕ್ರೋಧ, ಲೋಭವೆನ್ನುವ ಮೂರು ವಿಧವಾದ ಅಸುರಸಂಪದಗಳು ನರಕಕ್ಕೆ ದ್ವಾರಗಳು ಎಂದು ಹೇಳಬಹುದು).

**ವ್ಯಾಖ್ಯೆ:** ನರಕ ಪ್ರಾಪ್ತಿಗೆ ಹೇತುಗಳಾದ ದುಷ್ಟತ್ರಯವನ್ನು ಈ ಶ್ಲೋಕದಲ್ಲಿ ಹೇಳಲಾಗಿದೆ. ಆ ಮೂರು (ಕಾಮಾದಿಗಳು) ನರಕಕ್ಕೆ ದ್ವಾರಗಳು ಎಂದು ಹೇಳಲ್ಪಟ್ಟಿವೆ. ಅಂದರೆ ಅವುಗಳನ್ನು ಹೊಂದಿದವರಿಗೆ ನರಕ ದ್ವಾರಗಳು ತೆರೆದಿರುವುವೆಂದರ್ಥ. ಆ ಮೂರು ದುರ್ಗುಣಗಳಿಲ್ಲದವರಿಗೆ ಆ ದ್ವಾರಗಳು ಮುಚ್ಚಲ್ಪಟ್ಟಿರುವುದರಿಂದ ಅವರಿಗೆ ನರಕಪ್ರವೇಶವು ಇಲ್ಲವೇ ಇಲ್ಲವೆಂದರ್ಥ. ಇಲ್ಲಿಯವರೆಗೆ ಭಗವಂತನು ಅನೇಕ ಅಸುರಗುಣಗಳನ್ನು ಹೇಳುತ್ತಾ ಬಂದಿದ್ದಾನೆ. ಅಂತಹ ದುರ್ಗುಣವುಳ್ಳವರು ಕೆಳಗಿನ ಲೋಕಗಳಿಗೆ, ನೀಚ ಜನ್ಮಗಳಿಗೆ ಹೋಗುತ್ತಾ ನಾನಾ ದುಃಖ ಪರಂಪರೆಗಳನ್ನು ಅನುಭವಿಸುವರೆಂದು ತಿಳಿಸಿದನು. ಆದರೆ ಅವರಗತಿ ಇನ್ನು ಅಲ್ಲಿಗೇ ಸೀಮಿತವೇ? ಅವರು ಉದ್ಧಾರವಾಗಲು ಅವಕಾಶಗಳಿಲ್ಲವೇ ಎಂದು ಪ್ರಶ್ನಿಸಿದರೆ, 'ಇರುವುವು', ಎಂದು ಗೀತಾಚಾರ್ಯನು ಹೇಳುತ್ತಿದ್ದಾನೆ. ೧) ಕಾಮ ೨) ಕ್ರೋಧ ೩) ಲೋಭ, ಯಾವನು ಈ ಮೂರನ್ನು ಪ್ರಯತ್ನ ಪೂರ್ವಕವಾಗಿ ತ್ಯಜಿಸುವನೋ ಆತನು ನರಕದಿಂದ ತಪ್ಪಿಸಿಕೊಂಡು ಊರ್ಧ್ವಗತಿಯನ್ನು ಪಡೆಯಬಲ್ಲನು. ಈ ಸತ್ಯವು ಇನ್ನೂ ವಿಶದವಾಗಿ ಮುಂದಿನ ಶ್ಲೋಕದಲ್ಲಿ, ಹೇಳಲ್ಪಡುತ್ತದೆ. ಆದ್ದರಿಂದ ಪಾಪಾತ್ಮರು ಅಧಃ ಪತನವನ್ನು ಕುರಿತು ಅಂಜದೆ ತಾವು ಯಾವಸ್ಥಿತಿಯಲ್ಲಿದ್ದರೂ ಅಲ್ಲಿಂದಲೇ ಭಗವಂತನು ತಿಳಿಸಿದ ಕಾಮಕ್ರೋಧ ಲೋಭಗಳನ್ನು ತ್ಯಜಿಸುವ ಪ್ರಯತ್ನವನ್ನು ಆಚರಿಸಿದರೆ ಆದಷ್ಟು ಬೇಗನೇ ಅವರು ನರಕ ವಿಮುಕ್ತರಾಗಿ, ದುಃಖವರ್ಜಿತರಾಗಿ ಪರಮ ಶ್ರೇಯವನ್ನು ಹೊಂದಬಲ್ಲರು. ಆದ್ದರಿಂದ ಪ್ರತಿಯೊಬ್ಬರೂ ಅವರವರ ಹೃದಯವನ್ನು ಪರಿಶೋಧಿಸಿಕೊಂಡು ಈ ಕಾಮ, ಕ್ರೋಧ, ಲೋಭವೆನ್ನುವ ಮೂರು ಕಳ್ಳರನ್ನು ಹಿಡಿದು ವಿವೇಕಾದಿಗಳ ಸಹಾಯದಿಂದ ಅವರನ್ನು ಹೊರಹಾಕಬೇಕು.

ಈ ಶ್ಲೋಕದಲ್ಲಿ 'ತ್ರಿವಿಧಂ' ಎನ್ನುವ ಪದವನ್ನು 'ನರಕಂ' ಎನ್ನುವುದಕ್ಕಲ್ಲದೆ, 'ಇದಂ' ಎನ್ನುವ ಪದಕ್ಕೆ ವಿಶೇಷಣವಾಗಿ ಹೇಳಿ (ಕಾಮ, ಕ್ರೋಧ, ಲೋಭ ಎನ್ನುವ) ಮೂರು ವಿಧಗಳಾಗಿರುವ ಆಸುರೀಸಂಪದ 'ನರಕದ್ವಾರ' ಎಂದೂ ಹೇಳಬಹುದು.

ಪ್ರ : ನರಕಕ್ಕೆ ಎಷ್ಟು ದ್ವಾರಗಳು ಅವು ಯಾವುವು?

ಉ : ಮೂರು ಅವು ಕ್ರಮವಾಗಿ ೧) ಕಾಮ ೨) ಕ್ರೋಧ ೩) ಲೋಭ

ಪ್ರ : ಆ ಕಾಮಾದಿಗಳಿಂದ ಉಂಟಾಗುವ ಹಾನಿಗಳೇನು?

ಉ : ಅವು ಆತನನ್ನು ನಾಶಮಾಡಿ, ವಿನಾಶಕ್ಕೆ ಹೇತುವಾಗುವುವು

ಪ್ರ : ಆದ್ದರಿಂದ ಶ್ರೇಯೋಭಿಲಾಷಿ ಏನು ಮಾಡಬೇಕು?

ಉ : ಆ ಮೂರು ದುರ್ಗುಣಗಳನ್ನು ತ್ಯಜಿಸಬೇಕು.

ಪ್ರ : ಅಸುರೀಸಂಪದ ದುರ್ಗುಣಗಳನ್ನು ಸಂಕ್ಷೇಪವಾಗಿ ತಿಳಿಸು?

ಉ : ೧) ಕಾಮ ೨) ಕ್ರೋಧ ೩) ಲೋಭ

**ಅ||** ಕಾಮಾದಿಗಳನ್ನು ತೊಲಗಿಸಿಕೊಂಡವರು ಪರಮ ಶ್ರೇಯವನ್ನು ಹೊಂದುವರು ಎಂದು ಹೇಳಲಾಗುತ್ತಿದೆ.

೨೨. ಏತೈರ್ವಿಮುಕ್ತಃ ಕೌಂತೇಯ ತಮೋದ್ವಾರೈಸ್ತ್ರಿಭಿರ್ನರಃ
ಆಚರತ್ಯಾತ್ಮನಃ ಶ್ರೇಯಸ್ತತೋ ಯಾತಿ ಪರಾಂಗತಿಂ

**ಅರ್ಥ:** ಕೌಂತೇಯ-ಓ ಅರ್ಜುನಾ! ಏತೈಃ=ಈ; ತ್ರಿಭಿಃ=ಮೂರಾದ; ತಮೋದ್ವಾರೈಃ=(ಅಜ್ಞಾನರೂಪಗಳಾದ) ನರಕದ್ವಾರಗಳಿಂದ; ವಿಮುಕ್ತಃ= ಬಿಡುಗಡೆಯಾದ; ನರಃ=ಮನುಜನು; ಆತ್ಮನಃ=ತನಗೆ; ಶ್ರೇಯಃ=ಹಿತವನ್ನು; ಆಚರತಿ=ಮಾಡಿಕೊಳ್ಳುತ್ತಿದ್ದಾನೆ; ತತಃ=ಅದರಿಂದ; ಪರಾಂ ಗತಿಂ= ಸರ್ವೋತ್ಕೃಷ್ಟವಾದ ಮೋಕ್ಷಗತಿಯನ್ನು; ಯಾತಿ=ಹೊಂದುತ್ತಿದ್ದಾನೆ.

**ತಾ||** ಓ ಅರ್ಜುನಾ! ಕಾಮ ಕ್ರೋಧ ಲೋಭಗಳೆನ್ನುವ ಈ ಮೂರು ನರಕದ್ವಾರಗಳಿಂದ ಬಿಡುಗಡೆಯಾದ ಮನುಜನು ತನಗೆ ಹಿತವನ್ನುಂಟು ಮಾಡಿಕೊಳ್ಳುತ್ತಿದ್ದಾನೆ, ಆದರಿಂದ ಸರ್ವೋತ್ಕೃಷ್ಟವಾದ ಮೋಕ್ಷಗತಿಯನ್ನು ಹೊಂದುತ್ತಿದ್ದಾನೆ.

**ವ್ಯಾಖ್ಯೆ:** ಕಾಮ, ಕ್ರೋಧ, ಲೋಭಗಳಿರುವವರೆಗೆ ಯಾವನೂ ವೃದ್ಧಿಯಾಗ ಲಾರನು. ಹಿತವನ್ನು ಹೊಂದಲಾರನು. ತನಗೆ ಒಳ್ಳೆಯದನ್ನು ತಾನು ಮಾಡಿಕೊಳ್ಳಲಾರ. ಆದುದರಿಂದ ಮೊಟ್ಟ ಮೊದಲನೆಯದಾಗಿ ಅವುಗಳನ್ನು ತೊಲಗಿಸಿಹಾಕಬೇಕೆಂದೂ, ಆಗ ಮಾತ್ರ ಮಾನವನು ತನ್ನ ಶ್ರೇಯವನ್ನುಂಟು ಮಾಡಿಕೊಂಡು ಸರ್ವೋತ್ತಮವಾದ ಮೋಕ್ಷಪದವಿಯನ್ನು ಹೊಂದಬಲ್ಲನೆಂದು ಭಗವಂತನು ಇಲ್ಲಿ ಬೋಧಿಸುತ್ತಿದ್ದಾನೆ. ಸೂರ್ಯ ಚಂದ್ರರು ರಾಹುವಿನಿಂದ ಬಿಡುಗಡೆ ಹೊಂದಿದ ಹಾಗೆ, ಗಜೇಂದ್ರನು ಮೊಸಳೆಯಿಂದ ಬಿಡುಗಡೆ ಹೊಂದಿದ ಹಾಗೆ, ಬಂಧಿತನಾದವನು ಕಾರಾಗೃಹದಿಂದ ಹೊರಬಂದ ಹಾಗೆ ಜೀವಿಯು ಈ ದುಷ್ಟತ್ರಯ ಬಂಧನದಿಂದ ವಿಮುಕ್ತಿಗೊಳ್ಳಬೇಕು. 'ಮುಕ್ತಃ' ಎಂದು ಹೇಳದೆ 'ವಿಮುಕ್ತಃ' ಎಂದು ಹೇಳಿರುವುದರಿಂದ ಅವುಗಳಿಂದ ಪೂರ್ತಿಯಾಗಿ ವಿಮುಕ್ತಿ ಹೊಂದಬೇಕೆಂದೂ, ಅವುಗಳ ಲವ ಲೇಶವೂ, ಹೃದಯದಲ್ಲಿ ಇರಬಾರದೆಂದು ಅರ್ಥವಾಗುತ್ತದೆ. ಮತ್ತೆ ಅವು 'ತಮೋ ದ್ವಾರಗಳೆಂದು' ಕರೆಯಲ್ಪಟ್ಟಿರುವುದರಿಂದ, ಆ ಕಾಮಾದಿಗಳು ಅಜ್ಞಾನ ರೂಪಾದಿಗಳೇ ಎಂದು, ಅಂಧಕಾರಮಯಗಳೆಂದು, ಪ್ರಕಾಶಾಭಾವರೂಪ ಗಳೆಂದು, ನರಕ ಹೇತುಗಳೆಂದು ಸ್ಪಷ್ಟವಾಗುತ್ತದೆ. ಅವು ತಮೋದ್ವಾರಗಳಾಗಿ ರುವುದರಿಂದ ಅವುಗಳನ್ನು ಹೊಂದಿರುವವನು 'ಕತ್ತಲೆಯ ಮನೆಯಲ್ಲಿ ಸಂಸಾರ ನಡೆಸಿದವನಂತೆ' ಇರುವನು. ಅಂದರೆ ದುಃಖಗಳನ್ನೇ ಅನುಭವಿಸುತ್ತಿರುವನು.

*'ಆಚರತ್ಯಾತ್ಮನಃ ಶ್ರೇಯಃ'*- ಆ ಕಾಮಾದಿಗಳಿರುವವರೆಗೆ ಯಾವನೂ ತನಗೆ ತಾನು ಶ್ರೇಯವನ್ನುಂಟುಮಾಡಿಕೊಳ್ಳಲಾರ, ಆತ್ಮೋದ್ಧಾರಣೆ ಮಾಡಿ ಕೊಳ್ಳಲಾರ, ತಾನು ಯಾರು? ಜಗತ್ತು ಏನು? ಎಂದು ವಿಚಾರಿಸಲು

ಸಾಧ್ಯವಿಲ್ಲ. ಅಂದರೆ ವಾಸನಾಕ್ಷಯವಾಗುವವರೆಗೆ ಆತ್ಮಜ್ಞಾನ ಪೂರ್ಣವಾಗಿ ಉದಯಿಸುವುದಿಲ್ಲವೆಂದು ಆತ್ಮಾನುಭೂತಿ ಉಂಟಾಗುವುದಿಲ್ಲವೆಂದು ಅರ್ಥ. - ಕಾಮಾದಿಗಳಿಂದ ಬಿಡುಗಡೆ ಹೊಂದಿದ ನಂತರವೇ ಅಂತಹ ಜ್ಞಾನ ಚೆನ್ನಾಗಿ ಸಂಪ್ರಾಪ್ತವಾಗಬಲ್ಲದೆಂದು ಈ ಶ್ಲೋಕದಿಂದ ತಿಳಿಯುತ್ತದೆ. ಆದ್ದರಿಂದ ಸಾಧಕನು ಮೊದಲು ಆ ದುಷ್ಟತ್ರಯವನ್ನು ಹೊರದೂಡಬೇಕು.

'*ಪರಾಂಗತಿಂ*'- ಎಂದು ಹೇಳುವುದರಿಂದ ಮೋಕ್ಷವು ಎಲ್ಲಾ ಪದಗಳಿಗಿಂತ ಸರ್ವೋತ್ಕೃಷ್ಟವಾದದ್ದೆಂದು ತಿಳಿಯುತ್ತದೆ. ಮತ್ತೆ ಕಾಮಾದಿಗಳ ಸ್ಥಿತಿ ಅತ್ಯಂತ ನಿಕೃಷ್ಟವಾದುದೆಂದು ಇದರಿಂದ ತಿಳಿಯುತ್ತದೆ.

ಪ್ರ : ಕಾಮಾದಿಗಳು ಎಂತಹವು ?

ಉ : ಅವು ನರಕಕ್ಕೆ ದ್ವಾರಗಳು

ಪ್ರ : ಮೋಕ್ಷಕ್ಕೆ ಯಾರು ಯತ್ನಿಸುವರು ?

ಉ : ಕಾಮಾದಿಗಳಿಂದ ವಿಮುಕ್ತನಾದವನು.

ಉ : ಹಾಗೆ ಯತ್ನಿಸುವುದರಿಂದ ಉಂಟಾಗುವ ಫಲಿತವೇನು ?

ಉ : ಆತನು ಮೋಕ್ಷವನ್ನು ಪಡೆಯಬಲ್ಲನು.

ಪ್ರ : ಮೋಕ್ಷ ಪದ ಎಂತಹದು ?

ಉ : ಎಲ್ಲದಕ್ಕಿಂತ ಸರ್ವೋತ್ತಮವಾದ ಗತಿ (ಪರಾಂಗತಿಂ)

**ಅ||** ಈ ಪ್ರಕಾರವಾಗಿ (ಶಾಸ್ತ್ರಾದೇಶವನ್ನು ಅನುಸರಿಸಿ) ವರ್ತಿಸದೆ ತನಗೆ ಇಷ್ಟಬಂದ ಹಾಗೆ ಪ್ರವರ್ತಿಸಿದರೆ ಮನುಜನು ಉನ್ನತಿಯನ್ನು ಹೊಂದುವುದಿಲ್ಲವೆಂದು ಹೇಳಲಾಗುತ್ತಿದೆ-

**೨೩ ಯಶ್ಶಾಸ್ತ್ರವಿಧಿಮುತ್ಸೃಜ್ಯ ವರ್ತತೇ ಕಾಮಕಾರತಃ**
**ನ ಸ ಸಿದ್ಧಿಮವಾಪ್ನೋತಿ ನ ಸುಖಂ ನ ಪರಾಂ ಗತಿಮ್**

**ಅರ್ಥ:** ಯಃ=ಯಾವನು; ಶಾಸ್ತ್ರ ವಿಧಿಂ=ಶಾಸ್ತ್ರೋಕ್ತವಾದ ವಿಧಿಯನ್ನು; ಉತ್ಸೃಜ್ಯ=ಬಿಟ್ಟು; ಕಾಮಕಾರತಃ=ತನಗೆ ಇಷ್ಟ ಬಂದ ಹಾಗೆ; ವರ್ತತೇ=ಪ್ರವರ್ತಿಸುತ್ತಿದ್ದಾನೆಯೋ; ಸಃ=ಆತನು; ಸಿದ್ಧಿಂ=ಅನುಷ್ಠಾನದಿಂದ ಹೊಂದಬಹುದಾದ ಸಿದ್ಧಿಯನ್ನು (ಪುರುಷಾರ್ಥ ಸಿದ್ಧಿ, ಜ್ಞಾನ ಸಿದ್ಧಿಯನ್ನು); ನ ಅವಾಪ್ನೋತಿ=ಹೊಂದುವುದಿಲ್ಲ; ಸುಖಂ=ಸುಖವನ್ನು; ನ (ಅವಾಪ್ನೋತಿ)= ಹೊಂದುವುದಿಲ್ಲ; ಪರಾಂಗತಿಂ=ಉತ್ತಮವಾದ ಮೋಕ್ಷವನ್ನು; ನ ಅವಾಪ್ನೋತಿ=ಹೊಂದುವುದಿಲ್ಲ.

**ತಾ||** ಯಾವನು ಶಾಸ್ತ್ರೋಕ್ತವಾದ ವಿಧಿಯನ್ನು ಬಿಟ್ಟು ತನಗೆ ಇಷ್ಟಬಂದ ಹಾಗೆ ವರ್ತಿಸುವನೋ, ಅಂತಹವನು ಪುರುಷಾರ್ಥಸಿದ್ಧಿಯನ್ನಾಗಲಿ, ಸುಖವನ್ನಾಗಲಿ, ಉತ್ತಮ ಗತಿಯಾದ ಮೋಕ್ಷವನ್ನಾಗಲಿ ಹೊಂದಲಾರನು.

**ವ್ಯಾಖ್ಯೆ:** ಇಷ್ಟ ಬಂದಹಾಗೆ ಆಚರಿಸುವ ಸ್ವೇಚ್ಛಾ ಪ್ರವರ್ತನೆಯನ್ನು ಈ ಶ್ಲೋಕದಲ್ಲಿ ಖಂಡಿಸಲಾಗಿದೆ. ಯಾರೇ ಆಗಲಿ ತಮಗೆ ಸರಿಯಾದ ಪದ್ಧತಿಯನ್ನೇ ಆಚರಿಸುತ್ತ, ಅದೇ ಸರಿಯೆಂದು ವಾದಿಸುವುದು ಸೂಕ್ತವಲ್ಲ. ಒಬ್ಬರ ಅನುಷ್ಠಾನ ಸರಿಯಾಗಿದೆಯೇ ಇಲ್ಲವೇ ಎಂದು ಪರೀಕ್ಷಿಸಲು ಶಾಸ್ತ್ರ ಪ್ರಮಾಣ ಬಹಳ ಅವಶ್ಯಕ. ಶಾಸ್ತ್ರ ಪ್ರಮಾಣವನ್ನು ತನ್ನ ಅನುಭವವೂ ಪುರಸ್ಕರಿಸಿದರೆ ಆಗ ಅದು ಸರಿಯಾದ ಮಾರ್ಗವೆಂದೂ, ಸಿದ್ಧಾಂತವೆಂದೂ ನಿರ್ಣಯಿಸಿಕೊಳ್ಳ ಬಹುದು. ಶಾಸ್ತ್ರವಾಕ್ಯಗಳು, ಅನುಭವಜ್ಞರಾದ ಮಹರ್ಷಿಗಳ ನಿರ್ಣಯಗಳಾಗಿರುವುದರಿಂದ, ಭಗವದಾಶಯಗಳೇ ಆದುದರಿಂದ ಅವುಗಳನ್ನು ಉಲ್ಲಂಘಿಸಬಾರದು. ಆದ್ದರಿಂದ ಅವುಗಳನ್ನು ಉಲ್ಲಂಘಿಸುವವರು ಮೋಕ್ಷವನ್ನು ಹೊಂದಲು ಸಾಧ್ಯವಿಲ್ಲವೆಂದು, ಸುಖವನ್ನು ಹೊಂದಲಾರರೆಂದು ಶ್ರೀಕೃಷ್ಣಮೂರ್ತಿ ಅಪ್ಪಣೆ ಕೊಟ್ಟಿರುತ್ತಾನೆ. ಆದ್ದರಿಂದ ಮುಮುಕ್ಷುಗಳು ಶಾಸ್ತ್ರಾಧೀನರಾಗಿ ಪ್ರವರ್ತಿಸಬೇಕು. ಇದರಿಂದ ಸುಖವನ್ನಾಗಲಿ ಮೋಕ್ಷವನ್ನಾಗಲಿ ಅಪೇಕ್ಷಿಸುವವನು ಶಾಸ್ತ್ರೋಕ್ತ ವಿಧಿ ಪ್ರಕಾರ ನಡೆಯಬೇಕೆಂದು ತಿಳಿಯುತ್ತದೆ.

ಪ್ರ : ಮನುಜನು ಅನುಷ್ಠಾನದಲ್ಲಿ ಹೇಗೆ ಪ್ರವರ್ತಿಸಬೇಕು ?

ಉ : ಶಾಸ್ತ್ರವಿಧಿಯನ್ನನುಸರಿಸಿ ಪ್ರವರ್ತಿಸಬೇಕು.

ಪ್ರ : ತನಗೆ ಇಷ್ಟ ಬಂದ ಹಾಗೆ ಆಚರಿಸಿದರೆ ಏನಾಗುವುದು ?

ಉ : ಪುರುಷಾರ್ಥ ಸಿದ್ಧಿ, ಮೋಕ್ಷವನ್ನು ಹೊಂದಲು ಸಾಧ್ಯವಿಲ್ಲ.

ಪ್ರ : ಸುಖಕ್ಕೆ ಹಾಗು ಮೋಕ್ಷಕ್ಕೆ ಉಪಾಯವೇನು ?

ಉ : ಶಾಸ್ತ್ರಾದೇಶವನ್ನನುಸರಿಸಿ ನಡೆಯುವುದು

**ಅ||** ಆದ್ದರಿಂದ ಶಾಸ್ತ್ರೋಕ್ತ ಪದ್ಧತಿಯನ್ನು ಅನುಸರಿಸಿ ಕಾರ್ಯಗಳನ್ನು ಮಾಡಬೇಕೆಂದು ಅರ್ಜುನನಿಗೆ ಶ್ರೀಕೃಷ್ಣ ಪರಮಾತ್ಮನು ಬೋಧಿಸುತ್ತಿದ್ದಾನೆ-

**೨೪ ತಸ್ಮಾಚ್ಛಾಸ್ತ್ರಂ ಪ್ರಮಾಣಂ ತೇ ಕಾರ್ಯಾಕಾರ್ಯವ್ಯವಸ್ಥಿತೌ**
**ಜ್ಞಾತ್ವಾ ಶಾಸ್ತ್ರವಿಧಾನೋಕ್ತಂ ಕರ್ಮ ಕರ್ತುಮಿಹಾರ್ಹಸಿ**

**ಅರ್ಥ:** ತಸ್ಮಾತ್=ಆ ಕಾರಣಗಳಿಂದ, ತೇ=ನಿನಗೆ; ಕಾರ್ಯಾಕಾರ್ಯ ವ್ಯವಸ್ಥಿತೌ=ಮಾಡಬೇಕಾದದನ್ನು, ಮಾಡಬಾರದ್ದನ್ನು ನಿರ್ಣಯಿಸುವಾಗ; ಶಾಸ್ತ್ರಂ=ಶಾಸ್ತ್ರವು; ಪ್ರಮಾಣಂ=ಪ್ರಮಾಣವಾಗಿದೆ; ಶಾಸ್ತ್ರ ವಿಧಾನೋಕ್ತಂ= ಶಾಸ್ತ್ರದಲ್ಲಿ ಹೇಳಲ್ಪಟ್ಟದ್ದನ್ನು; ಜ್ಞಾತ್ವಾ=ತಿಳಿದುಕೊಂಡು; ಇಹ=ಈ ಪ್ರಪಂಚದಲ್ಲಿ; ಕರ್ಮ=ಕರ್ಮವನ್ನು; ಕರ್ತುಂ=ಮಾಡಲು (ತ್ವಂ=ನೀನು); ಅರ್ಹಸಿ=ಯೋಗ್ಯನಾಗಿರುವೆ.

**ತಾ||** ಆದ್ದರಿಂದ ಮಾಡಬೇಕಾದದ್ದನ್ನು ಮಾಡಬಾರದದ್ದನ್ನು ನಿರ್ಣಯಿಸುವಾಗ ಶಾಸ್ತ್ರವು ಪ್ರಮಾಣವಾಗಿದೆ. ಶಾಸ್ತ್ರದಲ್ಲಿ ಹೇಳಿರುವುದನ್ನು ತಿಳಿದುಕೊಂಡು ಅದನ್ನು ಅನುಸರಿಸಿ ನೀನು ಈ ಪ್ರಪಂಚದಲ್ಲಿ ಕರ್ಮಗಳನ್ನು ಮಾಡುವುದು.

**ವ್ಯಾಖ್ಯೆ:** ಯಾವ ಕಾರ್ಯವನ್ನು ಮಾಡಬೇಕು ? ಯಾವ ಕಾರ್ಯವನ್ನು ಮಾಡಬಾರದು ? ಎನ್ನುವ ವಿತರ್ಕ ಬಂದೊದಗಿದಾಗ ಅದಕ್ಕೆ ಶಾಸ್ತ್ರವೇ ಪ್ರಮಾಣವಾಗಿರುವುದು. ಅದನ್ನು ಅನುಸರಿಸಿ ವರ್ತಿಸಬೇಕೆಂದು ಭಗವಂತನು ಬೋಧಿಸುತ್ತಿದ್ದಾನೆ. 'ತಸ್ಮಾತ್' ಎಂದರೆ ಪೂರ್ವಶ್ಲೋಕದಲ್ಲಿ ಹೇಳಲ್ಪಟ್ಟ ಹಾಗೆ ಶಾಸ್ತ್ರ ವಿರುದ್ಧವಾಗಿ ಆಚರಿಸಿದರೆ ಸುಖವಾಗಲಿ ಮೋಕ್ಷವಾಗಲಿ ಉಂಟಾಗುವುದಿಲ್ಲವೆಂದು ಅರ್ಥ. ಈ ವಾಕ್ಯಗಳಿಂದ ಭಗವದ್ದೃಷ್ಟಿಯಲ್ಲಿ ವೇದಶಾಸ್ತ್ರಗಳು ಎಷ್ಟು ಮುಖ್ಯವೋ ತಿಳಿಯುತ್ತದೆ. ಅವು ಮಹಾ ಪ್ರಮಾಣಗಳೆಂದು ಸಾಕ್ಷಾತ್ ಭಗವಂತನೇ ಹೇಳಿರುವುದರಿಂದ ಇನ್ನು ಆ ಶಾಸ್ತ್ರಾದಿಗಳಲ್ಲಿ ಜನರು ಎಷ್ಟು ವಿಶ್ವಾಸವಿಡಬೇಕೋ ಯೋಚಿಸಿಕೊಳ್ಳ ಬೇಕಾಗಿದೆ. ಆದ್ದರಿಂದ ವೇದಶಾಸ್ತ್ರಗಳ ಹಿರಿಮೆಯ ವಿಷಯವಾಗಿ, ಪ್ರಾಮಾಣ್ಯದ ಬಗ್ಗೆ ಜನರಿಗೆ ಸಂದೇಹವಿರಬಾರದು. ಅಕುಂಠಿತ ವಿಶ್ವಾಸದಿಂದ ಅವುಗಳಲ್ಲಿ ಬೋಧಿಸಿದ ನೀತಿಗಳನ್ನು ಅನುಸರಿಸಿದರೂ ಸಾಕು, ಮನುಷ್ಯನು ಮುಕ್ತಿ ಹೊಂದುವವನು.

'*ಜ್ಞಾತ್ವಾ ಶಾಸ್ತ್ರವಿಧಾನೋಕ್ತಂ*'ಎಂದು ಹೇಳುವುದರಿಂದ ಕರ್ಮಾಚರಣೆಗೆ

ಮೊದಲು ಶಾಸ್ತ್ರಜ್ಞಾನ ಅವಶ್ಯಕವೆಂದು ಅರ್ಥವಾಗುತ್ತದೆ. ಶಾಸ್ತ್ರಾದಿಗಳ ದ್ವಾರ ಕರ್ಮಮಾಡುವ ಪದ್ಧತಿಗಳನ್ನು ತಿಳಿದುಕೊಂಡು ನಂತರ ಕರ್ಮಮಾಡುವುದು ಉತ್ತಮ. ಶಾಸ್ತ್ರ ಪರಿಚಯದಿಂದ ಅಂದರೆ ಅಪರಾವಿದ್ಯೆಯಿಂದ ಉತ್ತಮ ಕರ್ಮಾಚರಣೆ ಸಾಧ್ಯವಾಗಿ ಕ್ರಮವಾಗಿ ಚಿತ್ತಶುದ್ಧಿಯುಂಟಾಗಿ ಪರಾವಿದ್ಯೆ ಅಂದರೆ ಬ್ರಹ್ಮಾನುಭೂತಿ ತ್ವರೆಯಾಗಿ (ಅಭ್ಯಾಸದಿಂದ) ಲಭಿಸಲು ಅವಕಾಶವೇರ್ಪಡುತ್ತದೆ.

'ಕರ್ಮ ಕರ್ತುಮಿಹಾರ್ಹಸಿ'- ಎಂದು ಬೋಧಿಸಿರುವುದರಿಂದ ಕರ್ಮ ಮಾಡುವುದರಲ್ಲಿ ತಪ್ಪಿಲ್ಲವೆಂದು, ಆದರೆ ಆ ಕರ್ಮ ಶಾಸ್ತ್ರಾನುಸಾರ ವಾಗಿರಬೇಕೆಂದು ಗೀತೆ ತಿಳಿಸುತ್ತದೆ. ಆದ್ದರಿಂದಲೇ ಅರ್ಜುನನಿಗೆ ಅಂತಹ ಶಾಸ್ತ್ರೋಕ್ತವಾದ ಕರ್ಮವನ್ನು ಆಚರಿಸಬೇಕೆಂದು ಭಗವಂತನು ಇಲ್ಲಿ ಬೋಧಿಸುತ್ತಿದ್ದಾನೆ.

ಪ್ರ : ಯಾವ ಕಾರ್ಯವನ್ನು ಮಾಡಬೇಕು, ಯಾವಕಾರ್ಯವನ್ನು ಮಾಡಬಾರದು ಎನ್ನುವುದಕ್ಕೆ ಪ್ರಮಾಣವೇನು ?

ಉ : ಶಾಸ್ತ್ರ. ಆದ್ದರಿಂದ ಶಾಸ್ತ್ರೋಕ್ತ ಪದ್ಧತಿಯನ್ನೇ ಆಚರಿಸಬೇಕು.

ಪ್ರ : ಕರ್ಮಗಳನ್ನು ಯಾವಾಗ ಮಾಡಬೇಕು ?

ಉ : ಶಾಸ್ತ್ರವಿಧಾನವನ್ನು ಪರೀಕ್ಷಿಸಿ ನಂತರ ಮಾಡಬೇಕು

ಪ್ರ : ಕರ್ಮವನ್ನು ಹೇಗೆ ಮಾಡಬೇಕು ?

ಉ : ಶಾಸ್ತ್ರಗಳಲ್ಲಿ ತಿಳಿಸಿದ ಹಾಗೆ ಮಾಡಬೇಕು.

**ಓಮ್**

ಇತಿ ಶ್ರೀ ಮದ್ಭಗವದ್ಗೀತಾಸೂಪನಿಷತ್ಸು ಬ್ರಹ್ಮವಿದ್ಯಾಯಂ ಯೋಗಶಾಸ್ತ್ರೇ
ಶ್ರೀ ಕೃಷ್ಣಾರ್ಜುನ ಸಂವಾದೇ ದೈವಾಸುರ ಸಂಪದ್ವಿಭಾಗಯೋಗೋನಾಮ

**ಷೋಡಶೋಽಧ್ಯಾಯಃ**

ಇದು ಉಪನಿಷತ್ಪ್ರತಿಪಾದಕವೂ ಬ್ರಹ್ಮವಿದ್ಯೆಯೂ, ಯೋಗಶಾಸ್ತ್ರವೂ ಶ್ರೀ ಕೃಷ್ಣಾರ್ಜುನ ಸಂವಾದವಾದ
ಶ್ರೀ ಭಗವದ್ಗೀತೆಯಲ್ಲಿಯ ದೈವಾಸುರಸಂಪದ್ವಿಭಾಗಯೋಗವೆನ್ನುವ

**ಹದಿನಾರನೆಯ ಅಧ್ಯಾಯ**

ಓಮ್ ತತ್ ಸತ್

# ಶ್ರದ್ಧಾತ್ರಯ ವಿಭಾಗಯೋಗ

## ಶ್ರೀ ಭಗವದ್ಗೀತೆ

### ಅಥ ಸಪ್ತದಶೋಽಧ್ಯಾಯಃ
### ಹದಿನೇಳನೆಯ ಅಧ್ಯಾಯ
### ಶ್ರದ್ಧಾತ್ರಯ ವಿಭಾಗಯೋಗಃ - ಶ್ರದ್ಧಾತ್ರಯ ವಿಭಾಗಯೋಗ

**ಈ ಅಧ್ಯಾಯದ ಹೆಸರು :**

'ಶ್ರದ್ಧಾತ್ರಯ ವಿಭಾಗಯೋಗ'- ಶ್ರದ್ಧೆ ಮೂರು ವಿಧಗಳಾಗಿದೆ. ಸಾತ್ವಿಕ, ರಾಜಸಿಕ, ತಾಮಸಿಕ ಶ್ರದ್ಧೆಗಳೆಂದು ಮೂರು ವಿಧಗಳು. ಯಾವ ಯಾವ ಶ್ರದ್ಧೆಯುಳ್ಳವನ ಲಕ್ಷಣಗಳು ಯಾವ ವಿಧವಾಗಿ ಇರುವುವೆಂದು ಈ ಅಧ್ಯಾಯದಲ್ಲಿ ವಿವರವಾಗಿ ತಿಳಿಸಲ್ಪಟ್ಟಿದೆ. ಈ ಪ್ರಕಾರವಾಗಿ ಮೂರು ವಿಧವಾದ ಶ್ರದ್ಧೆಗಳನ್ನು (ಗುಣಗಳನ್ನು) ಕುರಿತು ಹೇಳಿದ ಅಧ್ಯಾಯ ವಾದುದರಿಂದ ಇದಕ್ಕೆ ಶ್ರದ್ಧಾತ್ರಯ ವಿಭಾಗಯೋಗವೆನ್ನುವ ಹೆಸರು ಬಂದಿದೆ.

**ಈ ಅಧ್ಯಾಯದಲ್ಲಿಯ ಪ್ರಧಾನ ವಿಷಯಗಳು :**

೧) ಮೂರು ವಿಧಗಳಾದ ಶ್ರದ್ಧೆಯನ್ನು ಕುರಿತ ವಿಷಯ
(೧ನೆಯ ಶ್ಲೋಕದಿಂದ ೩ನೆಯ ಶ್ಲೋಕದವರೆಗೆ)

೨) ಮೂರುವಿಧಗಳಾದ ಆರಾಧನೆ-ಶಾಸ್ತ್ರವಿರುದ್ಧವಾದ ಘೋರತಪಸ್ಸು
(೪ನೆಯ ಶ್ಲೋಕದಿಂದ ೬ನೆಯ ಶ್ಲೋಕದವರೆಗೆ)

೩) ಮೂರು ವಿಧಗಳಾದ ಆಹಾರ-
(೭ನೆಯ ಶ್ಲೋಕದಿಂದ ೧೦ನೆಯ ಶ್ಲೋಕದವರೆಗೆ)

೪) ಮೂರು ವಿಧವಾದ ಯಜ್ಞಗಳು-
(೧೧ನೆಯ ಶ್ಲೋಕದಿಂದ ೧೩ನೆಯ ಶ್ಲೋಕದವರೆಗೆ)

೫) ಮೂರು ವಿಧವಾದ ತಪಸ್ಸುಗಳು
(೧೪ನೆಯ ಶ್ಲೋಕದಿಂದ ೧೯ನೆಯ ಶ್ಲೋಕದವರೆಗೆ)

೬) ಮೂರು ವಿಧವಾದ ದಾನಗಳು-
(೨೦ನೆಯ ಶ್ಲೋಕದಿಂದ ೨೨ನೆಯ ಶ್ಲೋಕದವರೆಗೆ)

೭) ಓಂ ತತ್‌ಸತ್-ಎನ್ನುವ ಮಂತ್ರದ ವ್ಯಾಖ್ಯೆ-
(೨೩ನೆಯ ಶ್ಲೋಕದಿಂದ ೨೭ನೆಯ ಶ್ಲೋಕದವರೆಗೆ)

೮) ಅಶ್ರದ್ಧೆಯಿಂದ ಮಾಡುವ ಕಾರ್ಯದ ಫಲ (೨೮ನೆಯ ಶ್ಲೋಕ)

**ಪೂರ್ವಾಧ್ಯಾಯದೊಡನೆ ಈ ಅಧ್ಯಾಯಕ್ಕೆ ಇರುವ ಸಂಬಂಧ:-**

ಹಿಂದಿನ ಅಧ್ಯಾಯದ ಕೊನೆಯಲ್ಲಿ ಭಗವಂತನು ಶಾಸ್ತ್ರಾದೇಶಗಳಿಗೆ ಭಿನ್ನವಾಗಿ ಪ್ರವರ್ತಿಸಬಾರದೆಂದು, ಶಾಸ್ತ್ರವಿಧಿಗಳನ್ನು ಉಲ್ಲಂಘಿಸಿ ಇಷ್ಟ ಬಂದ ಹಾಗೆ ನಡೆದರೆ ಮೋಕ್ಷ ಸಿದ್ಧಿಯು ಲಭಿಸದು ಎಂದು ಹೇಳಿದ ಆ ವಾಕ್ಯಗಳನ್ನು ಕೇಳಿ, ಅರ್ಜುನನ ಮನಸ್ಸಿನಲ್ಲಿ ಒಂದು ಸಂಶಯ ಉದಯಿಸಿತು. ಅದು ಏನೆಂದರೆ-ಯಾರಾದರೂ ಒಂದು ಪಕ್ಷ ಅಜ್ಞಾನದಿಂದಾಗಲಿ, ಬೇರೆ ಕಾರಣದಿಂದಾಗಲಿ ಶಾಸ್ತ್ರವಿಧಿಯನ್ನು ತ್ಯಜಿಸಿ, ಶ್ರದ್ಧೆಯಿಂದ ಪೂಜೆ ಯಜ್ಞಗಳನ್ನು ಆಚರಿಸುತ್ತಿದ್ದರೆ, ಅವರ ಪರಿಸ್ಥಿತಿ ಏನು? ಅವರು ಮಾಡುವ ಪ್ರಯತ್ನ ಸತ್ತ್ವಗುಣವಾದದ್ದೇ, ರಜೋಗುಣವಾದದ್ದೇ, ಇಲ್ಲವೇ ತಮೋಗುಣವಾದದ್ದೇ? ಅಂತಹ ಸಂಶಯ ಉದಯಿಸುತ್ತಲೇ ಅರ್ಜುನನು ಭಗವಂತನನ್ನು ಪ್ರಶ್ನಿಸಿದನು. ಅರ್ಜುನನ ಆ ಪ್ರಶ್ನೆಯಿಂದ ಈ ಅಧ್ಯಾಯ ಪ್ರಾರಂಭವಾಗುತ್ತಿದೆ.

**ಅರ್ಜುನ ಉವಾಚ:**

**೧. ಯೇ ಶಾಸ್ತ್ರವಿಧಿಮುತ್ಸೃಜ್ಯ ಯಜಂತೇ ಶ್ರದ್ಧಯಾನ್ವಿತಾಃ**
**ತೇಷಾಂ ನಿಷ್ಠಾ ತು ಕಾ ಕೃಷ್ಣ ಸತ್ತ್ವಮಾಹೋ ರಜಸ್ತಮಃ**

ಅರ್ಜುನ ಉವಾಚ-ಅರ್ಜುನನು ಕೇಳಿದನು.

**ಅರ್ಥ:** ಕೃಷ್ಣ=ಓ ಕೃಷ್ಣಾ! ಯೇ=ಯಾರು; ಶಾಸ್ತ್ರ ವಿಧಿಂ=ಶಾಸ್ತ್ರೋಕ್ತ ವಿಧಾನವನ್ನು; ಉತ್ಸೃಜ್ಯ=ಬಿಟ್ಟು; ಶ್ರದ್ಧಯಾ ಅನ್ವಿತಾಃ=ಶ್ರದ್ಧೆಯಿಂದ ಕೂಡಿದವರಾಗಿ; ಯಜಂತೇ=ಪೂಜಾದಿಗಳನ್ನು ಆಚರಿಸುತ್ತಿದ್ದಾರೋ; ತೇಷಾಂ=ಅವರ, ನಿಷ್ಠಾತು=ಸ್ಥಿತಿ (ಪ್ರವೃತ್ತಿ); ಕಾ=ಎಂತಹದು? ಸತ್ತ್ವಂ=ಸಾತ್ವಿಕವೇ; ಆಹೋ= ಇಲ್ಲದೆ; ರಜಃ=ರಾಜಸವೇ, (ಅಥವಾ=ಇಲ್ಲದೆ) ತಮಃ=ತಾಮಸವೇ?

**ತಾ॥** ಅರ್ಜುನನು ಕೇಳಿದನು-ಯಾರು ಶಾಸ್ತ್ರೋಕ್ತ ವಿಧಾನವನ್ನು ಬಿಟ್ಟು ಶ್ರದ್ಧೆಯಿಂದ ಪೂಜಾದಿಗಳನ್ನು ಆಚರಿಸುವರೋ ಅವರ ನಿಷ್ಠೆ ಸಾತ್ವಿಕ, ರಾಜಸಿಕ, ತಾಮಸಿಕಗಳಲ್ಲಿ ಯಾವ ಗುಂಪಿಗೆ ಸೇರಿದುದಾಗಿದೆ?

**ವ್ಯಾಖ್ಯೆ:** ಹಿಂದಿನ ಅಧ್ಯಾಯದ ಅಂತ್ಯದಲ್ಲಿ ಶಾಸ್ತ್ರ ವಿಧಿಯನ್ನು ಉಲ್ಲಂಘಿಸಿ

ಸ್ವೇಚ್ಛಾಚಾರರಾಗಿ ವರ್ತಿಸುವವರಿಗೆ ಮೋಕ್ಷವು ಸಿದ್ಧಿಸುವುದಿಲ್ಲವೆಂದು ಹೇಳಲಾಗಿದೆ. ಆದರೆ ಕೆಲವರು ಶಾಸ್ತ್ರನಿರ್ದಿಷ್ಟವಾದ ವಿಧಿ ನಿಷೇಧಗಳನ್ನು ಶ್ರಮವೆಂದೋ ಇಲ್ಲವೆ ಉದಾಸೀನದಿಂದಲೋ ಅವುಗಳನ್ನು ಕುರಿತು ತಿಳಿದುಕೊಳ್ಳಲು ಯತ್ನಿಸದೆ, ಶ್ರದ್ಧೆಯಿಂದ ಕೂಡಿದವರಾಗಿ ಆಸ್ತಿಕ ಬುದ್ಧಿಯಿಂದ ದೇವತಾದಿಗಳನ್ನು ಅರ್ಚಿಸುವವರಲ್ಲ! ಅಂತಹವರ ಪ್ರವೃತ್ತಿ ಎಂತಹದು? ಅದು ಸಾತ್ವಿಕವೇ, ರಾಜಸವೇ ಅಥವ ತಾಮಸವೇ ಎನ್ನುವುದು ಅರ್ಜುನನ ಪ್ರಶ್ನೆ.

ಅ॥ ಅರ್ಜುನನ ಈ ಪ್ರಶ್ನೆಗೆ ಭಗವಂತನು ಉತ್ತರವನ್ನು ನೀಡುತ್ತಿದ್ದಾನೆ-

**ಶ್ರೀ ಭಗವಾನುವಾಚ:**

**೨. ತ್ರಿವಿಧಾ ಭವತಿ ಶ್ರದ್ಧಾ ದೇಹಿನಾಂ ಸಾ ಸ್ವಭಾವಜಾ**
**ಸಾತ್ವಿಕೀ ರಾಜಸೀ ಚೈವ ತಾಮಸೀ ಚೇತಿ ತಾಂ ಶೃಣು**

ಶ್ರೀ ಭಗವಾನುವಾಚ-ಶ್ರೀ ಭಗವಂತನು ಹೇಳಿದನು-

**ಅರ್ಥ:** ದೇಹಿನಾಂ=ಪ್ರಾಣಿಗಳ; ಸ್ವಭಾವಜಾ=ಸ್ವಭಾವಗಳಿಂದ (ಪೂರ್ವಜನ್ಮ ಸಂಸ್ಕಾರಗಳಿಂದ ಉಂಟಾದ); ಸಾಶ್ರದ್ಧಾ=ಆ ಶ್ರದ್ಧೆ ಸಾತ್ವಿಕೀ= ಸತ್ವಗುಣ ಸಂಬಂಧವಾದ ಶ್ರದ್ಧೆಯೆಂದು; ರಾಜಸೀ ಚ ಏವ=ರಜೋಗುಣ ಸಂಬಂಧ ವಾದ ಶ್ರದ್ಧೆಯೆಂದು; ತಾಮಸಿ ಚ ಇತಿ=ತಮೋಗುಣ ಸಂಬಂಧವಾದ ಶ್ರದ್ಧೆಯೆಂದು; ತ್ರಿವಿಧಾ=ಮೂರು ವಿಧಗಳಾಗಿ; ಭವತಿ=ಇರುತ್ತದೆ; ತಾಂ=ಅದನ್ನು; ಶೃಣು=ಕೇಳು.

**ತಾ॥** ಶ್ರೀ ಭಗವಂತನು ಹೇಳಿದನು-ಪ್ರಾಣಿಗಳ ಸ್ವಭಾವದಿಂದ (ಪೂರ್ವ ಜನ್ಮ ಸಂಸ್ಕಾರದಿಂದ) ಉಂಟಾದ ಆ ಶ್ರದ್ಧೆ ಸಾತ್ವಿಕ, ರಾಜಸಿಕ, ತಾಮಸಿಕಗಳೆಂದು ಮೂರು ವಿಧವಾಗಿದೆ. ಅದನ್ನು ಕುರಿತು ಕೇಳು.

**ವ್ಯಾಖ್ಯೆ:** 'ಸಾ ಸ್ವಭಾವಜಾ'- ಎಂದು ಹೇಳುವುದರಿಂದ ಪೂರ್ವಜನ್ಮ ಸಂಸ್ಕಾರದಿಂದ, ಜನ್ಮಾಂತರ ವಾಸನಾಪ್ರಾಬಲ್ಯದಿಂದ ಅಂತಹ ಶ್ರದ್ಧೆ ಅವರಲ್ಲಿ ಸ್ವಭಾವವಾಗಿಯೇ ಜನಿಸುವುದೆಂದು ಭಾವ.

ಪ್ರ : ಶ್ರದ್ಧೆ ಎಷ್ಟು ವಿಧಗಳು? ಅವು ಯಾವುವು?

ಉ: ಮೂರು ವಿಧಗಳು. ಅವು ಕ್ರಮವಾಗಿ ೧) ಸಾತ್ವಿಕ ೨) ರಾಜಸಿಕ ೩) ತಾಮಸಿಕ ಶ್ರದ್ಧೆಗಳೆಂದು ಕರೆಯಲ್ಪಡುತ್ತವೆ.

ಪ್ರ : ಅಂತಹ ಶ್ರದ್ಧೆ ಜೀವಿಗಳಿಗೆ ಹೇಗೆ ಉಂಟಾಗುವುದು?

ಉ: ಸ್ವಭಾವವಾಗಿಯೇ ಅಂದರೆ ಜನ್ಮಾಂತರ ಸಂಸ್ಕಾರ ಪ್ರಾಬಲ್ಯದಿಂದ ಇಲ್ಲವೆ ಇಹಜನ್ಮ ಪ್ರಯತ್ನಾದಿಗಳಿಂದ ಸಹಜವಾಗಿಯೇ ಅದು ಜನಿಸುವುದು ಎಂದು ಭಾವ.

ಅ॥ ಶ್ರದ್ಧೆ (ಸಂಸ್ಕಾರ ಅಥವ ಗುಣ) ಮನುಜನ ಸ್ವರೂಪವೆಂದು ಹೇಳಲಾಗಿದೆ-

**೩. ಸತ್ವಾನುರೂಪಾ ಸರ್ವಸ್ಯ ಶ್ರದ್ಧಾ ಭವತಿ ಭಾರತ**
**ಶ್ರದ್ಧಾಮಯೋಽಯಂ ಪುರುಷೋ ಯೋ ಯಚ್ಛ್ರದ್ಧಸ್ಸ ಏವ ಸಃ**

**ಅರ್ಥ:** ಭಾರತ=ಓ ಅರ್ಜುನಾ! ಸರ್ವಸ್ಯ=ಸಮಸ್ತ ಜೀವಿಗಳಿಗೆ ಸತ್ವಾನುರೂಪ್ವ =ಅವರವರ (ಪೂರ್ವ ಜನ್ಮ ಸಂಸ್ಕಾರದಿಂದ ಕೂಡಿದ) ಅಂತಃಕರಣವನ್ನು ಅನುಸರಿಸಿದ; ಶ್ರದ್ಧಾ=ಶ್ರದ್ಧೆ (ಗುಣ, ಸಂಸ್ಕಾರ); ಭವತಿ=ಉಂಟಾಗುತ್ತದೆ; ಅಯಂ=ಈ; ಪುರುಷಃ=(ಪುರುಷನು) ಜೀವಿಯು; ಶ್ರದ್ಧಾಮಯಃ=ಶ್ರದ್ಧೆಯನ್ನು ಸ್ವರೂಪವಾಗಿ ಹೊಂದಿರುವವನು; ಯಃ=ಯಾರು; ಯಚ್ಛ್ರದ್ಧಃ=ಇಂತಹ ಶ್ರದ್ಧೆಯುಳ್ಳವನು; ಸಃ=ಆತನು ಸಃ ಏವ=ಅಂತಹ ಶ್ರದ್ಧೆ (ಭವತಿ=ಆಗುತ್ತಿದ್ದಾನೆ), (ಅಂತಹ ಶ್ರದ್ಧೆಯನ್ನು ಗ್ರಹಿಸಿ ತದ್ರೂಪನಾಗಿರುವನೆಂದು ಭಾವ).

**ತಾ॥** ಓ ಅರ್ಜುನಾ! ಸಮಸ್ತ ಜೀವಿಗಳಿಗೆ ಅವರವರ (ಪೂರ್ವ ಜನ್ಮ ಸಂಸ್ಕಾರದಿಂದ ಕೂಡಿದ) ಅಂತಃಕರಣಗಳಿಗೆ ಅನುಗುಣವಾಗಿ ಶ್ರದ್ಧೆ (ಗುಣ, ಸಂಸ್ಕಾರ) ಉಂಟಾಗುತ್ತದೆ. ಈ ಪುರುಷನು ಶ್ರದ್ಧೆಯನ್ನೇ ಸ್ವರೂಪವುಳ್ಳ ವನಾಗಿದ್ದಾನೆ. ಯಾವನು ಎಂತಹ ಶ್ರದ್ಧೆ ಹೊಂದಿರುವನೋ ಆತನು ಅಂತಹ ಶ್ರದ್ಧೆಯೇ ಆಗುತ್ತಿದ್ದಾನೆ (ಅಂತಹ ಶ್ರದ್ಧೆಯನ್ನು ಗ್ರಹಿಸಿ; ತದ್ರೂಪನಾಗುವನೆಂದು ಭಾವ).

**ವ್ಯಾಖ್ಯೆ:** ಮನಸ್ಸೇ (ಅಂತಃಕರಣವೇ) ಮನುಜನು (ಪ್ರತಿಬಿಂಬ ರೂಪ ಜೀವಿಯು); ಮನುಜನೇ ಮನಸ್ಸು. ಆದ್ದರಿಂದ ಮನಸ್ಸು ಶುದ್ಧರೂಪವಾಗಿದ್ದರೆ ಮನುಜನೂ ಶುದ್ಧ ರೂಪಿಯೇ ಆಗುತ್ತಿದ್ದಾನೆ. ಇಲ್ಲವೆ ಸತ್ವಾನುರೂಪ ಎನ್ನುವ ಪದದಲ್ಲಿ, ಸತ್ವವೆಂದರೆ ಅಂತಃಕರಣ. ಪ್ರತಿಯೊಬ್ಬರಿಗೂ ಅವರ ಜನ್ಮಾಂತರ ಸಂಸ್ಕಾರಗಳಿಂದ ಕೂಡಿದ ಅಂತಃಕರಣ ಹೇಗಿರುವುದೋ ಅಂತಹ ಶ್ರದ್ಧೆ, ಸಂಸ್ಕಾರ, ಗುಣ ಉಂಟಾಗುತ್ತವೆ. ಯಾವನು ಯಾವ ಶ್ರದ್ಧೆ ಯಾವ ಗುಣವನ್ನು ಹೊಂದಿರುವನೋ ಆತನು ಅಂತಹ ರೂಪವೇ ಆಗಿರುವನು. ಆದ್ದರಿಂದ ಮೊದಲನೆಯ ಮನುಜನು ತನ್ನ ಅಂತಃಕರಣವನ್ನು ಶುದ್ಧಗೊಳಿಸಿಕೊಂಡು ಸಾತ್ವಿಕ ಶ್ರದ್ಧಾವಂತನಾಗಿರಲು ಪ್ರಯತ್ನಿಸಿ, ಸಾಧನಾಭ್ಯಾಸದಿಂದ ಕ್ರಮವಾಗಿ ನಿರ್ಗುಣಾತ್ಮರೂಪಿಯಾಗಲು ಪ್ರಯತ್ನಿಸಬೇಕು. ಯಾವನ ಚಿತ್ತವು, ಯಾವ ಶ್ರದ್ಧೆ, ಗುಣ ಹೊಂದಿರುವುದೋ ತದನುಗುಣವಾದ ಪ್ರವೃತ್ತಿಯನ್ನೇ ಆತನು ಹೊಂದಿರುವುದರಿಂದ (ರಾಜಸಿಕ, ತಾಮಸಿಕ ಶ್ರದ್ಧೆಗಳನ್ನು ಹೊರದೂಡಿ) ಸಾತ್ವಿಕ ಶ್ರದ್ಧೆಯನ್ನು ಅವಲಂಬಿಸಿ ಕ್ರಮವಾಗಿ ಅದನ್ನೂ ದಾಟಿ ವಿಶುದ್ಧ ತತ್ವ (ಆತ್ಮ) ಸ್ಥಿತಿಯನ್ನು ಪಡೆದುಕೊಳ್ಳಬೇಕು. ಅದು ಆತನ ಯಥಾರ್ಥ ಸ್ವರೂಪ, ಸ್ಥಾನ.

ಪ್ರ : ಜೀವಿಗಳಿಗೆ ಎಂತಹ ಶ್ರದ್ಧೆ ಉಂಟಾಗುತ್ತದೆ?

ಉ: ಅವರ ಅಂತಃಕರಣ ಹೇಗಿದೆಯೋ ಅದಕ್ಕನುಗುಣವಾದ ಶ್ರದ್ಧೆ (ಗುಣ) ಉಂಟಾಗುತ್ತದೆ.

ಪ್ರ : ಮನುಜನು ಯಾವುದರಿಂದ ಪರಿಪೂರ್ಣನಾಗುವನು?

ಉ : ಶ್ರದ್ಧೆಯಿಂದ

ಪ್ರ : ಮನುಜನ ಸ್ವರೂಪವೇನು?

ಉ : ಆತನು ಎಂತಹ ಶ್ರದ್ಧೆ ಹೊಂದಿರುವನೋ ಅಂತಹ ಸ್ವರೂಪವನ್ನು ಹೊಂದಿರುವನು. (ಆದರೆ ಇದು ಪ್ರತಿಬಿಂಬಿತ ಜೀವರೂಪ. ವಾಸ್ತವವಾಗಿ ಬಿಂಬ ಭೂತವಾದ ಆತ್ಮವೇ ಆತನ ಸ್ವರೂಪ ಎಂದು ತಿಳಿಯಬೇಕು.)

ಅ॥ ಯಾವನು ಎಂತಹ ಶ್ರದ್ಧೆ ಹಾಗು ಗುಣ ಹೊಂದಿರುವನೋ ಅದಕ್ಕೆ ಅನುಗುಣವಾದ ಧ್ಯೇಯವನ್ನೇ ಆರಾಧಿಸುವನೆಂದು ಹೇಳಲಾಗುತ್ತಿದೆ-

**೪ ಯಜಂತೇ ಸಾತ್ವಿಕಾ ದೇವಾನ್ ಯಕ್ಷರಕ್ಷಾಂಸಿ ರಾಜಸಾಃ**
**ಪ್ರೇತಾನ್ ಭೂತಗಣಾಂಶ್ಚಾನ್ಯೇ ಯಜಂತೇ ತಾಮಸಾ ಜನಾಃ**

**ಅರ್ಥ:** ಸಾತ್ವಿಕಾಃ=ಸತ್ವಗುಣವುಳ್ಳವರು; ದೇವಾನ್=ದೇವತೆಗಳನ್ನು;

ಯಜಂತೇ=ಪೂಜಿಸುತ್ತಿದ್ದಾರೆ; ರಾಜಸಾಃ=ರಜೋಗುಣಿಗಳು: ಯಕ್ಷರಕ್ಷಾಂಸಿ= ಯಕ್ಷ, ರಾಕ್ಷಸರನ್ನು (ಯಜಂತೇ=ಪೂಜಿಸುತ್ತಿದ್ದಾರೆ), ಅನ್ಯೇ=ಇತರರಾದ; ತಾಮಸಾಃ ಜನಾಃ=ತಮೋಗುಣ ಹೊಂದಿರುವ ಜನರು; ಪ್ರೇತಾನ್= ಪ್ರೇತಗಳನ್ನು; ಭೂತಗಣಾಂಶ್ಚ=ಭೂತಗಣಗಳನ್ನು; ಯಜಂತೇ= ಪೂಜಿಸುತ್ತಿದ್ದಾರೆ;

**ತಾ॥** ಸತ್ವಗುಣವುಳ್ಳವರು ದೇವತೆಗಳನ್ನು, ರಜೋಗುಣವುಳ್ಳವರು ಯಕ್ಷ, ರಾಕ್ಷಸರನ್ನು; ತಮೋ ಗುಣಿಗಳು ಭೂತ ಪ್ರೇತಗಣಗಳನ್ನು ಪೂಜಿಸುತ್ತಿರುವರು.

**ವ್ಯಾಖ್ಯೆ :** ಯಾರು ಯಾರು ಯಾವ ಗುಣಗಳನ್ನು ಹೊಂದಿರುವರೋ ಅವರ ಸ್ವಭಾವ, ನಡತೆ, ಆಹಾರ, ಮಾತು, ಓದುವ ಗ್ರಂಥಗಳು, ಪೂಜಿಸುವ ದೇವರುಗಳು, ಅದಕ್ಕೆ ಅನುಗುಣವಾಗಿಯೇ ಇರುವುವು. ಈ ವಿಷಯವನ್ನು ಈಗಾಗಲೇ ೧೪ನೆಯ ಅಧ್ಯಾಯದಲ್ಲಿ ತಿಳಿಸಲಾಗಿದೆ. ಭಾವವು ದೃಢಪಡಲೆಂದು ಮತ್ತೊಮ್ಮೆ ಹೇಳಲಾಗಿದೆ.

**ಅ॥** ಅಸುರ ಸ್ವಭಾವದವರು ಆಚರಿಸುವ ಘೋರ ತಪಸ್ಸುಗಳು ತ್ಯಾಜ್ಯಗಳೆಂದು ಎರಡು ಶ್ಲೋಕಗಳ ಮೂಲಕ ಹೇಳಲಾಗಿದೆ-

**೫ ಅಶಾಸ್ತ್ರವಿಹಿತಂ ಘೋರಂ ತಪ್ಯಂತೇ ಯೇ ತಪೋ ಜನಾಃ**
**ದಂಭಾಹಂಕಾರಸಂಯುಕ್ತಾಃ ಕಾಮರಾಗಬಲಾನ್ವಿತಾಃ**
**೬ ಕರ್ಶಯಂತಃ ಶರೀರಸ್ಥಂ ಭೂತಗ್ರಾಮಮಚೇತಸಃ**
**ಮಾಂ ಚೈವಾಂತಃಶರೀರಸ್ಥಂ ತಾನ್ವಿದ್ಧ್ಯಾಸುರನಿಶ್ಚಯಾನ್**

**ಅರ್ಥ:** ಯೇ ಜನಾಃ=ಯಾವ ಜನರು; ಶರೀರಸ್ಥಂ=ಶರೀರದಲ್ಲಿ ಇರುವಂತಹ; ಭೂತಗ್ರಾಮಂ=ಪಂಚಭೂತ ಸಮೂಹಗಳನ್ನು ಇಲ್ಲವೆ ಇಂದ್ರಿಯ ಸಮೂಹಗಳನ್ನು; ಕರ್ಶಯಂತಃ=ಉಪವಾಸಾದಿಗಳಿಂದ ಶೋಷಿಸಿ; ಅಂತಃ ಶರೀರಸ್ಥಂ=ಶರೀರದಲ್ಲಿ ಅಂತರ್ಯಾಮಿಯಾದ; ಮಾಂ ಚ ಏವ=ನನ್ನನ್ನೂ; ಕರ್ಶ್ಯಂತಃ=ಶೋಷಿಸುವವರನ್ನು (ಕಷ್ಟಕೊಡುವವರನ್ನು); ದಂಭಾಹಂಕಾರ ಸಂಯುಕ್ತಾಃ=ದಂಭ, ಅಹಂಕಾರದಿಂದ ಕೂಡಿದವರು ಕಾಮರಾಗ ಬಲಾನ್ವಿತಾಃ=ಕಾಮ, ರಾಗ (ಆಸಕ್ತಿ), (ಪಶು) ಬಲವಿರುವವರು; ಅಚೇತಸಃ= ಅವಿವೇಕಿಗಳು ಆಗಿ; ಅಶಾಸ್ತ್ರವಿಹಿತಂ=ಶಾಸ್ತ್ರಗಳಲ್ಲಿ ನಿಯಮಿಸಲ್ಪಡದೆ ಇರುವುದು; ಘೋರಂ=ತನಗೂ ಹಾಗೂ ಇತರರಿಗೆ ಬಾಧೆಯುಳ್ಳದ್ದಾಗಿರು ವುದು; ತಪಃ=ತಪಸ್ಸನ್ನು; ತಪ್ಯಂತೇ=ಆಚರಿಸುತ್ತಿರುವರೋ; ತಾನ್=ಅವರನ್ನು; ಅಸುರ ನಿಶ್ಚಯಾನ್=ಅಸುರ ಸ್ವಭಾವವುಳ್ಳವರೆಂದು; ವಿದ್ಧಿ=ತಿಳಿದು ಕೊಳ್ಳುವುದು.

**ತಾ॥** ಯಾವ ಜನರು ಶರೀರದಲ್ಲಿರುವ ಪಂಚಭೂತ ಸಮುದಾಯಗಳನ್ನು ಇಲ್ಲವೆ ಇಂದ್ರಿಯ ಸಮೂಹಗಳನ್ನು (ಉಪವಾಸಾದಿಗಳಿಂದ) ಶೋಷಿ ಸುವರೋ, ಹಾಗೆಯೇ ಈ ಶರೀರದಲ್ಲಿ ಅಂತರ್ಯಾಮಿಯಾಗಿರುವ ನನ್ನನ್ನು ಕ್ಲೇಶಗೊಳಿಸುವರೋ, ದಂಭಾಹಂಕಾರಗಳಿಂದ ಕೂಡಿ ಕಾಮ, ರಾಗಗಳ (ಆಸಕ್ತಿ) ಪಶುಬಲ ಹೊಂದಿದ್ದು ಅವಿವೇಕಿಗಳಾಗಿ ಶಾಸ್ತ್ರಗಳಲ್ಲಿ ವಿಧಿಸದೇ ಇರುವ, ತಮಗೂ ಹಾಗೂ ಇತರರಿಗೂ ತೊಂದರೆ ಯುಂಟುಮಾಡುವ ವರ್ತನೆಗಳನ್ನು ಆಚರಿಸುವರೋ, ಅವರು ಅಸುರ ಸ್ವಭಾವವುಳ್ಳವರು ಎಂದು ತಿಳಿಯುವುದು.

**ವ್ಯಾಖ್ಯೆ:** *'ಅಶಾಸ್ತ್ರವಿಹಿತಂ'*-ಶಾಸ್ತ್ರಗಳಲ್ಲಿ ವಿಧಿಸದ ಕಾರ್ಯಗಳನ್ನು ಯಾರೂ ಮಾಡಬಾರದೆಂದು ಗೀತೆ ಶಾಸಿಸುತ್ತದೆ. ಘೋರ ತಪಸ್ಸುಗಳು, ಭಯಂಕರ ವಾದ ರಾಜಸ, ತಾಮಸ ಕ್ರಿಯೆಗಳು ಶಾಸ್ತ್ರ ವಿಹಿತಗಳಲ್ಲ. ಆದ್ದರಿಂದ ಇಂತಹ ಶಾಸ್ತ್ರವಿರುದ್ಧವಾದ ಕ್ರಿಯೆಗಳು ನಿಂದಾರ್ಹವೇ ಸರಿ.

*'ತಪ್ಯಂತೇ ಯೇ ತಪೋಜನಾಃ'*- ವಾಸ್ತವವಾಗಿ ತಪಸ್ಸೆಂದರೆ ಅಂತಃಕರಣ ದಲ್ಲಿರುವ ದೋಷಗಳನ್ನು ಭಸ್ಮಗೊಳಿಸುವುದೇ ಆಗಲಿ ದೇಹಾದಿಗಳನ್ನು ಕ್ಷೀಣಿಸುವುದಲ್ಲ ಎನ್ನುವುದನ್ನು ತಿಳಿಯಬೇಕು. ಆದ್ದರಿಂದ ಅಂತಹ ತಪಸ್ಸುಗಳನ್ನು ಆಶ್ರಯಿಸಬೇಕೇ ಹೊರತು ತನಗೆ ಹಾಗು ಇತರರಿಗೆ ಉಪದ್ರವವಾದ ಕ್ರೂರತಪಸ್ಸುಗಳನ್ನು (ರಾವಣ, ಹಿರಣ್ಯ ಕಶಿಪುಗಳಂತೆ) ಆಚರಿಸಬಾರದು.

*'ಕಾಮರಾಗಬಲಾನ್ವಿತಾಃ'*- ಪ್ರಾಪಂಚಿಕ ಬಲಗಳೆಷ್ಟಿದ್ದರೂ, ದೈವಬಲ ವಿಲ್ಲದಿದ್ದಲ್ಲಿ ಅವೆಲ್ಲವೂ ನಿರುಪಯೋಗಗಳೇ. ಕ್ಷುದ್ರ ಬಲವುಳ್ಳವರು, ದೈವಗಂಧವಿಲ್ಲದವರು ಯಾರಾದರೂ ಸರಿಯೇ, ರಾಕ್ಷಸರೇ ಹೌದು. ಕಾಮರಾಗಗಳು ಮಾನವರ ಮಾನವತ್ವವನ್ನು, ಅಂತರ್ಗತವಾಗಿರುವ ದೇವತ್ವವನ್ನು ಹರಿಸಿ, ಅವರ ಪಾರಮಾರ್ಥಿಕತೆಯನ್ನು ಹೀರಿ ಹಿಪ್ಪೆ ಮಾಡಿ, ನಿಜಾತ್ಮ ಸ್ವರೂಪವನ್ನು ಮುಚ್ಚಿ ಅವರನ್ನು ರಾಕ್ಷಸರನ್ನಾಗಿ ಮಾಡುವುವು. ಆದ್ದರಿಂದ ಅವುಗಳನ್ನು ತ್ಯಜಿಸಬೇಕು. ಅಸುರ ಸ್ವಭಾವಿಗಳಿಗೆ ಕಾಮರಾಗವೇ ಬಲ; ದೈವೀ ಸಂಪದವುಳ್ಳವರಿಗೆ ಭಕ್ತಿ ಜ್ಞಾನಗಳೇ ಬಲ. ಆದ್ದರಿಂದ ಕಾಮ, ರಾಗ ಬಲಗಳನ್ನು ತ್ಯಜಿಸಿ ಭಕ್ತಿ, ಜ್ಞಾನಾದಿಗಳನ್ನು ಸ್ವೀಕರಿಸಬೇಕು.

*'ಕರ್ಶ್ಯಯಂತಃ ಶರೀರಸ್ಥಂ ಭೂತಗ್ರಾಮಂ'*- ಶುಷ್ಕೋಪವಾಸಗಳಿಂದ ಇಂದ್ರಿಯಾದಿಗಳ ಶೋಷಣೆ ಮಾಡುವವರನ್ನು ಅಸುರ ಸ್ವಭಾವಿಗಳೆಂದು ಹೇಳಲಾಗಿದೆ. ದೇಹಾರೋಗ್ಯಕ್ಕಾಗಿ ವ್ರತಾದಿಗಳ ನಿಮಿತ್ತ ಉಪವಾಸಗಳನ್ನು ಆಗಾಗ ಆಚರಿಸುವುದು ಒಳ್ಳೆಯದೇ ಆಗಲಿ, ಅದು ಮಿತವನ್ನು ಮೀರಬಾರದು. ಹಾಗೆ ಮಿತ ತಪ್ಪಿದಲ್ಲಿ ಅದು ಆಸುರೀ ತಪಸ್ಸೇ ಆಗುವುದು. ಹುತ್ತವನ್ನು ಬಡಿದರೆ ಹಾವು ಸಾಯುವುದಿಲ್ಲ. ಆದ್ದರಿಂದ ದೀರ್ಘೋಪವಾಸಾದಿಗಳಿಂದ ಒಳಗಿರುವ ದುರ್ವಾಸನಾ ಸಂಸ್ಕಾರಗಳು ನಶಿಸುವುದಿಲ್ಲ. ಕೆಲವರು ತಮ್ಮ ಉಪವಾಸಾದಿಗಳನ್ನು ಕುರಿತು ದೊಡ್ಡದಾಗಿ ಹೇಳಿಕೊಳ್ಳುವರು. ಆದರೆ ಭಗವಂತನು ಈ ಶ್ಲೋಕದಲ್ಲಿ ಅವರನ್ನು ಮೆಚ್ಚಲಿಲ್ಲ. ಮೇಲಾಗಿ ಹಾಗೆ ದೇಹಾದಿಗಳನ್ನು ಶೋಷಣೆ ಮಾಡುವವರನ್ನು ಅಸುರ ಸ್ವಭಾವಿಗಳೆಂದು ಕರೆದನು. ಆದ್ದರಿಂದ ಸಾಧಕರು ಈ ವಿಷಯದಲ್ಲಿ ಜಾಗರೂಕರಾಗಿದ್ದು ಭಗವಂತನು ಆದೇಶಿಸಿದ ಹಾಗೆ 'ಯುಕ್ತಾಹಾರ ವಿಹಾರಿಗಳಾಗಿ' ಮಾನವ ಸ್ಥಿತಿಯಿಂದ ದೈವಸ್ಥಿತಿಗೆ ಹೋಗಬೇಕಾಗಲೀ ಅಸುರ ಸ್ಥಿತಿಗೆ ಇಳಿಯಬಾರದು.

*'ಮಾಂ ಚೈವಾಂತಃ ಶರೀರಸ್ಥಂ'*- 'ಅಂತಹ ಶುಷ್ಕೋಪವಾಸಾದಿಗಳ ಮೂಲಕ ಅವರ ಶರೀರದ ಒಳಗಿರುವ ನನ್ನನ್ನು (ಭಗವಂತನನ್ನು) ಕೂಡ ಕೃಶಿಗೊಳ್ಳುವಂತೆ ಮಾಡುತ್ತಿದ್ದಾರೆಂದು' ಶ್ರೀ ಕೃಷ್ಣಪರಮಾತ್ಮನು ಇಲ್ಲಿ ಹೇಳಿರುವನು. ವಾಸ್ತವವಾಗಿ ವಿಚಾರಿಸಿದರೆ ನಿರ್ವಿಕಾರನು ಕೃಷಿಗೊಳ್ಳು ವುದೇನು? ಆದರೂ ಅಂತಹವರ ಶರೀರವನ್ನು ತೃಣೀಕರಿಸುವ ಚರ್ಯೆ ಯನ್ನು ಅಲ್ಲಗಳೆದು ಭಗವಂತನು ಹೀಗೆ ಹೇಳಿರುವನು. ಇಲ್ಲಿ ಕೃಶಿಗೊಳ್ಳುವಂತೆ ಮಾಡುವುದೆಂದರೆ ಆತನ ಆಜ್ಞೆಯನ್ನು ನಿರಾಕರಿಸಿದಂತೆ ಎಂದು ತಿಳಿಯುವುದು. 'ಅಂತಃ ಶರೀರಸ್ಥಂ' ಎನ್ನುವ ಪದದಿಂದ ಭಗವಂತನು ಎಲ್ಲೋ ದೂರವಿಲ್ಲವೆಂದು ಪ್ರತಿಯೊಬ್ಬರ ಶರೀರದಲ್ಲಿ (ಪಂಚಕೋಶಾಂತರ್ಗತನಾಗಿ) ಇರುವವನೆಂದು ಸ್ಪಷ್ಟವಾಗುತ್ತದೆ. ಆದ್ದರಿಂದ ಪಾಪಾಚರಣೆಗಳನ್ನು ತ್ಯಜಿಸಿ, ವಿವೇಕ ವಿಚಾರಣಾದಿಗಳಿಂದ ಪಂಚಕೋಶಗಳನ್ನು ಬೇರ್ಪಡಿಸಿ, ನಿಜ ಶರೀರದಲ್ಲಿಯೇ ಭಗವಂತನನ್ನು ಕಂಡು ಜನರು ಕೃತಾರ್ಥರಾಗಬೇಕು. ಮತ್ತೆ ಶುಷ್ಕೋಪವಾಸಾದಿಗಳಿಂದ ಒಳಗಿರುವ ಆತ್ಮವನ್ನು ಬಾಧಿಸದೆ ಮಧ್ಯಮಾರ್ಗ

ವನ್ನನುಸರಿಸಿ, ಮಿತಾಹಾರ, ಸಾತ್ವಿಕಾಹಾರಗಳನ್ನು ಅವಲಂಬಿಸಿ, ಧ್ಯಾನಾದಿಗಳಿಂದ ದೈವಾನುಭೂತಿಯನ್ನು ಪಡೆದು ಕೃತಕೃತ್ಯರಾಗಬೇಕು.

ಪ್ರ : ಅಸುರ ಸ್ವಭಾವವುಳ್ಳವರು ಯಾರು?

ಉ : ೧) ದಂಭ, ಅಂಹಕಾರವುಳ್ಳವರಾಗಿ ೨) ಕಾಮ, ರಾಗ (ಪಶು) ಬಲವುಳ್ಳವರಾಗಿ ೩) ಅವಿವೇಕಿಗಳಾಗಿ ೪) ಶಾಸ್ತ್ರಗಳಲ್ಲಿ ವಿಧಿಸದೆ ಇರುವ ಘೋರತಪಸ್ಸುಗಳನ್ನು ಮಾಡುತ್ತ ಇಂದ್ರಿಯಾದಿಗಳನ್ನು ಶೋಷಿಸುತ್ತಾ ಶರೀರಾಂತರ್ಗತನಾದ ಪರಮಾತ್ಮನ್ನು ಬಾಧೆಗೊಳಿಸುವವರು ಅಸುರ ಸ್ವಭಾವಿಗಳು.

ಪ್ರ : ಆದ್ದರಿಂದ ವಿಜ್ಞುವಾದವನು ಏನು ಮಾಡಬೇಕು?

ಉ : ದಂಭ, ಅಹಂಕಾರ, ಕಾಮ, ರಾಗಗಳನ್ನು ತ್ಯಜಿಸಿ ವಿವೇಕವಂತನಾಗಿ, ಶಾಸ್ತ್ರೋಕ್ತ ರೀತಿಯನ್ನು ಅನುಸರಿಸುತ್ತ ಶುಷ್ಕೋಪವಾಸಾದಿಗಳನ್ನು ಆಶ್ರಯಿಸದೇ, ಮಿತಾಹಾರವನ್ನು ಸೇವಿಸುತ್ತ ಅಂತರ್ಗತವಾಗಿರುವ ಪರಮಾತ್ಮನನ್ನು ಭಕ್ತಿಪೂರ್ವಕವಾಗಿ ಧ್ಯಾನಿಸಬೇಕು.

**ಅ॥** ಇನ್ನು ಮೂರು ವಿಧಗಳಾದ ಆಹಾರ, ಯಜ್ಞ, ತಪಸ್ಸು, ದಾನಗಳನ್ನು ಕುರಿತು ಹೇಳುತ್ತಿದ್ದಾನೆ-

**೭. ಆಹಾರಸ್ತ್ವಪಿ ಸರ್ವಸ್ಯ ತ್ರಿವಿಧೋ ಭವತಿ ಪ್ರಿಯಃ**
**ಯಜ್ಞಸ್ತಪಸ್ತಥಾ ದಾನಂ ತೇಷಾಂ ಭೇದಮಿಮಂ ಶೃಣು**

**ಅರ್ಥ:** ಆಹಾರಃ ತು ಅಪಿ=ಆಹಾರವೂ ಕೂಡ; ಸರ್ವಸ್ಯ=ಸರ್ವರಿಗೂ; ತ್ರಿವಿಧಃ=(ಸತ್ವಾದಿ ಗುಣಗಳ ಪ್ರಕಾರ) ಮೂರು ವಿಧಗಳಾಗಿ; ಪ್ರಿಯಃ ಭವತಿ= ಇಷ್ಟವಾಗುತ್ತದೆ; ತಥಾ=ಹಾಗೆಯೇ; ಯಜ್ಞಃ=ಯಜ್ಞವು; ತಪಃ=ತಪಸ್ಸು; ದಾನಂ=ದಾನವು(ಸಹ); ತ್ರಿವಿಧಃ ಪ್ರಿಯಭವತಿ=ಮೂರು ವಿಧಗಳಾಗಿ ಇಷ್ಟವಾಗುತ್ತದೆ; ತೇಷಾಂ=ಅವುಗಳ; ಇಮಂ=ಈ; ಭೇದಂ=ಭೇದವನ್ನು; ಶೃಣು=ಕೇಳು.

**ತಾ॥** ಆಹಾರವೂ ಕೂಡ ಸರ್ವರಿಗೂ (ಸತ್ವಾದಿಗುಣಗಳ ಪ್ರಕಾರ) ಮೂರು ವಿಧಗಳಾಗಿ ಇಷ್ಟವಾದದ್ದಾಗಿರುತ್ತದೆ. ಹಾಗೆಯೇ ಯಜ್ಞ, ತಪಸ್ಸು, ದಾನಗಳೂ ಸಹ ಮೂರು ವಿಧಗಳಾಗಿವೆ. ಆ ಆಹಾರಾದಿಗಳ ಭೇದವನ್ನು ಕುರಿತು (ಹೇಳುವೆನು) ಕೇಳು.

**ವ್ಯಾಖ್ಯೆ:** ಆಹಾರವೇ ಮುಂತಾದ ನಾಲ್ಕು ಸಾಧನೆಗಳ ಬಗ್ಗೆ ಹೇಳಬೇಕೆಂದು ಕೊಂಡು ಭಗವಂತನು ಅವುಗಳಲ್ಲಿ ಮೊಟ್ಟಮೊದಲಿಗೆ ಆಹಾರವನ್ನು ಪ್ರಸ್ತಾಪಿಸಿರುವುದು ಗಮನಾರ್ಹ. ಜೀವಿಯ ಆಧ್ಯಾತ್ಮಿಕ ಸಾಧನಾಕ್ರಮಗಳಲ್ಲಿ ಆಹಾರ ಸಾಧನೆ ಪ್ರಪ್ರಥಮವಾದುದು. ಆಹಾರ ಶುದ್ಧಿಯಿಂದ ಚಿತ್ತಶುದ್ಧಿ, ಚಿತ್ತಶುದ್ಧಿಯಿಂದ ಜ್ಞಾನೋದಯವು ಸಂಭವಿಸುವುದು. ಆಹಾರವು ಶುದ್ಧವಾಗಿಲ್ಲದೆ ಇದ್ದಲ್ಲಿ ಮನಸ್ಸು ಕೂಡ ಮಲಿನವಾಗಿ ಅದರಿಂದ ಲಕ್ಷ್ಯಪ್ರಾಪ್ತಿಯಾಗುವುದಿಲ್ಲ.

ಪ್ರ : ಆಹಾರ, ಯಜ್ಞ, ತಪಸ್ಸು, ದಾನ ಜನಗಳಿಗೆ ಎಷ್ಟು ವಿಧವಾಗಿ ಪ್ರಿಯವಾಗಿರುವುವು?

ಉ: ಅವರವರ ಗುಣಗಳನ್ನು ಅನುಸರಿಸಿ ಮೂರು ವಿಧಗಳಾಗಿರುವುವು. (ಸತ್ವಗುಣವುಳ್ಳವರಿಗೆ ಸಾತ್ವಿಕ ಆಹಾರ-ಈ ಪ್ರಕಾರವಾಗಿ)

**ಅ॥** ಅದರಲ್ಲಿ ಸಾತ್ವಿಕ ಆಹಾರವನ್ನು ಕುರಿತು ಹೇಳಲಾಗಿದೆ-

**೮ ಆಯುಃಸತ್ತ್ವಬಲಾರೋಗ್ಯಸುಖಪ್ರೀತಿವಿವರ್ಧನಾಃ**
**ರಸ್ಯಾಃ ಸ್ನಿಗ್ಧಾಃ ಸ್ಥಿರಾ ಹೃದ್ಯಾ ಆಹಾರಾಃ ಸಾತ್ವಿಕಪ್ರಿಯಾಃ**

**ಅರ್ಥ:** ಆಯುಃಸತ್ವ ಬಲಾರೋಗ್ಯ ಸುಖ ಪ್ರೀತಿ ವಿವರ್ಧನಃ=ಆಯುಸ್ಸು, ಮನೋಬಲ, ಶರೀರಬಲ, ಆರೋಗ್ಯ, ಸೌಖ್ಯ, ಪ್ರೀತಿಯನ್ನು ವೃದ್ಧಿ ಹೊಂದುವಂತೆ ಮಾಡುವ; ರಸ್ಯಾಃ=ರಸಯುಕ್ತವಾದ; ಸ್ನಿಗ್ಧಾಃ=ಎಣ್ಣೆ ಉಳ್ಳವುಗಳಾದ; ಸ್ಥಿರಾಃ=ದೇಹದಲ್ಲಿ ಸ್ವಲ್ಪ ಕಾಲ ಸ್ಥಿರವಾಗಿರುವ; ಹೃದ್ಯಾಃ= ಹೃದಯಪ್ರಿಯವಾದ: ಆಹಾರಾಃ=ಆಹಾರಗಳು; ಸಾತ್ವಿಕ ಪ್ರಿಯಾಃ= ಸತ್ವಗುಣವುಳ್ಳವರಿಗೆ ಇಷ್ಟವಾಗಿರುವುವು.

**ತಾ॥** ಆಯುಸ್ಸು, ಮನೋಬಲ, ದೇಹಬಲ, ಆರೋಗ್ಯ, ಸೌಖ್ಯ ಪ್ರೀತಿಯನ್ನು ಚೆನ್ನಾಗಿ ವೃದ್ಧಿಗೊಳಿಸುವಂತಹ, ರಸಯುಕ್ತವಾದ ಸ್ನಿಗ್ಧ ಪದಾರ್ಥಗಳು (ಎಣ್ಣೆ) ಹಾಗು ದೇಹದಲ್ಲಿ ಸ್ವಲ್ಪ ಕಾಲ ಸ್ಥಿರವಾಗಿ ನಿಲ್ಲುವ ಹೃದಯಪ್ರಿಯವಾದ ಆಹಾರಗಳು ಸತ್ವಗುಣಿಗಳಿಗೆ ಪ್ರಿಯವಾಗಿರುವುವು.

**ವ್ಯಾಖ್ಯೆ:** ಜನರಲ್ಲಿ ಸತ್ವಗುಣ ಅಭಿವೃದ್ಧಿ ಹೊಂದಿದಾಗ ಇಂತಹ ಆಹಾರ ಅವರಿಗೆ ರುಚಿಸುವುದೆಂದು ಭಾವ. ಅಂದರೆ ಖಾರ, ಹುಳಿಯಿಂದ ಕೂಡಿದ ರಾಜಸಿಕ ಹಾಗು ತಾಮಸಿಕವಾದ ಆಹಾರ ಅವರಿಗೆ ಯಾವಾಗಲೂ ಇಷ್ಟವಾಗುವುದಿಲ್ಲ. ಮೇಲೆ ತಿಳಿಸಿದ ಸಾತ್ವಿಕ ಆಹಾರವೇ ಅವರಿಗೆ ಇಷ್ಟವಾಗುವುದು. ಧ್ಯಾನಾದಿಗಳಿಗೆ ಇಂತಹ ಆಹಾರ ಹೆಚ್ಚಾಗಿ ಅನುಕೂಲವಾಗುವುದು. ಆಹಾರದ ವಿಷಯ ಪರಮಾರ್ಥರಂಗದಲ್ಲಿ ಮುಖ್ಯವಾದುದು. ಆದುದರಿಂದ ಶ್ರೀಕೃಷ್ಣಮೂರ್ತಿ ಗೀತೆಯಲ್ಲಿ ಅನೇಕ ಕಡೆ ಅದರ ಪ್ರಸ್ತಾಪ ಮಾಡಿರುವನು. ಆದ್ದರಿಂದ ಮುಮುಕ್ಷುಗಳು ಆಹಾರ ಸಂಯಮವನ್ನು ಚಿಕ್ಕ ವಿಷಯವೆಂದು ನಿರ್ಲಕ್ಷಿಸದೆ ಬ್ರಹ್ಮಮಾರ್ಗದಲ್ಲಿ ಪ್ರಾಮುಖ್ಯ ಸ್ಥಾನವನ್ನು ಆಕ್ರಮಿಸಿದೆಯೆಂದು ತಿಳಿದು ಸಾತ್ವಿಕಾಹಾರವನ್ನೇ ಸೇವಿಸಬೇಕು.

ಪ್ರ : ಸಾತ್ವಿಕ ಆಹಾರ ಎಂತಹದು?

ಉ : ೧) ಆಯು, ಮನೋ, ಶರೀರ, ಆರೋಗ್ಯ, ಸುಖ, ಪ್ರೀತಿಯನ್ನು ಚೆನ್ನಾಗಿ ಅಭಿವೃದ್ಧಿ ಹೊಂದಿಸುವುಂತಹ ೨) ರಸವುಳ್ಳ ೩) ಎಣ್ಣೆಯಿಂದ ಕೂಡಿರುವ ೪) ದೇಹದಲ್ಲಿ ಸ್ವಲ್ಪ ಕಾಲದವರೆಗೆ ಇರುವಂತಹ ೫) ಹೃದಯಪ್ರಿಯವಾದಂತಹ ಆಹಾರವನ್ನು ಸಾತ್ವಿಕ ಆಹಾರವೆಂದು ಕರೆಯುವರು.

**ಅ॥** ರಾಜಸ ಆಹಾರ ವಿವರಿಸಲ್ಪಡುತ್ತಿದೆ

**೯ ಕಟ್ವಾಮ್ಲಲವಣಾತ್ಯುಷ್ಣತೀಕ್ಷ್ಣ ರೂಕ್ಷವಿದಾಹಿನಃ**
**ಆಹಾರಾ ರಾಜಸ ಸ್ಯೇಷ್ಟಾ ದುಃಖಶೋಕಾಮಯಪ್ರದಾಃ**

**ಅರ್ಥ:** ಕಟು=ಕಹಿ; ಆಮ್ಲ=ಹುಳಿಯಾಗಿ; ಲವಣಾ=ಉಪ್ಪಾಗಿ; ಅತ್ಯುಷ್ಣ= ಹೆಚ್ಚಿಗೆ ಬಿಸಿಯಾಗಿ; ತೀಕ್ಷ್ಣ=ಖಾರವಾಗಿ; ರೂಕ್ಷ=ಸ್ನಿಗ್ಧವಿಲ್ಲದ್ದು; ವಿದಾಹಿನಃ= ಬಾಯಾರಿಕೆ ಉಂಟುಮಾಡುವಂತಹ; ದುಃಖ ಶೋಕಾಮಯ ಪ್ರದಾಃ= (ಶರೀರಕ್ಕೆ) ದುಃಖವನ್ನು (ಮನಸ್ಸಿಗೆ) ವ್ಯಾಕುಲತೆಯನ್ನು, ರೋಗವನ್ನುಂಟು ಮಾಡುವ; ಆಹಾರಾಃ=ಆಹಾರ ಪದಾರ್ಥಗಳು: ರಾಜಸಸ್ಯ=ರಜೋಗುಣ ವುಳ್ಳವರಿಗೆ; ಇಷ್ಟಾಃ=ಪ್ರಿಯವಾದವು (ಆಗಿವೆ).

**ತಾ॥** ಕಹಿ, ಹುಳಿ, ಉಪ್ಪು, ಬಹಳ ಬಿಸಿಯಾದ, ಖಾರವಾದ, ಸ್ನಿಗ್ಧವಿಲ್ಲದೇ

ಇರುವ, (ಶರೀರಕ್ಕೆ) ದುಃಖವನ್ನು (ಮನಸ್ಸಿಗೆ) ವ್ಯಾಕುಲತೆಯನ್ನು ಉಂಟು ಮಾಡುವ ಆಹಾರ ಪದಾರ್ಥಗಳು ರಜೋಗುಣವಿರುವವರಿಗೆ ಇಷ್ಟವಾಗುವುವು.

**ವ್ಯಾಖ್ಯೆ:** ಈ ಶ್ಲೋಕದಲ್ಲಿ ತಿಳಿಸಲ್ಪಟ್ಟ ಆಹಾರ ಪದಾರ್ಥಗಳು ರಾಜಸಿಕವಾದವುಗಳೆಂದು ಹೇಳಿರುವುದರಿಂದ ಅವು ಸರ್ವಥಾ ತ್ಯಾಜ್ಯಗಳೇ ಆಗಿವೆ.

*'ದುಃಖ ಶೋಕಾಮಯ ಪ್ರದಾಃ'*- ಇಲ್ಲಿ ದುಃಖವೆಂದರೆ ಭುಜಿಸಿದ ತಕ್ಷಣವೇ ಶರೀರಾದಿಗಳಿಗೆ ಉಂಟಾಗುವ ಬಾಧೆಯೆಂದೂ, ಶೋಕವೆಂದರೆ ಭುಜಿಸಿದ ನಂತರ ಮನಸ್ಸಿಗೆ ಉಂಟಾಗುವ ಕ್ಲೇಶವೆಂದು ಗ್ರಹಿಸಬೇಕು.

ಕೆಲವರು 'ಉಷ್ಣ' ಎನ್ನುವ ಪದದ ಮುಂದಿರುವ 'ಅತಿ' ಎನ್ನುವ ವಿಶೇಷಣವನ್ನು ಕಟ್ವಾದಿ ಪದಗಳಿಗೆ ಅನ್ವಯಿಸಿ ಅರ್ಥ ಹೇಳುವರು. ಆದರೆ ಹಾಗೆ ಹೇಳುವುದು ಸಮಂಜಸವಾಗಿ ಕಾಣಿಸುತ್ತಿಲ್ಲ. ಏಕೆಂದರೆ, ಆಗ 'ಅತಿಕಟುತ್ವ' ನಿಷಿದ್ಧವೆಂದು, ಅಲ್ಪ ಕಟುತ್ವ ಗ್ರಾಹ್ಯವೆಂದು ಅರ್ಥವಾಗುವುದು. ಅದು ಅಸಮಂಜಸವೇ ಆಗುವುದು (ಸ್ವಲ್ಪ ಕಹಿಯನ್ನು ಯಾರೂ ಇಷ್ಟಪಡುವುದಿಲ್ಲ) ಮತ್ತೆ 'ವಿದಾಹಿನಃ' ಎನ್ನುವ ಪದಕ್ಕೆ 'ಅತಿ' ಸೇರಿಸಿದರೆ 'ಅತಿ ವಿದಾಹಿನಃ' ಆಗುವುದು. ಆಗ 'ವಿ' ಎನ್ನುವ ಉಪಸರ್ಗದ ಮೇಲೆ ಮತ್ತೆ 'ಅತಿ' ಎನ್ನುವ ವಿಶೇಷಣವನ್ನು ಜೋಡಿಸುವುದು ಅಪ್ರಸ್ತುತವಾಗಿ ಕಾಣುವುದು (ಎರಡೂ ಒಂದೇ ಅರ್ಥ ಸೂಚಿಸುತ್ತವೆಯಾದ್ದರಿಂದ).

ರಾಜಸ ಸುಖದ ಲಕ್ಷಣ-ಪ್ರಾರಂಭದಲ್ಲಿ ಅಮೃತತುಲ್ಯವಾಗಿದ್ದು ಕೊನೆಗೆ ವಿಷ ಪ್ರಾಯವಾಗುವುದು ಎಂದು (೧೮ನೆಯ ಅಧ್ಯಾಯದಲ್ಲಿ ಬರುವುದು)- **"ವಿಷಯೇಂದ್ರಿಯ ಸಂಯೋಗಾದ್ಯತ್ತದಗ್ರೇಽಮೃತೋಪಮಮ್, ಪರಿಣಾಮೇ ವಿಷಮಿವ ತತ್ಸುಖಂ ರಾಜಸಂ ಸ್ಮೃತಮ್"** ಹಾಗೆಯೇ ಈ ರಾಜಸಾಹಾರ ಪ್ರಾರಂಭದಲ್ಲಿ ರುಚಿಯಾಗಿ ಕಾಣಬಹುದು. ಆದರೆ ಭುಜಿಸಿದ ಸ್ವಲ್ಪ ಹೊತ್ತಿಗೆ ದುಃಖವನ್ನು, ಹಾಗು ವ್ಯಾಕುಲತೆಯನ್ನುಂಟು ಮಾಡುವುದು. ನಿತ್ಯಜೀವನದಲ್ಲಿ ಇದನ್ನು ಅನೇಕರು ಅನುಭವಿಸುತ್ತಿರುತ್ತಾರೆ. ಮತ್ತೆ ರಜೋಗುಣಾತ್ಮಕವಾದ ಈ ಆಹಾರವನ್ನು ಭುಜಿಸುವವರಿಗೆ ಧ್ಯಾನವೂ ಕೂಡ ಸರಿಯಾಗಿ ನಡೆಯದು. ಚಿತ್ತವು ವಿಕಾರವಾಗಿ, ಚಂಚಲವಾಗಿರುವುದು. ಅಲ್ಲಿ ಸ್ವಲ್ಪ ಹೊತ್ತೂ ಮನಸ್ಸು ನಿಶ್ಚಲವಾಗಿರುವುದಿಲ್ಲ. ಜಂತುಗಳಲ್ಲಿಯೂ ಸಹ ರಜೋಗುಣಾದಿಗಳಾದ ಮಾಂಸಾದಿಗಳನ್ನು ಭುಜಿಸುವ ಸಿಂಹ, ಹುಲಿ ಮುಂತಾದವು ಚಂಚಲವಾದವುಗಳಾಗಿ ಕ್ರೂರಿಗಳಾಗಿರುವುವು. ತೃಣಾದಿ (ಹುಲ್ಲು ಮುಂತಾದವು)ಗಳನ್ನು ತಿನ್ನುವ ಹಸು, ಮೇಕೆ ಮುಂತಾದುವು ಸಾತ್ವಿಕ ಚಿತ್ತವೃತ್ತಿಯನ್ನು ಹೊಂದಿರುವುವು.

*'ಆಮಯಪ್ರದಾಃ'*- ಎಂದು ಹೇಳುವುದರಿಂದ ರಾಜಸಾಹಾರ ಆರೋಗ್ಯವನ್ನು ಕೆಡಿಸಿ ವ್ಯಾಧಿಗಳನ್ನುಂಟುಮಾಡುವುದೆಂದು ತಿಳಿಯುತ್ತದೆ. ಆದ್ದರಿಂದ ಆರೋಗ್ಯಭಂಗಕರಗಳಾದ, ದುಃಖ ಶೋಕಪ್ರದಗಳಾದ, ಧ್ಯಾನ ಪ್ರತಿಬಂಧಕಗಳಾದ ರಾಜಸಾಹಾರ ಪದಾರ್ಥಗಳನ್ನು ಮುಮುಕ್ಷುಗಳು ತೆಗೆದುಕೊಳ್ಳಬಾರದು. ಅಂತಹ ಆಹಾರದ ಮೇಲೆ ಇಷ್ಟ ಬಂದರೆ ತಮ್ಮಲ್ಲಿ ಇನ್ನೂ ರಜೋಗುಣವು ಇದೆಯೆಂದು ನಿಶ್ಚಯಿಸಿ ಅದನ್ನು ತೊಲಗಿಸಿಕೊಳ್ಳಲು ಯತ್ನಿಸಬೇಕು.

*'ದಾಃ'* ಎಂದು ಹೇಳದೆ *'ಪ್ರದಾಃ'* ಎಂದು ಹೇಳಿರುವುದರಿಂದ ರೋಗಾದಿಗಳನ್ನು ತಪ್ಪದೆ ಉಂಟುಮಾಡುವುದು ಎಂದರ್ಥ.

ಪ್ರ : ರಾಜಸಾಹಾರ ಎಂತಹದು?

ಉ : ೧) ಕಹಿ, ಹುಳಿ, ಉಪ್ಪು, ಖಾರಗಳಿಂದ ಕೂಡಿದುದು. ೨) ಹೆಚ್ಚಿಗೆ ಬಿಸಿಯಾಗಿರುವುದು ೩) ಸ್ನಿಗ್ಧವಿಲ್ಲದ್ದು ೪) ದಾಹವನ್ನುಂಟು ಮಾಡುವುದು.

ಪ್ರ : ಆದ್ದರಿಂದ ಮುಮುಕ್ಷುಗಳು ಏನು ಮಾಡಬೇಕು?

ಉ : ಆಯಾ ಆಹಾರಗಳಿಂದ ಉಂಟಾಗುವ ದುಷ್ಪರಿಣಾಮಗಳನ್ನು ತಿಳಿದು ಅವುಗಳನ್ನು ತ್ಯಜಿಸಬೇಕು.

**ಅ॥** ಇನ್ನು ತಾಮಸ ಆಹಾರ ಎಂತಹುದೋ ತಿಳಿಸಲಾಗುತ್ತಿದೆ-

**೧೦ ಯಾತಯಾಮಂ ಗತರಸಂ ಪೂತಿ ಪರ್ಯುಷಿತಂ ಚ ಯತ್**
**ಉಚ್ಛಿಷ್ಟಮಪಿ ಚಾಮೇಧ್ಯಂ ಭೋಜನಂ ತಾಮಸಪ್ರಿಯಮ್**

**ಅರ್ಥ:** ಯಾತಯಾಮಂ=ತಯಾರು ಮಾಡಿದ ನಂತರ ಒಂದು ಜಾವ ಕಳೆದಿರುವುದು (ಅಂದರೆ ಅಡಿಗೆ ಮಾಡಿ ಬಹಳ ವೇಳೆಯಾದನಂತರ ಇಲ್ಲವೆ ಚೆನ್ನಾಗಿ ಬೇಯದೇ ಇರುವುದು); ಗತರಸಂ=ಸಾರ ನಶಿಸಿರುವ; ಪೂತಿ=ದುರ್ಗಂಧವುಳ್ಳ; ಪರ್ಯುಷಿತಂ ಚ=ಹಳಸಿ ಹೋಗಿರುವ (ಅಡಿಗೆ ಮಾಡಿ ಒಂದು ರಾತ್ರಿ ಕಳೆದಿರುವುದು) ಉಚ್ಛಿಷ್ಟಮಪಿ=ಒಬ್ಬರು ತಿಂದು ಬಿಟ್ಟ (ಎಂಜಲು ಮಾಡಿರುವ); ಅಮೇಧ್ಯಂ ಚ=ಅಶುದ್ಧವಾಗಿರುವ (ಭಗವಂತನಿಗೆ ನಿವೇದಿಸಲ್ಪಡದೆ ಇರುವ); ಯತ್=ಯಾವ; ಭೋಜನಂ= ಆಹಾರ (ಅಸ್ತಿ=ಇರುವುದೋ, ತತ್=ಅದು); ತಾಮಸಪ್ರಿಯಂ= ತಮೋಗುಣ ಉಳ್ಳವರಿಗೆ ಇಷ್ಟವಾದದ್ದು (ಆಗಿರುವುದು)

**ತಾ॥** ಅಡಿಗೆ ಮಾಡಿದ ನಂತರ ಒಂದು ಹೊತ್ತು ಆಗಿರುವ, ಇಲ್ಲವೆ ಚೆನ್ನಾಗಿ ಬೇಯದೇ ಇರುವ, ಸಾರವು ನಶಿಸಿರುವ, ದುರ್ಗಂಧವುಳ್ಳ, ಹಳಸಿ ಹೋಗಿರುವ, ಅಡಿಗೆ ಮಾಡಿದ ನಂತರ ಒಂದು ರಾತ್ರಿ ಕಳೆದಿರುವ, ಒಬ್ಬರು ತಿಂದು ಉಳಿದಿರುವ (ಎಂಜಲು ಮಾಡಿರುವ), ಅಶುದ್ಧವಾಗಿ ಇರುವ (ಭಗವಂತನಿಗೆ ನಿವೇದಿಸದೇ ಇರುವ), ಆಹಾರ ತಮೋಗುಣಿಗಳಿಗೆ ಇಷ್ಟವಾಗುವುದು.

**ವ್ಯಾಖ್ಯೆ:** ಆರೋಗ್ಯ ಶಾಸ್ತ್ರದ ಪ್ರಕಾರ ಇಂತಹ ತಾಮಸ ಆಹಾರ ಹಾಗು ಈ ಹಿಂದೆ ತಿಳಿಸಿದ ರಾಜಸಾಹಾರ ನಿಷಿದ್ಧವಾದವುಗಳು. ಸಾರ ನಶಿಸಿ ಹಳಸಿ ಹೋದ ಪದಾರ್ಥಗಳನ್ನು ತಿಂದರೆ ಮಲಿನವಾದ ಆಹಾರ ಪದಾರ್ಥಗಳ ಅಣುಗಳು ಶರೀರವನ್ನು ಪ್ರವೇಶಿಸಿ ರಕ್ತವನ್ನು ಕೆಡಿಸಿ ಅನಾರೋಗ್ಯವನ್ನು ಉಂಟು ಮಾಡುವುವೇ ಅಲ್ಲದೆ, ಅವುಗಳ ಸೂಕ್ಷ್ಮಾಂಶಗಳು ಮನಸ್ಸಿನಲ್ಲಿ ಪ್ರವೇಶಿಸಿ ಅದನ್ನೂ ಮಲಿನಗೊಳಿಸುವುವು. ಆದ್ದರಿಂದ ಮುಮುಕ್ಷು ಅಂತಹ ಆಹಾರವನ್ನು ಎಂದಿಗೂ ಸೇವಿಸಬಾರದು.

**ಅ॥** ಇನ್ನು ಯಜ್ಞಗಳನ್ನು ಕುರಿತು ಹೇಳುತ್ತಾ ಮೊದಲಿಗೆ ಸಾತ್ವಿಕ ಯಜ್ಞದ ಲಕ್ಷಣಗಳನ್ನು ವಿವರಿಸುತ್ತಿದ್ದಾನೆ-

**೧೧. ಅಫಲಾಕಾಂಕ್ಷಿಭಿರ್ಯಜ್ಞೋ ವಿಧಿದೃಷ್ಟೋ ಯ ಇಜ್ಯತೇ**
**ಯಷ್ಟವ್ಯಮೇವೇತಿ ಮನಸ್ಸಮಾಧಾಯ ಸ ಸಾತ್ವಿಕಃ**

**ಅರ್ಥ:** ಯಷ್ಟವ್ಯಮ್ ಏವ=ಮಾಡಬೇಕಾದದ್ದೇ; ಇತಿ=ಎಂದು; ಮನಃ= ಮನಸ್ಸನ್ನು; ಸಮಾಧಾಯ=ಸಮಾಧಾನ ಪಡಿಸಿ, ವಿಧಿದೃಷ್ಟಃ=ಶಾಸ್ತ್ರಸಮ್ಮತವಾದ; ಯಃ ಯಜ್ಞಃ=ಯಾವ ಯಜ್ಞವು; ಅಫಲಾಕಾಂಕ್ಷಿಭಿಃ=ಫಲಾಪೇಕ್ಷೆಯಿಲ್ಲ

ದವರಿಂದ; ಇಜ್ಯತೇ=ಮಾಡಲ್ಪಡುತ್ತದೋ; ಸಃ=ಅದು; ಸಾತ್ತ್ವಿಕಃ=ಸಾತ್ತ್ವಿಕವಾದದ್ದು; ಭವತಿ=ಆಗುತ್ತದೆ.

**ತಾ||** 'ಇದು ಮಾಡಬೇಕಾದದ್ದೇ' ಎಂದು ಮನಸ್ಸನ್ನು ಸ್ಥಿರಗೊಳಿಸಿಕೊಂಡು, ಶಾಸ್ತ್ರ ಸಮ್ಮತವಾದ, ಯಾವ ಯಜ್ಞವನ್ನು ಫಲಾಪೇಕ್ಷೆಯಿಲ್ಲದವರು ಮಾಡುವರೋ ಅದು ಸಾತ್ತ್ವಿಕವೆನಿಸಿಕೊಳ್ಳುವುದು

**ವ್ಯಾಖ್ಯೆ:** ಪ್ರತಿಯೊಬ್ಬನೂ ತಾನು ಮಾಡುವ ಕಾರ್ಯ ಶಾಸ್ತ್ರ ಸಮ್ಮತವಾದದ್ದೇ ಅಲ್ಲವೇ ಚೆನ್ನಾಗಿ ವಿಚಾರಿಸಿಕೊಂಡು ಶಾಸ್ತ್ರ ವಿರುದ್ಧವಾದದನ್ನು ತ್ಯಜಿಸಿ, ಶಾಸ್ತ್ರ ಸಮ್ಮತವಾದದ್ದನ್ನು ಪಾಲಿಸಬೇಕು. ಆದ್ದರಿಂದಲೇ 'ವಿಧಿದೃಷ್ಟ' ಎಂದು ಹೇಳಲ್ಪಟ್ಟಿದೆ. ಮತ್ತೆ 'ಇದು ಮಾಡಬೇಕಾದದ್ದು' ಎನ್ನುವ ಕರ್ತವ್ಯ ಬುದ್ಧಿ ಅದರಲ್ಲಿ ಚೆನ್ನಾಗಿಟ್ಟುಕೊಂಡು ಫಲಾಪೇಕ್ಷೆಯಿಲ್ಲದೆ ಅದನ್ನು ಆಚರಿಸಬೇಕು. ಆಗ ಅದು ಸಾತ್ತ್ವಿಕ ಕಾರ್ಯವಾಗಿ ಬೆಳಗುವುದು. ಇಲ್ಲಿ ಯಜ್ಞವೆಂದು ಹೇಳಿರುವುದರ ಅರ್ಥ ಪಶು ಹಿಂಸಾದಿಗಳಿಂದ ಕೂಡಿದ ಯಾಗಗಳೆಂದಲ್ಲ. ಭಗವದ್ಧ್ಯಾನ, ಪರೋಪಕಾರ, ದೈವ ಸಂಬಂಧವಾದ ಕಾರ್ಯಗಳು, ಮತ್ತು ಬೇರೆ ಸತ್ಕಾರ್ಯಗಳು - ಎಂದೇ ಅರ್ಥ.

'ಮನಃ ಸಮಾಧಾಯ'- ಎಂದು ಹೇಳಲ್ಪಟ್ಟಿರುವುದರಿಂದ ಪ್ರತಿಯೊಬ್ಬರೂ ತಾವು ಕಾರ್ಯವನ್ನು ಪ್ರಾರಂಭಿಸುವುದಕ್ಕಿಂತ ಮುಂಚೆ ಮನಸ್ಸನ್ನು ಚೆನ್ನಾಗಿ ನಿಗ್ರಹಿಸಿ ಸಂಶಯಕ್ಕೆ ಸ್ಥಾನಕೊಡದೆ, ನಿಶ್ಚಯಬುದ್ಧಿಯಿಂದ ಅದನ್ನು ಉಪಕ್ರಮಿಸಬೇಕೆಂದು ತಿಳಿಯುತ್ತದೆ. ಮನಸ್ಸನ್ನು ಸಮಾಧಾನ ಪಡಿಸದೆ ನಿಶ್ಚಲಗೊಳಿಸದೆ ಆರಂಭಿಸುವವನು, ಯಾವ ಕಾರ್ಯವನ್ನೂ ಸಕ್ರಮವಾಗಿ ಮಾಡುವುದಿಲ್ಲ. ಆದ್ದರಿಂದ ಮಾಡಬೇಕಾದ ಕಾರ್ಯದ ಆಗು ಹೋಗುಗಳನ್ನು ಶಾಸ್ತ್ರಾದಿಗಳ ವಾಕ್ಯಗಳಿಂದ ನಿಶ್ಚಯಿಸಿ, ಮನಸ್ಸನ್ನು ಸ್ಥಿರಪಡಿಸಿಕೊಂಡು, ನಿಷ್ಕಾಮ ಬುದ್ಧಿಯಿಂದ ಅಂತಹ ಶಾಸ್ತ್ರ ಸಮ್ಮತ ಕಾರ್ಯವನ್ನು ಆಚರಿಸಿದರೆ ಅದ್ಭುತ ಫಲ ಒದಗುವುದು. ಅದೇ ಸಾತ್ತ್ವಿಕ ಕಾರ್ಯ, ಸಾತ್ತ್ವಿಕ ಯಜ್ಞವೆನಿಸಿಕೊಳ್ಳುವುದು.

ಪ್ರ : ಸಾತ್ತ್ವಿಕ ಯಜ್ಞವೆಂತಹದು?

ಉ : ೧) ಶಾಸ್ತ್ರೋಕ್ತವಾದುದು ೨) ಫಲಾಪೇಕ್ಷೆರಹಿತವಾದುದು ೩) 'ಇದು ಮಾಡಬೇಕಾದದ್ದು' ಎಂದು ಮನಸ್ಸನ್ನು ಒಲಿಸಿಕೊಂಡು ನಂತರ ಆಚರಿಸಲ್ಪಟ್ಟದ್ದನ್ನು ಸಾತ್ತ್ವಿಕ ಯಜ್ಞವೆನ್ನುವರು.

**ಅ||** ಮುಂದೆ ರಾಜಸಯಜ್ಞದ ಉಲ್ಲೇಖವಿದೆ-

> ೧೨ ಅಭಿಸಂಧಾಯ ತು ಫಲಂ ದಂಭಾರ್ಥಮಪಿ ಚೈವ ಯತ್
> ಇಜ್ಯತೇ ಭರತಶ್ರೇಷ್ಠ ತಂ ಯಜ್ಞಂ ವಿದ್ಧಿ ರಾಜಸಮ್.

**ಅರ್ಥ:** ಭರತಶ್ರೇಷ್ಠ=ಭರತಶ್ರೇಷ್ಠನಾದ ಓ ಅರ್ಜುನಾ! ಫಲಂ=ಫಲವನ್ನು; ಅಭಿಸಂಧಾಯ ತು=ಅಪೇಕ್ಷಿಸಿ; ದಂಭಾರ್ಥಮ್ ಅಪಿ ಚ ಏವ=ದಂಭಕ್ಕಾಗಿ; ಯತ್=ಯಾವುದು (ಯಾವ ಯಜ್ಞವು); ಇಜ್ಯತೇ=ಮಾಡಲ್ಪಡುತ್ತಿದೆಯೋ; ತಂ ಯಜ್ಞಂ=ಆ ಯಜ್ಞವು; ರಾಜಸಂ=ರಾಜಸವಾದದ್ದೆಂದು; ವಿದ್ಧಿ=ತಿಳಿ

**ತಾ||** ಭರತವಂಶ ಶ್ರೇಷ್ಠನಾದ ಓ ಅರ್ಜುನಾ! ಫಲವನ್ನು ಉದ್ದೇಶಿಸಿ, ದಂಭಕ್ಕಾಗಿ ಮಾಡುವ ಯಜ್ಞವನ್ನು ರಾಜಸವೆಂದು ನೀನು ತಿಳಿಯುವುದು.

**ವ್ಯಾಖ್ಯೆ:** ಫಲವನ್ನು ಅಪೇಕ್ಷಿಸಿ ಮಾಡುವ ಕರ್ಮದಿಂದ ಚಿತ್ತ ಶುದ್ಧಿ ಎಂದಿಗೂ ಉಂಟಾಗುವುದಿಲ್ಲ. ಚಿತ್ತವು ಶುದ್ಧವಾಗಿರದಿದ್ದಲ್ಲಿ ಆತ್ಮತತ್ತ್ವವು ಪ್ರಕಾಶಿಸುವುದಿಲ್ಲ (ಅನುಭೂತಿಗೊಳ್ಳುವುದಿಲ್ಲ). ಆದ್ದರಿಂದ ಅಂತಹ ಫಲಾಭಿಸಂಧಿಯುಕ್ತವಾದ ಕರ್ಮವನ್ನು ಇಲ್ಲಿ ರಾಜಸವೆಂದು (ಆದ್ದರಿಂದ ತ್ಯಾಜ್ಯವೆಂದು) ಹೇಳಲ್ಪಟ್ಟಿದೆ. ಮತ್ತೆ ಕೇವಲ ಹೆಸರು ಖ್ಯಾತಿಗಳಿಗೆ, ತೋರಿಕೆ ಹಾಗು ದಂಭಕ್ಕಾಗಿ ಮಾಡಲ್ಪಡುವ ಕಾರ್ಯವು ರಾಜಸವೇ ಎಂದು ಇಲ್ಲಿ ಹೇಳಲಾಗಿದೆ. ಆದ್ದರಿಂದ ಅವುಗಳನ್ನು ಯಾರೂ ಆಶ್ರಯಿಸಬಾರದು.

ಪ್ರ : ರಾಜಸ ಯಜ್ಞ ಎಂತಹದು?

ಉ : ೧) ಫಲಾಭಿಲಾಷೆಯಿಂದ ೨) ದಂಭಕ್ಕಾಗಿ ಮಾಡಲ್ಪಡುವ ಯಜ್ಞವನ್ನು ರಾಜಸಯಜ್ಞವೆಂದು ಕರೆಯುವರು.

**ಅ||** ತಾಮಸ ಯಜ್ಞವನ್ನು ವಿವರಿಸಲಾಗುತ್ತಿದೆ-

> ೧೩ ವಿಧಿಹೀನಮಸೃಷ್ಟಾನ್ನಂ ಮಂತ್ರಹೀನಮದಕ್ಷಿಣಮ್
> ಶ್ರದ್ಧಾವಿರಹಿತಂ ಯಜ್ಞಂ ತಾಮಸಂ ಪರಿಚಕ್ಷತೇ

**ಅರ್ಥ:** ವಿಧಿಹೀನಂ=ಶಾಸ್ತ್ರವಿಧಿಯನ್ನನುಸರಿಸದೇ ಇರುವ ಅಸೃಷ್ಟಾನ್ನಂ= ಅನ್ನದಾನವಿಲ್ಲದೇ ಇರುವ; ಮಂತ್ರಹೀನಂ= ಮಂತ್ರ ರಹಿತವಾದ; ಅದಕ್ಷಿಣಂ=ದಕ್ಷಿಣೆಯಿಲ್ಲದೆ ಇರುವ; ಶ್ರದ್ಧಾವಿರಹಿತಂ=ಶ್ರದ್ಧೆ ಸ್ವಲ್ಪವೂ ಇಲ್ಲದೆ ಇರುವ; ಯಜ್ಞಂ=ಯಜ್ಞವನ್ನು; ತಾಮಸಂ= ತಾಮಸವೆಂದು; ಪರಿಚಕ್ಷತೇ-ಹೇಳುತ್ತಾರೆ.

**ತಾ||** ವಿಧ್ಯುಕ್ತವಲ್ಲದೆ ಇರುವ, ಅನ್ನದಾನವಿಲ್ಲದಿರುವ, ಮಂತ್ರರಹಿತವಾದ ದಕ್ಷಿಣೆಯಿಲ್ಲದೇ ಇರುವ, ಸ್ವಲ್ಪವೂ ಶ್ರದ್ಧೆ ಇಲ್ಲದೆ ಇರುವ ಯಜ್ಞವನ್ನು ತಾಮಸ ಯಜ್ಞವೆನ್ನುವರು.

**ವ್ಯಾಖ್ಯೆ:** 'ಅಸೃಷ್ಟಾನ್ನಂ'- ಅನ್ನದಾನವೆನ್ನುವುದು ಅನುಷ್ಠಾನ ವೇದಾಂತದ ಒಂದು ಸ್ವರೂಪ. ಸರ್ವಭೂತಗಳಲ್ಲಿ ಪರಮಾತ್ಮನಿರುವನೆಂಬ ಸತ್ಯವನ್ನು ಅನುಭೂತಿಗೊಳಿಸಿಕೊಂಡವನು ಪರೋಪಕಾರವನ್ನು ತಪ್ಪದೆ ಮಾಡುವನು. ಅದು ಆಚರಣ ವೇದಾಂತ. ಆದ್ದರಿಂದಲೇ ಬಹುಶಃ ಇರಬಹುದು, ಎಲ್ಲಾ ಪುಣ್ಯ ಕಾರ್ಯಗಳಲ್ಲಿ, ಶ್ರಾದ್ಧಾದಿಗಳಲ್ಲಿ, ಯಜ್ಞಗಳಲ್ಲಿ ಅನ್ನದಾನವನ್ನು ವಿಧಿಸಿದ್ದಾರೆ. ತನ್ನಂತೆ ಎಲ್ಲಾ ಪ್ರಾಣಿಗಳನ್ನು ನೋಡುವ ಸಾಧನೆ ಈ ಅನ್ನದಾನ ಕಾರ್ಯದಿಂದ ಚೆನ್ನಾಗಿ ಅನುಭವಕ್ಕೆ ಬರಬಲ್ಲದು. ಆದ್ದರಿಂದ ಇಂತಹ ಪವಿತ್ರವಾದ ಅಂಗದ ಕೊರತೆಯುಂಟಾದ ಯಜ್ಞವು ತಾಮಸವೆಂದು ಭಗವಂತನು ತಿಳಿಸಿರುವನು.

'ಅದಕ್ಷಿಣಂ'- ಇದೂ ಕೂಡ ಮೇಲೆ ತಿಳಿಸಿದ ಅನ್ನದಾನವನ್ನು ಹೋಲುವಂತಹುದೇ. ತನ್ನ ಸ್ವತ್ತಿನ ಸ್ವಲ್ಪ ಭಾಗವನ್ನು ಋತ್ವಿಕ್ಕುಗಳಿಗೆ, ಬಡವರಿಗೆ, ದರಿದ್ರ ನಾರಾಯಣರಿಗೆ ದಕ್ಷಿಣೆಯಾಗಿ ಕೊಡಬೇಕು. ಇದು ತ್ಯಾಗದ ಚಿಹ್ನೆ. ಆದ್ದರಿಂದ ಇಂತಹ ತ್ಯಾಗಭಾವವಿಲ್ಲದ ಯಜ್ಞ ತಾಮಸವಾದುದೆಂದು ಹೇಳಲಾಗಿದೆ.

'ಶ್ರದ್ಧಾ ವಿರಹಿತಂ'- ಯಾವ ಕಾರ್ಯವನ್ನಾದರೂ ಶ್ರದ್ಧೆ, ಭಕ್ತಿ, ಪರಿಪೂರ್ಣವಿಶ್ವಾಸದಿಂದ ಮಾಡಬಹುದಾದರೆ ಉತ್ತಮ ಫಲ ಒದಗುವುದು. ಶ್ರದ್ಧೆಯಿಲ್ಲದೆ ಮಾಡಲ್ಪಡುವ ಕಾರ್ಯ, ಮಾಡದೆ ಇರುವುದಕ್ಕೆ ಸಮಾನವೆಂದು ಈ ಅಧ್ಯಾಯದಲ್ಲಿ ಮುಂದೆ ಭಗವಂತನು ಹೇಳುವನು (ಅಶ್ರದ್ಧಯಾ ಹುತಂ-ಅಸದಿತ್ಯುಚ್ಯತೇ----) ಆದ್ದರಿಂದ ಶ್ರದ್ಧಾರಾಹಿತ್ಯ ಹಾಗು

ತಾಮಸಪ್ರವೃತ್ತಿಗಳನ್ನು ಬಿಟ್ಟು ಜನರು ಶ್ರದ್ಧಾಸಮನ್ವಿತರಾಗಿ ಸಮಸ್ತ ಕಾರ್ಯಗಳನ್ನಾಚರಿಸಿ ಉತ್ತಮ ಫಲಗಳನ್ನು ಹೊಂದಬೇಕು.

ಪ್ರ : ತಾಮಸಯಜ್ಞ ಎಂತಹದು ?

ಉ : ೧) ಶಾಸ್ತ್ರೋಕ್ತವಲ್ಲದ್ದು ೨) ಅನ್ನದಾನವಿಲ್ಲದ್ದು ೩) ಮಂತ್ರರಹಿತ ವಾದದ್ದು (ಮಂತ್ರ ಲೋಪವುಳ್ಳದ್ದು) ೪) ದಕ್ಷಿಣಿವಿಲ್ಲದ್ದು ೫) ಶ್ರದ್ಧೆಯಿಲ್ಲದೆ ಮಾಡಲ್ಪಡುವುದು-ಇದನ್ನು ತಾಮಸ ಯಜ್ಞವೆನ್ನುವರು.

**ಅ॥** ಇನ್ನು ಶಾರೀರಿಕ, ವಾಚಕ, ಮಾನಸಿಕ ತಪಸ್ಸುಗಳನ್ನು ಹೇಳ ಹೊರಟು ಮೊದಲು ಶಾರೀರಕ ತಪಸ್ಸನ್ನು ಕುರಿತು ವರ್ಣಿಸಲಾಗಿದೆ-

**೧೪ ದೇವದ್ವಿಜಗುರುಪ್ರಾಜ್ಞಪೂಜನಂ ಶೌಚಮಾರ್ಜವಮ್**
**ಬ್ರಹ್ಮಚರ್ಯ ಮಹಿಂಸಾ ಚ ಶಾರೀರಂ ತಪ ಉಚ್ಯತೇ**

**ಅರ್ಥ:** ದೇವದ್ವಿಜಗುರು ಪ್ರಾಜ್ಞ ಪೂಜನಂ=ದೇವತೆಗಳನ್ನು, ಬ್ರಹ್ಮ ನಿಷ್ಠರನ್ನು, ಗುರುಗಳನ್ನು, ಜ್ಞಾನಿಗಳನ್ನು (ಬ್ರಹ್ಮ ಜ್ಞಾನವುಳ್ಳ ಹಿರಿಯರನ್ನು) ಪೂಜಿಸುವುದು; ಶೌಚಂ=ಬಾಹ್ಯಾಭ್ಯಂತರ ಶುದ್ಧಿ ಹೊಂದಿರುವುದು; ಆರ್ಜವಮ್= ಋಜುತ್ವವನ್ನು ಪಾಲಿಸುವುದು (ಕುಟಿಲವಿಲ್ಲದೆ ಮನೋವಾಕ್ಕುಗಳಿಂದ ಏಕರೀತಿಯಾಗಿ ಪ್ರವರ್ತಿಸುವುದು); ಬ್ರಹ್ಮಚರ್ಯಂ=ಬ್ರಹ್ಮಚರ್ಯ ವ್ರತವನ್ನು ಪಾಲಿಸುವುದು; ಅಹಿಂಸಾ ಚ =ಯಾವ ಪ್ರಾಣಿಯನ್ನೂ ಹಿಂಸಿಸದೆ ಇರುವುದು; ಶಾರೀರಂ=ಶರೀರ ಸಂಬಂಧವಾದ; ತಪಃ=ತಪಸ್ಸೆಂದು; ಉಚ್ಯತೇ=ಹೇಳಲ್ಪಡುತ್ತದೆ.

**ತಾ॥** ದೇವತೆಗಳನ್ನು, ಬ್ರಹ್ಮ ನಿಷ್ಠರನ್ನು, ಗುರುಗಳನ್ನು ಜ್ಞಾನಿಗಳನ್ನು (ಮಹಾತ್ಮರನ್ನು, ಬ್ರಹ್ಮಜ್ಞಾನವುಳ್ಳ ಹಿರಿಯರನ್ನು) ಪೂಜಿಸುವುದು, ಬಾಹ್ಯಾಭ್ಯಂತರ ಶುದ್ಧಿಯಿಂದಿರುವುದು, ಋಜುತ್ವವನ್ನು ಪಾಲಿಸುವುದು (ಕುಟಿಲತೆ ಇಲ್ಲದಿರುವುದು, ಮನೋವಾಕ್ಕುಗಳಿಂದ ಏಕರೀತಿಯಾಗಿ ಪ್ರವರ್ತಿಸುವುದು). ಬ್ರಹ್ಮಚರ್ಯ ವ್ರತವನ್ನು ಪಾಲಿಸುವುದು, ಯಾವ ಪ್ರಾಣಿಯನ್ನೂ ಹಿಂಸಿಸದೇ ಇರುವುದು, ಶಾರೀರಿಕ (ಶರೀರ ಸಂಬಂಧವಾದ) ತಪಸ್ಸೆಂದು ಹೇಳಲಾಗುತ್ತದೆ.

**ವ್ಯಾಖ್ಯೆ:** ಶಾರೀರಿಕ, ವಾಚಕ, ಮಾನಸಿಕಗಳೆಂಬ ತ್ರಿವಿಧ ತಪಸ್ಸುಗಳನ್ನು ಕುರಿತು ಹೇಳಲ್ಪಟ್ಟ ಈ ಘಟ್ಟ (೧೪,೧೫,೧೬ ಶ್ಲೋಕಗಳು) ಬಹಳ ಮುಖ್ಯವಾದುದು. ಸಾಧಕರು ಈ ಮೂರು ವಿಧಗಳಾದ ತಪಸ್ಸುಗಳನ್ನು ಆಚರಿಸಿ, ತ್ರಿಕರಣ ಶುದ್ಧರಾಗಿದ್ದರೆ ನಿರ್ಮಲ ದರ್ಪಣದಲ್ಲಿಯ ಪ್ರತಿಬಿಂಬದಂತೆ, ಆತ್ಮಾನುಭೂತಿ ಅವರಿಗೆ ಸುಲಭವಾಗಿ ಲಭ್ಯವಾಗಬಲ್ಲದು. ಈ ಅಧ್ಯಾಯದಲ್ಲಿ ಆಹಾರ, ಯಜ್ಞ, ದಾನಗಳ ಬಗ್ಗೆ ಹೇಳುವಾಗ ಅವುಗಳ ಸಾತ್ವಿಕ, ರಾಜಸ, ತಾಮಸ ರೂಪಗಳನ್ನು ಹೇಳಿ, ತಪಸ್ಸನ್ನು ಕುರಿತು ವರ್ಣಿಸುವಾಗ ಅದರ ಸಾತ್ವಿಕ, ರಾಜಸ, ತಾಮಸ ರೂಪಗಳಲ್ಲದೆ ತತ್ಸಂಬಂಧವಾದ ಶಾರೀರಿಕ, ಮಾನಸಿಕ, ವಾಚಕ ತಪಸ್ಸುಗಳನ್ನೂ ಕೂಡ ಹೇಳಿದನು. ಉಪಾಧಿಯಲ್ಲಿಯ (ಇಂದ್ರಿಯಾದಿಗಳಲ್ಲಿಯ) ಮಾಲಿನ್ಯಗಳನ್ನು ಚೆನ್ನಾಗಿ ತಪಿಸುವಂತೆ ಮಾಡಿ ಅವುಗಳನ್ನು ತೊಲಗಿಸುವುದೇ ತಪಸ್ಸು, ಅದೇ ಮೋಕ್ಷಕ್ಕೆ ಹೇತು. ಪರಮಾರ್ಥ ಸಾಧನೆಯಲ್ಲಿ ಅದು ಬಹಳ ಪ್ರಧಾನವಾದುದು. ಆದ್ದರಿಂದಲೇ ಗೀತಾ ಚಾರ್ಯನು ತಪಸ್ಸಿನ ಬಗ್ಗೆ ಹೇಳುವಾಗ ಬೇರೆಯವರಂತೆ ಸಾಮಾನ್ಯವಾಗಿ ಹೇಳದೆ ಪ್ರತ್ಯೇಕವಾಗಿ ಮೂರು ವಿಧಗಳಾಗಿ ಹೇಳಿರುವನು. ಜನರಲ್ಲಿ ಕೆಲವರು ತಪಸ್ಸೆನ್ನುವ ಮಾತು ಕೇಳುತ್ತಲೇ ಭಯ ಬೀಳುವರು. ಬಿಸಿಲು, ಮಳೆಗಳಲ್ಲಿ, ಬಾಧೆ ಬೀಳುವುದೇ ತಪಸ್ಸು ಎಂದು ಅವರ ಭಾವ. ಆದರೆ ಶ್ರೀ ಕೃಷ್ಣ ಪರಮಾತ್ಮನು ತಪಸ್ಸಿನ ಬಗ್ಗೆ ಇಲ್ಲಿ ಕೊಟ್ಟಿರುವ ವ್ಯಾಖ್ಯೆಯನ್ನು ಪರಿಶೀಲಿಸಿದರೆ ಅವರು ಹಾಗೆ ಭಯಪಡುವ ಕೆಲಸವಿಲ್ಲವೆಂದು ಅರ್ಥವಾಗುವುದು. ಭಯಂಕರವಾದ ತಪಸ್ಸುಗಳ ಪ್ರಸ್ತಾಪವೇ ಇಲ್ಲಿಲ್ಲ. ಆದ್ದರಿಂದ ಸುಲಭ ಸಾಧ್ಯವಾದ, ಸರ್ವರಿಗೂ ಆಚರಣಯೋಗ್ಯವಾದ, ಈ ತ್ರಿವಿಧ ತಪಸ್ಸುಗಳನ್ನು ಪ್ರತಿಯೊಬ್ಬರೂ (ಸ್ತ್ರೀ, ಪುರುಷರು) ಆಚರಿಸಿ ಶರೀರ, ವಾಕ್ಕ ನ್ನಗಳನ್ನು ಶುದ್ಧಪಡಿಸಿಕೊಂಡು ಮೋಕ್ಷಕ್ಕೆ ಭಾಗಿಗಳಾಗಬೇಕು.

ಈ ಶ್ಲೋಕದಲ್ಲಿ ಶಾರೀರಿಕ (ಶರೀರ ಸಂಬಂಧವಾದ) ತಪಸ್ಸನ್ನು ಕುರಿತು ಹೇಳಲಾಗಿದೆ. ಇದರಲ್ಲಿ ಐದು ಸಾಧನೆಗಳನ್ನು ಕೊಡಲಾಗಿದೆ ೧) ಮೊದಲು ಹಿರಿಯರ ಸೇವೆ ಹಾಗು ಪೂಜೆಯನ್ನು ಹೇಳಲಾಗಿದೆ (ದೇವ ದ್ವಿಜಗುರು ಪ್ರಾಜ್ಞ ಪೂಜನಂ). ಹಿರಿಯರನ್ನು, ಬ್ರಹ್ಮನಿಷ್ಠರನ್ನು ಪೂಜಿಸುವುದರಿಂದ, ಸೇವಿಸುವುದರಿಂದ, ಎರಡು ಮಹತ್ತರ ಸತ್ಫಲಿತಗಳು ಸಾಧಕನಿಗೆ ಉಂಟಾಗ ಬಲ್ಲವು. ಅವು ಯಾವುವೆಂದರೆ - ೧) ಅವರ ಅನುಗ್ರಹ ಲಭಿಸುವುದು ೨) ತನ್ನ ಅಹಂಕಾರ, ಅಭಿಮಾನ ಕ್ಷೀಣಿಸುವುದು. ಅಧ್ಯಾತ್ಮ ಮಾರ್ಗದಲ್ಲಿ ಸರ್ವೇಶ್ವರನ, ಸದ್ಗುರುವಿನ, ಮಹಾತ್ಮರ ಅನುಗ್ರಹವಿಲ್ಲದಿದ್ದಲ್ಲಿ ದುಸ್ತರವಾದ ಮಾಯೆ ಯಾರಿಗೂ ದಾರಿ ಕೊಡುವುದಿಲ್ಲ. ಪ್ರತಿಬಂಧಕಗಳು ತೊಲಗುವುದಿಲ್ಲ. ಆಗ್ಗ ಜನರು ಪರಮಾರ್ಥ ರಂಗದಲ್ಲಿ ಮುಂದುವರಿಯುವುದು ಕಷ್ಟ. ಆದ್ದರಿಂದ ಹಿರಿಯರ ಪೂಜೆ, ಸೇವಾದಿಗಳಿಂದ, ಅವರ ಬಗ್ಗೆ ವಿನಯ ವಿಧೇಯತೆಗಳನ್ನು ತೋರಿಸುವುದರಿಂದ, ಅವರ ಅನುಗ್ರಹ, ಆಶೀರ್ವಾದ ಸಂಪಾದಿಸಬೇಕು. ಅವರ ಕಟಾಕ್ಷ ಮುಮುಕ್ಷುಗಳಿಗೆ ಅಪಾರವಾದ ಮೇಲನ್ನುಂಟುಮಾಡುವುದು. ಇಷ್ಟೇ ಅಲ್ಲ, ಹಿರಿಯರನ್ನು ಸೇವಿಸುವುದರಿಂದ ಮನುಜನಿಗೆ ತನ್ನಲ್ಲಿಯ ಅಹಂಕಾರ, ಗರ್ವ, ಅಭಿಮಾನ ಶಮನ ಹೊಂದುವುದು. ಆದ್ದರಿಂದ ಮುಮುಕ್ಷುವಿಗೆ ಈ ಸಾಧನೆ ಅವಶ್ಯಕವಾಗಿದೆ. ಆದ್ದರಿಂದಲೇ ಭಗವಂತನು ಮೊದಲು ಅದನ್ನೇ ಇಲ್ಲಿ ಹೇಳಿರುವನು.

'ದ್ವಿಜ'- ದ್ವಿಜರೆಂದರೆ ಎರಡನೆಯ ಜನ್ಮವೆತ್ತಿದವರು ; ಅಂದರೆ ಹುಟ್ಟುತ್ತಲೇ ಬರುವ ಜನ್ಮವಲ್ಲದೇ ಸಂಸ್ಕಾರದಿಂದ, ಸಾಧನೆಯಿಂದ ಬಂದ ಎರಡನೆ ಜನ್ಮ ಹೊಂದಿದವರು ಎಂದರ್ಥ. ಅಜ್ಞಾನವನ್ನು ಛೇದಿಸಿ ಇಲ್ಲವೆ ಅಜ್ಞಾನದಿಂದ ಕೂಡಿದ ಹಳೆಯ ಶರೀರ ಹಾಗು ಮನಸ್ಸುಗಳನ್ನು ತ್ಯಜಿಸಿ ಬ್ರಹ್ಮಜ್ಞಾನದಿಂದ ಕೂಡಿದ ನೂತನ ಶರೀರ, ಮನಸ್ಸುಗಳನ್ನು ಹೊಂದಿದವರೆಂದು ಭಾವ. ಅವರ ಜೀವನ ಪೂರ್ವಜೀವನದಂತಿರುವುದಿಲ್ಲ. ಅವರಲ್ಲಿ ಬ್ರಹ್ಮತೇಜಸ್ಸು ಪ್ರಕಾಶಿಸುತ್ತಿರುತ್ತದೆ.

'ಪ್ರಾಜ್ಞ'- ಪ್ರಜ್ಞೆಯಿರುವವನು ಪ್ರಾಜ್ಞ, ಜ್ಞಾನಿಯೆಂದು ಅರ್ಥ. **'ಪ್ರಜ್ಞಾನಾಂ ಬ್ರಹ್ಮ'** ಎನ್ನುವ ಮಹಾವಾಕ್ಯದಲ್ಲಿ ತಿಳಿಸಲ್ಪಟ್ಟ ಬ್ರಹ್ಮರೂಪವಾದ ಪ್ರಜ್ಞೆಯನ್ನು, ಚಿದ್ವಸ್ತುವನ್ನು ತಿಳಿದವರೇ ಪ್ರಾಜ್ಞರು. ಅಂತಹ ಪ್ರಾಜ್ಞರನ್ನು, ಮಹನೀಯರನ್ನು ಸತ್ಕರಿಸುವುದು, ಪೂಜಿಸುವುದು ಒಂದು ವಿಧವಾದ ತಪಸ್ಸೇ ಎಂದು ಇಲ್ಲಿ ಹೇಳಲಾಗಿದೆ.

'ಶೌಚಮ್'- ಮನಶ್ಶುದ್ಧಿ, ಶರೀರ ಶುದ್ಧಿ, ಪರಿಸರ ಶುದ್ಧಿ-ಮೂರೂ ಅವಶ್ಯಕವಾದವುಗಳೇ. ತನ್ನ ಮನಸ್ಸು, ಶರೀರ ಹಾಗೂ ಇರುವ ಸ್ಥಾನವನ್ನು ಶುದ್ಧವಾಗಿಟ್ಟುಕೊಳ್ಳಬೇಕು. ಮಲಿನವಾದ ಸ್ಥಳಗಳಲ್ಲಿ ವಾಸಮಾಡುವವರ

ಆರೋಗ್ಯ ಕೆಡುವುದೇ ಅಲ್ಲದೆ 'ಮಲಿನ' ಸ್ವಭಾವವನ್ನೇ ಹೊಂದುವರು. ಮಲೀನ ಶರೀರದಿಂದ ಸ್ವಾಸ್ಥ್ಯಕ್ಕೆ ಧಕ್ಕೆ ಒದಗುವುದೇ ಅಲ್ಲದೆ, ಆತನ ನಿಷ್ಠೆಗೆ ವಿಘ್ನಗಳು ಎದುರಾಗುವುವು. ಇನ್ನು ಮಲಿನ ಮನಸ್ಸುಳ್ಳವರಿಗೆ ದೈವಮಾರ್ಗವೇ ಗೋಚರಿಸುವುದಿಲ್ಲ. ಆದ್ದರಿಂದ ಸಾಧಕನು ಜಾಗರೂಕನಾಗಿದ್ದು ಶುಚಿತ್ವವನ್ನು ಕಾಪಾಡಿಕೊಳ್ಳಬೇಕು. ಗುಡಿಸಿ ಸಾರಿಸುವುದರಿಂದ ಪರಿಸರವನ್ನೂ, ಸ್ನಾನ ಸಾತ್ವಿಕಾಹಾರಾದಿಗಳಿಂದ ಶರೀರವನ್ನೂ, ಮಲಿನ ಸಂಕಲ್ಪಗಳ ತ್ಯಾಗ ಹಾಗು ದೈವ ಸಂಕಲ್ಪದಿಂದ ಮನಸ್ಸನ್ನೂ ಶುಚಿಗೊಳಿಸಿಕೊಳ್ಳಬೇಕು.

'ಆರ್ಜವಮ್'- (ಋಜುತ್ವ) - ಕಪಟ, ಕುಟಿಲತೆ, ದುಷ್ಟಸಂಕಲ್ಪ ಇಲ್ಲದಿರುವುದು- ಹಾವಿನಂತೆ ವಕ್ರವಿರುವವನಲ್ಲಿ ವಿಷ (ಪಾಪ, ಅಜ್ಞಾನ) ಇದ್ದೇ ಇರುವುದು. ಆದ್ದರಿಂದ ಯೋಚನೆಯಲ್ಲಿ, ಮಾತಿನಲ್ಲಿ, ಕ್ರಿಯೆಯಲ್ಲಿ ಒಂದೇ ವಿಧವಾದ ಪ್ರವರ್ತನೆಯನ್ನು ಹೊಂದಿರಬೇಕು. ಶರೀರವಾಕ್ ಮನಗಳಲ್ಲಿ ಒಂದೇ ರೀತಿಯ ವರ್ತನೆಯಿರಬೇಕು. 'ವಕ್ರ' ವ್ಯವಹಾರವನ್ನು ತ್ಯಜಿಸಬೇಕು.

'ಬ್ರಹ್ಮ ಚರ್ಯಂ'- ತ್ರಿಕರಣಗಳಿಂದ ಬ್ರಹ್ಮಚರ್ಯವನ್ನು ಪಾಲಿಸುವುದು ಒಂದು ಮಹಾತಪಸ್ಸೆಂದು ಭಗವಂತನು ಹೇಳಿದ್ದಾನೆ. ಬ್ರಹ್ಮಚರ್ಯವೆಂದರೆ ವಿಷಯದೋಷ, ಕಾಮಭಾವನೆ, ಕಾಮವ್ಯವಹಾರವಿಲ್ಲದೇ ಇರುವುದು; ಮತ್ತೆ ಬ್ರಹ್ಮವನ್ನು ಕುರಿತು ಚಿಂತಿಸುವುದು. ಎಲ್ಲಾ ಸಾಧನೆಗಳಿಗೂ ಬ್ರಹ್ಮಚರ್ಯೆಯೇ ಬುನಾದಿ. ಆದ್ದರಿಂದಲೇ ಗೀತೆಯಲ್ಲಿ ಅಲ್ಲಲ್ಲಿ ಭಗವಂತನು ಅದನ್ನು ಪ್ರೋತ್ಸಾಹಿಸುತ್ತಾ ಬಂದಿರುವನು. ಇದರ ವಿಷಯವಾಗಿ ಅಶ್ರದ್ಧೆ ವಹಿಸಿದರೆ ಮುಮುಕ್ಷು ಪರಮಾರ್ಥ ಪಥದಲ್ಲಿ ಏಳಿಗೆಯಾಗಲು ಸಾಧ್ಯವಿಲ್ಲ. ಆಧ್ಯಾತ್ಮಸಾಧನೆಯಲ್ಲಿ ಬ್ರಹ್ಮಚರ್ಯೆ ಪ್ರಧಾನ ಸ್ಥಾನವನ್ನು ಆಕ್ರಮಿಸಿಕೊಂಡಿದೆ (Main-Switch).

'ಅಹಿಂಸೆ- ಶರೀರವಾಕ್‌ಮನಗಳಿಂದ ಯಾವ ಪ್ರಾಣಿಗೂ ಅಪಕಾರವನ್ನು ಮಾಡದಿರುವುದು ಇನ್ನು ಅಜ್ಞಾನವಿದ್ದಲ್ಲಿ ತನ್ನ ಆತ್ಮವನ್ನು ತಾನು ಹಿಂಸಿಸಿಕೊಂಡಂತೆ ಆಗುವುದರಿಂದ, ಅಜ್ಞಾನವನ್ನು ತೊಲಗಿಸಿಕೊಂಡು ಜ್ಞಾನಸಂಪಾದನೆಯನ್ನು ಮಾಡಿಕೊಳ್ಳುವುದರ ಮೂಲಕ ಆತ್ಮಹಿಂಸೆಯನ್ನು ಮಾಡಿಕೊಳ್ಳದಿರುವುದೇ ಅಹಿಂಸೆಯೆನಿಸಿಕೊಳ್ಳುವುದು. ಇದನ್ನು ಅಹಿಂಸೆಯ ಮಹೋನ್ನತ ರೂಪವೆಂದು ತಿಳಿಯಬೇಕು.

ಪ್ರ : ಶಾರೀರಿಕ ತಪಸ್ಸೆಂದರೆ ಏನು?

ಉ : ೧) ದೇವತೆಗಳು, ಗುರುಗಳು, ಬ್ರಹ್ಮನಿಷ್ಠರು, ಪ್ರಾಜ್ಞರಾದ ಮಹನೀಯರನ್ನು (ಜ್ಞಾನಿಗಳನ್ನು ಹಾಗು ಹಿರಿಯರನ್ನು) ಪೂಜಿಸುವುದು ೨) ಬಾಹ್ಯಾಭ್ಯಂತರ ಶುಚಿ ೩) ಋಜುತ್ವ ೪) ಬ್ರಹ್ಮಚರ್ಯೆ ೫) ಅಹಿಂಸೆ - ಇವುಗಳನ್ನು ಹೊಂದಿರುವುದು ಶಾರೀರಿಕ ತಪಸ್ಸೆನಿಸಿಕೊಳ್ಳುವುದು.

ಅ।। ವಾಚಿಕತಪಸ್ಸಿನ ಬಗ್ಗೆ ಹೇಳಲಾಗುತ್ತಿದೆ-

೧೫ ಅನುದ್ವೇಗಕರಂ ವಾಕ್ಯಂ ಸತ್ಯಂ ಪ್ರಿಯಹಿತಂ ಚ ಯತ್
ಸ್ವಾಧ್ಯಾಯಾಭ್ಯಸನಂ ಚೈವ ವಾಙ್ಮಯಂ ತಪ ಉಚ್ಯತೇ

ಅರ್ಥ: ಅನುದ್ವೇಗಕರಂ=ಇತರರ ಮನಸ್ಸಿಗೆ ಬಾಧೆಯುಂಟುಮಾಡದಂತಹ; ಸತ್ಯಂ=ಸತ್ಯವಾದ; ಪ್ರಿಯಹಿತಂ ಚ=ಪ್ರಿಯವಾದ, ಒಳ್ಳೆಯದನ್ನು ಮಾಡು ವಂತಹ; ವಾಕ್ಯಂ=ವಾಕ್ಯವನ್ನು; ಸ್ವಾಧ್ಯಾಯಾಭ್ಯಾಸನಂ ಚೈವ=ವೇದಾದಿಗಳ ಅಧ್ಯಯನ ಮಾಡುವ (ವೇದ, ಉಪನಿಷತ್ತು, ಭಗವದ್ಗೀತೆ, ಭಾರತ, ರಾಮಾಯಣ, ಯೋಗ ವಾಸಿಷ್ಠ ಮುಂತಾದುವುಗಳನ್ನು ಅಭ್ಯಾಸಮಾಡುವ, ಪ್ರಣವಾದಿ ಮಂತ್ರಗಳನ್ನು ಜಪಿಸುವ); ಯತ್-ಯಾವುದು ಇರುವುದೋ; (ತತ್-ಅದು) ವಾಙ್ಮಯಂ=ವಾಕ್ಕಿಗೆ ಸಂಬಂಧಿಸಿದ (ವಾಚಿಕ); ತಪಃ (ಇತಿ)=ತಪಸ್ಸೆಂದು; ಉಚ್ಯತೇ=ಹೇಳಲ್ಪಡುತ್ತದೆ.

ತಾ।। ಇತರರ ಮನಸ್ಸಿಗೆ ಬಾಧೆಯುಂಟುಮಾಡದಂತಹ, ಸತ್ಯವಾದ, ಪ್ರಿಯವಾದ, ಒಳಿತು ಮಾಡುವುದೂ ಆದ ವಾಕ್ಯವನ್ನು; ವೇದಗಳ ಅಧ್ಯಯನವನ್ನು (ವೇದ, ಉಪನಿಷತ್ತು, ಭಗವದ್ಗೀತೆ, ಭಾರತ, ಭಾಗವತ, ರಾಮಾಯಣ, ಯೋಗ ವಾಸಿಷ್ಠ ಮುಂತಾದುವನ್ನು ಅಭ್ಯಾಸ ಮಾಡುವುದು, ಪ್ರಣವಾದಿ ಮಂತ್ರಗಳನ್ನು ಜಪಿಸುವುದು) ವಾಚಿಕ ತಪಸ್ಸು ಎಂದು ಕರೆಯುವರು.

ವ್ಯಾಖ್ಯೆ: 'ಅನುದ್ವೇಗಕರಂ ವಾಕ್ಯಂ'- ಉಚ್ಚರಿಸುವ ವಾಕ್ಯ ಪರರ ಮನಸ್ಸಿಗೆ ನೋವುಂಟುಮಾಡಬಾರದು ಮತ್ತೆ ಅದು ಸತ್ಯವಾಗಿ (ಯಥಾರ್ಥವಾಗಿ) ಇರಬೇಕು. ಸತ್ಯ ವಾಕ್ಯಾದರೂ ಅದನ್ನು ಕಠಿಣವಾಗಿ, ಅಪ್ರಿಯವಾಗಿ ಹೇಳಬಾರದು. ಇತರರಿಗೆ ಪ್ರಿಯ ಹಾಗು ಹಿತವಾಗಿರಬೇಕು.

'ಸಾಧ್ಯಾಯಾಭ್ಯಸನಂ'- 'ಅಭ್ಯಸನಂ' ಎಂದು ಹೇಳಿರುವುದರಿಂದ ಅಂತಹ ಸ್ವಾಧ್ಯಾಯವನ್ನು ಚೆನ್ನಾಗಿ ಅಭ್ಯಾಸಮಾಡಬೇಕೆಂದು, ಪ್ರತಿದಿನ ಅದನ್ನು ಸಾಧಿಸಬೇಕೆಂದು ಸ್ಪಷ್ಟವಾಗುತ್ತದೆ. 'ಧ್ಯಾನವು ಪ್ರಧಾನವಲ್ಲವೇ, ಇನ್ನು ಶಾಸ್ತ್ರಾಭ್ಯಾಸಗಳೇಕೆ?' ಎಂದು ಕೇಳುವವರಿಗೆ ಭಗವಂತನು ಸಮಾಧಾನವಿತ್ತಿದ್ದಾನೆ. ಧ್ಯಾನವು ಮುಖ್ಯವಾಗಿದ್ದರೂ ವಿರಾಮ ಸಮಯದಲ್ಲಿ ಶಾಸ್ತ್ರಾದಿಗಳನ್ನು ಪರಿಶೀಲಿಸಿ, ಅಧ್ಯಯನ ಮಾಡುವುದು, ಕೆಂಡಕ್ಕೆ ಗಾಳಿ ಸಹಾಯಕವಾದಂತೆ, ಆತನ ಧ್ಯಾನಾದಿಗಳಿಗೆ ಬಹಳ ಸಹಾಯವಾಗುವುದು. ಇಂತಹ ಅಧ್ಯಯನದಿಂದ ಪ್ರಣವಾದಿ ಮಂತ್ರಗಳ ಜಪದಿಂದ, ಸತ್ಯವಾಕ್ಕಿನಿಂದ ವಾಕ್‌ಶುದ್ಧಿ ಉಂಟಾಗುವುದು.

ಪ್ರ : ವಾಚಿಕ ತಪಸ್ಸು ಎಂದರೇನು?

ಉ : ೧) ಪರರಿಗೆ ನೋವು ಉಂಟು ಮಾಡದಿರುವುದು, ಸತ್ಯವಾದದ್ದು, ಪ್ರಿಯವಾಗಿ ಹಿತವಾಗಿ ಇರುವ ಮಾತು ೨) ವೇದಾದಿ ಅಧ್ಯಯನಗಳನ್ನು ವಾಚಿಕ ತಪಸ್ಸು ಎಂದು ಹೇಳುವರು.

ಅ।। ಇನ್ನು ಮಾನಸಿಕ ತಪಸ್ಸನ್ನು ಕುರಿತು ಹೇಳಲಾಗಿದೆ -

೧೬ ಮನಃ ಪ್ರಸಾದಸ್ಸೌಮ್ಯತ್ವಂ ಮೌನಮಾತ್ಮ ವಿನಿಗ್ರಹಃ
ಭಾವಸಂಶುದ್ಧಿರಿತ್ಯೇತತ್ತಪೋ ಮಾನಸಮುಚ್ಯತೇ

ಅರ್ಥ: ಮನಃ ಪ್ರಸಾದಃ=ಮನಸ್ಸನ್ನು ನಿರ್ಮಲವಾಗಿಡುವುದು (ಕಲಬೆರಕೆ ಯಾಗಗೊಡದೆ ಸ್ವಚ್ಛವಾಗಿಡುವುದು); ಸೌಮ್ಯತ್ವಂ=ಮುಖಪ್ರಸನ್ನತೆ

* ವೇದಾಂತ ಶತರುದ್ರೀಯಪ್ರಣವಾದಿ ಜಪಂ ಬುಧಾಃ
ಸತ್ವಶುದ್ಧಿಕರಂ ಪುಂಸಾಂ ಸ್ವಾಧ್ಯಾಯಂ ಪರಿಚಕ್ಷ್ಯತೇ

(ಕ್ರೂರಭಾವವಿಲ್ಲದೆಯಿರುವುದು); ಮೌನಂ=ಭಗವಂತನನ್ನು ಕುರಿತ ಸತ್ಪ್ರವರ್ತನೆ ಹಾಗು ಮನನ ಅಂದರೆ ಆತ್ಮ ಧ್ಯಾನಾದಿಗಳಲ್ಲಿ ಚಿತ್ತವನ್ನು ನಿಲ್ಲಿಸುವುದು [ಇಲ್ಲವೆ ಯಾವ ದೃಶ್ಯ ಸಂಕಲ್ಪವೂ ಇಲ್ಲದೆ ಆತ್ಮದಲ್ಲಿಯೇ ಸ್ಥಿತಿ ಹೊಂದಿರುವ (ವಾಙ್ಮೌನ ಸಹಿತವಾಗಿ) ಮನೋ ಮೌನ]; ಆತ್ಮವಿನಿಗ್ರಹಃ= ಮನಸ್ಸನ್ನು ನಿಗ್ರಹಿಸುವುದು; ಭಾವಸಂಶುದ್ಧಿಃ=ಪರಿಶುದ್ಧವಾದ ಭಾವವನ್ನು ಹೊಂದಿರುವುದು (ಮೋಸ ಮುಂತಾದುವು ಇಲ್ಲದೆ ಇರುವುದು); ಇತಿ ಏತತ್=ಎನ್ನುವುವು; ಮಾನಸಂ=ಮನಸ್ಸಂಬಂಧವಾದ; ತಪಃ=ತಪಸ್ಸೆಂದು; ಉಚ್ಯತೇ=ಹೇಳಲ್ಪಡುತ್ತದೆ.

**ತಾ||** ಮನಸ್ಸನ್ನು ನಿರ್ಮಲವಾಗಿರಿಸುವುದು (ಕಲಬೆರೆಕೆಯಾಗದಂತೆ ನೋಡಿ ಕೊಂಡು ಸ್ವಚ್ಛವಾಗಿರಿಸುವುದು), ಮುಖ ಪ್ರಸನ್ನತೆ (ಕ್ರೂರಭಾವವಿಲ್ಲದಿರುವುದು), ಪರಮಾತ್ಮನನ್ನು ಕುರಿತ ಮನನ (ದೈವಧ್ಯಾನ)ವನ್ನು ಹೊಂದಿರುವುದು [ಇಲ್ಲವೆ ದೃಶ್ಯ ಸಂಕಲ್ಪಗಳು ಯಾವುವೂ ಇಲ್ಲದೆ ಆತ್ಮದಲ್ಲೇ ಸ್ಥಿತಿ ಹೊಂದಿರುವುದು, (ವಾಕ್ಕಿನ ಮೌನದೊಂದಿಗೆ) ಮನೋ ಮೌನ], ಮನಸ್ಸನ್ನು ನಿಗ್ರಹಿಸುವುದು, ಪರಿಶುದ್ಧವಾದ ಭಾವವನ್ನು ಹೊಂದಿರುವುದು (ಮೋಸ ಮುಂತಾದುವು ಇಲ್ಲದೆ ಇರುವುದು), ಇವುಗಳನ್ನು ಮಾನಸಿಕ ತಪಸ್ಸುಗಳೆಂದು ಕರೆಯುವರು.

**ವ್ಯಾಖ್ಯೆ:** 'ಮನಃ ಪ್ರಸಾದಃ'- ಮನಸ್ಸು ಸ್ವಚ್ಛವಾಗಿ, ನಿರ್ಮಲವಾಗಿ ಕಲಬೆರೆಕೆ ಯಾಗದೆ ಇರಬೇಕು ಮನಸ್ಸಿಗೆ ರಜೋತಮೋಗುಣಗಳ ಸಂಪರ್ಕವಿದ್ದರೆ ಅದು ಚಂಚಲವಾಗಿ, ಮತ್ತೇರಿದಂತೆ ಇರುವುದು. ಸತ್ತ್ವಗುಣ, ವಿಶುದ್ಧ ಸತ್ತ್ವಗುಣವನ್ನು ಆಶ್ರಯಿಸಿ ಮನಸ್ಸನ್ನು ನಿರ್ಮಲಗೊಳಿಸಿಕೊಳ್ಳಬೇಕು. ಸ್ಫಟಿಕವನ್ನು ನೀರಿನಲ್ಲಿ ಹಾಕಿದಾಗ ಮಲಿನವೆಲ್ಲಾ ತಳ ಸೇರಿ ನೀರು ಸ್ವಚ್ಛವಾದ ಹಾಗೆ ಭಕ್ತಿ ಜ್ಞಾನ ವೈರಾಗ್ಯಗಳಿಂದ ಮನೋ ಮಾಲಿನ್ಯವನ್ನು ನಿರ್ಮೂಲಿಸಿ ಚಿತ್ತವನ್ನು ನಿರ್ಮಲಗೊಳಿಸಬೇಕು. ಇದು ಮನಃ ಪ್ರಸಾದ (ಮಾನಸಿಕ ತಪಸ್ಸು) ಇಂತಹ ಮನಃ ಪ್ರಸಾದವನ್ನು ಹೊಂದಿದವನು ಮತ್ತೆ ಬಂಧವನ್ನು ಹೊಂದುವುದಿಲ್ಲ.

'ಸೌಮ್ಯತ್ವಂ'- ಅಂತಃಕರಣ ವೃತ್ತಿ ಸಾಮಾನ್ಯವಾಗಿ ಮುಖದಲ್ಲಿ ಪ್ರತಿಬಿಂಬವಾಗುತ್ತದೆ. ಮುಖವು ಸೌಮ್ಯವಾಗಿ ವಿಕಾಸವಾಗಿದ್ದರೆ ಚಿತ್ತವು ನಿರ್ಮಲವಾಗಿ, ನಿಶ್ಚಲವಾಗಿ, ಸೌಮ್ಯವಾಗಿದೆಯೆಂದು ಊಹಿಸಬಹುದು. ಅಂತಹ ಸೌಮ್ಯ ಸ್ಥಿತಿ ಹೊಂದುವುದು ಮಾನಸಿಕ ತಪಸ್ಸೇ ಸರಿ.

'ಮೌನಂ'- 'ವಾಕ್ಕಿನ ಮೌನ, ಮನೋಮೌನ' ಎಂದು ಮೌನಗಳು ಎರಡು ವಿಧ. ಇಲ್ಲಿ ಮೌನವನ್ನು ಮಾನಸಿಕ ತಪಸ್ಸೆಂದು ಹೇಳುವುದರಿಂದ ಮಾನಸಿಕ ಮೌನವೇ ಇಲ್ಲಿ ಉತ್ತಮವಾದುದೆಂದು ತಿಳಿಯುತ್ತದೆ. ಆದರೆ ವಾಕ್ ಮೌನವು, ಮನೋ ಮೌನಕ್ಕೆ ಸಹಾಯಕಾರಿಯಾಗಿರಬಲ್ಲದು. ಆದ್ದರಿಂದ ಅದನ್ನೂ ಅಭ್ಯಸಿಸಬೇಕು. ಆದರೆ ಮನೋ ಮೌನಕ್ಕಾಗಿ ಯತ್ನಿಸದೆ ಕೇವಲ ವಾಕ್ಕಿನ ಮೌನ ಇದ್ದರೆ ಆಗ ಮನಸ್ಸು ಅನೇಕ ಸಂಕಲ್ಪಗಳಿಂದ ಕೂಡಿ ಚಂಚಲವಾಗುವುದರಿಂದ, ಆ ಮೌನದಿಂದ ಹೆಚ್ಚಿನ ಪ್ರಯೋಜನ ವಿರುವುದಿಲ್ಲವೆಂದು ಗ್ರಹಿಸಬೇಕು. ಮೌನಕ್ಕೆ ಮುಖ್ಯಾರ್ಥ ಮನೋವೃತ್ತಿಗಳ ನಿಶ್ಚಲತೆ, ದುಃಖ ಸಂಕಲ್ಪ ರಾಹಿತ್ಯವೇ ಹೌದು. ಆದ್ದರಿಂದ ಮೌನವನ್ನು ಭಗವಂತನು ವಾಚಿಕ ತಪಸ್ಸಿನಲ್ಲಿ ಸೇರಿಸದೆ ಮಾನಸಿಕ ತಪಸ್ಸಿನಲ್ಲಿ ಸೇರಿಸಿರುವನು. ಆದ್ದರಿಂದ ಮನೋಮೌನವೇ ಸರ್ವರಿಗೂ ಮುಖ್ಯವಾದು ದೆಂದು ವಾಕ್‌ಮೌನವು ಅದಕ್ಕೆ ಸಹಾಯಕವಾಗಿರುವುದು ಎಂದು ತಿಳಿಯಬೇಕು.

'ಆತ್ಮ ವಿನಿಗ್ರಹಃ'- ಇಲ್ಲಿ 'ಆತ್ಮ' ಎನ್ನುವ ಪದಕ್ಕೆ ಮನಸ್ಸು. ಇಂದ್ರಿಯ ಗಳೆಂದರ್ಥ. 'ನಿಗ್ರಹ'ವೆಂದು ಹೇಳದೆ 'ವಿನಿಗ್ರಹ' ಎಂದು ಹೇಳಿರುವುದರಿಂದ ಸಾಮಾನ್ಯ ನಿಗ್ರಹ ಸಾಲದೆಂದೂ ಇಂದ್ರಿಯ ಮನಗಳನ್ನು ಸಂಪೂರ್ಣವಾಗಿ ನಿಗ್ರಹಿಸಬೇಕೆಂದು ತಿಳಿಯುತ್ತದೆ. ಹಾಗೆಯೇ 'ಭಾವ ಸಂಶುದ್ಧಿ' ಎನ್ನುವ ಪದದಲ್ಲಿ 'ಶುದ್ಧಿ' ಎಂದು ಹೇಳದೆ 'ಸಂಶುದ್ಧಿ' ಎಂದು ಹೇಳುವುದರಿಂದ ಭಾವದಲ್ಲಿ ಪರಿಪೂರ್ಣವಾದ ಶುದ್ಧತೆಯಿರಬೇಕೆಂದು ಸ್ಪಷ್ಟವಾಗುತ್ತದೆ. ಜ್ಞಾನಸಿದ್ಧಿಗೆ ಭಾವಶುದ್ಧಿ ಅವಶ್ಯಕ. ಅಂದರೆ ಆತ್ಮಾನುಭೂತಿಗೆ ಭಾವ ನಿರ್ಮಲತೆ ಅತ್ಯಂತ ಅವಶ್ಯಕವಾದುದಾಗಿದೆ. ನಿರ್ಮಲ ಜಲದಲ್ಲಿ ಸೂರ್ಯನು ದೇದೀಪ್ಯಮಾನವಾಗಿ ಪ್ರಕಾಶಿಸಿದಂತೆ ಶುದ್ಧ ಹೃದಯದಲ್ಲಿ ಆತ್ಮ ಭಾಸ್ಕರನು ಚೆನ್ನಾಗಿ ಕಂಗೊಳಿಸುವನು. ಆದ್ದರಿಂದ ಮನಸ್ಸು, ಭಾವಗಳಲ್ಲಿ ಯಾವ ರೀತಿಯ ದೃಶ್ಯ ದೋಷ, ಅಪವಿತ್ರತೆ ಸೇರದಂತೆ ಬಹು ಜಾಗರೂಕತೆಯಿಂದ ನೋಡುತ್ತಿರಬೇಕು.

ಪ್ರ : ಮಾನಸಿಕ ತಪಸ್ಸೆಂದರೇನು?

ಉ : ೧) ಮನಸ್ಸು ನಿರ್ಮಲವಾಗಿರುವುದು ೨) ಮುಖದಲ್ಲಿ ಪ್ರಸನ್ನತೆಯಿರುವುದು ೩) ಮೌನ (ಆತ್ಮವನ್ನು ಕುರಿತ ಮನನ, ಇಲ್ಲವೆ ದೃಶ್ಯ ವೃತ್ತಿ ರಾಹಿತ್ಯ ಪೂರ್ವಕವಾದ ಆತ್ಮಸ್ಥಿತಿ)-ಎನ್ನುವುಗಳನ್ನು ಮಾನಸಿಕ ತಪಸ್ಸುಗಳೆನ್ನುವರು.

**ಅ||** ಇಲ್ಲಿಯವರೆಗೆ ಶಾರೀರಿಕ, ವಾಚಿಕ, ಮಾನಸಿಕ ತಪಸ್ಸುಗಳನ್ನು ಕುರಿತು ಹೇಳಿ ಇನ್ನು ಸಾತ್ತ್ವಿಕ, ರಾಜಸಿಕ, ತಾಮಸಿಕ ತಪಸ್ಸುಗಳನ್ನು ವಿವರಿಸುತ್ತಿದ್ದಾನೆ-

**೧೭ ಶ್ರದ್ಧಯಾ ಪರಯಾ ತಪ್ತಂ ತಪಸ್ತತ್ತ್ರಿವಿಧಂ ನರೈಃ**
**ಅಫಲಾಕಾಂಕ್ಷಿಭಿರ್ಯುಕ್ತೈಃ ಸಾತ್ತ್ವಿಕಂ ಪರಿಚಕ್ಷ್ಯತೇ**

**ಅರ್ಥ:** ಅಫಲಾಕಾಂಕ್ಷಿಭಿಃ=ಫಲಾಪೇಕ್ಷೆಯಿಲ್ಲದೆ ಇರುವವರು; ಯುಕ್ತೈಃ= ನಿಶ್ಚಲಚಿತ್ತವುಳ್ಳವುರು (ಇಲ್ಲವೆ ದೈವಭಾವದಿಂದ ಕೂಡಿರುವವರು) ಆದ; ನರೈಃ=ಮನಜರಿಂದ; ಪರಯಾ=ಅಧಿಕವಾದ; ಶ್ರದ್ಧಯಾ=ಶ್ರದ್ಧೆಯಿಂದ; ತಪ್ತಂ=ಆಚರಿಸಲ್ಪಟ್ಟ; ತತ್ ತ್ರಿವಿಧಂ=(ಮೇಲೆ ತಿಳಿಸಲ್ಪಟ್ಟ) ಈ ಮೂರು ವಿಧಗಳಾದ; ತಪಃ=ತಪಸ್ಸನ್ನು; ಸಾತ್ತ್ವಿಕಂ=ಸಾತ್ತ್ವಿಕವಾದದ್ದಾಗಿ; ಪರಿಚಕ್ಷ್ಯತೇ= (ಹಿರಿಯರು) ಹೇಳುತ್ತಿದ್ದಾರೆ.

**ತಾ||** ಫಲಾಪೇಕ್ಷೆಯಿಲ್ಲದವರು, ನಿಶ್ಚಲಚಿತ್ತವುಳ್ಳವರು (ಇಲ್ಲವೆ ದೈವ ಭಾವಯುಕ್ತರು) ಆದ ಮನುಜರಿಂದ ಅಧಿಕವಾದ ಶ್ರದ್ಧೆಯಿಂದ ಆಚರಿಸಲ್ಪಟ್ಟ ಈ (ಮೇಲೆ ತಿಳಿಸಿದ) ಶಾರೀರಿಕ, ವಾಚಿಕ, ಮಾನಸಿಕಗಳೆಂಬ ಮೂರು ವಿಧವಾದ ತಪಸ್ಸುಗಳನ್ನು ಸಾತ್ತ್ವಿಕ ತಪಸ್ಸುಗಳೆಂದು (ಹಿರಿಯರು) ಹೇಳುತ್ತಿದ್ದಾರೆ.

**ವ್ಯಾಖ್ಯೆ:** 'ಶ್ರದ್ಧಯಾ'- ಎನ್ನುವ ಪದಕ್ಕೆ 'ಪರಯಾ' ಎನ್ನುವ ವಿಶೇಷಣವನ್ನು ಸೇರಿಸುವುದರಿಂದ ಸಾಮಾನ್ಯ ಶ್ರದ್ಧೆ ಸಾಲದೆಂದೂ ವಿಶೇಷವಾದ, ಉತ್ತಮವಾದ ಶ್ರದ್ಧೆ ಅವಶ್ಯಕವೆಂದು ವಿದಿತವಾಗುತ್ತದೆ. ಏಕೆಂದರೆ ಸಾಧಕನಿಗೆ ಮಧ್ಯೆ ಮಧ್ಯೆ ಯಾವಾದರೂ ಅಂತರಾಯಗಳುಂಟಾದರೆ ಅಲ್ಪವಾದ ಶ್ರದ್ಧೆ ಚಂಚಲವಾಗಬಹುದು. ಆದ್ದರಿಂದ ಅಪರಿಮಿತ ಶ್ರದ್ಧೆ ವಿಶ್ವಾಸದಿಂದ ಕೂಡಿರುವಾಗ ಮಾತ್ರ ಮಾಯೆಯನ್ನು ದಾಟಲು ಸಾಧ್ಯವಾಗುವುದು.

'ನರೈಃ'- ಇಲ್ಲಿ ನರರು ಎಂದು ಹೇಳಲಾಗಿದೆಯೇ ಹೊರತು ಜಾತಿ ಮತ ಕುಲಗಳನ್ನು ಹೇಳಲಿಲ್ಲ. ಆದ್ದರಿಂದ ಎಲ್ಲಾ ಮಾನವರೂ ಪರಮಾರ್ಥ

ಲಕ್ಷ್ಯ ಸಾಧಿಸಲು, ಭಗವಂತನನ್ನು ಅನ್ವೇಷಿಸಲು ಅರ್ಹರೇ ಎಂದು ಗೀತಾಚಾರ್ಯನು ಹೇಳಿರುವನು.

'ಯುಕ್ತೈಃ- ಭಗವಂತನೊಂದಿಗೆ, ಆತ್ಮತತ್ವದೊಂದಿಗೆ, ಪರಮಾರ್ಥ ಸಾಧನೆಯೊಂದಿಗೆ ಕೂಡುವುದೇ (ಯೋಗ); ಅದನ್ನು ಹೊಂದಿದವರು ಪ್ರಾಪಂಚಿಕ ದೃಶ್ಯಜಾಲದೊಡನೆ ಸಂಬಂಧ ಕಡಿಮೆ ಮಾಡಿಕೊಂಡು ಭಗವದ್ಧ್ಯಾನಪರರಾಗಿರುವವರು. ಅಂತಹ ನಿಶ್ಚಲ ಚಿತ್ತರು ಯುಕ್ತರೆಂದು ಕರೆಯಿಸಿಕೊಳ್ಳುವರು.

ಇದರಿಂದ ಸಾತ್ವಿಕ ತಪಸ್ಸನ್ನು ಆಚರಿಸುವವರಿಗೆ ಮೂರು ಸದ್ಗುಣಗಳು ಇರಬೇಕೆಂದು ತಿಳಿಯುತ್ತದೆ. ಅವು ಯಾವುವೆಂದರೆ ೧) ಅವರು ಪರಮಶ್ರದ್ಧೆಯಿಂದಿರಬೇಕು ೨) ಫಲವನ್ನು ಅಪೇಕ್ಷಿಸದೆ ಕರ್ಮಗಳನ್ನು ಮಾಡಬೇಕು ೩) ನಿಶ್ಚಲ ಚಿತ್ತ, ಇಲ್ಲವೆ ಭಗವದ್ಧ್ಯಾನಪರತೆಯನ್ನು ಹೊಂದಿರಬೇಕು. ಇಂತಹ ಉತ್ತಮ ಸ್ವಭಾವಗಳುಂಟಾಗಿ, ಮೇಲೆ ತಿಳಿಸಿದ ತ್ರಿವಿಧ (ಶಾರೀರಿಕ, ವಾಚಿಕ, ಮಾನಸಿಕ) ತಪಸ್ಸುಗಳನ್ನಾಚರಿಸಿದರೆ ಅದು ಸಾತ್ವಿಕ ತಪಸ್ಸೆನಿಸಿಕೊಳ್ಳುವುದು.

ಪ್ರ : ಸಾತ್ವಿಕ ತಪಸ್ಸೆಂದರೆ ಎಂತಹದು?

ಉ : ೧) ಅತ್ಯಂತ ಶ್ರದ್ಧೆಯಿಂದ ೨) ಫಲಾಭಿಲಾಷಾರಹಿತವಾಗಿ ೩) ನಿಶ್ಚಲಚಿತ್ತರಾಗಿ (ಇಲ್ಲವೆ, ದೈವಧ್ಯಾನ ಪರರಾಗಿ) ಮೇಲೆ ತಿಳಿಸಿದ ತ್ರಿವಿಧ ತಪಸ್ಸುಗಳನ್ನು ಮಾಡುವುದೇ ಸಾತ್ವಿಕ ತಪಸ್ಸು.

**ಅ||** ರಾಜಸಿಕ ತಪಸ್ಸನ್ನು ಕುರಿತು ಹೇಳಲಾಗುತ್ತಿದೆ-

**೧೮ ಸತ್ಕಾರಮಾನಪೂಜಾರ್ಥಂ ತಪೋ ದಂಭೇನ ಚೈವ ಯತ್**
**ಕ್ರಿಯತೇ ತದಿಹ ಪ್ರೋಕ್ತಂ ರಾಜಸಂ ಚಲಮಧ್ರುವಮ್**

**ಅರ್ಥ:** ಸತ್ಕಾರ ಮಾನ ಪೂಜಾರ್ಥಂ=ಇತರರಿಂದ ತಾನು ಸತ್ಕರಿಸಿ ಕೊಳ್ಳಬೇಕೆಂದು, ಗೌರವಿಸಲ್ಪಡಬೇಕೆಂದು, ಪೂಜಿಸಲ್ಪಡಬೇಕೆಂದು; ದಂಭೇನ ಚ ಏವ=ದಂಭದಿಂದ ಮಾತ್ರ; ಯತ್=ಯಾವ; ತಪಂ=ತಪಸ್ಸು; ಕ್ರಿಯತೇ=ಮಾಡಲ್ಪಡುತ್ತಿದೆಯೋ; ತತ್=ಅದು; ಚಲಮ್=ಅಸ್ಥಿರವಾದ; ಅಧೃವಂ=ಅನಿಶ್ಚಿತಫಲವುಳ್ಳದ್ದಾದ; ರಾಜಸಂ=ರಾಜಸ ತಪಸ್ಸೆಂದು; ಇಹ=ಈ ಪ್ರಪಂಚದಲ್ಲಿ; ಪ್ರೋಕ್ತಂ=ಹೇಳಲ್ಪಟ್ಟಿದೆ.

**ತಾ||** ಇತರರಿಂದ ತಾನು ಸತ್ಕಾರ ಮಾಡಿಸಿಕೊಳ್ಳಬೇಕೆಂದು, ಗೌರವಿಸಲ್ಪಡ ಬೇಕೆಂದು, ಪೂಜಿಸಲ್ಪಡಬೇಕೆಂದು ದಂಭದಿಂದ ಮಾಡಲ್ಪಡುವ ತಪಸ್ಸು ಅಸ್ಥಿರವಾಗಿದ್ದು, ಅನಿಶ್ಚಿತವಾದ ಫಲವುಳ್ಳದ್ದಾಗಿದ್ದು ಚಪಲವಾದ ರೂಪವುಳ್ಳ ದ್ದಾಗಿದ್ದು ಅದನ್ನು ಈ ಪ್ರಪಂಚದಲ್ಲಿ ರಾಜಸ ತಪಸ್ಸು ಎಂದು ಕರೆಯುವರು.

**ವ್ಯಾಖ್ಯೆ:** ಕೆಲವರು ತಮ್ಮ ತಪಸ್ಸನ್ನು ನೋಡಿ ಇತರರು ತಮ್ಮನ್ನು ಸತ್ಕರಿಸುವರು ಎನ್ನುವ ಭಾವದಿಂದ ತಪಸ್ಸು ಮಾಡಲಾರಂಭಿಸುವರು. ಅದು ಸದುದ್ದೇಶದಿಂದ, ಹೃದಯ ಪೂರ್ವಕವಾಗಿ ಭಕ್ತಿ, ಶ್ರದ್ಧೆಗಳಿಂದ ಮಾಡಲ್ಪಡುವ ತಪಸ್ಸು ಅಲ್ಲವಾದ್ದರಿಂದ ಡಂಭಕ್ಕಾಗಿ ಮಾಡಲ್ಪಟ್ಟದ್ದಾದ್ದರಿಂದ ಸ್ಥಿರವಾಗಿರುವುದಲ್ಲ. ಅದರ ಫಲಿತವೂ ಚಪಲವಾಗಿದ್ದು ಅನಿಶ್ಚಿತವಾಗಿರುವುದು. ಆದ್ದರಿಂದ ವಿಜ್ಞುಗಳು ಅದನ್ನು ಅನುಸರಿಸಬಾರದು.

ಪ್ರ : ರಾಜಸ ತಪಸ್ಸು ಎಂತಹದು?

ಉ : ಸತ್ಕಾರ ಮಾನ ಪೂಜಾದಿಗಳಿಗಾಗಿ ದಂಭದಿಂದ ಮಾಡಲ್ಪಡುವುದನ್ನು ರಾಜಸಿಕ ತಪಸ್ಸೆನ್ನುವರು.

ಪ್ರ : ಅದರ ಫಲಿತವೇನು? ಸ್ವರೂಪವೇನು?

ಉ : ಅಸ್ಥಿರವಾಗಿದ್ದು ಅನಿಶ್ಚಿತವಾದ ಫಲವನ್ನು ಹೊಂದಿರುವುದು ಚಂಚಲ ಹಾಗು ಅನಿಶ್ಚಿತ ಸ್ವರೂಪವನ್ನು ಹೊಂದಿರುವುದು.

**ಅ||** ಇನ್ನು ತಾಮಸಿಕ ತಪಸ್ಸಿನ ವಿವರಣೆ-

**೧೯. ಮೂಢಗ್ರಾಹೇಣಾತ್ಮನೋ ಯತ್ಪೀಡಯಾ ಕ್ರಿಯತೇ ತಪಃ**
**ಪರಸ್ಯೋತ್ಸಾದನಾರ್ಥಂ ವಾ ತತ್ತಾಮಸ ಮುದಾಹೃತಮ್**

**ಅರ್ಥ:** ಯತ್ ತಪಃ=ಯಾವ ತಪಸ್ಸು; ಮೂಢಗ್ರಾಹೇಣ=ಮೂರ್ಖವಾದ ಹುಮ್ಮಸ್ಸಿನಿಂದ; ಆತ್ಮನಃ ಪೀಡಯಾ=ತನ್ನ ಶರೀರವನ್ನು (ಶುಷ್ಕೋಪವಾಸಾದಿ ಗಳಿಂದ) ದಂಡಿಸುವುದರಿಂದ; ಪರಸ್ಯ=ಇತರರ; ಉತ್ಸಾದನಾರ್ಥಂ ವಾ=ನಾಶಕ್ಕಾಗಿ; ಕ್ರಿಯತೇ=ಮಾಡಲ್ಪಡುವುದೋ; ತತ್=ಅದು; ತಾಮಸಂ= ತಾಮಸ ತಪಸ್ಸೆಂದು; ಉದಾಹೃತಂ=ಹೇಳಲ್ಪಟ್ಟಿದೆ.

**ತಾ||** ಮೂರ್ಖವಾದ ಹುಮ್ಮಸ್ಸಿನಿಂದ ತನ್ನ ಶರೀರವನ್ನು (ಶುಷ್ಕೋಪ ವಾಸಾದಿಗಳಿಂದ) ಬಾಧಿಸುವುದರಿಂದ ಇಲ್ಲವೆ ಇತರರನ್ನು ನಾಶ ಮಾಡುವ ಉದ್ದೇಶದಿಂದ ಮಾಡಲ್ಪಡುವ ತಪಸ್ಸನ್ನು ತಾಮಸಿಕ ತಪಸ್ಸೆನ್ನುವರು.

**ವ್ಯಾಖ್ಯೆ:** 'ಮೂಢಗ್ರಾಹೇಣ'- ಮೂರ್ಖವಾದ ಹುಮ್ಮಸ್ಸಿನಿಂದ-ಹುಮ್ಮಸ್ಸು ಒಳ್ಳೆಯದೇ ಆಗಲಿ, ಅದು ವಿವೇಕದಿಂದ ಕೂಡಿದಾಗ ಮಾತ್ರ ಸತ್ಫಲಗಳನ್ನು ಕೊಡುವುದು. ಮೂರ್ಖವಾದ ಹುಮ್ಮಸ್ಸಿನಿಂದ ಪ್ರಯೋಜನವಿಲ್ಲ.

'ಆತ್ಮನೋ ಯತ್ಪೀಡಯಾ'- ಕೆಲವರು ಮೂರ್ಖವಾದ ಜಿದ್ದಿನಿಂಧ, ಶುಷ್ಕೋಪವಾಸಾದಿಗಳಿಂದ ತಮ್ಮ ಶರೀರವನ್ನು ಬಾಧಿಸಿಕೊಂಡು ತಪಸ್ಸು ಮಾಡುವರು. ತಪಸ್ಸಾಗಲಿ, ಉಪವಾಸವಾಗಲಿ ಒಳ್ಳೆಯದೇ ಆದರೂ ಸ್ವಲ್ಪ ವಿವೇಕವನ್ನು ಅವುಗಳಿಗೆ ಜೋಡಿಸಿದಾಗ ಮಾತ್ರ ಶೋಭಿಸುವುವು. ಇಲ್ಲದಿದ್ದರೆ ಮನುಜನು ವಕ್ರ ಮಾರ್ಗದಲ್ಲಿ ನಡೆಯುವ ಪ್ರಮಾದವಿದೆ. ಅಂತಹ ವಿವೇಕವಿಲ್ಲದ ಕಾರಣದಿಂದ ಕೆಲವರು ಇತರರನ್ನು ನಾಶಗೊಳಿಸಲು ತಪಸ್ಸು ಮಾಡುವರೆಂದು ಇಲ್ಲಿ ಹೇಳಲಾಗಿದೆ. ಈ ಪ್ರಕಾರವಾಗಿ ಅವರು ತಪಸ್ಸೆನ್ನುವ ಸಾಧನೆಯನ್ನು ದುರ್ವಿನಿಯೋಗಪಡಿಸಿಕೊಳ್ಳುತ್ತಿದ್ದಾರೆ. ಇದಕ್ಕೆಲ್ಲಾ ಮೂಢತ್ವವೇ ಕಾರಣ. ಆದ್ದರಿಂದ ಅದನ್ನು ಹೋಗಲಾಡಿಸಿಕೊಂಡು, ರಾಜಸ ತಾಮಸ ತಪಸ್ಸುಗಳನ್ನು ಆಶ್ರಯಿಸದೆ, ತಮಗಿರುವ ಆ ಹುಮ್ಮಸ್ಸನ್ನು ಸನ್ಮಾರ್ಗದಲ್ಲಿ ವಿನಿಯೋಗಿಸಿ ದೈವ ಪ್ರಾಪ್ತಿಗಾಗಿ ಸಾತ್ವಿಕ ತಪಸ್ಸನ್ನೇ ಆಶ್ರಯಿಸಿ ಮುಕ್ತಿ ಹೊಂದಬೇಕು.

ಈ ಶ್ಲೋಕದಿಂದ ಕೆಳಕಂಡ ಅಂಶಗಳು ತಿಳಿಯುತ್ತಿವೆ. ೧) ಮೂರ್ಖವಾದ ಹುಮ್ಮಸ್ಸು ಕೆಲಸಕ್ಕೆ ಬರುವುದಿಲ್ಲ ೨) ಶುಷ್ಕೋಪ ವಾಸಾದಿ ಗಳಿಂದ ಶರೀರವನ್ನಾಗಲಿ ಮನಸ್ಸನ್ನಾಗಲಿ, ತೊಂದರೆಗೀಡು ಮಾಡಬಾರದು

ಪ್ರ : ತಾಮಸಿಕ ತಪಸ್ಸು ಎಂತಹದು?

ಉ : ೧) ಮೂರ್ಖವಾದ ಹುಮ್ಮಸ್ಸಿನಿಂದ ತನ್ನ ಶರೀರವನ್ನು ತೊಂದರೆ ಗೀಡುಮಾಡಲ್ಪಡುವ ತಪಸ್ಸು ತಾಮಸಿಕ ತಪಸ್ಸೆನಿಸಿಕೊಳ್ಳುವುದು.

**ಅ||** ಇನ್ನು ದಾನಗಳನ್ನು ಕುರಿತು ಹೇಳಬಯಸಿ ಮೊದಲಿಗೆ ಸಾತ್ವಿಕ ದಾನದ ಬಗ್ಗೆ ತಿಳಿಸಲಾಗಿದೆ-

**೨೦ ದಾತವ್ಯಮಿತಿ ಯದ್ದಾನಂ ದೀಯತೇಽನುಪಕಾರಿಣೇ**
**ದೇಶೇ ಕಾಲೇಚ ಪಾತ್ರೇ ಚ ತದ್ದಾನಂ ಸಾತ್ತ್ವಿಕಂ ಸ್ಮೃತಮ್**

**ಅರ್ಥ:** ದಾತವ್ಯಮಿತಿ=ಕೊಡಲೇಬೇಕೆಂಬ ನಿಶ್ಚಯದಿಂದ; ಯತ್ ದಾನಂ=ಯಾವ ದಾನವನ್ನು, ದೇಶೇ=(ಪುಣ್ಯ) ಪ್ರದೇಶದಲ್ಲಿ; ಕಾಲೇ ಚ=(ಪುಣ್ಯ) ಕಾಲದಲ್ಲಿ; ಪಾತ್ರೇ ಚ=ಯೋಗ್ಯನಿಗೆ; ಅನುಪಕಾರಿಣೇ= ಪ್ರತ್ಯುಪಕಾರ ಮಾಡುವ ಶಕ್ತಿಯಿಲ್ಲದವನಿಗೆ; ದೀಯತೇ= ಕೊಡಲ್ಪಡುವುದೋ; ತದ್ದಾನಂ=ಆ ದಾನವು; ಸಾತ್ತ್ವಿಕಂ (ಇತಿ)=ಸಾತ್ತ್ವಿಕವೆಂದು, ಸ್ಮೃತಂ= ಹೇಳಲ್ಪಡುತ್ತದೆ.

**ತಾ||** ಕೊಡಬೇಕಾದದ್ದೇ ಎನ್ನುವ ನಿಶ್ಚಯದಿಂದ ಯಾವ ದಾನವನ್ನು ಪುಣ್ಯ ಪ್ರದೇಶದಲ್ಲಿ, ಪುಣ್ಯ ಕಾಲದಲ್ಲಿ, ಯೋಗ್ಯನಾದವನಿಗೆ ಮತ್ತು ಪ್ರತ್ಯುಪಕಾರ ಮಾಡುವ ಶಕ್ತಿಯಿಲ್ಲದವನಿಗೆ ಕೊಡಲ್ಪಡುವುದೋ ಅಂತಹ ದಾನ ಸಾತ್ತ್ವಿಕ ದಾನವೆಂದು ಹೇಳಲ್ಪಡುತ್ತದೆ.

**ವ್ಯಾಖ್ಯೆ:** 'ದಾತವ್ಯಮಿತಿ'- ಪ್ರತಿಯೊಬ್ಬನೂ ದಾನ ಮಾಡುವುದು ತನ್ನ ಧರ್ಮವೆಂದು ತಿಳಿದು ದಾನಮಾಡಬೇಕು. ಅಷ್ಟೇ ಅಲ್ಲದೆ ಒಬ್ಬರ ಹೊಗಳಿಕೆಗಾಗಲಿ, ಪ್ರತಿಫಲಾಪೇಕ್ಷೆಯಿಂದ ಮಾಡಬಾರದು. 'ನೀನು ಏಕೆ ದಾನಮಾಡುತ್ತಿರುವೆ' ಎಂದು ಯಾರಾದರೂ ದಾತನನ್ನು ಕೇಳಿದರೆ 'ಇದು ನನ್ನ ಧರ್ಮ ನಾನು ದಾನ ಮಾಡಬೇಕಾದದ್ದೇ (ದಾತವ್ಯಂ). ಆದ್ದರಿಂದ ಮಾಡುತ್ತಿದ್ದೇನೆ. ಎಂದು ಉತ್ತರ ಹೇಳಬೇಕು. ವಾಸ್ತವವಾಗಿ ತ್ಯಾಗ ಮಾಡುವುದು, ದಾನ ಮಾಡುವುದು ತನ್ನ ಉನ್ನತಿಗೇ ಹೌದು. ಒಬ್ಬರಿಗೆ ಉಪಕಾರ ಮಾಡಿದರೆ ಅದು (ಪುಣ್ಯ ಪ್ರಾಪ್ತಿಯಿಂದ) ತನಗೆ ತಾನು ಮಾಡಿಕೊಳ್ಳುವ ಉಪಕಾರವೇ ಹೌದು. ಆದ್ದರಿಂದ ದಾನ ಮಾಡುವವರು ತಾವು ಯಾರನ್ನೋ ಉದ್ಧರಿಸುವೆವೆಂದು ತಿಳಿಯುವುದಕ್ಕಿಂತ ಆ ದಾನಕ್ರಿಯೆ ಯಿಂದ ತಮ್ಮನ್ನು ತಾವು ಉದ್ಧರಿಸಿಕೊಂಡಂತೆ ಭಾವಿಸುವುದು ಉತ್ತಮ.

'ಅನುಪಕಾರಿಣೇ'- ಎಂದು ಹೇಳಿರುವುದರಿಂದ ಪ್ರತ್ಯುಪಕಾರ ಮಾಡಲಾರದವನಿಗೆ, ಬಡವರಿಗೆ, ಅಶಕ್ತರಿಗೆ, ದರಿದ್ರನಾರಾಯಣರಿಗೆ ಮಾಡುವ ದಾನ ಉತ್ಕೃಷ್ಟವೆಂದು ಅರ್ಥವಾಗುತ್ತದೆ ಮತ್ತೆ ಶಕ್ತಿಯುಳ್ಳವರಿಗೆ, ಪ್ರತ್ಯುಪಕಾರ ಮಾಡಬಲ್ಲ ಸಮರ್ಥರಿಗೆ ದಾನ ಮಾಡುವುದು ಅಷ್ಟು ಉತ್ತಮವಲ್ಲವೆಂದು ಸೂಚಿತವಾಗುತ್ತದೆ.

'ದೇಶೇ' - ಅಂದರೆ ಪುಣ್ಯಕ್ಷೇತ್ರ ತೀರ್ಥಾದಿಗಳು ಪವಿತ್ರ ಆಶ್ರಮಾದಿಗಳು ಇಲ್ಲವೆ ಪವಿತ್ರವಾದ ದೈವಗಂಧಯುತವಾದ ಪ್ರದೇಶಗಳೆಂದು ಅರ್ಥ. 'ಕಾಲೇ'-ಎಂದರೆ ಗ್ರಹಣ, ಸಂಕ್ರಾಂತಿ ಮುಂತಾದ ಪುಣ್ಯ ದಿನಗಳು ಇತ್ಯಾದಿ ರೂಪಗಳಾದ ಪವಿತ್ರ ಕಾಲವೆಂದರ್ಥ. 'ಪಾತ್ರೇ' ಅಂದರೆ ಯೋಗ್ಯತೆ ಯಿರುವವನಿಗೆ, ತಕ್ಕವನಿಗೆ ಎಂದರ್ಥ. ಪಾತ್ರತೆಯನ್ನು ತಿಳಿದು ದಾನಮಾಡ ಬೇಕೆಂದು ಹಿರಿಯರು ಹೇಳುವರು. ಅಪಾತ್ರರಿಗೆ ದಾನಮಾಡಿದರೆ ದಾತನಿಗೆ ಉತ್ತಮ ಫಲ ಒದಗುವುದಿಲ್ಲವೆಂದು ಭಾವ.

ಪ್ರ : ಸಾತ್ತ್ವಿಕ ದಾನವೆಂದರೆ ಎಂತಹದು?

ಉ : 'ದಾನಮಾಡಬೇಕಾದದ್ದೇ' ಎಂದು ನಿಶ್ಚಯಿಸಿಕೊಂಡು ೧) ಪ್ರತ್ಯುಪಕಾರ ಮಾಡಲಾರದವರಿಗೆ, ದೀನರಿಗೆ, ಅಸಹಾಯಕರಿಗೆ ೨) ದೇಶ, ಕಾಲ, ಪಾತ್ರತೆಯನ್ನು ನೋಡಿ ಮಾಡುವ ದಾನವನ್ನು ಸಾತ್ತ್ವಿಕವೆಂದು ಹೇಳಲ್ಪಡುವುದು.

**ಅ||** ರಾಜಸ ದಾನದ ಬಗ್ಗೆಯ ವಿವರಣೆ

**೨೧. ಯತ್ತು ಪ್ರತ್ಯುಪಕಾರಾರ್ಥಂ ಫಲಮುದ್ದಿಶ್ಯ ವಾ ಪುನಃ**
**ದೀಯತೇ ಚ ಪರಿಕ್ಲಿಷ್ಟಂ ತದ್ದಾನಂ ರಾಜಸಂ ಸ್ಮೃತಂ||**

**ಅರ್ಥ:** ಪ್ರತ್ಯುಪಕಾರಾರ್ಥಂ=ಪ್ರತ್ಯುಪಕಾರಕ್ಕಾಗಲಿ; ಪುನಃ=ಮತ್ತೆ; ಫಲಂ= ಫಲವನ್ನು; ಉದ್ದಿಶ್ಯ ವಾ=ಉದ್ದೇಶಿಸಿ; ಪರಿಕ್ಲಿಷ್ಟಂ ಚಯಃ=ಕ್ಲೇಶದಿಂದ (ಅತಿಕಷ್ಟದಿಂದ) ಆಗಲಿ; ಯತ್ ತು=ಯಾವುದಾದರೆ; ದೀಯತೇ=ಕೊಡಲ್ಪಡುವುದೋ; ತದ್ದಾನಂ=ಆ ದಾನವು; ರಾಜಸಂ (ಇತಿ)=ರಾಜಸದಾನವೆಂದು; ಸ್ಮೃತಂ=ಹೇಳಲಾಗುತ್ತದೆ.

**ತಾ||** ಪ್ರತ್ಯುಪಕಾರಕ್ಕಾಗಲಿ, ಇಲ್ಲವೆ ಫಲವನ್ನು ಉದ್ದೇಶಿಸಿ, ಇಲ್ಲವೆ ಮನಃ ಕ್ಲೇಶದಿಂದ (ಅತಿ ಕಷ್ಟದಿಂದ) ಕೊಡಲ್ಪಡುವ ದಾನವನ್ನು ರಾಜಸ ದಾನವೆನ್ನುವರು.

**ವ್ಯಾಖ್ಯೆ:** ಪ್ರತ್ಯುಪಕಾರವನ್ನು ಕೋರಿ ಮಾಡುವ ದಾನ ಉತ್ತಮವಾದುದಲ್ಲವೆಂದು ಹೇಳಲಾಗಿದೆ. ಪ್ರತ್ಯುಪಕಾರದ ಅಪೇಕ್ಷೆಯಿಂದ ಮಾಡಲ್ಪಡುವ ದಾನ ಬಜಾರಿನಲ್ಲಿಯ ವ್ಯಾಪಾರವಿದ್ದಂತೆ (Shop Keeping) ಆಗುವುದು. ಕೊಟ್ಟು ತೆಗೆದುಕೊಳ್ಳುವ ಪದ್ಧತಿ ಶ್ರೇಷ್ಠವಾದುದಲ್ಲ. ಅದು ರಾಜಸ ದಾನ ಪದ್ಧತಿಯಾಗುವುದು. ಮತ್ತೆ ತನಗೆ ಏನೋ ಮುಂದೆ ಪರಲೋಕಗಳಲ್ಲಿ ಫಲವುಂಟಾಗುವುದೆಂದು ಆಶಿಸಿ ಮಾಡುವ ದಾನವೂ ಕೂಡ ಉತ್ತಮವಾದುದಲ್ಲ. ನಿಷ್ಕಾಮವಾಗಿ, ಭಗವತ್ಪ್ರೀತ್ಯರ್ಥವಾಗಿ ಮಾಡುವ ದಾನವೇ ಮಹೋನ್ನತವಾದದ್ದು

'ಪರಿಕ್ಲಿಷ್ಟಂ'- ಕೆಲವರು ದಾನಮಾಡುವಾಗ 'ಅಯ್ಯೋ! ಈ ವಸ್ತುವು ಹೋಗುತ್ತಿದೆಯಲ್ಲಾ' ಎಂದು ಮನಸ್ಸಿನಲ್ಲಿ ಬಾಧೆ ಬೀಳುವರು. ಮತ್ತೆ ಕೆಲವರು ಇತರರ ಬಲವಂತದಿಂದ ದಾನ ಮಾಡುವರು. ಹಾಗೆ ಕ್ಲೇಶದಿಂದ ದಾನಮಾಡುವುದು ಉತ್ತಮ ಪದ್ಧತಿಯಲ್ಲ. ಅಂತಹದು ಸತ್ಫಲಯೋಜನವನ್ನು ಉಂಟುಮಾಡಲಾರದು. ದಾನಮಾಡುವುದು ತನ್ನ ಕರ್ತವ್ಯವೆಂದು (ಧರ್ಮವೆಂದು) ಭಾವಿಸಿ, ಐಚ್ಛಿಕವಾಗಿ (ಆನಂದದಿಂದ) ಒಬ್ಬರಿಗೆ ಕೊಡುವುದೇ ಸಾತ್ತ್ವಿಕ ದಾನ. ಇತರ ದಾನಗಳು ರಾಜಸ, ತಾಮಸಗಳೇ ಆಗುವುವು. ಆದ್ದರಿಂದ ಮುಮುಕ್ಷು ಸಾತ್ತ್ವಿಕ ದಾನವನ್ನೇ ಅವಲಂಬಿಸಬೇಕು.

ಪ್ರ : ರಾಜಸ ದಾನವೆಂತಹದು?

ಉ : ೧) ಪ್ರತ್ಯುಪಕಾರದ ಅಪೇಕ್ಷೆಯಿಂದ ೨) ಫಲವನ್ನು ಕೋರಿ ೩) ಮನಸ್ಸಿನಲ್ಲಿ ಬಾಧೆ ಬೀಳುತ್ತ ಮಾಡುವ ದಾನವನ್ನು ರಾಜಸ ದಾನವೆನ್ನುವರು

**ಅ||** ಇನ್ನು ತಾಮಸ ದಾನದ ವಿವರಣೆ-

**೨೨ ಅದೇಶಕಾಲೇ ಯದ್ದಾನಮಪಾತ್ರೇಭ್ಯಶ್ಚ ದೀಯತೇ**
**ಅಸತ್ಕೃತಮವಜ್ಞಾತಂ ತತ್ತಾಮಸ ಮುದಾಹೃತಮ್**

**ಅರ್ಥ:** ಅದೇಶ ಕಾಲೇ=ದಾನಗಳಿಗೆ ಯೋಗ್ಯವಲ್ಲದ (ಅಪವಿತ್ರವಾದ) ದೇಶ, ಕಾಲಗಳಲ್ಲಿ; ಅಪಾತ್ರೇಭ್ಯಃ ಚ=ಪಾತ್ರರು (ಅರ್ಹರು) ಅಲ್ಲದವರಿಗೆ; ಅಸತ್ಕೃತಂ=ಸತ್ಕಾರಶೂನ್ಯವಾಗಿ; ಅವಜ್ಞಾತಂ=ಅವಮರ್ಯಾದೆಯಿಂದ (ಅವಮಾನಮಾಡಿ); ಯತ್ ದಾನಂ=ಯಾವದಾನ; ದೀಯತೇ= ಕೊಡಲ್ಪಡುತ್ತದೆಯೋ; ತತ್=ಅದು; ತಾಮಸಂ(ಇತಿ)=ತಾಮಸದಾನವೆಂದು; ಉದಾಹೃತಂ=ಹೇಳಲ್ಪಡುತ್ತದೆ.

**ತಾ||** ದಾನಕ್ಕೆ ಯೋಗ್ಯವಲ್ಲದ (ಅಪವಿತ್ರವಾದ) ದೇಶಕಾಲಗಳಲ್ಲಿ, ಪಾತ್ರರು, (ಅರ್ಹರು) ಅಲ್ಲದವರಿಗೆ, ಸತ್ಕಾರ ಶೂನ್ಯವಾಗಿ, ಅವಮರ್ಯಾದೆಯಿಂದ ಕೊಡಲ್ಪಡುವ ದಾನ ತಾಮಸದಾನವೆಂದು ಹೇಳಲ್ಪಡುವುದು.

**ವ್ಯಾಖ್ಯೆ:** ದಾನ ಮಾಡುವಾಗ ಸತ್ಕಾರ ಭಾವದಿಂದ, ಮರ್ಯಾದೆಯಿಂದ, ಆದರದಿಂದ ಕೊಡಬೇಕೇ ಹೊರತು ತಿರಸ್ಕಾರ ಭಾವದಿಂದಲ್ಲ. ಅನಾದರ ಭಾವದಿಂದ 'ಹೋಗು! ತೆಗೆದುಕೊಂಡು ಹೋಗು!' ಎಂದು ಹಣ ಮುಂತಾದುವುಗಳನ್ನು ಬಿಸಾಡಬಾರದು. ಬಯ್ಯುತ್ತಾ ಕೊಡಬಾರದು. ಅದು ತಾಮಸ ಲಕ್ಷಣವಾಗುವುದು. ಅಂತಹ ತಾಮಸದಾನದಿಂದ ದಾನ ಫಲಿತವು ಕಡಿಮೆಯಾಗುವುದು. ಇಲ್ಲವೆ ಇಲ್ಲದೇ ಹೋಗಬಹುದು. ಏಕೆಂದರೆ ಅಶ್ರದ್ಧೆಯಿಂದ ಕೊಡಲ್ಪಡುವ ವಸ್ತುವು ಕೊಡದೆ ಇರುವುದಕ್ಕೆ ಸಮಾನವೆಂದು ಭಗವಂತನು ಈ ಅಧ್ಯಾಯದಲ್ಲಿ ಮುಂದೆ ಹೇಳುವನು (ಅಶ್ರದ್ಧಯಾ ಹುತಂ ದತ್ತಂ.......... ಅಸದಿತ್ಯುಚ್ಯತೇ); ಆದ್ದರಿಂದ ಇಂತಹ ದಾನವನ್ನು ಯಾರೂ ಮಾಡಬಾರದು. ಸಾತ್ತ್ವಿಕ ದಾನವನ್ನೇ ಆಶ್ರಯಿಸಬೇಕು.

ಪ್ರ : ತಾಮಸ ದಾನವೆಂತಹದು?

ಉ : ೧) ದೇಶ, ಕಾಲ ಪಾತ್ರತೆಗಳನ್ನು ನೋಡದೆ ದಾನಮಾಡುವುದು ೨) ಸತ್ಕಾರ ಪೂರ್ವಕವಾಗಿ ಮಾಡದೇ ಇರುವುದು ೩) ತಿರಸ್ಕಾರ ಭಾವದಿಂದ ಮಾಡಲ್ಪಡುವ ದಾನ ತಾಮಸದಾನವೆನಿಸಿಕೊಳ್ಳುವುದು.

**ಅ||** ಬ್ರಹ್ಮದ ನಾಮವನ್ನು ಕುರಿತು ಐದು ಶ್ಲೋಕಗಳ ಮೂಲಕ ವಿವರಣೆ ಕೊಡಲಾಗಿದೆ-

**೨೩. ಓಂ ತತ್ಸದಿತಿ ನಿರ್ದೇಶೋ ಬ್ರಹ್ಮಣಸ್ತ್ರಿವಿಧಃ ಸ್ಮೃತಃ**
**ಬ್ರಾಹ್ಮಣಾಸ್ತೇನ ವೇದಾಶ್ಚ ಯಜ್ಞಾಶ್ಚ ವಿಹಿತಾಃ ಪುರಾ**

**ಅರ್ಥ:** ಬ್ರಹ್ಮಣಃ=ಪರಬ್ರಹ್ಮನಿಗೆ; ಓಂ ಇತಿ='ಓಂ' ಎಂದು; ತತ್ (ಇತಿ)='ತತ್' ಎಂದೂ; 'ಸತ್' (ಇತಿ)='ಸತ್' ಎಂದು; ತ್ರಿವಿಧಃ=ಮೂರು ವಿಧಗಳಾಗಿ; ನಿರ್ದೇಶಃ=ನಾಮನಿರ್ಣಯ (ನಾಮಗಳು); ಸ್ಮೃತಃ= ಹೇಳಲ್ಪಟ್ಟಿದೆ; ತೇನ=ಅದರಿಂದ; ಬ್ರಾಹ್ಮಣಾಃ=ಬ್ರಾಹ್ಮಣರು (ಬ್ರಹ್ಮಜ್ಞಾನಿಗಳು); ವೇದಾಃ ಚ= ವೇದಗಳೂ; ಯಜ್ಞಾಃ ಚ=ಯಜ್ಞಗಳು; ಪುರಾ=ಪೂರ್ವದಲ್ಲಿ; ವಿಹಿತಾಃ=ನಿರ್ಮಿಸಲ್ಪಟ್ಟವು.

**ತಾ||** ಪರಬ್ರಹ್ಮನಿಗೆ 'ಓಂ', 'ತತ್', 'ಸತ್' ಎಂದು ಮೂರು ವಿಧಗಳಾದ ಹೆಸರುಗಳಿವೆ. ಈ ನಾಮತ್ರಯದಿಂದಲೇ, (ಅವುಗಳ ಉಚ್ಚಾರಣೆಯಿಂದ) ಪೂರ್ವದಲ್ಲಿ ಬ್ರಾಹ್ಮಣರು (ಬ್ರಹ್ಮ ಜ್ಞಾನಿಗಳು), ವೇದಗಳು. ಯಜ್ಞಗಳು ನಿರ್ಮಿಸಲ್ಪಟ್ಟವು.

**ವ್ಯಾಖ್ಯೆ:** ಪರಬ್ರಹ್ಮವಾಸ್ತವವಾಗಿ ನಾಮರೂಪ ರಹಿತವಾಗಿದ್ದರೂ, ಭಕ್ತರು ಧ್ಯಾನಿಸಲು, ಚಿಂತಿಸಲು ಅದಕ್ಕೆ ನಾಮಗಳನ್ನು ನಿರ್ದೇಶಿಸಲಾಯಿತು. ಅವು 'ಓಂ', 'ತತ್', 'ಸತ್' ಎನ್ನುವುವು. ಆ ಮಂತ್ರಗಳ ಚಿಂತನೆಯಿಂದ ಲಕ್ಷ್ಯವಾದ ಪರಬ್ರಹ್ಮವನ್ನು ಜನರು ಚಿಂತನೆ ಮಾಡುತ್ತಿದ್ದಾರೆ. ಸಾಕ್ಷಾತ್ ಪರಬ್ರಹ್ಮದ ವಾಚಕಗಳಾದ್ದರಿಂದ ಆ ಮೂರು ನಾಮಗಳಿಗೆ ಮಹತ್ತರವಾದ ಶಕ್ತಿ ಹಾಗೂ ಪವಿತ್ರತೆ ಇದೆ. ವೇದಶಾಸ್ತ್ರಾದಿಗಳೆಲ್ಲವುಗಳಲ್ಲಿ ಈ ಪ್ರಣವಾದಿ ಮಂತ್ರಗಳನ್ನು ಕುರಿತು ವಿಶೇಷವಾಗಿ ಹೇಳಲಾಗಿದೆ.

'ತಸ್ಯವಾಚಕಃ ಪ್ರಣವಃ'- ಆ ಪರಮಾತ್ಮನ ನಾಮವು ಓಂಕಾರ.

'ತಜ್ಜಪಸ್ತದಾರ್ಥಭಾವನಂ'- "ಆ ನಾಮವನ್ನು ಜಪಿಸುತ್ತ ಅದರ ಅರ್ಥವನ್ನು ಚೆನ್ನಾಗಿ ಗ್ರಹಿಸಬೇಕು" ಎಂದು ಪತಂಜಲಿ ಮಹರ್ಷಿ ಓಂಕಾರ ಮಹಿಮೆಯನ್ನು ಕುರಿತು ಶ್ಲಾಘಿಸಿದ್ದಾನೆ. ಕರ್ಮಾನುಷ್ಠಾನದಲ್ಲಿ ಯಾವುದೇ ಲೋಪಗಳು, ವಿಘ್ನಗಳು, ದೋಷಗಳು ಮುಂತಾದುವುಗಳಿದ್ದರೆ ಅವೆಲ್ಲವೂ ಪರಮ ಪವಿತ್ರಗಳಾದ ಮೂರು ನಾಮಗಳ ಉಚ್ಚಾರಣೆಯಿಂದ ಮಾಯವಾಗಿ ಹೋಗುವುವು. ಆದ್ದರಿಂದಲೇ ಯಾವ ಕಾರ್ಯವನ್ನೇ ಆಗಲಿ ಪ್ರಾರಂಭಿಸುವ ಮುನ್ನ ಹಿರಿಯರು ಪ್ರಣವೋಚ್ಚಾರವನ್ನು ಮಾಡುವರು. ಎಲ್ಲಾ ಮಂತ್ರಗಳಲ್ಲಿ ಪ್ರಣವವು ಶಿರೋಮಣಿಯಾಗಿ ಬೆಳಗುತ್ತಿದೆ. ಆದ್ದರಿಂದಲೇ ಪ್ರತಿ ಮಂತ್ರಕ್ಕೆ ಆದಿಯಲ್ಲಿ ಓಂಕಾರವನ್ನು ಸೇರಿಸಲ್ಪಡುತ್ತದೆ. ಆದರೆ 'ಓಂ ತತ್-ಸತ್' ಎನ್ನುವ ಮಂತ್ರವನ್ನು ಉಚ್ಚರಿಸುವಾಗ ಅದರ ಅರ್ಥವನ್ನು ಭಾವಿಸುತ್ತ ಅದರ ವಾಚ್ಯರೂಪವಾದ ಪರಬ್ರಹ್ಮವನ್ನು ಚಿಂತಿಸಬೇಕು. ಭಾವದಿಂದ ಕೂಡಿದಾಗ ಮಾತ್ರವೇ ಮಂತ್ರವು ಹೆಚ್ಚು ಶಕ್ತಿಯುತವಾಗುವುದು.

ವೇದಗಳು, ಯಜ್ಞಗಳು ಮುಂತಾದುವು ಆ ಪ್ರಣವ ಮಂತ್ರೋಚ್ಚಾರಣೆ ಯಿಂದ ನಿರ್ಮಿಸಲ್ಪಟ್ಟಿವೆ ಎಂದು ಹೇಳುವುದರಿಂದ ವೇದದ ಮೂಲ, ಬೀಜ ಓಂಕಾರವೇ 'ಪರಬ್ರಹ್ಮವೇ' ಎಂದು ತಿಳಿಯುತ್ತದೆ. ಮತ್ತೆ ವೇದಸಾರವೆಲ್ಲವೂ ಆ ಪ್ರಣವದಲ್ಲಿಯೇ ಇರುವ ಹಾಗೆ ಗೋಚರವಾಗುತ್ತದೆ. ಆದ್ದರಿಂದ ವೇದ ಸಾರವಾದ ಓಂಕಾರವನ್ನು ಉಚ್ಚರಿಸಿ ಭಾವವನ್ನು ಮನನ ಮಾಡಿದಾಗ ಸಮಸ್ತ ವೇದಗಳನ್ನು ಉಚ್ಚರಿಸಿದಂತೇ ಆಗುವುದು.

'ಓಂ ತತ್ ಸತ್' - ಎನ್ನುವುದಕ್ಕೆ ಇನ್ನೊಂದು ಅರ್ಥವಿದೆ. ಓಂ ಅಂದರೆ ಪರಬ್ರಹ್ಮ ತತ್ ಅಂದರೆ ಅದು (ಆ ಪರಬ್ರಹ್ಮ) ಒಂದೇ, ಸತ್= ಸದ್ವಸ್ತುವು, ಬೇರೆಯದಾದ ದೃಶ್ಯ ಜಗತ್ತೆಲ್ಲಾ ಮಿಥ್ಯಾವಸ್ತುವೆಂದರ್ಥ. ಆದ್ದರಿಂದ ಈ 'ಓಂ ತತ್ ಸತ್' ಎನ್ನುವ ಮಂತ್ರದ ಉಚ್ಚಾರಣೆಯಿಂದ 'ಬ್ರಹ್ಮಸತ್ಯ ಜಗನ್ಮಿಥ್ಯ' ಎನ್ನುವ ಸರ್ವವೇದಾಂತ ಸಿದ್ಧಾಂತ ಸಾರ ಸ್ಫುಟವಾಗುತ್ತದೆ. ಅಂತಹ ನಾಮೋಚ್ಚಾರಣೆ ಮಾಡುತ್ತಾ ಸದ್ವಸ್ತುವಾದ ಬ್ರಹ್ಮವನ್ನು ಸತ್ಯವೆಂದು ತಿಳಿದು ಮಿಥ್ಯಾ ಭೂತವಾದ ದೃಶ್ಯಜಗತ್ತನ್ನು ಅಸತ್ಯವೆಂದು ತಿಳಿದು ವೈರಾಗ್ಯ ಭಾವವನ್ನು ಅಭಿವೃದ್ಧಿ ಪಡಿಸಿಕೊಳ್ಳಬೇಕು. ಸದ್ರೂಪ ದೈವ ಭಾವನೆಯನ್ನು, ಆತ್ಮ ಭಾವನೆಯನ್ನು ದೃಢಪಡಿಸಿಕೊಳ್ಳಬೇಕು. 'ಓಂ ತತ್ ಸತ್' ಎನ್ನುವ ಮಂತ್ರಕ್ಕೆ ಈ ಕೆಳಗಿನ ಎರಡು ಅರ್ಥಗಳನ್ನು ಕೊಡಬಹುದು.

| | |
|---|---|
| ೧) ಓಂ=ಪರಬ್ರಹ್ಮ(ಆಗಿದೆ) | ೨) ತತ್=ಆ |
| ತತ್=ಆ ಪರಬ್ರಹ್ಮ | ಸತ್=ಸದ್ವಸ್ತು |
| ಸತ್=ಸದ್ರೂಪವಾದುದು | ಓಂ=ಪರಬ್ರಹ್ಮ |

ಪ್ರ : ಪರಬ್ರಹ್ಮನಿಗೆ ಎಷ್ಟು ಹೆಸರುಗಳಿವೆ? ಅವು ಯಾವುವು?

ಉ : ಮೂರು ಹೆಸರುಗಳಿವೆ. ಅವು ಕ್ರಮವಾಗಿ
೧) ಓಂ ೨) ತತ್ ೩) ಸತ್.

ಪ್ರ : ಅವುಗಳ ಮಹತ್ವವೇನು?

ಉ: ಅವುಗಳಿಂದಲೇ (ಇಲ್ಲವೆ, ಅವುಗಳ ನಾಮೋಚ್ಚಾರಣೆಯಿಂದ) ಪೂರ್ವದಲ್ಲಿ ೧) ಬ್ರಾಹ್ಮಣರು (ಬ್ರಹ್ಮಜ್ಞಾನಿಗಳು) ೨) ವೇದಗಳು ೩) ಯಜ್ಞಗಳು ಸೃಷ್ಟಿಸಲ್ಪಟ್ಟವು.

ಪ್ರ : ಆದ್ದರಿಂದ ಬ್ರಹ್ಮಜ್ಞಾನ, ವೇದ, ಯಜ್ಞಗಳಿಗೆ ಮೂಲವೇನು?

ಉ : ಓಂಕಾರವೇ (ಪರಬ್ರಹ್ಮವೇ)

**೨೪ ತಸ್ಮಾದೋಮಿತ್ಯುದಾಹೃತ್ಯ ಯಜ್ಞದಾನತಪಃಕ್ರಿಯಾಃ**
**ಪ್ರವರ್ತಂತೇ ವಿಧಾನೋಕ್ತಾ ಸ್ತತಂ ಬ್ರಹ್ಮವಾದಿನಾಮ್**

**ಅರ್ಥ:** ತಸ್ಮಾತ್=ಆದ್ದರಿಂದ; ಬ್ರಹ್ಮವಾದಿನಾಂ=ವೇದಗಳನ್ನು ಚೆನ್ನಾಗಿ ತಿಳಿದವರು; ವಿಧಾನೋಕ್ತಾಃ=ಶಾಸ್ತ್ರಗಳಲ್ಲಿ ಹೇಳಲ್ಪಟ್ಟ; ಯಜ್ಞದಾನತಪಃ ಕ್ರಿಯಾಃ=ಯಜ್ಞ ದಾನ, ತಪಸ್ಸುಗಳೆಂಬ ಕರ್ಮಗಳನ್ನು; ಸತತಂ= ಯಾವಾಗಲೂ; 'ಓಂ' ಇತಿ=ಓಂ ಎಂದು; ಉದಾಹೃತ್ಯ=ಹೇಳಿ (ನಂತರ) ಪ್ರವರ್ತಂತೇ=ಪ್ರಾರಂಭ ಮಾಡುವರು (ಅನುಷ್ಠಾನಗೊಳಿಸುವರು).

**ತಾ||** ಆದ್ದರಿಂದ, ವೇದಗಳನ್ನು, ಚೆನ್ನಾಗಿ ತಿಳಿದವರು ಶಾಸ್ತ್ರೋಕ್ತಗಳಾದ ಯಜ್ಞದಾನಃ ತಪಃ ಕ್ರಿಯೆಗಳನ್ನು ಯಾವಾಗಲೂ 'ಓಂ' ಎಂದು ಹೇಳಿ ನಂತರವೇ ಪ್ರಾರಂಭಿಸುವರು.

**ವ್ಯಾಖ್ಯೆ:** 'ಓಂ' 'ತತ್' 'ಸತ್'ಎನ್ನುವ ಮೂರು ಪದಗಳಲ್ಲಿ ಮೊದಲನೆಯ ದಾದ 'ಓಂ' ಎನ್ನುವ ಪದದ ಮಹಿಮೆಯನ್ನು ಹೇಳುತ್ತಿದ್ದಾನೆ- ಇದು ಪರಬ್ರಹ್ಮದ ವಾಚಕವು (ನಾಮವು) ಆಗಿದ್ದು ಪವಿತ್ರವಾಗಿ ಮಹಾಶಕ್ತಿವಂತ ವಾಗಿರುವುದರಿಂದ ವೇದವೇತ್ತರೆಲ್ಲರೂ ತಾವು ಪ್ರಾರಂಭಿಸುವ ಯಜ್ಞದಾನ ತಪಸ್ಸು ಕ್ರಿಯೆಗಳ ಆದಿಯಲ್ಲಿ 'ಓಂ' ಎನ್ನುವ ಏಕಾಕ್ಷರ ಪ್ರಣವ ಮಂತ್ರವನ್ನು ಉಚ್ಚರಿಸುತ್ತಿದ್ದಾರೆ. ಹಾಗೆ ಉಚ್ಚರಿಸಿದ ನಂತರವೇ ಆ ಕ್ರಿಯೆಗಳನ್ನು ಅವರು ಪ್ರಾರಂಭಿಸುವರು. ಹಾಗೆಯೇ ಆ ಕ್ರಿಯೆಗಳು ಸಮಾಪ್ತವಾದಾಗ ಮತ್ತೆ 'ಓಂ' ಎಂದು (ಆ ಪ್ರಣವವನ್ನು) ಉಚ್ಚರಿಸುವರು. ಹಾಗೆ ಮಾಡುವುದರಿಂದ ಆಯಾ ಕ್ರಿಯೆಗಳಲ್ಲಿ ಏನಾದರೂ ಲೋಪ, ದೋಷಗಳಿದ್ದರೆ ಅವೆಲ್ಲವೂ ಮಂತ್ರಪ್ರಭಾವದಿಂದ ಭಸ್ಮೀಭೂತವಾಗಿ ಕರ್ಮಗಳು ಪರಿಪೂರ್ಣ ಫಲವನ್ನು ಕೊಡುವುವು.

'ಸತತಂ'- (ಯಾವಾಗಲೂ) ಎಂದು ಹೇಳುವುದರಿಂದ ಅಂತಹ ವೇದವೇತ್ತರು ತಾವು ಆಚರಿಸುವ ಆಯಾ ಯಜ್ಞದಾನಾದಿ ಸತ್ಕ್ರಿಯೆಗಳ ಪ್ರಾರಂಭದಲ್ಲಿ ಯಾವಾಗಲೂ ಆ ಪ್ರಕಾರವಾಗಿ ಪ್ರಣವೋಚ್ಚಾರಣೆ ಮಾಡುವ ರೆಂದು ತಿಳಿಯುತ್ತದೆ. ಇಂಜಿನ್ನಿಂದ ರೈಲು ಬೋಗಿಗಳು ಕದಲಿದ ಹಾಗೆ, ಒಂದು ಎನ್ನುವ ಸಂಖ್ಯೆಯಿಂದ ಸೊನ್ನೆಗಳೆಲ್ಲವೂ ಬೆಲೆಹೊಂದುವಂತೆ, ಮೊದಲ ಓಂಕಾರದಿಂದ ಬೇರೆ ಮಂತ್ರಗಳು, ಕ್ರಿಯೆಗಳು ಚೈತನ್ಯ ಹೊಂದಿ ಪ್ರತಿಭಾವಂತವುಗಳಾಗುತ್ತಿವೆ.

ಪ್ರ : 'ಓಂಕಾರ'ದ ಮಹಿಮೆಯೇನು?

ಉ : ವೇದವೇತ್ತರು ತಾವು ಆಚರಿಸುವ ಯಜ್ಞದಾನ ತಪಃ ಕ್ರಿಯೆಗಳಲ್ಲಿ ಮೊದಲು ಓಂಕಾರವನ್ನು ಉಚ್ಚರಿಸಿ ನಂತರ ಆ ಕ್ರಿಯೆಗಳನ್ನು ಮಾಡುವರು.

**೨೫. ತದಿತ್ಯನಭಿಸಂಧಾಯ ಫಲಂ ಯಜ್ಞತಪಃಕ್ರಿಯಾಃ**
**ದಾನಕ್ರಿಯಾಶ್ಚ ವಿವಿಧಾಃ ಕ್ರಿಯಂತೇ ಮೋಕ್ಷಕಾಂಕ್ಷಿಭಿಃ**

**ಅರ್ಥ:** ಮೋಕ್ಷಕಾಂಕ್ಷಿಭಿಃ=ಮುಮುಕ್ಷುಗಳಿಂದ; 'ತತ್' ಇತಿ='ತತ್'=ಎಂದು [ಉದಾಹೃತ್ಯ=(ಬ್ರಹ್ಮ ನಾಮವನ್ನು) ಉಚ್ಚರಿಸಿ]; ಫಲಂ=ಫಲವನ್ನು; ಅನಭಿಸಂಧಾಯ=ಕೋರದೆ; ವಿವಿಧಾಃ=ಅನೇಕ ವಿಧಗಳಾದ; ಯಜ್ಞತಪಃ ಕ್ರಿಯಾಃ=ಯಜ್ಞ, ತಪಸ್ಸು ಮುಂತಾದ ಕರ್ಮಗಳು; ದಾನಕ್ರಿಯಾಃ ಚ= ದಾನರೂಪವಾದ ಕರ್ಮಗಳು; ಕ್ರಿಯಂತೇ=ಮಾಡಲ್ಪಡುತ್ತಿವೆ.

**ತಾ||** ಹಾಗೆಯೇ 'ತತ್' ಎನ್ನುವ ಪದವನ್ನು ಉಚ್ಚರಿಸಿಯೇ ಮುಮುಕ್ಷುಗಳು ಫಲಾಪೇಕ್ಷೆಯಿಲ್ಲದೆ ಅನೇಕ ವಿಧಗಳಾದ ಯಜ್ಞ, ದಾನ, ತಪಃ ಕರ್ಮಗಳನ್ನು ಮಾಡುತ್ತಿರುವರು.

**ವ್ಯಾಖ್ಯೆ:** ಮುಮುಕ್ಷುಗಳು ಫಲವನ್ನಾಶ್ರಯಿಸದೆ ಯಜ್ಞ, ದಾನ ತಪಃ ಕ್ರಿಯೆಗಳನ್ನು ಆಚರಿಸುವವರು ಎಂದು ಹೇಳುವುದರಿಂದ ಫಲಾಭಿಸಂಧಿ ರಹಿತವಾಗಿ ಆಚರಿಸಿದಾಗ ಚಿತ್ತಶುದ್ಧಿಯಿಂದ ಆಯಾ ಕ್ರಿಯೆಗಳು ಮೋಕ್ಷಕ್ಕೆ ಸಹಾಯಯಕ ಗಳಾಗುವುದೆಂದು ತಿಳಿಯುತ್ತದೆ. ಇಂತಹ ಕರ್ಮಫಲ ತ್ಯಾಗವೇ ಗೀತೆಯ ಪ್ರಧಾನ ಬೋಧೆಗಳಲ್ಲಿ ಒಂದಾಗಿದೆ; ಮತ್ತೆ ಮುಮುಕ್ಷುವಿಗೆ ಇದು ಅತ್ಯಂತ ಅವಶ್ಯಕವಾದ ಅಂಗವಾಗಿದೆ.

ಇಲ್ಲಿ 'ಮೋಕ್ಷ ಕಾಂಕ್ಷಿಗಳು' ತಪೋಯಜ್ಞ ದಾನಾದಿ ಕ್ರಿಯೆಗಳನ್ನು ನಿಷ್ಕಾಮವಾಗಿ ಆಚರಿಸುವರು ಎಂದು ಹೇಳುವುದರಿಂದ, ಚಿತ್ತ ಶುದ್ಧಿಯಿಂದ ಮಾಡುವ ಆಯಾಕ್ರಿಯೆಗಳು ಮೋಕ್ಷಕ್ಕೆ ಸಹಾಯಕಾರಿಗಳಾಗುವುವು ಎಂದೂ, ಅಂತಹ ಪುಣ್ಯಕಾರ್ಯಗಳನ್ನು ಮುಮುಕ್ಷು ಮುಕ್ತಿ ರೂಪವಾದ ತನ್ನ ಲಕ್ಷ್ಯ ಪ್ರಾಪ್ತಿಗಾಗಿ ತಪ್ಪದೆ ಆಚರಿಸಬೇಕೆಂದೂ ಇಲ್ಲಿ ಹೇಳಲಾಗಿದೆ. ಅಂದರೆ ಆ ಯಜ್ಞದಾನ ತಪಃ ಕಾರ್ಯಗಳನ್ನು ಮುಮುಕ್ಷುಗಳು ಬಿಡಬಾರದೆಂದೂ, ಅವೆಲ್ಲವೂ ಮೋಕ್ಷಕ್ಕೆ ಸಹಾಯವಾಗುವುವೆಂದು ತಿಳಿಸಿದಂತಾಗಿದೆ. ಈ ಭಾವವನ್ನೇ ಮುಂದಿನ ಅಧ್ಯಾಯದಲ್ಲಿ ***'ಯಜ್ಞದಾನತಪಃ ಕರ್ಮ ನ ತ್ಯಾಜಂ ಕಾರ್ಯಮೇವ ತತ್'*** ಎನ್ನುವ ಶ್ಲೋಕದ ಮೂಲಕ ಗೀತಾಚಾರ್ಯನು ಸ್ಪಷ್ಟೀಕರಿಸುವನು. ಲೋಕದಲ್ಲಿ ಕೆಲವರು ಪುಣ್ಯ ಕಾರ್ಯಗಳನ್ನು ಕೀಳ್ದೃಷ್ಟಿಯಲ್ಲಿ ನೋಡುವರು. ಅವುಗಳನ್ನು ಮಾಡಬಾರದೆಂದು ಅವು ಬಂಧವನ್ನುಂಟು ಮಾಡುವುವು ಎಂದೂ ಹೇಳುವರು. ಆದರೆ ಭಗವಂತನು ಗೀತೆಯಲ್ಲಿ ಹಾಗೆ ಹೇಳಲಿಲ್ಲ. ಅವುಗಳನ್ನು ಬಿಡಬಾರದೆಂದು ಹೇಳಿರುವುದೇ ಅಲ್ಲದೆ ತಪ್ಪದೆ ಆಚರಿಸಬೇಕೆಂದು ಕೂಡ ಹೇಳಿರುವನು. ಆದ್ದರಿಂದ ಈ ವಾಕ್ಯಗಳ ಮೇಲೆ ವಿಶ್ವಾಸವಿಟ್ಟು ಜನರು ಫಲಾಪೇಕ್ಷೆರಹಿತವಾಗಿ (ಜ್ಞಾನ) ಯಜ್ಞತಪೋ ದಾನಾದಿ ಪುಣ್ಯ ಕಾರ್ಯಗಳನ್ನು ಆಚರಿಸಿ, ಚಿತ್ತ ಶುದ್ಧಿ ಪಡೆದು ಮೋಕ್ಷಕ್ಕೆ ಭಾಗಿಗಳಾಗಬೇಕು.

ಪ್ರ : ಮೋಕ್ಷವನ್ನು ಅಭಿಲಾಷಿಸುವವರು ಹೇಗೆ ಪ್ರವರ್ತಿಸುವರು?

ಉ: 'ತತ್' ಎನ್ನುವ ಬ್ರಹ್ಮವಾಚಕವನ್ನುಚ್ಚರಿಸಿ ವಿವಿಧ ತಪೋಯಜ್ಞದಾನಾದಿ ಪುಣ್ಯ ಕಾರ್ಯಗಳನ್ನು ಆಚರಿಸುವರು

ಪ್ರ : ಆಯಾಕಾರ್ಯಗಳನ್ನು ಅವರು ಹೇಗೆ ಆಚರಿಸುವರು?

ಉ : ಫಲಾಪೇಕ್ಷೆ ರಹಿತವಾಗಿ

ಪ್ರ : ಆದ್ದರಿಂದ ಮೋಕ್ಷ ಪ್ರಾಪ್ತಿಗೆ ಮಾರ್ಗವೇನು?

ಉ : 'ಓಂ' 'ತತ್' 'ಸತ್' ಎನ್ನುವ ಪರಬ್ರಹ್ಮದ ವಾಚಕಗಳಾದ ಪವಿತ್ರ ನಾಮಗಳನ್ನುಚ್ಚರಿಸಿ ತಪೋ (ಜ್ಞಾನ) ಯಜ್ಞದಾನಾದಿ ವಿವಿಧ ಕ್ರಿಯೆಗಳನ್ನು ಫಲಾಪೇಕ್ಷಾರಹಿತವಾಗಿ ಆಚರಿಸುವುದರಿಂದ ಚಿತ್ತಶುದ್ಧಿ ಹೊಂದಿ ನಂತರ ಜ್ಞಾನ ಉಂಟಾಗಿ ಅದರಿಂದ ಮೋಕ್ಷವು ಲಭಿಸುವುದು. ಆದ್ದರಿಂದ ಇದು ಮೋಕ್ಷ ಪ್ರಾಪ್ತಿಗೆ ಮಾರ್ಗವಾಗಿದೆ.

**೨೬. ಸದ್ಭಾವೇ ಸಾಧುಭಾವೇ ಚ ಸದಿತ್ಯೇತತ್ಪ್ರಯುಜ್ಯತೇ**
**ಪ್ರಶಸ್ತೇ ಕರ್ಮಣಿ ತಥಾ ಸಚ್ಛಬ್ದಃ ಪಾರ್ಥ ಯುಜ್ಯತೇ**

**ಅರ್ಥ:** ಪಾರ್ಥ=ಓ ಅರ್ಜುನಾ! ಸದ್ಭಾವೇ='ಇರುವುದು' ಎನ್ನುವ ಅರ್ಥದಲ್ಲಿ; ಸಾಧುಬಾವೇ ಚ=ಒಳ್ಳೆಯದು ಎನ್ನುವ ಅರ್ಥದಲ್ಲಿ; ಸತ್ ಇತಿ ಏತತ್='ಸತ್' ಎನ್ನುವ ಈ ಪರಬ್ರಹ್ಮನಾಮವು; ಪ್ರಯುಜ್ಯತೇ=ಪ್ರಯೋಗಿಸಲ್ಪಡುತ್ತದೆ; ತಥಾ=ಹಾಗೆಯೇ; ಪ್ರಶಸ್ತೇ ಕರ್ಮಣಿ=ಉತ್ತಮವಾದ ಕರ್ಮದಲ್ಲಿ; ಸಚ್ಛಬ್ದಃ= 'ಸತ್' ಎನ್ನುವ ಪದ; ಯುಜ್ಯತೇ=ಉಪಯೋಗಿಸಲ್ಪಡುತ್ತದೆ.

**ತಾ||** ಓ ಅರ್ಜುನಾ! 'ಇರುವುದು, 'ಒಳ್ಳೆಯದು' ಎನ್ನುವ ಅರ್ಥದಲ್ಲಿ, 'ಸತ್' ಎನ್ನುವ ಈ ಪರಬ್ರಹ್ಮನಾಮವು ಪ್ರಯೋಗಿಸಲ್ಪಡುತ್ತದೆ. ಹಾಗೆಯೇ ಉತ್ತಮವಾದ ಕರ್ಮದಲ್ಲಿ ಆ 'ಸತ್' ಎನ್ನುವ ಪದವನ್ನು ಉಪಯೋಗಿಸುವರು.

**ವ್ಯಾಖ್ಯೆ:** ಪರಬ್ರಹ್ಮವಾಚಕವಾದ 'ಸತ್' ಎನ್ನುವ ಪದವು 'ಇರುವಿಕೆಯನ್ನೂ' 'ಶ್ರೇಷ್ಠತ್ವ'ವನ್ನೂ ಸೂಚಿಸುತ್ತದೆ. ಈ ಎರಡು ಅರ್ಥಗಳಲ್ಲಿ ಈ ಪದವು ಪ್ರಯೋಗಿಸಲ್ಪಡುವುದು. (ದೃಷ್ಟಾಂತಕ್ಕೆ ಸತ್+ಕರ್ಮ=ಒಳ್ಳೆಯ ಕರ್ಮ, ಸತ್+ಭಾವ=ಸದ್ಭಾವ).

ಪ್ರ : ಪರಬ್ರಹ್ಮವಾಚಕವಾದ 'ಸತ್' ಎನ್ನುವ ಪದವು ಯಾವ ಅರ್ಥದಲ್ಲಿ ಉಪಯೋಗಿಸಲ್ಪಡುತ್ತದೆ?

ಉ : ೧) 'ಇರುವುದು' ಎನ್ನುವ ಅರ್ಥದಲ್ಲಿ ೨) 'ಒಳ್ಳೆಯದು' ಎನ್ನುವ ಅರ್ಥದಲ್ಲಿ ಅದನ್ನು ಉಪಯೋಗಿಸಲಾಗುತ್ತದೆ.

**೨೭. ಯಜ್ಞೇ ತಪಸಿ ದಾನೇ ಚ ಸ್ಥಿತಿಃ ಸದಿತಿ ಚೋಚ್ಯತೇ**
**ಕರ್ಮ ಚೈವ ತದರ್ಥೀಯಂ ಸದಿತ್ಯೇವಾಭಿಧೀಯತೇ**

**ಅರ್ಥ:** ಯಜ್ಞೇ=ಯಜ್ಞದಲ್ಲಿ ; ತಪಸಿ ಚ=ತಪಸ್ಸಿನಲ್ಲಿ; ದಾನೇಚ=ದಾನದಲ್ಲಿ (ಇರುವ); ಸ್ಥಿತಿಃ=ನಿಷ್ಠೆ; ಸತ್, ಇತಿ ಉಚ್ಯತೆ='ಸತ್' ಎಂದು ಹೇಳಲ್ಪಡುತ್ತದೆ; ತದರ್ಥೀಯಂ ಕರ್ಮ ಚ ಏವ=ಆ ಬ್ರಹ್ಮೋದ್ದೇಶವಾದ (ಭಗವತ್ಪ್ರೀತ್ಯರ್ಥ ವಾದ) ಕರ್ಮ ಸಹ; ಸತ್ ಇತಿ ಏವ='ಸತ್' ಎಂದೇ; ಅಭಿಧೀಯತೇ= ಕರೆಯಲ್ಪಡುವುದು.

**ತಾ||** ಯಜ್ಞ, ತಪಸ್ಸು, ದಾನಗಳಲ್ಲಿರುವ ನಿಷ್ಠೆಯನ್ನು 'ಸತ್' ಎಂದು ಕರೆಯುವರು. ಮತ್ತೆ ಬ್ರಹ್ಮೋದ್ದೇಶವಾದ ಭಗವತ್ಪ್ರೀತ್ಯರ್ಥವಾದ ಕರ್ಮಗಳೂ ಕೂಡ 'ಸತ್' ಎಂದು ಕರೆಯಲ್ಪಡುತ್ತವೆ.

**ವ್ಯಾಖ್ಯೆ:** ಗೀತೆಯಲ್ಲಿ ತಪೋ ಯಜ್ಞ, ದಾನಾದಿ ಪುಣ್ಯ ಕಾರ್ಯಗಳನ್ನು ಭಗವಂತನು ಚೆನ್ನಾಗಿ ಪ್ರೋತ್ಸಾಹಿಸಿದ್ದಾನೆ. ಅವುಗಳಲ್ಲಿಯ ಸ್ಥಿತಿ (ನಿಷ್ಠೆ) ಕೇವಲ ಬ್ರಹ್ಮವಾಚಕವಾದ 'ಸತ್' ಎಂದೇ ಈ ಶ್ಲೋಕದಲ್ಲಿ ಹೇಳಲ್ಪಟ್ಟಿರು ವುದರಿಂದ ಆ ಪುಣ್ಯ ಕಾರ್ಯಗಳಿಗೆ ಎಂತಹ ಪ್ರಾಮುಖ್ಯತೆಯನ್ನು ಕೊಡಲಾಗಿದೆಯೋ ತಿಳಿಯುವುದು. ಮತ್ತೆ 'ತದರ್ಥೀಯಂ ಕರ್ಮ' ಎಂದರೆ ಭಗವತ್ಪ್ರೀತ್ಯರ್ಥವಾದ (ಭಗವತ್ಸಂಬಂಧವಾದ) ಕರ್ಮವು 'ಸತ್' ಎಂದು ಹೇಳಲ್ಪಟ್ಟಿರುವುದರಿಂದ ಅಂತಹ ಕರ್ಮ ಹಾಗು ಮೇಲೆ ತಿಳಿಸಿದ ಯಜ್ಞಾದಿ ಕರ್ಮಗಳು, ಚಿತ್ತ ಶುದ್ಧಿಯುಂಟುಮಾಡಿ ಸದ್ರೂಪವಾದ ಬ್ರಹ್ಮವನ್ನೇ ಹೊಂದುವಂತೆ ಮಾಡುವುವೆಂದು ಸ್ಪಷ್ಟವಾಗುತ್ತದೆ. ಈ ವಿಧವಾಗಿ ಸದ್ರೂಪವಾದ ಬ್ರಹ್ಮ ಪ್ರಾಪ್ತಿಗೆ ಹೇತು ಭೂತಗಳಾಗಿರುವುದರಿಂದ ಆಯಾ ಪುಣ್ಯ ಕಾರ್ಯಗಳನ್ನು, ಅವುಗಳಲ್ಲಿಯ ಸ್ಥಿತಿಯನ್ನು ಸಾಕ್ಷಾತ್ ಬ್ರಹ್ಮನಾಮವಾದ ಸತ್ ಎಂದೇ ಇಲ್ಲಿ ವರ್ಣಿಸಲಾಗಿದೆ. ಆದರೆ ಕರ್ಮ 'ತದರ್ಥೀಯಂ' ಆಗಿ ಇರುವಾಗ ಅಂದರೆ, ಭಗವತ್ಸಂಬಂಧವಾದದ್ದಾಗಿ (ಭಗವತ್ಪ್ರೀತ್ಯರ್ಥವಾಗಿ, ಭಗವದ್ಭಾವನೆಯಿಂದ ಮಾಡಲ್ಪಟ್ಟದ್ದಾಗಿ, ಮತ್ತೆ ನಿಷ್ಕಾಮವಾಗಿ) ಇದ್ದಾಗಲೇ ಆ ಕರ್ಮಕ್ಕೆ ಪವಿತ್ರತೆ, ಔನ್ನತ್ಯ ಬರುವುದು. ಇಲ್ಲದೆ ಇದ್ದಲ್ಲಿ ಆ ಕರ್ಮ, ಸಾಮಾನ್ಯ ಕರ್ಮವಾಗು ವುದಾಗಲಿ ಬ್ರಹ್ಮರೂಪವಾದ 'ಸತ್ತು' ಆಗಲಾರದು. ಆದ್ದರಿಂದ ವಾಸ್ತವವಾಗಿ ಕರ್ಮದಲ್ಲಿ ಲೋಪವಿಲ್ಲ, ಕರ್ಮಮಾಡುವ ವಿಧಾನದಲ್ಲಿ ಲೋಪವಿರುವುದು. ದೈವಬುದ್ಧಿಯಿಂದ ಮಾಡಿದರೆ ಕರ್ಮ ದೈವ ಬುದ್ಧಿಯನ್ನು ('ಸತ್' ರೂಪವನ್ನು) ತಪ್ಪದೆ ಪಡೆಯುವುದೆಂದು ಈ ಶ್ಲೋಕದಿಂದ ವ್ಯಕ್ತವಾಗುತ್ತದೆ. ಆದ್ದರಿಂದ ಅಂತಹ ಯಜ್ಞದಾನಾದಿ ಪುಣ್ಯಕಾರ್ಯಗಳನ್ನು ಭಗವತ್ಪ್ರೀತ್ಯರ್ಥ ವಾಗಿ, ನಿಷ್ಕಾಮವಾಗಿ ಆಚರಿಸಿ ಜನರು ಚಿತ್ತ ಶುದ್ಧಿಯನ್ನು, ತದ್ವಾರ 'ಸತ್' ರೂಪ ಬ್ರಹ್ಮಪ್ರಾಪ್ತಿಯನ್ನು ಹೊಂದಬೇಕು. ಈ ಶ್ಲೋಕದಲ್ಲಿ ಭಗವಂತನು ಕರ್ಮದಲ್ಲಿ ದೈವತ್ವವನ್ನು ಬೋಧಿಸಿರುವನು.

ಪ್ರ : ಯಜ್ಞದಾನ ತಪಗಳಲ್ಲಿಯ ನಿಷ್ಠೆಯನ್ನು, ಭಗವತ್ಪ್ರೀತ್ಯರ್ಥ ಕರ್ಮವನ್ನು ಹಿರಿಯರು ಏನೆನ್ನುವರು?

ಉ : ಪರಬ್ರಹ್ಮವಾಚಕವಾದ 'ಸತ್' ಎನ್ನುವರು (ಅಂದರೆ ಅವು ದೈವರೂಪಗಳೇ ಎಂದು ಭಾವ).

**ಅ||** ಅಶ್ರದ್ಧೆಯಿಂದ ಆಚರಿಸುವ ಕಾರ್ಯ ಅಸತ್ತೆಂದೇ (ಮಾಡದೆ ಇರುವುದಕ್ಕೆ ಸಮವೆಂದೇ, ಇಲ್ಲವೆ ಬ್ರಹ್ಮಸಂಬಂಧವಾದದ್ದಲ್ಲವೆಂದೇ) ಹೇಳಲಾಗಿದೆ-

**೨೮. ಅಶ್ರದ್ಧಯಾ ಹುತಂ ದತ್ತಂ ತಪಸ್ತಪ್ತಂ ಕೃತಂ ಚ ಯತ್**
**ಅಸದಿತ್ಯುಚ್ಯತೇ ಪಾರ್ಥ ನ ಚ ತತ್ಪ್ರೇತ್ಯ ನೋ ಇಹ**

**ಅರ್ಥ:** ಪಾರ್ಥ=ಓ ಅರ್ಜುನಾ! ಅಶ್ರದ್ಧಯಾಃ=ಅಶ್ರದ್ಧೆಯಿಂದ; ಹುತಂ= ಹೋಮವನ್ನು ಆಚರಿಸಿರುವುದು; ದತ್ತಂ=ದಾನ ಮಾಡಲ್ಪಡುವುದು; ತಪ್ತಂ ತಪಃ ಚ=ಮಾಡಲ್ಪಟ್ಟ ತಪಸ್ಸು; ಕೃತಂ ಚ=ಮಾಡಲ್ಪಟ್ಟ ಇತರ ಕರ್ಮಗಳು; ಯತ್=ಯಾವುದು ಇದೆಯೋ; (ತತ್=ಅದು); 'ಅಸತ್' ಇತಿ='ಅಸತ್ತೆಂ'ದು; ಉಚ್ಯತೇ=ಹೇಳಲ್ಪಡುತ್ತದೆ; ತತ್=ಅದು; ಪ್ರೇತ್ಯ=ಪರಲೋಕ ಫಲಕ್ಕೆ; ನ=ಇಲ್ಲ; ಇಹ ಚ=ಇಹಲೋಕ ಫಲಕ್ಕಾಗಿ; ನ=ಇಲ್ಲ.

**ತಾ||** ಓ ಅರ್ಜುನಾ! ಅಶ್ರದ್ಧೆಯಿಂದ ಮಾಡಲ್ಪಟ್ಟ ಹೋಮ, ದಾನ, ತಪಸ್ಸುಗಳಾಗಲಿ, ಇತರೆ ಕರ್ಮಗಳಾಗಲಿ, 'ಅಸತ್ತು' ಎಂದು ಹೇಳಲ್ಪಡುವುವು. ಅವು ಇಹಲೋಕ ಫಲವನ್ನು (ಸುಖವನ್ನು) ಆಗಲಿ, ಪರಲೋಕ ಫಲವನ್ನಾಗಲೀ ಉಂಟುಮಾಡುವುದಿಲ್ಲ.

**ವ್ಯಾಖ್ಯೆ:** ಪರಮಾರ್ಥ ಸಾಧನಗಳಲ್ಲಾಗಲಿ ಇಲ್ಲವೆ ವ್ಯವಹಾರದಲ್ಲಾಗಲಿ ಶ್ರದ್ಧೆಗೆ ಅತ್ಯಧಿಕ ಪ್ರಾಮುಖ್ಯತೆಯಿದೆ. ಶ್ರದ್ಧೆಯಿಲ್ಲದ ಕಾರ್ಯ ಯಾವ ರಂಗದಲ್ಲಾಗಲಿ ವಿಫಲವೇ ಆಗುವುದು. ಇನ್ನು ಪರಮಾರ್ಥರಂಗದಲ್ಲಿ ಬೇರೆ ಹೇಳಬೇಕೇ? ಆದ್ದರಿಂದ ಭಗವಂತನು ಗೀತೆಯಲ್ಲಿ ಅನೇಕ ಕಡೆ ಶ್ರದ್ಧೆಯ ಆವಶ್ಯಕತೆಯನ್ನು ಒತ್ತಿಹೇಳಿದ್ದಾನೆ. ಗೀತೆ ಪೂರ್ತಿಯಾಗುತ್ತಿರುವ ಈ ಸಮಯದಲ್ಲಿ ಕೂಡ ಶ್ರೀ ಕೃಷ್ಣಮೂರ್ತಿ ಶ್ರದ್ಧೆಯನ್ನು ಕುರಿತು ಬೋಧಿಸುತ್ತಿದ್ದಾನೆ. ಯಾವ ಕಾರ್ಯವಾಗಲೀ, ಅವು ಹೋಮ, ದಾನ, ತಪಸ್ಸು, ಅಧ್ಯಯನಗಳೇ ಆಗಿರಲಿ, ಶ್ರದ್ಧೆಯಿಂದ ಮಾಡಲ್ಪಡದಿದ್ದರೆ ನಿರುಪಯೋಗವಾಗುವುವು; ದೈವ ಸಂಬಂಧವಿಲ್ಲದೆ ಹೋಗುವುವು; ಅಸತ್ತೇ (zero) ಆಗ್ತುವುವು. ಅಂದರೆ ಮಾಡದೆ ಇರುವುದಕ್ಕೆ ಸಮಾನ. ಒಂದು ವೇಳೆ ಅಂತಹ ಕಾರ್ಯ ಈ

ಲೋಕದಲ್ಲಿ ಫಲವೀಯದಿದ್ದರೂ ಪರಲೋಕದಲ್ಲಿ ಏನಾದರು ಫಲ ಕೊಡುವುದೇ ಎಂದರೆ ಅಲ್ಲಿಯೂ ಫಲಿಸದು (ನ ಚ ತತ್ಪ್ರೇತ್ಯ) ಎಂದು ಖಂಡಿತವಾಗಿ ಹೇಳಲಾಗಿದೆ; ಅಡಿಗೆಗೆ ಕೆಲಸಕ್ಕೆ ಬರುವ ಪದಾರ್ಥಗಳು ಸಿದ್ಧವಾಗಿದ್ದರೂ, ಮಾಡುವವನಿಗೆ ಶ್ರದ್ಧೆಯಿಲ್ಲದಿದ್ದರೆ ಅಡಿಗೆ ಹೇಗೆ ಕೆಟ್ಟು ಹೋಗುವುದೋ ಹಾಗೆ ಅಧ್ಯಾತ್ಮಕ್ಷೇತ್ರದಲ್ಲಿ ಮುಮುಕ್ಷುವಿಗೆ ಶ್ರದ್ಧೆ ಇಲ್ಲದಿದ್ದರೆ ಸಾಧನೆ ಫಲವೀಯುವುದಿಲ್ಲ. ಆಗ ಆತನು ಮಾಡಿದ ಕರ್ಮ ಮಾಡದೆ ಇರುವುದಕ್ಕೆ ಸಮಾನವೆಂದು ಹೇಳಲ್ಪಟ್ಟಿರುವುದರಿಂದ (ಅಸತ್), ಆತನದು ವ್ಯರ್ಥ ಪರಿಶ್ರಮವೇ ಎಂದು ತಿಳಿಯುತ್ತದೆ. ಇಲ್ಲವೆ ಶ್ರದ್ಧೆಯಿಂದ ಮಾಡದ ಕಾರ್ಯ ಅಸತ್ತಾದ ಜಗದ್ರೂಪದಲ್ಲಿರುವುದೇ ಆಗಲಿ ಸತ್ಯವಾದ ಪರಮಾರ್ಥರೂಪವನ್ನು ಹೊಂದಲಾರದು ಎಂದು ಹೇಳಬಹುದು, ಈ ಪ್ರಕಾರವಾಗಿ ಇಹಲೋಕದಲ್ಲಿ, ಪರಲೋಕದಲ್ಲಿ ಶ್ರೇಯವನ್ನು ಹೊಂದಲಾರದ ಈ ಅಶ್ರದ್ಧೆಯನ್ನು ಹೊರದೂಡಿ, ಸಮಸ್ತ ಕಾರ್ಯಗಳಿಗೆ ಶ್ರದ್ಧೆಯನ್ನು ಜೋಡಿಸಿ ತಾನು ಮಾಡುವ ಕಾರ್ಯ ಅಸತ್ತಾಗಿ ನಿಷ್ಫಲವಾಗಿ ಪರಿಣಮಿಸದೆ ಸತ್ತಾಗಿ (ದೈವರೂಪವಾಗಿ) ಪರಿಣಮಿಸುವ ಹಾಗೆ ನೋಡಿ ಕೊಳ್ಳಬೇಕು. ಆಗ ಆತನು ಪರಮಾರ್ಥ ಪದವಿಯಲ್ಲಿ ಶೀಘ್ರವಾಗಿ ಉನ್ನತಿ ಪಡೆಯುವನು.

ಪ್ರ : ಅಶ್ರದ್ಧೆಯಿಂದ ಮಾಡಲ್ಪಡುವ ತಪೋದಾನಯಜ್ಞಕರ್ಮಗಳು ಎಂತಹ ಫಲವನ್ನು ಕೊಡುವುವು ?

ಉ : ಯಾವ ಫಲವನ್ನೂ ನೀಡುವುದಿಲ್ಲ. ಅವು ನಿಷ್ಫಲಗಳು. ಮಾಡದೆ ಇರುವುದಕ್ಕೆ ಸಮಾನವಾದವುಗಳು

ಪ್ರ : ಅವು ಪರಲೋಕದಲ್ಲಿ ಫಲವನ್ನು ಕೊಡುವುವೇ ?

ಉ : ಎಲ್ಲಿಯೂ ಫಲವನ್ನೀಯುವುದಿಲ್ಲ.

ಪ್ರ : ಆದ್ದರಿಂದ ಇದರಿಂದ ತಿಳಿಯುವುದೇನು ?

ಉ : ಪ್ರತಿಯೊಬ್ಬರೂ ಶ್ರದ್ಧೆಯನ್ನು ಆಶ್ರಯಿಸಿ ವಿಶ್ವಾಸದಿಂದ ಅವರವರ ಆಧ್ಯಾತ್ಮಿಕ ಕಾರ್ಯಗಳನ್ನು ಪಾಲಿಸಬೇಕು.

**ಓಮ್**

ಇತಿ ಶ್ರೀಮದ್ಭಾಗವದ್ಗೀಸೂಪನಿಷತ್ಸು ಬ್ರಹ್ಮವಿದ್ಯಾಯಾಂ ಯೋಗಶಾಸ್ತ್ರೇ
ಶ್ರೀ ಕೃಷ್ಣಾರ್ಜುನ ಸಂವಾದೇ ಶ್ರದ್ಧಾ ತ್ರಯ ವಿಭಾಗ ಯೋಗೋ ನಾಮ

**ಸಪ್ತದಶೋಽಧ್ಯಾಯಃ**

ಇದು ಉಪನಿಷತ್ಪ್ರತಿಪಾದಕವೂ, ಬ್ರಹ್ಮವಿದ್ಯೆಯೂ, ಯೋಗಶಾಸ್ತ್ರವೂ, ಶ್ರೀ ಕೃಷ್ಣಾರ್ಜುನ ಸಂವಾದವಾದ
ಶ್ರೀ ಭಗವದ್ಗೀತೆಯಲ್ಲಿಯ ಶ್ರದ್ಧಾತ್ರಯ ವಿಭಾಗಯೋಗವೆನ್ನುವ

## ಹದಿನೇಳನೆಯ ಅಧ್ಯಾಯ

**ಓಮ್ ತತ್ ಸತ್**

# ಮೋಕ್ಷಸಂನ್ಯಾಸಯೋಗ

## ಶ್ರೀ ಭಗವದ್ಗೀತೆ

### ಅಥ ಅಷ್ಟಾದಶೋऽಧ್ಯಾಯಃ
### ಹದಿನೆಂಟನೆಯ ಅಧ್ಯಾಯ
### ಮೋಕ್ಷಸಂನ್ಯಾಸಯೋಗಃ - ಮೋಕ್ಷಸಂನ್ಯಾಸಯೋಗ

**ಈ ಅಧ್ಯಾಯದ ಹೆಸರು :**

**'ಮೋಕ್ಷಸಂನ್ಯಾಸಯೋಗ'**- ೧) ಮೋಕ್ಷವೆಂದರೆ ಬಿಡುಗಡೆ; ಬಂಧದಿಂದ ಬಿಡುಗಡೆ. ಸಾಂಸಾರಿಕ ದುಃಖದಿಂದ, ಜನನ ಮರಣಗಳಿಂದ ಬಿಡುಗಡೆ ಅಂದರೆ ಬಂಧವಿಮುಕ್ತಿಯೆಂದು ಭಾವ. ಅಂತಹ ಬಂಧ ವಿಮೋಚನಾರೂಪವಾದ ಕೈವಲ್ಯವು (ಮೋಕ್ಷ) ತ್ಯಾಗದಿಂದಲೇ ಲಭಿಸಿವುಸುದು.* ತ್ಯಾಗವೆಂದರೂ, ಸಂನ್ಯಾಸವೆಂದರೂ ಎರಡೂ ಒಂದೇ. ತ್ಯಾಗ (ಸಂನ್ಯಾಸ) ಅಂದರೆ ವಾಸ್ತವವಾಗಿ ದೃಶ್ಯ ಭಾವನಾಪರಿತ್ಯಾಗ, ಸರ್ವಸಂಗ ಪರಿತ್ಯಾಗ, ಪ್ರಪಂಚ, ದೇಹ, ಮನಸ್ಸು - ಇತ್ಯಾದಿ ಸಮಸ್ತ ದೃಶ್ಯ ವಸ್ತುಗಳ ಸಂಗವನ್ನು ಪರಿತ್ಯಜಿಸಿ ಮೋಕ್ಷರೂಪವಾದ ಭಗವಂತನೊಬ್ಬನನ್ನೇ, ಆತ್ಮ ವಸ್ತುವೊಂದನ್ನೇ ಶರಣು ಹೊಂದುವುದು. ದೃಶ್ಯ ವಸ್ತು ಸಂಬಂಧವಾದ ಭಾವವೆಲ್ಲವನ್ನೂ ಯಾವ ಕ್ಷಣದಲ್ಲಿ ಮನುಷ್ಯನು ತ್ಯಜಿಸುವನೋ ಆ ಕ್ಷಣದಲ್ಲಿಯೇ ಆತನು ದೃಕ್ - ವಸ್ತುವಾದ ಆತ್ಮನಾಗಿಯೇ ಉಳಿಯುವನು. ಅದೇ ಮೋಕ್ಷ ಸ್ಥಿತಿ. ಅಂದರೆ ಕ್ಷೇತ್ರವನ್ನು ತ್ಯಜಿಸುವುದರಿಂದ ಕ್ಷೇತ್ರಜ್ಞನು ಉಳಿಯವನೆಂದು ಭಾವ. ದೃಶ್ಯ ಸಂನ್ಯಾಸ (ತ್ಯಾಗ)ದಿಂದ ದೃಗ್ರೂಪವಾದ ಮೋಕ್ಷ (ದೈವ, ಆತ್ಮ) ಲಭಿಸುವುದೆಂದರ್ಥ. ಈ ಪ್ರಕಾರವಾಗಿ, ಸಂನ್ಯಾಸದಿಂದ, ತ್ಯಾಗದಿಂದ, ಸರ್ವದೃಶ್ಯವಸ್ತು ಸಂಗಪರಿತ್ಯಾಗದಿಂದ ಮೋಕ್ಷ ಲಭಿಸುವುದೆಂದು ಬೋಧಿಸಲ್ಪಟ್ಟ ಅಧ್ಯಾಯವಾಗಿರುವುದರಿಂದ ಇದನ್ನು ಮೋಕ್ಷಸಂನ್ಯಾಸ ಯೋಗವೆಂದರು.

೨) ಮೋಕ್ಷ ಸಂನ್ಯಾಸಕ್ಕೆ ಇನ್ನೊಂದು ಅರ್ಥ - ಮೋಕ್ಷವೆಂದರೆ ದೈವ, ಭಗವಂತ. ಸಂನ್ಯಾಸವೆಂದರೆ ಸಮಸ್ತ ಕರ್ಮಗಳ್ನು ಅರ್ಪಿಸುವುದು. ಸಮಸ್ತ ಕರ್ಮಗಳನ್ನು ಆ ಕರ್ಮಗಳ ಫಲಗಳನ್ನು ಭಗವಂತನಿಗೆ ಅರ್ಪಿಸುವುದೇ ಮೋಕ್ಷ ಸಂನ್ಯಾಸ

೩) ಇನ್ನೊಂದು ಅರ್ಥ - ಮೋಕ್ಷವನ್ನು ಸಂನ್ಯಾಸಿಸುವುದು, ಬಿಡುವುದು ಮೋಕ್ಷ ಸಂನ್ಯಾಸ. ಪ್ರತಿಯೊಬ್ಬರೂ ಮೋಕ್ಷ ಬೇಕು ಎಂದು ಅಪೇಕ್ಷಿಸುವರೇ ಹೊರತು, ಬೇಡ ಎನ್ನುವವರು ಯಾರು? ಮೋಕ್ಷವನ್ನು ಕೋರುವವರು ಬಂಧಿತರೇ, ಬದ್ಧನೇ ಮುಕ್ತಿಯನ್ನು ಕೋರುವನು. ಆದರೆ ಗೀತೆಯ ೧೭ ಅಧ್ಯಾಯಗಳಲ್ಲಿ ತಿಳಿಸಲ್ಪಟ್ಟ ಬೋಧೆಯನ್ನು ಜೀರ್ಣಿಸಿಕೊಂಡವನು ಬದ್ಧನು ಹೇಗೆ ಆಗುವನು?

*'ಅಜೋ ನಿತ್ಯಶ್ಶಾಶ್ವತೋऽಯಂ ಪುರಾಣೋ'* ಎಂದು ನಿತ್ಯ ಸತ್ಯ ಸನಾತನವಾದ ತನ್ನ ಆತ್ಮವನ್ನು ತಿಳಿದವನಿಗೆ ಇನ್ನು ಬಂಧವೆಲ್ಲಿಯದು? ಬಂಧವೇ ಇಲ್ಲದಾಗ ಇನ್ನು ಮೋಕ್ಷವನ್ನು ಕುರಿತ ಪ್ರಶ್ನೆಯೇ ಇರುವುದಿಲ್ಲ @ ಆದ್ದರಿಂದ ಅಂತಹ ಮುಕ್ತ ಸ್ಥಿತಿಯಲ್ಲಿ ಜೀವಿಯು ಮೋಕ್ಷ ಭಾವವನ್ನು ತ್ಯಜಿಸುವನು. ಏಕೆಂದರೆ ಆಗ ಮಾತ್ರ ಮೋಕ್ಷ ರೂಪಿಯಾಗಿ ಬೆಳಗುವನು. ಇಲ್ಲವೆ ಅಂತಹ ೧೭ ಅಧ್ಯಾಯಗಳ ಬೋಧನೆಯನ್ನು ಅನುಭೂತಿ ಗೊಳಿಸಿಕೊಂಡರೆ ಭಗವಂತನೇ ಆತನಿಗೆ ಮೋಕ್ಷವನ್ನು ಪ್ರಸಾದಿಸುವನು. ಆದ್ದರಿಂದ ಮೋಕ್ಷವನ್ನು ಕುರಿತ ಸಂಕಲ್ಪವೇ ಆತನಿಗೆ ಅನವಶ್ಯಕ. ಆಗ ಮೋಕ್ಷ ಸಂಕಲ್ಪವನ್ನೇ ಆತನು ತ್ಯಜಿಸುವನು. ಅದೇ ಮೋಕ್ಷ ಸಂನ್ಯಾಸ.

ಇಲ್ಲಿಯವರೆಗೆ ೧೭ ಅಧ್ಯಾಯಗಳಲ್ಲಿ ಹೇಳಲ್ಪಟ್ಟ ಬೋಧೆಗಳೆಲ್ಲವೂ ಈ ಅಧ್ಯಾಯದಲ್ಲಿ ಸಂಕ್ಷೇಪವಾಗಿ ತಿಳಿಸಲ್ಪಟ್ಟಿವೆ ಮತ್ತೆ ಇಲ್ಲಿಯವರೆಗೆ ಯಾವುದಾದರೂ ಬೋಧೆಗಳನ್ನು ಬಿಟ್ಟಿದ್ದರೆ ಅವುಗಳನ್ನೂ ಸಹ ಇಲ್ಲಿ ಕೊಡಲಾಗಿದೆ. ಆದ್ದರಿಂದ ಈ ಅಧ್ಯಾಯವನ್ನು ಗೀತಾ ಸಾರವೆಂದಾಗಲಿ, ಸಂಕ್ಷಿಪ್ತ ಗೀತೆಯೆಂದಾಗಲಿ ಹೇಳಬಹುದು ಇಂತಹ ಅಪೂರ್ವ ಅಧ್ಯಾತ್ಮ ಬೋಧೆಗಳನ್ನು ಪಡೆದವನು ಮುಕ್ತಿ ಹೊಂದದೆ ಇರುವನೇ? ಅಂತಹವನು

---

* ತ್ಯಾಗೇನೈಕೇ ಅಮೃತತ್ವ ಮಾನಶುಃ (ಕೈವಲ್ಯೋಪನಿಷತ್ತು)

@ ನ ನಿರೋಧೋ ನ ಚೋತ್ಪತ್ತಿರ್ನಬದ್ಧೋ ನ ಚ ಸಾಧಕಃ
ನ ಮುಮುಕ್ಷುರ್ನವೈಮುಕ್ತ ಇತ್ಯೇಷಾ ಪರಮಾರ್ಥತಾ (ಅಮೃತ ಬಿಂದು ಉಪನಿಷತ್ತು - ೨)

ಇನ್ನು ಮೋಕ್ಷವನ್ನು ಕುರಿತ ಸಂಕಲ್ಪವನ್ನು ತ್ಯಜಿಸಬಹುದು. ಅಂದರೆ ಮೋಕ್ಷ ಸಂನ್ಯಾಸವನ್ನು ಪಾಲಿಸಬಹುದು. ಇಂತಹ ಭಾವವನ್ನು ಸೂಚಿಸುವುದಾದ್ದರಿಂದ ಇದಕ್ಕೆ ಮೋಕ್ಷ ಸಂನ್ಯಾಸಯೋಗವೆಂದು ಹೆಸರು ಬಂದಿರಬಹುದು.

೪) ಇಲ್ಲಿಯವರೆಗೆ ಹೇಳಲ್ಪಟ್ಟ ೧೭ ಅಧ್ಯಾಯಗಳ ಹೆಸರುಗಳು ಜ್ಞಾನ, ಕರ್ಮ, ಭಕ್ತಿಯೋಗಗಳೆಂದಿದ್ದು- ಈ ಪ್ರಕಾರವಾದ ಹೆಸರುಗಳ ಅರ್ಥ- 'ಜ್ಞಾನದಿಂದ ಭಗವದೈಕ್ಯ (ಯೋಗ)' 'ಕರ್ಮದಿಂದ ಭಗವದೈಕ್ಯ', 'ಭಕ್ತಿಯಿಂದ ಭಗವದೈಕ್ಯ' ಉಂಟುಮಾಡುವ ಪದ್ಧತಿಗಳನ್ನು ತಿಳಿಸುವ ಅಧ್ಯಾಯಗಳೆಂದು ಹೇಳುತ್ತಿದ್ದೆವು. ಹಾಗೆಯೇ ಇಲ್ಲಿ 'ಮೋಕ್ಷಸಂನ್ಯಾಸಯೋಗ' ಎಂದು ಹೇಳಿದಾಗ, 'ಮೋಕ್ಷ ಸಂನ್ಯಾಸ' ಎನ್ನುವ ಕ್ರಿಯೆಯ ದ್ವಾರ ಭಗವದೈಕ್ಯವನ್ನು ಸಿದ್ಧಿಸುವ ಯೋಗವೆಂದು ಹೇಳಬೇಕಾಗಿ ಬಂದಿದೆ. ಈ ಪ್ರಕಾರವಾಗಿ ಸಾಕ್ಷಾತ್ ಮೋಕ್ಷ ಸ್ವರೂಪವಾದ, ಇಲ್ಲವೆ ಮೋಕ್ಷ ಪ್ರದವಾದ ಸಂನ್ಯಾಸ ಹಾಗು ತ್ಯಾಗ ಮತ್ತು ಭಗವದರ್ಪಣೆ ಹಾಗು ಸರ್ವಸಂಗರಾಹಿತ್ಯದ ದ್ವಾರ ಯೋಗ (ಭಗವದೈಕ್ಯ)ವು ಸಿದ್ಧಿಸುವುದೆಂದು ತಿಳಿಸುವ ಅಧ್ಯಾಯವಾದುದರಿಂದ ಇದಕ್ಕೆ ಮೋಕ್ಷ ಸಂನ್ಯಾಸಯೋಗವೆನ್ನುವ ಹೆಸರು ಬಂದಿರಬಹುದು.

೧) ಸಂನ್ಯಾಸ, ತ್ಯಾಗ, ಸರ್ವಸಂಗಪರಿತ್ಯಾಗದಿಂದ ಮೋಕ್ಷ ಲಭಿಸುವುದು.

೨) ಮೋಕ್ಷ (ಮೋಕ್ಷ ಸಂಕಲ್ಪ)ವನ್ನು ಕೂಡ ಸಂನ್ಯಸಿಸುವುದು,

೩) ಮೋಕ್ಷರೂಪನಾದ ಭಗವಂತನಿಗೆ ಸರ್ವ ಕರ್ಮಗಳನ್ನು ಸಮರ್ಪಿಸುವುದು

೪) ಮೋಕ್ಷ ಪ್ರದವಾದ, ಇಲ್ಲವೆ ಮೋಕ್ಷರೂಪವಾದ ಸಂನ್ಯಾಸದಿಂದ (ತ್ಯಾಗದಿಂದ) ಭಗವದೈಕ್ಯ (ಯೋಗ) ಸಿದ್ಧಿಸುವುದು. ಎಂದು ಬೋಧಿಸಿದ ಅಧ್ಯಾಯವಾದುದರಿಂದ ಇದಕ್ಕೆ ಮೋಕ್ಷ ಸಂನ್ಯಾಸ ಯೋಗವೆನ್ನುವ ಹೆಸರು ಬಂದಿದೆ.

**ಈ ಅಧ್ಯಾಯದಲ್ಲಿಯ ಪ್ರಧಾನ ವಿಷಯಗಳು**

೧) ತ್ಯಾಗವನ್ನು ಕುರಿತ ಪ್ರಸಂಗ -
(೧ನೆಯ ಶ್ಲೋಕದಿಂದ ೧೨ನೆಯ ಶ್ಲೋಕದವರೆಗೆ)

೨) ಸಾಂಖ್ಯ ಸಿದ್ಧಾಂತದ ಪ್ರಕಾರ ಕರ್ಮಗಳ ಸ್ಥಿತಿಗೆ ಕಾರಣವನ್ನು ಹೇಳುವುದು, ಆತ್ಮ ಅಕರ್ತನೆಂದು ಬೋಧಿಸುವುದು -
(೧೩ನೆಯ ಶ್ಲೋಕದಿಂದ - ೧೮ನೆಯ ಶ್ಲೋಕದವರೆಗೆ)

೩) ಜ್ಞಾನ, ಕರ್ಮ, ಬುದ್ಧಿ, ಧೈರ್ಯ, ಸುಖ - ಎನ್ನುವುಗಳ ಸಾತ್ತ್ವಿಕ, ರಾಜಸ, ತಾಮಸ ರೂಪಗಳು -
(೧೯ನೆಯ ಶ್ಲೋಕದಿಂದ - ೪೦ನೆಯ ಶ್ಲೋಕದವರೆಗೆ)

೪) ಚಾತುರ್ವರ್ಣಗಳ ಧರ್ಮಗಳು -
(೪೧ನೆಯ ಶ್ಲೋಕದಿಂದ - ೪೮ನೆಯ ಶ್ಲೋಕದವರೆಗೆ)

೫) ಬ್ರಹ್ಮ ಸಾಕ್ಷಾತ್ಕಾರ ಸಿದ್ಧಿಗೆ ಉಪಾಯಗಳು - ಜ್ಞಾನ ನಿಷ್ಠೆಯನ್ನು ಕುರಿತ ಪ್ರಸಂಗ
(೪೯ನೆಯ ಶ್ಲೋಕದಿಂದ - ೫೫ನೆಯ ಶ್ಲೋಕದವರೆಗೆ)

೬) ಭಕ್ತಿ ಸಹಿತ ನಿಷ್ಕಾಮಕರ್ಮಯೋಗವನ್ನು ಕುರಿತ ವರ್ಣನೆ-
(೫೬ನೆಯ ಶ್ಲೋಕದಿಂದ - ೬೦ನೆಯ ಶ್ಲೋಕದವರೆಗೆ)

೭) ಭಗವತ್ ಶರಣಾಗತಿ, ಗೀತಾಸಾರಸಂಗ್ರಹ -
(೬೧ನೆಯ ಶ್ಲೋಕದಿಂದ - ೬೬ನೆಯ ಶ್ಲೋಕದವರೆಗೆ)

೮) ಗೀತಾಮಹಿಮೆ -
(೬೭ನೆಯ ಶ್ಲೋಕದಿಂದ - ೭೩ನೆಯ ಶ್ಲೋಕದವರೆಗೆ)

೯) ಸಂಜಯನ ಗೀತಾ ಸಂಸ್ತುತಿ -
(೭೪ನೆಯ ಶ್ಲೋಕದಿಂದ - ೭೮ನೆಯ ಶ್ಲೋಕದವರೆಗೆ)

**ಪೂರ್ವಾಧ್ಯಾಯದೊಡನೆ ಈ ಅಧ್ಯಾಯಕ್ಕೆ ಇರುವ ಸಂಬಂಧ:**

ಇಲ್ಲಿಯವರೆಗೆ ಶ್ರೀ ಕೃಷ್ಣ ಪರಮಾತ್ಮನು ಅನೇಕ ಯೋಗಗಳನ್ನು ಕುರಿತು ಅರ್ಜುನನಿಗೆ ಬೋಧಿಸುತ್ತಾ ಬಂದನು. ಅವೆಲ್ಲವುಗಳನ್ನು ಕೇಳಿದ ನಂತರ ಅರ್ಜುನನಿಗೆ ಅವುಗಳ ಸಾರವನ್ನು ತಿಳಿದುಕೊಳ್ಳಬೇಕೆಂದು ಕುತೂಹಲ ವುಂಟಾಗಿ ಸಂನ್ಯಾಸದ, ತ್ಯಾಗದ ತತ್ತ್ವವನ್ನು ಕುರಿತು ಭಗವಂತನನ್ನು ಪ್ರಶ್ನಿಸಿದನು. ಅರ್ಜುನನ ಆ ಪ್ರಶ್ನೆಯಿಂದ ಈ ಅಧ್ಯಾಯ ಪ್ರಾರಂಭವಾಗುತ್ತಿದೆ. (ಇದು ಕೊನೆಯ ಅಧ್ಯಾಯವಾಗಿರುವುದರಿಂದ ಇಲ್ಲಿಯವರೆಗೆ ಬೋಧಿಸಲ್ಪಟ್ಟ ತತ್ತ್ವದ ಸಾರವು ಈ ಅಧ್ಯಾಯದಲ್ಲಿ ಹೇಳಲ್ಪಟ್ಟಿದೆ).

**ಅರ್ಜುನ ಉವಾಚ.**

**೧. ಸಂನ್ಯಾಸಸ್ಯ ಮಹಾಬಾಹೋ ತತ್ತ್ವಮಿಚ್ಛಾಮಿ ವೇದಿತುಮ್**
**ತ್ಯಾಗಸ್ಯ ಚ ಹೃಷೀಕೇಶ ಪೃಥಕ್ಕೇಶಿನಿಷೂದನ**

ಅರ್ಜುನ ಉವಾಚ =ಅರ್ಜುನನು ಹೇಳಿದನು (ಪ್ರಶ್ನಿಸಿದನು)-

**ಅರ್ಥ:** ಮಹಾಬಾಹೋ=ಮಹಾಬಾಹು (ಉದ್ದವಾದ ತೋಳು)ಗಳುಳ್ಳವನು; ಹೃಷೀಕೇಶ=ಇಂದ್ರಿಯಗಳ ನಿಯಾಮಕನೂ; ಕೇಶಿನಿಷೂದನ= 'ಕೇಶಿ' ಎನ್ನುವರಾಕ್ಷಸನನ್ನು ಸಂಹರಿಸಿದವನು* ಆದ ಓ ಕೃಷ್ಣಾ !, ಸಂನ್ಯಾಸಸ್ಯ= ಸಂನ್ಯಾಸದ; ತ್ಯಾಗಸ್ಯ=ತ್ಯಾಗದ, ತತ್ತ್ವಂ=ಅಂದರೆ ಯಥಾರ್ಥವನ್ನು (ನಿಜಸ್ಥಿತಿ ಯನ್ನು); ಪೃಥಕ್=ಬೇರೆ ಬೇರೆಯಾಗಿ; ವೇದಿತುಂ= ತಿಳಿದುಕೊಳ್ಳಲು; ಇಚ್ಛಾಮಿ=ಕೋರುತ್ತಿದ್ದೇನೆ.

**ತಾ||** ಅರ್ಜುನನು ಪ್ರಶ್ನಿಸಿದನು- ದೊಡ್ಡ ಬಾಹುಗಳುಳ್ಳವನೂ, ಇಂದ್ರಿಯಗಳ ನಿಯಾಮಕನೂ, ಕೇಶಿ ಎನ್ನುವ ರಾಕ್ಷಸನನ್ನು ಸಂಹರಿಸಿದವನಾದ ಓ ಕೃಷ್ಣಾ! ಸಂನ್ಯಾಸದ, ತ್ಯಾಗದ ಯಥಾರ್ಥವನ್ನು ತಿಳಿಯಲಿಚ್ಛಿಸುತ್ತೇನೆ. ಆದ್ದರಿಂದ ಆ ಎರಡನ್ನೂ ಬೇರೆ ಬೇರೆಯಾಗಿ ನನಗೆ ಹೇಳು.

**ವ್ಯಾಖ್ಯೆ:** ಗೀತೆಯಲ್ಲಿ ಇಲ್ಲಿಯವರೆಗೆ ಅನೇಕ ಪ್ರಸಂಗಗಳಲ್ಲಿ ಶ್ರೀ ಕೃಷ್ಣ ಪರಮಾತ್ಮನು ಸಂನ್ಯಾಸ ಹಾಗೂ ತ್ಯಾಗ ಎನ್ನುವ ಶಬ್ದಗಳನ್ನುಪಯೋಗಿಸುತ್ತಾ ಬಂದಿರುವನು. ಆದರೆ ಅವುಗಳನ್ನು ಕುರಿತ ವಿವರಣೆಗಳನ್ನು ತಿಳಿಸಲಿಲ್ಲ. (ಶ್ಲೋಕ ೩-೩೦, ೪-೨೦, ೪-೪೧, ೯-೨೮, ೧೨-೬, ೧೨-೧೧, ೧೨-೧೨, ೧೨-೧೬, ೧೭-೨೫). ಆದ್ದರಿಂದ ಅರ್ಜುನನಿಗೆ ಅವುಗಳ ವಿವರಣೆಗಳನ್ನು ತಿಳಿದು

* ಕುದುರೆ ಮುಖವುಳ್ಳ 'ಕೇಶಿ' ಎನ್ನುವ ರಾಕ್ಷಸನು ಬಾಯಿ ತೆರೆದುಕೊಂಡು ಶ್ರೀಕೃಷ್ಣನ ಮೇಲೆ ಎರಗಿ ಬೀಳಲು ಶ್ರೀಕೃಷ್ಣನು ಆತನ ಬಾಯಿಯಲ್ಲಿ ತನ್ನ ಕೈಯನ್ನು ಇಟ್ಟು ಅದನ್ನು ಬೆಳಸಲು ಆ ರಾಕ್ಷಸನು ಛಿದ್ರವಾಗಿ ಮರಣಿಸಿದನು.

ಕೊಳ್ಳಬೇಕೆಂಬ ಕಾಂಕ್ಷೆ ಉದಯಿಸಲು ಅವುಗಳನ್ನು ಕುರಿತು ಭಗವಂತನನ್ನು ಹೀಗೆ ಪ್ರಶ್ನಿಸಿದನು.

ಉಪನಿಷತ್ತುಗಳಲ್ಲಿ ಸಂನ್ಯಾಸ, ತ್ಯಾಗ ಎರಡೂ ಮೋಕ್ಷಕ್ಕೆ ಹೇತುಗಳೆಂದು ಹೇಳಲ್ಪಟ್ಟಿದೆ.

೧) 'ತ್ಯಾಗೇನೈಕೇ ಅಮೃತತ್ವ ಮಾನಶುಃ'- ೨) ಸಂನ್ಯಾಸಯೋಗಾದ್ಯತ ಯಶ್ಶುದ್ಧಸತ್ವಾಃ.... ಇತ್ಯಾದಿ ವಾಕ್ಯಗಳು ಉಪಷತ್ತಿನಲ್ಲಿವೆ.

ಈ ಶ್ಲೋಕದಲ್ಲಿ ಅರ್ಜುನನು ಭಗವಂತನನ್ನು ಮೂರು ವಿಶೇಷಣಗಳ ದ್ವಾರ ಸಂಸ್ತುತಿಸುತ್ತಾ ಸಂಬೋಧಿಸುವನು. ಇಂತಹ ಸಂಬೋಧನೆಯಿಂದ ಆತನು ತನ್ನ ಭಕ್ತಿ ಭಾವವನ್ನು ಚೆನ್ನಾಗಿ ತೋರಿಸಿರುವನು. ಈ ಪ್ರಕಾರವಾಗಿ ವಿನಯಾನ್ವಿತವಾಗಿ, ಪರಿಪೂರ್ಣ ಭಕ್ತಿ ಭಾವ ಹೊಂದಿದವನಾಗಿ ಪ್ರಶ್ನಿಸುವುದನ್ನು, ಪರಿಪ್ರಶ್ನೆ ಎನ್ನುವರು. ಶಿಷ್ಯನು ಗುರುವಿನ ಬಳಿ ಈ ವಿಧವಾಗಿ ಶ್ರದ್ಧಾ ಭಕ್ತಿಗಳಿಂದ ಇರಬೇಕು. ಅಂತಹ ವರ್ತನೆಯಿಂದ ಗುರು ಸಂತೋಷಿಸಿ ಶಿಷ್ಯನ ಶ್ರೇಯಸ್ಸಿಗಾಗಿ ಜ್ಞಾನ ಬೋಧನೆ ಮಾಡುವನು.

ಪ್ರ : ಅರ್ಜುನನು ಭಗವಂತನಿಂದ ಯಾವ ಯಾವ ವಿಷಯಗಳನ್ನು ತಿಳಿಯಬಯಸಿದನು?

ಉ : ಸಂನ್ಯಾಸ, ತ್ಯಾಗ-ಎನ್ನುವ ಎರಡರ ತತ್ತ್ವವನ್ನು ತಿಳಿಯಬಯಸಿದನು.

**ಅ॥** ಅರ್ಜುನನ ಪ್ರಶ್ನೆಗೆ ಭಗವಂತನು ಉತ್ತರ ವೀಯುತ್ತಿದ್ದಾನೆ-

**ಶ್ರೀಭಗವಾನುವಾಚ**

**೨ ಕಾಮ್ಯಾನಾಂ ಕರ್ಮಣಾಂ ನ್ಯಾಸಂ ಸಂನ್ಯಾಸಂ ಕವಯೋ ವಿದುಃ**
**ಸರ್ವಕರ್ಮಫಲತ್ಯಾಗಂ ಪ್ರಾಹುಸ್ತ್ಯಾಗಂ ವಿಚಕ್ಷಣಾಃ**

ಶ್ರೀ ಭಗವಾನುವಾಚ-ಶ್ರೀ ಭಗವಂತನು ಹೇಳಿದನು-

**ಅರ್ಥ:** ಕಾಮ್ಯಾನಾಂ=ಫಲವನ್ನು ಅಪೇಕ್ಷಿಸಿ ಮಾಡಲ್ಪಡುವ (ಕಾಮ್ಯಗಳಾದ); ಕರ್ಮಣಾಂ=ಕರ್ಮಗಳನ್ನು, ನ್ಯಾಸಂ=ಬಿಡುವುದು; ಸಂನ್ಯಾಸಂ= ಸಂನ್ಯಾಸವೆಂದು; ಕವಯಃ= (ಕೆಲವರು) ಪಂಡಿತರು (ಜ್ಞಾನಿಗಳು); ವಿದುಃ= ಹೇಳುವರು; ಸರ್ವಕರ್ಮ ಫಲತ್ಯಾಗಂ=ಸಮಸ್ತ ಕರ್ಮಗಳ ಫಲವನ್ನು ತ್ಯಜಿಸುವುದು; ತ್ಯಾಗಂ=ತ್ಯಾಗವೆಂದು; ವಿಚಕ್ಷಣಾಃ=(ಮತ್ತೆ ಕೆಲವರು) ಪಂಡಿತರು (ವಿದ್ವಾಂಸರು), ಪ್ರಾಹುಃ=ಹೇಳುವರು.

**ತಾ॥** ಶ್ರೀ ಭಗವಂತನು ಹೇಳಿದನು- (ಓ ಅರ್ಜುನಾ!) ಕಾಮ್ಯ ಕರ್ಮಗಳನ್ನು ಬಿಡುವುದೇ ಸಂನ್ಯಾಸವೆಂದು ಕೆಲವರು ಪಂಡಿತರು ಹೇಳುವರು. ಮತ್ತೆ ಕೆಲ ಪಂಡಿತರು ಸಮಸ್ತ ಕರ್ಮಗಳ ಫಲವನ್ನು ತ್ಯಜಿಸುವುದೇ ತ್ಯಾಗವೆಂದು ಹೇಳುವರು.

**ವ್ಯಾಖ್ಯೆ:** ಗೀತೆಯಲ್ಲಿ ಸಂನ್ಯಾಸವೆಂದರೆ ಸಮಸ್ತವನ್ನು ತ್ಯಜಿಸಿ ಅರಣ್ಯಕ್ಕೆ ಹೋಗುವ ಅರ್ಥದಲ್ಲಿ ಹೇಳಲಾಗಿಲ್ಲ. ಕಾಮ್ಯ ಕರ್ಮಗಳನ್ನು ತ್ಯಜಿಸುವುದೇ ಸಂನ್ಯಾಸವೆಂದು ಹೇಳಲಾಗಿದೆ. ಅಂದರೆ ಇಂತಹ ಸಂನ್ಯಾಸವನ್ನು ಗೃಹಸ್ಥರೂ ಕೂಡ ಆಚರಿಸಬಹುದು ಎಂದರ್ಥ. ನಿಷ್ಕಾಮಕರ್ಮಗಳನ್ನು ಆಚರಿಸುವವನು, ಕಾಮ್ಯ ಕರ್ಮಗಳನ್ನು ತ್ಯಜಿಸುವವನು ಸಂನ್ಯಾಸಿಯೇ ಎಂದರ್ಥ. ಹಾಗೆಯೇ ಸಮಸ್ತ ಕರ್ಮಗಳ ಫಲವನ್ನು ತ್ಯಜಿಸುವವನು, ಯಾವ ಆಶ್ರಮದಲ್ಲಿದ್ದರೂ 'ತ್ಯಾಗಿ'ಯೇ ಆಗಿರುವನು.

ಪ್ರ : ಸಂನ್ಯಾಸವೆಂದರೆ ಏನು?

ಉ : ಕಾಮ್ಯ ಕರ್ಮಗಳನ್ನು ಬಿಡುವುದೇ ಸಂನ್ಯಾಸ

ಪ್ರ : ತ್ಯಾಗವೆಂದರೆ ಏನು?

ಉ : ಸಮಸ್ತ ಕರ್ಮಗಳ ಫಲವನ್ನು ತ್ಯಜಿಸುವುದೇ ತ್ಯಾಗ.

**ಅ॥** ಕರ್ಮವನ್ನು ಕುರಿತ ಕೆಲವರ ಅಭಿಪ್ರಾಯಗಳನ್ನು ಹೇಳಲಾಗಿದೆ-

**೩ ತ್ಯಾಜ್ಯಂ ದೋಷವದಿತ್ಯೇಕೇ ಕರ್ಮ ಪ್ರಾಹುರ್ಮನೀಷಿಣಃ**
**ಯಜ್ಞದಾನತಪಃಕರ್ಮ ನ ತ್ಯಾಜ್ಯಮಿತಿ ಚಾಪರೇ**

**ಅರ್ಥ:** ಏಕೇ=ಕೆಲವರು; ಮನೀಷಿಣಃ=ಬುದ್ಧಿವಂತರು (ಸಾಂಖ್ಯರು); ದೋಷವತ್=ದೋಷವೆಂದು; ಕರ್ಮ=ಕರ್ಮವು ತ್ಯಾಜ್ಯಂ= ಬಿಡಬೇಕಾದದ್ದು; ಇತಿ=ಎಂದು; ಪ್ರಾಹುಃ=ಹೇಳುವರು; ಅಪರೇ=ಮತ್ತೆ ಕೆಲವರು; ಯಜ್ಞದಾನ ತಪಃ ಕರ್ಮ=ಯಜ್ಞದಾನ, ತಪಸ್ಸು ಎನ್ನುವ ಕರ್ಮಗಳನ್ನು; ನ ತ್ಯಾಜ್ಯಂ ಇತಿ ಚ=ಬಿಡಬಾರದೆಂದು; (ಪ್ರಾಹುಃ= ಹೇಳುವರು);

**ತಾ॥** ಕೆಲವರು ಬುದ್ಧಿವಂತರು (ಸಾಂಖ್ಯರು) ಕರ್ಮವನ್ನು ದೋಷವೆಂದು ಭಾವಿಸಿ ಕರ್ಮವನ್ನು ಬಿಡಬೇಕೆಂದು ಹೇಳುವರು. ಮತ್ತೆ ಕೆಲವರು ಯಜ್ಞ, ದಾನ ತಪಸ್ಸು-ಮುಂತಾದ ಕರ್ಮಗಳನ್ನು ಬಿಡಬಾರದು ಎಂದು ಹೇಳುವರು.

**ವ್ಯಾಖ್ಯೆ:** ಕರ್ಮ ಉಪಾಧಿಗೆ (ಶರೀರ, ಇಂದ್ರಿಯ, ಮನಗಳಿಗೆ) ಸಂಬಂಧಿಸಿದ್ದಾದ್ದರಿಂದ ಉಪಾಧಿ ಭ್ರಾಂತಿಜನ್ಯವಾದುದಾಗಿರುವುದರಿಂದ, ಆತ್ಮ ಸರ್ವಸಾಕ್ಷಿಯಾದುದರಿಂದ ಕರ್ಮ ದೋಷಯುತವಾದದ್ದು, ಆದ್ದರಿಂದ ಬಿಡಬೇಕಾದದ್ದು ಎಂದು ಕೆಲವರ (ಸಾಂಖ್ಯರ) ಮತ. ಕರ್ಮವನ್ನು ಪೂರ್ತಿಯಾಗಿ ಬಿಟ್ಟಲ್ಲಿ ಜೀವಿಗೆ ಚಿತ್ತ ಶುದ್ಧಿ ಹೇಗೆ ಉಂಟಾಗುವುದೆಂದು, ದೇಹ ಯಾತ್ರೆ ಹೇಗೆ ನಡೆಯುತ್ತದೆಂದು ಯೋಚಿಸಿ ಕೆಲವರು ಚಿತ್ತಶುದ್ಧಿ ಕರ್ಮಗಳಾದ ತಪೋಯಜ್ಞದಾನಾದಿ ಕರ್ಮಗಳು ಬಿಡಬೇಕಾದವು ಅಲ್ಲವೆಂದು ಹೇಳುವರು. ಈ ಪ್ರಕಾರವಾಗಿ ಜನರಲ್ಲಿ ಕರ್ಮವನ್ನು ಕುರಿತ ಭಿನ್ನಾಭಿಪ್ರಾಯಗಳನ್ನು ಭಗವಂತನು ನೋಡಿ ತನ್ನ ನಿರ್ಣಯವನ್ನು ಮುಂದಿನ ಶ್ಲೋಕದಲ್ಲಿ ತಿಳಿಸುವನು.

ಪ್ರ : ಕರ್ಮವನ್ನು ಕುರಿತು ಕೆಲವರ ಅಭಿಪ್ರಾಯವೇನು?

ಉ : ಕೆಲವರು ಕರ್ಮವನ್ನು ದೋಷಯುತವಾದುದೆಂದು ಆದ್ದರಿಂದ ತ್ಯಜಿಸಬೇಕೆಂದು ಮತ್ತೆ ಕೆಲವರು ತಪೋ ಯಜ್ಞ ದಾನಾದಿ ಕರ್ಮಗಳನ್ನು ತ್ಯಜಿಸಬಾರದೆಂದು ಹೇಳುವರು.

**ಅ॥** ಹೀಗೆ ಕರ್ಮವನ್ನು ಕುರಿತ ಬೇರೆ ಬೇರೆ ದೃಷ್ಟಿಗಳನ್ನು ತಿಳಿಸಿ ಶ್ರೀ ಕೃಷ್ಣಮೂರ್ತಿಯು ತನ್ನ ನಿಶ್ಚಯವನ್ನು ತಿಳಿಸುತ್ತಿದ್ದಾನೆ-

**೪ ನಿಶ್ಚಯಂ ಶೃಣು ಮೇ ತತ್ರ ತ್ಯಾಗೇ ಭರತಸತ್ತಮ**
**ತ್ಯಾಗೋ ಹಿ ಪುರುಷವ್ಯಾಘ್ರ ತ್ರಿವಿಧಃ ಸಂಪ್ರಕೀರ್ತಿತಃ**

**ಅರ್ಥ:** ಭರತಸತ್ತಮ=ಭರತವಂಶದಲ್ಲಿ ಶ್ರೇಷ್ಠನಾದ ಅರ್ಜುನಾ! ತತ್ರ ತ್ಯಾಗೇ=(ಭಿನ್ನವಾದಗಳುಳ್ಳ) ಆ ಕರ್ಮತ್ಯಾಗದ ವಿಷಯದಲ್ಲಿ; ಮೇ=ನನ್ನ; ನಿಶ್ಚಯಂ=ನಿಶ್ಚಯವನ್ನು; ಶೃಣು=ಕೇಳು; ಪುರುಷವ್ಯಾಘ್ರ=ಪುರುಷ ಶ್ರೇಷ್ಠನಾದ ಓ ಅರ್ಜುನಾ! ತ್ಯಾಗಃ=ತ್ಯಾಗ; ತ್ರಿವಿಧಃ=ಮೂರು ವಿಧಗಳಾಗಿ; ಸಂಪ್ರಕೀರ್ತಿತಃ ಹಿ=ಹೇಳಲ್ಪಟ್ಟಿದೆಯಲ್ಲ!

**ತಾ॥** ಭರತಕುಲೋತ್ತಮನಾದ, ಪುರುಷ ಶ್ರೇಷ್ಠನಾದ ಓ ಅರ್ಜುನಾ! ಅಂತಹ ಕರ್ಮತ್ಯಾಗದ ವಿಷಯದಲ್ಲಿ ನನ್ನ ನಿಶ್ಚಯವನ್ನು ಹೇಳುವೆನು ಕೇಳು. ತ್ಯಾಗವು ಮೂರು ವಿಧಗಳುಳ್ಳದಾಗಿದೆ ಎಂದು ಹೇಳಲ್ಪಟ್ಟಿದೆ.

**ವ್ಯಾಖ್ಯೆ:** ೧) ಕರ್ಮಗಳನ್ನು ಪೂರ್ತಿಯಾಗಿ ತ್ಯಜಿಸಬೇಕು. ೨) ತಪೋ ಯಜ್ಞದಾನಾದಿ ಕರ್ಮಗಳನ್ನು ಬಿಡಬಾರದು- ಎನ್ನುವ ಎರಡು ವಾದಗಳನ್ನು ಹೇಳಿ ಭಗವಂತನು ಆ ವಿಷಯದಲ್ಲಿ ತನ್ನ ತೀರ್ಮಾನವನ್ನು ತಿಳಿಸುತ್ತಿದ್ದಾನೆ- **'ನಿಶ್ಚಯಂ ಶೃಣು ಮೇ'-** ಎಂದು ಹೇಳಿರುವುದರಿಂದ ಭಗವಂತನು ತಾನು ಪೂರ್ಣವಾಗಿ ಸ್ಥಿರಪಡಿಸಿಕೊಂಡು, ನಿಶ್ಚಯಿಸಿಕೊಂಡಿರುವುದನ್ನೇ ಹೇಳುತ್ತಿದ್ದಾನೆಂದು ಅರ್ಥ. ಆಹಾ! ಇಂತಹ ಭಗವನ್ನಿಶ್ಚಯದಲ್ಲಿ ಜನರಿಗೆ ಏಕೆ ವಿಶ್ವಾಸವಿರಬಾರದು? ಸಾಮಾನ್ಯರು ಪ್ರಕೃತಿಗೆ, ಮಾಯೆಗೆ ಒಳಗಾಗಿರುವ ವರಾದ್ದರಿಂದ ಅವರ ನಿಶ್ಚಯಗಳಲ್ಲಿ ಲೋಪಗಳಿರಬಹುದು. ಆದರೆ ಪ್ರಕೃತಿಗೆ ಅತೀತನಾಗಿ ಮಾಯಾ ದೋಷವಿಲ್ಲದ (ಚೈತನ್ಯ ರೂಪನಾದ) ಪರಮಾತ್ಮನ ಭಾವ ಅತಿ ನಿರ್ದಿಷ್ಟವಾದುದಾಗಿದೆ. ಅಂತಹ ಮಹನೀಯನು 'ನನ್ನ ನಿಶ್ಚಯವನ್ನು ಕೇಳು' ಎಂದು ಹೇಳಿದಾಗ ಇನ್ನು ಜೀವಿಗಳು ಎಷ್ಟು ಕಿವಿಗಳಿಂದ ಅದನ್ನು ಕೇಳಬೇಕೋ ಯೋಚಿಸುವುದು! ಆದ್ದರಿಂದ ಭಗವಂತನು ಹೇಳಹೋಗುವ ತ್ಯಾಗ ಮುಂತಾದುವುಗಳನ್ನು ಕುರಿತ ಉದಾತ್ತ ಭಾವಗಳನ್ನು ನಿಶ್ಚಯಗಳನ್ನು ಜಾಗರೂಕತೆಯಿಂದ ಕೇಳಿ ಆ ರೀತಿ ಅನುಷ್ಠಾನ ಮಾಡಿ ಮುಕ್ತಿ ಹೊಂದಬೇಕು.

ಪ್ರ : ತ್ಯಾಗವು ಎಷ್ಟು ವಿಧಗಳೆಂದು ಭಗವಂತನು ತಿಳಿಸಿದನು?

ಉ : ಮೂರು ವಿಧಗಳು

೫ **ಯಜ್ಞದಾನತಪಃಕರ್ಮ ನ ತ್ಯಾಜ್ಯಂ ಕಾರ್ಯಮೇವ ತತ್**
**ಯಜ್ಞೋ ದಾನಂ ತಪಶ್ಚೈವ ಪಾವನಾನಿ ಮನೀಷಿಣಾಮ್**

**ಅರ್ಥ:** ಯಜ್ಞದಾನ ತಪಃ ಕರ್ಮ=ಯಜ್ಞ, ದಾನ, ತಪಸ್ಸುಗಳು ಎನ್ನುವ ಕರ್ಮಗಳನ್ನು; ನ ತ್ಯಾಜ್ಯಂ=ಬಿಡಬಾರದು; ಕಾರ್ಯಂ ಏವ= ಮಾಡ ಬೇಕಾದದ್ದೇ ಹೌದು; ಯಜ್ಞಃ=ಯಜ್ಞವು; ದಾನಂ=ದಾನ; ತಪಃ ಚ ಏವ=ತಪಸ್ಸೂ; ಮನೀಷಿಣಾಂ=(ಫಲಾಭಿಲಾಷೆಯಿಲ್ಲದ) ಬುದ್ಧಿವಂತರಿಗೆ; ಪಾವನಾನಿ=ಪವಿತ್ರತೆಯನ್ನು (ಚಿತ್ತಶುದ್ಧಿಯನ್ನು) ಉಂಟುಮಾಡುವುವು (ಆಗಿವೆ).

**ತಾ||** ಯಜ್ಞ, ದಾನ, ತಪಸ್ಸು ಎನ್ನುವ ಕರ್ಮಗಳು ತ್ಯಜಿಸಬೇಕಾದುವುಗಳಲ್ಲ, ಮಾಡಬೇಕಾದುವೇ ಆಗಿವೆ. ಏಕೆಂದರೆ, ಆ ಯಜ್ಞದಾನ ತಪಗಳು ಬುದ್ಧಿ ವಂತರಿಗೆ ಪವಿತ್ರತೆಯನ್ನು, ಚಿತ್ತಶುದ್ಧಿಯನ್ನು ಉಂಟುಮಾಡುವುವಾಗಿವೆ.

**ವ್ಯಾಖ್ಯೆ:** ಭಗವಂತನು ಈ ಶ್ಲೋಕದಲ್ಲಿ ಕರ್ಮಗಳನ್ನು ಕುರಿತ ತನ್ನ ನಿಶ್ಚಯವನ್ನು ಹೇಳುತ್ತಿದ್ದಾನೆ-

೧) 'ನ ತ್ಯಾಜ್ಯಂ'- ಎಂದರೆ ತಪೋಯಜ್ಞದಾನಾದಿ ಕರ್ಮಗಳನ್ನು ಬಿಡಬಾರದು ಎಂದು ಅರ್ಥ.

೨) 'ಕಾರ್ಯಮೇವ ತತ್'- ಎಂದರೆ ಅವುಗಳನ್ನು ತಪ್ಪದೆ ಮಾಡಬೇಕು.

'ಪುಣ್ಯ ಕರ್ಮಗಳನ್ನು ಬಿಡಬಾರದು'- ಎನ್ನುವ ವಾಕ್ಯಗಳಲ್ಲಿ ಆ ಕರ್ಮಗಳನ್ನು ಮಾಡಬೇಕೆಂಬ ಅರ್ಥ ಅಡಗಿದೆ. ಆದರೂ ಭಗವಂತನು ಅಷ್ಟರಿಂದ ತೃಪ್ತಿ ಹೊಂದದೆ ಆ ಪುಣ್ಯ ಕರ್ಮಗಳನ್ನು ತಪ್ಪದೆ ಮಾಡಬೇಕೆಂದು ಪುನಃ ಹೇಳುವುದರಿಂದ ಈ ವಿಷಯವನ್ನು ಆತನು ಎಷ್ಟು ಒತ್ತಿ ಹೇಳಿರುವನೆನ್ನುವುದು ವಿದಿತವಾಗುತ್ತದೆ. ಮತ್ತೆ ಅಂತಹ ಪುಣ್ಯ ಕಾರ್ಯಗಳನ್ನು ಮಾಡುವುದು ಮುಮುಕ್ಷುಗಳಿಗೆ ಎಷ್ಟು ಅವಸರವೆನ್ನುವುದು ಸ್ಪಷ್ಟವಾಗುತ್ತದೆ- ಸಾಮಾನ್ಯವಾಗಿ ಲೋಕದಲ್ಲಿ ಕೆಲವು ಜನರು 'ಪುಣ್ಯ ಕಾರ್ಯಗಳನ್ನು ಮಾಡಿದಲ್ಲಿ ಮತ್ತೆ ಜನ್ಮ ಒದಗುವುದು; ಆದ್ದರಿಂದ ಅವುಗಳನ್ನು ಮಾಡಬಾರದು' ಎಂದು ಏನೂ ತಿಳಿಯದವರಿಗೆ ದುರ್ಬೋಧೆಗಳನ್ನು ಮಾಡುತ್ತಾ ಅಂತಹ ಕಾರ್ಯಗಳಿಂದ ಅವರನ್ನು ವಿಮುಖಗೊಳಿಸುತ್ತಿದ್ದಾರೆ. ಇದು ಬಹಳ ಘೋರವಾದುದು. ಏಕೆಂದರೆ, ಹಾಗೆ ಮಾಡುವುದು ಭಗವದಾಜ್ಞೆಗೆ ವಿರುದ್ಧ. ಭಗವಂತನು ಗೀತೆಯಲ್ಲಿ ಅನೇಕ ಕಡೆ ಪುಣ್ಯ ಕಾರ್ಯಗಳನ್ನು, ತಪೋದಾನಾದಿ ಕರ್ಮಗಳನ್ನು ವಿಶೇಷವಾಗಿ ಪ್ರೋತ್ಸಾಹಿಸುತ್ತಾ ಬಂದು ಈ ಶ್ಲೋಕದಲ್ಲಿಯೂ ಅವುಗಳನ್ನು ತಪ್ಪದೆ ಮಾಡಬೇಕೆಂದೇ ಎಚ್ಚರಿಸಿದನು. ಅವುಗಳನ್ನು ಬಿಡಬಾರದೆಂದು ಆಜ್ಞೆಯಿತ್ತನು. ಈ ಪ್ರಕಾರವಾಗಿ ಆ ಯಜ್ಞಾದಿ ಕರ್ಮಗಳು ಮೋಕ್ಷಕ್ಕೆ ಹೇತುಗಳೇ ಆಗುತ್ತವೆ. ಆದ್ದರಿಂದ ಮುಮುಕ್ಷುಗಳು ಅವುಗಳನ್ನು ಬಿಡಬಾರದು.

'ಪಾವನಾನಿ'- ಎಂದು ಹೇಳುವುದರಿಂದ ಆ ಯಜ್ಞಾದಿ ಕರ್ಮಗಳು ಪರಮ ಪವಿತ್ರವಾದವುಗಳು ಎನ್ನುವುದು ಸ್ಪಷ್ಟವಾಗುತ್ತದೆ. ಆದರೆ ಒಂದು ಪಕ್ಷ ಅವು ಅಪವಿತ್ರ, ದೋಷ ಜನಕಗಳಾಗಿದ್ದಿದ್ದರೆ ಭಗವಂತನು ಅವುಗಳನ್ನು ಕುರಿತು 'ಪಾವನಾನಿ' ಎಂದು ಹೇಳುತ್ತಲೇ ಇರಲಿಲ್ಲ.

'ಮನೀಷಿಣಾಂ'- ಬುದ್ಧಿಯುಳ್ಳವರಿಗೆ- ಬುದ್ಧಿವಂತರಿಗೆ, ಫಲವನ್ನು ಕೋರದೆ ಮಾಡುವವರಿಗೆ ಎಂದು ಅರ್ಥ. ಫಲವನ್ನು ಕೋರಿ ಮಾಡು ವವರು ಬುದ್ಧಿ ವಿಕಾಸವಿಲ್ಲದವರು. ಆದ್ದರಿಂದ ಅವರು ಮನೀಷರಲ್ಲ.

ಇಲ್ಲಿ ಯಜ್ಞವೆಂದರೆ ಜ್ಞಾನಯಜ್ಞವೆಂದು, ಈಗಾಗಲೇ ೪ನೆಯ ಅಧ್ಯಾಯದಲ್ಲಿ ತಿಳಿಸಲ್ಪಟ್ಟ ಸ್ವಾಧ್ಯಾಯಾದಿ ಚಿತ್ತ ಶುದ್ಧಿಕರಗಳಾದ ವಿವಿಧ ಯಜ್ಞಗಳೆಂದು ಭಾವ.

ಪ್ರ : ಯಜ್ಞದಾನ ತಪಗಳನ್ನು ಮಾಡಬೇಕೇ? ಅಥವ ಬಿಡಬೇಕೆ?

ಉ : ಅವುಗಳನ್ನು ಬಿಡದೆ, ತಪ್ಪದೆ ಮಾಡಬೇಕು.

ಪ್ರ : ಏಕೆ?

ಉ : ಅವು ಜನರನ್ನು ಪವಿತ್ರಗೊಳಿಸುವುವು. ಚಿತ್ತ ಶುದ್ಧಿಯನ್ನುಂಟು ಮಾಡುವುವು.

ಪ್ರ : ಯಾವ ಪ್ರಕಾರವಾಗಿ ಆಚರಿಸಿದರೆ?

ಉ: ಫಲಾಭಿಲಾಷೆ ಇಲ್ಲದೆ (ನಿಷ್ಕಾಮವಾಗಿ) ಆಚರಿಸುವುದರಿಂದ [ಮನೀಷ (ಅರಿವು) ಉಂಟಾಗಿ ಅವುಗಳ ಬಗ್ಗೆ ಜಾಗ್ರತೆಯಾಗಿದ್ದರೆ]

**ಅ||** ತನ್ನ ಆ ನಿಶ್ಚಯವನ್ನು ಮತ್ತೂ ದೃಢವಾಗಿ ಹೇಳುತ್ತಿದ್ದಾನೆ-

೬ **ಏತಾನ್ಯಪಿ ತು ಕರ್ಮಾಣಿ ಸಂಗಂ ತ್ಯಕ್ತ್ವಾ ಫಲಾನಿ ಚ**
**ಕರ್ತವ್ಯಾನೀತಿ ಮೇ ಪಾರ್ಥ ನಿಶ್ಚಿತಂ ಮತಮುತ್ತಮಮ್.**

**ಅರ್ಥ:** ಪಾರ್ಥ=ಓ ಅರ್ಜುನಾ! ಏತಾನಿ ಕರ್ಮಾಣಿ ಅಪಿ ತು=ಈ ಯಜ್ಞದಾನ ತಪಗಳನ್ನು ಹಾಗು ಕರ್ಮಗಳನ್ನು ಕೂಡ; ಸಂಗಂ=ಆಸಕ್ತಿಯನ್ನು (ತಾನು ಕರ್ತನೆನ್ನುವ ಅಭಿಮಾನವನ್ನು); ಫಲಾನಿ ಚ=ಫಲಗಳನ್ನು; ತ್ಯಕ್ತ್ವಾ=ಬಿಟ್ಟು; ಕರ್ತವ್ಯಾನಿ=ಮಾಡ ಬಹುದಾದುವು; ಇತಿ=ಎಂದು; ಮೇ=ನನ್ನ; ನಿಶ್ಚಿತಂ= ನಿಶ್ಚಯಿಸಲ್ಪಟ್ಟಿರುವುದು; ಉತ್ತಮಂ=ಶ್ರೇಷ್ಠವಾದುದೂ; ಮತಂ=ಅಭಿಪ್ರಾಯ

**ತಾ||** ಅರ್ಜುನಾ! ಈ ಯಜ್ಞದಾನ ತಪಃ ಕರ್ಮಗಳನ್ನು ಮಾಡುವಾಗ ಆಸಕ್ತಿಯನ್ನು, ಫಲವನ್ನು ಬಿಟ್ಟು ಮಾಡಬೇಕೆನ್ನುವುದು ನನ್ನ ನಿಶ್ಚಿತವಾದ ಅಭಿಪ್ರಾಯ.

**ವ್ಯಾಖ್ಯೆ:** ಹಿಂದಿನ ಶ್ಲೋಕದಲ್ಲಿ ಯಜ್ಞದಾನತಪಗಳನ್ನು ತಪ್ಪದೆ ಮಾಡಬೇಕೆಂದು ಹೇಳಲಾಯಿತು. ಆದರೆ ಅವುಗಳನ್ನು ಯಾವ ರೀತಿ ಆಚರಿಸಬೇಕೆನ್ನುವ ಪದ್ಧತಿಯನ್ನು ಇಲ್ಲಿ ತಿಳಿಸಲಾಗಿದೆ. ಆಯಾ ಕರ್ಮಗಳನ್ನು ಅಸಂಗವಾಗಿ, ಫಲಾಪೇಕ್ಷೆಯನ್ನು ಬಿಟ್ಟು ಮಾಡಬೇಕೆಂದು ಹೇಳಲಾಗಿದೆ. ಸಂಗದಿಂದ (ನಾನು ಕರ್ತನೆಂಬ ಅಭಿಮಾನದಿಂದ) ಮಾಡುವುದರಿಂದ, ಫಲವನ್ನು ಕೋರುವುದರಿಂದ ಅದರ ಪವಿತ್ರತೆ ಕುಂದಿ ಹೋಗುವುದು. ಕರ್ಮದಲ್ಲಿ ದೋಷವಿಲ್ಲವಾಗಲಿ, ಅದನ್ನು ಸಂಗದಿಂದ, ಕರ್ತೃತ್ವಾಭಿಮಾನದಿಂದ ಮಾಡುವುದರಿಂದ ದೋಷ ಉಂಟಾಗುತ್ತದೆ. ಆದ್ದರಿಂದ ಮುಮುಕ್ಷುಗಳು ಅಸಂಗವಾಗಿ, ಫಲಾಪೇಕ್ಷಾರಹಿತವಾಗಿ ಆ ತಪೋದಾನಾದಿ ಪುಣ್ಯ ಕಾರ್ಯಗಳನ್ನು ಆಚರಿಸಬೇಕು. ತನ್ನ ಈ ಅಭಿಪ್ರಾಯವನ್ನು ಕುರಿತು 'ಇದು ನನ್ನ ನಿಶ್ಚಯವಾದ ಅಭಿಪ್ರಾಯ ಹಾಗು ಶ್ರೇಷ್ಠವಾದುದು (ನಿಶ್ಚಿತಂ, ಉತ್ತಮಂ) ಎಂದು ಭಗವಂತನು ತಿಳಿಸಿರುವುದರಿಂದ ಅದರ ಮಹತ್ತರ ಶಕ್ತಿ ಅರ್ಥವಾಗುತ್ತದೆ. ಇದು ಸಾಕ್ಷಾತ್ ಭಗವಂತನೇ ನಿಶ್ಚಯಿಸಿ ಹೇಳಿರುವ ಭಾವವಾದ್ದರಿಂದ, ಅಲ್ಲದೆ ಅದು ನಿರ್ದಿಷ್ಟವಾಗಿರುವುದರಿಂದ ಮುಮುಕ್ಷುಗಳು ಅದನ್ನು ಅನುಸರಿಸಬೇಕು.

ಪ್ರ : ಮೇಲೆ ತಿಳಿಸಿದ ಯಜ್ಞದಾನಾದಿ ಕರ್ಮಗಳನ್ನು ಹೇಗೆ ಆಚರಿಸಬೇಕು?

ಉ : ಸಂಗರಹಿತವಾಗಿ (ನಾನು ಕರ್ತನೆಂಬ ಅಭಿಮಾನವಿಲ್ಲದೆ), ಫಲಾಪೇಕ್ಷೆರಹಿತವಾಗಿ (ನಿಷ್ಕಾಮವಾಗಿ) ಆಚರಿಸಬೇಕು.

ಪ್ರ : ಈ ಅಭಿಪ್ರಾಯ ಎಂತಹದು?

ಉ : ಸಾಕ್ಷಾತ್ ಭಗವಂತನಿಂದ ನಿಶ್ಚಯಿಸಲ್ಪಟ್ಟದ್ದು ಮತ್ತು ಸರ್ವ ಶ್ರೇಷ್ಠವಾದದ್ದು.

**ಅ॥** ಸಾತ್ವಿಕ, ರಾಜಸಿಕ, ತಾಮಸಿಕ ತ್ಯಾಗಗಳನ್ನು ಹೇಳಬಯಸಿ ಮೊದಲಿಗೆ ತಾಮಸ ತ್ಯಾಗದ ಬಗ್ಗೆ ಹೇಳಲಾಗಿದೆ-

೭ **ನಿಯತಸ್ಯ ತು ಸಂನ್ಯಾಸಃ ಕರ್ಮಣೋ ನೋಪಪದ್ಯತೇ**
**ಮೋಹಾತ್ತಸ್ಯ ಪರಿತ್ಯಾಗಸ್ತಾಮಸಃ ಪರಿಕೀರ್ತಿತಃ**

**ಅರ್ಥ:** ನಿಯತಸ್ಯ=(ವೇದ ಶಾಸ್ತ್ರಾದಿಗಳಿಂದ) ವಿಧಿಸಲ್ಪಟ್ಟ; ಕರ್ಮಣಃ= ಕರ್ಮದ; ಸಂನ್ಯಾಸಃ ತು=ಪರಿತ್ಯಾಗವಾದರೋ; ನ ಉಪದ್ಯತೇ= ಯುಕ್ತವಲ್ಲ; ಮೋಹತ್=ಅಜ್ಞಾನದಿಂದ; ತಸ್ಯ=ಅಂತಹ ಕರ್ಮದ; ಪರಿತ್ಯಾಗಃ= ಬಿಡುವುದು; ತಾಮಸಃ=(ತಮೋಗುಣ ಸಂಬಂಧವಾದ) ತ್ಯಾಗವೆಂದು; ಪರಿಕೀರ್ತಿತಃ= ಹೇಳಲ್ಪಡುತ್ತದೆ.

**ತಾ॥** (ವೇದ ಶಾಸ್ತ್ರಾದಿಗಳಿಂದ ವಿಧಿಸಲ್ಪಟ್ಟ) ಕರ್ಮದ ಪರಿತ್ಯಾಗವು ಯುಕ್ತವಲ್ಲ. ಅಜ್ಞಾನದಿಂದ ಅಂತಹ ಕರ್ಮವನ್ನು ಯಾರಾದರೂ ಬಿಟ್ಟರೆ ಅದು ತಾಮಸತ್ಯಾಗವೆಂದು ಹೇಳಲ್ಪಡುತ್ತದೆ.

**ವ್ಯಾಖ್ಯೆ:** ಶಾಸ್ತ್ರವಿಹಿತ ಕರ್ಮವನ್ನು ಯಾರೂ ತ್ಯಜಿಸಬಾರದು. ಶಾಸ್ತ್ರಗಳಲ್ಲಿ ವಿಧಿಸಿದ ಕರ್ಮಗಳು ಜೀವಿಯ ನೈತಿಕ, ಅಧ್ಯಾತ್ಮಿಕ ಉನ್ನತಿಗೆ ದಾರಿ ಮಾಡಿ ಕೊಡುವುವಾದ್ದರಿಂದ ಅವುಗಳನ್ನು ತ್ಯಜಿಸಬಾರದು ಹಾಗೆ ತ್ಯಜಿಸುವುದು ಅವಿವೇಕವೇ ಸರಿ. ಆದ್ದರಿಂದಲೇ 'ಮೋಹಾತ್' ಎಂದು ಇಲ್ಲಿ ಹೇಳಲ್ಪಟ್ಟಿದೆ. ಅಂದರೆ ಮೋಹದಿಂದ, ಅಜ್ಞಾನದಿಂದ ಆವರಿಸಿದಾಗ ಮಾತ್ರ ಅಂತಹ ವಿಧ್ಯುಕ್ತ ಕರ್ಮ, ಧರ್ಮವನ್ನು ತ್ಯಜಿಸುವ ಸಂಕಲ್ಪ ಜೀವಿಗೆ ಉಂಟಾಗುತ್ತದೆಂದು ಭಾವ. ಆದ್ದರಿಂದ ವಿವೇಕವನ್ನು ಆಶ್ರಯಿಸಿ ಅಂತಹ ಶಾಸ್ತ್ರ ನಿಯತ ಕರ್ಮಗಳನ್ನು ತ್ಯಜಿಸದೆ ಆಚರಿಸುವುದೇ ಶ್ರೇಯಸ್ಕರ. ಸೋಮಾರಿತನದಿಂದ, ಅಜ್ಞಾನದಿಂದ ಅವುಗಳನ್ನು ತ್ಯಜಿಸಿದರೆ ಅದು ತಾಮಸತ್ಯಾಗವೆನಿಸಿಕೊಳ್ಳುವುದು.

ಈ ಹಿಂದೆ ಯಜ್ಞದಾನಾದಿಗಳನ್ನು ಕುರಿತು ವರ್ಣಿಸುವಾಗ, ಮತ್ತು ಜ್ಞಾನ, ಧೈರ್ಯ ಮೊದಲಾದುವುಗಳನ್ನು ಹೇಳುವಾಗ ಮೊದಲು ಸಾತ್ವಿಕವಾದದ್ದನ್ನು ನಂತರ ರಾಜಸ, ತಾಮಸಿಕಗಳನ್ನು ಹೇಳಿ, ತ್ಯಾಗದ ಬಗ್ಗೆ ಹೇಳುವಾಗ ಮಾತ್ರ ಮೊದಲು ತಾಮಸಿಕ, ನಂತರ ರಾಜಸ ಕೊನೆಯಲ್ಲಿ ಸಾತ್ವಿಕವನ್ನು ಹೇಳಿರುವುದು ಗಮನಾರ್ಹ. ಮೊಟ್ಟ ಮೊದಲಿನಲ್ಲಿಯೇ ತಾಮಸಿಕ ತ್ಯಾಗವನ್ನು ಖಂಡಿಸಬೇಕೆಂದು ಭಗವಂತನು ಹೀಗೆ ಹೇಳಿರಬಹುದು.

ಪ್ರ : ತಾಮಸ ತ್ಯಾಗವೆಂತಹದು?

ಉ : ಶಾಸ್ತ್ರವಿಹಿತವಾದ ತಪೋದಾನ ಯಜ್ಞಗಳ ಪರಿತ್ಯಾಗವನ್ನು ತಾಮಸತ್ಯಾಗವೆನ್ನುವರು.

ಪ್ರ : ಯಾವುದರಿಂದ ಜನರು ನಿಯತಕರ್ಮಗಳನ್ನು ತ್ಯಜಿಸುವರು?

ಉ : ಅವಿವೇಕ, ಅಜ್ಞಾನಗಳಿಂದ.

ಪ್ರ : ಆದ್ದರಿಂದ ಶಾಸ್ತ್ರವಿಹಿತ ಕರ್ಮಗಳನ್ನು ತ್ಯಜಿಸುವವರು ಎಂತಹವರು?

ಉ : ಅವಿವೇಕಿಗಳು, ಮೋಹವಶರು

**ಅ॥** ರಾಜಸತ್ಯಾಗದ ವರ್ಣನೆ ಕೊಡಲಾಗುತ್ತಿದೆ-

೮ **ದುಃಖಮಿತ್ಯೇವ ಯತ್ಕರ್ಮ ಕಾಯಕ್ಲೇಶಭಯಾತ್ತ್ಯಜೇತ್**
**ಸ ಕೃತ್ವಾ ರಾಜಸಂ ತ್ಯಾಗಂ ನೈವ ತ್ಯಾಗಫಲಂ ಲಭೇತ್**

**ಅರ್ಥ:** (ಯಃ=ಯಾವನು); ಯತ್ಕರ್ಮ=ಯಾವ ಕರ್ಮವನ್ನು; ಕಾಯಕ್ಲೇಶ ಭಯಾತ್=ಶರೀರ ಪ್ರಯಾಸವಾಗುವುದೆನ್ನುವ ಭಯದಿಂದ; ದುಃಖಂ ಇತಿ ಏವ=ದುಃಖ (ಕಷ್ಟ)ವನ್ನು ಉಂಟುಮಾಡುವುದು ಎಂದು ತಿಳಿದು: ತ್ಯಜೇತ್=ಬಿಟ್ಟುಬಿಡುವನೋ; ಸಃ=ಆತನು; ರಾಜಸಂ=ರಜೋಗುಣ ಸಂಬಂಧವಾದ; ತ್ಯಾಗಂ=ತ್ಯಾಗವನ್ನು; ಕೃತ್ವಾ ಮಾಡಿ; ತ್ಯಾಗಫಲಂ= ತ್ಯಾಗದ ಫಲವನ್ನು; ನ ಲಭೇತ್ ಏವ=ಹೊಂದುವುದೇ ಇಲ್ಲ.

**ತಾ॥** ಯಾವನು ಶರೀರ ಪ್ರಯಾಸವಾಗುವುದೆನ್ನುವ ಭಯದಿಂದ ದುಃಖ ಉಂಟುಮಾಡುವುದೆಂದು ತಿಳಿದು ವಿಧ್ಯುಕ್ತ ಕರ್ಮವನ್ನು ಬಿಟ್ಟು ಬಿಡುವನೋ, ಅಂತಹವನು ರಾಜಸ ತ್ಯಾಗವನ್ನು ಮಾಡಿದಂತವನಾಗಿ ತ್ಯಾಗಫಲವನ್ನು ಹೊಂದುವುದೇ ಇಲ್ಲ.

**ವ್ಯಾಖ್ಯೆ:** ತಾಮಸತ್ಯಾಗಿ ಅಜ್ಞಾನದಿಂದ ವಿಧ್ಯುಕ್ತ ಕರ್ಮವನ್ನು ಬಿಡುತ್ತಿದ್ದಾನೆ. ರಾಜಸ ತ್ಯಾಗಿಯಾದರೋ ಅದು ಪ್ರಯಾಸವಾದದ್ದು ಎಂದು ಭಾವಿಸಿ ಬಿಟ್ಟು ಬಿಡುತ್ತಿದ್ದಾನೆ. ಅಂದರೆ ಸೋಮಾರಿತನವನ್ನು ವಹಿಸುತ್ತಾನೆ ಎಂದರ್ಥ. ಉತ್ತಮ ಸುಖವನ್ನು ಉಂಟುಮಾಡುವ ಕ್ರಿಯೆಗಳು ಸಾಮಾನ್ಯವಾಗಿ ಪ್ರಾರಂಭದಲ್ಲಿ ಕಷ್ಟವಾಗಿರುವುವು. ಆದರೆ ಕೊನೆಗೆ ಅನಂತಸುಖವನ್ನು ಕೊಡುವುವು. ರಾಜಸತ್ಯಾಗಿ ಪ್ರಾರಂಭದಲ್ಲಿ ಕಷ್ಟಕ್ಕೆ ಹೆದರಿ, ಸೋಮಾರಿತನದಿಂದ ಶ್ರಮಿಸಿದೆ ಆ ಕರ್ಮಗಳನ್ನು ಬಿಡುತ್ತಿದ್ದಾನೆ. ಬ್ರಹ್ಮಮುಹೂರ್ತದಲ್ಲಿ ಏಳುವುದು, ತಣ್ಣೀರಿನಲ್ಲಿ ಸ್ನಾನ ಮಾಡುವುದು, ಬ್ರಹ್ಮಚರ್ಯವನ್ನು ಪಾಲಿಸುವ ಮುಂತಾದ ಕ್ರಿಯೆಗಳು ಪ್ರಾರಂಭದಲ್ಲಿ ಕಷ್ಟವಾಗಿ ಕಾಣಬಹುದು. ಆದರೆ ಅವು ಕೊನೆಗೆ

ಮಹದಾನಂದವನ್ನು ಕೊಡುವುವು. ಆದರೆ ರಾಜಸತ್ಯಾಗಿ (ಸೋಮಾರಿತನ, ಆಲಸ್ಯದಿಂದ) ಅವುಗಳನ್ನು ಮಾಡಲು ಇಚ್ಛಿಸದೆ ಬಿಟ್ಟುಬಿಡುವನು. ಅಂತಹನಿಗೆ ತ್ಯಾಗದ ಫಲವು ಲಭಿಸುವುದಿಲ್ಲ ಏಕೆಂದರೆ ತ್ಯಾಗವೆಂದರೆ ಸಂಗತ್ಯಾಗವೇ ಆಗಲಿ ಕರ್ಮತ್ಯಾಗವೆಂದು ಅರ್ಥವಲ್ಲ. ಅವರಾದರೋ ಕರ್ಮಗಳನ್ನೇ ತ್ಯಜಿಸುತ್ತಿದ್ದಾರೆ. ಈ ಪ್ರಕಾರವಾಗಿ ರಾಜಸ, ತಾಮಸ ಗುಣವುಳ್ಳವರು ಬೇರೆ ಬೇರೆ ಕಾರಣಗಳಿಂದ ವಿಧ್ಯುಕ್ತ ಕರ್ಮಗಳನ್ನು ತ್ಯಜಿಸಿ ಫಲದಿಂದ ವಂಚಿತರಾಗುವರು.

ಪ್ರ : ರಾಜಸತ್ಯಾಗದ ಲಕ್ಷಣವೇನು?

ಉ : ಕಾರ್ಯವು ಕಷ್ಟವೆಂದು ತಿಳಿದು (ಸೋಮಾರಿತನದಿಂದ) ಅದನ್ನು ತ್ಯಜಿಸುವುದನ್ನು ರಾಜಸತ್ಯಾಗವೆನ್ನುವರು.

ಪ್ರ : ಅದರಿಂದ ಆತನಿಗುಂಟಾಗುವ ನಷ್ಟವೇನು?

ಉ : ಆತನು ತ್ಯಾಗಫಲವನ್ನು ಎಳ್ಳಷ್ಟೂ ಹೊಂದುವುದಿಲ್ಲ.

**ಅ||** ಸಾತ್ವಿಕ ತ್ಯಾಗದ ವಿವರಣೆಯನ್ನು ಕೊಡಲಾಗಿದೆ-

**೯ ಕಾರ್ಯಮಿತ್ಯೇವ ಯತ್ಕರ್ಮ ನಿಯತಂ ಕ್ರಿಯತೇऽರ್ಜುನ**
**ಸಂಗಂ ತ್ಯಕ್ತ್ವಾ ಫಲಂ ಚೈವ ಸ ತ್ಯಾಗಸ್ಸಾತ್ತ್ವಿಕೋ ಮತಃ**

**ಅರ್ಥ:** ಅರ್ಜುನಾ=ಓ ಅರ್ಜುನಾ! ನಿಯತಂ=ಶಾಸ್ತ್ರದಿಂದ ನಿಯಮಿಸಲ್ಪಟ್ಟ; ಯತ್ಕರ್ಮ=ಯಾವ ಕರ್ಮವು; ಕಾರ್ಯಂ ಇತಿ ಏವ=ಮಾಡಲ್ಪಡಬೇಕಾದದ್ದೇ ಎಂದು (ತಿಳಿದುಕೊಂಡು); ಸಂಗಂ=ಅಭಿಮಾನವನ್ನು (ಆಸಕ್ತಿಯನ್ನು); ಫಲಂ ಚ ಏವ= ಫಲವನ್ನೂ ಕೂಡ; ತ್ಯಕ್ತ್ವಾ=ಬಿಟ್ಟು; ಕ್ರಿಯತೇ=ಮಾಡಲ್ಪಡುತ್ತದೆಯೋ; ಸಃ ತ್ಯಾಗಃ=ಅಂತಹ ತ್ಯಾಗವು; ಸಾತ್ತ್ವಿಕಃ=ಸತ್ತ್ವಗುಣ ಸಂಬಂಧವಾದದ್ದೆಂದು; ಮತಃ=ನಿಶ್ಚಯಿಸಲ್ಪಟ್ಟಿದೆ.

**ತಾ||** ಇದು ಮಾಡಬೇಕಾದದ್ದೇ ಎಂದು ತಿಳಿದು ಶಾಸ್ತ್ರನಿಯತವಾದ ಕರ್ಮವನ್ನು ಅಭಿಮಾನ, ಫಲಾಪೇಕ್ಷೆಯಿಲ್ಲದೆ ಮಾಡಿದರೆ (ಅಂತಹ ಕರ್ಮದಲ್ಲಿಯ ಫಲತ್ಯಾಗವನ್ನು) ಅಂತಹ ತ್ಯಾಗವನ್ನು ಸಾತ್ವಿಕ ತ್ಯಾಗವೆನ್ನುವರು.

**ವ್ಯಾಖ್ಯೆ:** ತ್ಯಾಗವೆಂದರೆ ಸಂಗತ್ಯಾಗವೇ ಹೊರತು (ಅಥವ ಫಲತ್ಯಾಗ) ಕರ್ಮತ್ಯಾಗವಲ್ಲವೆಂದು ತಿಳಿಯುತ್ತದೆ. ಮತ್ತೆ 'ಕಾರ್ಯಂ' ಎಂದು ಹೇಳಿರುವುದರಿಂದ ಶಾಸ್ತ್ರನಿಯತವಾದ ಕರ್ಮವನ್ನು ಮನುಜರು ತಪ್ಪದೆ ಮಾಡಬೇಕೆಂದು ತಿಳಿಯುತ್ತದೆ. ತಾಮಸಿಯು ಶಾಸ್ತ್ರ ವಿಧಿ ತಿಳಿಯದೆ ಕರ್ಮವನ್ನು ಆಚರಿಸುವುದಿಲ್ಲ. ರಾಜಸಿಯು ತಿಳಿದೂ, ಆಚರಿಸುವುದು ಕಷ್ಟವೆಂದು ಭಾವಿಸಿ ಅದನ್ನು ಮಾಡುವುದಿಲ್ಲ. ಸಾತ್ವಿಕನು ತಿಳಿದು ಕಷ್ಟಕ್ಕೆ ಹೆದರದೆ, ಸಂಗವನ್ನು, ಫಲವನ್ನು ತ್ಯಜಿಸಿ ಅದನ್ನು ಆಚರಿಸುವನು. ಸಾತ್ವಿಕನದೇ ಉತ್ತಮ ಪದ್ಧತಿಯೆಂದು, ಆತನ ತ್ಯಾಗವೇ ಉತ್ತಮ ತ್ಯಾಗವೆಂದು ಈ ಶ್ಲೋಕದಿಂದ ತಿಳಿಯುತ್ತದೆ. ಆದ್ದರಿಂದ ಅಂತಹುದನ್ನೇ ಮುಮುಕ್ಷುಗಳು ಅವಲಂಬಿಸಬೇಕು.

ಪ್ರ : ಸಾತ್ವಿಕ ತ್ಯಾಗದ ಲಕ್ಷಣವೇನು?

ಉ : ಶಾಸ್ತ್ರನಿಯತವಾದ ಕರ್ಮವನ್ನು ತಪ್ಪದೆ ಮಾಡಬೇಕೆಂದು ನಿರ್ಣಯಿಸಿ, ಫಲ, ಸಂಗ (ಆಸಕ್ತಿಯನ್ನು) ಬಿಟ್ಟು ಮಾಡುವುದನ್ನು ಸಾತ್ವಿಕ ತ್ಯಾಗವೆನ್ನುವರು.

**ಅ||** ಅಂತಹ ತ್ಯಾಗಶೀಲನಿಗೆ ಕರ್ಮಗಳಲ್ಲಿ ಇಚ್ಛಾದ್ವೇಷಗಳು ಇರುವುದಿಲ್ಲವೆಂದು ತಿಳಿಸಲಾಗುತ್ತಿದೆ-

**೧೦. ನ ದ್ವೇಷ್ಟ್ಯಕುಶಲಂ ಕರ್ಮ ಕುಶಲೇ ನಾನುಷಜ್ಜತೇ**
**ತ್ಯಾಗೀ ಸತ್ತ್ವಸಮಾವಿಷ್ಟೋ ಮೇಧಾವೀ ಛಿನ್ನಸಂಶಯಃ**

**ಅರ್ಥ:** ಸತ್ತ್ವ ಸಮಾವಿಷ್ಟಃ=ಸತ್ತ್ವಗುಣದಿಂದ ಕೂಡಿದವನು; ಮೇಧಾವಿ=ಪ್ರಜ್ಞಾಶೀಲನು; ಛಿನ್ನಸಂಶಯಃ=ಸಂಶಯವನ್ನು ಹೋಗಲಾಡಿಸಿಕೊಂಡವನು; ತ್ಯಾಗೀ=ತ್ಯಾಗಶೀಲನು (ಸಂಗ, ಫಲ ತ್ಯಜಿಸಿ ಕರ್ಮಗಳನ್ನು ಮಾಡುವವನು); ಅಕುಶಲಂ ಕರ್ಮ=ಅಶುಭ, ದುಃಖ, ಕಾಮ್ಯವಾದ ಕರ್ಮಗಳನ್ನು; ನ ದ್ವೇಷ್ಟಿ=ದ್ವೇಷಿಸುವುದಿಲ್ಲ; ಕುಶಲೇ=ಶುಭವಾದ, ಸುಖವಾದ, ನಿಷ್ಕಾಮವಾದ ಕರ್ಮಗಳಲ್ಲಿ; ನ ಅನುಷಜ್ಜತೇ=ಆಸಕ್ತನಾಗುವುದಿಲ್ಲ.

**ತಾ||** ಸತ್ತ್ವಗುಣದಿಂದ ಕೂಡಿದವನು, ಪ್ರಜ್ಞಾಶೀಲನು, ಸಂಶಯವನ್ನು ಹೋಗಲಾಡಿಸಿಕೊಂಡಂತಹ ತ್ಯಾಗಶೀಲನು, ಅಶುಭ, ದುಃಖಕರವಾದ ಕಾಮ್ಯ ಕರ್ಮಗಳನ್ನು ದ್ವೇಷಿಸುವುದಿಲ್ಲ; ಶುಭವಾದ ನಿಷ್ಕಾಮವಾದ, ಸುಖಕರವಾದ ಕರ್ಮಗಳಲ್ಲಿ ಆಸಕ್ತನಾಗಿರುವುದಿಲ್ಲ.

**ವ್ಯಾಖ್ಯೆ:** ಸತ್ತ್ವಗುಣದಿಂದ ಕೂಡಿದ ಕರ್ಮಫಲತ್ಯಾಗಿ ದ್ವಂದ್ವಗಳಲ್ಲಿ ಸಮಬುದ್ಧಿ ಹೊಂದಿರುವವನು ಎಂದು ಹೇಳಲಾಗುತ್ತಿದೆ. ಒಂದನ್ನು ದ್ವೇಷಿಸುವುದು ಮತ್ತೊಂದರಲ್ಲಿ ಆಸಕ್ತಿ ಇರುವುದು, ಅದಕ್ಕೆ ಹೆಚ್ಚು ಅಂಟಿಕೊಳ್ಳುವುದು ಆತನಿಗೆ ಇರುವುದಿಲ್ಲ. ಆತನು ಇಚ್ಛಾದ್ವೇಷ ರಹಿತನಾಗಿರುವನು. ಅಶುಭಕರ್ಮ, ಕಾಮ್ಯಕರ್ಮವನ್ನು ದ್ವೇಷಿಸುವುದಿಲ್ಲವೆಂದರೆ ಅವುಗಳನ್ನು ಪ್ರೇಮಿಸುತ್ತಾನೆ ಎಂದು ಅರ್ಥವಲ್ಲ. ಜೀವನ್ಮುಕ್ತನು ಅಂತಹ ಕರ್ಮಗಳೆಡೆಗೆ ತಟಸ್ಥಭಾವವನ್ನು ಹೊಂದಿದ್ದು, ಅವುಗಳನ್ನಾಚರಿಸದೆ ಶುಭಕಾರ್ಯ, ನಿಷ್ಕಾಮಕರ್ಮಗಳನ್ನೇ ಆಚರಿಸುವನು. ಹಾಗೆ ಆಚರಿಸಿದರೂ ಅವುಗಳೊಡನೆ ವಿಲೀನವಾಗದೆ, ಸಂಗವಿಲ್ಲದೆ ಇರುವನು.

ಪ್ರ : ಸತ್ತ್ವಗುಣಶೀಲನು ಕರ್ಮಫಲತ್ಯಾಗದಲ್ಲಿ ಎಂತಹ ಸ್ವಭಾವವನ್ನು ಹೊಂದಿರುವನು?

ಉ : ಆತನು ೧) ಸತ್ತ್ವಗುಣ ಸಂಪನ್ನನಾಗಿ ೨) ಪಜ್ಞಾಶೀಲನಾಗಿ ೩) ಸಂಶಯರಹಿತನಾಗಿ ೪) ಅಶುಭ (ಕಾಮಾದಿ) ಕರ್ಮಗಳನ್ನು ದ್ವೇಷಿಸದೆ, ಶುಭ (ನಿಷ್ಕಾಮಾದಿ) ಕರ್ಮಗಳಲ್ಲಿ ಸಕ್ತನಾಗದೆ (ಅಭಿಮಾನವಿಲ್ಲದೆ) ಇರುವನು.

**ಅ||** ಕರ್ಮಫಲವನ್ನು ತ್ಯಜಿಸಿದವನೇ ತ್ಯಾಗಿಯೆಂದು ಹೇಳಲಾಗಿದೆ-

**೧೧ ನ ಹಿ ದೇಹಭೃತಾ ಶಕ್ಯಂ ತ್ಯಕ್ತುಂ ಕರ್ಮಾಣ್ಯಶೇಷತಃ**
**ಯಸ್ತು ಕರ್ಮಫಲತ್ಯಾಗೀ ಸ ತ್ಯಾಗೀತ್ಯಭಿಧೀಯತೇ**

**ಅರ್ಥ:** ಕರ್ಮಾಣಿ=ಕರ್ಮಗಳನ್ನು; ಅಶೇಷತಃ=ಸಂಪೂರ್ಣವಾಗಿ; ತ್ಯಕ್ತುಂ= ಬಿಡಲು, ದೇಹಭೃತಾ=ದೇಹಧಾರಿಯಾದ ಜೀವಿಗೆ; ಶಕ್ಯ ಹಿ=ಸಾಧ್ಯವಿಲ್ಲವಲ್ಲ! ಯಃ ತು=ಯಾರಾದರೇ; ಕರ್ಮ ಫಲತ್ಯಾಗಿ=ಕರ್ಮಗಳ ಫಲಗಳನ್ನು ಬಿಡುತ್ತಿದ್ದಾನೋ; ಸಃ=ಆತನು; ತ್ಯಾಗೀ ಇತಿ=ತ್ಯಾಗಿಯೆಂದು; ಅಭಿಧೀಯತೆ= ಕರೆಯಲ್ಪಡುತ್ತಿದ್ದಾನೆ.

**ತಾ||** ಕರ್ಮಗಳನ್ನು ಪೂರ್ತಿಯಾಗಿ ಬಿಡಲು ದೇಹಧಾರಿಯಾದ ಜೀವಿಗೆ ಸಾಧ್ಯವಿಲ್ಲ. ಆದ್ದರಿಂದ ಯಾವನು ಕರ್ಮಗಳ ಫಲವನ್ನು ಬಿಡುವನೋ ಅವನೇ ತ್ಯಾಗಿಯೆಂದು ಕರೆಯಲ್ಪಡುವನು.

**ವ್ಯಾಖ್ಯೆ:** ದೇಹಧಾರಿಯಾದ ಜೀವಿಯು ದೇಹ ಸಂರಕ್ಷಣೆಗಾಗಿ ಕರ್ಮವನ್ನು ಮಾಡಲೇಬೇಕಾಗಿದೆ. ಆದ್ದರಿಂದ ಕರ್ಮವನ್ನು ಸಂಪೂರ್ಣವಾಗಿ ಬಿಡಲು

ಸಾಧ್ಯವಾಗದು. ಈ ಕಾರಣದಿಂದ ಕರ್ಮಗಳನ್ನು ಮಾಡುತ್ತ ಅವುಗಳ ಫಲಗಳನ್ನು ಬಿಡುವುದೇ ಸರ್ವೋತ್ತಮವಾದ ಪದ್ಧತಿ. ಅಂತಹವನು ಇನ್ನು ಆ ಕರ್ಮಗಳಿಗೆ ಬದ್ಧನಾಗುವುದಿಲ್ಲ. ಮತ್ತೆ ಅಂತಹವನೇ ತ್ಯಾಗಿಯೆಂದು ಕರೆಯಲ್ಪಡುವನು. ತ್ಯಾಗಿಯೆಂದರೆ ಬಾಹ್ಯ ವಸ್ತುಗಳನ್ನು ತ್ಯಾಗ ಮಾಡುವವನಲ್ಲವೆಂದೂ, ಕರ್ಮಗಳನ್ನು ಮಾಡುತ್ತ ಅವುಗಳ ಫಲಗಳನ್ನು ಬಿಡುವವನೇ ತ್ಯಾಗಿಯೆಂದು, ಅಭಿಮಾನವನ್ನು ಸಂಗವನ್ನು ತ್ಯಜಿಸುವವನೇ ತ್ಯಾಗಿಯೆಂದು ಈ ಶ್ಲೋಕದಿಂದ ತಿಳಿಯುತ್ತದೆ. ಕೇವಲ ಕರ್ಮಗಳನ್ನು ಬಿಟ್ಟ ಮಾತ್ರಕ್ಕೆ ಮನುಜನು ತ್ಯಾಗಿಯಾಗಲಾರನು, ತ್ಯಾಗ ಫಲವನ್ನು ಹೊಂದಲಾರನು. ಕರ್ಮಗಳನ್ನು ಮಾಡುತ್ತ ಅವುಗಳ ಫಲಗಳನ್ನು ಬಿಡುವವನೇ ತ್ಯಾಗಿಯೆನಿಸಿಕೊಳ್ಳುವನು ಮತ್ತು ತ್ಯಾಗ ಫಲಗಳನ್ನು ಹೊಂದುವನು. ಇದರಿಂದ ಅಂತರಂಗ ತ್ಯಾಗ, ಫಲಾಪೇಕ್ಷರೂಪ (ದೇಹಾಭಿಮಾನರೂಪ) ಅಂತರಂಗ ಮನೋವೃತ್ತಿಯ ತ್ಯಾಗದ ಮೇಲೆ ಆಧಾರ ಹೊಂದಿದೆಯೇ ಆಗಲಿ ಬಾಹ್ಯ ವಸ್ತುಗಳ ಪರಿತ್ಯಾಗದಲ್ಲಲ್ಲವೆಂದು ಸ್ಪಷ್ಟವಾಗುತ್ತದೆ. ಆದ್ದರಿಂದ ಕರ್ಮಗಳನ್ನು ಮಾಡಬೇಕು, ಆದರೆ ಫಲಾಭಿರಹಿತವಾಗಿ ಮಾಡಬೇಕೆಂದು ಭಗವಂತನು ತಿಳಿಸಿರುವನು.

ಪ್ರ : ಕರ್ಮಗಳನ್ನು ಪೂರ್ತಿಯಾಗಿ ಬಿಡಲು ಸಾಧ್ಯವೇ?

ಉ :ದೇಹಧಾರಿಯಾದ ಜೀವಿಗೆ ಅದು ಸಾಧ್ಯವಾಗುವುದಿಲ್ಲ.

ಪ್ರ : ತ್ಯಾಗಿ ಎಂದರೆ ಯಾರು?

ಉ: ಯಾವನು ಕರ್ಮಗಳನ್ನು ಮಾಡುತ್ತ ಅವುಗಳ ಫಲಗಳನ್ನು ಬಿಡುವನೋ ಆತನೇ ತ್ಯಾಗಿ (ಅಷ್ಟೇ ಅಲ್ಲದೆ ಕರ್ಮಗಳನ್ನು ಬಿಟ್ಟವನಲ್ಲ)

**ಅ||** ಕರ್ಮಫಲಗಳನ್ನು ತ್ಯಜಿಸುವುದರಿಂದ ಕರ್ಮಬಂಧನದಿಂದ ಮನುಷ್ಯನು ಹೇಗೆ ಬಿಡುಗಡೆ ಹೊಂದುವನು ಎನ್ನುವುದನ್ನು ಹೇಳಲಾಗಿದೆ-

**೧೨ ಅನಿಷ್ಟಮಿಷ್ಟಂ ಮಿಶ್ರಂ ಚ ತ್ರಿವಿಧಂ ಕರ್ಮಣಃ ಫಲಮ್**
**ಭವತ್ಯತ್ಯಾಗಿನಾಂ ಪ್ರೇತ್ಯ ನ ತು ಸಂನ್ಯಾಸಿನಾಂ ಕ್ವಚಿತ್**

**ಅರ್ಥ:** ಅನಿಷ್ಟಂ=ದುಃಖಕರವಾದದ್ದು (ನರಕ, ನೀಚಜನ್ಮಗಳನ್ನುಂಟು ಮಾಡುವುದು); ಇಷ್ಟಸುಖಕರವಾದ (ಸ್ವರ್ಗ, ದೇವತಾಜನ್ಮಗಳನ್ನುಂಟು ಮಾಡುವ); ಮಿಶ್ರಂ ಚ=ಸುಖ ದುಃಖಗಳೆರಡೂ ಕಲೆತಿರುವುದು (ಮನುಷ್ಯ ಜನ್ಮವನ್ನು ಉಂಟುಮಾಡುವುದು) ಆಗಿ; ತ್ರಿವಿಧಂ=ಮೂರು ವಿಧಗಳಾದ; ಕರ್ಮಣಃ ಫಲಂ=ಕರ್ಮಗಳ ಫಲ; ಅತ್ಯಾಗಿನಾಂ=ಕರ್ಮಫಲತ್ಯಾಗ ಮಾಡದವರಿಗೆ; ಪ್ರೇತ್ಯ=ಮರಣಾನಂತರ; ಭವತಿ=ಉಂಟಾಗುತ್ತದೆ; ಸಂನ್ಯಾಸಿನಾಂ ತು=ಕರ್ಮಫಲತ್ಯಾಗಮಾಡಿದವರಿಗೆ; ಕ್ವಚಿತ್=ಯಾವಾಗಲೂ; ನ=ಉಂಟಾಗುವುದಿಲ್ಲ.

**ತಾ||** ದುಃಖಕರವಾದ್ದುದು, ಸುಖಕರವಾದುದು, ಸುಖದುಃಖಕರವಾದುದು ಎನ್ನುವ ಮೂರು ವಿಧಗಳಾದ ಕರ್ಮಫಲವು, ಕರ್ಮಫಲತ್ಯಾಗ ಮಾಡದವರಿಗೆ ಮರಣಾನಂತರ ಉಂಟಾಗುವುದು. ಕರ್ಮಫಲತ್ಯಾಗ ಮಾಡಿದವರಿಗೆ ಅವು ಎಂದೆಂದಿಗೂ ಉಂಟಾಗಲಾರವು.

**ವ್ಯಾಖ್ಯೆ:** ಕರ್ಮ ಬಂಧವನ್ನುಂಟು ಮಾಡುವುದೆಂದು, ಜನ್ಮಕ್ಕೆ ಹೇತುವೆಂದು, ಆದುದರಿಂದ ಮಾಡಬಾರದೆಂದು ಹೇಳುವವರಿಗೆ ಭಗವಂತನು ಉತ್ತರವೀಯುತ್ತಿದ್ದಾನೆ. ಕರ್ಮ ಯಾರಿಗೆ ಬಂಧವುಂಟು ಮಾಡುವುದು? ಎಲ್ಲರಿಗೂ ಅಲ್ಲ. ಫಲಾಪೇಕ್ಷೆ, ಸಂಗ, ಅಭಿಮಾನ, ಕರ್ತೃತ್ವ ಬುದ್ಧಿಯಿಂದ ಆಚರಿಸುವವನಿಗೆ ಮಾತ್ರ ಕರ್ಮ ಬಂಧಕರವಾಗಿ ಪರಿಣಮಿಸುವುದಾಗಲಿ; ನಿಸ್ಸಂಗವಾಗಿ, ನಿಷ್ಕಾಮವಾಗಿ, ಫಲಾಪೇಕ್ಷೆ ರಹಿತವಾಗಿ ಆಚರಿಸುವವರಿಗಲ್ಲ. ಈ ವಿಷಯವನ್ನೇ ಈ ಶ್ಲೋಕದಲ್ಲಿ ಸ್ಪಷ್ಟವಾಗಿ ಹೇಳಲಾಗಿದೆ. ಸ್ವರ್ಗಾದಿ ಸುಖರೂಪವಾದ ಇಷ್ಟ ಫಲವಾಗಲಿ, ನರಕ ನೀಚಜನ್ಮಾದಿ ದುಃಖರೂಪವಾದ ಅನಿಷ್ಟ ಫಲವಾಗಲಿ, ಮಾನವ ಜನ್ಮದಲ್ಲಿಯ ಸುಖದುಃಖ ಮಿಶ್ರ ಫಲವಾಗಲಿ ಫಲಾಪೇಕ್ಷೆಯಿಂದ ಕರ್ಮಗಳನ್ನು ಮಾಡುವವರಿಗೆ ಉಂಟಾಗುವುದಾಗಲಿ, ಫಲಗಳನ್ನು ಬಿಟ್ಟವರಿಗಲ್ಲ (ನ ತು ಸಂನ್ಯಾಸಿನಾಂ ಕ್ವಚಿತ್). 'ಕ್ವಚಿತ್' ಎಂದು ಹೇಳಿರುವುದರಿಂದ ಯಾವ ಕಾಲದಲ್ಲಿಯೂ ಅವರಿಗೆ ಬಂಧವುಂಟಾಗುವುದಿಲ್ಲವೆಂದು ಭಾವ. ಏಕೆಂದರೆ ಕರ್ಮಫಲ ತ್ಯಜಿಸುವವರಿಗೆ ಚಿತ್ತ ಶುದ್ಧಿಯ ದ್ವಾರ ಮೋಕ್ಷವೇ ಉಂಟಾಗುವುದು. ಜನ್ಮರಾಹಿತ್ಯ ಸಿದ್ಧಿಸುವುದು. ಅವರಿಗೆ ಲೋಕಾದಿಗಳ (ಜನ್ಮಾದಿಗಳ) ಪ್ರಸಕ್ತಿಯೇ ಇರುವುದಿಲ್ಲ. ಸಂಸಾರ ಚಕ್ರ ಪರಿಭ್ರಮಣೆಯೆಲ್ಲವೂ ಫಲಾಪೇಕ್ಷೆಯಿಂದ ಕರ್ಮಗಳನ್ನು ಮಾಡುವವರಿಗೆ ಮಾತ್ರ ಮೀಸಲು. ಇದರಿಂದ ಫಲಾಪೇಕ್ಷಾರಹಿತವಾದ (ನಿಷ್ಕಾಮವಾದ) ಕರ್ಮ ಎಂತಹ ಮಹಿಮೆಯಿಂದ ಕೂಡಿರುವುದೋ, ಭಗವಂತನಿಗೆ ಅದರೆಡೆಗೆ ಎಷ್ಟು ಪ್ರೀತಿಯೋ ಸ್ಪಷ್ಟವಾಗುತ್ತದೆ.

ಪ್ರ : ಕರ್ಮಫಲಗಳು ಎಷ್ಟು ವಿಧ? ಅವು ಯಾವುವು?

ಉ : ಮೂರು ವಿಧಗಳು (೧) ಇಷ್ಟವಾದುದು (ಸುಖಕರವಾದ ಸ್ವರ್ಗಾದಿಗಳು) (೨) ಅನಿಷ್ಟವಾದದ್ದು (ದುಃಖಕರವಾದ ನರಕ ನೀಚ ಜನ್ಮಾದಿಗಳು) (೩) ಇಷ್ಟಾನಿಷ್ಟ ಮಿಶ್ರವಾದುದು (ಸುಖದುಃಖ ಗಳೆರಡನ್ನೂ ಉಳ್ಳ ಮಾನವ ಜನ್ಮ)

ಪ್ರ : ಈ ಮೂರು ಫಲಗಳು ಯಾರಿಗೆ ಉಂಟಾಗುತ್ತವೆ?

ಉ : ಕರ್ಮಫಲಗಳನ್ನು ಬಿಡದೆ ಕರ್ಮಗಳನ್ನು ಫಲಾಸಕ್ತಿಯಿಂದ ಮಾಡುವವರಿಗೆ ಒದಗುವುವು.

ಪ್ರ : ಯಾವಾಗ ಉಂಟಾಗುತ್ತವೆ?

ಉ : ಮರಣಾನಂತರ(ಪ್ರೇತ್ಯ)

ಪ್ರ : ಈ ಕರ್ಮಫಲಗಳು ಯಾರಿಗೆ ಉಂಟಾಗುವುದಿಲ್ಲ?

ಉ : ಕರ್ಮಫಲವನ್ನು ತ್ಯಜಿಸಿ ಕರ್ಮಗಳನ್ನಾಚರಿಸುವವರಿಗೆ ಅಂದರೆ ನಿಷ್ಕಾಮ ಕರ್ಮಾಚರಣೆಗಳಿಗೆ. (ಅವರಿಗೆ ಚಿತ್ತಶುದ್ಧಿ ದ್ವಾರ ಮೋಕ್ಷ ಲಭಿಸುವುದಾದ್ದರಿಂದ).

**ಅ||** ಕರ್ಮಗಳು ನೆರವೇರಲು ಐದು ಕಾರಣಗಳನ್ನು ಹೇಳಲಾಗಿದೆ.

**೧೩ ಪಂಚೈತಾನಿ ಮಹಾಬಾಹೋ ಕಾರಣಾನಿ ನಿಬೋಧ ಮೇ**
**ಸಾಂಖ್ಯೇ ಕೃತಾಂತೇ ಪ್ರೋಕ್ತಾನಿ ಸಿದ್ಧಯೇ ಸರ್ವಕರ್ಮಣಾಮ್**

**ಅರ್ಥ:** ಮಹಾಬಾಹೋ=ದೊಡ್ಡಬಾಹುಗಳುಳ್ಳ ಅರ್ಜುನಾ! ಸರ್ವ ಕರ್ಮಣಾಂ=ಸಮಸ್ತ ಕರ್ಮಗಳ; ಸಿದ್ಧಯೇ=ನೆರವೇರಿಸಲು (ಸಂಪೂರ್ತಿಗಾಗಿ); ಕೃತಾಂತೇ=ಕರ್ಮಕಾಂಡದ ಅಂತ್ಯವನ್ನು ತಿಳಿಸುವ (ಕರ್ಮಬಂಧನವನ್ನು ನಶಿಸುವಂತೆ ಮಾಡುವ, ಇಲ್ಲವೆ ಕರ್ಮಫಲ ಸಮಾಪ್ತಿಯುಳ್ಳ); ಸಾಂಖ್ಯೇ= ಸಾಂಖ್ಯ ಶಾಸ್ತ್ರದಲ್ಲಿ (ವೇದಾಂತ ಶಾಸ್ತ್ರಗಳಲ್ಲಿ); ಪ್ರೋಕ್ತಾನಿ=ಹೇಳಲ್ಪಟ್ಟ; ಏತಾನಿ=ಈ; ಪಂಚ ಕಾರಣಾನಿ=ಈ ಐದು ಕಾರಣಗಳನ್ನು; ಮೇ (ವಚನಾತ್)=ನನ್ನ ವಾಕ್ಯಗಳಿಂದ; ನಿಬೋಧ=ತಿಳಿದುಕೊಳ್ಳುವುದು.

**ತಾ||** ಉದ್ದ ಬಾಹುಗಳುಳ್ಳ ಅರ್ಜುನಾ! ಸಮಸ್ತ ಕರ್ಮಗಳು ಪರಿಸಮಾಪ್ತಿ ಹೊಂದುವ ಹಾಗು ಕರ್ಮಕಾಂಡದ ಅಂತ್ಯವನ್ನು ತಿಳಿಸುವ ಸಾಂಖ್ಯ ಶಾಸ್ತ್ರದಲ್ಲಿ ಹೇಳಿದ ಈ ಐದು ಕಾರಣಗಳನ್ನು ನನ್ನಿಂದ ತಿಳಿಯುವುದು.

**ವ್ಯಾಖ್ಯೆ:** ಕೃತ + ಅಂತೇ=ಕೃತಾಂತೇ, ಸಾಂಖ್ಯೇ-ಅಂದರೆ ಕರ್ಮಕಾಂಡದ ಅಂತ್ಯವನ್ನು ಬೋಧಿಸುವ ವೇದಾಂತಶಾಸ್ತ್ರದಲ್ಲಿ-ಎಂದರ್ಥ. ವೇದಾಂತದಲ್ಲಿ ಆತ್ಮಸ್ವರೂಪ ನಿರ್ಣಯಿಸಲ್ಪಟ್ಟಾಗ ಅದು ಪ್ರಕೃತಿಗೆ ಪರವಾಗಿ, ಅತೀತವಾಗಿ ರುವುದೆಂದು, ಸಮಸ್ತ ಕರ್ಮಗಳು ಪ್ರಕೃತಿಯಿಂದಲೇ ನಡೆಯುತ್ತಿವೆಯೆಂದು, ಆತ್ಮ ಸಾಕ್ಷಿಯಾಗಿ, ನಿಷ್ಕ್ರಿಯವಾಗಿ ಇರುವುದೆಂದು ತಿಳಿಸಲಾಗಿದೆ. ಆದ್ದರಿಂದಲೇ ಸಮಸ್ತಕರ್ಮಗಳನ್ನು ಅಂತ್ಯಗೊಳಿಸುವ ವೇದಾಂತ ಶಾಸ್ತ್ರದಲ್ಲಿ ಎಂದು ಇಲ್ಲಿ ಹೇಳಲಾಗಿದೆ. ಮತ್ತೆ **'ಸರ್ವಂ ಕರ್ಮಾಖಿಲಂ ಪಾರ್ಥ ಜ್ಞಾನೇ ಪರಿಸಮಾಪ್ಯತೇ'** ಎಂದು ಹೇಳಲ್ಪಟ್ಟಿರುವುದರಿಂದ ಕರ್ಮಗಳೆಲ್ಲವೂ ಜ್ಞಾನದಲ್ಲಿ ಲಯಹೊಂದಿ ಪರಿಸಮಾಪ್ತಿಗೊಳ್ಳುತ್ತಿವೆ. ಏಕೆಂದರೆ, ಆ ಚೈತನ್ಯ (ಪ್ರಜ್ಞಾರೂಪ) ಆತ್ಮಸ್ಥಿತಿಯಲ್ಲಿ ಶರೀರ, ಇಂದ್ರಿಯ, ಮನಸ್ಸಂಕಲ್ಪಾದಿಗಳು ಇರುವುದಿಲ್ಲ ವಾದ್ದರಿಂದ ಅಲ್ಲಿ ಕರ್ಮವಿರುವುದಿಲ್ಲ. ಕರ್ಮಗಳನ್ನು ದಾಟಿ ಹೋದ ಸ್ಥಿತಿ ಅದು. ಆದ್ದರಿಂದಲೇ ಇಲ್ಲಿ ಜ್ಞಾನ ಹಾಗೂ ವೇದಾಂತ ಶಾಸ್ತ್ರವನ್ನು ಕರ್ಮದ ಅಂತ್ಯ (ಕೃತಾಂತ)ವೆಂದು ಹೇಳಲಾಗಿದೆ.

ಪ್ರ : ಯಾವ ಕರ್ಮ ನಡೆಯಬೇಕಾದರೂ ಎಷ್ಟು ಕಾರಣಗಳಿರಬೇಕು?

ಉ : ಐದು

ಪ್ರ : ಅವುಗಳನ್ನು ಕುರಿತು ಎಲ್ಲಿ ತಿಳಿಸಲಾಗಿದೆ?

ಉ : ಕರ್ಮ ಅಂತ್ಯವಾಗುವ ಜ್ಞಾನವನ್ನು ಬೋಧಿಸುವ ಸಾಂಖ್ಯ (ವೇದಾಂತ) ಶಾಸ್ತ್ರದಲ್ಲಿ ತಿಳಿಸಲಾಗಿದೆ.

**ಅ||** ಆ ಐದು ಕಾರಣಗಳು ಯಾವುವು ಎನ್ನುವುದನ್ನು ಇಲ್ಲಿ ತಿಳಿಸಲಾಗಿದೆ-

**೧೪ ಅಧಿಷ್ಠಾನಂ ತಥಾ ಕರ್ತಾ ಕರಣಂ ಚ ಪೃಥಗ್ವಿಧಂ**
**ವಿವಿಧಾಶ್ಚ ಪೃಥಕ್ಚೇಷ್ಟಾ ದೈವಂ ಚೈವಾತ್ರ ಪಂಚಮಮ್**

**ಅರ್ಥ:** ಅತ್ರ=ಈ ಕರ್ಮಾಚರಣೆ ವಿಷಯವಾಗಿ; ಅಧಿಷ್ಠಾನಂ=ಶರೀರ; ತಥಾ=ಹಾಗೆಯೇ; ಕರ್ತಾ=ಕರ್ತೃ; ಪೃಥಗ್ವಿಧಂ=ಬೇರೆ ಬೇರೆ ವಿಧಗಳಾದ; ಕರಣಂ ಚ=ಇಂದ್ರಿಯಗಳು; ವಿವಿಧಾಃ=ನಾನಾ ವಿಧಗಳಾದ; ಪೃಥಕ್=ಬೇರೆ ಬೇರೆಯಾಗಿರುವ; ಚೇಷ್ಟಾಃ ಚ=ಕ್ರಿಯೆಗಳು; ಪಂಚಮಂ=ಐದನೆಯದಾದ; ದೈವಂ ಚ=ದೈವವು; (ಭವಂತಿ=ಕಾರಣಗಳಾಗಿವೆ.)

**ತಾ||** ಈ ಕರ್ಮಾಚರಣೆ ವಿಷಯದಲ್ಲಿ (೧) ಶರೀರ (೨) ಕರ್ತೃ (೩) ವಿವಿಧ ಇಂದ್ರಿಯಗಳು (೪) ಹಲವು ವಿಧಗಳಿಂದ ಬೇರೆ ಬೇರೆಯಾಗಿರುವ ಕ್ರಿಯೆಗಳು (ವ್ಯಾಪಾರಗಳು) (೫) ದೈವ ಕಾರಣಗಳಾಗಿವೆ.

**ವ್ಯಾಖ್ಯೆ:** ಕರಣಗಳೆಂದರೆ ೧೨ (ಪಂಚ ಕರ್ಮೇಂದ್ರಿಯಗಳು, ಪಂಚ ಜ್ಞಾನೇಂದ್ರಿಯಗಳು, ಮನಸ್ಸು, ಬುದ್ಧಿ. ಚೇಷ್ಟೆಗಳೆಂದರೆ ಅವುಗಳ ವ್ಯಾಪಾರಗಳು. ಇಲ್ಲಿ 'ದೈವ'ವೆಂದರೆ ಆಯಾ ಇಂದ್ರಿಯಾದಿಗಳ ಅಧಿಷ್ಠಾನ ದೇವತೆಗಳೆಂದಾಗಲಿ ಇಲ್ಲವೆ ಪೂರ್ವ ಜನ್ಮಸಂಸ್ಕಾರಗಳು (ಅದೃಷ್ಟ ಪುಣ್ಯ ಪಾಪಗಳು) ಎಂದು ಹೇಳಬಹುದು.

ಪ್ರ : ಯಾವ ಕರ್ಮ ನಡೆಯಬೇಕಾದರೂ ಅದಕ್ಕೆ ಬೇಕಾದ ಐದು ಕಾರಣಗಳಾವುವು?

ಉ : ೧) ಶರೀರ ೨) ಕರ್ತೃ ೩) ವಿವಿಧವಾದ ಇಂದ್ರಿಯಗಳು ೪) ಇಂದ್ರಿಯಗಳ ವ್ಯಾಪಾರಗಳು ೫) ದೈವ.

**ಅ||** ಯಾವ ಕರ್ಮ ಮಾಡಿದರೂ ಈ ಐದೂ ಅವುಗಳಿಗೆ ಕಾರಣವೆಂದು ಹೇಳಲಾಗಿದೆ-

**೧೫ ಶರೀರವಾಙ್ಮನೋಭಿರ್ಯತ್ಕರ್ಮ ಪ್ರಾರಭತೇ ನರಃ**
**ನ್ಯಾಯಂ ವಾ ವಿಪರೀತಂ ವಾ ಪಂಚೈತೇ ತಸ್ಯ ಹೇತವಃ**

**ಅರ್ಥ:** ನರಃ=ಮನುಜನು; ಶರೀರವಾಙ್ಮನೋಭಿಃ=ಶರೀರವು, ವಾಕ್ಕು, ಮನಸ್ಸು-ಎನ್ನುವುವುಗಳಿಂದ; ನ್ಯಾಯಂ ವಾ=ನ್ಯಾಯವಾದದ್ದಾಗಿ (ಶಾಸ್ತ್ರೀಯ ವಾದಂತಹ); ವಿಪರೀತಂ ವಾ=ಅನ್ಯಾಯವಾದಂತಹ (ಅಶಾಸ್ತ್ರೀಯ ವಾದಂತಹ); ಯತ್ಕರ್ಮ=ಯಾವ ಕರ್ಮವನ್ನಾದರೂ; ಪ್ರಾರಭತೇ=ಆರಂಭಿ ಸುತ್ತಿದ್ದಾನೋ; ತಸ್ಯ=ಆ ಕರ್ಮಕ್ಕೆ; ಏತೇ ಪಂಚ=ಈ ಐದೂ; ಹೇತವಃ=ಕಾರಣಗಳಾಗಿವೆ.

**ತಾ||** ಮನುಜನು ಶರೀರ, ವಾಕ್ಕು, ಮನಸ್ಸು ಎನ್ನುವುಗಳಿಂದ ನ್ಯಾಯವಾದಂತಹ (ಶಾಸ್ತ್ರೀಯವಾದಂತಹ) ಹಾಗೂ ಅನ್ಯಾಯವಾದಂತಹ (ಅಶಾಸ್ತ್ರೀಯ ವಾದಂತಹ) ಯಾವ ಕರ್ಮಗಳನ್ನು ಪ್ರಾರಂಭಿಸುತ್ತಿದ್ದಾನೋ ಅವೆಲ್ಲವುಗಳಿಗೆ ಈ ಐದೂ ಕಾರಣಗಳಾಗಿವೆ.

**ಅ||** ಸಾಕ್ಷಿಯಾದ ಆತ್ಮನನ್ನು ಕರ್ತನೆಂದು ತಿಳಿಯುವವನು ಅವಿವೇಕಿ ಎನ್ನುವುದನ್ನು ಹೇಳಲಾಗಿದೆ-

**೧೬ ತತ್ರೈವಂ ಸತಿ ಕರ್ತಾರಮಾತ್ಮಾನಂ ಕೇವಲಂ ತು ಯಃ**
**ಪಶ್ಯತ್ಯಕೃತಬುದ್ಧಿತ್ವಾನ್ನ ಸ ಪಶ್ಯತಿ ದುರ್ಮತಿಃ**

**ಅರ್ಥ:** ತತ್ರ=ಆಕರ್ಮದ ವಿಷಯಗಳು; ಏವಂ ಸತಿ=ಹೀಗಿರುವಾಗ (ಮೇಲೆ ತಿಳಿಸಿದ ಐದು ಕಾರಣಗಳಿಂದ ಕೂಡಿರುವಾಗ); ಯಃ=ಯಾವನು; ಅಕೃತ ಬುದ್ಧಿತ್ವಾತ್=(ಶಾಸ್ತ್ರಾದಿಗಳಿಂದ) ಸಂಸ್ಕರಿಸಲ್ಪಡದ ಬುದ್ಧಿಯಿಂದ; ಕೇವಲಂ ಆತ್ಮಾನಂ ತು=ನಿರುಪಾಧಿಯು, ಸಂಗರಹಿತನಾದ ಆತ್ಮನು; ಕರ್ತಾರಂ= ಕರ್ತನೆಂದು;, ಪಶ್ಯತಿ=ನೋಡುತ್ತಿದ್ದಾನೋ; ಸಃ ದುರ್ಮತಿಃ= ಅಂತಹ ದುರ್ಬುದ್ಧಿಯುಳ್ಳವನು (ಅವಿವೇಕಿ); ನ ಪಶ್ಯತಿ=ಕರ್ಮದ ಸ್ವರೂಪವನ್ನಾಗಲಿ, ಆತ್ಮದ ಸ್ವರೂಪವನ್ನಾಗಲಿ ತಿಳಿಯದೇ ಇರುವನು.

**ತಾ||** ಕರ್ಮದ ವಿಷಯ ಹೀಗಿರಲು (ಮೇಲೆ ತಿಳಿಸಿದ ಐದು ಕಾರಣಗಳಿಂದ ಕೂಡಿರಲು) ಯಾವನು ಸಂಸ್ಕರಿಸಲ್ಪಡದ ಬುದ್ಧಿಯಿಂದ ನಿರುಪಾಧಿಕನಾದ ಆತ್ಮನನ್ನು ಕರ್ತನೆಂದು ತಿಳಿಯುತ್ತಾನೋ, ಅಂತಹ ಅವಿವೇಕಿ ಕರ್ಮದ, ಆತ್ಮದ ವಾಸ್ತವ ಸ್ವರೂಪವನ್ನು ತಿಳಿಯದವನಾಗಿದ್ದಾನೆ.

**ವ್ಯಾಖ್ಯೆ:** ಕರ್ಮದಲ್ಲಿ ಆತ್ಮ ಕರ್ತನಲ್ಲ. ಮೇಲೆ ತಿಳಿಸಿದ ಐದು ಕಾರಣಗಳು ಮಾತ್ರವೇ ಕರ್ತರು. ಆತ್ಮ ಸಾಕ್ಷಿ, ಕೇವಲನು, ನಿರುಪಾಧಿಯು, ಸಂಗರಹಿತನು. ಆದರೂ ಕರ್ತೃತ್ವವನ್ನು ಆತ್ಮದ ಮೇಲೆ ಆರೋಪಿಸುವವನು ವಿವೇಕಹೀನನೇ ಸರಿ. ಆತನು ಪರಮಾತ್ಮ ತತ್ತ್ವವನ್ನು ತಿಳಿದಿರುವುದಿಲ್ಲ. ಶ್ರವಣಾದಿ ಸಂಸ್ಕಾರ ಇಲ್ಲದ ಬುದ್ಧಿಯುಳ್ಳವನು - ದುರ್ಮತಿ. ಅಂಸಗವಾದ ಆತ್ಮನನ್ನು ಕರ್ತನನ್ನಾಗಿ ನೋಡುವವನು ನೇತ್ರಗಳಿರುವ ಕುರುಡನು. ಏಕೆಂದರೆ ಆತನು ಸತ್ಯವನ್ನು ನೋಡುವುದಿಲ್ಲ. ಆತ್ಮಕ್ಕೆ ಕರ್ತೃತ್ವವನ್ನು ಆರೋಪಿಸುವುದು ಅಜ್ಞಾನವೇ ಸರಿ. ಆದ್ದರಿಂದ ಅಂತಹವರು ಕುರುಡರೇ. ಇದಕ್ಕೆ ಕಾರಣ ಅವರ ಬುದ್ಧಿಗೆ ಸರಿಯಾದ ಸಂಸ್ಕಾರವಿಲ್ಲದಿರುವುದು (ಅಕೃತ ಬುದ್ಧಿತ್ವಾತ್). ಎಷ್ಟು ಪಾಂಡಿತ್ಯ, ಲೌಕಿಕ

ವಿದ್ಯೆಗಳನ್ನು ಹೊಂದಿದ್ದರೂ ಸತ್ಯ ದೃಷ್ಟಿ ಹಾಗು ಆತ್ಮ ಜ್ಞಾನವಿಲ್ಲದಿದ್ದರೆ ಅಂತಹವರು ಅಂಧರೇ ಎನಿಸಿಕೊಳ್ಳುವರು. ಏಕೆಂದರೆ ಅವರು ಜ್ಞಾನ ನೇತ್ರವಿಹೀನರು. ಅವರು ಎಷ್ಟು ದೊಡ್ಡವರಾದರೂ ಕತ್ತಲಿನಲ್ಲಿದ್ದು ವಾಸ್ತವವನ್ನು ಗ್ರಹಿಸಲು ಅಶಕ್ಯರಾದವರು.

ಆದ್ದರಿಂದ ಎಷ್ಟು ಪ್ರಾಪಂಚಿಕ ವಿವೇಕವಿದ್ದರೂ ಆತ್ಮ ಜ್ಞಾನವಿಲ್ಲದವರು ದುರ್ಮತಿಗಳೇ ಸರಿ. ಅವರು ಕಣ್ಣಿದ್ದೂ ಅಂಧರಾಗಿರುವುದರಿಂದ ಪ್ರಪಂಚದ ದೃಷ್ಟಿಯಲ್ಲಿ ಕೀರ್ತಿ, ಪ್ರತಿಷ್ಠೆಗಳನ್ನು ಸಂಪಾದಿಸಿದ್ದರೂ ಪರಮಾರ್ಥ ದೃಷ್ಟಿಯಲ್ಲಿ ಗಣನೀಯರಲ್ಲ. ಆದ್ದರಿಂದ ಜನರು ಆತ್ಮ ತತ್ತ್ವವನ್ನು ತಿಳಿದು ಮಾನವರಿಗೇ ಅಲ್ಲದೆ ಭಗವಂತನಿಗೂ ಪ್ರೀತಿ ಪಾತ್ರರಾಗಬೇಕು.

ದೋಷ- ಅಸಂಗವಾದ ಆತ್ಮವನ್ನು ಕರ್ತನನ್ನಾಗಿ ಭಾವಿಸುವುದು

ದೋಷಕಾರಣ- ಬುದ್ಧಿ, ಶ್ರವಣಾದಿಗಳಿಂದ ಸಂಸ್ಕರಿಸಲ್ಪಡದೆ ಇರುವುದರಿಂದ

ದೋಷ ಫಲ- ಅಜ್ಞಾನರೂಪ ಅಂಧತ್ವ (ಸತ್ಯವನ್ನು ನೋಡದೆ ಇರುವುದು)

ಪ್ರ : ಆತ್ಮ ಎಂತಹದು?

ಉ : ಕೇವಲವಾಗಿ, ಸಾಕ್ಷಿಯಾಗಿ, ಅಸಂಗವಾಗಿರುವುದು.

ಪ್ರ : ಅಂತಹ ನಿಷ್ಕ್ರಿಯ, ಅಸಂಗಾತ್ಮನನ್ನು ಕರ್ತನೆಂದು ಮನುಷ್ಯನು ಏಕೆ ಹೇಳುವನು?

ಉ : ಅಜ್ಞಾನದಿಂದ. ಬುದ್ಧಿಗೆ ಇನ್ನೂ ಶ್ರವಣಾದಿ ಸಂಸ್ಕಾರ ಗಳಿಲ್ಲದಿರುವುದರಿಂದ.

ಪ್ರ : ಆದ್ದರಿಂದ ಆತನ ಸ್ಥಿತಿ ಹೇಗಿದೆ?

ಉ : ಕುರುಡನ ಸ್ಥಿತಿಯಂತಿದೆ - ಸತ್ಯವನ್ನು ಆತನು ನೋಡುತ್ತಿಲ್ಲ.

**ಅ||** ಅಹಂಕಾರ, ಕರ್ತೃತ್ವ ಬುದ್ಧಿಯಿಲ್ಲದವನು ಕರ್ಮಗಳಿಂದ ಬಂಧಿತ ನಾಗುವುದಿಲ್ಲವೆಂದು ಹೇಳಲಾಗಿದೆ-

**೧೭ ಯಸ್ಯ ನಾಹಂಕೃತೋ ಭಾವೋ ಬುದ್ಧಿರ್ಯಸ್ಯ ನ ಲಿಪ್ಯತೇ**
**ಹತ್ವಾಪಿ ಸ ಇಮಾನ್ ಲೋಕಾನ್ನ ಹಂತಿ ನ ನಿಬಧ್ಯತೇ**

**ಅರ್ಥ:** ಯಸ್ಯ=ಯಾರಿಗೆ; ಅಹಂಕೃತಃ ಭಾವಃ='ನಾನು ಕರ್ತ' ಎನ್ನುವ ಭಾವ; ನ=ಇಲ್ಲವೋ; ಯಸ್ಯ=ಯಾರ; ಬುದ್ಧಿಃ=ಬುದ್ಧಿ (ಅಂತಃಕರಣ); ನ ಲಿಪ್ಯತೇ=ವಿಷಯಗಳನ್ನು, ಕರ್ಮಗಳನ್ನು ತಾಕುವುದಿಲ್ಲವೋ; ಸಃ=ಆತನು; ಇಮಾನ್ ಲೋಕಾನ್=ಈ ಪ್ರಾಣಿಗಳೆಲ್ಲವನ್ನೂ; ಹತ್ವಾ ಅಪಿ=ವಧಿಸಿದರೂ; ನ ಹಂತಿ=ವಧಿಸುತ್ತಿಲ್ಲ; ನ ನಿಬಧ್ಯತೇ=(ಕರ್ಮಗಳಿಂದ, ಪಾಪಗಳಿಂದ) ಬಂಧಿಸಲ್ಪಡುತ್ತಿಲ್ಲ.

**ತಾ||** ಯಾವನಿಗೆ 'ನಾನು ಕರ್ತ' ಎನ್ನುವ ಭಾವನೆಯಿಲ್ಲವೋ, ಆತನು ಈ ಪ್ರಾಣಿಗಳನ್ನೆಲ್ಲಾ ವಧಿಸಿದರೂ ವಾಸ್ತವವಾಗಿ ಏನನ್ನೂ ವಧಿಸುತ್ತಿಲ್ಲ. ಮತ್ತೆ ಆತನು (ಕರ್ಮ ಪಾಪಗಳಿಂದ) ಬಂಧಿಸಲ್ಪಡುವುದಿಲ್ಲ.

**ವ್ಯಾಖ್ಯೆ:** ಅಹಂಕಾರವಾಗಲಿ, ನಾನು ಕರ್ತನೆಂಬ ಭಾವನೆಯಾಗಲಿ ಇಲ್ಲದೆ, ವಿಷಯಗಳಲ್ಲಾಗಲಿ, ಕರ್ಮಗಳಲ್ಲಾಗಲಿ ಅಸಕ್ತನಾಗಿರುವವನು ಈ ಪ್ರಾಣಿ ಗಳನ್ನೆಲ್ಲಾ ವಧಿಸಿದರೂ ವಧಿಸದೆ ಇದ್ದಂತೆ ಎಂದೂ, ಪಾಪಕ್ಕೆ ಆತನು ಸಿಕ್ಕಿ ಹಾಕಿಕೊಳ್ಳುವುದಿಲ್ಲವೆಂದು ಹೇಳಲ್ಪಟ್ಟಿದೆ. ಈ ಶ್ಲೋಕಾರ್ಥವನ್ನು ಎಚ್ಚರಿಕೆಯಿಂದ ಗಮನಿಸಬೇಕು. ಇಲ್ಲದಿದ್ದರೆ ಮನುಜನು ಘೋರಪಾತಕದಲ್ಲಿ ಬೀಳುವ ಸಂಭವವಿದೆ.

ಕರ್ಮಬಂಧನಕ್ಕೆ ಕಾರಣ ಕರ್ಮಗಳಲ್ಲಿ ಕರ್ತೃತ್ವ ಬುದ್ಧಿಯನ್ನು ಹೊಂದಿರುವುದು ಹಾಗು ಬುದ್ಧಿಯು ಆಯಾ ವಿಷಯಗಳಿಗೆ, ಕರ್ಮಗಳಿಗೆ ಅಂಟಿಕೊಳ್ಳುವುದೇ ಆಗಿದೆ. ಕರ್ತೃತ್ವ ಬುದ್ಧಿಯಿಲ್ಲದೆ ಕರ್ಮ ಮಾಡುವವನಿಗೆ, ವಿಷಯಗಳಲ್ಲಿ ಬುದ್ಧಿಸಕ್ತವಾಗದೆ (ಸಂಗಹೊಂದದೆ) ಕರ್ಮ ಮಾಡುವವನಿಗೆ, ಕರ್ಮಜನಿತ ಸುಖದುಃಖಗಳು, ಪುಣ್ಯ ಪಾಪಗಳು ಅಂಟುವುದಿಲ್ಲ. ಆ ಸತ್ಯವನ್ನೇ ಇಲ್ಲಿ ಹೇಳಲಾಗಿದೆ. ಅಷ್ಟೇ ಅಲ್ಲದೆ ಪ್ರಾಣಿಗಳನ್ನು ವಧಿಸುವುದು ಅಥವ ಸಾಯಿಸುವುದು ಯುಕ್ತವೆಂದು ಇಲ್ಲಿ ಬೋಧಿಸಲಾಗಿಲ್ಲ. ಮೇಲಾಗಿ ಸಮಸ್ತವನ್ನು ಆತ್ಮರೂಪವಾಗಿ ವೀಕ್ಷಿಸುವವನು, ಕರ್ತೃತ್ವವಿಲ್ಲದವನು, ಅಸಂಗವಾಗಿರುವವನು, ತಾನು ತನ್ನ ಮನಸ್ಸಲ್ಲವೆಂದು ತಿಳಿಯುವವನು, ಆತ್ಮದಲ್ಲಿಯೇ ಸ್ಥಿತಿ ಹೊಂದಿರುವವನಾದ್ದರಿಂದ ಅಂತಹವನು ಸಮಸ್ತ ಪ್ರಾಣಿಗಳಲ್ಲಿ ತನ್ನ ಆತ್ಮವನ್ನೇ ನೋಡುತ್ತಾನಾದ್ದರಿಂದ ಪ್ರಾಣಿಗಳಿಗೆ ಹೇಗೆ ಹಾನಿಯುಂಟುಮಾಡಬಲ್ಲನು? ಆದ್ದರಿಂದ ಅಂತಹ ಅಸಂಗ ಭಾವವಿರುವವನು, ಆತ್ಮಸ್ಥಿತನು ಜನರಿಗೆ ಉಪಕಾರ ಮಾಡುವವನೇ ಹೊರತು ಅಪಕಾರ ಮಾಡುವುದಿಲ್ಲ. ಪ್ರಾಣಿಗಳನ್ನು ಹಿಂಸಿಸುವುದಿಲ್ಲ. ಒಂದು ವೇಳೆ ಹಿಂಸಿಸಿದರೆ ಆತನಿಗೆ ಇನ್ನೂ ಆತ್ಮಜ್ಞಾನವುಂಟಾ ಗಿಲ್ಲವೆಂದು ಊಹಿಸಬೇಕು.

ಮನುಜನು ವಾಸ್ತವವಾಗಿ ದೇಹವಾಗಲಿ, ಮನಸ್ಸಾಗಲಿ ಅಲ್ಲ; ಆತ್ಮವೇ. ಕರ್ತೃತ್ವ, ಅಹಂಭಾವವಿಲ್ಲದವನು. ಆತ್ಮದಲ್ಲಿಯೇ ಸ್ಥಿತಿ ಹೊಂದಿರುವವನು. ಅಂತಹವರು ತಮ್ಮ ಬುದ್ಧಿಯಿಂದ ಮಾಡಲ್ಪಡುವ ಕರ್ಮಗಳೊಡನೆ ಹಾಗೂ ಅವುಗಳಿಂದ ಉಂಟಾಗುವ ಬಂಧಗಳೊಡನೆ ಯಾವ ಸಂಬಂಧವನ್ನೂ ಹೊಂದಿರುವುದಿಲ್ಲ. ಆದ್ದರಿಂದ ಆತನು ಯಾವುದೋ ಒಂದು ಪ್ರಾಣಿಯನ್ನೇ ಅಲ್ಲ, ಎಲ್ಲಾ ಪ್ರಾಣಿಗಳನ್ನು ಸಾಯಿಸಿದರೂ ಬುದ್ಧಿಯಲ್ಲಿ ಸಂಗ, ಕರ್ತೃತ್ವ ವಿಲ್ಲದಿರುವುದರಿಂದ ಆತನು ಸಾಯಿಸಿದಂತೆ ಆಗುವುದಿಲ್ಲ. ಮತ್ತೆ ಆ ವಧೆಯಿಂದ ಉಂಟಾಗುವ ಪಾಪ ಹಾಗೂ ಬಂಧದಿಂದ ಲೇಪಗೊಳ್ಳುವುದಿಲ್ಲ. ಇಲ್ಲಿ ಆತ್ಮ ಹಾಗು ಆತ್ಮ ಸ್ಥಿತಿಯನ್ನು ಹೊಂದಿದವನ ನಿರ್ಲೇಪತೆಯನ್ನು ಕುರಿತ ಸಿದ್ಧಾಂತವನ್ನು, ಸತ್ಯವನ್ನು ಹೇಳಲಾಗಿದೆಯೇ ಆಗಲಿ ಹಿಂಸಾ ಪ್ರೇರಣೆಯನ್ನಲ್ಲ. ವಾಸ್ತವವಾಗಿ ಅಂತಹ ನಿರ್ಲೇಪತೆಯನ್ನು ಹೊಂದಿದವನು ಆತ್ಮ ಸ್ಥಿತಿಯಲ್ಲಿರುವವನು, ನಿರಂತರವಾಗಿ ಪ್ರಾಣಿಕೋಟಿಗೆ ಮೇಲು ಮಾಡುವನೇ ಆಗಲಿ ಅವುಗಳಿಗೆ ಹಿಂಸೆಯುಂಟುಮಾಡುವುದಿಲ್ಲ. ಈ ವಿಷಯವನ್ನು ಮುಮುಕ್ಷುಗಳು ಮುಖ್ಯವಾಗಿ ಗಮನಿಸಬೇಕು.

ಪುಣ್ಯ ಪಾಪಗಳಿಗೆ ಕಾರಣ ಕರ್ತೃತ್ವ, ಸಂಗ, ಆಸಕ್ತಿ; ಅಂದರೆ ಜೀವಿಯು ತನ್ನ ಆತ್ಮ ಸ್ಥಾನವನ್ನು ಬಿಟ್ಟು ಇಳಿದು ಬಂದು ದೃಶ್ಯ, ಬುದ್ಧಿಯೊಡನೆ ಕೂಡಿ 'ನಾನು ಮಾಡುತ್ತಿದ್ದೇನೆ' ಎಂದು ಭಾವಿಸುವುದೇ ಆಗಿದೆ. ಆದರೆ ಯಾವಾಗ ಅಂತಹ ಸಂಗ (ಆಸಕ್ತಿ) ಕರ್ತೃತ್ವ ಭಾವ ಇಲ್ಲವೋ ಆಗ ಪುಣ್ಯ ಪಾಪ ಗಳಿಂದಾಗಲಿ, ಸುಖದುಃಖಗಳಿಂದಾಗಲಿ, ಬಂಧ ಮೋಕ್ಷಗಳಿಂದಾಗಲಿ ಮನುಜನಿಗೆ ಸಂಬಂಧವಿರುವುದಿಲ್ಲ. ಆದ್ದರಿಂದಲೇ ಅಂತಹವನು ಎಲ್ಲರನ್ನು ವಧಿಸಿದರೂ, ಹಂತಕನೆಂದೆನಿಸಿಕೊಳ್ಳುವುದಿಲ್ಲ ಎಂದು ಹೇಳಲು ಕಾರಣ. 'ಎಳ್ಳಷ್ಟು ಪಾಪವೂ' ಆತನಿಗೆ ಸೋಂಕುವುದಿಲ್ಲ - ಎನ್ನುವುದಕ್ಕೆ ನಿದರ್ಶನವಾಗಿ 'ಆತನು ಒಂದು ವೇಳೆ ಎಲ್ಲರನ್ನು ವಧಿಸಿದರೂ, ವಧಿಸದವನೇ ಆಗುವನೆಂದು' ಹೇಳಲ್ಪಟ್ಟಿದೆಯೇ ಹೊರತು ವಧಿಸಬಹುದೆಂದು ಇಲ್ಲಿ ಬೋಧಿಸಲ್ಪಟ್ಟಿಲ್ಲ.

ಮತ್ತೆ ಅರ್ಜುನನು ಕ್ಷತ್ರಿಯನು, ದುಷ್ಟ ಶಿಕ್ಷಣ, ಪ್ರಭುಗಳ ಧರ್ಮವನ್ನು ಕಾಪಾಡುವುದು ಆತನ ಕರ್ತವ್ಯ. ಕೌರವರು ಅಧರ್ಮವನ್ನು ಪಾಲಿಸಿದ ರಾದ್ದರಿಂದ ದುಷ್ಟರಾದರು. "ಆದ್ದರಿಂದ ಅಂತಹವರನ್ನು ಓ ಅರ್ಜುನಾ! ಅಂಸಗ ಬುದ್ಧಿಯಿಂದ ನಿರಹಂಕಾರನಾಗಿ ನೀನು ವಧಿಸಿದರೂ ವಧಿಸದಂತೆಯೇ ಸರಿ" ಎಂದು ಭಗವಂತನು ಅರ್ಜುನನಿಗೆ ತಿಳಿಸುತ್ತಿದ್ದಾನೆಂದು ಭಾವಿಸ ಬಹುದು. ಬುದ್ಧಿ, ಅಹಂಭಾವವನ್ನು ದಾಟಿ ಆತ್ಮದಲ್ಲಿ ಸ್ಥಿರವಾಗಿರುವವನಿಗೆ ಆ ಬುದ್ಧಿಯಿಂದ ಏನು ಮಾಡಿದರೂ ಮಾಡದಂತೆಯೇ ಆಗುವುದು! ಆದರೆ ಅಂತಹ ಸ್ಥಿತಿಯಲ್ಲಿರುವವರು ಅಸಭ್ಯ, ಅಧರ್ಮ, ಹಿಂಸೆ, ಪೀಡಾಕರವಾದ ಕ್ರಿಯೆಗಳನ್ನು ಮಾಡುವುದಿಲ್ಲ. 'ಇಮಾನ್ ಲೋಕಾನ್' ಎಂದು ಅರ್ಜುನನಿಗೆ ಹೇಳಿರುವುದರಿಂದ 'ಈ ಎದುರಿಗಿರುವ ಕೌರವ ರಾಜರು ಮುಂತಾದವರು' ಎಂದೂ ಅರ್ಥ ಹೇಳಬಹುದು. ಪ್ರಭುಗಳು ದುಷ್ಟರಿಗೆ, ದ್ರೋಹಿಗಳಿಗೆ ಕೊಡುವ ಶಿಕ್ಷೆ ಪಾಪವೆಂದು ಪರಿಗಣಿಸಲ್ಪಡುವುದಿಲ್ಲ. ಆದ್ದರಿಂದ ಅದು ಅವರನ್ನು ಬಂಧಿಸುವುದಿಲ್ಲ. ಮೇಲಾಗಿ ಅಂತಹ ಕ್ರಿಯೆಯನ್ನು ಅಸಂಗ ಬುದ್ಧಿಯಿಂದ ಆಚರಿಸಿದರೆ ಯಾವ ಮಾತ್ರವೂ ಬಂಧನಕ್ಕೆ ಒಳಗಾಗುವುದಿಲ್ಲ.

ಆದ್ದರಿಂದ ಭಗವಂತನು ತಿಳಿಸಿದ ಈ ಶ್ಲೋಕದ ಭಾವವನ್ನು ಆಳವಾಗಿ ಆಲೋಚಿಸಿ ಪರಪ್ರಾಣಿಗೆ ಯಾವ ಬಾಧೆಯನ್ನೂ ಉಂಟು ಮಾಡದೆ ಆತ್ಮದಲ್ಲಿ ಸ್ಥಿತನಾಗಿ ಅಸಂಗಬುದ್ಧಿಯಿಂದ ಆಯಾ ಕಾರ್ಯಗಳನ್ನು ನೆರವೇರಿಸುತ್ತ ಬಂಧ ವಿಮುಕ್ತನಾಗಬೇಕು.

ಪ್ರ : ಪಾಪ ಹಾಗು ಬಂಧನಕ್ಕೆ ಕಾರಣವೇನು?

ಉ : (೧) ಅಹಂಭಾವ ('ನಾನು ಕರ್ತನು' ಎನ್ನುವ ಭಾವ) (೨) ಬುದ್ಧಿಯ ಸಂಗ (ವಿಷಯ ಕರ್ಮಾದಿಗಳಿಗೆ ಅಂಟಿಕೊಳ್ಳುವುದು)

ಪ್ರ : ಪಾಪ, ಬಂಧ ತೊಲಗುವ ಉಪಾಯವೇನು?

ಉ : ಸಂಗ ಕರ್ತೃತ್ವಾದಿಗಳು ಇಲ್ಲದೆ ಇರುವುದು. ಆಗ ಕಾರ್ಯಗಳನ್ನು ಮಾಡಿದರೂ ಅವುಗಳಿಂದ ಬಂಧಿಸಲ್ಪಡುವುದಿಲ್ಲ.

ಪ್ರ : ಪಾಪ, ಬಂಧ ತೊಲಗುವ ಉಪಾಯವೇನು?

ಉ : ಸಂಗ ಕರ್ತೃತ್ವಾದಿಗಳು ಇಲ್ಲದೆ ಇರುವುದು. ಆಗ ಕಾರ್ಯಗಳನ್ನು ಮಾಡಿದರೂ ಅವುಗಳಿಂದ ಬಂಧಿಸಲ್ಪಡುವುದಿಲ್ಲ.

**ಅ||** ಕರ್ಮಕ್ಕೆ ಕಾರಣ ಹಾಗೂ ಆಧಾರವನ್ನು ತಿಳಿಸಲಾಗುತ್ತಿದೆ-

**೧೮ ಜ್ಞಾನಂ ಜ್ಞೇಯಂ ಪರಿಜ್ಞಾತಾ ತ್ರಿವಿಧಾ ಕರ್ಮಚೋದನಾ**
**ಕರಣಂ ಕರ್ಮ ಕರ್ತೇತಿ ತ್ರಿವಿಧಃ ಕರ್ಮ ಸಂಗ್ರಹಃ**

**ಅರ್ಥ:** ಕರ್ಮಚೋದನಾ=ಕರ್ಮಕ್ಕೆ ಹೇತುವು; ಜ್ಞಾನಂ=ತಿಳಿವು; ಜ್ಞೇಯಂ= ತಿಳಿಯಬೇಕಾದ ವಸ್ತು; ಪರಿಜ್ಞಾತಾ=ತಿಳಿಯುವವನು (ಎಂದು); ತ್ರಿವಿಧಾ= ಮೂರುವಿಧಗಳಾಗಿವೆ; ಕರ್ಮಸಂಗ್ರಹಃ= ಕರ್ಮಕ್ಕೆ ಆಧಾರ; ಕರಣಂ= ಉಪಕರಣ (ಸಾಧನೆಗಳು ಬಾಹ್ಯಾಭ್ಯಂತರೇಂದ್ರಿಯಗಳು); ಕರ್ಮ=ಕ್ರಿಯೆ; ಕರ್ತಾ=ಮಾಡುವವನು; ಇತಿ=ಎಂದು; ತ್ರಿವಿಧಃ= ಮೂರುವಿಧಗಳಾಗಿವೆ.

**ತಾ||** ಕರ್ಮಕ್ಕೆ ಹೇತುವು ತಿಳಿವು, ತಿಳಿಯಬೇಕಾದ ವಸ್ತು, ತಿಳಿಯುವವನು ಎಂದು ಮೂರು ವಿಧಗಳಾಗಿವೆ. ಹಾಗೆಯೇ ಕರ್ಮಕ್ಕೆ ಆಧಾರ ಉಪಕರಣ, (ಸಾಧನೆಗಳು) ಕ್ರಿಯೆ, ಮಾಡುವವನು - ಎಂದು ಮೂರು ವಿಧಗಳಾಗಿವೆ.

ಪ್ರ : ಕರ್ಮಕ್ಕೆ ಕಾರಣ ಎಷ್ಟು ವಿಧಗಳಾಗಿವೆ? ಯಾವುವು?

ಉ : ಮೂರು ವಿಧಗಳಾಗಿವೆ ೧) ತಿಳಿವು ೨) ತಿಳಿಯಬೇಕಾದ ವಸ್ತು ೩) ತಿಳಿಯುವವನು.

ಪ್ರ : ಕರ್ಮಕ್ಕೆ ಆಧಾರಗಳು ಎಷ್ಟು ವಿಧಗಳಾಗಿವೆ? ಯಾವುವು?

ಉ : ಮೂರು ವಿಧಗಳಾಗಿವೆ ೧) ಉಪಕರಣ ೨) ಕ್ರಿಯೆ ೩) ಕರ್ತ (ಮಾಡುವವನು)

**ಅ||** ಜ್ಞಾನ, ಕರ್ಮ, ಕರ್ತ ಎನ್ನುವುಗಳ ಸಾತ್ವಿಕ, ರಾಜಸಿಕ, ತಾಮಸಿಕ ರೂಪಗಳನ್ನು ತಿಳಿಸುತ್ತೇನೆಂದು ಹೇಳುತ್ತಿದ್ದಾನೆ-

**೧೯. ಜ್ಞಾನಂ ಕರ್ಮ ಚ ಕರ್ತಾ ಚ ತ್ರಿಧೈವ ಗುಣಭೇದತಃ**
**ಪ್ರೋಚ್ಯತೇ ಗುಣಸಂಖ್ಯಾನೇ ಯಥಾವಚ್ಛೃಣು ತಾನ್ಯಪಿ**

**ಅರ್ಥ:** ಗುಣಸಂಖ್ಯಾನೇ=ಗುಣಗಳನ್ನು ಕುರಿತು ವಿಚಾರ ಮಾಡುವ ಸಾಂಖ್ಯ ಶಾಸ್ತ್ರದಲ್ಲಿ; ಜ್ಞಾನಂ=ಜ್ಞಾನದ; ಕರ್ಮ ಚ=ಕರ್ಮದ; ಕರ್ತಾ ಚ=ಕರ್ತನ, ಗುಣ ಭೇದತಃ=ಸತ್ವಾದಿ ಗುಣಗಳ ಭೇದವನ್ನನುಸರಿಸಿ; ತ್ರಿಧಾ ಯೇವ= ಮೂರು ವಿಧಗಳಾಗಿ; ಪ್ರೋಚ್ಯತೇ=ಹೇಳಲ್ಪಡುತ್ತಿವೆ; ತಾನ್ಯಪಿ=ಅವುಗಳನ್ನು ಕೂಡ; ಯಥಾವತ್=ಯಥಾರೀತಿ (ಶಾಸ್ತ್ರಗಳ ಪ್ರಕಾರ) ಶೃಣು=ಹೇಳು.

**ತಾ||** ಗುಣಗಳನ್ನು ಕುರಿತು ವಿಚಾರಣೆ ಮಾಡುವ ಸಾಂಖ್ಯ ಶಾಸ್ತ್ರದಲ್ಲಿ ಜ್ಞಾನ, ಕರ್ಮ, ಕರ್ತ ಎನ್ನುವುಗಳನ್ನು ಸತ್ವಾದಿಗುಣಗಳ ಭೇದವನ್ನನುಸರಿಸಿ ಮೂರು ವಿಧಗಳಾಗಿ ವಿಂಗಡಿಸಲಾಗಿದೆ. ಅವುಗಳನ್ನೂ ಕೂಡ ಯಥಾರೀತಿ (ಶಾಸ್ತ್ರೋಕ್ತ ಪ್ರಕಾರ) ಹೇಳುವೆನು ಕೇಳು.

ಪ್ರ : ಭಗವಂತನು ಗುಣಭೇದವನ್ನು ಅನುಸರಿಸಿ ಮೂರು ವಿಧಗಳಾಗಿ ಯಾವುದನ್ನು ಕುರಿತು ಹೇಳಿರುವನು?

ಉ : ೧) ಜ್ಞಾನ ೨) ಕರ್ಮ ೩) ಕರ್ತ ಇವುಗಳನ್ನು ಕುರಿತು

ಪ್ರ : ಅವುಗಳನ್ನು ಕುರಿತು ಎಲ್ಲಿ ಹೇಳಲ್ಪಟ್ಟಿದೆ?

ಉ : ಸಾಂಖ್ಯ ಶಾಸ್ತ್ರದಲ್ಲಿ.

**ಅ||** ಅದರಲ್ಲಿ ಮೊದಲನೆಯದಾದ ಜ್ಞಾನವನ್ನು ತೆಗೆದುಕೊಂಡು ಸಾತ್ವಿಕ ಜ್ಞಾನದ ಸ್ವರೂಪವನ್ನು ತಿಳಿಸಲಾಗುತ್ತಿದೆ-

**೨೦ ಸರ್ವಭೂತೇಷು ಏನ್ಯೆಕಂ ಭಾವಮವ್ಯಯ ಮೀಕ್ಷತೇ**
**ಅವಿಭಕ್ತಂ ವಿಭಕ್ತೇಷು ತಜ್ಞಾನಂ ವಿದ್ಧಿ ಸಾತ್ವಿಕಮ್**

**ಅರ್ಥ:** ವಿಭಕ್ತೇಷು=ವಿಭಜಿಸಲ್ಪಟ್ಟು ಭಿನ್ನ ಭಿನ್ನವಾಗಿರುವ; ಸರ್ವಭೂ ತೇಷು=ಸಮಸ್ತ (ಚರಾಚರ) ಪ್ರಾಣಿಕೋಟಿಗಳಲ್ಲಿ; ಏಕಂ=ಒಂದಾದ; ಅವ್ಯಯಂ=ನಾಶರಹಿತವಾದ; ಭಾವಂ=ಆತ್ಮವಸ್ತುವನ್ನು (ದೈವದ ಸ್ಥಿತಿಯನ್ನು); ಏನ=ಯಾವಜ್ಞಾನದಿಂದ; ಅವಿಭಕ್ತಂ= ವಿಭಜಿಸಲ್ಪಡದೆ (ಏಕವಾಗಿ) ಇರುವ ಹಾಗೆ; ಈಕ್ಷತೇ=ನೋಡುತ್ತಿದ್ದಾನೋ (ತಿಳಿಯುತ್ತಿದ್ದಾನೊ); ತತ್ ಜ್ಞಾನಂ=ಆ ಜ್ಞಾನವು; ಸಾತ್ವಿಕಂ=ಸಾತ್ವಿಕವೆಂದು; ವಿದ್ಧಿ=ತಿಳಿಯುವುದು.

**ತಾ||** ವಿಭಜಿಸಲ್ಪಟ್ಟು ಬೇರೆ ಬೇರೆಯಿರುವ ಸಮಸ್ತ ಚರಾಚರ ಪ್ರಾಣಿಗಳಲ್ಲಿ, ಒಂದಾದ ನಾಶರಹಿತವಾದ ಆತ್ಮವಸ್ತುವು (ದೈವದ ಸ್ಥಿತಿಯು) ವಿಭಜಿಸಲ್ಪಡದೆ (ಏಕವಾಗಿ) ಇರುವುದೆಂದು ಯಾವ ಜ್ಞಾನದಿಂದ ತಿಳಿದುಕೊಳ್ಳುತ್ತಿದ್ದಾನೋ, ಅಂತಹ ಜ್ಞಾನವನ್ನು ಸಾತ್ವಿಕವೆಂದು ತಿಳಿಯುವುದು.

**ವ್ಯಾಖ್ಯೆ:** ಅಜ್ಞಾನಿಗಳ ದೃಷ್ಟಿಗೆ, (ಸ್ಥೂಲ ದೃಷ್ಟಿಗೆ, ಭೌತಿಕ ನೇತ್ರಗಳಿಗೆ) ಈ ಪ್ರಪಂಚವು, ಸಮಸ್ತ ಪದಾರ್ಥಗಳು, ಸಮಸ್ತ ಪ್ರಾಣಿಗಳು ವಿಭಜಿಸಲ್ಪಟ್ಟ ಹಾಗೆ ಭಿನ್ನ ಭಿನ್ನವಾಗಿ ಕಾಣಿಸುವುವು. ಆದರೆ ಜ್ಞಾನಿಗಳ ದೃಷ್ಟಿಗೆ ಎಲ್ಲವೂ ಅವಿಭಕ್ತವಾಗಿ, ಸರ್ವತ್ರ ನಾಶರಹಿತವಾದ ಒಂದೇ ಆತ್ಮವಸ್ತುವು (ಪರಬ್ರಹ್ಮವು) ವ್ಯಾಪಿಸಿದಂತೆ ಗೋಚರಿಸುವುದು. ಯಾವ ಜ್ಞಾನದಿಂದ ಅಂತಹ ಅವಿಭಕ್ತವು ಅವರಿಗೆ ಅನುಭೂತವಾಗುವುದೋ ಅಂತಹ ಜ್ಞಾನವನ್ನು ಸಾತ್ತ್ವಿಕವಾದದ್ದೆಂದು ಇಲ್ಲಿ ಹೇಳಲಾಗಿದೆ.

'ಸರ್ವಭೂತೇಷು'- ಎಂದು ಹೇಳಿರುವುದರಿಂದ ಭಗವಂತನು (ಆತ್ಮ) ಸಮಸ್ತ ಚರಾಚರ ಪ್ರಾಣಿಕೋಟಿಗಳಲ್ಲಿ ವ್ಯಾಪಿಸಿರುವನೆಂದು ತಿಳಿಯುತ್ತದೆ. ಆದ್ದರಿಂದ ಎಂತಹ ನಿಕೃಷ್ಟ ಜೀವಿಯಾಗಿದ್ದರೂ ತನ್ನಲ್ಲಿರುವ ಪರಮಾತ್ಮನನ್ನು ತಿಳಿದುಕೊಂಡು ತನ್ನ ಯಥಾರ್ಥರೂಪವನ್ನು ಅವಗತ ಮಾಡಿಕೊಂಡು ಮುಕ್ತಿ ಹೊಂದಲು ಅವಕಾಶವಿದೆ. ತರಂಗವು ಚಿಕ್ಕದಾದರೂ ಅದಕ್ಕೆ ಆದಾರಭೂತವಾದ ಸಮುದ್ರವನ್ನು ಮೊರೆಹೊಕ್ಕು ಅದರಲ್ಲಿ ಲೀನವಾಗಲು, ಸಮುದ್ರ ರೂಪವಾಗಲು ಅದಕ್ಕೆ ಹಕ್ಕಿದೆ. ಆದ್ದರಿಂದ ಎಂತಹ ಅಲ್ಪ ವ್ಯಕ್ತಿಯಾದರೂ ಅಧೈರ್ಯ ಪಡಬೇಕಾದ ಕೆಲಸವಿಲ್ಲ. ಹೃದಯವನ್ನು ಪವಿತ್ರಮಾಡಿಕೊಂಡು ತನ್ನ ನಿಜರೂಪವಾದ ಆತ್ಮವನ್ನು ತಿಳಿದುಕೊಂಡರೆ ಸಾಕು ಮುಕ್ತಿ ಹೊಂದುವನು.

ಅನೇಕ ತರಂಗಗಳಿದ್ದರೂ ಅವುಗಳ ನಾಮರೂಪಗಳನ್ನು ಬಿಟ್ಟು ಜಲವನ್ನು ಮಾತ್ರ ನೋಡುವವನು, ಅನೇಕ ಮಡಿಕೆಗಳಲ್ಲಿಯ ಮಣ್ಣನ್ನೇ ವೀಕ್ಷಿಸುವವನು, ಪುಷ್ಪಮಾಲೆಯಲ್ಲಿಯ ಅನೇಕ ಪುಷ್ಪಗಳಿಗೆ ಆಧಾರವಾಗಿರುವ ದಾರವನ್ನು ನೋಡುವವನು, ಪ್ರಪಂಚದಲ್ಲಿಯ ಅನೇಕ ಜೀವ ರಾಶಿಗಳನ್ನು, ಭಿನ್ನ ಭಿನ್ನ ಪದಾರ್ಥಗಳನ್ನು ನೋಡಿದರೂ ಅವುಗಳ ಉಪಾಧಿ ರೂಪ, ನಾಮ ರೂಪಗಳನ್ನು ಬಿಟ್ಟು ಎಲ್ಲವುಗಳಲ್ಲಿ ಅನುಸ್ಯೂತವಾಗಿರುವ ಅವಿಭಕ್ತವಾದ ಏಕವಾದ ಆತ್ಮನನ್ನೇ ನೋಡುವವನು ಸಾತ್ತ್ವಿಕ ಜ್ಞಾನಿಯೆಂದು ಕರೆಯಲ್ಪಡುವನು. ಅಂದರೆ ಅನೇಕತ್ವದಲ್ಲಿ ಏಕತೆಯನ್ನು, ನಾಶದಲ್ಲಿ ಅವಿನಾಶತೆಯನ್ನು; ವಿಭಜಿತ ವಸ್ತುಗಳಲ್ಲಿ ಅವಿಭಕ್ತತೆಯನ್ನು ವೀಕ್ಷಿಸಲು ಸಾಧ್ಯವಾದವನೇ ಉತ್ತಮ ಭಾವವನ್ನು ಹೊಂದಿರುವವನೆಂದರ್ಥ. ಇದರಿಂದ ಪ್ರಪಂಚದಲ್ಲಿ ಅನೇಕತ್ವವನ್ನು ನೋಡುವುದು ಕೇವಲ ಅಜ್ಞಾನವೆಂದು ಅರ್ಥವಾಗುತ್ತದೆ.

ಈ ಶ್ಲೋಕದಲ್ಲಿ ಆತ್ಮವಸ್ತುವಿಗೆ ಮೂರು ವಿಶೇಷಣಗಳನ್ನು ಕೊಡಲಾಗಿದೆ (೧) ಏಕವಾದುದು (೨) ಅವ್ಯಯವಾದುದು (೩) ಅವಿಭಕ್ತವಾದುದು - ಎಂದು; ಪ್ರಪಂಚ ವಸ್ತುಗಳಿಗೆ ಹಾಗು ಆತ್ಮಕ್ಕೆ ಇರುವ ಭೇದವನ್ನು ಈ ಕೆಳಗೆ ಕೊಡಲಾಗಿದೆ.

| **ಪ್ರಪಂಚ ವಸ್ತುಗಳು** | **ಆತ್ಮ (ದೈವ)** |
|---|---|
| ೧. ಅನೇಕವಾದವುಗಳು | ಏಕವಾದದು (ಏಕಂ) |
| ೨. ನಾಶವಾಗುವಂತವುಗಳು | ನಾಶರಹಿತವಾದುದು (ಅವ್ಯಯಂ) |
| ೩. ವಿಭಾಗದಿಂದ ಕೂಡಿದವುಗಳು | ಅವಿಭಕ್ತವಾದುದು (ಅವಿಭಕ್ತಂ) |

ಲೋಕದಲ್ಲಿ ಅನೇಕ ಜ್ಞಾನಗಳಿವೆ - ಸಂಗೀತ, ಸಾಹಿತ್ಯ, ರಾಜಕೀಯ ಜ್ಞಾನ ಮುಂತಾದುವುಗಳು. ಆದರೆ ಯಾವ ಜ್ಞಾನದಿಂದ ಮನುಜನು ಅನೇಕತ್ವದಲ್ಲಿ ಏಕತ್ವವನ್ನು, ಮೃತ್ಯುವಿನಲ್ಲಿ ಅಮೃತತ್ವವನ್ನು, ವಿಭಾಗದಲ್ಲಿ ಅವಿಭಾಗವನ್ನು ನೋಡಬಲ್ಲನೋ ಅದೇ ಎಲ್ಲಾ ಜ್ಞಾನಗಳಲ್ಲಿ ಶ್ರೇಷ್ಠವಾದದ್ದೆಂದು, ಸಾತ್ತ್ವಿಕ ಜ್ಞಾನವೆಂದು ಭಗವಂತನು ಹೇಳಿರುವನು. ಅದೇ ಆಧ್ಯಾತ್ಮ ವಿದ್ಯೆ. ಆದ್ದರಿಂದ ಮುಮುಕ್ಷುಗಳು ಈ ಭಗವದ್ವಾಕ್ಯದಲ್ಲಿ ವಿಶ್ವಾಸವುಳ್ಳವರಾಗಿ ಉತ್ತಮೋತ್ತಮ ಜ್ಞಾನವನ್ನು ಪಡೆದು ಧನ್ಯರಾಗಬೇಕು! ಇದರಿಂದ ಪ್ರಪಂಚದಲ್ಲಿ ಎಷ್ಟೋ ಮೇಧಾ ಸಂಪನ್ನರು, ಕಲಾಕುಶಲರು ಇದ್ದರೂ ಇಂತಹ ಸರ್ವಭೂತಾತ್ಮ ಭಾವ, ಸರ್ವಾತ್ಮ ಜ್ಞಾನ, ಅವಿಭಕ್ತ ದೈವ ಭಾವವಿಲ್ಲದಿದ್ದರೆ ಅವರೆಲ್ಲರೂ ಭಗವದ್ದೃಷ್ಟಿಯಲ್ಲಿ ಜ್ಞಾನರಹಿತರೇ ಆಗಿರುವರು. ಆದ್ದರಿಂದ ಲೌಕಿಕವಾದ ಇತರ ವಿದ್ಯೆಗಳು, ಜ್ಞಾನಗಳು ಎಷ್ಟಿದ್ದರೂ ಪ್ರತಿಯೊಬ್ಬರೂ ಭಗವತ್ಪ್ರೋಕ್ತವಾದ ಈ ಸಾತ್ತ್ವಿಕ ಜ್ಞಾನವನ್ನು ಅವಲಂಬಿಸಿ ಸರ್ವಾತ್ಮದೃಷ್ಟಿ ಹೊಂದಿ ಜೀವನವನ್ನು ಮುಕ್ತಿಗೊಳಿಸಿಕೊಳ್ಳಬೇಕು. ಹಾಗಿಲ್ಲದೆ ಲೋಕದಲ್ಲಿಯ ಭಿನ್ನತ್ವವನ್ನೇ ನೋಡಿದಲ್ಲಿ ಅದರ ಫಲವಾದ ಸಂಸಾರ ಬಂಧನ, ಮೃತ್ಯು, ಜನನ ಮರಣ ದುಃಖಗಳ ಪಾಲಾಗಬೇಕಾಗುತ್ತದೆ. ಉಪನಿಷತ್ತುಗಳೂ ಸಹ ಈ ಪ್ರಕಾರ ವಾಗಿಯೇ ತಿಳಿಸುತ್ತವೆ.

'ಮೃತ್ಯೋಃಸಮೃತ್ಯು ಮಾಪ್ನೋತಿ ಯ ಇಹಾನಾನೇ ವ ಪಶ್ಯತಿ'. ಆದ್ದರಿಂದ ಪ್ರಪಂಚದಲ್ಲಿ ಯಾವ ಪ್ರಾಣಿಯನ್ನು ನೋಡಿದರೂ ಆತನ ದೇಹ ಸೌಂದರ್ಯ ಹಾಗೂ ಗುಣವನ್ನು ನೋಡದೆ ಒಳಗಿರುವ ಆತ್ಮದಲ್ಲೇ ದೃಷ್ಟಿಯನ್ನಿಡಬೇಕು. ದೇಹ ದೃಷ್ಟಿ ಮಾತ್ರ ಹೊಂದಿರುವವರು ಅಧಮರು. ಮನೋದೃಷ್ಟಿ ಹೊಂದಿರುವವರು ಅಂದರೆ ಒಂದು ಪ್ರಾಣಿಯನ್ನು ನೋಡಿದಾಗ ಆತನ ಗುಣಗಳನ್ನು ವೀಕ್ಷಿಸುವವರು ಮಧ್ಯಮರು. ಆತ್ಮದೃಷ್ಟಿ ಅಂದರೆ ದೈವ ದೃಷ್ಟಿ ಯುಳ್ಳವರು ಉತ್ತಮರು. ಈ ಭಾವವನ್ನೇ ಈ ಶ್ಲೋಕದಲ್ಲಿ ವ್ಯಕ್ತಗೊಳಿಸಲಾಗಿದೆ. ಆದ್ದರಿಂದ ಅಂತಹ ಆತ್ಮ ದೃಷ್ಟಿಗಾಗಿ, ಸಾತ್ತ್ವಿಕ ಜ್ಞಾನಕ್ಕಾಗಿ ಸರ್ವರೂ ಯತ್ನಿಸಬೇಕು.

ಪ್ರ : ಸಾತ್ತ್ವಿಕ ಜ್ಞಾನದ ಲಕ್ಷಣವೇನು?

ಉ: ಯಾವ ಜ್ಞಾನದಿಂದ ಮನುಜನು ಭಿನ್ನ ಭಿನ್ನವಾಗಿರುವ ಸಮಸ್ತ ಪ್ರಾಣಿಗಳಲ್ಲಿ, ಏಕವಾಗಿ, ನಾಶರಹಿತವಾಗಿ ಅವಿಭಕ್ತವಾದ ಆತ್ಮ ವಸ್ತುವನ್ನು ವೀಕ್ಷಿಸಬಲ್ಲನೋ ಅದು ಸಾತ್ತ್ವಿಕ ಜ್ಞಾನ.

ಪ್ರ : ಭಗವಂತನು ಎಲ್ಲಿದ್ದಾನೆ?

ಉ :ಸಮಸ್ತ ಚರಾಚರ ಪ್ರಾಣಿ ಕೋಟಿಗಳಲ್ಲಿದ್ದಾನೆ.

ಪ್ರ : ಆತ್ಮದ ಸ್ವರೂಪವೇನು?

ಉ: ಅದು (೧) ಏಕವಾದುದು (೨) ನಾಶರಹಿತವಾದುದು (೩) ಅವಿಭಕ್ತವಾದುದು

ಪ್ರ : ಈ ಪ್ರಪಂಚದಲ್ಲಿ ಕಾಣುತ್ತಿರುವ ಅನೇಕತ್ವವು ಸತ್ಯವೇ?

ಉ: ಇಲ್ಲ. ಏಕತ್ವವೇ ಸತ್ಯವಾದುದು (ಮಣಿಗಳಲ್ಲಿಯ ದಾರದಂತೆ, ತರಂಗ ಗಳಲ್ಲಿಯ ಜಲದಂತೆ).

**ಅ।।** ರಾಜಸ ಜ್ಞಾನವನ್ನು ಹೇಳುತ್ತಿದ್ದಾನೆ-

**೨೧ ಪೃಥಕ್ತ್ವೇನ ತು ಯಜ್ಞಾನಂ ನಾನಾಭಾವನ್ ಪೃಥಗ್ವಿಧಾನ್**
**ವೇತ್ತಿ ಸರ್ವೇಷು ಭೂತೇಷು ತಜ್ಞಾನಂ ವಿದ್ಧಿ ರಾಜಸಮ್**

**ಅರ್ಥ:** ಯತ್ ಜ್ಞಾನಂ=ಯಾವ ಜ್ಞಾನ; ಸರ್ವೇಷು=ಸಮಸ್ತವಾದ; ಭೂತೇಷು=ಪ್ರಾಣಿಗಳಲ್ಲಿ; ಪೃಥಗ್ವಿಧಾ=ಬೇರೆ ಬೇರೆ ವಿಧಗಳಾಗಿ ಉಳ್ಳ; ನಾನಾಭಾವಾನ್=ಅನೇಕವಾದ ಜೀವಿಗಳನ್ನು; ಪೃಥಕ್ತ್ವೇನ ತು=ಬೇರೆ

ಬೇರೆಯಾಗಿ; ವೇತ್ತಿ=ತಿಳಿದುಕೊಳ್ಳುತ್ತಿದೆಯೋ; ತತ್ ಜ್ಞಾನಂ=ಅಂತಹ ಜ್ಞಾನ; ರಾಜಸಂ=ರಾಜಸ ಜ್ಞಾನವೆಂದು, ವಿದ್ಧಿ=ತಿಳಿಯುವುದು.

**ತಾ||** ಯಾವ ಜ್ಞಾನ ಸಮಸ್ತ ಪ್ರಾಣಿಗಳಲ್ಲಿ ಬೇರೆ ಬೇರೆ ವಿಧವಾಗಿರುವ ಅನೇಕ ಜೀವಿಗಳನ್ನು ಬೇರೆ ಬೇರೆಯೆಂದು ತಿಳಿಯುವುದೋ ಅದನ್ನು ರಾಜಸ ಜ್ಞಾನವೆಂದು ತಿಳಿಯುವುದು.

**ವ್ಯಾಖ್ಯೆ:** ಪ್ರಪಂಚದಲ್ಲಿರುವ ಪ್ರಾಣಿಗಳಲ್ಲಿ 'ಇವನು ಬೇರೆ ಅವನು ಬೇರೆ'- ಎಂದು ಈ ಪ್ರಕಾರವಾಗಿ ಅನೇಕತ್ವವನ್ನು ನೋಡುವುದು ಉತ್ತಮ ಜ್ಞಾನವಲ್ಲ. ಅದು ರಾಜಸವೇ ಹೌದು. ಅಂತಹ ಜ್ಞಾನವುಳ್ಳವರು ಯಾವುದೇ ವ್ಯಕ್ತಿಯನ್ನು ನೋಡಿದಾಗ ಆತನ ಗುಣವನ್ನು ಪರಿಶೀಲಿಸುವರೇ ಹೊರತು ಆತ್ಮವನ್ನಲ್ಲ. ಆದ್ದರಿಂದಲೇ ಅವರು ವ್ಯಕ್ತಿಗಳಲ್ಲಿ ಭಿನ್ನತ್ವವನ್ನು ನೋಡುವರು. ಇಂತಹ ರಾಜಸ ಜ್ಞಾನವನ್ನೇ ಈಗ ಪ್ರಪಂಚದಲ್ಲಿ ಅನೇಕ ಮಂದಿ ಹೊಂದಿರುವರು. ಏಕೆಂದರೆ ಅವರು ಪ್ರಾಣಿಗಳಲ್ಲಿ ಭಿನ್ನತ್ವವನ್ನೇ ನೋಡುವರು. ಆದ್ದರಿಂದ ಅದನ್ನು ತೊಲಗಿಸಿಕೊಂಡು ಅದ್ವೈತ ಭಾವ ಹಾಗು ಸಮದೃಷ್ಟಿಯನ್ನು ಅವಲಂಬಿಸಬೇಕು (ದಿಂಬಿನ ಮೇಲಿನ ಬಟ್ಟೆಯ ಮೇಲೆ ದೃಷ್ಟಿಯಿಡದೆ ಒಳಗಿರುವ ಅರಳೆಯ ಮೇಲೆಯೇ ದೃಷ್ಟಿಯಿಟ್ಟಂತೆ).

ಪ್ರ : ರಾಜಸಿಕ ಜ್ಞಾನದ ಲಕ್ಷಣವೇನು?

ಉ : ಪ್ರಪಂಚದಲ್ಲಿ ಅನೇಕತ್ವವನ್ನು ನೋಡುವುದು, ಸರ್ವ ಜೀವಿಗಳಲ್ಲಿ 'ಇವನು ಬೇರೆ ಅವನು ಬೇರೆ' ಎನ್ನುವ ಭೇದ ಭಾವವನ್ನು ಹೊಂದಿರುವುದು.

**ಅ||** ತಾಮಸ ಜ್ಞಾನದ ಬಗ್ಗೆ ತಿಳಿಸಲಾಗುತ್ತಿದೆ-

**೨೨ ಯತ್ತು ಕೃತ್ಸ್ನವದೇಕಸ್ಮಿನ್ಕಾರ್ಯೇ ಸಕ್ತಮಹೈತುಕಂ**
**ಅತತ್ತ್ವಾರ್ಥವದಲ್ಪಂ ಚ ತತ್ತಾಮಸಮುದಾಹೃತಮ್**

**ಅರ್ಥ:** ಯತ್ ತು=ಯಾವ ಜ್ಞಾನವಾದರೆ; ಏಕಸ್ಮಿನ್ ಕಾರ್ಯೇ= ಯಾವುದಾದರೂ ಒಂದು ಕೆಲಸದಲ್ಲಿ (ಶರೀರ ಪ್ರತಿಮೆಗಳಲ್ಲಿ); ಕೃತ್ಸ್ನವತ್= ಸಮಸ್ತದಲ್ಲಿ (ಎಲ್ಲವೂ ಅದೇ ಎಂದು); ಸಕ್ತಂ=ಅಂಟಿಕೊಳ್ಳುವನೋ; ಅಹೈತುಕಂ=ಅವುಗಳಿಗೆ ಸರಿಯಾದ ಕಾರಣವಿಲ್ಲದೆ ಇರುವುದೋ; ಅತತ್ತ್ವಾರ್ಥ ವತ್=ತತ್ತ್ವವನ್ನು (ಸತ್ಯ ವಸ್ತುವನ್ನು) ತಿಳಿಯದೆ ಇರುವನೋ; ಅಲ್ಪಂಚ= ಅಲ್ಪವಾದದ್ದಾಗಿ (ಸ್ವಲ್ಪ ಫಲವನ್ನು ಹೊಂದಿರುವುದಾಗಿ) ಇರುವುದೋ; ತತ್= ಅಂತಹ ಜ್ಞಾನವು; ತಾಮಸಂ=ತಾಮಸ ಜ್ಞಾನವೆಂದು; ಉದಾಹೃತಂ= ಹೇಳಲ್ಪಟ್ಟಿದೆ.

**ತಾ||** ಯಾವ ಜ್ಞಾನದಿಂದ ಮನುಜನು ಯಾವುದೇ ಒಂದು ಕಾರ್ಯದಲ್ಲಿ (ಶರೀರ ಪ್ರತಿಮಾದಿಗಳಲ್ಲಿ) ಸಮಸ್ತವೂ ಅದೇ ಎಂದು ಸಕ್ತನಾಗುವನೋ, ಅವುಗಳಿಗೆ ಸರಿಯಾದ ಕಾರಣವಿಲ್ಲದೆ ಇರುವುದೋ, ಸತ್ಯವಸ್ತುವನ್ನು (ತತ್ತ್ವವನ್ನು) ತಿಳಿಯದೆ ಇರುವನೋ, ಯಾವುದು (ಅಲ್ಪಫಲವುಳ್ಳದ್ದೋ) ತುಚ್ಛವೋ ಅಂತಹ ಜ್ಞಾನವನ್ನು ತಾಮಸಜ್ಞಾನವೆನ್ನುವರು.

**ವ್ಯಾಖ್ಯೆ:** ತಾಮಸ ಜ್ಞಾನವುಳ್ಳವನು ಯಾವುದೋ ಒಂದು ದೃಶ್ಯ ವಸ್ತುವನ್ನು ಹಿಡಿದುಕೊಂಡು ಏನೋ ಮುಳುಗಿ ಹೋದ ಹಾಗೆ ಅದರಲ್ಲಿಯೇ ಆಸಕ್ತಿ ಹೊಂದಿ ಅದೇ ಸಮಸ್ತವೆಂದು ತಿಳಿಯುವನು. ಆತನು ಒಬ್ಬ ವ್ಯಕ್ತಿಯ ಶರೀರವನ್ನು ಮಾತ್ರನೋಡಿ ಆ ಶರೀರವೇ ಆತ್ಮವೆಂದು ಅದೇ ಸಮಸ್ತವೆಂದು ಭಾವಿಸುವನು. ರಾಜಸ ಜ್ಞಾನವುಳ್ಳವನು ಒಳಗಿರುವ ಗುಣ ಮತ್ತು ಮನೋಭಾವವನ್ನೇ ನೋಡುವನು. ಸಾತ್ತ್ವಿಕ ಜ್ಞಾನವುಳ್ಳವನು ಒಳಗಿರುವ ಅವಿಭಕ್ತವಾದ ಆತ್ಮವನ್ನೇ ವೀಕ್ಷಿಸುವನು. ಚಂಚಲ ವಸ್ತುಗಳಾದ ದೇಹ ಮನಸ್ಸು ಎರಡೂ ವಿಕಾರವಾದವುಗಳು, ಅಸ್ಥಿರವಾದವು. ಆದ್ದರಿಂದ ಅವುಗಳನ್ನು ಆಶ್ರಯಿಸುವವನು, ಅವುಗಳಲ್ಲಿ ದೃಷ್ಟಿಯಿರುವವನು ಅಸ್ಥಿರತೆ, ವಿನಾಶ, ಜನನ ಮರಣಗಳನ್ನೇ ಹೊಂದುವನು. ನಿತ್ಯ, ಸ್ಥಿರ, ಅವ್ಯಯವಾದಂತಹ ಆತ್ಮವನ್ನು ಆಶ್ರಯಿಸುವವನು ಅಂತಹ ಆತ್ಮದೃಷ್ಟಿಯುಳ್ಳವನು, ನಿತ್ಯ, ಪುನರಾವೃತ್ತಿ ರಹಿತ ಆತ್ಮ ಪದವಿಯನ್ನೇ ಹೊಂದುವನು. ಆದ್ದರಿಂದ ರಾಜಸ, ತಾಮಸ ಜ್ಞಾನಗಳೆರಡನ್ನು ಬಿಟ್ಟು ಮುಮುಕ್ಷುವು ಸಾತ್ತ್ವಿಕ ಜ್ಞಾನವನ್ನೇ ಅವಲಂಬಿಸಬೇಕು.

ಪ್ರ : ತಾಮಸ ಜ್ಞಾನ ಎಂತಹದು?

ಉ : ಯಾವುದೋ ಒಂದು ದೃಶ್ಯವಸ್ತುವಿನ ಬಾಲ ಹಿಡಿದು ಅದರಲ್ಲಿಯೇ ಆಸಕ್ತಿಯನ್ನು ಬೆಳೆಸಿಕೊಂಡು ಅದೇ ಸಮಸ್ತವೆಂದು ತಿಳಿಯುವುದು (ದೃಷ್ಟಾಂತಕ್ಕೆ ಶರೀರವನ್ನು ನೋಡಿ ಅದನ್ನೇ ಆತ್ಮವೆಂದು ಭಾವಿಸುವುದು) ೨) ಅದಕ್ಕೆ ಬೇಕಾದ ಕಾರಣವನ್ನು ತೋರಿಸದೇ ಇರುವುದು ೩) ತತ್ತ್ವವನ್ನು, ಸತ್ಯವಸ್ತುವನ್ನು ತಿಳಿಯದೇ ಇರುವುದು ಹಾಗು ೪) ಯಾವುದು ಅಲ್ಪ ಫಲವನ್ನು ಕೊಡುವುದೋ ಅದನ್ನು ತಾಮಸಜ್ಞಾನವೆನ್ನುವರು

**ಅ||** ಇಲ್ಲಿಯವರೆಗೆ ಮೂರು ವಿಧಗಳಾದ ಜ್ಞಾನಗಳನ್ನು ತಿಳಿಸಿ ಇನ್ನು ಮೂರು ವಿಧಗಳಾದ ಕರ್ಮಗಳನ್ನು ಕುರಿತು ತಿಳಿಸಲು ಅನುಕ್ರಮಿಸಿ ಮೊದಲು ಸಾತ್ತ್ವಿಕ ಕರ್ಮದ ಬಗ್ಗೆ ತಿಳಿಸಲಾಗಿದೆ-

**೨೩ ನಿಯತಂ ಸಂಗರಹಿತಮರಾಗದ್ವೇಷತಃ ಕೃತಂ**
**ಅಫಲಪ್ರೇಪ್ಸುನಾ ಕರ್ಮ ಯತ್ತತ್ಸಾತ್ತ್ವಿಕಮುಚ್ಯತೇ**

**ಅರ್ಥ:** ನಿಯತಂ=ಶಾಸ್ತ್ರದಿಂದ ನಿಯಮಿಸಲ್ಪಟ್ಟ; ಯತ್ ಕರ್ಮ=ಯಾವ ಕರ್ಮವು; ಅಫಲ ಪ್ರೇಪ್ಸುನಾ=ಫಲಾಪೇಕ್ಷೆಯಿಲ್ಲದವನಿಂದ; ಸಂಗರಹಿತಂ= ಆಸಕ್ತಿಯಿಲ್ಲದೆ (ತಾನು ಕರ್ತನೆನ್ನುವ ಅಭಿಮಾನವಿಲ್ಲದೆ); ಅರಾಗ ದ್ವೇಷತಃ= ರಾಗದ್ವೇಷವಿಲ್ಲದ; ಕೃತಂ=ಮಾಡಲ್ಪಡುವುದೋ; ತತ್=ಅದು; ಸಾತ್ತ್ವಿಕಂ= ಸಾತ್ತ್ವಿಕ ಕರ್ಮವೆಂದು; ಉಚ್ಯತೇ=ಹೇಳಲ್ಪಡುತ್ತಿದೆ.

**ತಾ||** ಶಾಸ್ತ್ರದಿಂದ ನಿಯಮಿಸಲ್ಪಟ್ಟಿದ್ದು, ಫಲಾಪೇಕ್ಷೆ, ಆಸಕ್ತಿ (ಸಂಗ), ಅಭಿಮಾನ, ರಾಗದ್ವೇಷಗಳಾಗಲಿ ಇಲ್ಲದೆ ಮಾಡಲ್ಪಡುವ ಯಾವ ಕರ್ಮವಿದೆಯೋ ಅದನ್ನು ಸಾತ್ತ್ವಿಕ ಕರ್ಮವೆನ್ನುವರು.

**ವ್ಯಾಖ್ಯೆ:** ಕರ್ಮಗಳನ್ನು ಕುರಿತು ಎಲ್ಲಿ ಹೇಳಬೇಕಾಗಿ ಬಂದರೂ 'ನಿಯತಂ' 'ನಿಯತಂ' ಎಂದು ಭಗವಂತನು ಪದೇ ಪದೇ ಹೇಳುತ್ತಾ ಬಂದಿದ್ದಾನೆ. ನಿಯತವೆಂದರೆ ವೇದ ಶಾಸ್ತ್ರಾದಿಗಳಿಂದ ನಿಯಮಿಸಲ್ಪಟ್ಟಿರುವುದು ಎಂದರ್ಥ. ಅವರವರಿಗೆ ತೋಚಿರುವುದೇ ಸತ್ಯವೆಂದು ಭಾವಿಸದೆ, ಜನರು ಶಾಸ್ತ್ರ ಪ್ರಮಾಣವನ್ನು ನೋಡಿ, ಅನುಭವವನ್ನು ಸಂಪಾದಿಸಿಕೊಂಡು ವ್ಯವಹರಿಸ ಬೇಕು. ಆದ್ದರಿಂದಲೇ ಇಷ್ಟ ಬಂದ ಕರ್ಮವನ್ನು ಮಾಡದೆ ಶಾಸ್ತ್ರ ನಿಯತವಾದ ಕರ್ಮವನ್ನೇ ಮಾಡಬೇಕೆಂದು ಆದೇಶಿಸಲು ಕಾರಣವಾಗಿದೆ. **'ನಹಿಕಶ್ಚಿತ್ ಕ್ಷಣಮಪಿ ಜಾತು ತಿಷ್ಠತ್ಯಕರ್ಮಕೃತ್'** ಎಂದ ಹಾಗೆ ಪ್ರಪಂಚದಲ್ಲಿ ಕರ್ಮ ಮಾಡದೆ ಯಾರೂ ಇರಲು ಸಾಧ್ಯವಿಲ್ಲವಾದ್ದರಿಂದ ಕರ್ಮವೆನ್ನುವುದು ನಿತ್ಯ ಜೀವನದಲ್ಲಿ ಸರ್ವರಿಗೂ ಅವಶ್ಯಕವಾದ ಕರ್ತವ್ಯವಾಗಿರುವುದರಿಂದ ಅದರ ರಹಸ್ಯವನ್ನು ಎಲ್ಲರೂ ಚೆನ್ನಾಗಿ ತಿಳಿದುಕೊಂಡಿರುವುದು ಅಗತ್ಯವಾಗಿದೆ. ಆದ್ದರಿಂದ ಸಾತ್ತ್ವಿಕ ಕರ್ಮವನ್ನು ಕುರಿತು ಭಗವಂತನು ಇಲ್ಲಿ ತಿಳಿಸಿದ ಈ

ಭಾವಗಳು ಸರ್ವರಿಗೂ ಬಹಳ ಮುಖ್ಯವಾದುವು. ಕರ್ಮ ಯಾವ ಪ್ರಕಾರವಾಗಿ ರಬೇಕೆಂದರೆ-

೧. ಶಾಸ್ತ್ರ ನಿಯತವಾಗಿರಬೇಕು.

೨. ಸಂಗರಹಿತವಾಗಿ (ಆಸಕ್ತಿ, ಅಭಿಮಾನವಿಲ್ಲದೆ) ಮಾಡಬೇಕು

೩. ರಾಗ ದ್ವೇಷಗಳಿಲ್ಲದೆ ಮಾಡಬೇಕು.

೪. ಫಲಾಪೇಕ್ಷೆಯಿಲ್ಲದೆ ಆಚರಿಸಬೇಕು.

ಈ ನಾಲ್ಕು ವಿಧಗಳ ಪ್ರಕಾರ ಆಚರಿಸುವ ಕರ್ಮ ಚಿತ್ತಶುದ್ಧಿಕರವಾಗಿ, ಹೃದಯ ಮಾಲಿನ್ಯ ನಿವಾರಕವಾಗಿ, ದೋಷ ರಹಿತವಾಗಿ, ಜ್ಞಾನ ದಾಯಕವಾಗಿ, ಮೋಕ್ಷ ಪ್ರದವಾಗಿರುತ್ತದೆ.

*'ಸಂಗರಹಿತಂ'*- 'ಬುದ್ಧಿರ್ಯಸ್ಯ ನ ಲಿಪ್ಯತೇ' ಎಂದು ಈವರೆಗೆ ತಿಳಿಸಿದ ಹಾಗೆ ಕರ್ಮಗಳಲ್ಲಿ ಬುದ್ಧಿ ಸಕ್ತವಾಗದೆ ಇರುವುದೇ ಅಸಂಗತ್ವ ಅಂದರೆ 'ನಾನು ಮಾಡುತ್ತಿದ್ದೇನೆ' ಎನ್ನುವ ಅಭಿಮಾನ, ಮಮತ್ವ, ಆಸಕ್ತಿಯಿರಬಾರದು. ಅಂತಹವನು ಕರ್ಮ ಪಾಶದಿಂದ 'ನ ನಿಬಧ್ಯತೇ'- ಬಂಧಿಸಲ್ಪಡು ವುದಿಲ್ಲವೆನ್ನುವುದು ಗೀತೋಕ್ತಿ; ಆದ್ದರಿಂದ ಸಂಗರಹಿತನಾಗಿ ಫಲಾಪೇಕ್ಷಾ ರಹಿತನಾಗಿ ಕಾರ್ಯಗಳನ್ನು ಆಚರಿಸುವುದನ್ನು ಅಭ್ಯಸಿಸಬೇಕು.

*'ಅರಾಗ ದ್ವೇಷತಃ'*- ಪದಾರ್ಥಗಳ ಮೇಲೆ ರಾಗದ್ವೇಷಗಳು ಇಲ್ಲದಾಗ ಸಂಗರಹಿತವಾಗಿ ಕಾರ್ಯವನ್ನಾಚರಿಸಲು ಅನುಕೂಲವಾಗುವುದು. ಮತ್ತೆ ಫಲಾಭಿಲಾಷೆಯನ್ನು ತ್ಯಜಿಸಲು ಅನುಕೂಲವಾಗುವುದು. ಆದ್ದರಿಂದ ಕರ್ಮದ ಪವಿತ್ರತೆಗೆ ಈ ರಾಗದ್ವೇಷರಾಹಿತ್ಯವು ಅತ್ಯಂತ ಅವಶ್ಯಕವಾದುದು.

ಪ್ರ : ಸಾತ್ವಿಕ ಕರ್ಮ ಎಂತಹದು?

ಉ: ೧. ಶಾಸ್ತ್ರನಿಯಮಿತವಾದದ್ದು ೨. ಸಂಗರಹಿತವಾಗಿ ಆಚರಿಸಲ್ಪಡುವುದು ೩. ರಾಗದ್ವೇಷರಹಿತವಾಗಿ ಮಾಡುವುದ ೪. ಫಲಾಭಿಲಾಷೆಯಿಲ್ಲದೆ ಮಾಡಲ್ಪಡುವುದು.

**ಅ||** ರಾಜಸ ಕರ್ಮವನ್ನು ಕುರಿತು ಹೇಳುತ್ತಿದ್ದಾನೆ-

**೨೪ ಯತ್ತು ಕಾಮೇಪ್ಸುನಾ ಕರ್ಮ ಸಾಹಂಕಾರೇಣ ವಾ ಪುನಃ**
**ಕ್ರಿಯತೇ ಬಹುಲಾಯಾಸಂ ತದ್ರಾಜಸಮುದಾಹೃತಮ್**

**ಅರ್ಥ:** ಕಾಮೇಪ್ಸುನಾ=ಫಲಾಪೇಕ್ಷೆಯುಳ್ಳವನಿಂದ, ಪುನಃ=ಮತ್ತೆ; ಸಾಹಂಕಾರೇಣ ವಾ=(ನಾನು ಕರ್ತವೆಂದು) ಅಹಂಕಾರದಿಂದ ಕೂಡಿದವ ನಿಂದ; ಬಹುಲಾಯಸಂ=ಅಧಿಕ ಪ್ರಯಾಸಕರವಾದ; ಯತ್ಕರ್ಮ=ಯಾವ ಕರ್ಮವು; ಕ್ರಿಯತೇ=ಮಾಡಲ್ಪಡುತ್ತಿದೆಯೋ; ತತ್=ಅದು: ರಾಜಸಂ= ರಾಜಸಕರ್ಮ (ಎಂದು); ಉದಾಹೃತಂ=ಹೇಳಲ್ಪಡುತ್ತದೆ.

**ತಾ||** ಫಲಾಪೇಕ್ಷೆಯುಳ್ಳವನಿಂದಾಗಲಿ ಮತ್ತೆ ಅಹಂಕಾರದಿಂದ ಕೂಡಿದವ ನಿಂದಾಗಲೀ ಅಧಿಕ ಪ್ರಯಾಸಕರವಾದ ಯಾವ ಕರ್ಮ ಮಾಡಲ್ಪಡುತ್ತದೋ, ಅದು ರಾಜಸ ಕರ್ಮವೆಂದು ಹೇಳಲ್ಪಡುತ್ತದೆ.

**ವ್ಯಾಖ್ಯೆ:** ೧. ಫಲಾಪೇಕ್ಷೆಯಿಂದ ೨. ಅಹಂಕಾರದಿಂದ ಕೂಡಿ ಮಾಡಲ್ಪಡುವ ಕರ್ಮವನ್ನು ರಾಜಸ ಕರ್ಮವೆನ್ನುವರು. 'ಆಯಾಸಂ' ಎಂದು ಹೇಳದೆ 'ಬಹುಲಾಯಾಸಂ' ಎಂದು ಹೇಳಿರುವುದರಿಂದ ರಾಜಸ ಕರ್ಮಾವಲಂಬಿ ಅತ್ಯಂತ ಪ್ರಯಾಸದಿಂದ ಕೂಡಿದ ಕಾರ್ಯಗಳನ್ನು ಮಾಡುತ್ತಿದ್ದಾನೆಂದು ತಿಳಿಯುತ್ತದೆ. ಆದರೆ ಅಂತಹ ಕರ್ಮಗಳಿಂದ ಆತನಿಗೆ ಪ್ರಯಾಸವೇ ಹೊರತು ಬಂಧನಿವೃತ್ತಿಯುಂಟಾಗುವುದಿಲ್ಲ. ಏಕೆಂದರೆ ಅವು ಅಹಂಕಾರ, ಫಲಾಪೇಕ್ಷೆಯೆನ್ನುವ ದೋಷಗಳಿಂದ ಕೂಡಿವೆ. ಅಹಂಕಾರವೇ ಬಂಧ, ಕರ್ತೃತ್ವವೇ ಬಂಧ. ಫಲಾಕಾಂಕ್ಷೆಯೇ ಬಂಧ, ಆದ್ದರಿಂದ ಮುಮುಕ್ಷುವು ರಾಜಸ ಕರ್ಮಗಳ ತಂಟೆಗೆ ಹೋಗದೆ ಸಾತ್ವಿಕ ಕರ್ಮಗಳನ್ನೇ ನಿಷ್ಕಾಮ ಬುದ್ಧಿಯಿಂದ ಆಚರಿಸಿ ಮುಕ್ತಿ ಹೊಂದಬೇಕು.

ಪ್ರ : ರಾಜಸ ಕರ್ಮ ಎಂತಹದು?

ಉ : ೧. ಫಲಾಪೇಕ್ಷೆಯಿಂದ ೨. ಅಹಂಕಾರದಿಂದ ಕೂಡಿ ಆಚರಿಸಲ್ಪಡುವುದು ೩. ಅಧಿಕ ಪ್ರಯಾಸದಿಂದ ಕೂಡಿದುದು.

**ಅ:** ತಾಮಸ ಕರ್ಮದ ವಿವರಣೆ ಕೊಡಲಾಗಿದೆ-

**೨೫ ಅನುಬಂಧಂ ಕ್ಷಯಂ ಹಿಂಸಾಮನಪೇಕ್ಷ್ಯ ಚ ಪೌರುಷಂ**
**ಮೋಹಾದಾರಭ್ಯತೇ ಕರ್ಮ ಯತ್ತತ್ತಾಮಸಮುಚ್ಯತೇ**

**ಅರ್ಥ:** ಅನುಬಂಧಂ=ತಾನು ಮಾಡುವ ಕರ್ಮಕ್ಕೆ ಭವಿಷ್ಯದಲ್ಲಿ ಉಂಟಾಗುವ ದುಃಖಾದಿಗಳನ್ನು; ಕ್ಷಯಂ=(ಧನಾದಿಗಳ) ನಾಶವನ್ನು; ಹಿಂಸಾಂ=(ತನ್ನ ಹಾಗು ಇತರರ ಶರೀರಗಳಿಗೆ ಉಂಟಾಗುವ) ಬಾಧೆ; ಪೌರುಷಂ=ತನ್ನ ಸಾಮರ್ಥ್ಯವನ್ನು; ಅನಪೇಕ್ಷ್ಯ=ಆಲೋಚಿಸದೆ; ಮೋಹಾತ್=ಅವಿವೇಕದಿಂದ; ಯತ್ಕರ್ಮ=ಯಾವ ಕರ್ಮವು; ಆರಭ್ಯತೇ=ಪ್ರಾರಂಭಿಸಲ್ಪಡುವುದೋ; ತತ್=ಅದು; ತಾಮಸಂ=ತಾಮಸ ಕರ್ಮವೆಂದು; ಉಚ್ಯತೇ=ಹೇಳಲ್ಪಡುತ್ತದೆ

**ತಾ||** ತಾನು ಮಾಡುವ ಕರ್ಮಕ್ಕೆ ಭವಿಷ್ಯದಲ್ಲಿ ಉಂಟಾಗುವ ದುಃಖಾದಿಗಳನ್ನು, (ಧನಾದಿಗಳ) ನಾಶವನ್ನು, (ತನ್ನ ಹಾಗು ಇತರರ ಶರೀರಾದಿಗಳಿಗೆ ಉಂಟಾಗುವ) ಬಾಧೆಯನ್ನು, ತನ್ನ ಸಾಮರ್ಥ್ಯವನ್ನು ಆಲೋಚಿಸದೆ ಅವಿವೇಕದಿಂದ ಪ್ರಾರಂಭಿಸಲ್ಪಟ್ಟ ಕರ್ಮವನ್ನು ತಾಮಸ ಕರ್ಮವೆಂದು ಹೇಳಲಾಗುತ್ತದೆ.

**ವ್ಯಾಖ್ಯೆ:** ತಾಮಸ ಕರ್ಮಾವಲಂಬಿ ಹಿಂದೆ ಮುಂದೆ ಆಲೋಚಿಸದೆ ಕರ್ಮಗಳನ್ನು ಪ್ರಾರಂಭಿಸುವನು. ಆ ಕರ್ಮದಿಂದ ಉಂಟಾಗುವ ದುಃಖಗಳ ಬಗ್ಗೆ ವಿಚಾರಿಸುವುದಿಲ್ಲ, ಇತರರಿಗೆ ಅದರಿಂದ ಉಂಟಾಗುವ ತೊಂದರೆ ಯನ್ನೂ ಯೋಚಿಸುವುದಿಲ್ಲ, ತನ್ನ ಶಕ್ತಿ ಸಾಮರ್ಥ್ಯಗಳನ್ನು ನೋಡಿಕೊಳ್ಳು ವುದಿಲ್ಲ. ಅವಿವೇಕದಿಂದ ಕರ್ಮಗಳನ್ನು ಪ್ರಾರಂಭಿಸುತ್ತಾನೆ. ಅಂತಹವನು ಮಾಡುವ ಕರ್ಮ ಮಹಾಪ್ರಮಾದಕರವಾಗಿರುವುದು. ಆದ್ದರಿಂದ ಅದು ತ್ಯಾಜ್ಯವೇ ಹೌದು.

ಸಾಮಾನ್ಯವಾಗಿ ಭಗವದ್ವಿಮುಖನಾಗಿ, ಸ್ವಾರ್ಥ ಸಾಧನೆಗಾಗಿ ಮಾಡುವ ದೃಶ್ಯ ವಿಷಯ ಸಂಪಾದನಾರೂಪವಾದ ಕರ್ಮಗಳೆಲ್ಲವೂ ರಾಜಸ, ತಾಮಸ ಕ್ರಿಯೆಗಳೇ ಆಗಿರುವುವು. ಏಕೆಂದರೆ, ಅವುಗಳಿಂದ ತನ್ನ ಆತ್ಮಕ್ಕೆ ಉಂಟಾಗುವ ನಷ್ಟ, ಸಂಸಾರ ಬಂಧನವನ್ನು ಆತನು ಆಲೋಚಿಸುವುದಿಲ್ಲ.

'ಮೋಹಾತ್'- ಎನ್ನುವುದರಿಂದ ಈ ರಾಜಸ ತಾಮಸ ಕ್ರಿಯೆಗಳಿಗೆ ಮೂಲ ಕಾರಣ ಅವಿವೇಕ, ಅಜ್ಞಾನ ಆಗಿರುವುದೆಂದು ಸ್ಪಷ್ಟವಾಗುತ್ತದೆ. ಆದ್ದರಿಂದ ಮೊದಲು ವಿವೇಕವನ್ನು ಸಂಪಾದಿಸಿ ಇಂತಹ ರಾಜಸ, ತಾಮಸಾದಿ ವೃತ್ತಿಗಳನ್ನು ತ್ಯಜಿಸಿ ಜೀವನವನ್ನು ಸಂಸ್ಕರಿಸಿಕೊಳ್ಳಬೇಕು.

ಪ್ರ : ತಾಮಸ ಕರ್ಮ ಎಂತಹದು?

ಉ : ಮುಂದೆ ಉಂಟಾಗುವ ದುಃಖಾದಿಗಳನ್ನು, (ಧನಾದಿಗಳ) ನಾಶವನ್ನು, (ದೇಹಾದಿಗಳ) ಬಾಧೆಯನ್ನು, ತನ್ನ ಸಾಮರ್ಥ್ಯವನ್ನು ಆಲೋಚಿಸದೆ, ಅವಿವೇಕದಿಂದ ಕುರುಡಾಗಿ ಆಚರಿಸುವ ಕರ್ಮವನ್ನು ತಾಮಸ ಕರ್ಮವೆನ್ನುವರು.

ಪ್ರ : ಇಂತಹ ತಾಮಸ ಪ್ರವೃತ್ತಿಗೆ ಕಾರಣವೇನು?

ಉ : ಅವಿವೇಕ.

**ಅ॥** ಮೂರು ವಿಧಗಳಾದ ಕರ್ತಗಳ ಬಗ್ಗೆ ಹೇಳುತ್ತಾ ಮೊಟ್ಟಮೊದಲಿಗೆ ಸಾತ್ತ್ವಿಕ ಕರ್ತನ ಸ್ವಭಾವವನ್ನು ತಿಳಿಸಲಾಗುತ್ತದೆ -

**೨೬ ಮುಕ್ತಸಂಗೋಽನಹಂವಾದಿ ಧೃತ್ಯುತ್ಸಾಹಸಮನ್ವಿತಃ**
**ಸಿದ್ಧ್ಯಸಿದ್ಧ್ಯೋರ್ನಿರ್ವಿಕಾರಃ ಕರ್ತಾ ಸಾತ್ತ್ವಿಕ ಉಚ್ಯತೇ**

**ಅರ್ಥ:** ಮುಕ್ತ ಸಂಗಃ=ಸಂಗವನ್ನು (ಫಲಾಪೇಕ್ಷೆಯನ್ನು) ಬಿಟ್ಟವನು; ಅನಹಂವಾದೀ='ನಾನುಕರ್ತ'ಎನ್ನುವ ಅಭಿಮಾನ, ಅಹಂಕಾರವಿಲ್ಲದವನು; ಧೃತ್ಯುತ್ಸಾಹಸಮನ್ವಿತಃ=ಧೈರ್ಯ, ಉತ್ಸಾಹಗಳಿಂದ ಕೂಡಿರುವವನು; ಸಿದ್ಧ್ಯಸಿದ್ಧ್ಯೋಃ=ಕಾರ್ಯ ಸಿದ್ಧಿಸಿದರೂ, ಸಿದ್ಧಿಸದೇ ಇದ್ದರೂ; ನಿರ್ವಿಕಾರಃ= ವಿಕಾರ ಉಂಟಾಗದೇ ಇರುವ; ಕರ್ತಾ=ಕರ್ತನು; ಸಾತ್ತ್ವಿಕ= ಸಾತ್ತ್ವಿಕ; ಕರ್ತನೆಂದು; ಉಚ್ಯತೇ=ಹೇಳಲ್ಪಡುತ್ತಿದ್ದಾನೆ.

**ತಾ॥** ಸಂಗವನ್ನು (ಆಸಕ್ತಿ, ಫಲಾಪೇಕ್ಷೆಯನ್ನು) ಬಿಟ್ಟವನು, 'ನಾನು ಕರ್ತ' ಎನ್ನುವ ಅಭಿಮಾನ, ಅಂಹಕಾರವಿಲ್ಲದೇ ಇರುವವನು, ಧೈರ್ಯ ಉತ್ಸಾಹಗಳಿಂದ ಕೂಡಿದವನು, ಕಾರ್ಯವು ಸಿದ್ಧಿಸಿದರೂ, ಸಿದ್ಧಿಸದೇ ಇದ್ದರೂ ವಿಚಲಿತನಾಗದೇ ಇರುವ ಕರ್ತನನ್ನು ಸಾತ್ತ್ವಿಕ ಕರ್ತನೆನ್ನುವರು.

**ವ್ಯಾಖ್ಯೆ:** ನಿತ್ಯ ಜೀವನದಲ್ಲಿ ಮುನುಜನು ನಿರಂತರ ಯಾವುದೋ ಒಂದು ಕರ್ಮವನ್ನು ಮಾಡಬೇಕಾಗಿಯೇ ಇರುವುದರಿಂದ ಕರ್ತನಿಗೆ ಇರಬೇಕಾದ ಈ ಲಕ್ಷಣಗಳನ್ನು ತಿಳಿದುಕೊಂಡಿದ್ದರೆ ಸರಿಯಾಗಿ ವ್ಯವಹರಿಸಲು ಶಕ್ಯವಾಗುವುದು. ಇಲ್ಲಿ ಕರ್ತನಿಗೆ ನಾಲ್ಕು ಉತ್ತಮ ಲಕ್ಷಣಗಳನ್ನು ಕೊಡಲಾಗಿದೆ. ಅವುಗಳಲ್ಲಿ ಮೊದಲನೆಯದು, ಸಂಗವಿಲ್ಲದ್ದು ಅಂದರೆ ಕಾರ್ಯವನ್ನು ಮಾಡಿದರೂ ಫಲಾಪೇಕ್ಷೆಯನ್ನು ಬಿಟ್ಟು ಕಾರ್ಯಕ್ಕೆ ಅಂಟಿಕೊಳ್ಳದೆ ಅಸಂಗನಾಗಿರಬೇಕು. ಎರಡನೆಯದು, 'ಅಹಂ' ಭಾವವು ಇಲ್ಲದಿರುವುದು. ಅಂದರೆ 'ನಾನು ಕರ್ತನು' ಎನ್ನುವ ಅಭಿಮಾನವಿಲ್ಲದಿರುವುದು. ಇನ್ನು ಮೂರನೆಯದು ಧೈರ್ಯೋತ್ಸಾಹಗಳಿಂದ ಕೂಡಿರುವುದು. ಅಂಜುಬುರುಕುತನ, ನಿರುತ್ಸಾಹಗಳಿಗೆ ಅಧ್ಯಾತ್ಮಕ್ಷೇತ್ರದಲ್ಲಿ ಸ್ಥಾನವೇ ಇಲ್ಲ. ಅವುಗಳಿರುವವನು ಪರಮಾರ್ಥ ರಂಗದಲ್ಲಿ ಒಂದು ಹೆಜ್ಜೆಯೂ ಮುಂದುವರಿಯಲಾರ. ತಾನು ಕೇವಲ ನಿತ್ಯ ಶುದ್ಧ, ಬುದ್ಧ, ಮುಕ್ತ, ಆತ್ಮಸ್ವರೂಪನೇ ಎಂದು ತಿಳಿದುಕೊಂಡರೆ ಅಪರಿಮಿತ ಧೈರ್ಯ, ಉತ್ಸಾಹ ಮನುಜನಿಗೆ ಉಂಟಾಗುತ್ತದೆ. ವಾಸ್ತವವಾಗಿ ತಾನು ನಿರ್ಮಲಾತ್ಮನೇ ಆದುದರಿಂದ ಅಧೈರ್ಯ, ನಿರುತ್ಸಾಹವನ್ನು ದೂರಮಾಡಿಕೊಂಡು ಸಾಧನೆಗಳಲ್ಲಿ ಪ್ರಯತ್ನ ಶೀಲನಾಗಬೇಕು. ಸಾತ್ತ್ವಿಕ ಕರ್ತನ ನಾಲ್ಕನೆಯ ಲಕ್ಷಣ, ಕಾರ್ಯದ ಸಿದ್ಧಿ, ಅಸಿದ್ಧಿಗಳಲ್ಲಿ ನಿರ್ವಿಕಾರನಾಗಿರುವುದು. ಕಾರ್ಯಗಳಲ್ಲಿ ಅಪಜಯ ಹೊಂದಿದರೆ, ಇಲ್ಲವೆ ಕಾರ್ಯ ವಿಫಲವಾದರೆ ಜಯಕ್ಕಾಗಿ, ಸಫಲತೆಗಾಗಿ ಮತ್ತೆ ಪ್ರಯತ್ನ ಮಾಡಬೇಕೇ ಹೊರತು ಮನೋ ವಿಚಲತೆಯನ್ನು ಹೊಂದಬಾರದು. ದ್ವಂದ್ವಗಳಿಗೆ ಸ್ವಲ್ಪವೂ ಬಗ್ಗಬಾರದು. ಈ ಜಗತ್ತೆಲ್ಲವೂ ಮಿಥ್ಯವೆಂದು ತಿಳಿದು, ತಾನು ಸಾಕ್ಷಿಯಾದ ಆತ್ಮ ಸ್ವರೂಪವೆಂದು ಭಾವಿಸಿ, ದ್ವಂದ್ವಗಳಲ್ಲಿ ಸಮಬುದ್ಧಿ ಹೊಂದಿ ವರ್ತಿಸಬೇಕು.

ಪ್ರ : ಸಾತ್ತ್ವಿಕ ಕರ್ತನ ಲಕ್ಷಣಗಳು ಯಾವುವು?

ಉ : ೧. ಸಂಗವನ್ನು (ಫಲಾಪೇಕ್ಷೆಯನ್ನು ಬಿಡುವುದು)
೨. 'ನಾನು ಕರ್ತ' ಎನ್ನುವ ಅಹಂಭಾವವಿಲ್ಲದಿರುವುದು
೩. ಧೈರ್ಯೋತ್ಸಾಹಗಳನ್ನು ಹೊಂದಿರುವುದು.
೪. ಕಾರ್ಯ ಸಫಲವಾದರೂ, ವಿಫಲವಾದರೂ ವಿಚಲಿತನಾಗದೆ ಇರುವುದು.

**ಅ॥** ರಾಜಸ ಕರ್ತನನ್ನು ಕುರಿತು ಹೇಳಲಾಗುತ್ತಿದೆ-

**೨೭ ರಾಗೀ ಕರ್ಮಫಲಪ್ರೇಪ್ಸುರ್ಲುಬ್ಧೋ ಹಿಂಸಾತ್ಮಕೋಽಶುಚಿಃ**
**ಹರ್ಷಶೋಕಾನ್ವಿತಃ ಕರ್ತಾ ರಾಜಸಃ ಪರಿಕೀರ್ತಿತಃ**

**ಅರ್ಥ:** ರಾಗೀ=ಅನುರಾಗ (ಬಂಧ್ವಾದಿಗಳಲ್ಲಿ ಅಭಿಮಾನ); ಕರ್ಮಫಲ ಪ್ರೇಪ್ಸುಃ=ಕರ್ಮಫಲವನ್ನು ಆಶ್ರಯಿಸುವವನು; ಲುಬ್ಧಃ=ಲೋಭಿ; ಹಿಂಸಾತ್ಮಕಃ= ಹಿಂಸಾಸ್ವಭಾವವುಳ್ಳವನು; ಅಶುಚಿಃ=ಶುಚಿತ್ವವಿಲ್ಲದವನು; ಹರ್ಷ ಶೋಕಾನ್ವಿತಃ= (ಕಾರ್ಯವು ಸಿದ್ಧಿಸಿದಾಗ) ಸಂತೋಷದಿಂದ (ಕಾರ್ಯ ಸಿದ್ಧಿಸದಾಗ) ದುಃಖದಿಂದ ಕೂಡಿದವನೂ; ಕರ್ತಾ=ಕರ್ತ; ರಾಜಸಃ=ರಾಜಸಕರ್ತನೆಂದು, ಪರಿಕೀರ್ತಿತಃ=ಹೇಳಲ್ಪಡುತ್ತಾನೆ.

**ತಾ॥** ಅನುರಾಗ (ಬಂಧ್ವಾದಿಗಳಲ್ಲಿ ಅಭಿಮಾನ) ವಿರುವವನು, ಕರ್ಮ ಫಲವನ್ನು ಆಶಿಸುವವನು, ಲೋಭಿ, ಹಿಂಸಾಸ್ವಭಾವವುಳ್ಳವನು, ಶುಚಿತ್ವವಿಲ್ಲದವನು, (ಕಾರ್ಯವು ಸಿದ್ಧಿಸಿದಾಗ) ಸಂತೋಷದಿಂದಿದ್ದು, (ಸಿದ್ಧಿಸದಿದ್ದಾಗ) ದುಃಖ ದಿಂದಿರುವ ಕರ್ತನನ್ನು ರಾಜಸ ಕರ್ತನೆನ್ನುವರು.

**ವ್ಯಾಖ್ಯೆ:** ಈ ಮೇಲಿನ ಲಕ್ಷಣಗಳನ್ನು ಹೊಂದಿರುವವನನ್ನು ರಾಜಸ ಕರ್ತನೆಂದು ಹೇಳಿರುವುದರಿಂದ ಉತ್ತಮನಾದವನು ಆ ಲಕ್ಷಣಗಳನ್ನು ತ್ಯಜಿಸಬೇಕು. ಅಂದರೆ ಬಂಧ್ವಾದಿಗಳಲ್ಲಿ, ಇತರ ಪ್ರಾಪಂಚಿಕ ಪದಾರ್ಥಗಳಲ್ಲಿ ಅನುರಾಗ, (ಅಭಿಮಾನ) ವಿಲ್ಲದಿರಬೇಕು. ಕರ್ಮ ಫಲವನ್ನು ಕೋರಬಾರದು. ಯಾವ ಪ್ರಾಣಿಯನ್ನೂ ಹಿಂಸಿಸಬಾರದು. ಅಶುಭ್ರತೆ ಹೊಂದಿರಬಾರದು. ಕಾರ್ಯದ ಸಿದ್ಧಿ, ಅಸಿದ್ಧಿಗಳಲ್ಲಿ ಹರ್ಷ ಶೋಕಗಳನ್ನು ಹೊಂದದೆ, ಮನೋ ವಿಕಾರಗಳಿಲ್ಲದೆ, ಸಮಚಿತ್ತವಾಗಿ, ದ್ವಂದ್ವ ಸಹಿಷ್ಣುವಾಗಿರಬೇಕು. ಪ್ರತಿಯೊಬ್ಬನೂ ತನ್ನನ್ನು ತಾನು ಪರಿಶೋಧಿಸಿಕೊಂಡು, ಮೇಲೆ ತಿಳಿಸಿದ ರಾಜಸಿಕ ಕರ್ತನ ಲಕ್ಷಣಗಳಿದ್ದಲ್ಲಿ ಅವುಗಳನ್ನು ಪ್ರಯತ್ನ ಪೂರ್ವಕವಾಗಿ ಬಿಟ್ಟು ಸಾತ್ತ್ವಿಕ ಕರ್ತನೇ ಆಗಲು ಪ್ರಯತ್ನಿಸಬೇಕು.

ಪ್ರ : ರಾಜಸ ಕರ್ತ ಎಂತಹವನು?

ಉ :೧. (ಬಂಧ್ವಾದಿಗಳಲ್ಲಿ) ಅನುರಾಗವಿರುವವನು ೨. ಕರ್ಮಫಲವನ್ನು ಅಪೇಕ್ಷಿಸುವವನು ೩. ಲೋಭಿ ೪. ಹಿಂಸಾಸ್ವಭಾವವುಳ್ಳವನು ೫. ಶುಚಿತ್ವವಿಲ್ಲದವನು ೬. (ಕಾರ್ಯಸಿದ್ಧಿಯಲ್ಲಿ) ಸಂತೋಷದಿಂದಿದ್ದು, (ಕಾರ್ಯ ವೈಫಲ್ಯದಲ್ಲಿ) ದುಃಖದಿಂದ ಕೂಡಿರುವವನ್ನು ರಾಜಸ ಕರ್ತನೆನ್ನುವರು.

**ಅ॥** ತಾಮಸ ಕರ್ತನ ಲಕ್ಷಣಗಳನ್ನು ವಿವರಿಸಲಾಗುತ್ತಿದೆ -

**೨೮ ಅಯುಕ್ತಃ ಪ್ರಾಕೃತಃ ಸ್ತಬ್ಧಃ ಶಠೋನೈಷ್ಕೃತಿಕೋಽಲಸಃ**
**ವಿಷಾದೀ ದೀರ್ಘಸೂತ್ರೀ ಚ ಕರ್ತಾ ತಾಮಸ ಉಚ್ಯತೇ**

**ಅರ್ಥ:** ಅಯುಕ್ತಃ=ಮನೋನಿಗ್ರಹ (ಚಿತ್ತೈಕಾಗ್ರತೆ) ಇಲ್ಲದವನು; ಪ್ರಾಕೃತಃ= ಪಾಮರ ಸ್ವಭಾವವುಳ್ಳವನು (ಅವಿವೇಕಿ); ಸ್ತಬ್ಧಃ=ವಿನಯವಿಲ್ಲದೇ ಇರುವವನು; ಶಠಃ=ಮೋಸಗಾರನು; ನೈಷತಿಕಃ =ಇತರರನ್ನು ವಂಚಿಸಿ ಅವರ ಕಾರ್ಯ ಗಳನ್ನು ಹಾಳು ಮಾಡುವವನು; ಅಲಸಃ=ಸೋಮಾರಿತನ ಹೊಂದಿರುವವನು; ವಿಷಾದೀ=ಯಾವಾಗಲೂ ಭಯದಿಂದಿರುವವನು; ದೀರ್ಘ ಸೂತ್ರೀ ಚ=ಸ್ವಲ್ಪ ಕಾಲದಲ್ಲಿ ಮಾಡಬೇಕಾದದ್ದನ್ನು ದೀರ್ಘ ಕಾಲದಲ್ಲಿಯೂ ಪೂರ್ತಿ ಮಾಡದವನು ಕರ್ತಾ=ಕರ್ತ; ತಾಮಸಃ=ತಮಸ ಕರ್ತನೆಂದು; ಉಚ್ಯತೇ= ಹೇಳಲ್ಪಡುತ್ತಿದ್ದಾನೆ.

**ತಾ||** ಮನೋನಿಗ್ರಹ (ಚಿತ್ತೈಕಾಗ್ರತೆ) ಇಲ್ಲದವನು, ಪಾಮರಸ್ವಭಾವ ಉಳ್ಳವನು (ಅವಿವೇಕಿ), ವಿನಯವಿಲ್ಲದವನು, ಮೋಸಗಾರನು, ಇತರರನ್ನು ವಂಚಿಸಿ ಅವರ ಜೀವನವನ್ನು ಹಾಳು ಮಾಡುವವನು, ಸೋಮಾರಿ, ಯಾವಾಗಲೂ ಭಯದಿಂದ ಇರುವವನು, ಸ್ವಲ್ಪಕಾಲದಲ್ಲಿ ಮಾಡಬೇಕಾದ ಕಾರ್ಯವನ್ನು ದೀರ್ಘಕಾಲದಲ್ಲಿಯೂ ಪೂರ್ತಿ ಮಾಡಲಾರದ ಕರ್ತನನ್ನು ತಾಮಸ ಕರ್ತನೆನ್ನುವರು.

**ವ್ಯಾಖ್ಯೆ:** 'ಅಯುಕ್ತಃ'- ಬಹಿರ್ಮುಖವಾಗಿ, ಚಂಚಲವಾಗಿರುವ ಮನಸು ಳ್ಳವನು, ಆತ್ಮದಲ್ಲಿ ನಿಲುಕಡೆಯಿಲ್ಲದವನು, ಏಕಾಗ್ರತೆ, ನಿಗ್ರಹವಿಲ್ಲದವನನ್ನು ಅಯುಕ್ತನೆನ್ನುವರು. ಆತ್ಮ, ಭಗವಂತನೊಡನೆ ಸಂಲಗ್ನವಾಗದೇ ಇರುವವನು ಅಯುಕ್ತನು. ಅಂತಹವನ ಮನಸ್ಸು ನಿಗ್ರಹವಾಗಿರದೆ ಹೊರಗೇ ತಿರುಗಾಡು ತ್ತಿರುತ್ತದೆ.

'ಪ್ರಾಕೃತಃ'- ಪ್ರಕೃತಿ ಗುಣಗಳನ್ನು ಹೊಂದಿರುವವನು ಪ್ರಾಕೃತನು. ಸಂಸ್ಕಾರವಿಲ್ಲದವನನ್ನು ಪಾಮರನೆನ್ನುವರು. ಪ್ರತಿಯೊಬ್ಬನೂ ತನ್ನಲ್ಲಿಯ ಪ್ರಕೃತಿಗುಣಗಳನ್ನು ತೊಲಗಿಸಿಕೊಂಡು ಅಪ್ರಾಕೃತನಾಗಿ, ದೈವ ಸ್ವರೂಪಿಯಾಗಿ ಬದಲಾಗಬೇಕು.

'ನೈಷ್ಕೃತಿಕಃ'= ಇತರರ ಕಾರ್ಯಗಳನ್ನು ಕೆಡಿಸುವವನು. ಇತರರನ್ನು ವಂಚಿಸುವವನು. ಸಾಮಾನ್ಯವಾಗಿ ಜನರು ನಾಲ್ಕು ರೀತಿಯಲ್ಲಿರುವರು ೧. ತನ್ನ ಸುಖವನ್ನೂ ನೋಡದೆ ಬೇರೆಯವರಿಗೆ ಮೇಲು ಮಾಡುವವನು. ೨. ತನ್ನ ಸುಖವನ್ನು ನೋಡಿಕೊಂಡು ಬೇರೆಯವರ ಹಿತ ಕೋರುವವನು. ೩. ತನ್ನ ಸುಖಕ್ಕಾಗಿ ಪರರಿಗೆ ನಷ್ಟವುಂಟುಮಾಡುವವನು. ೪. ಅನವಶ್ಯಕವಾಗಿ ಬೇರೆಯವರಿಗೆ ನಷ್ಟವುಂಟುಮಾಡುವವನು. ಮೊದಲಿನವನು ಉತ್ತಮನು. ಎರಡನೆಯವನು ಮಧ್ಯಮನು. ಮೂರನೆಯವನು ಅಧಮನು. ನಾಲ್ಕನೆಯವನು ಅಧಮಾಧಮನು. ಈ ಶ್ಲೋಕದಲ್ಲಿ ತಿಳಿಸಲ್ಪಟ್ಟ 'ನೈಷ್ಕೃತಿಕ'ರು ಕೊನೆಯ ಎರಡು ತರಗತಿಗಳಿಗೆ ಸೇರಿದವರು.

'ಅಲಸಃ'- ಸೋಮಾರಿ-ಭಗವಂತನು ಸೋಮಾರಿತನವನ್ನು ತಾಮಸ ವೆಂದು ತಿಳಿಸಿ ಅದನ್ನು ಹೊರದೋಡಿಸಬೇಕೆಂದು ಬೋಧಿಸುತ್ತಿದ್ದಾನೆ. ಸೋಮಾರಿ ಯಾವ ರಂಗದಲ್ಲಿಯೂ ವೃದ್ಧಿ ಹೊಂದಲಾರನು. ಅಧ್ಯಾತ್ಮರಂಗದಲ್ಲಿ ಸೋಮಾರಿಗಳಿಗೆ ಸ್ಥಾನವೇ ಇಲ್ಲ.

'ವಿಷಾದೀ'- ತಾಮಸಕರ್ತ ಪ್ರತಿ ಕಾರ್ಯದಲ್ಲೂ ಅಳುವ ಮುಖ ವಿಟ್ಟುಕೊಂಡಿರುವನು, ವಾಸ್ತವವಾಗಿ ಅನಂತಾನಂದ ಪರಿಪೂರ್ಣವಾದ ಮಾನವನು ವಿಷಾದಯುಕ್ತವಾಗಿ ಮೂಲುಗುವುದು ಕೇವಲ ಅಜ್ಞಾನವೇ ಸರಿ. ಆದ್ದರಿಂದ ಗಂಭೀರವಾದ ಸ್ವಸ್ವರೂಪವನ್ನು ತಿಳಿದು ವಿಷಾದವನ್ನು ಹೊರದೂಡಬೇಕು.

'ದೀರ್ಘ ಸೂತ್ರೀ'- ಮಂದವಾಗಿ ಪ್ರವರ್ತಿಸುವವನು. ಆಮೆ ನಡೆದ ಹಾಗೆ ನಡೆಯುತ್ತಾ ಚಿಕ್ಕ ಕೆಲಸವನ್ನೂ ಗಂಟೆಗಟ್ಟಲೇ ಮಾಡುತ್ತಾ, ಇಲ್ಲ ಮಾಡದೇ ಮುಂದಕ್ಕೆ ಹಾಕುತ್ತಾ ಇರುವವನು. ಈ ತಾಮಸ ಕರ್ತ 'ನಂತರ ನೋಡೋಣ' ಎನ್ನುವ ಭಾವವನ್ನು ಹೊಂದಿರುವನು. ಮಹಾಭಾರತದ ಶಾಂತಿ ಪರ್ವದಲ್ಲಿ ಭೀಷ್ಮನು ಧರ್ಮರಾಜನಿಗೆ 'ದೀರ್ಘದರ್ಶಿ, ಪ್ರಾಪ್ತಕಾಲಜ್ಞ, ದೀರ್ಘಸೂತ್ರಿ' ಎನ್ನುವ ಮೂರು ಮೀನುಗಳನ್ನು ಕುರಿತು ಬೋಧಿಸಿದ ವಿಷಯ ಈ ಸಂದರ್ಭದಲ್ಲಿ ಜ್ಞಾಪಿಸಿಕೊಳ್ಳುವುದು ಉಚಿತ. ಆ ಮೂರು ಮೀನುಗಳಲ್ಲಿ ದೀರ್ಘದರ್ಶಿ ಮುಂದಾಲೋಚನೆಯುಳ್ಳದ್ದು. ಪ್ರಾಪ್ತ ಕಾಲಜ್ಞನು ಸ್ವಲ್ಪ ಪ್ರಯತ್ನ ಲೋಪವುಳ್ಳದ್ದು. ದೀರ್ಘಸೂತ್ರಿ ಯಾವ ಪ್ರಯತ್ನವನ್ನೂ ಮಾಡದ ಸೋಮಾರಿ (ಕಥೆಯಲ್ಲಿ ಅದು ಬೆಸ್ತನ ಬಲೆಯಲ್ಲಿ ಬಿದ್ದು ಮರಣಿಸುವುದು). ಆದ್ದರಿಂದ ಇಂತಹ ದೀರ್ಘಸೂತ್ರತೆ, ಆಲಸ್ಯ, ಸೋಮಾರಿ ತನವನ್ನು ಮುಮುಕ್ಷುಗಳು ಹತ್ತಿರ ಸೇರಿಸಬಾರದು. ಅಮೂಲ್ಯವಾದ ಮಾನವ ಜನ್ಮವನ್ನು ಹೊಂದಿ ಭಗವತ್ಪ್ರಾಪ್ತಿಗಾಗಿ ಯತ್ನಿಸದೆ ಸೋಮಾರಿಯಾಗಿ ಕಳೆಯುವುದು ಮಹಾಪ್ರಮಾದಕರ ಎಂದು ತಿಳಿಯಬೇಕು.

ಪ್ರ : ತಾಮಸ ಕರ್ತ ಎಂತಹವನು?

ಉ : ೧. ಮನೋನಿಗ್ರಹ (ಚಿತ್ತೈಕಾಗ್ರತೆ) ಇಲ್ಲದವನು ೨. ಪಾಮರನು ೩. ಮಂದ ಹಾಗು ವಿವೇಕವಿಲ್ಲದವನು. ೪. ಮೋಸಗಾರ ೫. ಇತರರ ಕಾರ್ಯ ಗಳನ್ನು ಕೆಡಿಸುವವನು ೬. ಸೋಮಾರಿ ೭. ಯಾವಾಗಲೂ ಯಾವುದೋ ಚಿಂತೆಯಿಂದ (ದುಃಖದಿಂದ) ಕೂಡಿರುವವನು ೮. ಕೆಲಸಗಳನ್ನು ಪೂರ್ತಿ ಮಾಡದೆ ಮುಂದಕ್ಕೆ ಹಾಕುವವನು ತಾಮಸಕರ್ತನು-

**ಅ||** ಬುದ್ಧಿ, ಧೈರ್ಯಗಳ ಸತ್ತ್ವಾದಿ ತ್ರಿವಿಧ ರೂಪಗಳನ್ನು ಬೇರೆ ಬೇರೆಯಾಗಿ ತಿಳಿಸಲಾಗುತ್ತಿದೆ-

**೨೯ ಬುದ್ಧೇರ್ಭೇದಂ ಧೃತೇಶ್ಚೈವ ಗುಣಸ್ತ್ರಿವಿಧಂ ಶೃಣು**
**ಪ್ರೋಚ್ಯಮಾನಮಶೇಷೇಣ ಪೃಥಕ್ತ್ವೇನ ಧನಂಜಯ**

**ಅರ್ಥ:** ಧನಂಜಯ=ಓ ಅರ್ಜುನಾ! ಬುದ್ಧೇಃ=ಬುದ್ಧಿಯ; ಧೃತೇಃ ಚ ಏ=ಧೈರ್ಯದ; ಭೇದಂ=ಭೇದವನ್ನು; ಗುಣತಃ=ಗುಣಗಳನ್ನು ಹಿಡಿದು; ತ್ರಿವಿಧಂ=ಮೂರು ವಿಧಗಳಾಗಿ; ಪೃಥಕ್ತ್ವೇನ=ಬೇರೆ ಬೇರೆಯಾಗಿ; ಅಶೇಷೇಣ= ಸಂಪೂರ್ಣವಾಗಿ; ಪ್ರೋಚ್ಯಮಾನಂ=ಹೇಳಲ್ಪಡುತ್ತಿರುವುದನ್ನು; ಶೃಣು=ಕೇಳು.

**ತಾ||** ಓ ಅರ್ಜುನಾ! ಬುದ್ಧಿ ಹಾಗು ಧೈರ್ಯಗಳು ಅವುಗಳ ಗುಣಗಳ ಪ್ರಕಾರ ಮೂರು ವಿಧಗಳಾಗಿವೆ. (ಅವುಗಳನ್ನು) ಬೇರೆ ಬೇರೆಯಾಗಿ ಸಂಪೂರ್ಣವಾಗಿ ಹೇಳುತ್ತೇನೆ (ನೀನು ಈಗ) ಕೇಳು.

**ಅ||** ಮೊಟ್ಟ ಮೊದಲು ಸಾತ್ವಿಕ ಬುದ್ಧಿಯನ್ನು ಕುರಿತು ಹೇಳಲಾಗಿದೆ-

**೩೦ ಪ್ರವೃತ್ತಿಂ ಚ ನಿವೃತ್ತಿಂ ಚ ಕಾರ್ಯಾಕಾರ್ಯೇ ಭಯಾಭಯೇ**
**ಬಂಧಂ ಮೋಕ್ಷಂ ಚ ಯಾ ವೇತ್ತಿ ಬುದ್ಧಿಸ್ಸಾ ಪಾರ್ಥ ಸಾತ್ತ್ವಿಕೀ**

**ಅರ್ಥ:** ಪಾರ್ಥ=ಓ ಅರ್ಜುನಾ! ಯಾ ಬುದ್ಧಿಃ=ಯಾವಬುದ್ಧಿ; ಪ್ರವೃತ್ತಿಂ ಚ=ಧರ್ಮದಲ್ಲಿ ಪ್ರವೃತ್ತಿಯನ್ನು (ಇಲ್ಲವೆ ಪ್ರವೃತ್ತಿ ಮಾರ್ಗವಾದ ಕರ್ಮಮಾರ್ಗವನ್ನು); ನಿವೃತ್ತಿಂ ಚ=ಅಧರ್ಮದಿಂದ ನಿವೃತ್ತಿಯನ್ನು (ಇಲ್ಲವೆ ನಿವೃತ್ತಿ ಮಾರ್ಗವಾದ ಸಂನ್ಯಾಸ ಮಾರ್ಗವನ್ನು); ಕಾರ್ಯಾ ಕಾರ್ಯೇ=ಮಾಡ ಬಹುದಾದ, ಮಾಡಬಾರದಾದ; ಭಯಾಭಯೇ=ಭಯ ಹಾಗೂ ಅಭಯ

(ನಿರ್ಭಯತೆ); ಬಂಧಂ=ಬಂಧವನ್ನು; ಮೋಕ್ಷಂ ಚ=ಮೋಕ್ಷವನ್ನು; ವೇತ್ತಿ= ತಿಳಿದುಕೊಳ್ಳುತ್ತಿದೆಯೋ; ಸಾ=ಅಂತಹ ಬುದ್ಧಿಃ ಸಾತ್ತ್ವಿಕೀ=ಸಾತ್ತ್ವಿಕವಾದ ದ್ದೆನಿಸುವುದು.

**ತಾ||** ಓ ಅರ್ಜುನಾ! ಯಾವ ಬುದ್ಧಿ ಧರ್ಮದಲ್ಲಿ ಪ್ರವೃತ್ತಿಯನ್ನು (ಇಲ್ಲವೆ ಪ್ರವೃತ್ತಿ ಮಾರ್ಗವಾದ ಕರ್ಮಮಾರ್ಗವನ್ನು), ಅಧರ್ಮದಿಂದ ನಿವೃತ್ತಿಯನ್ನು (ಇಲ್ಲವೆ ನಿವೃತ್ತಿಮಾರ್ಗವಾದ ಸಂನ್ಯಾಸ ಮಾರ್ಗವನ್ನು), ಮಾಡಬೇಕಾದದ್ದನ್ನು, ಮಾಡಬಾರದದ್ದನ್ನು ಭಯಾಭಯಗಳನ್ನು, ಬಂಧ, ಮೋಕ್ಷವನ್ನು ತಿಳಿದು ಕೊಳ್ಳುತ್ತದೆಯೋ ಅಂತಹ ಬುದ್ಧಿ ಸಾತ್ತ್ವಿಕವಾದದ್ದು.

**ವ್ಯಾಖ್ಯೆ:** ಸಾತ್ತ್ವಿಕ ಬುದ್ಧಿ ಒಳ್ಳೆಯದು ಕೆಟ್ಟದ್ದು ಎರಡನ್ನೂ ಕುರಿತು ತಿಳಿದುಕೊಂಡು ಒಳ್ಳೆಯದನ್ನು ಗ್ರಹಿಸಿ ಕೆಟ್ಟದ್ದನ್ನು ಬಿಡುತ್ತದೆ. ಹಾಗೆಯೇ ಬಂಧ, ಮೋಕ್ಷ ಎರಡನ್ನೂ ತಿಳಿದುಕೊಂಡವನು ಬಂಧವನ್ನು ಪರಿತ್ಯಜಿಸಿ ಮೋಕ್ಷವನ್ನು ಕುರಿತು ಯತ್ನಿಸುವನು. ಭಯರೂಪವಾದ ಈ ದೃಶ್ಯಸಂಸಾರ ಸ್ಥಿತಿಯನ್ನು ನೋಡಿ ಅದರೆಡೆ ವಿರಕ್ತಿ ಹೊಂದಿ, ಅಭಯ ರೂಪವಾದ, ನಿತ್ಯಾನಂದ ಪರಮಾತ್ಮನನ್ನೇ ಆಶ್ರಯಿಸಿ ಮುಕ್ತಿಹೊಂದುವನು. ಅಂತಹ ಸಾತ್ತ್ವಿಕ ಬುದ್ಧಿಯೇ ಉತ್ತಮೋತ್ತಮವಾದುದು. ಆದ್ದರಿಂದ ಅಂತಹ ಬುದ್ಧಿ ತಮಗಿದೆಯೇ ಎಂದು ಪ್ರತಿಯೊಬ್ಬರೂ ಪರೀಕ್ಷಿಸಿಕೊಂಡು ಭಗವದ್ದೃಷ್ಟಿಯಲ್ಲಿ 'ಬುದ್ಧಿವಂತರಾಗಿ' ವರ್ತಿಸಲು ಪ್ರಯತ್ನಿಸಬೇಕು. ಇಂತಹ ಲಕ್ಷಣಗಳುಳ್ಳ ಬುದ್ಧಿಯಿಲ್ಲದಿದ್ದರೆ ಎಷ್ಟು ಪಾಂಡಿತ್ಯ ಹಾಗು ಲೌಕಿಕ ಪ್ರಜ್ಞೆಯಿದ್ದರೂ ಜನರು ಬುದ್ಧಿಯ ಕೊರತೆಯುಳ್ಳವರೇ ಆಗುವರು.

ಪ್ರ : ಸಾತ್ತ್ವಿಕ ಬುದ್ಧಿ ಎಂತಹದು ?

ಉ : ೧. ಧರ್ಮ ಪ್ರವೃತ್ತಿಯನ್ನು (ಇಲ್ಲವೆ ಪ್ರಕೃತಿಮಾರ್ಗವನ್ನು) ೨. ಮಾಡಬೇಕಾದದ್ದನ್ನು, ಮಾಡಬಾರದದ್ದನ್ನು ೩. ಭಯ, ಅಭಯವನ್ನು ೪. ಬಂಧ, ಮೋಕ್ಷವನ್ನು - ತಿಳಿದುಕೊಳ್ಳುವ ಬುದ್ಧಿಯನ್ನೇ ಸಾತ್ತ್ವಿಕ ಬುದ್ಧಿಯೆನ್ನುವರು.

**ಅ||** ರಾಜಸ ಬುದ್ಧಿಯ ಉಲ್ಲೇಖ-

೩೧ ಯಯಾ ಧರ್ಮಮಧರ್ಮಂ ಚ ಕಾರ್ಯಂ ಚಾಕಾರ್ಯಮೇವಚ
ಅಯಥಾವತ್ಪ್ರಜಾನಾತಿ ಬುದ್ಧಿಸ್ಸಾ ಪಾರ್ಥ ರಾಜಸೀ

**ಅರ್ಥ:** ಪಾರ್ಥ=ಓ ಅರ್ಜುನಾ! ಯಯಾ=ಯಾವ ಬುದ್ಧಿಯಿಂದ; ಧರ್ಮಂ=ಧರ್ಮವನ್ನು; ಅಧರ್ಮಂ ಚ=ಅಧರ್ಮವನ್ನು; ಕಾರ್ಯಂ ಚ=ಮಾಡಬೇಕಾದದ್ದನ್ನು; ಅಕಾರ್ಯಂ ಏವಂ ಚ=ಮಾಡಬಾರದ್ದನ್ನು; ಅಯಥಾವತ್=ಇದ್ದದ್ದು ಇದ್ದಂತಲ್ಲದೆ (ಮತ್ತೊಂದು ವಿಧವಾಗಿ) ಪ್ರಜಾನಾತಿ= ತಿಳಿದುಕೊಳ್ಳುತ್ತಿದ್ದಾನೋ; ಸಾ ಬುದ್ಧಿಃ=ಆ ಬುದ್ಧಿ; ರಾಜಸೀ=ರಾಜಸವಾದದ್ದು (ರಜೋಗುಣ ಸಂಬಂಧವಾದದ್ದು) ಆಗಿದೆ.

**ತಾ||** ಓ ಅರ್ಜುನಾ! ಯಾವ ಬುದ್ಧಿಯಿಂದ ಮನುಜನು ಧರ್ಮ, ಅಧರ್ಮ; ಮಾಡಬೇಕಾದ, ಮಾಡಬಾರದ; ಇದ್ದದ್ದು ಇದ್ದ ಹಾಗಲ್ಲದೆ (ಮತ್ತೊಂದು ವಿಧವಾಗಿ, ಬೇರೆ ಅರ್ಥದಲ್ಲಿ) ತಿಳಿಯುತ್ತಿದ್ದಾನೋ ಆ ಬುದ್ಧಿ ರಾಜಸಬುದ್ಧಿ ಯೆನಿಸಿಕೊಳ್ಳುವುದು.

**ವ್ಯಾಖ್ಯೆ:** ಕೆಲವರ ಬುದ್ಧಿ ಧರ್ಮಾಧರ್ಮಗಳನ್ನು, ಕರ್ತವ್ಯಾಕರ್ತವ್ಯಗಳನ್ನು ಶಾಸ್ತ್ರಗಳಲ್ಲಿ ತಿಳಿಸಿದ ರೀತಿಯಲ್ಲಲ್ಲದೆ, ಹಿರಿಯರಾದ ಗುರುಗಳು ತಿಳಿಸಿದ ರೀತಿಯಲ್ಲಲ್ಲದೆ ಇನ್ನೊಂದು ವಿಧವಾಗಿ ತಪ್ಪಾಗಿ ಗ್ರಹಿಸುವುದು. ಅಂತಹ ಬುದ್ಧಿ ರಾಜಸವಾದದ್ದು. ಅದನ್ನು ಸಾತ್ತ್ವಿಕ ಬುದ್ಧಿಯಾಗಿ ಬದಲು ಮಾಡಿಕೊಳ್ಳಬೇಕು

ಪ್ರ : ರಾಜಸ ಬುದ್ಧಿ ಎಂತಹದು ?

ಉ : ಧರ್ಮ, ಅಧರ್ಮ; ಕರ್ತವ್ಯ, ಅಕರ್ತವ್ಯ; ಇದ್ದದ್ದು ಇದ್ದ ಹಾಗಲ್ಲದೆ ತಪ್ಪಾಗಿ ಗ್ರಹಿಸುವ ಬುದ್ಧಿಯನ್ನು ರಾಜಸ ಬುದ್ಧಿಯೆನ್ನುವರು.

**ಅ||** ಇನ್ನು ತಾಮಸ ಬುದ್ಧಿಯ ವರ್ಣನೆ-

೩೨ ಅಧರ್ಮಂ ಧರ್ಮಮಿತಿ ಯಾ ಮನ್ಯತೇ ತಮಸಾಽಽವೃತಾ
ಸರ್ವಾರ್ಥಾನ್ವಿಪರೀತಾಂಶ್ಚ ಬುದ್ಧಿಸ್ಸಾ ಪಾರ್ಥ ತಾಮಸೀ

**ಅರ್ಥ:** ಪಾರ್ಥ=ಓ ಅರ್ಜುನಾ! ಯಾ=ಯಾವ ಬುದ್ಧಿಃ ತಮಸಾ= ಅವಿವೇಕದಿಂದ, ಆವೃತಾ=ಕವಿಯಲ್ಪಟ್ಟಿರುವುದೋ; ಅಧರ್ಮಂ=ಅಧರ್ಮ ವನ್ನು; ಧರ್ಮಂ ಇತಿ=ಧರ್ಮವೆಂದೂ; ಸರ್ವಾರ್ಥಾನ್= ಸಮಸ್ತ ಪದಾರ್ಥ ಗಳನ್ನು; ವಿಪರೀತಾಂಶ್ಚ=ವಿರುದ್ಧವಾದವುಗಳಾಗಿ; ಮನ್ಯತೇ=ತಿಳಿಯುತ್ತದೆಯೋ; ಸಾಬುದ್ಧಿಃ=ಅಂತಹ ಬುದ್ಧಿ; ತಾಮಸೀ=ತಾಮಸವಾದುದು (ತಮೋಗುಣ ಸಂಬಂಧವಾದದ್ದು).

**ತಾ||** ಓ ಅರ್ಜುನಾ! ಯಾವ ಬುದ್ಧಿ ಅವಿವೇಕದಿಂದ ಕವಿಯಲ್ಪಟ್ಟಿದ್ದಾಗಿ ಅಧರ್ಮವನ್ನು ಧರ್ಮವೆಂದು ತಿಳಿದುಕೊಳ್ಳುವುದೋ; ಸಮಸ್ತ ಪದಾರ್ಥ ಗಳನ್ನು ವಿರುದ್ಧವಾಗಿ ಅರ್ಥಮಾಡಿಕೊಳ್ಳುವುದೋ ಅಂತಹ ಬುದ್ಧಿ ತಾಮಸ ಬುದ್ಧಿಯೆನಿಸಿಕೊಳ್ಳುವುದು.

**ವ್ಯಾಖ್ಯೆ:** ತಾಮಸ ಬುದ್ಧಿಯಿರುವವನಿಗೆ ಎಲ್ಲವೂ ತಲೆಕೆಳಗಾಗಿ ಕಾಣಿಸುವುವು. ವಿಕಾರವಾದ ಕನ್ನಡಿಯಲ್ಲಿ ಮುಖ ವಿಕೃತವಾಗಿ ಕಾಣಿಸುವಂತೆ, ನೀರಿನಲ್ಲಿಯ ಪ್ರತಿಬಿಂಬ ತಲೆ ಕೆಳಗಾಗಿ ಕಂಡಂತೆ ತಾಮಸಬುದ್ಧಿಯುತನಿಗೆ ಎಲ್ಲವೂ ವಿಪರೀತವಾಗಿ ತೋರುವುವು. 'ಸರ್ವಾರ್ಥಾನ್' ಎಂದು ಹೇಳಿರುವುದರಿಂದ ಒಂದು ವಿಷಯದಲ್ಲಲ್ಲದೆ ನಿತ್ಯ ಜೀವನದಲ್ಲಿ ಪ್ರತಿ ವಿಷಯವೂ ಆತನಿಗೆ ವಿರುದ್ಧವಾಗಿ ಕಾಣಿಸುತ್ತದೆಯೆಂದು ತಿಳಿಯುತ್ತದೆ. ಇದಕ್ಕೆಲ್ಲಾ ಕಾರಣವೇನು ?- 'ತಾಮಸಾವೃತಾ' - ಬುದ್ಧಿಯು ಅವಿದ್ಯೆ, ಅಜ್ಞಾನ, ಅವಿವೇಕಗಳಿಂದ ಕವಿಯಲ್ಪ ಟ್ಟಿರುವುದೇ ಕಾರಣ. ಹೆಂಡ ಕುಡಿದವನಿಗೆ ಲೋಕ ತಿರುಗುತ್ತಿರುವಂತೆ ಭಾಸವಾದ ಹಾಗೆ, ಮಾಯಾ ಮೋಹವೆನ್ನುವ ಮದಿರ ಪಾನದಿಂದ ಮತ್ತನಾದ ಅಜ್ಞಾನಿಗೆ ಈ ಜಗತ್ತೆಲ್ಲವೂ ವಾಸ್ತವವಾಗಿ ಗೋಚರಿಸುವುದು. ದೃಷ್ಟಾಂತಕ್ಕಾಗಿ-

೧. ಇಲ್ಲದ ದೇಹ, ಜಗತ್ತು ಅವನಿಗೆ ಇರುವಂತೆ ಕಾಣುವುದು. ಇರುವ ಆತ್ಮ(ದೈವ) ಇಲ್ಲದ ಹಾಗೆ ಭಾಸವಾಗುವುದು.

೨. ದುಃಖಪ್ರದಗಳಾದ ವಿಷಯಭೋಗಗಳು ಸುಖಕರವಾಗಿ ತೋರುವುವು. ಪರಮಾನಂದದಾಯಕವಾದ ಆತ್ಮ(ದೈವ) ಅವರಿಗೆ ರುಚಿಸುವುದಿಲ್ಲ.

೩. ರಕ್ತಮಾಂಸಮಯಗಳಾದ ಕ್ಷಣಿಕ ದೇಹಗಳಲ್ಲಿ ಸೌಂದರ್ಯ ಕಾಣುವರು. ಸಚ್ಚಿದಾನಂದ ಘನವಾದ ಶಾಶ್ವತ ಪರಮಾತ್ಮನಲ್ಲಿ ಹೇಯಬುದ್ಧಿ ತೋರುವರು.

ಅಷ್ಟೇಕೆ, ಧರ್ಮವನ್ನು ಅಧರ್ಮವಾಗಿ, ಅಧರ್ಮವನ್ನು ಧರ್ಮವಾಗಿ ಭಾವಿಸುವರು. ಇದಕ್ಕೆಲ್ಲಾ ಕಾರಣ ಅವಿವೇಕವೇ ಎಂದು ಈಗಾಗಲೇ ಹೇಳಲಾಗಿದೆ. ಆದ್ದರಿಂದ ಯಾವ ಬುದ್ಧಿಯಲ್ಲಿ ಅಂತಹ ವಿದ್ಯೆ, ತಮಸ್ಸು,

ಮನೆಮಾಡಿಕೊಂಡಿರುವುವೋ ಅದು ಮಹಾನಿಕೃಷ್ಟವಾದುದು-ಆತನು ಎಷ್ಟೇ ಭೌತಿಕ ಬಲ, ವಿಜ್ಞಾನ ಸಂಪನ್ನತೆ ಹೊಂದಿರಲಿ ಆತನು ತಾಮಸಿಯೇ. ಆದ್ದರಿಂದ ವಿವೇಕವನ್ನು ಆಶ್ರಯಿಸಿ ಪ್ರಯತ್ನ ಪೂರ್ವಕವಾಗಿ ಅಂತಹ ತಮಸ್ಸನ್ನು ಹೊರದೋಡಿಸಿ, ಸತ್ಯವನ್ನು ಸತ್ಯವನ್ನಾಗಿ, ಅಸತ್ಯವನ್ನು ಅಸತ್ಯವನ್ನಾಗಿ ಗ್ರಹಿಸುವ ಶಕ್ತಿಯನ್ನು ಸಂಪಾದಿಸಿಕೊಂಡು ಕೃತಾರ್ಥನಾಗಬೇಕು.

ಪ್ರ : ತಾಮಸ ಬುದ್ಧಿ ಎಂತಹದು?

ಉ : ಅವಿವೇಕದಿಂದ ಆವೃತವಾಗಿದ್ದು ಅಧರ್ಮವನ್ನು ಧರ್ಮವೆಂದು, ಸಮಸ್ತ ಪದಾರ್ಥಗಳನ್ನು ವಿರುದ್ಧವಾಗಿ ಗ್ರಹಿಸುವ ಬುದ್ಧಿಯನ್ನು ಹೊಂದಿರುವುದು.

**ಅ॥** ಮೂರು ವಿಧಗಳಾದ ಧೈರ್ಯವನ್ನು ಉಲ್ಲೇಖಿಸುತ್ತಾ ಮೊದಲು ಸಾತ್ವಿಕ ಧೈರ್ಯವನ್ನು ವಿವರಿಸಲಾಗುತ್ತಿದೆ-

**೩೩. ಧೃತ್ಯಾ ಯಯಾ ಧಾರಯತೇ ಮನಃಪ್ರಾಣೇಂದ್ರಿಯಕ್ರಿಯಾಃ**
**ಯೋಗೇನಾವ್ಯಭಿಚಾರಿಣ್ಯಾ ಧೃತಿಃ ಸ್ಾ ಪಾರ್ಥ ಸಾತ್ವಿಕೀ**

**ಅರ್ಥ:** ಪಾರ್ಥ - ಓ ಅರ್ಜುನಾ! ಅವ್ಯಭಿಚಾರಿಣ್ಯಾ=ಚಲಿಸದೆ ಇರುವ; ಯಯಾ ಧೃತ್ಯಾ (ಯುಕ್ತಃ) = ಯಾವ ಧೈರ್ಯದಿಂದ ಕೂಡಿದವನಾಗಿ; ಮನಃ ಪ್ರಾಣೇಂದ್ರಿಯ ಕ್ರಿಯಾಃ=ಮನಸ್ಸು, ಪ್ರಾಣಗಳು, ಇಂದ್ರಿಯ ಕ್ರಿಯೆಗಳನ್ನು; ಯೋಗೇನ=ಯೋಗ ಸಾಧನೆಯಿಂದ (ಇಲ್ಲವೆ, ಚಿತ್ತೈಕಾಗ್ರತೆಯಿಂದ); ಧಾರಯತೇ= (ವಿಷಯಗಳಿಂದ ಮರಳಿಸಿ), ಆತ್ಮಧ್ಯಾನದಲ್ಲಿ, ಇಲ್ಲವೆ ಶಾಸ್ತ್ರೋಕ್ತ ಮಾರ್ಗದಲ್ಲಿ ನಿಲ್ಲಿಸುತ್ತಿದ್ದಾನೋ; ಸಾ ಧೃತಿಃ=ಆ ಧೈರ್ಯವು; ಸಾತ್ವಿಕೀ=ಸಾತ್ವಿಕವಾದದ್ದು.

**ತಾ॥** ಓ ಅರ್ಜುನಾ! ವಿಚಲಿತನಾಗದೆ (ವಿಷಯಗಳಲ್ಲಿ ಪ್ರವರ್ತಿಸದೆ), ಧೈರ್ಯದಿಂದ ಕೂಡಿದವನಾಗಿ, ಮನಸ್ಸು, ಪ್ರಾಣ, ಇಂದ್ರಿಯಗಳನ್ನು ಯೋಗ ಸಾಧನೆಯಿಂದ (ವಿಷಯಗಳಿಂದ ಮರಳಿಸಿ ಆತ್ಮಧ್ಯಾನದಲ್ಲಿ, ಇಲ್ಲವೆ ಶಾಸ್ತ್ರೋಕ್ತ ಮಾರ್ಗದಲ್ಲಿ) ಯಾವ ಧೈರ್ಯ ನಿಲ್ಲಿಸುತ್ತದೆಯೋ ಅಂತಹ ಧೈರ್ಯವನ್ನು ಸಾತ್ವಿಕ ಧೈರ್ಯವೆನ್ನುವರು.

**ವ್ಯಾಖ್ಯೆ:** ಪ್ರಪಂಚದಲ್ಲಿ ಧೈರ್ಯವುಳ್ಳವರು ಅನೇಕರಿರುವರು. ಕೆಲವರು ಯುದ್ಧದಲ್ಲಿ ಧೈರ್ಯವಾಗಿ ಹೋರಾಡುವರು. ಕೆಲವರು ಧೈರ್ಯವಾಗಿ ಕತ್ತಲಲ್ಲಿ ಅಥವ ಭೀಕರಾರಣ್ಯದಲ್ಲಿ ಸಂಚರಿಸುವರು. ಕೆಲವರು ಧೈರ್ಯದಿಂದ ಪರ್ವತ ಶಿಖರಗಳನ್ನು ಏರುವರು. ಸಮುದ್ರವನ್ನು ದಾಟುವರು ಆದರೆ ಆ ಎಲ್ಲಾ ಧೈರ್ಯಗಳಿಗಿಂತ ಉನ್ನತವಾಗಿರುವ ಧೈರ್ಯವನ್ನು ಇಲ್ಲಿ ಹೇಳಲಾಗಿದೆ. ಅದು ಸಾತ್ವಿಕ ಧೈರ್ಯ. ಅಂದರೆ ಯಾವ ಧೈರ್ಯದಿಂದ ಮನುಜನು ತನ್ನ ಮನಸ್ಸು, ಇಂದ್ರಿಯಗಳನ್ನು ವಿಷಯ ಭೋಗಗಳಿಂದ ನಿರೋಧಿಸುವನೋ, ದೃಶ್ಯವ್ಯಾಮೋಹದಿಂದ ನಿವೃತ್ತಿ ಹೊಂದುವವನೋ, ಆ ಧೈರ್ಯವೇ ಮಹಾಧೈರ್ಯವೆಂದು ಭಗವಂತನು ಇಲ್ಲಿ ತಿಳಿಸಿರುವನು. ಆದ್ದರಿಂದ ಬೇರೆ ಧೈರ್ಯಗಳಿದ್ದರೂ, ಜನ್ಮಸಾಫಲ್ಯಕ್ಕೆ ಬೇಕಾದ ಈ ಪಾರಮಾರ್ಥಿಕ ಧೈರ್ಯವನ್ನು ಮನುಜನು ತಪ್ಪದೆ ಹೊಂದಿರಬೇಕು.

ಆದರೆ ಆ ಧೈರ್ಯ ಚಪಲವಾಗಿರಬಾರದು. ಈ ದಿನ ಇದ್ದು ನಾಳೆ ಮಾಯವಾಗಬಾರದು. ಆದ್ದರಿಂದಲೇ 'ಅವ್ಯಭಿಚಾರಿಣ್ಯಾ' (ನಿಶ್ಚಲವಾದ) ಎಂದು ಹೇಳಲ್ಪಟ್ಟಿದೆ. ಏಕೆಂದರೆ ಕೆಲವರು ಮುಮುಕ್ಷುಗಳು ಯಾವುದೋ ಒಂದು ಆವೇಶದಲ್ಲಿ ಧೈರ್ಯದಿಂದ ತಮ್ಮ ಇಂದ್ರಿಯಾದಿಗಳನ್ನು ನಿಗ್ರಹಿಸಿ ಮತ್ತೆ ಪರಿಸ್ಥಿತಿಗಳ ಪ್ರಾಬಲ್ಯದಿಂದ ಕ್ರಮವಾಗಿ ಆ ಧೈರ್ಯವನ್ನು ಸಡಿಲಿಸಿ, ವಿಷಯಗಳಲ್ಲಿ ಪ್ರವರ್ತಿಸುವುದು ಕಂಡು ಬರುತ್ತಿದೆ. ಅದು 'ಅವ್ಯಭಿಚಾರಿಣಿ' ಧೈರ್ಯವು ಅಲ್ಲ, ಆದ್ದರಿಂದ ಸ್ಥಿರವಾಗಿರುವ ಧೈರ್ಯವನ್ನೇ ಅವಲಂಬಿಸಬೇಕು.

ಪ್ರ : ಸಾತ್ವಿಕ ಧೈರ್ಯ ಎಂತಹದು?

ಉ : ಯಾವ ನಿಶ್ಚಲ ಧೈರ್ಯದಂದ ಕೂಡಿ ಯೋಗ ಸಾಧನೆಯ ಮೂಲಕ ಮನುಜನು ಇಂದ್ರಿಯಾದಿಗಳನ್ನು ವಿಷಯಗಳಿಂದ ನಿರೋಧಿಸುವನೋ ಅಂತಹ ಧೈರ್ಯವನ್ನು ಸಾತ್ವಿಕವೆನ್ನುವರು.

**ಅ॥** ರಾಜಸ ಧೈರ್ಯವನ್ನು ಕುರಿತು ಹೇಳಲಾಗುತ್ತಿದೆ-

**೩೪ ಯಯಾ ತು ಧರ್ಮಕಾಮಾರ್ಥಾನ್ ಧೃತ್ಯಾ ಧಾರಯತೇಽರ್ಜುನ**
**ಪ್ರಸಂಗೇನ ಫಲಾಕಾಂಕ್ಷೀ ಧೃತಿಸ್ಸಾ ಪಾರ್ಥ ರಾಜಸೀ**

**ಅರ್ಥ:** ಪಾರ್ಥ =ಓ ಅರ್ಜುನಾ! ಯಯಾ ಧೃತ್ಯಾ ತು=ಯಾವ ಧೈರ್ಯದಿಂದ; ಫಲಾಕಾಂಕ್ಷಿ=ಫಲಾಪೇಕ್ಷೆಯುಳ್ಳವನಾಗಿ; ಧರ್ಮ ಕಾಮಾರ್ಥಾನ್=ಧರ್ಮ, ಕಾಮ, ಅರ್ಥಗಳನ್ನು; ಪ್ರಸಂಗೇನ=ಹೆಚ್ಚಿನ ಆಸಕ್ತಿಯಿಂದ; ಧಾರಯತೇ=ಅನುಷ್ಠಾನಮಾಡುತ್ತಿ ದ್ದಾನೋ; ಸಾ ಧೃತಿಃ=ಆ ಧೈರ್ಯವು; ರಾಜಸೀ=ರಾಜಸವಾದದ್ದು.

**ತಾ॥** ಓ ಅರ್ಜುನಾ! ಯಾವ ಧೈರ್ಯದಿಂದ ಮನುಜನು ಫಲಾಪೇಕ್ಷೆ ಯುಳ್ಳವನಾಗಿ ದರ್ಮಾರ್ಥಕಾಮಗಳನ್ನು ಹೆಚ್ಚಿನ ಆಸಕ್ತಿಯಿಂದ ಅನುಷ್ಠಾನ ಮಾಡುತ್ತಿದ್ದಾನೋ, ಆ ಧೈರ್ಯವು ರಾಜಸ ಧೈರ್ಯವೆನಿಸಿಕೊಳ್ಳುವುದು.

**ವ್ಯಾಖ್ಯೆ:** ಪುರುಷಾರ್ಥಗಳು ನಾಲ್ಕು - ೧) ಧರ್ಮ ೨) ಅರ್ಥ ೩) ಕಾಮ ೪) ಮೋಕ್ಷ. ಈ ಚತುರ್ವಿಧ ಪುರುಷಾರ್ಥಗಳಲ್ಲಿ ಮೊದಲ ಮೂರನ್ನು ಮಾತ್ರ ಇಲ್ಲಿ ತಿಳಿಸಲಾಗಿದೆ. ನಾಲ್ಕನೆಯದಾದ ಮೋಕ್ಷವನ್ನು ಕುರಿತು ಹೇಳಿಲ್ಲ. ಇದರಿಂದ ರಾಜಸಿಗಳು ಮೋಕ್ಷವನ್ನು ಕುರಿತು ಆಲೋಚಿಸುವುದಿಲ್ಲವೆಂದು ವಿದಿತವಾಗುತ್ತದೆ. ಆದ್ದರಿಂದಲೇ ಈ ಧೈರ್ಯವು ಪರಮಾರ್ಥ ದೃಷ್ಟಿಯಲ್ಲಿ ಅಷ್ಟು ಉತ್ತಮವಾದುದಲ್ಲವೆಂದು ಅರ್ಥವಾಗುತ್ತದೆ. ಇಂದ್ರಿಯಗಳನ್ನು ನಿರೋಧಿಸುವುದರ ಮೂಲಕ ಮೋಕ್ಷಕ್ಕೆ ಯತ್ನಿಸುವ ಸಾತ್ವಿಕ ಧೈರ್ಯವೇ ಉತ್ಕಷ್ಟವಾದುದು. ಧರ್ಮಕ್ಕೆ ಅರ್ಥ ಸಾಮಾನ್ಯ ಧರ್ಮವೆಂದು ಗ್ರಹಿಸಬೇಕು. ವಿಶೇಷ ಧರ್ಮ ಪರಮಾತ್ಮಾವಲಂಬನೆಯೇ, ದೈವನಿಷ್ಠೆಯೇ ಹಾಗೂ ಆತ್ಮಜ್ಞಾನವೇ ಹೌದು.

'ಸಂಗೇನ'ಎಂದು ಹೇಳದೆ 'ಪ್ರಸಂಗೇನ' ಎಂದು ಹೇಳುವುದರಿಂದ ಅಂತಹವರು ಪುರುಷಾರ್ಥದಲ್ಲಿ ವಿಶೇಷ ಆಸಕ್ತಿಯನ್ನು ತೋರಿಸುವರು ಎಂದು ತಿಳಿಯುತ್ತದೆ.

ಪ್ರ : ರಾಜಸ ಧೈರ್ಯ ಎಂತಹದು?

ಉ : ಯಾವ ಧೈರ್ಯದಿಂದ ಮನುಜನು ಫಲಾಪೇಕ್ಷೆಯುಳ್ಳವನಾಗಿ ಧರ್ಮಾರ್ಥಕಾಮಗಳನ್ನು ವಿಶೇಷ ಆಸಕ್ತಿಯಿಂದ ಅನುಸರಿಸುವನೋ ಅದನ್ನು ರಾಜಸ ಧೈರ್ಯವೆನ್ನುವರು.

**ಅ॥** ಇನ್ನು ತಾಮಸ ಧೈರ್ಯವನ್ನು ಕುರಿತು ಹೇಳಲಾಗಿದೆ-

**೩೫ ಯಯಾ ಸ್ವಪ್ನಂ ಭಯಂ ಶೋಕಂ ವಿಷಾದಂ ಮದಮೇವ ಚ**
**ನ ವಿಮುಂಚತಿ ದುರ್ಮೇಧಾ ಧೃತಿಸ್ಸಾ ಪಾರ್ಥ ತಾಮಸೀ**

**ಅರ್ಥ:** ಪಾರ್ಥ=ಅರ್ಜುನಾ! ಯಯಾ=ಯಾವ ಬುದ್ಧಿಯಿಂದ

ದುರ್ಮೇಧಾಃ=ದುರ್ಬುದ್ಧಿಯುಳ್ಳವನು; ಸ್ವಪ್ನಂ=ನಿದ್ರೆಯನ್ನು; ಭಯಂ= ಭಯವನ್ನು;ಶೋಕಂ=ದುಃಖವನ್ನು; ವಿಷಾದಂ=ಸಂತಾಪವನ್ನು (ದಿಗಿಲನ್ನು); ಮದಂ ಏವ ಚ=ಮದವನ್ನು; ನ ವಿಮುಂಚತಿ=ಬಿಡದೇ ಇರುವನೋ; ಸಾ ಧೃತಿಃ=ಆ ಧೈರ್ಯವು; ತಾಮಸೀ=ತಾಮಸವಾದದ್ದು.

**ತಾ||** ಓ ಅರ್ಜುನಾ! ಯಾವ ಬುದ್ಧಿಯಿಂದ ದುರ್ಬುದ್ಧಿಯುಳ್ಳ ಮನುಜನು ನಿದ್ರೆ, ಭಯ, ದುಃಖ, ಸಂತಾಪವನ್ನು, ಮದವನ್ನು ಬಿಡುವುದಿಲ್ಲವೋ ಅಂತಹ ಧೈರ್ಯ ತಾಮಸವಾದದ್ದು.

**ವ್ಯಾಖ್ಯೆ:** ಧೈರ್ಯ ಒಳ್ಳೆಯ ಸುಗುಣ. ಆದರೆ ಅದನ್ನು ದುರ್ವಿಷಯಗಳಲ್ಲಿ ಉಪಯೋಗಿಸಿದರೆ ನಿಷ್ಫಲವಾಗಿ ಹೋಗುವುದು. ತಮೋಗುಣಿಯು ಧೈರ್ಯವನ್ನು ಅವಲಂಬಿಸಿ ತನ್ನ ಅತಿ ನಿದ್ರೆ, ಭಯ, ದುಃಖ, ದಿಗಿಲನ್ನು, ಮದವನ್ನು ಬಿಡದೆ ಮುಂದುವರಿಸುವನು. ಧೈರ್ಯ ಎನ್ನುವ ಒಳ್ಳೆಯ ಸುಗುಣವನ್ನು ಅಂತಹ ನಿಕೃಷ್ಟವಾದ ನಿದ್ರೆ, ಭಯಾದಿ ನಿಕೃಷ್ಟ ವಸ್ತು ಸಂಪಾದನೆಗಳಲ್ಲಿ ವಿನಿಯೋಗಿಸಲ್ಪಡುವುದರಿಂದ ನಿರರ್ಥಕವಾಗಿ ಹೋಗುವುದು. ಆದ್ದರಿಂದ ಆ ಧೈರ್ಯವನ್ನು ಸದ್ವಸ್ತು ಸಂಪಾದನೆಗೆ, ಸಶ್ಶೀಲ ಸಮುಪಾರ್ಜನೆಗೆ, ಮೋಕ್ಷ ಪ್ರಾಪ್ತಿಗೆ, ದೈವ ಕರುಣೆ ಸಂಪಾದಿಸಲು ವಿನಿಯೋಗಿಸುವುದು ಉತ್ತಮನ ಧರ್ಮವಾಗಿದೆ. ವಾಲ್ಮೀಕಿಯು ಅಪಾರ ಧೈರ್ಯ, ನಿಷ್ಠೆಯನ್ನು ಹಿಂಸೆ ಮಾಡುವುದರಲ್ಲಿ ಉಪಯೋಗಿಸಿ ವಿಫಲನಾಗಿದ್ದನು. ಆದರೆ ಮಹನೀಯರ ಸಾಂಗತ್ಯದಿಂದ ಆ ಧೈರ್ಯವನ್ನೇ ದೈವದ ಕಡೆ ತಿರುಗಿಸಿ ಧನ್ಯನಾದನು.

'ದುರ್ಮೇಧಾ'- ಎಂದು ಹೇಳುವುದರಿಂದ ಆತನಿಗೆ 'ಮೇಧಾ' (ತಿಳಿವು) ಇದ್ದಾಗ್ಯೂ, ಅದನ್ನು ವಕ್ರ ಮಾರ್ಗದಲ್ಲಿ ಉಪಯೋಗಿಸುವನೆಂದು ಭಾವ.

'ಸ್ವಪ್ನಂ'- (ನಿದ್ರೆ) ಇಲ್ಲಿ ನಿದ್ರೆಯೆಂದು ಹೇಳಿದ ಕಡೆ 'ಅತಿ ನಿದ್ರೆ' ಎಂದು ಭಾವಿಸಿಕೊಳ್ಳಬೇಕು. ಏಕೆಂದರೆ ಮಿತ ನಿದ್ರೆ ಸರ್ವರಿಗೂ ಆವಶ್ಯಕ.

ಪ್ರ : ತಾಮಸ ಧೈರ್ಯ ಎಂತಹದು?

ಉ: ಯಾವ ಧೈರ್ಯದಿಂದ ದುರ್ಬುದ್ಧಿ, ನಿದ್ರೆ, ಶೋಕ, ಭಯ, ಮದಗಳನ್ನು ಬಿಡದೆ ಇರುವನೋ ಅದನ್ನು ತಾಮಸ ಧೈರ್ಯವೆನ್ನುವರು.

**ಅ||** ಸಾತ್ವಿಕ, ರಾಜಸಿಕ, ತಾಮಸಿಕ ಸುಖಗಳ ವರ್ಣನೆ -

**೩೬ ಸುಖಂ ತ್ವಿದಾನೀಂ ತ್ರಿವಿಧಂ ಶೃಣು ಮೇ ಭರತರ್ಷಭ**
**ಅಭ್ಯಾಸಾದ್ರಮತೇ ಯತ್ರ ದುಃಖಾಂತಂ ಚ ನಿಗಚ್ಛತಿ**

**ಅರ್ಥ:** ಭರತರ್ಷಭ=ಭರತಕುಲ ಶ್ರೇಷ್ಠನಾದ ಓ ಅರ್ಜುನಾ! ಯತ್ರ= ಯಾವುದರಲ್ಲಿ; ಅಭ್ಯಾಸಾತ್=ಅಭ್ಯಾಸದಿಂದ; ರಮತೇ=ಆನಂದವನ್ನು ಹೊಂದುತ್ತಿದ್ದಾನೋ; ದುಃಖಾಂತಂ ಚ= ದುಃಖನಾಶನವನ್ನು ಕೂಡ; ನಿಗಚ್ಛತಿ=ಚೆನ್ನಾಗಿ ಹೊಂದುತ್ತಿದ್ದಾನೋ; (ತತ್=ಅ); ಸುಖಂ ತು=ಸುಖವನ್ನು; ಇದಾ ನೀಂ=ಈಗ; ತ್ರಿವಿಧಂ=ಮೂರು ವಿಧಗಳಾಗಿ; ಮೇ=ನನ್ನ; (ವಚನಾತ್= ವಾಕ್ಯಗಳಿಂದ); ಶೃಣು=ಕೇಳು.

**ತಾ||** ಭರತಕುಲಶ್ರೇಷ್ಠನಾದ ಓ ಅರ್ಜುನಾ! ಯಾವ ಅಭ್ಯಾಸದಿಂದ ಮನುಜನು ಆನಂದವನ್ನು ಹೊಂದುತ್ತಿದ್ದಾನೋ ಮತ್ತು ದುಃಖದಿಂದ ಬಿಡುಗಡೆ ಹೊಂದುತ್ತಾನೆಯೋ ಅಂತಹ ಮೂರು ವಿಧವಾದ ಸುಖ ನನ್ನಿಂದ ತಿಳಿಸಲ್ಪಡುತ್ತಿದೆ, ಕೇಳು

**ವ್ಯಾಖ್ಯೆ:** 'ಅಭ್ಯಾಸಾತ್'- ಸಾತ್ವಿಕ ಸುಖ, ದೈವ ಸುಖ, ಬ್ರಹ್ಮಾನಂದ ಅಭ್ಯಾಸದಿಂದಲೇ ಜೀವಿಗೆ ಲಭಿಸುವುದೆಂದು ಭಗವಂತನು ಇಲ್ಲಿ ತಿಳಿಸುತ್ತಿದ್ದಾನೆ. ಅಧ್ಯಾತ್ಮ ವಿದ್ಯೆ ಮಾತಿನಿಂದ (ವಾಚಾ ಜ್ಞಾನದಿಂದ) ಉಂಟಾಗುವುದಿಲ್ಲ. ಅದು ಅನುಭವ ವಿದ್ಯೆ. ಅದರಲ್ಲಿಯ ಪ್ರತಿ ಸಿದ್ಧಾಂತವನ್ನೂ ಅನುಭವದಿಂದ ಪರೀಕ್ಷಿಸಿಕೊಳ್ಳಬೇಕು. ಆಗಲೇ ಜೀವಿಗೆ ಪ್ರತ್ಯಕ್ಷ ಸುಖವು ಲಭಿಸುವುದು. ಬಹಳ ಮಂದಿ 'ನಮಗೆ ಸಾಕ್ಷಾತ್ಕಾರ ಹೇಗೆ ಉಂಟಾಗುವುದು? ದುಃಖವು ಹೇಗೆ ತೊಲಗುವುದು? ಸುಖವು ಹೇಗೆ ಪ್ರಾಪ್ತವಾಗುವುದು?' ಎಂದು ಪ್ರಶ್ನಿಸುವರು. ಭಗವಂತನು ಅದಕ್ಕೆ ಅಭ್ಯಾಸ ಮಾಡಿದರೆ ನಿಮಗೆ ಅವೆಲ್ಲವೂ ಲಭಿಸುತ್ತದೆ ಎಂದು ತಿಳಿಸುತ್ತಿದ್ದಾನೆ. ಪ್ರಯತ್ನ ಮಾಡದೆ, ಸಾಧನೆ ಮಾಡದೆ, ದಂಡೆಯ ಮೇಲೆ ಕುಳಿತು ಹರಟೆ ಹೊಡೆಯುವುದರಿಂದ ಪರಮಾರ್ಥ ಅನುಭವ ಎಂದಿಗೂ ಉಂಟಾಗುವುದಿಲ್ಲ. ಮೊಸರನ್ನು ಕಡೆದಾಗ ಮಾತ್ರ ಬೆಣ್ಣೆ ಬರುವುದು. ಎಳ್ಳನ್ನು ರುಬ್ಬಿದಾಗ ಮಾತ್ರ ಎಣ್ಣೆಬರುವುದು, ಕಬ್ಬನ್ನು ಅಗಿದಾಗ ಮಾತ್ರ ಅದರ ಸಿಹಿಯ ಅನುಭವವಾಗುವುದು. ಹಾಗೆಯೇ ಅಭ್ಯಾಸದಿಂದ ಮಾತ್ರ 'ದುಃಖಾಂತ', ಸುಖಾವಿರ್ಭಾವ ಜೀವಿಗೆ ಉಂಟಾಗುವುದು.

'ದುಃಖಾಂತಂ ಚ ನಿಗಚ್ಛತಿ'- ಈ ಪ್ರಪಂಚದಲ್ಲಿ ಪ್ರತಿ ಜೀವಿ ಅಪೇಕ್ಷಿಸುವುದು ದುಃಖರಾಹಿತ್ಯ, 'ದುಃಖಾಂತ'. ಜೀವನದಲ್ಲಿ ಅತಿ ಕ್ಲಿಷ್ಟತರವಾದ ಸಮಸ್ಯೆ ಈ 'ದುಃಖಾಂತ' ಸಂಪಾದನೆಯೇ ಆಗಿದೆ. ಪ್ರತಿಯೊಬ್ಬನನ್ನೂ ಈ ಸಮಸ್ಯೆ ಬಾಧಿಸುತ್ತಿದೆ. ಇರುವೆಯೂ ಈ ದುಃಖಾಂತಕ್ಕೆ ಯತ್ನಿಸುವುದು. ಸೊಳ್ಳೆಯೂ ಅದಕ್ಕೋಸ್ಕರವೇ ಯತ್ನಿಸುವುದು. ಚತುರ್ಮುಖ ಬ್ರಹ್ಮನೂ ಅದಕ್ಕೋಸ್ಕರವೇ ಯತ್ನಿಸುತ್ತಿರುವನು. ದುಃಖದ ಅಂತ್ಯವನ್ನು ಪ್ರಾಣಿ ಎಲ್ಲಿ ಹೊಂದುವುದು? ಈ ಮಹಾಸಾಂಸಾರಿಕ ಬಾಧೆಗಳಿಗೆ ಎಲ್ಲಿ ಉಪಶಮನ? ದುಃಖವಿಲ್ಲದ ಸ್ಥಳವು ಯಾವುದು? ಪ್ರಪಂಚದಲ್ಲಿ ಎಲ್ಲಿಯಾದರೂ ಅಂತಹ ಸ್ಥಳವಿದೆಯೇ? ಶಾಶ್ವತ ಸುಖವನ್ನು ಕೊಡುವ ಯಾವುದಾದರೂ ವಸ್ತು ಈ ದೃಶ್ಯ ಪ್ರಪಂಚದಲ್ಲಿದೆಯೇ? ಇಲ್ಲ. ದುಃಖದ ಅಂತ್ಯ ಆತ್ಮದಲ್ಲಿ, ದೈವದಲ್ಲಿ ಮಾತ್ರ ಇದೆ. ಆತ್ಮ ಸುಖದಲ್ಲಿಯೇ, ಸಾತ್ವಿಕಾನಾಂದದಲ್ಲಿಯೇ ದುಃಖದ ಅಂತ್ಯವನ್ನು ಜೀವಿಯೂ ಹೊಂದುವನೆಂದು ಈ ಶ್ಲೋಕದಲ್ಲಿ ಹೇಳಲಾಗಿದೆ. ಈ ಭಗವದ್ವಾಕ್ಯ ಪ್ರತಿ ಪ್ರಾಣಿಯನ್ನು ಬಾಧಿಸುತ್ತಿರುವ 'ದುಃಖ ನಿವಾರಣೆ ಸಮಸ್ಯೆ'ಯನ್ನು ಬಗೆ ಹರಿಸುತ್ತಿದೆ. ದುಃಖ ನಿವಾರಣೆಗೆ ಉಪಾಯ ಸಾತ್ವಿಕ ಸುಖ ಸಂಪಾದನೆಯಾದ ಆತ್ಮಾನಂದ ಪ್ರಾಪ್ತಿಯೇ. ಆದ್ದರಿಂದ ಆತ್ಮಸುಖವನ್ನೇ, ದೈವ ಸುಖವನ್ನೇ ಅನ್ವೇಷಿಸಬೇಕು. ಅದು ಹೇಗೆ ಲಭ್ಯವಾಗುವುದು? ಅಭ್ಯಾಸದಿಂದ, ಸಾಧನ ಚತುಷ್ಟಯ ಸಂಪತ್ತಿಯಿಂದ, ಅಮಾನಿತ್ವಾದಿ ಗುಣಗಳಿಂದ 'ನಿಗಚ್ಛತಿ' ಎಂದು ಹೇಳುವುದರಿಂದ ಅಭ್ಯಾಸದಿಂದ ಅಂತಹ ದುಃಖರಾಹಿತ್ಯ ಸ್ಥಿತಿಯನ್ನು ಜೀವಿಯು ನಿಶ್ಚಿತವಾಗಿ ಪಡೆಯುತ್ತಾನೆಂದು ತಿಳಿಯುತ್ತದೆ.

ಪ್ರ : ಸುಖವು ಎಷ್ಟು ವಿಧಗಳಾಗಿದೆ?

ಉ :ಮೂರು ವಿಧಗಳು, ಸಾತ್ವಿಕ, ರಾಜಸಿಕ, ತಾಮಸಿಕ ಸುಖಗಳು

ಪ್ರ : ದುಃಖರಾಹಿತ್ಯವು ಹೇಗೆ ಉಂಟಾಗುವುದು?

ಉ: ಅಭ್ಯಾಸದ ದ್ವಾರ ಉತ್ತಮ (ಸಾತ್ವಿಕ) ಸುಖವನ್ನು ಹೊಂದುವುದರಿಂದ ದುಃಖವು ತೊಲಗಿ ಹೋಗುವುದು.

**ಅ||** ಸಾತ್ವಿಕ ಸುಖದ ಲಕ್ಷಣವನ್ನು ವಿವರಿಸಲಾಗುತ್ತದೆ-

**೩೭ ಯತ್ತದಗ್ರೇ ವಿಷಮಿವ ಪರಿಣಾಮೇಽಮೃತೋಪಮಮ್**
**ತತ್ಸುಖಂ ಸಾತ್ತ್ವಿಕಂ ಪ್ರೋಕ್ತಮಾತ್ಮಬುದ್ಧಿಪ್ರಸಾದಜಮ್.**

**ಅರ್ಥ:** ಯತ್ತತ್=ಯಾವ ಸುಖವು; ಅಗ್ರೇ=ಆರಂಭದಲ್ಲಿ; ವಿಷಮಿವ= ವಿಷದ ಹಾಗೆ; ಪರಿಣಾಮೇ=ಪರ್ಯವಸಾನದಲ್ಲಿ (ಕೊನೆಯಲ್ಲಿ); ಅಮೃತೋ ಪಮಮ್=ಅಮೃತದ ಹಾಗೆ ಇರುವುದೋ; ಆತ್ಮಬುದ್ಧಿ ಪ್ರಸಾದ ಜಮ್=ತನ್ನ ಬುದ್ಧಿಯ ನೈರ್ಮಲ್ಯದಿಂದ ಉಂಟಾಗುವ; ತತ್ಸುಖಂ=ಆಸುಖವು; ಸಾತ್ವಿಕಂ= ಸಾತ್ವಿಕವೆಂದು; ಪ್ರೋಕ್ತಂ=ಹೇಳಲ್ಪಡುತ್ತದೆ.

**ತಾ||** ಯಾವ ಸುಖವು ಪ್ರಾರಂಭದಲ್ಲಿ ವಿಷದ ಹಾಗೆಯೂ ಕೊನೆಯಲ್ಲಿ ಅಮೃತದ ಹಾಗೆಯೂ ಇರುವುದೋ ಮತ್ತು ತನ್ನ ಬುದ್ಧಿಯ ನಿರ್ಮಲತೆಯಿಂದ ಉಂಟಾಗುವ ಆ ಸುಖವು ಸಾತ್ವಿಕವೆಂದು ಕರೆಯಲ್ಪಡುವುದು.

**ವ್ಯಾಖ್ಯೆ:** ಅಧ್ಯಾತ್ಮಕ್ಷೇತ್ರದಲ್ಲಿ ಸಾಧಕನಿಗೆ ಅಭ್ಯಾಸದ ಪ್ರಾರಂಭದಲ್ಲಿ ಬ್ರಹ್ಮ ನಿಷ್ಠಾಜ್ಞಾನ ವೈರಾಗ್ಯಾದಿಗಳು ಕಷ್ಟವಾಗಿ ತೋರಬಹುದು. ಆದರೆ ಅಭ್ಯಾಸ, ಸಾಧನೆಗಳು ಪೂರ್ತಿಯಾದ ನಂತರ ಅವು ಅಮೃತಮಯವಾಗಿ ತೋರುವುವು. ಆತ್ಮಸುಖವನ್ನು ಅವು ಉಂಟು ಮಾಡುವುವು ಎಂದು ಹೇಳಲಾಗಿದೆ. ಆದ್ದರಿಂದ ಸಾಧನೆಯ ದೆಶೆಯಲ್ಲಿ ಕಷ್ಟವುಂಟಾದರೆ ಅಧೈರ್ಯ ಬೀಳದೆ ಅದು ವಾಸ್ತವವಾದ ಬಾಧೆಯಲ್ಲವೆಂದೂ; ಪರಿಣಾಮದಲ್ಲಿ ಅನಂತಾನಂದ ಕೊಡುವುದೆಂದೂ ತಿಳಿದು ಸಾಧನೆಯನ್ನು ಬಿಡದೆ ಧೈರ್ಯದಿಂದ ಮುಂದುವರಿಸಬೇಕು. ಆದ್ದರಿಂದಲೇ 'ವಿಷಮವ' ಎಂದು ಹೇಳಲಾಗಿದೆಯೇ ಹೊರತು 'ವಿಷಂ' ಎಂದು ಹೇಳಲಿಲ್ಲ, ಅಂದರೆ ಪ್ರಾರಂಭದಲ್ಲಿರುವ ಕಷ್ಟ ವಿಷವಾಗಿ ತೋರುವುದೇ ಆಗಲಿ ವಾಸ್ತವವಾಗಿ ಅದು ವಿಷವಲ್ಲ ಎಂದು ಭಾವ. ಇಲ್ಲಿ ಪ್ರಯೋಗಿಸಿರುವ 'ಇವ' ಪದದಲ್ಲಿ ವಿಶೇಷ ಅರ್ಥವಿದೆ. 'ಬಾಧೆಯಂತೆ ತೋರುವುದೇ ಆಗಲಿ ಬಾಧೆಯಲ್ಲ' ಎಂದು ತಿಳಿಯುತ್ತದೆ. ಆ ತಾತ್ಕಾಲಿಕ ಬಾಧೆಗೆ ಕಾರಣ ಜನ್ಮಾರ್ಜಿತ ಪಾಪವಾಸನೆಗಳಿಗೂ, ಆಧುನಿಕ ಪುಣ್ಯ ವಾಸನೆಗಳಿಗೂ, ಮಧ್ಯೆ ಇರುವ ಸಂಘರ್ಷಣೆಯೇ ಆಗಿದೆ. ಪುಣ್ಯ ವಾಸನಗೆಳು ಬಲವಾಗಿ ಪಾಪವಾಸನೆಗಳನ್ನು ದೂಡಿ ಹಾಕಿದರೆ, ಅವು ಹೋಗುವಾಗ ಜೀವಿಯನ್ನು ಸ್ವ ಲ್ಪ ಚಿವುಟಿ ಹೋಗುವುವು. ಆ ನೋವನ್ನೇ 'ವಿಷವಿಮ' ಎನ್ನುವ ಶಬ್ದ ತೋರಿಸುತ್ತದೆ. ವಾಸ್ತವವಾಗಿ ಅದು ಬಾಧೆಯಲ್ಲ. ಅನುಪಮ ಸುಖಕ್ಕೆ ನಾಂದಿ ಆಗಿದೆ.

ಒಂದು ನಿರ್ದಿಷ್ಟ ರೋಗಕ್ಕೆ ಬೇವಿನ ಸೊಪ್ಪನ್ನು ಅರೆದು ಔಷಧಿಯಾಗಿ ಕೊಡುವರು. ಅದು ಕಹಿಯಾಗಿದ್ದರೂ ಆರೋಗ್ಯ ವರ್ಧಕ. ಔಷಧವನ್ನು ಸೇವಿಸುವಾಗ ಇಷ್ಟವಿಲ್ಲದಿದ್ದರೂ ಆರೋಗ್ಯಕ್ಕಾಗಿ ಬಲವಂತವಾಗಿಯಾದರೂ ಸೇವಿಸಬೇಕಾದದ್ದೇ. ಒಂದು ಕಲ್ಲು ದೈವ ವಿಗ್ರಹವಾಗುವುದಕ್ಕೆ ಮುಂಚೆ ಉಳಿಯ ಏಟುಗಳನ್ನು ತಿಂದ ಹಾಗೆ, ಬಂಗಾರ ಕಿರೀಟವಾಗಲು ಅಕ್ಕ ಸಾಲಿಗನ ಸುತ್ತಿಗೆಯ ಏಟು ತಿನ್ನುವ ಹಾಗೆ, ಅನಂತವಾದ ಬ್ರಹ್ಮಾನಂದವನ್ನು ಅನುಭವಿಸುವುದಕ್ಕೆ ಮುಂಚೆ ಜೀವಿಯು ಈ ಸ್ವಲ್ಪ ನೋವುಗಳನ್ನು ಅನುಭವಿಸಬೇಕಾಗುವುದು. ಹಾಗೆಯೇ ಅಲ್ಪ ಸುಖವನ್ನು ಬಿಡುವಾಗ ದುಃಖ ಉಂಟಾಗಬಹುದು. ಅನೇಕ ಜನ್ಮಗಳಿಂದ ವಿಷಯ ಸುಖಗಳೆಂಬ ಬಂಧಗಳು ಹೃದಯ ಗುಹೆಯಲ್ಲಿ ನಿವಸಿಸುತ್ತಿದ್ದಾರೆ. ಅವರು ಹೋಗುವಾಗ ಬಂಧು ವಿಯೋಗದಂತೆ ತಾತ್ಕಾಲಿಕ ಆವೇದನೆ ಸ್ವಲ್ಪ ಇರುವುದು. ಆದರೆ ಸಾಧಕನು ಹೆದರಬಾರದು. ಸ್ವಲ್ಪ ಸಹನೆಯಿಂದ ಸಾಧನೆಯನ್ನು ಬಿಡದೆ ಸಾಗಿಸಿದರೆ ಸುಖವು ಬಂದೇ ಬರುವುದು.

ವಿದ್ಯಾರ್ಥಿ ರಾತ್ರಿ ಹಗಲು ಕಷ್ಟಪಟ್ಟು ಅಭ್ಯಾಸಮಾಡುವನು. ನಂತರ ಉದ್ಯೋಗ ಕಾಲದಲ್ಲಿ ಸುಖವಾಗಿರುವನು. ಹಾಗೆಯೇ ಅಧ್ಯಾತ್ಮರಂಗದಲ್ಲಿ ಇಂದ್ರಿಯಾದಿಗಳನ್ನು ನಿಗ್ರಹಿಸಿದಾಗ ಅಂತರ್ಯುದ್ಧದ ಫಲವಾಗಿ ಪ್ರಯಾಸ ಉಂಟಾದರೂ ಅದನ್ನು ಸಹಿಸಿ ಮುಂದುವರಿಯಬೇಕು. ಭಯಪಟ್ಟು ಸಾಧನೆಯನ್ನು ನಿಲ್ಲಿಸಬಾರದು. ಆದ್ದರಿಂದ ಭಗವಂತನು ಇಲ್ಲಿ ಸಾತ್ವಿಕ ಸುಖದ ನಿಜಸ್ಥಿತಿಯನ್ನು ತಿಳಿಸಿರುವನು. ವಿಷರೂಪ ದುಃಖದಲ್ಲಿ ಅಮೃತರೂಪ ಸುಖದ ಬೀಜವಿದೆಯೆಂದು ತಿಳಿಹೇಳಿರುವನು. ತಾತ್ಕಾಲಿಕವಾಗಿ ಕಷ್ಟವಾದ ಆ ವಿಷವನ್ನು ಹೇಗಾದರೂ ಮಾಡಿ ನಿಭಾಯಿಸಿದರೆ ಅದರಲ್ಲಿರುವ ಅಮೃತ ಬೀಜಗಳು ಮೊಳಕೆ ಒಡೆಯುವುವು. ಇದು ವಿಷವೆಂದು ಬಿಸಾಡಿದರೆ ಅದರಲ್ಲಿಯ ಅಮೃತ ಬೀಜವನ್ನು ಕಳೆದುಕೊಂಡ ಹಾಗಾಗುವುದು. ಆದ್ದರಿಂದ ಸಾಧಕರು ಜಾಗರೂಕರಾಗಿದ್ದು ಭಗವಂತನ ಈ ಅಮೂಲ್ಯ ಉಪದೇಶವನ್ನು ಜ್ಞಾಪಕದಲ್ಲಿಟ್ಟುಕೊಂಡು ಅನಂತಾತ್ಮ ಸುಖ ತಮಗಾಗಿ ಕಾದಿದೆಯೆಂದು ಭಾವಿಸಿ ಕಷ್ಟ ಸಹಿಷ್ಣುಗಳಾಗಿ, ತ್ಯಾಗ ಶೀಲರಾಗಿ ಸಾಧನೆಯನ್ನು ಬಿಡದೆ ಮುಂದುವರಿಸಬೇಕು. ಆದ್ದರಿಂದಲೇ **'ಕಶ್ಚಿತ್ ಧೀರಃ'**- ಯಾವುನೋ ಒಬ್ಬ ಧೀರನು ಕಷ್ಟಗಳನ್ನು ಸಹಿಸಿ ಪ್ರತ್ಯಗಾತ್ಮನನ್ನು ನೋಡುವನು ಎಂದು ಉಪನಿಷತ್‌ನಲ್ಲಿ ಹೇಳಲಾಗಿದೆ. ಶ್ರೀ ಬುದ್ಧ, ಶ್ರೀ ರಾಮಕೃಷ್ಣ ಪರಮಹಂಸ ಮೊದಲಾದವರ ಸಾಧನಕಾಲದ ಜೀವನವನ್ನು ನೋಡಿದಲ್ಲಿ ಸತ್ಯವು ಅರ್ಥವಾಗುವುದು. ಮತ್ತೆ 'ಅಮೃತೋಪಮಮ್' ಅಮೃತದಂತೆ ಎಂದು ಹೇಳಿರುವುದು ಸಮಂಜಸವಾಗಿದೆ. ಏಕೆಂದರೆ ಆತ್ಮಸುಖ, ದೈವಸುಖ ದೈವರೂಪ ಅಮೃತವೇ ಆಗಲಿ ಜಡವಾದ ಆ ದೇವತೆಗಳ ಅಮೃತವಲ್ಲ. ಅದಕ್ಕಿಂತ ಎಷ್ಟೋ ಶಕ್ತಿಯುತವಾದದ್ದು. ದೇವತೆಗಳ ಬಳಿ ಇರುವ ಅಮೃತ, ಸ್ಥೂಲ ದೇಹಗಳಿಗೆ ಸ್ವಲ್ಪ ಕಾಲ ಮೃತ್ಯು ಇಲ್ಲದ ಹಾಗೆ ನಿವಾರಿಸಬಲ್ಲದು. ಆದರೆ ಈ ಆತ್ಮ ಸುಖರೂಪವಾದ ಅಮೃತ ಶಾಶ್ವತವಾಗಿ ಜನನ ಮರಣ ಸಂಸಾರದಿಂದ ಜೀವಿಯನ್ನು ವಿಮುಕ್ತಿಗೊಳಿಸುವುದು.

'ಆತ್ಮ ಬುದ್ಧಿ ಪ್ರಸಾದಜಮ್'- ಆ ಸಾತ್ವಿಕ ಸುಖವು (ಆತ್ಮಸುಖವು) ಹೇಗೆ ಉಂಟಾಗುವುದು? ಬುದ್ಧಿ ನಿರ್ಮಲವಾಗಿದ್ದು ವಿಷಯ ದೋಷಗಳು ಯಾವುವೂ ಇಲ್ಲದಿದ್ದರೆ ನಿರ್ಮಲ ದರ್ಪಣದಲ್ಲಿಯ ಪ್ರತಿಬಿಂಬದಂತೆ ಆತ್ಮಸುಖವು ಗೋಚರಿಸುವುದು. ಅನುಭೂತವಾಗುವುದು. ಆದ್ದರಿಂದ ಸುಖವನ್ನು ಅಪೇಕ್ಷಿಸುವವರು ಮೊದಲು ತಮ್ಮ ಬುದ್ಧಿಯನ್ನು ನಿರ್ಮಲಗೊಳಿಸಿಕೊಳ್ಳಬೇಕು. 'ಮೋಕ್ಷವು ಎಲ್ಲಿದೆ, ಸುಖವು ಎಲ್ಲಿದೆ?' ಎಂದು ಕೆಲವರು ಪ್ರಶ್ನಿಸುವರು. ಅದಕ್ಕೆ ಭಗವಂತನು ಇಲ್ಲಿ ಉತ್ತರ ಕೊಟ್ಟಿರುವನು. ಮೋಕ್ಷ, ದೈವ ಸುಖ ಎಲ್ಲೋ ಆಕಾಶದಲ್ಲಿಲ್ಲ, ಪಾತಾಳದಲ್ಲಿಲ್ಲ, ನಿರ್ಮಲವಾದ ತನ್ನ ಬುದ್ಧಿಯಲ್ಲೇ ಇದೆ. ಈ ಅರ್ಥವನ್ನೇ ಶ್ರೀರಾಮಚಂದ್ರನಿಗೆ ಶ್ರೀವಸಿಷ್ಠರು ಹೀಗೆ ಬೋಧಿಸಿದರು-

**ನ ಮೋಕ್ಷೋ ನಭಸಃ ಪೃಷ್ಠೇ ಪಾತಾಲೇ ನ ಚ ಭೂತಲೇ**
**ಮೋಕ್ಷೋ ಹಿ ಚೇತೋ ವಿಮಲಂ ಸಮ್ಯಜ್ಞಾ ನವಿಬೋಧಿತಂ**
**(ಶ್ರೀ ವಸಿಷ್ಠಗೀತೆ)**

ಪ್ರ.: ಸಾತ್ವಿಕ ಸುಖದ ಲಕ್ಷಣವೇನು?

ಉ : ಪ್ರಾರಂಭದಲ್ಲಿ ವಿಷದ ಹಾಗಿದ್ದು ಕೊನೆಯಲ್ಲಿ ಅಮೃತದಂತೆ ಸುಖಕರವಾದದ್ದು.

ಪ್ರ : ಅಂತಹ ಸಾತ್ವಿಕ ಸುಖ ಜೀವಿಗೆ ಹೇಗೆ ಉಂಟಾಗುವುದು?

ಉ : ನಿರ್ಮಲ ಬುದ್ಧಿಯಿಂದ ಅದು ಜನಿಸುವುದು.

ಪ್ರ : ಆದ್ದರಿಂದ ಜೀವಿಯ ಕರ್ತವ್ಯವೇನು?

ಉ : ಅಧ್ಯಾತ್ಮಸಾಧನೆಗಳನ್ನು ಮಾಡುವಾಗ ಉಂಟಾಗುವ ಕಷ್ಟಗಳಿಗೆ ಅಂಜದೆ ಭಗವಂತನ ಮೇಲೆ ಪೂರ್ಣ ವಿಶ್ವಾಸವಿಟ್ಟು ಸಾಧನೆಯನ್ನು ಧೈರ್ಯದಿಂದ ಮುಂದುವರಿಸಿ ಬುದ್ಧಿಯಲ್ಲಿ ವಿಷಯದೋಷವೇನೂ ಇಲ್ಲದೆ ನಿರ್ಮಲವಾಗಿರುವಂತೆ ನೋಡಿಕೊಳ್ಳಬೇಕು. ನಂತರ ಮಹತ್ತರವಾದ ಆತ್ಮ ಸುಖದ ಅನುಭೂತಿಯಾಗುವುದು. ಅದೇ ಮೋಕ್ಷ.

**ಅ||** ರಾಜಸ ಸುಖದ ವಿವರಣೆ-

೩೮ ವಿಷಯೇಂದ್ರಿಯಸಂಯೋಗಾದ್ಯತ್ತದಗ್ರೇಽಮೃತೋಪಮಮ್
ಪರಿಣಾಮೇ ವಿಷಮಿವ ತತ್ಸುಖಂ ರಾಜಸಂ ಸ್ಮೃತಮ್

**ಅರ್ಥ:** ಯತ್ತ್=ಯಾವ ಸುಖವು. ವಿಷಯೇಂದ್ರಿಯ ಸಂಯೋಗಾತ್= ವಿಷಯ, ಇಂದ್ರಿಯಗಳು ಕಲೆಯುವುದರಿಂದ (ಅವುಗಳ ಸಂಬಂಧದಿಂದ); ಅಗ್ರೇ=ಮೊದಲು; ಅಮೃತೋಪಮಮ್=ಅಮೃತವನ್ನು ಹೋಲುವಂತಹ, ಪರಿಣಾಮೇ=ಕೊನೆಯಲ್ಲಿ (ಅನುಭವದ ನಂತರ); ವಿಷಂ ಇವ=ವಿಷದ ಹಾಗಿರುವುದು: (ಭವತಿ=ಆಗುತ್ತಿದೆಯೋ); ತತ್ ಸುಖಂ=ಆ ಸುಖವು; ರಾಜಸಂ=ರಾಜಸವೆಂದು; ಸ್ಮೃತಂ=ಹೇಳಲ್ಪಟ್ಟಿದೆ.

**ತಾ||** ಯಾವ ಸುಖವು ವಿಷಯೇಂದ್ರಿಯ ಸಂಬಂಧದಿಂದ ಮೊದಲು ಅಮೃತದ ಹಾಗಿದ್ದು, ಕೊನೆಯಲ್ಲಿ (ಅನುಭವದ ನಂತರ) ವಿಷದ ಹಾಗೆ ಇರುವುದೋ ಅಂತಹ ಸುಖ ರಾಜಸವೆಂದು ಹೇಳಲ್ಪಡುವುದು.

**ವ್ಯಾಖ್ಯೆ:** ವಿಷಯ ಸುಖ ತಾತ್ಕಾಲಿಕವಾದದ್ದು; ಇಂದ್ರಿಯ, ವಿಷಯಗಳ ಸಂಯೋಗವುಂಟಾದಾಗ ಆ ಸುಖ ಉದಯಿಸಿ ನಂತರ ತಕ್ಷಣವೇ ಮಾಯವಾಗುವುದು. ಪ್ರಾರಂಭದಲ್ಲಿ ಅಮೃತದ ಹಾಗೆ ಸುಖವಾಗಿದ್ದರೂ ಪರ್ಯವಸಾನದಲ್ಲಿ ವಿಷದ ಹಾಗೆ ದಾರುಣ ದುಃಖರೂಪವಾಗಿ ಪರಿಣಮಿಸುವುದೆಂದು ಇಲ್ಲಿ ತಿಳಿಸಲಾಗಿದೆ. ಇದರಿಂದ ಪ್ರಾರಂಭದಲ್ಲಿ ಜೀವಿಗಳಿಗೆ ಅಮೃತದ ಹಾಗೆ ಇರುವ ರಾಜಸ ಸುಖವು ವಾಸ್ತವವಾಗಿ ಅಮೃತವಲ್ಲವೆಂದು ತಿಳಿಯುತ್ತದೆ. ವಿಷರೂಪವಾದ ಆ ಅಮೃತ ಮಹಾಪ್ರಮಾದಕರ ವಸ್ತು. ಏಕೆಂದರೆ ಅಮೃತದಲ್ಲಿರುವ ವಿಷಬೀಜಗಳು ಆ ಸುಖದಲ್ಲಿ ನಿವಸಿಸುವುವು. ಆದ್ದರಿಂದ ಅಂತಹ ಅಮೃತವನ್ನು ತ್ಯಜಿಸದಿದ್ದರೆ ಅದರಲ್ಲಿ ಅಡಗಿರುವ ವಿಷಬೀಜಗಳನ್ನು ಸ್ವೀಕರಿಸಬೇಕಾಗುವುದು. ಆದ್ದರಿಂದ ಮುಮುಕ್ಷುಗಳು ದೃಶ್ಯ ವಿಷಯಗಳಿಂದ ಸುಖಾಭಾಸವಾದಾಗ ಅದು ದುಃಖಗರ್ಭಿತವೆಂದು, ಗಾಳಕ್ಕೆ ಹಾಕಿದ ಹುಳವೆಂದು ತಿಳಿದು ತ್ಯಜಿಸಬೇಕು. ಆ ಸುಖ ಈ ಜೀವನದಲ್ಲಿಯೇ ಅಲ್ಲದೆ ಭಾವೀ ಜೀವನವನ್ನು ಕೂಡ ನಾಶಮಾಡುವುದು. ಆದ್ದರಿಂದಲೇ ಭಗವಂತನು ಕರುಣಿಸಿ ಸಾಧಕರಿಗೆ ಇಲ್ಲಿ ಎಚ್ಚರಿಕೆ ಕೊಡುತ್ತಿದ್ದಾನೆ. ಆ ದೃಶ್ಯ ಸುಖಗಳ ನಿಜವಾದ ಬಣ್ಣವನ್ನು ಗೀತಾಚಾರ್ಯನು ಹೊರತೋರಿಸುತ್ತಿರುವನು. 'ಮೋಸ ಹೋಗಬೇಡಿ' ಎಂದು ಸಲಹೆಯಿತ್ತಿರುವನು. ಅಜ್ಞಾನಿಗಳು ಈ ಸತ್ಯವನ್ನು ತಿಳಿಯದೆ ಶಬ್ದಾದಿ ವಿಷಯಗಳನ್ನು ಗ್ರಹಿಸಿ ಸಂಸಾರ ಕೂಪದಲ್ಲಿ ಬೀಳುತ್ತಿರುವರು.

ಭಗವಂತನ ಈ ವಾಕ್ಯಗಳು ಜೀವಿಗಳಿಗೆ ಅಂಧಕಾರದಲ್ಲಿ ಬೆಳಕನ್ನು ನೀಡುತ್ತಿವೆ. ಜಗತ್ತಿನ ವಾಸ್ತವ ಸ್ವರೂಪವನ್ನು ಬೋಧಿಸುತ್ತಿವೆ. ಮೇಲು ಮೇಲಿನ ಥಳಕು ಬೆಳಕುಗಳಿಗೆ ಮೋಸ ಹೋಗಬಾರದೆನ್ನುವುದನ್ನು ತಿಳಿಸುತ್ತದೆ. ಮುಮುಕ್ಷುಗಳು ವಿಷಯ ಸುಖಗಳಿಂದ ಉಂಟಾಗುವ ಈ ಕೇಡನ್ನು ಗುರುತಿಸಿ ಇಂದ್ರಿಯ ಮನಸ್ಸುಗಳು ವಿಷಯಗಳೊಂದಿಗೆ ಸಂಯೋಗವಾಗದಂತೆ ನೋಡಿಕೊಳ್ಳಬೇಕು. ಒಂದು ವೇಳೆ ಸಂಸ್ಕಾರ ಪ್ರಾಬಲ್ಯದಿಂದ ಇಂದ್ರಿಯಗಳು ವಿಷಯಗಳ ಮೇಲೆ ಬಿದ್ದರೂ ಅವುಗಳನ್ನು ವಿವೇಕದಿಂದ ಹಿಂದಕ್ಕೆ ಸೆಳೆದುಕೊಂಡು ಆತ್ಮದಲ್ಲಿ ಸ್ಥಿತಿ ಹೊಂದುವಂತೆ ಮಾಡಬೇಕು.

ಪ್ರ : ರಾಜಸ ಸುಖದ ಲಕ್ಷಣವೇನು?

ಉ : ಮೊದಲು ಅಮೃತದಂತೆ ಕಂಡು ಅನುಭವದ ನಂತರ ವಿಷದ ಹಾಗೆ ದಾರುಣದುಃಖ ರೂಪವಾಗಿ ಪರಿಣಮಿಸುವುದೇ ರಾಜಸ ಸುಖದ ಲಕ್ಷಣ

**ಅ||** ಇನ್ನು ತಾಮಸ ಸುಖದ ವರ್ಣನೆಯನ್ನು ಕೊಡಲಾಗಿದೆ-

೩೯ ಯದಗ್ರೇ ಚಾನುಬಂಧೇ ಚ ಸುಖಂ ಮೋಹನಮಾತ್ಮನಃ
ನಿದ್ರಾಲಸ್ಯಪ್ರಮಾದೋತ್ಥಂ ತತ್ತಾಮಸಮುದಾಹೃತಮ್

**ಅರ್ಥ:** ನಿದ್ರಾಲಸ್ಯ ಪ್ರಮಾದೋತ್ಥಂ=ನಿದ್ರೆ, ಸೋಮಾರಿತನ, ಪ್ರಮತ್ತತೆ ಎನ್ನುವುಗಳಿಂದ ಹುಟ್ಟಿದ; ಯತ್ ಸುಖಂ=ಯಾವ ಸುಖವು; ಅಗ್ರೇ ಚ=ಆರಂಭದಲ್ಲಿ; ಅನುಬಂಧೇ ಚ=ಅಂತ್ಯದಲ್ಲಿ (ಅನುಭವಿಸಿದ ನಂತರ); ಆತ್ಮನಃ=ತನಗೆ; ಮೋಹನಂ=ಮೋಹವನ್ನು (ಅಜ್ಞಾನವನ್ನು, ಭ್ರಮೆಯನ್ನು) ಉಂಟುಮಾಡುತ್ತಿರುವುದೋ; ತತ್=ಅದು; ತಾಮಸಂ=ತಾಮಸ ಸುಖವೆಂದು; ಉದಾಹೃತಂ=ಹೇಳಲ್ಪಟ್ಟಿದೆ.

**ತಾ||** ನಿದ್ರೆ, ಸೋಮಾರಿತನ, ಪ್ರಮತ್ತತೆ ಎನ್ನುವುಗಳಿಂದ ಹುಟ್ಟಿದ್ದಾಗಿ, ಯಾವ ಸುಖವು ಆರಂಭದಲ್ಲಿಯೂ, ಅಂತ್ಯದಲ್ಲಿಯೂ (ಅನುಭವಿಸಿದ ನಂತರ) ತನಗೆ ಮೋಹವನ್ನು (ಅಜ್ಞಾನ, ಭ್ರಮೆ) ಉಂಟುಮಾಡುತ್ತಿದೆಯೋ ಅದನ್ನು ತಾಮಸ ಸುಖವೆನ್ನುವರು

**ವ್ಯಾಖ್ಯೆ:** ಅತಿನಿದ್ರೆ, ಸೋಮಾರಿತನ (ಆಲಸ್ಯ) ಪ್ರಮತ್ತತೆ- ಎನ್ನುವುಗಳಿಂದ ಉಂಟಾಗುವ ಸುಖ ತಾಮಸ ಸುಖ. ಇದು ಆರಂಭ, ಮಧ್ಯೆ ಹಾಗು ಅಂತ್ಯಗಳಲ್ಲಿ ಕೂಡ ಜೀವಿಗೆ ಮೋಹ (ಅಜ್ಞಾನ, ಭ್ರಮೆಯನ್ನು)ವನ್ನು ಉಂಟುಮಾಡುತ್ತದಾದ್ದರಿಂದ ಅತ್ಯಂತ ನಿಕೃಷ್ಟವಾದುದು. ಇದು ಜೀವಿಯನ್ನು ಅಜ್ಞಾನ ಕೂಪದಲ್ಲಿ ಬೀಳಿಸುವುದಾದ್ದರಿಂದ ಮಹಾ ಪ್ರಮಾದಕರವಾದದ್ದು. ಆದ್ದರಿಂದ ಅತಿ ನಿದ್ರೆ, ಸೋಮಾರಿತನವನ್ನು ಅವಲಂಬಿಸಿ ಅಮೂಲ್ಯವಾದ ಈ ಮಾನವ ಜೀವನವನ್ನು ವ್ಯರ್ಥವಾಗಿ ಕಳೆಯುವವರು ಸಂಸಾರ ದುಃಖ ಸೌಧ ಪ್ರಾಂಗಣದಲ್ಲಿ ಹೆಜ್ಜೆಯಿಡುವವರಾಗಿದ್ದಾರೆ. ಜನನ ಮರಣ ಪರಂಪರಾರೂಪವಾದ ಈ ಸಂಸಾರಕ್ಕೆ ಕಾರಣವಾದ ಅಜ್ಞಾನರೂಪ ಬೀಜವು ತಾಮಸ ಸುಖಾವಲಂಬಿಗಳಲ್ಲಿ ನಶಿಸದೆ ಇನ್ನೂ ಬಲಗೊಳ್ಳುತ್ತದಾದ್ದರಿಂದ, ಅಲ್ಲದೆ ಅಂತಹ ಸುಖ ಪ್ರಮಾದಕರವಾಗಿರುವುದರಿಂದ ಅದನ್ನು ಸಂಪೂರ್ಣವಾಗಿ ತ್ಯಜಿಸಬೇಕು. ಆದ್ದರಿಂದ ಭಗವಂತನ ಈ ಸದ್ಬೋಧೆಗಳನ್ನು ಗ್ರಹಿಸಿ ಮುಮುಕ್ಷುಗಳು ಇಂತಹ ತಾಮಸ, ರಾಜಸಿಕ ಸುಖಗಳೆರಡನ್ನು ಬಿಟ್ಟು ಸಾತ್ವಿಕ ಸುಖವನ್ನು ಅವಲಂಬಿಸಿ ಶ್ರೇಯವನ್ನು ಹೊಂದಬೇಕು.

ಪ್ರ : ತಾಮಸ ಸುಖದ ಲಕ್ಷಣಗಳೇನು?

ಉ: (೧) ನಿದ್ರೆ, ಸೋಮಾರಿತನ, ಪ್ರಮತ್ತತೆಗಳಿಂದ ಕೂಡಿದುದು. (೨) ಆರಂಭ, ಅಂತ್ಯಗಳಲ್ಲಿ (ಅನುಭವಾನಂತರ) ಕೂಡ ತನಗೆ ಮೋಹವನ್ನು, ಭ್ರಮೆಯನ್ನು, ಅಜ್ಞಾನವನ್ನು ಉಂಟುಮಾಡುವುದು.

**ಅ॥** ಈ ಸತ್ವಾದಿ ತ್ರಿಗುಣಗಳಿಂದ ಕೂಡಿರದ ವಸ್ತುವು ಈ ಮೂರು ಲೋಕಗಳಲ್ಲಿ ಯಾವುದೂ ಇಲ್ಲವೆಂದು ತಿಳಿಸಲಾಗುತ್ತಿದೆ-

**೪೦ ನ ತದಸ್ತಿ ಪೃಥಿವ್ಯಾಂ ವಾ ದಿವಿ ದೇವೇಷು ವಾ ಪುನಃ**
**ಸತ್ತ್ವಂ ಪ್ರಕೃತಿಜೈರ್ಮುಕ್ತಂ ಯದೇಭಿಸ್ಸ್ಯಾತ್ತ್ರಿಭಿರ್ಗುಣೈಃ**

**ಅರ್ಥ:** ಪ್ರಕೃತಿಜೈಃ=ಪ್ರಕೃತಿ (ಮಾಯೆ) ಯಿಂದ ಹುಟ್ಟಿದ; ಯೇಭಿಃ ತ್ರಿಭಿಃ ಗುಣೈಃ=ಈ ಮೂರು ಗುಣಗಳಿಂದ; ಮುಕ್ತಂ=ಬಿಡುಗಡೆ ಹೊಂದಿದ; ಸತ್ತ್ವಂ=ವಸ್ತುವು; ಯತ್ಸ್ಯಾತ್=ಯಾವುದು ಇರುವುದೋ; ತತ್=ಅದು; ಪೃಥಿವ್ಯಾಂ ವಾ=ಭೂಲೋಕದಲ್ಲಿ ಆಗಲಿ; ಪುನಃ=ಮತ್ತೆ ದಿವಿ=ಸ್ವರ್ಗದಲ್ಲಾಗಲಿ; ದೇವೇಷು ವಾ=ದೇವತೆಗಳಲ್ಲಾಗಲಿ; ನ ಅಸ್ತಿ=ಇಲ್ಲ.

**ತಾ॥** ಪ್ರಕೃತಿ (ಮಾಯೆ)ಯಿಂದ ಹುಟ್ಟಿದ ಈ ಮೂರು ಗುಣಗಳಿಂದ ಮುಕ್ತವಾಗಿರುವ ವಸ್ತುವು ಭೂ, ಸ್ವರ್ಗ, ದೇವತೆಗಳಲ್ಲಾಗಲೀ ಎಲ್ಲೂ ಇಲ್ಲ.

**ವ್ಯಾಖ್ಯೆ:** ಮೂರು ಲೋಕಗಳಲ್ಲಿ ಪ್ರತಿ ವಸ್ತುವು ಸತ್ತ್ವ, ರಜಸ್ತಮಸ್ಸುಗಳೆಂಬ ಮೂರು ಗುಣಗಳಿಂದ ಕೂಡಿರುವುದೆಂದೂ, ಈ ಗುಣಗಳಿಂದ ಮುಕ್ತವಾಗಿರುವ ವಸ್ತು (ಜೀವನ್ಮುಕ್ತನನ್ನು ಬಿಟ್ಟು) ಯಾವುದೂ ಈ ಪ್ರಪಂಚದಲ್ಲಿ ಇಲ್ಲವೆಂದು ಹೇಳುತ್ತಿದ್ದಾನೆ. ಜೀವನ್ಮುಕ್ತರಾದ ಮಹನೀಯರನ್ನು ಬಿಟ್ಟು ಬೇರೆಯವರೆಲ್ಲರೂ ಯಾವುದೋ ಒಂದು ಗುಣದಿಂದ, ಅಥವ ಗುಣಗಳಿಂದ ಕೂಡಿರುವವರೇ ಆಗಿದ್ದಾರೆ. ಸ್ವರ್ಗ ಲೋಕದಲ್ಲಿರುವವರು ಕೂಡ ಈ ತ್ರಿಗುಣಗಳಿಂದ ಬಾಧಿತರಾಗಿದ್ದಾರೆ ಎಂದು ಈ ಶ್ಲೋಕದಲ್ಲಿ ಭಗವಂತನು ಹೇಳಿದನು. ಆದ್ದರಿಂದ ಅವರೂ ಸಹ ಬಂಧನಕ್ಕೊಳಗಾಗಿರುವವರೇ. ಅವರೂ ಕೂಡ ಯಾವಾಗಲೋ ಒಮ್ಮೆ ಜ್ಞಾನಾದಿಗಳನ್ನು ಪಡೆದು ಗುಣರಹಿತರಾಗಿ ಮುಕ್ತರಾಗಲೇಬೇಕಾಗಿದೆ.

'ಪ್ರಕೃತಿಜೈಃ'-ಎಂದು ಹೇಳಿರುವುದರಿಂದ ಈ ಮೂರುಗುಣಗಳ ಉತ್ಪತ್ತಿ ಸ್ಥಾನ ಪ್ರಕೃತಿ, ಮಾಯೆ (ಅಜ್ಞಾನ) ಎಂದು ಸ್ಪಷ್ಟವಾಗುತ್ತದೆ. ಈ ಮೂರು ಗುಣಗಳಲ್ಲಿ ಯಾವುದೊಂದಿದ್ದರೂ ಅವರಿನ್ನೂ ಪ್ರಕೃತಿಯೊಡನೆ ಸಂಬಂಧ ಹೊಂದಿದ್ದಾರೆ ಎಂದರ್ಥ. ಆದ್ದರಿಂದ ರಜಸ್ತಮಸ್ಸುಗಳನ್ನು ಪ್ರಯತ್ನ ಅಭ್ಯಾಸ ಪ್ರಾಬಲ್ಯಗಳಿಂದ ದಾಟಿ ಸತ್ತ್ವಗುಣದವರೆಗೆ ಮುಂದುವರಿದು ಕ್ರಮವಾಗಿ ಗುಣಾತೀತ ಆತ್ಮಸ್ಥಿತಿಯನ್ನು ಪಡೆಯಬೇಕು. ಅದೇ ಮೋಕ್ಷ

ಪ್ರ : ಸತ್ವಾದಿ ತ್ರಿಗುಣಗಳು ಯಾವುದರಿಂದ ಹುಟ್ಟಿವೆ?

ಉ : ಪ್ರಕೃತಿಯಿಂದ (ಮಾಯೆ, ಅಜ್ಞಾನದಿಂದ)

ಪ್ರ : ಈ ಗುಣಗಳಿಂದ ಕೂಡಿರದ ವಸ್ತುವು ಏನಾದರೂ ಇದೆಯೇ?

ಉ : ಇಲ್ಲ (ಜೀವನ್ಮುಕ್ತನೊಬ್ಬನನ್ನು ಬಿಟ್ಟು)

ಪ್ರ : ಇಂತಹ ಸ್ಥಿತಿ ಈ ಲೋಕದಲ್ಲಿಯೇ ಅಲ್ಲದೆ ಬೇರೆ ಲೋಕಗಳಲ್ಲಿ ಎಲ್ಲಾದರೂ ಇದೆಯೇ?

ಉ : ಸ್ವರ್ಗಾದಿ ಬೇರೆ ಲೋಕಗಳಲ್ಲಿ, ದೇವತೆಗಳಲ್ಲಿಯೂ ಈ ಪರಿಸ್ಥಿತಿಯೇ ಇದೆ.

**ಅ॥** ಲೋಕದಲ್ಲಿ ಜನರ ಗುಣಗಳನ್ನು ಗ್ರಹಿಸಿ ಕರ್ಮಗಳು ವಿಭಜಿಸಲ್ಪಟ್ಟಿವೆ ಎಂದು ತಿಳಿಸಲಾಗುತ್ತಿದೆ-

**೪೧ ಬ್ರಾಹ್ಮಣಕ್ಷತ್ರಿಯವಿಶಾಂ ಶೂದ್ರಾಣಾಂ ಚ ಪರಂತಪ**
**ಕರ್ಮಾಣಿ ಪ್ರವಿಭಕ್ತಾನಿ ಸ್ವಭಾವಪ್ರಭವೈರ್ಗುಣೈಃ**

**ಅರ್ಥ:** ಪರಂತಪ=ಶತ್ರುಗಳನ್ನು ತಪಿಸುವಂತಹ ಅರ್ಜುನ! ಬ್ರಾಹಣ ಕ್ಷತ್ರಿಯವಿಶಾಂ=ಬ್ರಾಹ್ಮಣ, ಕ್ಷತ್ರಿಯ ವೈಶ್ಯರಿಗೆ; ಶೂದ್ರಾಣಾಂ ಚ=ಶೂದ್ರರಿಗೆ ಕೂಡ; ಕರ್ಮಾಣಿ=ಕರ್ಮಗಳು; ಸ್ವಭಾವಪ್ರಭವೈಃ= ಅವರವರ (ಜನ್ಮಾಂತರ ಸಂಸ್ಕಾರಗಳನ್ನನುಸರಿಸಿ) ಸ್ವಭಾವವು (ಪ್ರಕೃತಿಯಿಂದ ಹುಟ್ಟಿದ); ಗುಣೈಃ= ಗುಣಗಳಿಂದ; ಕರ್ಮಾಣಿ=ಕರ್ಮಗಳು; ಪ್ರವಿಭಕ್ತಾನಿ=ಬೇರೆ ಬೇರೆಯಾಗಿ ವಿಭಜಿಸಲ್ಪಟ್ಟಿವೆ.

**ತಾ॥** ಶತ್ರುಗಳನ್ನು ತಪಿಸುವ ಓ ಅರ್ಜುನಾ! ಬ್ರಾಹ್ಮಣ ಕ್ಷತ್ರಿಯ ವೈಶ್ಯ ಶೂದ್ರರ ಕರ್ಮಗಳು, ಅವರವರ (ಜನ್ಮಾಂತರ ಸಂಸ್ಕಾರಗಳಿಂದುಂಟಾದ) ಸ್ವಭಾವದ ಮೇರೆಗೆ (ಪ್ರಕೃತಿಯಿಂದ ಹುಟ್ಟಿದ ಗುಣಗಳಿಗನುಸಾರವಾಗಿ) ಬೇರೆ ಬೇರೆಯಾಗಿ ವಿಭಜಿಸಲ್ಪಟ್ಟಿವೆ.

**ವ್ಯಾಖ್ಯೆ:** ಈ ಮೊದಲೇ ನಾಲ್ಕನೆಯ ಅಧ್ಯಾಯದ ೧೩ನೆಯ ಶ್ಲೋಕದಲ್ಲಿ ಚಾತುರ್ವರ್ಣಗಳು, ಅವರವರ ಗುಣ, ಕರ್ಮಗಳ ಪ್ರಕಾರ ಸೃಷ್ಟಿಸಲ್ಪಟ್ಟರು ಎಂದು ಭಗವಂತನು ಹೇಳಿರುತ್ತಾನೆ* ಈಗಲೂ ಆ ಭಾವವನ್ನೇ ವ್ಯಕ್ತಗೊಳಿಸುತ್ತಾ ಅವರವರ ಜನ್ಮಾಂತರ ಸಂಸ್ಕಾರಗಳಿಂದ ಉಂಟಾದ ಗುಣಗಳಪ್ರಕಾರ ಅವರವರ ಕರ್ಮಗಳು, (ಅವುಗಳನ್ನು ಅನುಸರಿಸಿ ಅವರ ವರ್ಣಗಳು) ವಿಭಜಿಸಲ್ಪಟ್ಟಿವೆ ಎಂದು ತಿಳಿಸುತ್ತಿದ್ದಾನೆ. ಇದರಿಂದ ಹುಟ್ಟಿನಿಂದಲೇ ಜಾತಿ ಏರ್ಪಾಡಾಗಿಲ್ಲ ವೆಂದು ಅವರವರ ಗುಣಗಳನ್ನು ಹಿಡಿದು ಜನ್ಮ, ಕರ್ಮಗಳು ಏರ್ಪಡಾಗುತ್ತಿವೆ ಯೆಂದು ಸ್ಪಷ್ಟವಾಗುತ್ತದೆ. ಇಂತಹ ಪರಿಸ್ಥಿತಿಯಲ್ಲಿ ಪ್ರತಿಯೊಬ್ಬನಿಗೂ ಊರ್ಧ್ವ ಸ್ಥಿತಿಗೆ ಹೋಗುವ ಅವಕಾಶ ಲಭಿಸುತ್ತಿದೆ. ಅಂದರೆ ನೀಚ ಜಾತಿಯಲ್ಲಿ ಹುಟ್ಟಿದಾಗಲೂ ತಮ್ಮ ತಮ್ಮ ಕರ್ಮಗಳ ಶುದ್ಧತೆಯಿಂದ, ಪಾರಮಾರ್ಥಿಕ ಸಾಧನಾತಿಶಯದಿಂದ ಪವಿತ್ರತೆಯಿಂದ ಉತ್ತಮ ವರ್ಣಸ್ಥರಾಗಬಹುದು. ಈ ಪ್ರಕಾರವಾಗಿ ಸರ್ವರಿಗೂ ಆಧ್ಯಾತ್ಮಿಕ ಉನ್ನತ ಶಿಖರವನ್ನು ಅಧಿರೋಹಿಸುವ ಅವಕಾಶ ಕಲ್ಪಿಸುತ್ತಿರುವುದು ಗೀತೆಯ ವಿಶಿಷ್ಟತೆಯಾಗಿದೆ.

ಪ್ರ : ಬ್ರಾಹ್ಮಣಾದಿ ವರ್ಣಗಳು ಯಾವುದರಿಂದ ಏರ್ಪಟ್ಟಿವೆ?

ಉ: ಅವರವರ ಗುಣಗಳಿಂದ.

ಪ್ರ : ಚಾತುರ್ವರ್ಣ್ಯದವರ ಕರ್ಮಗಳು ಹೇಗೆ ವಿಭಜಿಸಲ್ಪಟ್ಟಿವೆ?

ಉ: ಅವರವರ (ಜನ್ಮಾಂತರ ಸಂಸ್ಕಾರಗಳನ್ನನುಸರಿಸಿ) ಸ್ವಭಾವಗಳಿಂದ ಹುಟ್ಟಿದ ಗುಣಗಳನ್ನು ಹಿಡಿದು ಆಯಾ ಕರ್ಮಗಳನ್ನು ವಿಭಜಿಸಲಾಗಿದೆ.

ಪ್ರ : ಹುಟ್ಟಿನಿಂದಲೇ ಜಾತಿ ಏರ್ಪಟ್ಟಿದೆಯೇ?

ಉ :ಇಲ್ಲ, ಅವರವರ ಕರ್ಮಗಳಿಂದ.

---

* ಚಾತುರ್ವರ್ಣ್ಯಂ ಮಯಾ ಸೃಷ್ಟಂ ಗುಣಕರ್ಮ ವಿಭಾಗಶಃ (೪-೧೩)

ಅ॥ ಹಾಗೆ ಸ್ವಭಾವದಿಂದ ಉಂಟಾಗುವ ಆಯಾ ಕರ್ಮಗಳ ಬಗ್ಗೆ ಹೇಳಲಾಗುತ್ತಿದೆ-

**೪೨ ಶಮೋ ದಮಸ್ತಪಃ ಶೌಚಂ ಕ್ಷಾಂತಿರಾರ್ಜವಮೇವ ಚ**
**ಜ್ಞಾನಂ ವಿಜ್ಞಾನ ಮಾಸ್ತಿಕ್ಯ ಬ್ರಾಹ್ಮಂ ಕರ್ಮ ಸ್ವಭಾವಜಂ**

**ಅರ್ಥ:** ಶಮಃ=ಅಂತರೇಂದ್ರಿಯನಿಗ್ರಹ (ಮನೋ ನಿಗ್ರಹ); ದಮಃ= ಬಾಹ್ಯೇಂದ್ರಿಯ ನಿಗ್ರಹ; ತಪಃ=ತಪಸ್ಸು; ಶೌಚಂ=ಶುಚಿತ್ವ; ಕ್ಷಾಂತಿಃ=ಸಹನೆ; ಆರ್ಜವಮ್ ಏವ ಚ=ಋಜುತ್ವ (ಕಪಟವಿಲ್ಲದೇ ಇರುವ ವರ್ತನೆ) ಜ್ಞಾನಂ=ಶಾಸ್ತ್ರ ಜ್ಞಾನ; ವಿಜ್ಞಾನಂ=ಅನುಭವಜ್ಞಾನ; ಆಸ್ತಿಕ್ಯಂ=ದೈವ, ಗುರು ಶಾಸ್ತ್ರದಲ್ಲಿ ನಂಬಿಕೆ (ಎನ್ನುವುವು); ಸ್ವಭಾವಜಂ=ಸ್ವಭಾವದಿಂದ; ಬ್ರಾಹ್ಮಂ ಕರ್ಮ =ಬ್ರಾಹ್ಮಣ ಕರ್ಮವಾಗಿದೆ.

**ತಾ॥** ಅಂತರಿಂದ್ರಿಯ (ಮನೋ) ನಿಗ್ರಹ, ಬಾಹ್ಯೇಂದ್ರಿಯ ನಿಗ್ರಹ, ತಪಸ್ಸು, ಶುಚಿತ್ವ, ಋಜುಮಾರ್ಗ ವರ್ತನೆ, ಶಾಸ್ತ್ರ ಹಾಗು ಅನುಭವ ಜ್ಞಾನ, ದೈವ, ಗುರು, ಶಾಸ್ತ್ರದಲ್ಲಿ ನಂಬಿಕೆಯಿರುವುದು ಮುಂತಾದುವು ಸ್ವಭಾವದಿಂದ ಹುಟ್ಟಿದ ಬ್ರಾಹ್ಮಣ ಕರ್ಮಗಳಾಗಿವೆ.

**ವ್ಯಾಖ್ಯೆ:** ಜ್ಞಾನ, ವಿಜ್ಞಾನಗಳೆರಡನ್ನೂ ಮುಮುಕ್ಷುವು ತಪ್ಪದೆ ಹೊಂದಿರ ಬೇಕೆಂದು ಭಗವಂತನು ಗೀತೆಯಲ್ಲಿ ಅನೇಕ ಕಡೆ ಹೇಳಿರುತ್ತಾನೆ. ಕೇವಲ ಶಾಸ್ತ್ರಜ್ಞಾನ ಸಾಕಾಗುವುದಿಲ್ಲ. ಅನುಭವ ಕೂಡ ಇರಬೇಕು. ಅನುಭವದಿಂದಲೇ ಮನುಜನಿಗೆ ಹೃದಯ ಪರಿಣಾಮ ಹಾಗು ಆನಂದ ಉಂಟಾಗುತ್ತದೆ. ಮತ್ತೆ ಜನರಿಗೆ ಪರಮಾರ್ಥ ವಿಷಯದ ಮೇಲೆ ವಿಶ್ವಾಸ ಕೂಡ ಉಂಟಾಗುತ್ತದೆ. ಆದ್ದರಿಂದ ಪ್ರತಿಯೊಬ್ಬನೂ ಶಾಸ್ತ್ರಜ್ಞಾನದೊಡನೆ ಅನುಭವಜ್ಞಾನವನ್ನೂ ಸಂಪಾದಿಸಬೇಕು. ಈ ಶ್ಲೋಕದಲ್ಲಿ ಶಮದಮಾದಿಗಳೆಂಬ ಏಳು ಕರ್ಮಗಳು ಹೇಳಲ್ಪಟ್ಟಿವೆ. ಆ ಸತ್ಕರ್ಮಗಳನ್ನು ಅನುಷ್ಠಾನ ಮಾಡುವವನು ಬ್ರಾಹ್ಮಣನೇ ಆಗುವನು ಎನ್ನುವುದು ಭಾವ. ಇಲ್ಲಿ 'ತಪಸ್ಸು' ಎನ್ನುವುದರ ಅರ್ಥ ೧೭ನೆಯ ಅಧ್ಯಾಯದಲ್ಲಿ ತಿಳಿಸಲ್ಪಟ್ಟ ಶಾರೀರಿಕ, ವಾಚಿಕ, ಮಾನಸಿಕ ತಪಸ್ಸುಗಳು ಎಂದು ಗ್ರಹಿಸಬೇಕು.

ಪ್ರ : ಯಾವ ಯಾವ ಕರ್ಮಗಳು ಬ್ರಾಹ್ಮಣ ಸ್ವಭಾವಗಳಾಗಿವೆ? (ಇಲ್ಲವೆ ಯಾವ ಕರ್ಮಗಳು ಬ್ರಾಹ್ಮಣತ್ವವನ್ನು ನಿರ್ಣಯಿಸುವುವು?

ಉ :೧) ಮನೋನಿಗ್ರಹ ೨) ಬಾಹ್ಯೇಂದ್ರಿಯ ನಿಗ್ರಹ ೩) ತಪಸ್ಸು ೪) (ಬಾಹ್ಯಾಭಂತರ) ಶುಚಿತ್ವ ೫) ಸಹನೆ ೬) ಋಜು ಪ್ರವರ್ತನೆ ೭) ಶಾಸ್ತ್ರ ಜ್ಞಾನ ೮) ಅನುಭವ ಜ್ಞಾನ ೯) ಆಸ್ತಿಕ ಭಾವನೆ (ದೇವರು, ಗುರು, ಶಾಸ್ತ್ರಗಳಲ್ಲಿ ವಿಶ್ವಾಸ) ಎನ್ನುವ ಒಂಭತ್ತು ಕರ್ಮಗಳು ಬ್ರಾಹ್ಮಣ ಸ್ವಭಾವವಾಗಿರುವುವು.

ಅ॥ ಕ್ಷತ್ರಿಯ ಕರ್ಮಗಳ ವಿವರಣೆ ಕೊಡಲಾಗಿದೆ-

**೪೩. ಶೌರ್ಯಂ ತೇಜೋ ಧೃತಿರ್ದಾಕ್ಷ್ಯಂ ಯುದ್ಧೇಚಾಪ್ಯಪಲಾಯನಮ್**
**ದಾನಮೀಶ್ವರಭಾವಶ್ಚ ಕ್ಷಾತ್ರಂಕರ್ಮ ಸ್ವಭಾವಜಂ.**

**ಅರ್ಥ:** ಶೌರ್ಯಂ=ಶೂರತ್ವ (ಪರಾಕ್ರಮ); ತೇಜಃ=ತೇಜಸ್ಸು (ಕೀರ್ತಿ= ಪ್ರತಾಪ); ಧೃತಿಃ=ಧೈರ್ಯ; ದಾಕ್ಷ್ಯಂ=ಸಾಮರ್ಥ್ಯ; ಯುದ್ಧೇ=ಯುದ್ಧದಲ್ಲಿ; ಅಪಲಾಯನಂ ಅಪಿ ಚ=ಓಡಿ ಹೋಗದೇ ಇರುವುದು; ದಾನಂ=ದಾನವು; ಈಶ್ವರಭಾವಃ ಚ=(ಧರ್ಮ ಪೂರ್ವಕ) ಪ್ರಜಾಪರಿಪಾಲನಾ ಶಕ್ತಿ (ಶಾಸಕತ್ವ); ಸ್ವಭಾವಜಂ=ಸ್ವಭಾವದಿಂದ ಹುಟ್ಟಿದ; ಕ್ಷಾತ್ರಂ ಕರ್ಮ=ಕ್ಷತ್ರಿಯ ಕರ್ಮ (ಆಗಿದೆ).

**ತಾ॥** ಶೂರತ್ವ, ತೇಜಸ್ಸು (ಕೀರ್ತಿ, ಪ್ರತಾಪ), ಧೈರ್ಯ, ಸಾಮರ್ಥ್ಯ ಯುದ್ಧದಲ್ಲಿ ಓಡಿಹೋಗದಿರುವುದು, ದಾನ, (ಧರ್ಮಪೂರ್ವಕ) ಪ್ರಜಾಪರಿಪಾಲನಾಶಕ್ತಿ (ಶಾಸಕತ್ವ)- ಇವು ಸ್ವಭಾವದಿಂದ ಹುಟ್ಟಿದ ಕ್ಷತ್ರಿಯ ಕರ್ಮಗಳಾಗಿವೆ.

**ವ್ಯಾಖ್ಯೆ:** 'ಯುದ್ಧೇಚಾಪ್ಯಪಲಾಯನಮ್'- ಯುದ್ಧದಲ್ಲಿ ಓಡಿ ಹೋಗುವುದು ಕ್ಷತ್ರಿಯ ಧರ್ಮವಲ್ಲವೆಂದು ತಿಳಿಸಲ್ಪಟ್ಟಿದೆ. ಆದರೆ ಬಾಹ್ಯಯುದ್ಧ ಯಾವಾಗಲೋ ಒಮ್ಮೆ ಸಂಭವಿಸುವುದು. ಆದರೆ ಅಂತರ್ಯುದ್ಧ ಮೋಕ್ಷ ಪರ್ಯಂತ ಸರ್ವ ಜೀವಿಗಳಲ್ಲಿ ನಡೆಯುತ್ತಲೇ ಇರುತ್ತದೆ. ಒಳ್ಳೆಯದು ಕೆಟ್ಟದ್ದಕ್ಕೆ, ಧರ್ಮ ಅಧರ್ಮಗಳಿಗೆ, ದೈವ ಅಸುರ ಸಂಪದಗಳಿಗೆ, ಸಂಗ್ರಾಮವು ಹೃದಯದಲ್ಲಿ ನಿರಂತರ ಸಾಗುತ್ತಲೇ ಇರುವುದು. ಬಲವತ್ತರವಾದ ಮಾಯೆಯಿಂದ ನಡೆಯುವ ಅಂತಹ ಯುದ್ಧದಲ್ಲಿ ಪ್ರತಿ ಮಾನವನು ಇಂತಹ ಕ್ಷಾತ್ರವನ್ನೇ ಪ್ರದರ್ಶಿಸಬೇಕು. ಅಂದರೆ ಮಾಯೆ (ಪ್ರಕೃತಿ)ಯೊಡನೆ ನಡೆಯುವ ಯುದ್ಧದಲ್ಲಿ ಸೋಲನ್ನೊಪ್ಪಿಕೊಳ್ಳಬಾರದು. ಮುಂದೆ ಹಾಕಿದ ಹೆಜ್ಜೆಯನ್ನು ಹಿಂದಕ್ಕೆ ತೆಗೆದುಕೊಳ್ಳಬಾರದು. ಬಾಹ್ಯ ಯುದ್ಧದಲ್ಲಿ ಕ್ಷತ್ರಿಯರು ತೋರಿಸುವ ಧೈರ್ಯ, ಪರಾಕ್ರಮಗಳಿಗಿಂತ ಅಧಿಕತರವಾದ ಧೈರ್ಯ ಸಾಹಸಗಳನ್ನು ಮನುಜನು ತನ್ನ ಅಂತರ್ಯುದ್ಧದಲ್ಲಿ ತೋರಿಸಬೇಕು. ಆಗಲೇ ವಿಜಯವು ಕರತಲಾಮಲಕವಾಗಿ ಜೀವಿಯು ಮೋಕ್ಷ ಸ್ವಾಮ್ರಾಜ್ಯಾಭಿಷಿಕ್ತನಾಗುವನು. ಅದಕ್ಕೆ ಬ್ರಹ್ಮತೇಜ. ಕ್ಷಾತ್ರವೀರ್ಯ- ಎನ್ನುವುಗಳನ್ನು ಜೀವಿಯು ಸಂಪಾದಿಸಬೇಕಾಗಿದೆ. ಮತ್ತೆ ಲಕ್ಷ್ಯವಾದ ಆತ್ಮಸಾಕ್ಷಾತ್ಕಾರ, ಜೀವನ್ಮುಕ್ತಿ ಹೊಂದುವವರೆಗೆ ಮನುಜನು ಹಿಂದಕ್ಕೆ ತಿರುಗಿ ನೋಡಬಾರದು. ಈ ವಿಧವಾಗಿ **'ಯುದ್ಧೇಚಾಪ್ಯಪ ಲಾಯನಮ್'** ಎನ್ನುವ ಈ ಕ್ಷತ್ರಿಯ ಧರ್ಮ ಸೂತ್ರವನ್ನು ಪ್ರತಿಯೊಬ್ಬನೂ ತನ್ನ ಅಂತರ್ಯುದ್ಧಕ್ಕೆ ಅನ್ವಯಿಸಿಕೊಂಡು ಕೃತಾರ್ಥನಾಗಬೇಕು.

ಪ್ರ : ಕ್ಷತ್ರಿಯನ ಸ್ವಭಾವ ಜನಿತ ಕರ್ಮಗಳಾವುವು?

ಉ: ೧) ಶೂರತ್ವ ೨) ತೇಜಸ್ಸು (ಕೀರ್ತಿ, ಪ್ರತಾಪ) ೩) ಧೈರ್ಯ ೪) ಸಾಮರ್ಥ್ಯ ೫) ಯುದ್ಧದಿಂದ ಪಲಾಯನ ಮಾಡದಿರುವುದು ೬) ದಾನ ೭) ಪ್ರಜಾ ಪರಿಪಾಲನಾ ಶಕ್ತಿ (ಶಾಸಕತ್ವ) ಇವು ಕ್ಷತ್ರಿಯನ ಕರ್ಮಗಳು.

ಅ॥ ವೈಶ್ಯ, ಶೂದ್ರರ ಸ್ವಭಾವಜನಿತ ಕರ್ಮಗಳನ್ನು ನಿರೂಪಿಸಲಾಗುತ್ತಿದೆ-

**೪೪ ಕೃಷಿಗೋರಕ್ಷವಾಣಿಜ್ಯಂ ವೈಶ್ಯಂ ಕರ್ಮ ಸ್ವಭಾವಜಮ್**
**ಪರಿಚರ್ಯಾತ್ಮಕಂ ಕರ್ಮ ಶೂದ್ರಸ್ಯಾಪಿ ಸ್ವಭಾವಜಮ್**

**ಅರ್ಥ:** ಕೃಷಿ=ವ್ಯವಸಾಯ; ಗೋರಕ್ಷ=ಗೋಸಂರಕ್ಷಣೆ, ವಾಣಿಜ್ಯಂ= ವ್ಯಾಪಾರ; ಸ್ವಭಾವಜಂ=ಸ್ವಭಾವದಿಂದ ಹಟ್ಟಿದ (ಸ್ವಭಾವಸಿದ್ಧವಾದ); ವೈಶ್ಯಂಕರ್ಮ= ವೈಶ್ಯನಕರ್ಮವಾಗಿದೆ; ಅಪಿ=ಮತ್ತೆ; ಪರಿಚರ್ಯಾತ್ಮಕಂ= ಸೇವಾರೂಪವಾದ; ಕರ್ಮ=ಕರ್ಮ; ಶೂದ್ರಸ್ಯ=ಶೂದ್ರನಿಗೆ; ಸ್ವಬಾವಜಂ=ಸ್ವಭಾವ ಸಿದ್ಧವಾದುದು.

**ತಾ॥** ವ್ಯವಸಾಯ, ಗೋಸಂರಕ್ಷಣೆ, ವ್ಯಾಪರ ವೈಶ್ಯನಿಗೆ ಸ್ವಭಾವಜನಿತವಾದ ಕರ್ಮಗಳಾಗಿವೆ. ಹಾಗೆಯೇ ಸೇವಾರೂಪವಾದ ಕರ್ಮವು ಶೂದ್ರ ಸ್ವಭಾವಕ್ಕನುಗುಣವಾಗಿದೆ.

ಪ್ರ : ವೈಶ್ಯನ ಸ್ವಭಾವ ಜನಿತ ಕರ್ಮಗಳು ಯಾವುವು?

ಉ : ೧) ವ್ಯವಸಾಯ ೨) ಗೋಸಂರಕ್ಷಣೆ, ೩) ವ್ಯಾಪಾರ

ಪ್ರ : ಶೂದ್ರನ ಸ್ವಾಭಾವಿಕ ಕರ್ಮಗಳು ಯಾವುವು?

ಉ : ಸೇವೆ.

**ಅ॥** ಅವರವರ ಸ್ವಾಭಾವಿಕ ಕರ್ಮಗಳನ್ನು ಸರಿಯಾಗಿ ಆಚರಿಸುವುದರಿಂದ ಜನರು ಜ್ಞಾನಯೋಗ್ಯತಾರೂಪಸಿದ್ಧಿಯನ್ನು ಪಡೆಯಬಲ್ಲರೆಂದು ಹೇಳಲಾಗಿದೆ-

**೪೫ ಸ್ವೇ ಸ್ವೇ ಕರ್ಮಣ್ಯಭಿರತಸ್ಸಂಸಿದ್ಧಿಂ ಲಭತೇ ನರಃ**
**ಸ್ವಕರ್ಮನಿರತಸ್ಸಿದ್ಧಿಂ ಯಥಾ ವಿಂದತಿ ತಚ್ಛೃಣು**

**ಅರ್ಥ:** ಸ್ವೇ ಸ್ವೇ ಕರ್ಮಣಿ=(ಮೇಲೆ ತಿಳಿಸಿದ) ತನ್ನ ಸ್ವಾಭಾವಿಕ ಕರ್ಮಗಳಲ್ಲಿ; ಅಭಿರತಃ=ಆಸಕ್ತಿ (ಶ್ರದ್ಧೆ) ಯುಳ್ಳ; ನರಃ=ಮನುಜನು; ಸಂಸಿದ್ಧಿಂ=ಜ್ಞಾನ ಯೋಗ್ಯತಾರೂಪ ಸಿದ್ಧಿಯನ್ನು; ಲಭತೇ=ಹೊಂದುತ್ತಿದ್ದಾನೆ; ಸ್ವಕರ್ಮ ನಿರತಃ=ಸ್ವಕೀಯ ಕರ್ಮದಲ್ಲಿ ಆಸಕ್ತಿಯುಳ್ಳವನು; ಯಥಾ=ಯಾವ ಪ್ರಕಾರವಾಗಿ; ಸಿದ್ಧಿಂ=ಜ್ಞಾನ ಯೋಗ್ಯತಾರೂಪ ಸಿದ್ಧಿಯನ್ನು; ವಿಂದತಿ= ಹೊಂದುತ್ತಿದ್ದಾನೋ; ತತ್ ಶೃಣು=ಅದನ್ನು ಕೇಳು.

**ತಾ॥** ತನ್ನ ಸ್ವಾಭಾವಿಕ ಕರ್ಮದಲ್ಲಿ ಆಸಕ್ತಿ (ಶ್ರದ್ಧೆ) ಯುಳ್ಳ ಮನುಜನು ಜ್ಞಾನಯೋಗ್ಯತಾರೂಪ ಸಿದ್ಧಿಯನ್ನು ಹೊಂದುತ್ತಿದ್ದಾನೆ. ಸ್ವಕೀಯ ಕರ್ಮದಲ್ಲಿ ಆಸಕ್ತಿಯುಳ್ಳವನು ಜ್ಞಾನಯೋಗ್ಯತಾರೂಪ ಸಿದ್ಧಿಯನ್ನು ಹೇಗೆ ಪಡೆಯುತ್ತಾನೆ ಎನ್ನುವುದನ್ನು ಹೇಳುವೆನು ಕೇಳು.

**ವ್ಯಾಖ್ಯೆ:** ಅವರವರ ಸ್ವಾಭಾವಿಕ ಕರ್ಮಗಳನ್ನು ಈಶ್ವರಾರ್ಪಿತವಾಗಿ ಇಲ್ಲವೆ ಫಲಾಭಿಲಾಷಾರಹಿತವಾಗಿ ಆಚರಿಸುವುದರಿಂದ ಮನುಜನು ಜ್ಞಾನ ಯೋಗ್ಯತಾರೂಪ ಸಿದ್ಧಿಯನ್ನು ಹೊಂದುವನೆಂದು ಇಲ್ಲಿ ಹೇಳಲಾಗಿದೆ. ಕರ್ಮದಿಂದ ಮೋಕ್ಷ ಸಿದ್ಧಿ ಹೇಗೆ ಉಂಟಾಗುವುದೆಂದು ಬಹಳ ಜನಗಳಿಗೆ ಸಂದೇಹ ಬರಬಹುದು. ಆ ಸಂದೇಹವನ್ನು ಭಗವಂತನು ಈ ಶ್ಲೋಕದಲ್ಲಿ ಹಾಗು ಮುಂದಿನ ಶ್ಲೋಕದಲ್ಲಿ ನಿವಾರಿಸಿರುವನು. ಕರ್ಮವನ್ನು ನಿಷ್ಕಾಮವಾಗಿ ಆಚರಿಸುವುದರಿಂದ ಚಿತ್ತ ಶುದ್ಧಿಯುಂಟಾಗಿ ಅದರಿಂದ ಜ್ಞಾನಸಾವಿರ್ಭವಿಸಿ ಮನುಜನು ಮೋಕ್ಷ ಸಿದ್ಧಿಯನ್ನು ಹೊಂದುತ್ತಾನೆ. ಈ ಪ್ರಕಾರವಾಗಿ ಕರ್ಮ ಮೋಕ್ಷ ಸಿದ್ಧಿಗೆ ಕಾರಣವಾಗುತ್ತದೆ. ಕರ್ಮ ಯೋಗದಲ್ಲಿಯ ಈ ರಹಸ್ಯವನ್ನು ಭಗವಂತನು ಈ ಪ್ರಕಾರವಾಗಿ ಗೀತೆಯಲ್ಲಿ ಸ್ಫುಟವಾಗಿ ತಿಳಿಸಿರುವನು.

ಪ್ರ : ಜ್ಞಾನಯೋಗ್ಯತಾರೂಪ ಸಿದ್ಧಿಯನ್ನು ಮನುಜನು ಹೇಗೆ ಹೊಂದುವನು?

ಉ: ತಮ್ಮ ತಮ್ಮ ಸ್ವಾಭಾವಿಕ ಕರ್ಮವನ್ನು ಫಲಾಪೇಕ್ಷೆಯಿಲ್ಲದೆ, ಈಶ್ವರಾರ್ಪಣವಾಗಿ, ನಿಷ್ಕಾಮವಾಗಿ ಆಚರಿಸುವುದರಿಂದ ಚಿತ್ತ ಶುದ್ಧಿಯುಂಟಾಗಿ ಅದರಿಂದ ಜ್ಞಾನ ಯೋಗ್ಯತೆ ಲಭಿಸುವುದು.

**ಅ॥** ಸ್ವಕೀಯ ಕರ್ಮಾಚರಣೆಯಿಂದ ಮನುಜನು ಜ್ಞಾನಯೋಗ್ಯತಾರೂಪ ಸಿದ್ಧಿಯನ್ನು ಹೇಗೆ ಪಡೆಯಬಲ್ಲನೋ ವಿವರಿಸಲಾಗಿದೆ-

**೪೬ ಯತಃ ಪ್ರವೃತ್ತಿರ್ಭೂತಾನಾಂ ಏನ ಸರ್ವಮಿದಂ ತತಂ**
**ಸ್ವಕರ್ಮಣಾ ತಮಭ್ಯರ್ಚ್ಯ ಸಿದ್ಧಿಂ ವಿಂದತಿ ಮಾನವಃ**

**ಅರ್ಥ:** ಯತಃ =ಯಾರಿಂದ; ಭೂತಾನಾಂ=ಪ್ರಾಣಿಗಳ; ಪ್ರವೃತ್ತಿಃ=ಉತ್ಪತ್ತಿ ಮೊದಲಾದ ಪ್ರವರ್ತನೆಗಳು [(ಪ್ರವೃತ್ತಿ)- ಉಂಟಾಗುತ್ತಿದೆಯೋ]; ಯೇನ= ಯಾರಿಂದ; ಇದಂ ಸರ್ವಂ=ಈ ಸಮಸ್ತ ಪ್ರಪಂಚ; ತತಂ=ವ್ಯಾಪಿಸಲ್ಪಟ್ಟಿರು ವುದೋ; ತಂ=ಆತನನ್ನು (ಪರಮಾತ್ಮನನ್ನು); ಮಾನವಃ=ಮನುಜನು; ಸ್ವಕರ್ಮಣಾ=ತನ್ನ ಕರ್ಮದಿಂದ; ಅಭ್ಯರ್ಚ್ಯ= ಆರಾಧಿಸಿ; ಸಿದ್ಧಿಂ=ಜ್ಞಾನಯೋಗ್ಯ ತಾರೂಪ ಸಿದ್ಧಿಯನ್ನು; ವಿಂದತಿ= ಹೊಂದುತ್ತಿದ್ದಾನೆ.

**ತಾ॥** ಯಾವನಿಂದ ಪ್ರಾಣಿಗಳ ಉತ್ಪತ್ತಿ ಹಾಗು ಅವುಗಳ ಪ್ರವರ್ತನೆಗಳು (ಪ್ರವೃತ್ತಿ) ಉಂಟಾಗುತ್ತಿವೆಯೋ, ಯಾವನಿಂದ ಈ ಸಮಸ್ತ ಪ್ರಪಂಚವು ವ್ಯಾಪಿಸಿರುವುದೋ, ಅವನನ್ನು (ಅಂಥಹ ಪರಮಾತ್ಮನನ್ನು) ಮನುಜನು ಸ್ವಕೀಯ ಕರ್ಮದಿಂದ ಆರಾಧಿಸಿ ಜ್ಞಾನಯೋಗ್ಯತಾರೂಪ ಸಿದ್ಧಿಯನ್ನು ಹೊಂದುತ್ತಿದ್ದಾನೆ.

**ವ್ಯಾಖ್ಯೆ:** *'ಯತಃ ಪ್ರವೃತ್ತಿರ್ಭೂತಾನಾಂ'*- 'ಯಾವನಿಂದ ಸಮಸ್ತ ಪ್ರಾಣಿ ಕೋಟಿಯ ಉತ್ಪತ್ತಿ ಮುಂತಾದುವು ಉಂಟಾಗುತ್ತಿವೆಯೋ' ಎಂದು ಹೇಳುವುದರಿಂದ, ಸಮಸ್ತ ಜೀವಿಗಳಿಗೆ ಆಧಾರ ಭೂತನು ಆ ಪರಮಾತ್ಮನೇ ಎಂದು ಸ್ಪಷ್ಟವಾಗುತ್ತದೆ. ಜಡವಾದ ವಸ್ತು, ಚೈತನ್ಯದ ಸಹಾಯವಿಲ್ಲದೆ ಏನೂ ಮಾಡಲಾರದು. ಜಡವಾದ ಪ್ರಕೃತಿ ಚಿದ್ರೂಪ ಪರಮಾತ್ಮನಿಂದಲೇ ಸ್ಪಂದಿಸುತ್ತದೆ **(ಮಯಾಧ್ಯಕ್ಷೇಣಪ್ರಕೃತಿಸ್ಸೂಯತೇ ಸ ಚರಾಚರಂ)** ಆದ್ದರಿಂದ ಜೀವಿಗಳು ತಮ್ಮ ಸಮಸ್ತಕ್ಕೆ ಕಾರಣ ಭೂತನಾದ ಆ ಪರಾತ್ಪರನಲ್ಲಿ ಅಪಾರ ಭಕ್ತಿ ಶ್ರದ್ಧೆಗಳನ್ನಿಟ್ಟು ಆತನನ್ನೇ ಆರಾಧಿಸುತ್ತ ಪರಮ ಶ್ರೇಯವನ್ನು ಹೊಂದಬೇಕು.

*'ಯೇನ ಸರ್ವಮಿದಂ ತತಂ'*- ಇದೇ ವಾಕ್ಯ ಗೀತೆಯಲ್ಲಿ ಮೂರು ಸಾರಿ ಪ್ರಯೋಗಿಸಲ್ಪಟ್ಟಿದೆ. 'ಯಾವುದರಿಂದ ಈ ಸಮಸ್ತ ಪ್ರಪಂಚ ವ್ಯಾಪಿಸಲ್ಪಟ್ಟಿದೆಯೋ' ಎಂದು ಇದರ ಅರ್ಥ. ಪರಮಾತ್ಮನು ಸರ್ವವ್ಯಾಪಕ ನಾಗಿರುವುದರಿಂದ ಈ ಪ್ರಪಂಚದಲ್ಲಿ ಆತನು ಇಲ್ಲದ ಸ್ಥಳವಿಲ್ಲವೆಂದು ನಿಶ್ಚಿತವಾಗುತ್ತದೆ. ಹಾಲಿನಲ್ಲಿಯ ಬೆಣ್ಣೆಯಂತೆ ಆತನು ಸರ್ವತ್ರ ವ್ಯಾಪಿಸಿರುವನು. ಸ್ಥೂಲನೇತ್ರಕ್ಕೆ ಆತನು ಗೋಚರವಾಗದೇ ಇದ್ದರೂ ಜ್ಞಾನ ನೇತ್ರಕ್ಕೆ ಸರ್ವತ್ರ ಗೋಚರಿಸುವನು. ಈ ಪ್ರಕಾರವಾಗಿ ಅಣು ಅಣುವಿನಲ್ಲಿ ಭಗವಂತನು ವ್ಯಾಪಿಸಿರುವುದರಿಂದ ಸರ್ವಸಾಕ್ಷಿಯಾಗಿ ಸಮಸ್ತವನ್ನು ವೀಕ್ಷಿಸುತ್ತಿರುವುದರಿಂದ ಜೀವಿಗಳು ಆತನ ಸಾನ್ನಿಧ್ಯವನ್ನು ಅನುಭೂತಿಗೊಳಿಸಿಕೊಂಡು, ಪಾಪಕೃತ್ಯಗಳನ್ನು ಮಾಡದೆ, ಭಕ್ತಿ ಭಾವ ಸಮನ್ವಿತರಾಗಿರಬೇಕು.

*'ಸ್ವಕರ್ಮಣಾ ತಮಭ್ಯರ್ಚ್ಯ'*- ಮನುಜನು ಮೋಕ್ಷ ಸಿದ್ಧಿಯನ್ನು ಕರ್ಮಾಚರಣೆಯಿಂದ ಹೇಗೆ ಹೊಂದಬಲ್ಲನು ಎನ್ನುವ ಪ್ರಶ್ನೆಗೆ ಉತ್ತರ ಕೊಟ್ಟಿರುವನು- 'ನೀನು ನಿನ್ನ ಕರ್ಮ ಮಾಡುತ್ತ ದೈವವನ್ನು ಆರಾಧಿಸು, ಸ್ಮರಿಸು. ಈಶ್ವರಾರ್ಪಣವಾಗಿ ನಿನ್ನ ಕರ್ಮಗಳನ್ನಾಚರಿಸು. ಅಂದರೆ ನಿನ್ನ ಕರ್ಮಗಳ ದ್ವಾರ ಪರಮಾತ್ಮನನ್ನು ಆರಾಧಿಸು. ಆಗ ನೀನು ಜ್ಞಾನಸಿದ್ಧಿಯನ್ನು ತದ್ವಾರ ಮೋಕ್ಷಸಿದ್ಧಿಯನ್ನು ಪಡೆಯಬಲ್ಲೆ' - ಎಂದು ಭಗವಂತನು ಇಲ್ಲಿ ಬೋಧಿಸಿರುವನು. ಈ ಪ್ರಕಾರವಾಗಿ ಕರ್ಮವನ್ನು ಈಶ್ವರಾರ್ಪಣ ಬುದ್ಧಿಯಿಂದ ಮಾಡಿದಾಗ ಚಿತ್ತ ಶುದ್ಧಿಯುಂಟಾಗಿ ಅದು ಜ್ಞಾನದ ಆವಿರ್ಭಾವಕ್ಕೆ ಹೇತುವಾಗಿ ಮೋಕ್ಷಪ್ರದವಾಗುವುದು. ಹಾಗಲ್ಲದೆ ಫಲಾಭಿಲಾಷೆ ಯಿಂದ ಮಾಡಿದಲ್ಲಿ ಕರ್ಮ ಮೋಕ್ಷಕ್ಕೆ ಕಾರಣವಾಗಲಾರದು. 'ಕರ್ಮವನ್ನು ಮಾಡು, ಆದರೆ ಫಲವನ್ನು ಈಶ್ವರಾರ್ಪಣ ಮಾಡು'- ಇದು ಕರ್ಮದ ಮೂಲಕ ಈಶ್ವರನನ್ನು ಆರಾಧಿಸುವ ವಿಧಾನ. ಅಂದರೆ ಭಗವತ್ಪ್ರೀತ್ಯರ್ಥವಾಗಿ ಕರ್ಮಗಳನ್ನಾಚರಿಸ ಬೇಕೆಂದು ಭಾವ.

ಕರ್ಮದಿಂದ ಮೋಕ್ಷವು ಲಭಿಸುವುದೇ ಎಂದು ಕೆಲವರು ಪ್ರಶ್ನಿಸುವರು. 'ಲಭಿಸುವುದು, ಆದರೆ ಅದನ್ನು ಮಾಡಬೇಕಾದ ಪದ್ಧತಿಯಲ್ಲಿ ಮಾಡಿದಾಗ ಮಾತ್ರ ಲಭಿಸುವುದು' ಎನ್ನುವುದನ್ನು ತಿಳಿದಿರಬೇಕು. ಆ ಪದ್ಧತಿ ಯಾವುದೆಂದರ ಕರ್ಮದಿಂದ ಭಗವಂತನನ್ನು ಅರ್ಚಿಸಬೇಕು. ಅಂದರೆ ಕರ್ಮವನ್ನು ಆಚರಿಸಿ ಅದರ ಫಲವನ್ನು ಭಗವಂತನಿಗೆ ಅರ್ಪಿಸಬೇಕು. ನಿಷ್ಕಾಮವಾಗಿ (ಭಗವದರ್ಪಿತವಾಗಿ) ಕರ್ಮ ಮಾಡಬೇಕೆಂದು ಭಾವ. ಆಗ ಕರ್ಮದಲ್ಲಿಯ

ದೋಷ ತೊಲಗಿ ಚಿತ್ತ ಶುದ್ಧಿಯ ದ್ವಾರ ಅದು ಮೋಕ್ಷ ಸಾಧನೆಯಾಗಿ ಪರಿಣಮಿಸುವುದು. ಇದು ಕರ್ಮ ಮಾರ್ಗದ ರಹಸ್ಯ. ಈ ಕರ್ಮರಹಸ್ಯವನ್ನು ಭಕ್ತರ ಮೇಲಿನ ಕರುಣೆಯಿಂದ ಭಗವಂತನು ಇಲ್ಲಿ ಬಹಿರಂಗಗೊಳಿಸಿರುವನು. 'ಓ ಜೀವಿಯೇ', ಕರ್ಮ ಮಾಡು ಆದರೆ ಈಶ್ವರಾರ್ಪಣ ಬುದ್ಧಿಯಿಂದ ಮಾಡಿ, ಆ ಕರ್ಮದಿಂದ ಈಶ್ವರನನ್ನು ಆರಾಧಿಸು. ಫಲವನ್ನು ಕೋರಬೇಡ. ಕರ್ಮಮಾಡುವುದೇ ನಿನ್ನ ಕರ್ತವ್ಯ. ಫಲವನ್ನು ಭಗವಂತನಿಗೇ ಅರ್ಪಿಸು ಎಂದು ಇಲ್ಲಿ ಬೋಧಿಸಲಾಗಿದೆ. ಈ ಪದ್ಧತಿಯ ಪ್ರಕಾರ ಕರ್ಮ ತನ್ನ ಕರ್ಮತ್ವವನ್ನು ಕಳೆದುಕೊಂಡು ಬಂಧ ರೂಪವನ್ನು ಹೋಗಲಾಡಿಸಿಕೊಂಡು, ಮೋಕ್ಷಕ್ಕೆ ಹೇತುವಾಗುವುದು. ಇದರಿಂದ ಕರ್ಮ ನಿಂದ್ಯವಲ್ಲವೆಂದೂ, ಕರ್ಮ ಮಾರ್ಗವು ಹೀನವಾದುದಲ್ಲವೆಂದೂ, ಅದನ್ನು ಆಚರಿಸುವ ಪದ್ಧತಿಯನ್ನು ತಿಳಿದರೆ ಅದು ಭಕ್ತಿ ಜ್ಞಾನಾದಿಗಳಂತೆ ಪರಮ ಪವಿತ್ರವಾದ ಮೋಕ್ಷಕ್ಕೆ ಸಾಧನೆಯಾಗಬಲ್ಲದೆಂದು ಸ್ಪಷ್ಟವಾಗುತ್ತದೆ.

ಆದರೆ *'ಸ್ವಕರ್ಮಣಾ ತಮಭ್ಯರ್ಚ್ಯ'* (ಸ್ವಕೀಯ ಈ ಕರ್ಮದಿಂದ ಭಗವಂತನನ್ನು ಆರಾಧಿಸುವುದು)- ಎನ್ನುವ ಈ ಪದ್ಧತಿಯನ್ನು ಜನರು ಸರಿಯಾಗಿ ಅರ್ಥಮಾಡಿಕೊಳ್ಳದೆ, ದೈವಾರ್ಪಣೆಯಿಂದ ಕರ್ಮಗಳನ್ನು ಮಾಡುವುದನ್ನು ಬಿಟ್ಟು, ಕಾಮ್ಯ ಬುದ್ಧಿಯಿಂದ ಮಾಡುತ್ತಿದ್ದಾರೆ. ಆದ್ದರಿಂದ ಕರ್ಮಬಂಧನರೂಪ ತಾಳುವುದು. ಭಗವಂತನಾದರೋ ಕರ್ಮವನ್ನು ಮೋಕ್ಷ ರೂಪವಾಗಿ ಉಪಯೋಗಿಸಬಹುದೆಂದು ತಿಳಿಸಿ ಅದಕ್ಕೆ ಉಪಾಯವನ್ನು ಕೂಡ ಸೂಚಿಸಿರುವನು. ಆದ್ದರಿಂದ ಮುಮುಕ್ಷುಗಳು ಈ ಸತ್ಯವನ್ನು ತಿಳಿದುಕೊಂಡು ಈ ಭಗವದ್ವಾಕ್ಯಗಳ ಮೇಲೆ ವಿಶ್ವಾಸವಿಟ್ಟು ತಾವು ಮಾಡುವ ಸಮಸ್ತ ಕರ್ಮಗಳನ್ನು ಈಶ್ವರಾರ್ಪಣ, ಭಗವತ್ಕೈಂಕರ್ಯ ಬುದ್ಧಿಯಿಂದ ಮಾಡಬೇಕು. ಹಾಗೆ ಮಾಡಿದ್ದೇ ಆದರೆ **'ಸಿದ್ಧಿಂ ವಿಂದತಿ ಮಾನವಃ'** ಎಂದ ಹಾಗೆ ಮಾನವನು ಜ್ಞಾನಸಿದ್ಧಿ, ಮೋಕ್ಷ, ಸಿದ್ಧಿಯನ್ನು ತಪ್ಪದೆ ಪಡೆಯುವನೆಂದು ಗೀತಾಚಾರ್ಯನು ಘಂಟಾಘೋಷವಾಗಿ ಸಾರುತ್ತಿದ್ದಾನೆ.

ಈ ಶ್ಲೋಕದಲ್ಲಿ ಕರ್ಮ, ಭಕ್ತಿ, ಜ್ಞಾನಗಳ ಸಮುಚ್ಚಯವನ್ನು ತಿಳಿಸಲಾಗಿದೆ. ಹೇಗೆಂದರೆ,

೧) ಕರ್ಮವನ್ನು ಆಚರಿಸುವುದು (ಕರ್ಮ)

೨) ಅದರ ಮೂಲಕ ಭಗವಂತನನ್ನು ಆರಾಧಿಸುವುದು (ಭಕ್ತಿ)

೩) ಹಾಗೆ ಆರಾಧಿಸುವುದರಿಂದ ಚಿತ್ತಶುದ್ಧಿ ಉಂಟಾಗಿ ಜ್ಞಾನ ಆವಿರ್ಭವಿಸುವುದು (ಜ್ಞಾನ)

ಕರ್ಮವೆನ್ನುವ ಹಣತೆಯಲ್ಲಿ ಭಕ್ತಿಯೆನ್ನುವ ಎಣ್ಣೆಯನ್ನು ಹಾಕಿ, ಧ್ಯಾನವೆನ್ನುವ ಬತ್ತಿಯನ್ನಿಟ್ಟು, ಜ್ಞಾನವೆನ್ನುವ ಜ್ಯೋತಿಯನ್ನು ಬೆಳಗಿಸಬೇಕು.

ಪ್ರ : ಸಮಸ್ತ ಪ್ರಾಣಿ ಕೋಟಿಗಳು ಯಾರಿಂದ ಉತ್ಪತ್ತಿ ಹೊಂದುತ್ತಿವೆ?

ಉ : ಪರಮಾತ್ಮನಿಂದ

ಪ್ರ : ಈ ಪ್ರಪಂಚವೆಲ್ಲವೂ ಯಾರಿಂದ ವ್ಯಾಪ್ತವಾಗಿದೆ?

ಉ : ಪರಮಾತ್ಮನಿಂದ

ಪ್ರ : ಜೀವಿಯು ಮೋಕ್ಷ ಸಿದ್ಧಿಯನ್ನು ಹೇಗೆ ಪಡೆಯಬಲ್ಲನು?

ಉ: ಸ್ವಕೀಯ ಕರ್ಮದಿಂದ ಭಗವಂತನನ್ನು ಆರಾಧಿಸಿರುವುದರಿಂದ. ಅಂದರೆ ಈಶ್ವರಾರ್ಪಣ ಬುದ್ಧಿಯಿಂದ (ನಿಷ್ಕಾಮವಾಗಿ) ಕರ್ಮಗಳನ್ನಾಚರಿಸಿದರೆ ಚಿತ್ತಶುದ್ಧಿಯುಂಟಾಗಿ ಅದರಿಂದ ಜ್ಞಾನವನ್ನು, ಜ್ಞಾನದಿಂದ ಮೋಕ್ಷವನ್ನು ಪಡೆಯುವನು.

**೮॥** ಸ್ವಧರ್ಮಾಚರಣೆ ಬಹಳ ಉತ್ತಮವಾದುದೆಂದು ಹೇಳಲಾಗುತ್ತಿದೆ-

**೪೭ ಶ್ರೇಯಾನ್ ಸ್ವಧರ್ಮೋ ವಿಗುಣಃ ಪರಧರ್ಮಾತ್ಸ್ವನುಷ್ಠಿತಾತ್**
**ಸ್ವಭಾವನಿಯತಂ ಕರ್ಮ ಕುರ್ವನ್ನಾಪ್ನೋತಿ ಕಿಲ್ಬಿಷಂ.**

**ಅರ್ಥ:** ಸ್ವಧರ್ಮಃ=ತನ್ನ ಧರ್ಮ; ವಿಗುಣಃ (ಅಪಿ)=(ತನ್ನ ಅವಿವೇಕದಿಂದ) ಗುಣವಿಲ್ಲದ್ದಾಗಿ ಕಂಡುಬಂದರೂ (ಇಲ್ಲವೆ, ಅಸಂಪೂರ್ಣವಾಗಿ ಅನುಷ್ಠಾನ ಮಾಡಿದರೂ); ಅನುಷ್ಠಿತಾತ್=ಚೆನ್ನಾಗಿ ಅನುಷ್ಠಾನಮಾಡಿದ; ಪರಧರ್ಮಾತ್= ಪರ ಧರ್ಮಕ್ಕಿಂತ (ಬೇರೆಯವರ ಧರ್ಮಗಳಿಗಿಂತ); ಶ್ರೇಯಾನ್= ಶ್ರೇಷ್ಠವಾದುದು; ಸ್ವಭಾವ ನಿಯತಂ=ಸ್ವಭಾವದಿಂದ ಏರ್ಪಟ್ಟ (ತನ್ನ ಧರ್ಮಕ್ಕನುಗುಣವಾದ); ಕರ್ಮ=ಕರ್ಮಗಳನ್ನು; ಕುರ್ವನ್=ಮಾಡುತ್ತಿದ್ದರೆ; ಕಿಲ್ಬಿಷಂ=ಪಾಪವನ್ನು; ನ ಆಪ್ನೋತಿ=ಹೊಂದುವುದಿಲ್ಲ.

**ತಾ॥** ತನ್ನ ಧರ್ಮವು (ತನ್ನ ಅವಿವೇಕದಿಂದ) ಗುಣವಿಲ್ಲದ್ದಾಗಿ ಕಂಡರೂ (ಇಲ್ಲವೆ ಅದನ್ನು ಅಸಂಪೂರ್ಣವಾಗಿ ಅನುಷ್ಠಾನ ಮಾಡಿದರೂ) ಚೆನ್ನಾಗಿ ಅನುಷ್ಠಾನ ಮಾಡಿದ ಇತರರ ಧರ್ಮಕ್ಕಿಂತ (ಇಲ್ಲವೆ ಇತರ ಧರ್ಮಗಳಿಗಿಂತ) ಶ್ರೇಷ್ಠವಾದುದೇ ಆಗಿರುವುದು. ಸ್ವಭಾವದಿಂದ ಏರ್ಪಟ್ಟ (ತನ್ನ ಧರ್ಮಕ್ಕೆ ತಕ್ಕ) ಕರ್ಮವನ್ನು ಮಾಡುತ್ತಿದ್ದರೆ ಮನುಜನು ಪಾಪವನ್ನು ಹೊಂದುವುದಿಲ್ಲ

**ವ್ಯಾಖ್ಯೆ:** ಸ್ವಕೀಯ ಕರ್ಮ, ಇಲ್ಲವೆ ತನ್ನ ಧರ್ಮವನ್ನು ಆಚರಿಸುವುದು ಸ್ವಲ್ಪ ಕಠಿಣವಾದರೂ, ಸುಲಭಾಗಿ ಆಚರಿಸಬಹುದಾದ ಇತರರ ಕರ್ಮವನ್ನು ಅವಲಂಬಿಸುವುದಕ್ಕಿಂತ ಅದು ಎಷ್ಟೋ ಉತ್ತಮವೆಂದು ಹೇಳಲಾಗಿದೆ. ಆದ್ದರಿಂದ ಸ್ವಧರ್ಮವನ್ನು ಅದು ಸ್ವಲ್ಪ ಕಷ್ಟವಾದರೂ ಬಿಡಬಾರದು. ಸ್ವಕೀಯ ಕರ್ಮವನ್ನು ಮೇಲಿನ ಶ್ಲೋಕದಲ್ಲಿ ತಿಳಿಸಿದ ಹಾಗೆ ಈಶ್ವರಾರ್ಪಣ ಬುದ್ಧಿಯಿಂದ ಆಚರಿಸಿದಲ್ಲಿ ಮನುಜನು ಪಾಪವನ್ನು ಹೊಂದುವುದಿಲ್ಲ.

(ಇಲ್ಲವೆ, ಇಲ್ಲಿ ಸ್ವಧರ್ಮವೆಂದರೆ ಆತ್ಮಕ್ಕೆ ಸಂಬಂಧಿಸಿದ ಧರ್ಮವೆಂದೂ ಹೇಳಬಹುದು, ಆತ್ಮ ಚಿಂತನಾದಿಗಳು, ಆತ್ಮ ಧ್ಯಾನಾದಿಗಳು ಸ್ವಲ್ಪ ಪ್ರಯಾಸವಾಗಿ ಕಂಡು ಬಂದರೂ ಪರಧರ್ಮಗಳಾದ ದೃಶ್ಯವಸ್ತು ಧರ್ಮಗಳನ್ನು ಇಲ್ಲವೆ ದೃಶ್ಯ ವಸ್ತು ಚಿಂತನೆಯನ್ನು ಗ್ರಹಿಸುವುದಕ್ಕಿಂತ ಎಷ್ಟೋ ಉತ್ತಮ. ಆತ್ಮಚಿಂತನಾದಿಗಳು (ಸ್ವಧರ್ಮ) ಪ್ರಾರಂಭದಲ್ಲಿ ಸ್ವಲ್ಪ ಕಷ್ಟವಾಗಿ ತೋರಿದರೂ ಕೊನೆಗೆ ಅನಂತ ಸೌಖ್ಯವನ್ನು ಪ್ರಸಾದಿಸುವುದು. ದೃಶ್ಯವಸ್ತುಗಳು (ಪರಧರ್ಮ) ಪ್ರಾರಂಭದಲ್ಲಿ ಸುಖವಾಗಿರುವಂತೆ ಕಂಡು ಬಂದರೂ ಕೊನೆಗೆ ಪರಮ ದುಃಖವನ್ನೇ ಉಂಟುಮಾಡುವವು. ಆದ್ದರಿಂದ ಪರಧರ್ಮಕ್ಕಿಂತ ಸ್ವಧರ್ಮ ಉತ್ತಮವೆಂದು ಹೇಳಲಾಗಿದೆ).

ಪ್ರ : ಜೀವಿಗೆ ಯಾವ ಕರ್ಮ ಹಾಗು ಧರ್ಮ, ಶ್ರೇಷ್ಠವಾದುದು?

ಉ: ಸ್ವಲ್ಪ ಕಷ್ಟವಾಗಿ ಕಂಡರೂ ಸ್ವಕೀಯ ಕರ್ಮ ಶ್ರೇಷ್ಠವಾದುದು.

ಪ್ರ : ಯಾವುದರಿಂದ ಮನುಷ್ಯನು ಪಾಪವನ್ನು ಹೊಂದುವುದಿಲ್ಲ?

ಉ: ಸ್ವಭಾವದಿಂದ ಏರ್ಪಟ್ಟ ಕರ್ಮವನ್ನು, ಸ್ವಧರ್ಮವನ್ನು (ಈಶ್ವರಾರ್ಪಣ ಬುದ್ಧಿಯಿಂದ) ಆಚರಿಸಿದರೆ ಪಾಪವನ್ನು ಹೊಂದುವುದಿಲ್ಲ.

**ಅ॥** ಸ್ವಕೀಯ ಕರ್ಮ, (ಸ್ವಧರ್ಮ) ಒಂದು ವೇಳೆ ದೋಷದಿಂದ ಕೂಡಿದ್ದಾದರೂ ಅದನ್ನು ಬಿಡಬಾರದೆಂದು ಹೇಳಲಾಗುತ್ತಿದೆ-

**೪೮ ಸಹಜಂ ಕರ್ಮ ಕೌಂತೇಯ ಸದೋಷಮಪಿ ನ ತ್ಯಜೇತ್**
**ಸರ್ವಾರಂಭಾ ಹಿ ದೋಷೇಣ ಧೂಮೇನಾಗ್ನಿರಿವಾವೃತಾಃ**

**ಅರ್ಥ:** ಕೌಂತೇಯ=ಓ ಅರ್ಜುನಾ! ಸಹಜಂ=ಸ್ವಭಾವ ಸಿದ್ಧವಾದ; ಕರ್ಮ=ಕರ್ಮವು; ಸದೋಷಮಪಿ=ದೋಷದಿಂದ ಕೂಡಿದ್ದಾದರೂ (ದೃಶ್ಯರೂಪವಾದರೂ, ಇಲ್ಲವೆ ತ್ರಿಗುಣಾತ್ಮಕವಾದರೂ) ನ ತ್ಯಜೇತ್=ಬಿಡಬಾರದು; ಧೂಮೇನ=ಹೊಗೆಯಿಂದ; ಅಗ್ನಿಃ ಇವ=ಕೆಂಡದಂತೆ; ಸರ್ವಾರಂಭಾಃ=ಸಮಸ್ತ ಕರ್ಮಗಳು; ದೋಷೇಣ= (ತ್ರಿಗುಣಗಳ) ದೋಷದಿಂದ; ಆವೃತಾಃ ಹಿ=ಕವಿಯಲ್ಪಟಿವೆಯಲ್ಲಾ!

**ತಾ॥** ಓ ಅರ್ಜುನಾ! ಸ್ವಭಾವ ಸಿದ್ಧವಾದ ಕರ್ಮವನ್ನು ಅದು ದೋಷಯುಕ್ತವಾದರೂ (ದೃಶ್ಯ ರೂಪವಾದರೂ ಇಲ್ಲವೆ ಗುಣಾತ್ಮಕವಾದರೂ) ಬಿಡಬಾರದು. ಹೊಗೆಯಿಂದ ಅಗ್ನಿ ಮುಚ್ಚಲ್ಪಟ್ಟ ಹಾಗೆ ಸಮಸ್ತ ಕರ್ಮಗಳು (ತ್ರಿಗುಣಗಳು) ದೋಷದಿಂದ ಆವರಿಸಲ್ಪಟ್ಟಿವೆ.

**ವ್ಯಾಖ್ಯೆ:** ಕರ್ಮ ಎನ್ನುವುದು ಇಂದ್ರಿಯಾದಿಗಳಿಂದ ಮಾಡಲ್ಪಡುವುದಾದ್ದರಿಂದ ದೃಶ್ಯದಲ್ಲಿ ಅಂತರ್ಭೂತವಾಗಿದೆ. ತ್ರಿಗುಣಾತ್ಮಕವಾದದ್ದು ಪ್ರಕೃತಿ (ಮಾಯೆ)ಯಲ್ಲಿ ವರ್ತಿಸುವುದು. ಆದ್ದರಿಂದಲೇ 'ದೋಷೇಣ' ಎಂದು ಹೇಳಲ್ಪಟ್ಟಿದೆ. ಆದ್ದರಿಂದ ಆತ್ಮವಲ್ಲದ ದೋಷವು, ದೃಶ್ಯ ರೂಪವಾದ ದೋಷ, ತ್ರಿಗುಣಾತ್ಮಕವಾದ ದೋಷ ಪ್ರತಿ ಕರ್ಮದಲ್ಲಿಯೂ ಇದೆ. ಆದ್ದರಿಂದಲೇ 'ಸರ್ವಾರಂಭಾಹಿ' (ಸಮಸ್ತ ಕರ್ಮಗಳೂ) - ಎಂದು ಹೇಳಲಾಗಿದೆ. ಆದ್ದರಿಂದ ಹೊಗೆಯಿಂದ ಅಗ್ನಿ ಕವಿಯಲ್ಪಟ್ಟ ಹಾಗೆ ಸಮಸ್ತ ಕರ್ಮಗಳು (ದೃಶ್ಯ ರೂಪವಾದುದರಿಂದ) ಈ ದೃಶ್ಯ ರೂಪ ದೋಷದಿಂದ ಕವಿಯಲ್ಪಟ್ಟಿವೆ. ಆದರೂ ಸ್ವಭಾವ ಸಿದ್ಧ ಕರ್ಮಗಳನ್ನು ಬಿಡಬಾರದು. ಏಕೆಂದರೆ ಅವುಗಳನ್ನು ನಿಷ್ಕಾಮ, ಭಗವದರ್ಪಿತ ಬುದ್ಧಿಯಿಂದ ಆಚರಿಸಿದರೆ ಅವು ಚಿತ್ತ ಶುದ್ಧಿಯನ್ನುಂಟು ಮಾಡಿ ಜ್ಞಾನ, ಮೋಕ್ಷಗಳನ್ನು ಪ್ರಸಾದಿಸುವುವು. ಆದರೆ ಪಾಪಕಾರ್ಯಗಳನ್ನು ಮಾತ್ರ ಮಾಡಬಾರದು. ಸಮಸ್ತ ಕರ್ಮಗಳು 'ಮಾಯಾ'ರೂಪ ದೋಷದಿಂದ ಆವೃತಗೊಂಡಿದ್ದರೂ ಅದರಲ್ಲಿ ಶುದ್ಧ ಕರ್ಮದಿಂದ ಅಶುದ್ಧಕರ್ಮವನ್ನು, ಪುಣ್ಯ ಕರ್ಮದಿಂದ ಪಾಪಕರ್ಮವನ್ನು , ನಿಷ್ಕಾಮ ಕರ್ಮದಿಂದ ಸ್ವಕಾಮ ಕರ್ಮವನ್ನು ತೊಲಗಿಸಿ, ನಂತರ ಕ್ರಮವಾಗಿ ಸಾಧನೆಯನ್ನು ಮುಂದುವರಿಸಿ ನೈಷ್ಕರ್ಮ್ಯಾತ್ಮ ರೂಪವನ್ನು ಸೇರಬೇಕು.

ಈ ವಿಷಯವನ್ನು ಬೇರೊಂದು ದೃಷ್ಟಿಯಲ್ಲೂ ವಿಚಾರಿಸಬಹುದು. ಅವರವರು ಮಾಡುವ ಕೆಲವು ಕಾರ್ಯಗಳಲ್ಲಿ ಪಂಚಸೂನ ಮುಂತಾದ ಅನಿವಾರ್ಯ ದೋಷಗಳು ಉಂಟಾಗುತ್ತಿರುತ್ತವೆ. ಜೀವನ ಯಾತ್ರೆಗೆ ಆಯಾ

| ದೋಷ (ಪಂಚಸೂನಗಳು) | ಪ್ರಾಯಶ್ಚಿತ್ತ (ಪಂಚಮಹಾಯಜ್ಞಗಳು) |
|---|---|
| ೧. ಧಾನ್ಯವನ್ನು ಬೆಳೆಯುವಾಗ ಸಂಭವಿಸುವ ಪ್ರಾಣಿ ಹಿಂಸೆ | ೧. ಬ್ರಹ್ಮಯಜ್ಞ-ವೇದಾಧ್ಯಯನಾದಿಗಳನ್ನು ಮಾಡುವುದು. |
| ೨. ಬೀಸುವಾಗ ಉಂಟಾಗುವ ಪ್ರಾಣಿ ಹಿಂಸೆ | ೨. ಪಿತೃಯಜ್ಞ-ಪಿತೃದೇವತೆಗಳನ್ನು ತರ್ಪಣಾದಿಗಳಿಂದ ತೃಪ್ತಿ ಪಡಿಸುವುದು |
| ೩. ಕಟ್ಟಿಗೆಯನ್ನು ಕಡಿಯುವಾಗ ಅವುಗಳಿಂದ ಅಡಿಗೆ ಮಾಡುವಾಗ ಉಂಟಾಗುವ ಪ್ರಾಣಿ ಹಿಂಸೆ | ೩. ದೇವ ಯಜ್ಞ, ಹೋಮ ಮುಂತಾದುವುಗಳನ್ನು ಮಾಡುವುದು. |
| ೪. ನೀರನ್ನು ತರುವಾಗ, ಕಾಯಿಸಿದಾಗ ಉಂಟಾಗುವ ಪ್ರಾಣಿ ಹಿಂಸೆ | ೪. ಭೂತಯಜ್ಞ-ಪ್ರಾಣಿಗಳಿಗೆ ಅನ್ನಾದಿಗಳನ್ನು ನೀಡುವುದು. |
| ೫. ಗುಡಿಸುವಾಗ ಸಂಭವಿಸುವ ಪ್ರಾಣಿಹಿಂಸೆ | ೫. ಮನುಷ್ಯ ಯಜ್ಞ-ಅತಿಥಿಗಳನ್ನು, ಬ್ರಹ್ಮ ನಿಷ್ಠರನ್ನು, ದೀನರನ್ನು ಭೋಜನಗಳಿಂದ ತೃಪ್ತಿ ಪಡಿಸುವುದು. |

ಕಾರ್ಯಗಳನ್ನು ಜನರು ತಪ್ಪದೆ ಮಾಡಲೇಬೇಕಾಗಿದೆ. ಆದ್ದರಿಂದ ಆಯಾ ದೋಷಗಳ ನಿವಾರಣೆಗಾಗಿ ಪಂಚವಿಧ ಪ್ರಾಯಶ್ಚಿತ್ತಗಳು ಏರ್ಪಟ್ಟಿವೆ.

ಈ ಪ್ರಕಾರವಾಗಿ ಕರ್ಮಗಳಿಂದ ಉಂಟಾಗುವ ಆಯಾ ಅನಿವಾರ್ಯ ದೋಷಗಳು ಪುಣ್ಯ ಕಾರ್ಯ, ನಿಷ್ಕಾಮಕಾರ್ಯಗಳಿಂದ ತೊಲಗಿ ಹೋಗುವುವು. ಇಷ್ಟೇ ಅಲ್ಲದೆ ಬ್ರಹ್ಮ ವಿಚಾರಣೆ, ಆತ್ಮಧ್ಯಾನ ಮುಂತಾದ ಪವಿತ್ರ ಕಾರ್ಯಗಳಿಂದ ಜೀವಿಗಳಲ್ಲಿಯ ಪ್ರಕೃತಿ ದೋಷಗಳು ಮಾಯವಾಗುವುವು. ಆದ್ದರಿಂದ ಅವರವರ ಸ್ವಭಾವಸಿದ್ಧ ಕಾರ್ಯಗಳಲ್ಲಿ ಪ್ರಕೃತಿಜನ್ಯಗಳಾದ ದೋಷಗಳಿದ್ದಾಗ್ಗೂ ಅವುಗಳನ್ನು ತ್ಯಜಿಸದೆ, ನಿಷ್ಕಾಮ ಬುದ್ಧಿಯಿಂದ ಅವುಗಳನ್ನು ಆಚರಿಸಿದರೆ ಹೃದಯ ನಿರ್ಮಲವಾಗಿ ಜೀವಿಗೆ ಜ್ಞಾನಪ್ರಾಪ್ತಿ, ಉತ್ತಮ ಬ್ರಹ್ಮಪದಪ್ರಾಪ್ತಿ ಸಿದ್ಧಿಸುವುದು.

**ಅ॥** ೪೧ ನೆಯ ಶ್ಲೋಕದಿಂದ ಇಲ್ಲಿಯವರೆಗೆ ಕರ್ಮಯೋಗವನ್ನು ಕುರಿತ ವಿಚಾರ ಮಾಡಿ ಇನ್ನು ಇಲ್ಲಿಂದ ಜ್ಞಾನಯೋಗವನ್ನು ಕುರಿತ (ಸಾಂಖ್ಯ ಇಲ್ಲವೆ ಸಂನ್ಯಾಸಯೋಗಗಳ) ವಿಚಾರಣೆಯನ್ನು ಮಾಡಲಾಗುತ್ತಿದೆ-

**೪೯ ಅಸಕ್ತಬುದ್ಧಿಸ್ಸರ್ವತ್ರ ಜಿತಾತ್ಮಾ ವಿಗತಸ್ಪೃಹಃ**
**ನೈಷ್ಕರ್ಮ್ಯಸಿದ್ಧಿಂ ಪರಮಾಂ ಸಂನ್ಯಾಸೇನಾಧಿಗಚ್ಛತಿ**

**ಅರ್ಥ:** ಸರ್ವತ್ರ=ಸಮಸ್ತ ವಿಷಯಗಳಲ್ಲಿ; ಅಸಕ್ತಬುದ್ಧಿಃ=ಅಂಟಿಕೊಳ್ಳದ ಬುದ್ಧಿಯುಳ್ಳವನಾಗಿ (ತನ್ನದೆನ್ನುವ ಅಭಿಮಾನವಿಲ್ಲದವನಾಗಿ); ಜಿತಾತ್ಮಾ= ಮನಸ್ಸನ್ನು ಜಯಿಸಿದವನು (ಮನೋನಿಗ್ರಹ ಹೊಂದಿದವನು); ವಿಗತಸ್ಪೃಹಃ= ಆಶೆಯಿಲ್ಲದವನು (ಕೋರಿಕೆಗಳನ್ನು ನಶಿಸಿದವನು); ಸಂನ್ಯಾಸೇನ=ಸಂಗತ್ಯಾಗದಿಂದ (ಕರ್ಮ ಫಲತ್ಯಾಗದಿಂದ); ಪರಮಾಂ=ಸರ್ವೋತ್ಕೃಷ್ಟವಾದ; ನೈಷ್ಕರ್ಮ್ಯ ಸಿದ್ಧಿಂ=ನಿಷ್ಕ್ರಿಯವಾದ ಆತ್ಮ ಸ್ಥಿತಿಯನ್ನು; ಅಧಿಗಚ್ಛತಿ= ಹೊಂದುತ್ತಿದ್ದಾನೆ.

**ತಾ॥** ಸಮಸ್ತ ವಿಷಯಗಳಲ್ಲಿ ಆಸಕ್ತಿ ಶೂನ್ಯನಾದವನೂ (ಅಂಟಿಕೊಳ್ಳದ ಬುದ್ಧಿಯುಳ್ಳವನೂ), ಮನಸ್ಸನ್ನು ಜಯಿಸಿದವನೂ, ಕೋರಿಕೆಗಳು ಇಲ್ಲದ ಮನುಜನು ಸಂಗತ್ಯಾಗದಿಂದ (ಜ್ಞಾನಮಾರ್ಗದಿಂದ) ಸರ್ವೋತ್ಕೃಷ್ಟವಾದ ನಿಷ್ಕ್ರಿಯಾತ್ಮಸ್ಥಿತಿಯನ್ನು ಹೊಂದುತ್ತಿದ್ದಾನೆ.

**ವ್ಯಾಖ್ಯೆ:** ಇಲ್ಲಿಯವರೆಗೆ ನಿಷ್ಕಾಮ ಕರ್ಮಯೋಗವನ್ನು ಪ್ರತಿಪಾದಿಸುತ್ತ ಬಂದು ಇನ್ನು ಜ್ಞಾನಯೋಗ (ಸಾಂಖ್ಯಯೋಗ)ದ ವಿಚಾರಣೆಯಲ್ಲಿ

ಪ್ರವೇಶಿಸುತ್ತಿದ್ದಾನೆ. ಕೆಲವು ಸುಗುಣಗಳನ್ನು ಹೇಳಿ, ಅವು ಹೊಂದಿರುವವನು ನಿಷ್ಕ್ರಿಯಪರಮಾತ್ಮ ಸ್ಥಿತಿಯನ್ನು ಹೊಂದುವನೆಂದು ಹೇಳಲಾಗಿದೆ. ಅವು ಯಾವುವೆಂದರೆ (೧) ಯಾವುದರಲ್ಲಿಯೂ ಆಸಕ್ತಿ ಹೊಂದದೆ ಇರುವ ಬುದ್ಧಿ (೨) ಮನಸ್ಸನ್ನು ಜಯಿಸುವುದು (೩) ಆಶೆ ಇಲ್ಲದೆ ಇರುವುದು.

'ಸರ್ವತ್ರ'- ಎಂದು ಹೇಳಿರುವುದರಿಂದ, ಯಾವ ವಸ್ತುವಿನಲ್ಲಿಯೂ ಯಾವ ಕಾಲದಲ್ಲಿಯೂ ಬುದ್ಧಿ ಸಕ್ತಗೊಳ್ಳಬಾರದೆಂದು, ಬುದ್ಧಿ ಸರ್ವತ್ರ ಅಸಕ್ತವಾಗಿ ಬೆಳಗಬೇಕೆನ್ನುವುದು ಭಾವ. ಹೇಗೆಂದರೆ ಕೆಲವರು ಕೆಲವು ವಿಷಯಗಳಲ್ಲಿ ವಿರಕ್ತಿ ಹೊಂದಿದ್ದರೂ ಕೆಲವುಗಳಲ್ಲಿ ಆಸಕ್ತಿ ಉಳಿಸಿ ಕೊಂಡಿರುತ್ತಾರೆ. ಹಾಗೆಯೇ ಕೆಲವರು ಧ್ಯಾನಕಾಲದಲ್ಲಿ ಅಸಕ್ತ ಚಿತ್ತರಾಗಿದ್ದರೂ ಬಹಿರ್ ಪ್ರಪಂಚದಲ್ಲಿ ಪ್ರವೇಶಿಸಿದಾಗ ವಿಷಯಗಳಲ್ಲಿ ಸಕ್ತರಾಗುವರು. ಅಂತಹದ್ದು ಯಾವುದೂ ಇರಬಾರದೆಂದು 'ಸರ್ವತ್ರ' ಎನ್ನುವುದರಿಂದ ಉಪದೇಶಿಸಲಾಗಿದೆ.

'ಜಿತಾತ್ಮಾ'- ತನ್ನ ಮನಸ್ಸನ್ನು ಜಯಿಸಿದವನು ಪ್ರಪಂಚವನ್ನೆಲ್ಲಾ ಜಯಿಸಿದ ಹಾಗೆ. ಹಾಗೆ ಮನಸ್ಸನ್ನು ಜಯಸದವನು ಪ್ರಪಂಚವನ್ನೆಲ್ಲಾ ಜಯಿಸಿದರೂ ಪರತಂತ್ರನೇ ಆಗುವನು. ದುಃಖ ಆತನನ್ನು ಬಿಡದು. ಆದ್ದರಿಂದ ಹೊರಗಿನ ಶತ್ರುಗಳನ್ನೇ ಅಲ್ಲದೆ ಒಳಗಿನ ಶತ್ರುಗಳನ್ನು ಜಯಿಸಬೇಕು. ಇಲ್ಲದಿದ್ದರೆ **'ಭೋಕ್ತುರ್ಗಳೇ ಕಂಟಕವತ್ಪ್ರತೀತಂ'**- ಎಂದು ಶ್ರೀ ಶಂಕರರು ಹೇಳಿದ ಹಾಗೆ ದುಷ್ಟ ಮನಸ್ಸು 'ಭುಜಿಸುವವನ ಕಂಠದಲ್ಲಿ ಸಿಕ್ಕಿಕೊಂಡ ಮುಳ್ಳಿನ ಹಾಗೆ ಬಾಧಿಸುವುದು. ಆದ್ದರಿಂದ ವಿವೇಕವಂತರು ಮೊದಲು ತಮ್ಮ ಮನಸ್ಸು ಇಂದ್ರಿಯಗಳನ್ನು ಪ್ರಯತ್ನ ಪೂರ್ವಕವಾಗಿ ಜಯಿಸಬೇಕು.

**'ವಿಗತಸ್ಪೃಹಃ'**- ದೃಶ್ಯ ಪದಾರ್ಥಗಳಲ್ಲಿ ಅಪೇಕ್ಷೆ, ಆಶೆ ಇರಬಾರದು. ಹಾಗಿದ್ದಲ್ಲಿ ಮನಸ್ಸು ಹೊರಗೆ ಹೋಗದೆ ಅಂತರ್ಮುಖವಾಗಿ ಆತ್ಮದಲ್ಲಿ ಸ್ಥಿರ ಹೊಂದುವುದು. ಚಂಚಲ ಚಿತ್ತದಿಂದ ಆತ್ಮಾನುಭೂತಿ ಎಂದಿಗೂ ಉಂಟಾಗುವುದಿಲ್ಲ. ಚಿತ್ತವು ನಿಶ್ಚಲವಾಗಿರಬೇಕೆಂದರೆ ಕೋರಿಕೆಗಳು ನಶಿಸಬೇಕು. ಆದ್ದರಿಂದ 'ವಿಗತಸ್ಪೃಹಃ' - ಆಶೆ, ಕೋರಿಕೆಗಳು ಇಲ್ಲದಿರಬೇಕೆಂದು ಹೇಳಲಾಗಿದೆ.

'ನೈಷ್ಕರ್ಮ್ಯಸಿದ್ಧಿಂ'- ಮೋಕ್ಷವನ್ನು ಇಲ್ಲಿ ನೈಷ್ಕರ್ಮ್ಯಸ್ಥಿತಿ ಎಂದು ವರ್ಣಿಸಲಾಗಿದೆ. ಅಂದರೆ ಸಮಸ್ತ ಕರ್ಮರಹಿತವಾದ ಆತ್ಮಸ್ಥಿತಿ ಎಂದರ್ಥ. ದೇಹ, ಇಂದ್ರಿಯ ಮನಸ್ಸುಗಳನ್ನು ದಾಟಿದ ಸ್ಥಿತಿಯಾದ್ದರಿಂದ ಅಂತಹ ಆತ್ಮ ಸ್ಥಿತಿಯಲ್ಲಿ ಕರ್ಮ ಸಂಭವಿಸದೆ ಇರುವ ಸ್ಥಿತಿಯನ್ನು ನೈಷ್ಕರ್ಮ್ಯವೆಂದು ಹೇಳಿರುವನು. ಅಂತಹ ನೈಷ್ಕರ್ಮ್ಯ ರೂಪವಾದ ಆತ್ಮಸ್ಥಿತಿ, ತ್ಯಾಗ (ಸಂನ್ಯಾಸ) ದಿಂದ ಲಭಿಸುವುದು ಎಂದು ತಿಳಿಸಲಾಗಿದೆ. ಯಾವುದರ ತ್ಯಾಗ? ಕರ್ಮ ಫಲ ತ್ಯಾಗ, ವಿಷಯ ವಾಂಛೆಯ ತ್ಯಾಗ, ಸಂಗ ಪರಿತ್ಯಾಗ. ಇಂತಹ ಕರ್ಮ ಫಲತ್ಯಾಗದಿಂದ, ವಿಷಯ ಪರಿತ್ಯಾಗದಿಂದ, ಕ್ರಮವಾಗಿ ಕರ್ಮರಹಿತ (ಕರ್ಮಾತೀತ) ಮೋಕ್ಷ ಪದವಿ ಲಭಿಸುವುದೆಂದು ಅರ್ಥವಾಗುತ್ತದೆ.

'ಪರಮಾಂ'- ಎಂದು ಹೇಳಿರುವುದರಿಂದ ಆ ಆತ್ಮಸ್ಥಿತಿ ಬೇರೆ ಎಲ್ಲಾ ಸ್ಥಿತಿಗಳಿಗಿಂತ ಶ್ರೇಷ್ಠವಾದದ್ದೆಂದು ವಿದಿತವಾಗುತ್ತದೆ.

ಪ್ರ : ನೈಷ್ಕರ್ಮ್ಯ ಸಿದ್ಧಿ ಎಂದರೇನು?

ಉ : ನಿಷ್ಕ್ರಿಯ ಆತ್ಮಸ್ಥಿತಿ, ಮೋಕ್ಷ

ಪ್ರ : ಅದು ಹೇಗೆ ಲಭಿಸುವುದು?

ಉ: (೧) ಯಾವುದರಲ್ಲಿಯೂ ಆಸಕ್ತಿಯಿಲ್ಲದಿರುವುದರಿಂದ ೨) ಮನಸ್ಸನ್ನು ಜಯಿಸುವುದರಿಂದ ೩) ಆಶಾರಹಿತನಾಗಿರುವುದರಿಂದ ೪) ತ್ಯಾಗ ಬುದ್ಧಿಯಿಂದ (ಸರ್ವಕರ್ಮ ಫಲ ತ್ಯಾಗ, ಸಂಗ ತ್ಯಾಗದಿಂದ) - ಅಂತಹ ನೈಷ್ಕರ್ಮ್ಯ ರೂಪ ಮೋಕ್ಷ ಸ್ಥಿತಿ ಲಭಿಸುವುದು.

ಪ್ರ : ಆ ಮೋಕ್ಷ ಸ್ಥಿತಿ ಎಂತಹುದು?

ಉ : ಎಲ್ಲಾ ಸಿದ್ಧಿಗಳಲ್ಲಿ ಉತ್ಕೃಷ್ಟವಾದುದು.

ಪ್ರ : ಕರ್ಮದಿಂದ ನೈಷ್ಕರ್ಮ್ಯ, ಮೋಕ್ಷ ಹೇಗೆ ಪಡೆಯಬಹುದು?

ಉ: ಫಲತ್ಯಾಗ ಪೂರ್ವಕವಾಗಿ ಕರ್ಮಗಳನ್ನು ಮಾಡುವುದರಿಂದ ಚಿತ್ತಶುದ್ಧ ವಾಗಿ, ಮೇಲೆ ತಿಳಿಸಿದ ಮನೋನಿಗ್ರಹಾದಿಗಳನ್ನು ಅಭ್ಯಸಿಸುವುದರಿಂದ ಜೀವಿಯು ನೈಷ್ಕರ್ಮ್ಯ ಸ್ಥಿತಿ (ಮೋಕ್ಷ)ಯನ್ನು ಹೊಂದಬಲ್ಲನು.

**೫೦ ಸಿದ್ಧಿಂ ಪ್ರಾಪ್ತೋ ಯಥಾ ಬ್ರಹ್ಮ ತಥಾಽಽಪ್ನೋತಿ ನಿಬೋಧ ಮೇ**
**ಸಮಾಸೇನೈವ ಕೌಂತೇಯ ನಿಷ್ಠಾ ಜ್ಞಾನಸ್ಯ ಯಾ ಪರಾ**

**ಅರ್ಥ:** ಕೌಂತೇಯ=ಓ ಅರ್ಜುನಾ! ಸಿದ್ಧಿಂ=(ನಿಷ್ಕಾಮ ಕರ್ಮಯೋಗಾನು ಷ್ಠಾನದಿಂದ ಉಂಟಾಗುವ ಚಿತ್ತ ಶುದ್ಧಿರೂಪವಾದ) ಕರ್ಮಸಿದ್ಧಿಯನ್ನು; ಪ್ರಾಪ್ತಃ=ಹೊಂದಿದವನು; ಯಥಾ=ಯಾವ ಪ್ರಕಾರವಾಗಿ: ಬ್ರಹ್ಮ= ಪರಮಾತ್ಮನನ್ನು; ಆಪ್ನೋತಿ=ಹೊಂದುತ್ತಿದ್ದಾನೆಯೋ; ತಥಾ=ಆ ವಿಧವಾಗಿ; ಜ್ಞಾನಸ್ಯ=ಜ್ಞಾನದ; ಪರಾ=ಶ್ರೇಷ್ಠವಾದ; ನಿಷ್ಠಾ=ನಿಷ್ಠೆ (ಪರಾಕಾಷ್ಠೆ); ಯಾ=ಯಾವುದು ಇರುವುದೋ (ಅದನ್ನು); ಸಮಾಸೇನ ಏವ=ಸಂಕ್ಷೇಪವಾಗಿ; ಮೇ=ನನ್ನಿಂದ, ನಿಬೋಧ=ತಿಳಿದುಕೊಳ್ಳುವುದು.

**ತಾ||** ಓ ಅರ್ಜುನಾ! ಕರ್ಮ ಸಿದ್ಧಿ (ನಿಷ್ಕಾಮ ಕರ್ಮಗಳಿಂದ ಉಂಟಾಗುವ ಚಿತ್ತ ಶುದ್ಧಿಯನ್ನು) ಪಡೆದವನು ಪರಮಾತ್ಮನನ್ನು ಹೇಗೆ ಹೊಂದಬಲ್ಲನು ಎನ್ನುವ ವಿಧಾನವನ್ನು, ಮತ್ತೆ ಜ್ಞಾನದ ಶ್ರೇಷ್ಠವಾದ ನಿಷ್ಠೆ (ಪರ್ಯವಸಾನ) ಯಾವುದೋ ಅದನ್ನು (ಜ್ಞಾನನಿಷ್ಠೆ, ಜ್ಞಾನ ಪರಾಕಾಷ್ಠೆಯನ್ನು) ನನ್ನಿಂದ ಸಂಕ್ಷೇಪವಾಗಿ ತಿಳಿಯುವುದು

**ವ್ಯಾಖ್ಯೆ:** ಪರಬ್ರಹ್ಮವನ್ನು ಹೊಂದುವ ವಿಧಾನವನ್ನು, ಜ್ಞಾನದ ಪರಾಕಾಷ್ಠೆಯನ್ನು ತಿಳಿಸುತ್ತಿದ್ದೇನೆಂದು ಭಗವಂತನು ಸೂಚಿಸಿರುವುದರಿಂದ ಗೀತೆ ಸಮಾಪ್ತಿಯಾಗುತ್ತಿರುವ ಈ ಹಂತದಲ್ಲಿ ಗೀತಾಸಾರವೆಲ್ಲವನ್ನೂ ಸಂಕ್ಷೇಪವಾಗಿ (ಸಮಾಸೇನೈವ) ತಿಳಿಸುತ್ತಿರುವುದರಿಂದ ಇದು ಬಹಳ ಮುಖ್ಯವಾದುದು. ಇದನ್ನು ಮುಮುಕ್ಷುಗಳು ಜಾಗ್ರತೆಯಿಂದ ಗಮನಿಸಬೇಕು. ಏಕೆಂದರೆ ಗೀತಾಸಾರವನ್ನು ಇಲ್ಲಿ ಕೊಡಲಾಗಿದೆ.

'ಸಮಾಸೇನೈವ'- ಯುದ್ಧವು ಪ್ರಾರಂಭವಾಗುವುದರಲ್ಲಿರುವುದರಿಂದ ಇನ್ನು ಅಧಿಕವಾಗಿ ಹೇಳಲು ಸಮಯವಿಲ್ಲದೆ ಸಂಕ್ಷೇಪವಾಗಿ ತಿಳಿಸಬೇಕೆಂದುಕೊಂಡಿರಬಹುದು. ಇಲ್ಲದಿದ್ದರೆ ಈಗಾಗಲೇ ಅನೇಕ ಧರ್ಮ ರಹಸ್ಯಗಳನ್ನು ಹೇಳಿರುವನಾದ್ದರಿಂದ ಇನ್ನು ಅಧಿಕವಾಗಿ ಹೇಳುವ ಅವಶ್ಯಕತೆ ಯಿಲ್ಲವೆಂದು ಸಂಕ್ಷೇಪವಾಗಿ ಹೇಳಲು ನಿರ್ಧರಿಸಿರಬಹುದು. ಮುಂದೆ ಬರುವ ಮೂರು ಶ್ಲೋಕಗಳು 'ಗೀತಾಸಾರವೆಂದೂ' 'ಸಂಕ್ಷಿಪ್ತಗೀತೆ' ಎಂದೂ ಪ್ರಸಿದ್ಧಿಗೊಂಡಿವೆ.

**ಅ||** ಪರಬ್ರಹ್ಮವನ್ನು ಹೊಂದುವ ವಿಧಾನವನ್ನು ಕುರಿತು, ಜ್ಞಾನ ನಿಷ್ಠೆಯನ್ನು ಕುರಿತು ಮೂರು ಶ್ಲೋಕಗಳ ದ್ವಾರ ತಿಳಿಸಲಾಗುತ್ತಿದೆ-

೫೧ ಬುದ್ಧ್ಯಾ ವಿಶುದ್ಧಯಾ ಯುಕ್ತೋ ಧೃತ್ಯಾಽತ್ಮಾನಂ ನಿಯಮ್ಯ ಚ
ಶಬ್ದಾದೀನ್ವಿಷಯಾಂ ಸ್ತ್ಯಕ್ತ್ವಾ ರಾಗದ್ವೇಷೌ ವ್ಯುದಸ್ಯಚ
೫೨ ವಿವಿಕ್ತ ಸೇವೀ ಲಘ್ವಾಶೀ ಯತವಾಕ್ಕಾಯಮಾನಸಃ
ಧ್ಯಾನಯೋಗಪರೋ ನಿತ್ಯಂ ವೈರಾಗ್ಯಂ ಸಮುಪಾಶ್ರಿತಃ
೫೩ ಅಹಂಕಾರಂ ಬಲಂ ದರ್ಪಂ ಕಾಮಂ ಕ್ರೋಧಂ ಪರಿಗ್ರಹಮ್
ವಿಮುಚ್ಯ ನಿರ್ಮಮಶ್ಶಾಂತೋ ಬ್ರಹ್ಮ ಭೂಯಾಯ ಕಲ್ಪತೇ

**ಅರ್ಥ:** ವಿಶುದ್ಧಯಾ=ಅತಿ ನಿರ್ಮಲವಾದ; ಬುದ್ಧ್ಯಾ=ಬುದ್ಧಿಯಿಂದ; ಯುಕ್ತ=ಕೂಡಿದವನು; ಧೃತ್ಯಾ=ಧೈರ್ಯದಿಂದ; ಆತ್ಮಾನಂ=ಮನಸ್ಸನ್ನು; ನಿಯಮ್ಯ ಚ=ನಿಗ್ರಹಿಸಿ (ಸ್ವಾಧೀನಪಡಿಸಿಕೊಂಡು); ಶಬ್ದಾದೀನ್ ವಿಷಯಾನ್=ಶಬ್ದ ಸ್ಪರ್ಶಾದಿ ವಿಷಯಗಳನ್ನು; ತ್ಯಕ್ತ್ವಾ=ಬಿಟ್ಟು; ರಾಗದ್ವೇಷೌ=ರಾಗದ್ವೇಷಗಳನ್ನು; ವ್ಯುದಸ್ಯಚ=ಪರಿತ್ಯಜಿಸಿ; ವಿವಿಕ್ತ ಸೇವಿ=ಏಕಾಂತ ಸ್ಥಳದಲ್ಲಿ ನಿವಸಿಸುವವನು; ಲಘ್ವಾಶೀ=ಮಿತಾಹಾರವನ್ನು ಸೇವಿಸುವವನು; ಯತ ವಾಕ್ಕಾಯ ಮಾನಸಃ=ಶರೀರ, ಮಾತು, ಮನಸ್ಸನ್ನು ಸ್ವಾಧೀನಪಡಿಸಿಕೊಂಡವನು; ನಿತ್ಯಂ=ಯಾವಾಗಲೂ; ಧ್ಯಾನಯೋಗ ಪರಃ=ಧ್ಯಾನಯೋಗ ತತ್ಪರನಾದವನು; ವೈರಾಗ್ಯಂ=ವೈರಾಗ್ಯವನ್ನು; ಸಮುಪಾಶ್ರಿತಃ=ಚೆನ್ನಾಗಿ ಅವಲಂಬಿಸಿದವನು; ಅಹಂಕಾರಂ=ಅಹಂಕಾರವನ್ನು; ಬಲಮ್=ಕಾಮ ಕ್ರೋಧಾದಿಗಳಿಂದ ಕೂಡಿದ ಬಲವನ್ನು (ಇಲ್ಲವೆ ಮೂರ್ಖತನ, ತಾನು ಬಲವಂತನೆಂಬ ಅಭಿಮಾನ, ಪಶುಬಲ); ದರ್ಪಂ=ದಂಭವನ್ನು; ಕಾಮಂ=ವಿಷಯಾಸಕ್ತಿಯನ್ನು; ಕ್ರೋಧಂ=ಕೋಪವನ್ನು; ಪರಿಗ್ರಹಂ=ವಸ್ತು ಸಂಗ್ರಹಣವನ್ನು; ವಿಮುಚ್ಯ=ಪೂರ್ಣವಾಗಿ ತ್ಯಜಿಸಿ; ನಿರ್ಮಮಃ=ಮಮಕಾರವಿಲ್ಲದವನು; ಶಾಂತಃ=ಶಾಂತನೂ (ಆಗಿರುವವನು); ಬ್ರಹ್ಮ ಭೂಯಾಯ=ಬ್ರಹ್ಮಸ್ವರೂಪನಾಗಲು (ಬ್ರಹ್ಮೈಕ್ಯಕ್ಕೆ); ಕಲ್ಪತೇ=ಸಮರ್ಥನಾಗುತ್ತಿದ್ದಾನೆ.

**ತಾ||** ಅತಿ ನಿರ್ಮಲವಾದ ಬುದ್ಧಿಯಿಂದ ಕೂಡಿದವನು, ಧೈರ್ಯದಿಂದ ಮನಸ್ಸನ್ನು ನಿಗ್ರಹಿಸುವವನು, ಶಬ್ದ ಸ್ಪರ್ಶಾದಿ ವಿಷಯಗಳನ್ನು ತ್ಯಜಿಸಿದವನು, ರಾಗದ್ವೇಷಗಳನ್ನು ಪರಿತ್ಯಜಿಸುವವನು, ಏಕಾಂತ ಸ್ಥಳದಲ್ಲಿ ನಿವಸಿಸುವವನು, ಮಿತಾಹಾರವನ್ನು ಸೇವಿಸುವವನು; ಮಾತು, ಶರೀರ, ಮನಸ್ಸನ್ನು ಸ್ವಾಧೀನ ಪಡಿಸಿಕೊಂಡವನು, ಯಾವಾಗಲೂ ಧ್ಯಾನಯೋಗ ತತ್ಪರನಾಗಿರುವವನು, ವೈರಾಗ್ಯವನ್ನು ಪೂರ್ತಿಯಾಗಿ ಅವಲಂಬಿಸಿದವನು; ಅಹಂಕಾರ, ಬಲ, ಡಂಭ, ಕಾಮ, ಕ್ರೋಧ, ವಸ್ತು ಸಂಗ್ರಹಣೆಯನ್ನು ತ್ಯಜಿಸಿದವನು; ಮಮಕಾರ ವಿಲ್ಲದವನು, ಶಾಂತನಾಗಿರುವವನು ಬ್ರಹ್ಮಸ್ವರೂಪವನ್ನು ಹೊಂದಲು (ಮೋಕ್ಷಕ್ಕೆ) ಸಮರ್ಥನಾಗುತ್ತಿದ್ದಾನೆ.

**ವ್ಯಾಖ್ಯೆ:** ಈ ಮೂರು ಶ್ಲೋಕಗಳನ್ನು ಗೀತಾಸಾರವೆಂದು ಹೇಳಲಾಗುತ್ತದೆ. ಮುಕ್ತಿಗೆ ಬೇಕಾದ ಎಲ್ಲಾ ಸಾಧನ ಸಂಪತ್ತುಗಳು ಈ ಶ್ಲೋಕಗಳಲ್ಲಿವೆ. ಈ ಮೂರು ಶ್ಲೋಕಗಳಲ್ಲಿ ತಿಳಿಸಿದ ಸಾಧನೆಗಳನ್ನು ಅನುಷ್ಠಾನ ಮಾಡಿದರೆ ಮನುಜನು ಬ್ರಹ್ಮಸಾಕ್ಷಾತ್ಕಾರವನ್ನು (ಮೋಕ್ಷವನ್ನು) ತಪ್ಪದೆ ಹೊಂದುವನು (ಬ್ರಹ್ಮ ಭೂಯಾಯ ಕಲ್ಪತೇ). ಸಾಧನ ವಿಧಾನ ಅದರ ಫಲ ಎರಡನ್ನೂ ಇಲ್ಲಿ ಹೇಳಲಾಗಿದೆ. ಇವು ಬ್ರಹ್ಮೈಕ್ಯರೂಪವಾದ ಮಹೋನ್ನತ ಪದವಿಯನ್ನು ಉಂಟುಮಾಡುವುದರಿಂದ ಮುಮುಕ್ಷು ಒಂದೊಂದನ್ನೂ ಶ್ರದ್ಧೆಯಿಂದ ಸಾಧಿಸಿ, ಕ್ರಮವಾಗಿ ಎಲ್ಲವನ್ನೂ ಸಾಧಿಸಬೇಕು.

'ವಿಶುದ್ಧಯಾ'- 'ಶುದ್ಧಯಾ' ಎಂದು ಹೇಳದೆ 'ವಿಶುದ್ಧಯಾ' ಎಂದು ಹೇಳಿರುವುದರಿಂದ ಬುದ್ಧಿ ಸ್ವಲ್ಪ ಶುದ್ಧವಾಗಿದ್ದರೆ ಸಾಲದೆಂದೂ ಪರಿಪೂರ್ಣವಾಗಿ ಶುದ್ಧವಾಗಿರಬೇಕೆಂದು ತಿಳಿಯುತ್ತದೆ. ಸ್ಪಷ್ಟವಾದ ಪ್ರತಿಬಿಂಬ ಶುದ್ಧವಾದ ಕನ್ನಡಿಯಲ್ಲಿ ಮಾತ್ರ ಕಾಣುವುದಲ್ಲವೇ!

'ಧೃತ್ಯಾ'- ಮನಸ್ಸು ಸಾಮಾನ್ಯವಾಗಿ ಬಗ್ಗುವುದಿಲ್ಲ, ಅದನ್ನು ಜಯಿಸಲು ಬಹಳ ಧೈರ್ಯ ಬೇಕು. ಆತ್ಮ ಅಂಜುಬುರುಕರಿಗೆ ಸಿಗುವ ವಸ್ತುವಲ್ಲ.

'ಕಶ್ಚಿದ್ಧೀರಃ'- ಎಂದ ಹಾಗೆ ಧೈರ್ಯವಂತನೇ ಮನಸ್ಸನ್ನು ಬಗ್ಗು ಬಡಿದು ಆತ್ಮವನ್ನು ಹೊಂದಬಲ್ಲನು.

'ಆತ್ಮಾನಾಂ ನಿಯಮ್ಯ ಚ'- ಮನಸ್ಸು, ಇಂದ್ರಿಯಗಳನ್ನು ನಿಗ್ರಹಿಸದಿದ್ದರೆ ಅಧ್ಯಾತ್ಮಕ್ಷೇತ್ರದಲ್ಲಿ ಯಾರೂ ವಿಜಯ ಹೊಂದಲಾರರು. ಸಾಧನ ಕ್ರಮದಲ್ಲಿ ಮನಃಸಂಯಮ ಅತ್ಯಂತ ಪ್ರಧಾನವಾದುದು. 'ನಿಯಮ್ಯ' ಎಂದು ಹೇಳಿರುವುದರಿಂದ ಮನಸ್ಸನ್ನು ಚೆನ್ನಾಗಿ ನಿಗ್ರಹಿಸಬೇಕೆಂದು ಆದೇಶಿಸಿ ದಂತಾಗಿದೆ.

'ಶಬ್ದಾದೀನ್ ವಿಷಯಾಂ ಸ್ತ್ಯಕ್ತ್ವಾ'- ಶಬ್ದಾದಿ ದೃಶ್ಯ ವಿಷಯಗಳ ಹಿಂದೆ ಓಡುವವರು ಆತ್ಮಾನುಭವವನ್ನು ಹೊಂದುವುದಿಲ್ಲ. ಮನಸ್ಸು ಬಹಿರ್ಮುಖತ್ವವನ್ನು ತ್ಯಜಿಸಿ ಅಂತರ್ಮುಖವಾಗಿ ಆತ್ಮ ಧ್ಯಾನದಲ್ಲಿ ಸ್ಥಿರಗೊಂಡಿರಬೇಕು.

'ವಿವಿಕ್ತ ಸೇವೀ'- ಏಕಾಂತ ಸ್ಥಳದಲ್ಲಿ ನಿವಸಿಸಬೇಕು. ಇಲ್ಲವೆ ಗೃಹದಲ್ಲಿ ಪ್ರತಿಬಂಧಕವಿಲ್ಲದ ಸ್ಥಳವನ್ನು ಏರ್ಪಾಟುಮಾಡಿಕೊಂಡು ಅದರಲ್ಲಿ ಬ್ರಹ್ಮ ನಿಷ್ಠಾದಿಗಳನ್ನು ಜರುಗಿಸಿಕೊಳ್ಳಬಹುದು. ಸಾಧನ ದಶೆಯಲ್ಲಿ ಬಹಳ ಜನರ ಮಧ್ಯೆ ಇದ್ದಲ್ಲಿ ಚಿತ್ತಕ್ಕೆ ವಿಕ್ಷೇಪ ಉಂಟಾಗುವುದು. ಆದ್ದರಿಂದ ಏಕಾಂತವಾಗಿ ಧ್ಯಾನಾದಿಗಳನ್ನು ಆಚರಿಸಬೇಕೆಂದು ಹೇಳಲಾಗಿದೆ.

'ಲಘ್ವಾಶೀ'- ಮಿತಾಹಾರವನ್ನು ಸ್ವೀಕರಿಸಬೇಕು. ಅಧಿಕವಾಗಿ ಭುಜಿಸುವುದರಿಂದ ಆರೋಗ್ಯ ಕೆಡುವುದೇ ಅಲ್ಲದೆ ಧ್ಯಾನವು ಸರಿಯಾಗಿ ಸಾಗಲಾರದು. ಶರೀರ ಎಷ್ಟು ಲವಲವಿಕೆಯಾಗಿದ್ದರೆ ಅಷ್ಟು ಒಳ್ಳೆಯದು. ಶುಷ್ಕೋಪವಾಸಗಳು ಕೆಲಸಕ್ಕೆ ಬರುವುದಿಲ್ಲ. ಯುಕ್ತಾಹಾರ ವಿಹಾರನಾಗಿರಬೇಕು. ಸಾಧಕನು ಆಹಾರದ ವಿಷಯದಲ್ಲಿ ಮಾತ್ರ ಬಹಳ ಜಾಗರೂಕನಾಗಿರಬೇಕು. ಆಹಾರದಿಂದಲೇ ಶರೀರ, ಮನಸ್ಸು ಏರ್ಪಡಾಗಿವೆಯಾದ್ದರಿಂದ ಸಾತ್ವಿಕವಾದ ಆಹಾರವನ್ನು ಮಿತವಾಗಿ ಸೇವಿಸಬೇಕು. ಆಧ್ಯಾತ್ಮಿಕ ಸಾಧನೆಯಲ್ಲಿ ಆಹಾರ ಬುನಾದಿಯಂತಹದು. ಈಗಾಗಲೇ ಗೀತೆಯಲ್ಲಿ ಅನೇಕ ಬಾರಿ ಭಗವಂತನು ಇದರ ಬಗ್ಗೆ ತಿಳಿಸಿರುವನು. ಗೀತೆ ಸಮಾಪ್ತಿಯಾಗುವ ಸಮಯದಲ್ಲಿ ಮತ್ತೆ ಜ್ಞಾಪಿಸುತ್ತಿರುವನು. ಗೀತೆಯ ೭೦೧ ಶ್ಲೋಕಗಳ ಸಾರವನ್ನು ಕೇವಲ ಮೂರು ಶ್ಲೋಕಗಳಲ್ಲಿ ಇಲ್ಲಿ ಹೇಳುತ್ತಿರುವಾಗ ಆಹಾರದ ವಿಷಯವೂ ಇದರಲ್ಲಿ ಸೇರಿಸಲ್ಪಟ್ಟಿದೆಯೆಂದರೆ ಅದರ ಮಹತ್ವ ಎಷ್ಟಿದೆ ಎಂದು ತಿಳಿಯುತ್ತದೆ. ಆಹಾರದ ವಿಷಯದಲ್ಲಿ ಜಾಗ್ರತೆ ಅತಿ ಅವಶ್ಯಕವಾದದ್ದು.

'ಯತ ವಾಕ್ಕಾಯ ಮಾನಸಃ'- ಮಾತು, ಶರೀರ, ಮನಸ್ಸುಗಳನ್ನು ಹತೋಟಿಯಲ್ಲಿಟ್ಟುಕೊಳ್ಳಬೇಕು. ಮದಗಜವನ್ನು ಮಾವಟಿ ಅಂಕುಶದಿಂದ ಹತೋಟಿಯಲ್ಲಿಟ್ಟುಕೊಂಡ ಹಾಗೆ ಸಾಧಕನು ಭಕ್ತಿ ಜ್ಞಾನಾದಿಗಳಿಂದ, ವಿವೇಕದಿಂದ ಮೇಲಿನ ಮೂರನ್ನೂ ಹತೋಟಿಯಲ್ಲಿಟ್ಟುಕೊಳ್ಳಬೇಕು. ತಾನು ಹೇಳಿದ ಹಾಗೆ ಅವು ಕೇಳಬೇಕೇ ಹೊರತು, ಅವು ಹೇಳಿದ ಹಾಗೆ ತಾನು ಕೇಳಬಾರದು.

'ಧ್ಯಾನಯೋಗಪರೋನಿತ್ಯಂ'- 'ನಿತ್ಯಂ' ಎಂದು ಹೇಳುವುದರಿಂದ ಒಮ್ಮೆ ಧ್ಯಾನಶೀಲನಾಗಿ, ದೈವಚಿಂತನಾಪರನಾಗಿ ಮತ್ತೊಮ್ಮೆ ದೃಶ್ಯವಿಹಾರಗಳಲ್ಲಿ ಇಷ್ಟ ಬಂದಂತೆ ವಿಹರಿಸಬಾರದೆಂದು ಆದೇಶಿಸಲಾಗಿದೆ. ಇಂತಹ ಸ್ಥಿತಿ ಪ್ರಾರಂಭದಲ್ಲಿ ಸಾಧ್ಯವಿಲ್ಲದಿದ್ದರೂ ಅಭ್ಯಾಸದಿಂದ ಕ್ರಮವಾಗಿ ಸಿದ್ಧಿಸುವುದು. ಧ್ಯಾನದಿಂದ ಹೊರಗೆ ಬಂದಾಗ ಕೂಡ ಆ ಧ್ಯಾನ ಕಾಲದ ಪ್ರಶಾಂತ ವಾತಾವರಣವನ್ನು ಕಾಪಾಡಿಕೊಳ್ಳಬೇಕು.

'ವೈರಾಗ್ಯಂ ಸಮುಪಾಶ್ರಿತಃ' -

ಶ್ರಿತಃ= ಆಶ್ರಯಿಸಿದವನು
ಆಶ್ರಿತಃ=ಚೆನ್ನಾಗಿ ಆಶ್ರಯಿಸಿದವನು
ಉಪಾಶ್ರಿತಃ=ಮತ್ತು ಚೆನ್ನಾಗಿ ಆಶ್ರಯಿಸಿದವನು
ಸಮುಪಾಶ್ರಿತಃ=ಸಂಪೂರ್ಣವಾಗಿ ಆಶ್ರಯಿಸಿದವನು.

'ಸಮುಪಾಶ್ರಿತಃ' - ಎಂದು ಹೇಳುವುದರಿಂದ ವೈರಾಗ್ಯವನ್ನು ಸಂಪೂರ್ಣವಾಗಿ ಆಶ್ರಯಿಸಬೇಕೆಂದು ಬೋಧಿಸಲಾಗಿದೆ. ಏಕೆಂದರೆ ಮಂದ ವೈರಾಗ್ಯವನ್ನು, ಮಾಯೆ ಒಂದೇ ಏಟಿನಲ್ಲಿ ಬೀಳಿಸುವುದು*

'ಬಲಂ'- ಇಲ್ಲಿ 'ಬಲಂ' ಎಂದು ಹೇಳಿರುವುದರ ಅರ್ಥ ದೈವ ಬಲ ಅಥವ ಪರಮಾರ್ಥ ಬಲವೆಂದಲ್ಲ. ಅಸುರ ಬಲ, ಪಶುಬಲ, ಕಾಮಕ್ರೋಧಾದಿಗಳ ಬಲವೆಂದೇ ಅರ್ಥ. ಇಲ್ಲವೆ ಬಲವಂತನೆಂಬ ಅಭಿಮಾನವೆಂದೂ ಹೇಳಬಹುದು. ಇವುಗಳನ್ನು ತ್ಯಜಿಸಬೇಕು. ಸತ್ಕಾರ್ಯ ಗಳಿಗೆ ಉಪಯೋಗಿಸುವ ಬಲ ಉತ್ತಮವಾದುದಾಗಲಿ ದುಷ್ಕಾರ್ಯಗಳಿಗೆ ಉಪಯೋಗಿಸುವುದಲ್ಲ. ಮೂರ್ಖತನದಿಂದ ಉಪಯೋಗಿಸಲ್ಪಡುವ ಬಲ ತ್ಯಾಜ್ಯವೇ ಸರಿ. ಆದ್ದರಿಂದ ಅವುಗಳನ್ನು ಬಿಟ್ಟು ದೈವ ಬಲವನ್ನೇ ಸಂಪಾದಿಸಬೇಕು.

'ಕಾಮಂ ಕ್ರೋಧಂ'- ಈ ಎರಡನ್ನೂ ಗೀತೆಯಲ್ಲಿ ಅನೇಕಕಡೆ ಜೊತೆಯಲ್ಲಿ ಉಪಯೋಗಿಸಲಾಗಿದೆ. ಇವು ಬೇರೆ ಬೇರೆಯಾಗಿ ಉಪಯೋಗಿಸಲ್ಪಟ್ಟಿರುವುದು ಗೀತೆಯಲ್ಲಿ ಬಹಳ ವಿರಳ. ಏಕೆಂದರೆ, ಕ್ರೋಧಕ್ಕೆ ತವರು ಕಾಮ **(ಕಾಮಾತ್ಕ್ರೋಧೋಽಭಿ ಜಾಯತೇ)** ಆ ಕಾಮ ಕ್ರೋಧ ಗಳೆರಡನ್ನೂ ಛೇದಿಸಿಹಾಕಬೇಕು.

'ಪರಿಗ್ರಹಂ'- ಪರಿಗ್ರಹವೆಂದರೆ ಬೇರೆಯವರಿಂದ ವಸ್ತುಗಳನ್ನು ಸ್ವೀಕರಿಸುವುದು. ತನ್ನ ದೇಹ ಪೋಷಣೆಗೆ ಅವಸರವಾದ ಭಿಕ್ಷಾದಿಗಳನ್ನು ಬಿಟ್ಟು ಬೇರೆಯಾವುದನ್ನೂ ಪರರಿಂದ ಗ್ರಹಿಸಬಾರದು. ಹಾಗೆ ತೆಗೆದು ಕೊಳ್ಳುವುದರಿಂದ ಆಯಾ ವಸ್ತುಗಳನ್ನು ಕುರಿತ ಆಶೆಗಳಿಂದ ಚಿತ್ತಕ್ಕೆ ವಿಕ್ಷೇಪವುಂಟಾಗಿ ಇತರರ ಕರ್ಮ ತನಗೆ ಬರುವುದರಿಂದ, ಭೋಗ ಸಾಮಗ್ರಿಯಿಂದ ಸಾಧನೆಗೆ ಭಂಗವೂ ಉಂಟಾಗುವುದು. ಆದ್ದರಿಂದ ಪರಿಗ್ರಹವನ್ನು ತ್ಯಜಿಸಬೇಕು. ಅಹಂಕಾರಾದಿ ದುರ್ಗುಣಗಳಲ್ಲಿ 'ಪರಿಗ್ರಹವನ್ನು' ಸೇರಿಸಿರುವುದರಿಂದ ಅದು ಬೇರೆಯವುಗಳಂತೆ ಪ್ರಮಾದಕರವೆಂದು, ಆದ್ದರಿಂದ ತ್ಯಾಜ್ಯವೆಂದು ಅರ್ಥವಾಗುತ್ತದೆ.

'ವಿಮುಚ್ಯ'- ಎಂದು ಹೇಳುವುದರಿಂದ ಮೇಲೆ ತಿಳಿಸಿದ ಅಹಂಕಾರ ದುರ್ಗುಣಗಳೆಲ್ಲವನ್ನೂ ಸಂಪೂರ್ಣವಾಗಿ ಬಿಡಬೇಕೆಂದು ಬೋಧಿಸಿ ದಂತಾಗಿದೆ.

'ಬ್ರಹ್ಮಭೂಯಾಯ ಕಲ್ಪತೇ'- ಈ ಸಾಧನೆಯಲ್ಲಿ ಜಯಗೊಳಿಸು ವವರು ಯಾರಾದರೂ ಸರಿಯೇ ಬ್ರಹ್ಮ ಪ್ರಾಪ್ತಿಗೆ (ಮೋಕ್ಷಕ್ಕೆ) ಅರ್ಹರೇ ಆಗುವರು. ಅವರು ತಪ್ಪದೆ ಬ್ರಹ್ಮಾನುಭೂತಿಯನ್ನು ಪಡೆಯುವರು. ಆದ್ದರಿಂದ ಮುಮುಕ್ಷುಗಳು ಈ ಬೋಧೆಗಳನ್ನು ಕಾರ್ಯಾನ್ವಿತಗೊಳಿಸಿಕೊಂಡು ಬ್ರಹ್ಮ ಪ್ರಾಪ್ತಿಯನ್ನು ಹೊಂದಬೇಕು.

ಈ ಮೂರು ಶ್ಲೋಕಗಳು ಗೀತಾಸಾರವಾಗಿರುವುದರಿಂದ, ಅತಿ ಮುಖ್ಯವಾದವುಗಳಾಗಿರುವುದರಿಂದ ಇವುಗಳನ್ನು ಮುಮುಕ್ಷುಗಳು ಕಂಠಪಾಠ ಮಾಡಿ ಅರ್ಥವನ್ನು ಮನನ ಮಾಡುತ್ತಾ ಅವುಗಳನ್ನು ಕಾರ್ಯಾನ್ವಿತ ಗೊಳಿಸಿಕೊಂಡು (ಮೋಕ್ಷ ಪ್ರಾಪ್ತಿ ಹೊಂದುವುದರ ಮೂಲಕ) ಕೃತಾರ್ಥ ರಾಗಬೇಕು. ಇವುಗಳಲ್ಲಿ ಕೆಲವು ಗ್ರಹಿಸಬೇಕಾದ, ಕೆಲವು ತ್ಯಜಿಸಬೇಕಾದ ಗುಣಗಳಿವೆ. ಅಂದರೆ ಔಷಧ, ಪಥ್ಯ ಎರಡನ್ನೂ ತಿಳಿಸಲಾಗಿದೆ. ಎರಡನ್ನೂ ಸಮವಾಗಿ ಪಾಲಿಸಿದರೆ ಭವರೋಗ ನಾಶಿಯಾಗುವುದು.

ಪ್ರ : ಬ್ರಹ್ಮಸಾಕ್ಷಾತ್ಕಾರಕ್ಕೆ (ಮೋಕ್ಷಪ್ರಾಪ್ತಿಗೆ) ಯಾವ ಸಾಧನೆಗಳನ್ನು ಮಾಡಬೇಕು ? ಹೇಗೆ ಪ್ರವರ್ತಿಸಬೇಕು ?

ಉ : ೧) ಬುದ್ಧಿಯನ್ನು ನಿರ್ಮಲವಾಗಿಟ್ಟುಕೊಳ್ಳಬೇಕು.
೨) ಧೈರ್ಯದಿಂದ ಇಂದ್ರಿಯಮನಗಳನ್ನು ಸ್ವಾಧೀನ ಪಡಿಸಿಕೊಳ್ಳಬೇಕು
೩) ಶಬ್ದ ಸ್ಪರ್ಶಾದಿ ವಿಷಯಗಳನ್ನು ತ್ಯಜಿಸಬೇಕು
೪) ರಾಗ ದ್ವೇಷಗಳನ್ನು ಬಿಡಬೇಕು.
೫) ಏಕಾಂತಸ್ಥಳವನ್ನಾಶ್ರಯಿಸಬೇಕು
೬) ಮಿತಾಹಾರವನ್ನು ಸೇವಿಸಬೇಕು.
೭) ಮಾತು, ಶರೀರ, ಮನಸ್ಸನ್ನು ಸ್ವಾಧೀನದಲ್ಲಿಟ್ಟುಕೊಳ್ಳಬೇಕು
೮) ನಿರಂತರ ಧ್ಯಾನಯೋಗ ತತ್ಪರನಾಗಿರಬೇಕು
೯) ವೈರಾಗ್ಯವನ್ನು ಆಶ್ರಯಿಸಬೇಕು (ತೀವ್ರ ವೈರಾಗ್ಯ ಹೊಂದಿರಬೇಕು)
೧೦) ಅಹಂಕಾರ, ದುಷ್ಟಕಾರ್ಯಗಳಿಗೆ ಉಪಯೋಗಿಸುವ ಬಲ (ಇಲ್ಲವೆ ಬಲಾಭಿಮಾನ) ದರ್ಪ, ಕಾಮ, ಕ್ರೋಧ, ಪರಿಗ್ರಹವನ್ನು ಪೂರ್ಣವಾಗಿ ತ್ಯಜಿಸಬೇಕು.
೧೧) ಮಮಕಾರವನ್ನು ಬಿಡಬೇಕು
೧೨) ಶಾಂತ ಚಿತ್ತನಾಗಿರಬೇಕು

ಪ್ರ : ಇಂದ್ರಿಯ ಮನಸ್ಸುಗಳನ್ನು ಹೇಗೆ ನಿಗ್ರಹಿಸಬೇಕು ?

ಉ : ಧೈರ್ಯದಿಂದ

---

* ಆಪಾತವೈರಾಗ್ಯವತೋ ಮುಮುಕ್ಷೂನ್
ಭವಾಬ್ಧಿಪಾರಂ ಪ್ರತಿಯಾತುಮುದ್ಯತಾನ್
ಆಶಾಗ್ರಹೋ ಮಜ್ಜಯತೇಽನ್ತರಾಲೇ
ನಿಗೃಹ್ಯ ಕಂಠಂ ವಿನಿವರ್ತ್ಯ ವೇಗಾತ್ (ವಿವೇಕಚೂಡಾಮಣಿ ಶ್ರೀ ಶಂಕರಾಚಾರ್ಯರು)

ಮಂದವೈರಾಗ್ಯವನ್ನು ಹೊಂದಿರುವ ಮುಮುಕ್ಷಗಳ ಕಂಠವನ್ನು ಸಂಸಾರ ಸಾಗರದ ಆಶೆಯೆನ್ನುವ ಮೊಸಳೆ ಗಟ್ಟಿಯಾಗಿ ಹಿಡಿದುಕೊಂಡು ಶೀಘ್ರವಾಗಿ ಮುಳುಗಿಸಿ ಬಿಡುವುದು.

ಪ್ರ : ಬ್ರಹ್ಮಪ್ರಾಪ್ತಿಗೆ (ಮೋಕ್ಷಕ್ಕೆ) ಯಾವನು ಅರ್ಹನು?

ಉ : ಮೇಲೆ ತಿಳಿಸಿದ ಸುಗುಣಗಳನ್ನು ಹೊಂದಿದವನು (ಆತನು ಯಾರಾದರೂ ಸರಿಯೇ)

**ಅ||** ಈ ರೀತಿ ಬ್ರಹ್ಮ ರೂಪವನ್ನು ಹೊಂದಿದ ಮಹನೀಯನು ಹೇಗೆ ಪ್ರವರ್ತಿಸುವನೋ ತಿಳಿಸುತ್ತಿದ್ದಾನೆ-

**೫೪ ಬ್ರಹ್ಮಭೂತಃ ಪ್ರಸನ್ನಾತ್ಮಾ ನ ಶೋಚತಿ ನ ಕಾಂಕ್ಷತಿ**
**ಸಮಸ್ಸರ್ವೇಷು ಭೂತೇಷು ಮದ್ಭಕ್ತಿಂ ಲಭತೇ ಪರಾಂ**

**ಅರ್ಥ:** ಬ್ರಹ್ಮಭೂತಃ=ಬ್ರಹ್ಮರೂಪವನ್ನು (ಇಲ್ಲವೆ ಬ್ರಹ್ಮೈಕ್ಯವನ್ನು) ಹೊಂದಿದವನು (ಜೀವನ್ಮುಕ್ತನು); ಪ್ರಸನ್ನಾತ್ಮಾ=ಪ್ರಸನ್ನವಾದ (ನಿರ್ಮಲವಾದ) ಮನಸ್ಸುಳ್ಳ (ವನಾದ ಮನುಜನು); ನ ಶೋಚತಿ=ಯಾವುದನ್ನು ಕುರಿತೂ ದುಃಖಿಸುವುದಿಲ್ಲ; ನ ಕಾಂಕ್ಷತಿ=ಯಾವುದನ್ನೂ ದುಃಖಿಸುವುದಿಲ್ಲ; ಸರ್ವೇಷು ಭೂತೇಷು=ಸಮಸ್ತ ಪ್ರಾಣಿಗಳಲ್ಲಿ; ಸಮಃ=ಸಮಬುದ್ಧಿಯುಳ್ಳವನಾಗಿ (ಅವುಗಳನ್ನು ತನ್ನಂತೆಯೇ ನೋಡುತ್ತ); ಪರಾಂ=ಉತ್ಕೃಷ್ಟವಾದ; ಮದ್ಭಕ್ತಿಂ=ನನ್ನಲ್ಲಿ ಭಕ್ತಿಯನ್ನು (ಸಮಸ್ತವೂ ಬ್ರಹ್ಮವೆಂಬ ಭಾವವನ್ನು); ಲಭತೇ=ಹೊಂದುತ್ತಿದ್ದಾನೆ.

**ತಾ||** ಬ್ರಹ್ಮರೂಪವನ್ನು ಹೊಂದಿದವನು, ನಿರ್ಮಲವಾದ ಮನಸ್ಸುಳ್ಳ ಮನುಜನು ಯಾವುದನ್ನು ಕುರಿತೂ ದುಃಖಿಸುವುದಿಲ್ಲ. ಯಾವುದನ್ನೂ ಬಯಸುವುದಿಲ್ಲ. ಸಮಸ್ತ ಪ್ರಾಣಿಗಳಲ್ಲಿ ಸಮಬುದ್ಧಿ ಹೊಂದಿದವನಾಗಿ, ನನ್ನಲ್ಲಿ ಉತ್ತಮ ಭಕ್ತಿಯನ್ನು ಹೊಂದುತ್ತಿದ್ದಾನೆ.

**ವ್ಯಾಖ್ಯೆ:** ನಿರ್ಮಲಚಿತ್ತವುಳ್ಳವನೊಬ್ಬನೇ ಬ್ರಹ್ಮಸಾಕ್ಷಾತ್ಕಾರವನ್ನು ಹೊಂದಬಲ್ಲನು. ಮಲಿನ ಚಿತ್ತವುಳ್ಳವನಲ್ಲ. ಆದ್ದರಿಂದಲೇ 'ಪ್ರಸನ್ನಾತ್ಮಾ' ಎಂದು ಹೇಳಲಾಗಿದೆ. ಈ ಶ್ಲೋಕದಲ್ಲಿ ಬ್ರಹ್ಮಸಾಕ್ಷಾತ್ಕಾರವಾದವನು ಹೇಗೆ ಪ್ರವರ್ತಿಸುವವನೋ ತಿಳಿಸಲಾಗಿದೆ. ಅಂತಹವನು ನಿರ್ಮಲಚಿತ್ತನಾಗಿದ್ದು ಯಾವುದನ್ನು ಕುರಿತೂ ಚಿಂತಿಸದೆ, ಯಾವುದನ್ನೂ ಬಯಸದೆ ಸರ್ವಭೂತಗಳಲ್ಲಿ ಸಮಬುದ್ಧಿಯುಳ್ಳವನಾಗಿ (ಭೂತದಯೆಯುಳ್ಳವನಾಗಿ) ಪರಾಭಕ್ತಿಯುತನಾಗಿ ಬೆಳಗುತ್ತಿರುವನು.

*'ನ ಶೋಚತಿ ನ ಕಾಂಕ್ಷತಿ'*- ದೃಶ್ಯ ಪ್ರಪಂಚವೆಲ್ಲವೂ ತನ್ನಲ್ಲಿಯೇ (ಸ್ವಾತ್ಮದಲ್ಲಿಯೇ) ಕಲ್ಪಿತವಾದುದೆಂದು ತಿಳಿದವನಾದ್ದರಿಂದ ಆತನು ಇನ್ನು ಯಾವುದನ್ನೂ ಇಚ್ಛಿಸುವುದಿಲ್ಲ, ಯಾವುದರ ಬಗ್ಗೆಯೂ ದುಃಖಿಸುವುದಿಲ್ಲ. ಈ ಸತ್ಯವನ್ನೇ ಈ ಕೆಳಗಿನ ಈಶಾವಾಸ್ಯೋಪನಿಷತ್ತಿನ ಮಂತ್ರ ತಿಳಿಸುತ್ತಿದೆ.

**ಯಸ್ಮಿನ್ ಸರ್ವಾಣಿ ಭೂತಾನಿ ಆತ್ಮೈವಾಭೂದ್ವಿಜಾನತಃ**
**ತತ್ರ ಕೋ ಮೋಹಃ ಕಃ ಶೋಕ ಏಕತ್ವ ಮನುಪಶ್ಯತಃ**
**(ಈಶಾವಾಸ್ಯೋಪನಿಷತು)**

*'ಸಮಃ ಸರ್ವೇಷು ಭೂತೇಷು'*- ಆತ್ಮಾನುಭೂತಿ, ಬ್ರಹ್ಮಾನುಭವವನ್ನು ಹೊಂದಿದವನ ಗುರುತು ಸಮಸ್ತ ಪ್ರಾಣಿ ಕೋಟಿಗಳಲ್ಲಿ ಸಮಭಾವದಿಂದಿದ್ದು ತನ್ನ ಹಾಗೆ ಅವುಗಳನ್ನೂ ನೋಡುವುದು. ಜ್ಞಾನ ಪ್ರಾಪ್ತಿಗೆ ಸರ್ವಭೂತದಯೆ ಒಂದು ಚಿಹ್ನೆಯಾಗಿದೆ. ಅದು ಇಲ್ಲದಿದ್ದಲ್ಲಿ ಪೂರ್ಣಜ್ಞಾನವು, ಆತ್ಮಾನುಭಾವವು ಇನ್ನೂ ಉಂಟಾಗಿಲ್ಲವೆಂದರ್ಥ. ಆದ್ದರಿಂದಲೇ ಬ್ರಹ್ಮಪ್ರಾಪ್ತಿಯನ್ನು ಹೊಂದಿದ ಮಹನೀಯನು ಸರ್ವಪ್ರಾಣಿಗಳಲ್ಲಿ ಸಮ ಬುದ್ಧಿ ಹೊಂದಿ, ಸರ್ವಭೂತ ಹಿತನಾಗಿ ವರ್ತಿಸುವನೆಂದು ಭಗವಂತನು ಹೇಳಿದನು.

*'ಮದ್ಭಕ್ತಿಂ ಲಭತೇ ಪರಾಂ'*- ಅಂತಹ ಬ್ರಹ್ಮಜ್ಞಾನಿ ನನ್ನ ಪರಾಭಕ್ತಿಯನ್ನು ಹೊಂದುತ್ತಿದ್ದಾನೆಂದು ಹೇಳುವುದರಿಂದ ಭಕ್ತಿಯ ಪರಾಕಾಷ್ಠೆಗೂ, ಜ್ಞಾನಕ್ಕೂ ಭೇದವಿಲ್ಲವೆಂದು ತಿಳಿಯುತ್ತದೆ.

ಭಕ್ತಿ ಎರಡು ವಿಧಗಳಾಗಿದೆ. ಒಂದು ಸಾಮಾನ್ಯ ಭಕ್ತಿ 'ಇನ್ನೊಂದು ಪರಾಭಕ್ತಿ. ಇದರಲ್ಲಿ ಎರಡನೆಯದಾದ ಪರಾಭಕ್ತಿ ಕೇವಲ ಜ್ಞಾನನಿಷ್ಠೆಗೆ ಸಮಾನವಾದುದು.

*'ಸ್ವಸ್ವರೂಪಾನುಸಂಧಾನಂ ಭಕ್ತಿ ರಿತ್ಯಭಿಧೀಯತೇ'*- ಎನ್ನುವ ಶಂಕರರ ವಚನದಂತೆ ಆತ್ಮತತ್ತ್ವಾನುಸಂಧಾನವೇ ಪರಾಭಕ್ತಿಯ ಲಕ್ಷಣ. ಆದ್ದರಿಂದ ಪರಾಭಕ್ತಿಗೂ, ಜ್ಞಾನಕ್ಕೂ ಭೇದವಿಲ್ಲ. ಮತ್ತೆ ಜ್ಞಾನ ಹೊಂದಿದವನಿಗೆ ಅಪರಿಮಿತವಾದ ಭಕ್ತಿಯಿರುವುದೆಂದು ಇಲ್ಲಿ ಅರ್ಥವಾಗುತ್ತದೆ. ಜ್ಞಾನಿಗೆ ಆತ್ಮದೇವನಲ್ಲಿ ಅನನ್ಯ ಭಕ್ತಿಯಿರುವುದು.

ಪ್ರ : ಬ್ರಹ್ಮಸಾಕ್ಷಾತ್ಕಾರ ಹೊಂದಿದ ಮಹನೀಯನು ಹೇಗಿರುವನು?

ಉ : ೧) ನಿರ್ಮಲವಾಗಿ ಶಾಂತ ಮನಸ್ಕನಾಗಿರುವನು ೨) ಯಾವುದನ್ನು ಕುರಿತೂ ದುಃಖಿಸುವುದಿಲ್ಲ ೩) ಯಾವುದನ್ನೂ ಬಯಸುವುದಿಲ್ಲ. ೪) ಸರ್ವಭೂತಗಳಲ್ಲಿ (ಪ್ರಾಣಿಕೋಟಿಗಳಲ್ಲಿ) ಸಮಭಾವಹೊಂದಿ ಅವುಗಳನ್ನು ತನ್ನಂತೆಯೇ ಭಾವಿಸುವನು.

ಪ್ರ : ಅಂತಹ ಬ್ರಹ್ಮಜ್ಞಾನಿ ಯಾವುದನ್ನು ಹೊಂದುವನು?

ಉ : ಉತ್ಕೃಷ್ಟವಾದ ದೈವ ಭಕ್ತಿಯನ್ನು ಹೊಂದುವನು.

**ಅ||** ಭಕ್ತಿಯಿಂದ ಜ್ಞಾನ ಉಂಟಾಗುವುದೆಂದು, ಜ್ಞಾನದಿಂದ ಮೋಕ್ಷ ಲಭಿಸುವುದೆಂದು ತಿಳಿಸಲಾಗುತ್ತಿದೆ-

**೫೫ ಭಕ್ತ್ಯಾ ಮಾಮಭಿಜಾನಾತಿ ಯಾವನ್ಯಶ್ಚಾಸ್ಮಿ ತತ್ತ್ವತಃ**
**ತತೋ ಮಾಂ ತತ್ತ್ವತೋ ಜ್ಞಾತ್ವಾ ವಿಶ್ವತೇ ತದನಂತರಂ**

**ಅರ್ಥ:** ಭಕ್ತ್ಯಾ=ಭಕ್ತಿಯಿಂದ; ಮಾಂ=ನನ್ನನ್ನು; ತತ್ತ್ವತಃ=ಯಥಾರ್ಥವಾಗಿ; ಯಾವಾನ್=ಯಾವನೋ; ಯಃಚ ಅಸ್ಮಿ=ಎಂತಹವನೋ; ಅಭಿಜಾನಾತಿ= ತಿಳಿದುಕೊಳ್ಳುತ್ತಿದ್ದಾನೆ; ತತಃ=ಅದರ ಮೂಲಕ; ಮಾಂ=ನನ್ನನ್ನು; ತತ್ತ್ವತಃ=ವಾಸ್ತವವಾಗಿ; ಜ್ಞಾತ್ವಾ=ತಿಳಿದುಕೊಂಡು; ತದನಂತರಂ=ನಂತರ; ವಿಶತೇ=(ನನ್ನಲ್ಲಿ) ಪ್ರವೇಶಿಸುತ್ತಿದ್ದಾನೆ.

**ತಾ||** ಭಕ್ತಿಯಿಂದ ಮನುಜನು 'ನಾನು ಏನೋ, ಎಂತಹವನೋ' ಯಥಾರ್ಥವಾಗಿ ತಿಳಿದುಕೊಳ್ಳುತ್ತಿದ್ದಾನೆ. ಈ ಪ್ರಕಾರವಾಗಿ ನನ್ನನ್ನು ಕುರಿತು ವಾಸ್ತವವಾಗಿ ತಿಳಿದು ಅನಂತರ ನನ್ನಲ್ಲಿ ಪ್ರವೇಶಿಸುತ್ತಿದ್ದಾನೆ.

**ವ್ಯಾಖ್ಯೆ:** ಹಿಂದಿನ ಶ್ಲೋಕದಲ್ಲಿ ಜ್ಞಾನದಿಂದ ಭಕ್ತಿಯುಂಟಾಗುವುದೆಂದು ಹೇಳಲಾಯಿತು. ಈ ಶ್ಲೋಕದಲ್ಲಿ ಭಕ್ತಿಯಿಂದ ಜ್ಞಾನ ಉದಯಿಸುತ್ತದೆಂದು ಹೇಳಲಾಗುತ್ತಿದೆ. ಇದರಿಂದ ಭಕ್ತಿ ಹಾಗು ಜ್ಞಾನಗಳು ಒಂದನ್ನೊಂದು ಪರಿಪೋಷಿಸಿಕೊಳ್ಳುತ್ತಿವೆ ಎಂದು ಸ್ಪಷ್ಟವಾಗುತ್ತದೆ. ಭಕ್ತಿ ಸರ್ವರಿಗೂ ಸುಲಭ ಸಾಧ್ಯವಾಗಿರುವುದರಿಂದ ಭಕ್ತಿಯಿಂದ ಜ್ಞಾನ ಉದಯಿಸುತ್ತವಾದ್ದರಿಂದ ಗೀತೆಯಲ್ಲಿ ಹೆಚ್ಚು ಕಡಿಮೆ ಪ್ರತಿ ಅಧ್ಯಾಯದಲ್ಲಿಯೂ ಭಕ್ತಿಯನ್ನು ಕುರಿತ ಪ್ರಸ್ತಾವನೆಯನ್ನು ಮಾಡಲಾಗಿದೆ. ಭಕ್ತಿಯೆನ್ನುವ ಪುಷ್ಪವೇ ಜ್ಞಾನವೆನ್ನುವ ಫಲವಾಗಿ ರೂಪುಗೊಳ್ಳುತ್ತದೆ.

'ಮಾಮಭಿಜಾನಾತಿ'- 'ಜಾನಾತಿ' ಎಂದು ಹೇಳದೆ 'ಅಭಿಜಾನಾತಿ' ಎಂದು ಹೇಳಲ್ಪಟ್ಟಿರುವುದರಿಂದ ಭಕ್ತಿಯಿಂದ ಮನುಜನು ಭಗವಂತನನ್ನು ಚೆನ್ನಾಗಿ ತಿಳಿದುಕೊಳ್ಳುತ್ತಾನೆಂದು ಭಾವ.

'ತತ್ತ್ವತಃ'- ಭಗವಂತನನ್ನು ಅನೇಕರು ಅನೇಕ ವಿಧಗಳಿಂದ ತಿಳಿಯುತ್ತಿದ್ದಾರಾಗಲಿ ಯಥಾರ್ಥವಾಗಿ ತಿಳಿಯುವವರು ಬಹಳ ವಿರಳ. ಭಕ್ತಿಯಿಂದಲೇ ಆತನನ್ನು ವಾಸ್ತವವಾಗಿ ತಿಳಿದುಕೊಳ್ಳಬಲ್ಲರು.

'ವಿಶತೇ ತದನಂತರಂ'- ಭಗವತ್ಸ್ವರೂಪವನ್ನು (ಇಲ್ಲವೆ ಆತ್ಮ ಸ್ವರೂಪವನ್ನು) ಭಕ್ತಿಯ ದ್ವಾರ ಯಥಾರ್ಥವಾಗಿ ತಿಳಿದುಕೊಂಡು ನಂತರ ಮನುಜನು ಆ ಸ್ವರೂಪದಲ್ಲಿ ಪ್ರವೇಶಿಸುತ್ತಿದ್ದಾನೆ. ಅಂದರೆ ಲಯ ಗೊಳ್ಳುತ್ತಿದ್ದಾನೆ. ಆನಂತರ ಉಪ್ಪು ಬೊಂಬೆ ಸಮುದ್ರದಲ್ಲಿ ಲಯಗೊಂಡಂತೆ ಆತನು ಬ್ರಹ್ಮದಲ್ಲಿ ಲಯಗೊಂಡು ಬ್ರಹ್ಮವೇ ಆಗುವನು.

[(ಜ್ಞಾತುಂ ದ್ರಷ್ಟುಣಂ ಚ ತತ್ತ್ವೇನ ಪ್ರವೇಷ್ಟುಂ ಚ ಪರಂತಪ] (೧೧-೫೪) ಇದರಿಂದ ಭಗವಂತನು ಎಂತಹವನೋ ಚೆನ್ನಾಗಿ ತಿಳಿದು ಕೊಂಡನಂತರ ಆತನಲ್ಲಿ ಐಕ್ಯವಾಗಬಹುದಾಗಲಿ ಅದಕ್ಕಿಂತ ಮೊದಲೇ ಅಲ್ಲ ಎಂದು 'ಅನಂತರಂ' ಎನ್ನುವ ಪದದಿಂದ ಭಗವಂತನು ಸ್ಪಷ್ಟಪಡಿಸಿರುವನು. ಅಂತಹ ಯಥಾರ್ಥ ಭಗವದ್‌ಜ್ಞಾನವು ಭಕ್ತಿಯಿಂದಲೇ ಸಿದ್ಧಿಸುವುದು. ಇದರಿಂದ ಎರಡು ಪ್ರಧಾನ ಅಂಶಗಳು ತಿಳಿಯುತ್ತವೆ-

೧) ಜ್ಞಾನದಿಂದಲೇ ಮುಕ್ತಿ ಲಭಿಸುವುದು

೨) ಆ ಜ್ಞಾನ ಭಕ್ತಿಯಿಂದಲೇ ಲಭಿಸುವುದು. ಆದ್ದರಿಂದ ಮೋಕ್ಷಕ್ಕಾಗಿ ಭಗವದ್ಭಕ್ತಿ ಅತ್ಯಾವಶ್ಯಕವೆಂದು ನಿರ್ಧಾರವಾಗುತ್ತದೆ.

ಪ್ರ : ಭಗವಂತನು ಎಂತಹವನೆಂದು ಮನುಜನು ಹೇಗೆ ತಿಳಿದುಕೊಳ್ಳಬಲ್ಲನು?

ಉ : ಭಕ್ತಿಯಿಂದ.

ಪ್ರ : ಹಾಗೆ ತಿಳಿದುಕೊಂಡನಂತರ ಆತನು ಏನು ಮಾಡುವನು?

ಉ : ಭಗವಂತನಲ್ಲಿ ಪ್ರವೇಶಿಸುವನು (ಬ್ರಹ್ಮೈಕ್ಯವನ್ನು ಹೊಂದುವನು)

ಪ್ರ : ಇದರಿಂದ ಬ್ರಹ್ಮೈಕ್ಯ ಯಾವುದರಿಂದ ಸಿದ್ಧಿಸುವುದೆಂದು ತಿಳಿಯುತ್ತದೆ?

ಉ : ಭಗವತ್ತತ್ತ್ವ ಪರಿಜ್ಞಾನದಿಂದ, ಅಂತಹ ತತ್ತ್ವ ಜ್ಞಾನ ಭಕ್ತಿಯಿಂದ ಉಂಟಾಗುತ್ತದೆ. ಆದ್ದರಿಂದ ಭಕ್ತಿಯಿಂದ ಜ್ಞಾನ, ಜ್ಞಾನದಿಂದ ಮೋಕ್ಷ ಜೀವಿಗೆ ಸಿದ್ಧಿಸುತ್ತವೆ.

**ಅ||** ಭಗವಂತನನ್ನು ಆಶ್ರಯಿಸಿದವನಿಗೆ ಭಗವದನುಗ್ರಹದಿಂದ ಶಾಶ್ವತ ಮೋಕ್ಷ ಪದವಿ ಲಭಿಸುವುದೆಂದು ತಿಳಿಸಲಾಗುತ್ತಿದೆ-

**೫೬ ಸರ್ವಕರ್ಮಾಣ್ಯಪಿ ಸದಾ ಕುರ್ವಾಣೋ ಮದ್ವ್ಯಪಾಶ್ರಯಃ**
**ಮತ್ಪ್ರಸಾದಾದವಾಪ್ನೋತಿ ಶಾಶ್ವತಂ ಪದಮವ್ಯಯಂ**

**ಅರ್ಥ:** ಸರ್ವ ಕರ್ಮಾಣಿ=ಸಮಸ್ತ ಕರ್ಮಗಳನ್ನು; ಸದಾ=ಯಾವಾಗಲೂ; ಕುರ್ವಾಣಃ ಅಪಿ=ಮಾಡುತ್ತಿರುವವನಾದರೂ; ಮದ್ವ್ಯಪಾಶ್ರಯಃ=ನನ್ನನ್ನೇ ಆಶ್ರಯಿಸುವವನು; ಮತ್ಪ್ರಸಾದಾತ್=ನನ್ನ ಅನುಗ್ರಹದಿಂದ; ಅವ್ಯಯಂ= ನಾಶರಹಿತವಾದ ; ಶಾಶ್ವತಂ ಪದಂ=ಶಾಶ್ವತ ಮೋಕ್ಷ ಪದವನ್ನು; ಆಪ್ನೋತಿ=ಹೊಂದುತ್ತಿದ್ದಾನೆ.

**ತಾ||** ಸಮಸ್ತ ಕರ್ಮಗಳನ್ನು ಸದಾ ಮಾಡುತ್ತಿದ್ದರೂ ಕೇವಲ ನನ್ನನ್ನೇ ಆಶ್ರಯಿಸಿರುವವನು ನನ್ನ ಅನುಗ್ರಹದಿಂದ ನಾಶರಹಿತವಾದ ಶಾಶ್ವತ ಮೋಕ್ಷ ಪದವಿಯನ್ನು ಹೊಂದುತ್ತಿದ್ದಾನೆ.

**ವ್ಯಾಖ್ಯೆ:** ಭಕ್ತಿಯಿಂದ ಕರ್ಮವನ್ನು ಆಚರಿಸುವುದರಿಂದ ಭಗವದನುಗ್ರಹ ಲಭ್ಯವಾಗಿ ಜೀವಿಗೆ ಮೋಕ್ಷಪದ ಕೈಗೂಡುವುದೆಂದು ಇಲ್ಲಿ ಹೇಳಲಾಗಿದೆ. 'ಸರ್ವಕರ್ಮಾಣ್ಯಪಿ' ಎಂದು ಹೇಳಿರುವುದರ ಅರ್ಥ, ವಿಧ್ಯುಕ್ತವಾದ ಸಮಸ್ತ ಕರ್ಮಗಳೆಂದೇ ಆಗಲಿ ದೋಷಯುಕ್ತವಾದ ಕರ್ಮಗಳು ಎಂದಲ್ಲ. ಏಕೆಂದರೆ ಅವು ಮೊದಲೇ ನಿಷಿದ್ಧವಾದವುಗಳು. ಸರ್ವೇಂದ್ರಿಯಗಳಿಂದ ಯಾವ ಕರ್ಮಗಳನ್ನು ಮಾಡುತ್ತಿದ್ದರೂ ಭಗವಂತನನ್ನು ಸದಾ ಸ್ಮರಿಸುತ್ತಲೇ ಇರುವವನು, ಇಲ್ಲವೆ ಆಯಾ ಕರ್ಮಫಲಗಳನ್ನು ಭಗವದರ್ಪಣೆ ಮಾಡುತ್ತಿರುವವನು, ಭಗವದನುಗ್ರಹಕ್ಕೆ ಪಾತ್ರನಾಗಬಲ್ಲನು. ಅದರಿಂದ ಮೋಕ್ಷವು ಆತನಿಗೆ ಸುಲಭವಾಗಿ ಲಭಿಸುವುದು. ಇದರಿಂದ, ಭಕ್ತಿಯಿಂದ ಕರ್ಮ ಮಾಡಿದಲ್ಲಿ, ಆ ಕರ್ಮವೇ ಮನುಜನನ್ನು ಮೋಕ್ಷ ಪದವಿಗೆ ಕೊಂಡೊಯ್ಯಬಲ್ಲದೆಂದು ಸ್ಪಷ್ಟವಾಗುತ್ತದೆ. ಭಗವಂತನನ್ನು ಆಶ್ರಯಿಸಿದವನು ಎಷ್ಟು ಕಾರ್ಯಗಳನ್ನು ಮಾಡಿದರೂ ಅವುಗಳಿಂದ ಬಂಧಿತನಾಗುವುದಿಲ್ಲ. ಅದು ಯಾವಾಗಲೋ ಒಮ್ಮೆಯಲ್ಲ. ನಿರಂತರ ಮಾಡಿದರೂ ಬದ್ಧನಾಗುವುದಿಲ್ಲ. ಮೇಲೆ ತಿಳಿಸಿದ ಭಗವದನುಗ್ರಹ ಪಡೆದು ಅದರಿಂದ ಅವ್ಯಯವಾದ ಮೋಕ್ಷ ಪದವಿಯನ್ನು ಪಡೆಯಬೇಕು. ಶಿರಸ್ಸಿನ ಮೇಲೆ ನೀರು ತುಂಬಿದ ಮಡಕೆಯನ್ನಿಟ್ಟುಕೊಂಡು ನೃತ್ಯ ಮಾಡುವ ಸ್ತ್ರೀಯು, ಬಾಯಿನಿಂದ ಹಾಡುತ್ತಿದ್ದರೂ, ಕೈಕಾಲುಗಳಿಂದ ನಾಟ್ಯ ಮಾಡುತ್ತಿದ್ದರೂ, ಆಕೆಯ ಮನಸ್ಸು ಯಾವಾಗಲೂ ಶಿರಸ್ಸಿನ ಮೇಲಿರುವ ಮಡಕೆಯ ಮೇಲಿರುವಂತೆ ಸಮಸ್ತ ಕಾರ್ಯಗಳನ್ನು ಸದಾ ಮಾಡುತ್ತಿದ್ದರೂ, ಯಾವನ ಮನಸ್ಸು ಭಗವಂತನ ಮೇಲೆಯೇ ಲಗ್ನವಾಗಿರುವುದೋ ಆತನು ಭಗವದನುಗ್ರಹಕ್ಕೆ ಪಾತ್ರನಾಗಿ ಮುಕ್ತಿಯನ್ನು ಹೊಂದಬಲ್ಲನೆಂದು ಇಲ್ಲಿ ತಿಳಿಸಲಾಗಿದೆ.

ಇದರಿಂದ, ದೈವ ಸ್ಮೃತಿಯಿಂದ ಮಾಡಲ್ಪಟ್ಟ, ಇಲ್ಲವೆ ಈಶ್ವರಾರ್ಪಣ ಬುದ್ಧಿಯಿಂದ ಮಾಡಲ್ಪಟ್ಟ ಕರ್ಮವು ಮಾತ್ರ ಮೋಕ್ಷಕ್ಕೆ ಕಾರಣವಾಗುವುದಾಗಲೀ ಬೇರೆಯವುಗಳಲ್ಲವೆಂದು ಸ್ಪಷ್ಟವಾಗುತ್ತದೆ. ಭಗವಂತನನ್ನು ಆಶ್ರಯಿಸದೆ ಫಲವನ್ನು ಈಶ್ವರಾರ್ಪಣ ಮಾಡದೆ ಮಾಡುವ ಕಾಮ್ಯಕರ್ಮಗಳಿಂದ ಜೀವಿಯು ಬದ್ಧನಾಗಿ ಮೋಕ್ಷವನ್ನು ಹೊಂದದೆ ಉಳಿಯುವನು. ಆದ್ದರಿಂದ ಕರ್ಮ ಮಾರ್ಗವನ್ನು ಅವಲಂಬಿಸುವ ಸಾಧಕರು ಈ ವಿಷಯವನ್ನು ಚೆನ್ನಾಗಿ ತಿಳಿದಿರಬೇಕು.

'ಮತ್ಪ್ರಸಾದಾತ್'- ಭಗವಂತನ ಅನುಗ್ರಹವಿಲ್ಲದಿದ್ದರೆ ಈ ಮಾಯಾ ಬಂಧನದಿಂದ ಯಾರೂ ತಪ್ಪಿಸಿಕೊಳ್ಳಲು ಸಾಧ್ಯವಿಲ್ಲ. ಮಾಯಾಧೀನರಾದ ಜನರು ಮಾಯಾಧೀಶನಾದ ಆ ಈಶ್ವರನ ಅನುಗ್ರಹವನ್ನು ಹೊಂದದೆ ಮಾಯೆಯನ್ನು ದಾಟಲು ಸಾಧ್ಯವಿಲ್ಲ **(ಮಾಮೇವ ಯೇ ಪ್ರಪದ್ಯಂತೇ ಮಾಯಾಮೇತಾಂ ತರಂತಿ ತೇ)**. ಆದ್ದರಿಂದ ಆತನ ಅನುಗ್ರಹವನ್ನು ಮೊದಲು ಸಂಪಾದಿಸಬೇಕು. ಅದು ಹೇಗೆ ಲಭಿಸುವುದು? ಭಗವದಾಶ್ರಯದಿಂದ. ಸಮಸ್ತ ಕರ್ಮಗಳನ್ನು ಈಶ್ವರಾರ್ಪಣ ಮಾಡುವುದರಿಂದ. ಅಂತಹವರನ್ನು

ಆತ ಕರುಣಿಸಿ ಅನುಗ್ರಹಿಸುವನೇ ಆಗಲಿ ಬೇರೆಯವರನ್ನಲ್ಲ. ಇಲ್ಲಿ ಭಗವಂತನ ಪಕ್ಷಪಾತವೇನೂ ಇಲ್ಲ. ಯಾರು ಆತನನ್ನು ಆಶ್ರಯಿಸುವರೋ ಅವರನ್ನು ಆತನು ಅನುಗ್ರಹಿಸುವನು. ಅಂತಹ ಭಗವದನುಗ್ರಹದಿಂದ ಅವರಿಗೆ ಮುಕ್ತಿ ಲಭಿಸುವುದು. ಆದ್ದರಿಂದ ಮೊದಲು ಸರ್ವರೂ ಭಗವದಾಶ್ರಯ ಪೂರ್ವಕವಾಗಿ, ಭಗವತ್ಪ್ರೀತ್ಯರ್ಥವಾಗಿ ಕರ್ಮಗಳನ್ನು ಮಾಡಬೇಕು.

ಅದರಿಂದ ಲಭಿಸುವ ಮೋಕ್ಷ ಪದವಿ ಎಂತಹದು? ಶಾಶ್ವತವಾದುದು. ನಾಶರಹಿತವಾದದು. ದೃಶ್ಯ ಪದಾರ್ಥವು ಯಾವುದೂ ಶಾಶ್ವತವಲ್ಲ. ಅದು ಎಷ್ಟು ದೊಡ್ಡದಾದರೂ ಸರಿಯೇ ಅದು ದೇಶ ಕಾಲಗಳಿಗೆ ಅಧೀನವಾಗಿಯೇ ಇರುವುದು. ಆದ್ದರಿಂದ ಮಹೋನ್ನತವಾದ, ನಿತ್ಯವಾದ ಸರ್ವೋತ್ಕೃಷ್ಟ ದೈವ ಪದವಿಗಾಗಿ ಸರ್ವರೂ ನಿಷ್ಕಾಮ ಭಕ್ತಿಗಳ ದ್ವಾರ ಯತ್ನಿಸಬೇಕು.

ಪ್ರ ; ಮೋಕ್ಷ ಎಂತಹದು?

ಉ : ಶಾಶ್ವತವಾದದ್ದು, ನಾಶರಹಿತವಾದದ್ದು

ಪ್ರ : ಅದು ಹೇಗೆ ಲಭಿಸುವುದು?

ಉ : ಭಗವದನುಗ್ರಹದಿಂದ (ಮತ್ಪ್ರಸಾದಾತ್)

ಪ್ರ : ಭಗವದನುಗ್ರಹ ಹೇಗೆ ಲಭಿಸುವುದು?

ಉ : ಸಮಸ್ತ ಕಾರ್ಯಗಳನ್ನು ಆಚರಿಸುತ್ತಿದ್ದರೂ ಭಗವಂತನನ್ನು ಆಶ್ರಯಿಸಿ, ಭಗವತ್ಶರಣೆ ಹೊಂದಿರುವುದರಿಂದ, ಇಲ್ಲವೆ ಭಗವತ್ಪ್ರೀತ್ಯರ್ಥವಾಗಿ ಆಯಾ ಕರ್ಮಗಳನ್ನು ಮಾಡುತ್ತಿರುವುದರಿಂದ ಲಭಿಸುವುದು.

ಪ್ರ : ಮೋಕ್ಷವನ್ನು ಹೊಂದಲು ಕರ್ಮಗಳನ್ನು ಬಿಡಬೇಕೇ?

ಉ : ಇಲ್ಲ. ಎಲ್ಲಾ ಕಾರ್ಯಗಳನ್ನು ನಿರಂತರ ಮಾಡುತ್ತಿದ್ದರೂ, ಭಗವಂತನಲ್ಲಿ ಮನಸ್ಸು ಲಗ್ನವಾಗಿದ್ದರೆ ಆತನ ಅನುಗ್ರಹದಿಂದ ಜೀವಿಗೆ ಶಾಶ್ವತವಾದ ಮೋಕ್ಷವು ಉಂಟಾಗಬಲ್ಲದು. ಆದ್ದರಿಂದ ಭಗವದ್ಭಕ್ತಿ, ನಿಷ್ಕಾಮ ಕರ್ಮಾಚರಣೆ ಅವಶ್ಯಕಗಳಾಗಿವೆ.

ಪ್ರ : ಕರ್ಮಗಳನ್ನು ಹೇಗೆ ಆಚರಿಸಬೇಕು?

ಉ : ಭಗವಂತನನ್ನು ಆಶ್ರಯಿಸಿ ಕರ್ಮಗಳನ್ನು ಭಗವತ್ಪ್ರೀತ್ಯರ್ಥವಾಗಿ, ನಿಷ್ಕಾಮವಾಗಿ, ಈಶ್ವರಾರ್ಪಣವಾಗಿ ಮಾಡಬೇಕು.

ಪ್ರ : ಅಂತಹ ಭಕ್ತಿ ಪೂರ್ವಕ ನಿಷ್ಕಾಮಕರ್ಮದಿಂದ ಏನು ಲಭಿಸುವುದು?

ಉ : ಭಗವದನುಗ್ರಹ, ಅದರಿಂದ ಮೋಕ್ಷವು ಲಭಿಸುವುದು.

**ಅ॥** ಸಮಸ್ತ ಕರ್ಮಗಳನ್ನು ಭಗವದರ್ಪಣೆ ಮಾಡಿ ಚಿತ್ತವನ್ನು ಸದಾ ಪರಮಾತ್ಮನಲ್ಲೇ ನಿಲ್ಲಿಸಬೇಕೆಂದು ಹೇಳಲಾಗುತ್ತಿದೆ-

**೫೭ ಚೇತಸಾ ಸರ್ವಕರ್ಮಾಣಿ ಮಯಿ ಸಂನ್ಯಸ್ಯ ಮತ್ಪರಃ**
**ಬುದ್ಧಿಯೋಗಮುಪಾಶ್ರಿತ್ಯ ಮಚ್ಚಿತ್ತಸ್ಸತತಂ ಭವ**

**ಅರ್ಥ:** ಸರ್ವಕರ್ಮಾಣಿ=ಸಮಸ್ತಕರ್ಮಗಳನ್ನು (ಕರ್ಮ ಫಲಗಳನ್ನು); ಚೇತಸಾ=ವಿವೇಕದಿಂದ ಕೂಡಿದ ಬುದ್ಧಿಯಿಂದ; ಮಯಿ=ನನ್ನಲ್ಲಿ; ಸಂನ್ಯಸ್ಯ =ಸಮರ್ಪಿಸಿ, ಮತ್ಪರಃ=ನನ್ನನ್ನೇ ಪರಮ ಪ್ರಾಪ್ಯವನ್ನಾಗಿ ತಿಳಿದುಕೊಂಡು; ಬುದ್ಧಿಯೋಗಂ= ಚಿತ್ತೈಕಾಗ್ರತೆಯಿಂದ ಕೂಡಿದ ತತ್ತ್ವವಿಚಾರಣೆಯನ್ನು (ಇಲ್ಲವೆ ಧ್ಯಾನ ಯೋಗ ವನ್ನು); ಉಪಾಶ್ರಿತ್ಯ=ಅವಲಂಬಿಸಿ; ಸತತಂ=ಯಾವಾಗಲೂ; ಮಚ್ಚಿತ್ತಃ=ನನ್ನಲ್ಲಿಯೇ ಚಿತ್ತವುಳ್ಳವನು; ಭವ=ಆಗು.

**ತಾ॥** ಸಮಸ್ತ ಕರ್ಮಗಳನ್ನು ವಿವೇಕಯುಕ್ತವಾದ ಬುದ್ಧಿಯಿಂದ ನನ್ನಲ್ಲಿ ಸಮರ್ಪಿಸಿ, ನನ್ನನ್ನೇ ಪರಮಪ್ರಾಪ್ಯವೆಂದು ತಿಳಿದುಕೊಂಡು ಚಿತ್ತೈಕಾಗ್ರತೆಯಿಂದ ಕೂಡಿದ ತತ್ತ್ವವಿಚಾರಣೆಯನ್ನು (ಇಲ್ಲವೆ ಧ್ಯಾನಯೋಗವನ್ನು) ಅವಲಂಬಿಸಿ ಯಾವಾಗಲೂ ನನ್ನಲ್ಲೇ ಚಿತ್ತವನ್ನು ನಿಲ್ಲಿಸು.

**ವ್ಯಾಖ್ಯೆ:** 'ಚೇತಸಾ' - ಶರೀರದಿಂದ ಸಮಸ್ತ ಕರ್ಮಗಳನ್ನು ಮಾಡುತ್ತಿದ್ದರೂ ಮನಸ್ಸಿನಿಂದ ಆ ಕರ್ಮಗಳನ್ನು ಭಗವಂತನಿಗೆ ಅರ್ಪಿಸಿ ಅವನಲ್ಲಿಯೇ ಮನಸ್ಸನ್ನು ಸಂಲಗ್ನಿಸಬೇಕು. 'ಚೇತಸಾ' ಎಂದು ಹೇಳಿರುವುದರಿಂದ ಕರ್ಮಫಲಸಂನ್ಯಾಸ ಇಲ್ಲಿ ಬೋಧಿಸಲ್ಪಟ್ಟಿದೆಯಾಗಲಿ ಕರ್ಮ ಸಂನ್ಯಾಸವನ್ನಲ್ಲ. ಶರೀರ ನಿಶ್ಚಲವಾಗಿದ್ದು ಯಾವ ಕರ್ಮ ಮಾಡದೇ ಇದ್ದರೂ ಮನಸ್ಸನ್ನು ಪ್ರಪಂಚದಲ್ಲಿ ತಿರುಗಿಸುತ್ತಿದ್ದರೆ ಅದರಿಂದ ಎಳ್ಳಷ್ಟೂ ಉಪಯೋಗವಿಲ್ಲ. ಹಾಗಲ್ಲದೆ ಶರೀರದಿಂದ ಅನೇಕ ಕರ್ಮಗಳನ್ನು ಮಾಡುತ್ತಿದ್ದರೂ ಮನಸ್ಸಿನಲ್ಲಿ ಆ ಕರ್ಮಗಳನ್ನು, ಕರ್ಮಫಲಗಳನ್ನು ಈಶ್ವರಾರ್ಪಣ ಮಾಡಿದಲ್ಲಿ ಅದು ಮೋಕ್ಷಕ್ಕೆ ಹೇತುವಾಗುವುದು. ಆದ್ದರಿಂದಲೇ ಇಲ್ಲಿ 'ಚೇತಸಾ' (ಚಿತ್ತದಿಂದ) ಎಂದು ಹೇಳಲಾಗಿದೆ.

'ಬುದ್ಧಿಯೋಗಂ'- ಪ್ರೀತಿಯಿಂದ ಭಕ್ತಿ ಪೂರ್ವಕವಾಗಿ ತನ್ನನ್ನು ಭಜಿಸುವವರಿಗೆ 'ಬುದ್ಧಿಯೋಗ'ವನ್ನು ಪ್ರಸಾದಿಸುವೆನೆಂದು ಹತ್ತನೆಯ ಅಧ್ಯಾಯದಲ್ಲಿ ಭಗವಂತನು ತಿಳಿಸಿರುವನು **(ದದಾಮಿ ಬುದ್ಧಿಯೋಗಂ ತಂ)**. ಅಂದರೆ ಚಿತ್ತೈಕಾಗ್ರತೆ, ತತ್ತ್ವವಿಚಾರಣಾಶಕ್ತಿ ಆತನಿಗೆ ಭಗವತ್ಕೃಪೆಯಿಂದ ಒದಗುವುದು. ಅಂತಹದನ್ನು ಚೆನ್ನಾಗಿ ಆಶ್ರಯಿಸಿ ನಿರಂತರವಾಗಿ ಚಿತ್ತವನ್ನು ಆ ಪರಮಾತ್ಮನಲ್ಲಿಯೇ ನೆಲೆಗೊಳಿಸಿರಬೇಕೆಂದು ಇಲ್ಲಿ ಹೇಳಲಾಗಿದೆ. 'ಸತತಂ'- ಎಂದು ಹೇಳುವುದರಿಂದ ಯಾವುದೋ ಒಂದು ನಿರ್ದಿಷ್ಟ ಕಾಲದಲ್ಲಲ್ಲದೆ, ನಿರಂತರವೂ ಚಿತ್ತವನ್ನು ಆತ್ಮದಲ್ಲಿಯೇ (ದೈವದಲ್ಲಿಯೇ) ಇರುವ ಹಾಗೆ ಪ್ರಯತ್ನಿಸಬೇಕು. ಏಕೆಂದರೆ ಮಾಯೆ ಜೀವಿಯನ್ನು ಮೋಸಗೊಳಿಸಲು ಕಾದುಕೊಂಡು ಕೂತಿದೆ. ಆತನು ಸ್ವಲ್ಪ ಅಜಾಗರೂಕನಾಗಿದ್ದರೂ, ಅದು ಆತನನ್ನು ಆವರಿಸಿ ತಮಸ್ಸಿನಲ್ಲಿ (ಅಜ್ಞಾನದಲ್ಲಿ) ಬೀಳಿಸಲು ಆತುರವಾಗಿದೆ. ಆದ್ದರಿಂದ ಸಾಧಕರು 'ಸತತಂ' ಎನ್ನುವ ಪದವನ್ನು ಸದಾ ಜ್ಞಾಪಕದಲ್ಲಿಟ್ಟುಕೊಂಡು ದೈವ ವಿಸ್ಮೃತಿ ಆಗದ ಹಾಗೆ ನೋಡಿಕೊಳ್ಳಬೇಕು.

'ಮತ್ಪರಃ'- ಸಮಸ್ತ ಪ್ರಪಂಚ ದೃಶ್ಯ ಪದಾರ್ಥಗಳು ನಶ್ವರವಾದವು. ಆದುದರಿಂದ ಮುಮುಕ್ಷುವಾದವನು ಶಾಶ್ವತವಾದ ಪರಮಾತ್ಮನನ್ನೇ ಪರಮಗಮ್ಯವಾಗಿ, ಪರಮಪ್ರಾಪ್ಯವಾಗಿ ಆಯ್ದುಕೊಳ್ಳಬೇಕು.

ಪ್ರ : ಪರಮಾತ್ಮನನ್ನು ಹೊಂದಲು ಜೀವಿಯು ಏನು ಮಾಡಬೇಕು?

ಉ : ೧) ಚಿತ್ತದಿಂದ ಸಮಸ್ತ ಕರ್ಮಗಳನ್ನು ಭಗವದರ್ಪಣ ಮಾಡಬೇಕು.

೨) ಅವನನ್ನೇ ಪರಮಪ್ರಾಪ್ಯವಾಗಿ ತೆಗೆದುಕೊಳ್ಳಬೇಕು.

೩) ಬುದ್ಧಿಯೋಗವನ್ನು ಅವಲಂಬಿಸಬೇಕು. (ಚಿತ್ತೈಕಾಗ್ರತಾಪೂರ್ವಕ ವಿಚಾರಣೆ)

೪) ಭಗವಂತನಲ್ಲಿಯೇ ಚಿತ್ತವನ್ನು ನಿರಂತರ ಸಂಲಗ್ನಿಸಬೇಕು.

ಪ್ರ : ಭಗವಂತನು ಬೋಧಿಸಿರುವುದು ಕರ್ಮ ಸಂನ್ಯಾಸವನ್ನೋ ಅಥವ ಕರ್ಮಫಲ ಸಂನ್ಯಾಸವನ್ನೋ

ಉ : 'ಚೇತಸಾ'- (ಚಿತ್ತದಿಂದ ಸಮಸ್ತ ಕರ್ಮಗಳನ್ನು ಭಗವದರ್ಪಣ ಮಾಡಿ)

ಎಂದು ಹೇಳುವುದರಿಂದ ಶರೀರದಿಂದ ಕರ್ಮಗಳನ್ನು ಮಾಡುತ್ತಿದ್ದರೂ ಮನಸ್ಸಿನಿಂದ ಅವುಗಳ ಫಲಗಳನ್ನು ಈಶ್ವರಾರ್ಪಣ ಮಾಡಬೇಕೆಂದು ಬೋಧಿಸಲಾಗಿದೆ. ಆದ್ದರಿಂದ ಕರ್ಮಫಲ ಸಂನ್ಯಾಸವೇ ಇಲ್ಲಿ ಸಾಧುವಾಗಲಿ ಕರ್ಮ ಸಂನ್ಯಾಸವಲ್ಲ.

ಪ್ರ : ಮನುಜನು ಏನನ್ನು ಪರಮಪ್ರಾಪ್ಯವಾಗಿ ತೆಗೆದುಕೊಳ್ಳಬೇಕು?

ಉ : ಪರಮಾತ್ಮನನ್ನು; ಅವನು ಶಾಶ್ವತನಾದುದರಿಂದ.

ಪ್ರ : ಚಿತ್ತ ಯಾವುದರಲ್ಲಿ ನಿರಂತರ ಸಂಲಗ್ನವಾಗಿರಬೇಕು?

ಉ : ಪರಮಾತ್ಮನಲ್ಲಿಯೇ.

**ಅ॥** ಈ ಪ್ರಕಾರವಾಗಿ ಭಗವಂತನಲ್ಲಿ ಚಿತ್ತವನ್ನು ಸ್ಥಿರಗೊಳಿಸುವವರಿಗೆ ಭಗವದನುಗ್ರಹದಿಂದ ಸಮಸ್ತ ದುಃಖಗಳು ಮಾಯವಾಗುವುವು ಎಂದು ಹೇಳಲಾಗುತ್ತಿದೆ-

**೫೮ ಮಚ್ಚಿತ್ತಸ್ಸರ್ವದುರ್ಗಾಣಿ ಮತ್ಪ್ರಸಾದಾತ್ತರಿಷ್ಯಸಿ**
**ಅಥ ಚೇತ್ತ್ವಮಹಂಕಾರಾನ್ನ ಶ್ರೋಷ್ಯಸಿ ವಿನಂಕ್ಷ್ಯಸಿ**

**ಅರ್ಥ:** ಮಚ್ಚಿತಃ=ನನ್ನಲ್ಲಿ ಚಿತ್ತವನ್ನು ಇಟ್ಟವನಾಗಿ; ಮತ್ಪ್ರಸಾದಾತ್=ನನ್ನ ಅನುಗ್ರಹದಿಂದ; ಸರ್ವದುರ್ಗಾಣಿ=ಸಮಸ್ತ ಸಾಂಸಾರಿಕ ದುಃಖಗಳನ್ನು (ದಾಟಲು ಕಷ್ಟ ಸಾಧ್ಯವಾದ ಕಷ್ಟಗಳನ್ನು, ಪ್ರತಿಬಂಧಗಳನ್ನು); ತರಿಷ್ಯಸಿ= ದಾಟಬಲ್ಲೆ; ಅಥ=ಇನ್ನು (ಹಾಗಲ್ಲದೆ); ತ್ವಂ=ನೀನು; ಅಹಂಕಾರಾತ್= ಅಹಂಕಾರದಿಂದ; ನ ಶ್ರೋಷ್ಯಸಿ ಚೇತ್=(ನನ್ನ ಈ ವಾಕ್ಯಗಳನ್ನು) ಕೇಳದೆ ಇದ್ದರೆ; ವಿನಂಕ್ಷ್ಯಸಿ=ಕೆಟ್ಟು ಹೋಗುವೆ (ನಾಶವಾಗುತ್ತೀಯೆ).

**ತಾ॥** ನನ್ನಲ್ಲಿ ಚಿತ್ತವನ್ನು ಇಟ್ಟವನಾದರೆ, ನನ್ನ ಅನುಗ್ರಹದಿಂದ ಸಮಸ್ತ ಸಾಂಸಾರಿಕ ದುಃಖವನ್ನು ದಾಟಬಲ್ಲೆ. ಹಾಗಲ್ಲದೆ ಅಹಂಕಾರದಿಂದ ನನ್ನ ವಾಕ್ಯಗಳನ್ನು ಕೇಳದೆ ಇದ್ದರೆ ನಾಶವಾಗುತ್ತೀಯೆ.

**ವ್ಯಾಖ್ಯೆ:** ಲೋಕದಲ್ಲಿ ಪ್ರತಿಯೊಬ್ಬರೂ ತಮಗೆ ದುಃಖಗಳು ಯಾವುವೂ ಉಂಟಾಗಬಾರದೆಂದು, ಸುಖಗಳೇ ಬೇಕೆಂದು ಅಪೇಕ್ಷಿಸುವರು. ಆದರೆ ಅವುಗಳಿಗೆ ಯಾವ ಸಾಧನೆಯನ್ನು ಮಾಡಬೇಕೋ ಅದನ್ನು ಮಾಡುವುದಿಲ್ಲ. ಆ ಸಾಧನೆ ಯಾವುದೋ ಭಗವಂತನೇ ಇಲ್ಲಿ ಭಕ್ತರ ಮೇಲಿನ ಕರುಣೆಯಿಂದ ತಿಳಿಸಿರುವನು. ಸರ್ವೇಶ್ವರನಲ್ಲಿ ಯಾರು ತಮ್ಮ ಚಿತ್ತವನ್ನು ಲಗ್ನಗೊಳಿಸುವರೋ ಅಂದರೆ ಯಾರು ತಮ್ಮ ಚಿತ್ತವನ್ನು ದೃಶ್ಯದಲ್ಲಿಡದೆ, ವಿಷಯಗಳಲ್ಲಿ ಸಂಚರಿಸಲು ಬಿಡದೆ ಆತ್ಮದಲ್ಲಿಯೇ (ಭಗವಂತನಲ್ಲಿಯೇ) ಕೇಂದ್ರೀಕರಿಸುವರೋ, ಅಂತಹವರಿಗೆ ಭಗವದನುಗ್ರಹದಿಂದ ಸಮಸ್ತದುಃಖಗಳು ಆತಂಕಗಳು ಇಲ್ಲವಾಗುವುವು. 'ಸರ್ವ' ಎನ್ನುವ ಪದವನ್ನು ಪ್ರಯೋಗಿಸಿರುವುದರಿಂದ ಯಾವುದೋ ಕೆಲವು ಆಪತ್ತುಗಳು ದೂರವಾಗುವುದಲ್ಲವೆಂದು, ಭಗವದ್ಭಕ್ತರಿಗೆ ಸಮಸ್ತ ಆಪತ್ತುಗಳು, ದುಃಖಗಳು, ತೊಲಗಿ ಹೋಗುವವೆಂದು ಭಾವ. ಇಂತಹ ಸ್ಥಿತಿಯನ್ನೇ ಪ್ರತಿಯೊಬ್ಬರೂ ಅಪೇಕ್ಷಿಸುವರು. ಜೀವಿಗಳ ಮೇಲಿನ ಕರುಣೆ ಯಿಂದ ಭಗವಂತನು ಈ ಪ್ರಕಾರವಾಗಿ ತಿಳಿಸುತ್ತಿದ್ದಾನೆ- 'ಓ ಜೀವಿಗಳಿರಾ! ನಿಮ್ಮ ಚಿತ್ತವನ್ನು ನನ್ನಲ್ಲಿ (ಆತ್ಮ ಭಗವಂತನಲ್ಲಿ) ಲಗ್ನ ಮಾಡುವುದು. ಅದಕ್ಕೆ ಪ್ರತಿಫಲವಾಗಿ ನಾನು ನಿಮ್ಮ ಸಮಸ್ತ ಸಾಂಸಾರಿಕ ದುಃಖ, ಆತಂಕಗಳನ್ನು ಹೊರದೂಡುವೆನು!' ಆದ್ದರಿಂದ ಭಗವದ್ವಾಕ್ಯಗಳ ಮೇಲೆ ಪರಿಪೂರ್ಣ ವಿಶ್ವಾಸವಿಟ್ಟು ಮನುಜನು ಭಕ್ತಿಭಾವಸಮನ್ವಿತನೂ, ದೈವಸಂಲಗ್ನಚಿತ್ತನೂ ಆಗಿ ಬೆಳಗಬೇಕು.

'ದುರ್ಗಾಣಿ'- ದುರ್ಗವೆಂದರೆ ಕೋಟೆ, ಪ್ರತಿಬಂಧವೆಂದು ಅರ್ಥ. ಮಾಯೆ ಜೀವಿಯ ಸುತ್ತ ಅನೇಕ ಅಡ್ಡಗೋಡೆಗಳನ್ನು, ದುಃಖಗಳನ್ನು, ಆತಂಕಗಳನ್ನು ವಿಘ್ನಗಳನ್ನು ಏರ್ಪಾಟು ಮಾಡಿರುವುದು. ಸಂಸಾರ ಶೃಂಖಲೆಯಿಂದ ಜೀವಿಯನ್ನು ಬಂಧಿಸಿದೆ. ಅಂತಹ ದುರ್ಗವನ್ನು ಭೇದಿಸಲು ಲೌಕಿಕ ಉಪಾಯಗಳು ಉಪಯೋಗವಾಗುವುದಿಲ್ಲ. ಮಾಯೆಯನ್ನು ಭೇದಿಸ ಬೇಕೆಂದರೆ ಮಾಯಾಧೀಶನನ್ನೇ ಶರಣು ಹೋಗಬೇಕು. ಆದ್ದರಿಂದ ದುಃಖರಾಹಿತ್ಯಕ್ಕೆ, ಸುಖಾನುಭೂತಿಗಾಗಿ, ಪರಮಾತ್ಮನ ಚರಣಗಳನ್ನು ಆಶ್ರಯಿಸುವುದೇ, ಅವನನ್ನು ಧ್ಯಾನಿಸುವುದೇ ಜೀವಿಗೆ ಇರುವ ಏಕೈಕ ಮಾರ್ಗ. ಬೇರೆ ದಾರಿಯಿಲ್ಲ.

'ಮತ್ಪ್ರಸಾದಾತ್'- ನನ್ನ ಅನುಗ್ರಹದಿಂದ ದುಃಖವನ್ನು ದಾಟಬಲ್ಲೆ. ಭಗವಂತನಿಗೆ ಎಲ್ಲರೂ ಸಮಾನರಾಗಿದ್ದರೂ ಯಾವನು ಆತನನ್ನು ಭಕ್ತಿಪೂರ್ವಕ ವಾಗಿ ಧ್ಯಾನಿಸುವನೋ, ಸೇವಿಸುವನೋ ಅಂತಹವನಿಗೆ ಮಾತ್ರ ತನ್ನ ಅನುಗ್ರಹವನ್ನು ತೋರಿಸುವನು. ಗಾಳಿ ಎಲ್ಲಾ ಕಡೆ ಬೀಸುತ್ತಿದ್ದರೂ ಯಾರು ದೋಣಿಯ ತೆರೆಯನ್ನು ತೆರೆಯುವರೋ ಆ ದೋಣಿಯೇ ಮುಂದೆ ಸಾಗುವುದು. ಮರದ ಕೆಳಗೆ ಯಾರು ನಿಲ್ಲುವರೋ ಅವರಿಗೆ ಮಾತ್ರ ನೆರಳು ಲಭಿಸುವುದು. ಆದ್ದರಿಂದ ಸುಖಾನುಭೂತಿ ಬೇಕಾಗಿದ್ದಲ್ಲಿ ಭಗವಂತನ ಆಶ್ರಯವನ್ನು ಬಿಟ್ಟರೆ ಬೇರೆ ಯಾವ ಉಪಾಯವೂ ಇಲ್ಲ.

ಒಂದು ವೇಳೆ ಯಾರಾದರೂ ಅಹಂಕಾರದಿಂದಾಗಲಿ, ಧನಮದ ದಿಂದಾಗಲಿ ಅಧಿಕಾರಗರ್ವದಿಂದಾಗಲಿ ಭಗವಂತನ ಈ ವಾಕ್ಯಗಳ ಮೇಲೆ ವಿಶ್ವಾಸವಿಡದಿದ್ದರೆ, ಇಲ್ಲವೆ ಈ ವಾಕ್ಯಗಳನ್ನು ಕೇಳದಿದ್ದರೆ ಅವರು ನಾಶವಾಗುವರೆಂದು, ಸಂಸಾರಕೂಪದಲ್ಲಿ ಬಿದ್ದು ನರಳುವರೆಂದು ಇಲ್ಲಿ ತಿಳಿಸಲಾಗಿದೆ. ಆದ್ದರಿಂದ ದೈವ ವಾಕ್ಯಗಳ ಮೇಲೆ ಶ್ರದ್ಧೆಯಿಟ್ಟು ಆಚರಿಸುವುದು ಜೀವಿಗಳ ಕರ್ತವ್ಯವಾಗಿದೆ.

ಪ್ರ : ಜೀವಿಗೆ ಸಮಸ್ತ ಸಾಂಸಾರಿಕ ದುಃಖಗಳು ಹೇಗೆ ನಶಿಸುವುವು?

ಉ : ಭಗವಂತನಲ್ಲಿ ಚಿತ್ತವನ್ನು ಸಂಲಗ್ನಿಸಿ ಭಗವತ್ಪರಾಯಣನಾಗಿದ್ದರೆ ಆಪತ್ತುಗಳು ತೊಲಗಿ ಹೋಗುವುವು.

ಪ್ರ : ಭಗವದ್ವಾಕ್ಯಗಳನ್ನು ಕೇಳದವರ ಗತಿಯೇನು?

ಉ : ಅವರು ಕೆಟ್ಟು ಹೋಗುವರು. ಸಂಸಾರದುಃಖ ವಶವಾಗುವರು.

ಪ್ರ : ಅವರು ಹಾಗೆ ಕೇಳದೇ ಇರಲು ಕಾರಣವೇನು?

ಉ : ಅಹಂಕಾರ, ಗರ್ವಗಳಿಂದ ಪ್ರೇರಿತರಾಗಿ ಹಾಗೆ ಮಾಡುವರು.

**ಅ॥** ಒಂದು ವೇಳೆ ಅಹಂಕಾರದಿಂದ ನನ್ನ ಮಾತುಗಳನ್ನು ಕೇಳದೆ 'ನಾನು ಯುದ್ಧ ಮಾಡುವುದಿಲ್ಲ' ಎಂದು ನೀನು ಹೇಳಿದರೂ ಪ್ರಕೃತಿಯೇ ನಿನ್ನಿಂದ ಯುದ್ಧ ಮಾಡಿಸುವುದೆಂದು ಹೇಳಲಾಗುತ್ತಿದೆ-

**೫೯ ಯದಹಂಕಾರಮಾಶ್ರಿತ್ಯ ನ ಯೋತ್ಸ್ಯ ಇತಿ ಮನ್ಯಸೇ**
**ಮಿಥ್ಯೈಷ ವ್ಯವಸಾಯಸ್ತೇ ಪ್ರಕೃತಿಸ್ತ್ವಾಂ ನಿಯೋಕ್ಷ್ಯತಿ**

**ಅರ್ಥ:** ಯದಿ=ಒಂದು ವೇಳೆ; ಅಹಂಕಾರ=ಅಹಂಕಾರವನ್ನು; ಆಶ್ರಿತ್ಯ=ಅವಲಂಬಿಸಿ; ನ ಯೋತ್ಸ್ಯೇ ಇತಿ=ಯುದ್ಧ ಮಾಡುವುದಿಲ್ಲವೆಂದು; ಮನ್ಯಸೇ (ಚೇತ್)= ತಿಳಿದೆಯಾದರೆ; ಏಷಃ ತೇ ವ್ಯವಸಾಯಃ=ಈ ನಿನ್ನ ಪ್ರಯತ್ನ; ಮಿಥ್ಯಾ=ವ್ಯರ್ಥವಾಗುವುದು; ಪ್ರಕೃತಿಃ=ನಿನ್ನ (ಕ್ಷತ್ರಿಯ) ಸ್ವಭಾವವೇ; ತ್ವಾಂ=ನಿನ್ನನ್ನು; ನಿಯೋಕ್ಷ್ಯತಿ=(ಯುದ್ಧದಲ್ಲಿ) ಪ್ರೇರೇಪಿಸುವುದು.

**ತಾ॥** ಒಂದು ವೇಳೆ ಅಂಹಕಾರವನ್ನು ಅವಲಂಬಿಸಿ 'ನಾನು ಯುದ್ಧ ಮಾಡುವುದಿಲ್ಲ' ಎಂದು ನೀನು ತಿಳಿದರೂ (ಹೇಳಿದರೂ) ಅಂತಹ ನಿನ್ನ ಪ್ರಯತ್ನವು ವ್ಯರ್ಥವೇ ಆಗುವುದು. (ಏಕೆಂದರೆ) ನಿನ್ನ (ಕ್ಷತ್ರಿಯ) ಸ್ವಭಾವವೇ ನಿನ್ನನ್ನು ಅದರಲ್ಲಿ (ಯುದ್ಧದಲ್ಲಿ) ಪ್ರೇರೇಪಿಸುವುದು.

**ವ್ಯಾಖ್ಯೆ:** ಕರ್ತೃತ್ವವನ್ನು ಬಿಟ್ಟು, ಕ್ಷತ್ರಿಯೋಚಿತವಾದ ಧರ್ಮಯುದ್ಧವನ್ನು ಮಾಡು ಎಂದು ಅರ್ಜುನನಿಗೆ ಭಗವಂತನು ಈಗಾಗಲೇ ತಿಳಿಸಿರುವನು. ಈಗ 'ಓ ಅರ್ಜುನಾ! ಅಹಂಕಾರದಿಂದ ನನ್ನ ಈ ವಾಕ್ಯವನ್ನು ಉಲ್ಲಂಘಿಸಿದರೆ ಅದು ನಿನ್ನ ವ್ಯರ್ಥ ಪ್ರಯತ್ನವೇ ಆಗುವುದು. ಏಕೆಂದರೆ ನಿನ್ನ ಕ್ಷತ್ರಿಯ ಸಂಬಂಧ ಸ್ವಭಾವವೇ ಬಲಾತ್ಕಾರವಾಗಿ ನಿನ್ನ ನ್ನು ಯುದ್ಧದಲ್ಲಿ ಇಳಿಸುವುದು' ಎಂದು ಭವಿಷ್ಯತ್ ಜ್ಞಾನವುಳ್ಳ ಪರಮಾತ್ಮನು ಹೇಳಿದನು.

**ಅ॥** ಮನುಜನು ಒಂದು ಕೆಲಸವನ್ನು ಮಾಡಬಾರದೆಂದುಕೊಂಡರೂ ತನ್ನ ಸ್ವಾಭಾವಿಕ ಕರ್ಮ ಪ್ರಭಾವದಿಂದ ಅದನ್ನು ಮಾಡಿಯೇ ತೀರುವನೆಂದು ಹೇಳಲಾಗುತ್ತಿದೆ-

**೬೦ ಸ್ವಭಾವಜೇನ ಕೌಂತೇಯ ನಿಬದ್ಧಃ ಸ್ವೇನ ಕರ್ಮಣಾ**
**ಕರ್ತುಂ ನೇಚ್ಛಸಿ ಯನ್ಮೋಹಾತ್ಕರಿಷ್ಯಸ್ಯವಶೋಽಪಿ ತತ್**

**ಅರ್ಥ:** ಕೌಂತೇಯ=ಓ ಅರ್ಜುನಾ! ಸ್ವಭಾವಜೇನ=ಸ್ವಭಾವ (ಪೂರ್ವಜನ್ಮ ಸಂಸ್ಕಾರ)ದಿಂದ ಉಂಟಾದ (ಪ್ರಕೃತಿ ಸಿದ್ಧವಾದ) ಸ್ವೇನ=ನಿನ್ನ; ಕರ್ಮಣಾ= ಕರ್ಮದಿಂದ; ನಿಬದ್ಧಃ=ಚೆನ್ನಾಗಿ ಬಂಧಿಸಲ್ಪಟ್ಟವನಾಗಿ; ಮೋಹಾತ್=ಅವಿವೇಕ ದಿಂದ; ಯತ್=ಯಾವುದನ್ನು (ಯಾವ ಯುದ್ಧವನ್ನು); ಕರ್ತುಂ=ಮಾಡುವುದಕ್ಕೆ; ನ ಇಚ್ಛಸಿ=ಇಚ್ಛಿಸುವುದಿಲ್ಲವೋ; ತತ್ ಅಪಿ=ಅದನ್ನು ಕೂಡ; ಅವಶಃ ಅಪಿ=ಪರಾಧೀನನಾಗಿ (ಕರ್ಮಾಧೀನನಾಗಿ); ಕರಿಷ್ಯಸಿ=ಮಾಡುವೆ.

**ತಾ॥** ಓ ಅರ್ಜುನಾ! ಸ್ವಭಾವ (ಪೂರ್ವಜನ್ಮ ಸಂಸ್ಕಾರ)ದಿಂದ ಉಂಟಾದ ನಿನ್ನ ಕರ್ಮದಿಂದ ಚೆನ್ನಾಗಿ ಬಂಧಿಸಲ್ಪಟ್ಟವನಾಗಿ ಯಾವುದನ್ನು ಮಾಡಲು ಅವಿವೇಕದಿಂದ ಇಚ್ಛಿಸುತ್ತಿಲ್ಲವೋ ಅದನ್ನು ಪರಾಧೀನನಾಗಿ (ಕರ್ಮಾ ಧೀನನಾಗಿ) ತಪ್ಪದೆ ಮಾಡಿಯೇ ತೀರುತ್ತೀಯೆ.

**ವ್ಯಾಖ್ಯೆ:** 'ನಿಬದ್ಧಃ'- ಮನುಜನು ತನ್ನ ಕರ್ಮದಿಂದಲೇ ತಾನು ಬಂಧಿಸಲ್ಪಟ್ಟಿದ್ದಾನೆ. 'ಬದ್ಧಃ' ಎಂದು ಹೇಳದೆ 'ನಿಬದ್ಧಃ' ಎಂದು ಹೇಳಿರು ವುದರಿಂದ ಚೆನ್ನಾಗಿ ಬಂಧಿಸಲ್ಪಟ್ಟಿದ್ದಾನೆಂದು ಭಾವ. ಪೂರ್ವ ಜನ್ಮದ ಸಂಸ್ಕಾರದಿಂದ ಅರ್ಜುನನು ಯುದ್ಧ ಮಾಡಲೇಬೇಕೆನ್ನುವುದು ತ್ರಿಕಾಲಜ್ಞನಾದ ಭಗವಂತನಿಗೆ ಗೊತ್ತು. ಆದ್ದರಿಂದಲೇ 'ನಾನು ಯುದ್ಧ ಮಾಡುವುದಿಲ್ಲ' ಎಂದು ನೀನು ಅಂದುಕೊಂಡರೂ ಸಂಸ್ಕಾರ ಪ್ರಭಾವದಿಂದ ಯುದ್ಧವನ್ನು ಮಾಡಿಯೇ ತೀರುತ್ತೀಯೆ ಎಂದು ಹೇಳಿದನು. ಹೀಗಿರುವಾಗ ಪುರುಷ ಪ್ರಯತ್ನದಿಂದ ಉಪಯೋಗವೇನು? ಎಂದು ಯಾರೂ ತಿಳಿಯಬಾರದು. ಮನುಜನಿಗೆ ೧) ಪೂರ್ವ ಜನ್ಮಸಂಸ್ಕಾರ ೨) ಇಹಜನ್ಮ ಪುರುಷ ಪ್ರಯತ್ನ ಎರಡು ಇವೆ. ಈ ಎರಡಕ್ಕೂ ನಿರಂತರವಾಗಿ ಜೀವಿಯಲ್ಲಿ ಸಂಘರ್ಷಣೆ ನಡೆಯುತ್ತಲೇ ಇದೆ. ಅದರಲ್ಲಿ ಇಹ ಜನ್ಮ ಪುರುಷ ಪ್ರಯತ್ನ ಅಧಿಕವಾಗಿದ್ದರೆ ಪೂರ್ವಜನ್ಮ ಸಂಸ್ಕಾರದ ಮೇಲೆ ಅದು ಜಯಿಸುವುದು. ಪ್ರತಿಯೊಬ್ಬರಿಗೂ ಅವರ ಪೂರ್ವಜನ್ಮದ ಸಂಸ್ಕಾರ ಹೇಗಿದೆಯೋ ಗೊತ್ತಿಲ್ಲವಾದ್ದರಿಂದ ತೀವ್ರ ಪುರುಷ ಪ್ರಯತ್ನದಿಂದ ಈ ಜನ್ಮದಲ್ಲಿ ದೈವಿಕ ಸಂಸ್ಕಾರಗಳನ್ನೇ ಅಭ್ಯಾಸ ಮಾಡುವುದರಿಂದ ಪೂರ್ವದ ದುಃಸಂಸ್ಕಾರಗಳೇನಾದರೂ ಇದ್ದರೆ ಅವು ಜಯಿಸಲ್ಪಡುವುವು. ಈಗಿನ ಪ್ರಯತ್ನ ಪ್ರಬಲವಾಗಿಲ್ಲದಿದ್ದರೆ ಪೂರ್ವ ಸಂಸ್ಕಾರ ಗೆಲ್ಲುವುದು. ಆದ್ದರಿಂದ ಜೀವಿಯು ಜಾಗರೂಕನಾಗಿ ಪ್ರಯತ್ನ ಪೂರ್ವಕವಾಗಿ ದೈವ ಸಂಸ್ಕಾರವನ್ನು ಅಭ್ಯಸಿಸಬೇಕು.

ಪ್ರ : ಮನುಜನು ಯಾವುದರಿಂದ ಬಂಧಿಸಲ್ಪಡುತ್ತಿದ್ದಾನೆ?

ಉ : ತನ್ನ ಪೂರ್ವಜನ್ಮಕರ್ಮದಿಂದ

ಪ್ರ : ಯಾವುದರಿಂದ ಮುಕ್ತನಾಗುವನು?

ಉ : ಇಹ ಜನ್ಮದಲ್ಲಿ ಸತ್ಕರ್ಮರೂಪದ ಪುರುಷ ಪ್ರಯತ್ನದಿಂದ

**ಅ॥** ಈಶ್ವರನು ಮಾಯೆಯಿಂದ ಸಮಸ್ತ ಭೂತಗಳನ್ನು ಕೀಲುಗೊಂಬೆಗಳಂತೆ ಆಡಿಸುತ್ತಿದ್ದಾನೆಂದು ತಿಳಿಸಲಾಗುತ್ತಿದೆ-

**೬೧ ಈಶ್ವರಃಸರ್ವಭೂತಾನಂ ಹೃದ್ದೇಶೇರ್ಜುನ ತಿಷ್ಠತಿ**
**ಭ್ರಾಮಯನ್ ಸರ್ವಭೂತಾನಿ ಯಂತ್ರಾರೂಢಾನಿ ಮಾಯಯಾ**

**ಅರ್ಥ:** ಅರ್ಜುನಾ=ಓ ಅರ್ಜುನಾ! ಈಶ್ವರಃ=ಜಗನ್ನಿಯಾಮಕನಾದ ಪರಮೇಶ್ವರ (ಅಂತರ್ಯಾಮಿ); ಮಾಯಯಾ=ಮಾಯೆಯಿಂದ; ಸರ್ವ ಭೂತಾನಿ=ಸಮಸ್ತ ಪ್ರಾಣಿಗಳನ್ನು; ಯಂತ್ರಾರೂಢಾನಿ (ಇವ)=ಯಂತ್ರ ವನ್ನು ಆರೋಹಿಸಿದ ಕೀಲು ಗೊಂಬೆಗಳಂತೆ; ಭ್ರಾಮಯನ್=ತಿರುಗಿಸುತ್ತ (ನಿಯಮಿಸುತ್ತ); ಸರ್ವಭೂತಾನಾಂ=ಸಮಸ್ತ ಪ್ರಾಣಿಗಳ; ಹೃದ್ದೇಶೇ= ಹೃದಯದಲ್ಲಿ; ತಿಷ್ಠತಿ=ಬೆಳಗುತ್ತಿದ್ದಾನೆ.

**ತಾ॥** ಓ ಅರ್ಜುನಾ! ಜಗನ್ನಿಯಾಮಕನಾದ ಪರಮೇಶ್ವರನು ಮಾಯೆಯಿಂದ ಸಮಸ್ತ ಪ್ರಾಣಿಗಳನ್ನು, ಯಂತ್ರಗಳನ್ನು ಆರೋಹಿಸಿದ ಬೊಂಬೆಗಳಂತೆ, ತಿರುಗಿಸುತ್ತಾ ಸಮಸ್ತ ಪ್ರಾಣಿಗಳ ಹೃದಯದಲ್ಲಿ ಬೆಳಗುತ್ತಿದ್ದಾನೆ.

**ವ್ಯಾಖ್ಯೆ:** ಈಶ್ವರನೆಲ್ಲಿದ್ದಾನೆ? ಏನು ಮಾಡುತ್ತಿದ್ದಾನೆ? ಎನ್ನುವ ಪ್ರಶ್ನೆಗಳಿಗೆ ಇಲ್ಲಿ ಉತ್ತರ ಕೊಡಲಾಗಿದೆ. ಈಶ್ವರನು (ಭಗವಂತನು) ಎಲ್ಲೋ ದೂರದಲ್ಲಿದ್ದಾನೆಂದು ಭಾವಿಸುವುದು ಹುಚ್ಚುತನ. ಆತನು ಜೀವಿಗಳಲ್ಲಿ ಅತಿ ಸಮೀಪವಾದ ಹೃದಯದಲ್ಲಿ (ಆತ್ಮರೂಪದಲ್ಲಿ) ನಿವಸಿಸುತ್ತಿದ್ದಾನೆ. ಆದ್ದರಿಂದ **'ಸರ್ವಭೂತಾನಾಂ ಹೃದ್ದೇಶೋ'** ಎಂದು ಹೇಳಲಾಗಿದೆ. ಆದ್ದರಿಂದ ಭಗವತ್ ಸಾನ್ನಿಧ್ಯವನ್ನು ಯಾವಾಗಲೂ ಅನುಭವಿಸುತ್ತ ಪಾಪಾಚರಣೆಗಳಿಲ್ಲದೆ ಭಕ್ತಿವಂತರಾಗಿರಬೇಕು. ಜೀವಿಗಳು ಮಾಡುವ ಕಾರ್ಯಗಳನ್ನು, ಸಂಕಲ್ಪಗಳನ್ನು ಈಶ್ವರನು ಸಾಕ್ಷೀಭೂತನಾಗಿ ಸದಾ ವೀಕ್ಷಿಸುತ್ತಿರುವನೆನ್ನುವುದನ್ನು ಯಾರೂ ಮರೆಯಬಾರದು. ಈಶ್ವರನೆಂದರೆ ಪ್ರಭು, ಶಾಸಕ, ನಿಯಾಮಕ. ರಾಜನು ಪ್ರಜೆಗಳನ್ನು ಶಾಸಿಸಿದ ಹಾಗೆ ಆತನು ಸಮಸ್ತ ಪ್ರಾಣಿ ಕೋಟಿಗಳನ್ನು ಶಾಸಿಸುವನು. ಅವರವರ ಕರ್ಮಾನುಷ್ಠಾನವಾಗಿ ಫಲಗಳನ್ನೀಯುವನು. ರಾಜಾಜ್ಞೆಯನ್ನು ಮೀರಿದರೆ ಹೇಗೆ ಪ್ರಜೆಗಳಿಗೆ ಶಿಕ್ಷೆ ವಿಧಿಸಲ್ಪಡುವುದೋ ಹಾಗೆಯೇ ಈಶ್ವರನಿಂದ ಶಿಕ್ಷೆಗೆ ಒಳಪಟ್ಟು ದುಷ್ಕರ್ಮ ಫಲವಾದ ಘೋರ ದುಃಖವನ್ನು ಅನುಭವಿಸುವರು. ಆದ್ದರಿಂದ ಹೃದಯದಲ್ಲಿ, ಬಾಹ್ಯದಲ್ಲಿ, ಈಶ್ವರನ ಸನ್ನಿಧಿಯನ್ನು ಸದಾ ಭಾವಿಸಿ ಧರ್ಮವನ್ನು, ಸತ್ಯವನ್ನು ಯಾರೂ ಉಲ್ಲಂಘಿಸಬಾರದು.

ಭಗವಂತನು ಎಲ್ಲಿ ಇರುವನು? ವೈಕುಂಠ, ಕೈಲಾಸ, ಪಾತಾಳಗಳಲ್ಲೇ? ಇತರ ಲೋಕಗಳಲ್ಲಿ ವಾಸಿಸುವನೇ? ಆತನು ಎಲ್ಲೆಲ್ಲೂ ವಾಸಿಸುತ್ತಿದ್ದಾನೆ. ಅತಿ ಸಮೀಪವಾದ ಹೃದಯ ಪ್ರದೇಶದಲ್ಲಿರುವನು. ಆದ್ದರಿಂದ ಪರಮಾತ್ಮನನ್ನು ಸದಾ ಭಕ್ತಿಯಿಂದ ಪ್ರಾರ್ಥಿಸುತ್ತಿರಬೇಕು.

'ಸರ್ವಭೂತಾನಾಂ' ಎಂದು ಹೇಳುವುದರಿಂದ ಯಾವುದೋ ಒಂದು ಪ್ರಾಣಿಯಲ್ಲಿ ಅಲ್ಲವೆಂದು, ಸಮಸ್ತ ಜೀವಕೋಟಿಗಳಲ್ಲಿ ಭಗವಂತನು ಬೆಳಗುತ್ತಿದ್ದಾನೆಂದು ಸ್ಪಷ್ಟವಾಗುತ್ತದೆ. ಆದ್ದರಿಂದ ಇರುವೆ, ಸೊಳ್ಳೆ, ಪಶು, ಚಂಡಾಲನಲ್ಲಿಯೂ ಕೂಡ ಆತನು ನಿವಸಿಸುತ್ತಿರುವನು. ಆದರೆ ಯಾರ ಚಿತ್ತವು ನಿರ್ಮಲವಾಗಿದೆಯೋ ಆತನಲ್ಲಿ ಚೆನ್ನಾಗಿ ಪ್ರಕಾಶಿಸಿ ವ್ಯಕ್ತನಾಗುವನು

'ಯಂತ್ರಾರೂಢಾನಿ'- ಈಶ್ವರನು ಮಾಯೆಯ ದ್ವಾರ ಸಮಸ್ತ ಜೀವಿಗಳನ್ನು ಸಂಸಾರ ರೂಪ ಯಂತ್ರದಲ್ಲಿ ತಿರುಗಿಸುತ್ತಿದ್ದಾನೆ. ಯಂತ್ರದ ಚಕ್ರದಲ್ಲಿ ಸಿಕ್ಕಿ ಹಾಕಿಕೊಂಡ ಯಾವುದೇ ಪ್ರಾಣಿಯಾಗಲೀ ಆ ಚಕ್ರದೊಡನೆ ತಿರುಗುವುದು. ಹಾಗೆಯೇ ಜೀವಿಗಳು ಈ ಸಂಸಾರ ಚಕ್ರಕ್ಕೆ ಸಿಲುಕಿ ಆ ಚಕ್ರದೊಡನೆ ವಿವಶರಾಗಿ ತಿರುಗುತ್ತಿದ್ದಾರೆ. ಅದರಿಂದ ವಿಮುಕ್ತರಾಗುವ ಉಪಾಯವನ್ನು ಮುಂದಿನ ಶ್ಲೋಕದಲ್ಲಿ ಕೊಡಲಾಗಿದೆ. ಆ ಯಂತ್ರವನ್ನು ತಿರುಗಿಸುತ್ತಿರುವವನನ್ನು (ಭಗವಂತನನ್ನು) ಆಶ್ರಯಿಸುವುದೇ ಆ ಉಪಾಯ.

'ಮಾಯಯಾ' ಎಂದು ಹೇಳುವುದರಿಂದ ಈಶ್ವರನು ಈ ಸಂಸಾರ ಚಕ್ರವನ್ನು ತಿರುಗಿಸುತ್ತಿದ್ದರೂ ಮಾಯೆಯಿಂದ ಆ ಪರಿಭ್ರಮಣವನ್ನು ಉಂಟುಮಾಡುವುದರಿಂದ ವಾಸ್ತವವಾಗಿ ಆತನು ಕರ್ತನಲ್ಲ. ಆತನು ಸಾಕ್ಷಿ ಮಾತ್ರನು.

ಪ್ರ : ಈಶ್ವರನು ಎಲ್ಲಿ ನಿವಸಿಸುತ್ತಿದ್ದಾನೆ?

ಉ : ಸಮಸ್ತ ಪ್ರಾಣಿ ಕೋಟಿಗಳ ಹೃದಯದಲ್ಲಿ

ಪ್ರ : ಏನು ಮಾಡುತ್ತಿದ್ದಾನೆ?

ಉ : ಈ ಸಂಸಾರ ಚಕ್ರಕ್ಕೆ ಸಿಲುಕಿರುವ ಜೀವಿಗಳನ್ನೆಲ್ಲಾ ತಿರುಗಿಸುತ್ತಿದ್ದಾನೆ

ಪ್ರ : ಯಾವುದರ ಮೂಲಕ?

ಉ : ಮಾಯಾಶಕ್ತಿಯಿಂದ

ಪ್ರ : ಯಾವ ಪ್ರಕಾರವಾಗಿ

ಉ : ಯಂತ್ರಕ್ಕೆ ಸಿಕ್ಕಿ ಹಾಕಿಕೊಂಡ ಹುಳುಗಳಂತೆ.

**ಅ॥** ಜೀವಿಗಳು ಸಂಸಾರ ಚಕ್ರದಲ್ಲಿ ಸಿಕ್ಕಿಕೊಂಡು ಪರಿಭ್ರಮಿಸುವರು ಎಂದು ಹೇಳಲಾಗಿದೆಯಲ್ಲವೇ! ಹೀಗಿರಲು ಅವರು ಶಾಂತಿ, ಸುಖವನ್ನು ಹೇಗೆ ಹೊಂದಬಲ್ಲರು? ಆ ಉಪಾಯವನ್ನು ಮುಂದೆ ಕೊಡಲಾಗಿದೆ-

೬೨ ತಮೇವ ಶರಣಂ ಗಚ್ಛ ಸರ್ವಭಾವೇನ ಭಾರತ
ತತ್ಪ್ರಸಾದಾತ್ಪರಾಂ ಶಾಂತಿಂ ಸ್ಥಾನಂ ಪ್ರಾಪ್ಸ್ಯಸಿ ಶಾಶ್ವತಂ

**ಅರ್ಥ:** ಭಾರತ=ಓ ಅರ್ಜುನಾ! ಸರ್ವಭಾವೇನ=ಸರ್ವವಿಧಗಳಿಂದ; ತಂ ಏವ=(ಹೃದಯಸ್ಥನಾದ) ಆ ಈಶ್ವರನನ್ನೇ; ಶರಣಂ ಗಚ್ಛ=ಶರಣು ಹೊಂದು; ತತ್ಪ್ರಸಾದಾತ್=ಆತನ ಅನುಗ್ರಹದಿಂದ; ಪರಾಂ=ಉತ್ಕೃಷ್ಟವಾದ; ಶಾಂತಿಂ=ಶಾಂತಿಯನ್ನು; ಶಾಶ್ವತಂ=ಶಾಶ್ವತವಾದ; ಸ್ಥಾನಂ=ಮೋಕ್ಷ ಪದವಿಯನ್ನು; ಪ್ರಾಪ್ಸ್ಯಸಿ=ಹೊಂದಬಲ್ಲೆ.

**ತಾ॥** ಓ ಅರ್ಜುನಾ! ಸರ್ವವಿಧಗಳಿಂದ ಆ ಈಶ್ವರನನ್ನೇ (ಹೃದಯಸ್ಥನನ್ನೇ) ಶರಣು ಹೊಂದು. ಆತನ ಅನುಗ್ರಹದಿಂದ ಸರ್ವೋತ್ಕೃಷ್ಟವಾದ ಶಾಂತಿಯನ್ನು, ಶಾಶ್ವತವಾದ ಮೋಕ್ಷ ಪದವಿಯನ್ನು ನೀನು ಪಡೆಯಬಲ್ಲೆ.

**ವ್ಯಾಖ್ಯೆ:** ಹಿಂದಿನ ಶ್ಲೋಕದಲ್ಲಿ ಜೀವಿಗಳು ಸಂಸಾರ ಚಕ್ರದಲ್ಲಿ ಸಿಕ್ಕಿ ಹಾಕಿಕೊಂಡು ಪರಿಭ್ರಮಿಸುವರು ಎಂದು ಹೇಳಲಾಗಿದೆ. ಮತ್ತೆ ಅವರು ಅದರಿಂದ ತಪ್ಪಿಸಿಕೊಳ್ಳುವ ಬಗೆ ಹೇಗೆ? ಜನನಮರಣರೂಪ ಸಂಸಾರದಿಂದ ಅವರು ಹೇಗೆ ಬಿಡುಗಡೆ ಹೊಂದುವರು? ಎನ್ನುವ ಪ್ರಶ್ನೆಗಳಿಗೆ ಈ ಶ್ಲೋಕದಲ್ಲಿ ಉತ್ತರ ಹೇಳಲಾಗುತ್ತಿದೆ. ಸಕಲ ಜೀವಿಗಳ ಹೃದಯ ಸ್ಥಾನದಲ್ಲಿ ಯಾವ ಪರಾತ್ಪರನು (ಯಾವ ಪರಮಾತ್ಮನು ನಿವಸಿಸುತ್ತಿದ್ದಾನೋ) ಅವನನ್ನು ಸರ್ವವಿಧದಿಂದ ಶರಣು ಹೊಂದುವುದೇ ಬಂಧ ವಿಮುಕ್ತಿಗೆ ಏಕೈಕ ಉಪಾಯವೆಂದು ಇಲ್ಲಿ ತಿಳಿಸಲಾಗಿದೆ. ಯಂತ್ರವನ್ನು ನಿಲ್ಲಿಸಬೇಕೆಂದರೆ ಅದನ್ನು ತಿರುಗಿಸುವವನನ್ನು ಆಶ್ರಯಿಸಬೇಕು. ಈ ಸಂಸಾರ ರೂಪ ಯಂತ್ರವನ್ನು ತಿರುಗಿಸುವವನು ಸಾಕ್ಷಾತ್ ಈಶ್ವರನೇ. ಆದ್ದರಿಂದ ಆ ಈಶ್ವರನನ್ನೇ ಈ ಜೀವಿಯು ಶರಣು ಹೊಂದಬೇಕಾಗಿದೆ. ಇಲ್ಲದಿದ್ದರೆ ಮಾಯೆ ಆತನಿಗೆ ದಾರಿ ಕೊಡುವುದಿಲ್ಲ. ಮಾಯೆಯು ಭಗವತ್ ಶಕ್ತಿಗೆ ಹೊರತು ಬೇರೆ ಯಾವುದಕ್ಕೂ ಜಗ್ಗುವುದಿಲ್ಲ. ಪ್ರಾಪಂಚಿಕ ಶಕ್ತಿಗಳು ಮಾಯಾ ಶಕ್ತಿಗೆ, ಮಾಯಾ ಶಕ್ತಿ ದೈವ ಶಕ್ತಿಗೆ ಒಳಗಾಗಿವೆ. ಆದ್ದರಿಂದ ಮಾಯಾಧೀನರಾದ ಜೀವಿಗಳೆಲ್ಲರೂ ಮಾಯಾಮೋಹದ ಸಂಸಾರ ಚಕ್ರವನ್ನು ದಾಟಬೇಕಾದರೆ ಮಾಯಾಧೀಶನಾದ ಪರಮಾತ್ಮನನ್ನೇ ಶರಣು ಹೊಂದಬೇಕು. ಆ ವಿಷಯವನ್ನೇ ಈ ಶ್ಲೋಕದಲ್ಲಿ ತಿಳಿಸಲಾಗಿದೆ.

**'ಸರ್ವಭಾವೇನ'-** ಎಂದು ಹೇಳುವುದರಿಂದ ಹೃದಯಸ್ಥ ಪರಮಾತ್ಮನನ್ನು ಸರ್ವ ವಿಧಗಳಿಂದ ಸಂಪೂರ್ಣ ಮನಸ್ಸಿನಿಂದ ಶರಣು ಹೊಂದಬೇಕೆಂದು ಸ್ಪಷ್ಟವಾಗುತ್ತದೆ. ಶರೀರವಾಕ್‌ಮನಸ್ಸುಗಳಿಂದ ಪರಿಪೂರ್ಣವಾಗಿ ಸೇವಿಸಬೇಕೆಂದು ಅರ್ಥ. ಅರ್ಧ ಮನಸ್ಸು, ಅರ್ಧ ಭಾವಗಳಿಂದ ದೇವರನ್ನು ಪ್ರಾರ್ಥಿಸಿದರೆ ಸಾಕಾಗುವುದಿಲ್ಲ. ಮೋಕ್ಷ ಪ್ರಾಪ್ತಿಗೆ ಪೂರ್ಣ ಮನಸ್ಸಿನಿಂದ ಭಗವಂತನನ್ನು ಪ್ರಾರ್ಥಿಸಬೇಕು. ದೃಶ್ಯ ವಿಷಯಗಳ ಮೇಲೆ ಮನಸ್ಸನ್ನು ಹರಿಯಬಿಡಬಾರದು.

**'ತತ್ಪ್ರಸಾದಾತ್'-** ಮೋಕ್ಷಕ್ಕೆ ಭಗವದನುಗ್ರಹ ಬಹಳ ಅವಶ್ಯಕವಾಗಿದೆ. ಅದನ್ನು ಸಂಪಾದಿಸದೆ ಬೇರೆ ಎಷ್ಟು ಉಪಾಯಗಳನ್ನು ಮಾಡಿದರೂ ಮಾಯಾಬಂಧ ತೊಲಗುವುದಿಲ್ಲ. ಅದು ಹೇಗೆ ಲಭಿಸುವುದೆನ್ನುವುದನ್ನು ಈ ಶ್ಲೋಕದ ಮೊದಲ ಪಾದದಲ್ಲಿ ತಿಳಿಸಲಾಗಿದೆ. ಭಗವತ್‌ಶರಣಾಗತಿಯಿಂದ, ಸರ್ವವಿಧಗಳಿಂದ ಆ ಭಗವಂತನನ್ನು ಭಕ್ತಿಯಿಂದ ಆಶ್ರಯಿಸುವುದರಿಂದ ಲಭಿಸುವುದು. ಭಗವಂತನನ್ನು ನಿರ್ಮಲ ಭಕ್ತಿಯಿಂದ ಸರ್ವವಿಧಗಳಲ್ಲಿ ಶರಣು ಹೊಂದಿದರೆ ಆತನ ಅನುಗ್ರಹವುಂಟಾಗುವುದು. ಆ ಅನುಗ್ರಹದಿಂದ ಜೀವಿಗೆ ಸರ್ವೋತ್ತಮಶಾಂತಿ, ಶಾಶ್ವತವಾದ ಮೋಕ್ಷ ಪದವಿ ಲಭಿಸುತ್ತದೆ. ಓಹೋ! ಎಂತಹ ಭವ್ಯವಾದ ಫಲ! ಆದ್ದರಿಂದ ಜೀವಿಯ ಪ್ರಥಮ ಕರ್ತವ್ಯ ಈಶ್ವರನಿಗೆ ಶರಣಾಗತಿಯಾಗುವುದೇ ಆಗಿದೆ.

'ಪರಾಂ ಶಾಂತಿಂ'- ಆ ಮೋಕ್ಷ ಪದವಿ ಎಂತಹದು? ಪರಮ ಶಾಂತಿ, ದುಃಖರಹಿತವಾದುದು. ಪೂರ್ಣ ಶಾಂತಿ ಎಲ್ಲಿ ಸಿಗುವುದು? ದೃಶ್ಯದಲ್ಲಿಲ್ಲ, ಯಾವ ಲೋಕದಲ್ಲಿಯೂ ಇಲ್ಲ, ಚಕ್ರವರ್ತಿಯಲ್ಲಿಲ್ಲ, ಇಂದ್ರ ಪದವಿಯಲ್ಲೂ ಇಲ್ಲ, ದೃಕ್ಸ್ವರೂಪನಾದ ಪರಮಾತ್ಮನಲ್ಲಿ ಮಾತ್ರ ಇದೆ. ಆದ್ದರಿಂದ ಶಾಂತಿಯನ್ನು ಕೋರುವ ಪ್ರತಿಮಾನವನು ಅಂತಹ ಶಾಂತಿಗೆ ನಿಲಯವಾದ ಭಗವಂತನನ್ನು ಶರಣು ಹೊಂದಬೇಕು. ನಂತರ ಶಾಂತಿ ಆತನಿಗೆ ತಪ್ಪದೆ

ಲಭಿಸುವುದೆಂದು ಶ್ರೀ ಕೃಷ್ಣಮೂರ್ತಿ ಇಲ್ಲಿ ಆಶ್ವಾಸನೆಯಿತ್ತಿರುವನು (ಸ್ಥಾನಂ ಪ್ರಾಪ್ಸ್ಯಸಿ). ಆದರೆ ಅಂತಹ ಸರ್ವೋತ್ತಮಸ್ಥಾನ ಹೊಂದಲು ತಕ್ಕ ಮೌಲ್ಯವನ್ನು ತೆರಬೇಕು. ದೃಶ್ಯ ವಿಷಯಾಭಿಲಾಷೆಗಳನ್ನು ಪರಿತ್ಯಜಿಸಿ ಪೂರ್ಣ ಭಾವದಿಂದ ಪರಮಾತ್ಮನನ್ನು ಆಶ್ರಯಿಸುವುದೇ ಆ ಮೌಲ್ಯ.

'ಶಾಶ್ವತಂ'- ಎಂದು ಹೇಳಿರುವುದರಿಂದ ದೈವ ಪದವು ಕಾಲಾತೀತವಾದದ್ದೆಂದು, ಅದಕ್ಕೆ ವಿನಾಶವಿಲ್ಲವೆಂದು ತಿಳಿಯುತ್ತದೆ. ಪ್ರಪಂಚದಲ್ಲಿಯ ಪ್ರತಿವಸ್ತುವೂ ಅಶಾಶ್ವತವೇ ಆಗಿದೆ. ಕಾಲಾಧೀನವಾಗಿದೆ. ಆದ್ದರಿಂದ ಅಮೂಲ್ಯವಾದ ಈ ಮಾನವ ಜನ್ಮವನ್ನು ಪಡೆದು ಜನ್ಮಸಾರ್ಥಕತೆಯನ್ನು ಹೊಂದಲು ಅಂತಹ ಶಾಶ್ವತ ದೈವ (ಆತ್ಮ) ಪದವನ್ನೇ ಸರ್ವರೂ ಪಡೆಯಲು ಯತ್ನಿಸಬೇಕು. ಭಗವಂತನ ಈ ವಾಕ್ಯಗಳ ಮೇಲೆ ಪೂರ್ಣ ವಿಶ್ವಾಸವಿಟ್ಟು ಅದಕ್ಕನುಗುಣವಾಗಿ ಭಕ್ತಿಯಿಂದ ವರ್ತಿಸಬೇಕು.

ಪ್ರ : ಪರಮಾತ್ಮನ ಸ್ಥಾನ ಎಂತಹದು?

ಉ :೧) ಪರಮ ಶಾಂತಿಗೆ ನಿಲಯ ೨) ಶಾಶ್ವತವಾದುದು

ಪ್ರ : ಅದು ಯಾವುದರಿಂದ ಲಭಿಸುವುದು?

ಉ :ಭಗವದನುಗ್ರಹದಿಂದ

ಪ್ರ : ಭಗವದನುಗ್ರಹ ಹೇಗೆ ಉಂಟಾಗುವುದು?

ಉ :ಸರ್ವವಿಧಿಗಳಿಂದ ಪರಮಾತ್ಮನನ್ನು ಶರಣು ಹೊಂದುವುದರಿಂದ

ಪ್ರ : ಶಾಂತಿಯನ್ನು ಹೊಂದಲು ಮಾರ್ಗವೇನು? ಶಾಶ್ವತ ಕೈವಲ್ಯ ಪದವಿ ಯಾವುದರಿಂದ ಉಂಟಾಗುವುದು?

ಉ: ಭಕ್ತ್ಯಾದಿಗಳಿಂದ ಸರ್ವೇಶ್ವರನ ಅನುಗ್ರಹ ಸಂಪಾದನೆಯೇ ಶಾಂತಿಗೆ, ಕೈವಲ್ಯ ಪದವಿಗೆ ಏಕೈಕ ಮಾರ್ಗ,

**ಅ||** ಇಲ್ಲಿಯವರೆಗೆ ಹೇಳಿದ ಬೋಧೆಯನ್ನು ವಿಮರ್ಶಿಸಿ ನಿನಗೆ ಹೇಗೆ ಉಚಿತವೋ ಹಾಗೆ ಆಚರಿಸು ಎಂದು ಭಗವಂತನು ಅರ್ಜುನನಿಗೆ ಹಿತ ಬೋಧಿಸುತ್ತಿರುವನು-

**೬೩ ಇತಿ ತೇ ಜ್ಞಾನಮಾಖ್ಯಾತಂ ಗುಹ್ಯಾದ್ಗುಹ್ಯತರಂ ಮಯಾ**
**ವಿಮೃಶ್ಯೈತದಶೇಷೇಣ ಯಥೇಚ್ಛಸಿ ತಥಾ ಕುರು**

**ಅರ್ಥ:** ಇತಿ=ಈ ವಿಧವಾಗಿ; ಗುಹ್ಯಾತ್=ರಹಸ್ಯಕ್ಕಿಂತ; ಗುಹ್ಯತರಮ್ ಇನ್ನೂ ಹೆಚ್ಚಿನ ರಹಸ್ಯವಾದ; ಜ್ಞಾನಂ=ಜ್ಞಾನವು (ಕರ್ಮ, ಭಕ್ತಿ, ಧ್ಯಾನ, ಜ್ಞಾನ ವೈರಾಗ್ಯಾದಿ ಬೋಧಯುಕ್ತವಾದ ಈ ಗೀತಾಶಾಸ್ತ್ರವು); ಮಯಾ=ನನ್ನಿಂದ; ತೇ=ನಿನಗೆ; ಆಖ್ಯಾತಂ=ಹೇಳಲ್ಪಟ್ಟಿದೆ. ಏತತ್=ಇದನ್ನು, ಅಶೇಷೇಣ=ಸಂಪೂರ್ಣವಾಗಿ; ವಿಮೃಶ್ಯ=ವಿಮರ್ಶಿಸಿ (ಚೆನ್ನಾಗಿ ವಿಚಾರಣೆ ಮಾಡಿ) ಯಥಾ=ಯಾವ ಪ್ರಕಾರವಾಗಿ; ಇಚ್ಛಸಿ=(ಮಾಡಲು) ಇಚ್ಛಿಸುತ್ತೀಯೋ; ತಥಾ=ಆ ಪ್ರಕಾರವಾಗಿ; ಕುರು=ಮಾಡು.

**ತಾ||** ಈ ವಿಧವಾಗಿ ರಹಸ್ಯಗಳಲ್ಲಿ ಪರಮ ರಹಸ್ಯವಾದ ಜ್ಞಾನವನ್ನು (ಗೀತಾಶಾಸ್ತ್ರವನ್ನು) ನಾನು ನಿನಗೆ ಹೇಳಿದೆ. ಇದನ್ನೆಲ್ಲವನ್ನೂ ಚೆನ್ನಾಗಿ ವಿಮರ್ಶಿಸಿ ನಂತರ ನಿನಗೆ ಹೇಗೆ ಇಷ್ಟವೋ ಹಾಗೆ ಆಚರಿಸು.

**ವ್ಯಾಖ್ಯೆ:** 'ಗುಹ್ಯಾದ್ಗುಹ್ಯತರಂ'- ಶ್ರೀ ಕೃಷ್ಣಪರಮಾತ್ಮನು ಗೀತಾ ಶಾಸ್ತ್ರವೆಲ್ಲವನ್ನೂ ಉಪದೇಶಿಸಿ ಕೊನೆಯಲ್ಲಿ ಅದನ್ನು ಅತಿರಹಸ್ಯವಾದ ವಿದ್ಯೆಯೆಂದು ವರ್ಣಿಸುತ್ತಿದ್ದಾನೆ. ಉಪನಿಷತ್ಸಾರವಾದ ಈ ಮಹಾಜ್ಞಾನವನ್ನು ಸದ್ಗುರುಗಳು ಅತಿ ಗೋಪ್ಯವಾಗಿ ಇಟ್ಟುಕೊಂಡು ಅಧಿಕಾರಿಗಳಾದ ಒಳ್ಳೆಯ ಶಿಷ್ಯರಿಗೇ ಉಪದೇಶಿಸುವರು. ಅಧಿಕಾರಿ ಪುರುಷನಾದ ಅರ್ಜುನನಿಗೆ ಶ್ರೀಕೃಷ್ಣನು ಬೋಧಿಸಿ ತದ್ವಾರ ಲೋಕಕ್ಕೆಲ್ಲಾ ಮಹೋಪಕಾರ ಮಾಡಿದನು. ಈ ಜ್ಞಾನವನ್ನು ಅತಿರಹಸ್ಯವಾದದ್ದು ಎಂದು ಹೇಳಿರುವುದರಿಂದ, ಅದರ ಪ್ರಭಾವ ವೆಂತಹುದೋ ನಾವು ಊಹಿಸಬಹುದು. ಏಕೆಂದರೆ ಸಾಮಾನ್ಯವಾಗಿ ಬೆಲೆಬಾಳುವ ವಸ್ತುಗಳನ್ನೇ ಜನರು ರಹಸ್ಯವಾಗಿಡುವರಾದ್ದರಿಂದ ಈ ಮಹತ್ತರ ಜ್ಞಾನ ಧನದ ಬೆಲೆಯನ್ನು ಗ್ರಹಿಸಿ ವಿಜ್ಞುಗಳಾದವರು ಅದನ್ನು ಸದ್ವಿನಿಯೋಗ ಮಾಡಿಕೊಂಡು ಧನ್ಯರಾಗಬೇಕು.

'ವಿಮೃಶ್ಯೈತದಶೇಷೇಣ'- ಮಹನೀಯರು ತಾವು ಧರ್ಮವನ್ನು ಬೋಧಿಸಿದರೂ, ಅದನ್ನು ಕುರಿತು ಆಲೋಚಿಸಲು, ವಿಮರ್ಶಿಸಲು ಬೇರೆಯವರಿಗೆ ಪೂರ್ತಿಯಾಗಿ ಅಧಿಕಾರ ಕೊಡುವರು. ಅವರು ಹೇಳಿದ ಬೋಧೆಯನ್ನು ಪೂರ್ವಾಪರ ವಿಚಾರಣೆಯಿಲ್ಲದೆ, ಸ್ವಯಂ ಆಗಿ ಅದನ್ನು ಕುರಿತು ಆಲೋಚಿಸದೆ ತಾವು ಹೇಳಿದ್ದನ್ನು ಒಪ್ಪಿಕೊಳ್ಳಬೇಕೆಂದು ಅವರು ಇಚ್ಛಿಸುವುದಿಲ್ಲ. ಮಹಾತ್ಮರಾದ ಗುರುಗಳ ಲಕ್ಷಣವಿದು. ಗುರು ಬೋಧಿಸಿದ್ದನ್ನು ಶಿಷ್ಯನು ತನ್ನ ಸ್ವಂತ ಪರಿಜ್ಞಾನದಿಂದ, ನಿಜ ಸಂಸ್ಕಾರದಿಂದ ಚೆನ್ನಾಗಿ ಪರಿಶೀಲಿಸಿ ವಿಚಾರಣೆ ಮಾಡಿ ಪೂರ್ವಾ ಪರಗಳನ್ನು ವಿಮರ್ಶಿಸಿ, ನಂತರ ಅದರಲ್ಲಿ ತನಗೆ ಇಷ್ಟವಾದದ್ದನ್ನು ಗ್ರಹಿಸಬಹುದು. ಇಂತಹ ಸ್ವಾತಂತ್ರ್ಯವನ್ನು ಪೂರ್ವದಲ್ಲಿ ಗುರುಗಳು ಶಿಷ್ಯರಿಗೆ ಕೊಡುತ್ತಿದ್ದರು. ಈ ಪದ್ಧತಿಗೆ ಅನುಗುಣವಾಗಿಯೇ ಗುರುಗಳಿಗೆ ಗುರುಗಳಾದ ಶ್ರೀ ಕೃಷ್ಣಪರಮಾತ್ಮನು ವರ್ತಿಸಿರುವನು. ಶ್ರೀ ಕೃಷ್ಣನು ಅರ್ಜುನನಿಗೆ ಬೋಧಿಸಬೇಕಾದದ್ದನ್ನೆಲ್ಲಾ ಬೋಧಿಸಿ ನಂತರ 'ಓ ಅರ್ಜುನಾ! ನನ್ನ ಮೇಲಿನ ಭಕ್ತಿ, ವಿಶ್ವಾಸ, ಗುರು ಭಾವದಿಂದ ನಾನು ಹೇಳಿದ್ದನ್ನೆಲ್ಲಾ ನೀನು ಕಣ್ಣು ಮುಚ್ಚಿಕೊಂಡು ಕೇಳಬೇಕೆಂದು ನಾನು ಅಪೇಕ್ಷಿಸುವುದಿಲ್ಲ. ನೀನು ಸ್ವಂತವಾಗಿ ಅದನ್ನು ವಿಮರ್ಶಿಸಿ ವಿವೇಚನೆಯಿಂದ ನಿರ್ಧರಿಸು. ನಂತರ ನಿನಗೆ ಇಷ್ಟವಾದದ್ದನ್ನು ಗ್ರಹಿಸು ಎಂದು ಹೇಳಿ ತನ್ನ ವಿಶಾಲಭಾವ, ಔದಾರ್ಯವನ್ನು ಪ್ರಕಟಿಸಿದನು. ಗುರು ಬೋಧಿಸಿದ್ದನ್ನು ಶಿಷ್ಯನು ಸ್ವಂತ ಪ್ರಜ್ಞೆಯಿಂದ ಸಮಾಲೋಚನೆ ಮಾಡದೆ ಇದ್ದರೆ ಶಿಷ್ಯನ ಬುದ್ಧಿ ವಿಕಾಸವಾಗುವುದಿಲ್ಲ. ಇದೆಲ್ಲವನ್ನೂ ಆಲೋಚಿಸಿ ಭಗವಂತನು ಮೇಲಿನ ವಾಕ್ಯಗಳನ್ನು ಹೇಳಿದನು. ಮತ್ತೆ ಬೋಧೆಯಲ್ಲಿ ಯಥಾರ್ಥವಿಲ್ಲದಿದ್ದರೆ ಇಂತಹ ವಾಕ್ಯಗಳನ್ನು ಧೈರ್ಯವಾಗಿ ಯಾರೂ ಹೇಳಲಾರರು. ಆದ್ದರಿಂದ ಗೀತಾ ಬೋಧೆಯ ಪ್ರಾಮಾಣಿಕತೆ ಸತ್ಯತೆ ಇದರಿಂದ ವ್ಯಕ್ತವಾಗುತ್ತದೆ. 'ಅಶೇಷೇಣ'- ಎಂದು ಹೇಳಿರುವುದರಿಂದ ಸ್ವಲ್ಪ ವಿಚಾರಣೆಯಿಂದ ಮುಗಿಯುವುದಲ್ಲ ವೆಂದೂ, ಪೂರ್ತಿಯಾಗಿ ಸರ್ವವಿಧಗಳಿಂದ ಸಮಸ್ತ ಪ್ರಮಾಣಗಳಿಂದ ವಿಚಾರಿಸಬೇಕೆಂದು ಅರ್ಜುನನಿಗೆ ತಿಳಿಸಿದಂತಾಗಿದೆ.

'ಯಥೇಚ್ಛಸಿ ತಥಾ ಕುರು'- ಹಾಗೆ ವಿಚಾರಿಸಿದ ನಂತರ ನಿನಗೆ ಹೇಗೆ ಉಚಿತವೆಂದು ತೋರುವುದೋ ಹಾಗೆ ಆಚರಿಸು ಎಂದು ಭಗವಂತನು ಅಪ್ಪಣೆಯಿತ್ತನು. ಗುರುವಾದ ಶ್ರೀ ಕೃಷ್ಣನು ಕರ್ತೃತ್ವವನ್ನು ತನ್ನಲ್ಲಿಟ್ಟುಕೊಳ್ಳಲಿಲ್ಲ. ನಿಷ್ಕಾಮಕರ್ಮದ ದೃಷ್ಟಾಂತ ಇಲ್ಲಿ ಕಂಡು ಬರುತ್ತಿದೆ. ಹದಿನೆಂಟು ಅಧ್ಯಾಯಗಳ ಬೋಧೆಯ ನಂತರ ಕೊನೆಗೆ ಅದರ ಫಲವನ್ನು ಕೋರದೆ ಭಗವಂತನು ವಿರಮಿಸುತ್ತಿದ್ದಾನೆ. ಅರ್ಜುನನಿಂದ ಯುದ್ಧ ಮಾಡಿಸುವುದು ತನ್ನ ಬೋಧೆಯ

ಲಕ್ಷ್ಯವಾದರೂ ಆ ಬೋಧೆಯ ಫಲವಾದ ಆ ಲಕ್ಷ್ಯವನ್ನು ಅಪೇಕ್ಷಿಸದೆ ಶ್ರೀಕೃಷ್ಣನು ಅದನ್ನು ಮುಗಿಸಿದನು. 'ನೀನು ಯುದ್ಧ ಮಾಡು, ಇಲ್ಲ ಮಾಡದೆ ಇರು ಅದರಿಂದ ನನಗೆ ಯಾವ ಸಂಬಂಧವೂ ಇಲ್ಲ. ನಾನು ಹೇಳಬೇಕಾದ ಧರ್ಮವನ್ನು ಹೇಳಿದೆ, ನಂತರ ನಿನ್ನ ಇಷ್ಟ **(ಯಥೇಚ್ಛಸಿ ತಥಾ ಕುರು)**- ಎಂದು ಭಗವಂತನು ವಿಶಾಲ ದೃಷ್ಟಿಯಿಂದ ಹೇಳಿದನು. ನಿಷ್ಕಾಮ ಕರ್ಮದ ನಮೂನೆಯಿದು. ಹಾಗಲ್ಲದೆ ಕರ್ತೃತ್ವವನ್ನು ತಮ್ಮ ಮೇಲೆ ಹಾಕಿಕೊಂಡರೆ ಇನ್ನು ಗುರುಗಳಿಗೇ ಶಾಂತಿಯಿರುವುದಿಲ್ಲ. ಆದ್ದರಿಂದ ಹಾಗೆ ಅವರು ಎಂದಿಗೂ ಮಾಡುವುದಿಲ್ಲ. ಅವರ ಧರ್ಮವನ್ನು (Duty) ಅವರು ನೆರವೇರಿಸುವರು. ಫಲವನ್ನು ಅಪೇಕ್ಷಿಸುವುದಿಲ್ಲ. ಇನ್ನು ಶಿಷ್ಯನು ತನ್ನ ಉದ್ಧಾರವನ್ನು ತಾನು ನೋಡಿಕೊಳ್ಳಬೇಕು. ಗುರು ದಾರಿ ತೋರಿಸುವನು. ಶಿಷ್ಯನು ಆ ದಾರಿಯಲ್ಲಿ ತಾನು ನಡೆಯಬೇಕು.

'ಜ್ಞಾನ ಮಾಖ್ಯಾತಂ'- ಎಂದು ಹೇಳಿರುವುದರಿಂದ ಗೀತಾಶಾಸ್ತ್ರದಲ್ಲಿ ಕರ್ಮ ಭಕ್ತ್ಯಾದಿಗಳು ಅನೇಕವು ಹೇಳಲ್ಪಟ್ಟಿದ್ದರೂ ಅವೆಲ್ಲವೂ ಜ್ಞಾನದಲ್ಲಿ ಅಂತರ್ಭೂತವಾಗಿರುವುವು ಎಂದು ಸ್ಪಷ್ಟವಾಗುತ್ತದೆ. ಕರ್ಮ, ಭಕ್ತಿ, ಧ್ಯಾನ ಮುಂತಾದ ಧರ್ಮಗಳನ್ನು ಬೋಧಿಸಿ ಕೊನೆಗೆ ಅವುಗಳನ್ನೆಲ್ಲಾ ಸೇರಿಸಿ ಭಗವಂತನು 'ಜ್ಞಾನಂ' ಎನ್ನುವ ಒಂದು ಪದದಲ್ಲಿ ಅಡಗಿಸಿ ಇಲ್ಲಿ ಹೇಳಿರುವನು. ಆದ್ದರಿಂದ ಸಮಸ್ತ ಮಾರ್ಗಗಳೂ ಕೊನೆಗೆ ಜ್ಞಾನದಲ್ಲಿ ಪರಿ ಸಮಾಪ್ತಿ ಗೊಳ್ಳುವವೆಂದು, ಜ್ಞಾನವೇ ಜೀವಿಗಳ ಚರಮ ಲಕ್ಷ್ಯವೆಂದು, ಕರ್ಮ ಭಕ್ತ್ಯಾದಿಗಳು ಜ್ಞಾನ ಪ್ರಾಪ್ತಿಗೆ ಸಹಾಯವಾಗುವುವೆಂದು ಇದರ ದ್ವಾರ ತಿಳಿಯಬಹುದು.

ಪ್ರ : ಈ ಗೀತಾಜ್ಞಾನವೆಂತಹುದು ?

ಉ : ಪರಮ ರಹಸ್ಯವಾದುದು.

ಪ್ರ : ಗುರುವು ಜ್ಞಾನವನ್ನು ಬೋಧಿಸಿದ ನಂತರ ಶಿಷ್ಯನು ಏನು ಮಾಡಬೇಕು ?

ಉ : ಗುರು ಹೇಳಿದುದನ್ನು ತನ್ನ ಸ್ವಂತ ಆಲೋಚನೆಯಿಂದ ವಿಮರ್ಶಿಸಿ ಸಮಾಲೋಚನೆ ಮಾಡಿ ತನಗೆ ಇಷ್ಟವಾದುದನ್ನು ಕಾರ್ಯಾನ್ವಿತಗೊಳಿಸಬೇಕು.

**ಅ||** ಅರ್ಜುನನ ಮೇಲಿರುವ ಪ್ರೀತಿಯಿಂದ ಶ್ರೀಕೃಷ್ಣ ಭಗವಂತನು ಅತಿ ರಹಸ್ಯವಾದ ಒಂದೆರಡು ವಾಕ್ಯಗಳನ್ನು ಮತ್ತೆ ಹೇಳಬಯಸಿ ಹೀಗೆ ಹೇಳುತ್ತಿದ್ದಾನೆ-

**೬೪ ಸರ್ವಗುಹ್ಯತಮಂ ಭೂಯಃ ಶೃಣು ಮೇ ಪರಮಂ ವಚಃ**
**ಇಷ್ಟೋऽಸಿ ಮೇ ದೃಢಮಿತಿ ತತೋ ವಕ್ಷ್ಯಾಮಿ ತೇ ಹಿತಮ್**

**ಅರ್ಥ:** ಸರ್ವಗುಹ್ಯತಮಂ=ರಹಸ್ಯಗಳಲ್ಲಿ ಪರಮ ರಹಸ್ಯವಾದುದು; ಪರಮಂ= ಶ್ರೇಷ್ಠವಾದುದೂ ಆದ; ಮೇ=ನನ್ನ; ವಚಃ=ವಾಕ್ಕನ್ನು; ಭೂಯಃ=ಮತ್ತೆ; ಶೃಣು=ಕೇಳು (ತ್ವಂ=ನೀನು); ಮೇ=ನನಗೆ; ದೃಢಃ=ಹೆಚ್ಚಿನ; ಇಷ್ಟಃ ಅಸಿ=ಇಷ್ಟವುಳ್ಳವನಾಗಿದ್ದೀಯೆ; ಇತಿ ತತಂ=ಎನ್ನುವ ಕಾರಣದಿಂದ; ತೇ= ನಿನಗೆ; ಹಿತಂ=ಹಿತವನ್ನು (ಮೇಲನ್ನು ಕೋರಿ); ವಕ್ಷ್ಯಾಮಿ=ಹೇಳುತ್ತಿದ್ದೇನೆ.

**ತಾ||** (ಓ ಅರ್ಜುನಾ) ರಹಸ್ಯಗಳಲ್ಲಿ ಪರಮರಹಸ್ಯವಾದುದು, ಶ್ರೇಷ್ಠ ವಾದುದೂ ಆದ ನನ್ನ ಪರಮವಚನವನ್ನು ಮತ್ತೆ ಕೇಳು. (ಏಕೆಂದರೆ) ನೀನು ನನಗೆ ಅತ್ಯಂತ ಪ್ರೀತಿ ಪಾತ್ರನು. ಈ ಕಾರಣದಿಂದ ನಿನ್ನ ಹಿತವನ್ನು ಕೋರಿ ಮತ್ತೆ ಹೇಳುತ್ತಿದ್ದೇನೆ.

**ವ್ಯಾಖ್ಯೆ:** 'ಸರ್ವಗುಹ್ಯತಮಂ'- ಗುಹ್ಯಂ=ರಹಸ್ಯವಾದುದು, ಗುಹ್ಯತರಂ=ಪರಮ ರಹಸ್ಯವಾದುದು, ಗುಹ್ಯತಮಂ=ಇನ್ನೂ ಹೆಚ್ಚು ಪರಮರಹಸ್ಯವಾದುದು, ಸರ್ವಗುಹ್ಯತಮಂ=ಇನ್ನೂ ಅತ್ಯಂತ ಪರಮರಹಸ್ಯವಾದುದು - ಈ ಪ್ರಕಾರವಾಗಿ ಶ್ರೀಕೃಷ್ಣಪರಮಾತ್ಮನು ತಾನು ಹಾಕಬೇಕಾದ ವಿಶೇಷಣಗಳನ್ನೆಲ್ಲಾ ಪ್ರಯೋಗಿಸಿ ಈ ವಾಕ್ಯವನ್ನು ಹೇಳಿದನು. ಬೋಧೆಯ ರಹಸ್ಯವು, ಪರಿಣಾಮವು, ಪ್ರಭಾವವು ಇದರಿಂದ ಗೋಚರವಾಗುತ್ತದೆ. ಮತ್ತೆ ಹೇಳುತ್ತಿರುವ ಬೋಧೆಯಲ್ಲಿ ಕುತೂಹಲವನ್ನೂ ಕೆರಳಿಸುತ್ತದೆ.

'ಭೂಯಃ'- ಮತ್ತೆ ಹೇಳುತ್ತಿದ್ದೇನೆ ಕೇಳು. ಶಿಷ್ಯನ ಮೇಲಿರುವ ವಾತ್ಸಲ್ಯದಿಂದ ಬೋಧೆಯನ್ನು ಮತ್ತೆ ಮಾಡುತ್ತಿದ್ದಾನೆ. ಹೇಳಿರುವುದನ್ನೇ ಮತ್ತೆ ಜ್ಞಾಪಿಸುತ್ತಿದ್ದಾನೆ. ಹಿಂದಿನ ಶ್ಲೋಕದಲ್ಲಿ 'ಇತಿ ತೇ ಜ್ಞಾನ ಮಾಖ್ಯಾತಂ' ಎಂದು ಹೇಳಿ ಭಗವಂತನು ಗೀತಾಬೋಧೆಯನ್ನು ಪರಿಸಮಾಪ್ತಿಗೊಳಿಸಿದನು. ಆದರೂ ಅರ್ಜುನನ ಮೇಲಿನ ವಾತ್ಸಲ್ಯದಿಂದ ಪ್ರೇರಿತನಾಗಿ ಮತ್ತೆ ಉಪದೇಶ ಮಾಡಬಯಸಿ ಈ ವಾಕ್ಯಗಳನ್ನು ಪುನಃ ವಚಿಸುತ್ತಿರುವನು.

'ಪರಮಂ ವಚಃ'- ಎಂದು ಹೇಳುವುದರಿಂದ ಈ ಹೇಳುವ ವಾಕ್ಯಗಳು ಪರಮೋತ್ಕೃಷ್ಟವಾದವುಗಳೆಂದು ಸ್ಪಷ್ಟವಾಗುತ್ತದೆ. ಸಾಕ್ಷಾತ್ ಭಗವಂತನೇ ಅವುಗಳನ್ನು ಉತ್ಕೃಷ್ಟವಾದವುಗಳೆಂದು ಹೇಳಿರುವುದರಿಂದ ಆ ವಾಕ್ಯಗಳ ಮೇಲೆ ಜನರು ಎಷ್ಟು ವಿಶ್ವಾಸವಿಡಬೇಕೋ ಊಹಿಸಬಹುದು.

*"ಇಷ್ಟೋऽಸಿ ಮೇ ದೃಢಮಿತಿ ತತೋ ವಕ್ಷ್ಯಾಮಿ ತೇ ಹಿತಂ"*- ಗುರುವಿನ ಇಷ್ಟವನ್ನು ಗ್ರಹಿಸುವದರಲ್ಲಿ ಶಿಷ್ಯನ ಪ್ರಜ್ಞೆ ಅಡಗಿದೆ. ಗುರುವಿಗೆ ಪ್ರೀತಿ ಪಾತ್ರನಾಗುವುದು ಶಿಷ್ಯನಿಗೆ ವರ ಪ್ರಸಾದ. ಏಕೆಂದರೆ ಪ್ರೀತಿ ಪಾತ್ರನಾದ ಶಿಷ್ಯನಿಗೆ ಗುರುವು ತನ್ನ ಹೃದಯವನ್ನು ಬಿಚ್ಚಿ ರಹಸ್ಯಗಳನ್ನು ಉಪದೇಶಿಸುವನು. ಆದ್ದರಿಂದಲೇ ಸೇವಾ ಶುಶ್ರೂಷೆಗಳ ದ್ವಾರ ನಮಸ್ಕಾರಾದಿಗಳ ದ್ವಾರ ವಿನಯ ವಿಧೇಯತೆಗಳಿಂದ ಗುರುವಿನ ಪ್ರೀತಿಯನ್ನು ಸಂಪಾದಿಸಿಕೊಂಡಲ್ಲಿ, ಇನ್ನು ಮುಕ್ತಿ ಮಾರ್ಗವು ಶಿಷ್ಯನ ಕೈಗೆ ಸಿಕ್ಕ ಹಾಗೆಯೇ. ಈ ವಿಷಯವನ್ನೇ ಭಗವಂತನು **'ತದ್ವಿದ್ಧಿ ಪ್ರಣಿಪಾತೇನ......** (೪-೩೪) ಎನ್ನುವ ಶ್ಲೋಕದಿಂದ ಈಗಾಗಲೇ ಸ್ಪಷ್ಟಪಡಿಸಿರುವನು.

ಇಲ್ಲಿ ಅರ್ಜುನನು ಗುರುವಾದ ಶ್ರೀ ಕಷ್ಣನಿಗೆ ಪ್ರೀತಿ ಪಾತ್ರನು. ಈ ವಿಷಯವನ್ನು ಶ್ರೀ ಕೃಷ್ಣನೇ **'ಇಷ್ಟೋऽಸಿ ಮೇ ದೃಢಮಿತಿ'** ಎನ್ನುವ ವಾಕ್ಯದ ದ್ವಾರ ಬಹಿರಂಗಗೊಳಿಸಿದನು. ಯಾವಾಗ ಹೃದಯ ಪರಿಪಕ್ವವಾಗಿ, ನಿರ್ಮಲವಾಗಿ, ಭಕ್ತಿಯುತವಾಗಿ ಬೆಳಗುವುದೋ ಆಗ ಗುರು ಆತನನ್ನು ಹುಡುಕುತ್ತಾ ಬಂದು, ಆತನ ಹೃದಯ ಕ್ಷೇತ್ರದಲ್ಲಿ ಜ್ಞಾನ ಬೀಜವನ್ನು ನಾಟಿಹೋಗುವನು. ಚರಿತ್ರೆಯಲ್ಲಿ ಇಂತಹ ಅನೇಕ ದೃಷ್ಟಾಂತಗಳು ಕಾಣಿಸುತ್ತಿವೆ. ಪ್ರಸ್ತುತ ಸಂದರ್ಭದಲ್ಲಿಯೂ ಸಹ ಅರ್ಜುನನು ಪರಿಪಕ್ವ ನಿರ್ಮಲ ಹೃದಯವನ್ನು ಹೊಂದಿರುವನಾದ್ದರಿಂದ ಸಾಕ್ಷಾತ್ ಭಗವಂತನೇ ಅರ್ಜುನನಿಗೆ ಸ್ವಯಂ ಆಗಿ ಹಿತಬೋಧಿಸಿದನು. ಮೋಕ್ಷಕ್ಕೆ ಯಾರು ದಾರಿತೋರಿಸುವರು ಎಂದು ಚಿಂತಿಸಬೇಕಾಗಿಲ್ಲ. ಅವರವರ ಹೃದಯವನ್ನು ಪವಿತ್ರವಾಗಿಟ್ಟುಕೊಂಡರೆ ಸಾಕು. ಸದ್ಗುರುಗಳನ್ನು ಭಗವಂತನೇ ಅವರ ಬಳಿಗೆ ಕಳುಹಿಸುವನು. ಇಲ್ಲ ಅವನನ್ನೇ ಸದ್ಗುರುಗಳ ಬಳಿಗೆ ಕರೆದೊಯ್ಯುವನು. ಇಲ್ಲ ತಾನೇ ಆತನ ಹೃದಯದಲ್ಲಿದ್ದು ಸದ್ಬೋಧೆ ಮಾಡುವನು.

'ನೀನು ನನಗೆ ಇಷ್ಟವಾದುದರಿಂದ ನಿನಗೆ ಹಿತವನ್ನು ಬೋಧಿಸುತ್ತಿದ್ದೇನೆ' ಎಂದು ಭಗವಂತನು ಅರ್ಜುನನಿಗೆ ಹೇಳುವುದರಿಂದ ಸರ್ವೇಶ್ವರನ, ಸದ್ಗುರುಗಳ ಅನುಗ್ರಹವನ್ನು ಸಂಪಾದಿಸದವರಿಗೆ ಬೋಧೆಯು ಲಭಿಸುವುದಿಲ್ಲವೆಂದು ತಿಳಿಯುವುದು. ಆದ್ದರಿಂದಲೇ ಶಾಸ್ತ್ರಗಳಲ್ಲಿ ಅನೇಕ ಕಡೆ ಈಶ್ವರಾನುಗ್ರಹವಿಲ್ಲದಿದ್ದರೆ, ಸದ್ಗುರುಗಳ ಅನುಗ್ರಹವಿಲ್ಲದಿದ್ದರೆ ಅದ್ವೈತ ಜ್ಞಾನ (ಆತ್ಮ ಸಾಕ್ಷಾತ್ಕಾರ) ಉಂಟಾಗುವುದಿಲ್ಲವೆಂದು ಹೇಳಲಾಗಿದೆ. ಆದ್ದರಿಂದ ಮುಮುಕ್ಷುಗಳು ಜಾಗರೂಕರಾಗಿದ್ದು ಸರ್ವೇಶ್ವರನ, ಸದ್ಗುರುಗಳ ಅನುಗ್ರಹ ಸಂಪಾದಿಸಲು ನಾಮಸ್ಮರಣೆ, ಪೂಜೆ, ಸೇವಾದಿ ಕಾರ್ಯಗಳನ್ನು ಮಾಡುತ್ತಾ ಭಕ್ತಿ ಭಾವ ಸಮನ್ವಿತರಾಗಿರಬೇಕು

ಪ್ರ : ಶ್ರೀ ಕೃಷ್ಣಮೂರ್ತಿ ಅರ್ಜುನನಿಗೆ ಮತ್ತೆ ಯಾವ ಬೋಧೆಯನ್ನು ಮಾಡಬೇಕೆಂದು ಇಚ್ಛಿಸಿದನು?

ಉ: ಅತಿರಹಸ್ಯವಾದ ಸರ್ವೋತ್ಕೃಷ್ಟ ಬೋಧೆಯನ್ನು.

ಪ್ರ : ಶ್ರೀ ಕೃಷ್ಣಮೂರ್ತಿ ಗೀತಾಶಾಸ್ತ್ರವನ್ನು ಅರ್ಜುನನಿಗೇ ಏಕೆ ಬೋಧಿಸಿದನು?

ಉ: ಅರ್ಜುನನು ಶ್ರೀ ಕೃಷ್ಣನಿಗೆ ಪರಮ ಪ್ರೀತಿಪಾತ್ರನಾದುದರಿಂದ.

**ಅ||** ತಾನು ಹೇಳಬೇಕಾದ ಪರಮ ರಹಸ್ಯವಾದ ಬೋಧೆಯನ್ನು ಪರಮಾತ್ಮನು ಎರಡು ಶ್ಲೋಕಗಳಲ್ಲಿ ಹೇಳುತ್ತಿದ್ದಾನೆ-

**೬೫ ಮನ್ಮನಾ ಭವ ಮದ್ಭಕ್ತೋ ಮದ್ಯಾಜೀ ಮಾಂ ನಮಸ್ಕುರು**
**ಮಾಮೇವೈಷ್ಯಸಿ ಸತ್ಯಂ ತೇ ಪ್ರತಿಜಾನೇ ಪ್ರಿಯೋಽಸಿ ಮೇ**

**ಅರ್ಥ:** ಮನ್ಮನಾಃ=ನನ್ನಲ್ಲಿ ಮನಸ್ಸುಳ್ಳವನಾಗಿ; ಮದ್ಭಕ್ತಃ=ನನ್ನಲ್ಲಿ ಭಕ್ತಿಯುಳ್ಳವನಾಗಿ; ಮದ್ಯಾಜೀ= ನನ್ನನ್ನು ಆರಾಧಿಸು; ನಮಸ್ಕುರು= ನಮಸ್ಕರಿಸು; ಮಾಂ ಏವ=ನನ್ನನ್ನೇ; ಏಷ್ಯಸಿ=ಹೊಂದುವೆ; ಮೇ=ನನಗೆ; ಪ್ರಿಯಃ ಅಸಿ= ಇಷ್ಟವಾಗಿದ್ದೀಯೆ (ಆದ್ದರಿಂದ); ತೇ=ನನಗೆ; ಸತ್ಯಂ=ಯಥಾರ್ಥವಾಗಿ; ಪ್ರತಿಜಾನೇ=ಆಶ್ವಾಸನೆ ಕೊಡುತ್ತಿದ್ದೇನೆ (ಪ್ರತಿಜ್ಞೆ ಮಾಡುತ್ತಿದ್ದೇನೆ).

**ತಾ||** ನನ್ನಲ್ಲಿ ಮನಸ್ಸಿಡು, ನನ್ನಲ್ಲಿ ಭಕ್ತಿಯಿಂದಿರು, ನನ್ನನ್ನು ಆರಾಧಿಸು, ನನ್ನನ್ನು ನಮಸ್ಕರಿಸು. ಹಾಗೆ ಮಾಡಿದರೆ ನೀನು ನನ್ನನ್ನೇ ಹೊಂದುವೆ. ನೀನು ನನಗೆ ಪ್ರಿಯನಾದುದರಿಂದ ಯಥಾರ್ಥವಾಗಿ ಪ್ರತಿಜ್ಞೆ ಮಾಡಿ ಹೇಳುತ್ತಿದ್ದೇನೆ.

**ವ್ಯಾಖ್ಯೆ:** ಈ ಶ್ಲೋಕವು ಹಾಗು ಮುಂದೆ ಬರುವ ಚರಮ ಶ್ಲೋಕವು ಗೀತಾಸಾರವನ್ನು ತಿಳಿಸುವಂತವುಗಳಾಗಿವೆ. ಭಗವಂತನು ಅತಿ ರಹಸ್ಯವಾದ ಬೋಧೆಯನ್ನು ಹೇಳುವನೆಂದು ತಿಳಿಸಿ ಪ್ರಾರಂಭಿಸಿರುವುದರಿಂದ ಈ ಶ್ಲೋಕಗಳ ಮಹಾತ್ಮ್ಯೆ ಎಂತಹುದೆನ್ನುವುದನ್ನು ಊಹಿಸಿಕೊಳ್ಳಬಹುದು. ಈ ಎರಡು ಶ್ಲೋಕಗಳಲ್ಲಿ ಮೊದಲನೆಯದಾದ 'ಸಾಧನೆಯನ್ನು' ಎರಡನೆಯವಾದ 'ಸಾಧ್ಯ'ವನ್ನು ತಿಳಿಸಲಾಗಿದೆ. ಅಂದರೆ ಯಾವ ಸಾಧನೆಯನ್ನು ಮಾಡಬೇಕೋ ಮೊದಲನೆಯ ಪಾದದಲ್ಲಿ ತಿಳಿಸಿ ಅದಕ್ಕೆ ಲಭಿಸುವ ಫಲವನ್ನು ಕೂಡಲೇ ಎರಡನೆಯ ಪಾದದಲ್ಲಿ ಹೇಳಲಾಗಿದೆ. ಇಲ್ಲಿ ನಾಲ್ಕು ಸಾಧನೆಗಳನ್ನು ಕೊಡಲಾಗಿದೆ. ೧) ಮನಸ್ಸನ್ನು ದೈವದಲ್ಲಿ ಲಗ್ನ ಮಾಡುವುದು ೨) ದೈವದಲ್ಲಿ ಭಕ್ತಿ ಪೊಂದಿರುವುದು ೩) ದೈವವನ್ನೇ ಆರಾಧಿಸುವುದು ೪) ದೈವಕ್ಕೆ ನಮಸ್ಕರಿಸುವುದು. ಈ ನಾಲ್ಕು ಸಾಧನೆಗಳನ್ನು ಮಾಡುವವನು ಲಕ್ಷ್ಯವಾದ ಪರಮಾತ್ಮನನ್ನು ತಪ್ಪದೆ ಹೊಂದುವನು (ಮಾಮ್ಯೇವೈಷ್ಯಸಿ) ಪರಮಾತ್ಮ ಪ್ರಾಪ್ತಿಯೇ ಈ ಸಾಧನೆಯ ಫಲ.

ಆದ್ದರಿಂದ ಜನರು ತಮ್ಮ ಮನಸ್ಸುಗಳನ್ನು ಪ್ರಾಪಂಚಿಕ ದೃಶ್ಯ ವಿಲಾಸಗಳಿಂದ, ಶಬ್ದಾದಿ ವಿಷಯಗಳಿಂದ ಮರಳಿಸಿ, ಆತ್ಮದಲ್ಲಿಯೇ (ದೈವದಲ್ಲಿಯೇ) ಸ್ಥಿರಗೊಳಿಸಬೇಕು. ಮತ್ತೆ ಜನರಿಗೆ ಯಾವ ಭಕ್ತಿ, ಪ್ರೀತಿ ಬಾಹ್ಯ ವಿಷಯಗಳಲ್ಲಿದೆಯೋ ಅದನ್ನು ಭಗವಂತನಲ್ಲಿ ಇಡಬೇಕು. ಅವನನ್ನೇ ಅರ್ಚಿಸಬೇಕು, ಧ್ಯಾನಿಸಬೇಕು. ಅವನನ್ನೇ ನಮಸ್ಕರಿಸಬೇಕು. ಅಜ್ಞಾನಿಗಳಾದ ಜನರು ಹಾಗೆ ಮಾಡದೆ ತಮ್ಮ ಚಿತ್ತವನ್ನು ದೃಶ್ಯ ವಿಷಯಗಳಲ್ಲಿಯೇ ಲಗ್ನ ಮಾಡಿ ಅವುಗಳನ್ನೇ ಸೇವಿಸುತ್ತ, ಕಾಮಾದಿರಾಕ್ಷಸರಿಗೆ ನಮಸ್ಕರಿಸುತ್ತ , ಅವರನ್ನೇ ಅರ್ಚಿಸುತ್ತ, ಪೋಷಿಸುತ್ತಿದ್ದಾರೆ. ಅಂತಹವರು ಭಗವಂತನನ್ನು ಎಂದೆಂದಿಗೂ ಹೊಂದಲಾರರೆಂದು ಈ ಶ್ಲೋಕದಿಂದ ಸ್ಪಷ್ಟವಾಗುತ್ತದೆ. ಆದ್ದರಿಂದ ಅಂತಹ ವಿಷಯ ಸೇವನೆಯನ್ನು ಬಿಟ್ಟು ಜನರು ತಮ್ಮ ಚಿತ್ತವನ್ನು ಪರಮಾತ್ಮನಲ್ಲೇ ಕೇಂದ್ರೀಕರಿಸಬೇಕು. ನಂತರ ಅವರು ಪರಮಾತ್ಮನನ್ನು ಖಚಿತವಾಗಿ ಹೊಂದುವರು.

'ಸತ್ಯಂ ತೇ ಪ್ರತಿಜಾನೇ'- ಆ ಪ್ರಕಾರವಾಗಿ ಸಾಧನೆ ಮಾಡುವವರು ಭಗವಂತನನ್ನು ಹೊಂದುವರೋ ಇಲ್ಲವೋ ಎಂದು ಅರ್ಜುನನಿಗೆ ಸಂಶಯವುಂಟಾಗುವುದೋ ಏನೋ ಎಂದು ತಿಳಿದು 'ಇದು ಸತ್ಯ, ನಾನು ಪ್ರತಿಜ್ಞೆ ಮಾಡಿ ಹೇಳುತ್ತಿದ್ದೇನೆ' ಎಂದು ಶ್ರೀ ಕೃಷ್ಣಮೂರ್ತಿ ಅಸಂದಿಗ್ಧವಾಗಿ ಹೇಳಿದನು. ಸಾಕ್ಷಾತ್ ಭಗವಂತನೇ ಪ್ರತಿಜ್ಞೆ ಮಾಡಿ ಹೇಳುತ್ತಿದ್ದೇನೆ' ಎಂದು ತಿಳಿಸಿದಾಗ ಇನ್ನು ಆ ವಾಕ್ಯಗಳು ಎಷ್ಟು ಪರಮಸತ್ಯಗಳೋ ಊಹಿಸಿಕೊಳ್ಳಬಹುದು. ಈ ಪ್ರಕಾರವಾಗಿ ಭಗವಂತನು ಪ್ರತಿಜ್ಞೆ ಮಾಡಿ ಹೇಳಿರುವುದು ಗೀತೆಯಲ್ಲಿ ವಿರಳ. ಆದ್ದರಿಂದ ಈ ಅಪೂರ್ವ ವಾಕ್ಯಗಳ ಮೇಲೆ ಸಾಧಕರು ಪರಿಪೂರ್ಣ ಶ್ರದ್ಧೆಯಿಟ್ಟು ಅದನ್ನು ಹಾಗೆಯೇ ಆಚರಿಸಿ, ಭಗವತ್ಸಾಕ್ಷಾತ್ಕಾರವೆಂಬ ಮಹೋನ್ನತ ಪದವಿಯನ್ನುಹೊಂದಿ ಕೃತಾರ್ಥರಾಗಬೇಕು.

'ಮನ್ಮನಾ ಭವ'- ಎನ್ನುವ ವಾಕ್ಯದಲ್ಲಿ ಕರ್ಮ, ಭಕ್ತಿ, ಜ್ಞಾನ, ಧ್ಯಾನಗಳೆಂಬ ನಾಲ್ಕು ಸಾಧನೆಗಳೂ ತಿಳಿಸಲ್ಪಟ್ಟಿವೆ.

ಪ್ರ : ಭಗವತ್ಪ್ರಾಪ್ತಿಗೆ (ಮೋಕ್ಷಕ್ಕೆ) ಉಪಾಯಗಳೇನು?

ಉ: ೧) ಭಗವಂತನಲ್ಲಿ (ಆತ್ಮನಲ್ಲಿ) ಮನಸ್ಸು ಲಗ್ನವಾಗಿರುವುದು ೨) ಭಗವಂತನ ಮೇಲೆ ಭಕ್ತಿಯಿರುವುದು ೩) ಭಗವಂತನ ಆರಾಧನೆ ೪) ಭಗವಂತನಿಗೆ ನಮಸ್ಕರಿಸುವುದು.

ಪ್ರ : ಭಗವಂತನು ಯಾರ ಮೇಲೆ ತನ್ನ ಕೃಪಾಕಟಾಕ್ಷವನ್ನು ಪ್ರಸಾದಿಸುವನು?

ಉ :ತನ್ನನ್ನು ಆರಾಧಿಸುವುದರ ಮೂಲಕ ಆತನ ಇಷ್ಟವನ್ನು ಸೂರೆಗೊಂಡವನ ಮೇಲೆ.

ಪ್ರ : ಮೇಲೆ ತಿಳಿಸಿದ ಹಾಗೆ ದೈವವನ್ನು ಕುರಿತು ಯತ್ನಿಸುವವರಿಗೆ ಉಂಟಾಗುವ ಫಲವೇನು?

ಉ: ಅವರು ದೈವವನ್ನೇ ಹೊಂದುವರು. ಈ ವಾಕ್ಯ ಪರಮಸತ್ಯ. ಸಾಕ್ಷಾತ್ ಶ್ರೀ ಕೃಷ್ಣಮೂರ್ತಿಯೇ ಇದು ಸತ್ಯವೆಂದು ಪ್ರತಿಜ್ಞೆ ಮಾಡಿ ಹೇಳಿರುವನು.

**ಅ||** ಗೀತಾಸಾರವಾದ ಚರಮ ಶ್ಲೋಕವನ್ನು ಕೊಡಲಾಗಿದೆ-

**೬೬ ಸರ್ವಧರ್ಮಾನ್ ಪರಿತ್ಯಜ್ಯ ಮಾಮೇಕಂ ಶರಣಂ ವ್ರಜ**
**ಅಹಂ ತ್ವಾ ಸರ್ವಪಾಪೇಭ್ಯೋ ಮೋಕ್ಷಯಿಷ್ಯಾಮಿ ಮಾಶುಚಃ**

**ಅರ್ಥ:** ಸರ್ವಧರ್ಮಾನ್=ಸಮಸ್ತ ಧರ್ಮಗಳನ್ನು; ಪರಿತ್ಯಜ್ಯ=ಬಿಟ್ಟು; ಮಾಮ್=ನನ್ನನ್ನು; ಏಕಂ=ಒಬ್ಬನನ್ನು ಮಾತ್ರ; ಶರಣಂ ವ್ರಜ=ಶರಣು ಹೊಂದು; ಅಹಂ=ನಾನು; ತ್ವಾ=ನಿನ್ನನ್ನು; ಸರ್ವಪಾಪೇಭ್ಯಃ=ಸಮಸ್ತ ಪಾಪ ಗಳಿಂದ; ಮೋಕ್ಷಯಿಷ್ಯಾಮಿ=ವಿಮುಕ್ತಗೊಳಿಸುವೆನು; ಮಾಶುಚಃ= ಶೋಕಿಸಬೇಡ;

**ತಾ||** ಸಮಸ್ತ ಧರ್ಮಗಳನ್ನು ಬಿಟ್ಟು ನನ್ನೊಬ್ಬನನ್ನು ಮಾತ್ರ ಶರಣು ಹೊಂದು. ನಾನು ನಿನ್ನನ್ನು ಸಮಸ್ತ ಪಾಪಗಳಿಂದ ವಿಮುಕ್ತಿಗೊಳಿಸುವೆನು. ಶೋಕಿಸಬೇಡ.

**ವ್ಯಾಖ್ಯೆ:** ಈ ಶ್ಲೋಕ ಬಹಳ ಮುಖ್ಯವಾದುದು. ಈ ಶ್ಲೋಕವನ್ನು ಚರಮ ಶ್ಲೋಕವೆನ್ನುವರು. ಋಷ್ಯಾದಿ ನ್ಯಾಸಗಳಲ್ಲಿ ಈ ಶ್ಲೋಕದ ಮೊದಲನೆಯ ಪಾದವನ್ನು ಶಕ್ತಿಯೆಂದೂ, ಎರಡನೆಯ ಪಾದವನ್ನು ಕೀಲಕವೆಂದೂ ಹೇಳಲ್ಪಟ್ಟಿದೆ. ಇದರಿಂದ ಈ ಶ್ಲೋಕದ ಪ್ರಾಧಾನ್ಯತೆ ಗೊತ್ತಾಗುತ್ತದೆ. ಗೀತಾಶಾಸ್ತ್ರದ ತತ್ತ್ವಬೋಧೆಯ ಕೊನೆಯ ಶ್ಲೋಕವಾದುದರಿಂದ ಸಾರವೆಲ್ಲವನ್ನೂ ತುಂಬಿ ಭಗವಂತನು ಇದನ್ನು ಪ್ರಸಾದಿಸಿದ್ದಾನೆ. ಇದರಲ್ಲಿ ತಿಳಿಸಲ್ಪಟ್ಟ ಭಗವತ್ ಶರಣಾಗತಿ ಸಾಧಕರಿಗೆ ಬಹಳ ಮುಖ್ಯವಾದುದು. ವೈಷ್ಣವರು ಈ ಶ್ಲೋಕಕ್ಕೆ ಬಹಳ ಪ್ರಾಧಾನ್ಯತೆ ಕೊಟ್ಟು ಮಂತ್ರದಂತೆ ಸದಾ ಇದನ್ನು ಜಪಿಸುವರು.

'ಸರ್ವಧರ್ಮಾನ್ ಪರಿತ್ಯಜ್ಯ'- ನಿತ್ಯನೈಮಿತ್ತಿಕಾದಿ ಸಮಸ್ತ ಧರ್ಮ ಗಳಿಗಿಂತ, ಕರ್ಮಗಳಿಗಿಂತ ಭಗವತ್ ಶರಣಾಗತಿ ಎಷ್ಟೋ ಪಾಲು ಹೆಚ್ಚು ಫಲಗಳನ್ನು ಕೊಡುವುದು. ಆ ಚಿಕ್ಕ ಚಿಕ್ಕ ಧರ್ಮಗಳು, ಕರ್ಮಗಳು ಪುಣ್ಯವನ್ನುಂಟುಮಾಡುವುವು. ಭಗವತ್ ಶರಣಾಗತಿ ಮೋಕ್ಷವನ್ನುಂಟು ಮಾಡುವುದು. ಆಯಾ ಧರ್ಮಗಳ ಕರ್ಮಗಳ ಫಲವು ಶರಣಾಗತಿಯ ಫಲದಲ್ಲಿ ಅಡಗಿಯೇ ಇವೆ, (ನೂರಲ್ಲಿ ಹತ್ತು ಅಡಗಿರುವಂತೆ) ಆದ್ದರಿಂದ ಭಗವಂತನು ಆ ಚಿಕ್ಕ ಚಿಕ್ಕ ಕಾರ್ಯಗಳನ್ನು ಬಿಟ್ಟು ಅನಂತ ಮೋಕ್ಷವನ್ನು ಉಂಟುಮಾಡುವುದನ್ನೇ ಅವಲಂಬಿಸು ಎಂದು ಹೇಳಿದನು. 'ಮಾಮೇಕಂ'- ಎಂದು ಹೇಳುವುದರಿಂದ ಭಗವಂತನೊಬ್ಬನನ್ನು ಆಶ್ರಯಿಸಿದರೆ ಸಾಕು, ಸಮಸ್ತ ಕರ್ಮಧರ್ಮಗಳನ್ನು ಆಶ್ರಯಿಸಿದಂತೇ ಎನ್ನುವುದು ವಿದಿತವಾಗುತ್ತಿದೆ. ಗಿಡದ ಮೂಲಕ್ಕೆ ನೀರು ಹಾಕಿದರೆ ಎಲೆ, ಕೊಂಬೆಗಳಿಗೆ ನೀರು ಹಾಕಿದಂತೆಯಲ್ಲವೇ! ಮೇಲಾಗಿ ಬಹುತೇಕ ಮಾರ್ಗಗಳು, ಕರ್ಮಗಳು, ಧರ್ಮಗಳು ಗಜಿಬಿಜಿ ಯಾಗಿದ್ದು ಮನಸ್ಸಿಗೆ ವಿಕ್ಷೇಪವನ್ನು ಉಂಟುಮಾಡಬಹುದು. ಆದ್ದರಿಂದ ಒಂದನ್ನೇ ಆಶ್ರಯಿಸುವುದು ಶ್ರೇಯಸ್ಕರ. ಆ ಒಂದು ಯಾವುದು? ಯಾವುದನ್ನು ತಿಳಿದುಕೊಂಡರೆ ಸಮಸ್ತವನ್ನೂ ತಿಳಿದಂತಾಗುವುದೋ, ಯಾವುದನ್ನು ಹೊಂದಿದರೆ ಸಮಸ್ತವನ್ನೂ ಹೊಂದಿದಂತಾಗುತ್ತದೋ, ಅಂತಹ ಆತ್ಮವಸ್ತು ವನ್ನು, ಬ್ರಹ್ಮವಸ್ತುವನ್ನು (ಭಗವಂತನನ್ನು) ಆಶ್ರಯಿಸಿದರೆ ಸಾಕು. ಇತರ ಸಾಧನೆ, ಧರ್ಮಗಳಿಂದ, ಕರ್ಮಗಳಿಂದ ಕೆಲಸವಿಲ್ಲ. ಆದ್ದರಿಂದಲೇ ಅವುಗಳನ್ನೆಲ್ಲಾ ಬಿಟ್ಟು ತನ್ನನ್ನು ಒಬ್ಬನನ್ನೇ ಶರಣು ಹೊಂದು ಎಂದು ಭಗವಂತನು ಉಪದೇಶಿಸಿದನು.

'ಅಹಂ ತ್ವಾ ಸರ್ವಪಾಪೇಭ್ಯೋ ಮೋಕ್ಷಯಿಷ್ಯಾಮಿ'- ಆದರೆ ಕೆಲವರು ಹೀಗೆ ಪ್ರಶ್ನಿಸಬಹುದು- ಎಲ್ಲಾ ಕರ್ಮಗಳನ್ನು, ಧರ್ಮಗಳನ್ನು ಬಿಟ್ಟು ಭಗವಂತನನ್ನು ಆಶ್ರಯಿಸಿದರೆ ಆತನು ನಮಗೆ ಏನು ಕೊಡುವನು? ಅದಕ್ಕೆ ಶ್ರೀ ಕೃಷ್ಣ ಪರಮಾತ್ಮನು ಸರಿಯಾದ ಸಮಾಧಾನವನ್ನು ಕೊಟ್ಟಿರುವನು. 'ಹಾಗೆ ನನ್ನನ್ನು ಆಶ್ರಯಿಸಿದರೆ ನಿನ್ನನ್ನು ಸಮಸ್ತ ಪಾಪಗಳಿಂದ, ಬಂಧಗಳಿಂದ ವಿಮುಕ್ತಿಗೊಳಿಸುವೆನು'- ಎಂದು. 'ಸರ್ವಪಾಪೇಭ್ಯೋ'- ಎಂದು ಹೇಳುವು ದರಿಂದ ಯಾವುದೋ ಒಂದು ಪಾಪದಿಂದ ಅಲ್ಲದೆ ಸಮಸ್ತ ಪಾಪಗಳಿಂದ ಬಿಡುಗಡೆ ಹೊಂದುವಂತೆ ಮಾಡುವೆ ಎನ್ನುವ ಆಶ್ವಾಸನೆಯಿತ್ತಿರುವನು. ಅಂದರೆ ಸಂಪೂರ್ಣವಾಗಿ ಬಂಧ ವಿಮುಕ್ತಿ ಮಾಡುವೆನು ಎಂದು ಹೇಳಿರುವನು. ಮನುಜನಿಗೆ ಇದಕ್ಕಿಂತ ಅಧಿಕವಾದುದು ಏನು ಬೇಕು? ಜನನ ಮರಣಾದಿ ಬಂಧನದಿಂದ ತಪ್ಪಿಸಿಕೊಳ್ಳುವುದು, ಕರ್ಮ ಪಾಶದಿಂದ ವಿಮುಕ್ತಿಯಾಗುವುದೇ ಆತನಿಗೆ ಬೇಕಾಗಿದೆ. ಅದನ್ನು ಉಂಟಾಗುವಂತೆ ಮಾಡುವೆನೆಂದು ಭಗವಂತನು ಪ್ರತಿಜ್ಞೆ ಮಾಡಿದನು. ಆದರೆ ಯಾರಿಗೆ? ಎಲ್ಲರಿಗೂ ಅಲ್ಲ. ಎಲ್ಲರೂ ಭಗವಂತನ ಮಕ್ಕಳಾಗಿದ್ದರೂ, ಯಾರು ಕೈಚಾಚಿ ಆತನನ್ನು ಆಹ್ವಾನಿಸುವರೋ ಅವರನ್ನು ಮಾತ್ರ ಹಿಡಿದುಕೊಂಡು ತನ್ನ ಬಳಿ ಕೂರಿಸಿಕೊಳ್ಳುವನು. ಯಾವನು ಸಮಸ್ತ ಅಪೇಕ್ಷೆಗಳನ್ನು, ಧರ್ಮಗಳನ್ನು, ಕರ್ಮಗಳನ್ನು ಬಿಟ್ಟು ತನ್ನನ್ನು (ಭಗವಂತನನ್ನು ಇಲ್ಲವೆ ಆತ್ಮವನ್ನು) ಶರಣು ಹೊಂದುವನೋ, ಶರೀರ ವಾಕ್‌ಮನಸ್ಸುಗಳಿಂದ ಅವನನ್ನೇ ಆಶ್ರಯಿಸುವನೋ, ಅಂದರೆ ದೃಶ್ಯ ವಸ್ತುಗಳನ್ನು, ದೃಶ್ಯ ವಿಷಯ ಸಂಬಂಧಗಳನ್ನು, ಧರ್ಮಗಳನ್ನು ತ್ಯಜಿಸಿ ದೃಗ್ರೂಪನಾದ ಆತ್ಮವೊಂದನ್ನೇ ಅವಲಂಬಿಸುವನೋ ಅಂತಹವನನ್ನು ಮಾತ್ರ ಸಂಸಾರ ಶೃಂಖಲೆಯಿಂದ ಬಿಡುಗಡೆ ಮಾಡಿ ಮುಕ್ತಿಗೊಳಿಸುವೆನೆಂದು ಶ್ರೀ ಕೃಷ್ಣಮೂರ್ತಿ ಹೇಳಿದನು.

ಇದರಿಂದ ಜೀವಿಯು ತನ್ನ ಕರ್ತವ್ಯವನ್ನು ತಾನು ನೆರವೇರಿಸಿದರೆ ಭಗವಂತನು ತಾನು ಕೊಡಬೇಕಾದದ್ದನ್ನು ಕೊಡುವನು ಎನ್ನುವುದು ಸ್ಪಷ್ಟವಾಗುತ್ತದೆ. ಈ ಶ್ಲೋಕದಲ್ಲಿಯ ಮೊದಲಪಾದ ಜೀವಿಯ ಕರ್ತವ್ಯವನ್ನು ಸೂಚಿಸುವುದು. ಎರಡನೆಯ ಪಾದ ಭಗವಂತನು ಕೊಡುವ ಪ್ರತಿಫಲವನ್ನು ಸೂಚಿಸುವುದು. ಜೀವಿಯು ತಾನು ಮಾಡುವುದನ್ನು ಮಾಡದಿದ್ದರೆ ಭಗವಂತನು ತಾನು ಕೊಡುವುದನ್ನು ಕೊಡುವುದಿಲ್ಲ. ಜೀವಿಯು ಪರಮಾತ್ಮನನ್ನು ಆಶ್ರಯಿಸದೆ, ದೃಶ್ಯ ಪದಾರ್ಥಗಳನ್ನು ಮಾತ್ರ ಹಿಡಿದು ಕೊಂಡಿದ್ದರೆ ಪರಮಾತ್ಮನು ಮಾತ್ರ ಏನು ಮಾಡಬಲ್ಲನು? ಪ್ರಕೃತಿಯಲ್ಲಿ ಒಂದು ನಿಯಮವನ್ನು ಭಗವಂತನು ಏರ್ಪಡಿಸಿರುವನು. ಅದು ಏನೆಂದರೆ- ಪಾಪದಿಂದ ದುಃಖ, ಪುಣ್ಯದಿಂದ ಸುಖ, ಜ್ಞಾನ ಇಲ್ಲವೆ ಭಗವತ್ ಶರಣಾಗತಿ ಯಿಂದ ಮೋಕ್ಷ ಉಂಟಾಗುವುದು ಎಂದು. ಯಾರು ಯಾವ ವಿಧವಾಗಿ ಆಚರಿಸುವರೋ ಅವರು ಆ ವಿಧದ ಫಲವನ್ನೇ ಹೊಂದುವರು. ಇದರಲ್ಲಿ ಭಗವಂತನ ಪಕ್ಷ ಪಾತವೇನೂ ಇಲ್ಲ. 'ಮಾಡಿದ್ದುಣ್ಣೋ ಮಹರಾಯ'.

'ಸರ್ವಧರ್ಮಾನ್ ಪರಿತ್ಯಜ್ಯ'- ಎನ್ನುವ ವಾಕ್ಯಕ್ಕೆ ಮತ್ತೊಂದು ಅರ್ಥವೂ ಇದೆ. 'ದೃಶ್ಯ ಭಾವಗಳನ್ನು ಬಿಟ್ಟು ದೃಗ್ವಸ್ತುವಾದ ಆತ್ಮವನ್ನು ಶರಣು ಹೊಂದು' ಎಂದು ಹೇಳಬಹುದು. ಇದು ಮತ್ತೂ ಶ್ರೇಷ್ಠವಾದ ಅರ್ಥ. ತ್ಯಾಗದಿಂದಲೇ ಮೋಕ್ಷವು ಲಭಿಸುವುದೆನ್ನುವ ಶಾಸ್ತ್ರ ನಿಯಮವನ್ನು ಇದು ಪೋಷಿಸುತ್ತದೆ. ಒಂದನ್ನು ತ್ಯಜಿಸದಿದ್ದರೆ ಮತ್ತೊಂದು ಲಭಿಸುವುದಿಲ್ಲ. ದೆವ್ವವನ್ನು ಹಿಡಿದಿದ್ದರೆ ದೈವ ಲಭಿಸದು. ದೇವರನ್ನು ಹಿಡಿಯಬೇಕೆಂದರೆ ದೆವ್ವವನ್ನು (ದೃಶ್ಯ ರೂಪ ಪಿಶಾಚಿಯನ್ನು) ತ್ಯಜಿಸಬೇಕು. ಅಂದರೆ ದೃಶ್ಯವನ್ನು ಕುರಿತ ಇಲ್ಲವೆ ಕ್ಷೇತ್ರದ ಬಗ್ಗೆಯ ಭಾವವನ್ನು ತ್ಯಜಿಸಿ ಕ್ಷೇತ್ರಜ್ಞನಾದ ಪರಮಾತ್ಮನನ್ನು ಶರಣು ಹೊಂದಬೇಕು.

ಈ ಶ್ಲೋಕದಲ್ಲಿ ಸಮಸ್ತ ಧರ್ಮಗಳನ್ನು ಬಿಡಬೇಕೆಂದು ಹೇಳಿದಾಕ್ಷಣ ಅಧರ್ಮವನ್ನು ಆಚರಿಸಬೇಕೆಂದಲ್ಲ. ಇಲ್ಲವೆ ಧರ್ಮವನ್ನು ಬಿಟ್ಟು ಸೋಮಾರಿಯಾಗಿರಬೇಕೆಂದೂ ಅಲ್ಲ. ಮಹಾಧರ್ಮವಾದ ಭಗವತ್ ಶರಣಾಗತಿಯಲ್ಲೇ, ಆತ್ಮಾಶ್ರಯದಲ್ಲಿಯೇ ಬೇರೆಯ ಧರ್ಮಗಳೆಲ್ಲವೂ ಅಂತರ್ಭೂತವಾಗಿರುವುವಾದ್ದರಿಂದ- 'ಶತೇ ಪಂಚಾಶತ್' (ನೂರಲ್ಲಿ ಐವತ್ತು ಸೇರಿದೆ) ಎನ್ನುವ ನ್ಯಾಯವನ್ನನುಸರಿಸಿ ಅಂತಹ ಮಹಾ ಧರ್ಮವನ್ನು ಆಚರಿಸುವವನು ಚಿಕ್ಕಚಿಕ್ಕವುಗಳನ್ನು ಪ್ರತ್ಯೇಕವಾಗಿ ಆಶ್ರಯಿಸುವ ಕೆಲಸವಿಲ್ಲವೆಂದೂ, ಆ ಒಂದನ್ನು ಸರಿಯಾಗಿ ಪಾಲಿಸಿದರೆ ಸಾಕು ಎಂದೂ ಹೇಳಲಾಗಿದೆ. ಇಲ್ಲಿ ದೊಡ್ಡ ಧರ್ಮವನ್ನು ಪಾಲಿಸುವಾಗ ಚಿಕ್ಕ ಧರ್ಮದ ಅವಸರವಿಲ್ಲವೆಂದು ಹೇಳಲಾಗಿದೆಯೇ ಹೊರತು, ಚಿಕ್ಕ ಧರ್ಮದಲ್ಲಿ ಏನೂ ಸತ್ವವಿಲ್ಲವೆಂದಾಗಲಿ, ಇಲ್ಲವೆ ಅವುಗಳನ್ನು ಬಿಟ್ಟು ಸೋಮಾರಿಗಳಾಗಬೇಕೆಂದಾಗಲಿ ಅರ್ಥವಲ್ಲ. ಆದ್ದರಿಂದ ಪದಗಳ ಅರ್ಥವನ್ನು ಜಾಗ್ರತೆಯಿಂದ ತಿಳಿದುಕೊಳ್ಳಬೇಕು.

'ಮಾಶುಚಃ'- ಈ ಸತ್ಯವನ್ನು ತಿಳಿದುಕೊಂಡು ಭಗವತ್ ಶರಣಾಗತಿ ಹೊಂದಿ ಇನ್ನು ಯಾವ ಮಾತ್ರವೂ ಶೋಕಿಸಬೇಡ ಎಂದು ಶ್ರೀ ಕೃಷ್ಣಮೂರ್ತಿ ಅರ್ಜುನನಿಗೆ ಅಪ್ಪಣೆ ಕೊಟ್ಟನು. ದುಃಖರಹಿತವಾದ ಶಾಶ್ವತ ಆತ್ಮಪದವಿ ಭಗವಂತನ ಸ್ಥಾನ ಲಭಿಸಿದಾಗ ಇನ್ನು ಶೋಕಕ್ಕೆ ಸ್ಥಾನವೆಲ್ಲಿದೆ? ದೃಶ್ಯವನ್ನು ಆಶ್ರಯಿಸುವವನನ್ನು ನಶ್ವರ ವಸ್ತುಗಳನ್ನು ನಂಬಿಕೊಂಡವನನ್ನು ಶೋಕವು ಬಾಧಿಸುವುದೇ ಆಗಲಿ, ಶಾಶ್ವತವಾದ ಆತ್ಮವನ್ನು, ಭಗವಂತನನ್ನು ಆಶ್ರಯಿಸುವವರನ್ನಲ್ಲ. ಅವರು ನಿತ್ಯವೂ ಪರಮಾನಂದವನ್ನೇ ಅನುಭವಿಸುವರು. ಆದ್ದರಿಂದಲೇ 'ನನ್ನನ್ನು ಆಶ್ರಯಿಸಿದರೆ ಇನ್ನು ದುಃಖ ಪಡುವ ಅವಸರವಿಲ್ಲ, ಆದ್ದರಿಂದ ಶೋಕಿಸಬೇಡ' ಎಂದು ಅರ್ಜುನನಿಗೆ ಬೋಧಿಸಲು ಕಾರಣ.

'ಅಶೋಚ್ಯಾನನ್ವಶೋಚಸ್ತ್ವಂ'- ಎನ್ನುವ ಶೋಕರಾಹಿತ್ಯ ಬೋಧನೆಯಿಂದ ಗೀತೆ ಪ್ರಾರಂಭವಾಗಿ 'ಮಾ ಶುಚಃ' ಎನ್ನುವ ಶೋಕ ರಾಹಿತ್ಯ ಬೋಧೆಯಿಂದ ಅಂತ್ಯಗೊಂಡಿರುವುದರಿಂದ ಗೀತಾಲಕ್ಷ್ಯ ಶೋಕರಾಹಿತ್ಯ ಎಂದು ಸ್ಪಷ್ಟವಾಗುತ್ತದೆ. ದುಃಖರಾಹಿತ್ಯ, ಆನಂದ ಪ್ರಾಪ್ತಿ, ಸಂಸಾರ ದುಃಖಶಮನ, ಬ್ರಹ್ಮಾನಂದ ಪ್ರಾಪ್ತಿ-ಗೀತೆಯ ಲಕ್ಷ್ಯಗಳು. ಅಂತಹ ಲಕ್ಷ್ಯಗಳನ್ನು ಜೀವಿಗಳು ಹೊಂದುವುದೇ ಗೀತೆಯ ಆಶಯ.

ಈ ಶ್ಲೋಕದಲ್ಲಿ ಅತಿ ಸುಲಭವಾದ ಭಕ್ತಿ, ಶರಣಾಗತಿ ಮಾತ್ರವೇ ಮುಕ್ತಿಗೆ ಹೇತು ಎಂದು ತಿಳಿಸಲ್ಪಟ್ಟಿರುವುದರಿಂದ ಇನ್ನು ದೊಡ್ಡ ದೊಡ್ಡ ಶಾಸ್ತ್ರಗಳನ್ನು ಓದದವರು, ಪಾಂಡಿತ್ಯ ಪ್ರತಿಭೆಯಿಲ್ಲದವರು, ಅನಕ್ಷರ ಕುಕ್ಷಿಗಳು, ಮೋಕ್ಷಕ್ಕಾಗಿ ದಿಗಿಲು ಬೀಳುವ ಕೆಲಸವಿಲ್ಲವೆಂದು, ನಿರ್ಮಲ ದೈವಭಕ್ತಿ ಒಂದಿದ್ದರೆ ಸಾಕೆಂದು ತಿಳಿಯುತ್ತದೆ.

ಈ ಶ್ಲೋಕ ಗೀತೆಯಲ್ಲಿ ಬಹಳ ಮುಖ್ಯವಾದುದಾಗಿರುವುದರಿಂದ ಇದನ್ನು ಕಂಠಪಾಠ ಮಾಡಿ ಅರ್ಥವನ್ನು ಸದಾ ಮನನ ಮಾಡುವುದು ಮುಮುಕ್ಷುಗಳಿಗೆ ಅತ್ಯಂತ ಶ್ರೇಯಸ್ಕರ.

ಪ್ರ : ಜೀವಿಗಳಿಗೆ ಸಮಸ್ತ ಪಾಪ ನಿವೃತ್ತಿ, ಬಂಧ ವಿಮುಕ್ತಿ, ದುಃಖ ನಿವೃತ್ತಿ ಹೇಗೆ ಉಂಟಾಗುವುವು?

ಉ : ಸಮಸ್ತ (ನಿತ್ಯನೈಮಿತ್ತಿಕಾದಿ) ಧರ್ಮಗಳನ್ನು, ಕರ್ಮಗಳನ್ನು ಇಲ್ಲವೆ ಸಮಸ್ತ ದೃಶ್ಯ ಭಾವಗಳನ್ನು ಬಿಟ್ಟು ಭಗವಂತನನ್ನು (ಆತ್ಮವನ್ನು) ಒಬ್ಬನನ್ನೇ ಆಶ್ರಯಿಸಿದರೆ ಆತನೇ ಜೀವಿಗೆ ಮೋಕ್ಷವನ್ನುಂಟುಮಾಡುವನು.,

ಪ್ರ : ಶೋಕ ರಾಹಿತ್ಯಕ್ಕೆ ಮಾರ್ಗವೇನು?

ಉ : ಭಗವತ್‌ಶರಣಾಗತಿ, ದೈವಾಶ್ರಯ

**ಅ॥** ಭಕ್ತಿಯಿಲ್ಲದವನಿಗೆ, ಭಗವದ್ವಾಕ್ಯಗಳಲ್ಲಿ ವಿಶ್ವಾಸವಿಲ್ಲದವನಿಗೆ ಈ ಗೀತಾಶಾಸ್ತ್ರವನ್ನು ಉಪದೇಶಿಸಬಾರದೆಂದು ತಿಳಿಸಲಾಗುತ್ತಿದೆ-

**೬೭ ಇದಂ ತೇ ನಾತಪಸ್ಕಾಯ ನಾಭಕ್ತಾಯ ಕದಾಚನಾ**
**ನ ಚಾಶುಶ್ರೂಷವೇ ವಾಚ್ಯಂ ನ ಚ ಮಾಂ ಯೋಽಭ್ಯಸೂಯತಿ**

**ಅರ್ಥ:** ತೇ=ನಿನಗೆ, (ಅಭಿಹಿತಂ=ಹೇಳಲ್ಪಟ್ಟ); ಇದಂ=ಈ ಗೀತಾ ಶಾಸ್ತ್ರವನ್ನು; ಕದಾಚನ=ಯಾವಾಗಲೂ; ಅತಪಸ್ಕಾಯ=ತಪಸ್ಸು ಇಲ್ಲದವನಿಗೆ (ಇಲ್ಲವೆ ಸಂಸಾರಬಂಧನದಿಂದ ತಪ್ಪಿಸಿಕೊಳ್ಳಬೇಕೆಂಬ ತವಕವಿಲ್ಲದವನಿಗೆ); ನ ವಾಚ್ಯಂ=ಹೇಳಬಾರದು; ಅಭಕ್ತಾಯ=ಭಕ್ತನಲ್ಲದವನಿಗೆ; ನ (ವಾಚ್ಯಂ)= ಹೇಳಬೇಕಾದುದಲ್ಲ; ಅಶುಶ್ರೂಷವೇ ಚ= ಕೇಳಲು ಇಚ್ಛೆಯಿಲ್ಲದವನಿಗೆ (ಇಲ್ಲವೆ ಗುರುಸೇವೆ ಮಾಡದವನಿಗೆ); ನ (ವಾಚ್ಯಂ)=ಹೇಳಬೇಕಾದುದಲ್ಲ; ಯಃ=ಯಾವನು; ಮಾಂ=ನನ್ನನ್ನು; ಅಭ್ಯಸೂಯತಿಃ=ದೂಷಿಸುವನೋ; (ತಸ್ಮೈ) ಚ=ಆತನಿಗೆ ಕೂಡ; ನ (ವಾಚ್ಯಂ)=ಹೇಳ ಬೇಕಾದುದಲ್ಲ.

**ತಾ॥** ನಿನಗೆ ಬೋಧಿಸಲ್ಪಟ್ಟ ಈ ಗೀತಾಶಾಸ್ತ್ರವನ್ನು ತಪಸ್ವಿಯಲ್ಲನವನಿಗೆ, ಭಕ್ತನಲ್ಲದವನಿಗೆ, ಕೇಳುವದಕ್ಕೆ ಇಷ್ಟವಿಲ್ಲದವನಿಗೆ (ಇಲ್ಲವ ಗುರುಸೇವೆ ಮಾಡದವನಿಗೆ), ನನ್ನನ್ನು ದೂಷಿಸುವವನಿಗೆ (ಇಲ್ಲವೆ ನನ್ನೆಡೆ ನಿರ್ಲಕ್ಷ್ಯವಿರುವವನಿಗೆ) ಯಾವಾಗಲೂ ಹೇಳಕೂಡದು.

**ವ್ಯಾಖ್ಯೆ:** ಈ ಗೀತಾಶಾಸ್ತ್ರವನ್ನು ಯಾರಿಗೆ ಬೋಧಿಸಬಾರದೆನ್ನುವುದನ್ನು ಈ ಶ್ಲೋಕದಲ್ಲಿ ಹೇಳಲಾಗಿದೆ. ಏಕೆಂದರೆ ಅತಿ ಪವಿತ್ರವಾದ ಈ ಬೋಧೆಯನ್ನು ಅಪಾತ್ರನಿಗೆ, ಅನರ್ಹನಿಗೆ, ಹೇಳುವುದರಿಂದ ನಿರುಪಯೋಗವಾಗುವುದು ಅಹಂಭಾವ, ಗರ್ವ ಹೃದಯದಲ್ಲಿ ತಾಂಡವವಾಡುತ್ತಿರುವ ಜನರಿಗೆ ಈ ಬೋಧೆ ಮಾಡಿದರೆ ಅವರ ಮನಸ್ಸಿಗೆ ನಾಟುವುದಿಲ್ಲ. ಮಲಿನ ಬಟ್ಟೆಗೆ ಬಣ್ಣ ಹಾಕಿ ಉಪಯೋಗವಿಲ್ಲ. ಆದ್ದರಿಂದ ವಿನಯ ವಿಧೇಯತೆಗಳು, ಭಕ್ತಿ, ಸೇವಾದಿ ಭಾವಗಳಿರುವವರಿಗೇ ಈ ಗೀತಾಶಾಸ್ತ್ರವನ್ನು ಬೋಧಿಸಬೇಕೇ ಹೊರತು ಬೇರೆಯವರಿಗಲ್ಲ ಎಂದು ಭಗವಂತನು ಹೇಳಿದನು. ಇಂತಹ ಅಮೂಲ್ಯ ಬೋಧ ಅನರ್ಹರ ಕೈಗೆ ಬಿದ್ದಲ್ಲಿ ನಿಷ್ಪ್ರಯೋಜನೆಯಾಗುತ್ತದರಿಂದ ಅಂತಹ ಸ್ಥಿತಿಯನ್ನು ಯಾರೂ ಉಂಟುಮಾಡಬಾರದೆಂದು ಗೀತಾಬೋಧೆಯ ಕೊನೆಯಲ್ಲಿ ಎಚ್ಚರಿಕೆಯನ್ನು ಕೊಡಲಾಗಿದೆ. ತಪಸ್ವಿಯಲ್ಲನವನಿಗೆ, ಭಕ್ತಿಯಿಲ್ಲದವನಿಗೆ (ಗುರು, ಶುಶ್ರೂಷೆ ಮಾಡದವನಿಗೆ), ಭಗವಂತನನ್ನು ನಿಂದಿಸುವವನಿಗೆ ಗೀತಾಶಾಸ್ತ್ರವನ್ನು ಬೋಧಿಸಬಾರದೆಂದು ಇಲ್ಲಿ ತಿಳಿಸಲಾಗಿದೆ. ಇಲ್ಲಿ ತಪಸ್ಸೆಂದರೆ ಪಾಪಗಳನ್ನು ಹೃದಯ ಮಾಲಿನ್ಯಗಳನ್ನು ತಪಿಸುವಂತೆ ಮಾಡುವುದೇ ಆಗಿದೆ. ಇಲ್ಲದಿದ್ದರೆ ಈ ಸಂಸಾರ ಬಂಧನದಿಂದ ಯಾವಾಗ ವಿಮುಕ್ತಿ ಹೊಂದುವೆನು ಎಂದು ಇರುವ ತೀವ್ರ ಪರಿತಾಪವೆಂದೂ ಹೇಳಬಹುದು. ಅಂತಹ ಉತ್ಕಟ ಪರಿತಾಪ ಉಳ್ಳವನಿಗೆ ಮಾತ್ರ ಪರಮಾತ್ಮ ಬೋಧೆ ಚೆನ್ನಾಗಿ ಅರ್ಥವಾಗುತ್ತದೆ (ರೋಗಿಗೆ ಔಷಧ ಹಿಡಿಸುವ ಹಾಗೆ) ಇಲ್ಲಿ ಶುಶ್ರೂಷೆಯೆಂದರೆ ಗುರುಸೇವೆ, ಹಿರಿಯರ ಸೇವೆ ಎಂದು ಹೇಳಬಹುದು. ಇಲ್ಲವೆ ಶ್ರವಣಕ್ಕೆ ಇರುವ ಕುತೂಹಲ ಎಂದು ಅರ್ಥ ಹೇಳಬಹುದು. 'ಕದಾಚನ' ಎಂದು ಹೇಳುವುದರಿಂದ ಇಂತಹ ಸುಗುಣಗಳು ಇಲ್ಲದಿರುವವನಿಗೆ ಗೀತಾಶಾಸ್ತ್ರವನ್ನು ಉಪದೇಶಿಸಬಾರದೆಂದು ಭಗವಂತನು ಎಚ್ಚರಿಕೆಯಿತ್ತಿದ್ದಾನೆ. ಅವರು ಯಾರಾದರೂ ಸರಿಯೇ, ಲೋಕದ ದೃಷ್ಟಿಯಲ್ಲಿ

ಅವರು ಎಷ್ಟು ದೊಡ್ಡವರಾದರೂ ಸರಿಯೇ. ಈ ಸುಗುಣಗಳಿ ರುವವರು ನೀಚ ಜಾತಿಗೆ ಸೇರಿದ್ದರೂ, ವಿದ್ಯಾವಿಹೀನರಾದರೂ ತಪ್ಪದೆ ಅವರಿಗೆ ಉಪದೇಶಿಸಬಹುದೆಂದು ಭಾವ. ಅಪಾತ್ರರಿಗೆ, ಅನರ್ಹರಿಗೆ, ಅಸೂಯಾಪರರಿಗೆ, ದೈವ ದ್ವೇಷಿಗಳಿಗೆ, ನಾಸ್ತಿಕರಿಗೆ ಬೋಧಿಸಲ್ಪಟ್ಟಲ್ಲಿ ಅಧ್ಯಾತ್ಮವಿದ್ಯೆಯ ಸತ್ಫಲಿತಗಳುಂಟಾಗುವುದಿಲ್ಲ. ಆದ್ದರಿಂದ ಯೋಗ್ಯರಿಗೇ ಅದನ್ನು ಉಪದೇಶಿಸಬೇಕು. ಇಲ್ಲಿ ಗೀತಾಶಾಸ್ತ್ರ ಶ್ರವಣಕ್ಕೆ, ಪಠನಕ್ಕೆ ಭಕ್ತ್ಯಾದಿ ಸದ್ಗುಣಗಳು ಮಾತ್ರ ಅವಶ್ಯಕವಾಗಲಿ, ಬೇರೆ ವಿಷಯಗಳಲ್ಲ ಎನ್ನುವುದನ್ನು ಚೆನ್ನಾಗಿ ಗಮನಿಸಬೇಕು.

ಪ್ರ : ಈ ಗೀತೆಯನ್ನು ಯಾರಿಗೆ ಉಪದೇಶಿಸಕೂಡದು?

ಉ : ೧) ತಪಸ್ವಿಯಲ್ಲದವನಿಗೆ ೨) ಭಕ್ತಿಯಿಲ್ಲದವನಿಗೆ ೩) ಶುಶ್ರೂಷೆ ಮಾಡದವನಿಗೆ ೪) ಭಗವಂತನನ್ನು ನಿಂದಿಸುವವನಿಗೆ - ಉಪದೇಶಿಸಬಾರದು.

ಪ್ರ : ಇದರಿಂದ ಗೀತೆಯನ್ನು ಯಾರಿಗೆ ಬೋಧಿಸಬೇಕೆಂದು ಅರ್ಥ ವಾಗುತ್ತದೆ?

ಉ : ೧) ತಪಸ್ವಿಗೆ ೨) ಭಕ್ತಿಯಿರುವವನಿಗೆ ೩) ಶುಶ್ರೂಷೆ ಮಾಡುವವನಿಗೆ ೪) ಭಗವಂತನನ್ನು ನಿಂದಿಸದವನಿಗೆ - ಉಪದೇಶಿಸಬೇಕು.

**ಅ॥** ಈ ಗೀತಾಶಾಸ್ತ್ರವನ್ನು ಶ್ರದ್ಧೆಯಿಂದ ಇತರರಿಗೆ ಬೋಧಿಸುವವರು ತನಗೆ ಅತ್ಯಂತ ಪ್ರಿಯವಾದವರೆಂದು, ಅವರು ತಪ್ಪದೆ ತನ್ನನ್ನು ಹೊಂದುವರೆಂದು ಭಗವಂತನು ಎರಡು ಶ್ಲೋಕದ ದ್ವಾರ ತಿಳಿಸುತ್ತಿದ್ದಾನೆ-

**೬೮ ಯ ಇಮಂ ಪರಮಂ ಗುಹ್ಯಂ ಮದ್ಭಕ್ತೇಷ್ವಭಿಧಾಸ್ಯತಿ**
**ಭಕ್ತಿಂ ಮಯಿ ಪರಾ ಕೃತ್ವಾ ಮಾಮೇವೈಷ್ಯತ್ಯಸಂಶಯಃ**

**ಅರ್ಥ:** ಯಃ=ಯಾವನು; ಪರಮಂ ಗುಹ್ಯಂ=ಅತಿ ರಹಸ್ಯವಾದ; ಇಮಂ=ಈ ಗೀತಾಶಾಸ್ತ್ರವನ್ನು; ಮದ್ಭಕ್ತೇಷು=ನನ್ನ ಭಕ್ತರಿಗೆ; ಅಭಿಧಾಸ್ಯತಿ=ಹೇಳುವನೋ (ಸಃ=ಅಂತಹವನು); ಮಯಿ=ನನ್ನಲ್ಲಿ; ಪರಾಂ=ಶ್ರೇಷ್ಠವಾದ;ಭಕ್ತಿಂ= ಭಕ್ತಿಯನ್ನುಕೃತ್ವಾ=ಮಾಡಿ (ಉಂಟಾಗಿ); ಅಸಂಶಯಃ=ನಿಸ್ಸಂದೇಹವಾಗಿ; ಮಾಂ ಏವ=ನನ್ನನ್ನೇ; ಏಷ್ಯತಿ=ಹೊಂದಬಲ್ಲನು.

**ತಾ॥** ಯಾವನು ಅತಿ ರಹಸ್ಯವಾದ ಈ ಗೀತಾ ಶಾಸ್ತ್ರವನ್ನು ನನ್ನ ಭಕರಿಗೆ ಹೇಳುವನೋ ಅಂತಹವನು ನನ್ನಲ್ಲಿ ಉತ್ತಮ ಭಕ್ತಿಯುಳ್ಳವನ್ನಾಗಿ ಸಂಶಯ ರಹಿತನಾಗಿ (ಇಲ್ಲವೆ ನಿಸ್ಸಂದೇಹವಾಗಿ) ನನ್ನನ್ನೇ ಹೊಂದುವನು.

**ವ್ಯಾಖ್ಯೆ:** ಗೀತಾಪ್ರಸಾರದ ಮಹಾಫಲವನ್ನು ಭಗವಂತನು ಇಲ್ಲಿ ತಿಳಿಸುತ್ತಿದ್ದಾನೆ. ಗೀತಾಪ್ರಸಾರದಲ್ಲಿ ಭಗವಂತನಿಗೆ ಎಷ್ಟು ಪ್ರೀತಿಯೋ ಈ ವಾಕ್ಯದಿಂದ ಅರ್ಥವಾಗುತ್ತಿದೆ. ಗೀತೆಯ ಪ್ರಬೋಧೆಯ ಫಲ ಸಾಕ್ಷಾತ್ ಮೋಕ್ಷವೇ ಎಂದು ಇಲ್ಲಿ ಒತ್ತಿ ಹೇಳಲಾಗಿದೆ. (ಮಾಮೇವೈಷ್ಯತಿ) ತನ್ನ ಭಕ್ತರಿಗೆ ಗೀತಾಶಾಸ್ತ್ರವನ್ನು ಬೋಧಿಸುವವರು ಪರಾಭಕ್ತಿಯುಳ್ಳವರಾಗಿ ಬ್ರಹ್ಮ ಸಾಯುಜ್ಯವನ್ನು ಪಡೆಯುವರೆಂದು ಇಲ್ಲಿ ಹೇಳಲಾಗಿದೆ. ಇದರಿಂದ ಇತರರಿಗೆ ಉಪಕಾರ ಮಾಡುವುದೇ ಸರ್ವೋತ್ತಮ ಭಕ್ತಿ (ಪರಾಭಕ್ತಿ)ಯಾಗುತ್ತದೆ. ಇತರರಿಗೆ ಉಪಕಾರ ಮಾಡುವುದೆಂದರೆ ಆಯಾ ರೂಪದಲ್ಲಿರುವ ಭಗವಂತನನ್ನು ಸೇವೆ ಮಾಡುವುದು ಎಂದೇ ಆಗುತ್ತದೆ. ಆದ್ದರಿಂದಲೇ ಇದನ್ನು ಸಾಮಾನ್ಯ ಭಕ್ತಿಯೆಂದು ಕರೆಯದೆ ಪರಾಭಕ್ತಿಯೆಂದು ಕರೆಯಲಾಗಿದೆ. ಎಲ್ಲಾ ದಾನಗಳಲ್ಲಿ ಜ್ಞಾನದಾನವು ಸರ್ವೋತ್ತಮವಾದುದಾಗಿರುವುದರಿಂದ, ಇತರರಿಗೆ ಮಾಡುವ ಜ್ಞಾನದಾನವನ್ನು ಪರಾಭಕ್ತಿಯೆಂದು ಇಲ್ಲಿ ವರ್ಣಿಸಲಾಗಿದೆ. 'ಅಸಂಶಯಃ' ಎಂದು ಹೇಳಿರುವುದರಿಂದ ಅಂತಹ ಗೀತಾಪ್ರಬೋಧಕನು ತಪ್ಪದೆ ಮುಕ್ತಿ ಹೊಂದುವನೆಂದು, ಇದನ್ನು ಕುರಿತು ಸಂಶಯರಹಿತನಾಗಿರಬೇಕೆಂದು ವಿದಿತವಾಗುತ್ತದೆ. ಆದ್ದರಿಂದ ಸರ್ವರೂ ಇಂತಹ ಮಹತ್ತರ ಫಲವನ್ನು ಕೊಡಬಲ್ಲ ಈ ಗೀತಾಶಾಸ್ತ್ರವನ್ನು ಶ್ರದ್ಧೆಯಿಂದ ಪಠಿಸಿ ಇತರರಿಗೂ ಬೋಧಿಸುವುದು ಧರ್ಮ.

ಪ್ರ : ಈ ಗೀತಾಶಾಸ್ತ್ರ ಎಂತಹದು?

ಉ : ರಹಸ್ಯವಾದುದು.

ಪ್ರ : ಇದನ್ನು ಯಾರಿಗೆ ಬೋಧಿಸಬೇಕು?

ಉ : ಭಗವದ್ಭಕರಿಗೆ, ಹಿಂದೆ ಹೇಳಿದ ದುರ್ಗುಣಗಳಿಲ್ಲದವರಿಗೆ

ಪ್ರ : ಹಾಗೆ ಬೋಧಿಸುವವರಿಗೆ ಉಂಟಾಗುವ ಫಲವೇನು?

ಉ : ಅವರು ಪರಾಭಕ್ತಿಯುಳ್ಳವರಾಗಿ ಮುಕ್ತಿ ಹೊಂದುವರು.

**೬೯ ನ ಚ ತಸ್ಮಾನ್ಮನುಷ್ಯೇಷು ಕಶ್ಚಿನ್ಮೇ ಪ್ರಿಯಕೃತ್ತಮಃ**
**ಭವಿತಾ ನ ಚ ಮೇ ತಸ್ಮಾದನ್ಯಃ ಪ್ರಿಯತರೋ ಭುವಿ**

**ಅರ್ಥ:** ಮನುಷ್ಯೇಷು=ಮನುಷ್ಯರಲ್ಲಿ; ತಸ್ಮಾತ್=ಅಂತಹವರಿಗಿಂತ; ಮೇ=ನನಗೆ; ಪ್ರಿಯಕೃತ್ತಮಃ=ಹೆಚ್ಚು ಪ್ರಿಯನು; ಕಶ್ಚಿತ್=ಒಬ್ಬನೂ; ನ ಚ=ಇಲ್ಲವೇ ಇಲ್ಲ; ತಸ್ಮಾತ್=ಆತನಿಗಿಂತ; ಮೇ=ನನಗೆ; ಪ್ರಿಯತರಃ=ಬಹಳ ಇಷ್ಟವಾದವನು; ಅನ್ಯಃ=ಇತರರು; ಭುವಿ=ಭೂಲೋಕದಲ್ಲಿ; ಭವಿತಾ ನ ಚ=ಭವಿಷ್ಯದಲ್ಲಿಯೂ ಇರುವುದಿಲ್ಲ;

**ತಾ॥** ಮನುಜರಲ್ಲಿ ನನಗೆ ಅಂತಹವನಿಗಿಂತ ಹೆಚ್ಚಿನ ಪ್ರೀತಿಪಾತ್ರನು ಬೇರೆ ಯಾವನೂ ಇಲ್ಲ. ಮತ್ತೆ ನನಗೆ ಆತನಿಗಿಂತ ಇಷ್ಟವುಳ್ಳ ಬೇರೆ ಯಾವನೂ ಈ ಭೂಲೋಕದಲ್ಲಿ ಮುಂದೆಯೂ ಸಹ ಹುಟ್ಟುವುದಿಲ್ಲ.

**ವ್ಯಾಖ್ಯೆ:** ಹಿಂದಿನ ಶ್ಲೋಕ ಹಾಗೂ ಈ ಶ್ಲೋಕದಿಂದ ಭಗವಂತನಿಗೆ ಅಧ್ಯಾತ್ಮವಿದ್ಯಾವ್ಯಾಪ್ತಿಯಲ್ಲಿ , ಗೀತಾತತ್ತ್ವ ಪ್ರಚಾರಣೆಯಲ್ಲಿ ಎಷ್ಟು ಆಸಕ್ತಿಯಿದೆಯೋ ವ್ಯಕ್ತವಾಗುತ್ತಿದೆ. ಗೀತೆಯನ್ನು ಭಗವದ್ಭಕ್ತರಿಗೆ ಬೋಧಿಸುವು ವನಿಗಿಂತ ಹೆಚ್ಚಿಗೆ ಪ್ರಿಯವಾದವನು ನನಗೆ ಬೇರೆ ಯಾವನೂ ಇಲ್ಲವೆಂದು ಶ್ರೀ ಕೃಷ್ಣಮೂರ್ತಿ ಹೇಳಿದನು. 'ಪ್ರಿಯಕೃತ್ತಮಃ' ಎನ್ನುವಲ್ಲಿ 'ತಮ' ಪ್ರತ್ಯಯವನ್ನು ಉಪಯೋಗಿಸಿರುವುದರಿಂದ ಅಂತಹವನು ಭಗವಂತನಿಗೆ ಮಹಾಪ್ರಿಯನು ಎಂದು ಸ್ಪಷ್ಟವಾಗುತ್ತದೆ. (ಪ್ರಿಯಕೃತ್, ಪ್ರಿಯಕೃತ್ತರಃ, ಪ್ರಿಯಕೃತ್ತಮಃ) ಪ್ರಪಂಚದಲ್ಲಿ ದೇವರನ್ನು ಪ್ರೀತಿಗೊಳಿಸಲು ಅನೇಕ ಪುಣ್ಯ ಕಾರ್ಯಗಳನ್ನು ಜನರು ಮಾಡುತ್ತಿರುವರು. ಆದರೆ ಅವರೆಲ್ಲರಿಗಿಂತ ಈ ಗೀತಾ ಪ್ರಬೋಧಕನೇ ಅಧಿಕ ಪುಣ್ಯವನ್ನು ಸಂಪಾದಿಸಿಕೊಳ್ಳುತ್ತಿದ್ದಾನೆ. ಆ ಕಾರ್ಯದ ದ್ವಾರ ಆ ಸರ್ವೇಶ್ವರನಿಗೆ ಅತ್ಯಂತ ಪ್ರಿಯವಾಗಿ, ತತ್ಫಲಿತವಾಗಿ ಬ್ರಹ್ಮಸಾಯುಜ್ಯವನ್ನೇ ಹೊಂದುತ್ತಿದ್ದಾನೆ. ಅಂತಹವನು ಭಗವಂತನಿಗೆ ಪರಮ ಪ್ರೀತಿ ಪಾತ್ರನು (ಪ್ರಿಯತಮನು) ಆಗುತ್ತಿದ್ದಾನೆ. ಭೂತ ಭವಿಷ್ಯತ್ ವರ್ತಮಾನಗಳಲ್ಲಿ ಅದಕ್ಕಿಂತ ಹೆಚ್ಚಿಗೆ ತನಗೆ ಇಷ್ಟವುಳ್ಳವನು ಬೇರೊಬ್ಬನಿಲ್ಲವೆಂದು ಶ್ರೀಕೃಷ್ಣ ಪರಮಾತ್ಮ ಹೇಳಿರುವುದರಿಂದ ಈ ಗೀತಾಪ್ರಚಾರ ಕಾರ್ಯ ಮಹಾಪುಣ್ಯಪ್ರದವಾದುದೆಂದು, ಭಗವತ್ಪ್ರೀತಿ ಕರವಾದುದೆಂದು ತಿಳಿಯುತ್ತದೆ. ವಾಸ್ತವವಾಗಿ ನೋಡಿದರೆ ಭಗವಂತನಿಗೆ

ಪ್ರೀತಿ ಪಾತ್ರನಾಗುವದಕ್ಕಿಂತ ಮಿಗಿಲಾದ ವಿಷಯ ಇನ್ನೇನಿದೆ? ಅಂತಹವನ ಜನ್ಮ ಸಾರ್ಥಕವಾದಂತೆಯೇ.

ಜಗನ್ನಾಥನಾದ ಸರ್ವೇಶ್ವರನಿಗೆ ಪ್ರಿಯನಾಗಿರುವಂತಹ ಜನ್ಮವು ಧನ್ಯವಾದುದು. ಅಂತಹ ಭಗವತ್ಪ್ರಿಯತ್ವವೇ ಜೀವನ ಪರಮಾವಧಿ. ಆದ್ದರಿಂದ ಪ್ರತಿಯೊಬ್ಬರೂ ಗೀತಾ ತತ್ತ್ವವನ್ನು ತಾವು ಚೆನ್ನಾಗಿ ಅನುಭೂತಿಗೊಳಿಸಿಕೊಂಡು, ಇತರರಿಗೂ ಅದನ್ನು ಬೋಧಿಸಬೇಕು. ಈ ವಿಧವಾಗಿ ತಾನು ಮುಕ್ತಿ ಹೊಂದಿ ಬೇರೆಯವರಿಗೂ ಮುಕ್ತಿ ದ್ವಾರವನ್ನು ತೋರಿಸಿ ತದ್ವಾರ ಭಗವಂತನಿಗೆ ಅತಿ ಪ್ರಿಯನಾಗುವ ಸೌಭಾಗ್ಯವನ್ನು ಪಡೆದುಕೊಳ್ಳಬೇಕು. ಯಾವನು ದೇವರಿಗೆ ಪ್ರಿಯವಾದ ಕಾರ್ಯವನ್ನು ಮಾಡುವನೋ ಆತನು ದೇವರಿಗೆ ಬಹಳ ಪ್ರೀತಿ ಪಾತ್ರನಾಗುವನು.

ಗೀತಾ ಪ್ರಬೋಧೆಯ ಮಹಿಮೆಯನ್ನು ಕುರಿತು ಭಗವಂತನು ಈ ರೀತಿ ತಿಳಿಸಿರುವುದರಿಂದ ಇನ್ನು ಪ್ರತಿಯೊಬ್ಬರೂ ತಮ್ಮ ಗ್ರಾಮಗಳಲ್ಲಿ, ತಮ್ಮ ಪರಿಸರ ಪ್ರಾಂತಗಳಲ್ಲಿ ಗೀತಾ ಸಂಘಗಳನ್ನು ಸ್ಥಾಪಿಸಿ, ಗೀತಾಜ್ಞಾನವನ್ನು ವ್ಯಾಪಿಸುವುದಕ್ಕೆ ಸಹಕಾರಿಯಾಗುವುದು ಧರ್ಮ. ಅಂತಹ ಕಾರ್ಯ ಭಗವಂತನಿಗೆ ಅತಿ ಪ್ರಿಯವಾದುದು. ಅಂಥವರು ಸರ್ವೇಶ್ವರನ ಕೃಪಾಕಟಾಕ್ಷಕ್ಕೆ ಪಾತ್ರರಾಗುವರು (ಗೀತಾ ಪ್ರಚಾರದ ವಿವರಗಳಿಗಾಗಿ ಈ ಗ್ರಂಥಾರಂಭದಲ್ಲಿ ಕೊಟ್ಟಿರುವ 'ಗೀತಾ ಪ್ರಚಾರ' ಎನ್ನುವ ಶೀರ್ಷಿಕೆಯನ್ನು ನೋಡಬೇಕು).

ಪ್ರ : ಈ ಪ್ರಪಂಚದಲ್ಲಿ ಭಗವಂತನಿಗೆ ಅತ್ಯಂತ ಪ್ರಿಯವಾದವರು, ಇಷ್ಟವಾದವರು ಯಾರು?

ಉ : ಗೀತಾತತ್ತ್ವವನ್ನು ಭಗವದ್ಭಕರಿಗೆ ಬೋಧಿಸುವವರು

ಪ್ರ : ಆತನಿಗಿಂತ ಹೆಚ್ಚು ಪ್ರಿಯರಾದವರು ಯಾರಾದರೂ ಭಗವಂತನಿಗೆ ಇದ್ದಾರೆಯೇ?

ಉ : ಭೂತ ಭವಿಷ್ಯತ್ ವರ್ತಮಾನಗಳಲ್ಲಿ ಯಾರೂ ಇಲ್ಲ

**ಅ||** ಈ ಗೀತಾಶಾಸ್ತ್ರವನ್ನು ಅಧ್ಯಯನ ಮಾಡುವವನು ಜ್ಞಾನಯಜ್ಞವನ್ನು ಆಚರಿಸಿದ ಹಾಗೆಯೇ ಎಂದು ತಿಳಿಸಲಾಗುತ್ತಿದೆ-

**೭೦ ಅಧ್ಯೇಷ್ಯತೇ ಚ ಯ ಇಮಂ ಧರ್ಮ್ಯಂ ಸಂವಾದಮಾವಯೋಃ**
**ಜ್ಞಾನಯಜ್ಞೇನ ತೇನಾಹಮಿಷ್ಟಸ್ಸ್ಯಾಮಿತಿ ಮೇ ಮತಿಃ**

**ಅರ್ಥ:** ಯಃ ಚ=ಯಾರಾದರೆ; ಧರ್ಮ್ಯಂ=ದರ್ಮಯುಕ್ತವಾದ (ಇಲ್ಲವೆ ಧರ್ಮ ಸ್ವರೂಪವೇ ಆದ) ಆವಯೋಃ=ನಮ್ಮಿಬ್ಬರ; ಇಮಂ ಸಂವಾದಂ=ಈ ಸಂಭಾಷಣೆಯನ್ನು (ಒಳಗೊಂಡ ಗ್ರಂಥವನ್ನು); ಅಧ್ಯೇಷ್ಯತೇ=ಅಧ್ಯಯನ ಮಾಡುವನೋ; ತೇನ=ಆತನಿಂದ; ಜ್ಞಾನಯಜ್ಞೇನ=ಜ್ಞಾನಯಜ್ಞದಿಂದ; ಅಹಂ=ನಾನು; ಇಷ್ಟಃ=ಆರಾಧಿಸಲ್ಪಟ್ಟಂತೆ; ಸ್ಯಾಮ ಇತಿ=ಆಗುವೆನೆಂದು; ಮೇ=ನನ್ನ; ಮತಿಃ=ನಿಶ್ಚಯವು

**ತಾ||** ಯಾವನು ಧರ್ಮಯುಕ್ತವಾದ (ಇಲ್ಲವೆ ಧರ್ಮ ಸ್ವರೂಪವೇ ಆದ) ನಮ್ಮಿಬ್ಬರ ಈ ಸಂಭಾಷಣೆಯನ್ನು ಅಧ್ಯಯನ ಮಾಡುವನೋ ಅಂತಹವನಿಂದ ನಾನು ಜ್ಞಾನಯಜ್ಞದಿಂದ ಆರಾಧಿಸಲ್ಪಟ್ಟಂತೆ ಆಗುವದು ಎನ್ನುವುದು ನನ್ನ ನಿಶ್ಚಯ.

**ವ್ಯಾಖ್ಯೆ:** 'ಧರ್ಮ್ಯಂ'- ಎಂದು ಹೇಳಿರುವುದರಿಂದ ಈ ಗೀತಾಶಾಸ್ತ್ರವು ಧರ್ಮ ಮಾರ್ಗದಿಂದ ಬೇರೆಯಲ್ಲವೆಂದೂ, ಸಾಕ್ಷಾತ್ ಧರ್ಮ ಸ್ವರೂಪವೇ ಎಂದು ವಿದಿತವಾಗುತ್ತದೆ. 'ಧರ್ಮಕ್ಷೇತ್ರೇ'- ಎನ್ನುವ ಧರ್ಮ ಶಬ್ದದಿಂದ ಗೀತೆ ಪ್ರಾರಂಭವಾಗಿರುವದನ್ನು ಈ ಸಂದರ್ಭದಲ್ಲಿ ಗಮನಿಸಬೇಕಾಗಿದೆ.

'ಜ್ಞಾನಯಜ್ಞೇನ'- ಈ ಗೀತಾ ಗ್ರಂಥವನ್ನು ಅಧ್ಯಯನ ಮಾಡುವವನು ಜ್ಞಾನಯಜ್ಞದಿಂದ ಭಗವಂತನನ್ನು ಪೂಜಿಸಿದಂಥವನಾಗುತ್ತಾನೆ ಎಂದು ಇಲ್ಲಿ ಹೇಳಲಾಗಿದೆ. ಆದ್ದರಿಂದ ಈ ಗ್ರಂಥದ ಕೇವಲ ಪಾರಾಯಣವೂ ಕೂಡ ಫಲವನ್ನು ಕೊಡುವುದೆಂದು ತಿಳಿದುಬರುತ್ತದೆ. ಆದರೆ ಭಕ್ತಿಯಿಂದ ಮಾಡಬೇಕು. ಅರ್ಥ ಮಾಡಿಕೊಂಡು ಅಧ್ಯಯನ ಮಾಡಿದರೆ ಇನ್ನೂ ಹೆಚ್ಚಿನ ಒಳಿತೇ ಆಗುವುದು. ಮತ್ತೆ ಗೀತೆಯೆಲ್ಲವನ್ನೂ ಅಧ್ಯಯನ ಮಾಡಿದವನು ಜ್ಞಾನ ಯಜ್ಞದಿಂದ ತನ್ನನ್ನು ಆರಾಧಿಸಿದಂತೆ ಎಂದು ಹೇಳಿರುವುದರಿಂದ, ಗೀತಾಗ್ರಂಥದ ಪರಮತತ್ತ್ವ ಜ್ಞಾನವೇ ಆಗಿದ್ದು ಕರ್ಮಭಕ್ತಿ ಧ್ಯಾನಾದಿಗಳು ಆ ಜ್ಞಾನದಲ್ಲಿ ಪರ್ಯವಸಾನಗೊಳ್ಳುತ್ತಿವೆ, ಮತ್ತು ಅವು ಈ ಜ್ಞಾನೋತ್ಪತ್ತಿಗೆ ಸಹಾಯಕಗಳಾಗಿರುವುವು ಎಂದು ತಿಳಿಯುತ್ತದೆ. ಹಾಗಿಲ್ಲದಿದ್ದರೆ ಗೀತಾಗ್ರಂಥಾಧ್ಯಯನವನ್ನು ಜ್ಞಾನಯಜ್ಞವೆಂದು ಕರೆಯುತ್ತಿರಲಿಲ್ಲ. ಆದ್ದರಿಂದ ಕರ್ಮ, ಭಕ್ತಿ, ಧ್ಯಾನಗಳನ್ನು ಸಹಾಯಕಗಳನ್ನಾಗಿ ತೆಗೆದುಕೊಂಡು ಜ್ಞಾನವನ್ನು ಅಭ್ಯಸಿಸಿ ಅಂತಹ ಜ್ಞಾನರೂಪ ಯಜ್ಞದಿಂದ ಭಗವತ್‌ಸಾಕ್ಷಾತ್ಕಾರವನ್ನು ಪಡೆಯಬೇಕು. ಫಲಪುಷ್ಪಾದಿಗಳಿಂದ ಭಗವಂತನನ್ನು ಪೂಜಿಸುವುದು ಸಾಮಾನ್ಯ ಪೂಜೆ. ಜ್ಞಾನಯಜ್ಞದಿಂದ ಆತನನ್ನು ಪೂಜಿಸುವುದು ಪರಾಪೂಜೆ ಮೊದಲನೆಯದಕ್ಕಿಂತ ಎರಡನೆಯದು ಉತ್ಕೃಷ್ಟವಾದುದು.

'ಮೇ ಮತಿಃ'- 'ಇದು ನನ್ನ ನಿಶ್ಚಯ' ಎಂದು ಭಗವಂತನು ಹೇಳಿರುವುದರಿಂದ ಈ ವಾಕ್ಯವು ಪರಮಪ್ರಮಾಣವೆಂದು ನಾವು ಭಾವಿಸಬೇಕು. ಏಕೆಂದರೆ ಸಾಕ್ಷಾತ್ ಭಗವಂತನೇ 'ಇದು ನನ್ನ ಸ್ಥಿರ ನಿಶ್ಚಯ' ಎಂದು ಘೋಷಿಸಿರುವವನಲ್ಲವೇ!

ಪ್ರ : ಈ ಗೀತಾ ಶಾಸ್ತ್ರವನ್ನು ಅಭ್ಯಾಸ ಮಾಡಿದವನು ಯಾವ ಯಜ್ಞವನ್ನು ಆಚರಿಸಿದಂತಾಗುವುದು?

ಉ : ಜ್ಞಾನಯಜ್ಞವನ್ನು.

**ಅ||** ಶ್ರದ್ಧೆಯಿಂದ ಗೀತಾಗ್ರಂಥವನ್ನು ಕೇಳುವವನು ಕೂಡ ಮಹಾ ಪುಣ್ಯವನ್ನು ಪಡೆಯುವವನೆಂದು ತಿಳಿಸಲಾಗುತ್ತಿದೆ-

**೭೧ ಶ್ರದ್ಧಾವಾನನಸೂಯಶ್ಚ ಶೃಣುಯಾದಪಿ ಯೋ ನರಃ**
**ಸೋಽಪಿ ಮುಕ್ತಃಶುಭಾನ್ ಲೋಕಾನ್ ಪ್ರಾಪ್ನುಯಾತ್‌ಪುಣ್ಯ ಕರ್ಮಣಾಮ್**

**ಅರ್ಥ:** ಯಃ ನರಃ=ಯಾವ ಮನುಜನು; ಶ್ರದ್ಧಾ ವಾನ್=ಶ್ರದ್ಧೆಯುಳ್ಳವನಾಗಿ; ಅನುಸೂಯಃ ಚ=ಅಸೂಯೆಯಿಲ್ಲದವನಾಗಿ; ಶೃಣುಯಾತ್ ಅಪಿ=(ಈ ಗೀತಾ ಶಾಸ್ತ್ರವನ್ನು) ಕೇಳುವನೋ; ಸಃ ಅಪಿ=ಆತನೂ ಸಹ; ಮುಕ್ತ=ಪಾಪವಿಮುಕ್ತನಾಗಿ; ಪುಣ್ಯ ಕರ್ಮಣಾಂ=ಪುಣ್ಯಕಾರ್ಯಗಳನ್ನು ಮಾಡಿದವರ; ಶುಭಾನ್ ಲೋಕಾನ್=ಪುಣ್ಯ ಲೋಕಗಳನ್ನು; ಪ್ರಾಪ್ನುಯಾತ್=ಹೊಂದುವನು.

**ತಾ||** ಯಾವ ಮನುಜನು ಶ್ರದ್ಧೆಯಿಂದ ಕೂಡಿದವನಾಗಿ, ಅಸೂಯೆಯಿಲ್ಲದವನಾಗಿ ಈ ಗೀತಾಶಾಸ್ತ್ರವನ್ನು ಕೇಳುವನೋ, ಅಂತಹವನೂ ಸಹ ಪಾಪ ವಿಮುಕ್ತನಾಗಿ ಪುಣ್ಯ ಕಾರ್ಯಗಳನ್ನು ಮಾಡಿದವರ ಪುಣ್ಯಲೋಕವನ್ನು ಪಡೆಯುವನು.

**ವ್ಯಾಖ್ಯೆ:** ಶ್ರದ್ಧೆಯನ್ನು ಕುರಿತು, ಅಸೂಯಾರಾಹಿತ್ಯವನ್ನು ಕುರಿತು ಗೀತೆಯಲ್ಲಿ ಅನೇಕ ಕಡೆ ಉಲ್ಲೇಖವಿದೆ. ಗ್ರಂಥವು ಪೂರ್ತಿಯಾಗುತ್ತಿರುವ ಈ ಸಂದರ್ಭದಲ್ಲಿ ಮತ್ತೆ ಅದನ್ನು ಕುರಿತ ಪ್ರಸ್ತಾವನ್ನು ಮಾಡಲಾಗಿದೆ. ಮು ಮುಕ್ಷುವಿಗೆ ಆ ಸದ್ಗುಣಗಳು ಎಷ್ಟು ಅವಶ್ಯಕ ಎನ್ನುವುದು ಇದರಿಂದ ತಿಳಿದುಬರುತ್ತದೆ. ಶ್ರದ್ಧೆಯಿಲ್ಲದೆ ಯಾವ ಕಾರ್ಯಮಾಡಿದರೂ ಅದು ನಿರುಪಯೋಗವೇ ಆಗುವುದು. ಹಾಗೆ ಅಸೂಯೆಯಿಂದ ಕೂಡಿದವನು ವೃದ್ಧಿಯಾಗಲಾರನು. ಅಸೂಯೆ ಬೇರು ಹುಳುವಿನಂತಹದು. ಅದು ಹೃದಯದಲ್ಲಿ ಪ್ರವೇಶಿಸಿದರೆ ಬೇರೆ ಎಲ್ಲಾ ಸದ್ಗುಣಗಳನ್ನು, ಇತರ ಶಕ್ತಿಗಳನ್ನೆಲ್ಲಾ ನಿರ್ವೀರ್ಯಗೊಳಿಸುವುದು. ಆದ್ದರಿಂದ ಅದನ್ನು ಯಾರೂ ಹತ್ತಿರಕ್ಕೆ ಸೇರಿಸಬಾರದು.

ಈ ಪ್ರಕಾರವಾಗಿ ಶ್ರದ್ಧೆ ಅಸೂಯಾ ರಾಹಿತ್ಯ ಹೊಂದಿರುವವನು ಗೀತೆಯ ಶ್ರವಣ ಮಾತ್ರದಿಂದ ಪಾಪರಹಿತನಾಗಿ ಮಹಾ ಪುಣ್ಯ ಲೋಕಗಳನ್ನು ಹೊಂದುವನೆಂದು ಇಲ್ಲಿ ಹೇಳಲಾಗಿದೆ. ಭಗವಂತನ ಈ ವಾಕ್ಯಗಳು ಓದುಬಾರದ ಕೆಲವು ಭಕ್ತರಿಗೆ ಪರಮ ವಿಶ್ವಾಸವುಂಟುಮಾಡುತ್ತಿವೆ. ಏಕೆಂದರೆ, ಅವರು ನಮಗೆ ವಿದ್ಯೆಯಿಲ್ಲವಲ್ಲ, ಗೀತೆಯನ್ನು ಹೇಗೆ ಪಾರಾಯಣ ಮಾಡಬಲ್ಲೆವು? ಇನ್ನು ನಮಗೆ ಮುಕ್ತಿಯಿಲ್ಲವೇ? ಎಂದು ಸಂಶಯಗ್ರಸ್ತ ರಾಗಿರುವರು. ಅಂತಹವರ ಸಂಶಯವನ್ನು ಭಗವಂತನು ಇಲ್ಲಿ ತೀರಿಸಿರುವನು. ಓದು ಬಾರದಿದ್ದರೂ ಭಕ್ತಿಶ್ರದ್ಧೆಗಳಿಂದ ಕೂಡಿ ಅಸೂಯಾದಿ ದುರ್ಗುಣಗಳಿಲ್ಲದೆ ಬೇರೆಯವರಿಂದ ಗೀತೆಯನ್ನು ಶ್ರವಣ ಮಾಡಿದರೂ ಅಂತಹವರು ಪುಣ್ಯವನ್ನು ಸಂಪಾದಿಸುವರೆಂದು ಭಗವಂತನು ತಿಳಿಸಿರುವನು. ಅಧ್ಯಾತ್ಮತತ್ತ್ವ ಹೃದಯಕ್ಕೆ ಸಂಬಂಧಿಸಿದುದೇ ಆಗಲಿ 'ಶಿರಸ್ಸಿಗೆ (Brain) ಅಲ್ಲ. ಭಗವಂತನ ಸ್ಥಾನ ಹೃದಯವೇ ಆಗಿದೆ. ಮಹಾಪಂಡಿತರು ಅನೇಕ ವಿದ್ಯೆಗಳನ್ನು ಕಲಿತು ಶಿರಸ್ಸನ್ನು (ಲೌಕಿಕ ಪ್ರಜ್ಞೆಯನ್ನು) ಬೆಳೆಸಿಕೊಂಡರೂ ಅವರ ಹೃದಯ ಸಂಕುಚಿತವಾಗಿದ್ದು ದಯಾ, ಕರುಣೆ, ಶ್ರದ್ಧೆ, ಅನುಸೂಯ ಮುಂತಾದ ಸದ್ಗುಣಗಳಿಲ್ಲದಿದ್ದರೆ ಹೆಚ್ಚಿನ ಪ್ರಯೋಜನವಾಗಲಾರದು. ಆದ್ದರಿಂದಲೇ ಭಗವಂತನು ಇಲ್ಲಿ ಒಂದು ವೇಳೆ ಓದು ಬರದಿದ್ದರೂ, ಒಳ್ಳೆಯ ಗುಣಗಳನ್ನು ಹೊಂದಿ ಬೇರೆಯವರಿಂದ ಗೀತೆಯನ್ನು ಕೇಳಿದರೂ ಪುಣ್ಯವನ್ನು ಸಂಪಾದಿಸಿಕೊಳ್ಳಬಹುದೆಂದು ಹೇಳಿರುವನು. ಆದರೆ ಈ ಶ್ರದ್ಧಾದಿಗಳ ಜೊತೆ ವಿದ್ಯೆಯೂ ಇದ್ದಲ್ಲಿ ಮತ್ತೂ ಒಳ್ಳೆಯದು.

ಪ್ರ : ಓದು ಬಾರದವನು ಈ ಗೀತಾಗ್ರಂಥವನ್ನು ಅಭ್ಯಾಸಮಾಡಲಾರನಲ್ಲ! ಆತನಿಗೆ ಮುಕ್ತಿ ಹೇಗೆ?

ಉ : ೧) ಶ್ರದ್ಧೆಯಿಂದ ೨) ಅಸೂಯೆಯಿಲ್ಲದೆ ಈ ಗೀತಾಶಾಸ್ತ್ರವನ್ನು ಬೇರೆಯವರಿಂದ ಕೇಳಿದರೂ ಅಂತಹವನು ಪಾಪರಹಿತನಾಗಿ ಪುಣ್ಯಾತ್ಮರು ಹೊಂದುವ ಉತ್ತಮ ಲೋಕವನ್ನು ಹೊಂದಬಲ್ಲನು. ಈ ಪ್ರಕಾರವಾಗಿ ಆತನು ಸದ್ಗತಿಯನ್ನು ಹೊಂದಬಲ್ಲನು.

**ಅII** ನನ್ನ ಈ ಬೋಧೆಯಿಂದ ನಿನ್ನ ಅಜ್ಞಾನವು (ಭ್ರಮೆ) ಶಮನ ಹೊಂದಿದೆಯೇ? ಎಂದು ಶ್ರೀ ಕೃಷ್ಣಮೂರ್ತಿ ಅರ್ಜುನನನ್ನು ಪ್ರಶ್ನಿಸುತ್ತಿದ್ದಾನೆ-

೭೨ ಕಚ್ಚಿದೇತಚ್ಛ್ರುತಂ ಪಾರ್ಥ ತ್ವಯೈಕಾಗ್ರೇಣ ಚೇತಸಾ
ಕಚ್ಚಿದಜ್ಞಾನಸಂಮೋಹಃ ಪ್ರನಷ್ಟಸ್ತೇ ಧನಂಜಯ

**ಅರ್ಥ:** ಪಾರ್ಥ=ಓ ಅರ್ಜುನಾ! ಏತತ್=ಇದು (ನನ್ನಿಂದ ಉಪದೇಶಿಸಲ್ಪಟ್ಟ ಈ ಗೀತಾಶಾಸ್ತ್ರ); ತ್ವಯಾ=ನಿನ್ನಿಂದ; ಏಕಾಗ್ರೇಣ ಚೇತಸಾ=ಏಕಾಗ್ರ ಮನಸ್ಸಿನಿಂದ; ಶ್ರುತಂ ಕಚ್ಚಿತ್=ಕೇಳಲಟ್ಟಿದೆಯಲ್ಲವೇ; ಧನಂಜಯ=ಓ ಅರ್ಜುನಾ! ತೇ=ನಿನ್ನ; ಅಜ್ಞಾನ ಸಂಮೋಹಃ=ಅಜ್ಞಾನದಿಂದ ಉಂಟಾದ ಮೋಹ (ಭ್ರಮೆ); ಪ್ರನಷ್ಟಃ ಕಚ್ಚಿತ್=ಸಂಪೂರ್ಣವಾಗಿ ನಶಿಸಿರುವುದಲ್ಲವೇ?

**ತಾII** ಓ ಅರ್ಜುನಾ! ನನ್ನ ಈ ಬೋಧೆಯನ್ನು ಏಕಾಗ್ರಚಿತ್ತದಿಂದ ಕೇಳಿದೆಯಾ? ಅಜ್ಞಾನ ಜನಿತವಾದ ನಿನ್ನ ಭ್ರಮೆ (ಅದರಿಂದ) ಸಂಪೂರ್ಣವಾಗಿ ನಾಶವಾಯಿತೇ?

**ವ್ಯಾಖ್ಯೆ:** ಶ್ರೀ ಕೃಷ್ಣಪರಮಾತ್ಮನು ತಾನು ಮಾಡಬೇಕಾದ ಬೋಧೆಯೆಲ್ಲವನ್ನೂ ಮಾಡಿ ಕೊನೆಯಲ್ಲಿ ಅರ್ಜುನನನ್ನು ಈ ವಿಧವಾಗಿ ಪ್ರಶ್ನಿಸುತ್ತಿದ್ದಾನೆ. ಈ ವಾಕ್ಯದಿಂದ ಗೀತಾಚಾರ್ಯನ ಬೋಧೆಯೆಲ್ಲವೂ ಪರಿಸಮಾಪ್ತಿಗೊಳ್ಳುತ್ತಿದೆ. 'ಓ ಅರ್ಜುನಾ! ನನ್ನ ಈ ವಾಕ್ಯಗಳನ್ನು ಏಕಾಗ್ರ ಚಿತ್ತದಿಂದ ಕೇಳಿದೆಯಾ? ನಿನ್ನ ಭ್ರಮೆ ನಶಿಸಿಹೋಯಿತೇ?' ಎಂದು ಭಗವಂತನು ಪ್ರಶ್ನಿಸಿದನು. ರೋಗಿಗೆ ಔಷಧ ಕೊಟ್ಟನಂತರ ಆತನ ರೋಗ ಗುಣವಾಗಿದೆಯೇ ಎಂದು ಕೇಳುವುದು ವೈದ್ಯನ ಕರ್ತವ್ಯ. ಭವರೋಗ ವೈದ್ಯನಾದ ಶ್ರೀ ಕೃಷ್ಣಮೂರ್ತಿ ಆ ಪ್ರಕಾರವಾಗಿಯೇ ಕೇಳುತ್ತಿದ್ದಾನೆ. ಅಜ್ಞಾನ ರೋಗದಿಂದ ಬಾಧಿತನಾದ ಅರ್ಜುನನಿಗೆ ಗೀತಾಶಾಸ್ತ್ರವೆಂಬ ಅನುಪಮ ಔಷಧವನ್ನು ಕೊಟ್ಟು ಭ್ರಮಾ ರೂಪವಾದ ಆತನ ವ್ಯಾಧಿ ಶಮನಗೊಂಡಿದೆಯೇ ಎಂದು ಪ್ರಶ್ನಿಸುತ್ತಿದ್ದಾನೆ.

'ಏಕಾಗ್ರೇಣಚೇತಸಾ'- ಧ್ಯಾನಿಸುವಾಗ, ಶ್ರವಣ ಮಾಡುವಾಗ, ವಿಚಾರಣೆ ಮಾಡುವಾಗ ಮನಸ್ಸು ಏಕಾಗ್ರವಾಗಿರಬೇಕು. ಚಂಚಲ ಚಿತ್ತದಿಂದ ಏನು ಮಾಡಿದರೂ ಉಪಯೋಗವಿಲ್ಲ. ಚಂಚಲ ಜಲದಲ್ಲಿ ಸೂರ್ಯನ ಪ್ರತಿಬಿಂಬ ಮಸುಕಾಗಿ ಕಾಣಿಸಿದಂತೆ, ಮಲಿನ ದರ್ಪಣದಲ್ಲಿ ಮುಖ ಸರಿಯಾಗಿ ಕಾಣದಂತೆ, ಚಂಚಲ ಮಲಿನ ಮನಸ್ಸಿನಲ್ಲಿ ಆತ್ಮ ಸರಿಯಾಗಿ ಪ್ರತಿಬಿಂಬವಾಗುವುದಿಲ್ಲ. ಶ್ರವಣಾದಿಗಳು ಸರಿಯಾಗಿ ನಡೆಯುವುದಿಲ್ಲ. ಮತ್ತೆ ಅದು ಯುದ್ಧ ಸಮಯವಾದುದರಿಂದ ಅರ್ಜುನನಿಗೆ ವಿಕ್ಷೇಪವುಂಟಾಗಿ ಏಕಾಗ್ರತೆಯನ್ನು ಕಳೆದುಕೊಂಡರೆ ತಾನು ಮಾಡಿದ ಬೋಧೆಯೆಲ್ಲವೂ ನಿರುಪಯೋಗವಾಗುವ ಸಾಧ್ಯತೆಗಳಿವೆ. ಆದ್ದರಿಂದ ಭಗವಂತನ ಈ ಪ್ರಶ್ನೆ ಸಮುಚಿತ ವಾಗಿದೆ. ಪ್ರತಿಯೊಬ್ಬರೂ ಪಾರಾಯಣ ಮಾಡುವಾಗ ತತ್ತ್ವ ವಿಚಾರಣೆ ಮಾಡುವಾಗ, ಧ್ಯಾನ ಮಾಡುವಾಗ, ಮನಸ್ಸನ್ನು ಬಹಿರ್ಮುಖವಾಗಿ ಹೋಗಗೊಡದೆ ಏಕಾಗ್ರತೆಯಿಂದಿರಬೇಕು. ಇದೇ ಭಗವಂತನ ಕೊನೆಯ ಬೋಧೆ.

'ಮನಸ್ಸನ್ನು ಏಕಾಗ್ರವಾಗಿರುವಂತೆ ಮಾಡಿಕೊಂಡು ಶ್ರವಣಾದಿಗಳನ್ನು ಮಾಡಿ ಅಜ್ಞಾನವನ್ನು ಸಂಪೂರ್ಣವಾಗಿ ನಾಶಗೊಳಿಸಿಕೊಳ್ಳಬೇಕು' ಎನ್ನುವ ಈ ವಾಕ್ಯವೇ ಶ್ರೀಕೃಷ್ಣಮೂರ್ತಿ ಗೀತಾಶಾಸ್ತ್ರದಲ್ಲಿ ಮಾಡಿದ ಅಂತಿಮ ಉಪದೇಶ.

'ಅಜ್ಞಾನಸಂಮೋಹಃ'- ಮೋಹಕ್ಕೆ (ಭ್ರಮೆಗೆ) ಕಾರಣ ಅಜ್ಞಾನ. ಅಜ್ಞಾನದಿಂದ ಮನುಜನು ಹಗ್ಗವನ್ನು ನೋಡಿ ಹಾವು ಎನ್ನುವ ಭ್ರಮೆಯಲ್ಲಿ ಬೀಳುವನು. ಹಾಗೆಯೇ ಅಜ್ಞಾನದಿಂದ ಅನಿತ್ಯವಸ್ತುವು ನಿತ್ಯವೆನ್ನುವ ಮೋಹದಲ್ಲಿ ಜೀವಿಯು ಬೀಳುವನು. ಅಜ್ಞಾನದಿಂದ ಉಂಟಾದ ಅರ್ಜುನನ ಮೋಹವು (ತನ್ನ ಬಂಧುಗಳು ಸಾಯುವರು ಎನ್ನುವ ದುಃಖ) ಶ್ರೀ ಕೃಷ್ಣಪರಮಾತ್ಮನಿಂದ ಉಪದೇಶಿಸಲ್ಪಟ್ಟ ಜ್ಞಾನದಿಂದ ನಶಿಸಿ ಹೋಯಿತು.

ಅದು ಇನ್ನೂ ದೂರವಾಗಿದೆಯೇ ಇಲ್ಲವೇ ಎಂದು ಭಗವಂತನು ಅರ್ಜುನನನ್ನು ಪ್ರಶ್ನಿಸುತ್ತಿದ್ದಾನೆ.

'ಪ್ರನಷ್ಟಃ'- ಔಷಧವು ಶಕ್ತಿಯುತವಾದದ್ದಾದರೆ ರೋಗವು ಪೂರ್ತಿಯಾಗಿ ಗುಣವಾಗುವುದು. ಶ್ರೀಕೃಷ್ಣನ ದಿವ್ಯೌಷಧದಿಂದ ಅರ್ಜುನನ ಭವರೋಗವು ಸಂಪೂರ್ಣವಾಗಿ ಗುಣಹೊಂದಿದೆ. ತಾನು ಪ್ರಯೋಗಿಸಿದ ಔಷಧದ ಪ್ರಭಾವವನ್ನು ಪರೀಕ್ಷಿಸುವ ಸಲುವಾಗಿ ಭಗವಂತನು ಧೈರ್ಯವಾಗಿ 'ನಿನ್ನ ರೋಗ ಶಮನ ಹೊಂದಿದೆಯೇ'? ಎಂದು ಕೇಳಿದನು. 'ನಷ್ಟಃ' ಎಂದು ಕೇಳದೆ 'ಪ್ರನಷ್ಟಃ' ಎಂದು ಕೇಳಿರುವುದರಿಂದ 'ನಿನ್ನ ಅಜ್ಞಾನ ವ್ಯಾಧಿ ಸಂಪೂರ್ಣವಾಗಿ ನಶಿಸಿದೆಯೇ?' ಎಂದು ಭಗವಂತನು ಪ್ರಶ್ನಿಸಿರುವನು.

'ಧನಂಜಯ'- 'ಓ ಅರ್ಜುನಾ! ಹಿಂದೆ ರಾಜಸೂಯ ಯಾಗದಲ್ಲಿ ನೀನು ಧನವನ್ನು ಹೇಗೆ ಜಯಿಸಿ ತಂದೆಯೋ ಹಾಗೆಯೇ ಈಗ ನಿನ್ನ ಮಾಯಾ ಸಂಮೋಹವನ್ನು, ಅಜ್ಞಾನವನ್ನು ಜಯಿಸಿ ಕೀರ್ತಿಹೊಂದು' ಎಂದು ಬಹುಶಃ ಎಚ್ಚರಿಸಲು 'ಧನಂಜಯ' ಎನ್ನುವ ಪದವನ್ನು ಭಗವಂತನು ಇಲ್ಲಿ ಉಪಯೋಗಿಸಿದನು.

ಪ್ರ : ಶ್ರವಣಾದಿಗಳನ್ನು ಹೇಗೆ ಮಾಡಬೇಕು?

ಉ : ಏಕಾಗ್ರಮನಸ್ಸಿನಿಂದ.

**ಅ||** ಭಗವಂತನ ಆ ಪ್ರಶ್ನೆಗೆ ಅರ್ಜುನನು ಉತ್ತರಕೊಡುತ್ತಿರುವನು-

**ಅರ್ಜುನ ಉವಾಚ:**

**೭೩ ನಷ್ಟೋ ಮೋಹಃ ಸ್ಮೃತಿರ್ಲಬ್ಧಾ ತ್ವತ್ಪ್ರಸಾದಾನ್ ಮಯಾಽಚ್ಯುತ**
**ಸ್ಥಿತೋಽಸ್ಮಿ ಗತಸಂದೇಹಃ ಕರಿಷ್ಯೇ ವಚನಂ ತವ**

ಅರ್ಜುನ ಉವಾಚ-ಅರ್ಜುನನು ಹೇಳಿದನು.

**ಅರ್ಥ:** ಅಚ್ಯುತ=ಕೃಷ್ಣ; ತ್ವತ್ಪ್ರಸಾದಾತ್=ನಿನ್ನ ಅನುಗ್ರಹದಿಂದ; ಮೋಹಃ=ನನ್ನ ಅಜ್ಞಾನವು; ನಷ್ಟಃ=ನಶಿಸಿದೆ; ಮಯಾ=ನನ್ನಿಂದ; ಸ್ಮೃತಿಃ=ಜ್ಞಾನ (ಆತ್ಮಸ್ಮೃತಿ); ಲಬ್ಧಾ=ಹೊಂದಲ್ಪಟ್ಟಿದೆ; ಗತಸಂದೇಹಃ=ಸಂಶಯರಹಿತನಾಗಿ; ಸ್ಥಿತಃ ಅಸ್ಮಿ=ಇದ್ದೇನೆ; ತವ=ನಿನ್ನ; ವಚನಂ=ವಾಕ್ಯವನ್ನು (ಆಜ್ಞೆಯನ್ನು); ಕರಿಷ್ಯೇ=ನೆರವೇರಿಸುವೆನು.

**ತಾ||** ಅರ್ಜುನನು ಹೇಳಿದನು- ಓ ಕೃಷ್ಣಾ! ನಿನ್ನ ಅನುಗ್ರಹದಿಂದ ನನ್ನ ಅಜ್ಞಾನವು ನಶಿಸಿದೆ. ಜ್ಞಾನವು (ಆತ್ಮಸ್ಮೃತಿ) ಉಂಟಾಗಿದೆ, ಸಂಶಯ ತೊಲಗಿದೆ. ಇನ್ನು ನಿನ್ನ ಆಜ್ಞೆಯನ್ನು ನೆರವೇರಿಸುವೆನು.

**ವ್ಯಾಖ್ಯೆ:** ಶ್ರೀ ಕೃಷ್ಣಮೂರ್ತಿ 'ನಿನ್ನ ಅಜ್ಞಾನವು ನಶಿಸಿದೆಯೇ?' ಎಂದು ಪ್ರಶ್ನಿಸಲು ಅರ್ಜುನನು ಅದಕ್ಕೆ ಸರಿಯಾದ ಸಮಾಧಾನವನ್ನಿತ್ತನು. 'ನನ್ನ ಅಜ್ಞಾನ (ಮೋಹ) ಮಾಯವಾಗಿದೆ.' ಎಂದು ಆತನು ಸ್ಪಷ್ಟವಾಗಿ ಹೇಳಿದನು. ಅರ್ಜುನನು ದೇಹ ಭ್ರಾಂತಿಯಿಂದ ಕೂಡಿದವನಾಗಿ ಕರ್ತವ್ಯಾಕರ್ತವ್ಯಗಳನ್ನು ವಿಸ್ಮರಿಸಿದ್ದ ಸಂದರ್ಭದಲ್ಲಿ ಶ್ರೀ ಕೃಷ್ಣಮೂರ್ತಿ ಆತನಿಗೆ ಯಥಾರ್ಥ ತತ್ತ್ವವನ್ನು ಉಪದೇಶಿಸಿದನು. (ರೋಗಿಗೆ ಔಷಧವನ್ನು ಕೊಟ್ಟ ಹಾಗೆ) ಇಲ್ಲಿ ವೈದ್ಯನು ಮಹಾ ಪಂಡಿತ. ಔಷಧವೂ ಉತ್ಕೃಷ್ಟವಾದುದು. ಇನ್ನು ರೋಗ ಎಷ್ಟು ಉಲ್ಬಣಿಸಿದ್ದರೂ ತೊಂದರೆಯಿಲ್ಲ. ಗೀತಾಮೃತವನ್ನು ಪಾನಮಾಡಿದ ಅರ್ಜುನನಿಗೆ ಮೋಹವು ಮಾಯವಾಗಿದೆ. ಅಜ್ಞಾನವು ಮಾಯವಾಗಿದೆ. ಈ ವಿಷಯವನ್ನು '**ನಷ್ಟೋ ಮೋಹಃ**' ಎನ್ನುವ ವಾಕ್ಯದಿಂದ ಅರ್ಜುನನು ತಾನೇ ಒಪ್ಪಿಕೊಂಡನು. ಔಷಧಕ್ಕೆ ಉತ್ತಮ ಫಲವೊದಗಿದೆ. ಬೋಧಿತನಲ್ಲಿ ತಕ್ಷಣ ಫಲವನ್ನು ಸಾಧಿಸಿರುವುದು ಬೋಧಕನ ಹಾಗೂ ಬೋಧೆಯ ಮಹಿಮೆಯನ್ನು ಎತ್ತಿ ತೋರುತ್ತಿದೆಯಾದ್ದರಿಂದ ಶ್ರೀ ಕೃಷ್ಣ ಪರಮಾತ್ಮನು ಎಷ್ಟು ಶಕ್ತಿಶಾಲಿಯೋ, ಗೀತಾಜ್ಞಾನ ಎಷ್ಟು ಉತ್ಕೃಷ್ಟವಾದುದೋ ಇದರಿಂದ ಸ್ಪಷ್ಟವಾಗುತ್ತದೆ.

ಅಧ್ಯಾತ್ಮಜ್ಞಾನ ಒಂದು ಅನುಭವ ವಿದ್ಯೆ. ಅದು 'ವಾಚಾ' ಜ್ಞಾನದಿಂದ ಪೂರ್ತಿಯಾಗುವುದಿಲ್ಲ. ಪ್ರತಿಯೊಬ್ಬರೂ ಅದನ್ನು ಆಚರಣೆಯಲ್ಲಿ ತಂದುಕೊಂಡು ಅನುಭವದಲ್ಲಿ ನೋಡಿಕೊಳ್ಳಬಹುದು. ಶಾಸ್ತ್ರಾದಿಗಳಲ್ಲಿ ತಿಳಿಸಿರುವುದು, ಮಹಾತ್ಮರಾದ ಋಷಿಗಳು ಬೋಧಿಸಿರುವುದು ಕಲ್ಪಿತವಲ್ಲವೆಂದು ತಿಳಿಯುವುದು. ಅರ್ಜುನನು ಶ್ರೀ ಕೃಷ್ಣನ ಬೋಧೆಯನ್ನು ಹಾಗೂ ಸಿದ್ಧಾಂತವನ್ನು ತನ್ನ ಉಪಾಧಿಯಲ್ಲಿ ಪರೀಕ್ಷಿಸಿಕೊಂಡು ನೋಡಿದನು, ಸಿದ್ಧಾಂತವು ಸರಿಯಾದದ್ದೇ ಎಂದು ಕೂಡಲೇ ಋಜು ಮಾಡಿದನು. ಆ ಸತ್ಯವನ್ನೇ ಈ ಶ್ಲೋಕದ ಮೂಲಕ ಅರ್ಜುನನು ಲೋಕಕ್ಕೆ ಹೇಳುತ್ತಿದ್ದಾನೆ- 'ಓ ಜನಗಳಿರಾ! ಔಷಧಿ ತೆಗೆದುಕೊಂಡು ನೋಡಿದೆನು, ತಕ್ಷಣ ಫಲವುಂಟಾಗಿದೆ ಆದ್ದರಿಂದ ಓ ಸಂಸಾರ ವ್ಯಾಧಿ ಪೀಡಿತರೇ! ನೀವೆಲ್ಲರೂ ನಿರಾತಂಕವಾಗಿ, ನಿಸ್ಸಂಕೋಚವಾಗಿ ಇದನ್ನು, ಸೇವಿಸಿರಿ ನನ್ನ ಹಾಗೆ ನಿಮಗೂ ತಪ್ಪದೆ ಭವರೋಗ ಹರಣವಾಗುವುದು!', ಎಂದು ಆತನು ಲೋಕಕ್ಕೆ ಹೇಳುತ್ತಿದ್ದಾನೆ. ಮತ್ತೆ ಹಸಿವು ತೀರಿರುವನ ಗುರುತು ತೇಗು ಬರುವುದು ಹೇಗೆಯೋ ಹಾಗೆ ಗೀತಾಮೃತವನ್ನು ತೃಪ್ತಿಯಾಗಿ ಪಾನಮಾಡಿದ ಅರ್ಜುನನಿಗೆ ಸಂತೃಪ್ತಿಯಾದ ತೇಗು ಬಂದಿದೆ. ಈ ಶ್ಲೋಕವೇ ಆ ತೇಗು. 'ನನ್ನ ಹಸಿವು ತೀರಿದೆ, ನನ್ನ ದಾಹ ಶಮನ ಹೊಂದಿದೆ, ಸಂತೃಪ್ತಿಯಾಗಿದೆ' ಎಂದು ಅರ್ಜುನನು ಹೇಳಿದನು. ಆದ್ದರಿಂದ ಇನ್ನು ಜನರಿಗೆ ಗೀತಾಪ್ರಭಾವದ ಮೇಲೆ ನಂಬಿಕೆ ಚೆನ್ನಾಗಿ ಹುಟ್ಟುವುದು. ಏಕೆಂದರೆ, ಅದನ್ನು ಸೇವಿಸಿದ ಅರ್ಜುನನಿಗೆ ಪ್ರತ್ಯಕ್ಷವಾಗಿ ಸತ್ಫಲಿತವುಂಟಾಗಿದೆ. ಆದ್ದರಿಂದ ಬೇರೆಯವರಿಗೂ ತಪ್ಪದೆ ಉಂಟಾಗುವುದು.

'ಸ್ಮೃತಿರ್ಲಬ್ಧಾ'- ಮರೆತು ಹೋಗಿರುವುದನ್ನು ಜ್ಞಾಪಕಕ್ಕೆ ತಂದುಕೊಳ್ಳುವುದೇ ಸ್ಮೃತಿ, ಸ್ಮರಣೆಯೆನ್ನುವರು. ಅರ್ಜುನನು ತನ್ನ ವಾಸ್ತವ ಸ್ವರೂಪವಾದ ಆತ್ಮವನ್ನು ಮರೆತು ದೇಹಭ್ರಾಂತಿ ಹೊಂದಿದ್ದನು. ಈಗ ಭಗವಂತನ ಬೋಧೆಯಿಂದ ಆತನಿಗೆ ಮತ್ತೆ ತನ್ನ ಆತ್ಮ ಸ್ವರೂಪ ಜ್ಞಾನವುಂಟಾಗಿದೆ. ತಾನು ದೇಹವಲ್ಲವೆಂದು, ದೇಹಾತೀತನಾದ ಸಚ್ಚಿದಾನಂದ ಆತ್ಮನು ಎನ್ನುವ ಭಾವ ಮತ್ತೆ ಜ್ಞಾಪಕಕ್ಕೆ ಬಂದಿದೆ. ಸ್ಮೃತಿಃ ಎಂದು ಹೇಳಿರುವುದರಿಂದ ಈ ಆತ್ಮಸ್ವರೂಪವು ಪ್ರತಿಯೊಬ್ಬನಿಂದ ಹೊಸದಾಗಿ ಹೊಂದುವುದಲ್ಲವೆಂದು, ಅದನ್ನು ಆತನು ಮರೆತಿದ್ದನೆಂದು, ಮತ್ತೆ ಆಪ್ತನ ವಾಕ್ಯದಿಂದ ಈಗ ಜ್ಞಾಪಕ ಮಾಡಿಕೊಳ್ಳುತ್ತಿದ್ದಾನೆಂದು ಸ್ಪಷ್ಟವಾಗುತ್ತದೆ.

**ಆತ್ಮಾ ತು ಸತತಂ ಪ್ರಾಪ್ತೋ ಹ್ಯಪ್ರಾಪ್ತವದವಿದ್ಯಯಾ**
**ತನ್ನಾಶೇ ಪ್ರಾಪ್ತವದ್ಭಾತಿ ಸ್ವಕಂಠಾಭರಣಂ ಯಥಾ**
**(ಆತ್ಮ ಬೋಧೆ - ಶ್ರೀ ಶಂಕರಾಚಾರ್ಯರು)**

'ಆತ್ಮ ಯಾವಾಗಲೂ ತನ್ನೊಡನೆಯೇ ಇದೆ. ಆದರೆ ಇಲ್ಲದ ಹಾಗೆ ಅವಿದ್ಯೆಯಿಂದ ಗೋಚರವಾಗುತ್ತಿದೆ. ಆ ಅವಿದ್ಯೆ ತೊಲಗಿದಾಗ ಮರೆತ ಸ್ವಕಂಠಾಭಾರಣವನ್ನು ಮತ್ತೆ ಹೊಂದಿದ ಹಾಗೆ ಗೋಚರಿಸುವುದು'- ಎಂದು ಶ್ರೀ ಶಂಕರ ಭಗವತ್ಪಾದರು ತಿಳಿಸಿರುವರು. ಹಾಗೆಯೇ ಆತ್ಮ ಸರ್ವ

ಜೀವಿಗಳಲ್ಲಿಯೂ ಸ್ವತಃ ಸಿದ್ಧವಾಗಿ ಇದ್ದೇ ಇದೆ. ಆದರೆ ಮರೆಯ ಲ್ಪಟ್ಟಿದೆ. ಗುರು ವಾಕ್ಯದಿಂದ ಮತ್ತೆ ಈಗ ಜ್ಞಾಪಕ ಮಾಡಿಕೊಳ್ಳಬೇಕಾಗಿದೆ. ಅದೇ 'ಸ್ಮೃತಿ'. ಇದರಿಂದ ಸರ್ವ ಜೀವಿಗಳೂ ನಾಶರಹಿತ ಆತ್ಮ ಸ್ವರೂಪಿಗಳೇ ಎಂದು, ಅವಿದ್ಯಾ ಪ್ರಭಾವದಿಂದ ಆ ಸಂಗತಿಯನ್ನು ಮರೆತು ತಾವು ದೇಹೇಂದ್ರಿಯಾದಿಗಳು ಎಂದು ತಿಳಿದು ವ್ಯರ್ಥವಾಗಿ ದುಃಖಿಸುತ್ತಿದ್ದಾರೆ ಎಂದು ಅರ್ಥವಾಗುತ್ತದೆ. ಆದ್ದರಿಂದ ಅನುಭವಜ್ಞರಾದ ಮಹನೀಯರ ಬೋಧೆಗಳಿಂದ ಗೀತಾಶಾಸ್ತ್ರ ವಿಚಾರಣೆಯಿಂದ ಆ ಮರೆತ ನಿಜರೂಪವನ್ನು ಪ್ರತಿಯೊಬ್ಬರೂ ಅರ್ಜುನನ ಹಾಗೆ ಜ್ಞಾಪಿಸಿಕೊಂಡು ನಿಜಮಹಿಮೆಯನ್ನು ತಿಳಿದು ಶೋಕ ವಿಮುಕ್ತರಾಗಬೇಕು.

'ತ್ವತ್ಪ್ರಸಾದಾತ್'- ಸದ್ಗುರುಗಳ ಅನುಗ್ರಹಕ್ಕೆ ಅಧ್ಯಾತ್ಮರಂಗದಲ್ಲಿ ವಿಶೇಷ ಸ್ಥಾನವಿದೆ. ಶಿಷ್ಯನು ಸ್ವಾತ್ಮೋನ್ನತಿಗಾಗಿ, ತಾನು ಎಷ್ಟು ಪ್ರಯತ್ನಿಸಿದರೂ ಸರ್ವೇಶ್ವರನ, ಸದ್ಗುರುವಿನ ಕೃಪೆಯಿಲ್ಲದಿದ್ದಲ್ಲಿ ಈ ಮಾಯೆಯನ್ನು ದಾಟಲು ಸಾಧ್ಯವಿಲ್ಲ. ಆದ್ದರಿಂದಲೇ ಭಗವಂತನನ್ನು ಕುರಿತ ಪೂಜೆ, ಜಪ ಧ್ಯಾನಾದಿಗಳನ್ನು ಮಾಡುವುದು, ಸದ್ಗುರುವನ್ನು ತ್ರಿಕರಣ ಶುದ್ಧಿಯಿಂದ ಸೇವಿಸುವುದು, ಮುಮುಕ್ಷುವಿಗೆ ವಿಧಿಯಾಗಿ ಏರ್ಪಡಿಸಲಾಗಿದೆ. ಮಹಾತ್ಮರ ಅನುಗ್ರಹದಿಂದ ಮಾಯಾಬಂಧ ಸಡಲಿ ಹೋಗುವುದು. ಆದುದರಿಂದಲೇ ನಮ್ಮ ಪೂರ್ವಿಕರು ತಾವು ಎಷ್ಟು ದೊಡ್ಡವರಾದರೂ ಗುರುವನ್ನು ಆಶ್ರಯಿಸಿ, ಸೇವಿಸಿ, ಅದೇ ವಿಧದಲ್ಲಿ ಭಗವಂತನನ್ನು ಪೂಜಿಸಿ, ಅರ್ಚಿಸಿ, ಮುಕ್ತಿ ಹೊಂದಿದರು. ಇಲ್ಲಿಯೂ ಸಹ ಅರ್ಜುನನು ತನಗೆ ಅಜ್ಞಾನ ನಶಿಸಿರುವುದು ಗುರುವಾದ ಶ್ರೀಕೃಷ್ಣನ ಅನುಗ್ರಹದಿಂದಲೇ ಎಂದು ಹೇಳಿರುವನು.

'ಅಚ್ಯುತ'- ತನ್ನ ಭಕ್ತರು ಸಂಸಾರಚ್ಯುತರಾಗದೆ ಅದರಿಂದ ತಪ್ಪಿಸುವವನಾದ್ದರಿಂದ ಶ್ರೀಕೃಷ್ಣನಿಗೆ ಅಚ್ಯುತನೆನ್ನುವ ಹೆಸರು ಬಂದಿದೆ. ಈ ಪದವು ಇಲ್ಲಿ ಬಹಳ ಸಮಯೋಚಿತವಾಗಿದೆ. ಏಕೆಂದರೆ ತನ್ನ ಭಕ್ತನಾದ ಅರ್ಜುನನನ್ನು ಸಂಸಾರ ಕೂಪದ ಅಜ್ಞಾನದಲ್ಲಿ ಜಾರಿಹೋಗದಂತೆ ಭಗವಂತನು ರಕ್ಷಿಸಿ, ತನ್ನ 'ಅಚ್ಯುತ' ನಾಮವನ್ನು ಸಾರ್ಥಕ ಮಾಡಿಕೊಂಡನು. ಅರ್ಜುನನು ಚ್ಯುತನು ಆಗಲಿಲ್ಲವೆನ್ನುವುದಕ್ಕೆ ಗುರುತು ಆತನು ಈ ಶ್ಲೋಕದಲ್ಲಿ ಹೇಳಿರುವ ಮಾತುಗಳೇ ಆಗಿವೆ.

'ಗತ ಸಂದೇಹಃ'- ಅಜ್ಞಾನವಿರುವಾಗ ಸಂದೇಹ ಪರಂಪರೆಗಳು ಮನುಜನನ್ನು ಪೀಡಿಸುವುವು. ಆದರೆ ಆತ್ಮತತ್ತ್ವ, ಜಗಸ್ಥಿತಿಯ ಪ್ರತ್ಯಕ್ಷಾನುಭೂತಿ ಪಡೆದ ನಂತರ ಅಂತಹ ಸಂಶಯಗಳಿಗೆ ಸ್ಥಾನವೇ ಇಲ್ಲ.

**ಭಿದ್ಯತೇ ಹೃದಯಗ್ರಂಥಿಶ್ಛಿದ್ಯಂತೇ ಸರ್ವಸಂಶಯಾಃ**
**ಕ್ಷೀಯಂತೇ ಚಾಸ್ಯ ಕರ್ಮಾಣಿ ತಸ್ಮಿನ್ ದೃಷ್ಟೇ ಪರಾವರೇ**

ಎನ್ನುವ ಉಪನಿಷತ್‌ವಾಕ್ಯವು ಈ ಸತ್ಯವನ್ನೇ ಖುಜು ಮಾಡುತ್ತಿದೆ-

'ಕರಿಷ್ಯೆ ವಚನಂ ತವ'- ರೋಗಿಗೆ ಆರೋಗ್ಯ ಮರಳಿ ಉಂಟಾಗಿರುವುದರ ಗುರುತು ಆತನು ಎದ್ದು ಚೆನ್ನಾಗಿ ನಡೆಯುವುದು ಹೇಗೋ ಹಾಗೆಯೇ ಆತ್ಮಜ್ಞಾನ ಹೊಂದಿರುವುದರ ಗುರುತು ದೇಹ ಭ್ರಾಂತಿ ತೊಲಗಿ ಕರ್ತವ್ಯವನ್ನು ಪಾಲಿಸುವುದೇ ಆಗಿದೆ. ಹಾಗೆಯೇ ಅರ್ಜುನನಿಗೆ ಅಜ್ಞಾನ ಶಮನ ಹೊಂದಿರುವುದರಿಂದ 'ನೀನು ಹೇಳಿದ ಹಾಗೆ ಮಾಡುವೆನು' ಎಂದು ಶ್ರೀ ಕೃಷ್ಣ ಪರಮಾತ್ಮನಿಗೆ ತಿಳಿಸಿ, ಕರ್ತವ್ಯೋನ್ಮುಖನಾದನು.

ಮತ್ತೆ ಲೋಕದಲ್ಲಿ ಶಿಷ್ಟಾಚಾರವಿದೆ. ಶಿಷ್ಯನು ಎಂತಹ ಉನ್ನತ ಸ್ಥಿತಿಯನ್ನೇರಿದರೂ, ಗುರುಭಕ್ತಿ, ಗುರು ವಾಕ್ಯ ಪಾಲನೆಯನ್ನು ಬಿಡಬಾರದು. ಹಾಗೆಯೇ ಅರ್ಜುನನು ತನಗೆ ಜ್ಞಾನೋದಯವಾಗಿದ್ದರೂ, ಗುರುವಾಜ್ಞೆ ಪಾಲನೆಯನ್ನು ಬಿಡಲಿಲ್ಲ. ಗುರುಭಕ್ತಿಗೆ ಇದೊಂದು ಒಳ್ಳೆಯ ನಿದರ್ಶನ. ಅರ್ಜುನನು ಜ್ಞಾನವನ್ನು ಪಡೆದು ಜೀವನ ಲಕ್ಷ್ಯವನ್ನು ನೆರವೇರಿಸಿಕೊಂಡು ಕೃತಕೃತ್ಯನಾದನು. ಇನ್ನು ಆತನಿಗೆ ಮಾಡಬೇಕಾದುದು ಏನೂ ಈ ಪ್ರಪಂಚದಲ್ಲಿಲ್ಲ. ಆದರೂ **'ಕರಿಷ್ಯೇ ವಚನಂ ತವ'**- ನೀನು ಹೇಳಿದ ಹಾಗೆ ಆಚರಿಸುವೆನು ಎಂದು ಭಕ್ತಿಯಿಂದ ವಚಿಸಿದನು. ಅರ್ಜುನನ ಈ ಆದರ್ಶವನ್ನು ಮುಮುಕ್ಷುಗಳು ಸದಾ ಜ್ಞಾಪಕದಲ್ಲಿಟ್ಟುಕೊಂಡು ಗುರುಭಕ್ತಿ, ದೈವಭಕ್ತಿ, ಶಾಸ್ತ್ರವಿಶ್ವಾಸಗಳನ್ನು ಯಾವ ಕಾಲದಲ್ಲಿಯೂ ಬಿಡದೆ ಕಾಪಾಡಿಕೊಳ್ಳಬೇಕು.

ಪ್ರ : ಶ್ರೀ ಕೃಷ್ಣನ ಬೋಧೆಯಿಂದ ಅರ್ಜುನನಿಗೆ ಎಂತಹ ಸತ್ಫಲಿತಗಳು ಒದಗಿವೆ?

ಉ : ಆತನಿಗೆ ೧) ಅಜ್ಞಾನ ತೊಲಗಿದೆ ೨) ಆತ್ಮಸ್ಮೃತಿ ಉಂಟಾಗಿದೆ ೩) ಸಂಶಯ ನಿವಾರಣೆಯಾಗಿದೆ ೪) ಆತನು ಕರ್ತವ್ಯನಿರತನಾದನು.

ಪ್ರ : ಜೀವಿಯ ಅಜ್ಞಾನಾದಿಗಳು ಹೇಗೆ ತೊಲಗುವುವು?

ಉ : ಮಹಾತ್ಮರಾದ ಸದ್ಗುರುಗಳ ಬೋಧೆ, ಅನುಗ್ರಹದಿಂದ ತೊಲಗುವುವು (ತ್ವತ್ಪ್ರಸಾದಾತ್)

**ಅ||** ಗೀತಾ ಬೋಧೆಯೆಲ್ಲವನ್ನು ಕೇಳಿದನಂತರ ಸಂಜಯನು ತನಗೆ ಉಂಟಾದ ಆನಂದಾನುಭವವನ್ನು ಐದು ಶ್ಲೋಕಗಳ ಮೂಲಕ ಧೃತರಾಷ್ಟ್ರನಿಗೆ ಹೇಳುತ್ತಿದ್ದಾನೆ-

**ಸಂಜಯ ಉವಾಚ-**

**೭೪ ಇತ್ಯಹಂ ವಾಸುದೇವಸ್ಯ ಪಾರ್ಥಸ್ಯ ಚ ಮಹಾತ್ಮನಃ**
**ಸಂವಾದಮಿಮಮಶ್ರೌಷಮದ್ಭುತಂ ರೋಮಹರ್ಷಣಂ**

ಸಂಜಯ ಉವಾಚ=ಸಂಜಯನು ಹೇಳಿದನು.

**ಅರ್ಥ:** ಇತಿ=ಈ ಪ್ರಕಾರವಾಗಿ; ಅಹಂ=ನಾನು; ವಾಸುದೇವಸ್ಯ= ಶ್ರೀಕೃಷ್ಣನ; ಮಹಾತ್ಮನಃ=ಮಹಾತ್ಮನಾದ (ಮಹಾಬುದ್ಧಿಶಾಲಿಯಾದ); ಪಾರ್ಥಸ್ಯ ಚ=ಅರ್ಜುನನ; ಇಮಂ=ಈ; ಅದ್ಭುತಂ=ಆಶ್ಚರ್ಯಕರವಾದದ್ದು; ರೋಮ ಹರ್ಷಣಂ=ರೋಮಪುಲಕಗೊಳ್ಳುವ; ಸಂವಾದಂ=ಸಂಭಾಷಣೆಯನ್ನು; ಅಶ್ರೌಷಂ=ಕೇಳಿದೆನು.

**ತಾ||** ಸಂಜಯನು ಹೇಳಿದನು- ಓ ಧೃತರಾಷ್ಟ್ರ ಮಹಾರಾಜಾ! ಈ ಪ್ರಕಾರವಾಗಿ ನಾನು ಶ್ರೀ ಕೃಷ್ಣನ ಮತ್ತು ಮಹಾತ್ಮನಾದ ಅರ್ಜುನನ ಆಶ್ಚರ್ಯಕರವಾದ ರೋಮಾಂಚಕಾರಿಯಾದ ಈ ಸಂಭಾಷಣೆಯನ್ನು ಕೇಳಿದೆ.

**ವ್ಯಾಖ್ಯೆ:** ಶ್ರೀ ಕೃಷ್ಣ ಪರಮಾತ್ಮನು ಮಾಡಿದ ಗೀತಾ ಬೋಧೆಯನ್ನು ವ್ಯಾಸಮುನಿಯ ಅನುಗ್ರಹದಿಂದ ಕೇಳಿದ ಸಂಜಯನು ಅದನ್ನು ಕೇಳಿದ ನಂತರ ಉಂಟಾದ ಅಪೂರ್ವವಾದ ತನ್ನ ಆನಂದಾತಿಶಯವನ್ನು ಧೃತರಾಷ್ಟ್ರನಿಗೆ ತಿಳಿಸುತ್ತಿರುವನು.

'ಪಾರ್ಥಸ್ಯ ಚ ಮಹಾತ್ಮನಃ'- ಇಲ್ಲಿಯವರೆಗೆ ಮೋಹಗ್ರಸ್ತನಾಗಿ ಭ್ರಾಂತಿಯುಕ್ತನಾಗಿ, ಅಲ್ಪಾತ್ಮನಾಗಿದ್ದ ಅರ್ಜುನನು ಭಗವಂತನ ದಿವ್ಯ

ಬೋಧೆಯಿಂದ 'ಮಹಾತ್ಮ' ನಾಗಿ ರೂಪುಗೊಂಡನು. ಅರ್ಜುನನ ಹಾಗೆ ಪ್ರತಿಯೊಬ್ಬರೂ ಶ್ರೀ ಕೃಷ್ಣನ ಬೋಧಾಮೃತವನ್ನು ಪಾನ ಮಾಡಿ ಸಂಸಾರ ಬಂಧನದಿಂದ ಬಿಡಿಸಿಕೊಂಡು "ಮಹಾತ್ಮರಾಗಿ" ಬೆಳಗಬೇಕು. 'ಮಹಾತ್ಮ' ಎನ್ನುವುದು ಒಂದು ಬಿರುದು. ಪ್ರಯತ್ನದಿಂದ ಅದನ್ನು ಯಾರಾದರೂ ಸಂಪಾದಿಸಿಕೊಳ್ಳಬಹುದು. ಗೀತೆಯ ಲಕ್ಷ್ಯ ಅಲ್ಪಾತ್ಮರನ್ನು ಮಹಾತ್ಮರನ್ನಾಗಿ ಮಾಡುವುದೇ ಆಗಿದೆ. ಮಂದ ಬುದ್ಧಿಗಳನ್ನು ಬುದ್ಧಿವಂತರನ್ನಾಗಿ ಮಾಡುವುದು. ಅಜ್ಞಾನಿಯನ್ನು ಜ್ಞಾನಿಯನ್ನಾಗಿ ಪರಿವರ್ತಿಸುವುದು.

'ಅದ್ಭುತಂ ರೋಮಹರ್ಷಣಂ'- ಶ್ರೀ ಕೃಷ್ಣಾರ್ಜುನ ಸಂವಾದ ರೂಪವಾದ ಈ ಗೀತಾಶಾಸ್ತ್ರವು ಅತ್ಯಾಶ್ಚರ್ಯಕರವಾದುದು. ಏಕೆಂದರೆ ಸ್ಪರ್ಶವೇದಿ ಕಬ್ಬಿಣವನ್ನು ಚಿನ್ನವನ್ನಾಗಿ ಮಾಡಿದ ಹಾಗೆ ಈ ಶಾಸ್ತ್ರವು ಮಾಯಾ ಮೋಹಿತನನ್ನು ವಿಮುಕ್ತಿಗೊಳಿಸುತ್ತಿದೆ. ಅಳುತ್ತಿರುವವನನ್ನು ನಗಿಸುತ್ತದೆ. ಇಂತಹ ಅಮೋಘ ದೈವೀ ಶಕ್ತಿ ಇದರಲ್ಲಿದೆ. ಮತ್ತೆ ಇದನ್ನು ಕೇಳಿದರೂ, ಓದಿದರೂ ಆನಂದದಿಂದ ತನ್ಮಯರಾಗುವರು. ಈ ಕಾರಣದಿಂದ ಇದನ್ನು ಸಂಜಯನು 'ಅದ್ಭುತ' 'ರೋಮಾಂಚಕ' ಎಂದು ವರ್ಣಿಸಿದನು. ಇಂತಹ ಅಪೂರ್ವ ಮಹಿಮೆ ಈ ಗೀತಾಶಾಸ್ತ್ರದಲ್ಲಿರುವುದರಿಂದ ಇದು ಜಗದ್ವಿಖ್ಯಾತವಾಗಿ ಸರ್ವಜನಗಳಿಗೆ ಆದರಣೀಯವಾಗಿ ಮುಮುಕ್ಷುಗಳಿಗೆ ಕಲ್ಪತರುವಾಗಿದೆ.

ಪ್ರ : ಶ್ರೀಕೃಷ್ಣಾರ್ಜುನ ಸಂವಾದ ಎಂತಹದು?

ಉ : ೧) ಅದ್ಭುತವಾದುದು ೨) ರೋಮಹರ್ಷವನ್ನುಂಟು ಮಾಡುವುದು

**ಅ॥** ಶ್ರೀ ವೇದವ್ಯಾಸರ ಅನುಗ್ರಹದಿಂದ ಈ ಸಂಭಾಷಣೆಯನ್ನು ಕೇಳಿದೆನೆಂದು ಸಂಜಯನು ಹೇಳುತ್ತಿದ್ದಾನೆ-

**೭೫ ವ್ಯಾಸಪ್ರಸಾದಾಚ್ಛ್ರುತವಾನೇತದ್ಗುಹ್ಯತಮಂ ಪರಮ್**
**ಯೋಗಂ ಯೋಗೇಶ್ವರಾತ್ಕೃಷ್ಣಾತ್ಸಾಕ್ಷಾತ್ಕಥಯತಃ ಸ್ವಯಮ್**

**ಅರ್ಥ:** ವ್ಯಾಸಪ್ರಸಾದಾತ್=ಶ್ರೀ ವೇದವ್ಯಾಸ ಮಹರ್ಷಿಯ ಅನುಗ್ರಹದಿಂದ; ಅಹಂ=ನಾನು; ಗುಹ್ಯಂ=ರಹಸ್ಯವಾದುದು; ಪರಂ=ಶ್ರೇಷ್ಠವಾದುದು; (ಆಗಿರುವ); ಏತತ್ ಯೋಗಂ=ಈ ಯೋಗ ಶಾಸ್ತ್ರವನ್ನು; ಸ್ವಯಂ=ಸ್ವಯವಾಗಿ; ಕಥಯತಃ=ಅರ್ಜುನನಿಗೆ ಹೇಳುತ್ತಿರುವಾಗ; ಯೋಗೇಶ್ವರಾತ್=ಯೋಗೇಶ್ವರನಾದ; ಕೃಷ್ಣಾತ್=ಶ್ರೀಕೃಷ್ಣನಿಂದ; ಸಾಕ್ಷಾತ್=ಪ್ರತ್ಯಕ್ಷವಾಗಿ; ಶ್ರುತವಾನ್=ಕೇಳಿದೆ.

**ತಾ॥** ಶ್ರೀ ವೇದವ್ಯಾಸ ಮಹರ್ಷಿಯ ಅನುಗ್ರಹದಿಂದ ನಾನು ಅತಿರಹಸ್ಯವಾದ, ಶ್ರೇಷ್ಠವಾದ ಈ ಯೋಗಶಾಸ್ತ್ರವನ್ನು ಸಾಕ್ಷಾತ್ತಾಗಿ ಅರ್ಜುನನಿಗೆ ಹೇಳುತ್ತಿರುವ ಯೋಗೇಶ್ವರನಾದ ಶ್ರೀ ಕೃಷ್ಣನಿಂದ ಪ್ರತ್ಯಕ್ಷವಾಗಿ ಕೇಳಿದೆ.

**ವ್ಯಾಖ್ಯೆ:** ಈ ಗೀತಾ ಶಾಸ್ತ್ರವನ್ನು ಕುರಿತು 'ಯೋಗಂ' ಎಂದು ಇಲ್ಲಿ ಹೇಳಲ್ಪಟ್ಟಿದೆ. ಯೋಗವೆಂದರೆ ಜೋಡಿಸುವುದು. ಜೀವಿಯನ್ನು ಪರಮಾತ್ಮನೊಡನೆ ಐಕ್ಯಗೊಳಿಸುವುದೆಂದರ್ಥ. ಈ ಗೀತೋಪದೇಶವು ಅಂತಹುದೇ ಆದ್ದರಿಂದ ಇದನ್ನು ಯೋಗವೆನ್ನುವರು. ಮತ್ತೆ ಇದು ಪರಮ ರಹಸ್ಯವಾದುದು, ಸರ್ವೋತ್ಕೃಷ್ಟವಾದುದೆಂದು ಇಲ್ಲಿ ಹೇಳಲಾಗಿದೆ. ಆದ್ದರಿಂದ ಇದು ಮುಮುಕ್ಷುಗಳಿಗೆ ಅವಶ್ಯಕವಾಗಿರುವುದೂ ಆಗಿದೆ.

'ಯೋಗೇಶ್ವರಾತ್ '- ಯೋಗಕ್ಕೆ ಪ್ರಭು ಯೋಗೇಶ್ವರನು. ಯೋಗವನ್ನು ಕುರಿತು ಸಂಪೂರ್ಣವಾಗಿ ತಿಳಿದವನು ಶ್ರೀಕೃಷ್ಣಪರಮಾತ್ಮ ಆದ್ದರಿಂದ ಅಂತಹ ಮಹನೀಯನು ಉಪದೇಶಿಸಿದ ಈ ಗೀತಾ ರೂಪ ಯೋಗಶಾಸ್ತ್ರದಲ್ಲಿ ಜನರಿಗೆ ಎಷ್ಟು ಪೂರ್ಣ ವಿಶ್ವಾಸವಿರಬೇಕು ಎನ್ನುವುದನ್ನು ಊಹಿಸಬಹುದು.

'ಸಾಕ್ಷಾತ್'- ಶ್ರೀ ವೇದವ್ಯಾಸರ ಅನುಗ್ರಹದಿಂದ ಗೀತಾಶಾಸ್ತ್ರವನ್ನು ಪ್ರತ್ಯಕ್ಷವಾಗಿ ತಾನು ಕೇಳಿದೆನೆಂದು ಸಂಜಯನು ಹೇಳುತ್ತಿರುವನು. ಶ್ರೀ ವ್ಯಾಸ ಮಹರ್ಷಿ ಸಂಜಯನಿಗೆ ದೂರಶ್ರವಣ, ದೂರದರ್ಶನ ಶಕ್ತಿ ಕೊಟ್ಟಿದ್ದರಿಂದ ರಣರಂಗದಲ್ಲಿ ಜರುಗಿದ ಸಂವಾದವನ್ನು ಮನೆಯಿಂದಲೇ ಆತನು ನೋಡಿ, ಕೇಳಿದನು. ಆದ್ದರಿಂದ ಸಂಜಯನು ಧೃತರಾಷ್ಟ್ರನಿಗೆ ಹೇಳಿರುವುದು ಪ್ರತ್ಯಕ್ಷ ಪ್ರಮಾಣ ಅಂದರೆ ಸಾಕ್ಷಾತ್ ಭಗವಂತನ ಮುಖದಿಂದ ಗೀತಾಬೋಧೆ ಯಾವ ಪ್ರಕಾರ ಹೊರಬಿತ್ತೋ ಅದನ್ನು ಇದ್ದ ದ್ದು ಇದ್ದ ಹಾಗೆ ಹೇಳಿದನೆಂದು ಭಾವ. ಈ ಪ್ರಕಾರವಾಗಿ ಸಂಜಯನು ಹೇಳಿರುವುದು ಸಾಕ್ಷಾತ್ ಭಗವದ್ವಾಕ್ಯಗಳಾಗಿರುವುದರಿಂದ, ಗೀತಾಗ್ರಂಥದ ಮೇಲೆ ಸರ್ವರಿಗೂ ಪರಮ ವಿಶ್ವಾಸವಿರಬೇಕು.

'ಸ್ವಯಂ' ಎಂದು ಹೇಳಿರುವುದರಿಂದ ಭಗವಂತನು ಸಾಕ್ಷಾತ್ತಾಗಿ ಬೋಧಿಸಿದ ಉಪದೇಶವಾದದ್ದರಿಂದ ಇದಕ್ಕೆ ಅಪರಿಮಿತವಾದ ಬೆಲೆಯಿದೆ.

ಪ್ರ : ಗೀತಾರೂಪವಾದ ಯೋಗಶಾಸ್ತ್ರವೆಂತಹದು?

ಉ : ೧) ಅತಿರಹಸ್ಯವಾದುದು ೨) ಪರಮೋತ್ಕೃಷ್ಟವಾದುದು ೩) ಭಗವಂತನು ಸಾಕ್ಷಾತ್ತಾಗಿ ಬೋಧಿಸಿರುವುದು.

ಪ್ರ : ಈ ಗೀತಾಶಾಸ್ತ್ರವನ್ನು ಸಂಜಯನು ಹೇಗೆ ಕೇಳಿದನು?

ಉ : ಶ್ರೀ ವೇದವ್ಯಾಸರ ಅನುಗ್ರಹದಿಂದ (ದೂರ ಶ್ರವಣ, ದೂರದರ್ಶನ ಶಕ್ತಿ ಪಡೆದು) ಕೇಳಿದನು.

**ಅ॥** ಭಗವಂತನ ಆ ದಿವ್ಯ ಬೋಧೆಗಳನ್ನು ಸ್ಮರಿಸಿ, ಸ್ಮರಿಸಿ ಮಹದಾನಂದವನ್ನು ಹೊಂದುತ್ತಿದ್ದೇನೆಂದು ಸಂಜಯನು ಹೇಳುತ್ತಿರುವನು-

**೭೬ ರಾಜನ್ ಸಂಸ್ಮೃತ್ಯ ಸಂಸ್ಮೃತ್ಯ ಸಂವಾದಮಿಮಮದ್ಭುತಮ್**
**ಕೇಶವಾರ್ಜುನಯೋಃ ಪುಣ್ಯಂ ಹೃಷ್ಯಾಮಿ ಚ ಮುಹುರ್ಮುಹುಃ**

**ಅರ್ಥ:** ರಾಜನ್=ಓ ಧೃತರಾಷ್ಟ್ರ ಮಹರಾಜಾ! ಅದ್ಭುತಮ್=ಆಶ್ಚರ್ಯಕರವಾದುದು; ಪುಣ್ಯಂ=ಪಾವನವಾದುದು (ಇಲ್ಲವೆ ಪುಣ್ಯದಾಯಕವಾದದ್ದು) ಆದ; ಕೇಶವಾರ್ಜುನಯೋಃ= ಕೃಷ್ಣಾರ್ಜುನರ; ಇಮಂ ಸಂವಾದಂ=ಈ ಸಂಭಾಷಣೆಯನ್ನು; ಸಂಸ್ಮೃತ್ಯ ಸಂಸ್ಮೃತ್ಯ=ಜ್ಞಾಪಿಸಿಕೊಂಡು ಜ್ಞಾಪಿಸಿಕೊಂಡು; ಮುಹುರ್ಮುಹುಃ ಚ=ಮಾತುಮಾತಿಗೆ; ಹೃಷ್ಯಾಮಿ=ಆನಂದಿಸುತ್ತಿದ್ದೇನೆ.

**ತಾ॥** ಓ ಧೃತರಾಷ್ಟ್ರ ಮಹಾರಾಜಾ! ಆಶ್ಚರ್ಯ ಕರವಾದುದು ಪಾವನವಾದುದು (ಪುಣ್ಯದಾಯಕವಾದದ್ದು) ಆದ ಕೃಷ್ಣಾರ್ಜುನರ ಈ ಸಂಭಾಷಣೆಯನ್ನು ನೆನೆನೆನೆದು ಮತ್ತೆ ಮತ್ತೆ ಆನಂದವನ್ನು ಹೊಂದುತ್ತಿದ್ದೇನೆ.

**ವ್ಯಾಖ್ಯೆ:** ಸಂಜಯನು ಗೀತಾಸಂಸ್ಮರಣಜನಿತ ಮಹಾದಾನಂದವನ್ನು ವ್ಯಕ್ತಗೊಳಿಸುತ್ತಿದ್ದಾನೆ.

'ಸಂಸ್ಮೃತ್ಯ ಸಂಸ್ಮೃತ್ಯ' -'ಸಂಸ್ಮೃತ್ಯ' ಎಂದು ಹೇಳುವುದರಲ್ಲಿ ವಿಶೇಷವಿದೆ. ಕೇಳಿದ ಬೋಧೆಯನ್ನು ಪೂರ್ತಿಯಾಗಿ ಸ್ಮರಿಸುವುದೇ ಸಂಸ್ಮರಣೆ. ಮತ್ತು ಆ ಪದವನ್ನು ಎರಡು ಸಾರಿ ಹೇಳುವುದರಿಂದ ಅದನ್ನು ಮತ್ತೆ ಮತ್ತೆ ಚೆನ್ನಾಗಿ ಸ್ಮರಿಸಬೇಕೆಂದು ಭಾವ. ಸಂಜಯನು ಆ ಪ್ರಕಾರವೇ ಮಾಡಿದನು. ಅಂದರೆ ಭಗವತ್ಪ್ರೋಕ್ತವಾದ ಈ ಗೀತಾಜ್ಞಾನವನ್ನು ಒಮ್ಮೆನೆನೆಯುವುದರಿಂದ ತೃಪ್ತಿ ಹೊಂದದೆ ಅದನ್ನು ಮತ್ತೆ ಮತ್ತೆ ಸ್ಮರಿಸಿದನು. ಅಂದರೆ ತೀವ್ರವಾಗಿ ಮನನ ಮಾಡಿದನು. ಹಾಗೆ ಮನನ ಮಾಡುವುದರಿಂದ ಅದರ ಅರ್ಥ ಚೆನ್ನಾಗಿ ಹೃದಯದಲ್ಲಿ ನಾಟುವುದು ೧) ಶ್ರವಣ ೨) ಮನನ ೩) ನಿದಿಧ್ಯಾಸಗಳು

ಎನ್ನುವ ಮೂರು ಪದ್ಧತಿಗಳು ಶಾಸ್ತ್ರಗಳಲ್ಲಿ ಹೇಳಲ್ಪಟ್ಟಿವೆ. ಸಂಜಯನು ಮೊದಲು ಗೀತಾಬೋಧೆಯನ್ನು ಶ್ರವಣ ಮಾಡಿದನು. ನಂತರ ಮನನ ನಿದಿ ಧ್ಯಾಸಗಳನ್ನು ಅವಲಂಬಿಸಿ ಪರಮಾನಂದವನ್ನು ಹೊಂದಿದನು.

'ಪುಣ್ಯಂ'- ಎಂದು ಹೇಳುವುದರಿಂದ ಕೃಷ್ಣಾರ್ಜುನ ಸಂವಾದ ರೂಪವಾದ ಈ ಗೀತಾಶಾಸ್ತ್ರವು ಮಹಾಪುಣ್ಯಪ್ರದವಾದದ್ದು ಹಾಗೂ ಅತಿ ಪಾವನವಾದದ್ದೆಂದು ಭಾವ. ಸಾಕ್ಷಾತ್ ಮೋಕ್ಷವನ್ನುಂಟುಮಾಡುವ ಪವಿತ್ರವಸ್ತು. ಆದ್ದರಿಂದಲೇ ಇದನ್ನು 'ಪುಣ್ಯ' ಎಂದು ಹೇಳಿದರು. ಅಂದರೆ ಈ ಗೀತಾಶಾಸ್ತ್ರವು ಮೂರ್ತೀಭವಿಸಿದ ಪುಣ್ಯವೇ ಎಂದು, ಪಾಪಕ್ಷಯಕರ ದೆಂದು ಭಾವ.

'ಹೃಷ್ಯಾಮಿ ಚ ಪುನಃ ಪುನಃ'- ಸ್ವಸ್ವರೂಪ ಸಾಕ್ಷಾತ್ಕಾರದ ಸಮಯದಲ್ಲಿ ಇಲ್ಲವೆ ಭಗವದೈಕ್ಯದ ಸಮಯದಲ್ಲಿ ಜೀವಿಯು ದುಃಖರಾಹಿತ್ಯವನ್ನು, ಅತಿ ಹರ್ಷವನ್ನು ಹೊಂದಿ ಆನಂದವನ್ನು ಮಾತುಮಾತಿಗೆ ಅನುಭವಿಸುವನು. ದುಃಖ ಮಯವಾದ ಈ ಸಂಸಾರದಲ್ಲಿ ಮನುಜನಿಗೆ ಬೇಕಾಗಿರುವುದು ಆನಂದವೇ (ಹರ್ಷವೇ) ಅಲ್ಲವೇ! ದುಃಖರಾಹಿತ್ಯವೇ ಅಲ್ಲವೇ! ಹರ್ಷವು ಗೀತಾಶಾಸ್ತ್ರದ ದ್ವಾರ ಜೀವಿಗೆ ಲಭಿಸುತ್ತದೆ. ದುಃಖಮಗ್ನನಾದ ಜೀವಿಗೆ ಅನಂತಾನಂದವು ಇದರಿಂದ ಪ್ರಾಪ್ತಿಯಾಗುವುದು. ಅರ್ಜುನನೇ ಇದಕ್ಕೆ ದೃಷ್ಟಾಂತ. ಮೊದಲು (ವಿಷೀದಂತಂ) ಪರಮಶೋಕಾನ್ವಿತನಾಗಿದ್ದ ಅರ್ಜುನನು ಗೀತಾಶಾಸ್ತ್ರ ಶ್ರವಣದಿಂದ, ಮನನದಿಂದ (ನಷ್ಟೋಮೋಹಃ) ಮೋಹರಹಿತನಾಗಿ, ಆನಂದ ಪರವಶನಾಗಿ ಕರ್ತವ್ಯ ನಿರ್ವಹಣೆಗಾಗಿ ರಣರಂಗಕ್ಕೆ ಧುಮುಕಿದನು. ಹಾಗೆಯೇ ಸಂಜಯನು ಗೀತಾಶ್ರವಣ ಮನನಗಳಿಂದ ಪರಮಾನಂದವನ್ನು ಹೊಂದುತ್ತಿರುವನು (ಹೃಷ್ಯಾಮಿ ಚ ಮುಹುರ್ಮುಹುಃ) ಈ ಪ್ರಕಾರವಾಗಿ ಗೀತಾಶ್ರವಣದಿಂದ ಇಬ್ಬರೂ ಒಂದೇ ಬಾರಿ ಪರಮಾನಂದವನ್ನು ಹೊಂದಿದರು. ಆದ್ದರಿಂದ ಪರಮಾನಂದವನ್ನು ಅಪೇಕ್ಷಿಸುವ ಪ್ರತಿ ಮಾನವನೂ, ದುಃಖವನ್ನು ಅಂತ್ಯಗೊಳಿಸಿಕೊಳ್ಳಬೇಕೆನ್ನುವ ಪ್ರತಿ ವ್ಯಕ್ತಿಯೂ, ಈ ಗೀತಾ ಶಾಸ್ತ್ರವನ್ನು ತಪ್ಪದೆ ಓದಿ, ಅದರ ಮನನ ನಿದಿಧ್ಯಾಸಗಳನ್ನು ಮಾಡಬೇಕು. ದುಃಖ ತಪ್ತರಾದ ಮಾನವರಿಗೆ ಈ ಶಾಸ್ತ್ರವು ಸಂಜೀವಿನಿಯಾಗಿದೆ. ಅಷ್ಟೇಕೆ ಸಮಸ್ತ ಜೀವಿಗಳಿಗೆ ಆನಂದವನ್ನು ನೀಡುವುದಾಗಿದೆ. ಸಂಜಯನ ವಾಕ್ಯಗಳು ಇದಕ್ಕೆ ಉದಾಹರಣೆ.

ಪ್ರ : ಕೃಷ್ಣಾರ್ಜುನ ಸಂವಾದ ರೂಪವಾದ ಗೀತಾಶಾಸ್ತ್ರ ಎಂತಹದು?

ಉ: ೧)ಮಹಾಪುಣ್ಯಪ್ರದವಾದದ್ದು -ಅತಿ ಪಾವನವಾದದ್ದು ೨) ಅದ್ಭುತವಾದದ್ದು- ಮಹದಾಶ್ಚರ್ಯ ಜನಕವಾದದ್ದು.

ಪ್ರ : ಅಂತಹ ಗೀತಾಶಾಸ್ತ್ರವನ್ನು ಕೇಳಿದ ನಂತರ ಏನು ಮಾಡಬೇಕು?

ಉ : ಕೇಳಿದ ಅರ್ಥವನ್ನು ಪದೇ ಪದೇ ಮನನ ಮಾಡಿಕೊಂಡು ನಿದಿ ಧ್ಯಾಸಮಾಡಬೇಕು.

ಪ್ರ : ಹಾಗೆ ಮಾಡುವುದರಿಂದ ಉಂಟಾಗುವ ಫಲವೇನು?

ಉ : ಜೀವಿಯು ದುಃಖರಹಿತನಾಗಿ, ಅತಿ ಹರ್ಷವನ್ನು, ಆತ್ಮಾನಂದವನ್ನು ಹೊಂದುವನು. ಮಾತು ಮಾತಿಗೆ ಸಂತೋಷದಿಂದ ತೂಗುವನು - ಸಂಜಯನೇ ಇದಕ್ಕೆ ಉದಾಹರಣೆ.

**ಅ॥** ಭಗವಂತನ ವಿಶ್ವರೂಪವನ್ನು ಸ್ಮರಿಸಿ, ಸ್ಮರಿಸಿ ಪರಮಾಶ್ಚರ್ಯವನ್ನು ಹೊಂದುತ್ತಿದ್ದೇನೆಂದು ಸಂಜಯನು ಹೇಳುತ್ತಿರುವನು-

**೭೭ ತಚ್ಚ ಸಂಸ್ಮೃತ್ಯ ಸಂಸ್ಮೃತ್ಯ ರೂಪಮತ್ಯದ್ಭುತಂ ಹರೇಃ**
**ವಿಸ್ಮಯೋ ಮೇ ಮಹಾನ್ ರಾಜನ್ ಹೃಷ್ಯಾಮಿ ಚ ಪುನಃ ಪುನಃ**

**ಅರ್ಥ:** ರಾಜನ್=ಓ ಧೃತರಾಷ್ಟ್ರ ಮಹಾರಾಜಾ! ಹರೇಃ=ಶ್ರೀಕೃಷ್ಣ ಮೂರ್ತಿಯ; ಅತ್ಯದ್ಭುತಂ=ಆಶ್ಚರ್ಯಕರವಾದ; ತತ್ ಚರೂಪಂ=ಆ ವಿಶ್ವರೂಪವನ್ನು; ಸಂಸ್ಮೃತ್ಯ ಸಂಸ್ಮೃತ್ಯ=ಸ್ಮರಿಸಿ, ಸ್ಮರಿಸಿ; ಮೇ=ನನಗೆ; ಮಹಾನ್=ಅಧಿಕವಾದ; ವಿಸ್ಮಯಃ=ಆಶ್ಚರ್ಯ (ಭವತಿ=ಉಂಟಾಗುತ್ತಿದೆ); ಪುನಃ ಪುನಃ ಚ=ಮತ್ತೆ ಮತ್ತೆ; ಹೃಷ್ಯಾಮಿ=ಸಂತೋಷಿಸುತ್ತಿದ್ದೇನೆ.

**ತಾ॥** ಧೃತರಾಷ್ಟ್ರ ಮಹಾರಾಜಾ! ಶ್ರೀ ಕೃಷ್ಣಮೂರ್ತಿಯ ಆಶ್ಚರ್ಯಕರವಾದ ಆ ವಿಶ್ವರೂಪವನ್ನು ನೆನೆನೆನೆದು ನನಗೆ ಮಹದಾಶ್ಚರ್ಯವಾಗುತ್ತಿದೆ. ಮತ್ತೆ (ಅದನ್ನು ಸ್ಮರಿಸಿಕೊಂಡು) ಪದೇ ಪದೇ ಸಂತೋಷ ಹೊಂದುತ್ತಿದ್ದೇನೆ.

**ವ್ಯಾಖ್ಯೆ:** ಹಿಂದಿನ ಶ್ಲೋಕದಲ್ಲಿ ಭಗವಂತನ ಬೋಧೆಯಿಂದ ಉಂಟಾಗುವ ಆನಂದವನ್ನು ತಿಳಿಸಲಾಗಿದೆ. ಈ ಶ್ಲೋಕದಲ್ಲಿ ಭಗವಂತನ ವಿಶ್ವರೂಪವನ್ನು ನೆನೆದಾಗ ಉಂಟಾಗುವ ದಿವ್ಯಾನುಭೂತಿ, ಪರಮಾನಂದವನ್ನು ವ್ಯಕ್ತ ಮಾಡಲಾಗಿದೆ.

'ಹೃಷ್ಯಾಮಿ ಚ ಪುನಃ ಪುನಃ'- ಸಂಜಯನು ಭಗವಂತನ ಬೋಧೆಯನ್ನು, ರೂಪವನ್ನು ನೆನೆನೆದು ಆನಂದವನ್ನು ಹಿಡಿಯಲಾರದವನಾಗಿದ್ದಾನೆ. ಆತನಿಗೆ ಉಂಟಾದ ಆಶ್ಚರ್ಯಕ್ಕೆ ಕೊನೆಯಿಲ್ಲದಾಗಿದೆ. ಪ್ರತಿಯೊಬ್ಬನೂ ಈ ದೆಸೆಯನ್ನು ಅಂದರೆ 'ಅತಿಹರ್ಷ' ಸ್ಥಿತಿಯನ್ನು ಯಾವಾಗಲಾದರೂ ಜ್ಞಾನಪ್ರಾಪ್ತಿಯಿಂದ ಹೊಂದಲೇಬೇಕಾಗಿದೆ. ನಶ್ವರ ಪ್ರಪಂಚ ಭಾವವನ್ನು ಬಿಟ್ಟು ಶಾಶ್ವತ ಭಗವತ್ಸ್ವರೂಪವನ್ನು ಚಿಂತಿಸಿದಾಗ ಕೆಲವರು ಆನಂದವನ್ನು ಹಿಡಿಯಲಾರದೆ ಕುಣಿಯುವರು. ಕೆಲವರು ಕೇಕೆ ಹಾಕಿ ಕುಪ್ಪಳಿಸುವರು. ಕೆಲವರು ಆನಂದಪಾರವಶ್ಯದಿಂದ ವರ್ತಿಸುವರು. ಇವು ಅತಿಹರ್ಷದ ಚಿಹ್ನೆಗಳು. ಸಂಜಯನಿಗೆ ಗೀತಾಶ್ರವಣದ ನಂತರ, ವಿಶ್ವ ರೂಪ ಸಂದರ್ಶನ ವಾದನಂತರ ಅವುಗಳಿಂದ ಮಹದಾನಂದ ಉಂಟಾಗಿದೆ. ಆ ವಿಷಯವನ್ನೇ ಈ ಎರಡು ಶ್ಲೋಕಗಳಲ್ಲಿ ಧೃತರಾಷ್ಟ್ರನಿಗೆ ತಿಳಿಸಿದನು.

ಪ್ರ : ಭಗವಂತನ ವಿಶ್ವರೂಪ ಎಂತಹದು?

ಉ : ಅತ್ಯದ್ಭುತವಾದದ್ದು.

ಪ್ರ : ಅದನ್ನು ಸ್ಮರಿಸಿದಾಗ ಸಂಜಯನಿಗೆ ಎಂತಹ ಅನುಭವವಾಯಿತು?

ಉ: ೧) ಮಹದಾಶ್ಚರ್ಯ ೨) ಪರಮಾನಂದ

**ಅ॥** ಶ್ರೀ ಕೃಷ್ಣಾರ್ಜುನರು ಇರುವ ಕಡೆ ವಿಜಯ, ಐಶ್ವರ್ಯ ಮುಂತಾದ ಶುಭ ಲಕ್ಷಣಗಳು ಬೆಳಗುತ್ತಿರುತ್ತವೆ ಎಂದು ಸಂಜಯನು ತಿಳಿಸುತ್ತಿದ್ದಾನೆ-

**೭೮ ಯತ್ರ ಯೋಗೇಶ್ವರಃ ಕೃಷ್ಣೋ ಯತ್ರ ಪಾರ್ಥೋ ಧನುರ್ಧರಃ**
**ತತ್ರ ಶ್ರೀರ್ವಿಜಯೋ ಭೂತಿರ್ಧ್ರುವಾ ನೀತಿರ್ಮತಿರ್ಮಮ**

**ಅರ್ಥ:** ಯತ್ರ ಎಲ್ಲಿ; ಯೋಗೇಶ್ವರಃ=ಯೋಗೇಶ್ವರನಾದ (ಯೋಗಕ್ಕೆ

ಪ್ರಭುವಾದ); ಕೃಷ್ಣಃ=ಶ್ರೀಕೃಷ್ಣನು (ತಿಷ್ಠತಿ=ಇರುವನೋ); ಯತ್ರ=ಎಲ್ಲಿ; ಧನುರ್ಧರಃ=ಧನುಸ್ಸನ್ನು ಹಿಡಿದ; ಪಾರ್ಥಃ=ಅರ್ಜುನನು (ತಿಷ್ಠತಿ=ಇರುವನೋ); ತತ್ರ=ಅಲ್ಲಿ; ಶ್ರೀಃ=ಲಕ್ಷ್ಮಿಯು (ಸಂಪದು); ವಿಜಯಃ= ವಿಜಯವು; ಭೂತಿಃ=ಐಶ್ವರ್ಯವು; ಧ್ರುವಾ=ದೃಢವಾದ; ನೀತಿಃ=ನೀತಿಯು (ಸಂತಿ ಇತಿ=ಇರುವವೆಂದು); ಮಮ=ನನ್ನ; ಮತಿಃ=ಅಭಿಪ್ರಾಯ.

**ತಾ||** ಎಲ್ಲಿ ಯೋಗೇಶ್ವರನಾದ ಶ್ರೀಕೃಷ್ಣನು ಎಲ್ಲಿ ಧನುರ್ಧಾರಿಯಾದ ಅರ್ಜುನನು ಇರುವರೋ ಅಲ್ಲಿ ಸಂಪದ, ವಿಜಯ, ಐಶ್ವರ್ಯ, ದೃಢವಾದ ನೀತಿಯಿರುವುದೆಂದು ನನ್ನ ಅಭಿಪ್ರಾಯ

**ವ್ಯಾಖ್ಯೆ:** ಗೀತಾಗ್ರಂಥವು ಈ ಶ್ಲೋಕದಿಂದ ಸಮಾಪ್ತಿಯಾಗುತ್ತದೆ. ಭಗವಂತನ, ಭಕ್ತನ ಸಾನ್ನಿಧ್ಯಗಳಲ್ಲಿ ಎಂತಹ ಶುಭಪ್ರದ ವಾತಾವರಣ ಏರ್ಪಾಡಾಗುವುದೋ ತಿಳಿಸಲ್ಪಟ್ಟಿದೆ. ಎಲ್ಲಿ ಯೋಗೇಶ್ವರನಾದ ಶ್ರೀಕೃಷ್ಣನು ಧನುರ್ಧಾರಿಯಾದ ಅರ್ಜುನನು ಇರುವರೋ ಅಲ್ಲಿ ಐಶ್ವರ್ಯ, ವಿಜಯ ಮುಂತಾದುವು ಬೆಳಗುತ್ತಿರುತ್ತವೆ ಎಂದು ಹೇಳಲಾಗಿದೆ. ಆದ್ದರಿಂದ ವಿಜಯ, ನೀತಿ, ಜ್ಞಾನ ಸಂಪಾದನೆಯನ್ನು ಅಭಿಲಾಷಿಸುವವರು ಭಗವತ್ ಚಿಂತನೆಯಿಂದ ಸಾಕ್ಷಾತ್ ಭಗವಂತನನ್ನು ಹೃದಯದಲ್ಲಿ ಪ್ರತಿಷ್ಠಿತಗೊಳಿಸಿಕೊಳ್ಳಬೇಕು.

ಭಗವಂತನಾದ ಶ್ರೀಕೃಷ್ಣನು ಇರುವ ಸ್ಥಳದಲ್ಲೇ ಅಲ್ಲದೆ ಭಕ್ತನಾದ ಅರ್ಜುನನು ಇರುವೆಡೆಯಲ್ಲೂ ಅಂತಹ ವಿಜಯಗಳು ಸಂಭವಿಸುವುವು ಎಂದು ಏಕೆ ಹೇಳಲ್ಪಟ್ಟಿದೆಯೆಂದರೆ ಅರ್ಜುನನು ಸಾಮಾನ್ಯ ಭಕ್ತನಲ್ಲ. ಧನುರ್ಧಾರಿಯಾದ ಭಕ್ತ. ಅಂದರೆ ಬಾಹ್ಯ ಶತ್ರುಗಳನ್ನು ಯಾವ ಪ್ರಕಾರ ಗಾಂಡೀವದಿಂದ ಜಯಿಸಿದನೋ ಹಾಗೆ ಅಂತಃಶತ್ರುಗಳನ್ನೂ ಗೀತಜ್ಞಾನರೂಪ ಧನುಸ್ಸಿನಿಂದ ಭೇಧಿಸಿ ಮೋಹರಹಿತನಾದವನು (ನಷ್ಟೋಮೋಹಃ).ಈ ಪ್ರಕಾರವಾಗಿ ಅಜ್ಞಾನ ನಶಿಸಿದ ಭಕ್ತನು ಸಾಕ್ಷಾತ್ ಭಗವಂತನೇ ಆಗುವನು. (ಬ್ರಹ್ಮವಿದ್ಬ್ರಹ್ಮೈವಭವತಿ) ಆದ್ದರಿಂದ ಪ್ರಕೃತಿಯನ್ನು ಜಯಿಸಿದ ಹಾಗು ಮಾಯಾ ಶತ್ರುವನ್ನು ಜ್ಞಾನಖಡ್ಗದಿಂದ, ಜ್ಞಾನಧನುಸ್ಸಿನಿಂದ ವಿಚ್ಛಿನ್ನಗೊಳಿಸಿದ ಭಕ್ತನು ಇರುವೆಡೆ ಭಗವತ್‌ಸಾನ್ನಿಧ್ಯದಂತೆ ಅಲ್ಲಿಯೂ ವಿಜಯ ಸಂಪದಗಳು ವೃದ್ಧಿಯಾಗಿರುವುದರಲ್ಲಿ ಆಶ್ಚರ್ಯವೇನಿಲ್ಲ. ಆದರೆ ಇಲ್ಲಿ ತಿಳಿಸಿರುವುದು ಸಾಮಾನ್ಯ ಭಕ್ತನ ವಿಷಯವಲ್ಲವೆಂದೂ, ಅಜ್ಞಾನ, ಕಾಮ, ಕ್ರೋಧಾದಿಗಳನ್ನು ಜಯಿಸಿ ಪ್ರಕೃತಿಯ ಮೇಲೆ ವಿಜಯ ಸಾಧಿಸಿದ್ದ ಭಕ್ತನ ಬಗ್ಗೆ ಹೇಳಿದೆಯೆನ್ನುವುದನ್ನು ಗ್ರಹಿಸಬೇಕು. ಆದ್ದರಿಂದ ಗೀತಾಜ್ಞಾನರೂಪ ಧನುಸ್ಸನ್ನು ಹಿಡಿದ, ನಿಷ್ಕಾಮಕರ್ಮ, ಭಕ್ತಿ, ಜ್ಞಾನ, ಧ್ಯಾನ, ವೈರಾಗ್ಯಾದಿಗಳೆಂಬ ಅಸ್ತ್ರಗಳನ್ನು ಧರಿಸಿದ ಭಕ್ತನ ಹತ್ತಿರ ಸಾಕ್ಷಾತ್ ಭಗವಂತನ ಸಾನ್ನಿಧ್ಯದಲ್ಲಿರುವಂತೆ ವಿಜಯಾದಿಗಳು ಪ್ರಾಪ್ತಿಯಾಗುವುವು ಎಂದು ಭಾವ. ಅಂತಹ ಪರಮಭಕ್ತನು, ಜ್ಞಾನಿಯು, ಸಾಕ್ಷಾತ್ ಭಗವತ್ಸ್ವರೂಪಿಯೇ ಹೌದು. ಆದ್ದರಿಂದ ದೈವದಲ್ಲಿ ಎಂತಹ ಪವಿತ್ರೀಕರಣ ಶಕ್ತಿಯಿರುವುದೋ ಅವರಲ್ಲಿಯೂ ಕೂಡ ಅಂತಹ ಶಕ್ತಿಯಿರುವುದು. ಏಕೆಂದರೆ ಅತಿಶಯ ಭಕ್ತಿಸ್ಥಿತಿಯಲ್ಲಿ, ಇಲ್ಲವೆ ಜ್ಞಾನಸ್ಥಿತಿಯಲ್ಲಿ ಭಕ್ತ ಹಾಗೂ ಭಗವಂತನಿಗೆ, ಇಲ್ಲವೆ ಜ್ಞಾನಿಗೆ ಹಾಗು ದೇವನಿಗೆ ಬೇಧವಿರುವುದಿಲ್ಲ **(ಜ್ಞಾನೀತ್ವಾತ್ಮೈವ ಮೇ ಮತಂ)**.

ಮತ್ತೆ 'ಧನುರ್ಧರಃ' ಎನ್ನುವ ಪದ ಕರ್ಮಯೋಗವನ್ನು, ನಿರ್ಮಲಾನುಷ್ಠಾನವನ್ನು ಸೂಚಿಸುತ್ತದೆ. ಪ್ರತಿವ್ಯಕ್ತಿಗೂ ತತ್ತ್ವ ಬೋಧೆಯೊಂದಿಗೆ ಅನುಷ್ಠಾನವೂ ಇರಬೇಕೆಂದು ಆ ಪದದಿಂದ ಸ್ಪಷ್ಟವಾಗುತ್ತದೆ.

ಎಲ್ಲಿ ಶ್ರೀ ಕೃಷ್ಣನು ಇರುವನೋ ಅಲ್ಲಿ ವಿಜಯ, ಐಶ್ವರ್ಯ ವಿರುವುದೆಂದು ಹೇಳುವುದರಿಂದ ಪ್ರತಿಯೊಬ್ಬರೂ ತಮ್ಮ ಗೃಹ ಹಾಗು ಹೃದಯದಲ್ಲಿ ಭಗವಂತನನ್ನು ಸ್ಥಾಪಿಸಿಕೊಂಡು ನಿರಂತರವಾಗಿ ಅರ್ಚನೆ, ಪೂಜೆ, ಧ್ಯಾನಾದಿಗಳನ್ನು ಮಾಡುತ್ತಿದ್ದಲ್ಲಿ ಅಲ್ಲಿ ಸಾಕ್ಷಾತ್ ಪರಮಾತ್ಮನೇ ನಿವಸಿಸುವುವನಾದ್ದರಿಂದ ಅಲ್ಲಿ ವಿಜಯ, ಐಶ್ವರ್ಯಾದಿಗಳು ತಪ್ಪದೆ ಇರುವುವು. ಹಾಗೆಯೇ ಎಲ್ಲಿ ಭಕ್ತಿ, ಜ್ಞಾನ, ವೈರಾಗ್ಯಾದಿಗಳೆನ್ನುವ ದೈವೀ ಸಂಪತ್ತನ್ನು ಹೊಂದಿರುವ ಮಹನೀಯರು, ಭಕ್ತರು ನಿವಸಿಸುವರೋ ಅಲ್ಲಿ ಧನುರ್ಧಾರಿಯಾದ ಅರ್ಜುನನ ಸನ್ನಿಧಾನದಲ್ಲಿಯ ಹಾಗೆ ವಿಜಯಾದಿಗಳು ಇರುವುವು ಎಂದು ಗ್ರಹಿಸಬೇಕು. ಭಗವತ್ ಪೂಜೆಗಳು ನಡೆಯುವ ಕಡೆ, ಮಹನೀಯರು ಇರುವಲ್ಲಿ ಶುಭ ಪ್ರದವಾದ ವಾತಾವರಣ ಹಾಗು ವಿಜಯಾದಿ ಲಕ್ಷಣಗಳು ಇರುವುದನ್ನು ನಾವು ನೋಡುತ್ತಲೇ ಇದ್ದೇವೆ.

ಪ್ರತಿ ಜೀವಿಯು ವಿಜಯವನ್ನೇ ಕೋರುವನಾಗಲಿ, ಅಪಜಯವನ್ನಲ್ಲ. ಸಂಪಾದನೆಯನ್ನು ಕೋರುವನೇ ಆಗಲಿ, ದಾರಿದ್ರ್ಯವನ್ನಲ್ಲ. ಆದರೆ ಅವು ಲಭಿಸುವ ಉಪಾಯವೇನು? ಆ ಉಪಾಯವನ್ನು ಈ ಶ್ಲೋಕದಲ್ಲಿ ಹೇಳಲಾಗಿದೆ. ಅದನ್ನು ಕಾರ್ಯಾನ್ವಿತಗೊಳಿಸಿಕೊಂಡರ ತಪ್ಪದೆ ಆ ವಿಜಯಾದಿಗಳು ಜನರಿಗೆ ಲಭಿಸುವುವು. ಶ್ರೀ ಕೃಷ್ಣ ಪರಮಾತ್ಮನನ್ನು ಅವರವರ ಹೃದಯಗಳಲ್ಲಿ ಸ್ಥಾಪಿಸಿಕೊಳ್ಳುವುದೇ ಆ ಉಪಾಯ. ಭಗವಂತನನ್ನು ಭಕ್ತಿ ಪೂರ್ವಕವಾಗಿ ಧ್ಯಾನಿಸುತ್ತ ಭಗವತ್ ಸಾನ್ನಿಧ್ಯವನ್ನು ಅನುಭವಿಸುವುದೇ ಆ ಉಪಾಯ. ಎಲ್ಲಿ ಶ್ರೀಕೃಷ್ಣನು ಇರುವನೋ ಅಲ್ಲಿ ವಿಜಯಾದಿಗಳು ಇರುವುದು ಸತ್ಯ. ಆದ್ದರಿಂದ ಭಗವತ್‌ಸಾನ್ನಿಧ್ಯವನ್ನು ಉಂಟುಮಾಡಿಕೊಳ್ಳುತ್ತಿರುವ ಭಕ್ತರಿಗೆ ವಿಜಯಾದಿಗಳು ತಪ್ಪದೆ ಸಿದ್ಧಿಸುವುವು. ಹಾಗೆ ಮಹನೀಯರಾದ ಜ್ಞಾನಿಗಳು, ಯೋಗಿ ಪುಂಗವರು ಮುಂತಾದವರ ಸಾಂಗತ್ಯದಲ್ಲಿ ಈ ಶಕ್ತಿ ಇರುತ್ತದೆ. ಆದ್ದರಿಂದ ಭಗವತ್ ಸಾನ್ನಿಧ್ಯ, ಸಜ್ಜನ ಸಾಂಗತ್ಯ ಎರಡನ್ನೂ ಗ್ರಹಿಸಿ ಶ್ರೀ ಕೃಷ್ಣಾರ್ಜುನರ (ನರನಾರಾಯಣರ) ಸಾಂಗತ್ಯವನ್ನು ಅನುಭವಿಸುತ್ತಿರಬೇಕು.

ಮತ್ತೆ ಎಲ್ಲಿ (ಯಾವ ಪಕ್ಷದಲ್ಲಿ) ಶ್ರೀಕೃಷ್ಣನು, ಅರ್ಜುನನು ಇರುವರೋ, ಧರ್ಮವು ಯಾವ ಪಕ್ಷದಲ್ಲಿರುವುದೋ, ಆ ಪಕ್ಷಕ್ಕೆ ವಿಜಯವು ತಪ್ಪದೆ ಉಂಟಾಗುವುದೆಂದು ಹೇಳುವುದರಿಂದ ಸಂಜಯನು ಪಾಂಡವ ಪಕ್ಷಕ್ಕೆ ವಿಜಯವು ಉಂಟಾಗುವುದು ಎನ್ನುವ ಮುನ್ನೆಚ್ಚರಿಕೆಯನ್ನು ಧೃತರಾಷ್ಟ್ರನಿಗೆ ಕೊಟ್ಟನು. (ಆ ವಾಕ್ಯವನ್ನು ಕೇಳಿಯಾದರೂ ಧೃತರಾಷ್ಟ್ರನು ಸಂಧಿ ಮಾಡಿಕೊಂಡು ಯುದ್ಧವನ್ನು ನಿಲ್ಲಿಸುವುದು ಶ್ರೇಯಸ್ಕರವೆಂದು ಗೂಢವಾಗಿ ಬೋಧಿಸಲ್ಪಟ್ಟಿದೆ).

ಈ ಶ್ಲೋಕದಲ್ಲಿ 'ಧ್ರುವಾನೀತಿಃ' ಎನ್ನುವ ಪದಕ್ಕೆ 'ನೀತಿ ಮುಂತಾದುವು 'ತಪ್ಪದೆ ಉಂಟಾಗುವುವು' ಎಂದು ಕೆಲವರು ಅರ್ಥ ಹೇಳುವರು.

ಗೀತೆಯ ಅಂತ್ಯದಲ್ಲಿ ಸಂಜಯನಿಂದ ಬೋಧಿಸಲ್ಪಟ್ಟ ಈ **'ಯತ್ರ ಯೋಗೇಶ್ವರಃ ಕೃಷ್ಣೋ.....''** ಎನ್ನುವ ಮಹತ್ತರವಾದ ಶ್ಲೋಕವನ್ನು ಭಕ್ತರು ಮತ್ತೆ ಮತ್ತೆ ನೆನೆದು ಭಗವತ್‌ಸಾನ್ನಿಧ್ಯವನ್ನು ತಮ್ಮ ಹೃದಯದಲ್ಲಿ ಸದಾ

ಸೃಷ್ಟಿಸಿಕೊಂಡು ಭಗವದನುಗ್ರಹದಿಂದ ಜೀವನವನ್ನು ಆನಂದಮಯವಾಗಿ ಮಾಡಿಕೊಳ್ಳುವಂತಾಗಲಿ! ಮತ್ತೆ ಭಗವಂತನಿಂದ ಕರುಣೆಯಿಂದ ಬೋಧಿಸಲ್ಪಟ್ಟ ಈ ಗೀತಾ ಶಾಸ್ತ್ರವನ್ನು ಪಠಿಸಿ, ಅನುಷ್ಠಾನಮಾಡಿ, ಆತ್ಮಾನುಭೂತಿಯನ್ನು ಪಡೆದು ಜನ್ಮರಾಹಿತ್ಯರೂಪ ನಿತ್ಯಾನಂದ ಪದವಿಯನ್ನು ಹೊಂದುವುದರಿಂದ ಮಾನವ ಜೀವನವನ್ನು ಕೃಥಾರ್ಥವನ್ನಾಗಿ ಮಾಡಿಕೊಳ್ಳುವಂತಾಗಲಿ!!!

ಹರಿಃ ಓಮ್ ತತ್ ಸತ್

ಇತಿ ಶ್ರೀ ಮನ್ಮಹಾಭಾರತೇ ಶತಸಾಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಶ್ರೀ ಮದ್ಭೀಷ್ಮಪರ್ವಣಿ ಶ್ರೀ ಮದ್ಭಗವದ್ಗೀತಾಸೂಪನಿಷತ್ಸು ಬ್ರಹ್ಮವಿದ್ಯಾಯಾಂ
ಯೋಗಶಾಸ್ತ್ರೇ ಶ್ರೀಕೃಷ್ಣಾರ್ಜುನಸಂವಾದೇ ಮೋಕ್ಷಸಂನ್ಯಾಸಯೋಗೋ ನಾಮ

## ಅಷ್ಟಾದಶೋಽಧ್ಯಾಯಃ

ಇದು ಶ್ರೀ ವ್ಯಾಸಮುನಿ ವಿರಚಿತ, ನೂರು ಸಾವಿರ ಶ್ಲೋಕಗಳುಳ್ಳದ್ದು, ಛಂದೋಬದ್ಧವಾಗಿರುವುದು
ಆದ ಶ್ರೀ ಮಹಾಭಾರತದ ಭೀಷ್ಮಪರ್ವದಲ್ಲಿರುವ ಉಪನಿಷತ್ಪ್ರತಿಪಾದಕವೂ, ಬ್ರಹ್ಮವಿದ್ಯೆಯೂ, ಯೋಗಶಾಸ್ತ್ರವೂ
ಶ್ರೀ ಕೃಷ್ಣಾರ್ಜುನಸಂವಾದವಾದ ಶ್ರೀಭಗವದ್ಗೀತೆಯಲ್ಲಿಯ ಮೋಕ್ಷಸಂನ್ಯಾಸಯೋಗವೆನ್ನುವ

## ಹದಿನೆಂಟನೆಯ ಅಧ್ಯಾಯ

**ಸಂಪೂರ್ಣ**

**ಹರಿಃ ಓಮ್ ತತ್ ಸತ್**

ಶ್ರೀ ಪರಬ್ರಹ್ಮಾರ್ಪಣಮಸ್ತು
ಓಂ

# ಶ್ರೀ ಭಗವದ್ಗೀತೆ ಶ್ಲೋಕಾನುಕ್ರಮಣ

## ರ

**ಓಂ ತತ್ ಸತ್**